# ಸಾಲು ದೀಪಗಳು

ಸಂಪಾದಕರು
ಜಿ.ಎಸ್. ಸಿದ್ಧಲಿಂಗಯ್ಯ
ಎಂ.ಎಚ್. ಕೃಷ್ಣಯ್ಯ



ಕರ್ನಾಟಕ ಸಾಹಿತ್ಯ ಅಕಾಡೆಮಿ
ಜೆ. ಸಿ. ರಸ್ತೆ, ಬೆಂಗಳೂರು - 560 002

**SALU DEEPAGALU** (A Row of Lights) : Some profiles of Makers of Modern Kannada Literature ; Edited by Prof. G.S. Siddalingaiah and Prof. M. H. Krishnaiah Published by Registrar, Karnataka Sahitya Academy, Kannada Bhavana Jayachamarajendra Road, Bangalore - 560002.

Revised & enlarged second edition : 2001 pp. xx+581

ಎರಡನೆ ಮುದ್ರಣದ ಪರಿಷ್ಕೃತ ಸಂಪುಟ : ೨೦೦೧

ಪ್ರಧಾನ ಸಂಪಾದಕರು

**ಡಾ. ಗಿರಡ್ಡಿ ಗೋವಿಂದರಾಜ**

*ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ*

ಪ್ರಕಾಶಕರು

**ಟಿ.ಎಸ್. ದಕ್ಷಿಣಾಮೂರ್ತಿ**

*ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ*

ಮೂಲ ಮುಖಪುಟ ವಿನ್ಯಾಸ

**ಕಮಲೇಶ್**

ಕಂಪ್ಯೂಟರ್ ಮುಖಪುಟ ವಿನ್ಯಾಸ

ಬಿ.ಎಲ್. ಶ್ರೀನಿವಾಸ

ಬೆಲೆ : ರೂ. ೩೭೫/-

ಮುದ್ರಕರು

**ಪ್ರಗತಿ ಪ್ರಿಂಟ್ ಕಮ್ಯೂನಿಕೇಶನ್ಸ್**

ಬೆಂಗಳೂರು - 560 020 ದೂರವಾಣಿ : 3340100



# ಅಧ್ಯಕ್ಷರ ಮಾತು

"ಸಾಲುದೀಪಗಳು" ಎಂಬ ಹೆಸರಿನ ಈ ಪುಸ್ತಕ ಮೊದಲು ಪ್ರಕಟವಾದದ್ದು ೧೯೯೦ರಲ್ಲಿ. ಅದರ ಪ್ರತಿಗಳು ಮುಗಿದುಹೋಗಿ ಹಲವು ವರ್ಷಗಳೇ ಆಗಿವೆ. ಆದರೆ ಈ ಪುಸ್ತಕಕ್ಕೆ ನಿರಂತರವಾಗಿ ಬೇಡಿಕೆ ಬರುತ್ತಲೇ ಇತ್ತು. ಇದರ ಉಪಯುಕ್ತತೆಯನ್ನು ಮನಗಂಡು, ಪ್ರಸಕ್ತ ಸಾಹಿತ್ಯ ಅಕಾಡೆಮಿ ಅದನ್ನು ಪುನರ್ಮುದ್ರಣ ಮಾಡಲು ನಿರ್ಧರಿಸಿತು.

ಆದರೆ ಪುಸ್ತಕವನ್ನು ಇದ್ದಕ್ಕಿದ್ದ ಹಾಗೆ ಮುದ್ರಿಸಲು ಸಾಧ್ಯವಿರಲಿಲ್ಲ. ಅನೇಕ ಸಂಗತಿಗಳನ್ನು ನವೀಕರಿಸಬೇಕಾಗಿತ್ತು. ದಿವಂಗತರಾದ ಅನೇಕ ಜನ ಲೇಖಕರ ಮರಣದ ದಿನಾಂಕಗಳನ್ನು ನಮೂದಿಸಬೇಕಾಗಿತ್ತು. ಹೊಸದಾಗಿ ಪ್ರಕಟವಾದ ಪುಸ್ತಕಗಳನ್ನು ಹೆಸರಿಸಬೇಕಾಗಿತ್ತು. ದೊರೆತ ಪ್ರಶಸ್ತಿ ಇತ್ಯಾದಿ ಗೌರವಗಳನ್ನು ಸೇರಿಸಬೇಕಾಗಿತ್ತು.

ಇದರ ಜೊತೆಗ, ಪ್ರಥಮ ಮುದ್ರಣದಲ್ಲಿ ಸೇರಿದ್ದ ೬೭ಜನ ಲೇಖಕರ ಪಟ್ಟಿಗೆ ಇನ್ನಷ್ಟು ಹೆಸರುಗಳನ್ನು ಸೇರಿಸಿ ಲೇಖನಗಳನ್ನು ಬರೆಸಬೇಕಾಗಿತ್ತು. ಕನ್ನಡ ಸಾಹಿತ್ಯದ ಇಂದಿನ ಸಂದರ್ಭದಲ್ಲಿ ಲೇಖನಗಳನ್ನು ಬರೆಸುವದೇ ಅತ್ಯಂತ ಕಷ್ಟದ ಕೆಲಸ. ನಮ್ಮಲ್ಲಿ ಸಮರ್ಥರಾದ ಲೇಖಕರು ಸಾಕಷ್ಟು ಜನ ಇದ್ದಾರೆ. ಆದರೆ ಹೊತ್ತಿಗೆ ಸರಿಯಾಗಿ ಲೇಖನ ಬರೆದುಕೊಡುವವರನ್ನು ಹುಡುಕುವದೇ ಕಷ್ಟ. ಆದರೂ ಪುಸ್ತಕವನ್ನು ಅರ್ಥಪೂರ್ಣವಾಗಿ ಪರಿಷ್ಕರಿಸಿಯೇ ಪ್ರಕಟಿಸಬೇಕೆಂಬ ಹಟದಿಂದ ಅಕಾಡೆಮಿ ಈ ಯೋಜನೆಯನ್ನು ಕೈಗೆತ್ತಿಕೊಂಡಿತು.

ಪ್ರಥಮ ಮುದ್ರಣದ ಕಾಲಕ್ಕೆ ಪ್ರೊ. ಜಿ.ಎಸ್. ಸಿದ್ದಲಿಂಗಯ್ಯ ಮತ್ತು ಪ್ರೊ. ಎಂ.ಎಚ್. ಕೃಷ್ಣಯ್ಯ ಅವರು ಸಂಪಾದಕರಾಗಿ ಅತ್ಯಂತ ಅಚ್ಚುಕಟ್ಟಾಗಿ ಪುಸ್ತಕವನ್ನು ಅಣಿಗೊಳಿಸಿಕೊಟ್ಟಿದ್ದರು. ಅವರೇ ಈ ಪರಿಷ್ಕೃತ ಆವೃತ್ತಿಯನ್ನೂ ಸಿದ್ಧಪಡಿಸಿಕೊಡಬೇಕೆಂದು ನಿರ್ಣಯಿಸಿ ಅವರನ್ನು ವಿನಂತಿಸಿಕೊಳ್ಳಲಾಯಿತು. ಅವರಿಬ್ಬರೂ ಪ್ರೀತಿಯಿಂದ ಈ ಕೆಲಸವನ್ನು ಒಪ್ಪಿಕೊಂಡು, ಕಳೆದ ಎರಡೂವರೆ ವರ್ಷಗಳಿಂದಲೂ ಇದಕ್ಕಾಗಿ ಶ್ರಮಿಸಿದ್ದಾರೆ. ಅವರಿಗೆ ಅಕಾಡೆಮಿ ಕೃತಜ್ಞವಾಗಿದೆ.

ಪ್ರಥಮ ಮುದ್ರಣದಲ್ಲಿದ್ದ ಮೂಲ ಲೇಖನಗಳಲ್ಲಿ ಹೆಚ್ಚಿನ ಬದಲಾವಣೆಗಳನ್ನೇನೂ ಮಾಡಲು ಹೋಗಲಿಲ್ಲ. ಅದು ಪುನರ್ಲೇಖನವನ್ನೇ ಅಪೇಕ್ಷಿಸುವ ಕೆಲಸವಾದ್ದರಿಂದ, ಆಯಾ ಲೇಖನವನ್ನು ಆಯಾ ಸಾಹಿತಿಗಳಿಗೇ ಕಳಿಸಿ, ಅದರಲ್ಲಿದ್ದಿರಬಹುದಾದ ತಪ್ಪು ಸಂಗತಿಗಳನ್ನು ಸರಿಪಡಿಸಬೇಕೆಂದು ವಿನಂತಿಸಲಾಯಿತು. ಅನೇಕ ಹಿರಿಯ ಸಾಹಿತಿಗಳು ಇದಕ್ಕೆ ಪ್ರತಿಕ್ರಿಯಿಸಿ ಸಹಕರಿಸಿದ್ದಾರೆ.

ಅನುಬಂಧ-೧ರಲ್ಲಿದ್ದ 'ಜೀವನಪಥ', 'ಸಾಹಿತ್ಯಪಥ'ಗಳನ್ನು ಸಂಪಾದಕರೇ ಹಲವಾರು ಮೂಲಗಳಿಂದ ಮಾಹಿತಿ ಸಂಗ್ರಹಿಸಿ, ಆಮೂಲಾಗ್ರವಾಗಿ ಪರಿಶೀಲಿಸಿ, ಬಿಟ್ಟುಹೋದ ಮತ್ತು ಹೊಸದಾಗಿ ಲಭ್ಯವಾದ ಸಂಗತಿಗಳನ್ನು ಸೇರಿಸಿ, ಆದಷ್ಟೂ ಪರಿಪೂರ್ಣವಾಗುವಂತೆ ಶ್ರಮಿಸಿದ್ದಾರೆ.

ಪ್ರಥಮ ಮುದ್ರಣದಲ್ಲಿ ೬೭ ಜನ ಸಾಹಿತಿಗಳ ಬಗ್ಗೆ ಲೇಖನಗಳಿದ್ದವು. ಅಲ್ಲಿ ಬಿಟ್ಟುಹೋಗಿದ್ದ ಮತ್ತೆ ಕೆಲವು ಹೆಸರುಗಳನ್ನು ಸೇರಿಸಿಕೊಳ್ಳಲಾಯಿತು. ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರು, ಜ್ಞಾನಪೀಠ ಪ್ರಶಸ್ತಿ ವಿಜೇತರು, ಪಂಪಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ ಪಡೆದವರು, ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ವಿಜೇತರು ಮೊದಲಾದವರ ಹೆಸರುಗಳನ್ನೂ ಸೇರಿಸಿ ಒಟ್ಟು ೪೨ ಲೇಖನಗಳನ್ನು ಹೊಸದಾಗಿ ಬರೆಸಲು ನಿರ್ಧರಿಸಲಾಯಿತು. ಅದಕ್ಕಾಗಿ ಲೇಖಕರನ್ನು ಸಂಪರ್ಕಿಸಲಾಯಿತು. ಕೆಲವು ಲೇಖನಗಳು ಬೇಗ ಬಂದವು. ಇನ್ನು ಕೆಲವು ನಿಧಾನವಾದವು. ನಿರಂತರ ಒತ್ತಾಯ ನಡೆದೇ ಇತ್ತು. ಸದ್ಯದ ಅಕಾಡೆಮಿಯ ಅವಧಿ ಮುಗಿಯುವ ಮೊದಲೇ ಇದನ್ನು ಹೊರತರಬೇಕೆಂಬ ಆಶೆಯಿಂದ ಒತ್ತಡ ಹೆಚ್ಚಿಸಿದೆವು. ನಾಲ್ಕೈದು ಜನ ಕೊನೆಯ ಕ್ಷಣದವರೆಗೂ ಆತಂಕ ಪಡುವಂತೆ ಮಾಡಿದರೂ ಕೊನೆಗೆ ಎಲ್ಲರೂ ಲೇಖನಗಳನ್ನು ಬರೆದುಕೊಟ್ಟು ಸಹಕರಿಸಿದ್ದಾರೆ. ಅವರಿಗೆಲ್ಲ ಅಕಾಡೆಮಿ ಋಣಿಯಾಗಿದೆ.

ಈ ಸಂಪುಟದ ಪರಿಷ್ಕೃತ ಆವೃತ್ತಿಯ ತಯಾರಿ ಆರಂಭವಾದಾಗಿನಿಂದಲೂ ಇದಕ್ಕಾಗಿ ವಿಶೇಷ ಅನುದಾನವನ್ನು ದೊರಕಿಸಿಕೊಳ್ಳಲು ಕಳೆದ ಮೂರು ವರ್ಷಗಳಿಂದ ಎಲ್ಲ ರೀತಿಯ ಪ್ರಯತ್ನಗಳನ್ನೂ ಮಾಡಿದ್ದೇವೆ. ಕೊನೆಗೂ ಕರ್ನಾಟಕ ಸರಕಾರ ದೊಡ್ಡಮನಸ್ಸು ಮಾಡಿ ಇದರ ಪ್ರಕಟಣೆಗಾಗಿ ಎರಡು ಲಕ್ಷ ರೂಪಾಯಿಗಳನ್ನು ಬಿಡುಗಡೆ ಮಾಡಿದೆ. ಅದಕ್ಕಾಗಿ ಸಂಬಂಧಿಸಿದ ಅಧಿಕಾರಿಗಳಿಗೆ ಅಕಾಡೆಮಿ ಕೃತಜ್ಞವಾಗಿದೆ.

ಈ ಪುಸ್ತಕದ ಉಪಯುಕ್ತತೆಯ ಬಗ್ಗೆ ಹೆಚ್ಚಿಗೆ ಹೇಳಬೇಕಾದ್ದೇನೂ ಇಲ್ಲ. ಆಧುನಿಕ ಕನ್ನಡ ಸಾಹಿತ್ಯದ ಇತಿಹಾಸಕ್ಕೆ ಅಗತ್ಯವಾದ ಆಕರ ಸಾಮಗ್ರಿಯನ್ನು ವಿಪುಲವಾಗಿ ಒದಗಿಸಿಕೊಡುವ ಕೆಲಸವನ್ನು ಇಲ್ಲಿಯ ಲೇಖನಗಳು ಸಮರ್ಥವಾಗಿ ಮಾಡಿಕೊಟ್ಟಿವೆ. ಸಾಹಿತ್ಯದ ವಿದ್ಯಾರ್ಥಿಗಳಿಗೂ, ಸಾಮಾನ್ಯ ಓದುಗರಿಗೂ ಇವುಗಳಿಂದ ವಿಶೇಷ ಪ್ರಯೋಜನವಾಗಬಲ್ಲದೆಂದು ನಮ್ಮ ನಂಬಿಕೆಯಾಗಿದೆ. ಆದರೂ ಇದು ಸಂಪೂರ್ಣ ಕೃತಿಯೆಂದೇನೂ ಭಾವಿಸಬೇಕಾಗಿಲ್ಲ. ಕಾಲಕಾಲಕ್ಕೆ ಇದರಲ್ಲಿ ಮತ್ತಷ್ಟು ಸಂಗತಿಗಳು, ಮತ್ತಷ್ಟು ಹೆಸರುಗಳು ಸೇರಬೇಕು. ಈ ಬಗೆಯ ಕೃತಿಯಲ್ಲಿ ಅದು ಅನಿವಾರ್ಯ.

ಈ ಸಂಪುಟದ ತಯಾರಿಯಲ್ಲಿ ಮತ್ತು ಅದಕ್ಕೆ ಅಗತ್ಯವಾಗಿದ್ದ ವಿಶೇಷ ಅನುದಾನವನ್ನು ದೊರಕಿಸುವಲ್ಲಿ ಅಕಾಡೆಮಿಯ ರಿಜಿಸ್ಟ್ರಾರರಾದ ಶ್ರೀ ಟಿ.ಎಸ್. ದಕ್ಷಿಣಾಮೂರ್ತಿಯವರು ವಹಿಸಿದ ಕಾಳಜಿ, ತೆಗೆದುಕೊಂಡ ಶ್ರಮ ಸ್ಮರಣೀಯವಾದದ್ದು.

ಇದರ ಮುದ್ರಣದಲ್ಲಿ ನಾವು ಮಾಡಿದ ವಿಳಂಬ, ಬದಲಾವಣೆ, ವಿಶೇಷ ಸೂಚನೆಗಳನ್ನು ನಗುನಗುತ್ತಲೇ ಸಹಿಸಿಕೊಂಡು ಸುಂದರವಾಗಿ ಅಚ್ಚುಮಾಡಿ ಕೊಟ್ಟಿರುವ ಮಯೂರ ಮುದ್ರಣದ ಶ್ರೀನಿವಾಸರಿಗೆ ನಮ್ಮ ವಿಶೇಷ ನೆನಕೆಗಳು ಸಲ್ಲಬೇಕು.

---

ಗಿರಡ್ಡಿ ಗೋವಿಂದರಾಜ

## ಸಂಪಾದಕರ ಮಾತು

(ಎರಡನೆ ಮುದ್ರಣದ ಪರಿಷ್ಕೃತ ಸಂಪುಟ)

---

೧೯೯೦ರಲ್ಲಿ ಪ್ರಕಟವಾದ ಸಾಲುದೀಪಗಳು ಕೃತಿಯ ಪ್ರತಿಗಳು ಈಗ ಅಲಭ್ಯವಾಗಿವೆ. ಅದು ಮರು ಮುದ್ರಣಗೊಳ್ಳಬೇಕೆಂಬ ಬೇಡಿಕೆ ಬಹಳ ದಿನಗಳಿಂದಲೂ ಇತ್ತು. ಅದನ್ನು ಮರು ಮುದ್ರಿಸುವುದಕ್ಕಿಂತ ಪರಿಷ್ಕರಿಸಿ ಪ್ರಕಟಿಸುವುದು ಉತ್ತಮ ಎಂದು ಅಕಾಡೆಮಿ ಭಾವಿಸಿತು. ಅಷ್ಟೇ ಅಲ್ಲ ಅದರ ಜವಾಬ್ದಾರಿಯನ್ನು ನಮಗೆ ಅಕಾಡೆಮಿ ವಹಿಸಿತು. ಇದಕ್ಕಾಗಿ ನಾವು ಕರ್ನಾಟಕ ಸಾಹಿತ್ಯ ಅಕಾಡೆಮಿಗೆ ಕೃತಜ್ಞರು.

ಪರಿಷ್ಕರಿಸುವಾಗ ಗಮನಿಸಬೇಕಾದ ಅಂಶಗಳನ್ನು ಮುಖ್ಯವಾಗಿ ಹೀಗೆ ಗುರುತಿಸಲಾಯಿತು : ಹಿಂದೆ ಪರಿಚಯಿಸಿದ ವಿದ್ವಾಂಸ /ಸಾಹಿತಿಗಳ ಶ್ರೇಣಿಯಲ್ಲಿ ಬಿಟ್ಟುಹೋಗಿರುವವರನ್ನು, ಉದಾಹರಣೆಗೆ, ಕಿಟ್ಟೆಲ್, ರೈಸ್ ಇಂಥವರ ಪರಿಚಯವನ್ನು ಸೇರಿಸುವುದು; ೧೯೯೦ರಿಂದೀಚೆಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಹಾಗೂ ಜ್ಞಾನಪೀಠ ಪ್ರಶಸ್ತಿ ಪಡೆದವರನ್ನು ಸೇರಿಸುವುದು ; ಜೊತೆ ಜೊತೆಗೆ ಅನಂತರ ಆರಂಭವಾದ ಪಂಪ ಪ್ರಶಸ್ತಿ, ನಾಡೋಜ ಪದವಿ ಮತ್ತು ಅತ್ತಿಮಬ್ಬೆ ಪ್ರಶಸ್ತಿ ಪುರಸ್ಕೃತರನ್ನು ಸೇರಿಸುವುದು ; ಈಗಾಗಲೇ ಪರಿಚಯಿಸಿದ್ದವರ ಸಾಧನೆ ಹಾಗೂ ಬದುಕಿನ ವಿವರಗಳ ಜೊತೆಗೆ ಈಗ ಲಭ್ಯವಾಗಿರುವ ಹೆಚ್ಚಿನ ಮಾಹಿತಿಯನ್ನು ಸೇರಿಸಿ ನೀಡುವುದು.

ಈ ಪರಿಷ್ಕೃತ ಸಂಪುಟವನ್ನು ಸಿದ್ಧಪಡಿಸಲು ಅತ್ಯಂತ ಪ್ರಾಮಾಣಿಕವಾಗಿ ಶ್ರಮಿಸಿದ್ದೇವಾದರೂ ಇದು ಪರಿಪೂರ್ಣವೆಂಬ ಭ್ರಮೆ ಖಂಡಿತ ನಮಗಿಲ್ಲ.

ಇದನ್ನು ಪರಿಷ್ಕರಿಸುವಲ್ಲಿ ಅಕಾಡೆಮಿ ಅಧ್ಯಕ್ಷರಾದ ಡಾ.ಗಿರಡ್ಡಿ ಗೋವಿಂದರಾಜ, ರಿಜಿಸ್ಟ್ರಾರ್ ಶ್ರೀ ಟಿ.ಎಸ್. ದಕ್ಷಿಣಾಮೂರ್ತಿ ಮತ್ತು ಸಿಬ್ಬಂದಿಯವರು, ನಮ್ಮ ಚಿತ್ರಗುಪ್ತರ ಹಿಂಸೆಯನ್ನು ಸಹಿಸಿಕೊಂಡು ಲೇಖನಗಳನ್ನು ಬರೆದುಕೊಟ್ಟ ವಿದ್ವಾಂಸರು ಇವರೆಲ್ಲರಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು. ಪರಿವಿಡಿ ಮತ್ತು ಅನುಬಂಧಗಳನ್ನು ಸಿದ್ಧಪಡಿಸುವಾಗ ನೆರವಾದ ಶ್ರೀಮತಿ ವಿಜಯಲಕ್ಷ್ಮಿ ಇವರ ಶ್ರಮವನ್ನು ಉಲ್ಲೇಖಿಸದಿದ್ದರೆ ಅಪರಾಧವಾಗುತ್ತದೆ.

**ಜಿ.ಎಸ್. ಸಿದ್ಧಲಿಂಗಯ್ಯ**
**ಎಂ.ಎಚ್. ಕೃಷ್ಣಯ್ಯ**

## ಕೃತಜ್ಞತೆಗಳು (ಎರಡನೆ ಮುದ್ರಣದ ಪರಿಷ್ಕೃತ ಸಂಪುಟ)

ಬಹಳ ದಿನಗಳಿಂದ ಬಹಳ ಜನರಿಂದ ಬೇಡಿಕೆಯಿದ್ದ ಸಾಲುದೀಪಗಳು ಇನ್ನಷ್ಟು ದೀಪಗಳ ಸೇರ್ಪಡೆಯೊಂದಿಗೆ ಪರಿಷ್ಕೃತಗೊಂಡು ಪ್ರಕಟವಾಗಿದೆ.

ಬಹಳ ದಿನಗಳ ಹಿಂದೆಯೆ ಮರುಮುದ್ರಣವಾಗಬೇಕಿದ್ದ ಈ ಕೃತಿ ಮರು ಮುದ್ರಣವಾಗದೆ ಇದ್ದುದನ್ನು ಗಮನಿಸಿದ ಅಕಾಡೆಮಿಯ ಅಧ್ಯಕ್ಷರಾದ ಡಾ. ಗಿರಡ್ಡಿ ಗೋವಿಂದರಾಜ ಹಾಗೂ ಸದಸ್ಯರು ಪರಿಷ್ಕರಿಸಿ ಮುದ್ರಿಸಲು ತೀರ್ಮಾನಿಸಿದ ಫಲವಾಗಿ ಇದು ಸಿದ್ಧವಾಗಿದೆ.

ಮೊದಲ ಮುದ್ರಣಕ್ಕೆ ಪುಸ್ತಕವನ್ನು ಸಂಪಾದಿಸಿಕೊಟ್ಟ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ ಹಾಗೂ ಪ್ರೊ. ಎಂ. ಎಚ್. ಕೃಷ್ಣಯ್ಯ ಅವರು ಇದನ್ನು ಶ್ರಮವಹಿಸಿ ಆಸಕ್ತಿಯಿಂದ ಪರಿಷ್ಕರಿಸಿಕೊಟ್ಟಿದ್ದಾರೆ.

ಪರಿಷ್ಕೃತ ಗ್ರಂಥಕ್ಕೆ ಬೇಕಾದ ಸಾಹಿತಿಗಳ ರೇಖಾಚಿತ್ರವನ್ನು ಮೋಹನ ವೆರ್ಣೇಕರ್ ಅವರು ಒದಗಿಸಿದ್ದಾರೆ. ಶ್ರೀ ಟಿ. ಆರ್. ಮಹದೇವಯ್ಯ ಅವರು ಶ್ರದ್ಧೆಯಿಂದ ಕರಡನ್ನು ಪರಿಶೀಲಿಸಿದ್ದಾರೆ. ಗ್ರಂಥವನ್ನು ರೂಪಿಸುವ ಕಾರ್ಯದಲ್ಲಿ ಅಕಾಡೆಮಿಯ ಸಿಬ್ಬಂದಿ ಅತ್ಯಂತ ಪ್ರೀತಿಯಿಂದ ಸಹಕರಿಸಿದ್ದಾರೆ. ಬಿ.ಎಲ್. ಶ್ರೀನಿವಾಸ ಹಾಗು ಅವರ ಸಹೋದ್ಯೋಗಿ ಮಿತ್ರರು ತುಂಬಾ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿದ್ದಾರೆ. ಈ ಎಲ್ಲರಿಗೂ ಅಕಾಡೆಮಿ ಪರವಾಗಿ ಅನಂತ ವಂದನೆಗಳು.

**ಟಿ. ಎಸ್. ದಕ್ಷಿಣಾಮೂರ್ತಿ**
ರಿಜಿಸ್ಟ್ರಾರ್
ಕರ್ನಾಟಕ ಸಾಹಿತ್ಯ ಅಕಾಡೆಮಿ

## ಮುನ್ನುಡಿ (ಮೊದಲನೆಯ ಮುದ್ರಣ)

ನಮ್ಮ ಸಾಹಿತ್ಯ ಸಂದರ್ಭದಲ್ಲಿ, ಪ್ರಾಚೀನ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕುರಿತು ಈವರೆಗು ನಡೆದಿರುವ ಕೆಲಸಕ್ಕೆ ಹೋಲಿಸಿದರೆ, ಹೊಸಗನ್ನಡ ಸಾಹಿತ್ಯ ಚರಿತ್ರೆಯನ್ನು ಒಂದು ಹಂತದವರೆಗಾದರೂ ಸಮರ್ಪಕವಾಗಿ ಹಾಗೂ ಸಮಗ್ರವಾಗಿ ಕಟ್ಟಿಕೊಡುವ ಕೆಲಸ ಇನ್ನೂ ನಡೆದಿಲ್ಲವೆಂದೇ ಹೇಳಬೇಕು. ಆದರೆ, ಸಾಹಿತ್ಯ ಚರಿತ್ರೆಗೆ ಹಿನ್ನೆಲೆಯಾದ ಸಾಹಿತ್ಯ ವಿಮರ್ಶೆ ಆಧುನಿಕ ಸಂದರ್ಭದಲ್ಲಿ ಗಣನೀಯವಾಗಿ ಬೆಳೆದಿದ್ದರೂ, ಅದು ಕೂಡ ಸಂಪೂರ್ಣ ನಿಷ್ಪಕ್ಷಪಾತವೂ, ಪೂರ್ವಗ್ರಹ ದೂರವೂ ಆದ ನಿಲುವಿನ ವಿವೇಚನೆಯನ್ನು ಪ್ರಕಟಿಸುವಂತಿದೆ ಎಂದು ಹೇಳಿಕೊಳ್ಳುವಂತಿಲ್ಲ. ಈ ಪರಿಸ್ಥಿತಿಗೆ ಕಾರಣ, ಬಹುಶಃ ಈ ಕಾಲಮಾನದ ಸಾಹಿತ್ಯ ನಿರ್ಮಿತಿಯನ್ನು ತಕ್ಕಷ್ಟು ವಸ್ತುನಿಷ್ಠ ಪರಿಶೀಲನೆಗೆ ಒಳಗುಪಡಿಸಲು ಅಗತ್ಯವಾದ 'ದೂರ'ವನ್ನು ನಾವಿನ್ನೂ ತಲುಪಿಲ್ಲ ಎನ್ನುವುದೆ ಇರಬಹುದು. ಈ ದೃಷ್ಟಿಯಿಂದ ಸಮಕಾಲೀನ ಸಾಹಿತ್ಯ ಚರಿತ್ರೆಯ ರಚನೆಯ ಪ್ರಯತ್ನಗಳೆಲ್ಲವೂ, ಒಂದರ್ಥದಲ್ಲಿ ಮುಂದೆ ನಡೆಯಬೇಕಾದ ನಿಜವಾದ ಸಾಹಿತ್ಯ ಚರಿತ್ರೆಯ ಕೆಲಸಕ್ಕೆ ಅಗತ್ಯವಾದ ಹಿನ್ನೆಲೆಯನ್ನೂ, ಸಾಮಗ್ರಿಯನ್ನೂ ಒದಗಿಸುವ ಸ್ವರೂಪದವುಗಳಾಗಿರುವುದು ಅನಿವಾರ್ಯವಾಗಿದೆ.

ಈ ಹಿನ್ನೆಲೆಯಿಂದ, ಕರ್ನಾಟಕ ಸಾಹಿತ್ಯ ಅಕಾಡೆಮಿಯು ಪ್ರಕಟಿಸುತ್ತಿರುವ 'ಸಾಲು ದೀಪಗಳು' ಎಂಬ ಈ ಮಹತ್ವಾಕಾಂಕ್ಷೆಯ ಸಂಪುಟವು, ಹೊಸಗನ್ನಡ ಸಾಹಿತ್ಯವನ್ನು ತಮ್ಮ ವ್ಯಕ್ತಿಪ್ರತಿಭೆಯಿಂದ ಕಟ್ಟಿ ಬೆಳೆಯಿಸಿದ ಅರವತ್ತೇಳು ಮಂದಿ ಲೇಖಕರ ವ್ಯಕ್ತಿತ್ವ ಹಾಗೂ ಸಾಹಿತ್ಯಕ ಸಾಧನೆಗಳ ಸಂಕ್ಷಿಪ್ತ ಸಮೀಕ್ಷೆಯೊಂದನ್ನು ಒಳಗೊಳ್ಳುವ ಕೃತಿಯಾಗಿದೆ. ಸಾಹಿತಿ ಕೇಂದ್ರಿತ ಸಾಹಿತ್ಯಸಮೀಕ್ಷೆಯ ಈ ವಿಧಾನದ ಮೂಲಕ, ಹೊಸಗನ್ನಡ ಸಾಹಿತ್ಯ ಪರಂಪರೆಯ ಸ್ಥೂಲವಾದ ಪರಿಚಯವೊಂದು ತಕ್ಕಮಟ್ಟಿಗೆ ಆಗುವುದಾದರೂ, ಹೊಸಗನ್ನಡ ಸಾಹಿತ್ಯ ಚರಿತ್ರೆಯನ್ನು ರೂಪಿಸಿದ ಇನ್ನೂ ಹಲವು ಸಾಹಿತಿಗಳ ಹಾಗೂ ಇನ್ನಿತರ ಕಾರಕ - ಪ್ರೇರಕ ಸಂಗತಿಗಳ ವಿವರಗಳು ಇಲ್ಲಿ ಇಲ್ಲ ಎಂಬುದನ್ನು ನಾವು ಬಲ್ಲೆವು. ಇಲ್ಲಿ ಸಮೀಕ್ಷೆಗೆ ಗುರಿಯಾಗಿರುವ ಅರವತ್ತೇಳು ಮಂದಿ ಸಾಹಿತಿಗಳ ಆಯ್ಕೆಗೆ ಸಮರ್ಥನೆ ಏನು ಎಂದು ಪ್ರಶ್ನಿಸಲು ಖಂಡಿತವಾಗಿಯೂ ಅವಕಾಶವಿರುವುದಾದರೂ, ಈ ಸಂಪುಟದ ಸಂಪಾದಕ ಮಂಡಲಿ, ಆ ಬಗ್ಗೆ ಕೆಲವು ಮೂಲಮಾನಗಳನ್ನು ಅನುಸರಿಸಿದೆ ಎಂಬುದನ್ನು ಸಹೃದಯರು ಗಮನಕ್ಕೆ ತೆಗೆದುಕೊಳ್ಳಬೇಕಾಗಿದೆ.

ಇಂಥ ಒಂದು ಸಂಪುಟದ ಪ್ರಯತ್ನವು, 1984ರಿಂದ 1987ರ ಅವಧಿಯಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಪ್ರೊ. ಕೆ. ಎಸ್. ನಿಸಾರ್ ಅಹಮದ್ ಅವರ ಕಾಲದಲ್ಲಿಯೆ ಪ್ರಾರಂಭವಾಗಿದ್ದು, ಈ ಸಂಪುಟದೊಳಗೆ ಸಮಾವೇಶವಾಗಿರುವ 34 ಲೇಖನಗಳು ಆ ಕಾಲದಲ್ಲಿಯೇ ವಿವಿಧ ಲೇಖಕರಿಂದ ಬರೆಯಲ್ಪಟ್ಟಿದ್ದವು. ಆದರೆ ಕಾರಣಾಂತರದಿಂದ ಸ್ಥಗಿತವೂ, ಅಪೂರ್ಣವೂ ಆದ ಆ ಕಾರ್ಯವನ್ನು, ಕಳೆದ ಎರಡು ವರ್ಷಗಳ ಅವಧಿಯಲ್ಲಿ ಒಂದು ನಿರ್ದಿಷ್ಟ ಉದ್ದೇಶದೊಳಗೆ ಬರುವಂತೆ, ಅನೇಕ ಹೊಸ ಲೇಖನಗಳೊಂದಿಗೆ, 'ಸಾಲು ದೀಪಗಳು' ಎಂಬ ಹೆಸರಿನಿಂದ ತರಲು ಸಾಧ್ಯವಾದದ್ದು ಇದರ ಸಂಪಾದಕರಾದ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ ಮತ್ತು ಪ್ರೊ. ಎಂ. ಎಚ್. ಕೃಷ್ಣಯ್ಯ ಇವರ ಶ್ರಮ ಹಾಗೂ ಸಹಕಾರಗಳಿಂದಲೇ. ಇದಕ್ಕಾಗಿ ಈ ಇಬ್ಬರು ಸ್ನೇಹಿತರನ್ನು ನಾನು ತುಂಬ ಕೃತಜ್ಞತೆಯಿಂದ ನೆನೆಯುತ್ತೇನೆ.

ಈ ಒಂದು ಸಂಪುಟದ ಸಿದ್ಧತೆಯಲ್ಲಿ ಉತ್ಸಾಹದಿಂದ ಜತೆಗೆ ನಿಂತ, ಸಾಹಿತ್ಯ ಅಕಾಡೆಮಿಯ ರಿಜಿಸ್ಟ್ರಾರ್ ಆದ ಶ್ರೀ ಡಿ. ಕೆ. ಶ್ಯಾಮಸುಂದರರಾವ್ ಅವರಿಗೆ, ಸೊಗಸಾಗಿ ಅಚ್ಚುಮಾಡಿಕೊಟ್ಟ ಬೆಂಗಳೂರಿನ ರಶ್ಮಿ ಮುದ್ರಣದ ಶ್ರೀ ಎಂ. ರಾಮಕೃಷ್ಣ ಅವರಿಗೆ, ಈ ಕೃತಿಗೆ ಅಗತ್ಯವಾದ, ಆದರೆ ಅಲಭ್ಯವಾದ ಭಾವಚಿತ್ರಗಳನ್ನು ಒದಗಿಸಿದ ಶ್ರೀ ಎನ್.ಎಸ್. ಕಿಟ್ಟಿ ಅವರಿಗೆ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿಗೆ ನಮ್ಮ ವಂದನೆಗಳು.

ಮೇ 1990

ಜಿ. ಎಸ್. ಶಿವರುದ್ರಪ್ಪ
ಅಧ್ಯಕ್ಷರು
ಕರ್ನಾಟಕ ಸಾಹಿತ್ಯ ಅಕಾಡೆಮಿ

## ಪ್ರಸ್ತಾವನೆ (ಮೊದಲನೆಯ ಮುದ್ರಣ)

'ಸಾಲು ದೀಪಗಳು' ಸುಮಾರು ಒಂದು ಶತಮಾನ ಕಾಲದ ಸಮೃದ್ಧವೂ, ವೈವಿಧ್ಯಮಯವೂ ಆದ ಸಾಹಿತ್ಯಕ ಇತಿಹಾಸವನ್ನುಳ್ಳ ಹೊಸಗನ್ನಡ ಸಾಹಿತ್ಯದ ಪ್ರತಿಭಾನ್ವಿತರಲ್ಲಿ ಅರವತ್ತೇಳು ವ್ಯಕ್ತಿತ್ವಗಳನ್ನು ಕುರಿತ ಲೇಖನಗಳ ಮಾಲೆ.

ಹೊಸಗನ್ನಡ ಸಾಹಿತ್ಯ ಭಾರತೀಯ ಸಾಹಿತ್ಯದಲ್ಲೆ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದಿದೆ. ಒಂಬತ್ತು ದಶಕಗಳ ಸಾರ್ಥಕ ಇತಿಹಾಸವನ್ನು ಪಡೆದಿರುವ ಈ ಸಾಹಿತ್ಯದ ವೈಶಿಷ್ಟ್ಯ ಭಾರತಕ್ಕೆಲ್ಲ ವಿದಿತವಾದದ್ದು. ಭಾರತೀಯ ಸಾಹಿತ್ಯ ಸಂದರ್ಭದಲ್ಲಿ ಅತ್ಯುನ್ನತ ಸಾಹಿತ್ಯಕ ಗೌರವವಾದ ಜ್ಞಾನಪೀಠ ಪ್ರಶಸ್ತಿಯನ್ನು ನಾಲ್ಕು ಬಾರಿ ಪಡೆದ ಹೆಮ್ಮೆ ಕನ್ನಡದ್ದು. ಅಷ್ಟೇ ಅಲ್ಲ, ಭಾರತದ ಶ್ರೇಷ್ಠ ಕಾವ್ಯವನ್ನು ಕುರಿತು ನೀಡುವ ಪ್ರಶಸ್ತಿ ಕಬೀರ್ ಸಮ್ಮಾನ್ ಮೊದಲು ಪ್ರಾಪ್ತವಾದದ್ದು ಕನ್ನಡಕ್ಕೆ. ಅದೇ ರೀತಿ ಬಿಲ್ವಾರ ಪ್ರಶಸ್ತಿಯೂ ಪ್ರಥಮ ಬಾರಿಗೆ ಕನ್ನಡಕ್ಕೇ ಸಂದಿದೆ. ಇಷ್ಟೇ ಅಲ್ಲದೆ ಮೂವತ್ತಕ್ಕೂ ಹೆಚ್ಚಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳನ್ನು ಕನ್ನಡದ ಪ್ರತಿಭಾವಂತರು ಪಡೆದಿದ್ದಾರೆ. ಇಷ್ಟೆಲ್ಲಾ ಹೇಳುವುದರ ಹಿನ್ನೆಲೆ ಈ ಎಲ್ಲ ಪ್ರಶಸ್ತಿಗಳ ವೈಶಿಷ್ಟ್ಯದಿಂದಾಗಿಯೇ ಕನ್ನಡವನ್ನು ಅಳೆಯಬೇಕು ಎಂದಾಗ ಕನ್ನಡದ ಸಾಹಿತ್ಯ ಭಾರತದಲ್ಲಿ ಇಷ್ಟು ವಿಶಿಷ್ಟವಾದ ಮನ್ನಣೆಯನ್ನು ಪಡೆದಿದೆ ಎಂದು ಸೂಚಿಸುವುದು ಅಷ್ಟೆ.

ಈ ಶತಮಾನದ ಆರಂಭದಲ್ಲಿ ಬಂಗಾಳಿ - ಕಾದಂಬರಿಗಳ ಅನುವಾದದಿಂದ ಸ್ಫೂರ್ತಿಗೊಂಡ, ಇಂಗ್ಲಿಷ್, ಸಂಸ್ಕೃತ ಮತ್ತಿತರ ಸಾಹಿತ್ಯಗಳಿಂದ ಹೆಚ್ಚಿನ ಜೀವದ್ರವ್ಯವನ್ನು ಪಡೆದುಕೊಂಡ ಕನ್ನಡ ತನ್ನದೇ ಆದ ವಿಶಿಷ್ಟತೆಯಿಂದ ಮೆರೆಯುತ್ತಿರುವುದು ಇಂದು ಭಾರತೀಯ ಸಾಂಸ್ಕೃತಿಕ ಇತಿಹಾಸದ ಒಂದು ಮಹತ್ವದ ಸಂಗತಿಯಾಗಿದೆ. ಈ ನೂರು ವರ್ಷಗಳಲ್ಲಿ ಕನ್ನಡ ಸಾಹಿತ್ಯ ವಿವಿಧ ಪ್ರಕಾರಗಳಲ್ಲಿ ತನ್ನ ಪ್ರತಿಭೆಯನ್ನಷ್ಟೇ ಅಲ್ಲ ಕನ್ನಡದ ಸಂಸ್ಕೃತಿಯನ್ನೂ ಪ್ರತಿಬಿಂಬಿಸುತ್ತಾ ಇದೆ. ಇಂತಹ ಕನ್ನಡ ಸಾಹಿತ್ಯ ಕಾವ್ಯ ಕ್ಷೇತ್ರದಲ್ಲಂತೂ ಅನುಭವದ ಆಳ ವಿಸ್ತಾರಗಳನ್ನು ಅಭಿವ್ಯಕ್ತಿಯ ಸಾಮರ್ಥ್ಯವನ್ನೂ ಒಳಗೊಂಡಿದೆ.

ಈ ಹಿನ್ನೆಲೆಯಲ್ಲಿ ಇಂತಹ ಸಮೃದ್ಧವೂ, ವೈವಿಧ್ಯಮಯವೂ ಆದ ಈ ಸಾಹಿತ್ಯದ ಮುಖ್ಯ ಘಟ್ಟಗಳನ್ನು ಗುರುತಿಸುವುದು ಈ ಗ್ರಂಥದ ಉದ್ದೇಶವಾಗಿದೆ. ವಾಸ್ತವವಾಗಿ ಈ ಗ್ರಂಥದ ಆರಂಭದ ಕಲ್ಪನೆಯನ್ನು ನೋಡಿದಾಗ, ಹೊಸಗನ್ನಡ ಸಾಹಿತ್ಯ ಪರಂಪರೆಯ ನಿರ್ಮಾಪಕರೆಂದು ಯೋಚಿಸಿದ ಈ ಗ್ರಂಥದಲ್ಲಿ ಕೇವಲ 34 ಪ್ರತಿಭಾವಂತರ ಪರಿಚಯ ಮಾಡಿಕೊಡುವ ದೃಷ್ಟಿಯನ್ನು ಇಟ್ಟುಕೊಳ್ಳಲಾಗಿತ್ತು.

ಇದಕ್ಕೆ ಸಂಬಂಧಿಸಿದಂತೆ ಲೇಖನಗಳಿಗಾಗಿ ಕರ್ನಾಟಕದ ವಿವಿಧ ಭಾಗಗಳಲ್ಲಿ ಇರುವ ವಿದ್ವಾಂಸ, ವಿಮರ್ಶಕರಿಂದ ವಿನಂತಿ ಮಾಡಿಕೊಂಡಾಗ ಪ್ರಬಂಧಗಳು ಬರುವುದು ಬಹಳ ವಿಳಂಬವಾಯಿತು. ಅಷ್ಟೇ ಅಲ್ಲ ಹಲವಾರು ಪ್ರಬಂಧಗಳು ಬರಲೇ ಇಲ್ಲ. ಈ ಹಂತದಲ್ಲಿ ಪ್ರೊ|| ನಿಸಾರ್ ಅಹಮದ್ ಅವರು ಅಕಾಡೆಮಿಯ ಅಧ್ಯಕ್ಷರಾಗಿದ್ದರು. ಈ ಗ್ರಂಥದ ಸಂಪಾದಕ ಮಂಡಲಿಯಲ್ಲಿ ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ, ಪ್ರೊ|| ಎಂ. ಎಚ್. ಕೃಷ್ಣಯ್ಯ, ಡಾ|| ಶ್ರೀನಿವಾಸ ಕುಲಕರ್ಣಿ ಇದ್ದೆವು. ಒಂದು ಸಭೆಯ ಅನಂತರ ಡಾ|| ಕುಲಕರ್ಣಿ ಅವರು ಕಾರಣಾಂತರಗಳಿಂದ ಅನಂತರದ ಸಭೆಗಳಿಗೆ ಬರಲೇ ಇಲ್ಲ. ಈ ಮಧ್ಯೆ ಮತ್ತೆ ಸಾಹಿತ್ಯ ಅಕಾಡೆಮಿಯ ಪುನರ್‌ರಚನೆಯಾಯಿತು. ಡಾ|| ಜಿ. ಎಸ್. ಶಿವರುದ್ರಪ್ಪ ಅವರು ಅಕಾಡೆಮಿಯ ಅಧ್ಯಕ್ಷರಾದರು. ಆಗ ಈ ಗ್ರಂಥದ ಬಗೆಗೆ ವಿಸ್ತಾರವಾದ ಚರ್ಚೆಯಾಯಿತು. ಹೀಗೆ ಸಮಾಲೋಚಿಸುವಾಗ ಮೊದಲು ಗಮನಿಸಿದ್ದ ಆ ಪಟ್ಟಿ ಯಾವುದೇ ರೀತಿಯಿಂದ ಪರಿಪೂರ್ಣ ಎನ್ನುವಂತೆ ಇರಲಿಲ್ಲ. ಕನ್ನಡದ ಅತ್ಯಂತ ಪ್ರಮುಖ ಸಾಹಿತಿ - ವಿದ್ವಾಂಸರನ್ನು ಆ ಪಟ್ಟಿ ಒಳಗೊಂಡಿರಲಿಲ್ಲ. ಈ ಹಿನ್ನೆಲೆಯಲ್ಲಿ 1950ರಿಂದ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆದವರನ್ನೂ ಒಳಗೊಂಡಂತೆ, ಕನ್ನಡದ ಸಾಹಿತ್ಯದ ಇತಿಹಾಸದಲ್ಲಿ ಪ್ರಮುಖ ಪಾತ್ರ ವಹಿಸಿದವರ ಒಂದು ಪಟ್ಟಿಯನ್ನು ತಯಾರಿಸಲಾಯಿತು. ಅದರಂತೆ ಕನ್ನಡದ ಪ್ರಮುಖ ಕವಿಗಳು - ಕಾದಂಬರಿಕಾರರು - ವಿಮರ್ಶಕರು - ನಾಟಕಕಾರರು ಹಾಗೂ ವಿದ್ವಾಂಸರನ್ನೂ ಒಳಗೊಂಡಂತೆ ಈ ಗ್ರಂಥದ ರೂಪರೇಖೆಗಳನ್ನು ನಿರ್ಣಯಿಸಲಾಯಿತು.

ವಾಸ್ತವವಾಗಿ ಈ ಅರವತ್ತೇಳು ಪ್ರತಿಭೆಗಳ ಪಟ್ಟಿ ಪರಿಪೂರ್ಣವಾದುದು ಎಂದು ಹೇಳುವುದು ಸಾಧ್ಯವಿಲ್ಲ. ಯಾವುದೇ ಮಾನದಂಡದಿಂದ ನೋಡಿದರೂ ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿದ ನೂರಾರು ಪ್ರತಿಭೆಗಳು ಇವೆ. ಈ ಮಹತ್ವದ ಲೇಖಕರ ಬಗ್ಗೆ ಮಾಡಬೇಕಾದ ಕೆಲಸಗಳು ಇನ್ನೂ ಇವೆ. ಮುಂದೆ ಈ ಕೆಲಸವನ್ನು ಮುಂದುವರೆಸಬಹುದು. ಈ ಗ್ರಂಥ ಹೊಸಗನ್ನಡ ಸಾಹಿತ್ಯದ ಚರಿತ್ರೆಯ ಆಕರ ಗ್ರಂಥವಾಗಬಹುದು, ಅಥವಾ ಹೊಸಗನ್ನಡ ಸಾಹಿತ್ಯದ ಪ್ರಮುಖ ಅಂಶಗಳನ್ನು ಸೂಚಿಸುವ ದಾರಿ ದೀಪವಾಗಬಹುದು ಅಷ್ಟೆ.

ಹೊಸಗನ್ನಡ ಸಾಹಿತ್ಯದ ಪರಿಚಯ ಮಾಡಿಕೊಡುವ ಗ್ರಂಥಕ್ಕೆ 'ಸಾಲು ದೀಪಗಳು' ಎಂಬ ಹೆಸರನ್ನು ಇಡಲಾಗಿದೆ. ಇಲ್ಲಿ 67 ಜನರನ್ನು ಕುರಿತು ಪ್ರಬಂಧಗಳನ್ನು ಬರೆಯಿಸಲಾಗಿದೆ. ವಿದ್ವಾಂಸರುಗಳಿಂದ ಪ್ರಬಂಧಗಳನ್ನು ಬರೆಸುವುದು ಎಷ್ಟು ಕಷ್ಟ ಎಂಬುದು ಎಲ್ಲರಿಗೂ ಗೊತ್ತಿರುವ ವಿಚಾರವೇ. ಎಷ್ಟೋ ವೇಳೆ ಲೇಖನಗಳು ಬಾರದೆ ಸಂಪಾದಕರೇ ಮತ್ತೆ ಕೆಲವು ಪ್ರಬಂಧಗಳನ್ನು ಬರೆಯಬೇಕಾಯಿತು.

ಇನ್ನು ಈ ಪ್ರಬಂಧಗಳನ್ನು ರೂಪಿಸುವಾಗ ಒಂದು ಆಶಯವನ್ನು ಸಮಿತಿ ಇಟ್ಟುಕೊಂಡಿತು. ಸುಮಾರು 10 ಪುಟಗಳ ಪ್ರಬಂಧದ ಮೊದಲಲ್ಲಿ ವ್ಯಕ್ತಿಯ ಪರಿಚಯ, ಅನಂತರ ಅವರ ಸಾಹಿತ್ಯಿಕ ಸಾಧನೆಗಳು, ಕೊನೆಗೆ ಆ ವ್ಯಕ್ತಿತ್ವದ ವಿಶಿಷ್ಟ ಕಾಣಿಕೆಯ ಉಲ್ಲೇಖ ಇರತಕ್ಕದ್ದು ಎಂದು ನಿರ್ಧರಿಸಲಾಯಿತು. ಇದೇ ಸೂಚನೆಯನ್ನು ಎಲ್ಲ ಲೇಖಕರಿಗೂ ನೀಡಲಾಯಿತು. ಈ ವಿಷಯದಲ್ಲಿ ಹತ್ತು ಪುಟಗಳ ಮಿತಿಯನ್ನು ಅಪೇಕ್ಷಿತವೆಂದು ಇಟ್ಟುಕೊಳ್ಳಲಾಯಿತು. ಬಹುಮಟ್ಟಿಗೆ ಈ ಸೂಚನೆಯನ್ನು ಪಾಲಿಸಲಾಗಿದೆ ಎಂದು ಭಾವಿಸಬಹುದು. ನಾವು ಕೊಟ್ಟ ಕಷ್ಟವನ್ನು ಅಂದರೆ ನೆನಪಿನ ಓಲೆಗಳನ್ನು ಬೇಸರವಿಲ್ಲದೆ ಸ್ವೀಕರಿಸಿ ನಮ್ಮೊಡನೆ ಸಹಕಾರ ನೀಡಿದ ಎಲ್ಲ ಪ್ರಬಂಧಕಾರರಿಗೂ ಸಮಿತಿಯು ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಈ ಗ್ರಂಥದ ಸಂಪಾದಕ ಮಂಡಲಿಯಲ್ಲಿರಲು ಮೊದಲಿಗೆ ಅವಕಾಶ ನೀಡಿದ ಪ್ರೊ. ಕೆ.ಎಸ್. ನಿಸಾರ್ ಅಹಮದ್ ಅವರನ್ನೂ ಅನಂತರ ಅದೇ ಅವಕಾಶವನ್ನು ಮುಂದುವರಿಸಿಕೊಟ್ಟ ಡಾ|| ಜಿ. ಎಸ್. ಶಿವರುದ್ರಪ್ಪ ಅವರನ್ನೂ ಹೃತ್ಪೂರ್ವಕವಾಗಿ ವಂದಿಸುತ್ತೇವೆ.

ಈ ಗ್ರಂಥದ ಕೊನೆಗೆ ಎರಡು ಅನುಬಂಧಗಳನ್ನು ನೀಡಲಾಗಿದೆ. ಮೊದಲನೆಯ ಅನುಬಂಧದಲ್ಲಿ 'ಸಾಲು ದೀಪ'ದ ಬೆಳಕು ನೀಡಿದ ವ್ಯಕ್ತಿಗಳ ಭಾವಚಿತ್ರಗಳನ್ನೂ, ಅವರ ಬದುಕಿನ ಮಹತ್ವದ ಕೊಡುಗೆಗಳ ವಿವರಗಳನ್ನೂ ಕೊಡಲಾಗಿದೆ. ಹೊಸಗನ್ನಡ ಸಾಹಿತ್ಯವನ್ನು ಪರಿಚಯ ಮಾಡಿಕೊಡಲಿರುವ ಇದು 'ತೋರು ದೀಪ' ಎಂಬ ಆಶಯ ನಮ್ಮದು. ಎರಡನೆಯ ಅನುಬಂಧದಲ್ಲಿ ಲೇಖಕರ ವಿಳಾಸ ನೀಡಲಾಗಿದೆ.

ಪ್ರತಿಭಾವಂತರನ್ನು ಯಾವ ಕ್ರಮದಲ್ಲಿ ಇರಿಸಿಕೊಳ್ಳಬೇಕು ಎಂಬ ಪ್ರಶ್ನೆ ಬಂದಾಗ ವಯಸ್ಸಿನ ಹಿರಿಮೆಯನ್ನಷ್ಟೆ ಆಧಾರವಾಗಿ ಇಟ್ಟುಕೊಂಡು ಈ ಕಾರ್ಯವನ್ನು ನಿರ್ವಹಿಸಲಾಗಿದೆ. ಅದೇ ಕ್ರಮದಲ್ಲಿ ಅನುಬಂಧವನ್ನೂ ಸಿದ್ಧಪಡಿಸಲಾಗಿದೆ. ಸಮೃದ್ಧವಾದ ಒಂದು ಸಾಹಿತ್ಯದ ಪ್ರಮುಖ ವ್ಯಕ್ತಿಗಳನ್ನು ಪರಿಚಯ ಮಾಡಿ ಕೊಡಲು ಹೋದಾಗ, ಎಲ್ಲ ಪ್ರಮುಖರನ್ನೂ ಗುರುತಿಸಲು ಹೋದಾಗ ಆಗಬಹುದಾದ ತೊಂದರೆ ನಮಗೂ ಆಗಿದೆ. ಹೀಗಾಗಿ ಇದನ್ನು 'ಸಾಲು ದೀಪ'ಗಳ ನಾಂದಿ ಎಂದು ಭಾವಿಸಬಹುದು.

ಈ ಸಂಪಾದನಾ ಕಾರ್ಯದಲ್ಲಿ ನೆರವಾದ ಸಾಹಿತ್ಯ ಅಕಾಡೆಮಿಯ ರಿಜಿಸ್ಟ್ರಾರ್ ಶ್ರೀ ಡಿ. ಕೆ. ಶ್ಯಾಮಸುಂದರರಾವ್ ಅವರಿಗೂ ಆಕಾಡೆಮಿಯ ಉಳಿದ ಸದಸ್ಯರುಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇವೆ. ಗ್ರಂಥ ಇಷ್ಟು ವರ್ಷಗಳ ಮೇಲಾದರೂ ಪ್ರಕಟಣೆಯ ಹಂತಕ್ಕೆ ಮುಟ್ಟಿದ್ದು ಡಾ. ಶಿವರುದ್ರಪ್ಪನವರ ಮತ್ತು ಶ್ರೀ ಶ್ಯಾಮಸುಂದರರಾವ್ ಅವರ ವಿಶೇಷವಾದ ಆಸಕ್ತಿಯಿಂದಾಗಿ ಎಂಬುದನ್ನು ಹೇಳದಿದ್ದರೆ ಕರ್ತವ್ಯಲೋಪವಾದೀತು ಎಂದು ಭಾವಿಸುತ್ತೇವೆ.

ಜಿ. ಎಸ್. ಸಿದ್ಧಲಿಂಗಯ್ಯ
ಎಂ.ಎಚ್. ಕೃಷ್ಣಯ್ಯ

## ಕೃತಜ್ಞತೆಗಳು (ಮೊದಲನೆ ಮುದ್ರಣ)

ಡಾ|| ಜಿ. ಎಸ್. ಶಿವರುದ್ರಪ್ಪನವರು ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ಪದವನ್ನು ಧಾರಣಮಾಡಿದ ನಂತರದ ಈ ಮೂರು ವರ್ಷಗಳ ಅವಧಿಯಲ್ಲಿ ಅಕಾಡೆಮಿಯು ಸಾಹಿತ್ಯಕ ಚಟುವಟಿಕೆಗಳ ಜೊತೆಗೇ ಗ್ರಂಥ ಪ್ರಕಾಶನ ಕಾರ್ಯದಲ್ಲೂ ಅಗಾಧವಾದ ಸಾಧನೆಯನ್ನು ಮಾಡಿರುವುದೂ, 50ಕ್ಕೂ ಹೆಚ್ಚು ಸಂಖ್ಯೆಯ ಗ್ರಂಥಗಳು ಹೊರಬಂದಿರುವುದೂ ಈಗಾಗಲೇ ಸುವಿದಿತವಾದ ಸಂಗತಿಯಾಗಿದೆ. ಅಕಾಡೆಮಿಯ ಇತಿಹಾಸದಲ್ಲಿ ಹಾಗೂ ಸಾಹಿತ್ಯ ಕೃತಿಗಳ ಪ್ರಕಟಣ ಕ್ಷೇತ್ರದಲ್ಲಿ ಇದೊಂದು ಚರಿತ್ರಾರ್ಹವಾದ ಅವಧಿಯೆನ್ನಬೇಕು. ಇತ್ತೀಚೆಗಷ್ಟೇ (ಏಪ್ರಿಲ್ ' 90)'ಭಾರತೀಯ ಸಾಹಿತ್ಯ ಸಮೀಕ್ಷೆ'ಯಂತಹ ಎರಡು ಬೃಹತ್ ಸಂಪುಟಗಳನ್ನು ಪ್ರಕಟಿಸಿದ ಅಕಾಡೆಮಿಯು ಇದೀಗ 'ಸಾಲು ದೀಪಗಳು' ಎಂಬ ಈ ಕೃತಿಯನ್ನು ಸಂತೋಷದಿಂದ ಪ್ರಕಟಿಸುತ್ತಿದೆ. ಸಾಹಿತ್ಯ ಕ್ಷೇತ್ರದ 67 ಮಂದಿ ಧುರೀಣರ ಜೀವನ - ಕೃತಿಗಳ ಮಾಹಿತಿಯನ್ನೊಳಗೊಂಡ ಈ ಗ್ರಂಥ ಸಾಹಿತ್ಯಾಸಕ್ತರೆಲ್ಲರಿಗೆ ಆಕರ ಗ್ರಂಥವಾಗಬಲ್ಲ ಉಪಯುಕ್ತ ಕೃತಿ ಎಂಬ ವಿಶ್ವಾಸ ನಮ್ಮದು. ಸುಮಾರು ನಾಲ್ಕು ವರ್ಷಗಳ ಹಿಂದೆಯೇ ಈ ಕೃತಿಯನ್ನು ಸಿದ್ಧಪಡಿಸುವ ಯೋಜನೆಯೊಂದು ರೂಪಿತವಾಗಿತ್ತಾದರೂ ಅದು ಕಾರ್ಯಗತವಾಗದೆ ನೆನೆಗುದಿಯಲ್ಲಿತ್ತಲ್ಲದೆ, ಈಗಿನಷ್ಟು ಸಮಗ್ರವೂ, ವ್ಯಾಪಕವೂ ಆದ ರೂಪುರೇಷೆಗಳಿಂದ ಕೂಡಿರಲಿಲ್ಲ. ಡಾ|| ಜಿ.ಎಸ್.ಎಸ್. ರವರ ಅಧಿಕಾರಾವಧಿಯಲ್ಲಿ ಈ ಯೋಜನೆ ಚಾಲನೆಯನ್ನು ಪಡೆಯಿತಲ್ಲದೆ ಈ ಕೃತಿಯನ್ನು ಪರಿಷ್ಕಾರಪೂರ್ಣವಾಗಿ ಸಿದ್ಧಪಡಿಸಿಕೊಡಲು ಮಾನ್ಯ ಅಧ್ಯಕ್ಷರ ಪ್ರಧಾನ ಸಂಪಾದಕತ್ವದಲ್ಲಿ ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ ಹಾಗೂ ಪ್ರೊ|| ಎಂ. ಎಚ್. ಕೃಷ್ಣಯ್ಯ ಇವರನ್ನೊಳಗೊಂಡ ಒಂದು ಸಂಪಾದಕ ಮಂಡಲಿ ರಚಿತವಾಯಿತು. ಈ ವಿದ್ವಾಂಸರು ತುಂಬಾ ಮುತುವರ್ಜಿ ವಹಿಸಿ ಈ ಗ್ರಂಥವನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಹಲವಾರು ಮಂದಿ ಗಣ್ಯ ಲೇಖಕರು ಈ ಗ್ರಂಥ ಸಿದ್ಧವಾಗುವಲ್ಲಿ ಅಮೂಲ್ಯವಾದ ಸಹಕಾರ ನೀಡಿದ್ದಾರೆ. ರಶ್ಮಿ ಮುದ್ರಣದ ಶ್ರೀ ಎಂ. ರಾಮಕೃಷ್ಣ ಹಾಗೂ ಸಿಬ್ಬಂದಿ ವರ್ಗದವರು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿದ್ದಾರೆ. ಈ ಕೃತಿಯ ರೂಪಣ ಕಾರ್ಯದಲ್ಲಿ ನೆರವಾದ ಎಲ್ಲರಿಗೂ ಅಕಾಡೆಮಿಯ ಪರವಾಗಿ ಗೌರವ ಪೂರ್ವಕ ವಂದನೆಗಳು ಸಲ್ಲುತ್ತವೆ.

**ಡಿ.ಕೆ. ಶ್ಯಾಮಸುಂದರರಾವ್**
ರಿಜಿಸ್ಟ್ರಾರ್
ಕರ್ನಾಟಕ ಸಾಹಿತ್ಯ ಅಕಾಡೆಮಿ

## ಪರಿವಿಡಿ

# ಫರ್ಡಿನಾಂಡ್ ಕಿಟೆಲ್

ವಿಲ್ಯಂ ಮಾಡ್ತ

### ಉಪಕ್ರಮ

ಫರ್ಡಿನಾಂಡ್ ಕಿಟೆಲರು (1832-1903) ಕನ್ನಡವನ್ನು ಶ್ರೀಮಂತಗೊಳಿಸಿದ ಅಗ್ರಗಣ್ಯ ಕ್ರೈಸ್ತ ಮಿಶನರಿಗಳಲ್ಲಿ ಪ್ರಾತಃಸ್ಮರಣೀಯರು. ಹತ್ತೊಂಬತ್ತನೆಯ ಶತಮಾನದಲ್ಲಿ ತಮ್ಮ ತಾಯ್ನಾಡಾದ ಜರ್ಮನಿಯಿಂದ ಬಾಸೆಲ್ ಮಿಶನ್ ಮೂಲಕ ನಾಡಿಗೆ ಪೂಜ್ಯರು ಬಂದು ಕನ್ನಡ ಭಾಷೆಯನ್ನು ತನ್ನ ಭಾಷೆಯನ್ನಾಗಿ ಸ್ವೀಕರಿಸಿ, ಕನ್ನಡದಲ್ಲಿ ಸರ್ವಸಂಗ್ರಾಹಕ ವಿವರಣಾತ್ಮಕ ಶಬ್ದಕೋಶ, ಸಾಹಿತ್ಯ ರಚನೆ, ಪಠ್ಯಪುಸ್ತಕ ನಿರ್ಮಾಣ, ವ್ಯಾಕರಣ ಗ್ರಂಥಗಳು, ಗ್ರಂಥ ಸಂಪಾದನೆ, ಛಂದಸ್ಸು, ಸಾಹಿತ್ಯ ಚರಿತ್ರೆ, ಅನ್ಯಧರ್ಮೀಯ ಅಧ್ಯಯನ ಮೊದಲಾದ ವಿದ್ವತ್-ಕ್ಷೇತ್ರಗಳಲ್ಲಿ ಮಹತ್ತರವಾದ ಸಾಧನೆಗೈದರು. ಇವರು ತಮ್ಮ ಗ್ರಂಥ ಹಾಗೂ ಲೇಖನಗಳ ಮೂಲಕ ಕನ್ನಡ ಭಾಷೆಯ ಹಾಗೂ ಸಾಹಿತ್ಯದ ವಿವಿಧ ಆಯಾಮಗಳಿಗೆ ತಮ್ಮ ವಿಶಿಷ್ಟ ಕೊಡುಗೆಗಳನ್ನಿತ್ತು ಕನ್ನಡದ ಸಿರಿಸಂಪದವನ್ನು ಬೆಳಗಿಸಿದವರು ಹಾಗೂ ಬೆಳೆಯಿಸಿದವರು. ತಮ್ಮ ಎಡಬಿಡದ ಸಂಶೋಧನೆಗಳಿಂದ, ನಿರಂತರ ಪರಿಶ್ರಮದಿಂದ, ನಿಚ್ಚಳ ವಿವೇಕದಿಂದ, ಆದರ್ಶ ಜೀವನ-ಶೈಲಿಯಿಂದ ಕನ್ನಡಿಗರೆಲ್ಲರಿಗೂ ಸದಾ ಸ್ಫೂರ್ತಿದಾಯಕ ಹಾಗೂ ಆದರ್ಶ ವ್ಯಕ್ತಿಯಾಗಿದ್ದಾರೆ, ಗುರುಗಳಾಗಿದ್ದಾರೆ.

ಪ್ರಸ್ತುತದಲ್ಲಿ ಬಹುಶ್ರುತ ಕಿಟಲರ ಜೀವನ ಹಾಗೂ ಸಾಧನೆಗಳ ಕಿರು ಪರಿಚಯವನ್ನು ಕೊಡಲು ಪ್ರಯತ್ನಿಸಲಾಗಿದೆ.

### ಜೀವನ ಪರಿಚಯ

ಜರ್ಮನಿಯ ರಾಸ್ಟರ್‌ಹಾಫ್ (Rosterhafe) ಎಂಬ ಊರಲ್ಲಿ 1832ರ ಏಪ್ರಿಲ್ ತಿಂಗಳ 8ರಂದು, ಫರ್ಡಿನಾಂಡ್ (Ferdinand) ಹುಟ್ಟಿದರೆಂದು ಆರಿಕ್ (Aurich) ಕಾಲೇಜಿನ ಪ್ರಾಂಶುಪಾಲರಾಗಿದ್ದ ರಾಟಾರ್ಟ್ (Rothart) ದಾಖಲಿಸಿದ್ದಾರೆ (Kolle, 26)[1]. ಫರ್ಡಿನಾಂಡರ ತಂದೆ, ಗಾಟಫ್ರೀಟ್ ಕ್ರಿಶ್ಚಿಯನ್ ಕಿಟೆಲ್ (Gottfried Chirstian Kittel); ತಾಯಿ ತೆಯೊಡೊವ್ ಹೆಲೆನ್ ಹಾಬರ್ಟ್ (Tejeddowe Helene Habbart). ಗಾಟಫ್ರೀಟ್, ಧರ್ಮಪಾಲಕರು (Pastor).

ಫರ್ಡಿನಾಂಡರ ಶಾಲಾ ಶಿಕ್ಷಣ ನಡೆದದ್ದು ತನ್ನ ಅಜ್ಜನ ಊರಾದ ಆರಿಕ್‌ನಲ್ಲಿ. ಆ ಬಳಿಕ ಅವರು ಸ್ವಿಸರ್ಲ್ಯಾಂಡಿನ ಬಾಸೆಲ್ ನಗರದ ಮಿಶನ್ ಸಂಸ್ಥೆಯನ್ನು 1850ರಲ್ಲಿ ಸೇರಿ 1853ರಲ್ಲಿ ಅಲ್ಲಿಯ ಶಿಕ್ಷಣವನ್ನು ಮುಗಿಸಿ, ಅದೇ ವರ್ಷ ಅಕ್ಟೋಬರ್ 16ರಂದು ಗುರುದೀಕ್ಷೆ ಪಡೆದುಕೊಂಡರು. ಆ ಬಳಿಕ ಒಂದು ವಾರದೊಳಗೆಯೇ ಮಿಶನ್ ಸಂಸ್ಥೆ ಅವರನ್ನು ಭಾರತಕ್ಕೆ ಕಳುಹಿಸಿತು. ಅವರು ಅಲೆಕ್ಸಾಂಡ್ರಿಯಾ ಮಾರ್ಗವಾಗಿ ಪ್ರಯಾಣ ಮಾಡಿ 1854ರ ಅಕ್ಟೋಬರ್ 20ರಂದು ಮಂಗಳೂರನ್ನು ತಲುಪಿದರು. ಆ ಬಳಿಕ ಧಾರವಾಡಕ್ಕೆ ಬಂದರು. ಅಗ ಅವರಿಗೆ 22 ವರ್ಷಪ್ರಾಯ. 1856ರ ನವೆಂಬರ್‌ವರೆಗೆ ಹುಬ್ಬಳ್ಳಿ-ಧಾರವಾಡದಲ್ಲಿ ಅವರಿಗೆ ಕೊಟ್ಟ ಕೆಲಸದಲ್ಲಿ ಕಾಯಾ ವಾಚಾ ಮನಸಾ ಕಿಟೆಲ್‌ರು ನಿರತರಾಗಿದ್ದರು.

ಕಿಟೆಲರಿಗೆ ಹೀಬ್ರೂ, ಗ್ರೀಕ್, ಲ್ಯಾಟಿನ್, ಫ್ರೆಂಚ್ ಹಾಗೂ ಇಂಗ್ಲೀಷ್ ಭಾಷೆಗಳಲ್ಲಿ ಪ್ರಾವೀಣ್ಯತೆ ಇತ್ತು. ಅದೇ ಮಟ್ಟದಲ್ಲಿ ಸ್ಥಳೀಯ ಜನ ಭಾಷೆಯಾದ ಕನ್ನಡವನ್ನು ಕಲಿಯಬೇಕೆಂಬ ಆಸೆ ಉಂಟಾಯಿತು. ಈ ಕಾರಣಕ್ಕಾಗಿ ಕಿಟೆಲರು ಧಾರವಾಡದಿಂದ ಶಿಕ್ಷಣಕ್ಕೆ ಹೆಸರುವಾಸಿಯಾದ ಮಂಗಳೂರಿಗೆ ಹೋದರು. ಅಲ್ಲಿ ಅತ್ಯುತ್ಸಾಹದಿಂದ ಕನ್ನಡ ಅಧ್ಯಯನ ಆರಂಭಿಸಿದರು. ಕನ್ನಡದ ಜೊತೆಜೊತೆಯಲ್ಲಿ ಸಂಸ್ಕೃತ, ತುಳು, ಮಲಯಾಳಂ ಭಾಷೆಗಳನ್ನೂ ಪರಿಚಯಿಸಿಕೊಂಡರು.

ಜರ್ಮನ್ ಮಾತೃಭಾಷಿಗಳಾದ ಕಿಟೆಲರು ಕನ್ನಡಾದಿ ಹಲವಾರು ದ್ರಾವಿಡ ಭಾಷೆಗಳನ್ನು ಕಲಿತು ಅವುಗಳನ್ನು ತಮ್ಮ ಸಂಶೋಧನೆಯಲ್ಲಿ ಹಾಗೂ ಕೃತಿರಚನೆಯಲ್ಲಿ ಬಳಸಿದುದನ್ನು ಗಮನಿಸಿದರೆ ಭಾಷಾ ಕಲಿಕೆಯಲ್ಲಿ ಮಾತೃಭಾಷಾ ಮಾಧ್ಯಮಕ್ಕಿಂತ, ವಿದ್ಯಾರ್ಥಿಯಲ್ಲಿರಬೇಕಾದ ಮನೋಧೋರಣೆ ಹಾಗೂ ಶಿಕ್ಷಕರಲ್ಲಿರಬೇಕಾದ ಯೋಗ್ಯತೆಗಳೇ ಪ್ರಮುಖವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

1860ರ ನವೆಂಬರ್‌ದಲ್ಲಿ ಮಂಗಳೂರಿನಲ್ಲಿ ಪೌಲಿನ್ ಈತ್ (Pauline Eith) ಎಂಬ ಜರ್ಮನ್ ಕನ್ಯೆಯೊಡನೆ ಕಿಟೆಲರ ವಿವಾಹವಾಯಿತು. ವಿವಾಹದ ಸುಮಾರು ನಾಲ್ಕು ವರ್ಷಗಳಲ್ಲಿಯೇ ಅವರು ತಮ್ಮ ಪತ್ನಿಯನ್ನು ಕಳೆದುಕೊಳ್ಳಬೇಕಾಯಿತು. ಪತ್ನಿಯ ಸಾವಿನಿಂದ ಕಿಟೆಲರು ಕುಗ್ಗಿದರು. ಇಲ್ಲಿಯ ಹವೆಯೂ ಅವರನ್ನು ಕಾಡುತ್ತಿತ್ತು. ಆರೋಗ್ಯವನ್ನು ಸುಧಾರಿಸಿಕೊಳ್ಳುವ ನಿಮಿತ್ತ ತಮ್ಮ ಇಬ್ಬರು ಗಂಡುಮಕ್ಕಳೊಂದಿಗೆ ಕಿಟೆಲ್ ಯುರೋಪಿನ ಪ್ರವಾಸ ಕೈಗೊಂಡರು. 1866ರಲ್ಲಿ ತಮ್ಮ ಅಗಲಿದ ಪತ್ನಿಯ ತಂಗಿಯಾದ ಜೂಲಿ (Julie)ಯನ್ನು ಮದುವೆಯಾದರು. 1883-84ರಲ್ಲಿ ಧಾರವಾಡದ ಬಾಸೆಲ್ ಮಿಶನ್ ಹೈಸ್ಕೂಲಿನ ಪ್ರಾಂಶುಪಾಲರಾಗಿ ಕಿಟೆಲರು ಕೆಲಸ ಮಾಡಿದರು. 1886ರ ಅಕ್ಟೋಬರ್ 13ರಂದು ಅವರು ಧಾರವಾಡದಿಂದ ಮಡಿಕೇರಿಗೆ ಹೋದರು.

ಕಿಟೆಲರ ಚಿರಸ್ಮರಣೀಯ ಕೃತಿಯಾದ ಕನ್ನಡ-ಇಂಗ್ಲೀಷ್ ಡಿಕ್ಶನರಿ (1894)ಯನ್ನು ಅಂದು ಭಾರತದಲ್ಲಿ ಯಾರೂ ಗಮನಿಸದಿದ್ದರೂ ಜರ್ಮನಿಯ ಟ್ಯುಬಿಂಗನ್ ವಿಶ್ವವಿದ್ಯಾಲಯ ಅದನ್ನು ಗಮನಿಸಿ ಕಿಟೆಲರಿಗೆ ಗೌರವ ಡಾಕ್ಟರೇಟ್ ಪದವಿಯನ್ನಿತ್ತು ಕೃತಾರ್ಥಗೊಂಡಿತು. ಕನ್ನಡದ ಕಾರ್ಯಕ್ಕೆ ಸಂದ ಪ್ರಪ್ರಥಮ ಡಾಕ್ಟರೇಟ್ ಪದವಿಯಿದು.

ಕಿಟೆಲರ ಕೊನೆಯ ಗ್ರಂಥವಾದ A Grammar of the Kannada Language (1903)ಯನ್ನು ತನ್ನ ಕೈಸೇರಿದ ಕೆಲವೇ ದಿನಗಳಲ್ಲಿ ಡಿಸೆಂಬರ್ 19,1903ರಂದು ತಮ್ಮ ಮಡದಿ ಮಕ್ಕಳ ಸಮ್ಮುಖದಲ್ಲಿ, 77ನೆಯ ವಯಸ್ಸಿನಲ್ಲಿ ಕಿಟೆಲರ ಜೀವಾತ್ಮ ಪರಮಾತ್ಮನಲ್ಲಿ ಐಕ್ಯವಾಯಿತು.

### ಸಾಹಿತ್ಯಕ ಸಾಧನೆಗಳು

ಸರ್ವಾರ್ಪಣಭಾವದಿಂದ ಹಾಗೂ ಅತ್ಯುತ್ಸಾಹದಿಂದ ಕನ್ನಡ ಕಲಿತ ಕಿಟೆಲರಿಗೆ ಕನ್ನಡದಲ್ಲಿ ಸಾಹಿತ್ಯ ರಚಿಸುವ ಅಭಿರುಚಿ ಉಂಟಾಯಿತು. ಈ ಸಾಹಸದ ಪ್ರಥಮ ಹೆಜ್ಜೆಯಾಗಿ 1855ರಲ್ಲಿ ಅವರು ಬೈಬಲಿನ ಎರಡನೆಯ/ಹೊಸ ಒಡಂಬಡಿಕೆ (The Second/New Testament)/ ಯ ಕೆಲವು ಭಾಗಗಳನ್ನು ಭಾಷಾಂತರಿಸಿದರು. 1858ರಿಂದ 'ಸಂಸಾರ ಕ್ರಮ', 'ಉಭಯ

ಮಾರ್ಗ', 'ನಂಬಿ ಜೀವಿಸಿರಿ', 'ಡೇನಿಯಲನೂ ಅವನ ಜತೆಗಾರರೂ' ಎಂಬಿತ್ಯಾದಿ ಪ್ರಬಂಧಗಳನ್ನು ಪ್ರಕಟಿಸಿದರಲ್ಲದೆ ಹಲವಾರು ಉತ್ತಮ ಗುಣಮಟ್ಟದ ಪಠ್ಯಪುಸ್ತಕಗಳನ್ನೂ ಬರೆದರು. ಅವು ಹಲವು ಬಾರಿ ಪುನರ್ಮುದ್ರಣಗೊಂಡಿವೆ. ಇವು ಅವರ ಧಾರ್ಮಿಕ ಮೌಲ್ಯಗಳಿಂದಲೂ ಉತ್ತಮ ನಿರೂಪಣಾ ಶೈಲಿಯಿಂದಲೂ ವಾಚಕರಲ್ಲಿ ಮತ್ತು ವಿದ್ಯಾರ್ಥಿಗಳಲ್ಲಿ ಅಭಿರುಚಿ ಹುಟ್ಟಿಸಿ ಪ್ರಸಿದ್ಧವಾದುದರಿಂದ ಅವುಗಳ ಸಹಸ್ರಾರು ಪ್ರತಿಗಳು ಮಾರಾಟವಾದವು.

ಕಿಟೆಲರ ಸ್ವಂತ ಪದ್ಯ ಕೃತಿ 'ಕಥಾಮಾಲೆ' 1862ರಲ್ಲಿ ಪ್ರಕಟವಾಯಿತು. ಅದು ಯೇಸುವಿನ ಜೀವನ ವೃತ್ತಾಂತದ ಕಥನ ರೂಪ. ಇದರಲ್ಲಿ 280 ಭಾಮಿನಿ ಷಟ್ಪದಿ, 75 ವಾರ್ಧಕ ಷಟ್ಪದಿ ಹಾಗೂ 175 ಪೂರ್ವೀರಾಗದ ಹಾಡುಗಳಿವೆ. ಇದೊಂದು ಅಪೂರ್ವವಾದ ಖಂಡಕಾವ್ಯ. 'ಶ್ರೀ ಯೇಹೋವಾಯ ನಮಃ' ಎಂದು ಶುದ್ಧ ದೇಶೀ ಶೈಲಿಯಲ್ಲಿ ಕಾವ್ಯದ ಆರಂಭ ಇದೆ. 1862ರಲ್ಲಿ ಮಂಗಳೂರಿನ 'ವಿಚಿತ್ರ ವರ್ತಮಾನ ಸಂಗ್ರಹ' ಎಂಬ ಪತ್ರಿಕೆಯ ಸಂಪಾದಕರಾಗಿಯೂ, 1863ರಲ್ಲಿ ರೆ.ಜಾನ್ ಮ್ಯಾಕ್ (Rev.John Mack) ನಡೆಯುತ್ತಿದ್ದ 'ಸಚಿತ್ರ ಕನ್ನಡ ಮಾಸಪತ್ರಿಕೆ' ಯ ಸಂಪಾದಕರಾಗಿಯೂ ಕಿಟೆಲ್ ದುಡಿದಿದ್ದಾರೆ. 1863ರಲ್ಲಿ ಬರೆದ 'ಪರಮಾತ್ಮ ಜ್ಞಾನ' ಎಂಬ ಗ್ರಂಥದಲ್ಲಿ ಕ್ರೈಸ್ತ ದೈವಶಾಸ್ತ್ರ (Christian Theology)ವನ್ನು ಸ್ಥೂಲವಾಗಿ ಸಂಭಾಷಣಾ ಕ್ರಮದಲ್ಲಿ 92 ಪುಟಗಳಲ್ಲಿ ನಿರೂಪಿಸಿ ತಮ್ಮ ಧಾರ್ಮಿಕ ಶ್ರದ್ಧೆ ಅಭಿಮಾನಗಳನ್ನು ಕಿಟೆಲ್ ತೋರ್ಪಡಿಸಿದ್ದಾರೆ. ಇವರು ಕ್ರೈಸ್ತ ಧರ್ಮತತ್ವಗಳ ಮೇಲೆ ಅಸಾಧಾರಣ ಪಾಂಡಿತ್ಯವನ್ನು ಗಳಿಸುವುದರ ಜೊತೆಗೆ, ಹಿಂದೂಧರ್ಮದ ವೇದೋಪನಿಷತ್ತುಗಳ ಹಾಗೂ ದ್ವೈತಾದ್ವೈತಾದಿ ಸಿದ್ಧಾಂತಗಳ ಬಗೆಗೂ ಆಳವಾದ ಜ್ಞಾನವನ್ನು ಸಂಪಾದಿಸಿದ್ದರು.

1864ರಲ್ಲಿ ಬಿ.ಎಲ್.ರೈಸ್‌ರವರ 'ಅರುಣೋದಯ' ಪತ್ರಿಕೆಯ ಸಹಸಂಪಾದಕರಾಗಿ ಕಿಟೆಲ್ ದುಡಿದಿದ್ದಾರೆ, ಮಾತ್ರವಲ್ಲದೆ ಭಾರತದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ವಿಷಯಗಳ ಮೇಲೆ ವಿದ್ವತ್ಪೂರ್ಣ ಲೇಖನಗಳನ್ನು ಬರೆದಿದ್ದಾರೆ. ಅಷ್ಟೇ ಅಲ್ಲದೆ ಬೈಬಲ್ ಲೇಖನಗಳನ್ನೂ ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದ ಲೇಖನಗಳನ್ನೂ ಬೆಳಕಿಗೆ ತಂದಿದ್ದಾರೆ. ಕ್ರೈಸ್ತ ಧರ್ಮಸಭೆಯ ಚರಿತ್ರೆಯನ್ನೂ ಧಾರವಾಹಿಯಾಗಿ ಪ್ರಕಟಿಸಿದ್ದಾರೆ. ಕನ್ನಡದೊಂದಿಗೆ ಇಂಗ್ಲಿಷ್ ಮತ್ತು ಜರ್ಮನ್ ಭಾಷೆಗಳಲ್ಲಿ ಅವರು ಬರೆದ ಸಾಹಿತ್ಯ ವಿಪುಲವಾಗಿದೆ. ಹೆನ್ರಿ ಮೊರಿಸ್ (Henry Morris) ಬರೆದ History of England ಎಂಬ ಚರಿತ್ರೆಯ ಗ್ರಂಥವನ್ನು 1864ರಲ್ಲಿ ಕಿಟೆಲರು ಕನ್ನಡಕ್ಕೆ ಅನುವಾದಿಸಿದರು. ಮದ್ರಾಸು ಸರಕಾರ ಅದನ್ನು ಪ್ರಕಟಿಸಿತು. ಅದೇ ವರ್ಷ ಅವರ 'ಪಂಚತಂತ್ರ' ಬೆಳಕನ್ನು ಕಂಡಿತು.

1865ರಲ್ಲಿ "Coorg Superstitions" ಎಂಬ ಲೇಖನದಲ್ಲಿ ಕೊಡಗಿನಲ್ಲಿಯ ಭೂತಾರಾಧನೆಯನ್ನು ಪ್ರಸ್ತಾಪಿಸಿ ಗುಳಿಗ, ಕುಟ್ಟಿಚಾತ, ಕಲ್ಲುರ್ಟಿ, ಪಂಜುರ್ಲಿ, ಕರಿಂಗಾಳಿ ಮೊದಲಾದ ಭೂತಗಳ ಆರಾಧನೆಯನ್ನು ಐತಿಹಾಸಿಕವಾಗಿ ಕಿಟೆಲ್ ಪರಿಶೀಲಿಸಿದ್ದಾರೆ. 'ಯೇಸು ಕ್ರಿಸ್ತನ ಶ್ರಮೇ ಚರಿತ್ರೆ' (1865)ಯಲ್ಲಿ ಯೇಸು ಅನ್ಯರಿಗಾಗಿ ಪಟ್ಟ ಶ್ರಮದ ಕಥೆ 64 ಪುಟಗಳ ವಿಸ್ತಾರದಲ್ಲಿದೆ. ಇದು ಸರಳ ಕನ್ನಡ ಗದ್ಯಶೈಲಿಗೆ ಉತ್ತಮ ಉದಾಹರಣೆಯಾಗಿದೆ.

1865ರಲ್ಲಿ ಕಿಟೆಲ್ಲರಿಂದ 'ಕನ್ನಡ ಸಂಗೀತಗಳು' ಎಂಬ ಸಂಕಲನ ರಚಿತವಾಗಿ ಬೆಳಕನ್ನು ಕಂಡಿತು. ಇದರಲ್ಲಿ ದೇಶೀಯ ಕವಿಗಳ ಪದ್ಯಗಳ ಸಂಗ್ರಹವಲ್ಲದೆ ತಮ್ಮ ಸ್ವಂತ ಧಾರ್ಮಿಕ ಕವನಗಳೂ ಇದ್ದುವು. 1865ರಲ್ಲಿ ಆರಂಭಗೊಂಡ 'ವೃತ್ತಾಂತ ಬೋಧಿನಿ' ಪತ್ರಿಕೆಯಲ್ಲಿ ಕಿಟೆಲರು ಕನ್ನಡ ಸಾಹಿತ್ಯ ಮತ್ತು ಚರಿತ್ರೆಯನ್ನು ಕುರಿತ ಲೇಖನಗಳನ್ನು ಬರೆದಿದ್ದಾರೆ. 1865ರಲ್ಲಿ ಕಿಟೆಲರು 'ಸಂಕ್ಷೇಪ ವ್ಯಾಕರಣ' ಎಂಬ 104 ಪುಟಗಳ ಕನ್ನಡ ವ್ಯಾಕರಣವನ್ನು ಪ್ರಕಟಿಸಿ, ಆ ಬಳಿಕ ಅದನ್ನು ಪರಿಷ್ಕರಿಸಿ 'ಹಳೆಗನ್ನಡ ವ್ಯಾಕರಣ ಸೂತ್ರಗಳು' ಎಂಬುದಾಗಿ 1866ರಲ್ಲಿ ಬೆಳಕಿಗೆ ತಂದರು. 1865ರಲ್ಲಿ ಬೆಳಕನ್ನು ಕಂಡ 'ಸಂಣ ಕರ್ಣಾಟಕ ಕಾವ್ಯಮಾಲೆ' ಎಂಬ ಕವನ ಸಂಗ್ರಹದಲ್ಲಿ 'ಬಸವ ಪುರಾಣ, ಪ್ರಭುಲಿಂಗಲೀಲೆ, ಕುಮಾರವ್ಯಾಸ ಭಾರತ, ಭಾಗವತ, ಗಿರಿಜಾ ಕಲ್ಯಾಣ ಇತ್ಯಾದಿ ಪ್ರಾಚೀನ ಕನ್ನಡ ಕವಿಗಳ ಪದ್ಯಗಳೊಂದಿಗೆ ತಮ್ಮ ಸ್ವಂತ ಕವನಗಳನ್ನು ಸೇರಿಸಿ, ಈ ಪದ್ಯಗಳಿಗೆ ಸಂಬಂಧಿಸಿದಂತೆ ವಿಸ್ತೃತ ಪದಕೋಶವನ್ನೂ ಕೂಡಿಸಿದ್ದರು. 1868ರ 'ಕರ್ಣಾಟಕ ವಾಗ್ವಿಧಾಯಿನಿ' ಸಾಹಿತ್ಯ ಪತ್ರಿಕೆಯಲ್ಲಿ ರೈಸ್, ಸ್ಯಾಂಡರ್ಸನ್ ಮೊದಲಾದವರೊಡನೆ ಸೇರಿಕೊಂಡು ಕನ್ನಡ ವ್ಯಾಕರಣವನ್ನು ಧಾರವಾಹಿಯಾಗಿ ಪ್ರಕಟಿಸಿದ್ದಾರೆ. 'ಕ್ರೈಸ್ತ ಸಭಾ ಚರಿತ್ರೆ' (1868)ಯಲ್ಲಿ ಕ್ರೈಸ್ತಸಭೆಯ ಉಗಮ ಮತ್ತು ಅದು ಬೆಳೆದುಬಂದ ರೀತಿಯನ್ನು 7 ಅಧ್ಯಾಯಗಳಲ್ಲಿ ವಿವರಿಸಲಾಗಿದೆಯಲ್ಲದೆ ಹಿಂದೂ ಧರ್ಮದ ತೌಲನಿಕ ವಿಚಾರಗಳೂ ಅಲ್ಲಿ ಇವೆ. ಇಲ್ಲಿಯ ಗದ್ಯ ವಿಶಿಷ್ಟವಾದುದು.

1871ರ ವೇಳೆಗೆ ಬಾಸೆಲ್ ಮಿಶನ್ ಸಂಸ್ಥೆ ಕಿಟೆಲ್‌ರ ಕನ್ನಡ ಭಾಷಾ ಪ್ರಭುತ್ವ ಹಾಗೂ ವಿದ್ವತ್ತನ್ನು ಗಮನಿಸಿ ಕನ್ನಡ-ಇಂಗ್ಲಿಷ್ ಶಬ್ದಕೋಶವನ್ನು ರಚಿಸಲು ಅವರನ್ನು ಒತ್ತಾಯಿಸಿತು. 1872ರಲ್ಲಿ ಪ್ರಕಟಗೊಂಡ 'ಯಜ್ಞ ಸುಧಾನಿಧಿ' ಎಂಬ ಪುಸ್ತಕದಲ್ಲಿ ಹಿಂದೂ ಹಾಗೂ ಕ್ರೈಸ್ತಧರ್ಮಗಳ ವಿವೇಚನೆಯನ್ನು ಮಾಡಿದ್ದಾರೆ. ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟು 'ಶಾಲಾ ವ್ಯಾಕರಣ'ವನ್ನೂ ಬರೆದು ಪ್ರಕಟಿಸಿದ್ದಾರೆ. 1872ರಲ್ಲಿ ಕಿಟೆಲರು 'ಮಂಗರಾಜ ನಿಘಂಟು' ಎಂಬ ಕೃತಿ ಹಾಗೂ ಕೃತಿಕಾರರ ಬಗೆಗೆ ಕೆಲವು ವಿಷಯಗಳನ್ನು ಪ್ರಥಮ ಸಲ ಕನ್ನಡಿಗರಿಗೆ ತಿಳಿಸಿದರು. ಅದೇ ವರ್ಷ ಕಿಟೆಲ್ ಕೇಶಿರಾಜನ 'ಶಬ್ದಮಣಿದರ್ಪಣ'ವನ್ನು 9 ಹಸ್ತಪ್ರತಿಗಳ ಆಧಾರದಿಂದ ಸಂಪಾದಿಸಿ ಅಲ್ಲಿಯ ಸೂತ್ರಗಳ ಸಾರಾಂಶವನ್ನು ಇಂಗ್ಲೀಷಿಗೆ ಭಾಷಾಂತರಿಸಿದ್ದರು. ಈ ಕೃತಿಯಲ್ಲಿ 26 ಪುಟಗಳ ಅತಿ ಉಪಯುಕ್ತ ಪ್ರಸ್ತಾವನೆ ಇದೆ. ಅದರಲ್ಲಿ ಕೇಶಿರಾಜ, ಅವನ ಕಾಲ, ಶಬ್ದಮಣಿದರ್ಪಣದ ಟೀಕಾಕಾರ, ತುಳು ಮತ್ತು ಬಡಗ ಭಾಷೆಗಳೊಡನೆ ಕನ್ನಡದ ತುಲನೆ ಇತ್ಯಾದಿ ವಿಚಾರಗಳು ಪ್ರಸ್ತಾಪವಾಗಿದ್ದು ಗ್ರಂಥ ಸಂಪಾದನೆಯಲ್ಲಿ ಅದೊಂದು ಅಪೂರ್ವ ಹಾಗೂ ಮಾರ್ಗದರ್ಶಿ ಕೃತಿಯಾಗಿದೆ. ಅದು ಪ್ರಕಟಗೊಂಡ ಬಳಿಕ ಕಿಟೆಲರು ಎಲ್ಲ ವಿದ್ವಾಂಸರ ಮನ್ನಣೆಗೆ ಪಾತ್ರರಾದರು. 1872ರಿಂದ ಅವರು ಇಂಗ್ಲೀಷಿನಲ್ಲಿ ಬರೆದ 24 ಅಮೂಲ್ಯ ಲೇಖನಗಳು Indian Antiquery ಎಂಬ ನಿಯತಕಾಲಿಕೆಯಲ್ಲಿ ಸಿಗುತ್ತವೆ. ಅವುಗಳಲ್ಲಿ ದ್ರಾವಿಡ ಸಂಖ್ಯಾವಾಚಕ ಗಳಲ್ಲದೆ ಹಲವಾರು ದ್ರಾವಿಡ ಪದಗಳ ನಿಷ್ಪತ್ತಿಯನ್ನು ಕುರಿತೂ ಚರ್ಚಿಸಿದ್ದಾರೆ. ಯುರೋಪಿಯನ್ ಭಾಷೆಗಳಲ್ಲಿಯೂ ಅವರು ಕನ್ನಡ ಹಾಗೂ ಇತರ ದ್ರಾವಿಡ ಭಾಷೆಗಳ ಬಗೆಗೆ ಲೇಖನಗಳನ್ನು ಬರೆದಿದ್ದಾರೆ.

1873ರಲ್ಲಿ ಮಂಗಳೂರು ಬಾಸೆಲ್ ಮಿಶನ್ ಪ್ರಕಟನಾಲಯದವರು ಕಿಟೆಲರು ಅನುವಾದಿಸಿದ 'ಹೊಸ ಒಡಂಬಡಿಕೆ'ಯನ್ನು ಬೆಳಕಿಗೆ ತಂದರು.

ಇದು ಅವರ ಹೆಸರುವಾಸಿ ಬೈಬಲ್ ಕೃತಿ. ಅದೇ ವರ್ಷ ಕರ್ನಾಟಕದ ವೈಷ್ಣವದಾಸರ ಬಗೆಗೆ ಸಂಶೋಧನೆ ನಡೆಯಿಸುತ್ತಾ ಪುರಂದರ, ಕನಕ, ಮಾಧವ, ವಿಠಲ, ವಿಜಯದಾಸ, ವೆಂಕಟದಾಸ ಮೊದಲಾದವರ ಕೃತಿಗಳನ್ನು ಸಂಗ್ರಹಿಸಿ, ಅವುಗಳಲ್ಲಿ ಕೆಲವನ್ನು ಇಂಗ್ಲೀಷಿಗೆ ಅವರು ಭಾಷಾಂತರಿಸಿದರು. 1875ರಲ್ಲಿ 'ಕರ್ನಾಟಕ ಕಾವ್ಯಮಾಲೆ' ಪ್ರಕಟಗೊಂಡಿತು. ಇದು 1868ರ 'ಸಂಣ ಕರ್ಣಾಟಕ ಕಾವ್ಯಮಾಲೆ'ಯ ವಿಸ್ತೃತ ರೂಪ. 1875ರಲ್ಲಿ ಕಿಟೆಲರು 14 ಹಸ್ತಪ್ರತಿಗಳ ನೆರವಿನಿಂದ ನಾಗವರ್ಮನ 'ಛಂದೋಂಬುಧಿ'ಯನ್ನು ಸಂಪಾದಿಸಿ ಮಂಗಳೂರು ಬಾಸೆಲ್ ಮಿಶನ್ ಮುದ್ರಾಣಾಲಯದಲ್ಲಿ ಮುದ್ರಿಸಿ ಪ್ರಕಟಿಸಿದರು. ಇದರಲ್ಲಿ ಸುದೀರ್ಘವಾದ, ಇಂಗ್ಲೀಷಿನಲ್ಲಿ ಬರೆದ ಮುನ್ನುಡಿಯೂ ಇದೆ. ಅದರಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ವಿಹಂಗಮ ನೋಟವಿದೆ. ಇಲ್ಲಿಯ ತನಕ ತಾಳೆಯೋಲೆಗಳಲ್ಲಿ ಅಡಗಿದ್ದ ಈ ಕೃತಿಯನ್ನು ಪ್ರಥಮ ಬಾರಿಗೆ ಮುದ್ರಿಸಿ ಪ್ರಕಟಿಸಿದ ಕೀರ್ತಿ ಕಿಟೆಲರಿಗೆ ಸಲ್ಲುತ್ತದೆ. ಈ ಕೃತಿಯ ವಿಷಯವಾಗಿ ಈ ಹಿಂದೆಯೇ ತನ್ನ 'ಕಾವ್ಯಮಾಲೆ' ಎಂಬ ಗ್ರಂಥದ ಮುನ್ನುಡಿಯಲ್ಲಿ ಸುದೀರ್ಘವಾದ ವಿವರಗಳನ್ನು ಕನ್ನಡದಲ್ಲಿಯೇ ಕೊಟ್ಟುದನ್ನು ಇಲ್ಲಿ ಸ್ಮರಿಸಬೇಕು. ಈ ಕೃತಿಯ ಸಂಪಾದನ ಕಾರ್ಯ ಕನ್ನಡ ಶಾಸ್ತ್ರೀಯ ಸಾಹಿತ್ಯಕ್ಕೆ ಮೂಲಮಾತೃಕೆಯಾಗಿದೆ. ಕನ್ನಡ ನಾಡಿನ ಜನತೆಯ, ಲಯ, ರಾಗ, ಸಂಪ್ರದಾಯಗಳನ್ನು ಕಲಿತು ಅವುಗಳ ಪ್ರಸಾರ ಮಾಡಬೇಕೇ ಹೊರತು ಪಾಶ್ಚಾತ್ಯ ಸಂಗೀತ ಹಾಗೂ ರೀತಿ ನೀತಿಗಳನ್ನು ಇಲ್ಲಿ ಹೇರಿಸುವುದು ಸಲ್ಲದೆಂಬುದು ಕಿಟೆಲರ ಸ್ಪಷ್ಟ ಅಭಿಪ್ರಾಯ. ಕನ್ನಡದಲ್ಲಿ ವೈಜ್ಞಾನಿಕ ರೀತಿಯ ಗ್ರಂಥ ಸಂಪಾದನೆ ಕಿಟೆಲ್ ಅವರಿಂದಲೇ ಆರಂಭವಾದುದರಿಂದ ಅವರೇ ಈ ಕ್ಷೇತ್ರದ ಪಿತಾಮಹರು.

1875ರಲ್ಲಿ "Lingayat Legends" ಎಂಬ ತಮ್ಮ ಸುದೀರ್ಘ ಲೇಖನದಲ್ಲಿ ವೀರಶೈವ ಧರ್ಮ, ಇತಿಹಾಸ ಮತ್ತು ಸಾಹಿತ್ಯದ ಬಗೆಗೆ ಅರ್ಥಗರ್ಭಿತವಾಗಿ ಬರೆದಿದ್ದಾರೆ. ಅದೇ ವರ್ಷ "Jaina, Vaishnava and Shaiva Literature" ಎಂಬ ಸಂಶೋಧಕನಾತ್ಮಕ ಲೇಖಕನದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ಸ್ಥೂಲ ಚಿತ್ರಣ ನೀಡಿದ್ದಾರೆ. ಇನ್ನೊಂದೆಡೆ ನಿಜಗುಣ ಶಿವಯೋಗಿ ವೀರಶೈವನೆಂದು ಆಧಾರಸಮೇತವಾಗಿ ತೀರ್ಮಾನಿಸಿದ್ದಾರೆ. 1876ರಲ್ಲಿ Washerman Virasena ಎಂಬ ಕಥೆಯ ಮೂಲಕ ವೀರಶೈವ ಪುರಾಣದ ಪರಿಚಯವನ್ನು ಕಿಟೆಲ್ ಮಾಡಿದ್ದಾರೆ. 1877ರಲ್ಲಿ 'ಕರ್ನಾಟಕ ಕಾವ್ಯಮಂಜರಿ'ಯನ್ನು ಪ್ರಕಟಿಸಿದರು. ಇದರಲ್ಲಿ ಅವರು ಹಳಗನ್ನಡದ ಸೊಗಸಾದ ಪದ್ಯಗಳನ್ನು ಆಯ್ದು, ಸ್ವಕವನಗಳನ್ನು ಸೇರಿಸಿದ್ದಾರಲ್ಲದೆ, ಟೀಕೆ, ಶಬ್ದಕೋಶ ಇತ್ಯಾದಿಗಳನ್ನು ಕೂಡಿಸಿದ್ದಾರೆ. 1877ರಲ್ಲಿ ಇಲ್ಲಿಯ ಹವೆಯ ಅನಾನುಕೂಲತೆಯಿಂದಾಗಿ ಕಿಟೆಲ್ ತಮ್ಮ ಶಬ್ದಕೋಶದ ಹಸ್ತಪ್ರತಿಯೊಂದಿಗೆ ಜರ್ಮನಿಗೆ ತೆರಳಿದರು.

1877ರಲ್ಲಿ "The Kongu Inscriptions" ಎಂಬ ಲೇಖನ ಬರೆಯುತ್ತಾ ಹಲವಾರು ರಾಜಕೀಯ ಹಾಗೂ ಭಾಷಾವೈಜ್ಞಾನಿಕ ಹಾಗೂ ಸ್ಥಳನಾಮಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಿ Indian Antiquery ಪತ್ರಿಕೆಯ 6ನೆಯ ಸಂಪುಟದಲ್ಲಿ ಪ್ರಕಟಿಸಿದ್ದಾರೆ.

1878ರಲ್ಲಿ 'ಕೆನರೀಸ್- ಇಂಗ್ಲೀಷ್ ಡಾಯಲಾಗ್' ಎಂಬ ಭಾಷಾಬೋಧನೆಗೆ ಸಂಬಂಧಿಸಿದ ಪುಸ್ತಕವನ್ನು ಬರೆದು ಶಿಕ್ಷಕರು ಕಲಿಸುವ ರೀತಿಯನ್ನು ಅಲ್ಲಿ ತೋರಿಸಿಕೊಟ್ಟಿದ್ದಾರೆ. 1880ರಲ್ಲಿ ಸಂಸ್ಕೃತ ಸಣ್ಣ ವ್ಯಾಕರಣ ಎಂಬ 106 ಪುಟಗಳ ಕಿರುಹೊತ್ತಗೆಯನ್ನು ಬರೆದರು. ಅದು ಬಹಳ ಜನಪ್ರಿಯವಾಗಿತ್ತು.

1882ರಲ್ಲಿ ಕಿಟೆಲ್ ಧಾರವಾಡಕ್ಕೆ ಬಂದು ಕನ್ನಡ-ಇಂಗ್ಲೀಷ್ ಶಬ್ದಕೋಶದ ರಚನಾಕಾರ್ಯವನ್ನು ಮುಂದುವರಿಸಿದರು. 1889ರಲ್ಲಿ 'ಹಳಗನ್ನಡ ವ್ಯಾಕರಣ ಸೂತ್ರಗಳು' ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್ಸಿನಿಂದ ಪ್ರಕಟವಾಯಿತು. ಇದು ಕನ್ನಡ ವ್ಯಾಕರಣದ ಸರಳ ನಿರೂಪಣೆಯಾಗಿದ್ದು ಅಲ್ಲಿಯ ಟಿಪ್ಪಣಿಗಳು ಇಂಗ್ಲೀಷಿನಲ್ಲಿವೆ. ಅದೇ ವರ್ಷ ಧಾರವಾಡದ ಅನೇಕ ವಿದ್ವಾಂಸರೊಂದಿಗೆ ವಿಚಾರ ವಿನಿಮಯ ನಡೆಯಿಸಿ 'ಕನ್ನಡ-ಇಂಗ್ಲೀಷ್ ಶಬ್ದಕೋಶ'ದ ಹಸ್ತಪ್ರತಿಯನ್ನು ಮುದ್ರಣಕ್ಕಾಗಿ ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್ಸಿಗೆ ಒಪ್ಪಿಸಿದರು. ಅದು 1894ರಲ್ಲಿ ಬೆಳಕನ್ನು ಕಂಡಿತು.

ಕಿಟೆಲ್ಲರ 'ಕನ್ನಡ-ಇಂಗ್ಲೀಷ್ ಶಬ್ದಕೋಶ' ಕನ್ನಡದ ಹಾಗೂ ಭಾರತೀಯ ಭಾಷೆಗಳಲ್ಲಿ ಅತ್ಯಂತ ಪ್ರಾಮಾಣಬದ್ಧವಾದ ಹಾಗೂ ವೈಜ್ಞಾನಿಕ ಪದ್ಧತಿಯನ್ನೊಳಗೊಂಡ ಸರ್ವಸಂಗ್ರಾಹಕ ವಿವರಣಾತ್ಮಕ ಶಬ್ದಕೋಶವಾಗಿದೆ. ಈ ಮೇರುಕೃತಿಯಲ್ಲಿ 1762 ಬೃಹತ್ ಗಾತ್ರದ ಪುಟಗಳಿವೆಯಲ್ಲದೆ ಸು.70,000 ಶಬ್ದಗಳನ್ನು ಅದು ಒಳಗೊಂಡಿದೆ. ಈ ಕೋಶದ ಪುಟ ಪುಟಗಳಲ್ಲಿ ಕಿಟೆಲ್‌ರ ಅಪಾರ ವಿದ್ವತ್ತು ಪುಟಿದು ಕಾಣುತ್ತದೆ. 1889ರಿಂದ ಅದರ ಮುದ್ರಣ ಪ್ರಾರಂಭಗೊಂಡು 1894ರಲ್ಲಿ ಅದು ಮುಗಿದಾಗ ಕಿಟೆಲರು ಕಣ್ಣುನೋವು ಮತ್ತು ತಲೆನೋವುಗಳಿಂದ ನರಳುತ್ತಿದ್ದರು. ತಮ್ಮ ಹುಟ್ಟೂರಿನಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗಲೇ ಶಬ್ದಕೋಶ ಪರಿವೀಕ್ಷಣಾ ಕಾರ್ಯವನ್ನು ಮಾಡಿದ್ದರಲ್ಲದೆ ಬಹು ಉಪಯುಕ್ತ ಮುನ್ನುಡಿಯನ್ನು ಬರೆದು 1893ರಲ್ಲಿ ಕಳುಹಿಸಿದರು. 1894ರಲ್ಲಿ ಕಿಟೆಲರ ಪರಮೋಚ್ಚವಾದ ಕೃತಿ ಬೆಳಕನ್ನು ಕಂಡಿತು.

ಕೋಶದಲ್ಲಿ ಅಡಕವಾಗಿರುವ ಅಪಾರವಾದ ಶಬ್ದಸಂಪತ್ತು, ಕನ್ನಡದ ವಿವಿಧ ಪ್ರಾದೇಶಿಕ ಹಾಗೂ ಸಾಮಾಜಿಕ ಉಪಭಾಷೆಗಳ ಮಾತುಗಳು; ಗಾದೆ ನಾಣ್ಣುಡಿಗಳು; ಹಳೆಗನ್ನಡ, ಹೊಸಗನ್ನಡ ಪ್ರಯೋಗಗಳು ಕಿಟೆಲರ ಪರಿಶ್ರಮ, ಕರ್ತವ್ಯನಿಷ್ಠೆ, ಅಚ್ಚುಕಟ್ಟುತನ, ವೈಜ್ಞಾನಿಕತೆ, ವಿದ್ವತ್ತುಗಳೆಲ್ಲವನ್ನು ಪ್ರತಿಬಿಂಬಿಸುತ್ತವೆ.

1903ರಲ್ಲಿ ಅವರ 483 ಪುಟದ 28 ಅಧ್ಯಾಯಗಳ ಬೃಹತ್ ಕನ್ನಡ ವ್ಯಾಕರಣ ಗ್ರಂಥ, A Grammar of Kannada Language ಬಾಸೆಲ್ ಮಿಶನ್ ಮುದ್ರಣಾಲಯದಲ್ಲಿ ಅಚ್ಚಾಗಿ ಪ್ರಕಟವಾಯಿತು. ಈ ಮಹತ್ತರ ಕೃತಿಯಲ್ಲಿ, ಹಳಗನ್ನಡ ಮತ್ತು ಹೊಸಗನ್ನಡ ಎಂಬ ಕನ್ನಡದ ಬೆಳವಣಿಗೆಯ ವಿವಿಧ ಘಟ್ಟಗಳ ವಿವರಣೆ ಇದೆಯಲ್ಲದೆ ಪ್ರಾದೇಶಿಕ ಹಾಗೂ ಜನಪದ ಪ್ರಯೋಗಗಳನ್ನು ಕಾಣಬಹುದು.

ಸಾಂಸ್ಕೃತಿಕ ಸೇವಾಕರ್ತರು ಹಾಗೂ ಧಾರ್ಮಿಕ ಗುರುಗಳು ತಾವು ದುಡಿಯುವ ಕ್ಷೇತ್ರದ ಸಂಸ್ಕೃತಿ, ಭಾಷೆ, ಸಾಹಿತ್ಯಗಳ ಬಗೆಗೆ ಆಸಕ್ತಿ ವಹಿಸಿ ಅದರ ಅಭ್ಯುದಯಕ್ಕೆ ಯಾವ ರೀತಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು ಎಂಬುದಕ್ಕೆ ಪೂಜ್ಯ ಕಿಟೆಲರು ಒಂದು ಅತ್ಯುತ್ತಮ ಉದಾಹರಣೆ. ಕಿಟೆಲರು ಧರ್ಮಗುರುಗಳಾಗಿದ್ದುಕೊಂಡೇ ಧೀಮಂತ ಕನ್ನಡಿಗರಾಗಿ ಉತ್ಕೃಷ್ಟ ಕನ್ನಡ ಸಾಹಿತಿಗಳಾಗಿ, ಕನ್ನಡ ಸಂಶೋಧನ ಮಾರ್ಗದ ಪ್ರಪ್ರಥಮ ನಿರ್ಮಾಪಕರಾಗಿ, ಮಾದರಿ ಸ್ವರೂಪದ ಕನ್ನಡ ಭಾಷಾಶಾಸ್ತ್ರಜ್ಞರಾಗಿ ಇರುವುದರ ಜೊತೆಗೆ ಕನ್ನಡ ಸಮಾಜದ ಸೇವಕರಾಗಿ, ಅನೇಕ ಜಾತಿ ಧರ್ಮಗಳ ನಡುವಿನ ಸೇತುವೆಯಾಗಿ, ಅವಿರತವಾಗಿ ದುಡಿದಿದ್ದಾರೆ. ಕಿಟೆಲರು ಭಾರತವನ್ನು 'ನಮ್ಮ

ಹಿಂದೂದೇಶ' ಎಂದೇ ಕರೆದಿದ್ದಾರೆ. ಅವರು ನಮ್ಮವರೇ ಆಗಿ ಬಾಳಿದ್ದುದೇ ಇದಕ್ಕೆ ಕಾರಣ.

ಕ್ರೈಸ್ತ ಮಿಶನರಿಗಳ ಕನ್ನಡ ಸಾಹಿತ್ಯ ಸೇವೆಯನ್ನು ಗಮನಿಸಿ ಅದನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕ್ರೈಸ್ತಯುಗವೆಂದು ಗುರುತಿಸಿಕೊಳ್ಳುವುದು ಯೋಗ್ಯವೆಂದೇ ಹೇಳಬೇಕು. ಕೊನೆಯಲ್ಲಿ ಡಿ.ಎಲ್.ಎನ್. ಅವರ ಮಾತು:

'ಶಾಸ್ತ್ರೀಯವಾದ ಮಾರ್ಗದಲ್ಲಿ ಕನ್ನಡ ವಿದ್ವತ್ತು ಬೆಳೆಯುವುದಕ್ಕೆ ಅವರು [ಕಿಟೆಲರು] ಶ್ರಮಿಸಿದರು....ಕನ್ನಡದ ಋಷಿಗಳಲ್ಲಿ ಅವರೂ ಒಬ್ಬರು. ಜರ್ಮನಿಯಲ್ಲಿ ಹುಟ್ಟಿದ ಅವರು ಕನ್ನಡಿಗರಾಗಿ ಮೆರೆದರು. ಅವರನ್ನು ಸ್ಮರಿಸಿಕೊಳ್ಳುವುದು ಪವಿತ್ರವಸ್ತುವೊಂದನ್ನು ಧ್ಯಾನಿಸಿದಂತೆ ಪುಣ್ಯಕರವಾದದ್ದು'.

ಪ್ರಬುದ್ಧ ಕರ್ಣಾಟಕ (1958:188)

❑

1 ಹಾವನೂರರು ಕಿಟೆಲರ ಜನ್ಮದಿನವನ್ನು 7.4.1832ಎಂದು ಉಲ್ಲೇಖಿಸಿದ್ದಾರೆ (ಹೆಗಡೆ,ಪು.1). ಕಾರಣ ಈ ವಿಷಯದಲ್ಲಿ ಹೆಚ್ಚಿನ ಸಂಶೋಧನೆಗೆ ಅವಕಾಶ ಇದೆ.

# ಬೆಂಜಮಿನ್ ಲೂಯಿ ರೈಸ್

ಡಾ. ಶ್ರೀನಿವಾಸ ಹಾವನೂರ
ಎಸ್.ಎಲ್. ಶ್ರೀನಿವಾಸಮೂರ್ತಿ

ಶಿಕ್ಷಣ, ಗ್ರಂಥ ಸಂಪಾದನೆ, ಪ್ರಾಚ್ಯವಸ್ತು ಸಂಶೋಧನೆ, ಶಾಸನಗಳ ಸಂಗ್ರಹ ಹಾಗೂ ಮುದ್ರಣಗಳಲ್ಲಿ ಗಣನೀಯವಾಗಿ ಸೇವೆ ಸಲ್ಲಿಸಿ ಪಂಪಭಾರತ, ಅಮರಕೋಶ, ಕರ್ನಾಟಕ ಭಾಷಾಭೂಷಣ, ಶಬ್ದಾನುಶಾಸನ ಹಾಗೂ ಎಪಿಗ್ರಾಫಿಯಾ ಕರ್ಣಾಟಕ ಸಂಪುಟಗಳನ್ನು ಪ್ರಕಟಿಸುವುದರ ಮೂಲಕ ಕನ್ನಡ ಸಾಹಿತ್ಯ ಸಂಶೋಧನೆಯ ಕ್ಷೇತ್ರದಲ್ಲಿ ಅಗ್ರಗಣ್ಯರೆನಿಸಿದವರು ಬಿ.ಎಲ್. ರೈಸರು.

**ಜೀವನ:**

ಬೆಂಜಮಿನ್ ಲೂಯಿ ರೈಸರು 1837ರ ಜುಲೈ 17ರಂದು ಬೆಂಗಳೂರಿನಲ್ಲಿ ಜನಿಸಿದರು. ತಂದೆ ಬೆಂಜಮಿನ್ ಹೋಲ್ಟ್‌ರೈಸ್ ಒಬ್ಬ ನಿಷ್ಠಾವಂತ ಆಂಗ್ಲ ಕ್ರೈಸ್ತಪಾದ್ರಿ. ಲಂಡನ್ನಿನಲ್ಲಿದ್ದಾಗ ಜಾನ್‌ಹ್ಯಾಂಡ್ಸ್ ಎಂಬ ಮಿಷನರಿಯ ಭಾಷಣದಿಂದ ಪ್ರಭಾವಿತರಾದ ಹೋಲ್ಟ್‌ರೈಸರು ದಕ್ಷಿಣ ಭಾರತದಲ್ಲಿ ಕ್ರೈಸ್ತಧರ್ಮವನ್ನು ಪ್ರಚಾರ ಮಾಡುವ ಉದ್ದೇಶದಿಂದ ಮದುವೆಯಾದ ಕೆಲವೇ ದಿನಗಳಲ್ಲಿ ಪತ್ನಿ ಸಮೇತರಾಗಿ ಬೆಂಗಳೂರಿಗೆ ಬಂದಿಳಿದರು. ಜನಸಾಮಾನ್ಯರೊಡನೆ ಬೆರೆಯಲು ಆ ದೇಶದ ನಡೆ-ನುಡಿಯ ನಿಕಟ ಪರಿಚಯ ಅನಿವಾರ್ಯ ಎಂದು ಅರಿತಿದ್ದ ಆತ ಬಂದ ಒಂದೇ ವರ್ಷದ ಅವಧಿಯಲ್ಲಿ ಕನ್ನಡದಲ್ಲಿ ಓದಿ, ಬರೆದು, ಪ್ರವಚನಗಳನ್ನು ನೀಡುವಲ್ಲಿ ಸಮರ್ಥರಾದರು. ಧರ್ಮ ಪ್ರಸಾರದ ಅಂಗವಾಗಿ ಪಠ್ಯಪುಸ್ತಕಗಳ ರಚನೆ, ಬೈಬಲ್‌ನ ಕನ್ನಡ ಭಾಷಾಂತರ, ಪ್ರಾರ್ಥನಾಗೀತೆಗಳ ರಚನೆಯಲ್ಲಿ ತೊಡಗಿದರು. ಈತನ ಸಂಪಾದಕತ್ವದಲ್ಲಿ ಹೊರಬಂದ 'ಅರುಣೋದಯ' ಎಂಬ ಮಾಸಪತ್ರಿಕೆಯು ಕೇವಲ ಧರ್ಮಪ್ರಸಾರದ ದೃಷ್ಟಿಯನ್ನು ಮಾತ್ರ ಹೊಂದಿಂದೆ ಶೈಕ್ಷಣಿಕ ಅಂಶಗಳಿಗೂ ಒತ್ತು ನೀಡಿತ್ತು.

ಈ ರೀತಿಯ ಸಾಂಸ್ಕೃತಿಕ ಪರಿಸರದಲ್ಲಿ ಬೆಳೆದ ಲೂಯಿ ಹಾಗೂ ಎಡ್ವರ್ಡ್ ಪೀಟರ್ ರೈಸರ ಮನೋಭಾವ ಸಾಹಿತ್ಯ, ಸಂಸ್ಕೃತಿ ಮುಂತಾದ ಕ್ಷೇತ್ರಗಳ ಕಡೆಗೆ ಒಲಿದಿದ್ದು ಸಹಜ.

ಪ್ರಾಥಮಿಕ ಶಿಕ್ಷಣವನ್ನು ಬೆಂಗಳೂರಿನಲ್ಲಿ ಮುಗಿಸಿದ ಬಳಿಕ ರೈಸರನ್ನು 1848ರಲ್ಲಿ ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಇಂಗ್ಲೆಂಡಿಗೆ ಕಳುಹಿಸಲಾಯಿತು. ಅಲ್ಲಿನ ವಿವಿಧ ವಿದ್ಯಾಸಂಸ್ಥೆಗಳಲ್ಲಿ ಅಧ್ಯಯನ ನಡೆಸಿ 1860ರ ಫೆಬ್ರವರಿ 29ರಂದು ಬೆಂಗಳೂರಿಗೆ ಬರುವ ವೇಳೆಗೆ ಸೆಂಟ್ರಲ್ ಹೈಸ್ಕೂಲಿನ (ಇದೇ ಮುಂದೆ ಸೆಂಟ್ರಲ್ ಕಾಲೇಜಾದದ್ದು) ಮುಖ್ಯೋಪಾಧ್ಯಾಯರ ಹುದ್ದೆ ಅವರಿಗಾಗಿ ಕಾದಿತ್ತು. 1865ರಲ್ಲಿ ಮುಖ್ಯೋಪಾಧ್ಯಾಯರ ಕೆಲಸದ ಜೊತೆಗೆ ಮೈಸೂರು ಹಾಗೂ ಕೊಡಗು ಪ್ರಾಂತ್ಯಗಳ ಶಾಲೆಗಳ ಇನ್ಸ್‌ಪೆಕ್ಟರ್ ಆಗಿಯೂ ರೈಸರು ನೇಮಿಸಲ್ಪಟ್ಟರು. ಈ ಪ್ರಾಂತ್ಯಗಳ ಮೂಲೆ ಮೂಲೆಗಳಲ್ಲಿನ ಶಾಲೆಗಳಿಗೆ ಭೇಟಿಕೊಡುವ ಸಂದರ್ಭದಲ್ಲಿ, ಅಲ್ಲಿನ ಜನಜೀವನದಲ್ಲಿ ಮಿಳಿತವಾಗಿದ್ದ ಕಲೆ, ಸಾಹಿತ್ಯ, ಶಾಸನ, ಶಿಲ್ಪ ಮುಂತಾದ ಸಾಂಸ್ಕೃತಿಕ ಅಂಶಗಳ ಕಡೆಗೆ ಅವರ ಮನಸ್ಸು ಆಕರ್ಷಿತವಾಯಿತು. ತಮಗೆ ಸ್ವಾರಸ್ಯಕರವೆಂದು ಕಂಡುಬಂದ ಮಾಹಿತಿ, ವಸ್ತುಗಳನ್ನು ಕೇವಲ ಹವ್ಯಾಸಕ್ಕೆಂದು ಸಂಗ್ರಹಿಸಲು ಆರಂಭಿಸಿದರು. ಈ ಹವ್ಯಾಸವೆ ಮುಂದೆ

ಅವರನ್ನು ನಾಡಿನ ಪ್ರಸಿದ್ಧ ಪ್ರಾಚ್ಯವಸ್ತು ಶಾಸ್ತ್ರಜ್ಞರನ್ನಾಗಿಸುತ್ತದೆ ಎಂಬ ಕಲ್ಪನೆ ಅವರಿಗೆ ಆಗ ಬಹುಶಃ ಇರಲಿಕ್ಕಿಲ್ಲ.

ರೈಸರಿಗೆ ಪ್ರಾಚ್ಯವಸ್ತುಗಳ ಬಗೆಗೆ ಆಸಕ್ತಿ ಮೂಡಿದ ಈ ಕಾಲದಲ್ಲಿಯೆ ಸರಿಸುಮಾರಾಗಿ ಇಡಿಯ ದೇಶದಲ್ಲಿ ಈ ತೆರನಾದ ಕ್ಷೇತ್ರಗಳ ಬಗ್ಗೆ ಒಲವು ಕಾಣಿಸಲಾರಂಭಿಸಿದ್ದು ಕೇವಲ ಕಾಕತಾಳೀಯ. ಮೈಸೂರು ಸಂಸ್ಥಾನದ ವಿವಿಧ ಮೂಲೆಗಳಲ್ಲಿ ಹರಡಿ ಹಂಚಿಹೋಗಿ ಅವಜ್ಞೆಗೆ ಒಳಗಾಗಿದ್ದ ಪ್ರಾಚೀನ ವಾಸ್ತುಶಿಲ್ಪಗಳ ಛಾಯಚಿತ್ರಗಳನ್ನು ಒಂದೆಡೆ ಸಂಗ್ರಹಿಸಬೇಕೆಂದು ಚಿಂತಿಸಿದ ಆಗಿನ ಮಹಾರಾಜರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಈ ಕೆಲಸಕ್ಕೆಂದು ಮದ್ರಾಸ್ ನೇಟಿವ್ ಇನ್‌ಫೆಂಟ್ರಿಯ 22ನೆಯ ರೆಜಿಮೆಂಟನಲ್ಲಿದ್ದ ಮೇಜರ್ ಡಿಕ್ಸನ್‌ರನ್ನು ಕರೆಸಿಕೊಂಡರು. ಮಹಾರಾಜರ ಅಪೇಕ್ಷೆಯಂತೆ ಹರಿಹರ, ಚಿತ್ರದುರ್ಗ, ಬಳ್ಳಿಗಾವೆ ಮುಂತಾದ ಸ್ಥಳಗಳ ದೇವಾಲಯ, ಶಿಲ್ಪಗಳ ಜೊತೆಗೆ ಲಭ್ಯವಿದ್ದ ಅನೇಕ ಶಿಲಾಶಾಸನಗಳ ಛಾಯಾ ಚಿತ್ರಗಳನ್ನೂ ಡಿಕ್ಸನ್ ತೆಗೆದು ಸರ್ಕಾರಕ್ಕೆ ಸಲ್ಲಿಸಿದರು.

ಅಂದಿಗೆ ಬಳಕೆಯಲ್ಲಿ ಇಲ್ಲದಿದ್ದ ಲಿಪಿಗಳಲ್ಲಿ ಬರೆಯಲಾಗಿದ್ದ ಈ ಶಾಸನಗಳನ್ನು ಓದುವವರಾದರೂ ಯಾರು ಎಂಬ ಪ್ರಶ್ನೆ ಉದ್ಭವಿಸಿದಾಗ ಆಗಿನ ಚೀಫ್ ಕಮಿಷನರ್ ಆಗಿದ್ದ ಎಲ್. ಬೌರಿಂಗ್‌ರಿಗೆ ಹೊಳೆದದ್ದು ರೈಸರ ಹೆಸರು. ಕೆಲಸಕ್ಕೆ ಸೇರಿದ ಕಲವೇ ವರ್ಷಗಳಲ್ಲಿ ದಕ್ಷ ಹಾಗೂ ಬುದ್ಧಿವಂತ ಅಧಿಕಾರಿಯೆಂದು ಹೆಸರಾಗಿದ್ದ ರೈಸರಿಗೆ ಈ ಶಾಸನಗಳ ಪಾಠಗಳನ್ನು ಆತ ತಲುಪಿಸಿ ಅವನ್ನು ಓದಿ ಅರ್ಥೈಸಲು ಸೂಚಿಸಿದನು. ಆ ವೇಳೆಗೆ ಶಿಲಾಶಾಸನಗಳನ್ನು ಓದಲು ರೈಸರಿಗಿದ್ದ ಅರ್ಹತೆಯೆಂದರೆ ಕನ್ನಡ ಭಾಷೆ ಮತ್ತು ಲಿಪಿಯ ಪರಿಚಯವಿದ್ದದ್ದು ಮಾತ್ರ! ಆದರೂ ಛಲದಿಂದ ಈ ಎಲ್ಲ ಶಾಸನಗಳನ್ನು ಓದಿ, ಅರ್ಥೈಸಿ, ಇವುಗಳೊಂದಿಗೆ ತಾವು ಸಂಗ್ರಹಿಸಿದ ಇತರ ಕೆಲವು ಶಾಸನಗಳ ಪಾಠಗಳನ್ನು ಸೇರಿಸಿ ಅವರು 1879ರಲ್ಲಿ 'ಮೈಸೂರ್ ಇನ್‌ಸ್ಕ್ರಿಪ್ಷನ್ಸ್' ಎಂಬ ಹೆಸರಿನಲ್ಲಿ ಪ್ರಕಟಿಸಿದರು.

ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದ ಜಾನ್ ಗ್ಯಾರೇಟ್‌ರು 1868ರಿಂದ 1873ರವರೆಗೆ ಆಗಾಗ್ಗೆ ರಜೆಯಲ್ಲಿರಬೇಕಾದಾಗ ರೈಸರು ನಿರ್ದೇಶಕರ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿತ್ತು. ಈ ಸಂದರ್ಭದಲ್ಲಿ ಅವರು ತಮ್ಮ ಪ್ರವೃತ್ತಿ-ವೃತ್ತಿಗಳೆರಡನ್ನೂ ಸಮರ್ಥವಾಗಿ ಹೇಗೆ ನಿರ್ವಹಿಸಿದರೆಂಬುದಕ್ಕೆ 1868ರಲ್ಲಿ ಅವರು ತಿರುನಗರಿ ರಾಮಾನುಜಯ್ಯಂಗಾರರ ರಾಮಾಯಣವನ್ನು ಪರಿಷ್ಕರಿಸಿ ಮುದ್ರಿಸಿದ್ದು ಹಾಗೂ ಅದೇ ವರ್ಷ ಸರ್ಕಾರಕ್ಕೆ ಸಲ್ಲಿಸಿದ ಹೋಬಳಿ ಶಾಲೆಗಳ ಪ್ರಸ್ತಾಪ-ಇವು ಉತ್ತಮ ನಿದರ್ಶನಗಳಾಗಿವೆ.

ಆಂಗ್ಲ ಮಾದರಿಯ ವಿದ್ಯಾಭ್ಯಾಸದ ಮಹತ್ವವನ್ನು ಅರಿತಿದ್ದ ಮೈಸೂರು ಸರ್ಕಾರವು 1833ರಷ್ಟು ಹಿಂದೆಯೆ ಈ ರೀತಿಯ ಶಾಲೆಗಳನ್ನು ಸ್ವತಃ ಸ್ಥಾಪಿಸಿತ್ತಲ್ಲದೆ ಖಾಸಗಿ ಸಂಘ ಸಂಸ್ಥೆಗಳಿಗೂ ಈ ಕಾರ್ಯದಲ್ಲಿ ಬೆಂಬಲವನ್ನು ನೀಡಿತ್ತು. ಆದರೂ 1856ರ ವರೆಗೆ ಇಡಿಯ ಸಂಸ್ಥಾನದಲ್ಲಿ ಕೇವಲ 26 ಶಾಲೆಗಳು ಮಾತ್ರ ಇದ್ದವು. ಈ ಶಾಲೆಗಳು ಬೆಂಗಳೂರು, ಮೈಸೂರು, ಹಾಸನ, ತುಮಕೂರು ಮುಂತಾದ ನಗರ ಪ್ರದೇಶಗಳಲ್ಲಿ ನೆಲೆಗೊಂಡಿದ್ದುದರಿಂದ ಗ್ರಾಮೀಣ ಪ್ರದೇಶದ ಜನರಿಗೆ ವಿದ್ಯಾಭ್ಯಾಸದ ಸೌಲಭ್ಯವು ಬಹುಮಟ್ಟಿಗೆ ಅಲಭ್ಯವೇ ಆಗಿತ್ತು. 1855ರಲ್ಲಿ ಜಾರಿಗೆ ಬಂದ ಶಿಕ್ಷಣ ಯೋಜನೆಯಲ್ಲಿ ಪ್ರತಿಯೊಂದು ತಾಲೂಕಿನಲ್ಲಿ ಅಲ್ಲಿಯ ಜನ ಆಶಿಸಿದಲ್ಲಿ ಒಂದೊಂದು ಶಾಲೆಯನ್ನು ತೆರೆಯಬೇಕೆಂದು ನಿರ್ಧರಿಸ 'ಲಾಯಿತಾದರೂ 1863ರ ವೇಳೆಗೆ ಇಂತಹ ಶಾಲೆಗಳ ಸಂಖ್ಯೆ ನಲವತ್ತನ್ನು ದಾಟಲಿಲ್ಲ.

ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ (ವಿಶೇಷವಾಗಿ ದೇಶಭಾಷೆ ಹಾಗೂ ಸ್ತ್ರೀ ಶಿಕ್ಷಣದಲ್ಲಿ) ಸಾಕಷ್ಟು ಬೆಳವಣಿಗೆ ಆಗಿಲ್ಲ ಎಂಬ ಬ್ರಿಟಿಷ್ ಸರ್ಕಾರದ ಟೀಕೆಗೆ ಉತ್ತರವಾಗಿ ರೈಸರು ರೂಪಿಸಿದ ಹೋಬಳಿ ಶಾಲೆಗಳ ಪ್ರಸ್ತಾಪವು ವಿದ್ಯಾಕ್ಷೇತ್ರದಲ್ಲಿ ಹೊಸದೊಂದು ಯುಗವನ್ನೆ ಆರಂಭಿಸಿತು. ಈ ಯೋಜನೆಯ ಪ್ರಮುಖ ಅಂಶವೆಂದರೆ ಇಡಿಯ ಸಂಸ್ಥಾನದಲ್ಲಿ ಪ್ರತಿ ನಾಲ್ಕೂವರೆ ಮೈಲಿಗಳ ಪರಿಧಿಯ ಹೋಬಳಿಯಲ್ಲಿ ಒಂದೊಂದು ಶಾಲೆಗಳ ಸ್ಥಾಪನೆ. ಬಾಲಕಿಯರಿಗೆ ಸಮಾನ ಪ್ರವೇಶಾವಕಾಶವಿದ್ದ ಈ ಶಾಲೆಗಳ ಮೇಲ್ವಿಚಾರಣೆಯನ್ನು ಆಯಾ ಹೋಬಳಿಯ ಗಣ್ಯ ನಾಗರೀಕರನ್ನು ಒಳಗೊಂಡ ಒಂದು ಪಂಚಾಯತಿಗೆ ಒಪ್ಪಿಸಲಾಯಿತು. ಹಳ್ಳಿಹಳ್ಳಿಗಳಲ್ಲಿ ವಿದ್ಯಾಭ್ಯಾಸದ ಮಹತ್ವವನ್ನು ಮನಮುಟ್ಟುವಂತೆ ವಿವರಿಸಿ ಶಾಲೆಗಳಿಗೆ ಮಕ್ಕಳನ್ನು ಕಳುಹಿಸಲು ಪ್ರೋತ್ಸಾಹಿಸಲಾಯಿತು.

ರೈಸರ ಈ ಯೋಜನೆಗೆ ಸಾರ್ವಜನಿಕರಿಂದ ಬಂದ ಪ್ರತಿಕ್ರಿಯೆ ಅಭೂತಪೂರ್ವವಾದದ್ದು. ಯೋಜನೆ ಆರಂಭವಾದ ಮೊದಲ ವರ್ಷವೆ 140 ಶಾಲೆಗಳಿದದ್ದು 1880ರ ವೇಳೆಗೆ 636ರ ಸಂಖ್ಯೆಯನ್ನು ಮುಟ್ಟಿತು. ಸ್ತ್ರೀ ಶಿಕ್ಷಣಕ್ಕೆ ವಿಶೇಷವಾದ ಮಹತ್ವವನ್ನು ನೀಡಿದುದುರ ಪರಿಣಾಮವಾಗಿ 1878ರ ವೇಳೆಗೆ 11 ಸರ್ಕಾರಿ ಬಾಲಕಿಯರ ಶಾಲೆಗಳಲ್ಲಿ 468 ವಿದ್ಯಾರ್ಥಿನಿಯರು ವ್ಯಾಸಂಗ ಮಾಡುತ್ತಿದ್ದರು.

ಕ್ರಿ.ಶ.1874ರಲ್ಲಿ ರೈಸರನ್ನು ಶಿಕ್ಷಣ ಇಲಾಖೆಯ ನಿರ್ದೇಶಕರೆಂದು ಖಾಯಂ ಆಗಿ ನೇಮಿಸಲಾಯಿತು. ಇದೇ ಸಮಯದಲ್ಲಿ ಭಾರತ ಸರ್ಕಾರವು 'ಇಂಪೀರಿಯಲ್ ಗೆಜೆಟಿಯರ್ಸ್ ಆಫ್ ಇಂಡಿಯ' ಮಾಲಿಕೆಯಲ್ಲಿ ದೇಶದ ಎಲ್ಲ ಪ್ರಾಂತ್ಯಗಳ ಗೆಜೆಟಿಯರ್‌ಗಳನ್ನು ಸಿದ್ಧಗೊಳಿಸಬೇಕೆಂದು ನಿರ್ಧರಿಸಿ ಮೈಸೂರು ಹಾಗೂ ಕೊಡಗು ಪ್ರಾಂತ್ಯಗಳ ಗೆಜೆಟಿಯರನ್ನು ರಚಿಸುವಂತೆ ಕಮೀಷನರ್‌ರ ಸರ್ಕಾರಕ್ಕೆ ಆದೇಶಿಸಿತು. ಈ ಪ್ರಾಂತ್ಯಗಳಲ್ಲಿ ವ್ಯಾಪಕವಾಗಿ ಸಂಚರಿಸಿ ನಾಡಿನ ನಿಕಟ ಪರಿಚಯವನ್ನು ಪಡೆದಿದ್ದ ರೈಸರನ್ನು ಈ ಕಾರ್ಯಕ್ಕೆ ನೇಮಿಸಲಾಯಿತು. 1875ರಲ್ಲಿ ಮುಗಿಯಬೇಕಿದ್ದ ಈ ಯೋಜನೆ ಎರಡು ವರ್ಷಗಳು ತಡವಾದರೂ ಮಾದರಿ ಸಂಪುಟಗಳೆಂಬ ಹೆಗ್ಗಳಿಕೆಗೆ ಪಾತ್ರವಾಯಿತು.

ಗೆಜೆಟಿಯರ್‌ಗಳ ಪೂರ್ವಮಾದರಿಗಳು ಇಲ್ಲದಿದ್ದ ಆ ಕಾಲದಲ್ಲಿ ರೈಸರು ಗೆಜೆಟಿಯರ್‌ಗಳನ್ನು ರಚಿಸಲು ಮಾಡಿಕೊಂಡ ಏರ್ಪಾಡುಗಳು ಹಾಗೂ ಅವರ ಬರವಣಿಗೆಯ ವಿಧಾನದಿಂದ ಪ್ರಭಾವಿತರಾದ ಇಂಪೀರಿಯಲ್ ಗೆಜೆಟಿಯರ್ ಮಾಲಿಕೆಯ ಪ್ರಧಾನ ಸಂಪಾದಕರಾಗಿದ್ದ ಡಬ್ಲ್ಯೂ. ಡಬ್ಲ್ಯೂ. ಹಂಟರ್‌ರು ಗೌರ್‍ನರ್ ಜನರಲ್‌ರಿಗೆ ಈ ಸಂಬಂಧದಲ್ಲಿ ನೀಡಿರುವ ವರದಿಯಲ್ಲಿ "ಮೈಸೂರಿನ ಜನಸಂಖ್ಯೆಯು ಅಪಾರವೇನೂ ಅಲ್ಲದಿದ್ದರೂ ಮಾಹಿತಿಯು ಸಮರ್ಪಕವಾಗಿ ದೊರೆಯದಿರುವುದರಿಂದ ಪ್ರತಿ ಜಿಲ್ಲೆಗೆ ಸಂಬಂಧಿಸಿದ ಎಲ್ಲ ವಿವರಗಳ ಸಂಗ್ರಹಣೆ ಹಾಗೂ ಅದರ ನಿಷ್ಕರ್ಷೆ ಅತ್ಯಂತ ತ್ರಾಸದಾಯಕವಾಗಿದೆ. ಆದರೆ ಈ ಸಂಪುಟಗಳ ಸಂಯೋಜಕರಾದ ಶ್ರೀ ಬಿ.ಎಲ್. ರೈಸರು ಈ ಕಾರ್ಯವನ್ನು ಬಹಳ ಅಚ್ಚುಕಟ್ಟಾಗಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗುವಂತೆ ಮಾಡಿದ್ದಾರೆ. ನನ್ನ ಪ್ರತಿ ಬಾರಿಯ

ಪ್ರವಾಸದಲ್ಲಿ ನಾನು ಅವರ ಕಾರ್ಯವಿಧಾನದ ಬಗ್ಗೆ ಕೊಂಡಾಡುವ ಹಾಗಾಗಿದೆ....ಆತ ಬಹಳ ಎಚ್ಚರಿಕೆಯಿಂದ ತನ್ನ ಸ್ವಂತದ ಸಂಶೋಧನೆಯನ್ನು ಆಡಳಿತಾತ್ಮಕ ವಿವರಗಳ ಜೊತೆಗೆ ಬೆರೆಸಿದ್ದಾರೆ" ಎಂದು ಪ್ರಶಂಸಿದ್ದಾರೆ.

ಗೆಜೆಟಿಯರ್‌ನ ರಚನೆಯಲ್ಲಿ ರೈಸರು ತೋರಿದ ಕಾರ್ಯಕ್ಷಮತೆಯನ್ನು ಮೆಚ್ಚಿದ ಹಂಟರ್ ಮುಂದೆ 1882ರಲ್ಲಿ ತಾನು ವಿದ್ಯಾಭ್ಯಾಸ ಸಮಿತಿಯು ಮುಖ್ಯಸ್ಥನಾದಾಗ ಅವರನ್ನು ಕಲ್ಕತ್ತೆಗೆ ಬರಮಾಡಿಕೊಂಡು ಸಮಿತಿಯ ಕಾರ್ಯದರ್ಶಿಯ ಸ್ಥಾನವನ್ನು ನೀಡಿದರು. ಈ ನಡುವೆ ಮೈಸೂರು ಹಾಗೂ ಕೊಡಗಿನಲ್ಲಿದ್ದ ಪ್ರಾಚೀನ ಸಂಸ್ಕೃತ ಹಸ್ತಪ್ರತಿಗಳ ಒಂದು ಸೂಚಿಯನ್ನು ಅವರು ಸಿದ್ಧಗೊಳಿಸಿದರು. (1880)

ಕ್ರಿ.ಶ.1883ರಲ್ಲಿ ಶೇಷಾದ್ರಿ ಅಯ್ಯರರು ದಿವಾನರಾಗಿ ನೇಮಕವಾದ ಮೇಲೆ ರೈಸರ ವೃತ್ತಿಜೀವನದಲ್ಲಿಯೂ ಗಮನಾರ್ಹವಾದ ಬದಲಾವಣೆಗಳಾದವು. ಅವರ ಕಾರ್ಯದಕ್ಷತೆಯನ್ನು ಮೆಚ್ಚಿದ ಅಯ್ಯರ್‌ರವರು ರೈಸರನ್ನು ಪೋಲಿಸ್ ಹಾಗೂ ವಿದ್ಯಾಇಲಾಖೆಯ ಕಾರ್ಯದರ್ಶಿಯನ್ನಾಗಿ ನೇಮಿಸಿದರಲ್ಲದೆ 1881ರಲ್ಲಿ ನಡೆದಿದ್ದ ಜನಗಣತಿ ವರದಿಯನ್ನು ಬರೆಯುವ ಗುರುತರ ಜವಾಬ್ದಾರಿಯನ್ನು ನೀಡಿದರು.

1884ನೆಯ ವರ್ಷವು ರೈಸರ ಪಾಲಿಗೆ ಮಹತ್ವದ ವರ್ಷ. ಅವರ ಬಹುಮುಖ ಸೇವೆಯನ್ನು ಪರಿಗಣಿಸಿ ಬ್ರಿಟಿಷ್ ಸರ್ಕಾರವು 'ಕಂಪ್ಯಾನಿಯನ್ ಆಫ್ ದಿ ಆರ್ಡರ್ ಆಫ್ ದಿ ಇಂಡಿಯನ್ ಎಂಪೈರ್' (ಸಿ.ಐ.ಇ) ಪದವಿಯನ್ನು ನೀಡಿ ಗೌರವಿಸಿದ್ದು ಒಂದಾದರೆ, ಪ್ರಾಚ್ಯವಸ್ತು ಸಂಗ್ರಹಣ ಹಾಗೂ ಸಂರಕ್ಷಣೆ, ಪ್ರಾಚೀನ ಹಸ್ತಪ್ರತಿಗಳ ಸಂಗ್ರಹ ಹಾಗೂ ಮುದ್ರಣ ಮುಂತಾದ ಚಟುವಟಿಕೆಗಳನ್ನು ಅಧಿಕೃತ ರೀತಿಯಲ್ಲಿ ಕೈಗೊಳ್ಳಲು ಶೇಷಾದ್ರಿ ಅಯ್ಯರ್ ನಿರ್ಧರಿಸಿದ್ದು ಈ ವರ್ಷದ ಮತ್ತೊಂದು ಪ್ರಮುಖ ಬೆಳವಣಿಗೆ. ಜೊತೆಗೆ ರೈಸರ ಸಂಗ್ರಹದಲ್ಲಿದ್ದ ಪ್ರಾಚೀನ ಹಸ್ತಪ್ರತಿಗಳ ಪರಿಶೋಧಿತ ಮುದ್ರಣದ ಕಾರ್ಯವಾದ 'ಬಿಬ್ಲಿಯಾಥಿಕಾ ಕರ್ನಾಟಿಕ' ಮಾಲೆಯ ಮೊದಲ ಕೃತಿಯಾಗಿ ನಾಗವರ್ಮನ 'ಕರ್ಣಾಟಕ ಭಾಷಾಭೂಷಣ'ವು ಅಚ್ಚಾಗಿ ಹೊರಬಂದದ್ದು ಈ ವರ್ಷದಲ್ಲಿಯೆ. ಮುಂದೆ ಈ ಮಾಲೆಯಲ್ಲಿ ಭಟ್ಟಾಕಳಂಕನ 'ಶಬ್ದಾನುಶಾಸನಂ' (1890), 'ಪಂಪರಾಮಾಯಣ' (1892), ವಿಕ್ರಮಾರ್ಜುನ ವಿಜಯ (1890), 'ಕವಿರಾಜ ಮಾರ್ಗ' (1898) ಹಾಗೂ 'ಕಾವ್ಯಾವಲೋಕನ' (1903)ಗಳು ಪ್ರಕಟವಾದವು.

ಕ್ರಿ.ಶ.1885ರಲ್ಲಿ ಪ್ರಾಚ್ಯವಸ್ತು ಸಂಶೋಧನಾ ಶಾಖೆಯ ಅರೆಕಾಲಿಕ ನಿರ್ದೇಶಕರಾಗಿ, ನಂತರ 1886ರಲ್ಲಿ ಈ ಶಾಖೆಯನ್ನು ಪ್ರತ್ಯೇಕವಾದ ಇಲಾಖೆಯನ್ನಾಗಿ ಬೇರ್ಪಡಿಸಿದಾಗ ಇಲಾಖೆಯ ಮೊದಲ ನಿರ್ದೇಶಕರಾದ ಮೇಲೆ ರೈಸರ ಕಾರ್ಯ ಚಟುವಟಿಕೆಗಳು ಮುಖ್ಯವಾಗಿ ಶಾಸನಗಳ ಸಂಗ್ರಹಣೆ, ವಿಶ್ಲೇಷಣೆ ಹಾಗೂ ಮುದ್ರಣದ ಮಟ್ಟಿಗೆ ಕೇಂದ್ರೀಕೃತವಾದವು. ಸಂಸ್ಥಾನದ ಪ್ರತಿಯೊಂದು ಜಿಲ್ಲೆಯ ಸಾಧ್ಯವಿರುವಷ್ಟು ಶಾಸನಗಳನ್ನು ಪತ್ತಹಚ್ಚಿ ಪ್ರಕಟಿಸಿರುವ ಬೃಹತ್ ಯೋಜನೆಯಲ್ಲಿ ಅವರು ತೊಡಗಿಕೊಂಡರು. ಇದರ ಫಲವೇ 'ಎಪಿಗ್ರಾಫಿಯಾ ಕರ್ನಾಟಿಕ' ಮಾಲೆಯ ಮೊದಲ ಕೃತಿಯಾದ 'ಕೂರ್ಗ್ ಇನ್ಸ್‌ಕ್ರಿಪ್ಷನ್ಸ್' (1886)

ದೇಶದ ಬೇರೆ ಸಂಸ್ಥಾನಗಳಂತಿರಲಿ, ಬ್ರಿಟಿಷ್ ಸರ್ಕಾರವೆ ಇಂತಹ ಒಂದು ಯೋಜನೆಯನ್ನು ರೂಪಿಸದಿದ್ದ ಕಾಲದಲ್ಲಿ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸಬೇಕಾದ ಅವಶ್ಯಕತೆಯನ್ನು ರೈಸರು ಮನಗಂಡಿದ್ದರು. ಅಂತೆಯೆ ಎ.ಕ.ಸಂಪುಟಗಳನ್ನು ಸಿದ್ಧಗೊಳಿಸುವಲ್ಲಿ ಅವರು ತಮ್ಮದೇ ಆದ ವಿಶಿಷ್ಟ ಶೈಲಿಯನ್ನು ಅಳವಡಿಸಿಕೊಂಡರು. ಕೊಡಗು ಮತ್ತು ಶ್ರವಣಬೆಳುಗೊಳಗಳನ್ನು ಬಿಟ್ಟು ಉಳಿದಂತೆ ಪ್ರತಿ ಜಿಲ್ಲೆಯ ಎಲ್ಲ ಶಾಸನಗಳು ಒಂದೊಂದು ಸಂಪುಟದಲ್ಲಿರುವಂತೆ ಅದನ್ನು ಆಯೋಜಿಸಲಾಯಿತು. (ಸಂಖ್ಯಾಬಾಹುಳ್ಯದಿಂದಾಗಿ ಮೈಸೂರು ಮತ್ತು ಶಿವಮೊಗ್ಗ ಜಿಲ್ಲೆಯ ಶಾಸನಗಳು ತಲಾ ಎರಡು ಸಂಪುಟಗಳಲ್ಲಿವೆ.) ಈ ಸಂಪುಟಗಳಲ್ಲಿ ಶಾಸನಗಳನ್ನು ತಾಲೂಕುವಾರಾಗಿ ವಿಂಗಡಿಸಿ ಅವುಗಳು ದೊರೆತ ಸ್ಥಳ, ಅವುಗಳ ವಿನ್ಯಾಸ, ಭಾಷೆ ಮುಂತಾದುವುಗಳನ್ನು ದಾಖಲಿಸಲಾಯಿತಲ್ಲದೆ ಶಾಸನಗಳ ಮೂಲಪಾಠಗಳೊಂದಿಗೆ ಅವುಗಳ ಇಂಗ್ಲೀಷ್ ಲಿಪ್ಯಂತರ ಹಾಗೂ ಭಾಷಾಂತರಗಳನ್ನು ಅಳವಡಿಸಲಾಯಿತು. ಆಯಾ ಜಿಲ್ಲೆಯ ಶಾಸನಗಳಿಂದ ಹೊರಡುವ ಐತಿಹಾಸಿಕಾಂಶಗಳ ಬಗ್ಗೆ ಆಯಾ ಸಂಪುಟಗಳ ಆರಂಭದ ಸುದೀರ್ಘವಾದ ಮುನ್ನುಡಿಯಲ್ಲಿ ಚರ್ಚಿಸಲಾಯಿತು.

ಭದ್ರಬಾಹುವಿನ ಉಲ್ಲೇಖವಿರುವ ಶ್ರವಣಬೆಳಗೊಳದ ಶಾಸನ, ಅಶೋಕನ ಬ್ರಹ್ಮಗಿರಿ, ಸಿದ್ಧಾಪುರ ಹಾಗೂ ಜಟಂಗ ರಾಮೇಶ್ವರಗಳಲ್ಲಿನ ಮೂರು ಶಾಸನಗಳು, ದೊಡ್ಡ ಹುಂಡಿಯ ನೀತಿಮಾರ್ಗನ ಶಾಸನಗಳೇ ಮೊದಲಾದ ಗಂಗ, ನೊಳಂಬ, ಪಲ್ಲವ ಶಾಸನಗಳು, ಕದಂಬ ಮುಂತಾದ ಅನೇಕ ರಾಜಮನೆತನಗಳಿಗೆ ಸೇರಿದ 8869 ಶಾಸನಗಳು ಮೊತ್ತಮೊದಲ ಬಾರಿಗೆ ಎಪಿಗ್ರಾಫಿಯಾ ಕರ್ನಾಟಕ ಸಂಪುಟಗಳ ಮೂಲಕ ಬೆಳಕು ಕಂಡವು. ವೆಬರ್, ಬ್ಯೂಲರ್, ಬರ್ಗೆಸ್, ಕಿಟೆಲ್, ಬಾರ್ನೆಟ್ ಹಾಗೂ ಫ್ಲೀಟ್‌ರಂತಹ ಘನ ವಿದ್ವಾಂಸರು ಈ ಸಂಪುಟಗಳಲ್ಲಿ ರೈಸರು ವ್ಯಕ್ತಪಡಿಸಿದ್ದ ಅನೇಕ ಅಭಿಪ್ರಾಯಗಳಿಗೆ ತಮ್ಮ ಪರ ಹಾಗೂ ವಿರೋಧದ ಅಭಿಪ್ರಾಯಗಳನ್ನು ಸೂಚಿಸಿದರಾದರೂ ಇಷ್ಟು ಬೃಹತ್ ಸಂಖ್ಯೆಯ ಶಾಸನಗಳನ್ನು ಪ್ರಕಟಿಸುವ ಒಟ್ಟು ಯೋಜನೆಯ ಆಶಯವನ್ನು ಮುಕ್ತ ಕಂಠದಿಂದ ಶ್ಲಾಘಿಸಿದರು.

ಈ ಸಂಪುಟಗಳ ಮುದ್ರಣದ ಕಾಲದಲ್ಲಿ ಆಗಾಗ್ಗೆ ಕಾಡಿದ ಭೀಕರ ಬರಗಾಲ ಹಾಗೂ ಪ್ಲೇಗಿನ ಹಾವಳಿಗಳ ನಡುವೆಯೂ ಧೃತಿಗೆಡದೆ ಮಂಗಳೂರು, ಬೆಂಗಳೂರು, ಮದ್ರಾಸುಗಳಲ್ಲಿನ ಸರ್ಕಾರಿ ಹಾಗೂ ಖಾಸಗಿ ಮುದ್ರಾಣಲಯಗಳಲ್ಲಿ ಏಕಕಾಲಕ್ಕೆ ಎಂಟು ಸಂಪುಟಗಳು ಅಚ್ಚಾಗುವಂತೆ ನೋಡಿಕೊಂಡಿದ್ದು ರೈಸರ ಪರಿಶ್ರಮದ ನಿದರ್ಶನವಾಗಿದೆ.

ಎಪಿಗ್ರಾಫಿಯಾ ಕರ್ನಾಟಕ ಯೋಜನೆಯ ಜೊತೆಗೆ ಆರಂಭವಾಗಿದ್ದ ಮೈಸೂರು ಗೆಜೆಟಿಯರ್‌ನ ಪರಿಷ್ಕೃತ ಮುದ್ರಣ (1897)ದ ಕೆಲಸವನ್ನು ಮುಗಿಸಿದ ಕೃತಕೃತ್ಯತೆಯೊಂದಿಗೆ 1906ರಲ್ಲಿ ಇಂಗ್ಲಂಡಿಗೆ ರೈಸರು ಮರಳಿಹೊರಟಾಗ ಅವರಿಗೆ 69ವರ್ಷ. ಅಲ್ಲಿಗೆ ಹಿಂದಿರುಗಿದ ಮೇಲೆಯೂ ಕನ್ನಡ ನಾಡು, ನುಡಿಯ ಬಗ್ಗೆ ಸದಾ ಉತ್ಸುಕರಾಗಿದ್ದ ಅವರು ಶಾಸನಗಳಲ್ಲಿ ದೊರೆತ ಮಾಹಿತಿಗಳ ಆಧಾರದ ಮೇಲೆ 'ಮೈಸೂರು ಅಂಡ್ ಕೂರ್ಗ್ ಫ್ರಂ ಇನ್ಸ್‌ಕ್ರಿಪ್ಷನ್ಸ್' ಎಂಬ ಕೃತಿಯನ್ನು ಪ್ರಕಟಿಸಿದರಲ್ಲದೆ (1909), ಇಂಡಿಯನ್ ಆಂಟಿಕ್ವೆರಿ ಮುಂತಾದ ವಿದ್ವತ್ ಪತ್ರಿಕೆಗಳಿಗೆ ಲೇಖನಗಳನ್ನು ಕಳುಹಿಸುತ್ತಿದ್ದರು. 1924ರಲ್ಲಿ ಲಂಡನ್ನಿನ ವಸ್ತು ಪ್ರದರ್ಶನವೊಂದರಲ್ಲಿ ತಮ್ಮನ್ನು ಭೇಟಿ ಮಾಡಿದ ಸೋಸಲೆ ಗರಳಪುರಿ ಶಾಸ್ತ್ರಿಗಳು ರೈಸರನ್ನು ಕಂಡ

ಹರ್ಷದಲ್ಲಿ ಇಂಗ್ಲೀಷಿನಲ್ಲಿಯೇ ಮಾತನಾಡುತ್ತಿದ್ದಾಗ "ಅಯ್ಯಾ, ಕನ್ನಡದಲ್ಲೇ ಮಾತಾನಾಡೋಣವೆ? ಮುದ್ದಾದ ಕನ್ನಡ ಕಿವಿಯ ಮೇಲೆ ಬೀಳದೆ ತುಂಬಾ ದಿನಗಳಾದುವು!" ಎಂದು ಉದ್ಗರಿಸುವಷ್ಟರ ಮಟ್ಟಿನ ಕನ್ನಡ ಪ್ರೇಮ ಅವರದು.

ಆರು ಗಂಡು ಮತ್ತು ನಾಲ್ಕು ಹೆಣ್ಣುಮಕ್ಕಳ ತಂದೆಯಾಗಿ, ಅನೇಕ ಮೊಮ್ಮಕ್ಕಳ ಅಕ್ಕರೆಯ ಅಜ್ಜನಾಗಿ ಹ್ಯಾರೋ ಪಟ್ಟಣದಲ್ಲಿ 90 ವರ್ಷಗಳ ತುಂಬು ಜೀವನ ನಡೆಸಿದ ರೈಸರು 1927ರ ಜುಲೈ 10ರಂದು ಕ್ರಿಸ್ತಪಾದವನ್ನು ಸೇರಿದರು.

**ಕೊಡುಗೆ**

ಶಿಕ್ಷಣ, ಗ್ರಂಥಸಂಪಾದನೆ, ಗೆಜೆಟಿಯರ್ ಹಾಗೂ ಚಾರಿತ್ರಿಕ ಅಧ್ಯಯನಗಳ ಕ್ಷೇತ್ರದಲ್ಲಿ ರೈಸರು ಸಲ್ಲಿಸಿರುವ ಕೊಡುಗೆಗಳು ನಾಡಿನ ಇತಿಹಾಸದಲ್ಲಿ ಅವರ ಹೆಸರನ್ನು ಚಿರಸ್ಥಾಯಿಯನ್ನಾಗಿ ಮಾಡಿವೆ.

ಶಿಕ್ಷಣಾಧಿಕಾರಿಗಳಾಗಿದ್ದಾಗ ಅವರು ಆರಂಭಿಸಿದ ಹೋಬಳಿ ಶಾಲೆಗಳಿಂದಾಗಿ ಮೈಸೂರು ಸಂಸ್ಥಾನದ ವಿದ್ಯಾವಂತರ ಸಂಖ್ಯೆ ಗಣನೀಯವಾಗಿ ಹೆಚ್ಚಿತು. ಮೈಸೂರಿಗೆ ಒಂದು ಪ್ರತ್ಯೇಕ ವಿಶ್ವವಿದ್ಯಾಲಯದ ಅವಶ್ಯಕತೆಯಿದೆಯೆಂಬ ಅರಿವು ಮೂಡುವಂತಾಯಿತು. ಪರಿಣಾಮವಾಗಿ 1916ರಲ್ಲಿ ಮೈಸೂರು ವಿಶ್ವವಿದ್ಯಾಲಯವು ತಲೆಯೆತ್ತಿತು. ಮಾತೃ ಭಾಷೆಯಲ್ಲಿಯೆ ಮಕ್ಕಳಿಗೆ ಶಿಕ್ಷಣವನ್ನು ನೀಡಬೇಕೆನ್ನುವ ಕೂಗು ಇತ್ತೀಚೆಗಷ್ಟೇ ಕೇಳಿಬರುತ್ತಿರುವಾಗ ನೂರು ವರ್ಷಗಳ ಹಿಂದೆಯೇ ಹೋಬಳಿ ಶಾಲೆಗಳಲ್ಲಿ ಈ ವ್ಯವಸ್ಥೆಯನ್ನು ರೈಸರು ಅಳವಡಿಸಿಕೊಂಡಿದ್ದರೆಂಬುದು ಅವರ ದೂರದರ್ಶಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಅವರು ರಚಿಸಿರುವ ಗೆಜೆಟಿಯರ್ ಸಂಪುಟಗಳು ಇಂದಿಗೂ ಪ್ರಸ್ತುತವೆನಿಸುವ ಆಕರಗ್ರಂಥಗಳಾಗಿವೆ.

**ಗ್ರಂಥಸಂಪಾದನೆ:**

ಕನ್ನಡದಲ್ಲಿ ಗ್ರಂಥಸಂಪಾದನೆಯ ಕಾರ್ಯವನ್ನು ಆರಂಭಿಸಿದವರಲ್ಲಿ ರೈಸರೂ ಒಬ್ಬರು. ಕನ್ನಡದ ಪ್ರಮುಖ ಕೃತಿಗಳಾದ ಪಂಪಭಾರತ, ಪಂಪರಾಮಾಯಣ, ಶಬ್ದಾನುಶಾಸನ, ಕವಿರಾಜಮಾರ್ಗ ಮುಂತಾದುವು ತಾಳೆಗರಿಯ ಹೊತ್ತಗೆಗಳಲ್ಲಿ ಉಳಿದು ಹೋಗಿ ಕತ್ತಲಲ್ಲಿ ಕೊಳೆಯುತ್ತಿರುವುದನ್ನು ಕಂಡು ವ್ಯಥಿತರಾದ ಅವರು 'ಬಿಬ್ಲಿಯಾಥಿಕಾ ಕರ್ಣಾಟಕ' ಮಾಲೆಯಲ್ಲಿ ಹೊರಬರುವುದೂ ಅಷ್ಟೇ ಮುಖ್ಯ ಎಂಬುದು ಅವರ ನಿಲುವಾಗಿತ್ತು. ಪಂಪಭಾರತದ ಪ್ರಕಟಣೆಯ ಇತಿಹಾಸವನ್ನು ಗಮನಿಸಿದಾಗ ಈ ಅಂಶ ನಿಚ್ಚಳವಾಗುತ್ತದೆ.

ಕನ್ನಡದ ಆದಿಕವಿಯೆನಿಸಿದ ಪಂಪನ ವಿಕ್ರಮಾರ್ಜುನವಿಜಯದ ಏಕೈಕ ಪ್ರತಿಯು ಬಹಳ ಹಿಂದೆಯೇ ದೊರೆತಿದ್ದರೂ ರೈಸರು ಪಾಠ ಪರಿಷ್ಕರಣೆಯ ಉದ್ದೇಶದಿಂದ ಅದನ್ನು ಪ್ರಕಟಿಸದೆ ಹಾಗೆಯೆ ಉಳಿಸಿಕೊಂಡಿದ್ದರು. ಕಡೆಗೆ ಬೇರೆ ಪ್ರತಿಗಳು ದೊರೆಯದೆ, ಇರುವ ಪ್ರತಿಯೂ ಹಾಳಾಗುವ ಸಂದರ್ಭ ಬಂದಾಗ ಅನಿವಾರ್ಯವಾಗಿ 1887ರಲ್ಲಿ ಅದನ್ನು ಸಾಧ್ಯವಿದ್ದಷ್ಟು ಪರಿಷ್ಕರಿಸಿ ಮುದ್ರಿಸಲು ಆರಂಭಿಸಲಾಯಿತು. ಆದರೆ 1893ರಲ್ಲಿ ಪಂಪಭಾರತದ ಮತ್ತೊಂದು ಪ್ರತಿಯು ದೊರೆತಾಗ ಮುದ್ರಣ ಕಾರ್ಯವನ್ನು ನಿಲ್ಲಿಸಿ ಪಾಠಾಂತರಗಳನ್ನು ಗುರುತಿಸಿದ ನಂತರ 1898ರಲ್ಲಿ ಮತ್ತೆ ಅಚ್ಚು ಹಾಕಿಸಿದ್ದು ನಿಖರತೆಗೆ ಅವರು ಇತ್ತಿದ್ದ ಬೆಲೆಗೆ ಸಾಕ್ಷಿ.

ಕನ್ನಡದ ಕೆಲಸವನ್ನು ಮಾಡಲಿಚ್ಛಿಸುವ ಯಾರಿಗಾದರೂ ರೈಸರ ಸಹಾಯ ಹಸ್ತ ಸಿದ್ಧವಿತ್ತು. ಕಿಟೆಲ್ಲರು ಕನ್ನಡ-ಇಂಗ್ಲೀಷ್ ನಿಘಂಟನ್ನು ಸಿದ್ಧಗೊಳಿಸುವಾಗ ಮೈಸೂರು ಸರ್ಕಾರದ ವತಿಯಿಂದ ಐದು ಸಾವಿರ ರೂ.ಗಳ ಮುಂಗಡವನ್ನು ನೀಡಿ 300 ಪ್ರತಿಗಳನ್ನು ಕೊಳ್ಳಲು ಅವರು ಬಲವಾಗಿ ಪ್ರತಿಪಾದಿಸಿದರು. ಈ ಸಂದರ್ಭದಲ್ಲಿ ಚೀಫ್‌ಕಮೀಷನರ್‌ರಿಗೆ ಬರೆದ ಪತ್ರದಲ್ಲಿ ಅವರು ಪ್ರಾಚೀನ ಕೃತಿಗಳನ್ನು ಪ್ರಕಟಿಸಬೇಕಾದ ಅಗತ್ಯವನ್ನು ಕುರಿತು ವಿವರಿಸುತ್ತಾ "ಸರ್ಕಾರವು ಕೇವಲ ಈ ನಿಘಂಟು ಮಾತ್ರವಲ್ಲದೆ ಕನ್ನಡದ ಪ್ರಾಚೀನ ಕೃತಿಗಳನ್ನು ಮುದ್ರಿಸಲು ಒಂದು ಶಾಶ್ವತವಾದ ನಿಧಿಯನ್ನು ಸ್ಥಾಪಿಸಬೇಕು. ಈ ರೀತಿಯ ಅನೇಕ ಕೃತಿಗಳು ಈಗ ವಿನಾಶದ ಅಂಚಿನಲ್ಲಿದ್ದು ದೇಶಿಯ ಸರ್ಕಾರವು ಸ್ಥಾಪನೆಯಾಗುವ ವೇಳೆಗೆ ಬಹುಶಃ ಅವು ಶಾಶ್ವತವಾಗಿ ಬೆಳಕು ಕಾಣದೆಯೇ ಹೋಗಿಬಿಡುವ ಸಾಧ್ಯತೆಗಳಿವೆ" ಎಂದಿದ್ದಾರೆ. ಆರ್.ನರಸಿಂಹಾಚಾರ್ಯರ ಕವಿಚರಿತೆಯ ಸಂಪುಟಗಳು ಹೊರಬಂದಾಗ ತಮ್ಮ ಇಳಿ ವಯಸ್ಸಿನಲ್ಲಿಯೂ ಅದನ್ನು ಇಂಗ್ಲೀಷಿಗೆ ಭಾಷಾಂತರಿಸುವ ಒಲವು ತೋರಿದ್ದು ಕನ್ನಡ ನಾಡು ನುಡಿಯ ಬಗ್ಗೆ ರೈಸರಿಗಿದ್ದ ಕಳಕಳಿಯ ದ್ಯೋತಕವಾಗಿದೆ.

ರೈಸರ ಅವಿರತ ಶ್ರಮದಿಂದಾಗಿ ಆರಂಭವಾದ ಪ್ರಾಚೀನ ಹಸ್ತಪ್ರತಿಗಳನ್ನು ಸಂಗ್ರಹಿಸುವ ಕಾರ್ಯ ವ್ಯಾಪಕವಾಗಿ ಮುಂದುವರಿದು 1887ರಲ್ಲಿ ಮೈಸೂರಿನ ಓರಿಯಂಟಲ್ ಲೈಬ್ರರಿಯ ಹುಟ್ಟಿಗೆ ಕಾರಣವಾಯಿತು. ಇಷ್ಟೇ ಅಲ್ಲದೆ ಗ್ರಂಥ ಸಂಪಾದನೆಯ ಕ್ಷೇತ್ರದಲ್ಲಿ ಸಮರ್ಥರೆನಿಸಿದ ಶಿಷ್ಯಪರಂಪರೆಯನ್ನು ಅವರು ಮೊದಲುಮಾಡಿದರು. 'ಕವಿರಾಜಮಾರ್ಗ'ವನ್ನು ಸಂಪಾದಿಸಿದ ಕೆ.ಬಿ.ಪಾಠಕ್, 'ಕರ್ಣಾಟಕ ಕವಿಚರಿತೆ'ಯ ಖ್ಯಾತಿಯ ಆರ್.ನರಸಿಂಹಾಚಾರ್ಯ, ಕರ್ಣಾಟಕ ಕಾವ್ಯ ಕಲಾನಿಧಿ ಮಾಲೆಯ ಎಂ.ಎ ರಾಮಾನುಜಯ್ಯಂಗಾರ್ ಮುಂತಾದ ಅನೇಕರು ರೈಸರ ಮಾರ್ಗದರ್ಶನದಲ್ಲಿ ಮುಂದೆ ಸಾಗಿದವರೇ ಆಗಿದ್ದಾರೆ.

ಶಾಸನ ಶಾಸ್ತ್ರದಲ್ಲಿನ ರೈಸರ ಸಾಧನೆಗಳು ಅವರಿಗೆ ಅಂತರ ರಾಷ್ಟ್ರೀಯ ಮಟ್ಟದ ಖ್ಯಾತಿಯನ್ನು ತಂದಿತ್ತವು. ಅವರು ಟಂಕಿಸಿದ 'ಎಪಿಗ್ರಾಫಿಯ' ಎಂಬ ಶಬ್ದ ಇಂದು ವಿಶ್ವವ್ಯಾಪಿಯಾಗಿ ಬಳಕೆಯಲ್ಲಿದೆ. ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳನ್ನು ಸಂಪಾದಿಸುವಲ್ಲಿ ಅವರು ತೋರಿರುವ ವಿಶ್ಲೇಷಣಾತ್ಮಕ ಮನೋಭಾವ ಹಾಗೂ ನಿಖರತೆಗೆ ಕೊಟ್ಟಿರುವ ಗಮನವು ಆನಂತರದಲ್ಲಿ ಪ್ರಕಟಿತವಾದ ಅನೇಕ ಈ ರೀತಿಯ ಗ್ರಂಥಮಾಲೆಗಳಿಗೆ ಮಾದರಿಯಾಗಿವೆ. ಇಂಡಿಯ ದೇಶದಲ್ಲಿ ಮತ್ತಾವ ರಾಜ್ಯವೂ, ಮತ್ತಾವ ವ್ಯಕ್ತಿಯೂ ಈ ಪ್ರಮಾಣದ ಶಾಸನಗಳನ್ನು ಪ್ರಕಟಿಸಿಲ್ಲ ಎಂಬ ಏಕೈಕ ಅಂಶವೇ ರೈಸರ ಹೆಗ್ಗಳಿಕೆಯನ್ನು ತೋರಿಸುತ್ತದೆ. ಜರ್ಮನಿಯ ಖ್ಯಾತ ವಿದ್ವಾಂಸರಾದ ವೆಬರ್ ಅವರು ಈ ಬಗ್ಗೆ ಆಡಿರುವ"A Splendid work of monumental charecter, that will bear your name to Uttarani ugani" ಎಂಬ ಮಾತುಗಳು ರೈಸರ ಸಮಗ್ರ ಕೊಡುಗೆಯನ್ನು ಕುರಿತಾಗಿಯೂ ಅಕ್ಷರಶಃ ಸತ್ಯವಾಗಿದೆ.

❑

# ಬಿ. ವೆಂಕಟಾಚಾರ್ಯ

ವಿಜಯಾ ಸುಬ್ಬರಾಜ್

ಆಧುನಿಕ ಕನ್ನಡ ಗದ್ಯಸಾಹಿತ್ಯ, ಅದರಲ್ಲೂ ಕನ್ನಡ ಕಾದಂಬರಿ ಸಾಹಿತ್ಯದಲ್ಲಿ ಮರೆಯಲಾಗದ ಮೈಲಿಗಲ್ಲನ್ನು ನೆಟ್ಟು ಅವಿಸ್ಮರಣೀಯರಾಗಿ ಉಳಿದವರೆಂದರೆ ಬಿ. ವೆಂಕಟಾಚಾರ್ಯರು. 19ನೇ ಶತಮಾನದಲ್ಲಿ ಬಿ. ವೆಂಕಟಾಚಾರ್ಯರ ಹೆಸರು ಮನೆಮಾತಾಗಿತ್ತು. ಸ್ವತಂತ್ರ ಸೃಜನಾತ್ಮಕ ರಚನೆಗಳಿಗಿಂತಲೂ, ಸ್ವತಂತ್ರ ರಚನೆ ಎಂಬಷ್ಟೇ ಮಹತ್ವಪೂರ್ಣವೆನಿಸುವ ಬಂಗಾಳಿಯಿಂದ ಅನುವಾದಿತ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿ ಕನ್ನಡ ಕಾದಂಬರಿ ಪಿತಾಮಹ ಎಂಬ ಹೆಸರಿಗೆ ಪಾತ್ರರಾಗಿದ್ದಾರೆ.

ಬಿ. ವೆಂಕಟಾಚಾರ್ಯರು ಬಂಗಾಳಿಯ ಕೃತಿಗಳನ್ನು ನೀಡಿದ್ದೂ ಒಂದು ಆಕಸ್ಮಿಕವೇ ಆದರೂ ಅದು ಸ್ವಾಗತಾರ್ಹವೆನಿಸಿತು. ವೆಂಕಟಾಚಾರ್ರು ತಮ್ಮ ಕಾದಂಬರಿಗಳಿಂದಾಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಆಸಕ್ತ ಓದುಗರ ಒಂದು ವರ್ಗವನ್ನೇ ನಿರ್ಮಾಣ ಮಾಡಿದರು. ವೆಂಕಟಾಚಾರ್ಯರು ರಚನೆಗೆ ತೊಡಗಿದ್ದ ಕಾಲ ಕನ್ನಡ ಸಾಹಿತ್ಯದ ಅರುಣೋದಯದ ಕಾಲವಾಗಿತ್ತು. ಇಂಗ್ಲಿಷ್ ಶಿಕ್ಷಣ ಪ್ರಸಾರ, ಹೊಸ ವಿಚಾರ ಸರಣಿಯ ಪ್ರಭಾವದಿಂದ ಕನ್ನಡ ಜನತೆಯಲ್ಲೂ ಒಂದು ಬಗೆಯ ಜಾಗೃತಿ ಉಂಟಾಗಿತ್ತಾದರೂ ಕನ್ನಡ ಜನತೆಯ ವಾಚನ ಪ್ರೀತಿಯನ್ನು ತಣಿಸುವುದಕ್ಕೆ ಕನ್ನಡದಲ್ಲಿ ಸಾಕಷ್ಟು ಕೃತಿಗಳು ಲಭ್ಯವಾಗುತ್ತಿರಲಿಲ್ಲ. ಕಾವ್ಯವಾಚನ ಪರಂಪರೆ ಎಂದೋ ನಿಲುಗಡೆಗೆ ಬಂದಿತ್ತು. ಗದ್ಯ ಕೃತಿಗಳಂತೂ ಅಪರೂಪವಾಗಿದ್ದವು. ಇದಕ್ಕೆ ಕಾರಣ ದೇಶ ಭಾಷೆಗಳಲ್ಲಿ ಒಂದಾದ ಕನ್ನಡದ ಬೆಳವಣಿಗೆಗೆ ಮಾರಕವಾದ ಪರಿಸರ. ಪಾಶ್ಚಾತ್ಯ ಸಂಸ್ಕೃತಿಯ ಅನುಕರಣೆಯ ವ್ಯಾಮೋಹ ಕನ್ನಡ ನಾಡಿನ ವಿದ್ಯಾವಂತ ಜನರನ್ನೂ ತಟ್ಟದಿರಲಿಲ್ಲ. ಹೀಗಾಗಿ ಪಾರತಂತ್ರ್ಯ, ಹೊರಗಿನ ವ್ಯಾಮೋಹ, ತಮ್ಮರಿವಿನ ಅಭಾವ ಇತ್ಯಾದಿಗಳು ನಾಡನ್ನು ಕವಿದಿದ್ದಾಗ, ಕನ್ನಡ ಜನಜಾಗೃತಿ ತೀರಾ ಅವಶ್ಯಕವಾಗಿದ್ದ ಸಂದರ್ಭದಲ್ಲಿ, ಜನರಲ್ಲಿ ಕನ್ನಡ ಸಾಹಿತ್ಯಾಭಿರುಚಿಯನ್ನು ಕೆರಳಿಸುವಂತಹ ಸಾಹಿತ್ಯ ಕೃತಿಗಳು - ಅವು ಕಾದಂಬರಿಗಳೋ, ಕಥೆಗಳೋ, ತೀರಾ ಅಗತ್ಯವೆನಿಸಿದವು. ಪುನರುಜ್ಜೀವನದ ಹಾದಿಯಲ್ಲಿ ಕಾಲಿಡುತ್ತಿದ್ದ ಕನ್ನಡ ನಾಡು ನುಡಿಗಳಿಗೆ ಕಾದಂಬರಿ ಸಾಹಿತ್ಯ ರಚನೆಯ ಮೂಲಕ ಹೊಸ ಚೈತನ್ಯವನ್ನು ಬಿ. ವೆಂಕಟಾಚಾರ್ಯರು ತುಂಬಿದರು.

ಇಂಗ್ಲಿಷ್ ಸಾಹಿತ್ಯ ಕನ್ನಡ ಕಾವ್ಯ, ಗದ್ಯ, ಕಾದಂಬರಿ ಇತ್ಯಾದಿ ಅನೇಕ ಪ್ರಕಾರಗಳ ಮೇಲೆ ಪ್ರಭಾವ ಬೀರಿದೆ. ಕವಿಗಳು, ಕಥೆಗಾರರು, ಕಾದಂಬರಿಕಾರರು, ತಮಗೆ ತಮ್ಮ ಸ್ವಧರ್ಮ, ಸ್ವಭಾಷೆಗಳ ಮೇಲಿನ ಅಭಿಮಾನವನ್ನು ತಾವು ಆರಿಸಿಕೊಂಡ ಸಾಹಿತ್ಯ ಮಾಧ್ಯಮಗಳ ಮೂಲಕ ವ್ಯಕ್ತಪಡಿಸಿದರು. ಸಂಸ್ಕೃತದಿಂದ, ಇಂಗ್ಲಿಷಿನಿಂದ ಅನೇಕ ಕೃತಿಗಳು ಕನ್ನಡಕ್ಕೆ ರೂಪಾಂತರಗೊಂಡು ಬಂದವು. ವಿಶ್ವದ ಮೌಲಿಕ ಕೃತಿಗಳೂ ಕೆಲವು ಕನ್ನಡಕ್ಕೆ ಬರತೊಡಗಿದವು. ಇಂಗ್ಲಿಷಿನಲ್ಲಿ 'ನಾವೆಲ್' ಎಂದು ಕರೆಸಿಕೊಳ್ಳುತ್ತಿದ್ದ ಸಾಹಿತ್ಯ ಪ್ರಕಾರವು 'ಕಾದಂಬರಿ' ಹೆಸರಿನಲ್ಲಿ ದೇಶ ಭಾಷೆಗಳಲ್ಲೆಲ್ಲಾ ಪ್ರಚಲಿತವಾಯಿತು. ಇಂಗ್ಲಿಷಿನಲ್ಲಿ 18ನೇ ಶತಮಾನದಲ್ಲಿ ತಲೆದೋರಿದ ಈ ಸಾಹಿತ್ಯ ಪ್ರಕಾರ ಜನತೆಯ ಉತ್ಸಾಹವನ್ನು ಕೆರಳಿಸಿತು. ಕಥಾ ಸಾಹಿತ್ಯದಲ್ಲಿ ಆಸಕ್ತರಾದ ಕನ್ನಡ ಜನತೆಗಂತೂ ಕಾದಂಬರಿಗಳು ದೊರೆತದ್ದು ಒಂದು ಪರ್ವವೆನಿಸಿತು. ಎಸ್. ಬಿ. ಕೃಷ್ಣಸ್ವಾಮಿಯವರು 'ರಾಬಿನ್‌ಸನ್ ಕ್ರೂಸೋ', ಬಾಪು ಸುಬ್ಬರಾಯರು ಮಿಸ್ ಎಜ್‌ವರ್ತ್‌ಳ ಕೃತಿಯ ಅನುವಾದ 'ನಿರ್ಭಾಗ್ಯ ಮುರಾದ' ಕೃತಿಯನ್ನೂ, ಎಂ. ಎಸ್. ಪುಟ್ಟಣ್ಣನವರು ಥಾಮಸ್ ಡೇಯವರ 'ಸ್ಯಾಂಡ್‌ಫೋರ್ಡ್ ಅಂಡ್ ಮಾರ್ಟಿನ್' ಕೃತಿಯ ಅನುವಾದವಾದ 'ಸುಮತಿ ಮದನಕುಮಾರರ ಚರಿತ್ರೆ' ಯನ್ನೂ ಕನ್ನಡಿಗರಿಗೆ ಪರಿಚಯಿಸಿದರು. ಇವಲ್ಲದೆ ಇನ್ನೂ ಅನೇಕ ಉತ್ತಮ ಕಾದಂಬರಿಗಳು ಇಂಗ್ಲಿಷಿನಲ್ಲಿ ಇದ್ದುದು ವಿದ್ಯಾವಂತ ಜನರ ಕಣ್ಣಿಗೆ ಬಿದ್ದಿದ್ದರೂ ಅವುಗಳನ್ನು ಕನ್ನಡಕ್ಕೆ ನೀಡಬೇಕೆಂದು ಅನಿಸಲಿಲ್ಲ. ಒಂದು ಅವರಿಗೆ ಅವುಗಳ ಬಗ್ಗೆ ಆಲೋಚನೆ ಬಂದಿಲ್ಲದಿರುವುದು ಕಾರಣವಾದರೂ, ಕನ್ನಡದ ಬಗ್ಗೆ ವಿದ್ಯಾವಂತ ಜನಕ್ಕೆ ಇದ್ದ ತಾತ್ಸಾರವೂ ಮತ್ತೊಂದು ಕಾರಣವೆಂದು ಭಾವಿಸಬಹುದು. ಆದರೆ ಜನತೆಯಲ್ಲಿನ ಇಂತಹ ತಾತ್ಸಾರ ಮನೋಭಾವ ದೂರವಾಗಿ ಕನ್ನಡ ಭಾಷೆ ಸಾಹಿತ್ಯಗಳ ಬಗ್ಗೆ ಅಭಿಮಾನ, ಆಸಕ್ತಿಗಳನ್ನು ಬೆಳೆಸಿಕೊಳ್ಳಲು ಒಂದು ಆಕರ್ಷಕ ಮಾಧ್ಯಮದ ಅವಶ್ಯಕತೆಯಿತ್ತು.

ನಡುಗನ್ನಡದ ಜನಪ್ರಿಯ ಕಾವ್ಯಗಳು ಮತ್ತು 'ಬತ್ತೀಸ ಪುತ್ಥಳಿ' ಯಂಥ ಕಥನಗಳಿಗೆ ಸೀಮಿತವಾಗಿದ್ದ ಅಂದಿನ ಕನ್ನಡಿಗರ ವಾಚನಾಬಿರುಚಿ ಯನ್ನು ಹೆಚ್ಚಿಸುವುದಕ್ಕೆ ದುಡಿದ ಮಹನೀಯರಲ್ಲಿ ಬಿ. ವೆಂಕಟಾಚಾರ್ಯರ ಹೆಸರು ಎದ್ದು ನಿಲ್ಲುತ್ತದೆ. ಮಧ್ಯಮ ವರ್ಗದ ಇಲ್ಲವೆ ಜನಸಾಮಾನ್ಯ ಓದುಗನ ಹೃದಯ ಪರಿಷ್ಕರಣ, ಭಾವವಿಕಸನಗಳಿಗೆ ಕಾದಂಬರಿ ಸಾಹಿತ್ಯ ಅತ್ಯಂತ ಸಾರ್ಥಕ ಮಾಧ್ಯಮವಾಗಬಹುದೆಂಬ ವೆಂಕಟಾಚಾರ್ಯರ ಆಲೋಚನೆ ಅರ್ಥಪೂರ್ಣ.

ಇಂತಹ ಒಂದು ಸಾಹಿತ್ಯಕ ಧೋರಣೆಯ ಹಿನ್ನೆಲೆಯಲ್ಲಿ ವೆಂಕಟಾಚಾರ್ಯರು ಕನ್ನಡ ಕಾದಂಬರಿ ಸಾಹಿತ್ಯ ಕ್ಷೇತ್ರದಲ್ಲಿ ಪ್ರವೇಶಿಸಿದರು.

1845ರಲ್ಲಿ ಹುಟ್ಟಿದ ವೆಂಕಟಾಚಾರ್ಯರ ಸ್ಥಳ ಕೊಳ್ಳೇಗಾಲ. ತಂದೆ ಗರುಡಾಚಾರ್ಯರು ಸಂಸ್ಕೃತ ಪಂಡಿತರು. ಎಳೆಯ ವಯಸ್ಸಿನಿಂದಲೂ ಧಾರ್ಮಿಕ ಪರಿಸರದಲ್ಲಿ ಬೆಳೆದ ವೆಂಕಟಾಚಾರ್ಯರದು ಉತ್ತಮ ಸಂಸ್ಕಾರ; ಸನಾತನ ಪ್ರವೃತ್ತಿ. ಅದ್ಭುತ ಪ್ರತಿಭೆಯ ಬಾಲಕರಾಗಿದ್ದ ಇವರಿಗೆ ಆರಂಭದ ಶಿಕ್ಷಣ ಮನೆಯಲ್ಲಿಯೇ ಆಯಿತು. ಆದರೆ ಅಷ್ಟರಿಂದಲೇ ಶಿಕ್ಷಣ ಪೂರ್ತಿಯಾಗದೆಂದು ಭಾವಿಸಿದ್ದ ತಂದೆ ಮಗನನ್ನು ತುಮಕೂರಿನ ಇಂಗ್ಲಿಷ್ ಶಾಲೆಗೆ ಸೇರಿಸಿದರು. ನಾಲ್ಕು-ಆರು ವರ್ಷಗಳಲ್ಲಿಯೇ ಜೂನಿಯರ್ ಸೀನಿಯರ್ ಪರೀಕ್ಷೆಗಳನ್ನು ಮುಗಿಸಿದ ನಂತರ ಸರಕಾರಿ ಗುಮಾಸ್ತೆಯಾಗಿ ಕೆಲಸ ಮಾಡಿದರು. ಕೆಲವೇ ವರ್ಷಗಳಲ್ಲಿಅಕೌಂಟೆಂಟ್ ಆಗಿ ಚಿತ್ರದುರ್ಗಕ್ಕೆ ಬಂದರು. ವೆಂಕಟಾಚಾರ್ಯರಲ್ಲಿ ಮೊದಲಿನಿಂದಲೂ ಮನೆಮಾಡಿದ್ದ ಕಾರ್ಯ ದಕ್ಷತೆ, ಶ್ರದ್ಧೆ, ಪರಿಶ್ರಮಗಳು ಅವರನ್ನು ಅತಿ ಶೀಘ್ರವಾಗಿ ಡಿವಿಜನ್ ಹೆಡ್ ಮುನ್ಷಿ, ಡಿಸ್ಟ್ರಿಕ್ಟ್ ಕೋರ್ಟ್ ಶಿರಸ್ತೇದಾರ್ ಮತ್ತು ಪಬ್ಲಿಕ್ ಪ್ರಾಸಿಕ್ಯೂಟರಾಗಿ ಕೊನೆಗೆ ಮುನ್ಸೀಫರಾಗಿ ಬಡ್ತಿ ಪಡೆಯುವಂತೆ ಮಾಡಿದವು. ಆದರೆ ಸರಕಾರಿ ಕಾರ್ಯಭಾರದ ನಡುವೆಯೂ ಅವರ ಸಾಹಿತ್ಯಕ ಸಾಧನೆ, ಆಸಕ್ತಿಗಳು ಜೀವಂತವಾಗಿ ಉಳಿದು ಮಹತ್ಕಾದಂಬರಿಗಳನ್ನು ಕನ್ನಡ ಜನತೆಗೆ ದೊರಕಿಸಿಕೊಟ್ಟವು.

ಸಾಹಿತ್ಯ, ಶಾಸ್ತ್ರಾಧ್ಯಯನಗಳು ಅವರ ಜೀವದುಸಿರಾಗಿತ್ತು. ಮನೆಯಲ್ಲಿಯೇ ಭೂತಾಕಾರದ, ಕಬ್ಬಿಣದ ತಿರುಗುವ ಪುಸ್ತಕ ಬೀರುವಿನ ತುಂಬ ಸಹಸ್ರಾರು ಬೆಲೆ ಬಾಳುವ ಗ್ರಂಥಗಳು, ನಿಘಂಟುಗಳು, ವಂಗೀಯ ವಿಶ್ವಕೋಶಗಳು ಮುಂತಾದವನ್ನು ತುಂಬಿ, ಅದನ್ನೊಂದು ಚಲಿಸುವ ಗ್ರಂಥಭಂಡಾರವಾಗಿಸಿದ್ದರು. ನಿರಂತರ ಅಧ್ಯಯನದಲ್ಲಿ ತೊಡಗಿರುತ್ತಿದ್ದ ಇವರಿಗೆ ಬಂಗಾಳಿ ಕಾದಂಬರಿಗಳನ್ನು ಕನ್ನಡಕ್ಕೆ ತರುವ ಪ್ರೇರಣೆ ದೊರೆತದ್ದೂ ಒಂದು ವಿಚಿತ್ರ ಯೋಗಾಯೋಗವಾಗಿತ್ತು. ತಂದೆಯಿಂದ ಧಾರ್ಮಿಕ ಶ್ರದ್ಧೆ, ಸಂಸ್ಕಾರಗಳನ್ನು ಪಡೆದಿದ್ದ ವೆಂಕಟಾಚಾರ್ಯರು ಆರಂಭಕ್ಕೆ, ಸ್ತೋತ್ರ ರಚನೆಗೆ ಕೈ ಹಾಕಿದ್ದರು. ತಮಿಳು ಇವರ ಮಾತೃಭಾಷೆಯಾಗಿತ್ತು. ಮೌಲಿಕವಾದ ಕೆಲವು ತಮಿಳು ಕೃತಿಗಳನ್ನೂ, ಇಂಗ್ಲಿಷ್ ವಿದ್ಯಾಭ್ಯಾಸದ ಮೂಲಕ ಇಂಗ್ಲಿಷ್ ಸಾಹಿತ್ಯದ ಪರಿಚಯವನ್ನು ಹೊಂದಿದ್ದರಿಂದ ಕೆಲವು ಇಂಗ್ಲಿಷ್ ಕೃತಿಗಳನ್ನೂ ಕನ್ನಡಕ್ಕೆ ಅನುವಾದಿಸುವ ಅವಕಾಶವನ್ನು ಪಡೆದರು. ಆದರೆ ಬಂಗಾಳಿ ಭಾಷೆಯಿಂದ ಅನುವಾದಿತ ಕೃತಿಗಳಿಂದಲೇ ವೆಂಕಟಚಾರ್ಯರು ಕನ್ನಡ ಕಾದಂಬರಿ ಸಾಹಿತ್ಯ ಕ್ಷೇತ್ರದಲ್ಲಿ ಭದ್ರವಾಗಿ ಬೇರೂರಿದ್ದು. ಬಂಗಾಳಿ ಭಾಷೆಯ ಪರಿಚಯವಾದದ್ದು, ಔಷಧಿಗಳನ್ನು ಸುತ್ತಿದ್ದ ಬಂಗಾಳಿ ಪತ್ರಿಕೆಯ ಹಾಳೆಗಳನ್ನು ನೋಡ ನೋಡುತ್ತ ತಮಗೂ ಆ ಭಾಷೆ ಕಲಿಯಬೇಕೆಂಬ ಆಸಕ್ತಿ ಮೂಡಿದಾಗ. ಅವರ ದೂರದ ಬಂಧುವೊಬ್ಬರು ಅವರ ನೆರವಿಗೆ ಬಂದು, ವೆಂಕಟಾಚಾರ್ಯರು ಬಂಗಾಳಿ ಭಾಷೆ ಕಲಿಯಲು ಬೇಕಾದ ಸಾಮಗ್ರಿಯನ್ನು ಒದಗಿಸಿದರು. ಕಲ್ಕತ್ತೆಗೆ ಹೋಗಿದ್ದವರು, ಹಿಂದಿರುಗುವಾಗ ಬಂಗಾಳಿ ಪುಸ್ತಕಗಳನ್ನು ತಂದು, ಅವರು ಬಂಗಾಳಿ ಭಾಷೆ ಕಲಿಯುವಂತೆ ಮಾಡಿದರು. ಕಲಿಯಬೇಕೆಂಬ ಆಸಕ್ತಿಯ ಜೊತೆಜೊತೆಗೆ ಆಳವಾದ ಶ್ರದ್ಧೆ, ಪರಿಶ್ರಮಗಳಿದ್ದುದರಿಂದಾಗಿ ಬೇಗನೆ ಬಂಗಾಳಿ ಭಾಷೆಯನ್ನು ಕಲಿತರು. ಅಲ್ಲದೆ ಈಶ್ವರಚಂದ್ರ ವಿದ್ಯಾಸಾಗರರೊಡನೆ ಪತ್ರವ್ಯವಹಾರವನ್ನಿರಿಸಿಕೊಂಡಿದ್ದು, ತನ್ಮೂಲಕವೂ ಅನೇಕ ವಿಷಯಗಳನ್ನು ಕಲಿತರು. ಬಂಗಾಳಿ ಓದುವುದರಲ್ಲಿ, ಬರೆಯುವುದರಲ್ಲಿ ನಿಷ್ಣಾತರಾದರು.

ಸ್ವಸಾಮರ್ಥ್ಯದ ಪರೀಕ್ಷೆಗೆಂಬಂತೆ ಮೊದಲಿಗೆ, ಪತ್ರ ಗುರುಗಳೂ, ಆಪ್ತರೂ ಆಗಿದ್ದ ಈಶ್ವರಚಂದ್ರ ವಿದ್ಯಾಸಾಗರರ 'ಭ್ರಾಂತಿ ವಿಲಾಸ' (ಕಾಮೆಡಿ ಆಫ್ ಎರರ್‍ಸ್‌ನ ಗದ್ಯರೂಪ)ವನ್ನು ಕನ್ನಡಕ್ಕೆ ತಂದರು. ಇದೇ ಅವರ ಪ್ರಪ್ರಥಮ ಅನುವಾದಿತ ಕೃತಿ. ಈಶ್ವರಚಂದ್ರರೇ ಸ್ವತಃ ಆ ಕೃತಿಯನ್ನು ಕನ್ನಡಕ್ಕೆ ಅನುವಾದಿಸಲು ಕೇಳಿದರಂತೆ ! ಕನ್ನಡ ಓದುವವರು ಕಡಿಮೆ. ಎಲ್ಲೆಲ್ಲೂ ಇಂಗ್ಲಿಷಿನ ವ್ಯಾಮೋಹ. ಕನ್ನಡದಲ್ಲಿ ಏನಿದೆ? - ಎಂಬ ನಿಲುವು - ಇಂತಹ ಪರಿಸರದಲ್ಲಿ ಆಸೆಗಳು ಆಸೆಗಳಾಗಿಯೇ ಉಳಿಯುವ ಸಂಭವವಿತ್ತಾದರೂ, ವೆಂಕಟಾಚಾರ್ಯರು ಧೈರ್ಯಗೆಡಲಿಲ್ಲ. ಅದೃಷ್ಟಕ್ಕೆ ವಿ. ಎನ್. ನರಸಿಂಹಾಚಾರ್ಯರೆಂಬ ಅವರ ಬಂಧುವೊಬ್ಬರು ಮುಂದಾಗಿ, 1876ರಲ್ಲಿ 'ಭ್ರಾಂತಿ ವಿಲಾಸ' ಅಚ್ಚುಹಾಕಿಸಿ ಕನ್ನಡಿಗರ ಕೈ ಸೇರುವಂತೆ ಮಾಡಿದರು. ನಿರೀಕ್ಷೆಗೂ ಮೀರಿದ ಜನಪ್ರಿಯತೆ ಅವರ ಪಾಲಿಗೆ ಬಂತು. 'ಭ್ರಾಂತಿ ವಿಲಾಸ' ಪ್ರಕಟವಾದ ಮರುವರ್ಷವೇ ಮದ್ರಾಸ್ ವಿಶ್ವವಿದ್ಯಾಲಯ ಅದನ್ನು ಪಠ್ಯ ಗ್ರಂಥವಾಗಿ ಇಟ್ಟರು. ಈಶ್ವರಚಂದ್ರ ವಿದ್ಯಾಸಾಗರರಿಗೆ ತಮ್ಮ ಶಿಷ್ಯನ ಸಾಧನೆಯಿಂದ ಹೆಮ್ಮೆಪಡುವಂತಾಯಿತು. ತಾವು ಬಂಗಾಳಿ ಭಾಷೆಯನ್ನು ಹೇಳಿಕೊಟ್ಟದ್ದಕ್ಕೆ ಸಾರ್ಥಕವಾಯಿತೆಂದು ಭಾವಿಸಿದರು. ಅವರ ಆನಂದಾತಿರೇಕದ ಫಲವೆಂದರೆ, ತಮ್ಮೆಲ್ಲ ಕೃತಿಗಳನ್ನೂ ಅನುವಾದಿಸಲು ಅಪ್ಪಣೆ ನೀಡಿದರು. ಗುರುಗಳ ಒಪ್ಪಿಗೆ ದೊರೆತದ್ದೇ, 'ಶಾಕುಂತಲ', 'ಸೀತಾ ವನವಾಸ'ದ ಕಥೆಗಳು ಅನುವಾದಗೊಂಡು ಕನ್ನಡಿಗರ ಮೆಚ್ಚಿಗೆ ಪಡೆದವು. ಇದ್ದಕ್ಕಿದ್ದಂತೆ ವೆಂಕಟಾಚಾರ್ಯರಿಂದ ಇಂತಹ ಇನ್ನಷ್ಟು ಕೃತಿಗಳು ಬರಬೇಕೆಂಬ ಬೇಡಿಕೆ ಹೆಚ್ಚಾಯಿತು. ಜನರ ಓದುವ ಅಭಿರುಚಿ ಚುರುಕುಗೊಂಡಿತು. ವೆಂಕಟಾಚಾರ್ಯರು ಕೊಡುವ ಕಾದಂಬರಿಗಳಿಗಾಗಿ ವಾಚಕರು ಕಾದು ನಿಲ್ಲುವಂತಾಯಿತು.

ಆಗ ತಾನೇ ಹೊಸ ಸಾಹಿತ್ಯ ಯುಗವು ಪ್ರಾರಂಭವಾಗಿತ್ತು. ಕೆಂಪು ನಾರಾಯಣನ 'ಮುದ್ರಾ ಮಂಜೂಷ' ಕನ್ನಡದ ಪ್ರಮುಖ ಗದ್ಯ ಗ್ರಂಥವೆನಿಸಿತ್ತು. ಪಂಡಿತರ ಗದ್ಯ ಶೈಲಿಯಂತಿರದೆ ಸರಳ ಹಾಗೂ ಕಥನಕ್ಕೆ ಸಹಜವಾದ ಶೈಲಿಯನ್ನನುಸರಿಸಿ ಹೊಸಗನ್ನಡ ಹೊಸ್ತಿಲಲ್ಲಿ ಕಾಲಿಟ್ಟಿತ್ತು. ಇದು ಕಾದಂಬರಿ ಅಲ್ಲದಿದ್ದರೂ ಕಾದಂಬರಿಗೆ ಬೇಕಾದ ಗದ್ಯವನ್ನು ಹದಗೊಳಿಸಿಕೊಟ್ಟಿದ್ದರಿಂದ ಕಾದಂಬರಿ ಸಾಹಿತ್ಯ ಸಂದರ್ಭದಲ್ಲೂ ಅದರ ಪ್ರಸ್ತಾಪ ಮುಖ್ಯವೆನಿಸುತ್ತದೆ. ಇದರ ಜೊತೆಗೆ ಮಂಗಳೂರಿನಲ್ಲಿ ಪ್ರಾರಂಭವಾದ 'ಕನ್ನಡ ಸಮಾಚಾರ', ಸುದ್ದಿಗೆಂದೇ ಮೀಸಲಾಗಿದ್ದ ಬೆಂಗಳೂರಿನಲ್ಲಿನ 'ವೃತ್ತಾಂತ ಬೋಧಿನಿ', ಧಾರವಾಡದ 'ಚಂದ್ರೋದಯ', ಮುಂಬಯಿಯ 'ಕನ್ನಡ ಸುವಾರ್ತೆ' - ಇತ್ಯಾದಿ ಪತ್ರಿಕೆಗಳು ಆಗ ತಾನೇ ಕಾಣಿಸಿಕೊಂಡವು. ಈಗಿನಂತೆ ಧಾರಾವಾಹಿಗಳಿಗೆ ಅವಕಾಶವಿರಲಿಲ್ಲವಾದರೂ ವೆಂಕಟಾಚಾರ್ಯರು ಅನುವಾದಿಸಿದ 'ವಿಷವೃಕ್ಷ' ಕರ್ನಾಟಕ ಗ್ರಂಥಮಾಲೆ ಯಲ್ಲಿ ಧಾರಾವಾಹಿಯಾಗಿ ಮೂರು ವರ್ಷಕಾಲ ಪ್ರಚುರವಾಗಿ 1900ನೇ ವರ್ಷದ ಆದಿ ಭಾಗದಲ್ಲಿ ಪೂರ್ತಿಗೊಂಡಿತು. ಆದರೆ ಅಷ್ಟು ಹೊತ್ತಿಗೆ ವೆಂಕಟಾಚಾರ್ಯರ ಉಳಿದ ಕಾದಂಬರಿಗಳು ಪ್ರಕಟವಾಗಿದ್ದವು.

ವೆಂಕಟಾಚಾರ್ಯರ ಕಾಲಕ್ಕೆ ಬಂಗಾಳದಲ್ಲಿ ಬಂಕಿಮಚಂದ್ರರು ಪ್ರತಿಷ್ಠಿತ ಕಾದಂಬರಿಕಾರರಾಗಿದ್ದರು. ಭಾರತದ ವಾಲ್ಟರ್‌ಸ್ಕಾಟ್ ಎಂದೇ ಹೆಸರಾಗಿದ್ದ ಬಂಕಿಮರ ಕಾದಂಬರಿಗಳು ಅನೇಕ ಭಾರತೀಯ ಸಾಹಿತ್ಯಗಳ ಮೇಲೆ ಪ್ರಭಾವ ಬೀರಿದ್ದಷ್ಟೇ ಅಲ್ಲ, ಇಂಗ್ಲಿಷ್ ಮತ್ತು ಇತರ ಯೂರೋಪೀಯ ಭಾಷೆಗಳಲ್ಲಿಯೂ ಅನುವಾದಗೊಂಡಿವೆ. ಬಂಕಿಮಚಂದ್ರರ ಕಾದಂಬರಿಗಳ ಶೈಲಿ, ವಸ್ತು, ಸಂವಿಧಾನಗಳು ವೆಂಕಟಾಚಾರ್ಯರನ್ನು ಮಂತ್ರಮುಗ್ಧರನ್ನಾಗಿ ಮಾಡಿದವು. ಬಂಗಾಳಿ ಕಲಿಯುವಾಗ ಅವರಿಗೆ ಬಂಗಾಳಿ ಕಾದಂಬರಿಗಳನ್ನು ಮಾತ್ರವೇ ಕನ್ನಡಿಸಬೇಕೆಂಬ ಉದ್ದೇಶವಿರಲಿಲ್ಲವಾದರೂ, ಬಂಕಿಮಚಂದ್ರರ ಬರವಣಿಗೆ ಅವರನ್ನು ಕಾದಂಬರಿಯತ್ತ ತಿರುಗಿಸಿದ್ದೇ ಅಲ್ಲದೆ ಆ ಅನುವಾದಗಳಿಂದಲೇ ಕಾದಂಬರಿ ಸಾಹಿತ್ಯದ ಪ್ರಮುಖ ಪ್ರವರ್ತಕರಾಗಿ ಉಳಿಯುವಂತಾಯಿತು.

ಬಂಕಿಮಚಂದ್ರರ ಕಾದಂಬರಿಯ ಆಶಯಗಳು ವೆಂಕಟಾಚಾರ್ಯರ ಮೆಚ್ಚುಗೆಗೆ ಪಾತ್ರವಾಗಿದ್ದವು. ಅವರ ಕಾದಂಬರಿಗಳಲ್ಲಿ ಬರುವ ರಾಷ್ಟ್ರಾಭಿಮಾನ, ಸ್ತ್ರೀ ಪರವಾದ ವಿಚಾರಗಳು, ಧರ್ಮ, ಆಚಾರ ಸಂಬಂಧವಾದ ಚರ್ಚೆಗಳು, ರಂಜಕ - ಅದ್ಭುತರಮ್ಯ ಮತ್ತು ರೋಮಾಂಚಕಾರಿ ಘಟನೆಗಳು - ಅಲೌಕಿಕ ಸಂಗತಿಗಳು, ಮೋಹಕ ಶೈಲಿ- ಇತ್ಯಾದಿ ಅಂಶಗಳು ಅವರನ್ನು ಆಕರ್ಷಿಸಿದವು. 'ದುರ್ಗೇಶ ನಂದಿನಿ' (1885) ಕನ್ನಡಕ್ಕೆ ಬಂದ ಮೊದಲ ಕಾದಂಬರಿಯಾಗಿದೆ. ಅದನ್ನು ಅನುವಾದಿಸಿದ ಉದ್ದೇಶವನ್ನು ಹೀಗೆ ಸ್ಪಷ್ಟಪಡಿಸಿದ್ದಾರೆ : "A Novel in the sense it is understood in English is not familiar to the Kanarese speaking public" - ಈ ಸ್ಥಿತಿಯನ್ನು ಸರಿಪಡಿಸುವುದು ವೆಂಕಟಾಚಾರ್ಯರ ಉದ್ದೇಶವಾಗಿತ್ತು.

1900ರಷ್ಟು ಹೊತ್ತಿಗೆ ವೆಂಕಟಚಾರ್ಯರು ಅನುವಾದಿಸಿಕೊಟ್ಟ ಕಾದಂಬರಿಗಳಲ್ಲಿ 'ಆನಂದಮಠ', 'ದೇವೀ ಚೌಧುರಾಣಿ', 'ರಜನೀ' ಮತ್ತು 'ವಿಷವೃಕ್ಷ' ಮುಖ್ಯವಾಗಿವೆ. 'ದುರ್ಗೇಶ ನಂದಿನೀ', 'ಆನಂದ ಮಠ', 'ದೇವೀ ಚೌಧುರಾಣಿ' ಐತಿಹಾಸಿಕ ಕಾದಂಬರಿಗಳಾಗಿವೆ. ಇಲ್ಲಿನ ಸ್ತ್ರೀ ಪಾತ್ರಗಳು ಕ್ಷಾತ್ರ ತೇಜದಿಂದಲೂ, ತ್ಯಾಗ, ಸಹನೆ, ಔದಾರ್ಯಗಳಿಂದಲೂ ಕೂಡಿರುವಂತೆ ಚಿತ್ರಿಸಲಾಗಿದೆ. 'ವಿಷವೃಕ್ಷ', 'ರಜನೀ' ಸಾಮಾಜಿಕ ಕಾದಂಬರಿಗಳು. ಅದರಲ್ಲಿಯೂ 'ವಿಷವೃಕ್ಷ' ಪೂರ್ಣ ಪ್ರಮಾಣದ ಕಾದಂಬರಿಯಾಗಿ, ಕಾದಂಬರಿಯ ವಸ್ತು ಅನಿರೀಕ್ಷಿತವಾದ ಅನೇಕ ತಿರುವುಗಳನ್ನು ಪಡೆಯುತ್ತದೆ.

ವೆಂಕಟಾಚಾರ್ಯರು ಸರಿಸುಮಾರು 75 ಕೃತಿಗಳ ರಚನೆ ಮಾಡಿದ್ದರೂ ಅವುಗಳಲ್ಲಿ 60ಕ್ಕಿಂತ ಹೆಚ್ಚು ಕೃತಿಗಳು ಕಾದಂಬರಿ ಮತ್ತು ಸಣ್ಣ ಕಥೆಗಳಾಗಿವೆ. ಬಂಗಾಳಿ ಅನುವಾದಗಳಲ್ಲಿ ಬಂಕಿಮಚಂದ್ರರದು ಸಿಂಹಪಾಲು. 'ಭ್ರಾಂತಿ ವಿಲಾಸ', 'ಶಾಕುಂತಲಾ', 'ಸೀತಾ ವನವಾಸ'ಗಳ ನಂತರ ಹರಪ್ರಸಾದ ಶಾಸ್ತ್ರಿಯವರ 'ಭಾರತ ಮಹಿಳಾ' (1884) ಗ್ರಂಥವನ್ನು ಅನುವಾದಿಸಿದರು. ಅಂದಿನ ಲೇಖಕರಂತೆ ವೆಂಕಟಾಚಾರ್ಯರೂ ಹೆಣ್ಣಿನ ತ್ಯಾಗ, ಪ್ರೇಮ, ಔದಾರ್ಯಗಳ ವಿಚಾರವಾಗಿ ಉದಾತ್ತ ಭಾವನೆಗಳನ್ನು ಹೊಂದಿದವರಾಗಿದ್ದರು. ಅವರ ಕಾಲಕ್ಕಾಗಲೇ ಸ್ತ್ರೀ ಪ್ರಗತಿಪರ ವಿಚಾರಗಳು ಪ್ರಾಬಲ್ಯವನ್ನು ಪಡೆದಿದ್ದವು. ಪಾಶ್ಚಾತ್ಯ ಶಿಕ್ಷಣ, ಮಿಷನರಿ ಜನರ ಪ್ರಚಾರ - ಸ್ತ್ರೀ ವಿಷಯಕ ಚರ್ಚೆ - ಸ್ತ್ರೀ ಶಿಕ್ಷಣದ ಅವಶ್ಯಕತೆ - ವಿಧವಾ ವಿವಾಹಕ್ಕೆ ಪ್ರೋತ್ಸಾಹ - ಬಾಲ್ಯ ವಿವಾಹ ಪದ್ಧತಿಯ ಖಂಡನೆ - ಇತ್ಯಾದಿ ವಿಷಯಗಳು 'ಭಾರತ ಮಹಿಳಾ' ಗ್ರಂಥವನ್ನು ಕನ್ನಡಿಸಲು ಪ್ರೇರಣೆ ನೀಡಿದವು. ತಮ್ಮ ಅನುವಾದಗಳ ಮೂಲಕ ಸ್ತ್ರೀ ಪರವಾದ ವಿಚಾರಗಳನ್ನು, ಉದಾತ್ತ ಭಾವನೆಗಳಾದ ಸೇವೆ, ತ್ಯಾಗ, ದೈವಭಕ್ತಿ, ಕರ್ತವ್ಯ ನಿಷ್ಠೆ, ದೇಶಪ್ರೇಮ, ಸ್ತ್ರೀ ಶಿಕ್ಷಣ - ಇತ್ಯಾದಿಗಳನ್ನು ಸಾರಿದರು. ಹಿಂದಿನ ಕಾಲದ ಸೀತೆ, ಸಾವಿತ್ರಿ, ಶಕುಂತಲೆ ಮುಂತಾದವರ ಆದರ್ಶ, ಪ್ರತಿಭೆಗಳನ್ನು ಹಿಂದೂ ಸ್ತ್ರೀಯರು ಕಾಪಾಡಿಕೊಂಡು ಬರಬೇಕು. ಈಗಿನ ಸ್ತ್ರೀಯರು ತಮ್ಮ ಸ್ಥಾನವನ್ನು ಕಾಪಾಡಿಕೊಂಡು, ಹಿಂದಿನಂತೆಯೇ ಮೆರೆಯಬೇಕೆಂಬುದು ಅವರ ಆಶಯವಾಗಿತ್ತು.

ಇಂತಹ ಎಲ್ಲ ವಿಚಾರಗಳಿಗೂ ಬಂಕಿಮರ ಕಾದಂಬರಿಗಳಲ್ಲಿ ಅವಕಾಶವಿತ್ತು. ಸಾಮಾಜಿಕ ಕಾದಂಬರಿಗಳಲ್ಲಿ, ಹಿಂದೂ ಸಾಮಾಜಿಕ, ಸಾಂಸ್ಕೃತಿಕ ಸ್ಪಷ್ಟ ವಿವರಗಳು, ಕೌಟುಂಬಿಕ ಸಮಸ್ಯೆಗಳು, ಮಾನವ ಸಂಬಂಧಗಳು ಕಾಣಸಿಕ್ಕರೆ, ಐತಿಹಾಸಿಕ ಕಾದಂಬರಿಗಳಲ್ಲಿ ಉಜ್ವಲ ದೇಶಭಕ್ತಿ, ಕ್ಷಾತ್ರತೇಜ, ತ್ಯಾಗ, ಔದಾರ್ಯಗಳ ಜೊತೆಗೆ ರೋಮಾಂಚಕಾರಿ ಘಟನೆಗಳು ಓದುಗರನ್ನು ಮಂತ್ರಮುಗ್ಧರಾಗಿಸುವ ರೀತಿಯಲ್ಲಿ ವರ್ಣಿತವಾಗಿವೆ. ಬಂಕಿಮಚಂದ್ರರ ಪ್ರವೇಶದೊಂದಿಗೆ ಬಂಗಾಳಿ ಸಾಹಿತ್ಯವೇ ಏಕೆ ಇಡೀ ಭರತಖಂಡದ ಸಾಹಿತ್ಯ ಜಗತ್ತು, ರಾಷ್ಟ್ರೀಯ ಪ್ರಜ್ಞೆಗಳು ಜಾಗೃತಗೊಂಡವು. ಜಡಸ್ಥಿತಿಯಲ್ಲಿದ್ದ ಭಾರತೀಯ ಸಾಹಿತ್ಯ 'ಕಪಾಲ ಕುಂಡಲ', 'ದುರ್ಗೇಶ ನಂದಿನಿ' ಕಾದಂಬರಿಗಳೊಂದಿಗೆ ದೀರ್ಘನಿದ್ರೆಯಿಂದ ಎಚ್ಚೆತ್ತಿತು. ಜೊತೆಗೆ 'ವಂದೇ ಮಾತರಂ' ಸಂದೇಶ ವಿದ್ಯುತ್ ಪ್ರವಾಹದಂತೆ ನಾಡಿನ ನರನಾಡಿಗಳಲ್ಲಿ ಹರಿಯಿತು. ಬಂಕಿಮಚಂದ್ರರ ದೈತ್ಯಪ್ರತಿಭೆಯ ಮೂಲಕವಾಗಿ ಅನೇಕ ಕೃತಿಗಳು ಹೊರಬಂದವು. ಅವು ಸಾಹಿತ್ಯ ಜಗತ್ತಿನಲ್ಲಿ ಎಬ್ಬಿಸಿದ ಸಂಚಲನದಿಂದ ಎಲ್ಲ ಭಾರತೀಯರಿಗೂ ಅವರ ಕೃತಿಗಳನ್ನು ಓದಬೇಕೆಂಬ ಹಂಬಲ ಕೆರಳಿತು. ಹೊಸದಾಗಿ ಬಂಗಾಳಿ ಭಾಷೆಯನ್ನು ಕಲಿತು, ಅದರ ಸಾಹಿತ್ಯದ ಪರಿಚಯವನ್ನು ಮಾಡಿಕೊಳ್ಳಲು ಹೊರಟ ವೆಂಕಟಾಚಾರ್ಯರು ಮೇಲೆ ವಿವರಿಸಿರುವ ವರ್ಚಸ್ವಿ ವ್ಯಕ್ತಿತ್ವದ, ರಾಷ್ಟ್ರದ ಮಹತ್ವದ ಸಾಹಿತಿಯಾಗಿದ್ದ ಬಂಕಿಮರ ಕಾದಂಬರಿಗಳ ಮತ್ತು ಇತರ ಬರಹಗಳ ಪ್ರಭಾವಕ್ಕೆ ಒಳಗಾದದ್ದು ಆಶ್ಚರ್ಯವಿಲ್ಲ. ಬಂಕಿಮಚಂದ್ರರ ಬರಹಗಳೇ ಅವರಿಗೆ ಆದರ್ಶ. ತಾವು ರಚಿಸಬೇಕಾಗಿದ್ದ ಸಾಹಿತ್ಯದ ರೂಪ ರೇಷೆಗಳು, ಆಶಯಗಳು, ವಿಚಾರಸರಣಿ - ಎಲ್ಲವೂ ಬಂಕಿಮರ ಕೃತಿಗಳಲ್ಲಿ ಪ್ರತಿಫಲಿತವಾಗಿರುವುದನ್ನು ಮನಗಂಡರು. ಸ್ವತಂತ್ರಕೃತಿಗಳ ರಚನೆಯ ಸಾಮರ್ಥ್ಯವಿದ್ದರೂ, ಅನುವಾದಗಳಿಗೆ ದೊರೆತ ಪುರಸ್ಕಾರ, ಜನಪ್ರಿಯತೆಗಳು ಒಂದೆಡೆಯಾದರೆ, ಗದ್ಯಸಾಹಿತ್ಯ ಅದರಲ್ಲಿಯೂ ಕಾದಂಬರಿ ಪ್ರಕಾರದ ಕಥನಸಾಹಿತ್ಯದ ಸೃಷ್ಟಿಗೆ ನಿರ್ದಿಷ್ಟವಾದ ಒಂದು ಸೈದ್ಧಾಂತಿಕ ಚೌಕಟ್ಟು ನಿರ್ಮಾಣವಾಗಿರಲಿಲ್ಲ. ಜನರನ್ನು ಸೆರೆಹಿಡಿಯಬಲ್ಲ ವಾತಾವರಣವನ್ನು ನಿರ್ಮಿಸಬಲ್ಲ ಎಲ್ಲ ಬಗೆಯ ರೊಮಾಂಟಿಕ್ ವಿವರಗಳು ಬಂಕಿಮರ ಕಾದಂಬರಿಗಳಲ್ಲಿ ಕಾಣಸಿಕೊಂಡವು. ಪ್ರೀತಿ, ಪ್ರೇಮ, ವಿರಹ, ಕನಸು, ಮಾನವ ಸಂಬಂಧಗಳು, ಕೌಟುಂಬಿಕ ಸಮಸ್ಯೆಗಳು, ಉದಾತ್ತ ವಿಚಾರಗಳು, ಸ್ತ್ರೀಪರವಾದ ಪ್ರಗತಿವಿಚಾರಗಳು, ಬಾಲ್ಯವಿವಾಹ, ವಿಧವಾವಿವಾಹ, ದೇಶಪ್ರೇಮ, ಕ್ಷಾತ್ರತೇಜ, ತ್ಯಾಗ, ಬಲಿದಾನಗಳು - ಎಲ್ಲಕ್ಕಿಂತ ಹೆಚ್ಚಾಗಿ ವಿಸ್ಮಯಕಾರಿ ಘಟನೆಗಳು - ಅದ್ಭುತರಮ್ಯ ನಿಸರ್ಗ ವರ್ಣನೆ, ಓದುಗರನ್ನೂ ಒಳಗೊಳ್ಳುವ ಕಥನ ಶೈಲಿ - ಇವೆಲ್ಲವೂ ವೆಂಕಟಾಚಾರ್ಯರ ಕಾಲದ ಸಾಹಿತ್ಯದಲ್ಲಿ, ಕಾದಂಬರಿಗಳಲ್ಲಿ ನಿರೀಕ್ಷಿಸುವಂತಹ ಅಂಶಗಳಾಗಿದ್ದು, ಅವೆಲ್ಲವನ್ನೂ ಬಂಕಿಮರ ಕಾದಂಬರಿಗಳು ಪೂರೈಸುತ್ತಿದ್ದುದು, ವೆಂಕಟಾಚಾರ್ಯರು ಅವರ ಕಾದಂಬರಿಗಳನ್ನೇ ಆರಿಸಿಕೊಳ್ಳುವುದಕ್ಕೆ ಮುಖ್ಯ ಪ್ರೇರಣೆಯಾಯಿತು. 1865ರಲ್ಲಿ ಬಂಗಾಳಿ ಭಾಷೆಯಲ್ಲಿ ಬಂದ 'ದುರ್ಗೇಶನಂದಿನಿ' ಕಾದಂಬರಿ 1885ರಷ್ಟು ಹೊತ್ತಿಗೇ ಕನ್ನಡಿಗರ ಕೈಸೇರಿತು. ಪ್ರೇಮ ಮತ್ತು ಯುದ್ಧದ ಕಥೆ ಚಾರಿತ್ರಿಕ ಹಿನ್ನಲೆಯೊಂದಿಗೆ ಈ ಕಾದಂಬರಿಯಲ್ಲಿ ಅತ್ಯಂತ ಅದ್ಭುತವಾಗಿ ಮೂಡಿಬಂದಿದೆ. ಶೌರ್ಯ ಸಾಹಸಗಳು ಪ್ರಭಾವಕಾರಿಯಾಗಿ ಚಿತ್ರಿತವಾಗಿವೆ. 'ದುರ್ಗೇಶನಂದಿನಿ'ಯಲ್ಲಿನ ಕೆಲವು ಘಟನೆಗಳು, ಸಂಗತಿಗಳು ವಾಸ್ತವದೂರವೆನಿಸಿದರೂ, ಅದು ಪ್ರಥಮ ಕಾದಂಬರಿಯಾಗಿರುವುದರ ಜೊತೆಗೆ ಬಂಕಿಮರ ಆಕರ್ಷಕ ಶೈಲಿ, ಕುತೂಹಲಕರವಾದ ಕಥಾನಕ, ದೋಷಗಳನ್ನು, ಅಸಂಭಾವ್ಯತೆಯನ್ನೂ ಮರೆಸಿಬಿಡುತ್ತದೆ. ಆದರೆ 1866ರಲ್ಲಿ ಬಂದ 'ಕಪಾಲಕುಂಡಲಾ' ಕಲ್ಪನೆ ಹಾಗೂ ಕಥಾನಿರ್ವಹಣೆಗಳ ಮೂಲಕ ಉತ್ತಮ ಕೃತಿಯಾಗಿ ಮೈತಳೆದಿದೆ. 'ಕಾಪಾಲಿಕ, ವಾಮಾಚಾರ' ಇತ್ಯಾದಿಗಳಿದ್ದರೂ ಸ್ವಲ್ಪ ಮಟ್ಟಿಗೆ ಮನೋವೈಜ್ಞಾನಿಕ ಸಂಬಂಧವಾದ ತಾತ್ವಿಕ ಸಮಸ್ಯೆಯಂತೆಯೂ ತೋರುತ್ತದೆ. ಇದಾದ ನಂತರ 'ಮೃಣಾಲಿನಿ', 'ವಿಷವೃಕ್ಷ', 'ಚಂದ್ರಶೇಖರ', 'ರಜನಿ', 'ರಾಧಾರಾಣಿ', 'ಕೃಷ್ಣಕಾಂತನ ಉಯಿಲು', 'ಆನಂದಮಠ', 'ರಾಜಸಿಂಹ' ಮುಂತಾದ ಕಾದಂಬರಿಗಳು ಒಂದಾದ ಮೇಲೊಂದರಂತೆ ಬಂದವು. ವೆಂಕಟಾಚಾರ್ಯರು ಹೀಗೆ ಬರುತ್ತಿದ್ದ ಕಾದಂಬರಿಗಳೆಲ್ಲವನ್ನೂ ಶೀಘ್ರ ದಲ್ಲಿಯೇ ಅನುವಾದಿಸಿ ಕನ್ನಡಿಗರಿಗೆ ತಲುಪಿಸಿದರು.

ಐತಿಹಾಸಿಕ ಕಾದಂಬರಿಗಳಲ್ಲಿ ಪ್ರಮುಖವಾದವುಗಳಲ್ಲಿ 'ಆನಂದ ಮಠ' (1882); 'ದೇವಿ ಚೌಧುರಾಣಿ' (1884) ; 'ಸೀತಾರಾಂ' (1887) ಕಡೆಯ ಕಾದಂಬರಿಗಳಾಗಿವೆ. ಇವುಗಳಿಗೆ ಕಥಾವಸ್ತುವನ್ನು ಇತಿಹಾಸದಿಂದಲೇ ಆರಿಸಿಕೊಂಡಿದ್ದರೂ, ತಮ್ಮ ಆಶಯಗಳಿಗೆ ಅನುಗುಣವಾಗಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಇಲ್ಲಿ ಪಾತ್ರಚಿತ್ರಣ, ಕಥಾ ನಿರೂಪಣೆಯಷ್ಟೇ ಮುಖ್ಯವಾಗದೆ, ಗಂಭೀರ ವಿಚಾರ ಚಿಂತನೆಗಳು,

ರಾಜಕೀಯ, ತಾತ್ವಿಕ ಹಾಗೂ ಧಾರ್ಮಿಕವಾದವುಗಳು ಕಾದಂಬರಿಯಲ್ಲಿ ಸಮರ್ಥವಾಗಿ ವಿಶ್ಲೇಷಿತವಾಗಿವೆ. ಅದರಲ್ಲಿಯೂ 'ಆನಂದಮಠ' ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ, ದೇಶಾಭಿಮಾನ, ಸ್ವಾತಂತ್ರ್ಯ ಪ್ರೇಮವನ್ನು ಜನರಲ್ಲಿ ಮೂಡಿಸಲು ಅತ್ಯಂತ ಮಹತ್ವದ ಕೃತಿಯೆನಿಸಿತು. ಈ ಕಾದಂಬರಿ ಭಾರತದ ಮನೆಮನೆಯ ಮಾತಾಗಿತ್ತು. 1770ನೇ ಇಸವಿಯಲ್ಲಿ ಬಂಗಾಳದಲ್ಲುಂಟಾದ ಭೀಕರ ಕ್ಷಾಮ ಪರಿಸ್ಥಿತಿ ಮತ್ತು ಅಂತಹ ಸಂದರ್ಭದ ಬಂಗಾಳದ ಕೆಲವು ಜಿಲ್ಲೆಗಳಲ್ಲಿ ಸನ್ಯಾಸಿಗಳು ನಡೆಸಿದ ವಿದ್ರೋಹ 'ವನ್ನವಲಂಬಿಸಿ ರಚಿತವಾಗಿದೆ. ಘೋರ ಕ್ಷಾಮದ ಪರಿಣಾಮವಾಗಿ ಉಂಟಾಗಿದ್ದ ಅರಾಜಕತೆ, ಕ್ಷಾಮಪೀಡಿತ ಜನರ ಹಸಿವು, ದಾರಿದ್ರ್ಯ, ನೋವು, ನರಳಿಕೆಗಳ ಹೃದಯವಿದ್ರಾವಕ ಚಿತ್ರವನ್ನು ಇದು ನೀಡುತ್ತದೆ. ಸಂಗತಿಗಳು, ಘಟನೆಗಳು ಇತಿಹಾಸಕ್ಕೆ ಬದ್ಧವಾಗಿದ್ದರೂ, ಬಂಡಾಯದ ವಿವರಗಳಲ್ಲಿ, ಪಾತ್ರಸೃಷ್ಟಿಯಲ್ಲಿ ಸ್ವತಂತ್ರ ಕಲ್ಪನೆಯಿದೆ. ಅದರಲ್ಲಿ ಬರುವ 'ವಂದೇ ಮಾತರಂ' ಗೀತೆಯಂತು ಭಾರತದಲ್ಲಿ ದೇಶಭಕ್ತಿ ಜಾಗೃತವಾಗಿ ಜನತೆಯನ್ನು ಒಟ್ಟುಗೂಡಿಸುವುದಕ್ಕೆ ಕೊಟ್ಟ ಕರೆಯಾಗಿ ಪರಿಣಮಿಸಿತು.

'ದೇವಿ ಚೌಧುರಾಣಿ'ಯಲ್ಲಿನ ಚಾರಿತ್ರಿಕ ಅಂಶ, 'ಆನಂದಮಠ' ಕ್ಕಿಂತಲೂ ತೆಳುವಾದುದು. ಮುಸಲ್ಮಾನರ ಆಳ್ವಿಕೆಯ ಕೊನೆಯ ದಿನಗಳಲ್ಲಿ ಬಂಗಾಳದಲ್ಲಿ ಉಂಟಾಗಿದ್ದ ಅಶಾಂತ ವಾತಾವರಣದ ಚಿತ್ರಣವನ್ನು ನೀಡುತ್ತದೆ. ರಾಜಕೀಯ ದುರಾಡಳಿತದಿಂದುಂಟಾದ ಅರಾಜಕ ಪರಿಸ್ಥಿತಿಯಲ್ಲಿ ಹಲವಾರು ಜಿಲ್ಲೆಗಳಲ್ಲಿ ಲೂಟಿ ದರೋಡೆಗಳು ನಡೆಯುತ್ತಿದ್ದವು. ಕಾರಣಾಂತರಗಳಿಂದ ದರೋಡೆಕೋರರಿಗೆ ಸಹಾಯಕಳಾಗಿದ್ದ 'ದೇವಿ ಚೌಧುರಾಣಿಯೂ' ಅವಳ ಜೊತೆಗೇ ದರೋಡೆಕೊರರ ನಾವೆಗಳಲ್ಲೇ ಇದ್ದ ಭವಾನಿ ಪಾಠಕ್‌ನ ಧರ್ಮಭೋಧನೆಯಿಂದ ಆದ ಮನಃಪರಿವರ್ತನೆಯಿಂದಾಗಿ ಹಿಂಸಾಕಾರ್ಯಗಳಿಂದ ಹೊರಳಿ, ಹೊಸದಾಗಿ ಪಡೆದಿದ್ದ 'ಚೌಧುರಾಣಿ' ಎಂಬ ಹೆಸರಿಗೆ ತಕ್ಕಂತೆ ರಾಗದ್ವೇಷರಹಿತಳಾಗಿ, ಸ್ವಾರ್ಥ ದೂರಳಾಗಿ, ದುರ್ಬಲರ, ಆರ್ತರ ರಕ್ಷಣೆಗೆ ಕಟಿಬದ್ಧಳಾಗಿ ದ್ರೋಹಿಗಳನ್ನು, ದುಷ್ಟರನ್ನು ಶಿಕ್ಷಿಸಿ ವಿರಕ್ತ ಚಕ್ರವರ್ತಿನಿಯಂತೆ ವಿರಾಜಿಸುತ್ತಾಳೆ. ಇಡೀ ಕಾದಂಬರಿಯಲ್ಲಿ 'ದೇವಿ ಚೌಧುರಾಣಿ' ಯ ವ್ಯಕ್ತಿತ್ವ ವಿಕಾಸದ ಚಿತ್ರಣವೇ ಮುಖ್ಯವಾಗಿದೆ. ಅವಳ ಸಾಹಸ, ಶೌರ್ಯ, ತ್ಯಾಗ, ಪ್ರೇಮ, ಸಂಯಮ, ಧರ್ಮಶ್ರದ್ಧೆಗಳು ಮುಖ್ಯವಾಗಿ ವರ್ಣಿತವಾಗಿವೆ.

ವೆಂಕಟಚಾರ್ಯರ ಕಾದಂಬರಿಗಳ ವಿಮರ್ಶೆ ಮಾಡುವಲ್ಲಿ ಎದುರಾಗುವ ಸಮಸ್ಯೆಗಳು ಮೂಲ ಕೃತಿಕಾರನ ಸಮಸ್ಯೆಗಳಾಗಿವೆ. ಆದಷ್ಟೂ ಮೂಲಕೃತಿಗೆ ಪ್ರಾಮಾಣಿಕವಾಗಿರಬೇಕೆಂಬ ಎಚ್ಚರಿಕೆಯಿರುವುದರಿಂದ ಕಾದಂಬರಿ ಭಾಷೆ ಶೈಲಿಯಲ್ಲಿ ಸರಳತೆಯನ್ನು ತರುವ ಮನಸ್ಸಿದ್ದರೂ, ಅರಿವಿಲ್ಲದಂತೆಯೇ ಸಂಸ್ಕೃತ ಭೂಯಿಷ್ಠ ಶೈಲಿ ಅನಿವಾರ್ಯವಾಗಿದೆ. ಸ್ವತಂತ್ರ ರಚನೆಗಿಂತಲೂ ಅನುವಾದ ಕಾರ್ಯ ಅತ್ಯಂತ ಕಠಿಣವಾದ ಕೆಲಸ. ಅಂಥಾದ್ದರಲ್ಲಿ ವೆಂಕಟಾಚಾರ್ಯರು ಅತ್ಯಂತ ಸಮರ್ಪಕವಾದ ರೀತಿಯಲ್ಲಿ ಆ ಕೆಲಸವನ್ನು ನಿರ್ವಹಿಸಿದ್ದಾರೆ. ಬಂಕಿಮಚಂದ್ರರೇ ವೆಂಕಟಾಚಾರ್ಯರಿಂದ ಪತ್ರಮುಖೇನ ಕನ್ನಡ ಕಲಿತು, ಅವರದೇ ಕೃತಿಗಳನ್ನು ಕನ್ನಡದಲ್ಲಿ ಓದಿ ಮೆಚ್ಚಿ, ವೆಂಕಟಾಚಾರ್ಯರ ಭಾಷಾಪ್ರೌಢಿಮೆ, ಪ್ರತಿಭೆಗಳಿಗೆ ಮುಗ್ಧರಾಗಿ ತಮ್ಮೆಲ್ಲ ಕಾದಂಬರಿಗಳನ್ನು ಅನುವಾದಿಸಲು ಮುಕ್ತ ಒಪ್ಪಿಗೆಯನ್ನು ಕೊಟ್ಟುಬಿಟ್ಟರಂತೆ !

ವೆಂಕಟಾಚಾರ್ಯರು ಕೇವಲ ಅನುವಾದಗಳಿಗಷ್ಟೇ ಸೀಮಿತರಾಗಲಿಲ್ಲ. ಜೊತೆಜೊತೆಗೇ 'ಸೂರ್ಯಪೂಜೆ' ಮೊದಲಾದ ಲೇಖನಗಳು, 'ದಾಡಿಯ ಹೇಳಿಕೆ' ಯಂತಹ ಪ್ರಬಂಧಗಳು, ಶಶಿಭೂಷಣ ವಿದ್ಯಾನಂದ ಎಂಬವರ 'ಆರ್ಯಶಾಸ್ತ್ರ ಪ್ರದೀಪ' ಎಂಬ ಗ್ರಂಥ - ಮೊದಲಾದವುಗಳನ್ನೂ ಬರೆದರು. ಸರಕಾರಿ ವೃತ್ತಿಯಿಂದ ನಿವೃತ್ತರಾಗುತ್ತಿದ್ದಂತೆ 'ಅವಕಾಶ ತೋಷಿಣಿ' ಎಂಬ ಮಾಸಪತ್ರಿಕೆಯನ್ನು ಸ್ಥಾಪಿಸಿ, ಅದರಲ್ಲಿ ಕಥೆ, ಲಘು ಲೇಖನಗಳನ್ನು ಬರೆಯುತ್ತಿದ್ದರು ಮತ್ತು ಬರೆಯುವವರಿಗೆ ಪ್ರೋತ್ಸಾಹ ನೀಡುತ್ತಿದ್ದರು.

ದೇಶೀ ಸ್ನೇಹಿತರಲ್ಲದೆ ಬಂಗಾಳದಲ್ಲಿಯೂ ಸ್ನೇಹಿತರ ವಲಯವನ್ನು ಸೃಷ್ಟಿಸಿದ್ದರು. ಬಂಗಾಳಿ ಕಾದಂಬರಿಗಳನ್ನು ಕನ್ನಡದಲ್ಲಿ ಅನುವಾದಿಸಿ, ಬಂಗಾಳದಲ್ಲಿಯೂ ಖ್ಯಾತರಾದರು. ಇವರ ಕೀರ್ತಿ ಪ್ರಶಂಸೆಗಳನ್ನು ಕೇಳಿದ ಬಂಗಾಳದ ಹಲವು ಹಿರಿಯರು ಕನ್ನಡನಾಡಿಗೆ ಬಂದಾಗ ಇವರನ್ನು ಭೇಟಿಯಾಗಿ ಮಾತನಾಡಿಸಿ ಹೋಗುತ್ತಿದ್ದರಂತೆ. ಅವರಲ್ಲಿದ್ದ ಬಂಗಾಳಿ ಸಾಹಿತ್ಯ ಗ್ರಂಥಗಳನ್ನು ನೋಡಿ, ಅವರ ಭಾಷಾಪ್ರೇಮವನ್ನು ನೋಡಿ ದಿಗ್ಭ್ರಾಂತರಾಗಿ ಹೋಗುತ್ತಿದ್ದರಂತೆ. ಸ್ವತಃ ರವೀಂದ್ರನಾಥ ಠಾಗೂರರ ತಂದೆ ದೇವೇಂದ್ರನಾಥರು, ಸ್ವಾಮಿ ವಿವೇಕಾನಂದ, ರಾಮಕೃಷ್ಣ ಪರಮಹಂಸ ಮುಂತಾದ ಮಹಾವ್ಯಕ್ತಿಗಳ ದರ್ಶನಭಾಗ್ಯಕ್ಕೆ ಒಳಗಾದವರು ವೆಂಕಟಾಚಾರ್ಯರು. ವೆಂಕಟಾಚಾರ್ಯರು ನಿರರ್ಗಳವಾಗಿ ಬಂಗಾಳಿ ಭಾಷೆಯಲ್ಲಿ ಮಾತನಾಡುವುದನ್ನು ನೋಡಿದ ವಿವೇಕಾನಂದರೇ ಸ್ತಬ್ಧರಾಗಿ ನಿಂತುಬಿಟ್ಟರಂತೆ ! ವೆಂಕಟಾಚಾರ್ಯರ ಬಂಗಾಳಿ ಭಾಷೆಯ ಪ್ರೌಢಿಮೆ ಅಷ್ಟು ಅದ್ಭುತವಾದುದಾಗಿತ್ತು.

ವೆಂಕಟಾಚಾರ್ಯರು ವ್ಯಕ್ತಿಯಾಗಿ, ಸಾಹಿತಿಯಾಗಿಯೂ ಜನಪ್ರಿಯರಾದರು. ಒಳ್ಳೇ ಎತ್ತರದ ಅಜಾನುಬಾಹು. ಎತ್ತರಕ್ಕೆ ತಕ್ಕ ದಪ್ಪ. ತೇಜಃಪೂರ್ಣವಾದ ಕಣ್ಣುಗಳು; ಸುಂದರ ದೃಢಕಾಯ ; ನೋಡುತ್ತಿದ್ದಂತೆ ಭಯಮಿಶ್ರಿತ ಗೌರವ ಮೂಡುತ್ತಿತ್ತು. ಕಚ್ಚೆಪಂಚೆ, ಜರಿ ರುಮಾಲು, ಉದ್ದನೆಯ ಕೋಟು, ಜರಿಶಲ್ಯ, ಕಾಲಿಗೆ ಚಡಾವು, ಹಣೆಯಲ್ಲಿ ನಾಮ - ಇವು ಇವರ ನಿತ್ಯದ ಉಡುಪು. ಸದಾ ಹಸನ್ಮುಖಿ. ನಿಷ್ಕಪಟ ಸ್ವಭಾವ, ದೊಡ್ಡವರು ಚಿಕ್ಕವರು ಎನ್ನದೆ ವಿಶ್ವಾಸ, ಪ್ರೀತಿಗಳಿಂದ ಅವರನ್ನು ಒಲಿಸಿಕೊಳ್ಳುವ ಜಾಣ್ಮೆ. ತಮ್ಮ ಇಂತಹ ವ್ಯಕ್ತಿತ್ವದಿಂದಲೇ ಅಧಿಕಾರಿಗಳ, ಬಂಧುಗಳ, ಸ್ನೇಹಿತರ, ಸ್ನೇಹಾದರಗಳನ್ನು ಗಳಿಸಿಕೊಂಡಿದ್ದರು. ಬಹುಶಃ ಈ ಗುಣಗಳೂ ಅವರ ಕೃತಿಗಳನ್ನು ಆದರದಿಂದ ಬರಮಾಡಿಕೊಳ್ಳುವುದಕ್ಕೆ ಕಾರಣವಾಗಿರಬೇಕು.

ಮಹತ್ವಾಕಾಂಕ್ಷೆಯ ವ್ಯಕ್ತಿಯಾಗಿದ್ದ ವೆಂಕಟಾಚಾರ್ಯರು, ತಾವು ಅನುವಾದಕ್ಕೆ ಆರಿಸಿಕೊಳ್ಳುವ ಕೃತಿಗಳ ಮೌಲ್ಯಾವಲೋಕನ ಮಾಡಿ, ಸಮಾಜಕ್ಕೆ, ಸಾಹಿತ್ಯಕ್ಕೆ ಉಪಯುಕ್ತವಾಗಬೇಕೆಂಬ ದೃಷ್ಟಿಯಿಂದ ಆರಿಸಿಕೊಳ್ಳುತ್ತಿದ್ದರು. ಜನತೆಗೆ ರಾಜಕೀಯ, ಸಾಮಾಜಿಕ, ಧಾರ್ಮಿಕ ತಿಳಿವಳಿಕೆಯೂ ಲಭ್ಯವಾಗಬೇಕೆಂಬುದೂ ಅವರ ವಿಚಾರವಾಗಿತ್ತು. ಸ್ತ್ರೀಯರ ಬಗ್ಗೆ ಅವರಿಗಿದ್ದ ಗೌರವ ಅಪಾರ. ಹಿಂದಿನ ಕಾಲದಲ್ಲಿ ಮಹಿಳೆಗೆ ಸಲ್ಲುತ್ತಿದ್ದ ಗೌರವ, ಮರ್ಯಾದೆ ಮತ್ತು ಈಗಿರುವ ಅವಳ ಪರಿಸ್ಥಿತಿಯ ತುಲನಾತ್ಮಕ ದೃಷ್ಟಿಯಿಂದಾಗಿ, ಸ್ತ್ರೀ ಪ್ರಗತಿಪರ ವಿಚಾರಗಳತ್ತ ತಿರುಗುವಂತೆ ಮಾಡಿತು. ಅಂತಹ ವಿಚಾರಗಳನ್ನೊಳಗೊಂಡ ಕಾದಂಬರಿಗಳೂ ಗ್ರಂಥಗಳೂ ಅವರನ್ನು ಆಕರ್ಷಿಸಿದವು. ಬಂಕಿಮಚಂದ್ರರ ಕಾದಂಬರಿಗಳ ಜೊತೆಗೆ ರಮೇಶಚಂದ್ರದತ್ತ,

ನನಿಲಾಲ ವಂದೋಪಾಧ್ಯಾಯ, ಸತ್ಯೇಂದ್ರಕುಮಾರ, ಸತೀಶಚಂದ್ರಬಾಬು, ಹರಪ್ರಸಾದ ಶಾಸ್ತ್ರಿ ಮುಂತಾದ ಇನ್ನೂ ಕೆಲವರ ಕೃತಿಗಳನ್ನೂ ಕನ್ನಡಿಸಿದರು.

ವೆಂಕಟಾಚಾಯರು ಅನುವಾದ ಮಾಡಿದ ಇಂತಹ ಕಾದಂಬರಿಗಳು ಎಷ್ಟೋ! ಅವರು ಅನುವಾದಿಸಿದ್ದೆಲ್ಲವೂ ಜನಪ್ರಿಯವಾದುದೇನೋ ಸತ್ಯಸಂಗತಿಯಾದರೂ, ಅವರು ರಚಿಸಿರುವ (ಅನುವಾದಗಳೂ ಸೇರಿ) 75 ಕೃತಿಗಳಲ್ಲಿ ಇಂದಿನ ಓದುಗರಿಗೆ ದೊರೆಯುತ್ತಿರುವುದು ಕೇವಲ ಕೆಲವೇ. ಇವತ್ತಿನ ಕಾದಂಬರಿಗಳ ಹೋಲಿಕೆಯಲ್ಲಿ ಅವು ಮಹತ್ವದ ಕೃತಿಗಳೆನಿಸದಿರಬಹುದು. ಮಿತಗೊಂಡ ವರ್ಣನೆ - ಕಥನಕ್ಕೆ ಪ್ರಾಮುಖ್ಯತೆ - ವ್ಯಕ್ತಿಗತ ಸುಖದುಃಖ - ವಾಸ್ತವ ಪ್ರಜ್ಞೆ - ಸಾಮಾನ್ಯ ಮಾನವನ ನೋವು ನಲಿವಿನ ಚಿತ್ರ - ವೈಚಾರಿಕತೆ ಇತ್ಯಾದಿಗಳು, ಇಂದಿನ ಕಾದಂಬರಿಯ ಲಕ್ಷಣಗಳು, ಅವರ ಕಾದಂಬರಿಗಳಲ್ಲಿ ಕಾಣಸಿಗದಿರಬಹುದು. ಆದರೆ ಅವರ ಕಾಲಕ್ಕೆ ಯಾವುದೇ ಕೃತಿಯಲ್ಲಿ ಕಾಣಸಿಗದಿರಬಹುದು. ಆದರೆ ಅವರ ಕಾಲಕ್ಕೆ ಯಾವುದೇ ಕೃತಿಯಲ್ಲಿ ವಾಚಕರು ನಿರೀಕ್ಷಿಸಬಹುದಾದ - ದೊಡ್ಡ ಕಥಾನಕಗಳು - ವೀರ ಶೃಂಗಾರಾದಿ ರಸಗಳ ಮೋಹಕ ಚಿತ್ರಣ - ವಾಸ್ತವಕ್ಕಿಂತ ಅದ್ಭುತವಾದ ಸನ್ನಿವೇಶಗಳು - ಅಲೌಕಿಕ ಪಾತ್ರಗಳು ಇತ್ಯಾದಿ ಅಂಶಗಳನ್ನು ವಿವರಿಸುವ ಕಾದಂಬರಿಗಳನ್ನು ನೀಡುವುದು ಮುಖ್ಯವಾಗಿತ್ತು. ಕಡೆಯ ಪಕ್ಷ ಕಾದಂಬರಿಯ ಈ ಗುಣಗಳಿಂದಲಾದರೂ ಆಕರ್ಷಿತರಾಗಿ, ವಾಚನಾಸಕ್ತಿಯನ್ನು ಬೆಳೆಸಿಕೊಂಡು, ಕನ್ನಡ ಭಾಷೆ, ಸಾಹಿತ್ಯಗಳ ವಿಕಾಸಕ್ಕೆ ದಾರಿಯಾಗಬಹುದೆಂಬ ದೂರದೃಷ್ಟಿಯೂ ಅವರದಾಗಿತ್ತು. ಆದ್ದರಿಂದ ಅವರ ಕೃತಿಗಳನ್ನು ಮೌಲ್ಯದ ದೃಷ್ಟಿಯಿಂದಲ್ಲದಿದ್ದರೂ, ಕನ್ನಡ ಕಾದಂಬರಿ ಬೆಳವಣಿಗೆಯ ಸಂದರ್ಭದಲ್ಲಿ ಐತಿಹಾಸಿಕ ಮಹತ್ವವನ್ನುಳ್ಳ ಕೃತಿಗಳನ್ನಾಗಿಯಾದರೂ ಉಳಿಸಬೇಕಾಗಿದೆ. ನಿರಂತರ ದುಡಿಮೆ ಸತತಾಭ್ಯಾಸಗಳಿಂದ ದಣಿದ ದೇಹ, ಶಿಸ್ತು ಸಂಯಮ ದಕ್ಷತೆಗಳ ಮೂಲಕ ಆದರ್ಶಪ್ರಾಯರಾಗಿ ಬಾಳಿದ ಉದಾತ್ತ ಚೇತನ ಕೊನೆಗಾಲದಲ್ಲಿ ಆರ್ಥಿಕ ಮಾನಸಿಕ ತೊಂದರೆಗಳಿಂದ ಕೂಡಿ 1914ನೇ ಜೂನ್ 26ರಂದು ಬೆಂಗಳೂರಿನಲ್ಲಿ ಸಾವಿನ ಮೂಲಕ ಮೂಕವಾಯಿತು. ❑

## ಇ.ಪಿ. ರೈಸ್

ಡಾ. ಸಿ.ಯು. ಮಂಜುನಾಥ್

ಇಂಗ್ಲೆಂಡಿನ ಗ್ಲೌಸ್ಟರ್ ಶೈರಿನ ಕಾಸ್ವುಡ್ ಬೆಟ್ಟದ ಬುಡದಲ್ಲಿ ಸ್ಟ್ರೌಡ್ ಎಂಬ ಊರು ಉಣ್ಣೆ ಬಟ್ಟೆ ತಯಾರಿಕೆಗೆ ತುಂಬ ಪ್ರಸಿದ್ಧ ಸ್ಥಳ. ಈ ಊರಿನಲ್ಲಿ ರೈಸ್ ಮನೆತನ ಅನೇಕ ತಲೆಮಾರುಗಳಿಂದ ನೆಲಸಿ ಧರ್ಮಶ್ರದ್ಧೆಯ ಕುಟುಂಬವೆಂದು ಹೆಸರಾಗಿದ್ದಿತು. ಇಂಥ ಮನೆತನದಿಂದ ಬಂದ ಥಾಮಸ್ ರೈಸ್ ಎಂಟು ಜನ ಮಕ್ಕಳೊಂದಿಗೆ ವಾಸಿಸುತ್ತಿದ್ದು, ಉಣ್ಣೆ ವಸ್ತ್ರ ತಯಾರಿಸಿ ಈಸ್ಟ್ ಇಂಡಿಯಾ ಕಂಪನಿಗೆ ಸರಬರಾಜು ಮಾಡುತ್ತಿದ್ದನು. ಹಲವಾರು ಕಾರಣಗಳಿಂದ ಈ ವಹಿವಾಟಿನಲ್ಲಿ ನಷ್ಟ ಉಂಟಾಗಿ ಕುಟುಂಬ ಸಂಕಷ್ಟಕ್ಕೆ ಸಿಲುಕಿತು. ಆಗ ಮಕ್ಕಳು ತಂದೆಯ ಬೆಂಬಲಕ್ಕೆ ನಿಂತರು. ಈ ಹಿನ್ನೆಲೆಯಲ್ಲಿ ಮಕ್ಕಳಲ್ಲಿ ಸೈಮನ್ ಪೀಟರ್ ತನ್ನ ಸ್ವಂತ ಅಲ್ಪ ಉಳಿತಾಯದ ಸಹಾಯದಿಂದ ತಂದೆಯೊಡನೆ ಸಹೋದರ ಫಿಲಿಪ್ ಜೊತೆಗೂಡಿಕೊಂಡು ಲಂಡನ್ನಿಗೆ ಬಂದನು. ಆರಂಭದಲ್ಲಿ ಸ್ವಲ್ಪ ಕಷ್ಟವಾದರೂ ಸಹೋದರರು ಕ್ರಮೇಣ ತಮ್ಮದೇ ಆದ ವ್ಯವಹಾರವನ್ನು ದೃಢಪಡಿಸಿಕೊಂಡು ನೆಲೆ ನಿಂತರು. ಸೈಮನ್ ಪೀಟರ್‌ಗೆ ಬೆಂಜಮಿನ್ ರೈಸ್ ಜನಿಸಿದನು. ಅವನಿಗೆ ನಾಲ್ಕು ವರ್ಷಗಳಾಗಿದ್ದಾಗ ತಾಯಿ ಮೃತಳಾದಳು. ತಂದೆ ಮರುಮದುವೆಯಾಗಿ ಎರಡನೆಯ ಹೆಂಡತಿಯಿಂದ ಐದು ಮಕ್ಕಳನ್ನು ಪಡೆದನು. ಬೆಂಜಮಿನ್ ಶಾಲಾಭ್ಯಾಸ ಮುಗಿಸಿ ಗುಮಾಸ್ತನಾಗಿ ಉದ್ಯೋಗಕ್ಕೆ ಸೇರಿದನು. ಸತತ ಅಭ್ಯಾಸ ಮತ್ತು ಧಾರ್ಮಿಕ ಸ್ವಭಾವ ಗಮನಿಸಿದ ತಂದೆಗೆ ಇವನು ಧಾರ್ಮಿಕ ಪ್ರಚಾರ ಕಾರ್ಯಕ್ಕೆ ತಕ್ಕವನು ಎಂಬ ಭಾವನೆ ಬಂದಿರಬೇಕು. ಲಂಡನ್ನಿನಲ್ಲಿ ಜಾನ್ ಹ್ಯಾಂಡ್ಸ್‌ನ ಉಪನ್ಯಾಸದಿಂದ ಪ್ರಭಾವಿತನಾಗಿ ಹೆಚ್ಚಿನ ವಿದ್ಯಾಭ್ಯಾಸ ಮುಗಿಸಿ ಲಂಡನ್ ಮಿಷನರಿ ಸಂಸ್ಥೆಯಲ್ಲಿ ವಿದ್ಯಾರ್ಥಿಯಾಗಿ ಸೇರ್ಪಡೆಯಾದನು. ಹೆಚ್ಚಿನ ತರಬೇತಿ ಪಡೆದು ಮದುವೆಯ ನಂತರ ಭಾರತಕ್ಕೆ ಆಗಮಿಸಿ ಬೆಂಗಳೂರಿನಲ್ಲಿ ನೆಲಸಿ ಸುಮಾರು ಐವತ್ತು ವರ್ಷಗಳಿಗೂ ಹೆಚ್ಚು ಕಾಲ ಕ್ರೈಸ್ತ ಧರ್ಮ ಪ್ರಚಾರಕನಾಗಿ ಅಸಾಧಾರಣ ಸೇವೆ ಸಲ್ಲಿಸಿದನು. ಅವನಿಗೆ ಆರು ಜನ ಮಕ್ಕಳು. ಅವರಲ್ಲಿ ಮೂರು ಜನ ಪ್ರಸಿದ್ಧರು, ಬಿ.ಎಲ್. ರೈಸ್, ಇ.ಪಿ. ರೈಸ್ ಮತ್ತು ಹೆನ್ರಿ. ಶಾಸನ ಮತ್ತು ಕನ್ನಡ ಸಾಹಿತ್ಯ ಸಂಶೋಧನ ಕ್ಷೇತ್ರದಲ್ಲಿ ಅಮೋಘ ಸೇವೆ ಸಲ್ಲಿಸಿ 'ಶಾಸನ ಪಿತಾಮಹ' ನೆಂಬ ಖ್ಯಾತಿ ಪಡೆದಿರುವ ಬಿ.ಎಲ್. ರೈಸ್ ಹಿರಿಯರು. ಎಡ್ವರ್ಡ್ ಪೀಟರ್ ರೈಸ್ ಪ್ರಸ್ತುತ ಲೇಖನದ ಕೇಂದ್ರ ವ್ಯಕ್ತಿ. ಹೆನ್ರಿ ಸ್ಕಾಟಿಶ್ ಮಿಷನ್ನಿನಲ್ಲಿ ಸೇವೆ ಸಲ್ಲಿಸಿ ಖ್ಯಾತರಾದ ಇನ್ನೊಬ್ಬ ಸಹೋದರ.

ಎಡ್ವರ್ಡ್ ಪೀಟರ್ ರೈಸ್ ಇ.ಪಿ.ರೈಸ್ ಎಂದೇ ಕನ್ನಡ ಸಾಹಿತ್ಯ ವಲಯದಲ್ಲಿ ಖ್ಯಾತರು. ತಂದೆಯಂತೆ ಧರ್ಮ ಪ್ರಚಾರ ಕಾರ್ಯದಲ್ಲಿ ಮತ್ತು ಕನ್ನಡ ಭಾಷಾ ಸಾಹಿತ್ಯದಲ್ಲಿ ವಿಶೇಷವಾಗಿ ನುರಿತಿದ್ದರು. ಬಹುಶಃ ಈ ವಿಷಯಗಳು ಆನುವಂಶಿಕವೆಂಬಂತೆ ಅವರಿಗೆ ದತ್ತವಾಗಿದ್ದವು. ಇವರ ತಾಯಿ (ತಂದೆಯ ಪ್ರಥಮ ಪತ್ನಿ) ಕನ್ನಡವನ್ನು ಚೆನ್ನಾಗಿ ರೂಢಿಸಿಕೊಂಡಿದ್ದು ಪತಿಯ ಕಾರ್ಯಗಳಲ್ಲಿ ಸಂಪೂರ್ಣ ಸಹಭಾಗಿಯಾಗಿದ್ದು ಸಾರ್ಥಕ ಬದುಕನ್ನು ಬಾಳಿದವರು. ಇ.ಪಿ. ರೈಸ್ 1849ನೆಯ ಏಪ್ರಿಲ್ 26ರಂದು ಬೆಂಗಳೂರಿನಲ್ಲಿ ಜನಿಸಿದರು.[1] ಆರಂಭದಿಂದಲೂ ರೈಸ್ ಅವರಿಗೆ ವಿದ್ಯಾಭ್ಯಾಸ, ಕನ್ನಡ ಭಾಷಾ ಸಾಹಿತ್ಯ ಮತ್ತು ಧರ್ಮ ಪ್ರಚಾರ ಕಾರ್ಯದಲ್ಲಿ ವಿಶೇಷ ಆಸಕ್ತಿಗಳು ಇದ್ದುದು ಕಂಡು ಬರುತ್ತದೆ. ತಂದೆಗೆ ಸಹಾಯಕವಾಗಿ ಮತಪ್ರಚಾರ ಮತ್ತು ಬೈಬಲ್ ಭಾಷಾಂತರ 'ಸಂಸ್ಕರಣ ಕಾರ್ಯದಲ್ಲಿ ತೊಡಗಿಕೊಂಡಿದ್ದರು. ಬೆಂಗಳೂರು, ಚಿಕ್ಕಬಳ್ಳಾಪುರ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಸಂಚರಿಸುತ್ತ ಕ್ರೈಸ್ತ ಧರ್ಮ ಪ್ರಚಾರವನ್ನು ಮಾಡುತ್ತಾ ಬಂದರು. ಜೊತೆ ಜೊತೆಗೆ ಕನ್ನಡ ಸಾಹಿತ್ಯ ಸಂಸ್ಕೃತಿಗಳನ್ನು' ಕನ್ನಡ ಭಾಷೆಯನ್ನು ವಿಶೇಷವಾಗಿ ರೂಢಿಸಿಕೊಂಡು ಅವುಗಳಲ್ಲಿ ವಿಶಿಷ್ಟ ಪ್ರೀತಿಯನ್ನು ಬೆಳೆಸಿಕೊಂಡರು. ತಂದೆಯ ಕಾಲಾನಂತರ ತಂದೆಯೊಡನೆ ಕೈಗೊಂಡ ಕಾರ್ಯಗಳನ್ನು ಯಶಸ್ವಿಯಾಗಿ ಮುಂದುವರಿಸಿದರು. ಲಂಡನ್ ಮಿಶನ್ ಹೈಸ್ಕೂಲಿನ ಅಧ್ಯಕ್ಷರಾಗಿ ಕೆಲಕಾಲ ಸೇವೆ ಸಲ್ಲಿಸಿದರು.

ಧರ್ಮ ಪ್ರಚಾರ, ವಿದ್ಯಾ ಪ್ರಸಾರ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಅವಿಶ್ರಾಂತವಾಗಿ ದುಡಿದು 1915ರವರೆಗೆ ಬೆಂಗಳೂರಿನಲ್ಲಿದ್ದು ತಮ್ಮ ಕಾರ್ಯಗಳಿಂದ ವಿಶ್ರಾಂತರಾಗಿ ಇಂಗ್ಲೆಂಡಿಗೆ ಮರಳಿ ಹ್ಯಾರೋ ಪಟ್ಟಣದಲ್ಲಿ ನೆಲಸಿ ತಮ್ಮ ಅಂತಿಮ ದಿನಗಳನ್ನು ಅಲ್ಲಿ ಕಳೆದರು. ಅವರ ಮರಣ 1936ರ ಜುಲೈ ಮೊದಲು ಸಂಭವಿಸಿತು. ಭಾರತವನ್ನು ಬಿಟ್ಟು ಹ್ಯಾರೋದಲ್ಲಿ ನೆಲಸಿದ ಮೇಲೂ ಕನ್ನಡ ಭಾಷಾ ಸಾಹಿತ್ಯಗಳ ವಿಷಯದಲ್ಲಿ ವಿಶೇಷ ಪ್ರೀತಿ ಬೆಳಸಿಕೊಂಡಿದ್ದ ರೈಸ್ ಅವರು ಹಲವು ಕೃತಿಗಳ ರಚನೆಯನ್ನು ಕೈಗೊಂಡರು.

ಬೆಂಗಳೂರಿನಲ್ಲಿದ್ದಾಗ ರೈಸ್ ಅವರು ಕ್ರೈಸ್ತ ಧರ್ಮ ಪ್ರಚಾರಕರಾಗಿ ಅಗತ್ಯಕ್ಕೆ ತಕ್ಕಂತೆ ಅನೇಕ ಕೃತಿಗಳನ್ನು ರಚಿಸಿದರು. ಹಳೆಯ ಒಡಂಬಡಿಕೆಯನ್ನು 1890ರಲ್ಲಿ ಸರಳ ಕನ್ನಡದಲ್ಲಿ ಬರೆದು ಪ್ರಕಟಿಸಿದರು; ಇದು ಅವರ ಮೊದಲ ಪ್ರಯತ್ನವೆನ್ನಲಾಗಿದೆ. ಮೋಸೆಯ ವಿರಚಿತವು ಮೊದಲನೆಯ ಕಾಂಡ 1908ರಲ್ಲಿ ಪ್ರಕಟವಾಯಿತು. ಮೋಸೆಯ ಧರ್ಮ ಶಾಸ್ತ್ರದಲ್ಲಿ ಯಾತ್ರಾ ಕಾಂಡವು ಎಂಬ ದ್ವಿತೀಯ ಭಾಗವು 1909ರಲ್ಲಿ ಪ್ರಕಟವಾಯಿತು. ಇದನ್ನು ಹೊಸ ಒಡಂಬಡಿಕೆಯ ಆಧಾರದ ಮೇಲೆ ರಚಿಸಿದ್ದು 107 ಪುಟಗಳನ್ನು ಒಳಗೊಂಡಿದೆ. 'ಕನ್ನಡ ಬೈಬಲ್ ಕೀರ್ತನೆಗಳು ಎಂಬ 74 ಡೆಮ್ಮಿ ಪುಟಗಳ ಹೊತ್ತಗೆ ಮತ್ತು ಅದೆಷ್ಟೊ ಸಂಖ್ಯೆಯಲ್ಲಿ ಕನ್ನಡ ಬೈಬಲ್ ಬಗ್ಗೆ ಲೇಖನಗಳನ್ನು ಬರೆದರು. ರೈಸರು ಬರೆದ ಎರಡು ಹಾಡುಗಳು 'ಕನ್ನಡ ಸಂಗೀತ ಸಂಗ್ರಹ'ದಲ್ಲಿ ಪ್ರಕಟವಾಗಿವೆ.

ಇಂಗ್ಲಿಷ್ ಭಾಷೆಯಲ್ಲಿ ರೈಸರು ಮೂರು ಕೃತಿಗಳನ್ನು ರಚಿಸಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಅತ್ಯಂತ ಗಮನಾರ್ಹ ಕೃತಿಯೆಂದರೆ 'ಹಿಸ್ಟರಿ ಆಫ್ ಕೆನರೀಸ್ ಲಿಟರೇಚರ್'. ಇಂಗ್ಲಿಷ್ ಭಾಷೆಯಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಮೊಟ್ಟಮೊದಲ ಬಾರಿಗೆ ಪರಿಚಯ ಮಾಡಿಕೊಡುವ ಕೃತಿ ಇದಾಗಿದೆ. ಇದು 1915ರಲ್ಲಿ ಮೊದಲು ಪ್ರಕಟವಾಯಿತು. ಧರ್ಮ ಪ್ರಚಾರಕರಾಗಿ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಅಮೂಲ್ಯ ಸೇವೆ ಸಲ್ಲಿಸಿದ ತಮ್ಮ ತಂದೆಯವರ ಜೀವನ ಚರಿತ್ರೆಯನ್ನು 'ಬೆಂಜಮಿನ್ ರೈಸ್ ಆರ್ ಫಿಫ್ಟಿ ಇಯರ್ಸ್ ಇನ್‌ದಿ ಮಾಸ್ಟರ್ಸ್ ಸರ್ವಿಸ್' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಅದನ್ನು ರಿಲಿಜನ್ ಟ್ರಾಕ್ಟ್ ಸೊಸೈಟಿ ಪ್ರಕಟಿಸಿದೆ. ಶ್ರೀಯುತರ ಮತ್ತೊಂದು ಕೃತಿ 'ದಿ ಮಹಾಭಾರತ ಅನಾಲಿಸಿಸ್ ಅಂಡ್ ಇಂಡೆಕ್ಸ್' ಇದು 1934ರಲ್ಲಿ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರಕಾಶನದ ಮೂಲಕ ಪ್ರಕಟವಾಗಿದೆ.

ಇ.ಪಿ. ರೈಸರು ರಚಿಸಿರುವ ಕೃತಿಗಳನ್ನು ಪ್ರಧಾನವಾಗಿ ಎರಡು ಗುಂಪುಗಳಾಗಿ ವಿಭಾಗಿಸಬಹುದು. ಕ್ರೈಸ್ತ ಧರ್ಮ ಪ್ರಚಾರಕರಾಗಿ ರಚಿಸಿದ ಕನ್ನಡ ಕೃತಿಗಳನ್ನು ಒಂದು ಗುಂಪಾಗಿಯೂ, ಉಳಿದಂತೆ ಇಂಗ್ಲಿಷ್ ಭಾಷೆಯಲ್ಲಿ ರಚಿಸಿದ ಕೃತಿಗಳನ್ನು ಇನ್ನೊಂದು ಗುಂಪಾಗಿ ಪರಿಭಾವಿಸಬಹುದಾಗಿದೆ.

ಕ್ರೈಸ್ತ ಧರ್ಮ ಪ್ರಚಾರದ ಅಂಗವಾಗಿ ಬೈಬಲ್ಲನ್ನು ಮತ್ತು ಇತರ ಧಾರ್ಮಿಕ ಕೃತಿಗಳನ್ನು ಭಾಷಾಂತರ ಮಾಡಬೇಕಾಗುತ್ತಿತ್ತು. ಕ್ಲಿಷ್ಟವಾದ ಭಾಷಾಂತರ ಕಾರ್ಯವನ್ನು ಅವರು ಸಮರ್ಥವಾಗಿ ನಿರ್ವಹಿಸಿರುವುದು ಕಂಡು ಬರುತ್ತದೆ. ತಂದೆಯೊಂದಿಗೆ ಮಾಡಿದ ಕೆಲವು ಪರಿಷ್ಕಾರ ಕಾರ್ಯಗಳು ಇವರಿಗೆ ವಿಶೇಷ ಸಹಾಯವನ್ನು ಮಾಡಿರಬೇಕು. ಈ ಕೆಲವು ಕೃತಿಗಳು ದೊರೆಯುವುದು ದುರ್ಲಭವಾದಂತಿದೆ.

ರೈಸರ ಬರವಣಿಗೆಯ ಮಾದರಿಯಾಗಿ ಯೇಸು ಕ್ರಿಸ್ತನ ಹಾಡೊಂದನ್ನು ಗಮನಿಸಬಹುದು.

ಜಯ ಜಯ ವಿಜಯ ಸ್ವಾಮಿಗೆ
ಜಯ ಜಯ ವಿಜಯ ಕ್ರಿಸ್ತಗೆ
ಜಯ ಜಯ ವಿಜಯ ಸ್ವಾಮಿಗೆ
ಜಯಶಾಲಿ ಯೇಸು ಸ್ವಾಮಿಯೇ

೧ ಪಾಪಾತ್ಮರು ಆತನ್ನ ತಾತ್ಸಾರಗೈದರು ;
ಈಗ ಸ್ವರ್ಗ ಪತಿಯಾದನು.

೨ ಕಿರೀಟ ಮುಳ್ಳಿನಿಂದ ಹೆಣೆದು ಕೊಟ್ಟರು ;
ಮಹಿಮಾ ಕಿರೀಟವಾಯಿತು.

೩ ಪಾಪಿಷ್ಠಮಿತ್ರನೆಂದು ಹೆಸರಿಟ್ಟು ನಕ್ಕರು ;
ಆ ನಾಮ ಮಾನ ಹೊಂದಿತು.

೪ ವಿರೋಧಿಗಳಿಗಾಗಿ ಸ್ವಪ್ರಾಣ ಕೊಟ್ಟನು ;
ಕರುಣಾ ಸಮುದ್ರನಾದನು.

೫ ಭೂಲೋಕದಲ್ಲಿ ಕಷ್ಟ ಸಹಿಸಿಕೊಂಡನು ;
ಪರಲೋಕದರಸಾದನು.

೬ ಅಧೈರ್ಯ ಪಡದಿರು, ಓ ಕ್ರಿಸ್ತಭಕ್ತನೇ ;
ರಾಜಾಧಿರಾಜ, ಯೇಸುವೇ.

೭ ಲೋಕಾಪವಾದವೇನು ? ತತ್ಕಾಲ ಮಾತ್ರವೇ ;
ವಿಜಯದಿನ ಬರುತ್ತೆ. (ಕನ್ನಡ ಸಂಗೀತ ಸಂಗ್ರಹ 130, ಪು.66-67)

ಕ್ರಿಸ್ತ ಎಲ್ಲ ವೈರುಧ್ಯಗಳ ಮಧ್ಯೆ ಸಾಧಿಸಿದ ವಿಜಯವನ್ನು ಇದು ನಿರೂಪಿಸುತ್ತದೆ. ಭಾಷೆ ಸರಳವಾಗಿದ್ದು ತರ್ಕಬದ್ಧವಾಗಿ ವಿಷಯ ನಿರೂಪಣೆಯನ್ನು ಮಾಡುತ್ತದೆ. 'ಕ್ರಿಸ್ತನ ಅನುತಾಪವು' ಎಂಬ ಇನ್ನೊಂದು ರೈಸ್ ಅವರು ರಚಿಸಿದ ಹಾಡು ಇದೇ ಸಂಕಲನದಲ್ಲಿ ದೊರಕುತ್ತದೆ.

ಕನ್ನಡ ಸಾಹಿತ್ಯದ ಇತಿಹಾಸ ದೃಷ್ಟಿಯಿಂದ ರೈಸರು ರಚಿಸಿದ 'ಹಿಸ್ಟರಿ ಆಫ್ ಕೆನರೀಸ್ ಲಿಟರೇಚರ್' ಅತ್ಯಂತ ಗಮನಾರ್ಹ ಕೃತಿಯೆಂದು ಹೇಳಬಹುದು. 1915ರಲ್ಲಿ ಹೊರಬಂದ ಈ ಕೃತಿ ಇಡೀ ಕನ್ನಡ ಸಾಹಿತ್ಯವನ್ನು ಮೊದಲ ಬಾರಿಗೆ ಸಾಹಿತ್ಯ ಚರಿತ್ರೆಯ ಪರಿಕಲ್ಪನೆಯಲ್ಲಿ ಗಮನಿಸಿದ ಕೃತಿ.[2] ಅದು ಹೊರ ಬರುವ ಹೊತ್ತಿಗೆ ಆರ್. ನರಸಿಂಹಾ ಚಾರ್ಯರ ಕರ್ಣಾಟಕ ಕವಿಚರಿತೆಯ ಮೊದಲ ಸಂಪುಟ (1907) ಮಾತ್ರ ಪ್ರಕಟವಾಗಿತ್ತು. ಡಾ|| ಕಿಟಲ್, ಬಿ.ಎಲ್. ರೈಸ್ ಮೊದಲಾದವರು ತಾವು ಸಂಪಾದಿಸಿದ ಕೃತಿಗಳಿಗೆ ಬರೆದ ಉಪೋದ್ಘಾತಗಳಲ್ಲಿ ಮತ್ತು ಬಿಡಿ ಲೇಖನಗಳಲ್ಲಿ ಸಾಹಿತ್ಯ ಚರಿತ್ರೆಯ ಹೊಳಹುಗಳನ್ನು ಮೊದಲೇ ಕಾಣಿಸಿದ್ದರು. ರೈಸ್ ಅವರ ಕೃತಿ ರಚನೆಯ ಮೊದಲು ಕನ್ನಡ ಸಾಹಿತ್ಯವನ್ನು ಒಟ್ಟಾಗಿ ಗ್ರಹಿಸುವ ಪ್ರಯತ್ನ ಆಗಿರಲಿಲ್ಲ. ಅಂಥ ಹಿನ್ನೆಲೆಯಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಕನ್ನಡ ಸಾಹಿತ್ಯದ ಇತಿಹಾಸವನ್ನು ಬರೆಯಲು ಹೊರಟರು. ಕನ್ನಡ ಸಾಹಿತ್ಯವನ್ನು ಕುರಿತು ವಿಹಂಗಮ ದೃಷ್ಟಿಯಿಂದ ಕೂಡಿದ್ದರೂ ಸಂಪೂರ್ಣ ಕಲ್ಪನೆಯನ್ನು ಕೊಡುವಂಥ ಈ ಕೃತಿ ಅವರು ಬರೆದದ್ದು ಗಮನಾರ್ಹವಾಗಿದೆ. ಕನ್ನಡ ಸಾಹಿತ್ಯದ ರಸಮಯ ಅಂಶಗಳನ್ನು ಪ್ರಪಂಚಕ್ಕೆ ಪರಿಚಯಿಸುವ ಒಂದು ಸ್ತುತ್ಯ ಕಾರ್ಯವನ್ನು ಅವರು ಕೈಗೊಂಡರು. ಹನ್ನೆರಡು ಅಧ್ಯಾಯಗಳಲ್ಲಿ ಕನ್ನಡ ಸಾಹಿತ್ಯವನ್ನು ವಿಭಾಗಿಸಿಕೊಂಡು ವಿವೇಚಿಸಿದ್ದಾರೆ. ಕಾವ್ಯ ಭಾಗಗಳನ್ನು ಉದಾಹರಿಸುವಾಗ ಅನೇಕ ಕಾವ್ಯಭಾಗಗಳನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದಾರೆ. ಸೋಮೇಶ್ವರ ಶತಕ, ಬಸವ ಪುರಾಣ, ಸರ್ವಜ್ಞನ ವಚನಗಳು ಮುಂತಾದುವನ್ನು ಅನುವಾದಿಸಲಾಗಿದೆ.

ಈ ಕೃತಿಯಲ್ಲಿ ಕನ್ನಡ ಸಾಹಿತ್ಯದ ವಿಮರ್ಶೆಯನ್ನು ಮಾಡುತ್ತಾ ನೀಡಿರುವ ಕೆಲವು ಹೇಳಿಕೆಗಳು ಅನುದಾರವಾಗಿವೆ. ಶುದ್ಧಮಾನವ ಪ್ರೀತಿ ಭಾರತೀಯ ಸಾಹಿತ್ಯದಲ್ಲಿ ಗೈರು ಹಾಜರಾಗಿರುವುದನ್ನು ಹೇಳುತ್ತಾ ಅದು ಪಾಶ್ಚಾತ್ಯ ಸಾಹಿತ್ಯದಲ್ಲಿ ಸಮೃದ್ಧವಾಗಿ ಇರುವುದನ್ನು ಹೇಳಿ ಮುಂದುವರಿದು 'I am afraid it must be confessed that Kanarese writers highly skilful though they are in the manipulation of their language and very pleasing to listen to in the original have as yet contributed extremely little to the stock of the world's knowledge and inspiration'. ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇಂಥ ಸತ್ಯಕ್ಕೆ ದೂರವಾದ ಸಮೀಕ್ಷಾ ಅಭಿಪ್ರಾಯ ವ್ಯಕ್ತವಾಗಿದೆ. ಇದನ್ನು ಗ್ರಹಿಕೆಯ ತೊಡಕುಗಳೆಂದು ಮತ್ತು ಅಭಿಪ್ರಾಯಭೇದವೆಂದು ಭಾವಿಸಬೇಕಾಗುತ್ತದೆ. ಈ ಕೃತಿಯ ದ್ವಿತೀಯಾವೃತ್ತಿ 1921ರಲ್ಲಿ ಪ್ರಕಟವಾಯಿತು. ಶಾಸನಗಳು, ವಚನ, ಕೀರ್ತನೆ, ಷಟ್ಪದಿಗಳನ್ನು ಇಂಗ್ಲಿಷ್ ಭಾಷೆಗೆ ಭಾಷಾಂತರಿಸಿದ್ದಾರೆ. ಅವರ ಅನುವಾದ ಸಾಮರ್ಥ್ಯ ಉತ್ತಮ ಮಟ್ಟದ್ದಾಗಿ ಕಂಡು ಬರುತ್ತದೆ.

ರೈಸ್ ಅವರ ಸಾಹಿತ್ಯ ಚರಿತ್ರೆ ರಚಿತವಾದ ಹಿನ್ನೆಲೆಯ ಮಿತಿಯಲ್ಲಿ ಪರಿಭಾವಿಸಿದರೆ ಅನೇಕ ಅಂಶಗಳು ಅಪೂರ್ಣವೆಂದೂ, ಕೆಲವು ದೋಷಗಳೆಂದೂ ಸಹಜವಾಗಿ ಭಾಸವಾಗುತ್ತದೆ. ಉದಾಹರಣೆಗೆ ಚಾವುಂಡರಾಯ ಪುರಾಣ ಸಂಪೂರ್ಣ ಗದ್ಯದಲ್ಲಿ ರಚಿತವಾದ ಅತಿಪ್ರಾಚೀನ ಕೃತಿಯೆಂದು ಅಭಿಪ್ರಾಯ ಪಡಲಾಗಿದೆ. ಆದರೆ ಈಗ ವಡ್ಡಾರಾಧನೆಗೆ ಆ ಸ್ಥಾನ ದೊರೆತಿರುವುದು ತಿಳಿದ ವಿಷಯವೇ ಆಗಿದೆ. ಕೇಶಿರಾಜನ ಶಬ್ದಮಣಿದರ್ಪಣವಲ್ಲದೆ ಅವನು ಇನ್ನೂ ಹಲವು ಕೃತಿಗಳನ್ನು ರಚಿಸಿರುವ ಉಲ್ಲೇಖವಿಲ್ಲ. ಹರಿಹರನ ರಕ್ಷಾಶತಕ, ಮುಡಿಗೆಯ ಅಷ್ಟಕಗಳ ಉಲ್ಲೇಖ ಬಂದಿಲ್ಲ. ಅಲ್ಲಮನನ್ನು ಗಣಪತಿಯ ಅವತಾರವೆನ್ನಲಾಗಿದೆ. ಕೆಂಪುನಾರಾಯಣ, ಮುದ್ದಣರ ಚರಿತ್ರೆಯು ಈ ಕೃತಿಯಲ್ಲಿ ಬಂದಿಲ್ಲ. ಇಂಥ ಹಲವು ಹತ್ತು ವಿಷಯಗಳ ಬಗ್ಗೆ ರೈಸ್ ಅವರ ಸಾಹಿತ್ಯ ಚರಿತ್ರೆಯನ್ನು ಕುರಿತು ಆಕ್ಷೇಪಣೆ ಎತ್ತಬಹುದಾಗಿದೆ. ರೈಸ್ ಅವರ ಸಾಹಿತ್ಯ ಚರಿತ್ರೆಯನ್ನು ಕನ್ನಡಕ್ಕೆ ಭಾಷಾಂತರಿಸಿರುವ ಡಾ|| ಸಂಗಮನಾಥ ಜಿ. ಹಂಡಿ ಮತ್ತು ಪೌಲಿನ ನಂದಗಾಂವ ಅವರು ಇಂಥ 34 ವಿಷಯಗಳನ್ನು ಪಟ್ಟಿಮಾಡಿ ಅನುಬಂಧದಲ್ಲಿ ಕೆಲವು ಪೋಷಕ ವಿಷಯಗಳೆಂದು ಕೊಟ್ಟಿದ್ದಾರೆ. ಯಾವುದೇ ಸಾಹಿತ್ಯ ಚರಿತ್ರೆಗೆ ಹೊಸ ಹೊಸ ಸಾಹಿತ್ಯ ಕೃತಿಗಳು ಪ್ರಕಟವಾದ ಹಾಗೆ, ನವೀನ ಸಂಶೋಧನೆಗಳ ಫಲಗಳು ಹೊರಬಿದ್ದ ಹಾಗೆ ಅನೇಕ ಅಂಶಗಳ ಸೇರ್ಪಡೆ, ಹಿಂದಿನ ಅಭಿಪ್ರಾಯಗಳ ಮಾರ್ಪಾಡು ಅತ್ಯಗತ್ಯವಾಗುತ್ತದೆ. ಈ ಮಾತು ರೈಸ್ ಅವರ ಸಾಹಿತ್ಯ ಚರಿತ್ರೆಗೆ ಅನ್ವಯವಾಗುವಂತೆ ಎಲ್ಲಾ ಸಾಹಿತ್ಯ ಚರಿತ್ರೆಗಳಿಗೂ ಹೊಂದುವಂತಹ ಅಭಿಪ್ರಾಯವಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಗಳ ವಿಷಯ ಇನ್ನೂ ಅಂಬೆಗಾಲಿಡುತ್ತಿದ್ದ ಕಾಲದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ಪರಿಕಲ್ಪನೆಯನ್ನು ಮಾಡಿಕೊಂಡು ರೈಸ್ ಅವರು ಇಂಗ್ಲಿಷ್ ಭಾಷೆಯಲ್ಲಿ ರಚಿಸಿ ಕನ್ನಡಕ್ಕೆ ಬಹುದೊಡ್ಡ ಉಪಕಾರವನ್ನು ಮಾಡಿದ್ದಾರೆ. ಈ ಕಾರಣಗಳಿಂದ ಅನೇಕ ಅರೆಕೊರೆಗಳ ಮಧ್ಯದಲ್ಲಿಯೂ ಈ ಕೃತಿಗೆ ಕನ್ನಡ ಸಾಹಿತ್ಯ ಚರಿತ್ರೆಗಳ ಇತಿಹಾಸದಲ್ಲಿ ತುಂಬ ಗಣ್ಯವಾದ ಸ್ಥಾನವಿದೆ.

ರೈಸ್ ಅವರು ತಮ್ಮ ತಂದೆಯಾದ ಬೆಂಜಮಿನ್ನರ ಬಗ್ಗೆ ಒಂದು ಉತ್ತಮ ಜೀವನ ಚರಿತ್ರೆಯನ್ನು ಇಂಗ್ಲಿಷ್ ಭಾಷೆಯಲ್ಲಿ ರಚಿಸಿದ್ದಾರೆ. ಈ ಕೃತಿ ಅವರು ಬೆಂಗಳೂರಿನಲ್ಲಿರುವಾಗ ರಚಿತವಾದಂತಿದೆ. 192 ಪುಟಗಳ ಈ ಪುಸ್ತಕದಲ್ಲಿ ಬೆಂಜಮಿನ್ನರ ಆರಂಭದ ಕೌಟುಂಬಿಕ ಹಿನ್ನೆಲೆ, ವಿದ್ಯಾಭ್ಯಾಸ ಮುಂತಾದುವನ್ನು ಒದಗಿಸಿ ತಮ್ಮ 22ನೆಯ ವಯಸ್ಸಿನಲ್ಲಿ ಭಾರತಕ್ಕೆ ಆಗಮಿಸಿ 50 ವರ್ಷಕ್ಕೂ ದೀರ್ಘಕಾಲ ಬೆಂಗಳೂರಿನಲ್ಲಿ ನೆಲಸಿ ಧರ್ಮ ಪ್ರಸಾರ ಮತ್ತು ಸಮಾಜಸೇವೆ ಕೈಗೊಂಡ ವಿಷಯವನ್ನು ಆತ್ಮೀಯವಾಗಿ ಅಷ್ಟೇ ವಸ್ತುನಿಷ್ಠವಾಗಿ ನಿರೂಪಿಸಿದ್ದಾರೆ. ಬೆಂಜಮಿನ್ನರ ಪೂರ್ವಿಕರು, ಕುಟುಂಬ ವರ್ಗದ ಸಂಕ್ಷಿಪ್ತ ಚಿತ್ರವೂ ದೊರೆಯುತ್ತದೆ. ಬೆಂಜಮಿನ್ನರು ತಮ್ಮ ಗೆಳೆಯರಿಗೆ, ಆತ್ಮೀಯರಿಗೆ ಬರೆದ ಪತ್ರಗಳನ್ನು ಸಂದರ್ಭಾನು ಸಾರವಾಗಿ ಉದಾಹರಿಸುವ ಮೂಲಕ ರೈಸರು ಜೀವನ ಚಿತ್ರವನ್ನು ಅಧಿಕೃತಗೊಳಿಸಿದ್ದಾರೆ.

ಆ ಕಾಲದಲ್ಲಿ ಸಂಪರ್ಕ ಸಾಧನಗಳು ಅಷ್ಟೊಂದು ವೇಗವಾಗಿರಲಿಲ್ಲ. ಟೆಲಿಗ್ರಾಫ್ ಇರಲಿಲ್ಲ, ಸ್ಟೀಮರ್ಸ್ ಇರಲಿಲ್ಲ-ತಿಂಗಳ ಪತ್ರ ವ್ಯವಸ್ಥೆ ಮಾತ್ರವಿದ್ದಿತು. ಆಗ ಒಂದು ಪತ್ರ ತಲುಪಲು ಮೂರು ತಿಂಗಳ ಅಗತ್ಯವಿದ್ದಿತಂತೆ. ವಿದೇಶಕ್ಕೆ ಹೋಗುವುದೆಂದರೆ ತನ್ನ ತಾಯ್ನಾಡಿನಿಂದ ಶಾಶ್ವತವಾಗಿ ಹೊರ ಹೋದಂತೆ ಎಂಬ ಅಭಿಪ್ರಾಯವಿತ್ತು. ಅಂಥ ಪರಿಸ್ಥಿತಿಯಲ್ಲಿ ಜನ, ಸಂಸ್ಕೃತಿ, ಭಾಷೆ ಗೊತ್ತಿರದ ದೇಶಕ್ಕೆ ತನ್ನ ಮಡದಿಯೊಂದಿಗೆ ಆಗಮಿಸಿ ನೆಲೆನಿಂತು ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಕಾರ್ಯಗಳನ್ನು ಯಶಸ್ವಿಯಾಗಿ ಮಾಡಿ ತನ್ನ ಮಕ್ಕಳಲ್ಲಿ ಕನ್ನಡ ಪ್ರೇಮಕ್ಕೆ

ಕಾರಣದಿಂದಾಗಿ ಅಂಥ ವಾತಾವರಣ ನಿರ್ಮಿಸಿ ಕನ್ನಡಕ್ಕೆ ಬಿ.ಎಲ್. ರೈಸ್, ಇ.ಪಿ. ರೈಸ್‌ರಂಥ ಮಹತ್ವದ ವಿದ್ವಾಂಸರನ್ನು ನೀಡಿದ್ದು ಬೆಂಜಮಿನ್ನರ ಶ್ರೇಷ್ಠ ಕಾಣಿಕೆಯಾಗಿದೆ.

ಬೆಂಜಮಿನ್ನರನ್ನು ಸಂಪರ್ಕಿಸಿದ ಬ್ರಾಹ್ಮಣ ಮತ್ತು ಲಿಂಗಾಯತ ವ್ಯಕ್ತಿಗಳು ಧರ್ಮಾಂತರ ಹೊಂದಲು ಬಯಸಿದಂತಹ ಸಂದರ್ಭದಲ್ಲಿ ಅವರಲ್ಲಿ ಉಂಟಾದ ಮನಃಸ್ಥಿತಿಯ ಚಿತ್ರಣಗಳು ಬಹು ಕುತೂಹಲ ಕರವಾಗಿವೆ. ಆ ಕಾಲದ ಜನರ ಮನೋಭಾವ, ಕ್ರೈಸ್ತ ಧರ್ಮದ ವಿಷಯದಲ್ಲಿ ಇದ್ದ ಭಯ-ಆತಂಕ, ಸ್ವಧರ್ಮೀಯರ ವಿಷಯದಲ್ಲಿದ್ದ ಹೆದರಿಕೆ, ಧರ್ಮ ಪ್ರಚಾರಕರಿಗೆ ಎದುರಾಗುತ್ತಿದ್ದ ಕ್ಲಿಷ್ಟ ಸಮಸ್ಯೆಗಳು ಮುಂತಾದ ವಿಷಯಗಳು ಬೆಂಜಮಿನ್ನರ ಜೀವನ ಚರಿತ್ರೆಯಲ್ಲಿ ಸೂಕ್ಷ್ಮವಾಗಿ ಚಿತ್ರಣಗೊಂಡಿವೆ. ಆ ಕಾಲದ ಧಾರ್ಮಿಕ ಮತ್ತು ಸಾಮಾಜಿಕ ಅಧ್ಯಯನಕ್ಕೆ ಮಹತ್ವದ ಸಾಮಗ್ರಿಯನ್ನು ಈ ಗ್ರಂಥ ಒದಗಿಸುತ್ತದೆ. ಉತ್ತಮ ರೀತಿಯಲ್ಲಿ ಅಚ್ಚುಕಟ್ಟಾಗಿ ರಚಿತವಾದ ಈ ಜೀವನ ಚರಿತ್ರೆ ಇ.ಪಿ. ರೈಸರ ಸಂಶೋಧನ ಮತ್ತು ವಸ್ತುನಿಷ್ಠ ಮನೋಧರ್ಮಕ್ಕೆ ಉತ್ತಮ ಸಾಕ್ಷಿಯಾಗಿದೆ.

ರೈಸರ ಮೂರನೆಯ ಮಹತ್ವದ ಇಂಗ್ಲಿಷ್ ಕೃತಿ 'ದಿ ಮಹಾಭಾರತ ಅನಾಲಿಸಿಸ್ ಅಂಡ್ ಇಂಡೆಕ್ಸ್' ಎಂಬುದಾಗಿದೆ. 1934ರಲ್ಲಿ ಪ್ರಕಟವಾದ ಈ ಕೃತಿ ರೈಸರ ಅಧ್ಯಯನ ವ್ಯಾಪ್ತಿಯನ್ನು ಅನಾವರಣಗೊಳಿಸುತ್ತದೆ. ಪ್ರಸಿದ್ಧ ವಿದ್ವಾಂಸರಾದ ಸಿ.ಡಿ. ಬಾರ್ನೆಟ್ ಅಭಿಪ್ರಾಯ ಪಡುವಂತೆ 'ಮಹಾಭಾರತದ ಅಧ್ಯಯನ ಭಾರತೀಯ ಸತ್ವ ಮತ್ತು ಪ್ರಾಚೀನ ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳಬಯಸುವವರಿಗೆ ಅತ್ಯಗತ್ಯ ಕೃತಿಯಾಗಿದೆ.' ಮಹಾಭಾರತ ತನ್ನ ಬೃಹತ್ತು ಮತ್ತು ಮಹತ್ತುಗಳಿಂದ ಕೋಟ್ಯಂತರ ಭಾರತೀಯರಿಗೆ ಪವಿತ್ರ ಕೃತಿಯಾಗಿದೆ. ಅದರ ವೈಶಾಲ್ಯ, ತತ್ವಜ್ಞಾನ, ದಂತಕತೆ, ಪಾತ್ರ ವೈವಿಧ್ಯ, ಘಟನಾ ವೈವಿಧ್ಯ ಇವುಗಳು ಅದನ್ನು ಪ್ರವೇಶಿಸುವವರಿಗೆ ದಟ್ಟ ಅರಣ್ಯದಂತೆ ದಿಕ್ಕು ತಪ್ಪಿಸುತ್ತದೆ. ಅಂಥ ಕೃತಿಯನ್ನು ಪ್ರವೇಶಿಸಲು ಒಂದು ಭೂಪಟ ಮಾದರಿಯ ಕೈಪಿಡಿಯನ್ನು ರಚಿಸಿ ಮಹಾಭಾರತದ ಓದುಗರಿಗೆ ಉಪಕಾರ ಮಾಡಿದ್ದಾರೆ. ಮಹಾಭಾರತ ಕೇವಲ ಮಹಾಕಾವ್ಯವಲ್ಲ ಅದು ಹಿಂದೂ ಸಂಸ್ಕೃತಿಯ, ತತ್ವಶಾಸ್ತ್ರದ ಸಾರವಾಗಿದೆ. ಅದು ಮುಗಿಯದ ಗಣಿಯಂತೆ ಮುಂದಿನ ತಲೆಮಾರಿನ ಎಲ್ಲ ಭಾರತೀಯ ಕವಿಗಳಿಗೆ, ಪುರಾಣ ಕರ್ತೃಗಳಿಗೆ ವಾಙ್ಮಯ ಸಾಮಗ್ರಿಯನ್ನು ಒದಗಿಸುತ್ತಾ ಬಂದಿದೆ. ಪ್ರೊ. ಜಾಕೊಬಿ ಜರ್ಮನ್ ಭಾಷೆಯಲ್ಲಿ ಇದೇ ಸ್ವರೂಪದ ಕೃತಿಯೊಂದನ್ನು ಬರೆದಿರುವ ತಿಳವಳಿಕೆ ತಮಗೆ ಮೊದಲು ಇರಲಿಲ್ಲವೆಂದು ರೈಸ್ ಅವರು ಹೇಳಿದ್ದಾರೆ. ರೈಸ್ ಅವರು ವಿಷಯಾನುಕ್ರಮವಾಗಿ ಹೆಸರುಗಳು, ಯುದ್ಧಕಲೆ, ಕಲ್ಪಗಳು, ಯುಗಗಳು ಮುಂತಾದವುಗಳಿಗೆ ಸಮರ್ಪಕ ರೀತಿಯಲ್ಲಿ ವಿವರಣೆಯನ್ನು ನೀಡಿ ಮಹಾಭಾರತದ ಅಭ್ಯಾಸಕ್ಕೆ ಉಪಯುಕ್ತ ಕೈಪಿಡಿಯೊಂದನ್ನು ನೀಡಿದ್ದಾರೆ.

ರೈಸರು ಕನ್ನಡ ನಾಡು ನುಡಿಗಳ ವಿಷಯದಲ್ಲಿ ಅಪಾರವಾದ ಪ್ರೀತಿಯನ್ನು ಹೊಂದಿದ್ದರು. ತಮಗೆ ಬೇರೆ ಬೇರೆ ಸಂದರ್ಭಗಳಲ್ಲಿ ದೊರೆತಿದ್ದ ಅನೇಕ ಅಮೂಲ್ಯ ವಸ್ತುಗಳನ್ನು ಬೆಂಗಳೂರಿನ ವಸ್ತು ಸಂಗ್ರಹಾಲಯಕ್ಕೆ ಕೊಡುಗೆಯಾಗಿ ನೀಡಿರುವುದು ಕಂಡು ಬರುತ್ತದೆ. ಎರಡು ಬೆಳ್ಳಿಯ ನಾಣ್ಯಗಳನ್ನು, ಮೃತ ಪ್ರಾಣಿಯ ಶಿರಸ್ಸನ್ನು (ವಾರ್ಷಿಕ ವರದಿ 1887-88), ಜಲಜೀವಿಯೊಂದನ್ನು (ವಾರ್ಷಿಕ ವರದಿ 1892-93) ಮತ್ತು ಹೆಬ್ಬಾವಿನ ಮೊಟ್ಟೆಗಳನ್ನು (ವಾರ್ಷಿಕ ವರದಿ 1896-97) ಕೊಡುಗೆಗಳಾಗಿ ನೀಡಿರುವುದು ಸರ್ಕಾರಿ ವಸ್ತು ಸಂಗ್ರಹಾಲಯದ ವಾರ್ಷಿಕ ವರದಿಗಳಲ್ಲಿ ದಾಖಲಾಗಿದೆ.

ಇ.ಪಿ. ರೈಸ್ ಅವರ ಸಾಮಾಜಿಕ ಕಾರ್ಯಗಳನ್ನು ಗಮನಿಸಿ 1891ನೆಯ ಇಸವಿಯಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಸೇವೆ ಸಲ್ಲಿಸಲು ಯೋಗ್ಯರಾದ ವ್ಯಕ್ತಿಗಳ ಪಟ್ಟಿಯಲ್ಲಿ ಶ್ರೀಯುತರ ಹೆಸರಿದ್ದುದು ತಿಳಿದು ಬರುತ್ತದೆ. (ಕರ್ನಾಟಕ ಪ್ರಕಾಶಿಕೆ ಪು.4)

ರೈಸ್ ಅವರ ಅಧ್ಯಯನಶೀಲತೆ, ಕನ್ನಡ ಸಾಹಿತ್ಯ ಪ್ರೇಮ, ಭಾಷಾ ಪ್ರೀತಿಗಳು ಅವರ ಕೃತಿಗಳಲ್ಲಿ ಮೂಡಿ ನಿಂತಿವೆ. ತಾವು ರಚಿಸಿದ ಸಾಹಿತ್ಯ ಚರಿತ್ರೆಯನ್ನು ಕರ್ನಾಟಕ ಕವಿಚರಿತೆಯನ್ನು ಬರೆದ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರಿಗೆ ಅರ್ಪಿಸಿದ್ದಾರೆ. ಇದು ರೈಸ್ ಅವರ ವಿದ್ವತ್ಪ್ರೀತಿ ಮತ್ತು ನಿಷ್ಪಕ್ಷಪಾತ ಮನೋಭಾವ, ಕನ್ನಡ ವಿದ್ವಾಂಸರಿಗೆ ತೋರಿಸುವ ಪ್ರೀತ್ಯಾದರ ಗುಣಗಳಿಗೆ ಸಂಕೇತವಾಗಿದೆ. ತಮ್ಮ ಕೃತಿಯ ದ್ವಿತೀಯ ಮುದ್ರಣದಲ್ಲಿ ಆರ್. ನರಸಿಂಹಾಚಾರ್ಯರ ದ್ವಿತೀಯ ಸಂಪುಟದಿಂದ ಬಹಳಷ್ಟು ಸಂಗತಿಗಳನ್ನು ಸ್ವೀಕರಿಸಿರುವುದಾಗಿ ಹೇಳಿದ್ದಾರೆ (ದ್ವಿತೀಯ ಆವೃತ್ತಿ ಮುನ್ನುಡಿ 1920). ರೈಸ್ ಅವರ ಸಾಹಿತ್ಯ ಚರಿತ್ರೆಯನ್ನು ಕನ್ನಡ ಭಾಷೆಗೆ ಭಾಷಾಂತರಿಸಿದ ಸಂಗಮನಾಥ ಜಿ. ಹಂಡಿ ಮತ್ತು ಪೌಲಿನಾ ಎಂ. ನಂದಗಾಂವರು ತಮ್ಮ ಕೃತಿಯನ್ನು ಇ.ಪಿ. ರೈಸರಿಗೆ ಪ್ರೀತ್ಯಾದರಗಳಿಂದ ಅರ್ಪಿಸಿ ಪ್ರತಿ ಗೌರವವನ್ನು ತೋರಿಸಿರುವುದು ಸ್ತುತ್ಯ ಕಾರ್ಯವಾಗಿದೆ. (ಕನ್ನಡ ಸಾಹಿತ್ಯ ಚರಿತ್ರೆ - 1975).

ರೈಸ್ ಅವರು ಹ್ಯಾರೋದಲ್ಲಿ ಮೃತರಾದ ವಿಷಯ ತಿಳಿದ ನಂತರ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ತುಂಬ ಗೌರವಪೂರ್ವಕವಾಗಿ ಸ್ಮರಿಸಲಾಗಿದೆ. 'ಕನ್ನಡ ಆಂಗ್ಲೇಯ ಮಹೋಪಕಾರಿಗಳಲ್ಲಿ ಪ್ರಮುಖರಾಗಿದ್ದ ಶ್ರೀಮಾನ್ ಇ.ಪಿ. ರೈಸ್ ರವರು ಈಚೆಗೆ ಇಂಗ್ಲೆಂಡಿನಲ್ಲಿ ಕಾಲಾಧೀನ ರಾದರೆಂದು ಕೇಳಿ ವಿಷಾದಿಸುತ್ತೇವೆ. (ಬಿ.ಎಲ್. ರೈಸ್)' ಅಣ್ಣಂದಿರಂತೆಯೇ ತಮ್ಮಂದಿರೂ ಕನ್ನಡದ ಅಭಿಮಾನಿಗಳಾಗಿ ಕನ್ನಡ ಜನಪದ ಮತ್ತು ಕನ್ನಡ ಸಾಹಿತ್ಯದ ಗುಣವಿಶೇಷಗಳನ್ನು ಇಂಗ್ಲಿಷ್ ಪ್ರಪಂಚಕ್ಕೆ ತಿಳಿಸುವುದರಲ್ಲಿ ಅಮೋಘವಾದ ಉಪಕಾರ ಮಾಡಿರುತ್ತಾರೆ. ಇ.ಪಿ. ರೈಸ್ ರವರು ಇಂಗ್ಲಿಷ್ ಭಾಷೆಯಲ್ಲಿ ಬರೆದಿರುವ ಕನ್ನಡ ಸಾಹಿತ್ಯ ಚರಿತ್ರೆಯ ನಮ್ಮ ಕಾವ್ಯ ತರಂಗಿಣಿಯ ಕಥೆಯನ್ನು ಆಮೂಲಾಗ್ರವಾಗಿ, ಸಂಗ್ರಹವಾಗಿ, ಮನೋಹರ ವಾದ ರೀತಿಯಲ್ಲಿ ಹೇಳುತ್ತದೆ.... ಇಂಥ ಹಿತಕರ್ತರ ಮರಣದಿಂದ ನಮಗೆ ಆಗಿರುವ ನಷ್ಟವನ್ನು ಅಷ್ಟಿಷ್ಟೆಂದು ಹೇಳಲಾಗದು. (ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ.21, 1936 ಜುಲೈ, ಪು. 250)

ಇ.ಪಿ. ರೈಸ್ ಅವರ ಮರಣದ ವಾರ್ತೆಯನ್ನು ಕೇಳಿ 8.1.1937ರಲ್ಲಿ ಬೆಂಗಳೂರು ನಗರದ ರೈಸ್ ಮೆಮೋರಿಯಲ್ ಚರ್ಚಿನಲ್ಲಿ ಒಂದು ಸಾರ್ವಜನಿಕ ಸಭೆ ಸೇರಿತ್ತು. ರೈಸ್ ಅವರು ಭಾರತವನ್ನು ಬಿಟ್ಟು 20 ವರ್ಷಗಳ ಮೇಲಾಗಿದ್ದರೂ ಅವರಲ್ಲಿ ಗೌರವಾಭಿಮಾನಗಳಿಂದ ಇಷ್ಟಮಿತ್ರರು ಸಭೆಗೆ ಆಗಮಿಸಿದ್ದರು. ರೆ|| ಎಚ್. ಸುಮಿತ್ರ ಅವರು ಅಧ್ಯಕ್ಷರಾಗಿದ್ದ ಸಭೆಯಲ್ಲಿ ಡಾ|| ಕೆ.ಪಿ. ಪುಟ್ಟಣ್ಣ ಶೆಟ್ಟಿ, ರೆ|| ಎಚ್. ಗಲಿ ಫರ್ಡ್, ಮ|| ಬಿ. ಪುಟ್ಟಯ್ಯ ಬಿ.ಎ, ಮೆ|| ಎನ್. ಕೃಷ್ಣಪ್ಪ, ಮಿಸ್ ಎಂ.ಎಲ್. ಬಟ್ಲರ್ ಮುಂತಾದವರು ಭಾಷಣ ಮಾಡಿ ರೈಸ್ ಅವರ ದಯೆ, ಶಾಂತಿ,

ಸಂತೋಷಚಿತ್ತ, ಕಾರ್ಯತತ್ಪರತೆ, ಕನ್ನಡ ಸಾಹಿತ್ಯದಲ್ಲಿಯೂ, ಭಾರತೀಯ ಧರ್ಮ ಶಾಸ್ತ್ರದಲ್ಲಿಯೂ ಅವರಿಗಿದ್ದ ಆಸಕ್ತಿ ಮುಂತಾದವುಗಳನ್ನು ಕುರಿತು ಭಾಷಣ ಮಾಡಿ ಅವರಿಗೆ ಶ್ರದ್ಧಾಂಜಲಿ ಅರ್ಪಿಸಿದರು. ರೈಸ್ ಅವರು ಕನ್ನಡ ನಾಡಿನ ಸಾಹಿತ್ಯ ಮತ್ತು ಸಾಂಸ್ಕೃತಿಕ ಜಗತ್ತಿನಲ್ಲಿ ಪಡೆದ ಗಣ್ಯ ಸ್ಥಾನವನ್ನು ಇದು ಸೂಚಿಸುತ್ತದೆ.

❑

---

1. ಇ.ಪಿ.ರೈಸ್ ಅವರು ಇಂಗ್ಲೆಂಡಿನ ಹ್ಯಾರೋ ಪಟ್ಟಣದಲ್ಲಿ ಜನಿಸಿದರೆಂದು ಕನ್ನಡ ವಿಷಯ ವಿಶ್ವಕೋಶದಲ್ಲಿ ಬರೆಯಲಾಗಿದೆ (ಪು. 1282). ರೈಸ್ ಅವರ ತಂದೆ ಬೆಂಜಮಿನ್ 1836ರಲ್ಲಿ ಬೆಂಗಳೂರಿಗೆ ಬಂದು ನೆಲಸಿ ಇಲ್ಲಿಯೆ ತಮ್ಮ ಕೊನೆಯುಸಿರೆಳೆದರು. 1853-56 ಮೂರು ವರ್ಷಗಳ ಕಾಲ ಮಾತ್ರ ರಜೆ ಪಡೆದು ಇಂಗ್ಲೆಂಡಿಗೆ ಹೋಗಿ ಬಂದರು. ಆದ್ದರಿಂದ ಇ.ಪಿ.ರೈಸ್ ನಿಸ್ಸಂಶಯವಾಗಿ ಬೆಂಗಳೂರಿನಲ್ಲಿ ಜನಿಸಿದರು ಎಂದು ಹೇಳಬಹುದು.

ಇ.ಪಿ.ರೈಸ್ ಅವರ ತಂದೆ ವಿಷಯ ಬರೆಯುವಾಗ ಬೆಂಜಮಿನ್ ಲೂಯಿ ರೈಸ್ ಎಂದು ನಿರ್ದೇಶಿಸಿ ಜರ್ಮನಿಯಿಂದ ಬಂದರೆಂದೂ ಸು. 1843ರಲ್ಲಿ ಮೊದಲು ಮದರಾಸಿಗೆ ಬಂದರೆಂದೂ ಬರೆಯಲಾಗಿದೆ. (ಕನ್ನಡ ಸಾಹಿತ್ಯ ಚರಿತ್ರೆ, ಇ.ಪಿ.ರೈಸ್ ರಚಿತ ಕೃತಿಯ ಭಾಷಾಂತರ, ಸಂಗಮನಾಥ ಜಿ.ಹಂಡಿ, ಪೌಲಿನ ನಂದಗಾವ, ಪೀಠಿಕಾಭಾಗ, ಡಾ. ಬಿ.ನಂ.ಚಂದ್ರಯ್ಯ ಪು. xiii). ಬೆಂಜಮಿನ್ ಲೂಯಿರೈಸ್ ಮಗನ ಹೆಸರಾಗುತ್ತದೆ. ಬೆಂಜಮಿನ್ ಎಂದು ಮಾತ್ರ ಹೆಸರಿಸಬೇಕು. ಅಲ್ಲದೆ ಆತ ಬಂದದ್ದು ಜರ್ಮನಿಯಿಂದ ಅಲ್ಲ ಇಂಗ್ಲೆಂಡಿನಿಂದ. ಇದೇ ತಪ್ಪನ್ನು ಡಾ. ಐ.ಮಾ. ಮುತ್ತಣ್ಣನವರು '19ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ' ಗ್ರಂಥದಲ್ಲಿ ಮಾಡಿದ್ದಾರೆ. ಪು. 321.

2. ಆದರೆ ಡಾ| ರಂ.ಶ್ರೀ ಮುಗಳಿಯವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ: 'ಹೊಸಗನ್ನಡ ಸಾಹಿತ್ಯದ ಆರಂಭ ಕಾಲದಲ್ಲಿ ಮಿಶನರಿ ವಿದ್ವಾಂಸರು ಅಂದು ಅವರಿಗೆ ದೊರೆತ ಸಾಮಗ್ರಿಯನ್ನು ಉಪಯೋಗಿಸಿ ಕನ್ನಡ ಸಾಹಿತ್ಯದ ಪರಿಚಯವನ್ನು ಇಂಗ್ಲಿಷಿನಲ್ಲಿ ಮಾಡಿಕೊಟ್ಟರು. ಅವಕ್ಕೆ ಚರಿತ್ರೆಯೆಂದಾಗಲಿ ಸಮೀಕ್ಷೆಯೆಂದಾಗಲಿ ಕರೆಯುವುದು ಸೂಕ್ತವಾಗದು. ಆ ಸಾಮಗ್ರಿಯೂ ತೀರ ಸ್ವಲ್ಪವಾಗಿತ್ತು' (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂ. 1, ಪು.1, ಬೆಂ.ವಿ.ವಿ. 1974).

## ಎಂ. ಎಸ್. ಪುಟ್ಟಣ್ಣ

**ಎಚ್.ಎಸ್. ಸುಜಾತ**

1

ಎಂ.ಎಸ್. ಪುಟ್ಟಣ್ಣನವರು (ಮೈಸೂರು ಸೂರ್ಯನಾರಾಯಣ ಭಟ್ಟ ಪುಟ್ಟಣ್ಣನವರು) ಕನ್ನಡದ ಮುನ್ನಡೆಗಾಗಿ ದುಡಿದ ಹಿರಿಯ ಮಹನೀಯರಲ್ಲಿ ಒಬ್ಬರು. ಪುಟ್ಟಣ್ಣನವರ ತಾತ ಲಕ್ಷ್ಮೀಕಾಂತಭಟ್ಟರು ಚನ್ನಪಟ್ಟಣದ ನಾಗವಾರ ಗ್ರಾಮದವರು, ವೇದವಿದ್ಯೆ ತಿಳಿದವರು, ಜ್ಯೋತಿಷ್ಯದಲ್ಲಿ ಪಾರಂಗತರು. ಅವರ ಮಕ್ಕಳು ನರಹರಿಭಟ್ಟರು, ಸೂರ್ಯನಾರಾಯಣಭಟ್ಟರು ಇಬ್ಬರೂ ವೈದಿಕ ವೃತ್ತಿಯವರು. ಸೂರ್ಯನಾರಾಯಣಭಟ್ಟರ ಒಬ್ಬರೇ ಮಗ ಎಂ. ಎಸ್. ಪುಟ್ಟಣ್ಣನವರು 1854ರಲ್ಲಿ ತಾಯಿಯ ತವರಾದ ಮೈಸೂರಿನಲ್ಲಿ ಜನಿಸಿದರು. ಹುಟ್ಟಿದ ಹತ್ತು ದಿನಗಳೊಳಗೆ ತಾಯಿಯನ್ನು ಕಳೆದುಕೊಂಡ ಈ ಮಗುವನ್ನು ಸೋದರ ಮಾವ ಸಾಕಿದರು. ಜೊತೆಗೆ ಇನ್ನೊಬ್ಬ ಸೋದರತ್ತೆಯ ಆರೈಕೆಯ ಭಾಗ್ಯವೂ ಸಿಕ್ಕಿತು. ತಂದೆ ಜೀವನದಲ್ಲಿ ಜುಗುಪ್ಸೆ ಹೊಂದಿ ಕಾಶಿಗೆ ಹೋಗಿ ಸನ್ಯಾಸಿಯಾದರು. ಪುಟ್ಟಣ್ಣನವರಿಗೆ ದೊಡ್ಡವರಾದ ಮೇಲೆ ತಂದೆಯ ಮುಖದರ್ಶನವಾಗಲೇ ಇಲ್ಲ.

ಪುಟ್ಟಣ್ಣನವರ ನಿಜ ನಾಮಧೇಯ ಲಕ್ಷ್ಮೀನರಸಿಂಹಶಾಸ್ತ್ರೀ. ಎಳೆವರೆಯದ, ಚುರುಕುಗಣ್ಣುಗಳ ತಬ್ಬಲಿ ಮಗುವನ್ನು ಕಂಡವರೆಲ್ಲ ಕರೆದ ಮುದ್ದಿನ ಹೆಸರು ಪುಟ್ಟಣ್ಣ. ಮುಂದೆ ಅದೇ ಹೆಸರು ಗಟ್ಟಿಯಾಯಿತು. ಸಂಪ್ರದಾಯಸ್ಥ ಮನೆತನದ ಪುಟ್ಟಣ್ಣನವರ ವಿದ್ಯಾಭ್ಯಾಸ ಪ್ರಾರಂಭದಲ್ಲಿ ಪಂತರ ಖಾಸಗಿ ಮಠಗಳಲ್ಲಿ ನಡೆಯಿತು. ಅನಂತರ ರಾಜಾ ಸ್ಕೂಲಿನಲ್ಲಿ (ಈಗಿನ ಮಹಾರಾಜ ಕಾಲೇಜು) ಎಫ್. ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಕೋಲಾರದ ಪ್ರೌಢಶಾಲೆಯಲ್ಲಿ ಸಹಾಯೋಪಾಧ್ಯಾಯರಾಗಿ ನೇಮಕಗೊಂಡರು.

ಪುಟ್ಟಣ್ಣನವರ ಮೊದಲ ದಾಂಪತ್ಯದಲ್ಲಿ ಹೊಂದಾಣಿಕೆಯಿಲ್ಲದೆ ಗಂಡ ಹೆಂಡಿರು ಬೇರ್ಪಟ್ಟರು. ಪತ್ನಿಯ ಶೀಲಶಂಕೆಯವರೆಗೆ ಪತಿಯ ಮನಸ್ಸು ವಿಮುಖವಾದ ಮೇಲೆ ಹಾಗಾಗದೆ ವಿಧಿಯಿರಲಿಲ್ಲ. ಅನಂತರ ಬೇರೆ ಯಾರ ಆಯ್ಕೆಯಲ್ಲೂ ನಂಬಿಕೆಯಿರದೆ ಮುಂದೆ ತಾವೇ ಆರಿಸಿದ ಹೆಣ್ಣನ್ನು ಮದುವೆಯಾಗಿ ಆಕೆಗೆ ಪಾಠ ಹೇಳಿದರು, ಹೇಳಿಸಿದರು. ಅವರ ಈ ಎರಡನೆಯ ದಾಂಪತ್ಯದಲ್ಲಿ ಅವರಿಗೆ ಮೂವರು ಗಂಡುಮಕ್ಕಳು, ಮೂವರು ಹೆಣ್ಣು ಮಕ್ಕಳು ಜನಿಸಿದರು.

ತಮ್ಮ ವೃತ್ತಿಯೊಂದಿಗೆ ಅಧ್ಯಯನಕ್ಕೂ ಮನಸ್ಸು ಕೊಟ್ಟ ಪುಟ್ಟಣ್ಣನವರು 1885ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದ ಬಿ. ಎ. ಪದವಿಯನ್ನು ಪಡೆದರು. ಮರು ವರ್ಷವೇ ಶಾಲೆಯ ಮುಖ್ಯೋಪಾಧ್ಯಾಯರಾದ ಎಚ್.ಜೆ. ಭಾಭಾ ಅವರೊಡನೆ ಭಿನ್ನಾಭಿಪ್ರಾಯವುಂಟಾಗಿ ರಾಜಿ ಮಾಡಿಕೊಳ್ಳಲಿಚ್ಛಿಸದೆ ತಮ್ಮ ಹುದ್ದೆಗೆ ರಾಜೀನಾಮೆ ಇತ್ತರು. ಕೆಲವು ಕಾಲ ಬೆಂಗಳೂರಿನ ಚೀಫ್ ಕೋರ್ಟಿನಲ್ಲಿ (ಈಗಿನ ಹೈಕೋರ್ಟ್) ಭಾಷಾಂತರಕಾರರಾಗಿ ದುಡಿದರು. 1897ರಲ್ಲಿ ಅವರನ್ನು ಚಿತ್ರದುರ್ಗದ ಅಮಲ್ದಾರರನ್ನಾಗಿ ನೇಮಿಸಲಾಯಿತು. ನೆಲಮಂಗಲ, ಚಾಮರಾಜ ನಗರ, ಬಾಗೇಪಲ್ಲಿ, ಮುಳಬಾಗಿಲು, ಹೊಸದುರ್ಗಗಳಲ್ಲಿಯೂ ಅವರು ಅಮಲ್ದಾರರಾಗಿ ಕಾರ್ಯನಿರ್ವಹಣೆ ಮಾಡಿದರು. ಅತ್ಯಂತ ಶಿಸ್ತಿನಿಂದಿದ್ದ, ಋಜುಮಾರ್ಗದಲ್ಲಿ ನಂಬಿಕೆಯಿದ್ದ

ಪುಟ್ಟಣ್ಣನವರಿಗೆ ಕಡೆಗೂ ಸರಕಾರದ ನೌಕರಿ ನೋವು ಬೇಸರಗಳನ್ನು ತಂದಿತು. 1908ರಲ್ಲಿ ಅವರು ತಮ್ಮ ವೃತ್ತಿಗೆ ರಾಜೀನಾಮೆ ನೀಡಿದರು. ಪುಟ್ಟಣ್ಣನವರಿಗೆ ಸರಕಾರವೇ ದೇವರು, ಪ್ರಜಾಭಿವೃದ್ಧಿಯೇ ಗುರಿ. ಅವರಿಗೆ ಕೆಲಸದ ಅವಧಿ ವಿಸ್ತರಣೆ ಸಿಗುವುದು ನ್ಯಾಯವಾಗಿತ್ತು. ಹಾಗಿರುವಾಗ ಪೂರ್ಣಾವಧಿ ಕೆಲಸವನ್ನೂ ಮಾಡದೆ ರಾಜೀನಾಮೆ ಕೊಟ್ಟಿದ್ದು ಒಂದು ವ್ಯಂಗ್ಯ. ಅನಂತರ ಸ್ವಲ್ಪ ಕಾಲ ವಕೀಲರಾಗಿದ್ದರು. ತಮ್ಮ ಬೇರೆ ಬೇರೆ ವೃತ್ತಿಗಳಲ್ಲಿದ್ದಾಗಲೂ ಅವರು ಸಾರಸ್ವತ ಸೇವೆಯನ್ನು ನಿಲ್ಲಿಸಲಿಲ್ಲ. ವಿಶ್ವವಿದ್ಯಾನಿಲಯ, ಶಿಕ್ಷಣ ಮಂಡಳಿಗಳಲ್ಲಿ ಪರೀಕ್ಷಕರಾಗಿ, ಪಠ್ಯಪುಸ್ತಕ ಸಮಿತಿಗಳಲ್ಲಿ ಸದಸ್ಯರಾಗಿ, ಭಾಷೆಯ ಸಾಧು ಅಸಾಧು ರೂಪಗಳನ್ನು ಚರ್ಚಿಸುವ ಸಮಿತಿಯಲ್ಲಿ ಒಬ್ಬರಾಗಿ ಅವರು ದುಡಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪಕ ಸದಸ್ಯರಲ್ಲಿ ಒಬ್ಬರಾದ ಅವರು ಕೆಲಕಾಲ ಅದರ ಕಾರ್ಯದರ್ಶಿಯೂ ಆಗಿದ್ದರು. ಸಾರ್ವಜನಿಕ ಚಟುವಟಿಕೆಗಳಲ್ಲಿ ಅವರದು ಅಪಾರವಾದ ಆಸಕ್ತಿ. ಬೆಂಗಳೂರಿನ ತೆರಿಗೆದಾರರ ಸಂಘದ ಸಂಘಟಕರಾಗಿದ್ದ ಅವರು ಆ ದಿನಗಳಲ್ಲಿನ ದಾಖಲೆಗಳು ಕನ್ನಡದಲ್ಲೇ ಇರಲು ಕಾರಣರಾದರು.

ವೃತ್ತಿಜೀವನದಲ್ಲಿ ಅವರು ಅತ್ಯಂತ ಪರಿಶುದ್ಧರಾಗಿದ್ದರು. ಅಮಲ್ದಾರರಾಗಿದ್ದಾಗ ತಿಂಗಳಿಗೆ ಹತ್ತು ದಿನಗಳ ಕಾಲದ ಸಂಚಾರದಲ್ಲಿ ಅವರು ಗ್ರಾಮಸ್ಥರಿಂದ ಹಾಲುಹಣ್ಣುಗಳನ್ನೂ ಬೆಲೆ ಕೊಡದೆ ಸ್ವೀಕರಿಸುತ್ತಿರಲಿಲ್ಲ. ಪಕ್ಕದ ಮನೆ ಖಾಲಿ ಬಿದ್ದಿದ್ದಾಗ ಆ ಮನೆಯಲ್ಲಿದ್ದ ಕರಿಬೇವಿನ ಸೊಪ್ಪನ್ನು ಕಿತ್ತಿದ್ದಕ್ಕಾಗಿ ಹೆಂಡತಿಯನ್ನು ಕೋರ್ಟಿಗೆ ಕರೆಸಿ ಜುಲ್ಮಾನೆ ಹಾಕಿದವರು ಅವರು. ಕೆಲಸಕ್ಕೆ ತಪ್ಪಿಸಿಕೊಳ್ಳುತ್ತಿದ್ದ ಸಂಬಂಧಿಯೊಬ್ಬನನ್ನು ವಜಾ ಮಾಡಿದವರು, ಕೆಲಸವಿಲ್ಲದ್ದರಿಂದ ಕಳ್ಳತನಕ್ಕಿಳಿದೆ ಎಂದ ಕಳ್ಳನೊಬ್ಬನಿಗೆ ಮನೆಯಲ್ಲೇ ಕೆಲಸ ಕೊಡುವ ಧೈರ್ಯ ಮಾಡಿದವರು, ಮೇಲಧಿಕಾರಿಗಳಿಗೆ ವಸ್ತುಗಳನ್ನು ಸರಬರಾಜು ಮಾಡಬೇಕಾಗಿ ಬಂದರೆ ಅವರಿಗೆ ಬಿಲ್ಲು ಕಳಿಸಿ ಹಣ ವಸೂಲಿ ಮಾಡಿದವರು ಅವರು. ಹೀಗೆ ಖಂಡಿತವಾದಿಗಳಾಗಿದ್ದುದರಿಂದ ಪುಟ್ಟಣ್ಣನವರಿಗೆ ಹಲವು ನ್ಯಾಯವಾದ ಅವಕಾಶಗಳೂ ತಪ್ಪಿಹೋದವು.

1930ರಲ್ಲಿ ಕಡೆಯುಸಿರೆಳೆಯುವವರೆಗೂ ಪುಟ್ಟಣ್ಣನವರು ಬರವಣಿಗೆ, ಸಾರ್ವಜನಿಕ ಸೇವೆಗಳಲ್ಲಿ ತೊಡಗಿದ್ದರು.

## 2

ಪುಟ್ಟಣ್ಣನವರದು ಕನ್ನಡ ಪುನರುಜ್ಜೀವನದ ಕಾಲ, ಸಾಹಿತ್ಯ ರಚನೆಗೆ ರಾಜಾಶ್ರಯ ಸಮೃದ್ಧವಾಗಿದ್ದ ಕಾಲ. ಆ ದಿನಗಳಲ್ಲಿ ಹಳೆಯ ಕಾವ್ಯಗಳ ಪ್ರಕಟಣೆ, ಭಾಷಾಂತರ ರೂಪಾಂತರಗಳ ಹಾಗೂ ಸ್ವತಂತ್ರ ಕೃತಿಗಳ ರಚನೆ ಒಟ್ಟೊಟ್ಟಿಗೆ ಕಾಣಿಸಿಕೊಂಡವು. ಇಂಗ್ಲಿಷ್ ಶಿಕ್ಷಣ, ಸಂಸ್ಥಾನದ ಅಭಿವೃದ್ಧಿಯಲ್ಲಿ ಆಸಕ್ತರಾಗಿದ್ದ ದಿವಾನರುಗಳ ಪ್ರೋತ್ಸಾಹಗಳು ಕನ್ನಡದ ಕೆಲಸಗಳಿಗೆ ವೇಗವರ್ಧಕ ಅಂಶಗಳಾಗಿ ಒದಗಿಬಂದುವು.

ಬ್ರಿಟಿಷರ ಆಳ್ವಿಕೆಯಿಂದ ಭಾರತೀಯರ ಆಡಳಿತ, ವಿದ್ಯಾಭ್ಯಾಸ, ಸಾಮಾಜಿಕ ಜೀವನ ಮುಂತಾದ ಪ್ರತಿಯೊಂದು ರಂಗದಲ್ಲೂ ಬದಲಾವಣೆಗಳು ಕಂಡುಬಂದುವು. ನಿರಂಕುಶ ಅರಸೊತ್ತಿಗೆಯಿಂದ ಸಾಂಕುಶವಾದ ಅರಸೊತ್ತಿಗೆಯ ಕಡೆಗೆ ರಾಜಕೀಯವಾಗಿ; ವರ್ಣಾಶ್ರಮದ ಕಟ್ಟುಪಾಡುಗಳಲ್ಲಿ ಶೈಥಿಲ್ಯ, ವಿದ್ಯಾಭ್ಯಾಸ ನೌಕರಿಗಳಲ್ಲಿ ಹೊಸ ಧೋರಣೆಗಳು, ಬಾಲ್ಯ ವಿವಾಹ ರದ್ದತಿ ಹಾಗೂ ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಸಾಮಾಜಿಕವಾಗಿ; ಪದ್ಯದಿಂದ ಗದ್ಯದೆಡೆಗೆ ಒಲವು, ಬಿಗುವಿನಿಂದ ನಾಜೂಕು ಸಾಹಿತ್ಯವಾಗಿ - ಮೊದಲಾದ ಸ್ಥಿತ್ಯಂತರಗಳು ಕಂಡುಬಂದುವು. ಹಳೆಯದಕ್ಕೆ ಇತಿಶ್ರೀ ಹೇಳುತ್ತಿದ್ದಂತೆ ಹೊಸದಕ್ಕೆ ಶ್ರೀ ಗಣೇಶ ಪೂಜೆ ನಡೆಯಿತು.

ಇಂಗ್ಲಿಷಿನ ಹಲವು ಪ್ರಭಾವಗಳು ಸಾಂಸ್ಕೃತಿಕ ಭಿನ್ನತೆಯಿಂದ ಕೂಡಿದ್ದರೂ ಅವುಗಳನ್ನು ರುಚಿಭೇದದಂತೆ ಪುಟ್ಟಣ್ಣನವರೂ ಅವರ ಸಮಕಾಲೀನರೂ ಬಳಸಿಕೊಂಡರು. ಮಾರ್ಗವನ್ನು ಬಿಡದ, ದೇಸಿಯನ್ನು ಒಳಗೊಂಡು ಹೊಸ ಹೊಗರಿನ ಶೈಲಿಯ ಮಹತ್ವವನ್ನು ಅಂದಿನವರು ಕಂಡುಕೊಂಡರು. ತಾಯ್ನುಡಿಯ ಹಾಗೂ ಆಡುಮಾತಿನ ಮಹತ್ವ ಕ್ರಮೇಣ ಹೆಚ್ಚಾಯಿತು. ಜೊತೆಗೆ ಜೀವನವನ್ನೂ ದೈವವನ್ನೂ ಒಪ್ಪಿಕೊಂಡು ತಮ್ಮ ಸಂಸ್ಕೃತಿಯಲ್ಲಿ ಬೆಳಕು ಕಾಣುವ ಈ ಗುಂಪಿಗೆ ಆಂಗ್ಲ ಸಾಹಿತ್ಯದ ಅರಿವಿನಿಂದ ಹೊಸ ಹೆಬ್ಬಾಗಿಲು ತೆರೆಯಿತು. ದೇಶವೇ ಪಾರತಂತ್ರ್ಯದಲ್ಲಿದ್ದರೂ ನೈರಾಶ್ಯವಾಗಲೀ, ನಿರಸನತೆಯಾಗಲೀ ಇವರುಗಳನ್ನು ಬಾಧಿಸಲಿಲ್ಲ. ಮೌಲ್ಯಗಳ ಬಗೆಗೆ ಗಟ್ಟಿ ನಿಲುವಿತ್ತು. ಹೊಣೆಗೆ ಹಿಂಜರಿಯದ ಮನಸ್ಸು ಇವುಗಳ ಕೊಡುಗೆಯಾಗಿತ್ತು.

ಪುಟ್ಟಣ್ಣನವರ ಸಾಹಿತ್ಯಸೃಷ್ಟಿ ಅನುವಾದ ಮತ್ತು ಪಠ್ಯಗಳಿಂದ ಪ್ರಾರಂಭವಾಯಿತು. ಅವರ ಗದ್ಯಸಾಧನೆ ಹಲವು ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡಿದೆ. ಕಥೆ, ಕಾದಂಬರಿಗಳು, ಜೀವನಚರಿತ್ರೆಗಳು, ರೂಪಾಂತರ ಭಾಷಾಂತರಗಳು, ಸಂಶೋಧನೆ, ಪಠ್ಯರಚನೆ, ಪತ್ರಿಕೋದ್ಯಮ ಹಾಗೂ ಲೇಖನಗಳು ಈ ಮಾತಿಗೆ ಸಾಕ್ಷಿಯಾಗಿವೆ.

ಗದ್ಯದ ಸಾಧ್ಯತೆಗಳನ್ನು ಪುಟ್ಟಣ್ಣನವರು ಬಹುಬೇಗ ಅರಿತುಕೊಂಡರು. ಕನ್ನಡ ಕಾದಂಬರಿಗಳಿಗೆ ವಸ್ತು ನಮ್ಮಲ್ಲೇ ವಿಪುಲವಾಗಿದೆ ಎಂಬುದನ್ನು ಅವರು ಕಂಡುಕೊಂಡಿದ್ದರು. ಮಾರ್ಗ ಕಾವ್ಯದ ತೆರಪಾಗುತ್ತಿದ್ದ ಸ್ಥಳಕ್ಕೆ ಇಂದಿಗೂ ಜನಪ್ರಿಯವಾದ ಕಾದಂಬರಿಯ ಪ್ರಕಾರವನ್ನು ಯಶಸ್ವಿಯಾಗಿ ತಂದವರಲ್ಲಿ ಪುಟ್ಟಣ್ಣನವರು ಮುಂಚೂಣಿಯಲ್ಲಿದ್ದಾರೆ. ಕನ್ನಡಿಗರಿಗೆ ಪರಿಚಯವಿಲ್ಲದ ಬೇರೆ ಸಮಾಜಗಳ ಚಿತ್ರಣಗಳಿಂದ ಕೂಡಿದ ಅನುವಾದಿತ ಕಾದಂಬರಿಗಳ ನಡುವೆ ಕನ್ನಡ ಜನರ ಆಚಾರ ವಿಚಾರ, ಸ್ವಭಾವ, ಮರ್ಯಾದೆ, ಆಸೆ ಆಕಾಂಕ್ಷೆಗಳು, ಪೂರ್ವಾಚಾರಶ್ರದ್ಧೆ, ನೇರ ಕೊಂಕುಗಳನ್ನು ಕನ್ನಡದ ನುಡಿಗಟ್ಟಿನಿಂದ ಶ್ರೀಮಂತವಾದ ಶೈಲಿಯಲ್ಲಿ ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದರು. 'ಮಾಡಿದ್ದುಣ್ಣೋ ಮಹಾರಾಯ' (1915), 'ಮುಸುಗ ತೆಗೆಯೇ ಮಾಯಾಂಗನೆ' (1928) ಹಾಗೂ 'ಅವರಿಲ್ಲದೂಟ' (1959) ಕಾದಂಬರಿಗಳು ಪುಟ್ಟಣ್ಣನವರ ಸಾಹಿತ್ಯಕ ಸಿದ್ಧಿಯ ಅತ್ಯುತ್ತಮ ಉದಾಹರಣೆಗಳು.

ಈ ಕಾದಂಬರಿಗಳ ಬನಿ ಸೂಸುವ ಆಡುನುಡಿ ಮೊದಲ ಸುತ್ತಿನಲ್ಲೇ ಆಕರ್ಷಕವಾಗಿ ಕಾಣುತ್ತದೆ. ಜೊತೆಗೆ ಘಟನೆಗಳ ಒಳಸಂಬಂಧಗಳಿಂದ ಹೊರಡುವ ಧ್ವನಿಗೂ ಹೊರಡಿಸುತ್ತಿರುವ ವ್ಯಕ್ತಿಗೂ ಬಳಸಿರುವ ಭಾಷೆಗೂ ಬಿರುಕುಗಳಿಲ್ಲದೆ ಇರುವುದರಿಂದ ಸಾಹಿತ್ಯಕ ಮಹತ್ವದ ಭದ್ರ ನೆಲೆಗಟ್ಟು ಇವುಗಳಿಗೆ ದಕ್ಕಿದೆ.

ಆ ಕಾಲದ ಸಾಮಾಜಿಕ ಹಾಗೂ ಜನಪದ ವಿಚಾರಗಳು ಬೆರಗುಗೊಳಿಸುವಂತೆ ಇಲ್ಲಿ ಚಿತ್ರಿತವಾಗಿದೆ. ಕಾಲದ ಪರಿಸರವನ್ನು ಪುಟ್ಟಣ್ಣನವರು ಅದರ ಎಲ್ಲ ಗೊಂದಲಗಳೊಡನೆಯೇ ಸೆರೆಹಿಡಿದಿದ್ದಾರೆ. ಅಂದಿನ ಸಾಂಸ್ಕೃತಿಕ ನೆಲೆಬೆಲೆಗಳೇನು ಎಂಬುದನ್ನು ಪುಟ್ಟಣ್ಣನವರ ಕಾದಂಬರಿಗಳಿಂದ ಸುಲಭವಾಗಿ ಕಂಡುಹಿಡಿಯಬಹುದು. ಜೊತೆಗೆ ಅವರ

ಕಾದಂಬರಿಗಳಷ್ಟು ಸಮರ್ಥವಾಗಿ ಕನ್ನಡದ ಬೇರೆ ಯಾವುದೇ ಕಾದಂಬರಿ ಮೈಸೂರಿನ ರಾಜಾಸ್ಥಾನವನ್ನು ಚಿತ್ರಿಸಿಲ್ಲ. ನಿಜವಾದ ರಾಜಭಕ್ತರಿಂದ ಹಿಡಿದು ಸಮಯಸಾಧಕರವರೆಗೆ ಹಲವು ಜನರ ಪರಿಚಯ ಇಲ್ಲಿದೆ. ಕಲೆ ಸಾಹಿತ್ಯಗಳ ಪೋಷಣೆಗಾಗಿ, ದಾನಧರ್ಮಗಳಿಗಾಗಿ ಮುಮ್ಮಡಿಯವರ ಬೆಂಬಲವನ್ನು ತಿಳಿಸುವಾಗ ಅವರ ಅತ್ಯುಜ್ವಲ ವ್ಯಕ್ತಿತ್ವವನ್ನು ರೂಪಿಸಿದಂತೆಯೇ ದೌಲತ್ತಿಗೆ ಎರವಾಗಿ ರಾಜಕೀಯದಲ್ಲಿ ಸೋತ, ಹಲವು ಕ್ಷೋಭೆಗಳ ನಡುವೆ ತೊಳಲಾಡುವ ರಾಜರ ಚಿತ್ರಣವನ್ನೂ ಅವರು ಕೊಟ್ಟಿದ್ದಾರೆ. ಮುಮ್ಮಡಿಯವರಲ್ಲಿ ಪುಟ್ಟಣ್ಣನವರಿಗೆ ಅಪರಿಮಿತ ಗೌರವವಿತ್ತು. 'ರಾಜಾ ಪ್ರತ್ಯಕ್ಷ ದೇವತಾ" ಎಂಬುದು ಪುಟ್ಟಣ್ಣನವರು ಒಪ್ಪಿದ ಧೋರಣೆ.

3

'ಮಾಡಿದ್ದುಣ್ಣೋ ಮಹಾರಾಯ'ದ ಕಥೆ ನಡೆಯುವುದು ಚಾಮರಾಜನಗರದ ಬಳಿಯ ಸಂಜವಾಡಿಯಲ್ಲಿ. ಕಥೆಯ ಪ್ರಾದೇಶಿಕವಾದ ಹಿನ್ನೆಲೆ ಸ್ಪಷ್ಟವಾಗಿ ತಿಳಿಯುತ್ತದೆ. "ಲಂಚಕೋರರು ಅವರಿಂದುಂಟಾಗುವ ಪ್ರಮಾದಗಳು ; ಗ್ರಾಮಗಳಲ್ಲಿ ಕಕ್ಷಿ ಅದರ ದೋಷಗಳು ; ಮೈಸೂರು ಮುಮ್ಮಡಿ ಶ್ರೀ ಕೃಷ್ಣರಾಜ ಪ್ರಭುವಿನ ಆಸ್ಥಾನ, ಅವರ ಮಹತ್ತರವಾದ ಔದಾರ್ಯ; ಆಸ್ಥಾನದ ನಕಲಿ ; ಹೇಳಿದ್ದನ್ನೆಲ್ಲಾ ನಂಬುವ ಗ್ರಾಮವಾಸಿಗಳು; ಪತಿವ್ರತಾ ಚರಿತ್ರೆ ; ಸಹಗಮನ ; ಗ್ರಾಮಗಳ ಕೊಳಚೆ ; ಅತ್ತೆಸೊಸೆಯರ ಪರಸ್ಪರ ಕಿರುಕುಳ ; ಮಠದ ಉಪಾಧ್ಯಾಯ, ಅವನ ಕ್ರೌರ್ಯ, ಬಾಲಕರಿಗೆ ಅವ ಕೊಡುವ ಶಿಕ್ಷೆ, ಅವನ ಮಹತ್ತರವಾದ ಕೃತಘ್ನತೆ, ವಿದ್ಯಾರ್ಥಿಗಳಿಗೆ ಮಾಡುವ ಕ್ರೂರವಾದ ಶಿಕ್ಷೆ, ಅದರ ಧರ್ಮ ಸೂಕ್ಷ್ಮ ; ಕಾಪಟ್ಯ, ಅದರ ನೀಚಕೃತ್ಯಗಳು ; ನಿಜವಾದ ಸೌಂದರ್ಯವನ್ನು ಸೌಂದರ್ಯವಲ್ಲವೆಂದು ಮಾಡುವ ವರ್ಣನೆ ; ಪಾತಿವ್ರತ್ಯವನ್ನು ಭಂಗ ಮಾಡಲು ನಡೆಸಿದ ಅತಿ ಹೇಯವಾದ ಪ್ರಯತ್ನ ; ಶಾಬರ ಪ್ರಯೋಗದ ನೀಚಕೃತ್ಯ: ಒಬ್ಬ ಐಲು ಮನುಷ್ಯನ ಹರಟೆಯಿಂದ ಹುಟ್ಟುವ ಹಾಸ್ಯ ; ಒಬ್ಬ ಹುಟ್ಟು ಕಳ್ಳ ಹೇಳಿಕೊಳ್ಳುವ ಸ್ವವಿಚಾರದ ಕಥೆ ; ಸ್ಮಶಾನದಲ್ಲಿ ನಡೆದ ಅತಿಭಯಂಕರವಾದ ವಿಷಯ; ಒಬ್ಬ ಮಹಾ ಮಂತ್ರವಾದಿ ಮಾಡಿದ ಅದ್ಭುತವಾದ ಕಾರ್ಯ ಮತ್ತು ಅವರ ಪಾರಮಾರ್ಥಿಕತೆ ; ಆದ್ಯಂತವಾಗಿರುವ ನೀತಿಯ ಸಾರಾಂಶ – ಇವೇ ಮೊದಲಾದ ಸಂಗತಿಗಳನ್ನೆಲ್ಲಾ ಆಯಾ ಸ್ಥಳಗಳಲ್ಲಿ ವಿವರಿಸಿದ್ದೇನೆ" ಎಂದು ಪುಟ್ಟಣ್ಣನವರು ಪೀಠಿಕೆಯಲ್ಲಿ ಹೇಳಿದ್ದಾರೆ. ಕಾದಂಬರಿಯ ಘಟನೆಗಳ ಆನುಪೂರ್ವಿ ಹೆಚ್ಚು ಕಡಿಮೆ ಇದೇ ಆಗಿದೆ. ಸಂಗತಿಗಳು ಕಾಲಾನುಸಾರಿ ಯಾಗಿಯೂ ಇವೆ.

ರಾಮಾಯಣವನ್ನೇ ಮನಸ್ಸಿನಲ್ಲಿಟ್ಟುಕೊಂಡು ತಮ್ಮ ಮೊದಲ ಕಾದಂಬರಿ 'ಮಾಡಿದ್ದುಣ್ಣೋ ಮಹಾರಾಯ' ವನ್ನು ರಚಿಸಿರುವುದು ಸ್ತ್ರೀಯ ಪಾತಿವ್ರತ್ಯವನ್ನು ಪುಟ್ಟಣ್ಣನವರು ಪ್ರಾಮಾಣಿಕತೆಯ ಒಂದು ರೂಪವೆಂದು ಪರಿಗಣಿಸಿರುವುದರಿಂದ. ತಮ್ಮ ಮೊದಲ ದಾಂಪತ್ಯದ ಬಿರುಕಿನ ಕಾರಣದಿಂದ ನೊಂದ ಪುಟ್ಟಣ್ಣನವರು, ಅದಕ್ಕೆ ವಿರುದ್ಧ ಮುಕ್ತಾಯವನ್ನು ಈ ಕೃತಿಯಲ್ಲಿ ಕಾಣಿಸಿದ್ದಾರೆ. ಒಂದು ಸಂಸ್ಕೃತಿಯ ಧೋರಣೆಯನ್ನು ವೈಯಕ್ತಿಕ ನೆಲೆಗಟ್ಟಿನಲ್ಲಿ ಅನುಭವಿಸಿ, ಪಕ್ವತೆಯನ್ನು ಹೊಂದಿ ಕಲಾತ್ಮಕವಾಗಿ ಅದನ್ನು ಸಾಹಿತ್ಯಕ ಕೃತಿಯಾಗಿಸುವುದರ ಒಂದು ಶ್ರೇಷ್ಠ ಉದಾಹರಣೆ - 'ಮಾಡಿದ್ದುಣ್ಣೋ ಮಹಾರಾಯ'. ಮಿಕ್ಕ ಕಾದಂಬರಿಗಳಲ್ಲೂ ಅವರ ಜೀವನದ ವೈಯಕ್ತಿಕ ಸಂಗತಿಗಳು ಇಣಕುತ್ತವೆ.

'ಮುಸುಗ ತೆಗೆಯೇ ಮಾಯಾಂಗನೆ'ಯ ಹೆಸರು ಈ ಕಾದಂಬರಿ ಪತ್ತೇದಾರಿ ಕಥೆಯನ್ನೋ ರಂಜನೀಯವಾದ ಸುರಸ ಕಥೆಯನ್ನೋ ಹೇಳುತ್ತದೆ ಎನಿಸುವಂತೆ ಮಾಡುತ್ತದೆ. ಇಲ್ಲಿ ಪತ್ತೇದಾರಿ ಎಳೆಯಿರುವುದೇನೋ ನಿಜವೇ. ಜೊತೆಗೆ ಕಾದಂಬರಿಯ ತೆಳುವಾದ ಕಥೆಯ ಹಂದರದಲ್ಲಿ ರಾಜಕೀಯ ಎಳೆಗಳಿವೆ. ಬ್ರಿಟಿಷರ ಕೈಯಿಂದ ಮೈಸೂರು ಅರಸೊತ್ತಿಗೆಯನ್ನು ಬಿಡಿಸಿ ಪುನಃ ಅದನ್ನು ಮುಮ್ಮಡಿಯವರ ಕೈಸೇರುವಂತೆ ಮಾಡಲು ಬ್ರಿಟಿಷ್ ಸರದಾರನನ್ನು ತಮ್ಮ ಕಡೆಗೆ ಒಲಿಸಿಕೊಳ್ಳುವ ಒಂದು ಹವಣು ಕಾಣುತ್ತದೆ. ಕಥೆ ನಡೆಯುವುದು ಮೈಸೂರಿನಲ್ಲಿ. ಮುಮ್ಮಡಿಯವರ ರಾಜಾಸ್ಥಾನವೇ ಕಥೆಯ ಮೂಲ ವೇದಿಕೆ. ಅಂದಿನ ಮೈಸೂರಿನ ರಾಜಕೀಯ ಸ್ಥಿತಿಯಲ್ಲಿನ ಒಳಜಗಳಗಳು, ಅಸೂಯೆ, ಪಿತೂರಿ ಮೊದಲಾದ ಎಲ್ಲ ಗೊಂದಲಗಳೂ ಸ್ಪಷ್ಟವಾಗಿ ಚಿತ್ರಿತವಾಗಿವೆ. ಕಥೆಯ ಮುಖ್ಯ ಪಾತ್ರವಾದ ಅಪ್ರಮೇಯನ ಪ್ರಾಮಾಣಿಕತೆಯೊಂದೇ ಅವನ ಬಲ. ಪುರುಷ ಪ್ರಯತ್ನದ ಪ್ರತೀಕವಾಗಿ ಅಪ್ರಮೇಯ ಇಲ್ಲಿ ಕಾಣಿಸಿಕೊಳ್ಳುತ್ತಾನೆ.

'ಅವರಿಲ್ಲದೂಟ'ದ ಕಥೆಯೂ ಮುಮ್ಮಡಿಯವರ ಕಾಲಮಾನದ್ದೇ. ಗರತಿಯೊಬ್ಬಳ ಮೇಲಿನ ಸಂಚು ಅಯಶಸ್ವಿಯಾಗುವುದಲ್ಲದೆ ನಿರಪರಾಧಿಗಳನ್ನು ಮೋಸಕ್ಕೊಳಗಾಗಿಸುವ ಯತ್ನವೂ ವಿಫಲವಾಗುವುದನ್ನು ಇಲ್ಲಿ ಕಾಣಬಹುದು. ಈ ಕೃತಿಯಲ್ಲಿ ಮೊದಲ ಎರಡು ಕಾದಂಬರಿಗಳಿಗಿಂತ ಸಂಭಾಷಣೆಗೆ ಹೆಚ್ಚಿನ ಮಹತ್ವ ದಕ್ಕಿದೆ. ಕಥೆಯ ಚುರುಕುಗತಿಗೆ ಇದರಿಂದ ಅನುಕೂಲವಾಗಿದೆ.

ನ್ಯಾಯಕ್ಕೆ ಗೆಲವು, ಅನ್ಯಾಯಕ್ಕೆ ಸೋಲು, ಪುರುಷ ಪ್ರಯತ್ನ ದೈವಕ್ಕೆ ಬಾಗುವುದು ಅನಿವಾರ್ಯ. ಈ ಎರಡು ಆಶಯಗಳು ಪುಟ್ಟಣ್ಣನವರ ಎಲ್ಲ ಕೃತಿಗಳಲ್ಲೂ ಕಾಣುವಂತಹುವೇ. ಪ್ರಮುಖವಾಗಿ ಅವರ ಕಾದಂಬರಿಗಳನ್ನು ಈ ಆಶಯಗಳೇ ನಿಯಂತ್ರಿಸುತ್ತವೆ.

ಪುರಾಣ, ಇತಿಹಾಸ, ಕಾವ್ಯ, ಶಾಸ್ತ್ರ ಗ್ರಂಥಗಳು ಮತ್ತು ಇತರ ಹಲವು ಮೂಲಗಳಿಂದ ಆರಿಸಿದ ಸುಮಾರು ನೂರೈವತ್ತು ಕಥೆಗಳ ಸಂಕಲನವೇ 'ನೀತಿಚಿಂತಾಮಣಿ' (1884) ಎಂಬ ಅನ್ವರ್ಥನಾಮಕ ಕೃತಿ. ಕಥೆ ಎಂದರೆ ಪ್ರತಿ ಮಗುವಿನ ಕಣ್ಣೂ ಅರಳುತ್ತದೆ, ಕುತೂಹಲ ಕೊನರುತ್ತದೆ. ಈ ಕಥನ ಕುತೂಹಲವನ್ನೇ ಪುಟ್ಟಣ್ಣನವರು ಬಾಲ ಶಿಕ್ಷಣದಲ್ಲಿ ಒಂದು ಖಾತರಿಯಾದ ಅಸ್ತ್ರವನ್ನಾಗಿಸಿಕೊಂಡರು. ರಂಜನೆ, ಚಮತ್ಕಾರಗಳ ಅಂಶಗಳನ್ನು ಪುಟ್ಟಣ್ಣನವರು ಹರದಿಂದೆಂಬಂತೆ ತೆಗೆದು ಹಾಕಿರುವುದರಿಂದ ಕಥೆಗಳ ಉದ್ದೇಶ ನೀತಿಬೋಧೆಯತ್ತ ಮಾತ್ರ ಎಂಬುದು ಸುಸ್ಪಷ್ಟ. ಮಕ್ಕಳ ಸಾಹಿತ್ಯ ನಿರ್ಮಾಪಕರೆಂಬ ಪಟ್ಟ ಈ ಕೃತಿಯಿಂದಲೇ ಪುಟ್ಟಣ್ಣನವರಿಗೆ ಲಭಿಸಿತು.

'ಪುಟ್ಟಣ್ಣ ಹೇಳಿದ ಕಥೆಗಳು' (ಪ್ರ1981) ಸಂಕಲನದಲ್ಲಿ ರೂಢಿಯ ಕಥೆಗಳಿಗೆ ಪ್ರಾಧಾನ್ಯ ದಕ್ಕಿದೆ. ಹಲವು ನಿಯತಕಾಲಿಕಗಳಲ್ಲಿ ಪ್ರಕಟಗೊಂಡಿದ್ದ ಕಥೆಗಳು, ಹಸ್ತಪ್ರತಿಗಳಲ್ಲಿ ಉಳಿದಿದ್ದ ಕೆಲವು ಕಥೆಗಳು ಇಲ್ಲಿ ಒಟ್ಟುಗೂಡಿವೆ. ಹಳೆಯ ದಾಖಲೆಗಳು ಕಳೆಯಬಾರದೆಂಬುದು ಈ ಪ್ರಕಟಣೆಯ ಪ್ರಮುಖ ಉದ್ದೇಶ.

'ಪೇಟೆ ಮಾತೇನಜ್ಜಿ' (1927) ಒಂದು ರಮ್ಯ ಕಥೆ. ಜನಪದ ಕಥೆಗಳಲ್ಲಿ ಕಾಣುವಂತಹದು. 'ಕಲಾವತೀ ಪರಿಣಯ'ದಂತಹ ಮಾರ್ಗ ಕಾವ್ಯದ ಕಥೆಗೂ ಈ ಕಥೆಗೂ ಕೆಲವು ಹೋಲಿಕೆಗಳನ್ನು ಕಾಣಬಹುದು. ಷೇಕ್ಸ್‌ಪಿಯರನ 'All's

Well That Ends Well' ನಾಟಕದಲ್ಲಿ ಕೂಡ ಇವೇ ಹೋಲಿಕೆಗಳನ್ನು ಕಾಣಬಹುದು. ಸ್ತ್ರೀಯ ಪ್ರಾಮಾಣಿಕತೆ ಪುಟ್ಟಣ್ಣನವರಿಗೆ ಬಲು ಪ್ರಿಯವಾದ ಆಶಯ. ತನ್ನ ಪಾತಿವ್ರತ್ಯದ ಬಲದಿಂದ ಎಂಥ ಕಷ್ಟವನ್ನೂ ಎದುರಿಸಬಲ್ಲ ಪಾತ್ರ ಇಲ್ಲಿನ ಚೆಲುವಾಜಿಯದು ಎಂಬುದೇ ಪುಟ್ಟಣ್ಣನವರಿಗೆ ಈ ಕಥಾನಕದಲ್ಲಿ ಮುಖ್ಯ ಆಕರ್ಷಣೆ.

4

ಚೀನಾ ದೇಶದ ತತ್ತ್ವಜ್ಞಾನಿ ಕನ್‌ಫ್ಯೂಷಿಯಸ್ಸನನ್ನು ಕುರಿತ 'ಕಾಂಫೂಷನ ಚರಿತ್ರೆ' (1892), ಮುಮ್ಮಡಿಯವರ ಆಸ್ಥಾನದಲ್ಲಿ ವಿದ್ವಾಂಸರಾಗಿದ್ದ 'ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ' (1910), ಹೈದರಾಬಾದಿನ ಮಂತ್ರಿ 'ಸರ್ ಸಾಲಾರ್ ಜಂಗನ ಚರಿತ್ರೆ' (1917), ಬಹಮನಿ ಸಂಸ್ಥಾನದ ಮಂತ್ರಿ 'ಮಹಮದ್ ಗವಾನನ ಚರಿತ್ರೆ' (1922) ಮತ್ತು ಸ್ವಸಾಮರ್ಥ್ಯದಿಂದ ರಾಜ್ಯ ಕಟ್ಟಿ ಆಳಿದ ಶಿವಾಜಿಯ ವೃತ್ತಾಂತ 'ಛತ್ರಪತಿ ಶಿವಾಜಿ ಮಹಾರಾಜ' (ಪ್ರ1981) - ಇವು ಪುಟ್ಟಣ್ಣನವರು ರಚಿಸಿದ ಐದು ಜೀವನಚರಿತ್ರೆಗಳು.

ಪುಟ್ಟಣ್ಣನವರ ಆಸಕ್ತಿ ಮುಖ್ಯವಾಗಿ ಎರಡು ಕ್ಷೇತ್ರಗಳಲ್ಲಿ ದುಡಿದವರಿಗೆ ಮಾತ್ರ ಮೀಸಲು. ಪಾರಮಾರ್ಥಿಕ, ಧಾರ್ಮಿಕ ರಂಗಗಳಲ್ಲಿ ಸಾಧನೆ ಮಾಡಿದವರು ಮೊದಲ ಗುಂಪು. ಇಂಥವರು ಪುಟ್ಟಣ್ಣನವರ ಅಸೀಮ ಕೃತಜ್ಞತೆಗೆ ಪಾತ್ರರು. ಅಧಿಕಾರ ಸ್ಥಾನದಲ್ಲಿ ಪ್ರಾಮಾಣಿಕತೆಯಿಂದ ಕಾರ್ಯನಿರ್ವಹಣೆ ಮಾಡಿದವರು ಇನ್ನೊಂದು ಗುಂಪು. ಈ ಎರಡು ಗುಂಪಿನವರೂ ಯಾವುದೇ ವೈಯಕ್ತಿಕ ಲಾಭಗಳಿಗೆ ಮನ ಸೋತವರಲ್ಲ. ಧರ್ಮ ಮತ್ತು ಸರಕಾರ ಈ ಎರಡು ವಲಯಗಳಲ್ಲೂ ಸಾವಯವ ಸಂಬಂಧವನ್ನು ಪುಟ್ಟಣ್ಣನವರು ಗುರುತಿಸುತ್ತಾರೆ. ಕಾಂಫೂಷನಂಥ ತತ್ತ್ವಜ್ಞಾನಿ ಕೋಶಾಧಿಕಾರಿಯಾಗಿ ದಂಡನಾಧಿಕಾರಿಯಾಗಿ ದುಡಿದವನು. ರಾಜಾಶ್ರಯ ಸಿಕ್ಕಿದರೆ ಅನೇಕ ಮಹಾಕಾರ್ಯಗಳಿಗೆ ಇಂಬಾದೀತು ಎಂದು ಆಶಿಸಿದವನು. ರಾಮಶಾಸ್ತ್ರಿಗಳು ರಾಜಾಸ್ಥಾನದ ಕೃಪೆಯನ್ನು ಪಡೆದೇ ತಮ್ಮ ಧಾರ್ಮಿಕ ಕರ್ತವ್ಯಗಳನ್ನು ನೆರವೇರಿಸಿದರು. ಸಾಲಾರ್‌ಜಂಗ್ ಮತ್ತು ಮಹಮದ್ ಗವಾನ್ ಕೂಡ ಅತ್ಯುನ್ನತ ಪದವಿಯಲ್ಲಿದ್ದಾಗಲೂ ಧರ್ಮವನ್ನು ಒಪ್ಪಿ ನಡೆದವರು. ಶಿವಾಜಿ ಬಾಲ್ಯದಿಂದ ಗಾಢವಾದ ಧಾರ್ಮಿಕ ಪರಿಸರದಲ್ಲಿ ಬೆಳೆದು ಸ್ವತಃ ರಾಜ್ಯಕಟ್ಟಿ ಆಳಿ ಆರ್ಯಧರ್ಮವನ್ನು ರಕ್ಷಿಸಿದವನು. ಪುಟ್ಟಣ್ಣನವರ ದೃಷ್ಟಿಯಲ್ಲಿ ಅಧಿಕಾರ ಸ್ಥಾನದಲ್ಲಿ ಧರ್ಮದ ಚೈತನ್ಯ ಅತ್ಯಂತ ಸುಸಂಬದ್ಧವಾದುದು. ರಾಜಕೀಯ ವ್ಯವಸ್ಥೆ ಸರಿಯಾಗಿಲ್ಲದಿದ್ದರೆ, ಆಗುವ ಅನರ್ಥಗಳನ್ನು ತಿಳಿದಿದ್ದುದರಿಂದ ಅಧಿಕಾರದ ಮಹತ್ತ್ವವನ್ನೂ ನೀತಿಪರವಾದ ಬಾಳು ಮಾತ್ರ ಗೌರವಾರ್ಹವಾದುದು ಎಂಬ ನಂಬಿಕೆಯಿಂದ ಧರ್ಮದ ಮಹತ್ತ್ವವನ್ನೂ ತಮ್ಮ ಕೃತಿಗಳಲ್ಲಿ ಪ್ರತಿಪಾದಿಸಿದರು. ಮೊದಲ ನಾಲ್ವರು ಸ್ವತಃ ವಿದ್ವಾಂಸರು. ಶಿವಾಜಿ ಪಂಡಿತ ಪೋಷಣೆಯಿಂದ ಈ ಕೊರತೆಯನ್ನು ತುಂಬಿಕೊಂಡವನು. ಪುಟ್ಟಣ್ಣನವರ ಜೀವನಚರಿತ್ರೆಗಳಲ್ಲಿ ಈ ಹೋಲಿಕೆಗಳು ಒಂದು ಅಂತಃಸೂತ್ರವನ್ನು ಕಲ್ಪಿಸಿವೆ.

ಪುಟ್ಟಣ್ಣನವರು ಷೇಕ್ಸ್‌ಪಿಯರನ ಮೂರು ನಾಟಕಗಳನ್ನು ಕನ್ನಡಕ್ಕೆ ರೂಪಾಂತರಿಸಿದ್ದಾರೆ. 'ಸಿಂಬಲೈನ್' ನಾಟಕದ ರೂಪಾಂತರ 'ಜಯಸಿಂಹರಾಜ ಚರಿತ್ರೆ' (1881), ಇದು ಕಥನರೂಪದಲ್ಲಿದೆ. 'ಕಿಂಗ್‌ಲಿಯರ್' ನಾಟಕದ ರೂಪಾಂತರ 'ಹೇಮಚಂದ್ರರಾಜ ವಿಲಾಸ' (1899), ಇದು ಗದ್ಯಪದ್ಯ ಮಿಶ್ರ ನಾಟಕ. 'ಹ್ಯಾಮ್ಲೆಟ್' ನಾಟಕದ ರೂಪಾಂತರ 'ಹೇಮಲತ' (ರಚನೆ 1920, ಅಪ್ರಕಟಿತ). ಇದು ಕೂಡ ಗದ್ಯಪದ್ಯಮಿಶ್ರ ನಾಟಕ. ಮೂರು ಕೃತಿಗಳೂ ರೂಪಾಂತರಗಳೇ. ಈ ಮೂರು ಕೃತಿಗಳಲ್ಲೂ ಕನ್ನಡಕ್ಕೆ ಹೊಂದುವಂತೆ ಔಚಿತ್ಯವರಿತು ಹಲವು ಬದಲಾವಣೆಗಳನ್ನು ಪುಟ್ಟಣ್ಣನವರು ಮಾಡಿಕೊಂಡಿದ್ದಾರೆ. ಷೇಕ್ಸ್‌ಪಿಯರನ ನಾಟಕಗಳಲ್ಲಿ ಪೂರ್ಣ ಗದ್ಯವನ್ನು ಉಪಯೋಗಿಸಿದವರಲ್ಲಿ ಪುಟ್ಟಣ್ಣನವರದು ಮೊದಲ ಸಾಲಿನ ಹೆಸರು. ಆ ಕಾಲಕ್ಕೆ ಇದೊಂದು ಅಪೂರ್ವ ಸಾಧನೆ. ಈ ರೂಪಾಂತರಗಳಲ್ಲಿ ಮೂಲದ ಸತ್ತ್ವವನ್ನು ಕನ್ನಡಕ್ಕೆ ತರುವ ಧ್ಯೇಯವಿದೆ. ಸಿದ್ಧಿ ಒಂದು ಮಿತಿಯಲ್ಲಿ ಮಾತ್ರ ದೊರಕಿದೆ. ಇಲ್ಲಿನ ಯಾವೊಂದು ರೂಪಾಂತರದಲ್ಲೂ ಮೂಲದ ಕಾವ್ಯಗುಣವಾಗಲೀ ವೈದುಷ್ಯವಾಗಲೀ ಇಲ್ಲ. ಇಲ್ಲಿನ ವಿವರಣಾತ್ಮಕ ಗದ್ಯದಲ್ಲಿ ಅಚ್ಚುಕಟ್ಟು ಕೂಡ ಕಡಿಮೆ, ಆದರೆ ಸಂವಹನಕ್ಕೆ ಅಡ್ಡಿಯಿಲ್ಲ. ಕಾವ್ಯಕ್ಕೆ ಸಂಬಂಧಿಸಿದಂತೆ ಪುಟ್ಟಣ್ಣನವರು ತಮ್ಮ ಮಿತಿಯನ್ನರಿತು ಗದ್ಯದಲ್ಲಿ ಸಾಧನೆಯ ಅವಕಾಶಗಳನ್ನು ತಿಳಿದುಕೊಂಡಿದ್ದು, ಷೇಕ್ಸ್‌ಪಿಯರನ ನಾಟಕಗಳನ್ನು ಪೂರ್ಣ ಗದ್ಯದಲ್ಲಿ ಬರೆಯುವುದು ಒಂದು ಸಾಹಿತ್ಯಕ ಧೋರಣೆ ಆಗದಿದ್ದಾಗಲೂ ಹಾಗೆ ಮಾಡಿದ್ದು ಮತ್ತು ಸಾಧ್ಯವಿದ್ದೆಡೆಗಳಲ್ಲೆಲ್ಲ ಆಡುಮಾತನ್ನು ಬಳಸಿದ್ದು ಇಲ್ಲಿನ ಹೆಚ್ಚಳ.

ಥಾಮಸ್ ಡೇ ಬರೆದ 'ದಿ ಹಿಸ್ಟರಿ ಆಫ್ ಸ್ಯಾಂಡ್‌ಫರ್ಡ್ ಅಂಡ್ ಮರ್ಟನ್' ಕೃತಿಯ ರೂಪಾಂತರವೇ 'ಸುಮತಿ ಮದನಕುಮಾರರ ಚರಿತ್ರೆ' (1897). ಮಕ್ಕಳಿಗೆ ಕಥೆಗಳ ಮೂಲಕ ಒಳ್ಳೆಯ ನಡತೆಯನ್ನು ಮತ್ತು ವಿದ್ಯಾಭ್ಯಾಸದ ವಿಷಯಗಳನ್ನು ಬೋಧಿಸುವುದೇ ಇಲ್ಲಿಯ ಸ್ವಾರಸ್ಯ. ಇಬ್ಬರು ಮುಗ್ಧ ಬಾಲಕರು ಗುರುಕುಲವಾಸದಲ್ಲಿ ಸ್ವಲ್ಪ ಕಾಲ ಬೆಳೆಯುವ ಚಿತ್ರಣ ಹಾಗೂ ಉಪಾಧ್ಯಾಯರು ಕೊಡುವ ಉತ್ತಮ ಶಿಕ್ಷಣ ಕ್ರಮ ಈ ಕೃತಿಯ ವಸ್ತು. ಮೂಲದ ಸಾರ ರೂಪಾಂತರದಲ್ಲಿ ಸೊಗಸಾಗಿ ಛಟ್ಟಿಯಿಳಿದಿದೆ. ಪುಟ್ಟಣ್ಣನವರ ರೂಪಾಂತರಗಳಲ್ಲಿ ಈ ಕೃತಿ ಅತ್ಯಂತ ಯಶಸ್ವಿಯಾದುದು.

'ಹಾತಿಂ ತಾಯ್' (ರಚನೆ 1920, ಅಪ್ರಕಟಿತ) ಪರ್ಷಿಯನ್ ಮೂಲದ್ದು. ಈ ಕೃತಿಯ ಇಂಗ್ಲಿಷ್ ಭಾಷಾಂತರದಿಂದ ಕನ್ನಡದ ತಮ್ಮ ಭಾಷಾಂತರವನ್ನು ಪುಟ್ಟಣ್ಣನವರು ಸಿದ್ಧಪಡಿಸಿದ್ದಾರೆ. ಹಾತಿಮ ಅಪರಿಗ್ರಹದ ಸಾಕಾರಮೂರ್ತಿ ಎಂಬುದೇ ಪುಟ್ಟಣ್ಣನವರಿಗೆ ಆಕರ್ಷಣೆಯನ್ನು ಉಂಟು ಮಾಡಿದೆ. ಇಂಗ್ಲಿಷ್ ಮೂಲದ ನಾಲ್ಕೂ ಕೃತಿಗಳು ರೂಪಾಂತರಗಳು. ಇಂಗ್ಲಿಷೇತರ ಮೂಲದ (ಇಂಗ್ಲಿಷ್ ಭಾಷಾಂತರದ ಮೂಲಕ ಬಂದ) 'ಹಾತಿಂತಾಯ್' ಉಪಲಬ್ಧ ದಾಖಲೆಗಳ ಪ್ರಕಾರ ಪುಟ್ಟಣ್ಣನವರ ಏಕೈಕ ಭಾಷಾಂತರ ಕೃತಿ.

5

ಪುಟ್ಟಣ್ಣನವರು ಪಾಳೆಯಗಾರರನ್ನು ಕುರಿತು ಮೊದಲು ಬರೆದ ಕೃತಿ 'ಪಾಳಯಗಾರರು' (1923), ಮುಂದೆ 'ಚಿತ್ರದುರ್ಗದ ಪಾಳಯಗಾರರು' (1924), 'ಗುಮ್ಮನಾಯಕನ ಪಾಳಯದ ಪಾಳಯಗಾರರು' (1926), 'ಹಾಗಲವಾಡಿ ಪಾಳಯಗಾರರು' (1931) ಮತ್ತು 'ಇಕ್ಕೇರಿ ಸಂಸ್ಥಾನದ ಚರಿತ್ರೆ' (1931) ಗಳು ಪ್ರಕಟಗೊಂಡವು. ತಮ್ಮ ಅಮಲ್ದಾರ ವೃತ್ತಿಯಲ್ಲಿ ಹಲವು ಊರುಗಳನ್ನು ಸುತ್ತಬೇಕಾದಾಗ ಪುಟ್ಟಣ್ಣನವರು ಆಯಾ ಪಾಳಯಗಾರರ ವಂಶಸ್ಥರ ಬಳಿಯಲ್ಲಿದ್ದ ದಾಖಲೆಗಳನ್ನು ಸಂಗ್ರಹಿಸಿದರು. ಶಾಸನ ಸಂಪುಟಗಳ ಅಧ್ಯಯನದ ಪೂರ್ಣ ಪ್ರಯೋಜನವನ್ನು ಪಡೆದುಕೊಂಡರು. ಈ ಪಾಳಯಗಾರರ ವಿಚಾರವಾಗಿ ಬೇರೆ ಎಲ್ಲೂ ಇಷ್ಟು ವ್ಯವಸ್ಥಿತವಾದ

ದಾಖಲೆಗಳು ಸಿಗುವುದಿಲ್ಲ. ತಮ್ಮ ಶ್ರಮ ಹಾಗೂ ಸಂಶೋಧಕ ಪ್ರವೃತ್ತಿಗಳಿಂದ ಪುಟ್ಟಣ್ಣನವರು ಹಲವು ಹೊಸ ಅಂಶಗಳನ್ನು ಬೆಳಕಿಗೆ ತಂದರು. ಅವರೆಗೆ ಸ್ವೀಕೃತವಾಗಿದ್ದ ಹಲವು ತಪ್ಪುಗಳನ್ನು ಹೊರಗೆಳೆದರು. ಅಂದಿನ ಬಖೈರು ಕೈಫಿಯತ್ತುಗಳಂತೆಯೇ ಅನ್ಯಭಾಷಾ ಪದಗಳಿಂದ ಕೂಡಿದ ಈ ಕೃತಿಗಳು ವಿಶಿಷ್ಟ ರಚನೆಗಳು. ಪುಟ್ಟಣ್ಣನವರ ಈ ಗ್ರಂಥಗಳು ಈ ಕ್ಷೇತ್ರದ ಆಧಾರಗ್ರಂಥಗಳೂ ಆಕರಗ್ರಂಥಗಳೂ ಆಗಿವೆ.

ಕಾಲಾನುಸಾರಿಯಾಗಿ ಆಳಿದ ರಾಜರು, ಮುಖ್ಯ ಘಟನೆಗಳು, ಆಸ್ಥಾನದ ವಿವರಗಳು, ಮತಾಚಾರ, ವಂಶಾವಳಿ ಇತ್ಯಾದಿ ವಿಷಯಗಳನ್ನು ಪುಟ್ಟಣ್ಣನವರು ಈ ಕೃತಿಗಳಲ್ಲಿ ತಿಳಿಸಿದ್ದಾರೆ. ಅಗತ್ಯವಿದ್ದೆಡೆಗಳಲ್ಲೆಲ್ಲ ಆನುಷಂಗಿಕ ವಿಚಾರಗಳನ್ನೂ ತಿಳಿಸಿದ್ದಾರೆ.

ಅಪರಿಗ್ರಹಣ ದೀಕ್ಷೆಯ ಧರ್ಮಿಷ್ಠರಲ್ಲೂ ಆಳುವ ರಾಜರಲ್ಲೂ ಪುಟ್ಟಣ್ಣನವರಿಗೆ ಇದ್ದ ಗೌರವ ನಂಬಿಕೆಗಳು ಈ ಕೃತಿಗಳಲ್ಲಿ ಸುವ್ಯಕ್ತವಾಗಿವೆ. ಪುಟ್ಟಣ್ಣನವರ ಕಾದಂಬರಿ, ಜೀವನಚರಿತ್ರೆಗಳಲ್ಲಿ ಕಾಣುವಂತೆ ಇಲ್ಲೂ ರಾಜಾಸ್ಥಾನದ ಚಿತ್ರಣವಿದೆ. ನೈತಿಕ ವಿಜಯದ ಧಾಟಿ ಇಲ್ಲೂ ಸುಸ್ಪಷ್ಟವಾಗಿದೆ.

ಚಾಮರಾಜ ಒಡೆಯರ ಅಧಿಕಾರಾವಧಿಯಲ್ಲಿ ಹಲವು ಪಾಠಶಾಲೆಗಳು ಪ್ರಾರಂಭವಾದವು. ಅರಮನೆಯ ದರ್ಬಾರು ಬಕ್ಷಿಗಳಾದ ಅಂಬಿಲ್ ನರಸಿಂಹಯ್ಯಂಗಾರರ ಪ್ರೋತ್ಸಾಹ, ದಿವಾನ್ ರಂಗಾಚಾರ್ಲು, ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರ್ ಲೂಯಿರೈಸ್ ಅವರುಗಳ ಪ್ರೋತ್ಸಾಹ, ಶಿಕ್ಷಣಾಧಿಕಾರಿಗಳಾದ ಎಚ್. ಜೆ. ಭಾಭಾ ಹಾಗೂ ಎಂ. ಶಾಮರಾವ್ ಇವರುಗಳ ಪ್ರೋತ್ಸಾಹದಿಂದ ಪುಟ್ಟಣ್ಣನವರು ತಮ್ಮ ಪಠ್ಯಕೃತಿಗಳನ್ನು ರಚಿಸಿದರು. ಎರಡು ಭಾಗಗಳಲ್ಲಿ 'ಹಿಂದೂ ಚರಿತ್ರ ದರ್ಪಣ' (1882), 'ಹಿಂದೂ ಚರಿತ್ರ ಸಂಗ್ರಹ'(1887), 'ಕನ್ನಡ ಒಂದನೆಯ ಪುಸ್ತಕವು' (1895) ಹಾಗೂ 'ಕನ್ನಡ ಲೇಖನ ಲಕ್ಷಣ' (1915) - ಈ ನಾಲ್ಕು ಪುಟ್ಟಣ್ಣನವರ ಪಠ್ಯಕೃತಿಗಳು. ಮೊದಲ ಎರಡು ಎಂ. ಬಿ. ಶ್ರೀನಿವಾಸಯ್ಯಂಗಾರರ ಸಹಕರ್ತೃತ್ವದಲ್ಲಿ ರಚಿತವಾದುವು. ಮೂರನೆಯದರ ಗದ್ಯಪಾಠಗಳನ್ನು ಪುಟ್ಟಣ್ಣನವರೂ ಹೊಸಕಾಲದ ಕವಿತೆಗಳನ್ನು ಎಸ್. ಜಿ. ನರಸಿಂಹ ಚಾರ್ಯರೂ ರಚಿಸಿದರು. ನಾಲ್ಕನೆಯದು ಪುಟ್ಟಣ್ಣನವರೊಬ್ಬರೇ ರಚಿಸಿದ ಕೃತಿ. ಕನ್ನಡದಲ್ಲಿ ಇಂಥ ಪಠ್ಯಗಳ ರಚನೆಗೆ ಸಿದ್ಧಸೂತ್ರಗಳಿಲ್ಲದಿದ್ದ ಕಾಲದಲ್ಲಿ ಮಕ್ಕಳಿಗೆ ಬೋಧಿಸಬೇಕಾದ ಅಂಶಗಳನ್ನು ಒಂದು ಕ್ರಮಕ್ಕೆ ಅಳವಡಿಸಿ ರಚಿಸಿದ ಈ ಕೃತಿಗಳು ತಮ್ಮ ಮುಂದಿನ ಅಂಥ' ಕೃತಿಗಳಿಗೆ ಮಾರ್ಗದರ್ಶಿಗಳಾದವು.

ಸುವ್ಯವಸ್ಥಿತ ವಿಷಯ, ಸಂಗ್ರಹಗುಣ, ನಕ್ಷೆ, ಭೂಪಟ, ಚಿತ್ರಗಳು ಇಲ್ಲಿನ ಅಚ್ಚುಕಟ್ಟನ್ನು ತಿಳಿಸುತ್ತವೆ. ಪ್ರಾರಂಭದ ಪಠ್ಯಗಳೇ ಇಷ್ಟು ಚೆನ್ನಾಗಿರುವುದು ಸಂತೋಷದ ವಿಷಯವಾಗಿದೆ.

ನಾಡಿನ ಎಳೆಯರನ್ನು ಕಂಡರೆ ಪುಟ್ಟಣ್ಣನವರಿಗಿದ್ದ ಪ್ರೀತಿ, ಶಿಕ್ಷಣದಲ್ಲಿದ್ದ ಆಸಕ್ತಿ ಈ ಕೃತಿಗಳ ರಚನೆಗೆ ಮೂಲ ಕಾರಣ. ಪುಟ್ಟಣ್ಣನವರ ವೃತ್ತಿಜೀವನ ಪ್ರಾರಂಭವಾದುದೇ ಉಪಾಧ್ಯಾಯ ವೃತ್ತಿಯಿಂದ ಎಂಬುದು ಆಕಸ್ಮಿಕವಾದರೂ ಗಮನಾರ್ಹವಾದ ಸಂಗತಿಯಾಗಿದೆ.

ಪುಟ್ಟಣ್ಣನವರು ಎಂ. ಬಿ. ಶ್ರೀನಿವಾಸಯ್ಯಂಗಾರರೊಡನೆ 1883ರ ಅಕ್ಟೋಬರ್ ತಿಂಗಳಲ್ಲಿ 'ಹಿತಬೋಧಿನಿ' ಮಾಸಪತ್ರಿಕೆಯನ್ನು ಆರಂಭಿಸಿದರು. ಪುಟ್ಟಣ್ಣನವರ ಸಾಮಾಜಿಕ ಪ್ರಜ್ಞೆ, ಕಳಕಳಿಗಳು ಇಲ್ಲಿ ಸುವ್ಯಕ್ತ. ಸಾಹಿತ್ಯ, ಕಲೆ, ವಿಜ್ಞಾನ, ಇತಿಹಾಸ, ಜೀವನಚರಿತ್ರೆ, ದೇಶಾಂತರ ವರ್ತಮಾನ ಸಂಗ್ರಹ, ಕಥೆಗಳು ಇತ್ಯಾದಿ ಹಲವು ಉಪಯುಕ್ತ ವಿಷಯಗಳು ಈ ಪತ್ರಿಕೆಯಲ್ಲಿ ಪ್ರಚುರವಾದುವು. ಸ್ವತಃ ಪುಟ್ಟಣ್ಣನವರೇ ಹಲವು ಲೇಖನಗಳನ್ನೂ ಬರೆದರು. ಆರು ತಿಂಗಳ ಕಾಲ ನಡೆಸಿದ ಮೇಲೆ ತಮ್ಮ ಬಿ. ಎ. ವ್ಯಾಸಂಗಕ್ಕಾಗಿ ಮದರಾಸಿಗೆ ತೆರಳಿದಾಗ ಪುಟ್ಟಣ್ಣನವರು 'ಹಿತಬೋಧಿನಿ'ಯನ್ನು ಎಂ. ವೆಂಕಟಕೃಷ್ಣಯ್ಯನವರಿಗೆ ಒಪ್ಪಿಸಿದರು. ಈ ಪತ್ರಿಕೆಯ ನಿರ್ವಹಣೆಯಿಂದ ವೆಂಕಟಕೃಷ್ಣಯ್ಯನವರ ಪತ್ರಿಕಾ ಜೀವನದ ನಾಂದಿಯಾದುದು ಕನ್ನಡ ಪತ್ರಿಕೋದ್ಯಮ ಕ್ಷೇತ್ರದ ಒಂದು ಮಹತ್ತ್ವದ ಸಂಗತಿಯಾಗಿದೆ. ತಮ್ಮಿಂದ ಪತ್ರಿಕೋದ್ಯಮದ ದೀಕ್ಷೆಯನ್ನು ಪಡೆದ ಸಿಡಿಲಮರಿಯ ಉಜ್ವಲ ವ್ಯಕ್ತಿತ್ವವನ್ನು ಪುಟ್ಟಣ್ಣನವರು ಗುರುತಿಸಿದ್ದು ಅವರ ಗುಣಗ್ರಹಣೆಯ ಗುರುತು. ಕನ್ನಡ ನುಡಿ ಮನ್ನಣೆ ಹಾಗೂ ಗದ್ಯದ ಬೆಳವಣಿಗೆಗೆ ಪ್ರೋತ್ಸಾಹ 'ಹಿತಬೋಧಿನಿ'ಯ ಮುಖ್ಯ ಸಾಧನೆಗಳು.

ಪುಟ್ಟಣ್ಣನವರ ಐವತ್ತು (ಮೂವತ್ತೈದು ಕನ್ನಡ ಮತ್ತು ಹದಿನೈದು ಇಂಗ್ಲಿಷ್) ಉಪಲಬ್ಧ ಲೇಖನಗಳಲ್ಲಿ ಕಾಣುವ ಪ್ರಮುಖ ಅಂಶಗಳೆಂದರೆ ಪ್ರಾಮಾಣಿಕತೆ, ಕನ್ನಡ ಪ್ರೇಮ ಹಾಗೂ ಸಾಮಾಜಿಕ ಕಳಕಳಿ. ಇಲ್ಲಿ ಚಾರಿತ್ರಿಕ ವ್ಯಕ್ತಿಗಳನ್ನು ಕುರಿತ ಲೇಖನಗಳಿವೆ. ಕನ್ನಡನಾಡಿನ ರಾಜರು, ರಾಜಭಕ್ತರು, ವೀರರು ಹಾಗೂ ಜನಸಾಮಾನ್ಯರನ್ನು ಕುರಿತ ಲೇಖನಗಳಿವೆ, ವಿಜ್ಞಾನಿಗಳನ್ನು ಕುರಿತ ಲೇಖನಗಳಿವೆ, ಸಾಮಾಜಿಕ ಪ್ರಜ್ಞೆಯ ಲೇಖನಗಳಿವೆ, ಭಾಷಾಸಂಬಂಧವಾದ ಕಳಕಳಿಯನ್ನು ಕುರಿತ ಲೇಖನಗಳಿವೆ, ವಿದ್ಯಾರ್ಥಿಗಳನ್ನು ಉದ್ದೇಶಿಸಿದ ಲೇಖನಗಳಿವೆ, ಪುಟ್ಟಣ್ಣನವರ ಸಮಕಾಲೀನರನ್ನು ಕುರಿತ ಲೇಖನಗಳೂ ಇವೆ. ಈ ಎಲ್ಲ ಲೇಖನಗಳಲ್ಲೂ ಒಂದು ಅಂತಃಸೂತ್ರ ಕಾಣುತ್ತದೆ, ಅದು ಸಮಾಜ ಪರಿಷ್ಕರಣಕ್ಕೆ ಸಂಬಂಧಿಸಿದ್ದು, ಇಲ್ಲೆಲ್ಲ ಪುಟ್ಟಣ್ಣನವರ ವ್ಯಕ್ತಿತ್ವವೂ ಪ್ರತಿಫಲಿತವಾಗಿದೆ. ಪುಟ್ಟಣ್ಣನವರ ಬಾಳಿನಲ್ಲಿ ಒದಗಿದ ಹಲವು ಸಂಸ್ಕಾರಗಳು ಈ ಲೇಖನಗಳಲ್ಲಿ ಇಣುಕುತ್ತವೆ. ಅವರ ಸಮೃದ್ಧವಾದ ಜೀವನಾನುಭವ, ಸಂದಿಗ್ಧ ವಿಚಾರಧಾರೆ, ಸತ್ಯನಿಷ್ಠುರವಾದ ವಿವೇಚನಾ ಶಕ್ತಿ ಈ ಲೇಖನಗಳಲ್ಲಿ ಸತ್ತ್ವಪೂರ್ಣ ಅಂಶಗಳಾಗಿವೆ.

ಎಂ. ಎಸ್. ಪುಟ್ಟಣ್ಣನವರು ಹೊಸಗನ್ನಡದ ಒಬ್ಬ ಮಹತ್ತ್ವದ ಲೇಖಕರು. ಅವರು ತಮ್ಮ ಸಾಹಿತ್ಯಕೃಷಿಯನ್ನು ಆರಂಭಿಸಿದಾಗ ಹೊಸಗನ್ನಡದ ನೆಲ ಉತ್ತು ಸಿದ್ಧವಾಗಿರಲಿಲ್ಲ. ಪ್ರಾರಂಭದ ಕಾರ್ಯಕರ್ತರಿಗೆ ಎದುರಾಗುವ ತೊಡಕುಗಳನ್ನೆಲ್ಲ ಅವರು ಸದ್ದಿಲ್ಲದೆ ಅನುಭವಿಸಬೇಕಾಯಿತು. ಅವರು ಸ್ವತಃ ಅಸಾಮಾನ್ಯರಾದರೂ ಜನಸಾಮಾನ್ಯರಿಗೆ ಅತಿ ಸಮೀಪದಲ್ಲಿದ್ದುಕೊಂಡು ದುಡಿದುದರಿಂದ ಅವರ ಬರಹಗಳಲ್ಲಿ ಗಟ್ಟಿಗತನವೂ ಕೂಡಿಕೊಂಡಿತು. ಗದ್ಯಕೃಷಿಯಲ್ಲಿ ಅವರದು ನಿಸ್ಸಂಶಯವಾಗಿ ಮೊದಲ ವರ್ಗದ ಫಸಲು.

❑

# ಶಾಂತಕವಿ

ವಿ. ಗುಂಡಣ್ಣ

ಕರ್ನಾಟಕದ ಉತ್ತರ ಭಾಗದಲ್ಲಿ ಕನ್ನಡದ ಬಾವುಟವನ್ನು ಏರಿಸಿ ನಿಲ್ಲಿಸಲು ಪ್ರಯತ್ನಿಸಿದವರಲ್ಲಿ ಪ್ರಮುಖರು ಶಾಂತಕವಿಗಳು. ಶಾಂತ ಕವಿಗಳ ನಿಜನಾಮ ಸಕ್ಕರಿ ಬಾಳಾಚಾರ್ಯ. ಬಾಳಾಚಾರ್ಯರು ಹುಟ್ಟಿದ್ದು 15 ಜನವರಿ 1856 ರಂದು. ಸಕ್ಕರಿ ಮನೆತನದ ಮೂಲ ಸ್ಥಳವಾದ ಧಾರವಾಡ ಜಿಲ್ಲೆಯ ಸಾತೇನಹಳ್ಳಿಯಲ್ಲಿ ಗೋಪಾಲಾಚಾರ್ಯರ ಮಗನಾಗಿ ಹುಟ್ಟಿದ ಇವರಿಗೆ ಹಾಡು ಕುಣಿತಗಳ ಕಡೆ ಬಹಳ ಒಲವು. ಆದ್ದರಿಂದ ಬಾಲ್ಯದಲ್ಲಿ ಆರಂಭವಾದ ಸಂಸ್ಕೃತ ವಿದ್ಯಾಭ್ಯಾಸದ ಕಡೆ ಅಷ್ಟಾಗಿ ಗಮನ ಹರಿಯಲಿಲ್ಲ. ಹಾಡು, ಕುಣಿತಗಳು ಎಲ್ಲೇ ನಡೆಯಲಿ ಅಲ್ಲಿ ಇವರು ಹಾಜರು. ಇವರ ಆಸಕ್ತಿ ಅಭಿರುಚಿಗಳು ದೊಡ್ಡವರ ಗಮನವನ್ನೂ ಸೆಳೆಯಿತು, ಎಲ್ಲೇ ಭಾಗವತರಾಟ ನಡೆಯಲಿ ಇವರಿಗೆ ಒಂದು ಪಾತ್ರ ಮೀಸಲು. ಇವರು ಹಾಡುಗಳ ರಚನೆಗೂ ಕೈಹಾಕಿದರು. ದಾಸರ ಪದಗಳನ್ನನುಸರಿಸಿ ಹಾಡುಗಳನ್ನು ರಚಿಸಿ ಕವಿಯಾಗಲು ಪ್ರಯತ್ನ ನಡೆಸಿದ್ದೂ ಉಂಟು. ಇವರ ಮನೆತನದ ಕುಲದೈವ ಶಾಂತೇಶ. ಶಾಂತೇಶನ ಹೆಸರನ್ನು ಇಟ್ಟುಕೊಂಡು ಸಕ್ಕರಿ ಬಾಳಾಚಾರ್ಯ ಶಾಂತಕವಿ ಆದರು. ಈ ಸಂಗತಿ ಅವರ 'ಮುಕುಂದ ದಾನಾಮೃತ' ವೆಂಬ ಕೀರ್ತನೆಯಿಂದ ತಿಳಿಯುತ್ತದೆ. ಕನ್ನಡದಲ್ಲಿ ಕೀರ್ತನೆಗಳಿಲ್ಲವೆಂಬ ಆಕ್ಷೇಪಣೆಯನ್ನು ಸಹಿಸಲಾರದೆ ರಚಿಸಿದ ಕೀರ್ತನೆಯಿದು. ಕನ್ನಡದ ಬಗೆಗಿನ ಕಾಳಜಿ ಅಂದಿನಿಂದಲೇ ಅವರಲ್ಲಿ ಕಾಣಲಾರಂಭವಾಗಿತ್ತು. ಹಾಡು, ಕುಣಿತ, ಭಾಗವತರಾಟ, ದಾಸರ ಪದಗಳ ಅನುಕರಣೆ, ರಚನೆ ಇವು ಶಾಂತಕವಿಗಳಲ್ಲಿ ಬಾಲ್ಯದಿಂದಲೇ ಕನ್ನಡಾಭಿಮಾನವನ್ನು ಬೆಳೆಸಿಕೊಂಡು ಬರಲು ಸಹಾಯಕವಾದುವು. ಯಾವಾಗ ಕನ್ನಡಾಭಿಮಾನ ಇವರಲ್ಲಿ ಜಾಗೃತವಾಯಿತೊ ಅಂದಿನಿಂದ ಕನ್ನಡಕ್ಕೆ ಸಿಗಬೇಕಾದ ಸ್ಥಾನಮಾನಗಳು ಸಿಕ್ಕಿಲ್ಲವೆಂಬ ಅರಿವು, ಅದಕ್ಕಾಗಿ ಪ್ರಯತ್ನವನ್ನೇ ಪಡದ ಕನ್ನಡಿಗರ ತೇಜೋಹೀನ ಸ್ಥಿತಿಗತಿಗಳು ಇವರಿಗೆ ಮನವರಿಕೆಯಾಗಲಾರಂಭವಾಗಿ ಕನ್ನಡಕ್ಕಾಗಿ ಹೋರಾಡಬೇಕೆಂಬ ಅಪೇಕ್ಷೆ ಮೊಳೆತು ಬೆಳೆಯಲಾರಂಭವಾಯಿತು. ಈ ಭಾವನೆಗಳನ್ನೊಳಗೊಂಡ ಶಾಂತಕವಿಗಳ ಪಾಂಡಿತ್ಯ ಪ್ರತಿಭೆಗಳನ್ನು ಅವರ ಇನ್ನೂ ಹಲವಾರು ಕೀರ್ತನೆಗಳಲ್ಲಿ ಕಾಣಬಹುದು.

ನಮ್ಮ ಯಕ್ಷಗಾನದ ತಾಳಮದ್ದಳೆಗೆ ತೀರ ಹತ್ತಿರವಾದುದು ಕೀರ್ತನೆ. ವೇಷ, ಅಭಿನಯಗಳಿಲ್ಲದ ಕೀರ್ತನೆಯಲ್ಲಿ ಹಿಮ್ಮೇಳ, ಹಾಡು ಮತ್ತು ಸಂಭಾಷಣೆಯಿಂದೊಡಗೂಡಿದ ಕಥಾಪ್ರಸಂಗ ಕಂಡುಬರುತ್ತದೆ. ಒಬ್ಬ ಪಾತ್ರಧಾರಿ ಮಾತ್ರ ಕೀರ್ತನೆಯಲ್ಲಿರುತ್ತಾನೆ. ಈ ಕೀರ್ತನೆಯೇ ಶಾಂತಕವಿಗಳ ನಾಟಕರಚನೆಗೆ ನಾಂದಿಯಾಯಿತು.

1870ರ ಸುಮಾರಿನಲ್ಲಿ ಅಂದರೆ ಶಾಂತಕವಿಗಳ ಜೀವನದ ಆರಂಭ ಕಾಲದಲ್ಲಿ ಉತ್ತರ ಕರ್ನಾಟಕದ ಅನೇಕ ಭಾಗಗಳಲ್ಲಿ ಕನ್ನಡ ನಾಡು ನುಡಿಗಳ ಮರ್ಯಾದೆಗೆ ಯಾರೂ ಅಷ್ಟಾಗಿ ಗಮನ ಕೊಡುತ್ತಿರಲಿಲ್ಲ. ಅಂದಿನ ಪ್ರಭುಗಳಾದ ಆಂಗ್ಲರ ಭಾಷೆ ಸಂಸ್ಕೃತಿಗಳ ಪ್ರಭಾವಕ್ಕೆ ಮಾರು ಹೋದ ಕಾಲ ಅದು. ಪರಕೀಯರು ಹೊರಿಸಿದ ಈ ಹೊರೆಯ ಅಡಿಯಲ್ಲಿ ಕನ್ನಡಿಗರ ಸಂಸ್ಕೃತಿ, ಲಲಿತಕಲೆಗಳ ವೈಶಿಷ್ಟ್ಯ ಯಾರಿಗೂ ಕಾಣದಂತಾಗಿತ್ತು. ಇಷ್ಟು ಸಾಲದೆಂಬಂತೆ ಕನ್ನಡದ ಜಾನಪದ ಕಲೆಯಿಂದಲೇ ಪ್ರಚೋದನೆಗೊಂಡು ರೂಪುಗೊಂಡ ಮಹಾರಾಷ್ಟ್ರದ ವೃತ್ತಿರಂಗಭೂಮಿಯ ನಾಟಕಗಳ ಬಗೆಗೆ ಸಂಪೂರ್ಣವಾಗಿ ಆಕರ್ಷಿತರಾಗಿದ್ದರು. ಮರಾಠಿಗರ ನಾಟಕಗಳನ್ನು ನೋಡಲು ಮತ್ತು ಮರಾಠಿಭಾಷೆಯನ್ನು ಕಲಿಯಲು ಕನ್ನಡಿಗರು ಅತ್ಯುತ್ಸುಕರಾಗಿದ್ದರು. ಕನ್ನಡದ ಪ್ರದೇಶಗಳಲ್ಲಿ ಹೆಸರುವಾಸಿಯಾಗಿದ್ದ ಭಾಗವತರಾಟದ ಮಾದರಿಯಲ್ಲಿ ತಮ್ಮ ರಂಗಭೂಮಿಯನ್ನು ರಚಿಸಿಕೊಂಡು ಮರಾಠಿ ಭಾಷೆಯಲ್ಲಿ ಮರಾಠಿಗರು ನಾಟಕಗಳನ್ನಾಡುತ್ತಿದ್ದರು. ಈ ನಾಟಕಗಳನ್ನು ನೋಡಲು ಜನ ದುಡ್ಡುತೆತ್ತು ಹಿಂಡುಹಿಂಡಾಗಿ ಹೋಗುತ್ತಿದ್ದರು. ಇದರಿಂದಾಗಿ ಕನ್ನಡಗರು ತಮ್ಮ ಭಾಷೆಯನ್ನೂ, ಕಲೆಯನ್ನೂ ಮಾತ್ರವಲ್ಲದೆ ಕನ್ನಡತನವನ್ನೇ ಮರೆಯುವ ಸ್ಥಿತಿಗೆ ಬಂದು ತಲುಪಿದ್ದರು. ಕನ್ನಡಿಗರ ಪ್ರೋತ್ಸಾಹವೂ ಇಲ್ಲದೆ ಕನ್ನಡ ರಂಗಭೂಮಿ ತನ್ನ ಅವನತಿಯ ಹಾದಿಯನ್ನು ಹಿಡಿಯಲಾರಂಬಿಸಿತ್ತು. ಈ ಪರಿಸ್ಥಿತಿಯು ಮೊದಲಿನಿಂದ ಕನ್ನಡ ರಂಗಭೂಮಿಯ ಉತ್ಕಟ ಉಪಾಸಕರಾದ ಶಾಂತಕವಿಗಳ ಮನಸ್ಸನ್ನು ಕಲಕಿತು.

ಕನ್ನಡ ರಂಗಭೂಮಿಯ ಜಾಗೃತಿಯನ್ನು ಕುರಿತು ಶಾಂತಕವಿಗಳು ಗಂಭೀರವಾಗಿ ಚಿಂತಿಸತೊಡಗಿದರು. ಅಂದಿನ ಕನ್ನಡ ಭಾಷೆ ಹಾಗೂ ರಂಗಭೂಮಿಯ ಪರಿಸ್ಥಿತಿಯು ಹೇಗಿತ್ತೆಂಬುದನ್ನೂ ಅದನ್ನು ಉದ್ಧರಿಸಿ ಉತ್ತಮಗೊಳಿಸುವಲ್ಲಿ ತಾವು ಮಾಡಿದ ಕೆಲಸವನ್ನೂ ಕುರಿತು 1919ರಲ್ಲಿ ತಾವು ರಚಿಸಿದ 'ನಾಟಕ' ಎಂಬ ಪದ್ಯಸಂಕಲನದಲ್ಲಿ (ಷಟ್ಪದಿಮಾಲಿಕೆ) ಸಾಕಷ್ಟು ವಿವರವಾಗಿ ಬಣ್ಣಿಸಿದ್ದಾರೆ.

ಕರ್ನಾಟಕ ಮರಾಠಿಯರ ನಾಟಕಮಯವಾಗಿಹೋಗಿತ್ತೆಂಬ ಶಾಂತಕವಿಗಳ ಅಳಲನ್ನು ಯಾರು ಅರ್ಥಮಾಡಿಕೊಂಡರೂ ಬಲ್ಲವರಾರು? ಆದರೆ ಕರ್ನಾಟಕದ ಧಾರವಾಡದ ಮಂದಿ ಸುಮ್ಮನೆ ಕೂರಲಿಲ್ಲ. ಕನ್ನಡಿಗರೇ ಆದ ಧಾರವಾಡದವರ ಅಭಿಪ್ರಾಯ ಮತ್ತು ಇಂತಹ ಸಮಯದಲ್ಲಿ ಕನ್ನಡ ನಾಟಕವು ಎಲ್ಲಿ ಹುಟ್ಟಿತೆಂಬುದನ್ನು ಶಾಂತಕವಿಗಳು ಹೇಳುವ ರೀತಿ ಇದು:

> ಎಲ್ಲಿ ನೋಡಲು ಕನ್ನಡದ ಭಾಷೆ ಮೆಟ್ಟಿಯದ
> ರಲ್ಲಿಲ್ಲ ಮೃದುಶಬ್ದವಿಲ್ಲ ಭಾಷಾಸರಣೆ
> ಯಿಲ್ಲವೈ ಸ್ವಾರಸ್ಯವಿಲ್ಲ- ನಾಟಕವಿಲ್ಲ ನಟನಟಿಗಳಿಲ್ಲವಿನ್ನು
> ಇಲ್ಲವವು ಮುಂದಾಗುವಾಶೆ ಕೂಡಾ ಇಲ್ಲ
> ಇಲ್ಲವೆಂದೇ ಧಾರವಾಡದ ಸೀಮೆಯ ಜನಂ
> ಸೊಲ್ಲಿಸುವ ಕಾಲದಲ್ಲಿ ಕರ್ನಾಟಕ ನಾಟಕ ಪುಟ್ಟಿದುದು
> ಕೃತುಪುರದೊಳು

ಈ ರೀತಿ ಕೃತುಪುರದಲ್ಲಿ (ಗದಗ) ಕನ್ನಡಿಗರಿಗಾಗಿ, ಕನ್ನಡದ ಉದ್ಧಾರಕ್ಕಾಗಿ, ಕನ್ನಡ ನಾಟಕದ ಏಳ್ಗೆಗಾಗಿ ಕರ್ನಾಟಕ ನಾಟಕ ಕಂಪನಿಯನ್ನು ಕಟ್ಟುವ, ಕನ್ನಡ ನಾಟಕಗಳನ್ನು ಬರೆದುಕೊಡುವ, ನಾಟಕವನ್ನು ಕಲಿಸಿಕೊಡುವ ಕೆಲಸ ಇವರಿಂದಾರಂಭವಾಯಿತು.

> ಕೃತುಪುರದೊಳಿದ್ದಾಗ ಕನ್ನಡದ ನುಡಿಯ ದು
> ಸ್ಥಿತಿಯ ನಾಟಕ ನಟನದಿಂದ ಕಳೆಯಬೇಕೆಂದು

ಸತತಮಲ್ಲಿಯ ಜನಕೆ ಪೇಳ್ದವದರಿಂ ಸ್ಫೂರ್ತಿಗೊಂಡವರ
ಬಯಕೆಯಂತೆ
ಅತಿಶಯಾನಂದದಿಂದತ್ಯವಸರವ ಮಾಡಿ
ಪ್ರಥಮದೊಳುಷಾಹರಣ ನಾಟಕವ ರಚಿಸಿ ಪ
ದ್ಧತಿಯಂತೆ ನಟನವನಂ ಕಲಿಸಿದೆವು ನಾಟಕವು ರಂಗಕೆ
ಬಂದುದು
ಇದೆ ಮೊದಲಿನದು ನಮ್ಮ ಕನ್ನಡ ನಾಡಿನೊಳ
ಗುದಯಿಸಿದ ಕನ್ನಡ ನಾಟಕದ ಮೇಳವಾ
ದುದರಿಂದ ಕರ್ನಾಟಕ ನಾಟಕ ಪ್ರಥಮ
ಗುರುವೆಂದೆಂಬರೆಮಗಿಂದಿಗಂ
ಇದರಿಂದಲೇನು ನಾಟಕನಟನದಿಂದೆಮ್ಮ
ಹೃದಯಪ್ರಭಾವಪೂರ್ವಕ್ಷಣದ ಪದುಮದಂ
ದದೇಲಾದುದ್ಯೆ ಮುಂದೆ ಬಹಸಿರಿಯ ಕುರುಹಿಂದೆ
ಒಗ್ಗೊಡಲೊಲೊಗೆಯದಿಹುದೆ

ಕನ್ನಡ ನಾಟಕ ಬಾವುಟವನ್ನು ಹಾರಿಸುವ ಹಿರಿದಾದ ಉದ್ದೇಶದಿಂದ ಕನ್ನಡ ನಾಡಿನಲ್ಲಿ ಕನ್ನಡ ನಾಟಕದ ಮೇಳವನ್ನು ಪ್ರಪ್ರಥಮವಾಗಿ ಕಟ್ಟಿ, ನಾಟಕವಾಡಲು 'ಉಷಾಹರಣ' ನಾಟಕವನ್ನು ರಚಿಸಿ ಆಡಿಸಿದ್ದರಿಂದ ಇಂದಿಗೂ ಕರ್ನಾಟಕ ನಾಟಕದ ಪ್ರಥಮ ಗುರುವೆಂದು ಕರೆಯುತ್ತಾರೆಂದು ಶಾಂತಕವಿಗಳೇ ಹೇಳಿಕೊಂಡಿದ್ದಾರೆ.

ಹೀಗೆ ಗದುಗಿನ ಉತ್ಸಾಹಿ ತರುಣರ ನೆರವಿನೊಂದಿಗೆ 'ಕರ್ನಾಟಕ ನಾಟಕ ಕಂಪನಿ'ಯನ್ನು 1874ರಲ್ಲಿ ಆರಂಭಿಸಿದರು. ಕಲೆಹಾಕಿದ ನಟರೊಡನೆ ನಾಟಕವಾಡಲು, ನಾಟಕ ರಚಿಸಿ, ಗಾಯಕರಿಗೆ ನಟರಿಗೆ ನಾಟ್ಯ ಶಿಕ್ಷಣವನ್ನು ಕೊಟ್ಟು 'ಕರ್ನಾಟಕ ನಾಟಕ ಪ್ರಥಮ ಗುರು' ಎಂಬ ಬಿರುದನ್ನು ಅರ್ಥಪೂರ್ಣವಾಗಿಸಿದರು ಶಾಂತಕವಿಗಳು. ಈ ರೀತಿ 'ಕರ್ನಾಟಕ ನಾಟಕ ಪಿತಾಮಹ' ಎಂಬ ಗೌರವಕ್ಕೆ ಸಂಪೂರ್ಣವಾಗಿ ಅರ್ಹತೆ ಪಡೆದರು.

ವೃತ್ತಿಯಿಂದ ಶಾಂತಕವಿಗಳು ಅಧ್ಯಾಪಕರಾಗಿದ್ದರು. ಬಡತನದಿಂದಾಗಿ ಆಂಗ್ಲಭಾಷೆಯ ವಿದ್ಯೆಯನ್ನು ಅವರು ಕಲಿಯಲಾಗಲಿಲ್ಲ. ಅದರಿಂದಾಗಿ ಶಾಂತಕವಿಗಳು ಕನ್ನಡ ಶಾಲೆಯ ಅಧ್ಯಾಪಕರಾಗಿಯೇ ಉಳಿಯಬೇಕಾಯಿತು. ಕೇವಲ 14 ವರ್ಷ ವಯಸ್ಸಿನಲ್ಲಿರುವಾಗಲೇ ಶಾಂತಕವಿಗಳು ರಾಣೆಬೆನ್ನೂರು ಕನ್ನಡ ಶಾಲೆಯ ಅಧ್ಯಾಪಕರಾಗಿ ಸೇರಿಕೊಂಡರು. ನಾಟಕಕಲೆ ಹುಟ್ಟಿನಿಂದಲೇ ಅವರಲ್ಲಿ ಬಂದಿತ್ತು. ಕನ್ನಡ ನಾಟಕದ ಬಗೆಗೆ ಅಪಾರವಾದ ಆಸಕ್ತಿ. ಆದರೆ ನಾಟಕ ರಚನೆಗೆ ಸಾಕಷ್ಟು ಸಮಯ ಸಿಕ್ಕದಿದ್ದಾಗ 'ಬಂಗಾರದಂತಹ ಹಗಲಿನ ಆಯುಷ್ಯವನ್ನು ಸಾಲಿಯ ವಿದ್ಯಾರ್ಥಿಗಳೊಡನೆ ತಲೆಯೊಡೆಯುತ್ತ ಕಳೆಯುತ್ತಿರುವುದಾಗಿ' ಒಂದೆಡೆ ಪೇಚಾಡಿಕೊಂಡಿರುವುದೂ ಉಂಟು. ಮೂರು ವರ್ಷಗಳ ಬಳಿಕ ಗದುಗಿಗೆ ಬಂದಾಗ ಇವರ ಕನ್ನಡ ಪ್ರೇಮ, ಕನ್ನಡ ನಾಟಕಗಳ ಬಗೆಗಿನ ಕಾಳಜಿ ಇವೆಲ್ಲಾ ಪುಟಿದ ಕಾರಂಜಿಯಂತಾಗಿ ಎಲ್ಲರನ್ನೂ ಆಕರ್ಷಿಸಿತು. ಮರಾಠಿಗರು ಇದನ್ನು ಕಂಡು ಕರುಬಿದರು. ಒಬ್ಬ ಮರಾಠಿ ಶಾಲಾ ಇನ್ಸ್‌ಪೆಕ್ಟರ್ ಅಂತೂ ಶಾಂತಕವಿಗಳನ್ನು ಗದುಗಿನಿಂದ ಹೊಂಬಳಕ್ಕೆ ವರ್ಗಮಾಡಿದರು. ಉತ್ಸಾಹಿ ತರುಣರನ್ನು ಕಲೆಹಾಕಿ ಕೆಲಸವಾರಂಭಿಸಿದ್ದ ಶಾಂತಕವಿಗಳ ಉತ್ಸಾಹ ಇದರಿಂದ ಕುಗ್ಗಲಿಲ್ಲ. ಶಾಲೆಯ ಕೆಲಸ ಮುಗಿಸಿದ ನಂತರ ಒಂಬತ್ತು ಮೈಲಿ ದೂರದ ಗದುಗಿಗೆ ಎಮ್ಮೆಯ ಮೇಲೆ ಕುಳಿತು ಹೋಗಿ ನಟರನ್ನು ತರಬೇತು ಮಾಡುತ್ತಿದ್ದರು. ಇವರ ಈ ಅಮಿತ ಉತ್ಸಾಹ ಆಸಕ್ತಿಗಳು ಕನ್ನಡ ರಂಗಭೂಮಿಗೆ ಭದ್ರವಾದ ಅಡಿಪಾಯವನ್ನು ಹಾಕಿದುವು.

17-18ನೇ ವಯಸ್ಸಿನಲ್ಲೇ ಶಾಂತಕವಿಗಳು ತಮ್ಮ ಮೊದಲ ನಾಟಕವಾದ 'ಉಷಾಹರಣ'ವನ್ನು ಬರೆದರು. ಅದೊಂದು ಸಂಗೀತ ನಾಟಕ. ಅವರೇ ತಿಳಿಸುವಂತೆ ಪ್ರದರ್ಶನಗೊಂಡ ಮೊದಲ ಕನ್ನಡ ನಾಟಕ ಅದು. ಅಂದಮೇಲೆ ಕನ್ನಡ ನಾಟಕವೊಂದನ್ನು ಬರೆದು ರಂಗಮಂಚದ ಮೇಲೆ ಆಡಿಸಿದ ಮೊದಲ ಕೀರ್ತಿ ಶಾಂತಕವಿಗಳಿಗೆ ಸಲ್ಲುತ್ತದೆ. ಪ್ರದರ್ಶಿತ ನಾಟಕವನ್ನು, ನಾಟಕಕಾರರನ್ನು, ನಟರನ್ನು ಮೆಚ್ಚಿ ಎಲ್ಲರೂ ಪ್ರಶಂಶಸಿದರು. ಇದರಿಂದ ಕರ್ನಾಟಕ ನಾಟಕ ಕಂಪೆನಿಯವರ ಉತ್ಸಾಹ ಗರಿಗೆದರಿತು. ಅವರು ಶಾಂತಕವಿಗಳನ್ನು ಇನ್ನೂ ಕೆಲವು ನಾಟಕಗಳನ್ನು ಬರೆದುಕೊಡುವಂತೆ ದುಂಬಾಲುಬಿದ್ದರು. ಅದರ ಫಲ ಒಂದಾದಮೇಲೊಂದು ಪೌರಾಣಿಕ ನಾಟಕಗಳ ರಚನೆ.

ಶಾಂತಕವಿಗಳ ಕಾವ್ಯ, ನಾಟಕಗಳ ಸುರಿಮಳೆಯನ್ನು ನಾವು ಮುಂದಿನ ಎರಡು ದಶಕಗಳಲ್ಲಿ ಕಾಣಬಹುದು. 63ಕ್ಕೂ ಹೆಚ್ಚಿನ ಕೃತಿಗಳನ್ನು ಮೊದಲ ದಶಕದಲ್ಲೇ ರಚಿಸಿದರೆಂದು ತಿಳಿದುಬರುತ್ತದೆ. ಅವಸರ ಮಾಡುವ ತಮ್ಮ 'ವಿಲಕ್ಷಣ ಸ್ವಭಾವ' ಕಾರಣವೆಂದು ಶಾಂತಕವಿಗಳೇ ಒಂದೆಡೆ ಹೇಳಿಕೊಂಡಿದ್ದಾರೆ. ಇದು ಕವಿತ್ವ ಹಾಗೂ ನಾಟಕ ನಿರ್ಮಾಣದಲ್ಲಿ ಅವರಿಗಿದ್ದ ಪ್ರತಿಭೆ, ಪಾಂಡಿತ್ಯ ಹಾಗೂ ಪ್ರೌಢತೆಯನ್ನು ಎತ್ತಿ ತೋರಿಸುತ್ತದೆ.

ಸಾಮಾನ್ಯ ಜನತೆಗಾಗಿ ತಮ್ಮ ಕಾವ್ಯ ನಾಟಕಗಳ ರಚನೆಯಾಗಬೇಕೆಂಬುದು ಶಾಂತಕವಿಗಳ ಪ್ರಧಾನ ಗುರಿಯಾಗಿತ್ತು. ಆಂಗ್ಲಭಾಷಾ ಮೋಹಕ್ಕೆ ಒಳಗಾದ ವಿದ್ಯಾವಂತರು, ಹಳೆಯ ಕನ್ನಡ ಪಂಡಿತರು ಕನ್ನಡ ತಾಯಿಯ ಸೇವೆಯನ್ನು ಮಾಡುತ್ತಿಲ್ಲವೆಂದು ಅವರು ಅನೇಕ ಕಡೆ ಆಕ್ಷೇಪಿಸಿದ್ದಾರೆ. ಅಂತಹ ಆಕ್ಷೇಪಣೆಯನ್ನು ಅವರ 'ಸೀತಾರಣ್ಯ ಪ್ರವೇಶ ನಾಟಕ'ದ ಪ್ರಸ್ತಾವನೆಯಲ್ಲಿ ಕಾಣಬಹುದು.

".....ಎಷ್ಟು ಮಾಡಿದರೂ ಅವರು ಪಂಡಿತರೇ ಪಂಡಿತರು. ಅವರಂತೆ ನಮ್ಮಿಂದ ಹ್ಯಾಗೆ ಆದೀತು? ಅವರ ಮುಗುಳು ನಗೆಯ ಒಂದೆರಡು ಶಬ್ದಗಳಿಂದ ಅದೆಷ್ಟು ಕಾರ್ಯವು ನಮ್ಮಂಥವರ ಇಡೀ ಜೀವಿತದಿಂದಲೂ ಆಗಲಿಕ್ಕಿಲ್ಲ. ಆದರೆ ಅಂಥ ಅರಸು ಪಂಡಿತರಿಗೆ ಅಣಕಿಸಿ ಅವರಲ್ಲಿ ಗ್ರಂಥರಚನೆಯ ಈರ್ಷ್ಯೆಯನ್ನು ಉತ್ಪನ್ನಮಾಡುವ ವಿಚಾರದಿಂದ, ಕನ್ನಡ ಭಾಷೆಯನ್ನು ಊರ್ಜಿತಗೊಳಿಸುವ ಅಭಿಲಾಷೆಯವರಾದ ನಾವು ಕನ್ನಡ ಭಾಷೆಯಲ್ಲಿ 63 ಗ್ರಂಥಗಳನ್ನು ರಚಿಸಿದ್ದೇವೆ". ಹೀಗೆ ಶಾಂತಕವಿಗಳ ಸಾಹಿತ್ಯಕಾರ್ಯದ ಪ್ರೇರಕ ಶಕ್ತಿಯೇ ಕನ್ನಡಾಭಿಮಾನವಾಗಿದ್ದಿತೆಂಬುದು ಗಮನಾರ್ಹವಾದ ವಿಷಯ. "ಕನ್ನಡದಲ್ಲಿ ಗ್ರಂಥಗಳು ಹೆಚ್ಚಾಗಬೇಕು. ಅನ್ಯ ಭಾಷೆಗಳಲ್ಲಿ ಇದ್ದ ಉತ್ತಮ ಕೃತಿಗಳನ್ನು ಕನ್ನಡಕ್ಕೆ ತರಬೇಕು. ಎಲ್ಲಲಿಯೂ ಕನ್ನಡದ ಪ್ರಚಾರವಾಗಬೇಕು ಎಂಬುದು ಶಾಂತಕವಿಗಳ ನರನಾಡಿಗಳಲ್ಲಿ ಸೇರಿಹೋಗಿದ್ದಿತೆ"ಂದು ಡಾ. ಶ್ರೀನಿವಾಸ ಹಾವನೂರರು ಅಭಿಪ್ರಾಯ ಪಡುತ್ತಾರೆ.

ಕರ್ನಾಟಕ ನಾಟಕ ಕಂಪನಿಯವರಿಗಾಗಿ ಶಾಂತಕವಿಗಳು ಬರೆದ ನಾಟಕಗಳಲ್ಲಿ ಕೆಲವನ್ನು ಇಲ್ಲಿ ಹೆಸರಿಸಬಹುದು. 'ಸಿರಿಯಾಳ ಸತ್ವ ಪರೀಕ್ಷೆ', 'ಸುಂದೋಪಸುಂದ ವಧೆ', 'ವತ್ಸಲಾಹರಣ', 'ಕೀಚಕವಧ', 'ಸುಧನ್ವ ವಧೆ',

'ಸೀತಾರಣ್ಯ ಪ್ರವೇಶ', 'ಪಾರ್ವತಿ ಪರಿಣಯ', 'ಮೇಘ ದೂತ', 'ಶಕುಂತಲೋತ್ಪತ್ತಿ', 'ಚಂದ್ರಾವಳಿ ಚರಿತ್ರೆ' –ಇವು ಮುಖ್ಯವಾದುವು.

ಜನರಲ್ಲಿ ನಾಟಕ ಕಲೆಯ ಬಗೆಗೆ ಹೊಸ ಅಭಿರುಚಿ ಹುಟ್ಟಿಸುವುದರಲ್ಲಿ ಶಾಂತಕವಿಗಳ ಪಾತ್ರ ಪ್ರಮುಖವಾದುದು. ಶಾಂತಕವಿಗಳ ನಾಟಕಗಳನ್ನು ಆಡಲೆಂದೇ ಕನ್ನಡನಾಡಿನ ಅನೇಕ ಕಡೆಗಳಲ್ಲಿ ನಾಟಕ ಕಂಪನಿಗಳು ಹುಟ್ಟಿಕೊಂಡವೆಂಬುದರಿಂದಲೇ ಇವರ ನಾಟಕಗಳ ಜನಪ್ರಿಯತೆಯ ಅರಿವಾಗುತ್ತದೆ. ಹೀಗೆ ಅವರ ನಾಟಕ ಪತಾಕೆಯು ಊರೂರಲ್ಲಿ ಮೆರೆದು ಹಾರಲಾರಂಭಿಸಿತು. ಇದಕ್ಕೆ ಕಾರಣರಾದ ಕೇವಲ ಇಪ್ಪತ್ತೈದು ವರ್ಷದವರಾದ ಶಾಂತಕವಿಗಳನ್ನು ಸನ್ಮಾನಿಸಲು 1881ರಲ್ಲಿ ಬೆಳಗಾವಿ, ಧಾರವಾಡ ಮೊದಲಾದೆಡೆಗಳಲ್ಲಿ ಸಾರ್ವಜನಿಕ ಸತ್ಕಾರ ಸಭೆಗಳು ನಡೆದುವು. ಜನತೆಯಿಂದ ಕನ್ನಡ ನಾಟಕಕಾರರೊಬ್ಬರಿಗೆ ಸಂದ ಈ ಗೌರವ ಪುರಸ್ಕಾರಗಳು ಅಭಿಮಾನಾಸ್ಪದವಾಗಿವೆ.

ಶಾಂತಕವಿಗಳ ಪ್ರಕಟಿತ ನಾಟಕಗಳನ್ನು ಅವಲೋಕಿಸುವುದರಿಂದ ಅವರ ನಾಟಕಗಳ ಸ್ವರೂಪವನ್ನು ಬಹುಮಟ್ಟಿಗೆ ಅರ್ಥಮಾಡಿಕೊಳ್ಳಬಹುದು. "ಶ್ರೀಮಾನ್ ಶಾಂತಕವಿಗಳ ನಾಟಕಗಳೆಂದರೆ ಸಾಮಾನ್ಯವಾಗಿ ಬಯಲಾಟಗಳಿಗೂ ಮಧ್ಯಸ್ಥವಾಗಿರುವ ರೂಪಗಳೆಂದು ಹೇಳಬಹುದು" ಎಂದು ತ.ಸು. ಶಾಮರಾಯರು ಅಭಿಪ್ರಾಯಪುಡುತ್ತಾರೆ.

ಶಾಂತಕವಿಗಳ ನಾಟಕಗಳಲ್ಲಿ ಮೊದಲು ಸೂತ್ರಧಾರನ ಪ್ರವೇಶ ಮತ್ತು ಅವನಿಂದ ಮಂಗಳಾಚರಣೆಯ ಹಾಡು ಕಂಡುಬರುತ್ತದೆ. ನಂತರ ಮುಖಕ್ಕೆ ಬೇವಿನ ಗೊಂಚಲನ್ನು ಕಟ್ಟಿಕೊಂಡು ಬರುವ ವಿದೂಷಕನ ವಿನೋದ ನೃತ್ಯ. ಆನಂತರ ವಿದೂಷಕ - ಸೂತ್ರಧಾರರ ಸಂಭಾಷಣೆಯ ಮೂಲಕ ಪ್ರೇಕ್ಷಕರಿಗೆ ನಾಟಕದ ಪರಿಚಯ. ನಾಟಕವನ್ನು ಹರಸುವಂತೆ ಸಿದ್ಧಿವಿನಾಯಕನ ಸ್ತೋತ್ರವನ್ನು ಸೂತ್ರಧಾರ ಹಾಡುವಾಗ ಗಣಪತಿಯ ಪ್ರವೇಶ. ಶಾರದಾ ಸ್ತೋತ್ರದ ಸಮಯದಲ್ಲಿ ನವಿಲಿನ ಮೇಲೆ ಕುಳಿತು ನರ್ತಿಸುವ ಸರಸ್ವತಿಯ ಆಗಮನ. ನಾಟಕವು ಸುಸೂತ್ರವಾಗಿ ಸಾಗುವುದೆಂಬ ಹರಕೆಯೊಡನೆ ಆ ದೇವತೆಗಳ ನಿಷ್ಕ್ರಮಣ. ನಂತರ ಸೂತ್ರಧಾರನಿಂದ ಪ್ರತಿಯೊಂದು ಪಾತ್ರದ ಪರಿಚಯ. ನಾಟಕ ಮುಗಿದ ನಂತರ ಮಂಗಳಾರತಿಯೊಡನೆ ನಾಟಕದ ಮುಕ್ತಾಯ. ಇದು ಅಂದಿನ ನಾಟಕ ಪ್ರದರ್ಶನದ ಪದ್ಧತಿಯಾಗಿತ್ತು. ಸಾಮಾನ್ಯವಾಗಿ ಬಯಲಾಟಗಳಲ್ಲೂ ಇದೇ ರೀತಿಯ ಪದ್ಧತಿಯು ಕಂಡುಬರುತ್ತದೆ. 'ಉಷಾಹರಣ', 'ವತ್ಸಲಾಹರಣ', 'ಪಾರ್ವತಿ ಪರಿಣಯ' ಇತ್ಯಾದಿ ನಾಟಕಗಳಲ್ಲಿ ಇದೇ ಸಂಪ್ರದಾಯವನ್ನು ನಾವು ಕಾಣಬಹುದು. 'ಪಾರ್ವತಿಪರಿಣಯ', 'ವತ್ಸಲಾಹರಣ', 'ಕೀಚಕವಧೆ' ನಾಟಕಗಳ ಸಂಭಾಷಣೆಗಳನ್ನು ಗಮನಿಸಿದಾಗ ಶಾಂತಕವಿಗಳ ವೈಶಿಷ್ಟ್ಯವೇನೆಂಬುದು ತಿಳಿದುಬರುತ್ತದೆ. ನಿರಾಭರಣ ಸುಂದರವಾದ ಸರಳ ಶೈಲಿ, ಸ್ವಾರಸ್ಯವಾದ ಹಿತಮಿತವಾದ ಸಂಭಾಷಣೆ - ಇವು ಶಾಂತಕವಿಗಳ ವೈಶಿಷ್ಟ್ಯಗಳು. ಈ ವೈಶಿಷ್ಟ್ಯಗಳು ಎದ್ದುಕಾಣುವಂತೆ ಸಂವಿಧಾನ ಕೌಸಲ ಮಾತ್ರ ಅಷ್ಟಾಗಿ ಕಂಡುಬರುವುದಿಲ್ಲ. ಚಾಚೂತಪ್ಪದೆ ಮೂಲದ ಕಥೆಯನ್ನು ನಾಟಕದ ಕಥೆಯೂ ಅನುಸರಿಸುತ್ತದೆ. ಪುರಾಣೋಕ್ತ ರೀತಿಯಲ್ಲೇ ಶಿವನು ಪಾರ್ವತಿಯನ್ನು ವಿವಾಹವಾದ ಕಥೆ ಮುಂದುವರಿಯುವುದೇ ಹೊರತು ಯಾವ ವ್ಯತ್ಯಾಸವೂ ನಾಟಕದಲ್ಲಿ ಕಂಡುಬರುವುದಿಲ್ಲ. ಪುರಾಣದ ಕಥೆಯನ್ನು ನಾಟಕಕ್ಕೆ ಅಳವಡಿಸಿಕೊಳ್ಳುವಾಗ ಹಲಕೆಲವು ವ್ಯತ್ಯಾಸಗಳನ್ನು ಮಾಡಿಕೊಳ್ಳುವುದು ಅಗತ್ಯ ಹಾಗೂ ಅನಿವಾರ್ಯವಾಗುತ್ತದೆ. ಆ ಅರಿವು ಶಾಂತವಿಗಳಲ್ಲಿ ಇನ್ನೂ ಮೂಡಿ ಬಂದಿರಲಿಲ್ಲ. ಕುಣಿತವಿಲ್ಲದ ಬಯಲಾಟವೇ ನಾಟಕವೆಂದು ಶಾಂತಕವಿಗಳು ಆರಂಭದಲ್ಲಿ ಭಾವಿಸಿದ್ದಂತೆ ತೋರುತ್ತದೆ.

ಸಮಕಾಲೀನವಾಗಿ ಪುರಾಣನಾಟಕದ ಕಥೆಯನ್ನು ಹೇಳಹೊರಟಾಗ ಎಚ್ಚರವಹಿಸಬೇಕಾದುದು ಅಗತ್ಯ. ಇಲ್ಲದಿದ್ದಲ್ಲಿ ಎಂತಹ ಪ್ರಮಾದ ವಾಗುತ್ತದೆಂಬುದಕ್ಕೆ ಶಾಂತಕವಿಗಳ 'ಉಷಾಹರಣ'ಕ್ಕಿಂತ ಉತ್ತಮವಾದ ಉದಾಹರಣೆ ಬಹುಪಾಲು ಸಿಗಲಾರದು. ಉರ್ದು ಭಾಷೆಯಲ್ಲಿ ಬಾಣಾಸುರನು ತನ್ನ ಸೇನಾಪತಿಯೊಡನೆ ಮಾತನಾಡುವುದು ತೀರಾ ಹಾಸ್ಯಾಸ್ಪದವಾಗಿದೆ. ಅದೇ ರೀತಿ ಕೋಪಿಸಿಕೊಂಡ ಪಾರ್ವತಿಯನ್ನು ಶಾಂತಗೊಳಿಸಲು ಶಿವ ಅವಳ ಕಾಲಿಗೆ ಬಿದ್ದು ಕ್ಷಮೆ ಕೇಳುವುದಂತೂ ನಗೆಪಾಟಲಾಗಿದೆ.

ಶಾಂತಕವಿಗಳು ಬಯಲಾಟದ ಪದ್ಧತಿಯನ್ನು ಚಾಚೂ ತಪ್ಪದಂತೆ ಅನುಸರಿಸಿಲ್ಲ. ನಾಟಕಗಳು ಆಧುನಿಕ ರಂಗಭೂಮಿಯ ಮೇಲೆ ಹೇಗೆ ಪ್ರದರ್ಶಗೊಳ್ಳಬೇಕೆಂಬ ವಿಚಾರವೇ ಜನರಿಗೆ ತಿಳಿಯದಿದ್ದ ಕಾಲದಲ್ಲಿ ಶಾಂತಕವಿಗಳು ಯಕ್ಷಗಾನ ನಾಟಕದ ರೂಪವನ್ನೇ ಬದಲಾಯಿಸಿ ಪಾತ್ರಗಳ ನೇರವಾದ ಸಂಭಾಷಣೆಗೆ ಪ್ರಾಮುಖ್ಯ ಕೊಟ್ಟು ಹೊಸ ರೀತಿಯ ಪ್ರದರ್ಶನಕ್ಕೆ ಪುರಾಣಕಥೆಗಳನ್ನು ಬಳಸಿಕೊಳ್ಳಲಾರಂಭಿಸಿದರು.

ಚೆಲುವು ರೂಪುಗಳಿದ್ದ, ಚೆಂದಬೇಸಗಳಿದ್ದ, ಲಲಿತಭಾಷಣವಿದ್ದ, ತಿಳಿಗಾನವಿದ್ದ, ಭಕ್ತರ ಕಥೆ, ಹರಿಹರಾದಿ ದೇವತೆಗಳ ಲೀಲೆ ಇದ್ದ ಅವರ ನಾಟಕಗಳು ಜನರಿಗೆ ಹಿಡಿಸಿದುವು. ಕನ್ನಡ ಭಾಷೆಯಲ್ಲಿ ಆಡುತ್ತಿದ್ದ ಅವರ ನಾಟಕಗಳು ಬೇಗ ಜನತೆಯ ಮನವನ್ನು ಸೂರೆಗೊಂಡು ಪ್ರಸಿದ್ಧವಾದುವು. ಅಷ್ಟೇ ಅಲ್ಲ ಒಂದೇ ನಾಟಕವನ್ನು ನೋಡಿದರೆ ಸಾಕು - ಇಹಲೋಕದಲ್ಲಿ ಸಿಕ್ಕುವ, ಪರಲೋಕದಲ್ಲಿ ಸಿಕ್ಕಬಹುದಾದುದೆಲ್ಲವೂ ಸಿಕ್ಕಿ ಹೋಗುತ್ತದೆ ಎಂದು ಜನ ಭಾವಿಸಿ ಹಿಗ್ಗುತ್ತಿದ್ದರು.

'ವತ್ಸಲಾಹರಣ'ದಲ್ಲಿ ಸಂವಿಧಾನಕೌಶಲ ಸ್ವಲ್ಪ ಕಂಡುಬರುತ್ತದೆ. ವತ್ಸಲಾ ಬಲರಾಮನ ಮಗಳು. ಶಕುನಿಯ ರಾಯಭಾರದಲ್ಲಿ ಅವಳನ್ನು ದುರ್ಯೋಧನನ ಮಗನಾದ ಲಕ್ಷಣನಿಗೆ ತಂದುಕೊಳ್ಳುವ ಪ್ರಯತ್ನ ನಡೆಯುತ್ತದೆ. ತನ್ನ ಮಗನಾದ ಅಭಿಮನ್ಯುವನ್ನು ಬಿಟ್ಟು ಲಕ್ಷಣನಿಗೆ ವತ್ಸಲೆಯೊಡನೆ ವಿವಾಹದ ಸಿದ್ಧತೆಯನ್ನು ಕಂಡು ಸುಭದ್ರೆಗೆ ಕೋಪ ಬಂದಿತು. ತಾಯಿ ಮಕ್ಕಳು ಯುದ್ಧಕ್ಕೆ ಸಿದ್ಧರಾದರು. ಸುಭದ್ರೆ, ಸಾರಥಿ, ಅಭಿಮನ್ಯು ಯೋಧ. ಅರ್ಜುನನಿಗೆ ವಿಷಯ ತಿಳಿಸಲು ಹೊರಟಾಗ ಕಾಡಿನಲ್ಲಿ ಘಟೋತ್ಕಚ ಇದಿರಿಸಿದ. ಪರಸ್ಪರ ಪರಿಚಯವಿಲ್ಲದ ಸೋದರರು ಹೋರಾಡಿದರು. ಅಭಿಮನ್ಯು ಗೆದ್ದ, ಘಟೋತ್ಕಚ ಸೋತ. ಆದರೇನು ತಾವು ಯಾರೆಂಬುದು ಗೊತ್ತಾದಾಗ ಘಟೋತ್ಕಚ ತಮ್ಮನಿಗೆ ಬೆಂಬಲವಾಗಿ ನಿಂತ. ಕೌರವ ಬಲರಾಮರ ಮೇಲೆ ಯುದ್ಧಕ್ಕೆ ಸಿದ್ಧನಾದ. ಆದರೆ ತಾಯಿಯ ಮಾತಿನಂತೆ ವತ್ಸಲೆಯನ್ನು ಕದ್ದುತಂದು ಮಾಯಾವತ್ಸಲೆಯನ್ನು ದ್ವಾರಕೆಯಲ್ಲಿಟ್ಟು ಕೌರವ ಬಲರಾಮರನ್ನು ಸೋಲಿಸಿದ. ಘಟೋತ್ಕಚನ ಬುದ್ಧಿವಾದ, ಅಭಿಮನ್ಯುವಿನ ವೀರವಚನ ಇವುಗಳು ಚೆನ್ನಾಗಿ ಮೂಡಿಬಂದಿದೆ.

'ಚಂದ್ರಾವಳಿ ಚರಿತ್ರೆ' ಭಾಗವತದಿಂದ ತೆಗೆದುಕೊಂಡು ಬರೆದಿರುವ ನಾಟಕ. ಶ್ರೀಕೃಷ್ಣನು ಪುಷ್ಪಹೃದಯ ರಮ್ಯಭೂಷಣದೊಂದಿಗೆ ಬಂದು

ಹೆಣ್ಣುಗಳಿಗಾಗಿ ಹೊಂಚುಹಾಕುತ್ತಿರುವಾಗ, ಅಲ್ಲಿಗೆ ನಕ್ಷತ್ರಮಾಲಿಕಾ ಕೈರವೆಯರೊಡಗೂಡಿದ ಚಂದ್ರಾವಳಿ ವೈಯಾರದಿಂದ ಬರುತ್ತಾಳೆ. ನಕ್ಷತ್ರಮಾಲಿಕೆ ವನದಲ್ಲಿದ್ದ ದುಂಬಿಗಳನ್ನು "ವಿರಹಿಗಳನ್ನು ಎಳೆಎಳೆದು ತರಲಿಕ್ಕೆ ವಾರಂಟುಕೊಟ್ಟು ಮಾರ ಮ್ಯಾಜಿಸ್ಟ್ರೇಟನು ಕಳಿಸಿದ ಕರಿ ಅಂಗಿಯವರ ಹಿಂಡೋ" ಎಂದು ವರ್ಣಿಸುವುದು ರಸಾಭಾಸಕ್ಕೆ ಎಡೆಮಾಡಿಕೊಟ್ಟಿದೆ.

'ಸೀತಾರಣ್ಯ ಪ್ರವೇಶ' ಉತ್ತರ ರಾಮಾಯಣದಿಂದ ಆರಿಸಿಕೊಂಡು ಬರೆದಿರುವ ನಾಟಕ. ಯಾವ ರೀತಿಯ ಆಭಾಸಗಳೂ ಇಲ್ಲದೆ ನಾಟಕ ಚೆನ್ನಾಗಿ ಮೂಡಿಬಂದಿದೆ. ಗರ್ಭಿಣಿಯಾಗಿದ್ದ ಸೀತೆಯ ಬಯಕೆ ಮತ್ತು ಅದು ಫಲಿಸಿದ ರೀತಿ ಪ್ರೇಕ್ಷಕರ ಮನವನ್ನು ಕರಗಿಸುತ್ತದೆ. ಆಡು ಭಾಷೆಯಲ್ಲಿ ಸರಳವಾಗಿ ಬರೆದ ಈ ನಾಟಕ ಶಾಂತಕವಿಗಳ ನಾಟಕ ಕಲಾ ಶಕ್ತಿಯ ಪರಾಕಾಷ್ಠತೆಗೆ ಒರೆಗಲ್ಲಾಗಿದೆ.

ಸೀತಾಪರಿತ್ಯಾಗದ ಸಮಯದಲ್ಲಿನ ಆಪ್ತಾಲೋಚನೆಯಲ್ಲಿ ಬರುವ ಭರತ ಶತ್ರುಘ್ನರ ಮಾತುಗಳಿವು :

ಭರತ : ನಾವು ಸುಮ್ಮನಿರುವುದೇ ಲೇಸು, ಯಾಕೆಂದರೆ ಹೇಳಿಕೊಂಡದ್ದಕ್ಕೆ ದಯಾ ಬಂದರೆ ಚಿಂತೆಯಿಲ್ಲ... ಹಣ್ಣು ಕಾಣದ ಬಿಸಿಲಿನ ಬೈಲಲ್ಲಿಯ ಕೋತಿಯ ಹಾಗೆ ಅಂಗಲಾಚಿದರೆ ಏನು ಬಂದ ಹಾಗಾಯಿತು.

ಶತ್ರುಘ್ನ : (ರಾಮನಿಗೆ) ಇಷ್ಟೊಂದು ಅವಳ ಮೇಲೆ ಉಗ್ರಶಾಸನದ ಕಿಡಿಗಳನ್ನು ಸುರಿಸುವುದು ಮನದಲ್ಲಿದ್ದರೆ ಅವಳು ಅಗಲಿ ಹೋದಾಗ ಗೋಳಾಡಿ ಅತ್ತಿಯಾಕೆ?

ನೈಜತೆ, ವಾಸ್ತವಗಳಿಗೆ ಹತ್ತಿರವಾದ ಈ ಮಾತುಗಳು ಗಮನಾರ್ಹವಾದುವು. ಸೀತೆಯು ಅರಣ್ಯಕ್ಕೆ ಹೊರಟುನಿಂತಾಗ ಅವಳ ದಾಸಿಯೊಡನೆ ನಡೆದ ಸಂಭಾಷಣೆಯು ಬಹಳ ಸೊಗಸಾಗಿ ಮೂಡಿ ಬಂದಿದೆ. ಈ ಸಂಭಾಷಣೆ ನಡೆಯುವಾಗ ತೆರೆಯ ಹಿಂದೆ ರಥವನ್ನು ಸಿದ್ಧಮಾಡುತ್ತಿದ್ದ ಲಕ್ಷ್ಮಣನು ತನ್ನನ್ನೇ ಬೈದುಕೊಳ್ಳುವ ಚಿತ್ರಣವನ್ನು ಶಾಂತಕವಿಗಳು ಕೊಟ್ಟಿದ್ದಾರೆ. ರಂಗದ ಮೇಲೆ ತುಂಬ ಪರಿಣಾಮವನ್ನು ಬೀರಬಲ್ಲ ತಂತ್ರ ಅದು. ಶಾಂತಕವಿಗಳ ಅನೇಕ ನಾಟಕಗಳಲ್ಲಿ ಯಕ್ಷಗಾನ ಬಯಲಾಟಗಳ ತಂತ್ರವನ್ನು ಬಳಸಿ ಆಧುನಿಕ ರಂಗಭೂಮಿಗೆ ಹೊಂದಿಕೊಳ್ಳುವಂತಹ ಹೊಸ ಆಲೋಚನೆ, ರೀತಿ ಹಾಗೂ ತಂತ್ರಗಳೊಡನೆ ನಾಟಕಗಳನ್ನು ಬರೆದರು.

'ಸಿರಿಯಾಳ ಸತ್ವಪರೀಕ್ಷೆ' ಮತ್ತು 'ಸುಂದೋಪಸುಂದ' ನಾಟಕಗಳು ಸಾಹಿತ್ಯ ದೃಷ್ಟಿಯಿಂದ ಉತ್ತಮ ಕೃತಿಗಳಲ್ಲದಿದ್ದರೂ ರಂಗದ ಮೇಲೆ ರಂಜಿಸಬಲ್ಲ ನಾಟಕಗಳು. ಹೊಸ ಕಲ್ಪನೆ, ಸಂಭಾಷಣೆಯ ಸೊಗಸು ಇವುಗಳಿಂದಾಗಿ ಅನೇಕ ಕಡೆಗಳಲ್ಲಿ ಹೊಸತನದ ಮೆರುಗು ಕಾಣುತ್ತದೆ. ಸ್ವರ್ಗಲೋಕದ ರಂಭೆಯನ್ನು ಅಲ್ಲಿಗೆ ದಾಳಿಯಿಟ್ಟ ರಾಕ್ಷಸದ್ವಯರು ದಿಕ್ಕುಗೆಡಿಸುತ್ತಾರೆ. ರಂಭೆಯು ಇಂದ್ರ, ಚಂದ್ರ, ಯಮ, ಸೂರ್ಯ ಮುಂತಾದವರಿಗೆ ತನ್ನ ಗೋಳನ್ನು ಹೇಳಿಕೊಳ್ಳುತ್ತಾಳೆ. ಇಂದ್ರ ಧೈರ್ಯ ಹೇಳುತ್ತಾನೆ. 'ಆ ರಾಕ್ಷಸರನ್ನು ಧ್ವಂಸ ಮಾಡಿ ಬರುತ್ತೇನೆ. ನೀನು ಸರ್ವಥಾ ಚಿಂತಾಕುಂಡದಲ್ಲಿ ಧುಮುಕಬೇಡ' ಎಂದು ಆಶ್ವಾಸನೆಯನ್ನು ಕೊಡುತ್ತಾನೆ. ಆದರೆ ಆಕೆಯು ಹಲುಬುತ್ತಲೇ ಇರುತ್ತಾಳೆ. ಸೂರ್ಯನು ಹೆಂಗಸಾದ ಇವಳನ್ನು ಸಮಾಧಾನ ಮಾಡದೆ ಇಲ್ಲಿಂದೇಳಬೇಕಾದರೆ ತ್ರಿಮೂರ್ತಿಗಳಿಂದಲೂ ಆಗಲಿಕ್ಕಿಲ್ಲ, ಆದ್ದರಿಂದ ಆ ಹಂಬಲವನ್ನು ಬಿಟ್ಟು ಯುದ್ಧಕ್ಕೆ ಹೋಗೋಣ ನಡೆಯಿರಿ ಎನ್ನುತ್ತಾನೆ. ಸೂರ್ಯದೇವನ ದೃಷ್ಟಿಯಲ್ಲಿ ರಂಭೆ ಸಾಮಾನ್ಯ ಹೆಂಗುಸಾಗಿದ್ದಾಳೆ. ಇದು 'ಸುಂದೋಪಸುಂದ' ನಾಟಕದ ಕಥೆ.

ಅಂದಿನ ಪೌರಾಣಿಕ ನಾಟಕಕಾಕರರನ್ನು ಗಮನಿಸಿದಾಗ ಶಾಂತಕವಿಗಳ ಕೊಡುಗೆಯು ಮಹತ್ವಪೂರ್ಣವಾದದ್ದೆಂಬ ಅರಿವು ಯಾರಿಗಾದರೂ ಆಗದಿರದು. ಸಮಗ್ರ ಕರ್ನಾಟಕದ ಸ್ವತಂತ್ರ ನಾಟಕಕಾರರಲ್ಲಿ ಶಾಂತಕವಿಗಳೇ ಮೊದಲಿಗರು. ಅನುವಾದದ ಕಡೆ ಗಮನಹರಿಸದೆ ಪೌರಾಣಿಕ ಕಥಾವಸ್ತುಗಳಿಂದ ಸ್ವಂತವಾಗಿ ನಾಟಕಗಳನ್ನು ರಚಿಸಿ ಕಳೆದ ಶತಮಾನದಲ್ಲೇ ಹಿರಿಯ ಸಾಧನೆಯನ್ನು ಮಾಡಿದ ಕೀರ್ತಿ ಶಾಂತಕವಿಗಳದು. ನವರಸಗಳಿಂದ ಕೂಡಿರುವ ಅವರ ನಾಟಕಗಳಲ್ಲಿ ಶೃಂಗಾರಕ್ಕೆ ವಿಶೇಷ ಪ್ರಾಧಾನ್ಯತೆಯಿದೆ. ಅದರೊಂದಿಗೆ ಹರಿಭಕ್ತಿ ಹಾಗೂ ಸದಾಚಾರ ಬೋಧನೆಗಳಿಗೂ ಅವಕಾಶ ದೊರೆತಿದೆ. ಅವರ ಸಾಹಿತ್ಯ ಸೃಷ್ಟಿ ಆಡುಭಾಷೆಗೆ ಹತ್ತಿರವಾಗಿದ್ದು ಕೆಲವೊಮ್ಮೆ ಅವು ದೋಷವೆನಿಸುವಷ್ಟು ಉರ್ದು, ಹಿಂದೂಸ್ಥಾನಿ ಶಬ್ದಗಳು ಕಂಡುಬರುತ್ತವೆ. ಆದರೆ ಪೌರಾಣಿಕ ವ್ಯಕ್ತಿಗಳ ಅವರ ಮಾತಿನ ರೀತಿಯು, ವಿಚಾರಸರಣಿಯು ಅಂದಿನ ಸಾಮಾಜಿಕ ಚಿತ್ರಣವನ್ನು ಕೊಡುವುದರಲ್ಲಿ ಸಹಾಯಕವಾಗಿವೆಯೆಂಬುದನ್ನು ಮರೆಯುವಂತಿಲ್ಲ. ಸಂವಿಧಾನ ಕೌಶಲದ ಕಡೆ ಶಾಂತಕವಿಗಳು ಗಮನ ಹರಿಸಿದ್ದಲ್ಲಿ ಅವರ ಕೆಲವು ನಾಟಕಗಳಾದರೂ ಅತ್ಯುತ್ತಮ ನಾಟಕಗಳ ಗುಂಪಿಗೆ ಸೇರುತ್ತಿದ್ದುವು.

1886ರಲ್ಲಿ ಅಗಡಿಗೆ ವರ್ಗವಾಗಿ ಬಂದ ಶಾಂತಕವಿಗಳು ಸುಮಾರು ಹತ್ತು ವರ್ಷಗಳ ಕಾಲ ಅಲ್ಲಿ ಸೇವೆ ಸಲ್ಲಿಸಿದರು. ಅಗಡಿಯಲ್ಲಿ ಶಾಂತಕವಿಗಳ ವ್ಯಕ್ತಿತ್ವ ಮತ್ತಷ್ಟು ಚೆನ್ನಾಗಿ ವಿಕಾಸವಾಗುವಂತಹ ವಾತಾವರಣ ಅವರಿಗೆ ದೊರಕಿತು. ಅಗಡಿಯ ಶೇಷಾಚಲ ಸಾಧುಗಳು, ಅಗಡಿಯ ದೇಸಾಯಿ, ಶಿಶುನಾಳ ಶರೀಫ ಸಾಹೇಬ ಮತ್ತು ಮೂಡಲಪಾಯದ ಹೆಸರಾಂತ ಶರಣಪ್ಪ ಇವರ ಸಂಪರ್ಕ, ಸಾನ್ನಿಧ್ಯಗಳು ಶಾಂತಕವಿಗಳಲ್ಲಿ ಪರಿಪಕ್ವತೆಯನ್ನು ತಂದುಕೊಡಲು ನೆರವಾದುವು.

ಮೊದಮೊದಲು ಅನುವಾದದ ಕಡೆ ಅಷ್ಟಾಗಿ ಗಮನ ಕೊಡದಿದ್ದ ಶಾಂತಕವಿಗಳು ಅಗಡಿಯಲ್ಲಿದ್ದಾಗ ಅನುವಾದದ ಕಡೆಗೂ ಗಮನ ಹರಿಸಿದರು. ಅದರ ಫಲವೇ 'ಮೇಘದೂತ', 'ವಿರಹತರಂಗ' ಮೊದಲಾದ ಕೃತಿಗಳು. ಸಂಸ್ಕೃತದ ಈ ಉತ್ತಮ ಕೃತಿಗಳ ಕಾವ್ಯಗುಣವನ್ನು ಮೊಟ್ಟಮೊದಲಿಗೆ ಮೆಚ್ಚಿದ ಕನ್ನಡ ಕವಿಯೆಂದರೆ ಶಾಂತಕವಿಗಳೆಂಬುದು ಗಮನಾರ್ಹವಾದ ವಿಷಯ. ಬಹಳ ಜನಪ್ರಿಯತೆಯನ್ನು ಸಂಪಾದಿಸಿದ್ದ ಶಾಂತಕವಿಗಳು ಅಗಡಿಯನ್ನು ಬಿಡುವಾಗ ಅದ್ದೂರಿಯಾದ ಬೀಳ್ಕೊಡುಗೆ ಸಮಾರಂಭ ನಡೆದು ರಸಿಕರಾದ ಕನ್ನಡಿಗರಿಂದ ಒಂದು ಮನೆ ಹಾಗೂ ಜಮೀನುಗಳು ಅವರಿಗೆ ದತ್ತಿಯಾಗಿ ದೊರೆಯಿತೆಂದು ತಿಳಿದುಬರುತ್ತದೆ.

ಏನಾದರೇನು ಶಾಂತಕವಿಗಳ ಆರ್ಥಿಕ ಪರಿಸ್ಥಿತಿ ಅಷ್ಟೇನೂ ಅನುಕೂಲಕರವಾಗಿರಲಿಲ್ಲ. ನಲವತ್ತು ವರ್ಷ ಸೇವೆಸಲ್ಲಿಸಿದ ಅವರಿಗೆ ಕೊನೆಗಾಲದಲ್ಲಿ ಕೇವಲ ಇಪ್ಪತೆರಡು ರೂಪಾಯಿ ಸಂಬಳ ಮಾತ್ರ ದೊರೆಯುತ್ತಿತ್ತು. ಮೊದಲೇ ಬಡತನದಲ್ಲಿ ಬೆಳೆದುಬಂದಿದ್ದ ಶಾಂತಕವಿಗಳಿಗೆ ಸಂಸಾರ ಬೆಳೆದದ್ದರಿಂದ ಅದನ್ನು ನಿಭಾಯಿಸಲಾಗದೆ ಅವರ ಚೇತನ ಕುಗ್ಗಿತು. ಅಂದು ಎಲ್ಲೆಲ್ಲೂ ರಾಷ್ಟ್ರೀಯ ಜಾಗೃತಿ ತಲೆದೋರುತ್ತಿತ್ತು. ಒಂದು ಕಾಲಕ್ಕೆ

"ಎತ್ತುಂ ಪೊತ್ತರೆ ತಾಳಲಾರದಷ್ಟು" ಗ್ರಂಥಗಳನ್ನು ರಚಿಸಿದ ಶಾಂತಕವಿಗಳೇ ಇಂದು "ಬತ್ತಲ್ ದೀಪದ ಬತ್ತಿ ಹೊಯ್ಯಲಕಟಾಸ್ನೇಹಾಂಶವೇ ದುರ್ಲಭಂ" ಎಂದು ನಿಟ್ಟುಸಿರು ಬಿಡುವಂತಾಯಿತು. ಇಂತಹ ಸಮಯದಲ್ಲೇ 1912ರಲ್ಲಿ ಶಾಂತಕವಿಗಳು ಸೇವೆಯಿಂದ ನಿವೃತ್ತಿಹೊಂದಿದರು. ಬಹಳ ಕಷ್ಟದಲ್ಲಿದ್ದ ಇವರ ಪರಿಸ್ಥಿತಿಯನ್ನರಿತು ಬೋಧರಾಯಾಚಾರ್ಯ ಸವಣೂರ, ಭಿಷ್ಟೋ ಪದಕಿ, ಬಾಳಾಜಿ ಅಣ್ಣಿಗೇರಿಕರ ಮೊದಲಾದವರು ಶಾಂತಕವಿಗಳ ಕೃತಿಗಳ ಮುದ್ರಣ ಮಾರಾಟಗಳ ಕೆಲಸವನ್ನು ಉತ್ಸಾಹದಿಂದ ತೆಗೆದುಕೊಂಡು ಶಾಂತಕವಿಗಳ ಕಷ್ಟದ ದಿನಗಳಲ್ಲಿ ನೆರವಾದುದನ್ನು ಯಾರಾದರೂ ನೆನೆಯಲೇಬೇಕು.

ಇಳಿಯ ವಯಸ್ಸಿನಲ್ಲೂ ಶಾಂತಕವಿಗಳ ಕವನ ಸ್ಫೂರ್ತಿಯು ಮರಳಿ ಚಿಮ್ಮಲು 'ಕರ್ನಾಟಕ ಗತವೈಭವ'ದ ಪ್ರಕಟಣೆ ಪ್ರಧಾನ ಕಾರಣವಾಯಿತು. ಜನಜಾಗೃತಿಯುಂಟುಮಾಡಲು ಶಾಂತಕವಿಗಳು 'ವಿದ್ಯಾರಣ್ಯ ವಿಜಯ'ವನ್ನು ಊರೂರಲ್ಲಿ ಕೀರ್ತನೆ ಮಾಡಿದರೆಂದು ಆಲೂರು ವೆಂಕಟರಾಯರೇ ತಿಳಿಸಿದ್ದಾರೆ. ಕನ್ನಡದ ಜನ ಬರಿ ಬಾಯಿ ಬಡುಕರು, ಕೆಲಸಗಳ್ಳರು ಎಂದು ಶಾಂತಕವಿಗಳು ಮೂದಲಿಸಿ ಎಚ್ಚರಿಸಬೇಕಾಯಿತು.

ಶಾಂತಕವಿಗಳ 'ರಕ್ಷಿಸು ಕರ್ನಾಟಕದೇವಿ' ಎಂಬ ಹಾಡಂತೂ ಮುಂಬಯಿ ಕರ್ನಾಟಕದಲ್ಲಿ ಬಹಳ ವರ್ಷಗಳು ನಾಡಗೀತೆಯಾಗಿತ್ತೆಂದು ತಿಳಿದುಬರುತ್ತದೆ.

ಒಟ್ಟಾರೆ ಶಾಂತಕವಿಗಳ ಕೃಷಿಯನ್ನು ಗಮನಿಸಿದಾಗ ಅವುಗಳ ಪ್ರೇರಕಶಕ್ತಿ ಕನ್ನಡಾಭಿಮಾನವೆಂಬುದು ಅನೇಕ ಕಡೆಗಳಲ್ಲಿ ಕಂಡು ಬರುತ್ತದೆ. ಕನ್ನಡದ ಪ್ರಚಾರ ಎಲ್ಲೆಲ್ಲೂ ಆಗಬೇಕು. ಕನ್ನಡದಲ್ಲಿ ಗ್ರಂಥಗಳ ಸಂಖ್ಯೆ ಹೆಚ್ಚಬೇಕು. ಅದಕ್ಕಾಗಿ ಬೇರೆಯ ಭಾಷೆಗಳಲ್ಲಿನ ಉತ್ತಮ ಕೃತಿಗಳನ್ನು ಕನ್ನಡಕ್ಕೆ ತಂದುಕೊಳ್ಳಬೇಕೆಂಬ ಅಂಶ ಶಾಂತಕವಿಗಳಲ್ಲಿ ತುಂಬಿತುಳುಕುತ್ತಿತ್ತು.

1919ರಲ್ಲಿ ಧಾರವಾಡದಲ್ಲಿ ಸಾಹಿತ್ಯ ಸಮ್ಮೇಳನ ನಡೆಯಬೇಕಿತ್ತು. ಹಣಕಾಸಿನ ತೊಂದರೆಯಿಂದಾಗಿ ಪೇಚಾಡಿ ಒದ್ದಾಡುತ್ತಿದ್ದ ಕಾರ್ಯಕರ್ತರಿಗೆ ಬೆಂಬಲವಾಗಿ ನಿಂತರು ಶಾಂತಕವಿಗಳು. ಮುದುಕರಾದರೂ ಕನ್ನಡದ ಕೆಲಸವೆಂದ ಕೂಡಲೆ ಸಾಹಿತ್ಯ ಸಮ್ಮೇಳನಕ್ಕೆ ಹಣ ಸಂಗ್ರಹಿಸಲು ಕನ್ನಡಿಗರ ಮನೆಮನೆಗೆ ಹೋಗಿ ಹಾಡಿದರು. ಆ ಸಂದರ್ಭದ ಕವಿತೆ ಇದು:

"ಬೇಡಲು ಕನ್ನಡ ದಾಸಯ್ಯ ಬಂದಾನೆ
ನೀಡಿರವ್ವಾ ತಡಮಾಡದಲೆ
ಕನ್ನಡಮಾತಿನ ತಂದೆತಾಯಿಗಳಿಂದ
ಚೆನ್ನಚೆನ್ನೆಯರೆಲ್ಲ ಹುಟ್ಟಿದಿರಿ
ಕನ್ನಡ ದೇಶದಿ ದೊಡ್ಡವರಾದಿರಿ
ಕನ್ನಡದಿಂದಲೆ ಶ್ರೀಮಂತರಾದಿರಿ
ಕನ್ನಡದೇಶದಿ ಹೆಸರಾದಿರಿ
ಅನ್ಯಭಾಷೆಗಳಂತೆ ಕನ್ನಡ ಭಾಷೆಗೆ
ಉನ್ನತಿಕೆಯ ತರಬೇಕೆಂದು
ಹೊನ್ನು ಕೂಡಿಸಲಿಕ್ಕೆ ಬಂದಿಹನಾತನು
ಮನ್ನಿಸಿ ನೀವೆಲ್ಲ ಕೊಡಬೇಕು
ಹೊಟ್ಟೆಗಿಲ್ಲದೆ ಬಂದ ದಾಸಯ್ಯನಿವನಲ್ಲ
ಕೊಟ್ಟಿದ್ದ ಬಿಟ್ಟು ಹೋಗುವನಲ್ಲವು
ದಿಟ್ಟಿಸಿ ದಿಟ್ಟಿಸಿ ಕೊಡ ಬಂದ ಕೈಗಳ
ನೊಟ್ಟು ಸೇರಿಸಿ ಪದ ಕಟ್ಟುವನು."

"ಶಾಂತಕವಿಗಳ ಕಾವ್ಯ ಹಳೆಯ ಪರಂಪರೆಯಿಂದ ಬಿಡುಗಡೆಯನ್ನು ಪಡೆಯದಿದ್ದರೂ ಕನ್ನಡ ನಾಡು-ನುಡಿಗಳ ಅಭಿಮಾನದ ಆವೇಶದಲ್ಲಿ ಅವರ ಕಾವ್ಯ ಹೊಸ ಜನ್ಮವನ್ನು ಪಡೆಯಿತು. 'ಕನ್ನಡ ದಾಸಯ್ಯ', 'ರಕ್ಷಿಸು ಕರ್ನಾಟಕದೇವಿ' ಇಂಥ ಅವರ ಕವನಗಳಲ್ಲಿ ಆಧುನಿಕ ಭಾವಗೀತದ ಜೀವಸ್ವರಗಳು ಸ್ಪಷ್ಟವಾಗಿ ಕೇಳುತ್ತವೆ" ಎಂದು ಕುರ್ತಕೋಟಿಯವರು ಅಭಿಪ್ರಾಯಪಡುತ್ತಾರೆ.

ಶಾಂತಕವಿಗಳು ಹಲವಾರು ದುಂದುಮೆ, ಲಾವಣಿಗಳನ್ನೂ ಸಹ ರಚಿಸಿದ್ದಾರೆ. ಶಾಂತಕವಿಗಳ ದುಂದುಮೆಗಳಲ್ಲಿ ಶ್ರೀಕೃಷ್ಣನು ಮೋಹಿನೀ ರೂಪವನ್ನು ಧರಿಸಿ ಶಿವನನ್ನು ಮರುಳುಗೊಳಿಸುವ ದುಂದುಮೆಯು ಚೆನ್ನಾಗಿದೆ. 'ರಸಿಕರ ಮನೋರಂಜನಾರ್ಥ'ವಾಗಿ ರಚಿತವಾದ ದುಂದುಮೆಗಳಿವು.

1900 ಸುಮಾರಿಗೆ ಶಾಂತಕವಿಗಳು ರಚಿಸಿದ ಲಾವಣಿಯೊಂದರ ಕೆಲವು ಪದ್ಯಗಳು ಹೀಗಿವೆ :

"ನೀ ಯಾರಿಗ್ಹೇಳತಿ
ಹೊಲಾ ಹೊಡೀತಿ ಹಸನ ಮಾಡತೀ
ಬೀಜಾ ಹಾಕತೀ ಕಾಯಿಸತೀ
ಬೆಳೀ ನೋಡತೀ ಕೋಲಿಗೆ ಬಂತಂತಿ

ಹೆರವರ್ ಚಂಡಿಯಾಡಿದರ ಯಾರಿಗ್ಹೇಳತಿ |
ನೀ ಯಾರಿಗ್ಹೇಳತಿ
ಹಗಲೆಲ್ಲ ದುಡೀತಿ ಹೈರಾಣ ಆಗತೀ
ರಾತರಿನ್ಯಾಗ ನಿದ್ದಿಬಂದು ನೀ ಬೀಳತೀ
ಮನಿತುಂಬಿ ಭಾಳೇವು ಹಾಂಗ ಬಿದ್ದಿರತೈತಿ

ಬೆಳತಂಕ ಮನಿ ಕಾಯಾಕ್ಯಾರಿಗ್ಹೇಳಿರತೀ ||
ಹೆಣತಿನ್ನ ಮಾಡಿಕೊಂತಿ ಮನಿತುಂಬಿಸಿಕೊಂತಿ
ಮನದಾಗ ಮಾರಿ ನೋಡಿ ಬಾಳ ಹಿಗ್ಗತೀ
ಬಾಳೇವ ಮಾಡೇನಂತಿ ಎಲ್ಲಾನು ಬೇಕಂತಿ

ಹೇಣತಿ ಬಾಳೇವೊಲ್ಲೆಂತ ಬಿಟ್ರ್ಯಾರಿಗ್ಹೇಳತಿ ||
ಉಂಗುರಾ ಇಡತೀ ಉಡದಾರ ಕಟ್ಟತೀ
ಜರತಾರಿ ಪಾವಡಾ ತಿದ್ದಿತಿದ್ದಿಸುತ್ತತೀ
ಊರಾಗ್ಹರದಾಡತೀ ಬಡವರ ಬೆದರಸತೀ

ಅಲ್ಲೆ ನಿನ್ನ ಸುಲಕೊಂಡಬಿಟ್ರ್ಯಾರಿಗ್ಹೇಳತೀ ||
ಮೈಯಾಗ ಎಣ್ಣೈತಿ ಮಾರಿಮ್ಯಾಗ ಬಣ್ಣೈತಿ
ಮುದುಕಲ್ಲ ತದಕಲ್ಲ ಹರೇವೈತಿ
ಕೂಳ ಪಡಶಾ ಮಾಡತಿ ಗೂಳಿಹಾಂಗ ತಿರಗತಿ
ಉಡಾಳ ಮೂಳ ನಿನ್ನಿಂದುಪ್ಯಾಗ್ ಯಾರಿಗೈನತಿ ||

ಶಾಂತಕವಿಗಳ ಬಹುತೇಕ ಕವಿತೆಗಳಲ್ಲಿ ಭಾಷೆ ಅಥವಾ ದೇಶದ ಮೇಲಿನ ಅಭಿಮಾನ ಕಾಣಿಸಿಕೊಂಡಿರುವುದನ್ನು ಗುರುತಿಸಬಹುದು. ಇತರರಿಗೆ

ಉಪಕಾರವೆಸಗದ ಬಾಳು ಹಾಳು. ಉಪಕಾರವಿದ್ದಲ್ಲಿ ಪ್ರತ್ಯುಪಕಾರವನ್ನು ಕಾಣಬಹುದು. ತುಂಡು ದನದಂತೆ ತಿಂದುಂಡು ಜೀವನ ಮಾಡದೆ ತಾನೂ ಸಮಾಜದಲ್ಲಿ ಒಬ್ಬ ಎಂಬ ಪ್ರಜ್ಞೆಯಿಂದ ಜೀವನ ಮಾಡಬೇಕೆಂಬಲ್ಲಿ ಶಾಂತಕವಿಗಳ ದೇಶಾಭಿಮಾನದ ಪ್ರಜ್ಞೆ ಅಂತಹ ಪ್ರಜ್ಞೆಯಿಲ್ಲದವರಿಗೆ ದಾರಿದೀಪವಾಗಿದೆ. ಹೊಸಗನ್ನಡದ ಕವಿಗಳಲ್ಲಿ ಇಂತಹ ರಾಷ್ಟ್ರೀಯ ಭಾವನೆಯಿಂದ ಕವಿತೆಗಳನ್ನು ನಿರ್ಮಿಸಿದವರಲ್ಲಿ ಶಾಂತಕವಿಗಳೇ ಮೊದಲನೆಯವರೆಂಬುದು ಗಮನಾರ್ಹವಾದ ಸಂಗತಿ.

ಶಾಂತಕವಿಗಳು ಕಾವ್ಯನಾಟಕಗಳ ಜೊತೆಗೆ 'ಕಾಲಮಹಿಮೆ', 'ದಾಸಪ್ಪನಾಯಕನ ಫಾರ್ಸು', 'ಕಾಳಾಸುರ' ಮುಂತಾದ ಹಾಸ್ಯಪ್ರಬಂಧಗಳನ್ನು ರಚಿಸಿದ್ದಾರೆಂದು ತಿಳಿದುಬರುತ್ತದೆ. ಸ್ವಾತಂತ್ರ್ಯದ ಹೋರಾಟಕ್ಕೆ ಅಭಿವ್ಯಕ್ತಿಯನ್ನು ಕೊಡಲು ಹುಟ್ಟಿದ ಪತ್ರಿಕಾವ್ಯವಸಾಯದ ಫಲಗಳೇ ಶಾಂತಕವಿಗಳ ಹಾಸ್ಯಪ್ರಬಂಧಗಳು.

ಕನ್ನಡಕ್ಕಾಗಿ ಇಳಿಯ ವಯಸ್ಸಿನಲ್ಲಿ ಸಾಕಷ್ಟು ಶ್ರಮಿಸಿದ ಶಾಂತಕವಿಗಳು ತಮ್ಮ ಕೆಲಸ ಫಲಪ್ರದವಾದುದನ್ನು ಕಂಡು ಸಂತೋಷಿಸಿದರು. ಅದನ್ನು ಶಾಂತಕವಿಗಳೇ ಈ ರೀತಿ ಹೇಳಿಕೊಂಡಿದ್ದಾರೆ : "ಈ ಕಾಲವಂ ನೋಡಬಯಬಯಸಿ ಮುದುಕನಾದೆನ್ನ ಸಂಪ್ರಾರ್ಥನೆಗೆ ಪರಮಾತ್ಮ ನಿಂದೊಲಿದ" ಎಂದು ಸಂತೃಪ್ತಿಯಿಂದಲೇ 'ಧರೆಯೊಳುದಯಿಸಿದ ಕಾರ್ಯ ಸಫಲವಾಯಿತು' ಎಂಬ ಧನ್ಯತಾಭಾವದಿಂದಲೇ 1920ರಲ್ಲಿ ಈ ಲೋಕದಿಂದ ದೂರವಾದರು.

ಕನ್ನಡಿಗರಿಗೆ ಕನ್ನಡ ಪ್ರಜ್ಞೆಯ ಅರಿವಿಲ್ಲದಿದ್ದ ಅಂದಿನ ದಿವಸಗಳಲ್ಲಿ ಕನ್ನಡಕ್ಕಾಗಿ, ಕನ್ನಡ ರಂಗಭೂಮಿಯ ಜಾಗೃತಿಗಾಗಿ, ವೃತ್ತಿ ರಂಗಭೂಮಿಯ ಏಳ್ಗೆಗಾಗಿ ದುಡಿದವರೆಂದರೆ ಶಾಂತಕವಿಗಳು. ಕನ್ನಡ ವೃತ್ತಿರಂಗಭೂಮಿಯು ಅಸ್ತಿತ್ವಕ್ಕೆ ಬಂದ ಮೊದಲ ಹಲವಾರು ವರ್ಷಗಳಲ್ಲಿ ರಂಗಸಾಹಿತ್ಯ ಹುಲುಸಾಗಿ ಬೆಳೆಯಲು ಕಾರಣರಾದವರಲ್ಲಿ ಶಾಂತಕವಿಗಳೂ ಒಬ್ಬರು. ಆದರೆ ಅವರ ಪೌರಾಣಿಕ ಪ್ರಸಂಗಗಳನ್ನಾಧರಿಸಿದ ಎಲ್ಲ ಸ್ವತಂತ್ರ ನಾಟಕಗಳೂ ರಂಗವನ್ನು ಕಾಣಲಿಲ್ಲ. ಹಾಗಾಗಿ ಸಂಖ್ಯಾದೃಷ್ಟಿಯಿಂದ ಹೆಚ್ಚು ನಾಟಕಗಳನ್ನು ಬರೆದರೂ ರಂಗದ ಮೇಲೆ ಪ್ರಯೋಗವಾದ ಹಾಗೂ ಪ್ರಕಟವಾದ ನಾಟಕಗಳು ಕೆಲವು ಮಾತ್ರ. ಇದರಿಂದಾಗಿ ರಂಗಸಾಹಿತ್ಯದ ದೃಷ್ಟಿಯಿಂದ ಅಪಾರ ನಷ್ಟ ಉಂಟಾಯಿತು ಮಾತ್ರವಲ್ಲ, ಶಾಂತಕವಿಗಳ ಮೂಲ ಉದ್ದೇಶ ಕನ್ನಡದ ಪ್ರಚಾರವಾಗಿತ್ತಾದ್ದರಿಂದ ಈ ನಾಟಕಗಳು ಸ್ವಯಂಪೂರ್ಣವಾಗಿ ಬರಲಿಲ್ಲವೆಂಬುದು ಗಮನಾರ್ಹ ಸಂಗತಿ. ಶಾಂತಕವಿಗಳ ಕಾವ್ಯ, ನಾಟಕ, ಹಾಸ್ಯಪ್ರಬಂಧ ಮತ್ತು ಇತರ ಬರಹಗಳು ಕನ್ನಡತನವೇ ಇಲ್ಲದಿದ್ದ ನಮ್ಮವರಲ್ಲಿ ಕನ್ನಡಪ್ರಜ್ಞೆ ಬೆಳಸುವ, ಕನ್ನಡದಲ್ಲಿ ವಾಚನಾಭಿರುಚಿ ಯನ್ನುಂಟುಮಾಡುವ, ಕನ್ನಡ ನಾಟಕಗಳನ್ನಾಡುವ, ಕನ್ನಡ ನಾಟಕಗಳನ್ನು ನೋಡುವ ಪ್ರವೃತ್ತಿಯನ್ನು ಬೆಳಸಿ ನಮ್ಮವರನ್ನು ನಿಜವಾದ ಕನ್ನಡಿ ಗರಾಗುವಂತೆ ಮಾಡಿ ಅವರ ಅಭಿಮಾನ, ಆಸಕ್ತಿಗಳಿಗೆ ಹೊಸ ಚೇತನವನ್ನು ತಂದುವು.

ರಾಷ್ಟ್ರಪ್ರೇಮವನ್ನು ಪ್ರಚೋದಿಸುವಂತೆ ಶ್ರಮಿಸಿದ ಕೆಲವು ಹಳಬರ ಸಾಲಿನಲ್ಲಿ ಸೇರಿಕೊಳ್ಳುವ ಹೊಸಗನ್ನಡದ ಕವಿಗಳಾದ ಆಲೂರು ವೆಂಕಟರಾಯರು, ರಾಷ್ಟ್ರಕವಿ ಗೋವಿಂದ ಪೈ, ರಾಷ್ಟ್ರಕವಿ ಹಾಗೂ ಪಂಪ ಪ್ರಶಸ್ತಿ ವಿಜೇತ ಕುವೆಂಪು ಮೊದಲಾದವರಂತೆ ಶಾಂತಕವಿಗಳು ಕರ್ನಾಟಕದ ಜನ ಕನ್ನಡದ ಬಗ್ಗೆ ಶ್ರದ್ಧಾಭಕ್ತಿಗಳನ್ನು ಬೆಳೆಸಿಕೊಳ್ಳಲು ರಂಗಭೂಮಿಯನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಕನ್ನಡ ಭಾಷೆ, ಸಾಹಿತ್ಯ ಹಾಗೂ ಕನ್ನಡ ನಾಟಕದ ಬಗ್ಗೆ ಆ ಮೂಲಕ ಕನ್ನಡನಾಡಿಗೆ ಅವರು ಸಲ್ಲಿಸಿದ ಸೇವೆ ಆಚಂದ್ರಾರ್ಕವಾದದ್ದು.

❑

# ಆರ್. ನರಸಿಂಹಾಚಾರ್

ಡಾ. ಬಿ.ವ್ಹಿ.ಶಿರೂರ

ಕನ್ನಡ ಸಾರಸ್ವತ ಪ್ರಪಂಚದಲ್ಲಿ ಅತ್ಯಂತ ಅವಿಸ್ಮರಣೀಯರಾದವರು ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್. ಅವರು ಖ್ಯಾತ ಸಂಶೋಧಕರಾಗಿ, ಭಾಷಾವಿಜ್ಞಾನಿಯಾಗಿ, ಶಾಸನ ತಜ್ಞರಾಗಿ, ಗ್ರಂಥ ಸಂಪಾದಕರಾಗಿ, ಅನುವಾದಕರಾಗಿ, ಸೃಜನಶೀಲ ಬರಹಗಾರರಾಗಿ, ವಿಮರ್ಶಕರಾಗಿ ಒಳ್ಳೆಯ ಹೆಸರು ಮಾಡಿದವರು. ತಮಿಳು ಮಾತೃಭಾಷೆಯಾಗಿದ್ದರೂ ಇಂಗ್ಲೀಷ್, ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಪಾಂಡಿತ್ಯ ಪಡೆದು ಅವರು ಕನ್ನಡಕ್ಕೆ ಸಲ್ಲಿಸಿದ ಸೇವೆ ಅಪೂರ್ವವಾದುದು.

ಮಂಡ್ಯದ ಕೊಪ್ಪಲುವಿನಲ್ಲಿ 1861, ಏಪ್ರಿಲ್ 9ರಂದು ಜನನ. ತಂದೆ ತಿರುನಾರಾಯಣ ಪೆರುಮಾಳ್, ತಾಯಿ ಶಿಂಗಮ್ಮಾಳು. ರಾಮಾನುಜಪುರದಲ್ಲಿ ಆಚಾರ್ಯರ ಹಿರಿಯರು ವಾಸ ಮಾಡುತ್ತಿದ್ದರಾದರೂ ಅವರ ತಾತಂದಿರ ಕಾಲದಿಂದ ಆ ಮನೆತನವು ಶ್ರೀರಂಗಪಟ್ಟಣದ ಸಮೀಪದಲ್ಲಿರುವ ಮಂಡ್ಯ ಕೊಪ್ಪಲುವಿನಲ್ಲಿ ನೆಲೆಸಿದ್ದಿತು. ಅವರ ವಂಶ ತಿರುಪತಿ ಬೆಟ್ಟದ ಕೆರೆ ಕಟ್ಟಿದ ಶ್ರೀ ಆನಂದಾಳ್ವರರದು.

ಬಾಲ್ಯದಲ್ಲಿಯೇ ತಂದೆಯಿಂದ ಸಂಸ್ಕೃತ ಅಭ್ಯಾಸ. ಅನಂತರ ಐದು ವರ್ಷ ತಮಿಳು ಅಭ್ಯಾಸ ಮಾಡಿ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಿಂದ 1878ರಲ್ಲಿ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಪಾಸಾದರು. ಬೆಂಗಳೂರಿಗೆ ಬಂದು ತಮಿಳು ಮತ್ತು ಸಂಸ್ಕೃತಗಳನ್ನು ತೆಗೆದುಕೊಂಡು ಸೆಂಟ್ರಲ್ ಕಾಲೇಜಿನಿಂದ 1882ರಲ್ಲಿ ಬಿ.ಎ. ಪರೀಕ್ಷೆಯಲ್ಲಿ ಉಚ್ಚ ತರಗತಿಯಲ್ಲಿ ಪಾಸಾದರು. ಅನೇಕ ಪಾರಿತೋಷಕಗಳನ್ನು ಪಡೆದರು. ಆಗ ಆಚಾರ್ಯರ ವಯಸ್ಸು ಕೇವಲ 21 ವರ್ಷ.

ದಿವಾನ್ ರಂಗಾಚಾರ್ಯರಲ್ಲಿ ಉದ್ಯೋಗಕ್ಕಾಗಿ ಹೋದರು. ಒಡನೆಯೇ 5 ರೂಪಾಯಿ ಸಂಬಳದ ಮೇಲೆ ಚಿಕ್ಕಮಗಳೂರು ಹೈಸ್ಕೂಲಿನಲ್ಲಿ ಸಹೋಪಾಧ್ಯಾಯ ಹುದ್ದೆ ದೊರೆಯಿತು. 'ಊರು ದೂರ' ಎಂದು ಹೋಗಲು ಹಿಂಜರಿದಾಗ ದಿವಾನರೆ ತಿಳಿಹೇಳಿ ಕಳುಹಿಸಿಕೊಟ್ಟರು. ಆಮೇಲೆ ಶಿವಮೊಗ್ಗ, ಹಾಸನಗಳಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದರು. ಅನಂತರ ಮೈಸೂರಿನ ಮಹಾರಾಜ ಮತ್ತು ಮಹಾರಾಣಿ ಕಾಲೇಜುಗಳಲ್ಲಿಯೂ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸಿದರು. 1893ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಕನ್ನಡ ಎಂ.ಎ. ಪಾಸಾದರು. ಕನ್ನಡದಲ್ಲಿ ಎಂ.ಎ. ಪದವಿ ಪಡೆದ ಮೊದಲಿಗರೆನಿಸಿದರು. 1894ರಲ್ಲಿ ವಿದ್ಯಾ ಇಲಾಖೆಯಲ್ಲಿ ಭಾಷಾಂತರಕಾರರೆಂದು ನೇಮಕಗೊಂಡರು. 1899ರಲ್ಲಿ ಮೈಸೂರಿನ ಪ್ರಾಚ್ಯವಸ್ತು ಸಂಶೋಧನ ಇಲಾಖೆ ಸೇರಿ, ಬಿ.ಎಲ್.ರೈಸ್ ಅವರಿಗೆ ಸಹಾಯಕರಾಗಿ ಕೆಲಸ ಮಾಡಿ, ರೈಸ್ ಅವರಿಗೆ ತುಂಬ ಆತ್ಮೀಯರಾದರು. ಹೀಗಾಗಿ ರೈಸ್ ಅವರ ನಂತರ 1906ರಲ್ಲಿ ಇಸಾಖೆಯ ನಿರ್ದೇಶಕರಾಗಿ ನೇಮಕಗೊಂಡರು. 1922ರ ವರೆಗೆ ಅದರ ನಿರ್ದೇಶಕರಾಗಿದ್ದ ಅನೇಕ ಮಹತ್ವದ ಕೃತಿಗಳನ್ನು ಹೊರತಂದರು. 16 ವರ್ಷಗಳ ಕಾಲ ಈಗಿನ ಮೈಸೂರು ಸಂಸ್ಥಾನದ ನಾನಾ ಭಾಗಗಳನ್ನು ಸಂಚರಿಸಿ ಸುಮಾರು 5000 ಶಾಸನಗಳನ್ನು ಸಂಗ್ರಹಿಸಿದರು. ಮುಖ್ಯಮುಖ್ಯವಾದುವುಗಳನ್ನು ಅಲ್ಲಲ್ಲಿ ರಿಪೋರ್ಟುಗಳಲ್ಲಿ ಚರ್ಚಿಸಿದರು. ಇವು ಅನಂತರ ಬೇರ ಬೇರೆ ವಿದ್ವಾಂಸರಿಂದ ಪರಿಷ್ಕಾರಗೊಂಡು ಉಪಸಂಪುಟಗಳಲ್ಲಿ ಪ್ರಕಟವಾದವು.

ಆಚಾರ್ಯರು ಮೈಸೂರು ಪುರಾತತ್ವ ಇಲಾಖೆಯ ವರದಿಗಳಲ್ಲಿ ಹಿಂದೂ, ಜೈನ ಮತ್ತು ಮಹಮದೀಯರಿಗೆ ಸಂಬಂಧಿಸಿದ ಸುಮಾರು 1000 ಕಟ್ಟಡಗಳನ್ನು ಪರಿಶೀಲಿಸಿ ಅವುಗಳ ವಾಸ್ತು ವಿಷಯವನ್ನು ಕುರಿತು ಟಿಪ್ಪಣಿಗಳನ್ನು ಬರೆದಿರುವರು.

ಶ್ರವಣಬೆಳಗೊಳದ ಶಾಸನಗಳನ್ನು ಈ ಹಿಂದೆ ಬಿ.ಎಲ್.ರೈಸ್ ಅವರು ಪ್ರಕಟಿಸಿದ್ದರು (1889) ಅಲ್ಲಿ ಕೇವಲ 144 ಶಾಸನಗಳಿದ್ದವು. ಆರ್. ನರಸಿಂಹಚಾರ್ ಅವರು ಅದನ್ನು ಪರಿಷ್ಕರಿಸಲು ತೊಡಗಿ, ಹೊಸದಾಗಿ 356 ಶಾಸನಗಳನ್ನು ಸೇರಿಸಿ, ಒಟ್ಟು 500 ಶಾಸನಗಳುಳ್ಳ ಸಂಪುಟವನ್ನು ಹೊರ ತಂದರು. ಅದರ ಪ್ರಾರಂಭದ 90 ಪುಟದ ಪ್ರಸ್ತಾವನೆ ಆಚಾರ್ಯ ವಿದ್ವತ್ತಿಗೆ ಹಿಡಿದ ಕನ್ನಡಿಯಾಗಿದೆ. ಶ್ರವಣಬೆಳಗೊಳದ ವಾಸ್ತುಶಿಲ್ಪವನ್ನು ಕುರಿತು ಮೊದಲಬಾರಿಗೆ ಇಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ.

1923ರಲ್ಲಿ ಪ್ರಕಟವಾದ 'ಶಾಸನ ಪದ್ಯ ಮಂಜರಿ'ಯಲ್ಲಿ ಸಾಹಿತ್ಯಾಂಶಗಳನ್ನೊಳಗೊಂಡ ಶಾಸನಗಳಿಂದಾಯ್ದ 1446 ಪದ್ಯಗಳಿವೆ. 'ಕವಿತೆಯ ಶೈಲಿಯ ಮತ್ತು ಸೊಬಗಿನ ರಸವನ್ನು ಸ್ವಲ್ಪ ಮಟ್ಟಿಗಾದರೂ ಆಸ್ವಾದನ ಮಾಡಲು ಅವಕಾಶವುಂಟು ಮಾಡಬೇಕೆಂಬ ಉದ್ದೇಶದಿಂದ' ಈ ಶಾಸನ ಭಾಗಗಳನ್ನು ಸಂಗ್ರಹಿಸಿ ಕೊಟ್ಟಿದೆ. ಈ ಪುಸ್ತಕಕ್ಕಾಗಿ ಆರಿಸಿದ ಶಾಸನಗಳ ಸಂಖ್ಯೆ 283. ಇವುಗಳಲ್ಲಿ ಬಾಂಬೆ ಪ್ರಾಂತ್ಯದಲ್ಲಿರುವ 24 ಶಾಸನ ಬಿಟ್ಟರೆ ಉಳಿದವರೆಲ್ಲ ಮೈಸೂರು ಸಂಸ್ಥಾನವು. ಅವು ಸುಮಾರು ಕ್ರಿ.ಶ.700 ರಿಂದ ಕ್ರಿ.ಶ.1465ರ ವರೆಗಿನ ಕಾಲಾವಧಿಯವು. ಅವನ್ನು ಆ ಅನುಪೂರ್ವಿಯಲ್ಲಿಯೇ ಕೊಟ್ಟಿರುವುದರಿಂದ ಕನ್ನಡ ಭಾಷೆಯು ಬೆಳೆದುಬಂದ ರೀತಿ ಗೊತ್ತಾಗುವುದು. ಈ ಶಾಸನಗಳು ಗಂಗ, ನೊಳಂಬ, ಚಾಲುಕ್ಯ, ರಾಷ್ಟ್ರಕೂಟ, ಚೋಳ, ಕಲಚೂರ್ಯ, ಸೇವುಣ, ಕೊಂಗಾಳ್ವ, ಹೊಯ್ಸಳ, ಸಾಂತರ, ಪಾಂಡ್ಯ, ಸಿಂಧ, ಕದಂಬ, ನಿಡುಗಲ್ಲು, ವಿಜಯನಗರ ಹೀಗೆ 15 ರಾಜವಂಶಗಳಿಗೆ ಸಂಬಂಧಿಸಿವೆ. ಇವು ಅಂದಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ವಿಷಯಗಳ ಮೇಲೂ ಬೆಳಕು ಚೆಲ್ಲುತ್ತವೆ.

ಆಚಾರ್ಯರ ಇತರ ಶಾಸನ ಸಂಶೋಧನೆ ಕುರಿತು ಎಸ್. ಶ್ರೀಕಂಠಯ್ಯ ಅವರು ಮಿಥಿಕ್ ಸೊಸಾಯಿಟಿಯ 27ನೆಯ ಸಂಪುಟಗಳಲ್ಲಿ ಬರೆದ ಲೇಖನದ ಭಾಗ ಹೀಗಿದೆ: ಗಂಗ ಶ್ರೀಪುರುಷನ ತಾಮ್ರ ಶಾಸನದ ಬಗೆಗೆ 1907-8ರ ಪ್ರಾಚ್ಯ ವಸ್ತು ಇಲಾಖೆಯ ವಾರ್ಷಿಕ ವರದಿಯಲ್ಲಿ ಪ್ರಕಟಿಸಿದ್ದಾರೆ. 2ನೆಯ ಹರಿಹರನ 1286ರ ತಾಮ್ರ ಶಾಸನದ ಸಹಾಯದಿಂದ ಸಾಯಣರು ವೇದಗಳ ಮೇಲೆ ಭಾಷ್ಯ ಬರೆಯಲು ಹಲವು ವಿದ್ವಾಂಸರು ನೆರವಾಗಿದ್ದರೆಂದು ನಿರ್ಣಯಿಸಿದ್ದಾರೆ. ಚಂದ್ರವಳ್ಳಿಯ ಉತ್ಖನನ ನಡೆಸಿ, ಅಲ್ಲಿ ಪ್ರಾಚೀನ ಕಾಲದ ಮಣ್ಣಿನ ಪಾತ್ರೆ, ನಾಣ್ಯ ಮೊದಲಾದುವುಗಳನ್ನು ಶೋಧಿಸಿದ್ದಾರೆ. ಈ ಸಂಶೋಧನೆಯು ಸರ್‌ಜಾನ್ ಮಾರ್ಶಲ್ ಮತ್ತು ಇತರ ಪ್ರಾಚ್ಯವಸ್ತು ಸಂಶೋಧಕರ ಗಮನ ಸೆಳೆಯಿತು. ಅರಿಷ್ಟನೇಮಿಯ ಸಮಾಧಿ ಲೇಖನವು

ಉಳಿದ ಸಮಾಧಿ ಲೇಖನಗಳ ಮೇಲೆ ಬೆಳಕು ಚೆಲ್ಲಿತು. ಸಿಂಹಸೂರಿ ರಚಿಸಿದ 'ಲೋಕವಿಭಾಗ' ಎಂಬ ಗ್ರಂಥದಿಂದ ಪಲ್ಲವ ನರಸಿಂಹವರ್ಮನ ಕಾಲವನ್ನು ಆಚಾರ್ಯರು ನಿರ್ಣಯಿಸಿದ್ದಾರೆ. ಅದು ಪಲ್ಲವರ ಇತಿಹಾಸವನ್ನು ನಿರ್ಣಯಿಸಲು ಸಹಾಯಕವಾಗಿದೆ. ಅವರು ಸಂಶೋಧಿಸಿದ ತಾಳಗುಂದದ ಪರಾತನ ಶಾಸನವು ಕದಂಬರ ಬಗೆಗೆ ಹೊಸ ಮಾಹಿತಿಯನ್ನು ಪೂರೈಸಿದೆ. ನರಸಿಂಹಾಚಾರ್ಯರು 1912ರಲ್ಲಿ ಗಂಗರಾಜನಾದ ದುರ್ವಿನೀತನ ಗುಮ್ಮರೆಡ್ಡಿಪುರ ತಾಮ್ರ ಶಾಸನವನ್ನು ಸಂಶೋಧಿಸಿದ ಈ ಕಾಲದಲ್ಲಿ ದುರ್ವಿನೀತನು ಜೀವಿಸಿದ್ದನೆಂದೂ, ಬೃಹತ್ಕಥನ ಶೃಂಗೇರಿ ತಾಮ್ರಶಾಸನದಲ್ಲಿ ಉಕ್ತವಾದ ಸಂಗತಿಯನ್ನು ಇದು ನಿರ್ವಿವಾದವಾಗಿ ಸಮರ್ಥಿಸುವುದೆಂದೂ ಹೇಳಿದ್ದಾರೆ. 1913ರಲ್ಲಿ ದೊರೆತ 1ನೆಯ ಮಾಧವನ ನಂದಿಯ ತಾಮ್ರ ಶಾಸನದಿಂದ ಗಂಗ ವಂಶಾವಳಿಯನ್ನು ಗೊತ್ತು ಹಚ್ಚಿದ್ದಾರೆ. ಬೆಂಗಳೂರು ಎಂಬ ಊರು ಅದೇ ಹೆಸರಿನಿಂದ 10ನೆಯ ಶತಮಾನದಲ್ಲಿಯೇ ಅಸ್ತಿತ್ವದಲ್ಲಿತ್ತೆಂದು ಒಂದು ಶಾಸನದ ಆಧಾರದಿಂದ ನಿರ್ಧರಿಸಿದ್ದಾರೆ. ಗಂಗ ಮಾಧವವರ್ಮನಿಗೆ ವಿಜಯ ಕೃಷ್ಣವರ್ಮನೆಂಬ ಮಗನಿದ್ದುದನ್ನು 1915ರಲ್ಲಿ ಹೊಸಕೋಟೆಯ ಶಾಸನದಿಂದ ಕಂಡುಹಿಡಿದಿದ್ದಾರೆ. ಕೃಷ್ಣರಾಜ ಪೇಟೆಯಲ್ಲಿ ಸಿಕ್ಕ 2ನೆಯ ಹರಿಹರನ ಶಾಸನವು ಬುಕ್ಕನು ಮರಣ ಹೊಂದಿದ ನಿಶ್ಚಿತ ಕಾಲವನ್ನು ಕೊಡುತ್ತದೆ. 1916ರಲ್ಲಿ ಶೃಂಗೇರಿಯ ದಾಖಲೆಗಳನ್ನು ಅಭ್ಯಸಿಸಿ ಶೃಂಗೇರಿ ಮಠಾಧೀಶ್ವರ ಮತ್ತು ವಿಜಯನಗರದ ಪ್ರಾರಂಭ ಕಾಲವನ್ನು ಆಚಾರ್ಯರು ನಿರ್ಣಯಿಸಿದ್ದಾರೆ. ಮುಳಬಾಗಿಲದಲ್ಲಿ ದೊರೆತ ಗಂಗರ ತಾಮ್ರ ಶಾಸನ ಮತ್ತು ಶೃಂಗೇರಿ ಮಠದಲ್ಲಿಯ ಶಾಸನಗಳು ಎಷ್ಟು ಮಹತ್ವವಾಗಿವೆ ಯೆಂಬುದನ್ನು ಅವರು ತೋರಿಸಿಕೊಟ್ಟಿದ್ದಾರೆ. 1916-17ರಲ್ಲಿ ಗಂಗರಾಜರಾದ ದುರ್ವಿನೀತ ಮತ್ತು ಶ್ರೀ ವಿಕ್ರಮರನ್ನು ಕುರಿತು, ಹೊಸದಾಗಿ ದೊರೆತ ಶಾಸನಾಧಾರಗಳನ್ನು ಗುರುತಿಸಿದ್ದಾರೆ. ಸು.ಕ್ರಿ.ಶ 500ರ ಪುನಾಡ ಶಾಸನವನ್ನು ಶೋಧಿಸಿದ್ದಾರೆ. ಟೀಪುವು ಶೃಂಗೇರಿ ಗುರುಗಳಿಗೆ ದತ್ತಿ ಕೊಟ್ಟಿದ್ದನ್ನು ಪ್ರಸ್ತಾಪಿಸಿ ಜನರು ತಿಳಕೊಂಡಷ್ಟು ಅವನು ಕ್ರೂರನಾಗಿದ್ದಿಲ್ಲವೆಂದು ಆಚಾರ್ಯರು ಅಭಿಪ್ರಾಯಪಟ್ಟಿರುವರು. ಗಂಗ ತ್ರಿವಿಕ್ರಮನ ಶಾಸನವನ್ನು ಕಂಡು ಹಿಡಿದಿದ್ದಾರೆ. 1917-18ರಲ್ಲಿ ಆಚಾರ್ಯರು 2ನೆಯ ಹರಿಹರನ ಡಂಬಳ ಶಾಸನವನ್ನೂ, ಕದಂಬ ಭೋಗಿವರ್ಮನ ತಗರೆಯ ತಾಮ್ರಶಾಸನವನ್ನು ಸಂಶೋಧಿಸಿದ್ದಾರೆ. ಈವರೆಗೆ ಈ ಭೋಗಿವರ್ಮನ ಬಗೆಗೆ ಏನೂ ಗೊತ್ತಾಗಿದ್ದಿಲ್ಲ. 2ನೆಯ ಗಂಗ ರಾಚಮಲ್ಲನು ಸು.ಕ್ರಿ.ಶ.900ರಲ್ಲಿ ನೇತ್ರಶಿವನೆಂಬ ಶೈವಗುರುವಿಗೆ ದಾನಕೊಟ್ಟದ್ದನ್ನು 1919ರಲ್ಲಿ ಆಚಾರ್ಯರು ಗುರುತಿಸಿದರು. ಮುಳಬಾಗಿಲಮಠದ ತಾಮ್ರಶಾಸನವು ಭಾಗವತ ಸಂಪ್ರದಾಯದ ವಿಷಯವಾಗಿ ಹೇಳುತ್ತದೆಂದು ಅವರು ಹೇಳಿದ್ದಾರೆ. ನರಸಿಂಹಾಚಾರ್ಯರು 1920ರಲ್ಲಿ ಕಾರ್ಲಾ, ಕನ್ಹೇರಿ, ಬಾದಾಮಿ, ಎಲ್ಲೋರ ಮತ್ತು ಅಜಂತಾಗಳಿಗೆ ಭೇಟಿಕೊಟ್ಟು ಆ ಸ್ಥಳಗಳಲ್ಲಿಯ ಗುಹೆಗಳ ವಿಷಯವಾಗಿ ಮಹತ್ವದ ಸಂಗತಿಗಳನ್ನು ಬರೆದಿದ್ದಾರೆ. ಅವರು 1909ರಲ್ಲಿ ಭಾಸಕವಿಯ ಸ್ವಪ್ನವಾಸವದತ್ತ ಎಂಬ ನಾಟಕವನ್ನು ಕಂಡುಹಿಡಿದಿರುವರು."

ಇವಲ್ಲದೆ ಗಂಗರ ಚರಿತ್ರೆ, ಸಾಯಣ-ಮಾಧವ, ಬೇಲೂರು, ಸೋಮನಾಥಪುರ ಮತ್ತು ದೊಡ್ಡಗದ್ದನ ಹಳ್ಳಿಯ ಹೊಯ್ಸಳ ದೇವಸ್ಥಾನಗಳು ಇವನ್ನು ಕುರಿತೂ ಇವರು ಕೃತಿ ರಚಿಸಿದ್ದಾರೆ.

ಆರ್. ನರಸಿಂಹಾಚಾರ್ ಅವರಿಗೆ ವಿಶೇಷ ಕೀರ್ತಿಯನ್ನು ತಂದುಕೊಟ್ಟ ಕೃತಿ "ಕರ್ನಾಟಕ ಕವಿಚರಿತೆ". ಮೂರು ಸಂಪುಟಗಳಲ್ಲಿರುವ ಈ ಕೃತಿ ಕನ್ನಡದ ಒಟ್ಟು 1148 ಜನ ಕವಿಗಳ ಚರಿತ್ರೆಯನ್ನೊಳಗೊಂಡಿದೆ. ಅವುಗಳ ವಿವರ ಹೀಗಿದೆ:

ಭಾಗ 1.

ಆರಂಭದಿಂದ 14ನೆಯ ಶ.ದ ಕೊನೆವರೆಗೆ 280ಜನ ಕವಿಗಳು 1909ರಲ್ಲಿ ಪ್ರಕಟ
(ಎಸ್.ಜಿ.ನರಸಿಂಹಾಚಾರ್ ಜೊತೆ)

ಇದು 1924ರಲ್ಲಿ ಆರ್. ನರಸಿಂಹಾಚಾರ್ ಅವರಿಂದಲೇ ಪರಿಶೀಲನೆಗೊಂಡು
ಪುನಃ ಮುದ್ರಣವಾಯಿತು ಮತ್ತೆ 1961ರಲ್ಲಿ ಕ.ಸಾ.ಪ.ಬೆಂ.
ಇದನ್ನು ಪರಿಶೋಧಿಸಿ ಪ್ರಕಟಿಸಿತು

ಭಾಗ 2.

5 ರಿಂದ 17ನೆಯ ಶ.ದ ಕೊನೆವರೆಗೆ 301ಜನ ಕವಿಗಳು 1919
(ಇದನ್ನು ಕ.ಸಾ.ಪ.ಬೆ. 1973ರಲ್ಲಿ ತಿದ್ದಿ ಮುದ್ರಣಗೊಳಿಸಿದೆ

ಭಾಗ 3. 18 ಮತ್ತು 19ನೆಯ ಶ. 352 ಜನ ಕವಿಗಳು 215 1929 ಪ್ರಕಟ

ಇವುಗಳನ್ನು ಕವಿಚರಿತ್ರಕಾರರು ಬರೆಯಲು ತೊಡಗಿದಾಗ ಕನ್ನಡ ಸಾಹಿತ್ಯದಲ್ಲಿ ಇನ್ನೂ ಅರುಣೋದಯದ ಕಾಲ, ಬಹಳಷ್ಟು ಪ್ರಾಚೀನ ಕೃತಿಗಳು ಅಪ್ರಕಟಿತವಾಗಿರುವ ಸನ್ನಿವೇಶ. ತಾವು ವಹಿಸಿದ ಕ್ರಮವನ್ನು ಕರಿತು "ಹಿಂದೆ ಮದ್ರಾಸ್ ಪ್ರಾಚ್ಯಕೋಶಾಲಯ ಮುಂತಾದ ಸ್ಥಳಗಳಲ್ಲಿ ಪುಸ್ತಕಗಳನ್ನು ಪರಿಶೀಲಿಸಿದಾಗ ಪ್ರಪ್ರಥಮ ಸಂಪುಟಕ್ಕೆ ಬೇಕಾದ ವಿಷಯಗಳನ್ನು ಮಾತ್ರ ವಿಸ್ತಾರವಾಗಿ ಗುರುತು ಹಾಕಿಕೊಂಡು, ಆವಶ್ಯಕತೆ ಬಿದ್ದಾಗ ಪುನಃ ಹೋಗಿ ನೋಡಬಹುದು ಎಂಬ ಭಾವನೆಯಿಂದ ಮಿಕ್ಕ ವಿಷಯಗಳನ್ನು ಬಹಳ ಸಂಗ್ರಹವಾಗಿ ಗುರುತು ಹಾಕಿದ್ದೆನು. ಮತ್ತೊಂದಾವೃತ್ತಿ ಹೋಗಿ ನೋಡಿದಾಗ ಹಿಂದೆ ನೋಡಿದ್ದ ಪುಸ್ತಕಗಳಲ್ಲಿ ಹಲವು ನನ್ನ ದುರದೃಷ್ಟದಿಂದ ಹುಳುಗಳ ಬಾಯಿಗೆ ತುತ್ತಾಗಿ ನಾಶವಾಗಿ ಹೋಗಿದ್ದವು. ಹೀಗೆ ನಷ್ಟವಾದ ಪುಸ್ತಕಗಳ ಪ್ರತ್ಯಂತರಗಳು ಬೇರೆ ಕಡೆ ಎಷ್ಟು ಹುಡುಕಿದರೂ ದೊರೆಯದೆ ಹೋದುದರಿಂದ ಕೆಲವು ಕವಿಗಳ ಚರಿತೆಯನ್ನು ಹಿಂದೆ ಗುರುತು ಹಾಕಿದ ಅಲ್ಪ ಸ್ವಲ್ಪ ವಿಷಯಗಳ ಆಧಾರದ ಮೇಲೆ ಅತಿ ಸಂಗ್ರಹವಾಗಿ ಬರೆಯಬೇಕಾಯಿತು. ಹಲವು ಸಂದರ್ಭಗಳಲ್ಲಿ ಅವಲೋಕನಕ್ಕಾಗಿ ಸ್ವಲ್ಪ ಕಾಲ ಪುಸ್ತಕಗಳನ್ನು ಪಡೆವುದಕ್ಕೋಸ್ಕರ ನಾನು ಪಟ್ಟ ಕಷ್ಟವು ಅಷ್ಟಿಷ್ಟೆಂದು ಹೇಳಲಾಗುವುದಿಲ್ಲ. ಅನೇಕ ಜನರು ತಮ್ಮಲ್ಲಿ ಪುಸ್ತಕಗಳಿದ್ದರೂ ಇಲ್ಲವೆಂದು ಹೇಳುತ್ತಾರೆ. ಮತ್ತೆ ಕೆಲವರು ಅವುಗಳನ್ನು ಇತರರಿಗೆ ತೋರಿಸುವುದಕ್ಕೆ ಹಿಂದೆಗೆಯುತ್ತಾರೆ. ಇನ್ನು ಕೆಲವರು ಇನ್ನೊಬ್ಬರ ಕೈಗೆ ಅವುಗಳನ್ನು ಕೊಡಲು ಸರ್ವಥಾ ಸಮ್ಮತಿಸುವುದಿಲ್ಲ." (ಕ.ಚ.ಸಂ.II ಪು-47).

ಇಂಥ ಸಂದರ್ಭದಲ್ಲೂ ಸುಮಾರು 2,000 ಓಲೆಯ ಪ್ರತಿಗಳನ್ನು ಕಣ್ಣಾರೆ ನೋಡಿ ಅವುಗಳ ಆಮೂಲಾಗ್ರ ಪರಿಚಯವನ್ನೂ ಕವಿ,ಕಾಲ, ದೇಶ, ಕೃತಿಗಳನ್ನು ಕುರಿತು ನಿಖರವಾದ ಅಭಿಪ್ರಾಯಗಳನ್ನೂ ವ್ಯಕ್ತಗೊಳಿಸಿರುವುದು ಇಲ್ಲಿಯ ವಿಶೇಷ. ಅವರು ಪ್ರತಿಯೊಬ್ಬ ಕವಿಯ ಮಾಹಿತಿ ನೀಡುವಲ್ಲಿ ಅನುಸರಿಸಿರುವ ರೀತಿ ಹೀಗಿದೆ:

"ಮೊದಲು ಕವಿಯ ಹೆಸರೂ ಅದರ ಪಕ್ಕದಲ್ಲಿ ವರ್ಷ ಸಂಖ್ಯೆಯೂ ಕೊಟ್ಟಿದೆ. ವರ್ಷ ಸಂಖ್ಯೆಗಳೆಲ್ಲ ಕ್ರಿ.ಶ. ಶಕೆಗೆ ಅನ್ವಯಿಸುತ್ತವೆ ಎಂದು ತಿಳಿಯಬೇಕು. ಈ ವರ್ಷ ಸಂಖ್ಯೆ ಪ್ರಾಯಕವಾಗಿ ಗ್ರಂಥರಚನಾ ಕಾಲವನ್ನು ಸೂಚಿಸುತ್ತವೆ. ಕೆಲವು ಕಡೆ ಈ ಸಂಖ್ಯೆಯ ಹಿಂದೆ ಸುಮಾರು ಎಂಬರ್ಥವನ್ನು ಸೂಚಿಸುವಂತೆ ಸು. ಎಂಬಕ್ಷರವು ಬರೆದಿದೆ. ಬಳಿಕ ಆ ಕವಿಯಿಂದ

ರಚಿತವಾದ ಗ್ರಂಥಗಳ ಹೆಸರು ಕೊಟ್ಟಿದೆ. ಕೆಲವೆಡೆಯಲ್ಲಿ ಆ ಕವಿ ಬರೆದುದಾಗಿ ಇತರ ಕಾರಣಗಳಿಂದ ತಿಳಿದುಬರುವ ಗ್ರಂಥಗಳ ಹೆಸರೂ ಸೇರಿಸಿದೆ. ತರುವಾಯ ಕವಿಯ ದೇಶ, ಮತ, ಗುರು, ಪೋಷಕ, ಬಿರುದುಗಳು ಇವೇ ಮೊದಲಾದ ವಂಶ ಅವನ ಜೀವನವೃತ್ತಾಂದ ಅಂಶಗಳು ಹೇಳಿವೆ. ಅನಂತರ ವಿಚಾರ ಪೂರ್ವಕವಾಗಿ ಕಾಲನಿರ್ಣಯ ಮಾಡಿದೆ. ಆಮೇಲೆ ಆ ಕವಿಯನ್ನು ಸ್ತುತಿಸುವ ಇತರ ಕವಿಗಳ ಹೆಸರು ಕೊಟ್ಟಿದೆ. ಅಲ್ಲಿಂದ ಮುಂದೆ ಆ ಕವಿ ಸ್ಮರಿಸುವ ಪೂರ್ವಕವಿಗಳ ಹೆಸರು ಹೇಳಿದೆ. ಅನಂತರ ಆ ಕವಿ ತನ್ನ ಕವಿತಾ ಚಾತುರಿ ಗುಣಗಳು ಮೊದಲಾದವನ್ನು ಹೇಳಿಕೊಳ್ಳುವ ಪದ್ಯಗಳು ಉದ್ಧರಿಸಿ ಬರೆದಿವೆ. ಬಳಿಕ ಕವಿಕೃತವಾದ ಗ್ರಂಥಗಳನ್ನು ಒಂದೊಂದಾಗಿ ತೆಗೆದುಕೊಂಡು ಅದರದರ ಸ್ವರೂಪ, ಪ್ರತಿಪಾದ್ಯ ವಿಷಯ, ಕಥಾಗರ್ಭ, ಆಶ್ವಾಸಸಂಖ್ಯೆ, ಇಷ್ಟದೇವತಾಸ್ತುತಿ, ಗುರುಪರಂಪರೆ, ಗ್ರಂಥರಚನೆಗೆ ಕಾರಣ ಮೊದಲಾದವನ್ನು ವಿವರಿಸಿ ಬಳಿಕ ಆಶ್ವಾಸಾಂತ್ಯಗಳಲ್ಲಿ ದೊರೆವ ಗದ್ಯಗಳು ಅನುವಾದ ಮಾಡಲ್ಪಟ್ಟಿವೆ. ಅನಂತರ ಗ್ರಂಥದ ಬಂಧದ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಿ, ಕವಿತೆಯ ಧೋರಣೆಯನ್ನು ತೋರಿಸುವುದಕ್ಕಾಗಿ ಕೆಲವು ಪದ್ಯಗಳು ಉದಾಹೃತವಾಗಿವೆ". ಈ ಒಂದು ಸಮತೋಲನವನ್ನು ಸಾಧ್ಯವಾದ ಮಟ್ಟಿಗೆ ಕಾಯ್ದುಕೊಂಡು ಬಂದಿರುವುದು ಈ ಕೃತಿಯ ವೈಶಿಷ್ಟ್ಯ.

ಹೀಗೆ ರಚಿಸಿರುವ ಈ ಕೃತಿಯಲ್ಲಿ ಕೆಲವು ಕಣ್ತಪ್ಪಿನಿಂದ, ಮೈಮರೆವಿನಿಂದ ದೋಷಗಳಾಗಿರುವುದೂ ಉಂಟು. ಅವುಗಳಲ್ಲಿ ಗಮನಕ್ಕೆ ಬಂದ ಕೆಲವನ್ನು ತಾವೇ ಸರಿಪಡಿಸಿ ಮುಂದಿನ ಸಂಪುಟದಲ್ಲಿ ಕೊಟ್ಟಿರುವುದುಂಟು. ಇನ್ನು ಕೆಲವರು ಸೂಚಿಸಿದ್ದನ್ನೂ ಒಪ್ಪಿದ್ದಾರೆ. ತಮಗೆ ಸಮ್ಮತವಾದ ಅಭಿಪ್ರಾಯಗಳನ್ನು ಸಕಾರಣವಾಗಿ ನಿರಾಕರಿಸಿದ್ದಾರೆ. ಉದಾಹರಣಗೆ ಮೂರನೆಯ ಸಂಪುಟದಲ್ಲಿಯ ಈ ಕೆಲವು ಮಾತುಗಳನ್ನು ನೋಡಬಹುದು: ಡಾ.ಎ. ವೆಂಕಟಸುಬ್ಬಯ್ಯನವರು ಎತ್ತಿದ ಆಕ್ಷೇಪಣೆಗಳನ್ನು ಕುರಿತು "ಇವರು ನನ್ನ ಗ್ರಂಥಕ್ಕೆ ಮುಖ್ಯವಾಗಿ ಪ್ರಥಮ ಸಂಪುಟಕ್ಕೆ ವಿಶೇಷವಾದ ಗಮನವನ್ನು ಕೊಟ್ಟು, ಆಕ್ಷೇಪಣೆಗಳನ್ನು ಹೂಡಿ ಸುಮಾರು 280 ಪುಟಗಳನ್ನು ಮುದ್ರಿಸಿದ್ದಾರೆ.... ಇವುಗಳಲ್ಲಿ ದುರ್ಗಸಿಂಹ, ಚಂದ್ರರಾಜ, ರಾಜಾದಿತ್ಯ, ವೃತ್ತವಿವಾಸ ಈ ಕವಿಗಳಿಗೆ ನಾನು ಹೇಳಿರುವ ಕಾಲದ ವಿಷಯದಲ್ಲಿಯೂ ಕೆಲವರು ಜೈನಗುರುಗಳ ನಾಮಸಾಮ್ಯದಿಂದ ನಾನು ಮಾಡಿರುವ ಸಮೀಕರಣದ ವಿಷಯದಲ್ಲಿಯೂ ಅಯ್ಯನವರು ಹೇಳಿರುವ ಆಕ್ಷೇಪಣೆಗಳು ನ್ಯಾಯವಾಗಿವೆ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಉಳಿದವುಗಳಲ್ಲಿ ಕೆಲವಕ್ಕೆ ಸರಿಯಾದ ಆಧಾರವೇ ಇಲ್ಲ. ಮತ್ತೆ ಕೆಲವಕ್ಕೆ ಬರಿಯ ಛಿದ್ರಾನ್ವೇಷಣ ದೋಷಾವಿಷ್ಕಾರಣೇಚ್ಛೆಗಳೇ ಮೂಲವೆಂದು ಹೇಳಬೇಕಾಗುತ್ತದೆ. ಹೀಗೆ ಇವರ ಆಕ್ಷೇಪಣೆಗಳಲ್ಲಿ ಹಲವು ಪ್ರಯೋಜನಕಾರಿಯಲ್ಲದೆ ಇದ್ದರೂ ನನ್ನ ಪಕ್ಷವನ್ನು ಪುನರ್ವಿಮರ್ಶೆ ಮಾಡಲು ನನಗೆ ಅವಕಾಶವನ್ನು ದೊರೆಯಿಸಿಕೊಟ್ಟುದ್ದಕ್ಕಾಗಿ ಇವರಿಗೆ ಧನ್ಯವಾದಗಳನ್ನು ಹೇಳಬೇಕಾಗಿದೆ. (ಸಂ.3.ಪು.1) ಎಂದು ತಮ್ಮ ವಾದವನ್ನು ಮಂಡಿಸಿದ್ದಾರೆ. ಆ ವಾದಗಳ ಹಿಂದೆ ಆಚಾರ್ಯರ ಆಳವಾದ ಅಭ್ಯಾಸ, ಅಗಾಧವಾದ ಪಾಂಡಿತ್ಯ ಪ್ರತಿಭೆಗಳಿರುವುದನ್ನೂ ಕಾಣುತ್ತೇವೆ. ಈ ಭಾಗ History of Karnataka Literature ಪುಸ್ತಕ (ಪು. 30-60)ದಲ್ಲಿಯೂ ಬಂದಿದೆ.

ಕೆಲವರು ಆಚಾರ್ಯರ ಮೇಲೆ ಮತೀಯ ಆರೋಪ ಹೊರಿಸಿ ಬರೆದುದನ್ನು ಈ ರೀತಿ ಉಲೇಖಿಸಿದ್ದಾರೆ. "ವೀರಶೈವಧರ್ಮ ಪ್ರಕಾಶಿಕೆ (ಜುಲೈ 1922), ವಿಭಾಕರ (ಜೂನ್ 30,1922)- ಈ ಪತ್ರಿಕೆಗಳು ವಸ್ತುಸ್ಥಿತಿಯನ್ನು ತಿಳಿಯದೆ ಭ್ರಮಿಸಿ ನನ್ನ ಮೆಲೆ ಕೆಲವು ದೋಷಗಳನ್ನು ಆರೋಪಿಸಿವೆ. ಮೊದಲನೆಯ ಪತ್ರಿಕೆಯಲ್ಲಿ ಈ ಮಾತುಗಳನ್ನು ಹೇಳಿವೆ- "ಶ್ರೀ ಮದ್ವೀರಶೈವ ಮತದ ಮೇಲೆ ಕರ್ನಾಟಕ ಕವಿಚರಿತೆಯ ಕರ್ತರು ಪರಮತದವರಾದ ಕಾರಣ ವಿಷವನ್ನು ಕಾರಿರುವರೆಂದು ವೇ. ಶಾಂತವೀರಯ್ಯ ನಿಶಾನಿಮಠ ಇವರು ತುಂಬಾ ಶ್ರಮವಹಿಸಿ ಶೋಧಿಸಿ ಕಳುಹಿಸಿರುವ ವಿಷಯಗಳನ್ನು ಓದಿದ ಎಂಥವರಿಗಾದರೂ ತಿಳಿಯದೆ ಇರಲಾರದು. ಇವರು ಕಷ್ಟಪಟ್ಟ ಪುರಾತನ ತಾಳವಾಲಿ ಗ್ರಂಥಗಳನ್ನು ಶೋಧಿಸಿ-ಪರಮತದವರು ನಮ್ಮ ಮತದ ಮೆಲೆ ಕಾರಿರುವ ವಿಷಕ್ಕೆ ತಕ್ಕ ಔಷಧವನ್ನು ತಯಾರು ಮಾಡುತ್ತಿರುವರು". ನಾನು ಕೆಲವು ವೀರಶೈವ ವಚನಕಾರರ ಹೆಸರನ್ನು ಹೇಳಿಲ್ಲ ಎಂಬುದಕ್ಕಾಗಿ ಈ ಕಠಿಣೋಕ್ತಿಗಳನ್ನು ಪ್ರಯೋಗಿಸಿವೆ... ಅನ್ಯಮತ, ವಿಷಕಾರುವುದು ಎಂಬ ನುಡಿಗಳು ನನಗೆ ಬಹಳ ಖೇದಕರವಾಗಿವೆ. ಸಾಹಿತ್ಯ ಸಾಮ್ರಾಜ್ಯದಲ್ಲಿ ಮತ, ವರ್ಣ, ಸಿರಿ, ಬಡತನ ಮುಂತಾದ ಭಾವನೆಗಳಿಗೆ ಎಡೆಯೆ ಇಲ್ಲ. ವೀರಶೈವ ಕವಿಗಳ ಚರಿತ್ರೆಯನ್ನು ಬರೆಯುವುದರಲ್ಲಿ ನಾನು ತೋರಿಸಿರುವ ನಿಷ್ಪಕ್ಷಪಾತತೆಗೆ ಅನೇಕ ವೀರಶೈವ ಮಹನೀಯರು ಆನಂದಿಸಿ ತಮ್ಮ ಮೆಚ್ಚಿಗೆಯನ್ನು ತಿಳಿಸಿದ್ದಾರೆ... ವೀರಶೈವ ಸಾಹಿತ್ಯಸಂಪತ್ತನ್ನು ಪ್ರಕಟ ಮಾಡುವುದರಲ್ಲಿ ಆವ ವೀರಶೈವನೂ ನನ್ನಷ್ಟು ಶ್ರಮಪಟ್ಟಿಲ್ಲ ಎಂದು ಧೈರ್ಯವಾಗಿ ಹೇಳಬಲ್ಲೆನು" (ಸಂ.I. ಪು. 21,22).

ಕವಿಚರಿತೆಯಲ್ಲಿಯ ಕೊರತೆಯ ಅರಿವು ಆರ್. ನರಸಿಂಹಾಚಾರ್ ಅವರಿಗಿದೆ. ಅದಕ್ಕಾಗಿಯೇ ಅವರು ದ್ವಿತೀಯ ಸಂಪುಟವನ್ನು ಕುರಿತು "ಈ ಸಂಪುಟದಲ್ಲಿ ೧೫,೧೬ ಮತ್ತು ೧೭ ಈ ಮೂರು ಶತಕಗಳಲ್ಲಿದ್ದ ಎಲ್ಲಾ ಕವಿಗಳ ವಿಷಯವೂ ಬಂದಿದೆಯೆಂದು ಧೈರ್ಯವಾಗಿ ಹೇಳಲಾರೆನು" ಎಂದಿದ್ದಾರೆ. ಮೂರನೆಯ ಸಂಪುಟದ ಪ್ರಸ್ತಾವನೆಯಲ್ಲಿ "ಕರ್ನಾಟಕ ಕವಿಚರಿತೆಯಲ್ಲಿ ಹಲವು ಕೊರತೆಗಳಿವೆ ಎಂಬುದನ್ನು ನಾನು ಚೆನ್ನಾಗಿ ಬಲ್ಲೆನು" ಎಂದೂ ಒಪ್ಪಿಕೊಂಡಿದ್ದಾರೆ. ಹೀಗಾಗಿ ಮುಂದೆ ಇದಕ್ಕೆ ಪೂರಕವೆನ್ನುವಂತೆ ಶ್ರೀ ಎಸ್. ಶಿವಣ್ಣ ಅವರು 'ಕರ್ನಾಟಕ ಕವಿ ಚರಿತೆಯ ಅನುಕ್ತ ಕೃತಿ ಸೂಚಿ'ಯನ್ನು ಹೊರತಂದರು. ಕವಿಚರಿತೆಯಲ್ಲಿ ಹಲವು ದೋಷಗಳು ಇವೊತ್ತಿಗೂ ಉಳಿದುಕೊಂಡು ಬಂದಿವೆ. ಅವುಗಳಲ್ಲಿ ಕೆಲವನ್ನು ಈ ರೀತಿ ಸಂಗ್ರಹಿಸಬಹುದು:

1) ಚಿದಾನಂದ ಕವಿಯ ಮುನಿವಂಶಾಭ್ಯುದಯವನ್ನು ಕುರಿತು 2ನೆಯ ಸಂಪುಟದ ಪರಿಷ್ಕೃತ ಆವೃತ್ತಿಯಲ್ಲಿ 'ಸಂಧಿ 16, ಪದ್ಯ 2530' ಎಂದಿದೆ. (ಪು. 477) ಆದರೆ ಈ ವಿವರಣೆ ಚಿದಾನಂದ ಕವಿಯ ಇನ್ನೊಂದು ಕೃತಿ ನೀತಿ ನಿರ್ಣಯಕ್ಕೆ ಸಂಬಂಧಿಸಿದುದು. ಮುನಿವಂಶಾಭ್ಯುದಯ ಈವರೆಗೆ ದೊರೆತಿರುವುದು ಅಪೂರ್ಣ. ಅಲ್ಲಿ ಕೇವಲ 624ಪದ್ಯಗಳಿವೆ. (ಬಿ.ವಿ.ಶಿರೂರ ಸ್ಮರಣ ಸಂಚಿಕೆ. ಪು. 127. 1981)

2) ಇಲ್ಲಿಯ ಕೆಲವು ದೋಷಗಳನ್ನು ಶ್ರೀ ಸೀತಾರಾಮ ಜಹಗೀರದಾರ ಅವರು ಗುರುತಿಸಿದ್ದು (ಮಹಾಮಾರ್ಗ. ಪು.366-378) ಅವನ್ನು ಹೀಗೆ ಸಂಗ್ರಹಿಸಿಬಹುದು. ಎಸ್.ಜಿ.ನರಸಿಂಹಾಚಾರ್ ಅವರು ಆದಿಪುರಾಣವನ್ನು ಸಮಗ್ರವಾಗಿ ಪ್ರಕಟಿಸಿದ್ದರೂ ಅದನ್ನು ನೋಡದೆ ಆರ್.ನರಸಿಂಹಾಚಾರ್ ಅವರು ಆದಿಪುರಾಣದ ಸಮಾಪ್ತಿ ತೇದಿಯನ್ನು ಅಪೂರ್ಣವಾಗುತ್ತಿರುವುದು,

ಪೊನ್ನನಿಗೆ ಕವಿಚಕ್ರವರ್ತಿ ಬಿರುದನ್ನಿತ್ತು ಅರಸನ, ಅವನ ರಾಜಧಾನಿಯ ಬಗೆಗೆ ಏನೂ ಹೇಳದೆ ಇರುವುದು, ಹರಿಹರನ ರಗಳೆಗಳ ಒಟ್ಟು ಸಂಖ್ಯೆಯನ್ನು ಕೊಡದೆ ಇರುವುದು. ಬಸವರಾಜ ದೇವರ ರಗಳೆ ಆತನದೆಂದು ಉಲ್ಲೇಖಿಸದೆ ಇರುವುದು ಇವೇ ಮೊದಲಾದ ದೋಷಗಳು ಇಲ್ಲಿವೆ.

3) ಡಾ|| ಹಂಪನಾ ಅವರು ಕವಿಚರಿತೆಗೆ ಕೆಲವು ತಿದ್ದುಪಡಿಗಳು ಎಂಬ ಲೇಖನ ಬರೆದು (ಶ್ರೀಕಂಠತೀರ್ಥ -ಪು. 883) ಅಲ್ಲಿಯ ಹಲವಾರು ತಪ್ಪುಗಳನ್ನು ಎತ್ತಿ ಹೇಳಿದ್ದಾರೆ. 1) ಆದಿಯಪ್ಪ ಹೆಸರಿನ ಕವಿಗಳು ಇಬ್ಬರಲ್ಲ, ಒಬ್ಬ. ಅವನ ಕಾಲ 1650ಅಲ್ಲ, 1462. 2) ಕಲ್ಯಾಣಕೀರ್ತಿಯ ಕೃತಿಗಳ ಪಟ್ಟಿಗೆ ಚಿನ್ಮಯ ಚಿಂತಾಮಣಿ, ಫಣಿ ಕುಮಾರ ಚರಿತೆ (ಕನ್ನಡ), ಜಿನಯಜ್ಞ ಫಲೋದಯ ಯಶೋಧರ ಚರಿತೆ (ಸಂಸ್ಕೃತ) ಸೇರಬೇಕು. 3) ಚಿನ್ಮಯ ಚಿಂತಾಮಣಿಯನ್ನು ಬರೆದ ಕವಿ ಸಿಂಹರ್ಧಾಜನಲ್ಲ, ಕಲ್ಯಾಣ ಕೀರ್ತಿ; ಅದು ಕಂದ ಪದ್ಯದಲ್ಲಿಲ್ಲ, ಚೌಪದಿಯಲ್ಲಿದೆ. ಇವೇ ಮೊದಲಾದ 15 ತಿದ್ದುಪಡಿಗಳನ್ನು ಇಲ್ಲಿ ಸೂಚಿಸಲಾಗಿದೆ.

"ಹೀಗೆಂದ ಮಾತ್ರಕ್ಕೆ ಅವರು ಮಾಡಿದ ಕಾರ್ಯ ಅಲಕ್ಷಿಸುವಂತಹದಲ್ಲ. ಗ್ರಂಥ'ಗಳನ್ನು ಪ್ರಕಟವಾದ ಕಾಲದಲ್ಲಿ ಹಸ್ತಪ್ರತಿಗಳನ್ನು ಕಣ್ಣಲ್ಲಿಕಣ್ಣಿಟ್ಟು ಓದಿ, ಕವಿ-ಕಾಲ-ದೇಶ-ಮತ, ಕೃತಿಸ್ವರೂಪ-ವೈಶಿಷ್ಟ್ಯಗಳ ಬಗೆಗೆ ಹೆಕ್ಕಿ ತೆಗೆದು ತಮಗೆ ದೊರೆತ ಆಧಾರಗಳ ಮೇಲಿಂದ ಖಚಿತ ವಿವರಗಳನ್ನು ನೀಡಿದ್ದು ಸಾಮಾನ್ಯ ಕೆಲಸವೇನಲ್ಲ. ಹತ್ತಾರುಜನ ಸೇರಿ ಹತ್ತಾರು ವರ್ಷಗಳ ಸತತ ಪರಿಶ್ರಮದಿಂದ ಮಾಡಬೇಕಾದ ಕಾರ್ಯವನ್ನು ಒಬ್ಬನೇ ವ್ಯಕ್ತಿ ಮಾಡಿದ್ದು ಅಪೂರ್ವವೆನಿಸಿದೆ. ಇದು ದೈತ್ಯಶಕ್ತಿಯ ವ್ಯಕ್ತಿಗಳಿಂದ ಮಾತ್ರ ಸಾಧ್ಯ. ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಅವರು ತೋರಿದ ಶ್ರಮ-ಶ್ರದ್ಧೆ-ಸಂಯಮಗಳು ಅನುಕರಣೀಯವೆನಿಸಿವೆ. ಕನ್ನಡದ ಯಾವುದೇ ಕವಿಯ ವಿಷಯವನ್ನು ತಿಳಿದುಕೊಳ್ಳಲು ಬಯಸುವವರಿಗೆ ಪ್ರಥಮ ಆಕರಗಳಾಗಿ ನಿಂತಿರುವ ಕವಿಚರಿತೆಯ ಸಂಪುಟಗಳಿಗೆ ಕನ್ನಡದ ಸಾಹಿತ್ಯದ ಇತಿಹಾಸದಲ್ಲಿ ಒಂದು ಚಾರಿತ್ರಿಕ ಮಹತ್ವವುಂಟು" (ಸೀತಾರಾಮ ಜಹಗೀರ್ ದಾರ್, ಮಹಾಮಾರ್ಗ.ಪು.323).

ಆರ್. ನರಸಿಂಹಚಾರ್ ಅವರು ಒಳ್ಳೆಯ ಗ್ರಂಥಸಂಪಾದಕರೂ ಹೌದು. ಅವರು 1903ರಲ್ಲಿ ಹೊಸ ಹಸ್ತಪ್ರತಿಗಳ ನೆರವಿನಿಂದ 'ಕರ್ಣಾಟಕ ಭಾಷಾ ಭೂಷಣ"ದ ಎರಡನೆಯ ಮುದ್ರಣವನ್ನು, ಮೊದಲಬಾರಿಗೆ 'ಕಾವ್ಯಾವಲೋಕನ'ವನ್ನೂ ಒಂದೇ ಸಂಪುಟದಲ್ಲಿ ಪ್ರಕಟಿಸಿದರು. ಈ ಗ್ರಂಥಕ್ಕೆ ವಿದ್ವತ್ಪೂರ್ಣವಾದ ಇಂಗ್ಲೀಷ್ ಪೀಠಿಕೆ ಇದೆ. ಬಹುವಿಷಯವನ್ನೊಳಗೊಂಡ ಇದರಲ್ಲಿ ಕಾದಂಬರಿ, ಛಂದೋಂಬುಧಿಗಳ ನಾಗವರ್ಮನು ಕಾವ್ಯಾವಲೋಕನ, ಭಾಷಾಭೂಷಣಗಳ ನಾಗವರ್ಮನಿಂದ ಭಿನ್ನನೆಂಬುದನ್ನು ಸಪ್ರಮಾಣವಾಗಿ ಪ್ರತಿಪಾದಿಸಲಾಗಿದೆ. ಈ ಗ್ರಂಥಗಳಿಗೆ ಇವರು ಸೇರಿಸಿರುವ ಪರಿಶಿಷ್ಟಗಳೂ ಉಪಯುಕ್ತವಾಗಿವೆ. ಕಾವ್ಯಾವಲೋಕನ ಮೈಸೂರು ವಿಶ್ವವಿದ್ಯಾಲಯದಿಂದ 1939 ಮತ್ತು 1967ರಲ್ಲಿ ಪುನರ್ಮುದ್ರಣವಾಗಿದೆ.

ಆರ್. ನರಸಿಂಹಚಾರ್ ಅವರು 'ನೀತಿಮಂಜರಿ', 'ನೀತಿ-ವಾಕ್ಯಮಂಜರಿ' ಕೃತಿಗಳಿಂದ ಒಳ್ಳೆಯ ಅನುವಾದಕರು ಎಂಬ ಹೆಸರನ್ನು ಪಡೆದಿದ್ದಾರೆ. 'ನೀತಿಮಂಜರಿ'ಯ ಪ್ರಥಮಭಾಗ 1896ರಲ್ಲಿ ಪ್ರಕಟವಾಯಿತು. ಅದರಲ್ಲಿ ತಮಿಳಿನ ಶ್ರೇಷ್ಠ ನೀತಿಸಾಹಿತ್ಯದ ಕೆಲವು ಭಾಗಗಳನ್ನಾಯ್ದು ಕನ್ನಡಕ್ಕೆ ಪದ್ಯರೂಪದಲ್ಲಿ ಅನುವಾದಿಸಿಕೊಟ್ಟಿದ್ದಾರೆ. ಶೈಲಿ ಬಿಗುವಾಗಿದೆ ಯಾದರೂ ಮೂಲದ ಭಾವಬನಿಗಳನ್ನು ಮೈದುಂಬಿಕೊಂಡು ಅಚ್ಚುಗಟ್ಟಿನಿಂದ ಕೂಡಿದೆ. 'ನೀತಿವಾಕ್ಯಮಂಜರಿ' ಗದ್ಯದಲ್ಲಿದ್ದು ತಮಿಳಿನ ಅಪ್ಪೈಯಾರ. ತಿರುವಳ್ಳುವರ್, ಸಂಸ್ಕೃತದ ಕ್ಷೇಮೇಂದ್ರ, ಭರ್ತೃಹರಿ ಮೊದಲಾದವರ ಕೃತಿ ಭಾಗಗಳನ್ನಾಯ್ದು ಅನುವಾದಿಸಲಾಗಿದೆ. ಇಜೀಞ ಬೆಶ್ಚಿ ಕೃತಿಯ ಭಾಷಾಂತರವಾದ 'ನಗೆಗಡಲು' ಆಚಾರ್ಯರ ಹಾಸ್ಯಪ್ರಜ್ಞೆಗೆ ಒಳ್ಳೆಯ ಉದಾಹರಣೆಯಾಗಿದೆ. ಗಾಂಪರೊಡೆಯರು ಮತ್ತು ಅವರ ಶಿಷ್ಯರ ಪ್ರತಾಪಗಳಿಗೆ ಸಂಬಂಧಿಸಿದ ಇಲ್ಲಿನ ಘಟನೆಗಳು ಕಥಾರೂಪದಲ್ಲಿವೆ. 78 ಪುಟಗಳ ಈ ಕೃತಿ 10 ಪ್ರಕರಣಗಳಲ್ಲಿ ಹರಡಿದೆ.

ಆರ್. ನರಸಿಂಹಾಚಾರ್ ಅವರು ಮೈಸೂರು ವಿಶ್ವವಿದ್ಯಾಲಯದ ಕೋರಿಕೆಯ ಮೇರೆಗೆ ಕನ್ನಡ ಭಾಷೆಯ ಇತಿಹಾಸವನ್ನು ಕುರಿತು ಮೈಸೂರಿನಲ್ಲಿ ಇತ್ತ ಐದು ರೀಡರ್‌ಶಿಪ್ ಲಕ್ಚರುಗಳ ಪುಸ್ತಕರೂಪವೇ 'History of kannada Language' ಕೃತಿ (1934) ಇದರಲ್ಲಿ ಕನ್ನಡಕ್ಕೆ ಮೂಲವಾದ ದ್ರಾವಿಡ ಭಾಷೆಯ ವಿವೇಚನೆಯಿದೆ. ದ್ರಾವಿಡ ಭಾಷೆಯ ಹುಟ್ಟು, ದ್ರಾವಿಡರ ನಾಗರಿಕತೆ, ದ್ರಾವಿಡ ಭಾಷೆಯ ಮೇಲೆ ಸಂಸ್ಕೃತದ ಮುಂತಾದ ಆರ್ಯಭಾಷೆಯ ಪ್ರಭಾವ. ಸಂಸ್ಕೃತ ಮತ್ತು ಆರ್ಯಭಾಷೆಗಳ ಮೇಲೆ ದ್ರಾವಿಡ ಭಾಷಾ ಪ್ರಭಾವ ಎಂಬ ಐದು ವಿಭಾಗಗಳಿವೆ. ಸ್ವತಃ ಕನ್ನಡ, ಸಂಸ್ಕೃತ, ತೆಲುಗು, ತಮಿಳು ಭಾಷೆಗಳಲ್ಲಿ ಪಂಡಿತರಾಗಿದ್ದ ಆರ್. ನರಸಿಂಹಾಚಾರ್ ಅವರಿಗೆ ಈ ರೀತಿಯ ಅಧ್ಯಯನ ನೀರು ಕುಡಿದಷ್ಟು ಸುಲಭವಾಗಿದೆ. ಇನ್ನೂ ಭಾಷಾ ವಿಜ್ಞಾನ ಅಷ್ಟಾಗಿ ಕಣ್ತೆರೆಯದಿದ್ದ ಕಾಲದಲ್ಲಿ ಈ ರೀತಿಯ ಪ್ರಯತ್ನ ಬಹು ಸಾಹಸದ್ದೆಂದೇ ಹೇಳಬೇಕು.

ಇದೇ ಮಾಲಿಕೆಯಲ್ಲಿ ಬೆಂಗಳೂರಿನಲ್ಲಿತ್ತ ಐದು ರೀಡರ್‌ಶಿಪ್ ಲಕ್ಚರುಗಳು History of Kannda Literature ಎಂಬ ಪುಸ್ತಕರೂಪದಲ್ಲಿ ಪ್ರಕಟವಾಗಿವೆ. ಇದರಲ್ಲಿ ಕನ್ನಡ ಸಾಹಿತ್ಯದ ಪ್ರಾಚೀನತೆ, ತಮಿಳು, ತೆಲುಗು, ಮಲೆಯಾಳಿ ಸಾಹಿತ್ಯ, ಕವಿ-ಕಾವ್ಯ-9ನೆಯ ಶತಮಾನದಿಂದ ಆಧುನಿಕ ಯುಗದವರೆಗೆ, ಕನ್ನಡ ಸಾಹಿತ್ಯ ಮತ್ತು ತೆಲುಗು, ತಮಿಳು, ಸಂಸ್ಕೃತಗಳ ಸಂಬಂಧ, ಕನ್ನಡ ಸಾಹಿತ್ಯದ ಸ್ಥಾನಮಾನ ಇವೇ ಮೊದಲಾದ ವಿಷಯಗಳು ವಿವೇಚನೆಗೊಂಡಿವೆ. ಅಲ್ಲದೆ ಒಂದು ಭಾಷಣದಲ್ಲಿ ತಮ್ಮ ಕವಿಚರಿತೆಯ ಮೇಲಿನ ವಿಮರ್ಶೆಗೆ ಉತ್ತರವನ್ನೂ ಕೊಡಲಾಗಿದೆ.

ಇವಲ್ಲದೆ ಆರ್. ನರಸಿಂಹಾಚಾರ್ ಅವರು ಸುಮಾರು 250 ಪುಸ್ತಕಗಳ ಹಸ್ತಪ್ರತಿಗಳನ್ನು ವಿಮರ್ಶಿಸಿದ್ದಾರೆ. ಬೆಂಗಳೂರಿನ ಮಿಥಿಕ್ ಸೊಸಾಯಿಟಿಯ ಬೆಳ್ಳಿಹಬ್ಬದ ಸಮಯದಲ್ಲಿ 'ಬೃಹದ್ಭಾರತ'ದ ಪರಿಚಯವನ್ನು ಸ್ವಾರಸ್ಯಕರವಾಗಿ ಮಾಡಿಕೊಟ್ಟಿದ್ದಾರೆ.

ಆರ್. ನರಸಿಂಹಾಚಾರ್ ಅವರ ವಿದ್ವತ್ ಮತ್ತು ಅವರು ಮಾಡಿದ ಘನ ಸಾಧನೆಯನ್ನು ನೋಡಿ ಆಗಿನ ಘನ ಸರಕಾರ ಮತ್ತು ಪ್ರಜಾಕೋಟಿ ಪ್ರಾಕ್ತನ ವಿಮರ್ಶನ ವಿಚಕ್ಷಣ, ಕರ್ಣಾಟಕ ಪ್ರಾಚ್ಯ ವಿದ್ಯಾವೈಭವ, ಮಹಾಮಹೋಪಾಧ್ಯಾಯ, ಅಭಿನವ ಕನ್ನಡ ಸೀಮಾ ಪುರುಷ, ರಾವ ಬಹದ್ದೂರ ಮುಂತಾದ ಬಿರುದುಗಳನ್ನಿತ್ತು ಗೌರವಿಸಿದವು. ಇವರು 1918ರಲ್ಲಿ ಜರುಗಿದ 4ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. 1907ರಲ್ಲಿ ಧಾರವಾಡದಲ್ಲಿ ನಡೆದ ಗ್ರಂಥಕರ್ತರ ಸಮ್ಮೇಳನದ ಅಧ್ಯಕ್ಷರೂ ಇವರಾಗಿದ್ದರು.

ಇಷ್ಟೆಲ್ಲ ವಿದ್ವಾಂಸರಾಗಿದ್ದರೂ ಅವರಲ್ಲಿ ವೈದಿಕ ಶ್ರದ್ಧೆ ಮತ್ತು ದೈವಭಕ್ತಿ ಅಪಾರವಾಗಿದ್ದಿತು. "ಅವರು ನಲ್ಲಿ ನೀರು ಎಂದೂ ಕುಡಿದವರಲ್ಲ. ಅವರೊಮ್ಮೆ ಕಲ್ಕತ್ತೆಯಲ್ಲಿದ್ದಾಗ ಮನೆಯ ಹತ್ತಿರ ಬಾವಿ ಇರಲಿಲ್ಲ. ಮನೆಯಾಳಿಗೆ ಆರೋಗ್ಯ ಕಡಿಮೆಯಾಗಿತ್ತು. ಆದ್ದರಿಂದ ದೂರದಲ್ಲಿದ್ದ ಬಾವಿಯಿಂದ ತಾವೇ ನೀರು ಹೊತ್ತು ತರುತ್ತಿದ್ದರಂತೆ. ಅವರೆಂದೂ ಮುಖಕ್ಷೌರ ಮಾಡಿಸಿಕೊಂಡವರ ಹಂತಿಯಲ್ಲಿ ಕುಳಿತು ಊಟ ಮಾಡಲೂ ಇಲ್ಲ. ಇಷ್ಟು ನಿಷ್ಠಾವಂತ ಸಂಪ್ರದಾಯಶೀಲರಾದರೂ ಪರಮತ ಪರಧರ್ಮಗಳ ವಿಷಯದಲ್ಲಿ ತಪ್ಪಿಯೂ ದ್ವೇಷಕ್ಕೆಡೆಗೊಟ್ಟವರಲ್ಲ". (ಅಧ್ಯಕ್ಷರ ಪರಿಚಯ, ಸಮಾಜ ಪುಸ್ತಕಾಲಯ, ಧಾರವಾಡ, 1957 ಪು.25).

6-12-1936ರಂದು ಈ ದಿವ್ಯಚೇತನದ ಆತ್ಮಜ್ಯೋತಿ ಆರಿಹೋಯಿತು.

❑

# ಕೆರೂರ ವಾಸುದೇವಾಚಾರ್ಯ

ಜಿ.ಎಸ್. ಕಾಪಸೆ

ಹೊಸಗನ್ನಡ ಸಾಹಿತ್ಯದ ಇತಿಹಾಸವನ್ನು ಬರೆದವರೆಲ್ಲ ನವೋದಯ ಸಾಹಿತ್ಯದ ಆರಂಭದ ಗಡುವನ್ನು 1920 ಎಂದು ಗುರುತಿಸಿದ್ದಾರೆ. ಇಲ್ಲಿಂದ ಮುಂದೆ ಕ್ರಮವಾಗಿ ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ ಬಂಡಾಯದ ಘಟ್ಟಗಳಿವೆ. ಕನ್ನಡ ಹಿಂದೆಂದೂ ಕಾಣದ ನವೀನತೆಯನ್ನೂ, ಸಮೃದ್ಧಿಯನ್ನೂ ಪಡೆದದ್ದು ಈ ಘಟ್ಟಗಳಲ್ಲಿಯೇ. ಈ ಎಲ್ಲ ಘಟ್ಟಗಳಿಗೆ ಬುನಾದಿಯಾಗಿರುವ ಕಾಲವೂ ಒಂದಿದೆ. ಅದನ್ನು ಹೊಸಗನ್ನಡ ಸಾಹಿತ್ಯದ ಆರಂಭದ ಘಟ್ಟವೆಂದು ಪರಿಗಣಿಸಬಹುದು.

ಭಾರತದ ರಾಷ್ಟ್ರೀಯ ಕಾಂಗ್ರೆಸ್ಸು ಸ್ಥಾಪನೆಯಾಗಿ ಭಾರತೀಯರಲ್ಲಿ ಸ್ವಾತಂತ್ರ್ಯ ಪ್ರಜ್ಞೆಯನ್ನು ಮೂಡಿಸಿದ, ಇಂಗ್ಲಿಷ್ ಶಿಕ್ಷಣದ ಪ್ರಭಾವದಿಂದ ಸಾಮಾಜಿಕ ಸುಧಾರಣೆಗಳ ಕಡೆಗೂ ಲಕ್ಷ್ಯ ಹೊರಳಿಸಿದ, ಭಾರತೀಯ ನೈಜ ಸಂಸ್ಕೃತಿಯನ್ನು ಅರಿತುಕೊಳ್ಳುವಲ್ಲಿ ಮನಸ್ಸು ಮಾಡಿರುವ, ಸಾಹಿತ್ಯಕವಾಗಿ ನೂತನ ಪ್ರಯೋಗಗಳನ್ನು ಮಾಡಲು ಯತ್ನಿಸುತ್ತಿರುವ ಒಂದು ವಿಶಿಷ್ಟ ಕಾಲಖಂಡವದು. ಈ ಕಾಲಖಂಡದಲ್ಲಿ ಕನ್ನಡ ನಾಡಿಗೇ ಸೀಮಿತವಾದ ಕೆಲವು ಸಮಸ್ಯೆಗಳು ಇದ್ದವು. ಮೈಸೂರು ಪ್ರದೇಶವೊಂದನ್ನು ಬಿಟ್ಟರೆ ಉಳಿದ ಪ್ರದೇಶಗಳೆಲ್ಲ ಬೇರೆ ಬೇರೆ ಭಾಷೆಗಳ ಪ್ರಭಾವಕ್ಕೆ ಒಳಗಾಗಿದ್ದವು. ಧಾರವಾಡ-ವಿಜಾಪುರ, ಬೆಳಗಾವಿ, ಕಾರವಾರಗಳನ್ನೊಳಗೊಂಡು ದಕ್ಷಿಣ ಮಹಾರಾಷ್ಟ್ರವೆನಿಸಿತ್ತು. ಕಲಬುರ್ಗಿ-ರಾಯಚೂರು, ಬೀದರ್‌ಗಳನ್ನು ಕೂಡಿಕೊಂಡು ನೈಜಾಮ ಅಧಿಪತ್ಯಕ್ಕೆ ಒಳಗಾಗಿತ್ತು. ಬಳ್ಳಾರಿಯಲ್ಲಿ ತೆಲುಗು ತನ್ನ ಪ್ರಾಬಲ್ಯವನ್ನು ಸ್ಥಾಪಿಸಿತ್ತು. ಹೀಗೆ ಕನ್ನಡದ ವಿಸ್ತಾರವಾದ ಪ್ರದೇಶ ತನ್ನತನವನ್ನು ಗುರುತಿಸಿಕೊಳ್ಳುವುದೇ ಒಂದು ಸಾಹಸದ ಕೆಲಸವಾಗಿತ್ತು. ಮೈಸೂರು ಕನ್ನಡದ ಪ್ರದೇಶವಾದರೂ ಅಲ್ಲಿಯ ಬರಹಗಾರರು ಸಂಪ್ರದಾಯದ ಕೋಟೆಯಿಂದ ಹೊರಬರಬೇಕಾದ ಪರಿಸ್ಥಿತಿಯಲ್ಲಿರಲಿಲ್ಲ. ಇಂಥ ಸ್ಥಿತಿಯಲ್ಲಿ ಬರವಣಿಗೆಗೆ ತೊಡಗುವ ಪ್ರತಿಯೊಬ್ಬನು ಕೆಲವು ತೊಡಕುಗಳನ್ನು ಎದುರಿಸಬೇಕಾದುದು ಅನಿವಾರ್ಯವಾಗಿತ್ತು.

ಭಾಷೆ, ಸಾಹಿತ್ಯಗಳೆರಡರಲ್ಲಿ ನೂತನ ಪ್ರಯೋಗಗಳನ್ನು ಮಾಡಬೇಕಾದ ಕಾಲದಲ್ಲಿ ಚುರಮುರಿ ಶೇಷಗಿರಿರಾಯರು, ಬಸವಪ್ಪ ಶಾಸ್ತ್ರಿಗಳು, ಬಿ. ವೆಂಕಟಾಚಾರ್ಯರು 1870ರ ನಂತರದ ಅವಧಿಯಲ್ಲಿ ಅನುವಾದದ ಮೂಲಕವೇ ಆಗಲಿ ಮಾಡಿದ ಕಾರ್ಯವು ಕನ್ನಡಕ್ಕೆ ಒಂದು ಬಗೆಯ ಹೊಸತನವನ್ನು ತಂದುಕೊಟ್ಟಿತು. ಇವರೆಲ್ಲರ ಕಾರ್ಯದ ಹಿನ್ನೆಲೆಯಲ್ಲಿಯೇ ಪ್ರೊ. ಎಲ್.ಎಸ್. ಶೇಷಗಿರಿರಾಯರು "ಹೊಸಗನ್ನಡ ಸಾಹಿತ್ಯದ ಮೊದಲ ಹಂತ 1870ರಿಂದ 1920ರ ವರೆಗೆ"[1] ಎಂದು ಗುರುತಿಸಿದ್ದಾರೆ. ಈ ಪ್ರಥಮ ಹಂತದ ಕಾಲಾವಧಿಯಲ್ಲಿಯೇ ಸಾಹಿತ್ಯಕವಾಗಿ ಅನೇಕ ಮುಖವಾಗಿ ಕಾರ್ಯ ಮಾಡಿದ ಕೆರೂರ ವಾಸುದೇವಾಚಾರ್ಯ (1866-1921)ರು ಒಬ್ಬ ಮಹತ್ವದ ಲೇಖಕರಾಗಿ ಕಾಣುತ್ತಾರೆ. ಕತೆ, ಕಾದಂಬರಿ, ನಾಟಕ ಈ ಮೂರು ಪ್ರಕಾರಗಳಲ್ಲಿ ಕೆರೂರವರು ಶ್ರದ್ಧೆಯಿಂದ ಕೆಲಸ ಮಾಡಿದ್ದು, ಸಂಸ್ಕೃತ ಮತ್ತು ಇಂಗ್ಲಿಷ್ ಸಾಹಿತ್ಯಗಳ ಪ್ರಭಾವಕ್ಕೆ ಒಳಗಾಗಿಯೂ ತಮ್ಮ ಸ್ವಂತಿಕೆಯನ್ನು ತೋರಿಸಿಕೊಟ್ಟಿದ್ದು ಒಂದು ಐತಿಹಾಸಿಕ ದಾಖಲೆಯಾಗಿ ಉಳಿದಿದೆ.

ಕೆರೂರ ವಾಸುದೇವಾಚಾರ್ಯರು ಜನಿಸಿದ್ದು 1866 ಅಕ್ಟೋಬರ್ 15ರಂದು. ಬಾಗಿಲಕೋಟೆ ಅವರ ಜನ್ಮಸ್ಥಳ. ಅವರ ತಂದೆ ಶ್ರೀನಿವಾಸಾ ಚಾರ್ಯರು. ಬಾದಾಮಿ ತಾಲ್ಲೂಕಿನ ಕೆರೂರು ಅವರ ಪೂರ್ವಜರು ವಾಸವಾಗಿದ್ದ ಒಂದು ಊರು. ಐತಿಹಾಸಿಕ ಮಹತ್ವವಿರುವ ಬಾಗಿಲಕೋಟೆ ಮತ್ತು ಬಾದಾಮಿ ತಾಲ್ಲೂಕಿನ ಪರಿಸರದಲ್ಲಿ ವಾಸುದೇವಾಚಾರ್ಯರ ಬಾಲ್ಯ ಕಳೆಯುತ್ತದೆ ; ಪ್ರಾಥಮಿಕ ಶಿಕ್ಷಣ ಪೂರ್ಣಗೊಳ್ಳುತ್ತದೆ. ಅವರ ಚಿಕ್ಕಂದಿರಾದ ಬಾಬಾಚಾರ್ಯ ಕೆರೂರ ಅವರು ಶಿಕ್ಷಣ ಇಲಾಖೆಯಲ್ಲಿ ಅಧಿಕಾರಿ

ಯಾಗಿದ್ದುದರಿಂದ, ಅವರ ಆಶ್ರಯದಲ್ಲಿ ವಾಸುದೇವಾಚಾರ್ಯರ ಮಾಧ್ಯಮಿಕ ಶಿಕ್ಷಣ ಬೆಳಗಾವಿ ಮತ್ತು ಧಾರವಾಡದಲ್ಲಿ ನಡೆಯುತ್ತದೆ. 1882ರಲ್ಲಿ ಆಗಿನ ಮ್ಯಾಟ್ರಿಕ್ಯುಲೇಶನ್ ಪಾಸಾದ ಆಚಾರ್ಯರು, ಪುಣೆಯಲ್ಲಿ ಇನ್ನೊಬ್ಬ ಕಕ್ಕಂದಿರ ಆಶ್ರಯದಲ್ಲಿ ಕಾಲೇಜು ಶಿಕ್ಷಣ ಮುಂದುವರಿಸುತ್ತಾರೆ. ಎರಡು ವರ್ಷ ಕಾಲೇಜಿನಲ್ಲಿ ಓದಿ, ಕಾರಣಾಂತರದಿಂದ ಅದನ್ನು ಮೊಟಕುಗೊಳಿಸಿ, ವಕೀಲಿ ಅಭ್ಯಾಸದ ಕಡೆಗೆ ಹೊರಳಿ, 1899ರಲ್ಲಿ ವಕೀಲಿ ಪರೀಕ್ಷೆಯನ್ನು ಪಾಸು ಮಾಡುತ್ತಾರೆ, ಆ ವೃತ್ತಿಯನ್ನು ಕೈಕೊಳ್ಳುತ್ತಾರೆ.

ವಕೀಲಿ ವೃತ್ತಿಯನ್ನು ಕೈಕೊಂಡದ್ದೆಷ್ಟೊ ಅಷ್ಟೆ. ಇದ್ದಕ್ಕಿದ್ದಂತೆ ಸಾಹಿತ್ಯದ ಕಡೆಗೆ, ಪತ್ರಿಕೋದ್ಯಮದ ಕಡೆಗೆ ಹೊರಳಿಬಿಡುತ್ತಾರೆ. "ವಾಸುದೇವಾಚಾರ್ಯರು ಸ್ವಭಾವತಃ ಸಾಹಿತಿ. ಸಾಹಿತ್ಯದ ಮೂಲಕ ಪತ್ರಿಕೋದ್ಯಮವನ್ನು, ಪತ್ರಿಕೋದ್ಯಮದ ಮೂಲಕ ರಾಜಕೀಯ ರಂಗವನ್ನು ಪ್ರವೇಶಿಸಿದರು"[2] ಎಂದು ಅವರನ್ನು ಪರಿಚಯಿಸಲಾಗುತ್ತಿದೆ. ರಾಜಕೀಯದಲ್ಲಿ ಅವರು ಪ್ರತ್ಯಕ್ಷವಾಗಿ ಕಾರ್ಯ ಮಾಡದಿದ್ದರೂ ಪ್ರತಿಕ್ರಿಯೆಗಳನ್ನು ಪ್ರಕಟಿಸಿದ್ದುದು ಆ ಕಾಲದಲ್ಲಿ ಒಂದು ಪ್ರಮುಖ ಕಾರ್ಯವೇ ಆಗಿತ್ತು. ಆ ದೃಷ್ಟಿಯಿಂದಲೇ 'ಅವರು ರಾಜಕೀಯ ರಂಗವನ್ನು ಪ್ರವೇಶಿಸಿದರು' ಎಂದು ಹೇಳಲಾಗುವುದು.

ಅತಿ ಮುಖ್ಯವಾದದ್ದು ಅವರ ಸಾಹಿತ್ಯಕ ಕೊಡುಗೆ. 1905 ರಿಂದ 1915ರ ಮಧ್ಯಂತರ ಕಾಲದಲ್ಲಿ ಕೆರೂರವರು ಸಾಹಿತಿಗಳಾಗಿ ರೂಪುಗೊಳ್ಳುತ್ತಿರುವುದು, ಬೆಳೆಯುತ್ತಿರುವುದು ಕಂಡುಬರುತ್ತದೆ. 'ನಲದಮಯಂತಿ' ನಾಟಕವನ್ನು ಬರೆದು, ಆಡಿಸಿದ್ದು ಈ ಅವಧಿಯಲ್ಲಿಯೇ. ಅವರ ಸ್ವತಂತ್ರ್ಯ ಸಾಮಾಜಿಕ ಕಾದಂಬರಿ 'ಇಂದಿರಾ' ಪ್ರಕಟವಾದದ್ದೂ ಇದೇ ಕಾಲದಲ್ಲಿಯೇ. 1921 ಜನವರಿ 21ರಂದು ನಿಧನ ಹೊಂದಿದ ವಾಸುದೇವಾಚಾರ್ಯರು ತಮ್ಮ ಜೀವಿತದ ಕೊನೆಯ ಗಳಿಗೆಯವರೆಗೂ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿದ್ದುದು ನೆನಪಿಡತಕ್ಕ ಮಾತಾಗಿದೆ.

ಹೊಸಗನ್ನಡದ ಪ್ರಾರಂಭದ ಗಮನಾರ್ಹ ಕಾದಂಬರಿಕಾರರಲ್ಲಿ ಒಬ್ಬರಾದ ಕೆರೂರ ಅವರು 'ಇಂದಿರೆ', 'ಯದುಮಹಾರಾಜ', 'ಭ್ರಾತೃ ಘಾತಕನಾದ ಔರಂಗಜೇಬ', 'ವಾಲ್ಮೀಕಿ ವಿಜಯ' ಮತ್ತು 'ಯಮನ ಸೈರಂಧ್ರಿ' ಹೀಗೆ ಐದು ಕಾದಂಬರಿಗಳನ್ನು ಕನ್ನಡಕ್ಕೆ ನೀಡಿದ್ದಾರೆ. 'ಇಂದಿರೆ' ಕನ್ನಡದಲ್ಲಿ ಬಂದ ಪ್ರಾರಂಭದ ಸಾಮಾಜಿಕ ಕಾದಂಬರಿಗಳಲ್ಲಿ ಎದ್ದುಕಾಣುವಂತಹದು. ಸಂಪ್ರದಾಯದ ಬೇರುಗಳು ಗಟ್ಟಿಯಾಗಿದ್ದ ಕಾಲದಲ್ಲಿ ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ವಿಧವಾ ವಿವಾಹ, ಆಧುನಿಕ ಶಿಕ್ಷಣ ಹೊಂದಿದ ಸುಧಾರಕ ಮನೋವೃತ್ತಿಯ ಯುವಕರು-ಮುಂತಾದ ಸಂಗತಿಗಳು ಕಾದಂಬರಿಯ ವಸ್ತು ವಿನ್ಯಾಸದಲ್ಲಿ ಬೆರೆತುಕೊಂಡ ನವೀನ ಸಂವೇದನಾಶೀಲತೆಯನ್ನು ನೀಡುವುದು ತುಂಬ ಹೊಸ ವಿಚಾರವಾಗಿರುವಂತೆ, ಬರಹಗಾರರ ಜವಾಬ್ದಾರಿಯ ವಿಷಯವೂ ಆಗಿತ್ತು. ಕೆರೂರ ಅವರ ಸುಧಾರಣಾವಾದಿತ್ವಕ್ಕೆ ಪರಿಚಯಿಸಿಕೊಂಡಿದ್ದುದರ ಪರಿಣಾಮವೇ ಕಾರಣವಾಗಿರುವಂತೆ ತೋರುತ್ತದೆ. 'ಇಂದಿರೆ' ಕಾದಂಬರಿಯ ಮುಖ್ಯ ವ್ಯಕ್ತಿಗಳೆಲ್ಲ ಸಮಾಜದ ಮೇಲಿನ ವರ್ಗಕ್ಕೆ ಸಂಬಂಧಿಸಿದವರಾಗಿದ್ದು, ಇವರ ನಡೆ-ನುಡಿಗಳು ಮಹಾರಾಷ್ಟ್ರದವರ ನಡೆನುಡಿಗಳನ್ನೇ ಹೋಲುತ್ತಿರುವುದರಿಂದ ಕೆರೂರವರು ಆಗಿನ ಮರಾಠಿ ಕಾದಂಬರಿಗಳ ಅಭಿವ್ಯಕ್ತಿಯ ನೆರವನ್ನೂ ಪಡೆದಿದ್ದುದು ಕಂಡುಬರುತ್ತದೆ. ಇಂದಿರೆ-ರಮಾಕಾಂತರ ಪ್ರೇಮವು ಕಾದಂಬರಿಯ ಪ್ರಮುಖ ವಿಷಯವೆನಿಸಿದರೂ ಅವರ ಸುತ್ತುವರಿದ ಪಾತ್ರಗಳು ಸಮಾಜದ ವಿವಿಧ ರೂಪಗಳನ್ನು ಕಣ್ಣುಮುಂದೆ ತಂದು ನಿಲ್ಲಿಸುತ್ತವೆ. ಪುಣೆಯಿಂದ ಬಂದ ವಿಚಾರಗಳು ಮೈಸೂರಿನ ಪ್ರದೇಶದಲ್ಲಿ ಸೇರಿ ಹೊಸ ಜೀವನವನ್ನು ಸೃಷ್ಟಿಸುತ್ತಿರುವಂತೆ ಕಂಡರೂ ಹಳೆಯ ಪರಂಪರೆಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. ಕೆರೂರವರದು ಅತ್ಯಂತ ಸುಸಂಸ್ಕೃತ ಮನಸ್ಸು ಮತ್ತು ವಿಶಾಲದೃಷ್ಟಿ. ಎಲ್ಲ ಬಗೆಯ ಪಾತ್ರ ಚಿತ್ರಣಗಳಲ್ಲಿ ಅವರ ಮನಸ್ಸಿನ ಮತ್ತು ಧೋರಣೆಯ ಪ್ರತಿಫಲನವನ್ನು ಕಾಣಬಹುದು. ಪ್ರೇಮವಿವಾಹವನ್ನು ಪ್ರೋತ್ಸಾಹಿಸುವ ಆಚಾರ್ಯರು ವಿಧವಾ ವಿವಾಹಕ್ಕೂ ಆಸ್ಪದ ನೀಡಿದ್ದಾರೆ. ಒಂದು ಸಂದರ್ಭದಲ್ಲಿ "ಶಾಸ್ತ್ರ ಸಮ್ಮತವಿರಲಿ, ಇಲ್ಲದಿರಲಿ ಪುನರ್ವಿವಾಹವು ಹಿತಕರವಾದದ್ದೆಂದು ನನ್ನ ಮತ" ಎಂದು ಪಾತ್ರವೊಂದರ ಮೂಲಕ ಹೇಳಿಸಿದ್ದು ಕೆರೂರವರ ಮತವೂ ಆಗಿದೆಯೆಂದು ಬೇರೆ ಊಹಿಸ ಬೇಕಾದುದಿಲ್ಲ.

ಹಾಸ್ಯವನ್ನು ಬೆರಸಿ ಕಥೆಯ ಆಕರ್ಷಣೆಯನ್ನು ಹೆಚ್ಚಿಸುವುದು ಕೆರೂರವರ ಅಭಿವ್ಯಕ್ತಿಯಲ್ಲಿ ಕಂಡುಬರುವ ಇನ್ನೊಂದು ಗುಣ. ಭಾಷ್ಯಳಪಂತ ಮತ್ತು ರಮಾಬಾಯಿಯವರ ಪಾತ್ರಗಳಲ್ಲಿ ಇದನ್ನು ನಾವು ವಿಶೇಷವಾಗಿಯೇ ಕಾಣುತ್ತೇವೆ. ಇಲ್ಲಿಯ ಹಾಸ್ಯ ಅಥವಾ ವಿಡಂಬನೆಯಲ್ಲಿ ಅತಿರಂಜಿತ ಮಾತು, ವಿಚಾರಗಳಿರುವುದು ಮಾತ್ರ ಖುಷಿಕೊಡುವ ಸಂಗತಿಗಳಾಗಿಲ್ಲ. ಜೀವನದ ಸಂಘರ್ಷಗಳಲ್ಲಿ, ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವಲ್ಲಿ ಕೆರೂರವರು ತಮಗನುಕೂಲವಾದ ದಾರಿಯನ್ನೇ ತುಳಿಯುತ್ತಾರೆ. ಸಂಪ್ರದಾಯ ಮತ್ತು ಸುಧಾರಣೆಗಳಲ್ಲಿ ಒಂದು ಬಗೆಯ ಮಿಶ್ರಣವಿದ್ದು ಕೆರೂರವರ ನಿಲುವು ಇನ್ನೂ ಅಸ್ಪಷ್ಟವಾಗಿದ್ದುದು ಗೋಚರವಾಗುತ್ತದೆ. ಕುರ್ತಕೋಟಿಯವರು "ರಕ್ತಗತ ಸಂಸ್ಕಾರವಾಗಿದ್ದ ಸಂಸ್ಕೃತ ಸಾಹಿತ್ಯದ ಬಗ್ಗೆ ಪ್ರೀತಿ, ಹೊಸದಾಗಿ ಅರಗಿಸಿಕೊಂಡಿದ್ದ ವೈಚಾರಿಕತೆ ಇವೆರಡೂ ಕೊನೆಯವರೆಗೆ ಆಚಾರ್ಯರಲ್ಲಿ ಪ್ರತ್ಯೇಕವಾಗಿಯೇ ಉಳಿದವು ; ಅವುಗಳ ಹೊಂದಾಣಿಕೆ ಸಾಧ್ಯವಾಗಲಿಲ್ಲ"[3] ಎಂದು ಅಭಿಪ್ರಾಯಪಟ್ಟಿದ್ದು ಒಪ್ಪತಕ್ಕ ಮಾತಾಗಿದೆ.

'ಯಮನ ಸೈರಂಧ್ರಿ', 'ಯದುಮಹಾರಾಜ' ಮತ್ತು 'ಭ್ರಾತೃಘಾತಕನಾದ ಔರಂಗಜೇಬ' ಇವು ಮೂರು ಕೆರೂರವರ ಐತಿಹಾಸಿಕ ಕಾದಂಬರಿಗಳು. ಉತ್ತರ ಕರ್ನಾಟಕದಲ್ಲಿ ಗಳಗನಾಥ'ರು ವಾಸುದೇವಾಚಾರ್ಯರ ಸಮಕಾಲೀನರಾಗಿ ವಿಪುಲವಾಗಿ ಐತಿಹಾಸಿಕ ಕಾದಂಬರಿಗಳನ್ನು ಸೃಷ್ಟಿಸಿದ್ದು ಒಂದು ಆಕರ್ಷಣೆಯಾಗಿತ್ತು. ಹಾಗೆ ನೋಡಿದರೆ ಕನ್ನಡದಲ್ಲಿ ಆರಂಭದಲ್ಲಿ ಬಂದ ಕಾದಂಬರಗಳಲ್ಲಿ ಐತಿಹಾಸಿಕ ಕಾದಂಬರಿಗಳದೇ ಸಿಂಹಪಾಲು. ಸಾಮಾಜಿಕ ಕಾದಂಬರಿಗಳು ಅಪರೂಪಕ್ಕೆ ಅಲ್ಲೊಂದು ಇಲ್ಲೊಂದು ಕಾಣಿಸಿಕೊಂಡವು.

ವಾಸುದೇವಾಚಾರ್ಯರ ಐತಿಹಾಸಿಕ ಕಾದಂಬರಿಗಳು ಆಗಿನ ಉಳಿದ ಕಾದಂಬರಿಗಳಂತೆ ಸರಳವಾದ ಮತ್ತು ಮನೋರಂಜಕವಾದ ಕಥನಕ್ರಮವನ್ನು ಅನುಸರಿಸಿದ್ದರೆ ಅದು ತೀರಾ ಸಹಜವಾದ ಕ್ರಿಯೆಯೇ ಆಗಿದೆ. ವಸ್ತು, ತಂತ್ರ ಮುಂತಾದವುಗಳನ್ನು ಕುರಿತು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಬೇಕಾದ ವಿಷಯಕ್ಕಿಂತ ಅಂದಿನ ಪರಿಸರದಲ್ಲಿ ಕೆರೂರವರು ಕಾದಂಬರಿ ಕ್ಷೇತ್ರದಲ್ಲಿ ಮಾಡಿದ ಸಾಧನೆಯನ್ನು ಗಮನಿಸುವುದು ಸೂಕ್ತವೆನಿಸುತ್ತದೆ.

ಮೇಲೆ ಹೆಸರಿಸಿದ ಮೂರು ಐತಿಹಾಸಿಕ ಕಾದಂಬರಿಗಳಲ್ಲಿ 'ಯಮನ ಸೈರಂಧ್ರಿ' ಸಂಪೂರ್ಣ ಐತಿಹಾಸಿಕವೇ ಆಗಿಲ್ಲ. ಇದು ನರೇಂದ್ರ ಹೇಮಲತೆಯರ ಸಾಹಸವನ್ನು ಚಿತ್ರಿಸುವ ಕೃತಿ. ಇವೆರಡು ಕಲ್ಪಿತ ಪಾತ್ರಗಳೇ.

ಹೇಮಲತೆ ಯಮನ ಸೈರಂಧ್ರಿಯಾಗಿ, ಫಕೀರನಾಗಿ, ಹುಡುಗ ಗಾಯಕನಾಗಿ ಕಾಣಿಸಿಕೊಳ್ಳುವುದು ಈ ಕಾದಂಬರಿಯಲ್ಲಿಯ ಒಂದು ವಿಶೇಷ ಆಕರ್ಷಣೆಯಾಗಿದೆ. ನರೇಂದ್ರ - ಹೇಮಲತೆಯರ ಜೀವನಕ್ಕೆ ಪೋಷಕ ಸಾಮಗ್ರಿಯಾಗಿ ಅಥವಾ ಕಥನಕ್ರಿಯೆಗೆ ಅನುಕೂಲಕರ ಸನ್ನಿವೇಶಗಳ ನಿರ್ಮಾಣದ ದ್ರವ್ಯವಾಗಿ ಅಕಬರ, ಮಿಹಿರುನ್ನಿಸಾ, ಸಲೀಮ- ಮುಂತಾದ ಐತಿಹಾಸಿಕ ಪಾತ್ರಗಳು ಪ್ರತ್ಯಕ್ಷವಾಗುತ್ತವೆ. ಈ ಕಾರಣಕ್ಕಾಗಿಯೇ ಇದನ್ನು ಐತಿಹಾಸಿಕ ಕಾದಂಬರಿಗಳ ಮಾಲಿಕೆಯಲ್ಲಿ ಸೇರಿಸುವಂತಾಗಿದೆ.

'ಯದುಮಹಾರಾಜ' ಕಾದಂಬರಿಗೆ ಮೈಸೂರು ರಾಜ್ಯದ ಐತಿಹಾಸಿಕ ಸಾಮಗ್ರಿ ಹಿನ್ನೆಲೆಯಾಗಿದೆ. ದಳವಾಯಿ ಮಾರನಾಯಕ ಚಾಮರಾಜ ಒಡೆಯರನ್ನು ಕೊಂದು ತಾನೇ ಸರ್ವಾಧಿಕಾರಿಯಾದಾಗ, ವಿಜಯನಗರದ ಯದುವಂಶದ ಯದುರಾಜ ಕೃಷ್ಣರಾಜನು ಬಂದು ಮಾರನಾಯಕನನ್ನು ಅನೇಕ ಉಪಾಯಗಳಿಂದ ಮಣ್ಣುಮುಕ್ಕಿಸುವುದೇ ಇಲ್ಲಿಯ ಮುಖ್ಯ ಕಥಾವಸ್ತು. ಈ ಕಾದಂಬರಿಯಲ್ಲಿ ಚತರಗ್ರಾಮದ ಪಾಳಯಗಾರ ಭದ್ರನಾಯಕ, ಬಂಕನಕೆರೆಯ ವಾಸುದೇವಯ್ಯ ಇವರು ತಮ್ಮ ಶೌರ್ಯ, ಪರಾಕ್ರಮ ಮತ್ತು ಸ್ವಾಮಿನಿಷ್ಠೆಯಿಂದ ಓದುಗರ ಗಮನವನ್ನು ಸೆಳೆಯುತ್ತಾರೆ. ಐತಿಹಾಸಿಕ ಸನ್ನಿವೇಶಗಳ ಪರಿಸರವೂ ಇಲ್ಲಿ ಮಹತ್ವದ್ದಾಗಿದೆ, ಈ ಕಾರಣಗಳಿಂದ ಇದು ಬೇಗನೇ ಮರೆತು ಬಿಡುವ ಕಾದಂಬರಿಯಾಗಿಲ್ಲ.

'ಭ್ರಾತೃಘಾತಕನಾದ ಔರಂಗಜೇಬ' ಮೊಗಲ ಸಾಮ್ರಾಜ್ಯದ ವಿಲಕ್ಷಣ ಸನ್ನಿವೇಶವನ್ನು ಆಯ್ದುಕೊಂಡು, ಶಹಾಜಹಾನ, ಔರಂಗಜೇಬ, ದಾರಾ, ಮುರಾದ ಮುಂತಾದವರ ಗುಣಸ್ವಭಾವಗಳನ್ನು ಅರ್ಥವತ್ತಾಗಿ ಚಿತ್ರಿಸುವಲ್ಲಿ ತನ್ಮಯವಾಗಿದೆ. ಕೆರೂರ ವಾಸುದೇವಾಚಾರ್ಯರು ತಮ್ಮ ಕಥನಕೌಶಲವನ್ನೆಲ್ಲ ಇಲ್ಲಿ ಪ್ರಕಟಪಡಿಸಿದಂತೆ ಕಂಡುಬರುತ್ತದೆ. ಔರಂಗಜೇಬನ ರಾಜಕಾರಣ, ಮುರಾದನ ವಿಷಯಲಂಪಟತೆ, ಅಧಿಕಾರ ಸ್ಥಾನದಲ್ಲಿರುವವರ ಸ್ವಾರ್ಥಪರತೆ, ಹೆಣ್ಣುಛಲ, ಮುಂತಾದವುಗಳು ಇಲ್ಲಿ ಅತ್ಯಂತ ಗಮನಾರ್ಹ ಸಂಗತಿಗಳಾಗಿವೆ. ರಾಜಮನೆತನವೊಂದರಲ್ಲಿ ಸ್ವಾರ್ಥಪರತೆಯಿಂದ ಎಷ್ಟೆಷ್ಟು ತಿರುಗಣಿ ಮಡುಗಳು ನಿರ್ಮಾಣವಾಗುತ್ತವೆ ಮತ್ತು ಯಾರು ಯಾರನ್ನು ಆಹುತಿ ತೆಗೆದುಕೊಳ್ಳುತ್ತವೆ ಎಂಬಿತ್ಯಾದಿ ವಿಷಯಗಳನ್ನು ಅರಿಯಲು ಇಲ್ಲಿ ಸಾಕಷ್ಟು ಸಾಮಗ್ರಿಯಿದೆ. ಕಾದಂಬರಿ ಕುತೂಹಲಕರ ಸನ್ನಿವೇಶಗಳನ್ನು ನಿರ್ಮಿಸಿಕೊಳ್ಳುತ್ತ ಸಾಗಿದ್ದರೂ ಐತಿಹಾಸಿಕ ವಾಸ್ತವ ಜೀವನದ ಚಿತ್ರವೇ ಯಥಾವತ್ತಾಗಿ ಕಣ್ಮುಂದೆ ನಿಂತಂತಹ ಅನುಭವ ಓದುಗನಿಗಾಗುತ್ತಿರುವುದು ಕಾದಂಬರಿಯ ಯಶಸ್ಸಿಗೆ ಒಂದು ನಿದರ್ಶನವಾಗಿದೆ. "ಕಾದಂಬರಿ ಅರ್ಧಸತ್ಯದ ಅಭಿವ್ಯಕ್ತಿಯಾಗದೆ ಹಚ್ಚಹಸಿರು ಪೂರ್ಣಸತ್ಯವನ್ನು ಕಣ್ಣೆದರು ನಿಲ್ಲಿಸುತ್ತದೆ"[4] ಎಂದು ಹೇಳುವುದು ಅತ್ಯಂತ ಸಮರ್ಪಕವಾದ ವಿಮರ್ಶೆಯ ಮಾತಾಗಿದೆ.

'ವಾಲ್ಮೀಕಿ ವಿಜಯ' ವಿಕ್ಷಿಪ್ತವಾದ ಪಾತ್ರರಚನೆಯಿಂದ ಕೂಡಿರುವುದರಿಂದ ಅಂಥ ಮಹತ್ವದ ಕಾದಂಬರಿಯಾಗಿಲ್ಲ.

ವಾಸುದೇವಾಚಾರ್ಯರು ಕನ್ನಡದ ಆರಂಭದ ಸಣ್ಣಕಥೆಗಾರರಲ್ಲಿ ಪ್ರಮುಖರು. 'ಪ್ರೇಮವಿಜಯ', 'ತೊಳೆದ ಮುತ್ತು' ಮತ್ತು 'ಬೆಳಗಿದ ದೀಪಗಳು' ಇವು ಅವರ ಕಥಾಸಂಗ್ರಹಗಳು. ಕೆರೂರವರ ಸಣ್ಣಕಥೆಗಳ ಮೇಲೆ ಮರಾಠಿಯ 'ಸಂಪೂರ್ಣತೆ'ಯ ಪ್ರಭಾವವಿರುವುದರಿಂದ ಆ ಮಾದರಿಯಲ್ಲಿಯೇ ಬರೆದ ತಮ್ಮ ಕಥೆಗಳನ್ನು ಅವರೂ 'ಸಂಪೂರ್ಣಕಥೆ'ಗಳೆಂದೇ ಕರೆದುಕೊಂಡಿದ್ದಾರೆ. ಕಥೆಗಳ ವಸ್ತು ಸಾಮಾಜಿಕ ಮತ್ತು ಐತಿಹಾಸಿಕವಾಗಿದ್ದು, ಕೆಲವು ಪತ್ತೇದಾರಿ ಕಥೆಗಳನ್ನು ಬರೆದಿರುವರು. 'ರಾಖೀಬಂಧನ ಬಂಧುತ್ವ', 'ಪ್ರಣಯದರ್ಪಣ', 'ಶಿಲ್ಪಿಗನ ಶಿಲಾಮೂರ್ತಿ' ಮೊದಲಾದ ಕಥೆಗಳಲ್ಲಿ ಕಾಲ್ಪನಿಕತೆಯ ಸೊಗಸು ಎದ್ದು ಕಾಣುತ್ತದೆ. 'ಬೆಳಗಿನ ದೀಪಗಳು' ಸಂಗ್ರಹದಲ್ಲಿಯ ಕಥೆಗಳು ಚಾರಿತ್ರಿಕ ಅಂದರೆ ಐತಿಹಾಸಿಕ ಪರಿಸರವನ್ನು ಹೊಂದಿವೆ. 'ನರಗುಂದದ ಸಾವಿತ್ರಿ ಬಾಯಿ', 'ನೂರಜಹಾನ', 'ಸಿಕಂದರ ಬಾದಶಹ', 'ಮಹಾರಾಣಾ ಪ್ರತಾಪಸಿಂಹ' ಈ ಮೊದಲಾದ ಕಥೆಗಳಲ್ಲಿ ಆಯಾ ವ್ಯಕ್ತಿಗಳ ಸದ್ಗುಣಗಳನ್ನು ಪ್ರತಿಬಿಂಬಿಸಲಾಗಿದೆ. ಶೌರ್ಯ, ಸಾಹಸ, ಸ್ವಾತಂತ್ರ್ಯಪ್ರೇಮ ಮುಂತಾದವುಗಳ ಪ್ರತಿಪಾದನೆ ಕಥೆಯಾಗಿ ರೂಪಗೊಂಡಿರುವುದೂ ಇಲ್ಲಿ ಕಂಡುಬರುತ್ತದೆ.

ಸಾಮಾಜಿಕ ಕಥೆಗಳಲ್ಲಿ 'ಮಲ್ಲೇಶಿಯ ನಲ್ಲೆಯರು', 'ಪ್ರಕೃತಿಬಲ', 'ಮನೆಮನೆಯ ಸಮಾಚಾರ' ಇವುಗಳು ಬದುಕಿನ ವಿವಿಧ ಸ್ತರಗಳನ್ನು ಚಿತ್ರಿಸುತ್ತವೆ. 'ಮಲ್ಲೇಶಿಯ ನಲ್ಲೆಯರು' ಕಥೆಯ ವಿಶೇಷತೆಯನ್ನು ಗಮನಿಸಿದ ಕುರ್ತಕೋಟಿಯವರು "... ಉತ್ತಮವಾದ ಹಾಸ್ಯನಾಟಕಕ್ಕಿರುವ ಒಂದು ಕಥಾವಸ್ತು ಇಲ್ಲಿದೆಯಲ್ಲದೆ, ಗೋಲ್ಡ್‌ಸ್ಮಿಥ್ ಹಾಗೂ ಡಿಕೆನ್ಸರ ವಿನೋದದ ರುಚಿಯನ್ನು ಅನುಭವಿಸಬಹುದಾಗಿದೆ. ಅದಕ್ಕಿಂತ ಹೆಚ್ಚಾಗಿ ಕೇವಲ ಭಾಷೆಯ ಹದದಿಂದಲೇ ಒಂದು ಕಾಲದ ಜೀವನಕ್ರಮವನ್ನು ಈ ಕಥೆ ಬದುಕಿನ ಲವಲವಿಕೆಯಿಂದ ಮಿಡಿಯುವಂತೆ ಮಾಡಿದೆ. ಹೆಣ್ಣೆಂದರೆ ನಾಚುತ್ತ ಆಧುನಿಕ ಋಷ್ಯಶೃಂಗನಾಗಿರುವ ಕಥಾನಾಯಕನಾದ ಮಲ್ಲೇಶಿ ಕಡೆಗೆ ಮದುವೆಯಾಗಿ ಬಾಳುವ ಒಂದು ಸರಸಪ್ರಸಂಗವನ್ನು ಕೆರೂರವರು ಮರೆಯಲಾಗದ ರೀತಿಯಲ್ಲಿ ಬಣ್ಣಿಸಿದ್ದಾರೆ....."[5] ಎಂದು ಮುಂತಾಗಿ ಅಭಿಪ್ರಾಯಪಟ್ಟಿದ್ದಾರೆ. ಹೀಗೆ ಕೆರೂರವರ ಕಥೆಗಳು ಒಂದಲ್ಲ ಒಂದು ಬಗೆಯ ವಿಶೇಷತೆಯನ್ನು ಪಡೆದು ಕನ್ನಡದ ಕಥಾಸಾಹಿತ್ಯಕ್ಕೆ ಉತ್ತಮ ವೇದಿಕೆಯನ್ನು ನಿರ್ಮಿಸಿಕೊಟ್ಟಿವೆ. ಅಂತೆಯೇ ಪಂಜೆ, ಕಾಮತರ ಜೊತೆಗೆ ಕೆರೂರವರ ಹೆಸರನ್ನು ಆ ಕಾಲದ ಪ್ರಮುಖ ಕಥೆಗಾರರ ಪಟ್ಟಿಯಲ್ಲಿ ಅವಶ್ಯವಾಗಿ ಸೇರಿಸಬೇಕಾಗುತ್ತದೆ.

ಕೆರೂರವರ ಸಾಹಿತ್ಯಕೃಷಿಯಲ್ಲಿ ನಾಟಕಸಾಹಿತ್ಯವೂ ಕೂಡ ಗಮನಾರ್ಹವಾದದ್ದು. 'ನಲದಮಯಂತಿ', 'ವಸಂತಯಾಮಿನಿ ಸ್ವಪ್ನ ಚಮತ್ಕಾರ', 'ಸುರತನಗರದ ಶ್ರೇಷ್ಠಿ' ಮತ್ತು 'ಪತಿವಶೀಕರಣ' ಇವು ನಾಲ್ಕು ಅವರ ಪ್ರಕಟಿತ ನಾಟಕಗಳು. ಆಮೇಲೆ 'ರುಕ್ಮಿಣೀಹರಣ' (ಮೂರು ಅಂಕಗಳು ಮಾತ್ರ), 'ಪುರಂದರದಾಸರು' (ಒಂದೆರಡು ಪ್ರವೇಶಗಳು) ಹಸ್ತಪ್ರತಿಯಲ್ಲಿ ದೊರಕಿದವು. ಇವೆರಡನ್ನೂ ಅವು ದೊರೆತ ಸ್ವರೂಪದಲ್ಲಿಯೇ 'ವಾಸುದೇವ ಪ್ರಶಸ್ತಿ'ಯಲ್ಲಿ ಪ್ರಕಟಿಸಲಾಗಿದೆ. ಇವೆರಡು ಅಪೂರ್ಣಸ್ವರೂಪದಲ್ಲಿದ್ದರೂ ಅವರು ಒಟ್ಟಿಗೆ ಆರು ನಾಟಕಗಳನ್ನು ಕನ್ನಡಕ್ಕೆ ನೀಡಿರುವುದನ್ನು ನಾವು ಗಮನಿಸಬಹುದು.

'ನಲದಮಯಂತಿ' ನಾಟಕದ ವಸ್ತು ಬಹಳ ಹಳೆಯದು. ಈ ನಾಟಕವನ್ನು ಕೆರೂರವರು ಕಾಳಿದಾಸನ ನಾಟಕಗಳ ಅಧ್ಯಯನದ ಪರಿಣಾಮವಾಗಿ ಬರೆದಂತೆ ತೋರುತ್ತದೆ. ನಲ ಧೀರೋದಾತ್ತ ನಾಯಕ, ದಮಯಂತಿ ಅವನಿಗೆ ತಕ್ಕ ಸತಿ. ಪರಸ್ಪರ ಪ್ರೇಮ, ವಿರಹ, ಅಸಹಾಯಕತೆ, ದುಃಖ, ಪುನರ್ಮಿಲನ ಮುಂತಾದವುಗಳೆಲ್ಲ ಕ್ರಮವಾಗಿ ಇಲ್ಲಿ ಚಿತ್ರಿತವಾಗಿವೆ. ಮೂಲಕಥೆಯಿಂದ ಭಿನ್ನವಾದ ಹೇಳಿಕೊಳ್ಳುವಂಥ ಬದಲಾವಣೆಗಳನ್ನು ಪಡೆಯದ ಈ ನಾಟಕ ಕನ್ನಡದ್ದಾಗಿ ರೂಪಗೊಂಡಿದ್ದೇ ಒಂದು ವಿಶೇಷ.

ಅನುವಾದಿತ ನಾಟಕಗಳೇ ಹೆಚ್ಚಾಗಿರುವ ಕಾಲದಲ್ಲಿ ಇದು ಸ್ವತಂತ್ರ ಪೌರಾಣಿಕ ನಾಟಕವಾಗಿರುವುದೂ ಒಂದು ಉಲ್ಲೇಖನೀಯ ಅಂಶ. ಪ್ರಚಲಿತವಿರುವ ನಳೋಪಾಖ್ಯಾನ ಕೆರೂರವರ ರಸಿಕ ಮನೋಧರ್ಮದಲ್ಲಿ ಹೊಸಗನ್ನಡದಲ್ಲಿ ಮೂಡಿ, ಸಮಕಾಲೀನ ರಸಿಕರನ್ನು ತಣಿಸುವ ಗುಣವನ್ನು ಮಾತ್ರ ಹೊಂದಿದೆ. ಈ ನಾಟಕದಲ್ಲಿ "ದಮಯಂತಿ ಗಂಡನನ್ನು ಕಳೆದುಕೊಂಡು, ವನದಲ್ಲಿ ಪುಳಿಂದನ ಆಶ್ರಯವನ್ನು ಹೊಂದಿದ ಸನ್ನಿವೇಶವೊಂದೇ ಇಡೀ ನಾಟಕದಲ್ಲಿ ಭಾವಪೂರ್ಣವಾಗಿ ಬಂದಿದೆ" ಎಂದು ಕುರ್ತಕೋಟಿಯವರು ಗಮನಿಸಿದ್ದು ಕೆರೂರವರ ನಾಟಕರಚನಾ ವೈಶಿಷ್ಟ್ಯಕ್ಕೆ ಒಂದು ಕುರುಹಾಗಿ ನಿಲ್ಲುತ್ತದೆ. ಈ ನಾಟಕದಲ್ಲಿ ಸಂಗೀತಕ್ಕೆ ಪ್ರಾಧಾನ್ಯ ದೊರಕಿದ್ದುದಕ್ಕೆ ಮರಾಠಿಯ 'ಸಾಗ್ರ ಸಂಗೀತ'ದ ಅನುಸರಣೆ ಕಾರಣವಾಗಿದೆ. ಈ ವಿಷಯವನ್ನು ಪರಿಶೀಲಿಸಿದ ಶ್ರೀರಂಗರು ಕೆರೂರವರು ಪದಗಳಿಗೆ ಕೊಟ್ಟ ದಾಟಿಯೂ ಕೂಡ ಮರಾಠಿಯ ಅನುಕರಣ ಎಂಬ ಅಭಿಪ್ರಾಯ ತಳೆದಿದ್ದಾರೆ. "ಸಂಗೀತ ಮರಾಠಿ ನಾಟಕಗಳನ್ನು ನೋಡಿದರು, ಮೆಚ್ಚಿದರು, ಒಳ್ಳೆಯದೆನ್ನಿಸಿತು ; ಸರಿ ತಾವು ಅಂತಹ ನಾಟಕವನ್ನು ಬರೆಯಬೇಕು ಎಂದರು" ಎಂದು ಮುಂತಾಗಿ ಶ್ರೀರಂಗರು ವಿವರಿಸಿ, ವಾಸುದೇವಾಚಾರ್ಯರ 'ನಲದಮಯಂತಿ'ಯ ಮೇಲೆ ಮರಾಠಿಯ ದಟ್ಟ ಪ್ರಭಾವವಿರುವುದನ್ನು ಮತ್ತೆ ಮತ್ತೆ ಒತ್ತಿ ಹೇಳಿದ್ದಾರೆ. ಸ್ವಾನುಭವಪೂರ್ಣವಾದ, ನಾಟಕ ಕ್ಷೇತ್ರದಲ್ಲಿ ಅಸಾಧಾರಣ ಕಾರ್ಯ ಮಾಡಿದ ಶ್ರೀರಂಗರ ಈ ಅಭಿಪ್ರಾಯಗಳನ್ನು ತಳ್ಳಿಹಾಕುವುದು ಸಾಧ್ಯವಿಲ್ಲ.

'ವಸಂತಯಾಮಿನೀ ಸ್ವಪ್ನ ಚಮತ್ಕಾರ' ಮತ್ತು 'ಸುರತನಗರದ ಶ್ರೇಷ್ಠಿ' ಇವು ಷೇಕ್ಸ್‌ಪಿಯರನ 'ಎ ಮಿಡ್ ಸಮರ್ ನೈಟ್ಸ್ ಡ್ರೀಮ್', 'ಮರ್ಚೆಂಟ್ ಆಫ್ ವೆನಿಸ್' ನಾಟಕಗಳ ಆಧಾರದ ಮೇಲೆ ರಚಿತವಾದವು. ನಾಟಕಗಳ ಶೀರ್ಷಿಕೆಯಲ್ಲಿ ಭಾರತೀಕರಣವಾದಂತೆ ಸನ್ನಿವೇಶ, ಪಾತ್ರಗಳ ಹೆಸರುಗಳಲ್ಲಿಯೂ ಅಂಥ ಪರಿವರ್ತನೆಗಳಾಗಿವೆ. ಕನ್ನಡಿಗರ ಸಮೀಪಕ್ಕೆ ಅಲ್ಲಿಯ ನಾಟಕಗಳ ಭಾವ, ವಿಚಾರಗಳನ್ನು ತರುವ ದೃಷ್ಟಿಹೊಂದಿದ ಕೆರೂರವರು ಹಾಗೆ ಪರಿವರ್ತನೆ ಮಾಡಿಕೊಂಡಿದ್ದರಲ್ಲಿ ತಪ್ಪೇನಿಲ್ಲವೆನಿಸುತ್ತದೆ.

'ಪತಿ ವಶೀಕರಣ'ವು ಗೋಲ್ಡ್‌ಸ್ಮಿಥ್‌ನ 'ಷಿ ಸ್ಟೂಪ್ಸ್ ಟು ಕಾಂಕರ್' ನಾಟಕದ ಪ್ರತಿರೂಪ. ಶ್ರೀರಂಗರು ಈ ನಾಟಕವನ್ನು ಕುರಿತು ಬರೆಯುತ್ತ 'ಅತ್ಯಂತ ಯಶಸ್ವಿಯಾದ ಪ್ರತಿರೂಪ' ಎಂದು ಹೇಳಿ "ಮೂಲದಲ್ಲಿಯ ಪಾತ್ರಗಳಿಗೆ ನಮ್ಮ ಇಂದಿನ ಸಮಾಜದಲ್ಲಿ ಪ್ರತಿಯಾದ ಪಾತ್ರಗಳಿವೆ ; ಮೂಲದಲ್ಲಿಯೆ ಸನ್ನಿವೇಶಕ್ಕೆ ಪ್ರತಿಯಾದ ಹಾಸ್ಯರಸ ಇಲ್ಲಿ ಅಷ್ಟೇ ಸಹಜವಾಗಿ ಮೂಡಿದೆ"[6] ಎಂದು ಮುಂತಾಗಿ ವಿವರಿಸಿದ್ದಾರೆ. ಇಂಥ ಉತ್ತಮ ಅನುವಾದವೂ ಕೂಡ ಮೂಲ ಕೃತಿಯಷ್ಟೇ ಮಹತ್ವದ್ದು. ಕೆರೂರವರ ಈ ಸಾಧನೆ ಪ್ರಶಂಸನೀಯವಾದದ್ದು.

ಈಚೆಗೆ ದೊರೆತ ಅಪೂರ್ಣ ನಾಟಕಗಳಲ್ಲಿ 'ರುಕ್ಮಿಣೀಹರಣ' ನಾಟಕಕ್ಕೆ ಮರಾಠಿ ರಂಗಭೂಮಿ ಮೇಲೆ ಆಗ ಲೋಕಪ್ರಿಯವಾಗಿದ್ದ ಖಾಡಿಲಕರರ 'ರುಕ್ಮಿಣಿ ಸ್ವಯಂವರ' ಪ್ರೇರಣೆ ನೀಡಿದ್ದನ್ನು ಮರೆಯುವಂತಿಲ್ಲ. ಹಾಗಿದ್ದರೂ ಕೆರೂರವರು ತಮ್ಮ ಸ್ವಂತಿಕೆಯನ್ನು ಕಳೆದುಕೊಂಡಿಲ್ಲ. ಭಾಗವತದ ದಶಮಸ್ಕಂದದ ಕಥೆಯನ್ನಾರಿಸಿಕೊಂಡು, ಮೂಲ ಶಿಲ್ಪಕ್ಕೆ ಧಕ್ಕೆಬಾರದಂತೆ ತಮ್ಮ ಕಲ್ಪನಾವಿನ್ಯಾಸದಿಂದ ಈ ನಾಟಕವನ್ನು ರಚಿಸಿದ್ದಾರೆ. ಐದಂಕದ ಈ ನಾಟಕದಲ್ಲಿ ಮೂರನೆಯ ಮತ್ತು ಐದನೆಯ ಅಂಕಗಳು ದೊರೆತಿಲ್ಲ. ಉಳಿದ ಅಂಕಗಳಲ್ಲಿ ರುಕ್ಮಿಣಿ ಶ್ರೀಕೃಷ್ಣನನ್ನು ಹೊಂದುವ ಅಥವಾ ಶ್ರೀಕೃಷ್ಣನು ರುಕ್ಮಿಣಿಯನ್ನು ಹರಣಮಾಡುವ ಪ್ರೇಮದ ಕಥೆ ಸೊಗಸಾಗಿ ನಿರೂಪಿತವಾಗಿದೆ. 'ರುಕ್ಮಿಣೀಹರಣ' - ಆಚಾರ್ಯರ ನಾಟಕಗಳಲ್ಲೆಲ್ಲ - ಶುದ್ಧ ಸಾಹಿತ್ಯಕ ಪ್ರಜ್ಞೆಯಿಂದ ಹುಟ್ಟಿಬಂದ ಕೃತಿಯಾಗಿದೆ ಎನ್ನುವಲ್ಲಿ ಆ ಕಾಲದ ಸಾಹಿತ್ಯಕ ಲಕ್ಷಣಗಳನ್ನು ಚೆನ್ನಾಗಿ ಗಮನದಲ್ಲಿರಿಸಿಕೊಂಡ ವಿಮರ್ಶನ ವಿಚಕ್ಷಣತೆ ಇದೆ.

'ಪುರಂದರದಾಸ'ನಾಟಕದ ಅಲ್ಪಭಾಗ ಮಾತ್ರ ಉಪಲಬ್ಧವಾಗಿದೆ. ಪುರಂದರದಾಸರು ಪೂರ್ವಾಶ್ರಮದಲ್ಲಿ ಜಿಪುಣ ಚಿನಿವಾರರಾಗಿದ್ದರು. ಅವರ ಮೊದಲಿನ ಹೆಸರು ಶ್ರೀನಿವಾಸ ಎಂಬುದು. ಅವರ ಹೆಂಡತಿಯ ಹೆಸರು ಸರಸ್ವತಿಬಾಯಿ ಎಂಬುದು. ಕೆರೂರವರ ನಾಟಕದಲ್ಲಿ ಅವರು ಕೃಷ್ಣನಾಯಕ ಮತ್ತು ಗಂಗಾಬಾಯಿ ಆಗಿದ್ದಾರೆ. ಮೂರು ದೃಶ್ಯಗಳ ಈ ನಾಟಕದಲ್ಲಿ ದೇಶೀಯ ಸೊಗಡು ವಿಶೇಷವಾಗಿದೆ.

ಸಣ್ಣಕಥೆ, ಕಾದಂಬರಿ, ನಾಟಕ ಇಂಥ ಸೃಜನಶೀಲ ಬರವಣಿಗೆಯನ್ನು ಮಾಡಿದ ಕೆರೂರವರು ಪತ್ರಿಕೋದ್ಯಮದಲ್ಲಿಯೂ ದುಡಿದಿರುವರು. ಧಾರವಾಡದಲ್ಲಿ ಹೊರಡುತ್ತಿದ್ದ 'ಸಚಿತ್ರ ಭಾರತ' ಮಾಸಪತ್ರಿಕೆಗೆ ಅವರು ಕೆಲಕಾಲ ಸಂಪಾದಕರಾಗಿದ್ದರು. ಅವರ ಅನೇಕ ಕತೆ, ನಾಟಕಗಳು ಈ ಪತ್ರಿಕೆಯಲ್ಲಿ ಬೆಳಕು ಕಂಡದ್ದೂ ಉಂಟು. 1917ರಿಂದ 1921ರವರೆಗೆ ಅವರು ಸ್ವತಂತ್ರವಾಗಿ 'ಶುಭೋದಯ' ಪತ್ರಿಕೆಯನ್ನು ನಡೆಸಿದ್ದರು. ಈ ಪತ್ರಿಕೆ ಅವರದೇ ಆದ ಧೋರಣೆಯನ್ನು ಹೊಂದಿತ್ತು. ಅವರು ತಮ್ಮ ಆ ಪತ್ರಿಕೆಯ ಧೋರಣೆಯನ್ನು ಒಂದು ಪದ್ಯದಲ್ಲಿ ವಿವರಿಸಿದ್ದುದು ಹೀಗೆ:

> ವೀರ ವಿಚಾರಯುಕ್ತ ವರ ಧಾರ್ಮಿಕ ನೈತಿಕ ರಾಜಕೀಯ ಸಾಂ
> ಸಾರಿಕ ವಿದ್ಯೆಯುದ್ಯಮ ಕಲಾಕೃಷಿಕರ್ಮ ಸುಲೇಖಮಾಲೆಯಿಂ
> ಚಾರು ಚರಿತ್ರ ಸಂಪದಭಿವೃದ್ಧಿ ಸಮಾಜಹಿತ ಪ್ರಬಂಧದಿಂ
> ಭಾರತ ಸಾರಕಲ್ಪಲತೆಯಂತೆಸೆಯುತ್ತಿಹುದೀ ಶುಭೋದಯಂ|

ಸಾಹಿತ್ಯಕ ಮಾಸಪತ್ರಿಕೆಯಾಗಿ 'ಸಚಿತ್ರ ಭಾರತ'ವನ್ನು ನಡೆಸಿದ ಆಚಾರ್ಯರು ಜನಜೀವನಕ್ಕೆ ಅಗತ್ಯವಾಗಿರುವ ಹಲವಾರು ವಿಚಾರಗಳಿಗೆ ವೇದಿಕೆಯಾಗಿ 'ಶುಭೋದಯ'ವನ್ನು ಪ್ರಾರಂಭಿಸಿದರು. ಇದೊಂದು ವಾರಪತ್ರಿಕೆ. ಅದು ಪ್ರಕಟವಾಗುಗವುದು ಪ್ರತಿ ಶುಕ್ರವಾರ. ಅದರ ಗಾತ್ರ ಮೊದಲು ನಾಲ್ಕು ಪುಟದ್ದಾಗಿದ್ದುದು ನಂತರ ಆರು ಪುಟಕ್ಕೆ ವಿಸ್ತರಿಸಿತು. ಪ್ರಥಮ ಜಾಗತಿಕ ಮಹಾಯುದ್ಧ ನಡೆದ ಸಂದರ್ಭದಲ್ಲಿ, ಭಾರತೀಯ ರಾಜಕೀಯ ರಂಗದಲ್ಲಿ ಸ್ವಾತಂತ್ರ್ಯ ಚಳವಳಿ ತೀವ್ರಗೊಳ್ಳುತ್ತಿರುವ ಕಾಲದಲ್ಲಿ ಈ ಪತ್ರಿಕೆ ಪ್ರಕಟವಾಗುತ್ತಿರುವಾಗ, ಅದರ ಜವಾಬ್ದಾರಿ ಹೆಚ್ಚಿನದಾಗಿತ್ತು.

'ಶುಭೋದಯ' ಪತ್ರಿಕೆಯ ಮೂಲಕ ಆ ಕಾಲದ ಪ್ರಚಲಿತ ಸಮಸ್ಯೆಗಳ ಬಗ್ಗೆ ಕೆರೂರವರು ಬರೆದ ಒಂದೆರಡು ವಿಚಾರಗಳನ್ನು ಇಲ್ಲಿ ಗಮನಿಸುವುದು ಸೂಕ್ತವೆನಿಸುತ್ತದೆ. 1918ರಲ್ಲಿ ಮಾಂಟೇಗು ಚೇಮ್ಸ್‌ಫರ್ಡ್ ವರದಿ ಪ್ರಕಟವಾದಾಗ ವಾಸುದೇವಾಚಾರ್ಯರು ಪ್ರಕಟಿಸಿದ ವಿಚಾರಗಳ ಮುಖ್ಯಾಂಶಗಳು ಇಷ್ಟು:

"ಈ ಸ್ಕೀಮಿಗೆ (ಮಾಂಟೇಗು- ಚೇಮ್ಸ್‌ಫರ್ಡ್ ಯೋಜನೆ) ಸ್ವರಾಜ್ಯದಾನದ ಕ್ರಮವೆಂದು ಹೆಸರಿಟ್ಟುಕೊಂಡು ಅನೇಕರು ತಪ್ಪು ತಿಳಿವಳಿಕೆಯನ್ನು ಮಾಡಿಕೊಂಡಿರುವುದಾಗಿ ತೋರುತ್ತದೆ. ಪ್ರಜಾಜನರಿಗೆ ಜವಾಬುದಾರವಾಗಿರುವ ಸರಕಾರ ಪದ್ಧತಿ ಬೇರೆ, ಪ್ರಜಾಜನರ ಸರಕಾರ ಬೇರೆ.

ಮಾಂಟೇಗು ಪದ್ಧತಿಯ ವ್ಯವಸ್ಥಾಕರ್ತರು ಹಿಂದುಸ್ಥಾನಕ್ಕೆ ಸ್ವರಾಜ್ಯವನ್ನು (Self - government) ಕೊಡುವೆವು ಎಂದು ಎಲ್ಲಿಯೂ ಹೇಳಿಲ್ಲ."

"ಮಾಂಟೇಗು ಸಾಹೇಬರು ತನ್ನ ಹೊಸ ಸ್ಕೀಮಿನಲ್ಲಿ ಅಪ್ರಯುಕ್ತವಾದ ಹಳೆ ಪದ್ಧತಿಯನ್ನು ನಿರಾಕರಿಸದೆ ಮತ್ತಿಷ್ಟು ಪಾರ್ಲಿಮೆಂಟದ ಅಧಿಕಾರವನ್ನು ಕಡಿಮೆ ಮಾಡಿ ಹಿಂದೂಸ್ಥಾನ ಸರಕಾರದ ಕೈಯಲ್ಲಿ ಮತ್ತೊಂದು ಗದೆಯನ್ನು ಹಿಡಿಸಿರುವನು. ಹಿಂದುಸ್ಥಾನ ಸರಕಾರವು ಮೊಗಲಾಯಿ ಸ್ವರೂಪವುಳ್ಳದ್ದಾಗುವದು."

ಈ ರೀತಿಯ ಬರವಣಿಗೆಯಲ್ಲಿ ಭಾರತೀಯರಿಗೆ ಅದರಲ್ಲೂ ಕನ್ನಡಿಗರಿಗೆ ಪತ್ರಿಕೆಯ ಮೂಲಕ ಸರಿಯಾದ ತಿಳಿವಳಿಕೆ ನೀಡುವ ಉದ್ದೇಶವನ್ನು ಕೆರೂರರವರು ಹೊಂದಿದ್ದರು. ಇದು ರಾಷ್ಟ್ರೀಯ ವಿಷಯವಾದರೆ ಕರ್ನಾಟಕಕ್ಕೆ ಸಂಬಂಧಿಸಿದ ವಿಷಯಗಳಲ್ಲಿಯೂ ಅವರ ವಸ್ತುನಿಷ್ಠ ಆಲೋಚನೆಗಳಿದ್ದವು. ಒಂದು ಕಾಲದಲ್ಲಿ ಉರ್ದು ಭಾಷೆಗೆ ತಲೆಬಾಗಿದ, ಇನ್ನೊಂದು ಕಾಲದಲ್ಲಿ ಮರಾಠಿ ಭಾಷೆಗೆ ಶರಣಾದ ಕನ್ನಡ ಪ್ರದೇಶದ ಅವಸ್ಥೆಯನ್ನು ಚಿತ್ರಿಸುತ್ತ, "ಮುಸಲ್ಮಾನರ ಕಾಲದಲ್ಲಿ ಉರ್ದು ಭಾಷೆಯ ಪ್ರಾಬಲ್ಯವು ನಮ್ಮಲ್ಲಿ ಉಂಟಾಯಿತು. ಸರಕಾರಿ ದಫ್ತರಗಳಲ್ಲಿಯೂ ಪತ್ರವ್ಯವಹಾರಗಳಲ್ಲಿಯೂ ಉರ್ದು ಭಾಷೆಯು ಪ್ರಾಚುರ್ಯವನ್ನು ಹೊಂದಿತು. ಆ ಕಾಲಕ್ಕೆ ಕನ್ನಡ ನುಡಿಗೆ ಉತ್ತೇಜನವೆ ಇರಲಿಲ್ಲ. ತರುವಾಯ ಮರಾಠಿಶಾಹಿಯ ಪ್ರಾಬಲ್ಯವಾಯಿತು. ಆಗ ಪ್ರಮಿತರೆಂಬವರೆಲ್ಲರು ಮರಾಠಿಯಲ್ಲಿಯೇ ಮಾತುಕತೆಗಳನ್ನು ನಡೆಸಿದರೆ ತಮಗೆ ಗೌರವವೆಂದು ತಿಳಿದಿದ್ದರು. ನಮ್ಮಲ್ಲಿಯವರು ತಾತ್ಯಾ ಪಂತೋಜಿಯವರನ್ನು ಕರೆಸಿಕೊಂಡು ಮರಾಠಿ ಭಾಷೆಯ ಜ್ಞಾನ ಮಾಡಿಕೊಳ್ಳುತ್ತಿದ್ದರು ....................." ಆಚಾರ್ಯರ ಈ ಮಾತುಗಳು ಆ ನಮ್ಮ ಸ್ಥಿತಿಗತಿಗಳನ್ನು ಚೆನ್ನಾಗಿಯೆ ತಿಳಿಸಿಕೊಡುತ್ತವೆ. ಅಲ್ಲದೆ "ಭೂದೇವಿಯ ತೊಡೆಯ ಮೇಲೆ ಆಡುತ್ತಲೂ ಕಷ್ಟಾರ್ಜಿತ ವಸ್ತುಗಳಲ್ಲಿ ವ್ಯವಹಾರ ಮಾಡುತ್ತಲೂ ಭಾಷಾಮಾತೆಯ ಸೊಲ್ಲಿಗೆ ಸೊಲ್ಲುಗೊಡುತ್ತಲೂ ಜೀವನವೃತ್ತಿಯನ್ನು ನಡೆಸುವ ನಮ್ಮ ಲಿಂಗಾಯತ ಬಾಂಧವರೆ ಹತಭಾಗ್ಯಳಾದ ಕನ್ನಡ ಮಾತೆಯನ್ನು ಕಾಪಾಡಿಕೊಳ್ಳುತ್ತ ಬಂದಿದ್ದರಿಂದಲೇ ಇಂದಿಗೆ ಕರ್ನಾಟಕವು ಕರ್ನಾಟಕವಾಗಿ ಉಳಿದುಕೊಂಡಿದೆ. ಇನ್ನು ನಮ್ಮ ಕೆಲ ಪ್ರಮಿತರನ್ನು ನೋಡಿರಿ! ದಾದಾಸಾಹೇಬ ದಾಸ್ತಿಕೊಪ್ಪದ, ಭೈಯಾಸಾಹೇಬ ಭೈರವಮಟ್ಟೀಕರ, ಗಂಗಾಧರರಾವ ಇಂಗಳೀಕರ ಮುಂತಾದವರೆಲ್ಲರೂ ಶುದ್ಧ ಬೀಜದ ಕನ್ನಡಿಗರಾಗಿದ್ದರೂ ಕನ್ನಡವನ್ನು ಹಳಿದು 'ಮರಾಠೀಂತ ವ್ಯಾಖ್ಯಾನೇಂ ಝೋಡೂನ' ಮರಾಠಿಗರಿಂದ ಸ್ತುತಿ ಪಡೆಯಬೇಕೆಂಬುದೆ ಹೊರತಾಗಿ ಕನ್ನಡಿಗರಾದವರ ಉದ್ಧರಣಕ್ಕಾಗಿ ಯತ್ನ ಮಾಡಿದರೆ ಅವರು ತಮ್ಮ ಗೌರವಕ್ಕೆ ಹಾನಿ ಎಂದು ತಿಳಿದುಕೊಳ್ಳುತ್ತಾರೆ" ಕೆರೂರವರು ಬದುಕಿನ ಸೂಕ್ಷ್ಮ ಸ್ತರಗಳನ್ನು ಗುರುತಿಸಿ ತಮ್ಮ ಪ್ರಾಮಾಣಿಕ ಮತ್ತು ವಸ್ತುನಿಷ್ಠ ವಿಚಾರಗಳನ್ನು ಸ್ಪಷ್ಟ ಹಾಗೂ ಖಚಿತವಾದ ಭಾಷೆಯಲ್ಲಿ ನಿರೂಪಿಸಿದ್ದು ನಿಜಕ್ಕೂ ತಲೆದೂಗುವಂತಹದಾಗಿದೆ.

ಕೆರೂರ ವಾಸುದೇವಾಚಾರ್ಯರು ಬದುಕಿದ್ದುದು ಐವತ್ತೈದು ವರ್ಷ ಮಾತ್ರ. ಅವರ ಸಾಹಿತ್ಯ ಹಾಗೂ ಪತ್ರಿಕಾ ಲೇಖನ ಕಾರ್ಯ ನಡೆದದ್ದು ಸುಮಾರು ಎರಡು ದಶಕಗಳ ಕಾಲಾವಧಿಯಲ್ಲಿ. ಅಲ್ಪಾವಧಿಯಲ್ಲಿಯೇ ಸಣ್ಣಕಥೆ, ಕಾದಂಬರಿ ಮತ್ತು ನಾಟಕಗಳಲ್ಲಿ ಅವರು ಮಹತ್ವದ ಲೇಖಕರಾಗಿ ಸಾಹಿತ್ಯೇತಿಹಾಸದಲ್ಲಿ ಉಳಿಯುವಂಥ ಕೊಡುಗೆ ನೀಡಿದ್ದು ಅನನ್ಯವಾದ ಸಾಧನೆಯೆಂದೇ ಹೇಳಬೇಕು. ಸಂಸ್ಕೃತ, ಇಂಗ್ಲಿಷ್, ಮರಾಠಿ ಭಾಷೆಗಳ ಪ್ರಭಾವ ಅವರ ಕೃತಿಗಳ ಮೇಲೆ ದಟ್ಟವಾಗಿ ಆಗಿದ್ದುದು, ಭಾಷೆಯನ್ನು ಬಳಸುವಲ್ಲಿ ಶಿಷ್ಟ ಹಾಗೂ ದೇಶಿಗಳ ಮಿಶ್ರಣ ಕಂಡುಬರುತ್ತಿದ್ದುದು, ಅವರ ಸ್ವಭಾವ ಸಹಜವಾದ ವಿಡಂಬನೆ ಒಮ್ಮೊಮ್ಮೆ ಅನಾವಶ್ಯಕವಾಗಿ ತಲೆಹಾಕುತ್ತಿದ್ದುದು ಅಥವಾ ಸಾಹಿತ್ಯ ಕೃತಿಯೊಂದರಲ್ಲಿ ಔಚಿತ್ಯ ಮೀರಿ ಪ್ರವೇಶ ಪಡೆಯುತ್ತಿದ್ದುದು ತಟ್ಟನೆ ಕಂಡುಬರುವ ದೋಷಗಳಾಗಿರಬಹುದು. ಆದರೆ ಇವೆಲ್ಲವನ್ನು ಮೀರಿ ಸಾಮಾಜಿಕ, ಐತಿಹಾಸಿಕ ವಿಷಯಗಳನ್ನು ಸುಧಾರಣಾಪರ ದೃಷ್ಟಿಯಿಂದ, ಪ್ರಾಮಾಣಿಕವಾಗಿ ಅಭಿವ್ಯಕ್ತಗೊಳಿಸಿದ್ದು ಅತ್ಯಂತ ಮಹತ್ವದ ಸಂಗತಿಯಾಗಿದೆ. ಈ ದೃಷ್ಟಿಯಿಂದ ವಾಸುದೇವಾಚಾರ್ಯರದು ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಎಂದೆಂದೂ ಮಾಸದ ಹೆಸರು.[6]

❑

1. ಎಲ್.ಎಸ್. ಶೇಷಗಿರಿರಾವ್ 'ಹೊಸಗನ್ನಡ ಸಾಹಿತ್ಯ' (1975). ಪು. 21
2. ಎಸ್.ಬಿ. ನರಗುಂದ 'ವಾಸುದೇವ ಪ್ರಶಸ್ತಿ' 1964) ಪು. 17.
3. ಕೀರ್ತಿನಾಥ ಕುರ್ತಕೋಟಿ,'ವಾಸುದೇವ ಪ್ರಶಸ್ತಿ' 1964) ಪು. 60
4. ಕೀರ್ತಿನಾಥ ಕುರ್ತಕೋಟಿ,'ವಾಸುದೇವ ಪ್ರಶಸ್ತಿ' 1964) ಪು. 169
5. ಕೆ.ಡಿ. ಕುರ್ತಕೋಟಿ 'ಯುಗಧರ್ಮ ಹಾಗೂ ಸಾಹಿತ್ಯದರ್ಶನ'(ದ್ವಿ.ಮು.1983) ಪು. 92.
6. ಶ್ರೀರಂಗ, 'ವಾಸುದೇವ ಪ್ರಶಸ್ತಿ' (1964) ಪು. 153.

# ಗಳಗನಾಥರು

ದೇವೇಂದ್ರಕುಮಾರ ಸಿದ್ದಪ್ಪ ಹಕಾರಿ

ಹೊಸಗನ್ನಡ ಸಾರಸ್ವತ ಪ್ರಪಂಚದ ಕೆಲವೇ ಚಿರಸ್ಮರಣೀಯ ವ್ಯಕ್ತಿಗಳಲ್ಲಿ ಅಗ್ರಪಜ್ತೆಯ ಸ್ಥಾನ ಗಳಗನಾಥರಿಗೆ ಸಲ್ಲುತ್ತದೆ. ಉತ್ತರ ಕರ್ನಾಟಕದ ಅಂದಿನ ಶೈಕ್ಷಣಿಕ, ಸಾಮಾಜಿಕ ಮತ್ತು ಸಾಹಿತ್ಯಕ ಸಂಗತಿಗಳನ್ನು ಗಮನಿಸಿದರೆ ಈ ಮಾತು ಇನ್ನಷ್ಟು ಸ್ಪಷ್ಟ. ಗಳಗನಾಥರ ಜೀವಿತ ಕಾಲಾವಧಿ (1869 - 1942) ಯ ಉತ್ತರ ಕರ್ನಾಟಕದ ಪರಿಸರ, ಕನ್ನಡಗರಿಗೆ ಕನ್ನಡ ಸಾಹಿತ್ಯಾಭಿಮಾನಿಗಳಿಗೆ ಮತ್ತು ಕನ್ನಡ ಬರಹಗಾರರಿಗೆ ಎಷ್ಟೊಂದು ಪ್ರತಿಕೂಲವಾಗಿತ್ತು ಮತ್ತು ಅಂದಿನ ಜನ ಏನೆಲ್ಲ ಕಷ್ಟನಷ್ಟಗಳನ್ನು ಅನುಭವಿಸಿ ಪ್ರವಾಹದ ವಿರುದ್ಧ ಈಜಿ ಕನ್ನಡಕ್ಕೆ ಒಂದು ದಿಕ್ಕುದೆಸೆ ತೋರುವಲ್ಲಿ ಹೇಗೆ ನಿರಂತರವಾಗಿ ಶ್ರಮಿಸಿದರು ಎನ್ನುವುದು ಆ ಕಾಲಖಂಡದ ಒಂದು ಚಾರಿತ್ರಿಕ ಸತ್ಯ.

ಮರಾಠಿ ಭಾಷೆ ಮತ್ತು ಮಹಾರಾಷ್ಟ್ರದ ಪ್ರಭಾವದಲ್ಲಿ ಆತ್ಮ ಪ್ರಜ್ಞಾಶೂನ್ಯರಾಗಿ ಬಾಳುತ್ತಿದ್ದ ಮತ್ತು ಬಾಳಬೇಕಾಗಿ ಬಂದ ಪರಿಸರದಲ್ಲಿ ಕನ್ನಡ ಭಾಷೆಯ ಪುನರುಜ್ಜೀವನಕ್ಕೆ ಹೋರಾಡಿದ ವ್ಯಕ್ತಿಗಳಲ್ಲಿ ಕೆಲವು ಪ್ರಮುಖರ ಹೆಸರು ಹೇಳುವುದಾದರೆ ರಸೆಲ್, ಡೆಪ್ಯೂಟಿ ಚೆನ್ನಬಸಪ್ಪ, ಚುರಮರಿ, ಕಟ್ಟಿ, ಶಾಂತವೀರ ಕಿತ್ತೂರ, ಭುಜಂಗರಾವ, ಮುಳುಬಾಗಲ, ರಾ.ಹ. ದೇಶಪಾಂಡೆ, ಹೊನ್ನಾಪುರ ಮಠ, ಆಲೂರು ವೆಂಕಟರಾಯ, ರೊದ್ದ ಶ್ರೀನಿವಾಸರಾವ್ ಮುಂತಾದವರು. ಧಾರವಾಡದ ಟ್ರೈನಿಂಗ್ ಕಾಲೇಜು, ಕರ್ನಾಟಕ ವಿದ್ಯಾವರ್ಧಕ ಸಂಘ ಮುಂತಾದ ಸಂಸ್ಥೆಗಳು ಮರಾಠಿ ಭಾಷೆಯ ಮೋಹವನ್ನು ಕಡಿಮೆ ಮಾಡಿ ಕನ್ನಡಿಗರಲ್ಲಿ ಕನ್ನಡತನದ ಮತ್ತು ಕನ್ನಡ ಭಾಷೆ-ಸಾಹಿತ್ಯಗಳ ಅಭಿಮಾನ ಜಾಗೃತಗೊಳಿಸುವತ್ತ ದಿಟ್ಟವಾದ ಹೆಜ್ಜೆಗಳನ್ನಿಟ್ಟುವು. ಪುಣೆಯಲ್ಲಿ ಉಚ್ಚ ಶಿಕ್ಷಣ ಪಡೆಯುತ್ತಿದ್ದ ಆಲೂರು ವೆಂಕಟರಾಯರು 1898ರಿಂದ 1905ರ ಅವಧಿಯಲ್ಲಿ ಕನ್ನಡಿಗರ ಮಾನಸಿಕ ಸ್ಥಿತಿಯನ್ನು ವಿವರಿಸುತ್ತ '.......ನಮ್ಮಲ್ಲಿಯ ಮರಾಠಿ ಮೋಹವು ಹೋಗಿದ್ದಿಲ್ಲ. ಬ್ರಾಹ್ಮಣರಂತೂ ಮರಾಠಿಯವರೊಡನೆಯೇ ಹೆಚ್ಚಿಗೆ ಸ್ನೇಹ ಸಂಬಂಧ ಬೆಳೆಸುತ್ತಿದ್ದರಲ್ಲದೆ, ಲಿಂಗಾಯಿತರೇ ಮುಂತಾದ ಕನ್ನಡಿಗರೊಡನೆ ಅಲ್ಲ. ಕಂಬಳಿ, ರೈನಾಪೂರ ಮುಂತಾದವರು ನಮ್ಮೊಡನೆ ಕಲಿಯುತ್ತಿದ್ದರು. ಆದರೂ ಅವರು ಪ್ರತ್ಯೇಕವಿದ್ದಂತೆಯೇ ಇದ್ದರು. ಮರಾಠಿ ಭಾಷೆಯಲ್ಲಿ ಲಿಂಗ ಪ್ರತ್ಯಯ ಮುಂತಾದವುಗಳ ತೊಡಕು ಇಲ್ಲದಿದ್ದರೆ ನಮ್ಮಲ್ಲಿ ಎಷ್ಟೋ ಜನರು ಪೂರ್ಣ ಮರಾಠಿಗರಾಗಿಯೇ ಹೋಗುತ್ತಿದ್ದರು. ಆ ತೊಡಕೇ ನಮ್ಮ ಕನ್ನಡವನ್ನು ರಕ್ಷಿಸುವ ಕೋಟೆಯಾಗಿತ್ತು'[1] ಎಂದಿದ್ದಾರೆ. ಒಂದೆಡೆ ರಾಜಕೀಯ ಪ್ರಜ್ಞೆ, ವಂದೇಮಾತರಂ ಚಳವಳಿ, ಸ್ವದೇಶ ನಿಷ್ಠೆ, ರಾಷ್ಟ್ರೀಯ ಜಾಗೃತಿ ಮುಂತಾದ ಸ್ಪಂದನೆಗಳು, ಇನ್ನೊಂದೆಡೆ ಪರಭಾಷೆ ಮತ್ತು ಸಾಹಿತ್ಯ ಸಂಸ್ಕೃತಿಗಳ ಆಕ್ರಮಣವನ್ನು ಪ್ರತಿಭಟಿಸುವ ಮನೋಭಾವ: ಹೀಗೆ ಧಾರವಾಡ ಜಿಲ್ಲೆ- ವಿಶೇಷತಃ ಧಾರವಾಡ, ಕನ್ನಡ ಪುನರುಜ್ಜೀವನದ ಕೇಂದ್ರಸ್ಥಳ ವಾಯಿತು. ಸಾಹಿತ್ಯಕ್ಕೆ ಸಂಬಂಧಿಸಿದಂತೆ ನಡೆದ ಅನೇಕ ಮುಖದ ಚಟುವಟಿಕೆಗಳಲ್ಲಿ 1890ರಲ್ಲಿ ಸ್ಥಾಪಿತವಾದ ವಿದ್ಯಾವರ್ಧಕ ಸಂಘ ಉಲ್ಲೇಖನಾರ್ಹವಾದ ಕಾರ್ಯ ಮಾಡಿತು. ಅಂದು ಕನ್ನಡ ಭಾಷೆಯ ಪ್ರತಿಷ್ಠಾಪನೆಯೇ ಒಂದು ಹಂತದ ಸಮಸ್ಯೆಯಾಗಿತ್ತು. ಕನ್ನಡ ಶಿಕ್ಷಣಕ್ಕೆ ಅಗತ್ಯವಾದ ಪಠ್ಯಪುಸ್ತಕಗಳು, ಸಂಸ್ಕೃತ, ಬಂಗಾಳಿ, ಮರಾಠಿ, ಆಂಗ್ಲಭಾಷೆಯ ಭಾಷಾಂತರಗಳು ಪ್ರಾರಂಭದ ಸಾಹಿತ್ಯಕ ಪ್ರಯತ್ನಗಳು. ಕನ್ನಡ ಸಾಹಿತ್ಯದ ಆಸಕ್ತಿಯ ಜೊತೆಗೆ ಕನ್ನಡದಲ್ಲಿ ಕೃತಿ ರಚನೆಯ ಹಂಬಲವುಳ್ಳ ಕೆಲವರು ಅನ್ಯಭಾಷೆಗಳ ಕಾದಂಬರಿಗಳನ್ನು ಕನ್ನಡಕ್ಕೆ ತಂದು ಜನರಲ್ಲಿ ಕನ್ನಡದ ಕುತೂಹಲ ಮೂಡಿಸಿದರು. ಇತಿಹಾಸ, ಪತ್ತೇದಾರಿ, ರಮ್ಯ ಕಥಾವಸ್ತುವುಳ್ಳ ಅಂದಿನ ಗದ್ಯ ಕಥಾನಕ ಕೆಲಮಟ್ಟಿಗೆ ಕನ್ನಡ ಗದ್ಯ ಪ್ರಕಾರವನ್ನು ಹದಗೊಳಿಸುವಲ್ಲಿ ಸಹಕಾರಿಯಾಯಿತು. ಕನ್ನಡ ಸರಸ್ವತಿಯ ಉಪಾಸಕರಾದ ಶಾಂತಕವಿಗಳು 'ರಕ್ಷಿಸು ಹೇ ಕರ್ನಾಟಕ ದೇವಿ' ಎಂದು ಮುಂತಾಗಿ ಹಾಡಿ ಕನ್ನಡಿಗರನ್ನು ಎಚ್ಚರಿಸಿದರು. ಅನೇಕ ಪತ್ರಿಕೆಗಳ ಮೂಲಕ ಕನ್ನಡ ಸಾಹಿತ್ಯ ಪ್ರಸರಣ ಕಾರ್ಯ ಮುನ್ನಡೆಯಿತು. 1896ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಆರಂಭಿಸಿದ 'ವಾಗ್ಭೂಷಣ' ತನ್ನ 1916ನೆಯ ವರ್ಷದ ಸಂಚಿಕೆಯೊಂದರಲ್ಲಿ ಹೇಳಿರುವ 'ಆತ್ಮ ನಿವೇದನೆ' ಅಂದಿನ ದಿನಮಾನಗಳು ಸಾಹಿತ್ಯಕ ಸ್ಥಿತಿಗತಿಗಳಿಗೆ ಕನ್ನಡಿಯಾಗಿದೆ. "ಕನ್ನಡಿಗರೇ ವಾಗ್ಭೂಷಣವು ಭಾಷಾಸೇವೆಯನ್ನು ಕೈಗೊಂಡು ಸುಮಾರು 19 ವರ್ಷಗಳಾದವು. ಈ ಅವಧಿಯಲ್ಲಿ 11 ಚರಿತ್ರೆಗಳು, 8 ಇತಿಹಾಸ ಗ್ರಂಥಗಳೂ, 7 ಶಾಸ್ತ್ರೀಯ ಪುಸ್ತಕಗಳೂ, 10 ನಾಟಕಗಳೂ, 11 ಕಾದಂಬರಿಗಳೂ, 16 ನೀತಿಪರ ನಿಬಂಧ ಮುಂತಾದವುಗಳೂ ಇದರಲ್ಲಿ ಪ್ರಸಿದ್ಧವಾಗಿವೆ. 19 ವರ್ಷಗಳ ಹಿಂದಿನ ಪರಿಸ್ಥಿತಿಯನ್ನು ಲಕ್ಷ್ಯಕ್ಕೆ ತಂದರೆ 'ವಾಗ್ಭೂಷಣ'ವು ಮಾಡಿದ ಕಾರ್ಯವು ಮನದಟ್ಟಾಗುವದು .......... ಮರಾಠಿ ಭಾಷೆಯ ಮದ್ದಿನಿಂದ ಮೈಮರೆತ ಕನ್ನಡಗರಿಗೆ ನಾವು ಕನ್ನಡಿಗರೆಂಬ ಅರಿವು ಸಹ ಆಗ ಇರಲಿಲ್ಲ ............ಈಗ ಆ ದಿವಸಗಳು ಹೋಗಿವೆ. ಹಿಂದುಸ್ಥಾನದಲ್ಲೆಲ್ಲ ಹುಟ್ಟಿದ ನವಜೀವನವು ಕನ್ನಡಿಗರಲ್ಲಿಯೂ ತೋರಹತ್ತಿದೆ."

ಕನ್ನಡ ಸಾಹಿತ್ಯದ ನವೋದಯ (ಸು.1921) ಪೂರ್ವದ ಸುಮಾರು 3 ದಶಕಗಳವರೆಗೆ ನಡೆದಿರುವ ಈ ಕಾಲವನ್ನು ಹೊಸಗನ್ನಡ ಸಾಹಿತ್ಯದ ಅರುಣೋದಯದ ಕಾಲವೆಂದು ಗುರುತಿಸಲಾಗಿದೆ.[2] ಕನ್ನಡ ನಾಡಿನ ಇತರ ಪ್ರದೇಶಗಳಲ್ಲಿ ವೆಂಕಟಾಚಾರ್ಯ, ಪುಟ್ಟಣ್ಣ, ಗುಲ್ವಾಡಿ, ಪಂಜೆ ಮಂಗೇಶರಾಯ ಮುಂತಾದವರು ಈ ಉದಯಕಾಲದ ಸಾಹಿತ್ಯ ಸೃಷ್ಟಿಯ ಪಥ ನಿರ್ಮಾಪಕರಾದರೆ, ಉತ್ತರ ಕರ್ನಾಟಕದಲ್ಲಿ ಕೆರೂರ ವಾಸುದೇವಾಚಾರ್ಯ, ಗಳಗನಾಥರು ಪಥ ನಿರ್ದೇಶಕರಾದರು. ಗಳಗನಾಥರ ಅಧಿಕ ಕೃತಿಗಳು ಅರುಣೋದಯ ಕಾಲದಲ್ಲಿ ರಚಿತಗೊಂಡು 1920ರ ನವೋದಯ ಕಾಲದಲ್ಲೂ ಮುಂದುವರೆದಿರುವುದು ಗಮನಾರ್ಹ. ತಮ್ಮ ಸಾಹಿತ್ಯ ಸೃಷ್ಟಿಗೆ ಗದ್ಯ ಪ್ರಕಾರವನ್ನೇ ಆಯ್ದುಕೊಂಡ ಗಳಗನಾಥರು 'ಹೊಸ ಗದ್ಯದ ಆದ್ಯ ಪ್ರವರ್ತಕರೂ ಆದರು'.[3] ಕನ್ನಡ ಗದ್ಯಕ್ಕೆ ಗಟ್ಟಿಮುಟ್ಟಾದ ಅಡಿಪಾಯ ಹಾಕಿ 'ಗದ್ಯಸೌಧವನ್ನು ನಿರ್ಮಿಸಿದ ಶ್ರೇಯಸ್ಸು ಮುಖ್ಯವಾಗಿ ಗಳಗನಾಥರಿಗೆ ಸಲ್ಲಬೇಕು'.[4]

ಗಳಗನಾಥ'ರೆಂದು ಕನ್ನಡಗರಿಗೆ ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಪರಿಚಿತರಾದ ಅವರ ಹೆಸರು ವೆಂಕಟೇಶ ತಿರಕೋ ಕುಲಕರ್ಣಿ. ಗಳಗನಾಥ ಎನ್ನುವುದು ಧಾರವಾಡ ಜಿಲ್ಲೆಯ ಹಾವೇರಿ ತಾಲ್ಲೂಕಿನ ಒಂದು ಗ್ರಾಮ. ಗಳಗೇಶ್ವರ ಆ ಗ್ರಾಮದ ಅಧಿದೇವತೆ. ಈ ಅಧಿದೇವತೆಯ ಹೆಸರೇ ಆ

ಗ್ರಾಮಕ್ಕೆ ಬಂದು ಅದು ಗಳಗನಾಥವೆಂದಾಯಿತು. ಈ ಊರಿನ ಕುಲಕರ್ಣಿ ಮನೆತನದ ತ್ರಿವಿಕ್ರಮಭಟ್ಟರ (ತಿರಕೋ) ಮೊದಲ ಮಗ ವೆಂಕಟೇಶ. ವೆಂಕಟೇಶ ಜನಿಸಿದ್ದು ಶಾಲಿವಾಹನಶಕ 1790ರ ವಿಭವ ಸಂವತ್ಸರದ ಷಷ್ಠಿ: 1869 ಜನವರಿ 5. 'ವೆಂಕಟೇಶ' ಅಂಕಿತನಾಮವಾದರೆ ಕಾಲಾನುಕ್ರಮದಲ್ಲಿ ಅದು 'ಗಳಗನಾಥ' ಎನ್ನುವ ಅನ್ವರ್ಥಕನಾಮವಾಗಿ ಪರಿವರ್ತನೆಗೊಂಡು ಸಾಹಿತ್ಯ ರಚನೆಗಳ ಮೂಲಕ ವ್ಯಾಪಕ ಮನ್ನಣೆ ಪಡೆದು ಗಳಗನಾಥ ಎಂದೇ ಶಾಶ್ವತವಾಯಿತು; ಇದು ಅಂಕಿತನಾಮ 'ಮರೆಯಾಗಿ', ಅನ್ವರ್ಥನಾಮ ಮೆರೆದ ಒಂದು ವಿಸ್ಮಯಕಾರಿ ಉದಾಹರಣೆಯೆಂದರೆ ಅತಿಶಯೋಕ್ತಿ ಅಲ್ಲ.

ತುಂಗಭದ್ರಾ - ವರದಾ ನದಿಗಳ ರಮ್ಯ ಹಿನ್ನೆಲೆಯ ಗಳಗನಾಥ ಮತ್ತು ಹಾವನೂರು ಗ್ರಾಮಗಳ ಪರಿಸರದಲ್ಲಿ ಬೆಳೆದ ಗಳಗನಾಥರಿಗೆ, ಅವರ ಮನೆತನದ ಧಾರ್ಮಿಕ ಶ್ರದ್ಧೆ, ಪಾರಂಪರಿಕ ಉತ್ತಮ ಸಂಸ್ಕಾರಗಳು ರಕ್ತಗತವಾಗಿ ದೊರೆತುದರ ಫಲವಾಗಿ ಅವರು ದೈವಭಕ್ತಿಯುಳ್ಳ, ಕಷ್ಟಸಹಿಷ್ಣು ಮತ್ತು ಸೃಜನಶೀಲ ವ್ಯಕ್ತಿಗಳಾಗಿ ರೂಪು ತಳೆದರು. ಬಾಲ್ಯದ ಈ ಕೆಲವು ಗುಣಗಳು ಅವರ ಪ್ರವೃತ್ತಿಗಳಾಗಿ ರೂಪುಗೊಂಡು ಬಹುಶಃ ಅವರ ಜೀವನದುದ್ದಕ್ಕೂ ಮುನ್ನಡೆಸಿದವೆಂದು ತೋರುತ್ತದೆ. ಗಳಗನಾಥರ ಈ ಬಗೆಯ ಪ್ರವೃತ್ತಿ ಅವರು ಬರೆದ 'ಸದ್ಗುರು ಪ್ರಭಾವ' ಎನ್ನುವ ಗ್ರಂಥದಲ್ಲಿ (1928) ಸೂಚಿತವಾಗಿದೆ. "ಶ್ರೀ ಸದ್ಗುರು ಪ್ರಭಾವ ಪೋಷಿತನಾದ ವೆಂಕಟೇಶನೆಂಬ ಹೆಸರಿನ ನಾನು..... "[5] ಇತ್ಯಾದಿ ಅವರ ದೈವಭಕ್ತಿ, ಗುರುಭಕ್ತಿಗಳ ಪ್ರತೀಕ. ಹಾವೇರಿ ಆಗ ಮುಲ್ಕೀ ಪರೀಕ್ಷೆಯ ಕೇಂದ್ರ. ತಮ್ಮ ಗ್ರಾಮೀಣ ಶಾಲೆಗಳಲ್ಲಿ ಪ್ರಾಥಮಿಕ ಶಿಕ್ಷಣ ಪಡೆದ ಅವರು ಹಾವೇರಿಯ ಕೇಂದ್ರದಿಂದ ಮುಲ್ಕೀ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ 1886ರಲ್ಲಿ ಧಾರವಾಡದ ಪ್ರಾಥಮಿಕ ಶಿಕ್ಷಕರ ಟ್ರೈನಿಂಗ್ ಕಾಲೇಜು ಸೇರಿದಾಗ ಅವರ ಜೀವನಕ್ಕೆ ನವ ಚೈತನ್ಯ. ಕನ್ನಡತನದ ಕೆಚ್ಚು, ಸಾಹಿತ್ಯದ ಬೀಸುಗಾಳಿ, ಅವರ ಆಸೆ ಆಕಾಂಕ್ಷೆಗಳಿಗೆ ಹೊಸ ಪ್ರೇರಣೆ ದೊರೆತದ್ದು ಧಾರವಾಡದಲ್ಲಿ. ಪ್ರಾಥಮಿಕ ಶಿಕ್ಷಕರ ತರಬೇತಿಯ ಮೂರು ವರ್ಷಗಳ ಧಾರವಾಡದ ವಾಸ್ತವ್ಯ ಗಳಗನಾಥರಿಗೆ ಅನೇಕ ಹಿರಿಯರ ಪ್ರಭಾವ, ಸಂಪರ್ಕ, ಪ್ರೇರಣೆಗಳನ್ನು ನೀಡಿತು. ರೊದ್ದ ಶ್ರೀನಿವಾಸರಾಯರು, ಕರಂಡೀಕರ ಗುರುಗಳು, ರಾ.ಹ. ದೇಶಪಾಂಡೆ, ಶ್ರೀಕಿತ್ತೂರ ಮತ್ತು ಮುಳುಬಾಗಿಲ ಪಂಡಿತ ಮುಂತಾದವರ ಮೂಲಕ ಅವರಲ್ಲಿ ಕನ್ನಡ ನಾಡು ನುಡಿಗಳನ್ನು ಕುರಿತ ಉಜ್ವಲ ಅಭಿಮಾನ ಜಾಗ್ರತವಾಯಿತು. ಅಂದು ಬಹು ಜನಪ್ರಿಯವಾಗಿದ್ದ ಲೋಕಮಾನ್ಯ ತಿಲಕರ 'ಕೇಸರಿ' ಮತ್ತು ಹರಿನಾರಾಯಣ ಆಪ್ಟೆಯವರ 'ಕರಮಣೂಕ' ಪತ್ರಿಕೆಗಳನ್ನು ಓದಿ ಸ್ವದೇಶಾಭಿಮಾನ, ಸ್ವಭಾಷಾ ಪ್ರೇಮಗಳನ್ನು ಬೆಳೆಸಿಕೊಂಡರು. 1889ರಲ್ಲಿ ಮೂರು ವರ್ಷಗಳ ತರಬೇತಿಯ ಅವಧಿ ಮುಗಿದು, ಧಾರವಾಡ ಜಿಲ್ಲೆಯ ಶಿರಗುಪ್ಪಿಯ ಶಾಲೆಯೊಂದರ ಮುಖ್ಯಾಧ್ಯಾಪಕರಾಗಿ ವಾಸ್ತವ ಜೀವನ ಆರಂಭಿಸಿದ ಗಳಗನಾಥರಿಗೆ ಈ ಗ್ರಾಮ ಒಂದು ಬಗೆಯ ಸುಖ ಸಂತೃಪ್ತಿಗಳನ್ನು ನೀಡಿತು. ಆದರೆ ಕೆಲಸಮಯದಲ್ಲಿಯೇ ಅವರ ಕೈಹಿಡಿದ ಜೀವೂಬಾಯಿಯ ಅಕಾಲ ಮರಣ, ಅದರ ಬೆನ್ನ ಹಿಂದೆಯೇ ಅವರ ತಂದೆ ತಾಯಿಗಳು ವಿಧಿವಶರಾದುದು ಮತ್ತೆ ಕೆಲಕಾಲದ ಬಳಿಕ ಆಪ್ತಮಿತ್ರರ ಸಲಹೆಗೆ ಒಪ್ಪಿ ಎರಡನೆಯ ಮದುವೆ ಮಾಡಿಕೊಂಡದ್ದು, ಹೆಂಡತಿ ಗಂಗಾಬಾಯಿಯ ಸಾತ್ವಿಕ ಪ್ರವೃತ್ತಿ ಮತ್ತು ಸೇವಾಭಾವಗಳಿಂದ ತಮ್ಮ ಜೀವನದಲ್ಲಿ ಕವಿದಿದ್ದ ನಿರಾಶೆಗಳನ್ನು ಚದುರಿಸಿ ಮತ್ತೆ ಶಿಕ್ಷಣ ಸಾಹಿತ್ಯಗಳ ಸೇವೆಯಲ್ಲಿ ನಿರತರಾದದ್ದು, ಕನ್ನಡ, ಸಂಸ್ಕೃತ ಸಾಹಿತ್ಯ ಕೃತಿಗಳ ನಿರಂತರ ಅಧ್ಯಯನ, ಇಬ್ಬರು ಹೆಣ್ಣು ಮಕ್ಕಳ ತಂದೆಯಾಗಿ, ನೆಮ್ಮದಿಯ ಗೃಹಸ್ಥ ಜೀವನ, ಇತ್ಯಾದಿಗಳು ಗಳಗನಾಥರ ಬದುಕಿನ ಒಂದು ಮುಖದ ಸಂಗತಿಗಳು.

ಸುಮಾರು ಎರಡು ದಶಕಗಳ ಅವರ ಶಿಕ್ಷಕ ವೃತ್ತಿಯಲ್ಲಿ ಶಿರಗುಪ್ಪಿ, ಉಪ್ಪಿನ ಬೆಟಗೇರಿ, ಬಂಕಾಪುರ, ಮುಂಡರಗಿ, ಗುತ್ತಲ ಮುಂತಾದ ಕಡೆ ಕಾರ್ಯಮಾಡಿ, ಧಾರವಾಡದ ಟ್ರೈನಿಂಗ್ ಕಾಲೇಜಿನ ಪ್ರಾಕ್ಟೀಸಿಂಗ್ ಸ್ಕೂಲ್‌ನಲ್ಲಿ ಕೆಲಕಾಲ, ಮತ್ತೆ ತಾವು ಶಿಕ್ಷಣ ಪಡೆದ ಟ್ರೈನಿಂಗ್ ಕಾಲೇಜಿನಲ್ಲಿಯೇ ಅಧ್ಯಾಪಕ-ಹೀಗೆ ಗಳಗನಾಥರು ಶಿಕ್ಷಣ ಕ್ಷೇತ್ರಕ್ಕೆ ಸೇವೆ ಸಲ್ಲಿಸಿದರೂ ಕಾರಣಾಂತರಗಳಿಂದ - ಮೇಲಧಿಕಾರಿಗಳ ನಿರ್ಲಕ್ಷ್ಯ, ಅಸಡ್ಡೆ, ತಾರತಮ್ಯ ಮನೋಭಾವ ಇತ್ಯಾದಿ-ಬೇಸತ್ತು ಅಕಾಲದಲ್ಲಿ ನೌಕರಿಯಿಂದ ನಿವೃತ್ತರಾದಂತೆ ತೋರುತ್ತದೆ. ಆದರೆ ಇದು ಮೇಲುನೋಟಕ್ಕೆ ಮತ್ತು ವ್ಯವಹಾರದ ಕಣ್ಣಿಗೆ ಕಾಣುವ ಸಂಗತಿ. ಗಳಗನಾಥರು ತಮ್ಮ ನೌಕರಿಯಿಂದ ನಿವೃತ್ತರಾದುದರ ಕಾರಣಗಳು ತೀರ ಭಿನ್ನವಾಗಿವೆ. ಶಿಕ್ಷಕರಾಗಿದ್ದ ಆರಂಭ ಕಾಲದಿಂದಲೇ ಕನ್ನಡ ಪಠ್ಯಪುಸ್ತಕಗಳ ರಚನೆ, ಅದಕ್ಕೂ ಮಹತ್ವದ ಸಾಹಿತ್ಯ ಸೃಷ್ಟಿಸಬೇಕೆನ್ನುವ ಹಂಬಲದಲ್ಲಿ ಪರಿವರ್ತನೆಗೊಂಡಿರಬೇಕು. ಈ ನಡುವೆ ಕರ್ನಾಟಕ ವಿದ್ಯಾವರ್ಧಕ ಸಂಘದ ಪ್ರತಿ ವರ್ಷದ ಗ್ರಂಥ ಸ್ಪರ್ಧೆಗಳು, 'ಪದ್ಮನಯನೆ' ಕಾದಂಬರಿಗಾಗಿ ಪುರಸ್ಕಾರ ಮತ್ತು ಧಾರವಾಡದಲ್ಲಿ ನಡೆಯುತ್ತಿದ್ದ ಇತರ ಸಾಹಿತ್ಯ ಚಟುವಟಿಕೆಗಳು ಅವರಲ್ಲಿ ಹುದುಗಿದ್ದ ಸೃಜನಶೀಲತೆಗೆ ಪ್ರೇರಣೆ ನೀಡಿರಬೇಕು. ಇದಲ್ಲದೆ ಧಾರ್ಮಿಕ ಮನೋಭಾವದ ಮತ್ತು ಸ್ವಭಾವತಃ ಭಾವುಕರಾದ ಗಳಗನಾಥರ ಮೇಲೆ ಶೇಷಾಚಲ ಸ್ವಾಮಿಗಳ ಭೇಟಿ ವಿಶೇಷ ಪಾತ್ರವಹಿಸಿದಂತೆ ತೋರುತ್ತದೆ. ಅಂದಿನ ಅವರ ಮನೋಭಾವ ಹೇಗಿತ್ತು ಎನ್ನುವುದಕ್ಕೆ ಪುರಾವೆ ಅವರೇ ಬರೆದಿರುವ ಮಾತುಗಳು : "ಹೀಗೆ ಅಕಾಲದಲ್ಲಿ ನಾನು ಪೆನ್ಶನ್ ಪಡೆದದ್ದಕ್ಕಾಗಿ ಒಬ್ಬರಲ್ಲೊಬ್ಬರಾದರೂ ಶಂಕಿಸಬಹುದಾಗಿದೆ. ಆದರೆ ನಾನು ಮಾಡುತ್ತಿದ್ದ ಅಧ್ಯಾಪಕ ಕೆಲಸದಲ್ಲಿ ಬೇಸರಮಾಡಿಯಾಗಲೀ, ಇದರಲ್ಲೇನು ಲಾಭವಿಲ್ಲೆಂಬ ಅಸಂತುಷ್ಟತೆಯಿಂದಾಗಲೀ, ಅಚ್ಚ ಲೇಖಕನಾಗಿ ಸ್ವತಂತ್ರನೂ, ದುಡ್ಡು ಗಳಿಸುವವನೂ ಎನಿಸಿಕೊಳ್ಳಬೇಕೆಂಬ ಡೌಲಿನಿಂದಾಗಲೀ, ದೇಶಭಕ್ತನೆನಿಸಿಕೊಳ್ಳಬೇಕೆಂಬ ಉಬ್ಬಿನಿಂದಾಗಲಿ ನಾನು ನೌಕರಿಯನ್ನು ಬಿಟ್ಟವನಲ್ಲ; ಆದರೆ ಅಷ್ಟು ಹೊತ್ತಿಗೆ ಮೂರು ನಾಲ್ಕು ವರ್ಷಗಳಿಂದ ಅಗಡಿಯ ಆನಂದ ವನಸ್ಥ ಶ್ರೀ ಶೇಷಾಚಲ ಸಾಧುಗಳವರ ಸತ್ಸಹವಾಸವು ನನಗೆ ಒದಗಿ, ಆನಂದ ವನದಲ್ಲಿ ಸಂಸ್ಕೃತ ಪಾಠಶಾಲೆಯ ಯೋಗಕ್ಷೇಮಕ್ಕಾಗಿ ನಾನು ಆರಂಭಿಸಿದ್ದ 'ಸದ್ಬೋಧ ಚಂದ್ರಿಕೆ' ಎಂಬ ಮಾಸಪತ್ರಿಕೆಯನ್ನು ಸಾಗಿಸುವುದಕ್ಕೂ, ಪಾಠಶಾಲೆಯನ್ನು ನನ್ನ ಸ್ವಭಾವಕ್ಕನುಸರಿಸಿ ನಡಿಸಲಿಕ್ಕೂ ನನ್ನ ನೌಕರಿಯು ವಿಘ್ನ ಮಾಡ ತೊಡಗಿತು. ಹೀಗೆ ಎರಡು ಪ್ರಬಲ ಉಪಾಧಿಗಳ ಇರುಕಿನಲ್ಲಿ ಸಿಕ್ಕ ನಾನು ಯಾವುದೊಂದು ಉಪಾಧಿಯಿಂದ ಮುಕ್ತನಾಗದಿದ್ದರೆ ಪರಿಣಾಮವಾಗುವ ಹಾಗಿದ್ದಿಲ್ಲ. ಹೀಗಿರುವಾಗ ನನ್ನ ಹಿರಿಯರ ಪುಣ್ಯದಿಂದಲೂ, ಶ್ರೀ ಲಕ್ಷ್ಮೀಪತಿಯ ಕೃಪೆಯಿಂದಲೂ ನಾನು ನೌಕರಿಯ ಉಪಾಧಿಯಿಂದ ಮುಕ್ತನಾಗಿ, ಮಹಾಪುರುಷ ಸಂಶ್ರಯದ ಭಾಗ್ಯವನ್ನು ಪಡೆದೆನು."[6]

ನಿವೃತ್ತಿಯ ನಂತರ ಅಗಡಿಯಲ್ಲಿ ಭಿ.ಪ. ಕಾಳೆಯವರ ಸಹಕಾರದಿಂದ 'ಸದ್ಬೋಧ ಚಂದ್ರಿಕೆ' ಪತ್ರಿಕೆಯ ಆರಂಭ, ನಿರ್ವಹಣೆ ಎಲ್ಲದಕ್ಕೂ ಬೆಂಗಾವಲಾಗಿ ನಿಂತವರು ಕೃಪಾಹಸ್ತ ಚಾಚಿದ ಗುರುಗಳು. ಈ ಪತ್ರಿಕೆಯ

ಮೂಲಕ ಗಳಗನಾಥರು ಮಾಡಿದ ಕಾರ್ಯ, ಸಾಹಿತ್ಯ ಸೃಷ್ಟಿ ಅಪಾರ. ಶಿಕ್ಷಕರಾಗಿದ್ದಾಗ ಪಠ್ಯಪುಸ್ತಕಗಳ ಕಾರ್ಯಕ್ಕಾಗಿ ಪುಣೆ ಇತ್ಯಾದಿ ನಗರಗಳಿಗೆ ಹೋಗಿದ್ದಾಗ ಮರಾಠಿ ಸಾಹಿತ್ಯದ ವಿಶೇಷ ರುಚಿ ಹತ್ತಿ ಅನೇಕ ಮರಾಠಿ ಕಾದಂಬರಿಗಳನ್ನು ಮೆಚ್ಚಿಕೊಂಡ ಗಳಗನಾಥರು ಶ್ರೀ ಹರಿನಾರಾಯಣ ಆಪ್ಟೆ ಅವರ 'ಗಡ ಆಲಾ ಪಣ ಸಿಂಹಗೇಲಾ' ಕಾದಂಬರಿಯನ್ನು ಕನ್ನಡಿಸಿದರು. 'ಕಮಲಕುಮಾರಿ' ಹೆಸರಿನ ಆ ಕಾದಂಬರಿ ಸದ್ಬೋಧ ಚಂದ್ರಿಕೆಯಲ್ಲಿ ಧಾರಾವಾಹಿಯಾಗಿ ಮೂಡಿಬಂದು, ಕಾದಂಬರಿ, ಪತ್ರಿಕೆಗಳ ಜೊತೆ ಜೊತೆ ಗಳಗನಾಥರಿಗೂ ಕೀರ್ತಿ ತಂದಿತು. ಸಮೂಹ ಸಂವಹನ ಮಾಧ್ಯಮಗಳ ವೈಜ್ಞಾನಿಕ ಕಲ್ಪನೆ ಇಲ್ಲದಿದ್ದ ಅಂದಿನ ದಿನಮಾನಗಳಲ್ಲಿ 'ಸದ್ಬೋಧ ಚಂದ್ರಿಕೆ'ಯಂಥ ಒಂದು ಪತ್ರಿಕೆಯನ್ನು ಹೊರಡಿಸಿ ತನ್ಮೂಲಕ ಸದಭಿರುಚಿಯ ಕಥಾನಕಗಳನ್ನು ಪ್ರಕಟಿಸಿ ಕನ್ನಡ ಜನರಲ್ಲಿ ವಾಚನಾಭಿರುಚಿ ಬೆಳೆಸಿದ ಶ್ರೇಯಸ್ಸು ಗಳಗನಾಥರಿಗೆ ಸಲ್ಲುತ್ತದೆ. ಸದ್ಬೋಧ ಚಂದ್ರಿಕೆಯ ವಿಷಯಪಟ್ಟಿ ಸಂವಹನದ ವಸ್ತುವಿನ ದೃಷ್ಟಿಯಿಂದ ಕುತೂಹಲಕಾರಿಯಾಗಿದೆ. ಯೋಗಾಭ್ಯಾಸ, ನೀತಿ ಪ್ರಧಾನ ಕಥಾನಕ, ವೀರಶೈವ ಮಹಾಸಭೆಯ ಕಾರ್ಯಕಲಾಪ, ಕುಟುಂಬ ಜೀವನ, ದಾಂಪತ್ಯ ಇತ್ಯಾದಿ. ಇದೆಲ್ಲಕ್ಕೂ ಮಿಗಿಲಾಗಿ, 'ಸದ್ಬೋಧ ಚಂದ್ರಿಕೆ' ಒಂದು ಸತ್ವಪೂರ್ಣವಾದ ಮತ್ತು ಚಾರಿತ್ರ್ಯ ನಿರ್ಮಾಣದ ಕಾರ್ಯ ಮಾಡಬೇಕು ಎನ್ನುವುದು ಅವರ ಮನೀಷೆಯಾಗಿತ್ತು. ಜನಕಲ್ಯಾಣ, ಕನ್ನಡಿಗರ ಅಭಿವೃದ್ಧಿ, ಸಚ್ಚಾರಿತ್ರ್ಯವುಳ್ಳ ಉಜ್ವಲ ಭವಿಷ್ಯದ ಜನಾಂಗರೂಪಣ ಇಂಥ ಪತ್ರಿಕೆಗಳ ಮೂಲಕ ಸಾಧ್ಯವಾದೀತು ಎನ್ನುವ ಲವಲವಿಕೆ ಗಳಗನಾಥರಿಗೆ. ಅವರು ಒಮ್ಮೆ ಸದ್ಬೋಧ ಚಂದ್ರಿಕೆಗೆ ಬರೆದ ಸಂಪಾದಕೀಯ ಹೀಗಿದೆ:

"ಕರ್ನಾಟಕದಲ್ಲಿ ಜಾತಿ ಧರ್ಮಗಳ ತಾರತಮ್ಯವಿಲ್ಲದೆ ಅಸಂಖ್ಯ ಸತ್ಪುರುಷರ ಉದಯವು ಆಗಿರುತ್ತದೆಂಬುದನ್ನು ನಿರ್ಮಾತ್ಸರ್ಯದ ಸುವಿಚಾರಿಗಳು ಒಪ್ಪಿಕೊಳ್ಳಬಹುದು. ಅವರೆಲ್ಲರ ಚರಿತ್ರೆಗಳ ಸಂಗ್ರಹವಾದರೆ ಕನ್ನಡಿಗರ ಕೋಟಿ ಕಲ್ಯಾಣವಾಗುವುದರಲ್ಲಿ ಸಂಶಯವಿಲ್ಲ..... ಸತ್ಪುರುಷರ ಜಾತಿ-ಧರ್ಮ ಮುಂತಾದವುಗಳ ಕಡೆಗೆ ಲಕ್ಷ್ಯಗೊಡದೆ, ಅತ್ಯಂತ ಪೂಜ್ಯ ಬುದ್ಧಿಯಿಂದ ಕರ್ನಾಟಕ ಸತ್ಪುರುಷ ಮಂಡಲವೆಂಬ ಮಂಡನವನ್ನು ಧರಿಸಲು ಚಂದ್ರಿಕೆಯು ಆತುರ ಪಡುತ್ತಿರುವಳು... ಇದು ಒಬ್ಬ ಮನುಷ್ಯನು, ಒಂದು ಧರ್ಮದವನು, ಒಂದು ಜಾತಿಯವನು, ಒಂದು ಪಂಥದವನು ಮಾಡತಕ್ಕ ಕೆಲಸವಲ್ಲ. ಕನ್ನಡ ನಾಡಿನ ಎಲ್ಲ ಜನರು, ಎಲ್ಲ ಧರ್ಮದವರು, ಎಲ್ಲ ಜಾತಿಯವರು, ಎಲ್ಲ ಪಂಥದವರು ಮಾಡತಕ್ಕದ್ದು. ಈ ಸತ್ಕೃತ್ಯಕ್ಕಾಗಿ ಎಲ್ಲ ಕನ್ನಡಿಗರು ಆತುರಪಡತಕ್ಕದ್ದು...... ನಿಜಗುಣ ಶಿವಯೋಗಿಗಳು, ಪುರಂದರದಾಸರು, ಕನಕದಾಸರು, ಫಕೀರಸ್ವಾಮಿಗಳು, ಗರಗದ ಮಡಿವಾಳಪ್ಪನವರು, ಕಳಸದ ಗೋವಿಂದಭಟ್ಟರು, ಮುಳಗುಂದದ ಮಹಾಂತಸ್ವಾಮಿಗಳು, ನಾಗಲಿಂಗಪ್ಪನವರು, ಮುಳಗುಂದದ ದಾವಲಮಲಿಕರು, ಶಿಶುನಾಳ ಶರೀಫ ಸಾಹೇಬರು"[7] ಮುಂತಾದವರ ಚರಿತ್ರೆಗಳನ್ನು ಬರೆದುಕೊಡಲು ಜನತೆಗೆ ಕರೆಯಿತ್ತರು.

ಪತ್ರಿಕೆ ಒಂದು ಪ್ರಬಲ ಸಮೂಹ ಸಂವಹನ ಮಾಧ್ಯಮ ಎನ್ನುವ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಗಳಗನಾಥರ ಸಂಪಾದಕೀಯದ ಟಿಪ್ಪಣಿಗಳು ನಿಜಕ್ಕೂ ವಿಸ್ಮಯಕಾರಿಯಾಗಿವೆ. ಅಷ್ಟೇ ಅಲ್ಲ ಪತ್ರಿಕಾಧರ್ಮದ ಜಾತ್ಯತೀತ ಮನೋಭಾವ, ಮತಪಂಥಗಳನ್ನು ಮೀರಿದ ಜನಾಂಗ ಕಲ್ಯಾಣ ಮತ್ತು ಜನತೆಯ ಸಮಗ್ರ ಮಾನಸಿಕ ವಿಕಾಸ ಕೂಡ ಹೇಗೆ ಗಳಗನಾಥರ ಹೃದಯದಲ್ಲಿ ಸ್ಪಂದಿಸುತ್ತಿದ್ದುವು ಎನ್ನುವುದಕ್ಕೆ ಸಾಕ್ಷಿಗಳಾಗಿವೆ. ಈ ಕಾರಣದಿಂದಾಗಿ 1907ರಲ್ಲಿ ಆರಂಭವಾದ 'ಚಂದ್ರಿಕೆ'ಗೆ ಎರಡು ವರ್ಷಗಳ ಅವಧಿ 1909ರಲ್ಲಿ 800 ಜನ ಚಂದಾದಾರರಾಗಿದ್ದ. ಗಳಗನಾಥರ ಕಾದಂಬರಿಗಳು ಧಾರಾವಾಹಿಯಾಗಿ ಪ್ರಕಟಗೊಂಡಂತೆ ಪತ್ರಿಕೆಯ ಪ್ರಸರಣ ಅಧಿಕಗೊಂಡು ಚಂದಾದಾರರ ಸಂಖ್ಯೆ ನಾಲ್ಕು ಸಾವಿರಕ್ಕೇರಿತು. ಇದೇ ಸಂದರ್ಭದ ಗಮನಾರ್ಹ ಅಂಶವೆಂದರೆ, 'ಸ. ಚಂದ್ರಿಕೆ' ಪತ್ರಿಕೆ, ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಜನಪ್ರಿಯತೆ ಪಡೆದದ್ದು. ಅದನ್ನು ಗಳಗನಾಥರು ವಾಚಕರನ್ನು ಉದ್ದೇಶಿಸಿ ಸದ್ಬೋಧ ಚಂದ್ರಿಕೆ ಪತ್ರಿಕೆಯಲ್ಲಿ ಹೇಳಿದ ಮಾತುಗಳಲ್ಲಿಯೇ ವಿವರಿಸುವುದಾದರೆ : 'ಪ್ರಿಯ ವಾಚಕರೆ, ಇನ್ನು ನಮ್ಮ ಚಪಲೆಯಾದ ಚಂದ್ರಿಕೆಯ ಚಟುವಟಿಕೆಯನ್ನು ಕೇಳಿರಿ. ಆಕೆಯು ಮುಂಬೈ ಇಲಾಖೆಯ, ಮದ್ರಾಸ ಇಲಾಖೆಯ, ಮೈಸೂರು ಪ್ರಾಂತ, ನಿಜಾಮ ಪ್ರಾಂತ, ಕೊಡಗು ಪ್ರಾಂತಗಳೊಳಗಿನ ಕನ್ನಡ ನಾಡಿನಲ್ಲಿ ತನ್ನ ಪೈಜಣಗಳ ಸುನಾದದಿಂದ ಜನರ ಚಿತ್ತವನ್ನು ರಂಜಿಸುತ್ತ ಪ್ರವೇಶಿಸಿರುವಳು. ಆಕೆಯ ಪ್ರಸಾರವು 27 ಜಿಲ್ಲೆಗಳಲ್ಲಿ 160 ಸಬ್ ಪೋಸ್ಟುಗಳಲ್ಲಿ 1200 ಊರುಗಳಲ್ಲಿ ಆಗಿರುತ್ತದೆ......'[8] ಇತ್ಯಾದಿ.

ಪತ್ರಿಕೆ ಮತ್ತು ಸಮೂಹ ಸಂವಹನ ಮಾಧ್ಯಮ ಕುರಿತು ಅಧ್ಯಯನ ಮಾಡುವವರಿಗೆ ಗಳಗನಾಥರ ಪತ್ರಿಕಾ ಕ್ಷೇತ್ರದ ಸೇವೆ ಒಂದು ಅಮೂಲ್ಯ ಮತ್ತು ಕುತೂಹಲಕಾರಿ ಆಕರವಾಗಿದೆ. ಇಷ್ಟೆಲ್ಲ ಪ್ರಯತ್ನಗಳ ಬಳಿಕ ಕೂಡ ಅವರಿಗೆ ನಿರೀಕ್ಷಿತ ಯಶಸ್ಸು ದೊರೆಯಲಿಲ್ಲ. ಸಾಲದ ಹೊರೆ ಅಧಿಕಗೊಂಡಿತು. ಮುಂದೆ 'ಚಂದ್ರಿಕೆ'ಯ ಚಂದಾದಾರರ ಸಂಖ್ಯೆ 7000 ತಲುಪಿದಾಗಲೂ ಅವರ ಆರ್ಥಿಕ ಮುಗ್ಗಟ್ಟು ಪರಿಹಾರವಾಗಲಿಲ್ಲ. ಈ ನಡುವೆ ಅವರ ಗುರು ಶೇಷಾಚಲಸ್ವಾಮಿ 1915ರಲ್ಲಿ ವಿಧಿವಶರಾದರು. ಮುಂದೆ ಬಂದ ಸ್ವಾಮಿಗಳಿಗೂ ಗಳಗನಾಥರಿಗೂ ಕೂಡಿ ಬರಲಿಲ್ಲ. ಅಗಡಿಯ ಆಶ್ರಮ ಬಿಟ್ಟು ಹಾವೇರಿಗೆ ಬಂದರು. 'ಚಂದ್ರಿಕೆ' ಪತ್ರಿಕೆಯೂ ಅವರಿಂದ ದೂರಾಯಿತು. ಈ ಅವಧಿಗಾಗಲೇ ಗಳಗನಾಥರು ತಮ್ಮ ಕೃತಿಗಳ ಮೂಲಕ ಮತ್ತು ಪತ್ರಿಕೆಯ ಮುಖಾಂತರ ಅನೇಕ ಗಣ್ಯರ ಸಂಪರ್ಕ ಸಂವಹನ ಸ್ಥಾಪಿಸಿಕೊಂಡಿದ್ದರು. ಟಿ.ಎಸ್. ವೆಂಕಣ್ಣಯ್ಯ, ಬೆಳ್ಳಾವೆ ವೆಂಕಟನಾರಣಪ್ಪ, ಹೊಸಕೆರೆ ಚಿದಂಬರಯ್ಯ, ಡಿ.ವಿ. ಗುಂಡಪ್ಪ, ಎ.ಆರ್. ಕೃಷ್ಣಶಾಸ್ತ್ರಿ, ದೇವುಡು, ಬಿ.ಎಂ.ಶ್ರೀ., ಡಿ.ಕೆ. ಭಾರದ್ವಾಜ ಹೀಗೆ ಅನೇಕರು ಅವರ ಸಾಲದ ಹೊರೆ ಇಳಿಸಲು ನೆರವಾದರು. ಇವರಲ್ಲಿ ಅನೇಕರು ಗಳಗನಾಥರನ್ನು ತಮ್ಮ ಗುರುಗಳೆನ್ನುವಷ್ಟು ಪೂಜ್ಯತೆಯಿಂದ ಕಂಡರೆಂದು ತಿಳಿಯುತ್ತದೆ. 1928ರ ಅವಧಿಯಲ್ಲಿ ಪುಸ್ತಕ ವ್ಯಾಪಾರಕ್ಕೆಂದು ಬೆಂಗಳೂರಿಗೆ ಹೋಗಿ ಮೇಲೆ ವಿವರಿಸಿದ ಹಿರಿಕಿರಿಯ ವ್ಯಕ್ತಿಗಳನ್ನು ಕಂಡು ಹೊಸ ಸಂಕಲ್ಪದೊಂದಿಗೆ ಹಾವೇರಿಗೆ ಮರಳಿದರು. ತಾವು ಬರೆದು ಮುಗಿಸಿದ ಮಹಾಭಾರತದ ಹಸ್ತಪ್ರತಿಯನ್ನು ಬಸವ ಜಯಂತಿಯ ಸಂದರ್ಭದಲ್ಲಿ ಹಾವೇರಿಗೆ ಬಂದ ಬಿ.ಎಂ.ಶ್ರೀ. ಮುಂತಾದವರ ಮುಂದೆ ಇಟ್ಟು ಧನ್ಯತಾಭಾವ ಪಡೆದರು. ಬೆಂಗಳೂರಿನ ತಮ್ಮ ವಾಸ್ತವ್ಯದ ಕಾಲಾವಧಿಯಲ್ಲಿ 'ರಾಣಿ ಮೃಣಾಲಿನಿ', 'ಮಹಾರಾಣಾ ರಾಜಸಿಂಹ' ಮುಂತಾದ ಕಾದಂಬರಿ, 'ಗೀತೆಯ ಶ್ರವಣಾಧಿಕಾರ' ಇತ್ಯಾದಿ ವೈಚಾರಿಕ ಕೃತಿಗಳನ್ನು ರಚಿಸಿದ್ದು ತಿಳಿದುಬರುತ್ತದೆ[9]. ಸಾಲ ತೀರಿಸಲು ಪುಸ್ತಕಗಳನ್ನು ಬರೆಯುತ್ತಿದ್ದು ವಾಚಕರು ಈ ಕೃತಿಗಳನ್ನು ಕೊಂಡು ನೆರವಾಗಬೇಕು ಎಂದು ಕೂಡ ಅವರು ಯತ್ನ ಮಾಡಿದರು. ಹಾವೇರಿಯಲ್ಲಿ ಅವರು ಸ್ಥಾಪಿಸಿದ ಪಾಠಶಾಲೆ, ಅವರ ಇತರ ನಿರ್ವಹಣೆಯ

ವೆಚ್ಚ, ಮನೆತನದ ಆರ್ಥಿಕ ಅಗತ್ಯತೆ ಇವುಗಳಿಂದ ಧೃತಿಗೆಡದ ಗಳಗನಾಥರು, ವಿವಿಧ ಕೃತಿ ರಚನೆಗಳಲ್ಲಿಯೇ ಸಮಾಧಾನ ಪಡೆಯುತ್ತಿದ್ದರು. 1929ರಲ್ಲಿ ಅವರ ಅರವತ್ತನೆಯ ವರ್ಷದ ಶಾಂತಿ ಉತ್ಸವ, ಮಹಾಭಾರತ ಕೃತಿಯ ಭಾಗಶಃ ಪ್ರಕಟವಾಯಿತು. 1930-31ರ ಸುಮಾರು ಸಾಲಮಾಡಿ ವೆಂಕಟೇಶ ಮುದ್ರಣಾಲಯ ಸ್ಥಾಪಿಸಿದರು. ಹಾವೇರಿಯ ಗುರುಬಸಪ್ಪ ಮಾಗಾವಿ ಬಂಧುಗಳಿಂದ ಮತ್ತು ಇತರ ಅನೇಕ ರಾ.ಹ. ದೇಶಪಾಂಡೆ, ಬಂಡೋಪಂತುಜೋಗ ಮುಂತಾದ ಮಹನೀಯರಿಂದ ತಮಗೆ ದೊರೆತ ಸಹಾಯ, ಗೌರವ, ಪ್ರೀತಿಗಳನ್ನು ಗಳಗನಾಥರು ಮತ್ತೆ ಮತ್ತೆ ಸ್ಮರಿಸಿ ಕೃತಾರ್ಥರಾಗಿದ್ದಾರೆ.

ಕನ್ನಡ ನವೋದಯ ಕಾಲದ ಹಿನ್ನೆಲೆಯ ಹೊಸಗನ್ನಡದ ಅರುಣೋದಯ ಕಾಲದ ನೂತನ ಪಥ ನಿರ್ಮಾಪಕರಾದ ಗಳಗನಾಥರು ಕ್ಯಾನ್ಸರ್ ರೋಗದಿಂದ 22-4-1942ರಲ್ಲಿ ಬೆಂಗಳೂರಿನಲ್ಲಿ ಕೊನೆಯುಸಿರೆಳೆದಾಗ ಕನ್ನಡ ಸಾರಸ್ವತ ಪ್ರಪಂಚ ನಿಜವಾದ ಅರ್ಥದಲ್ಲಿ ಒಬ್ಬ ಸರಸ್ವತಿಯ ಉಪಾಸಕರನ್ನು ಕಳೆದುಕೊಂಡಿತು. 74 ವರ್ಷದ ವಯಸ್ಸಿನಲ್ಲಿ ಈ ಲೋಕದ ಯಾತ್ರೆ ಮುಗಿಸಿದ ಗಳಗನಾಥರ ಜೀವನ, ಒಬ್ಬ ಸಾಹಿತ್ಯ ಸೇವಕನ, ಸೃಜನಶೀಲ ಬರಹಗಾರನ ಸಾತ್ವಿಕ ಮನೋವೃತ್ತಿಯ ಅಪ್ರತಿಮ ಸಾಹಸಿಯ ನಿರಂತರ ಹೋರಾಟದ ಮಾದರಿ ಜೀವನ. ಗಳಗನಾಥರ ಸಾಹಿತ್ಯ ಕೃಷಿ ವೈವಿಧ್ಯಮಯವಾಗಿದ್ದಂತೆ ಅತ್ಯಂತ ಪ್ರಭಾವಶಾಲಿಯೂ ಆಗಿದೆ. 'ಪ್ರಬುದ್ಧ ಪದ್ಮನಯನೆ' ಕಾದಂಬರಿಯಿಂದ ಮೊದಲುಗೊಂಡು (1898), ಅವರ ಕೊನೆಯ ಕಾದಂಬರಿ 'ದುರ್ಗದ ಬಿಚ್ಚುಗತ್ತಿ'ಯವರೆಗೆ (1938) ಒಟ್ಟು 22 ಕಾದಂಬರಿ-ಅನುವಾದಿತ ಮತ್ತು ಸ್ವತಂತ್ರ ಕೃತಿಗಳು, ಗಿರಿಜಾ ಕಲ್ಯಾಣ, ಉತ್ತರರಾಮ ಚರಿತ್ರೆ, ಚಿದಂಬರ ಚರಿತ್ರ, ಮಹಾಭಾರತ, ಶೈವ ಸುಧಾರ್ಣವ ಮುಂತಾದ ಪೌರಾಣಿಕ ಕಥೆಗಳು, ದಾಂಪತ್ಯ, ಕುಟುಂಬ, ಕನ್ಯಾ ಶಿಕ್ಷಣ, ರಾಜನಿಷ್ಠೆ, ಸದ್ಗುರು ಪ್ರಭಾವ, ಶ್ರೇಷ್ಠ ಸದುಪದೇಶ ಮೊದಲಾದ ವೈಚಾರಿಕ ಲೇಖನ, ಪ್ರಬಂಧಗಳು ಒಟ್ಟು ಐವತ್ತು ಕೃತಿಗಳನ್ನು ಕನ್ನಡ ಸಾಹಿತ್ಯ ಸಂವರ್ಧನೆಗೆ ನೀಡಿದ ಗಳಗನಾಥರ ಸೃಜನಶೀಲತೆ ಮೆರೆದದ್ದು ಮತ್ತು ಕನ್ನಡ ವಾಚಕರಲ್ಲಿ ಓದುವ ಹವ್ಯಾಸ ಬೆಳೆಸಿದ್ದು, ಕಾದಂಬರಿ ಪ್ರಕಾರ ಎಂದು ಹೇಳಿದರೆ ಅತಿಶಯೋಕ್ತಿ ಆಗಲಾರದು.

ಗಳಗನಾಥರ ಕಾದಂಬರಿಗಳನ್ನೇ ಪ್ರತ್ಯೇಕವಾಗಿ ಆಯ್ದುಕೊಂಡು ಪಿಎಚ್.ಡಿ. ಪದವಿ ಪಡೆದಂತೆ ಅವರ ಇತರ ವೈಚಾರಿಕ ಕೃತಿಗಳ ಹಿನ್ನೆಲೆ, ನೆಲೆಗಳನ್ನು[10] ಗುರುತಿಸಿ ಅವುಗಳ ಮೌಲ್ಯವನ್ನು ಕನ್ನಡ ವಿಚಾರ ಸಾಹಿತ್ಯ ಮತ್ತು ಪ್ರಬಂಧ ಸಾಹಿತ್ಯಗಳ ಬೆಳಕಿನಲ್ಲಿ ವಿವೇಚನೆ ನಡೆಯಬೇಕಾಗಿದೆ.

ಕನ್ನಡ ಸಾಹಿತ್ಯ ಪ್ರಿಯರು ಮತ್ತು ವಿಮರ್ಶಕರು ಗಳಗನಾಥರನ್ನು ಪ್ರಧಾನವಾಗಿ ಕಾದಂಬರಿಕಾರರೆಂದೇ ಗುರುತಿಸುವುದು ಗಮನಾರ್ಹ. ವಿಮರ್ಶಕರು ಅವರ ಕಾದಂಬರಿಗಳನ್ನು ಅನುವಾದಿತ ಮತ್ತು ಸ್ವತಂತ್ರ ಎಂದು ಎರಡು ಬಗೆಯಾಗಿ ವರ್ಗೀಕರಿಸಿ ಮತ್ತೆ ಅವುಗಳಲ್ಲಿ ಮರಾಠರ ಇತಿಹಾಸಕ್ಕೆ ಸಂಬಂಧಿಸಿದ ಕೃತಿ, ರಾಜಪೂತರ ಚರಿತ್ರೆಗೆ ಸಂಬಂಧಿಸಿದ ಕಾದಂಬರಿ ಮತ್ತು ಮೂರನೆಯ ಮಹತ್ವದ್ದು-ಕರ್ನಾಟಕದ ಇತಿಹಾಸಕ್ಕೆ ಸಂಬಂಧಪಟ್ಟ ಕಾದಂಬರಿ ಎಂದು ಗುರುತಿಸಿ, ಇದಲ್ಲದೆ ಇತರ ಬಗೆಯ ಕಾದಂಬರಿ ಎಂದೂ ವಿಭಜಿಸಿದ್ದಾರೆ.

ಗಳಗನಾಥರು ಅನುವಾದಿತ ಕಾದಂಬರಿಗಳನ್ನು ರಚಿಸಿದ್ದರೂ ಅವರ ಸ್ವತಂತ್ರ ಧೋರಣೆ ಒಬ್ಬ ಪ್ರಗತಿಶೀಲ ಲೇಖಕನ ಪ್ರತಿಭೆಗಳಿಗೆ ಅವರು ಹೇಳಿರುವ ('ಸದ್ಗುರು ಪ್ರಭಾವ' ಪು. 39) ಮಾತುಗಳೇ ಸಾಕ್ಷಿ: 'ನನ್ನ ಆಯುಷ್ಯದಲ್ಲಿ ನಾನು ಕೈ.ವಾ. ಆಪಟೆಯವರ 'ಕಮಲ ಕುಮಾರಿ' ಎಂಬ ಒಂದು ಕಾದಂಬರಿಯ ಹೊರತು ಯಾವ ಕಾದಂಬರಿಯನ್ನೂ ಅಕ್ಷರಶಃ ಭಾಷಾಂತರ ಮಾಡಿರುವುದಿಲ್ಲ. ಬೇಕಾದವರ ಕಾದಂಬರಿಯಿರಲಿ ನಾನು ಹಾಗೂ ನನ್ನ ಕನ್ನಡಿಗರು ಎಂಬ ಜೋಡನ್ನು ಮರೆಯದೆ ನಾನು ಕಾದಂಬರಿಯನ್ನು ಬೇಕಾದಲ್ಲಿ ಹಿಗ್ಗಿಸಿರುವೆನು, ಬೇಡಾದಲ್ಲಿ ಕುಗ್ಗಿಸಿರುವೆನು. ಬೇಕಾದಲ್ಲಿ ಹೊಸ ವಿಷಯವನ್ನು ಸೇರಿಸಿರುವೆನು. ಬೇಡಾದಲ್ಲಿ ಇದ್ದ ವಿಷಯವನ್ನು ತೆಗೆದು ಹಾಕಿರುವೆನು. ಆ ಕಾದಂಬರಿಯೇ ಕೈಗೊಂಬೆಯಲ್ಲದೆ, ನಾನು ಕಾದಂಬರಿಯ ಕೈಗೊಂಬೆಯಾಗಿರುವುದಿಲ್ಲ'[11] ಒಬ್ಬ ಸ್ವೋಪಜ್ಞ ಲೇಖಕನ ಸ್ಫುಟವಾದ ಈ ಧೋರಣೆ ಅವರ ಕಾದಂಬರಿಗಳ ನಿರ್ಮಿತಿಗೆ ವಿಶಿಷ್ಟರೂಪ ಒದಗಿಸಿದರೆ ಒಬ್ಬ ಸೃಜನಶೀಲ ಕಾದಂಬರಿಕಾರನ ಸಂವಹನವಸ್ತು ಕುರಿತ ಗಾಢವಾದ ಚಿಂತನೆ ಅವರ ಕಾದಂಬರಿಗಳ ಸ್ವರೂಪಕ್ಕೆ ವಿಶೇಷ ದ್ರವ್ಯ ತುಂಬಿದವು. ಧಾರ್ಮಿಕ ಲೇಖನಗಳಿಗೆ, ಆಲೋಚನೆಗಳಿಗೆ ಪ್ರಾಮುಖ್ಯ ನೀಡುವ ಸದ್ಬೋಧ ಚಂದ್ರಿಕೆಯಲ್ಲಿ ಅವರು ಹೇಳಿದ ಈ ಕೆಲವು ವಿಚಾರಗಳು ಸ್ಪಷ್ಟವಾಗಿವೆ. 'ಕಮಲಕುಮಾರಿ' ಕಾದಂಬರಿಯ ವಸ್ತು ಕುರಿತು ವಿವೇಚಿಸುತ್ತ ..... "ಸದ್ಬೋಧ ಚಂದ್ರಿಕೆಯಲ್ಲಿ ಕಮಲಕುಮಾರಿಯು ಪ್ರಸಿದ್ಧವಾದುದಕ್ಕಾಗಿ ನನಗೆ ಬಹಳ ಸಂತೋಷವಾಗಿದೆ; ಯಾಕೆಂದರೆ ಕಮಲಕುಮಾರಿಯಂಥ ಧರ್ಮಿಷ್ಠ ಸಾಧ್ವಿಯು ಹಾಗೂ ತಾನಾಜಿಯಂಥ ಧರ್ಮನಿಷ್ಠ ಹಾಗೂ ರಾಜನಿಷ್ಠ ವೀರನ ಪವಿತ್ರವಾದ ವರ್ಣನೆಗಳಿಗೆ ಇದಕ್ಕಿಂತ ಪವಿತ್ರವಾದ ಸ್ಥಳವು ದೊರೆಯುವುದು ದುರ್ಲಭವು.... ಜನರಲ್ಲಿ ಸಾತ್ವಿಕಭಾವವನ್ನು ಹೆಚ್ಚಿಸುವುದೇ ಸಜ್ಜನರ ಧರ್ಮವಾಗಿರುವುದು. ಆ ಸಾತ್ವಿಕ ಭಾವದ ಅಭಿವೃದ್ಧಿಗೆ ಈ ಕಾದಂಬರಿಯು ಸಹಾಯಮಾಡಬಹುದೆಂದು ನಾನು ನೆನಿಸುತ್ತೇನೆ"[12] ಈ ಮೇಲಿನ ಮಾತು 'ಕಮಲಕುಮಾರಿ' ಕಾದಂಬರಿ ಕುರಿತು ಹೇಳಿದ್ದಾದರೂ ಸಾಹಿತ್ಯ ಪ್ರಕಾರವಾದ ಕಾದಂಬರಿ ಮತ್ತು ಸಂವಹನದ ಗುರಿಗಳಿಗೆ ಸಂಬಂಧಿಸಿದ ಆಲೋಚನೆಗಳೂ ಅಡಕಗೊಂಡಿರುವುದು ಕಂಡುಬರುತ್ತದೆ. ಧರ್ಮನಿಷ್ಠೆ, ರಾಜನಿಷ್ಠೆ, ಶೌರ್ಯ ಮತ್ತು ಸಾತ್ವಿಕ ಮನೋಭಾವಗಳ ಪ್ರೇರಣೆ ಈ ಬಗೆಯ ಚಾರಿತ್ರಿಕ ಕಾದಂಬರಿಗಳ ಸ್ವರೂಪ ನಿರ್ಮಿತಿಯ ಪ್ರಧಾನ ಅಂಶಗಳಾಗಬೇಕು ಎಂದು ಗಳಗನಾಥರ ಅಭಿಪ್ರಾಯ. ಇದು ಯಾವ ಕಾದಂಬರಿಕಾರನಿಗೆ ಬೇಡ? ಆದರೆ ಕೆಲವೊಮ್ಮೆ ಬರಹಗಾರ ಹೇಗೆ ಪರಿಸರದ ಒತ್ತಡಕ್ಕೆ ಸಿಲುಕಿರುತ್ತಾನೆ ಎನ್ನುವುದಕ್ಕೆ ಕಮಲಕುಮಾರಿ ಕಾದಂಬರಿಯ ಪ್ರಸ್ತಾವನೆಯಲ್ಲಿ "...... ನಾವು ಸದ್ಗುಣಗಳನ್ನು ಸ್ವೀಕರಿಸಿ ಧರ್ಮಗಳಲ್ಲಿ ಶ್ರದ್ಧೆ ...... ದೇವರಲ್ಲಿ ಭಕ್ತಿ...... ಇಂಗ್ಲಿಷ್ ಸರಕಾರದ ವಿಷಯವಾಗಿ ನಿಷ್ಠೆಯುಳ್ಳವರೂ ಆಗತಕ್ಕದ್ದು" ಎಂದು ವಿವರಿಸುತ್ತಾರೆ. ಇಂಥ ಮಾತು ಪ್ರಸ್ತುತತೆಯನ್ನು ಕಳೆದುಕೊಳ್ಳುತ್ತದೆ ನಿಜ. ಆದರೆ ಅದು ಯಾವುದೇ ಲೇಖಕನ ಪರಿಮಿತಿಯನ್ನು ಸೂಚಿಸುತ್ತದೆ. ಅಲ್ಲದೆ ಲೇಖಕ ಸಹಾ ಪ್ರವಾದಿಯಾಗಿರಬೇಕು ಎಂದು ಕಡ್ಡಾಯವೇನಿಲ್ಲ. ಗಳಗನಾಥರು ಬರೆದ ಅನುವಾದಿತ ಅಥವಾ ಆಧಾರಿತ ಕಾದಂಬರಿಗಳಲ್ಲಿ ಮುಖ್ಯವಾದವುಗಳು: 'ಕಮಲಕುಮಾರಿ', 'ಮರಾಠರ ಅಭ್ಯುದಯ', 'ಶಿವಪ್ರಭುವಿನ ಪುಣ್ಯ', 'ಕುರುಕ್ಷೇತ್ರ' ಮುಂತಾದವು.

ಮರಾಠಿ ಸಾಹಿತ್ಯದಲ್ಲಿ ಪ್ರಸಿದ್ಧ ಕಾದಂಬರಿಕಾರ ಹರಿನಾರಾಯಣ ಆಪ್ಟೆ ಅವರ 'ಗಡ ಆಲಾ ಪಣ ಸಿಂಹಗೇಲಾ' (ಕೋಟೆ ದೊರಕಿತು ಆದರೆ ಸಿಂಹ ಹೋಯಿತು) ಕೃತಿಯ ಕನ್ನಡಾನುವಾದಕ್ಕೆ ಗಳಗನಾಥರು 'ಕಮಲಕುಮಾರಿ' ಹೆಸರಿಟ್ಟರು. ವಾಸ್ತವವಾಗಿ ಮೂಲಕೃತಿಯ ನಾಯಕ ತಾನಾಜಿ. ಆತ

ಶಿವಾಜಿಯ ಬಲಗೈಬಂಟ. ಅಂದಿನ ಮುಸಲ್ಮಾನ ಅರಸರ ದುರಾಕ್ರಮಣವನ್ನು ಬಗ್ಗುಬಡಿದು, ಔರಂಗಜೇಬನ ಸೈನ್ಯದಲ್ಲಿ ಸರದಾರನಾಗಿದ್ದ ಉದಯಭಾನು ಮೇವಾಡದ ವೀರಸಿಂಹನ ವಿಧವೆ ಕಮಲಕುಮಾರಿಗಾಗಿ ನಡೆಸಿದ ಹೀನ ತಂತ್ರಗಳನ್ನು ಕತ್ತರಿಸಿ ಮಹಾರಾಷ್ಟ್ರದ ಕೊಂಡಾಣಾದುರ್ಗವನ್ನು ಔರಂಗಜೇಬನ ಸೆರೆಯಿಂದ ಮುಕ್ತ ಮಾಡಿ ತಮ್ಮ ಕೈವಶಮಾಡಿಕೊಳ್ಳುವುದು ಶಿವಾಜಿಯ ಮುಖ್ಯ ಗುರಿ; ಮತ್ತು ಅದೇ ಕಾದಂಬರಿಯ ಕಥಾನಕ. ಅದಕ್ಕಾಗಿ ಶಿವಾಜಿಯ ಬಂಟ ವೀರ ತಾನಾಜಿಯು ನಡೆಸುವ ಹೋರಾಟ ಸಾಹಸಗಳೇ 'ಕಮಲಕುಮಾರಿ' ಕಾದಂಬರಿಯ ಶಿಖರ. ಈ ಹೋರಾಟದಲ್ಲಿ ತಾನಾಜಿ ವೀರಸ್ವರ್ಗ ಪಡೆಯುತ್ತಾನೆ. 'ಕೋಟೆ ಕೈವಶ; ಆದರೆ ಸಿಂಹ ಹೋಯಿತು' ಎನ್ನುವ ಶೀರ್ಷಿಕೆ. ಆದರೆ ಇಲ್ಲಿ ತನ್ನ ಪಾತಿವ್ರತ್ಯಕ್ಕಾಗಿ ಕಮಲಕುಮಾರಿ ಸತಿ ಹೋಗುವುದರೊಂದಿಗೆ ಈ ಕಥಾನಕ ಕೊನೆಗೊಳ್ಳುವುದನ್ನು ವಿಮರ್ಶಕರು ಗುರುತಿಸಿದ್ದಾರೆ. ಹೀಗೆ ಶಿವಾಜಿ ತನ್ನ ಬಂಟರನ್ನು ಕೂಡಿಕೊಂಡು 'ಸುಲ್ತಾನಗಡ'ವನ್ನು ಕೈವಶ ಮಾಡಿಕೊಂಡ ಕಥೆ 'ಈಶ್ವರೀ ಸೂತ್ರ'ದಲ್ಲಿ ಮುಸಲ್ಮಾನ ಆಳರಸರ ಕುತಂತ್ರಗಳನ್ನು ಕತ್ತರಿಸಿದರೂ ಮರಾಠರಾಜ್ಯ ಸ್ಥಾಪನೆಯ ಭದ್ರ ಅಸ್ತಿವಾರ ಹಾಕಿ ಕೊನೆಗೆ ರಾಯಗಡದಲ್ಲಿ ಪಟ್ಟಾಭಿಷೇಕ ಹೊಂದಿ ಅರಸನಾಗಿ, ಕಾಲಾನಂತರ ಅಫ್ಜಲ್‌ಖಾನನ ಮೋಸಕ್ಕೆ ಬಲಿಯಾದ ಶಿವಾಜಿಯ ಅದ್ಭುತ ಪರಾಕ್ರಮದ ಕಥೆ 'ಮರಾಠರ ಅಭ್ಯುದಯ', 'ಶಿವಪ್ರಭುವಿನ ಪುಣ್ಯ' ಶಿವಾಜಿಯ ಪುತ್ರ ಅವಿವೇಕಿ ಸಂಭಾಜಿಯ ಕಾಲದ ಕಥಾನಕ.

ವೀರ, ಕರುಣ ರಸಗಳಿಂದ ಓತಪ್ರೋತವಾದ ನಾನಾ ಸಾಹೇಬ ಪೇಶ್ವೆ ಕಾಲದ ಪಾನಿಪತ್ತ ಯುದ್ಧ ವಿವರ ಹಿನ್ನೆಲೆಯಲ್ಲಿ ಜರುಗಿದ ಪೇಶ್ವೆ ಸದಾಶಿವರಾವ್ ಭಾವೂ, ಜೊತೆಗಾರ ಶೂರರಾಗಿದ್ದ ಸಿಂಧೆ, ಹೋಳಕರ, ಗಾಯಕವಾಡ ಭೋಸಲೆ ಮುಂತಾದವರೊಡನೆ ದಿಗ್ವಿಜಯ ಮಾಡುತ್ತ ಅಬದಾಲಿಯನ್ನು ಪಾನಿಪತ್ತದಲ್ಲಿ ಎದುರಿಸುತ್ತ ರಣರಂಗದಲ್ಲಿಯೇ ಮಡಿದ ಸಿಂಹಸಾಹಸಿಗಳ ದುರಂತ-ಕರುಣ ಕಥೆಯೇ 'ಕುರುಕ್ಷೇತ್ರ'. ಮುಸಲ್ಮಾನ ಆಳರಸರ ವಿರುದ್ಧ ಬಂಡೆದ್ದು ಹೋರಾಡಿದ ವೀರರ ಕಥೆಗಳ ಬಳಿಕ ರಾಜಪೂತ ಶೂರ ಸಾಹಸಿಗಳ ಅಪ್ರತಿಮ ಹೋರಾಟವನ್ನು ಚಿತ್ರಿಸುವ ಉದ್ದೇಶವಿರಿಸಿಕೊಂಡ ಗಳಗನಾಥರಿಗೆ ಕಂಡದ್ದು ಕೆಲವು ಐತಿಹಾಸಿಕ ಹಿನ್ನೆಲೆಯ ಹಂಬೇಡಿಗಳಾಗಿ ವರ್ತಿಸಿದ ರಾಜಪೂತ ಅರಸರು. ಅಂಥ ಸಂಗತಿಗಳನ್ನು ಚಿತ್ರಿಸುವ ಕೆಲವು ಕಾದಂಬರಿಗಳೆಂದರೆ 'ಕ್ಷಾತ್ರ ತೇಜ', 'ತಿಲೋತ್ತಮೆ ಅಥವಾ ಸರಸಪ್ರೇಮ', 'ರಾಣಾ ರಾಜಸಿಂಹ', 'ಧಾರ್ಮಿಕ ತೇಜ', 'ಸತ್ವಸಾರ', 'ಸಂಸಾರಸುಖ' ಮುಂತಾದುವು. ತಮಾಷೆಯೆಂದರೆ ರಾಜಪೂತರು ಹೇಗೆ ಪರಿಸ್ಥಿತಿ ಪರಿಸರಗಳೊಂದಿಗೆ ಒಪ್ಪಂದಮಾಡಿಕೊಂಡರು; ಮುಸಲ್ಮಾನರ ದುರಾಕ್ರಮಣಕ್ಕೆ ಒಳಗಾಗಿ ಅವರ ಅಧೀನರಾಗಿ ಬಾಳಿದರು; ಸ್ವಾಭಿಮಾನಶೂನ್ಯರಾಗಿ ಅವರೊಡನೆ ನೆಂಟಸ್ತನ ಬೆಳೆಸಿದರು ಅಥವಾ ಚರಿತ್ರೆಯಲ್ಲಿ ಘಟಿಸಿದ ಕೆಲವು ದುರ್ಭರ ಸಂಗತಿಗಳನ್ನೂ ಕಥಾನಕಕ್ಕೆ ಅಳವಡಿಸಿ ಜನತೆಯನ್ನು ಜಾಗೃತಗೊಳಿಸುವ ಗುರಿ, ದೌರ್ಬಲ್ಯಗಳನ್ನೂ ಹೇಡಿತನವನ್ನೂ ಮೆಟ್ಟಿ ಮೇಲೆದ್ದು ನಿಲ್ಲುವ ಆತ್ಮಾಭಿಮಾನ ಮೂಡಿಸುವ ಹಿನ್ನೆಲೆ ಇಂಥ ಕಾದಂಬರಿಗಳ ಗುರಿಯಾಗಿರುವಂತೆ ತೋರುತ್ತದೆ. 'ಕ್ಷಾತ್ರತೇಜ' ಔರಂಗಜೇಬನ ಕ್ರೌರ್ಯ ಕಾಮುಕತೆಗಳ ಚಿತ್ರಣಕ್ಕಿಂತ ವಿಜಯಸಿಂಹ, ರಾಜಸಿಂಹ ಮುಂತಾದ ವೀರರ ಶೌರ್ಯವನ್ನು ಎತ್ತಿತೋರಿಸುತ್ತದೆ. 'ಧಾರ್ಮಿಕತೇಜ', 'ಪರಹಿತ-ದಕ್ಷತಾ', 'ಸತ್ವಸಾರ' ಅರ್ಥಾತ್ 'ಶೌರ್ಯಸಂಜೀವನ' ಮುಂತಾದವು ಈ ಮಾಲಿಕೆಯ-ಮುಖ್ಯ ಕಾದಂಬರಿಗಳು.

'ಕನ್ನಡಿಗರ ಕರ್ಮಕಥೆ' ಅಥವಾ 'ವಿಜಯನಗರದ ನಾಶ' ಎನ್ನುವುದು ಆಪ್ಟೆ ಕಾದಂಬರಿ ಆಧರಿಸಿ ಗಳಗನಾಥರು ಕನ್ನಡೀಕರಿಸಿದ ಮತ್ತೊಂದು ಕೃತಿಯಾಗಿದೆ. ಇದನ್ನು 'ಕನ್ನಡಿಗರ ಕರ್ಮಕಥೆ' ಎಂದು ಕರೆದಿರುವುದು ಗಳಗನಾಥರು ಇತಿಹಾಸವನ್ನು ವೀಕ್ಷಿಸುತ್ತಿದ್ದ ದೃಷ್ಟಿಧೋರಣೆಗಳಿಗೆ ಸಾಕ್ಷಿ. 'ಧರ್ಮರಹಸ್ಯ'; 'ಚಾಣಕ್ಯನ ಕಾರಸ್ಥಾನ', 'ಮೃಣಾಲಿನೀ' ಇವು ಮತ್ತೆ ಕೆಲವು ಕೃತಿಗಳು. ಬಂಕಿಮಚಂದ್ರರ 'ಮೃಣಾಲಿನಿ'-ಮರಾಠಿ ಮುಖಾಂತರದ-ಕನ್ನಡ ರೂಪವೇ 'ಮೃಣಾಲಿನಿ'. ಅಶೋಕನ ಜೀವನಧ್ಯೇಯ, ಶೋಕ ಪರಿತಾಪಗಳು, ಚಂದ್ರಗುಪ್ತನ ಜೀವನದ ವಿವರಗಳು, ಚಾಣಕ್ಯ ನೀತಿಗಳನ್ನು ಕಾದಂಬರಿಗಳ ಮೂಲಕ ಚಿತ್ರಿಸಿದ ಗಳಗನಾಥರು ಅಂದು ಕನ್ನಡ ವಾಚಕರಿಗೆ ಎಂಥ ಆಕರ್ಷಕ ಬರಹಗಾರರಾಗಿದ್ದರು ಎನ್ನುವುದು ಇಂದಿಗಂತೂ ರೋಮಾಂಚಕಾರಿ ಸಂಗತಿಯಾಗಿದೆ.

'ಪ್ರಬುದ್ಧ ಪದ್ಮನಯನೆ', 'ಕುಮುದಿನಿ', 'ಸತ್ವಸಾರ', 'ಮಾಧವ ಕರುಣಾ ವಿಲಾಸ', 'ದುರ್ಗದ ಬಿಚ್ಚುಗತ್ತಿ' ಮುಂತಾದವುಗಳಲ್ಲಿ ಅತ್ಯಂತ ಮಹತ್ವದ ಕೃತಿ 'ಮಾಧವಕರುಣಾ ವಿಲಾಸ'. 770 ಪುಟಗಳ ಈ ಬೃಹತ್ ಕಾದಂಬರಿ ಮಾಧವಾಚಾರ್ಯರ ಪ್ರೇರಣೆ ಸಂಕಲ್ಪಗಳ ಫಲವಾಗಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡ ಶೌರ್ಯ ಸಾಹಸ, ಅಪ್ರತಿಮ ಧರ್ಮಪ್ರಭಾವ ಶ್ರದ್ಧೆಗಳ ಬೆಳಕು-ಮಾರ್ಗದರ್ಶನ-ಸಂಗಮವಂಶದ ಹಕ್ಕಬುಕ್ಕರು[13] ಅವರ ನಿರಂತರ ಧೈರ್ಯ, ನಾಡಿನ ನಿಷ್ಠೆ, ಸ್ವಾಭಿಮಾನ ಇತ್ಯಾದಿ ಸಂಗತಿಗಳ ನಿರೂಪಣೆಯೇ 'ಮಾಧವ ಕರುಣಾವಿಲಾಸ'. ಐತಿಹಾಸಿಕ ಸಂಗತಿಗಳ ಸತ್ಯಾಸತ್ಯತೆಗಿಂತ ಈ ಕಾದಂಬರಿಯ ಬಂಧ, ಪಾತ್ರಚಿತ್ರಣ, ಸನ್ನಿವೇಶ ನಿರ್ಮಾಣಗಳು ಒಂದೊಂದು ಚೇತೋಹಾರಿಯಾಗಿವೆ. ಈ ಕಾದಂಬರಿಯ ಗುಣದೋಷಗಳನ್ನು ಚರ್ಚಿಸಿದ ವಿಮರ್ಶಕರು ಈ ಕೃತಿಯಲ್ಲಿ "..... ಜಾತೀಯತೆ, ಅಸ್ಪೃಶ್ಯತೆ ಮೊದಲಾದ ಸಮಕಾಲೀನ ಜೀವನದ ಸಮಸ್ಯೆಗಳು ಬರುವುದರಿಂದ ಒಮ್ಮೊಮ್ಮೆ ಪಾತ್ರಗಳ ಗುರುತು ಕೂಡಾ ತಪ್ಪಿಹೋಗುವಂತಾಗಿದೆ" ಎಂದಿದ್ದಾರೆ. ಆದರೆ ಈ ಕೃತಿರಚನೆಯ ಅವಧಿ ಮತ್ತು ಅಂದಿನ ಐತಿಹಾಸಿಕ ಸಾಮಗ್ರಿ-ಆಕರಗಳ ಲಭ್ಯಾಲಭ್ಯತೆಗಳನ್ನು ಗಮನದಲ್ಲಿರಿಸಿ ನೋಡಿದರೆ ಒಂದು ಕಾದಂಬರಿಯಾಗಿ ಗಳಗನಾಥರ 'ಮಾಧವ ಕರುಣಾವಿಲಾಸ' ಇಂದಿಗೂ ತನ್ನ ಸ್ಥಾನ ಕಳೆದುಕೊಳ್ಳಲಾರದು.

ಗಳಗನಾಥರ ಶೈಲಿಯನ್ನು 'ಆತ್ಮೀಯ ಶೈಲಿ' ಎಂದು ಕರೆಯಬಹುದು. ಅಂದರೆ ಓದಿದಾಕ್ಷಣ ಚಿತ್ತವನ್ನು ಆಕರ್ಷಿಸುವ ನೇರ ಸಂಬೋಧನೆ "ಹಾಯ್...ಪ್ರಿಯ ವಾಚಕರೇ... ಆ ಮಹಾಸಾಧ್ವಿಯಾದ ಕಮಲಕುಮಾರಿಯನ್ನು ತಡೆದವರು ಯಾರಿರಬಹುದು... ಪ್ರಿಯವಾಚಕರೇ ಸಮಾಧಾನ ತಾಳಿರಿ. ನಮ್ಮ ಆರ್ಯೆಯಾದ ಕಮಲಕುಮಾರಿಯ ದುಃಖದ ವೃತ್ತಾಂತ ಶ್ರವಣದಿಂದ ನಿಮ್ಮ ಹೃದಯ ವಿದಾರಣವಾಗಿರಬಹುದು. ನೀವು ಸ್ವಲ್ಪ ವಿಶ್ರಾಂತಿ ತಾಳಿದ ಬಳಿಕ ಇವರು ಯಾರೆಂಬುದನ್ನು ನಿಮಗೆ ಹೇಳುವೆನು" ಇತ್ಯಾದಿ. ಸಾಹಿತ್ಯ ಮತ್ತು ಸಂವಹನ ಕುರಿತು ಹೇಳುವುದಾದರೆ ಇದು 'ನೇರ ಸಂವಹನ ಶೈಲಿ'. ಆದ್ದರಿಂದ 'ಆತ್ಮೀಯ ಶೈಲಿ' ಎಂದು ವಿವರಿಸಬಹುದು.

'ಪ್ರಬುದ್ಧ ಪದ್ಮನಯನೆ' ಕೃತಿಯ ಒಂದು ಘಟ್ಟದಲ್ಲಿ ಪದ್ಮನಯನೆಯ ಕಥಾನಕ ಹೇಳಬೇಕಾದ ಸಂದರ್ಭ: ಆಗ ಪದ್ಮನಯನೆಗೆ ತುಂಬ ಹಸಿವೆ.

ಆಗ ಗಳಗನಾಥರು "ನಮ್ಮ ಪದ್ಮನಯನೆಯು ಹಸಿವೆಯಿಂದ ಕಂಗಾಲಾಗಿರಲು, ಸದ್ಯಕ್ಕೆ ನಾವು ಆ ಮಂದಿರವನ್ನು ವರ್ಣಿಸುವ ಗೊಡವೆಗೆ ಹೋಗುವುದಿಲ್ಲ" ಎಂದು ನೇರವಾಗಿ ವಾಚಕರನ್ನು ತಮ್ಮ ವಿಶ್ವಾಸಕ್ಕೆ, ಆಂತರ್ಯಕ್ಕೆ ಬರಮಾಡಿಕೊಳ್ಳುತ್ತಾರೆ.

"ನಾನು ಶಬರಿಯು, ವಾಚಕರು ಶ್ರೀರಾಮರು. ನನ್ನ ಕಣ್ಣಿಗೆ ಬಿದ್ದ ಅಥವಾ ನನ್ನ ಊರ್ಮಿಯಲ್ಲಿ ಸ್ಫುರಿಸಿದ ಕಾದಂಬರಿಗಳೇ ಶ್ರೀರಾಮ ರೂಪಕ ವಾಚಕವರ್ಗವೆಂಬ ನನ್ನ ಅಧಿದೈವತಕ್ಕೆ ಭಕ್ತಿಯಿಂದ ನನ್ನ ಬೋರೆಯ ಹಣ್ಣುಗಳು"[14] ಆ ಕಾರಣದಿಂದಾಗಿಯೇ ಬಹುಶಃ ಗಳಗನಾಥರ ಶೈಲಿಯಲ್ಲಿ ಜನಪದ ಭಾಷೆ, ನುಡಿಗಟ್ಟು, ಗಾದೆಗಳ ನೆಯ್ಗೆ ಕಂಡುಬರುತ್ತದೆ. ಮಸಲತ್ತು, 'ನಾಗವಂದಿಗೆ', 'ಕವಡುಗಂಟುತನ', 'ಲಂಡತನ', 'ಝುಳಝುಳ', 'ಹೊಮ್ಮಾಲಿತನ', 'ಕಿವಿಯೂದು', 'ನಾಚಿಕೆಸಾವು', 'ಲಂಚಬೊಕ್ಕ', 'ಕಿವಿಗೆತುತ್ತು', 'ಅನಕಾ ಕೆಲವು ದಿವಸ', 'ಉಂಡಮನೆಗಳ ಎಣಿಸು', 'ಮುಂಡೆಗೆ ಮುಂಡೆಯನ್ನು ಕಂಡರೆ ಉಂಡಷ್ಟು ಸಂತೋಷ' ಮುಂತಾದ ನುಡಿಗಟ್ಟು, ಗಾದೆಗಳಿಂದ ಗಳಗನಾಥರ ಶೈಲಿಗೆ ಒಂದು ಸಹಜ ಮೆರಗು ಪ್ರಾಪ್ತವಾಗಿದೆ.

ವಿಮರ್ಶಕರು ಗಳಗನಾಥರ ಶೈಲಿಯನ್ನು ಕುರಿತು "ವ್ಯಾಕರಣ ನಿಯಮಗಳನ್ನು ಮೀರಿ ನಡೆದಿಲ್ಲವಾದರೂ ದೇಶೀಯ ಮೆರುಗನ್ನು ಪರಿಶುದ್ಧ ಭಾಷಾಶೈಲಿಗೆ ಅಳವಡಿಸಿ ಇವರು ತಮ್ಮದೇ ಆದ ಶೈಲಿಯನ್ನು ನಿರ್ಮಿಸಿಕೊಂಡಿದ್ದಾರೆ" ಎಂದು ವಿವೇಚಿಸಿರುವುದು ನಿಲ್ಲುವ ಮಾತು.[15]

ಗಳಗನಾಥರ ವ್ಯಕ್ತಿತ್ವ ಧರ್ಮಪ್ರವೃತ್ತಿಯಿಂದ ಓತಪ್ರೋತ; ಆದರೆ ಅವರ ಪ್ರತಿಭೆ ಹೊಸಸೃಷ್ಟಿಯ ಸಂಕೇತ. ಅವರನ್ನು ಕಾದಂಬರಿಕಾರ ಎಂದು ಕನ್ನಡಿಗರು ಗುರುತಿಸಿದ್ದು ಅವರಿಗೆ ಸಂತೋಷಕೊಟ್ಟ ವಿಷಯವಾಗಿದೆ; ಅವರೇ ವಿವರಿಸುವಂತೆ "ಕರ್ನಾಟಕವು ಪ್ರಾಮುಖ್ಯವಾಗಿ ನನ್ನನ್ನು ಕಾದಂಬರಿಕಾರನೆಂದು ಗುರುತಿಸುತ್ತಿರುವುದು ನನಗೆ ಅಭಿಮಾನದ ಸಂಗತಿಯು."[16] 'ಮಾಧವಕರುಣಾ ವಿಲಾಸ'ದಲ್ಲಿ ಗಳಗನಾಥರು "ನಮ್ಮ ಮಹಾತ್ಮನಾದ ಮಾಧವನು ತನ್ನ ಸರ್ವಾಂಗವನ್ನೇ ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯನೆಂಬ ಬಿರುದನ್ನು ಪಡೆದನು[17]... ಶ್ರೇಷ್ಠ ಮಾಧವಾ..." ಇತ್ಯಾದಿ ತಮ್ಮ ಅಭಿಮಾನ ತೋಡಿಕೊಂಡಿದ್ದಾರೆ. ಅಂಥವೇ ಮಾತುಗಳನ್ನು ನಾವು ಗಳಗನಾಥರಿಗೆ ಸ್ವಲ್ಪ ಬದಲಿಸಿ ಹೀಗೆ ಹೇಳಬಹುದು: "ಮಹಾತ್ಮನಾದ ಗಳಗನಾಥನು ತನ್ನ ಸರ್ವಸ್ವವನ್ನೇ ಕನ್ನಡ ಸರಸ್ವತಿಯ ಉಪಾಸನೆಗೆ! ಕನ್ನಡಿಗರ ಕಲ್ಯಾಣಕ್ಕಾಗಿ ಅರ್ಪಿಸಿದನು. ಶ್ರೇಷ್ಠ ಗಳಗನಾಥ ನಿನ್ನ ಉದಾತ್ತ ಭಾವನೆ-ಧೋರಣೆಗಳು ಲೇಖಕರನ್ನು ಕೈಹಿಡಿದು ಮುನ್ನಡೆಸಲಿ!"

❑

---

1. ಈ ಅವತರಣಿಕೆಗಳು ವಾಸುದೇವ ಪ್ರಶಸ್ತಿ' (1964) ಗ್ರಂಥದಲ್ಲಿ ಶ್ರೀ ಎಸ್.ಬಿ. ನರಗುಂದಕರರ 'ಕನ್ನಡ ಶುಭೋದಯದ ಆಚಾರ್ಯರು' ಲೇಖನದಿಂದ ಆಯ್ದುಕೊಂಡವುಗಳು.
2. ಆಲೂರು ವೆಂಕಟರಾಯರು 'ನನ್ನ ಜೀವನದ ಸ್ಮೃತಿಗಳು' ಪು 68 (1974).
3. ಡಾ|| ಕೃಷ್ಣಮೂರ್ತಿ ಕಿತ್ತೂರ, ಗಳಗನಾಥರು ಮತ್ತು ಅವರ ಕಾದಂಬರಿಗಳು, ಪು. 51. ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, 1978.
4. " "
5. " "
6. ವೇ. ತಿ. ಗಳಗನಾಥ : 'ಸದ್ಗುರುಪ್ರಭಾವ', ಪುಟ 4.
7. ವೇ. ತಿ. ಗಳಗನಾಥ : 'ಸದ್ಗುರುಪ್ರಭಾವ', ಪುಟ 8-9
8. ಡಾ. ಕೃಷ್ಣಮೂರ್ತಿ ಕಿತ್ತೂರು, 'ಗಳಗನಾಥರು ಮತ್ತು ಅವರ ಕಾದಂಬರಿಗಳು,' ಪ್ರಸಾರಾಂಗ, ಕ.ವಿ. ವಿದ್ಯಾಲಯ, ಧಾರವಾಡ 1978, ಪು.73-74
9. ಡಾ|| ಕೃಷ್ಣಮೂರ್ತಿ ಕಿತ್ತೂರು 'ಗಳಗನಾಥರು ಮತ್ತು ಅದರ ಕಾದಂಬರಿಗಳು' ಪು. 75, ಪ್ರಸಾರಾಂಗ, ಕ.ವಿ. ವಿದ್ಯಾಲಯ, ಧಾರವಾಡ, 1978.
10. ಗಳಗನಾಥ 'ಸದ್ಗುರುಪ್ರಭಾವ' ಪು. 21.
11. ಕೃಷ್ಣಮೂರ್ತಿ ಕಿತ್ತೂರ ಅವರು 'ಗಳಗನಾಥರು ಮತ್ತು ಕಾದಂಬರಿಗಳು' ವಿಷಯ ಕುರಿತು ಮಾಡಿದ ಸಂಶೋಧನೆಗಾಗಿ, ಕ.ವಿ. ವಿದ್ಯಾಲಯದಿಂದ ಪಿಎಚ್‌ಡಿ. ಪದವಿ ದೊರೆತಿದ್ದು ಅದೇ ವಿಶ್ವವಿದ್ಯಾಲಯ 1978ರಲ್ಲಿ ಅದನ್ನು ಪ್ರಕಟಿಸಿದೆ.
12. ಗಳಗನಾಥ 'ಸದ್ಗುರುಪ್ರಭಾವ' ಪು. 39.
13. 'ಗಳಗನಾಥ' ಪು. 26, ಪ್ರಧಾನ ಸಂಪಾದಕ: ಡಾ||ಹಾ.ಮಾ. ನಾಯಕ, ಕ.ಅ. ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1970.
14. ಇತ್ತೀಚಿನ ಸಂಶೋಧನೆಗಳ ಪ್ರಕಾರ 'ಕ್ರಿಯಾಶಕ್ತಿ' ಎನ್ನುವ ಗುರುಗಳ ಪ್ರೇರಣೆ - ವಿಜಯನಗರ ಸಾಮ್ರಾಜ್ಯ - ಪೌಢದೇವರಾಯನ ಕಾಲಾವಧಿಯ ಉಜ್ವಲ ಅಭಿವೃದ್ಧಿಗಳು, ತತ್‌ಪೂರ್ವದ ಸಂಗತಿಗಳಾಗಿರುವುದನ್ನು 'ವಿಜಯಕಲ್ಯಾಣ' ಕೃತಿಯಲ್ಲಿ ಎತ್ತಿತೋರಿಸಲಾಗಿದೆ.
15. ಗಳಗನಾಥ 'ಸದ್ಗುರುಪ್ರಭಾವ' ಪು. 40.
16. 'ಗಳಗನಾಥ' ಸಂ.: ಡಾ|| ಹಾ.ಮಾ. ನಾಯಕ, ಕ.ಅ. ಸಂಸ್ಥೆ, ಮೈಸೂರು, 1970, ಪು.56.
17. 'ಗಳಗನಾಥ' ಸಂ.: ಡಾ|| ಹಾ.ಮಾ. ನಾಯಕ, ಕ.ಅ. ಸಂಸ್ಥೆ, ಮೈಸೂರು, 1970, ಪು. 61.

# ಪಂಜೆ ಮಂಗೇಶರಾವ್

ಎಮ್. ರಾಮಚಂದ್ರ

"ಹೊಸಗನ್ನಡಕ್ಕೆ ದಕ್ಷಿಣ ಕನ್ನಡದ ಗುರುಜನರು ಮೂವರು. ಕಿರುಗವನದ, ಕಿರುಗತೆಗಳ ಕೊಂಡಾಟದ ಪಂಜೆಯವರು; ಪ್ರಾಸಭಂಜಕ, ದೇಶವಿದೇಶ ಕಾವ್ಯಮಾರ್ಗ ಮಹಾರಥಿಕ, ಸಂಶೋಧಕ ಮನೋರಾಜಕ ಪೈಯವರು; ಕನ್ನಡದ ಶಬ್ದಭಂಡಾರಿ, ಹಳೆಗನ್ನಡ ಕಾವ್ಯಾರಣ್ಯ ಕೇಸರಿ, ಪ್ರೌಢ ವಿದ್ಯಾರ್ಥಿ ಮನೋಹಾರಿ ಮುಳಿಯರವರು...." ಹೀಗೆಂದು ದಕ್ಷಿಣ ಕನ್ನಡದ ಇನ್ನೊಬ್ಬ ಹಿರಿಯ ಸಾಹಿತಿ ಸೇಡಿಯಾಪು ಕೃಷ್ಣಭಟ್ಟರು ವರ್ಣಿಸಿದ್ದಾರೆ. ಇದು ಹರಿದು ಹಂಚಾಗಿದ್ದ ಕನ್ನಡನಾಡು ಒಂದೇ ಬಾವುಟದ ಅಡಿಯಲ್ಲಿ ಒಂದುಗೂಡುವುದಕ್ಕಿಂತ ಹಿಂದಿನ ಮಾತು. ಈಗ ಘಟ್ಟಗಳನ್ನು, ನದಿಗಳನ್ನೂ ದಾಟಿ ನಾಡು ಬೆಳೆದಿದೆ. ಸೇಡಿಯಾಪು ಬಣ್ಣಿಸಿದ ಆ 'ಮೂವರು' ದಕ್ಷಿಣ ಕನ್ನಡಕ್ಕೆ ಮಾತ್ರವಲ್ಲ, ಅಖಿಲ ಕರ್ನಾಟಕದ ಗುರುಜನರಲ್ಲಿ ಸಹ ಪಾಂಕ್ತಿಕರೂ ಸಾಮಾನ್ಯರೂ ಆಗಿದ್ದಾರೆ. ಮೂವರಲ್ಲಿ ಮೊದಲಿಗರಾದ ಪಂಜೆ ಮಂಗೇಶರಾಯರು ತಮ್ಮ 'ಕಿರುಗತೆ-ಕಿರುಗವನಗಳು' ಮೂಲಕ ಹೊಸಸಾಹಿತ್ಯದ ಹರಿಕಾರರಲ್ಲಿ ಒಬ್ಬರೆಂದು ಚಿರಸ್ಮರಣೀಯರು. ಉತ್ತಮ ಸಾಹಿತ್ಯ ರಸಿಕರೆಂದೂ, ಉದಾರ ಹೃದಯದ ಸಾಹಿತ್ಯ ಪೋಷಕರೆಂದೂ, ಆದರ್ಶ ಅಧ್ಯಾಪಕರೆಂದೂ, ಶಿಶುಸಾಹಿತ್ಯದ ಅದ್ವಿತೀಯ ಸೃಷ್ಟಿಕರ್ತ-ಪುರಸ್ಕರ್ತರೆಂದೂ ಪ್ರಸಿದ್ಧರು. ಸೌಜನ್ಯ-ಸೌಹಾರ್ದಗಳ ಮೂರ್ತಿಮತ್ ರೂಪವಾಗಿ ಮೆರೆದ ಪಂಜೆಯವರು ಮರೆಯಾಗಿ ನಾಲ್ಕು ದಶಕಗಳೇ ಸಂದು ಹೋದುವು. ಅವರು ಜನಿಸಿ, ಒಂದು ಶತಕದ ಮೇಲೆ ಮತ್ತೊಂದು ದಶಕವೂ ಸರಿದು ಹೋಯಿತು.

**ಪಂಜೆಯವರ ಚೇತನ**

ರಾಮಪ್ಪಯ್ಯ ಮತ್ತು ಶಾಂತಾದುರ್ಗಾ ಅಥವಾ ಸೀತಮ್ಮ ಎಂಬ ಸಾರಸ್ವತ ದಂಪತಿಗಳ ದ್ವಿತೀಯ ಪುತ್ರನಾಗಿ ಮಂಗೇಶರಾಯರು 1874ನೆಯ ಫೆಬ್ರವರಿ 22ರಂದು ಬಂಟವಾಳದಲ್ಲಿ ಜನಿಸಿದರು. ಅವರ ಪೂರ್ವಿಕರು ಮೂಲತಃ ಪುತ್ತೂರಿಗೆ ಸಮೀಪದ 'ಪಂಜ'ದವರಾಗಿದ್ದು ಅನಂತರ ಬಂಟವಾಳದಲ್ಲಿ ನೆಲೆನಿಂತರು. ಆದರೂ ಆ ಮನೆತನಕ್ಕೆ 'ಪಂಜೆ' ಎಂಬ ಊರ ಹೆಸರು ಅಂಟಿಕೊಂಡಿತು. ತಾಯಿ ತಂದೆಗಳ ಧಾರ್ಮಿಕ ಸುಸಂಸ್ಕೃತ ಎಳೆಯ ಮಂಗೇಶನ ಬಾಳನ್ನು ತಿದ್ದಿರೂಪಿಸಿದುವು. ಜತೆಯಲ್ಲಿ ನೇತ್ರಾವತೀ ತೀರದ ಬಂಟವಾಳದ ನಿಸರ್ಗಶ್ರೀಯೂ ಬಾಲಕನ ಹೃದಯದ ಮೇಲೆ ತನ್ನ ಹಸುರಿನ ಅಚ್ಚನ್ನು ಒತ್ತಿತು; ಸೋದರನೊಂದಿಗೂ, ಓರಗೆಯವರೊಂದಿಗೂ ಆಟ ಆಡುತ್ತಾ, ಪಾಠ ಓದುತ್ತಾ ಮಂಗೇಶ ಬೆಳೆದ ; ಜತೆಗಾರರಲ್ಲಿ ಕಾಣದ ಬುದ್ಧಿ ಕುಶಲತೆ, ವಿನೋದಪರತೆ, ಕಾವ್ಯರಸಿಕತೆ ಮಂಗೇಶನಲ್ಲಿ ಇದ್ದುವಲ್ಲದೆ ಅವನೊಂದಿಗೆ ಅವೂ ಬೆಳೆಯುತ್ತಲೇ ಹೋದುವು. ಹುಡುಗನಾದರೂ ತನ್ನ ಮನೆಯ ದುಸ್ಥಿತಿಯನ್ನು ಮಂಗೇಶ ಚೆನ್ನಾಗಿ ಅರಿತಿದ್ದ. ಕಾಯಕಷ್ಟ-ಕಷ್ಟ ಸಹಿಷ್ಣುತೆಗಳನ್ನೂ, ಸ್ವಾವಲಂಬನ ಬುದ್ಧಿಯನ್ನೂ ಮೈಗೂಡಿಸಿಕೊಂಡಿದ್ದ. ಬಾಲ್ಯಕಾಲದ ಸ್ವ-ಶಿಕ್ಷಣದಿಂದಾಗಿಯೇ, ಮುಂದೆ ಒಂದೊಂದಾಗಿ ಬಂದು ಮುತ್ತಿದ ಕಷ್ಟಗಳ ಕಾರ್ಮೋಡಗಳಲ್ಲೂ ನೆಮ್ಮದಿಯ ಬೆಳ್ಳಿಗೆರೆಯನ್ನು ಕಾಣುವ ಸಹನೆ, ದೃಢತೆಗಳು ಮಂಗೇಶರಾಯರದಾಯಿತು.

ಬಂಡವಾಳದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ, ಜಾಣ ವಿದ್ಯಾರ್ಥಿಯೆಂದು ಹೆಸರಾದ ಮಂಗೇಶ ಹೈಸ್ಕೂಲು ವಿದ್ಯಾಭ್ಯಾಸಕ್ಕಾಗಿ ಮಂಗಳೂರನ್ನು ಸೇರಿದ. 1890ರಲ್ಲಿ, ಎಂದರೆ - ಪಂಜೆಯವರಿಗೆ ಹದಿನಾರು ವರ್ಷ ನಡೆಯುತ್ತಾದ್ದಾಗ ಅವರ ತಂದೆ ನಿಧನರಾದರು. ಉಸಿರು ಅಡಗುವ ಮೊದಲು ತಂದೆ ಮಗನನ್ನು ಬಳಿಗೆ ಕರೆದು, "ಕುಡಿಯಬೇಡ, ನೀತಿಯನ್ನು ಬಿಡಬೇಡ. ನಿನ್ನ ತಂಗಿ, ತಮ್ಮಂದಿರನ್ನು ತೊರೆಯಬೇಡ" ಎಂದು ಉಪದೇಶಿಸಿದರಂತೆ. ತಂದೆಯ ಅಂತ್ಯಕಾಲದ ಈ ಉಪದೇಶವನ್ನು ಪಂಜೆಯವರು ಬದುಕಿನ ಉದ್ದಕ್ಕೂ ಬಿಡದೆ ಪಾಲಿಸಿದರು.

ಮಂಗಳೂರಿನ ಸರಕಾರೀ ಕಾಲೇಜಿನಲ್ಲಿ ಎಫ್.ಎ. ಓದುತ್ತಿದ್ದಾಗಲೇ, 1894ರಲ್ಲಿ ಪಂಜೆಯವರಿಗೆ ವಿವಾಹವಾಯಿತು. ಆಗ ಅವರಿಗೆ ಇಪ್ಪತ್ತು ವರ್ಷ. ಅವರ ಕೈಹಿಡಿದು ಮನೆಬೆಳಗಿದ ಸಾಧ್ವಿ 'ಬೆನಗಲ್' ಕುಟುಂಬದ ಗಿರಿಜಾಬಾಯಿಗೆ ಹನ್ನೊಂದು ವರ್ಷ! ಕಾಲ ಕ್ರಮೇಣ ಈ ದಂಪತಿಗಳಿಗೆ ಮೂರು ಗಂಡು, ಎರಡು ಹೆಣ್ಣು ಮಕ್ಕಳಾದರು. ಗಣಿತದಲ್ಲಿ ವಿಶೇಷವಾಗಿ ಆಸಕ್ತರೂ, ಶಕ್ತರೂ ಆಗಿದ್ದ ಪಂಜೆಯವರಿಗೆ ಅದನ್ನೇ ಐಚ್ಛಿಕ ವಿಷಯವನ್ನಾಗಿ ಆರಿಸಿ ಬಿ.ಎ. ಓದ ಬೇಕೆಂದಿತ್ತು. ಅದಕ್ಕಾಗಿ ಮದರಾಸಿಗೆ ಹೋಗಬೇಕಿತ್ತು. ಆದರೆ ಆಗಿನ ಪರಿಸ್ಥಿತಿಯಲ್ಲಿ ಅದು ಅಸಾಧ್ಯವಾಗಿದ್ದುದರಿಂದ ಅವರು ಇತಿಹಾಸ, ಅರ್ಥಶಾಸ್ತ್ರಗಳನ್ನು ಆರಿಸಿಕೊಂಡು ಮಂಗಳೂರಿನ ಎಲೋಸಿಯಸ್ ಕಾಲೇಜಿನಲ್ಲಿ ವ್ಯಾಸಂಗವನ್ನು ಮುಂದುವರಿಸಿದರು. 1895ರಲ್ಲಿ ಇಂಗ್ಲಿಷ್, ಕನ್ನಡ ಪರೀಕ್ಷೆಗಳಲ್ಲೂ 1900ರಲ್ಲಿ ಐಚ್ಛಿಕ ವಿಷಯಗಳಲ್ಲೂ ಅವರು ಉತ್ತೀರ್ಣರಾದರು.

ಪಂಜೆಯವರ ಬಿ.ಎ. ಅಧ್ಯಯನ ಪೂರ್ಣವಾಗುವ ಮೊದಲೇ ಅವರಿಗೊಂದು ಅಧ್ಯಾಪಕ ವೃತ್ತಿ ಲಭಿಸಿತು. ಮಂಗಳೂರಿನ ಸರಕಾರೀ ಕಾಲೇಜಿನಲ್ಲಿ ಇಪ್ಪತ್ತು ರೂಪಾಯಿ ಸಂಬಳದ ಜೂನಿಯರ್ ಕನ್ನಡ ಪಂಡಿತರಾಗಿ ಅವರ ನೇಮಕವಾಯಿತು. ಅದೇ ಹುದ್ದೆಗೆ ನಂದಳಿಕೆ ಲಕ್ಷ್ಮೀನಾರಾಯಣಪ್ಪ ಅಥವಾ ಮುದ್ದಣ್ಣ ಕವಿಯೂ ಒಬ್ಬ ಅಭ್ಯರ್ಥಿಯಾಗಿದ್ದನಂತೆ. ಆದರೆ ಇಂಗ್ಲಿಷ್ ಬಲ್ಲವರೆಂಬ ಕಾರಣದಿಂದ ಆ ಹುದ್ದೆಗೆ ಪಂಜೆಯವರನ್ನೇ ಆರಿಸಲಾಯಿತಂತೆ! ಈ ವಿಷಯವನ್ನು ತಿಳಿದ ಪಂಜೆಯವರು, "ಬತ್ತದ ಸಿಪ್ಪೆಯನ್ನು ಕುಟ್ಟತಕ್ಕ ಒನಕೆಯನ್ನು ಕನ್ನಡದ ಬರಹ ಬರೆಯುವುದಕ್ಕೆ ತಂದರು ; ಚಿತ್ರವನ್ನು ಬಿಡಿಸುವ ಬಣ್ಣದ ಗರಿಯನ್ನು ಕವಿಯ ತುರಿಕೆಗೆ ಗುಗ್ಗೆ ಕಡ್ಡಿಯನ್ನಾಗಿ ಮಾಡಿದರು" ಎಂದು ನೊಂದುಕೊಂಡು ನಂದಳಿಕೆಯವರಿಗೆ ಬರೆದರಂತೆ! ಈ ಪ್ರಸಂಗ ಪಂಜೆಯವರ ವಿದ್ವತ್ ಪಕ್ಷಪಾತ, ಗುಣಗ್ರಾಹಿತ್ವ, ನಿರಹಂಕೃತಿಗಳಿಗೊಂದು ಹೃದಯಸ್ಪರ್ಶಿ ನಿದರ್ಶನ.

ಅಧ್ಯಾಪಕ ಪಂಜೆಯವರು ಕ್ಷಿಪ್ರದಲ್ಲೇ ಪ್ರಸಿದ್ಧರಾದರು, ಜನಾದರಣೀಯರಾದರು. ಅವರ ಪಾಠಪ್ರವಚನವೆಂದರೆ ವಿದ್ಯಾರ್ಥಿಗಳಿಗೊಂದು 'ಸಮಾರಾಧನ'ವೇ ಆಗಿತ್ತೆಂದೂ ಅನುಭವಿಸಿ, ಅಭಿನಯಿಸಿ ಪಾಠ ಹೇಳುವ ಅವರ ರೀತಿಯಿಂದಾಗಿ 'ತಾವು' ಕಂಡದ್ದು, ಕೇಳಿದ್ದು ಎಲ್ಲವೂ ಮನಸ್ಸಿನಲ್ಲಿ ನೆಟ್ಟುಬಿಡುತ್ತಿದ್ದುವೆಂದೂ ಪಂಜೆಯವರ ಶಿಷ್ಯರೂ, ಮಿತ್ರರೂ ಮುಕ್ತಕಂಠದಿಂದ ವರ್ಣಿಸಿದ್ದಾರೆ.

ಬಿ.ಎ. ಪದವೀಧರರಾದ ಅನಂತರ ಪಂಜೆಯವರು ಮದರಾಸಿನಲ್ಲಿ ಎಲ್.ಟಿ. ತರಬೇತಿ ಪಡೆದರು. ಆಮೇಲೆ ಮಂಗಳೂರು ಸರಕಾರಿ

ಕಾಲೇಜಿನಲ್ಲೇ ಕನ್ನಡ ಪಂಡಿತರಾಗಿ ಪುನಃ ನಿಯುಕ್ತರಾದರೂ ಹೊಸದಾಗಿ ಆರಂಭವಾದ ಮಂಗಳೂರು ಶಾಲಾ ರೇಂಜಿನ ಸಬ್-ಅಸಿಸ್ಟೆಂಟ್ ಇನ್ಸ್‌ಪೆಕ್ಟರ್ ಸ್ಥಾನವನ್ನು ಸ್ವೀಕರಿಸಿದರು. ಮಂಗಳೂರಿನಲ್ಲಿ ಸುಮಾರು ಒಂದು ವರ್ಷವನ್ನು ಕಳೆದ ಬಳಿಕ 1907ರಲ್ಲಿ ಕಾಸರಗೋಡಿಗೆ ವರ್ಗಾವಣೆ ಹೊಂದಿದರು. ಅಲ್ಲಿ ಅವರು ಕಳೆದ ಎಂಟು ವರ್ಷ ಅವರ ವೈಯಕ್ತಿಕ ಜೀವನದಲ್ಲಿ, ಅಧಿಕಾರ ರಂಗದಲ್ಲಿ, ಸಾಹಿತ್ಯ ಕ್ಷೇತ್ರದಲ್ಲಿ ಹೀಗೆ ಎಲ್ಲ ದೃಷ್ಟಿಗಳಿಂದಲೂ ಸುಖ-ಸಂತೋಷಪ್ರದವಾಗಿತ್ತು. ಆಗಿನ ನೂರು ರೂಪಾಯಿ ಸಂಬಳದಿಂದ ಗೃಹಕೃತ್ಯಗಳು ಸುಗಮವಾದವು. ಇಂಗಿತವನ್ನು ಅರಿತು ನಡೆಯುವ ನಂಬುಗೆಯ ಇಬ್ಬರು ಆಳುಗಳು ಅವರಿಗೆ ದೊರೆತರು. ಶಾಲಾ ಪರೀಕ್ಷಕನಾಗಿ ಊರಿಂದೂರಿಗೆ ಸುತ್ತುವಾಗ ದೇಹಕ್ಕಾಗುವ ದಣಿವು ಮನಸ್ಸಿಗಾಗುವ ತಣಿವಿನಿಂದ ಮರೆಯಾಗುತ್ತಿತ್ತು. ಶಾಲೆಗಳ, ಮುಖ್ಯವಾಗಿ ಹಳ್ಳಿಶಾಲೆಗಳ ಸ್ಥಿತಿಗತಿಗಳನ್ನು ತಿಳಿದು ಅವುಗಳ ಸುಧಾರಣೆಗೆ ಪ್ರಯತ್ನಿಸಿದರು; ಅಧ್ಯಾಪಕರ ಕಷ್ಟ-ಸುಖಗಳಲ್ಲಿ ಸಹಭಾಗಿಯಾದರು; ಬಡ ಅಧ್ಯಾಪಕರಿಗೆ ಪ್ರೀತಿ ವಿಶ್ವಾಸಗಳನ್ನು ಕೊಟ್ಟು ಅವರ ಪ್ರೀತಿ ವಿಶ್ವಾಸಗಳನ್ನು ಕೊಂಡರು; ಶಿಕ್ಷಣ ಕ್ರಮದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಿ ಎಳೆಯ ಮಕ್ಕಳಿಗೆ ಪಾಠಪ್ರವಚನಗಳಲ್ಲಿ ರುಚಿಯನ್ನು ಕುದುರಿಸಿದರು. ಒಟ್ಟಿನಲ್ಲಿ, ಶಾಲಾ ಇನ್ಸ್‌ಪೆಕ್ಟರರ ಮಿತವಾದ ಕ್ಷೇತ್ರದಲ್ಲಿ ಅಷ್ಟೇ ಅಲ್ಲ, ಅದರ ಹೊರಗಿನ ಜನಜೀವನದಲ್ಲೂ ಪಂಜೆಯವರು ಪ್ರವೇಶಿಸಿ, ಸಾಮಾಜಿಕ ಕಾರ್ಯಗಳಲ್ಲೂ ಪ್ರವೃತ್ತರಾಗಿ ಜನರ ಸ್ನೇಹವನ್ನು ಸಂಪಾದಿಸಿದರು. ಅವರ ಸಾಹಿತ್ಯಾಸಕ್ತಿ ರಚನೆಗಳೂ ಈ ಅವಧಿಯಲ್ಲಿ ಹೆಚ್ಚುದುವು. ಇನ್ಸ್‌ಪೆಕ್ಷನ್ ಕಾಲದ ಪ್ರವಾಸಾನುಭವಗಳಿಂದ ಪ್ರೇರಿತರಾಗಿ ತಿರುಳು ಹುರುಳುಗಳಿರುವ ಸಾಹಿತ್ಯ ಸೃಷ್ಟಿ ಮಾಡಿದರು. ಹರಟೆ, ಹಾಡು ಕಿರುಗಥೆ ಹೀಗೆ ನಾನಾಮುಖವಾದದ್ದು ಆ ಸಾಹಿತ್ಯ ಸೃಷ್ಟಿ. ಅದರಲ್ಲಿ ಕೆಲವು ಎಳೆಯರಿಗಾದರೆ ಇನ್ನೂ ಕೆಲವು ಬೆಳೆದವರಿಗೆ. ಮಕ್ಕಳಿಗಾಗಿ ಬರೆದದ್ದು ಅವರಿಗೆ ಮಾತ್ರವಲ್ಲ, ಹೆತ್ತವರೂ ಹಿರಿಯರೂ ಓದಿ ಮೆಚ್ಚಿ ಬಾಯಿ ಚಪ್ಪರಿಸುವಂತೆ ಇರುವುದು ಪಂಜೆಯವರ ಲೇಖನ ವೈಶಿಷ್ಟ್ಯ.

ಕಾಸರಗೋಡಿನಲ್ಲಿ ಎಂಟು ವರ್ಷಗಳನ್ನು ಕಳೆದ ಬಳಿಕ 1915ರಲ್ಲಿ ಪಂಜೆಯವರಿಗೆ ಮತ್ತೆ ಮಂಗಳೂರಿಗೆ ವರ್ಗವಾಯಿತು. ಹೊಟ್ಟೆಯ ಕಿಚ್ಚಿಗೆ ಅನ್ನಾಹಾರವುಂಟು: ಆದರೆ ಹೊಟ್ಟೆಕಿಚ್ಚಿಗೆ ಮದ್ದಿಲ್ಲ. ಹೊಟ್ಟೆ ಕಿಚ್ಚಿನ ಕೆಲವರು ಪಂಜೆಯವರ ಮೇಲೆ ಕಿರುಕುಳದ ಕಿಡಿಗಳನ್ನು ಕಾರಿದರು; ಇಲ್ಲಸಲ್ಲದ ಆರೋಪಗಳನ್ನು ಅವರ ಮೇಲೆ ತೂರಿದರು. ವಿದ್ಯಾಖಾತೆಯ ಮೇಲಿನವರೆಗೂ ದೂರುಗಳು ಹೋದುವು. ವಿಚಾರಾಂತ್ಯದಲ್ಲಿ ಅವುಗಳಲ್ಲಿ ಹುರುಳಿಲ್ಲವೆಂಬುದೂ ಸ್ಥಾಪಿತವಾಯಿತು. ಮಿಥ್ಯಾರೋಪಗ್ರಹಣದಿಂದ ಮುಕ್ತರಾದ ಪಂಜೆಯವರ ಕೀರ್ತಿಚಂದ್ರಿಕೆ ಇನ್ನಷ್ಟು ಶುಭ್ರವಾಗಿ, ಮತ್ತಷ್ಟು ವಿಸ್ತಾರವಾಗಿ ಹರಡಿತು. ಪರೀಕ್ಷಕ ವೃತ್ತಿಯಿಂದ ಟ್ರೈನಿಂಗ್ ಶಾಲೆಯ ಮುಖ್ಯಸ್ಥರಾಗಿ ಸ್ಥಾನಪಲ್ಲಟ ಹೊಂದಿದರೂ ಪಂಜೆಯವರ ಮಾನಕ್ಕಾಗಲೀ ಇತರ ಸೌಲಭ್ಯಗಳಿಗಾಗಲೀ ಏನೂ ಚ್ಯುತಿ ಬರಲಿಲ್ಲ. ಹೊಸ ಕ್ಷೇತ್ರದಲ್ಲಿ ಉಳ್ಳಾಲ ಮಂಗೇಶರಾಯರಂತಹ ಸಹೃದಯ ಸಾಹಿತ್ಯಜ್ಞರ ಸ್ನೇಹ ಸಹಕಾರಗಳು ದೊರೆಯುವಂತಾಯಿತು. ಹಿಡಿದ ದಾರಿ, ಕಣ್ಣ ಮುಂದಿನ ಗುರಿಗಳನ್ನು ಒಂದಿಷ್ಟೂ ಬಿಡದೆ ಪಂಜೆಯವರು ನಡೆದರು. 1918 ರಿಂದ 21ರವರೆಗಿನ ಅವಧಿಯಲ್ಲಿ ಶಿಕ್ಷಣ ರಂಗದಲ್ಲಿ ಅವರು ಫಲಕಾರಿಯಾದ ಅನೇಕ ನೂತನ ಪ್ರಯೋಗಗಳನ್ನು ಮಾಡಿದರು. ಅವುಗಳಲ್ಲಿ ಒಂದೆರಡೆಂದರೆ ಹರಿಜನ ಬಾಲಕರಿಗೂ ಶಾಲಾ ಪ್ರವೇಶವನ್ನು ದೊರಕಿಸಿದ್ದು; ಅವರೊಂದಿಗೆ ಸಹಪಂಕ್ತಿ ಭೋಜನ ಮಾಡಿದ್ದು. ಜೆ.ಎ. ವಿಟ್ಸ್‌ರಂತಹ ಆಂಗ್ಲ ವಿದ್ಯಾಧಿಕಾರಿಗಳು ಸಹ ಪಂಜೆಯವರ ನೂತನ ಮಾರ್ಗಾನುಸರಣವನ್ನು ಮೆಚ್ಚಿ ಕೊಂಡಾಡಿದರು.

ಅಸಿಸ್ಟೆಂಟ್ ಸ್ಕೂಲ್ ಇನ್ಸ್‌ಪೆಕ್ಟರ್ ಸ್ಥಾನಕ್ಕೆ ಪದೋನ್ನತಿಗೊಳಿಸಿ 1921ರಲ್ಲಿ ಪಂಜೆಯವರನ್ನು ಮಡಿಕೇರಿಗೆ ವರ್ಗಾಯಿಸಲಾಯಿತು. ಅವರ 1928ರವರೆಗೆ ತಂಪು ಹವೆಯ ಆ ಬೆಟ್ಟದೂರದಲ್ಲಿದ್ದರು. ಆದರೆ ಅಲ್ಲಿಯ ಒಳಗಿನ-ಹೊರಗಿನ ಎರಡೂ 'ಹವೆ'ಗಳೂ ಪಂಜೆಯವರಿಗೆ ಹಿತಕರವಾಗಲಿಲ್ಲ. ಕೊಡವನಲ್ಲದ ಪಂಜೆಯವರನ್ನು ಅಲ್ಲಿಯ ಆ ಕಾಲದ ಜನ ಅಷ್ಟೊಂದು ವಿಶ್ವಾಸದಿಂದ ಕಾಣಲಿಲ್ಲ. ಎರಡು ವರ್ಷ ಅಸಿಸ್ಟೆಂಟ್ ಇನ್ಸ್‌ಪೆಕ್ಟರ್ ಆಗಿದ್ದು ಅನಂತರ ಅಲ್ಲಿಯ ಸೆಂಟ್ರಲ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾಗಿ ದುಡಿದು, 1928ರಲ್ಲಿ ಅವಧಿಪೂರ್ವದಲ್ಲೇ ನಿವೃತ್ತಿ ಮಾಡಿಸಿಕೊಂಡು ಮಂಗಳೂರಿಗೆ ಹಿಂದಿರುಗಿದರು. ಮಡಿಕೇರಿಯಲ್ಲಿದ್ದ ಕಾಲದಲ್ಲೇ ಪಂಜೆಯವರು ತಮ್ಮ ಅತ್ಯುತ್ಕೃಷ್ಟ ರಚನೆಗಳಲ್ಲಿ ಒಂದೆನಿಸಿರುವ, ಕೊಡಗಿನ ದೇಶಗೀತವೆಂದೇ ಹೇಳಬಹುದಾದ 'ಹುತ್ತರಿ ಹಾಡ'ನ್ನು ಬರೆದದ್ದು. ಕೊಡವರಿಂದ ತಮಗೆ ಅಷ್ಟಾಗಿ ಪ್ರೀತಿ ಸಿಗದಿದ್ದರೂ, ಆ ಹಾಡಿನ ಮೂಲಕ ಪಂಜೆಯವರು ಕೊಡಗಿಗೆ ತಮ್ಮ ಪ್ರೀತಿ-ಪ್ರಶಂಸೆ, ಕೃತಜ್ಞತೆಗಳನ್ನು ಧಾರಾಳವಾಗಿ ಸಲ್ಲಿಸಿದರು.

ಸ್ವಯಂ ನಿವೃತ್ತರಾಗಿ ಮಡಿಕೇರಿಯಿಂದ ಹಿಂದಿರುಗಿದ ಪಂಜೆಯವರು 1934ರವರೆಗೆ ಹೆಚ್ಚೇನೂ ಸುತ್ತಾಟಗಳಿಲ್ಲದೆ ಮಂಗಳೂರಿನಲ್ಲೇ ಇದ್ದರು. ಆದರೆ ಈಗಾಗಲೇ ತಮ್ಮ ವಿಶಿಷ್ಟ ಸಾಹಿತ್ಯ ಸೃಷ್ಟಿ, ರಸಿಕತೆಗಳಿಂದಲೂ, ಸಂಘಟನಾ ಕುಶಲತೆಯಿಂದಲೂ ಪಂಜೆಯವರು ನಾಡಿನ ಅನೇಕ ವಿದ್ವಜ್ಜನರ, ಸಾಹಿತ್ಯ ಸಹೃದಯರ ಪ್ರೀತ್ಯಾದರಗಳಿಗೆ ಪಾತ್ರವಾಗಿದ್ದರು. ತತ್ಫಲವಾಗಿ 1934ರಲ್ಲಿ ರಾಯಚೂರಿನಲ್ಲಿ ಸಮಾವೇಶಗೊಂಡ ಇಪ್ಪತ್ತನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ ಕನ್ನಡ ಸಾಹಿತಿಯೊಬ್ಬನಿಗೆ ದೊರೆಯ ಬಹುದಾದ ಅತ್ಯುಚ್ಚ ಗೌರವ ಪಂಜೆಯವರಿಗೆ ಲಭಿಸಿತು. ಆ ನಿಮಿತ್ತವಾಗಿ ಅವರು ಮಂಗಳೂರು ಬಿಟ್ಟು ನಾಡು ಸುತ್ತುವಂತಾಯಿತು. ಸೋದರ ಕನ್ನಡಿಗರ ಹೃನ್ಮನಗಳಲ್ಲಿ ಪಂಜೆಯವರ ಸ್ಥಾನ ಎಷ್ಟೊಂದು ಉನ್ನತ ಎಂಬುದೂ ಆ ಕಾಲದಲ್ಲಿ ಸ್ಪಷ್ಟವಾಯಿತು. ಆದರೆ ಸಮ್ಮೇಳನ ಪೂರ್ವದಲ್ಲಿ ಮಂಗಳೂರನ್ನೂ, ಸಮ್ಮೇಳನದ ಅನಂತರ ಕರ್ನಾಟಕವನ್ನೂ ಬಿಟ್ಟ ಪಂಜೆಯವರು ಮತ್ತೆ ಕನ್ನಡದ ಮಣ್ಣಿಗೆ ಕಾಲಿಡಲಾರದೇ ಹೋದರು! ವಿವಿಧ ವೃತ್ತಿಗಳಲ್ಲಿ, ದೇಶದ ವಿವಿಧ ಪ್ರಾಂತಗಳಲ್ಲಿ ನೆಲಸಿದ್ದ ತಮ್ಮ ಮಕ್ಕಳ ಮನೆಯಲ್ಲಿ ತಂಗುತ್ತ, 1937ರಲ್ಲಿ ಪಂಜೆಯವರು ಹೈದರಾಬಾದಿನಲ್ಲಿ ತಮ್ಮ ಮಗನ ಮನೆಯಲ್ಲಿದ್ದಾಗ ನ್ಯೂಮೋನಿಯಾ ಪೀಡಿತರಾದರು. ಅಕ್ಟೋಬರ್ 24ರಂದು ಸಮೀಪದಲ್ಲಿದ್ದ ತಮ್ಮ ಇಷ್ಟಮಿತ್ರರನ್ನು ಪ್ರೀತಿಯಿಂದ ಮಾತನಾಡಿಸಿ, ದೂರದಲ್ಲಿದ್ದವರನ್ನೆಲ್ಲ ಆರ್ದ್ರ ಹೃದಯದಿಂದ ನೆನೆನೆನೆದು, ತಮಗೆ ಅತಿಪ್ರಿಯವಾಗಿದ್ದ ಗದುಗಿನ ಭಾರತದ ಷಟ್ಪದಿಯನ್ನು ಮೆಲುಕುತ್ತಾ ಪಂಜೆಯವರು ಕಣ್ಮುಚ್ಚಿದರು. ಹಾಗೆ ಮುಚ್ಚಿದ ಕಣ್ಣು ಮತ್ತೆ ತೆರೆಯಲಿಲ್ಲ. ಆಗ ಅವರಿಗೆ ಅರವತ್ತಮೂರು ವರ್ಷ ವಯಸ್ಸು. 'ಕವಿಶಿಷ್ಯ'ನ ಶಿಷ್ಯ ಶ್ರೀ ಗೋವಿಂದಪೈಯವರು ಉದ್ಗರಿಸಿದರಂತೆ: "ತುಳುನಾಡಿನ ಕನ್ನಡ ಸಾಹಿತ್ಯದ ವಿಗಡ ದೀಪಸ್ತಂಭವಾರಿತು; ಬೆಳಕು ಬೆಳಕಿಗೆ ಸಾರಿತು."

### ಸಾಹಿತ್ಯ ಜೀವನ

ಪಂಜೆಯವರು ಹೊಸಗನ್ನಡ ಸಾಹಿತ್ಯದ ಪ್ರವರ್ತಕರಲ್ಲಿ ಪ್ರಮುಖರು.

ಶ್ರೀ ರಾಜರತ್ನಂ ಹೇಳಿದಂತೆ, "ಹತ್ತೊಂಬತ್ತನೆಯ ಶತಮಾನ ಮುಗಿಯುವುದನ್ನು ನೋಡಿ, ಇಪ್ಪತ್ತನೆಯ ಶತಮಾನ ಆರಂಭವಾಗುವುದನ್ನು ಕಂಡು ಕನ್ನಡದ ಮುಂದುವರಿಕೆಗೆ ಸೇತುವೆಗಳಾಗಿ ನಡೆದುಕೊಂಡ ಮಹಾನುಭಾವರಲ್ಲಿ ಶ್ರೀ ಪಂಜೆ ಮಂಗೇಶರಾಯರು ಗಣ್ಯರಾದರು". 'ಕವಿ ಶಿಷ್ಯ', 'ರಾ.ಮ.ಪಂ.', 'ಹರಟೆ ಮಲ್ಲ' ಮುಂತಾದ ಗುಪ್ತನಾಮಗಳಿಂದ ಪಂಜೆಯವರು ರುಚಿಯಾದ, ಶುಚಿಯಾದ ಸಾಹಿತ್ಯವನ್ನು ರಚಿಸಿದರು. ಅವರ ವಾಙ್ಮಯ ಸಂಪತ್ತನ್ನು ಮುಖ್ಯವಾಗಿ ಮೂರು ಗುಂಪುಗಳಾಗಿ ಮಾಡಬಹುದು. ೧) ಸ್ವತಂತ್ರವಾದದ್ದು, ೨) ಅನ್ಯಭಾಷಾ ಸಾಹಿತ್ಯಗಳಿಂದ ಅನುವಾದ ಅಥವಾ ರೂಪಾಂತರ, ೩) ದೇಶೀ ಜನಪದ ಸಾಹಿತ್ಯದಿಂದ ಪ್ರಚೋದಿತ. ಅನುವಾದ ರೂಪಾಂತರಗಳೇ ಇರಲಿ, ದೇಶೀ ಜನಪದ ಸಾಹಿತ್ಯ ಪ್ರೇರಿತವೇ ಆಗಿರಲಿ ಎಲ್ಲವುಗಳಿಗೂ 'ಪಂಜೆ'ತನದ ಮುದ್ರೆಯನ್ನೊತ್ತಿ ಸ್ವತಂತ್ರವೆಂದೇ ತೋರುವಷ್ಟು ಸಹಜವಾಗಿ, ಸುಂದರವಾಗಿ ಕನ್ನಡದಲ್ಲಿ ನಿರೂಪಿಸಿರುವುದು ಅವರ ಶ್ರೇಷ್ಠತೆ ಮತ್ತು ವಿಶಿಷ್ಟತೆ. ಅವರ ಮೂರು ಕವಿತೆಗಳು: 'ತೆಂಕಣ ಗಾಳಿಯಾಟ', 'ಅಣ್ಣನ ವಿಲಾಸ', 'ನಕ್ಷತ್ರ', 'ಕೋಟಿಚೆನ್ನಯ್ಯ' ಇಷ್ಟನ್ನೂ ಹೆಸರಿಸಬಹುದು. ಅವೆಲ್ಲ ರೂಪಾಂತರ-ಭಾವಾಂತರ ಅಥ'ವಾ ಭಾಷಾಂತರಗಳೆಂದು ಯಾರು ತಾನೇ ಹೇಳಬಲ್ಲರು? ಅವರು ರಚಿಸಿದ ವಿಪುಲ ಶಿಶುಸಾಹಿತ್ಯದಲ್ಲಿ ಎಷ್ಟೋ ಕತೆ-ಕವಿತೆಗಳು ಅನ್ಯ ಸಾಹಿತ್ಯದಿಂದ, ಮುಖ್ಯವಾಗಿ ಇಂಗ್ಲಿಷಿನಿಂದಲೇ ತಂದುಕೊಂಡದ್ದು. ಆದರೆ ತಾಯಿ ಅನ್ನವನ್ನು ಚೆನ್ನಾಗಿ ನುರಿಸಿ, ತುತ್ತು ತುತ್ತಾಗಿ ಮಗುವಿಗೆ ನೀಡುವಂತೆ, ಮಗು ಅದನ್ನು ನಿರಾಯಾಸವಾಗಿ ಉಂಡು, ಸಂತೋಷದಿಂದ ಬಾಯಿ ಚಪ್ಪರಿಸುವಂತೆ ಪಂಜೆಯವರು ಅಂತಹ ಸಾಹಿತ್ಯವನ್ನು ಕನ್ನಡಕ್ಕೆ 'ಪರಕಾಯ ಪ್ರವೇಶ' ಮಾಡಿಸಿದ್ದಾರೆ.

ಪಂಜೆಯವರ ಸಾಹಿತ್ಯ ಜೀವನ ಆರಂಭವಾದದ್ದು ಮಂಗಳೂರಿನ 'ಸತ್ಯ ದೀಪಿಕೆ'ಯ ಮೂಲಕ ಎಂಬುದು ಶ್ರೀ ಎಂ. ಗೋವಿಂದಪೈಯವರ ಹೇಳಿಕೆ. 'ಸತ್ಯ ದೀಪಿಕೆ' ಬಾಸೆಲ್ ಮಿಷನ್ ಸಂಸ್ಥೆಯ ಮುಖ್ಯ ಪತ್ರಿಕೆ. ಕನ್ನಡ ಗ್ರಂಥ ಮುದ್ರಣ ಹಾಗೂ ಪ್ರಕಾಶನಗಳ ಮೂಲಕ ಆ ಸಂಸ್ಥೆ ಕನ್ನಡಕ್ಕೆ ಮಾಡಿದ ಮಹೋಪಕಾರ ಚಿರಸ್ಮರಣೀಯ. ಅಂಥ ಸಂಸ್ಥೆಯೊಂದಿಗೆ ಪಂಜೆಯವರಿಗೆ ಸಂಪರ್ಕವಾದದ್ದು ಕನ್ನಡದ ಪುಣ್ಯವೆಂದೇ ಹೇಳಬೇಕು. ಆ ಸಂಪರ್ಕವು ಹಾರ್ದಿಕವಾಗಿಯೂ, ಸುದೀರ್ಘವಾಗಿಯೂ, ಸುಭದ್ರವಾಗಿಯೂ ಇತ್ತೆನ್ನುವುದು ಸಂತೋಷದ ಸಂಗತಿ. 'ಸತ್ಯ ದೀಪಿಕೆ'ಯಲ್ಲಿ 'ಅಣ್ಣನ ವಿಲಾಪ'ವೇ ಮುಂತಾದ ಕೆಲವು ಕವಿತೆಗಳೂ 'ಹರಟೆ ಮಲ್ಲ'ನೆಂಬ ಮರೆಹೆಸರಲ್ಲಿ ಅವರು ಬರೆದ ವ್ಯಂಗ್ಯ-ವಿನೋದ ಮಿಶ್ರಿತ ಲಘು ಲೇಖನಗಳೂ ಪ್ರಕಟವಾದವು. ಪಂಜೆಯವರು ರಚಿಸಿದ ಹಲವಾರು ಮಕ್ಕಳ ಪುಸ್ತಕಗಳು, ಕನ್ನಡ ವ್ಯಾಕರಣ, ಅವರು ಸಂಪಾದಿಸಿ ಪರಿಷ್ಕರಿಸಿದ 'ಶಬ್ದಮಣಿದರ್ಪಣ' ಮುಂತಾದುವು ಬಾಸೆಲ್ ಮಿಷನ್ ಪ್ರೆಸ್ಸಿನಲ್ಲೇ ಮುದ್ರಿತವೂ, ಪ್ರಕಾಶಿತವೂ ಆದುವು.

ಪಂಜೆಯವರ ಸಾಹಿತ್ಯ ಸೃಷ್ಟಿಗೆ ಆಶ್ರಯವನ್ನು ನೀಡಿದ ಇನ್ನೊಂದು ಪತ್ರಿಕೆಯೆಂದರೆ 'ಸುವಾಸಿನಿ'. 1900ರ ಸುಮಾರಿಗೆ ಶ್ರೀ ಬೋಳಾರ ವಿಠಲರಾಯರು ಆರಂಭಿಸಿದ ಆ ಪತ್ರಿಕೆಗೆ ಪಂಜೆಯವರ ಭಾವನಂಟ ಶ್ರೀ ಬೆನೆಗಲ್ ರಾಮರಾಯರೇ ಸಂಪಾದಕರು. ಮೂರು ವರ್ಷಗಳ ಕಾಲ ಪಂಜೆಯವರ ಕತೆಗಳೂ, ಕವಿತೆಗಳೂ 'ಸುವಾಸಿನಿ'ಯಲ್ಲಿ ಪ್ರಕಟವಾದುವು. ಅದರಲ್ಲಿ ಬೆಳಕು ಕಂಡ 'ನನ್ನ ಚಿಕ್ಕ ತಾಯಿ', 'ನನ್ನ ಚಿಕ್ಕ ತಂದೆ', 'ಭಾರತ ಶ್ರವಣ' ಮೊದಲಾದ ಸಣ್ಣಕಥೆಗಳಿಂದಾಗಿಯೇ ಪಂಜೆಯವರು ಕನ್ನಡದ 'ಸಣ್ಣಕಥೆಗಳ ಪಿತಾಮಹ' ಎಂಬ ಮನ್ನಣೆಯನ್ನು ಪಡೆದದ್ದು. ಒಂದು ಉಲ್ಲೇಖನೀಯ ವಿಷಯವೆಂದರೆ ಕವಿ ಮುದ್ದಣನು 'ಚಕ್ರಧಾರಿ' ಎಂಬ ಮತ್ತೊಂದು ಗುಪ್ತನಾಮದಲ್ಲಿ ಬರೆದ 'ಜೋ ಜೋ' ಎಂಬ ಪ್ರಬಂಧವನ್ನು ಪ್ರಕಟಿಸಿದ ಕೀರ್ತಿಯೂ 'ಸುವಾಸಿನಿ'ಗೆ ಸಲ್ಲುತ್ತದೆ; ಮಾತ್ರವಲ್ಲ ನಂದಳಿಕೆಯವರ ಪರವಾದ ಲೇಖನಗಳನ್ನು ಪ್ರಕಟಿಸಿ, ಅವರ ಕರ್ತೃತ್ವದ ಬಗೆಗೆ ಎದ್ದಿದ್ದ ಸಂದೇಹಗಳಿಗೆ ಸಮಾಧಾನವನ್ನು ನೀಡಿದ ಪತ್ರಿಕೆಯೂ ಅದಾಗಿದೆ. ಅಂತಹ ಲೇಖನಗಳ ಪ್ರಕಟನೆಯಲ್ಲಿ ಪಂಜೆಯವರ ಕೈವಾಡವೂ ಇತ್ತೆಂಬುದನ್ನು ಅವರೆ ಒಪ್ಪಿಕೊಂಡಿದ್ದಾರೆ.

'ಬಾಲ ಸಾಹಿತ್ಯ' ಹಾಗೂ 'ಪಂಜೆ' ಎಂಬುದು ಏಕಾರ್ಥಕವೆಂಬಂತೆ ಕನ್ನಡದಲ್ಲಿ ಪ್ರಯುಕ್ತವಾಗುತ್ತಿವೆ. ಬಾಲ ಸಾಹಿತ್ಯ ಪಂಜೆಯವರ First Love-ಪ್ರಥಮ ಪ್ರೇಮ. ಬಾಲ ಸಾಹಿತ್ಯದ ಪ್ರಕಟನೆ, ಪ್ರಚಾರಗಳಿಗಾಗಿಯೇ ಪಂಜೆಯವರು ಶ್ರೀ ಉಳ್ಳಾಲ ಮಂಗೇಶರಾಯರಂತಹ ಸುಹೃತ್ ಬಲದಿಂದ 1921ರಲ್ಲಿ, ಮಂಗಳೂರಿನ ಕೊಡಿಯಾಲ ಬೈಲಿನಲ್ಲಿ 'ಬಾಲ ಸಾಹಿತ್ಯ ಮಂಡಲ'ವನ್ನು ಸ್ಥಾಪಿಸಿದರು. ಬಾಲಸಾಹಿತ್ಯವನ್ನು ಪ್ರಕಟಿಸುವುದರೊಂದಿಗೆ ಅಂತಹ ಸಾಹಿತ್ಯ ರಚಕರಿಗೆ ಯೋಗ್ಯ ಸಂಭಾವನೆ ನೀಡಬೇಕೆಂಬುದೂ ಪಂಜೆಯವರ ಆಶಯವಾಗಿತ್ತು. ಸ್ವತಃ ಪಂಜೆಯವರ 'ಕಿರು ಮಹಾಕೃತಿ'ಗಳಲ್ಲಿ ಹಲವು ಈ ಮಂಡಲದ ಮೂಲಕವೇ ಪ್ರಕಾಶಿತವಾದುವು. ಸುಮಾರು ಮೂವತ್ತೈದು ವರ್ಷಗಳ ಕಾಲ ಸಾರ್ಥಕ ಕಾರ್ಯಗಳಿಂದ ದೃಢವಾಗಿದ್ದ ಮಂಡಲವು ಈಗ ಜೀರ್ಣವೂ, ಶೀರ್ಣವೂ ಆಗಿರುವುದು ಶೋಚನೀಯ. ಪಂಜೆ ಸ್ಮಾರಕವೋ ಎಂಬಂತಿರುವ ಆ ಕಟ್ಟಡವು ಈಗಲೂ ಕನ್ನಡ ಪ್ರೇಮಿಗಳಿಗೂ, ಕುತೂಹಲಿಗಳಿಗೂ ತನ್ನ ಗತ ವೈಭವದ ಕಥೆಯನ್ನು ಹೇಳುತ್ತಿದೆ!

ಬಾಲ ಸಾಹಿತ್ಯದಲ್ಲಿ ಯಾರೂ ಕೈಯಾಡಿಸಬಹುದು. ಆದರೆ ಎಲ್ಲರ ಕೈಗೂ ಹೊನ್ನಿನ ಬೆಳೆಯೇ ಬರುತ್ತದೆ ಎಂದು ಹೇಳಲಾಗದು. ಅದಕ್ಕೆ ಮುಖ್ಯ ಕಾರಣ ಇದು: ಮಕ್ಕಳಿಗಾಗಿ ಬರೆದದ್ದೆಲ್ಲವೂ ಅವರ ಮನಸ್ಸಿಗೆ ಒಗ್ಗುವಂತೆ, ಅವರ ಶಕ್ತಿಗೆ ಸಗ್ಗುವಂತೆ ಇರುವುದಿಲ್ಲ. ಮಕ್ಕಳ ಮನೋಧರ್ಮ, ಅವರ ಶಬ್ದ ಸಂಗ್ರಹಗಳನ್ನು ಚೆನ್ನಾಗಿ ತಿಳಿದವರು ಮಾತ್ರ ಸ್ವಾದಿಷ್ಟ ಬಾಲ ಸಾಹಿತ್ಯವನ್ನು ರಚಿಸಬಲ್ಲರು. ಪಂಜೆಯವರು ಅಂತಹವರಲ್ಲಿ ಅಗ್ರಗಣ್ಯರು. ಅವರು ಅಧ್ಯಾಪಕರಾಗಿ, ಶಾಲಾ ಪರೀಕ್ಷಕರಾಗಿ, ಸಾವಿರಾರು ಮಕ್ಕಳ ನಡುವೆ ಓಡಾಡಿದವರು; ಅವರೊಂದಿಗೆ ಬೆರೆತು, ನಡೆ-ನುಡಿಗಳನ್ನು ಚೆನ್ನಾಗಿ ಅರಿತುಕೊಂಡವರು. ಮಕ್ಕಳ ಶಬ್ದ ಸಂಗ್ರಹ ಸಣ್ಣದು, ಕಲ್ಪನಾಶಕ್ತಿ ದೊಡ್ಡದು ಎಂಬುದನ್ನು ಬಲ್ಲವರಾಗಿದ್ದ ಪಂಜೆಯವರು ಅದಕ್ಕೆ ತಕ್ಕಂತೆ ಅಡುಗೆ ಮಾಡಿದರು, ಬಡಿಸಿದರು. ಮಕ್ಕಳು ನಾ ಮುಂದು, ತಾ ಮುಂದು ಎಂದು ತಿಂದರು, ತೇಗಿದರು, ಕುಣಿದು ಕುಪ್ಪಳಿಸಿದರು. ಆ ಅಡುಗೆಯ ಕಂಪು, ಆ ತೇಗಿದ ದನಿ ಈಗಲೂ ಕನ್ನಡದ ಉದ್ದಗಲದಲ್ಲಿ ಮೂಗಿಗೆ ಬಡಿಯುತ್ತಿದೆ, ಕಿವಿಗೆ ಕೇಳುತ್ತಿದೆ!

ಪಂಜೆಯವರು ರಚಿಸಿದ ಬಾಲಸಾಹಿತ್ಯದಲ್ಲಿ ಕಥೆಗಳದು ಒಂದು ಗುಂಪಾದರೆ ಗೀತಗಳದು ಇನ್ನೊಂದು; ಕಥನಕವನಗಳದು ಮತ್ತೊಂದು. 'ಗುಡುಗುಡು ಗುಮ್ಮಟದೇವರು', 'ಹೇನು ಸತ್ತು ಕಾಗೆ ಬಡವಾಯಿತು', 'ಅಗಣೆ ಮುದ್ದೆ', 'ಸಿಗಡೆ ಯಾಕೆ ಒಣಗಲಿಲ್ಲ', 'ಮೆಣಸಿನ ಕಾಳಪ್ಪ', 'ಮೂರು ಕರಡಿಗಳು', 'ಇಲಿಗಳ ಥಕ ಥೈ' - ಇವು ಕೆಲವು ಕಥೆಗಳು. ಇವುಗಳಲ್ಲದೆ 'ಪ್ರಥುವಾ ಶೈಲಿನಿ', 'ದುರ್ಗಾವತಿ'ಯೇ ಮುಂತಾದ ಪ್ರೌಢ ನೀಳ್ಗತೆಗಳೂ,

ಕಿರುಕಾದಂಬರಿಯೆನ್ನಬಹುದಾದ 'ಕೋಟಿ ಚೆನ್ನಯ'ವೂ ಇದೆ. 'ಕೋಟಿ-ಚೆನ್ನಯ'ದ ಚೆಲುವೇ ಬೇರೆ ಬಗೆಯದು. 'ತುಳು ಪಾಡ್ದೊನೆ'ಯ ಗನಿಯಿಂದ ಅದನ್ನು ಎತ್ತಿ ಹಿಡಿದಿದ್ದ ಮಣ್ಣನ್ನು ಒರಸಿ, ಕಡೆದು, ಥಳಥಳಿಸುವಂತೆ ಮಾಡಿ, ಎಜ್ಜವಿಟ್ಟು ಕಥಾರತ್ನಮಾಲಿಕೆಯಲ್ಲಿ ಪೋಣಿಸಿ, ಕನ್ನಡ ತಾಯಿಗೆ ತೊಡಿಸಿ ಧನ್ಯರಾಗಿದ್ದಾರೆ-ಪಂಜೆ. ಮಕ್ಕಳ ಕಿರುಗಥೆಗಳಲ್ಲಿ ಅವುಗಳ ತಲೆಬರಹಗಳೇ ಸಾಕು ಎಳೆಯರನ್ನು ಮರುಳುಗೊಳಿಸುವುದಕ್ಕೆ. ಅವುಗಳ ಹೂರಣವಾದರೂ ಅಷ್ಟೆ! ವಸ್ತುಗಳೆಲ್ಲ ಮಕ್ಕಳ ಕಲ್ಪನಾಪ್ರಪಂಚಕ್ಕೆ ಸೇರಿ, ಅದ್ಭುತರಸ 'ಪೂರ್ಣವಾಗಿದ್ದು, ಸರಳ-ಸುಲಭ ಭಾಷೆಯಲ್ಲಿ ನಿರೂಪಿತವಾಗಿವೆ; ಅವರ ಮನಸ್ಸನ್ನು ಹೊಕ್ಕು ಆವರಿಸಿ ನಿಲ್ಲುತ್ತವೆ. ಒಂದೆರಡು ಉದಾಹರಣೆಗಳನ್ನು ನೋಡಿ:

> *"ಹೇನಿನ ಮನೆಯಲ್ಲಿ ಹಬ್ಬ ಬಂತು. ಹೇನು ಕಾಗೆಯನ್ನು ಊಟಕ್ಕೆ ಕರೆಯಿತು. ಹೇನು ಬೆಳಗ್ಗೆ ಎದ್ದು, ಸೆಗಣಿ ಬಳಿದು, ಮುಸುರೆ ತೊಳೆದು, ಸ್ನಾನಮಾಡಿತು ; ಮತ್ತು ಬೆಂಕಿ ಹೊತ್ತಿಸಿ, ನೀರು ಮೊಗೆದು ಅಡಿಗೆ ಮಾಡಿತು. ಪಾಯಸಕ್ಕೆ ಪಾತ್ರೆಯನ್ನು ಒಲೆಯ ಮೇಲೆ ಇಟ್ಟು, ಪಾತ್ರೆಯಲ್ಲಿ ಬೆಲ್ಲ ಹಾಕಿತು. ಪಾಯಸವನ್ನು ಸಟ್ಟುಗದಿಂದ ಕೆದಕುವಾಗ ಆ ಹೇನು ಪಾಯಸದಲ್ಲಿ ಜಾರಿಬಿದ್ದು ಸತ್ತುಹೋಯಿತು..."*
>
> *(ಹೇನು ಸತ್ತು ಕಾಗೆ ಬಡವಾಯಿತು)*
>
> *"...... ಅರಸು ಮಗನು ಗುಮ್ಮಟ ಬೆಟ್ಟಕ್ಕೆ ಹೋಗುವಾಗ ಕೊಂಬು ಇತ್ತು, ಕಹಳೆ ಇತ್ತು, ವಾದ್ಯ ಇತ್ತು, ವಾಲಗ ಛತ್ರ ಇತ್ತು, ಚಾಮರ ಇತ್ತು; ಬಾವುಟೆ ಇತ್ತು; ದಿವಟಿಗೆ ಇತ್ತು; ಕನ್ನಡಿ ಇತ್ತು, ಕಲಶ ಇತ್ತು; ದೊಡ್ಡ ದಂಡಿಗೆ ಇತ್ತು, ಅಡ್ಡ ಪಲ್ಲಕ್ಕಿ ಇತ್ತು; ಅಡ್ಡಪಲ್ಲಕ್ಕಿಯಲ್ಲಿ ಅರಸು ಮಗನು ಕೂತಿದ್ದನು......."*

'ಕವಿತೆಯನ್ನು ಓದುವಾಗ ಒಂದು ಚಿತ್ರ ಕಣ್ಣಿಗೆ ಕಟ್ಟಿದಂತಿರಬೇಕು'-ಎಂಬುದು ಪಂಜೆಯವರ ಸೂಕ್ತಿ, ಅವರ ಕಾವ್ಯದ ಸೂತ್ರ. ಅವರ ಶಿಶುಗೀತೆಗಳೆಲ್ಲ ಈ ಉಕ್ತಿಯನ್ನು ಸಮರ್ಥಿಸುವಂತೆಯೇ ಇವೆ. 'ತೂಗುವೆ ತೊಟ್ಟಿಲು', 'ಹಾವಿನ ಹಾಡು', 'ಜೋಗುಳ', 'ಸಂಜೆಯ ಹಾಡು' ಮುಂತಾದ ರಚನೆಗಳಲ್ಲಿ ಒಂದೊಂದೂ ಓದುಗರ ಕಿವಿ ಮನಸ್ಸುಗಳೆರಡನ್ನೂ ಒಟ್ಟಿಗೆ ಹಿಡಿದು ನಿಲ್ಲಿಸಬಲ್ಲ ರಸಚಿತ್ರಗಳು. 'ಡೊಂಬರ ಚೆನ್ನೆ', 'ಕೆಡೆಕಂಜಿ', 'ನಾಗಣ್ಣನ ಕನ್ನಡಕಗಳು' ಸ್ವಲ್ಪ ದೀರ್ಘವಾಗಿರುವ ಕಥನಕವನಗಳು. ಇವುಗಳ ಚೆಲುವಾದರೂ ಹಾಗೆಯೇ - ಕಿರಿಯರಿಗೂ ಹಿರಿಯರಿಗೂ ಒಟ್ಟಾಗಿ ಒಪ್ಪಿಗೆಯಾಗುತ್ತವೆ. 'ಡೊಂಬರ ಚೆನ್ನೆ'ಯಿಂದ ಕೆಲವು ಪಂಕ್ತಿಗಳನ್ನು ಉಲ್ಲೇಖಿಸುತ್ತಿದ್ದೇನೆ - ನೋಡಿ:

> *ಹೆಣ್ಣು ಬಂದಳು, ಹಣ್ಣು ಬಿಡದಾ ಸಣ್ಣಬಳ್ಳಿಯ ಬೆಡಗಿನಾ*
> *ಮಣ್ಣೊಳಾಡುವ, ಬೆಣ್ಣೆಯಂತಹ, ಕಣ್ಣುಕಟ್ಟಿನ ಸೊಬಗಿನಾ*

ಅಂತಹ ಡೊಂಬರ ಚೆನ್ನೆ ಗಣೆಯನ್ನು ಏರಿ, ಬಗೆಬಗೆಯ ಕಸರತ್ತುಗಳನ್ನು ತೋರಿ, ತನ್ಮಯ ಪ್ರೇಕ್ಷಕನಾಗಿದ್ದ ಬಂಗರಸನ ಬಗೆಯನ್ನು ಸೆಳೆಯುವ ಗಮ್ಮತ್ತು ಹೇಗಿದೆ ಕೇಳಿ:

> *ಇದ್ದು ನೋಡಿದ, ಎದ್ದು ನೋಡಿದ, ಕದ್ದು ನೋಡಿದ ಹುಡುಗಿಯಾ ಮುದ್ದು ಗಿಳಿಯಲಿ ಅರಸಿನಾ ಮನ ಹದ್ದು ಹಾರಿತು ಬೇಗನೆ.*

ಅರಸನ ಚಿತ್ತಚಾಂಚಲ್ಯವನ್ನು ಪಂಜೆಯುವರು ಎಷ್ಟು ಸಮರ್ಥವಾಗಿ ವ್ಯಂಜಿಸುತ್ತಾರೋ ಅಷ್ಟೇ ಚಮತ್ಕಾರಿಕವಾಗಿ ಆತ ಹುಡುಗಿಗೆ ಮನಸೋತುದನ್ನೂ ಚಿತ್ರಿಸುತ್ತಾರೆ. ಮಾಂಸದ ಮುದ್ದೆಗೆ ಎರಗುವ ಹದ್ದಿನಂತೆ ಅವನು ನಡಕೊಂಡ. ಅಷ್ಟೇ ಅಲ್ಲ, ಆತ ಹದ್ದನ್ನು ಎಂದರೆ ಮೇರೆಯನ್ನೂ ಮೀರಿದ ಎಂಬುದನ್ನು ಶ್ಲೇಷೆಯಿಂದ ಸೂಚಿಸುವುದೂ ತುಂಬ ಸೊಗಸಾಗಿದೆ.

ಶಿಶುಗೀತ, ಕಥನಕವನಗಳ ಜೊತೆಗೆ ಪಂಜೆಯವರು ಬರೆದ ಕೆಲವು ಪ್ರೌಢ ಕವಿತೆಗಳೂ ಇವೆ. ವೃತ್ತ, ತಾಳವೃತ್ತ, ಷಟ್ಪದಿ, ಚೌಪದಿಯೇ ಮುಂತಾದ ವಿವಿಧ ಕಮಲ, ಲಕ್ಷ್ಮೀಶ ಛಂದೋಬಂಧಗಳಲ್ಲಿ ರಚಿತವಾಗಿರುವ 'ಚಂದ್ರೋದಯ', 'ಭೀಷ್ಮನಿರ್ಯಾಣ', 'ತೂಕಡಿಕೆಯನು ಕಳೆಯದೇಕೆ ಕುಳಿತಿಹೆ', 'ಸತ್ಯಸೀಮೆಗೆ ತಾಯೆ ನಡೆಸೆನ್ನ' ಇವೆಲ್ಲ ಕಿರಿಯರಿಗಿಂತ ಹಿರಿಯರಿಗೇ ಹೆಚ್ಚು ಪ್ರಿಯವಾಗಬಹುದಾದ ರಚನೆಗಳು. ಮುಂಗಾರು ಮಳೆಯ ಅಬ್ಬರವನ್ನು ಸಶಕ್ತವಾಗಿ ಚಿತ್ರಿಸುವ 'ತೆಂಕಣಗಾಳಿಯಾಟ', ಕೊಡಗಿನ ಪ್ರಾಕೃತಿಕ ಸೌಂದರ್ಯವನ್ನೂ ವೀರಶ್ರೀಯನ್ನೂ ವರ್ಣಿಸುವ 'ಹುತ್ತರಿಹಾಡು' ಎಲ್ಲ ವರ್ಗದ ಜನವೂ ಮೆಚ್ಚಿ ತಲೆದೂಗುವ ಕವಿತೆಗಳು. ಇವುಗಳಲ್ಲಿ ವರ್ಣನಾತ್ಮಕವಾದವು. ದೇಶಭಕ್ತಿ ಪ್ರಚೋದಕವಾದವು, ನೀತಿಬೋಧಕವಾದವು ಎಲ್ಲವೂ ಇವೆ. ಹರಿಜನರ ದಯನೀಯ ಸ್ಥಿತಿಗಾಗಿ ಮರುಗಿ, ಕರಗಿ ಬರೆದ 'ಹೊಲೆಯನ ಹಾಡು' ಎಲ್ಲ ಕಾಲದಲ್ಲೂ ನೆನಪಿಡಬೇಕಾದ ಒಂದು ಕವಿತೆ - ಪಂಜೆಯವರ ಪ್ರಾಗತಿಕ ಮನೋಭಾವಕ್ಕೆ ಒಂದು ಪ್ರಬಲ ನಿದರ್ಶನ :

> *ಉಳ್ಳಯ್ಯಾ ; ದಯೆಗೊಳ್ಳಯ್ಯಾ!*
> *ಕಣ್ಣು, ಮೂಗು, ಕಿವಿ, ಕೈ, ಕಾಲು, ಗಂಟಲು -*
> *ಅಣ್ಣ, ನಿಮ್ಮಂತೆಯೆ ನಮಗೆಲ್ಲ ಉಂಟು.*
> *ಬಣ್ಣ ಕಪ್ಪೆಂದು ನೀ ಬಿಡುವುದೆ ನಂಟು?*
> *ಎಣ್ಣೆಯೋಲ್ ಹಿಡಿವುದೇ ನಮ್ಮ ಮೈ ಅಂಟು?*

ಎಂದು ಉಚ್ಚವರ್ಣೀಯರೊಂದಿಗೆ ತನ್ನ ಗೋಳನ್ನು ಹೇಳಿಕೊಳ್ಳುತ್ತಾನೆ ಒಬ್ಬ ದಲಿತ ಹರಿಜನ ಬಂಧು. ಬಹುಕಾಲದಿಂದ ನಡೆದುಬಂದಿರುವ ಒಂದು ಅಮಾನುಷ ಅನಿಷ್ಟ ಪ್ರವೃತ್ತಿಯನ್ನು ಪಂಜೆಯವರು ಶೋಷಿತ ಭ್ರಾತೃವಿನ ಬಾಯಿಂದಲೇ ಹೇಳಿಸಿ ಓದುಗರ ಎದೆಯನ್ನು ಹಿಂಡಿದ್ದಾರೆ.

ಪಂಜೆಯವರ ಸಾಹಿತ್ಯಜೀವನದ ಆರಂಭದಲ್ಲಿ 'ಸತ್ಯದೀಪಿಕೆ', 'ಸುವಾಸಿನಿ'ಗಳು ಹೇಗೆ ಅವರ ರಚನೆಗಳಿಗೆ ಆಲಂಬನವಾದುವು ಎಂಬುದನ್ನು ಈ ಮೊದಲೇ ಹೇಳಿದೆ. ಅದೇ ರೀತಿ 'ರಾಷ್ಟ್ರಬಂಧು', 'ಸ್ವದೇಶಾಭಿಮಾನಿ', 'ಸಹಕಾರಿ', 'ಕಂಠೀರವ' ಎಂಬ ಪತ್ರಿಕೆಗಳಲ್ಲೂ ಅವರ ಇನ್ನೆಷ್ಟೋ ಕೃತಿಗಳು ಪ್ರಕಟವಾದವು. 'ಪದಾರ್ಥವೇನು' ಎಂಬ ಸ್ಥಿರಶೀರ್ಷಿಕೆಯಲ್ಲಿ ಅವರು ಭಾಷಾ ವಿಷಯಕವಾದ ಒಂದು ಲೇಖನಮಾಲೆಯನ್ನೇ ತೊಡಗಿದ್ದರು. 'ಹಳೆಯ ಸಬ್ ಅಸಿಸ್ಟಾಂಟನ ಸುಳ್ಳು ಡೈರಿಯಿಂದ' ಎಂಬ ಲೇಖನದಲ್ಲಿ ಪಂಜೆಯವರು ತಮ್ಮ ಅಧಿಕಾರೀ ಜೀವನದ ಹತ್ತಾರು ಹೃದಯಂಗಮ ಚಿತ್ರಗಳನ್ನು ನೀಡಿದ್ದಾರೆ. ಅದು ಅವರ ಹಾಸ್ಯರಸಿಕತೆಗೂ ಒಂದು ಉದಾಹರಣೆಯಾಗಿದೆ. 'ಸ್ಥಳನಾಮ', 'ಮೂಡಬಿದಿರೆಯ ಹೊಸಬಸದಿಯ ಶಾಸನಗಳು', 'ಬಿಳಗಿಯ ಕೆಲವು ಶಾಸನಗಳು', 'ಕುಮಾರವ್ಯಾಸನ ಹೆಗ್ಗಳಿಕೆ', 'ಹೊಸದಾರಿ', 'ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು', 'ಸರ್ವಜ್ಞನ ಓನಾಮ ಪದ್ಧತಿ'ಯೇ ಮೊದಲಾದ ಲೇಖನಗಳಲ್ಲಿ ಪಂಜೆಯವರ ಬಹುಮುಖ ವೈದುಷ್ಯ, ಪ್ರಸಕ್ತಿಗಳು ಪ್ರಕಟವಾಗುತ್ತವೆ. ಪಂಜೆಯವರ ಲೆಕ್ಕಣಿಕೆ ಕಿರಿಯರನ್ನು ರಂಜಿಸುವ

ಕಾಮನಬಿಲ್ಲನ್ನು ಮೂಡಿಸುವುದಕ್ಕೆ ಮಾತ್ರ ಮೀಸಲಾಗಿಲ್ಲ, ಅದು ಹಿರಿಯರನ್ನು ಚಿಂತನೆಗೆ ಹಚ್ಚಬಲ್ಲ ತಾರಾಮಂಡಲವನ್ನು ಮುಟ್ಟಲು ಶಕ್ತವಾಗಿದೆ ಎಂಬುದನ್ನು ಅವರ ಉಪನ್ಯಾಸಗಳು ಸಮರ್ಥಿಸುತ್ತವೆ. ಗದ್ಯವೇ ಇರಲಿ, ಪದ್ಯವೇ ಆಗಲಿ, ಈ ಶತಮಾನದಲ್ಲಿ ಪ್ರಥಮ ಪಾದದಲ್ಲಿ ಒಂದು ನೂತನ ಭಾಷಾಶೈಲಿಯನ್ನು ಸಿದ್ಧಪಡಿಸಿದ ಆದ್ಯರಲ್ಲಿ ಪಂಜೆಯವರೂ ಒಬ್ಬರು. ಕನ್ನಡ ಸಾಹಿತ್ಯದ ಅಭಿವೃದ್ಧಿ, ಕನ್ನಡ ನುಡಿಯ ಸುಧಾರಣೆ, ಶಿಕ್ಷಣ ಪದ್ಧತಿಯ ನವೀಕರಣ ಇವೆಲ್ಲ ಹೇಗೆ ಸಾಧ್ಯ ಎಂಬುದನ್ನು ಅವರು ಎಷ್ಟು ಗಂಭೀರವಾಗಿ, ವ್ಯಾಪಕವಾಗಿ ಚಿಂತಿಸುತ್ತಿದ್ದರು ಎಂಬುದಕ್ಕೆ ಅವರ ಗದ್ಯಲೇಖನಗಳು ಸ್ಪಷ್ಟ ನಿದರ್ಶನಗಳಾಗಿವೆ. ಹಳತನ್ನು ಬಿಡದೆ, ಹೊಸತರ ಕಡೆಗೆ ಕೈಚಾಚಿದವರು ಪಂಜೆಯವರು. ನಮ್ಮಲ್ಲಿ ಶ್ರೀ ಗೋವಿಂದ ಪೈಯವರದು ಎಂದು ಪ್ರಚುರವಾಗಿರುವ 'ಇಸು' ಪ್ರತ್ಯಯ ಪ್ರಯೋಗಕ್ಕೆ ಪಂಜೆಯವರೇ ಮೂಲಪ್ರೇರಣೆ ಎಂಬುದನ್ನು ಅವರ 'ಹೊಸದಾರಿ' ಎಂಬ ಉಪನ್ಯಾಸವು ರುಜುಪಡಿಸುತ್ತದೆ. ಟೆಲಿಗ್ರಾಫಿಸು, ಮೋಟಾರಿಸು ಇತ್ಯಾದಿ ಪ್ರಯೋಗಗಳ ಸಾಧ್ಯತೆಯನ್ನು ಸಾಧುತ್ವವನ್ನು ಅವರು ಎತ್ತಿ ಹಿಡಿದಿದ್ದಾರೆ.

ಕನ್ನಡ ಸಾಹಿತ್ಯಕ್ಕೆ ಪಂಜೆಯವರ ಕೊಡುಗೆ ಏನು ಎಂಬುದನ್ನು ಸ್ಥೂಲವಾಗಿ ಹೇಳಿದ್ದಾಯಿತು. ಕರ್ನಾಟಕಕ್ಕೆ ಎಂದರೆ ಪ್ರಾಂತ್ಯಕ್ಕೆ, ಪ್ರಾಂತ್ಯ ಭಾಷೆಗೆ (ಪಂಜೆಯವರ ಕಾಲದಲ್ಲಿ ಭೌಗೋಳಿಕವಾಗಿ ಅಖಿಲ ಕರ್ನಾಟಕ ರಚನೆ ಆಗಿರಲಿಲ್ಲ. ಆದರೆ ಭಾವಾತ್ಮಕವಾಗಿ ಅದು ನೃಪತುಂಗನ ಕಾಲದಿಂದಲೂ ಇತ್ತೇ ಇತ್ತು!) ಪಂಜೆಯವರ ಸಲುವಳಿ ಯಾವುದು ಎಂದು ಪ್ರಶ್ನಿಸಿದರೆ ಅದು ರಾಮ-ಕೃಷ್ಣರಲ್ಲಿ ಭೇದವನ್ನು ಎಣಿಸಿದ ಹನುಮಂತನ ಮನಃಸ್ಥಿತಿಯಂತೆ ಆದೀತು! ಕನ್ನಡ ನುಡಿ ಹಬ್ಬಬೇಕು, ಜನಮನವನ್ನೆಲ್ಲ ತಟ್ಟಿ ಬೆಳೆಯಬೇಕು ಎಂಬ ಭಾವನೆ ಅವರ ನಡೆ-ನುಡಿ-ಬರಹ ಎಲ್ಲದರಲ್ಲೂ ದಟ್ಟವಾಗಿ ವ್ಯಕ್ತವಾಗಿವೆ. ಕೊಂಕಣಿ ಮನೆಮಾತಿನ ಪಂಜೆಯವರು ತನ್ನದು 'ಬಂಜೆಗನ್ನಡ'ವೆಂದು ಹಾಸ್ಯವಾಗಿ ಹೇಳುತ್ತಿದ್ದರೂ ಅವರ ಕನ್ನಡಪ್ರೇಮ ಎಷ್ಟು ಗಾಢವಾದುದು ಎಂಬುದಕ್ಕೆ ರಾಯಚೂರು ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣವೇ ಉಜ್ವಲ ಉದಾಹರಣೆ: ".... ನಾನು ಕನ್ನಡ ಲೇಖಕನೂ ಅಲ್ಲ, ಕನ್ನಡಕ್ಕಾಗಿ ಮೈಮುರಿದು ದುಡಿದವನೂ ಅಲ್ಲ...... ಕೊಂಕಣಿ ಮಾತಿನ ನಾಲಗೆಯಿಂದ ಅಂದಚೆಂದದ ಕನ್ನಡ ನುಡಿಗಳು ಸಹಜವಾಗಿ ಬರಲಾರವು. 'ಕನ್ನಡಂ ಕತ್ತುರಿಯಲ್ತೆ', 'ಕನ್ನಡ ಭಾಷೆ ಕನ್ನಡಿಗನ ಭಾಗ್ಯ', 'ಸಿರಿಗನ್ನಡಂ ಗೆಲ್ಗೆ' ಎಂಬೀ ಹೆಮ್ಮಾತುಗಳ ಹುಚ್ಚು ಕನ್ನಡಿಗನಷ್ಟು ನನ್ನ ಹೃದಯವನ್ನು ಸ್ಫುರಿಸಲಾರವು....." ಎಂದು ಆರಂಭದಲ್ಲಿ ವಿನಮ್ರವಾಗಿ ನಿವೇದಿಸಿಕೊಂಡರೂ ಅಂತ್ಯದಲ್ಲಿ, "ನನಗೀಗ ಇರುವುದು ಒಂದೇ ಆಶೆ, ನನ್ನ ಕಡೆಯ ಗಳಿಗೆಯಲ್ಲಿ ನನ್ನ ನಾಲಗೆ 'ಕೃಷ್ಣ', 'ಕೃಷ್ಣ' ಎಂದು ನುಡಿಯುವಂತೆಯೇ 'ಕನ್ನಡ' 'ಕನ್ನಡ' ಎಂದೂ ನುಡಿಯುತ್ತಿರಲಿ!" ಎಂದು ಉದ್ಗರಿಸಿದಾಗ ಸಭೆ ಸ್ತಬ್ಧವಾಯಿತೆಂದೂ ಚೇತರಿಸಿಕೊಳ್ಳಲು ಎರಡು ಗಳಿಗೆ ಬೇಕಾಯಿತೆಂದೂ ಆ ಸಂದರ್ಭವನ್ನು ಡಿ.ವಿ.ಜಿ. ಯವರು ಜ್ಞಾಪಿಸಿಕೊಂಡಿದ್ದಾರೆ. ಪಂಜೆಯವರ ಸಾಹಿತ್ಯವ್ಯವಸಾಯ, ಅದರ ಉದ್ದೇಶ ಸಫಲತೆಗಳನ್ನು ಕುರಿತು ಅವರನ್ನು ಸಮೀಪದಿಂದ, ಆದರದಿಂದ ಕಂಡಿದ್ದ ಶ್ರೀ ಸೇಡಿಯಾಪು ಕೃಷ್ಣಭಟ್ಟರು ಹೀಗೆ ಹೇಳಿದ್ದಾರೆ : "ಪಂಜೆಯವರು ಕಥೆ ಕವನಗಳನ್ನು ಬರೆಯುವ ಕಸುಬು ಮಾಡಿದವರಲ್ಲ. ಬರೆಯಬೇಕೆಂಬ ಅಂತಃಪ್ರೇರಣೆ ಒತ್ತೊತ್ತಿ ಬಂದಾಗ ಮಾತ್ರ ಬರೆದವರು; ಆಗ ಕೂಡ ಬಹಳ ಸಂಯಮದಿಂದ ಬರೆದವರು..... ಪಂಜೆಯವರು ಇಂಗ್ಲಿಷಿನಲ್ಲಿ ವಿದ್ವಾಂಸರೇ ಆದರೂ, ಆ ಸಾಹಿತ್ಯವನ್ನು ಸವಿದು ಮೆಚ್ಚಿ ನಲಿದವರೇ ಆದರೂ, ಅವರು ಬರೆದುದೆಲ್ಲ ಇಂಗ್ಲಿಷ್ ಕಲಿಯದವರಿಗಾಗಿ; ಕೇವಲ ಕನ್ನಡವನ್ನು ಬಲ್ಲ ಸಾಮಾನ್ಯರ ಸಂತೋಷಕ್ಕಾಗಿ, ಹೃದಯ ಸಂಸ್ಕಾರಕ್ಕಾಗಿ...".

**ಪಂಜೆಯವರ ವ್ಯಕ್ತಿತ್ವ**

ಪಂಜೆಯವರ ಸಾಹಿತ್ಯಸಂಪತ್ತಿನಾಚೆಯೇ ಅವರ ವ್ಯಕ್ತಿತ್ವವೂ ವಿಶಿಷ್ಟವಾದದ್ದು. ಅವರ ಹೃದಯಮಾರ್ದವತೆ, ಸಂವೇದನಾಶೀಲತೆಗಳನ್ನು ಬಹಳ ಜನ ಕಂಡುಕೊಂಡಿದ್ದಾರೆ. ಲೋಕಜೀವನದ ಕಷ್ಟ ನಿಷ್ಠುರಗಳನ್ನು ಚೆನ್ನಾಗಿ ಉಂಡು ಬಲ್ಲ ಪಂಜೆಯವರು ಅನ್ಯರಿಗೆ ಅದರ ಸಿಹಿ-ಸೊಗಸುಗಳನ್ನು ಹಂಚಿದರಲ್ಲದೆ ಕಹಿ-ನಂಜುಗಳನ್ನಲ್ಲ. "ಯಾರೊಬ್ಬರ ಮೇಲೂ - ತಮಗೆ ಕೇಡು ಮಾಡಿದವರ ಮೇಲೂ - ಪ್ರತೀಕಾರದ ಬಯಕೆಯನ್ನು ಎಂದೂ ತೋರಿದವರಲ್ಲ. ಬದಲು ಹಾನಿಮಾಡಿದವರಿಗೆ ಒಳಿತನ್ನೇ ಎಸಗಿದ್ದು ಉಂಟು" - ಹೀಗೆಂದು ಪಂಜೆಯವರ ಸುಪುತ್ರ ಶ್ರೀ ರಾಮರಾಯರು ಬರೆದಿದ್ದಾರೆ. ಅವರ ಮನೋಧರ್ಮ ಎಷ್ಟು ಕೋಮಲ, ಸೂಕ್ಷ್ಮ ಎಂಬುದಕ್ಕೆ ಶ್ರೀ ಶಿವರಾಮ ಕಾರಂತರು ಒಂದು ಮಾರ್ಮಿಕ ಸಂದರ್ಭವನ್ನು ಉಲ್ಲೇಖಿಸಿದ್ದಾರೆ : ಜಮ್‌ಶೆಡ್‌ಪುರಕ್ಕೆ ಹೋಗಿಬಂದಿದ್ದ ಕಾರಂತರು ಒಮ್ಮೆ ಪಂಜೆಯವರೊಂದಿಗೆ ಕೇಳಿದರಂತೆ - "ನೀವೂ ತಾತಾನಗರಕ್ಕೆ ಹೋದವರು, ನಿಮಗೆ ಅಂಥ ದೊಡ್ಡ ಕಾರ್ಖಾನೆಗಳನ್ನು ಕಂಡು ಹೇಗನಿಸಿತು"? (ಪಂಜೆಯವರ ಪುತ್ರ ಮುಕುಂದರಾಯರು ತಾತಾನಗರದಲ್ಲಿದ್ದರು) ಅದಕ್ಕೆ ಪಂಜೆಯವರು - "ನಾನು ಅದನ್ನು ನೋಡಲೇ ಇಲ್ಲ. ಅಂಥದ್ದೆಲ್ಲ ನನ್ನಿಂದ ನೋಡಲಿಕ್ಕೆ ಆಗದು" ಎಂದರಂತೆ! "ಆ ಉಕ್ಕಿನ ಕಾರ್ಖಾನೆಯ ಕಬ್ಬಿಣದ ಗಾಣಗಳನ್ನೂ ಕುಲುಮೆಗಳನ್ನೂ ಕಂಡು ಸಹಿಸಲು ಅವರಿಂದ ಆಗದೇ ಆಗದು" ಎಂದು ವ್ಯಾಖ್ಯಾನಿಸಿದ್ದಾರೆ ಕಾರಂತರು. ಪಂಜೆಯವರು ಅಂಥ ಮೃದುಹೃದಯಿ ಯಾಗಿದ್ದುದರಿಂದಲೇ ಬಿ.ಎಂ.ಶ್ರೀ. ಯವರ 'ದುಃಖ ಸೇತು' (ಥಾಮಸ್‌ಹುಡ್ ಕವಿಯ Bridge of Sighsನ ಅನುವಾದ)ವನ್ನು ಆಗಾಗ ಓದಿ ಅಲ್ಲಿಯ ಕರುಣರಸಾನುಭವವನ್ನು ಮಾಡುವುದೂ, ಸಭೆಗಳಲ್ಲಿ ಹಾಡಿ ಕೇಳುಗರ ಎದೆಯನ್ನು ಕರಗಿಸುತ್ತ ಇದ್ದದ್ದೂ ಆಶ್ಚರ್ಯಕರವಲ್ಲ.

ರಸಿಕತೆಯೆಂಬುದು ಪಂಜೆಯವರ ಜತೆಯಲ್ಲೇ ಹುಟ್ಟಿಬಂದ ಗುಣ ವಿಶೇಷ. ಅವರ ರಸಿಕತೆಗೆ ಸಾಹಿತ್ಯದಲ್ಲಿ ಹೇಗೋ ಹಾಗೆಯೇ ಅವರ ಜೀವನದಲ್ಲೂ ವಿಪುಲ ನಿದರ್ಶನಗಳಿವೆ. ಅವರ ಸೂಕ್ಷ್ಮಬುದ್ಧಿ ಈ ರಸಿಕತೆಗೆ ಒಪ್ಪವಿಟ್ಟು ಬಣ್ಣವೇರಿಸುತ್ತಿತ್ತು. ತಮ್ಮ ಮನೆಯ ಪಕ್ಕದ ಡಾಕ್ಟರರೊಬ್ಬರ ಆಗಮನವನ್ನು

*'ಜೋಡು ಕುದುರೆ ಬಂಡಿ ಮೇಲೆ*
*ನೋಡು ಶಿವರಾಮ್ ಬರುತ್ತಾರೆ.'*

ಎಂದು ಹಾಡಿ ನಕ್ಕು ನಗಿಸುತ್ತಿದ್ದರಂತೆ. ಪ್ರತ್ಯೇಕ ಪದಗಳಲ್ಲಿರುವ ಅಕ್ಷರಗಳನ್ನು ವ್ಯತ್ಯಸ್ತಗೊಳಿಸಿ 'ಕುಬೇರನಿಗೇನಿರಬೇಕು' ಎಂಬಂತೆ ನಗೆಯಾಡುವುದು; ತಮ್ಮ ವಿದ್ಯಾರ್ಥಿಗಳೊಂದಿಗೆ ಸೇರಿ, 'ನಿಮ್ಮಂಥ ಮಂಗಗಳಿಗೆ ಈಶನಾಗಿರುವುದರಿಂದಲೇ ನಾನು ಮಂಗೇಶ' ಎಂದು ಅರ್ಥ ಕಟ್ಟುವುದು; ಪರಿಚಿತ ತಿಮ್ಮಪ್ಪಯ್ಯನವರ ಊರ ಹೆಸರಾಗಿದ್ದ 'ಮುಳಿಯ'ದ ಮೇಲೆ ಸರಸ ವ್ಯಾಖ್ಯಾನ ಮಾಡುವುದು, ಹೆಂಡತಿಯನ್ನು ಊರಲ್ಲೇ ಬಿಟ್ಟು ಒಂಟಿಯಾಗಿ ಮೈಸೂರ ಕಡೆ ಹೋದಾಗ ಗೆಳೆಯರು 'ಮಡದಿ ಎಲ್ಲಿ' ಎಂದು ಕೇಳಿದರೆ 'ಚೇಂಜಿ'ಗಾಗಿ ಬಂದೆನೆಂದು ಹೇಳುವುದು-ಇವೆಲ್ಲ ಅವರ ಆಗರ್ಭ ಹಾಸ್ಯರಸಿಕತೆಗೆ, 'ನಕ್ಕು ನಗಿಸುವ' ನುಡಿಗಾರಿಕೆಗೆ ನಿದರ್ಶನಗಳು.

ಪಂಜೆಯವರು ಊಟದ ಜತೆಗೆ ಸವಿಯಲು ಮಾವಿನ ಹಣ್ಣುಗಳನ್ನು ಆರಿಸುವುದರಲ್ಲಿ ಎಂತಹ ರಸಜ್ಞತೆ ಪ್ರಕಟವಾಗುತ್ತಿತ್ತೋ ಅಂತಹದ್ದೇ ರಸಿಕತೆ ಪಾಠ ಮಾಡುವಾಗ ಅರ್ಥ ಸ್ಪಷ್ಟತೆಗಾಗಿ ತಮ್ಮ ಕಿರುಜುಟ್ಟನ್ನು ಬಿಚ್ಚಿಕಟ್ಟಿ, 'ಚದುರ ಶಿಖೆಯನು ಹಾಕಿದಾ' ಎಂದು ಅಭಿನಯಿಸುವುದರಲ್ಲೂ ವ್ಯಕ್ತವಾಗುತ್ತಿತ್ತು.

ಪಂಜೆಯವರು ಗುಣಗ್ರಾಹಿ-ಒಳ್ಳೆಯದನ್ನು ಕಂಡಾಗಲೆಲ್ಲ ಅದನ್ನು ಎತ್ತಿಕೊಂಡು ಮೆಚ್ಚುಗೆಯ ಹತ್ತು ಮಾತುಗಳನ್ನು ಆಡುವುದು ಅವರ ಹೃದಯವಂತಿಕೆ. ಪ್ರಬುದ್ಧ ಸಾಹಿತಿಗಳೋ, ಉದಯೋನ್ಮುಖ ಲೇಖಕರೋ, ಸತ್ಕಾರ್ಯ ನಿರತರೋ ಯಾರೇ ಆಗಿರಲಿ ಅವರಿಗೆಲ್ಲ ಪ್ರೋತ್ಸಾಹವನ್ನು-ಅವಶ್ಯವಾದಲ್ಲಿ ಪೋಷಣೆಯನ್ನು ಕೊಡುತ್ತಿದ್ದವರು ಪಂಜೆ. ಶ್ರೀ ಕಡೆಂಗೋಡ್ಲು ಶಂಕರಭಟ್ಟರು, ತಮ್ಮ 'ಹಣ್ಣು ಕಾಯಿ' ಎಂಬ ಕವನ ಸಂಗ್ರಹದ ಮುನ್ನುಡಿಯಲ್ಲಿ, "ಓದಿ ಹಿತಸೂಚನೆಗಳನ್ನಿತ್ತು, ಪ್ರೂಫನ್ನೂ ನೋಡಿ, ಪರದೆಯೊಳಗೆ ನಿಂತು, ಪುಸ್ತಕ ಪ್ರಕಟನದ ಸಕಲ ವ್ಯವಸ್ಥೆಗಳನ್ನೂ ಮಾಡಿ, ತಮ್ಮ ಸ್ವಭಾವ ಗುಣವಾಗಿ ಗುಪ್ತ ಸಹಾಯವನ್ನೊದಗಿಸಿದ ದಕ್ಷಿಣ ಕನ್ನಡದ ಆಧುನಿಕ ಸಾಹಿತ್ಯ ಪ್ರವರ್ತಕ ಪಂಜೆ ಮಂಗೇಶರಾಯರಿಗೆ" ಕೃತಜ್ಞತೆಯನ್ನು ಅರ್ಪಿಸಿದ್ದಾರೆ. ಶ್ರೀ ಪಾಂಡೇಶ್ವರ ಗಣಪತಿರಾಯರು ಒಮ್ಮೆ ಪಂಜೆಯವರನ್ನು ಭೇಟಿ ಮಾಡಿದಾಗ ಅವರು ಪಾಂಡೇಶ್ವರರ ಸದ್ಯಃ ಪ್ರಕಟಿತ ಕಾವ್ಯಗಳಿಂದ ಕೆಲವು ಪದ್ಯಗಳನ್ನು ಹೇಳಿಸಿ, ಕೇಳಿ ಸಂತೋಷಪಟ್ಟರಂತೆ. ಆ ಸಂದರ್ಭವನ್ನು ಪಾಂಡೇಶ್ವರರು ಜ್ಞಾಪಿಸುತ್ತಾ, "ಅವರ ಕಾವ್ಯ ಪ್ರೇಮವೂ ಕಾವ್ಯ ಪ್ರಪಂಚದಲ್ಲಿ ಅಡಿ ಇಡಲಾರಂಭಿಸುತ್ತಿರುವವರ ಮೇಲಣ ಮಮತೆಯು ಇಂದೂ ನನ್ನ ಕಣ್ಮುಂದೆ ರೂಪ ತಳೆದು ಬಂದಂತೆ ತೋರುತ್ತಿದೆ" ಎಂದು ಬರೆದಿದ್ದಾರೆ. ಮಡಿಕೇರಿಯ ಸಾಹಿತ್ಯ ಸಮ್ಮೇಳನದಲ್ಲಿ ಸೇಡಿಯಾಪು ಕೃಷ್ಣಭಟ್ಟರು ಓದಿದ 'ಕನ್ನಡ ಛಂದಸ್ಸು' ಎಂಬ ನಿಬಂಧವನ್ನು ಬಹುವಾಗಿ ಮೆಚ್ಚಿದ ಪಂಜೆಯವರು ಅವರ ಕೈಕುಲುಕಿ ತಬ್ಬಿಕೊಂಡರಂತೆ. ರಾಯಚೂರು ಸಮ್ಮೇಳನದ ಕಾವ್ಯಗೋಷ್ಠಿಯಲ್ಲಿ ತನ್ನದೊಂದು ಚೊಚ್ಚಲ ಕವಿತೆಯನ್ನು ಅಂಜುತ್ತಾ ಓದಿದ ಒಬ್ಬ ತರುಣ ಕವಿಯನ್ನು ಹೆದರಿಸುವ ಹುಸಿ ನಾಟಕವಾಡಿ - 'ಯಾರು ನಿಮಗೆ ಇದು ಕಾವ್ಯ ಅಲ್ಲ ಅಂತ ಹೇಳಿದವರು? ಅವರನ್ನಿಲ್ಲಿ ಕರೆತನ್ನಿ. ಬುದ್ಧಿ ಕಲಿಸಿಯೇವು' ಎಂದು ಪಂಜೆಯವರು ಹೇಳಿದುದನ್ನು ಡಿ.ವಿ.ಜಿ. ಯವರು ಸ್ಮರಿಸಿದ್ದಾರೆ. 1932ರಲ್ಲಿ ಮಂಗಳೂರಿನಲ್ಲಿ ನಡೆದ ಶಿಕ್ಷಣ ಸಪ್ತಾಹದ ಕೊನೆಯಲ್ಲಿ ಐನೂರು ರೂಪಾಯಿಗಳು ಖೋತಾ ಆದುದನ್ನು ತಿಳಿದ ಪಂಜೆಯವರು ಆ ಕೂಡಲೇ ಅಷ್ಟೂ ಮೊತ್ತಕ್ಕೂ ಒಂದು ಚೆಕ್ ಬರೆದು ಶಿವರಾಮ ಕಾರಂತರ ಕೈಯಲ್ಲಿರಿಸಿದರಂತೆ! ಒಟ್ಟಿನಲ್ಲಿ ಪಂಜೆಯವರು ಶ್ರೀ ಗೋವಿಂದ ಪೈಯವರು ಹೇಳಿದಂತೆ - "ತಮ್ಮೊಂದಿಗೆಯ ಇತರ ಲೇಖಕರಲ್ಲಿ ಅವರಿಗೆ ನಿಷ್ಕಳಂಕವಾದ ಸೌಹಾರ್ದವಿತ್ತಲ್ಲದೆ ಕೇಶಿರಾಜನೆಂದನಂತೆ 'ಕವಿಗೆ ಕವಿ ಮುನಿವಂ' ಎಂಬ ಪ್ರಾಯಶಃ ಸಾರ್ವಕಾಲಿಕವೆಂದು ತೋರುವ ಆ ಭಾವವಿರಲಿಲ್ಲ. ಯುವಕರಿಗೆ ಇವರಿತ್ತ ಪ್ರೋತ್ಸಾಹ ಎಷ್ಟೆಂಬುದನ್ನು ನಾನೇ ಅಲ್ಲ ಅವರಿಂದ ಕಲಿತ, ಅವರೊಡನೆ ಕಲೆತ ಅವರೆಲ್ಲರೂ ಬಲ್ಲರು. ಏವಂಚ ಅವರು ಕನ್ನಡದಲ್ಲಿ ಅಭಿರುಚಿಯುಳ್ಳ ನಮ್ಮ ತುಳುನಾಡಿನ ಯುವಕರಿಗೂ ಇತರ ಸಾಹಿತಿಗಳಿಗೂ ಉದಾರ ಕಟಿಕೋಪಾಧ್ಯಾಯನಂತಿದ್ದರು."

'ಪಂಜೆಯವರ ಎತ್ತರ ಸುಮಾರು ಐದು ಅಡಿ ಏಳು-ಎಂಟು ಇಂಚು. ನೋಟಕ್ಕೆ ತೆಳ್ಳಗೆ, ಅವರ ಮೈಬಣ್ಣ ಬೆಳ್ಳಗೆ. ಮುಖ ನಸು ಕೆಂಪು ಮತ್ತು ಅಗಲವಾದ ಹಣೆ. ತಲೆಯು ನಿಕೇಶ. ಅವರ ಮೀಸೆಯೂ ಹುಬ್ಬುಗಳೂ ಗಟ್ಟಿವಾಗಿದ್ದುವು.' (ಶ್ರೀ ಹರಿಶೈಣೈ) ಅವರದು ಹುಲುಸಾದ ಮೆದುಳು, ನಿರಾಳವಾದ ನುಡಿತ, ಆಳವಾದ ಭಾವನೆ, ವಿಶಾಲವಾದ ಕಾಣಿಕೆ, ಹಸನಾದ ಜಕ್ಕುಲಿಕೆ' (ಶ್ರೀ ಗೋವಿಂದಪೈ), 'ಅವರನ್ನು ನೆನೆಸಿಕೊಂಡಾಗಲೆಲ್ಲ ಒಂದು ತುಂಬುಬಾಳಿನ ಚಿತ್ರ ಕಣ್ಣಮುಂದೆ ಬರುತ್ತದೆ. ಒಂದು ಕಾಲ, ಒಂದು ಜನತೆ ಇಂಥ'ವರ ಹುಟ್ಟು ಬದುಕುಗಳಿಂದ ಒಂದು ವಿಶೇಷ ಬಗೆಯ ಕೃತಾರ್ಥತೆಯನ್ನು ಪಡೆಯುತ್ತದೆ.' (ವಿ. ಸೀತಾರಾಮಯ್ಯ)

ಕನ್ನಡನಾಡು 1973-74ರಲ್ಲಿ ಪಂಜೆಯವರ ಜನ್ಮ ಶತಾಬ್ದಿಯನ್ನು ಸಮುಚಿತವಾಗಿ ಆಚರಿಸಿ ತನ್ನ ಕೃತಜ್ಞತೆಯನ್ನು ಪ್ರಕಟಿಸಿತು. ಪಂಜೆಯವರ ಹುಟ್ಟೂರು ಬಂಟವಾಳದಲ್ಲಿ ಒಂದು ಸ್ಮಾರಕ, ಮಂಗಳೂರಿನ ರಸ್ತೆಯೊಂದಕ್ಕೆ ಅವರ ನಾಮಕರಣ, ಅವರ ಕೃತಿ ಸಂಪುಟಗಳ ಪ್ರಕಟನೆ - ಇಷ್ಟೂ ಆ ವರ್ಷದಲ್ಲಿ ನಡೆದವು. ಜಯಂತಿಗೂ ತಿಥಿಗೂ ವರ್ಷದಲ್ಲಿ ಒಂದೊಂದು ದಿನ ಸಾಕು; ಆದರೆ ಸ್ಮರಣೆಗೆ ಅನುದಿನವೂ ಬೇಕು.

### ಗ್ರಂಥ-ಲೇಖನ ಋಣ


1. ಪಂಜೆಯವರ ನೆನಪಿಗಾಗಿ-(ಪಂಜೆಯವರ ಸ್ಮಾರಕ ಗ್ರಂಥ)
2. ಮಹನೀಯರು - ವಿ.ಸೀ.
3. ಪಂಜೆ ಮಂಗೇಶರಾವ್- ಶೇಖರ ಸಾಹಿತ್ಯ.
4. ಕನ್ನಡಕ್ಕಾಗಿ ದುಡಿದವರು - ಶ್ರೀ ಬಿ. ಶಂಕರಭಟ್ಟ.
5. ಕನ್ನಡ ಸಾಹಿತ್ಯ ಮತ್ತು ಉಪನ್ಯಾಸಗಳು - ಶ್ರೀ ಮುಳಿಯ ತಿಮ್ಮಪ್ಪಯ್ಯ.
6. 'ಕವಿ ಶಿಷ್ಯ' ಪಂಜೆ ಮಂಗೇಶರಾಯರು - ಶ್ರೀ ಜಿ.ಪಿ. ರಾಜರತ್ನಂ ('ಪ್ರಜಾವಾಣಿ')
7. ಹಣ್ಣುಕಾಯಿ - ಶ್ರೀ ಕಡೆಂಗೋಡ್ಲು ಶಂಕರಭಟ್ಟ.
8. ಯುಗಧರ್ಮ ಹಾಗೂ ಸಾಹಿತ್ಯ - ಕೀರ್ತಿನಾಥ ಕುರ್ತಕೋಟಿ.
9. ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ - ಎಸ್. ಅನಂತನಾರಾಯಣ.
10. ತೆಂಕಣಗಾಳಿ - ಪಂಜೆ ಶತಮಾನೋತ್ಸವ ಸ್ಮರಣ ಸಂಚಿಕೆ.


❑

# ಫ.ಗು.ಹಳಕಟ್ಟಿ

ಜಿ.ಎಸ್. ಸಿದ್ಧಲಿಂಗಯ್ಯ

'ಕನ್ನಡದ ಕಣ್ವಮುನಿ' ಎಂದು ಖ್ಯಾತರಾಗಿದ್ದ ಆಚಾರ್ಯ ಬಿ.ಎಂ. ಶ್ರೀಕಂಠಯ್ಯನವರು ಬಿಜಾಪುರದಲ್ಲಿ ಬಂದಿಳಿದಾಗ ಒಬ್ಬರು ಕೇಳಿದರಂತೆ- "ಇತಿಹಾಸ ಪ್ರಸಿದ್ಧವಾದ ಗೋಳಗೊಮ್ಮಟವನ್ನು ನೋಡುವಿರಾ?" ಅದಕ್ಕೆ ನಕ್ಕು ಬಿ.ಎಂ. ಶ್ರೀಕಂಠಯ್ಯನವರು ಉತ್ತರಿಸಿದರಂತೆ: "ಮೊದಲು ನಾನು ವಚನಗೊಮ್ಮಟವನ್ನು ನೋಡಬೇಕಾಗಿದೆ" ಎಂದು. ಆ ವಚನ ಗೊಮ್ಮಟವೇ ವಚನ ಪಿತಾಮಹರೆಂದು ಖ್ಯಾತನಾಮರಾದ ರಾವಬಹದ್ದೂರ ಫಕೀರಪ್ಪ ಗುರುಬಸಪ್ಪ ಹಳಕಟ್ಟಿ ಅವರು. ಬಡತನಕ್ಕೂ ಜೊತೆ ಜೊತೆಗೆ ವಚನ ಸಾಹಿತ್ಯಕ್ಕೂ ತವರುಮನೆಯಾದ ಬಿಜಾಪುರ ಹಳಕಟ್ಟಿ ಅವರ ಹುಟ್ಟೂರೇನೂ ಅಲ್ಲ. ಅವರು ಹುಟ್ಟಿದ್ದು ಧಾರವಾಡದಲ್ಲಿ, ಜುಲೈ 2ನೇ ತಾರೀಖು 1880ನೇ ಇಸವಿಯಲ್ಲಿ. ಇವರ ತಂದೆ ಗುರುಬಸಪ್ಪನವರು, ತಾಯಿ ಬೆಳಗಾವಿ ಜಿಲ್ಲೆಯ ಹೂಲಿ ಗ್ರಾಮದ ಸೊಪಡಲದ ಮನೆತನದ ದಾನಮ್ಮದೇವಿ ಅವರು. ಗುರುಬಸಪ್ಪನವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಅಧ್ಯಯನಶೀಲರೂ ಆದವರು. 'ಇಂಗ್ಲೆಂಡಿನ ಇತಿಹಾಸ', 'ಏಕನಾಥ ಸಾಧುಗಳ ಚರಿತ್ರೆ' ಮುಂತಾದ ಗ್ರಂಥಗಳನ್ನು ರಚಿಸಿದವರು. ಪ್ರಾಥಮಿಕ ಶಾಲಾ ಶಿಕ್ಷಕರಾದರೂ ಜ್ಞಾನಪ್ರಸಾರವನ್ನು ಜೀವನದ ಧ್ಯೇಯವಾಗಿ ಮಾಡಿಕೊಂಡವರು. ಈ ಕಾರಣದಿಂದಾಗಿಯೇ ಅವರ ಅಧ್ಯಯನಶೀಲತೆ, ವಚನ ಸಾಹಿತ್ಯ ಪ್ರೇಮಗಳು ಅವರ ಪುತ್ರರಾದ ಹಳಕಟ್ಟಿ ಅವರಿಗೂ ಬಳುವಳಿಯಾಗಿ ಬಂದಿವೆ.

ಒಂದು ಕಡೆ ಬಡತನ, ಮತ್ತೊಂದು ಕಡೆ ಮೂರು ವರ್ಷದ ಮಗುವಾಗಿದ್ದಾಗಲೇ ತಾಯಿಯನ್ನು ಕಳೆದುಕೊಂಡು, ಮಲತಾಯಿಯ ಪ್ರೀತಿಯ ಕಹಿಯನ್ನು ಉಂಡ ಹಳಕಟ್ಟಿ ಅವರ ಎಳೆಯ ಮನಸ್ಸು ಕಹಿಗೊಳ್ಳಲಿಲ್ಲ. ಅದರ ಬದಲಾಗಿ ಅಧ್ಯಯನದ ಕಡೆಗೆ ಹರಿಯಿತು. ಜೊತೆ ಜೊತೆಗೆ ನೋವುಗಳನ್ನು ಸಹಿಸುವ ಗಟ್ಟಿತನವನ್ನು ಗಳಿಸಿಕೊಳ್ಳಲು ಆರಂಭಿಸಿತು.

ಬಾಲ್ಯಜೀವನ ಹಾಗೂ ಪ್ರಾಥಮಿಕ ಶಿಕ್ಷಣಗಳು ಧಾರವಾಡದಲ್ಲೇ ಮುಗಿದವು. ಅವರು 14ನೆಯ ವರ್ಷದವರಾಗಿದ್ದಾಗಲೇ ಮೆಟ್ರಿಕ್ ಪರೀಕ್ಷೆಯಲ್ಲಿ ಪ್ರಥಮಶ್ರೇಣಿಯಲ್ಲಿ ತೇರ್ಗಡೆ ಹೊಂದಿದರು. ಅನಂತರ ಮುಂಬಯಿಯ ಸೇಂಟ್ ಜೇವಿಯರ್ ಕಾಲೇಜಿನಲ್ಲಿ ಅಧ್ಯಯನವನ್ನು ನಡೆಸಿ ಬಿ.ಎ. ಪದವೀಧರರಾದರು. ಮುಂದೆ ಎಂ.ಎ. ಮತ್ತು ಎಲ್.ಎಲ್.ಬಿ. ಪರೀಕ್ಷೆಗಳಿಗೆ ಅಧ್ಯಯನ ನಡೆಸಿದ ಹಳಕಟ್ಟಿ ಅವರು ಎಲ್.ಎಲ್.ಬಿ. ಪರೀಕ್ಷೆಗೆ ಮಾತ್ರ ಕುಳಿತು ಪದವೀಧರರಾದರು. ಸ್ವಲ್ಪ ಕಾಲ ಪಬ್ಲಿಕ್ ಪ್ರಾಸಿಕ್ಯೂಟರ್ (ಸರ್ಕಾರಿ ವಕೀಲರಾಗಿ) ಹುದ್ದೆಯಲ್ಲಿ ನೇಮಕಗೊಂಡು ಸೇವೆ ಸಲ್ಲಿಸಿದರು. ಅಷ್ಟಾದರೂ ಅವರ ಮನಸ್ಸು ಸದಾ ಸಾರ್ವಜನಿಕ ಜೀವನದ ಕಡೆಗೆ ಇದ್ದಿತೇ ಹೊರತು ಸ್ವಂತ ಬದುಕಿನ ಅಭಿವೃದ್ಧಿಯ ಕಡೆಗೆ ಇರಲಿಲ್ಲ. "ಜೇನುನೊಣ ನನ್ನನ್ನು ಕಚ್ಚಿದರೂ ಚಿಂತೆಯಿಲ್ಲ, ನನ್ನ ಜನಕ್ಕೆ ಜೇನುತುಪ್ಪ ದೊರಕಿದರೆ ಸಾಕು" ಎನ್ನುವ ಧೋರಣೆ ಹಳಕಟ್ಟಿ ಅವರದು.

ಫಕೀರಪ್ಪ ಅವರದು ಅಧ್ಯಯನಶೀಲ ಮನಸ್ಸು. ಜನಹಿತಾಕಾಂಕ್ಷಿಯಾದ ದೃಷ್ಟಿ. ಅಂತರಂಗದಲ್ಲಿ ಸಾಹಿತ್ಯವನ್ನು ಅದರಲ್ಲಿಯೂ ಶರಣ ಸಾಹಿತ್ಯವನ್ನು ಕುರಿತ ಆಳವಾದ ಪ್ರೀತಿ. ತಾವು ಅಧ್ಯಯನ ಮಾಡುತ್ತಿದ್ದ ಕ್ರೈಸ್ತ ಮಿಷನರಿಗಳ ಶಾಲೆಗಳಲ್ಲಿ ಇರುತ್ತಿದ್ದ ಬೈಬಲ್‌ನ ವಾತಾವರಣವನ್ನು ಗಮನಿಸಿದ ಇವರಿಗೆ ತಮ್ಮ ನೆಲದ ನಿಧಿಯಾದ ವಚನ ಸಾಹಿತ್ಯದ ಕಡೆಗೆ ಮನಸ್ಸು ಹರಿದುದು ಆಶ್ಚರ್ಯಕರವೇನಲ್ಲ. ಒಂದು ಕಡೆಯಲ್ಲಿ ಕ್ರೈಸ್ತ ಮಿಷನರಿಗಳ ಕಾಟ, ಮತ್ತೊಂದು ಕಡೆಯಲ್ಲಿ ಮರಾಠಿಗರ ಅಬ್ಬರ. ಇವುಗಳಿಂದಾಗಿ ಕನ್ನಡ ಭಾಷೆಗೆ ಇದ್ದ ತೊಂದರೆಯನ್ನು, ಕನ್ನಡ ಅಧ್ಯಯನಕ್ಕೆ ಇರುವ ಅಡಚಣೆಗಳನ್ನು ಗುರುತಿಸಿದ ಹಳಕಟ್ಟಿಯವರು ಕನ್ನಡದ ಕಲಿಕೆಗೆ ಹಾಗೂ ರಕ್ಷಣೆಗೆ ಸಹಜವಾಗಿ ಮನಸ್ಸು ಕೊಟ್ಟರು. ವಚನ ಸಾಹಿತ್ಯದ ಪ್ರೀತಿ ಈ ಕನ್ನಡಪರವಾದ ಪ್ರೇಮವನ್ನು ಮತ್ತಷ್ಟು ಉದ್ದೀಪಿಸಿತು. ಹೀಗಾಗಿ ಕರ್ನಾಟಕದ ಏಕೀಕರಣಕ್ಕೆ ದುಡಿಯುವ ಅಭೀಪ್ಸೆ ಕೂಡ ಅವರದಾಯಿತು.

ಸಹಜವಾಗಿಯೇ ಹಳಕಟ್ಟಿಯವರು ವಕೀಲಿ ವೃತ್ತಿಯನ್ನು ಬಿಟ್ಟುಕೊಟ್ಟರು. ಹನ್ನೆರಡನೆಯ ಶತಮಾನದಲ್ಲಿ ಹೊಸ ಬದುಕಿಗೆ ಆಹ್ವಾನ ನೀಡಿದ ವಚನಶಾಸ್ತ್ರದ ಸಾರದ, ಸಂಗ್ರಹದ ಕಡೆಗೆ ಮನಸ್ಸು ಹೊರಳಿತು. ಹಳಕಟ್ಟಿಯವರದು ಶಿಸ್ತಿನಿಂದ ಕೂಡಿದ ಸರಳವಾದ ಬದುಕು. 'ಕಾಯಕವೇ ಕೈಲಾಸ', 'ಜನಸೇವೆಯೇ ಜನಾರ್ದನ ಸೇವೆ' ಎಂದು ನಂಬಿದ ಹಳಕಟ್ಟಿಯವರದು ಸಹಜವಾಗಿ ವಿವಾಹದ ನಂತರ ಬಿಜಾಪುರವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡರು.

ವಿದ್ಯಾರ್ಥಿ ದಿಸೆಯಿಂದಲೇ ಸಾಹಿತ್ಯಾಸಕ್ತಿಯನ್ನು ಹಾಗೂ ಅಧ್ಯಯನಶೀಲತೆಯನ್ನು ಬೆಳೆಸಿಕೊಂಡ ಹಳಕಟ್ಟಿಯವರು ಧಾರವಾಡದ ತರಬೇತಿ ಕಾಲೇಜಿನ ಶಿಕ್ಷಕರ ಮಾರ್ಗದರ್ಶನದಿಂದ ಕನ್ನಡ ಸಾಹಿತ್ಯವನ್ನು ಅಧ್ಯಯನ ಮಾಡಿದರು. ಅಧ್ಯಯನಶೀಲರಾದ ಅವರು ಪತ್ರಿಕೆಗಳಿಗೆ ಲೇಖನಗಳನ್ನೂ ಬರೆಯುತ್ತಿದ್ದುದೂ ಉಂಟು. ಸಾಹಿತ್ಯಕವಾದ ಆಕಾಂಕ್ಷೆ ಚಿಗುರೊಡೆಯುತ್ತಿದ್ದ ಕಾಲದಲ್ಲಿ ಶಿವಲಿಂಗಪ್ಪ ಮಂಚಾಲಿಯವರ ಮನೆಯಲ್ಲಿದ್ದ ಪ್ರಭುದೇವರ ವಚನ, ಷಟ್ಸ್ಥಲ ತಿಲಕದಂತಹ ತಾಳೆಯೋಲೆಯ ಕಟ್ಟುಗಳನ್ನು ಕಂಡಾಗ ಅವರು ಕುತೂಹಲಗೊಂಡರು. ಬಿಜಾಪುರ ಜಿಲ್ಲೆಯಲ್ಲೆಲ್ಲ ಅಲೆದಾಡಿ ವಚನಗಳ ತಾಳೆಯೋಲೆಯ ಕಟ್ಟುಗಳನ್ನು ಕಂಡಾಗ ಅವರಿಗೆ ಒಂದು ವಜ್ರದ ಗಣಿಯೇ ದೊರೆತಂತೆ ಆಯಿತು. ಅವುಗಳ ಅಧ್ಯಯನ ಆಳವಾಗುತ್ತಿದ್ದ ಹಾಗೆ ಆ ವಚನಗಳ ಸಾಹಿತ್ಯದ ಸಮೃದ್ಧಿಗೆ ಬೆರಗಾದ ಹಳಕಟ್ಟಿಯವರು ಊರೂರುಗಳನ್ನು ತಿರುಗಿ ವಚನಗಳ ಸಂಗ್ರಹವನ್ನು ಆರಂಭಿಸಿದರು. 1920ನೆಯ ಇಸವಿಯ ಹೊತ್ತಿಗೆ ಎಷ್ಟೋ ಸಾವಿರ ಸಂಖ್ಯೆಯಲ್ಲಿ ತಾಳೆಯೋಲೆಗಳು ಹಾಗೂ ಹಸ್ತಪ್ರತಿಗಳು ಸಂಗ್ರಹವಾದವು. ಈ ಸಂಗ್ರಹ ಎಷ್ಟೊಂದು ಅಪಾರ ಮತ್ತು ಅಮೂಲ್ಯವಾಗಿತ್ತೆಂದರೆ ಈ ತಾಳೆಯೋಲೆಗಳು ಹಾಗೂ ಹಸ್ತಪ್ರತಿಗಳ ಪ್ರದರ್ಶನವೊಂದನ್ನು ಬಿಜಾಪುರ ಜಿಲ್ಲೆಯಲ್ಲಿ ಏರ್ಪಡಿಸಿ, ಆ ಜಿಲ್ಲೆಯ ಕಲೆಕ್ಟರ್ ಅವರ ಅಮೃತಹಸ್ತದಿಂದಲೇ ಆ ಪ್ರದರ್ಶನವನ್ನು ಉದ್ಘಾಟನೆ ಮಾಡಿಸಿದರು.

ಹಸ್ತಪ್ರತಿಗಳ ಸಂಗ್ರಹಕ್ಕೆ ಅವರು ಮಾಡಿದ ಪ್ರಯತ್ನ ಸ್ಮರಣೀಯವಾದುದು. ಆ ಕಾಲದಲ್ಲಿ ಅನೇಕ ಹಸ್ತಪ್ರತಿಗಳು ಪಾವಿತ್ರ್ಯದ ಹೆಸರಿನಲ್ಲಿ,

ಪೂಜಾಗೃಹಗಳಲ್ಲಿ ಕುಟ್ಟುಹಿಡಿದು ಕೂತಿದ್ದವು. ಅವು ವಂಶಪಾರಂಪರ್ಯವಾಗಿ ಬಂದ ಪವಿತ್ರವಾದವುಗಳು ಎಂಬ ಭ್ರಮೆಯಿಂದ ಅವುಗಳನ್ನು ಕೊಡಲು ಯಾರೂ ಮುಂದಾಗುತ್ತಿರಲಿಲ್ಲ. ಕೆಲವು ಅಟ್ಟಗಳಲ್ಲಿ ಮೂಲೆಗುಂಪಾಗಿ ಹುಳುಹುಪ್ಪಟೆಗಳಿಗೆ ಆಹಾರವಾಗಿದ್ದವು. ತೇವಕ್ಕೆ ಕೆಲವು ಬೂಸ್ಟು ಹಿಡಿದು ಹಾಗೆಯೇ ನಶಿಸಿಹೋಗುತ್ತಿದ್ದವು. ಇನ್ನು ಕೆಲವು ಕಡೆ ಈ ಹಸ್ತಪ್ರತಿಗಳ ಅಥವಾ ತಾಳೆಯೋಲೆಗಳ ಕಟ್ಟುಗಳ ಬೆಲೆ ತಿಳಿಯದವರು ಅವುಗಳನ್ನು ಒಲೆಗಳಿಗೆ ಉರುವಲಾಗಿ ಬಳಸುತ್ತಿದ್ದುದು ಉಂಟು. ಹೀಗೆ ಬಹುಮುಖವಾಗಿ ಅಲಕ್ಷ್ಯಕ್ಕೆ ಗುರಿಯಾಗಿದ್ದ ಹಸ್ತಪ್ರತಿಗಳನ್ನು ಹಾಗೂ ತಾಳೆಯೋಲೆಗಳ ಪ್ರತಿಗಳನ್ನು ಸಂಗ್ರಹಿಸುವುದು ಸಾಹಸದ ಮಾತಾಯಿತು. ಹಳಕಟ್ಟಿಯವರು ಕೆಲವನ್ನು ಕೊಂಡುಕೊಂಡರು. ಮತ್ತೆ ಕೆಲವನ್ನು ಅವುಗಳ ಹಿರಿಮೆಯನ್ನು ಆ ಹಸ್ತಪ್ರತಿಗಳನ್ನು ಪಡೆದಿದ್ದವರುಗಳ ಗಮನಕ್ಕೆ ತಂದು ಪ್ರಕಟಣೆಗಾಗಿ ಪಡೆದರು. ಹೀಗೆ ಅವರು ಸಂಗ್ರಹಿಸಿದ ಹಸ್ತಪ್ರತಿಗಳು ಅಪಾರವಾದ ಸಂಖ್ಯೆಯಲ್ಲಿದ್ದುವು.

ಸುಮಾರು 1920ರ ಹೊತ್ತಿಗೆ ಈ ಎಲ್ಲ ಹಸ್ತಪ್ರತಿಗಳ ಸಂಗ್ರಹ ಅವರಿಗೆ ಆಶ್ಚರ್ಯವನ್ನುಂಟುಮಾಡಿತು. ಈ ಹಸ್ತಪ್ರತಿಗಳ ಸಂಖ್ಯೆ ವಿಪುಲವಾಗಿದ್ದುದು ಅವುಗಳನ್ನು ಮುದ್ರಣಕ್ಕೆ ಸಿದ್ಧಪಡಿಸಲು ಕೆಲವರನ್ನು ನೇಮಿಸಿಕೊಂಡದ್ದೂ ಉಂಟು. ಹೀಗೆ ಸಂಗ್ರಹಿಸಿ, ವಿಶ್ಲೇಷಿಸಿ, ವರ್ಗೀಕರಿಸಿ ವಚನಗಳು, ರಗಳೆಗಳು, ಶೂನ್ಯ ಸಂಪಾದನೆ ಮತ್ತಿತರ ಕೃತಿಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಗುರುತಿಸುವ ಕೈಂಕರ್ಯವನ್ನು ಕೈಗೊಂಡರು. ಈ ಹಸ್ತಪ್ರತಿಗಳಲ್ಲಿ ಅವರಿಗೆ ವಿಶೇಷವಾದ ಬೆರಗು ಕಾದಿತ್ತು. ಕರ್ನಾಟಕದ ಹೊಸ ಧರ್ಮವೊಂದರ ಅದ್ಭುತವಾದ ಸಾಹಿತ್ಯವೇ ಅಲ್ಲಿ ಇದ್ದುದು ಆಶ್ಚರ್ಯಕರವಾಗಿತ್ತು. ಬರೀ ವಚನಗಳೇ ಅಲ್ಲದೆ ಹರಿಹರನಂತಹ ಕನ್ನಡದ ಹೆಮ್ಮೆಯ ಕವಿಯೊಬ್ಬನ ರಗಳೆಗಳು ಇಂತಹ ತಾಳೆಯೋಲೆಗಳಲ್ಲಿ ಹುದುಗಿದ್ದುದು ಅವರ ಗಮನಕ್ಕೆ ಬಂದಿತು.

ಅಪಾರವಾದ ಸಾಮಗ್ರಿಯನ್ನು ಸಂಗ್ರಹಿಸಿದ ಹಳಕಟ್ಟಿ ಅವರಿಗೆ ಅವುಗಳ ಪ್ರಕಟಣೆ ಸುಲಭವಾದದ್ದು ಎಂದು ಅನ್ನಿಸಿರಲಿಲ್ಲ. ಅಂದಿನ ಕಾಲದಲ್ಲಿ ದೊರೆತ ಒಂದೆರಡು ಪ್ರತಿಗಳ ನೆರವಿನಿಂದ ವಚನಕಾಲದ ಗ್ರಂಥಗಳನ್ನು ಪ್ರಕಟಿಸುವುದು ಅಷ್ಟೇನೂ ಸುಲಭವಾದ ಕಾರ್ಯವಾಗಿರಲಿಲ್ಲ. ಈ ಬಗ್ಗೆ ಅವರಿಗೆ ಆದ ಆಳವಾದ ಅರಿವು ಅವರ ಪ್ರಸ್ತಾವನೆಯ ಕೆಳಗಿನ ಮಾತುಗಳಲ್ಲಿ ತನಗೆ ತಾನೆ ಆಗಬಲ್ಲದು ಎಂದು ಭಾವಿಸುತ್ತೇನೆ:

"ನನಗೆ ದೊರೆತ ವಚನ ಗ್ರಂಥಗಳ ಪ್ರತಿಗಳೆಲ್ಲವೂ ಅಶುದ್ಧವಾದವುಗಳು, ಬಹಳ ಕಡೆ ಅವುಗಳು ಅರ್ಥವೇ ಆಗುವುದಿಲ್ಲ. ಆದರೂ ಅವುಗಳಲ್ಲಿಯ ಅಶುದ್ಧತೆಯನ್ನು ಆದಷ್ಟು ಮಟ್ಟಿಗೆ ತಿದ್ದಿ ಅವುಗಳನ್ನು ನಾನು ಇಲ್ಲಿ ಪ್ರಸಿದ್ಧಿಸಿದ್ದೇನೆ. ಆದರೂ ಅರ್ಥ ತಿಳಿಯದಂಥ ವಾಕ್ಯಗಳು ಈ ಗ್ರಂಥಗಳಲ್ಲಿ ಎಷ್ಟೋ ಉಳಿದಿವೆ. ಅದರಂತೆ ಈ ಪ್ರತಿಗಳಲ್ಲಿ ಇರುವ ಸಂಸ್ಕೃತ ಅವತರಣಗಳು ಅತ್ಯಂತ ಅಶುದ್ಧವಾದವುಗಳು....."

"ಪುರಾತನ ಗ್ರಂಥಗಳನ್ನು ಶೋಧಿಸಿ, ಶುದ್ಧವಾಗಿ ಅಚ್ಚು ಹಾಕುವ ಕಾರ್ಯವು ಯಾವಾಗಲೂ ಕಷ್ಟಕರವಾದುದು."

"ಪುರಾತನ ಗ್ರಂಥಗಳನ್ನು ಶುದ್ಧವಾಗಿ ಮುದ್ರಣಗೊಳಿಸಲಿಕ್ಕೆ ಹೆಚ್ಚು ಪ್ರತಿಗಳು ದೊರೆತಷ್ಟೂ ಅನುಕೂಲ....."

"ಪಾಠಾಂತರಗಳ ಬಗೆಗೆ ಮತ್ತು ದೋಷಗಳ ಬಗೆಗೆ ವಾಚಕರು ನಮಗೆ ತಿಳಿಸಿದರೆ ನಾವು ಅವರಿಗೆ ಆಭಾರಿಯಾಗುವೆವು"

ಮೇಲೆ ಉದ್ಧರಿಸಿದ 'ವಚನಸಾರ', 'ಪ್ರಭುದೇವರ ವಚನಗಳು', 'ಸಿದ್ಧರಾಮೇಶ್ವರ ವಚನಗಳು' - ಅವುಗಳಿಗೆ ಬರೆದ ಪ್ರಸ್ತಾವನೆಯ ಮಾತುಗಳು, ಹಳಕಟ್ಟಿಯವರಿಗೆ ಗ್ರಂಥ ಸಂಪಾದನೆಯ ಬಗ್ಗೆ ಇದ್ದ ಎಚ್ಚರಿಕೆಯನ್ನು, ಅಂತಹ ಸಂಪಾದಕನ ಮುಂದೆ ಇರುವ ಕಷ್ಟಗಳ ಬಗೆಗೆ ಇದ್ದ ಅರಿವನ್ನು ಬಹಳ ಸ್ಪಷ್ಟವಾಗಿ ಸೂಚಿಸುತ್ತವೆ.

ಆಶ್ಚರ್ಯವೆಂದರೆ ಆಳವಾದ ಅಧ್ಯಯನ, ಈ ಕೃತಿಗಳ ಬಗೆಗೆ ಇರುವ ಶ್ರದ್ಧೆ, ಅವುಗಳಿಂದ ಪ್ರಾಪ್ತವಾದ ವಿದ್ವತ್ತು ಹಾಗೂ ಒಳನೋಟಗಳಿಂದ ಹಳಕಟ್ಟಿಯವರು ಸಂಪಾದಿಸಿದ ವಚನಗಳು ಹಾಗೂ ರಗಳೆಗಳು ಅವರ ಪ್ರಾಮಾಣಿಕತೆ, ವಿಚಾರ ಪರಿಪಕ್ವತೆ, ಪಾಂಡಿತ್ಯ, ವಿವೇಕ - ಇವುಗಳಿಗೆ ದ್ಯೋತಕವಾಗಿವೆ. ಹೀಗೆ ಅವರು ಪ್ರಕಟಿಸಿದ ಗ್ರಂಥಗಳು 70ಕ್ಕೂ ಮೀರಿವೆ.

ಹಳಕಟ್ಟಿ ಅವರು ತಾಳೆಯೋಲೆಗಳನ್ನು ಸಂಗ್ರಹಿಸುವುದಕ್ಕೆ ಮೊದಲು ಕವಿ ಚರಿತೆಕಾರರು ಗುರುತಿಸಿದ್ದುದು ಕೇವಲ 50ವಚನಕಾರರನ್ನು ಮಾತ್ರ. ಹಳಕಟ್ಟಿ ಅವರು ಸಂಗ್ರಹಿಸಿದ ತಾಳೆಯೋಲೆಗಳಿಂದ 250ಕ್ಕೂ ಹೆಚ್ಚು ವಚನಕಾರರು ಬೆಳಕಿಗೆ ಬಂದರು ಎಂಬುದನ್ನು ಗಮನಿಸಿದರೆ, ಅವರ ತಾಳೆಯೋಲೆಗಳ ಸಂಗ್ರಹದ ಹಾಗೂ ಗ್ರಂಥ ಸಂಪಾದನೆಯ ಮಹತ್ವ ಅರ್ಥವಾಗುತ್ತದೆ.

ಆವರೆಗೂ ಪ್ರಸಿದ್ಧರಾಗಿದ್ದ ಹಾಗೂ ಅಪ್ರಸಿದ್ಧರಾಗಿದ್ದ ವಚನಕಾರರ ವಚನಗಳನ್ನೆಲ್ಲಾ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸತೊಡಗಿದರು. ಹೀಗೆ ಪತ್ರಿಕೆಯಲ್ಲಿ ಪ್ರಕಟಗೊಳ್ಳುತ್ತಿದ್ದಂತೆಯೇ ಅವುಗಳನ್ನು ಪ್ರತ್ಯೇಕ ಗ್ರಂಥ ರೂಪದಲ್ಲಿ ಹೊರತಂದರು. ಹೀಗೆ ಮೊದಲು ಪ್ರಕಟಿಸಿದ್ದು ಬಸವೇಶ್ವರರ ವಚನಗಳು ಮತ್ತು ಮಹಾದೇವಿ ಅಕ್ಕನ ವಚನಗಳು.

ಈ ಎರಡು ಗ್ರಂಥಗಳು ಪ್ರತ್ಯೇಕವಾಗಿ ಪ್ರಕಟವಾದ ಮೇಲೆ ಅವು ನಾಡಿನ ಬಹುಜನರ ಗಮನಕ್ಕೆ ಸ್ವಲ್ಪಕಾಲ ಬಾರದೇ ಹೋದುದನ್ನು ಗಮನಿಸಿದ ಹಳಕಟ್ಟಿ ಅವರು 'ಈ ಎರಡು ಗ್ರಂಥಗಳು ಯಾರ ಲಕ್ಷ್ಯವನ್ನೂ ಎಳೆಯಲಿಲ್ಲ' ಎಂದು ಉತ್ಸಾಹ ಕುಂದುವಂತಾದದ್ದುಂಟು. ಈ ಪರಿಸ್ಥಿತಿ ಬಹಳ ದಿನ ಉಳಿಯಲಿಲ್ಲ ಎನ್ನುವುದಕ್ಕೆ ಅವರು ಮುಂದೆ ಹೇಳಿದ ಈ ಮಾತುಗಳೇ ಸಾಕ್ಷಿ.

"ಈ ಎರಡೂ ಗ್ರಂಥಗಳು ಜನರಲ್ಲಿ ಒಂದು ಕ್ರಾಂತಿಯನ್ನುಂಟು ಮಾಡಿದವೆಂದು ಹೇಳಬಹುದು. ಅವುಗಳಲ್ಲಿರುವ ಉಚ್ಚ ವಿಚಾರಗಳು ಕನ್ನಡ ನಾಡಿನಲ್ಲಿ ಪ್ರಸಾರ ಹೊಂದಹತ್ತಿರುತ್ತವೆ." ಅಲ್ಲಿಂದ ಮುಂದೆ ಹಳಕಟ್ಟಿ ಅವರು ಹಿಂದಿರುಗಿ ನೋಡಬೇಕಾಗಲಿಲ್ಲ. ವಚನ ಸಂಗ್ರಹ, ಸಂಕಲನ, ವಿಶ್ಲೇಷಣೆ ಮತ್ತು ಪ್ರಕಟಣೆ ನಿರಾತಂಕವಾಗಿ ನಡೆಯತೊಡಗಿತು.

'ಗಣದಾಸಿ ವೀರಣ್ಣನವರ ವಚನಗಳು', 'ಸಂಗನ ಬಸವೇಶ್ವರನ ವಚನಗಳು', 'ದೇವರದಾಸಿಮಯ್ಯನ ವಚನಗಳು', 'ಹಡಪದಪ್ಪಣನ ವಚನಗಳು', 'ಸಕಲೇಶ ಮಾದರಸನ ವಚನಗಳು', 'ಪ್ರಭುದೇವರ ವಚನಗಳು', 'ಆದಯ್ಯನ ವಚನಗಳು', 'ಸಿದ್ಧರಾಮೇಶ್ವರನ ವಚನಗಳು', 'ಚನ್ನಬಸವೇಶ್ವರನ ವಚನಗಳು', 'ಅಂಬಿಗರ ಚೌಡಯ್ಯನ ವಚನಗಳು', 'ರೇಮ್ಮವ್ವೆಯ ವಚನಗಳು', 'ಏಲೇಶ ಕೇತಯ್ಯನ ವಚನಗಳು', 'ಸೊಡ್ಡಳ ಬಾಚರಸನ ವಚನಗಳು', 'ಅರಿವಿನ

ಮಾರಿತಂದೆಯ ವಚನಗಳು' - ಹೀಗೆ ಅನೇಕ ಪ್ರಸಿದ್ಧ, ಅಪ್ರಸಿದ್ಧ ವಚನಕಾರರ ಸಾಹಿತ್ಯ ಸಂಪದವನ್ನು ಕನ್ನಡ ಜನತೆಗೆ ನೀಡಿದರು. ಹೀಗೆ ಪ್ರಕಟಿಸಿದ ವಚನಗಳು ಸುಮಾರು 250 ವಚನಕಾರರನ್ನು ಕನ್ನಡಿಗರಿಗೆ ಪರಿಚಯಿಸಿ ವಚನ ಸಾಹಿತ್ಯದ ಹರವನ್ನೂ ಮಹತ್ವವನ್ನೂ ಒಂದೆಡೆ ಕನ್ನಡಿಗರು ಮನಗಾಣುವಂತೆ ಮಾಡಿದವು.

ಇದರ ಜೊತೆ ಅವರು ಗೂಳೂರು ಸಿದ್ಧವೀರಣಾಚಾರ್ಯನ ಶೂನ್ಯ ಸಂಪಾದನೆಯನ್ನೂ ಪ್ರಕಟಿಸಿದರು. ಅದರ ಪ್ರಸ್ತಾವನೆಯಲ್ಲಿ ಬರುವ ಈ ಮಾತನ್ನು ಗಮನಿಸಬಹುದು. "ವೀರಶೈವ ಧರ್ಮಮಂದಿರಕ್ಕೆ ಒಂದು ಪ್ರಕಾಶಮಾನವಾದ ಕಲಶವನ್ನು ಇಟ್ಟಂತೆ". ವಚನ ಸಾಹಿತ್ಯವನ್ನಲ್ಲದೆ ಹಳಕಟ್ಟಿ ಅವರು ಮೈಲಾರ ಬಸಪ್ಪ, ಸೋಮೇಕಟ್ಟೆ ಕರಿವೃಷಭೇಂದ್ರ ಮೊದಲಾದ ಶರಣರ ಪದಗಳನ್ನೂ ಶಿವಾನುಭವದಲ್ಲಿ ಪ್ರಕಟಗೊಳಿಸಿದರು.

1926ರಲ್ಲಿ ಪ್ರಕಟವಾದ 'ಶಿವಾನುಭವ'ವು 35 ಸಂಪುಟಗಳಲ್ಲಿದೆ. ಮೊದಲ ಮೂರು ವರ್ಷಗಳು ತ್ರೈಮಾಸಿಕವಾಗಿದ್ದ 'ಶಿವಾನುಭವ'ವು ಮುಂದಿನ ಐದು ವರ್ಷಗಳು ದ್ವೈಮಾಸಿಕವಾಗಿಯೂ ಅನಂತರ ಮಾಸಪತ್ರಿಕೆಯಾಗಿಯೂ ಪ್ರಕಟಗೊಂಡು. ಮೂರೂವರೆ ದಶಕಗಳ ಇತಿಹಾಸವುಳ್ಳ ಈ ಪತ್ರಿಕೆ ಅತ್ಯಂತ ಪ್ರಮುಖವಾದ ಅರ್ಜುನವಾಡ, ಅಬ್ಬಲೂರು, ಅರಕೇರಿ ಮೊದಲಾದ ಪ್ರದೇಶಗಳ ಅನೇಕ ಶಾಸನಗಳನ್ನು ಪ್ರಕಟಿಸಿ, ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಗೆ ಪೂರಕವಾದ ಸಾಹಿತ್ಯವನ್ನು ಒದಗಿಸಿದೆ.

ಅಷ್ಟೇ ಮುಖ್ಯವಾದ ಮತ್ತೊಂದು ಕಾರ್ಯವೆಂದರೆ ಹರಿಹರ ಕವಿಯ 40ಕ್ಕೂ ಹೆಚ್ಚಿನ ರಗಳೆಗಳ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದು ಹಾಗೂ ಪ್ರಕಟಿಸಿದ್ದು. ವಾಸ್ತವವಾಗಿ ಸುಮಾರು 1930ರ ಹೊತ್ತಿಗೆ ಹರಿಹರ ಕವಿಯ ಕೃತಿಗಳ ಪರಿಚಯ ಇದ್ದದ್ದು ಬೆರಳೆಣಿಕೆಯಷ್ಟು ವಿದ್ವಾಂಸರಿಗೆ ಮಾತ್ರ. ಆತನ ಅನೇಕ ರಗಳೆಗಳು ಆ ಕಾಲಕ್ಕೆ ಅಲಭ್ಯ ಎಂಬಂತೆ ಇದ್ದವು. ಅಂತಹ ಕಾಲದಲ್ಲಿ ಹಳಕಟ್ಟಿ ಅವರು ರಗಳೆಗಳನ್ನು ಸಂಗ್ರಹಿಸಿದ್ದೆ ಅಲ್ಲದೆ 'ಶಿವಾನುಭವ' ಪತ್ರಿಕೆಯಲ್ಲಿ ಹರಿಹರನ ಒಟ್ಟು 42 ರಗಳೆಗಳನ್ನು ಏಳು ಸಂಪುಟಗಳಲ್ಲಿ ಪ್ರಕಟಿಸಿ ಕನ್ನಡಿಗರೆಲ್ಲರಿಗೆ ಹರಿಹರನನ್ನು ಪರಿಚಯಿಸಿದ ಪುಣ್ಯಕ್ಕೆ ಪಾತ್ರರಾಗಿದ್ದಾರೆ.

ಪುಷ್ಪರಗಳೆ, ಲಿಂಗಾರ್ಚನೆಯ ರಗಳೆ, ತಿರುನೀಲಕಂಠನ ರಗಳೆ, ಕಣ್ಣಪ್ಪನ ರಗಳೆ, ಆನೆಯನಾರನ ಮಹಾತ್ಮೆ, ಚನ್ನಯ್ಯಗಳ ಮಹಾತ್ಮೆ, ಇಳೆಯಾಂಡ ಗುಡಿಮಾರನ ಮಹಾತ್ಮೆ, ಪ್ರಭುದೇವರ ರಗಳೆ, ರೇವಣಸಿದ್ದೇಶ್ವರ ರಗಳೆ, ಶಂಕರ ದಾಸಿಮಯ್ಯನ ರಗಳೆ, ಆದಯ್ಯನ ರಗಳೆ, ಕಾರಿಕಾಲಮ್ಮೆಯ ರಗಳೆ, ರುದ್ರಪಶುಪತಿಯ ಮಹಾತ್ಮೆ, ತಿರುನಾಳ್ನೋವರ ಮಹಾತ್ಮೆ, ಮಳೆಯರಾಜ ಶರಣರ ಮಹಾತ್ಮೆ, ಓಹಿಲಯ್ಯ ಮಹಾತ್ಮೆ, ತಿರುಕುರುಪೆಕೊಂಡರ ಮಹಾತ್ಮೆ, ಅರಿವಾಳಾಂಡರ ಮಹಾತ್ಮೆ, ಬಲಘಾಂಡ ಮೂರ್ತಿಗಳ ಮಹಾತ್ಮೆ, ಮುರುಘರ ಮಹಾತ್ಮೆ, ಅಯ್ಯಡಿಯರ ಮಹಾತ್ಮೆ, ಮಾನಕಂಜರ ಮಹಾತ್ಮೆ, ಬಾಣಶರಣರ ಮಹಾತ್ಮೆ, ಉದ್ಭಟದೇವರ ಮಹಾತ್ಮೆ, ಹಲಾಯುಧ ದೇವರ ರಗಳೆ, ಮಳೆಯರಾಜ ಶರಣರ ಮಹಾತ್ಮೆ, ಓಹಿಲಯ್ಯ ಮಹಾತ್ಮೆ, ಲಿಂಗಾರ್ಚನೆಯ ರಗಳೆ, ಸಾಮವೇದಿಗಳ ಮಹಾತ್ಮೆ, ಏಕಾಂತರಾಮಿ ತಂದೆಗಳ ಮಹಾತ್ಮೆ, ವೈಜಕ್ಕವ್ವೆಯ ರಗಳೆ, ಕೆಂಭಾವಿ ಭೋಗಣ್ಣಗಳ ರಗಳೆ, ಕೇಶಿರಾಜ ದಣ್ಣಾಯಕರ ರಗಳೆ, ಕುಂಬರ ಗುಂಡಯ್ಯನ ರಗಳೆ, ಹಾವಿನ ಹಾಳ ಕಲ್ಲಿದೇವನ ರಗಳೆ, ಅತಿಭಕ್ತನ ರಗಳೆ, ಮಲುಹಣನ ರಗಳೆ, ಭೃಂಗೀಶರನ ರಗಳೆ, ಲಿಂಗಾರ್ಚನೆಯ ರಗಳೆ, ಪ್ರಾರ್ಥನೆಯ ರಗಳೆ, ಹಂಪೆಯ ರಗಳೆ, ಪಂಪಾಕ್ಷೇತ್ರದ ರಗಳೆ, ಸಂಸಾರ ವ್ಯಾಮೋಹ ನಿರಸನ ರಗಳೆ, ಚಂಡೇಶ ಪಿಳ್ಳೆಯ ರಗಳೆ, ಅಮರನೀತಿಯ ರಗಳೆ - ಇವಿಷ್ಟು ಏಳು ಸಂಪುಟಗಳಲ್ಲಿ ಪ್ರಕಟವಾದ ರಗಳೆಗಳು. ಇನ್ನುಳಿದ ಬಾಹೂರು ಬೊಮ್ಮಯ್ಯನ ರಗಳೆ, ತೆಲುಗು ಜೊಮ್ಮಯ್ಯನ ರಗಳೆ, ಶಿವಮಹಿಮಾ ರಗಳೆ ಮತ್ತು ವೀರಭದ್ರದೇವ ರಗಳೆ ಎಂಬ ಈ ನಾಲ್ಕು 'ಶಿವಾನುಭವ'ದಲ್ಲಿ ಮಾತ್ರ ಪ್ರಕಟಗೊಂಡಿವೆ.

"ಹರಿಹರನ ರಗಳೆಗಳಲ್ಲಿ ಹಳಕಟ್ಟಿ ಅವರು ಬೆಳಕು ಕಾಣಿಸಿದ ರಗಳೆಗಳು ಒಟ್ಟು 47. ಅವುಗಳಲ್ಲಿ 17 ಪುರಾತನ ರಗಳೆಗಳು; 20ನೂತನ ರಗಳೆಗಳು; 9 ಸಂಕೀರ್ಣ ರಗಳೆಗಳು."[1]

ಶಿವಶರಣರ ವಚನಗಳು, ಶರಣರ ಪದಗಳು, ಶಾಸನಗಳು ಹಾಗೂ ಹರಿಹರನ ರಗಳೆಗಳನ್ನು ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸಿದ ಹಳಕಟ್ಟಿ ಅವರು 'ವಚನಶಾಸ್ತ್ರ ಸಾರ'ವನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಿದರು. ಈ ಸಂಪುಟಗಳು ಕ್ರಮವಾಗಿ 1923, 1931 ಮತ್ತು 1939ರಲ್ಲಿ ಪ್ರಕಟವಾಗಿದ್ದು, ವಚನಗಳ ಆಧಾರದಂತೆ ಲಿಂಗಾಯತ ಧರ್ಮದ ತತ್ವಗಳನ್ನು, ಸೃಷ್ಟಿ, ಜ್ಞಾನ, ಕ್ರಿಯ ಷಟ್ಸ್ಥಲ ವಿವರಗಳನ್ನೂ, ವೀರಶೈವ ಆಚರಣೆಗಳನ್ನೂ ವಿಶದೀಕರಿಸಿದ್ದಾರೆ.

ಮೂರು ಭಾಗಗಳಲ್ಲಿ ಸುಮಾರು 145 ಶಿವಶರಣರ ಚರಿತ್ರೆಗಳನ್ನೂ ಹಾಗೆಯೇ ಮತ್ತೊಂದು ಭಾಗದಲ್ಲಿ ಶಿವಶರಣೆಯರ ಚರಿತ್ರೆಗಳನ್ನೂ ಪ್ರಕಟಿಸಿದ್ದಾರೆ. 770 ಶರಣರನ್ನು ಕುರಿತ ಅಮರಗಣಾಧೀಶ್ವರರ ಚರಿತ್ರೆಗಳನ್ನೂ ರೂಪಿಸಿದ ಹಳಕಟ್ಟಿ ಅವರ ಮತ್ತೊಂದು ಮಹತ್ವದ ಕೃತಿ 246 ಪುಟಗಳ 'ಶಿವಾನುಭವ ಶಬ್ದಕೋಶ'.

ಇಷ್ಟೆಲ್ಲಾ ಪ್ರಕಟಣೆಗಳಿಗೆ ಕಾರಣವಾದ, ತ್ರೈಮಾಸಿಕವಾಗಿ ಆರಂಭವಾಗಿ ಕೊನೆಗೆ ಮಾಸಪತ್ರಿಕೆಯಾಗಿ 35 ವರ್ಷಗಳ ಸೇವೆ ಮಾಡಿದ 'ಶಿವಾನುಭವ' ಪತ್ರಿಕೆಯ ಚಂದಾದಾರರ ಸಂಖ್ಯೆ ಮುನ್ನೂರನ್ನು ಎಂದೂ ಮೀರಿರಲಿಲ್ಲ ಎಂಬುದನ್ನು ನೆನೆದಲ್ಲಿ ವಚನ ಸಾಹಿತ್ಯ, ಶಿವಶರಣರ ಚರಿತ್ರೆಗಳು ಹಾಗೂ ರಗಳೆಗಳು-ಇವುಗಳನ್ನು ಕನ್ನಡಿಗರಿಗೆ ಮುಟ್ಟಿಸಬೇಕೆಂಬ ಹಳಕಟ್ಟಿ ಅವರ ಅದಮ್ಯವಾದ ಸಾಹಿತ್ಯಪ್ರೇಮ ಎಂತಹದು ಎಂಬುದು ಮನವರಿಕೆಯಾಗುತ್ತದೆ.

ಈ ವಚನ ಸಾಹಿತ್ಯವನ್ನು ಮೆಚ್ಚಿಕೊಂಡು ತನ್ನನ್ನು ಅದಕ್ಕೇ ಮಾರಿಕೊಂಡಂತೆ ಬದುಕಿದವರು ಹಳಕಟ್ಟಿಯವರು. ಬದುಕಿನ ಉದ್ದಕ್ಕೂ ವಚನಗಳು, ಶರಣರ ಹಾಡುಗಳು, ಷಟ್ಪದಿ, ಶರಣ ಶರಣೆಯರ ಚರಿತ್ರೆಗಳು - ಇವುಗಳಲ್ಲಿಯೇ ತಮ್ಮ ಮನಸ್ಸನ್ನು ತೊಡಗಿಸಿಕೊಂಡ ಹಳಕಟ್ಟಿ ಅವರು ಮನಸಾರೆ ಹೀಗೆ ಹೇಳಿಕೊಂಡಿದ್ದಾರೆ:

"ಈ ಸಾಹಿತ್ಯದಲ್ಲಿ 'ಧರ್ಮಾಂಧ'ತೆ ಇಲ್ಲ. ಅದು ಅಂತಹ ಧರ್ಮವಾಗಿದೆ. ಶರಣರು ಜಾತಿಯನ್ನು ಮನ್ನಿಸುವುದಿಲ್ಲ. ಪ್ರತಿಯೊಬ್ಬನೂ ಕಠಿಣ ಪರಿಶ್ರಮ ಮಾಡಬೇಕು. ಭಿಕ್ಷೆ ಬೇಡಬಾರದು ಎಂದು ಅವರು ಉಪದೇಶ ಮಾಡಿದ್ದಾರೆ. ಅವರ ದೃಷ್ಟಿಯಲ್ಲಿ ಕಾಯಕವೇ ಪೂಜೆ. [illegible]ವಾಗಿ ಕಾಯಕವೇ ಕೈಲಾಸ. ಪುರುಷನಿಗೆ ಕೊಟ್ಟ ಸ್ಥಾನವನ್ನು ಅವರು ಸ್ತ್ರೀಯ[illegible] ಕೊಟ್ಟಿದ್ದಾರೆ. ಅದರಿಂದಾಗಿ ತಮ್ಮ ಸುಂದರ ವಚನಗಳಿಂದ ಕನ್ನಡ ಸಾಹಿತ್ಯವನ್ನು ಅಲಂಕರಿಸಿದ ಶಿವಶರಣೆಯರು ಅನೇಕ ಜನರಿದ್ದಾರೆ."

"ನಾನು ಮುಖ್ಯವಾಗಿ ಮೂರು ಕಾರ್ಯಗಳನ್ನು ಕೈಗೊಂಡಿದ್ದೇನೆ; ಶಿಕ್ಷಣ, ಸಾಹಿತ್ಯ, ಹಣಕಾಸು. ಕೊನೆಯದು ಒಕ್ಕಲುತನ ಮತ್ತು ಸಹಕಾರಕ್ಕೆ ಸಂಬಂಧಿಸಿದ್ದು" ಎಂದು ತಮ್ಮ ಜೀವನದ ಬಗ್ಗೆ ನಮ್ಮ ಗಮನ ಸೆಳೆಯುವ ಹಳಕಟ್ಟಿ ಅವರು ಕರ್ಮಯೋಗಿಗಳು. ಒಂದು ಪ್ರದೇಶದ ಅಭ್ಯುದಯಕ್ಕೆ ಶಿಕ್ಷಣ ಹಾಗೂ ಹಣ ಎಷ್ಟು ಮುಖ್ಯ ಎಂಬುದನ್ನು ಅರಿತವರಾಗಿದ್ದರು. ಹಾಗೆಯೇ ಪ್ರಾಥಮಿಕ ಶಾಲಾ ಹಂತದಿಂದ ಹಿಡಿದು ಕಾಲೇಜು ಮಟ್ಟದವರೆಗೆ ಹಲವು ಪ್ರೌಢಶಾಲೆಗಳನ್ನೂ ಒಳಗೊಂಡಂತೆ ಬಿಜಾಪುರ ಜಿಲ್ಲೆಯ ಹಿಂದುಳಿದ ಜನರ ಶೈಕ್ಷಣಿಕ ಅಭಿವೃದ್ಧಿಯನ್ನು ಧ್ಯೇಯವಾಗಿಟ್ಟುಕೊಂಡು ಬಿ.ಎಲ್.ಡಿ.ಇ. ಎಂಬ ಬೃಹತ್ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿ, ಆ ಸಂಸ್ಥೆಯ ಮೂಲಕ ಜಿಲ್ಲಾದ್ಯಂತ ಶೈಕ್ಷಣಿಕ ವಾತಾವರಣವನ್ನು ನಿರ್ಮಾಣ ಮಾಡಿ ಶಿಕ್ಷಣ ಸುಧಾರಕರು ಎನಿಸಿಕೊಂಡಿದ್ದಾರೆ. ಹಳಕಟ್ಟಿ ಅವರು ಅತ್ಯುತ್ತಮ ಸಂಘಟಕರೂ ಹೌದು.

ಬಿಜಾಪುರದ ಕಾರ್ಯನಿರ್ವಹಣಾ ಸಮಿತಿಯ ಅಧ್ಯಕ್ಷರಾಗಿ ವಿಶ್ವೇಶ್ವರಯ್ಯನವರ ಸಲಹೆಯಂತೆ ಭೂತನಾಳ ಕೆರೆಯ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸಿ ಅಲ್ಲಿನ ಜನರ ನೀರಿನ ಕೊರತೆಯ ನಿವಾರಣೆಗೆ ಪರಿಹಾರ ಒದಗಿಸಿಕೊಟ್ಟರು. ಬಿಜಾಪುರ ನಗರದಿಂದ ಹಿಡಿದು ಜಿಲ್ಲೆಯಲ್ಲೆಲ್ಲಾ ತಮ್ಮ ಕಾರ್ಯವನ್ನು ವ್ಯಾಪಕಗೊಳಿಸಿದರಲ್ಲದೆ ಜಿಲ್ಲಾ ಲೋಕಲ್ ಬೋರ್ಡ್‌ನ ಸದಸ್ಯರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಜಿಲ್ಲಾ ಅಭಿವೃದ್ಧಿ ಮಂಡಲ ಹಾಗೂ ವಿಲ್ಸನ್ ಬರಗಾಲ ನಿವಾರಣಾ ಸಂಸ್ಥೆಯ ಕಾರ್ಯದರ್ಶಿಗಳಾಗಿ ಕಾರ್ಯ ನಿರ್ವಹಿಸಿ ಆ ಜಿಲ್ಲೆಯ ಭೂಅಭಿವೃದ್ಧಿಯ ಕಾರ್ಯದಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿದರು. ಹಿಂದುಳಿದ ವರ್ಗದವರಾದ ನೇಕಾರರಿಗಾಗಿ ನೇಕಾರರ ಸಹಕಾರ ಸಂಘವನ್ನು, ಹತ್ತಿ ಮಾರಾಟ ಸಂಘವನ್ನು ಸ್ಥಾಪಿಸಿದ್ದೇ ಅಲ್ಲದೆ ರಾಜ್ಯದಲ್ಲಿ ಪ್ರಥಮ ಶ್ರೇಣಿಯಲ್ಲಿ ಮುನ್ನಡೆಯುತ್ತಿರುವ ಶ್ರೀ ಸಿದ್ದೇಶ್ವರ ಅರ್ಬನ್ ಕೋ ಆಪರೇಟಿವ್ ಬ್ಯಾಂಕ್ ಅನ್ನೂ ಸ್ಥಾಪಿಸಿದರು.

1917ರಲ್ಲಿ ಬಿಜಾಪುರ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಗಳಾದರು. ಆಮೇಲೆ 1920ರಲ್ಲಿ ಆಗಿನ ಮುಂಬಯಿ ರಾಜ್ಯದ ವಿಧಾನ ಪರಿಷತ್ತಿನ ಸದಸ್ಯರಾಗಿ ಆಯ್ಕೆಯಾದರು. ಮುಂದೆ ವಚನ ಸಾಹಿತ್ಯಕ್ಕೆ ತಮ್ಮನ್ನು ಅರ್ಪಿಸಿಕೊಂಡಮೇಲೆ ಮತ್ತೆ ಅವರು ಚುನಾವಣೆಗೆ ನಿಲ್ಲಲಿಲ್ಲ. ಸಮಾಜಕಲ್ಯಾಣದಲ್ಲಿ ತಮ್ಮನ್ನೇ ತೊಡಗಿಸಿಕೊಂಡು ಸಂಘಟನೆಯ ಕಾರ್ಯದಲ್ಲಿ ತಲ್ಲೀನರಾಗುತ್ತಿದ್ದಂತೆ ಅವರ ಮನಸ್ಸು ಕನ್ನಡ ಭಾಷೆ ಹಾಗೂ ಕರ್ನಾಟಕ ಏಕೀಕರಣಗಳ ಕಡೆಗೆ ಹೊರಳಿತು. ಜೂನ್ 1928ರಲ್ಲಿ ಧಾರವಾಡದಲ್ಲಿ ನಡೆದ ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಯಾದ ಹಳಕಟ್ಟಿಯವರು ಹೆಸರಿಗೆ ಮಾತ್ರ ಅದರ ಅಧ್ಯಕ್ಷರಾಗಿ ಉಳಿಯಲಿಲ್ಲ. ಮಹಾರಾಷ್ಟ್ರ, ಮದ್ರಾಸ್ ರಾಜ್ಯ, ಹೈದರಾಬಾದ್ ಪ್ರಾಂತ್ಯ ಮತ್ತಿತರ ಭಾಗಗಳಲ್ಲಿ ಹರಡಿ ಹಂಚಿ ಹೋಗಿದ್ದ ಕರ್ನಾಟಕದ ಏಕೀಕರಣ ಚಳವಳಿಗೆ ಉದ್ದೀಪನೆಯನ್ನು ನೀಡಲು ತೀರ್ಮಾನಿಸಿದರು. ಅದೇ ವರ್ಷ ಅಕ್ಟೋಬರ್ ತಿಂಗಳಿನಲ್ಲಿ ಕರ್ನಾಟಕ ಏಕೀಕರಣ ಚಳವಳಿಗೆ ಚಾಲನೆಯನ್ನು ನೀಡಲು 'ನವ ಕರ್ನಾಟಕ' ಎಂಬ ಹೆಸರಿನ ವಾರಪತ್ರಿಕೆಯನ್ನು ಆರಂಭಿಸಿ, ಆ ಮೂಲಕ ಕರ್ನಾಟಕ ಏಕೀಕರಣದ ಹೋರಾಟಕ್ಕೆ ಸಜ್ಜಾದರು.

ಹೀಗೆ ಸಾಹಿತ್ಯ, ಸಮಾಜ ಸೇವೆ, ಶಿಕ್ಷಣ ಇವುಗಳೆಲ್ಲಕ್ಕೂ ತಮ್ಮನ್ನೇ ಅರ್ಪಿಸಿಕೊಂಡ ಹಳಕಟ್ಟಿಯವರು ತುಂಬಾ ಶಿಸ್ತಿನ ಜೀವನ ನಡೆಸಿದವರು. ಮುಂಜಾನೆ ಬೇಗ ಏಳುವುದು; ಹೊತ್ತಿಗೆ ಮುಂಚೆ ಮಲಗುವುದು ಅವರ ಅಭ್ಯಾಸ. ಮುಂಜಾನೆ ಒಮ್ಮೆ ಚಹಾ ತೆಗೆದುಕೊಂಡರೆ ಮತ್ತೆ ಸಂಜೆ ಒಮ್ಮೆ ಚಹಾ. ಮಧ್ಯಾಹ್ನ 11 ಗಂಟೆಗೆ ಊಟ, ರಾತ್ರಿ 8-30ಕ್ಕೆ ಮತ್ತೆ ಊಟ. ಹೀಗೆ ಇದೇ ಶಿಸ್ತಿನ ಜೀವನ ನಡೆಸಿದ ಹಳಕಟ್ಟಿ ಅವರಿಗೆ ಬಿಳಿಯ ವಸ್ತ್ರ ಎಂದರೆ ತುಂಬಾ ಪ್ರಿಯವಾದುದು. ಕಚ್ಚೆಪಂಚೆ, ಮುಚ್ಚಿದ ಕೋಟು, ತಲೆಗೆ ಬಿಜಾಪುರದ ಪೇಟ, ಕಾಲಲ್ಲಿ ಬಿಳಿಯ ಕ್ಯಾನ್‌ವಾಸ್ ಬೂಟು-ಇವು ಹಳಕಟ್ಟಿಯವರ ಸಮವಸ್ತ್ರ ಎಂದರೂ ನಡೆಯುತ್ತದೆ.

ಹಳಕಟ್ಟಿ ಮತ್ತು ಭಾಗೀರಥಿದೇವಿ ಅವರದು 58 ವರ್ಷಕ್ಕೂ ಮೀರಿದ ದೀರ್ಘವಾದ ದಾಂಪತ್ಯ. ಚಂದ್ರಶೇಖರ, ಸರಸ್ವತಿ, ಗುರುಪುತ್ರ, ಪಾರ್ವತಿಬಾಯಿ ಮತ್ತು ಶಿವಶಂಕರ - ಇವರುಗಳು ಅವರ ಮಕ್ಕಳು. ತಮ್ಮ ಬದುಕಿನಲ್ಲಿ ಬಡತನಕ್ಕಾಗಿ ಎಂದೂ ಹಳಕಟ್ಟಿ ಅವರಾಗಲಿ ಅವರ ಕುಟುಂಬದವರಾಗಲಿ ವ್ಯಥೆ ಪಟ್ಟಂತೆ ತೋರುವುದಿಲ್ಲ. ಬದುಕಿನುದ್ದಕ್ಕೂ ಶರಣರಾಗಿ ಬದುಕಿದ ಈ ದಂಪತಿಗಳು ಮೊದಲ ತಮ್ಮ ಹಿರಿಮಗನಾದ ಚಂದ್ರಶೇಖರನನ್ನು ಕಳೆದುಕೊಳ್ಳಬೇಕಾಯಿತು. ಉತ್ತಮ ಹುದ್ದೆಯಲ್ಲಿದ್ದ ಚಂದ್ರಶೇಖರ ತೀರಿಕೊಂಡಾಗ ಕೂಡ ಆ ದುಃಖವನ್ನು ಸಹಿಸಿದ ಹಳಕಟ್ಟಿ ಅವರ ರೀತಿ ಅನ್ಯಾದೃಶವಾದುದು. ಹಾಗೆಯೇ ಹಿರಿಯ ಮಗಳಾದ ಸರಸ್ವತಿಯನ್ನು ಕಳೆದುಕೊಂಡಾಗಲೂ ಹಳಕಟ್ಟಿ ಅವರು ಶರಣರಾಗಿ ಅದನ್ನು ಸಹಿಸಿಕೊಂಡರು.

ಬಹುಶಃ ಸುಮಾರು 59 ವರ್ಷಗಳ ಸುದೀರ್ಘ ದಾಂಪತ್ಯ ಜೀವನ ನಡೆಸಿದ ಹಳಕಟ್ಟಿಯವರ ಬದುಕಿನ ಉದ್ದಕ್ಕೂ ಸಂಗಾತಿಯಾಗಿದ್ದವರು ಮೂವರು. ಒಬ್ಬರು ಸಹಧರ್ಮಿಣಿ ಭಾಗೀರಥಿದೇವಿಯವರು; ಮತ್ತೊಂದು ಮನೆಯಿಂದ ಮುದ್ರಣಾಲಯಕ್ಕೆ ಮತ್ತು ಮುದ್ರಣಾಲಯದಿಂದ ಮನೆಗೆ ಕರೆದೊಯ್ಯುತ್ತಿದ್ದ ಸೈಕಲ್, ಮತ್ತೊಂದು ಎಂದರೆ ಶರಣ ಸಾಹಿತ್ಯ.

ಆಶ್ಚರ್ಯ ಎಂದರೆ ಮಡದಿ ವಿಧಿವಶರಾದ (25.5.64) ತಿಂಗಳಲ್ಲಿ ಅವರೂ (29.6.64) ಕೊನೆಯುಸಿರೆಳೆದರು.

ಅವರ ಮುದ್ರಣಾಲಯವಾದ 'ಹಿತಚಿಂತಕ'ದ ಬಗ್ಗೆ ಹೇಳದಿದ್ದರೆ ಲೋಪವಾದೀತು. 'ವಚನಶಾಸ್ತ್ರಸಾರ: 1' ಕೃತಿಯನ್ನು ಹಳಕಟ್ಟಿಯವರು ಮುದ್ರಿಸಲು ಕ್ರಿಶ್ಚಿಯನ್ ಮಿಷನರಿಗಳ ಮುದ್ರಣಾಲಯಕ್ಕೆ ಕೊಟ್ಟಾಗ, ಅದನ್ನು ಓದಿ ಅವರು ಆ ಗ್ರಂಥದಲ್ಲಿರುವ ಧರ್ಮದ ವಿಚಾರಗಳು ತಮ್ಮ ಧರ್ಮವನ್ನೇ ಹೋಲುವುದರಿಂದ ಮುದ್ರಿಸಲು ನಿರಾಕರಿಸಿದರು. ಆಗ ಹಳಕಟ್ಟಿ ಅವರು ಆ ಕೃತಿಯನ್ನು ಬೆಳಗಾವಿಯ ಮುದ್ರಣಾಲಯವೊಂದರಲ್ಲಿ ಮುದ್ರಣ ಮಾಡಿಸಿದರು. ಆದರೆ ಮುಂದೆ ತಾವು ಸಂಗ್ರಹಿಸಿ, ವಿಶ್ಲೇಷಿಸಿ, ಪ್ರಕಟಣೆಗೆ ಸಿದ್ಧಪಡಿಸಿದ ಇತರ ಸಾಹಿತ್ಯದ ಪ್ರಕಟಣೆಗಾಗಿ ಸ್ವಂತ ಮುದ್ರಣಾಲಯ ವೊಂದನ್ನು ತೆರೆಯಲು ನಿರ್ಧರಿಸಿದರು. ಅದಕ್ಕಾಗಿ ತಾವಿದ್ದ ಮನೆಯನ್ನೇ ಮಾರಿ ಮುದ್ರಣಾಲಯವನ್ನು ತೆರೆದರು. ಕೊನೆಯವರೆಗೂ ಅವರು ಬಾಡಿಗೆಯ ಮನೆಯಲ್ಲೆ ಇದ್ದು ಈ ಮುದ್ರಣಾಲಯ 'ಹಿತಚಿಂತಕ'ದ ಹೆಸರನ್ನು ಸಾರ್ಥಕಗೊಳಿಸಿದರು. ಮುದ್ರಣಾಲಯದಲ್ಲಿ ಕೆಲಸ ಮಾಡುತ್ತಿದ್ದವರನ್ನೆಲ್ಲಾ ತಮ್ಮ ಕುಟುಂಬದವರಂತೆ ನಡೆಸಿಕೊಂಡವರು ಹಳಕಟ್ಟಿಯವರು. ಮನೆಯಿಂದ ಸೈಕಲ್ ಮೇಲೆ ಬಂದ ಹಳಕಟ್ಟಿಯವರು

ಅದನ್ನು ಮುದ್ರಣಾಲಯದೊಳಗೆ ತರಲು ಯಾರಿಗೂ ಅವಕಾಶ ನೀಡುತ್ತಿರಲಿಲ್ಲ. ತಾವೇ ಅದನ್ನು ಒಯ್ದು ಒಳಗೆ ಇಡುತ್ತಿದ್ದರು ಮತ್ತು ಹೊರತರುತ್ತಿದ್ದರು. ಇನ್ನೊಬ್ಬರಿಗೆ ಎಂದೂ ಭಾರವಾಗದಂಥ ಬದುಕು ಅವರದು.

ಹಳಕಟ್ಟಿ ಅವರನ್ನು ಅನೇಕ ಸಂಘಸಂಸ್ಥೆಗಳು ಗೌರವಿಸಿದವು. ಅವುಗಳಲ್ಲಿ ಕೆಲವನ್ನು ನಾವು ಇಲ್ಲಿ ಗಮನಿಸಬಹುದು.

1931ರಲ್ಲಿ ಅವರು ಮುಂಬಯಿ ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾದರು. 1956ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯವು ಗೌರವ ಡಿ.ಲಿಟ್. ಪದವಿಯನ್ನಿತ್ತು ಗೌರವಿಸಿತು. 1928ರಲ್ಲಿ ಮೂರನೇ ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಯಾದರು. 1933ರಲ್ಲಿ ಧಾರವಾಡದಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರಾದರು. ಅವರ ಸಾಹಿತ್ಯದ ಸೇವೆಯನ್ನು ಗುರುತಿಸಿದ ಕನ್ನಡ ಸಾಹಿತ್ಯ ಪರಿಷತ್ತು 1926ರಲ್ಲಿ ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗೌರವಿಸಿತು.

ಹಳಕಟ್ಟಿಯವರು ಬಸವಣ್ಣನವರ ವಚನಗಳನ್ನು ಇಂಗ್ಲಿಷ್‌ಗೆ ಅನುವಾದಿಸಿ 'ಇಂಡಿಯನ್ ಆಂಟಿಕ್ವರಿ'ಯಲ್ಲಿ ಪ್ರಕಟಗೊಳಿಸಿದರು. ಅಷ್ಟೇ ಅಲ್ಲ ವಚನಗಳ ಗಾಯನಕ್ಕೂ ವ್ಯವಸ್ಥೆ ಮಾಡಿಸಿದರಲ್ಲದೆ ಶ್ರೇಷ್ಠ ಸಂಗೀತಕಾರರನ್ನು ವಚನ ಗಾಯನ ರೆಕಾರ್ಡಿಂಗ್‌ಗಾಗಿ ಮುಂಬಯಿಯವರೆಗೆ ಕಳುಹಿಸಿದರು. ಹೀಗೆ ವಚನ ಸಾಹಿತ್ಯದ ಪ್ರಸಾರ ಕಾರ್ಯವನ್ನು ಕೈಗೊಂಡ ಅವರನ್ನು 'ವಚನ ಪಿತಾಮಹ' ಎಂದು ಕರೆದಿರುವುದು ಉಚಿತವಾಗಿದೆ.

❑

1. ಪುಟ 55 ಬಸವಪಥ – ಸಂಪುಟ 2, ಸಂಚಿಕೆ 2, –ಜೂನ್1980–ಕನ್ನಡ ಗ್ರಂಥ ಸಂಪುಟ – 'ಹಳಕಟ್ಟಿ ಅವರ ವಿಶಿಷ್ಟ ಕೊಡುಗೆ'– ಲೇಖಕರು: ಡಾ.ವಿದ್ಯಾಶಂಕರ್.

## ಆಲೂರ ವೆಂಕಟರಾಯರು

ವೇಣುಗೋಪಾಲ ಸೊರಬ

ಒಂದು ನಾಡನ್ನು ಒಂದು ಭಾಷೆಯ ಮೂಲಕ ಅನ್ವೇಷಿಸುವ ಪ್ರಯತ್ನ ಸಾಂಸ್ಕೃತಿಕ ಅನ್ವೇಷಣೆಗಳಲ್ಲಿ ತನ್ನದೇ ಆದ ಪ್ರಾಮುಖ್ಯ ಪಡೆದಿದೆ. ಮೇಲಾಗಿ, ಇಂತಹ ಅನ್ವೇಷಣೆಯೇ ಸಾಂಸ್ಕೃತಿಕ ನೆಲೆಯ ಒಂದು ಮಹತ್ತರ ಘಟ್ಟವೂ ಅಥವಾ ಅದೇ ಸಂಸ್ಕೃತಿಯ ಅರಳುವಿಕೆಯೂ ಆಗಬಲ್ಲದು.

ಆಲೂರ ವೆಂಕಟರಾಯರಂತಹ ನಾಡು ನುಡಿ ದ್ರಷ್ಟಾರರ ಜೀವನ, ಕೃತಿಗಳನ್ನು ಕುರಿತು ಚಿಂತಿಸಬೇಕಾದರೆ, ಇಂತಹ ಹಿನ್ನೆಲೆ ಅವಶ್ಯಕ. 'ಕರ್ನಾಟಕತ್ವ'ವನ್ನೇ ತಮ್ಮ ಜೀವನಮಂತ್ರವನ್ನಾಗಿ ಕಂಡುಕೊಂಡ ಈ ಕನ್ನಡಗರಡಿಯಾಳಿನ ಹೋರಾಟದ ಬದುಕು ಒಂದು ರೋಮಾಂಚಕಾರಿ ಅನುಭವ.

ಆಲೂರ ವೆಂಕಟರಾಯರು ಇಪ್ಪತ್ತನೆಯ ಶತಮಾನದಲ್ಲಿ ಕರ್ನಾಟಕದ ಧೂಳಿನ ಕಣ ಕಣದಲ್ಲಿಯೂ ಕರ್ನಾಟಕ ಮಾತೆಯ ಕಾಣಲು ಹಾತೊರೆದರು. ಇದಕ್ಕೆ ಅವರಿಗೆ ಪ್ರೇರಣೆ ನೀಡಿದ್ದು ಮಹಾರಾಷ್ಟ್ರದ - ಸಂಪರ್ಕ ಸಹವಾಸಗಳು; ಅದಕ್ಕೂ ಮಿಗಿಲಾಗಿ, ಬಾಲಗಂಗಾಧರ ತಿಲಕರ ರಾಷ್ಟ್ರ ಮನೋಧರ್ಮ, ಅವರ ಕಾರ್ಯತತ್ಪರತೆ ಮತ್ತು ಬರವಣಿಗೆಯ ಮೂಲಕ ಅವರು ಜನಮನವನ್ನು ಗೆದ್ದ ರೀತಿ, ಆಲೂರರಿಗೆ ಸ್ಫೂರ್ತಿ ನೀಡಿತು ಎನ್ನುವುದು ಗಂಭೀರ ಚಿಂತನಕ್ಕೆ ಎಡೆಕೊಡುತ್ತದೆ.

ಆಲೂರ ವೆಂಕಟರಾಯರು ತಮ್ಮ ವಿದ್ಯಾರ್ಥಿಜೀವನದಲ್ಲಿಯೇ ಕನ್ನಡಕ್ಕೆ ಸೊಂಟಕಟ್ಟಿದರು. ಆದರೆ ತಮ್ಮ ಕಾನೂನು ಪರೀಕ್ಷೆಯನ್ನು ಮುಗಿಸಿಕೊಂಡು, ಫಲಿತಾಂಶ ಬರುವ ಮೊದಲೇ ಅವರು ನವವೃಂದಾವನ, ಆನೆಗೊಂದಿ, ಹಂಪಿಗಳಿಗೆ ಭೇಟಿ ಕೊಡದೆ ಇದ್ದಿದ್ದರೆ ಬಹುಶಃ ಅವರ ಕನ್ನಡ ಸೇವೆಯ ಆಯಾಮ ಬೇರೆಯಾಗಿರಲು ಸಾಧ್ಯವಾಗುತ್ತಿತ್ತೇನೊ. ಅವರ ಕನ್ನಡ ದರ್ಶನದ ತಾತ್ವಿಕ ನೆಲೆಗಟ್ಟು ಬೇರೆಯೇ ಆಗಿರುತ್ತಿತ್ತೇನೊ! ಅವರು ಕನ್ನಡ ಭವಿಷ್ಯವನ್ನು 'ಗತ ವೈಭವ'ದ ನೆಲೆಗಟ್ಟಿನಲ್ಲಿ ಕಂಡುಕೊಂಡರು. ವೀರರತ್ನಗಳನ್ನು ಹುಡುಕಿ ತೆಗೆದರು; ಭವಿಷ್ಯದ ಆಭರಣಗಳನ್ನು ರೂಪಿಸಲು ಬೇಕಾದ ಸೂತ್ರಗಳನ್ನು ನಿರೂಪಿಸಲು ಯತ್ನಿಸಿದರು. ಆದರೆ ಅವರು ತಮ್ಮ ಜೀವನದ ಮಧ್ಯಂತರ ಕಾಲದಲ್ಲಿಯೇ, ಬಾಹ್ಯಜೀವನದಿಂದ ಒಳಗೆ ಸೆಳೆದುಕೊಂಡದ್ದು ಒಂದು ವಿಪರ್ಯಾಸ. ಕನ್ನಡದ ದ್ರಷ್ಟಾರರಾದ ಆಲೂರರು, ಜೀವನ ಪರ್ಯಂತವೂ ಕನ್ನಡದ ಕೈಂಕರ್ಯವನ್ನು ಒಂದೇ ದೃಷ್ಟಿಯಿಂದ ಮುಂದುವರಿಸಿದ್ದರೆ, ಕನ್ನಡದ ಒಗ್ಗೂಡುವಿಕೆಗೆ ಇನ್ನಷ್ಟು ಇಂಬು ದೊರೆಯತ್ತಿತ್ತೆಂದು ಭಾವಿಸಬಹುದು. ಹೊಸ ಜನಾಂಗದ ತರುಣರಿಗೆ ಕನ್ನಡದ ವ್ರತ ಮತ್ತಷ್ಟು ಶಕ್ತಿಪೂರ್ಣವಾಗಿ ಹರಿದು ಬರುತ್ತಿತ್ತು ಎನ್ನಬಹುದು. ಆಲೂರರು ಮಾಡಿದ ಕನ್ನಡದ ಸೇವೆ, ಕನ್ನಡವನ್ನು ಕಟ್ಟುವ ಕೆಲಸ, ಕನ್ನಡವನ್ನು ಒಗ್ಗೂಡಿಸುವ ಕೆಲಸ, ಕನ್ನಡಿಗರಲ್ಲಿ ಕನ್ನಡತನವನ್ನು ಹುರಿದುಂಬಿಸುವ ಕೆಲಸ ಇವು ಅನ್ಯಾದೃಶವಾದವು.

ಆಲೂರ ವೆಂಕಟರಾಯರು 1880ರ ಜುಲೈ 12ರಂದು ಬಿಜಾಪುರದಲ್ಲಿ ಭೀಮರಾಯ-ಬಾಗೀರಥೀಬಾಯಿ ಇವರ ಮಗನಾಗಿ ಜನಿಸಿದರು. ಇವರ ತಂದೆ ಭೀಮರಾಯರು ಸರಕಾರೀ ವೃತ್ತಿಯಲ್ಲಿದ್ದುದರಿಂದ, ಇವರ ಶಿಕ್ಷಣ

ನವಲಗುಂದ, ಗದಗ, ಹಾನಗಲ್, ಧಾರವಾಡ ಹೀಗೆ ಬೇರೆ ಬೇರೆ ಊರುಗಳಲ್ಲಿ ನಡೆಯಿತು.

ಧಾರವಾಡದ ವಿದ್ಯಾರ್ಥಿ ಜೀವನ, ಆಲೂರ ವೆಂಕಟರಾಯರು ಪ್ರಬುದ್ಧ ಜೀವಮಾನದಲ್ಲಿ ಬೆಳೆಸಿಕೊಂಡ ಎಲ್ಲ ಬಗೆಯ ಆಸಕ್ತಿಗಳಿಗೆ ಅಂಕುರಾರ್ಪಣವನ್ನು ಒದಗಿಸಿತು. ಈ ವೇಳೆಗೆ ಭೀಮರಾಯರು ಆಲೂರಿನ ಜಹಗೀರಿ ಹಿಡಿದಿದ್ದರಿಂದ ಶ್ರೀಮಂತಿಕೆಯ ಮೆರಗು ಒದಗಿ ಬಂದಿತ್ತು. ಓದಿನ ವಿಷಯವಾಗಿ ಆತ್ಮಪ್ರತ್ಯಯ. ಇದರ ಪರಿಣಾಮವಾಗಿ, ಆಲೂರರು ಅನ್ಯ ವಿಷಯಗಳಲ್ಲಿ ಆಸಕ್ತಿ ತಳೆಯಲು ಸಹಕಾರಿಯಾಯಿತು. ಹೈಸ್ಕೂಲಿನ ವಿದ್ಯಾರ್ಥಿಯಾಗಿದ್ದಾಗಲೇ ಇವರು ಸಂಸ್ಕೃತ 'ವೇಣೀ ಸಂಹಾರ' ನಾಟಕವನ್ನು ರಂಗದ ಮೇಲೆ ಸ್ನೇಹಿತರ ನೆರವಿನಿಂದ ತಂದರು. ಗಣಪತಿ ಉತ್ಸವ, ಕನ್ನಡಮೇಳಗಳನ್ನು ಕೂಡಿಸಿದರು. ಲಕ್ಷ್ಮಣ ಘಟಿಕಾರ ಎಂಬ ವಿದ್ಯಾರ್ಥಿ ಕವಿ ರಚಿಸಿದ 15-20 ಪದಗಳಿಂದ ಕೂಡಿದ, 'ಗಜಾನನ ಸ್ತವನ' ಎಂಬ 'ಮೇಳಾಪದ ಸಂಗ್ರಹ'ವನ್ನು ಆಲೂರರು ಪ್ರಕಟಿಸಿದರು.

ಇಡೀ ಭಾರತಾದ್ಯಂತ ಅಂದು ನಡೆಯುತ್ತಿದ್ದ ಘಟನೆಗಳು ಆಲೂರರನ್ನು, ದೇಶದ ಹಿತಚಿಂತನೆಯ ಕಡೆ ಮನ ಮಾಡುವಂತೆ ಪ್ರೇರೇಪಣೆ ನೀಡಿದವು. ಇವುಗಳ ಜೊತೆಗೆ ಸ್ವಾಮಿ ವಿವೇಕಾನಂದರು ಅಮೇರಿಕೆಯಲ್ಲಿ ಏರಿಸಿದ ಭಾರತದ ಆಧ್ಯಾತ್ಮಿಕ ಪತಾಕೆಯೂ ಸೇರಿತು.

1897ರಲ್ಲಿ ಆಲೂರರು ಮ್ಯಾಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಇಡೀ ಶಾಲೆಗೆ ಎರಡನೆಯವರಾಗಿ ಉತ್ತೀರ್ಣರಾದರು. ಆ ವರ್ಷ ಎಲ್ಲ ಕಡೆಯೂ ಪ್ಲೇಗ್‌ಮಾರಿ ಹಬ್ಬಿದ್ದರಿಂದ, ಆಲೂರರಿಗೆ ಕಾಲೇಜು ಸೇರಲಿಕ್ಕೆ ಆಗಲಿಲ್ಲ. ಆದರೆ ಆಲೂರರು, ಮನೆಯಲ್ಲಿ ತಂದೆ ಸಂಗ್ರಹಿಸಿಟ್ಟಿದ್ದ ಗ್ರಂಥರಾಶಿಯನ್ನು ಲೂಟಿ ಮಾಡಿದರು. ಮಹಾಭಾರತ ಮತ್ತು ಕೆಲವು ಮರಾಠಿ ಧಾರ್ಮಿಕ ಗ್ರಂಥಗಳ ಅಧ್ಯಯನ ಆಲೂರರ ಮನಸ್ಸನ್ನು ಜಾಗೃತಗೊಳಿಸಿದವು. ದಾಭೋಳೇಕರ ಎಂಬ ಮರಾಠಿ ಲೇಖಕರ 'ಧರ್ಮ ಮೀಮಾಂಸೆ' ಗ್ರಂಥವನ್ನು ಓದಿದಾಗ ಅವರಿಗೆ ಕೆಲವು ಸಂಶಯಗಳು ಹುಟ್ಟಿಕೊಂಡವು. ಆ ಗ್ರಂಥ ಮ್ಯಾಕ್ಸ್‌ಮುಲ್ಲರ ಕೃತಿಯನ್ನು ಆಧರಿಸಿತ್ತು. ಆದ್ದರಿಂದ ಆಲೂರರು ಮ್ಯಾಕ್ಸ್‌ಮುಲ್ಲರಿಗೇ ಸಂಶಯ ಪರಿಹಾರಕ್ಕಾಗಿ ಪತ್ರ ಬರೆದರು. ಆದರೆ ವಿಳಾಸ ಖಚಿತವಾಗಿಲ್ಲದ ಕಾರಣ, ಉತ್ತರ ಪಡೆಯುವ ಭಾಗ್ಯ ಅವರಿಗೆ ದೊರೆಯಲಿಲ್ಲ.

ಆದರೆ ಗ್ರಂಥ ರಚನೆ ಮಾಡಬೇಕೆಂಬ ಹುಮ್ಮಸ್ಸು ಆಲೂರರನ್ನು ಬಿಡಲಿಲ್ಲ. ಅವರು ಪ್ರೊ. ಭಾನು ಅವರ 'ನೀತಿ ಮೀಮಾಂಸೆ'ಯನ್ನು ಅನುವಾದಿಸಲು ಆ ಕೂಡಲೇ ಪ್ರಾರಂಭಿಸಿದರು.

1899ರಲ್ಲಿ ಪುಣೆಯ ಫರ್ಗ್ಯುಸನ್ ಕಾಲೇಜನ್ನು ಆಲೂರರು ಸೇರಿದರು. ಆಲೂರರು ಕಾಲೇಜು ವಿದ್ಯಾರ್ಥಿಯಾಗಿಯೂ ಸಾದಾ ಜೀವನವನ್ನು ಮುಂದುವರಿಸಿದರು. ಕಾಲೇಜಿನ ಅಂದಿನ ವಾತಾವರಣ ದೇಶಸೇವೆಗೆ ಬೇಕಾದ ಒಲವನ್ನು ಮೂಡಿಸಿತು. ಆಲೂರರು ತಮ್ಮ ಭವಿಷ್ಯ ಜೀವನವನ್ನು ರೂಪಿಸಲು, ಕಾಲೇಜಿನ ಚಟುವಟಿಕೆಗಳು, ಪುಣೆಯಲ್ಲಿನ ಬೆಳವಣಿಗೆಗಳು ಸಹಕಾರಿಯಾದವು. ಆಗ ಅವರಿಗೆ ಹೊಳೆದದ್ದು-ವಕೀಲಿ ಪರೀಕ್ಷೆ ಮಾಡಿಕೊಂಡು, ದೇಶ ಸೇವೆಗೆ ತೊಡಗುವುದು. 'ಕೇಸರಿ'ಯಂತಹ ಪ್ರಭಾವೀ ಪತ್ರಿಕೆಯೊಂದನ್ನು ಕನ್ನಡದಲ್ಲಿ ನಡೆಸುವುದು.

ಫರ್ಗ್ಯುಸನ್ ಕಾಲೇಜಿನ ಪ್ರೊಫೆಸರುಗಳಾದ ಭಾಟೆ, ಕರ್ವೆ, ರಾಜವಾಡೆ, ಗೋಖಲೆ - ಇವರುಗಳು ವೆಂಕಟರಾಯರಿಗೆ ಸ್ಫೂರ್ತಿಯ ಸೆಲೆಗಳಾದರು. ಅವರ ಉಪನ್ಯಾಸಗಳು ಆಲೂರರ ಮೇಲೆ ಗಾಢ ಪರಿಣಾಮ ಬೀರಿದವು. ವೀರ ಸಾವರಕರ, ಸೇನಾಪತಿ ಬಾಪಟ, ಆಲೂರರ ಸಹಪಾಠಿಗಳಾಗಿದ್ದು ಆಲೂರರಿಗೆ ರಾಷ್ಟ್ರಪ್ರೇಮದಲ್ಲಿ ವೀರನಿಷ್ಠೆಯುಂಟಾಗಲು ಸಹಕಾರಿಯಾಯಿತು. ಟಿಳಕರು ವೆಂಕಟರಾಯರ ತಾರುಣ್ಯದ ದಿನಗಳ ಧೀರೋದಾತ್ತ ನಾಯಕರಾದರು.

ಅದೇ ಸಮಯದಲ್ಲಿ ಫರ್ಗ್ಯುಸನ್ ಕಾಲೇಜಿನ ಆವರಣದಲ್ಲಿ ಕನ್ನಡ ಕಾಯಕವನ್ನು ಕೈಗೊಳ್ಳುವಲ್ಲಿ ಆಲೂರರು ಮುಂದಾದರು. ಉತ್ತರ ಕರ್ನಾಟಕದಿಂದ ಅಲ್ಲಿ ಬಂದು ಸೇರಿದ್ದ ವಿದ್ಯಾರ್ಥಿಗಳೆಲ್ಲ ಒಗ್ಗೂಡಿ ಕನ್ನಡ ಚಟುವಟಿಕೆಗಳಿಗೆ ತೊಡಗಿದರು. ಕ್ರೀಡಾ - ವಿನೋದ ಕಾರ್ಯಕ್ರಮಗಳಲ್ಲಿ ಆಲೂರರು ನೇತೃತ್ವ ವಹಿಸಿದರು.

1903ರಲ್ಲಿ ಬಿ.ಎ. ಪದವಿ ಪಡೆದ ವೆಂಕಟರಾಯರು, ಮುಂಬಯಿಯಲ್ಲಿ ಕಾನೂನಿನ ಅಭ್ಯಾಸಕ್ಕೆ ತೊಡಗಿ, 1905ರಲ್ಲಿ ವಕೀಲರಾದರು.

ವೆಂಕಟರಾಯರು ಬೇಸಿಗೆ ರಜೆಯಲ್ಲಿ, ನವ ವೃಂದಾವನ, ಆನೆಗೊಂದಿಗಳನ್ನು ಸಂದರ್ಶಿಸಿ ಅಲ್ಲಿಂದ ಹಂಪಿಗೆ ಹೋದರು. ಹಂಪಿಯ ಅವಶೇಷಗಳು ಅವರ ಮನಸ್ಸಿನ ಮೇಲೆ ಅಪೂರ್ವ ಪರಿಣಾಮ ಉಂಟುಮಾಡಿದವು. ಅವರ ಮಾತಿನಲ್ಲೇ ಹೇಳುವುದಾದರೆ:

"ನಮ್ಮ ವಿಜಯನಗರವು ಅಲ್ಲಿ ಪ್ರತ್ಯಕ್ಷವಾಗಿಯೂ ವಿಸ್ತಾರವಾಗಿಯೂ ನನ್ನ ಮುಂದೆ ಬಿದ್ದಿದೆ. ಆ ದಿವಸದ ದರ್ಶನವು ನನ್ನ ಮನದಲ್ಲಿ ವಿದ್ಯುತ್ತಿನ ಸಂಚಾರವನ್ನು ಮಾಡಿಸಿತು. ಚಲನಚಿತ್ರ ಪಟದಲ್ಲಿ ವಿದ್ಯುದ್ದೀಪದ ಬಲದಿಂದ ಮೂರ್ತಿಗಳು ಮೂಡುವಂತೆ ನನ್ನ ಹೃದಯದಲ್ಲಿ ಕರ್ನಾಟಕ ದೇವಿಯ ಸುಂದರ ಮೂರ್ತಿಯು ಒಡಮೂಡಹತ್ತಿತು. ಆ ದರ್ಶನವು ನನ್ನ ತಲೆಯಲ್ಲಿ ನಾನಾ ವಿಧ ತರಂಗಗಳಿಗೆ ಇಂಬುಗೊಟ್ಟಿತು. ಹೃದಯ ಸಮುದ್ರವು ಅಲ್ಲೋಲ ಕಲ್ಲೋಲವಾಯಿತು. ಆ ದಿವಸವು ನನ್ನ ಜೀವನ ಕ್ರಮದಲ್ಲಿ ಕ್ರಾಂತಿಯನ್ನು ಮಾಡಲಿಕ್ಕೆ ಕಾರಣವಾಯಿತು."

ವೆಂಕಟರಾಯರ ಪಾಲಿಗೆ ಈ ಸಂದರ್ಭ ಅಂತರಂಗದ ಕದವನ್ನು ತೆರೆಯಿಸಿತು. ಇದೇ ಕಾಲಘಟ್ಟದಲ್ಲಿ ನಡೆದ ವಂಗಭಂಗ ಚಳವಳಿ ಆಲೂರರ ಜೀವನದಲ್ಲಿ ಸ್ವದೇಶೀ ವ್ರತ ಕೈಗೊಳ್ಳುವಂತೆ ಪ್ರೇರೇಪಣೆ ನೀಡಿತು. ವಕೀಲಿ ವೃತ್ತಿಯನ್ನು ಅದೇ ತಾನೇ ಆರಂಭಿಸಿದ್ದ ವೆಂಕಟರಾಯರಿಗೆ, ಕಾಲವನ್ನು ದಂಡ ಮಾಡುವ ಹವ್ಯಾಸ ಹಿಡಿಸುತ್ತಿರಲಿಲ್ಲ. ಆದ್ದರಿಂದ ಅವರು ಕರ್ನಾಟಕದ ಇತಿಹಾಸ, ಸಾಹಿತ್ಯಗಳ ವ್ಯಾಸಂಗಕ್ಕೆ ತೊಡಗಿದರು. ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಪ್ರವೇಶಿಸಿದರು. ಸಂಘದ ಸ್ಥಿತಿ ಅಷ್ಟೊಂದು ಸಮರ್ಪಕವಾಗಿಲ್ಲದ ಕಾರಣ, ಅದರ ಕಾರ್ಯಭಾರವನ್ನು ಹೊತ್ತುಕೊಂಡರು. 'ವಾಗ್ಭೂಷಣ' ಪತ್ರಿಕೆಯ ಸಂಪಾದಕತ್ವವನ್ನು ವಹಿಸಿಕೊಂಡರು, ತಮ್ಮ ಸಾಮರ್ಥ್ಯದಿಂದ ಆ ಪತ್ರಿಕೆಗೆ ಹೊಸ ರೂಪವನ್ನು ಕೊಟ್ಟರು.

ವಿದ್ಯಾವರ್ಧಕ ಸಂಘಧ ಗ್ರಂಥ ಭಂಡಾರ ಆಲೂರರ ಆಸಕ್ತಿಯನ್ನು ತಣಿಸುವಷ್ಟು ಸಮೃದ್ಧವಾಗಿರಲಿಲ್ಲ. ಕನ್ನಡದಲ್ಲಿ ಗ್ರಂಥಗಳ ಸಂಖ್ಯೆ ತೀರ ಕಡಿಮೆಯಾಗಿತ್ತು. ಇದ್ದ ಗ್ರಂಥಗಳ ಸ್ಥಿತಿ ಕೂಡ ಸಮರ್ಪಕವಾಗಿರಲಿಲ್ಲ. ಕನ್ನಡದಲ್ಲಿ ಉತ್ತಮ ಗ್ರಂಥ ರಚನೆಗೆ ಮರಾಠಿ ಪ್ರಭಾವ ಅಡ್ಡಬಂದಂತೆ

ಅವರಿಗೆ ತೋಚಿತು. ಮೈಸೂರು, ಮಂಗಳೂರು ಕಡೆಗಳಲ್ಲಿ ಪ್ರಕಟವಾಗುತ್ತಿದ್ದ ಗ್ರಂಥಗಳ ಭಾಷಾ ರೂಪ ಏಕರೂಪವಾಗಿರಲಿಲ್ಲ. ಈ ಭಾಷಾಭೇದವನ್ನು ತೊಡೆಯುವುದು ಹೇಗೆ? ಆಲೂರರ ವಿಚಾರಧಾರೆ ಹೀಗೆ ಹರಿಯಿತು. ಇದರ ಪರಿಣಾಮವಾಗಿ, ಅವರು ಕನ್ನಡ ಗ್ರಂಥಕರ್ತರ ಸಮ್ಮೇಳನವನ್ನು ಕರೆಯುವುದಕ್ಕೆ ಅವಕಾಶ ಮಾಡಿಕೊಟ್ಟಿತು.

ಕನ್ನಡ ಗ್ರಂಥಕರ್ತರ ಸಮ್ಮೇಳನವನ್ನು ಧಾರವಾಡದಲ್ಲಿ, ಕರ್ನಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕ ಅಧಿವೇಶನದ ಅಂಗವಾಗಿ, 1907ರ ಜೂನ್ ತಿಂಗಳಲ್ಲಿ ಕರೆಯಲಾಯಿತು. ಈ ಸಮ್ಮೇಳನಕ್ಕೆ ಕರ್ನಾಟಕದ ನಾನಾ ಮೂಲೆಗಳಿಂದ ಗ್ರಂಥಕರ್ತರೂ, ಶಿಕ್ಷಕರೂ ಆಗಮಿಸಿದ್ದರು. ಈ ಸಮ್ಮೇಳನದಲ್ಲಿ, ಕರ್ನಾಟಕದ ಎಲ್ಲ ಭಾಗದ ಜನರಿಗೂ ಸಮ್ಮತವಾಗುವ ರೀತಿಯಲ್ಲಿ ಗ್ರಂಥಗಳನ್ನು ಬರೆದು ಪ್ರಕಟಿಸಬೇಕೆಂದು ನಿರ್ಣಯವಾಯಿತು. ಈ ಸಮ್ಮೇಳನದ ಅಧ್ಯಕ್ಷತೆ ವಹಿಸಿದವರು ಪ್ರಸಿದ್ಧ ಗ್ರಂಥಕರ್ತ ಶ್ರೀ ಎಸ್.ಜಿ. ನರಸಿಂಹಾಚಾರ್ಯರು. ಮಾರನೆಯ ವರ್ಷವೇ, ವಿದ್ಯಾವರ್ಧಕ ಸಂಘಧ ಆಶ್ರಯದಲ್ಲಿಯೇ ಧಾರವಾಡದಲ್ಲಿ ಗ್ರಂಥಕರ್ತರ ಎರಡನೆಯ ಸಮ್ಮೇಳನ ನಡೆಯಿತು. ಈ ಸಮ್ಮೇಳನದಲ್ಲಿಯೂ ಭಾಷೆಯ ಏಕರೂಪತೆ ಬಗ್ಗೆ ನಿರ್ಣಯವಾಯಿತು.

1908ರಿಂದಲೇ ಆಲೂರ ವೆಂಕಟರಾಯರು ಗ್ರಂಥಕರ್ತರ ಮೂರನೆಯ ಸಮ್ಮೇಳನ ಬೆಂಗಳೂರಿನಲ್ಲಿ ನಡೆಯಬೇಕೆಂದು ಸರ್ವ ಪ್ರಯತ್ನ ನಡೆಸಿದರು. ಆದರೆ ಆ ಪ್ರಯತ್ನ ಯಶಸ್ವಿಯಾದದ್ದು ಆರು ವರ್ಷಗಳ ನಂತರ. ಆಗಲೂ ಅದು ಮೂರನೆಯ ಸಾಹಿತ್ಯ ಸಮ್ಮೇಳನದೊಂದಿಗೆ ಸಂಮಿಳಿತವಾಗಿ, 1915ರಲ್ಲಿ ನಡೆಯಿತು. ಕರ್ಪೂರ ಶ್ರೀನಿವಾಸರಾಯರು, ಶ್ರೀ ಎಚ್.ವಿ. ನಂಜುಂಡಯ್ಯ, ದಿವಾನ್ ಸರ್. ಎಂ. ವಿಶ್ವೇಶ್ವರಯ್ಯ - ಇವರುಗಳ ಬೆಂಬಲದೊಂದಿಗೆ ನಡೆದ ಆ ಸಮ್ಮೇಳನ ಒಂದು ಬಹುದೊಡ್ಡ ಕೆಲಸಕ್ಕೆ ನಾಂದಿಯಾಯಿತು. ಅದೆಂದರೆ, ಕರ್ನಾಟಕ ಸಾಹಿತ್ಯ ಪರಿಷತ್ತಿನ ಸ್ಥಾಪನೆ. ಈ ಸಮ್ಮೇಳನದ ಸೂತ್ರಧಾರರಾಗಿ ಅಪ್ರತ್ಯಕ್ಷವಾಗಿ ಕಾರ್ಯ ನಿರ್ವಹಿಸಿದವರು ಆಲೂರ ವೆಂಕಟರಾಯರೇ. ಅವರು ಧಾರವಾಡದಲ್ಲಿದ್ದುಕೊಂಡೇ ಈ ಕಾರ್ಯವನ್ನು ಆಗು ಮಾಡಿದರು.

ಆಲೂರರು ಗ್ರಂಥರಚನೆ ಮತ್ತು ಪ್ರಕಾಶನದ ವಿಷಯವನ್ನು ತೀಕ್ಷ್ಣವಾಗಿ ಪರಿಗಣನೆಗೆ ತೆಗೆದುಕೊಂಡರು. ಅವರ ದೃಷ್ಟಿಯಲ್ಲಿ ಪ್ರೌಢ ಗ್ರಂಥಗಳನ್ನೇ ಪ್ರಕಟಣೆಗೆ ತೆಗೆದುಕೊಳ್ಳಬೇಕಾಗಿತ್ತು. ಅವರಿಗೆ ತೃಪ್ತಿಕರವಾದ ಹಸ್ತಪ್ರತಿ ಕಂಡುಬರದಿದ್ದಾಗ, ತಾವೇ ಆ ಕೆಲಸಕ್ಕೆ ಕೈಹಾಕಿದರು. ಹರ್ಬರ್ಟ್ ಸ್ಪೆನ್ಸರ್‌ನ 'Education' ಎಂಬ ಪುಸ್ತಕದ ಅನುವಾದವನ್ನು ಕೈಗೊಂಡರು. ಅನುವಾದದ ಗುಣಮಟ್ಟವನ್ನು ಅವರು ಬಹಳ ಶ್ರದ್ಧೆಯಿಂದ ಕಾಪಾಡಿಕೊಂಡರು. ಇದಕ್ಕಾಗಿ ಮಿತ್ರರ ಸ್ಪಷ್ಟ ಅಭಿಪ್ರಾಯ ಕೇಳಿಕೊಂಡರು. ಈ ಅನುವಾದ ಸಂಪೂರ್ಣವಾದಾಗ, ಅದರ ಪ್ರಕಟನೆಯ ಉದ್ದೇಶದಿಂದ ಕರ್ನಾಟಕ ಗ್ರಂಥ ಪ್ರಸಾರಕ ಮಂಡಲವೆಂಬ ಸಹಕಾರೀ ಪ್ರಕಾಶನ ಸಂಸ್ಥೆಯನ್ನು ಸ್ಥಾಪಿಸಿದರು. 1908ರಲ್ಲಿ ಸ್ಥಾಪಿತವಾದ ಈ ಸಂಸ್ಥೆಯ ಷೇರುದಾರರು ರೂ. 5ನ್ನು ಕಟ್ಟಿ ಗ್ರಂಥಗಳನ್ನು ಪಡೆಯಬಹುದಾಗಿತ್ತು. ಈ ಸಂಸ್ಥೆಯ ಮೂಲಕ 'ಶಿಕ್ಷಣ ಮೀಮಾಂಸೆ' ಮತ್ತು 'ಸಂಸಾರಸುಖ' ಎಂಬ ಎರಡು ಕೃತಿಗಳನ್ನು ಪ್ರಕಟಿಸಿದರು. ಆದರೆ ಮುದ್ರಿಸಲು ಹೆಚ್ಚು ಗ್ರಂಥಗಳಿಲ್ಲದೆ, ಈ ಗ್ರಂಥಗಳೇ ಪುನರ್‌ಮುದ್ರಣಗೊಳ್ಳಬೇಕಾಗಿ ಬಂದು; ಪ್ರಸಾರಕ ಮಂಡಲ ನಿಂತುಹೋಯಿತು.

'ಶಿಕ್ಷಣ' ಅಥವಾ 'ಶಿಕ್ಷಣ ಮೀಮಾಂಸೆ' ಎಂಬ ಹರ್ಬರ್ಟ್ ಸ್ಪೆನ್ಸರ್‌ನ ಅನುವಾದಿತ ಕೃತಿಯೇ ಆಲೂರರ ಮೊಟ್ಟಮೊದಲ ಗ್ರಂಥವಲ್ಲ, ಅದಕ್ಕೂ ಮೊದಲೇ ಅವರು 'ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ ವಿದ್ಯಾರಣ್ಯರು' ಎಂಬ ಸ್ವಂತ ಕೃತಿಯನ್ನು ರಚಿಸಿದ್ದರು. ಈ ಕೃತಿಯ ರಚನೆಗೆ ಸ್ಫೂರ್ತಿ ಕೊಟ್ಟದ್ದು ಅವರ ಆನೆಗೊಂದಿಯ ಪ್ರವಾಸದ ಫಲ. "ಕರ್ನಾಟಕತ್ವದ ಅಭಿಮಾನ ಹುಟ್ಟಿಸುವುದಕ್ಕೆ ನಾನು ಬರೆದ ಮೊಟ್ಟಮೊದಲಿನ ಪುಸ್ತಕ ಈ 'ಶ್ರೀ ವಿದ್ಯಾರಣ್ಯರ ಚರಿತ್ರೆ'" ಎಂದು ಅವರು ಈ ಕೃತಿಯ ಬಗ್ಗೆ ಹೇಳಿಕೊಂಡಿರುವುದು ಮೆಚ್ಚುವಂತಹ ಸಂಗತಿ.

1912ರಲ್ಲಿ ಆಲೂರ ವೆಂಕಟರಾಯರು ತಮ್ಮ ಆಚಾರ್ಯ ಕೃತಿ 'ಕರ್ನಾಟಕ ಗತವೈಭವ'ವನ್ನು ಪ್ರಕಟಿಸಿದರು. ಕನ್ನಡಿಗರ ಪಾಲಿಗೆ ಇದೊಂದು ಅತ್ಯಂತ ಮಹತ್ತರದ ಕೃತಿ. ಅನೇಕ ಕನ್ನಡಿಗರಿಗೆ ತಮ್ಮ ನೆಲೆ ಏನೆಂಬುದನ್ನು ಕಣ್ತೆರಿಸಿ ತೋರಿದ ಕೃತಿ 'ಗತವೈಭವ'. ಆಲೂರರು 1905ರಲ್ಲಿ ನವವೃಂದಾವನ, ಆನೆಗೊಂದಿ, ಹಂಪಿಗಳ ಪ್ರವಾಸ ಕಾಲದಲ್ಲಿ ಕನಸಾಗಿ ಮೂಡಿಬಂದ ಕನ್ನಡತನದ ಅರಿವು ಹೆಪ್ಪುಗಟ್ಟಿದ 'ಗತವೈಭವ' ಅವರ ತಪಸ್ಸಿನ ಫಲ.

ಪ್ರಸಿದ್ಧ ವಿಮರ್ಶಕ ಡಾ. ರಂ.ಶ್ರೀ. ಮುಗಳಿಯವರು, 'ಗತವೈಭವ'ದ ಬಗ್ಗೆ ಆಡಿರುವ ಈ ಮಾತುಗಳನ್ನು ಮೆಲುಕುಹಾಕಬಹುದು:

"ಇದೊಂದು ಸಣ್ಣಸ್ವರೂಪದ ಯುಗಪ್ರವರ್ತಕ ಕೃತಿಯಾಗಿದೆ. ಕನ್ನಡ ಜನತೆಯ ಕಣ್ಣನ್ನು ಇದು ತೆರೆಯಿಸಿತು. ಕನ್ನಡ ಹೃದಯವನ್ನು ಕೆರಳಿಸಿತು, ಅರಳಿಸಿತು. ಶತಶತಮಾನದಿಂದ ಹೆರವರ ತೊತ್ತಾಗಿ ಸ್ವಂತದ ಅರಿವನ್ನು ಕಳೆದುಕೊಂಡು ಸುಪ್ತವಾಗಿದ್ದ ಜಡವಾದ ಕಣ್ಣನ್ನು ಇದು ಅಗಲವಾಗಿ ತೆರೆಯಿಸಿತು. ವಿಶಾಲವಾದ ನೋಟವನ್ನು ಕೊಟ್ಟಿತು. ಭಾರತ ಮತ್ತು ಕರ್ನಾಟಕ ಇವುಗಳ ಸಮ್ಯಗ್ದರ್ಶನವನ್ನು ಒದಗಿಸಿತು."

'ಗತವೈಭವ'ದ ಈ ಕೆಳಗಿನ ಮಾತುಗಳ ವೀರ್ಯವತ್ತಾದ ಶೈಲಿಯನ್ನು, ತನ್ನಲ್ಲಿ ಆವಿರ್ಭವಿಸಿಕೊಳ್ಳದ ಕನ್ನಡಿಗನೇ ಇಲ್ಲ ಎನ್ನಬಹುದು:

"ನಾನು ಕನ್ನಡಿಗನು, ಕರ್ನಾಟಕವು ನನ್ನದು ಎಂಬ ಸದ್ವಿಚಾರ ತರಂಗಗಳಿಂದ ಯಾವನ ಹೃದಯವು ಅತ್ಯಾನಂದದಿಂದ ಪುಲಕಿತಗೊಳ್ಳುವುದಿಲ್ಲವೋ ಕನ್ನಡ ತಾಯಿಗೆ ಈಗ ಬಂದೊದಗಿರುವ ವಿಷಮ ಸ್ಥಿತಿಯಲ್ಲಿ ಯಾವಾತನ ಹೃದಯವು ತಲ್ಲಣಿಸುವುದಿಲ್ಲವೋ ಅದು ಹೃದಯವಲ್ಲ, ಕಲ್ಲಿನ ಬಂಡೆ; ದೇಹವಲ್ಲ, ಮೋಟು ಮರ."

"ನಮ್ಮ ಕರ್ನಾಟಕದ ವಿಷಯಕ್ಕೆ ಅಭಿಮಾನ ಪಡತಕ್ಕ ಸಂಗತಿಗಳೇನಿವೆ? ನಮ್ಮದೇನು ರಾಷ್ಟ್ರವೇ? ನಮಗೇನು ಇತಿಹಾಸವಿದೆಯೇ?" ಇಂತಹ ಪ್ರಶ್ನೆಗಳೇ ಈ ಕೃತಿಯ ರಚನೆಗೆ ಕಾರಣವಾಯಿತು ಎಂದು ಆಲೂರರು ಹೇಳಿಕೊಂಡಿದ್ದಾರೆ.

ಆಲೂರರ ಕರ್ನಾಟಕದ ಕನಸು, ಕೇವಲ ಗತವೈಭವವನ್ನು ಸ್ಮರಿಸುವುದರಲ್ಲೇ ಕೊನೆಗೊಳ್ಳಲಿಲ್ಲ. 'ಕರ್ನಾಟಕದ ವೀರರತ್ನಗಳು' (1930), ' ಕರ್ನಾಟಕತ್ವದ ಸೂತ್ರಗಳು' (1950) ಮತ್ತು 'ಕರ್ನಾಟಕತ್ವದ ವಿಕಾಸ' (1957) - ಗ್ರಂಥಗಳ ಮೂಲಕ ಅವರು ಕರ್ನಾಟಕ ದರ್ಶನವನ್ನು ಸಮಗ್ರಗೊಳಿಸಿದರು; ಈ ದರ್ಶನಕ್ಕೆ ಭದ್ರವಾದ ನೆಲೆಗಟ್ಟು ಹಾಕಿದರು. ಗತವೈಭವದಿಂದ ಹಿಡಿದು ಹೊಸ ಕರ್ನಾಟಕ ಕಟ್ಟುವುದಕ್ಕೆ ಬೇಕಾದ ಚೌಕಟ್ಟನ್ನು ನಿರ್ಮಿಸಿ ಪ್ರಾಣಪ್ರತಿಷ್ಠಾಪನೆಯನ್ನು ಮಾಡಿದರು.

'ಕರ್ನಾಟಕದ ವೀರರತ್ನಗಳು' ಗ್ರಂಥದಲ್ಲಿ ಕರ್ನಾಟಕದ ವೀರ ಪರಂಪರೆಯನ್ನು ಆಲೂರರು ಚಿತ್ರಿಸಿದ್ದಾರೆ. ಇಂತಹ ಚಿತ್ರಣದ ಉದ್ದೇಶ, ಕನ್ನಡಿಗರಲ್ಲಿ ನಾಡುನುಡಿಗಳಿಗಾಗಿ, ಹೋರಾಟದ ಕೆಚ್ಚು ಪ್ರಜ್ವಲಿಸುವಂತೆ ಮಾಡುವುದೇ ಆಗಿದೆ, ಎಂದು ಅವರೇ ಹೇಳಿಕೊಂಡಿದ್ದಾರೆ. ಭಾಷಾಶೈಲಿ ಬಗೆಗೆ ಕೂಡ ಅವರು "ಕನ್ನಡ ವಾಙ್ಮಯದಲ್ಲಿ ಹೊಸ ತರದ ವೀರ ಭಾಷಾಶೈಲಿಯೊಂದನ್ನು ಹುಟ್ಟಿಸುವುದಕ್ಕೆ ಪ್ರಯತ್ನಿಸಿದುದಾಗಿ ಹೇಳಿಕೊಂಡಿದ್ದಾರೆ.

ಈ ವೀರರತ್ನಗಳು ಕೃತಿ ಬರೆಯುವುದಕ್ಕೆ, ಬಹಳ ಮೊದಲೇ ಆಲೂರರು ಬರೆದ 'ಶ್ರೀ ವಿದ್ಯಾರಣ್ಯ ಚರಿತ್ರೆ' (1907) ಅವರ ಇನ್ನೊಂದು ಉಜ್ವಲ ಕೃತಿ. ಇಲ್ಲಿ ಅವರಿಗೆ ಪ್ರಧಾನವಾಗಿ ಕಂಡುಬರುವುದು "ಕರ್ನಾಟಕತ್ವದ ಸ್ಫೂರ್ತಿಯನ್ನು, ಅಭಿಮಾನವನ್ನು ಕನ್ನಡಿಗರಲ್ಲಿ ತುಂಬಿದ, ಈಗಲೂ ತುಂಬಬಹುದಾದ" ಒಬ್ಬ ಮಹಾನ್ ರಾಷ್ಟ್ರ ನಿರ್ಮಾತನ ದಿವ್ಯದರ್ಶನ.

'ಕರ್ನಾಟಕತ್ವದ ಸೂತ್ರಗಳು', 'ಗತವೈಭವ'ದ ಮುಂದಿನ ಹೆಜ್ಜೆ. ಈ ಗ್ರಂಥ ರಚನೆಗೆ ಕಾರಣವಾದದ್ದು, "ಕರ್ನಾಟಕ ಅವಶ್ಯವೆ?", "ರಾಷ್ಟ್ರೀಯ ಐಕ್ಯಕ್ಕೆ ಪ್ರಾಂತೀಯತೆ ಘಾತಕವಾಗದೆ?" ಎಂಬ ಸಂಶಯಾತ್ಮಕ ಪ್ರಶ್ನೆಗಳು ತಲೆ ಎತ್ತಿದಾಗ,

"ವಿಶ್ವ, ಭಾರತ, ಕರ್ನಾಟಕಗಳ ಪರಸ್ಪರ ಸಂಬಂಧ'ವನ್ನು ವ್ಯಾವಹಾರಿಕವಾಗಿ, ತಾತ್ವಿಕವಾಗಿ, ಆಧ್ಯಾತ್ಮಿಕವಾಗಿ ವಿವರಿಸಿ ಬರೆದ ಕಿರುಕೃತಿ" ಇದೆಂದು, ಡಾ. ಸೂರ್ಯನಾಥ ಕಾಮತರು ಈ ಕೃತಿ ಬಗ್ಗೆ ಸಂಗ್ರಹವಾಗಿ ಹೇಳಿದ್ದಾರೆ. ಕರ್ನಾಟಕತ್ವವನ್ನು ಪ್ರತಿಪಾದಿಸುವ ಒಂದು ನೂರು ಸೂತ್ರಗಳನ್ನು ಆಲೂರರು ಇದರಲ್ಲಿ ಕೊಟ್ಟಿದ್ದಾರೆ.

"ಕರ್ನಾಟಕತ್ವವೆಂದರೆ, ಕೇವಲ ದೇಶಾಭಿಮಾನವಲ್ಲ; ಕೇವಲ ಭಾಷಾಭಿಮಾನವಲ್ಲ; ಕೇವಲ ಇತಿಹಾಸಾಭಿಮಾನವಲ್ಲ; ಇವೆಲ್ಲವುಗಳನ್ನು ಮೀರಿದ, ಇವೆಲ್ಲವುಗಳನ್ನು ಒಳಗೊಂಡ ಪರಿಶುದ್ಧ ಭಾವನೆ." - ಇಂತಹ ಸೂತ್ರೀಕರಣ, ಆಲೂರರ ಹೃದಯವೈಶಾಲ್ಯವನ್ನು ಪ್ರತಿಬಿಂಬಿಸುತ್ತದೆ.

ಕರ್ನಾಟಕತ್ವದ ವಿಕಾಸದಲ್ಲಿ ತಮ್ಮ ಕಿರಿದಾದ ಪಾತ್ರವನ್ನು ಹೇಳಿದ ಆಲೂರರು, 'ಕರ್ನಾಟಕತ್ವದ ವಿಕಾಸ'ದ ಉದ್ದೇಶ ಕುರಿತು, ಈ ಮಾತುಗಳನ್ನು ನುಡಿದಿದ್ದಾರೆ:

"ಕರ್ನಾಟಕ ಗತವೈಭವವು ಅಖಂಡ ಕರ್ನಾಟಕಕ್ಕೆ ತಳಹದಿಯಾದಂತೆ, ಇದು ಭಾವೀ ವೈಭವಕ್ಕೆ ತಳಹದಿಯಾಗಬಹುದೆಂದು ಆಶೆ. ಭಾವೀ ವೈಭವವನ್ನು ಪಡೆಯುವುದು ಹತ್ತು ಪಟ್ಟು, ನೂರು ಪಟ್ಟು ಹೆಚ್ಚಿನ ಕಾರ್ಯ. ಕಟ್ಟುವುದಕ್ಕಿಂತ ಕಾಪಾಡುವುದು ಕಠಿಣ ಕೆಲಸ; ಕರ್ನಾಟಕದ ಭಾವಿ ವೈಭವ ಕಟ್ಟುವುದೆಂದರೆ ಹಂಪೀ ವಿರೂಪಾಕ್ಷ ದೇವಾಲಯದ ಗೋಪುರ ಕಟ್ಟಿದಂತೆ! ಆ ಗೋಪುರ ಅನೇಕ ಸಲ ಬಿದ್ದು ಬಿದ್ದು ಹೋಗುತ್ತಿತ್ತಂತೆ! ಕೊನೆಗೆ ಒಬ್ಬ ಹೆಣ್ಣು ಮಗಳು, ತನ್ನನ್ನು ಬಲಿಕೊಟ್ಟುಕೊಂಡಾಗ ಮಾತ್ರ ನಿಂತಿತಂತೆ! ಅದರ ಮರ್ಮವೆಂದರೆ, ಜನತೆ ಸಂಪೂರ್ಣ ತ್ಯಾಗಕ್ಕೆ ಸಿದ್ಧವಾದಾಗಲೇ ಅದು ಸಾಧ್ಯ. ಹಾಗೆ ಕರ್ನಾಟಕದ ಭಾವೀ ವೈಭವದ ಗೋಪುರವು ಕಟ್ಟಲ್ಪಟ್ಟು, ಅದು ಮಿಕ್ಕವರಿಗೆಲ್ಲರಿಗೂ ನಮ್ಮ ಸಂಸ್ಕೃತಿಯ ದಿವ್ಯ ದೀಪಸ್ತಂಭವಾಗಲಿ."

ಇದೇ ಪುಸ್ತಕದಲ್ಲಿ 'ಕರ್ನಾಟಕತ್ವ'ವನ್ನು ಅವರು ಹೀಗೆ ವಿವರಿಸಿದ್ದಾರೆ: "ಕರ್ನಾಟಕತ್ವವೆಂಬುದು ನನ್ನ ವಿಶಿಷ್ಟ ವಿಚಾರ. ಆ ಶಬ್ದವೂ ಕೂಡ ನನ್ನ ಟಂಕಸಾಲೆಯಲ್ಲಿ ಹುಟ್ಟಿದ್ದು. ಅದೊಂದು ಶಬ್ದದಲ್ಲಿ ರಾಜಕಾರಣ, ಧರ್ಮ, ವಾಙ್ಮಯ, ಇತಿಹಾಸ, ಕಲೆ ಮುಂತಾದ ಯಾವತ್ತೂ ವಿಷಯಗಳೂ ಸೇರ್ಪಡೆಯಾಗುತ್ತವೆ. ಅದರಲ್ಲಿ ಸೇರದ ವಿಷಯವಿಲ್ಲ. ನನ್ನ ಜೀವನದ ಯಾವತ್ತೂ ಚಟುವಟಿಕೆಗಳ ಅದೃಶ್ಯವಾದ ಉಗಮವು ಈ ಕರ್ನಾಟಕತ್ವದ ಕಲ್ಪನೆಯಲ್ಲಿ."

"ರಾಷ್ಟ್ರೀಯತ್ವಕ್ಕೆ ವಿರುದ್ಧವಾದ ಕರ್ನಾಟಕತ್ವವು ಕರ್ನಾಟಕತ್ವವೇ ಅಲ್ಲ. ಕರ್ನಾಟಕತ್ವಕ್ಕೆ ವಿರುದ್ಧವಾದ ರಾಷ್ಟ್ರೀಯತ್ವವು ರಾಷ್ಟ್ರೀಯತ್ವವೇ ಅಲ್ಲ."

"ನಮ್ಮ ಕರ್ನಾಟಕವು ಭರತಖಂಡಕ್ಕಿಂತಲೂ ದೊಡ್ಡದಾಗಿದೆ; ಏಷಿಯಾ ಖಂಡವನ್ನು ಮಿಕ್ಕಿದೆ, ವಿಶ್ವವನ್ನು ವ್ಯಾಪಿಸಿದೆ!.... ಏಕೆಂದರೆ ಕರ್ನಾಟಕದ ಸ್ಥೂಲಶರೀರವು ಚಿಕ್ಕದಾಗಿದ್ದರೂ ಸೂಕ್ಷ್ಮಶರೀರವು ಅತಿ ವಿಸ್ತಾರವಾಗಿದೆ. ಕರ್ನಾಟಕದಿಂದ ಪ್ರಸೃತವಾದ ವಿಚಾರಗಳು ಇಂದಿಗೆ ಇಡೀ ಪ್ರಪಂಚದಲ್ಲಿ ಹರಡಿಕೊಂಡಿವೆ. ಕರ್ನಾಟಕ ಸಂಸ್ಕೃತಿಯು ಇಡೀ ಪ್ರಪಂಚವನ್ನೇ ಕೈವಶಮಾಡಿಕೊಂಡಿದೆ... ಕರ್ನಾಟಕವು ಭರತಖಂಡದ ಸಂಸ್ಕೃತಿಯನ್ನೆಲ್ಲ ಪಚನಮಾಡಿಕೊಂಡಿರುವುದಲ್ಲದೆ, ತನ್ನ ವಿಶಿಷ್ಟ ಸಂಸ್ಕೃತಿಯನ್ನು ಅದರಲ್ಲಿ ಬೆರೆಸಿ ಅದನ್ನು ಮತ್ತಷ್ಟು ಪುಷ್ಟವನ್ನಾಗಿಯೂ, ವ್ಯಾಪಕವನ್ನಾಗಿಯೂ ಮಾಡಿರುವುದು."

ಈ ಮಾತುಗಳಿಂದ, ಆಲೂರರು ತಾವು ಕಂಡರಿಸಿದ ಕರ್ನಾಟಕ ಕೇವಲ ಭೌಗೋಳಿಕ ಸಂಗತಿಯಲ್ಲ; ಅದನ್ನೂ ಮೀರಿದ ಆದಿಭೌತಿಕ, ಆಧ್ಯಾತ್ಮಿಕ ನೆಲೆಗೆ ಸೇರಿದ್ದು ಎನ್ನುವುದನ್ನು ಸ್ಪಷ್ಟಗೊಳಿಸಿದ್ದಾರೆ.

ಒಟ್ಟಿನಲ್ಲಿ ಆಲೂರರು ಕರ್ನಾಟಕ ಗತವೈಭವದೊಂದಿಗೆ ತೃಪ್ತರಾಗಲಿಲ್ಲ. ವೀರರತ್ನಗಳನ್ನು ವಿಜೃಂಭಿಸುವುದರಲ್ಲಿ ಸಮಾಧಾನ ಪಡೆಯಲಿಲ್ಲ. ಅದಕ್ಕೆ ಬದಲಾಗಿ, ಹೊಸ ಕರ್ನಾಟಕದ ನಿರ್ಮಾಣಕ್ಕೆ ಬೇಕಾದ ನೆಲಗಟ್ಟನ್ನು ನಿರ್ಮಿಸಿದರು. ಹೊಸ ಕರ್ನಾಟಕದ ನಿರ್ಮಾಣಕ್ಕೆ ಸಾಂಗವಾಗಿ ಬೇಕಾದ ವಿಶ್ವಕರ್ನಾಟಕದ ಭಿತ್ತಿಚಿತ್ರಗಳನ್ನು ರೂಪಿಸಿದರು. ಅದು ಕನ್ನಡ ಜನರ ಹೃನ್ಮನಗಳಲ್ಲಿ ನೆಲೆಸುವಂತೆ ಮಾಡಿದರು.

1-11-1956ರಂದು ಕರ್ನಾಟಕ ಉದಯವಾದ ಸಂದರ್ಭದಲ್ಲಿ ಆಲೂರರು ಹಂಪಿಯಲ್ಲಿ ನಡೆದ ಉತ್ಸವದಲ್ಲಿ ಪಾಲ್ಗೊಂಡರು. ಆ ಶುಭ ದಿನದಂದು ಅವರು ನೀಡಿದ ಸಂದೇಶದಲ್ಲಿ, "ಸರ್ವತಂತ್ರವು ಭಾರತಕ್ಕೇನೆ. ದತ್ತ ಸ್ವಾತಂತ್ರ್ಯವು ಅಂದರೆ ತದಧೀನ ತಂತ್ರವು ಮಾತ್ರವೇ ರಾಜ್ಯಗಳಿಗೆ. ಆದಕಾರಣ ಭಾರತಾಂಬೆಯ ಕಲ್ಯಾಣದಲ್ಲಿ ಕನ್ನಡನಾಡಿನ ಕಲ್ಯಾಣವು ಅಂತರ್ಗತವಾಗಿದೆ ಎಂಬುದನ್ನು ಕನ್ನಡಿಗರು ಮರೆಯದಿರಲಿ" - ಎಂದು ಘಂಟಾಘೋಷವಾಗಿ ಸಾರಿದುದು ಸರ್ವಶ್ರೇಯಸ್ಕರವಾಗಿದೆ.

ಇದಿಷ್ಟೂ ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿದ ಆಲೂರರ ಜೀವನಚಿತ್ರಣದ ಒಂದು ಮುಖ. ಉಳಿದ ಮುಖಗಳೆಂದರೆ ಅವರು ಕಟ್ಟಿದ ಸಂಘಸಂಸ್ಥೆಗಳು, ವೈಯಕ್ತಿಕ ಬದುಕಿನ ಹೋರಾಟ ಇತ್ಯಾದಿ ಇತ್ಯಾದಿ.

## 2

ಕನ್ನಡ ಅವರನ್ನು ಹಂಪಿಯಲ್ಲಿ ಕೈಮಾಡಿ ಕರೆದ ರೀತಿಯಲ್ಲಿಯೇ, ಅಂದು ನಡೆದ ವಂಗಭಂಗ-ವಂಗೈಕ್ಯ ಚಳವಳಿ, ಆಲೂರರನ್ನು ರಾಷ್ಟ್ರೀಯ ಆಂದೋಲನದಲ್ಲಿ ಧುಮುಕಲು ಕೈ ಮಾಡಿ ಕರೆದವು.

ರಾಷ್ಟ್ರೀಯ ಆಂದೋಲನದಲ್ಲಿ ಪರದೇಶಿ ವಸ್ತುಗಳ ಅಗ್ನಿಸ್ಪರ್ಶ ಒಂದು ಹಂತಕ್ಕೆ ಬಂದ ಮೇಲೆ, ಎರಡನೆಯ ಹಂತದಲ್ಲಿ ರಾಷ್ಟ್ರೀಯ ಶಿಕ್ಷಣ ಚಳವಳಿ ಪ್ರಾರಂಭವಾಯಿತು. ಬಂಗಾಳದಲ್ಲಿ ರಾಷ್ಟ್ರೀಯ ಕಾಲೇಜು, ಮಹಾರಾಷ್ಟ್ರದಲ್ಲಿ ಸಮರ್ಥ ವಿದ್ಯಾಲಯ-ಇವುಗಳು ಆರಂಭಗೊಂಡಂತೆಯೇ ಕರ್ನಾಟಕ ದಲ್ಲಿಯೂ, ರಾಷ್ಟ್ರೀಯ ಶಾಲೆಯನ್ನು ತೆರೆಯಲು ಆಲೂರರು ಸಂಕಲ್ಪ ಮಾಡಿದರು. ಅದು ಕಾರ್ಯಗತವಾದದ್ದು 26-1-1909ರಲ್ಲಿ, ಕರ್ನಾಟಕ ನೂತನ ವಿದ್ಯಾಲಯ ಎಂಬ ಹೆಸರಿನಲ್ಲಿ. ಈ ಶಾಲೆ ವಿವಿಧೋದ್ದೇಶ ಶಾಲೆಯಾಗಿದ್ದು, ಕಡ್ಡಿಪೆಟ್ಟಿಗೆ, ಸೀಸಪೆನ್ಸಿಲ್‌ಗಳ ತಯಾರಿಕೆ, ಬಡಿಗತನ, ಹೆಣಿಗೆ, ಹೊಲಿಗೆ, ಮುದ್ರಣ-ಹೀಗೆ ಹಲವು ಕೈಗಾರಿಕಾ ಕಸಬುಗಳನ್ನು ಕಲಿಸುವ ವಿಷಯಗಳನ್ನು ತನ್ನ ಪಠ್ಯಕ್ರಮದಲ್ಲಿ ಹೊಂದಿತ್ತು.

ಆದರೂ ಈ ಪ್ರಯೋಗ ಯಶಸ್ವಿಯಾಗಲಿಲ್ಲ. ಇದಕ್ಕೆ ಮುಖ್ಯ ಕಾರಣ, ಉದಾರ ಕಾಣಿಕೆ ನೀಡುವವರು ಮುಂದೆ ಬರದೇ ಹೋದದ್ದು, ಮತ್ತು ಕಲಿಯಲು ಸಾಕಷ್ಟು ವಿದ್ಯಾರ್ಥಿಗಳು ಮುಂದಾಗದಿದ್ದದ್ದು.

ಆಲೂರರು ವಾಚನಾಲಯಗಳ ಚಳವಳಿಯನ್ನೇ ಕರ್ನಾಟಕದಲ್ಲಿ ಹುಟ್ಟುಹಾಕಿದರು. ಅವರು ಧಾರವಾಡದಲ್ಲಿ ಆರಂಭಿಸಿದ್ದು 'ಭಾರತ ವಾಚನಾಲಯ'. 1916ರಲ್ಲಿ ವಾಚನಾಲಯಗಳ ಜಾಳಿಗೆಯನ್ನೇ ಹಬ್ಬಿಸಬೇಕೆಂಬ ಉದ್ದೇಶ ಅವರಿಗಿತ್ತು.

ಆಲೂರರು ಇತಿಹಾಸ ಸಂಶೋಧನೆಯ ವಿಷಯದಲ್ಲಿಯೂ ಹಿಂದೆ ಬಿದ್ದಿರಲಿಲ್ಲ. ಕರ್ನಾಟಕದ ಉದ್ದಗಲ ಅವರು ಐತಿಹಾಸಿಕ ಸಂಶೋಧನೆ ಯನ್ನು ಕೈಗೊಂಡರು. ಆದರೆ ಏಕಾಂಗಿಯಾಗಿ ಮಾಡುವುದಕ್ಕೆ ಈ ಸಂಶೋಧನೆಯ ಕೆಲಸ ಬಹಳ ದೊಡ್ಡದು ಎನಿಸಿತು. ಇದೇ ಸಮಯಕ್ಕೆ ಅಂದರೆ, 1914ರಲ್ಲಿ ಪುಣೆಯ ಡೆಕ್ಕನ್ ಕಾಲೇಜಿನ ಇತಿಹಾಸ ವಿದ್ಯಾರ್ಥಿಗಳು ಆಲೂರರನ್ನು ಕರೆಸಿಕೊಂಡರು. ಕರ್ನಾಟಕ ಇತಿಹಾಸ ಸಂಶೋಧನೆಯಲ್ಲಿ ಆಲೂರರು ಮಾಡಬೇಕೆಂದಿದ್ದ ಸಂಶೋಧನೆಗೆ ನೆರವಾಗುವಂತೆ, ಒಂದು ನೂರು ರೂಪಾಯಿ ಕಾಣಿಕೆ ಕೊಟ್ಟರು. ಧಾರವಾಡದಲ್ಲಿ ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲವನ್ನು ಆಲೂರರು ಸ್ಥಾಪಿಸುವುದಕ್ಕೆ ಇದು ನಾಂದಿಯಾಯಿತು.

ಆಲೂರರೇ ಈ ಮಂಡಲದ ಅಧ್ಯಕ್ಷರಾಗಿ, ಅನೇಕ ವಿದ್ಯಾರ್ಥಿಗಳಿಗೆ ಸಂಶೋಧನೆ ಕೈಗೊಳ್ಳಲು ನೆರವಾದರು. ಆಲೂರರ ಹನ್ನೆರಡು ವರ್ಷಗಳ ಸತತ ಪರಿಶ್ರಮದ ಫಲವಾಗಿ ಕೇಂದ್ರ ಸರಕಾರದ ಪುರಾತತ್ವ ಇಲಾಖೆ ಹಳ್ಳಿ ಹಳ್ಳಿಗಳಲ್ಲಿ ಚದರಿ ಹೋಗಿದ್ದ ಶಾಸನಗಳ ಸರ್ವೆ ಕಾರ್ಯವನ್ನು ಆರಂಭಿಸಿತು. ಶಾಸನಗಳ ಅಭ್ಯಾಸಕ್ಕೆ ಒಬ್ಬ ಕನ್ನಡ ಸಂಶೋಧಕರನ್ನು ನೇಮಿಸಿಕೊಂಡಿತು. 'ಪ್ರಾಚೀನ ಕರ್ನಾಟಕ' ಎಂಬ ಆಂಗ್ಲ ಕನ್ನಡ ಅರ್ಧವಾರ್ಷಿಕ ಪತ್ರಿಕೆಯನ್ನು ಪ್ರಕಟಿಸುವ ಕಾರ್ಯವನ್ನು ಮಂಡಲವು ಕೈಗೊಂಡಿತು.

1906ರಲ್ಲಿ ಪುಣೆಯಲ್ಲಿ ಹೋಂ ರೂಲ್ ಲೀಗ್ ಸ್ಥಾಪನೆಯಾದಾಗ ಆಲೂರರು ಕರ್ನಾಟಕದ ಪರವಾಗಿ ಪ್ರಬಲವಾಗಿ ವಾದಿಸಿ, ಕರ್ನಾಟಕಕ್ಕೆ ಪ್ರತ್ಯೇಕ ಶಾಲೆಯನ್ನು, ಟಿಳಕರಿಂದ ಒಪ್ಪಿಗೆ ಪಡೆದು ತೆರೆದರು. ಅದೇ ರೀತಿ, 'ಕರ್ನಾಟಕ ಸಭೆ'ಯನ್ನು ಸ್ಥಾಪನೆ ಮಾಡಿ, ಕರ್ನಾಟಕದ ಏಕೀಕರಣದ ಬಗ್ಗೆ ವಿಸ್ತೃತವಾಗಿ ಎಲ್ಲ ಕಡೆಗಳಲ್ಲಿಯೂ ಪ್ರಚಾರ ಮಾಡಿದರು. ಇದರ ಮುಂದಿನ ಹೆಜ್ಜೆ ಕರ್ನಾಟಕ ರಾಷ್ಟ್ರೀಯ ಪರಿಷತ್ತು. ಕರ್ನಾಟಕದ ಸರ್ವತೋಮುಖ ಅಭಿವೃದ್ಧಿಗೆ ಈ ಪರಿಷತ್ತು ಕಾರ್ಯನಿರತವಾಗಬೇಕೆಂಬುದು ಆಲೂರರ ಇರಾದೆಯಾಗಿತ್ತು. 1920ರಲ್ಲಿ ಸ್ಥಾಪಿತವಾದ ಈ ಪರಿಷತ್ತಿಗೆ ದಿವಾನ್ ವಿ.ಪಿ. ಮಾಧವರಾಯರು ಅಧ್ಯಕ್ಷರಾಗಿದ್ದರು. 1921ರಲ್ಲಿ ಇದು ರಾಜಕೀಯ ಪರಿಷತ್ತಿನಲ್ಲಿ ಸೇರಿಹೋಯಿತು.

ವೆಂಕಟರಾಯರು ಹಲವಾರು ಪತ್ರಿಕೆಗಳ ಜತೆ ಕಾಲಕಾಲಕ್ಕೆ ಸಂಪರ್ಕ ಇಟ್ಟುಕೊಂಡಿದ್ದರು.

ಅಸಹಕಾರ ಚಳವಳಿಯ ಕಾಲದಲ್ಲಿ, 'ಕರ್ಮವೀರ' ಪತ್ರಿಕೆ ನಡೆಸುತ್ತಿದ್ದ ದಿವಾಕರ ರಂಗರಾಯರು ಸೆರೆಹಿಡಿಯಲ್ಪಟ್ಟರು. ಆದರೂ ಅವರಿಗೆ ಶಿಕ್ಷೆ ಆಗದೆ, ಅಭಿನಂದನಾರ್ಥವಾಗಿ ಅವರನ್ನು ಬೆಳಗಾವಿಗೆ ಕರೆದೊಯ್ಯುವ ಸಂದರ್ಭ ಉಂಟಾಯಿತು. ಆಗ ಪತ್ರಿಕೆ ನಡೆಸುವ ಜವಾಬ್ದಾರಿ ವೆಂಕಟರಾಯರ ಹೆಗಲಿಗೆ ಬಿತ್ತು. ಆ ಸಮಯದಲ್ಲಿ ವೆಂಕಟರಾಯರು ಬರೆದ "ಭೂರಕ್ಕಸಾಯ ಸ್ವಾಹಾ" ಎಂಬ ಅಗ್ರಲೇಖನಕ್ಕಾಗಿ ರಂಗರಾಯರಿಗೆ ಸೆರೆಯಾಯಿತು. ಆದರೆ ಅವರು ನಿಜಸ್ಥಿತಿ ಹೇಳಿದ್ದರಿಂದ ಅವರಿಗೆ ಆಗ ಶಿಕ್ಷೆಯಾಗಲಿಲ್ಲ. ಆದರೆ, ಒಂದಲ್ಲ ಒಂದು ಕಾರಣಕ್ಕೆ ಅವರನ್ನು ಸೆರೆ ಹಿಡಿಯುತ್ತಲೇ ಇದ್ದರು. ಕೊನೆಯ ಬಾರಿ ಶಿಕ್ಷೆಯಾದ ಕೂಡಲೇ, ಆಲೂರರು ಮ್ಯಾಜಿಸ್ಟ್ರೇಟ್‌ರಿಗೆ 'ಕರ್ಮವೀರ'ದ ಹೊರೆಯನ್ನು ತಾವೇ ಸಂಪೂರ್ಣವಾಗಿ ಹೊರುವುದಾಗಿ ಹೇಳಿಕೆ ನೀಡಿದರು. ಅಲ್ಲದೆ ಪತ್ರಿಕೆಯ ಸಂಪಾದಕ, ಮುದ್ರಕ, ಪ್ರಕಾಶಕ-ಎಲ್ಲವೂ ತಾವೇ ಅದರು. ಹೀಗೆ ಒಂದು ವರ್ಷ ಆ ಪತ್ರಿಕೆಯನ್ನು ನಡೆಸಿದರು.

1907 ಮತ್ತು 1916ರಲ್ಲಿ 'ವಾಗ್ಭೂಷಣ' ಪತ್ರಿಕೆಯನ್ನು ನಡೆಸುವ ಜವಾಬ್ದಾರಿಯನ್ನು ಅವರು ಹೊತ್ತರು. 'ಕನ್ನಡಿಗ' ಎಂಬ ದೈನಿಕದ ಸಂಪಾದಕರಾಗಿ ಆಲೂರರು ಸೇವೆ ಸಲ್ಲಿಸಿದರು.

ಎಲ್ಲಕ್ಕಿಂತ ಹೆಚ್ಚಿನದೆಂದರೆ, ಅವರು 'ಜಯ ಕರ್ನಾಟಕ' ಪತ್ರಿಕೆಯನ್ನು ಸ್ಥಾಪಿಸಿ ನಡೆಸಿಕೊಂಡು ಬಂದದ್ದು. ಕರ್ನಾಟಕದ ಪತ್ರಿಕಾ ಇತಿಹಾಸದಲ್ಲಿ 'ಜಯ ಕರ್ನಾಟಕ'ಕ್ಕೆ ಒಂದು ವಿಶಿಷ್ಟಸ್ಥಾನ ಇದ್ದೇ ಇದೆ. 1922ರ ನವೆಂಬರ್ ತಿಂಗಳಲ್ಲಿ ಆರಂಭವಾದ 'ಜಯ ಕರ್ನಾಟಕ' ಕರ್ನಾಟಕದ ಸಾಂಸ್ಕೃತಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ವಿಶೇಷ ಮನ್ನಣೆ ಪಡೆದಿದೆ.

ಕರ್ನಾಟಕದ ಬಗ್ಗೆ ಎಲ್ಲಿಯೇ ಆಗಲೀ, ಅಪಚಾರದ ದನಿ ಎತ್ತಿದರೆ, ಆಲೂರರು, 'ಜಯ ಕರ್ನಾಟಕ'ದ ಮೂಲಕ, ತಮ್ಮ ಬಿಡಿನುಡಿಯಲ್ಲಿ ಖಂಡತುಂಡವಾಗಿ ಅಲ್ಲಗಳೆಯುತ್ತಿದ್ದರು. ಈ ಪತ್ರಿಕೆಯನ್ನು ಅವರು ಏಳು ವರ್ಷಗಳ ಕಾಲ ಪ್ರಭಾವಕಾರಿಯಾಗಿ ನಡೆಸಿದರು.

ಅವರು ಕೈಗೊಂಡ ಇನ್ನೊಂದು ಮಹತ್ತರ ಕಾರ್ಯ - ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ 600ನೆಯ ವರ್ಷದ ಸಮಾರಂಭ. ಈ ವಿಷಯ ಮೊದಲು ಪ್ರಸ್ತಾಪವಾದದ್ದು ಬೆಳಗಾವಿಯಲ್ಲಿ 1929ರಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ. ಈ ಉತ್ಸವಕ್ಕೆ ಆಲೂರರು ಒಂದು ಲಕ್ಷ ರೂಪಾಯಿ ವೆಚ್ಚದ ಅಂದಾಜು ಪಟ್ಟಿ ಸಿದ್ಧಪಡಿಸಿದರು. ಉತ್ಸವ ನಡೆದದ್ದು 1936ನೆಯ ಡಿಸೆಂಬರ್ 25ರಿಂದ ನಾಲ್ಕು ದಿನಗಳವರೆಗೆ. ಇದೊಂದು ಅಭೂತಪೂರ್ವ ಉತ್ಸವವೆನಿಸಿತು.

ಕರ್ನಾಟಕ ಸಾಹಿತ್ಯ ಪರಿಷತ್ತಿನ ಸ್ಥಾಪನೆಗೆ ಆಲೂರ ವೆಂಕಟರಾಯರು ಹೇಗೆ ಸೂತ್ರಧಾರರಾಗಿ ಕೆಲಸ ಮಾಡಿದರು ಎನ್ನುವುದನ್ನು ಈ ಮೊದಲೇ ನೋಡಿದ್ದೇವೆ. ಪರಿಷತ್ತಿನ ಸ್ಥಾಪನೆಯ ಕಾಲಕ್ಕೆ ಬಿ. ಕೃಷ್ಣಪ್ಪನವರು

ಕಾರ್ಯದರ್ಶಿಗಳಾಗಿದ್ದರೂ, ಮೊದಲ ಸಮ್ಮೇಳನದ ಸಮಸ್ತ ಜವಾಬ್ದಾರಿಯನ್ನೂ ಆಲೂರರೇ ವಹಿಸಿಕೊಂಡರು, ಅದೂ ದೂರದ ಧಾರವಾಡದಲ್ಲಿಯೇ ಇದ್ದುಕೊಂಡು, ವಿದ್ಯಾವರ್ಧಕ ಸಂಘದ ಹೆಸರಿನಲ್ಲಿ, ಎನ್ನುವುದು ತುಂಬ ಮೆಚ್ಚಬೇಕಾದ ಸಂಗತಿ.

ಆದರೆ 1934ರ ವೇಳೆಗೆ ಪರಿಷತ್ತು ಮತ್ತು ವೆಂಕಟರಾಯರ ಸಂಬಂಧ ಆದರಣೀಯವಾಗಿರಲಿಲ್ಲ. ಆಲೂರರ ಆಕ್ಷೇಪ ಮುಖ್ಯವಾಗಿ ಪರಿಷತ್ತಿನಲ್ಲಿ ಬೆಂಗಳೂರಿನವರದೇ ಮೇಲುಗೈ ಆಗಿ, ಮೈಸೂರೇತರ ಕನ್ನಡಿಗರಿಗೆ ಪ್ರಾಧಾನ್ಯ ಸಿಕ್ಕುತ್ತಿಲ್ಲ ಎನ್ನುವುದೇ ಆಗಿತ್ತು. 1938ರ ವೇಳೆಗೆ ಅವರು ಪರಿಷತ್ತಿನ ಕಾರ್ಯಕಾರಿ ಸಮಿತಿಗೆ ರಾಜೀನಾಮೆ ಕೊಟ್ಟು, ಹೊರಬಂದರು.

1930ರಲ್ಲಿ ಮೈಸೂರಿನಲ್ಲಿ ನಡೆದ 16ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನಕ್ಕೆ ಆಲೂರ ವೆಂಕಟರಾಯರು ಅಧ್ಯಕ್ಷರು. ತಮ್ಮ ಅಧ್ಯಕ್ಷ ಭಾಷಣದಲ್ಲಿ ಅವರು ಹೇಳಿದ ಈ ಮಾತುಗಳು ಚಿಂತನಯೋಗ್ಯವಾಗಿವೆ- "ಕರ್ನಾಟಕವೆಂಬುದೊಂದು ಜನಾಂಗವು. ಅದಕ್ಕೆ ಒಂದೇ ಒಂದು ಶರೀರ, ಮನಸ್ಸು ಮತ್ತು ಆತ್ಮಗಳಿರುತ್ತವೆಂಬ ಭಾವನೆಯು ಎಲ್ಲಿಯವರೆಗೆ ನಮ್ಮಲ್ಲಿ ಉತ್ಪನ್ನವಾಗುವುದಿಲ್ಲವೋ ಅಲ್ಲಿಯವರೆಗೆ ನಮ್ಮ ಕನ್ನಡ ನುಡಿಯ ಅಭಿವೃದ್ಧಿಯು ಭರದಿಂದ ಸಾಗಲಾರದು."

ಆಲೂರರು ತಮ್ಮನ್ನು ತಾವು ಒಬ್ಬ ಸಾಹಿತಿಯೆಂದು ಎಲ್ಲಿಯೂ ಬಣ್ಣಿಸಿಕೊಂಡೇ ಇಲ್ಲ. ಆದರೆ ದ.ರಾ. ಬೇಂದ್ರೆ, ಬೆಟಗೇರಿ ಕೃಷ್ಣಶರ್ಮ, ಶ್ರೀರಂಗ, ಶಂ.ಬಾ. ಜೋಶಿ, ರಂಗರಾವ್ ದಿವಾಕರ ಮುಂತಾದ ಹಲವು ಜನ ಸಾಹಿತಿ ಶ್ರೇಷ್ಠರಿಗೆ ಅವರು ಪೋಷಣೆ, ಪ್ರೋತ್ಸಾಹಗಳನ್ನು ನೀಡಿದರು. 'ಜಯ ಕರ್ನಾಟಕ'ದ ಸಂಪಾದಕೀಯ ಧೋರಣೆ ಬಗ್ಗೆ ಅವರು ಆಡಿರುವ ಈ ಕೆಳಕಂಡ ಮಾತುಗಳು, ಈ ಸಂದರ್ಭದಲ್ಲಿ ಉಲ್ಲೇಖನೀಯ-"ಕಚ್ಚಾ ಲೇಖಕರಿಗೂ, ಕಚ್ಚಾ ಕವಿಗಳಿಗೂ ಅಶುದ್ಧ ಬರಹಗಳಿಗೂ ಆಸ್ಪದ ಕೊಟ್ಟಿರುವೆ. ಕರ್ನಾಟಕದ ಸಕಲಭಾಗಗಳಲ್ಲಿಯೂ ಲೇಖಕರೂ ಕವಿಗಳೂ ಹುಟ್ಟಬೇಕೆಂಬುದೇ ನನ್ನ ಉದ್ದೇಶ."

### 3

ಆಲೂರ ವೆಂಕಟರಾಯರು ಕರ್ನಾಟಕಕ್ಕಾಗಿ ಹೇಗೆ ಹೋರಾಡಿದರೋ, ಅದೇ ರೀತಿಯಲ್ಲಿ ರಾಷ್ಟ್ರೀಯತ್ವಕ್ಕಾಗಿಯೂ ಹೊಡೆದಾಡಿದರು. ಈ ನಿಟ್ಟಿನಲ್ಲಿ ಅವರೆಂದೂ ಹಿಂದೆ ಬೀಳಲಿಲ್ಲ.

1928ರಲ್ಲಿ ಅವರು "ರಾಷ್ಟ್ರೀಯತ್ವದ ಮೀಮಾಂಸೆ" ಎಂಬ ಒಂದು ಕಿರುಹೊತ್ತಿಗೆಯನ್ನು ಬರೆದು ಪ್ರಕಟಿಸಿದರು. ರಾಷ್ಟ್ರೀಯತ್ವವನ್ನು ಸುಂದರವಾಗಿ ವರ್ಣಿಸುವ, ಆಲೂರರ ಈ ವಾಕ್ಯವೃಂದವನ್ನು ನೋಡಿದಾಗ, ನಮಗೆ ಅವರ ಕಲ್ಪನೆಯ ನಿಚ್ಚಳತೆ ಕಂಡುಬರುತ್ತದೆ:

"ರಾಷ್ಟ್ರೀಯತ್ವವನ್ನು ಅಥವಾ ರಾಷ್ಟ್ರಾಭಿಮಾನ ಎಂಬುದನ್ನು ಅಥವಾ ಅಹಂಕಾರವನ್ನು ಒಂದು ನದಿಗೆ ಹೋಲಿಸಬಹುದು. ಈ ಅಹಂಕಾರ ರೂಪ ನದಿಯ ಉಗಮವು ಚಿಕ್ಕದಿದ್ದು, ಅದು ತನ್ನ ಸ್ವಂತ ದೇಹ, ಸ್ವಂತ ಮನಸ್ಸು ಇಷ್ಟರಮಟ್ಟಿಗೆ ಮಾತ್ರವೇ ಇರುತ್ತದೆ. ಆದರೆ ಅದು ಮುಂದೆ ವಿಸ್ತಾರವಾಗುತ್ತ ತನ್ನ ಹೆಂಡಿರು ಮಕ್ಕಳು, ತನ್ನ ಊರು, ತನ್ನ ಪ್ರಾಂತ್ಯ, ತನ್ನ ರಾಷ್ಟ್ರ - ಇಲ್ಲಿಯವರೆಗೆ ವಿಸ್ತಾರಹೊಂದಿ ಕೊನೆಗೆ ಅದು ಸರ್ವಭೂತಹಿತ ಸಮುದ್ರಕ್ಕೆ ಹೋಗಿ ಕೂಡುತ್ತದೆ."

"ರಾಷ್ಟ್ರೀಯತ್ವಕ್ಕೆ ಒಂದೇ ಜಾತಿ ಅಥವಾ ಜನಾಂಗವಿರಲೇಬೇಕೆಂಬ ಅವಶ್ಯಕತೆಯೂ ಇಲ್ಲ, ಒಂದೇ ಭಾಷೆಯಿರಲೇಬೇಕೆಂದೂ ಹೇಳಲಾಗುವುದಿಲ್ಲ; ಒಂದೇ ಧರ್ಮವೂ ಬೇಕೇಬೇಕಂತಲ್ಲ; ಒಂದೇ ದೇಶವೂ ಕೂಡ ಇಲ್ಲದಿದ್ದರೂ ಸಾಗಬಹುದು."

"ಹಿಂದುಸ್ಥಾನಕ್ಕೆ ಒಂದೇ ಧರ್ಮ, ಒಂದೇ ಭಾಷೆ, ಒಂದೇ ವಂಶ ಇವು ಇಲ್ಲದಿರುವುದರಿಂದಲೇ ರಾಷ್ಟ್ರೀಯತ್ವವು ಬೇಗನೆ ಬೆಳೆಯುವುದಿಲ್ಲವೆಂದು ಅನೇಕರು ಪ್ರಾಮಾಣಿಕವಾಗಿ ನಂಬುತ್ತಾರೆ. ಈ ಕೊರತೆಗಳು ನಮ್ಮ ರಾಜಕೀಯ ಪ್ರಗತಿಯ ಮಾರ್ಗದಲ್ಲಿಯ ಮುಳ್ಳುಗಳೆಂದೂ, ಅವನ್ನು ಕಿತ್ತೊಗೆಯದಿದ್ದರೆ ರಾಷ್ಟ್ರರಥವು ಸಾಗಲಾರ ದೆಂದೂ ಅವರ ಅಂತಃಕರಣಪೂರ್ವಕವಾದ ಭಾವನೆ. ಅವರ ಈ ಕಲ್ಪನೆಗಳು ತಪ್ಪು ಇರುತ್ತವೆ ಎಂಬುದನ್ನು ನಾವು ಈ ಲೇಖನ ('ರಾಷ್ಟ್ರೀಯತ್ವದ ಮೀಮಾಂಸೆ')ದಲ್ಲಿ ತೋರಿಸುವವರಿದ್ದೇವೆ."

ಮೇಲಿನ ಎರಡು ಮತ್ತು ಮೂರನೇ ಉದ್ಧೃತಗಳು ಆಲೂರರ ದಿಟ್ಟತನವನ್ನೂ, ಆಲೋಚನೆಯಲ್ಲಿನ ಅಸ್ಖಲಿತ ನಿಲವನ್ನೂ ಬಹಿರಂಗಪಡಿಸುತ್ತವೆ.

ವೀರ ಸಾವರ್‌ಕರ್, ಬಾಲಗಂಗಾಧರ ತಿಲಕ - ಇಂತಹ ಮಹಾರಾಷ್ಟ್ರೀಯ ನಾಯಕರೊಡನೆ ತೀರ ನಿಕಟ ಸಂಪರ್ಕ ಹೊಂದಿದ್ದರೂ, ಆಲೂರರು ಅಖಿಲ ಭಾರತೀಯ ದೃಷ್ಟಿಯನ್ನು ಬೆಳಸಿಕೊಂಡರು. ಆದರೆ ಅವರು ಕರ್ನಾಟಕವಷ್ಟೇ ತಮ್ಮ ಕಾರ್ಯಕ್ಷೇತ್ರವೆಂಬುದನ್ನು ಬಹುಬೇಗ ಕಂಡುಕೊಂಡರು.

1906ರಿಂದ 1911ರ ವರೆಗೆ ವಕೀಲಿಯನ್ನು ಬಿಟ್ಟುಕೊಟ್ಟರು. ಮತ್ತೆ 1920ರಲ್ಲಿ, ಗಾಂಧೀಜಿಯವರು ನೀಡಿದ ಅಸಹಕಾರ ಚಳವಳಿಗೆ ಓಗೊಟ್ಟು ಆಲೂರರು ವಕೀಲಿಗೆ ಶರಣು ಹೊಡೆದರು. ಇದೇ ಸಮಯದಲ್ಲಿ ದೇಶಪಾಂಡೆ ಗಂಗಾಧರರಾಯರಿಗೂ, ಆಲೂರರಿಗೂ, ರಾಜಕೀಯವಾಗಿ ಒಮ್ಮತವಿದ್ದರೂ, ಭಾಷೆಯ ವಿಷಯದಲ್ಲಿ ಭಿನ್ನಾಭಿಪ್ರಾಯ ಮೂಡಿತು. ಗಂಗಾಧರರಾಯರು ಮರಾಠಿ ಪರವಾಗಿ ಇದ್ದವರು, ಆಲೂರರು ಕಟ್ಟಾ ಕನ್ನಡ ಪರ.

ಆಲೂರರು ಭಿನ್ನಾಭಿಪ್ರಾಯಗಳನ್ನು ತಳೆಯುವುದರಲ್ಲಿ ಹಿಂದೆ ಮುಂದೆ ಬೀಳಲಿಲ್ಲ. ತಮ್ಮ ಮನಸ್ಸಿಗೆ, ಅಂತರಾತ್ಮಕ್ಕೆ ಒಪ್ಪಿಕೊಳ್ಳಲು ಸಾಧ್ಯವಿಲ್ಲದಿದ್ದಾಗ, ಅವರು ತಮ್ಮ ಪಾಡಿಗೆ ತಾವು ಚಳವಳಿಗಳಿಂದ ಹಿಂತೆಗೆದುಕೊಳ್ಳುತ್ತಿದ್ದರು. ಇದಕ್ಕೆ ಅತ್ಯುತ್ತಮ ಉದಾಹರಣೆ, ಗಾಂಧೀ ಮಾರ್ಗ ಒಪ್ಪಿಗೆ ಆಗದಿದ್ದಾಗ ಅವರು ರಾಷ್ಟ್ರೀಯ ಚಳವಳಿಯಿಂದ ಹಿಂತೆಗೆದುಕೊಂಡದ್ದು. ಈ ವಿಷಯವಾಗಿ ಅವರ ಮಾತುಗಳನ್ನು ಗಮನಿಸಬೇಕು - "ಅಹಿಂಸೆಯು ಒಂದು ವಿಶಿಷ್ಟ ಮನೋವೃತ್ತಿಯುಳ್ಳ ವಿಶಿಷ್ಟ ವರ್ಗದ ಪರಮಧರ್ಮವಾಗಬಹುದೇ, ಪರಮಧರ್ಮವಾಗಬೇಕೇ ವಿನಾ, ಅದು ಇಡೀ ರಾಷ್ಟ್ರದ ಮನೋಭಾವನೆಯಾಗಲಾರದು, ಆಗಬಾರದು ಎಂದು ನನ್ನ ಮತ. ಸೆರೆಮನೆಗಾಗಿಯೇ ಸೆರೆಮನೆಗೆ ಹೋಗುವುದೂ ಒಂದು ಬಾಹ್ಯಾಡಂಬರವಾಗಬಾರದು."

ಈ ಕಾರಣಗಳಿಗಾಗಿಯೇ ಆಲೂರರು ಸ್ಥಳೀಯ ಕಾಂಗ್ರೆಸ್ ಕಮಿಟಿಯ ಉಪಾಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ನೀಡಿದರು.

ಆಲೂರರರದು ಮೂಲತಃ ಧಾರ್ಮಿಕ ವ್ಯಕ್ತಿತ್ವ, ಬಾಲಗಂಗಾಧರ ತಿಲಕರ 'ಗೀತಾ ರಹಸ್ಯ'ದ ಅನುವಾದ ಕಾರ್ಯ, ಅವರ ರಾಜಕಾರಣ ಮತ್ತು ಧರ್ಮ ದೃಷ್ಟಿಗಳ ಸಮನ್ವಯಕ್ಕೆ ಒಂದು ದಾರಿ ಮಾಡಿಕೊಟ್ಟಿತು ಎನ್ನಬಹುದು. 'ಗೀತಾ ರಹಸ್ಯ'ದ ಅನುವಾದ ಕಾರ್ಯ ಕೈಗೊಂಡದ್ದು, ತಿಲಕರ ಒತ್ತಾಯದ ಮೇರೆಗೇ. ಅನುವಾದ ಎಲ್ಲರಿಗೂ ಸಮ್ಮತವಾಗಬೇಕೆನ್ನುವ ದೃಷ್ಟಿಯಿಂದ, ಬಿ.ಎಂ.ಶ್ರೀ. ಮತ್ತಿತರರ ಅಭಿಪ್ರಾಯ ಪಡೆದು ಅದನ್ನು ಪರಿಷ್ಕರಿಸಿದರು. ಆಲೂರರ ಜತೆಗೆ ಕೆರೂರು ವಾಸುದೇವಾಚಾರ್ಯ ಕೊನೆಯ ಭಾಗದ ಕೆಲವು ಶ್ಲೋಕಗಳನ್ನು ಅನುವಾದ ಮಾಡಿ ಸಹಕರಿಸಿದರು.

4

ಆಲೂರ ವೆಂಕಟರಾಯರದು ಆಧ್ಯಾತ್ಮಿಕ ಪ್ರವೃತ್ತಿ. 1931ರಲ್ಲಿ ಬ್ರಿಟಿಷ್ ಸರಕಾರ 'ಸರ್ಚ್ ವಾರೆಂಟ್'ಅನ್ನು ಹೊರಡಿಸಿತು. ಅವರನ್ನು ಸೆರೆಹಿಡಿದು ಕಲಘಟಗಿಯಲ್ಲಿ ದಿಗ್ಬಂಧನದಲ್ಲಿ ಇರಿಸಿದರು. ಇದರ ಪರಿಣಾಮ, ಆಲೂರರ ಮೇಲೆ ಒಳ್ಳೆಯದನ್ನೇ ಮಾಡಿತು. ಅವರ ಆಧ್ಯಾತ್ಮ ಚಿಂತನೆಗೆ, ಅಧ್ಯಯನಕ್ಕೆ ಈ ಬಿಡುವು ಅನುವು ಮಾಡಿಕೊಟ್ಟಿತು. ಅವರು ಗೀತೆಯ ಬಗ್ಗೆ ಅನಂತರ ಬರೆದ ನಾಲ್ಕು ವಿದ್ವತ್ ಪೂರ್ಣ ಗ್ರಂಥಗಳ ಬರವಣಿಗೆಗೆ, ಇಲ್ಲಿ ನಡೆಸಿದ ಚಿಂತನೆ ಮತ್ತು ಅಧ್ಯಯನಗಳು ಬುನಾದಿ ಹಾಕಿದವು ಎಂದು ಹೇಳಬಹುದು.

ಒಬ್ಬ ಮಾಧ್ವ ಧರ್ಮಾನುಯಾಯಿಯಾಗಿಯೂ ವೆಂಕಟರಾಯರು ಹಲವು ಗ್ರಂಥಗಳನ್ನು ಬರೆದರು. ಮುಖ್ಯವಾಗಿ ಮಧ್ವಮತವನ್ನು ದ್ವೈತಮತ ಎಂಬ ಧೋರಣೆಯನ್ನು ತಳ್ಳಿಹಾಕಿ, ಅದನ್ನು ಪೂರ್ಣ ಬ್ರಹ್ಮವಾದವೆಂದು ಕರೆದರು; ಅದನ್ನು ತಮ್ಮ ಬರಹದಲ್ಲಿ ಪ್ರತಿಪಾದಿಸಿದರು. ಇದು ಅವರ ಆಳವಾದ ವಿದ್ವತ್ತನ್ನು ತೋರಿಸುತ್ತದೆ; ಸ್ವೋಪಜ್ಞತೆಯನ್ನು ಬಿಂಬಿಸುತ್ತದೆ.

ಅವರು ತಮ್ಮ ಜೀವನದ ಕೊನೆಯ ಭಾಗದಲ್ಲಿ ಬಹಳ ಮಟ್ಟಿಗೆ ಸಾರ್ವಜನಿಕ ಜೀವನದಿಂದ ದೂರವಿದ್ದು ಒಳಗೆ ಸೆಳೆದುಕೊಂಡರು. ಒಂದು ಕಡೆ ರಾಜಕಾರಣದಿಂದ ದೂರವಾದದ್ದು, ಇನ್ನೊಂದು ಕಡೆ ಆಧ್ಯಾತ್ಮಿಕ ಜೀವನದತ್ತ ಒಲವು-ಇವರು ಸಾರ್ವಜನಿಕವಾಗಿ ದೂರಸರಿಯಲು ಕಾರಣವಾಯಿತು. ಇದರಿಂದ ಕನ್ನಡದ ಕೆಲಸಕ್ಕೆ ಸ್ವಲ್ಪ ವ್ಯತ್ಯಯವಾಯಿತೆಂದು ಹೇಳಬಹುದು. ಆದರೆ ಆಧ್ಯಾತ್ಮದ ಒಲವು ಅವರಲ್ಲಿ ಮೊದಲಿನಿಂದಲೂ ಇದ್ದದ್ದೇ. ಶ್ರೀ ಅರವಿಂದರ ಬರವಣಿಗೆ ಚಿಕ್ಕವಯಸ್ಸಿನಲ್ಲಿಯೇ ಪ್ರಭಾವವನ್ನು ಬೀರಿದ್ದಿತು.

ವರಕವಿ ದ.ರಾ. ಬೇಂದ್ರೆಯವರು, ಆಲೂರರನ್ನು 'ಕರ್ನಾಟಕದ ಪ್ರಾಣೋಪಾಸಕರು' ಎಂದು ಕರೆದದ್ದು ಅರ್ಥಪೂರ್ಣವಾಗಿದೆ. ಬೇಂದ್ರೆ ಯವರು ಆಲೂರರ ವೈಶಿಷ್ಟ್ಯವನ್ನು ಹೀಗೆ ಗುರುತಿಸಿದ್ದಾರೆ:

"ಬಹುಮುಖವಾಗಿಯೂ, ಏಕನಿಷ್ಠೆಯಿಂದಲೂ, ಅನನ್ಯ ಬುದ್ಧಿ ಯಿಂದಲೂ, ಸತತ ಅನುಸಂಧಾನದಿಂದಲೂ, ಕರ್ನಾಟಕದ ಸಲುವಾಗಿ ವಿಚಾರ ಮಾಡುವವರೂ, ತದನುಸಾರವಾಗಿಯೆ ಆಚರಿಸಲು ಪ್ರಯತ್ನಿ ಸುವವರೂ ಹಿರಿಯರಾದ ಕನ್ನಡಿಗರಲ್ಲಿ ಇನ್ನೂ ಇವರೊಬ್ಬರೇ! ಅದೇ ಇವರ ತಪಸ್ಸು. ಇವರ ಅದ್ವಿತೀಯವಾದ ಹೆಸರು ಅದರ ಫಲವು.

ಇವರಲ್ಲಿ ಬುದ್ಧಿಯ ಏಕಾಗ್ರ ವೃತ್ತಿಗಿಂತ ವ್ಯಾಪಕವೃತ್ತಿಯು ಹೆಚ್ಚು; ಮೂರ್ತಿಪೂಜೆಗಿಂತ ತತ್ವಪೂಜೆಯು ಅಧಿಕ. ಆಚಾರ ನಿಷ್ಠೆಗಿಂತ ವಿಚಾರ ನಿಷ್ಠೆ ಬಹಳ. ರಾಷ್ಟ್ರೀಯ ದೃಷ್ಟಿ ಹೆಚ್ಚು; ರಾಷ್ಟ್ರದರ್ಶನ ಕಡಿಮೆ. ಜನೋದ್ದೀಪನ ಹೆಚ್ಚು; ಜನ ನಿರ್ವಹಣ ಶಕ್ತಿ ಕಡಿಮೆ... ಇವರು ಜನನಾಯಕರಾಗದೆ ನೇತ್ರವಾಗಿದ್ದಾರೆ; ಮುಂದಾಳುಗಳಾಗದೆ ಪ್ರತಿನಿಧಿ ಗಳಾಗಿದ್ದಾರೆ."

**ಆಕರ ಗ್ರಂಥಗಳು**


1. ಕರ್ನಾಟಕತ್ವದ ವಿಕಾಸ, ಆಲೂರ ವೆಂಕಟರಾಯರು, ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-18, ದ್ವಿ. ಮು. 1980.
2. ನನ್ನ ಜೀವನ ಸ್ಮೃತಿಗಳು - ಆಲೂರ ವೆಂಕಟರಾಯರು, ಪ್ರ : ಮನೋಹರ ಗ್ರಂಥಮಾಲಾ, ಧಾರವಾಡ - 1, ಪ್ರ. ಮು. 1974.
3. ಕರ್ನಾಟಕ ಕುಲಪುರೋಹಿತರು-ಪ್ರ : ಕರ್ನಾಟಕ ಕುಲ ಪುರೋಹಿತ ಜನ್ಮ ಶತಮಾನೋತ್ಸವ ಸಮಿತಿ, ಧಾರವಾಡ (1981), ಪ್ರ. ಸಂಪಾದಕರು : ಪ್ರೊ.ಸ.ಸ. ಮಾಳವಾಡ.
4. ಕರ್ನಾಟಕ ಗತ ವೈಭವ- ಲೇ : ಆಲೂರ ವೆಂಕಟರಾಯರು, ಪ್ರ : ಸಮಾಜ ಪುಸ್ತಕಾಲಯ, ಧಾರವಾಡ-1 (ಪರಿಷ್ಕೃತ ಆವೃತ್ತಿ 1968).


❑

# ಚನ್ನಪ್ಪ ಉತ್ತಂಗಿ

ಜಿ.ಎಸ್. ಸಿದ್ಧಲಿಂಗಯ್ಯ

ರೆವರೆಂಡ್ ಚನ್ನಪ್ಪ ಉತ್ತಂಗಿಯವರು, ಉತ್ತಂಗಿ ಚನ್ನಪ್ಪ ಎಂದೂ ಕೊನೆಗೆ ಉತ್ತಂಗಿಯವರು ಎಂದು ಖ್ಯಾತರಾಗಿದ್ದರು. ಅವರು ಹುಟ್ಟಿದ್ದು 28-10-1881ರಂದು ಧಾರವಾಡದಲ್ಲಿ. ಅವರ ತಂದೆ ದಾನಿಯೇಲಪ್ಪನವರು; ತಾಯಿ ಸುಭದ್ರವ್ವ. ದಾನಿಯೇಲಪ್ಪನವರಿಗೆ ಬಹುಕಾಲ ಮಕ್ಕಳೇ ಆಗದಿದ್ದಾಗ ಅವರ ಹಾಗೂ ಅವರ ಮಡದಿಯ ಪ್ರಾರ್ಥನೆಯ ಬಲದಿಂದ ಹುಟ್ಟಿದ ಕೂಸಿಗೆ ಅವರ ಅಜ್ಜನಾದ ಚನ್ನಪ್ಪನವರ ಹೆಸರನ್ನೆ ಇಟ್ಟರಂತೆ.

ತಂದೆ ಪ್ರಾಥಮಿಕ ಶಾಲಾಶಿಕ್ಷಕರಾಗಿ ಅನಂತರ ಅನಾಥ ಬಾಲಿಕೆಯರ ಶಾಲೆಯ ಮುಖ್ಯೋಪಾಧ್ಯಾಯರಾಗಿ ಕರ್ತವ್ಯ ನಿರ್ವಹಿಸಿ ಅಲ್ಲಿನ ಮಕ್ಕಳನ್ನು ಅತ್ಯಂತ ಆತ್ಮೀಯತೆಯಿಂದ ನೋಡಿಕೊಂಡವರು. ಉತ್ತಮ ಶಿಕ್ಷಕರಾದ ಅವರು ಒಳ್ಳೆಯ ಬಡಗಿಯೂ ಆಗಿದ್ದರು. ಜೊತೆಗೆ ಯಂತ್ರಕಲಾಕೌಶಲ್ಯವನ್ನು ಪಡೆದ ವಿಜ್ಞಾನ ಪ್ರಯೋಗಪ್ರಿಯರು. ತಾಯಿಯಾದರೂ ಮಹಾ ಕ್ರಿಸ್ತ ಭಕ್ತೆ. ತನ್ನ ಮೊದಲ ಮಗನಾದ ಚನ್ನಪ್ಪನವರಲ್ಲಿ ಕ್ರಿಸ್ತಭಕ್ತಿ ಮೂಡಲು ಕಾರಣರಾದವರು.

ಚನ್ನಪ್ಪನವರಲ್ಲಿ ಬಾಲ್ಯದಿಂದಲೂ ಕ್ರಿಸ್ತಭಕ್ತಿ ತಾಯಿಯಿಂದ ಬಳುವಳಿಯಾಗಿ ಬಂದಂತೆ, ತಂದೆಯಿಂದ ಯಂತ್ರಗಳ ಬಗೆಗೆ ಆಸಕ್ತಿ ತಾನೇ ತಾನಾಗಿತ್ತು. ಯಂತ್ರ ಹಾಗೂ ಪ್ರಯೋಗಗಳ ಬಗ್ಗೆ ಅವರಿಗೆ ಬಹಳ ಆಸಕ್ತಿ. ಮನೆಯಲ್ಲಿದ್ದ ದೊಡ್ಡ ಗಡಿಯಾರದ ಪೆಂಡುಲಂಗೆ ಕೈಗಡಿಯಾರವನ್ನು ತಗುಲಿ ಹಾಕಿದರೆ ಎರಡು ಗಡಿಯಾರಗಳು ತೋರಿಸುವ ಕಾಲ ಒಂದೇ ಇರಬಲ್ಲುದೆ ಎಂಬುದು ಅವರ ಕುತೂಹಲ. ತಂದೆ ಮನೆಯಲ್ಲಿಲ್ಲದಾಗ ಚಿಕ್ಕ ಗಡಿಯಾರವನ್ನು ದೊಡ್ಡ ಗಡಿಯಾರದ ಪೆಂಡುಲಂ ಮೇಲೆ ಇಟ್ಟು ಕಾಲವನ್ನು ಎರಡೂ ಗಡಿಯಾರಗಳಲ್ಲಿ ಪರಿಶೀಲಿಸುತ್ತ ಯಾವುದೇ ವ್ಯತ್ಯಾಸವಿಲ್ಲದ್ದನ್ನು ಕಂಡುಕೊಂಡವರು. ಅಷ್ಟೇ ಅಲ್ಲ ಆ ಕಾಲಕ್ಕೆ ಆಗಲೇ ಬಂದಿದ್ದ ಉಗಿಬಂಡಿಯನ್ನು ನೋಡಿ ಹಬೆಯ ಶಕ್ತಿಯನ್ನು ಪರೀಕ್ಷಿಸುವ ಪ್ರಯೋಗವನ್ನು ಮನೆಯಲ್ಲಿಯೇ ಮಾಡಿ ಸಮಾಧಾನ ಪಟ್ಟುಕೊಂಡವರು. ಬಹುಶಃ ಈ ಯಂತ್ರ ಜ್ಞಾನದ ಮೇಲಿರುವ ತೀವ್ರವಾದ ಆಸಕ್ತಿ, ಪ್ರೇಮಗಳ ಕಾರಣವಾಗಿಯೆ ಅವರ ಮನಸ್ಸು ಓದಿನಲ್ಲಿ ಅಷ್ಟೊಂದು ಆಸಕ್ತಿ ತಾಳಲಿಲ್ಲ. ಉತ್ತಂಗಿಯವರೇ ಈ ಬಗ್ಗೆ ತಮಗೆ ಆಗ ಜ್ಞಾಪಕಶಕ್ತಿ ಕಡಿಮೆ ಎಂದು ಹೇಳಿಕೊಂಡದ್ದುಂಟು. ಆದರೆ ಇದು ಜ್ಞಾಪಕಶಕ್ತಿ ಕೊರತೆಗಿಂತ ಅವರಲ್ಲಿದ್ದ ಯಂತ್ರಜ್ಞಾನದ ಮೇಲಿನ ಪ್ರೇಮವನ್ನು ಸೂಚಿಸುತ್ತದೆ ಎನ್ನಬಹುದೆಂದು ತೋರುತ್ತದೆ.

ತಂದೆ ದಾನಿಯೇಲಪ್ಪನವರಿಗೆ ತನ್ನ ಮಗ ಯಂತ್ರಜ್ಞಾನಿಯಾಗುವುದರಲ್ಲಿ ಆಸಕ್ತಿಯಿದ್ದಂತೆ ತೋರುವುದಿಲ್ಲ. ಅವರಿಗೆ ಮಗ ಓದಲಿ; ಬುದ್ಧಿವಂತನಾಗಿ ಅಧಿಕಾರ ಪಡೆಯಲಿ ಎಂದು ಆಸೆಯಿದ್ದಿರಬೇಕು. ಓದಿನಲ್ಲಿ ಹೆಚ್ಚು ಆಸಕ್ತಿ ತೋರದ ಮಗನನ್ನು ಆಗಾಗ ಹೊಡೆದದ್ದು ಉಂಟು.

ಯಂತ್ರಗಳ ಬಗೆಗೆ ಒಲವು ಪಡೆದ ಚನ್ನಪ್ಪನವರು ಕನ್ನಡ ಐದನೆಯ ವರ್ಗ ತೇರ್ಗಡೆಯಾದಾಗ ಅವರಿಗಿನ್ನೂ ಹತ್ತು ವರ್ಷ ಮಾತ್ರ. ತಂದೆ ದಾನಿಯೇಲಪ್ಪನವರು ಮಗನಿಗೆ ಇಂಗ್ಲಿಷ್ ಕಲಿಸಲು ಬಯಸಿದರು. ಆಗಿನ ಕಾಲದಲ್ಲಿ ಕ್ರೈಸ್ತ ಬಾಲಕರಿಗೆ ಇಂಗ್ಲಿಷ್ ಕಲಿಸುವುದು ಒಳ್ಳೆಯದಲ್ಲ; ಅದರಿಂದ ಅವರು ಹಾಳಾಗುತ್ತಾರೆಂಬ ಒಂದು ನಂಬಿಕೆ. ಆದರೆ ರೆ. ಝಿಗ್ಲರ್, ರೆವರೆಂಡ್ ಅರ್ನೆಸ್ಟ್ ಮತ್ತು ರೆ. ಹರ್ಮನ್ ರಿಷೆ ಇವರುಗಳು ಈ ನಂಬಿಕೆ ತಪ್ಪೆಂದು ವಾದಿಸಿ ಕ್ರೈಸ್ತ ಯುವಕರೂ ಇಂಗ್ಲಿಷ್ ಕಲಿಯುವ ಸೌಲಭ್ಯವನ್ನು ಉಂಟುಮಾಡಿದರು. ಈ ಕಾರಣದಿಂದಾಗಿಯೇ ಗದಗಿನಲ್ಲಿದ್ದ ಮಾಧ್ಯಮಿಕ ಶಾಲೆಯನ್ನು ಧಾರವಾಡಕ್ಕೆ ವರ್ಗಾಯಿಸಿ 'ಸ್ಟೂಡೆಂಟ್ಸ್ ಹೋಮ್' ಅನ್ನು ಪ್ರಾರಂಭಿಸಿದರು. ಅದಕ್ಕೆ ಪ್ರವೇಶಾವಕಾಶ ಇದ್ದದ್ದು ಹನ್ನೆರಡು ಮಂದಿಗೆ ಮಾತ್ರ. ರೆ. ಝಿಗ್ಲರ್ ಹಾಗೂ ರೆ. ವೇಲ್ಸ್ ಅವರಿಂದ ತಮ್ಮ ಸೇವೆಗಾಗಿ ಶ್ಲಾಘಿಸಲ್ಪಟ್ಟಿದ್ದ ದಾನಿಯೇಲಪ್ಪನವರ ಮಗ ಚನ್ನಪ್ಪ ಉತ್ತಂಗಿಯವರು ಅವರಲ್ಲೊಬ್ಬರಾದರು. ಈ ಸಂಸ್ಥೆ 1892ರಲ್ಲಿ ಆರಂಭವಾದರೂ ಉತ್ತಂಗಿ ಚನ್ನಪ್ಪನವರು ಮನೆಯಲ್ಲಿದ್ದುಕೊಂಡೇ ಆ ಶಾಲೆಯಲ್ಲಿ ಅಧ್ಯಯನ ಮಾಡಿ 1897ರಲ್ಲಿ ವಿದ್ಯಾರ್ಥಿನಿಲಯ ಸೇರಿದರು.

ಧಾರವಾಡದ ಮಿಷನ್ ಹೈಸ್ಕೂಲಿನಲ್ಲಿ ಕ್ರೈಸ್ತ ಮಕ್ಕಳಿಗೆ ಪ್ರವೇಶಾವಕಾಶ ಇಲ್ಲದ್ದರಿಂದ ಮಗ ಚನ್ನಪ್ಪ ಪ್ರಾಥಮಿಕ ವಿದ್ಯಾಭ್ಯಾಸದ ಕೊನೆಯ ಹಂತವಾದ ಮುಲ್ಕಿ ಪರೀಕ್ಷೆಯಲ್ಲಾದರೂ ತೇರ್ಗಡೆಯಾಗಲಿ ಎಂಬುದು ತಂದೆಯ ಆಸೆಯಾಗಿತ್ತು. ಹೀಗಾಗಿ ಮನೆಯಲ್ಲಿ ಮಗನಿಗೆ ಎಷ್ಟೋ ಕಲಿಸಲು ಯತ್ನಿಸಿದರೂ ಜಯಶಾಲಿಗಳಾಗಿರಲಿಲ್ಲ. ಇದನ್ನರಿತಿದ್ದ ಸ್ಟೂಡೆಂಟ್ಸ್ ಹೋಮ್‌ನ ಮುಖ್ಯೋಪಾಧ್ಯಾಯರಾಗಿದ್ದ ರೆವರೆಂಡ್ ರಿಷ್ ಚನ್ನಪ್ಪನವರ ಮೇಲೆ ವಿಶೇಷ ಆಸಕ್ತಿ ವಹಿಸಿದರು. ಬಹುಶಃ ತಂದೆ ತೋರಿಸದಿದ್ದ ಪ್ರೀತಿ, ಅಕ್ಕರೆಗಳನ್ನು ಅವರು ಧಾರೆಯೆರೆದಿರಬೇಕು. ಹೀಗಾಗಿ 1897ರಿಂದ 1900ರ ವರೆಗೆ ಮೂರು ವರ್ಷಗಳ ಕಾಲ ರಿಷ್ ಅವರು ಬೀರಿದ ಪ್ರಭಾವ ಚನ್ನಪ್ಪನವರಲ್ಲಿ ಅಪೂರ್ವವಾದ ರೀತಿಯಲ್ಲಿ ವಿಚಾರಶಕ್ತಿಯನ್ನು ಬೆಳೆಸಿತು. ರಿಷ್ ಅವರ ಸತತ ಪ್ರಯತ್ನ, ಪ್ರಭಾವ ಹಾಗೂ ಶ್ರಮಗಳ ಕಾರಣವಾಗಿ ಚನ್ನಪ್ಪನವರಿಗೆ ಬಾಸೆಲ್ ಮಿಷನ್ ಹೈಸ್ಕೂಲಿನ ಇಂಗ್ಲಿಷ್ ನಾಲ್ಕನೆಯ ವರ್ಗಕ್ಕೆ ಪ್ರವೇಶ ದೊರೆಯಿತು.

ಮೊದಲಿನಿಂದಲೂ ಓದಿನಲ್ಲಿ ಆಸಕ್ತಿ ಅಷ್ಟಕ್ಕಷ್ಟೆ ಚನ್ನಪ್ಪ ಉತ್ತಂಗಿ ಅವರಿಗೆ. ಇಲ್ಲಿ ಇಂಗ್ಲಿಷ್ ಶಾಲೆಗೆ ಸೇರುತ್ತಿದ್ದಂತೆ ಪಾಠಕ್ರಮದಲ್ಲಿ ವಿಶೇಷ ಬದಲಾವಣೆಗಳಿದ್ದವು. ಗಂಟೆಗೆ ಒಬ್ಬೊಬ್ಬರು ಅಧ್ಯಾಪಕರು ಬಂದು ಪಾಠ ಹೇಳುತ್ತಿದ್ದರು. ಒಂದೊಂದು ವಿಷಯಕ್ಕೆ ಒಬ್ಬೊಬ್ಬ ಪ್ರತ್ಯೇಕ ಅಧ್ಯಾಪಕರು. ಚನ್ನಪ್ಪನವರಿಗೆ ಈ ವಿಧಾನಕ್ಕೆ ಒಗ್ಗಿಕೊಳ್ಳುವುದರ ಜೊತೆಗೆ ಮತ್ತೂ ಒಂದು ಕಷ್ಟ ತೋರಿತು.

ಚಿಕ್ಕಂದಿನಲ್ಲಿ ತಂದೆಯಿಂದ ಕಲಿಯುತ್ತಿದ್ದರು. ತಾಯಿ ಕ್ರಿಸ್ತನ ಬಗ್ಗೆ ಹೇಳುತ್ತಿದ್ದಳು. 'ಸ್ಟೂಡೆಂಟ್ಸ್ ಹೋಮ್' ಸೇರಿದಾಗ ರೆ. ರಿಷ್‌ರಂಥ ಪ್ರೀತಿಯ ಗುರುಗಳಿದ್ದರು. ಇಲ್ಲಿ ಕಲಿಯುವಾಗ ಭೂಮಿತಿಯ ತರಗತಿಯಲ್ಲಿ ದೊಡ್ಡ ಸಮಸ್ಯೆಯೇ ಹುಟ್ಟಿಕೊಂಡಿತು. ಒಮ್ಮೆ ಭೂಮಿತಿಯ ಪ್ರತ್ಯಕ್ಷ ಪ್ರಮಾಣಗಳನ್ನು ಕುರಿತು ಗುರು ಹೇಳಿದರು: "ಬಿಂದುವಿಗೆ ಪರಿಮಾಣವಿಲ್ಲ; ಸರಳರೇಖೆಗೆ ಉದ್ದಳತೆಯುಂಟಲ್ಲದೆ ಅಗಲಳತೆಯಿಲ್ಲ". ಆದರೆ "ಬಿಂದುವಿಗೆ ಪರಿಮಾಣವುಂಟು; ಅಗಲಳತೆಯಿಲ್ಲದೆ ಸರಳರೇಖೆಯನ್ನು ಬರೆಯಲು ಬರುವಂತಿಲ್ಲ" ಎಂದರು ಚನ್ನಪ್ಪ. "ವ್ಯವಹಾರದ ದೃಷ್ಟಿಯಿಂದ ಹೀಗೆ ಹೇಳಬೇಕಾಗಿದ್ದರೂ,

ಭಾವನೆಯಲ್ಲಿ ಇಲ್ಲವೆಂದು ತಿಳಿಯತಕ್ಕದ್ದು" ಎಂದು ಮತ್ತೆ ಗುರುಗಳ ಉತ್ತರ. "ಹೀಗೆ ಪುಸ್ತಕದಲ್ಲಿ ಏಕೆ ಬರೆದಿರುವುದಿಲ್ಲ?" ಎಂದು ಮತ್ತೆ ಚನ್ನಪ್ಪನವರು ಪ್ರಶ್ನಿಸಿದ್ದಕ್ಕೆ "You stupid ass, sit down" ಎಂದು ಹೇಳಿದರು. ಚನ್ನಪ್ಪನವರು ಅದಕ್ಕೂ ಬಗ್ಗಲಿಲ್ಲ. ಎದ್ದು ನಿಂತು, "ಗ್ರಂಥಕರ್ತನು ಹೇಳದಿದ್ದುದನ್ನು ಶಿಕ್ಷಕರಿಗೆ ಹೇಳಲು ಅಧಿಕಾರವುಂಟೇ?" ಎಂದು ಪ್ರಶ್ನಿಸಿದರು. ಶಿಕ್ಷಕರು ಚನ್ನಪ್ಪನವರನ್ನು ಚೆನ್ನಾಗಿ ಥಳಿಸಿದರು. ಅಂದಿನಿಂದಲೆ ಶಿಕ್ಷಕರ ಮೇಲೆ ಹಾಗೂ ಭೂಮಿತಿಯ ಬಗ್ಗೆ ಜಿಗುಪ್ಸೆ ಹುಟ್ಟಿತು. 1903ರಲ್ಲಿ ಮೆಟ್ರಿಕ್ ಪರೀಕ್ಷೆಗೇನೋ ಕುಳಿತರು. ಅಂಕಗಣಿತ, ಬೀಜಗಣಿತ ಪ್ರಶ್ನೆಪತ್ರಿಕೆಗಳಿಗೆ ಸರಿಯಾಗಿಯೆ ಉತ್ತರಿಸಿದರು. ಭೂಮಿತಿಯ ಉತ್ತರ ಪತ್ರಿಕೆಯಲ್ಲಿ ಸೊನ್ನೆಯೊಂದನ್ನು ಬರೆದರು. ಅಂಕಗಣಿತ ಹಾಗೂ ಬೀಜಗಣಿತಗಳಲ್ಲಿ ಇವರು ಬರೆದಿದ್ದ ಉತ್ತರಗಳು ಎಷ್ಟು ಚೆನ್ನಾಗಿದ್ದವೆಂದರೆ ಇನ್ನು ಮೂರೇ ಅಂಕಗಳು ಭೂಮಿತಿಯ ಉತ್ತರ ಪತ್ರಿಕೆಯಲ್ಲಿ ಬರೆದಿದ್ದರೂ ಅವರು ಮೆಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತಿದ್ದರು. ಮೆಟ್ರಿಕ್ ಫೇಲಾದಾಗ ಇವರ ತಂದೆಯವರಿಗೆ ದುಃಖವಾದದ್ದು ಸಹಜವೇ. ಮತ್ತೆ ಪರೀಕ್ಷೆಗೆ ಕುಳಿತುಕೊಳ್ಳಲು ಒತ್ತಾಯ ಮಾಡಿದರು. ಆದರೆ ಚನ್ನಪ್ಪನವರ ಸ್ವಭಾವವನ್ನು ಅರಿತಿದ್ದ ಅವರ ತಂದೆ ದಾನಿಯೇಲಪ್ಪನವರು ಈ ಬಗ್ಗೆ ಹೆಚ್ಚು ಆಗ್ರಹ ಮಾಡಲಿಲ್ಲ. ಚನ್ನಪ್ಪನವರು ತನ್ನನ್ನು ತಂದೆ ಯಾವುದಾದರು ಯಂತ್ರಶಾಲೆಗೆ ಸೇರಿಸಲಿ ಅಥವಾ ತಂತ್ರಜ್ಞಾನದ ಅಧ್ಯಯನಕ್ಕೆ ನೆರವಾಗಲಿ ಎಂದು ಆಶಿಸಿದ್ದು ನಿಜ. ಆದರೆ ಕಡುಬಡವರಾಗಿದ್ದ ತಂದೆ ಇಂಥ ನೆರವು ನೀಡುವ ಸ್ಥಿತಿಯಲ್ಲಿರಲಿಲ್ಲ. ಈ ಹಂತದಲ್ಲಿ ತಾಯಿಯೆ ಮಗನನ್ನು ಒತ್ತಾಯಿಸಿದ್ದುಂಟು. ಮಗು, ನೀನು ಹುಟ್ಟಿದರೆ ಕ್ರಿಸ್ತನಿಗೆ ಅರ್ಪಿಸುತ್ತೇನೆ ಎಂದೆ ನಾನು ಹರಕೆ ಹೊತ್ತಿದ್ದೆ. ಈಗಲಾದರೂ ನೀನು ಕ್ರೈಸ್ತ ದೈವಜ್ಞಾನದ ಶಾಲೆಗೆ ಸೇವೆ ಮಾಡು" ಎಂದರು. ಭೂಮಿತಿಯನ್ನು ಮತ್ತೆ ಓದುವುದಿಲ್ಲ ಎಂದು ನಿಶ್ಚಯ ಮಾಡಿಕೊಂಡಿದ್ದ ಚನ್ನಪ್ಪನವರಿಗೆ ಬೇರೆ ಮಾರ್ಗವೇ ಇರಲಿಲ್ಲ. ತನ್ನನ್ನು ಅತ್ಯಂತ ವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದ ತಾಯಿಯ ಮಾತನ್ನು ನಿರಾಕರಿಸಲಿಲ್ಲ. ಮಂಗಳೂರು ದೈವಜ್ಞಾನ ಶಾಲೆಯಲ್ಲಿ ಜನವರಿ 1904ರಂದು ಬಂದು ದಾಖಲಾದರು.

'ಸ್ಟೂಡೆಂಟ್ಸ್ ಹೋಮ್'ನ ಮುಖ್ಯೋಪಾಧ್ಯಾಯರೂ ಚನ್ನಪ್ಪನವರನ್ನು ತೀರ ಹತ್ತಿರದಿಂದ ಬಲ್ಲವರೂ ಆದ ರೆವರೆಂಡ್ ಹರ್ಮನ್ ರಿಷ್‌ರವರ ಶಿಫಾರಸು ಪತ್ರವನ್ನು ತಂದ ಚನ್ನಪ್ಪನವರಿಗೆ ಇಲ್ಲಿಯ ಶಿಕ್ಷಣ ಸುಮುಖವಾಗಿರಲಿಲ್ಲ. ರಿಷ್‌ರಂಥ ಮುಕ್ತಮನಸ್ಸಿನ ಮುಖ್ಯೋಪಾಧ್ಯಾಯರ ಬಳಿ ಬಳೆದಿದ್ದ ಚನ್ನಪ್ಪನವರಲ್ಲಿ ಸ್ವಾಭಿಮಾನ, ವಿಚಾರಪರತೆ, ಧೀರತೆ, ಸಚ್ಚಾರಿತ್ರಗಳು ತಾನೇ ತಾನಾಗಿದ್ದವು. 24 ವರ್ಷದವರಾಗಿದ್ದ ಅವರು ಮಂಗಳೂರಿನ ಶಾಲೆಗೆ ಸೇರಿದಾಗ ತಟ್ಟನೆ ಅವರಿಗೆ ಆ ಶಾಲೆಯಲ್ಲಿದ್ದ ಪರಿಸ್ಥಿತಿ ವೇದ್ಯವಾಗಿಬಿಟ್ಟಿತು. ಉತ್ತಮವಾದ ಪುಸ್ತಕಭಂಡಾರವಿಲ್ಲದ ಅಲ್ಲಿನ ಪಠ್ಯಕ್ರಮ ತೀರ ಹಳೆಯ ಕಾಲದ್ದಾಗಿತ್ತು. ಮಾಧ್ಯಮಿಕ ಭಾಷೆ ಜರ್ಮನ್-ಕನ್ನಡವಾಗಿದ್ದುದಲ್ಲದೆ, ಅನಗತ್ಯವಾಗಿ ವಿದೇಶೀ ಮಿಷನರಿಗಳ ಮೇಲುಗೈ ಅಸಹ್ಯ ಹುಟ್ಟಿಸುವಂತಿತ್ತು. ಬೋಧನಾಕ್ರಮ ಕೂಡ ಅವೈಜ್ಞಾನಿಕವಾಗಿದ್ದು, ಹಳೆಯ ವಿದ್ಯಾರ್ಥಿಗಳನ್ನೂ, ಹೊಸ ವಿದ್ಯಾರ್ಥಿಗಳನ್ನೂ ಒಂದೆಡೆ ಕೂಡಿಸಿ ಪಾಠ ಹೇಳುವ ಕ್ರಮವೇ ಅಲ್ಲದೆ ಬಿ.ಎ. ಪಾಸಾದವರು; ಹೊಸದಾಗಿ ಕಲಿಯುವವರು; ಎಲ್ಲರನ್ನೂ ಒಟ್ಟಿಗೆ ಕೂಡಿಸುತ್ತಿದ್ದರು. ಇಂಥ ಪರಿಸ್ಥಿತಿ ಬಹಳ ವರ್ಷಗಳಿಂದಲೂ ಇದ್ದರೂ ಯಾರೂ ಇದನ್ನು ಪ್ರತಿಭಟಿಸಿರಲಿಲ್ಲ; ಈ ಬಗ್ಗೆ ವಿಚಾರಿಸಿರಲಿಲ್ಲ.

ಚನ್ನಪ್ಪನವರು ಶಾಲೆಗೆ ಸೇರಿದ ಸ್ವಲ್ಪ ದಿನಗಳಲ್ಲಿಯೇ ಈ ಅಸಂಗತ ಅಂಶಗಳನ್ನು ಗುರುತಿಸಿದರು. ತಮ್ಮ ಸಹಪಾಠಿಗಳನ್ನೆಲ್ಲ ಒಂದು ಕಡೆ ಕೂಡಿಸಿ ಅವರಿಗೆ ಈ ಬಗ್ಗೆ ವಿವರಿಸಿದರು. ಈ ವಿಷಯವನ್ನು ಪ್ರಿನ್ಸಿಪಾಲರಿಗೆ ಲಿಖಿತ ರೂಪದಲ್ಲಿಯೂ ಹಾಗೂ ಮೌಖಿಕವಾಗಿಯೂ ನಿವೇದಿಸಲು ತಾವೇ ಮುಂದಾಗಿ ವೈ.ಎಂ.ಸಿ.ಎ. ನಲ್ಲಿ ಸಭೆ ಸೇರಿ ನಿರ್ಭೀತವಾಗಿ ಈ ವಿಷಯಗಳನ್ನು ಪ್ರಿನ್ಸಿಪಾಲರು ಹಾಗೂ ಉಳಿದ ಪ್ರಾಧ್ಯಾಪಕರ ಮುಂದೆ ನಿವೇದಿಸಿದರು. ಅವರಲ್ಲಿ ಒಬ್ಬರು ವಿದ್ಯಾರ್ಥಿನಿಲಯದ ವ್ಯವಸ್ಥಾಪಕರೂ ಆದ ರೆವರೆಂಡ್ ಕ್ರಿಸ್ತಾನುಜವತ್ಸರು. ಉದಾರ ದೃಷ್ಟಿಯ ಪ್ರಿನ್ಸಿಪಾಲರೇನೊ ಚನ್ನಪ್ಪನವರ ಸೂಚನೆಗಳನ್ನು ಪರಿಶೀಲಿಸುವುದಾಗಿ ಭರವಸೆಯಿತ್ತರು. ಆದರೆ ಅವರು ಹಾಗೂ ಕ್ರಿಸ್ತಾನುಜರನ್ನುಳಿದರೆ ಉಳಿದ ಇಬ್ಬರು ಅಧ್ಯಾಪಕರು ಚನ್ನಪ್ಪನವರನ್ನು ಅವಿಧೇಯರೆಂದು ತಿಳಿದರು. ವಿದ್ಯಾರ್ಥಿಗಳನ್ನೆಲ್ಲ ಹೆದರಿಸಿದರು. ಚನ್ನಪ್ಪನವರನ್ನು ಬಿಟ್ಟು ಉಳಿದವರೆಲ್ಲ ಹೆದರಿ ಚನ್ನಪ್ಪನವರಿಂದ ದೂರಸರಿದು ಪ್ರಾಧ್ಯಾಪಕರುಗಳ ಮಾತಿನಂತೆ ನಡೆದುಕೊಂಡುಬಿಟ್ಟರು. ಚನ್ನಪ್ಪನವರು ವಿಚಲಿತರಾಗಲಿಲ್ಲ. ಮನಸ್ಸನ್ನು ದೃಢ ಮಾಡಿಕೊಂಡರು. ತಾವು ಮಾಡುತ್ತಿರುವುದು ಸರಿಯಾದದ್ದು ಎಂಬುದನ್ನು ಮನಗಂಡಿದ್ದ ಅವರು ಹೆಚ್ಚು ಹೆಚ್ಚು ಅಧ್ಯಯನಶೀಲರಾದರು.

ಬಾಲ್ಯದಿಂದ ತಮಗೆ ಜ್ಞಾಪಕಶಕ್ತಿ ಕಡಿಮೆ ಎಂದುಕೊಳ್ಳುತ್ತಿದ್ದಾಗ ಅವರ ತಾಯಿ ಎಷ್ಟೋ ಸಲ ಏಕಾಂತದಲ್ಲಿ ಕುಳಿತು ದೇವರಲ್ಲಿ ಬುದ್ಧಿಕೊಡೆಂದು ಪ್ರಾರ್ಥಿಸು ಎಂದು ಹೇಳುತ್ತಿದ್ದುದುಂಟು. ಹಾಗೆ ಎಷ್ಟೋ ಸಲ ಏಕಾಂತದಲ್ಲಿ ಅವರು ಪ್ರಾರ್ಥಿಸುತ್ತಿದ್ದುದೂ ಉಂಟು. ಆ ಏಕಾಂತ ಅವರಿಗೆ ಈಗ ಹೆಚ್ಚು ಅನುಕೂಲವಾಯಿತು. ಒಬ್ಬೊಬ್ಬರಿಗೆ ಒಂದೊಂದು ಕೊಠಡಿ ಕೊಡುವ ವ್ಯವಸ್ಥೆ ಅಲ್ಲಿದ್ದು ತಾವಿದ್ದ ವಿದ್ಯಾರ್ಥಿನಿಲಯದ ಬಾಗಿಲು ಚಿಲಕಗಳು ಹಳೆಯವಾಗಿದ್ದು ಸಡಿಲಗೊಂಡಿದ್ದವು. ಅದೂ ಇವರಿಗೆ ವರವಾಗಿ ಪರಿಣಮಿಸಿತು. ಒಳಗೆ ಕುಳಿತು ಹೊರಗಿನಿಂದ ಚಿಲಕ ಹಾಕಿ ಕೋಣೆಯೊಳಗೇ ಕುಳಿತು ಏಕಾಂತದಲ್ಲಿ ಆಳವಾದ ಅಧ್ಯಯನ ನಡೆಸಲು ಆರಂಭಿಸಿದರು. ಜ್ಞಾಪಕಶಕ್ತಿ ಕಡಿಮೆ ಎಂದುಕೊಂಡಿದ್ದ ಚನ್ನಪ್ಪನವರು ಏನನ್ನೇ ಓದಿದರು ವಿವರವಿವರವಾಗಿ ಟಿಪ್ಪಣಿ ಮಾಡಿ ಬರೆಯುವುದನ್ನು ರೂಢಿಮಾಡಿಕೊಂಡರು. ಹೀಗಾಗಿ ಇವರ ಅಧ್ಯಯನ ಅತ್ಯಂತ ಖಚಿತವೂ ಶಾಸ್ತ್ರಬದ್ಧವೂ ಆಗುತ್ತ ನಡೆಯಿತು. ಹೊರಗಿನಿಂದ ಚಿಲಕಹಾಕಿಕೊಂಡು ಒಳಗೇ ಕುಳಿತು ಹೀಗೆ ಎಷ್ಟೋ ಕಾಲ ಇವರು ಅಧ್ಯಯನ ನಡೆಸುತ್ತಿದ್ದದ್ದು ಹೇಗೋ ತನ್ನ ಸಹಪಾಠಿಯೊಬ್ಬರ ಗಮನಕ್ಕೆ ಬಂದು ಪ್ರಾಧ್ಯಾಪಕರವರೆಗೂ ಈ ಸುದ್ದಿ ಹೋಗಿ ಚನ್ನಪ್ಪನವರ ಮೇಲೆ ಮೊದಲಿನಿಂದ ಅಸಹನೆಗೊಂಡಿದ್ದ ಗುರುವೊಬ್ಬರು ಕೋಣೆಯೊಳಕ್ಕೆ ಇದ್ದಕ್ಕಿದ್ದಂತೆ ನುಗ್ಗಿ ಬಂದು "ಒಳಗೆ ಕುಳಿತು ಏನು ನಡೆಯಿಸಿದ್ದೀ?" ಎಂದು ಅನುಮಾನಿಸುತ್ತಿದ್ದಂತೆ ಚನ್ನಪ್ಪನವರು ಓದುತ್ತಿದ್ದ ಜಾನ್ ಲೋಕ್‌ನ ಗ್ರಂಥದ ಕಡೆ ನೋಡಿ, "ಈ ಗ್ರಂಥದೊಳಗಿನ ವಿಷಯ ನಿನಗೆ ತಿಳಿಯುತ್ತದೆಯೋ?" ಎಂದು ಗಡುಸಾಗಿ ಪ್ರಶ್ನಿಸಿದ್ದೂ ಉಂಟು. ಮಹಾ ಅಭಿಮಾನಶಾಲಿಗಳಾದ ಚನ್ನಪ್ಪನವರು ಅಷ್ಟೇ ದೃಢವಾಗಿ "ನನಗೆ ತಿಳಿಯದಿದ್ದರೆ ತಮ್ಮನ್ನು ಕೇಳುತ್ತೇನೆ" ಎಂದದ್ದೂ ಉಂಟು. ಈ ಘಟನೆಯನ್ನು ಉತ್ತಂಗಿ ಚನ್ನಪ್ಪನವರು ತಾವೇ ಉಲ್ಲೇಖಿಸಿದ್ದಾರೆ. ಎಲ್ಲಿಯೂ ಗುರುಗಳ ಹೆಸರನ್ನು ಹೇಳಲು ಹೋಗಿಲ್ಲ; ಗುರುಗಳನ್ನು ಅವಮಾನಿಸಲು ಹೋಗಿಲ್ಲ; ಅದಕ್ಕೆ ಬದಲಾಗಿ ತಮ್ಮ ನಿಲುವನ್ನು ಖಚಿತಪಡಿಸಿದ್ದಾರೆ. ಅಷ್ಟೇ ಅಲ್ಲ ಅಂದಿನ ಬೋಧನ ಪದ್ಧತಿಯ ಬಗ್ಗೆ ಬೇಸತ್ತ ಅವರು ವಿಶ್ವದ ಶ್ರೇಷ್ಠ ತತ್ವಜ್ಞಾನಿಗಳು ಹಾಗೂ ಮಹಾ ವ್ಯಕ್ತಿಗಳನ್ನು

ಕುರಿತು ಆಳವಾಗಿ ಅಧ್ಯಯನ ಮಾಡಿದರು. ಜಾನ್ ಲೋಕ್‌ನಂಥ ಅತ್ಯಂತ ಕಠಿಣವೆನ್ನುವಂತೆ ತೋರುವ ತತ್ವಜ್ಞಾನಿಯ ಗ್ರಂಥಗಳನ್ನು ಓದಿ ಅರಗಿಸಿಕೊಳ್ಳುವ ಅವರ ಬುದ್ಧಿಮತ್ತೆ; ಹಿಡಿದುದನ್ನು ಕೊನೆಯವರೆಗೂ ಸಾಧಿಸುವ ಮಾನಸಿಕಶಕ್ತಿ ಇವುಗಳು ಅಪೂರ್ವವಾದುವು. ಮಂಗಳೂರಿನ ನಾಲ್ಕು ವರ್ಷಗಳ ತಮ್ಮ ಶಿಕ್ಷಣದ ಅವಧಿಯಲ್ಲಿ ಅಲ್ಲಿನ ಇಬ್ಬರು ಶಿಕ್ಷಕರಿಂದ ಎಷ್ಟೋ ಕಿರುಕುಳ ಯಾತನೆಗಳು ಉಂಟಾದರೂ ಅವುಗಳನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳಲಿಲ್ಲ. ಕ್ರೈಸ್ತಧರ್ಮದ ಬಗ್ಗೆ ಅಧ್ಯಯನ, ನಾಸ್ತಿಕವಾದಿಗಳ ಅಧ್ಯಯನ ಆಗದೆ ಪೂರ್ಣವಾಗುವುದಿಲ್ಲ ಎಂಬುದನ್ನು ತಿಳಿದಿದ್ದರು. ಇಂಗರ್‌ಸಾಲ್, ವಾಲ್ಟೇರ್, ಪೇನ್ ಇವರ ಗ್ರಂಥಗಳನ್ನೂ ಅಧ್ಯಯನ ಮಾಡಿದ ಇವರು ಎಷ್ಟೋ ಕಾಲದವರೆಗೆ ಲಂಡನ್ನಿನಲ್ಲಿರುವ (R.P.A.) ವಿಚಾರ ಗ್ರಂಥಮಾಲಾ ಸಂಸ್ಥೆಯ ಗುಪ್ತಸದಸ್ಯನಾಗಿ ಅಧ್ಯಯನ ನಡೆಸಿದ್ದರು. ಅಧ್ಯಯನ ನಡೆಸುವಾಗ ಯಾವಾಗಲೂ ಚನ್ನಪ್ಪನವರು ತೌಲನಿಕ ದೃಷ್ಟಿಯಿಂದಲೇ ಶಾಸ್ತ್ರೀಯವಾಗಿ ಹಾಗೂ ವ್ಯಾಪಕವಾಗಿ ಅಧ್ಯಯನ ನಡೆಸುತ್ತಿದ್ದರು. ತೌಲನಿಕವಾದ ದೃಷ್ಟಿ ಇವರಿಗೆ ಸಹಜವಾಗಿ ಪ್ರಾಪ್ತವಾದದ್ದರಿಂದಲೇ ಅತ್ಯಂತ ವಿಶಿಷ್ಟವಾದ ರೀತಿಯಲ್ಲಿ ಇವರು ವಿಶ್ವದ ಧರ್ಮಗಳನ್ನೆಲ್ಲ ಅಷ್ಟೇ ಪ್ರೀತಿ, ಅಭಿಮಾನಗಳಿಂದ ಅಭ್ಯಸಿಸಿದರು. ಬೈಬಲಿನಷ್ಟೇ ಕುರಾನನ್ನು; ಕುರಾನಿನಷ್ಟೇ ಶೂನ್ಯಸಂಪಾದನೆಯನ್ನು; ಶೂನ್ಯಸಂಪಾದನೆಯಷ್ಟೇ ಸರ್ವಜ್ಞನನ್ನು ಅಧ್ಯಯನ ಮಾಡುವ ಚನ್ನಪ್ಪನವರ ದೃಷ್ಟಿಯನ್ನು ಕಂಡಾಗ ಆಶ್ಚರ್ಯಕರವಾಗಿ ಕಾಣುವುದು ಕ್ರೈಸ್ತ ಹಾಗೂ ವೀರಶೈವ ಧರ್ಮಗಳ ಸಾಂಸ್ಕೃತಿಕ ಸಮಾವೇಶವನ್ನು. ಪಂಪನ ಪೂರ್ವಜರು ಬ್ರಾಹ್ಮಣರು; ಆದರೆ ಪಂಪನ ತಂದೆ ಹಾಗೂ ಪಂಪ ಜೈನರು. ಎರಡೂ ಧರ್ಮಗಳ ತಿರುಳು ಅವನ ಕಾವ್ಯಗಳಲ್ಲಿ ಫಲಿಸಿದೆ. ಚನ್ನಪ್ಪನವರ ಮೂಲಜರು ಲಿಂಗಾಯಿತರು. ತಾತ ಪಾರುಪತ್ತೇಗಾರ ಚನ್ನಪ್ಪ ಕೂಡ ಪಂಚಮಸಾಲಿ ಲಿಂಗಾಯಿತರು. ಗಂಡುಮಕ್ಕಳಾಗಲಿಲ್ಲ ಎಂದು ವ್ಯಥೆ. ಮೊದಲ ಹೆಂಡತಿ ಮಲ್ಲವ್ವನಿಗೆ ಎರಡು ಹೆಣ್ಣು ಮಕ್ಕಳಾದವು, ಗಂಡುಮಗುವಾಗಲಿಲ್ಲ. ಎರಡನೆಯವಳನ್ನು ಮದುವೆಯಾದರು. ಆಕೆಗೂ ಮಕ್ಕಳಾಗಲಿಲ್ಲ. ಅದೇ ಚಿಂತೆಯಲ್ಲಿ ಆಕೆ ಪ್ರಾಣಕಳೆದುಕೊಂಡಳು. ವ್ಯಥಿತರಾಗಿ ಚನ್ನಪ್ಪ ಊರು ಬಿಟ್ಟು ಪಕ್ಕದೂರಲ್ಲಿ ಜೀತದ ಆಳಾಗಿ ದುಡಿದರು. ಒಂದು ದಿನ ಅವರ ಮನೆಯಲ್ಲಿ ಕೀರ್ತನೆ ನಡೆಯುವಾಗ ಅವನು ಹೇಳುತ್ತಿದ್ದ ತಪ್ಪುಗಳನ್ನು ಗುರುತಿಸಿ ತಿದ್ದಿದರು. ಮನೆಯೊಡೆಯ ಇವರ ಬುದ್ಧಿಶಕ್ತಿಯನ್ನು ಕಂಡು ಇವರು ಸಾಮಾನ್ಯರಲ್ಲ ಎಂದು ತಿಳಿದು ಅವರನ್ನು ಹುಟ್ಟೂರಾದ ಉತ್ತಂಗಿಗೆ ಕಳುಹಿಸಿಕೊಟ್ಟ. ಚನ್ನಪ್ಪನವರ ಮನಸ್ಸು ಧರ್ಮಗ್ರಂಥಗಳ ಕಡೆ ಹೊರಳಿತು. ಇವರ ಚಿಂತೆಯನ್ನು ತಿಳಿದ ಪಾದ್ರಿಯೊಬ್ಬರು 'ಬೈಬಲ್ಲಿನ ಹೊಸ ಒಡಂಬಡಿಕೆ' ಪ್ರತಿಯನ್ನು ಕೊಟ್ಟರು. ಅದರಲ್ಲಿ ಆಸಕ್ತಿ ಹುಟ್ಟಿದ ಚನ್ನಪ್ಪ ಅದರ ಓದಿನಲ್ಲೇ ಮುಳುಗಿದರು. ಅದರಲ್ಲಿ ನಂಬಿಕೆ ಹುಟ್ಟಿತು. ಈ ಗ್ರಂಥದ ಬಗ್ಗೆ ತನ್ನ ಗಂಡನಿಗೆ ಉಂಟಾದ ಅಭಿಮಾನ ತಿಳಿದ ಹೆಂಡತಿ ಅದೇನೆಂದು ಕೇಳಿದಳು. "ಕ್ರೈಸ್ತಧರ್ಮದ ಗ್ರಂಥ. ಈಗ ನಾನದೇ ಧರ್ಮ ನಂಬಿದ್ದೇನೆ, ಕ್ರಿಶ್ಚಿಯನ್ ಆಗುತ್ತೇನೆ; ನೀನೂ ಇಷ್ಟಪಟ್ಟರೆ ಬಾ; ಇಲ್ಲದಿದ್ದರೆ ಬಿಡು" ಎಂದುಬಿಟ್ಟರು. ತಾಯ ಬಳಿ ಹೋದ ಆಕೆ ಗಂಡನನ್ನು ಹಿಂಬಾಲಿಸಲು ನಿಶ್ಚಯಿಸಿ ಬಂದಳು. ಇಬ್ಬರೂ ಧಾರವಾಡಕ್ಕೆ ಬಂದು ಕ್ರಿಶ್ಚಿಯನರಾಗಲು ಬಯಸಿದರು. ಪಾದ್ರಿಗಳು ಇವರ ಶ್ರದ್ಧೆಯನ್ನು ಅನುಮಾನಿಸಿದಾಗ ಅಲ್ಲಿ ಸೇವೆಯಲ್ಲೆ ನಿಂತುಬಿಟ್ಟರು. ಇವರ ಶ್ರದ್ಧೆಯ ಸ್ಥಿರತೆ ಕಂಡ ಪಾದ್ರಿಯವರು ಇವರಿಬ್ಬರನ್ನೂ ಕ್ರೈಸ್ತ ಧರ್ಮಕ್ಕೆ ಸೇರಿಸಿಕೊಂಡರು. ಅವರ ತಾತ ಕ್ರೈಸ್ತರಾದದ್ದು ಹಾಗೆ. ಅವರು ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನ ಉತ್ತಂಗಿಯ ಪಾರುಪತ್ತೇಗಾರರಾಗಿದ್ದುದರಿಂದ ಅವರಿಗೂ ಹಾಗೂ ಅವರ ಮಗ ದಾನಿಯೇಲಪ್ಪ ಮತ್ತೆ ಆತನ ಮಗ ಚನ್ನಪ್ಪ ಇವರೆಲ್ಲರ ಹೆಸರಿನ ಜೊತೆಗೆ ಉತ್ತಂಗಿ ಸೇರಿ ಅವರು ಉತ್ತಂಗಿ ಮನೆತನದವರೆಂದೂ ಖ್ಯಾತರಾದರು. ತಾತ ಲಿಂಗಾಯತನಾಗಿದ್ದವನು ಕ್ರೈಸ್ತನಾದ; ಮಕ್ಕಳು ಮೊಮ್ಮಕ್ಕಳೂ ಕ್ರೈಸ್ತರಾದರು, ಆದರೆ ಕ್ರೈಸ್ತರಾದ ಚನ್ನಪ್ಪನವರ ಮನಸ್ಸು ವೀರಶೈವ ಧರ್ಮ ಹಾಗೂ ಸಾಹಿತ್ಯಗಳ ಬಗ್ಗೆ ಹೊರಳಿದ್ದು ಆಶ್ಚರ್ಯಕರವಾದದ್ದು.

ಕ್ರೈಸ್ತ ದೈವಜ್ಞಾನ ಶಾಲೆಯಲ್ಲಿ ವ್ಯಾಪಕವಾಗಿ ಧರ್ಮ ಹಾಗೂ ತತ್ವಜ್ಞಾನಗಳ ಅಧ್ಯಯನಗಳಲ್ಲಿ ಎಷ್ಟೊಂದು ಮುಳುಗಿದರೆಂದರೆ, ಅವರ ವಿದ್ಯಾಗುರುಗಳೂ ವಿಸ್ಮಯಗೊಳ್ಳುವ ಹಾಗೆ ತಮ್ಮ ಸ್ವತಂತ್ರ ಧರ್ಮ ವಿಚಾರ ಹಾಗೂ ಬೈಬಲ್ ಅಧ್ಯಯನಗಳ ಅಧಿಕೃತತೆಯಿಂದ ಪ್ರಥಮ ದರ್ಜೆಯಲ್ಲೆ ತೇರ್ಗಡೆಯಾದರು. ಅಲ್ಲಿ ಇಬ್ಬರು ಗುರುಗಳ ಆಕ್ರೋಶಕ್ಕೆ ಗುರಿಯಾಗಿದ್ದ ಚನ್ನಪ್ಪನವರಿಗೆ ಅಲ್ಲಿ ಆಶ್ರಯ ಹಾಗೂ ಸ್ಥೈರ್ಯ ನೀಡಿದವರು ಎಂದರೆ ಕ್ರಿಸ್ತಾನುಜವತ್ಸರೆಂಬ ಗುರುಗಳು. ಪ್ರಥಮ ದರ್ಜೆಯಲ್ಲಿ ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತಿದ್ದಂತೆ ಈ ಸಂಸ್ಥೆಯಿಂದ ಹೇಗೊ ಪಾರಾಗಿ ಕಲ್ಕತ್ತದಲ್ಲಿ ನೆಲೆಸುವ ಇವರ ಯೋಚನೆ ಅಲ್ಲಿನ ಬಿಷಪ್‌ರು ನಿಧನರಾದುದರಿಂದ ಮಣ್ಣುಪಾಲಾಯಿತು. ಅಲ್ಲಿನ ಗುರು ಕ್ರಿಸ್ತಾನುಜರ ವಾತ್ಸಲ್ಯ, ಒತ್ತಾಯ ಹಾಗೂ ಪ್ರೇರಣೆಗಳಿಂದ ಅವರು ತಮ್ಮ ಮಾತೃ ಸಂಸ್ಥೆಯಾದ ಬಾಸೆಲ್ ಮಿಷನ್ ಸಂಸ್ಥೆಯನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡರು.

1-1-1908ರಲ್ಲಿ ಸೇವೆಗೆ ಚನ್ನಪ್ಪನವರು ಆ ವರ್ಷವೇ ಸುಭಕ್ತವ್ವಳನ್ನು ಮದುವೆಯಾದರು. ಆಗ ಅವರಿಗೆ 27ವರ್ಷ ವಯಸ್ಸು, ಸುಭಕ್ತವ್ವಳಿಗೆ 19 ವರ್ಷ. ಈಕೆ ತನ್ನತ್ತೆಯ ಕೈಯಲ್ಲಿ ಕಲಿತವಳು. ಮದುವೆಯಾಗಿ, ಶಿಕ್ಷಣ ಮುಂದುವರಿಸಿ ಎಲ್ಲ ರೀತಿಯಲ್ಲೂ ಗಂಡನ ಸೇವೆ ಮಾಡಿದ ಆದರ್ಶ ಗೃಹಿಣಿ. ಹುಟ್ಟಿದ ಹತ್ತು ಮಕ್ಕಳಲ್ಲಿ ಇಬ್ಬರು ಹೆಣ್ಣು ಮಕ್ಕಳು ಹಾಗೂ ಎರಡು ಗಂಡು ಮಕ್ಕಳು ತೀರಿಕೊಂಡವು. ಗಂಡು ಮಗುವಿನ ಸಾವು ಸುಭಕ್ತವ್ವನ ಆರೋಗ್ಯದ ಮೇಲೆ ತೀವ್ರ ಪರಿಣಾಮ ಬೀರಿದಂತೆ ಕಾಣುತ್ತದೆ. ಆಕೆ 25 ವರ್ಷಗಳಷ್ಟು ದೀರ್ಘ ಕಾಲ ಬಳಲಿ 1955ರಲ್ಲಿ ಕ್ರಿಸ್ತವಾಸಿಯಾದಳು.

ಚನ್ನಪ್ಪನವರು 1908ರಿಂದ 1942ರ ವರೆಗೂ ಧಾರವಾಡ, ಗದಗ, ಮುಂಡರಗಿ, ಹಾವೇರಿ, ಹುಬ್ಬಳ್ಳಿಗಳನ್ನು ತಮ್ಮ ಕೇಂದ್ರ ಸ್ಥಳಗಳನ್ನಾಗಿಟ್ಟುಕೊಂಡು ಕ್ರೈಸ್ತ ಬೋಧಕರಾಗಿ ಕೆಲಸ ಮಾಡಿದರು. ಗ್ರೀಕ್, ಇಂಗ್ಲಿಷ್ ಹಾಗೂ ಕನ್ನಡಗಳಲ್ಲಿ ವಿದ್ವತ್ ಪಡೆದ ಇವರ ಕ್ರೈಸ್ತಶ್ರದ್ಧೆ ಅದ್ವಿತೀಯವಾಗಿದ್ದುದರಿಂದಲೇ ಕನ್ನಡ ಭಾಷೆಯ ಬೈಬಲ್ ಪರಿಷ್ಕರಣ ಸಮಿತಿ ಕಾರ್ಯದರ್ಶಿಯಾಗಿ ನೇಮಕಗೊಂಡು, ಅದರ ಅಂದವಾದ ಭಾಷಾಂತರಕ್ಕೆ ಕಾರಣರಾದರು.

ಅನಾಥ ಗಂಡು ಮಕ್ಕಳ ಶಾಲೆಯ ಮುಖ್ಯಸ್ಥರಾಗಿದ್ದಾಗ ಅಲ್ಲಿನ ಮಕ್ಕಳನ್ನು ಸ್ವಂತ ಮಕ್ಕಳಂತೆ ಪ್ರೀತಿಯಿಂದ ನೋಡಿಕೊಂಡವರು. ಒಮ್ಮೆ ಅಲ್ಲಿನ ಮಕ್ಕಳಿಗೆ ಕಜ್ಜಿಯಾದಾಗ ತಾವೇ ಸ್ವತಃ ಆಯುರ್ವೇದದ ಔಷಧವನ್ನು ಕೈಯಾರೆ ಲೇಪನ ಮಾಡಿ ತಪಾಸಣೆಗೆ ಬರುತ್ತಿದ್ದ ವೈದ್ಯರೂ ವಿಸ್ಮಯಗೊಳ್ಳುವಂತೆ ಕಜ್ಜಿಯಿಂದ ಮಕ್ಕಳನ್ನು ಪಾರು ಮಾಡಿದವರು. ಅಷ್ಟೇ ಅಲ್ಲ, ಕಲಿಯುವ ಮಕ್ಕಳಲ್ಲಿ ದಡ್ಡರಾದವರನ್ನು ಕರೆದು ಖಾಸಗಿಯಾಗಿ ಪಾಠ ಹೇಳಿಕೊಟ್ಟು, ಅವರ ಕೀಳರಿಮೆಯನ್ನು ದೂರಮಾಡುತ್ತಿದ್ದರು.

ಬೋಧನೆ ಅವರ ಬದುಕಿನ ವಿಧಾನವಾಗಿತ್ತು. ಅಸ್ಪೃಶ್ಯರ ಕೇರಿಯಲ್ಲಿ ಪಾಲ್ಗೊಳ್ಳುವಾಗ ಅವರ ಜೊತೆಗೇ ಇದ್ದು, ಅವರ ಜೊತೆಯಲ್ಲೇ ಊಟೋಪಚಾರ ಮಾಡಿ, ಅವರ ಕೇರಿಯನ್ನೆಲ್ಲ ಶುಚಿಯಾಗಿಡುವುದೇ ಅಲ್ಲದೆ ಕ್ರಿಸ್ತ ಹಾಗೂ ಬಸವಣ್ಣನವರಂಥ ಆದರ್ಶ ಪುರುಷರ ಕಥೆಗಳನ್ನು ಹೇಳಿ ಅವರನ್ನು ಹುರಿದುಂಬಿಸುತ್ತಿದ್ದರು.

ಅವರ ಬೋಧನೆಯ ವಿಧಾನ ಅಪೂರ್ವವಾದದ್ದು. ನಮ್ಮ ದೇಶದಲ್ಲಿ ಪ್ರಚಲಿತವಿದ್ದ ಕೀರ್ತನೆಗಳ ಪದ್ಧತಿ, ಹರಿಕಥೆಗಳನ್ನು ಮಾಡುವ ಪದ್ಧತಿಗಳನ್ನು ಬಳಸಿಕೊಳ್ಳುವುದೇ ಅಲ್ಲದೆ ದೇಶೀಯ ಹಬ್ಬಗಳನ್ನು ಆಚರಿಸುತ್ತಾ ಕ್ರಿಸ್ತನ ಉಪದೇಶದ ಸಾರವನ್ನು ಜನರ ಹೃದಯಕ್ಕೆ ಮುಟ್ಟಿಸುತ್ತಿದ್ದರು. 'ಕ್ರೈಸ್ತ ಧರ್ಮವೂ ನಾಗರಪಂಚಮಿ ಹಬ್ಬವೂ' ಎಂಬ ಚರ್ಚಾಗೋಷ್ಠಿಯಲ್ಲಿ ಇವರು ಮಂಡಿಸಿದ ಪ್ರಬಂಧವಂತೂ ಭಾಷೆ, ಭಾವ, ಶೈಲಿ, ವಿವೇಚನಾ ರೀತಿ–ಈ ದೃಷ್ಟಿಗಳಿಂದ ರೆ. ಅರ್ನೆಸ್ಟರ ಮೆಚ್ಚುಗೆಯನ್ನು ಪಡೆಯಿತು. ದೇಶೀಯ ಸಂತರು, ಶರಣರು, ಇಂಥವರ ಕಥೆಗಳನ್ನೂ, ಪ್ರಸಂಗಗಳನ್ನೂ ಬಳಸಿಕೊಂಡು ಇವರು ಬೋಧಿಸುತ್ತಿದ್ದ ರೀತಿ ಪಂಡಿತಪಾಮರರೆಲ್ಲರ ಅಪಾರ ಮೆಚ್ಚುಗೆಗೆ ಪಾತ್ರವಾಯಿತು.

ಹೀಗೆ ಜನಾನುರಾಗಿಗಳೂ, ಉನ್ನತ ಆಚರಣೆಯ ವ್ಯಕ್ತಿಗಳೂ ಆಗಿ ಪ್ರಸಿದ್ಧಿಗೆ ಬರುತ್ತಿದ್ದ ಚನ್ನಪ್ಪನವರದು ನಿರ್ಭೀತವಾದ ಹಾಗೂ ನಿಷ್ಠುರವಾದ ಮನೋವೃತ್ತಿಯೆಂಬುದು ಜನಜನಿತವಾಗಿತ್ತು. ಇದೇ ವೇಳೆಗೆ ಅರ್ನೆಸ್ಟ್ ಅವರು ಕಾರಣಾಂತರಗಳಿಂದ ಜರ್ಮನಿಗೆ ಹೋಗಬೇಕಾಯಿತು. ಅವರ ಸ್ಥಾನದಲ್ಲಿ ರೆ.ಬಿ. ಲೂಥಿಯವರು ನೇಮಕಗೊಂಡರು. ಮಂಗಳೂರಿನ ಕ್ರೈಸ್ತ ದೈವಜ್ಞಾನದ ಶಾಲೆಯಲ್ಲಿ ಪ್ರಾಧ್ಯಾಪಕರಾಗಿದ್ದು ಚನ್ನಪ್ಪನವರ ಮೇಲೆ ಉರಿದೆದ್ದಿದ್ದವರು ಅವರು. ಚನ್ನಪ್ಪನವರಿಗೆ ಅವರು ಕೊಡಬಾರದ ಕಿರುಕುಳ ಕೊಡಲಾರಂಭಿಸಿದರು. ಕ್ರೈಸ್ತ ಧರ್ಮಬೋಧಕರಾಗಿದ್ದ ಇವರು ಅನ್ಯಧರ್ಮಗಳ ಬಗ್ಗೆ ಅಪಾರ ಗೌರವವಿಟ್ಟುಕೊಂಡು ಉದ್ದೇಶಕ್ಕೆ ವಿರೋಧವಾಗಿ ವರ್ತಿಸುತ್ತಿದ್ದಾರೆಂದು ಆಕ್ಷೇಪಿಸಿದರು. ಬಸವಣ್ಣನವರನ್ನು ಕುರಿತು ಅವರು ನೀಡುತ್ತಿದ್ದ ಭಾಷಣಗಳನ್ನು ಧರ್ಮದ್ರೋಹಿ ಕ್ರಮ ಎಂದು ಖಂಡಿಸಿದರು. ಸರ್ವಜ್ಞನನ್ನು ಕುರಿತು ಚನ್ನಪ್ಪನವರು ನಡೆಸುವ ಅಧ್ಯಯನ ಧರ್ಮವಿರೋಧಿ ಕ್ರಮ ಎಂದು ಘೋಷಿಸಿದರು. ಅಲ್ಲದೆ ವಿದೇಶಿ ಪಾದ್ರಿಗಳ ಅನಗತ್ಯ ಯಾಜಮಾನ್ಯವನ್ನು ವಿರೋಧಿಸುವ ದೇಶಪ್ರೇಮವನ್ನು ಕ್ರೈಸ್ತ ಸಂಸ್ಥೆಯಲ್ಲಿ ಎದ್ದ ದಂಗೆಯೆಂದು ಅಬ್ಬರಿಸಿ ಅವರಿಂದ ವಿವರಣೆಯನ್ನು ಕೇಳಿದರು. ರೆವರೆಂಡ್ ಆಗುವ ಸಂಚು ಎಂದೂ ಟೀಕಿಸಿದರು. ಈ ಎಲ್ಲಾ ಟೀಕೆಗಳಿಗೆ ಸಮಾಧಾನವಾಗಿ, ಆದರೆ ದಿಟ್ಟವಾಗಿ ಉತ್ತರಿಸಿದ ಚನ್ನಪ್ಪನವರು 'ಬನಾರಸಕ್ಕೆ ಬೆತ್ಲೆಹೇಮಿನ ವಿನಂತಿ' ಎಂಬ ತಮ್ಮ ಪುಸಕ್ತವನ್ನು ಓದಬೇಕೆಂದೂ, ದೇಶೀಯ ಸಾಹಿತ್ಯದ ಸೇವೆ ಮಾಡುವಾಗ ಕಿಟ್ಟೆಲ್ ಮೊದಲಾದವರ ಹಾದಿಯಲ್ಲಿ ನಡೆದವರೆಂದೂ ಸೂಚಿಸಿದ ನಿರ್ಭೀತರು. ಕೊನೆಗೆ ರೆವರೆಂಡ್ ಸ್ಥಾನವನ್ನೂ ತ್ಯಜಿಸಿದರು.

ಚನ್ನಪ್ಪನರು ಹುಟ್ಟು ಹೋರಾಟಗಾರರು; ಅನ್ಯಾಯದ ವಿರುದ್ಧ ಎಂದೂ ಅವರು ನಿರ್ಭೀತರಾಗಿ ಪ್ರತಿಭಟಿಸುತ್ತಿದ್ದರು.

ಅಲ್ಲಿಯವರೆಗೆ ಕ್ರೈಸ್ತ ದೈವಜ್ಞಾನ ಶಾಲೆಯಲ್ಲಿ ಪ್ರಥಮ ದರ್ಜೆ ಪಡೆದವರಿಗೆ 17ರೂಪಾಯಿಗಳು; ದ್ವಿತೀಯ ದರ್ಜೆ ಪಡೆದವರಿಗೆ 15 ರೂಪಾಯಿಗಳು ವೇತನ ನೀಡುತ್ತಿದ್ದರು. ಧರ್ಮ ಪ್ರಚಾರಕರಾದಾಗ, ಧರ್ಮ ಪ್ರಚಾರಕರಲ್ಲಿ ಈ ವ್ಯತ್ಯಾಸ ಬೇಡ ಎಂದು (ತಾವು ಮೊದಲ ದರ್ಜೆಯಲ್ಲಿ ತೇರ್ಗಡೆಯಾದವರು) ಹೋರಾಡಿ ಗೆದ್ದರು. ಅದಕ್ಕಿಂತಲೂ ಗಮನಾರ್ಹವಾದದ್ದು, ಬಾಸೆಲ್ ಮಿಷನ್ ಸೇವಕರೆಲ್ಲ ಪ್ರತಿ ತಿಂಗಳು ತಮ್ಮ ವೇತನದಲ್ಲಿ ಶೇ.2ರಷ್ಟನ್ನು ಕೊಡಬೇಕೆಂದಿದ್ದ ನಿಯಮದ ಪಾಲನೆಯ ವಿಧಾನ. ಆವರೆಗೆ ಶೇ.2ರಷ್ಟು ಹಣವನ್ನು ಮುರಿದುಕೊಂಡೇ ವೇತನ ವಿತರಣೆಯಾಗುತ್ತಿತ್ತು. ಈ ಕ್ರಮವನ್ನು ವಿರೋಧಿಸಿದರು ಚನ್ನಪ್ಪ. ಸ್ವಯಂ ಪ್ರತಿಯೊಬ್ಬರು ವೇತನ ಪಡೆದು ಅದರಲ್ಲಿ ಶೇ. 2ರಷ್ಟನ್ನು ಸಂತೋಷದಿಂದ ವಂತಿಗೆಯಾಗಿ ನೀಡುವ ಅವಕಾಶವನ್ನು ಹೋರಾಡಿ ಪಡೆದೇ ಪಡೆದರು. ಈ ಕಾರಣಗಳಿಂದಾಗಿ ರೆ. ಲೂಥಿಯಂಥವರು ಚನ್ನಪ್ಪನವರ ಸ್ವತಂತ್ರ ವಿಚಾರ ಶಕ್ತಿಯನ್ನು ಅವಿಧೇಯ ಎಂದು ಸಾಕಷ್ಟು ತೊಂದರೆಗೆ ಗುರಿಮಾಡಿದ್ದು ಉಂಟು. ಹಾವೇರಿಗೆ ವರ್ಗಾಯಿಸಿದ್ದೂ ಉಂಟು. ಚನ್ನಪ್ಪನವರು ಯಾವುದಕ್ಕೂ ಅಂಜಲಿಲ್ಲ. ಕೆಲಸ ಹೋಗುವುದಾದರೂ ಸಿದ್ಧವಾಗಿದ್ದರು. ಅವರು ಧರ್ಮಪ್ರಚಾರದ ಕಾರ್ಯವನ್ನು ಆತ್ಮತೃಪ್ತಿಯಿಂದ ಮಾಡಿದರು.

ಹೀಗೆ ತಮಗಾದ ಕಿರುಕುಳದಿಂದ ಅವರ ಮಾನಸಿಕ ಶಾಂತಿ ಕೆಡಲಿಲ್ಲ; ಚಿತ್ತಸ್ಥಿರತೆ ಹೆಚ್ಚಿ ತಮ್ಮ ಮನಸ್ಸನ್ನು ಸದಾ ಧರ್ಮ ವಿಚಾರಗಳಲ್ಲಿ ತೊಡಗಿಸಿಕೊಂಡರು. ಕ್ರಿಸ್ತಪ್ರೇಮ, ಕ್ರಿಸ್ತಧರ್ಮ ಪ್ರಚಾರ ಹಾಗೂ ಸೇವಾ ಮನೋಭಾವಗಳಲ್ಲಿದ್ದ ಚನ್ನಪ್ಪನವರನ್ನು ಸಹಜವಾಗಿಯೇ ಧರ್ಮೋಪದೇಶಕರನ್ನು ಸಭಾಪಾಲಕರನ್ನಾಗಿ (Reverend) ಆಯ್ಕೆ ಮಾಡುವ ಮಂಡಲಿಯ ಸದಸ್ಯರಾಗಿ ಅನೇಕ ವರ್ಷ ಸೇವೆ ಸಲ್ಲಿಸಿದರು. ತಾವು ಬೆಟಗೇರಿಯಲ್ಲಿದ್ದಾಗಲೇ ಶರಣು ಹೊಡೆದಿದ್ದ ರೆವರೆಂಡ್ ಸ್ಥಾನವನ್ನು ಎಂದೂ ಅವರು ಮತ್ತೆ ಬಯಸಲಿಲ್ಲ.

ವಿಶ್ವದ ಅನುಭಾವಿಗಳಲ್ಲಿ ಚನ್ನಪ್ಪನವರಿಗೆ ಒಂದೇ ದರ್ಶನ ಕಾಣಿಸುತ್ತಿತ್ತು. ಬಸವನಾಗಲಿ, ಬುದ್ಧನಾಗಲಿ, ಪೈಗಂಬರ್ ಆಗಲಿ ಅವರಿಗೆ ಅಷ್ಟೇ ಗೌರವ. ಈ ಹಂತದಲ್ಲಿ ರೆ. ಉರ್ನರ್ ಅವರಿಂದಾಗಿ ಸ್ಫೂರ್ತಿ ಪಡೆದ ಚನ್ನಪ್ಪನವರು ಸರ್ವಜ್ಞನಿಗೆ ತನ್ನ ಮನಸ್ಸನ್ನು ಪೂರ್ಣವಾಗಿ ಸೂರೆಗೊಟ್ಟರು. ಇಂಗ್ಲಿಷಿಗೆ ಅನುವಾದಿಸುವ ಸಂದರ್ಭದಲ್ಲಿ ಸರ್ವಜ್ಞನ ವಚನಗಳಲ್ಲಿರುವ ಸ್ಖಾಲಿತ್ಯಗಳನ್ನು ಕಂಡು ಅವುಗಳನ್ನು ಸರಿಪಡಿಸಬೇಕೆಂದುಕೊಂಡರು. ಸರ್ವಜ್ಞನ ವಚನಗಳನ್ನು ಮೊದಲು ಒಂದೆಡೆ ಸಂಗ್ರಹಿಸುವ, ಅನಂತರ ಅವುಗಳ ಪಾಠಗಳನ್ನು ಅಧ್ಯಯನ ಮಾಡಿ ಶುದ್ಧ ಮಾಡುವ ಕಾರ್ಯಕ್ಕೆ ತಮ್ಮನ್ನು ಅರ್ಪಿಸಿಕೊಂಡ ಅವರು ಸು. 20ಪ್ರತಿಗಳ ಅಧ್ಯಯನ ನಡೆಸಿ 2000ಕ್ಕೂ ಹೆಚ್ಚು ವಚನಗಳ ಪಾಠ ಸಂಶೋಧನೆ ಹಾಗೂ ನಿರ್ಣಯಕ್ಕೆ ಮನಸ್ಸು ಕೊಟ್ಟರು. ಸರ್ವಜ್ಞನ ಈ ಅಧ್ಯಯನ ಒಂದು ತಪಸ್ಯೆಯಂತೆ ನಡೆಯಿತು. ನಿರಂತರ ಅಧ್ಯಯನದಿಂದ ದೃಷ್ಟಿ ಕೆಟ್ಟಿತು. ಈ ಮಧ್ಯೆ ತಂದೆಯವರು ಹೃದಯಕ್ರಿಯೆ ನಿಂತು ಉಸಿರೆಳೆದರು; ಬಡತನವಂತೂ ಕಿತ್ತು ತಿನ್ನುತ್ತಲೇ ಇತ್ತು. ಎಷ್ಟೋ ವೇಳೆ ಈ ಕೆಲಸ ಮುಗಿಯುವ ಮೊದಲೇ ಉಸಿರೆಳೆಯಬಹುದೆಂಬ ಭಾವನೆ ಮನಸ್ಸಿನಲ್ಲಿ ಮೂಡಿದ್ದುಂಟು. ಆಗೆಲ್ಲ ಈ ಕಾರ್ಯ ನನ್ನಿಂದಾಗಬೇಕಿದ್ದರೆ ನನ್ನನ್ನು ಉಳಿಸು ಎಂದಷ್ಟೆ ಪ್ರಾರ್ಥಿಸುತ್ತಿದ್ದ ಚನ್ನಪ್ಪನವರು ಸರ್ವಜ್ಞನಿಗಾಗಿ ಭಾಷಾಶಾಸ್ತ್ರ, ಸಾಹಿತ್ಯ ಹಾಗೂ ಅಲಂಕಾರ ಶಾಸ್ತ್ರಗಳನ್ನೂ ಅಧ್ಯಯನ ಮಾಡಿದರು. ಬಹು ದೀರ್ಘಕಾಲದ ಅಧ್ಯಯನದ ನಂತರ ಸರ್ವಜ್ಞನ 2000 ವಚನಗಳನ್ನು ಶೋಧಿಸಿ ತೆಗೆದರು. ಸುಮಾರು 24 ತಿಂಗಳು ಈ ಕೃತಿ ಪ್ರಕಟವಾಗದೆ ಉಳಿದಿತ್ತು. ಆಗ ಯಶವಂತ ಜಠಾರ ಎಂಬವರು ಮೂರು ಭಾಗಗಳಲ್ಲಿ ಅವನ್ನು ಪ್ರಕಟಿಸಿದರು. ಆದರೆ ಇದಕ್ಕೆ ಸಾಕಷ್ಟು ಉತ್ತಮ ಪ್ರತಿಕ್ರಿಯೆ ದೊರಕಲಿಲ್ಲ. ಇದೇ ವೇಳೆಗೆ ಇವರಿಗೆ ಹಾವೇರಿಗೆ ವರ್ಗವಾಗಿ ಈ ಕೃತಿ

ಸಂಬಂಧದ 500 ರೂಪಾಯಿಗಳ ಸಾಲದ ಹೊರೆಯಿತ್ತು. ಚಿಂತೆಯಲ್ಲಿದ್ದ ಇವರ ಸಾಲದ ಹೊರೆ ನೀಗಲು ಕಾರಣವಾದ ಸಲಹೆ ನೀಡಿದವರು ದ.ರಾ. ಬೇಂದ್ರೆಯವರು. ಗರೂಡ ಸದಾಶಿವರಾವ್, ನಾಮಧಾರ ಬೆಳವಿ, ನರಸಿಂಹಾಚಾರ್, ವಿದ್ಯಾವರ್ಧಕ ಸಂಘಗಳ ನೆರವಿನಿಂದ ಸಾಲದ ಹೊರೆ ಇಳಿಸಿಕೊಂಡು ಹಾವೇರಿಗೆ ಹೊರಟರು. ಜೊತೆಗೇ ಅನಾರೋಗ್ಯಕ್ಕೆ ತುತ್ತಾದ ಹೆಂಡತಿಯ ಸಮಸ್ಯೆಯ ಭಾರ ಬಿದ್ದಿತು. ಇಲ್ಲಿಯೇ ಇವರ ಒಂದು ಹೆಣ್ಣು ಮಗು ಹಾಗೂ ಎರಡು ಗಂಡು ಮಕ್ಕಳು ತೀರಿಕೊಂಡದ್ದು. ಬುದ್ಧಿವಂತನಾದ ಹುಡುಗನ ಸಾವು ತಾಯಿಯ ಆರೋಗ್ಯದ ಮೇಲೆ ತೀವ್ರ ಪರಿಣಾಮ ಬೀರಿತು. ಆಗೆಲ್ಲ ಚನ್ನಪ್ಪನವರ ಪ್ರಾರ್ಥನೆ ಒಂದೇ; "ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ, ಕೈ ಹಿಡಿದು ನಡಸೆನ್ನನು." ಆತ್ಮಸ್ಥೈರ್ಯದಿಂದ ನಂಜುಂಡನಂತೆ ಬಡತನ, ಮಡದಿಯ ಅನಾರೋಗ್ಯ, ವಿದೇಶೀ ಮಿಷನರಿಗಳ ಕಿರುಕುಳ ಇವುಗಳನ್ನೆಲ್ಲ ಸಹಿಸಿದ ಚನ್ನಪ್ಪನವರು 300 ಪುಟಗಳ ವಿಸ್ತೃತ ಉಪೋದ್ಘಾತ ಟಿಪ್ಪಣಿಗಳೊಡನೆ ಸರ್ವಜ್ಞನ ವಚನಗಳನ್ನು ಒಂದೇ ಸಂಪುಟದಲ್ಲಿ ಪ್ರಕಟಿಸಿದರು. ಜನಕ್ಕೆ ಈಗ ನಿಜಕ್ಕೂ ಸರ್ವಜ್ಞನ ಮೇಲೆ ಅಕ್ಕರೆ ಹುಟ್ಟಿತು. ಈ ವಚನಗಳ ಜನಪದಾವೃತ್ತಿ, ಜೇಬಿನಾವೃತ್ತಿ, ಅಗ್ಗದಾವೃತ್ತಿ, ಸಾಹಿತ್ಯಾವೃತ್ತಿ - ಹೀಗೆ ಚತುರ್ವಿಧಾವೃತ್ತಿಗಳೂ ಪ್ರಕಟವಾದವು. ಸರ್ವಜ್ಞನಂತೂ ಚನ್ನಪ್ಪನವರ ವ್ಯಕ್ತಿತ್ವವನ್ನೆಲ್ಲ ಆವರಿಸಿಕೊಂಡನೆಂದೇ ಹೇಳಬೇಕು.

ಚನ್ನಪ್ಪನವರದು ವಿಪುಲವೂ ವ್ಯಾಪಕವೂ ಆದ ಆಳವಾದ ಅಧ್ಯಯನ. ಅವರ ವಿದ್ವತ್ತಿನ ಹರಹನ್ನೂ ವಿಚಾರಪಕ್ವತೆಯನ್ನೂ ಮನಗಾಣಬೇಕಾದರೆ ಅವರ ಲೇಖನಗಳನ್ನೂ ಗ್ರಂಥಗಳನ್ನೂ ಪರಿಶೀಲಿಸಬೇಕಾಗುತ್ತದೆ.

'ಬನಾರಸಕ್ಕೆ ಬೆತ್ಲೆಹೇಮಿನ ವಿನಂತಿ', 'ಹಿಂದೂ ಸಮಾಜದ ಹಿತಚಿಂತಕ', 'ಮಕ್ಕಳ ಶಿಕ್ಷಣ ಪಟ', 'ನಾರಾಯಣವಾಮನ ತಿಲಕರ ಜೀವನ ಚರಿತ್ರೆ' (ಅನುವಾದ), 'ಸರ್ವಜ್ಞನ ವಚನಗಳು', 'ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ', 'ಸಾಧುಸುಂದರಸಿಂಗರ ದೃಷ್ಟಾಂತದರ್ಪಣ', 'ಮೋಳಿಗೆ ಮಾರಯ್ಯ ಮತ್ತು ರಾಣಿ ಮಹಾದೇವಿಯರ ವಚನಗಳು', 'ಅನುಭವ ಮಂಟಪದ ಐತಿಹಾಸಿಕತೆ', 'ಸಿದ್ಧಾರಾಮ ಸಾಹಿತ್ಯಸಂಗ್ರಹ', 'ಆದಯ್ಯನ ವಚನಗಳು', 'ಮೃತ್ಯುಂಜಯ' ಇವು ಕನ್ನಡದ ಕೃತಿಗಳು. 'ಅನುಭವ ಮಂಟಪ' ಇಂಗ್ಲಿಷಿನಲ್ಲಿ ಪ್ರಕಟವಾದ ಕೃತಿ. ಆಲೂರು ವೆಂಕಟರಾಯರು ಇದನ್ನು ಕನ್ನಡಿಸಿದ್ದಾರೆ.

ಅನೇಕ ಲೇಖನಗಳನ್ನು ಇವರು ಬರೆದಿದ್ದಾರೆ. ಇವುಗಳಲ್ಲಿ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳು ಇವು: 'ಸರ್ವಜ್ಞನ ವಚನಗಳ ಸಂಶೋಧನೆ', 'ವಚನಾಂಕಿತದಲ್ಲಿರುವ ಐತಿಹಾಸಿಕಾಂಶಗಳು', 'ಜನಪದ ಸಾಹಿತ್ಯ', 'Contribution of Christian Missionaries for the development of Karnataka', 'Synopsis for the Studies in Lingayatism'. ಈ ಲೇಖನಗಳೇ ಅಲ್ಲದೆ ಮುದ್ರಣಕ್ಕೆ ಸಿದ್ಧವಾಗಿದ್ದ ಗ್ರಂಥಗಳ ವಿವರ ಹೀಗಿದೆ: A faith, Philosophy and Religion; Complete Concordance to Bhagavadgeetha; Yellamma, a Goddess of South India; Creation; A wonderful child of God; From cross to Crown through crosswords, a Comedy. ಇವುಗಳಲ್ಲಿ ಮೊದಲ ಗ್ರಂಥವು ಲಿಂಗಾಯತ ಧರ್ಮವನ್ನು ಕುರಿತದ್ದಾಗಿದ್ದರೆ, ಭಗವದ್ಗೀತೆ ವಿಸ್ತೃತ ಶಬ್ದಾನುಕ್ರಮಣಿಕೆಯುಳ್ಳ ಮಹತ್ತರವಾದ ಆಶಯಗಳಿಂದ ಕೂಡಿದ ಗ್ರಂಥ'. ಬೈಬಲ್, ವೇದೋಪನಿಷತ್ತುಗಳಿಂದ ಪ್ರಯೋಗಾತ್ಮಕ ಹೋಲಿಕೆಗಳಿಂದ ಕೂಡಿದ್ದು ಇದು ತಮ್ಮ ಬದುಕಿನ ಅವಧಿಯಲ್ಲೇ ಪ್ರಕಟವಾಗಬೇಕೆಂಬ ಮಹದಾಶೆಯಿತ್ತು ಚನ್ನಪ್ಪನವರಿಗೆ.

ಚನ್ನಪ್ಪನವರು ಕವಿತೆಗಳನ್ನೂ ರಚಿಸಿದ್ದಾರೆ. ಸರ್ವಜ್ಞನನ್ನು ಕುರಿತೇ ಪದ್ಯ ಬರೆದಿದ್ದಾರೆ. ಮಹಾರಾಷ್ಟ್ರದ ನಾರಾಯಣವಾಮನ ತಿಲಕರ ಹಾಡುಗಳನ್ನು ಅನುವಾದಿಸಿದ್ದಾರೆ.

ಬಸವಣ್ಣನವರು, ಶೂನ್ಯಸಂಪಾದನೆ, ಅನುಭವ ಮಂಟಪ, ವಚನಕಾರರು, ಸರ್ವಜ್ಞ ಹಾಗೂ ವೀರಶೈವ ಧರ್ಮವನ್ನು ಕುರಿತು ಅವರು ನಡೆಸಿದ ಆಳವಾದ ಅಧ್ಯಯನ ಹಾಗೂ ಸಾಹಿತ್ಯ ರಚನೆ ಅವರನ್ನು ಸಾಹಿತ್ಯ ಲೋಕದ ಭೀಷ್ಮಾಚಾರ್ಯರನ್ನಾಗಿ ಮಾಡಿದೆ. ಬಸವಣ್ಣನ ವಚನಪಾಠ ನಿರ್ಣಯದಲ್ಲಿ ಚನ್ನಪ್ಪನವರ ಉಪಕಾರವನ್ನು ಬಸವನಾಳರೇ ಹೆಮ್ಮೆಯಿಂದ ಸ್ಮರಿಸಿದ್ದಾರೆ. ತಿರುಳುಗನ್ನಡ ತಿರುಕನೆಂದು ತನ್ನನ್ನು ಕರೆದುಕೊಂಡ ಚನ್ನಪ್ಪನವರು ಕನ್ನಡಕ್ಕಾಗಿ ದುಡಿದರು. ಅವರ ವಿದ್ವತ್ತು ಅದ್ವಿತೀಯವಾದದ್ದೆನ್ನಬೇಕು. 1942ರಲ್ಲಿ ಹುಬ್ಬಳ್ಳಿಯಲ್ಲಿ ಇವರ 60ನೆಯ ಹುಟ್ಟುಹಬ್ಬವನ್ನು ಸಂಭ್ರಮದಿಂದ ಆಚರಿಸಲಾಯಿತು. ಪ್ರೊ. ರುಬೆನ್, ಪ್ರೊ. ದ.ರಾ. ಬೇಂದ್ರೆ, ಪ್ರೊ.ಸ.ಸ. ಮಾಳವಾಡ, ಶ್ರೀ ತುಕೋಳ್, ಪಂಡಿತ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ, ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು ಮತ್ತು ಮುದುವೀಡು ಕೃಷ್ಣರಾಯರು ಅಂದು ಚನ್ನಪ್ಪನವರ ಸಾಹಿತ್ಯ ಸೇವೆಯನ್ನೂ, ವ್ಯಕ್ತಿತ್ವವನ್ನೂ ಕುರಿತು ಮಾತನಾಡಿದರು. 1949ರಲ್ಲಿ ಕಲುಬುರ್ಗಿಯಲ್ಲಿ ನಡೆದ 32ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. 1971ರಲ್ಲಿ ಉತ್ತಂಗಿಯವರ ಸಮಗ್ರ ಜೀವನ ಚರಿತ್ರೆಯನ್ನು ಮತ್ತು 1982ರಲ್ಲಿ ಉತ್ತಂಗಿ ಚನ್ನಪ್ಪನವರು ಗ್ರಂಥವನ್ನು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿ ಗೌರವ ಸಮರ್ಪಿಸಿತು. ಚನ್ನಪ್ಪನವರು ಸರ್ವಜ್ಞನ ವಚನಗಳನ್ನು ರಾ. ನರಸಿಂಹಾಚಾರ್ಯರಿಗೆ ಅರ್ಪಿಸಿದ್ದು, ಆ ಪ್ರತಿಯನ್ನು ಸ್ವತಃ ಕೊಡಲು ಹೋದಾಗ ರಾ. ನರಸಿಂಹಾಚಾರ್ಯರು ತಟ್ಟನೆ ಹೊರ ಬಂದು ಹಸ್ತಲಾಘವ ನೀಡಿದ್ದೇ ಅಲ್ಲದೆ ಪುಸ್ತಕವನ್ನು ಪಡೆಯುತ್ತಲೆ ಒಳಕ್ಕೆ ಹೋಗಿ ತಟ್ಟೆಯೊಂದರಲ್ಲಿ ಫಲತಾಂಬೂಲ ಹಾಗೂ 50ರೂಪಾಯಿಗಳನ್ನಿತ್ತು ಕುಶಲ ಸಂಭಾಷಣೆಯಲ್ಲಿ ತೊಡಗಿದ್ದ ಸಂಗತಿಯಾಗಲಿ, ದೇವುಡು ನರಸಿಂಹಶಾಸ್ತ್ರಿಗಳ ಮನೆಗೆ ಹೋದಾಗ "ಏಸುಕ್ರಿಸ್ತ ನಮ್ಮ ಮನೆಗೆ ಬಂದಿದ್ದಾನೆ" ಎಂದು ಅವರನ್ನು ಭಾವಿಸಿ ಅವರ ಕಾಲು ತೊಳೆದು ಒರೆಸಿ, ಅವರನ್ನು ಬರಮಾಡಿಕೊಂಡದ್ದನ್ನು ಕಂಡ ಚನ್ನಪ್ಪನವರು ತಮ್ಮ ಮನಸ್ಸಿನಲ್ಲಿರುವುದನ್ನು ತಿಳಿಸಲಾರದೆ ಕಣ್ಣೀರು ಸುರಿಸಿದುದನ್ನು ದೇವುಡು ಅವರ ಮಗ ತಮ್ಮ ಸ್ಮರಣೆಯಲ್ಲಿ ದಾಖಲಿಸಿದ್ದಾರೆ. ಧಾರವಾಡದಲ್ಲಿದ್ದಾಗ ಒಮ್ಮೆ ಮಾಳವಾಡರು ತಮ್ಮ ಮಿತ್ರರೊಂದಿಗೆ ವಚನ ಸಾಹಿತ್ಯದ ಬಗ್ಗೆ ಸಂವಾದ ನಡೆಸಿದ್ದಾಗ ಅವರ ಹಿಂದೆ ಹಿಂದೆಯೇ ಆ ಸಂಭಾಷಣೆಯ ಸೊಗಸನ್ನು ಸವಿದ ವಿನಯಶಾಲಿಗಳು ಚನ್ನಪ್ಪನವರು. ಕಲಿಯುವುದರಲ್ಲಿ ಅಂಥ ಆಸಕ್ತಿ, ಕುತೂಹಲ ಮತ್ತು ಆನಂದ. ಕಲಿಯುವುದರಲ್ಲಿ, ಬೋಧಿಸುವುದರಲ್ಲಿ ತಮ್ಮ ಇಡೀ ಬದುಕನ್ನು ತೊಡಗಿಸಿಕೊಂಡ ಅವರು ಅಪೂರ್ವವಾದ ರೀತಿಯಲ್ಲಿ ಧರ್ಮ ಹಾಗೂ ಸಾಹಿತ್ಯಗಳ ಸೇವೆ ಮಾಡಿದ್ದಾರೆ. 25ವರ್ಷಗಳಷ್ಟು ದೀರ್ಘ ಕಾಲ ತನ್ನ ಪತ್ನಿ ರೋಗಶಯ್ಯೆಯಲ್ಲಿದ್ದರೂ ಬೇಸರಪಡದೆ ಬದುಕನ್ನು ಪ್ರೀತಿಸಿದವರು. ಹತ್ತು ಮಕ್ಕಳಲ್ಲಿ ಹಲವರನ್ನು ಕಳೆದುಕೊಂಡಾಗ ಕ್ರಿಸ್ತಾರ್ಪಣ ಎಂದವರು. ತಮ್ಮ 11ನೇ ವರ್ಷದ ಮಗ ತೀರಿಕೊಂಡ ಆಘಾತದಿಂದ ತನ್ನ ಮಡದಿ

ಚೇತರಿಸಿಕೊಳ್ಳದಿದ್ದಾಗಲೂ ಕ್ರಿಸ್ತಾರ್ಪಣ ಎಂದವರು ಅವರು. ಕ್ರಿಸ್ತ ಹಾಗೂ ಸರ್ವಜ್ಞ ಅವರ ಶ್ವಾಸಕೋಶಗಳೆನ್ನಬಹುದು.

ನಾನು ಹುಟ್ಟು ಕನ್ನಡಿಗ, ಕ್ರೈಸ್ತರಾದ ನನ್ನ ತಂದೆತಾಯಿಗಳೂ ಹುಟ್ಟು ಕನ್ನಡಿಗರು ಎನ್ನುವ ಚನ್ನಪ್ಪ "ನಾನೊಬ್ಬ ತಿಳಿತಿಳಿವಿನ ತಿರುಕ; ತಿರುಳುಗನ್ನಡದ ತಿರುಕ; ಹಾಡಿ ಬೇಡಿದವನಲ್ಲ; ಬೇಡಿ ಬಾಳಿದವನಲ್ಲ" ಎಂದು ಸಂತೋಷ ಪಡುತ್ತಾರೆ. "ಬಡತನದ ಚಿಂತೆ, ಸಂಸಾರದ ದುಃಖ, ಕ್ರೈಸ್ತ ಸಮಾಜ ಸ್ವಾತಂತ್ರ್ಯಕ್ಕಾಗಿ ದೇಶೀ ವಿದೇಶಿಯರ ವಿರೋಧ, ಅನಾರೋಗ್ಯ ಶರೀರ, ತಂದೆತಾಯಿಗಳ ನಿಧನ, ಪುತ್ರಶೋಕ, ಸಾಹಿತ್ಯ ಸೇವೆಯಲ್ಲಿ ಸಹಭಾಗಿನಿಯಾಗಿದ್ದ ಹೆಂಡತಿಯ ಕಾಯಿಲೆ, ಇವೇ ಮುಂತಾದ ಸಪ್ತಾಗ್ನಿಗಳು ಕನ್ನಡ ಸಾಹಿತ್ಯ ಸೇವೆಯ ತಪಸ್ಸಿಗಾಗಿ ನನ್ನನ್ನು ಸಿದ್ಧಪಡಿಸಿದವೆಂದು ಹೇಳಲು ಹೆಮ್ಮೆಪಡುತ್ತೇನೆ" ಎಂದು ಶ್ರುತಪಡಿಸುತ್ತಾರೆ. 25 ವರ್ಷಗಳು ಮಡದಿ ರುಗ್ಣಶಯ್ಯೆಯಲ್ಲಿದ್ದಾಗ ಪತ್ನೀವ್ರತರಾಗಿದ್ದ ಚನ್ನಪ್ಪನವರನ್ನು ಸುಭಕ್ತಮ್ಮ 8-2-1955ರಂದು ಅಗಲಿದರು. ಅವರು ನಿವೃತ್ತರಾದದ್ದು 1941ರಲ್ಲಿ. ಆತ್ಮಚಿಂತನೆ, ಸಮಾಜ ಸುಧಾರಣೆ, ಅಧ್ಯಯನ, ಸಮಾಲೋಚನೆಗಳಲ್ಲಿ ತಮ್ಮ ಬದುಕನ್ನು ತೊಡಗಿಸಿಕೊಂಡ ಚನ್ನಪ್ಪನವರು ಬಯಲಾದದ್ದು 28-8-1962ರಂದು.

❑

## ಎಂ.ಗೋವಿಂದ ಪೈ

ಜಿ. ವರದರಾಜರಾವ್

ಇದೀಗ ಗೋವಿಂದ ಪೈ ಅವರ ಜನ್ಮ ಶತಮಾನೋತ್ಸವವನ್ನು ಕನ್ನಡನಾಡು ಮತ್ತು ಇತರ ಕಡೆಗಳಲ್ಲಿ ಒಂದು ವರ್ಷ ಕಾಲ 1983ರಿಂದ 1984ರ ವರೆಗೆ) ಆಚರಿಸಿದುದರಿಂದ, ಅವರನ್ನು ಕುರಿತಂತೆ ಅನೇಕ ಸಮಾರಂಭಗಳು ನಡೆದಿವೆ. ಅವರ ಕೃತಿಗಳನ್ನು ಕುರಿತಂತೆ ಹಲವಾರು ಪುಸ್ತಕ-ಪುಸ್ತಿಕೆಗಳೂ, ವಿಶೇಷಾಂಕಗಳೂ ಪ್ರಕಟವಾಗಿವೆ. ಇದೊಂದು ಅಪೂರ್ವವಾದ ಸನ್ನಿವೇಶವೇ ಸರಿ. ಆಧುನಿಕ ಕನ್ನಡದ ಆಚಾರ್ಯ ಪುರುಷರ ಸಾಧನೆ, ಸಿದ್ಧಿಗಳನ್ನು ತಿಳಿಯುವ ಒಂದು ಸದವಕಾಶ ಇಂದಿನ ಪೀಳಿಗೆಯವರಿಗೆ ತಾನಾಗಿ ಒದಗಿ ಬಂದಿತು.

ಎಂ. ಗೋವಿಂದ ಪೈ ಅವರ ಎಂಬತ್ತು ವರ್ಷದ ನಿಡುಬಾಳಿನ ಕೆಲವು ಘಟ್ಟಗಳನ್ನು ಪರಿಚಯ ಮಾಡಿಕೊಳ್ಳುವ ಕುತೂಹಲ ಸಹಜವೇ ಸರಿ. ಅವರು ಮಂಗಳೂರಿನ ಸಾಹುಕಾರ ತಿಮ್ಮ ಪೈ ಅವರ ಹಿರಿಯ ಮಗ. ಅವರಿಗೆ ಮೂವರು ತಮ್ಮಂದಿರು ಮತ್ತು ಮೂವರು ಸೋದರಿಯರಿದ್ದರು. ಒಳ್ಳೆಯ ಶ್ರೀಮಂತ ಮನೆತನದಲ್ಲಿ ಹುಟ್ಟಿದ ಗೋವಿಂದ ಪೈ ಅವರ ಪದವಿಪೂರ್ವದ ವಿದ್ಯಾಭ್ಯಾಸವೆಲ್ಲ ಮಂಗಳೂರಿನಲ್ಲಿಯೇ ಸಾಗಿತು. ಚಿಕ್ಕಂದಿನಿಂದಲೂ ಚುರುಕಾಗಿದ್ದ ಪೈ ಅವರ ವಿದ್ಯಾರ್ಜನೆ ಯಾವ ಘಟ್ಟದಲ್ಲಿಯೂ ಕಷ್ಟಕರವೆನ್ನಿಸಲಿಲ್ಲ. ಅವರ ಒಡನೋದಿಗಳಲ್ಲಿ ಎಂ.ಎನ್. ಕಾಮತರು ಒಬ್ಬರಾದರೆ, ಅವರಿಗೆ ಪಾಠ ಕಲಿಸಿದ ಗುರುವರ್ಯರಲ್ಲಿ ಪಂಜೆ ಮಂಗೇಶರಾಯರು ಒಬ್ಬರು. ಅವರು ಸಾರಸ್ವತ ಮನೆತನದಲ್ಲಿ ಹುಟ್ಟಿದ್ದು ಅನ್ವರ್ಥವೊ ಎಂಬಂತೆ, ಸರಸ್ವತಿಯ ಪುತ್ರನಾಗಿಯೇ ಬೆಳೆದರು. ಬಿ.ಎ. ಪದವಿ ಶಿಕ್ಷಣಕ್ಕಾಗಿ 1903-1906ರ ವರೆಗೆ ಮದರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ವ್ಯಾಸಂಗ ಮಾಡಬೇಕಾಯಿತು. ಬಿ.ಎ. ಪದವಿಯ ಪರೀಕ್ಷೆ ಕಟ್ಟಿದ್ದಾಗ, ಅವರ ತಂದೆಯ ಮರಣದ ದೆಸೆಯಿಂದ ಪರೀಕ್ಷೆಯ ಮಧ್ಯದಲ್ಲಿಯೇ ಮಂಗಳೂರಿಗೆ ಹಿಂತಿರುಗಬೇಕಾಯಿತು. ಹಿರಿಯ ಮಗನಾಗಿದ್ದರಿಂದ ಮನೆಯ ಹೊಣೆಯನ್ನು ಹೊರಬೇಕಾಯಿತು. ಆದ್ದರಿಂದ ಅವರು ತಮ್ಮ ಬಿ.ಎ. ಪದವಿಯನ್ನು ಪಡೆಯಲಾಗಲಿಲ್ಲ. ಆದರೂ ಅವರು ಇಂಗ್ಲಿಷ್ ವಿಭಾಗದಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದುದರಿಂದ ಅದರಲ್ಲಿ ಚಿನ್ನದ ಪದಕವನ್ನು ಗಳಿಸಿದರು. ಅವರ ವ್ಯಾಸಂಗ ಅರ್ಧಕ್ಕೇ ನಿಂತರೂ ಅವರ ಅಧ್ಯಯನ ಮಾತ್ರ ನಿರಾತಂಕವಾಗಿ ಸಾಗಿತು. ಅವರು ತಮ್ಮ ತಾಯಿಯ ಊರಾದ ಮಂಜೇಶ್ವರದಲ್ಲಿ ಹುಟ್ಟಿದ್ದು ಮಾತ್ರವಲ್ಲದೆ, ಆಕೆಯ ಮೂಲಕ ತಮಗೆ ದತ್ತವಾದ ಆಸ್ತಿಯನ್ನೂ ನೋಡಿಕೊಂಡು ಅಲ್ಲಿಯೇ ನೆಲಸಿದ್ದರಿಂದ, ಅವರನ್ನು ಮಂಜೇಶ್ವರದ ಗೋವಿಂದ ಪೈ ಎಂದು ಕರೆಯುವುದೇ ರೂಢಿಯಾಯಿತು.

ಇನ್ನು ಅವರ ದಾಂಪತ್ಯ ಜೀವನದ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಹುದು. ಅವರ ಪತ್ನಿ ಕೃಷ್ಣಾಬಾಯಿ ತನ್ನ 45ನೆಯ ವರ್ಷದಲ್ಲಿ ಕಣ್ಮುಚ್ಚಿದರು. ಆಕೆ ಇದ್ದಷ್ಟು ಕಾಲವೂ ಉಬ್ಬಸದಿಂದ ನರಳುತ್ತಿದ್ದರೆಂದೂ, ಆಕೆಗೆ ಪೈ ಅವರು ತಾವೇ ಮುಗ್ಗುಲ ದಾಯಿಯಂತೆ ನೋಡಿಕೊಳ್ಳ ಬೇಕಾಗಿತ್ತೆಂದೂ ಅವರ ಆತ್ಮಕಥನದಿಂದ ತಿಳಿದುಬರುತ್ತದೆ. 'ಆಕೆಯ 46 ವರ್ಷಗಳ ನೆನಪಿಗಾಗಿ 35 ವೃತ್ತಗಳುಳ್ಳ ಪ್ರಾಸರಹಿತವಾದ 'ಗೊಮ್ಮಟ ಜಿನಸ್ತುತಿ' ಎಂಬ ಒಂದು ಕವಿತೆಯನ್ನು ರಚಿಸಿ, 1928ನೆಯ ಜನವರಿಯಲ್ಲಿ ಪ್ರಕಟಿಸಿ ಅದನ್ನು ಅವಳಿಗೆ ಕಾಣಿಕೆಯಾಗಿತ್ತೆ' (ಆತ್ಮಕಥನ, ಕನ್ನಡದ ಮೊರೆ, ಪು. 40) ಎಂದು ತಾವೇ ಹೇಳಿಕೊಂಡಿರುತ್ತಾರೆ. ಅವರ ಪತ್ನಿವಿಯೋಗದ ಬೇಗೆ ಇಷ್ಟಕ್ಕೆ ಉಪಶಮಿಸಲಿಲ್ಲ. ಅವರ ಜೀವನ ಒಡಲಿಲ್ಲದ ನೆರಳಿನಂತಾಗಲು ಸಹಧರ್ಮಿಣಿಯ ನೆನಪಿಗೆ ಬಾಷ್ಪಾಂಜಲಿಯಾಗಿ; ತಮ್ಮನ್ನು ಅಗಲಿಸಿದ ವಿಧಾತನಿಗೆ ಶ್ರದ್ಧಾಂಜಲಿಯಾಗಿ, 87 ಕವಿತೆಗಳನ್ನು ಬರೆದು 'ನಂದಾದೀಪ'ವೆಂಬ ಕವನ ಸಂಕಲನವೊಂದನ್ನು ಅಣಿಗೊಳಿಸಿದರು. ಮಕ್ಕಳಿಲ್ಲದ ತಮ್ಮ ಉಳಿದ ಆಯುಷ್ಯವನ್ನು ತಮ್ಮ ತಮ್ಮನಾದ ಸುಬ್ರಾಯ

ಪೈಯ ಸಂಸಾರದ ನೆರವಿನಿಂದ ಕಳೆದರು. ಅವರ ಪಾಲಿಗೆ ತಮ್ಮನ ಮಕ್ಕಳೂ, ನೆರೆಹೊರೆಯವರ ಮಕ್ಕಳೂ ಅಕ್ಷಯವಾದ ನಿಧಿಯಂತಿದ್ದರು. ಮನೆಯ ಮೇಲ್ವಿಚಾರಣೆಯ ಹೊಣೆಯನ್ನೆಲ್ಲಾ ತಮ್ಮನಿಗೇ ವಹಿಸಿಕೊಟ್ಟು, ತಾವು ಸರ್ವದಾ ಶಾರದೋಪಾಸನೆಯಲ್ಲಿ ನಿರತರಾದರು. ಗೋವಿಂದ ಪೈ ಅವರ ಕ್ರಮಬದ್ಧವಾದ ವ್ಯಾಸಂಗ ಅರ್ಧಕ್ಕೇ ನಿಂತಂತೆ, ಅವರ ದಾಂಪತ್ಯಜೀವನದ ಎಳೆಯೂ ಅರ್ಧದಲ್ಲಿಯೇ ಕಡಿದು ಬಿದ್ದಿತು. ಈ ಎರಡು ಅನಿರೀಕ್ಷಿತ ದುರ್ಘಟನೆಗಳಿಂದ ಅವರು ಕುಗ್ಗಿ ಕುಸಿಯದೆ, ತಮ್ಮ ದೀರ್ಘಾಯುಷ್ಯವನ್ನು ಧೀಮಂತರಾಗಿಯೇ ನಿರ್ವಹಿಸಿದರು. ಸುತ್ತ ಮುತ್ತಲೂ ಸರ್ವದಾ ಸ್ಮಿತವನ್ನು ಸೂಸುತ್ತಿದ್ದ ಸುಂದರವಾದ ಸೃಷ್ಟಿ ಸೌಂದರ್ಯ, ಕುಟೀರದ ಸನಿಹದಲ್ಲಿಯೇ ಇದ್ದ ಕರಾವಳಿಯ ಕಡಲಿನ ಗೆಳೆತನ, ಮನೆಗೆ ಬಂದು ಹೋಗುವ ಬಂಧು ಬಳಗದವರ ಅಭಿಮಾನ, ಸಾಹಿತ್ಯ ಬಾಂಧವರ ಸಹೃದಯ ಸಂವಾದದ ಸವಿ, ಎಲ್ಲಕ್ಕೂ ಮಿಗಿಲಾಗಿ ತಮ್ಮ ಸಹೋದರನ ಸಹವಾಸಗಳಲ್ಲಿ ಅವರ ಜೀವನ ಸುಗಮವಾಗಿಯೇ ಸಾಗಿತು. ತಮ್ಮ ವ್ಯಾಸಂಗದ ಕೋಣೆಯಲ್ಲಿ ಗೋಡೆಗೆ ತೂಗು ಹಾಕಿದ್ದ ಪತ್ನಿಯ ಭಾವಚಿತ್ರಕ್ಕೆ ಪ್ರತಿನಿತ್ಯವೂ ಒಂದು ಪುಷ್ಪವನ್ನು ಸಮರ್ಪಿಸದೆ ದಿನದ ಕೆಲಸ ಮೊದಲಾಗುತ್ತಿರಲಿಲ್ಲವೆಂದು ಮಾಸ್ತಿಯವರ ಮಾತಿನಿಂದ ತಿಳಿದು ಬರುತ್ತದೆ. (ಶ್ರೀ ಎಂ. ಗೋವಿಂದ ಪೈ ಅವರು : ದೀವಿಗೆ, ಭಾಗ ಒಂದು, ಪು. 91), ಮುಪ್ಪಿನಲ್ಲಿಯೂ ಮುಗ್ಧರಂತೆ ಕಂಡುಬಂದ ವಾಙ್ಮಯ ವಿಶಾರದರನ್ನು ಬನ್ನಂಜೆ ಗೋವಿಂದಾಚಾರ್ಯರು ತಮ್ಮ ಕವಿತೆಯಲ್ಲಿ 'ಬೆಳ್ಳಿ ಮೀಸೆಯ ಮಗು' ಎಂದು ಕರೆದಿರುವುದು ('ದೀವಿಗೆ', ಭಾಗ ಒಂದು, ಪು. 41) ಇಂದಿಗೂ ಒಂದು ಅಚ್ಚುಕಟ್ಟಾದ ನುಡಿಗಟ್ಟನಿಂತಿದೆ. ಇಂಥ ಮಹಾಚೇತನ 6-9-1963ನೆಯ ಶುಕ್ರವಾರದಂದು ತನ್ನ ಎಂಭತ್ತನೆಯ ವಯಸ್ಸಿನಲ್ಲಿ ತಾನು ಹಾರೈಸುತ್ತಿದ್ದ ಸಾವಿನ ಕರೆಯನ್ನು ಸೇರಿ ಕೃತ ಕೃತ್ಯವಾಯಿತು. ಕನ್ನಡಿಗರಿಗಾದರೋ ಅವರ ಪಾರ್ಥಿವ ಶರೀರ ಕಣ್ಮರೆಯಾದರೂ, ಅವರು ಬಿಟ್ಟು ಹೋಗಿರುವ ಸಾರಸ್ವತ ಸಂಪತ್ತು ಅಪಾರವಾಗಿರುವುದರಿಂದ, ಅವರ ಆ ಉಪಕಾರ ಸ್ಮರಣೆಗಾಗಿ ಅವರಿಗೆ ತಾವು ಚಿರಋಣಿಗಳಾಗಿದ್ದಾರೆ.

**ಕಾವ್ಯಕ್ಷೇತ್ರ**

ಗೋವಿಂದ ಪೈ ಅವರ ಹೆಸರನ್ನು ಕೇಳಿದ ಕೂಡಲೇ ಅವರೊಬ್ಬ ಕನ್ನಡದ ಸುಪ್ರಸಿದ್ಧ ಸಂಶೋಧಕರೆಂದು ಎಲ್ಲರಿಗೂ ಕೂಡಲೇ ಸ್ಫುರಿಸುವುದು. ಆದರೆ, ಅವರ ಸಾಹಿತ್ಯ ವ್ಯವಸಾಯ ಮೊದಲು ಕಾವ್ಯಸೃಷ್ಟಿಯಿಂದ ತೊಡಗಿತೆನ್ನುವುದನ್ನು ನಾವು ಮರೆಯುವಂತಿಲ್ಲ. ಈ ಕಾವ್ಯ ಪ್ರೇರಣೆ ಅವರಿಗೆ ಹೇಗಾಯಿತೆನ್ನುವುದನ್ನು ಅವರೇ ಬಹಳ ಸ್ವಾರಸ್ಯವಾಗಿ ಹೇಳಿಕೊಂಡಿದ್ದಾರೆ. ತಮ್ಮ ತಮ್ಮನ ಮುಂಜಿಯ ಗಡಿಬಿಡಿಯಲ್ಲಿ ಎತ್ತಲಿಂದಲೋ ಯಾವುದೋ ಹಾಡು ಕೇಳಿ ಬಂದು ಅವರ ಸುಪ್ತಚಿತ್ತವೂ ಚೇತರಿಸಿಕೊಂಡಿತಂತೆ. ಕೂಡಲೇ ಏಕಾಂತ ಸ್ಥಳದಲ್ಲಿ ಕುಳಿತು ತಮ್ಮ ಲೇಖನಿ ಅಣಿಗೊಳಿಸಿದರಂತೆ. "ಹೀಗೆ ಸಾಹಿತ್ಯ ಮಂದಿರದ ಹೊಸ್ತಿಲಲ್ಲಿ ಅಕಾಂಡವಾಗಿ ಎಡವಿದೆ. ಮುಚ್ಚು ಕದಕ್ಕೆ ಡಿಕ್ಕಿ ಹೊಡೆದೆ. ಅಗುಳಿ ಇಲ್ಲದ ಬಾಗಲು ಹಾರಿತು. ಒಳಹೊಕ್ಕೆ. ನನ್ನ ಜೀವಮಾನದಲ್ಲಿ ಅದೊಂದು ಅಮಗ (ಉತ್ಸವ ಸಮಯ). ನೆನಪಿನಲ್ಲಿ ಹಚ್ಚೆ ಚುಚ್ಚಿದಂತಿರುವ ಆ ದಿನವನ್ನು ಎಂದಿಗೂ ಮರೆಯುವಂತಿಲ್ಲ" (ಆತ್ಮಕಥನ, ಕನ್ನಡ ಮೊರೆ, ಪು. 13) ಎಂದು ತಿಳಿಸಿರುವರು. ಮೊದಮೊದಲು ಕೆಲವು ನಾಟಕಗಳನ್ನು ಬರೆಯಲು ಹೊರಟರು. ಅವು ಅವರಿಗೆ ತೃಪ್ತಿ ನೀಡಲಿಲ್ಲ. ಆನಂತರ ಕವಿತೆಯತ್ತ ಅವರ ಚಿತ್ತ ಹೊರಳಿತು. ಅದೂ ಒಂದು ಆಕಸ್ಮಿಕವೇ ಸರಿ. 1900ರಲ್ಲಿ ಮಂಗಳೂರಿನಿಂದ 'ಸುವಾಸಿನಿ' ಎಂಬ ಪತ್ರಿಕೆ ಪ್ರಕಟವಾಗತೊಡಗಿತು. ಅದಕ್ಕೆ ಗೋವಿಂದ ಪೈ ಅವರು 'ಸುವಾಸಿನಿ' ಎಂಬ ಹೆಸರಿನಲ್ಲಿಯೇ ಮೂರು ಕಂದ ಪದ್ಯಗಳನ್ನು ಬರೆದು ಕಳುಹಿಸಿದರು. ಅದು ಆ ಪತ್ರಿಕೆಯಲ್ಲಿ ಪ್ರಕಟವಾದುದಲ್ಲದೆ ಅದಕ್ಕಾಗಿ ಇಟ್ಟಿದ್ದ ಮೂರು ರೂಪಾಯಿ ಬಹುಮಾನವೂ ಬಂದಿತು. ಆಗ ಪೈ ಅವರು 8ನೆಯ ತರಗತಿಯಲ್ಲಿ ಓದುತ್ತಿದ್ದರು. ಕೇವಲ ಹದಿನೇಳು ವರ್ಷದ ಹುಡುಗ. ಇದರಿಂದ ಉತ್ತೇಜಿತರಾಗಿ ಮೇಲಿಂದ ಮೇಲೆ ಪದ್ಯಗಳನ್ನು ಬರೆದರು. ಆ ಕಾಲಕ್ಕೆ ತಕ್ಕಂತೆ ಕಂದ ವೃತ್ತಗಳಲ್ಲಿಯೇ ತಮ್ಮ ಪದ್ಯಗಳನ್ನು ಬರೆಯುತ್ತಿದ್ದರು. ದ್ವಿತೀಯಾಕ್ಷರ ಪ್ರಾಸದ ಬಗ್ಗೆ ಅವರಿಗೆ ಕುತೂಹಲ ಕೆರಳಿತು. ಅದನ್ನು ಬಿಡಬಾರದೇಕೆನ್ನಿಸಿತು. ಈ ವೇಳೆಗೆ ಅವರ ಗುರುಗಳಾಗಿದ್ದ ಪಂಜೆ ಮಂಗೇಶರಾಯರೊಂದಿಗೆ ವಿಚಾರ ನಡೆಸಿದ್ದರು. ಅವರಿಂದ ಸೂಕ್ತವಾದ ಪ್ರತಿಕ್ರಿಯೆ ಬರಲಿಲ್ಲ. ಆನಂತರ, 1911ರಲ್ಲಿ ಬಡೋದೆಗೆ ಹೋಗಿದ್ದಾಗ ಅಲ್ಲಿ ಇದೇ ಚಿಂತನೆಯಲ್ಲಿಯೇ ಅಡ್ಡಾಡುತ್ತಿದ್ದಾಗ ಈ ಪ್ರಾಸೋಲ್ಲಂಘನೆಯನ್ನು ಮಾಡುವುದೇ ಸರಿಯೆಂದು ನಿರ್ಧರಿಸಿದರು. ಅವರ ಮಾತಿನಲ್ಲಿಯೇ ಹೇಳುವುದಾದರೆ "ಪ್ರಾಸವನೀಗಲೆ ತೊರೆದು ಬಿಡುವುದು ನಿಶ್ಚಯಂ" ಎಂದು ಶಪಥ ಮಾಡಿದರು. ಆ ಬಳಿಕ ರವೀಂದ್ರರ ಎರಡು ಗೀತಗಳನ್ನು, ಮಹಮ್ಮದ್ ಇಕ್ಬಾಲ್ ಅವರ ಒಂದು ಪದ್ಯವನ್ನು ಅನುವಾದಿಸಿದರು. ಅಂದಿನ 'ಸ್ವದೇಶಾಭಿಮಾನಿ' ಪತ್ರಿಕೆಯಲ್ಲಿ ಅವುಗಳು ಪ್ರಕಟವಾದಾಗ ದೊಡ್ಡ ಹುಯಿಲೇ ಎದ್ದಿತೆಂದು ತಿಳಿದು ಬರುತ್ತದೆ. ಅನಂತರ ಅವರ ಗಮನ ಇಂಗ್ಲಿಷ್ ಕವಿತೆಗಳಲ್ಲಿ ಪ್ರಯೋಗವಾಗುತ್ತಿದ್ದ ಅಂತ್ಯಾಕ್ಷರ ಪ್ರಾಸಕ್ಕೆ ಹೆಚ್ಚಾಗಿ ಮನವೊಲಿದಂತೆ ಕಾಣುತ್ತದೆ. ಆಧುನಿಕ ಕನ್ನಡ ಕವಿತೆಗಳು ಬಳಕೆಗೆ ಬಂದಂತೆಲ್ಲ ಪೈ ಅವರ ಕಾವ್ಯ ಸಾಮ್ರಾಜ್ಯ ವಿಜೃಂಭಿಸಲಾರಂಭಿಸಿತು. 1900ರಲ್ಲಿ ಪ್ರಾರಂಭವಾದ ಅವರ ಕವಿತಾ ರಚನೆ 1930ರ ವೇಳೆಗೆ ಸಾಕಷ್ಟು ಪುಷ್ಟಿ ಪಡೆದಿದ್ದನ್ನು ಮನಗಂಡ ಅವರ ಗುರುಗಳಾದ ಪಂಜೆ ಮಂಗೇಶರಾಯರು, ಅವರ 'ಗಿಳಿವಿಂಡು' ಎಂಬ ಮೊತ್ತಮೊದಲನೆಯ ಕವನ ಸಂಕಲನವನ್ನು, 'ಬಾಲ ಸಾಹಿತ್ಯ ಮಂಡಲ'ದ ಮೂಲಕ ಬೆಳಕಿಗೆ ತಂದರು. ಈ ಪುಸ್ತಕದ ಅಳಿದುಳಿದ ಪ್ರತಿಗಳನ್ನು ಪೈ ಅವರೇ ದುಡ್ಡು ತೆತ್ತು ತರಿಸಿಕೊಂಡರಂತೆ. ಈ ಅನುಭವಕ್ಕೆ ಅವರು "ಹೂವು ಮೂಸಿದರೆ ಒಂದು ವಾಸನೆ, ತಿಕ್ಕಿದರೆ ಒಂದು ವಾಸನೆ" ಎಂದಿರುತ್ತಾರೆ.

ಅವರ ಎರಡನೆಯ ಕವನ ಸಂಕಲನವಾದ 'ನಂದಾದೀಪ'ದ ಸಂಕಲನದ ರೂಪುರೇಷೆಗಳನ್ನೆಲ್ಲಾ ಅಣಿಗೊಳಿಸಿದ್ದರು. ಆದರೆ, ಈ ಅಪೂರ್ವ ಸಂಕಲನ ಅವರ ಜೀವಿತಾವಧಿಯಲ್ಲಿ ಪ್ರಕಟವಾಗಲಿಲ್ಲ. ಪ್ರಕಾಶಕರು ಎಚ್ಚರಿಕೆ ವಹಿಸಿ ಪೈ ಅವರ ಸೂಚನೆಗಳನ್ನು ಚಾಚೂತಪ್ಪದೆ ಇದನ್ನು ಬೆಳಕಿಗೆ ತಂದಿರುತ್ತಾರೆ. 'ಗಿಳಿವಿಂಡಿ'ನಲ್ಲಿ ಒಟ್ಟನಲ್ಲಿ 46 ಪದ್ಯಗಳಿದ್ದರೆ, 'ನಂದಾದೀಪ'ದಲ್ಲಿ 37 ಪದ್ಯಗಳಿವೆ. ಗೋವಿಂದ ಪೈ ಅವರ ಕೃತಿಗಳ ಪ್ರಕಟನೆಯ ಸರ್ವ ಸ್ವಾಮ್ಯವನ್ನು ಪಡೆದ ಮೈಸೂರಿನ ಕಾವ್ಯಾಲಯದವರು ಅಲ್ಲಿ ಇಲ್ಲಿ ಪತ್ರಿಕೆಗಳಲ್ಲಿ ಚೆದುರಿಹೋಗಿದ್ದ ಕವನಗಳನ್ನು ಹುಡುಕಿ, ತಡಕಿ, 1969ರಲ್ಲಿ 'ಹೃದಯರಂಗ' ಎಂಬ ಮೂರನೆಯ ಕವನ ಸಂಕಲನವನ್ನು ಪ್ರಕಟಿಸಿದರು. ಇದರ ಶೀರ್ಷಿಕೆ ಮತ್ತು ಕವನ ಕ್ರಮಗಳ ಹೊಣೆಯೆಲ್ಲ ಪ್ರಕಾಶಕರದೇ ಸರಿ. ಇದರಲ್ಲಿ ವೈವಿಧ್ಯಪೂರ್ಣವಾದ 44 ಪದ್ಯಗಳಿವೆ. ಕಾವ್ಯಾಲಯದ ಒಡೆಯರಾಗಿದ್ದ ಕೂಡಲಿ ಚಿದಂಬರಂ ಅವರು 'ವಿಟಂಕ' ಎಂಬ ಹೆಸರಿನಲ್ಲಿ

ಪೈ ಅವರ ನಾಲ್ಕನೆಯ ಕವನ ಸಂಕಲನಕ್ಕಾಗಿ 35 ಪದ್ಯಗಳನ್ನು ಆರಿಸಿ ಕೂಡಿಸುವ ಕಾರ್ಯದಲ್ಲಿ ತೊಡಗಿದ್ದರು. ಅವುಗಳಲ್ಲಿ ಕೆಲವು ಮಾತ್ರವೇ ದೊರೆತಿದ್ದುದರಿಂದ ಈ ಸಂಕಲನ ಕಾರ್ಯ ಸ್ಥಗಿತವಾಯಿತು. ಈಗ ಸದ್ಯದಲ್ಲಿಯೇ ಆ ಕವನ ಸಂಕಲನವೂ ಹೊರಬರಲಿದೆ. ಇವುಗಳಲ್ಲದೆ, ಗೋವಿಂದ ಪೈ ಅವರ ಕೆಲವು ಪ್ರಾತಿನಿಧಿಕ ಕವನಗಳನ್ನಾಯ್ದು 'ಇಂಗಡಲು' ಎಂಬ ಸಂಕಲನವನ್ನು ಈಗ ತಾನೆ ಪ್ರಕಟಿಸಿದೆ. ಅಷ್ಟೇ ಅಲ್ಲದೆ ಗೋವಿಂದ ಪೈ ಅವರ 'ಗೊಲ್ಗೊಥಾ' ಮತ್ತು 'ವೈಶಾಖಿ' ಎಂಬ ಎರಡು ನೀಳ್ಗವಿತೆಗಳು ಮೊದಲು ಬಿಡಿಬಿಡಿಯಾಗಿ ಅಚ್ಚಾಗಿ, ಅನಂತರ ಕಾವ್ಯಾಲಯದವರು ಎರಡನ್ನೂ ಒಟ್ಟುಗೂಡಿಸಿ ಈವರೆಗೆ ನಾಲ್ಕು ಮುದ್ರಣಗಳನ್ನು ತಂದಿದ್ದಾರೆ.

ಗೋವಿಂದ ಪೈ ಅವರು ಆಗೊಮ್ಮೆ ಈಗೊಮ್ಮೆ ಈ ಕವಿತೆಗಳನ್ನು ರಚಿಸಿದೆನೆಂದು ಹೇಳಿಕೊಂಡಿದ್ದರೂ, ಇವುಗಳಲ್ಲಿ ವ್ಯಕ್ತವಾಗುವ ಭಾವವೈವಿಧ್ಯ, ಪ್ರಕಾರ ನೈಪುಣ್ಯ ಮತ್ತು ಶೈಲಿವೈಶಿಷ್ಟ್ಯಗಳು ಅಧ್ಯಯನ ಮಾಡುವವರಿಗೆ ಸಾಕಷ್ಟಿವೆ. ವಿ.ಎಂ. ಇನಾಂದಾರರು ತಮ್ಮ ಒಂದು ಪುಸ್ತಕದಲ್ಲಿ ನಿರ್ದೇಶಿಸಿರುವಂತೆ "ಅವರ ಕಾವ್ಯಚೇತನವನ್ನು ನಿಲ್ಲಿಸಿ ನಡೆಸುವ ಕಲ್ಪನಾವಿಲಾಸ ಸತ್ವಯುತವಾದದ್ದು, ನೀಡುಗಣ್ಣ ನೋಟದಿಂದ ಬದುಕನ್ನು ನೋಡುವವನ, ಅನುಭವಿಸಿದವನ ಧೀರತೆಯುಳ್ಳದ್ದು; ತಲಸ್ಪರ್ಶಿಯಾದ ವಿದ್ವತ್ತಿನಿಂದಾಗಿ, ಈಡು, ಆಳ, ವಿಸ್ತಾರಗಳನ್ನು ಪಡೆದು ಹಿರಿಯ ಸಾಹಿತ್ಯ ವ್ಯಾಸಂಗದಿಂದ ಶ್ರೀಮಂತವಾದದ್ದು; ಸಮತೂಕದ ದೃಷ್ಟಿಯಿಂದಾಗಿ ಅರ್ಥಪೂರ್ಣವಾದದ್ದು; ಸಂವೇದನಾಶೀಲವಾದ ಮನಸ್ಸಿನಿಂದ ಮೊನೆಗೊಂಡದ್ದು" (ಗೋವಿಂದ ಪೈಗಳ ಕಾವ್ಯ 1965, ಪು. 2-3). ಇದೇ ಲೇಖಕರು ಹದಿನೆಂಟು ವರ್ಷಗಳಾದ ಬಳಿಕವೂ ಗೋವಿಂದ ಪೈ ಅವರ ಸಂಕಲನಗಳನ್ನು ಪುನಃ ಪರಿಶೀಲಿಸಿದಾಗಲೂ ಅವರ ಅಭಿಪ್ರಾಯ ಅಂತೆಯೇ ಅಚಲವಾಗಿದೆಯೆಂದ ಬಳಿಕ ಪೈ ಅವರ ಕಾವ್ಯದ ಮೌಲ್ಯ ಎಷ್ಟು ಶಾಶ್ವತವೆನ್ನುವುದನ್ನು ತಿಳಿಯಬಹುದು. ಗೋವಿಂದ ಪೈ ಅವರ ಕವನಗಳಲ್ಲಿ, ನಮ್ಮ ಚಂಪೂ ಕವಿಗಳಲ್ಲಿ ಕಂಡುಬರುವಂತೆ ಪ್ರತಿಭೆ ಮತ್ತು ಪಾಂಡಿತ್ಯಗಳೆರಡೂ ಹದವಾಗಿ ಕೂಡಿಕೊಂಡು ಬರುತ್ತವೆ. ಆದ್ದರಿಂದ, ಒಮ್ಮೊಮ್ಮೆ ಅವು ಕಬ್ಬಿಣದ ಕಡಲೆಯಂತೆ ತೋರಿಬರಬಹುದು. ಅವರು ತಾವು ಬರೆಯುವ ಅಪೂರ್ವ ಶಬ್ದಗಳಿಗೆ, ಇಲ್ಲ ತಾವೇ ಸೃಷ್ಟಿಸುವ ಪದಗಳಿಗೆ ಅಡಿಟಿಪ್ಪಣಿಯನ್ನು ಕೊಡುವುದನ್ನು ಕಂಡು ಕೆಲವರಿಗೆ ಬೆರಗಾಗಬಹುದು. ಅವರ ಪಾಲಿಗೆ ಈ ಕವನ ಕ್ರಿಯೆ ಕೇವಲ ಒಂದು ಚಪಲವಲ್ಲ; ಅದು ಒಂದು ಅಪೂರ್ವವಾದ ಕಲಾಕೌಶಲ, ಕಲ್ಪನೆ ಮತ್ತು ಕಲೆಗಳ ಮಧುರ ಸಮನ್ವಯ. ಅವರಿಗೆ ಕವಿ-ಕಾವ್ಯಗಳಲ್ಲಿರುವ ಶ್ರದ್ಧೆ ಗೌರವಗಳು ಅಪಾರವಾದವು. ಪೈ ಅವರು 'ಕವಿತಾವತಾರ'ವೆಂಬ ಕವನದಲ್ಲಿ ಆದಿಕವಿ ವಾಲ್ಮೀಕಿಯನ್ನು ನೆನೆದು, "ಸುಯ್ಯೊಂದು, ನರುಕಂಬನಿಯೊಂದು, ಬಿಕ್ಕೊಂದು - ಕವಿತೆ ಗಡ ಮರುಕಂ" ಎಂದು ಹೇಳಿರುವ ಮಾತು ಔಪಚಾರಿಕವಲ್ಲ; ಅದು ಅವರ ಅಂತಃಕರಣದ ಅನುಭವವೂ ಹೌದು. 'ಕವಿತೆ'ಯ ಕರ್ಮವನ್ನು, ಮರ್ಮವನ್ನು ಚೆನ್ನಾಗಿ ಚಿಂತನೆ ಮಾಡಿರುವ ಅವರು "ಕವಿತೆ ಮತಿಜಲ ನಲಿನ, ವ್ಯಸನ ವನಧಿಯ ಪುಲಿನ, ಕವಿತೆ ಗಾನದ ಸುಗ್ಗಿ, ಸೊಬಗ ತನಿಗೂಡಿ, ಕವಿತೆ ನವರಸ ರಂಗವದು, ತ್ರಿವೇಣಿಯ ಸಂಗಮಿದೊ ನೆನಸು ಕನಸು ಮನಸ್ಸಿನ ತ್ರಿತಯಮೊಡಗೂಡಿ" ಎಂದು ವರ್ಣಿಸಿದ್ದರಿಂದ ಅದರ ಬಗ್ಗೆ ಲಘುವಾಗಿ ಭಾವಿಸುವವರಲ್ಲ. ಕವಿತೆಗೆ ಶೋಭಾವಹವಾದ, ಪ್ರಾಸ, ಛಂದಸ್ಸು, ಶೈಲಿ, ಅರ್ಥಲಾಲಿತ್ಯಗಳನ್ನು ಪುರಸ್ಕರಿಸುವ ಸ್ವಭಾವ ಅವರದು. ಬ್ರಹ್ಮಸೃಷ್ಟಿ ಕಾಲಾಧೀನವಾದದ್ದಾದರೆ, ಕವಿಯ ಸೃಷ್ಟಿ ಕಾಲಾತೀತವಾದದ್ದು ಎನ್ನುವುದನ್ನು ತಮ್ಮ 'ಬರ್ದಿಲ'ವೆಂಬ ಕವನದಲ್ಲಿ ಸಕಾರಣವಾಗಿ ಪ್ರತಿಪಾದಿಸಿದ್ದಾರೆ. "ಕಾವ್ಯಂ ನ ಮಮಾರ ನ ಜೀರ್ಯತಿ" ( ಅಥರ್ವವೇದ, X,8 32) [ಕಾವ್ಯಕ್ಕೆ ಮರಣವಿಲ್ಲ, ಮುಪ್ಪಿಲ್ಲ] ಎಂಬ ಉನ್ನತ ಧ್ಯೇಯದಿಂದ ಪ್ರೇರಿತವಾಗಿ ಕಾವ್ಯಕ್ಷೇತ್ರದಲ್ಲಿ ಪ್ರವೇಶಿಸಿದ ಅವರು ನಿರ್ವಹಿಸಿರುವ ಕಾರ್ಯ ಭವ್ಯ ಪ್ರಯತ್ನವೇ ಸರಿ.

ಗೋವಿಂದ ಪೈ ಅವರ ಕಾವ್ಯಸೃಷ್ಟಿಯನ್ನು ಸಮಷ್ಟಿದೃಷ್ಟಿಯಿಂದ ಸಮೀಕ್ಷಿಸಿದಾಗ ಅಲ್ಲಿ ಪ್ರಧಾನವಾಗಿ ದೇಶಭಕ್ತಿ, ದೈವಭಕ್ತಿ, ಮಾನವೀಯತೆ, ವಿಭೂತಿ ಸ್ತುತಿ ಮತ್ತು ಪ್ರಕೃತಿ ಪ್ರೇಮುಗಳ ಪ್ರೇರಣೆಗಳನ್ನು ಗುರುತಿಸಬಹುದು. ಅವರ ದೇಶಭಕ್ತಿ, ತಮ್ಮ ತವರುನಾಡಾದ ತುಳುನಾಡಿನಿಂದ ಕುಡಿಯೊಡೆದು, ಕನ್ನಡನಾಡಿನ ಸುತ್ತಲೂ ಬಳ್ಳಿವರಿದು, ಕಡೆಗೆ ಭಾರತಾಂಬೆಯ ಮುಡಿಯಲ್ಲಿ ಹೂವಾಗಿ ಅರಳಿ ಪರಿಮಳಿಸುತ್ತದೆ. ಈ ಸ್ವಾನುಭವ ಕಲ್ಪನಾವಿಲಾಸ ಮತ್ತು ವಿಚಾರಗಳೆರಡರಿಂದಲೂ ಪುಷ್ಟಿಪೂರ್ಣವಾದದ್ದು "ಜಯ ಜಯ ತುಳುವ ತಾಯೇ ಮಣಿವೆ, ತಂದೆ ತಾಯಂದಿರ ತಾಯೆ, ಭುವನದಿ ತ್ರಿದಿವಚ್ಛಾಯೆ" ಎಂದು ಮೊದಲಾಗುವ ಈ ತುಳುವ ಮಾತೆಯ ಸ್ತುತಿಯಲ್ಲಿ. ಆ ಪ್ರದೇಶದ ಐತಿಹ್ಯ, ಐತಿಹಾಸಿಕ ಮತ್ತು ಸಾಂಸ್ಕೃತಿಕ ಸಂಗತಿಗಳನ್ನೆಲ್ಲ ಹೇಳಿ, ಕೇಳುವವರನ್ನು ಹುರಿದುಂಬಿಸುತ್ತಾರೆ. ಅದು ಪರಶುರಾಮನ ಕೊಡಲಿಯ ಮೊನೆಯಿಂದ ಮೂಡಿಬಂದರೂ ಭರತ ಮಾತೆಯ ತೊಡೆಯ ಒಂದು ಭಾಗವೆನ್ನುವುದನ್ನು ಮರೆಯುವುದಿಲ್ಲ. ಆ ತುಳುವ ಮಾತೆಯನ್ನು ಕುರಿತು 'ಮರಳಿ ಬಾರ, ಕಂದಾ, ನನ್ನುದರದಿ" ಎಂದು ಹರಕೆಯನ್ನು ಕೋರಿ ತಮ್ಮ ತವರುನಾಡಿನ ಅಭಿಮಾನವನ್ನು ವ್ಯಕ್ತಪಡಿಸುವರು. ಅನಂತರ, ಕನ್ನಡ ನಾಡಿನ ಕಡೆಗೆ ಅವರ ದೃಷ್ಟಿ ಹರಿದಾಗ, ಅವರ ಅಂತರಂಗ ಮತ್ತಷ್ಟು ಮಿಗಿಲಾಗಿ ಮಿಡಿಯುವುದು. "ತಾಯೆ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ, ಹರಸು ತಾಯೆ, ಸುತರ ಕಾಯೆ, ನಮ್ಮ ಜನ್ಮದಾತೆಯೆ" ಎಂದು ಅಂದು ಅವರು ಕೊರಳೆತ್ತಿ ಹಾಡಿದ ಹಾಡು, ಎಂದೆಂದಿಗೂ ಕನ್ನಡಿಗರ ತನುಮನಗಳಲ್ಲಿ ಮಾರ್ದನಿಸುತ್ತಿರುವುದು. "ತನು ಕನ್ನಡ, ಮನ ಕನ್ನಡ, ಧನ ಕನ್ನಡವೆಮ್ಮೆವು" ಎಂಬ ಮಾತುಗಳು, ಅವರ ಬಾಯಿಂದ ಹೊರಹೊಮ್ಮಿದ ಮಂತ್ರಗಳೇ ಸರಿ! ಎಂದಿನಂತೆಯೇ ತಮ್ಮ ವ್ಯಕ್ತಿತ್ವಕ್ಕೆ ಅನುಗುಣವಾಗಿ ಕನ್ನಡ ನಾಡಿನ ಪ್ರಕೃತಿ ಸಂಪತ್ತು, ಪೌರಾಣಿಕ ಮಹತ್ವ, ಚಾರಿತ್ರಿಕ ಹಿನ್ನೆಲೆ, ಸಾಹಿತ್ಯಕ ಸಾಧನೆ, ಧಾರ್ಮಿಕ ಸಹಿಷ್ಣುತೆ ಮತ್ತು ವಾಸ್ತುಶಿಲ್ಪಗಳ ವೈಭವವನ್ನೆಲ್ಲ ಈ ಕವನ ಶಿಲ್ಪದಲ್ಲಿ ಕಡೆದಿರಿಸಿರುತ್ತಾರೆ. ಪ್ರಕೃತ ದುಃಸ್ಥಿತಿಯನ್ನು ಕಂಡು ಕವಿಯ ಕಂಠ ಗದ್ಗದಿತವಾಗಲು "ನಿನ್ನ ಮೂರ್ತಿ ಜಗತ್ಕೀರ್ತಿ, ಎಂದಿಗೆಮಗೆ ತೋರುವೆ?" ಎಂದು ಕಂಬನಿಯೊಂದನ್ನು ಸುರಿಸಿ ಸಮಾಧಾನಗೊಳ್ಳುತ್ತಾರೆ. (ಈ ಅಚ್ಚುಕಟ್ಟಾದ ಬಿಡಿಗವಿತೆಯನ್ನು ಓದುತ್ತಿದ್ದರೆ 'ಶ್ರೀ' ಅವರ 'ಕನ್ನಡತಾಯ್ ನೋಟ' ಎಂಬ ನಿಡಿದಾದ ಪ್ರಗಾಥದ ನೆನಪಾಗದೆ ಇರದು!) ಗೋವಿಂದ ಪೈ ಅವರ ಈ ನಾಡಿನೊಲುಮೆ ಮತ್ತಷ್ಟು ಮಹಾಪೂರವಾಗಿ ತುಂಬಿತುಳುಕಿ ಭಾರತಾಂಬೆಯತ್ತ ಧಾವಿಸುತ್ತದೆ. ಭಾರತ ಭೂಮಿಯ ಚೆಲುವು ನಲಿವುಗಳನ್ನು, ಮೇಲ್ಮೆ ಮಹಿಮೆಗಳನ್ನು ಬಣ್ಣಿಸಿದ ಬಾಯಿಗೆ ಆಕೆ ದಾಸ್ಯ ಶೃಂಖಲೆಯಲ್ಲಿ ತೊಳಲುತ್ತಿರುವುದನ್ನು ಕಂಡು ದುಃಖ ಒತ್ತರಿಸಿ ಬರುತ್ತದೆ. "ಮೂಡುವನೆಂದೀ ಭಾರತ ಭಾಗ್ಯಭಾಸ್ಕರಂ? ಮರಳುವುದೆಂದೆಮಗಗಲಿದ ಸ್ವತಂತ್ರಮತಿ ಯಶಸ್ಕರಂ?" ಎಂದು ನಿಟ್ಟುಸಿರು ಬಿಡುತ್ತಾರೆ. "ಉದಾರ ಚರಿತಾನಾಂ ತು

ವಸುಧೈವ ಕುಟುಂಬಕಂ" ಎಂಬ ಭವಭೂತಿಯ ಮಾತಿನ ಸರಣಿಯನ್ನು ಸ್ಮರಿಸಿಯೊ ಏನೋ, "ಭಾರತದಲಿ ಸರ್ವಧರ್ಮವೊಂದಲಿ ಸದನಂ. ಮಾಣಿಸಲೀಕೆಯ ಸ್ವಸ್ತಿಧ್ವಜಮಧರ್ಮದೊಳಕದನಂ" ಎಂದು ಶುಭವನ್ನು ಕೋರುವರು: ಕಡೆಗೆ 'ಭಾರತಾಂಬೆಯ ಮಹಿಮೆಯನ್ನು' ಮತ್ತೆ ಮತ್ತೆ ಮೆಚ್ಚಿಕೊಂಡು "ಭಾರತವನಳಿಯುತ್ತ ನನಗೆ ಜೀವನವೆತ್ತ? ಭಾರತವೆ ನನ್ನುಸಿರು. 'ನನ್ನೊಗೆದ ಬಸಿರು' ಎಂದು ತಮ್ಮ ಭಕ್ತಿಯ ಸುಮಮಾಲೆಯನ್ನು ಆಕೆಯ ಮುಡಿಗೆ ತೊಡಿಸಿ "ಭಾರತ ಯಶೋಗಾನವೆನ್ನೆದೆಯ ತಾನ" "ಭಾರತಾಂಬೆಯ ಭಕ್ತಿ ನನಗಾತ್ಮಶಕ್ತಿ" ಎಂದು ಹಿಗ್ಗುವರು.

ರಾಷ್ಟ್ರಾಭ್ಯುದಯದ ಹೊಂಗನಸನ್ನು ಕಾಣುತ್ತಿದ್ದ ಕವಿಗೆ, ಸ್ವಾತಂತ್ರ್ಯಾನಂತರದ ದುಃಖ ಪರಂಪರೆಯನ್ನು ಕಂಡು ಆದ ಹತಾಶೆ ಹೇಳತೀರದು. "ಇನ್ನು ಹೆರವರ ನೊಗಕೆ ಮಣಿವರಾವಲ್ಲ? ಜಗದಿ ತಲೆಯೆತ್ತಿ ಹೆಬ್ಬಾಳಲೆದ್ದಿಹೆವು; ಕಳಕೊಂಡ ಬಿಡುಗಡೆಯ ಮರಳಿ ಗೆದ್ದಿಹೆವು; ನಡೆ ಮುಂದೆ, ಹಿಂದವಿನ್ನಡಿಮೆಯನ್ನೊಲ್ಲ!" ಎಂದು ಎತ್ತರಿಸಿದ್ದ ಅವರ ಧ್ವನಿ ಇದ್ದಕ್ಕಿದ್ದಂತೆಯೇ ಸ್ವಾತಂತ್ರ್ಯದಾತನನ್ನು ನೆನೆದು "ಏನು ತೋರಿಸಿದೆಮಗೆ? ಮೇಣೇನನಿತ್ತೆ: ಕಳಕೊಂಡ ಬಿಡುಗಡೆಯನೆಮಗಿತ್ತೆ ತಂದೆ! ಆದರೀಗಣ ಕಥೆಯ ಬಲ್ಲೆಯಾ ಮತ್ತೆ? ರಾಹುವನು ತೊಲಗಿಸಿದೆ, ಕೇತುವನು ತಂದೆ!" ಎಂದು ಇಳಿಮುಖವಾಗುವುದು. ಗಾಂಧೀಜಿಯನ್ನು ಸ್ಮರಿಸಿ "ಇನ್ನಿನಿಸು ನೀ ಮಹಾತ್ಮಾ ಬದುಕಬೇಕಿತ್ತು!" ಎಂದು ಯಾತನೆ ಪಡುವರು. ಮಾತೃಭೂಮಿಯನ್ನು ಈಶ್ವರನೆಂದು ಕಲ್ಪಿಸಿಕೊಂಡು ರಚಿಸಿರುವ ಅಷ್ಟಕದಲ್ಲಿ "ಅಧ್ವಶ್ರಾಂತಗೆ ಬೆಲ್ಲವಿತ್ತೊಡನೆ ನೀರಂ ನೀಡಬೇಡಾ" ಎಂದು ಪ್ರಶ್ನಿಸಿ, "ಕಾಯ್ಯೆ ನೀನೆಮಗಿತ್ತಪೂರ್ವ ವರಮಂ ಸ್ವಾತಂತ್ರ್ಯಮಂ ಸರ್ವದಾ" ಎಂದು ಪ್ರಾರ್ಥಿಸುವರು. ಸ್ವತಂತ್ರ ಭಾರತದ ಅತಂತ್ರವನ್ನು ಕಂಡು ವರ್ಷ ವರ್ಷವೂ ಬರೆದಿರುವ ಚತುರ್ದಶಪದಿಗಳನ್ನು ನೋಡಿದರೆ, ಕವಿಯ ಕಂಬನಿಯ ಕುಯ್ಲನ್ನು ಕಾಣಬಹುದು. ಗೋವಿಂದ ಪೈ ಅವರ ಈ ದೇಶಪ್ರೇಮ, ಸ್ವದೇಶಕ್ಕೆ ಮಾತ್ರ ಸೀಮಿತವಾಗದೆ, ದೂರದ ತುರ್ಕಿಯನ್ನು ಕಬಳಿಸಲು ಇಟಲಿಯು ಮಾಡಿದ ಸನ್ನಾಹವನ್ನು ಖಂಡಿಸುವವರೆಗೂ ವ್ಯಾಪಿಸಿರುವುದು.

ಇನ್ನು ನುಡಿಯ ಮೇಲಿನ ಅವರ ಅಭಿಮಾನವನ್ನು ಒಂದೆರಡು ಮಾತುಗಳಲ್ಲಿಯೇ ಹೇಳಿ ಮುಗಿಸಬಹುದು. ಅವರ ಮಾತೃಭಾಷೆ ಕೊಂಕಣಿಯಾದರೂ ಅವರ ಕೈಂಕರ್ಯವೆಲ್ಲ ಕನ್ನಡಕ್ಕೆ ಮೀಸಲಾಗಿತ್ತು. ಈ ಬಗ್ಗೆ ಅವರೇ ಹೇಳಿಕೊಂಡಿರುವ ಮಾತುಗಳು ಮನನೀಯವಾಗಿವೆ. "ನಾನು ಎರಡು ತಾಯಂದಿರ ಕೂಸು. ಕೊಂಕಣಿ ನನ್ನ ಹೆತ್ತ ತಾಯಿ, ಕನ್ನಡ ಸಾಕು ತಾಯಿ, ನನ್ನನ್ನು ಸಾಕಿದ ತಾಯಿ..... ಆದರೆ ತಾಯಿಯ ಮೊಲೆಯಲ್ಲಿ ಹಾಲಿಲ್ಲ; ಕೊಂಕಣಿಯಲ್ಲಿ ಸಾಹಿತ್ಯವಿಲ್ಲ. ಆಕೆ ಆ ಬಗ್ಗೆ ನನ್ನನ್ನು ಕನ್ನಡದ ಮೊರೆಯಲ್ಲಿ ಹಾಕಿದಳು. ಈ ದಾಯಿಯಾದರೆ ಪಯಸ್ವಿನಿ. ಎಷ್ಟು ಕಾಲದಿಂದ ಎಷ್ಟೋ ಕವಿಗಳನ್ನು ಊಡಿಸಿಯೂ ಮತ್ತೂ ಬತ್ತದ, ದೇವರ ದಯೆಯಿಂದ ಸರ್ವದಾ ಬತ್ತಬಾರದ ಸದಾಸ್ನುಹಿ. ತನ್ನ ಮೊಲೆಯನ್ನು ಆಕೆ ತಾಯಿಗೂ ಮಿಕ್ಕ ಅಳ್ತಿಯಿಂದ ನನಗೆ ಉಣಿಸಿದಳು. ಆಕೆಯ ಅಕ್ಕರೆಯ ಸಾಲವನ್ನು ಏಳೇಳು ಜನ್ಮಕ್ಕೂ ತೆತ್ತು ತೀರಿಸಲಾರೆ." ('ಕನ್ನಡದ ಮೊರೆ', ಪು. 64:65) ಆಯಾ ಜನರ ಮಾತೃಭಾಷೆಯೇ ಶಿಕ್ಷಣದ ಮಾಧ್ಯಮವಾಗ ಬೇಕೆಂಬ ತತ್ವವನ್ನು ಒಪ್ಪಿದ್ದ ಪೈ ಅವರು "ತನ್ನ ತಾಯ್ನುಡಿಯಿಂದ ದುಡಿದ ಬಿಜ್ಜೆಯೇ ಬಿಜ್ಜೆ! ಹೆರರ ನಾಲಗೆಯೆಂಜಲೆನ್ನಗಂ ಸವಿಯೊ?" ಎಂದು ಎಚ್ಚರಿಸಿರುವರು.

ಗೋವಿಂದ ಪೈ ಅವರು ತಮ್ಮ ಕಾವ್ಯ ಪ್ರತಿಭೆಯನ್ನು ಯಾವ ಪಂಥ ಇಲ್ಲವೇ ಪ್ರಚಾರಕ್ಕೂ ಒತ್ತೆಯಿಟ್ಟವರಲ್ಲ. ಅವರಲ್ಲಿ ಸಾಂಪ್ರದಾಯಿಕವಾದ ಶ್ರದ್ಧೆ ಮತ್ತು ಆಧುನಿಕ ಪ್ರಜ್ಞೆಗಳೆರಡೂ ಸಹಜವಾಗಿ ಮೇಳವಿಸಿಕೊಂಡು ಬಂದಿರುತ್ತವೆ. ಆದ್ದರಿಂದ ಅವರಲ್ಲಿ ಜಾಗೃತವಾಗಿ ತೋರಿಬರುವ ಅಧ್ಯಾತ್ಮಿಕ ದೃಷ್ಟಿ ಹೇಗೆ ಸರ್ವಜನಾದರಣೀಯವಾಗಿದೆಯೆನ್ನುವುದನ್ನು ಅವರ ಕೆಲವು ಕವನಗಳಿಂದ ಗ್ರಹಿಸಬಹುದು. ಪಂಢರಪುರದ ವಿಠೋಬನನ್ನು ಮೊದಲ್ಗೊಂಡು, ಯರೂಸಲೇಮಿನ ಯೇಸು ಕ್ರಿಸ್ತನವರೆಗೆ ಅವರ ಅಧ್ಯಾತ್ಮಿಕ ಧಾರೆ ಪ್ರವಹಿಸಿದೆ. ಅವತಾರ ಪುರುಷರಾದ ಶ್ರೀಕೃಷ್ಣ ಮತ್ತು ಬುದ್ಧರಲ್ಲಿ ಅವರಿಗೆ ಸಮಾನ ಭಾವನೆ. ಅವರ ಭಕ್ತಿ ಪ್ರತಿಪಾದನೆಯೂ ವಿಶಿಷ್ಟವಾದುದು. ಪಂಢರಪುರದ ವಿಠೋಬನ ಎದುರಿನಲ್ಲಿ ನಿಂತು, ಅವನ ಭಕ್ತರನ್ನೆಲ್ಲ ಸ್ಮರಿಸಿ, ಅವರನ್ನು ಸಲಹಿದಂತೆಯೇ ತನ್ನನ್ನು ಕಾಪಾಡಬೇಕೆಂದು ಕೇಳಿಕೊಳ್ಳುವ ವೈಖರಿಯ ವೈಭವವೇ ಬೇರೆ. ಆ ದೇವನ ಭಂಗಿಯನ್ನು ಕಂಡು "ನಡುವಲಿ ಕೈಯ್ಮಡಗುತ ನಿಡುನಿಂತೆ, ಕೃತಕೃತ್ಯನೊಲೆನ್ನ ಕಾವಮುಂತೆ ಮುಗಿವುದೆಂತು ನಿನ್ನ ಕೆಲಸವಂತೆ?" ಎಂದು ವಿನಂತಿಮಾಡಿಕೊಳ್ಳುವ ವಿಧಾನ ವಿನೂತನವಾದುದು. ಇಟ್ಟಿಗೆಯ ಮೇಲೆ ನಿಂತಿರುವ ಸ್ವಾಮಿಯನ್ನು ನೋಡಿ "ಹಳಸಿರದೆ ಅಂದಿನಿಟ್ಟಿಗೆ ನಿನ್ನ? ನೋಡ ಜೀಯ ತಂದಿದೆ ಹೊಸತನ್ನ - ಮೆಟ್ಟಿ ನಿಲ್ಲು ನಿಷ್ಠುರ ಮನವೆನ್ನ" ಎಂಬ ಪ್ರಾರ್ಥನೆ ಎಷ್ಟು ಚಿತ್ತಾಕರ್ಷಕವಾಗಿದೆಯೋ ಅಷ್ಟೇ ಭಾವಪೂರ್ಣವಾಗಿದೆ. ಇತರರು ದೇವರಿಗೆ ಹಣ್ಣುಕಾಯಿಗಳನ್ನು ನೀಡಬಯಸಿದರೆ, ಪೈ ಅವರು ಪರಮಾತ್ಮನಿಗೆ ತಮ್ಮ ನಿಷ್ಠುರ ಮನವೆಂಬ ಇಟ್ಟಿಗೆಯನ್ನೇ ನೀಡಲು ಸಿದ್ಧರಾಗಿರುವುದು ಅತ್ಯಂತ ಆತ್ಮೀಯವಾಗದೆ? ಎಲ್ಲಿಯ ಕೃಷ್ಣ - ಎಲ್ಲಿಯ ಕ್ರಿಸ್ತ? ಆದರೆ ಗೋವಿಂದ ಪೈ ಅವರ ಆಧ್ಯಾತ್ಮಿಕ ಪ್ರಜ್ಞೆಗೆ ಆ ಇಬ್ಬರೂ ಒಂದೇ ಶಕ್ತಿಯ ಎರಡು ಅವತಾರಗಳೆಂಬ ಪೂಜ್ಯ ಭಾವನೆ! ಸಂಪ್ರದಾಯಬದ್ಧವಾದ ಧಾರ್ಮಿಕ ಪ್ರಪಂಚದಲ್ಲಿ ಇದಕ್ಕಿಂತಲೂ ಕ್ರಾಂತಿಕಾರವಾದ ತರ್ಕವನ್ನು ಹೂಡಲು ಸಾಧ್ಯವೇ? ಪೈ ಅವರು 'ಯೇಸುಕೃಷ್ಣ' ಎಂಬ ಕವಿತೆಯಲ್ಲಿ ಈ ಅಸದೃಶ ಸಾಮ್ಯವನ್ನು ಎತ್ತಿ ತೋರಿಸಿದ್ದಾರೆ. ಕೃಷ್ಣನು ಸೆರೆಮನೆಯಲ್ಲಿ ಹುಟ್ಟಿದರೆ, ಯೇಸುವು ದನದ ಕೊಟ್ಟಿಗೆಯಲ್ಲಿ ಹುಟ್ಟಿದವನು. ಒಬ್ಬ ಕೊಳಲೂದಿ ದನಗಾಹಿಯೆನಿಸಿದರೆ, ಇನ್ನೊಬ್ಬ ಬಡಗಿಯ ಕೆಲಸವನ್ನು ಅವಲಂಬಿಸಿದವನು. ಒಬ್ಬ ರಾಧೆಯ ಪ್ರೇಮಪಾಶದಲ್ಲಿ ಬಂಧಿತನಾದರೆ, ಇನ್ನೊಬ್ಬ ಮಗ್ದಲದ ಮರಿಯಳ ಅನುರಾಗಕ್ಕೆ ಪಾತ್ರನಾಗುತ್ತಾನೆ. ಒಬ್ಬ ಕೌರವನಿಂದ ಬಂಧಿತನಾದರೆ, ಇನ್ನೊಬ್ಬನು ತನ್ನವರ ಮೂಲಕವೇ ತಲೆಗೆ ಮುಳ್ಳಿನ ಕಿರೀಟವನ್ನು ತೊಡಬೇಕಾಗುತ್ತದೆ. ಈ ತೆರನಾದ ಸಾದೃಶ್ಯ ಪರಂಪರೆಯನ್ನು ಪಟ್ಟಿ ಮಾಡಿ, ಕಡೆಗೆ ಪೈ ಅವರು "ಯದುನಾಥನೆ ಯೂದನಾಥನಲ್ಲವೆ?" ಎಂದು ವಿಸ್ಮಯಚಕಿತರಾಗುವರು. ಕಾಲ, ದೇಶಗಳು ಬೇರೆ ಬೇರೆಯಾದರೂ ಅವರಿಗೆ ಆ ಈರ್ವರನ್ನು ಒಂದೇ ದೈವ ಶಕ್ತಿಯ ಎರಡು ಅವತಾರಗಳೆಂದು ಎಣಿಸಲು ಮನಸ್ಸು ಹಿಂತೆಗೆಯುವುದಿಲ್ಲ. ಈ ಬಗ್ಗೆ ಆಕ್ಷೇಪವೆತ್ತಿದವರಿಗೆ "ದಿನವೆರಡರ ಭಾಸ್ಕರನೆರಡಹನೆ?" ಎಂಬ ಪ್ರಶ್ನೆಯೇ ಅವರಿಗೆ ಸದುತ್ತರ. ಉಡುಪಿಯ ಶ್ರೀಕೃಷ್ಣನನ್ನು ಕಂಡಾಗಲೂ ಅವರ ವಿಚಾರಧಾರೆ ವಿಶಿಷ್ಟವಾಗಿಯೇ ವ್ಯಕ್ತವಾಗುತ್ತದೆ. ಹಿಂದೂಗಳಲ್ಲಿ ಐಕಮತ್ಯವನ್ನು ರೂಢಿಸಬೇಕೆಂದೂ, ದ್ವಾಪರಯುಗದಲ್ಲಿ ಮಹಾಭಾರತದಲ್ಲಿ ಸೂತ್ರಧಾರ ನಂತಿದ್ದು ಧರ್ಮವನ್ನು ಉದ್ಧರಿಸಿದಂತೆ ಇಂದಿನ ಭಾರತದ ಗೋಳನ್ನು ಪರಿಹರಿಸಬೇಕೆಂದೂ ಮೊರೆಯಿಡುವರು. "ಬಡಗೋಳ ಕೇಳೆಮ್ಮ ಕಡಗೋಲ

ಕನ್ನ! ಸಡಗರಿಸೋ ಬಿಡುಗಡಿಸೆ ಭಾರತದ ನಿನ್ನ!" ಎಂಬ ಯುಗಳ ಪಂಕ್ತಿಗಳಲ್ಲಿ ಮುಕ್ತಾಯವಾಗುವ ಈ ಚತುರ್ದಶಪದಿ ಪೈ ಅವರ ಹೃದಯವೈಶಾಲ್ಯಕ್ಕೆ ಸಾಕ್ಷಿಯಂತಿದೆ. 'ಶ್ರೀ ಗೊಮ್ಮಟಜಿನಸ್ತುತಿ'ಯಲ್ಲಿ ಅವರ ಪಾರಮಾರ್ಥಿಕ ದೃಷ್ಟಿ ಆ ವಿಗ್ರಹದಷ್ಟೆ ಎತ್ತರವೂ, ಬಿತ್ತರವೂ ಆದುದು. ಬೊಪ್ಪಣ ಪಂಡಿತ ವಿರಚಿತ 'ಗೊಮ್ಮಟ ಸ್ತುತಿ' ಹೇಗೆ ನಮಗೆ ಮಾನ್ಯವಾದುದೋ, ಗೋವಿಂದ ಪೈ ಅವರು ವೃತ್ತರೂಪದಲ್ಲಿ ಬರೆದಿರುವ ಈ ಸ್ತುತಿಯೂ ಅಷ್ಟೇ ಅತಿಶಯವಾದುದು. ಕಟ್ಟಕಡೆಯ ಪದ್ಯದಲ್ಲಿ ಅವರು ಗೊಮ್ಮಟನಲ್ಲಿ ಕೇಳಿಕೊಳ್ಳುವ ಕ್ರಮವನ್ನು ಕಂಡರೆ ಆ ಬಾಹುಬಲಿ ಸ್ವಾಮಿ ಸರ್ವಸಂರಕ್ಷಕನೆಂಬ ವಿಶಾಲವಾದ ಭಾವನೆ ಮೂಡುತ್ತದೆ.

> ಕಾಯ್ಯೆ ಭೇದಮನೊಲ್ಲದಲ್ಲರಲ್ಲಿ ಸತ್ಯೌದಾರ್ಯಮಂ ವೀರ್ಯಮಂ !
> ಕಾಯ್ಯೆ ಗಂಡಸರಲ್ಲಿ ಮಾತೃಭುವಿಯಾ ಸಂಪ್ರೀತಿಯಂ ನೀತಿಯಂ !
> ಕಾಯ್ಯೆ ಹೆಂಗಸರಲ್ಲನನ್ಯ ಪರ ಪಾತಿವ್ರತ್ಯಮಂ ಸತ್ಯಮಂ !
> ಕಾಯ್ಯೆ ಮಕ್ಕಳೊಳಾತ್ಮದೀಧಿತಿಯ ನೀ ! ಶ್ರೀ ಗೋಮಟಾಧೀಶ್ವರಾ !

ತಮ್ಮ ಪತ್ನಿಯನ್ನು ಕಳೆದುಕೊಂಡಿದ್ದ ಗೋವಿಂದ ಪೈ ಅವರು ಆಕೆಯ ಸ್ಮರಣಾರ್ಥವಾಗಿ ರಚಿಸಿದ ಈ ವೃತ್ತಗಳಲ್ಲಿ ಎಲ್ಲಿಯಾದರೂ ಒಂದೆಡೆಯಲ್ಲಿ ತಮ್ಮ ಸ್ವಾರ್ಥವನ್ನು ಪ್ರಕಟಿಸದಿರುವುದು ಸೋಜಿಗವೆನ್ನಿಸದೆ ಇರದು.

ಗೋವಿಂದ ಪೈ ಅವರ ಈ ದೈವಾರಾಧನೆ ಬರಬರುತ್ತ ಹೇಗೆ ವಿಶ್ವಾರಾಧನೆಯಾಗಿ ಪರಿಣಮಿಸಿದೆಯೆನ್ನುವುದನ್ನು ಅವರ 'ವಿಶ್ವಾಂಜಲಿ' ಎಂಬ ಕವನದಲ್ಲಿ ನಿಚ್ಚಳವಾಗಿ ಕಾಣಬಹುದು. "ಏನದ್ಭುತ ಮಹಿಮೆಯೋ ನಿನ್ನ, ಪ್ರಭೋ ಪೊಗಳಲಳವೆ ನನ್ನ" ಎಂದು ಈ ಪದ್ಯ ಸಾಂಪ್ರದಾಯಿಕವಾದ ಸರಣಿಯಲ್ಲಿ ಪ್ರಾರಂಭವಾದರೂ ಮುಂದುವರಿದಂತೆಲ್ಲ ಅವರ ಕಲ್ಪನೆ ಎಷ್ಟು ಭೂಮವಾಯಿತು ಅನ್ನುವುದು ಅನುಭವಕ್ಕೆ ಬರುತ್ತದೆ. ಮೇಲೆ ವ್ಯಾಪಿಸಿರುವ ನೀಲಿಯ ವ್ಯೋಮ, ಸೂರ್ಯರಶ್ಮಿ, ರಾತ್ರಿಯಲ್ಲಿ ರಾರಾಜಿಸುವ ನಕ್ಷತ್ರಖಚಿತವಾದ ನಭ, ಬೀಸಿ ಬರುವ ಗಾಳಿ, ಸರ್ವರನ್ನು ಸಹನೆಯಿಂದ ಸಾಕಿ ಸಲಹುವ ಭೂದೇವಿ, ಕೈಗನ್ನಡಿಯಂತೆ ತೋರಿ ಬರುವ ಕಡಲು, ದೇವರ ಯಶಸ್ತಂಭದಂತೆ ನಿಂತಿರುವ ಬೆಟ್ಟ ಗುಡ್ಡಗಳ ಪಂಕ್ತಿ, ಅತ್ತಲಿಂದಲೇ ಹರಿದು ಬರುವ ನದಿಯ ನೀರಿನ ನಿರ್ಘೋಷ ಮೊದಲಾದವು ಪರಮಾತ್ಮನ ಪ್ರತ್ಯಕ್ಷ ದರ್ಶನಕ್ಕೆ ಪ್ರಮಾಣವೆಂದು ಮುಕ್ತಕಂಠದಿಂದ ಪ್ರಶಂಸಿಸಿ, ತಾವು ಆ ದಿವ್ಯದೇವನ ಹಸುಗೂಸು ಮಾತ್ರವೆಂದು ಭಾವಿಸಿ "ಮಗು ತೊದಲುಲಿವೊಲು ತಾಯನು ಕರೆಯೆ ಉಲಿವೆನು, ಮಗುಳ್ದುಲಿವೆನು. ಶ್ರೀ ಹರಿಯೇ ನಿನ್ನ ನಾಮವನು" ಎಂದು ತಮ್ಮಲ್ಲಿನ ದೈನ್ಯವನ್ನು ವ್ಯಕ್ತಪಡಿಸುವರು. ಈ ಪಾರಮಾರ್ಥಿಕ ಪ್ರಜ್ಞೆಯಿಂದ ಜೀವನಕ್ಕೆ ದೊರೆಯುವ ಶಾಂತಿ, ಸಮಾಧಾನ, ತುಷ್ಟಿ, ಪುಷ್ಟಿಗಳು ಎಂತಹುವೆನ್ನುವುದನ್ನು ಪೈ ಅವರ ಹಲವಾರು ಕವಿತೆಗಳಲ್ಲಿ ನಾವು ಮನಗಾಣಬಹುದು.

ಕವಿಗಳ ಈ ಗಾಢವಾದ ದೈವಭಕ್ತಿಯೇ ಅವರ ಪತ್ನೀವಿಯೋಗದ ಬಾಷ್ಪಾಂಜಲಿಯನ್ನು, ಭಗವಂತನಿಗೆ ಶ್ರದ್ಧಾಂಜಲಿಯಾಗಿ ಸಮರ್ಪಿಸಲು ಸಮರ್ಥವಾಯಿತು. ಆಕೆಯ ನೆನಪಿಗಾಗಿ ಅವರು ಹಚ್ಚಿಟ್ಟಿರುವ 'ನಂದಾದೀಪ'ದ ಕವನಗಳು ಕನ್ನಡ ಕಾವ್ಯ ಪ್ರಪಂಚಕ್ಕೆ ಒಂದು ಅಮೂಲ್ಯವೂ, ಅಪೂರ್ವವೂ ಆದ ಕೊಡುಗೆ. ಕವನ ಸಂಕಲನದಲ್ಲಿರುವ ಏಕಸೂತ್ರತೆಯನ್ನು, ಎಂದರೆ ಕವಿಯ ವಿರಹೋದ್ವೇಗ ಮತ್ತು ಅಚಲ ದೈವಶ್ರದ್ಧೆಗಳ ಎಳೆಗಳನ್ನು ಗುರುತಿಸುವ ಕೆಲಸ ತುಸು ಪ್ರಯಾಸವೆನ್ನಿಸಿದರೂ, ಪ್ರಯತ್ನಿಸಿದ್ದೇ ಆದರೆ ಫಲಕಾರಿಯಾಗದೆ ಇರದು. ಈ ಕೆಲಸದಲ್ಲಿ ಯಶಸ್ವಿಯಾಗಿರುವ ವಿ.ಎಂ. ಇನಾಂದಾರರು ತಮ್ಮ ಇಂಗ್ಲಿಷ್ ಪುಸ್ತಕದಲ್ಲಿ ಈ ಸಂಕಲನದ ಮೌಲ್ಯಗಳನ್ನು ನಿರ್ಣಯಿಸುವಲ್ಲಿ "ಈ ಕವಿತೆಗಳನ್ನು ಆಗಿಂದಾಗ್ಗೆ ಬರೆದಿದ್ದರೂ ಅವಿಚ್ಛಿನ್ನವಾಗಿ ಮುಂದುವರಿಯುವ ಭಾವನೆಯಿಂದಲೂ, ವಾಸ್ತವಿಕವಾಗಿ ಆ ಚಿಂತನೆ ಏಕಾಗ್ರವಾದ ದೈವಿಕಧ್ಯೇಯ ಮತ್ತು ಆಕಾಂಕ್ಷೆಗಳ ಸುತ್ತಲೂ ಬಳಸಿ ಬೆಳಗುವುದರಿಂದಲೂ ಇವುಗಳು ಅನ್ಯೋನ್ಯವಾಗಿ ಹೊಂದಿಕೊಂಡಿವೆ" (Though the poems were written off and on, they are held together by continuing movement forward of thought and by the fact that it resolves around and reflects aspects of a simple pointed Godward aim and desire ! (Govinda Pai, P.26/27) ಎಂದು ನೀಡಿರುವ ಅಭಿಪ್ರಾಯ ಸಮರ್ಪಕವೆನ್ನಿಸುತ್ತದೆ.

ಬಿಡಿಬಿಡಿಯಾದ ಮತ್ತು ಕೆಲವು ಸಣ್ಣ ಕಥನ-ಕವನಗಳಲ್ಲಿ ಕಂಡುಬರುವ ಗೋವಿಂದ ಪೈ ಅವರ ಹೃದಯದ ಮಾರ್ದವ, ಮಾನವೀಯತೆಗಳು ಸ್ತುತ್ಯವಾದುವು. ತನ್ನ ದುರ್ದೈವದಿಂದ ಮೂರು ಮಕ್ಕಳನ್ನು ಒಟ್ಟಿಗೇ ಕಳೆದುಕೊಂಡ ಹತಭಾಗಿನಿಯೊಬ್ಬಳನ್ನು ಕುರಿತು ಚತುರ್ದಶಪದಿಯಲ್ಲಿ ಬರೆದ 'ಅಂದಿನಿಂದಾಕೆ ನಕ್ಕಿಲ್ಲ, ಅತ್ತಿಲ್ಲ' ಎಂಬ ಪಂಕ್ತಿಯಲ್ಲಿ ಪೂರ್ಣಪ್ರಮಾಣದ ಪಶ್ಚಾತ್ತಾಪ ಪ್ರತಿಸ್ಪಂದಿಸುತ್ತದೆ. ಇನ್ನು ಅವರು ಬೌದ್ಧ ಸಾಹಿತ್ಯದಿಂದ ಆರಿಸಿಕೊಂಡಿರುವ 'ಮಾತಂಗಿ' ಎಂಬ ಕಥನ ಕವನದಲ್ಲಿ ವ್ಯಕ್ತವಾಗುವ ಅಸ್ಪೃಶ್ಯ ಜನರ ಮೇಲಿನ ಅವರ ಅನುಕಂಪೆ, 'ಭಿಕ್ಷುವೂ ಪಕ್ಷಿಯೂ' ಎಂಬಲ್ಲಿ ಗೋಚರವಾಗುವ ಭಿಕ್ಷುವಿನ ಸಹನೆ, 'ವಾಸವದತ್ತೆ' ಎಂಬಲ್ಲಿ ಪರಿತ್ಯಕ್ತ ವೇಶ್ಯೆಯ ಬಗ್ಗೆ ಪ್ರಕಾಶಿತವಾಗುವ ಉಪಗುಪ್ತನ ಉದಾರದೃಷ್ಟಿ ಮೊದಲಾದುವು ಕವಿಯ ಮಾನವೀಯತೆಯನ್ನು ಪ್ರತಿಬಿಂಬಿಸುವ ಉತ್ತಮ ಉದಾಹರಣೆಗಳು; ಸುಪ್ರಸಿದ್ಧವಾದ ಹರಿಶ್ಚಂದ್ರನ ಕಥೆಗೆ ಒಂದು ಹೊಸ ತಿರುವನ್ನು ಕೊಟ್ಟು, ಅವನ ಸತ್ಯಸಂಧತೆಯನ್ನು ಮೆಚ್ಚಿದ ನಭೋವಾಣಿಯೊಂದು ಅವನನ್ನು ದೇವಲೋಕಕ್ಕೆ ಕರೆದುತರಲು ವಿಮಾನವನ್ನು ಕಳುಹಿಸಲು, ಅವನು 'ಶ್ವಪಚನನು ಜತೆಗೊಳದೆ ದಿವಕೇರ್ವೆನೆಂತು' ಎಂದು ನಿರಾಕರಿಸಿರುವುದು ನಿಬ್ಬೆರಗಾಗಿಸುವಂತಿದೆ. ದಾಸೀಪುತ್ರನಾದ ಕವಷನೆಂಬ ಋಷಿಯನ್ನು ಇತರ ಋಷಿಗಳು ತಮ್ಮ ಯಾಗ ಮಂಟಪದಿಂದ ದೂರದ ಮರಳುಗಾಡಿಗೆ ಅಟ್ಟಲು, ಅವನು ತನ್ನ ತಪೋಬಲದಿಂದ ಸರಸ್ವತೀ ನದಿಯನ್ನು ತನ್ನೆಡೆಗೇ ಬರಮಾಡಿಕೊಳ್ಳುವನು. ಆಗ ಗರ್ವಿಷ್ಠರಾಗಿದ್ದ ಇತರ ಋಷಿಗಳು ಅವನ ಕ್ಷಮಾಪಣೆಯನ್ನು ಕೋರುವರು. ಋಗ್ವೇದದಲ್ಲಿ ಹುದುಗಿದ್ದ ಈ ಅದುರನ್ನು ಒಪ್ಪವಿಟ್ಟು ಮೆರೆಸಿರುವ ಕೀರ್ತಿ ಪೈ ಅವರಿಗೆ ಸಲ್ಲುತ್ತದೆ. ಪ್ರಕೃತಿ ಸೌಂದರ್ಯವನ್ನೂ ಅವರು ಅಲಕ್ಷಿಸಿಲ್ಲ. 'ಮಿಂಚುಳ್ಳಿ'ಯೆಂಬ ಕವನದಲ್ಲಿ ಆ ಪುಟ್ಟ ಹಕ್ಕಿಯ ವಿಲಾಸವನ್ನು ವಿಧವಿಧವಾಗಿ ವರ್ಣಿಸಿ ಅದರೊಂದಿಗೆ ತನ್ಮಯರಾಗುತ್ತಾರೆ. 'ಪ್ರಭಾಸ'ವೆಂಬ ನಿಯೋಜಿತ ನೀಳ್ಗವಿತೆಗೆ ಅವರು ಮೊತ್ತಮೊದಲಿನಲ್ಲಿಯೇ ಕಡಲನ್ನು ಕುರಿತು ಮಾಡಿರುವ ವರ್ಣನೆ ಉಲ್ಲಾಸದಾಯಕವಾಗಿರುವುದಲ್ಲದೆ, ಉದ್ಬೋಧಕವೂ ಆಗಿದೆ. ಈಗ ಪ್ರಕಟಿತವಾಗಿರುವ ಗೋವಿಂದ ಪೈ ಅವರ ಬಿಡಿಗವಿತೆಗಳನ್ನು ಮಾತ್ರವೇ ಪರಿಶೀಲಿಸಿದರೂ ಅವರು ಸಮಕಾಲೀನ ಸಮಸ್ಯೆಗಳಾಗಿದ್ದ ಅಸ್ಪೃಶ್ಯತೆ, ಬಡತನ, ಸ್ವಾತಂತ್ರ್ಯ ಸಂಗ್ರಾಮ, ಧಾರ್ಮಿಕ ಸಂಕುಚಿತ ಭಾವನೆಗಳನ್ನು ಒಂದಲ್ಲ ಒಂದು ರೀತಿಯಲ್ಲಿ ಪ್ರಸ್ತಾಪಿಸಿರುತ್ತಾರೆ. 'ಶ್ರೀ' ಅವರು 'ಹೊಂಗನಸುಗಳು' ಎಂಬ ತಮ್ಮ ಕವನ ಸಂಕಲನದಲ್ಲಿ

ಸಮಕಾಲೀನ ಸಂಗತಿಗಳಿಗೂ ಹೇಗೆ ಹಳಗನ್ನಡವನ್ನು ಬಳಸಿರುವರೋ ಹಾಗೆಯೇ ಗೋವಿಂದ ಪೈ ಅವರು ತಮ್ಮದೇ ಆದ ಒಂದು ರೀತಿಯಲ್ಲಿ ಕಾವ್ಯಶೈಲಿ (Poetic diction)ಯನ್ನು ಅಳವಡಿಸಿಕೊಂಡಿದ್ದರು. ಆದ್ದರಿಂದ, ಅವರು ಸಮಕಾಲೀನ ಸಮಸ್ಯೆಗಳಿಗೆ ಗಮನವೀಯಲಿಲ್ಲವೆಂಬ ಆಕ್ಷೇಪಣೆಯಾಗಲಿ, ಅವರು ತಮ್ಮ ಕಾವ್ಯಶಿಲ್ಪ ನಿರ್ಮಾಣದತ್ತ ತೋರಿದ ಆಸಕ್ತಿ ಅವರ ಕವನಗಳ ತಿರುಳಿನ ಕಡೆ ನೀಡಲಿಲ್ಲವೆಂಬ ನಿಷ್ಠುರ ದೃಷ್ಟಿಯಾಗಲಿ ಸಾಧುವಲ್ಲವೆಂದು ನನ್ನ ಎಣಿಕೆ.

ಗೋವಿಂದ ಪೈ ಅವರು ವಿಭೂತಿ ಮಹತ್ವವನ್ನು ಕಂಡಲ್ಲಿ ಕೈಮುಗಿದು ತಲೆಬಾಗುವ ತಲೆಮಾರಿನವರು. ಈ ಕ್ಷೇತ್ರದಲ್ಲಿ ಅವರಿಗೆ ಕಾಲ ದೇಶಗಳ ಅಂತರವಾಗಲಿ; ಜಾತಿ, ಮತ, ಪಂಥಗಳ ತಾರತಮ್ಯವಾಗಲಿ ಇಲ್ಲ. ಅವರ ಈ ಪೂಜ್ಯ ಭಾವನೆ ಯೇಸುವಿನ ಕಡೆಯ ದಿನವನ್ನು ಕುರಿತ 'ಗೊಲ್ಗೊಥಾ' ಮತ್ತು ಬುದ್ಧನ ಕಡೆಯ ದಿನವನ್ನು ಕುರಿತ 'ವೈಶಾಖಿ' ಎಂಬ ನೀಳ್ಗವಿತೆಗಳಲ್ಲಿ ವಿಶ್ವರೂಪವನ್ನೇ ತಾಳಿರುವುದನ್ನು ಕಾಣಬಹುದು.

ಈ ಎರಡು ಕೃತಿಗಳನ್ನು ಕುರಿತಂತೆ ವಿದ್ವಾಂಸರು ಈಗಾಗಲೇ ಸಾಕಷ್ಟು ಸಮಾಲೋಚನೆಗಳನ್ನು ಮಾಡಿರುವುದರಿಂದ, ಈ ರಚನೆಗಳ ವಿವರಕ್ಕೆ ಹೋಗದೆ ಮೇಲ್ಮೆಯನ್ನು ಮಾತ್ರ ಇಲ್ಲಿ ಪರಿಚಯ ಮಾಡಿಕೊಡಲಾಗುವುದು. ಈ ಎರಡು ಕೃತಿಗಳನ್ನು ಕೆಲವು ವಿಮರ್ಶಕರು ಖಂಡಕಾವ್ಯಗಳೆಂದು ನಿರ್ದೇಶಿಸಿರುವರು. 'ಗೊಲ್ಗೊಥಾ'ದಲ್ಲಿ 377 ಪಂಕ್ತಿಗಳಿದ್ದರೆ 'ವೈಶಾಖಿ'ಯಲ್ಲಿ 732 ಪಂಕ್ತಿಗಳಿವೆ. ಈ ರಚನೆಗಳು ತಮ್ಮ ಮಟ್ಟಿಗೆ ದೀರ್ಘವಾಗಿದ್ದರೂ ಇಲ್ಲಿ ಕವಿಯ ದೃಷ್ಟಿಯಲ್ಲಿ ಏಕೈಕ ವ್ಯಕ್ತಿಯ ಅಂತ್ಯದಿನದ ಮೇಲೆ ಮಾತ್ರ ಕೇಂದ್ರೀಕೃತವಾಗಿರುವುದನ್ನು ನಾವು ಮರೆಯುವಂತಿಲ್ಲ. ಉಳಿದ ಪಾತ್ರಗಳು ಕೇವಲ ಪೋಷಕ ಮಾತ್ರವಲ್ಲದೆ ಅವು ಪ್ರತ್ಯೇಕವಾದ ಪರಿಗಣನೆಗೆ ಒಳಪಡುವುದಿಲ್ಲ. ಕ್ರಿಯೆ, ಕಾಲ ಮತ್ತು ಸ್ಥಳಗಲ್ಲಿಯೂ ಬಹುಮಟ್ಟಿಗೆ ಕವಿಗಳು ಐಕ್ಯವನ್ನೇ ಪರಿಪಾಲಿಸಿರುತ್ತಾರೆ. ಆದ್ದರಿಂದ ಇವುಗಳನ್ನು ನೀಳ್ಗವಿತೆಗಳೆಂದು ನಿರ್ದೇಶಿಸುವಲ್ಲಿ ಯಾವ ಬಾಧಕವೂ ಇಲ್ಲವೆಂದು ಹೇಳಬಹುದು.

ಈ ಎರಡು ಕೃತಿಗಳೂ ಧಾರ್ಮಿಕ ಪುರುಷರನ್ನು ಕುರಿತವಾದುದರಿಂದ, ವಿಷಯವನ್ನು ಪ್ರತಿಪಾದಿಸುವಲ್ಲಿ ಕವಿಯ ಹೊಣೆ ಬಹಳ ದೊಡ್ಡದಾದುದು. ಆ ಸಲುವಾಗಿಯೇ ಗೋವಿಂದ ಪೈ ಅವರು 'ಗೊಲ್ಗೊಥಾ'ದ ವಸ್ತುವನ್ನು ಸಂಗ್ರಹಿಸುವಲ್ಲಿ ಮೂಲ ಆಕರಗಳನ್ನು ಎಷ್ಟು ನಿಷ್ಠೆಯಿಂದ ವ್ಯಾಸಂಗ ಮಾಡಿರುವರೆನ್ನುವುದನ್ನೂ, 'ವೈಶಾಖಿ'ಗೆ ಸಂಬಂಧಿಸಿದ ಪಾಳಿಭಾಷೆಯ ಗ್ರಂಥಗಳನ್ನೇ ಅವಲಂಬಿಸಿರುವರೆಂಬುದನ್ನೂ ಅವರು ಕೊಟ್ಟಿರುವ ಟಿಪ್ಪಣಿಗಳಿಂದ ತಿಳಿಯಬಹುದು. ಅವರು ಕೈಕೊಂಡಿರುವ ಕೆಲಸವಾದರೋ ಆಯಾ ಧರ್ಮದ ಪ್ರಚಾರವಲ್ಲ. ಆಯಾ ಮಹಾಪುರುಷರ ಮರಣದ ಮಾಹಾತ್ಮ್ಯ ಮಾತ್ರ!

ಈ ಎರಡರಲ್ಲಿ ಗೋವಿಂದ ಪೈ ಅವರು ಮೊದಲು 'ಗೊಲ್ಗೊಥಾ'ವನ್ನು ಬರೆದರು. ಈ ದೀರ್ಘ ಕವನ ಮೊದಲು ಬಿಡಿಬಿಡಿಯಾಗಿಯೂ, ಅನಂತರ ಇಡಿಯಾಗಿಯೂ ಪ್ರಕಟವಾಯಿತು. ಈ ಕೃತಿ ಅಚ್ಚಾದ ಕೂಡಲೆ ಗೋವಿಂದ ಪೈ ಅವರ ಹೆಸರು ಮತ್ತು ಕಾವ್ಯಪ್ರತಿಭೆ ಬಹು ಜನರಿಗೆ ಪರಿಚಯ ವಾಯಿತು. ಈ ಕವನದುದ್ದಕ್ಕೂ ತೋರಿಬರುವ ಪೈ ಅವರ ಕಾವ್ಯಪ್ರತಿಭೆ ಅಸದೃಶವಾದದ್ದು. ಯೇಸುವಿನ ಮೇಲಿನ ಅವರ ಅಂತಃಕರಣವೆಲ್ಲ ತನಗೆ ತಾನೇ ರೂಪುವೆತ್ತು ಕಡೆದು ನಿಲ್ಲಿಸಿದ ಜೀವಂತ ಕೃತಿಯೆನ್ನಿಸಿ ಕನ್ನಡದಲ್ಲಿ ಅಮರವಾಗಿದೆ.

ಆ ಬಳಿಕ, ಕೆಲವು ವರ್ಷಗಳ ತರುವಾಯ ರಚಿಸಿದ 'ವೈಶಾಖಿ' ಎನ್ನುವುದೂ ಗೋವಿಂದ ಪೈ ಅವರ ಅಮೃತ ಕಥನ ಕಲೆಗೆ ಮತ್ತೊಂದು ಸಾಕ್ಷಿ. ವೈಶಾಖ ಶುಕ್ಲ ಪೂರ್ಣಿಮೆಯಂದು ರಾಜಕುಮಾರನಾಗಿ ಹುಟ್ಟಿದ ಸಿದ್ಧಾರ್ಥನು, ಸರ್ವವನ್ನೂ ತ್ಯಾಗ ಮಾಡಿ ಸಂನ್ಯಾಸವನ್ನು ಕೈಗೊಂಡು, ವೈಶಾಖ ಶುಕ್ಲ ಪೂರ್ಣಿಮೆಯಂದೇ ಜ್ಞಾನೋದಯವನ್ನು ಪಡೆದು ಬುದ್ಧನೆಂಬ ಹೆಸರಿನಿಂದ ಜಗತ್ಪ್ರಸಿದ್ಧನಾಗಿ, ವೈಶಾಖ ಶುಕ್ಲ ಪೂರ್ಣಿಮೆಯಂದೇ ಪರಿನಿರ್ವಾಣವನ್ನು ಪಡೆದುದರಿಂದ, ಕವಿಗಳು ಈ ಹೆಸರನ್ನು ಇಟ್ಟಿರುವುದು ಅರ್ಥಪೂರ್ಣವಾಗಿದೆ.

ಗೋವಿಂದ ಪೈ ಅವರು 'ವೈಶಾಖಿ'ಯನ್ನು ಬರೆದು ವಿದ್ವಾಂಸರಿಗೆ ಒಂದು ಹೊಸ ಸವಾಲನ್ನೇ ಒಡ್ಡಿದರು. ಈ ಎರಡರಲ್ಲಿ ಯಾವುದು ಹೆಚ್ಚು ಪರಿಣಾಮಕಾರಿಯೆಂಬ ಜಿಜ್ಞಾಸೆ ಅಂದಿನಿಂದ ಈವರೆಗೂ ನಡೆದಿದೆ. ಆ ಅಮಳ ಕವನಗಳ (Companion poems) ಗುರಿ ಮತ್ತು ನಿರೂಪಣೆಗಳಲ್ಲಿ ಸಮಾನಧರ್ಮವನ್ನು ನಾವು ಕಾಣಬಹುದಾದರೂ ಆಯಾ ಮಹಾವ್ಯಕ್ತಿಯ ಮರಣಕ್ಕನುಗುಣವಾಗಿ ಅದರದರ ಅನುಭವ ಬೇರೆಯೆನ್ನಿಸುವುದು ಸಹಜ. ಒಬ್ಬನ ಸಾವು ದುರಂತವೆನ್ನಿಸಿದರೆ, ಇನ್ನೊಬ್ಬನ ಸಾವು ಸುಖಾಂತವಾದುದು. ಒಬ್ಬನು ತನ್ನ ಹರೆಯದಲ್ಲಿಯೇ ತನ್ನವರ ಅಸಹನೆಯಿಂದ ಸಾವಿನ ನೋವಿಗೆ ಈಡಾದರೆ; ಇನ್ನೊಬ್ಬನು ತನ್ನ ವಾರ್ಧಕ್ಯದಲ್ಲಿ ಆತ್ಮೀಯರ ಅಭಿಮಾನ ಆದರಗಳ ಮಧ್ಯೆ ಸಾವಿನ ಸವಿಯನ್ನು ಅನುಭವಿಸುತ್ತಾನೆ. ಗೋವಿಂದ ಪೈ ಅವರು ಜೀವಂತವಾಗಿರುವಾಗಲೇ ಅವರ ಕೃತಿಗಳನ್ನು ಸಮೀಕ್ಷಿಸಿದ ಜಿ.ಪಿ. ರಾಜರತ್ನಂ ಅವರು "ಗೊಲ್ಗೊಥಾ' - ಕವಿಚಕ್ರವರ್ತಿ ರನ್ನನ 'ಗದಾಯುದ್ಧ' ಇದ್ದಂತೆ, 'ವೈಶಾಖಿ' - ಅದೇ ಕವಿಚಕ್ರವರ್ತಿಯ 'ಅಜಿತತೀರ್ಥ ಪುರಾಣ ತಿಲಕ' ಇದ್ದಹಾಗೆ. ಮೊದಲಿನ ಕೃತಿಯ ತುಂಬ 'ಕಾವ್ಯಾಂಗ' "ಎರಡನೆಯ ಕೃತಿಯ ತುಂಬ 'ಭವ್ಯಾಂಗ" - ಎಂದು ಹೇಳಿರುವುದು ಸಮ್ಮತವೆನ್ನಿಸುತ್ತದೆ (ಕವಿ ಗೋವಿಂದ ಪೈ, 1949; ಪು.58). ವಿ.ಎಂ. ಇನಾಂದಾರರು 'ಗೊಲ್ಗೊಥಾ' ಧವಲಗಿರಿಯಾದರೆ, 'ವೈಶಾಖಿ' ಕಾಂಚನಗಂಗೆ ಎಂದು ಪ್ರಶಂಸಿದ್ದಾರೆ (ಗೋವಿಂದ ಪೈಗಳ ಕಾವ್ಯ, 1965, ಪುಟ.31).

ಗೋವಿಂದ ಪೈ ಅವರ ಈ ಕಾವ್ಯ ಸಮೀಕ್ಷೆ ಕೇವಲ ಒಂದು ಅಂತರಿಕ್ಷ ವೀಕ್ಷಣೆ (ಏರಿಯಲ್ ವ್ಯೂ) ಯೆನ್ನಿಸಿದರೂ ಅವರ ಕಾವ್ಯ ನಿರ್ಮಿತಿಯ ಒಂದು ಸ್ಥೂಲ ಪರಿಚಯವನ್ನಾದರೂ ಮಾಡಿಕೊಡಬಹುದೆಂದು ಎಣಿಸಿರುತ್ತೇನೆ. ಅವರ ಕೃತಿಗಳಲ್ಲಿ ವ್ಯಕ್ತವಾಗುವ ಪ್ರಮುಖ ಪ್ರೇರಣೆಗಳು, ಅಪೂರ್ವ ಶಬ್ದಪ್ರಯೋಗಗಳು, ಛಂದೋವೈವಿಧ್ಯಗಳು, ಶೈಲಿಯ ವಜ್ರಬಂಧ, ಪ್ರಯೋಗಶೀಲತೆ, ಕಾವ್ಯಾನುಸಂಧಾನ, ಪ್ರಾಚೀನ ಕವಿಗಳ ಪ್ರಭಾವ ಮೊದಲಾದವುಗಳನ್ನು ಗಮನಿಸಿದರೆ, ಅವರನ್ನು ಆಧುನಿಕ ಕನ್ನಡ ಕಾವ್ಯದ ಪಂಡಿತ ಕವಿಗಳೆಂದು ಪರಿಗಣಿಸಬಹುದು.

**ಸಂಶೋಧನ ಸಾಮ್ರಾಜ್ಯ**

ಕವಿ ಮತ್ತು ಸಂಶೋಧಕನ ಪ್ರಜ್ಞೆಗಳೆರಡನ್ನೂ ಒಳಗೊಂಡಿರುವ ಗೋವಿಂದ ಪೈ ಅವರ ವಿಶಿಷ್ಟ ವ್ಯಕ್ತಿತ್ವವನ್ನು ಕಂಡು ಡಾ|| ಎ.ಎನ್. ಉಪಾಧ್ಯೆ ಅವರು ವಿಸ್ಮಿತರಾಗಿರುವುದುಂಟು. (One more point that

strikes me is - this may be by way of contrast that in M. Govinda Pai we have a research scholar who could compose poetry and also be an effective creative writer: M. Govinda Pai, A man of letters, P. 8). ಈ ಎರಡರ ವಿಚಿತ್ರ ಸಮನ್ವಯವನ್ನು ಕುರಿತು ಪೈ ಅವರು ಆತ್ಮಶೋಧನೆ ಮಾಡಿಕೊಂಡಿರುವುದೂ ಉಂಟು: "ಕವಿತಾ ಮಾರ್ಗ ಬೇರೆ, ಸಂಶೋಧನಾಮಾರ್ಗ ಬೇರೆ. ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ ಎಳೆಯಿತು. ವಿಶಿಷ್ಟವಾದ ದೈವಕೃಪೆ ಉಳ್ಳವರು ಅವೆರಡನ್ನು ಕಯ್ಕೊಂಡು ಹೊತ್ತನ್ನು ಹಿಡಿತದಿಂದ ಬಳಸಿದರೆ ಸವ್ಯಸಾಚಿಸಬಹುದಾದರೂ ನನ್ನ ಬಗೆಗಾದರೋ ಅವು ಮುಳುವಾಗಿವೆ..... ಆದರೆ ಎಷ್ಟೋ ವರ್ಷಗಳಿಂದ ಅವೆರಡನ್ನು ಸಾಧಿಸುತ್ತಾ ಹೋದ ಮೇಲೆ ಇನ್ನು ಹೆಡಮೆಟ್ಟಲಾಗುವುದಿಲ್ಲ. ಕಾಲವೂ ತಪ್ಪಿತು; ಕಾಲೂ ತಪ್ಪಿತು. ಇನ್ನು ಈಸಿದಷ್ಟು ಈಸುವುದು ಮತ್ತೆ ಗಂಗಾದೇವಿ ತೇಲಿಸಿಕೊಂಡು ಹೋದಲ್ಲಿ" (ಆತ್ಮಕಥನ, ಕನ್ನಡದ ಮೊರೆ, ಪು. 21) ಎನ್ನುವರು. ಅವರ ಸಂಶೋಧನ ಸಾಮ್ರಾಜ್ಯವನ್ನು ಸಮೀಕ್ಷಿಸಿದರೆ ಈ ಮಾತುಗಳು ಅವರ ಸೌಜನ್ಯದ ಸಂಕೇತವೇ ಹೊರತು ವಾಸ್ತವ ವೆನ್ನಿಸುವುದಿಲ್ಲ.

ಪಾಶ್ಚಾತ್ಯ ವಿದ್ವಾಂಸರಾದ ರೆವರೆಂಡ್ ಎಫ್. ಕಿಟಲ್ ಅವರು ಮತ್ತು ಬಿ.ಎಲ್. ರೈಸ್ ಅವರು ಕನ್ನಡ ಸಾಹಿತ್ಯದ ರೂಪುರೇಷಗಳನ್ನು ತೋರಿಸಿಕೊಟ್ಟಂದಿನಿಂದ ಕನ್ನಡದಲ್ಲಿ ಸಂಶೋಧನ ಯುಗ ಮೊದಲಾಯಿತೆನ್ನಬಹುದು. ಕವಿಗೂ ಆತನ ಕಾವ್ಯಕ್ಕೂ ಇರುವ ಪರಸ್ಪರ ಸಂಬಂಧವನ್ನು ವಿಶ್ಲೇಷಿಸುವಲ್ಲಿ, ಆಯಾ ಕವಿಗಳ ಕಾಲ ಮತ್ತು ಮತ-ದೇಶಗಳ ಪರಿಜ್ಞಾನದ ಪಾತ್ರವೇನು ಎನ್ನುವುದು ನಮ್ಮವರಿಗೆ ಮನವರಿಕೆಯಾಯಿತು. ಆ ಬಳಿಕ ಈ ಕಾರ್ಯಕ್ಷೇತ್ರದಲ್ಲಿ ಶ್ರಮಿಸಿದ ಅಗ್ರಪಂಕ್ತಿಯ ವಿದ್ವಾಂಸರಲ್ಲಿ ಪೈ ಅವರು ಒಬ್ಬರು. ಅವರ ಈ ಕಾರ್ಯಕ್ಷೇತ್ರದ ಹರಹು ಬಹಳ ದೊಡ್ಡದು. ಇಂಗ್ಲಿಷ್, ಕೊಂಕಣಿ ಮತ್ತು ಕನ್ನಡ ಭಾಷೆಗಳಲ್ಲಿ ಅವರು ಲೇಖನಗಳನ್ನು ಬರೆದಿರುತ್ತಾರೆ. ಕೇವಲ ಕನ್ನಡವೊಂದನ್ನೇ ತೆಗೆದುಕೊಂಡರೂ 1927ರಲ್ಲಿ ಮೊದಲಾದ ಅವರ ಈ ಕೆಲಸ 1967ರವರೆಗೆ ವ್ಯಾಪಿಸಿದೆ. ಈ ನಿಡಿದಾದ ನಲ್ವತ್ತು ವರ್ಷಗಳ ಅವಧಿಯಲ್ಲಿ ಅವರು ನನ್ನ ಎಣಿಕೆಯಂತೆ, ಹತ್ತಿರ ಹತ್ತಿರ ನೂರಿಪ್ಪತ್ತು ಲೇಖನಗಳನ್ನು ಬರೆದಿರುತ್ತಾರೆ. ಬಹುಭಾಷಾ ವಿಶಾರದರಾದ ಅವರು ಬೇರೆ ಬೇರೆ ಭಾಷೆಗಳಿಂದ ವಿಷಯಗಳ ರಾಶಿಯನ್ನೇ ತಂದು ಸುರಿದಿರುವುದಲ್ಲದೆ, ಹಲವಾರು ಸಮಸ್ಯೆಗಳನ್ನು ಜಿಜ್ಞಾಸೆ ಮಾಡಿರುತ್ತಾರೆ. ಅವರ ಈ ವಸ್ತುವೈವಿಧ್ಯವನ್ನು ಕನ್ನಡಕ್ಕೆ ಸೀಮಿತಗೊಳಿಸಿಕೊಂಡು ವಿಭಜಿಸಿದರೂ, ಕನ್ನಡ ನಾಡಿನಲ್ಲಿ ಪ್ರಚಲಿತವಾಗಿದ್ದ ವಿವಿಧ ಧರ್ಮಗಳು, ರಾಜವಂಶಗಳು, ಕನ್ನಡನುಡಿ ಮತ್ತು ಸಾಹಿತ್ಯಗಳು ಸಮಾವೇಶಗೊಳ್ಳುತ್ತವೆ. ಈ ಹಲವಾರು ಲೇಖನಗಳು ಬೇರೆ ಬೇರೆ ಪತ್ರಿಕೆಗಳು, ಸಂಭಾವನಾ ಸಂಪುಟಗಳು, ಸಂಸ್ಮರಣ ಸಂಚಿಕೆಗಳಲ್ಲಿ ಚೆದುರಿಹೋಗಿರುವುದರಂದ; ಇವುಗಳ ಮೌಲ್ಯ ನಿರ್ಣಯವನ್ನು ಈವರೆಗೆ ಮಾಡಲು ವಿದ್ವಾಂಸರಿಗೆ ಅವಕಾಶವಾಗಿಲ್ಲ. ಗೋವಿಂದ ಪೈಯವರ ಜನ್ಮಶತಮಾನೋತ್ಸವದ ಕಾಲದಲ್ಲಿಯೂ ಈ ಬಗ್ಗೆ ಪ್ರಕಟವಾಗಿರುವ ಪ್ರಬಂಧಗಳು ತೀರ ವಿರಳ; ಅಷ್ಟೇ ಅಲ್ಲದೆ, ಅವುಗಳು ಅಸಮಗ್ರವಾಗಿಯೋ ಅಸಮರ್ಪಕವಾಗಿಯೋ ಉಳಿದಿವೆ. ಬೇರೆ ಬೇರೆ ವಿಷಯಗಳಲ್ಲಿಯೂ ತಜ್ಞರಾದವರು ಮಾಡಬೇಕಾದ-ಈ ಕೆಲಸ ಸ್ಥೂಲವಾಗಿಯಾದರೂ ಆಗಿದ್ದರೆ ನನ್ನ ಈ ಸಮಾಲೋಕನಕ್ಕೆ ತುಂಬ ಅನುಕೂಲವಾಗುತ್ತಿತ್ತು.

ಗೋವಿಂದ ಪೈಯವರು ಬೌದ್ಧ ಧರ್ಮದ ಕುರುಹನ್ನು ಗುರುತಿಸುವಲ್ಲಿ ಮಂಗಳೂರಿನ ಕದಿರೆಯಲ್ಲಿರುವ ಮಂಜುನಾಥೇಶ್ವರ ಮತ್ತು ಧರ್ಮಸ್ಥಳದಲ್ಲಿರುವ ಮಂಜುನಾಥೇಶ್ವರ ಶಿವಲಿಂಗಗಳ ಬಗ್ಗೆ ಹೇಳಿರುವ ಸಂಗತಿಗಳು ಕುತೂಹಲಪ್ರದವಾದುವು. ಮಹಾವೀರ ಮತ್ತು ಬುದ್ಧರ ಪರಿನಿರ್ವಾಣ ಕಾಲವನ್ನು ಕುರಿತು ಬಹು ದೀರ್ಘವಾದ ಲೇಖನಗಳನ್ನು ಬರೆದಿರುವ ಪೈ ಅವರ ನಿರ್ಣಯವನ್ನು ಡಾ|| ಎ.ಎನ್. ಉಪಾಧ್ಯೆ ಸಮ್ಮತಿಸಿರುವುದು ಸ್ವಾಗತಾರ್ಹ. ಕರ್ನಾಟಕದಲ್ಲಿ ಪ್ರತಿಷ್ಠಿತವಾಗಿರುವ ಶ್ರವಣಬೆಳ್ಗೊಳದ ಗೊಮ್ಮಟೇಶ್ವರ, ಕಾರ್ಕಳದ ಗೊಮ್ಮಟೇಶ್ವರ ಮತ್ತು ವೇಣೂರಿನ ಗೊಮ್ಮಟೇಶ್ವರಗಳನ್ನು ಕುರಿತು ಅವರು ಬರೆದಿರುವ ಲೇಖನಗಳು ಅಮೂಲ್ಯವಾದುವು. ನೃಪತುಂಗನ ಮತವಿಚಾರ, ಮಧ್ವಾಚಾರ್ಯರ ಕಾಲ, ಬಸವೇಶ್ವರನ ಕಾಲ ನಿರ್ಣಯಗಳು ಲೇಖನಗಳಲ್ಲಿ ವ್ಯಕ್ತವಾಗುವ ಪೈ ಅವರ ಪರಿಶ್ರಮ ಪ್ರಶಂಸನೀಯವಾದುದು. ಗೋವಿಂದ ಪೈ ಅವರು ಧಾರ್ಮಿಕ ಲೇಖನಗಳಲ್ಲಿ ಕರ್ನಾಟಕಕ್ಕೆ ಮಾತ್ರ ತಮ್ಮ ಗುರಿಯನ್ನು ಸೀಮಿತಗೊಳಿಸದೆ ಸಮಗ್ರ ಭಾರತದ ಇತಿಹಾಸವನ್ನೇ ತಮ್ಮ ವ್ಯಾಸಂಗದ ಅವಧಿಯನ್ನಾಗಿ ಇಟ್ಟುಕೊಂಡಿದ್ದಾರೆ.

ಹಾಗೇ ಕನ್ನಡ ಭಾಷೆ ಮತ್ತು ಸಾಹಿತ್ಯಗಳನ್ನು ಕುರಿತಂತೆ ಪೈ ಅವರು ಮಾಡಿರುವ ಕೆಲಸವನ್ನು ಕಂಡರೆ ಆಶ್ಚರ್ಯವಾಗುತ್ತದೆ. ಕನ್ನಡದ ಪ್ರಾಚೀನತೆ, ಹಾಗೆ ಪಂಪನಿಂದ-ಪಾರ್ತಿಸುಬ್ಬನವರೆಗೆ ಲೇಖನಗಳನ್ನು ಬರೆದಿದ್ದಾರೆ.

ಒಟ್ಟಿನಲ್ಲಿ ಗೋವಿಂದ ಪೈ ಅವರ ಸಂಶೋಧನ ಪ್ರಬಂಧಗಳನ್ನು ಸಾವಧಾನವಾಗಿ ಪರಿಶೀಲಿಸಿದಲ್ಲಿ ಅವುಗಳ ಮೌಲ್ಯವನ್ನು ಕುರಿತಂತೆ ಹೀಗೆ ಹೇಳಬಹುದು: 1) ಅವರ ಪ್ರತಿಯೊಂದು ಸಂಶೋಧನ ಲೇಖನವೂ ಒಂದು ಅಪೂರ್ವವಾದ ಗಣಿ. ಅದರಲ್ಲಿ ದೊರೆಯುವ ಅದರುಗಳನ್ನು ಒಮ್ಮೆ ಒಪ್ಪವಿಟ್ಟು ನೋಡಬೇಕು. 2) ಅನ್ಯರ ಭಿನ್ನಾಭಿಪ್ರಾಯಗಳು ಹಾಗಿರಲಿ, ಅವರೇ ತಮ್ಮ ಅಭಿಪ್ರಾಯವನ್ನು ಪುನರ್ವಿಮರ್ಶಿಸಿ, ತಮ್ಮ ತಪ್ಪನ್ನು ತಿದ್ದಿಕೊಳ್ಳುವ ಪ್ರಾಮಾಣಿಕತೆ ಪ್ರಶಂಸನೀಯ. 3) ಇತರರು ಎತ್ತಿದ ಆಕ್ಷೇಪಣೆಗಳಿಗೆ ಅವರು ಪ್ರತ್ಯುತ್ತರವೀಯುವಲ್ಲಿ ತಮ್ಮ ತಾಳ್ಮೆಯನ್ನು ಕಳೆದುಕೊಂಡಿರುವುದು ತೀರ ವಿರಳ. 4) ಬಹುಭಾಷಾತಜ್ಞರಾದ ಅವರು ಸಾಮಾಗ್ರಿ ಸಂಗ್ರಹಿಸುವಲ್ಲಿ ಅತ್ಯಂತ ಸಮರ್ಥರು. 5) ಅವರ ಪ್ರತಿಪಾದನೆಯಲ್ಲಿ ಆಗಿಂದಾಗ್ಗೆ ತೋರಿ ಬರುವ ದೂರಾನ್ವಯ ಮತ್ತು ಬಳಸು ಬಳಸಾದ ಅವರ ನಿರ್ಣಯಗಳು ಮಸುಕಾಗುವವಲ್ಲದೆ, ಮಾನ್ಯವಾಗದೆ ಹೋಗುವುದೂ ಉಂಟು. ಕನ್ನಡದ ಮಟ್ಟಿಗೆ ಅವರ ಸಂಶೋಧನ ಸಾಮಾಗ್ರಿ ಪ್ರಪ್ರಥಮ ಪ್ರಯತ್ನಗಳೆನ್ನುವುದರಲ್ಲಿ ಸಂಶಯವಿಲ್ಲ. "ಅವರು ತಮ್ಮ ಪಾಂಡಿತ್ಯ ಬಲದಿಂದ ಏನನ್ನು ಸಾದಿಸಿರುವರೋ ಅದೇ ಅವರ ಪಾಲಿಗೆ ಸಂದ ಸನ್ಮಾನ" ಎಂದು ಡಾ. ಉಪಾಧ್ಯೆ ಅವರು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ.

**ಇತರ ಕೃತಿಗಳು**

ಗೋವಿಂದ ಪೈ ಅವರ ಇತರ ಕೃತಿಗಳಲ್ಲಿ, ಅವರು ರಚಿಸಿರುವ 'ಹೆಬ್ಬೆರಳು', 'ಚಿತ್ರಭಾನು ಅಥವಾ 1942' ಮತ್ತು 'ತಾಯಿ' ಎಂಬವು ನಾಟಕಗಳಾದರೆ, 'ಕನ್ನಡದ ಮೊರೆ' ಎಂಬ ಸಂಕಲನದಲ್ಲಿ ಅವರು ಆಗಿಂದಾಗ್ಗೆ ಬರೆದ ಕೆಲವು ವ್ಯಕ್ತಿಚಿತ್ರಗಳು, ಆತ್ಮಕಥನಗಳು ಮತ್ತು ಭಾಷಣಗಳು ಅಡಕವಾಗಿವೆ. 'ಗೋವಿಂದ ಪೈ ಅವರ ಕೆಲವು ಪತ್ರಗಳು' ಎಂಬ ಸಂಕಲನ

ಆ ವ್ಯಕ್ತಿಯ ಔನ್ನತ್ಯವನ್ನು ತಿಳಿಯ ಹೇಳುವ ಪ್ರತ್ಯಕ್ಷ ಸಾಕ್ಷಿಯಂತಿವೆ. ಅವರ ಅನುವಾದಿತ ಕೃತಿಗಳಲ್ಲಿ 'ಶ್ರೀ ಕೃಷ್ಣ ಚರಿತ್ರ'ವೆನ್ನುವುದು ಶ್ರೀ ನವೀನ ಚಂದ್ರಸೇನರ ಬಂಗಾಳಿ ಕಾವ್ಯದ ಗದ್ಯಾನುವಾದವಾದರೆ, 'ನೋ ನಾಟಕಗಳು' ಎಂಬವು ಜಪಾನಿ ಭಾಷೆಯ ಕೆಲವು ನಾಟಕಗಳ ಅನುವಾದಗಳು. ಅವರ ಕವನ ಸಂಕಲನದಲ್ಲಿ ಉಮರ್ ಖಯ್ಯಾಮಿನ 50 ರೂಬಾಯಿಗಳ ಭಾಷಾಂತರವಲ್ಲದೆ, ಇಂಗ್ಲಿಷ್, ಉರ್ದು, ಬಂಗಾಳಿ ಭಾಷೆಯ ಅನುವಾದಗಳೂ ಇವೆ. ಪೈ ಅವರು ಅನುವಾದಿಸಿದ್ದ ಠಾಕೂರರ 'ಗೀತಾಂಜಲಿ' ಪದ್ಯಗಳಲ್ಲಿ ಕೆಲವು 'ಕನ್ನಡ ಸಹಕಾರಿ' ಎಂಬ ಪಕ್ಷ ಪತ್ರಿಕೆಯಲ್ಲಿ ಬಿಡಿ ಬಿಡಿಯಾಗಿ ಅಚ್ಚಾಗಿವೆ.

ಪ್ರಕೃತದಲ್ಲಿ ಅವರ 'ಹೆಬ್ಬೆರಳು' ನಾಟಕದ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಹುದು, ಮಹಾಭಾರತದಲ್ಲಿ ಕಂಡು ಬರುವ ಏಕಲವ್ಯನಿಗೆ ಆದ ಅನ್ಯಾಯಕ್ಕಾಗಿ ಮರುಗಿ, ಅವನನ್ನು ಕುರಿತಂತೆ ಕನ್ನಡದಲ್ಲಿಯೇ ಕುವೆಂಪು ವಿರಚಿತ 'ಬೆರಳ್‌ಗೆ ಕೊರಳ್' ಎಂಬ ನಾಟಕವೊಂದರ ಜೊತೆಗೆ, ಗಮನಾರ್ಹವಾದ ಪೈ ಅವರ 'ಹೆಬ್ಬೆರಳು' ಎನ್ನುವುದೂ ಸೇರಿ ಎರಡು ಇವೆ. ಕೈಲಾಸಂ ಅವರ 'ಪರ್ಪಸ್' ಎನ್ನುವುದು ಇಂಗ್ಲಿಷ್‌ನಲ್ಲಿದ್ದು ಸಾಕಷ್ಟು ಸುಪ್ರಸಿದ್ಧವಾಗಿದೆ. ಒಂದೇ ವಸ್ತುವನ್ನು ಒಳಗೊಂಡಿದ್ದರೂ ಆಯಾ ಲೇಖಕರ ದೃಷ್ಟಿಗೆ ಅನುಗುಣವಾಗಿ ಇವು ಬೇರೆ ಬೇರೆ ಗುರಿಯನ್ನು ಸಾಧಿಸುತ್ತವೆ. ಕುವೆಂಪು ಅವರು ಈ ಪ್ರಸಂಗದಲ್ಲಿ ಗ್ರೀಕ್ ನಾಟಕಗಳಲ್ಲಿ ಕಂಡುಬರುವ ದೈವ ಸಂಕಲ್ಪವನ್ನು ನಿರೂಪಿಸಿದರೆ, ಪೈ ಅವರು ಆರ್ಯ ಮತ್ತು ಅನಾರ್ಯ ಘರ್ಷಣೆಯತ್ತ ಹೆಚ್ಚು ಗಮನಹರಿಸಿರುತ್ತಾರೆ. ಸರಳ ರಗಳೆಯ ನಾಟಕವಾದ 'ಹೆಬ್ಬೆರಳು' ಎಂಬ ಕೃತಿಯಲ್ಲಿ ಪೈ ಅವರು ಗ್ರೀಕ್ ನಾಟಕದ ರಚನೆಯಲ್ಲಿ ಕಂಡುಬರುವ 'ಗೋಂದಳ' (Chorus)ವನ್ನು ಬಳಸಿಕೊಂಡಿರುತ್ತಾರೆ. ನಾಲ್ಕು ನೋಟಗಳುಳ್ಳ ಈ ನಾಟಕ ಪೈ ಅವರ ಜೀವನ ದೃಷ್ಟಿಯನ್ನು ಯಶಸ್ವಿಯಾಗಿ ಪ್ರತಿಪಾದಿಸುವಂತಿದೆ. ಧ್ವನಿಪೂರ್ಣವಾದ ಶೀರ್ಷಿಕೆ, ಉನ್ನತವಾದ ಧ್ಯೇಯ, ಪಶ್ಚಾತ್ತಾಪದಿಂದ ಪುನೀತವಾಗುವ ಪಾತ್ರಗಳ ಸಂಯೋಜನೆ, ಅಪೂರ್ವವಾದ ಕಲಾಕೌಶಲ್ಯದಿಂದ 'ಹೆಬ್ಬೆರಳು' ನಾಟಕ ಮನಮೆಚ್ಚುವಂತಿದೆ.

ಸ್ವಾತಂತ್ರ್ಯ ಸಂಗ್ರಾಮದ ಸಂಗತಿಯನ್ನು ಒಳಗೊಂಡ 'ಚಿತ್ರಭಾನು ಅಥವಾ 1942' ಎಂಬ ಗದ್ಯನಾಟಕ ಮತ್ತು 'ತಾಯಿ' ಎನ್ನುವುದು ಕೇವಲ ಪ್ರಯತ್ನಗಳೆಂದು ಹೇಳಿ ಸಮಾಧಾನಪಟ್ಟುಕೊಳ್ಳಬಹುದು.

ಪ್ರಬಂಧಗಳಲ್ಲಿ ಪೈ ಅವರ 'ಆತ್ಮಕಥನ' ಅವರ ಸಾಹಿತ್ಯ ಕೃಷಿಯ ಮಥನದ ನವನೀತವೆನ್ನಿಸಿದರೆ 'ಬರಹಗಾರನ ಹಣೆಬರಹ' ಲೇಖಕನ ಕಷ್ಟನಿಷ್ಠುರಗಳ ಕೈಗನ್ನಡಿಯಂತಿದೆ. ವ್ಯಕ್ತಿಚಿತ್ರಗಳಲ್ಲಿ ಪಂಜೆ ಮಂಗೇಶರಾಯರನ್ನು ಕುರಿತ 'ಕನಸಾದ ನನಸು' ಎನ್ನುವುದು ಪೈ ಅವರಿಗೆ ತಮ್ಮ ಗುರುಗಳಾದ ಪಂಜೆಯವರಲ್ಲಿದ್ದ ಪೂಜ್ಯಭಾವದ ಪ್ರತೀಕದಂತಿದೆ. ತಮ್ಮ ಒಡನಾಡಿಗಳಾದ ಎಂ.ಎನ್. ಕಾಮತ್ ಮತ್ತು ಕಿಲ್ಲೆಯವರ ಚಿತ್ರಗಳನ್ನು ಬಿಡಿಸುವಲ್ಲಿ ಅವರ ಮೈತ್ರಿಯೇ ಮೂರ್ತಿವೆತ್ತಂತಿದೆ. ಎಂ.ಆರ್. ಶ್ರೀನಿವಾಸಮೂರ್ತಿಗಳಿಗೆ ಅವರು ಸಲ್ಲಿಸಿರುವ ನೆನಪಿನ ಕಾಣಿಕೆ ಹೃತ್ಪೂರ್ವಕವಾದ ಒಂದು ಹಣತೆಯ ದೀಪವೇ ಸರಿ. ದ.ರಾ. ಬೇಂದ್ರೆಯವರ ಐವತ್ತನೆಯ ಹುಟ್ಟಿದ ಹಬ್ಬಕ್ಕೆ ಅವರು ಕಳುಹಿಸಿಕೊಟ್ಟಿರುವ 'ಹರಕೆ'ಯಂತೂ 'ಕವಿಗೆ ಕವಿ ಮುನಿವಂ' ಎಂಬ ಹೇಳಿಕೆಯನ್ನೇ ಹುಸಿಯೆನ್ನಿಸುತ್ತದೆ. ಬೊಂಬಾಯಿ ಕನ್ನಡ ಸಾಹಿತ್ಯ ಸಮ್ಮೇಳನದ ಭಾಷಣವಾದ 'ಕನ್ನಡದ ಮೊರೆ' ಎನ್ನುವುದು ಆದ್ಯಂತವೂ ಅವರ ಕನ್ನಡದ ಮೇಲಿನ ಅಕ್ಕರೆಯ ತೆರೆಮಾಲೆಯೇ ಸರಿ; ಆಧುನಿಕ ಸಾಹಿತ್ಯದ ಕೆಲವು ಪ್ರಕಾರಗಳನ್ನು ಕುರಿತಂತೆ ಅವರು ಬರೆದಿರುವ ಬರಹಗಳು ಆಯಾ ಕ್ಷೇತ್ರದ ಮೊತ್ತಮೊದಲ ಹೆಜ್ಜೆಯ ಜಾಡನ್ನು ಗುರುತಿಸುವ ಪ್ರಯತ್ನಗಳಂತಿವೆ. ವಿದ್ವತ್ಪ್ರಬಂಧಗಳಲ್ಲಿ ಕಂಡುಬರುವ ಪೈ ಅವರ ಶೈಲಿ, ಈ ಮೇಲಿನ ಪ್ರಬಂಧಗಳಲ್ಲಿ ಎಷ್ಟು ಲಲಿತವಾಗಿದೆಯೋ ಅಷ್ಟೇ ಆತ್ಮೀಯವೂ ಆಗಿದೆ. ಅವರ ಪತ್ರಗಳ ಮೂಲಕ ವಿಶದವಾಗುವ ಪೈ ಅವರ ಸರಳತೆ, ಪ್ರಾಮಾಣಿಕತೆ, ವಿಚಾರಪ್ರಿಯತೆ ಅವರ ಜೀವನದ ನಿತ್ಯಸೂತ್ರಗಳಂತಿವೆ.

ಗೋವಿಂದ ಪೈ ಅವರ ಅನುವಾದಿತ ಕೃತಿಗಳ ಬಗ್ಗೆ ಹೆಚ್ಚು ಹೇಳಲಾಗದಿದ್ದರೂ, ಅವರು ಆಯಾ ಭಾಷೆಯ ಮೂಲವನ್ನೇ ಕಲಿತು ಹೇಗೆ ಅದರಲ್ಲಿ ಉದ್ಯುಕ್ತರಾದರೆನ್ನುವುದನ್ನು ನಾವು ನೆನಪಿನಲ್ಲಿಡಬೇಕು. ಅವರ ಈ ಅನುವಾದಗಳಲ್ಲಿ ಕೆಲವು ಭಾವಾನುವಾದವಾಗಿರಬಹುದು, ಕೆಲವು ರೂಪಾಂತರಗಳಾಗಿರಬಹುದು. ಈ ಬಗ್ಗೆ ವ್ಯಾಸಂಗಪೂರ್ಣವಾದ ವಿಶ್ಲೇಷಣೆ ನಡೆಸಿರುವ ಪ್ರಧಾನ್ ಗುರುದತ್ತ ಅವರು, "ಕೆಲವೆಡೆಗಳಲ್ಲಿ ಅವು ಸಾಕಷ್ಟು ತೃಪ್ತಿಕರವೆನ್ನಿಸದಿದ್ದರೂ ಕನ್ನಡ ಸಾಹಿತ್ಯಕ್ಕೆ ಈ ಹೊಸ ಆಯಾಮವನ್ನು ಜೋಡಿಸಿದ ಅವರ ಕೀರ್ತಿಗೆ ಕುಂದನ್ನೇನೂ ತಾರವು" (ಅನುವಾದಗಳು ಗೋವಿಂದ ಪೈ, ಪು.157) ಎಂದು ಹೇಳಿರುವುದನ್ನು ಒಪ್ಪಿ ಹೆಮ್ಮೆಪಟ್ಟುಕೊಳ್ಳಬಹುದಾಗಿದೆ.

ಗೋವಿಂದ ಪೈ ಅವರ ಜನ್ಮಶತಮಾನೋತ್ಸವದ ಸಂದರ್ಭದಲ್ಲಿ ಪ್ರಕಟವಾದ ಕೃತಿಗಳಲ್ಲಿ ಕೆಲವು ಪರಿಚಯಾತ್ಮಕವಾದುವು; ಕೆಲವು ವರ್ಣನಾತ್ಮಕವಾದುವು. ಅವರ ಕೃತಿಗಳ ಮೌಲ್ಯನಿರ್ಣಯ ಮಾಡುವಲ್ಲಿ ವಿ.ಎಂ. ಇನಾಂದಾರರ 'ಗೋವಿಂದ ಪೈ' ಎಂಬ ಪುಸ್ತಕ ತನ್ನ ಏಕಸೂತ್ರತೆ ಹಾಗೂ ವಸ್ತುನಿಷ್ಠ ದೃಷ್ಟಿಯಿಂದ ಉತ್ಕೃಷ್ಟವಾಗಿದೆ. ಲೇಖನ ಸಂಕಲನಗಳನ್ನು ಒಳಗೊಂಡ ಪುಸ್ತಕಗಳಲ್ಲಿ, ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯವರು ಪ್ರಕಟಿಸಿರುವ 'ಗೋವಿಂದ ಪೈ' ಎಂಬ ಸಂಪುಟ ಒಂದು ಕೈಪಿಡಿಯಂತಿದ್ದರೆ, ಕರ್ನಾಟಕ ಸಾಹಿತ್ಯ ಅಕಾಡೆಮಿಯವರು ಪ್ರಕಟಿಸಿರುವ 'ಗೋವಿಂದ ಪೈ ಶತಮಾನ ಸ್ಮರಣೆ' ಎಂಬ ಕೃತಿ ಒಂದು ಕೈಗಂಬವಾಗಿ ಉಳಿಯುತ್ತದೆ.

ಪ್ರತಿಭೆ ಮತ್ತು ಪಾಂಡಿತ್ಯಗಳ ಸಮನ್ವಯವನ್ನು ಸಾಧಿಸಿ ಪಾಲಿಸಿಕೊಂಡು 62 ವರ್ಷಗಳ ಕಾಲ ಕನ್ನಡ ಕಾರ್ಯವನ್ನು ಕೈಗೊಂಡು ಕೃತಕೃತ್ಯರಾದ ಗೋವಿಂದ ಪೈ ಅವರ ಈ ಸಾಹಿತ್ಯಾವಲೋಕನ "ಕರಿಯು ಕನ್ನಡಿಯೊಳಡಗಿಪ್ಪ ತೆರನಂತೆ" ತೋರಿ ಕೊಡುವ ಒಂದು ಪ್ರಯತ್ನವೇ ಹೊರತು, ಪೂರ್ಣ ಪ್ರಮಾಣದ ಚಿತ್ರವಲ್ಲ. ಗೋವಿಂದ ಪೈ ಅವರ ವ್ಯಕ್ತಿತ್ವ ಅವರ ಅಚ್ಚುಮೆಚ್ಚಿನ ಗೊಮ್ಮಟೇಶ್ವರನಂತೆಯೇ ಉನ್ನತವೂ, ಉದಾತ್ತವೂ ಆದುದು. "ಶ್ರಮವಿರದೆ ನಿಮ್ಮಂತರಂಗವನರಿಯಲಹುದೆ?" ಎಂಬ ಸ್ತುತಿಗೆ ಇವರು ಪ್ರತ್ಯಕ್ಷ ಸಾಕ್ಷಿಯೇ ಸರಿ.

**ಉಲ್ಲೇಖಿತ ಗ್ರಂಥಗಳ ಸೂಚಿ**


1. 'ಕವಿ ಗೋವಿಂದ ಪೈ' (1949), ಜಿ.ಪಿ. ರಾಜರತ್ನಂ, ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು-560 019.
2. 'ಪಂಪಮಹಾಕವಿ' (1951) (ಲೇಖನ ಸಂಗ್ರಹ), ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ.

3. 'A History of the Dvaita School of Vedanta and its Literature' (HDSVL) Vol.-I (1960), Dr. B.N.K. Sharma, Book Sellers' Publishing Co., Bombay-4..

4. 'ದೀವಿಗೆ' (ಲೇಖನ ಸಂಗ್ರಹ) ಭಾಗ ಒಂದು (1964), ಗೋವಿಂದ ಪೈ ಸ್ಮಾರಕ ನಿಧಿ, ಭಂಡಾರ್ಕರ್ಸ್ ಕಾಲೇಜ್, ಕುಂದಾಪುರ (ದಕ್ಷಿಣ ಕನ್ನಡ).

5. 'ಗೋವಿಂದ ಪೈಗಳ ಕಾವ್ಯ' (1968), ವಿ.ಎಂ. ಇನಾಂದಾರ್ ಎಂ.ಎ., ಮಹಾತ್ಮ ಗಾಂಧಿ ಮೆಮೋರಿಯಲ್ ಕಾಲೇಜ್, ಉಡುಪಿ (ದ.ಕ.).

6. 'ಉಪಾಯನ' (ಡಾ|| ಡಿ.ಎಲ್. ನರಸಿಂಹಾಚಾರ್ಯರಿಗೆ ಸಮರ್ಪಿಸಿದ ಸಂಭಾವನ ಗ್ರಂಥ (1967), ಮಾರಾಟಗಾರರು: ಶಾರದಾ ಮಂದಿರ, ಕೃಷ್ಣಮೂರ್ತಿಪುರಂ, ಮೈಸೂರು-570 004.

7. 'ಕನ್ನಡ ಮೊರೆ' (1975) (ಪ್ರಬಂಧ ಸಂಕಲನ) ಕಾವ್ಯಾಲಯ, ಜಯನಗರ, ಮೈಸೂರು - 570 014.

8. M. Govinda Pai, A Man of Letters (1976), Dr. A.N. Upadhye, The Gokhale Institute of Public Affairs, Bangalore-560 019.

9. 'Govinda Pai' (1963), V.M. Inamdar M.A., Institute of Kannada Studies, University of Mysore, Mysore-570 006.

10. 'ಗೋವಿಂದ ಪೈ' (1983) (ಲೇಖನ ಸಂಗ್ರಹ), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-6.

11. 'ಗೋವಿಂದ ಪೈ: ಶತಮಾನ ಸ್ಮರಣೆ' (1984) (ಲೇಖನ ಸಂಗ್ರಹ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-560 002.


❑

# ಬಿ.ಎಂ.ಶ್ರೀ.

ಎಂ.ವಿ. ಸೀತಾರಾಮಯ್ಯ

**ಕನ್ನಡ ಮಾತಿಗೆ ಕಣ್‌ತೆರೆದ ಕಾಲ**

ಕನ್ನಡ ನವೋದಯ ಕಾರ್ಯಪ್ರವರ್ತಕ, ಕನ್ನಡದ ಕಣ್ವ, ಕರ್ನಾಟಕದ ಆಚಾರ್ಯಪುರುಷ ಎಂದು ಖ್ಯಾತನಾಮರಾದ ಪ್ರೊಫೆಸರ್ ಬಿ.ಎಂ. ಶ್ರೀಕಂಠಯ್ಯನವರು ಹುಟ್ಟಿದ ಕಾಲ ಕನ್ನಡ ನಾಡಿಗೆ ಮಾತ್ರವಲ್ಲದೆ ಸಮಸ್ತ ಭರತಭೂಮಿಗೂ ಸಂಬಂಧಪಟ್ಟಂತೆ ಒಂದು ಪರ್ವಕಾಲವಾಗಿತ್ತು. ಬಿ.ಎಂ.ಶ್ರೀ.ಯವರು ಹುಟ್ಟಿದ ಮರುವರ್ಷವೇ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಜನ್ಮಧಾರಣೆ ಮಾಡಿದ್ದು ದೇಶದ ರಾಜಕೀಯದಲ್ಲಿ ಒಂದು ಗಮನಾರ್ಹವಾದ ಮೈಲಿಗಲ್ಲು. ಈ ಚರಿತ್ರಾರ್ಹ ಘಟನೆ ದೇಶದಲ್ಲೆಲ್ಲ ಒಂದು ರಾಷ್ಟ್ರಪ್ರಜ್ಞೆ, ಸ್ವಾತಂತ್ರ್ಯ ಕಲ್ಪನೆ, ಸ್ವದೇಶ, ಸ್ವಭಾಷಾ ಪ್ರೇಮ, ಸ್ವಧರ್ಮ ಪ್ರೇಮ ಇವು ಮೊಳೆಯಲು ಕಾರಣವಾಯಿತು. ಇದೇ ಕಾಲಕ್ಕೆ ರಾಜಾರಾಂ ಮೋಹನ ರಾಯ್, ಈಶ್ವರಚಂದ್ರ ವಿದ್ಯಾಸಾಗರ್, ದೇವೇಂದ್ರನಾಥ ಠಾಕೂರ ಮುಂತಾದವರ ಪ್ರಯತ್ನದಿಂದ ಮತೀಯ ಸಾಮಾಜಿಕ ಸುಧಾರಣ ದೃಷ್ಟಿ ಬಂಗಾಲದಲ್ಲಿ ಮೊಳೆತು ಅಂದಿನ ಬೊಂಬಾಯಿ, ಮದರಾಸು ಪ್ರಾಂತಗಳಲ್ಲಿ ಚಿಗುರಿ, ಇತರ ಪ್ರದೇಶಗಳಲ್ಲೂ ಕವಲೊಡೆಯುತ್ತಿತ್ತು. ಸರ್ ವಿಲಿಯಂ ಜೋನ್ಸ್, ಮ್ಯಾಕ್ಸ್‌ಮುಲರ್ ಮುಂತಾದ ಪಾಶ್ಚಾತ್ಯ ವಿದ್ವಾಂಸರು ಒಂದು ಕಡೆ ಸಂಸ್ಕೃತ ಭಾಷೆಯಲ್ಲಿ ಅಡಗಿದ್ದ ನಮ್ಮ ಸಾಂಸ್ಕೃತಿಕ ಸಾಹಿತ್ಯಕ ಸತ್ವಪೂರ್ಣ ಪರಂಪರೆಯನ್ನು ದೇಶೀಯರಿಗೂ ಹೊರಗಿನ ಜಗತ್ತಿಗೂ ಪರಿಚಯ ಮಾಡಿಕೊಟ್ಟರು, ಇನ್ನೊಂದು ಕಡೆ ಪಾಶ್ಚಾತ್ಯ ಕ್ರೈಸ್ತಮತ ಪ್ರಚಾರಕರು ಪ್ರಚಾರೋದ್ದೇಶಕ್ಕಾಗಿ ದೇಶಭಾಷೆಗಳಲ್ಲಿ ಉಪಲಬ್ಧವಿದ್ದ ಧಾರ್ಮಿಕ ಸಾಹಿತ್ಯವನ್ನು ಅಭ್ಯಾಸ ಮಾಡಿ ಭಾರತದ ಮತೀಯ ವಿಚಾರಗಳನ್ನು ಹೋಲಿಸಿ, ಕ್ರೈಸ್ತಮತದ ಹೆಚ್ಚಳವನ್ನು ಎತ್ತಿಕಾಣಿಸುವ ಉದ್ದೇಶದಿಂದ ಮುದ್ರಣ ಯಂತ್ರಗಳನ್ನು ಬಳಕೆಗೆ ತಂದರು; ದೇಶಭಾಷೆಯ ಸಾಹಿತ್ಯ ಕೃತಿಗಳನ್ನು ಬೈಬಲ್ ಭಾಷಾಂತರಗಳ ಜೊತೆಜೊತೆಗೇ ಅಚ್ಚುಹಾಕಿದರು. ಬೊಂಬಾಯಿ, ಮದರಾಸು ಪ್ರಾಂತಗಳಿಗೆ ಸೇರಿಹೋಗಿದ್ದ ಕರ್ನಾಟಕದಲ್ಲಿ ಕೆಲಸ ಮಾಡಿದ ಕ್ರೈಸ್ತ ಧರ್ಮ ಪ್ರಚಾರಕರಾದ ವರ್ತ್, ಕಿಟೆಲ್, ಪ್ಲೀಟ್, ಕಾಲ್ಡ್‌ವೆಲ್ ಮತ್ತು ಮೈಸೂರು ಸಂಸ್ಥಾನದಲ್ಲಿ ನೆಲಸಿದ ಬಿ. ಎಲ್. ರೈಸ್ ಮುಂತಾದವರು ಪ್ರಾಚೀನ ಕನ್ನಡ ಕಾವ್ಯ ಪರಂಪರೆಯನ್ನು ನಮ್ಮವರಿಗೆ ಪರಿಚಯ ಮಾಡಿಕೊಟ್ಟರು. ಇವರ ಕೆಲಸ ದೇಶೀಯ

ವಿದ್ವಾಂಸರ ಕಣ್ಣು ತೆರೆಯಿಸಿ ಆರ್. ನರಸಿಂಹಾಚಾರ್, ಎಸ್. ಜಿ. ನರಸಿಂಹಾಚಾರ್ ಮೊದಲಾದವರನ್ನು ಹಳಗನ್ನಡ ನಡುಗನ್ನಡ ಕಾವ್ಯ ಸಂಪತ್ತಿನ ಪ್ರಕಾಶನ ಪರಿಶೀಲನ ಕಾರ್ಯಗಳಿಗೆ ಪ್ರೇರಿಸುವ ಶಕ್ತಿಯಾಯಿತು. ಉತ್ತರ ಕರ್ನಾಟಕ ಮರಾಠಿ ಪ್ರಭಾವಕ್ಕೆ ಮೈಒಡ್ಡಿದ್ದ ಕಾಲದಲ್ಲಿ ಕನ್ನಡಕ್ಕೆ ಕಾವು ಕೊಟ್ಟು ಅದು ಉಸಿರಾಡುವಂತೆ ಮಾಡಲು ನೆರವಾದದ್ದು ಮುಂಬಯಿ ವಿಶ್ವವಿದ್ಯಾನಿಲಯ ಧಾರವಾಡದಲ್ಲಿ ಸ್ಥಾಪಿಸಿದ ಟ್ರೇನಿಂಗ್ ಕಾಲೇಜು, ರಸೆಲ್ಲನ ಮೇಲ್ವಿಚಾರಣೆಯಲ್ಲಿ ಕನ್ನಡ ಶಾಲೆಗಳ ಸ್ಥಾಪನೆ, ಕ್ರಮಿಕ ಪುಸ್ತಕಗಳ ಭಾಷಾಂತರ ಹಾಗೂ ಟ್ರೇನಿಂಗ್ ಕಾಲೇಜಿನಲ್ಲಿ ಅಧ್ಯಾಪನ – ಈ ರಂಗಗಳಲ್ಲಿ ಡೆಪ್ಯೂಟಿ ಚೆನ್ನಬಸಪ್ಪ, ವೆಂಕಟ ರಂಗೋ ಕಟ್ಟಿ, ಗಂಗಾಧರ ಮಡಿವಾಳೇಶ್ವರ ತುರಮರಿ ಇವರು ಆರಂಭದಲ್ಲಿ ಮಾಡಿದ ಕಾರ್ಯವು ಮುಂದಣ ಸಾಹಿತ್ಯಕೃಷಿಗೆ ಪೋಷಕವಾಯಿತು. ಮುಂಬಯಿ ಕರ್ನಾಟಕದಲ್ಲಿ ಕನ್ನಡ ಸಸಿಯ ನಿಜವಾದ ಪರಾಮರಿಕೆಯು ಟ್ರೇನಿಂಗ್ ಕಾಲೇಜಿನ ಆವರಣದಲ್ಲಿಯೆ ನಡೆಯಿತು. ಅಲ್ಲಿಯ ಅಧ್ಯಾಪಕರೂ ಶಿಕ್ಷಕ ವಿದ್ಯಾರ್ಥಿಗಳೂ ಕನ್ನಡದ ಪ್ರೇಮವನ್ನು ಮೈಗೂಡಿಸಿಕೊಂಡರು. ಮುಂದಿನ ಗ್ರಂಥ ರಚನೆಗೆ ಅಣಿಯಾದರು."[1] ಕನ್ನಡದ ಬಗೆಗಿದ್ದ ಇವರ ಕಳಕಳಿ ಹೆಪ್ಪುಗಟ್ಟಿ 1890 ಜುಲೈ 20 ರಂದು ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಸ್ಥಾಪನೆಯಾಯಿತು. ಅಖಿಲ ಕರ್ನಾಟಕ ದೃಷ್ಟಿಯಿಂದಲೇ ಸ್ಥಾಪಿತವಾದ ಸಂಸ್ಥೆ ಇದು. "ಪ್ರತಿವರ್ಷದ ವಾರ್ಷಿಕ ಸಭೆಗೆ ಮೈಸೂರಿನಿಂದ ಪ್ರತಿನಿಧಿಗಳನ್ನು ಆಮಂತ್ರಿಸುತ್ತಿತ್ತು. 11-3-1900ರ ಸಭೆಗೆ ಮೈಸೂರು ಸರಕಾರದವರು ಬಿ.ಎಂ.ಶ್ರೀ. ಅವರನ್ನು ಕಳಿಸಿದ್ದರು." ಬಿ.ಎಂ.ಶ್ರೀ. ಮೊದಲಾದವರು ಸಂಘದ ಉದ್ಧಾರಕರು.[2]

ಹತ್ತು ವರ್ಷಗಳ ತರುವಾಯ 1911ರಲ್ಲಿ ಈ ಸಂಘದ ಆಶ್ರಯದಲ್ಲಿ ಬಿ.ಎಂ.ಶ್ರೀ ತಮ್ಮ ಮೊತ್ತಮೊದಲನೆಯ, 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ಯುಗಪ್ರವರ್ತಕ ಭಾಷಣವನ್ನು ಮಾಡಿದರು. ಆಗ ಮೈಸೂರು ವಿಶ್ವವಿದ್ಯಾನಿಲಯವಾಗಲಿ, ಕನ್ನಡ ಸಾಹಿತ್ಯ ಪರಿಷತ್ತಾಗಲಿ ಇನ್ನೂ ಸ್ಥಾಪಿತವಾಗಿರಲಿಲ್ಲ. ಬಿ.ಎಂ.ಶ್ರೀ. ಮೈಸೂರು ಮಹಾರಾಜರವರ ಕಾಲೇಜಿನಲ್ಲಿ ಇಂಗ್ಲಿಷ್ ಭಾಷೆಯ ಅಧ್ಯಾಪಕರಾಗಿದ್ದರು. ಅಂದರೆ, 3-1-1884ರಲ್ಲಿ ಹುಟ್ಟಿದ ಬಿ.ಎಂ.ಶ್ರೀ. ಅವರಿಗೆ 27ರ ತಾರುಣ್ಯ, ಧಾರವಾಡದಲ್ಲಿ ಭಾಷಣ ಮಾಡಿದಾಗ. ಈ ಭಾಷಣದಲ್ಲಿ ಹೊರ ಹೊಮ್ಮಿರುವ ಆವೇಶಪೂರ್ಣವಾದರೂ ಸಂಯಮದಿಂದ ಕೂಡಿದ ಅವರ ಉತ್ಕಟವಾದ ಕನ್ನಡದೊಲವು, ಕನ್ನಡ ಸಾಹಿತ್ಯ ವಿಷಯಕ ವಿಚಾರಗಳಲ್ಲಿ ವಿಮರ್ಶನಯುಕ್ತವಾದ ಅಧ್ಯಯನದ ಫಲವಾಗಿ ಪಡೆದುಕೊಂಡ ತಿಳಿವಳಿಕೆ, ಕನ್ನಡದ ಪುರೋಬಿವೃದ್ಧಿಯ ಬಗೆಗೆ ಗಾಢವಾದ ಚಿಂತನೆ, ಪೂರ್ವಪರಂಪರೆಯಲ್ಲಿ ನಿಷ್ಠೆಯನ್ನು ಬಿಡದ ಪ್ರಗತಿಯ ಮುನ್ನೋಟ, ಇವನ್ನೆಲ್ಲ ಶ್ರೋತೃಗಳಿಗೆ ಮನದಟ್ಟಾಗುವಂತೆ ಸರಳವಾದ, ಶಕ್ತಿಯುತವಾದ ಶೈಲಿಯಲ್ಲಿ ಯುಕ್ತಿಯುಕ್ತವಾಗಿ ಮಂಡಿಸುವ ಜಾಣ್ಮೆ, ಇಂಗ್ಲಿಷ್ ಕನ್ನಡ ಸಂಸ್ಕೃತ ಸಾಹಿತ್ಯಗಳ ಬಗೆಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲಮಟ್ಟಿಗೆ ಗಳಿಸಿಕೊಂಡ ಸಾಹಿತ್ಯಜ್ಞಾನ ಇವನ್ನೆಲ್ಲಾ ಗಮನಿಸಿದರೆ, ನಾವು ಮೂಕವಿಸ್ಮಿತರಾಗುತ್ತೇವೆ.

ಧಾರವಾಡದ ಭಾಷಣ ಇನ್ನೊಂದು ದೃಷ್ಟಿಯಿಂದಲೂ ಗಮನಾರ್ಹ. 1911ರ ಸುಮಾರಿಗಾಗಲೇ ಹೊಸಕಾವ್ಯಮಾರ್ಗದಲ್ಲಿ ನಡೆಯಲು ಮೊದಲು ಮಾಡಿದ್ದರು ಎನ್ನುವುದಕ್ಕೆ ಅದರಲ್ಲಿ ಸುಳಿವು ಸಿಕ್ಕುತ್ತದೆ. ಅವರು ಹೇಳಿದರು: "ಹಿಂದಿನ ಸಂಸ್ಕೃತದ ಪ್ರಾಬಲ್ಯವೂ ಅದರ ಕಾವ್ಯಮಾರ್ಗವೂ ಕುಗ್ಗಿಹೋದುವು. ಮುಂದೆ ಇಂಗ್ಲಿಷಿನ ಪ್ರಾಬಲ್ಯವೂ ಅದರ ಕಾವ್ಯಮಾರ್ಗವೂ ಹೆಚ್ಚುವಂತೆ ತೋರುತ್ತದೆ. ಆದರೆ ಇದು ಇನ್ನೂ ದೃಢವಾಗಿ ಎಲ್ಲರ ಮನಸ್ಸಿಗೂ ಹತ್ತಿಲ್ಲ. ನಮಗೇನೊ ಇದು ಸ್ವತಸ್ಸಿದ್ಧವಾಗಿ ಕಾಣುತ್ತದೆ; ಇಂಗ್ಲಿಷ್ ಸಾಹಿತ್ಯವೇ ಜೀರ್ಣವಾದ ನಮ್ಮ ಕಾವ್ಯಮಾಲೆಯನ್ನು ಕೈಕೊಟ್ಟು ಎತ್ತಬೇಕು; ಇಂಗ್ಲಿಷ್ ಸಾಹಿತ್ಯವೇ ಸಂಸ್ಕೃತ ಸಾಹಿತ್ಯದಿಂದ ನಮ್ಮ ಕಾವ್ಯಮಾಲೆಗೆ ಇಳಿದಿರುವ ದೋಷಗಳನ್ನು ಪರಿಹಾರ ಮಾಡಬೇಕು".[3] ಪ್ರತಿಭಾರಾಹಿತ್ಯದಿಂದ, ಸಂಸ್ಕೃತ ಕಾವ್ಯದ ಅನುಸರಣೆ, ಅನುಕರಣೆ, ಕನ್ನಡ ಸಾಹಿತ್ಯವನ್ನು ಯಾವ ದುರ್ಗತಿಗೆ ತಂದಿತ್ತೆಂದರೆ, "ಈಚೀಚೆಗಂತೂ ಯಕ್ಷಗಾನ, ದೊಂಬಿದಾಸರ ಪದ, ಶುಕಸಪ್ತತಿ, ಹಲ್ಲಿಯ ಶಕುನ ಇವೇ ಜನಗಳಿಗೆ ಮಹಾಕಾವ್ಯಗಳು!"[4] ಎಂದು ಭಾವಿಸುವಂತಾಗಿತ್ತು.

**ಅಧ್ಯಾಪಕರಾಗಿ ನೇಮಕ**

ಹೀಗೆ, 30ರ ಪ್ರಾಯದ ವೇಳೆಗೆ ಬಿ.ಎಂ.ಶ್ರೀ. ಇಂಗ್ಲಿಷ್ ಅಧ್ಯಾಪಕರಾಗಿದ್ದುಕೊಂಡು ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಗಾಢ ಪಾಂಡಿತ್ಯ ಪಡೆದಿದ್ದರು ಎಂಬಲ್ಲಿ ಸಂಶಯವಿಲ್ಲ. ವಿದ್ಯಾರ್ಥಿಗಳಿಗೆ ಆಧುನಿಕ ವಿಮರ್ಶನ ವಿಧಾನದಲ್ಲಿ ಬೋಧನೆ ಮಾಡಲು ಕೇವಲ ಕನ್ನಡ ಸಂಸ್ಕೃತಗಳಲ್ಲಿ ಮಾತ್ರ ಪಂಡಿತರಾಗಿದ್ದ ಪಿ.ಆರ್. ಕರಿಬಸವಶಾಸ್ತ್ರಿ, ಬಿ.ಎಂ.ಶ್ರೀ. ಅವರ ಗುರುಗಳೇ ಆಗಿದ್ದ ಪಂಡಿತ ಕಾನಕಾನಹಳ್ಳಿ ವರದಾಚಾರ್ಯ,* ಇಂಥವರಿಂದ ಸಾಧ್ಯವಿಲ್ಲ ಎಂದು ತೀರ್ಮಾನಿಸಿ ಪಂಡಿತರ ಜೊತೆಜೊತೆಗೆ ಕನ್ನಡ ಪಾಠ ಹೇಳಲು ಮಹಾರಾಜ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ವಿಯರ್ (Mr. Weir) ಸಾಹೇಬರು ಬಿ.ಎಂ. ಶ್ರೀಕಂಠಯ್ಯನವರನ್ನು ಇಂಗ್ಲಿಷ್ ಮತ್ತು ಕನ್ನಡ ಅಧ್ಯಾಪಕ ಎಂದು ನೇಮಿಸಿಕೊಂಡರು (1909). ನೇಮಕವಾದ ಎರಡು ವರ್ಷಗಳಲ್ಲಿ ಇವರ ಕನ್ನಡದ ಒಲವು, ಒಲ್ಮೆ ಇವುಗಳ ಕೀರ್ತಿ ಧಾರವಾಡದವರೆಗೂ ಹಬ್ಬಿತು.

**'ಇಂಗ್ಲಿಷ್ ಗೀತಗಳು' ಪ್ರಕಟಣೆ**

19ನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯದಲ್ಲಿ ಕಾವ್ಯರಚನೆ ಜಡಗಟ್ಟಿ ಅರ್ಥಹೀನವಾಗಿದ್ದ ಲಕ್ಷಣಗಳಿಗೆ ಕಟ್ಟುಬಿದ್ದು ಶುಷ್ಕವಾಗಿತ್ತು. ಇಂಗ್ಲಿಷ್ ವಿದ್ಯೆಯ ಪರಿಣಾಮವಾಗಿ ಹೊಮ್ಮಿ ಹರಡುತ್ತಿದ್ದ ಆಧುನಿಕ ವಿಚಾರಗಳನ್ನುಳ್ಳ ಗದ್ಯಗ್ರಂಥಗಳ ರಚನೆಯ ಅಗತ್ಯ ಇದೆ ಎಂಬ ಅರಿವು ಕರ್ನಾಟಕದ ಎಲ್ಲ ಕಡೆಯ ವಿದ್ಯಾವಂತರಲ್ಲಿ ಮೂಡುತ್ತಿತ್ತು. ಬಂಗಾಳಿಯಲ್ಲಿ, ಮರಾಠಿಯಲ್ಲಿ ಹೊರಬಂದ ಕಾದಂಬರಿಗಳನ್ನು ಬಿ. ವೆಂಕಟಾಚಾರ್ಯರೂ ಗಳಗನಾಥರೂ ಅನುವಾದ ಮಾಡುತ್ತಿದ್ದರು. ಪಠ್ಯಪುಸ್ತಕಗಳಲ್ಲಿ ಕ್ರೈಸ್ತ ಮಿಷನರಿಗಳೂ, ಎಸ್.ಜಿ. ನರಸಿಂಹಾಚಾರ್ಯರಂತಹ ದೇಶೀಯ ವಿದ್ಯಾವಂತರೂ ಇಂಗ್ಲಿಷ್ ಪದ್ಯಗಳ ಮಾದರಿಯಲ್ಲಿ ಕನ್ನಡ ಷಟ್ಪದೀ ಛಂದೋರೂಪಗಳನ್ನು ಅಳವಡಿಸಿಕೊಂಡು ಹೊಸಪದ್ಯಗಳನ್ನು ಬರೆಯುತ್ತಿದ್ದರು. ಈ ಮಾದರಿಯಲ್ಲಿ ಹೆಚ್ಚಿನ ಸ್ವಾತಂತ್ರ್ಯ ವಹಿಸಿ ಪ್ರಯೋಗಾತ್ಮಕವಾಗಿ ಹಲಕೆಲವು ಪದ್ಯಗಳನ್ನು ದಕ್ಷಿಣಕನ್ನಡದ ಹಟ್ಟಿಯಂಗಡಿ ನಾರಾಯಣರಾಯರೂ, ಪಂಜೆ ಮಂಗೇಶರಾಯರೂ ಬರೆದಿದ್ದರು. ಉತ್ತರ ಕರ್ನಾಟಕದಲ್ಲಿ ಸಕ್ಕರಿ ಬಾಳಾಚಾರ್ಯರು (ಶಾಂತಕವಿ) ದಾಸರ ಪದಗಳ ಮಾದರಿಯಲ್ಲಿ ಕರ್ನಾಟಕ ಪ್ರೇಮವನ್ನು, ಕನ್ನಡದೊಲವನ್ನು, ಪ್ರಚಾರ ಮಾಡುವ ಪದ್ಯಗಳನ್ನು ರಚಿಸಿದ್ದರು. ಇವರ 'ರಕ್ಷಿಸು ಕರ್ನಾಟಕದೇವಿ' ಉ.ಕ.ದಲ್ಲಿ ಅತ್ಯಂತ ಜನಪ್ರಿಯವಾಗಿತ್ತು. ಈ ಪ್ರಯತ್ನಗಳೆಲ್ಲ ಹೊಸಗನ್ನಡದ ಅರುಣೋದಯದ

ಮುಂಗಿರಣಗಳಾಗಿದ್ದವು. ಕನ್ನಡ ಕಾವ್ಯದಿಗಂತದಲ್ಲಿ ಝಗಝಗಿಸುತ್ತ ಇರುಳ ಬಸಿರಿಂದ ಹೊರಬಂದು ಸುತ್ತೆಲ್ಲ ಹೊಸ ಬೆಳ್ಳಂಬೆಳಕನ್ನು ಹರಡುವ ಸೂರ್ಯನ ಹುಟ್ಟಿಗಾಗಿ ನಾಡು ಕಾದಿತ್ತು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘ ಮೊತ್ತಮೊದಲಿಗೆ 'ಶ್ರೀ' ಕಾವ್ಯನಾಮವನ್ನು ಧರಿಸಿದ ಬಿ.ಎಂ.ಶ್ರೀ. ಅವರ 'ಇಂಗ್ಲಿಷ್ ಗೀತಗಳು' ಸಂಕಲನವನ್ನು ಪ್ರಕಟಿಸಿದಾಗ (1926) 'ಮೂಡಿದನು ರವಿ ಮೂಡಿದನು' ಹೊಸಗನ್ನಡ ಕವಿರವಿ ಮೂಡಿದನು. ಕನ್ನಡ ಕಾವ್ಯಪ್ರಪಂಚದಲ್ಲಿ ನವೋದಯ ಯುಗ ಪ್ರಾರಂಭವಾಯಿತು. 'ಶ್ರೀ' ಅದರ ಹರಿಕಾರ, ಪ್ರವರ್ತಕ (ಎಂದು ಮುಂದೆ) ಪ್ರಸಿದ್ಧರಾದರು. 'ಇಂಗ್ಲಿಷ್ ಗೀತ'ಗಳನ್ನು ಪ್ರಕಟಿಸಿದಾಗ ಕರ್ನಾಟಕ ಸಂಘದ ಅಧ್ಯಕ್ಷರಾಗಿದ್ದವರು 'ಶ್ರೀ' ಅವರ ಗುರುಗಳಾಗಿದ್ದ ಬೆಳ್ಳಾವೆ ವೆಂಕಟನಾರಾಯಣಪ್ಪನವರು; ಉಪಾಧ್ಯಕ್ಷರಾಗಿದ್ದವರು ಶಿಷ್ಯ ಟಿ.ಎಸ್. ವೆಂಕಣಯ್ಯ, ಎಂಥ ಯೋಗ!

**ಪತ್ನೀವಿಯೋಗ : ಪ್ರತಿಜ್ಞಾವಚನ**

ಬಿ.ಎಂ. ಶ್ರೀಯವರು ತಮ್ಮ ನೆಚ್ಚಿನ ಮೆಚ್ಚಿನ ಮಡದಿ 'ಇಬ್ಬರು ಹೆಣ್ಣುಮಕ್ಕಳನ್ನು' ಒಬ್ಬ ಕಣ್‌ಕುರುಡು ಮಗನನ್ನೂ ತಮ್ಮ ಕೈಗೊಪ್ಪಿಸಿ ಹಿಂದಿರುಗಿ ಬಾರದ ಮನೆಗೆ ತೆರಳಿದ ಮೇಲೆ, ಧನುಷ್ಕೋಟಿಯ ಬಳಿ ಕಡಲ ತೀರದಲ್ಲಿ ನಿಂತು, ಮುಳುಗುವ ಸೂರ್ಯಸಾಕ್ಷಿಯಾಗಿ ಒಂದು ಕವಿತೆಯಲ್ಲಿ ತಮ್ಮ ಎದೆಯಳಲನ್ನು ತೋಡಿಕೊಂಡು, ಪತ್ನಿಯ ಸ್ಮೃತಿ ಮೂರ್ತಿಯ ಸಂಮುಖದಲ್ಲಿ ಒಂದು ಪ್ರತಿಜ್ಞಾವಚನವನ್ನು ಕೈಕೊಂಡರು. ಇದು 15 ಪದ್ಯಗಳ ಎದೆಯ ಹೊಯ್ದಾಟವನ್ನು ಬಿಂಬಿಸುವ ಇಂಗ್ಲಿಷ್ ಭಾವಗೀತೆ.[5] ಪದ್ಯದ ಹೆಸರೇ Dhanushkoti 1915 ಎಂದಿರುವುದರಿಂದ ಆ ಇಸವಿ ಪದ್ಯದ ರಚನಾಕಾಲವನ್ನು ಸೂಚಿಸುತ್ತದೆ. ಮನಸ್ಸಿನ ತುಮುಲವನ್ನು, ಅದಕ್ಕೆ ಕಾರಣವಾದ ಸಂದರ್ಭವನ್ನು, ಅಧಿಕೃತವಾದ ತಿಳಿವಳಿಕೆಯನ್ನು ಶ್ರೀಮತಿ ವಿಶಾಲಾಕ್ಷಿಯವರು ನಮಗೆ ಕೊಟ್ಟು ಬಿ.ಎಂ.ಶ್ರೀ. ಅವರ ಬದುಕಿನ ಒಂದು ಮಹತ್ವದ ತಿರುವನ್ನು ನಮಗೆ ಪರಿಚಯ ಮಾಡಿಕೊಟ್ಟಿರುತ್ತಾರೆ. ಅವರ ಕಾವ್ಯಮಯವಾದ ಮಾತುಗಳು ಆ ಸಂದರ್ಭವನ್ನು ಅತ್ಯಂತ ಮಾರ್ಮಿಕವಾಗಿ ಮೂಡಿಸಿರುವುದರಿಂದ ಅವುಗಳನ್ನೇ ಇಲ್ಲಿ ಎತ್ತಿ ಹೇಳಬಯಸುತ್ತೇನೆ:

"ಮರಳ ಹೆಜ್ಜೆ ತುಳಿದು ತುಳಿದು ಒಂದು ದೃಢಸ್ಮೃತಿಗೆ ಬಂದು ನಿಂತ ಸಂಯಮ ಸಂಗತಿ. ಎಳೇ ವಯಸ್ಸಿನ ಪತ್ನಿ ದೇವಮ್ಮ ನಾಲ್ಕನೇ ಮಗುವಿನ ಹುಟ್ಟು ಸಾವುಗಳ ಶಯ್ಯೆಯಲ್ಲಿ ಕಣ್ಮರೆಯಾದಾಗಿನ ದಟ್ಟದಾರುಣ ಸನ್ನಿವೇಶ. ಪುನಃ ಮದುವೆಗೆ ಒಪ್ಪಿಸುವ ತೀಕ್ಷ್ಣ ಹಂಬಲದಲ್ಲಿ, ಚತುರುಪಾಯಗಳ ಬಹುವಿಧ ನೂಲಿಗೆ ಮಗನನ್ನು ಸಿಕ್ಕಿಸಿ ಕಟ್ಟಿಹಾಕಬೇಕೆಂಬ ತಾಯಿ ಭಾಗೀರಥಮ್ಮನ ಭಗೀರಥ ಪ್ರಯತ್ನ ಸಂದರ್ಭ. ಕಾವು ಕದಡುಗಳನ್ನು ಕಡೆದು ತಣ್ಪದೆ ಸಂಪಾದಿಸಬೇಕೆಂಬ ಸಹಜಾಪೇಕ್ಷೆ ಒಂದೆಡೆ; ಜವಾಬ್ದಾರಿ ಹೊರಬೇಕಾದ ಕಡೆ ತಿಳಿಮತಿ ಆಲೋಚನೆಯ ಅವಶ್ಯಕತೆ ಮನಗಂಡ ಧೀಗಾಲಿ ಇನ್ನೊಂದೆಡೆ :- ಹೀಗಿತ್ತು ಗಂಡ-ಮಗ-ತಂದೆ-ಅಣ್ಣ ಅಂಕಗಳ ತುಗುಯ್ಯಾಲೆ ಮೇಲೆ ನಿಂತ 'ಶ್ರೀ' ವ್ಯಕ್ತಿಯ ಬಾನ್‌ಬಿಲ್ ಕ್ಷೇತ್ರರಚನ ಹೊಯ್ದಾಟದ ಸ್ಥಿತಿ". "ಪರಿಸ್ಥಿತಿಗೆ ಉತ್ತರವನರಸಿ, ಕೊಂಚ ಕಾಲ ಏಕಾಕಿಯಾಗಿರ ಬಯಸಿ ಮನೆಯಿಂದ ಹೊರಬಿದ್ದರು. ಕಡೆಗೊಂದು ದಿನ ಮೂವತ್ತು ಸಂವತ್ಸರ ಅದೇ ತಾನೇ ದಾಟಿದ ತರುಣ 'ಶ್ರೀ' ಧನುಷ್ಕೋಟಿ ಕಡಲಂಚಿನಿಂದಲೇ ತಿರುತಿರುಗಿ, ಮರುಗಿ, ಬೆಂದು, ಕುಟ್ಟಿ, ಕೊಚ್ಚಿ, ತೂರಿ, ಕೆಚ್ಚೆದೆಯ ಕೂರ್ಪೊಂದಕ್ಕೆ ಬೆಸೆದುಕೊಂಡು ಮುಗಿಲ ಗಾಂಭೀರ್ಯದಲ್ಲಿ ಮರಳಿದರು ಮನೆಗೆ."

ಇಂಥ 'ದಟ್ಟದಾರುಣ' ಸನ್ನಿವೇಶದಲ್ಲಿ ಬಿ.ಎಂ.ಶ್ರೀ. ಅವರ ಎದೆಯಾಳದಿಂದ ಹೊರಹೊಮ್ಮಿದ ಧೀರಸಂಕಲ್ಪದ ಕಾವ್ಯೋಕ್ತಿಯನ್ನು, - ಅವರ ಬದುಕಿನ ಸಂಧಿಕಾಲವೊಂದರಲ್ಲಿ ದೃಢನಿರ್ಧಾರವನ್ನು ಕೈಗೊಂಡು, ತಬ್ಬಲಿ ಮಕ್ಕಳನ್ನು ತಮ್ಮ ತೆಕ್ಕೆಗೆ ಒಳಕೊಂಡು, ಕನ್ನಡ ನುಡಿಯ ಕೈಂಕರ್ಯಕ್ಕೆ ತಮ್ಮನ್ನು ತಾವು ಅರ್ಪಿಸಿಕೊಂಡ ಮಹತ್ವದ ಕ್ಷಣದಲ್ಲಿ ಆಂಗ್ಲ ಭಾಷೆಯಲ್ಲಿ (ಹೇಳಿ ಕೇಳಿ ಆಂಗ್ಲ ಅಧ್ಯಾಪಕ ತಾನೇ ಈ ತರುಣ) ಹೊಮ್ಮಿದ ಕಾವ್ಯೋಕ್ತಿಯನ್ನು ಉದ್ಧರಿಸಿದರೆ ಅದು ಪ್ರಸ್ತುತ :

Dead dead dead
Dead is the life of life
O gone from my eyes that darling head
Gone, my love, my wife.

Twelve years since, I wedded thee,
O my darling, my joy, my wife !
And hardly six years you lived with me,
Six summers you sweetened my life.

* * *

And children came, and greif, and cares
Our only boy was blind.
We prayed to God for strength to bear,
And he gave us a meek mind.

You will make me a home with a wife again?
You will bring to the bruised heart balm ?
I am broken, you think, and wild with pain ?
-No, no, I can lose and be calm.

* * *

Here, in sight of this heaving Sea,
And that sinking, broad red sun,
I vow love's deep loyalty
To her, till my race is run.

And listen, my Angel, the rest of way-
Thy ministry now is mine :
No longer to pine for the flesh, but to pray
And follow the Guide divine.

The motherless ones you have left, sweet wife,
My fatherless brother you cherished,
For them will I crush the wine of my life,
For them shall my life be nourished.

Loving the Muses, teaching the boys,
And planning a song or two
In my own sweet tongue-O these are my joys,
These are my pledges to you.

I dare not hope to be sinless quite
Or never be shamed by wrong :
But will you not dwell in my heart, O light
Of my life and my love and my song.[6]

ಈ ಪದ್ಯಗಳಲ್ಲಿ ಬಿ.ಎಂ.ಶ್ರೀ. ತಮ್ಮ ಪತ್ನಿಯಲ್ಲಿ ಇಟ್ಟಿದ್ದ ಆಳವಾದ, ಪರಿಶುದ್ಧವಾದ ದಾಂಪತ್ಯಪ್ರೇಮದ ಒಂದು ಉತ್ಕೃಷ್ಟವಾದ ಮಾದರಿ ನಮ್ಮ ಕಣ್ಣಿಗೆ ಕಟ್ಟುತ್ತದೆ. My Angel, ನನ್ನ ದೇವತೆಯೆ ಎಂದು ಹೆಂಡತಿಯನ್ನು ಸಂಬೋಧಿಸುವುದರಲ್ಲಿ ಆಕೆ ಅವರ ಭಾಗದ ದೇವತೆ ಆಗಿದ್ದುದು

ಮಾತ್ರವಲ್ಲದೆ 'ದೇವಮ್ಮ' ಎಂಬ ಆಕೆಯ ಅಂಕಿತನಾಮ ಅವರ ಪಾಲಿಗೆ ಅನ್ವರ್ಥಕವೂ ಆಗಿತ್ತು ಎನ್ನುವುದನ್ನು ಸೂಚಿಸುತ್ತದೆ. ಬಿ.ಎಂ.ಶ್ರೀ. ದೇವಮ್ಮನನ್ನು ತಮ್ಮ 18-19ರ ಪ್ರಾಯದಲ್ಲಿ ಮದುವೆಯಾದರು (1903); ಕೇವಲ 6 ವರ್ಷ ಕಾಲ ಬಿ.ಎಂ.ಶ್ರೀ. ಅವರ ಒಡನಾಡಿಯಾಗಿದ್ದರು - ಎಂದರೆ, ತನ್ನ 9ನೆಯ ವರ್ಷದಲ್ಲಿ ತರುಣ ಶ್ರೀಕಂಠಯ್ಯನನ್ನು ಮದುವೆಯಾದ ಬಾಲೆ ಗುಂಡಮ್ಮ (ದೇವಮ್ಮ ಎಂಬ ಹೆಸರನ್ನು ಮದುವೆಯ ಕಾಲದಲ್ಲಿ ಗಂಡನೇ ಇಟ್ಟದ್ದು) ತನ್ನ 15ನೆಯ ಪ್ರಾಯದಲ್ಲಿ ದೊಡ್ಡವಳಾಗಿ ಗಂಡನ ಮನೆ ಸೇರಿದಳು. ಮೂರು ಮಕ್ಕಳನ್ನು ಹಡೆದಳು; ಎರಡು ಹೆಣ್ಣು, ಒಂದು ಗಂಡು. ನಾಲ್ಕನೆಯ ಸಲ ತಾಯಿಯಾದಾಗ ಮಗುವಿನೊಂದಿಗೆ ತಾನು ಕಣ್ಮರೆಯಾದಳು. ಮೊದಲನೆಯ ಹೆಣ್ಣು ಶಾರದೆ (ಜನನ 1909). ಅನಂತರ ಹುಟ್ಟಿದವರು, ತಮ್ಮಯ್ಯ ಮತ್ತು ತಂಗಮ್ಮ. ತಂದೆ ಮೈಲಾರಯ್ಯನವರು ಶ್ರೀರಂಗಪಟ್ಟಣಕ್ಕೆ ಕೆಲವು ಮೈಲಿ ದೂರದಲ್ಲಿದ್ದ ಹಿರೋಡೆಯಲ್ಲಿ (ಈಗಿನ ಪಾಂಡವಪುರ) ಒಂದು ಮನೆ ಮಾಡಿದ್ದರು. ದೇವಮ್ಮ ತನ್ನ ಎರಡು ಮಕ್ಕಳು ಶಾರದಮ್ಮ ಮತ್ತು ತಮ್ಮಯ್ಯನೊಡನೆ ಇದ್ದಾಗ ಅಲ್ಲಿ ಮಾವಿನ ಹಣ್ಣಿನ ಕಾಲವಾಗಿದ್ದು, ಮಕ್ಕಳಿಗೆ ತೀವ್ರವಾದ ಕಣ್ಣುಬೇನೆ ಅಂಟಿತು. ಶ್ರೀಕಂಠಯ್ಯನವರ ತಂಗಿಯ ಹೆಣ್ಣುಮಗುವಿಗೂ ಅದೇ ಬೇನೆ "ಮೂರು ಮಕ್ಕಳಿಗೂ ಯಾರದೋ ಸಲಹೆಯಂತೆ ನಾನೇ ಮೈಲತುತ್ತದ (Copper sulphate) ದ್ರಾವಣ ಹಾಕಿದೆ. ಇಬ್ಬರು ಮಕ್ಕಳಿಗೆ ವಾಸಿಯಾಯಿತು ; ತಮ್ಮಯ್ಯನ ಕಣ್ಣಿನ ದೃಷ್ಟಿ ಮಾತ್ರ ಹೋಯಿತು" ಎಂದು ಬಿ.ಎಂ.ಶ್ರೀ. ಯವರ ತಮ್ಮ ಶಿವರಾಮಯ್ಯನವರೇ ಈ ಸಂಗತಿಯನ್ನು ತಿಳಿಸಿದ್ದಾರೆ.[7] "Our only boy was blind" (ನಮ್ಮ ಒಂದೇ ಗಂಡು ಮಗು ಕುರುಡು). ಎಂಬ ಪದ್ಯದ ಮಾತಿಗೆ ಸಂದರ್ಭಸೂಚನೆಯಾಗಿ ಮೇಲಿನ ವಿವರಣೆಯನ್ನು ಕೊಟ್ಟಿದೆ.

ಹೆಂಡತಿ ಬಿಟ್ಟುಹೋದ ತಮ್ಮ ಮೂರು ಮಕ್ಕಳು, ತಂದೆಯಿಲ್ಲದ ಇಬ್ಬರು ತಮ್ಮಂದಿರು ಇವರಿಗಾಗಿ ತಾವು ಬದುಕುವುದಾಗಿ, ಇವರಿಗಾಗಿ ಜೀವನಮಧುವನ್ನು ಮೀಸಲಿಡುವುದಾಗಿ ಕರ್ತವ್ಯಾಭಿಮುಖವಾದ ದೃಢನಿರ್ಧಾರವನ್ನು ಕೈಗೊಂಡದ್ದು ; ಕಾವ್ಯೋಪಾಸನೆ, ಪಾಠ ಪ್ರವಚನ, ತಮ್ಮ ಸ್ವಂತದ ಸವಿನುಡಿಯಲ್ಲಿ ಒಂದೆರಡು ಗೀತಗಳನ್ನು ರಚಿಸುವುದು; ಪತ್ನೀಪ್ರೇಮವನ್ನು ಹೃದಯ ಸಂಪುಟದಲ್ಲಿ ಚಿರಸ್ಮಾರಕವಾಗಿ ಇಟ್ಟುಕೊಳ್ಳುವುದು - ಇವು ತಮ್ಮ ನಲ್ಮೆಯ ಮಡದಿಯ ಸ್ಮೃತಿಬಿಂಬ ಸಂಮುಖದಲ್ಲಿ ಕೈಗೊಂಡ ಪ್ರತಿಜ್ಞಾವಚನ. 'ಶ್ರೀ'ಯವರ ಮುಂದಿನ ಬದುಕೆಲ್ಲವೂ ಈ ವಚನದ ಪಾಲನೆಗೆ ಮುಡಿಪಾಯಿತು.

ಎರಡು ಮನಸ್ಸು

ಮೇಲೆ ಉದ್ಧರಿಸಿಕೊಟ್ಟಿರುವ ಕವನವಲ್ಲದೆ ಇನ್ನೊಂದು ಇಂಗ್ಲಿಷ್ ಕವನವೂ ಅವರದ್ದೇ ಎಂದು ಈಚೆಗೆ ತಿಳಿದುಬಂದಿದೆ. ಅಜ್ಞಾತ ಕವಿಯದು (anonymous) ಎಂದು ಹೇಳಿ 'ಇಂಗ್ಲಿಷ್ ಗೀತಗಳು ಸಂಕಲನದಲ್ಲಿ ಪ್ರಕಟವಾಗಿರುವ Two Moods ('ಎರಡು ಮನಸ್ಸು') ಎಂಬ ಕವನವೇ ಅದು. ಸ್ವಂತ ವೇದನೆಯ ನಿವೇದನೆ ಈ ಕವನ. "ಆತ್ಮಹತ್ಯೆಯ ಹೇಡಿ ಮನಸ್ಸನ್ನು, ಎರಡು ಮನಸ್ಸುಗಳ ಹೊಯ್ದಾಟವನ್ನು, ಅತ್ಯಂತ ಸಮರ್ಥವಾಗಿ ಚಿತ್ರಿಸಿದೆ. ಪ್ರಿಯಪತ್ನಿ ಮಡಿದ ಮೇಲೆ, ಕಣ್ಣುರುಡಾದ ಒಬ್ಬನೇ ಮಗ, ವಿರಹಿಯಾದ ತಾವು, ಇಬ್ಬರೇ ಉಳಿದುಕೊಂಡರು. ಈಗ ಅವರಿಗೆ ಮನೆ ಶೂನ್ಯ, ಮನ ಶೂನ್ಯ; ಯಾವುದೂ ಬೇಕಿಲ್ಲ; ಕೆಳೆಯರು ಎಷ್ಟೇ ಸಮಾಧಾನ ಹೇಳಿದರೂ ಕೆಳೆಯರಿಂದ ಶಾಂತಿ ಸಮಾಧಾನ ದೊರಕುವಂತಿಲ್ಲ. ಈ ಮನಸ್ ಸ್ಥಿತಿಯಲ್ಲಿ ತನ್ನ ಮಗನೂ, ತಾವೂ ಸಾಯಬಾರದು ಏಕೆ? ಎನ್ನಿಸುತ್ತದೆ. ಮಗ ಬದುಕಿದ್ದೂ ಸತ್ತಂತೆ, ತಾವು ಸತ್ತರೆ ಸಾಕು, ಇಬ್ಬರ ನಿಲುವೂ ಸಾವಿನಲ್ಲಿ. 'ಶ್ರೀ'ಯವರ ಎರಡನೆಯ ಮನಸ್ಸಿಗೆ, ಬದುಕಿನ ಹೋರಾಟದಲ್ಲಿ ಹೋರಾಡಿ ಗೆಲ್ಲಬೇಕು ಎಂಬ ಮನಸ್ಸಿಗೆ, ಗೆಲುವು. ಹೀಗೆ ಗೆದ್ದ 'ಶ್ರೀ' ಕನ್ನಡನಾಡು ನುಡಿಯ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡರು. ಬದುಕಿನ ಕಡಲನ್ನು ವಿಧಿ ಕಡೆದು ನೀಡಿದ ನಂಜನ್ನು ನುಂಗಿ ನಂಜುಂಡರಾದರು. ಬದುಕಿನ ನಂಜು ಕನ್ನಡದ ಸಿರಿ ಆಯಿತು. ಅನ್ವರ್ಥಕವಾಗಿಯೂ 'ಶ್ರೀಕಂಠ'ರಾದರು. 'ಹೇಳದಿರು ಹೋರಾಡಿ ಫಲವಿಲ್ಲವೆಂದು' ಎಂದು ನಂಬಿ ಗೆದ್ದ 'ಶ್ರೀ'ಯವರು ಕನ್ನಡ ಪರವಾದ ಹೋರಾಟಕ್ಕೆ ಅಣಿಯಾಗಿ ನಿಂತರು. 'ಇಂಗ್ಲಿಷ್ ಗೀತಗಳು' ಪುಸ್ತಕವನ್ನು ಪ್ರಕಟಿಸಿದ ಮೇಲೆ 'ಇಂಗ್ಲಿಷ್ ಗೀತಗಳು' ಕನ್ನಡಕ್ಕೆ, ಕನ್ನಡನಾಡಿಗೆ, 'ಶ್ರೀ'ಯನ್ನು ಕೊಟ್ಟಿತು."[8]

## 2

ಬಿ.ಎಂ.ಶ್ರೀಕಂಠಯ್ಯನವರು ತಮ್ಮ ಬದುಕಿನುದ್ದಕ್ಕೂ ಹೋರಾಡಿದರು; ತಮಗಾಗಿ ಅಲ್ಲ; ತಾವು ನಂಬಿದ್ದ ಗುರಿಯ ಸಾಧನೆಗೆ, ತತ್ವಕ್ಕೆ. ಪೂರ್ವವಯಸ್ಸಿನಲ್ಲಿಯೇ ಕನ್ನಡ ಸಾಹಿತ್ಯದ ತಿರುಳನ್ನು ಮೈಗೂಡಿಸಿಕೊಂಡಿದ್ದ ಬಿ.ಎಂ.ಶ್ರೀ 'ಸರ್ವಭಾಷಾಮಯೀ ಸರಸ್ವತೀ' ತತ್ವದಲ್ಲಿ ನಂಬಿಕೆ ಇಟ್ಟಿದ್ದವರು. ಅವರ ದೃಷ್ಟಿಯಲ್ಲಿ ಎಲ್ಲ ಭಾಷೆಗಳೂ ಸಮಾನ ಗೌರವಕ್ಕೆ ಅರ್ಹವಾದವು. 'ವಿಶ್ವಭಾರತಿ ಶರಣು, ಕಿರುತೀರ್ಥವಲ್ತು' ಎಂದು 'ಶುಕ್ರಗೀತೆ' (1941)ಯಲ್ಲಿ ತಮ್ಮ ವಿಶ್ವ ವಿಶಾಲಮನೋಧರ್ಮವನ್ನು ವ್ಯಕ್ತಪಡಿಸಿದ್ದಾರೆ. ವೈದಿಕ, ಜೈನ, ಬೌದ್ಧ, ಜೊರಾಷ್ಟ್ರಿಯನ್, ಕ್ರೈಸ್ತ - ಹೀಗೆ ಎಲ್ಲ ಧರ್ಮಗಳನ್ನೂ ವ್ಯಾಸಂಗ ಮಾಡಿ ತಮ್ಮದನ್ನಾಗಿಸಿಕೊಂಡಿದ್ದರು. ಅದೇ ರೀತಿ, ಭಾಷೆಗಳ ವಿಷಯದಲ್ಲಿಯೂ ಅವರ ನಿಲುವು ವಿಶಾಲವಾದದ್ದು. ಕನ್ನಡವಂತೂ ಸರಿಯೇ ಸರಿ; ತಾಯ್ನುಡಿ. ಮೆಟ್ರಿಕ್ಯುಲೇಷನ್, ಎಫ್.ಎ., ಬಿ.ಎ. ವಿದ್ಯಾರ್ಥಿಯಾಗಿ ಇತರ ವಿಜ್ಞಾನ ಮತ್ತು ಗಣಿತ ಶಾಸ್ತ್ರ ವಿಷಯಗಳೊಂದಿಗೆ ಅವರು ವ್ಯಾಸಂಗ ಮಾಡಿದ್ದು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳನ್ನು. ಎಫ್.ಎ.ವರೆಗೂ ಮೈಸೂರಿನಲ್ಲೂ ಬಿ.ಎ. ಪದವಿ ಪರೀಕ್ಷೆಗಾಗಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲೂ ಅವರ ವ್ಯಾಸಂಗ ನಡೆಯಿತು. ಎರಡೂ ಭಾಷೆಗಳ ಸಾಹಿತ್ಯದಲ್ಲಿ ಅವರಿಗೆ ಸಹಜವಾದ ಒಲವು. ಹಳಗನ್ನಡ ಸಾಹಿತ್ಯದ ಹಿರಿಮೆಯ ಬಗೆಗೆ ಪ್ರೀತಿ ಮತ್ತು ಹೆಮ್ಮೆಯನ್ನು ಬಿತ್ತಿದವರು ಪ್ರಕಾಂಡ ಪಂಡಿತರೂ, ಉಭಯಭಾಷಾ ವಿಶಾರದರೂ, ಕಾವ್ಯರಸಜ್ಞರೂ ಆಗದ್ದ ಗುರು ಕಾನಕಾನಹಳ್ಳಿ ವರದಾಚಾರ್ ಅವರು. ಇಂಗ್ಲಿಷ್ ಸಾಹಿತ್ಯದಲ್ಲಿ ಸ್ವೋಪಜ್ಞಚಿಂತನ ಮತ್ತು ವಿಮರ್ಶನ ಸಾಮರ್ಥ್ಯವನ್ನು ಕುದುರಿಸಿದವರು ಪ್ರಾಧ್ಯಾಪಕ ಜೆ.ಜಿ. ಟೆಯಟ್ ಅವರು.

ಬಿ.ಎಂ.ಶ್ರೀ. ಬಿ.ಎ., ಪದವಿಯನ್ನು ಪಡೆದ ಮೇಲೆ, ಮುಂದೆ ವೈದ್ಯ ವಿದ್ಯೆ ಕಲಿತು ತಮ್ಮ ಮಗ ಡಾಕ್ಟರ್ ಆಗಬೇಕು ಎಂಬುದು ತಂದೆ ಮೈಲಾರಯ್ಯನವರ ಹೆಬ್ಬಯಕೆ. ಆದರೆ, ಅತ್ತಕಡೆ ಒಲವಿಲ್ಲದೆ 23ರ ಹರೆಯದ ತರುಣ ತನ್ನ ಭವಿಷ್ಯದ ಕಡೆಗೆ ಗಮನಕೊಟ್ಟು, ಇಷ್ಟಕ್ಕೆ ವಿರುದ್ಧವಾಗಿ ತಂದೆಯ ವೃತ್ತಿಯನ್ನೇ ಅವಲಂಬಿಸುವ ಉದ್ದೇಶದಿಂದ ನ್ಯಾಯಶಾಸ್ತ್ರದ ಪದವಿ ಪಡೆಯಲು ಮದರಾಸಿಗೆ ತೆರಳಿದರು. ಅಲ್ಲಿ

ಬಿ.ಎಲ್., (1907) ಮತ್ತು ಇಂಗ್ಲಿಷ್ ಎಂ.ಎ. (1909) ಪದವಿಗಳನ್ನು ಪಡೆದರು. ವ್ಯಾಸಂಗ ಕಾಲದಲ್ಲಿ ಹಾಸ್ಟೆಲಿನಲ್ಲಿದ್ದಾಗ ಕೆಲವು ಕಾಲ ಟಿ.ಪಿ. ಕೈಲಾಸಂ, ಬಿ.ಎಂ.ಶ್ರೀ. ಅವರ ಹಾಸ್ಟೆಲ್ ಕೊಠಡಿಯ ಗೆಳೆಯರಾಗಿದ್ದರು. ಬಹುಶಃ ಅವರ ಪ್ರಭಾವದಿಂದಲೋ ಏನೊ, ಬಿ.ಎಂ.ಶ್ರೀ. ತಮಿಳನ್ನು ಕಲಿತರು. ಹಳಗನ್ನಡಕ್ಕೂ ತಮಿಳಿಗೂ ಇರುವ ಹತ್ತಿರದ ನಂಟನ್ನು ಮನಗಂಡರು. ಅನಂತರ, ಹಲವು ವರ್ಷ ತಮಿಳು ಸಾಹಿತ್ಯವನ್ನು ಆಳವಾಗಿ ವ್ಯಾಸಂಗ ಮಾಡಿ ತಮಿಳಿನಲ್ಲಿ ಸ್ವತಂತ್ರವಾಗಿ ಪದ್ಯ ರಚನೆ ಮಾಡುವ ಮಟ್ಟಿಗೆ ಆ ಭಾಷೆಯಲ್ಲಿ ಪ್ರಭುತ್ವ ಪಡೆದರು. ಕನ್ನಡ ಸಂಸ್ಕೃತ ಜನ್ಯವಲ್ಲ, ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿದ್ದು ಎಂಬ ಸತ್ಯಸಂಗತಿ ಅವರಿಗೆ ಸ್ಪಷ್ಟವಾಯಿತು. ಮಾತ್ರವಲ್ಲ; ಕಾಲ ಕ್ರಮದಲ್ಲಿ ತಮ್ಮ ಹೆಚ್ಚಿನ ತೌಲನಿಕ ವ್ಯಾಸಂಗದ ಫಲವಾಗಿ ಕನ್ನಡ ತಮಿಳಿಗಿಂತ ಪ್ರಾಚೀನ ಎನ್ನಬಹುದಾದ ಶಬ್ದರೂಪಗಳನ್ನು ಉಳಿಸಿಕೊಂಡಿದೆ ಎಂಬುದನ್ನು ಕಂಡುಕೊಂಡರು. ಕನ್ನಡದ ಬಗ್ಗೆ ಅವರಲ್ಲಿ ಅತಿಶಯವಾದ ಸಕಾರಣವಾದ ಅಭಿಮಾನ, ಹೆಮ್ಮೆ ಬೆಳೆಯಲು ಈ ಅರಿವು ಪ್ರೇರಕವಾಯಿತು.

ಕನ್ನಡ ಏಳಿಗೆಯನ್ನು ಕುರಿತು ಬಿ.ಎಂ.ಶ್ರೀ. ಚಿಂತಿಸತೊಡಗಿದ್ದು ಮದರಾಸಿನಲ್ಲೆ. ಕಲಬುರ್ಗಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ (1928) ಅವರು ಮಾಡಿದ ಅಧ್ಯಕ್ಷ ಭಾಷಣದಲ್ಲಿ ಪ್ರಾರಂಭದಲ್ಲಿಯೇ ಈ ಸಂಗತಿಯನ್ನು ಸ್ಮರಿಸಿಕೊಂಡಿದ್ದಾರೆ :-

> "ದೇಶಾಭಿಮಾನಿಗಳೂ, ಭಾಷಾಭಿಮಾನಿಗಳೂ ತುಂಬಿರುವ ಈ ಮಹಾ ಸಭೆಯಲ್ಲಿ ಅಗ್ರಾಸನಕ್ಕೆ ಅರ್ಹನಲ್ಲದ ನನಗೆ ತಾವು ಕೊಟ್ಟಿರತಕ್ಕ ಮರ್ಯಾದೆಗೆ ನಾನು ತಲೆಯನ್ನು ತಗ್ಗಿಸಬೇಕಾಗಿದೆ. ತಮ್ಮಲ್ಲಿ ಹಲವರು ದೇಶದ ಏಳಿಗೆಗಾಗಿಯೂ, ಭಾಷೆಯ ಅಭಿವೃದ್ಧಿಗಾಗಿಯೂ ಬಹಳವಾಗಿ ಕೆಲಸ ಮಾಡಿರುತ್ತೀರಿ; ನಾನು ಮಾಡಿರುವುದು ಅತ್ಯಲ್ಪವಾಗಿರುತ್ತದೆ. ಈಗಲೂ ನನಗೆ ಜ್ಞಾಪಕವಿದೆ - ಮದರಾಸಿನಲ್ಲಿ ವಿದ್ಯಾರ್ಥಿಗಳಾಗಿದ್ದಾಗ, ನನ್ನ ಸ್ನೇಹಿತರೂ ನಾನೂ ಸಾಯಂಕಾಲ ಸಮುದ್ರ ತೀರದಲ್ಲಿ ಮರಳಿನ ಮೇಲೆ ಕುಳಿತು, ಸಮಾಜದ ಮತ್ತು ಸಾಹಿತ್ಯದ ವಿಷಯಗಳನ್ನು ಚರ್ಚಿಸುತ್ತ, ಹೀಗೆ ಮಾಡಬೇಕು, ಹಾಗೆ ಮಾಡಬೇಕು ಕನ್ನಡ ನಾಡಿಗೆ, ಕನ್ನಡ ನುಡಿಗೆ, ನಮ್ಮ ಬಾಳಿಕೆಯನ್ನೇ ಕಾಣಿಕೆಯಾಗಿ ಒಪ್ಪಿಸಿಬಿಡಬೇಕು ಎಂದು ಪೌರುಷವನ್ನು ಕೊಚ್ಚಿಕೊಳ್ಳುತ್ತಿದ್ದದ್ದು. ಕನ್ನಡ ಕಾವ್ಯಗಳನ್ನೆಲ್ಲಾ ಓದಬೇಕು, ಜನರಲ್ಲಿ ಬಳಕೆಗೆ ತರಬೇಕು, ಉಪಾಧ್ಯಾಯನಾಗಿ ವಿದ್ಯಾರ್ಥಿಗಳಲ್ಲಿ ಕನ್ನಡದ ಪ್ರೇಮವನ್ನು ಬಿತ್ತಬೇಕು, ಜನ ಸಾಮಾನ್ಯಕ್ಕೆ ತಿಳಿವಳಿಕೆಯೂ, ಹೊಸ ನಡವಳಿಕೆಯೂ ಹುಟ್ಟುವಂತೆ ಕಾಲಕ್ಕೆ ತಕ್ಕ ಪುಸ್ತಕಗಳನ್ನು ಬರೆಯಬೇಕು. ಷೇಕ್ಸ್‌ಪಿಯರಿನ ನಾಟಕಗಳನ್ನೂ, ಗ್ರೀಕರ ರುದ್ರ ನಾಟಕಗಳನ್ನೂ, ಪ್ಲೇಟೋವಿನ ಸಂವಾದಗಳನ್ನೂ, ಕಾರ್ಲೈಲಿನ ಧೀರೋ ಪದೇಶಗಳನ್ನೂ ಕನ್ನಡಕ್ಕೆ ತರಬೇಕು ಎಂಬಿವೇ ಮೊದಲಾದ ಸವಿಗನಸುಗಳನ್ನು ಕಂಡ ಆ ಯುವಕನ ಆಸೆ ಎಷ್ಟು! ಉದ್ಯೋಗದ ನಿರ್ಬಂಧಗಳಿಗೂ, ಸಂಸಾರದ ಮನಃಕ್ಲೇಶಗಳಿಗೂ, ಪ್ರಕೃತಿಧರ್ಮ ವಾದ ಅಸಡ್ಡೆ ಸೋಮಾರಿತನ ಗಳಿಗೂ ತುತ್ತಾಗಿ, ಇದ್ದಬದ್ದ ಅಲ್ಪಸ್ವಲ್ಪ ಶಕ್ತಿಯೂ ಕುಂದಿಹೋಗಿ, ಎಣಿಸುವುದಕ್ಕೇ ಹೋದರೆ ಕಾರ್ಯದಲ್ಲಿ ಈಗ ನಡಸಿರುವುದೆಷ್ಟು!"

### ಕೃತಿವಿಮರ್ಶೆ-ಕೃತಿರಚನೆ

ನಾಡು ನುಡಿಗಳ ಸೇವೆಯನ್ನು ತಾವು ಹೇಗೆ ಮಾಡಬೇಕೆಂಬ ಬಗೆಗೆ ಅವರ ಕಲ್ಪನೆ ಸ್ಪಷ್ಟವಾಗಿತ್ತು. ಪ್ರಥಮತಃ ಅವರು ಕಾವ್ಯಪ್ರೇಮಿ; ಹಾಗೂ ಹುಟ್ಟು ಕವಿ, ಸಹೃದಯ ವಿಮರ್ಶಕರು. ಆದ್ದರಿಂದ, ಸಂಸ್ಕೃತ ಕಾವ್ಯದಲ್ಲಿ ಕಾಳು ಯಾವುದು, ಜಳ್ಳು ಯಾವುದು ಎನ್ನುವುದನ್ನು ಗುರುತಿಸಬಲ್ಲ, ಸಹೃದಯತೆಯಿಂದ ಮನಕರಗಬಲ್ಲ, ರಸಿಕ ವಿಮರ್ಶಕರಾಗಿದ್ದರು. ಇಂಗ್ಲಿಷ್, ಸಂಸ್ಕೃತ, ಗ್ರೀಕ್ ಮತ್ತು ತಮಿಳು ಕಾವ್ಯಗಳ ಪಾಂಡಿತ್ಯಪೂರ್ಣ ಪರಿಚಯ ಇದ್ದದ್ದರಿಂದ ಹಳಗನ್ನಡ ನಡುಗನ್ನಡ ಕಾವ್ಯಗಳನ್ನು ತೌಲನಿಕ ದೃಷ್ಟಿಯಿಂದ ಓದಿ, ವಿಮರ್ಶೆಮಾಡಿ, ಬೆಲೆಕಟ್ಟಬಲ್ಲವರಾಗಿದ್ದರು. ಈ ಸಾಮರ್ಥ್ಯ ಇದ್ದದ್ದರಿಂದಲೇ ಹಳಗನ್ನಡ ನಡುಗನ್ನಡ ಕಾವ್ಯದ ರಸವತ್ತಾದ, ಸಾರವತ್ತಾದ ಭಾಗವನ್ನು ಕನ್ನಡ ಜನಕ್ಕೆ ಪರಿಚಯ ಮಾಡಿಕೊಡಬೇಕೆಂಬ ಸಂಕಲ್ಪ ಅವರದ್ದಾಗಿತ್ತು. ಅಲ್ಲದೆ, ಚಾರಿತ್ರಿಕ ದೃಷ್ಟಿಯಿಂದಲೂ ಕನ್ನಡ ಕಾವ್ಯರಾಶಿಯನ್ನು ಸಮಗ್ರವಾಗಿ ವ್ಯಾಸಂಗ ಮಾಡಿದ್ದ ಅವರಿಗೆ ಕನ್ನಡ ಕಾವ್ಯ ಸಂಸ್ಕೃತ ವಾಙ್ಮಯದ ಸತ್ವವನ್ನು ಹೀರಿಕೊಂಡು ಬೆಳೆಯಬೇಕಾದ ರೀತಿಯಲ್ಲಿ ಬೆಳೆದು 19ನೆಯ ಶತಮಾನದ ವೇಳೆಗೆ, ಕನ್ನಡ ಕಾವ್ಯವಾಹಿನಿ ಬಲುಮಟ್ಟಿಗೆ ನಿಂತನೀರಾಗಿತ್ತು ಎಂಬ ಅರಿವಿತ್ತು. ಇಂಗ್ಲಿಷ್ ಸಾಹಿತ್ಯದಲ್ಲಿ ಪ್ರವೀಣರಾಗಿದ್ದ ಬಿ.ಎಂ.ಶ್ರೀ. ಇಂಗ್ಲಿಷ್ ಕಾವ್ಯವೇ ಕನ್ನಡ ಕಾವ್ಯವನ್ನು ಮೇಲಕ್ಕೆತ್ತಬೇಕೆಂದು ನಂಬಿ, ಈ ಕಾರ್ಯ ಹೇಗೆ ಆಗಬೇಕು ಎನ್ನುವುದನ್ನು ಕುರಿತು ಚಿಂತಿಸಿ ಇಂಗ್ಲಿಷ್ ಗೀತಗಳನ್ನು ರಚಿಸಿ, ಹೊಸ ಕಾವ್ಯಸೃಷ್ಟಿಗೆ ಮಾರ್ಗದರ್ಶಕರಾದರು.

### ಇಂಗ್ಲಿಷ್ ಗೀತೆಗಳು

'ಇಂಗ್ಲಿಷ್ ಗೀತೆಗಳು' ಒಂದು ಯುಗಪ್ರವರ್ತಕ ಕೃತಿ. ಭಾಷೆ, ಕಾವ್ಯಶೈಲಿ, ಛಂದಸ್ಸು, ಕಾವ್ಯದ ವಸ್ತು - ಹೀಗೆ ಯಾವ ದೃಷ್ಟಿಯಿಂದ ನೋಡಿದರೂ ಕನ್ನಡ ಕಾವ್ಯಪರಂಪರೆಯಲ್ಲಿ ಅದರ ಹೊಸತನದ ಛಾಪು ಎದ್ದು ಕಾಣುವಂಥದು. 'ಸರ್ ಜಾನ್ ಮೂರನ್ನು ಹೂಳಿದ್ದು', 'ರಾಯಲ್ ಜಾರ್ಜ್ ಮುಳುಗಿದ್ದು', 'ಇಂಗ್ಲೆಂಡ್ ನಾವಿಕರು' ಮುಂತಾದ ಐದಾರು ಭಾಷಾಂತರಗಳನ್ನು ಬಿಟ್ಟರೆ, ಉಳಿದೆಲ್ಲ ಕವನಗಳು ಭಾಷಾಂತರ ಮಾರ್ಗದಲ್ಲಿಯೇ ಸಾಗಿದ ಪುನಸ್ಸೃಷ್ಟಿ ಅಥವಾ ಅನುಸೃಷ್ಟಿ, ಎಂದರೆ ಮೂಲವನ್ನು ಸಮೀಪವರ್ತಿಯಾಗಿ ಅನುಸರಿಸಿಯೂ ಸ್ವತಂತ್ರ ರಚನೆ ಎಂಬ ಭ್ರಮೆಯನ್ನು ಹುಟ್ಟಿಸುವ ಪ್ರತಿಭಾನ್ವಿತ ಅನುವಾದ ಕಾರ್ಯ. ಇದರಲ್ಲಿಯ ಮೂಲ ಕವನಗಳು ಆಂಗ್ಲಕಾವ್ಯರಾಶಿಯಲ್ಲಿ ಉತ್ತಮವಾದುವಲ್ಲ ಎಂದು ಹೇಳಿ 'ಶ್ರೀ'ಯವರು ಮುಖ್ಯವಾಗಿ ಇಟ್ಟುಕೊಂಡಿದ್ದ ಮೂಲ ಉದ್ದೇಶವನ್ನು ಗ್ರಹಿಸದೆ ಮಾಡಿದ ಅಂಥ ಅನ್ಯಾಯದ ಟೀಕೆಗಳಿಗೆ ನಾವು ಮಹತ್ವ ಕೊಡಬೇಕಾಗಿಲ್ಲ. ಇದು ಹೇಗಿದ್ದರೂ, ಆಂಗ್ಲ ಕವಿತಾಭಂಡಾರದಿಂದ ಉತ್ತಮವಾದುದನ್ನು ಆಯ್ದುಕೊಡುವುದು ಶ್ರೀಯವರ ಉದ್ದೇಶವಾಗಿರಲಿಲ್ಲ. ಅವರ ಮಾತಿನಲ್ಲಿಯೇ ಹೇಳುವುದಾದರೆ, "ಕನ್ನಡದ ಜಾಯಮಾನವನ್ನು ಮೀರದೆ ಎಷ್ಟು ಮಟ್ಟಿಗೆ ಛಂದಸ್ಸು ಇಂಗ್ಲಿಷ್ ಛಂದಸ್ಸುಗಳಲ್ಲಿ ಹೋಲಬಹುದೋ ಅಷ್ಟು ಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನಪಟ್ಟಿರುತ್ತೇನೆ" ಎಂದಿರುವುದು ಅವರ ಒಂದು ಮುಖ್ಯ ಗುರಿಯನ್ನು ತಿಳಿಸುತ್ತದೆ. ಈ ಗುರಿಯ ಸಾಧನೆಯಲ್ಲಿ ಅವರು ಪೂರ್ಣ ಯಶಸ್ಸನ್ನು ಪಡೆದರು; ಅವರ ಪ್ರಯೋಗ ಕನ್ನಡ ಛಂದಸ್ಸಿನಲ್ಲಿ ಹೊಸ ಸಾಧ್ಯತೆಗಳನ್ನು ತೆರೆದು ತೋರಿಸಿ, ಆಧುನಿಕ ಕನ್ನಡ ಛಂದೋ ಮಾರ್ಗವನ್ನು

ನಿರ್ಮಾಣ ಮಾಡಿತು. ಅಲ್ಲದೆ, ಕಾವ್ಯವಸ್ತುವಿನ ಆಯ್ಕೆಯ ವಿಷಯದಲ್ಲಿಯೂ 'ಶ್ರೀ'ಯವರು ಕ್ರಾಂತಿಕಾರರಾದರು. ಕವಿ ಸಮಯ, ಅರ್ಥಾಲಂಕಾರ, ಸಂಸ್ಕೃತ ಭೂಯಿಷ್ಠವಾದ ಶೈಲಿ, ಆ ಶೈಲಿಗೆ ಒಗ್ಗಿ ಬಂದ ವರ್ಣವೃತ್ತ ಕಂದಗಳ ಬಳಕೆ - ಈ ಎಲ್ಲ ಸಾಂಪ್ರದಾಯಿಕ ಸಂಕೋಲೆಗಳನ್ನು ಕಡಿದುಹಾಕಿ, ಅಚ್ಚಕನ್ನಡ ನುಡಿಯಲ್ಲಿ, ಕನ್ನಡ ಛಂದಸ್ಸಿನ ಹೊಸ ಹೊಸ ಮಟ್ಟುಗಳಲ್ಲಿ, ಸ್ವಾನುಭವ ನಿಷ್ಠ ಭಾವಗೀತೆಗಳನ್ನು ಸಮೃದ್ಧವಾಗಿ ರಚಿಸಬಲ್ಲ (lyrics) ಕನ್ನಡ ಕವಿಗಳ ಹೊಸ ಪೀಳಿಗೆಯೊಂದು ಹುಟ್ಟಲು ಕಾರಣಪುರುಷರಾದರು 'ಶ್ರೀ'ಯವರು.

**ದುರಂತ ನಾಟಕ**

ಕನ್ನಡ ಸಾಹಿತ್ಯಕ್ಕೆ ಶ್ರೀಯವರು ಕೊಟ್ಟ ಇನ್ನೊಂದು ಅಭೂತಪೂರ್ವ ಕೊಡುಗೆ ಎಂದರೆ, ಸಂಸ್ಕೃತ ಕಾವ್ಯಪ್ರಪಂಚದಲ್ಲಿ ಇಲ್ಲದ, ದುರಂತ ನಾಟಕ. ಶ್ರೀಯವರು ಷೇಕ್ಸ್‌ಪಿಯರ್ ನಾಟಕಗಳನ್ನೂ, ಗ್ರೀಕ್ ರುದ್ರನಾಟಕಗಳನ್ನೂ ಆಳವಾಗಿ ಅಧ್ಯಯನ ಮಾಡಿದ್ದರು; ಕೆಲವು ಹಳಗನ್ನಡ ಕೃತಿಗಳಲ್ಲಿ ಷೇಕ್ಸ್‌ಪಿಯರ್ ಕವಿ ಸೃಷ್ಟಿಸಿರುವ ದುರಂತ ನಾಯಕ ಪಾತ್ರದ ಕಲ್ಪನೆಗೆ ಹತ್ತಿರ ಬರುವ ಪಾತ್ರಗಳನ್ನು ಗುರುತಿಸಿದರು. ಅಂಥ ಪಾತ್ರಗಳಲ್ಲಿ, ನಾಗಚಂದ್ರ ಕವಿಯ ಪಂಪ ರಾಮಾಯಣದ ರಾವಣ ಮತ್ತು ರನ್ನನ 'ಸಾಹಸಭೀಮ ವಿಜಯ'ದ ದುರ್ಯೋಧನ ಪಾತ್ರಗಳು ಅವರ ಗಮನವನ್ನು ಸೆಳೆದವು. ನಾಗಚಂದ್ರನ ರಾವಣನನ್ನು ಕುರಿತು A Tragic Ravana ಎಂಬ ಲೇಖನವನ್ನು ಇಂಗ್ಲಿಷಿನಲ್ಲಿ ಬರೆದು ಪ್ರಕಟಿಸಿದರು. ರನ್ನನ ಕಾವ್ಯವನ್ನು 'ಗದಾಯುದ್ಧ ನಾಟಕ'ವನ್ನಾಗಿ ರೂಪಾಂತರಿಸಿದರು. ಹೀಗೆ ರೂಪಾಂತರಿಸುವಲ್ಲಿ, ಅಲ್ಲಲ್ಲಿ ರನ್ನನ ಶೈಲಿಯಲ್ಲಿಯೇ ತಮ್ಮ ಮಾತುಗಳನ್ನೂ ವಾಕ್ಯಗಳನ್ನೂ (ಮುಖ್ಯವಾಗಿ ಗದ್ಯಭಾಗಗಳಲ್ಲಿ) ಸೇರಿಸಿರುವುದೂ ಉಂಟು; ಮೂಲದ ಸಂಭಾಷಣೆಗಳನ್ನು ಸ್ಥಳಪಲ್ಲಟ ಮಾಡಿರುವುದೂ ಉಂಟು. ಈ ಸ್ವಾತಂತ್ರ್ಯವಹಿಸಿರುವುದರಿಂದ ಕಾವ್ಯದ ನಾಟಕೀಯತೆಗೆ ಪುಷ್ಟಿ ಬಂದಿದೆಯೇ ಹೊರತು ನಷ್ಟವೇನೂ ಆಗಿಲ್ಲ.

'ಅಶ್ವತ್ಥಾಮನ್' ನಾಟಕ ಇಂಗ್ಲಿಷ್ ಗೀತಗಳಂತೆಯೇ ಕನ್ನಡ ಸಾಹಿತ್ಯದ ನಾಟಕ ಪ್ರಕಾರ ಶಾಖೆ ಬೆಳೆಯಲು ಹೊಸದಾರಿ ಹಾಕಿಕೊಟ್ಟ ಮಾರ್ಗ ಪ್ರವರ್ತಕ ಕೃತಿ; ಗ್ರೀಕ್ ರುದ್ರನಾಟಕದ ಮಾದರಿಯ ರುದ್ರ ನಾಟಕ. ಸಾಫೊಕ್ಲೀಸನ 'ಏಜಾಕ್ಸ್' ನಾಟಕದ ಅನುವಾದವಾದರೂ ಸ್ವತಂತ್ರ ಕೃತಿ ಎನ್ನುವ ಮಟ್ಟಿಗೆ 'ಶ್ರೀ' ಯವರ ಸೃಜನಶೀಲ ಸಾಮರ್ಥ್ಯವನ್ನು ಪೂರ್ಣಪ್ರಮಾಣದಲ್ಲಿ ಪ್ರತಿಬಿಂಬಿಸಿರುವ ಕೃತಿ. ಅವರ ರಚನೆಗಳಲ್ಲಿ ಮುಕುಟಪ್ರಾಯವಾದದ್ದು. ರನ್ನನ ಗದಾಯುದ್ಧ ನಾಟಕದ ಹಳಗನ್ನಡಕ್ಕೂ ಹಳೆಯದಾದ ಪೂರ್ವದ ಹಳಗನ್ನಡದ ಶಬ್ದರೂಪಗಳನ್ನು ಅಲ್ಲಲ್ಲಿ ಹೊಂದಿಕೆಯಾಗುವಂತೆ ಪವಣಿಸಿ, ಒಂದು ಹೊಸ ಭಾಷಾ ಶೈಲಿಯನ್ನೇ ಈ ನಾಟಕದಲ್ಲಿ ನಿರ್ಮಾಣ ಮಾಡಿದರು. ಈ ಶೈಲಿಯಲ್ಲಿ ಅಲ್ಲದೆ ಹೊಸಗನ್ನಡದ ಇಲ್ಲವೆ ಮುಂದೆ 'ಪಾರಸಿಕರು' ನಾಟಕದಲ್ಲಿ ಪ್ರಯೋಗ ಮಾಡಿದ ಹಳಗನ್ನಡ ನಡುಗನ್ನಡದ ಮಿಶ್ರಣದ ಭಾಷೆಯ ಶೈಲಿಯಲ್ಲಿ ಈ ನಾಟಕವನ್ನು ರಚಿಸಿದ್ದಿದ್ದರೆ ಇದಕ್ಕೆ ಈಗ ಮೈಗೂಡಿಸಿಕೊಂಡಿರುವ ರುದ್ರ ಘನತೆ ಲಭಿಸುತ್ತಿರಲಿಲ್ಲ.

'ಅಶ್ವತ್ಥಾಮನ್' ನಾಟಕ ಪ್ರಕಟವಾದಾಗ ಸಾಂಪ್ರದಾಯಿಕ ದೃಷ್ಟಿಯ ಜನ ಅದರ ಬಗ್ಗೆ ದೊಡ್ಡ ಹುಯಿಲೆಬ್ಬಿಸಿದರು. ಇದಕ್ಕೆ ಮುಖ್ಯ ಕಾರಣ, ಪರಂಪರಾಗತವಾಗಿ ಚಿರಂಜೀವಿ ಎಂದು ಪ್ರಸಿದ್ಧನಾದ ಅಶ್ವತ್ಥಾಮ ಶ್ರೀಯವರ ನಾಟಕದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಸಾವನ್ನು ರಂಗದ ಮೇಲೆ ತೋರಿಸಬಾರದು ಎನ್ನುವುದಕ್ಕೆ ಭರತಾದಿ ಲಾಕ್ಷಣಿಕರ ದೃಷ್ಟಿಯೇ ಬೇರೆ. ಮರಣ ಮುಂತಾದ ಕೆಲವು ಸನ್ನಿವೇಶಗಳು ಅಭಿನಯ ಶಕ್ಯವಲ್ಲ, ಅಭಿನಯ ಯೋಗ್ಯವಲ್ಲ ಎನ್ನುವುದೇ ಆ ದೃಷ್ಟಿ. ಅಷ್ಟೇ ಹೊರತು, ಲಾಕ್ಷಣಿಕರಿಗಾಗಲಿ ಲಾಕ್ಷಣಿಕರನ್ನು ಅನುಸರಿಸಿದ ನಾಟಕಕಾರರಿಗಾಗಲಿ ದುಃಖದ, ಅಮಂಗಳದ ಕಲ್ಪನೆ ಇರಲಿಲ್ಲ ಎನ್ನುವ ಹಾಗಿಲ್ಲ.[10]

ಸಾಂದರ್ಭಿಕ ಕವನಗಳೇ ಆದರೂ ಶುಕ್ರಗೀತೆ, ಕನ್ನಡ ತಾಯನೋಟ, ಶ್ರೀಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ, ಬಾನ್‌ಕೊಂಡ ಕೃಷ್ಣನ್-ಇವು ಸಾಂದರ್ಭಿಕತೆಯನ್ನು ದಾಟಿ ಒಳ್ಳೆಯ ಕಾವ್ಯತ್ವದ ಸಿದ್ಧಿಯನ್ನು ಪಡೆದ ರಚನೆಗಳಾಗಿವೆ. ಇವುಗಳಲ್ಲಿ ಪ್ರಧಾನವಾಗಿ ಮಿಡಿಯುವುವು ಕನ್ನಡ ನಾಡು ನುಡಿಗಳ ಪ್ರೇಮ, ರಾಜಭಕ್ತಿ, ಪ್ರಕೃತಿ ಸೌಂದರ್ಯ ಪ್ರಜ್ಞೆ. 'ಭಾರತಮಾತೆಯ ನುಡಿ'ಯಲ್ಲಿ ಪ್ರಾಂತ್ಯಾಭಿಮಾನದ ಜೊತೆ ಜೊತೆಗೇ ರಾಷ್ಟ್ರಪ್ರೇಮವೂ ವ್ಯಕ್ತವಾಗಿರುವುದು ಗಮನಾರ್ಹ. (ಈ ಪದ್ಯ 1914ರಷ್ಟು ಹಿಂದೆಯೇ ರಚಿತವಾದದ್ದು ಎಂಬುದನ್ನೂ ನೆನೆಯಬೇಕು.)

ಇಂಗ್ಲಿಷ್ ಗೀತಗಳಲ್ಲಿ ಶ್ರೀಯವರು ಹೊಸಹೊಸ ನಿಬದ್ಧ ಪದ್ಯರೂಪದ ಛಂದಸ್ಸನ್ನು ಪ್ರಯೋಗ ಮಾಡಿದ್ದರು; ಅಶ್ವತ್ಥಾಮನ್, ಶುಕ್ರಗೀತೆ, ಕನ್ನಡ ತಾಯನೋಟ ಮುಂತಾದವುಗಳಲ್ಲಿ ಆ ವೇಳೆಗಾಗಲೇ ರೂಢಿಗೆ ಬಂದಿದ್ದ ಸರಳರಗಳೆಯ ಸಾಲುಗಳನ್ನು ಇನ್ನು ಸ್ವಲ್ಪ ಹಿಗ್ಗಿಸಿ. ಒಂದು ನೂತನ ಅನಿಬದ್ಧ ಛಂದಸ್ಸನ್ನು ಪ್ರಯೋಗ ಮಾಡಿದರು. (ಇದೇ ಕುವೆಂಪು ಅವರ ರಾಮಾಯಣ ದರ್ಶನದ ಮಹಾಛಂದಸ್ಸಿನ ಪ್ರಯೋಗಕ್ಕೆ ಮಾದರಿಯನ್ನೊದಗಿಸಿರಬಹುದು.) ಒಟ್ಟಿನಲ್ಲಿ, 'ಶ್ರೀ'ಯವರು ಮಾತ್ರಾಲಯ ಅಂಶಲಯಗಳ ಆಧಾರದ ಮೇಲೆ ವಿವಿಧ ಛಂದೋರೂಪಗಳನ್ನು ಬಳಕೆಗೆ ತಂದು, ಆಧುನಿಕ ಕನ್ನಡ ಕವಿಗಳಿಗೆ ಲಕ್ಷ್ಯಗಳನ್ನು ಒದಗಿಸಿದರು.

**ಕನ್ನಡ ಛಂದಸ್ಸಿನ ಚರಿತ್ರೆ**

(ಕನ್ನಡ ಕೈಪಿಡಿಯ ಮೊದಲ ಸಂಪುಟದಲ್ಲಿ ಪ್ರಕಟಿತ)

ಕವಿರಾಜಮಾರ್ಗದ ಕಾಲದಿಂದ ಮೊದಲ್ಗೊಂಡು ಕನ್ನಡ ಕಾವ್ಯದಲ್ಲಿ ಪ್ರಯೋಗವಾಗಿರುವ ಹಾಗೂ ಜನಪದ ಗೀತಗಳಲ್ಲಿ ಪ್ರಯೋಗವಾಗಿರುವ ವಿವಿಧ ಛಂದೋರೂಪಗಳಲ್ಲಿ ಕಂಡುಬರುವ ಲಯವಿನ್ಯಾಸಗಳನ್ನೂ ಛಂದೋಗತಿಗಳನ್ನೂ ವೈದಿಕ ಛಂದಸ್ಸಿನ ಹಿನ್ನೆಲೆಯಲ್ಲಿ, ತಮಿಳು ಮತ್ತು ತೆಲುಗು ಛಂದೋರೂಪಗಳೊಂದಿಗೆ ಹೋಲಿಸಿ ಶ್ರೀಯವರು ತೌಲನಿಕವಾಗಿ ನಡೆಸಿರುವ ಕನ್ನಡ ಛಂದಸ್ಸಿನ ಚಾರಿತ್ರಿಕ ವಿಶ್ಲೇಷಣಾತ್ಮಕ ನಿರೂಪಣೆ ಈ ನಿಟ್ಟಿನಲ್ಲಿ ಮೊತ್ತಮೊದಲಿನದು; ಮಾತ್ರವಲ್ಲ, ಆಗಿನ ಕಾಲದ ಸಂಶೋಧನ ಸಂದರ್ಭದಲ್ಲಿ ಸಮಗ್ರವಾದುದು ಅಲ್ಲದೆ, ಮುಂದಿನ ಸಂಶೋಧನೆಗಳ ಪ್ರಯತ್ನಗಳಿಗೆ ಮಾರ್ಗದರ್ಶಕವಾಯಿತು.

**ಕನ್ನಡ ಸಾಹಿತ್ಯ ಚರಿತ್ರೆ**

(ಕನ್ನಡ ಕೈಪಿಡಿಯ ಎರಡನೆಯ ಸಂಪುಟ)

ಬಿ.ಎಂ.ಶ್ರೀ.ಯವರು ಸಾಹಿತ್ಯ ಚರಿತ್ರೆಯನ್ನು ಬರೆಯುವುದಕ್ಕೆ ಮೊದಲು ಈ ಕ್ಷೇತ್ರದಲ್ಲಿ ಪ್ರಾರಂಭಕಾರ್ಯವೇನೋ ಸ್ವಲ್ಪಮಟ್ಟಿಗೆ ನಡೆದಿತ್ತು. ಕಿಟೆಲ್ಲರು ತಾವು ಸಂಪಾದನೆ ಮಾಡಿದ ಛಂದೋಂಬುಧಿಯ ಮುನ್ನುಡಿಯಲ್ಲಿ ಪ್ರಾಚೀನ ಕನ್ನಡ ಸಾಹಿತ್ಯ ನಡೆದು ಬಂದ ದಾರಿಯನ್ನು

ಗುರುತಿಸಿದ್ದರು. ಇ.ಪಿ. ರೈಸ್ ಅವರ (Heritage of India ಗ್ರಂಥಮಾಲೆಯ) 'ಕನ್ನಡ ಸಾಹಿತ್ಯ' (Kannada Literature) ಮೊತ್ತಮೊದಲನೆಯ 'ಲಘು ಸಾಹಿತ್ಯ ಚರಿತ್ರೆ' ಎಂಬ ಗೌರವಕ್ಕೆ ಪಾತ್ರವಾದುದು. ಆರ್. ನರಸಿಂಹಾಚಾರ್ಯರ ಮೂರು ಸಂಪುಟಗಳ 'ಕರ್ಣಾಟಕ ಕವಿಚರಿತೆ' ಆಚಾರ್ಯ ಕೃತಿಯೇ ಆದರೂ ಅನ್ವರ್ಥವಾಗಿ ಕವಿಗಳ ಕಾಲ, ಸ್ಥಳ, ಮತ ಮತ್ತು ಕೃತಿಗಳನ್ನು ಕುರಿತಂತೆ ವಸ್ತುನಿಷ್ಠ ಮಾಹಿತಿಯನ್ನು ಒದಗಿಸುತ್ತದೆ. ಹೀಗಿದ್ದರೂ, ಶ್ರೀಯವರೂ ಸೇರಿದಂತೆ ಮುಂದಿನ ಎಲ್ಲ ಸಾಹಿತ್ಯ ಚರಿತ್ರಕಾರರಿಗೂ ಈ ಬೃಹದ್ಗ್ರಂಥ ಆಗತ್ಯ ಮಾಹಿತಿಯನ್ನು ಒದಗಿಸುವ ಆಕರಗ್ರಂಥ' ಎಂಬುದನ್ನು ಒಪ್ಪಿಕೊಳ್ಳಬೇಕು. ಬಿ.ಎಂ.ಶ್ರೀ.ಯವರು ಮೊತ್ತಮೊದಲಿಗೆ ಸಾಹಿತ್ಯವಾಹಿನಿಯ ಗತಿಗಮನಗಳನ್ನು ಗುರುತಿಸುವ ಜೊತೆಜೊತೆಯಲ್ಲೇ ಅದರ ಆಳ ಅಗಲಗಳನ್ನು ಅಳೆಯುವ-ಎಂದರೆ ಸಾಹಿತ್ಯ ವಿಮರ್ಶೆ ಮತ್ತು ಮೌಲ್ಯಮಾಪನ ಮಾಡುವ ಕ್ರಮವನ್ನು ಅನುಸರಿಸಿದರು. ಈ ವಿಧಾನದಲ್ಲಿ ಮುಖ್ಯವಾಗಿ ಕವಿಯ ಕಾಲ, ಸ್ಥಳ, ಮತಗಳಿಗಿಂತ ಮುಖ್ಯವಾಗಿ ಕಾವ್ಯದಲ್ಲಿ ವ್ಯಕ್ತಪಡುವ ಅವನ ವ್ಯಕ್ತಿತ್ವ, ಅವನ ಕವಿತಾ ಧೋರಣೆ, ಭಾಷಾ ಶೈಲಿ, ಪಾತ್ರ ಸೃಷ್ಟಿ, ವರ್ಣನೆಗಳ ಔಚಿತ್ಯ, ಕವಿಯ ಸ್ಥಾನ - ಈ ಅಂಶಗಳಿಗೆ ಒತ್ತುಕೊಟ್ಟು, ಸಾಹಿತ್ಯ ಚರಿತ್ರೆ ವಿವರಗಳ ದಾಖಲೆ ಎನಿಸದೆ ಸಹೃದಯ ವಿಮರ್ಶಕನ ರಸವತ್ತಾದ ನಿರೂಪಣೆ ಎನಿಸುವಂತೆ ಸಾಹಿತ್ಯ ಚರಿತ್ರೆಯನ್ನು ರಚಿಸಿದರು. ಸಾಹಿತ್ಯಚರಿತ್ರಲೇಖಕರಿಗೆ ಇದು ಸ್ವಲ್ಪಮಟ್ಟಿಗೆ ಮಾದರಿಯಾಯಿತು.

**ವ್ಯಾಕರಣ, ಭಾಷಾಚರಿತ್ರೆ**

ಕನ್ನಡಕ್ಕೆ ಒಂದು ಕಟ್ಟು, ಪೂರ್ವದ ಹಳಗನ್ನಡ ಮತ್ತು ತಮಿಳು, ಕನ್ನಡ ಮೊದಲೋ ತಮಿಳು ಮೊದಲೋ- ಎಂಬ ಲೇಖನಗಳಲ್ಲಿಯೂ ಕನ್ನಡ ಕೈಪಿಡಿಯಲ್ಲಿ (ಮೊದಲ ಸಂಪುಟ) ಟಿ.ಎಸ್. ವೆಂಕಣ್ಣಯ್ಯ ನವರೊಂದಿಗೆ ಬರೆದಿರುವ 'ಕನ್ನಡ ಭಾಷೆಯ ಚರಿತ್ರೆ' ಎಂಬ ಅಧ್ಯಾಯದಲ್ಲಿಯೂ ಶ್ರೀಯತರು ಹಳಗನ್ನಡ ವ್ಯಾಕರಣ ಹಾಗೂ ಕನ್ನಡ ಭಾಷಾಚರಿತ್ರೆಗಳಲ್ಲಿ ಎಷ್ಟು ಆಳವಾದ ಪಾಂಡಿತ್ಯವನ್ನು ಪಡೆದಿದ್ದರು ಎಂಬುದು ವ್ಯಕ್ತಪಡಿಸುತ್ತದೆ. ಕೇಶಿರಾಜನ 'ಶಬ್ದಮಣಿದರ್ಪಣ'ವನ್ನು ಅವರು ಕರತಲಾಮಲಕ ಮಾಡಿಕೊಂಡಿದ್ದರು. ತಮಿಳಿನ 'ನನ್ನೂಲ್' ವ್ಯಾಕರಣದ ಮಾದರಿಯಲ್ಲಿ ಶಾಸ್ತ್ರಶುದ್ಧವಾದ ಸಂಕ್ಷಿಪ್ತ ವ್ಯಾಕರಣ ಸೂತ್ರಗಳನ್ನು ರಚಿಸಬೇಕೆಂಬುದು ಅವರ ಉದ್ದೇಶವಾಗಿತ್ತು. ಈ ದಿಸೆಯಲ್ಲಿ ಕೆಲವು ಮಾದರಿ ಸೂತ್ರಗಳನ್ನು ರಚಿಸಿದ್ದರು.

**ಗ್ರಂಥ ಸಂಪಾದನೆ**

'ಕವಿರಾಜಮಾರ್ಗ'ದ ಮದರಾಸು ಮುದ್ರಣದ (1930) ಬಗೆಗೂ ಮೈಸೂರು ವಿಶ್ವವಿದ್ಯಾನಿಲಯ ಹಾಗೂ ಧಾರವಾಡದ ವಿದ್ಯಾವರ್ಧಕ ಸಂಘ ಹೊರತಂದ 'ಕಾವ್ಯಾವಲೋಕನ'ದ ಎರಡು ಪುನರ್ಮುದ್ರಣಗಳ ಬಗೆಗೂ ಬಿ.ಎಂ.ಶ್ರೀ. ಬರೆದಿರುವ ವಿಮರ್ಶೆಗಳನ್ನು ಗಮನಿಸಿದರೆ, ಸಂಪಾದಕರು ಸ್ವೀಕರಿಸಿರುವ ಪಾಠಗಳ ಬಗ್ಗೆ ಅವರು ಮಾಡಿರುವ ಸೂಕ್ಷ್ಮದೃಷ್ಟಿಯ ಟೀಕೆಗಳನ್ನು ಪರಿಶೀಲಿಸಿದರೆ, ಗ್ರಂಥ ಸಂಪಾದನಾಶಾಸ್ತ್ರವನ್ನು ಬಹುಶಃ ಅವರು ಕ್ರಮಬದ್ಧವಾಗಿ ಅಧ್ಯಯನ ಮಾಡಿರದಿದ್ದರೂ (?) ಅವರಲ್ಲಿ ಆ ಶಾಸ್ತ್ರಪ್ರಜ್ಞೆ ಹೇಗೆ ಒಂದು ಪ್ರತಿಭಾ ವ್ಯಾಪಾರವಾಗಿತ್ತು ಎಂದು ಗೊತ್ತಾಗುತ್ತದೆ. ಟಿ.ಎಸ್. ವೆಂಕಣ್ಣಯ್ಯನವರ ಸಹಕಾರದಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಸಂಪಾದನೆ ಮಾಡಿದ ಪಂಪಭಾರತದ ಸಂಪಾದನ ಕಾರ್ಯದಲ್ಲಿ ಉಚಿತ ಪಾಠ ನಿಷ್ಕರ್ಷೆಯಲ್ಲಿ ಬಿ.ಎಂ. ಶ್ರೀ ಅವರದ್ದೇ ಕೊನೆಯ ಮಾತಾಗಿತ್ತು. ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿದ್ದ ಓರಿಯಂಟಲ್ ಲೈಬ್ರರಿಯವರು ಕುಮಾರವ್ಯಾಸ ಭಾರತದ ಸಂಪುಟಗಳ ಪುನರ್ಮುದ್ರಣವನ್ನು ಕೈಗೊಂಡಾಗ, ಬಿ.ಎಂ.ಶ್ರೀ.ಅವರನ್ನೇ ಪ್ರಧಾನ ಸಂಪಾದಕರಾಗಿ ನೇಮಿಸಲಾಯಿತು. ಬಿ.ಎಂ.ಶ್ರೀ.ಯವರು ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿದ್ದಾಗ ಬೇರೆ ಬೇರೆ ವಿದ್ವಾಂಸರಿಂದ ಪ್ರಮುಖ ಪ್ರಾಚೀನ ಕನ್ನಡ ಕಾವ್ಯಗಳ ಸಂಗ್ರಹಗಳನ್ನು ಮಾಡಿಸಿದಾಗ, ಪಾಠ ಪರಿಷ್ಕರಣಕ್ಕೂ ಗಮನಕೊಡುವಂತೆ ಅವರು ನಿರ್ದೇಶನ ನೀಡಿದ್ದರಲ್ಲದೆ ಆ ಗ್ರಂಥಮಾಲೆಯ ಪ್ರಧಾನ ಸಂಪಾದಕರಾಗಿದ್ದುಕೊಂಡು ಸಂಪಾದಕರುಗಳ ಪಾಠಪರಿಷ್ಕರಣವನ್ನು ಪರಿಶೀಲಿಸಿ, ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ಈ ಕಾವ್ಯಸಂಗ್ರಹಮಾಲೆಯಲ್ಲಿ ಕುಮಾರವ್ಯಾಸ ಭಾರತದ ಸಂಗ್ರಹದ ಸಂಪಾದನ ಕಾರ್ಯವನ್ನು ಅವರು ಪಂಜೆ ಮಂಗೇಶರಾಯರಿಗೆ ವಹಿಸಿದ್ದರು, ಅನಿರೀಕ್ಷಿತವಾಗಿ ಅವರು ನಿಧನರಾದ ಮೇಲೆ ಆ ಕೆಲಸವನ್ನು ವೆಂಕಣ್ಣಯ್ಯನವರು ತಮ್ಮ ಶಿಷ್ಯರ ನೆರವಿನಿಂದ ಪೂರೈಸಿದರು. ಸಿದ್ಧವಾದ ಹಸ್ತಪ್ರತಿಯಲ್ಲಿ ಪಾಠಾಂತರಗಳನ್ನು ಗುರುತಿಸಿತ್ತೇ ಹೊರತು ಯಾವ ಪಾಠವನ್ನು ಇಟ್ಟುಕೊಳ್ಳಬೇಕು, ಯಾವುದನ್ನು ಬಿಡಬೇಕು ಎನ್ನುವುದನ್ನು ನಿಷ್ಕರ್ಷೆ ಮಾಡಿರಲಿಲ್ಲ. ಆ ಪಾಠ ನಿಷ್ಕರ್ಷೆಯ ಕೆಲಸವನ್ನು ಬಿ.ಎಂ.ಶ್ರೀ. ಮಾಡಿದರು. ಕಾರಣಾಂತರದಿಂದ, ಬಿ.ಎಂ.ಶ್ರೀ ಮತ್ತು ಟಿ.ಎಸ್. ವೆಂಕಣ್ಣಯ್ಯ ಸಂಪಾದನೆ ಮಾಡಿದ ಕುಮಾರವ್ಯಾಸ ಭಾರತ ಸಂಗ್ರಹ ವಿಶ್ವವಿದ್ಯಾನಿಲಯದಿಂದ ಪ್ರಕಟವಾಗಲೇ ಇಲ್ಲ. ಯಾರ ಉಪೇಕ್ಷೆಯಿಂದ ಹೀಗಾಯಿತೋ ಹೇಳಲು ಸಾಧ್ಯವಿಲ್ಲ. ಇದೊಂದು ಚಿದಂಬರ ರಹಸ್ಯ.[11]

**ಕರ್ನಾಟಕ ಏಕೀಕರಣ**

ಬ್ರಿಟಿಷರು ಟಿಪ್ಪುಸುಲ್ತಾನನನ್ನು ಸೋಲಿಸಿದ ಮೇಲೆ ಅವನು ವಿಸ್ತರಿಸಿದ್ದ ಮೈಸೂರು ರಾಜ್ಯದಲ್ಲಿ ಸೇರಿದ್ದ ಕನ್ನಡ ನಾಡನ್ನು ಒಡೆದು ಮೈಸೂರು ಅರಸುಮನೆತನದ ಆಡಳಿತಕ್ಕೆ ಒಂದು ಭಾಗವನ್ನು ಉಳಿಸಿ, ಹೆಚ್ಚಿನ ಭಾಗವನ್ನು ಬೊಂಬಾಯಿ, ಮದರಾಸು ಪ್ರಾಂತಗಳು, ಹೈದರಾಬಾದು ನಿಜಾಮನ ರಾಜ್ಯ ಇವುಗಳಿಗೆ ಹಂಚಿ, ಕೆಲವು ಸಣ್ಣಪುಟ್ಟ ಸಂಸ್ಥಾನಗಳನ್ನು (ಅಕ್ಕಲಕೋಟೆ, ಜಮಖಂಡಿ, ಸಂಡೂರು, ಜಕ್ ಮುಂತಾದವು) ನಿರ್ಮಾಣಮಾಡಿ, ಕೊಡಗನ್ನು ಪ್ರತ್ಯೇಕವಾಗಿ ಇರಿಸಿ, ಕನ್ನಡ ನಾಡನ್ನು ಸುಮಾರು 20 ಭಾಗಗಳಾಗಿ ಹರಿದು ಹಂಚಿಬಿಟ್ಟರು. ಮೈಸೂರು ಒಡೆಯರ ಆಡಳಿತದಲ್ಲಿ ಸಂಸ್ಥಾನ ಕ್ರಮ ಕ್ರಮವಾಗಿ ಪ್ರಗತಿಹೊಂದುತ್ತ ಬಂದಿತು. ಮೈಸೂರನ್ನು ಬಿಟ್ಟು ಉಳಿದ ಕನ್ನಡ ನಾಡಿನ ಜನ ನಾನಾ ವಿಧವಾದ ಕಷ್ಟನಷ್ಟಗಳನ್ನು ಅನುಭವಿಸುತ್ತ, ಮರಾಠಿ, ಉರ್ದು, ತಮಿಳು, ತೆಲುಗು ಭಾಷೆಗಳ ರಾಜ್ಯಾಡಳಿತದಲ್ಲಿ ತಾವು ಕನ್ನಡಿಗರು ಎನ್ನುವ ತಮ್ಮತನವನ್ನು ಕೂಡ ಮರೆಯುವಂತಹ ಸ್ಥಿತಿ ಇತ್ತು. ಈ ಪರಿಸ್ಥಿತಿಯಲ್ಲಿ, ಧಾರವಾಡ, ಮಂಗಳೂರು, ಮದರಾಸು ಪಟ್ಟಣಗಳಲ್ಲಿ ದೇಶಾಭಿಮಾನ ಬೆಳೆದ ದಿನಗಳಲ್ಲಿ, ಅದರ ಅಂಗವಾಗಿ ದೇಶಭಾಷೆಗಳ ಅಭಿಮಾನವೂ ಬೆಳೆಯಿತು. ಆ ಪಟ್ಟಣಗಳ ಮುಖಂಡರುಗಳಲ್ಲಿ ಕನ್ನಡ ನಾಡು ನುಡಿಗಳ ಅಭಿಮಾನವು ಬೆಳೆಯಿತು. ಧಾರವಾಡದಲ್ಲಿ ಡೆಪ್ಯುಟಿ ಚೆನ್ನಬಸಪ್ಪನವರು ಕನ್ನಡ ಕಲಿಕೆಗೆ ಇಂಬುಕೊಟ್ಟು, ಕರ್ನಾಟಕ ಏಕೀಕರಣದ ಘೋಷಣೆಯನ್ನು ಮುಂದಿಟ್ಟರು (1856). ಕಾಲಕ್ರಮದಲ್ಲಿ, ಧಾರವಾಡದಲ್ಲಿ ವಿದ್ಯಾವರ್ಧಕ ಸಂಘವೂ (1895),

ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತೂ (1915) ಸ್ಥಾಪನೆಯಾದ ಮೇಲೆ ಕರ್ನಾಟಕ ಏಕೀಕರಣ ಚಳವಳಿಗೆ ಪುಟ ದೊರೆಯಿತು. ಬಿ.ಎಂ.ಶ್ರೀ.ಯವರು 1911ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ "ಕನ್ನಡ ಮಾತು ತಲೆಯೆತ್ತುವ ಬಗೆ" ಎಂಬ ವಿಷಯವಾಗಿ ಭಾಷಣ ಮಾಡಿದ ವಿಚಾರವನ್ನು ಹಿಂದೆಯೇ ಪ್ರಸ್ತಾಪಿಸಲಾಗಿದೆ. ಏಕೀಕರಣದ ಕಲ್ಪನೆ ಅಂದಿನಿಂದಲೇ ಬಿ.ಎಂ.ಶ್ರೀ.ಯವರಲ್ಲಿ ಬೇರೂರಿ ಬೆಳೆಯ ತೊಡಗಿತು. ಉತ್ತರ ಕರ್ನಾಟಕದಲ್ಲಿ ಆಲೂರು ವೆಂಕಟರಾಯರೂ, ಮೈಸೂರು ಸೀಮೆಯಲ್ಲಿ ಬಿ.ಎಂ.ಶ್ರೀಯವರೂ ಕರ್ನಾಟಕ ಏಕೀಕರಣ ಚಳವಳಿಯ ಪ್ರವರ್ತಕರಾದರು. 1936ರಲ್ಲಿ ಹಂಪೆಯಲ್ಲಿ ವಿಜಯನಗರ ಸಾಮ್ರಾಜ್ಯದ 600ನೇ ವರ್ಷದ ಉತ್ಸವ ಜರುಗಿದ ಸಂದರ್ಭದಲ್ಲಿ ಸಾಹಿತ್ಯಗೋಷ್ಠಿಯ ಅಧ್ಯಕ್ಷರಾಗಿ ಶ್ರೀಯವರು ಆಹೂತರಾಗಿದ್ದರು. ಅಲ್ಲಿಗೆ ಹೋಗುವ ಮುನ್ನ ಕನ್ನಡ ನಾಡನ್ನು ಬಲವಂದು, ನಾಡಿನ ನೋಟದ ಚೆಲುವು ಸವಿದು, ಆ ಚೆಲುವಿನಲ್ಲಿ ಕನ್ನಡ ತಾಯನ್ನು ಸಾಕ್ಷಾತ್ಕರಿಸಿಕೊಂಡು, 'ಕನ್ನಡ ತಾಯ ನೋಟ'ವನ್ನು ಶ್ರೋತೃಗಳಿಗೂ ಕಾಣಗೊಟ್ಟರು-ತಮ್ಮ ಪದ್ಯರೂಪದ ಭಾಷಣದಲ್ಲಿ. ಶ್ರೀಯವರು ತಾವು ಕಂಡು ಇತರರಿಗೂ ಕಾಣಿಸಿದ 'ಕನ್ನಡ ತಾಯ ನೋಟ' ಅವರು ಕಂಡ ಕರ್ನಾಟಕ ಏಕೀಕರಣದ ಕನಸು; ಮೂರ್ತರೂಪ. ಎರಡು ವರ್ಷದ ತರುವಾಯ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದಾಗ (1938) ಅವರು ಮೊತ್ತಮೊದಲು ಮಾಡಿದ ಕೆಲಸ ಎಂದರೆ ಕನ್ನಡದ ಬಾವುಟವನ್ನು ಹಾರಿಸಿದ್ದು; ತಾವು ರೂಪಿಸಿದ ಕನ್ನಡದ ಬಾವುಟದ ಕಲ್ಪನೆಗೆ ಕವನರೂಪವನ್ನು ಕೊಟ್ಟರು; ಪ್ರಾಚೀನ-ಅರ್ವಾಚೀನ ಕನ್ನಡ ಕವಿಗಳು ಕಂಡ ಕರ್ನಾಟಕವನ್ನು ವರ್ಣಿಸುವ ಕವನಗಳ ಸಂಕಲನವೊಂದನ್ನು 'ಕನ್ನಡದ ಬಾವುಟ' ಎಂಬ ಹೆಸರಿನಲ್ಲಿ ಪ್ರಕಟಿಸಿದರು; ಕನ್ನಡ ಬಾವುಟವನ್ನು ಹಿಡಿದು ಕನ್ನಡ ನಾಡನ್ನೆಲ್ಲ ಸುತ್ತಿ ಕರ್ನಾಟಕ ಏಕೀಕರಣದ ಹೋರಾಟಕ್ಕೆ ಕನ್ನಡ ಜನಮನವನ್ನು ಸಿದ್ಧಗೊಳಿಸಿದರು. ಪ್ರಾಂತಮಿತಿಗಳನ್ನು ವ್ಯವಸ್ಥೆ ಮಾಡಿ, ಕನ್ನಡ ಸಾಹಿತ್ಯ ಪರಿಷತ್ತಿಗೆ ವಾಸ್ತವವಾಗಿ ಅಖಿಲ ಕರ್ನಾಟಕ ವ್ಯಾಪ್ತಿ ಸಿದ್ಧಿಸುವ ಹೆಜ್ಜೆ ಇಟ್ಟರು. ಜಿಲ್ಲಾ ಸಮಿತಿಗಳ ರಚನೆಯ ಯೋಜನೆಯನ್ನೂ ಮುಂದಿಟ್ಟರು.

ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯ ಪ್ರೇರಕರು ಸರ್ ಎಂ. ವಿಶ್ವೇಶ್ವರಯ್ಯನವರು ಎಂಬ ತಿಳಿವಳಿಕೆ ರೂಢಮೂಲವಾಗಿದೆ. ಆದರೆ, ಪರಿಷತ್ತಿನಂತಹ ಒಂದು ಸಂಸ್ಥೆ ಸ್ಥಾಪನೆಯಾಗಬೇಕು ಎಂಬ ಆಲೋಚನೆ ವಿಶ್ವೇಶ್ವರಯ್ಯನವರಿಗೆ ಬರುವಂತೆ ಮಾಡಿದವರು ಬಿ.ಎಂ.ಶ್ರೀ. ಎಂದು ತೀರ ಇತ್ತೀಚೆಗೆ ದೊರೆತ ಒಂದು ದಾಖಲೆಯಿಂದ ಊಹಿಸಲು ಅವಕಾಶವಿದೆ. ಮೈಸೂರಿನ ಸರ್ವತೋಮುಖ ಅಭಿವೃದ್ಧಿಗೆ ಒಂದು ವ್ಯಾಪಕ ಕಾರ್ಯ ಯೋಜನೆಯನ್ನು ಸಿದ್ಧಪಡಿಸಲು ಸ್ಥಾಪಿಸಿದ 'ಮೈಸೂರು ಸಂಪದಭ್ಯುದಯ ಸಮಾಜ'ದ (The Mysore Economic Conference) ಮೂಲಕ, ಕರ್ನಾಟಕ ಸಾಹಿತ್ಯ ಪರಿಷತ್ತಿನ ಸ್ಥಾಪನೆಗೆ 1914ರ ಅಕ್ಟೋಬರಿನಲ್ಲಿ ಸಮಾಜದ ವಿದ್ಯಾವಿಷಯಕ ಮಂಡಲಿಯಲ್ಲಿ (Education Committee) ಸ್ಪಷ್ಟವಾದ ನಿರ್ಣಯ ಅಂಗೀಕೃತವಾಯಿತು. ಅದರಂತೆ ಪರಿಷತ್ತು 1915 ಮೇ 5 ರಂದು ವಿಧಿವತ್ತಾಗಿ ಸ್ಥಾಪಿತವಾಯಿತು.

ಮೇಲೆ ಹೇಳಿದ Education Committeeಯ ಆಶ್ರಯದಲ್ಲಿ ಬಿ.ಎಂ.ಶ್ರೀ. ಯವರು "ಕನ್ನಡದ ಏಳಿಗೆ" (The Improvement of Kanarese)[1] ಎಂಬ ಭಾಷಣವನ್ನು ಮಾಡಿದರು. ಅದರಲ್ಲಿ, ಗ್ರಂಥಕರ್ತರಿಗೆ, ಗ್ರಂಥಗಳ ಉತ್ಪಾದನೆಗೆ ಉತ್ತೇಜನ ಕೊಡಲು ಪರಿಷತ್ತಿನಂತಹ ಒಂದು ಸಂಸ್ಥೆ ಸ್ಥಾಪನೆಯಾಗಬೇಕು ಎಂಬ ಸಲಹೆಯನ್ನು ಮುಂದಿಟ್ಟರು. ಅವರ ಭಾಷಣ ಇಂಗ್ಲೀಷಿನಲ್ಲಿದೆ; ಅಚ್ಚಾದದ್ದು 1915ರಲ್ಲಿ.

ಅವರ ಭಾಷಣದಲ್ಲಿ ಭಾಷಾಪರಿಷ್ಕರಣ, ಪ್ರಮಾಣಭೂತ ಭಾಷಾ ನಿರ್ಮಾಣ, ಮುಂತಾದ ವಿಷಯಗಳ ಪ್ರಸ್ತಾಪವೂ ಇದೆ. ಪರಿಷತ್ತಿನ ಧ್ಯೇಯಗಳನ್ನು ಗೊತ್ತುಪಡಿಸಿದಾಗ, ಗ್ರಂಥಾಭಿವೃದ್ಧಿ ಮತ್ತು ಭಾಷಾಪರಿಷ್ಕರಣವೇ ಮುಖ್ಯ ಧ್ಯೇಯಗಳಾಗಿ ಅಂಗೀಕೃತವಾದುವು. ಈ ಹಿನ್ನೆಲೆಯಲ್ಲಿ ವಿಚಾರ ಮಾಡಿದಾಗ, ಪರಿಷತ್ತಿನ ಸ್ಥಾಪನೆಗೆ ಸ್ಫೂರ್ತಿ ನೀಡಿದವರು ಬಿ.ಎಂ.ಶ್ರೀ. ಎನ್ನುವುದು ಸ್ಪಷ್ಟ ಗೋಚರವಾಗುತ್ತದೆ.

ಇಲ್ಲಿಯವರೆಗೆ ನಿರೂಪಿಸಿರುವ ಸಂಗತಿಗಳಿಂದ ಕನ್ನಡ ಭಾಷೆ ಸಾಹಿತ್ಯಗಳ ಸರ್ವತೋಮುಖ ಪ್ರಗತಿ, ಕನ್ನಡ ನಾಡಿನ ಮತ್ತು ಕನ್ನಡಿಗರ ಐಕ್ಯ, ಇವುಗಳ ಬಗೆಗೆ ಶ್ರೀಯವರು ತಮ್ಮ ವಿದ್ಯಾರ್ಥಿ ದೆಸೆಯಿಂದ ಹಿಡಿದು ಧಾರವಾಡದ ಕಾಲೇಜೊಂದರ ಪ್ರಿನ್ಸಿಪಾಲರಾಗಿ ಒಂದೆರಡು ವರ್ಷ ಕೆಲಸ ಮಾಡಿ 1946ರಲ್ಲಿ ಹೃದಯಾಘಾತದಿಂದ ನಿಧನರಾಗುವವರೆಗೆ ಚಿಂತಿಸುತ್ತ, ಚಿಂತನೆಗಳನ್ನು ಕಾರ್ಯರೂಪಕ್ಕೆ ತರುತ್ತ ಇದ್ದರು ಎನ್ನುವುದರ ಸ್ಥೂಲ ಕಲ್ಪನೆ ಆಗುತ್ತದೆ ಎಂದು ನಂಬಿದ್ದೇನೆ. ಇವಲ್ಲದೆ ಭಾಷೆಗಳ ಸ್ಥಾನಮಾನ, ಜನಪದ ಸಾಹಿತ್ಯ, ವಯಸ್ಕರ ವಿದ್ಯಾಭ್ಯಾಸ, ಹಳ್ಳಿಗಳ ಏಳಿಗೆ, ಲಿಪಿಸುಧಾರಣೆ, ಇತ್ಯಾದಿ ಕನ್ನಡಿಗರ ಬದುಕು ಉತ್ತಮವಾಗಲು ಏನೇನು ಮಾಡಬೇಕು ಎಂಬುದರ ಬಗ್ಗೆ ತಮ್ಮ ವಿಚಾರಧಾರೆಯನ್ನು ಹರಿಸಿದ್ದಾರೆ. ಇದನ್ನೆಲ್ಲ ನಾವು ಗಮನಿಸಿದಾಗ, 'ಶ್ರೀ'ಯವರ ಬಗ್ಗೆ ಬಲ್ಲವರು ಹೇಳಿದ 'ಕನ್ನಡದ ಕಣ್ವ', 'ಆಚಾರ್ಯ ಪುರುಷ' (ನುಡಿದಂತೆ ನಡೆದು ದಾರಿತೋರಿದ ಮಹನೀಯ), 'ನಾಡೋಜ' ಎಂಬ ಮಾತುಗಳು ಗೌರವದ ಪ್ರಶಸ್ತಿವಾಚಕಗಳಾಗಿರದೆ ಅನ್ವರ್ಥಕವಾಗಿದ್ದುವು ಎಂದು ಮನವರಿಕೆಯಾಗದಿರದು.

---

1. ಡಾ|| ಶ್ರೀನಿವಾಸ ಹಾವನೂರರ 'ಹೊಸಗನ್ನಡದ ಅರುಣೋದಯ', 1974; ಪು. 294.
2. ಚಿನ್ನದ ಬೆಳಸು, 1970; ಅನುಬಂಧ, ಪು. 87.
3. ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ - ಭಾಗ 1, 1948; ಪು.10.
4. ಅದೇ ಈ 'ಇಬ್ಬರೂ ಈ ಲೇಖಕನ ಗುರುಗಳೂ ಆಗಿದ್ದರು. ಬಿ.ಎಂ.ಶ್ರೀ ಅವರು ಭಾಷಾಂತರ ಪಾಠವನ್ನು ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಈ ಕಾಲದಲ್ಲಿ ಬಿ. ಕೃಷ್ಣಪ್ಪನವರು ಮಹಾರಾಜ ಕಾಲೇಜಿನಲ್ಲಿ ಕನ್ನಡ ಉಪಪ್ರಾಧ್ಯಾಪಕರಾಗಿದ್ದರು. ಅವರು ಪ್ರೊ. ಬಿ. ಕೃಷ್ಣಪ್ಪ ಎಂದೇ ಪ್ರಸಿದ್ಧರಾಗಿದ್ದರು.

5. ಈ ಇಂಗ್ಲಿಷ್ ಪದ್ಯ ಕನ್ನಡ ನುಡಿಯಲ್ಲಿ ಪ್ರಕಟವಾಗಿದೆ ಮತ್ತು 'ಶ್ರೀ' ಯವರ ಮೊಮ್ಮಗಳು ಶ್ರೀಮತಿ ವಿಶಾಲಾಕ್ಷಿ ಅಜ್ಜನ ಸಂಸ್ಮರಣಾರ್ಥ ಸಿದ್ಧ ಪಡಿಸಿ ಪ್ರಕಟಿಸಿರುವ 'ಶ್ರೀ' ಉತ್ಸವ ಸಂಪುಟದಲ್ಲಿ ಪ್ರಕಟವಾಗಿದೆ. ಅದರೊತ್ತಿಗೇ ಡಾ. ರಾಮಚಂದ್ರಶರ್ಮರು ಅನುವಾದ ಮಾಡಿರುವ ಅದರ ಕನ್ನಡ ರೂಪವೂ ಅಚ್ಚಾಗಿದೆ.
6. 15ಪದಗಳನ್ನುಳ್ಳ 'ಶ್ರೀ' ಅವರ ಈ ಆಂಗ್ಲಕವಿತೆಯಿಂದ ನೇರವಾದ ಆತ್ಮವೃತ್ತಕ್ಕೆ ಸಂಬಂಧಪಟ್ಟ 9 ಪದ್ಯಗಳನ್ನು ಮಾತ್ರ ಇಲ್ಲಿ ಎತ್ತಿಕೊಟ್ಟಿದೆ. ಡಾ|| ರಾಮಚಂದ್ರಶರ್ಮ ಅವರು ಮಾಡಿರುವ ಕನ್ನಡ ಕವಿತೆಯ ಸಂವಾದಿ ಪದ್ಯಗಳನ್ನು ಲೇಖನ ವಿಸ್ತಾರ ಭಯದಿಂದ ಕೊಡಹೋಗಿಲ್ಲ. ಬಿ.ಎಂ.ಶ್ರೀ ಯವರ ಬದುಕಿನ ಒಂದು ಪ್ರಮುಖ ಘಟ್ಟದ ಮೇಲೆ ಬೆಳಕು ಚೆಲ್ಲುವ ಈ ಆಂಗ್ಲಕವಿತೆ ಈವರೆಗೆ ಅಲಭ್ಯವಾಗಿದ್ದು ಇದೀಗ ದೊರಕಿರುವುದು ಅಲಭ್ಯಲಾಭ.
7. 3-1-1984ರಲ್ಲಿ ನಾಗಮಂಗಲ ತಾಲ್ಲೂಕು ಬೆಳ್ಳೂರಿನಲ್ಲಿ ಬಿ.ಎಂ.ಶ್ರೀ ಜನ್ಮಶತಮಾನೋತ್ಸವಕ್ಕೆ ಆಗಮಿಸಿದ್ದ ಬಿ.ಎಂ. ಶಿವರಾಮಯ್ಯನವರು ಈ ಸಂಗತಿಯನ್ನು ಈ ಲೇಖಕನಿಗೆ ತಿಳಿಸಿದರು. ಶಿವರಾಮಯ್ಯನವರು ಈ ವರ್ಷ ತೀರಿಕೊಂಡರು.
8. ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ 'ಇಂಗ್ಲಿಷ್ ಗೀತಗಳು' (1984), ಮುನ್ನುಡಿ, ಪು.10
9. 'ಗದಾಯುದ್ಧ' ನಾಟಕ ಪ್ರಕಟವಾದದ್ದು 1926ರಲ್ಲಿ; 'ಅಶ್ವತ್ಥಾಮನ್' 1929ರಲ್ಲಿ; 'ಪಾರಸಿಕರು' 1935ರಲ್ಲಿ. ಐದಾರು ವರ್ಷಗಳ ತರುವಾಯ, 'ಅಶ್ವತ್ಥಾಮನ್' ನಾಟಕದ ವಿರುದ್ಧ ಪ್ರತಿಭಟನೆಯನ್ನು ಬಹುಶಃ ನೆನೆದು, ಗ್ರೀಕ್ ರುದ್ರನಾಟಕದ ಬಗೆಗೆ ಮಾತನಾಡುತ್ತ ಭಾರತೀಯ ಸಾಹಿತ್ಯದಲ್ಲಿ ಯಾವುದೇ ನಿರ್ದಿಷ್ಟ ಪ್ರಕಾರದ ರುದ್ರನಾಟಕ ಇಲ್ಲದಿದ್ದರೂ ಅಮಂಗಳದ, ದುಃಖದ, ಸನ್ನಿವೇಶಗಳು - ದುರಂತತೆಯನ್ನು ಧ್ವನಿಸುವಂಥವು - ಉಂಟು ಎಂದು ಪ್ರಸ್ತಾಪಿಸಿದ್ದಾರೆ.
10. ಸುದೈವದಿಂದ ಕುಮಾರವ್ಯಾಸ ಭಾರತ ಸಂಗ್ರಹದ ಹಸ್ತಪ್ರತಿ ಈಗ ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ವಶಕ್ಕೆ ಬಂದು, ಸುರಕ್ಷಿತವಾಗಿದೆ. ಅದರ ಪ್ರಕಟನೆಯ ವ್ಯವಸ್ಥೆಯೂ ನಡೆಯುತ್ತಿದೆ.
11. ಈ ಇಂಗ್ಲಿಷ್ ಭಾಷಣ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ 'ಶ್ರೀ ಸಾಹಿತ್ಯ' ಸಂಪುಟದ ಇಂಗ್ಲಿಷ್ ಬರಹಗಳಲ್ಲಿ ಸೇರಿಲ್ಲ.

❑

# ಟಿ.ಪಿ.ಕೈಲಾಸಂ

ಇ.ಆರ್. ಸೇತೂರಾಮ್

### ರಂಗವೇರಿದ ಸಾಮಾನ್ಯರು

ಪೌರಾಣಿಕ ನಾಟಕಗಳ ಮಬ್ಬಿನಲ್ಲಿ ಮೈಮರೆತಿದ್ದ ಕನ್ನಡ ಜನತೆಗೆ, ಪ್ರಚಲಿತ ಸಾಮಾಜಿಕ ಸಮಸ್ಯೆಗಳನ್ನು ರಂಗಮಂಟಪವೇರಿಸಿ ಹೊಸದೊಂದು ಯುಗವನ್ನೇ ಪ್ರಾರಂಭಿಸಿದ ಕೀರ್ತಿ ಕೈಲಾಸಂರವರಿಗೆ ಸಲ್ಲತಕ್ಕದ್ದು ಎಂಬುದಂತೂ ನಿರ್ವಿವಾದ. ಪ್ರಥಮ ಬಾರಿಗೆ ಈ ಸಾಮಾಜಿಕ ನಾಟಕ ಯುಗದ ನಾಂದಿಯಾಗಿ ಅವರು ನೀಡಿದ ಕೊಡುಗೆ 'ಟೊಳ್ಳು ಗಟ್ಟಿ'. ಇದರಲ್ಲಿ ಕೈಲಾಸಂ ಜನತೆಗೆ ತಮ್ಮನ್ನು ಪರಿಚಯ ಮಾಡಿಕೊಡುತ್ತಾ "ಪ್ರಹಸನ ಪ್ರಪಿತಾಮಹ ಚಂಡ ಪ್ರಚಂಡ ಗುಂಡೂರಾಯ ನಮೋಸ್ತುಮೇ" ಎಂದು ಕನ್ನಡಿ ಹಿಡಿದು ಬಂದು ತಮ್ಮ ಕಾಲಿಗೆ ತಾವೇ ಸಾಷ್ಟಾಂಗವರ್ಪಿಸಿಕೊಂಡರು. ಹಾಸ್ಯ ಚಕ್ರವರ್ತಿ ಎಂದು ತಮ್ಮ ಬಗ್ಗೆ ಹರಡಿದ್ದ ಕೀರ್ತಿಯನ್ನು ಸಾಬೀತುಗೊಳಿಸಿಕೊಂಡರು. ಅಂದಿನ ಸಂಪೂರ್ಣ ರಾಮಾಯಣ, ಭಕ್ತ ಪ್ರಹ್ಲಾದ ಇತ್ಯಾದಿ ಅಹೋರಾತ್ರಿ ನಡೆಯುತ್ತಿದ್ದ ನಾಟಕಗಳೆದುರಿನಲ್ಲಿ ತಮ್ಮದು ಒಂದು ಸಾಮಾಜಿಕ ಪ್ರಹಸನ ಮಾತ್ರವೆಂದು ಅವರಿಗೆ ಅನ್ನಿಸಿರಬೇಕು. ಆದರೆ ಇಂದಿನ ದೃಷ್ಟಿಯಲ್ಲಿ ಅವೆಲ್ಲವೂ ತೇಜಸ್ವಿಯಾದ, ಪೂರ್ಣವಾದ ನಾಟಕಗಳೇ ಹೌದು ಎನ್ನುವುದು ಸರ್ವವಿದಿತವಾಗಿದೆ.

ಅಂದಿನ ಪೌರಾಣಿಕ ನಾಟಕಗಳಲ್ಲಿ ಹತ್ತು ತಲೆಗಳನ್ನು ಹೊತ್ತು ಇಪ್ಪತ್ತು ಕೈಗಳಿಂದ ತನ್ನ ಮೀಸೆಗಳನ್ನು ತಿರುವುತ್ತಿದ್ದ ರಾವಣಾಸುರ, ನಿದ್ದೆಗಣ್ಣಿನಿಂದ ಮೇಲೆದ್ದು ಬರುವ ಪರ್ವತ ದೇಹಿ ಕುಂಭಕರ್ಣ, ಖೇಚರ ಸ್ಥಾಯಿಯಲ್ಲಿ ಕಂದಗಳನ್ನು ಕಿರಿಚಾಡುವ ಕಂಸಾಸುರ, ದೇವತೆಗಳನ್ನು ಗದ್ದರಿಸುತ್ತಾ ಮಲ್ಲಯುದ್ಧಕ್ಕೆ ತೊಡೆತಟ್ಟಿ ಕರೆಯುವ ಹಿರಣ್ಯಾಕ್ಷ ಹಿರಣ್ಯಕಶಿಪುಗಳು, ಲಂಕೆಗೆ ಬೆಂಕಿ ಹಚ್ಚಿ ಬಾಲದಿಂದ ರಕ್ಕಸರನ್ನು ಸದೆಬಡಿಯುವ ಆಂಜನೇಯ, ಗಡ್ಡಧಾರಿಗಳಾಗಿ ಶಾಪವನ್ನೆತ್ತಿ ಒಗೆಯಲು ತವಕದಿಂದ ಅಡ್ಡಾಡುವ ಋಷಿವರ್ಯರುಗಳು ರಂಗಮಂಟಪವೇರಿಕೊಂಡು ಅಟ್ಟಹಾಸದಿಂದ ಮೆರೆಯುತ್ತಿದ್ದರು. ಇವರ ನಾನಾ ವರ್ಣರಂಜಿತ ರಟ್ಟಿನ ಗದೆಗಳು, ಥಳಥಳಿಸುವ ತಗಡಿನ ಖಡ್ಗಗಳು, ಕೃತಕ ವಜ್ರ ವೈಢೂರ್ಯಾದಿಗಳಿಂದ ಕಣ್ಣು ಕೋರೈಸುವ ಕಿರೀಟಾದಿ ಆಭರಣಗಳು ಹಾಗೂ ಇವರು ಹಾಡುತ್ತಿದ್ದ ವೀರಾವೇಶದ ಹಾಡುಗಳು ಜನರ ಕಣ್ಮನ ಸೆಳೆದಿದ್ದವು.

ಇಂತಹ ನೂಕುನುಗ್ಗಲಿನ ರಂಗಮಂದಿರದೊಳಗೆ ಗಡ್ಡಗಳಿಲ್ಲದ, ಗದೆ ಕತ್ತಿಗಳನ್ನೇ ಕಾಣದ, ಕಿರೀಟಾದಿ ಆಭರಣರಹಿತವಾದ ಜನಸಾಮಾನ್ಯರು ಪ್ರವೇಶ ಮಾಡುವುದೆಂದರೇನು? ಇಂತಹ ಸಮಯದಲ್ಲಿ ಕೈಲಾಸಂ ತನ್ನ ಹಾವಾಡಿಗನ ಬುಟ್ಟಿಯಲ್ಲಿ ಕಟ್ಟಿ ತಂದ, ಸಾಮಾನ್ಯ ಮಾನವರಾದ ರಂಗಣ್ಣ, ರಾಮಣ್ಣ, ಅಹೋಬ್ಲು, ನಾಗತ್ತೆ, ಸುಬ್ಬಮ್ಮ, ಪಾತು, ಸಾತು, ಬಾಳು, ನರಸಿಂಹಯ್ಯ, ಪೋಸ್ಟ್‌ಮನ್, ಗಡಪ್‌ಖಾನ್, ಪೋಲಿಕಿಟ್ಟಿ, ಕಪ್ಪಣ್ಣ ಇತ್ಯಾದಿ ಮಂದಿಯನ್ನು ಧೈರ್ಯವಾಗಿ ರಂಗಮಂಟಪಕ್ಕೇರಿಸಿದರು. ಆದದ್ದೇನು? ಇವರನ್ನು ಕಂಡಾಕ್ಷಣ ರಾವಣ, ಕುಂಭಕರ್ಣಾದಿ ದೈತ್ಯರು ಬೆಕ್ಕಸಬೆರಗಾಗಿ ತಮ್ಮ ಗದೆ, ಕತ್ತಿ, ಮೀಸೆ, ಗಡ್ಡ, ಆಭರಣಾದಿಗಳ ಸಮೇತ ಪರಾರಿಯಾದರು! ಈ ಕೈಲಾಸಂ ಪಾತ್ರಗಳ ಮಾತಿನ ಚಕಮಕಿ, ವಿನೋದಪೂರ್ಣ ವಿವಾದಗಳು, ವಿಚಿತ್ರ ಸನ್ನಿವೇಶಗಳು ಜನರನ್ನು ಕಕ್ಕಾಬಿಕ್ಕಿ ಮಾಡಿದವು. ಈ ವಿಚಿತ್ರ ವ್ಯಕ್ತಿಗಳ ನಡೆ ನುಡಿಗಳ ಆಕರ್ಷಣೆಗೆ ಪ್ರೇಕ್ಷಕರು ಮಾರುಹೋದರು. ಕನ್ನಡ ನಾಟಕ ರಂಗಕ್ಕೆ ಹತ್ತಿದ್ದ ಪೌರಾಣಿಕ ತೆವಲು

ಬಿಟ್ಟುಹೋಯಿತು. ಸಾಮಾನ್ಯ ಜನರ ದಿನನಿತ್ಯದ ಜೀವನದ ಹಿಂದೆ ಅಡಗಿರುವ ಕಾಪಟ್ಯ, ವಂಚನೆ, ನಟನೆ, ಆಟಾಟೋಪ, ಅಟ್ಟಹಾಸ, ಮೋಸ, ಠಕ್ಕುಗಳನ್ನೆಲ್ಲಾ ಈ ನಾಟಕಗಳು ಬಯಲು ಮಾಡಿದವು. ಇವು ಜನತೆಯ ಕಣ್ಣನ್ನು ತೆರೆಯಿಸಿದವು. ಇಂತಹ ವೈವಿಧ್ಯಮಯ ಆಕರ್ಷಣೆ ಎದುರಿನಲ್ಲಿ ದೇವದಾನವರ ಅರ್ಥಶೂನ್ಯ ಆರ್ಭಟಗಳು ಹುಸಿ ಎನಿಸಿದವು. ಎಂತೂ ಕನ್ನಡದ ಸಾಮಾಜಿಕ ನಾಟಕಗಳ ಹೊಸ ಯುಗ ಆರಂಭವಾಯಿತು. ಇದರ ಆದ್ಯ ಪ್ರವರ್ತಕ ಶ್ರೀ ತ್ಯಾಗರಾಜ ಪರಮಶಿವ ಕೈಲಾಸಂ.

**ವಿನೋದದ ದಾಳಿ**

ಶ್ರೀ ಕೈಲಾಸಂರವರು ಹುಟ್ಟಿದ್ದು ನೂರು ವರ್ಷಗಳ ಹಿಂದೆ. ಇವರು ಮೈಸೂರು ಸಂಸ್ಥಾನದ ಹೈಕೋರ್ಟು ನ್ಯಾಯಾಧೀಶರಾಗಿದ್ದ ಜ|| ಪರಮಶಿವ ಐಯ್ಯರ್ ಅವರ ಮಕ್ಕಳು. ಇವರ ವಿದ್ಯಾಭ್ಯಾಸ ಮೈಸೂರು, ಬೆಂಗಳೂರು, ಹಾಸನಗಳಲ್ಲಾಯಿತು. ಕಾಲೇಜು ವಿದ್ಯಾಭ್ಯಾಸ ಮತ್ತು ಪ್ರಶಸ್ತಿ ಪಡೆದುದು ಮದ್ರಾಸಿನಲ್ಲಿ. ಬಾಲ್ಯದಿಂದಲೇ ಕೈಲಾಸಂ ಚಾಣಾಕ್ಷಮತಿ ಎಂದು ಹೆಸರುಗಳಿಸಿದ್ದು ಪರೀಕ್ಷೆಗಳಲ್ಲಿ 'ಫಸ್ಟ್ ಕ್ಲಾಸ್'ಗಳನ್ನು ಸಿಗಿದುಸಿಪ್ಪೆ ಹಾಕಿದ್ದರು. ಕಡೆಗೆ ಭೂಗರ್ಭ ಶಾಸ್ತ್ರದ ಉನ್ನತ ಪದವಿಗಾಗಿ ಲಂಡನ್ನಿನ ರಾಯಲ್ ಕಾಲೇಜಿಗೆ ಸೇರಿ ಅಲ್ಲಿ ಪ್ರಶಸ್ತಿ ಪಡೆದು ಬಂದರು. ಇಂಗ್ಲೆಂಡಿನಲ್ಲಿದ್ದ ಹಲವು ವರ್ಷಗಳ ಕಾಲದಲ್ಲಿ ಇವರು ಅಲ್ಲಿನ ಸರ್ಕಸ್ ಕೂಟಗಳು, ನೃತ್ಯಮಂದಿರಗಳು, ನಾಟಕ ರಂಗಗಳ ಆಮೂಲಾಗ್ರ ಪರಿಚಯ ಮಾಡಿಕೊಂಡು ಬಂದರು. ಇದಲ್ಲದೆ ಯೂಜಿನ್‌ಸಾಂಡೋ ಎಂಬ ವ್ಯಾಯಾಮ ಪಟುವಿನ ಬಳಿ 'ಫಿಸಿಕಲ್ ಕಲ್ಚರ್' ಶಿಕ್ಷಣ ಪಡೆದರು. ಇಂಗ್ಲೆಂಡಿನ ಫುಟ್‌ಬಾಲ್ ಟೀಮಿನ ಗೋಲಿಯಾಗಿಯೂ ಆಡುತ್ತಿದ್ದರಂತೆ. ಇವರ ಮೈಕಟ್ಟು ಅತ್ಯಂತ ದೃಢವಾದುದೂ ಆಗಿತ್ತು. ಇಷ್ಟಲ್ಲದೆ ಅಲ್ಲಿನ ಸಂಗೀತ ಸಾಹಿತ್ಯಗಳಲ್ಲಿ ಇವರ ಪ್ರೌಢಿಮೆ ಅಸದಳವಾಗಿತ್ತು. ಇವರ 'ತಿಪ್ಪಾರಳ್ಳಿ', 'ಕೋಳೀಕೆರಂಗಾ', 'ನೋಡಿದ್ರಾ ನಂ ನಂಜೀನಾವ' ಕೇಳಿದರೆ ಪಾಶ್ಚಾತ್ಯರ ಸಂಗೀತದ ಮರ್ಮಗಳ ಐತಿಹ್ಯ ಇವರಿಗೆ ಎಷ್ಟುಮಟ್ಟಿಗೆ ಕರತಲಾಮಲಕವಾಗಿತ್ತೆಂದು ಊಹಿಸಬಹುದು. ಇವರ ಇಂಗ್ಲಿಷ್ ಕವನಗಳಲ್ಲೂ, ನಾಟಕಗಳಲ್ಲೂ ಕಾಣ ಬರುವ ಶೈಲಿ ಇವರಿಗೆ ಆ ಭಾಷೆಯ ಮೇಲಿದ್ದ ಆಧಿಪತ್ಯವನ್ನು ಶ್ರುತಪಡಿಸುತ್ತದೆ.

ಇವುಗಳೆಲ್ಲಕ್ಕೂ ಹೆಚ್ಚಾಗಿ ಇವರ ವಿನೋದಪ್ರಿಯತೆ ಇವರನ್ನು ಒಬ್ಬ 'ಜೀನಿಯಸ್'ರನ್ನಾಗಿ ಮಾಡಿತು ಎನ್ನುವುದರಲ್ಲಿ ಸಂದೇಹವಿಲ್ಲ. ಇವರ ನಾಟಕದ ಪಾತ್ರಗಳನ್ನೇ ಒತ್ತಟ್ಟಿಗಿಟ್ಟರೂ ಇವರು ಕಟ್ಟುತ್ತಿದ್ದ ಅಣಕವಾಡುಗಳು, 'ಕುಂಟ್ಪದಿಗಳು,' ವಕ್ರೋಕ್ತಿಗಳು, ಚುಟುಕಚಾಟೋಕ್ತಿಗಳು, ಜೋಕುಗಳು ಅಸಂಖ್ಯಾತವಾಗಿವೆ. ಇದನ್ನು ಕೇಳುವ ಜನ ಈಗಲೂ ಹೊಟ್ಟೆ ಹುಣ್ಣಾಗುವಷ್ಟು ನಕ್ಕು ಇಡೀ ಜೀವಮಾನ ಅವನ್ನು ಚಪ್ಪರಿಸುವುದು ವಾಡಿಕೆ. ಕೈಲಾಸಂ ಎಂದರೆ ಕುಚೋದ್ಯಕ್ಕೆ ಮತ್ತೊಂದು ಹೆಸರು ಎನ್ನುವಷ್ಟು ಮಟ್ಟಿಗೆ ಇವರ ನುಡಿಕಟ್ಟುಗಳು ಪ್ರಸಿದ್ಧವಾಗಿವೆ.

"I was born with a siuber spoon in my mouthಉ it hurt me terribly ಮಗು-ಕಿತ್ತು ಬಿಸಾಡಿಬಿಟ್ಟೆ" ಎಂದು ಗಹಗಹಿಸುವರು.

ಇವರ ಮನೆ ಹೆಸರು white house ಎಂದು "I am the only dark spot in the white house" ಎಂದು ನಗೆಯಾಡುವರು. "ನನ್ನನ್ನು ಒಂದು ಸ್ಥಳಕ್ಕೆ wild horses cannot bring me... but once I am in, wild asses cannot kick me away" ಎನ್ನುವರು. "ಕೂತಲ್ಲಿ ಕಂಪ್ನಿ......ನಿಂತಲ್ಲಿ ನಾಟ್ಕ" ಎನ್ನುತ್ತಾ ಕೈಲಾಸಂ ರಾತ್ರಿ ಎಲ್ಲಾ ಮಾತನಾಡಿ ಬೆಳಗ್ಗೆ ಸೂರ್ಯೋದಯವಾದ ನಂತರ... "ನೋಡು ಮಗು tomorrow morning ಬಂದ್ಬಿಡ್ತು, ಮಲಗಿಕೋ ಹೋಗು" ಎಂದು ಹೇಳುವುದು ರೂಢಿ. ಇಂತಹ ಮಾತಿನ ಸರಮಾಲೆಗಳನ್ನು ಬರೆದು ಹಲವಾರು ಪುಟಗಳನ್ನು ತುಂಬಬಹುದು.

ಇವರು ಒಮ್ಮೆ ಎರಡು ಗಂಟೆಗಳ ಕಾಲ ತಮ್ಮ ಕರ್ಣ (ಇಂಗ್ಲಿಷ್) ನಾಟಕವನ್ನು ಏಕಪಾತ್ರಾಭಿನಯ ಪ್ರದರ್ಶನ ನೀಡಿದ ನಂತರ ಯಾರೋ ಒಬ್ಬಾತ ಬಹು ಮೆಚ್ಚಿಕೊಂಡರೂ, ಕೊಂಕು ಮಾತಾಡಿ "after all he is a drunkardoo" ಎಂದರು. ಅದನ್ನು ಯಾರೋ ಕೈಲಾಸಂಗೆ ಹೇಳುತ್ತಲೇ ಕೆರಳಿದ ಕೈ "Before all..I am a think-hardoo!" ಅನ್ನೋದು ಹೊಳೀಲಿಲ್ವೆ ಆತನಿಗೆ ಎಂದು ಸಿಡಿಕಿದರು. ಆತನ ಪಾತ್ರಗಳಲ್ಲಿ ಕಾಣಬರುವ ವಿಕಟಹಾಸ್ಯದ ಜೊತೆಗೆ ಆತ ಮಾತನಾಡುತ್ತಿದ್ದ ಶೈಲಿ ಇನ್ನೂ ಆಕರ್ಷಕವೆಂದು ಬಲ್ಲವರೇ ಬಲ್ಲರು. ತಮಗೆ ಡ್ರಿಂಕ್ upset ಮಾಡೋಲ್ವೆ ಎಂಬ ಪ್ರಶ್ನೆಗೆ ಅವರ ಉತ್ತರ "No ಮಗು.... it sets me up" ಎಂದು. ಅದು ನಿಜ ಕೂಡ. ಕಾಳಿದಾಸನ ಶ್ಲೋಕ ಒಂದನ್ನು ಒಂದು ಪದ ಬದಲಿಸಿ ತದ್ವಿರುದ್ಧವಾದ ಅರ್ಥ ಬರುವಂತಾಗಿಸಿ "There is a cheap little 'd' of a difference between a Kalidas and Kailas" ಎನ್ನುವರು. "Shaw Irish, ನಾನು Iyerish" ಎನ್ನುವರು. ಕನ್ನಡದ ಆದಿಕವಿ ಆದಿಪಂಪ, ನಾನು ನವ್ಯಕವಿ "ಎಲೆಕ್ಟ್ರಿಕ್ ಪಂಪ" ಎನ್ನುತ್ತಾ ಪಂಪನ ಹಲವು ಸಾಲುಗಳನ್ನು ಚಮತ್ಕಾರವಾಗಿ ತಿರುಚಿ ಹಾಡಿ ನಗಿಸುವರು. ನಮ್ಮ ಮನೆಗೆ ಬಂದು ನೀವು ಇರಬಹುದು, ಆದರೆ ನಾನು communist ಎಂದಾರೋ ಮೈಸೂರಿನಲ್ಲಿ ಆಹ್ವಾನವಿತ್ತಾಗ, ಅದು ಪರವಾಗಿಲ್ಲ ನಾನು immunist ಎಂದು ಹೇಳಿದರು. ಮಕ್ಕಳಿಗೆ ಕುರುಗಳ ಬಾಧೆಯಿಂದ ಗೃಹ ಪ್ರವೇಶ ಮುಂದೆ ಹೋಯಿತು ಅಂತಾರೋ ಹೇಳುತ್ತಿದ್ದಾಗ ಕೈಲಾಸಂ.. ಅದು ಪರವಾಗಿಲ್ಲ ಗೃಹಪ್ರವೇಶ ಜರುಗಿಸಿ ಮನೆಗೆ "ಕುರುಕ್ಷೇತ್ರ" ಎಂದು ಹೆಸರಿಡಿ ಎನ್ನಬೇಕೆ? ಬೆಳಗಾವಿಯಲ್ಲಿ ಯಾರೋ ಒಬ್ಬ ಮಹಾರಾಷ್ಟ್ರವಾದಿ ಮರಾಠಿ ಚರಿತ್ರೆಯ ಹೆಗ್ಗಳಿಕೆ ಪರಿಚಯವಿದೆಯೇ ಎಂದು ಇವರನ್ನು ಕೇಳಿದಾಗ. .... "ಓಹೋ ಗೊತ್ತು... ಬಹು ಸುಲಭ... ಮೊದಲು ಶಿವಾಜಿ... ನಂತರ ಸಾಂಬಾಜಿ... ಅನಂತರ ಪೂರಿಬಾಜಿ..... ನಂತರ ಪಾತಾಳಬಾಜಿ.... ಪಾವ್‌ಬಾಜಿ ಇತ್ಯಾದಿ" ಎಂದು ಚಟಾಕಿ ಹಾರಿಸಿದ ಚಾಣಾಕ್ಷ ಕೈಲಾಸಂ.

ಈ ಕಥೆಗಳಿಗೆ ನಿಜಕ್ಕೂ ಒಂದು ಪುಸ್ತಕವೆ ಸಾಕಾಗದು. ಹಾಡುಗಳ ಹುಳಿಕರಣೆ ಎಂದು ಒಂದು ಗಂಟೆಯ ಕಾಲ ಪ್ರಹಸನ ಮಾಡುತ್ತಿದ್ದ ಈತ ಹಲವಾರು ಕೀರ್ತನೆ, ಪದ, ದೇವರ ನಾಮಗಳನ್ನು ಧ್ವನಿ, ಅಕ್ಷರ, ನುಡಿಕಾರ ಅಥವಾ ಸಂದರ್ಭಗಳನ್ನು ಬದಲಾಯಿಸಿ ವಿಲಕ್ಷಣವಾಗಿ ಮಾರ್ಪಡಿಸುತ್ತಿದ್ದ ನೂರಾರು ಉದಾಹರಣೆಗಳಿವೆ. ಇವರು ಬರೆದ ಸಂಗೀತಮಯ ಪ್ರಹಸನಗಳು ನಾಲ್ಕಾರಿವೆ, ಇವು ವರದಾಚಾರ್ಯರ ನಾಟಕಗಳ ಮುಖ್ಯ ಹಾಡುಗಳ ಅಣಕವಾಡುಗಳ ಸರಮಾಲೆ. ಅವುಗಳ ಮೂಲ ಕೃತಿಗಳು, ಮಟ್ಟುಗಳು ಈಗಿನ ಜನರಿಗೆ ತಿಳಿಯದೆ ಅವುಗಳು ಮರೆಯಾಗುತ್ತಿವೆ. ಅವುಗಳಲ್ಲಿ 'ನಂಕಂಪ್ನಿ ಅಥ್ವಾ ಶೂರ್ಪಣಖಾ ಕುಲ ವೈಭವ', 'ಶಂಬರನ ಶೃಂಗಾರ', 'ವಿವಿಧ ವಿನೋದ ಧಾಳಿ' ಇತ್ಯಾದಿಗಳೇ ಅಲ್ಲದೆ 'ಅಧ್ಯಾನ್ನವನ' 'ಬಲಿತ ಬಾಲಿಕಾ ಪಾಠಶಾಲೆ'

ಇತ್ಯಾದಿ ಛೋಟಾ ಪ್ರಹಸನಗಳೂ ಇವೆ. ವರದಾಚಾರ್ಯರ ಮನ್ಮಥ ವಿಜಯದ ಕೋರಸ್-"ಕೀರೆಯಸೊಪ್ಪು, ಮೆಂತೆಯ ಸೊಪ್ಪು" ಆಗಿದೆ. 'ನಲ್ಲೆ ಕುಸುಮ ಚಲ್ಲಿರೆ' ಎಂಬ ಮನ್ಮಥನ ದಿವ್ಯವಾದ ವನಗಳ ವರ್ಣನೆ ಸ್ಯಾನಿಟರಿ ಇನ್ಸ್‌ಪೆಕ್ಟರ್ ಬಾಯಲ್ಲಿ 'ಪೆನಾಯಿಲ್ಲನು ಚಲ್ಲಿರೆ' ಆಗಿದೆ. "ಇಂದುವದನೆ ಚಂದಿರಾನನೆ ಒಂದೇ ಮಾತಲಿ ಪೇಳ್ವುದು" ಎಂಬ ಹಾಡು ತರಕಾರಿ ವ್ಯಾಪಾರಕ್ಕಿಳಿದ ಐಯ್ಯರ್ ಬಾಯಿನಲ್ಲಿ "ಇಂದು ಬದನೆಕಾಯಿಯಾ ಬೆಲೆ ಒಂದೇ ಮಾತಲಿ ಪೇಳ್ವುದೋ" ಆಗಿದೆ. ಇಂತಹ ನೂರಾರು ಹಾಡುಗಳನ್ನು ಹೇಳಿ ವಿವರ ನೀಡಿದಾಗ ಪ್ರೇಕ್ಷಕರು ಗಂಟೆಗಟ್ಟಲೆ ಮಂತ್ರಮುಗ್ಧರಾಗಿ ಕೇಳಿದ ಅನುಭವ ಈ ಲೇಖಕನದಾಗಿದೆ.

**ಸವ್ಯಸಾಚಿ**

ಕೈಲಾಸಂ ಸ್ವತಃ ವರದಾಚಾರ್ಯರ ನಾಟಕಗಳಲ್ಲಿ ಪಾತ್ರಧಾರಿ ಯಾಗಿದ್ದುದಲ್ಲದೆ ಆಚಾರ್ಯರು ತೀರಿಕೊಂಡಾಗ ಅವರ ಕಂಪೆನಿ ಯಾಜಮಾನ್ಯ ವಹಿಸಿಕೊಂಡುದು ಹಲವರಿಗೆ ತಿಳಿಯದು. ಅವರಿಗೆ ಅಂದಿನ ಪೌರಾಣಿಕ ನಾಟಕಗಳ ಸಂಪೂರ್ಣ ಪರಿಚಯವೇ ಅಲ್ಲದೆ ಆ ಹಾಡುಗಳ ಧಾಟಿಯ ಸರ್ವಲಕ್ಷಣಗಳೂ ಗೊತ್ತಿದ್ದವು. ಸ್ವತಃ ಅವರಿಗೆ ಸಂಗೀತದ ಅನುಭವವೇ ಅಲ್ಲದೆ ಸಂಗೀತ ಲಕ್ಷಣಶಾಸ್ತ್ರದ ಗಾಢ ಪರಿಚಯವಿತ್ತು. ಶಂಬರನ ಶೃಂಗಾರದಲ್ಲಿ ಅವರು ಹಂಸಧ್ವನಿ, ಶಹನ, ಘರಜ್, ಬೇಗಡೆ ಕಮಾಚ್ ರಾಗಗಳ ಅತ್ಯುತ್ತಮ ಕೃತಿಗಳನ್ನು ರಚಿಸಿದ್ದಾರೆ. ವಾದ್ಯಗಾರರು ಮತ್ತು ತಬಲದವರು ಕಕ್ಕಾಬಿಕ್ಕಿಯಾಗುವಂತಹ ಕಸರತ್ತುಗಳನ್ನು ಅವುಗಳಲ್ಲಿ ತುರುಕಿದ್ದಾರೆ. (ಅದೊಂದು ದೀರ್ಘ ಪ್ರಸಂಗವೇ ಎನ್ನಿ). ಆದುದರಿಂದ ಅವರಿಗೆ ಸಂಗೀತ, ಪುರಾಣ ಗೊತ್ತಿಲ್ಲದೆ ನೀರಸವಾದ ಜನಸಾಮಾನ್ಯರನ್ನು ಕುರಿತು ಬರೀ ಮಾತು ತುಂಬಿದ ಸಾಮಾಜಿಕ ನಾಟಕಗಳನ್ನು ರಚಿಸಿದರೆಂಬ ಅಪ್ರಬುದ್ಧರು ಆಡುವ ಮಾತು ಕುರಿತು ಅವರ ಮಾತಿನಲ್ಲೆ ಹೇಳಬೇಕಾದರೆ 'ಅಜ್ಞಾನದ ಅಪಾಯ" ಎನ್ನಬೇಕು. ಇದಕ್ಕಿಂತ ಆಭಾಸ ಬೇಕೆ?

"ನಕ್ಕು ನಗಿಸುವಾತ ಸಾವಿರ್ದನಕ್ಕಾತ" ಎಂದ ಕೈಲಾಸಂ ಅನೇಕ ನಾಟಕಗಳಲ್ಲಿ ನಗುವಿನ ಹುಚ್ಚುಹೊಳೆ ಹರಿಸಿದ್ದಾರೆಂದು ಗುರುತಿಸಿರುವವರ ಮಾತಿನಲ್ಲೂ ತಥ್ಯವಿದೆ. ಒಂದೇ ಉದಾಹರಣೆ ಎಂದರೆ ಬಂಡ್ವಾಳ್ವಿಲ್ಲದ ಬಡಾಯಿನ ಅಹೋಬ್ಲು ಮುದ್ಮಣಿಯ ಬಗ್ಗೆ ಪ್ರಯೋಗಿಸಿದ ಹಲವು ಜೋಕುಗಳು. ಆದರೆ ಇಡೀ ಚೌಕಟ್ಟೇ ಹಾಸ್ಯದ ಹೂರಣ ತುಂಬಿರುವ ಕಡುಬಿನಂತಿದೆ. ಅದರಲ್ಲಿ ಎರಡು ಗೋಡಂಬಿ, ದ್ರಾಕ್ಷಿ ಹೆಚ್ಚಾಯಿತೆಂದರೆ ಅದನ್ನು ವಿಪರೀತವೆಂದು ಹೇಳುವುದೇನಿದೆ? ಅಂತೆಯೇ ಹಲವು ನಾಟಕಗಳಲ್ಲಿ ಮಾತಿನ ಹೊಳೆ ದಡ ಮೀರಿ ಹರಿದಿದೆ ಹಾಗೂ ಕಲೆಗೆ ವಿಶಿಷ್ಟವೆನಿಸಿದ ಔಚಿತ್ಯ, ಬಿಕ್ಕಟ್ಟುಗಳಿಗೆ ಕೆಲವೆಡೆ ಧಕ್ಕೆ ಬಂದಿರುವುದು ನಿಜ. ಆದರೆ ಕೈಲಾಸಂ ಜನರ ಮಾತುಕತೆ, ಧ್ವನಿ, ಉಚ್ಚಾರಣೆ, ಸಮಯ ಸಂದರ್ಭ, ಕಾಪಟ್ಯ, ಗರ್ವ, ದೊಡ್ಡಸ್ತಿಕೆ, ಅಟಾಟೋಪ, ಆಡಂಬರಗಳನ್ನು ದುರ್ಬೀನು ಹಾಕಿ ನೋಡಿ ಗುರುತು ಹಿಡಿದು ಅದನ್ನು ಬಹಿರಂಗಪಡಿಸಿದ್ದಾರೆ. ಅವರ ನಾಟಕಗಳ ಉದ್ದಕ್ಕೂ ಜನ ಹೊಟ್ಟೆ ಹುಣ್ಣಾಗುವಷ್ಟು ನಗುತ್ತಿದ್ದರೂ ಅದರ ಹಿನ್ನೆಲೆಯಲ್ಲಿ ನಮ್ಮ ಸಮಾಜದ ಅನಿಷ್ಟ ಪ್ರವೃತ್ತಿಗಳನ್ನು, ಕ್ಷಕಿರಣಗಳನ್ನು ಚೆಲ್ಲಿ ತೋರಿಸಿದ್ದಾರೆ. ದೊಡ್ಡಕ್ತದವರಾಡುವ ಆಂಗ್ಲೋ ಕನ್ನಡ, ಶೆಟ್ರ ತೆಲುಗು, ಐಯ್ಯರಿ, ಐಯ್ಯಂಗಾರ್‍ಸ್, ಸಂಕೇತಿಗಳಾಡುವ ವಿಧವಿಧ ಶೃತಿಗಳಿರುವ ತಮಿಳು, ಗಡಫ್‌ಖಾನರ ಉರ್ದು ಮಿಶ್ರಿತ ಕನ್ನಡ ಎಷ್ಟೊಂದು ರಸಭರಿತ ಎಂದು ವರ್ಣಿಸಲು ಸಾಧ್ಯವಿಲ್ಲ. ಇದು ಅತ್ಯಂತ ಶಕ್ತಿಯುತ ಎನ್ನಬೇಕು. ಆದರೆ ಈ ವತ್ತಕ್ಷರಗಳ ಸಾಲುಗಳನ್ನು ಓದಲಾಗದೆ ಕಣ್ಣುಬಿಡುವ ಓದುಗರು ಕೈಲಾಸಂ ಓದಲು ಇಂದು ಹಿಂತೆಗೆಯುತ್ತಿದ್ದು, ಈ ಅದ್ಭುತ ಕೃತಿಗಳು ಜನರಿಂದ ದೂರವಾಗುತ್ತಿವೆ ಎಂಬುದೂ ಒಂದು ಕಠೋರ ಸತ್ಯ.

ಕೈಲಾಸಂ ಭೂಗರ್ಭಶಾಸ್ತ್ರದಲ್ಲಿ ಅತ್ಯುನ್ನತ ಪದವಿ ಪಡೆದು ಶ್ರೀಮಂತ ವಂಶದ ಆಸರೆ ಇದ್ದು, ಸರ್ಕಾರಿ ಉದ್ಯೋಗ ದೊರಕಿದ್ದರೂ ಸಹ ಅದನ್ನೆಲ್ಲಾ ತೊರೆದರು. ಅವರು ಹುಟ್ಟಿದ್ದೇ ನಾಟಕ ಬರೆಯಲೋಸುಗ ಎಂದು ಹೇಳಬೇಕಾಗುತ್ತದೆ. ಅವರಿಗೆ ಲಂಡನ್ನಿನಲ್ಲಿ ವೈಲ್ಡ್, ಷಾ, ಷೆರಿಡನ್, ಇಬ್ಸನ್, ಷೇಕ್ಸ್‌ಪಿಯರನ ನಾಟಕಗಳನ್ನು ನೋಡಿ ಅಂತೆಯೇ ನಮ್ಮ ನಾಟಕವನ್ನು ಇಂದಿನ ಯುಗಕ್ಕೆ ಕೊಂಡೊಯ್ಯುವುದೆಂತು ಎಂಬ ಚಿಂತೆ ಸರ್ವದಾ ಕಾಡುತ್ತಿದ್ದಿತು. ಅದಕ್ಕಾಗಿ ಅವರು ಸರ್ವಸ್ವವನ್ನೂ ತೊರೆದು ಅಲೆಮಾರಿಯಾದರು. "ಕೂತಲ್ಲಿ ಕಂಪೆನಿ....ನಿಂತಲ್ಲಿ ನಾಟ್ಕ" ಅವರು ಹೋದಲ್ಲೆಲ್ಲಾ ನಾಟಕವಾಡಿಸುವರು. ತಾವೇ 4ಗಂಟೆಗಳ ಕಾಲ ಏಕಪಾತ್ರಾಭಿನಯ ಮಾಡಿ ಪ್ರದರ್ಶನಗಳನ್ನು ನೀಡುತ್ತಿದ್ದರು. ಅವರಿಗೆ ಕೈಬರಹದ ಪ್ರತಿ ಅವಶ್ಯಕವಿರಲಿಲ್ಲ. ನಾಲ್ಕಾರು ನಾಟಕಗಳನ್ನೂ, ನೂರಾರು ಹಾಡುಗಳನ್ನೂ, ಹಲವಾರು ಅಣಕವಾಡುಗಳನ್ನೂ ನೀಡಿ, ಜನರನ್ನು ಚುಚ್ಚಿ ನಗಿಸುವರು. ಇವರ ಇಡೀ ಜೀವಮಾನವೇ ಹೀಗೆ ಜರುಗಿತು. ಇವರು ಕುಟುಂಬದ ಹಂಗನ್ನು ತೊರೆದು ಈ ಗಂಧರ್ವ ವೃತ್ತಿಗೆ ತೊಡಗಿದರು. ಅವರ ಕಲೆಯಲ್ಲಿ ನಾಟಕಗಳ ಜೇನುಗೂಡು ಕಟ್ಟಿತ್ತು. ನಾವು ಪೀಡಿಸಿ ಬರೆದುಕೊಂಡರೆ ಕೈ ಪ್ರತಿಗಳು; ಇಲ್ಲವೋ. ಇಲ್ಲ! ಅವರ ಹಲವಾರು ನಾಟಕಗಳು ಅವರೊಡನೆಯೇ ಅಂತರ್ಧಾನವಾದವು. ಲೇಖಕನಿಗೆ ತಿಳಿದಂತೆ ಅವರ ಸಂಗೀತಮಯ ನಾಟಕಗಳು, ಕೇರಳಯಾತ್ರೆ, ಕಾಳಮ್ಮನ್ಕೆಕ್ಕು, ಅಹೋಬ್ಲುಸ್ ಆಟೋಕಾರು, ಮೃಕಂಡು (ಸಂಸ್ಕೃತದಲ್ಲಿ), ಹರಿಶ್ಚಂದ್ರ (ಇಂಗ್ಲಿಷಿನಲ್ಲಿ), ಹೌಸ್ ಆಫ್ ವೊಡೆಯರ್‍ಸ್ (ಇಂಗ್ಲಿಷ್) ಇವುಗಳೆಲ್ಲ ಅರ್ಧಂಬರ್ಧ ಕಾಗದಕ್ಕಿಳಿದಿದ್ದು ಅಂತರ್ಧಾನವಾಗಿವೆ. ಅಂತೆಯೇ ಅವರು ಗುಡುಗುತ್ತಿದ್ದ ಸಹಸ್ರಾರು ಜೋಕುಗಳೂ ಅಸ್ತಂಗತವಾಗಿವೆ. ಕೇಳಿದರೆ "it all depends on the luck of the posterity" ಎನ್ನುತ್ತಿದ್ದರು. ಇಂದು ಈ ಊರು, ನಾಳೆ ಮತ್ತೊಂದೂರು, ತಂಗುವ ಸ್ಥಳ ಅನಿರ್ದಿಷ್ಟ, ಅಡ್ರೆಸ್ ನಾಪತ್ತೆ ಈ ರೀತಿ ಜರುಗಿದ ಇವರ ಜೀವನದಲ್ಲಿ ಸುವ್ಯವಸ್ಥಿತ ಕ್ರಮವೆಲ್ಲಿಂದ ಬಂದೀತು? ಇಷ್ಟಾಗಿ ಸುಮಾರು ಇಪ್ಪತ್ತೈದು ಕನ್ನಡ ನಾಟಕಗಳು, ಆರು ಇಂಗ್ಲಿಷ್ ನಾಟಕಗಳು ಅಚ್ಚಾಗಿವೆ. ಇದಕ್ಕೆ ದಿವಂಗತ ಶ್ರೀ ಬಿ.ಎಸ್. ರಾಮರಾಯರು ಬಹುಮಟ್ಟಿಗೆ ಕಾರಣರಾದರು. ಇವರಿಗೆ ಕನ್ನಡ ಜನತೆ ಎಷ್ಟು ವಂದಿಸಿದರೂ ಸಾಲದು. ಇದು ಕನ್ನಡ ನಾಡಿನ ಸೌಭಾಗ್ಯ ಎನ್ನಲು ಅಡ್ಡಿ ಇಲ್ಲ.

**ನಾಟಕಗಳ ವಸ್ತು-ಪಾತ್ರಗಳು**

ಇನ್ನು ಸ್ವಲ್ಪ ನಾಟಕಗಳತ್ತ ಕಣ್ಣು ತಿರುಗಿಸೋಣ. ಇವರ ಕನ್ನಡ ನಾಟಕಗಳ ಪಾತ್ರಗಳೆಲ್ಲವೂ ನಮ್ಮ ಸಮಾಜದಲ್ಲಿ ದಿನಂಪ್ರತಿ ನಾವು ಕಾಣುವ ಸಾಮಾನ್ಯ ವ್ಯಕ್ತಿಗಳೇ ಹೌದು. ಇವರ ಉಡಿಗೆ ತೊಡುಗೆ, ಇವರ ಊಟ ಉಪಚಾರ, ಇವರ ದೃಷ್ಟಿಕೋನ ಹಾಗೂ ಇವರು ಎದುರಿಸುವ ಸಮಸ್ಯೆಗಳು ನಮ್ಮಿಂದ ಭಿನ್ನವಾದವುಗಳಲ್ಲ. ಆದರೆ ಸಂದರ್ಭಗಳು ಮಾತ್ರ ಅತಿ ವಿಚಿತ್ರಮಯವಾದವು. ಇಲ್ಲೇಳುವ ವಾದ ವಿವಾದಗಳು ವಿಸ್ಮಯಕಾರಕ.

ಕೈಲಾಸಂರವರ ಅದ್ವಿತೀಯ ಹಾಸ್ಯ ಪ್ರವೃತ್ತಿ, ಅಸಾಧಾರಣ ಜಾಣ್ಮೆ, ವ್ಯಕ್ತಿ ಮತ್ತು ವಿಷಯಗಳ ಬಗ್ಗೆ ಇವರಿಗಿದ್ದ ಅಗಾಧ ಅರಿವು, ಮಾನವನ ಪ್ರವೃತ್ತಿಗಳ ಬಗ್ಗೆ ಇವರಿಗಿದ್ದ ಅಪಾರ ತಿಳುವಳಿಕೆ ಹಾಗೂ ದಂಗುಬಡಿಸಬಲ್ಲ ನಾಟಕೀಯ ಪ್ರತಿಭೆ ಇವುಗಳನ್ನು ಅಮೋಘ ಕೃತಿ ರತ್ನಗಳನ್ನಾಗಿಸಿತು. ನೀವೆಷ್ಟೇ ನಗುವಿನ ಅಲೆಗಳ ನಡುವೆ ಈಸಾಡುತ್ತಿದ್ದರೂ ನಿಮಗೆ ಇದರ ಹಿನ್ನೆಲೆಯಲ್ಲಿ ಟೊಳ್ಳಾವುದು, ಗಟ್ಟಿ ಯಾವುದು ಎಂಬ ಬಗ್ಗೆ ಕೈಲಾಸಂ ತಮ್ಮ ಎಲ್ಲಾ ನಾಟಕಗಳಲ್ಲೂ ಬೆರಳು ಮಾಡಿ ತೋರಿಸುತ್ತಾರೆ. ಸಾಮಾಜಿಕ ಕಾಪಟ್ಯ, ಡಾಂಭಿಕತನ, ಆಟಾಟೋಪ, ಸ್ವಾರ್ಥ, ಸಂಪ್ರದಾಯಗಳ ಅಸಂಬದ್ಧತೆ ಹಾಗೂ ಕ್ರೌರ್ಯಗಳನ್ನು ಪ್ರತಿಯೊಂದು ನಾಟಕದಲ್ಲೂ ಇವರು ಬಹಿರಂಗ ಪಡಿಸಿದ್ದಾರೆ. ಅವರೇ ಬರೆದಂತೆ "The barque of humour often veers to shoals of tears" ಎಂಬ ಮಾತನ್ನು ಕೈಲಾಸಂ ನಾಟಕಗಳಿಗೆ ಒಂದು ಸೂತ್ರದಂತೆ ಅನ್ವಯಿಸಬಹುದು.

ರಂಗಮಂಟಪದಲ್ಲಿ ಅಡ್ಡಾಡುತ್ತಿರುವವರು ನಿಮ್ಮ ನೆರೆಯಾತ, ಆತನ ಪತ್ನೀಪುತ್ರರು ನಿಮ್ಮ ಕ್ಲಬ್ಬಿನ ಮಿತ್ರ ಅಥವಾ ನೀವೇ ಇರುವಂತಿರುತ್ತದೆ. ನಿಮ್ಮಲ್ಲಿ ಮಿಡಿಯುವ ಹೃದಯವೇ ಅವನಲ್ಲೂ ಮಿಡಿಯುತ್ತಿದ್ದರೂ, ಸಮಸ್ಯೆಗಳ ವಿಡಂಬನೆಯಲ್ಲಿ ಕೈಲಾಸಂ ಪ್ರಭಾವ ಅವನ್ನು ಅಮರವನ್ನಾಗಿಸಿವೆ. ಉದ್ದಕ್ಕೂ ಅದು ನಗುವಿನ ಒಂದು ಹುಯಿಲು. ಇಷ್ಟಾಗಿ ಹೋಂರೂಲಿನ ರಾಮಣ್ಣನಾಗಲಿ, ಬಡಾಯಿಗಾರ ಅಹೋಬ್ಲೂ ವನ್ನಾಗಲಿ, ಹುತ್ತದಲ್ಲಿ ಹುತ್ತದ ಕಪ್ಪಣ್ಣನನ್ನಾಗಲಿ ನೋಡಿ ನಾವೆಷ್ಟೇ ನಕ್ಕರೂ, ಅವನನ್ನು ನಾವು ದ್ವೇಷಿಸುವುದಿಲ್ಲ. ನಾವೆಲ್ಲರೂ ಆ ಪಾತ್ರಗಳ ಲೋಪಗಳನ್ನು ಹೊತ್ತುಕೊಂಡೇ ಬಾಳುತ್ತಿದ್ದೇವೆ ಎನ್ನಿಸುತ್ತದೆ. ಸನ್ನಿವೇಶ ಸಂದರ್ಭಗಳು ಹೋಂರೂಲು, ಬಂಡ್ವಾಳ್ವಿಲ್ಲ ಬಡಾಯಿ, ಸತ್ತವನ ಸಂತಾಪ, ವೈದ್ಯನ ವ್ಯಾಧಿ, ಅಮ್ಮಾವ್ರಗಂಡ, ಪೋಲಿಕಿಟ್ಟಿ, ಟೊಳ್ಳುಗಟ್ಟಿಯ ನಾಲ್ಕು ನಾಟಕಗಳ ಸರಮಾಲೆ ಇತ್ಯಾದಿಗಳನ್ನು ಅದ್ವಿತೀಯ ನಾಟಕಗಳನ್ನಾಗಿಸಿವೆ. ಅವರು ಆಸ್ಕರ್ ವೈಲ್ಡ್‌ನಂತೆ ಕೋಲ್ಮಿಂಚುವ ಡೈಲಾಗ್ ರಚಿಸ ಬಲ್ಲವರಾಗಿದ್ದರು. ಷಾನಂತೆ ಜಾಣ್ಮೆಯ ಅತಿರೇಕಗಳನ್ನು ಹೊಮ್ಮಿಸುವ ಶಕ್ತಿ ಹೊಂದಿದ್ದರು. ಆದರೆ ಷೇಕ್ಸ್‌ಪಿಯರನ ಕಾರುಣ್ಯ, ಮಾನವತಾದೃಷ್ಟಿ ಇವರಲ್ಲಿ ಮೂಡಿದ್ದುದು ವಿಶೇಷ.

**ಇಂಗ್ಲಿಷ್ ನಾಟಕಗಳು**

ಕೈಲಾಸಂ ಕನ್ನಡದಲ್ಲಿ ದುರಂತ ನಾಟಕಗಳನ್ನೇ ಬರೆಯಲಿಲ್ಲ ಎಂಬುವರನ್ನು ಹೊಡೆದೇಳಿಸುವಂತಹ ದುರಂತ ನಾಟಕ 'ಬಹಿಷ್ಕಾರ'. ಮದುವೆಯಾಗದ ಕನ್ಯೆ, ಉಳಿದ ಕುಟುಂಬದವರಿಗೆ ಆಚಾರದ ಹೆಸರಿನಲ್ಲಿ ಸಮಾಜ ಕೊಡುವ ನರಕಯಾತನೆಯ ಕ್ರೌರ್ಯ ಇದರಲ್ಲಿ ಚಿತ್ರಿತವಾಗಿದೆ. ಇದೊಂದು ಕರಳು ಹಿಂಡುವ ಭೀಕರ ದುರಂತ ನಾಟಕ. ಇದರಲ್ಲಾವ ಚಿಲ್ಲರೆ ಜೋಕುಗಳೂ ಇಲ್ಲ. ಕಡೆಗೆ ವಿಷಪ್ರಾಶನ ಮಾಡಿ ಆತ್ಮಹತ್ಯೆ ಮಾಡಿಕೊಳ್ಳುವ ಕನ್ಯೆಯ ಪಾತ್ರ ನಮಗೆ ಗ್ರೀಕ್ ದುರಂತ ನಾಟಕಗಳ ನೆನಪನ್ನು ತರುತ್ತದೆ. ಇದರಲ್ಲಿ ವೈದಿಕ ಚೌಕಟ್ಟಿನಲ್ಲಿ ಹುದುಗಿರುವ ಕೊಳೆಗಡುಕ ಪ್ರವೃತ್ತಿಯನ್ನು ಕೈಲಾಸಂ ಹಂತ ಹಂತವಾಗಿ ಬಿಚ್ಚಿ ತೋರಿಸಿದ್ದಾರೆ. ಈ ನಾಟಕವನ್ನು ನೋಡಿ ಬಂದಾಗ ಸ್ವತಃ ಕೈಲಾಸಂ ರಂಗ ಮಂಚವೇರಿ ಜೋಕ್ ಹೊಡೆದರೂ ಜನ ತಿರಸ್ಕರಿಸುವಷ್ಟು ಭೀಕರವಾಗಿದೆ ಇದರ ಅಂತ್ಯ ಭಾಗ. ಅಂದರೆ ಕೈಲಾಸಂ ವಿದೂಷಕ ಎಂದರೂ ಆತನೇನೂ ಕುರುಡನಲ್ಲ. ಆತನ ವಿಚಿತ್ರ ವಿಡಂಬನೆಯ ಹಿಂದೆ ಸಾಮಾಜಿಕ ಅನಿಷ್ಟ ಪ್ರವೃತ್ತಿಗಳ ಘೋರ ದರ್ಶನವಾಗುತ್ತದೆ. ಆತ ಅರ್ಥಶೂನ್ಯ ನಗೆ ಎಬ್ಬಿಸುವ ಚಿಲ್ಲರೆ ಹವ್ಯಾಸದಲ್ಲಿದ್ದ ಎಂದಾರೂ ಹೇಳಲು ಸಾಧ್ಯವಾಗದು.

ಕೈಲಾಸಂರವರಿಗೆ ಇಂಗ್ಲೀಷಿನಲ್ಲಿದ್ದ ಅದ್ವಿತೀಯ ಪಾಂಡಿತ್ಯ, (ಷಾ, ವೈಲ್ಡ್, ಇಬ್ಸನ್, ಷೇಕ್ಸ್‌ಪಿಯರ್ ನಾಟಕಗಳನ್ನು ಇಡೀ ರಾತ್ರಿ ಅಭಿನಯಿಸುವ ಚಟ ಇವರಿಗಿತ್ತು) ಪುರಾಣಗಳ ಅಗಾಧ ಪರಿಚಯದಿಂದಾಗಿ, ಅವರು ಪರ್ಪಸ್, ಫುಲ್‌ಫಿಲ್‌ಮೆಂಟ್, ಬರ್ಡನ್, ಕರ್ಣ, ಕೀಚಕ ಇತ್ಯಾದಿ ನಾಟಕಗಳನ್ನು ಸೃಷ್ಟಿಸಿ ಹೋಗಿದ್ದಾರೆ. ಇದಲ್ಲದೆ ಅವರು ಇಂಗ್ಲಿಷಿನಲ್ಲಿ ಹಲವಾರು ಸುಂದರವಾದ ಕವನಗಳನ್ನೂ ರಚಿಸಿದ್ದಾರೆ. ಅವುಗಳು ವಜ್ರದೋಪಾದಿಯಲ್ಲಿ ಹೊಳೆಯುತ್ತವೆ. ಪೌರಾಣಿಕ ನಾಟಕಗಳಲ್ಲಂತೂ ಮಹಾಭಾರತ, ರಾಮಾಯಣಗಳಲ್ಲಿ ಕಾಣಬಂದ ವ್ಯಕ್ತಿಗಳನ್ನೆತ್ತಿಕೊಂಡು, ಅವರಿಗೆ ವಿನೂತನ ದೃಷ್ಟಿ ಮತ್ತು ಸಂದರ್ಭಗಳನ್ನು ಕಲ್ಪಿಸಿಕೊಂಡು ಚಿರಸ್ಮರಣೀಯ ಪಾತ್ರಗಳನ್ನು ಹೆಣದಿದ್ದಾರೆ. ಪಾತ್ರಗಳನ್ನು ಚೆನ್ನಾಗಿ ಕಡೆದಿದ್ದು ಅವು ಎದ್ದು ಕಾಣುತ್ತವೆ. ಈ ಎಲ್ಲ ಪಾತ್ರಗಳಿಗೂ ತಕ್ಕ ಧ್ವನಿ ಕುದುರಿಸಿಕೊಂಡು, ರಂಗದ ಮೇಲೆ ನಿಂತು ಇವರು ಇಡೀ ನಾಟಕವನ್ನು ಗಂಟೆಗಟ್ಟಲೆ ಏಕಪಾತ್ರಾಭಿನಯ ಮಾಡುತ್ತಿದ್ದ ಪ್ರಸಂಗ ನೆನೆಸಿಕೊಂಡರೆ ಈಗಲೂ ರೋಮಾಂಚವಾಗುತ್ತದೆ. ಎಷ್ಟು ಬಗೆಯ ಶೃತಿಗಳು, ತಿರುವುಗಳು, ಮರ್ಮಗಳು, ಕ್ಷಣ ಕ್ಷಣಕ್ಕೂ ಎಷ್ಟು ಬಗೆಯ ಬದಲಾವಣೆಗಳು!

ಏಕಲವ್ಯ ಎಂಬ ನಿಷಾಧನು ದ್ರೋಣರು ಅರ್ಜುನನಿಗೆ ಹೇಳಿಕೊಡುತ್ತಿರುವ ಬಿಲ್ಲುವಿದ್ಯೆಯನ್ನು ಮರೆಯಲ್ಲಿ ನಿಂತು ಕಲಿಯುತ್ತಾನೆ. ದ್ರೋಣರು ಅವನ ಮಾನಸಿಕ ಗುರು. ಆದರೇನು ಅವನ ಮುಂದೆ ಅರ್ಜುನ ಒಬ್ಬ ಪೋರನೆನ್ನಬೇಕು. ಅರ್ಜುನ ಬಿಲ್ಲುವಿದ್ಯೆ ಕಲಿಯುವುದು ವಿಶ್ವದ ಅದ್ವಿತೀಯ ಬಿಲ್ಲುಗಾರನಾಗಲೆಂದು. ಇವನ ಧ್ಯೇಯ ಅಹಂಕಾರ ಮಿಶ್ರಿತವಾದುದು. ಇದು ರಾಜಸ ಗುಣದ ಪ್ರತೀಕ. ಆದರೆ ಏಕಲವ್ಯ ಕಲಿಯುವ ಧ್ಯೇಯ ತನ್ನ ಜಿಂಕೆಗಳನ್ನು ತೋಳಗಳಿಂದ ರಕ್ಷಿಸಲು. ಧ್ಯೇಯ ಅತ್ಯುಚ್ಚವಾದುದು. ಇದರಿಂದಾಗಿ ಏಕಲವ್ಯನ ಮುಂದೆ ಅರ್ಜುನ ಬೀಳಾಗಿ ಕಾಣುತ್ತಾನೆ. ಬಾಯಿಬಡುಕ, ಬಡಾಯಿಗಾರ, ಸ್ವಾರ್ಥಿ, ಅಹಂಕಾರಿ. ಇವನ ಮಾತುಗಳು ತೂಕವಿಲ್ಲದವು. ತದ್ವಿರುದ್ಧವಾಗಿ ಏಕಲವ್ಯನ ವ್ಯಕ್ತಿತ್ವ ಅತ್ಯುನ್ನತವಾಗಿ ಕಂಗೊಳಿಸುತ್ತದೆ. ಕಡೆಗೆ ಬಲಗೈ ಹೆಬ್ಬೆಟ್ಟನ್ನು ಗುರುದಕ್ಷಿಣೆಯಾಗಿತ್ತೂ, ಮತ್ತೆ ಎಡಗೈನಲ್ಲಿ ಈತ ಅದ್ವಿತೀಯ ಬಿಲ್ಲುಗಾರನಾಗುತ್ತಾನೆ. ಗೀತೆಯ ನಿಷ್ಕಾಮಕರ್ಮದ ಶ್ರೇಷ್ಠ ಬೋಧೆಯ ಪ್ರತೀಕ ಈ ನಾಟಕದಲ್ಲಿ ಅಭಿವ್ಯಕ್ತವಾಗಿದೆ.

ಡಾ|| ಸಿ.ಆರ್. ರೆಡ್ಡಿಯವರು ಮನಸಾರೆ ಹೊಗಳಿ ಕೈಲಾಸಂರನ್ನು "ಒಂದು ಅತಿ ಶ್ರೇಷ್ಠ ವಜ್ರ" ಎಂದು ಬಣ್ಣಿಸಿದುದು ಕರ್ಣ ನಾಟಕದ ಮುನ್ನುಡಿಯಲ್ಲಿದೆ. ಇಲ್ಲಿ ಕರ್ಣನ ಧೈರ್ಯ, ಸ್ಥೈರ್ಯ, ಶಕ್ತಿಸಾಮರ್ಥ್ಯ, ಸ್ವಾಮಿಭಕ್ತಿ, ನಿಷ್ಠೆ ಹಾಗೂ ಔದಾರ್ಯಗಳು ಆತನನ್ನು ಮುಗಿಲೆತ್ತರಕ್ಕೆ ಏರಿಸಿವೆ. ಆದರೆ ಎಡೆಬಿಡದೆ ಬೆನ್ನು ಹತ್ತಿದ ವಿಪ್ರಶಾಪ ಆತನನ್ನು ವಿನಾಶಕ್ಕೊಳಗಾಗಿಸುತ್ತದೆ. ಈ ದುರಂತ ನಾಟಕ ಶ್ರೇಷ್ಠ ಗ್ರೀಕ್ ದುರಂತ ನಾಟಕಕಾರರಾದ ಸೋಫಕ್ಲಿಸ್ ಮತ್ತು ಯುರಿಪಿಡಿಸ್‌ರನ್ನು ಸ್ಮರಣೆಗೆ ತರುತ್ತದೆ. ಈ ಇಂಗ್ಲಿಷ್ ನಾಟಕಗಳಲ್ಲಿ ಕೈಲಾಸಂ ನಮ್ಮ ವೇದೋಪನಿಷತ್ತು, ಪುರಾಣಗಳಲ್ಲಿರುವ ಸಿದ್ಧಾಂತ, ತತ್ವಗಳನ್ನು ವಿಫುಲವಾಗಿ ಬಳಸಿಕೊಂಡು

ಭಾರತೀಯ ಪರಂಪರೆಯ ಅಂತರಾರ್ಥವನ್ನು ಅತ್ಯಂತ ರಮ್ಯವಾಗಿ ಅಭಿವ್ಯಕ್ತಿಗೊಳಿಸಿದ್ದಾರೆ. ವಿಪರೀತ ಆಡಂಬರ, ಅಲಂಕಾರಗಳ ಲೇಪ ಹೊಂದಿದ್ದರೂ ಕೈಲಾಸಂರಿಗೆ ಇಂಗ್ಲಿಷಿನ ಮೇಲಿದ್ದ ಪ್ರಭುತ್ವ ಅಗಾಧ ಎನ್ನಬೇಕು.

ಎಂತೂ ಪುರಾಣದ ಮಬ್ಬಿನಲ್ಲಿ ಮೈಮರೆತು, ಸತ್ಯದಿಂದ ದೂರ ಸಾಗಿ ಪುರಾಣಗಳಲ್ಲಿನ ಅದ್ಭುತಗಳನ್ನು ವಿಕೃತಗೊಳಿಸಿ ಇಂದಿನ ಸಮಾಜವನ್ನೇ ರಂಗ ಮಂಟಪದಿಂದ ದೂರತಳ್ಳಿದ್ದ ಜನತೆಗೆ, ಹೊಸ ಬಗೆಯ ಪ್ರತಿಭಾನ್ವಿತವಾದ, ಪ್ರಚಲಿತ ಸಮಸ್ಯೆಗಳತ್ತ ಕಣ್ಣು ಹೊರಳಿಸಿ ಸತ್ಯ ದರ್ಶನ ಮಾಡಿಸಿದ ಇಂದಿನ ಸಮಾಜಿಕ ನಾಟಕದ 'ಪ್ರಪಿತಾಮಹ'ನಾದ ಕೈಲಾಸಂ ಇಡೀ ಜೀವನವನ್ನೇ ಇದಕ್ಕಾಗಿ ತೇದು ಹೋಗಿದ್ದಾರೆ. ಆತನ ಹಾಸ್ಯ ಪ್ರವೃತ್ತಿ, ಕುಚೋದ್ಯ, ಕಚಗುಳಿ ಇಡುವ ಅಸಾಧಾರಣ ಪ್ರತಿಭೆ ಮೇಲ್ಮುಖ ಮಾತ್ರ. ಅದರ ಹಿಂದೆ ಅಡಗಿರುವ ದಾರುಣ ಪರಿಸ್ಥಿತಿಗೆ ಆತ ಕನ್ನಡಿ ಹಿಡಿಯಲು ಮರೆಯಲಿಲ್ಲ. ಆತನ ಪ್ರತಿಭೆ ಬಹುಮುಖವಾದುದು, ಅಗಾಧವಾದುದು. ಆತನ ಜನ್ಮಶತಾಬ್ಧಿಯಂದು ಆತನೊಬ್ಬ ಕನ್ನಡ ಸಾರಸ್ವತ ಲೋಕದ ಅನರ್ಘ್ಯ ರತ್ನನೆಂದು ಸ್ಮರಿಸೋಣ.

❑

## ಟಿ.ಎಸ್. ವೆಂಕಣ್ಣಯ್ಯ

ಎಲ್.ಎಸ್. ಶೇಷಗಿರಿರಾವ್

1

ಹಲವು ದೀಪಗಳನ್ನು ಹಚ್ಚಿ ಅವುಗಳ ಪ್ರಭೆಯಲ್ಲಿ ತಾನು ಹಿಂದೆ ನಿಂತ ದೀಪ ತಳುಕಿನ ವೆಂಕಣ್ಣಯ್ಯನವರು. ಕುವೆಂಪು, ತೀ.ನಂ.ಶ್ರೀ., ಡಿ.ಎಲ್. ನರಸಿಂಹಚಾರ್, ಎಂ.ವಿ. ಸೀತಾರಾಮಯ್ಯ, ಎಸ್.ವಿ. ಪರಮೇಶ್ವರ ಭಟ್ಟ, ಮಾಸ್ತಿ ನರಸಿಂಗರಾವ್ ಇಂತಹ ವಿದ್ವಾಂಸರು, ಕವಿಗಳು ಎಷ್ಟೋ ದಶಕಗಳ ನಂತರವೂ ಅವರನ್ನು ಪ್ರೀತಿಯಿಂದ, ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಾರೆ ಎನ್ನುವುದು, ಅವರ ಶಿಷ್ಯರಲ್ಲದೆ ಬಿ.ಎಂ.ಶ್ರೀ, ಮಾಸ್ತಿ, ಡಿ.ವಿ.ಜಿ. ಇಂತಹವರೂ ಅವರನ್ನು ಅದೇ ಬಗೆಯ ಪ್ರೀತಿಯಿಂದ, ಗೌರವದಿಂದ ಸ್ಮರಿಸಿಕೊಳ್ಳುತ್ತಾರೆ ಎನ್ನುವುದು ನವೋದಯ ಕನ್ನಡ ಸಾಹಿತ್ಯದ ಯುಗದಲ್ಲಿ ಅವರ ಸ್ಥಾನಕ್ಕೆ ಕನ್ನಡಿ. ದೈಹಿಕವಾಗಿ, ಮಾನಸಿಕವಾಗಿ ಎತ್ತರದ ವ್ಯಕ್ತಿಯಾಗಿದ್ದ ವೆಂಕಣ್ಣಯ್ಯನವರನ್ನು ಸ್ಮರಿಸಿಕೊಳ್ಳುವವರು, ಅವರನ್ನು ಕುರಿತು ಅತ್ಯಂತ ಗೌರವದಿಂದ ಅವರಂತಹ ಮನುಷ್ಯರೇ ವಿರಳ ಎನ್ನುವ ರೀತಿಯಲ್ಲಿ ಮಾತನಾಡುತ್ತಾರೆ.

ದೈವಭಕ್ತಿ, ಶುದ್ಧ ಜೀವನಗಳೇ ಆಸ್ತಿಯಾಗಿದ್ದ ಮನೆತನದಲ್ಲಿ ಹುಟ್ಟಿದವರು ವೆಂಕಣ್ಣಯ್ಯನವರು. ಅವರ ಮನೆಮಾತು ತೆಲುಗಾದರೂ ಅವರ ಪೂರ್ವಿಕರು ಬಹು ಹಿಂದೆಯೇ ಕನ್ನಡ ನಾಡಿನಲ್ಲಿ ನೆಲೆಸಿದವರು. ಅವರ ತಾತ ವೆಂಕಣ್ಣಯ್ಯ ಶೇಕದಾರರು, ಆಗಿನ ಕಾಲದಲ್ಲಿ ತಕ್ಕಷ್ಟು ಒಳ್ಳೆಯ ಕೆಲಸವೇ. ಆದರೆ ಬಿಡುಗೈಯ ಅಂತಃಕರಣದ ಅವರ ಕೈಯಲ್ಲಿ ಕಾಸು ಉಳಿಯಲಿಲ್ಲ. ಸದಾ ಅವರಿಗೆ ಹಣದ ಮುಗ್ಗಟ್ಟೇ. ಅವರ ದೊಡ್ಡ ಮಗ, ವೆಂಕಣ್ಣಯ್ಯನವರ ತಂದೆ, ದೊಡ್ಡ ಸುಬ್ಬಣ್ಣನವರಿಗೆ ಎಂಟು ವರ್ಷ ವಯಸ್ಸಾಗಿದ್ದಾಗ ಅವರು ತೀರಿಕೊಂಡರು. ಅವರು ಸಾಯುವಾಗ ಮಗನಿಗೆ ಅವರು ಕೊಟ್ಟಿದ್ದು ಒಂದು ರಾಮಾಯಣ, ಇಡೀ ಸಂಸಾರದ ಹೊರೆಯನ್ನು ಹೊತ್ತುಕೊಂಡರು ಎಂಟು ವರ್ಷದ ದೊಡ್ಡಸುಬ್ಬಣ್ಣ. ಹದಿನಾಲ್ಕು ವರ್ಷವಾಗಿದ್ದಾಗ ಎಂಟು ವರ್ಷ ವಯಸ್ಸಿನ ಲಕ್ಷ್ಮೀ ದೇವಮ್ಮ ಅವರ ಕೈಹಿಡಿದರು. ಇವರ ಹಿರಿಯ ಮಗ ವೆಂಕಣ್ಣಯ್ಯ 1885ರ ಅಕ್ಟೋಬರ್ ಒಂದರಂದು ಹುಟ್ಟಿದರು. ನಂಟರೊಬ್ಬರ ಮನೆಯಲ್ಲಿ ವಿದ್ಯಾಭ್ಯಾಸಕ್ಕಾಗಿ ವಾಸಿಸಿದ ವೆಂಕಣ್ಣಯ್ಯ ಕಷ್ಟ, ತಿರಸ್ಕಾರಗಳ ನಡುವೆಯು ವ್ಯಾಸಂಗ ಮಾಡಿದರು. ಇನ್ನೂ ವಿದ್ಯಾರ್ಥಿಯಾಗಿದ್ದಾಗಲೆ ಅವರ ಮದುವೆಯಾಯಿತು, ಹೆಂಡತಿ ಭಾಗೀರಥಮ್ಮ. ಫಸ್ಟ್ ಇನ್ ಆರ್ಟ್ಸ್ (ಎಫ್.ಎ.) ಪರೀಕ್ಷೆಯಲ್ಲಿ ಯಶಸ್ವಿಯಾದ ನಂತರ ಚಿಕ್ಕಪ್ಪನ ನೆರವಿನಿಂದ ಬಿ.ಎ. ಓದಿದರು. ಅವರು ಬಿ.ಎ. ಪರೀಕ್ಷೆಯಲ್ಲಿ ಯಶಸ್ವಿಯಾದಾಗ ಇಡೀ ತಳುಕು ಹಳ್ಳಿಯೇ ಸಂಭ್ರಮದಿಂದ ಹಬ್ಬವನ್ನಾಚರಿಸಿತು. 1914ರಲ್ಲಿ, ಖಾಸಗಿ ವಿದ್ಯಾರ್ಥಿಯಾಗಿ, ಕನ್ನಡ ಎಂ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಆಗಿನ ದಿನಗಳಲ್ಲಿ ಕನ್ನಡ ಎಂದರೇ ತಾತ್ಸಾರ, ಕನ್ನಡದಲ್ಲಿ ಎಂ.ಎ. ಪರೀಕ್ಷೆ ಮಾಡುವುದೆಂದರೆ ಹಾಸ್ಯಕ್ಕೆ ವಸ್ತು.

ಧಾರವಾಡದ ಬೇಸಿಲ್ ಮಿಷನ್ ಹೈಸ್ಕೂಲಿನಿಂದ ಅಧ್ಯಾಪಕರಾದ ವೆಂಕಣ್ಣಯ್ಯ ಬಹುಬೇಗ ಉತ್ತಮ ಅಧ್ಯಾಪಕರೆಂದೂ ಗೌರವಿಸಬೇಕಾದ ಮನುಷ್ಯ ಎಂದೂ ಹೆಸರು ಮಾಡಿಕೊಂಡರು. ಅರವತ್ತು ರೂಪಾಯಿ ಸಂಬಳದಲ್ಲಿ ಇಪ್ಪತ್ತು ರೂಪಾಯಿಗಳನ್ನು ತಂದೆಗೆ ಕಳಿಸುತ್ತಿದ್ದರು. ಮೂರು ವರ್ಷಗಳ ನಂತರ ಬೆಂಗಳೂರು ಸೇಂಟ್ ಜೋಸೆಫ್ ಹೈಸ್ಕೂಲಿಗೆ ಎಪ್ಪತ್ತೈದು ರೂಪಾಯಿಗಳ ಸಂಬಳದ ಮೇಲೆ ಅಧ್ಯಾಪಕರಾಗಿ ಬಂದರು. ಹದಿನೈದು ರೂಪಾಯಿ ಬಾಡಿಗೆಗೆ ದೊಡ್ಡಮನೆ ಸಿಕ್ಕುತ್ತಿದ್ದ ಕಾಲ. ಅವರು ಆರಿಸಿದ ಮನೆ ಎಷ್ಟು ದೊಡ್ಡದಾಗಿತ್ತೆಂದರೆ ಅಲ್ಲೇ ಎ.ಎಸ್. ನರಸಿಂಹಯ್ಯನವರು, ಎ.ಆರ್. ಕೃಷ್ಣಶಾಸ್ತ್ರಿಗಳು, ಎಂ. ಆರ್. ಶ್ರೀನಿವಾಸಮೂರ್ತಿಗಳು ಎಲ್ಲ ಸಂಸಾರ ಸಹಿತ ವಾಸ ಮಾಡುವುದು ಸಾಧ್ಯವಾಯಿತು. 1919ರಲ್ಲಿ ಸೆಂಟ್ರಲ್

ಕಾಲೇಜಿಗೆ ಕನ್ನಡ ಅಧ್ಯಾಪಕರಾಗಿ ನೇಮಿತರಾದ ವೆಂಕಣ್ಣಯ್ಯನವರು, ಕ್ರಮೇಣ ಅಸಿಸ್ಟೆಂಟ್ ಪ್ರೊಫೆಸರಾದರು, ಪ್ರೊಫೆಸರಾದರು. 1927ರಲ್ಲಿ ಮಹಾರಾಜ ಕಾಲೇಜಿನಲ್ಲಿ ಪ್ರೊಫೆಸರಾಗಿ ನೇಮಕವಾದ ಅವರು ಎಂಟು ವರ್ಷ ಆ ವಿಭಾಗದ ಭಾಗ್ಯವನ್ನು ಬೆಳೆಸಿದರು. ಅದಕ್ಕೆ ಕೀರ್ತಿಯನ್ನು ತಂದುಕೊಟ್ಟರು, ಅದನ್ನು ಸಾಹಿತ್ಯಸ್ಫೂರ್ತಿಯ ನೆಲೆಯನ್ನಾಗಿ ಮಾಡಿದರು. 1939ರ ಫೆಬ್ರವರಿ 24ರಂದು ಅವರು ತೀರಿಕೊಂಡರು.

## 2

ವೆಂಕಣ್ಣಯ್ಯನವರು ಕನ್ನಡವು ಆಧುನಿಕ ಜಗತ್ತಿನಲ್ಲಿ ಗರಿಗೂಡಬೇಕಾದ ದಿನಗಳಲ್ಲಿ ಕನ್ನಡ ಕೆಲಸದ ಕೇದ್ರವಾಗಿದ್ದರು. 1918ರಲ್ಲಿ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘವನ್ನು ಎ.ಆರ್. ಕೃಷ್ಣಶಾಸ್ತ್ರಿಗಳು ಪ್ರಾರಂಭಿಸಿದಾಗ ಅವರಿಗೆ ವೆಂಕಣ್ಣಯ್ಯನವರ ಬೆಂಬಲ ಸಂಪೂರ್ಣವಾಗಿತ್ತು (ಇದೇ ಪ್ರಾಯಶಃ ಮೊಟ್ಟಮೊದಲನೆಯ ಕರ್ನಾಟಕ ಸಂಘ). ಮರು ವರ್ಷ 'ಪ್ರಬುದ್ಧ ಕರ್ನಾಟಕ' ಪ್ರಾರಂಭವಾಯಿತು. ಕೃಷ್ಣಶಾಸ್ತ್ರಿಗಳಿಗೆ ಮೈಸೂರಿಗೆ ವರ್ಗವಾದಾಗ ವೆಂಕಣ್ಣಯ್ಯನವರು ಸಂಘದ ಮತ್ತು ಪತ್ರಿಕೆಯ ನಿರ್ವಹಣೆಯನ್ನು ವಹಿಸಿಕೊಂಡರು. ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದ ಆಚಾರ್ಯ ಶ್ರೀ ಅವರ 'ಇಂಗ್ಲಿಷ್ ಗೀತಗಳು' ವೆಂಕಣ್ಣಯ್ಯನವರು ಸಂಘವನ್ನು ನಿರ್ವಹಿಸುತ್ತಿದ್ದಾಗ ಪ್ರಕಟವಾಯಿತು. ಡಿ.ವಿ.ಜಿ. ಅವರ 'ವಸಂತ ಕುಸುಮಾಂಜಲಿ' ಮತ್ತು 'ನಿವೇದನ'ಗಳೂ ಈ ಕಾಲದ ಪ್ರಕಟಣೆಗಳೇ. ಅವರು ಮೈಸೂರು ಮಹಾರಾಜ ಕಾಲೇಜಿಗೆ ವರ್ಗವಾಗಿ ಹೋದ ನಂತರ ಅಲ್ಲಿನ ಕರ್ನಾಟಕ ಸಂಘದ ಮಾರ್ಗದರ್ಶನ, ಕಾರ್ಯನಿರ್ವಹಣೆ ಬಹುಮಟ್ಟಿಗೆ ಅವರ ಪಾಲಿಗೆ ಬಂದವು. (ಪ್ರೊ.ಬಿ.ಎಂ.ಶ್ರೀ. ಅವರು ಅಧ್ಯಕ್ಷರಾಗಿದ್ದರು.) ವಿದ್ಯಾರ್ಥಿ ಕವಿಗಳ ಕಾವ್ಯವಾಚನಕ್ಕೆ ಅವಕಾಶ ಮಾಡಿಕೊಟ್ಟ ವೆಂಕಣ್ಣಯ್ಯನವರು ಒಂದು ವಿಶಿಷ್ಟ ವಾತಾವರಣವನ್ನು ಸೃಷ್ಟಿಸಿದರು. ಈ ಕಾರ್ಯಕ್ರಮಗಳಲ್ಲಿ ವಾಚನವಾದ ಆಯ್ದ ಕವನಗಳ ಎರಡು ಸಂಕಲನಗಳೂ ಪ್ರಕಟವಾದವು- 'ಕಿರಿಯ ಕಾಣಿಕೆ' ಮತ್ತು 'ತಳಿರು'. ಕುವೆಂಪು, ಪು.ತಿ.ನ, ಜಿ.ಪಿ. ರಾಜರತ್ನಂ, ದಿನಕರ ದೇಸಾಯಿ, ತೀ.ನಂ.ಶ್ರೀ., ಎಂ.ವಿ. ಸೀತಾರಾಮಯ್ಯ ಮೊದಲಾದವರ ಕವನಗಳು ಮೊದಲು ಪುಸ್ತಕಗಳಲ್ಲಿ ದಾಖಲೆಯಾಗಿದ್ದು ಈ ಸಂಕಲನಗಳಲ್ಲಿ. ಬಿ. ವೆಂಕಟಾಚಾರ್ಯರ 'ಸಾವಿನ ಸಮಸ್ಯೆ', ಎ.ಎನ್. ಮೂರ್ತಿರಾಯರ 'ಆಷಾಢಭೂತಿ' (ಎರಡೂ ಫ್ರೆಂಚ್ ನಾಟಕಕಾರ ಮೋಲಿಯೇರನ ಕೃತಿಗಳ ಆಧಾರದ ಮೇಲೆ ರಚಿತವಾದವು) ಮತ್ತು ಅನಂತ ನಾರಾಯಣ ಶಾಸ್ತ್ರಿಗಳು ಶ್ರೀ ಹರ್ಷನ ನಾಟಕವನ್ನು ಅನುವಾದಿಸಿದ 'ನಾಗಾನಂದ ನಾಟಕ'-ಎಲ್ಲ ಈ ಕಾಲದಲ್ಲಿ ಪ್ರಕಟವಾದವು. ಹಿರಿಯರೂ ಕನ್ನಡಕ್ಕಾಗಿ ಶ್ರಮಿಸಿದವರೂ ಆದ ಗಳಗನಾಥರಿಗೆ ಸಂಘ ಸನ್ಮಾನ ಮಾಡಿತು. 'ಕುಮಾರ ವ್ಯಾಸ ಜಯಂತಿ'ಯನ್ನು ವ್ಯವಸ್ಥೆ ಮಾಡಿ ಗದುಗಿನ ಭಾರತದ ಭಾಗಗಳ ವಾಚನಗಳನ್ನೂ ಏರ್ಪಡಿಸಿ ಹೊಸ ಹೆಜ್ಜೆ ಹಾಕಿತು. ಮೈಸೂರಿನಲ್ಲಿ ನಡೆದ ಹದಿನಾರನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ವ್ಯವಸ್ಥೆ ಮಾಡಿತು.

ವೆಂಕಣ್ಣಯ್ಯನವರು ತಮ್ಮ ವಿದ್ಯಾರ್ಥಿಗಳ ಮೇಲೆ ಬೀರಿದ ಪ್ರಭಾವ ಗಾಢವಾದದ್ದು. ಅವರ ವಿದ್ಯಾರ್ಥಿಗಳೆಲ್ಲ ಅವರನ್ನು ಕುರಿತು ಮಾತನಾಡುವಾಗ, ಭಕ್ತಿ-ಪ್ರೀತಿಗಳಿಂದಲೇ ಮಾತನಾಡುತ್ತಾರೆ. ಅವರ ನಿರಾಡಂಬರವಾದ ಆದರೆ ಖಚಿತವಾದ, ಆಳವಾದ ವಿದ್ವತ್ತು ವಿದ್ಯಾರ್ಥಿಗಳ ಅಧ್ಯಯನವನ್ನು ರೂಪಿಸಿತು. ಅವರ ಪ್ರೀತಿಯ ಪ್ರೋತ್ಸಾಹ ವಿದ್ಯಾರ್ಥಿಗಳ ಸೃಜನಶೀಲ ಪ್ರತಿಭೆಯನ್ನು ಪೋಷಿಸಿತು. ಕುವೆಂಪು ತಮ್ಮ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯವನ್ನು ವೆಂಕಣ್ಣಯ್ಯನವರಿಗೆ 'ಪ್ರಿಯ ಗುರು' ಎಂದು ಸಂಬೋಧಿಸಿ ಅರ್ಪಿಸಿದುದು ಅವರು ಬೆಳೆಸಿದ ಎಲ್ಲ ವಿದ್ವತ್ತಿನ, ಸದಭಿರುಚಿಯ, ಸೃಜನ ಪ್ರತಿಭೆಯ ಕೃತಜ್ಞತಾಪೂರ್ವಕ ನಮಸ್ಕಾರವಾಗಿದೆ.

## 3

ವೆಂಕಣ್ಣಯ್ಯನವರು ಬರೆದದ್ದು ಹೆಚ್ಚಿಲ್ಲ. ಐವತ್ತಮೂರನೆಯ ವರ್ಷ ನಡೆಯುತ್ತಿದ್ದಾಗಲೇ ಅವರು ತೀರಿಕೊಂಡರು. ಅವರು ಕಾಲೇಜಿಗೆ ಪಾಠ ಹೇಳಲು ಪ್ರಾರಂಭ ಮಾಡುವ ಹೊತ್ತಿಗೆ ಮೂವತ್ತಮೂರು ವರ್ಷ. ಅವರಿಗೆ ಬರಹಕ್ಕೆ ಲಭ್ಯವಾದದ್ದು ಇಪ್ಪತ್ತೇ ವರ್ಷಗಳು.

ವೆಂಕಣ್ಣಯ್ಯನವರು ರವೀಂದ್ರನಾಥ ಠಾಕೂರರ ವಿಮರ್ಶಾ ಲೇಖನಗಳನ್ನು ಅನುವಾದಿಸಿದರು; ಇವುಗಳ ಸಂಗ್ರಹ 'ಪ್ರಾಚೀನ ಸಾಹಿತ್ಯ', 'ಶ್ರೀ ರಾಮಕೃಷ್ಣ ಪರಮಹಂಸರ ಲೀಲಾ ಪ್ರಸಂಗ' ಬಂಗಾಳಿ ಕೃತಿಯ ಅನುವಾದ. 'ಶ್ರೀ ರಾಮಕೃಷ್ಣ ಪರಮಹಂಸರ ಚರಿತ್ರೆ'ಯನ್ನು ಎ.ಆರ್. ಕೃಷ್ಣಶಾಸ್ತ್ರಿಗಳೊಂದಿಗೆ ಬರೆದರು. ರವೀಂದ್ರರ ಲೇಖನಗಳ ಅನುವಾದಗಳು 'ಪ್ರಬುದ್ಧ ಕರ್ನಾಟಕ'ದಲ್ಲಿ 1923-24-25ರ ಸುಮಾರಿನಲ್ಲಿ ಪ್ರಕಟವಾದವು. ಆಗ ಕನ್ನಡದಲ್ಲಿ ಸಾಹಿತ್ಯ ವಿಮರ್ಶೆಯ ಅಂಕುರಾರ್ಪಣವಾಗುತ್ತಿತ್ತು. (ಡಿ.ವಿ.ಜಿ. ಅವರ 'ಸಾಹಿತ್ಯ ಮತ್ತು ಜನಜೀವನ' 1932ರಲ್ಲಿ ಪ್ರಕಟವಾಯಿತು. ಅದರಲ್ಲಿನ ಕೆಲವು ಉಪನ್ಯಾಸಗಳು 1920, 22ರಲ್ಲಿ ನೀಡಿದವು. ಮಾಸ್ತಿಯವರ 'ಸಾಹಿತ್ಯದಲ್ಲಿ ವಿಮರ್ಶೆಯ ಕಾರ್ಯ' 1924ರಲ್ಲಿ ಪ್ರಕಟವಾಯಿತು). ಸ್ವತಃ ಶ್ರೇಷ್ಠ ಕವಿ-ಕಾದಂಬರಿಕಾರ-ನಾಟಕಕಾರ-ಕತೆಗಾರನಾದ ಒಬ್ಬನೇ ವಿಮರ್ಶಕನು ಶ್ರೇಷ್ಠ ಕೃತಿಗಳ ಅಧ್ಯಯನವನ್ನು ಹೀಗೆ ಒಂದೆಡೆ ತಂದುಕೊಟ್ಟದ್ದೇ ಒಂದು ಉಪಕಾರ. ಸಾಹಿತ್ಯವನ್ನು ಕುರಿತು, ಸಾಹಿತ್ಯದ ಮೌಲ್ಯಮಾಪನವನ್ನು ಕುರಿತು ಬಹು ಖಚಿತವಾದ ಅಭಿಪ್ರಾಯಗಳ ಅನ್ವಯವನ್ನು ಕನ್ನಡದ ವಿದ್ಯಾರ್ಥಿಗಳು ಕಾಣುವಂತಾಯಿತು. ಉದಾಹರಣೆಗೆ ಕಾಳಿದಾಸನ 'ಶಾಕುಂತಲ' ನಾಟಕವನ್ನಾಗಲಿ 'ಕುಮಾರಸಂಭವ'ವನ್ನಾಗಲಿ ಬಹುಮಟ್ಟಿಗೆ ಶೃಂಗಾರ ರಸ ಪ್ರಧಾನ ಕೃತಿಯಾಗಿ ಕಂಡು ಅದರ ಅಲಂಕಾರಗಳನ್ನು, ಭಾಷೆಯ ಸೊಗಸನ್ನು ಮುಖ್ಯವಾಗಿ ಕಾಣುತ್ತಿದ್ದ ದಿನಗಳಲ್ಲಿ ರವೀಂದ್ರರು ಈ ಕೃತಿಗಳನ್ನು ಒಂದು ಜೀವನದರ್ಶನದ ಅಭಿವ್ಯಕ್ತಿಯನ್ನಾಗಿ ಕಂಡದ್ದು ಆ ಕಾಲದ ಸಾಹಿತ್ಯ ವಿದ್ಯಾರ್ಥಿಗಳಿಗೆ ಹೊಚ್ಚ ಹೊಸಮಾರ್ಗವಾಗಿ ಕಂಡಿರಬೇಕು. ತೀ.ನಂ.ಶ್ರೀ. ಅವರು 'ಕಾಳಿದಾಸನ ನಾಟಕಗಳಲ್ಲಿ ದುರಂತವಸ್ತು ವಿನ್ಯಾಸ' ಲೇಖನದಲ್ಲಿ (1939) ವೆಂಕಣ್ಣಯ್ಯನವರ 'ಪ್ರಾಚೀನ ಸಾಹಿತ್ಯ'ದಿಂದ (ರವೀಂದ್ರರ ಲೇಖನವನ್ನು 'ಉತ್ಕೃಷ್ಟ' ಎಂದು ಕರೆದು) ಕೆಲವು ವಾಕ್ಯಗಳನ್ನು ಉದ್ಧರಿಸುತ್ತಾರೆ. ಈ ಲೇಖನ ಮತ್ತು ಅವರದೇ 'ಶಾಕುಂತಲ'ವನ್ನು ಕುರಿತು ಎರಡೂ ಲೇಖನಗಳ ಮೇಲೆ ರವೀಂದ್ರರ ಲೇಖನದ ಸ್ಪಷ್ಟ ಪ್ರಭಾವ ಉಂಟು.

ವೆಂಕಣ್ಣಯ್ಯನವರ ಸ್ವತಂತ್ರ ವಿಮರ್ಶಾ ಲೇಖನಗಳು ಬೇರೆ ಬೇರೆ ಪ್ರಕಟಣೆಗಳಲ್ಲಿ ಹಂಚಿ ಹೋಗಿದ್ದವು. 1959ರಲ್ಲಿ ಇವು 'ಕನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು' ಎನ್ನುವ ಶೀರ್ಷಿಕೆಯಲ್ಲಿ ಪ್ರಕಟವಾದವು.

ಈ ಲೇಖನಗಳನ್ನು ಪರಿಶೀಲಿಸುವ ಮೊದಲು ಒಂದು ಅಂಶವನ್ನು ಗಮನಿಸಬೇಕು. ಈ ಲೇಖನಗಳು ವೆಂಕಣ್ಣಯ್ಯನವರು ತಮ್ಮ ತರಗತಿಗಳಲ್ಲಿ

ಯಾವ 'ಪರ್ಸ್‌ಪೆಕ್ಟೆವ್' ಅಥವಾ ಸಮಗ್ರದೃಷ್ಟಿಯನ್ನು ತಮ್ಮ ವಿದ್ಯಾರ್ಥಿಗಳಿಗೆ ಕೊಟ್ಟಿರಬಹುದು, ಅವರ ವಿಮರ್ಶಾಶಕ್ತಿಯನ್ನು ಬೆಳೆಸಿರಬಹುದು ಎನ್ನುವುದನ್ನು ಕಾಣಿಸಿಕೊಡುತ್ತವೆ. ಪ್ರಸಿದ್ಧ ಸಂಶೋಧನಕಾರರಾದ ಡಾ|| ಡಿ.ಎಲ್. ನರಸಿಂಹಾಚಾರ್ಯರು ವೆಂಕಣ್ಣಯ್ಯ ನವರ ಸಂಸ್ಮರಣ ಗ್ರಂಥದಲ್ಲಿ 'ದಿವಂಗತ ಪೂಜ್ಯ ವೆಂಕಣ್ಣಯ್ಯನವರು' ಎಂಬ ಲೇಖನದಲ್ಲಿ ತಮಗೆ ಅವರಿಂದ ದೊರೆತ ಮಾರ್ಗದರ್ಶನವನ್ನು ವರ್ಣಿಸಿದ್ದಾರೆ. 'ಕನ್ನಡ ಕೈಪಿಡಿ'ಗೆ ಭಾಷಾಶಾಸ್ತ್ರದ ಭಾಗವನ್ನು ವೆಂಕಣ್ಣಯ್ಯನವರು ಬರೆಯಲು ಸಾಮಗ್ರಿಯನ್ನು ಒದಗಿಸಿಕೊಡಬೇಕೆಂದು ಹೇಳಿ ಆ ನೆಪದಲ್ಲಿ ನರಸಿಂಹಾಚಾರ್ಯರಿಗೆ ಶಿಕ್ಷಣ ಕೊಟ್ಟದ್ದು, 'ಬಸವದೇವರಾಜ ರಗಳೆ'ಯ ಹಸ್ತಪ್ರತಿಯ ಪರಿಷ್ಕರಣ ಕೆಲಸದಲ್ಲೂ ಇದೇ ರೀತಿ ಅವರಿಗೆ ಅವಕಾಶವನ್ನು ಒದಗಿಸಿದ್ದು ಇವನ್ನು ಸ್ಮರಿಸಿಕೊಂಡಿದ್ದಾರೆ. ಕುವೆಂಪು, ಡಿ.ಎಲ್.ನ., ತೀ.ನಂ.ಶ್ರೀ, ಎಂ.ವಿ.ಸೀ. ಮೊದಲಾದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವಂಕಣ್ಣಯ್ಯನವರ ತರಗತಿಗಳ ಮಾರ್ಗದರ್ಶನದಿಂದ ಎಷ್ಟು ಪ್ರಯೋಜನವಾಗಿರಬಹುದು ಎನ್ನುವುದನ್ನು ಈ ಲೇಖನಗಳಿಂದ ಊಹಿಸಬಹುದು.

ವೆಂಕಣ್ಣಯ್ಯನವರ ಲೇಖನಗಳು ಎರಡು ಬಗೆಯವು-ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದವು ಮತ್ತು ಬಿಡಿ ಕೃತಿಗಳಿಗೆ ಸಂಬಂಧಿಸಿದವು.

ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಲೇಖನಗಳಲ್ಲಿ ಅವರದು ಚರಿತ್ರಕಾರ-ಸಂಶೋಧನಕಾರ ಇಬ್ಬರ ಮನೋಧರ್ಮಗಳೂ ಸಂಗಮಗೊಂಡ ನಿಲವು. ಕ್ರಿ.ಶ. ಒಂಬತ್ತನೆಯ ಶತಮಾನಕ್ಕೆ ಮೊದಲೇ ಕನ್ನಡದಲ್ಲಿ ರಾಮಾಯಣ-ಮಹಾಭಾರತಗಳು ರಚನೆಯಾಗಿದ್ದಿರಬೇಕು ಎಂದು ಊಹಿಸುತ್ತಾರೆ. 'ಕವಿರಾಜಮಾರ್ಗ'ದಲ್ಲಿ ಹಿಂದಣ ಎಲ್ಲ ಕವಿಗಳನ್ನೂ ಸ್ಮರಿಸಲಾಗಿದೆ ಎಂದು ಹೇಳುವುದು ಕಷ್ಟ. ಮಹಾಕವಿಗಳನ್ನು ಸ್ಮರಿಸಿರಬೇಕು; 'ಪುರಾತನರ್', 'ಚಿರಂತನಾಚಾರ್ಯರ್' ಮೊದಲಾದ ವರ್ಣನೆಗಳನ್ನೂ 'ಬೆದಂಡೆ', 'ಚತ್ತಾಣ' ಕಾವ್ಯಭೇದಗಳನ್ನೂ ಗಮನಿಸಿದರೆ, 'ಕವಿರಾಜ ಮಾರ್ಗ'ದಂತಹ ಪ್ರೌಢ ಕಾವ್ಯಮೀಮಾಂಸೆ ಸೃಷ್ಟಿಯಾಗುವುದಕ್ಕೆ ಬಹು ಮುಂಚಿನಿಂದ ಸೃಜನಶೀಲ ಸಾಹಿತ್ಯ ಕಾಣಿಸಿಕೊಂಡಿರಬೇಕು ಎಂದು ವೆಂಕಣ್ಣಯ್ಯನವರು ಅಭಿಪ್ರಾಯ ಪಡುತ್ತಾರೆ. ಜೈನರಿಗೆ ಮೊದಲು ಬೌದ್ಧರು ಕನ್ನಡದಲ್ಲಿ ಸಾಹಿತ್ಯ ರಚನೆಯನ್ನು ಮಾಡಿದ್ದಿರಬೇಕು, ಬೌದ್ಧರ ಪ್ರಭಾವ ಖಿಲವಾದಂತೆ ಆ ಕೃತಿಗಳು ಮಾಯವಾಗಿರಬೇಕು ಎಂದು ಊಹಿಸುತ್ತಾರೆ. 'ಕವಿರಾಜ ಮಾರ್ಗ'ದ ಕರ್ತೃ ಯಾರು ಎಂಬ ಬಗ್ಗೆ ವಾದಗಳನ್ನು ಗಮನಿಸಿ, ರಾಜ ಪುರೋಹಿತರ ಮತ್ತು ಕೆ.ಬಿ. ಪಾಠಕರ ಅಭಿಪ್ರಾಯವನ್ನು ವಿಮರ್ಶಿಸಿ, ಅದನ್ನು ಒಪ್ಪದೆ, ಶ್ರೀವಿಜಯನೇ ಕರ್ತೃ ಎಂದು ತೀರ್ಮಾನಿಸುತ್ತಾರೆ. (ಇಂದು ಅದೇ ವಿದ್ವಾಂಸರು ಒಪ್ಪಿರುವ ತೀರ್ಮಾನ.) ಬೇರೆ ಬೇರೆ ಕಾಲಗಳ ಸಾಹಿತ್ಯದ ಲಕ್ಷಣಗಳನ್ನು ಗುರುತಿಸುತ್ತಾರೆ. ಸಾಹಿತ್ಯ ಕೃತಿಯನ್ನು ಅದು ಸೃಷ್ಟಿಯಾದ ಯುಗದ ಸಂದರ್ಭದಲ್ಲಿ ಇಟ್ಟು ನೋಡುತ್ತಾರೆ. ಕಾವ್ಯಗಳಲ್ಲಿ ಬಳಕೆಯಾದ ಛಂದಸ್ಸು, ಭಾಷೆ ಇವುಗಳತ್ತ ಗಮನ ನೀಡುತ್ತಾರೆ. ವಚನಗಳನ್ನು ಕುರಿತು ಅವರು ಆಡಿರುವ ಮಾತುಗಳು ಗಮನಾರ್ಹ: "ಈ ವಚನಗಳನ್ನು ಗದ್ಯ ಭಾವಗೀತೆಗಳೆಂದು ಕರೆಯಬಹುದು. ಇವುಗಳು ಮತಧರ್ಮವನ್ನು ಬೋಧಿಸುವುದು ಮಾತ್ರವೇ ಅಲ್ಲ, ಅನೇಕ ವೇಳೆ ವಚನಕಾರರು ತಮ್ಮ ಮನಸ್ಸಿನಲ್ಲಿ ನಡೆಯುವ ಒಳತೋಟಿಯನ್ನೂ, ಸ್ವಂತ ಸುಖದುಃಖಗಳನ್ನೂ, ತಮ್ಮ ಸುತ್ತಮುತ್ತಿನ ಆವರಣದೊಳಗೆ ತಾವು ಮಾಡುವ ಹೋರಾಟವನ್ನೂ ವಚನಗಳಲ್ಲಿ ವ್ಯಕ್ತಪಡಿಸುತ್ತಾರೆ. ಇವರು ವ್ಯಕ್ತಪಡಿಸುವ ಭಾವಗಳು ಸ್ವಾನುಭವಜನ್ಯವಾದುದರಿಂದ ಅವುಗಳಲ್ಲಿ ಅಧಿಕಾರವಾಣಿ ಇರುತ್ತದೆ."

'ಪಂಪ ಭಾರತ', 'ಬಸವದೇವರಾಜರ ರಗಳೆ', 'ಕಾದಂಬರಿ' ಈ ಬಿಡಿ ಕೃತಿಗಳ ವಿಮರ್ಶೆಯನ್ನೂ ವೆಂಕಣ್ಣಯ್ಯನವರು ಬರೆದಿದ್ದಾರೆ. ಪ್ರತಿಕೃತಿಯನ್ನು ಕುರಿತ ಅವರ ಅಭಿಪ್ರಾಯಗಳನ್ನೂ ಇಲ್ಲಿ ವಿಮರ್ಶಿಸುವ ಆಗತ್ಯವಿಲ್ಲ. ಯಾವ ವಿಮರ್ಶಕನ ಮಾತೂ ಕಡೆಯದಾಗಲಾರದು. ಎಂತಹ ಶ್ರೇಷ್ಠ ವಿಮರ್ಶಕನೇ ಆಗಲಿ ಅವನ ಕೆಲವು ಅಭಿಪ್ರಾಯಗಳನ್ನಾದರೂ ಮುಂದಿನ ಪೀಳಿಗೆಗಳವರು ಮಾರ್ಪಾಡು ಮಾಡುತ್ತಾರೆ. ಕೆಲವನ್ನು ಬದಿಗಿಡುತ್ತಾರೆ. ಮುಖ್ಯವಾದದ್ದು ವಿಮರ್ಶಕನ ಅಭಿರುಚಿ, ದೃಷ್ಟಿ, ವಿಧಾನ. ವೆಂಕಣ್ಣಯ್ಯನವರ ಈ ಲೇಖನಗಳು 1958ರ ವರೆಗೆ ಪುಸ್ತಕ ರೂಪದಲ್ಲಿ ಲಭ್ಯವಾಗದಿದ್ದರೂ, ಎರಡಾದರೂ ಇವು ಪುಸ್ತಕಗಳ ಮುನ್ನುಡಿಗಳಾದದ್ದರಿಂದ ಮತ್ತು ಅವರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾಗಿದ್ದುದರಿಂದ ಅವರ ಅಭಿಪ್ರಾಯಗಳು ಮತ್ತು ವಿಧಾನಗಳು ಸಾಕಷ್ಟು ಪ್ರಭಾವವನ್ನು ಬೀರಿರಬೇಕು.

ಈ ಲೇಖನಗಳಲ್ಲೂ ಸಾಹಿತ್ಯದ ಇತಿಹಾಸಕಾರ ಮತ್ತು ಸಂಶೋಧಕ ವೆಂಕಣ್ಣಯ್ಯನವರು ಕಾಣಿಸಿಕೊಳ್ಳುತ್ತಾರೆ. 'ಬಸವದೇವರಾಜರ ರಗಳೆ'ಯನ್ನು ಕುರಿತ ಲೇಖನದಲ್ಲಿ ಹನ್ನೆರಡನೆಯ ಶತಮಾನದ ಧಾರ್ಮಿಕ ಕ್ರಾಂತಿಯ ಸ್ವರೂಪವನ್ನೂ ಅದರಲ್ಲಿ ಬಸವಣ್ಣನವರ ಪಾತ್ರವನ್ನೂ ವಿಶ್ಲೇಷಿಸುತ್ತಾರೆ. ಬಸವಣ್ಣನವರನ್ನು ಕುರಿತ ವೀರಶೈವ ಪುರಾಣಗಳೆಲ್ಲವನ್ನೂ ಗಮನಿಸುತ್ತಾರೆ. ಈ ಕೃತಿಯ ಕರ್ತೃತ್ವವನ್ನು ಚರ್ಚಿಸುತ್ತಾರೆ. 'ಕಾದಂಬರಿ' ಲೇಖನದಲ್ಲಿ ಕರ್ನಾಟಕ ಕಾದಂಬರಿಯ ಕರ್ತೃ ಒಂದನೆಯ ನಾಗವರ್ಮನ ಕಾಲ ಮೊದಲಾದುವನ್ನು ಚರ್ಚಿಸುತ್ತಾರೆ. ಕನ್ನಡ ಸಾಹಿತ್ಯದ ಮೇಲೆ ಸಂಸ್ಕೃತ ಸಾಹಿತ್ಯದ ಪ್ರಭಾವವನ್ನು ವಿಶ್ಲೇಷಿಸುತ್ತಾರೆ. ಕೃತಿನಿಷ್ಠವಾದ ವಿಮರ್ಶೆಗೆ ಒತ್ತು ಬಂದಿರುವ ಈ ಕಾಲದಲ್ಲಿ, ವೆಂಕಣ್ಣಯ್ಯನವರು ಕೃತಿಯಾಚೆ ಹಲವು ವಿಷಯಗಳನ್ನು ಚರ್ಚಿಸುವುದು ಸ್ವಲ್ಪ ಅತೃಪ್ತಿಯನ್ನುಂಟು ಮಾಡಬಹುದು. ಆದರೆ, ವೆಂಕಣ್ಣಯ್ಯನವರು ಬರೆಯುತ್ತಿದ್ದ ಕಾಲವನ್ನು ಗಮನಿಸಿದರೆ ಈ ಬಗೆಯ ಚರ್ಚೆ ಮುಂದಿನ ವಿಮರ್ಶೆ ಬೆಳೆಯುವುದಕ್ಕೆ ನೆರವಾಯಿತು ಎನ್ನುವುದು ಸ್ಪಷ್ಟವಾಗುತ್ತದೆ. ಅಲ್ಲದೆ ನಾಗವರ್ಮನ ಕೃತಿಯನ್ನು ಮೂಲದೊಂದಿಗೆ ಹೋಲಿಸಿ ಅವನ ಪ್ರತಿಭೆಯನ್ನು ಸ್ಫುಟಗೊಳಿಸುವ ಅಧ್ಯಯನದಂತೆ ಹಲವೊಮ್ಮೆ ಈ ಭಾಗಗಳೂ ಕೃತಿಯ ಸಾಧನೆಯನ್ನು ಗ್ರಹಿಸಲು ಪೋಷಕವಾಗುತ್ತವೆ.

ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ, ವೆಂಕಣ್ಣಯ್ಯನವರಿಗೆ ಕೃತಿಯ ಸಾಹಿತ್ಯದ ಸಾಧನೆ ಮುಖ್ಯ. ಅವರದು ಸುಶಿಕ್ಷಿತ ಅಭಿರುಚಿ, ಸಮತೂಕದ ವಿಮರ್ಶೆ ಎನ್ನುವುದು. ಪಂಪ ಹರಿಹರರು ಅವರ ಪ್ರೀತಿಯ ಕವಿಗಳಾದರೂ ತಮಗೆ ಕಂಡ ದೋಷವನ್ನು ಹೇಳಬಲ್ಲರು. ಪಂಪಭಾರತದಲ್ಲಿ ಅರಿಕೇಸರಿ-ಅರ್ಜುನರನ್ನು ಅಭೇದ್ಯಗೊಳಿಸಿದ್ದರಿಂದ ಆದ ತೊಡಕುಗಳನ್ನು ವಿವರಿಸಿ, ಇದರಿಂದ ಕೃತಿಗೆ ಆದ ಲಾಭಕ್ಕಿಂತ ನಷ್ಟವೇ ಹೆಚ್ಚು ಎನ್ನುತ್ತಾರೆ. ಪಂಪನ ಕೃತಿಯ ಯಶಸ್ಸಿಗೆ ಅವನು ಮಹಾಭಾರತವನ್ನು ಐದನೆಯ ವೇದ ಎಂದು ಕಾಣದೆ ಲೌಕಿಕ ದೃಷ್ಟಿಯಿಂದ ಕಂಡದ್ದು ಮುಖ್ಯ ಕಾರಣ ಎನ್ನುತ್ತಾರೆ. ಮೂಲಭಾರತವನ್ನು ಆಧರಿಸಿದ್ದರೂ ಕೃತಿ ಕವಿಯ ವಿಶಿಷ್ಟ ದರ್ಶನವನ್ನು ಬೆಳಗುತ್ತದೆ ಎಂದು ವಿವರಿಸುತ್ತಾರೆ. ಹರಿಹರ ವೈವಿಧ್ಯವನ್ನು ಸಾಧಿಸಿದ ರೀತಿಯನ್ನು ವಿವರಿಸುತ್ತಾರೆ. ಕೃತಿಯ ನಾಯಕನ ವಿಶಿಷ್ಟ ಸಾಧನೆ, ಇದು

ಹರಿಹರನ ಕಾವ್ಯಮಾರ್ಗವನ್ನು ಪ್ರಭಾವಿಸಿದ್ದು ಇದನ್ನು ವಿಶ್ಲೇಷಿಸುತ್ತಾರೆ. 'ಕಾದಂಬರಿ'ಯಲ್ಲಿ ಗಿಳಿಯ ಜೀವನದ ಕಥೆ, ಮಹಾಶ್ವೇತೆಯ ಕಥೆ ಇವುಗಳ ಪಾತ್ರವನ್ನು ವಿಮರ್ಶಿಸುತ್ತಾರೆ. ಪ್ರತಿಕೃತಿಯ ಸಮಗ್ರ ಆಕಾರ, ವಿವಿಧ ಅಂಗಗಳ (ಭಾಷೆ, ಛಂದಸ್ಸು, ವರ್ಣನೆ) ಔಚಿತ್ಯ ಇವುಗಳಿಗೆ ಅವರು ಸಾಕಷ್ಟು ಗಮನ ಕೊಡುತ್ತಾರೆ ಎನ್ನುವುದು ಮುಖ್ಯವಾದ ಸಂಗತಿ.

**4**

ವೆಂಕಣ್ಣಯ್ಯನವರ ವ್ಯಕ್ತಿತ್ವವನ್ನು ಕುರಿತು ಇಲ್ಲಿ ಏನನ್ನೂ ಹೇಳಿಲ್ಲ. ಅವರದು ಶ್ರೀಮಂತ ವ್ಯಕ್ತಿತ್ವ. ಅವರ ಔದಾರ್ಯ, ನಿರ್ಮಲ ಸ್ನೇಹಪರತೆ, ಸಣ್ಣತನ ಬಳಿಸುಳಿಯದ ಹಿರಿಮೆ, ಶಿಷ್ಯವಾತ್ಸಲ್ಯ, ಧಾರ್ಮಿಕ ಮನೋಧರ್ಮ, ಚಿತ್ತ ಸಂಯಮ ಇವನ್ನು ಹಲವರು ವಿವರಿಸಿದ್ದಾರೆ. ಈ ಲೇಖನದಲ್ಲಿ ಮುಖ್ಯವಾಗಿ ಕನ್ನಡಕ್ಕೆ ಅವರಿಂದ ಸಂದ ಕೊಡುಗೆಯನ್ನು ಗುರುತಿಸಲು ಯತ್ನಿಸಿದೆ. ಪ್ರೊ|| ಎಂ.ವಿ. ಸೀತಾರಾಮಯ್ಯನವರು ಒಂದೆಡೆ, 'ವೆಂಕಣ್ಣಯ್ಯನವರು ಸಂತರಲ್ಲ, ಸಂತ ಸದೃಶರು' ಎಂದಿದ್ದಾರೆ.

ವೆಂಕಣ್ಣಯ್ಯನವರು ಪಾಠ ಹೇಳಲು ಪ್ರಾರಂಭಿಸಿದ, ಬರೆದ ಕಾಲ ಕನ್ನಡವು ನಿಷ್ಠ ಅಭಿಮಾನಿಗಳನ್ನೂ, ಅಧ್ಯಯನಶೀಲವನ್ನೂ ಬೇಡುತ್ತಿದ್ದ ಕಾಲ. ಕನ್ನಡ ಭಾಷೆ ಮತ್ತು ಸಾಹಿತ್ಯಗಳಲ್ಲಿ ಅಭಿಮಾನ, ಅಧ್ಯಯನಗಳು ಒಂದಕ್ಕೊಂದು ಪೂರಕವಾಗಿ, ಅಭಿಮಾನವನ್ನು ಅಧ್ಯಯನಕ್ಕೆ ಪ್ರೇರಣೆ ಉತ್ಸಾಹಗಳನ್ನು ಕೊಟ್ಟು, ಅಧ್ಯಯನವು ಅಭಿಮಾನಕ್ಕೆ ಗಟ್ಟಿಯಾದ ಆಧಾರವನ್ನು ಒದಗಿಸಬೇಕಾಗಿದ್ದ ಕಾಲ. ಈ ಯುಗ ಬೇಡಿದಂತಹ ಸ್ವಭಾವದ, ಸಾಮರ್ಥ್ಯದ ಅನೇಕ ಹಿರಿಯರು ಕಾಣಿಸಿಕೊಂಡದ್ದು ಕನ್ನಡದ ಪುಣ್ಯ. ಅಂತಹ ಹಿರಿಯರಲ್ಲಿ ವೆಂಕಣ್ಣಯ್ಯನವರು ಒಬ್ಬರು. ಅವರ ವಿದ್ಯಾರ್ಥಿಗಳೆಲ್ಲ ಸ್ಮರಿಸಿಕೊಳ್ಳುವಂತೆ, ಅವರ ಕೃತಿಗಳು ತೋರಿಸುವಂತೆ ಅವರದು ಸಂಶೋಧನ ಪ್ರವೃತ್ತಿ. ಸಾಹಿತ್ಯ ಕೃತಿಯನ್ನು ಅದರ ಸಾಮಾಜಿಕ ಮತ್ತು ಚಾರಿತ್ರಿಕ ಸಂದರ್ಭದಲ್ಲಿ ಇಟ್ಟು ನೋಡುವವರು, ಆದರೆ ಕಡೆಗೆ ಅದರ ಸಾಹಿತ್ಯಸತ್ವಕ್ಕೆ ಬೆಲೆ ಕೊಡುವವರು. ಹತ್ತು ದೀಪ ಹೊತ್ತಿಸಿದ ಮೂಲದೀಪವಾದರು.

❑

# ಡಿ.ವಿ.ಜಿ.

ಎಸ್.ಆರ್. ರಾಮಸ್ವಾಮಿ

"ಒಲವೇಂ, ಸಂಭ್ರಮವೇಂ, ಪ್ರಿಯಾಭಿಸರಮೇಂ ಲಾವಣ್ಯಮೇಂ ಲೀಲೆಯೇಂ... ಬಲಮಂ ತೋರುವ ರೀವಿಯೇಂ, ಚಪಲಮೇಂ..." ಎಂದು ಕಾವೇರಿ ನದೀಸ್ರೋತದ ವಿಜೃಂಭಣೆಯನ್ನು ವರ್ಣಿಸಿದವರು, ಡಿ.ವಿ.ಜಿ. ಅವರ ಬಹುಮುಖ ಸಾಧನೆಯನ್ನು ನೆನೆಯುವಾಗ ನಮ್ಮಲ್ಲುಂಟಾಗುವುದೂ ಅಂಥದೇ ಭಾವನೆ, ರೋಮಾಂಚನ. ಪಾಂಡಿತ್ಯ–ಸಹೃದಯತೆ, ದಾರ್ಶನಿಕತೆ-ಲೌಕಿಕಾಸಕ್ತಿ, ವೈಚಾರಿಕತೆ-ಪರಂಪರಾಶ್ರದ್ಧೆ, ಪ್ರತಿಭೆ-ಪರಿಶ್ರಮ-ಈ ವಿವಿಧ ಗುಣಗಳ ಸಮನ್ವಯವನ್ನು ಡಿ.ವಿ.ಜಿ.ಯಂತೆ ಮೆರೆದವರು ವಿರಳ. ಸಮಾಜಸೇವೆ, ರಾಜಕೀಯ ಚರ್ಚೆಗಳಲ್ಲಿಯೂ, ಪತ್ರಿಕೋದ್ಯಮದಲ್ಲಿಯೂ ಅವರು ಮಾಡಿದ ಪರಿಶ್ರಮ ಅವರ ಸಾಹಿತ್ಯಕ ಪರಿಶ್ರಮಕ್ಕಿಂತ ಬಹುಪಾಲು ಮಿಗಿಲಾಗಿದ್ದು ಮತ್ತು ಅವರನ್ನು ಕುರಿತು ಚಿಂತಿಸುವಾಗ ಜೀವನ ಕ್ಷೇತ್ರಗಳನ್ನು ಹೀಗೆ ವಿಂಗಡಿಸುವುದು ಕೃತಕವೆನಿಸುತ್ತದೆ. ತಮ್ಮ 'ಶ್ರೀ ಕೃಷ್ಣ ಪರೀಕ್ಷಣಂ' ಕೃತಿಯಲ್ಲಿ ಡಿ.ವಿ.ಜಿ.ಯವರೇ ಹೇಳಿದ ಈ ಮಾತುಗಳು ಅವರ ಜೀವನ ರೀತಿಯನ್ನು ಸಂಗ್ರಹಿಸುತ್ತವೆನ್ನಬಹುದು:

> ಜೀವಕೆ ಸಂಸ್ಕಾರದ್ವಯ-
> ಮಾವಶ್ಯಕಮಾತ್ಮಪದವ ಪಡೆವೊಡೆ ಪುರುಷಂ
> ಗೀವ್ಯವಸಾಯಂ ತತ್ವಕೆ
> ಭಾವಪರಿಷ್ಕರಣ ಲೋಕಸಂಪರ್ಕಗಳಿಂ
> ಅತ್ತಲ್ ಬುದ್ಧಿವಿಚಾರಮು-
> ಮಿತ್ತಲ್ ಲೋಕಪ್ರಸಕ್ತ ಹೃದ್ವಿಕಸನಮುಂ
> ಯುಕ್ತಮಿಹಾ ಸಂಸ್ಕಾರದಿ-
> ನಾತ್ಮದ ಸಾರ್ವತ್ರಿಕತ್ವಮನುಭವಮಕ್ಕುಂ

**ಮತಿ-ಮನಗಳ ದಾಂಪತ್ಯ**

ಸಾಮಾಜಿಕ ಜೀವನ, ಸಾಹಿತ್ಯ ವ್ಯವಸಾಯ ಹೇಗೆ ಒಂದಕ್ಕೊಂದು ಪೂರಕವಾಗಿದ್ದವೋ ಹಾಗೆಯೇ ಶಾಸ್ತ್ರಪಾಂಡಿತ್ಯ, ಕಾವ್ಯರಸಿಕತೆಗಳೂ ಅವರಲ್ಲಿ ಅಭಿನ್ನವಾಗಿ ಮನೆಮಾಡಿದ್ದವು. 'ಶ್ರೀಮದ್ ಭಗವದ್ಗೀತಾ ತಾತ್ಪರ್ಯ' ಗ್ರಂಥದಲ್ಲಿ ಗೀತೆಯ ಗೇಯಗುಣವನ್ನು ಪ್ರಸ್ತಾಪಿಸುತ್ತ ಡಿ.ವಿ.ಜಿ. ಹೇಳಿರುವ ಮಾತುಗಳು ಮನನೀಯ:

> ಸತ್ಯಾನ್ವೇಷಣೆ ಶಾಸ್ತ್ರಂ
> ಹೃತ್ತೋಷಣೆ ಕಾವ್ಯಂ, ಅಂತು ಮತಿ-ಮನಗಳ ದಾಂ-
> ಪತ್ಯದ ಫಲಮಧಿರಸರುಚಿ-
> ಯಾತ್ಮಾನಂದಮದು ಶಾಸ್ತ್ರಕಾವ್ಯಾನುಭವಂ

ಸಾಹಿತ್ಯ ಪ್ರಸಾದ ಜನದ ತಪಸ್ಸಿಗೆ ಪ್ರತ್ಯುತ್ತರ-ಎಂದು ಸೂತ್ರಿಸಿದ ಡಿ.ವಿ.ಜಿ. ಜನತೆಯಲ್ಲಿರಬೇಕಾದ ತಪೋನಿಷ್ಠೆಯಲ್ಲಿ ಮೂರು ಅಂಶಗಳನ್ನು

ಗುರುತಿಸಿದ್ದಾರೆ :

(1) ಲೋಕವಸ್ತು ಪರಿಜ್ಞಾನ
(2) ವಿಮರ್ಶನ ಜಾಗರೂಕತೆ
(3) ಪರಮಾರ್ಥದ ದೃಷ್ಟಿ (ಐಡಿಯಲಿಸ್ಮ್)

ರಾಷ್ಟ್ರಕತೆ-ಸಾಹಿತ್ಯ ಕಾರ್ಯಗಳು ಡಿ.ವಿ.ಜಿ. ಯವರಲ್ಲಿ ಸಮನ್ವಿತವಾದದ್ದು ಈ ಸೂತ್ರದ ಆಧಾರದ ಮೇಲೆ: "ಯಾವ ವಸ್ತುಸೌಂದರ್ಯ, ಗುಣಸೌಂದರ್ಯಗಳಿಂದ ಕವಿಯ ನಿರ್ಮಿತಿ ನಮಗೆ ಆನಂದದಾಯಕವಾಗಿರುತ್ತದೆಯೋ.... ಆ ದಿವ್ಯ ಸೌಂದರ್ಯಗಳನ್ನು, ಆ ತೇಜಸ್ಸುಗಳನ್ನು ಜನತೆಯ ನಿತ್ಯಜೀವನದಲ್ಲಿ ಯತ್ಕಿಂಚಿತ್ತಾದರೂ ಘನರೂಪಕ್ಕೆ ತರುವುದು ರಾಜ್ಯಕರ್ಮಿಯ ಪ್ರಯತ್ನ..." ಈ ಚಿಂತನೆಯ ಸವಿಸ್ತರ ಮಂಡನೆಯನ್ನು ಡಿ.ವಿ.ಜಿ. ಯವರ ಉಪನ್ಯಾಸ ಸಂಗ್ರಹಗಳಾದ 'ಜೀವನ ಸೌಂದರ್ಯ ಮತ್ತು ಸಾಹಿತ್ಯ' (1932), 'ಸಾಹಿತ್ಯ ಶಕ್ತಿ' (1950) ಮತ್ತು 'ಕಾವ್ಯಸ್ವಾರಸ್ಯ' (1975) ಕೃತಿಗಳಲ್ಲಿ ಕಾಣುತ್ತೇವೆ.

ದೀರ್ಘಕಾಲ ಶಾಸನ ಪರಿಷತ್ತಿನ ಸದಸ್ಯರಾಗಿ (1927-40), ಪೌರಸಭಾ ಸದಸ್ಯರಾಗಿ, ಮೈಸೂರು ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿ (1927-43), ಮೈಸೂರು ರಾಜ್ಯ ನಿಬಂಧನ ಸುಧಾರಣೆ ಸಮಿತಿ ಮತ್ತಿತರ ತಜ್ಞಸಮಿತಿಗಳಲ್ಲಿ ಡಿ.ವಿ.ಜಿ. ಸಲ್ಲಿಸಿದ ಸೇವೆ ಇದೇ ಉದಾತ್ತ ರಾಷ್ಟ್ರನಿಷ್ಠೆಯಿಂದ ಪ್ರೇರಣೆ ಪಡೆದದ್ದು. ಡಿ.ವಿ.ಜಿ. ತಮ್ಮ ಜೀವನಕ್ಕೆ ತೋರುಬೆಳಕಾಗಿ ಇರಿಸಿಕೊಂಡು ಮೇಲಿಂದ ಮೇಲೆ ಸ್ಮರಿಸುತ್ತಿದ್ದ:

ಜ್ಞಾನಿನಾ ಚರಿತುಂ ಶಕ್ಯಂ
ಸಮ್ಯಗ್ ರಾಜ್ಯಾದಿ ಲೌಕಿಕಮ್
(ಜ್ಞಾನಿಯಿನಕ್ಕುಂ ಹಿತಸಂ-
ಧಾನಂ ರಾಜ್ಯಾದಿ ಲೌಕಿಕವ್ಯವಹೃತಿಯೋಳ್)

-ಎಂಬ ವಿದ್ಯಾರಣ್ಯ ವಚನವೂ, "ಸಾರ್ವಜನಿಕ ಜೀವನವನ್ನು ಧರ್ಮಮಯವನ್ನಾಗಿಸಬೇಕು" ಎಂಬ ಗೋಪಾಲಕೃಷ್ಣ ಗೋಖಲೆಯವರ ಆದರ್ಶವೂ ಡಿ.ವಿ.ಜಿ. ಯವರ ಜೀವಿತ-ಸಾಧನೆಯನ್ನು ಅರಿಯಲು ಕೈಮರಗಳಾಗಿವೆ. ತಾವು ಪ್ರಧಾನವಾಗಿ ಪತ್ರಿಕೋದ್ಯಮಿಗಳೆಂದು ಕರೆದುಕೊಳ್ಳುತ್ತಿದ್ದುದು ಡಿ.ವಿ.ಜಿ. ಯವರ ರೂಢಿ. ಅವರ ಬೌದ್ಧಿಕ ಪರಿಶ್ರಮದ ಬಹುಪಾಲು ಅಭಿವ್ಯಕ್ತಗೊಂಡಿದ್ದು ಸಾಹಿತ್ಯ ಕೃತಿಗಳಿಗಿಂತ ಹೆಚ್ಚಾಗಿ ಅವರು ದಶಕಗಳುದ್ದಕ್ಕೂ ನಡೆಸಿದ ಒಂದಲ್ಲ ಒಂದು ಪತ್ರಿಕೆಯ ಮೂಲಕ. ಪತ್ರಿಕಾಕ್ಷೇತ್ರದ ಅವರ ಜೀವನಾನುಭವಗಳನ್ನೂ ಅವರ ದೃಗ್ರೀತಿಯನ್ನೂ 'ವೃತ್ತಪತ್ರಿಕೆ' (1928, 1968) ಗ್ರಂಥದಲ್ಲಿ ಕಾಣಬಹುದು.

**ಪತ್ರಿಕಾವೃತ್ತಿ**

1906-07ರ ಸುಮಾರಿಗೇ ಆರಂಭವಾದ್ದು ಡಿ.ವಿ.ಜಿ. ಯವರ ಪತ್ರಿಕಾವೃತ್ತಿ : ಆಗಿನ 'ಸೂರ್ಯೋದಯ ಪ್ರಕಾಶಿಕಾ', 'ಮೈಸೂರು ಸ್ಟ್ಯಾಂಡರ್ಡ್', 'ಈವನಿಂಗ್ ಮೈಲ್', 'ಮೈಸೂರು ಟೈಮ್ಸ್' ಪತ್ರಿಕೆಗಳ ಆಶ್ರಯದಲ್ಲಿ, ಒಂದೆರಡು ವರ್ಷಗಳಲ್ಲಿ ನವರತ್ನ ಕೃಷ್ಣಸ್ವಾಮಿಯವರೊಡನೆ 'ಭಾರತಿ' ಎಂಬ ದಿನಪತ್ರಿಕೆಯೊಂದನ್ನು ತಾವೇ ಹೊರಡಿಸುವ ಸಾಹಸ ಮಾಡಿದರು. 1908ರಲ್ಲಿ ಪತ್ರಿಕಾ ವಾಗ್ಬಂಧನ ಜಾರಿಯಾದಾಗ ಮದರಾಸಿಗೆ ವಲಸೆ ಹೋಗಿ ಅಲ್ಲಿ 'ಹಿಂದೂ', 'ಇಂಡಿಯನ್ ಪೇಟ್ರಿಯಟ್' ಮುಂತಾದ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯತೊಡಗಿದರು.

ಬೆಂಗಳೂರಿಗೆ ವಾಪಸ್ಸು ಬಂದು ನಂತರ 1913ರಲ್ಲಿ 'ಕರ್ನಾಟಕ' ಅರ್ಧವಾರಪತ್ರಿಕೆಯನ್ನು ಆರಂಭಿಸಿ ಏಳೆಂಟು ವರ್ಷ ನಡೆಸಿದರು. ಒಂದೆರಡು ವರ್ಷಗಳ ಬಿಡುವಿನ ನಂತರ 'ಇಂಡಿಯನ್ ರೆವ್ಯೂ ಆಫ್ ರೆವ್ಯೂಸ್' ಇಂಗ್ಲಿಷ್ ಮಾಸಪತ್ರಿಕೆಯನ್ನು 1921 ಆಗಸ್ಟ್‌ರಲ್ಲಿ ಆರಂಭಿಸಿದರು ಅದರ ಧ್ಯೇಯಘೋಷಣೆ ಹೀಗಿತ್ತು : "ರಾಷ್ಟ್ರಕ ಜೀವನ ಜಟಿಲವಾಗಿ ಇಂದು ವಿಧವಿಧವಾದ ನೂತನ ಸಮಸ್ಯೆಗಳು ಹುಟ್ಟಿಕೊಂಡಿವೆಯಾದ್ದರಿಂದ, ತತ್ಸಂಬಂಧದ ಸಾಹಿತ್ಯವೂ ಬಹುಗುಣವಾಗಿ ಬೆಳೆಯುತ್ತಿದೆ. ಹತ್ತಾರು ಪತ್ರಿಕೆಗಳಲ್ಲಿ ಪ್ರಕಟವಾಗುವ ಲೇಖನಗಳ ಸಾರಸಂಗ್ರಹವೊಂದರ ಅಗತ್ಯವಿದೆ. ಸಮಕಾಲೀನ ಚರಿತ್ರೆಗೆ ಅಂಥ ಒಂದು ಕೈಪಿಡಿಯನ್ನು ಒದಗಿಸುವ ಕರ್ತವ್ಯವನ್ನು 'ಇಂಡಿಯನ್ ರೆವ್ಯು ಆಫ್ ರೆವ್ಯೂಸ್' ಪತ್ರಿಕೆಯು ಯಾವ ವಿಶಿಷ್ಟ ಪಕ್ಷ ವಿಶ್ವಾಸವೂ ಇಲ್ಲದೆ ನಿರ್ವಹಿಸಹೊರಟಿದೆ. ಆದರೆ ಹಾಗೆಂದ ಮಾತ್ರಕ್ಕೆ ಈ ಪತ್ರಿಕೆಗೆ ಯಾವ ವಿಶಿಷ್ಟ ಸಂಪಾದಕೀಯ ನೀತಿಧೋರಣೆಯೂ ಇಲ್ಲವೆಂದು ಅರ್ಥ ಮಾಡಬೇಕಾದದ್ದಿಲ್ಲ...."

1923 ರಿಂದಾಚೆಗೆ ಡಿ.ವಿ.ಜಿ. ನಡೆಸಿದ ಪತ್ರಿಕೆ 'ಕರ್ನಾಟಕ ಜನ ಜೀವನ ಮತ್ತು ಅರ್ಥಸಾಧಕ ಪತ್ರಿಕೆ.' 1945ರಲ್ಲಿ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಪುನರ್ಜನ್ಮ ಪಡೆದಾಗಿನಿಂದ ತಮ್ಮ ಅವಸಾನದವರೆಗೆ (1975) ಡಿ.ವಿ.ಜಿ. ಆ ಸಂಸ್ಥೆಯ ಅಂಗಪತ್ರಿಕೆ 'ಪಬ್ಲಿಕ್ ಅಫೇರ್ಸ್' ಮೂಲಕ ಸಮಕಾಲೀನ ರಾಜಕೀಯ ವಿದ್ಯಮಾನಗಳನ್ನು ಕುರಿತು ಸತತವಾಗಿ ವ್ಯಾಖ್ಯೆ ನೀಡಿದರು. ತಮ್ಮದೇ ಪತ್ರಿಕೆ ಇಲ್ಲದಿದ್ದಾಗಲೂ ಡಿ.ವಿ.ಜಿ. ವಿರಮಿಸಿದವರಲ್ಲ. 'ಹಿಂದೂ' ಮುಂತಾದ ಪ್ರತಿಷ್ಠಿತ ಪತ್ರಿಕೆಗಳ ಮೂಲಕ ತಮ್ಮ ಟೀಕೆಗಳನ್ನು ನಿರಂತರ ಪ್ರಕಟಿಸಿದರು. ಇವಲ್ಲದೆ ಸಾಮಾಜಿಕ-ರಾಜಕೀಯ ವಿಷಯಗಳನ್ನು ಕುರಿತು ಪ್ರತ್ಯೇಕ ಪುಸ್ತಿಕೆಗಳನ್ನು ಆಗಿಂದಾಗ ಹೊರತಂದರು. 'ಸರ್ ಕೆ. ಶೇಷಾದ್ರಿ ಅಯ್ಯರ್' (1916), 'ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳು' (1917), 'ಟಾಲ್‌ಸ್ಟಾಯ್' (1917), 'ಹಿಂದೂ ಧಾರ್ಮಿಕ ಸಂಸ್ಥೆಗಳ ಸುಧಾರಣೆ' (1923), 'ಭಾರತಕ್ಕೆ ಡೊಮಿನಿಯನ್ ಸಂವಿಧಾನದ ಅನ್ವಯ' (1929)-ಇಂಥ ಹತ್ತಾರು ಕಿರು ಪುಸ್ತಕಗಳು ಸಮಕಾಲೀನ ಇತಿಹಾಸ ರಚಿಸಬಯಸುವವರಿಗೆ ಇಂದಿಗೂ ಅತ್ಯುಪಯುಕ್ತವಾಗಬಲ್ಲ ಸಾಮಗ್ರಿ. ಅಂತೆಯೇ ಸಾರ್ವಜನಿಕ ಜೀವನದಲ್ಲಿರುವ ಎಲ್ಲರಿಗೂ ಅಧ್ಯಯನಯೋಗ್ಯವಾದ ಶಾಸ್ತ್ರಗ್ರಂಥಗಳು 'ರಾಜ್ಯಶಾಸ್ತ್ರ' (1951), 'ರಾಜ್ಯಾಂಗ ತತ್ವಗಳು' (1954), ರಾಜಕೀಯ ಪ್ರಾಸ್ತಾವಿಕ ಉಪನ್ಯಾಸ ಸಂಗ್ರಹ 'ರಾಜಕೀಯ ಪ್ರಸಂಗಗಳು' (1958).

**ಸಂವಿಧಾನ ತಜ್ಞ**

ದೇಶೀಯ ಸಂಸ್ಥಾನಗಳ ವಿಶಿಷ್ಟ ಸಮಸ್ಯೆಗಳನ್ನು ಕುರಿತು ಅಧಿಕಾರಯುತವಾಗಿ ಮಾತನಾಡಬಲ್ಲ ಭಾರತೀಯರಲ್ಲಿ ಅಗ್ರಪಂಕ್ತಿಯವರೆಂದು ಡಿ.ವಿ.ಜಿ. 1914-15ರ ವೇಳೆಗೇ ವಿಶಾಲ ಮನ್ನಣೆಗಳಿಸಿಕೊಂಡಿದ್ದರು. ಈ ವಿಷಯದ ವಿವಿಧ ಮುಖಗಳನ್ನು ಕುರಿತ ಅವರ ಬರಹಗಳು ಪ್ರೊ|| ಬೆರ್ರಿಡೇಲ್ ಕೀತ್ ಮೊದಲಾದ ಜಗದ್ವಿಖ್ಯಾತ ರಾಜ್ಯಶಾಸ್ತ್ರಜ್ಞರ ಹಾಗೂ ಸರ್ ಪಿ.ಎಸ್. ಶಿವಸ್ವಾಮಿ ಅಯ್ಯರ್ ಮೊದಲಾದ ಭಾರತೀಯ ಸಂವಿಧಾನತಜ್ಞರ ಗಮನವನ್ನೂ ಸೆಳೆದಿದ್ದವು. ದೇಶೀಯ

ಸಂಸ್ಥಾನ ಪ್ರಜೆಗಳ ಸಮ್ಮೇಳನವೊಂದು 1929ರಲ್ಲಿ ತಿರುವಾಂಕೂರಿನಲ್ಲಿ ನಡೆದಾಗ ಅದರ ಅಧ್ಯಕ್ಷರಾಗಿದ್ದ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಡಿ.ವಿ.ಜಿ. ಯವರನ್ನು ಕಾರ್ಯದರ್ಶಿಯಾಗಿ ನೇಮಿಸಿಕೊಂಡಿದ್ದರು. 1918ರಲ್ಲಿ ಮುಂಬೈನಲ್ಲಿ ನಡೆದ ಕಾಂಗ್ರೆಸ್ಸಿನ ವಿಶೇಷಾಧಿವೇಶನದಲ್ಲಿ ಡಿ.ವಿ.ಜಿ. ಯವರು ದೇಶೀಯ ಸಂಸ್ಥಾನಗಳ ಸ್ಥಿತಿಗತಿ ಬಗೆಗೆ ನಿರ್ಣಯವೊಂದನ್ನೂ ಮಂಡಿಸಿದ್ದರು. ಅಲ್ಲಿಂದಾಚೆಗೆ 1928ರಲ್ಲಿ ಬಟ್ಲರ್ ಆಯೋಗಕ್ಕೆ, 1942ರಲ್ಲಿ ಕ್ರಿಪ್ಸ್ ಆಯೋಗಕ್ಕೆ, 1945ರಲ್ಲಿ ಸಪ್ರು ಸಮಿತಿಗೆ-ಇಂಥ ನಾಲ್ಕಾರು ಸಂದರ್ಭಗಳಲ್ಲಿ ಡಿ.ವಿ.ಜಿ. ಸಲ್ಲಿಸಿದ ಮನವಿಗಳು ಉಲ್ಲೇಖನೀಯ.

**ಸಾಮಾಜಿಕ ಸಂಘಟನೆಗಳಲ್ಲಿ**

ಬರಿಯ ವಿದ್ವತ್ಕಾರ್ಯಕ್ಕೇ ತಮ್ಮನ್ನು ಮೀಸಲಾಗಿರಿಸಿಕೊಂಡವರಲ್ಲ ಡಿ.ವಿ.ಜಿ. ತಮ್ಮ ಧ್ಯೇಯಗಳ ಪ್ರವರ್ತನೆಗಾಗಿ ಅನೇಕ ಸಂಘ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದರು. 1915ರ ಸುಮಾರಿಗೆ 'ಸೋಷಲ್ ಸರ್ವೀಸ್ ಲೀಗ್', 'ಪಾಪ್ಯುಲರ್ ಎಜುಕೇಶನ್ ಲೀಗ್' ಮುಂತಾದ ಸಾಮಾಜಿಕ ಸಂಘಟನೆಗಳನ್ನು ಹುಟ್ಟುಹಾಕಿದ್ದರು. ಈ 'ಸೋಷಲ್‌ಸರ್ವೀಸ್ ಲೀಗ್' ಸಂಘಟನೆಯೇ ಆಮೇಲಿನ ವರ್ಷಗಳಲ್ಲಿ 'ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ'ಯಾಗಿ ಮರುಜನ್ಮ ಪಡೆಯಿತು. ಉತ್ತಮ ರಾಷ್ಟ್ರದ ಪ್ರಜೆಗಳಾಗಲು ಜನತೆಗೆ ಶಿಕ್ಷಣ ನೀಡುವುದಕ್ಕೂ ಸಾರ್ವಜನಿಕ ಸಮಸ್ಯೆಗಳ ನಿಷ್ಪಾಕ್ಷಿಕ ಅಧ್ಯಯನಕ್ಕೂ ಮಾಧ್ಯಮವಾಗಿ ಈ ಸಂಸ್ಥೆಯು ಇಂದಿಗೂ ಕಾರ್ಯಪ್ರವೃತ್ತವಾಗಿದೆ.

ಕರ್ನಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ (1933-37) ಡಿ.ವಿ.ಜಿ. ಆ ಸಂಸ್ಥೆಯ ಕಾರ್ಯ ವಿಸ್ತರಣೆಗೆ ಕಾರಣರಾದರು. ವಸಂತ ('ವಿಶೇಷ') ಸಾಹಿತ್ಯೋತ್ಸವ, ಕನ್ನಡ ಶಿಕ್ಷಕರಿಗೆ ತರಬೇತಿ ಶಿಬಿರ, ಗಮಕ ತರಗತಿಗಳು ಮುಂತಾದ ಹಲವಾರು ಚಟುವಟಿಕೆಗಳ ಉಪಕ್ರಮವಾದದ್ದು ಡಿ.ವಿ.ಜಿ. ಯವರ ಉತ್ಸಾಹದ ಫಲವಾಗಿ. ಕರ್ನಾಟಕ ವೃತ್ತಪತ್ರಿಕಾಕರ್ತರ ಸಂಘ, ಶೀಘ್ರಲಿಪಿ ಬರಹಗಾರರ ಸಂಘ, ಪಂಡಿತ ಮಂಡಲ, ರಾಮಾಯಣ ಪ್ರಕಾಶನ ಸಮಿತಿ, ರಾಮಾಯಣ ಮಹಾಭಾರತಾದಿ ಪ್ರಕಾಶನ ಸಮಿತಿ ಮೊದಲಾದ ವಿವಿಧ ಗೋಷ್ಠಿಗಳಿಗೂ ಡಿ.ವಿ.ಜಿ. ಯವರಿಂದ ಆರೈಕೆ ದೊರೆತಿತ್ತು.

**ಎರಡು ಜೀವನ ಚರಿತ್ರೆಗಳು**

ಹೀಗೆ ಬಿಡುವಿಲ್ಲದ ಸಾರ್ವಜನಿಕ ಜೀವನದ ಚಟುವಟಿಕೆಗಳ ನಡುನಡುವೆಯೇ ಹೊರಬಂದವು, ಡಿ.ವಿ.ಜಿ. ಯವರ ಸಾಹಿತ್ಯಕೃತಿಗಳು.

"ಉತ್ತಮ ರಾಜ್ಯ ವ್ಯವಸ್ಥೆಯ ಲಕ್ಷಣಗಳು, ರಾಜ್ಯಸೇವೆಯ ವಿಧಾನಗಳು, ಪ್ರಜಾ ಜೀವನದ ಉತ್ಕೃಷ್ಟಗತಿ-ಇವೇ ಮೊದಲಾದ ಪ್ರಜಾಧರ್ಮದ ಮುಖ್ಯಾಂಶಗನ್ನು" ನಿದರ್ಶನಪಡಿಸಲು 'ದಿವಾನ್ ರಂಗಾಚಾರ್ಲು' (1911) ಜೀವನಚರಿತ್ರೆಯನ್ನು ಬರೆದುದಾಗಿ ಡಿ.ವಿ.ಜಿ. ಹೇಳಿದ್ದಾರೆ. ಅವರು ಬರೆದ ಇನ್ನೊಂದು ಜೀವನಚರಿತ್ರೆ, 'ಗೋಪಾಲ ಕೃಷ್ಣ ಗೋಖಲೆ' (1915). "ಜನರಿಗೆ ಬದುಕು ಸಹ್ಯವೂ ಪ್ರಿಯವೂ ಅರ್ಥಪೂರಿತವೂ ಆಗಬೇಕೆಂಬ ಮಹೋದ್ದೇಶಕ್ಕೆ ರಾಜ್ಯಾಧಿಕಾರವನ್ನು ಸಾಧನವನ್ನಾಗಿ ಉಪಯೋಗಿಸಿ ಕೃತಕೃತ್ಯರಾದವರು ರಂಗಾಚಾರ್ಯರು. ಅದೇ ಉದ್ದೇಶವನ್ನೇ ಸಾರ್ವಜನಿಕ ಕ್ಷೇತ್ರದೊಳಗಿಂದ ಸಾಧಿಸಲು ಶ್ರಮಿಸಿದವರು ಗೋಪಾಲಕೃಷ್ಣ ಗೋಖಲೆಯವರು. ಅವರಿಬ್ಬರೂ ಪರಸ್ಪರ ಪೂರ್ಣಕಾರಿಗಳು. ರಂಗಾಚಾರ್ಯರು ಬಯಸುತ್ತಿದ್ದಂತಹ ಆದರ್ಶ ಪ್ರಜಾ ಪ್ರತಿನಿಧಿ ಗೋಖಲೆ; ಗೋಖಲೆಯವರು ಬಯಸುತ್ತಿದ್ದಂತಹ ಆದರ್ಶ ಮಂತ್ರಿ ರಂಗಾಚಾರ್ಯರು."

ಜೀವನಚರಿತ್ರೆ, ತತ್ವಚಿಂತನೆ, ರಾಜ್ಯವಿಷಯಕ ಪ್ರಸಂಗಗಳು, ಕಾವ್ಯ, ಗೇಯ ಪ್ರಬಂಧ, ನಾಟಕ, ಸಂಸ್ಕೃತಿದರ್ಶನ, ದಾರ್ಶನಿಕ ಜಿಜ್ಞಾಸೆ, ಅಧ್ಯಾತ್ಮ ಪ್ರತಿಪಾದನೆ-ಈ ನಾಲ್ಕಾರು ಸಾಹಿತ್ಯ ಪ್ರಕಾರಗಳ ಕೃತಿಗಳನ್ನು ವಿಪುಲಸಂಖ್ಯೆಯಲ್ಲಿ ಡಿ.ವಿ.ಜಿ. ಕನ್ನಡನಾಡಿಗೆ ನೀಡಿದ್ದಾರೆ. 'ಸಾಹಿತ್ಯ ಶಕ್ತಿ' (1950) ಪ್ರಬಂಧಸಂಕಲನದ ಆರಂಭದಲ್ಲಿ ಅವರು ಹೇಳಿರುವ ಮಾತು ಅವರ ವ್ಯಕ್ತಿತ್ವದ ಮೇಲಣ ವ್ಯಾಖ್ಯೆಯೂ ಆಗಿದೆಯೆನ್ನಬಹುದು.

ರಾಮಣೀಯಕವೆಂದು ಬಿಸುಸುಯ್ಯಲದು ಕವಿತೆ  
ಭೂಮಿಗದನೆಟುಕಿಸುವೆನೆಂಬೆಸಕ ರಾಷ್ಟ್ರಕತೆ  
ಆಮೂಲಮದರರಿವನ್ ಅರಸಲ್ ಅದು ವಿಜ್ಞಾನ  
ಸಾಮಗ್ರ್ಯದಿಂ ಕಾಣಲ್ ಅದುವೆ ದಿವ್ಯಜ್ಞಾನ

**ಕಾವ್ಯ ಕೃತಿಗಳು**

1922ರಷ್ಟು ಹಿಂದೆಯೇ ಬೆಳಕಿಗೆ ಬಂದ ಡಿ.ವಿ.ಜಿ. ಯವರ 'ವಸಂತ ಕುಸುಮಾಂಜಲಿ'ಯ ಕವನಗಳು ಏಳು ದಶಕಗಳ ನಂತರವೂ ಕನ್ನಡಿಗರ ನಾಲಗೆಯಲ್ಲಿ ನಲಿದಾಡುತ್ತಿವೆ. ಅಂತೆಯೇ 'ನಿವೇದನ' (1924) ಸಂಕಲನದ ಪದ್ಯಗಳು ಕೂಡ. ಅನುವಾದಗಳಾದರೂ ಸ್ವತಂತ್ರ ರಚನೆಗಳಂತೆ ಹೊಸತನ, ರಮ್ಯತೆಯಿಂದ ಮೆರೆದವು 'ಉಮರನ ಒಸಗೆ' (1930), 'ಮ್ಯಾಕ್‌ಬೆತ್' (1936) ಮುಂತಾದವು. ಒಂದು ವಿಶಿಷ್ಟ ಚಿಂತನಪ್ರಧಾನ ರೀತಿಯ ಪದ್ಯಗಳ ಸಂಗ್ರಹ 'ಕೇತಕೀವನ' (1973).

ಶ್ರೀರಾಮನು ಎದುರಿಸಿದ ಧರ್ಮದ್ವೈಧಗಳ ವಿವೇಚನೆಯನ್ನು ರಾಮಾಯಣದ ವಿವಿಧ ಪಾತ್ರಗಳ ನಡುವಣ ಸಂವಾದದ ರೀತಿಯಲ್ಲಿ ನಿರೂಪಿಸಿರುವ ಪದ್ಯಕೃತಿ 'ಶ್ರೀ ರಾಮಪರೀಕ್ಷಣ' (1945). ಇದಕ್ಕೆ ಪೂರಕವಾಗಿ 1971ರಲ್ಲಿ ಹೊರಬಂದ 'ಶ್ರೀ ಕೃಷ್ಣಪರೀಕ್ಷಣ' ಶ್ರೀ ಕೃಷ್ಣನನ್ನು ಕುರಿತು ಸಾಮಾನ್ಯರಿಗೆ ಬರುವ ಅನೇಕ ಸಂಶಯಗಳನ್ನು ಪರಿಹರಿಸುವ ಪ್ರಯತ್ನ. ಈ ಕೃತಿಯಲ್ಲಿ ಹಾಗೂ 'ಶೃಂಗಾರ ಮಂಗಳಂ' (1970) ಕಾವ್ಯಲಹರಿಯಲ್ಲಿ ಡಿ.ವಿ.ಜಿ. ಪ್ರತಿಪಾದಿಸಿರುವ ಒಂದು ಸಿದ್ಧಾಂತ-ಸೌಂದರ್ಯಾಸ್ವಾದನೆಯು ಆತ್ಮೋತ್ಕರ್ಷಕ್ಕೆ ಬಾಧಕವಾಗದೆ ಸಹಾಯಕ ಹಾಗೂ ಸಂಸ್ಕಾರಕಾರಿ ಎಂಬುದು.

ರೂಪಂ ಧ್ವನಿ, ದನಿ ರಾಗಾ-  
ಲಾಪಂ, ರಾಗೋಕ್ತಿಯಾ ಸುದೃಕ್ ಸಲ್ಲಾಪಂ  
ದೀಪಿಪುದು ಮನವನಾ ರಸ-  
ದಾಪಗೆಯಾತ್ಮೋಪವನವ ಸೊಂಪಾಗಿಸುಗುಂ  
ಸುಖಮುಂ ಸಂಸ್ಕಾರಂ ಜೀ-  
ವಕೆ ದುಃಖದವೊಲೆ ಚಿತ್ತಪರಿಪಾಚನಕಂ  
ವಿಕಸಿತಮದರಿಂ ಹೃತ್ಕೋ-  
ರಕಮಾ ಸೌರಭದೆ ಜೀವಕಾತ್ಮಾನುಭವಂ

ಭೌತ-ಆಧ್ಯಾತ್ಮಗಳ ಪರಸ್ಪರ ಪೂರಕ ಗುಣವನ್ನು 'ಶ್ರೀ ಕೃಷ್ಣ ಪರೀಕ್ಷಣ'ದ ಈ ಮಾತು ಸಂಗ್ರಹಿಸಿದೆ.

ಬ್ರಹ್ಮಕೆ ಹೃದಯವನಿತ್ತು ಜ-  
ಗನ್ಮಂಗಲಕಾರ್ಯಕೊಡಲನೆಲ್ಲವನಿತ್ತುಂ  
ಇಮ್ಮಿದಳೊಡನಾಡುತ ಸ-  
ಚ್ಚಿನ್ಮಯನಂ ಮರೆಯದಿರ್ದೊಡದು ನಿರ್ವಾಣಂ.

#### ವಿಶ್ವ ಸಂಬೋಧನೆ

ಕಾವ್ಯಕ್ಕೆ ಮಹತ್ವ ಬಂದಿರುವುದು ವಿಶ್ವ ಸಂಬೋಧನೆಯಿಂದ ಎಂಬ ಆಳವಾದ ನಂಬಿಕೆಯ ಇನ್ನೊಂದು ದಿಕ್ಕಿನ ಅಭಿವ್ಯಕ್ತಿ-ಬೇಲೂರು ಚನ್ನಕೇಶವ ಸನ್ನಿಧಿಯ ಅಂತಃಪುರದ ಮದನಿಕೆಯರ ವಿಲಾಸ ವಿಭ್ರಮಗಳನ್ನು ಗೀತರೂಪದಲ್ಲಿ ಹಿಡಿದಿಟ್ಟಿರುವ 'ಅನ್ತಃಪುರ ಗೀತೆ' (1950). ಸಂಗೀತ-ನೃತ್ಯ ರಸಿಕರ ಪಾಲಿಗೆ ಅದು ಮರೆಯಲಾಗದ ರಸದೌತಣ ಆ ವೈಭವ-

ವಿಶ್ವ ತಂತ್ರ ರಹಸ್ಯ-<br>ಬೋಧನೋತ್ಸಾಹಮಿದು<br>ವಿಶ್ವ ಶಿಲ್ಪಿಯ ಸಭೆಯೊ-<br>ಳುಚಿತಮೆನಿಕುಂ

ಗೇಯ ಮಾಧ್ಯಮದ ಸಮರ್ಥವಾದ ಬಳಕೆಗೆ ಇನ್ನೊಂದು ನಿದರ್ಶನ ಡಿ.ವಿ.ಜಿ. ಯವರ 'ಗೀತಶಾಕುನ್ತಲ' (1960) : ಕಾಳಿದಾಸನ ಶಾಕುನ್ತಲ ನಾಟಕದ ಕೆಲವು ಸರಸ ಸಂದರ್ಭಗಳ ಸಂಗೀತಾನುವಾದ.

ಜೀವನವನ್ನು ಅರ್ಥಪೂರ್ಣಗೊಳಿಸಿಕೊಳ್ಳಬೇಕೆನ್ನುವವರಿಗೆ "ಮರ್ಜಿ, ಮಾತು, ನಡವಳಿಕೆಗಳ ಸೊಬಗನ್ನು" ಸುಲಭಗ್ರಾಹ್ಯವಾಗಿ ತಿಳಿಸಿರುವ ಗ್ರಂಥಗಳು 'ಬಾಳಿಗೊಂದು ನಂಬಿಕೆ' (1950) ಮತ್ತು 'ಸಂಸ್ಕೃತಿ' (1953).

ಪ್ರವೃತ್ತಿ-ನಿವೃತ್ತಿ ಸಮನ್ವಯ, ವ್ಯತ್ಯಗ್ದೃಷ್ಟಿ ಮುಂತಾದ ದಾರ್ಶನಿಕ ತತ್ವಗಳ ಪ್ರತಿಪಾದನೆಗಾಗಿ ಡಿ.ವಿ.ಜಿ. ಬರೆದವು-' ಈಶೋಪನಿಷತ್ತು' ಮತ್ತು 'ಪುರುಷ ಸೂಕ್ತ' ವ್ಯಾಖ್ಯಾನಗಳು (1951).

#### 'ಮಂಕುತಿಮ್ಮನ ಕಗ್ಗ'

ಎಲ್ಲರಿಗೂ ಬಂದೊದಗುವ ಆಘಾತಗಳನ್ನೂ ಜೀವನಕ್ಲೇಶಗಳನ್ನೂ ಎದುರಿಸಲು ಮನಃಸ್ಥೈರ್ಯವುಂಟುಮಾಡುವ ಹಿತಬೋಧೆಗಳನ್ನೊಳಗೊಂಡ ಡಿ.ವಿ.ಜಿ. ಯವರ 'ಮಂಕುತಿಮ್ಮನ ಕಗ್ಗ' (1943) ಕನ್ನಡ ಭಾಷೆಯ ಅತ್ಯಂತ ಜನಪ್ರಿಯ ಕೃತಿಗಳಲ್ಲೊಂದೆನಿಸಿದೆ. ಯಾವ ಕಾರಣದಿಂದಲಾದರೂ ಮನಸ್ಸು ಕುಗ್ಗಿದ್ದಾಗ ಎಂಥವರಿಗೂ ಸಾಂತ್ವನ ನೀಡುವ ಅಪೂರ್ವವಚನ ಸಂಗ್ರಹ ಇದು. ಜನತೆಗೆ ಡಿ.ವಿ.ಜಿ. ಮಾಡಿರುವ ಉಪಕಾರಗಳಲ್ಲಿ 'ಕಗ್ಗ' ವಿಶೇಷವಾಗಿ ಸ್ಮರಿಸಬೇಕಾದ್ದು. 'ಕಗ್ಗ'ದ ಪದ್ಯಗಳು ಅನೇಕರ ಜೀವನದಲ್ಲಿ ಆತ್ಮೀಯ ಮಿತ್ರನ ಸ್ಥಾನ ಪಡೆದಿವೆ.

'ಕಗ್ಗ'ದ ಒಂದೊಂದು ಪದ್ಯವೂ ಜೀವನ ಶ್ರದ್ಧೆಯನ್ನು ದೃಢಿಷ್ಠಗೊಳಿಸುವಂಥದು:

ಒಲ್ಲೆನೆನದಿರು ಬಾಳನ್, ಒಲವದೇನ್ನೆನ್ನದಿರು<br>ಉಲ್ಲಾಸಕೆಡೆಮಾಡು ನಿನ್ನಿನಾದನಿತು<br>ನಿಲ್ಲು ಕೆಚ್ಚೆದೆಯಿಂದಲನ್ಯಾಯಗಳನಳಿಸೆ<br>ಎಲ್ಲಕಂ ಸಿದ್ಧನಿರು-ಮಂಕುತಿಮ್ಮ

ಒಂದೇ ಮಾತಿನಲ್ಲಿ ಹೇಳಬೇಕೆಂದರೆ 'ಆತ್ಮೌಪಮ್ಯ' ಇಲ್ಲಿಯ ಉಪದೇಶ:

ಜಗದ ಕಲ್ಯಾಣದೊಳಗಾತ್ಮಕಲ್ಯಾಣವನು<br>ಜಗದ ಬೀದಿಗಳೊಳು ನಿಜಾತ್ಮಯಾತ್ರೆಯನು<br>ಜಗದ ಜೀವಿತದಿ ನಿಜಜೀವಿತದ ಪೂರ್ತಿಯನು<br>ಬಗೆಯರಿತವನೆ ಸುಖಿ-ಮಂಕುತಿಮ್ಮ

#### 'ಗೀತಾ ತಾತ್ಪರ್ಯ'

ಡಿ.ವಿ.ಜಿ.ಯವರ ಉಪನ್ಯಾಸ ಸಂಗ್ರಹವಾದ 'ಶ್ರೀಮದ್ ಭಗವದ್ಗೀತಾ ತಾತ್ಪರ್ಯ'ದ (1956) ಉದ್ದಕ್ಕೂ ನಾವು ಕಾಣುವುದು ಇದೇ ಅಂತರ್ಧ್ವನಿಯನ್ನು. ಭಗವದ್ಗೀತೆಯು ಕಾಷಾಯ-ಸಂನ್ಯಾಸವನ್ನು ಉಪದೇಶಿಸುವ ಗ್ರಂಥವಲ್ಲ; ಲೋಕಜೀವನದ ವಿಷಯದಲ್ಲಿ ಗೌರವ ಬುದ್ಧಿಯನ್ನೂ, ಕರ್ತವ್ಯಾಚರಣೆಯಲ್ಲಿ ಉತ್ಸಾಹವನ್ನು ಉಂಟುಮಾಡುವ ಗ್ರಂಥ ಅದೆಂದು ಡಿ.ವಿ.ಜಿ. ವ್ಯಾಖ್ಯೆ ಮಾಡಿದ್ದಾರೆ :

ವಿವಿಧ ಮತ ಗಭೀರಂ ಸಾಮರಸ್ಯ ಪ್ರಕಾರಂ<br>ಗೃಹಿ-ಯತಿ ಸಮುದಾರಂ ಸರ್ವಜೀವೋಪಚಾರಂ<br>ಸುರ-ನರ ಸಹಕಾರಂ ಸ್ವಾತ್ಮ್ಯ-ಸರ್ವಾತ್ಮ್ಯಸಾರಂ<br>ಭವಜಲನಿಧಿಪಾರಂ ಕೃಷ್ಣಗೀತಾವತಾರಂ

ಮತಭೇದ ವಿವಾದಗಳೆಲ್ಲ ಬಹುಮಟ್ಟಿಗೆ ಶಾಬ್ದಿಕವೆಂದೂ ವಿವಿಧ ಮತಗಳಲ್ಲಿ ಸಾಮರಸ್ಯ ಶಕ್ಯ ಹಾಗೂ ಅವಶ್ಯವೆಂದೂ ಡಿ.ವಿ.ಜಿ. ಪ್ರತಿಪಾದಿಸಿದ್ದಾರೆ :

ದ್ವೈತಮೊ ಮತಂ ವಿಶಿಷ್ಟಾ-<br>ದ್ವೈತಮೊ ಅದ್ವೈತಮೋ ಅದೇನಾದೊಡದೇಂ<br>ಭೂತವ್ರಾತದೊಳಾರ್ಗನು-<br>ಭೂತಮೊ ಪರವಸ್ತುವವನೆ ಕೃತಪರಮಾರ್ಥಮಂ<br>ಸರ್ವೋಹಮೆಂದು ಲೋಕವ<br>ನಿರ್ವಹಿಪಂಗೆತ್ತಲುಂ ವಸಂತಾರಾಮಂ<br>ನಿರ್ವೈರಂ ನಿರ್ಮೋಹಂ<br>ನಿರ್ವಾಣಪದಸ್ಥನಾತನುಸಿರ್ದೆಡೆ ಪುಣ್ಯಂ

ಅಂತರಂಗ ಜೀವನೋತ್ಸಾಹಿಗಳಿಗೆ ಅತ್ಯವಶ್ಯವಾದ್ದು ಈ ಸಾಮರಸ್ಯದ ದೃಷ್ಟಿ.

#### 'ಜ್ಞಾಪಕ ಚಿತ್ರಶಾಲೆ'

ಡಿ.ವಿ.ಜಿ.ಯವರ ಒಂದು ಅನಿತರಸಾಧಾರಣ ಕೃತಿಮಾಲೆ ಅವರ 'ಜ್ಞಾಪಕ ಚಿತ್ರಶಾಲೆ'ಯ ಎಂಟು ಸಂಪುಟಗಳು. ಗತಯುಗದ ಸಮಾಜ ಪರಿಸರ, ಜೀವನ ರೀತಿ ಹಾಗೂ ಹಿಂದಿನ ಎರಡು ಪೀಳಿಗೆಗಳ ಹತ್ತಾರು ಮಂದಿ ಸಾರ್ವಜನಿಕರ, ಪ್ರಸಿದ್ಧ ಪುರುಷರ ಮತ್ತು ಜನಸಾಮಾನ್ಯರ ವ್ಯಕ್ತಿ ವೈಶಿಷ್ಟ್ಯಗಳನ್ನು ಚಿತ್ರಿಸಿರುವ ಅಪೂರ್ವ ದಾಖಲೆಗಳು ಇವು. 1953ರಿಂದ ಬೇರೆ ಬೇರೆ ಪತ್ರಿಕೆಗಳಲ್ಲಿ ಲೇಖನಮಾಲೆಗಳಾಗಿಯೂ 1969ರಿಂದಾಚೆಗೆ ಗ್ರಂಥರೂಪವಾಗಿಯೂ ಹೊರಬಂದ ಈ ಪ್ರಬಂಧಗಳು ಗತಯುಗದ ಸಮಾಜೇತಿಹಾಸದ ಅದ್ವಿತೀಯ ದಾಖಲೆಗಳು. ಅವುಗಳ ವೈವಿಧ್ಯವೂ, ಸ್ವಾರಸ್ಯವೂ ಓದಿಯೇ ಸವಿಯಬೇಕು. ಸ್ವಭಾವತಃ ವಿನೋದಪ್ರಿಯರಾದ ಡಿ.ವಿ.ಜಿ. ಯವರ ಹಾಸ್ಯಪ್ರಜ್ಞೆ ಈ ಸಂಪುಟಗಳುದ್ದಕ್ಕೂ ವಿಜೃಂಭಿಸಿದೆ. ಪ್ರಸಿದ್ಧ ಪುರುಷರನ್ನು ಕುರಿತು ಬರೆಯುವಷ್ಟೆ ಉತ್ಸಾಹದಿಂದ ತೀರ ಅತಿಸಾಮಾನ್ಯರ ಗೃಹಜೀವನ ಶೈಲಿಯನ್ನೂ ಡಿ.ವಿ.ಜಿ. ಕಣ್ಣಿಗೆ ಕಟ್ಟುವಂತೆ ನಿರೂಪಿಸಿದ್ದಾರೆ. ಎಲ್ಲ ಮನೆಗಳಲ್ಲೂ ಅಷ್ಟಿಷ್ಟು ಕಷ್ಟ-ಕಾರ್ಪಣ್ಯಗಳು, ಅಷ್ಟಿಷ್ಟು ಶುಭ ಸಂತೋಷಗಳೂ; ಬಡತನ, ಅದರೊಡನೆ ಒಂದಿಷ್ಟು ನಂಬಿಕೆ; ಕೊಂಚ ಪ್ರಯತ್ನ ಕೊಂಚ ಸಾಧನೆ; ಹಾಗ ಪಾಲು ಕೊರತೆ, ಮುಪ್ಪಾಗ ಪಾಲು ನೆಮ್ಮದಿ; ಒಟ್ಟಿನಲ್ಲಿ ಜೀವಸಹಾನುಭೂತಿ, ಜೀವನದ ರೀತಿಯಲ್ಲಿ ಸರಳತ,

ಸ್ವಾಭಾವಿಕತೆ:- ನಮ್ಮ ದೇಶದಲ್ಲಿ ಒಂದು ಕಾಲದಲ್ಲಿ ಸರ್ವಸಾಮಾನ್ಯವಾಗಿದ್ದ ಜೀವನ ಶೈಲಿ ಇದು. ಅಂಥ ನೆಮ್ಮದಿಯ ಯುಗ ಕಳೆದುಹೋಗಿ ಎಂಥ ನಿರಂತರ ತಳಮಳದ ಯುಗ ಆರಂಭವಾಗಿದೆ ಈಗ-ಎನಿಸುತ್ತದೆ ಡಿ.ವಿ.ಜಿ.ಯವರ 'ಜ್ಞಾಪಕ ಚಿತ್ರಶಾಲೆ'ಯ ಸಂಪುಟಗಳನ್ನು ಓದಿದಾಗ.

ಒಮ್ಮೆ ಹೂದೋಟದಲ್ಲಿ ಒಮ್ಮೆ ಕೆಳೆಕೂಟದಲಿ
ಒಮ್ಮೆ ಸಂಗೀತದಲ್ಲಿ ಒಮ್ಮೆ ಶಾಸ್ತ್ರದಲಿ
ಒಮ್ಮೆ ಸಂಸಾರದಲಿ, ಮತ್ತೊಮ್ಮೆ ಮೌನದಲಿ
ಬ್ರಹ್ಮಾನುಭವಿಯಾಗೊ-ಮಂಕುತಿಮ್ಮ

ಜನಾದರಣೆ

ಎಲ್ಲ ಸನ್ಮಾನಗಳನ್ನು ದೂರವಿರಿಸ ಬಯಸಿದ ಡಿ.ವಿ.ಜಿ.ಯವರಿಗೆ ಸಹಜವಾಗಿಯೇ ಕೆಲವಾರು ಪ್ರಶಸ್ತಿಗಳು ಬಂದವು: ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಾಕ್ಟೊರೇಟ್ (1961), 'ಶ್ರೀಮದ್ ಭಗವದ್ಗೀತಾ ತಾತ್ಪರ್ಯ'ಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ (1967), ನಾಗರಿಕರಿಂದ ಸನ್ಮಾನ ಹಾಗೂ ನಿಧಿಸಮರ್ಪಣೆ (1970), ರಾಷ್ಟ್ರಾಧ್ಯಕ್ಷರ 'ಪದ್ಮಭೂಷಣ' ಪ್ರಶಸ್ತಿ (1974). ಆದರೆ ಡಿ.ವಿ.ಜಿ. ಯವರ ಎಣಿಕೆಯಲ್ಲಿ ಅವರಿಗೆ ಸಂದ ಬಹು ದೊಡ್ಡ ಪ್ರಶಸ್ತಿ ಎಂದರೆ ಜನಾದರಣೆ. ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬಂದ ಸಂದರ್ಭದಲ್ಲಿ ಅಭಿಮಾನಿಗಳೂ, ಕನ್ನಡ ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳೂ ಅಭಿನಂದಿಸಲು ಡಿ.ವಿ.ಜಿ. ಯವರ ಮನೆಗೆ ಹೋದಾಗ ಅವರು ಸ್ಮರಿಸಿದ್ದು (ಬಹುಶಃ ಬಸವಪ್ಪಶಾಸ್ತ್ರಿಗಳ) ಈ ಪದ್ಯ :

ಅರಸರ ಕುಡುವಾ ಕಾರ್ತ-
ಸ್ವರ ಕಂಕಣಮಿರ್ಕೆ, ರಸವನಾಸ್ವಾದಿಸಿ ಕಾ-
ವ್ಯರಸಿಕರೊಲಿದೀವಾ ಭಾ-
ಸುರತರ ಕಣ್‌ಕಣಮೆ ಕವಿಗೆ ಕಂಕಣಮಲ್ತೇ.

❑

# ಮುಳಿಯ ತಿಮ್ಮಪ್ಪಯ್ಯ

ನೀರ್ಪಾಜೆ ಭೀಮಭಟ್ಟ

"ಪಂಪನ ಭಕ್ತ, ಪಾರ್ತಿಸುಬ್ಬನ ಮಿತ್ರ, ಕವಿರಾಜಮಾರ್ಗದ ಪುರಸ್ಕರ್ತ, ಅಚ್ಚಕನ್ನಡದ ಹುಚ್ಚ, ಕ್ಷಮಿಸು ನಮೋ ನಮೋ, ಕನ್ನಡದ ತಿರುಳನ್ನು ಕಂಡು ಉಂಡು ಉಣಿಸಿದ ಪಂಡಿತರಲ್ಲ. ಕನ್ನಡ ಕಾವ್ಯಪಾಠಕರಲ್ಲಿ ಪರಮೋಚ್ಚ, ಸಿರಿವಂತರ ಕುಲದಲ್ಲಿ ಜನಿಸಿಯೂ ಕಡುಬಡವ, ಬದುಕನ್ನೆಲ್ಲಾ ಬಡತನದಲ್ಲಿಯೇ ಕಳೆದೂ ಮನಸ್ವಿ, ವಚಸ್ವಿ, ವರ್ಚಸ್ವಿ, ಯಶಸ್ವಿ, ಹಳಗನ್ನಡ-ಹೊಸಗನ್ನಡ ಹಾರದ ಮಧ್ಯಮಣಿ, ನಮ್ಮ ಮುದ್ದಿನ ಮುದ್ದಣ ನವೋದಯದ ಮುಂಗೋಳಿ ಸ್ವರವೆತ್ತಿ ಕೂಗಿ ಕೆಲೆದು ನುಡಿಯಿಸಿದ ಕನ್ನಡವಕ್ಕಿ ನಮ್ಮಮುಳಿಯದ ಪಂಡಿತವಕ್ಕಿ"

ಕವಿ ಸೇಡಿಯಾಪು ಕೃಷ್ಣಭಟ್ಟರು ಮುಳಿಯರನ್ನು ಕಂಡ ಬಗೆ ಹೀಗೆ! ಕನ್ನಡ ಪಂಡಿತರಾಗಿ, ಪ್ರಕಾಂಡ ವೈಯಾಕರಣರಾಗಿ ಆದರ್ಶ ಅಧ್ಯಾಪಕರಾಗಿ, ಉತ್ತಮ ಪತ್ರಕರ್ತರಾಗಿ, ಅಗಾಧಜ್ಞಾನ ಸಂಪನ್ನ-ಸಂಶೋಧಕ - ವಿಮರ್ಶಕರಾಗಿ, ಸುಮಧುರ ಕಂಠದ ಗಮಕಿಗಳಾಗಿ, ಚಿತ್ತಾಕರ್ಷಕ ವ್ಯಾಖ್ಯಾನಕಾರರಾಗಿ, ತಿಮ್ಮಪ್ಪಯ್ಯನವರು ಪ್ರಸಿದ್ಧರಾಗಿದ್ದಾರೆ. ಅವರು ಅನನ್ಯ ಪ್ರತಿಭಾ ಸಂಪನ್ನರು.

"ಮೈಸೂರಿನವರು ವೆಂಕಣ್ಣಯ್ಯನವರನ್ನು, ಧಾರವಾಡದವರು ಪ್ರೊ.ಸಾಸನೂರರನ್ನು, ಮಂಗಳೂರಿನವರು ಪಂಡಿತ ತಿಮ್ಮಪ್ಪಯ್ಯನವರನ್ನು ನೆನೆದು ಗೌರವಿಸುವದು ಕನ್ನಡಿಗರ ಪುಣ್ಯ ವಿಶೇಷ"ವೆಂದು ದ.ಬಾ.ಕುಲಕರ್ಣಿ ಹೇಳಿದ್ದಾರೆ.

ಮುಳಿಯ ತಿಮ್ಮಪ್ಪಯ್ಯನವರು ಜಿಲ್ಲೆಯ ಒಂದು ದೊಡ್ಡ ಕುಲೀನ ಮನೆತನದವರು. ಆದರೆ ಹಟತೊಟ್ಟಂತೆ ಅವರು ಸರಸ್ವತಿಯ ಉಪಾಸನೆಗೆ ಹೊರಟದ್ದೇ ತಪ್ಪಾಯಿತೆಂದು ತೋರುತ್ತದೆ. ಅದರ ಪರಿಣಾಮ ಅವರ ಮೇಲೆ ಲಕ್ಷ್ಮೀಯ ಕಟಾಕ್ಷ ವಕ್ರ ಆದರೂ ರಕ್ತಗತವಾಗಿ ಬಂದ ಅವರ ಔದಾರ್ಯ, ಧರ್ಮಬುದ್ಧಿಯ ಒರತೆಗೆ ಕೊರತೆ ಬರಲಿಲ್ಲ. ಕೇಳಿದವರಿಗೆಲ್ಲ ಕೇಳಿದಷ್ಟು ಕೊಟ್ಟು ಸಹಾಯ ಮಾಡುವಷ್ಟು ಹಣಕಾಸಿನ ಬೊಕ್ಕಸ ಅವರಲ್ಲಿರಲಿಲ್ಲ. ಕೇಳಿದವರಿಗೆಲ್ಲ ಕೇಳಿದಷ್ಟು ಕೊಟ್ಟು ತೃಪ್ತಿಪಡಿಸುವಷ್ಟು ವಾಙ್ಮಯಭಂಡಾರ ಅವರಲ್ಲಿತ್ತು. ಅದೇ ಅವರು ತಮ್ಮಲ್ಲಿ ಏನಿತ್ತೋ ಅದನ್ನೇ ಬಂದ ಬಂದವರಿಗೆಲ್ಲ ಬೊಗಸೆ ಬೊಗಸೆಯಾಗಿ ದಾನಮಾಡಿದರು; ಹಂಚಿದರು. ಕವಿತೆ ಬೇಕೆಂದವರಿಗೆ ಕವಿತೆ, ಪ್ರಬಂಧ ಬಯಸಿದವರಿಗೆ ಪ್ರಬಂಧ, ಯಾರಿಗೇನು

ಬೇಕೋ ಅದನ್ನು ಬರೆದುಕೊಟ್ಟು, ಕನ್ನಡದ ಪತ್ರಿಕೆಗಳಲ್ಲಿ ಜೀವಕಳೆ ತುಂಬಿದರು. ಪತ್ರಿಕೋದ್ಯಮದ ಧ್ವಜವನ್ನು ಎತ್ತಿ ಹಿಡಿದರು. ಕನ್ನಡದ ನುಡಿ ತಾಯಿ, ಈ ಮೋಹದ ಕುವರನಿಂದ ತನ್ನ ಕಂಠಾಭರಣಕ್ಕೊಂದು ದಿವ್ಯರತ್ನವನ್ನು ಬಯಸಿದ್ದರೆ, ಶ್ರೀ ತಿಮ್ಮಪ್ಪಯ್ಯ ನವರು ನಾಡೋಜ ಪರಿಪಕ್ವತೆಯಿಂದ ಅದನ್ನು ಸಂಪಾದಿಸಿಕೊಟ್ಟರು. ಹಿಂದೆ ಈ ಜಿಲ್ಲೆಯಲ್ಲಿ ವಿದ್ಯಾಧಿಕಾರಿಗಳೂ ಉದ್ದಾಮ ಪಂಡಿತರೂ ಆಗಿದ್ದ ಶ್ರೀ ಆರ್. ತಾತಾ ಚಾರ್ಯ ಅವರು ಸಹಾಯವನ್ನು ಅಪೇಕ್ಷಿಸಿದಾಗ ಮೂಡಬಿದಿರೆಯ ಪುರಾತನ ಗ್ರಂಥ ಭಂಡಾರದಿಂದ ಹಲವು ಗ್ರಂಥಗಳನ್ನು ಪರಿಶೋಧಿಸಿ ಪರಿಷ್ಕರಿಸಿ ಅಚ್ಚಿಗೆ ಸಿದ್ಧಪಡಿಸಿಕೊಟ್ಟವರೂ ಶ್ರೀ ತಿಮ್ಮಪ್ಪಯ್ಯನವರೇ ! ಒಟ್ಟು ಅವರ ಪಾಂಡಿತ್ಯಸಿದ್ಧಿಗೆ ಭಾಷಣಗಳಿಗೆ, ಗ್ರಂಥ ರಚನೆಗೆ, ಲೇಖನೋದ್ಯೋಗಕ್ಕೆ, ವಾಚಾಕಕ್ಕೆ ಅಧ್ಯಾಪಕವೃತ್ತಿಗೆ ಇಷ್ಟಕ್ಕೆಲ್ಲ ಹೇಗವರ ಆಯುಷ್ಕಾಲ ಸಾಕಾಯಿತೋ ಅದವರಿಗೇ ಗೊತ್ತು ! ಶ್ರೀ ತಿಮ್ಮಪ್ಪಯ್ಯನವರ ಗುಣಾತಿಶಯಗಳ ಕುರಿತು ಹೇಳಿದಷ್ಟೂ ಸ್ವಲ್ಪವೇ! ಅವರದು ಸಾತ್ವಿಕ ಸ್ವಭಾವ, ಮೃದುಮನಸ್ಸು, ನಗುಮುಖ, ಪ್ರಸನ್ನ ಶಾಂತಚಿತ್ತವೃತ್ತಿ, ಗೌರವ ಗಂಭೀರ ಭಾವ, ವಿದ್ಯಾರ್ಥಿಗಳ ಮೇಲೆ ನಿರ್ಮಲ ಪ್ರೇಮ, ಒಡನಾಡಿಗಳೊಡನೆ ನಯ-ವಿನಯ-ಸೌಜನ್ಯದ ವರ್ತನೆ. ಅವರು ನಿರಹಂಕಾರ, ನಿರ್ವಂಚನೆ, ಸಮಭಾವನೆ, ಸರಳಜೀವನಗಳ ಪ್ರತಿರೂಪ, ಕನ್ನಡದ ಕಿಂಕರರಲ್ಲಿ ಆತ್ಮೀಯತೆ, ಆದರ ಬುದ್ಧಿ; ಬಂಧು ಜನಗಳ ಉನ್ನತಿಗಾಗಿ ಅವರು ಆಚರಿಸಿದ ತ್ಯಾಗ ವ್ರತ, ಹಾಸಿಗೆ ಹಿಡಿದಾಗಲೂ, ಜೀವನದ ಕಷ್ಟನಿಷ್ಠುರಗಳ, ತೆರೆಗಳ ಅಲ್ಲೋಲ ಕಲ್ಲೋಲದಲ್ಲಿ ತೇಲಾಡುತ್ತಿದ್ದಾಗಲೂ ಅವರು ವಹಿಸಿದ ತಾಳ್ಮೆ, ಧೃತಿ, ಕನ್ನಡದ ಉದ್ಧಾರ ಕಾರ್ಯದಲ್ಲಿ ತೋರಿದ ಕಾರ್ಯನಿಷ್ಠೆ, ಇವೆಲ್ಲ ಮಾನವ ವರ್ಗದಲ್ಲಿ ಅವರನ್ನು ಉನ್ನತ ಶ್ರೇಣಿಯ ಉಚ್ಚಸ್ಥಾನಕ್ಕೇರಿಸಿ, ಅಂಥವನಿಗಾಗಿ ಕೊರಗಿ-ಮರುಗಿ ನೊಂದುಬೆಂದು ಸದಾಕಾಲವೂ ನಾವು ಹಂಬಲಿಸುವಂತೆ ಮಾಡಿದೆ. ಶ್ರೀ ಹುರುಳಿ ಭೀಮರಾಯರು ಮುಳಿಯರ ಬಗ್ಗೆ ಆಡಿದ ನುಡಿಗಳು ಹತ್ತಿರದಿಂದ ಬಲ್ಲವರ ಆತ್ಮೀಯ ಅನಿಸಿಕೆಗಳಾಗಿವೆ:

"ಅವರು ಭಾಷೆಯ ಬಿಗುವನ್ನು ಕಾಯ್ದುಕೊಳ್ಳಲು ಜೀವನ ಪರ್ಯಂತವೂ ಶ್ರದ್ಧೆಯಿಂದ ದುಡಿದರು. ಭಾಷೆಯ ಬಂಧುರತೆಗಾಗಿ ಪರಿಶುದ್ಧತೆಗಾಗಿ ಮುಳಿಯ ಬಹಳ ಶ್ರಮಿಸಿದರು. ಹಳಗನ್ನಡವೂ ನಡುಗನ್ನಡವೂ ಹೊಸಗನ್ನಡವೂ ಎಲ್ಲ ಸರಿಬೆರಕೆ ಮಾಡಿದರು. ಹಾಲು ಸಕ್ಕರೆಯಂತೆ ಅವನ್ನು ಹದಗೊಳಿಸಿ ಹೊಸತೊಂದು ಪಾಕವನ್ನೇ ಮಾಡಿದರು. ಮುಳಿಯ ತಿಮ್ಮಪ್ಪಯ್ಯನವರ ಕೃತಿಗಳಲ್ಲಿ ಈ ತ್ರಿವೇಣೀ ಸಂಗಮವನ್ನು ಯಾರೂ ಗುರುತಿಸ ಬಹುದಾಗಿದೆ. ಮುಳಿಯ ತಿಮ್ಮಪ್ಪಯ್ಯನವರನ್ನು ನೆನೆದಾಗಲೆಲ್ಲ ನನ್ನ ಮನದಿದಿರು ಹಳ್ಳದ ದಡದ ಹೂವಿನ ನೆನಪೇ ಆಗುತ್ತದೆ. ಹೂವು ಮೌನದಿಂದ ಅರಳುತ್ತಿದೆ. ಅರಳಿ ಸೌರಭವನ್ನು ಸೂಸುತ್ತಿದೆ. ನಲವಿನಿಂದ ನಗುತ್ತಿದೆ. ದೀನತೆಯನ್ನು ಚಣಚಣಕ್ಕೂ ವ್ಯಕ್ತಪಡಿಸುತ್ತಿದೆ. ಕೃತಕೃತ್ಯತೆಯನ್ನು ಹೊಂದಿದೆನೆಂದು ಹಿಗ್ಗುತ್ತಿದೆ. ಆದರೆ ತಂಪನ್ನು ಸೂಸುತ್ತಿರುವೆನೆಂಬ ಅಭಿಮಾನವಿಲ್ಲ. ಪ್ರೇಮಿ ಜನಕ್ಕೆ ಉಪಕಾರ ಮಾಡಿದೆನೆಂಬ ಬಿಂಕವಿಲ್ಲ. ಶಿವನ ಸಿರಿಮುಡಿಯ ಮೇಲೆ ಮಂಡಿಸುವೆನೆಂಬ ಲೋಭವಿಲ್ಲ. ಜನದ ಹೊಗಳಿಕೆಗೆ ಪಾತ್ರನಾಗುವೆನೆಂಬ ಗರ್ವವಿಲ್ಲ. ಅವರ ಬದುಕು ವನಸುಮದಂತೆ !"

ಶ್ರೀ ಹಿರೇಮಲ್ಲೂರ ಈಶ್ವರನ್ ತಿಮ್ಮಪ್ಪಯ್ಯನವರ ನುಡಿಚಿತ್ರವನ್ನು ಹೀಗೆ ಬಿಡಿಸಿದ್ದಾರೆ.

"ದಕ್ಷಿಣಕನ್ನಡದ ಹಿರಿಯ ಸಾಹಿತಿಗಳಲ್ಲಿ ಹಳಗನ್ನಡದ ಅಪಾರ ಕಾವ್ಯರಂಗದಲ್ಲಿ ನಲಿದಾಡಿದವರು ಶ್ರೀಮಾನ್ ಮುಳಿಯ ತಿಮ್ಮಪ್ಪಯ್ಯ ನವರು." ಅವರ ತಾಳ್ಮೆಯ ಮೆದುಮಾತುಗಳ ವರ್ಚಸ್ಸು ಅವರ ಗೆಳೆಯರ ಮೇಲೆ ಸದಾ ಆಗುವಂತಿತ್ತು. ಕನ್ನಡದ ವಿಚಾರದಲ್ಲಿ ಮಾತನಾಡುವಾಗಲೆಲ್ಲ ಅಪೂರ್ವವಾದ ಉತ್ಸಾಹ ಅವರಿಗೆ!...ಮಾತು ಸಂಭಾಷಣೆ, ಉಪನ್ಯಾಸ, ಪಾಠ ಒಂದೆ ಬಗೆಯಲ್ಲಿ ಅವರಿಗೆ ಕಾಣಿಸುತ್ತಿದ್ದವು......ನಿತ್ಯನುಡಿಯ ಸೊಬಗೇ ಅವೆಲ್ಲಕ್ಕೂ ಬರುವಂತೆ ಮಾಡಿ, ಹೇಳುವ ಕೇಳುವವರಲ್ಲಿ ಒಂದು ಬಗೆಯ ಆತ್ಮೀಯತೆಯನ್ನು ಕಲ್ಪಿಸಿಕೊಂಡವರಲ್ಲಿ ಅವರೊಬ್ಬರು!... ಶಿಕ್ಷಕನ ಸೋಗನ್ನು ಮರೆತು ಕಾವ್ಯರಸದಲ್ಲಿ ತಾನು ತಲ್ಲೀನನಾಗಿ ನಮ್ಮನ್ನು ಮೈಮರೆಯಿಸುವ ಅವರ ಗುಣ ಅವರ ಪಾಠಗಳಿಗಿತ್ತು... ಕನ್ನಡದ ವಿದ್ಯಾರ್ಥಿಗಳು ಕನ್ನಡವನ್ನು ಮರೆತರೂ ಅವರನ್ನು ಮರೆಯಲಾರರು,"

ಶ್ರೀ ಶಿವರಾಮ ಕಾರಂತರು ತಿಮ್ಮಪ್ಪಯ್ಯನವರನ್ನು ಹೀಗೆ ಗುರುತಿಸಿದ್ದಾರೆ:

"ಅವರ ವೈಯುಕ್ತಿಕ ಜೀವನವು ಎಷ್ಟು ಸರಳ ? ಎಷ್ಟು ತ್ಯಾಗಮಯ? ಎಂಬುದನ್ನು ಬರೆಯುವದು ಅಸಾಧ್ಯ...., ಪ್ರಾಚೀನ ಸಾಹಿತ್ಯದ ಸಾಹಿತ್ಯಾಭ್ಯಾಸ ಹೊಂದಿದವರಾಗಿದ್ದರೂ ಅವರ ಸ್ವತಂತ್ರ ವಿಚಾರಶಕ್ತಿಗೆ ಎಂದೂ ಅವಗುಂಠನ ಬೀಳಲಿಲ್ಲ, ಹೊಸತು ಹೊಸತು ಎನ್ನುವುದೇ ಅವರ ಕೂಗು..... ಕನ್ನಡದ ಗುಡಿ ಮೇಲೇರಬೇಕು. ಕನ್ನಡನಾಡು ಉಜ್ವಲವಾಗ ಬೇಕು ಎನ್ನುವ ಮಂತ್ರವೇ ಅವರ ತುಟಿಗಳಿಂದ ಹೊರಡುತ್ತಿದ್ದವು" 'ರಾಷ್ಟ್ರಬಂಧು' ವಾರಪತ್ರಿಕೆಯಲ್ಲಿ ಹಿರಿಯ ಸಾಹಿತಿ ಕಡೆಂಗೋಡ್ಲು ಶಂಕರ ಭಟ್ಟರು ಅಗ್ರಲೇಖನ ಬರೆದು ಗೌರವಿಸಿದ ಮಾತುಗಳಿವು.

"ತಿಮ್ಮಪ್ಪಯ್ಯನವರು ಹಳಬರಿಗೆ ಹಳಬರಾಗಿಯೂ ಹೊಸಬರಿಗೆ ಹೊಸಬರಾಗಿಯೂ ಇತ್ತಡಿಗಳ ನಡುವೆ ಹರಿಯುವ ನದಿಯಂತೆ, ಇಕ್ಕಡೆಗಳಿಗೂ ನೀರುಣಿಸಿದರು..... ರಾಗತಾಳ ಬದ್ಧವಾದ ಅವರ ಓದಿನಿಂದಲೂ ಕಾಲೇಜಿನ ವಿದ್ಯಾರ್ಥಿವೃಂದ ಅವರ ವಿಷಯದಲ್ಲೂ ಭಕ್ತಿಪರವಶವಾಗುತ್ತಿದ್ದಿತು. ವಿದ್ಯಾರ್ಥಿಗಳನ್ನು ಅವರು ನೀವು ಎಂಬ ಗೌರವ ಸೂಚಕ ಬಹುವಚನದಿಂದ ಕರೆಯುತ್ತಿದ್ದರಲ್ಲದೆ ಅವರೊಡನೆ ಆಪ್ತಮಿತ್ರನಂತೆ ವರ್ತಿಸುತ್ತಿದ್ದರು"

ಸರ್ವಜಿತ್ ಸಂವತ್ಸರದ ಫಾಲ್ಗುಣ ಬಹುಳ ಆರರಂದು ತಾ.3-3-1888ನೇ ದಿನ, ಹಿಂದೆ ಪುತ್ತೂರು ತಾಲೂಕಿಗೆ ಸೇರಿದ್ದ, ಸದ್ಯ ಬಂಟ್ವಾಳ ತಾಲೂಕಿಗೆ ಒಳಪಟ್ಟಿರುವ ಅಳಿಕೆ ಗ್ರಾಮದ ಮುಳಿಯ ಎಂಬಲ್ಲಿ ಜನಿಸಿದ ಶ್ರೀ ತಿಮ್ಮಪ್ಪಯ್ಯನವರದು ಕನ್ನಡ ಸಾಹಿತ್ಯೇತಿಹಾಸದಲ್ಲಿ ಅಳಿಯದ ಹೆಸರು! ಸದಾಚಾರ ಸಂಪನ್ನರಾದ ಶಾಸ್ತ್ರವೇತ್ತ ಕೇಶವ ಭಟ್ಟ ಮತ್ತು ಮೂಕಾಂಬಿಕಾ ಅಮ್ಮನವರ ಸುಪುತ್ರರಾಗಿ ಜನ್ಮ ತಳೆದ ತಿಮ್ಮಪ್ಪಯ್ಯನವರಿಗೆ ಮೂವರು ತಮ್ಮಂದಿರು ಒಬ್ಬ ತಂಗಿ. ಅವರ ಒತ್ತಿನ ತಮ್ಮ ಶಂಕರಭಟ್ಟರು ಕನ್ನಡಪಂಡಿತರಾಗಿ ಕವಿಯಾಗಿ ಹೆಸರಾದವರು! ನಾರಾಯಣಭಟ್ಟ-ಶಾಮಭಟ್ಟ ಎಂಬಿಬ್ಬರು ಮತ್ತಿನವರು. ಶಾಮಭಟ್ಟರು ನ್ಯಾಯವಾದಿಯಾದರೆ, ನಾರಾಯಣಭಟ್ಟರು ಗೃಹಸ್ಥರಾಗಿದ್ದರು.

ವಿಟ್ಲ ಸೀಮೆಯಲ್ಲಿ ವಿಟ್ಲದರಸರಿಗೆ ಸರಿಸಾಟಿಯಾಗಿ ಮುಳಿಯ ದರಸುಗಳು ಎಂದೇ ಖ್ಯಾತವಾದ ಮುಳಿಯರ ಮನೆ ಕೆಚ್ಚಿನಿಂದ ಮೆರೆಯುತ್ತಿದ್ದ ದಿನಗಳನ್ನು ಊರ ಹಿರಿಯರು ಸ್ಮರಿಸುತ್ತಿದ್ದರು ಎಂಬುದನ್ನು ಬಲ್ಲವರಿದ್ದಾರೆ. ಅದೇ ಕೆಚ್ಚು, ಮನೆತನದ ಔದಾರ್ಯ, ಸಜ್ಜನಿಕೆಗಳ ಫಲವಾಗಿ ಆಸ್ತಿಪಾಸ್ತಿಗಳೆಲ್ಲ ಕರಗಿಹೋದುದು ಒಂದು ಕರುಣ ಕಥೆ ! ಒಲೆಯಲ್ಲಿ ಅನ್ನದ ಪಾತ್ರೆಯಿಂದ ಅನ್ನವನ್ನು ಅಂಗಳಕ್ಕೊಗೆದು ಪಾತ್ರವನ್ನು ಜಪ್ತಿ ಮಾಡಿಕೊಂಡಂಥ ದಾರುಣ-ಅಮಾನವೀಯ ವರ್ತನೆ ಕ್ರೂರಿಗಳಾದ ಸಾಲದಾರರಿಂದ ನಡೆಯಿತು. ತಂದೆ ಕೇಶವ ಭಟ್ಟರು ಅನಾರೋಗ್ಯದಿಂದ ನರಳುತ್ತಿದ್ದು ಮಲಗಿದ್ದ ಮಂಚವನ್ನು ಎತ್ತಿಕೊಂಡು ಹೋದ ದಯನೀಯ ಸ್ಥಿತಿಯನ್ನು ಎಳೆಯ ಮುಳಿಯರು ಕಣ್ಣಾರೆ ಕಂಡರು. ಅಲ್ಲಿಂದ ಬಡತನದ ಸಂಕಷ್ಟಗಳ ಸರಮಾಲೆ ಸಾಲುಸಾಲಾಗಿ ಬಂತು.

ಶ್ರೀಯುತರ ಪ್ರಾಥಮಿಕ ಶಿಕ್ಷಣ ಮನೆಯ ಬಳಿಯ ಪ್ರಾಥಮಿಕ ಶಾಲೆಯಲ್ಲಿ ಜರಗಿತು. ವಾಮನ ಮಾಸ್ತರರು ಅವರಿಗೆ ಅಲ್ಲಿ ಗುರುಗಳಾಗಿದ್ದರು. ನಾಲ್ಕನೆ ತರಗತಿ ಉತ್ತೀರ್ಣರಾಗುವಷ್ಟರಲ್ಲಿ ಮನೆಗೊದಗಿದ ದುರ್ದಶೆ ಅವರನ್ನು ಕಾಡಿತು. ಶಾಲೆಯ ಓದು ಅಷ್ಟರಲ್ಲಿಯೇ ಕೊನೆಗೊಳ್ಳಬೇಕಾಯಿತು. ಆದರೆ ಅವರ ಅಧ್ಯಯನದ ಆಸಕ್ತಿ ಅಲ್ಲಿಗೆ ಇಂಗಿಹೋಗಲಿಲ್ಲ. ವಿಟ್ಲ ಸೀಮೆಯಲ್ಲಿ ಪ್ರಸಿದ್ಧ ವಿದ್ವಾಂಸರಾಗಿದ್ದ ಕಲ್ಲಜೆ ಕೃಷ್ಣಶಾಸ್ತ್ರಿಗಳಲ್ಲಿ ಅವರು ಸಂಸ್ಕೃತಾಧ್ಯಯನ ಮಾಡಿದರು. ಕನ್ನಡವನ್ನು ಸ್ವತಂತ್ರವಾಗಿ ಓದಿ ಜೀರ್ಣಿಸಿಕೊಂಡರು. ಜ್ಞಾನ-ಉಪಾಸನೆಯಿಂದ ತೃಷಿತರಾದವರಿಗೆ ವಿದ್ಯೆಯ ಸೆಲೆ-ನೆಲೆಗಳು ಎಲ್ಲೆಲ್ಲೂ ಲಭ್ಯವಾಗುತ್ತವೆ. ವಿಶಾಲ ವಿಶ್ವವೇ ಅವರ ವಿದ್ಯಾಮಂದಿರವಾಯಿತು.

ಅನಂತರ ಮುಳಿಯವನ್ನು ತೊರೆದು ಪೆರುವಾಯಿ ಗ್ರಾಮದ ಗುಡ್ಡೆ ತೋಟ -ಕುಂಬಳ ಕೋಡಿ ಎಂಬೆಡೆಗಳಲ್ಲಿ ಅವರು ವಾಸಿಸಬೇಕಾಯಿತು. ಅಲ್ಲಿಯೂ ಅವರಿಗೆ ಮನಶ್ಶಾಂತಿ ಸಿಗಲಿಲ್ಲ. ಜ್ಞಾನದಾಹ ಹೆಚ್ಚುತ್ತಲೇ ಇತ್ತು. 1906ರ ಒಂದು ದಿನ ಮನೆಯನ್ನು ತೊರೆದು, ಕಾಲ್ನಡಿಗೆಯಿಂದಲೇ ಕೇರಳದ ತಿರುವನಂತಪುರಕ್ಕೆ ಕ್ರಮಿಸಿದರು. ಪ್ರಸಿದ್ಧ ವಿದ್ಯಾಕೇಂದ್ರವಾದ ತಿರುವಾಂಕೂರು ಅವರನ್ನು ಆಕರ್ಷಿಸಿತ್ತು ಅಲ್ಲಿನ ಮಹಾರಾಜಾ ಕಾಲೇಜು ಸಂಸ್ಕೃತ ವಿದ್ಯಾದಾನದಲ್ಲಿ ಹೆಸರಾಗಿತ್ತು ಛತ್ರದಲ್ಲಿ ಉಂಡು ಜಗಲಿಗಳಲ್ಲಿ ಮಲಗಿ, ಓದು ಮುಂದುವರಿಸಿದರು. ಒಂದೇ ಪಂಚೆಯುಟ್ಟು ಸಂಕೋಚ ಪಡದೆ ವಿದ್ಯಾರ್ಜನೆಗಾಗಿ ಹೋರಾಡಿದರು. ಹೀಗೆ ಕೆಲಕಾಲವನ್ನು ಅಲ್ಲಿ ಕಳೆದು ಇನ್ನಷ್ಟು ಜ್ಞಾನಾರ್ಜನೆಯ ಆಶೆಯಿಂದ ಮೈಸೂರಿನತ್ತ ನಡೆದರು. ಅಲ್ಲಿಯೂ ಅದೇ ಸ್ಥಿತಿ! ವಾರಾನ್ನ ಮಾಡಿಕೊಂಡು ವಿದ್ಯಾದಾಹವನ್ನು ತಣಿಸಿಕೊಂಡರು.

ಆ ಸಂದರ್ಭದಲ್ಲಿ ಸಂಗೀತಕಳಾ ನಿಧಿ ಆರ್. ವಾಸುದೇವಾ ಚಾರ್ಯರಿಂದ ಸಂಗೀತ ಶಿಕ್ಷಣವನ್ನು ಪಡೆಯುವ ಅವಕಾಶ ದೈವಾಯತ್ತವಾಗಿ ಒದಗಿಬಂತು. ಮುಂದೆ ಅವರ ಸಮರಕಲೆಯ ವಿಕಸನಕ್ಕೆ ಇದು ಸಹಕಾರಿಯಾಯಿತು. 1910ರಲ್ಲಿ ಅಂದರೆ ಊರು ಬಿಟ್ಟು ಹೋದ ನಾಲ್ಕು ವರ್ಷಗಳಲ್ಲಿ ಮರಳಿ ಮನೆ ಸೇರಿದರು.

ಆಗ ಅವರು ಇಪ್ಪತ್ತೆರಡರ ತರುಣ! ಸಂಗೀತ ಪರಿಜ್ಞಾನ-ವಿದ್ವತ್ತೆಗಳನ್ನು ಮೈಗೂಡಿಸಿಕೊಂಡ ಅವರಿಗೆ ವಿಶೇಷ ಆತ್ಮವಿಶ್ವಾಸ ಧೈರ್ಯ ಮೂಡಿತ್ತು. ವಾಚನ-ಪ್ರವಚನ ಮಾಡುವ ಅವರ ಬಯಕೆ ಆಗ ಸಹಜವಾಗಿ ಮೊಳಕೆಯೊಡೆಯಿತು. ಅಂದಿನ ದಿನಗಳಲ್ಲಿ ಮನೆ-ಮನೆಗಳಲ್ಲಿ, ಹಳ್ಳಿ ಹಳ್ಳಿಗಳಲ್ಲಿ ಪುರಾಣ ವಾಚನ-ಪ್ರವಚನಗಳು ದೈನಂದಿನದ ಅನಿವಾರ್ಯ ಕಾರ್ಯಕ್ರಮಗಳೆಂಬಂತೆ ಜರಗುತ್ತಿದ್ದವು. ಸದ್ಗೃಹಸ್ಥರೆನಿಸಿದವರಲ್ಲಿ ಇವು ಅನಿಶ್ಯಂಭಾವಿಗಳೆನಿಸಿದ್ದರು. ಶಿವಪೂಜೆ-ಸತ್ಯನಾರಾಯಣ ಪೂಜೆ, ಹಬ್ಬ ಹರಿದಿನಗಳಲ್ಲಿ ಪ್ರತಿ ಮನೆಯಲ್ಲಿ ತಪ್ಪದೆ ನಡೆಯುತ್ತಿದ್ದ ಈ ಕಾರ್ಯಕ್ರಮಗಳಲ್ಲಿ ತಿಮ್ಮಪ್ಪಯ್ಯನವರಿಗೆ ವಿಪುಲವಾದ ಅವಕಾಶವೊದಗಿತು. ರಮ್ಯವಾದ ಆಕರ್ಷಕ ಶಾರೀರ, ವಿದ್ವತ್‌ಪೂರ್ಣ ಸರಳ ಸುಂದರ ಸರಸ ವ್ಯಾಖ್ಯಾನಗಳಿಂದ ಅವರ ಹೆಸರು ಮನೆಮಾತಾಯಿತು. ಜನಮನದ ಆಕರ್ಷಕ ಕೇಂದ್ರ ಬಿಂದುವಾಗಿ ಅವರು ಗುರುತಿಸಲ್ಪಟ್ಟರು. ಜಿಲ್ಲೆಯ ಆದ್ಯಂತ ಅವರ ಕ್ಷೇತ್ರ ವಿಸ್ತರಿಸಿತು.

ಆ ಹೊತ್ತಿಗೆ ಜಿಲ್ಲೆಯ ಯಕ್ಷಗಾನ ಕಲೆಗಳಲ್ಲಿಯೂ ಅವರು ಭಾಗವಹಿಸಿದರು. ಕವಿ ಭೂಷಣ ಕೆ.ಪಿ.ವೆಂಕಪ್ಪಶೆಟ್ಟರು ಆಗ ಪ್ರಸಿದ್ಧ ಅರ್ಥದಾರಿಗಳಾಗಿದ್ದರು. ತಿಮ್ಮಪ್ಪಯ್ಯನವರ ಪ್ರೌಢಿಮೆ, ವಾಚನ- ಪ್ರವಚನ ಸಾಮರ್ಥ್ಯವನ್ನು ಮೆಚ್ಚಿದ ಅವರು ಮಂಗಳೂರಿನ ಅಮ್ಮೆಂಬಳ ಶ್ರೀನಿವಾಸ ಪೈಗಳಿಗೆ ವಾಚನ ಕಲೆಯ ಪರಿಚಯ ಮಾಡಿಸಿಕೊಟ್ಟರು. (ಉಚ್ಚ ನ್ಯಾಯಾಲಯದಲ್ಲಿ ಮುಖ್ಯ ನ್ಯಾಯಾಧೀಶರಾಗಿದ್ದ ನಾರಾಯಣ ಪೈಗಳು ಶ್ರೀನಿವಾಸ ಪೈಗಳ ಮಗ) ಶ್ರೀನಿವಾಸ ಪೈಗಳು ತಿಮ್ಮಪ್ಪಯ್ಯನವರ ಪಾಂಡಿತ್ಯ ಪ್ರವಚನ ಕಲೆಗಳನ್ನು ಮೆಚ್ಚಿ ತಮ್ಮ ಕೆನರಾ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರನ್ನಾಗಿ ಕರೆಸಿಕೊಂಡರು. ಇಲ್ಲಿ ತಿಮ್ಮಪ್ಪಯ್ಯನವರಿಗೆ ವಿಶಾಲವಾದ ಅವಕಾಶವೊದಗಿ ಬಂತು.

ಕೆನರಾ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿ ಸೇರಿದ ಮೇಲೆ ಅವರ ಜೀವನಕ್ಕೊಂದು ಆಯಾಮ ಬಂತು. ತನ್ನ ಮನೆಯವರನ್ನೆಲ್ಲಾ ಮಂಗಳೂರಿಗೆ ಕರೆತಂದು ನೆಲೆಯೊಂದನ್ನು ಕಲ್ಪಿಸಿಕೊಂಡರು. ತಂದೆ ಕೇಶವ ಭಟ್ಟರು 1914ರಲ್ಲಿ ತೀರಿಕೊಂಡರು. 1915ರಲ್ಲಿ ಕರೋವಾಡಿ ಗ್ರಾಮದ ದೇವಕಿ ಅಮ್ಮ ಎಂಬವರೊಡನೆ ವಿವಾಹ ಮಾಡಿಕೊಂಡರು. 1919ರಲ್ಲಿ ಅವರ ತಾಯಿ ತೀರಿಕೊಂಡರು. ಸಂಕಷ್ಟವಿನ್ನೂ ಅವರನ್ನು ಬಿಟ್ಟು ತೊಲಗಿರಲಿಲ್ಲ. ಸಾಧ್ವಿ ದೇವಕಿ ಅಮ್ಮ ಮನೆ-ಮನಗಳನ್ನು ತುಂಬಿದ್ದರಿಂದ ಅವರ ಸಾಹಿತ್ಯ ಸರಸ್ವತಿಯ ಆರಾಧನೆ ಯಶಸ್ವಿಯಾಯಿತು! ಈ ದಿನಗಳಲ್ಲಿ ಅವರು ಚಂದ್ರಾವಳಿ ವಿಲಾಸ, ಸೊಬಗಿನ ಬಳ್ಳಿ, ಹಗಲಿರುಳು, ಬಡ ಹುಡುಗಿ, ನಡತೆಯ ನಾಡು ಮೊದಲಾದ ಕೃತಿಗಳನ್ನು ಅವ್ಯಾಹತವಾಗಿ ರಚಿಸಿದರು. 'ಕನ್ನಡ ಕೋಗಿಲೆ' ಮಾಸ ಪತ್ರಿಕೆ ಕೂಡಾ ನಾಡಿನ ಆದ್ಯಂತ ತನ್ನ ಕೂಜಿತವನ್ನು ಮೊಳಗಿಸಿತು. ಇದು ಅವರ ಸಾಹಿತ್ಯಜೀವನದ ಒಂದು ಘಟ್ಟವೆಂದು ವಿದ್ವಾಂಸರು ಪರಿಗಣಿಸಿದ್ದಾರೆ.

1918ರಲ್ಲಿ ಸೈಂಟ್ ಎಲೋಸಿಯಸ್ ಕಾಲೇಜಿನ ಕನ್ನಡ ಪ್ರಾಧ್ಯಾಪಕರ ಹುದ್ದೆ ತೆರವಾದಾಗ, ಅದನ್ನು ತುಂಬಲು ತಿಮ್ಮಪ್ಪಯ್ಯನವರು ಆಮಂತ್ರಿತರಾದರು. ಮೂವತ್ತು ವರ್ಷಗಳ ಕಾಲ ಅಧ್ಯಾಪನ-ಪ್ರವಚನ ನಡೆಸಿ ಅಸಂಖ್ಯ ಶಿಷ್ಯರಾಶಿಯನ್ನು ಗಳಿಸಿದರು. ಕನ್ನಡದ ಸವಿಯನ್ನು ತನ್ನ ವಿದ್ಯಾರ್ಥಿಗಳಿಗೆ ಮಾತ್ರವಲ್ಲ ನಾಡಿನ ಆದ್ಯಂತ ಎಲ್ಲರಿಗೂ ಉಣಿಸಿದರು. ಈ ಅವಧಿಯಲ್ಲಿ ಅವರ ಪ್ರಬುದ್ಧ ಕೃತಿಗಳು ಬೆಳಕಿಗೆ ಬಂದವು! 'ನಾಡೋಜ ಪಂಪ' ಅವರನ್ನು ಎತ್ತರಕ್ಕೇರಿಸಿದ ಮೇರು ಕೃತಿ ! ಕನ್ನಡದ ಓಜರೆಂದು ಖ್ಯಾತಿ ತಂದು ಕೊಟ್ಟ ಮಹಾಕೃತಿ ! ಸಮಸ್ತ ಭಾರತ ಸಾರ, ಪಾರ್ತಿಸುಬ್ಬ,

ಕವಿರಾಜ ಮಾರ್ಗ ವಿವೇಕ, ಆದಿಪುರಾಣ ಸಂಗ್ರಹದಂಥ ಕೃತಿರತ್ನಗಳ ರಚನೆ ಈ ಕಾಲ ಘಟ್ಟದಲ್ಲಿ ನಡೆದಿದೆ.

ಕೇಶವ ಭಟ್ಟರು ಅವರ ಹಿರಿಯ ಮಗ! ಮದ್ರಾಸ್-ಕರ್ನಾಟಕ ಸರಕಾರಗಳ ಮುಖ್ಯ ಭಾಷಾಂತರಕಾರರಾಗಿದ್ದರು. ಮಹಾಬಲಭಟ್ಟರು ನ್ಯಾಯವಾದಿ, ಉತ್ತಮ ಸಾಹಿತಿ, ಇವರಿಬ್ಬರೂ ತೀರ್ಥರೂಪರ ಪಾಂಡಿತ್ಯದ ವಾರಸುದಾರರಾಗಿ ಗುರುತಿಸಲ್ಪಟ್ಟಿದ್ದಾರೆ. ಗೋಪಾಲಕೃಷ್ಣ ಭಟ್ಟರು ಮೂರನೆಯವರು. ಇವರು ನ್ಯಾಯವಾದಿಯಾಗಿ ಪ್ರಾಮಾಣಿಕ ಅಧಿಕಾರಿಯಾಗಿ ಸೇವೆ ಸಲ್ಲಿಸಿದ್ದಾರೆ. ರಾಘವಯ್ಯ ಒಬ್ಬ ವಿಜ್ಞಾನಿಯಾಗಿದ್ದಾರೆ. ಹಿರೇ ಮಗಳು ಮೂಕಾಂಬಿಕೆ, ಇನ್ನೊಬ್ಬಳು ಜಯಲಕ್ಷ್ಮಿ ಇಬ್ಬರು ಪುತ್ರಿಯರು ಸದ್ಗೃಹಿಣಿಯರಾಗಿದ್ದಾರೆ. ಹೀಗೆ ಮಕ್ಕಳ ಸೌಭಾಗ್ಯವನ್ನು ಪಡೆದ ತೃಪ್ತಿ ಅವರಿಗಿತ್ತು. ಪತ್ನಿ ದೇವಕಿ ಅಮ್ಮ 1944ರಲ್ಲಿ ತೀರಿಕೊಂಡರು. 1948ರಲ್ಲಿ ಅವರು ನಿವೃತ್ತರಾಗಿ ಮಂಗಳೂರನ್ನು ತ್ಯಜಿಸಿದರು. ಮಗ ಮಹಾಬಲ ಭಟ್ಟರೊಡನೆ ಕೆಲಕಾಲ ಪೆರ್ಲದಲ್ಲಿದ್ದು ಮತ್ತೆ ಹಿರಿಯ ಮಗ ಕೇಶವ ಭಟ್ಟರು ನೆಲಸಿದ್ದ ಮದ್ರಾಸಿಗೆ ತೆರಳಿ, ಅಲ್ಲಿ ಹೃದಯದ ಬೇನೆಗೆ ಸಾಕಷ್ಟು ಚಿಕಿತ್ಸೆ ಪಡೆದರು. ಆರೋಗ್ಯ ತುಸು ಸುಧಾರಿಸಿದಂತೆ ಕಂಡಾಗ ಮತ್ತೆ ಸಾಹಿತ್ಯಾಸಕ್ತಿಯಿಂದ ಕೃತಿ ರಚನೆಗೆ ತೊಡಗಿದರು. 1950ರ ಜನವರಿ 16ನೇ ದಿನ ಇದ್ದಕ್ಕಿದ್ದಂತೆ, ಮಗನ ತೊಡೆಯಲ್ಲಿ ತಲೆಯಿರಿಸಿ, ಸ್ನೇಹಿತರನ್ನೆಲ್ಲಾ ವಿಚಾರಿಸಿಕೊಂಡು ಕೊನೆಯುಸಿರನ್ನೆಳೆದರು. ಜ್ಞಾನಜ್ಯೋತಿಯೊಂದು ಮರೆಯಾಯಿತು!

ಅವರ ಕೃತಿರಚನೆಯ ಕಾಲಘಟ್ಟವನ್ನು ಎರಡನೆಯ ಹಂತದಲ್ಲಿ ಗುರುತಿಸಿದರೂ ಪ್ರಮುಖ ಘಟ್ಟಗಳಲ್ಲಿ ಅವರ ಜೀವನಯಾತ್ರೆ ಸಾಗಿದೆ. ಅವರ ಬಾಲ್ಯ-ವಿದ್ಯಾಪರಿಶ್ರಮ, ಮಂಗಳೂರಿಗೆ ಕಾಲಿಡುವ ತನಕದ ಅವಧಿಯನ್ನು ಮೊದಲ ಘಟ್ಟವೆಂದೂ, ಹೈಸ್ಕೂಲ್ ಅಧ್ಯಾಪನದ ಕೃತಿರಚನೆಗಳ ಕಾಲವನ್ನು ಮುಖ್ಯವಾಗಿ ಎರಡನೆಯದೆಂದೂ, 1918ರ ಅನಂತರದ ದಿನಗಳನ್ನು ಮೂರನೆಯದೆಂದೂ ಗುರುತಿಸಿದರೆ ಸಮರ್ಪಕವೆನಿಸಬಹುದು.

ಪಂಡಿತ ತಿಮ್ಮಪ್ಪಯ್ಯನವರ ಸಾಹಿತ್ಯ ಪ್ರಕಾರವನ್ನು ಕೆಳಗಿನಂತೆ ಗುರುತಿಸ ಬಹುದು:

**ಕಾವ್ಯ** : 1) ಸೊಬಗಿನ ಬಳ್ಳಿ (1917), 2) ಪ್ರೇಮಸಾರ (1917), 3) ಬಡಹುಡುಗಿ (1918), 4) ನವನೀತ ರಾಮಾಯಣ (1940).

**ನಾಟಕ** : 1) ಚಂದ್ರಾವಳೀವಿಲಾಸಂ (1913), 2) ನಡತೆಯ ನಾಡು (1917), 3) ಹಗಲಿರುಳು (1918), 4) ರಾವ್ಯತ-ರಂಗಪ್ಪ (1959 ಮರಣೋತ್ತರ)

**ಗದ್ಯಾನುವಾದ** : 1) ಆದಿಪುರಾಣ ಸಂಗ್ರಹ (1938,1977), 2) ಸಮಸ್ತಭಾರತ ಸಾರ (1941), 3) ತ್ರಿಪುರ ದಾಹ (1941)

**ಸಂಶೋಧನೆ** : 1) ನಾಡೋಜ ಪಂಪ (1938, 1977)
2) ಕವಿರಾಜಮಾರ್ಗವಿವೇಕ (1948, 1973)
3) ಪಾರ್ತಿಸುಬ್ಬ (1945) 4) ಕನ್ನಡ ನಾಡೂ ದೇಸಿ ಸಾಹಿತ್ಯವೂ ಮರಣೋತ್ತರ (1959)

**ವಿಮರ್ಶೆ** : 1) ಕನ್ನಡ ಸಾಹಿತ್ಯ ಮತ್ತು ಇತರ ಉಪನ್ಯಾಸಗಳು
2) ಸಂಸ್ಕೃತಿ (1981) ಮರಣೋತ್ತರ.
3) ಆಂಡಯ್ಯನೂ ಕನ್ನಡಮೆನಿಪ್ಪಾ ನಾಡೂ (1927)

**ಕಾದಂಬರಿ** : 1) ಪಶ್ಚಾತ್ತಾಪ (1934,1945), 2) ವೀರಬಂಕೆಯ (1948,49,83,83)

**ಪತ್ರಿಕೆ** : ಕನ್ನಡ ಕೋಗಿಲೆ (1916 ಎಪ್ರಿಲಿನಿಂದ 1919 ಅಕ್ಟೋಬರ್‌ವರೆಗೆ)

**ಕಿರುಕವನಗಳು**

1) ಇವಳ್ಯಾರು, 2) ಹಾರುವ ಹಕ್ಕಿ ಇತರ ವಿಶಿಷ್ಟ ಬರೆಹಗಳು.

1) ಕನ್ನಡ ಸಾಹಿತ್ಯ 2) ಪಂಪ ಮಹಾಕವಿ, 3) ಮುದ್ದಣನ ಜಾಣ್ಮೆ, 4) ಕವಿಸಮಯದಲ್ಲಿ ಸಾಹಿತ್ಯದ ಸ್ಥಾನ, 5) ನೆತ್ತಮನಾಡಿ ಭಾನುಮತಿ ಸೋಲ್ತೋಡೆ 6) ಶಿಶುಮಾಯಣ 7) ಕನ್ನಡ ಅಕ್ಷರ ಮಾಲೆ, 8) ಅಚ್ಚಗನ್ನಡ 9) ಹೊನ್ನಮ್ಮ 10) ಭಾಸಕವಿ 11) ತುಳುವೂ ಕನ್ನಡವೂ, 12) ಸಾಹಿತ್ಯ 13) ಶ್ರೀಕೃಷ್ಣ 14) ಯಕ್ಷಗಾನವೂ ಬಯಲಾಟವೂ 15) ಪಾರ್ತಿಸುಬ್ಬ, 16) ಒಂದು ಪತ್ರ, 17) ಪ್ರಜಾವರ್ಗವೇ ಸಾರ್ವಭೌಮಾಧಿಕಾರದ ಮೂಲ, 18) ಪ್ರಾಚೀನ ಭಾರತದಲ್ಲಿ ಪ್ರಜಾಗ್ರಹಣಪದ್ಧತಿ ಇತ್ತು 19) ಅವಿನಯದ ಪರಮಾವಧಿ 20) ಏಶ್ಯನ್ ಜನಾಂಗಗಳ ಸಮ್ಮೇಳನದ ಅರ್ಥ 21) ಏಶ್ಯ ಜನಾಂಗ ಪರಿಷತ್ತಿನ ಅವಶ್ಯಕತೆ, 22) ಐಕ್ಯಕೇರಳವಾದಿಗಳ ವಿಚಿತ್ರವಾದ 23) ಜಗತ್ತಿನ ಮುಖ್ಯ ಸಂಸ್ಕೃತಿಗಳೆರಡರಲ್ಲಿಯ ತಾರತಮ್ಯ 24) ಮೂವರು ನರೇಂದ್ರರ ಮೂರು ಮಾರ್ಗಗಳು 25) ದಾರಿದ್ರ್ಯ ನಿವಾರಣದಿಂದಲೇ ಸ್ವಾತಂತ್ರ್ಯದ ಸಾಫಲ್ಯವು.

**ಯಕ್ಷಗಾನ ಪ್ರಸಂಗ** : 1) ಸೂರ್ಯಕಾಂತಿ ಕಲ್ಯಾಣ (ಅಪ್ರಕಟಿತ)

ಕಾವ್ಯ ಪ್ರಕಾರದಲ್ಲಿ ಬಡಹುಡುಗಿ, ಪ್ರೇಮಪಾಶ ಎಂಬ ಕಥನ ಕವನಗಳು ಮೂಡಿಬಂದಿವೆ. ಬಡತನದಲ್ಲಿ ನವೆಯುತ್ತಿದ್ದ ತಂದೆ, ತನ್ನ ಮಗಳನ್ನು ದೂರದೂರಿಗೆ ಮಾರಿ, ಗಂಡುಮಕ್ಕಳು ತೀರಿಕೊಂಡು ಬೀದಿ ಪಾಲಾದುದು, ಮಗಳು ಗಂಡನನ್ನು ಕಳೆದುಕೊಂಡು ಇತರ ಧರ್ಮೀಯನೊಡನೆ ಬಾಳುವೆ ನಡೆಸಿ ತಂದೆಯನ್ನ ಆದರಿಸಿದುದು ಮುದುಕನ ಮದುವೆ-ಹೆಣ್ಣಿನ ಬಾಳಿನ ಕಥೆ ಆಗಿನ ದಿನಗಳ ವ್ಯಥೆಯನ್ನು ಚಿತ್ರಿಸಿದೆ. "ಜಾತಿ ಜಾತಿಯೆನುತ್ತ ಸಾವರಲ್ಲದೆ, ಅದರ ನೀತಿ ನೀರಾಗಿ ಕೆಳಹರಿಯದಂತೆ ಓತು, ಸರಿಯಾದ ಬಾಂಧವ್ಯದಿಂದ ಕಟ್ಟದಿರಲಾ ತಂದೆತಾಯಿಗಳ ತಪ್ಪಲ್ಲವೇ ? ಎಂಬ ಸಾಮಾಜಿಕ ಒಳಸುಳಿಯನ್ನು ಕವಿ ಇಲ್ಲಿ ಬಿಚ್ಚಿದ್ದಾರೆ. ಪ್ರೇಮ ಪಾಶದಲ್ಲಿ ಹಳ್ಳಿ -ಪಟ್ಟಣಗಳ ಬದುಕಿನ ಅಂತರ-ಪ್ರೇಮದ ಅರ್ಥ-ಬದುಕಿನ ಬವಣೆಯೊಂದಿಗೆ ಚಿತ್ರಿತವಾಗಿದೆ. ಚಂದ್ರಾವಳೀ ವಿಲಾಸವು ತಿಮ್ಮಪ್ಪಯ್ಯನವರ ರಸಿಕತೆಯ ದ್ಯೋತಕವಾಗಿದೆ. ಮುದ್ದಣನ ರಾಮಾಶ್ವಮೇಧ-ಅದ್ಭುತ ರಾಮಾಯಣಗಳನ್ನು ಓದಿದ ಪರಿಣಾಮವಾಗಿ ಈ ಕಾವ್ಯ ಮೈದಳೆಯಿತೆಂದು ಹೇಳಿಕೊಂಡಿದ್ದಾರೆ. ಐದೇ ದಿನಗಳಲ್ಲಿ ರಚಿತವಾದ ಈ ಕೃತಿ ವಿಶಿಷ್ಟ ಸ್ವರೂಪದ್ದಾಗಿದೆ. ಪ್ರಬೋಧ ಚಂದ್ರೋದಯದಿಂದ ಪ್ರಭಾವಿತರಾಗಿ 'ಹಗಲಿರುಳು' ಕೃತಿಯನ್ನು, ಆಂಡಯ್ಯನ ಕಬ್ಬಿಗರ ಕಾವಂ

ಮಾದರಿಯಲ್ಲಿ 'ಸೊಬಗಿನ ಬಳ್ಳಿ' ಎಂಬ ಕಾವ್ಯರಚನೆಯನ್ನು ಅವರು ಮಾಡಿದ್ದಾರೆ. ನವನೀತ ರಾಮಾಯಣವು ರಾಮಾಯಣದಲ್ಲಿ ಒಂದು ವಿಶಿಷ್ಟ ಸೊಬಗನ್ನು ಮತ್ತು ಅವರದೇ ಆದ ವೈಲಕ್ಷಣ್ಯವನ್ನು ಮೆರೆಯಿಸಿದೆ. ತಮ್ಮ ಬಾಲ್ಯದಲ್ಲಿ ತಾಯಿಯಿಂದ ಪ್ರಭಾವಿತರಾದುದನ್ನು ನೆನೆಸಿ ಕವಿಮಾತೆಯನ್ನು ಕವನದಿಂದ ಸ್ತುತಿಸಿದ್ದಾರೆ.

ಮಹಾಕವಿ ಪಂಪನ ಆದಿಪುರಾಣವನ್ನು ಆದಿಪುರಾಣ ಸಂಗ್ರಹ ಎಂಬ ಹೆಸರಿನಿಂದಲೂ, ವಿಕ್ರಮಾರ್ಜುನ ವಿಜಯವನ್ನು ಸಮಸ್ತ ಭಾರತಸಾರ ಎಂಬ ಹೆಸರಿನಿಂದಲೂ ಗದ್ಯರೂಪದಲ್ಲಿ ನೀಡಿದ್ದಾರೆ. ಸಂಸ್ಕೃತಿ ಉತ್ತಮ ಚಿಂತನ ಪ್ರಧಾನ ಕೃತಿ. ವೀರಬಂಕೆಯ ಕಾದಂಬರಿ ರಚನೆಗೆ ಪಂಪನ ಪ್ರೇರಣೆಯೇ ಕಾರಣವಾಗಿರಬೇಕು. ಪಶ್ಚಾತ್ತಾಪ ಕಾದಂಬರಿಯು ತಮ್ಮೂರಿನ ಹಾಗೂ ಕುಟುಂಬದ ಸುತ್ತಮುತ್ತಲಿನ ಚಿತ್ರವಾಗಿದೆ. ಪಶ್ಚಾತ್ತಾಪ ಕಾದಂಬರಿಯಲ್ಲಿ ಬರುವ ಪ್ರದೇಶ-ಪರಿಸರಗಳ ಚಿತ್ರಣ ಈ ತನಕ ಯಾವದೇ ಕತೆ-ಕಾದಂಬರಿಗಳಲ್ಲಿ ಬಂದಿಲ್ಲ ಎಂಬುದು ಇಲ್ಲಿ ಗಮನಾರ್ಹವಾಗುತ್ತದೆ.

ಪಂಪನ ಕುರಿತಾದ ಅವರ ಅಧ್ಯಯನ ಅಗಾಧ, ಅನಂತ, ಅಪಾರ, ಕನ್ನಡದ ನಾಡೋಜನೆಂದು ಕೊಂಡಾಡಿದ ಮುಳಿಯರೇ ಕನ್ನಡದ ಓಜರಾಗಿ ಗುರುತಿಸಲ್ಪಟ್ಟಿದ್ದಾರೆ. ಸಂಸ್ಕೃತಕ್ಕೆ ವಾಲ್ಮೀಕಿಯಂತೆ, ಕನ್ನಡಕ್ಕೆ ಆದಿಕವಿ ಪಂಪನೆಂದು ಸಾರಿದ ತಿಮ್ಮಪ್ಪಯ್ಯನವರು ಚಾಳುಕ್ಯ ವಂಶದ ಅರಿಕೇಸರಿಯೊಡನೆ ಅರ್ಜುನನನ್ನು ಸಮೀಕರಿಸಿದ ಪಂಪನ ಪೆಂಪನ್ನು ತೋರಿಸಿದ್ದಾರೆ. ವೆಂಗಿಮಂಡಲದ ಸೀಮಾವಿಮರ್ಶೆ, ವೆಂಗಿಪೊಳು ಕರ್ನಾಟಕ ಧಾತ್ರೀ ತಿಲಕವೇ ಆಗಿದ್ದುದು, ಪಂಪನು ಹೇಳುವ ವೆಂಗೀಶನ ನಾಡು ಕರ್ನಾಟಕವೇ ಸರಿ ಎಂಬ ಸಿದ್ಧಾಂತ, ಬೆಳ್‌ಪದ ಸಂಬಂಧದಿಂದಲೇ ಬೆಂಗಿ ಎಂದಾಗಿರಬೇಕು. ಬೆಳ್ಳ ಪಂಗಡದವರನ್ನೇ ವೇದದಲ್ಲಿ ದಸ್ಯುಗಳು ಎಂದು ಕರೆದರು, ಬೆಳ್ಳರೊಡಗೂಡಿದವನು ಬೆಪ್ಪ, ಅದಕ್ಕೆ ಪೂರ್ವಾಧಾರ, ಬೆಳ್ಳರೆಂದರೆ ಅನಾಗರಿಕರಲ್ಲ, ವೈದಿಕಸಾಹಿತ್ಯದಲ್ಲಿ ವೆಂಗಿನಾಡಿನ ಹೊಲವಿದೆಯೆ? ಬೇಕನಾಟ ಪದದ ವ್ಯುತ್ಪತ್ತಿ, ಪದವಿ ವಿಮರ್ಶೆ, ಬೇಕನಾಟರೆಂದರೆ ಬೆಂಗಿನಾಡವರು, ಆರ್ಯಘರ್ಷಣೆಯಿಂದ ಬೆಳ್ಳವರ್ಗದವರು ಚದರಿ ಅಲ್ಲಲ್ಲಿ ನೆಲಸಿದ್ದು, ಮೊದಲಾದವುಗಳನ್ನು ಪಾಂಡಿತ್ಯಪೂರ್ಣವಾಗಿ ಅವರು ಚರ್ಚಿಸಿದ್ದಾರೆ. ಇಲ್ಲಿ ಯಾಸ್ಕ-ಸಾಯಣದ ನಿರೂಪಣೆಯನ್ನು ಅವರು ಒರೆಗೆ ಹಚ್ಚುತ್ತಾರೆ. ಬೇಕನಾಟರೆಂದರೆ ಕೊಟ್ಟುದರ ಇಮ್ಮಡಿ ಹಣವನ್ನು ಎಸಗುವವರು, ಅಥವಾ ಕೇಳಿದುದಕ್ಕೆರಡರಷ್ಟು ಸಾಲ ಕೊಡುವವರು, ದ್ವಿಗುಣ ದ್ರವ್ಯವನ್ನಾಶಿಸುವವರು ಎಂಬ ನಿರುಕ್ತಕಾರ ಯಾಸ್ಕರ ವ್ಯಾಖ್ಯೆಯನ್ನು ಅವರು ವಿಶ್ಲೇಷಿಸುತ್ತಾರೆ. ಬೇ+ಏಕ ಎಂಬುದನ್ನು ಕೂಡಿಸುವದಿಲ್ಲವಾದರೂ ದ್ವಿಗುಣ ಎಂಬರ್ಥವನ್ನು ಕೊಡುವದು ಎಂಬ ಅಭಿಪ್ರಾಯವನ್ನು ನಿರುಕ್ತಕಾರ ಯಾಸ್ಕನು ಹೇಳಲಿಲ್ಲವೇಕೆ? ಬೇಕ ಎಂಬುದು ದ್ವಿಕದ ಅಪಭ್ರಂಶವೆ ? ವೇದದಲ್ಲಿ ಅಪಭ್ರಂಶವಿದೆಯೆಂದು ಹೇಳಲು ಯಾಸ್ಕರಿಗೆ ಮನಸ್ಸಿರಲಿಲ್ಲವೆ? ಸಾಯಣನಂಥ ಧೈರ್ಯ ಅವರಿಗೆ ಇರಲಿಲ್ಲವೆ? ಎಂಬ ಪ್ರಶ್ನೆಗಳು ತಿಮಪ್ಪಯ್ಯನವರ ನಿಶಿತ ವಿಮರ್ಶಕ ಮಾತಿಗೆ ಸಾಕ್ಷಿಗಳಾಗಿವೆ. ಬೇಕ ಎಂಬ ಪದದ ನಿರುಕ್ತಿಯ ವಿಚಾರದಲ್ಲಿ ನಿರುಕ್ತಕಾರನ ಮೌನವನ್ನು ಮಾತ್ರವಲ್ಲ ವ್ಯಾಖ್ಯಾನಕಾರನಾದ ದುರ್ಗಾಚಾರ್ಯನನ್ನು ತಿಮ್ಮಪ್ಪಯ್ಯನವರು ಪ್ರಶ್ನಿಸದೆ ಬಿಡುವದಿಲ್ಲ. ಯಾಸ್ಕರಿಗಿಲ್ಲದ ಧೈರ್ಯ ಸಾಯಣರಿಗಿತ್ತು ಎಂಬುದನ್ನು ಅವರು ತೋರಿಸಿಕೊಡುತ್ತಾರೆ. ಇಂಥ ಗಹನ ವಿಚಾರಗಳನ್ನು ಎತ್ತಿಕೊಂಡು ಆಳವಾದ ಚರ್ಚೆ ನಡೆಸಿ ದೇಶ-ಕಾಲ-ಕವಿ-ಕಾವ್ಯವಿಚಾರಗಳ ಸಿದ್ಧಾಂತಕ್ಕೆ ಅವರು ಬಂದಿದ್ದಾರೆ.

ಅಮೋಘವರ್ಷ ನೃಪತುಂಗನ ಬಗ್ಗೆ ತಿಮ್ಮಪ್ಪಯ್ಯನವರ ಸಂಶೋಧನೆ ಹರಸಾಹಸವಾಗಿದೆ. ಕವಿರಾಜಮಾರ್ಗಕಾರನಾರು? ನೃಪತುಂಗನೆ? ವಿಜಯನೆ ಎಂಬುದನ್ನು ವಿಸ್ತಾರವಾಗಿ ವಿವೇಚಿಸಿ ವಿಜಯನೆಂಬ ಸಿದ್ಧಾಂತಕ್ಕೆ ಬರುತ್ತಾರೆ. ಆದರೆ ನೃಪತುಂಗನ ಬಗ್ಗೆ ಅವರ ಧೋರಣೆ ಪ್ರತಿಕೂಲ ಸ್ಥಿತಿಗೆ ಕಾರಣವಾಗುವುದಿಲ್ಲ. ರಾಷ್ಟ್ರಕೂಟರ ವಂಶ, ಪ್ರಭೂತ ವರ್ಷ ಗೋವಿಂದ, ಅಮೋಘವರ್ಷ, ನೃಪತುಂಗ, ಆತನ ಆಳ್ವಿಕೆ, ಮತ, ಗ್ರಂಥರಚನೆಯ ವಿಚಾರ, ಕವಿಗಳ ಪೋಷಕತ್ವ ಉದಾರವರ್ತನೆಗಳನ್ನು ಒರೆಗೆ ಹಚ್ಚಿದ್ದಾರೆ. ಕವಿರಾಜಮಾರ್ಗ ರೂಪಿತವಾದ ಮಾರ್ಗವಿಭಾಗ, ಗುಣಗತ ಮಾರ್ಗ ಭೇದ, ರಸಗತ ಮಾರ್ಗಭೇದಗಳನ್ನು ತೋರಿಸಿ ಕಾವ್ಯದೋಷ, ಅಲಂಕಾರ ದರ್ಶನಗಳನ್ನು ಮಾಡಿಸಿದ್ದಾರೆ. ದಂತಿವರ್ಮನಿಂದ ನೃಪತುಂಗನವರೆಗಿನ ವಂಶವಿಚಾರದೊಡನೆ, ರಾಜಧಾನಿ ಮಾನ್ಯಖೇಟವನ್ನು ಕಂಡು ಹಿಡಿದುದು, ತಿರುಳ್ಗನ್ನಡದ ಸಂಸ್ಕೃತಿ, ನಾಡಿನ ಬಾಹ್ಯಾಂತರಂಗಸ್ವರೂಪಗಳ ದರ್ಶನವನ್ನು ಮಾಡಿಸಿದ್ದಾರೆ.

ಯಕ್ಷಗಾನ ಕವಿ ಪಾರ್ತಿಸುಬ್ಬನ ಬಗ್ಗೆ ಇವರ ಸಂಶೋಧನೆ ಪ್ರಾಮಾಣಿಕವಾಗಿ ಆ ಕಾಲದ ಸ್ಥಿತಿಯಿಂದ ವ್ಯಕ್ತವಾಗಿದೆ. ಯಕ್ಷಗಾನದತ್ತ ಪಂಡಿತರ ಗಮನ ಹರಿಯದ ದಿನಗಳಲ್ಲಿ ಯಕ್ಷಗಾನದ ಕಾವ್ಯ-ರಂಗ ಕಲೆಗಳ ಬಗ್ಗೆ ತಿಮ್ಮಪ್ಪಯ್ಯನವರ ಆಸ್ಥೆ ಮೆಚ್ಚುವಂಥದ್ದು! ಅವರು ಹಾಕಿದ ತಳಹದಿಯಲ್ಲಿ ಮುಂದುವರಿದ ಸಂಶೋಧನೆ ಬಹಳಷ್ಟು ವಾದಕ್ಕೆ ಎಡೆಯಾದರೂ ಅನಂತರ ತಳೆಯಲಾದ ಸತ್ಯ ಸಿದ್ಧಾಂತಕ್ಕೆ ನೆರವಾಯಿತು. ಆ ಕಾಲದ ದೃಷ್ಟಿಯಲ್ಲಿ ನಡೆದ ಸಂಶೋಧನೆಯನ್ನು ಈಗಿನ ಕನ್ನಡಕ ಹಾಕಿಕೊಂಡು ಚರ್ಚೆಗೆ ಗುರಿಪಡಿಸುವುದು ಸಮರ್ಪಕವಾಗುವುದಿಲ್ಲ. ಅವರ ಕಾದಂಬರಿಗಳ ಕುರಿತೂ ಇದೇ ಮಾತು ಅನ್ವಯಿಸುತ್ತದೆ. ಕಾದಂಬರೀ ಪ್ರಕಾರವಿಂದು ಬೆಳೆದು ಹೆಮ್ಮರವಾದರೂ ಬೀಜವಾದ ಸ್ಥಿತಿಯಲ್ಲಿ ಅದರ ಗುಣಲಕ್ಷಣಗಳನ್ನು ವಿಮರ್ಶಿಸಬೇಕೇ ಹೊರತು ಇಂದಿನ ಮಾಪನದಿಂದಲ್ಲ. ಅವರ ಕಾದಂಬರಿ-ನಾಟಕ ಕಥೆ ಏನೇ ಇರಲಿ, ಅದರಲ್ಲಿ ಕಾವ್ಯಾತ್ಮಕ ಗುಣ-ಲಕ್ಷಣಗಳಿದ್ದು ವಾಚನೀಯತೆಯನ್ನುಳಿಸಿಕೊಂಡಿದೆ. ಅಧ್ಯಯನಕ್ಕೆ ಅರ್ಹವಾಗಿದೆ ಎಂಬುದನ್ನು ಗಮನಿಸಬೇಕಾಗಿದೆ, ವಿಮರ್ಶಕನೂ ದೇಶ-ಕಾಲ-ಸ್ಥಿತಿಗಳನ್ನು ಗಮನಿಸಿಯೇ ವಿಮರ್ಶೆ ನಡೆಸಬೇಕಾಗುತ್ತದೆ.

ಅವರ ಸಾಧನೆಗಳಲ್ಲಿ 'ಕನ್ನಡ ಕೋಗಿಲೆ' ಪತ್ರಿಕೆ ಅವರ ಕೀರ್ತಿಕಿರೀಟಕ್ಕೆ ತುರಾಯಿಯಂತಿದೆ. ಕೇವಲ ನಾಲ್ಕೇ ವರ್ಷಗಳ ಕಾಲ ನಡೆದರೂ ಅದರ ಕೀರ್ತಿ-ಪಂಚಮದ ಇಂಚರ ನಾಡನ್ನು ಮೈಮರೆಯಿಸಿತ್ತು. 1916ರಲ್ಲಿ ಪೇಜಾವರ ಭೋಜರಾಯರೊಂದಿಗೆ ಮಂಗಳೂರಿನಿಂದ ಪ್ರಕಟವಾದ 'ಕನ್ನಡ ಕೋಗಿಲೆ' ನಾಡಿನ ಅನೇಕಾನೇಕ ವಿದ್ವಾಂಸರ ಲೇಖನಗಳಿಂದ ಸಮೃದ್ಧವಾಗಿದೆ. ತಿಮ್ಮಪ್ಪಯ್ಯನವರು ತಮ್ಮ ರಾಷ್ಟ್ರಪ್ರೇಮ, ಸಾಹಿತ್ಯ ವಿಚಾರದ ಲೇಖ, ಕಾವ್ಯಗಳನ್ನು ಪತ್ರಿಕೆಯ ಮುಖೇನ ಪ್ರಕಟಿಸಿದ್ದಾರೆ. ಇತರರಿಗೂ ಅವಕಾಶ ನೀಡಿ ಪ್ರೋತ್ಸಾಹ ಕೊಟ್ಟಿದ್ದಾರೆ. ಜಿಲ್ಲೆಯ ಪತ್ರಿಕಾ ಇತಿಹಾಸದಲ್ಲಿ 'ಕನ್ನಡ ಕೋಗಿಲೆ'ಯ ದನಿ ಇನ್ನೂ ಮಾಯದೆ ಉಳಿದಿದೆ. ನಾಡಿನ ಆದ್ಯಂತ ತಿಮ್ಮಪ್ಪಯ್ಯನವರು ಪತ್ರಿಕೆಗಾಗಿ ಓಡಾಡಿ, ಉತ್ತಮೋತ್ತಮ ಲೇಖನಗಳನ್ನು ಬರೆಸಿ ಪ್ರಕಟಿಸಿದರು. ಕನ್ನಡ ಪತ್ರಿಕೋದ್ಯಮದಲ್ಲಿ ಸಾಹಿತ್ಯ ಪ್ರಕಾರಕ್ಕೆ ಮಹತ್ತ್ವ ನೀಡಿದ ಆದ್ಯಪತ್ರಿಕೆಯಾಗಿ ಅದು ವಿರಾಜಮಾನವಾಯಿತು.

ಅವರ ಸಾಧನೆಗಳ ಕಥೆ, ಕನ್ನಡದ ಕರ್ಮಕಥೆ, ಸಾಹಿತ್ಯ ನವೋದಯದ ಬಾಲಗ್ರಹದ ಸಂಕಷ್ಟಗಳ ಕಥೆ, ಯಾವುದೇ ತೆರನಾದ ಮಾಧ್ಯಮ, ಸರಕಾರದ ಪ್ರೋತ್ಸಾಹ, ಏನೊಂದೂ ಇಲ್ಲದೆ ಕನ್ನಡ-ಸಂಸ್ಕೃತಿ ಇಲಾಖೆಯಂಥ ಸಂಸ್ಥೆ-ಸರಕಾರ ಮಾಡುವ ಕೆಲಸವನ್ನು ಅವರು ಆ ದಿನಗಳಲ್ಲಿ ಮಾಡಿದ್ದಾರೆ ಎಂಬುದು ಅವರ ಮಹತ್ತ್ವ! ಕನ್ನಡದ ಸೀಮಾ ಪುರುಷರಾದ ರತ್ನಾಕರವರ್ಣಿ, ಮುದ್ದಣರಂತೆ ಕನ್ನಡದ ಹರಿಕಾರರಾಗಿ ಅವರು ಬೆಳಗಿದರು ಎಂಬುದೊಂದೇ ಇತಿಹಾಸದಲ್ಲಿ ಉಳಿಯತಕ್ಕ ಸತ್ಯವೆನ್ನಬಹುದು.

1927ರಲ್ಲಿ ಮಂಗಳೂರಿನಲ್ಲಿ ಆರ್.ತಾತಾಚಾರ್ಯರ ಅಧ್ಯಕ್ಷತೆಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಅವರು ಮಂಡಿಸಿದ 'ಆಂಡಯ್ಯನೂ ಕನ್ನಡಮೇನಿಪ್ಪಾ ನಾಡು' ಎಂಬ ಪ್ರಬುದ್ಧವಾದ ಪ್ರಬಂಧ ಅವರನ್ನು ದಿಗಂತದೆತ್ತರಕ್ಕೇರಿಸಿತು. ವಿದ್ವದ್ಗೋಷ್ಠಿ ತಲೆದೂಗಿ ಅವರನ್ನು ಅಭಿನಂದಿಸಿತು. ಕನ್ನಡ ಸಾರಸ್ವತಲೋಕದ ಮೇರುಪುರುಷರೆಂಬ ಗೌರವವನ್ನು ಗಳಿಸಲು ಇದು ಮೊದಲ ಹೆಜ್ಜೆಯಾಯಿತು.

1931ರಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವು ಕಾರವಾರದಲ್ಲಿ ನೆರವೇರಿದಾಗ ತಿಮ್ಮಪ್ಪಯ್ಯನವರು ಅಧ್ಯಕ್ಷಪೀಠವನ್ನು ಅಲಂಕರಿಸಲು ಆಹ್ವಾನಿತರಾದರು. ದಕ್ಷಿಣ ಕನ್ನಡದಲ್ಲಿ ಈ ಪೀಠವನ್ನು ಅಲಂಕರಿಸಿದ ಮೊದಲ ಸಾಹಿತಿ ಎಂಬ ಗೌರವ ಅವರಿಗೆ ಪ್ರಾಪ್ತವಾಯಿತು.

ಲಕ್ಷ್ಮೇಶ್ವರದಲ್ಲಿ ಜರುಗಿದ ಪಂಪನ ಸಹಸ್ರಸಾಂವತ್ಸರಿಕೋತ್ಸವದ ಅಧ್ಯಕ್ಷಸ್ಥಾನದ ಗೌರವ ಅವರ ಜೀವನದ ಇನ್ನೊಂದು ಮಹತ್ತ್ವದ ಮಜಲಾಗಿ ದಾಖಲಾಗತಕ್ಕ ಸ್ವರ್ಣಾವಕಾಶವನ್ನು ಕಲ್ಪಿಸಿತು. ಒಂದು ನೂರು ಎತ್ತುಗಳ ಗಾಡಿಯಲ್ಲಿ ಅಧ್ಯಕ್ಷರ ಮೆರವಣಿಗೆ ಸಾಗುತ್ತಿದ್ದಂತೆ, ನಾಡೋಜ ಪಂಪ ಮಹಾಗ್ರಂಥದ 600 ಪುಟಗಳಿಗೆ ಸಮನಾಗುವ ಸಂಖ್ಯೆಯಲ್ಲಿ ಪುಷ್ಪಹಾರಗಳು ಅವರ ಕೊರಳನ್ನು ಅಲಂಕರಿಸಿದುದು ಕನ್ನಡ ಸರಸ್ವತಿಯ ಊಳಿಗದಾಳ್ ಎಂದು ಕರೆಸಿಕೊಂಡ ಈ ಕವಿ-ಸಂಶೋಧಕನಿಗೆ ಸಂದ ಅರ್ಹ ಗೌರವವಾಗಿದೆ.

ಮುಳಿಯ ತಿನ್ನಪ್ಪಯ್ಯರ ಮುಳಿಯಕ್ಕೂ ಅವರಿಗೂ ಇರತಕ್ಕ ಅವಿನಾಭಾವ ಸಂಬಂಧದ ಬಗ್ಗೆ ಪಂಜೆ ಮತ್ತು ಡಿವಿಜಿ ನಡೆಸಿದ ಸಂಭಾಷಣೆಯೊಂದು ಬೆಳಕು ಬೀರುತ್ತದೆ. ಮುಳಿಯ ತಿಮ್ಮಪ್ಪಯ್ಯ ಮುಳಿಯದ ತಿಮ್ಮಪ್ಪಯ್ಯ, ಮುಳಿಯೆ ತಿಮ್ಮಪ್ಪಯ್ಯ ಈ ಮೂರರಲ್ಲಿ ನಿಮಗಾವುದು ಹಿತ? ಎಂಬ ಪ್ರಶ್ನೆ ಅವರಿಂದ ಬಂದಾಗ ತಿಮ್ಮಪ್ಪಯ್ಯನವರು ತೀರ್ಮಾನವನ್ನು ಅವರಿಗೆ ಬಿಟ್ಟರೆಂದು ಡಿವಿಜಿ ಹೇಳಿದ್ದಾರೆ. ಮುಳಿಯ ಎಂದರೆ ಕೋಪವನ್ನರಿಯದ ಸ್ವಭಾವದಲ್ಲಿಯೇ ಕೋಪವಿಲ್ಲದ ಎಂಬುದಾಗಿಯೂ, ಮುಳಿಯದ ಎಂದರೆ ಕೋಪವು ಒಂದು ವೇಳೆ ಇದ್ದರೂ ಅದನ್ನು ಮೇಲಕ್ಕೆ ಬರಕೊಡದವರು ಎಂದರ್ಥವೆಂದೂ, ಮುಳಿಯೆ ಎಂದರೆ ಕೋಪಿಸಿಕೊಂಡದ್ದೇ ಆದರೆ, ಕೋಪವೆಂದರೆ ತಿಮ್ಮಪ್ಪಯ್ಯನವರದೇ ಕೋಪ ಎಂದೂ ಡಿವಿಜಿ ಹೇಳುತ್ತಾರೆ.

ಅವರು ಸಂಸ್ಕೃತ-ಕನ್ನಡ ಉಭಯ ಭಾಷಾವಿಶಾರದರೂ ಅಮೋಘ ವಿದ್ವಾಂಸರೂ ಆಗಿದ್ದರು. ಇಂಗ್ಲಿಷನ್ನು ಅರ್ಥಮಾಡಿಕೊಳ್ಳುವಷ್ಟು ಪ್ರೌಢಿಮೆ ಪಡೆದಿದ್ದರು. ಕನ್ನಡದ ಮೇಲೆ ಇತರ ಭಾಷೆಗಳ ಹೇರುವಿಕೆಯನ್ನು ಅವರು ಬಯಸುತ್ತಿರಲಿಲ್ಲ. ಭಾಷಾಶುದ್ಧಿಗೆ ಅವರು ಪ್ರಾಶಸ್ತ್ಯ ನೀಡುತ್ತಿದ್ದರೆಂದು ಕಡೆಂಗೊಡ್ಲು ಶಂಕರಭಟ್ಟರು ಸೋದಾಹರಣವಾಗಿ ವಿವರಿಸಿದ್ದಾರೆ. ಹವ್ಯಕರ ಮನಿಮಾತಿನಲ್ಲಿಯೂ ಅವರು ಭಾಷಾಶುದ್ಧಿಯನ್ನು ಕಾಯ್ದುಕೊಳ್ಳುವ ಇಚ್ಛೆಯನ್ನು ಹೊಂದಿದ್ದರೆಂದೂ ಅವರಿಂದಲೇ ಪ್ರಭಾವಿತರಾದ ಕಡೆಂಗೋಡ್ಲು ಹೇಳಿದ್ದುಂಟು. ಅಚ್ಚಕನ್ನಡದ ಹುಚ್ಚು ಅವರಿಗೆ ಬಲವಾಗಿತ್ತು. ಆಂಡಯ್ಯನಂತೆ ಸಂಸ್ಕೃತದ ನೆರವಿಲ್ಲದೆ ಅಚ್ಚಕನ್ನಡದ ಕಾವ್ಯ ಸೊಬಗಿನ ಬಳ್ಳಿಯ ರಚನೆಯೇ ಇದಕ್ಕೆ ದೃಷ್ಟಾಂತ? ದೇಸಿಯ ಪದಗಳು ಅವರಿಗೆ ಅಚ್ಚು ಮೆಚ್ಚು, ಗಾದೆಗಳು, ನುಡಿಗಟ್ಟುಗಳು, ಅವರ ಕಾವ್ಯ-ಕತೆ-ಕಾದಂಬರಿಗಳಲ್ಲಿ ಹೇರಳವಾಗಿ ಸಿಗುತ್ತವೆ. ಅವನ್ನೇ ಸಂದರ್ಭೋಚಿತವಾಗಿ ಪೋಣಿಸಿಕೊಂಡು ಅವರು ತಮ್ಮದೇ ಆದ ಶೈಲಿಯಿಂದ ಓದುಗರ ಮೇಲೆ ಮೋಡಿ ಮಾಡಿ ಬಿಡುತ್ತಾರೆ. ದೇಸಿ, ಆಡುಮಾತುಗಳಿಗೆ ಕಾವ್ಯದ ಸೊಗಸು ಜೊತೆಯಾದರೆ, ಜನ ಸಾಮಾನ್ಯರಿಗೂ ಕಾವ್ಯವು ನಿಕಟವಾಗುವ ಇಂಗಿತವನ್ನು ಅವರು ಹೊಂದಿದ್ದರು.

ಸ್ಥಿತಪ್ರಜ್ಞತೆ ಅವರ ದೊಡ್ಡಗುಣ! ಅವರ ಧರ್ಮಪತ್ನಿ ತೀರಿಕೊಂಡಾಗ ಶ್ಮಶಾನಯಾತ್ರೆ ಮುಗಿಸಿ ಬಂದು ಏಕಾಂತವಾಗಿ ಇದ್ದು ಕವಿರಾಜಮಾರ್ಗ ವಿವೇಕದ ರಚನೆಗೆ ಅವರು ತೊಡಗಿದ್ದರಂತೆ ! ನೋವನ್ನು ಮರೆಯಲು ಇದು ಅವರಿಗೆ ಸಾಧನವಾಗಿತ್ತು. ಮರುದಿನ ಅವರು ಕಾಲೇಜಿಗೆ ಹೋದಾಗ ಪ್ರಿನ್ಸಿಪಾಲರೇ ಆದಿಯಾಗಿ 'ಈ ದುಃಖದ ದಿನದಲ್ಲಿ ನೀವು ರಜೆ ಮಾಡಬಹುದಿತ್ತು' ಎಂದು ಹೇಳಿದಾಗ, ನನಗೆಲ್ಲಿಯ ದುಃಖ? ವಿದ್ಯಾರ್ಥಿಗಳೊಡನೆ ಬೆರೆತಾಗ ಎಲ್ಲವೂ ಮಾಯವಾಗುತ್ತದೆ ಎಂಬ ಮಾತು ಅವರಿಂದ ಬಂತು ಎಂಬುದರಿಂದ ಅವರ ನಿರ್ವಿಕಲ್ಪ ಸಮಾಧಿಯ ಚಿತ್ತವೃತ್ತಿ ಅರಿವಾಗುತ್ತದೆ. ಗೀತಾಚಾರ್ಯನು ಹೇಳಿದಂತೆ

> "ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹ
> ವೀತರಾಗಭಯಕ್ರೋಧಃಸ್ಥಿತಧೀರ್ಮುನಿರುಚ್ಯತೇ"

ದುಃಖದಲ್ಲಿ ಕೊರಗದೆ, ಸುಖವನ್ನು ಪಡೆದೇ ಇಲ್ಲವೆಂಬಂತೆ, ರಾಗ ಭಯ ಕ್ರೋಧಗಳಿಲ್ಲದೆ ಬದುಕುಳಿದ ಅವರು ಸ್ಥಿತಪ್ರಜ್ಞ- ಮುನಿಸದೃಶ ವ್ಯಕ್ತಿ ಎಂದು ಪ್ರತ್ಯೇಕ ಹೇಳಬೇಕಾಗಿಲ್ಲ.

ಬೆರಳಂ ಸಿಡಿಯಲಿ ಪೊಗಳಲಿ
ಧರೆಯೊಳ್ ತಂತಮ್ಮ ಪುಟ್ಟು ಗುಣದಂದದೊಳಾ-
ನೆರಡರೊಳುಂ ಮುದಮಾಂಪೆಂ
ಇರುಳುಂ ಪಗಲುಂ ನರಂಗೆ ಸುಖಕರಮಲ್ತೇ?
ಈ ಪದ್ಯ ಅವರ ಅಂತರಾಳವನ್ನು ತೆರೆದಿಟ್ಟಿದೆ.

ಅವರೊಬ್ಬ ಮಾನವತಾವಾದಿ, ರಾಷ್ಟ್ರೀಯವಾದಿ ಕವಿಯಾಗಿ ಎತ್ತರಕ್ಕೇರಿದ್ದಾರೆ. ಸ್ವಾತಂತ್ರ್ಯದ ಹೋರಾಟದ ದಿನಗಳಲ್ಲಿ ರಾಷ್ಟ್ರೀಯತೆಯನ್ನು ಅವರು ತಮ್ಮ ಲೇಖನಿಯಿಂದ ಮೆರೆದಿದ್ದಾರೆ. ಅವರ 'ಕನ್ನಡ ಕೋಗಿಲೆ' ರಾಷ್ಟ್ರವಿಡೀ ತನ್ನ ಕೂಜನದಿಂದ ರಂಜಿಸಿದ ಕೋಗಿಲೆ ತಿಮ್ಮಪ್ಪಯ್ಯ ಎಂಬ ಬಿರುದು ಅವರಿಗೆ ಜನರಿಂದ ನೇರವಾಗಿ ಸಂದಿದೆ. ಕನ್ನಡದ ಉದ್ಧಾರಕ್ಕೆ ಕನ್ನಡ ಏಕೀಕರಣವಾಗಬೇಕು ಎಂಬುದನ್ನು ಅವರು ಸಮರ್ಥಿಸಿದ್ದಾರೆ. ರಾಷ್ಟ್ರದ ಬಿಡುಗಡೆಯನ್ನಂತೂ ಸಮರ್ಥಿಸುತ್ತಲೇ ಬಂದಿದ್ದಾರೆ. ಕನ್ನಡದ ಕೈಂಕರ್ಯವನ್ನು ಶ್ರದ್ಧೆಯಿಂದ ನಡೆಸಿದುದಷ್ಟೇ ಅವರ ಹೆಗ್ಗಳಿಕೆಯಲ್ಲ: ಕನ್ನಡದ ಕಟ್ಟಾಳುಗಳನ್ನು ಸಿದ್ಧಪಡಿಸುವದರಲ್ಲಿ ಆಚಾರ್ಯಸ್ಥಾನವನ್ನು ಅವರು ಗಳಿಸಿಕೊಡಿದ್ದಾರೆ.

ಸ್ವಾತಂತ್ರ್ಯ ಬಂದ ಬೆನ್ನಿಗೆ ಪಂಜಾಬ್-ಬಂಗಾಲಗಳಲ್ಲಿ ನಡೆದ ನರಮೇಧದ ಬಗ್ಗೆ ನೊಂದು ಬರೆದ ಅವರ ಕವನವೊಂದು ಹೀಗಿದೆ:

"ಮತಮತವೆಂದು ಕಾಡುವರು ಕೊಲ್ವರಿದುಂ ಮತವಾಗೆ ಮಾರಣಂ
ಮತವಹುದಲ್ತೆ ಸನ್ಮತಿಯ ಸಾರವೆ ತಾಂ ಮತವೆಂಬ ವಿಶ್ವ ಸ
ಮ್ಮತವಹ ತತ್ತ್ವದೊಂದಮೃತಮಂ ವಸುಧೈವ ಕುಟುಂಬವೆಂಬ ವಾ-
ಙ್ಮಥಿತವನುಂಡು ಧಾತ್ರಿಗುಣಿಪಾ ಗುರುವಲ್ತೆ ಮಹಾತ್ಮನೆಂಬವಂ"

ಗಾಂಧೀಜಿ ನೌಖಾಲಿ-ತಿಪ್ಪೇರಾ ಹಿಂಸಾಕಾಂಡದಲ್ಲಿ ನೊಂದಂತೆ, ಕವಿ ಅವನ್ನು ಚಿತ್ರಿಸಿ ರಾಷ್ಟ್ರೀಯತೆಯನ್ನು ಮೆರೆದಿದ್ದಾರೆ:

ತಿಮ್ಮಪ್ಪಯ್ಯನ ಪೆಸರಿಂ
ದೆಮ್ಮ ನೆಲಂ ಪಳ್ಳಿ-ಸೀಮೆ, ಹೋಬಳಿಯೂರುಂ
ಘಮ್ಮನೆ ನಾಡಿಗೆ ನಾಡೇ
ಕಮ್ಮೈಸಿದುದಲ್ತೆ, ಕನ್ನಡಂ ಕತ್ತುರಿಯುಂ

ಕವಿ ಕಡವ ಶರ್ಮರು ತಿಮ್ಮಪ್ಪಯ್ಯನವರ ಕನ್ನಡ ಕತ್ತುರಿಯ ಪರಿಮಳವನ್ನು ಹಾಡಿ ಹೊಗಳಿದ್ದಾರೆ. ಕಸ್ತೂರಿಯ ಪರಿಮಳ-ಕವಿಯ ಯಶೋವಿಲಸಿತದೊಂದಿಗೆ ಕನ್ನಡಸೀಮೆಯ ಸೀಮೋಲ್ಲಂಘನ ನಡೆಸಿದೆ.

❑

# ಹರ್ಡೇಕರ್ ಮಂಜಪ್ಪ

ಆರ್. ರಾಚಪ್ಪ

ಹುಟ್ಟು-ಸಾವು ಇವೆರಡರ ನಡುವೆ ಅಪಾರವಾದ ಜೀವನಸಾಗರ. ಈ ಸಾಗರದಲ್ಲಿ ಈಸಿ ನಿಭಾಯಿಸಿಕೊಂಡು ಹೋಗುವುದೇ ಜೀವನ, ಬದುಕು. ಈ ಜಗತ್ತಿನಲ್ಲಿ ಜನಿಸಿದ ಎಷ್ಟೋ ಜೀವರಾಶಿಗಳು ಸತ್ತು ಹುಟ್ಟುತ್ತವೆ. ಇನ್ನು ಕೆಲವು ಹುಟ್ಟಿದೊಡನೆಯೆ ಸಾಯುತ್ತವೆ. ಮತ್ತೆ ಕೆಲವು ಜೀವಗಳು ಕೆಲಕಾಲ ಬದುಕಿ ಈ ಜೀವನದ ಅಪಾರತೆಯನ್ನು ಕಂಡು ಎದೆಯೊಡೆದು ಸಾಯುತ್ತವೆ. ಕೆಲವು ಜೀವಗಳು ಎಂತೋ ಏನೋ ಈ ಸಾಗರದಲ್ಲಿ ಈಸುತ್ತಾ ಜೀವನ ಸಾಗಿಸುತ್ತವೆ. ಮತ್ತಷ್ಟು ಜೀವಿಗಳು ಇತರರನ್ನು ಹಿಂಸಿಸಿ, ಲೂಟಿಮಾಡಿ, ವಂಚಿಸಿ, ಹೀಯಾಳಿಸಿ ತಾವು ದೊಡ್ಡವರೆಂಬ ಸೋಗುಹಾಕಿ ಕೊಂಡು ಬದುಕುತ್ತವೆ. ಕೆಲವೇ ಕೆಲವು ಜೀವಿಗಳು ಧರ್ಮ, ಸತ್ಯ, ನ್ಯಾಯ, ನೀತಿ ಎಂಬ ತತ್ವಗಳಿಗೆ ಅಂಟಿಕೊಂಡು ಋಜುಜೀವನ ನಡೆಸುತ್ತವೆ. ಇಂತಹವರು ವಿರಳವಾದರೂ ಇದ್ದಾರೆಂಬುದು, ಇರುವರೆಂಬುದು ಸಮಾಧಾನದ ಸಂಗತಿ. ಇಂತಹವರಿಂದಲೇ ಬದುಕಿಗೆ ಅರ್ಥವಂತಿಕೆ ಬಂದದ್ದು, ಸಾರ್ಥಕವಾದದ್ದು.

ಪ್ರಪಂಚದ ಇತಿಹಾಸವನ್ನು ತಿರುವಿಹಾಕಿದಾಗ ನಮಗೆ ಒಬ್ಬ ಜೀಸಸ್, ಒಬ್ಬ ಬುದ್ಧ, ಒಬ್ಬ ಮಹಾವೀರ, ಒಬ್ಬ ಬಸವ, ಒಬ್ಬ ಅಲ್ಲಮ, ಒಬ್ಬ ಗಾಂಧಿ ದೊರೆಯುವರು, ಈ ಎಲ್ಲಾ ಮಹನೀಯರು ಮಹತ್ವದ ಬದುಕು ಬದುಕಿದವರು. ಬದುಕನ್ನು ಸಾರ್ಥಕಗೊಳಿಸಿದವರು. ಜನತೆಯ ದುಃಖ ಕಷ್ಟ ಕಾರ್ಪಣ್ಯಗಳಿಗೆ ಮರುಗಿ ಮಮಕಾರ ದೂರರಾಗಿ ಎಲ್ಲರನ್ನು ದುಃಖದಿಂದ, ಕಷ್ಟ ಕಾರ್ಪಣ್ಯಗಳಿಂದ, ವ್ಯಾಕುಲದಿಂದ ಬಿಡುಗಡೆ ಮಾಡಲು ಶ್ರಮಿಸಿದವರು. ತಮ್ಮನ್ನು ತಾವು ತೇದುಕೊಂಡು ಜನರ ಬದುಕನ್ನು ಹಸನಾಗಿಸಲು ಹೆಣಗಿದರು. ದುರದೃಷ್ಟದ ಸಂಗತಿ ಎಂದರೆ ಈ ಸುಧಾರಕರ ಜೀವನ ಸುಖಮಯವಾಗಿಲ್ಲದಿರುವುದು. ತಾವು ಯಾರನ್ನು ಉದ್ಧರಿಸ ಹೊರಟರೋ ಆ ಜನ ಸಮೂಹದಿಂದಲೇ ಅವಹೇಳನಕ್ಕೆ ಪಕ್ಕಾದುದು. ತಿರಸ್ಕಾರ ದ್ವೇಷವಾಗಿ ಮಾರ್ಪಟ್ಟು, ದ್ವೇಷ ಮಹಾನುಭಾವರ ಮರಣದಲ್ಲಿ ಪರ್ಯವಸಾನವಾಯಿತು. ಅವರ ವಿಚಾರವಾಹಿನಿ, ಸಮಾಜ ಸುಧಾರಣಾಕಾರ್ಯ ಕ್ರಾಂತಿಯಲ್ಲಿ ಪರ್ಯವಸಾನವಾಯಿತು. ಆ ಕ್ರಾಂತಿಯ ಬಿರುಗಾಳಿಯಲ್ಲಿ ಅನೇಕ ಲೋಕಜ್ಯೋತಿಗಳು ಆರಿ ತಣ್ಣಗಾದವು. ಆದರೂ ಇವರುಗಳು ಮಾಡಿದ ಕಾರ್ಯದಿಂದ ಆ ಹೆಸರುಗಳು ಇಂದಿಗೂ ಜನಮನದಲ್ಲಿ ಆರೂಢವಾಗಿವೆ. ಈ ಹೆಸರುಗಳನ್ನು ಜನತೆಯ ಹೃದಯ ಸಿಂಹಾಸನದಿಂದ ಕಿತ್ತೊಗೆಯಲು ಯಾವ ಕ್ರಿಯೆಗೂ ಸಾಧ್ಯವಾಗಿಲ್ಲ, ಸಾಧ್ಯವಾಗುವುದೂ ಇಲ್ಲ. ಇದೇ ಸಾಲಿನಲ್ಲಿ ಬರುವ ಇಪ್ಪತ್ತನೇ ಶತಕದ ಮತ್ತೊಂದು ಹೆಸರು ಕರ್ನಾಟಕದ ಗಾಂಧಿ ಎಂದು ಹೆಸರು ಪಡೆದ ಹರ್ಡೇಕರ್ ಮಂಜಪ್ಪನವರು.

ಕನ್ನಡನಾಡು ಜಗತ್ತಿನ ಕಣ್ಣನ್ನು ತೆರೆಯಿಸುವ ಮಹಾ ವ್ಯಕ್ತಿಗಳನ್ನು, ಮಹಾ ಶೂರರನ್ನು ಕಾಣಿಕೆ ಇತ್ತಿದೆ. ಉತ್ತರದ ಚಕ್ರವರ್ತಿಯನ್ನು ಪರಿಗಣಿಸಿ ಆತನಿಂದಲೇ ದಕ್ಷಿಣಾಪಥೇಶ್ವರ ಎಂಬ ಹೆಸರು ಪಡೆದ ಪುಲಕೇಶಿ, ವಿಜಯನಗರದ ಅರಸರು, ಹೊಯ್ಸಳ ರಾಜರು ಇತಿಹಾಸದ ವ್ಯಕ್ತಿಗಳಾಗಿ ಹೋಗಿದ್ದಾರೆ. ಜಾಗತಿಕ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನ ಪಡೆದಿರುವ ಪಂಪ, ರನ್ನ, ಜನ್ನ, ಹರಿಹರ, ರಾಘವಾಂಕ, ಚಾಮರಸ, ಲಕ್ಷ್ಮೀಶ, ಮುದ್ದಣ ಮೊದಲಾದ ಕವಿ ಪುಂಗವರು. ರಾಷ್ಟ್ರಕವಿಗಳಾಗಿ ನಮ್ಮ ನಡುವಿದ್ದ ಎಂ. ಗೋವಿಂದ ಪೈ, ವರಕವಿ ಬೇಂದ್ರೆ, ರಾಷ್ಟ್ರಕವಿ ಕುವೆಂಪು, ಪ್ರಪಂಚದ ಬಹುದೊಡ್ಡ ಬಹುಮಾನವಾದ ನೊಬೆಲ್ ಪ್ರಶಸ್ತಿ ಪಡೆದ ಸರ್ ಸಿ.ವಿ. ರಾಮನ್, ಚಂದ್ರಶೇಖರ್ ಮೊದಲಾದವರಲ್ಲದೆ ಕಲಾ ಪ್ರಪಂಚದಲ್ಲಿ ಹೆಸರಾದ ಹೆಬ್ಬಾರ್‌ರಂತಹವರನ್ನು ಕನ್ನಡನಾಡು ಪಡೆದಿದೆ. ಹಾಗೆಯೇ

ರಾಷ್ಟ್ರದ ಏಕತೆಗೆ ದುಡಿದ ಚೇತನಗಳು ಅವೆಷ್ಟೋ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ದುಮುಕಿ ಗಾಂಧಿಯೊಡನೆ ಚಳವಳಿಯಲ್ಲಿ ಭಾಗವಹಿಸಿ ಕರ್ನಾಟಕಕ್ಕೆ ಕೀರ್ತಿ ತಂದವರು ಅನೇಕರು. ಋಷಿಜೀವನ ಬದುಕಿ ರಾಷ್ಟ್ರೀಯ ಭಾವವನ್ನು ಜನತೆಯಲ್ಲಿ ಬಿತ್ತಿ ಅವರನ್ನು ಎಚ್ಚರಿಸಿದ ಮಹಾವ್ಯಕ್ತಿ ಮಂಜಪ್ಪನಂತಹವರನ್ನೂ ಕರ್ನಾಟಕ ಪಡೆದಿದೆ. ಮಂಜಪ್ಪನವರಿಂದ ಕರ್ನಾಟಕದ ಕೀರ್ತಿ ಅಮರವಾಗಿದೆ.

ಒಬ್ಬ ವ್ಯಕ್ತಿ ತನ್ನ ಜೀವಿತಾವಧಿಯಲ್ಲಿ ಒಳ್ಳೆಯ ಸಾಹಿತಿ ಅಥವಾ ಒಳ್ಳೆಯ ಪತ್ರಿಕೋದ್ಯಮಿ ಅಥವಾ ಒಳ್ಳೆಯ ಸಮಾಜ ಸುಧಾರಕ ಅಥವಾ ದಕ್ಷ ಆಡಳಿತಗಾರ ಅಥವಾ ಒಬ್ಬ ಒಳ್ಳೆಯ ಮನುಷ್ಯನಾಗಿರುವುದು ಸಾಧ್ಯ. ಆದರೆ ಈ ಎಲ್ಲಾ ಪ್ರತಿಭೆಗಳೂ ಒಟ್ಟಿಗೆ ಒಬ್ಬನೇ ವ್ಯಕ್ತಿಯಲ್ಲಿ ಕಾಣಬರುವುದು ಅಪರೂಪ. ಅಂತಹ ಅಪರೂಪದ ವ್ಯಕ್ತಿಗಳೇ ಪ್ರಾತಃ ಸ್ಮರಣೀಯರು. ಈ ರೀತಿ ಪ್ರಾತಃಸ್ಮರಣೀಯರ ಸಾಲಿನಲ್ಲಿ ನಿಲ್ಲುವ ಹರ್ಡೇಕರ್ ಮಂಜಪ್ಪನವರದು ಬಹುಮುಖ ಪ್ರತಿಭೆ. ಸಾಹಿತಿಯಾಗಿ, ಪತ್ರಿಕೋದ್ಯಮಿಯಾಗಿ, ಸಮಾಜ ಸುಧಾರಕನಾಗಿ, ರಾಷ್ಟ್ರಧರ್ಮ ಪ್ರವರ್ತಕನಾಗಿ, ಆಜನ್ಮ ಬ್ರಹ್ಮಚಾರಿಯಾಗಿದ್ದು ಕಡೆತನಕ ಮನುಷ್ಯತ್ವವನ್ನು ಉಳಿಸಿಕೊಂಡು ಬದುಕಿದ ಶ್ರೇಷ್ಠಜೀವನ ಮಂಜಪ್ಪನವರದು.

1889ರ ಫೆಬ್ರವರಿ 18ರಂದು ಹರ್ಡೇಕರ್ ಮಂಜಪ್ಪನವರು ಬನವಾಸಿಯ ಬಡಕುಟುಂಬದಲ್ಲಿ ಜನಿಸಿದರು. ಆ ಸಂದರ್ಭದಲ್ಲಿ ಭಾರತದ ಬಿಡುಗಡೆಯ ಸಲುವಾಗಿ ಹೋರಾಟ ನಡೆಯುತ್ತಿತ್ತು. ರಾಷ್ಟ್ರೀಯ ಸಂದೇಶವನ್ನು ಜನತೆಗೆ ಮುಟ್ಟಿಸಲೆಂದೇ ಹರ್ಡೇಕರರು ಹೋರಾಟದ ಶಿಶುವಾಗಿ ಜನಿಸಿದರು. ಭಾರತದ ಸ್ವಾತಂತ್ರ್ಯ ಸಂಗ್ರಾಮ ಬಿರುಸಿನಿಂದ ನಡೆದಂತೆ ಇವರೂ ಕ್ರಾಂತಿಯ ಕುಮಾರರಾದರು. ತಮ್ಮ ಅಂತಿಮ ದಿನದವರೆಗೂ ಕ್ರಾಂತಿವೀರರಾಗಿ ಜೀವನದ ಹಲವಾರು ಹೋರಾಟ ರಂಗಗಳಲ್ಲಿ ಶ್ರಮಿಸಿ ನಾಡ ನೇತಾರರಲ್ಲಿ ಒಬ್ಬರಾಗಿ ಉಳಿದವರು.

ಸಿರಸಿಯಲ್ಲಿ ಕಾರಕೂನರಾಗಿದ್ದ ತಮ್ಮ ಅಣ್ಣನವರ ಬಳಿಯಲ್ಲಿದ್ದುಕೊಂಡು ಮುಲ್ಕಿ ಪರೀಕ್ಷೆ ಪಾಸುಮಾಡಿ ಶಾಲೆಯಲ್ಲಿ ಉಪಾಧ್ಯಾಯರಾಗಿ ಸೇರಿದರು, ಏಳೂವರೆ ರೂಪಾಯಿ ಸಂಬಳದ ಮೇಲೆ. ಹುಡುಗರಿಗೆ ಕವಾಯಿತಿ (ಡ್ರಿಲ್) ಕಲಿಸುವಾಗ ಚಿಕ್ಕ ಚಿಕ್ಕ ಪದಗಳನ್ನು ಕಟ್ಟಿ ಹುರುಪಿನಿಂದ ಹುಡುಗರಿಗೆ ಕಲಿಸುತ್ತಿದ್ದ ರೀತಿಯನ್ನು ಕಂಡು ಮೆಚ್ಚಿದ ಹೆಡ್‌ಮಾಸ್ತರ್ ಅವರು 2ನೇ ನಂಬರ್ ಶಾಲೆಯನ್ನು ಕೊಟ್ಟರಂತೆ. ಹೀಗಾಗಿ 1905ರಲ್ಲಿ ಪ್ರತ್ಯೇಕ ಶಾಲೆ ಉಪಾಧ್ಯಾಯರಾದರು. ಲೋಕ ಶಿಕ್ಷಣ ಮಹಾಮಣಿಹಕ್ಕೆ ಮೀಸಲಾಗಿದ್ದ ಮಂಜಪ್ಪನವರ ಜೀವನ ಆರಂಭದ ದೆಸೆಯಲ್ಲಿ ಶಿಕ್ಷಣ ಪ್ರಪಂಚಕ್ಕೆ ಸೇರಿದುದು ಒಳ್ಳೆಯದೇ ಆಯಿತು.

ತನ್ನ ಜೀವನವನ್ನು ಸಮಾಜಕ್ಕೆ ಅರ್ಪಿಸಿಕೊಳ್ಳಲಿದ್ದ ಮಂಜಪ್ಪನವರಿಗೆ ಸಂಸ್ಕೃತ ಕಲಿಯುವಾಕಾಂಕ್ಷೆ ತೀವ್ರವಾಗಿದ್ದಿತು. ಸಂಸ್ಕೃತವನ್ನು ಕಲಿತು 'ಶಾಸ್ತ್ರಿ' ಎನಿಸಿಕೊಳ್ಳಬೇಕೆಂಬ ಹಂಬಲ ಬಹಳವಾಗಿದ್ದಂತೆ ಕಂಡುಬರುತ್ತದೆ. ಆದರೆ ವೈದಿಕ ಸಂಪ್ರದಾಯವಾದಿಗಳ ಏಕಗ್ರಾಹಿತನದಿಂದ ಇದು ಸಾಧ್ಯವಾಗಲಿಲ್ಲ ವಂತೆ. ಆದರೂ ಮೈಸೂರಿನ ಸ್ಟಾರ್ ಪತ್ರಿಕೆಯಲ್ಲಿ ಸ್ವದೇಶಿ ವಸ್ತುಗಳನ್ನೇ ಉಪಯೋಗಿಸಿ ಎಂಬ ವಿಷಯ ಕುರಿತು ಪದ್ಯ ಬರೆದು ಅದರ ಕೆಳಗೆ 'ಮಂಜುನಾಥ ಶಾಸ್ತ್ರಿ' ಎಂದು ಬರೆದು ಕಳುಹಿಸಿದರಂತೆ. ಒಂದೆಡೆ 'ಅಂತು ಒಮ್ಮೆ ಲೇಖನದಲ್ಲಿ ನಾನು ಶಾಸ್ತ್ರಿಯೇ ಆಗಿಬಿಟ್ಟೆ' ಎಂದು ಬರೆದಿರುವುದನ್ನು ಗಮನಿಸಿದರೆ ಅವರ ಸಂಸ್ಕೃತ ಕಲಿಯುವ ಹಂಬಲ ಈಡೇರಲಿಲ್ಲ ಎಂಬುದು ತಿಳಿಯುತ್ತದೆ. ಅದರಲ್ಲಿನ ನೋವನ್ನು ಅಂದು ಯಾರೂ ಗುರುತಿಸಲಿಲ್ಲ. ಆದರೂ ಸಾಂಪ್ರದಾಯಿಕ ಶಾಸ್ತ್ರಿಗಳಾಗದೆ ಶುದ್ಧ ಜೀವನ ಪ್ರತೀಕದ ಶಾಸ್ತ್ರಿಯಾಗಿ ಉಳಿದದ್ದು ಕನ್ನಡದ ಸುದೈವ.

ಅದಮ್ಯ ಚೇತನರಾದ ಮಂಜಪ್ಪನವರು ಒಂದು ಕೆಲಸಕ್ಕೆ ಅಂಟಿಕೊಂಡು ಕೂಡುವವರಲ್ಲ. ಹಾಗಾಗಿ ಅಧ್ಯಾಪಕ ವೃತ್ತಿಗೆ ರಾಜೀನಾಮೆ ಇತ್ತರು. ಇವರಂತೆ ಇವರ ಅಣ್ಣಂದಿರೂ ತಮ್ಮ ಕಾರಕೂನ ವೃತ್ತಿಗೆ ರಾಜೀನಾಮೆ ಇತ್ತು ವರ್ತಮಾನ ಪತ್ರಿಕೆ ಹೊರಡಿಸಲು ಸಜ್ಜಾದರು.

ಸಾಧಕನ ಜೀವನ ಸುಲಭವಾದುದಲ್ಲ ಎಂಬುದಕ್ಕೆ ಮಂಜಪ್ಪನವರ ಜೀವನ ಸ್ಪಷ್ಟ ಉದಾಹರಣೆ. ಪತ್ರಿಕಾ ಪ್ರಪಂಚಕ್ಕೆ ಕಾಲಿಟ್ಟ ಸೋದರರು ದಾವಣಗೆರೆಯನ್ನು ತಮ್ಮ ಕೇಂದ್ರವಾಗಿರಿಸಿಕೊಂಡರು. ಮೂರು ನಾಲ್ಕು ತಿಂಗಳುಗಳ ಸತತ ಪ್ರಯತ್ನದಿಂದಾಗಿ 1906ರ ಸೆಪ್ಟೆಂಬರ್ ತಿಂಗಳಿನಲ್ಲಿ 'ಧನುರ್ಧಾರಿ' ಪತ್ರಿಕೆ ಪ್ರಕಟವಾಯಿತು. 'ಕೇಸರಿ', 'ಜ್ಞಾನ', 'ಕಾಳ' ಪತ್ರಿಕೆಗಳಿಂದ ಲೇಖನಗಳನ್ನು ಅನುವಾದಿಸುವುದು ಮಂಜಪ್ಪನವರ ಕೆಲಸವಾದರೆ, ಅವನ್ನು ಪ್ರಕಟಿಸುವ ಮತ್ತು ಇತರ ಹೊಣೆ ಅವರ ಅಣ್ಣಂದಿರದಾಗಿತ್ತು. ಅವರ ನಿಸ್ಪೃಹ ಪ್ರಯತ್ನದಿಂದ ಪತ್ರಿಕೆ ಜನಪ್ರಿಯವಾಗಿ ಚಂದಾದಾರರ ಸಂಖ್ಯೆ ಏಳುನೂರಕ್ಕೆ ಏರಿತು. ಆದರೆ ಪತ್ರಿಕೆಯ ಉಗ್ರ ಧೋರಣೆಯನ್ನು ಗಮನಿಸಿದ ಮುದ್ರಣಾಲಯದ ಒಡೆಯರು ಬಾಡಿಗೆಯನ್ನು ಹೆಚ್ಚಿಸಿ ಪತ್ರಿಕೆಯನ್ನು ನಡೆಸದಂತೆ ಮಾಡಿದರು. ಆದರೆ ದೇಶದ ಸಲುವಾಗಿ ಚಿಂತಿಸುತ್ತಿದ್ದ ಈ ಸೋದರರು ಶ್ರೀ ಬಾಳಪ್ಪ ಎಂಬುವರ ನೆರವಿನಿಂದ 1908ರಲ್ಲಿ 'ಸಚ್ಚಿದಾನಂದ' ಎಂಬ ಹೆಸರಿನಲ್ಲಿ ಮತ್ತೆ ಪತ್ರಿಕೆ ಪ್ರಾರಂಭಿಸಿದರು. ಪ್ರಬಲ ವಿರೋಧವಿದ್ದರೂ ಒಬ್ಬ ಪತ್ರಿಕಾಕರ್ತನಿಗೆ ಇರಬೇಕಾದ ಧೈರ್ಯ ಹೊಂದಿದ್ದ ಈ ಸೋದರರಿಬ್ಬರೂ ದಿಟ್ಟತನದಿಂದ ಲಾಲಾ ಲಜಪತ್‌ರಾಯ್, ಬಾಲ ಗಂಗಾಧರತಿಲಕ್, ಬಿಪಿನ್‌ಪಾಲರ ಭಾಷಣಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದರು. ಒಮ್ಮೆ ಇವರ ಅಣ್ಣಂದಿರು ಡೆಪ್ಯುಟಿ ಕಮೀಷನರಿಗೆ ಕೊಟ್ಟ ಉತ್ತರ ಹೀಗಿದೆ 'ಸಂಪಾದಕರಾಗಿ ಬರೆಯಲು ಕುಳಿತಾಗ ನಾನು ಏನೇನು ಬರೆದೇನೆಂಬುದನ್ನು ಈಗಲೇ ಹೇಳಲಾರೆ' ಎಂದುದಲ್ಲದೆ ಇವರ ಮೇಲೆ ಕಾನೂನಿನ ಕ್ರಮ ಜರುಗಿಸಲು ಬಂದ ಬಸವಂತ ಕಾಳೋಜಿ ಅವರಿಗೆ "ನಾವು ಬೆದರಿಕೆಗೆ ಬಗ್ಗುವವರಲ್ಲ. ನಮ್ಮ ಒಂದು ಕಾಲು ಜೇಲಲ್ಲಿ, ಒಂದು ಕಾಲು ಮನೆಯಲ್ಲಿ ಇದೆಯೆಂಬುದು ನಿಮಗೆ ಗೊತ್ತಿದ್ದಂತೆ ಕಾಣುವುದಿಲ್ಲ" ಎಂದು ಉತ್ತರಿಸಿದ ಈ ಸೋದರರ ದಿಟ್ಟ ನಿಲುವು ಪತ್ರಿಕಾ ಪ್ರಪಂಚದಲ್ಲಿ ಆ ಕಾಲಕ್ಕೆ ಒಂದು ದಾಖಲೆ.

ಪತ್ರಿಕೆಗಳಿಗೆ ಲೇಖನ ಸ್ವಾತಂತ್ರ್ಯವಿರಲಿಲ್ಲವಾಗಿ ಪತ್ರಿಕೆ ಸಪ್ಪೆಯಾಯಿತು. ಪತ್ರಿಕೆಯ ಓದುಗರು ಕಡಿಮೆಯಾದರು. ಆರ್ಥಿಕ ಅಡಚಣೆ ಇವರನ್ನು ಕಾಡಲಾರಂಭಿಸಿತು. ಇಂತಹ ಸಂದರ್ಭದಲ್ಲಿ ಇವರಿಗೆ ಧೈರ್ಯ ತುಂಬಿದ ಸಂಗತಿ ಎಂದರೆ ಅವ್ಯಾಹತವಾದ ಅಧ್ಯಯನ. ಮರಾಠಿ ಗ್ರಂಥ ಮತ್ತು ಪತ್ರಿಕೆಗಳನ್ನು ಹೆಚ್ಚು ಓದುತ್ತಿದ್ದರು. ಪ್ರಿಯ ವಿಷಯಗಳಾಗಿದ್ದ ಧರ್ಮಶಾಸ್ತ್ರಗಳ ಅಧ್ಯಯನ ಮುಂದುವರೆಯಿತು. ಈ ಮಧ್ಯೆ ವಿವಾಹವಾಗದೆ ಬ್ರಹ್ಮಚಾರಿಯಾಗಿರುವ ಸಂಕಲ್ಪ ಮಾಡಿದರು. ಮಂಜಪ್ಪನವರ ಈ 'ಭೀಷ್ಮ ಪ್ರತಿಜ್ಞೆ ' ಕನ್ನಡ ನಾಡಿಗೆ ಹೆಮ್ಮೆಯ ವಿಷಯ ಮತ್ತು ಕನ್ನಡ ಸಾಹಿತ್ಯಕ್ಕೆ ಆದ ಮಹತ್ತರ ಲಾಭ.

ಪತ್ರಿಕಾ ವ್ಯವಸಾಯ ನಿಂತ ಮೇಲೆ ಅವರ ಒಲವು ಕೃತಿ ರಚನೆಗಳತ್ತ ತಿರುಗಿತು. ವರ್ಷ ಒಂದಕ್ಕೆ ಒಂದು ಕನ್ನಡ ಪುಸ್ತಕವನ್ನು ಬರೆದು ಪ್ರಕಟಿಸಲು

ನಿರ್ಧರಿಸಿದರು. ಈ ನಿರ್ಧಾರ, ಅವರಿಂದ 'ಸ್ವಕರ್ತವ್ಯ ಸಿದ್ಧಾಂತ', 'ಮಹಾತ್ಮಾ ಗಾಂಧಿಯವರ ಈವರೆಗಿನ ಚರಿತ್ರೆ', 'ಶ್ರೀ ಸ್ವಾಮಿ ರಾಮತೀರ್ಥರವರ ಚರಿತ್ರೆ ಮತ್ತು ಆರು ಉಪನ್ಯಾಸಗಳು', (ನಾಲ್ಕು ಪುಸ್ತಕಗಳು) 'ಬುದ್ಧಿಯ ಮಾತು', 'ಆರೋಗ್ಯ ಜೀವನ', 'ಆಧುನಿಕ ಜರ್ಮನಿ', 'ಪತಿತೋದ್ಧಾರ', 'ವಾರದ ಮಲ್ಲಪ್ಪನವರ ಚರಿತ್ರೆ', 'ಭಾರತೀಯ ದೇಶಭಕ್ತಿ', 'ಶ್ರೀ ಬಸವ ಚರಿತ್ರೆ', 'ವಿಜಯವಾಣಿ', 'ಬುದ್ಧ ಚರಿತ್ರೆ', 'ಖಾದಿ ಶಾಸ್ತ್ರ', 'ಬಸವ ಬೋಧಾಮೃತ', 'ಶುದ್ಧಿ ಮತ್ತು ಸಂಘಟನೆ', 'ಪ್ರಮಥಾಚಾರ ದೀಪಿಕೆ', 'ಸ್ತ್ರೀನೀತಿ ಸಂಗ್ರಹ', 'ದಾಂಪತ್ಯ ಧರ್ಮ', 'ಲಜಪತರಾಯರ ಚರಿತ್ರೆ', 'ಶ್ರೀ ಲಿಂಗರಾಜರ ಚರಿತ್ರೆ', 'ವೀರಶೈವ ಮತ್ತು ಬೋಧೆ', 'ವೀರಶೈವ ಮತತತ್ವ', 'ಕಾಯಕವೇ ಕೈಲಾಸ', 'ಪ್ರಭುದೇವರ ಕಥೆ', 'ಏಕಲವ್ಯನ ಕಥೆ', 'ಜಾತೀಯವಾದ ವಿಮರ್ಶೆ', 'ವಚನಕಾರರ ಸಮಾಜ ರಚನೆ' (ಸಂಪಾದಿಸಿದ್ದು), 'ವೀರಶೈವ ಏಕೀಕರಣ', 'ಪುಲಿಕೇಶಿಯ ಚರಿತ್ರೆ', 'ಕಚದೇವನ ಕಥೆ', 'ಸ್ವಾಮಿ ವಿವೇಕಾನಂದರ ಚರಿತ್ರೆ', 'ಸುಗ್ಗಲಾದೇವಿಯ ಕಥೆ', 'ದೇವಯಾನಿಯ ಕಥೆ', 'ಅಕ್ಕನ ಉಪದೇಶ', 'ಅಣ್ಣನ ಅರ್ಪಣಯೋಗ', 'ತರುಣನ ಕೈಗನ್ನಡಿ', 'ಗಾಂಧೀಯವರ ಗೋಸೇವೆ', 'ಕಳೆದ ಮೂವತ್ತು ವರ್ಷಗಳ ನನ್ನ ಕಾಣಿಕೆ', 'ಕೇರ್ ಹಾರ್ಡಿಯವರ ಭಾರತ ಪರ್ಯಟನ', 'ಸತ್ಯಾಗ್ರಹ', 'ಬ್ರಹ್ಮಚರ್ಯ', 'ಖಾದಿ', 'ಅಹಿಂಸೆ', 'ಸತ್ಯಾಗ್ರಹ ಪದ್ಯಾವಳಿ', 'ಸುಬೋಧಸಾರ' (ಸಂಪಾದಿತ), 'ಎಚ್ಚೆತ್ತ ಹಿಂದೂಸ್ಥಾನ', 'ಋಗ್ವೇದ ಸಾರ', 'ಶ್ರೀ ಗುರುಸಂಗನ ಬಸವ ಸ್ತುತಿ' ಹೀಗೆ ವಿಪುಲ ಗ್ರಂಥ ರಚನೆ ಮಾಡಿಸಿತು. ಈ ಗ್ರಂಥ ರಾಶಿಯಲ್ಲಿ ಆತ್ಮಚರಿತ್ರೆ, ರಾಷ್ಟ್ರೀಯ ಸಾಹಿತ್ಯ, ಭಾಷಾಂತರ, ಸಮಾಜ ಸುಧಾರಣೆ, ಮಕ್ಕಳ ಸಾಹಿತ್ಯ, ಸಂಶೋಧನೆ, ಹೀಗೆ ಸಾಹಿತ್ಯದ ನಾನಾ ಪ್ರಕಾರಗಳ ರಚನೆ ಇದೆ. ಈ ಎಲ್ಲಾ ಕೃತಿಗಳ ಮೌಲ್ಯ ತುಲನೆ ಈ ಪುಟ್ಟ ಲೇಖನದಲ್ಲಿ ಸಾಧ್ಯವಿಲ್ಲ ಎಂಬುದು ಮಂಜಪ್ಪನವರ ಗ್ರಂಥ ರಾಶಿ, ಅವುಗಳಲ್ಲಿನ ವೌಲ್ಯವರಿತ ಸಹೃದಯರೆಲ್ಲರಿಗೂ ವೇದ್ಯವಾದುದೇ ಆಗಿದೆ.

ಈ ಎಲ್ಲಾ ಕೃತಿಗಳನ್ನು ಅಭ್ಯಸಿಸಿದಾಗ ಒಂದು ವಾತು ಸ್ಪಷ್ಟವಾಗುತ್ತದೆ. ಮಂಜಪ್ಪನವರು ನಾನು ಸಾಹಿತಿಯಾಗಬೇಕೆಂದಾಗಲೀ ಅಥವಾ ನಾನು ಸಾಹಿತಿ ಎಂಬ ಭಾವನೆಯಿಂದಾಗಲೀ ಕೃತಿ ರಚನೆಗೆ ಕೈ ಹಚ್ಚಲಿಲ್ಲ. ಅವರ ಮನಸ್ಸಿನಲ್ಲಿ ಮೂಡಿದ ಭಾವನೆಗಳನ್ನು ಜನ ಸಮುದಾಯದೊಂದಿಗೆ ಹಂಚಿಕೊಳ್ಳುವ ಹವ್ಯಾಸದಿಂದ ಅವರು ಬರೆದದ್ದೆಲ್ಲಾ ಸಾಹಿತ್ಯವೆನಿಸಿತು. ಸಾಹಿತ್ಯ ಎಂದರೇನು? ಎಂಬ ಪ್ರಶ್ನೆಗೆ ಮಂಜಪ್ಪನವರ ಕೃತಿಗಳು ಉತ್ತರವಾಗುತ್ತವೆ. ಹಾಗೆಯೇ ಶ್ರೀ ಮಂಜಪ್ಪನವರನ್ನು ಕನ್ನಡದಲ್ಲಿ ವಿಚಾರ ಸಾಹಿತ್ಯ ಹಾಗೂ ರಾಷ್ಟ್ರೀಯ ಸಾಹಿತ್ಯದ ಪಿತಾಮಹರೆಂದು ಗೌರವಿಸುವುದು ಆಗತ್ಯ ಮತ್ತು ಸೂಕ್ತ.

ಶ್ರೀ ಮಂಜಪ್ಪನವರ ಆತ್ಮಕಥೆಯಲ್ಲಿ ಕವಿದೃಷ್ಟಿ, ವಿಮರ್ಶಾತ್ಮಕ ಹಾಗೂ ತುಲನಾತ್ಮಕ ವಿವೇಚನೆಗಳು ಸ್ಪಷ್ಟವಾಗಿವೆ. ಅವರ ಇತರ ಕೃತಿಗಳಲ್ಲಿ ರಾಷ್ಟ್ರ ಪುನರ್ನಿರ್ಮಾಣದ ಒಂದೇ ಸೂತ್ರ ಎದ್ದು ಕಾಣುತ್ತದೆ. ಅಲ್ಲದೆ ಅವರು ನುರಿತ ಗದ್ಯ ಲೇಖಕರು ಎಂಬುದು ಸ್ಪಷ್ಟವಾಗುತ್ತದೆ. ಇವರು ಬರೆದ ಕೃತಿಗಳ ಪ್ರತಿಗಳ ಸಂಖ್ಯೆ ಮೂರು ಲಕ್ಷಕ್ಕೂ ಮಿಗಿಲಾದುದು ಎಂಬ ಅಂಶದಿಂದ ಅವರ ಕೃತಿ ರಚನಾಕಾರ್ಯ ಎಷ್ಟು ಜನಪ್ರಿಯವಾಗಿತ್ತೆಂಬುದು ತಿಳಿಯುತ್ತದೆ. ಅವರ 'ಬುದ್ಧಿಯ ಮಾತು' ಎಂಬ ಕೃತಿ ಏಳು ಆವೃತ್ತಿಗಳಲ್ಲಿ ಹದಿನೈದು ಸಾವಿರ ಪ್ರತಿಗಳು ಖರ್ಚಾದುವೆಂದರೆ 1915ರಿಂದ 25ರ ವರೆಗಿನ ಕಾಲದಲ್ಲಿ ಮಹತ್ತರ ಸಾಧನೆ ಅಲ್ಲವೇ? ಅವರ ಸಾಹಿತ್ಯ ರಚನೆಯನ್ನು ನಾವು ಯಾವುದೇ ಹೆಸರಿನಿಂದ ಕರೆದರೂ ಅದು ಜೀವನ ಸಾಹಿತ್ಯವಾಗಿತ್ತೆನ್ನುವುದು ಗಮನಾರ್ಹ ಅಂಶ. ಈ ಸಾಹಿತ್ಯ ಜನಾಂಗವನ್ನು ಮೇಲೆತ್ತುವ ಉಜ್ವಲ ಸಾಹಿತ್ಯ; ರಾಷ್ಟ್ರಧರ್ಮವನ್ನು ಪ್ರತಿಪಾದಿಸುವ ತೇಜಪುಂಜವಾದ ಸಾಹಿತ್ಯ. ಕನ್ನಡದ ಸೊಗಸು, ತಿಳಿವಿನ ತೇಜಸ್ಸು ಈ ಕೃತಿಗಳಲ್ಲಿ ಎದ್ದುಕಾಣುವುದು. ಈ ಎಲ್ಲಾ ಗ್ರಂಥ ರಾಶಿಯನ್ನು ಅವಲೋಕಿಸಿದಾಗ 'ಸಂಗನ ಬಸವಸ್ತುತಿ' ಎಂಬ ಕೃತಿ ಮಂಜಪ್ಪನವರು ರಚಿಸಿದ ಹಾಡುಗಬ್ಬ; ಉಳಿದುವೆಲ್ಲವೂ ಗದ್ಯ ರೂಪದಲ್ಲಿವೆ.

ಇವರು ರಚಿಸಿದ 'ಬಸವ ಬೋಧಾಮೃತವು' ಮರಾಠಿ ಭಾಷೆಗೆ ಅನುವಾದಿತವಾದರೆ ಇನ್ನು ಕೆಲವು ಚಿಕ್ಕ ಪುಸ್ತಕಗಳು ಉರ್ದು ಮತ್ತು ಹಿಂದಿ ಭಾಷೆಗೆ ತರ್ಜುಮೆಗೊಂಡವು. 'ವಚನಕಾರರ ಸಮಾಜ ರಚನೆ' ಎಂಬ ಕೃತಿಯನ್ನು ಪ್ರಾಧ್ಯಾಪಕ ಬೊಂದಾಡೆ ಸ್ವಾಮಿರಾಯರಿಂದ ಇಂಗ್ಲಿಷಿಗೆ ಅನುವಾದ ಮಾಡಿಸಿ ತಮ್ಮ ಅಣ್ಣ ಮಧುಲಿಂಗಪ್ಪ ಹರ್ಡೇಕರರ ದಿವ್ಯ ಸ್ಮರಣೆಗೆ ಅರ್ಪಿಸಿದರು.

ಒಟ್ಟಿನಲ್ಲಿ ಮಂಜಪ್ಪನವರ ಸಾಹಿತ್ಯ ವಿಚಾರ ಪ್ರಧಾನವಾದುದು. ಅವರ ಕೃತಿಗಳಲ್ಲಿ ರಾಷ್ಟ್ರಭಕ್ತಿಯ ನಿಷ್ಠೆ, ಸಮಾಜ ಸುಧಾರಣೆಯ ತೀವ್ರಾಕಾಂಕ್ಷೆ, ಮಾನವತಾವಾದದ ಸಂದೇಶ, ಆದರ್ಶ ಜೀವನದ ಹಂಬಲ ತುಂಬಿರುವುದನ್ನು ಕಾಣಬಹುದು. ಈ ಕೃತಿಗಳ ಮೂಲಕ ತಿಳುವಳಿಕೆಯ ಬೆಳಕು ನಾಡಿನ ಮೂಲೆ ಮೂಲೆಗೆ ಹರಡಿತು. ರಾಷ್ಟ್ರೀಯ ಪುನರುಜ್ಜೀವನಕ್ಕೆ ಉಪಕಾರವಾಯಿತು. ಕೇವಲ ಮುಲ್ಕಿ ಪರೀಕ್ಷೆ ಪಾಸಾದ ಈ ಮಹಾ ಪ್ರತಿಭಾವಂತ, ಸ್ವಂತವಾಗಿ ಇಂಗ್ಲಿಷ್, ಸಂಸ್ಕೃತ, ಮರಾಠಿ ಭಾಷೆಗಳನ್ನು ಕಲಿತು ಕೃತಿ ರಚಿಸಿದರು. ಈ ಎಲ್ಲಾ ಕೃತಿಗಳ ಅಭ್ಯಾಸದಿಂದ ಇಂದು ದಾರಿ ತಪ್ಪಿರುವ ಯುವ ಪೀಳಿಗೆ ಸ್ಫೂರ್ತಿ ಪಡೆದು ರಾಷ್ಟ್ರದ ಗೌರವಾನ್ವಿತ ಪ್ರಜೆಯಾಗಿ ಬದುಕಲು ಸಾಧ್ಯವಿದೆ.

ಪತ್ರಿಕೋದ್ಯಮದಲ್ಲಿ ವಿಶಿಷ್ಟವೆನ್ನಿಸುವಂತಹ ಸಾಧನೆಯನ್ನು ಸಾಧಿಸಿದ ಹರ್ಡೇಕರ್ ಅವರು ಸಾಹಿತ್ಯ ರಚನೆಯಲ್ಲಿಯೂ ವಿಶಿಷ್ಟವಾದುದನ್ನೇ ಸಾಧಿಸಿದರು.

ಶರಣ ಜೀವನ ಬದುಕಿದ ಮಂಜಪ್ಪನವರು ಕೇವಲ ಜನರನ್ನು ಮೆಚ್ಚಿಸುವುದಕ್ಕಾಗಲೀ, ತಮ್ಮ ಸ್ವಾರ್ಥಸಾಧನೆಗಾಗಲೀ ಪ್ರಯತ್ನಿಸಿದವರಲ್ಲ. ಜನಸೇವೆ ಅವರ ಮುಖ್ಯ ಗುರಿಯಾಗಿತ್ತು. ದೈವನಿಷ್ಠೆಯುಳ್ಳ ಹಾಗೂ ಜನಸೇವಾ ಭಾವನೆ ಹೊಂದಿದ್ದ ಮಂಜಪ್ಪನವರು ತಮ್ಮದೇ ಆದ ಮಾರ್ಗದಲ್ಲಿ ನಡೆದರು. ಅವರು ನಡೆದ ಮಾರ್ಗ ಆದರ್ಶವಾದುದು. "ಮನುಷ್ಯನು ತನ್ನ ಸಹಜವಾದ ಗುಣ ಸ್ವಭಾವಗಳಿಗನುಗುಣವಾಗಿ ಕಾರ್ಯಮಾಡಬೇಕೇ ವಿನಾ ಜನಾನುರಾಗ ಪ್ರಾಪ್ತಿಗಾಗಿಯೇ ತನಗೆ ಸಹಜವಲ್ಲದ ಕಾರ್ಯವನ್ನು ಮಾಡುವುದು ವಿಹಿತವಲ್ಲ. ಅದೊಂದು ರೀತಿಯ ಆತ್ಮಹತ್ಯವೆಂದೇ ನನ್ನ ತಿಳಿವಳಿಕೆ" ಎಂದು ತಮ್ಮ ಆತ್ಮಚರಿತ್ರೆಯಲ್ಲಿ ತಮ್ಮ ಜೀವನ ದೃಷ್ಟಿ ಏನೆಂಬುದನ್ನು ಹೇಳಿದ ಹರ್ಡೇಕರ್ ಅವರು ಆ ಹೇಳಿಕೆಯನ್ನು ಕಾರ್ಯರೂಪಕ್ಕೆ ತಂದವರು. "ನುಡಿಯಲ್ಲಿ ಒಪ್ಪಿ ನಡೆಯಲಿಲ್ಲದಿದ್ದರೆ ಹಿಡಿದಿಪ್ಪ ಲಿಂಗ ಘಟಸರ್ಪ" ಎಂಬ ಅಣ್ಣನವರ ವಾಣಿಯನ್ನು ಮನದಟ್ಟು ಮಾಡಿಕೊಂಡಿದ್ದ ಮಂಜಪ್ಪನವರು ಆದರ್ಶ ಬದುಕನ್ನು ಹೇಳಿದುದಲ್ಲದೆ ಆದರ್ಶ ಬದುಕನ್ನು ಬದುಕಿದರು.

1987ರಲ್ಲಿ ಡಾ|| ಮಾಣಿಕರಾವ ಧನಶ್ರೀ ಮತ್ತು ಕಾಶೀನಾಥ ರೆಡ್ಡಿ ಅವರು 'ಜನಸೇವಕನ ವಚನಗಳು' ಎಂಬ ಶೀರ್ಷಿಕೆಯಲ್ಲಿ ಮೂವತ್ತೆರಡು ವಚನಗಳನ್ನು ಪ್ರಕಟಿಸಿದ್ದಾರೆ. ಅದರ ಪ್ರಸ್ತಾವನೆಯಲ್ಲಿ "ಬಸವಾದಿ ಪ್ರಮಥರಿಂದ ಪ್ರೇರಣೆ ಹೊಂದಿದ ಮಂಜಪ್ಪನವರು... 'ಜನಸೇವಕನ ವಚನಗಳು' ಎಂಬ ತಲೆಬರಹದಲ್ಲಿ ಸುಂದರವಾದ ವಚನಗಳನ್ನು ರಚಿಸಿದ್ದಾರೆ. ನಾವು ಮರಕುಂದಿಯ 'ಬಸವಣ್ಣನವರ' ಭಜನೆಗಳನ್ನು ಸಂಗ್ರಹಿಸಿ ಪ್ರಕಟಿಸುವ ಉದ್ದೇಶದಿಂದ ಬೀದರ ತಾಲ್ಲೂಕಿನ ಭಂಗೂರಿಗೆ ಹೋದಾಗ ಅಲ್ಲಿಯ ನಿವಾಸಿಗಳಾದ ಶ್ರೀ ಚನ್ನವೀರಪ್ಪವಾಲಿಯವರ ಮನೆಯಲ್ಲಿ ಶ್ರೀ ಹರ್ಡೇಕರ ಮಂಜಪ್ಪಣ್ಣನವರ ವಚನಗಳು ನಮಗೆ ಲಭಿಸಿದುವು. ಸಾಹಿತ್ಯ ಅಭಿಮಾನಿಗಳೂ, ಸುಸಂಸ್ಕೃತರೂ ಆದ ಶ್ರೀ ಚನ್ನವೀರಪ್ಪನವರು ಆ ವಚನಗಳನ್ನು ಅತ್ಯಂತ ಜೋಪಾನವಾಗಿ ರಕ್ಷಿಸಿಕೊಂಡು ಬಂದಿದ್ದರು. ಸದರಿ ವಚನಗಳನ್ನು ಮಹಾರಾಷ್ಟ್ರದ ಉದಗೀರದಲ್ಲಿ ಸ್ವತಃ ಮಂಜಪ್ಪಣ್ಣನವರ ಮುಖದಿಂದಲೇ ಕೇಳಿ ಬರೆದುಕೊಂಡುದಾಗಿ, ಅವರು ನಮಗೆ ತುಂಬಾ ಅಭಿಮಾನದಿಂದ ವಿವರಿಸಿದರು" ಎಂದು ಹೇಳಿದ್ದಾರೆ. ಇದಕ್ಕೆ ಪೂರಕವಾಗಿ ಮುನ್ನುಡಿ ಬರೆಯುತ್ತಾ ಡಾ|| ಸಿದ್ಧಯ್ಯ ಪುರಾಣಿಕರು "ನನಗೆ ನೆನಪಿರುವಂತೆ ಹರ್ಡೇಕರ ಮಂಜಪ್ಪಣ್ಣನವರು 'ಜನಸೇವಕನ ವಚನಗಳು' ಎಂಬ ವಚನಗಳನ್ನು ಬರೆದುದುಂಟು. ಅವು ಒಂದು ಪುಸ್ತಿಕೆಯ ರೂಪದಲ್ಲಿ ಪ್ರಕಟವಾಗಿದ್ದಂತೆ ಕೂಡ ನೆನಪಿದೆ ನನಗೆ. ಆ ಪುಸ್ತಿಕೆಯಲ್ಲಿರುವ ವಚನಗಳೂ, ಈಗ ಪ್ರಕಟವಾಗುತ್ತಿರುವ ಈ ವಚನಗಳೂ ಒಂದೇ ಆಗಿದ್ದಲ್ಲಿ ಇವುಗಳ ಕರ್ತೃತ್ವದ ಬಗ್ಗೆ ಸಂದೇಹವೇ ಉಳಿಯುವುದಿಲ್ಲ" ಎಂದಿದ್ದಾರೆ.

ಈಗ ಆಧುನಿಕ ವಚನಕಾರರ ಸಾಲಿನಲ್ಲಿ ಮೊದಲ ಹೆಸರು ಮಂಜಪ್ಪನವರದಾಗಿ ಕಾಣುತ್ತದೆ. ಹೊಸಗನ್ನಡ ಯುಗದಲ್ಲಿ ವಚನಗಳನ್ನು ಶ್ರೀ ಜ.ಚ.ನಿ., ಶ್ರೀ ಮೂಜಗಂ, ಶ್ರೀ ಮಹದೇವ ಬಣಕಾರ, ಶ್ರೀ ಸಿದ್ಧಯ್ಯ ಪುರಾಣಿಕ ಮೊದಲಾದವರು ರಚಿಸಿರುವುದು ಸ್ಪಷ್ಟ. ಆದರೆ 1935ರ ಹೊತ್ತಿಗೆ ವಚನಗಳನ್ನು ಹರ್ಡೇಕರರು ಹೇಳಿ ಬರೆಯಿಸಿದುದು ನಿಜವಾದಲ್ಲಿ ಹರ್ಡೇಕರ್ ಅವರು ಆಧುನಿಕ ವಚನಕಾರರಲ್ಲಿ ಮೊದಲಿಗರಾಗಿ ಉಳಿಯುತ್ತಾರೆ.

"ಇವುಗಳ ಭಾಷೆ ಹರ್ಡೇಕರ್ ಮಂಜಪ್ಪಣ್ಣನವರ ಪರಿಚಿತ ಭಾಷೆ; ಇವುಗಳ ವಿಚಾರಗಳು ಹರ್ಡೇಕರ್ ಮಂಜಪ್ಪಣ್ಣನವರಿಗೆ ಪ್ರಿಯವಾಗಿದ್ದ ವಿಚಾರಗಳೇ. ಆದುದರಿಂದ ಇವು ಅವರ ವಚನಗಳೇ ಎಂದು ಸ್ವೀಕರಿಸಬಹುದಾಗಿದೆ" ಎಂಬ ಸಿದ್ಧಯ್ಯ ಪುರಾಣಿಕರ ಹೇಳಿಕೆ ಈ ನಿರ್ಧಾರಕ್ಕೆ ಪುಷ್ಟಿಕೊಡುತ್ತದೆ.

ಈ ವಚನಗಳಿಗೆ 'ಪ್ರಭುದೇವ' ಎಂಬ ಅಂಕಿತವಿದೆ. ವೈರಾಗ್ಯನಿಧಿ ಅಲ್ಲಮ ಪ್ರಭುವಿನ ಜೀವನ ಸಾಧನೆಗಳ ಪ್ರಭಾವಕ್ಕೆ ಒಲಿದ ಮಂಜಪ್ಪನವರು ಪ್ರಭುದೇವನನ್ನೇ ತಮ್ಮ ವಚನಗಳ ಅಂಕಿತವಾಗಿರಿಸಿಕೊಂಡಿರಬಹುದು.

'ಗಂಟೆ ನುಡಿಯುವುದೆ ಅಯ್ಯಾ ತಾನೇ ನುಡಿಸುವರಿಲ್ಲದೆ.... ಗುರುವೇ ನೀ ನುಡಿಸಿದಂತೆ ನುಡಿವೆನಯ್ಯ' ಎಂದು ಹೇಳಿ ಗುರುವಿನ ಮಹತ್ವವನ್ನು ಕೊಂಡಾಡಿದ್ದಾರೆ.

ಈ ವಚನಗಳನ್ನು ಓದುತ್ತಿರುವಲ್ಲಿ ಬಸವಣ್ಣನವರ ವಚನಗಳಲ್ಲಿ ಬರುವ ಅನೇಕ ಭಾವಗಳು ಮಂಜಪ್ಪನವರ ವಚನಗಳಲ್ಲಿವೆ. ಆದರೆ ಇಲ್ಲಿ ತಮ್ಮನ್ನು ಜನಸೇವೆಗೆ ಒಪ್ಪಿಸಿಕೊಂಡ ಕಾರಣ ತಮ್ಮನ್ನು ಜನಸೇವಕ ಎಂದು ಕರೆದುಕೊಂಡಿದ್ದಾರೆ. ಹಾಗಾಗಿ ಈ ವಚನಗಳನ್ನು 'ಜನಸೇವಕನ ವಚನಗಳು' ಎಂದು ಕರೆದಿದ್ದಾರೆ. ಹನ್ನೆರಡನೆ ಶತಮಾನದ ವಚನಗಳ ಗದ್ಯ ಶೈಲಿಯನ್ನು ಈ ವಚನಗಳು ನೆನಪಿಗೆ ತರುತ್ತವೆ.

ಶ್ರೀ ಹರ್ಡೇಕರ್ ಅವರು ಶ್ರೇಷ್ಠ ಜ್ಞಾನಯೋಗಿಗಳೂ ಮತ್ತು ಕರ್ಮಯೋಗಿಗಳೂ ಆಗಿದ್ದರು. ಅಲ್ಲಮ, ಅಕ್ಕಮಹಾದೇವಿ ಮತ್ತು ಪ್ರತಿಭಾಶಾಲಿ ಚಾಮರಸರಂತೆ ಬನವಾಸಿಯಲ್ಲಿ ಜನಿಸಿ, ಬಾಳಿದ ಮಂಜಪ್ಪನವರು ಜ್ಞಾನ ಕೋಗಿಲೆಯಾಗಿ ಹಾಡಿ ಕನ್ನಡ ನಾಡನ್ನು ಬೆಳಗಿದರು. ಅರಿವಿನ ದುಂಬಿಯಾಗಿ ಕನ್ನಡ ಸಂಸ್ಕೃತಿಯ ಕಂಪನ್ನು ಎಲ್ಲ ಕಿವಿಗಳಿಗೆ ತುಂಬಿದರು. ಭಾರತದ ಐಕ್ಯತೆಯ ಸಂದೇಶವನ್ನು ಸಾರಿದರು.

ಲೇಖಕರಾಗಿ ಮಂಜಪ್ಪನವರು ಉನ್ನತ ಸ್ಥಾನಗಳಿಸಿದ್ದಾರೆ. ಕನ್ನಡ ಭಾಷೆಯ ಮೇಲಿನ ಅವರ ಹಿಡಿತ ಅಸದೃಶವಾದದು. ಆಧುನಿಕ ಕನ್ನಡ ಗದ್ಯವನ್ನು ಕುರಿತು ಮಾತನಾಡುವಾಗ ಪ್ರೊ|| ಎ. ಆರ್. ಕೃಷ್ಣಶಾಸ್ತ್ರಿಗಳು ಹಾಗೂ ಸಿದ್ಧವನಹಳ್ಳಿ ಕೃಷ್ಣಶರ್ಮರ ಹೆಸರನ್ನು ಎಲ್ಲರೂ ಹೇಳುತ್ತಾರೆ. ಈ ಇಬ್ಬರಿಗೂ ಮೊದಲೆ ಕನ್ನಡ ಗದ್ಯಕ್ಕೆ ಒಂದು ಹದವನ್ನು ತಂದುಕೊಟ್ಟವರು ಹರ್ಡೇಕರ್ ಮಂಜಪ್ಪನವರು ಎಂಬುದು ಅವರ ಕೃತಿಗಳನ್ನು ಓದಿದ ಎಲ್ಲ ಸಹೃದಯರಿಗೆ ವೇದ್ಯವಾಗುತ್ತದೆ. ಅವರ ಗದ್ಯಶೈಲಿ ಸರಳ ಮತ್ತು ಪರಿಣಾಮಕಾರಿ. ಇಪ್ಪತ್ತನೆಯ ಶತಕದಲ್ಲಿ ಕನ್ನಡ ಗದ್ಯ ಶೈಲಿಯನ್ನು ರೂಪುಗೊಳಿಸಿದ ಹಿರಿಯ ಲೇಖಕರೂ, ರಾಷ್ಟ್ರೀಯ ಸಾಹಿತ್ಯದ ಪಿತಾಮಹರೂ ಆಗಿ ಇವರ ಸಾಹಿತ್ಯ ಸೇವೆ ಅಪ್ರತಿಮವಾದುದು. ಹೀಗಾಗಿ ಮಂಜಪ್ಪನವರು ಕನ್ನಡ ಸಾಹಿತ್ಯಕ್ಕೆ ನೀಡಿದ ಕಾಣಿಕೆ ಬಹು ಬೆಲೆಯುಳ್ಳದ್ದು.

ಪ್ರಪಂಚದ ಖ್ಯಾತಸಾಹಿತಿ ಜಾರ್ಜ್ ಬರ್ನಾರ್ಡ್ ಷಾ ಅವರು ಲೇಖಕರಾಗಿ ನಿಮ್ಮನ್ನು ಹೇಗೆ ಓದುಗರ ಮುಂದೆ ಇಡಬೇಕೆಂದು ಕೇಳಿದವರಿಗೆ ಅವರು, "ನನ್ನ ಕೃತಿಗಳಿವೆ, ಅವುಗಳ ಮೇಲಿಂದ ಬೆಲೆಗಟ್ಟಲಿ" ಎಂದು ಉತ್ತರಿಸಿದರಂತೆ. ಈ ಮಾತುಗಳು ಮಂಜಪ್ಪನವರ ಕೃತಿಗಳಿಗೂ ಅನ್ವಯಿಸುತ್ತವೆ. ಮೆಕೆವೆಲ್ಲಿ, ರೂಸೋ, ಫ್ರಾಯಿಡ್, ಕಾರ್ಲ್‌ಮಾರ್ಕ್ಸ್, ಡಾರ್ವಿನ್, ಬರ್ಟ್‌ರೆಂಡ್ ರಸಲ್, ಬರ್ನಾರ್ಡ್‌ಷಾರವರಂತೆ ಜನಾನುರಾಗ ಗಳಿಸಿದ ಕೀರ್ತಿ ಮಂಜಪ್ಪನವರದ್ದು. ಅವರ ಬರಹಗಳು ಕನ್ನಡಿಗರ ಆದರಕ್ಕೆ ಪಾತ್ರವಾದವು. ತಮಿಳುನಾಡಿನ ಸುಬ್ರಹ್ಮಣ್ಯ ಭಾರತಿಯವರಂತೆ ರಾಷ್ಟ್ರೀಯತೆಯ ಸಂದೇಶವನ್ನು ಹರಡಿದರು. ಗದ್ಯ ಬರಹಗಳ ಮೂಲಕ ಪ್ರಚಂಡ ಜನಜಾಗೃತಿಯನ್ನು ಉಂಟುಮಾಡಿದರು.

ಹರ್ಡೇಕರ್ ಮಂಜಪ್ಪನವರ ಸಾಹಿತ್ಯ ಕೃಷಿಯನ್ನು 'ಆತ್ಮಚರಿತ್ರೆ', 'ರಾಷ್ಟ್ರೀಯ ಸಾಹಿತ್ಯ', 'ಸಂಶೋಧನೆ', 'ಭಾಷಾಂತರ ಸಾಹಿತ್ಯ', 'ಸಮಾಜ ಸುಧಾರಣೆ', 'ಪತ್ರಿಕೋದ್ಯಮ', 'ಮಕ್ಕಳ ಸಾಹಿತ್ಯ' ಎಂದು ವಿಭಜಿಸಬಹುದು.

ಭಾರತೀಯ ಸಾಹಿತ್ಯದಲ್ಲಿ ಆತ್ಮಚರಿತ್ರೆ ಹೆಚ್ಚು ಬೆಳೆಯದಿರುವ ಸಂದರ್ಭದಲ್ಲಿ ಮಂಜಪ್ಪನವರ 'ನನ್ನ ಕಳೆದ ಮೂವತ್ತು ವರ್ಷಗಳ ಕಾಣಿಕೆ', ಆಲೂರು ವೆಂಕಟರಾಯರ 'ಜೀವನ ಸ್ಮೃತಿಗಳು', ಸರ್ ಎಂ. ವಿಶ್ವೇಶ್ವರಯ್ಯನವರ 'ಆತ್ಮವೃತ್ತ', ಮಧುರ ಚೆನ್ನರ 'ಕಾಳರಾತ್ರಿ ಹಾಗೂ ಆತ್ಮ ಸಂಶೋಧನೆ', ಸರ್ ಮಿರ್ಜಾ ಇಸ್ಮಾಯಿಲ್‌ರವರ 'ನನ್ನ ಸಾರ್ವಜನಿಕ ಜೀವನ', ಆರ್.ಆರ್. ದಿವಾಕರರ 'ಸೆರೆಯ ಮರೆಯಲ್ಲಿ', ಈ ಕೃತಿಗಳ

ಸಾಲಿನಲ್ಲಿ ಎದ್ದು ಕಾಣುವ ಕೃತಿ. ತಮ್ಮ ಪರಿಶುದ್ಧವಾದ ಜೀವನದಿಂದಲೂ ವಿಚಾರಪರ ಬರಹಗಳಿಂದಲೂ ಕರ್ನಾಟಕ ಗಾಂಧಿ ಎಂದು ಜನತೆಯ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದ ಹರ್ಡೇಕರ್‌ರವರ ಸತ್ಯ ಸಂಗತಿಗಳಿಂದ ತುಂಬಿರುವ ಆತ್ಮಕಥೆಯು ಮಹಾತ್ಮಗಾಂಧಿಯವರ ಆತ್ಮವೃತ್ತಾಂತವನ್ನು ನೆನಪಿಸುತ್ತದೆ. ಈ ಕೃತಿಯಲ್ಲಿ ಭಾವಾವೇಶವಾಗಲೀ, ಅಸಹನೆಯ ಹುಚ್ಚಾಗಲೀ ಕಾಣದು. ಪರಿಪಕ್ವ ಅನುಭವದ ಸಾರವಾಗಿದೆ. ಈ ಕೃತಿಯಲ್ಲಿ ಬರುವ ಘಟನೆಗಳನ್ನು (1) ತಮ್ಮ ಜೀವನ ಯಾತ್ರೆಯಲ್ಲಿ ಕಂಡುಬಂದ ಅನುಭವಗಳು, (2) ಭಾರತ ಹಾಗೂ ಕರ್ನಾಟಕದ ರಾಷ್ಟ್ರೀಯ ಘಟನೆಗಳಿಗೆ ಸಂಬಂಧಿಸಿದ ಸಾರ್ವಜನಿಕ ಸಂಗತಿಗಳು ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಈ ಕೃತಿಯನ್ನು ಮಹಾತ್ಮಾಜಿಯವರ 69ನೇ ಹುಟ್ಟು ಹಬ್ಬದ ಶುಭದಿನದಲ್ಲಿ ಪ್ರಕಟಿಸಿದರು. ಈ ಗ್ರಂಥದಲ್ಲಿ ಮಂಜಪ್ಪನವರ ವೈಯಕ್ತಿಕ ಜೀವನದ ಬೆಳವಣಿಗೆಯ ವಿವಿಧ ಹಂತಗಳನ್ನು ಗುರುತಿಸಬಹುದು. ಅವರು ಅನುಭವಿಸಿದ ಕಷ್ಟ ಕಾರ್ಪಣ್ಯಗಳನ್ನು ಕಾಣಬಹುದಲ್ಲದೆ ಅವರ ಗುಣ, ಸ್ವಭಾವಗಳನ್ನು ಜೀವನ ದೃಷ್ಟಿಯ ನಾನಾ ಮುಖಗಳನ್ನೂ ಕಾಣಬಹುದು. ಸಾರ್ವಜನಿಕ ಕಾರ್ಯ ಮಾಡುವವರು ಶ್ರೀ ಮಂಜಪ್ಪನವರ ಜೀವನದಿಂದಲೂ ಮತ್ತು ಅವರ ಈ ಆತ್ಮ ಚರಿತ್ರೆಯಿಂದಲೀ ಸ್ಫೂರ್ತಿ ಪಡೆಯಬಹುದಾಗಿದೆ. ರಾಷ್ಟ್ರೀಯತೆಯನ್ನು ಪ್ರತಿಪಾದಿಸುವ ವಿಚಾರವಾಹಿನಿ ಅವರ ಜೀವನದ ಉಸಿರಾಗಿತ್ತು. ಹಾಗಾಗಿ ಭಾರತೀಯರ ದೇಶಭಕ್ತಿ, ಮಹಾತ್ಮ ಗಾಂಧಿಯವರ ಚರಿತ್ರೆ, ಎಚ್ಚೆತ್ತ ಹಿಂದೂಸ್ಥಾನ, ಸತ್ಯಾಗ್ರಹ, ಕೇರ್ ಹಾರ್ಡಿಯವರ 'ಭಾರತ ಪರ್ಯಟನ' ಮುಂತಾದ ಕೃತಿಗಳನ್ನು ರಚಿಸಿ ಭಾರತೀಯರಲ್ಲಿ ರಾಷ್ಟ್ರೀಯತೆ ಬೆಳೆಯಲು ಸಹಕಾರಿಯಾದರು. ಇವರ ಈ ರಾಷ್ಟ್ರೀಯ ಸಾಹಿತ್ಯದಲ್ಲಿ ಆಚಾರ್ಯ ಡಿ.ಎಲ್.ಎನ್. ರವರು ಹೇಳುವಂತೆ "ಕನ್ನಡದ ನಾಡಿಯನ್ನು ಬಲ್ಲ ನಿಪುಣ ಶ್ರೀ ಮಂಜಪ್ಪ! ಅವರ ಕೃತಿಗಳಲ್ಲಿ ಕನ್ನಡ ನಾಣ್ನುಡಿ, ಪಡೆ ನುಡಿ, ಮನೆಮಾತು, ಸಾರ್ಥಕವಾದ ಉಪಮಾನಗಳ ಮತ್ತು ನಿತ್ಯಜೀವನದ ಸೊಬಗನ್ನೂ ಕಾಣಬಹುದು. ಶ್ರೀ ಮಂಜಪ್ಪನವರು ಜೀವನದ ಸಮಸ್ಯೆಗಳನ್ನು ಚೆನ್ನಾಗಿ ಗ್ರಹಿಸಿದ್ದರು. ಜನತೆಯ ದುಃಖ ದುಮ್ಮಾನಗಳನ್ನು ಅರಿತು ಜನಮನವನ್ನು ತಿದ್ದಿ ತಿರುಗಿಸಲು ಪ್ರೇರಕವಾಗುವ ಸಾಮಾಜಿಕ ಹಾಗೂ ವೈಚಾರಿಕ ಸಾಹಿತ್ಯವನ್ನು ಅಂತಃಕರಣಪೂರ್ವಕವಾಗಿ ನಿರ್ಮಿಸಿದರು. ಅವರ ಕೃತಿಗಳನ್ನು ವರ್ಗೀಕರಿಸಿ ಅಭ್ಯಸಿಸಬಹುದಾದರೂ ಅವುಗಳಲ್ಲಿ ರಾಷ್ಟ್ರ ಪುನರ್‌ನಿರ್ಮಾಣದ ಮಹತ್ತರವಾದ ಏಕಸೂತ್ರ ಎದ್ದು ಕಾಣುತ್ತದೆ. ಈ ರಾಷ್ಟ್ರೀಯ ಸಾಹಿತ್ಯ ಕೃತಿಗಳಲ್ಲಿ ರಾಷ್ಟ್ರಭಕ್ತಿಯ ನಿಷ್ಠೆ, ಸಮಾಜ ಸುಧಾರಣೆಯ ತೀವ್ರಾಕಾಂಕ್ಷೆ, ಮಾನವತಾವಾದದ ಸಂದೇಶ ಆದರ್ಶ ಜೀವನದ ಹಂಬಲ ಎದ್ದು ಕಾಣುತ್ತವೆ."

'ಭಾರತೀಯರ ದೇಶಭಕ್ತಿ' ಕೃತಿಯಲ್ಲಿ ಸ್ವದೇಶ ಭಕ್ತಿಯ ಮೂಲ ತತ್ವಗಳು, ದೇಶಾಭಿಮಾನ ಮತ್ತು ಧರ್ಮಾಭಿಮಾನ, ದೇಶಭಕ್ತಿ ಯುಂಟಾಗದಿದ್ದರ ಕಾರಣಗಳು, ಭಾರತೀಯರಲ್ಲುಂಟಾದ ಸ್ವದೇಶಪ್ರೇಮ, ದೇಶಸೇವೆ ಮೊದಲಾಗಿ ವಿಭಾಗಗಳನ್ನು ಮಾಡಿಕೊಂಡು ಭಾರತೀಯರಲ್ಲಿ ದೇಶಾಭಿಮಾನ ಉಂಟಾಗಬೇಕಾದ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ. ಈ ಕೃತಿಗಳೊಂದಿಗೆ ಪೂರಕವಾಗಿ ಮಹಾತ್ಮ ಗಾಂಧಿಯವರ ಜೀವನ ಚರಿತ್ರೆಯನ್ನು ಸೇರಿಸಿ ರಾಷ್ಟ್ರೀಯತೆಯ ಬಗ್ಗೆ ಗಾಂಧೀಜಿಯವರ ಪ್ರಭಾವ ಪ್ರಖರವಾಗಿ ರುವುದನ್ನು ಸಾದರಪಡಿಸಿದ್ದಾರೆ.

ಸಂಶೋಧನೆ ಮನುಷ್ಯನ ಸಹಜಸ್ವಭಾವ. ಎಲ್ಲವನ್ನೂ ವಿಚಿಕಿತ್ಸಕ ಬುದ್ಧಿಯಿಂದ ಕಾಣುವ ಕಾತುರದ ಮನುಷ್ಯ ಎಲ್ಲವನ್ನೂ ಸಂಶೋಧಿಸಿ ವಾಸ್ತವಿಕವಾದುದನ್ನು ಒಪ್ಪಿಕೊಳ್ಳುವ ನಿರ್ಧಾರಕ್ಕೆ ಬರುವವನು. ಈ ಸಂಶೋಧನೆ ನಿರಂತರವಾದುದು. ಒಬ್ಬ ಸಂಶೋಧಕ ಒಮ್ಮೆ ತಾನು ತಳೆದ ಅಭಿಪ್ರಾಯವನ್ನು ಪುನಃ ಸಂಶೋಧಿಸಿದಾಗ ತಿದ್ದಿಕೊಳ್ಳುವ ಅವಶ್ಯಕತೆಯೂ ಇರುತ್ತದೆ. ಸಂಶೋಧನೆ ಯಾವ ಒಬ್ಬ ಸಂಶೋಧಕನಿಗೆ ಮೀಸಲಲ್ಲ. ಆತನು ಅಲ್ಲಿಗೇ ನಿಲ್ಲುವುದಿಲ್ಲ. ಇಂತಹ ನಿಲುವನ್ನು ತಳೆದಿದ್ದ ಹರ್ಡೇಕರರು ಕನ್ನಡಿಗರ ನಿರ್ಲಕ್ಷ್ಯ ಭಾವವನ್ನು ಬಡಿದೆಬ್ಬಿಸಿದ ಧೀಮಂತರು. ಕರ್ನಾಟಕದಲ್ಲಿ ಇತಿಹಾಸ ಮತ್ತು ಸಂಸ್ಕೃತಿಗಳ ವಿಷಯದಲ್ಲಿ ಸಂಶೋಧನೆಗೆ ಅವಕಾಶವಿದ್ದುದನ್ನು ಅರಿತು, ಸಂಶೋಧನೆಗೆ ಅಗತ್ಯವಾದ ಸಾಹಿತ್ಯಸಾಮಗ್ರಿ ದೊರಕದಿದ್ದ ಕಾಲದಲ್ಲಿಯೂ ಭಾರತೀಯ ಸಂಸ್ಕೃತಿಯನ್ನು ಕುರಿತು ಶ್ರೇಷ್ಠ ದರ್ಜೆಯ ಕೃತಿಯನ್ನು ರಚಿಸಿದುದು ವಿಸ್ಮಯಕಾರಕ ಸಂಗತಿ. ಈವರೆಗೂ ರಾಷ್ಟ್ರಭಕ್ತಿ ಕುರಿತು ಇಂತಹ ವಿವೇಚನಾತ್ಮಕ ಕೃತಿ ಕನ್ನಡದಲ್ಲಿ ರಚಿತವಾಗಿಲ್ಲವೆಂದರೆ ಆ ಕೃತಿಯ ಹಿರಿಮೆ ನಮಗೆ ತಿಳಿದೀತು. ಅನೇಕ ಪಾಶ್ಚಾತ್ಯ-ಪೌರಾತ್ಯ ವಿದ್ವಾಂಸರ ಗ್ರಂಥಗಳ ಸಹಾಯದಿಂದ ಈ ಕೃತಿಯನ್ನು ಮಂಜಪ್ಪನವರು ರಚಿಸಿದ್ದಾರೆ. ಈ ಕೃತಿ ಗಹನ ವಿಚಾರಗಳಿಂದ ಕೂಡಿ ಲಲಿತವಾದ ಶೈಲಿಯಲ್ಲಿ ನಿರರ್ಗಳವಾಗಿ ಮೂಡಿ ಬಂದಿದೆ. ಕೃತಿಯ ಆರಂಭದಲ್ಲಿ ಶ್ರೀ ಅಂಬಿಕಾಚರಣ ಮಜುಂದಾರರು 31ನೇ ರಾಷ್ಟ್ರೀಯ ಸಭಾಧ್ಯಕ್ಷತೆಯ ಭಾಷಣದಲ್ಲಿ ಪ್ರತಿಪಾದಿಸಿದ "ಭಾರತ ಮಾತೆಯು ತನ್ನ ಮಕ್ಕಳನ್ನು ಕುರಿತು ಏನನ್ನು ಕೇಳುತ್ತಿದ್ದಾಳೆ, ಎಂದು ಯಾರಾದರೂ ನನ್ನನ್ನು ಕೇಳಿದರೆ ನಾನು ಅನುಮಾನವಿಲ್ಲದೆ ಸ್ವದೇಶ ಭಕ್ತಿಯನ್ನು ಎಂದು ಹೇಳುವೆನು, ಎರಡನೆಯ ಸಾರಿ ಕೇಳಿದರೂ ಸ್ವದೇಶ ಭಕ್ತಿ ಎಂದು ಹೇಳುವೆನು" ಎಂಬ ಮಾತುಗಳನ್ನು ಸೇರಿಸಿ ಕೊನೆಯಲ್ಲಿ ಗುರುದೇವ ರವೀಂದ್ರನಾಥ ಠಾಗೂರ್ ಅವರ ಗೀತಾಂಜಲಿಯ "ಎಲ್ಲಿ ಮನಸ್ಸು ನಿರ್ಭಯದಿಂದಿದ್ದು ಬುದ್ಧಿಯ ವಿಕಸಿತವಾಗಿರುವುದೋ..." ಎಂಬ ಮಾತುಗಳನ್ನು ಹೇಳಿ ಕೃತಿಯನ್ನು ಸಮಾಪ್ತಿಗೊಳಿಸಿದ್ದಾರೆ. ಬಸವಣ್ಣನವರ ಜೀವನ ಚರಿತ್ರೆಯ ಬಗ್ಗೆ ಸಾಕಷ್ಟು ಸಂಶೋಧನೆ ಆಗದಿರುವುದನ್ನು ಮನಗಂಡ ಮಂಜಪ್ಪನವರು ತಮ್ಮ ಬಸವ ಚರಿತ್ರೆಯಲ್ಲಿ ಬಸವಣ್ಣನವರ ಜೀವನದ ಬಗ್ಗೆ ಅನೇಕ ಸಂಗತಿಗಳನ್ನು ಸಂಶೋಧಿಸಿ ನಿರೂಪಿಸಿದ್ದಾರೆ. ಬಸವಣ್ಣನವರನ್ನು ತುಲನಾತ್ಮಕ ದೃಷ್ಟಿಯಿಂದ ಅಳೆದು ಅವರನ್ನು ಬುದ್ಧ, ಕ್ರಿಸ್ತ ಮೊದಲಾದ ಮಹಾನುಭಾವರ ಸಾಲಿನಲ್ಲಿ ನಿಲ್ಲಿಸಿದ್ದಾರೆ. ಸ್ವಯಂ ತರಬೇತಿಯಿಂದ ಸಂಶೋಧನೆ ಕೈಗೊಳ್ಳುವ ಸಾಮರ್ಥ್ಯವಿದ್ದ ಮಂಜಪ್ಪನವರು, ಪೌರಾಣಿಕ ಮತ್ತು ಸಾಂಪ್ರದಾಯಿಕ ಸಾಹಿತ್ಯದಲ್ಲಿ ಇತಿಹಾಸವನ್ನು ಕಾಣಲು ಅನುಸರಿಸಿದ ಮಾರ್ಗ ಯಾರೂ ಮೆಚ್ಚುವಂತಹುದು.

'ಶುದ್ಧಿ ಮತ್ತು ಸಂಘಟನೆ' ಹಾಗೂ 'ಬಸವ ಬೋಧಾಮೃತ' ಕೃತಿಯು ಐತಿಹಾಸಿಕ ಸಂಶೋಧನಾತ್ಮಕ ಪದ್ಧತಿಯಿಂದ ರಚಿಸಿದುದಾಗಿದೆ. ಇಲ್ಲಿ ಪ್ರಾಚೀನ ಭಾರತೀಯ ಜನಾಂಗ, ಬುದ್ಧನಿಂದ ಬಸವನವರೆಗೆ, ಬಸವಣ್ಣನವರ ಸುಧಾರಣೆ, ಬಸವಣ್ಣನವರ ನಂತರದ ಸ್ಥಿತಿ, ಮುಂದಿನ ಕಾರ್ಯ, ಉಪ ಸಂಹಾರ ಹೀಗೆ ಆರು ಪ್ರಕರಣಗಳಿವೆ. ಐತಿಹಾಸಿಕ ಹಿನ್ನೆಲೆಯಿಟ್ಟುಕೊಂಡು ಸಮಾಜ ಸುಧಾರಕ ಬಸವಣ್ಣನವರ ಬೆಲೆ ಕಟ್ಟುವ ಪ್ರಯತ್ನ ಇಲ್ಲಿದೆ. 'ಲಿಂಗಪೂಜೆಯ ಐತಿಹಾಸಿಕ ವಿವೇಚನೆ' ಎಂಬ ಕೃತಿಯಲ್ಲಿ ಲಿಂಗಪೂಜೆಯ ಆರಂಭ, ಅಗತ್ಯಗಳ ವಿವೇಚನೆ, ಲಿಂಗವೇ ಶಿವನಾಗಿ ಪರಿಣಮಿಸಿದ ಸಂಗತಿಗಳ

ವಿವರವಿದೆ. ಲಿಂಗಪೂಜೆಯ ಪ್ರಸಾರದ ಬಗ್ಗೆಯೂ, ಲಿಂಗವು ವಿಶ್ವದ ಪ್ರತೀಕ ಎಂಬ ಬಗ್ಗೆಯೂ ಸಾಕಷ್ಟು ವಿವರಗಳು ಇಲ್ಲಿವೆ.

ಭಾಷಾಂತರ ಸಾಹಿತ್ಯದಲ್ಲಿ ಸ್ವಾಮಿ ರಾಮತೀರ್ಥರ ಉಪನ್ಯಾಸಗಳನ್ನು ಐದು ಭಾಗಗಳಾಗಿ ಭಾಷಾಂತರಿಸಿ ಪ್ರಕಟಿಸಿದ್ದಾರೆ. ರಾಮತೀರ್ಥರ ವಿಚಾರಗಳು ಮಂಜಪ್ಪನವರ ಮೇಲೆ ವಿಶೇಷ ಪರಿಣಾಮ ಬೀರಿದುದರಿಂದ ಅವರ ಉಪನ್ಯಾಸಗಳನ್ನು ಶ್ರೀ ನಾರಾಯಣಸ್ವಾಮಿಗಳವರು ಪ್ರಕಟಿಸಿದ ಇಂಗ್ಲಿಷ್ ಕೃತಿಗಳು ಹಾಗೂ ಶ್ರೀಯುತ ಪರಕೆ ಮತ್ತು ಬರವೆ ಅವರು ಪ್ರಕಟಿಸಿದ ಮರಾಠಿ ಗ್ರಂಥಗಳ ಆಧಾರದಿಂದ ಅನುವಾದಿಸಿದ್ದಾರೆ. ಕೊನೆಯಲ್ಲಿ ಶ್ರೀ ರಾಮತೀರ್ಥರ ಉಪನ್ಯಾಸದಿಂದ ಆಯ್ದ ನುಡಿಮುತ್ತುಗಳು ಎಂಬ ಶೀರ್ಷಿಕೆಯಲ್ಲಿ ಸುಮಾರು 165 ಆದರ್ಶ ಮತ್ತು ಅನುಕರಣೀಯ ಮಾತುಗಳನ್ನು ಸಂಗ್ರಹಿಸಿದ್ದಾರೆ. "ಹಿಂದುತ್ವ" ಎಂಬ ಕೃತಿಯಲ್ಲಿ ಅದು ಒಂದು ಶಬ್ದವಲ್ಲ, ಅದು ಒಂದು ಇತಿಹಾಸ ಎಂಬಂಶವನ್ನು ನಿರೂಪಿಸಿದ್ದಾರೆ. ಇದಕ್ಕೆ ಅನೇಕ ಸಂಸ್ಕೃತ ಗ್ರಂಥಗಳಿಂದ ಆಧಾರ ಕೊಟ್ಟು ವಿವರಿಸಿದ್ದಾರೆ. ಹಿಂದುತ್ವದಲ್ಲಿನ ವಿವಿಧತೆ, ರಾಷ್ಟ್ರೀಯತೆಯ ವಿವರಗಳನ್ನು ಕೊಟ್ಟಿದ್ದಾರೆ.

ಸಮಾಜ ಸುಧಾರಣೆಗಾಗಿ ರಚಿಸಿದ ಸ್ತ್ರೀನೀತಿ ಸಂಗ್ರಹ, ಆದಿಜನ ಸುಧಾರಣೆ, ತರುಣರ ಕೈಗನ್ನಡಿ, ದಾಂಪತ್ಯಧರ್ಮ, ದಾಂಪತ್ಯ ಜೀವನ, ಹಿಂದೂ ಸಂಘಟನೆ, ಹಿಂದೂಗಳ ಕೈಗನ್ನಡಿ, ಹಿಂದೂ ಜಾಗೃತಿ ಅವಶ್ಯಕವೇ? ಜಾತೀಯವಾದ ವಿಮರ್ಶೆ, ಜಾತ್ರೆಗಳ ಸುಧಾರಣೆ, ಗೃಹಶಿಕ್ಷಣ, ಸ್ವಕರ್ತವ್ಯ ಸಿದ್ಧಾಂತ ಎಂಬ ಹನ್ನೆರಡು ಕೃತಿಗಳಲ್ಲಿ ಸಮಾಜ, ಸಮಾಜದಲ್ಲಿನ ಕೃತಕತೆಗಳು, ಲೋಪಗಳು, ಅವುಗಳನ್ನು ಸರಿಪಡಿಸುವಲ್ಲಿ ಮಾನವ ಪ್ರಯತ್ನ, ಕರ್ತವ್ಯಗಳ ವಿವರವಿದೆ. ಅದರಲ್ಲಿಯೂ ಸ್ವಕರ್ತವ್ಯ ಸಿದ್ಧಾಂತದಲ್ಲಿ ಮಾನವ ಸಮಾಜದಲ್ಲಿ ಹೇಗೆ ವರ್ತಿಸಬೇಕೆಂಬ ವಿವರವಿದೆ. ಸ್ತ್ರೀ ವಿದ್ಯಾಭ್ಯಾಸದ ಬಗ್ಗೆ ಹೆಚ್ಚು ಒತ್ತು ಕೊಟ್ಟಿರುವುದು ಸ್ತ್ರೀನೀತಿ ಸಂಗ್ರಹದಲ್ಲಿ ಕಂಡುಬರುತ್ತದೆ. ಪತಿವ್ರತಾ ಧರ್ಮವನ್ನು ಸುಮಾರು 46 ಸಾಂಗತ್ಯಗಳಲ್ಲಿ ವಿವರಿಸಿದ್ದಾರೆ. ಅಲ್ಲದೆ ಭಾರತೀಯ ಸುಪ್ರಸಿದ್ಧ ಸ್ತ್ರೀಯರೆಂದು ಮೈತ್ರೇಯಿ, ಗಾರ್ಗಿ, ದೇವಹೂತಿ, ಮದಾಲಸೆಯಿಂದ ಹಿಡಿದು ಆಧುನಿಕರಾದ ಸರೋಜಿನಿದೇವಿ, ಕಸ್ತೂರಿಬಾಯಿಯವರವರೆಗೆ ಪರಿಚಯವನ್ನು ಮಾಡಿಕೊಟ್ಟಿದ್ದಾರೆ.

ಪತ್ರಿಕೋದ್ಯಮದ ಬಗ್ಗೆ ಸಾಕಷ್ಟು ಕೆಲಸ ಮಾಡಿರುವುದು ಅವರ ಸಂಪಾದಕೀಯ ಲೇಖನಗಳಿಂದ ತಿಳಿಯುತ್ತದೆ. ಅಲ್ಲಿ ಚಾರಿತ್ರಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ವಿಷಯಗಳ ವಿವೇಚನೆ ಇದೆ. ಶ್ರೀ ಮಂಜಪ್ಪನವರು ಕರ್ನಾಟಕದಲ್ಲಿ ರಾಷ್ಟ್ರೀಯ ಪತ್ರಿಕೋದ್ಯಮದ ಬೆಳ್ಳಿ ಚುಕ್ಕಿಯಾಗಿ ಮಿನುಗಿದವರು. ಅವರ ಪತ್ರಿಕೋದ್ಯಮವನ್ನು ರಾಷ್ಟ್ರೀಯ ನ್ಯಾಯ ನಿಷ್ಠುರ ಪತ್ರಿಕೋದ್ಯಮ ಎನ್ನಬಹುದು. ಪತ್ರಿಕೋದ್ಯಮವನ್ನು ಜೀವನೋಪಾಯಕ್ಕೆ ಬಳಸದೆ, ಅದನ್ನು ಜನಾಂಗದಲ್ಲಿ ಜಾಗೃತಿ ಉಂಟು ಮಾಡಲು ಪ್ರಯತ್ನಿಸಿದರು ಮಂಜಪ್ಪನವರು. ತಮ್ಮ ಪತ್ರಿಕೆಗಳಾದ 'ಧನುರ್ಧಾರಿ', 'ಶರಣ ಸಂದೇಶ'ಗಳಲ್ಲಿ ರಾಷ್ಟ್ರಭಕ್ತಿಯ ವೀರನಿಷ್ಠೆ, ಮಾನವ ಪ್ರೇಮದ ಉದಾರ ದೃಷ್ಟಿಗಳನ್ನು ಪ್ರಚುರಪಡಿಸಿದರು. ಅಲ್ಲದೆ ತಮ್ಮ ಪತ್ರಿಕೆಗಳಲ್ಲಿ ಕೀಳು ಅಭಿರುಚಿಯ ಬರಹಗಳನ್ನು ಪ್ರಕಟಿಸುತ್ತಿರಲಿಲ್ಲ. ದೇಶಭಕ್ತಿ ಪ್ರೇರಕ, ಸಮಾಜ ಸುಧಾರಣೆಗೆ ಸಹಾಯಕವಾದ ಲೇಖನಗಳನ್ನು ಪ್ರಕಟಿಸುತ್ತಿದ್ದರು. ಅವರ ಪತ್ರಿಕೆ ಎಂದರೆ ದೋಷಾರೋಪಣೆಗಳ ದೊಂಬರಾಟವಾಗದೆ, ಜ್ಞಾನಪ್ರಸಾರದ ಕೈದೀವಿಗೆಯಾಗಿದ್ದಿತು. ಪ್ರಗತಿಪರ ವಿಚಾರಗಳಿಂದ ತುಂಬಿ ತರುಣರಿಗೆ ಸ್ಫೂರ್ತಿಯ ಸೆಲೆಯಾಗಿತ್ತು. 'ಖಾದಿ ವಿಜಯ' ಮತ್ತು 'ಉದ್ಯೋಗ' ಪತ್ರಿಕೆಗಳಲ್ಲಿ ಮಂಜಪ್ಪನವರು ಪ್ರತಿಪಾದಿಸಿದ ಆರ್ಥಿಕ ಸ್ವಾವಲಂಬನದ ವಿಚಾರಗಳು ಗಂಗಾ ಪ್ರವಾಹದಂತೆ ಶಾಂತವಾಗಿ ಹರಿದು ಜನರನ್ನು ರಚನಾತ್ಮಕ ವಿಚಾರಗಳಿಂದ ಸಮೃದ್ಧಗೊಳಿಸಿದುವು. "ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ" ಎಂಬ ವಾಕ್ಯವನ್ನು 'ಉದ್ಯೋಗ' ಪತ್ರಿಕೆಯ ಮುಖಪುಟದಲ್ಲಿ ಮುದ್ರಿಸಿ ಜನರನ್ನು ರಾಷ್ಟ್ರೀಯ ಸಂಪದಭಿವೃದ್ಧಿಯ ಕಡೆಗೆ ಕೊಂಡೊಯ್ದರು. ಉದ್ಯೋಗ ಪತ್ರಿಕೆಯ ಮೊದಲನೆ ಸಂಚಿಕೆಯ ಸಂಪಾದಕೀಯ ಲೇಖನವು ಮಂಜಪ್ಪನವರ ವಾದಸರಣಿ ಮತ್ತು ಉಜ್ವಲ ಶೈಲಿಯನ್ನು ಪ್ರಕಟಿಸುವುದಲ್ಲದೆ, ಅವರ ಲೇಖನಗಳು ಸಾಹಿತ್ಯ ಮಟ್ಟಕ್ಕೆ ಹೇಗೆ ಏರಿವೆ ಎಂಬುದನ್ನು ವ್ಯಕ್ತಪಡಿಸುತ್ತವೆ. ಜ್ಞಾನಪ್ರಸಾರ, ಭಾಷಾ ಪ್ರಸಾರ ಪತ್ರಿಕೆಗಳ ಮೂಲಕ ಹೇಗೆ ಸಾಧಿಸಲ್ಪಡುವುವು ಎಂಬುದು ಮಂಜಪ್ಪನವರ ಪತ್ರಿಕಾ ವ್ಯವಸಾಯದಿಂದ ತಿಳಿಯುತ್ತದೆ.

ಮಕ್ಕಳಿಗಾಗಿ ಬುದ್ಧಿಯ ಮಾತು, ಆರೋಗ್ಯ ಜೀವನ, ಭಾಗ್ಯದ ಬೀಗದ ಕೈ, ಗೋಸೇವೆ, ಗಾಂಧೀ ಸಂದೇಶ, ಕಚದೇವನ ಕಥೆ, ಬಸವಣ್ಣನವರ ಚರಿತ್ರೆ, ಅಕ್ಕನ ಉಪದೇಶ, ಪ್ರಭುದೇವರ ಕಥೆ, ಶರಣ ಬಸವೇಶ್ವರ ಚರಿತ್ರೆ, ಲಜಪತರಾಯರ ಚರಿತ್ರೆ, ವಿಜಯವಾಣಿ, ಅಣ್ಣನ ಕ್ರಾಂತಿ, ಬಸವ ಭಕ್ತಿ, ಕಾಯಕವೇ ಕೈಲಾಸ ಎಂಬ ಹದಿನೈದು ಕೃತಿಗಳನ್ನು ರಚಿಸಿ ಮಕ್ಕಳ ಸಾಹಿತ್ಯ ಪ್ರಕಾರಕ್ಕೆ ಮಹತ್ತರ ಕಾಣಿಕೆ ಇತ್ತಿದ್ದಾರೆ. ನಾಲ್ಕು ವರ್ಷದಿಂದ ಹದಿನಾಲ್ಕು ವರ್ಷದೊಳಗಿನ ಮಕ್ಕಳಿಗೆ ಬೋಧಪ್ರದವಾಗುವಂತೆ ಅವರ ಮನಸ್ಸಿಗೆ ನಾಟುವಂತೆ ಉಲ್ಲಾಸವಾಗುವಂತೆ ರಚಿಸುವ ಸಾಹಿತ್ಯವೇ ಮಕ್ಕಳಸಾಹಿತ್ಯ. ಈ ಸಾಹಿತ್ಯವನ್ನು ಕಥೆ, ಪದ್ಯ, ಸ್ತೋತ್ರ, ಸಂವಾದ ಮೊದಲಾದ ರೂಪದಿಂದ ರಚಿಸಿದೆ. ನೀತಿಬೋಧೆ, ಪ್ರಪಂಚ ಪರಿಚಯ ಮಾಡಿಕೊಡುವ ಮಹತ್ತರ ಉದ್ದೇಶ ಈ ಮಕ್ಕಳ ಸಾಹಿತ್ಯದ್ದು. ಈ ಕೆಲಸ ಮಂಜಪ್ಪನವರ ಕೃತಿಗಳಲ್ಲಿ ಸಮರ್ಥವಾಗಿ ಆಗಿದೆ ಎಂಬಂಶ ಆ ಕೃತಿಗಳು ಅಭ್ಯಾಸದಿಂದ ಮನನವಾಗುತ್ತದೆ. ಹೀಗಾಗಿ ಮಂಜಪ್ಪನವರನ್ನು 'ಮಕ್ಕಳ ಸಾಹಿತ್ಯ ಮಾಲೆಯ ಮೊದಲಿಗ' ಎಂದು ಗೌರವಿಸುವುದು ಅಗತ್ಯ. "ಮಹಾನುಭಾವರಾದ ಬಸವಣ್ಣನವರ ದಿವ್ಯಚರಿತ್ರೆಯನ್ನು 63 ನುಡಿಗಳಲ್ಲಿ ತಿಳಿಸಿದ ಇದೊಂದು ನನ್ನ ನೂತನ ಪ್ರಯತ್ನ..... ಇದನ್ನು ಚಿಕ್ಕಂದಿನಲ್ಲಿಯೇ ಪಾಠ ಮಾಡಿಸುವುದರಿಂದ ಮಕ್ಕಳ ಎಳೆಯ ಮನಸ್ಸಿನಲ್ಲಿ ಆ ದಿವ್ಯ ಚರಿತ್ರೆಯು ಮೂಡಿ ಅದು ಶಿಲಾಶಾಸನವಾಗಿ ಪರಿಣಮಿಸುವುದು" ಎಂದು ಹೇಳಿದ ಮಂಜಪ್ಪನವರು 1945ರಲ್ಲಿ 'ಶ್ರೀ ಗುರುಸಂಗನ ಬಸವನ ಸ್ತುತಿ' ಎಂಬ ಕೃತಿ ರಚಿಸಿದರು. ಈ ಹಿನ್ನಲೆಯನ್ನು ಗಮನಿಸಿದಾಗ ಮಂಜಪ್ಪನವರ ಮಕ್ಕಳ ಸಾಹಿತ್ಯ ಅನುಕರಣೀಯ ಎಂಬುದು ಸ್ಪಷ್ಟ.

ಹೀಗೆ ಹರ್ಡೇಕರ್ ಮಂಜಪ್ಪನವರ ಸಾಹಿತ್ಯಸೇವೆ ವೈವಿಧ್ಯಮಯ, ವಿಶಿಷ್ಟವಾದುದಾಗಿದೆ.

❑

# ಕಪಟರಾಳ ಕೃಷ್ಣರಾವ್

ಡಾ. ಸ್ವಾಮಿರಾವ ಕುಲಕರ್ಣಿ

ಹೈದ್ರಾಬಾದ್ ಕರ್ನಾಟಕದ ಹಿರಿಯ ಕನ್ನಡ ಸಾಹಿತಿ ಸಂಶೋಧಕರಾದ ದಿ. ಶ್ರೀ ಕಪಟರಾಳ ಕೃಷ್ಣರಾಯರು ಕಟ್ಟಾ ಕನ್ನಡಾಭಿಮಾನಿ. ಕನ್ನಡ ಭಾಷೆ ಮತ್ತು ಸಂಸ್ಕೃತಿ ಹಾಗೂ ಸಂಶೋಧನೆಗೆ ತಮ್ಮ ಬದುಕನ್ನೆ ಮುಡುಪಾಗಿಟ್ಟವರು. ಹೈದ್ರಾಬಾದ್ ಕರ್ನಾಟಕದ ಕಲಬುರ್ಗಿ ಐತಿಹಾಸಿಕವಾಗಿ ಸಾಹಿತ್ಯವಾಗಿ ಪ್ರಸಿದ್ಧಿಯನ್ನು ಪಡೆದ ಪ್ರದೇಶ. ಚಾಲುಕ್ಯ ರಾಷ್ಟ್ರಕೂಟ, ಕಲಚೂರಿ ಮುಂತಾದ ಸಾಮ್ರಾಜ್ಯಗಳ ಆಳ್ವಿಕೆಗೆ ಒಳಪಟ್ಟ ಈ ಭಾಗ ಬೌದ್ಧ, ಶೈವ, ಜೈನ, ವೈಷ್ಣವ, ವೀರಶೈವ, ಇಸ್ಲಾಂ ಮುಂತಾದ ಧರ್ಮಗಳ ಸಾಮರಸ್ಯದ ಪ್ರದೇಶ.

ಹೈದ್ರಾಬಾದ್ ಕರ್ನಾಟಕ ಪ್ರದೇಶದ ಕಲಬುರ್ಗಿ ಜಿಲ್ಲೆ ಬಹುಕಾಲ ಹೈದ್ರಾಬಾದ್ ನಿಜಾಮನ ಆಳ್ವಿಕೆಗೆ ಒಳಪಟ್ಟು ಉರ್ದು ಮಾಧ್ಯಮದ ಮೂಲಕವಾಗಿ ಕನ್ನಡದ ಪರಿಸ್ಥಿತಿ ಅತ್ಯಂತ ದಯನೀಯವಾಗಿ, ಜೊತೆಗೆ ಮಹಾರಾಷ್ಟ್ರದ ಪ್ರಭಾವಕ್ಕೆ ಸಿಕ್ಕು ಮರಾಠಿಭಾಷೆ ಅತ್ಯಂತ ಪ್ರಬಲವಾಗಿರುವಾಗ ಕಲಬುರ್ಗಿಯಲ್ಲಿ ಕನ್ನಡವನ್ನು ಉಳಿಸಿ-ಬೆಳೆಸುವ ಪ್ರಯತ್ನವನ್ನು ಮಾಡಿದ ಕೆಲವು ಮಹನೀಯರಲ್ಲಿ ಕಪಟರಾಳ ಕೃಷ್ಣರಾಯರು ಒಬ್ಬರು.

ಕಲಬುರ್ಗಿ ಜಿಲ್ಲೆಯ ಜೇವರ್ಗಿ ತಾಲೂಕಿನ 'ಹಾಲಗಡಲಿ'ಎಂಬ ಗ್ರಾಮದಲ್ಲಿ 1889ರಲ್ಲಿ ಜನಿಸಿದ ಕಪಟರಾಳರು ಕಲಬುರ್ಗಿಯಲ್ಲಿ ನೆಲಸಿ ತಮ್ಮ ಶಿಕ್ಷಣವನ್ನು ಮುಂದುವರೆಸಿದರು. ಆರಂಭಿಕ ಅಧ್ಯಯನವು ಆ ಕಾಲದಲ್ಲಿ ಅನಿವಾರ್ಯ ಮಾಧ್ಯಮಗಳಾಗಿದ್ದ ಉರ್ದು, ಫಾರಸಿ ಭಾಷೆಯಲ್ಲಿಯೇ ಆಯಿತು. ಮರಾಠಿಯ ಪ್ರಭಾವದಿಂದಾಗಿ ಮರಾಠಿಯನ್ನು ಕಲಿಯುವುದು ಅನಿವಾರ್ಯವಾಯಿತು.

ಶ್ರೀಯುತ ಕಪಟರಾಳರು ಬಹುಭಾಷಾ ಬಲ್ಲಿದರಾಗಿರುವಂತೆ ಭಾಷಾ ಪ್ರೇಮಿಗಳೂ ಆಗಿದ್ದರು. ಪುಣೆಗೆ ಹೋಗಿ ಇಂಗ್ಲೀಷ್‌ನಲ್ಲಿ ಕಾನೂನು ಅಭ್ಯಾಸಮಾಡಿ ನ್ಯಾಯವಾದಿಯಾಗಿ ಸೇವೆ ಸಲ್ಲಿಸಲು ಪ್ರಯತ್ನಿಸಿದರು. ಕಲಬುರ್ಗಿ ಜಿಲ್ಲೆಯಲ್ಲಿ ಆಕಾಲದಲ್ಲಿ ಆಂಗ್ಲಭಾಷೆಯಲ್ಲಿ ವಕೀಲ ಶಿಕ್ಷಣವನ್ನು ಪಡೆದವರು ಇವರೊಬ್ಬರೆ ಆಗಿದ್ದರೆಂಬುದು ಗಮನಿಸಬೇಕಾದ ಸಂಗತಿ. ಇಂಗ್ಲೀಷ್, ಮರಾಠಿ, ಉರ್ದು ಮತ್ತು ಫಾರಸಿ ಭಾಷೆಗಳಲ್ಲಿ ನೈಪುಣ್ಯತೆಯುನ್ನು ಪಡೆದಿದ್ದರೂ ರಾಯರ ಮನಸ್ಸಿನಲ್ಲಿ ಕನ್ನಡ ಭಾಷಾಭಿಮಾನಕ್ಕೇನೂ ಕೊರತೆ ಇರಲಿಲ್ಲ. ಕನ್ನಡದ ಗಂಡುಮಟ್ಟಿನ ಸ್ಥಳವಾದ ಕಲಬುರ್ಗಿಯಲ್ಲಿ ಇತರ ಭಾಷೆಗಳ ಪ್ರಾಬಲ್ಯದಿಂದಾಗಿ ಕನ್ನಡಕ್ಕೆ ಬಂದೊದಗಿದ ಅಧೋಗತಿಗೆ ಕಪಟರಾಳರ ಮನ ಮಿಡುಕುತ್ತಿತ್ತು. ಹೀಗಾಗಿ ಅವರು ಕನ್ನಡದ ಸಂಘಟನೆ, ಸಾಂಸ್ಕೃತಿಕ ಚಟುವಟಿಕೆಗಳ ಕಾರ್ಯದಲ್ಲಿ ತಮ್ಮನ್ನು ತಾವೆ ತೊಡಗಿಸಿಕೊಂಡರು. ಕನ್ನಡ ಸಾಹಿತ್ಯ ಸಂಘದ ಕ್ರಿಯಾಶೀಲ ಸದಸ್ಯರಾಗಿ ವೈಭವದಿಂದ ನಾಡಹಬ್ಬಗಳನ್ನು ಸಂಘಟಿಸಿ ಕನ್ನಡ ಭಾಷೆ ಮತ್ತು ಸಂಸ್ಕೃತಿಗೆ ಪ್ರಚೋದನೆಯನ್ನು ಕೊಟ್ಟರು. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿಯ ಸದಸ್ಯರಾಗಿ ಕನ್ನಡ ಪರ ಕಾರ್ಯಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಮರಾಠಿ ಮತ್ತು ಉರ್ದು ಮಾಧ್ಯಮಗಳ ಕಪಿಮುಷ್ಠಿಯಲ್ಲಿ ಸಿಲುಕಿದ ಕನ್ನಡವನ್ನು ಹೊರತಂದ ಕೀರ್ತಿ ಕಪಟರಾಳರಿಗೆ ಸಲ್ಲುತ್ತದೆ. ಕೇವಲ ಸಂಘ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಂದ ಕನ್ನಡಭಾಷೆ ಶ್ರೀಮಂತವಾಗಲಾರದು-ಎಂಬ ಸತ್ಯವನ್ನು ಮನಗಂಡ ಕೃಷ್ಣರಾಯರು ಕನ್ನಡ ಸಾಹಿತ್ಯದ ಕೃಷಿಯಲ್ಲಿ ಅದು - ಮುಖ್ಯವಾಗಿ ಸಂಶೋಧನೆಯ ಮಾರ್ಗದಲ್ಲಿ ಸಾಗುತ್ತ, ಕನ್ನಡ ಸಾಹಿತ್ಯದ ಇತಿಹಾಸದ ಮೇಲೆ ಹೊಸ ಬೆಳಕನ್ನು ಬೀರಿಬಲ್ಲ ಉತ್ಕೃಷ್ಟವಾದ ಕೃತಿಗಳನ್ನು ಕನ್ನಡಕ್ಕೆ ಕಾಣಿಕೆಯಾಗಿ ನೀಡಿದರು. ಕನ್ನಡದ ಕಾರ್ಯಕ್ಕಾಗಿ ತಮ್ಮ ವಕೀಲ ವೃತ್ತಿಯನ್ನು ತ್ಯಜಿಸುವುದಕ್ಕೆ ರಾಯರು ಹಿಂದೆ ಮುಂದೆ ನೋಡಲಿಲ್ಲ. ಆ ಸಂದರ್ಭದಲ್ಲಿ ಮಹಾತ್ಮಾ ಗಾಂಧೀಜಿಯವರು ಕರೆಕೊಟ್ಟ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಚಳುವಳಿಯಲ್ಲಿಯೂ ಕೃಷ್ಣರಾಯರು ಭಾಗವಹಿಸಿದರು.

ವಕೀಲರಾಗಿ, ಬಹುಭಾಷಾ ವಿದ್ವಾಂಸರಾಗಿ, ಗಾಂಧೀವಾದಿಗಳಾಗಿ, ದೇಶಭಕ್ತರಾಗಿ, ಕನ್ನಡದ ಸೇವಕರಾಗಿ, ಕಲಬುರ್ಗಿಯ ಹಿರಿಯ ಸಾಮಾಜಿಕ ಕಾರ್ಯಕರ್ತರಾಗಿ ಹಿರಿಯ ಚಿಂತಕರಾಗಿ, ಕನ್ನಡಿಗರ ಸಂಘಟಕರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸದಸ್ಯರಾಗಿ, ಕನ್ನಡ ಚಟುವಟಿಕೆಗಳ ಸ್ಫೂರ್ತಿ-ಪ್ರೇರಣೆಯ ಶಕ್ತಿಯಾಗಿ ಹೀಗೆ ಶ್ರೀಯುತ ಕಪಟರಾಳ ಕೃಷ್ಣರಾಯರು ವಿವಿಧ ಮುಖಗಳ ಸುಸಂಸ್ಕೃತ. ಸೌಜನ್ಯಪೂರ್ಣ, ಸ್ನೇಹಪರ ಜೀವಿಯಾಗಿದ್ದರು.

ಕನ್ನಡ ಇತಿಹಾಸ ಸಂಶೋಧಕರಲ್ಲಿ ಅಗ್ರಗಣ್ಯರು ಮತ್ತು ಪ್ರಾತಃ ಸ್ಮರಣೀಯರು. ಇಂತಹ ಕನ್ನಡದ ಹಿರಿಯ ಚೇತನ ತನ್ನ ಬದುಕಿನುದ್ದಕ್ಕೂ ಕನ್ನಡ ಸಾಹಿತ್ಯ ಸರಸ್ವತಿಯ ಸೇವೆಯನ್ನು ಮಾಡುತ್ತ 1996ರಲ್ಲಿ ನಮ್ಮಿಂದ ಅಗಲಿದರು. ಯಾವ ವರ್ಗ-ವರ್ಣ, ಲಿಂಗ ಭೇದವಿಲ್ಲದೆ ಅವರು ಮಾಡಿದ ಕಾರ್ಯ ಸಮಾಜಕ್ಕೆ ಅವರು ನೀಡಿದ ವಿಚಾರಪೂರ್ಣ ಮತ್ತು ಸಂಶೋಧನಾ ಕೃತಿಗಳು ತಮ್ಮದೆ ಆದ ಮಹತ್ವವನ್ನು ಹೊಂದಿವೆ ಎಂಬುವುದರಲ್ಲಿ ಎರಡುಮಾತಿಲ್ಲ.

ಕಪಟರಾಳ ಕೃಷ್ಣರಾಯರ ಬರಹಗಳನ್ನು ಮುಖ್ಯವಾಗಿ ಎರಡು ಭಾಗಗಳಾಗಿ ವಿಂಗಡಿಬಹುದು. ಒಂದು:ಪತ್ರಿಕೆಗಳಲ್ಲಿ ಪ್ರಕಟಗೊಂಡ ಲೇಖನಗಳು. ಎರಡು : ಗ್ರಂಥಗಳು.

೧.ಲೇಖನಗಳು

ಕಪಟರಾಳರು ಮೊದಲು ತಮ್ಮ ಸಾಹಿತ್ಯ ಸೇವೆಯನ್ನು ಸಂಶೋಧನ ಕಾರ್ಯವನ್ನು ಆರಂಭಮಾಡಿದ್ದು ಪತ್ರಿಕೆಗಳ ಮೂಲಕ. ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಯ ಪರವಾಗಿ ಸಂಘಟನೆಯತ್ತ ಪೂರ್ಣಒಲವನ್ನು ಹೊಂದಿದ ರಾಯರು ಬಿಡಿ ಲೇಖನಗಳನ್ನು ಬರೆಯುವುದರ ಮೂಲಕವಾಗಿ ಸಂಶೋಧನಾ ಕ್ಷೇತ್ರವನ್ನು ಪ್ರವೇಶಿಸಿದರು, ಶರಣಸಾಹಿತ್ಯ ಪರಿಷತ್ ಪತ್ರಿಕೆ, ಪ್ರಬುದ್ಧ ಕರ್ನಾಟಕ, ಹೈದ್ರಾಬಾದ್ ಇಂದು, ಸಂಯುಕ್ತ ಕರ್ನಾಟಕ, ಜಯಂತಿ, ಮುಂತಾದ ಪತ್ರಿಕೆಗಳ ಮೂಲಕ ತಮ್ಮ ವಿಚಾರಪೂರ್ಣ ಲೇಖನಗಳನ್ನು ಪ್ರಕಟಿಸಿದರು. ಇವರ ಹಲವು

ಲೇಖನಗಳನ್ನು ಸಂಗ್ರಹ ಮಾಡಿ "ಕರ್ನಾಟಕ ಸಂಸ್ಕೃತಿಯ ಸಂಶೋಧನೆ" ಎಂಬ ಹೆಸರಿನಿಂದ ಪ್ರಕಟಿಸಿದ, ಕಪಟರಾಳರ ಸ್ನೇಹಿತರಾದ ರಾಯಚೂರು ಜಿಲ್ಲೆಯ ಕುರ್ಡಿ ಹನುಮಂತಾಚಾರ್ಯರು 'ತಮ್ಮ ಸಂಪಾದಕನ ಅರಿಕೆ'ಎಂಬ ಲೇಖನದಲ್ಲಿ "ಶ್ರೀ ಕೃಷ್ಣರಾಯರ ವಿದ್ವತ್ಪೂರ್ಣವಾದ ಪ್ರಚೋದನಾತ್ಮಕವಾದ ಲೇಖನಗಳು ನಮ್ಮ ಪ್ರಾಂತದ ಒಂದು ಕಾಲದ ಇತಿಹಾಸ. ಸಂಸ್ಕೃತಿ, ಧರ್ಮ - ದರ್ಶನಗಳ ಮೇಲೆ ಪ್ರಕಾಶ ಚಲ್ಲುತ್ತವೆ...... ರಾಯರ ಲೇಖನಗಳ ಸಂಗ್ರಹದ ಪ್ರಕಟನೆಯೂ ನಮ್ಮ ಭಾಗದ ಲೇಖಕರಿಗೆ ಮಾರ್ಗದರ್ಶಕವಾಗುವುದು" ಎಂದು ಹೇಳಿರುವ ಮಾತುಗಳಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲ. ಇವರ ಈ ಲೇಖನದ ಕೃತಿಗೆ ಮುನ್ನುಡಿಯನ್ನು ಬರೆದ ಬಿ. ಶಿವಮೂರ್ತಿ ಶಾಸ್ತ್ರೀಯವರು: "ಇವರ ಬರಹಗಳು ಓದುಗರ ಮನಸ್ಸಿನಲ್ಲಿ ವಿಚಾರ ಕ್ರಾಂತಿಯನ್ನುಂಟುಮಾಡುತ್ತವೆ, ಸತ್ಯದ ಬುನಾದಿಯನ್ನು ತಿಳಿಯಲು ಪ್ರಚೋದನೆಯನ್ನುಂಟುಮಾಡುತ್ತವೆ. ಹಲವು ಸಂದರ್ಭದಲ್ಲಿ ವಾಚಕರ ಮನಸ್ಸಿನಲ್ಲಿರುವ ಮೂಢನಂಬಿಕೆಗಳನ್ನು ಹೊಡೆದೊಡಿಸುತ್ತವೆ ಎಂದು ನಾನು ಹೇಳಬಯಸುತ್ತೇನೆ" ಎಂಬ ಮಾತುಗಳು ಕಪಟರಾಳರಲ್ಲಿದ್ದ ಸಂಶೋಧನಾ ಲೇಖನಗಳ ವೈಚಾರಿಕ ಪ್ರಖರತೆಯನ್ನು ಎತ್ತಿತೋರಿಸುತ್ತವೆ.

ಎರಡನೆಯ ಮುನ್ನುಡಿಯನ್ನು ಬರೆದಿರುವ ವಿ. ಸೀತಾರಾಮಯ್ಯನವರು "ಮನಸ್ಸಿನ ಶ್ರದ್ಧೆ ಎಲ್ಲಿ ದೊಡ್ಡದಾಗುತ್ತದೆನೋ ಅಲ್ಲಿ ಬಡತನ-ಸಿರಿತನಗಳ ಲೆಕ್ಕ ಹತ್ತುವುದಿಲ್ಲ:ಅಂತಹ ಮನಸ್ಸು ಕೃಷ್ಣರಾಯರಲ್ಲಿದೆ. ಅಪಾರ ವಿದ್ಯಾ ಸಾಧನೆಯನ್ನು ಮಾಡಿದ್ದಾರೆ. ಸಂಶೋಧಕನಿಗೆ ಇರಬೇಕಾದ ಸತ್ಯದೃಷ್ಟಿ, ಸತ್ಯದ ಅನ್ವೇಷಣೆ, ಪ್ರಮಾಣ ನಡೆಸಿದಲ್ಲಿಗೆ ಹೋಗುವ ಪ್ರಾಮಾಣಿಕತೆ ಬೇಕು. ಅನವಧಾನ, ಪ್ರಮಾದ, ಹಠ, ಆಕ್ರೋಶ ಇಲ್ಲವೆ ಇನ್ನಾವದೋ ಸಾಧನೆಗಾಗಿರುವ ಪ್ರಮಾಣ ಚೇರಿದ್ದು ಇಂಥವೆಲ್ಲ ಸತ್ಯಸಾಧನೆಗೆ ಅಪಕಾರಕ. ಕೃಷ್ಣರಾಯರ ಲೇಖನಗಳಲ್ಲಿ ಸಂಶೋಧನೆಗೆ ಇರಬೇಕಾದ ಎಲ್ಲ ಗುಣಗಳನ್ನು ಕಾಣುತ್ತೇವೆ" ಎಂಬ ಮಾತುಗಳಲ್ಲಿ ಕಪಟರಾಳರ ಲೇಖನಗಳಲ್ಲಿರುವ ಸತ್ಯದೃಷ್ಟಿಯ ಅರ್ಹತೆಯನ್ನು ಕಾಣುತ್ತೇವೆ.

ಬಹುಭಾಷಾ ವಿದ್ವಾಂಸರಾದ ಕಪಟರಾಳರ ಬರವಣಿಗೆ ಆರಂಭವಾದದ್ದು 1924ರಲ್ಲಿ, ಅವರ ಪ್ರಥಮ ಸಂಶೋಧನಾತ್ಮಕ ಲೇಖನ 'ಕರ್ಮವೀರ'ವಾರ ಪತ್ರಿಕೆಯಲ್ಲಿ ಪ್ರಕಟಗೊಂಡಿರುವುದಾಗಿ ತಿಳಿದು ಬರುತ್ತದೆ. ಜಯಂತಿ ಮತ್ತು ತತ್ವವಾದ ಪತ್ರಿಕೆಗಳಲ್ಲಿಯೂ ಅವರ ಲೇಖನಗಳು ಪ್ರಕಟವಾಗಿವೆ.

**೨. ಗ್ರಂಥಗಳು**

ಕೃಷ್ಣರಾಯರ ಬಹುಮಟ್ಟಿನ ಸಂಶೋಧನಾ ಲೇಖನಗಳು "ಕರ್ನಾಟಕ ಸಂಸ್ಕೃತಿ ಸಂಶೋಧನೆ" ಎಂಬ ಕೃತಿಯಲ್ಲಿ ಅಡಕವಾಗಿವೆ. ಹೆಚ್ಚಾಗಿ ಸಾಮಾಜಿಕ ಕಾರ್ಯಕರ್ತರಾಗಿ ಕಾರಣರಾದ ಕಪಟರಾಳರಿಗೆ ಹೆಚ್ಚು ಬರವಣಿಗೆ ಮಾಡಲು ಭಾಷೆಯ ಬೆಳವಣಿಗೆಗೆ ಕಾರಣರಾದ ಕಪಟರಾಳರಿಗೆ ಹೆಚ್ಚು ಬರವಣಿಗೆ ಮಾಡಲು ಸಾಧ್ಯವಾಗಲಿಲ್ಲ ಎಂಬ ವಿಷಯ ತಿಳಿದು ಬರುತ್ತದೆ. ಆರ್ಥಿಕ ಪರಿಸ್ಥಿತಿಯ ದುಸ್ಥಿತಿಯಿಂದಾಗಿ ಕೃತಿಗಳನ್ನು ಪ್ರಕಟಿಸಲು ಅವರಿಗೆ ಸಾಧ್ಯವಗಲಿಲ್ಲ. ಇವರ ಹರಿತವಾದ ಲೇಖನಿಯನ್ನು, ದಾಖಲಿಸಬೇಕಾದ ಮಹತ್ವದ ಸಂಶೋಧನಾ ಕಾರ್ಯವನ್ನು ಗಮನಿಸಿದ ಕೆಲವು ಅಭಿಮಾನಿಗಳು ಇವರ ಕೃತಿಗಳನ್ನು ಹೊರತರುವಲ್ಲಿ ಪ್ರಯತ್ನಿಸಿದ್ದಾರೆ. ಪ್ರಕಟವಾದ ಕೃತಿಗಳು ನಮಗೆ ದೊರೆತಿರುವ ಮಾಹಿತಿಯ ಪ್ರಕಾರ ನಾಲ್ಕು:

೧. ಕರ್ನಾಟಕದ ಲಾಕುಳ ಶೈವರ ಇತಿಹಾಸ: (ಕನ್ನಡ ಅಧ್ಯಯನ ಸಂಸ್ಥೆ; ಮೈಸೂರು,1958)

೨. ತಂದೆ ಮಗಳಿಗೆ ಬರೆದ ಪತ್ರಗಳು: (ಭಾಷಾಂತರ ಗ್ರಂಥ)

೩. ಕರ್ನಾಟಕ ಸಂಸ್ಕೃತಿ ಸಂಶೋಧನೆ: ( 28 ಲೇಖನಗಳ ಸಂಗ್ರಹ):ಉಷಾ ಸಾಹಿತ್ಯ ಮಾಲೆ; ಮೈಸೂರು,1970 .

೪. ಸುರಪುರ ಸಂಸ್ಥಾನದ ಇತಿಹಾಸ: ಪ್ರಕಾಶಕರು, ಮಂಜುನಾಥ ಪ್ರಕಾಶನ, ರಾಜಾಜಿನಗರ ಬೆಂಗಳೂರು, 1977.

ಈ ಪ್ರಕಟವಾದ ಕೃತಿಗಳಲ್ಲದೆ ಶರಣಸಾಹಿತ್ಯ ಸಂಪುಟ -12ಸಂಚಿಕೆ -47ರಲ್ಲಿ ಚೈತನ್ಯ ಸಂಪ್ರದಾಯ ಮತ್ತು ಶರಣಸಾತ್ಮದ ನವೆಂಬರ - ಡಿಸೆಂಬರ ಸಂಚಿಕೆಯಲ್ಲಿ 'ಸಿದ್ಧವಮಾರ್ಗವೂ ಮತ್ತು ವೀರಶೈವ ಸಂಪ್ರದಾಯವೂ' ಎಂಬ ಲೇಖನಗಳು ಪ್ರಕಟವಾಗಿರುವುದಾಗಿ ತಿಳಿದು ಬರುತ್ತದೆ.

**ಕರ್ನಾಟಕ ಸಂಸ್ಕೃತಿಯ ಸಂಶೋಧನೆ**

ಕನ್ನಡ ಸಾಹಿತ್ಯದ ವಿವಿಧ ಮುಖ ದರ್ಶಿಸುವ 28 ಸಂಶೋಧನಾ ಲೇಖನಗಳು ಈ ಗ್ರಂಥದಲ್ಲಿ ಇವೆ. ಈ ಲೇಖನಗಳನ್ನು ಮೂರು ಭಾಗಗಳಲ್ಲಿ ವಿಂಗಡಿಸಲಾಗಿದೆ. ಮೊದಲನೆಯ ಭಾಗದಲ್ಲಿ18 ಲೇಖನಗಳು, ಎರಡನೆಯ ಭಾಗದಲ್ಲಿ 3 ಲೇಖನಗಳು, ಮೂರನೆಯ ಭಾಗದಲ್ಲಿ 7 ಲೇಖನಗಳು ಪ್ರಕಟವಾಗಿದ್ದರೂ ಕೃತಿಯ ಕೊನೆಗೆ ಪರಿಶಿಷ್ಟದಲ್ಲಿ ಆಯಾ ಲೇಖನಗಳು ಪ್ರಕಟವಾದ ಪತ್ರಿಕೆ ಮತ್ತು ವರ್ಷಗಳ ವಿವರಗಳನ್ನು ಪಟ್ಟಿಮಾಡಿಕೊಡಲಾಗಿದೆ. ಈ ಕೃತಿಗೆ ಮೊದಲನೆಯ ಮುನ್ನುಡಿಯನ್ನು ಶಿವಮೂರ್ತಿ ಶಾಸ್ತ್ರಿಗಳು ಬರೆದಿದ್ದಾರೆ. ಎರಡನೆಯ ಮುನ್ನುಡಿಯನ್ನು ವಿ. ಸೀತಾರಾಮಯ್ಯನವರು ಬರೆದಿದ್ದಾರೆ. ಇದನ್ನು ಸಂಪಾದಿಸಿದವರು ವಿದ್ವಾನ್ ಕುರಡಿ ಹನುಮಂತಾಚಾರ್ಯರು ವಿಷ್ನು ವಿವರಗಳ ಈ ಗ್ರಂಥದ ಭಾಹ್ಯ ದರ್ಶನವಾದರೆ, ಕೃತಿಯ ಒಳಹೊಕ್ಕಾಗ ಮೊದಲ ಭಾಗದಲ್ಲಿ ಬರುವ ಲೇಖನಗಳು–

೧. ರೇವಣಸಿದ್ಧನ ಉತ್ಪತ್ತಿಯ ಕಲ್ಪನೆಯ ವಿಕಾಸ ಮತ್ತು ಅವನ ಕಾಲ.

೨. ಹರಿಹರನು ನಿರೂಪಿಸಿದ ರೇವಣಸಿದ್ದೇಶ್ವರನ ಸಮಕಾಲೀನರು.

೩. ಸಿದ್ಧರಾಮೇಶ್ವರನ ಸಂಪ್ರದಾಯ ಯಾವುದು?

೪. ಸಿದ್ಧರಾಮೇಶ್ವರನಿಗೆ ಚೆನ್ನಬಸವೇಶ್ವರನಿಂದ ಶಿವದೀಕ್ಷೆ ಯಾದುದು ಐತಿಹಾಸಿಕವೆ?

೫. ಮಹಾನುಭಾವ ಪಂಥ ಶಿವಾನುಭವ ಪಂಥಗಳ ಹಿನ್ನೆಲೆ.

೬. ವೀರಶೈವರಲ್ಲಿ ಸಾಂಪ್ರದಾಯಿಕ ಭೇದವಿಲ್ಲವೆ?

೭. ಅಲ್ಲಮ ಪ್ರಭು ಮತ್ತು ನಾಥ ಸಂಪ್ರದಾಯ

೮. ಅಲ್ಲಮಪ್ರಭು

೯. ಅಲ್ಲಮನೋ-ಅಲ್ಲಮಯ್ಯನೋ?

೧೦. ಬಸವೇಶ್ವರನು ನಾಥ - ಸಿದ್ಧ ಪಂಥದ ಅನುಯಾಯಿ

೧೧. ವಾದಭೂಮಿ - ಶ್ರೀ ಬಸವೇಶ್ವರ ಪಂಥ ವಿಚಾರ

೧೨. ಬಸವೇಶ್ವರನ ವಂಶಕ್ರಮ

೧೩. ಬಸವ-ಬಿಜ್ಜಳರ ಇತಿಹಾಸದ ಪುನರ್ ವಿಮರ್ಶೆ

೧೪. ಬಸವೇಶ್ವರನೂ ಸ್ತ್ರೀ ಸ್ವಾತಂತ್ರ್ಯವೂ

೧೫. ಸಾವಳಿ ಶಿವಲಿಂಗೇಶ್ವರ ಚರಿತ್ರೆ

೧೬. ವೀರಶೈವ ಸಂಶೋಧನೆ

೧೭. ಶಿವಾನುಭವ ಮಂಟಪವು ಐತಿಹಾಸಿಕವೇ?

೧೮. ಕರ್ನಾಟಕ -ಮಹಾರಾಷ್ಟ್ರದಲ್ಲಿ ಚೈತನ್ಯ ಸಂಪ್ರದಾಯ

ಎರಡನೆಯ ಭಾಗದಲ್ಲಿ:

೧೯. ಹಳಗನ್ನಡ - ಹೊಸಗನ್ನಡ ಐತಿಹಾಸಿಕ ವಿಮೋಚನೆ

೨೦. ನಮ್ಮ ನಾಡು - ನುಡಿಯ ಇತಿಹಾಸ

೨೧. ಕನ್ನಡ ಶಾಸನಗಳ ಅಭ್ಯಾಸ ಮೂರನೆಯ ಭಾಗದಲ್ಲಿ:

೨೨. ಕಂಪಿಲನೂ ಅವನ ಸ್ಥಾನಮಾನವೂ

೨೩. ಮೊದಲನೆಯ ಹರಿಹರರಾಯ

೨೪. ಶ್ರೀ ಚಂದ್ರಲಾ ಪರಮೇಶ್ವರಿ

೨೫. ಪುರುಷಾರ್ಥ ಪ್ರಭೋದ

೨೬. ಹರಿದಾಸರ ಪರಂಪರೆ

೨೭. ಸಾವಸಿಗರು ಕಾಶ್ಮೀರ ದೇಶದ ಬ್ರಾಹ್ಮಣರು

೨೮. ವಸ್ತು ಸಂಗ್ರಹ

ಇಲ್ಲಿ ಬರದಿರುವ ಒಂದೊಂದು ಸಂಶೋಧನಾ ಲೇಖನಗಳೂ ಸಹಿತ ಆಯಾ ವಿಷಯದ ಕುರಿತು ಹೊಸ ಬೆಳಕು, ಚಿಂತನೆಗೆ ಆಸ್ಪದ ನೀಡುತ್ತವೆ. ವಿಷಯ ಪ್ರತಿಪಾದನೆಗಾಗಿ ಲೇಖಕರು ಲಭ್ಯವಿರುವ ಶಾಸನಗಳು ಮತ್ತು ಕೃತಿಗಳನ್ನು ಆಧಾರವಾಗಿಟ್ಟುಕೊಂಡಿದ್ದಾರೆ. ಬರಹ ಅತ್ಯಂತ ಆಳವಾಗಿದ್ದು ಸಂಶೋಧನಾ ಸೂತ್ರಗಳ ಹಿನ್ನೆಲೆಯಲ್ಲಿ ಹೊಸ ಆಕರಗಳನ್ನು ಸಂಗ್ರಹಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದಾರೆ. ಅವರ ಹಲವು ಲೇಖನಗಳಲ್ಲಿ ವಾದ-ವಿವಾದವನ್ನು ಸೃಷ್ಟಿಸುವ ವಿಷಯಗಳಿದ್ದರೂ ಯಾವ ಪೂರ್ವಗ್ರಹಪೀಡಿತ ದೃಷ್ಟಿಯಿಲ್ಲದೆ ಆಕರಗಳ ನಿದರ್ಶನದ ಹಿನ್ನೆಲೆಯಲ್ಲಿ ಚರ್ಚಿಸಲು ರಾಯರು ಹಿಂಜರಿಯಲಿಲ್ಲ. ಉದಾಹರಣೆಗೆ: ರೇವಣಸಿದ್ಧ, ಅಲ್ಲಮ ಪ್ರಭು, ಬಸವೇಶ್ವರ ಕುರಿತ ಲೇಖನಗಳನ್ನು ನೋಡಬಹುದು.

ಅದೇ ರೀತಿಯಾಗಿ, ವೀರಶೈವರಲ್ಲಿ ಸಂಪ್ರದಾಯಿಕ ಭೇದವಿಲ್ಲವೆ? ಶಿವಾನುಭವ ಮಂಟಪವು ಐತಿಹಾಸಕವೆ? ಬಸವ - ಬಿಜ್ಜಳರ ಇತಿಹಾಸದ ಪುರರ್ ವಿಮರ್ಶೆಗಳ, ಹರಿದಾಸರ ಪರಂಪರೆ ಮುಂತಾದ ಲೇಖನಗಳು ಅವರ ಅಪಾರ ದೂರದೃಷ್ಟಿ ಸಂಶೋಧನೆಯ ಫಲವಾಗಿ ಸೃಷ್ಟಿಗೊಂಡಿವೆ. ನಮ್ಮ ನಾಡ - ನುಡಿಯ ಇತಿಹಾಸ 1942ರಲ್ಲಿ ಪ್ರಕಟಗೊಂಡ ಲೇಖನವಾಗಿದ್ದು ರಾಯಚೂರು ಮತ್ತು ಕಲಬುರ್ಗಿ ಜಿಲ್ಲೆಗಳ ಕನ್ನಡ ಸಾಂಸ್ಕೃತಿಕ ಪರಂಪರೆಯನ್ನು ವಿವರಿಸಿದ್ದಾರೆ. ಶ್ರೀ ಚಂದ್ರಲಾ ಪರಮೇಶ್ವರಿ ಲೇಖನದಲ್ಲಿ ಸನ್ನತಿ ಕ್ಷೇತ್ರದ ಪ್ರಾಚೀನ ಅವಶೇಷಗಳ ಪೂರ್ಣ ವಿವರಗಳು ಲಭ್ಯವಾಗುತ್ತವೆ. ಹೀಗೆ ಇಲ್ಲಿರುವ ಪ್ರತಿಯೊಂದು ಲೇಖನವು ಕಪಟರಾಳರಲ್ಲಿರುವ ಆಳವಾದ ಅಧ್ಯಯನ, ಐತಿಹಾಸಿಕ ಪ್ರಜ್ಞೆಯ ದ್ಯೋತಕವಾಗಿ ನಿಲ್ಲುತ್ತವೆ.

ಹಲವು ವಿಮರ್ಶಕರ ಅಭಿಪ್ರಾಯದಂತೆ ಈ ಕೃತಿಯ ಇತಿಹಾಸ ಸಂಶೋಧಕರಿಗೊಂದು ಕೈದೀವಟಿಗೆ.

**ಸುರಪುರ ಸಂಸ್ಥಾನದ ಇತಿಹಾಸ**

'ಸುರಪುರ ಸಂಸ್ಥಾನದ ಇತಿಹಾಸ' ಕೃತಿಯು ಅತ್ಯಂತ ಮೌಲಿಕ ಸಂಶೋಧನಾ ಕೃತಿಯಾಗಿದೆ. ಈ ಪುಸ್ತಕದ ಪ್ರಕಾಶಕರು ಮಂಜುನಾಥ ಪ್ರಕಾಶಕನ, ರಾಜಾಜಿನಗರ ಬೆಂಗಳೂರು.1977ರಲ್ಲಿ ಪ್ರಥಮ ಮುದ್ರಣ ಪ್ರಕಟವಾಗಿದೆ. ಸುರಪುರ ಸಂಸ್ಥಾನ ವಂಶಸ್ಥರು ಮತ್ತು ಮಾಜಿ ಲೋಕಸಭಾ ಸದಸ್ಯ ರಾಜಾ ವೆಂಕಟಪ್ಪನಾಯಕ ಅವರು ಈ ಪುಸ್ತಕಕ್ಕೆ ಮೊದಲ ಮಾತುಗಳನ್ನು ಬರೆದು ಕಪಟರಾಳರ ಕಾರ್ಯವನ್ನು, ಅವರ ಸಂಶೋಧನಾ ರೀತಿಯನ್ನು ಪ್ರಶಂಸಿಸಿದ್ದಾರೆ. ಆಗ ಕರ್ನಾಟಕ ಗೃಹ ನಿರ್ಮಾಣ ಮಂಡಳಿಯ ಮುಖ್ಯ ಇಂಜಿನಿಯರರಾಗಿದ್ದ ಆರ್. ಸಿದ್ದಯ್ಯನವರು ಸುರುಪುರ ಇತಿಹಾಸದ ಬಗ್ಗೆ ಆಸಕ್ತಿ ಇದ್ದವರು. ಆ ಸಂಸ್ಥಾನದ ಬಗ್ಗೆ ಹೆಚ್ಚಿನ ಇತಿಹಾಸ ತಿಳಿಯುವ ಕುತೂಹಲದಿಂದ ಕಪಟರಾಳ ಕೃಷ್ಣರಾವ ಅವರನ್ನು ಭೆಟ್ಟಿಯಾದಾಗ 'ಸುರಪುರ ಸಂಸ್ಥಾನದ ಇತಿಹಾಸ'ದ ಹಸ್ತಪ್ರತಿಯನ್ನು ಓದಿದರು. ಇಂತಹ ಅಪೂರ್ವ ಸಂಶೋಧನಾ ಕೃತಿ 40 ವರ್ಷಗಳಿಂದ ಪ್ರಕಟವಾಗದೆ ಇದ್ದದ್ದು ಕಂಡು ಪ್ರಕಟಿಸಲು ಮುಂದಾದರು. ಕುರ್ಡಿ ಹನುಮಂತಾಚಾರ್ಯರ ಸಹಕಾರದಿಂದ ಪ್ರಕಟಿಸಿದರು. ಈ ಎಲ್ಲ ವಿಚಾರಗಳನ್ನು ಪ್ರಕಾಶಕರೇ ತಮ್ಮ 'ಪ್ರಕಾಶನದ ನುಡಿ'ಯಲ್ಲಿ ಹೇಳಿದ್ದಾರೆ.

ಒಟ್ಟು 285ಪುಟಗಳ ಈ ಪುಸ್ತಕ ಇಡಿಯಾಗಿ 'ಸುರಪುರ ಸಂಸ್ಥಾನದ ಇತಿಹಾಸ 'ದರ್ಶನವನ್ನು ಓದುಗರಿಗೆ ಮಾಡಿಕೊಡುತ್ತದೆ. 12 ಪ್ರಕರಣಗಳ ಮೂಲಕ ಲೇಖಕರು 'ಸುರಪುರ ಸಂಸ್ಥಾನದ ಇತಿಹಾಸವನ್ನು' ಅಮೂಲ್ಯ ದಾಖಲೆಗಳ ಸಹಿತ ಹಿಡಿದಿದ್ದಾರೆ.

(೧) ವಂಶ ಪರಂಪರೆ (೨) ಗಡ್ಡಿ ಪಿಡ್ಡನಾಯಕ (೩) ಹಸರಂಗಿ ಪಾಮನಾಯಕ (೪) ಪೀತಾಂಬರ ಬಹಿರಿ ಪಿಡ್ಡನಾಯಕ (೫) ಇಮ್ಮಡಿ ಪಾಮನಾಯಕ (೬) ಮೊಂಡಗ್ಯೆ ವೆಂಕಟಪ್ಪನಾಯಕ (೭) ಮುಮ್ಮಡಿ ಪಾಮನಾಯಕ (೮) ಇಮ್ಮಡಿ ವೆಂಕಟಪ್ಪನಾಯಕ (೯) ಮುಮ್ಮಡಿ ಪಿಡ್ಡನಾಯಕ (೧೦) ಮುಮ್ಮಡಿ ವೆಂಕಟಪ್ಪನಾಯಕ (೧೧) ಕೃಷ್ಣಪ್ಪನಾಯಕ (೧೨) ನಾಲ್ವಡಿ ವೆಂಕಟಪ್ಪನಾಯಕ – ಹೀಗೆ ೧೨ ಪ್ರಕರಣ ಅಲ್ಲದೆ ಡೋಲರನ ಅಧಿಕ ಮಾತುಗಳು, ಉಪಸಂಹಾರವಲ್ಲದೆ ಅನುಬಂಧದಲ್ಲಿ ಸುರಪುರ ಸಂಸ್ಥಾನದ ವಂಶವಾಹಿನಿಯ ಪೂರ್ಣ ವಿವರಗಳನ್ನು ಕೊಟ್ಟಿದ್ದಾರೆ.

'ವಂಶಪರಂಪರೆ'ಪ್ರಕರಣದಲ್ಲಿ ಸುರಪುರ ಸಂಸ್ಥಾನದ 14 ತಲೆಮಾರುಗಳ ವಂಶಸ್ಥರ ಪಟ್ಟಿಯನ್ನು ನೀಡಲಾಗಿದೆ. ಇತಿಹಾಸದ ವಿಷಯದ ವಿವರಣೆಯಲ್ಲಿಕಪಟರಾಳರು ಬಳಸಿದ ಭಾಷೆ, ಶೈಲಿ ಅತ್ಯಂತ

ಸರಳ ಸಾಮಾನ್ಯ ಓದುದರಿಗೂ ಅರ್ಥವಾಗುವಂತಹದ್ದು. ಉದಾಹರಣೆಗೆ - "ಸುರಪುರ ಸಂಸ್ಥಾನದ ಅರಸರಿಗೆ 'ಗೋಸಲ'ವಂಶದವರೆಂದು ಕರೆಯುವ ರೂಢಿ ಇದೆ. ಗೋವುಗಳನ್ನು ಸಲಹುತ್ತಿದ್ದರಿಂದ ಇವರಿಗೆ 'ಗೋಸಲ' ದವರೆಂದು ಹೆಸರು. ಈ ಅರಸರ ಪೂರ್ವಜರು ದಕ್ಷಿಣದಿಂದ ಬಂದವರೆಂದು ಐತಿಹ್ಯವಿದೆ. ಮೂಲಪುರುಷನು ನರಸಿಂಹನಾಯಕ. ಇವನ ಮಗ ವೀರಭೊಮ್ಮನಾಯಕ, ಮಗ ಸಿಂಗಪ್ಪನಾಯಕ, ಮಗ ಬಡೊರ ನಾಯಕ, ಇವನ ಮಗ ಕಲ್ಲಪ್ಪನಾಯಕನು. ಇವರೆಲ್ಲ ಸಾರಂಗಕೊಳ್ಳ ಮುಂತಾದ ಸ್ಥಳಗಳಲ್ಲಿ ಇರುತ್ತಿದ್ದು ಅಲ್ಲಲ್ಲಿಯ ದೇಶಗತಿಯನ್ನು ಮಾಡಿತ್ತಿದ್ದರೆಂದು ಪ್ರಾಚೀನ ಕೈಫಿಯತ್ತುಗಳಿಂದ ತಿಳಿದು ಬರುತ್ತದೆ". (ಪ್ರಕರಣ ೧. ವಂಶಪರಂಪರೆ, ಪುಟ.೧)

ವಂಶಪರಂಪರೆ ಪ್ರಕರಣದಲ್ಲಿಸಂಸ್ಥಾನದ ರಾಜವಂಶದ 16 ತಲೆಮಾರುಗಳ ವಿವರಗಳಿವೆ. ಬಡೊರ ನಾಯಕನ ಮಗನಾದ ಕಲ್ಲಪ್ಪ ನಾಯಕನಿಂದ ಮನೆತನದ ಇತಿಹಾಸದ ಆರಂಭದಿಂದ ಸಂಸ್ಥಾನದ ಕೊನೆಯ ಅರಸ ವೆಂಕಟಪ್ಪನಾಯಕನ ಕಾಲದವರೆಗಿನ ವಂಶಾವಳಿ ವಿವರಗಳು ಇಲ್ಲಿವೆ. ಮುದಗಲ್ಲಿನ ಕಿಲ್ಲೇದಾರ ಮುಸ್ತಾಖಾನ್ ಎಂಬಾತನು ಕಲ್ಲಪ್ಪನಾಯಕನನ್ನು ಮುದಗಲ್ಲಿಗೆ ಕರಿಸಿದನು. ಈ ನಾಯಕನಿಗೆ ಏಳು ಜನ ಮಕ್ಕಳು. ಹಿರಿಯ ಮಗ ಹನುಮಪ್ಪನಾಯಕ ಕೊಡೋಕಲ್ ದೇಶಗತಿ ಪಡೆದನು. ಈತನ ಸಂತತಿಯವರೇ ಈಗಿನ ಕೊಡೇಕಲ್ ದೊರೆಗಳು. ಎರಡನೆಯ ಮಗ ಇಮ್ಮಡಿ ಹನುಮಪ್ಪನಾಯಕ ಸೊಂಡೂರು ಅಲ್ಲಿಂದ ಕೋಸಗಿ ದೇಶಗತಿ ಹೊಂದಿ ಅಲ್ಲೇ ನೆಲೆಸಿದ. ಆದವಾನಿ ಸಮೀಪದ ಕೊಸಗಿಯಲ್ಲಿಈಗಲೂ ಈತನ ವಂಶದವರು ಇದ್ದಾರೆ. ಮೂರನೆಯ ಮಗ ಮುಮ್ಮಡಿ ಹನುಮಪ್ಪನಾಯಕ ಬೀದರ ಕೊಡೆಯತ್ತ ಹೋಗಿದ್ದು ಈತನ ಕುರಿತು ಹೆಚ್ಚಿನ ವಿವರಗಳು ಲಭ್ಯವಿಲ್ಲ ಎಂಬುವುದನ್ನು ಲೇಖಕರು ಒಪ್ಪಿಕೊಂಡಿದ್ದಾರೆ 4, 5 ಮತ್ತು 6ನೆಯ ಮಕ್ಕಳು ಕೌಲಗಿ, ನಿಡಗುಂದಿ, ಕೆರೂರ ಮತ್ತು ದಕ್ಷಿಣದ ಭಾಗಕ್ಕೆ ತೆರಳಿ ನೆಲೆಸಿದರೆ ಏಳನೆಯ ಮಗ ಚಿನ್ನ ಹಣಮನಾಯಕ ಕಕ್ಕೇರಿಯಲ್ಲಿ ನೆಲೆಸಿದ. ಈತನ ವಂಶಜರೆ ಸುರಪುರ ಹಾಗೂ ಗುಡಗುಂಚಿ ಸಂಸ್ಥಾನಗಳ ಮೂಲ ಪುರುಷರು. ದೊರೆತಿರುವ ಮರಾಠಿ ಕೈಫಿಯತ್ತುಗಳಿಂದ ಸುರಪುರ ಸಂಸ್ಥಾನದ ಮೂಲ, ವಿಜಾಪುರ ಬಾದಶಾಹ ಯುಸುಫ ಆದಿಲಶಾಹ ಮತ್ತು ಕೃಷ್ಣದೇವರಾಯನ ಕಾಲದವರೆಗೆ ಸಂಬಂಧ ಇರುವ ವಿಷಯವನ್ನು ಕಪಟರಾಳರು ಇದರಲ್ಲಿ ಬಹಿರಂಗಗೊಳಿಸಿದ್ದಾರೆ.

ಮುಂದಿನ ಪ್ರಕರಣಗಳು ಆಯಾ ದೊರೆಗಳ ಬದುಕಿನ ವಿವರಗಳು, ಪ್ರಮುಖ ಘಟನೆಗಳು, ಅವರ ರಾಜಕೀಯ ಸಾಧನೆ, ಆಡಳಿತ ವೈಖರಿ - ಈ ಎಲ್ಲ ವಿವರಗಳನ್ನು ಲೇಖಕರು ಇಸ್ವಿಗಳು ಸಹಿತ ನೀಡಿರುವುದು ಅವರ ಐತಿಹಾಸಿಕ ಪ್ರಜ್ಞೆಗೆ ಹಿಡಿದ ಕನ್ನಡಿಯಾಗಿದೆ.

**ಲಾಕುಳ ಶೈವರ ಇತಿಹಾಸ**

ಕಪಟರಾಳರ ಈ ಗ್ರಂಥವು ಲಾಕುಳ ಶೈವ ಪಂಥದ ಬಗ್ಗೆ ತಮ್ಮದೆ ಆದ ಹೊಸ ವಿಚಾರಗಳನ್ನು ಓದುಗನ ಮನಕ್ಕೆ ಮುಟ್ಟಿಸುತ್ತದೆ. ಲಾಕುಳ ಶೈವ ಪಂಥ'ದ ಉಗಮ-ವಿಕಾಸಗಳ ವಿವರಗಳೊಂದಿಗೆ ಶೈವ ಸಂಪ್ರದಾಯಕ್ಕೂ ಲಾಕುಳಕ್ಕೂ ಇರುವ ಸಂಬಂಧದ ವಿವಿಧ ಮುಖಗಳನ್ನು ಎತ್ತಿತೋರಿಸುತ್ತದೆ. ಕಪಟರಾಳರ ದೃಷ್ಟಿ ಸಂಶೋಧನೆಯದು. ಆದ್ದರಿಂದ ಲಾಕುಳ ಶೈವದ ಆಳವಾದ ವಿಚಾರಗಳು ಇಲ್ಲಿ ಒಡಗೂಡಿವೆ. ಮುಂದೆ ಬರುವ ವೀರಶೈವ ಸಂಪ್ರದಾಯವು ಮೂಲತಃ ಲಾಕುಳ ಶೈವದ ಪ್ರತಿನಿಧಿಯಾಗಿದೆ ಎನ್ನುವುದನ್ನು ಅವರು ಪ್ರತಿಪಾದಿಸುತ್ತಾರೆ. ಲಾಕುಳಶೈವರಿಗೂ ಶೈವ ಸಂಪ್ರದಾಯಕ್ಕೂ ಇರುವ ಸಾಮ್ಯಗಳನ್ನು ಮತ್ತು ಭಿನ್ನತೆಗಳನ್ನು ಈ ಕೃತಿಯಲ್ಲಿ ಹಿಡಿದಿದ್ದಾರೆ. ಲಾಕುಳ ಶೈವರ ಇತಿಹಾಸ ಕುರಿತ ಕೃಷ್ಣರಾಯರ ಈ ಕೃತಿ ನಮ್ಮಿಂದ ಕಣ್ಮರೆಯಾಗುತ್ತಿರುವ ಪಂಥವೊಂದರ ವಿಸ್ತಾರವಾದ ಮುಖದರ್ಶನವನ್ನು ನಮಗೆ ಮಾಡಿ ಕೊಡುತ್ತದೆ.

ಕೃಷ್ಣರಾಯರು ಬರೆದದ್ದು ಸಂಖ್ಯಾದೃಷ್ಟಿಯಿಂದ ಕಡಿಮೆಯಾಗಿದ್ದರೂ ಸಂಶೋಧನಾ ದೃಷ್ಟಿಯಿಂದ ಅತ್ಯಂತ ಪ್ರಮುಖವಾದ ಬರವಣಿಗೆಯನ್ನು ಕಾಣಿಕೆಯಾಗಿ ನೀಡಿದ್ದಾರೆ. ಇವರ ಕೃತಿಗಳು ಮುಂಬರುವ ಸಂಶೋಧಕರಿಗೆ ಮಾರ್ಗದರ್ಶಿಗಳಾಗಿ ಇತಿಹಾಸದ ಮೇಲೆ, ಸಂಶೋಧನೆಯ ಬಗ್ಗೆ ಇವರಿಗಿರುವ ಅಗಾಧ ಪ್ರೀತಿಯನ್ನು ನಾವು ಇವರ ಕೃತಿಗಳ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಬಹುದು. ನಿಖರವಾದ ಅಭಿಪ್ರಾಯ, ಸ್ಪಷ್ಟವಾದ ಮಾತುಗಳು ಜೊತೆಗೆ ಯಾವುದೇ ಮತಧರ್ಮಗಳ ಬಗ್ಗೆ ನಿರ್ಮತ್ಸರವಾದ ಮನೋಭಾವವನ್ನು ನಾವು ಕಪಟರಾಳರ ಕೃತಿಗಳಿಂದ ಕಂಡುಕೊಳ್ಳ ಬಹುದಾಗಿದೆ. ಶರಣರೆ ಇರಲಿ, ಹರಿದಾಸರೆ ಇರಲಿ ಅವರ ದೃಷ್ಟಿ ಶುದ್ಧ ಸಂಶೋಧನೆಯದು. ಆಕರ ರಹಿತವಾದ ಯಾವುದೆ ವಿಷಯವನ್ನು ಪ್ರಸ್ತಾಪಿಸಲಾಗದಂತಹ ತೀಕ್ಷ್ಣವಾದ ಮನೋಭಾವವನ್ನು ಕಾಣುತ್ತೇವೆ.

ಮೈಸೂರು ಸರಕಾರದ ವಿಶ್ರಾಂತಿ ವೇತನದ ಗೌರವ ಪ್ರಶಸ್ತಿ, ರಾಜ್ಯಸರಕಾರದ ಪ್ರಶಸ್ತಿ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವಕ್ಕೂ ಪಾತ್ರರಾಗಿದ್ದಾರೆ. ಇವರ ಸಂಶೋಧನಾ ಕೃತಿಗಳು ಸಂಶೋಧನಾಸಕ್ತರಿಗೆ ದೊರೆಯುವಂತಹ ಪರಿಸ್ಥಿತಿ ಇಲ್ಲ ಮರುಮುದ್ರಣದ ಅವಶ್ಯಕತೆ ಇದೆ. ಕಪಟರಾಳರು ಸಂಶೋಧನಾ ಕ್ಷೇತ್ರದಲ್ಲಿ ದುಡಿಯುವಾಗ ಸರಕಾರ ಮತ್ತು ಸಮಾಜದಿಂದ ಯಾವುದೆ ಅನುಕೂಲಗಳು ಇರದಂತಹ ಅವಧಿ ಎಂಬುದನ್ನು ನಾವು ಗಮನಿಸಿದಾಗ, ಆ ಕಾಲದಲ್ಲಿ ಕನ್ನಡ ಸಂಸ್ಕೃತಿ, ಭಾಷೆ ಮತ್ತು ಸಂಶೋಧನಾ ಕ್ಷೇತ್ರಕ್ಕೆ ಕೃಷ್ಣರಾಯರು ಸಲ್ಲಿಸಿದ ಸೇವೆ ಅತ್ಯಂತ ಮಹತ್ವಪೂರ್ಣವಾದದ್ದು ಎಂದು ಹೇಳಬಹುದಾಗಿದೆ.

❑

# ಎ.ಆರ್. ಕೃಷ್ಣಶಾಸ್ತ್ರೀ

ಸಾ. ಗೀತಾಚಾರ್ಯ

ಪ್ರೊ|| ಕೃಷ್ಣಶಾಸ್ತ್ರಿಗಳ ಬಹುಮುಖ ವ್ಯಕ್ತಿತ್ವದ, ಬಹುಮುಖ ಪ್ರತಿಭೆಯ ಜೀವನವೇ ಒಂದು ಪವಾಡ ಸದೃಶವಾದದ್ದು. ಅವರು ಬಾಳಿದ ಜೀವನಮೌಲ್ಯಗಳು ಇಂದಿನ ಸಮಾಜದಲ್ಲಿ ಕಾಣಸಿಗುವಂಥವುಗಳಲ್ಲ. ಪ್ರಾಯಶಃ ಹತ್ತೊಂಬತ್ತನೆಯ ಶತಮಾನದ ಆ ಕೊನೆಯ ದಶಕಗಳೇ ಅಂತಹುದೇನೋ ಎನಿಸುತ್ತದೆ. ಆಗಿನ ಹಲವಾರು ಮಹನೀಯರು ಬದುಕಿನ ಬೆಲೆಯನ್ನು ಅರಿತು ಅದಕ್ಕೆ ತಕ್ಕಂತೆ ಬಾಳಿ ತಮ್ಮ ಜೀವನವನ್ನು ಸಾರ್ಥಕಮಾಡಿಕೊಂಡದ್ದೇ ಅಲ್ಲದೆ ಸಮಾಜದ ಮೌಲ್ಯಗಳಿಗೂ ನಿದರ್ಶನಗಳಾಗಿ ನಿಂತರು.

ಎ.ಆರ್.ಕೃ. ಅವರು ಹನ್ನೆರಡನೇ ಫೆಬ್ರವರಿ ಸಾವಿರದ ಎಂಟುನೂರ ತೊಂಬತ್ತರಂದು ಚಿಕ್ಕಮಗಳೂರು ಜಿಲ್ಲೆಯ ಅಂಬಳೆಯಲ್ಲಿ ರಾಮಕೃಷ್ಣ ಶಾಸ್ತ್ರಿಗಳು ಮತ್ತು ಶಂಕರಮ್ಮನವರ ಮೊದಲನೆಯ ಮಗನಾಗಿ ಜನಿಸಿದರು. ಇವರಿಗೆ ಮೂರು ಜನ ತಂಗಿಯರು ಮತ್ತು ಒಬ್ಬ ತಮ್ಮನನ್ನು ಕೊಟ್ಟ ತಾಯಿ ಖಾಯಿಲೆಗೆ ತುತ್ತಾಗಿ ಅಸುನೀಗಿದ ಮೇಲೆ 10 ವರ್ಷದ ಬಾಲಕ ಕೃಷ್ಣಶಾಸ್ತ್ರಿಯವರ ಮೇಲೆ ಸಂಸಾರದ ಭಾರ ಬಿತ್ತು. ತಂದೆಯವರು ಮೈಸೂರಿನಲ್ಲಿ ಮೂವತ್ತು ರೂಪಾಯಿಗಳ ಮಾಸಾಶನದಿಂದ ಸಂಸಾರ ನಡೆಸುತ್ತಿದ್ದುದರಿಂದ ಬಡತನದಲ್ಲೇ ಬೆಳೆದರು. ಅದು ಸಾಲದೆಂಬಂತೆ ಬಾಲ್ಯದಲ್ಲೇ ಮೂವರೂ ತಂಗಿಯರನ್ನು ಕಳೆದುಕೊಂಡ ದುಃಖವೂ ಸೇರಿತ್ತು. ಆದರೆ ವಿದ್ಯೆಗೆ ಬಡತನವಿರಲಿಲ್ಲ. ಮೈಸೂರಿನಲ್ಲಿ ಸಂಸ್ಕೃತ ಪಾಠಶಾಲೆಯ ಪ್ರಾಚಾರ್ಯರೂ, ಘನ ವ್ಯಾಕರಣ ಪಂಡಿತರೂ ಆಗಿದ್ದ ತಂದೆಯವರೇ ಕೃಷ್ಣಶಾಸ್ತ್ರಿಗಳಿಗೆ ಪ್ರಥಮ ವಿದ್ಯಾಗುರುಗಳು. ಪ್ರತಿದಿನ ಮಗನಿಗೆ ಮರಳಮೇಲೆ ಅಕ್ಷರ ಬರೆದು ಪಾಠಶಾಲೆಗೆ ಹೋದರೆ ಬರುವ ವೇಳೆಗೆ ಅದನ್ನು ತಿದ್ದಿ ಕಲಿತು ತಂದೆಯಿಂದಲೇ ಕಾಸಿನ ಬಹುಮಾನ ಗಿಟ್ಟಿಸುತ್ತಿದ್ದರು. ಈ ಬಹುಮಾನದ ಪರಂಪರೆ ಬದುಕಿನಾದ್ಯಂತ ಮುಂದುವರಿಯಿತು. ವೆಸ್ಲಿ ಮಿಷನ್ ಹೈಸ್ಕೂಲಿನಲ್ಲೂ ಸರ್ವಪ್ರಥಮರಾಗಿ ಸ್ಕಾಲರ್‌ಷಿಪ್ ಗಿಟ್ಟಿಸಿದ್ದರು. ತಂದೆಯವರಿಂದ ಬಂದ ಒಂದೇ ಒಂದು ಆಸ್ತಿಯೆಂದರೆ ಈ ವಿದ್ಯೆ.

ಕೃಷ್ಣಶಾಸ್ತ್ರಿಗಳು ಲೋಯರ್ ಸೆಕೆಂಡರಿಯಲ್ಲಿ ಓದುತ್ತಿರುವಾಗಲೆ ಹತ್ತು ವರ್ಷದ ವೆಂಕಟಲಕ್ಷ್ಮಿಯವರನ್ನು ವಿವಾಹವಾಗಬೇಕಾಯಿತು. ಇದರಿಂದ ಇನ್ನೇನಿಲ್ಲದಿದ್ದರೂ ಅಡುಗೆ ಕೆಲಸ ತಪ್ಪಿ ಓದಲು ಸ್ವಲ್ಪ ಬಿಡುವಾದಂತಾಯಿತು. ಆ ವೇಳೆಗಾಗಲೇ ವಿಜ್ಞಾನ ಕ್ಷೇತ್ರದ ಬಗೆಗೆ ಆಸಕ್ತಿ ಬೆಳೆಯುತ್ತಿದ್ದು ಸಹಜವಾಗಿ ತಾವೂ ಅತ್ತ ಒಲಿದಿದ್ದರು. ಆದರೆ ತಂದೆಯವರ ಆರ್ಥಿಕ ಪರಿಸ್ಥಿತಿಯ ಕಾರಣ ಬೆಂಗಳೂರಿಗೆ ಹೋಗಿ ವಿಜ್ಞಾನವನ್ನು ಕಲಿಯುವುದು ದುಸ್ಸಾಧ್ಯವಾಯಿತು. ಈ ಅಸಹಾಯಕ ಸ್ಥಿತಿಯಲ್ಲಿ ಅನಿವಾರ್ಯವಾಗಿ ಹೆಚ್ಚು ಖರ್ಚಿಲ್ಲದ ಕನ್ನಡ ಮತ್ತು ಸಂಸ್ಕೃತಗಳಲ್ಲಿ ತಮ್ಮ ವಿದ್ಯಾಭ್ಯಾಸ ಮುಂದುವರಿಸಿದರು. 1914ರಲ್ಲಿ ಬಿ.ಎ. ಪದವಿ ಪಡೆದರು.

ನಂತರ ಎ.ಆರ್.ಕೃ. ಅವರು ಖಾಸಗಿಯಾಗಿ ಮದ್ರಾಸಿನಿಂದ ಕನ್ನಡ ಎಂ.ಎ. ಮಾಡಿ ಕೆಲವು ಕಾಲ ಅಠಾರ ಕಚೇರಿಯಲ್ಲಿ ಕೆಲಸಮಾಡಿದರು. 1916ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಟ್ಯೂಟರ್ ಆಗಿ ನೇಮಕವಾಗುವುದರ ಮೂಲಕ ಅಧ್ಯಾಪಕ ವೃತ್ತಿಗೆ ಪಾದಾರ್ಪಣ ಮಾಡಿದರು. ಕೆಲವು ಕಾಲ ಓರಿಯಂಟಲ್ ಲೈಬ್ರರಿಯಲ್ಲಿ ಕೆಲಸಮಾಡಿ ಮತ್ತೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲೂ, 1939ರಿಂದ ನಿವೃತ್ತಿಯವರೆಗೆ ಮೈಸೂರಿನ ಮಹಾರಾಜ ಕಾಲೇಜಿನಲ್ಲೂ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿದರು. ಬಾಲ್ಯದಿಂದಲೂ ಬಡತನಕ್ಕಿಂತ ಹೆಚ್ಚಾಗಿ ದುಃಖ ದುಮ್ಮಾನಗಳ ನಡುವೆಯೇ ಬೆಳೆದ ಕೃಷ್ಣಶಾಸ್ತ್ರಿಗಳಿಗೆ ತಮ್ಮ ಸಂಸಾರದಲ್ಲಿಯೂ ಅದು ಕಟ್ಟಿಟ್ಟ ಬುತ್ತಿಯಾಗಿತ್ತು. ಶಾಸ್ತ್ರಿಗಳು ನಾಲ್ಕು ಜನ ಹೆಣ್ಣುಮಕ್ಕಳ ಮತ್ತು ಒಂದು ಗಂಡುಮಗುವಿನ ತಂದೆಯಾಗಿದ್ದರೂ ಗಂಡುಮಗು ವರ್ಷಾವಧಿಯಲ್ಲಿಯೇ ಇಲ್ಲವಾಯಿತು. ಮೂರನೆಯ ಮಗಳು 18ನೇ ವರ್ಷದಲ್ಲಿ ಅಸುನೀಗಿದಳು. ಈ ನೋವು ಶಾಸ್ತ್ರಿಗಳನ್ನು ಕಾಡಿತು. ಮಾನಸಿಕವಾಗಿ ತುಂಬ ಬಳಲಿದರು. ಶ್ರೀಪತಿಯ ಕಥೆಗಳಲ್ಲಿ ಈ ತೊಳಲಾಟವನ್ನು ಗುರುತಿಸಲು ಸಾಧ್ಯವಿದೆ. ಇದೇ ಬೇಸರದಲ್ಲಿ ಇನ್ನೂ ಕೆಲವು ವರ್ಷಗಳ ಸೇವಾ ಅವಧಿ ಇದ್ದರೂ ಸ್ವ ಇಚ್ಛೆಯಿಂದ ನಿವೃತ್ತರಾದರು. ಇದು ಸರ್ಕಾರಿ ಸೇವೆಯಿಂದ ನಿವೃತ್ತಿಯೇ ವಿನಾ ಸಾರ್ವಜನಿಕ ಸೇವೆಯಿಂದಲ್ಲ. ಸೇವೆಯಲ್ಲಿರುವಾಗ ಎಷ್ಟು ಚಟುವಟಿಕೆಯಿಂದಿದ್ದರೊ ಅದಕ್ಕಿಂತ ಹೆಚ್ಚು ಚಟುವಟಿಕೆಗಳನ್ನು ನಿವೃತ್ತಿ ವಯಸ್ಸಿನಲ್ಲಿ ಇಟ್ಟುಕೊಂಡರು. ಸೇವೆಯಲ್ಲಿರುವಾಗಲೆ ಧರ್ಮಾಮೃತ, ಭಾಸಕವಿ, ಸಂಸ್ಕೃತ ನಾಟಕಗಳನ್ನು ಪ್ರಬುದ್ಧ ಕರ್ನಾಟಕದ ಸಂಪಾದನೆಯ ನಡುವೆಯೂ ಸಮರ್ಥವಾಗಿ ಮಾಡಿದ್ದವರು. ಸೇವಾನಂತರ ಈ ಕಾರ್ಯಗಳಿಗಾಗಿಯೇ ಇಡೀ ಕಾಲವನ್ನು ಮೀಸಲಿಟ್ಟರು. ವಚನಭಾರತ, ಕಥಾಮೃತ, ಬಂಕಿಮಚಂದ್ರ ಮುಂತಾದ ಬೃಹತ್ ಕೃತಿಗಳನ್ನು ಈ ವಿಶ್ರಾಂತ ಜೀವನದಲ್ಲೇ ಬರೆದರು. ನಿಬಂಧಮಾಲಾ ಬರೆಯುತ್ತಿದ್ದಾಗ ಕೃಷ್ಣಶಾಸ್ತ್ರಿಗಳಿಗೆ ಎಪ್ಪತ್ತೈದು ವರ್ಷವಾಗಿತ್ತು. ಇವುಗಳ ರಚನೆಗೆ ಬೇಕಾಗಿದ್ದ ಪೂರಕ ಅಧ್ಯಯನ, ಸಾಮಗ್ರಿ ಸಂಗ್ರಹಣೆ ಮುಂತಾದ ನಿರಂತರ ಶ್ರಮದಿಂದ ವಾಸ್ತವವಾಗಿಯೂ ಶಾಂತಿ ಬಯಸುತ್ತಿದ್ದ ಶರೀರ ಮತ್ತು ಮನಸ್ಸುಗಳೆರಡೂ ಜರ್ಜರಿತವಾದವು. ಶಾಸ್ತ್ರಿಗಳು ಸಹಜವಾಗಿ ಕುಗ್ಗಿದರು, ಕೊರಗಿದರು, ತುಂಬ ಬಳಲಿದರು. ಇದೇ ಸ್ಥಿತಿಯಲ್ಲೇ ಒಂದು ಅಪಘಾತವೂ ಆಗಿ ಹಾಸಿಗೆಯಿಂದ ಮೇಲೇಳಲಾಗದೆ ಸಹಿಸಲಾಗದ ನೋವನ್ನುಂಡರು. ಕೊನೆಗೆ ಒಂದನೇ ಫೆಬ್ರವರಿ 1968ರಲ್ಲಿ ಇಹಲೋಕವನ್ನು ತ್ಯಜಿಸಿದರು. ಹೊಸಗನ್ನಡ ಉದ್ಯಾನವನದಲ್ಲಿ ಮೊದಲಬಾರಿಗೆ ನಕ್ಕು ನಲಿಯುತ್ತಿದ್ದ ಕೆಲವೇ ಹೂಗಳಲ್ಲಿ ಒಂದು ಬಾಡಿತು. ಹತ್ತಾರು ಹೂ ಗಿಡಗಳಿಗೆ ಆಸರೆಯಾಗಿ, ನೂರಾರು ಹೂಗಳನ್ನು ಕನ್ನಡಕ್ಕೆ ನೀಡುತ್ತ ಕಂಗೊಳಿಸುತ್ತಿದ್ದ ಈ ಹೂವು ಬಾಡಿತಾದರೂ ಇವರು ಪೋಷಿಸಿ ಬೆಳೆಸಿದ ಗಿಡಗಳು ಇಂದಿಗೂ ಬೆಳೆಯುತ್ತಿವೆ; ಇನ್ನಷ್ಟು ಗಿಡಗಳನ್ನು ಬೆಳೆಸುತ್ತಿವೆ.

ಎ.ಆರ್.ಕೃ. ಅವರ ವ್ಯಕ್ತಿತ್ವ ಅಸಾಧಾರಣೀಯವಾದದ್ದು. ಬಾಲ್ಯದಿಂದ ರೂಢಿಸಿಕೊಂಡು ಬಂದ ವೈದಿಕನಿಷ್ಠ ಸಂಸ್ಕೃತಿಯೊಂದಿಗೆ ಅಧ್ಯಯನದಿಂದ ಮೂಡಿಬಂದ ಸಹಜ ಸ್ವಭಾವಗಳು, ತಂದೆಯವರಿಂದ ಬಳುವಳಿಯಾಗಿ ಬಂದ ಪಾಂಡಿತ್ಯ, ಪ್ರತಿಭೆ, ಪಾರಂಪರಿಕವಾಗಿ ಬಂದ ಮೌಲ್ಯಗಳು ಇವುಗಳೆಲ್ಲದರಿಂದ ಕೃಷ್ಣಶಾಸ್ತ್ರಿಗಳ ವ್ಯಕ್ತಿತ್ವ ಒಂದು ಪೂರ್ಣಕುಂಭವಾಗಿತ್ತು. "ತಿಳಿಮನಸ್ಸು,

ಕಳಕಳಿ, ಪ್ರಾಚ್ಯ ಮತ್ತು ಪಾಶ್ಚಾತ್ಯ ವಿದ್ವತ್ತಿನ ಸುಸ್ಪಷ್ಟ ತಿಳುವಳಿಕೆ, ಅನೇಕ ಭಾಷಾಜ್ಞಾನ, ನಿಷ್ಕೃಷ್ಟ ವ್ಯಾಕರಣಜ್ಞಾನ, ಜೀವನ ಶ್ರದ್ಧೆ, ನಿಷ್ಠೆ, ಸೂಕ್ಷ್ಮ ಸಾಹಿತ್ಯಸಂವೇದನೆ, ಅಗಾಧ ಲೋಕಾನುಭವ, ಆಡಂಬರ ವೈರ" ಇವು ಎ.ಆರ್.ಕೃ. ಅವರ ಲಕ್ಷಣಗಳೆಂದು ಡಾ|| ಕೆ. ಕೃಷ್ಣ ಮೂರ್ತಿಗಳು ಗುರುತಿಸಿದ್ದಾರೆ. ಇವು ಕೇವಲ ಉತ್ಪ್ರೇಕ್ಷೆಯ ಮಾತುಗಳಲ್ಲ, ನಿಜವಾಗಿಯೂ ಇವುಗಳಿಗೆ ಅನ್ವರ್ಥಕವಾಗಿದ್ದವರು ಶಾಸ್ತ್ರಿಗಳು.

ಅವರಿಗೆ ಅದಮ್ಯ ಜೀವನೋತ್ಸಾಹವಿತ್ತು. ಸಹಜ ಆಸಕ್ತಿಯ ಜೊತೆಗೆ ಪರಿಸರವೂ ಅನುಕೂಲಕರವಾಗಿ ಸಂಗೀತ, ಚಿತ್ರಕಲೆ, ನಾಟಕಗಳಲ್ಲೂ ಅಭಿರುಚಿ ಮೂಡಿತ್ತು. ವೀಣೆ ಶೇಷಣ್ಣ, ಕಲಾವಿದ ಕೆ. ವೆಂಕಟಪ್ಪ, ರತ್ನಾವಳಿ, ಶಾಕುಂತಲ ನಾಟಕಗಳು ಇವರಿಗೆ ಅತ್ಯಂತ ಪ್ರಿಯವಾಗಿದ್ದವು.

ಕೃಷ್ಣಶಾಸ್ತ್ರಿಗಳು ಶಿಷ್ಯವಾತ್ಸಲ್ಯಕ್ಕೆ ಪ್ರಿಯರಾದವರು. ಶಿಷ್ಯರನ್ನು ಕೂಡಿಸುತ್ತಿದ್ದುದು ಕನ್ನಡದ ಕೆಲಸಕ್ಕೆ ಕಟ್ಟಾಳುಗಳನ್ನು ತರಬೇತುಗೊಳಿಸುತ್ತಿದ್ದಂತೆ ಕುವೆಂಪು ಫಿಲಾಸಫಿ ಎಂ.ಎ. ತೆಗೆದುಕೊಂಡುದನ್ನು ತಿಳಿದು "....... ನಮಗೀಗ ನಿಮ್ಮಂಥ ವಿದ್ಯಾರ್ಥಿಗಳೇ ಬೇಕಾಗಿದ್ದಾರೆ. ಫಿಲಾಸಫಿಗಿಂತ ಕನ್ನಡಕ್ಕೆ ನಿಮ್ಮ ಅವಶ್ಯಕತೆ ಹೆಚ್ಚು" ಎಂದು ಕನ್ನಡಕ್ಕೆ ಅವರನ್ನು ಒಲಿಸಿದ್ದುದಾಗಲಿ, ಕನ್ನಡ ತರಗತಿಗೆ ಇರುತ್ತಿದ್ದ ಕೆಲವೇ ವಿದ್ಯಾರ್ಥಿಗಳಲ್ಲಿ ಒಬ್ಬಿಬ್ಬರು ತಪ್ಪಿಸಿಕೊಳ್ಳುತ್ತಿದ್ದರೆ ಅವರನ್ನು ಕರೆಸಿ ಯೋಗಕ್ಷೇಮ ವಿಚಾರಿಸಿ ಆರ್ಥಿಕ ತೊಂದರೆಯಿದ್ದಾಗ ತಾವೇ ಫೀಸು ಕೊಟ್ಟು ಕಟ್ಟಿಸಿ 'ಇರುವ ಇಬ್ಬರಲ್ಲಿ ಒಬ್ಬ ಹೀಗೆ ತಲೆತಪ್ಪಿಸಿಕೊಂಡು ತಿರುಗಾಡಿದರೆ ಹೇಗೆ?' ಎಂದು ಜವಾಬ್ದಾರಿಯುತರನ್ನಾಗಿ ಮಾಡಿ ಮುಂದೆ ಅವರು ಮಾಡಬೇಕಾದ ಕೆಲಸ ಬೇಕಾದಷ್ಟಿದೆಯೆಂದು ಮನವರಿಕೆ ಮಾಡಿಕೊಡುತ್ತ ಉಳಿಸಿಕೊಳ್ಳುತ್ತಿದ್ದುದಾಗಲಿ ಇಲ್ಲೆಲ್ಲ ಶಾಸ್ತ್ರಿಗಳ ಶಿಷ್ಯವಾತ್ಸಲ್ಯದ ಜೊತೆಜೊತೆಗೇ ಅವರನ್ನು ತರಬೇತುಮಾಡುತ್ತಿದ್ದ ಕನ್ನಡದ ಕೆಲಸಕ್ಕೆ ಸಜ್ಜುಮಾಡುತ್ತಿದ್ದ ರೀತಿಯೂ ಮನವರಿಕೆಯಾಗದಿರದು.

ಶಾಸ್ತ್ರಿಗಳ ಪಾಂಡಿತ್ಯ ಎಷ್ಟು ಆಳವಾಗಿತ್ತೋ ಅದಕ್ಕೆ ವ್ಯತಿರಿಕ್ತವಾಗಿತ್ತು ಅವರ ಬಾಹ್ಯ ವ್ಯಕ್ತಿತ್ವ. ಸರಳವೂ, ನಿರಾಡಂಬರವೂ ಆದ 'ಲಲಿತ ಸುಂದರ' ಉಡುಗೆ ಅವರದು. ಅಂಚಿರುವ ರೇಷ್ಮೆ ಪಂಚೆ, ಟ್ವೀಡ್‌ಕೋಟು ಮತ್ತು ದೊಡ್ಡಂಚಿನ ಜರತಾರಿ ಮೈಸೂರು ರುಮಾಲು ಇವು ಅವರ ಉಡುಪು. ಎ.ಆರ್.ಕೃ. ಎಂದರೆ ತಕ್ಷಣ ನಮ್ಮ ಮುಂದೆ ನಿಲ್ಲುವ ಚಿತ್ರ ಇದು. ಕೃಷ್ಣಶಾಸ್ತ್ರಿಗಳ ನೀಟಾದ ಆದರೆ ಸರಳವಾದ ಸ್ನೇಹಪರ ವ್ಯಕ್ತಿತ್ವ ಎಲ್ಲರಿಗೂ ಮೆಚ್ಚುಗೆಯಾದುದನ್ನು ಅನೇಕರು ಸ್ಮರಿಸಿದ್ದಾರೆ. ಶಾಸ್ತ್ರಿಗಳ ನಡೆ ನುಡಿಗಳನ್ನು ಅವರ ಉಡುಗೆಯಲ್ಲಿಯೇ ಗುರುತಿಸಬಹುದಾದಷ್ಟರ ಮಟ್ಟಿಗೆ ಅನ್ವರ್ಥವಾಗಿದ್ದರು.

ಎ.ಆರ್.ಕೃ. ಅವರ ಇನ್ನೊಂದು ಮುಖ್ಯಗುಣ ಅವರ ಜಾಗೃತ ಪ್ರಜ್ಞೆ. ಯಾವಾಗಲೂ ಕೃಷ್ಣಶಾಸ್ತ್ರಿಗಳು ಎಚ್ಚರದ ಮನಃಸ್ಥಿತಿಯನ್ನು ಉಳ್ಳವರಾಗಿರುತ್ತಿದ್ದರು. ಮಾಡುವ ಕೆಲಸವಾಗಲಿ, ಆಡುವ ಮಾತಾಗಲಿ ಎಂದೂ ಎಚ್ಚರ ತಪ್ಪುತ್ತಿರಲಿಲ್ಲ. ಅವರ ಯಾವುದೇ ಬರಹದಲ್ಲಿ ಈ ಗುಣವನ್ನು ಕಾಣಬಹುದಾಗಿದೆ. ಒಂದು ಪಾತ್ರವನ್ನು ವರ್ಣಿಸುವಾಗಾಗಲಿ, ಒಂದು ಘಟನೆಯನ್ನು ಹೇಳುವಾಗಾಗಲಿ, ನಿದರ್ಶನವನ್ನು ಕೊಡುವಾಗಾಗಲಿ ಅವರು ಹೇಳುತ್ತಿದ್ದ ಮಾತುಗಳು ಅಲಂಕಾರಕ್ಕಾಗಿ, ಭವ್ಯತೆಗಾಗಿ, ಉತ್ಪ್ರೇಕ್ಷೆಯಿಂದ ಕೂಡಿದವಾಗಿ ಇರುತ್ತಿರಲಿಲ್ಲ. ಆ ಪದ ಬಿಟ್ಟು ಬೇರೆ ಪದ ಬಳಸಿದ್ದರೆ ಆ ಪರಿಣಾಮ ಬರುತ್ತಿರಲಿಲ್ಲವೆನ್ನುವಷ್ಟರ ಮಟ್ಟಿಗೆ ಸರಿಯಾಗಿ ಸಹಜವಾಗಿ ಇರುತ್ತಿದ್ದವು.

ಕೃಷ್ಣಶಾಸ್ತ್ರಿಗಳು ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾಗ 'ಪ್ರಬುದ್ಧ ಕರ್ನಾಟಕ'ವನ್ನು ಪ್ರಾರಂಭಿಸಿದರು. ಇದೊಂದು ಹೊಸಗನ್ನಡ ಸಾಹಿತ್ಯದ ಬೆಳ್ಳಿಯ ಕಿರಣ. ಹೊಸಗನ್ನಡ ಸಾಹಿತ್ಯ ರೂಪುಗೊಳ್ಳುತ್ತಿದ್ದ ಆ ಕಾಲದಲ್ಲಿ ಹೊಸ ಬರಹಗಾರರಿಗೆ ವೇದಿಕೆಯೊಂದರ ಅಗತ್ಯ ತೀವ್ರವಾಗಿತ್ತು. ಅದನ್ನು ಮನಗಂಡ ಕೃಷ್ಣಶಾಸ್ತ್ರಿಗಳು ತಮ್ಮ ವಿದ್ಯಾರ್ಥಿಗಳಲ್ಲೇ ಇರುವ ಅಂಥ ಸುಪ್ತಪ್ರತಿಭೆಯನ್ನು ಪ್ರಚೋದಿಸುವ ಸಲುವಾಗಿ ಈ ಮೊದಲೇ ಪ್ರಾರಂಭಿಸಿದ್ದ ಕರ್ನಾಟಕ ಸಂಘದಿಂದ ಈ ಪತ್ರಿಕೆಯನ್ನು ಪ್ರಕಟಿಸಲು ಪ್ರಾರಂಭಿಸಿದರು. ಇದು ಅತ್ಯಲ್ಪ ಕಾಲದಲ್ಲೇ ಜನಪ್ರಿಯವಾಗಿ ಕೇವಲ ವಿದ್ಯಾರ್ಥಿಗಳಿಗಷ್ಟೇ ಅಲ್ಲದೆ ಅನೇಕ ವಿದ್ವಜ್ಜನರನ್ನೂ ಆಕರ್ಷಿಸಿತು. ಕವಿ, ಸಾಹಿತಿ, ಬರಹಗಾರರ ಒಂದು ಸಮರ್ಥ ವೇದಿಕೆಯಾಗಿ ರೂಪುಗೊಂಡಿತು. ಈ ಪತ್ರಿಕೆಯಲ್ಲಿ "ಎಲ್ಲಿಯೂ ಸ್ವಜನವೆಂಬ ಪಕ್ಷಪಾತವಿಲ್ಲ, ದಾಕ್ಷಿಣ್ಯವಿಲ್ಲ, ಪರಜನವೆಂಬ ದ್ವೇಷವಿಲ್ಲ, ಪ್ರಾಚೀನವೆಂಬ ಪುರಸ್ಕಾರವಿಲ್ಲ, ಅರ್ವಾಚೀನವೆಂಬ ಅವಹೇಳನವಿಲ್ಲ, ಯೋಗ್ಯತೆಯೊಂದೇ ಅಳತೆಗೋಲು. ಕಿರಿಯರ ಪ್ರಬಂಧಕ್ಕೆ ಕತ್ತರಿ ಪ್ರಯೋಗ ಮಾಡುವಂತೆಯೇ ಹಿರಿಯರ ಲೇಖನಕ್ಕೂ ಉಳಿಯಪಟ್ಟನ್ನು ಕೊಟ್ಟಿದ್ದಾರೆ" ಎಂಬ ಕೃಷ್ಣಶಾಸ್ತ್ರಿಗಳ ಬಗೆಗೆ ಕೃತಜ್ಞರಾಗಿರುವುದನ್ನೂ ದಾಖಲಿಸುವ ಅನಂತ ರಂಗಾಚಾರ್ ಅವರ ಈ ಅಭಿಪ್ರಾಯ ಶಾಸ್ತ್ರಿಗಳ ಸಂಪಾದನ ಕಾರ್ಯದ ಮಹತ್ವವನ್ನು ಹೇಳುತ್ತದೆ.

ಕೃಷ್ಣಶಾಸ್ತ್ರಿಗಳು ಸುಮಾರು ಹದಿಮೂರು ವರ್ಷಗಳ ಕಾಲ ಸ್ವಯಂ ಪ್ರಯತ್ನದಿಂದ, ಸಾಹಸದಿಂದ ಈ ಪತ್ರಿಕೆಯನ್ನು ಪ್ರಕಟಿಸುತ್ತಿದ್ದರೂ ಎಲ್ಲಿಯೂ ತಮ್ಮ ಹೆಸರನ್ನು ಪ್ರಕಟಿಸಿಲ್ಲ. ಕೇವಲ ಕರ್ನಾಟಕ ಸಂಘದ ಹೆಸರಿನಲ್ಲಿ ಮಾತ್ರ ಪ್ರಕಟಣೆ ಇದೆ. ನಂತರ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಈ ಪತ್ರಿಕೆಯನ್ನು ಬಿಟ್ಟುಕೊಟ್ಟ ಮೇಲೆ ವೆಂಕಣ್ಣಯ್ಯನವರ ಸಂಪಾದಕತ್ವದಲ್ಲಿ ಇದೇ ಗುಣಮಟ್ಟದಲ್ಲಿ ಪತ್ರಿಕೆ ಮುಂದುವರಿಯುತ್ತದೆ. ನಂತರ ತಾವೇ ಮೈಸೂರಿಗೆ ವರ್ಗವಾದ ಮೇಲೆ ಅಂದರೆ ವೆಂಕಣ್ಣಯ್ಯನವರ ನಿಧನದಿಂದ 1939ರಲ್ಲಿ ಅವರ ಸ್ಥಾನಕ್ಕೆ ಪ್ರಾಧ್ಯಾಪಕರಾಗಿ ಎ.ಆರ್.ಕೃ. ನೇಮಕವಾದ ಮೇಲೆ ತಾವೇ ಪತ್ರಿಕೆಯ ಸಂಪಾದನಾ ಕಾರ್ಯವಹಿಸಿಕೊಂಡು ತಮ್ಮ ನಿವೃತ್ತಿಯವರೆಗೂ ಯಶಸ್ವಿಯಾಗಿ ನಡೆಸಿಕೊಂಡು ಬಂದರು.

ಎ.ಆರ್.ಕೃ. ಅವರು ಸೆಂಟ್ರಲ್ ಕಾಲೇಜಿನಲ್ಲಿದ್ದಾಗ 1918ರಲ್ಲಿ ಕರ್ನಾಟಕದಲ್ಲೇ ಪ್ರಥಮ ಬಾರಿಗೆ 'ಕರ್ನಾಟಕ ಸಂಘ'ವನ್ನು ಪ್ರಾರಂಭಿಸಿದರು. ಈ ಬಗೆಗೆ ಸಿ.ಕೆ. ವೆಂಕಟರಾಮಯ್ಯನವರು ಹೀಗೆ ಹೇಳುತ್ತಾರೆ: "ಆಗ್ಗೆ ಮೈಸೂರು ಸಂಸ್ಥಾನದಲ್ಲಿ ಆ ಬಗೆಯ ಮತ್ತಾವ ಸಂಘವೂ ಇರಲಿಲ್ಲ. ಅಂತಹ ಸಮಯದಲ್ಲಿ ಸಂಘವನ್ನು ಸ್ಥಾಪಿಸಿದ ದೂರದೃಷ್ಟಿಯನ್ನು ಎಷ್ಟು ಕೊಂಡಾಡಿದರೂ ಸಾಲದು. ಆಗ್ಗೆ ಕನ್ನಡ ಭಾಷೆ ಮತ್ತು ಕನ್ನಡ ಸಾಹಿತ್ಯ ವಿಚಾರದಲ್ಲಿ ಕನ್ನಡದವರಲ್ಲೇ ಬಹುಭಾಗದವರಿಗಿದ್ದ ತಾತ್ಸಾರದ ದೃಷ್ಟಿಯನ್ನು ವಿಚಾರ ಮಾಡಿ ನೋಡಿದರೆ ಸಂಘ ಸ್ಥಾಪನೆಯನ್ನು ದೊಡ್ಡ ಸಾಹಸವೆನ್ನಬೇಕು." ಈ ಹೇಳಿಕೆಯಿಂದ ವ್ಯಕ್ತವಾಗುವ ಅಂಶಗಳು ಎರಡು, ಈ ಕರ್ನಾಟಕ ಸಂಘ ಕರ್ನಾಟಕದ ಎಲ್ಲ ಕನ್ನಡ ಸಂಘಗಳಿಗೆ ನಾಂದಿಯಾಗಿರುವುದು. ಇನ್ನೊಂದು ಸಂಘ ಸ್ಥಾಪನೆಯ ಉದ್ದೇಶ ಜನರಲ್ಲಿ ಕನ್ನಡಾಭಿಮಾನ ಮೂಡಿ ಸಂಘಟಿತರಾಗಬೇಕೆಂಬುದು. ಈ ಎರಡು

ದೃಷ್ಟಿಗಳಿಂದಲೂ ಕೃಷ್ಣಶಾಸ್ತ್ರಿಗಳು ಸ್ಥಾಪಿಸಿದ ಕರ್ನಾಟಕ ಸಂಘ ಮಹತ್ತರ ಸಾಧನೆ ಮಾಡಿದೆ.

ಕನ್ನಡಕ್ಕೆ ಕಿಟಲ್ ನಿಘಂಟನ್ನು ಬಿಟ್ಟರೆ ವಿದ್ವತ್ತಿಗೆ, ಪಾಂಡಿತ್ಯಕ್ಕೆ ನೆರವಾಗುವಂತಹ ಸಮಗ್ರ ನಿಘಂಟು ಇಲ್ಲದಿರುವುದನ್ನು ಗಮನಿಸಿದ ಕೃಷ್ಣಶಾಸ್ತ್ರಿಗಳು ಸಾಹಿತ್ಯ ಪರಿಷತ್ತಿನಲ್ಲಿದ್ದಾಗ ಆ ಬಗೆಗೆ ಕಾರ್ಯಪ್ರವೃತ್ತ ರಾದರು. ಪರಿಷತ್ತು ರೂಪಿಸಿದ ನಿಘಂಟು ರಚನಾ ಸಮಿತಿಗೆ ಅಧ್ಯಕ್ಷರಾಗಿ, ಸಂಪಾದಕರಾಗಿ ಪ್ರಾರಂಭದಲ್ಲಿ ಕೆಲಸ ಮಾಡಿದರು. ಆ ಸಂದರ್ಭದಲ್ಲಿ ಅವರು ರೂಪಿಸಿದ ಕರಡು ಪ್ರತಿ ಕನ್ನಡ ನಿಘಂಟು ಹೇಗಿರಬೇಕೆಂಬ ಅವರ ದೃಷ್ಟಿಯನ್ನು ಹೇಳುತ್ತದೆ. ಬಹೂಪಯೋಗಿಯಾದ ಈ ನಿಘಂಟಿನಲ್ಲಿ ಒಂದು ಪದದ ಅರ್ಥಗಳನ್ನು ಬೇರೆ ಬೇರೆ ರೂಪಗಳನ್ನೂ ಅದು ಬಳಕೆಯಾಗಿರುವ ಆಕರದೊಂದಿಗೆ ಕೊಡುವುದಷ್ಟೇ ಅಲ್ಲದೆ, ಕನ್ನಡದ ಸೋದರ ಭಾಷೆಗಳಲ್ಲಿ ದೊರೆಯುವ ಅದರ ಪರ್ಯಾಯ ಪದಗಳನ್ನು ದಾಖಲಿಸುತ್ತದೆ. ಒಂದೊಂದು ಪದಗಳನ್ನು ನಿಷ್ಕರ್ಷೆ ಮಾಡುವಾಗಲೂ ಅವರು ತೋರುತ್ತಿದ್ದ ಪಾಂಡಿತ್ಯ ಪ್ರತಿಭೆ ಅಸಾಧಾರಣವಾದದ್ದೆಂಬುದನ್ನೂ ಅವರೊಂದಿಗೆ ಕೆಲಸ ಮಾಡಿರುವ ಪ್ರೊ|| ಎಂ.ವಿ.ಸೀ., ಎಲ್. ಬಸವರಾಜು ಮುಂತಾದವರು ಸ್ಮರಿಸಿದ್ದಾರೆ.

ಕೃಷ್ಣಶಾಸ್ತ್ರಿಗಳ ಬಹುದೊಡ್ಡ ಸಾಧನೆಯೆಂದರೆ ಕೆಲವು ಮೌಲಿಕ ಗ್ರಂಥಗಳ ರಚನೆ, ವಿಮರ್ಶೆ, ಸಂಪಾದನೆ, ಅನುವಾದ, ಶಾಸ್ತ್ರ ಸಾಹಿತ್ಯ, ಲಲಿತ ಸಾಹಿತ್ಯ ಮುಂತಾದ ಕ್ಷೇತ್ರಗಳಲ್ಲಿ ಸುಮಾರು ಹದಿನೈದು ಗ್ರಂಥಗಳನ್ನು ಬರೆದಿದ್ದಾರೆ. ಹಾಗೆ ನೋಡಿದರೆ ಎ.ಆರ್.ಕೃ. ಅವರು ತಾವು ಬರೆದಿರು ವುದಕ್ಕಿಂತ ಇತರರಿಂದ ಬರೆಸಿರುವುದೇ ಹೆಚ್ಚು. ಬರೆಯಬಲ್ಲವರನ್ನು ಗುರುತಿಸಿ, ಪ್ರೋತ್ಸಾಹಿಸಿ, ಪ್ರಚೋದಿಸುತ್ತಿದ್ದರು. ಕುವೆಂಪು ಅವರನ್ನು ತಾವೇ 'ವರಕವಿ' ಎಂದು ಕರೆದು ಅವರ ಬರಹಗಳನ್ನು ಓದಿಸಿ, ಚರ್ಚಿಸಿ ತಿದ್ದುಪಡಿಗಳನ್ನು ಸೂಚಿಸಿ, ಅವರನ್ನು ಬೆಳೆಸಿದ ರೀತಿಯನ್ನು ಸ್ವತಃ ಕುವೆಂಪು ಅವರೇ ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ಎಂ.ವಿ. ಸೀತಾರಾಮಯ್ಯನವರು ಪರಿಷತ್ತಿನಲ್ಲಿ ಅವರೊಂದಿಗೆ ಕೆಲಸ ಮಾಡುತ್ತಿರುವಾಗ ಎಸ್.ಎಸ್. ವೀರಪ್ಪ ಎಂಬ ವಿದ್ಯಾರ್ಥಿಯೊಬ್ಬರ ಕಾವ್ಯವಾಚನ ಕಾರ್ಯಕ್ರಮಕ್ಕೆ ಶಾಸ್ತ್ರಿಗಳು ತಮ್ಮನ್ನು ಅಧ್ಯಕ್ಷರನ್ನಾಗಿಮಾಡಿದುದನ್ನು ಸ್ಮರಿಸುತ್ತಾರೆ. ಗೊರೂರು ಅವರ ಹಾಸ್ಯ ಪ್ರಜ್ಞೆಯನ್ನು ಗುರುತಿಸಿ ಅವರಿಗೆ ಭಾಷಣ ಮೊಡಲು ಪದೇ ಪದೇ ವೇದಿಕೆಯನ್ನು ಕಲ್ಪಿಸಿಕೊಟ್ಟುದನ್ನು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಸ್ವಾರಸ್ಯಕರವಾಗಿ ಸ್ಮರಿಸಿದ್ದಾರೆ. 'ಅಭಿನಂದನೆ' ಮತ್ತು 'ಎ.ಆರ್.ಕೃ. ಜೀವನ ಸಾಧನೆ' ಕೃತಿಗಳ ಎಲ್ಲ ಬರಹಗಾರರೂ ಒಂದಿಲ್ಲೊಂದು ರೀತಿಯಲ್ಲಿ ಕೃಷ್ಣಶಾಸ್ತ್ರಿಗಳ ಪ್ರಭಾವಕ್ಕೆ ಒಳಗಾದವರು. ಅವರ ಪ್ರೋತ್ಸಾಹದಿಂದ ಬೆಳೆದವರು ಎಂಬುದನ್ನು ಗಮನಿಸಿದರೆ ಶಾಸ್ತ್ರಿಗಳ ಸಾಧನೆ ಎಷ್ಟು ಮಹತ್ತರದ್ದೆಂಬ ಅರಿವಾಗುತ್ತದೆ.

ಶಾಸ್ತ್ರಿಗಳ ಗದ್ಯದಲ್ಲಿ ಎದ್ದುಕಾಣುವ ಒಂದು ವಿಶಿಷ್ಟ ಲಕ್ಷಣವೆಂದರೆ ಅವರ ಗದ್ಯ ಶೈಲಿ. ಇದು ಕನ್ನಡ ಸಾಹಿತ್ಯಕ್ಕೆ ಎ.ಆರ್.ಕೃ. ಅವರು ಕೊಟ್ಟಿರುವ ಅತ್ಯಂತ ವಿಶಿಷ್ಟ ಕೊಡುಗೆ. ಅವರ ಯಾವುದೇ ಕೃತಿಯಲ್ಲೂ ಈ ಶೈಲಿಯನ್ನು ಗುರುತಿಸಬಹುದು. ಕನ್ನಡ ಸಾಹಿತ್ಯ ಚರಿತ್ರೆ ಅವರ ಈ ಕೊಡುಗೆಯನ್ನು 'ಗದ್ಯ ಶಿಲ್ಪಿ', 'ಹೊಸ ಪರಂಪರೆಯ ನಿರ್ಮಾಪಕ', 'ಕೃಷ್ಣಶಾಸ್ತ್ರಿಗಳ ಮಾರ್ಗ' ಎಂದೆಲ್ಲ ಗುರುತಿಸಿದೆ. ಹೊಸಗನ್ನಡ ಸಾಹಿತ್ಯ ವಿವಿಧ ಶಾಖೆಗಳಲ್ಲಿ ಹುರುಪಿನಿಂದ ಚಿಗುರೊಡೆಯುತ್ತಿದ್ದ ಕಾಲದಲ್ಲಿ ಕೃಷ್ಣಶಾಸ್ತ್ರಿಗಳ ಗದ್ಯ, ಗದ್ಯ ಕ್ಷೇತ್ರಕ್ಕೆ ಒಂದು ಮಾರ್ಗ ಹಾಕಿಕೊಟ್ಟಿತೆಂದರೆ ತಪ್ಪಲ್ಲ.

ಕೃಷ್ಣಶಾಸ್ತ್ರಿಗಳ ಗದ್ಯವೆಂದರೆ ಸರಳವಾದ, ನಿರಾಡಂಬರವಾದ, ಸುಲಲಿತವಾದ ಪದಗಳ ಸುಂದರ ರಚನೆ. ಪರಿಚಿತವಾದ ಸಾಮಾನ್ಯ ಪದಗಳಿಂದಲೇ ಶಾಸ್ತ್ರಿಗಳು ತೋರುವ ಗದ್ಯ ಸೌಂದರ್ಯ, ಅದು ಬೀರುವ ಪರಿಣಾಮ ಅದ್ಭುತವಾದದ್ದು. "ಮನೆಯಲ್ಲಿ ಇರುವ ಒಂದೆರಡು ಸಾಮಗ್ರಿಗಳಿಂದಲೇ, ಮೂರು ನಾಲ್ಕು ಪಾತ್ರೆಗಳಲ್ಲಿಯೇ ಹತ್ತಾರು ರುಚಿ ರುಚಿಯಾದ ಅಡುಗೆ ಮಾಡಬಲ್ಲ ನಿಪುಣೆಯಾದ ಗೃಹಿಣಿಯಂತೆ ಕವಿಯು ಮುಂದಿರುವ ಒಂದೆರಡು ಪಾತ್ರಗಳಲ್ಲಿಯೇ, ಹಳೆಯ ಕಥಾ ಸಾಮಗ್ರಿ ಯಿಂದಲೇ ಸುಂದರವಾಗಿ ಕಂಗೊಳಿಸುವ ಮನೋಹರವಾದ ರಸ ಪದಾರ್ಥಗಳನ್ನು ಸೃಷ್ಟಿಸಿದ್ದಾನೆ." ಇದು ಕೃಷ್ಣಶಾಸ್ತ್ರಿಗಳು ಭಾಸಕವಿಯನ್ನು ಕುರಿತು ಆಡಿರುವ ಮಾತುಗಳಾದರೂ ಸ್ವತಃ ಎ.ಆರ್.ಕೃ. ಅವರ ಗದ್ಯವನ್ನು ಕುರಿತು ಹೇಳಬಹುದಾದ ಮಾತುಗಳೂ ಆಗುತ್ತವೆ. ಸಂಸ್ಕೃತನಾಟಕ, ಸರ್ವಜ್ಞಕವಿ, ಭಾಸ ಕವಿ, ಗದಾಯುದ್ಧ ನಾಟಕ ಮತ್ತು ಅದರ ನಾಯಕ, ಬಂಕಿಮಚಂದ್ರ ಇವು ಕೃಷ್ಣಶಾಸ್ತ್ರಿಗಳ ವಿಮರ್ಶಾ ಕೃತಿಗಳು. ವಚನ ಭಾರತ, ಕಥಾಮೃತ, ಸ್ವಾಮಿಶಿಷ್ಯ ಸಂವಾದ, ನಾಗಮಹಾಶಯ, ನಿಬಂಧಮಾಲಾ, ಶ್ರೀ ರಾಮಕೃಷ್ಣ ಪರಮಹಂಸರ ಚರಿತ್ರೆ ಇವು ಅವರ ಅನುವಾದ ಕೃತಿಗಳು. 'ಶ್ರೀಪತಿಯ ಕಥೆಗಳು' ಒಂದೇ ಲಲಿತಸಾಹಿತ್ಯ. ನಿರ್ಮಲಭಾರತಿ ಮಕ್ಕಳಿಗಾಗಿ ಬರೆದ ಮಹಾಭಾರತ. ಇದನ್ನೂ ಲಲಿತ ಸಾಹಿತ್ಯವೆಂದೇ ಹೇಳಬಹುದಾದಷ್ಟು ಸರಳವಾಗಿ ಸುಲಲಿತವಾಗಿ ಸುಂದರ ಚಿತ್ರಗಳಿಂದ ಕೂಡಿದೆ.

ಶಾಸ್ತ್ರಿಗಳ ಗದ್ಯವನ್ನು ವಿಶ್ಲೇಷಿಸುವಾಗ ಈ ಮೂರೂ ಸಾಹಿತ್ಯ ಪ್ರಕಾರಗಳೂ ಪರಸ್ಪರ ಪೂರಕವಾಗಿರುವುದನ್ನು ಕಾಣಬಹುದು. ವಿಮರ್ಶೆಯಲ್ಲಿ ಅನುವಾದವನ್ನೂ, ಅನುವಾದದಲ್ಲಿ ವಿಮರ್ಶೆಯನ್ನೂ, ಇವೆರಡರಲ್ಲೂ ಸೃಜನಶೀಲತೆಯನ್ನೂ, ಅದರಲ್ಲಿ ವಿಮರ್ಶೆಯನ್ನೂ ಸುಲಭವಾಗಿ ಗುರುತಿಸಬಹುದು.

"ಶ್ರೀಪತಿಯ ಕಥೆಗಳಲ್ಲಾಗಲಿ, ಅನುವಾದಗಳಲ್ಲಾಗಲಿ, ವಿಮರ್ಶೆ ಗಳಲ್ಲಾಗಲಿ ಶಾಸ್ತ್ರಿಗಳ ವರ್ಣನಾ ಚಾತುರ್ಯ ಮೆಚ್ಚುವಂತಹುದು.... ನಮ್ಮಲ್ಲಿ ಇಂಥ ಚಿತ್ತಾಕರ್ಷಕ ವಿಮರ್ಶೆ ಇಷ್ಟು ವಿಶ್ಲೇಷಣಾತ್ಮಕವಾಗಿ ಇನ್ನೊಂದು ಕಡೆ ಸುಲಭವಾಗಿ ಸಿಕ್ಕುವುದಿಲ್ಲ.... ಎಷ್ಟೇ ಕಷ್ಟವಾದ ಸಂಕೀರ್ಣವಾದ ವಿಷಯವನ್ನಾದರೂ ಕೃಷ್ಣಶಾಸ್ತ್ರಿಗಳು ಸರಳವಾಗಿ, ಸುಲಭವಾಗಿ, ಹಿಡಿಮಾತಿನಲ್ಲಿ ವಿವರಿಸಬಲ್ಲರು.... ಕೃಷ್ಣಶಾಸ್ತ್ರಿಗಳ ಗದ್ಯ ಕಲೆಯೂ ಹೌದು, ಕೌಶಲ್ಯವೂ ಹೌದು. ಸ್ಪಷ್ಟತೆ, ಖಚಿತತೆ ಅವರ ಶೈಲಿಯ ಪ್ರಧಾನ ಗುಣಗಳು. ಅದರಲ್ಲಿ ಬೆಡಗಿಲ್ಲ, ಬಿನ್ನಾಣವಿಲ್ಲ; ಹಾಗೆಂದು ಕುರೂಪ, ಅವಲಕ್ಷಣಗಳೂ ತಲೆ ಹಾಕಿಲ್ಲ."

"ಲೇಖಕರ ಆಲೋಚನೆಗಳು, ಭಾವಗಳು ಸಂದೇಹಕ್ಕೆ ಆಸ್ಪದವಿಲ್ಲದಂತೆ ವಾಚಕನಿಗೆ ಅರ್ಥವಾಗುತ್ತವೆ. ಅವರ ಆಶಯ ಇವರ ಹೃದಯದಲ್ಲಿ ಸ್ಪಷ್ಟವಾಗಿ ಮೂಡುತ್ತದೆ. ಎಲ್ಲಿಯೂ ವಾಚಕ ತಿಣುಕಬೇಕಾಗಿಲ್ಲ."

"ಎ.ಆರ್.ಕೃ. ಅವರ ವಿಮರ್ಶಾ ವಿಧಾನ ರಸಮಯವಾದುದು. ನಾಟಕವಾಗಲಿ, ಕಾದಂಬರಿಯಾಗಲಿ ಅವುಗಳ ತಂತ್ರ ಸಂವಿಧಾನಗಳಲ್ಲಿಯೂ, ರಸ ನಿರೂಪಣೆಯಲ್ಲಿಯೂ ಸಮಾನವಾದ ಗಮನವಿಟ್ಟು ಅವುಗಳ ಒಟ್ಟು ಆನಂದವನ್ನು ಅವರು ಹೃದ್ಯವಾಗಿ ನಿರೂಪಿಸುತ್ತಾರೆ. ಶಾಸ್ತ್ರೀಯವಾದ ವಿಮರ್ಶನ ದೃಷ್ಟಿ ಮತ್ತು ಕಲ್ಲುಸಕ್ಕರೆಯಂತೆ ತಟ್ಟನೆ ಕರಗುವ ಸಹೃದಯತೆ ಎರಡನ್ನೂ ಕಾಣಬಹುದು."

"ತಾವು ಉದ್ದೇಶಿಸಿದ ಕೃತಿಯ ಸ್ವಾರಸ್ಯ, ಚೆಲುವು, ಗುಣದೋಷಗಳನ್ನು ಸಹೃದಯ ನಿಲುವಿನಿಂದ ವಿಮರ್ಶಿಸುವುದಷ್ಟೇ ಅವರು ಮಾಡುವ ಕೆಲಸ. ತೀರ್ಪನ್ನು ರೂಪಿಸಿಕೊಳ್ಳುವ ಜವಾಬ್ದಾರಿಯನ್ನು ಅವರು ವಾಚಕರ ಪಾಲಿಗೇ ಬಿಡುತ್ತಾರೆ. ಶಾಸ್ತ್ರಿಗಳ ವಿಮರ್ಶೆಯ ಮತ್ತೊಂದು ಲಕ್ಷಣವೆಂದರೆ ಬಹುಮಟ್ಟಿಗೆ ಸಾಧಾರಣೀಕರಿಸದೆ ಆಧಾರಭೂತವಾಗಿ ಹೇಳುವುದು."

ಮೇಲಿನ ಎಲ್ಲ ಅಭಿಪ್ರಾಯಗಳೂ ಶಾಸ್ತ್ರಿಗಳ ವಿಮರ್ಶೆಯನ್ನು ಕುರಿತವಾಗಿದ್ದು, ವಿಮರ್ಶೆಯಲ್ಲಿ ಹೆಣೆದುಕೊಂಡಿರುವ ವರ್ಣಕಗುಣವನ್ನು ಬಹಳ ಸ್ಪಷ್ಟವಾಗಿ ಗುರುತಿಸಿವೆ. ಭಾಸ ಮತ್ತು ಸಂಸ್ಕೃತನಾಟಕಗಳಲ್ಲಿ ಶಾಸ್ತ್ರಿಗಳು ಆಯಾ ನಾಟಕಗಳ ಕೆಲವು ಭಾಗಗಳನ್ನು ಅನುವಾದಿಸಿದ್ದಾರೆ. ಹಾಗೆಯೇ 'ಬಂಕಿಮಚಂದ್ರ'ದಲ್ಲಿ ಕಾದಂಬರಿಯ ಕೆಲವು ಭಾಗಗಳ ಸಾರಾಂಶವನ್ನೂ ಕೊಟ್ಟಿದ್ದಾರೆ. ಇಲ್ಲೆಲ್ಲ ಅನುವಾದಕ ಮತ್ತು ವಿಮರ್ಶಕ ಕೃಷ್ಣಶಾಸ್ತ್ರಿಗಳಲ್ಲಿ ಅಡಗಿಕೊಂಡಿರುವ ಕತೆಗಾರ ಕೃಷ್ಣಶಾಸ್ತ್ರಿಯನ್ನು ಕಾಣಬಹುದು. ಪಾತ್ರಗಳ, ಘಟನೆಗಳ, ಸಂದರ್ಭಗಳ ವಿಶ್ಲೇಷಣೆಗೆ ಅವರು ಬಳಸಿರುವ ಸುಂದರ ಚಿತ್ರಗಳಲ್ಲಿಯ ಈ ಸೃಜನಶೀಲತೆಯನ್ನು ಗುರುತಿಸಬಹುದು. ಈ ಎಲ್ಲ ನಿದರ್ಶನಗಳೂ ಸುಂದರ ವರ್ಣನೆಗಳಾಗಿ ನಿಲ್ಲುತ್ತವೆ. ಚಿತ್ರಕಾರನ ರೇಖೆಗಿಂತ ಸ್ಪಷ್ಟವಾಗಿ ಓದುಗನ ಮನಸ್ಸಿನಲ್ಲಿ ಪಡಿಮೂಡುತ್ತವೆ. ಈ ಬಗೆಗೆ ಅವರೇ ಒಂದು ಕಡೆ ಹೀಗೆ ಹೇಳುತ್ತಾರೆ: "ವರ್ಣನೆಯ ಮುಖ್ಯ ಉದ್ದೇಶವೆಂದರೆ ವರ್ಣಿತ ವಸ್ತುವು ನಮ್ಮ ಕಣ್ಣಿಗೆ ಕಟ್ಟಿದಂತಿರಬೇಕು. ಅದರ ಭಾವಚಿತ್ರವನ್ನು ಮುಂದೆ ತಂದಿಟ್ಟಂತಿರಬೇಕು. ಅಷ್ಟೇ ಅಲ್ಲ ಚಿತ್ರಗಾರನಾಗಲಿ, ಭಾವಚಿತ್ರವನ್ನು ಸೆರೆ ಹಿಡಿಯುವ ಯಂತ್ರವಾಗಲಿ ಅಸಾಧ್ಯವೆಂದು ಕೈಬಿಡುವ ಎಷ್ಟೋ ಸೂಕ್ಷ್ಮ ವಿಷಯಗಳನ್ನು ಕವಿಯು ತನ್ನ ವಾಕ್ಸಂಪತ್ತಿನಿಂದ ಪಾಠಕರ ಕಿವಿಯ ಮೂಲಕ ಅವರ ಮನಸ್ಸಿನಲ್ಲಿ ಅಚ್ಚಳಿಯದಂತೆ ಚಿತ್ರಿಸಬೇಕು." ಬಂಕಿಮಚಂದ್ರರ ಕಾದಂಬರಿಗಳ ವರ್ಣನ ಶಕ್ತಿಯನ್ನು ಹೀಗೆ ವಿಶ್ಲೇಷಿಸಿರುವ ಮಾತುಗಳು ಸ್ವತಃ ಕೃಷ್ಣಶಾಸ್ತ್ರಿಗಳ ಗದ್ಯದ ವರ್ಣನಾ ಚಾತುರ್ಯಕ್ಕೂ ವ್ಯಾಖ್ಯಾನವಾಗಿದೆ.

ಹಾಗೆಯೇ ಶ್ರೀಪತಿಯ ಕಥೆಗಳು ಮತ್ತು ಅನುವಾದ ವಿಮರ್ಶಾ ಕೃತಿಗಳಲ್ಲೇ ಬರುವ ಪಾತ್ರಗಳ ವಿಶ್ಲೇಷಣೆಯಲ್ಲಿ ವಿಮರ್ಶಕ ಕೃಷ್ಣಶಾಸ್ತ್ರಿಯನ್ನೂ ಗುರುತಿಸಬಹುದಾಗಿದೆ. ಸಂಸ್ಕೃತ ನಾಟಕದಲ್ಲಿ ಕಾಳಿದಾಸನ ಪಾತ್ರಗಳನ್ನು ವಿಶ್ಲೇಷಿಸುವಾಗಿನ "ಇರಾವತಿ ಕೋಪಮಾತ್ಸರ್ಯಗಳ ಮುದ್ದೆಯಾದ ಹುಳಿಗಾಯಿ, ಧಾರಿಣೀ ಔಶೀನರೀ ದೇವಿಯರು ವಿಧಿಯಿಲ್ಲದೆ ಬಂದಾಗ ಗಂಡನೊಡನೆ ಹೇಗೋ ಹಾಗೆ ಸಮಾಧಾನ ಮಾಡಿಕೊಂಡಿದ್ದ ದೋರೆಹಣ್ಣುಗಳು, ಶಕುಂತಲೆ ಪತಿಗೋಸ್ಕರ ಪೂರ್ಣಸ್ವಾರ್ಥತ್ಯಾಗ ಮಾಡಿದ ಮೃದುಮಧುರವಾದ ಅಖಂಡ ಪುಣ್ಯಫಲ" ಎಂಬುದಾಗಲಿ; ಕೃಷ್ಣಕಾಂತನ ಉಯಿಲಿನ ಪಾತ್ರಗಳ ಬಗೆಗಿನ ಕುಂದೆ ಭೀರು, ಸಾಧು, ರೋಹಿಣಿಯದೃಷ್ಟೆ, ಅವಳು ಹುಲಿ-ಹೆಣ್ಣು ಹುಲಿ, ಗೋವಿಂದ ಲಾಲನು ಎತ್ತು, ಎಂಬುದಾಗಲಿ ಇಂಥ ಇನ್ನೂ ಅನೇಕ ಸಂದರ್ಭಗಳಲ್ಲಿ ಕೃಷ್ಣಶಾಸ್ತ್ರಿಗಳ ಚುರುಕಾದ, ನಿಖರವಾದ, ವಿಮರ್ಶನ ಪ್ರಜ್ಞೆಯನ್ನು ನೋಡಬಹುದು. ಇದು ಏಕಕಾಲದಲ್ಲಿ ವಿಮರ್ಶೆಯೂ ಹೌದು, ವರ್ಣನೆಯೂ ಹೌದು. ಅದಕ್ಕಾಗಿಯೇ ಕೃಷ್ಣಶಾಸ್ತ್ರಿಗಳ ವಿಮರ್ಶೆ 'ಚಿತ್ತಾಕರ್ಷಕ ವಿಮರ್ಶೆ; ಸಹೃದಯನಿಷ್ಠ ವರ್ಣನಾತ್ಮಕ ವಿಮರ್ಶೆ.

ಅನುವಾದ ಕಲೆಯಲ್ಲಿ ಶಾಸ್ತ್ರಿಗಳದ್ದು ಸಿದ್ಧಹಸ್ತ. ವಚನಭಾರತದಂತಹ ಅನುವಾದ ಕೃತಿ ಇನ್ನೊಂದಿಲ್ಲ. ಹಾಗೆಯೇ ಅವರ ಗದ್ಯಕ್ಕೆ ಶಿಖರಪ್ರಾಯ ಕೃತಿ. ಕೃಷ್ಣಶಾಸ್ತ್ರಿಗಳಿಗೆ ಹೆಸರನ್ನು ತಂದುಕೊಟ್ಟ ಕೃತಿಯೆಂದರೆ ವಚನಭಾರತವೆಂದೇ ಹೇಳಬೇಕು. ಮಹಾಭಾರತದ ಬೃಹತ್ಕಾವ್ಯವನ್ನು ಕೇವಲ 500 ಪುಟಗಳಲ್ಲಿ ಸಾರಸಂಗ್ರಹ ಮಾಡಿರುವ ಕಾರ್ಯ ಸಾಮಾನ್ಯವಾದದ್ದಲ್ಲ. ಇದು ಯಥಾವತ್ತಾದ ಅನುವಾದವಾಗಲಿ ಅಥವಾ ಕೇವಲ ಅನುವಾದವಾಗಲಿ ಅಲ್ಲ. ಕೃಷ್ಣಶಾಸ್ತ್ರಿಗಳ ಅಗಾಧ ಪರಿಶ್ರಮದ ಅಧ್ಯಯನದ ಪರಿಪೂರ್ಣ ಪಾಂಡಿತ್ಯ, ಪ್ರತಿಭೆಯ ಪ್ರತಿಫಲ. ಈ ಗ್ರಂಥ ರಚನೆಯಲ್ಲಿ, ನನ್ನ ದೃಷ್ಟಿ ಮುಖ್ಯವಾಗಿ ಕಾವ್ಯ ದೃಷ್ಟಿ, ಸಾಹಿತಿಯ ದೃಷ್ಟಿ, ಕಥೆ ಚೆನ್ನಾಗಿರಬೇಕು, ಆದಷ್ಟು ರಸವತ್ತಾಗಿರಬೇಕು. ವರ್ಣನೆ, ಅಲಂಕಾರ, ಧರ್ಮನೀತಿ ಎಲ್ಲ ಉಚಿತ ಪ್ರಮಾಣದಲ್ಲಿ ಹದವಾಗಿ ಹೊಂದಿಕೊಂಡಿರಬೇಕು. ಆದರೂ ಹಿಡಿತದಲ್ಲಿರಬೇಕು, ಭಾಷೆ ಬಿಗಿಯಾಗಿ ಆದರೆ ತಿಳಿಯಾಗಿರಬೇಕು," ಇದು ಕೃಷ್ಣಶಾಸ್ತ್ರಿಗಳು ವಚನಭಾರತಕ್ಕೆ ಬರೆದಿರುವ ಮುನ್ನುಡಿ. ಇದಕ್ಕೆ ಸ್ವಲ್ಪವೂ ಅಪವಾದವಾಗದಂತೆ ಯಶಸ್ವಿಯಾಗಿ ತಮ್ಮ ಗುರಿಯನ್ನು ಸಾಧಿಸಿದ್ದಾರೆಂಬುದನ್ನು ವಚನಭಾರತವನ್ನು ಓದಿದ ಯಾರಾದರೂ ಗುರುತಿಸಬಹುದು. ಗದ್ಯದ ಸೊಗಸನ್ನಂತೂ ಹೇಳುವಂತೆಯೇ ಇಲ್ಲ, ಓದಿಯೇ ಸವಿಯಬೇಕು.

ಇದರ ಜೊತೆಗೆ ವಿಮರ್ಶಾ ಕೃತಿಗಳಾದ 'ಸಂಸ್ಕೃತ ನಾಟಕ', 'ಭಾಸಕವಿ', 'ಬಂಕಿಮಚಂದ್ರ' ಮೊದಲಾದವುಗಲ್ಲಿ ಎ.ಆರ್.ಕೃ. ಅವರು ತೋರಿರುವ ಪಾಂಡಿತ್ಯ, ಪ್ರತಿಭೆ ಅಸಾಧಾರಣವಾದುದು. ಬಂಕಿಮಚಂದ್ರ ಅವರಿಗೆ ಪ್ರಶಸ್ತಿ ತಂದುಕೊಟ್ಟಿರುವ ಕೃತಿ. ಬಂಗಾಳಿ ಭಾಷೆಯ ಶ್ರೇಷ್ಠ ಕಾದಂಬರಿಕಾರನನ್ನು ಕನ್ನಡಕ್ಕೆ ತರುವುದರ ಮೂಲಕ ಇದೀಗ ಬೆಳೆಯುತ್ತಿರುವ ತೌಲನಿಕ ಸಾಹಿತ್ಯ ಅಧ್ಯಯನದ ಮಹತ್ವವನ್ನು ಆಗಲೇ ತೋರಿಸಿಕೊಟ್ಟಿದ್ದಾರೆ. ಕನ್ನಡದಲ್ಲಿ ವೆಂಕಟಾಚಾರ್ಯರ ಕೆಲವು ಅನುವಾದಿತ ಕಾದಂಬರಿಗಳನ್ನು ಬಿಟ್ಟರೆ ಬಂಕಿಮಚಂದ್ರರನ್ನು ಕುರಿತಂತೆ ಬೇರೆ ಯಾವ ಆಕರವೂ ಇಲ್ಲದಿದ್ದ ಕಾಲದಲ್ಲಿ ಇತರ ಮೂಲಗಳನ್ನೇ ಆಧರಿಸಿ ಸಮಗ್ರವಾಗಿ ಅಧ್ಯಯನ ಮಾಡಿ ಬಂಕಿಮಚಂದ್ರರ ಜೀವನ, ಸಾಧನೆ, ಸಾಹಿತ್ಯಗಳನ್ನು ವಿಮರ್ಶಿಸುವಲ್ಲಿ ತೋರಿರುವ ಶಾಸ್ತ್ರಿಗಳ ಶ್ರಮ, ಶ್ರದ್ಧೆ, ಪಾಂಡಿತ್ಯಗಳು ಮಹತ್ವಪೂರ್ಣ ವಾಗಿವೆ. ಇದೊಂದು 'ಮಹಾವಿಮರ್ಶಾ ಕೃತಿ' ಎಂಬ ಕುವೆಂಪು ಅವರ ಮಾತು ಅಕ್ಷರಶಃ ಅನ್ವಯವಾಗುತ್ತದೆ. ಬಂಕಿಮಚಂದ್ರರ ಜೀವನದ ಎಳೆಎಳೆಯನ್ನೂ ಬಿಡಿಸಿರುವ ರೀತಿಯಲ್ಲಿ, ಅವರ ಕಾದಂಬರಿಗಳ ಪಾತ್ರಗಳನ್ನು ವಿಶ್ಲೇಷಿಸಿರುವ ರೀತಿಯಲ್ಲಿ ಕೃಷ್ಣಶಾಸ್ತ್ರಿಗಳ ವಿಮರ್ಶನ ಪ್ರಜ್ಞೆಯನ್ನು, ಒಬ್ಬ ಮಹಾಕವಿ ಯೊಬ್ಬನ ಬದುಕಿನ ಸಾರ್ಥಕತೆಯನ್ನು ಕಾಣಬಹುದಾಗಿದೆ. ಬಂಕಿಮಚಂದ್ರ ಮತ್ತು ಕೃಷ್ಣಶಾಸ್ತ್ರಿಗಳ ಬದುಕಿನಲ್ಲಿ ಹಲವಾರು ಸಾದೃಶ್ಯಗಳು ಇರುವುದನ್ನು ಕಾಣಬಹುದು. ಒಂದು ರೀತಿಯಲ್ಲಿ ಬಂಕಿಮಚಂದ್ರರ ಬದುಕು ಸಾಹಿತ್ಯಕ ಮೌಲ್ಯಗಳು, ಅವರ ಜೀವನದರ್ಶನ, ಕೃಷ್ಣಶಾಸ್ತ್ರಿಗಳದ್ದೂ ಹೌದು ಎನ್ನುವಷ್ಟರ ಮಟ್ಟಿಗೆ ಸಾಮ್ಯತೆಯಿದೆ. ಪ್ರಾಯಶಃ ಈ ಕಾರಣಕ್ಕಾಗಿಯೇ ಅವರ ಸುಪ್ತ ಮನಸ್ಸು ಬಂಕಿಮಚಂದ್ರರನ್ನೇ ವಿಮರ್ಶೆಗೆ ಆಯ್ದುಕೊಂಡಂತೆ ತೋರುತ್ತದೆ.

ಶಾಸ್ತ್ರಿಗಳ ವಿಮರ್ಶೆ ಮತ್ತು ಪಾಂಡಿತ್ಯಕ್ಕೆ ಕೋಡು ಮೂಡಿಸಿರುವ ಇನ್ನೆರಡು ಕೃತಿಗಳೆಂದರೆ ಸಂಸ್ಕೃತ ನಾಟಕ ಮತ್ತು ಭಾಸ ಕವಿ. "ಫ್ರೆಂಚ್ ಭಾಷೆಯಲ್ಲಿ ಪ್ರಸಿದ್ಧರಾದ ಡಾ|| ಸಿಲ್ವೇನ್‌ಲೇವಿ ಅವರ La Theatre India

ಎಂಬ ಉದ್ಗ್ರಂಥವನ್ನು, ಜರ್ಮನ್ ಭಾಷೆಯ ಡಾ|| ಸ್ಟೇನ್ ಕೋನೊ ಅವರ Sanskrit drama ಎಂಬ ಗ್ರಂಥವನ್ನು ಕೂಲಂಕುಷವಾಗಿ ಅಭ್ಯಾಸ ಮಾಡಿದ್ದೇನೆ. ಆದರೆ ಎಲ್ಲಿಯೂ ಒಂದೆಡೆಯಲ್ಲಿ ಕೃಷ್ಣಶಾಸ್ತ್ರಿಗಳ ಕನ್ನಡ ಗ್ರಂಥದಲ್ಲಿರುವ ಸಮಗ್ರದೃಷ್ಟಿ, ಭಾರತೀಯ ರಸಗ್ರಹಣ ವೈಶಿಷ್ಟ್ಯ, ವಿಮರ್ಶನ ವೈದುಷ್ಯ, ಭಾಷಾ ಸೌಂದರ್ಯ, ಭಾವ ವಿಸ್ತಾರಗಳನ್ನು ನಾನು ಕಂಡಿಲ್ಲ. ಭಾರತೀಯ ಅಭಿರುಚಿಯಲ್ಲಿ ಕಾಳಿದಾಸ, ಭವಭೂತಿ, ಹರ್ಷ ಮುಂತಾದವರ ಮಹತ್ವವೇನೆಂಬುದನ್ನು ಆಧುನಿಕ ಸಾಹಿತ್ಯ ವಿಮರ್ಶೆಯ ಭಾಷೆಯಲ್ಲಿ ಇಷ್ಟು ತಿಳಿಯಾಗಿ ಇಷ್ಟು ನಿಷ್ಕೃಷ್ಟವಾಗಿ, ಇಷ್ಟು ವಿದ್ವದ್ಗ್ರಾಹ್ಯವಾಗಿ, ಇಷ್ಟೇ ತೂಕದ ಮಾತುಗಳಲ್ಲಿ ತಿಳಿಸಿಕೊಡುವ ಮತ್ತೊಂದು ಗ್ರಂಥ ಎಲ್ಲಿಯೂ ಕಾಣಸಿಗದು."

"ಭಾಸ ಕವಿಯನ್ನು ಕುರಿತ ಕೃಷ್ಣಶಾಸ್ತ್ರಿಗಳ ವಿಮರ್ಶೆಗೆ ಯಾವ ದೃಷ್ಟಿಯಿಂದ ನೋಡಿದರೂ ಕನ್ನಡದಲ್ಲಿ ಒಂದು ಗಣ್ಯಸ್ಥಾನವಿದೆ. ಕೇವಲ 120 ಪುಟಗಳ ಹರಹಿನಲ್ಲಿ ಭಾಸ ಪ್ರಪಂಚವನ್ನೇ ಸೆರೆಹಿಡಿದಿರುವುದು ಆಶ್ಚರ್ಯಕರ. ಇಷ್ಟು ಸಂಗ್ರಹವಾಗಿ, ನಿಷ್ಕೃಷ್ಟವಾಗಿ ಭಾಸನನ್ನು ವಿಮರ್ಶಿಸುವ ಪುಸ್ತಕ ಇಂಗ್ಲಿಷಿನಲ್ಲಾಗಲಿ, ಬೇರೆ ಭಾಷೆಯಲ್ಲಾಗಲಿ ಹೊರಬಂದಿರುವುದು ಅಸಂಭವ."

ಸಂಸ್ಕೃತ ಸಾಹಿತ್ಯದಲ್ಲಿ ಪಾಂಡಿತ್ಯ ಪಡೆದಿರುವ ಡಾ|| ಕೆ. ಕೃಷ್ಣಮೂರ್ತಿ ಮತ್ತು ಡಾ|| ಸಿ.ಪಿ.ಕೆ. ಅವರುಗಳ ಈ ಅಭಿಪ್ರಾಯಗಳು ಕೃಷ್ಣಶಾಸ್ತ್ರಿಗಳ ಈ ಗ್ರಂಥಗಳ ಮಹತ್ವವನ್ನು ಖಚಿತಪಡಿಸುತ್ತವೆ.

ಶಾಸ್ತ್ರಿಗಳ ಪಾಂಡಿತ್ಯವನ್ನು ನೋಡಬಹುದಾದ ಇನ್ನೊಂದು ಕ್ಷೇತ್ರವೆಂದರೆ ಗ್ರಂಥ ಸಂಪಾದನೆ, ಅಲಂಕಾರ ಇತ್ಯಾದಿ ಶಾಸ್ತ್ರ ಸಾಹಿತ್ಯದಲ್ಲಿ. ಕೃಷ್ಣಶಾಸ್ತ್ರಿಗಳು ಅನುವಾದ ವಿಮರ್ಶೆಗಳಲ್ಲಿ ಹೇಗೆ ಗುರುಸ್ಥಾನೀಯರಾಗಿದ್ದಾರೋ, ಗ್ರಂಥ ಸಂಪಾದನಾ ಕ್ಷೇತ್ರದಲ್ಲಿಯೂ ಹಾಗೆಯೇ ಗುರುಸ್ಥಾನೀಯರಾಗಿದ್ದಾರೆ. ಕವಿಜಿಹ್ವಾಬಂಧನ, ಹರಿಶ್ಚಂದ್ರ ಕಾವ್ಯ ಸಂಗ್ರಹ, ಕೆಳದಿನೃಪವಿಜಯ, ಧರ್ಮಾಮೃತ ಇವು ಅವರ ಪಾಂಡಿತ್ಯ ಕೃತಿಗಳು. ಇವುಗಳಲ್ಲದೆ ಕನ್ನಡ ಕೈಪಿಡಿಯ ಅಲಂಕಾರ ಭಾಗ ಮತ್ತು ಹತ್ತಾರು ಪಾಂಡಿತ್ಯಪೂರ್ಣ ಲೇಖನಗಳನ್ನೂ ಬರೆದಿದ್ದಾರೆ. ಈ ಎಲ್ಲ ಕೃತಿಗಳಲ್ಲೂ ಅವರು ತೋರಿರುವ ಶಾಸ್ತ್ರನಿಷ್ಠೆ, ಪಾಂಡಿತ್ಯ, ಅಧ್ಯಯನಶೀಲತೆಗಳು ಅನುಕರಣೀಯವಾದವು. ಎಲ್ಲಕ್ಕಿಂತ ಹೆಚ್ಚಾಗಿ ಈ ಗ್ರಂಥಗಳಿಗೆ ಅವರು ಬರೆದಿರುವ ಮುನ್ನುಡಿಗಳು, ಪೀಠಿಕೆಗಳು, ಪ್ರಸ್ತಾವನೆಗಳು ಗ್ರಂಥ ಸಂಪಾದನ ಕ್ಷೇತ್ರದಲ್ಲಿ ಇಂದಿಗೂ ಮಹತ್ವವನ್ನು ಪಡೆದಿವೆ. ಕನ್ನಡದಲ್ಲಿ ಗ್ರಂಥ ಸಂಪಾದನಾ ಶಾಸ್ತ್ರವೇ ಪರಿಚಯವಿರದಿದ್ದ ಕಾಲದಲ್ಲಿ ಶಾಸ್ತ್ರ ರೀತಿಯಲ್ಲಿ ಆಧುನಿಕ ಜ್ಞಾನದೊಂದಿಗೆ ಗ್ರಂಥವೊಂದನ್ನು ಸಂಪಾದಿಸಿ ಸೂಕ್ತ ಪೀಠಿಕೆಯೊಂದಿಗೆ ಹೇಗೆ ಪ್ರಕಟಿಸಬೇಕೆಂಬುದಕ್ಕೆ ಶಾಸ್ತ್ರಿಗಳು ಮಾದರಿ ಹಾಕಿಕೊಟ್ಟಿದ್ದಾರೆ. ಕವಿ, ಕಾಲ, ದೇಶ, ಮತ ವಿಚಾರಗಳ ನಿಷ್ಕರ್ಷೆ, ಮೂಲಕಥೆಗೂ ಕೃತಿಗೂ ಇರುವ ವ್ಯತ್ಯಾಸ, ಸಾದೃಶ್ಯ, ವೈಶಿಷ್ಟ್ಯ, ಕವಿಯ ಶೈಲಿ, ರಸ, ವರ್ಣನೆ, ಕಥಾಸಾರ, ಕಾವ್ಯ ವಿಮರ್ಶೆ, ಪಾತ್ರ ವಿಶ್ಲೇಷಣೆ, ಸಂಪಾದನಾ ರೀತಿ ಮುಂತಾದ ಅಗತ್ಯ ಮಾಹಿತಿಗಳನ್ನೊಳಗೊಂಡ ಸುದೀರ್ಘ ಪೀಠಿಕೆಯೊಂದಿಗೆ ಸಂಪಾದಿಸಿರುವ ಹರಿಶ್ಚಂದ್ರ ಕಾವ್ಯ ಸಂಗ್ರಹ ಒಂದು ಒಳ್ಳೆಯ ಉದಾಹರಣೆ. ಇದೊಂದು ಸಂಗ್ರಹವಾದರೂ ಪಾಠ ನಿಷ್ಕರ್ಷೆಯಲ್ಲಿ ಅವರು ತೋರಿರುವ ಪ್ರತಿಭೆ ಪಾಂಡಿತ್ಯ ಅಸಾಧರಣೀಯವಾದದ್ದು. ಇಂದಿಗೂ ಇದೇ ಉತ್ತಮ ಸಂಪಾದಿತ ಕೃತಿಯಾಗಿದೆ.

ಪ್ರೊ|| ಕೃಷ್ಣಶಾಸ್ತ್ರಿಗಳ ಕನ್ನಡ ಸೇವೆಯನ್ನು ಇಷ್ಟೇ ಎಂದು ಹೇಳಲಾಗುವುದಿಲ್ಲ. ಆ ಕಾಲದಲ್ಲಿ ಕನ್ನಡ ಕಟ್ಟಲು ಅಗತ್ಯವಾಗಿದ್ದ ಕಾರ್ಯವನ್ನು ಸೇವೆಯೆಂದು, ಕರ್ತವ್ಯವೆಂದು ಮಾಡಿದ್ದಾರೆ. ಅವರ ಆ ಶ್ರದ್ಧಾಪೂರ್ವಕ ಸೇವೆಯ ಪ್ರತಿಫಲವನ್ನು ಇಂದು ಕನ್ನಡನಾಡು ಅನುಭವಿಸುತ್ತಿದೆ. ಅವರ ಬಹುಮಟ್ಟಿನ ಎಲ್ಲ ಕೃತಿಗಳಿಗೂ ಒಂದಿಲ್ಲೊಂದು ಪುರಸ್ಕಾರ, ಪ್ರಶಸ್ತಿಗಳು ಬಂದಿವೆ. 1960ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಾಕ್ಟರೇಟ್ ಪದವಿ ನೀಡುವುದರ ಮೂಲಕ 1941ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ 26ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ ನೀಡುವುದರ ಮೂಲಕ, 1956ರಲ್ಲಿ ಅಭಿಮಾನಿ ಶಿಷ್ಯವೃಂದ 'ಅಭಿನಂದನೆ' ಅಭಿನಂದನಾ ಗ್ರಂಥ ಸಮರ್ಪಿಸುವುದರ ಮೂಲಕ, 1961ರಲ್ಲಿ 'ಬಂಕಿಮ ಚಂದ್ರ'ಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡುವುದರ ಮೂಲಕ ಪ್ರೊ|| ಎ.ಆರ್.ಕೃ. ಅವರ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿವೆ.

ಇದೆಲ್ಲಕ್ಕಿಂತ ಹೆಚ್ಚಾಗಿ ಕನ್ನಡನಾಡು, ಕನ್ನಡ ಜನತೆ ಅವರಿಗೆ ನೀಡಿರುವ ಪ್ರಶಸ್ತಿ ಬಹಳ ದೊಡ್ಡದು. ಅವರು ಕೈ ಇಟ್ಟ ಎಲ್ಲ ಕ್ಷೇತ್ರಗಳಿಗೂ ಅವರೇ ಮೊದಲಿಗರಾಗಿ ಮುಂದಿನ ಪೀಳಿಗೆಗೆ ಆದರ್ಶವಾಗಿದ್ದಾರೆ. ಅವರ ಈ ಆದರ್ಶದಲ್ಲಿ ಕನ್ನಡನಾಡು ತನ್ನನ್ನು ಗುರುತಿಸಿಕೊಳ್ಳುತ್ತಿದೆ. 'ವಚನ ಭಾರತ' ಇಂದಿಗೂ ಜನಪ್ರಿಯ ಕೃತಿಯಾಗಿ ಜನಸಾಮಾನ್ಯರ ನೆನಪಿನಲ್ಲಿ ಸದಾ ಹಸಿರಾಗಿದೆ. ಸಾಹಿತ್ಯ ಮತ್ತು ಪಾಂಡಿತ್ಯದ ಕ್ಷೇತ್ರದಲ್ಲಂತೂ ಅವರನ್ನು ಬಿಟ್ಟು ಮುಂದೆ ಹೋಗುವಂತೆಯೇ ಇಲ್ಲ. ಈ ಕ್ಷೇತ್ರದಲ್ಲಿ ಇಂದಿಗೂ ಕಾರ್ಯ ನಡೆಯುತ್ತಿದೆಯೆಂದರೆ ಅದು ಒಂದಿಲ್ಲೊಂದು ಮೂಲದಿಂದ ಎ.ಆರ್.ಕೃ. ಅವರ ಪರಂಪರೆಯೇ ಆಗಿರುತ್ತದೆ.

❑

# ಮಾಸ್ತಿ ವೆಂಕಟೇಶ ಅಯ್ಯಂಗಾರ್

ಡಿ. ಲಿಂಗಯ್ಯ

ಕನ್ನಡ ಭಾಷೆ, ಕನ್ನಡ ಸಾಹಿತ್ಯ ಸಮೃದ್ಧವಾದುದು. ಕನ್ನಡ ಪ್ರಾಚೀನ ಸಾಹಿತ್ಯದಂತೆ, ಅರ್ವಾಚೀನ ಸಾಹಿತ್ಯವೂ ಶ್ರೀಮಂತವಾಗಿದೆ. ರಾಷ್ಟ್ರ ಹಾಗೂ ಅಂತರರಾಷ್ಟ್ರ ಮಟ್ಟದ ಶ್ರೇಷ್ಠಸಾಹಿತ್ಯಕ್ಕೆ ಸರಿದೂಗಬಲ್ಲ ಸಾಹಿತ್ಯ ಕನ್ನಡದಲ್ಲಿ ಸೃಷ್ಟಿಯಾಗಿದೆ. ಪ್ರತಿಭಾವಂತರಾದ ಕನ್ನಡ ಸಾಹಿತಿಗಳ ದುಡಿಮೆ, ಸೃಜನಶೀಲ ಶಕ್ತಿಗಳಿಂದ ಕನ್ನಡ ಸಾಹಿತ್ಯ ಪರಂಪರೆ ಉಜ್ವಲವಾಗಿ ಮುಂದುವರಿದಿದೆ. ಕನ್ನಡ ಸಾಹಿತ್ಯ ಪರಂಪರೆಯ ನಿರ್ಮಾಪಕರಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಒಬ್ಬರು. ಅವರು 6-6-1891ರಲ್ಲಿ ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ಮಾಸ್ತಿ ಎಂಬ ಗ್ರಾಮದಲ್ಲಿ ಹುಟ್ಟಿದರು. ಕಷ್ಟಪಟ್ಟು ವಿದ್ಯಾಭ್ಯಾಸ ಮಾಡಿ ಸ್ವಂತ ಪ್ರತಿಭೆಯಿಂದ 1907ರಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ; 1909ರಲ್ಲಿ ಎಫ್.ಎ. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದರು. ಎಲ್ಲ ತರಗತಿಗಳಲ್ಲೂ ಉತ್ತಮ ವಿದ್ಯಾರ್ಥಿಯಾಗಿದ್ದ ಅವರಿಗೆ ಪ್ರಥಮ ಸ್ಥಾನದ ಗಳಿಕೆ ನೀರು ಕುಡಿದಷ್ಟು ಸಲೀಸು. ಅವರು 1912ರಲ್ಲಿ ಬಿ.ಎ., 1914ರಲ್ಲಿ ಎಂ.ಎ. ಪದವಿ ಗಳಿಸಿದರು. 1913ರಲ್ಲಿ ಮೈಸೂರು ಸಿವಿಲ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಅದೇ ವರ್ಷ ಅಸಿಸ್ಟೆಂಟ್ ಕಮೀಷನರ್ ಆಗಿ ನೇಮಕಗೊಂಡರು. 1930ರಲ್ಲಿ ಅವರಿಗೆ ಡೆಪ್ಯುಟಿ ಕಮಿಷನರ್ ಹುದ್ದೆಗ ಬಡ್ತಿ ದೊರೆಯಿತು. ಸರಕಾರದ ಹಲವು ಉನ್ನತ ಹುದ್ದೆಗಳಲ್ಲಿ, ರಾಜ್ಯದ ನಾನಾ ಭಾಗಗಳಲ್ಲಿ ಸೇವೆ ಸಲ್ಲಿಸಿದರು. 1943ರಲ್ಲಿ ಸರಕಾರದ ಸೇವೆಯಿಂದ, ಸ್ವಾಪೇಕ್ಷಿತ ನಿವೃತ್ತಿ ಪಡೆದರು. ಅವರ ಸರಕಾರಿ ಸೇವೆಯ ಅವಧಿ ಸಾಕಷ್ಟು ದೀರ್ಘವಾದುದು; ವೈವಿಧ್ಯಮಯವಾದುದು. ದೊರಕಿದ ಹುದ್ದೆಗೆ ಅಪಚಾರವಾಗದಂತೆ ದುಡಿದು ದಕ್ಷ ಆಡಳಿತಗಾರರೆಂಬ ಮನ್ನಣೆಗೆ ಪಾತ್ರರಾದರು. ಮಾಸ್ತಿಯವರ ರಾಜನಿಷ್ಠೆ ಹೆಸರುವಾಸಿಯಾದುದು. 1942ರಲ್ಲಿ ಮೈಸೂರು ಮಹಾರಾಜರು 'ರಾಜ ಸೇವಾ ಪ್ರಸಕ್ತ' ಬಿರುದು ನೀಡಿ ಮಾಸ್ತಿಯವರನ್ನು ಗೌರವಿಸಿದರು. ಸರಕಾರಿ ನೌಕರಿಯ ಅನುಭವ ಅವರ ಸಾಹಿತ್ಯಕೃಷಿಗೆ ಬಹಳ ಸ್ಫೂರ್ತಿ ನೀಡಿದೆ.

ಮಾಸ್ತಿ ವೆಂಕಟೇಶ ಅಯ್ಯಂಗಾರ್ ವಿದ್ಯಾರ್ಥಿಯಾಗಿದ್ದಾಗಲೇ ಸಾಹಿತ್ಯ ರಚನೆಗೆ ಪ್ರಾರಂಭಿಸಿದರು. 1910-11ರ ಸುಮಾರಿನಲ್ಲಿ 'ರಂಗನ ಮದುವೆ' ಎಂಬ ಮೊದಲ ಸಣ್ಣಕಥೆಯನ್ನು ಬರೆದರು. 'ಶ್ರೀನಿವಾಸ' ಎಂಬುದು ಅವರ ಕಾವ್ಯನಾಮ. ಅವರ ಹುಟ್ಟೂರು 'ಮಾಸ್ತಿ' ಕಾವ್ಯನಾಮದಂತೆಯೇ ಜನಪ್ರಿಯವಾಗಿದೆ. 1920ರಲ್ಲಿ 'ಕೆಲವು ಸಣ್ಣಕಥೆಗಳು' ಎಂಬ ಪ್ರಥಮ ಪುಸ್ತಕ ಪ್ರಕಟವಾಯಿತು. ಇದು ಮಾಸ್ತಿಯವರ ಮೊದಲ ಪುಸ್ತಕವಷ್ಟೇ ಅಲ್ಲ, ಆಧುನಿಕ ಕನ್ನಡ ಸಾಹಿತ್ಯದ ವಿಶಿಷ್ಟವಾದ ಮೊದಲ ಪುಸ್ತಕವೂ ಹೌದು. ಮಾಸ್ತಿಯವರ ಸುಮಾರು 90 ಕಥೆಗಳು 14 ಸಂಪುಟಗಳಲ್ಲಿ ಪ್ರಕಟವಾಗಿವೆ. ಅವರು ಕನ್ನಡದ ಮೊದಲ ಕಥೆಗಾರರಲ್ಲ, ಆದರೆ ಅವರಷ್ಟು ಉತ್ತಮ ಕಥೆಗಳನ್ನು ಕನ್ನಡದಲ್ಲಿ ಬರೆದವರು ವಿರಳ. ಕಥೆಗಳಿಗೂ ಮಾಸ್ತಿಯವರಿಗೂ ಅವಿನಾ ಸಂಬಂಧ. ಕನ್ನಡ ಕಥಾಬ್ರಹ್ಮ, ಸಣ್ಣಕಥೆಗಳ ಪಿತಾಮಹ, ಕಥೆಗಾರರ ಅಣ್ಣ ಎಂಬ ಹೇಳಿಕೆಗಳು ಇದಕ್ಕೆ ಸಾಕ್ಷಿ. ಅವರ ಕಥೆಗಳಲ್ಲಿ ಕಥಾಸಾಹಿತ್ಯದ ಅತ್ಯುತ್ತಮ ಅಂಶಗಳಿವೆ. ನಿಜಗಲ್ಲಿನ ರಾಣಿ, ಒಂದು ಹಳೆಯ ಕಥೆ, ಕಾಮನ ಹಬ್ಬದ ಒಂದು ಕಥೆ, ಮೊಸರಿನ ಮಂಗಮ್ಮ, ಜೋಗ್ಯೋರ ಅಂಜಪ್ಪನ ಕೋಳಿ ಕಥೆ', ವೆಂಕಟಶಾಮಿಯ ಪ್ರಣಯ, ಕಲ್ಮಾಡಿಯ ಕೋಣ ಮೊದಲಾದವು ಶ್ರೇಷ್ಠಕಥೆಗಳಾಗಿವೆ. ಮಾಸ್ತಿಯವರ ಸಣ್ಣಕಥೆಗಳ ಭಾಷೆ, ನಿರೂಪಣೆ, ಶೈಲಿ ಸರಳ. ಜೀವನದ ಅನುಭವ ನಿಚ್ಚಳ. ಕಥೆಯ ನಿರೂಪಣೆಗೆ ಅವರದೇ ಆದ ವಿಧಾನವಿದೆ. ಸಂಗೀತಗಾರನೊಬ್ಬನ ಜೀವನವನ್ನು ಆಧರಿಸಿರುವ 'ಸುಬ್ಬಣ್ಣ' ಎಂಬ ನೀಳ್ಗತೆ ಪ್ರಪಂಚದ ಅತ್ಯುತ್ತಮ ಕಥೆಗಳ ಸಾಲಿಗೆ ಸೇರುವಂಥದು. ಇದು ಇಂಗ್ಲಿಷ್, ತಮಿಳು, ತೆಲುಗು, ಮಲಯಾಳಂ, ಮರಾಠಿ, ಜರ್ಮನ್ ಭಾಷೆಗಳಿಗೂ ಅನುವಾದವಾಗಿದೆ, ಕುರುಡರಿಗಾಗಿ ಬ್ರೈಲ್ ಆವೃತ್ತಿಯೂ ಸಿದ್ಧವಾಗಿದೆ; ಹಲವು ಪುನರ್ಮುದ್ರಣ ಕಂಡಿರುವ ಜನಪ್ರಿಯ ಗ್ರಂಥವಾಗಿದೆ.

ಮಾಸ್ತಿಯವರ ಕಥೆಗಳ ವಸ್ತು, ಪಾತ್ರ, ಘಟನೆ, ಅನುಭವ, ವಿನ್ಯಾಸಗಳ ಕ್ಷೇತ್ರ ವಿಶಾಲವಾಗಿದೆ; ವಿವಿಧ ಮುಖಗಳಿಂದ ಕೂಡಿದೆ. ಅವರ ಕಥಾ ನಿರೂಪಣೆ ಅನುಕರಣೀಯವಾದುದು. ಅವರಿಗೆ ಕಥಾ ನಿರೂಪಣೆ ಮುಖ್ಯ, ಘಟನೆಯಲ್ಲ. ಮನುಷ್ಯ ಸ್ವಭಾವ ಮುಖ್ಯ; ತಂತ್ರವಲ್ಲ. 1968ರಲ್ಲಿ ಮಾಸ್ತಿಯವರ 'ಸಣ್ಣಕಥೆ'ಗಳು (ಸಣ್ಣಕಥೆಗಳು 12-13ರ ಸಂಯುಕ್ತ ಸಂಪುಟ) ಗ್ರಂಥಕ್ಕೆ ದೆಹಲಿ ಸಾಹಿತ್ಯ ಅಕಾಡೆಮಿಯ ಬಹುಮಾನ ದೊರೆಯಿತು. ಆ ಸಂದರ್ಭದಲ್ಲಿ ಮೈಸೂರಿನಲ್ಲಿ ಸಾರ್ವಜನಿಕರು ಅವರನ್ನು ಸನ್ಮಾನಿಸಿದರು. 'ಸಣ್ಣ ಕಥೆಗಳು' ಎರಡನೇ ಸಂಪುಟ 'ಗುರುದಕ್ಷಿಣೆ' ಎಂಬ ಹೆಸರಿನಲ್ಲಿ ತಮಿಳು ಭಾಷೆಗೆ ಭಾಷಾಂತರವಾಗಿದೆ.

ಮಾಸ್ತಿಯವರ ಕಥಾಸಾಹಿತ್ಯದಲ್ಲಿ ಚೆನ್ನಬಸವನಾಯಕ ಮತ್ತು ಚಿಕವೀರರಾಜೇಂದ್ರ ಕಾದಂಬರಿಗಳು ಶಿಖರಪ್ರಾಯವಾಗಿವೆ. ಇವು ಕ್ರಮವಾಗಿ 1949 ಮತ್ತು 1956ರಲ್ಲಿ ಪ್ರಕಟವಾಗಿವೆ. ಇವೆರಡೂ ಐತಿಹಾಸಿಕ ಕಾದಂಬರಿಗಳು. ಕಾದಂಬರಿಯ ಶಿಲ್ಪ, ಆರಂಭ, ಬೆಳವಣಿಗೆ, ಮುಕ್ತಾಯ, ಪರಿಣಾಮಗಳಲ್ಲಿ ಎರಡು ಕಾದಂಬರಿಗಳಿಗೂ ಸಾಮ್ಯವಿದೆ. ಇವು ದುರಂತ ಕಾದಂಬರಿಗಳು. ಬಿದನೂರಿನ ನಾಯಕ ಮನೆತನದ ಕಥೆ ಚೆನ್ನಬಸವನಾಯಕ ಕಾದಂಬರಿಯ ವಸ್ತು. ಮನೆತನದ ಅವ್ಯವಸ್ಥೆ, ರಾಣಿಯ ಕೆಟ್ಟ ನಡತೆ, ತಾಯಿ ಮಕ್ಕಳ ವೈಮನಸ್ಸು, ಅಕ್ರಮ ಸಂಬಂಧ, ಇತಿಹಾಸದ ಘಟನಾವಳಿಗಳು ಕಾದಂಬರಿಯಲ್ಲಿ ಮುಖ್ಯವಾಗಿವೆ. ಬಿದನೂರಿನ ಇತಿಹಾಸ ನಮ್ಮ ಜನಾಂಗದ ಭಾಗವಾಗಿ ವರ್ಣನೆಯಾಗಿದೆ. ಭೂತಕಾಲದ ಕತೆಯನ್ನು ವರ್ತಮಾನದೊಡನೆ ಬೆಸುಗೆ ಹಾಕಿ ಜೀವಂತಗೊಳಿಸುವ ಪ್ರಯತ್ನ ಕಾದಂಬರಿಯಲ್ಲಿ ನಡೆದಿದೆ. ಚೆನ್ನಬಸವಪ್ಪನಾಯಕ ಕಾದಂಬರಿ ಇಂಗ್ಲಿಷ್, ಹಿಂದಿ, ತಮಿಳು ಭಾಷೆಗಳಿಗೂ ಅನುವಾದವಾಗಿದೆ.

ಕೊಡಗಿನ ರಾಜಕೀಯದ ದುರವಸ್ಥೆ, ಕೊನೆಯ ರಾಜನ ದುರಂತ ಚಿಕವೀರರಾಜೇಂದ್ರ ಕಾದಂಬರಿಯ ವಸ್ತು. ರಾಜನ ಲಂಪಟತನ, ದುಷ್ಟ ಸ್ನೇಹ, ಅಧಿಕಾರ ಲಾಲಸೆ, ಕಾಮುಕತನ, ಪ್ರಜಾಹಿತ ನಿರ್ಲಕ್ಷ್ಯ, ಸ್ವಾರ್ಥ, ಸ್ವೇಚ್ಛಾ ಪ್ರವೃತ್ತಿ, ಅದರಿಂದಾಗುವ ಅವನತಿ ಕಾದಂಬರಿಯಲ್ಲಿ

ಪ್ರಧಾನವಾಗಿದೆ. ವೈಯಕ್ತಿಕ ಅಧಃಪತನ, ಐತಿಹಾಸಿಕ ಮುನ್ನಡೆಯ ಅನಿವಾರ್ಯತೆ ಏಕಕಾಲದಲ್ಲಿ ಚಿತ್ರಿತವಾಗಿದೆ. ಕಾದಂಬರಿಯಲ್ಲಿ ಸಾರ್ವಕಾಲಿಕವಾದ, ಶಾಶ್ವತವಾದ ಆಲೋಚನೆಯಿದೆ. ಅಂದಿನ ಕತೆಗೆ ಇಂದಿನ ಅರ್ಥ ತುಂಬಲು ಅವಕಾಶವಿದೆ. ಕೊಡಗಿನ ಅಂದಿನ ಆಡಳಿತದ ಕತೆ ಇಂದಿನ ಆಡಳಿತಕ್ಕೆ ಅನ್ವಯಿಸುವಂತಿದೆ. ಕೊಡಗಿನ ಕೊನೆಯ ಅರಸ, ಚಿಕವೀರರಾಜನ ದುರಂತ ಕಥೆ ಕಣ್ಣಿಗೆ ಕಟ್ಟುವಂತೆ, ಮನಕರಗುವಂತೆ ವರ್ಣನೆಯಾಗಿದೆ.

ಚಿಕವೀರರಾಜೇಂದ್ರ ಕಾದಂಬರಿಗೆ 1983ರಲ್ಲಿ ಜ್ಞಾನಪೀಠ ಪ್ರಶಸ್ತಿ ಬಂದಿದೆ. ಸ್ವಾತಂತ್ರ್ಯೋತ್ತರ ಭಾರತದ ಪ್ರಮುಖ ಸಾಹಿತ್ಯ ಗ್ರಂಥವೆಂಬುದು ಪ್ರಶಸ್ತಿ ಆಯ್ಕೆಯ ಕಾರಣ. ಮಾಸ್ತಿಯವರ ಸಾಹಿತ್ಯ ರಚನೆಯ ಹಿನ್ನೆಲೆಯಲ್ಲಿ ಜ್ಞಾನಪೀಠ ಪ್ರಶಸ್ತಿ ದೊಡ್ಡದೇನಲ್ಲ. ಮಾಸ್ತಿಯವರಿಗೆ ಬಂದ ಪ್ರಶಸ್ತಿ ಕನ್ನಡಕ್ಕೆ, ಕನ್ನಡಿಗರಿಗೆ, ಕನ್ನಡ ನಾಡಿಗೆ ಬಂದ ಪ್ರಶಸ್ತಿಯಾಗಿದೆ. ಅದರಿಂದ ಕನ್ನಡಕ್ಕೆ ಕೋಡು ಬಂದಂತಾಯಿತು. ಪ್ರಶಸ್ತಿ ನೆಪದಲ್ಲಿ ಕನ್ನಡದ ಸಾಹಿತಿ ಮಾಸ್ತಿ ಭಾರತದ ಸಾಹಿತಿಯಾದರು. ಕನ್ನಡದಲ್ಲಿ ಜ್ಞಾನಪೀಠ ಪ್ರಶಸ್ತಿ ಪಡೆದವರಲ್ಲಿ ಮಾಸ್ತಿ ನಾಲ್ಕನೆಯವರು. ಪ್ರಶಸ್ತಿ ಬಂದ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ಸರಕಾರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ನಗರ ಸಭೆ, ಸಾಹಿತ್ಯ ಪರಿಷತ್ತುಗಳಿಂದ ಅದ್ದೂರಿಯಾದ ಸನ್ಮಾನ ಸಮಾರಂಭಗಳು ನಡೆದವು. ನ್ಯಾಷನಲ್ ಬುಕ್ ಟ್ರಸ್ಟ್ ಚಿಕವೀರ ರಾಜೇಂದ್ರ ಕಾದಂಬರಿಯನ್ನು ಭಾರತದ ಎಲ್ಲ ಭಾಷೆಗಳಿಗೆ ಅನುವಾದಿಸಲು ಯೋಜನೆ ಹಾಕಿಕೊಂಡಿದೆ.

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸಾಕಷ್ಟು ಕಾವ್ಯಗಳನ್ನು ಬರೆದಿದ್ದಾರೆ. ಅವರ ಕಾವ್ಯಗಳಲ್ಲಿ 'ಶ್ರೀನಿವಾಸ' ದರ್ಶನ ಪ್ರಮುಖವಾಗಿದೆ. ದೇವರ ಲೀಲೆ, ಆತ್ಮ ನಿವೇದನ, ಪ್ರಕೃತಿ ಸೌಂದರ್ಯ, ಕನ್ನಡ ಪ್ರೇಮ, ಸಮಾಜದ ಅಂಕುಡೊಂಕು, ನಾಡುನುಡಿ ವ್ಯಕ್ತಿಗಳಿಗೆ ಸಂಬಂಧಿಸಿದ ರಚನೆಗಳು ಭಾವಗೀತೆಗಳಲ್ಲಿ ಎದ್ದುಕಾಣುತ್ತವೆ. ಶ್ರೀನಿವಾಸರ ಕಾವ್ಯ ಸರಳವಾದುದು; ಸುಂದರವಾದುದು. ಅವರ ಪದ್ಯ ಸಾಹಿತ್ಯದಲ್ಲಿ ಚೆಲುವು, ಹಾಸ್ಯ ಹೆಚ್ಚಾಗಿದೆ. ಗದ್ಯ ಪದ್ಯಗಳ ನಡುವಿನ ಮಡಿ ಮೈಲಿಗೆಯ ನಿರ್ಬಂಧವನ್ನು ತೆಗೆದುಹಾಕಿ ಕಾವ್ಯ ಬರೆದಿರುವುದು ಅವರ ವೈಶಿಷ್ಟ್ಯ. ಶ್ರೀನಿವಾಸರ ಮೊದಲ ಭಾವಗೀತೆಗಳ ಸಂಗ್ರಹ ಬಿನ್ನಹ 1922ರಲ್ಲಿ ಪ್ರಕಟವಾಯಿತು. ಹೂವುಗಳು, ಕನ್ನೈದಿಲೆ, ನಾಲ್ಕತ್ತರ ನಲುಗು, ಕೊಂಬು, ಕೋಗಿಲೆ-ಮೊದಲಾದ ಭಾವಗೀತೆಗಳು ವಿಶಿಷ್ಟವಾಗಿವೆ. ಕನ್ನಡ ನವೋದಯ ಕಾವ್ಯದಲ್ಲಿ ಶ್ರೀನಿವಾಸರ ಕಾವ್ಯಕ್ಕೆ ಚಾರಿತ್ರಿಕ ಮಹತ್ವವಿದೆ. ಬಿನ್ನಹ, ಅರುಣ, ತಾವರೆ, ಮಲಾರ, ಸಂಕ್ರಾಂತಿ ಮುಂತಾದ ಕವನ ಸಂಗ್ರಹಗಳಲ್ಲಿ ಭಾವಗೀತೆಗಳ ವೈವಿಧ್ಯವನ್ನು ಕಾಣಬಹುದು.

ಕಥನ ಗೀತೆಗಳಲ್ಲಿ ಶ್ರೀನಿವಾಸರ ಸಾಧನೆ, ಸಿದ್ಧಿ ಗಮನಾರ್ಹ. ಗದ್ಯದಲ್ಲಾಗಲೀ, ಪದ್ಯದಲ್ಲಾಗಲೀ ಕಥೆ ಹೇಳುವುದರಲ್ಲಿ ಒಂದೇ ರೀತಿಯ ಪರಿಣತಿ ಕಂಡುಬರುತ್ತದೆ. ಸರಳರಗಳೆಯನ್ನು ಸಾರ್ಥಕವಾಗಿ ಬಳಸಿದ್ದಾರೆ. 1940ರಲ್ಲಿ ಪ್ರಕಟವಾದ ಗೌಡರ ಮಲ್ಲಿ, ಅನಂತರ ಬೆಳಕುಕಂಡ ನವರಾತ್ರಿ, ಮೂಕನ ಮಕ್ಕಳು, ರಾಮನವಮಿ ಸಂಗ್ರಹಗಳಲ್ಲಿ ಶ್ರೀನಿವಾಸರ ಕಥನಗೀತೆಗಳು ಅಡಕವಾಗಿವೆ. ಕನ್ನಡ ನವೋದಯ ಕಾಲದಲ್ಲಿ ರಚನೆಯಾದ ಅವರ ಕಥನಗೀತೆಗಳಲ್ಲಿ ಚಾರಿತ್ರಿಕವಾದ, ಸಾಹಿತ್ಯಕವಾದ, ಸುಸಂಸ್ಕೃತವಾದ ಮೌಲಿಕ ಗುಣಗಳಿವೆ. ಮದಲಿಂಗನ ಕಣಿವೆ, ಗೌಡರ ಮಲ್ಲಿ, ಸೋಜಿಗದ ಹೊಳಲು, ದೇಶಾಚಾರ, ಗುಂಡುಸೂಜಿ ಮುಂತಾದ ಕಥನಗೀತೆಗಳು ಉತ್ತಮವಾಗಿವೆ.

ಶ್ರೀನಿವಾಸರ ಕಾವ್ಯ ಪ್ರಕಾರದ ಆಚಾರ್ಯ ಕೃತಿ 'ಶ್ರೀರಾಮ ಪಟ್ಟಾಭಿಷೇಕ'. ಸರಳ ರಗಳೆಯನ್ನು ಸಹಜವಾಗಿ ದುಡಿಸಿಕೊಂಡಿರುವ ಗ್ರಂಥ. ಶ್ರೀರಾಮನ ಪಟ್ಟಾಭಿಷೇಕವನ್ನು ಕೇಂದ್ರವಾಗಿರಿಸಿ ಸಂಪೂರ್ಣ ರಾಮಾಯಣದ ಕತೆಯನ್ನು ಕಂಡರಿಸಿರುವ ಬೃಹತ್ ಕೃತಿ. ಇದು ಶ್ರೀನಿವಾಸರ ಮಹತ್ವಾಕಾಂಕ್ಷೆಯ ಕಾವ್ಯವೂ ಹೌದು. ಒಂಬತ್ತು ಸಾವಿರ ಸಾಲುಗಳಿಗೆ ಮಿಕ್ಕಿರುವ ಈ ದೀರ್ಘ ಕಾವ್ಯದಲ್ಲಿ ಸಂಪ್ರದಾಯಬದ್ಧವಾದ ಹಾಗೂ ಹೊಸ ಆಯಾಮದ ಅಂಶಗಳನ್ನೊಳಗೊಂಡ ರಾಮಾಯಣದ ಕಥೆಯನ್ನು ಕಾಣಬಹುದು. 'ಶ್ರೀರಾಮ ಪಟ್ಟಾಭಿಷೇಕ' ಕಾವ್ಯ 1972ರಲ್ಲಿ ಪ್ರಕಟವಾಯಿತು.

ಮಾಸ್ತಿಯರು ಹಲವು ನಾಟಕಗಳನ್ನು ಬರೆದಿದ್ದಾರೆ. 1923ರಲ್ಲಿ ಪ್ರಕಟವಾದ 'ಶಾಂತಾ' ಅವರ ಮೊದಲ ನಾಟಕ. 'ಮಂಜುಳಾ' ಎಂಬುದು ಸಾಮಾಜಿಕ ನಾಟಕ. ಉಳಿದವು ಪುರಾಣ ಹಾಗೂ ಇತಿಹಾಸದಿಂದ ಪ್ರೇರಣೆ ಪಡೆದಿವೆ. ಕಾಡುಕುರುಬರಿಗೆ ಸಂಬಂಧಿಸಿದ, ಐತಿಹಾಸಿಕ ಅಂಶಗಳನ್ನೊಳಗೊಂಡ 'ಕಾಕನಕೋಟೆ' ಮಾಸ್ತಿಯವರ ಉತ್ತಮ ನಾಟಕ. ಗೌತಮ ಬುದ್ಧನ ಹೆಂಡತಿ ಯಶೋಧರೆಯ ಮಾನಸಿಕ ತುಮುಲವನ್ನು ಪ್ರಧಾನವಾಗಿ ಚಿತ್ರಿಸಿರುವ 'ಯಶೋಧರಾ' ಅತ್ಯುತ್ತಮ ನಾಟಕ. ಮಹಾಕವಿ ಕಾಳಿದಾಸನ ಬಗೆಗೆ ಇರುವ ಕಟ್ಟುಕತೆ, ಇತಿಹಾಸವನ್ನು ಬಳಸಿಕೊಂಡು ರಚಿಸಿರುವ ಏಳು ಅಂಕಗಳ ನಾಟಕ 'ಕಾಳಿದಾಸ'. ಇದಕ್ಕೆ 1983ರಲ್ಲಿ 'ವರ್ಧಮಾನ ಪ್ರಶಸ್ತಿ' ದೊರಕಿದೆ. ಮಾಸ್ತಿಯವರ ಸುಸಂಸ್ಕೃತ ಮನೋಧರ್ಮ ನಾಟಕ ರಚನೆಯಲ್ಲಿ ನಿಚ್ಚಳವಾಗಿ ಕಾಣುತ್ತದೆ. ಕನ್ನಡ ನಾಟಕ ಕ್ಷೇತ್ರಕ್ಕೆ ಮಾಸ್ತಿಯವರ ನಾಟಕಕೃಷಿ ಸಾಕಷ್ಟು ಕಸುವು ತುಂಬಿದೆ. ಷೇಕ್ಸ್‌ಪಿಯರ್ ಮಹಾಕವಿಯ ಕೆಲವು ನಾಟಕಗಳನ್ನು ಚಂಡಮಾರುತ, ದ್ವಾದಶ ರಾತ್ರಿ, ಲಿಯರ್ ಮಹಾರಾಜ ಮೊದಲಾದ ಹೆಸರುಗಳಲ್ಲಿ ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಮಾಸ್ತಿಯವರ ಭಾಷಾಂತರ ನಾಟಕಗಳಿಂದ ಕನ್ನಡ ನಾಟಕಸಾಹಿತ್ಯ ಗರಿಗಟ್ಟಿಕೊಳ್ಳಲು ಸಹಾಯಕವಾಗಿದೆ.

ಮಾಸ್ತಿಯವರ ಆತ್ಮಕತೆ 'ಭಾವ' ಮೂರು ಸಂಪುಟಗಳಲ್ಲಿ ಪ್ರಕಟವಾಗಿದೆ. 'ಭಾವ'ದಲ್ಲಿ ಅವರ ಬದುಕಿನ ಮೂಲಧಾತುಗಳ ದಾಖಲೆಗಳಿವೆ. ನವರತ್ನರಾಮರಾವ್, ರವೀಂದ್ರನಾಥ ಠಾಗೂರರು, ಶ್ರೀರಾಮಕೃಷ್ಣ ಎಂಬ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. ವೇದಗಳ ಕಾಲದಿಂದ ಬೆಳೆದುಬಂದ ಧರ್ಮ, ಸಂಸ್ಕೃತಿ, ಪರಂಪರೆಗಳ ಅವಲೋಕನವಾದ 'ಅಂತರಗಂಗೆ'; ವಾಲ್ಮೀಕಿ ರಾಮಾಯಣವನ್ನು ಕುರಿತ ವಿಮರ್ಶಾತ್ಮಕ ಅಧ್ಯಯನವಾದ 'ಆದಿಕವಿ ವಾಲ್ಮೀಕಿ'; ಆಧುನಿಕ ಕನ್ನಡ ಸಾಹಿತ್ಯದ ಪ್ರಾರಂಭದ ಮುಖ್ಯ ಘಟ್ಟಗಳನ್ನು ವಿವೇಚಿಸುವ 'ನಮ್ಮ ಹೊಸ ಸಾಹಿತ್ಯದ ಆರಂಭ'; ಹಿಂದೂ ಧರ್ಮದ ಹಿನ್ನೆಲೆಯಲ್ಲಿ ಮೂಡಿರುವ 'ಧರ್ಮಸಂರಕ್ಷಣೆ'; ಮಹಾಭಾರತ ಕಾವ್ಯದ ಸಾರಸಂಗ್ರಹವಾದ 'ಭಾರತ ತೀರ್ಥ' ಗ್ರಂಥಗಳು ಮಾಸ್ತಿಯವರ ಪರಿಪಕ್ವ ಬದುಕಿನ, ಉದಾತ್ತ ಚಿಂತನೆಯ ವೈಚಾರಿಕ ಗ್ರಂಥಗಳಾಗಿವೆ. ಭಾರತ ಮತ್ತು ಪಾಶ್ಚಾತ್ಯ ಕೃತಿಗಳು ವಿವೇಚನೆಯನ್ನೊಳಗೊಂಡ 'ವಿಮರ್ಶೆ'ಗಳು, ನೂರಾರು 'ಪ್ರಸಂಗ'ಗಳು, ವಿಚಾರಸೂಕ್ತಿಗಳು, ಕನ್ನಡದ ಕೆಚ್ಚನ್ನು ಉತ್ತೇಜಿಸುವ

ಲೇಖನಗಳು ಅವರಿಂದ ಸೃಷ್ಟಿಯಾಗಿವೆ. ಕರ್ನಾಟ ಭಾರತ ಕಥಾಮಂಜರಿ, ರವೀಂದ್ರ ಪ್ರಶಸ್ತಿ, ಸಂಭಾವನೆ, ಸರ್.ಎಂ. ವಿಶ್ವೇಶ್ವರಯ್ಯ ಮೊದಲಾದ ಗ್ರಂಥಗಳನ್ನು ಸಂಪಾದಿಸಿದ್ದಾರೆ.

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಇಂಗ್ಲಿಷ್ ಭಾಷೆಯಲ್ಲೂ ಗ್ರಂಥಗಳನ್ನು ರಚಿಸಿದ್ದಾರೆ. ತಮ್ಮ ಕೆಲವು ಕನ್ನಡ ಕೃತಿಗಳನ್ನು ಸ್ವತಃ ಇಂಗ್ಲಿಷ್‌ಗೆ ಭಾಷಾಂತರಿಸಿದ್ದಾರೆ. ಅವರ ಇಂಗ್ಲಿಷ್ ಭಾಷೆಯ ಬರಹ ಕೂಡ ಕನ್ನಡದಷ್ಟೇ ಆಕರ್ಷಕವಾಗಿದೆ. ಮಾಸ್ತಿಯವರ ಮೂಲ ಕೃತಿಗಳು ಕನ್ನಡೇತರರಿಗೆ ತಲುಪಲು, ಅಂತರರಾಷ್ಟ್ರ ಸಂಪರ್ಕ ಪಡೆಯಲು, ಅವರ ಇಂಗ್ಲಿಷ್ ಕೃತಿಗಳು ನೆರವಾಗಿವೆ. ಕನ್ನಡ ಭಾಷೆಯ ಶ್ರೇಷ್ಠ ಗ್ರಂಥಗಳು ಇಂಗ್ಲಿಷ್ ಭಾಷೆಗೆ, ಇತರ ಭಾಷೆಗಳಿಗೆ ಭಾಷಾಂತರವಾಗಬೇಕು, ಕನ್ನಡ ಸಾಹಿತ್ಯದ ಪರಿಚಯ ಇತರ ಭಾಷಿಕರಿಗೆ ಆಗಬೇಕು ಎಂಬುದು ಮಾಸ್ತಿಯವರ ಕಳಕಳಿ.

ಮಾಸ್ತಿಯವರು ತಮ್ಮ ಕೆಲವು ಕೃತಿಗಳಿಗೆ ಅನ್ಯಮೂಲಗಳಿಂದ ಪ್ರೇರಣೆ ಪಡೆದಿದ್ದಾರೆ. ಮಹಾಕವಿ ವಾಲ್ಮೀಕಿ ಅವರಿಗೆ ಹೆಚ್ಚು ಪ್ರಿಯ, ರಾಮಾಯಣ ಮಹಾಕಾವ್ಯವೂ ಅಷ್ಟೇ. ರಾಮಾಯಣಕ್ಕೆ ಸಂಬಂಧಿಸಿದ ಹಲವು ಅಂಶಗಳನ್ನು, ಹೊಸಸೃಷ್ಟಿಯನ್ನು ತಮ್ಮ ಗ್ರಂಥಗಳಲ್ಲಿ ಅಭಿವ್ಯಕ್ತಿಸಿರುವುದನ್ನು ಕಾಣಬಹುದು. ಪಾಶ್ಚಾತ್ಯ ಕವಿಗಳಲ್ಲಿ ಷೇಕ್ಸ್‌ಪಿಯರ್ ಅವರಿಗೆ ಇಷ್ಟವಾದ ಕವಿ. ಷೇಕ್ಸ್‌ಪಿಯರ್‌ನ ಕೆಲವು ನಾಟಕಗಳನ್ನು ಅನುವಾದಿಸಿರುವುದೇ ಇದಕ್ಕೆ ಸಾಕ್ಷಿ. ಪ್ರಪಂಚದ ಮಹಾ ಸಾಹಿತಿಗಳಾದ ಗಯಟೆ, ರವೀಂದ್ರನಾಥ ಠಾಗೂರ್ ಮೊದಲಾದವರ ಬಗೆಗೂ ಮಾಸ್ತಿಯವರ ಚಿಂತನೆ ಹರಿದಿದೆ. ತಮಗೆ ಪ್ರಿಯವಾದ ಅನ್ಯ ಭಾಷೆಯ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಕನ್ನಡದ ಸಾಹಿತ್ಯ ಸಂಪತ್ತು ವೃದ್ಧಿಸಲು ಕಾರಣರಾಗಿದ್ದಾರೆ. ಅನ್ಯ ಭಾಷೆಯ ಕೃತಿಗಳಿಂದ ಗಳಿಸಿಕೊಂಡ ಅನುಭವವನ್ನು ತಮ್ಮ ಸ್ವಂತ ಗ್ರಂಥಗಳ ಮೂಲಕ ಕನ್ನಡಿಗರಿಗೆ ನೀಡಿದ್ದಾರೆ. ಪ್ರಪಂಚದ ವಿವಿಧ ಸಾಹಿತ್ಯ ಪ್ರಕಾರಗಳನ್ನು ಕನ್ನಡದಲ್ಲಿ ಪ್ರಯೋಗಮಾಡಿ, ಹಲವು ಸಾಹಿತ್ಯ ಪ್ರಕಾರಗಳಲ್ಲಿ ಏಕಪ್ರಕಾರವಾದ ಯಶಸ್ಸು ಗಳಿಸಿ, ಕನ್ನಡ ಸಾಹಿತ್ಯ ಶ್ರೀಮಂತವಾಗಲು ಶ್ರಮಿಸಿದ್ದಾರೆ. ಕನ್ನಡ ಸಾಹಿತ್ಯ ಸರ್ವತೋಮುಖವಾಗಿ ಬೆಳೆಯಲು ಮಾಸ್ತಿಯವರ ಸಾಹಿತ್ಯ ದಾರಿತೋರಿದೆ.

ಮಾಸ್ತಿಯವರ ಕೃತಿಗಳು ಸಂಖ್ಯೆಯಲ್ಲಿ, ಸತ್ವದಲ್ಲಿ, ಗುಣದಲ್ಲಿ, ಗಾತ್ರದಲ್ಲಿ, ವೈವಿಧ್ಯದಲ್ಲಿ ದೊಡ್ಡವು. ಕತೆ, ಕಾದಂಬರಿ, ಕಾವ್ಯ, ನಾಟಕ, ವಿಮರ್ಶೆ, ಆತ್ಮಕತೆ, ಜೀವನ ಚರಿತ್ರೆ, ಪ್ರಬಂಧ, ಜನಪದ, ಪತ್ರಿಕೋದ್ಯಮ, ವಿಚಾರ ಸಾಹಿತ್ಯ ಮೊದಲಾದ ಪ್ರಕಾರಗಳಲ್ಲಿ 120 ಗ್ರಂಥಗಳನ್ನು ಬರೆದಿದ್ದಾರೆ. ಇದರ ಜೊತೆಗೆ ಇಂಗ್ಲಿಷ್ ಭಾಷೆಯಲ್ಲಿಯೂ 17 ಗ್ರಂಥಗಳನ್ನು ರಚಿಸಿದ್ದಾರೆ. ಸುಮಾರು ಎಪ್ಪತ್ತು ವರ್ಷಗಳು ಸತತವಾಗಿ ಸಾಹಿತ್ಯ ಸೃಷ್ಟಿಸಿದ್ದಾರೆ. ಅವರು ತಾವು ಸಾಹಿತಿಯಾದುದಲ್ಲದೆ ಹಲವರು ಸಾಹಿತಿಗಳಾಗಲು ಸ್ಫೂರ್ತಿ ನೀಡಿದ್ದಾರೆ. ಪ್ರತಿಭಾವಂತ ಸಾಹಿತಿಗಳನ್ನು ಗುರುತಿಸಿ ಪ್ರೋತ್ಸಾಹಿಸಿದ್ದಾರೆ. ಹಲವರ ಗ್ರಂಥಗಳನ್ನು ಪ್ರಕಟಿಸಿ, ಹಲವರಿಗೆ ನಾನಾ ರೀತಿಯಲ್ಲಿ ನೆರವು ನೀಡಿ ಬೆಂಬಲಿಸಿದ್ದಾರೆ. ಕನ್ನಡದಲ್ಲಿ ಸಾಹಿತಿಗಳ ಪಡೆ ಸೃಷ್ಟಿಯಾಗಲು ಸಹಕರಿಸಿದ್ದಾರೆ. ಅವರ ಬದುಕು ಬರಹ ಹಲವು ಕೃತಿಗಳಿಗೆ, ಕೃತಿಕಾರರಿಗೆ ಪ್ರೇರಣೆ ನೀಡಿದೆ. ಮಾಸ್ತಿಯವರನ್ನು ಕುರಿತು ಇತರರಿಂದ ಮೌಲಿಕ ಗ್ರಂಥಗಳು ಬೆಳಕು ಕಂಡಿವೆ. ಸಂಭಾವನಾ ಗ್ರಂಥಗಳು, ವಿಮರ್ಶಾ ಗ್ರಂಥಗಳು ಸಾಕಷ್ಟು ಬಂದಿವೆ. ಕನ್ನಡ ಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿ ಅಭ್ಯಸಿಸಲು ಅವರ ಸಾಹಿತ್ಯ ಕೃತಿಗಳು ಉತ್ತಮ ಆಕರಗಳಾಗಿವೆ. ಮಾಸ್ತಿ ಕನ್ನಡ ಸಾಹಿತ್ಯ ಪರಂಪರೆಯ ಅವಿಭಾಜ್ಯ ಅಂಗ.

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಮನೆಮಾತು ತಮಿಳು, ಕಾಲೇಜಿನಲ್ಲಿ ಓದಿದ್ದು ಇಂಗ್ಲಿಷ್. ಬದುಕಿದ್ದು, ಬರೆದದ್ದು ಕನ್ನಡ. ಅವರು ಮೊದಲಿನಿಂದಲೂ ಕನ್ನಡದ ಪರವಾಗಿ ದನಿಗೂಡಿಸಿದವರು. 1910ರ ಸುಮಾರಿನಲ್ಲಿ ಕನ್ನಡದಲ್ಲಿ ಮಾತಾಡುವುದಕ್ಕೆ, ಬರೆಯುವುದಕ್ಕೆ ವಿದ್ಯಾವಂತರು ಹಿಂದುಮುಂದು ನೋಡುತ್ತಿದ್ದರು. ಅಂಥ ದಿನಗಳಲ್ಲಿ ಮಾಸ್ತಿಯವರು ಕನ್ನಡದಲ್ಲಿ ಬರೆದರು; ಕನ್ನಡದ ಏಳಿಗೆಗೆ ಹೋರಾಡಿದರು. ಇದರಿಂದ ಕನ್ನಡ ಭಾಷೆ, ಸಾಹಿತ್ಯ ಬೆಳೆಯಲು ಸಹಾಯವಾಯಿತು. ಮಾಸ್ತಿಯವರ ಮಾರ್ಗ ಹಲವರಿಗೆ ದಾರಿದೀಪವಾಯಿತು. ಕರ್ನಾಟಕ ಏಕೀಕರಣಕ್ಕೆ ಅವರು ನಿಷ್ಠೆಯಿಂದ ದುಡಿದರು. ತಮ್ಮ ಉಪನ್ಯಾಸಗಳಿಂದ, ವೈಚಾರಿಕ ಬರಹಗಳಿಂದ ಜನರನ್ನು ಎಚ್ಚರಿಸಿದರು. ಅವರಿಂದ ಕನ್ನಡ ಸಾಹಿತ್ಯ ಕ್ಷೇತ್ರ ವಿಸ್ತಾರವಾಯಿತು.

ಮಾಸ್ತಿಯವರು ಪತ್ರಿಕೋದ್ಯಮಿಯೂ ಹೌದು. 1944ರಿಂದ 1965ರವರೆಗೆ 'ಜೀವನ' ಮಾಸಪತ್ರಿಕೆಯನ್ನು ಯಶಸ್ವಿಯಾಗಿ ನಡೆಸಿದರು. 'ಜೀವನ' ಪತ್ರಿಕೆಯ ಮೂಲಕ ಅನೇಕ ಸಾಹಿತಿಗಳ ಕೃತಿಗಳು ಬೆಳಕು ಕಂಡಿವೆ. 'ಜೀವನ' ಪತ್ರಿಕೆಯ ಸಂಪಾದಕೀಯಗಳಲ್ಲಿ ಮೂಡಿದ ಸಾಹಿತ್ಯ, ಸಂಸ್ಕೃತಿ, ಕಲೆ, ರಾಜಕೀಯ, ಧರ್ಮ, ದೇವರು, ಸಾಮಾಜಿಕ, ಆರ್ಥಿಕ ವಿಚಾರ ಮೊದಲಾದ ಹಲವು ಹತ್ತು ವಿಷಯಗಳ ಬಗೆಗಿನ ಲೇಖನಗಳಲ್ಲಿ ಮಾಸ್ತಿಯವರ ಭಾವ ಮಿಂಚಿದೆ. ಈ ಬರಹಗಳು 'ಜೀವನ ಸಂಪಾದಕೀಯ' ಎಂಬ ಹೆಸರಿನ ಗ್ರಂಥದಲ್ಲಿ ಪ್ರಕಟವಾಗಿವೆ. ಕನ್ನಡ ಪತ್ರಿಕೋದ್ಯಮದಲ್ಲಿ ಮಾಸ್ತಿಯವರ 'ಜೀವನ' ಮರೆಯಲಾಗದ ನೆನಪು.

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸರಕಾರದ ಉನ್ನತ ಹುದ್ದೆಗಳಲ್ಲಿ, ವಿವಿಧ ಸ್ಥಳಗಳಲ್ಲಿ ಅನುಭವ ಗಳಿಸಿದವರು. ಜನಸಾಮಾನ್ಯರ ಜನಜೀವನವನ್ನು ಹತ್ತಿರದಿಂದ ಗಮನಿಸಿದವರು. ನಮ್ಮ ಜನರ ಆಚಾರ ವಿಚಾರ, ಸಂಸ್ಕೃತಿ, ಪರಂಪರೆ, ಬದುಕಿನ ರೀತಿ ನೀತಿ ಮೊದಲಾದವುಗಳ ಬಗೆಗೆ ಆಸಕ್ತಿ ತಳೆದವರು. ಶುಚಿಯಾದ, ಆದರ್ಶವಾದ ಸಂಪ್ರದಾಯಕ್ಕೆ ನಿಷ್ಠೆ ತೋರಿದವರು. ರಾಜಮಹಾರಾಜರ ಗೌರವಕ್ಕೆ ಪಾತ್ರರಾದವರು. ಬ್ರಿಟಿಷರ ಆಡಳಿತವನ್ನು, ಬ್ರಿಟಿಷ್ ಆಡಳಿತಗಾರರನ್ನು ಕಣ್ಣಾರೆ ಕಂಡವರು. ಸಂಪ್ರದಾಯಬದ್ಧವಾದ ಮನೆತನದಲ್ಲಿ ಹುಟ್ಟಿ ಬೆಳೆದವರು. ದೊಡ್ಡವರನ್ನು, ದೊಡ್ಡ ಬದುಕನ್ನು ನೋಡಿದವರು; ಅನುಸರಿಸಿದವರು. ತಮ್ಮಂತೆ ಇತರರೂ ಅನುಸರಿಸಲು ಆಶಿಸಿದವರು. ಜನರ ಬದುಕು ದೊಡ್ಡದಾಗಲು ಹಾರೈಸಿದವರು. ಈ ಅಂಶಗಳಿಗೆ ಒತ್ತುಕೊಡುವ ವಸ್ತು, ಪಾತ್ರ, ಸನ್ನಿವೇಶ, ನಿರೂಪಣೆಗಳು ಮಾಸ್ತಿಯವರ ಕೃತಿಗಳಲ್ಲಿ ಯಥೇಚ್ಛವಾಗಿ ಕಂಡುಬರುತ್ತವೆ. ಭಾರತ ದೇಶದಲ್ಲಿ ಕಾಣಬಹುದಾದ, ಕಾಣಬೇಕಾದ ಪಾತ್ರಗಳು ಅವರವು. ಮಾಸ್ತಿಯವರಲ್ಲಿ ಆದರ್ಶ ಪಾತ್ರಗಳು ಅಧಿಕ. ದುಷ್ಟರು, ಕ್ರೂರಿಗಳು, ಅಯೋಗ್ಯರು ಎನ್ನಬಹುದಾದ ಪಾತ್ರಗಳು ಕಡಿಮೆ. ಇದ್ದರೂ ಅವುಗಳ ಬಗೆಗೆ ಇನ್ನಿಲ್ಲದ ಅನುಕಂಪ. ದುಷ್ಟತನವೂ ದೌರ್ಬಲ್ಯ ಎನ್ನುವುದು ಅವರ

ಮನೋಧರ್ಮ. ಆದರ್ಶ ಸ್ತ್ರೀ ಪಾತ್ರಗಳ ಬಗೆಗೆ ಮಾಸ್ತಿಯವರಿಗೆ ಒಲವು ಹೆಚ್ಚು.

ಮಾಸ್ತಿಯವರ ಎಲ್ಲ ಕೃತಿಗಳಲ್ಲಿ ಸರಳತೆಗೆ ಮೊದಲ ಪಟ್ಟ. ಸರಳತೆ ಮಾಸ್ತಿ ಕೃತಿಗಳ ಗುಣವೂ ಹೌದು; ದೋಷವೂ ಹೌದು. ಸರಳತೆಯಿಂದ ಮಾಸ್ತಿಯವರು ಅನುಪಮವಾದ ಶಬ್ದಚಿತ್ರಗಳನ್ನು ಸೃಷ್ಟಿಸಿರುವುದೂ ಉಂಟು; ಜಾಳಾದ ನಿರೂಪಣೆ ನೀಡಿರುವುದೂ ಉಂಟು. ಆದರೆ ಸರಳವಾದ ಶೈಲಿಯಲ್ಲಿ ಮಾಸ್ತಿಯವರು ಸೋತಿರುವುದಕ್ಕಿಂತ ಗೆದ್ದಿರುವುದೇ ಹೆಚ್ಚು. ಸಾಧಾರಣ ಮಾತುಗಳಿಂದ ಅಸಾಧಾರಣ ಚಿತ್ರ ನಿರ್ಮಿಸುವ ಕಲೆ ಅವರದು. ಮಾಸ್ತಿಯವರ ಶೈಲಿ ಅವರಿಗೇ ವಿಶಿಷ್ಟವಾದುದು.

ಕನ್ನಡ ನಾಡು ನುಡಿಗೆ ಬಹುಮುಖ ಸೇವೆ ಸಲ್ಲಿಸಿ, ಕೀರ್ತಿ ಗಳಿಸಿದ ಮಾಸ್ತಿಯವರಿಗೆ ಹಲವು ಗೌರವ ಸ್ಥಾನಗಳು ಲಭಿಸಿವೆ. 1929ರಲ್ಲಿ ಬೆಳಗಾವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅವರನ್ನು ಅಧ್ಯಕ್ಷರನ್ನಾಗಿ ಆರಿಸಿ ಕನ್ನಡಿಗರು ಗೌರವ ತೋರಿದರು. ಅವರ ಅಧ್ಯಕ್ಷ ಭಾಷಣದಲ್ಲಿ 'ಕನ್ನಡದ ಸೇವೆ'ಯ ಕಳಕಳಿ ಎದ್ದುಕಾಣುತ್ತದೆ. ಅವರು 1942ರಲ್ಲಿ ಹೈದರಾಬಾದಿನಲ್ಲಿ ನಡೆದ ಅಖಿಲ ಭಾರತ ಪ್ರಾಚ್ಯ ಸಮ್ಮೇಳನದ ಕನ್ನಡ ವಿಭಾಗದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. 1943ರಿಂದ 48ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ, 1953-54ರ ಅವಧಿಯಲ್ಲಿ ಅಧ್ಯಕ್ಷರಾಗಿ ಸಾಹಿತ್ಯ ಪರಿಷತ್ತಿಗೆ ದುಡಿದರು. 1946ರಲ್ಲಿ ಮದರಾಸಿನಲ್ಲಿ ನಡೆದ ದಕ್ಷಿಣ ಭಾಷೆಗಳ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. 1954ರಲ್ಲಿ ಪುಣೆಯಲ್ಲಿ ಜರುಗಿದ ಭಾಷಾ ಸಮ್ಮೇಳನದಲ್ಲಿ ರಾಷ್ಟ್ರಭಾಷಾ ವಿಭಾಗದ ಅಧ್ಯಕ್ಷರಾಗಿದ್ದರು. 1956ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, 1977ರಲ್ಲಿ ಮೈಸೂರು ವಿಶ್ವವಿದ್ಯಾಲಯ ಮಾಸ್ತಿಯವರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿ ನೀಡಿ ಸನ್ಮಾನಿಸಿದವು. ಆ ಸಂದರ್ಭದ ಭಾಷಣದಲ್ಲಿ 'ಕನ್ನಡ ಲೆಂಕ' ಮಾಸ್ತಿಯವರ ಕನ್ನಡ ಪ್ರೇಮ ಕಂಡುಬರುತ್ತದೆ. 1956ರಲ್ಲಿ ಬೊಂಬಾಯಿಯಲ್ಲಿ ನಡೆದ ಅಖಿಲ ಭಾರತ ಲೇಖಕರ ಸಮ್ಮೇಳನಕ್ಕೆ ಅವರು ಅಧ್ಯಕ್ಷರಾಗಿದ್ದರು. 1964ರಲ್ಲಿ ಇಂಡಿಯನ್ ಪಿ.ಇ.ಎನ್. ಸಂಸ್ಥೆಯ ಉಪಾಧ್ಯಕ್ಷರಾಗಿ, 1976ರಲ್ಲಿ ಅದರ ಅಧ್ಯಕ್ಷರಾಗಿ ಆಯ್ಕೆಯಾದರು. 1974ರಲ್ಲಿ ಸಾಹಿತ್ಯ ಅಕಾಡೆಮಿ ಫೆಲೋ ಆಗಿ ಆಯ್ಕೆಯಾದುದು ಕನ್ನಡ ಸಾಹಿತಿಗೆ ದೊರಕಿದ ರಾಷ್ಟ್ರಮಟ್ಟದ ಗೌರವ. 1979ರಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಪಾತ್ರರಾದರು. 1983ರಲ್ಲಿ ಅವರಿಗೆ ಜ್ಞಾನಪೀಠ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಕನ್ನಡಕ್ಕೆ ಅಖಿಲ ಭಾರತ ಮಟ್ಟದ ಜ್ಞಾನಪೀಠ ಪ್ರಶಸ್ತಿ ಗಳಿಸಿಕೊಟ್ಟ ಮಹಾನ್ ಬರಹಗಾರರ ಸಾಲಿಗೆ ಮಾಸ್ತಿಯವರೂ ಸೇರಿದರು; ಕನ್ನಡ ಸಾಹಿತ್ಯಕ್ಕೆ ಹೆಗ್ಗಳಿಕೆ ತಂದರು.

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಕನ್ನಡ ಭಾಷೆಗೆ, ಸಾಹಿತ್ಯಕ್ಕೆ ಹೊಸ ಸೌಂದರ್ಯ, ಅರ್ಥ, ಆಯಾಮ ತಂದುಕೊಟ್ಟ ಧೀಮಂತ ಸಾಹಿತಿ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಅವರದು ಸಿಂಹಪಾಲು. ಅವರ ಬದುಕು ಬರಹಗಳಿಂದ ಕನ್ನಡಕ್ಕೆ, ಕನ್ನಡಿಗರಿಗೆ, ಕನ್ನಡ ಸಾಹಿತ್ಯಕ್ಕೆ ಬೆಲೆ ಬಂದಿದೆ. ಸಹಜವಾದ ಪ್ರತಿಭೆ ಅವರದು. ದೇವರು, ಧರ್ಮದ ಬಗೆಗೆ ನಂಬಿಕೆ ಅವರಿಗೆ. ಚಮತ್ಕಾರ, ನಾವೀನ್ಯದ ವ್ಯಾಮೋಹಕ್ಕೆ ಬಲಿಬಿದ್ದು ಕೃತಿಯ ಸ್ವಾರಸ್ಯ ಕೆಡಿಸುವುದು ಅವರಿಗೆ ಅಪ್ರಿಯ. ಅವರದು ಆತ್ಮಶೋಧನೆಯ, ಮೌಲ್ಯಾಧಾರಿತ ಸಾಹಿತ್ಯ. ಬದುಕಿನ ನಿಗೂಢವನ್ನು ಎಳೆಎಳೆಯಾಗಿ ಬಿಡಿಸಿ ಅನಿರ್ವಚನೀಯವಾದ ಆನಂದ ನೀಡುವುದು ಮಾಸ್ತಿಯವರ ಸ್ವಭಾವ. ಆಡಂಬರ, ಅಟ್ಟಹಾಸಗಳಿಂದ ದೂರ. ಕನ್ನಡ ಪರಂಪರೆಯ ಜೀವನಾನುಭವದ, ಆತ್ಮಸಂಯಮದ ಬರವಣಿಗೆ ಅವರದು. ನಿರಂತರ ಎಚ್ಚರ, ವಿವೇಕ, ಪರಿಪಕ್ವತೆ, ಜಾಣತನ ಅವರಲ್ಲಿ, ಅವರ ಕೃತಿಗಳಲ್ಲಿ ಮುಂದು. ಅವರ ಗದ್ಯದಲ್ಲಿ ಪದ್ಯತನವಿದೆ; ಪದ್ಯದಲ್ಲಿ ಗದ್ಯತನವಿದೆ.

ಮಾಸ್ತಿಯವರ ಸಾಹಿತ್ಯದಂತೆ ಅವರ ಬದುಕೂ ದೊಡ್ಡದು. ಅವರ ಬದುಕು ಒಂದು ಮಹಾಕೃತಿ. ಅವರ ಬದುಕಿಗೂ, ಬರಹಕ್ಕೂ ಅಂತರ ಕಡಿಮೆ. ಬದುಕಿದಂತೆ ಬರೆಯಬೇಕು, ಬರೆದಂತೆ ಬದುಕಬೇಕು ಎನ್ನುವುದಕ್ಕೆ ಅವರು ಉತ್ತಮ ಉದಾಹರಣೆ. ಕನ್ನಡಕ್ಕೆ ಅಖಿಲ ಭಾರತ ಖ್ಯಾತಿ ದೊರಕಿಸಿಕೊಟ್ಟ ಕೀರ್ತಿ ಅವರದು. 1986ರಲ್ಲಿ ಅವರು ನಿಧನರಾದಾಗ ಅವರಿಗೆ 95 ವರ್ಷ ತುಂಬಿತ್ತು.

❑

# 'ವ್ಯಾಕರಣತೀರ್ಥ' ಚಂದ್ರಶೇಖರ ಶಾಸ್ತ್ರಿಗಳು

ಡಾ. ಸಂಗಮೇಶ ಸವದತ್ತಿಮಠ

ಕನ್ನಡ ಬಂಟರ ಬಂಟಂ
ಕನ್ನಡ ಕಿಂಕರರ ಕಿಂಕರರ ಕಿಂಕರ ನಾಂ
ಕನ್ನಡ ಲೆಂಕರ ಲೆಂಕಂ
ಕನ್ನಡ ತೊತ್ತೆನಗೆ ಬೇರೆ ಗತಿಮತಿಯುಂಟೇ

1940ರಲ್ಲಿ ಧಾರವಾಡದಲ್ಲಿ ನಡೆದ ಅಖಿಲಭಾರತ 25ನೆಯ ಕನ್ನಡಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನದಿಂದ ತಮ್ಮನ್ನು ಮೇಲಿನಂತೆ ಪರಿಚಯಿಸಿಕೊಂಡವರು ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳು. ಸ್ವತಃ ಕನ್ನಡ ಮಾತೃಭಾಷೆಯವರಾಗಿ ಸಂಸ್ಕೃತ ಪಾಂಡಿತ್ಯವನ್ನು ಗಳಿಸಿ ತೆಲುಗು, ಉರ್ದು, ಇಂಗ್ಲೀಷ್, ಹಿಂದಿ, ಮರಾಠಿ ಮುಂತಾದ ಹಲವು ಭಾಷಾ ಪರಿಣತಿಯನ್ನೂ ಪಡೆದುಕೊಂಡವರು. ಇಷ್ಟಾಗಿಯೂ ಅವರು ಕನ್ನಡ ನಾಡುನುಡಿ ಸಾಹಿತ್ಯಕ್ಕಾಗಿಯೇ ತಮ್ಮ ಸಮಸ್ತ ಧೀಶಕ್ತಿಯನ್ನು ಮೀಸಲಾಗಿಟ್ಟರು.

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನ ಹೊಳಲು ಗ್ರಾಮದ ಹಿರೇಮಠದ ಪಟ್ಟದಯ್ಯನವರು ಮತ್ತು ಅವರ ಧರ್ಮಪತ್ನಿ ಬಸಮ್ಮನವರಿಗೆ ಏಕೈಕಪುತ್ರನಾಗಿ 1892ರ ಜನವರಿ ಮೂರರಂದು ಚಂದ್ರಶೇಖರು ಜನಿಸಿದರು. ಚಿಕ್ಕವಯಸ್ಸಿನಲ್ಲಿಯೇ ತಂದೆ ಪಟ್ಟದಯ್ಯನವರನ್ನು ಕಳೆದುಕೊಂಡ ಚಂದ್ರಶೇಖರ ತಾಯಿಯ ತವರೂರಾದ ಮಾಗಳ ಗ್ರಾಮದ ಹಾಲವಡ್ಡಿ ಮಠದಲ್ಲಿಯೇ ಬಾಲ್ಯವನ್ನು ಕಳೆಯಬೇಕಾಯಿತು. ಬಡ ಜಂಗಮರ ಮನೆತನ, ಕಿತ್ತು ತಿನ್ನುವ ಬಡತನ. ಕಂತೆಭಿಕ್ಷೆಯಿಲ್ಲದೆ ಹೊಟ್ಟೆಗೆ ಹಿಟ್ಟಿಲ್ಲ. ಉಳಿದ ದಿನಗಳಲ್ಲಿ ಹೊಲಗಳಲ್ಲಿ ಕೂಲಿನಾಲಿ ಮಾಡಿ ಜೀವಿಸಬೇಕು. ಇಂಥ ಪರಿಸ್ಥಿತಿಯಲ್ಲಿ ಚಂದ್ರಶೇಖರ ಮಾಗಳದಲ್ಲಿ ಮೂರನೆಯ ತರಗತಿಯವರೆಗೆ ಪ್ರಾಥಮಿಕ ಶಾಲೆಯಲ್ಲಿ ಕಲಿತದ್ದಾಯಿತು. ಮುಂದಿನ ಓದಿಗೆ ಆ ಶಾಲೆಯಲ್ಲಿ ಅವಕಾಶವಿಲ್ಲ. ಸರಿ, ಮನೆಯಲ್ಲಿ ಅಜ್ಜ ಸಂಗ್ರಹಿಸಿದ್ದ ಅಮರಕೋಶ, ಮಹಿಮ್ನಸ್ತೋತ್ರ, ನಿಜಲಿಂಗಶತಕ, ಸೋಮೇಶ್ವರಶತಕ ಇವೇ ಮುಂತಾದ ಗ್ರಂಥಗಳನ್ನು ತನ್ನಷ್ಟಕ್ಕೆ ತಾನೆ ಪಠಣಮಾಡತೊಡಗಿದ. ನಾಲ್ಕು ಮತ್ತು ಐದನೆ ತರಗತಿಗಳ ಶಿಕ್ಷಣಕ್ಕಾಗಿ ಮತ್ತೆ ತಂದೆಯ ಊರಾದ ಹೊಳಲು ಗ್ರಾಮಕ್ಕೆ ಬಂದ. ಭಕ್ತರ ಮನೆಯಲ್ಲಿ ಪ್ರಸಾದ, ಶಾಲೆಯಲ್ಲಿ ಓದು. ಹೇಗೂ ಐದನೇ ತರಗತಿ ಮುಗಿಯಿತು. ಮುಂದಿನ ವಿದ್ಯಾಭ್ಯಾಸಕ್ಕಾಗಿ ಹರಪನಹಳ್ಳಿಗೆ ಹೋಗಬೇಕು. ಬಡತನದ ಪರಿಸ್ಥಿತಿಯಿಂದಾಗಿ ಪರಸ್ಥಳದಲ್ಲಿ ಶಿಕ್ಷಣವನ್ನು ಮುಂದುವರಿಸುವುದು ಅಸಾಧ್ಯವಾಯಿತು. ಓದಿಗೆ ವಿದಾಯ ಹೇಳಿ ಮಾಗಳಕ್ಕೆ ತಿರುಗಿ ಬಂದು ಕೂಲಿನಾಲಿ ಮಾಡಿ ಉದರಂಭರಣೆಗಾರಂಭವಾಯಿತು. ಚಂದ್ರಶೇಖರನ ತಂದೆಯ ಮಿತ್ರ ಬ್ಯಾಡಗಿಯ ಸಿದ್ದಲಿಂಗಪ್ಪನವರು ಒಮ್ಮೆ ಮಾಗಳಕ್ಕೆ ಬಂದಾಗ ಚಂದ್ರಶೇಖರನನ್ನು ನೋಡಿದರು. ಪ್ರತಿಭಾವಂತನಾದ ಈ ಹುಡುಗನಿಗೆ ಈ ಸ್ಥಿತಿ ಬಂದುದನ್ನು ತಿಳಿದು ಮರಮರನೆ ಮರುಗಿ ತಮ್ಮೂರಿಗೆ ಕರೆದುಕೊಂಡು ಹೋದರು. ಬ್ಯಾಡಗಿಯ ಮುಪ್ಪಯ್ಯನಮಠದ ಸಂಸ್ಕೃತ ಪಾಠಶಾಲೆಗೆ ಚಂದ್ರಶೇಖರನನ್ನು ಸೇರಿಸಿದರು. ಆದರೆ ಅದೇ ಕಾಲಕ್ಕೆ (1911) ಪ್ಲೇಗು ಮಾರಿ ಹಚ್ಚಿ ಊರೆಲ್ಲ ಖಾಲಿ ಆಯಿತು. ಚಂದ್ರಶೇಖರನು ಶಿರಹಟ್ಟಿಗೆ ಬಂದು ಫಕೀರೇಶ್ವರಸ್ವಾಮಿಗಳ ಮಠದಲ್ಲಿ ಆಶ್ರಯ ಪಡೆದುಕೊಂಡ. ಅಲ್ಲಿ ಒಂದಿಷ್ಟು ಜ್ಯೋತಿಷ್ಯಶಾಸ್ತ್ರವನ್ನು ಕಲಿತ, ಅದು ಅವರಿಗೆ ಹಿಡಿಸಲಿಲ್ಲ. ಹಾವೇರಿಗೆ ಬಂದು ಹುಕ್ಕೇರಿಮಠದ ಸಂಸ್ಕೃತ ಪಾಠಶಾಲೆಗೆ ಸೇರಿಕೊಂಡ. 1915ರಲ್ಲಿ ಗದುಗಿನ ತೋಂಟದಾರ್ಯಮಠದ ಸಂಸ್ಕೃತ ಪಾಠಶಾಲೆಗೆ ಪ್ರವೇಶ ಪಡೆದ. ಆದರೆ ಚಂದ್ರಶೇಖರನಿಗೆ ಈ ಪಾಠಗಳಲ್ಲಿ ಅಧ್ಯಯನ ತೃಪ್ತಿ ನೀಡಲಿಲ್ಲ. ಅಂತೆಯೆ ಸುಪ್ರಸಿದ್ಧ ಕಾಶಿ ಜಂಗಮವಾಡಿಮಠದ ಸಂಸ್ಕೃತ ಪಾಠ ಶಾಲೆಗೆ ಸೇರಿಕೊಂಡ, ಅಲ್ಲಿ ಸತತ ಏಳು ವರ್ಷ ವ್ಯಾಸಂಗ ಮಾಡಲು ಸದವಕಾಶ ಲಭಿಸಿತು. ಸಾಹಿತ್ಯ ಮತ್ತು ವ್ಯಾಕರಣಗಳಲ್ಲಿ 'ಪಂಡಿತ' ಹಾಗೂ 'ಸಾಹಿತ್ಯಾಚಾರ್ಯ' ಪದವಿಗಳನ್ನು ಅಲ್ಲಿ ಗಳಿಸಿದ. ನಂತರ ಕಲಕತ್ತೆಗೆ ಹೋಗಿ 'ವ್ಯಾಕರಣತೀರ್ಥ' ಪದವಿ ಪಡೆದ. ಅಲ್ಲಿಂದ ಚಂದ್ರಶೇಖರ 'ವ್ಯಾಕರಣತೀರ್ಥ 'ಪಂ|| ಚಂದ್ರಶೇಖರ ಶಾಸ್ತ್ರಿ'ಗಳಾಗಿ ಮಾರ್ಪಟ್ಟ.

1924ರಲ್ಲಿ ಕಾಶಿಯಿಂದ ತಾಯ್ನಾಡಿಗೆ ಮರಳಿಬಂದ ಶಾಸ್ತ್ರಿಗಳು ಯಾದಗಿರಿಯಲ್ಲಿ ಸಜ್ಜನಶೆಟ್ಟಿ ಶಂಕರಣ್ಣನವರ ಉದಾರ ದೇಣಿಗೆಯಿಂದ ಚಿತ್ರದುರ್ಗದ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳು ಪ್ರಾರಂಭ ಮಾಡಬೇಕಾಗಿದ್ದ ಸಂಸ್ಕೃತ ಪಾಠಶಾಲೆಯ ಜವಾಬ್ದಾರಿಯನ್ನು ಶ್ರೀಗಳ ಅಪ್ಪಣೆಯಂತೆ ಹೊತ್ತುಕೊಂಡರು. ಅದೇ ವರ್ಷ ಯಾದಗಿರಿಯಲ್ಲಿ ಶಂಕರ ಕಾಲೇಜು ಆರಂಭಗೊಂಡಿತು. ಚಂದ್ರಶೇಖರ ಶಾಸ್ತ್ರಿಗಳು ಅದರ ಸ್ಥಾಪಕ ಪ್ರಾಚಾರ್ಯರಾದರು. ನೂರಾರು ವಿದ್ಯಾರ್ಥಿಗಳು ಕಾಲೇಜಿಗೆ ಸೇರಿಕೊಂಡರು. ಕಾಲೇಜಿನ ವಿದ್ಯಾರ್ಥಿಗಳಿಗಾಗಿ ಒಂದು ಪ್ರಸಾದನಿಲಯವನ್ನು ಆರಂಭಿಸಿದರು. ಇಡೀ ಕರ್ನಾಟಕದಲ್ಲಿಯೇ ಅತ್ಯುತ್ತಮ ಕಾಲೇಜುಗಳಲ್ಲಿ ಒಂದು ಎಂದು ಶಂಕರ್ ಕಾಲೇಜು ಹೆಸರುಗಳಿಸಿತು. ಅಖಿಲಭಾರತ ಮಟ್ಟದ ಸಂಸ್ಕೃತ ಪರೀಕ್ಷೆಗಳು ನಡೆಯುವಂಥ ಕೇಂದ್ರವಾಗಿ ಕಾಲೇಜು ಪರಿಗಣಿಸಲ್ಪಟ್ಟಿತು.

1931ರಲ್ಲಿ ಚಂದ್ರಶೇಖರ ಶಾಸ್ತ್ರಿಗಳು ಮೂರುಸಾವಿರಮಠದ ಗಂಗಾಧರ ಸಂಸ್ಕೃತ ಕಾಲೇಜಿನ ಪ್ರಥಮ ಪ್ರಾಚಾರ್ಯರಾಗಿ ಹುಬ್ಬಳ್ಳಿಗೆ ಬಂದರು. ಹುಬ್ಬಳ್ಳಿಯ ಕಾಲೇಜು ಚಂದ್ರಶೇಖರ ಶಾಸ್ತ್ರಿಗಳಿಂದಾಗಿ ಹೆಚ್ಚು ಪ್ರಸಿದ್ಧಿ ಪಡೆಯಲಾರಂಭಿಸಿತು. ಯಾದಗಿರಿ ಕಾಲೇಜು ಸೊರಗಿತು. ಇದನ್ನರಿತ ಯಾದಗಿರಿಯ ಕೆಲವು ಹಿರಿಯರು ಹುಬ್ಬಳ್ಳಿಗೆ ಬಂದು ಶಾಸ್ತ್ರಿಗಳು ಯಾದಗಿರಿಯನ್ನು ಬಿಡುವಂತೆ ಮಾಡಿದ ತಮ್ಮ ತಪ್ಪನ್ನು ಮನ್ನಿಸಲು ವಿನಂತಿಸಿ, ಶಾಸ್ತ್ರಿಗಳನ್ನು ಮನವೊಲಿಸಿ ಮತ್ತೆ ಯಾದಗಿರಿಗೆ (1938) ಕರೆತಂದರು. ನಂತರ ಶಾಸ್ತ್ರಿಗಳು ತಮ್ಮ ನಿವೃತ್ತಿಯವರೆಗೂ (1948) ಸುಮಾರು ಹತ್ತುವರ್ಷ ಅಲ್ಲಿದ್ದು ಕಾಲೇಜನ್ನು ಸಮರ್ಥವಾಗಿ ಮುನ್ನಡೆಸಿದರು.

### ಕನ್ನಡ ಸೇವೆ

ಚಂದ್ರಶೇಖರ ಶಾಸ್ತ್ರಿಗಳು ಸಂಸ್ಕೃತದಲ್ಲಿ ಅಪಾರ ಪಾಂಡಿತ್ಯವನ್ನು ಗಳಿಸಿ ಆಗಿನ ಕಾಲದಲ್ಲಿ ಶ್ರೇಷ್ಠವೆನಿಸಿದ 'ವ್ಯಾಕರಣತೀರ್ಥ' ಪದವಿಯನ್ನು ಪಡೆದು ಸಂಸ್ಕೃತ ಕಾಲೇಜುಗಳನ್ನು ಸ್ಥಾಪಿಸಿ ಅವುಗಳ ಅಭಿವೃದ್ಧಿಯಲ್ಲಿ ಸತತ ಎರಡೂವರೆ ದಶಕಗಳವರೆಗೆ ಶ್ರಮಿಸಿದರು. ತಮ್ಮ ವಿದ್ಯಾಭ್ಯಾಸ ಎಲ್ಲವೂ ಸಂಸ್ಕೃತವಾಗಿತ್ತು. ಹೀಗಿದ್ದೂ ಅವರು ಕನ್ನಡ ನಾಡು- ನುಡಿಗಳಿಗಾಗಿ

ಸಲ್ಲಿಸಿರುವ ಸೇವೆ ಅನುಪಮವಾದುದು. ಹಳಗನ್ನಡ ಕಾವ್ಯಗಳನ್ನು, ವ್ಯಾಕರಣವನ್ನು ಆಳವಾಗಿ ಅಧ್ಯಯನ ಮಾಡಿದವರು. ವೇದಾಗಮಗಳನ್ನು ಮೂಲ ಸಂಸ್ಕೃತದಲ್ಲಿಯೇ ವ್ಯಾಸಂಗಗೈದು ಕನ್ನಡದ ವಚನಸಾಹಿತ್ಯಕ್ಕೆ ಅವು ಹೇಗೆ ಪ್ರೇರಕ-ಪೋಷಕವಾಗಿವೆ ಎಂಬುದನ್ನು ತುಲನಾತ್ಮಕವಾಗಿ ವಿವೇಚಿಸಿ ಅಮೂಲ್ಯವಾದ ಸಂಶೋಧನ ಲೇಖನಗಳನ್ನು ಕನ್ನಡದಲ್ಲಿಯೇ ರಚಿಸಿದ್ದಾರೆ.

ಪಂ. ಚಂದ್ರಶೇಖರ ಶಾಸ್ತ್ರಿಗಳು ಕನ್ನಡದಲ್ಲಿ ಸುಮಾರು 15 ಕೃತಿಗಳನ್ನು ರಚಿಸಿರುವುದಾಗಿ ತಿಳಿದು ಬಂದಿದೆ. ಅವಲ್ಲದೆ ನೂರಾರು ಲೇಖನಗಳನ್ನು ನಾಡಿನ ಶ್ರೇಷ್ಠಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ.

ಅವರ ಉಪಲಬ್ಧ ಕೃತಿಗಳಲ್ಲಿ-

1. ಬಸವತತ್ವ ರತ್ನಾಕರ, 2. ಕಾಡಸಿದ್ಧೇಶ್ವರ ವಚನ ಹಾಗೂ
3. ಧಾರವಾಡದ ಮೃತ್ಯುಂಜಯ ಶಿವಯೋಗಿಗಳ ಚರಿತ್ರೆ–ಇವು ಮೂರು ಮಾತ್ರ.

ಅನುಪಲಬ್ಧ ಕೃತಿಗಳಲ್ಲಿ-

1. ಧರ್ಮವೀರ ಶಂಕ್ರಣ್ಣನವರ ಚರಿತ್ರೆ
2. ಮದನಮೋಹನ ಮಾಲವೀಯರ ಚರಿತ್ರೆ
3. ಸ್ವತಂತ್ರ ಸಿದ್ಧಲಿಂಗೇಶ್ವರ ವಚನ
4. ಸಿದ್ಧೇಶ್ವರ ವಚನ
5. ರಾಜಗಿರಿ
6. ಶಬರಶಂಕರ ಪಾರ್ಥಪುರುಷ
7. ಲಿಂಗಧಾರಣವೂ ವೇದಮಂತ್ರಗಳೂ
8. ಚಾಣಕ್ಯನೀತಿ ದರ್ಪಣ
9. ಭಗವಾನ ಬಸವೇಶ್ವರ ಜಯಂತಿ
10. ರೇಣುಕ ವಿಜಯ
11. ಕೊಲ್ಲಿಪಾಕಿ
12. ಅತ್ಮಚರಿತ್ರೆ–ಒಳಗೊಂಡಿವೆ.

ಚಂದ್ರಶೇಖರ ಶಾಸ್ತ್ರಿಗಳು ಕೇವಲ ಒಬ್ಬ ಸಂಸ್ಕೃತ ವಿದ್ವಾಂಸರಾಗಿ ಹಾಗೂ ಪಾಂಡಿತ್ಯಪೂರ್ಣ ಕೃತಿರಚನಾಕಾರರಾಗಿ ಮಾತ್ರ ನಿಲ್ಲದೆ ಶ್ರೇಷ್ಠ ಆಡಳಿತಗಾರರಾಗಿ, ಉತ್ತಮ ಸಂಶೋಧಕರಾಗಿ, ಪತ್ರಿಕೋದ್ಯಮಿಯಾಗಿ, ಸಂಘಟಕರಾಗಿ, ರಾಜಕೀಯ ವಿಮರ್ಶಕರಾಗಿ, ಕೃಷಿಕರಾಗಿ, ಚಲನಚಿತ್ರ ನಿರ್ಮಾಪಕರಾಗಿ ಹೀಗೆಯೆ ಹತ್ತು ಹಲವು ಕ್ಷೇತ್ರಗಳಲ್ಲಿ ತಮ್ಮ ವ್ಯಕ್ತಿತ್ವವನ್ನು ಪ್ರಕಾಶಿಸಿದವರು. ೧೯೧೯ರಿಂದ ನಿರಂತರವಾಗಿ ಸುಮಾರು ಅರ್ಧ ಶತಮಾನದ ಕಾಲ ನಾಡಿನ ವಿವಿಧ ಪ್ರತಿಕೆಗಳಿಗೆ-ಧರ್ಮ, ಸಾಹಿತ್ಯ, ಶಿಕ್ಷಣ, ರಾಷ್ಟ್ರದ ರಾಜ್ಯದ ರಾಜಕೀಯ, ಕರ್ನಾಟಕ ಏಕೀಕರಣ, ಸ್ವಾತಂತ್ರ್ಯ ಚಳುವಳಿ, ಭಾರತಿಯ, ಕರ್ನಾಟಕ ಸಂಸ್ಕೃತಿ ಇತ್ಯಾದಿ ವಿಷಯಗಳನ್ನು ಕುರಿತು ಸಹಸ್ರಾರು ವಿಚಾರಪೂರ್ಣ ಲೇಖನಗಳನ್ನು ಬರೆದಿದ್ದಾರೆ. ಅವರ ಲೇಖನಗಳು ಅತ್ಯಂತ ಜನಪ್ರಿಯವೂ ಆಗಿರುತ್ತಿದ್ದವೆಂಬುದಕ್ಕೆ ಒಂದು ಉದಾಹರಣೆಯೆಂದರೆ 1926ರಲ್ಲಿ ಅವರು ಬರೆದ 'ಭಗವಾನ್ ಬಸವೇಶ್ವರ ಜಯಂತಿ' ಎಂಬ ಲೇಖನವನ್ನು ಅನೇಕ ಮರು ಮುದ್ರಣ ಮಾಡಿಸಿ ಹಂಚಲಾಯಿತಂತೆ. ಈ ಲೇಖನದ ಜನಪ್ರಿಯತೆಯಿಂದ ಸ್ಫೂರ್ತಿಗೊಂಡು ಚಂದ್ರಶೇಖರ ಶಾಸ್ತ್ರಿಗಳು ಬಸವಣ್ಣನವರನ್ನು ಹಾಗೂ ಅವರ ವಚನಗಳನ್ನು ಕುರಿತು ವಿಶೇಷ ಅಧ್ಯಯನ, ಆಲೋಚನೆಗಳಿಗೆ ಹುಟ್ಟುಹಾಕಿದರು. ಪ್ರಾಯಃ ಇದರ ಪರಿಣಾಮವಾಗಿಯೇ 'ಬಸವ ರತ್ನಾಕರ' ಎಂಬ 700 ಪುಟಗಳ ಬೃಹತ್ ಗ್ರಂಥ ರೂಪುದಳೆದು 1961ರಲ್ಲಿ ಪ್ರಕಟಗೊಂಡಿತು. ಅಂತೆಯೆ "ಈ ಗ್ರಂಥವು ಬಸವಣ್ಣನವರ ಜೀವನ ಮತ್ತು ದರ್ಶನಗಳನ್ನು ಕುರಿತು ಒಂದು ಶಾಶ್ವತ ಕೃತಿ ಎಂಬುದರಲ್ಲಿ ಸಂದೇಹವೇ ಇಲ್ಲ" ಎಂಬುದಾಗಿ ಸುಪ್ರಸಿದ್ಧ ವಿದ್ವಾಂಸ ಹಾಗು ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿ ಪ್ರೊ.ಎಸ್.ಎ.ನಿಕ್ಕಮ್ ಅವರು ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ವೇದ-ಉಪನಿಷತ್ತು, ಗೀತೆ, ಶಿವಾಗಮಗಳನ್ನು ಆಳವಾಗಿ ಅಧ್ಯಯನಮಾಡಿದ್ದ ಶಾಸ್ತ್ರಿಗಳು ಬಸವಣ್ಣನವರ ವಚನಗಳನ್ನು ತೌಲನಿಕವಾಗಿ ವಿವೇಚಿಸಿದ್ದಾರೆ. ಇದರಿಂದಾಗಿ ಇದೊಂದು ಅಪೂರ್ವ ಸಂಶೋಧನ ಗ್ರಂಥವಾಗಿ ಹೊಮ್ಮಿದೆ. ಪ್ರಾಚೀನ ಭಾರತೀಯ ಧಾರ್ಮಿಕ-ತಾತ್ವಿಕ ಪರಂಪರೆಯ ಹಿನ್ನೆಲೆಯಲ್ಲಿ ಬಸವಣ್ಣನವರನ್ನು ತೂಗಿ ನೋಡಿದ್ದಾರೆ. ವೀರಶೈವದ ಮೂಲ ಬೇರುಗಳನ್ನು ಗುರುತಿಸಿ ಚರ್ಚಿಸಿದ್ದಾರೆ.

ಚಂದ್ರಶೇಖರ ಶಾಸ್ತ್ರಿಗಳು ತಮ್ಮ ಕೆಲವು ನಿಕಟವರ್ತಿಗಳೊಂದಿಗೆ 'ಭಗವಾನ್ ಬಸವೇಶ್ವರ' ಎಂಬ ಚಲನಚಿತ್ರವನ್ನು ನಿರ್ಮಿಸಲು ಪ್ರಯತ್ನಿಸಿದರು. ಇದಕ್ಕಾಗಿ ಅವರು ಬೆಂಗಳೂರು-ಮೈಸೂರು ಕಡೆಗೆ ಅಲೆದಾಡಬೇಕಾಯಿತು, ಚಲನಚಿತ್ರ ಪೂರ್ಣವಾಗಲಿಲ್ಲ. ಹಾನಿಯನ್ನು ಅನುಭವಿಸಬೇಕಾಯಿತು. ಆದರೆ ಅವರು ಮೈಸೂರಿನಲ್ಲಿ ಇರುವಾಗಲೆಲ್ಲ ಅಲ್ಲಿ ಶ್ರೇಷ್ಠ ವಿದ್ವಾಂಸರ ಸಂಪರ್ಕ ಅವರಿಗೆ ವಿಶೇಷ ಲಾಭವನ್ನು ತಂದುಕೊಟ್ಟಿತು. ಮೈಸೂರಿನ ಹಲವು ಸಂಸ್ಥೆಗಳಿಗೆ ಅವರು ಭೇಟಿ ನೀಡಿ ವಿದ್ವತ್ ಸಮಾರಂಭಗಳಲ್ಲಿ ಭಾಗವಹಿಸಿ ಉಪನ್ಯಾಸಗಳನ್ನು ನೀಡಿದರು.

ಇದೆಲ್ಲಕ್ಕೂ ಹೆಚ್ಚಾಗಿ, ಕನ್ನಡ ನಾಟಕಗಳ ಬಗೆಗೆ ಅವರು ಇಟ್ಟುಕೊಂಡಿದ್ದ ಅಭಿಮಾನ ಬಹುದೊಡ್ಡದು. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಸತತ ಹದಿನೈದು ವರ್ಷ ಸೇವೆ ಸಲ್ಲಿಸಿದ್ದು ಅಷ್ಟೆ ಅಲ್ಲ, ಪರಿಷತ್ತು ಹುಟ್ಟಿದಾರಭ್ಯ ತಮ್ಮ ವಯಸ್ಸಿನ ನೂರು ವರ್ಷಗಳವರೆಗು ಒಂದೂ ಬಿಡದೆ ಎಲ್ಲ ಸಮ್ಮೇಳನಗಳಲ್ಲಿ ಉಪಸ್ಥಿತರಾಗಿ ಭಾಗವಹಿಸಿದ ದಾಖಲೆ ಇವರದು. ಅಂತೆಯೆ ಕನ್ನಡ ಸಾಹಿತ್ಯ ಪರಿಷತ್ತು ಚಂದ್ರಶೇಖರ ಶಾಸ್ತ್ರಿಗಳಿಗೆ ನೂರು ತುಂಬಿದ ಸಂದರ್ಭದಲ್ಲಿ ಪರಿಷತ್ತಿನ ಅತ್ಯುನ್ನತ ಗೌರವ ಸದಸ್ಯತ್ವವನ್ನು ನೀಡಿ ಸನ್ಮಾನಿಸಿತು.

ಬಳ್ಳಾರಿ ಜಿಲ್ಲೆಯಲ್ಲಿ ಹುಟ್ಟಿ, ಹೈದ್ರಾಬಾದ್ ಕರ್ನಾಟಕ ಹಾಗೂ ಮುಂಬೈ ಕರ್ನಾಟಕದ ಪ್ರದೇಶಗಳಲ್ಲಿ ವೃತ್ತಿಸೇವೆ ಸಲ್ಲಿಸಿ ಬೆಂಗಳೂರು-ಮೈಸೂರು ಭಾಗದ ವಿದ್ವಜ್ಜನರ ಸಂಪರ್ಕವನ್ನು ಇಟ್ಟುಕೊಂಡು; ಹರಿದು ಹಂಚಿಹೋಗಿದ್ದ ಕರ್ನಾಟಕವನ್ನು ಒಂದುಗೂಡಿಸಲು ಅವರು ಮಾಡಿದ ಪ್ರಯತ್ನ ಅಷ್ಟಿಷ್ಟಲ್ಲ. ಅಂತೆಯೆ ಅವರನ್ನು ವ್ಯಾಕರಣಶಾಸ್ತ್ರಿ ಎಂದು ಕರೆಯುವ ಬದಲು 'ಏಕೀಕರಣಶಾಸ್ತ್ರಿ' ಎಂದೇ ಅವರ ಸ್ನೇಹಿತರು ಅವರನ್ನು ಕರೆಯುತ್ತಿದ್ದರಂತೆ. 'ಹಿಂದೂಸ್ತಾನಕ ಸ್ವಾತಂತ್ರ್ಯ ಸಿಗಲಿ ಬಿಡಲಿ ಕರ್ನಾಟಕ ಮಾತ್ರ ಒಂದುಗೂಡಬೇಕು' ಎನ್ನುವುದೇ ಅವರ ಮಂತ್ರವಾಗಿತ್ತು. ಹದಿಹರೆಯದಲ್ಲಿ ಇವರು ಏಕೀಕರಣ ಚಳುವಳಿಯಲ್ಲಿ ಧುಮುಕಿದರೆ, ಮುದಿವಯದಲ್ಲಿ ಗೋಕಾಕ ಚಳುವಳಿಯಲ್ಲಿ ಭಾಗಿಯಾಗಿದ್ದರು.

ಧಾರವಾಡದಲ್ಲಿ ನಡೆದ ೬೫ನೆ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನದಿಂದ ಕರ್ನಾಟಕ, ಕನ್ನಡ ಸಾಹಿತ್ಯ ಇವುಗಳನ್ನು ಕುರಿತು ಅವರು ವ್ಯಕ್ತಪಡಿಸಿದ ಚಿಂತನೆಗಳು ಅಮೋಘವಾಗಿದೆ.

1968ರಲ್ಲಿ ಇವರ 'ಬಸವತತ್ತ್ವ ರತ್ನಾಕರ' ಗ್ರಂಥಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1983ರಲ್ಲಿ ಕರ್ನಾಟಕ ಸರಕಾರದ ರಾಜ್ಯ ಪ್ರಶಸ್ತಿ, 1996ರಲ್ಲಿ ಸಂಶೋಧಕರಾಗಿ ಇರುವ ಚಿದಾನಂದ ಪ್ರಶಸ್ತಿ ಇವರಿಗೆ ತಾನಾಗೇ ಬಂದ ಪ್ರಶಸ್ತಿಗಳಲ್ಲಿ ಮುಖ್ಯವಾದುವುಗಳು. ಕನ್ನಡ ಸಾಹಿತ್ಯ ಪರಿಷತ್ತು 'ವ್ಯಾಕರಣ ತೀರ್ಥ' ಎಂಬ ಹೆಸರಿನಲ್ಲಿ ಅವರ ಅಯಾ ಕೃತಿಗಳ ಸಂಕಲನ ಗ್ರಂಥವೊಂದನ್ನು 1993ರಲ್ಲಿ ಪ್ರಕಟಿಸಿದೆ. ಬಳ್ಳಾರಿಯ ಇವರ ಅಭಿಮಾನಿಗಳು 'ಚಂದ್ರಚೇತನ' ಎಂಬ ಕವನ ಸಂಕಲನವನ್ನು ಪ್ರಕಟಿಸಿ ಸನ್ಮಾನಿಸಿದ್ದಾರೆ

**ಪ್ರಮುಖ ಕೃತಿಗಳು**

'ಬಸವತತ್ತ್ವ ರತ್ನಾಕರ' ಏಳುನೂರು ಪುಟಗಳ ಇವರ ಬೃಹತ್ ಸಂಶೋಧನ ಕೃತಿ. ಬಸವಣ್ಣನವರನ್ನು ಕುರಿತು ಹೆಚ್ಚು ಚಿಂತನೆಗಳು ಪ್ರಚಾರದಲ್ಲಿ ಇಲ್ಲದ ಸಮಯದಲ್ಲಿ, 1913ರಲ್ಲಿ ಮೊಟ್ಟಮೊದಲ ಸಲ ಧಾರವಾಡ ಮುರುಘಾಮಠದ ಮೃತ್ಯುಂಜಯಪ್ಪಗಳು ಆಚರಿಸಿದ ಬಸವ ಜಯಂತಿ ಆಚರಣೆ ಹಾಗೂ ತಾವೇ ಬರೆದ 'ಭಗವಾನ್ ಬಸವೇಶ್ವರ ಜಯಂತಿ' ಲೇಖನಕ್ಕೆ ಸಿಕ್ಕ ಅಭೂತಪೂರ್ವ ಪ್ರೋತ್ಸಾಹದಿಂದ ಶಾಸ್ತ್ರಿಗಳು ಬಸವಣ್ಣನವನರನ್ನು ಕುರಿತು ಸುದೀರ್ಘ ಅಧ್ಯಯನ ಮಾಡಲು ಪ್ರೇರಣೆ ಪಡೆದರು. 28 ಪ್ರಕರಣಗಳಲ್ಲಿ ಬಸವಣ್ಣವರನ್ನು ಕುರಿತು ಉದ್‌ಗ್ರಂಥ ಬರೆದರೂ ಅದು ಇನ್ನೂ ಅಪರಿಪೂರ್ಣ ಕೃತಿ ಎಂದೇ ಅವರು ಹೇಳಿಕೊಂಡಿದ್ದಾರೆ. ಇಲ್ಲಿ ಸಂಶೋಧಕನೊಬ್ಬನ ಪ್ರಾಮಾಣಿಕತೆ ನಮಗೆ ವೇದ್ಯವಾಗುತ್ತದೆ. ಬಸವಣ್ಣನವರ ಕ್ರಾಂತಿಕಾರಿ ಆಲೋಚನೆಗಳನ್ನು ಪಾರಂಪರಿಕ ತತ್ತ್ವಗಳ ಹಿನ್ನೆಲೆಯಲ್ಲಿ ಹಿಂಜಿಹಿಂಜಿ "ಬಸವತತ್ತ್ವ" ಯಾವುವು ಎಂಬುದನ್ನು ಪ್ರಪ್ರಥಮವಾಗಿ ಪ್ರತಿಪಾದಿಸುತ್ತಾರೆ. ವೇದಕಾಲೀನ ಹಾಗೂ ಸಮಕಾಲೀನ ಹಾಗೂ ಆಧುನಿಕ ವಿಚಾರಧಾರೆಯನ್ನು, ತತ್ತ್ವ ಪ್ರಣಾಲಿಯನ್ನು ಸಾದ್ಯಂತ ಬಸವಣ್ಣನವರ ಚಿಂತನೆಗಳಿಗೆ ಸೋದಾಹರಣ ಹೋಲಿಸುತ್ತಾರೆ. ಅವರ ಸೈದ್ಧಾಂತಿಕ ವಿವೇಚನೆ ವಿದ್ವತ್‌ಪೂರ್ಣ ಓತಪ್ರೋತವಾಗಿ ಇಲ್ಲಿ ವಾಕ್‌ಗೊಂಡು ನಿಂತಿದೆ. ವಿವಿಧ ಭಾಷೆಗಳ ನೂರಾರು ಗ್ರಂಥಗಳನ್ನು ಇದಕ್ಕಾಗಿಯೇ ಅವರು ಅಭ್ಯಸಿಸಿದ್ದರಿಂದ 'ಭಾರತೀಯ ತತ್ತ್ವಶಾಸ್ತ್ರ ಸಾಹಿತ್ಯಕ್ಕೆ ಇದೊಂದು ಅತ್ಯಮೂಲ್ಯ ಕೊಡುಗೆ' ಎಂದು ವಿದ್ವಾಂಸರು ಕೈವಾರಿಸಿದ್ದಾರೆ. 'ಬಸವತತ್ತ್ವ ರತ್ನಾಕರ' ಒಂದು ಸಂಪ್ರಬಂಧದಂತಿದೆ. ಶಾಸ್ತ್ರಿಗಳು ಇದನ್ನು ಬರೆಯುವ ಸಂದರ್ಭದಲ್ಲಿ ಪ್ರಕಟಿಸಿದ ಇದೇ ವಿಷಯಕ್ಕೆ ಸಂಬಂಧಿಸಿದ ಕೆಲವು ಸಂಶೋಧನ ಲೇಖನಗಳು ಗಮನಾರ್ಹವಾಗಿವೆ. (1) ವೇದಗಳೂ ಬಸವಣ್ಣನವರೂ (25 ಪುಟಗಳ ಸುದೀರ್ಘ ಪ್ರಬಂಧ) (2) ಉಪನಿಷತ್ತುಗಳೂ ಬಸವಣ್ಣನವರೂ (52 ಪುಟಗಳ ದೀರ್ಘ ಪ್ರಬಂಧ) (3) ಶ್ರೀ ಬಸವಣ್ಣನವರೂ ಶಿವಾಗಮುಗಳೂ (22 ಪುಟಗಳ ದೀರ್ಘ ಲೇಖನ) –ಇವು ಅವುಗಳಲ್ಲಿ ಪ್ರಮುಖವಾದ ಕೆಲವು. ಈ ಲೇಖನಗಳೆಲ್ಲವೂ ರತ್ನಾಕರದಲ್ಲಿ ಸಮ್ಮಿಳಿತಗೊಂಡಿವೆ.

ವೇದಗಳ ಬಗ್ಗೆ ಹೇಳುವಾಗ ತಾವೆ ಸ್ವತಃ ಮೂಲ ಸಂಸ್ಕೃತದಲ್ಲಿಯೇ ವೇದಾಧ್ಯಯನ ಮಾಡಿದ್ದರೂ, ಮ್ಯಾಕ್ಸ್‌ಮುಲರ್, ಹೌಗ್, ಯಾಕೋಬಿ, ಮೆಕಾನೆಲ್ಲ, ಬೆರಿಂಡೇಲ್ ಕೀಥ್, ಬೂಲರ್ ಮುಂತಾದ ಪಾಶ್ಚಾತ್ಯ ವಿದ್ವಾಂಸರ ಹೇಳಿಕೆಗಳನ್ನು ಉಲ್ಲೇಖಿಸುತ್ತಾರೆ. ಇದು ಅವರ ಬಹುಶ್ರುತತ್ವವನ್ನು ತೋರುತ್ತದೆ. ಪ್ರಪಂಚದಾದ್ಯಂತ ನಡೆದ ಸಂಶೋಧನೆಗಳ ಫಲಶೃತಿಗಳನ್ನು ಉದಾಹರಿಸುತ್ತಾರೆ. ಹೀಗೆ ಶಾಸ್ತ್ರಿಗಳ ಸಂಶೋಧನ ದೃಷ್ಟಿ ಅವರ ಬರಹದಲ್ಲಿ ಇಡಿಕಿರಿದಿದೆ. ಒಂದು ಸಣ್ಣ ಉದಾಹರಣೆ ಕೊಡುವುದಾದರೆ-ಬಸವಣ್ಣನವರ ಸಾವಿರಾರು ವಚನಗಳಲ್ಲಿ ಕೇವಲ 38 ವಚನಗಳಲ್ಲಿ ಮಾತ್ರ 'ವೇದ'ದ ವಿಚಾರ ಇರುವುದನ್ನು ನಿರ್ದಿಷ್ಟವಾಗಿ ಅವರು ಮತ್ತೆ ಪತ್ತೆಹಚ್ಚಿದ್ದಾರೆ. ಆ ಎಲ್ಲ 38 ವಚನಗಳನ್ನೂ ಪೂರ್ಣ ಉಲ್ಲೇಖಿಸಿ ವಿವರಿಸುತ್ತಾರೆ. ವೇದಾಗಮ, ಸ್ಮೃತಿ, ಗೀತೆ, ಉಪನಿಷತ್ತು ಮುಂತಾದ ಎಲ್ಲ ಪ್ರಾಚೀನ ಚಿಂತನೆ ತತ್ತ್ವಗಳ ಬಗೆಗೆ ಗೌರವವಿದ್ದರೂ ಅವುಗಳಲ್ಲಿನ "ಅಪ್ರಯೋಜಕ" ಅಂಶಗಳನ್ನು ಸ್ಪಷ್ಟಪಡಿಸುತ್ತಾ ವೇದೋತ್ತರ ಕಾಲದಲ್ಲಿ ಅವುಗಳ ಬಗೆಗೆ ಪಟ್ಟಭದ್ರರು ರಚಿಸಿದ ಕಟ್ಟುಪಾಡುಗಳು 'ಹಾಸ್ಯಾಸ್ಪದ' ಎಂದು ಹೀಗಳೆಯಲೂ ಅವರು ಹಿಂಜರಿಯುವುದಿಲ್ಲ.

ಉಪನಿಷತ್ತುಗಳ ಮಂತ್ರಗಳು ಪ್ರಾಯಃ ಶರಣರಿಗೆ ವಚನರಚನೆ ಮಾಡಲು ಪ್ರೇರಣೆ ನೀಡಿರಬಹುದೆಂದು ಶಾಸ್ತ್ರಿಗಳು ಊಹಿಸುತ್ತಾರೆ. ಊಹೆಯನ್ನು ಸಂಭಾವ್ಯವಾಗಿ ಹೇಳಲು ಬಸವಣ್ಣನವರ ವಚನಗಳು-ಹಾಗೂ ಉಪನಿಷತ್ತಿನ ಮಂತ್ರಗಳನ್ನು ಒಟ್ಟೊಟ್ಟಿಗೆ ಇಟ್ಟು ತೋರಿಸುತ್ತಾರೆ ಹೀಗೆ:

"ಸತ್ಯಂ ವದ, ಧರ್ಮಂ ಚರ..." ತೈತ್ತರಿಯೋಪನಿಷತ್‌ನ ಏಕಾದಶೋನು ವಾಕ್ಯಮಂತ್ರ "ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ..." ಬಸವಣ್ಣನವರ ವಚನ.

ಹೀಗೆಯೆ 117 ವಚನಗಳನ್ನು ಉದಾಹರಿಸಿ ಅವುಗಳಿಗೆ ಮೂಲವಾಗಿರಬಹುದಾದ ಉಪನಿಷತ್ತುಗಳ ಶ್ಲೋಕಗಳನ್ನು ಉದಾಹರಿಸುತ್ತಾರೆ.

ವೇದೋಪನಿಷತ್ತುಗಳಿಗಿಂತಲೂ ಶಿವಾಗಮುಗಳು ವೀರಶೈವಕ್ಕೂ ವಚನಗಳಿಗೂ ತೀರ ಹತ್ತಿರದವು. ಶಾಸ್ತ್ರಿಗಳು ಈಗಲೂ ಜ್ವಲಂತವಾಗಿರುವ ಬಹುಮುಖ್ಯ ಸಮಸ್ಯೆಯನ್ನು ಸುಲಭವಾಗಿ ಬಗೆಹರಿಸಿದ್ದಾರೆ. ವೀರಶೈವವು ಆಗಮೋಕ್ತ ಪ್ರಾಚೀನ ಧರ್ಮ ಎಂಬುದನ್ನು ಒಪ್ಪದೆಯೆ, ಬಸವಣ್ಣನಿಂದ ಆರಂಭಗೊಂಡ ಧರ್ಮ ಎಂಬ ವಿಚಾರ ಎಷ್ಟರಮಟ್ಟಿಗೆ ಸಮಂಜಸ? ಎಂಬುದೇ ಈ ಸಮಸ್ಯೆ. ಶಾಸ್ತ್ರಿಗಳು ಬಸವಣ್ಣನ ಧರ್ಮ ಸುಧಾರಣಾ ಪಾರಮ್ಯವನ್ನು ಎತ್ತಿಹಿಡಿಯುತ್ತಲೇ ಪ್ರಾಚೀನ ಧರ್ಮದ ಬೇರುಗಳಿಗೂ ಮಹತ್ವ ಇದೆ ಎಂದು ಪ್ರತಿಪಾದಿಸುತ್ತಾರೆ. ಅದೇ ವೇಳೆಗೆ ವೇದಾಗಮುಗಳ ಎಲ್ಲ ವಿಚಾರಗಳನ್ನು ಒಪ್ಪಬೇಕಾಗಿಲ್ಲವೆಂದೂ ಸ್ಪಷ್ಟಪಡಿಸುತ್ತಾರೆ.

"…. ವೇದಾಗಮುಗಳಿಗೂ ಬಸವಣ್ಣನವರ ಧರ್ಮಕ್ಕೂ ಸಂಬಂಧವೇ ಇಲ್ಲವೆಂದು ಕೆಲವರ ವಾದ. ಆದರೆ ಇದು ಸರಿಯಾದುದಾಗಿರುವುದಿಲ್ಲ. ಷಟ್‌ಸ್ಥಲ, ಪಂಚಾಚಾರ, ಅಷ್ಟಾವರಣಗಳೆಲ್ಲ ಆಗಮದಲ್ಲಿ ಹೇಳಿದವುಗಳೇ ಇರುತ್ತವೆ"... ಎಂದು ಹೇಳುತ್ತ ಆಗಮುಗಳಲ್ಲಿ ಹೇಳಿದ ಆದರೆ ಅನುಷ್ಠಾನಕ್ಕೆ ಸರಿಕಾಣದವುಗಳನ್ನು ಬಸವಣ್ಣ ತಿರಸ್ಕರಿಸಿದ್ದು ಸರಿ ಎಂದು ಸಮರ್ಥಿಸುತ್ತ ಪರಂಪರಾಗತ ಧರ್ಮವನ್ನೇ ಹೊಸರೂಪದಲ್ಲಿ ಕಾಣಿಸಿದ ಶಂಕರಾಚಾರ್ಯ ಮಧ್ವಾಚಾರ್ಯರಂತೆ ಬಸವಣ್ಣನವರೂ "...ಆಗಮೋಕ್ತಗಳಿಗೆ ವಿರುದ್ಧವಾಗದ ಧರ್ಮೋದ್ಧಾರದ ಕಾರ್ಯವನ್ನು ಹೊಸ ಪದ್ಧತಿಯಿಂದ ಪ್ರಾರಂಭಿಸಿದರು...." ಎಂದು ಅವರು ಸ್ಪಷ್ಟಪಡಿಸಿದ್ದಾರೆ. ಬಸವಣ್ಣನವರನ್ನು "ದ್ವಿತೀಯ ಶಂಭು" ಎಂದೇ ಕರೆದು ಗೌರವ ಶ್ರದ್ಧಾಭಕ್ತಿಯಿಂದ ಅವರ ಮಹಿಮೆಯನ್ನು ವರ್ಣಿಸುತ್ತಾರೆ. 'ಬಸವಣ್ಣನವರೂ ಜಾತಿಯ ವಾದವೂ' ಎಂಬ ಲೇಖನದಲ್ಲಿ

"...ಬಸವಣ್ಣನವರ ತತ್ತ್ವಗಳೇನೋ ಜಗತ್ತಿನಲ್ಲಿ ಅತಿ ಮಹತ್ವದವು ಗಳಾಗಿರುತ್ತವೆ. ಆದರೆ ಬಸವಣ್ಣನ ಭಕ್ತರೆಂದು ಹೇಳಿಕೊಳ್ಳುತ್ತಿರುವವರು ಆತನ ವಿಶಾಲವಾದ ತತ್ತ್ವಗಳನ್ನು ಲೋಕದ ಮುಂದಿಟ್ಟರೆ ಎಷ್ಟೋ ಮಹತ್ಕಾರ್ಯಗಳನ್ನು ಮಾಡಿದಂತಾಗುತ್ತದೆ..." ಎಂದು ಬಸವತತ್ತ್ವಗಳು ಅನುಷ್ಠಾನದಲ್ಲಿ ಆಗುತ್ತಿರುವ ಕೊರತೆಯನ್ನು ಎತ್ತಿ ಹೇಳಿದ್ದಾರೆ. ನಿಜವಾದ ಬ್ರಾಹ್ಮಣ್ಯದ ಅರ್ಥವನ್ನು ಉಪನಿಷತ್ತಿನ ರಹಸ್ಯವನ್ನು ಎಳೆಎಳೆಯಾಗಿ ಬಿಡಿಸಿ ಬಸವಣ್ಣನವರು ಜಾತಿಗಿಂತ ಗುಣಕ್ಕೆ ಹೇಗೆ ಪ್ರಾಧಾನ್ಯ ನೀಡಿದ್ದರೆಂಬುದನ್ನು ಚಂದ್ರಶೇಖರ ಶಾಸ್ತ್ರಿಗಳು ಎತ್ತಿತೋರಿದ್ದಾರೆ. ಅಷ್ಟೇ ಅಲ್ಲದೆ ಅಸ್ಪೃಶ್ಯೋದ್ಧಾರದ ಪರಿಕಲ್ಪನೆಯನ್ನು ಬಸವಣ್ಣನವರು ಆಚರಣೆಗೊಳಿಸಿದ ನಂತರ ಮತ್ತೆ ಮುಂದಿನ ದಿನಮಾನಗಳಲ್ಲಿ ಅದರ ಪರಿಸ್ಥಿತಿ ಏನಾಯಿತೆಂಬುದನ್ನು ವಿವರಿಸುತ್ತ ಮಹಾತ್ಮ ಗಾಂಧೀಜಿಯವರನ್ನು ಹಾಗೂ ರಾಜ್ಯಾಂಗವನ್ನು ಉಲ್ಲೇಖಿಸುತ್ತಾರೆ. ಬಸವಣ್ಣನವರ ಈ ಮಹಾತ್ಕಾರ್ಯ ವನ್ನು ಅವ್ಯಾಹತವಾಗಿ ಮುಂದುವರಿಸುವ ಮಹಾಜನಗಳು ನಮ್ಮಲ್ಲಿ ಬೇಕಾಗಿದ್ದಾರೆಂದು ಆಶಿಸುತ್ತಾರೆ.

ಚಂದ್ರಶೇಖರ ಶಾಸ್ತ್ರಿಗಳ ಗಮನಾರ್ಹ ಕೃತಿಗಳಲ್ಲಿ 'ಕಾಡಸಿದ್ಧೇಶ್ವರ' ಎಂಬ ಸಂಶೋಧನ ನಿಬಂಧವು ಒಂದಾಗಿದೆ. ಕಷ್ಟಸಾಧ್ಯವಾದ ಕ್ಷೇತ್ರಕಾರ್ಯಾಧಾರಿತ ಸಂಶೋಧನೆಯ ಪರಿಕಲ್ಪನೆ ಇನ್ನೂ ಮೊಳಕೆ ಯೊಡೆಯದಿದ್ದ ಆಗಿನ ಕಾಲದಲ್ಲೇ ಶಾಸ್ತ್ರಿಗಳು ಹಲವು ಸ್ಥಳಗಳಿಗೆ ಸ್ವತಃ ಹೋಗಿ ಶಿಲಾಶಾಸನ, ಐತಿಹಾಸಿಕ ಸ್ಮಾರಕಗಳಲ್ಲದೆ, ಜಾನಪದ ಐತಿಹ್ಯ, ಸಾಹಿತ್ಯ ಸಂಗ್ರಹ ಇವುಗಳನ್ನು ಪರಿಶೀಲಿಸಿ, ಸಮಕಾಲೀನ ಹಾಗೂ ನಂತರದ ಗ್ರಂಥಗಳು, ಗ್ಯಾಝಿಟಿಯರ್ ಆಂಗ್ಲಭಾಷಾ ಗ್ರಂಥಗಳು, ಕೋರ್ಟಿನ ಜಜ್‌ಮೆಂಟ್‌ಗಳು, ಶಿಲ್ಪಶಾಸ್ತ್ರ, ಹಸ್ತಪ್ರತಿ ಇವೇ ಮುಂತಾದ ಆಧಾರಗಳನ್ನು ಇಟ್ಟುಕೊಂಡು ಈ ನಿಬಂಧವನ್ನು ರಚಿಸಿದ್ದು ಅವರ ಸಂಶೋಧನ ದೃಷ್ಟಿಗೆ ಹಿಡಿದ ಕನ್ನಡಿಯಾಗಿದೆ. ಕೇವಲ ಕಾಡಸಿದ್ಧೇಶ್ವರರ ಒಂದು ವಚನಕ್ಕೆ ಅವರು ಮುನ್ನುಡಿ ಬರೆಯುವುದಕ್ಕಾಗಿ ಅವರು ದಕ್ಷಿಣ ಕರ್ನಾಟಕ, ಉತ್ತರ ಕರ್ನಾಟಕ, ಮಹಾರಾಷ್ಟ್ರ ಈ ಪ್ರದೇಶದಲ್ಲೆಲ್ಲಾ ಕಾಡಸಿದ್ಧೇಶ್ವರರ ಕುರಿತು ಆಕರಗಳಿಗಾಗಿ ತಡಕಾಡಿದ್ದು ಅಷ್ಟೇ ಅಲ್ಲ ಇಡೀ ಕರ್ನಾಟಕದ ಸಮಗ್ರ ಕವಿಚರಿತೆ ಹಾಗೂ ಇತಿಹಾಸದ ಪುಟಗಳನ್ನು ತಿರುವಿ ಯಾವ ಯಾವ ರಾಜವಂಶಸ್ಥರೊಡನೆ ಕಾಡಸಿದ್ಧೇಶ್ವರ ಸಂಪರ್ಕ ಉಂಟಾಗಿತ್ತು ಎಂಬುದನ್ನೆಲ್ಲ ಪರಿಶೀಲಿಸಿ ಕಾಡಸಿದ್ಧೇಶ್ವರರ ಸ್ಥಳ, ಕಾಲ, ಪ್ರಭಾವ, ವೈಶಿಷ್ಟ್ಯಗಳನ್ನು ಸ್ಪಷ್ಟಪಡಿಸಿರುತ್ತಾರೆ.

ಇದೇ ರೀತಿ ಇನ್ನೊಂದು ಸಂಶೋಧನ ಪ್ರಬಂಧ- "ಕೊಲ್ಲಿಪಾಕಿ" ಕ್ಷೇತ್ರಕಾರ್ಯದಿಂದ ಲಭ್ಯ ಆಕರಗಳು, ಶಿಲ್ಪಕಲೆ, ಶಿಲಾಶಾಸನ, ಹಸ್ತಪ್ರತಿ, ಕೋರ್ಟು ನಿರ್ಣಯಗಳು, ಇವೇ ಮುಂತಾದ ಆಕರಗಳನ್ನು ಬಳಸಿ ಕೊಲ್ಲಿಪಾಕಿಯ ಸಮಗ್ರ ಚಿತ್ರಣವನ್ನು ಲೇಖನದಲ್ಲಿ ದಾಖಲಿಸಿದ್ದಾರೆ. ಅವರ ಸಂಶೋಧನ ಬರವಣಿಗೆಯು ಒಂದು ವೈಶಿಷ್ಟ್ಯವೆಂದರೆ-(ಹಿಂದಿನ ತಲೆಮಾರಿನವರಲ್ಲಿ ಇದು ಸಾಮಾನ್ಯಾಂಶ) ಕ್ಷೇತ್ರಕಾರ್ಯ ಮಾಡುತ್ತ ಮಾಡುತ್ತ ಅಲ್ಲಿ ನಡೆದ ಸ್ವಾರಸ್ಯಕರ ಘಟನೆಗಳನ್ನು ನಮೂದಿಸುತ್ತ ಸಾಗುವುದು. ಮಾದರಿಗಾಗಿ ಒಂದು ಉದಾಹರಣೆಯನ್ನಿಲ್ಲಿ ನೀಡಬಹುದು.

"... ಹೈದ್ರಾಬಾದಿನಿಂದ ಪ್ರಾತಃಕಾಲ 2ಗಂಟೆಗೆ ಬಿಟ್ಟ ಗಾಡಿಯು ಸರಿಯಾಗಿ ಅಲೇರು ಸ್ಟೇಶನ್‌ಗೆ 10 ಗಂಟೆಗೆ ಮುಟ್ಟಿತು. ಆ ಸ್ಥಳದಲ್ಲಿ ಒಂದು ಆಶ್ಚರ್ಯಕರವಾದ ಸಂಗತಿಯನ್ನು ನಾನು ಹೇಳದೆ ಇರಲಾರೆನು. ಸ್ಟೇಶನ್‌ನಲ್ಲಿ ಇಳಿದ ಕೂಡಲೇ ಓರ್ವ ಬಾಲಕಿಯು "ಕಲ್ಲುತಾಗುತ್ತಾವ" (ಮದ್ಯವನ್ನು ಸೇವಿಸುವಿರಾ?) ಎಂದು ಕೂಗಿದಳು... ಕೂಡಲೆ ಆಶ್ಚರ್ಯವೂ ವ್ಯಸನವೂ ಆಯಿತು. ಇಂಥ ಅಶಿಷ್ಟ ವ್ಯವಹಾರವು ಯಾಕೆ ಇರುವುದು ಎಂದು ಕೇಳಲಾಗಿ... ಇದೇ ಅಲ್ಲವೇ "ಪಶುವೃತ್ತಿಯ ಪರಮಾವಧಿಯು" ಎಂದು ನನ್ನ ಮನಸ್ಸಿಗೆ ಅನಿಸಿತು..."

ಹೀಗೆ ಅವರ ಸಂಶೋಧನ ಬರವಣಿಗೆ ಅದ್ಭುತ ಕಥಾನಕವೆಂಬಂತೆ ಸಾಗುತ್ತದೆ.

ಧಾರ್ಮಿಕ, ನೈತಿಕ ನೆಲೆಗಟ್ಟಿನ ಶೋಧನೆಗಳ ಬರವಣಿಗೆ ಶಾಸ್ತ್ರಿಗಳದು. ಆದರೆ ಸಾಹಿತ್ಯಕ, ವೈಚಾರಿಕ ಲೇಖನಗಳನ್ನು ಬರೆಯುವಲ್ಲಿಯೂ ಅವರದು ಎತ್ತಿದ ಕೈ. 'ನಾಟಕಗಳ ಮಹತ್ವ ಮತ್ತು ಪ್ರಾಚೀನತ್ವ', 'ಕನ್ನಡ ಸಾಹಿತ್ಯದಲ್ಲಿ ವಚನಗಳ ಸ್ಥಾನ', 'ಕಾಳಿದಾಸನ ಶೈವಭಕ್ತಿ', ಇವೇ ಮುಂತಾದ ಲೇಖನಗಳು ಅವರ ಚಿಂತನಶೀಲತೆಗೆ ಸಾಕ್ಷಿಯಾಗಿವೆ.

ಈ ರೀತಿ ಇಪ್ಪತ್ತನೆಯ ಶತಮಾನದ ಆರಂಭಕಾಲದಿಂದ ಎಂಬತ್ತರ ದಶಕದವರೆಗೆ ನಿರಂತರವಾಗಿ ಆರುದಶಕಗಳಿಗೂ ಹೆಚ್ಚುಕಾಲ ಕನ್ನಡಕ್ಕಾಗಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡು, ತಮ್ಮ ಬದುಕಿನ ಕೊನೆಯ ಕ್ಷಣದವರೆಗೂ ಕನ್ನಡನಾಡು ನುಡಿಯ ಸೇವೆಗೇ ಹಂಬಲಿಸಿದ ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು ವೃದ್ಧಾಪ್ಯವನ್ನು ಮಾಗಳ ಗ್ರಾಮದಲ್ಲಿ ಕಳೆಯುತ್ತ ಅಲ್ಲಿಯೇ ದಿ-24-10-1997ರಂದು ಲಿಂಗೈಕ್ಯರಾದರು. ಕನ್ನಡ ಸಾಹಿತ್ಯ ಚರಿತ್ರೆಯ ಪುಟಗಳಲ್ಲಿ ತಮ್ಮದೇ ಆದ ಸ್ಥಾನವನ್ನುಳಿಸಿ ಅಸ್ತಂಗತರಾದರು.

❑

# ಕೆ.ಜಿ.ಕುಂದಣಗಾರ

ಹಂಪ ನಾಗರಾಜಯ್ಯ

ದೊಡ್ಡವ್ಯಕ್ತಿಯಾಗಲು ಸಣ್ಣದಾರಿ ಕಾಲುದಾರಿ ಒಳದಾರಿ ಅಡ್ಡದಾರಿ ಯಾವುವೂ ಇಲ್ಲ. ದೊಡ್ಡವರಾಗಲು ಇರುವುದು ಒಂದೇ ಹೆದ್ದಾರಿ-ನಿರಂತರ ದುಡಿಮೆ, ದಣಿವರಿಯದ ಉದಾತ್ತ ಕಾಯಕ, ಸೋಲರಿಯದ ಶ್ರದ್ಧಾನ್ವಿತ ಸಾಹಸ, ಪ್ರಾಮಾಣಿಕ ಪ್ರಯತ್ನಗಳ ಋಜುಮಾರ್ಗ, ಉನ್ನತ ಆದರ್ಶ. ಇಂಥ ರಾಜಪಥವನ್ನು ಆರಿಸಿಕೊಂಡು ಯಶಸ್ಸಿನ ಗುರಿ ಮುಟ್ಟಿದ ಅಪರೂಪದವರು ಪ್ರೊ. ಕೆ. ಜಿ. ಕುಂದಣ ಗಾರರು.

ಕಲ್ಲಪ್ಪ ಗಿರಿಮಲ್ಲಪ್ಪ (ಕಾಳಪ್ಪ ಗುರಪ್ಪ) ಕುಂದಣಗಾರರು ಬೆಳಗಾವಿ ಜಿಲ್ಲೆಯ ಗೋಕಾಕ ತಾಲ್ಲೂಕು ಕೌಜಲಗಿ ಹಳ್ಳಿಯಲ್ಲಿ ಹುಟ್ಟಿದವರು [14-8-1895 – 22-81965]. ಬಡತನದ ಕವಚತೊಟ್ಟು, ಕಷ್ಟಗಳ ಕುಂಡಲ ಧರಿಸಿ, ವಿಶ್ವಕರ್ಮ [ಪತ್ತಾರ, ಬಡಿಗೇರ, ಅಕ್ಕಸಾಲಿ, ಪಂಚಾಳ, ಕುಂದಣಗಾರ, ಕಂಬಾರ, ಸ್ವರ್ಣಕಾರ, ಆಚಾರ್ರು] ಕುಟುಂಬದಲ್ಲಿ ದಾರುಣತರ ಬಾಲ್ಯ ಕಳೆದರು. ಪತ್ತಾರ ಮನೆತನಗಳು ಉಪಜೀವನ ಸಾಗಿಸುವ ರೀತಿಯನ್ನು ದೇವರೇ ಬಲ್ಲ. ಕುಂದಣಗಾರರು ಹುಟ್ಟಿದ ಕೌಜಲಗಿಯಲ್ಲಿಯಾಗಲಿ, ನೆರೆಹೊರೆಯ ಹಳ್ಳಿಗಳಲ್ಲಾಗಲಿ, ಹಗಲಲ್ಲಿ ದೀಪ ಮಶಾಲು ಹಚ್ಚಿಹುಡುಕಿದರೂ ಬಂಗಾರ ಕಾಣುವುದು ಅಪರೂಪ. ಊರಲ್ಲಿ ಎಂದೋ ಒಮ್ಮೆ ಯಾರೋ ಒಬ್ಬರು ಒಂದು ಉಂಗುರವನ್ನೊ ಬೆಂಡೋಲೆಯನ್ನೋ ಮಾಡಿಸುವುದಿದ್ದರೆ, ಮೊದಲು ಕಾಳುಕಡಿಕೊಟ್ಟು ಪತ್ತಾರನ ಹೊಟ್ಟೆಗೆ ಹಿಟ್ಟು ಪೂರೈಸಬೇಕು. ಆ ಮುಂದೆ ತಮ್ಮ ಆಭರಣ ಕಾಣಬೇಕು. ಕುಂದಣಗಾರರ ಮನೆತನ ಇಂತಹ ಕಡುಬಡತನದ ಒಂದು ಕುಟುಂಬ. ಬಡತನ ಆ ಸಂಸಾರಕ್ಕೆ ಹಾಸಲಿತ್ತು, ಹೊದೆಯಲಿತ್ತು. ಬಂದ ನೆಂಟರಿಷ್ಟರಿಗೂ ಹಂಚಲಿತ್ತು. ಮೂರು ವರುಷ ತುಂಬುವುದರೊಳಗೆ ತಾಯಿ ತಂದೆಯನ್ನು ಕಳೆದುಕೊಂಡ ತರುವಲಿ ಕಲ್ಲಪ್ಪನ ಕೊರಳಿಗೆ ದುಃಖಗಳ ಹಾರ, ಹೆಗಲಿಗೆ ಹೊಣೆಗಳ ಹೊರೆ ಎಲ್ಲಿ ಹೋದರೂ ನೆರಳಾಗಿ ಹಿಂಬಾಲಿಸಿತು. ಬೆರಣೆಯನ್ನು ಆಯುವುದರಲ್ಲಿ ಆಯುಷ್ಯ ಕಳೆಯಿತು, ಅಟ್ಟುಂಬ ದಿನಗಳು ಬರಲೇ ಇಲ್ಲ. ನರಳಾಟವೇ ನಿತ್ಯ ಉಸಿರಾಗಿ ಹಣ್ಣಾದರು, ಅನಾರೋಗ್ಯದ ಚಳಿಗಾಳಿ ಮಳೆಗೆ ಮುದುಡಿ ಮುರುಟಿದರು.

ಸತ್ವವಿರುವ ಮನುಷ್ಯ ಮಹಾನುಭಾವನಾಗಲು ಸಾಯದಿರುವುದು ಪ್ರತಿಕೂಲದ ಸವಾಲುಗಳನ್ನು ಸ್ವೀಕರಿಸಿ ಪಾರಾಗಿ ಬರುವ ಪ್ರಕ್ರಿಯೆಯಲ್ಲಿ. ಸ್ವಾಭಿಮಾನದ ಆತ್ಮಪ್ರತ್ಯಯವನ್ನು ಉಳಿಸಿಕೊಂಡು ಧೃತಿಗೆಡದೆ ನಿಂತ ಕುಂದಣಗಾರರಲ್ಲಿ ಸ್ಥಿತಪ್ರಜ್ಞತ್ವ, ಸಹನೆ, ಸಂಯಮ ಅನಿವಾರ್ಯವಾಗಿ ಮೈಗೂಡಿತ್ತು. ಅನ್ನರೇಖೆ ಇರದಿದ್ದರೂ ಆರೋಗ್ಯ ಭಾಗ್ಯ ಕಡಿಮೆಯಾದರೂ ತಕ್ಕ ಮಟ್ಟಿಗೆ ಆಯುಷ್ಯರೇಖೆಯಿತ್ತು. ಹಣದ ದಾರಿದ್ರ್ಯವಿದ್ದರೂ ಗುಣ ಸಮೃದ್ಧಿಯ ಐಸಿರಿಯಿತ್ತು. ಅವರು ಬಾಳಿದ ಋಷಿಜೀವನ ಸದೃಶವೇ ಆದ ಮಾನ ಮರ್ಯಾದೆಯ ಸಭ್ಯ ಗೃಹಸ್ಥಿಕೆಯನ್ನು ಬೆಳಗಿದ ನಿದರ್ಶನಗಳು ಬೋಧಕವಾಗಿವೆ.

ಕೌಜಲಗಿಯಲ್ಲಿ ಪ್ರಾಥಮಿಕ ಓದು ಮುಗಿಯಿತು. ಅಲ್ಲಿಂದ ಬೆಳಗಾವಿಗೆ ಬಂದು ಸರಕಾರಿ ಸರ್ದಾರ ಪ್ರೌಢಶಾಲೆಯಲ್ಲಿ ಕಲಿತರು. ಕಲ್ಲಪ್ಪನಿಗೆ ಕೂಲಿನಾಲಿ ಮಾಡಿಯಾದರೂ ಕಲಿಯುವ ಉಮೇದು; ಓದುತ್ತ ಸಂಪಾದನೆ, ಸಂಪಾದಿಸುತ್ತಾ ಓದು. ಕಲ್ಲಪ್ಪ ಕಲಿತಪ್ಪ ಆಗಲು ಒಂದು ದಾರಿ ತೆರೆಯಿತು. ಕಲ್ಲಪ್ಪನ ಅಕ್ಷರ ದುಂಡು, ಬಾಯಿ ಲೆಕ್ಕದಲ್ಲಿ ಚುರುಕು. ಅದನ್ನು ನೋಡಿ ದೊಡ್ಡ ಸರಾಫ ಶಂಕರಪ್ಪ ಮೇಲುಗಿರಿಯವರು ತಮ್ಮ ದುಖಾನಿನಲ್ಲಿ ಲೆಕ್ಕಪತ್ರಗಳನ್ನು ಸರಿಯಾಗಿಡುವ ಉಸ್ತುವಾರಿಕೆ ಕೆಲಸ ಕೊಟ್ಟರು. ತಿಂಗಳಿಗೆ ನಾಲ್ಕು ರೂಪಾಯಿ ಪಗಾರ ! ಕಲ್ಲಪ್ಪನ ಕಲಿಕೆಗೆ ಅನುಕೂಲವಾಯಿತು. ಧಾರವಾಡಕ್ಕೆ ಬಂದು, ಅಂದಿನ ವಿಕ್ಟೋರಿಯಾ ಹೈಸ್ಕೂಲ್ (ಇಂದಿನ ವಿದ್ಯಾರಣ್ಯ ಹೈಸ್ಕೂಲ್) ಮೂಲಕ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಗೆ ಕುಳಿತು ಉತ್ತಮ ಶ್ರೇಣಿ ಪಡೆದರು.

ಮುಂದುವರಿದ ಓದಿಗೆ ಮತ್ತೆ ಗಂಡಾಂತರ ಎದುರಾಯಿತು. ಈಗಿರುವ ಇಡೀ ಧಾರವಾಡ, ಬೆಳಗಾವಿ, ವಿಜಾಪುರ, ಗುಲ್ಬರ್ಗ, ಬೀದರ ಜಿಲ್ಲೆಗಳ ವ್ಯಾಪಕ ಪ್ರದೇಶದಲ್ಲಿ ಅಂದು ಎಲ್ಲಿಯೂ ಉಚ್ಚ ಶಿಕ್ಷಣ ಸಂಸ್ಥೆಗಳ ಇರಲಿಲ್ಲ. ಮುಂಬಯಿ-ಕರ್ನಾಟಕವೆನಿಸಿದ ಈ ಭಾಗದವರು ಇಂಟರ್ ಮೀಡಿಯೆಟ್ (ಈಗಿನ ಪ್ರಿ ಯೂನಿವರ್ಸಿಟಿ ) ಮತ್ತು ಅದಕ್ಕೂ ಹೆಚ್ಚಿನ ಕಲಿಕೆಗೆ ಪುಣೆಗೂ ಮುಂಬಯಿಗೆ ಹೋಗಬೇಕಿತ್ತು. ಐನೂರು ಕಿ. ಮೀ. ದೂರದ ಪುಣೆಯ ಫರ್ಗುಸನ್ ಕಾಲೇಜು ಸೇರಿ ಕುಂದಣಗಾರರು 1913 ರಲ್ಲಿ ಇಂಟರ್ ಪರೀಕ್ಷೆ ಮುಗಿಸಿದರು. ಹೆಚ್ಚಿನ ಶಿಕ್ಷಣಕ್ಕೆ ಅಲ್ಪ ವಿರಾಮ ಬಿತ್ತು, ಅದಕ್ಕೆ ಬೇಕಾದ ಕಾಸು ಕೂಡಿಸಬೇಕಾಗಿತ್ತು. ಮೂರು ವರ್ಷ ಮೀನ ಮೇಷ ಎಣಿಸುತ್ತ ಕಾಲಹರಣ ಮಾಡಿದ ಮೇಲೆ ಅಹನ್ಯಹನಿಗೊಂದು ನಿಲುಗಡೆ ದಡ ಸಿಕ್ಕಿತು. 1916ರಲ್ಲಿ ಕೊಲ್ಲಾಪುರ ರಾಜಾರಾಮ ಹೈಸ್ಕೂಲಿನಲ್ಲಿ ಶಿಕ್ಷಕರಾದರು. ಅಲ್ಲಿಂದ 1918ರಲ್ಲಿ ಗೋಕಾಕದ ಮುನಿಸಿಪಲ್ ಪ್ರೌಢಶಾಲೆಯಲ್ಲಿ ಅಧ್ಯಾಪಕರಾದರು. ಹೀಗೆ ದುಡಿಯುತ್ತಿರುವಾಗಲೇ ಬಿ. ಎ. ಪರೀಕ್ಷೆಗೆ ಟರ್ಮು ತುಂಬುತ್ತ, ಖಾಸಗಿಯಾಗಿ ಕಲಿಯುತ್ತ 1919ರಲ್ಲಿ ಪದವೀಧರರಾದರು.

ಕುಂದಣಗಾರರಿಗೆ ಕನ್ನಡದ ಕಡಲನ್ನು ಕುಡಿಯುವ ಬಾಯಾರಿಕೆ. ಅವರ ಅರಿವಿನ ದಾಹ ಗರಿಕೆಹುಲ್ಲಿನ ಹನಿಗಳಿಂದ ನಿಲ್ಲಲಿಲ್ಲ. ಆಗತ್ಯವೇ ಅನ್ವೇಷಣೆಯ ತಾಯಿಬೇರು. ಗೋಕಾಕದಲ್ಲಿ ವಾಸ್ತವ್ಯ ಮಾಡಿದ್ದರೂ ಮೇಲಿಂದ ಮೇಲೆ ಧಾರವಾಡ ಮತ್ತು ಬೆಳಗಾವಿಗೆ ದಾರಿ ಸವೆಸುತ್ತ ಜ್ಞಾನತೃಷ್ಣೆಯನ್ನು ನಿವಾರಿಸಲು ಪ್ರಯತ್ನಿಸಿದರು. ಬಿಡದ ಛಲ, ಉಡದ ಪಟ್ಟು, ಕಡೆಗೂ 1925ರಲ್ಲಿ ಕುಂದಣಗಾರರು, ತಮ್ಮ ಮೂವತ್ತನೆಯ ವಯಸ್ಸಿನಲ್ಲಿ ಮುಂಬಯಿ ವಿಶ್ವವಿದ್ಯಾಲಯದಿಂದ ಕನ್ನಡ ಎಂ. ಎ. ಸ್ನಾತಕೋತ್ತರ ಪದವೀಧರರಾದರು. ಅದೇ ವರ್ಷ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನೇಮಕಗೊಂಡರು. ಆಗ ನಡೆದ ಕೆಲವು ಸಂಚುಗಳಿಂದ ಕುಂದಣಗಾರರಿಗೆ ಧಾರವಾಡ ಕಾಲೇಜಿನ ಕೆಲಸ ತಪ್ಪಿ, ಅದನ್ನು ಅವರಿಗಿಂತ ಕಡಿಮೆ ಅರ್ಹತೆಯವರಿಗೆ ಕೊಡಲಾಯಿತು.

ಧಾರವಾಡಕ್ಕೆ ತಪ್ಪಿದ ಭಾಗ್ಯ ಕೊಲ್ಲಾಪುರಕ್ಕೆ ದಕ್ಕಿತು. ಕೊಲ್ಲಾಪುರ ಸಂಸ್ಥಾನದ ದಿವಾಣರಾದ ರಾವ್‌ಬಹದ್ದೂರ ಅಣ್ಣಾಸಾಹೇಬ ಬಾಬಾಜಿ ಲಠ್ಠೆ (1878-1950)ಅವರು ಕೊಲ್ಲಾಪುರದ ರಾಜಾರಾಮ ಹೈಸ್ಕೂಲಿನಲ್ಲಿ

ಉಪಾಧ್ಯಾಯರಾಗಿ ನೇರವಾದ ನೇಮಕಾತಿ ಆಜ್ಞೆ ಕೊಡಿಸಿ ಜ್ಞಾನವೃಕ್ಷವನ್ನು ನೀರೆರೆದು ನಿಲ್ಲಿಸಿದರು. ರಾಜಾರಾಮ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ ಹುದ್ದೆ ಇರಲಿಲ್ಲ. ಇದನ್ನು ಅರಿತು ದಿವಾಣರಾದ ಅಣ್ಣಾ ಸಾಹೇಬ ಲಠ್ಠೆಯವರು ತಮ್ಮ ಅಧಿಕಾರ ಬಳಸಿ 1929ರಲ್ಲಿ ಕನ್ನಡ ಪ್ರಾಧ್ಯಾಪಕ ಹುದ್ದೆಯನ್ನು ಸೃಷ್ಟಿಸಿ ಕುಂದಣಗಾರರನ್ನು ನೇಮಿಸಿದರು. ಅಲ್ಲಿಂದ 1948ರ ವರೆಗೆ ಕೊಲ್ಹಾಪುರ ಅವರ ಕರ್ಮಭೂಮಿಯಾಯಿತಲ್ಲದೆ ಅದನ್ನು ಕನ್ನಡದ ತಪೋಭೂಮಿಯಾಗಿಸಿದರು. ಮರಾಠಿಯ ಮಣ್ಣಿನಲ್ಲಿ ಕನ್ನಡದ ವ್ಯವಸಾಯ ಮಾಡಿದರು. ಕನ್ನಡ ಮರಾಠಿಗರನ್ನು ಕೂಡಿಸುವ ಹೊನ್ನಕೊಂಡಿಯಾಗಿ, ಕರ್ನಾಟಕದ ಶ್ರೇಷ್ಠರಾಯಭಾರಿಯಾಗಿ ಅವರು ಮಿಂಚಿದರು.

ಬ್ರಿಟಿಷರು ಭಾರತವನ್ನು ಆಳುತ್ತಿದ್ದ ಆ ದಿನಗಳಲ್ಲಿ ಶೈಕ್ಷಣಿಕ ವಲಯದ ಹಲವು ಜ್ಞಾನ ಶಾಖೆಗಳು ಪುನರುಜ್ಜೀವಿತವಾದುವು. ಪಶ್ಚಿಮದ ಎರಕದಲ್ಲಿ, ಜರ್ಮನಿಯ ವಿದ್ವಾಂಸರ ಮಾದರಿಯಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದ ಅಧ್ಯಯನ ವೊದಲಾಯಿತು. ಅಪ್ರಕಟಿತ ಹಳೆಗನ್ನಡ ಕಾವ್ಯಗಳನ್ನು, ಗ್ರಂಥ ಸಂಪಾದನೆಯ ಶಾಸ್ತ್ರ ನಿಯಮದ ಚೌಕಟ್ಟಿನಲ್ಲಿ ಸಂಪಾದಿಸಿ ಪೀಠಿಕೆ, ಪದಕೋಶ, ಅನುಬಂಧ ಪರಿಕರ ಸಹಿತ ಪ್ರಕಟಿಸುವ ಪದ್ಧತಿಯೊಂದು ಪ್ರಾರಂಭವಾಯಿತು, ರಾಜಮಾರ್ಗ ತೆರೆಯಿತು. ಈ ಕೆಲಸದಲ್ಲಿ ದೇಶೀಯ ಸೂರಿಗಳು ಹಿಂದೆ ಬೀಳಲಿಲ್ಲ. ಮೈಸೂರು, ಮದರಾಸು, ಮುಂಬಯಿ ಕನ್ನಡ ಪ್ರದೇಶಗಳ ಹಿಡಿಮಂದಿ ಬಲ್ಲಿದರು ಪಾಂಡಿತ್ಯದ ಪರಿಶ್ರಮಕ್ಕೆ ತೊಡಗಿದರು. ಉತ್ತರ ಕರ್ನಾಟಕದ ಸಂಶೋಧಕ ಸೂರಿವರೇಣ್ಯರಲ್ಲಿ ಆ. ನೇ. ಉಪಾಧ್ಯೆ, ಶಿ. ಶಿ. ಬಸವನಾಳ, ಫ.ಗು.ಹಳಕಟ್ಟಿ ಮತ್ತು ಕೆ.ಜಿ. ಕುಂದಣಗಾರ ವೊದಲ ಮನ್ನಣೆ ಪಡೆದವರು. ಆಳವಾದ ವಿದ್ವತ್ತನ್ನು ಬಯಸುವ ಪಂಪನ ಆದಿಪುರಾಣ, ಹಸ್ತಿಮಲ್ಲಿಷೇಣಆಚಾರ್ಯಕೃತ ಪೂರ್ವಪುರಾಣ, ನೇಮಿಚಂದ್ರನ ಲೀಲಾವತಿ ಪ್ರಬಂಧ ಮುಂತಾದ ಪ್ರಾಚೀನ ಕಾವ್ಯಗಳನ್ನು ಹೊರತಂದರು. ಪ್ರಾಚೀನ ಮಾತೃಕೆಗಳಿಂದ ಶುದ್ಧಕವಿಪಾಠವನ್ನು ನಿರ್ಧರಿಸುವುದಕ್ಕೆ ಬೇಕಾದ ಬುದ್ಧಿಯ ಬಲ, ಕಾವ್ಯಾನುಶೀಲನ ವಶದಿಂದ ಪ್ರಾಪ್ತವಾದ ಸಂಸ್ಕಾರ ಅವರಲ್ಲಿತ್ತು. ಸಂಶೋಧನ ಪ್ರವೃತ್ತಿಯನ್ನು ಗಂಭೀರವಾಗಿ ಮೈಗೂಡಿಸಿ ಕೊಂಡವರಿಗೆ ನಿವೃತ್ತಿ ಎಂಬುದಿಲ್ಲ. ಉಸಿರು ಇರುವವರೆಗೆ, ಕಸುವು ಇರುವತನಕ ಹಗಲಿರುಳು ದುಡಿದವರು ಕೆ. ಜಿ. ಕುಂದಣಗಾರರು.

ಕುಂದಣಗಾರರ ಬಗ್ಗೆ ಬರೆಯುವಾಗ ವೊತ್ತವೊದಲು ನೆನಪಾಗುವುದು ಅವಿರತವಾದ ಶ್ರಮ ಮತ್ತು ಸ್ಥಿತಪ್ರಜ್ಞ ಸಾರ್ಥಕ ಜೀವನಯಾನ. ಬಹುಜ್ಞಾನ ಶಾಖೆಗೆ ಸೇರಿದ ಹಲವು ವಿಷಯಗಳ ನ್ನೊಳಗೊಂಡ ಅವರ ಬರೆಹದ ಹರಹು ಹುಬ್ಬೇರಿಸಿ ನೋಡಬೇಕಾದ್ದು. ವಿಸ್ತಾರ, ವೈಭವ, ವೈವಿಧ್ಯ, ವಿದ್ವತ್ತು ಅವರ ಬರೆಹವನ್ನು ಬೆಳಗಿದೆ. ಗ್ರಂಥ ಸಂಪಾದನೆಯಲ್ಲದೆ ಛಂದಸ್ಸು, ಶಾಸನಶಾಸ್ತ್ರ, ವಾಸ್ತು-ಶಿಲ್ಪ, ನಿಘಂಟು, ಹಸ್ತಪ್ರತಿಶಾಸ್ತ್ರ, ಕವಿ-ಕಾವ್ಯ-ಕಾಲ ಕುರಿತ ಇತಿವೃತ್ತ ಜಿಜ್ಞಾಸೆ, ಸಂಸ್ಕೃತ-ಕನ್ನಡ-ಪ್ರಾಕೃತ-ಪಾಳಿ ಭಾಷೆಗಳ ಹಿನ್ನೆಲೆಯಿಂದ ಶಬ್ದಾರ್ಥ ಚರ್ಚೆ, ಜೈನ ಮತ್ತು ವೀರಶೈವ ಧರ್ಮಜ್ಞಾನ ಪ್ರಸರಣ, ಜನಪದ ಅಧ್ಯಯನ, ಸಾಂಸ್ಕೃತಿಕ ವಿವೇಚನೆ - ಹೀಗೆ ಅವರ ಅಧ್ಯಯನ ಹಲವು ಜ್ಞಾನ ಶಾಖೆಗಳಿಗೆ ದಾಂಗುಡಿಯಿಟ್ಟಿದೆ. ಈ ಎಲ್ಲ ಬಗೆಯ ಬರವಣಿಗೆಯಲ್ಲಿ ಪಾರದರ್ಶಕವಾಗುವುದು ಪ್ರಾಮಾಣಿಕತೆ ಮತ್ತು ಸಂಪೂರ್ಣ ತೊಡಗುವಿಕೆ.

ಪುರಾತತ್ತ್ವ ಶೋಧನ ವಿಧಾನದಲ್ಲಿ ಆಸಕ್ತಿವಹಿಸಿ ಸಂಶೋಧನೆ ಕೈಗೊಂಡ ಕನ್ನಡ ವಿದ್ವಾಂಸರಲ್ಲಿ ಕೆ. ಜಿ. ಕುಂದಣಗಾರರು ವೊತ್ತವೊದಲನೆಯ ಪ್ರಾಕ್ತನ ಶಾಸ್ತ್ರಜ್ಞರು. ಕೊಲ್ಹಾಪುರದಲ್ಲಿ ಮಹಾಲಕ್ಷ್ಮೀ ದಿಬ್ಬದ ಪ್ರದೇಶದಲ್ಲಿ ಉತ್ಖನನ ಕೈಗೊಂಡರು. ಆ ಪುರಾತತ್ತ್ವ ಶೋಧದ ಸಾರವನ್ನು 'ಮಹಾಲಕ್ಷ್ಮಿ ಟೆಂಪಲ್' ಎಂಬ ಇಂಗ್ಲಿಷ್ ಗ್ರಂಥದಲ್ಲಿ ತಿಳಿಸಿದ್ದಾರೆ. ಪ್ರಾಕ್ತನ ಶಾಸ್ತ್ರದಂತೆ ಶಾಸನಶಾಸ್ತ್ರ, ಛಂದಸ್ ಶಾಸ್ತ್ರವೆಂಬ ಜ್ಞಾತಿ ಶಿಸ್ತುಗಳಲ್ಲಿಯೂ ಸಮದಂಡಿಯಾದ ಪ್ರಗಲ್ಭ ಪಾಂಡಿತ್ಯ. ಈ ಮೂರೂ ಪೂರಕ ಕ್ಷೇತ್ರಗಳಲ್ಲಿ ಕೆಸರ್ಗಲ್ಲು ಕಲಸಿಟ್ಟು ಗುದ್ದಲಿ ಪೂಜೆ ಮಾಡಿದ ಆದ್ಯರೆನಿಸಿದರು. ದೇವಾಲಯಗಳಿಗೆ ಶಾಸನಗಳ ಅನ್ವೇಷಕರಾಗಿ ಹೋಗುತ್ತಿದ್ದರು. ಕೊಲ್ಹಾಪುರದಲ್ಲಿ ಇದ್ದಾಗಲೂ ಅದರ ಸುತ್ತಲಿನ ಶಾಸನಗಳನ್ನು ಕುರಿತು, ಆ. ನೇ. ಉಪಾಧ್ಯೆಯವರ ಸಲಹೆಯಂತೆ, ಸೂಕ್ತ ಟಿಪ್ಪಣಿಗಳ ಸಹಿತ ಇಂಗ್ಲಿಷಿನಲ್ಲಿ Inscriptions from Northern Karnataka and Kolhapur ಎಂಬ ಗ್ರಂಥವನ್ನು ಪ್ರಗಟಿಸಿದರು. ಎಚ್. ಹೆರಾಸರು ಕುಂದಣಗಾರರನ್ನು ಕುರಿತು "ಶಾಸನ ಶಾಸ್ತ್ರ ಮತ್ತು ಪ್ರಾಕ್ತನಶಾಸ್ತ್ರ ಕ್ಷೇತ್ರಗಳಲ್ಲಿ ಇಂಥ ಪ್ರಾವೀಣ್ಯ ಪಡೆದಿರುವ ಸಂಶೋಧಕ ಕುಂದಣಗಾರರನ್ನು ಶಿಕ್ಷಕರನ್ನಾಗಿ ಹೊಂದಿರುವ ಕಾಲೇಜನ್ನು ಅಭಿನಂದಿಸಬೇಕು. ಪ್ರೊ. ಕುಂದಣಗಾರರು ಭಾರತದ ಮತ್ತು ವಿದೇಶದ ಶಾಸನತಜ್ಞರ ಸಾಲಿನಲ್ಲಿ ನಿಲ್ಲುತ್ತಾರೆ" ಎಂದು ಮುಂತಾಗಿ ಶ್ಲಾಘಿಸಿದ್ದಾರೆ. ಈ ಸಾಕಲ್ಯಜ್ಞಾನ ಅವರಿಗೆ ಗುರುಗಳಿಂದ ಬರಲಿಲ್ಲ, ಸ್ವಾಧ್ಯಾಯದಿಂದ ಸಂಪಾದಿಸಿದ್ದರು. ಸ್ವಂತ ಪರಿಶ್ರಮದಿಂದ ಸ್ವಯಮಾಚಾರ್ಯರಾದರು.

ಅವರ ಪಾಂಡಿತ್ಯಕ್ಕೆ ಬಲ್ಲಿದರು ಮಂಡೆಬಾಗಿ ಮಣಿದರು. 'ಟೈಮ್ಸ್ ಆಫ್ ಇಂಡಿಯಾ' ಮತ್ತು 'ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯ' ಪತ್ರಿಕೆಗಳಲ್ಲಿ ಕುಂದಣಗಾರರ ಸಂಶೋಧನೆಯ ಫಲಿತಗಳು ವರದಿಯಾದುವು. ಕೊಲ್ಹಾಪುರ ಬದಿಯ ಪಂಚಗಂಗಾ ನದಿಯ ತೀರದಲ್ಲಿ ಬ್ರಹ್ಮಪುರಿಯ ಉತ್ಖನನವನ್ನು, ಸರಕಾರದ ಹಣಸಹಾಯವಿಲ್ಲದೆ ಸ್ವಂತ ಪರಿಶ್ರಮದಿಂದ ಯಶಸ್ವಿಯಾಗಿ ಗುರಿಮುಟ್ಟಿದ್ದು ಕಂಡು ಪ್ರಶಂಸೆಯ ಹೇಳಿಕೆಗಳು ಹೊರಟುವು. ವಿಖ್ಯಾತ ಪ್ರಾಚ್ಯವಸ್ತು ಸಂಶೋಧಕ ಮಾರ್ಟಿಮರ್ ವೀಲರ್ ಖುದ್ದಾಗಿ ಬಂದು ಕುಂದಣಗಾರರನ್ನು ಅಭಿನಂದಿಸಿ, 'ಇದು ಅದ್ಭುತ, ಆಶ್ಚರ್ಯ ಹುಟ್ಟಿಸುವಂತಹುದು' ಎಂದು ಕೊಂಡಾಡಿದರು. ಮೊರೇಸರ 'ಕದಂಬ ಕುಲ' ಗ್ರಂಥ ಪ್ರಸಿದ್ಧಿ ಪಡೆದಿದೆ: ಕದಂಬ ವಂಶದ ಸಾಧನೆಗಳನ್ನು ಪರಿಚಯಿಸುವ ಈ ಮೌಲಿಕ ಕೃತಿಯನ್ನು ಬರೆಯುವಾಗ ಮೊರೇಸರು ಕುಂದಣಗಾರರಲ್ಲಿ ಚರ್ಚಿಸಿ ಸೂಚನೆಗಳನ್ನು ಪಡೆದರೆಂಬುದು ಕುಂದಣಗಾರರು ಹೊಂದಿದ್ದ ಇತಿಹಾಸಜ್ಞಾನ ಮತ್ತು ಪ್ರಭುತ್ವಕ್ಕೆ ಜ್ವಲಂತ ಸಾಕ್ಷಿ,

ತಮ್ಮ ಸ್ವಾಧ್ಯಾಯ ಕಾಲದಲ್ಲಿ ಮಿರ್ಜಿ ಅಣ್ಣಾರಾಯರು, ಸಂಸ್ಕೃತ-ಪ್ರಾಕೃತ ಜ್ಞಾನಕ್ಕೆ ಆ. ನೇ. ಉಪಾಧ್ಯೆಯವರನ್ನೂ ಹಳೆಗನ್ನಡ ಸಾಹಿತ್ಯ ಲಾಭಕ್ಕೆ ಕುಂದಣಗಾರರನ್ನೂ ಸಂಪರ್ಕಿಸುತ್ತಿದ್ದರು. ಸೇಡಬಾಳದಿಂದ ಕೊಲ್ಹಾಪುರಕ್ಕೆ ಹೋಗಿ ತಿಂಗಳಲ್ಲಿ ನಾಲ್ಕಾರು ದಿನ ಬಿಡಾರ ಹೂಡುತ್ತಿದ್ದರು. ಉಪಾಧ್ಯೆ, ಕುಂದಣಗಾರ, ಅಣ್ಣಾರಾಯ-ಮೂವರೂ ಮಧ್ಯಮ ತನುಗಾತ್ರರು, ಕದಳೀಗರ್ಭಶ್ಯಾಮರು, ಶಾರದೆಯವರ ಪುತ್ರರು. ಉಪಾಧ್ಯೆ ವಿದ್ವತ್ತಿಗೆ ತವನಿಧಿ. ಕುಂದಣಗಾರರು ಬತ್ತದ ಅರಿವಿನ ತೊರೆ. ಅಣ್ಣಾರಾಯರು ಇವರಿಬ್ಬರ ಮಾನಸಪುತ್ರರಾಗಿ ವರ್ಧಿಷ್ಣು. ಉಪಾಧ್ಯೆ

ಮತ್ತು ಕುಂದಣಗಾರರು ಮುಚ್ಚುಕೋಟು ತೊಟ್ಟು, ಕಚ್ಚೆಪಂಚೆ ಉಟ್ಟು, ತಲೆಗೆ ಕರಿಯ ಟೊಪ್ಪಿಗೆಯಿಟ್ಟು, ಕೈಯಲ್ಲಿ ಕೊಡೆ ಹಿಡಿದು ಕೊಲ್ಹಾಪುರದಲ್ಲಿ ಗಾಳಿಸವಾರಿ ಹೊರಡುವುದು: ಅವರಿಬ್ಬರ ಜತೆಗೆ ಬಿಳಿಯ ಗಾಂಧಿಟೋಪಿ, ಜುಬ್ಬ, ಕಚ್ಚೆ ಹಾಕಿದ ಮಿರ್ಜಿಯವರೂ ಉಪನದಿಯಾಗಿ ಸೇರುವುದು. ಈ ಮೂವರ ಜೋಡಿಯನ್ನು ನೋಡುವವರಿಗೆ ಸಾಹಿತ್ಯಕ್ಕೆ ಕೈಕಾಲು ಮೂಡಿ ನಡೆದಾಡುತ್ತಿರುವ ಅನುಭವ.

ಶ್ರವಣಬೆಳಗೊಳದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿ ಆಯ್ಕೆಯಾದಾಗ ಉಪಾಧ್ಯೆಯವರು ವ್ಯಕ್ತಪಡಿಸಿದ ಮರುಕ್ಷಣದ ಪ್ರತಿಕ್ರಿಯೆ -'ಈಗ ಮಿತ್ರರಾದ ಪ್ರೊ. ಕುಂದಣಗಾರ್ರು ಇರಬೇಕಿತ್ರಿ, ಸ್ಕಾಲರ್ ಅಂದ್ರ ಅವರ ನೋಡ್ರಿ' ಕನ್ನಡ ಸಾಹಿತ್ಯ ಸಂಬಂಧವಾದ ಸಂಶಯಗಳ ನಿವಾರಣೆಗೆ ಉಪಾಧ್ಯೆಗೆ ಕುಂದಣಗಾರರ ಸಹಾಯ ಸಿದ್ಧವಾಗಿತ್ತು. ಸ್ವಯಂ ಉಪಾಧ್ಯೆಯವರೇ ಅದನ್ನು ಒಪ್ಪಿಕೊಂಡಿದ್ದಾರೆ: "ಕುಂದಣಗಾರರ ಉಪಕಾರ ನನ್ನ ಮೇಲೆ ಭಾಳ ಇತ್ರಿ. ಅವರ ಮಾರ್ಗದರ್ಶನ ಇರದಿದ್ರ ನನ್ಗೆ ತುಂಬಾ ತ್ರಾಸ ಆಗಲಿಕ್ ಇತ್ರಿ. ಅದೇನೊ, ನನ್ ಸುದೈವ ಅನ್ರಿ, ಕುಂದಣಗಾರ್ರ ಸ್ನೇಹ ಪ್ರಾಪ್ತಿ ಲಭಿಸ್ತು. ಅವರ ಕೊಲ್ಹಾಪುರ ಬಿಟ್ಟ ಬೆಳಗಾವೀಗ್ ಹೋದರ್ರಿ. ಅದರ ದಸೀಂದ ನಂಗ ತ್ರಾಸ್ ಆಯ್ತುರಿ". ಉಪಾಧ್ಯೆ ಹಾಗೂ ಕೆ. ಜಿ. ಕುಂದಣಗಾರರು ಸೇರಿ ಸಹಸಂಪಾದಕರಾಗಿ ಚಿನ್ಮಯ ಚಿಂತಾಮಣಿ ಮತ್ತು ಜ್ಞಾನಭಾಸ್ಕರ ಚರಿತೆ -ಎಂಬ ಎರಡು ಕಿರುಕಾವ್ಯಗಳನ್ನು ಸಂಪಾದಿಸಿದ್ದಾರೆ. ಅವರಿಬ್ಬರೂ ಒಟ್ಟಿಗೆ ಇಪ್ಪತ್ತು ವರ್ಷ ಕೊಲ್ಹಾಪುರದಲ್ಲಿ ಕನ್ನಡ ವಿದ್ವತ್ತಿನ ಅಧ್ವರ್ಯುಗಳಾಗಿ, ಸಂಜೀವನ ಕರ್ನಾಟಕ ಪರಂಪರೆಯ ವಾರಸುದಾರರಾಗಿ, ಸಂಸ್ಕೃತಿಯ ರಾಯಭಾರಿಗಳಾಗಿ ತಾವು ಕಲಿತ ಕಲ್ಪಿಯನ್ನು ಧಾರೆಯೆರೆದರು. ಪುದುವಾಳುತ್ತ ಕನ್ನಡದಂತೆ ಇಂಗ್ಲಿಷಿನಲ್ಲೂ ಬರೆದರು. ಅದರಿಂದ ಕನ್ನಡೇತರರೂ ಕನ್ನಡ ರತ್ನಭಂಡಾರದ ಸಿರಿಸಂಪದವನ್ನು ತಿಳಿದರು. ಹೊರನಾಡಿನಲ್ಲಿದ್ದ ಈ ಇಬ್ಬರು ವಿದ್ವಾಂಸರೂ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

ಕೊಲ್ಹಾಪುರದಲ್ಲಿ ಕನ್ನಡ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ಹುರುಪು ತುಂಬಿದ ಹಿರಿಯರಾದ ಕುಂದಣಗಾರರ ಮೇಲಾಳಿಕೆಯಲ್ಲಿ 'ಕರ್ನಾಟಕ ಸಂಘ' ಹುಟ್ಟಿತು. ಅದರ ವತಿಯಿಂದ 'ಹರಿಹರದೇವ' ಎಂಬ ಅಪರೂಪ ಪುಸ್ತಕವೂ ಅಚ್ಚಾಯಿತು. ಪ್ರೊ. ಸ. ಸ. ಮಾಳವಾಡರು ಅಂದಿನ ದಿನಗಳನ್ನು ದಾಖಲಿಸಿದ್ದಾರೆ: "ಕನ್ನಡ ಸಾಹಿತ್ಯ ಸಂಸ್ಕೃತಿಗಳ ವ್ಯಾಸಂಗಕ್ಕೆ ಉಪಯುಕ್ತವಾಗುವ ದೊಡ್ಡಗಾತ್ರದ ಪುಸ್ತಕ ಭಂಡಾರವು ಆಗಲೇ ರಾಜಾರಾಮ ಕಾಲೇಜಿನಲ್ಲಿತ್ತು. ಪುರಾತನ ಸಂಶೋಧನೆಗಳಿಗೆ, ಕನ್ನಡ ಶಿಲಾಶಾಸನಗಳ ಅಭ್ಯಾಸಕ್ಕೆ ಬೇಕಾಗುವ ಸಾಮಗ್ರಿಯೂ ಅಲ್ಲಿತ್ತು. ಇದನ್ನೆಲ್ಲ ಕಟ್ಟಿ ಬೆಳಸಿದರು ಪ್ರೊ. ಕುಂದಣಗಾರರು. ಮಹಾರಾಷ್ಟ್ರದ ಒಂದು ದೇಶೀ ಸಂಸ್ಥಾನದಲ್ಲಿ ನಾಲ್ವತ್ತು ವರ್ಷಗಳ ಹಿಂದಣ ಪರಿಸ್ಥಿತಿಯಲ್ಲಿ ಇಂತಹ ಕಾರ್ಯವನ್ನು ಸಾಧಿಸಿದ ಪ್ರೊ. ಕುಂದಣಗಾರರ ನಿಷ್ಠೆ, ಕುಶಲತೆಗಳು ಪ್ರಶಂಶನೀಯ, ಅವರ ಸವಿಯಾದ, ಗೌರವಾನ್ವಿತವಾದ ವ್ಯಕ್ತಿತ್ವದಿಂದ ಅದು ಸಾಧ್ಯವಾಯಿತು. ರಾಜಾರಾಂ ಕಾಲೇಜಿನ ಆಗಿನ ಪ್ರಾಧ್ಯಾಪಕರು, ಕೊಲ್ಹಪುರದ ಪ್ರತಿಷ್ಠಿತ ವ್ಯಕ್ತಿಗಳು ಅವರನ್ನು ವಾತ್ಸಲ್ಯದಿಂದ 'ಅಣ್ಣಾ' ಎಂದು ಸಂಬೋಧಿಸುತ್ತಿದ್ದರು. ಪ್ರಾಚೀನ ಕರ್ನಾಟಕದಲ್ಲಿ 'ಅಣ್ಣ' ಎಂಬ ಸಂಬೋಧನೆಯನ್ನು ಪಡೆದವ ಹತ್ತನೆಯ ಶತಮಾನದ ಚಾವುಂಡರಾಯ. ಆದ್ದರಿಂದ ಪ್ರೊ. ಕುಂದಣಗಾರರನ್ನು ಇಪ್ಪತ್ತನೆಯ ಶತಮಾನದ ಚಾವಂಡರಾಯನೆಂದು ಹೇಳಬೇಕಾಗುತ್ತದೆ. ಸಾಹಿತ್ಯ, ಸಂಸ್ಕೃತಿ, ಧರ್ಮಗಳನ್ನು ಕುರಿತು ನಿಷ್ಠೆಯಲ್ಲಿ, ವಿದ್ಯಾದಾನದ ಬಗೆಗೆ ತೋರುವ ಔದಾರ್ಯದಲ್ಲಿ, ಉನ್ನತವಾದ ಕಾರ್ಯದ ಸಾಧನಗಳನ್ನು ನಾಡಿನ ಹಿತಕ್ಕಾಗಿ ಬಳಸುವಲ್ಲಿ ಈ ಆಧುನಿಕ ಚಾವುಂಡರಾಯ ಗೈದ ಸಾಧನೆಗಳನ್ನು ಕರ್ನಾಟಕವು ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ."

ಕೊಲ್ಹಾಪುರದಲ್ಲಿ ಪ್ರಾಚ್ಯವಸ್ತುವಿಭಾಗವನ್ನು ಹುಟ್ಟುಹಾಕಿ ಕಟ್ಟಿ ಬೆಳಸಿದ ಪ್ರೊ. ಕುಂದಣಗಾರರು ಧಾರವಾಡದ ಕನ್ನಡ ಸಂಶೋಧನಾ ಸಂಸ್ಥೆಯ ಸಂಸ್ಥಾಪನೆಗೂ ತುಂಬ ಶ್ರಮಿಸಿದರು. ಆದರೆ ನಿರಂತರ ಹದಿನೈದು ವರ್ಷಗಳ ಸ್ವಂತ ಖರ್ಚಿನ ಕಾಯಕದಿಂದ ಕೊಲ್ಹಾಪುರದಲ್ಲಿ ರೂಪಿಸಿದ ಪ್ರಾಚ್ಯವಸ್ತು ಸಂಗ್ರಹಾಲಯ ಅತಿಮಹತ್ವದ ಏಕವ್ಯಕ್ತಿಯ ದೊಡ್ಡ ಸಾಧನೆಯೆಂದು ಪ್ರೊ. ಮ. ಗು. ಬಿರಾದಾರ ಬರೆದಿರುವುದರಲ್ಲಿ ಅತಿಶಯೋಕ್ತಿಯಿಲ್ಲ: "ಈ ಪ್ರಾಚ್ಯವಸ್ತು ಸಂಗ್ರಹಾಲಯದ ಪ್ರತಿವಸ್ತುವಿನ ಮೇಲೂ ಪ್ರೊ. ಕುಂದಣಗಾರರ ಬೆರಳಿನ ಗುರುತುಗಳಿವೆ. ಆಗಿನ ಕಾಲದಲ್ಲಿ ಲಕ್ಷಗಟ್ಟಲೆ ಹಣ ಖರ್ಚು ಮಾಡಿದರೂ ಆಗದ ಆ ವಸ್ತು ಸಂಗ್ರಹಾಲಯ ಈ ಬಡ ಪ್ರಾಧ್ಯಾಪಕನೊಬ್ಬನ ಬೆವರು ಸಹಿತ ಪರಿಶ್ರಮದ ಫಲ ಎಂಬುದನ್ನು ಎಷ್ಟುಜನ ನೆನಪಿಟ್ಟದ್ದಾರೋ? ಅವರ ಗಳಿಕೆಯ ಅರ್ಧಕ್ಕೂ ಹೆಚ್ಚು ಹಣ ಈ ಸಂಶೋಧನಾ ಕಾರ್ಯಕ್ಕಾದರೆ, ಕಾಲುಭಾಗ ಕನ್ನಡ ವಿದ್ಯಾರ್ಥಿಗಳ ಕಲ್ಯಾಣಕ್ಕೆ ! ಉಳಿದದ್ದರಲ್ಲಿ ಹರಕು ಹಾಸಿಗೆಯ, ಚಟ್ನಿ ರೊಟ್ಟಿಯ ಸಂಸಾರ ಸಾಗುತ್ತಿತ್ತು.

ಕರ್ನಾಟಕದಲ್ಲಿ ನಾಣ್ಯಶಾಸ್ತ್ರದ ಅಧ್ಯಯನಕ್ಕೆ ತಕ್ಕ ಬುನಾದಿಯನ್ನು ಹಾಕಿ ಉದ್ಘಾಟಿಸಿದ ಪ್ರಥಮಿಗರು ಕುಂದಣಗಾರರು. ಕೊಲ್ಹಾಪುರದೊಳಗಿನ ಪ್ರಾಚೀನ ಕಾಲದ ನಾಣ್ಯಗಳು, ಆಂಧ್ರದ ನಾಣ್ಯಗಳು, ಪ್ರಾಚೀನ ಕನ್ನಡ ನಾಡಿನ ನಾಣ್ಯ ಪದ್ಧತಿ-ಮುಂತಾದುವು ತೀರ ಅಪರೂಪದ ಬರೆಹಗಳು. ಈ ನಾಣ್ಯಗಳ ಆಧಾರದಿಂದ, ಕ್ರಿ. ಶ. ಎರಡನೆಯ ಶತಮಾನದಲ್ಲಿ ಕರ್ನಾಟಕವು ಬೌದ್ಧಧರ್ಮ ಬೀಡಾಗಿದ್ದಿತು-ಎಂಬ ತೀರ್ಮಾನವನ್ನು ನೀಡಿದ ಮೊಟ್ಟಮೊದಲ ಸಂಶೋಧಕರು ಕುಂದಣಗಾರರು. ವಿದ್ವತ್ತಿನ ಅಂಜನ ಹಚ್ಚಿದ ಅವರ ಕಣ್ಣುಗಳಿಗೆ ನೆಲದ ಮರೆಯ ನಿಧಾನ ನಿಚ್ಚಳವಾಗಿ ಕಾಣುತ್ತಿತ್ತು. ಭಾರತ ಮತ್ತು ರೋಮ್ ನಡುವೆ ಇದ್ದ ಬಾಂಧವ್ಯದ ಸ್ವರೂಪದ ಮೇಲೆ ಬೆಳಕು ಬೀರಿದ, 'ರೋಮನ್ ಸಮುದ್ರ ದೇವತೆಯ' ಹಿತ್ತಾಳೆಯ ಅಪರೂಪದ ಮೂರ್ತಿಯನ್ನು, ತಮ್ಮ ಉತ್ಖನನದಿಂದ ಹೊರತೆಗೆದ ಕೀರ್ತಿಯು ಅವರಿಗೆ ದೊರೆಯಿತು. ಜನಪದ ಸಾಹಿತ್ಯದ ಅಧ್ಯಯನ ಮತ್ತು ಆಸಕ್ತಿ ಇನ್ನೂ ವಿಶ್ವವಿದ್ಯಾಲಯಗಳ ಗದ್ದುಗೆ ಏರಿರದ ಆ ಕಾಲದಲ್ಲಿ, ಪಿ ಎಚ್. ಡಿ. ಪದವಿಗಾಗಿ 'ಕನ್ನಡ ಜನಪದ ಗೀತೆಗಳು' ಎಂಬ ವಿಷಯವನ್ನು ಗದ್ದಗಿಮಠ ಅವರಿಗೆ ಕೊಟ್ಟು ಮಾರ್ಗದರ್ಶನ ಮಾಡಿದ ಶ್ರೇಯವೂ ಕುಂದಣಗಾರರಿಗೆ ಸಂದಿತು; ಕನ್ನಡದ ಪ್ರಪ್ರಥಮ ಪಿ ಎಚ್. ಡಿ ಮಹಾಪ್ರಬಂಧ ಇದೇ ಎಂಬುದು ಇನ್ನೊಂದು ಹೆಚ್ಚಳ. ಡಿ. ಎಸ್. ಕರ್ಕಿ ಅವರ 'ಕನ್ನಡ ಛಂದೋವಿಕಾಸ' ಮಹಾಪ್ರಬಂಧವು ಕುಂದಣಗಾರರ ಮಾರ್ಗದರ್ಶನದಲ್ಲಿ ಸಿದ್ಧವಾದದ್ದು.

ಕುಂದಣಗಾರರಿಗೆ ಜೈನ ಸಾಹಿತ್ಯ ಮತ್ತು ವೀರಶೈವ ಸಾಹಿತ್ಯ ಕರತಲಾಮಲಿಕವಾಗಿತ್ತು. ಈ ಎರಡೂ ಧರ್ಮಗಳ ಸಾರ, ವೈಶಿಷ್ಟ್ಯ, ಸ್ವೋಪಜ್ಞತೆ ಗುರುತಿಸಿದ್ದರು. ಜಿನವಿಜಯ ಮತ್ತು ವಾಗ್ಭೂಷಣ ಎಂಬ ಎರಡು ಆದರ್ಶ ಪತ್ರಿಕೆಗಳ ಸಂಪಾದಕರೂ ಆಗಿದ್ದ ಕುಂದಣಗಾರರು ಅಪ್ರಕಟಿತ ಓಲೆಗರಿ ಹಸ್ತಪ್ರತಿಗಳನ್ನು ಆಳವಾಗಿ ಓದಿ ತಲಸ್ಪರ್ಶಿಯಾದ ಪಾಂಡಿತ್ಯವನ್ನು ಗಳಿಸಿದ್ದರು. ಸಂಸ್ಕೃತ, ಪ್ರಾಕೃತ ಸಾಹಿತ್ಯದ ಕವಿ ಮತ್ತು ಕಾವ್ಯಗಳ ಮಹತ್ವ, ಕನ್ನಡದ ಸಂದರ್ಭದಲ್ಲಿ ಎಷ್ಟು ಮುಖ್ಯ ಎಂಬುದನ್ನು ಎತ್ತಿ ಹೇಳಿದ್ದಾರೆ. ಪಂಪ, ನಾಗಚಂದ್ರ, ಜನ್ನ, ನೇಮಿಚಂದ್ರ, ರತ್ನಾಕರವರ್ಣಿ, ಮುಂಗರಸ ಮುಂತಾದ ಕವಿಗಳ ಕಾವ್ಯ ಸೂಕ್ಷ್ಮಗಳಿಗೆ ಸ್ಪಂದಿಸುವ ಮೌಲಿಕವಾದ ಬರವಣಿಗೆ ಮಾಡಿದ್ದಾರೆ. ಅವರ ಸಮಕಾಲೀನ ಸಾಹಿತ್ಯ ಸಂದರ್ಭದಲ್ಲಿ ಅಪೂರ್ವ ಮತ್ತು ಶ್ಲಾಘನೀಯವೆನಿಸುವ ವಿಮರ್ಶಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಈ ಬಗೆಯ ಬರಹಗಳಲ್ಲಿ ವಾಗಿದ ಅಭಿರುಚಿಯೊಂದಿಗೆ ಆಯಾ ಹಳೆಗನ್ನಡ ಕಾವ್ಯಗಳ ಶ್ರೇಷ್ಠಭಾಗವನ್ನು, ಮುಖ್ಯ ಕಾಣ್ಕೆಯನ್ನು ಕಾಣುವ ಆಧುನಿಕ ದೃಷ್ಟಿಕೋನವೊಂದು ಕ್ರಿಯಾಶೀಲವಾಗಿರುವುದನ್ನು ಮನಗಾಣಬಹುದು. ರತ್ನಾಕರನ ಭರತೇಶ ವೈಭವ ಕಾವ್ಯದ ಭಿನ್ನ ಪಾತಳಿಗಳನ್ನು ವಿವೇಚಿಸುತ್ತ ಪತಿತ್ವ, ಭ್ರಾತೃತ್ವದ ಬಾಂಧವ್ಯ ಭಾವ ಪ್ರಕಟಗೊಂಡು ಕೆನೆಕಟ್ಟಿರುವ ಪರಿಯನ್ನು ನೃತ್ಯ ನಿರೂಪಣೆಯಲ್ಲಿ ಹೆಣೆದುಕೊಂಡಿರುವ ನಟ್ಟುವರ ಮಾಹಿತಿಯನ್ನೂ ಬಯಲುಗೊಳಿಸಿದ್ದಾರೆ.

ಮಾಘಣಂದಿ ಮತ್ತು ಆಚಣ್ಣ, ಆದಿಪಂಪನೂ ಸಮುದಾಯದ ಮಾಘಣಂದಿಯೂ, ಪಂಪನು ಜಿನಸೇನಾಚಾರ್ಯರನ್ನು ಅನುಸರಿಸಿದ್ದಾನೆ. ಎಂಬಿತ್ಯಾದಿ ಲೇಖನಗಳಲ್ಲಿ ಕುಂದಣಗಾರರು ತಳೆದಿದ್ದ ತೌಲನಿಕ ಪ್ರಜ್ಞೆಯ ಹೊಳಪುಗಳು ಹರಳುಗೊಂಡಿವೆ. ಸಮುದಾಯದ ಮಾಘಣಂದಿಯು ಶಾಸ್ತ್ರಸಾರ ಸಮುಚ್ಚಯ ಎಂಬ ಕೃತಿಯಲ್ಲಿ ಸಂಸ್ಕೃತ ವೃತ್ತಗಳಿಗೆ ಕನ್ನಡ ವೃತ್ತಿಯನ್ನು ಬರೆದಿದ್ದಾನೆ. ಮಾಘಣಂದಿಯು ಉದಾಹರಿಸಿರುವ ಪದ್ಯಗಳಲ್ಲಿ ಪಂಪನ ಆದಿಪುರಾಣ ಮತ್ತು ಆಚಣ್ಣಕವಿಯ ವರ್ಧಮಾನ ಪುರಾಣದಿಂದ ಆರಿಸಿದ ಪದ್ಯಗಳೂ ಸೇರಿರುವ ಸಂಗತಿಯನ್ನು ಸಂಶೋಧಿಸಿದ ಹಿರಿಮೆ ಕುಂದಣಗಾರರದು. ಸೋಮದೇವ ಕವಿಯ ಸಂಸ್ಕೃತ 'ನೀತಿ ವಾಕ್ಯಾಮೃತ' ಕೃತಿಯಿಂದ ಆರಿಸಿದ ಕನ್ನಡ ಪದಗಳು, ಕುರುವಂಶದ ಬಗೆಗೆ ಜೈನ ವಿಚಾರ, ಗೊಮ್ಮಟ ಶಬ್ದದ ವ್ಯುತ್ಪತ್ತಿ-ಮುಂತಾದ ರಚನೆಗಳು ಕುಂದಣಗಾರರ ಆಸಕ್ತಿಯ ವ್ಯಾಪಕತೆಗೆ ಸಾಕ್ಷಿಯಾಗಿವೆ.

ಜೈನ ಕಾವ್ಯಗಳಿಗೆ ಕುಂದಣಗಾರರು ಹೇಗೆ ಪ್ರತಿಕ್ರಿಯಿಸಿದರೆಂಬುದನ್ನು ಮನಗಾಣಲು ವಿವಿಧ ಕಾಲಮಾನದಲ್ಲಿ ಬರೆದ ಈ ಬಗೆಯ ಬಿಡಿ ಬರೆಹಗಳ ಜತೆಗೆ ಅವರು ಸಂಪಾದಿಸಿದ ಜೈನ ಕಾವ್ಯಗಳನ್ನೂ ಅವುಗಳಿಗೆ ಸೇರಿಸಿರುವ ಪ್ರಸ್ತಾವನೆಯನ್ನು ಓದಬೇಕು. ಅವರು ಎಂ. ಎ. ತರಗತಿಗೆ ಕಲಿಯುತ್ತಿದ್ದಾಗ ಈ ಪರಿಶ್ರಮ ನಡೆದಿತ್ತು. ದ್ರವಸ್ಥಿತಿಯಲ್ಲಿದ್ದ ಜೈನ ಸಾಹಿತ್ಯದ ಆಸಕ್ತಿ ಘನಸ್ಥಿತಿ ತಲಪಿದ್ದು ಕೊಲ್ಲಾಪುರದಲ್ಲಿ ಸಿಕ್ಕ ಉಪಾಧ್ಯೆಯವರ ಒಡನಾಟದಿಂದ. ಎರಡು ದಶಕಗಳ ದೀರ್ಘಕಾಲಿಕ ಸ್ನೇಹ ಸಾಹಚರ್ಯದಿಂದ ಜೈನ ಧರ್ಮದ ಮತ್ತು ಸಾಹಿತ್ಯದ ಅರಿವು ಪಡೆದು ಹಿಡಿತವನ್ನು ಸಂಪಾದಿಸಿದರು. ಜತೆಗೆ ಚಂದ್ರಕಾಂತ ನಿಂಗರಾಜ ಪಾಟೀಲ ತಿಗಡೊಳ್ಳಿ ಮತ್ತು ಅಣ್ಣಪ್ಪ ಪಡೆಪ್ಪ ಚೌಗುಲೆ ಬೆಳಗಾವಿ- ಇವರ ಸಂಪರ್ಕದಿಂದ ಈ ತಿಳಿವಳಿಕೆ ಮತ್ತು ಮೊನಚುಗೊಂಡಿತು. ತತ್ಫಲವಾಗಿ ಜೈನ ಶಾಸ್ತ್ರಗ್ರಂಥ ಹಾಗೂ ಕಾವ್ಯಗಳ ವಿಷಯದಲ್ಲಿ ಅಧಿಕೃತ ವಕ್ತಾರನಾಗುವ ಶಕ್ತಿಯೂ ಪ್ರಭುತ್ವವೂ ದೊರೆಯಿತು. ಸೃಜನಶೀಲ ಸಾಹಿತಿಯೂ ಆಗಿದ್ದ ಕುಂದಣಗಾರರು 'ಸರಸ್ವತಿ' ಎಂಬ ಕಾದಂಬರಿಯನ್ನು ಹಾಸ್ಯಪೂರಿತ ಪ್ರಬಂಧಗಳನ್ನೂ ಅಕ್ಕಮಹಾದೇವಿಯನ್ನು ಕುರಿತು ಜೀವನ ಚರಿತೆಯನ್ನೂ ರಚಿಸಿದ್ದಾರೆ. ಸಂಸ್ಕೃತದಿಂದ ರತ್ನಾವಳೀ ಮತ್ತು ನಾಗಾನಂದ ಎಂಬ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ.

ಕೊಲ್ಲಾಪುರದಿಂದ ನಿವೃತ್ತಿಯ ಅನಂತರ ಬೆಳಗಾವಿಯ ರಾಣಿ ಪಾರ್ವತಿದೇವಿ ಕಾಲೇಜಿನಲ್ಲಿ (ಆರ್. ಪಿ. ಡಿ) 1948 ರಿಂದ 1965 ರವರೆಗೆ ಪ್ರಾಧ್ಯಾಪಕರಾಗಿದ್ದ ಕುಂದಣಗಾರರು ಶಿಕ್ಷಣ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಅವಿಸ್ಮರಣೀಯ. ಸ್ವಯಂ ಜ್ಞಾನಭಂಡಾರವಾಗಿದ್ದರಿಂದ ಅವರು ಶಿಷ್ಯರ ಪಾಲಿಗೆ ಕಲ್ಪವೃಕ್ಷ-ಕಾಮಧೇನು ಆಗಿದ್ದರೆಂದು ಅವರಲ್ಲಿ ಕಲಿತ ಹಲವು ಹಿರಿಯರು ಮುಕ್ತಕಂಠರಾಗಿ ನುಡಿದಿದ್ದಾರೆ. ಕನ್ನಡದಲ್ಲಿ ಉನ್ನತ ಶಿಕ್ಷಣಕ್ಕಾಗಿ ಕೊಲ್ಲಾಪುರಕ್ಕೆ ಬರುತ್ತಿದ್ದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಅವರ ಮನೆಯೆ ಯಾತ್ರಾಸ್ಥಳ, ಕಾಶಿ. ಬೆಳಗಿನ ಜಾವದಲ್ಲಿ ತಾವೇ ಖುದ್ದಾಗಿ ನಿಂತು ವಿದ್ಯಾರ್ಥಿಗಳನ್ನು ಏಳಿಸುತ್ತಿದ್ದರು, ಯೋಗಕ್ಷೇಮ ವಿಚಾರಿಸುತ್ತಿದ್ದರು. ಉಚಿತ ಊಟ ಉಪಹಾರ ವಸತಿ ಸೌಕರ್ಯ ಅವರ ಮನೆಯಲ್ಲಿ ವಿದ್ಯಾರ್ಥಿಗಳಿಗೆ ಮೀಸಲು. ಆಹಾರ, ಫೀಸು ಕಟ್ಟಲು ಹಣ, ಬಟ್ಟೆ ಬರೆ, ಪುಸ್ತಕಗಳು-ಎಲ್ಲ ಪುಕ್ಕಟೆಯಾಗಿ ಹಂಚುತ್ತಿದ್ದರು. ಕನ್ನಡ ಕಲಿಯಲು ಬಂದ ಛಾತ್ರರಿಗೆ ಕುಂದಣಗಾರರು ಪ್ರಾಧ್ಯಾಪಕರೂ ಪಾಲಕರೂ ಪೋಷಕರೂ ಗೆಳೆಯರೂ ತತ್ವಜ್ಞಾನಿಯೂ ಮಾರ್ಗದರ್ಶಕರೂ ಆಗಿದ್ದರು. ಕುಂದಣಗಾರರು ಗುರು ಅವರ ಮನೆ ಗುರುಕುಲ, ಗ್ರಂಥಾಲಯ ಮತ್ತು ಕನ್ನಡ ಜಾಗೃತಿಯ ಕಮ್ಮಟ.

"ಕುಂದಣಗಾರರು ವಾತ್ಸಲ್ಯದ ಸಾಕಾರ ಮೂರ್ತಿ. ವಿದ್ಯಾರ್ಥಿಗಳೆಲ್ಲರೂ ಅವರಿಗೆ ಮನೆಯ ಮಕ್ಕಳಂತೆ. ಬಡವಿದ್ಯಾರ್ಥಿಗಳಿಗೆ ಎಲ್ಲ ದೃಷ್ಟಿಯಿಂದಲೂ ತಮ್ಮ ಶಕ್ತ್ಯಾನುಸಾರ ಸಹಾಯ ಮಾಡುತ್ತಿದ್ದರು. ಅಂತೆಯೇ ಸಹಸ್ರರು ವಿದ್ಯಾರ್ಥಿಗಳು ಪದವೀಧರರಾಗಿ ಜೀವನದ ನಾನಾ ಕ್ಷೇತ್ರಗಳಲ್ಲಿ ಮುಂದೆ ಬಂದು ಕಾರ್ಯಮಾಡುತ್ತಿರುವರು. ಇವರ ಹೆಸರು ಹೇಳಿ ಅವರು ಮನೆಗೆ ದೀಪ ಮುಡಿಸುತ್ತಿರುವರು. ಇಷ್ಟು ಅಪಾರವಾಗಿದೆ. ಅವರ ವಾತ್ಸಲ್ಯ ಭಾವನೆ, ನಾಡು ನುಡಿಗಳ ಪ್ರೇಮ" (ಆರ್. ಸಿ. ಹಿರೇಮಠ, 'ಕುಂದಣ'ದ ಸಂಪಾದಕೀಯ). ಭಾರತದ ರಾಷ್ಟ್ರಪತಿಯಿಂದ ಹಿಡಿದು, ವಿಶ್ವವಿದ್ಯಾಲಯದ ಕುಲಪತಿಗಳು, ಕಾಲೇಜುಗಳ ಪ್ರಾಂಶುಪಾಲರು, ಪ್ರಾಧ್ಯಾಪಕರು-ಹೀಗೆ ಒಂದು ದೊಡ್ಡ ಪಾಳಿಯೇ ಇದೆ ಕುಂದಣಗಾರರ ಶಿಷ್ಯಸಮುದಾಯದ ಪ್ರಭಾವಳಿಯನ್ನು ಬೆಳಗಿಸಲು. ಈ ನಾಡಿನ ಉದ್ದಗಲಗಳಲ್ಲಿ ಹೆಸರುಗಳಿಸಿದ ಕುಂದಣಗಾರರ ವಿದ್ಯಾರ್ಥಿ ಮಹೋದಯರಲ್ಲಿ ಕೆಲವರು: ಇಂಚಲ ಎಸ್. ಜಿ, ಕರ್ಕಿ ಡಿ. ಎಸ್, ಕುಲಕರ್ಣಿ ವ್ಹಿ. ಜಿ., ಗದ್ದಗಿಮಠ ಬಿ. ಎಸ್, ಜತ್ತಿ ಬಿ. ಡಿ, ಜಾಧವ ಆರ್. ಬಿ. (ರಾಮಜಾಧವ), ಪಾಟೀಲ ಕೆ. ಎಚ್. ರ್‍ಯಾಂಗಲರ್ ಡಿ. ಸಿ. ಪಾವಟೆ, ಬಿರಾದಾರ ಎಂ. ಜಿ. , ಭಾಗೋಜಿ ಪಿ.ಕೆ., ಭೂಸನೂರ ಮಠ ಎಸ್. ಎಸ್., ಮಾಳವಾಡ ಸ. ಸ., ಮುಗಳಿ ರಂ. ಶ್ರೀ. ಲಗಳಿ, ಎಚ್. ಕೆ. ವೆಂಕಟೇಶ ಸಾಂಗಲಿ, ಶಂಕರರಾವ, ಜಿ. ಬಿ. ಶಹಪೇಟಿ,

ಎಸ್. ಬಿ. ಸದಾನಂದ ನಾಯಕ, ಸಾಸನೂರ, ಎ. ಟಿ. ಸಾಸನೂರ, ಬಿ. ಟಿ. ಸಾಸ್ನೂರ, ಎಚ್. ಟಿ. ಸುಂಕಾಪುರ, ಎಂ. ಎಸ್. ಹಿರೇಮಠ, ಆರ್. ಸಿ. ಹಿರೇಮಲ್ಲೂರ್, ಈಶ್ವರನ್ ಮುಂತಾದವರು.

ಕುಂದಣಗಾರರಿಗೆ ಶಿಷ್ಯವಾತ್ಸಲ್ಯ, ಪುಸ್ತಕ ಪ್ರೀತಿ ಇವು ಎರಡು ಶ್ವಾಸಕೋಶಗಳು. ಸಾಲಮಾಡಿ ಪುಸ್ತಕ ಕೊಳ್ಳುತ್ತಿದ್ದರು. ಅವರ ವೈಯಕ್ತಿಕ ಪುಸ್ತಕ ಭಂಡಾರ ಬಹಳ ದೊಡ್ಡದಿದ್ದು ಅದು ವಿಧ್ಯಾರ್ಥಿಗಳಿಗೆ ಮುಕ್ತವಾಗಿತ್ತು. ಅವರಿಗೆ ಕುಳಿತುಕೊಳ್ಳಲು ಒಳ್ಳೆಯ ಕುರ್ಚಿ ಇರದಿದ್ದರೂ ಪುಸ್ತಕಗಳಿಗೆ ಮಾತ್ರ ಸಾಗುವಾನಿಯ ದೊಡ್ಡ ಕಪಾಟುಗಳನ್ನು ಮಾಡಿಸಿದ್ದರು. ಪುಸ್ತಕಗಳ ಮಹತ್ವವನ್ನು ಶಿಷ್ಯರಿಗೆ ತಿಳಿಸಿದ್ದಲ್ಲದೆ ಪುಸ್ತಕವನ್ನು ವಿದ್ಯಾರ್ಥಿಗಳಿಗೆ ತಾವೇ ಖುದ್ದಾಗಿ ಒಯ್ದು ಮುಟ್ಟಿಸುತ್ತಿದ್ದುದು ಅವರ ಘನ ವ್ಯಕ್ತಿತ್ವದ ಒಂದು ಮುಖ. ಎರಡು ಉದಾಹರಣೆಯಿಂದ ಈ ಅಂಶವನ್ನು ಸಾಬೀತು ಪಡಿಸಬಹುದು:

1"ಜಾತಿ-ಮತ-ಪ್ರದೇಶಗಳ ತಾರತಮ್ಯವಿಲ್ಲದೆ ಇಡೀ ವಿದ್ಯಾರ್ಥಿ ಜಾತಿಯನ್ನೇ ತಮ್ಮ ಮನೆಯ ಮಕ್ಕಳಾಗಿಸಿಕೊಂಡು ಅವರ ಉತ್ಕರ್ಷಕ್ಕೆ ಕಾರಣರಾದ ಮಹಾನ್ ಪ್ರಾಧ್ಯಾಪಕ, ಆಚಾರ್ಯರ ಆಚಾರ್ಯ ಈ ಪ್ರೊ. ಕುಂದಣಗಾರ! ವಿದ್ಯಾರ್ಥಿಗಳ ಮೇಲಿನ ಪ್ರೀತಿಯ ಪ್ರತೀಕವಾಗಿ, ನನ್ನೊಂದಿಗೆ ನಡೆದ ಘಟನೆಯೊಂದನ್ನು ಉಲ್ಲೇಖಿಸುವುದು ಅವಶ್ಯವೆನಿಸಿದೆ. ನನ್ನ ಪಿಎಚ್. ಡಿ ಅಧ್ಯಯನಕ್ಕೆ ಆಕರಗ್ರಂಥವಾಗಿ ಜಿನಸೇನಾಚಾರ್ಯರ ಪೂರ್ವಪುರಾಣ ಬೇಕಾಯ್ತು. ಅದು ಬೆಳಗಾಂವದಿಂದ ನಾಲ್ಕು ಮೈಲು ದೂರದ ಒಂದು ಜೈನ ಮಠದಲ್ಲಿದ್ದುದ್ದನ್ನು ನನಗೆ ತಿಳಿಸಿದರು. ಅಲ್ಲದೆ -ಮುಂಜಾನೆ ಬೇಗ ಬನ್ನಿ, ಸ್ವಾಮಿಗಳಿಗೊಂದು ಪತ್ರ ಕೊಡುವೆ ತರುವಿರಂತೆ -ಎಂದೂ ಹೇಳಿದರು. ನಾನು ಅವರ ಆದೇಶದಂತೆ ಮುಂಜಾನೆ ಮನೆಗೆ ಹೋದಾಗ ಅವರಿರಲಿಲ್ಲ. ನಸುಕಿನಲ್ಲೇ ಹೋದವರು ಇನ್ನೂ ಬಂದಿಲ್ಲವೆಂದು ತಾಯಿಯವರು ಹೇಳಿದರು. ನಾನು ವಿಚಾರಿಸುತ್ತ ಟಿಳಕವಾಡಿಯ ಬಸ್ ನಿಲುಗಡೆಯ ಸ್ಥಳಕ್ಕೆ ಬಂದೆ. ಹದಿನೈದು ಇಪ್ಪತ್ತು ನಿಮಿಷ ಕಾದಿರಬೇಕು. ಆಗ ಹೆಗಲ ಮೇಲೊಂದು ದೊಡ್ಡ ಗಂಟು ಹೊತ್ತುಕೊಂಡು ಗುರುಗಲು ಬಸ್ಸಿನಿಂದಿಳಿದರು. ಏನು ತಂದಿದ್ದಾರೂ ಎಂದು ಒತ್ತಾಯದಿಂದ ಅದನ್ನು ತೆಗೆದುಕೊಂಡೆ. '.....ನೀವು ಹೋದರೆ ಅವರು ಕೊಡಲಿಕ್ಕಿಲ್ಲ ಎಂದು ನಾನೇ ನಸುಕಿನಲ್ಲಿ ಎದ್ದು ವಾಕಿಂಗ್ ಹೋದೆ..' ಮುಂತಾಗಿ ಹೇಳುತ್ತಿರುವಾಗ ಆ ಗಂಟಿನಲ್ಲಿದ್ದುದು ತೆಕ್ಕೆಗೆ ಸಿಕ್ಕದ ಗಾತ್ರದ ಗ್ರಂಥ ಪೂರ್ವಪುರಾಣವೆಂಬ ಅರಿವಾಯ್ತು! ಗುರುವಿನ ಈ ಕಾರ್ಯಕ್ಕೂ, ಆ ಗಾತ್ರದ ಕೃತಿಗೂ ಏನೂ ವ್ಯತ್ಯಾಸ ಕಾಣಲಿಲ್ಲ" (ಮ. ಗು. ಬಿರಾದಾರ: ಪ್ರೊ. ಕೆ. ಜಿ. ಕುಂದಣಗಾರರ ಬದುಕು ಮತ್ತು ಬರಹ: 1995-24-25).

2. ಅವರ ಸಾತ್ವಿಕ, ಸರಳ, ಉದಾರ, ವಿನಮ್ರ ಜೀವನದ ಪ್ರಬಲವಾದ ಪ್ರಭಾವ ಇಂದಿಗೂ ನನ್ನೊಳಗೆ ಗುನುಗುಣಿಸುತ್ತಾ ನಿನಾದ ಮಾಡುತ್ತಿದೆ. ಅವರಂಥವರು ಅವರು. ಯಾವಾಗಲೂ ಮೊಗದಲ್ಲಿ ನಗೆ, ಮಾತಿನಲ್ಲಿ ಜೇನು, ಕೈಯಲ್ಲಿ ಉಪಕಾರ, ಕಾಲೇಜಿನ ಕೆಲಸ ಮುಗಿಸಿಕೊಂಡು ಮನೆಗೆ ಬರುವಾಗ ನನಗೆ ಉಪಯುಕ್ತವಾಗುವ ನಾಲ್ಕೆಂಟು ದೊಡ್ಡ ದೊಡ್ಡ ಪುಸ್ತಕಗಳನ್ನು ಹೊತ್ತುಕೊಂಡು ನಮ್ಮ ಹಾಸ್ಟೇಲಿಗೆ ಬಂದು, ಆ ಗ್ರಂಥಗಳಲ್ಲಿ ನಾವು ಓದಬೇಕಾದ ವಿಷಯಗಳನ್ನೆಲ್ಲ ಗುರುತುಹಾಕಿಕೊಟ್ಟು ತಮ್ಮ ಮನೆಗೆ ಹೋಗುತ್ತಿದ್ದರು. ಬಹುಮಟ್ಟಿಗೆ ನನಗೆ ಕೊಟ್ಟಗ್ರಂಥಗಳನ್ನು ತಿರುಗಿ ವಾಚನಾಲಯಕ್ಕೆ ಮುಟ್ಟಿಸುವವರೂ ಅವರೆ ! ಅಭ್ಯಾಸದಲ್ಲಿ ಮುಳುಗಿದಂತಿದ್ದ ನನ್ನ ಹೊತ್ತು ವಾಚನಾಲಯದ ದಂದುಗದಲ್ಲಿ ವ್ಯರ್ಥವಾಗಿ ಕಳೆದುಹೋಗಬಾರದೆಂಬುದೆ ಗುರುಗಳಾದ ಕುಂದಣಗಾರರ ಉತ್ಕಟ ಉತ್ಸಾಹ ಭಾವ" [ಸಂ.ಶಿ. ಭೂಸನೂರ ಮಠ : 'ಕುಂದಣದ ಬೆಳೆ' (ಸಂ) ಪ್ರಕಾರ ಕೋಟಿನ ತೋಟ: 1995 : 22-23].

ವಿದ್ಯಾರ್ಥಿಗಳೇ ತಮ್ಮ ಪ್ರಥಮ ದೈವವೆಂದು ನಂಬಿ ನಡೆದ ಕುಂದಣಗಾರರು ಎಂಥ ಪರಿಸ್ಥಿತಿಯಲ್ಲಿಯೂ ರಜೆ ಹಾಕಿದವರಲ್ಲ, ತರಗತಿ ತಪ್ಪಿಸಿದವರಲ್ಲ. ಪೂರ್ವಸಿದ್ಧತೆ ಇರದೆ ತರಗತಿಗೆ ಬಂದವರಲ್ಲ. ಆಧ್ಯಯನ, ಅಧ್ಯಾಪನ, ಸಂಶೋಧನ- ಇವುಗಳಲ್ಲಿ ಆನಂದ ಪಡೆದರು, ಬಿಡುಗಡೆ ಕಂಡರು .'ಬಹು ಜನಪ್ರಿಯ' ಎಂಬ ಮಾತು ಹಾಗಿರಲಿ, 'ತುಸು ಜನಪ್ರಿಯ' ಕೂಡ ಆಗಿರಲಿಲ್ಲ. ಸಾರ್ವಜನಿಕ ಸಭೆ ಸಮಾರಂಭದ ವೇದಿಕೆಗಳು ಅವರಿಗೆ ದೂರ. ಹೀಗಾಗಿ ಅವರ ಬೌದ್ಧಿಕ ಎತ್ತರಗಳ ಪರಿಚಯ ವ್ಯಾಪಕವಾಗಿ ಹಬ್ಬಲಿಲ್ಲ. ಅಲ್ಲದೆ ಅವರ ಸಂಶೋಧನೆ ಪ್ರಬಂಧಗಳ ಅಲಭ್ಯತೆಯೂ ಕಾರಣವಾಗಿ, ಅವರ ಹುಡುಕಾಟದ ಹೊನ್ನಗೆರೆಗಳನ್ನು ಗುರುತಿಸಲು ಸಾಧ್ಯವಾದದ್ದು ತಡವಾಗಿ, ಕರ್ನಾಟಕದ ವಿದ್ವತ್ತಿನ ಬಾಂದಳದ ಈ ಬೆಳ್ಳಿನಕ್ಷತ್ರ ಜಂಗಮ ವಿಶ್ವಕೋಶವೆಂದು ತಿಳಿದದ್ದು ಕೆಲವು ಶಿಷ್ಯರಿಗೆ ಮಾತ್ರ. ಕೀರ್ತಿ ಗಳಿಸಬಹುದು. ಪ್ರಾಮಾಣಿಕರೆಂದು, ಸಚ್ಚಾರಿತ್ರ್ಯ ಶುಭ್ರರೆಂದು ಹೆಸರು ಗಳಿಸುವುದು ಅಪರೂಪ. ಕುಂದಣಗಾರರಲ್ಲಿ ಸಣ್ಣತನಗಳು ಇರಲಿಲ್ಲ. ಅಕಳಂಕವಾದ ಪಾರದರ್ಶಕ ಸನ್ನಡತೆಯಿಂದ, ತಲಸ್ಪರ್ಶಿಯಾದ ತುಂಬು ಪಾಂಡಿತ್ಯದಿಂದ, ಬಿಂಕ ಬಿಗುಮಾನಗಲಿರದ ಸರಳಜೀವನದಿಂದ ಅಪರೂಪದವರೆನಿಸಿದರು.

ತಮ್ಮ ಜನ್ಮಸ್ಥಳವಾದ ಕೌಜಲಗಿಯಲ್ಲಿ ಮಾದರಿ ಶಿಕ್ಷಣ ಸಂಸ್ಥೆಯು ನಡೆಸುತ್ತಿದ್ದ ಶಾಲೆಯು ಹಣಕಾಸಿನ ತೊಂದರೆಯಿಂದಾಗಿ ಮುಚ್ಚುವಂತಹ ಪರಿಸ್ಥಿತಿ ಎದುರಾಯಿತು. ಪ್ರೊ. ಕುಂದಣಗಾರರ ಕರುಳು ಕಿತ್ತು ಬಂದಂತಾಯಿತು. ಕೈಯಲ್ಲಿ ಕಾಸಿಲ್ಲ. ಕೂಡಲೆ ಕೌಜಲಗಿಯಲ್ಲಿದ್ದ ಮನೆಯನ್ನು ಮಾರಿ ಬಂದ ಮೂರುಸಾವಿರ ರೂಪಾಯಿಗಳನ್ನು 1933ರಲ್ಲಿ ನೀಡಿ ಹಳ್ಳಿಯ ಏಕೈಕ ಶಾಲೆಯನ್ನು ಉಳಿಸಿದರು! ಕೇಳುವವ ಬಡವನಲ್ಲದೆ ನೀಡುವವ ಬಡವನೆ ಎಂಬಂತೆ ಅವರ ಹೃದಯ ಶ್ರೀಮಂತಿಕೆ, ಜನಪರ ಕಾಳಜಿ, ಜೀವಪರ ಮಿಡಿತ ಪ್ರಕಟವಾಯಿತು.

ಕುಂದಣಗಾರರು ಕೊಂಡಾಟಗಳಿಗೆ ಬಾಯಿ ಬಿಡಲಿಲ್ಲ, ತೆಗಳಿಕೆಗೆ ಮೊಗ ಮುರುಕಿಸಲಿಲ್ಲ. ಹಿಡಿದ ಕೆಲಸಗಳನ್ನು ಶ್ರದ್ಧೆಯಿಂದ ತುದಿ ಮುಟ್ಟಿಸಿದರು. ಆತ್ಮವಂಚನೆಯಿಲ್ಲದ ಬದುಕನ್ನು ಬಾಳಿದರು. ಇತಿಹಾಸವೆನ್ನುವಂಥ ಜೀವನವನ್ನು ನಡೆಸಿ ಕರ್ನಾಟಕ ಸಂಸ್ಕೃತಿಯ ಇತಿಹಾಸ ಬರೆದರು. ಜೇಡವು ತನ್ನ ಒಡಲಿನಿಂದ' ಬರುವ ಎಳೆಗಳಿಂದಲೇ ತನ್ನ ಬಲೆ ನೇಯುವಂತೆ ಕುಂದಣಗಾರರು ತಮಗೆ ತಾವೆ ಓಜರಾದರು. ವಿದ್ವತ್ತಿನ ಎತ್ತರಗಲನ್ನು ಏರುತ್ತ ತಮ್ಮ ತರುವಾಯದ ತಲೆಮಾರಿನವರಿಗೆ ಶೃಂಗಗಳನ್ನು ಏರುವ ದಾರಿ ತೋರಿದರು, ಸ್ವಯಂ ತಾವೇ ದೊಡ್ಡ ಶೃಂಗವಾದರು.

ಬೆಳಗಾಗಿ ನಾನೆದ್ದು ಯಾರಾರ ನೆನೆಯಲಿ ಎದ್ದೊಂದು ಗಳಿಗೇಲೆ ಕಲ್ಲಪ್ಪ ಗಿರಿಯಪ್ಪ ಕುಂದಣಗಾರರ ನೆನೆದೇನ ಎದೆತುಂಬಿ॥

❑

# ಶಿ.ಶಿ.ಬಸವನಾಳ

ಎಸ್.ಎಲ್. ಶ್ರೀನಿವಾಸಮೂರ್ತಿ

ಈ ಶತಮಾನದ ಎರಡನೆಯ ದಶಕದಲ್ಲಿಯೇ ಎಂ.ಎ. ಪದವಿಯನ್ನು ಪಡೆದ ಬಸವನಾಳರು ಮನಸು ಮಾಡಿದ್ದರೆ ಹಿರಿಯ ಸರ್ಕಾರಿ ಅಧಿಕಾರಿಯಾಗಿ ಅನಂತವಾದ ಸುಖಭೋಗಗಳನ್ನು ಅನುಭವಿಸಬಹುದಿತ್ತು. ಆದರೆ ಅವರು ಈ ಸುಲಭದ ಮಾರ್ಗವನ್ನು ನಿರಾಕರಿಸಿದರು. ತಮ್ಮ ಕನ್ನಡ ನಾಡು, ನುಡಿಯ ಪ್ರೇಮದ ಅಭಿವ್ಯಕ್ತಿಯಾಗಿ ಶಾಲೆ ಕಾಲೇಜುಗಳ ಸ್ಥಾಪನೆ, ಪಠ್ಯ ಪುಸ್ತಕಗಳ ರಚನೆ, ಪ್ರಾಚೀನ ಸಾಹಿತ್ಯ ಕೃತಿಗಳ ಪರಿಷ್ಕರಣ, ಅನುವಾದ ಹಾಗೂ ವೀರಶೈವ ಧರ್ಮಾಭಿವೃದ್ಧಿಯ ಕ್ಷೇತ್ರಗಳಲ್ಲಿ ದುಡಿದು ಕರ್ಮ ಯೋಗಿಯೆನಿಸಿದರು.

### ಮೊತ್ತ ಮೊದಲ ವೀರಶೈವ ಪದವೀಧರ

ಬಸವನಾಳರು 1893ರ ನವೆಂಬರ್‌ರಂದು ಹಾವೇರಿಯಲ್ಲಿ ಜನಿಸಿದರು. ತಂದೆ ಶಿವಯೋಗಪ್ಪ ರೈಲ್ವೆ ಇಲಾಖೆಯಲ್ಲಿ ಸ್ಟೇಷನ್ ಮಾಸ್ತರು. ಇಬ್ಬರು ಗಂಡು, ನಾಲ್ವರು ಹೆಣ್ಣು ಮಕ್ಕಳಲ್ಲಿ ಮೊದಲಿಗರಾದ ಬಸವನಾಳರು ಶಾಲೆಯಲ್ಲಿಯೂ ಮೊದಲಿಗರಾಗಿಯೇ ಉಳಿದಿದ್ದರು. ಕನ್ನಡ, ಸಂಸ್ಕೃತ, ಇಂಗ್ಲೀಷ್ ಭಾಷೆಗಳನ್ನು ಅರಿತಿದ್ದ ತಂದೆಯು ಮಗನಿಗೆ ತಮ್ಮ ಜ್ಞಾನವೆಲ್ಲವನ್ನು ಧಾರೆಯೆರೆದರು. ಇದರೊಂದಿಗೆ ಆತ ಬಳ್ಳಾರಿಯ ವಾರ್ಡಾ ಮಿಷನ್ ಸ್ಕೂಲಿನಲ್ಲಿ ಕಲಿಯಬೇಕಾಗಿ ಬಂದುದರಿಂದ ತೆಲುಗಿನ ಪರಿಚಯವೂ ಚೆನ್ನಾಗಿ ಅಯಿತು. ಮುಂದೆ ತಂದೆಗೆ ವಿಜಾಪುರಕ್ಕೆ ವರ್ಗವಾದ್ದರಿಂದ ಬಸವಾನಾಳರು ಧಾರವಾಡದ ಸರ್ಕಾರಿ ಪ್ರೌಢಶಾಲೆಯಲ್ಲಿ ಓದನ್ನು ಮುಂದುವರಿಸಿದರು. ಅವರ ಮುಂದಿನ ಕಾರ್ಯಕ್ಷೇತ್ರ ಪುಣೆಯ ಸುಪ್ರಸಿದ್ಧ ಡೆಕ್ಕನ್ ಕಾಲೇಜು, ಬಸವನಾಳರ ಶೈಕ್ಷಣಿಕ ಜೀವನವನ್ನು ಚಂದಗಾಣಿಸಿತಲ್ಲದೆ ಮುಂದೆ ಆ ಮಾದರಿಯ ಅನೇಕ ಶಿಕ್ಷಣ ಸಂಸ್ಥೆಗಳನ್ನು ಹುಟ್ಟುಹಾಕುವಲ್ಲಿ ಆದರ್ಶಪ್ರಾಯವಾಯಿತು.

1914ರಲ್ಲಿ ಬಸವನಾಳರು ಬಿ.ಎ.ಪರೀಕ್ಷೆಯಲ್ಲಿ ಉನ್ನತವರ್ಗದಲ್ಲಿ ಉತ್ತೀರ್ಣರಾದರೂ ಈ ಸಾಧನೆಯ ಸಂತಸವನ್ನು ಅನುಭವಿಸುವ ಸ್ಥಿತಿಯಲ್ಲಿ ಇರಲಿಲ್ಲ. ಕಾರಣ ಮಗನ ಏಳಿಗೆಯನ್ನು ಹಗಲಿರುಳು ಬಯಸುತ್ತಿದ್ದ ತಂದೆ ತಾಯಿಯರ ಮರಣ. ಮನೆಯಲ್ಲಿ ಅತ್ಯಂತ ಕಷ್ಟಕರವಾದ ಪರಿಸ್ಥಿತಿ. ಇಂತಹ ದಾರುಣ ಸಂದರ್ಭದಲ್ಲಿಯೂ ಧೃತಿಗೆಡದೆ ಬಸವನಾಳರು ಇತಿಹಾಸ ಹಾಗೂ ಅರ್ಥಶಾಸ್ತ್ರ ವಿಷಯಗಳಲ್ಲಿ ಎಂ.ಎ. ಪದವಿಯನ್ನು ಗಳಿಸಿ ಸ್ನಾತಕೋತ್ತರ ಪದವಿಯನ್ನು ಪಡೆದ ಮೊದಲ ವೀರಶೈವ ತರುಣನೆನಿಸಿದರು. ವಿದ್ಯಾಭ್ಯಾಸ 'ದಲ್ಲಿ ಅತಿ ಹೆಚ್ಚಿನ ಸಾಧನೆಯನ್ನು ತೋರಿದ ವೀರಶೈವ ತರುಣರನ್ನು ಪ್ರೋತ್ಸಾಹಿಸಲು ಅಥಣಿಯ ಮಹಾಜನ ಮಹದೇವಪ್ಪ ಹಾಗೂ ಮತ್ತಿತರರು ಸ್ಥಾಪಿಸಿದ್ದ 'ವಿಕ್ಟೋರಿಯಾ ಜ್ಯುಬಿಲಿ' ಪಾರಿತೋಷಕವನ್ನು ಅವರಿಗಿಂತಲೂ ಕಡಿಮೆ ದರ್ಜೆಯಲ್ಲಿ ತೇರ್ಗಡೆಯಾಗಿದ್ದ ಎಂ.ಆರ್.ಸಾಖರೆಯವರೊಂದಿಗೆ ಬಸವನಾಳರು ಹಂಚಿಕೊಂಡದ್ದು ಅವರ ಸ್ನೇಹಪರತೆಗೆ ನಿದರ್ಶನವಾಗಿದೆ.

### ಆದರ್ಶ ಶಿಕ್ಷಣವೇತ್ತ

ದಯನೀಯವೆನಿಸುವ ಕುಟುಂಬದ ಆರ್ಥಿಕ ಪರಿಸ್ಥಿತಿ, ಮೊದಲ ವರ್ಗದ ಅಂಕಗಳ ಗಳಿಕೆಗಳೆರಡೂ ಯಾರನ್ನಾದರೂ ಸುಭದ್ರ ಸರ್ಕಾರಿ ಉದ್ಯೋಗವನ್ನು ಅರಸುವಂತೆ ಮಾಡುವುದು ಸಹಜ. (ಎಂ.ಎ.ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರ ಹಾವೇರಿಯ ಬಂಧುಗಳೊಬ್ಬರ ಮನೆಗೆ ಹೋಗಿದ್ದ ಬಸವನಾಳರನ್ನು ಅಲ್ಲಿದ್ದ ಒಬ್ಬ ವೃದ್ಧ 'ತಮ್ಮಾ ಈ ಪರೀಕ್ಷೆ ಪಾಸುಮಾಡಿರುವುದರಿಂದ ನಿನಗೆ ಕೋರ್ಟಿನ ಬೇಲೀಫ (ಅಮೀನ)ನ ನೌಕರಿ ಸಿಗುತ್ತದೇನು?' ಎಂದು ಮುಗ್ಧವಾಗಿ ಪ್ರಶ್ನಿಸಿದಳಂತೆ! 1916 ರಲ್ಲಂತೂ ಅವು ಬಸವಾನಾಳರ ಕೈಚಾಚಿನಷ್ಟೇ ಸಮೀಪದಲ್ಲಿದ್ದವು. ಆದರೆ ಬಸವನಾಳರ ಆದರ್ಶಗಳು ಅವರ ಬರವಣಿಗೆಗಳಿಗಿಂತ ಹಿರಿದಾಗಿದ್ದವು. ಪುಣೆಯ ಡೆಕ್ಕನ್ ಕಾಲೇಜಿನಂತಹ ಒಂದು ಆದರ್ಶ ಶಿಕ್ಷಣ ಸಂಸ್ಥೆಯನ್ನು ಆರಂಭಿಸಬೇಕೆಂಬ ಅವರ ಕನಸು 1916ರಲ್ಲಿ ಸಮಾನ ಮನೋಧರ್ಮದ ಗೆಳೆಯರಾದ ಎಂ.ಆರ್. ಸಾಖರೆ, ಹುಚ್ಚಯ್ಯ ಕಟ್ಟೀಮನಿ, ಬಸವಂತಪ್ಪ ಮಮದಾಪುರ, ಬಸಪ್ಪ ಹಂಚಿನಾಳ, ಪಂಡಿತಪ್ಪ ಚಿಕ್ಕೋಡಿ ಹಾಗೂ ಬಿ.ಎಲ್. ಪಾಟೀಲರ ಸಹಕಾರದಿಂದ ಸಾಕಾರಗೊಂಡಿತು. ಬೆಳಗಾವಿ, ಸೊಲ್ಲಾಪುರ, ಗುಲ್ಬರ್ಗ, ಮುಂತಾದ ಅಚ್ಚ ಕನ್ನಡದ ಪ್ರದೇಶಗಳಲ್ಲಿ ಪರಭಾಷೀಯರು ನಡೆಸುತ್ತಿದ್ದ ದಬ್ಬಾಳಿಕೆಯ ವಿರುದ್ಧ ಕನ್ನಡಿಗರನ್ನು ಜಾಗೃತಗೊಳಿಸುವ ಪ್ರಧಾನ ಉದ್ದೇಶದಿಂದ 'ಕರ್ನಾಟಕ ಲಿಂಗಾಯಿತ ಎಜುಕೇಶನ್ ಸೊಸೈಟಿ' ಎಂಬ ಹೆಸರಿನಿಂದ ಆರಂಭವಾದ ಈ ಶಿಕ್ಷಣಸಂಸ್ಥೆಯು ಇಂದು 'ಕರ್ನಾಟಕ ಲಿಬರಲ್ ಎಜುಕೇಶನ್ ಸೊಸೈಟಿ' ಎಂಬ ಹೆಸರಿನಿಂದ ನಾಡಿನಾದ್ಯಂತ ಖ್ಯಾತವಾಗಿದೆ.

ಈ ಶಿಕ್ಷಣ ಸಂಸ್ಥೆಯ ಮೊದಲ ಶಾಲೆಯಾಗಿ ಆರಂಭವಾದ ಬೆಳಗಾವಿಯ ಗಿಲಗಂಚಿ ಅರ್ಟಾಳ ಹೈಸ್ಕೂಲಿನಲ್ಲಿ ಬಸವನಾಳರು ಅಧ್ಯಾಪಕರಾಗಿ ಅನೇಕ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಮೆಟ್ರಿಕ್ ತರಗತಿಯೊಂದಕ್ಕೆ ಇಂಗ್ಲೀಷ್ ಭಾಷೆಯನ್ನು ಕಲಿಸುತ್ತಿದ್ದ ಮಾಸ್ತರ ಬಸವನಾಳರ ಎರಡು ಇಂಗ್ಲೀಷ್ ಶಬ್ದಗಳ ಉಚ್ಚಾರ ತಪ್ಪೆಂದು ಸುಳ್ಳೆ ವಾದಿಸಿದ ಹೆಸ್ಕಿಲ್ ಎಂಬ ಆಂಗ್ಲ ಶಾಲಾಇನ್ಸ್‌ಪೆಕ್ಟರ ಮುಂದೆ ಆಕ್ಸ್‌ಫರ್ಡ್ ನಿಘಂಟನ್ನು ತೆರೆದಿಟ್ಟು ತಮ್ಮ ಪ್ರಯೋಗವು ಶಾಸ್ತ್ರಸಮ್ಮತವಾಗಿದೆ ಎಂಬುದನ್ನು ನಿರೂಪಿಸುವಷ್ಟರ ಮಟ್ಟಿಗೆ ಅವರ ವ್ಯಾಸಂಗ ನಿರ್ದಿಷ್ಟತೆ ಬೆಳೆದಿತ್ತು.

ಬೆಳಗಾವಿಯ ಹೈಸ್ಕೂಲು ತನ್ನ ಕಾಲ ಮೇಲೆ ತಾನು ನಿಲ್ಲುವ ಶಕ್ತಿಯನ್ನು ಪಡೆದಿದೆ ಎಂಬ ಅಂಶ ಖಾತ್ರಿಯಾದೊಡನೆ ಬಸವನಾಳರ ಅದಮ್ಯ ಚೇತನ ಮತ್ತೊಂದು ಶಿಕ್ಷಣ ಸಂಸ್ಥೆಯನ್ನು ಆರಂಭಿಸಲು ತುಡಿಯಾಲಾರಂಭಿಸಿತು. 1922ರಲ್ಲಿ ಧಾರವಾಡದಲ್ಲಿ ಮೊದಲಾದ ರಾಜಾ ಲಖಮಗೌಡ ಸರದೇಸಾಯಿ ಪ್ರೌಢಶಾಲೆ ಅವರದೇ ಪರಿಶ್ರಮದ ಫಲ. ಕೇವಲ ಪ್ರೌಢಶಾಲೆಯ ಮಟ್ಟದಲ್ಲಿ ಮಾತ್ರವಲ್ಲದೆ ಉಚ್ಚ ಶಿಕ್ಷಣದ ಹಂತದಲ್ಲಿಯೂ ವಿದ್ಯಾ ಪ್ರಸಾರವಾಗುವುದು ಅವಶ್ಯಕ ಎಂಬುದನ್ನು ಮನಗಂಡ ಅವರು 1933ರಲ್ಲಿ ಬೆಳಗಾವಿಯಲ್ಲಿ ಲಿಂಗರಾಜ ಕಾಲೇಜನ್ನು ಆರಂಭಿಸಿದರು. ತಾವು ಸಂಸ್ಥೆಯ ಸ್ಥಾಪಕರೆಂಬ ಏಕೈಕ ಕಾರಣದಿಂದ ಅದಕ್ಕೆ ಮುಖ್ಯಸ್ಥರಾಗುವುದು ಅವರಿಗೆ ಸಾಧ್ಯವಿತ್ತಾದರೂ ಆಗಷ್ಟೇ ಇಂಗ್ಲೆಂಡಿ ನಲ್ಲಿ ಉಚ್ಚಶಿಕ್ಷಣವನ್ನು ಮುಗಿಸಿ ಹಿಂತಿರುಗಿದ್ದ ತಮ್ಮ ಶಿಷ್ಯ

ಡಾ|| ಎಸ್.ಸಿ. ನಂದೀಮಠರನ್ನು ಚಾರ್ಯರನ್ನಾಗಿ ಮಾಡಿ ತಾವು ಕೇವಲ ಒಬ್ಬ ಅಧ್ಯಾಪಕರಾಗಿ ಉಳಿದದ್ದು ಬಸವನಾಳರ ನಿಸ್ವಾರ್ಥತೆಯನ್ನು ತೋರುತ್ತದೆ.

ಪ್ರಮುಖವಾದ ಉದ್ಯಮವೊಂದನ್ನು ಕೈಗೆತ್ತಿಕೊಂಡಾಗ ಅದರ ಸಾಧನೆಗೆ ಪೂರಕವಾದ ಅನೇಕ ಆನುಷಂಗಿಕ ಅಂಶಗನ್ನು ಗಮನವಿಟ್ಟು ಬಸವನಾಳರು ಸಜ್ಜುಗೊಳಿಸುತ್ತಿದ್ದರು. ಕೆ.ಎಲ್.ಇ. ಸಂಸ್ಥೆಗಳಿಗೆ ಅವಶ್ಯಕವಾಗಿದ್ದ ಮುದ್ರಣಾ ಕಾರ್ಯಗಳಿಗೆ ಇತರ ಮುದ್ರಣಾಲಯಗಳವರ ಕೈಕಾಯುವುದರ ಬದಲಾಗಿ ಗದುಗಿನ ತೋಂಟದಾರ್ಯ ಸ್ವಾಮಿಗಳ ಬಳಿಯಲ್ಲಿದ್ದ ಮುದ್ರಣ ಯಂತ್ರವನ್ನು ಪಡೆದು, ಅವರು ತೋಂಟದಾರ್ಯ ಪ್ರೆಸ್ ಎಂಬ ಮುದ್ರಣಾಲಯವನ್ನು ಧಾರವಾಡದಲ್ಲಿ ಸ್ಥಾಪಿಸಿದರು. ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಪಠ್ಯಪುಸ್ತಕಗಳನ್ನೇ ಅಲ್ಲದೆ, ಹಂಪಯ್ಯ ಹಲಗಲಿಯವರ ಜತೆಗೂಡಿ 'ಹಿಂದೂಸ್ಥಾನದ ಇತಿಹಾಸ' ಹಾಗೂ 'ಇಂಗ್ಲೆಂಡಿನ ಅರ್ವಾಚೀನ ಇತಿಹಾಸ' ಎಂಬ ಪಠ್ಯಗಳನ್ನು ರಚಿಸಿದರು.

ಶಿಕ್ಷಣಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಬಸವನಾಳರು ಮುಂಬೈ ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿ ಚುನಾಯಿತರಾದದ್ದು ಸಹಜ. ಅಲ್ಲಿಯ ಕ್ರಮಿಕ ಪುಸ್ತಕಗಳ ನಿಯಾಮಕ ಸಮಿತಿಯ ಸದಸ್ಯರಾದ ನಂತರ ಅವರು ಮಾಡಿದ ಗಣನೀಯ ಕಾರ್ಯವೆಂದರೆ ಆವರೆಗೆ ಅವಜ್ಞೆಗೆ ಒಳಗಾಗಿದ್ದ ವಚನ ಸಾಹಿತ್ಯವನ್ನು ಪದವಿ, ಸ್ನಾತಕೋತ್ತರ ಪದವಿ ತರಗತಿಗಳಿಗೆ ಕ್ರಮಿಕ ಪುಸ್ತಕಗಳನ್ನಾಗಿ ನಿಯಮಿಸಿದ್ದು. ಹೀಗೆ ಈವರೆಗೆ ಕೇವಲ ಧಾರ್ಮಿಕ ವಲಯದಲ್ಲಿ ಮಾತ್ರವೆ ಪ್ರಚುರವಾಗಿದ್ದ ವಚನ ವಾಙ್ಮಯದ ಶಾಸ್ತ್ರೀಯ ಅಧ್ಯಯನವನ್ನು ಆರಂಭಿಸಿದ ಕೀರ್ತಿಗೆ ಅವರು ಭಾಜನರಾದರು.

ಧರ್ಮ ಸಂವರ್ಧನೆಯಲ್ಲಿ

ಬಸವನಾಳರು ತಮ್ಮ ನಾಡು, ನುಡಿಯನ್ನು ಪ್ರೀತಿಸುವಷ್ಟೇ ಉತ್ಕಟವಾಗಿ ತಮ್ಮ ಮತವನ್ನೂ ಪ್ರೀತಿಸುತ್ತಿದ್ದರು. ಅವರ ದೃಷ್ಟಿಯಲ್ಲಿ ಸ್ವಮತಾಭಿಮಾನವು ನಾಡು, ದೇಶ ಪ್ರೇಮಗಳನ್ನು ಸಾಧಿಸುವಲ್ಲಿ ಮೊದಲ ಮೆಟ್ಟಿಲೇ ಹೊರತು ಸಂಕುಚಿತ ಮನೋಭಾವದ ತೊಟ್ಟಿಲಲ್ಲ. 1944ರಲ್ಲಿ ಮೈಸೂರಿನ ಸುತ್ತೂರು ಮಠದಲ್ಲಿ ನೀಡಿದ ಭಾಷಣವೊಂದರಲ್ಲಿ ನೂತನ ವೀರಶೈವ ಪದವೀಧರರನ್ನು ಕುರಿತು ಸಂಬೋಧಿಸುತ್ತಾ ಅವರು - "ದಿನಚರ್ಯದ ಯಾವ ಕೆಲಸಗಳಲ್ಲಿ ನೀವು ತೊಡಗಿದ್ದರೂ ನೀವು ವೀರಶೈವರು, ಕನ್ನಡಿಗರು, ಭಾರತೀಯರೆಂಬ ಅರಿವು ಸ್ಥಿರವಾಗಿ ನಿಮ್ಮಲ್ಲಿ ಮೈಗೊಂಡಿದ್ದರೆ ಸಮಾಜಪುರುಷನು ಸರ್ವಾಂಗ ಸುಂದರವಾಗಿ ವರ್ಧಿಸಲು ಅನುಕೂಲವಾಗುತ್ತದೆಂಬುದರಲ್ಲಿ ಸಂದೇಹವಿಲ್ಲ" ಎಂದಿದ್ದಾರೆ.

ವೀರಶೈವ ಧರ್ಮದ ಬಗೆಗೆ ಯುವಪೀಳಿಗೆಯ ಜನರಲ್ಲಿ ಗೌರವಾದರಗಳು ಬೆಳೆಯಬೇಕಿದ್ದರೆ ವೀರಶೈವ ಧರ್ಮಗ್ರಂಥಗಳು ಓದಲು ಲಭ್ಯವಾಗಬೇಕು ಮತ್ತು ಆ ಧರ್ಮದ ಹಿನ್ನೆಲೆ, ಉಗಮ ಮತ್ತು ವಿಕಾಸ, ತಾತ್ವಿಕ ನೋಟಗಳ ವಿವರಗಳು ಅವರ ಗಮನಕ್ಕೆ ಬರಬೇಕು ಎಂದು ಭಾವಿಸಿದ ಅವರು ಬಸವಜಯಂತಿ, ವೀರಶೈವ ತರುಣ ಸಂಘದ ಸಮ್ಮೇಳನ ಮುಂತಾದ ಸಾರ್ವಜನಿಕ ಸಮಾರಂಭಗಳಲ್ಲಿ "ವೀರಶೈವ ಸಾಹಿತ್ಯವು ಅಳತೆಗೆ ತೂಕಕ್ಕೆ ಎಣಿಕೆಗೆ ಒಮ್ಮೆಲೆ ಅಳವಡದಷ್ಟು ಅಪಾರವಾಗಿದೆ. ಅದರ ಅತ್ಯಲ್ಪಾಂಶವು ಮಾತ್ರ ಈಗ ಪರಿಚಿತವಾಗಿದೆ; ಅದಕ್ಕೂ ಕಡಿಮೆ ಭಾಗ ಪ್ರಕಟವಾಗಿದೆ. ಹುಳುಗಳ ಬಾಯ್ಗೆ ತುತ್ತಾಗುತ್ತಿರುವ, ಕಾಲನ ಭಕ್ಷಣೆಗೆ ಈಡಾಗುತ್ತಿರುವ ಭಾಗವೇ ಬಹಳ ಹೆಚ್ಚು! ಹೀಗೆ ಅಜ್ಞಾನಗಳ-ಅವಜ್ಞೆಗಳ ಇಕ್ಕಟ್ಟಿನಲ್ಲಿ ಸಿಲುಕಿ ಖಿಲವಾಗುತ್ತಿರುವ ತಾಳೆವೋಲೆ ಕೈಬರಹದ ಪ್ರತಿಗಳನ್ನು ಕೂಡಿಸಿ ಕೇಂದ್ರ ಸಂಸ್ಥೆಗಳಿಗೆ ಸಲ್ಲಿಸಿ, ಅಮೌಲ್ಯವಾದ ಗ್ರಂಥಗಳನ್ನು ಸಕಾಲದಲ್ಲಿ ಬೆಳಕಿಗೆ ತರುವ ಕಾರ್ಯದಲ್ಲಿ ನೆರವಾಗುವುದು ತಮ್ಮ ಪವಿತ್ರ ಕರ್ತವ್ಯವೆಂದು ಪ್ರತಿಯೊಬ್ಬ ವೀರಶೈವನೂ ಭಾವಿಸಬೇಕು". (1941ರಲ್ಲಿ ಧಾರವಾಡದ ವೀರಶೈವ ಸಾಹಿತ್ಯ ಗೋಷ್ಠಿಯ ಭಾಷಣ) ಎಂದು ಪದೇ ಪದೇ ಪ್ರಸ್ತಾಪಿಸಿ ಸಾಧ್ಯವಿದ್ದಷ್ಟೂ ಕೃತಿಗಳ ಪ್ರತಿಗಳನ್ನು ಸಂಗ್ರಹಿಸಿಲು ಹುರಿದುಂಬಿಸಿದರು. ಧಾರವಾಡದ ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿಯ ಆಶ್ರಯದಲ್ಲಿ ಇವುಗಳಲ್ಲಿ ಅನೇಕರನ್ನು ಸಂಪಾದಿಸಿ ಪ್ರಕಟಿಸಿದರು.

1941ರಲ್ಲಿ ಬಸವಾನಾಳರ ಸಂಪಾದಕತ್ವದಲ್ಲಿ ಪ್ರಕಟವಾದ 'ವೀರಶೈವತತ್ವ ಪ್ರಕಾಶ' ಎಂಬ ಕೃತಿಯು ಆ ಧರ್ಮದ ಉಗಮ ಮತ್ತು ವಿಕಾಸನಗಳನ್ನು ಕುರಿತಾದ ವಿವಿಧ ವಿದ್ವಾಂಸರ ಲೇಖನಗಳನ್ನು ಒಳಗೊಂಡ ಸಂಗ್ರಹ ಗ್ರಂಥ.

ಲೇಖನ, ಭಾಷಣಗಳ ರೂಪದಲ್ಲಿಯೂ ಬಸವನಾಳರು ವೀರಶೈವ ಧರ್ಮದ ಹಿರಿಮೆ, ಹಿನ್ನೆಲೆಗಳನ್ನು ಕುರಿತು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಇವುಗಳಲ್ಲಿ ಅತಿ ಪ್ರಮುಖವಾದದ್ದು 1951ರಲ್ಲಿ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ 'ವೀರಶೈವದ ಹುಟ್ಟು-ಬೆಳವಣಿಗೆ' ಎಂಬ ವಿಷಯವನ್ನು ಕುರಿತಾದ ಭಾಷಣ ಮಾಲೆ. ವೀರಶೈವ ಧರ್ಮದ ಉಗಮ ಮತ್ತು ವಿಕಾಸಗಳ ಬಗೆಗೆ ಪ್ರಸ್ತಾಪಿತವಾಗಿರುವ ವಿದ್ವಾಂಸರೆಲ್ಲರ ಅಭಿಪ್ರಾಯಗಳನ್ನು ಅವರಿಲ್ಲಿ ತೂಗಿ ನೋಡಿದ್ದಾರೆ.

ಭಾರತದ ಇತರ ಅನೇಕ ಮತಗಳಂತೆ ವೀರಶೈವವೂ ವೈದಿಕ ಮೂಲದಿಂದ ಹುಟ್ಟಿದ್ದು; ಆಗಮಗಳ ಬೆಂಬಲದಿಂದ ಬೆಳೆದದ್ದು; ಬಸವಣ್ಣನವರೇ ವೀರಶೈವ ಧರ್ಮದ ಸ್ಥಾಪಕರು - ಎಂಬಿತ್ಯಾದಿಯಾದ ವಾದಗಳನ್ನು ಅವರಿಲ್ಲಿ ಸತಾರ್ಕಿಕವಾಗಿ ವಿವರಿಸಿದ್ದಾರೆ. ಪ್ರಾಚೀನ ಕಾಲದಿಂದ ಭಾರತದಲ್ಲಿ ವ್ಯಾಪಕವಾಗಿದ್ದ ಶೈವ ಸಿದ್ಧಾಂತದ ಪಂಗಡವೊಂದು ಕಾಲಾನುಕ್ರಮದಲ್ಲಿ ಅನೇಕ ಬದಲಾವಣೆಗಳನ್ನು ಹೊಂದಿ ವೀರಶೈವ ಧರ್ಮದ ರೂಪವನ್ನು ತಳೆದಿರಬೇಕೆಂಬ ಡಾ.ನಂದಿಮಠರ ವಾದವನ್ನು ಬೆಂಬಲಿಸಿ "ಬಸವಣ್ಣನವರ ಕಾಲದಲ್ಲಿ ಪುನರುಜ್ಜೀವನ ಅಥವಾ ಪುನರುದ್ಧಾರ ಹೊಂದಿದ ವೀರಶೈವ ಮತ ಸಣ್ಣ ಪುಟ್ಟ ವಿವರಗಳಲ್ಲಿ ಮಾರ್ಪಾಡು ಹೊಂದಿತೆಂದಲ್ಲ. ಉದ್ದೇಶ, ವ್ಯಾಪ್ತಿ, ಆಚರಣೆ ಮುಂತಾದ ಮುಖ್ಯ ಅಂಶಗಳಲ್ಲಿಯೇ ಸಂಪೂರ್ಣ ಮಾರ್ಪಾಡು ಹೊಂದಿತೆಂತಲೂ ಅದರಿಂದಾಗಿ ಅದು ಹೊಸ ಸ್ವರೂಪವನ್ನು ಧಾರಣ ಮಾಡಿತೆಂತಲೂ ಅಂತೆಯೇ ಅದನ್ನು ಹೊಸದಾಗಿ ಬಸವಣ್ಣನವರು ಸ್ಥಾಪಿಸಿದರೆಂಬ ಅಭಿಪ್ರಾಯ ವೀರಶೈವರ ಸಾಹಿತ್ಯ ಮತ್ತು ಧರ್ಮಗ್ರಂಥಗಳಲ್ಲಿ ಕಂಡುಬರಲು ಅವಕಾಶವಾಯಿತೆಂದು" ಅವರು ನಿರ್ಣಯಿಸಿದ್ದಾರೆ.

ಶಿವಶರಣರ ಸಾಹಿತ್ಯದ ಸವಿಯನ್ನು ಕನ್ನಡೇತರರೂ ಸವಿಯುವಂತಾಗಲು ಬಸವನಾಳರು 1940ರಲ್ಲಿ ಕೆ.ಆರ್. ಶ್ರೀನಿವಾಸ ಅಯ್ಯಂಗಾರರ ಒಡಗೂಡಿ 'Musings of Shiva' ಎಂಬ ಬಸವಣ್ಣನವರ ವಚನಗಳ ಇಂಗ್ಲಿಷ್ ಅನುವಾದವನ್ನು ಹೊರತಂದರು. ಮೂಲ ವಚನಗಳ ಭಾವವು ಈ ಅನುವಾದಗಳಲ್ಲಿ ಅದೆಷ್ಟು ಪರಿಪೂರ್ಣವಾಗಿ ಪ್ರಕಟವಾಗಿದೆ

ಎಂಬುದನ್ನು 'ಎನಗಿಂತ ಕಿರಿಯರಿಲ್ಲ, ಶಿವಶರಣರಿಗಿಂತ ಹಿರಿಯರಿಲ್ಲ' ಎಂಬ ಪ್ರಸಿದ್ಧವಾದ ವಚನದ ಅನುವಾದದ ಈ ಸಾಲುಗಳಲ್ಲಿ ಕಾಣಬಹುದು-

A lesser man than I,
no, there is none;
a greater than your devotees,
no, there is none,
I feel it, I know it!
be witness to these truths,
O Lord, Kudala Sangama!

**ಸಾಹಿತ್ಯ ಸೇವೆ**

ಕ್ರಿ.ಶ. 1918ರ ಸುಮಾರಿಗೆ 'ಪ್ರಬೋಧ' ಪತ್ರಿಕೆಯ ಸಂಪಾದಕತ್ವವನ್ನು ವಹಿಸಿಕೊಳ್ಳುವುದರೊಂದಿಗೆ ಬಸವನಾಳರ ಸಾಹಿತ್ಯ ವ್ಯವಸಾಯವು ಆರಂಭವಾಯಿತು. ಕೆಲಕಾಲದ ನಂತರ ಈ ಪತ್ರಿಕೆ ನಿಂತಿತಾದರೂ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ವತಿಯಿಂದ ಪ್ರಕಟವಾಗುತ್ತಿದ್ದ 'ಸಾಹಿತ್ಯ ಸಮಿತಿ ಪತ್ರಿಕೆ'ಯೆಂಬ ತ್ರೈಮಾಸಿಕದ ಸಂಪಾದನೆಯ ಜವಾಬ್ದಾರಿ ಅವರ ಹೆಗಲೇರಿತು. ಕೆ.ಎಲ್.ಇ. ಶಿಕ್ಷಣ ಸಂಸ್ಥೆಯಿಂದ ನಿವೃತ್ತರಾದ ಮೇಲೆ ಅವರು ಧಾರವಾಡದಲ್ಲಿ ಬೆಳಗಾವಿ ರಾಮಚಂದ್ರರಾಯರ 'ಕಲಾಸಿಂಧು' ಮುದ್ರಣಾಲಯವನ್ನು ಕೊಂಡು 'ರವೀಂದ್ರ ಮುದ್ರಣಾಲಯ' ವೆಂಬ ಹೆಸರಿನಿಂದ ಮುಂದುವರೆಸಿದರಲ್ಲದೆ ಆಲೂರು ವೆಂಕಟರಾಯರಿಂದ ಆರಂಭವಾಗಿ ಆಗ ರಾಮಚಂದ್ರರಾಯರ ವಶದಲ್ಲಿಯೇ ಇದ್ದ 'ಜಯ ಕರ್ನಾಟಕ'ವೆಂಬ ಮಾಸಪತ್ರಿಕೆಯನ್ನು ಖರೀದಿಸಿ, ಅದೇ ಹೆಸರಿನ ಸಾಪ್ತಾಹಿಕವನ್ನೂ ಆರಂಭಿಸಿ ಮುನ್ನಡೆಸಿದರು. ಇವಲ್ಲದೆ ವಿದ್ಯಾವರ್ಧಕ ಸಂಘದ ಪ್ರಕಟಣೆಯಾದ 'ವಾಗ್ಭೂಷಣ' ಪತ್ರಿಕೆಯಲ್ಲಿಯೂ ಅವರು ಅನೇಕ ಅಮೂಲ್ಯ ಲೇಖನಗಳನ್ನು ಬರೆದಿದ್ದಾರೆ.

ಇದೇ ಸಮಯದಲ್ಲಿ ಲಕ್ಷ್ಮೀಶನ 'ಜೈಮಿನಿಭಾರತ'ದಿಂದ ವಿರೂಪಾಕ್ಷ ಪಂಡಿತನು ಪ್ರಭಾವಿತನಾಗಿದ್ದನೋ ಅಥವಾ ವಿರೂಪಾಕ್ಷಪಂಡಿತನ ಪ್ರಭಾವವು ಲಕ್ಷ್ಮೀಶನ ಮೇಲೆ ಉಂಟಾಗಿದೆಯೋ'? ಎಂಬ ವಿವಾದವೊಂದು ವಿದ್ವದ್ವಲಯದಲ್ಲಿ ಹುಟ್ಟಿಕೊಂಡಿತು. ಆಗ ಬಸವನಾಳರು ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣದೊಳಗಿನ ಕಾಮದಹನ, ಪಾರ್ವತೀ ತಪಸ್ಸು ಹಾಗೂ ಗಿರಿಜಾ ಕಲ್ಯಾಣಗಳೆಂಬ ಸಂಧಿಗಳನ್ನು ಅನೇಕ ಪಾಠಗಳ ಆಧಾರದ ಮೇಲೆ ಪರಿಷ್ಕರಿಸಿ ಪ್ರಕಟಿಸಿದರು. ಈ ಗ್ರಂಥದ ಪ್ರಸ್ತಾವನೆಯಲ್ಲಿ ವಿರೂಪಾಕ್ಷ ಪಂಡಿತನೇ ಲಕ್ಷ್ಮೀಶನಿಗೆ ಸ್ಫೂರ್ತಿಯನ್ನು ನೀಡಿದನು ಎಂದು ತಮ್ಮ ವಾದವನ್ನು ಮಂಡಿಸಿದರು.

ಮುಂದೆ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿಯು ಕನ್ನಡದ ಪ್ರಾಚೀನ ಗ್ರಂಥಗಳನ್ನು ಪ್ರಕಟಿಸಲು ಆರಂಬಿಸಿದಾಗ ಬಸವನಾಳರು ಚೆನ್ನಬಸವ ಪುರಾಣವನ್ನೇ ಸಮಗ್ರವಾಗಿ ಸಂಪಾದಿಸಿ ಪ್ರಕಟಿಸಿದರು (1934). ಆನಂತರದಲ್ಲಿ ಚಾಮರಸನ ಪ್ರಭುಲಿಂಗಲೀಲೆ (1938), ನಾಗವರ್ಮನ ಕಾವ್ಯಾವಲೋಕನಂ (1939). ಷಡಕ್ಷರದೇವನ ಶಬರಶಂಕರ ವಿಳಾಸಂ (1939), ಕುಂಡಲಗಿಯಾಚಾರ್ಯರ ಕರ್ಣಾಟಕ ಶಬ್ದಾನುಶಾಸನ ಪ್ರಕಾಶಿಕೆ (1941), ಹರಿಹರನ ರೇವಣಸಿದ್ಧೇಶ್ವರ ದೇವರ ರಗಳೆ (1942), ರಕ್ಷಾಶತಕ ಮತ್ತು ಪಂಪಾಶತಕ (1943), ಬಾಲಲೀಲಾ ಮಹಾಂತ ಶಿವಯೋಗಿಗಳ ಕೈವಲ್ಯದರ್ಪಣ (1943), ಮೈಲಾರದ ಬಸವಲಿಂಗ ಶರಣರ ಕೃತಿಗಳು (1945), ಸರ್ಪ ಭೂಷಣ ಶಿವಯೋಗಿಗಳ ಕೈವಲ್ಯ ಕಲ್ಪವಲ್ಲರಿ (1948) ಹಾಗೂ 'ಬಸವಣ್ಣನವರ ಷಟ್‌ಸ್ಥಲದ ವಚನಗಳನ್ನು (1951) ಅವರು ಸಂಪಾದಿಸಿ ಪರಿಷ್ಕರಿಸಿ ಮುದ್ರಿಸಿದ್ದಾರೆ. 'ಬಸವಣ್ಣನವರ ಹೆಚ್ಚಿಗೆ ದೊರೆತ ವಚನಗಳು' ಎಂಬ ಕೃತಿಯು ಅವರ ನಿಧನಾನಂತರ 1954ರಲ್ಲಿ ಪ್ರಕಟವಾಗಿದೆ).

ಕನ್ನಡದಲ್ಲಿ ಗ್ರಂಥ ಸಂಪಾದನಾ ಶಾಸ್ತ್ರವನ್ನು ಬೆಳೆಸಿದವರಲ್ಲಿ ಬಸವನಾಳರೂ ಒಬ್ಬರು. ಅವರ ಪಾಲಿಗೆ ಗ್ರಂಥ ಸಂಪಾದನೆಯ ಕೆಲಸ ಕೇವಲ ಹತ್ತಾರು ಪಾಠಗಳಲ್ಲಿ ಸರಿಯೆನಿಸಿದೊಂದನ್ನು ಆಯ್ದು ಅಚ್ಚಿಡುವುದಾಗಿರಲಿಲ್ಲ. ಕವಿಯ ಮನದ ಇಂಗಿತವನ್ನು ಗ್ರಹಿಸಬಲ್ಲ ಸಮರ್ಥ ಗ್ರಂಥ ಸಂಪಾದಕನೊಬ್ಬನ ಊಹಾಪಾಠವೂ ನಿರ್ದುಷ್ಟವಾಗಿರುತ್ತದೆ ಎಂಬುದನ್ನು ಅವರು ಸಾಬೀತು ಪಡಿಸಿದರು. ಬಸವಣ್ಣನವರ ವಚನವೊಂದರಲ್ಲಿದ್ದ 'ರಬ್ಬು' ಎಂಬ ಶಬ್ದದ ಪಾಠವನ್ನು ಅನೇಕ ವಿದ್ವಾಂಸರು ಸಂದೇಹವಿಲ್ಲದೆ ಒಪ್ಪಿಕೊಂಡಿದ್ದರಾದರೂ ಬಸವನಾಳರು 'ಕಬ್ಬು' ಎಂಬ ಪಾಠವು ವಚನದ ಒಟ್ಟು ಅರ್ಥವ್ಯಾಪ್ತಿಯ ದೃಷ್ಟಿಯಿಂದ ಸರಿಯಾದ ಪಾಠವೆಂದು ಊಹಿಸಿ ಸಾಬೀತುಪಡಿಸಿದರು.

ಬಸವನಾಳರಿಂದ ಸಂಪಾದಿತವಾದ ಕೃತಿಗಳ ಮಹತ್ವದ ಭಾಗವೆಂದರೆ ಪ್ರತಿ ಗ್ರಂಥದ ಪ್ರಾರಂಭದಲ್ಲಿನ ಪ್ರಸ್ತಾವನೆ, ಕವಿಯ ಹೆಸರು, ಕಾಲ, ಸ್ಥಾನ, ಮತ, ಗ್ರಂಥದ ಮಹತ್ವ, ವಿಷಯ, ಛಂದಸ್ಸು, ಅಲಂಕಾರ, ಪೂರ್ವ ಕವಿಗಳ ಛಾಯೆ ಮುಂತಾದ ಅನೇಕ ವಿಷಯಗಳ ಮೇಲೆ ಇಲ್ಲಿ ಸಂಶೋಧನಾತ್ಮಕವಾದ ವಿವರಗಳಿವೆ. ಆದರೂ "ಈ ಗ್ರಂಥಕ್ಕೆ ನಾವು ಟಿಪ್ಪಣಿಗಳನ್ನು ಜೋಡಿಸಿದುದು ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂಬ ದೃಷ್ಟಿಯಿಂದ; ಪಂಡಿತರಿಗೆ ಮಾನ್ಯವಾಗಬೇಕೆಂಬ ಧಾರ್ಷ್ಟ್ಯದಿಂದಲ್ಲ" (ಕಾವ್ಯಾವಲೋಕನಂ ನ ಮುನ್ನುಡಿ) ಎಂಬ ಅವರ ಮಾತುಗಳು ಅವರ ವಿನಯಶೀಲತೆಗೆ ಸಾಕ್ಷಿಯಾಗಿವೆ.

ಸಂಶೋಧಕನು ಸತ್ಯವ್ರತನಾಗಿರಬೇಕೆಂಬ ತತ್ವಕ್ಕೆ ಬದ್ಧರಾದ ಬಸವನಾಳರು ಅದೇ ಕಾರಣದಿಂದಾಗಿ ಒಮ್ಮೆ ಪ್ರಾಣಾಪಾಯಕ್ಕೆ ಒಳಗಾಗಬೇಕಾಯಿತು. 'ಹಿಂದೂಸ್ಥಾನದ ಇತಿಹಾಸ'ವೆಂಬ ಪಠ್ಯದಲ್ಲಿ ಶಿವಾಜಿಯನ್ನು ಕುರಿತಂತೆ ನೀಡಿದ್ದ ಸಾಮಾನ್ಯ ವಿವರಗಳೊಂದಿಗೆ ಅಡಿಟಿಪ್ಪಣಿಯಲ್ಲಿ ಅವರು 'ಕೆಳದಿ ನೃಪ ವಿಜಯ'ದಲ್ಲಿ ಉಕ್ತವಾಗಿರುವ ಕೆಲವು ಅಂಶಗಳನ್ನೂ ಪ್ರಸ್ತಾಪಿಸಿದ್ದರು. ಇದರಿಂದ ಕುಪಿತನಾದ ಮರಾಠಾ ತರುಣನೊಬ್ಬನು 1934ರಲ್ಲಿ ಬೆಳಗಾವಿಯಲ್ಲಿ ಬಸವನಾಳರನ್ನು ಚೂರಿಯಿಂದ ಇರಿಯಲು ಯತ್ನಿಸಿದನಾದರೂ ಸಮೀಪದಲ್ಲಿದ್ದವರ ಪ್ರಸಂಗಾವಧಾನತೆ ಯಿಂದ ಪ್ರಾಣಾಪಾಯದಿಂದ ದೂರವಾದರು. ಬಸವನಾಳರು ಮಾತ್ರ ಎಂದಿನಂತೆ ತಮ್ಮ ಸತ್ಯನಿಷ್ಠೆಯನ್ನು ಮುಂದುವರಿಸಿಯೇ ವರಿಸಿದರು.

**ಏಕೀಕರಣ ಚಳುವಳಿಯ ನೇತಾರ**

ಕರ್ನಾಟಕದ ಏಕೀಕಕರಣಕ್ಕಾಗಿ ಬಸವನಾಳರು ತಮ್ಮನ್ನು ಸಮರ್ಪಿಸಿಕೊಂಡ ರೀತಿ ಅನನ್ಯವಾದದ್ದು. ಗಡಿ ಪ್ರದೇಶಗಳಲ್ಲಿ ಕನ್ನಡ ನುಡಿ-ಸಂಸ್ಕೃತಿಗಳನ್ನು ಜೀವಂತವಾಗಿಡುವ ಸಲುವಾಗಿ ಅವರು ಆ ಪ್ರಾಂತ್ಯಗಳಲ್ಲಿ ಶಾಲಾ ಕಾಲೇಜುಗಳನ್ನು ಸ್ಥಾಪಿಸಿದರು. ಏಕೀಕರಣವನ್ನು ತನ್ನ ಪ್ರಮುಖ

ಧ್ಯೇಯವನ್ನಾಗಿರಿಸಿಕೊಂಡಿದ್ದ ಧಾರವಾಡದ ವಿದ್ಯಾವರ್ಧಕ ಸಂಘದ ಕಾರ್ಯಕಾರಿ ಮಂಡಲದ ಅಧ್ಯಕ್ಷರಾಗಿ, ಕರ್ನಾಟಕ ಪ್ರಾಚ್ಯ ಸಂಶೋಧನಾಲಯದ ಆಡಳಿತ ಮಂಡಲಿಯ ಸದಸ್ಯರಾಗಿ ತಮ್ಮ ಶ್ರದ್ಧೆ, ನಿಷ್ಠೆಗಳನ್ನು ಧಾರೆಯೆರೆದರು.

ಒಂದು ಕಾಲಕ್ಕೆ ಮರಾಠಿಯ ಪ್ರಭಾವವೇ ಅಧಿಕವಾಗಿದ್ದ ಉತ್ತರ ಕರ್ನಾಟಕದಲ್ಲಿ ಈ ಶತಮಾನದ ಆದಿಭಾಗದಲ್ಲಿ ಡೆಪ್ಯೂಟಿ ಚೆನ್ನಬಸಪ್ಪ, ಆಲೂರು ವೆಂಕಟರಾಯ, ವೆಂಕಟರಂಗೋ ಕಟ್ಟೀಯವರಂತಹ ಅನೇಕ ಕನ್ನಡದ ಕಟ್ಟಾಳುಗಳಿಂದಾಗಿ ಕನ್ನಡದ ವಾತಾವರಣ ಮೂಡಲು ಆರಂಭವಾಗಿತ್ತಾದರೂ ಉನ್ನತ ಶಿಕ್ಷಣಕ್ಷೇತ್ರದಲ್ಲಿ ಕನ್ನಡದ ಬಳಕೆ ಬಹುಮಟ್ಟಿಗೆ ಶೂನ್ಯವೇ ಆಗಿತ್ತು. ಅನೇಕ ಶಿಕ್ಷಣ ಸಂಸ್ಥೆಗಳು ಶಾಲೆ, ಕಾಲೇಜುಗಳ ಮಟ್ಟದಲ್ಲಿ ಕನ್ನಡದಲ್ಲಿ ಯಶಸ್ವಿಯಾಗಿ ಕಲಿಸುತ್ತಿದ್ದುವಾದರೂ ಸ್ನಾತಕೋತ್ತರ ಶಿಕ್ಷಣಕ್ಕಾಗಿ ಈ ಪ್ರಾಂತ್ಯದ ವಿದ್ಯಾರ್ಥಿಗಳು ಮುಂಬೈ ಅಥವಾ ಪುಣೆಗೆ ಹೋಗಬೇಕಿದ್ದುದರಿಂದ ಮರಾಠಿಯ ಪ್ರಭಾವದಿಂದ ಪೂರ್ಣವಾಗಿ ಹೊರಬರಲು ಸಾಧ್ಯವಾಗಿರಲಿಲ್ಲ. ಹೀಗಾಗಿ ಕನ್ನಡಿಗರ ಆಶೋತ್ತರಗಳಿಗೆ ಸ್ಪಂದಿಸುವಂತಹ ಒಂದು ಪ್ರತ್ಯೇಕ ವಿಶ್ವವಿದ್ಯಾಲಯದ ಸ್ಥಾಪನೆ ಆ ಪ್ರದೇಶಕ್ಕೆ ಅತ್ಯಗತ್ಯವಾಗಿತ್ತು. ಈ ಬಗ್ಗೆ 1927ರಲ್ಲಿಯೇ ಬಸವನಾಳರು ದನಿಯೆತ್ತಿದರು.

ಮುಂದೆ 1944ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಬಸವನಾಳರ ಸಾಹಿತ್ಯ ಸೇವೆಯನ್ನು ಗುರುತಿಸಿ ರಬಕವಿಯಲ್ಲಿ ನಡೆದ 28ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಿತು. ಈ ಸಂದರ್ಭದಲ್ಲಿ 'ಕನ್ನಡ ಮುನ್ನಡೆವ ಬಗೆ' ಎಂಬ ವಿಷಯವನ್ನು ಕುರಿತು ಮಾತನಾಡುತ್ತಾ ಅವರು "ನೆರೆಹೊರೆಯ ನಾಡುಗಳಾದ ಆಂಧ್ರ-ಮಹಾರಾಷ್ಟ್ರದವರ ಆಕ್ರಮಣ ಶೀಲಸ್ವಭಾವವು ಗಡಿನಾಡ ಪ್ರಶ್ನೆಗಳನ್ನು ಹೆಚ್ಚು ಜಟಿಲವಾಗಿಯೂ ಹೆಚ್ಚು ಅಗತ್ಯವಾಗಿಯೂ ಮಾಡಿದೆ.... ಇದರಿಂದಾಗಿ ಕನ್ನಡಿಗರಾದ ನಾವು ನಮ್ಮ ಸಲುವಾಗಿ ಕರ್ನಾಟಕ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವ ಯೋಜನೆಯನ್ನು ಬದಿಗಿರಿಸಿ, ಅಕ್ಕಪಕ್ಕದವರಾದ ಆಂಧ್ರ - ಮಹಾರಾಷ್ಟ್ರಿಗರ ಆಕ್ರಮಣ ಶೀಲತೆಯನ್ನು ತಡೆದು, ನಮ್ಮ ನಾಡ ಸೀಮೆಯು ಸಂಕುಚಿತವಾಗದಂತೆ ಜಾಗರೂಕರಾಗಿರುವುದರಲ್ಲಿಯೆ ನಮ್ಮ ಪ್ರಯತ್ನಗಳನ್ನು ವೆಚ್ಚ ಮಾಡಬೇಕಾಗಿ ಬಂದಿದೆ. ಈ ಪರಿಸ್ಥಿತಿಯಲ್ಲಿ ನಾವು ಕನ್ನಡ ವಿಶ್ವವಿದ್ಯಾನಿಲಯದ ಬಗ್ಗೆ ಸತತವಾದ ಪ್ರಬಲವಾದ ಪ್ರಯತ್ನಗಳನ್ನು ಮಾಡುವಲ್ಲಿ ಕೊಂಚ ಹಿಂಜರಿದರೆ ಸಾಕು-ಕರ್ನಾಟಕ ವಿಶ್ವವಿದ್ಯಾಲಯದ ಬಗ್ಗೆ ಮೊದಲೇ ಸಿದ್ಧವಾಗಿದ್ದ ಯೋಗ್ಯ ಯೋಜನೆಯು ತಮ್ಮ ಕಣ್ಣ ಮುಂದಿಲ್ಲವೆಂಬ ನೆವದಿಂದ, ಆಡಳಿತದ ಅನುಕೂಲಕ್ಕೆಂದು, ಬರಿಯ ಗಡಿನಾಡುಗಳನ್ನೇಕೆ, ಬ್ರಿಟಿಷ್ ಕರ್ನಾಟಕದ ಜಿಲ್ಲೆಗಳನ್ನು ಆಂಧ್ರ ಹಾಗೂ ಮಹಾರಾಷ್ಟ್ರ ವಿಶ್ವವಿದ್ಯಾನಿಲಯಗಳಿಗೆ ಜೋಡಿಸಿ ಬಿಡುವ ಕಲ್ಪನೆ ಆಡಳಿತಗಾರರ ಮನಸ್ಸಿನಲ್ಲಿ ಬರುವ ಸಂಭವವೂ ಇದೆ. ಆದುದರಿಂದ ನಾವೆಲ್ಲ ಕನ್ನಡಿಗರು ಅತ್ಯಂತ ಜಾಗರೂಕತೆಯನ್ನು ವಹಿಸಿ ಸರ್ವವಿಧದ ಪ್ರಯತ್ನಗಳ ಮೂಲಕ ನಮ್ಮ ಗುರಿಯನ್ನು ಸಾಧಿಸಿ ಕೊಳ್ಳತಕ್ಕದ್ದು" ಎಂಬ ಎಚ್ಚರಿಕೆಯ ಮಾತುಗಳನ್ನಾಡಿದ್ದಾರೆ.

1945-46ರ ಸುಮಾರಿಗೆ ಧಾರವಾಡದಲ್ಲಿ 'ಕರ್ನಾಟಕ ವಿಶ್ವವಿದ್ಯಾಲಯ ಸಮಿತಿ' ಯೊಂದು ಆರಂಭವಾಯಿತು. ಈ ಸಮಿತಿಯು ಸುಮಾರು ಮೂರು ವರ್ಷಗಳ ಕಾಲ ಕರ್ನಾಟಕ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವುದರ ಬಗ್ಗೆ ಜನಮತವನ್ನು ಸಂಗ್ರಹಿಸಿತಲ್ಲದೆ ಬಸವನಾಳರ ನೇತೃತ್ವದಲ್ಲಿ ಆಗಿನ ವಿದ್ಯಾ ಸಚಿವರಾದ ಬಿ.ಜಿ. ಖೇರರನ್ನು ಭೇಟಿಮಾಡಿ ವಿಶ್ವವಿದ್ಯಾಲಯವನ್ನು ಸ್ಥಾಪಿಸುವಂತೆ ಅವರ ಮನವೊಲಿಸುವಲ್ಲಿ ಯಶಸ್ವಿಯಾಯಿತು. (ಇದೇ ಸಂದರ್ಭದಲ್ಲಿ ಬಸವನಾಳರು ಮಾಳವಾಡರೊಡನೆ ಸೇರಿ A case of Karnatak University ಎಂಬ ಪುಸ್ತಿಕೆಯನ್ನು ಪ್ರಕಟಿಸಿದರು.) ಇದರ ಫಲವಾಗಿ 1949ರಲ್ಲಿ ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ತಲೆಯೆತ್ತಿತು.

ವಿಶ್ವವಿದ್ಯಾಲಯದ ಮೊದಲ ಉಪಕುಲಪತಿಗಳಾದ ಆರ್.ಎ.ಜಾಗೀರದಾರರು ನಿವೃತ್ತಿ ಹೊಂದಿದಾಗ ಆ ಸ್ಥಾನಕ್ಕೆ ಪಾಂಡಿತ್ಯ, ಅನುಭವ, ಉದಾತ್ತ ಜೀವನ, ಶೀಲ ಸಂಪನ್ನರಾದ ಬಸವನಾಳರನ್ನೇ ಆಯಬೇಕೆಂದು ನಿರ್ಧರಿಸಿ ಹಿತೈಷಿಗಳನೇಕರು ಅವರನ್ನು ಚುನಾವಣೆಗೆ ಆಗ್ರಹದಿಂದ ಒಪ್ಪಿಸಿದರು. ಈ ಚುನಾವಣೆಯಲ್ಲಿ ಕಾರಾಣಾಂತರಗಳಿಂದ ಬಸವನಾಳರು ಸೋತರಾದರೂ ಮನಸ್ಸಿನಲ್ಲಿ ಸ್ವಲ್ಪವೂ ಅದರ ಕಹಿಯನ್ನು ಉಳಿಸಿಕೊಳ್ಳದೆ ಸಿಂಡಿಕೇಟಿನ ಸದಸ್ಯರಾಗಿ ತಮ್ಮ ಪಾಲಿನ ಕರ್ತವ್ಯವನ್ನು ನಿಷ್ಠೆಯಿಂದ ಪಾಲಿಸಿದರು.

ಅಖಂಡ ಕರ್ನಾಟಕಕ್ಕೊಂದು ಅಪೂರ್ವವಾದ ವಿಶ್ವವಿದ್ಯಾಲಯದ ಕನಸನ್ನು ಕಂಡು ಅದನ್ನು ನನಸಾಗಿಸಲು ಶ್ರಮಿಸಿದ ಬಸವನಾಳರು ಅಕ್ಷರಶಃ ತಮ್ಮ ಕೊನೆಯುಸಿರಿನವರೆಗೆ ವಿಶ್ವವಿದ್ಯಾಲಯದ ಏಳಿಗೆಗಾಗಿ ಶ್ರಮಿಸಿದರು. 1951ರ ಡಿಸೆಂಬರ್ 22ರಂದು ವಿಶ್ವವಿದ್ಯಾಲಯದ ಸಿಂಡಿಕೇಟ್ ಸಭೆಯಲ್ಲಿ ಪಾಲ್ಗೊಂಡಿದ್ದ ಅವರು ಎದೆನೋವಿನ ಕಾರಣದಿಂದ ಸಭೆಯ ಮಧ್ಯದಲ್ಲೆ ಮನೆಗೆ ಬಂದವರು ಮತ್ತೆ ಮರಳಿಬಾರದ ಮಹಾಮನೆಗೆ ತೆರಳಿದರು.

"ದೈವವನ್ನು ಹಳಿದು ಮೂಲೆಗೊರಗುವ ಮೂಳನಿಗಲ್ಲ ಇಂದಿನ ಜಗತ್ತು. ಸಾಹಸದಿಂದ ಮುನ್ನುಗ್ಗಿ ಕಾರ್ಯಮಾಡುವ ಕರ್ಮಶೀಲನಿಗೆ ಮೀಸಲು ಅದು. ಕಾರಣ ನೀವು ಕೈಕೊಳ್ಳಬಹುದಾದ ಜೀವನದ ಪ್ರತಿಯೊಂದು ಹೋರೆಯಲ್ಲಿ ಕನ್ನಡದ ದೃಷ್ಟಿಯಿರಲಿ; ವಿಚಾರದ ವಿಮರ್ಶೆ ಇರಲಿ; ಸ್ವಾತಂತ್ರ್ಯದ ಉಸಿರಿರಲಿ; ವಿಶ್ವಮಾನವನ ಹೃದಯವಿರಲಿ. ಹೆತ್ತಮ್ಮನ ಮುಡಿಗೆ ಹೂ ತರುವ ಭಾಗ್ಯ, ಅವಳ ತುಂಬು ಸೊಬಗನ್ನು ಸವಿವ ಸ್ಥೈರ್ಯ ನಿಮ್ಮನ್ನು ಕೂಡಿದೆ". (ಪದವೀಧರರಿಗೆ ಉಪದೇಶಪರ ಭಾಷಣ, ಮೈಸೂರು, 1944), ಎಂದು ನುಡಿದಂತೆ ನಡೆದ ಪ್ರೊ|| ಬಸವನಾಳರು 'ಕಾಯಕವೇ ಕೈಲಾಸ'ವೆಂಬ ಶರಣರ ನುಡಿಯನ್ನು ಸಾರ್ಥಕಗೊಳಿಸಲೆಂದೇ ಧರೆಗಿಳಿದ ಮಹನೀಯರು.

❑

# ಎಂ. ಆರ್. ಶ್ರೀನಿವಾಸಮೂರ್ತಿ

ಎಸ್. ವಿದ್ಯಾಶಂಕರ

ಆಧುನಿಕ ಯುಗದಲ್ಲಿ ಕನ್ನಡಕ್ಕಾಗಿ ದುಡಿದ, ಕನ್ನಡವನ್ನು ಬೆಳೆಸಿದ ಮಹನೀಯರಲ್ಲಿ ಎಂ.ಆರ್. ಶ್ರೀನಿವಾಸಮೂರ್ತಿಯವರೂ ಒಬ್ಬರು. ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿ, ಉಪಾಧ್ಯಾಯರ ಶಿಕ್ಷಣ ಶಾಲೆಗಳಾಗಿದ್ದ ನಾರ್ಮಲ್ ಸ್ಕೂಲುಗಳ ಮುಖ್ಯೋಪಾಧ್ಯಾಯರಾಗಿ, ರೇಂಜ್ ಇನ್ಸ್‌ಪೆಕ್ಟರಾಗಿ, ಜಿಲ್ಲಾ ವಿದ್ಯಾಧಿಕಾರಿಗಳಾಗಿ ಶಿಕ್ಷಣಕ್ಷೇತ್ರದಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದ ಇವರು ಆ ಕ್ಷೇತ್ರದಲ್ಲಿನ 'ಆದರ್ಶ ವ್ಯಕ್ತಿ'ಯಾಗಿ ಕಂಡುಬರುವರು. ವಿಜ್ಞಾನದ ವಿದ್ಯಾರ್ಥಿಯಾದರೂ ಕನ್ನಡದ ಬಗೆಗೆ ವಿಶೇಷ ಆಸಕ್ತಿ ತಳೆದು ತಮ್ಮ ನಾಟಕ, ಕಾದಂಬರಿ, ಕಾವ್ಯ, ಸಂಶೋಧನ ಲೇಖನಗಳ ಮೂಲಕ ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿರುವರು. ವೀರಶೈವ ಸಾಹಿತ್ಯ, ಅದರಲ್ಲೂ ವಚನ ಸಾಹಿತ್ಯಕ್ಕೆ ಎಂ.ಆರ್.ಶ್ರೀ. ಅವರದು ಬೆಲೆಯುಳ್ಳ ಕಾಣಿಕೆ. ಕನ್ನಡ ಸಾಹಿತ್ಯ ಪರಿಷತ್ತನ್ನು ಕಟ್ಟಿ ಬೆಳೆಸಿದ ಪ್ರಮುಖರಲ್ಲಿ ಎಂ.ಆರ್.ಶ್ರೀ. ಅವರೂ ಒಬ್ಬರು. ಪರಿಷತ್ತಿನ ಕಾರ್ಯಕಾರೀ ಸಮಿತಿಯ ಸದಸ್ಯರಾಗಿ ಸುಮಾರು 20 ವರುಷ ದುಡಿದಿರುವ ಇವರು ಅದರ ಅಧ್ಯಕ್ಷರಾಗಿದ್ದರು: 'ಕನ್ನಡ ನುಡಿ' ಮತ್ತು ಪರಿಷತ್ಪತ್ರಿಕೆಗಳ ಸಂಪಾದಕರಾಗಿದ್ದರು; ವಿಶೇಷ ಸಾಹಿತ್ಯೋತ್ಸವಗಳ ಕಾರ್ಯದರ್ಶಿಯಾಗಿದ್ದರು. 1950ರಲ್ಲಿ ಸೊಲ್ಲಾಪುರದಲ್ಲಿ ನಡೆದ 33ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗುವ ಗೌರವವನ್ನೂ ಇವರು ಪಡೆದಿದ್ದರು.

ಎಂ.ಆರ್.ಶ್ರೀ. ಅವರು ಆಗಸ್ಟ್ 28, 1892ರಲ್ಲಿ ಸುಸಂಸ್ಕೃತ ಮಾಧ್ವ ಬ್ರಾಹ್ಮಣ ಮನೆತನದಲ್ಲಿ ಜನಿಸಿದರು. ಇವರ ಪೂರ್ವಿಕರು ಆಂಧ್ರದ ಗೋಲ್ಕೊಂಡದವರು. ಇವರ ತಂದೆಯವರಾದ ರಾಮಚಂದ್ರರಾಯರು ಮೈಸೂರಿನವರು, ಅಬ್ಕಾರಿ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದರು; ನಿವೃತ್ತರಾಗುವಾಗ ಅಮಲ್ದಾರರಾಗಿದ್ದರು. ಎಂ.ಆರ್.ಶ್ರೀ. ಅವರ ತಾಯಿ ಸಾವಿತ್ರಮ್ಮನವರು ಮದರಾಸು ಪ್ರಾಂತ್ಯದ ಕೃಷ್ಣಗಿರಿಯವರು. ಇವರ ತವರು ಮನೆಯ ಮಾತು ತೆಲುಗು. ಹೀಗಾಗಿ ಎಂ.ಆರ್.ಶ್ರೀ. ಅವರ ಮನೆ ಮಾತು ತೆಲುಗೇ ಆಯಿತು. ಸಾವಿತ್ರಮ್ಮ ರಾಮಚಂದ್ರರಾಯರಿಗೆ ಆರು ಜನ ಗಂಡು ಮಕ್ಕಳು, ಮೂವರು ಹೆಣ್ಣು ಮಕ್ಕಳು. ಗಂಡು ಮಕ್ಕಳಲ್ಲಿ ಎರಡನೆಯವರು ಎಂ.ಆರ್.ಶ್ರೀ. ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಎಂ.ಆರ್.ಶ್ರೀ. ಅವರಿಗೆ ಪದ್ಯ ಬರೆಯುವ ಹವ್ಯಾಸ. ಸೆಂಟ್ರಲ್ ಕಾಲೇಜಿನಲ್ಲಿ ಎಫ್.ಎ. ವ್ಯಾಸಂಗ ಮಾಡುತ್ತಿದ್ದಾಗ ವೆಂಟಕರಾವ್ ತೆಲಾಂಗ್ ಎಂಬ ಸಾಹಿತ್ಯದ ವಿದ್ಯಾರ್ಥಿಯ ಪರಿಚಯವಾಯಿತು. ಆತನ ಸಹವಾಸದಿಂದ ಎಂ.ಆರ್.ಶ್ರೀ. ಅವರಿಗೆ ಅನೇಕ ಕನ್ನಡ ಕಾವ್ಯಗಳ ಪರಿಚಯವಾಯಿತು. ಅದರ ಫಲವಾಗಿ ಸೆಂಟ್ರಲ್ ಕಾಲೇಜಿನ ಗ್ರಂಥಾಲಯದಲ್ಲಿದ್ದ ಸಾಹಿತ್ಯ ಗ್ರಂಥಗಳನ್ನೆಲ್ಲಾ ಶ್ರದ್ಧೆಯಿಂದ ಓದತೊಡಗಿದರು. ಎಂ.ಆರ್.ಶ್ರೀ. ಅವರ ಸ್ಮರಣ ಶಕ್ತಿ ಅಪಾರವಾಗಿದ್ದುದರಿಂದದ ಹಳಗನ್ನಡ ಕಾವ್ಯಗಳ ಅನೇಕ ಭಾಗಗಳು, ಶಿವಶರಣರ ನೂರಾರು ವಚನಗಳು ಇವರಿಗೆ ಕಂಠಸ್ಥವಾಗಿದ್ದವು.

1915ರಲ್ಲಿ ಪದವೀಧರರಾದ ಎಂ.ಆರ್.ಶ್ರೀ. ಅವರು ಮೊದಲಿಗೆ ಶಿವಮೊಗ್ಗದ ಪ್ರೌಢಶಾಲೆಯಲ್ಲಿ ಒಬ್ಬ ಉಪಾಧ್ಯಾಯರು ಮೂರು ತಿಂಗಳು ರಜೆ ಪಡೆದು ಹೋದಾಗ ಅವರ ಬದಲಿಗೆ ಕೆಲಸಕ್ಕೆ ಸೇರಿದರು. ಈ ಬದಲಿ ಕೆಲಸದ ಅವಧಿ ಮುಗಿಯುವ ವೇಳೆಗೆ ತೀರ್ಥಹಳ್ಳಿ ಕನ್ನಡ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿ ಕಾಯಂ ಕೆಲಸವನ್ನು ಪಡೆದರು. ಆ ವೇಳೆಗೆ ಎಂ.ಆರ್.ಶ್ರೀ. ಅವರಿಗೆ ವಿವಾಹವೂ ಆಗಿದ್ದಿತು. ಇವರು ತೀರ್ಥಹಳ್ಳಿ ಯಲ್ಲಿದ್ದುದು ಎಂಟು ಒಂಬತ್ತು ತಿಂಗಳುಗಳು ಮಾತ್ರ. ನಂತರ ಇವರಿಗೆ ಶಿವಮೊಗ್ಗೆಗೆ ವರ್ಗವಾಯಿತು. 1921ರ ಸುಮಾರಿಗೆ ಇವರಿಗೆ ಬೆಂಗಳೂರಿಗೆ ವರ್ಗವಾದರೂ ಅಲ್ಲಿ ಹೆಚ್ಚಿಗೆ ಕಾಲ ನಿಲ್ಲಲಿಲ್ಲ. 1922ರ ಪ್ರಾರಂಭದಲ್ಲಿ ಸ್ನಾತಕೋತ್ತರ ಶಿಕ್ಷಣ ತರಬೇತಿಗೆಂದು ಮೈಸೂರಿಗೆ ಎಂ.ಆರ್.ಶ್ರೀ. ಯವರು ಬಂದರು. 1927ರಲ್ಲಿ ಇವರಿಗೆ ಅಸಿಸ್ಟೆಂಟ್ ಸ್ಕೂಲ್ ಇನ್ಸ್‌ಪೆಕ್ಟರಾಗಿ ಮಂಡ್ಯಕ್ಕೆ ವರ್ಗವಾಯಿತು. ಅಲ್ಲಿಂದ ಬೆಂಗಳೂರಿನ ಆಕ್ಯುಪೇಷನಲ್ ಇನ್ಸ್‌ಟಿಟ್ಯೂಟ್ ನಲ್ಲಿ ವಿಜ್ಞಾನದ ಬೋಧಕರಾಗಿ ಬಂದರು. ಅಲ್ಲಿ ಸ್ವಲ್ಪ ಕಾಲವಿದ್ದು ಮತ್ತೆ ನಾರ್ಮಲ್ ಸ್ಕೂಲ್‌ನ ಮುಖ್ಯೋಪಾಧ್ಯಾಯ ರಾದರು. 1935ರವರೆವಿಗೂ ಬೆಂಗಳೂರಿನಲ್ಲಿದ್ದು ಅಲ್ಲಿಂದ ದೊಡ್ಡಬಳ್ಳಾ ಪುರಕ್ಕೆ ಇನ್ಸ್‌ಪೆಕ್ಟರಾಗಿ ವರ್ಗವಾದರು. ಅಲ್ಲಿ 1939ರವರೆವಿಗೂ ಇದ್ದರು. ನಂತರ ಮೈಸೂರು ವಿಶ್ವವಿದ್ಯಾಲಯದ ಇಂಗ್ಲಿಷ್-ಕನ್ನಡ ನಿಘಂಟಿನ ಕೆಲಸಕ್ಕಾಗಿ ಇವರ ಸೇವೆಯನ್ನು ಎರವಲು ಕೊಡಲಾಯಿತು. ಮೊದಲಿಗೆ ಸಹಾಯಕ ಸಂಪಾದಕರಾಗಿದ್ದ ಇವರು 1943ರಲ್ಲಿ ಬೆಳ್ಳಾವೆ ವೆಂಕಟನಾರಾಣಪ್ಪ ನವರು ನಿಧನರಾದ ಮೇಲೆ ಪ್ರಧಾನ ಸಂಪಾದಕರಾಗಿ ನೇಮಕಗೊಂಡರು. 1947ರ ವರೆವಿಗೆ ಅಲ್ಲಿ ಸೇವೆ ಸಲ್ಲಿಸಿ ಡಿಸೆಂಬರ್ ತಿಂಗಳಿನಲ್ಲಿ ಶಿಕ್ಷಣ ಇಲಾಖೆಗೆ ಹಿಂತಿರುಗಿ ಕೆಲವು ಕಾಲ ಬೆಂಗಳೂರು ಸೆಂಟ್ರಲ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾಗಿದ್ದರು. 1949ರಲ್ಲಿ ಶಿಕ್ಷಣ ಇಲಾಖೆಯ ಸೇವೆಯಿಂದ ನಿವೃತ್ತರಾಗುವ ಮುನ್ನ ಆರು ತಿಂಗಳು ಕೋಲಾರದಲ್ಲಿ ಡಿಸ್ಟ್ರಿಕ್ಟ್ ಎಜುಕೇಷನ್ ಆಫೀಸರ್ ಆಗಿ ಸೇವೆ ಸಲ್ಲಿಸಿದರು.

ಎಂ.ಆರ್.ಶ್ರೀ. ಯವರು ವಿಜ್ಞಾನದ ಉಪಾಧ್ಯಾಯರಾಗಿ ಮಕ್ಕಳ ಮನಸ್ಸನ್ನು ಅರ್ಥಮಾಡಿಕೊಂಡು ಶ್ರದ್ಧೆಯಿಂದ ಪಾಠ ಮಾಡುತ್ತಿದ್ದರು. ಅವರ ಬೋಧನೆ ಎಂದೂ ಶುಷ್ಕವಾಗಿರುತ್ತಿರಲಿಲ್ಲ. ತಮ್ಮ ಬದುಕಿನಲ್ಲಿ ಶಿಸ್ತನ್ನು ನಿಷ್ಠೆಯಿಂದ ಪರಿಪಾಲಿಸಿದ ಅವರು ಮಕ್ಕಳಲ್ಲೂ ಅದು ಪ್ರಕಟಗೊಳ್ಳಲು ವಿಶೇಷವಾಗಿ ಶ್ರಮಿಸಿದರು. ನಾರ್ಮಲ್ ಸ್ಕೂಲಿನ ಮುಖ್ಯೋಪಾಧ್ಯಾಯ ರಾಗಿದ್ದಾಗ ಬಿಡುವಿನ ವೇಳೆಯಲ್ಲಿ ವಿದ್ಯಾರ್ಥಿಗಳಿಗೆ ಯಾವುದಾದರೊಂದು ಸಾಹಿತ್ಯ ಕೃತಿಯ ಪರಿಚಯ ಮಾಡಿಕೊಡುತ್ತಿದ್ದರು. ಎಂ.ಆರ್.ಶ್ರೀ. ಅವರ ಶಿಕ್ಷಣಕ್ಕೆ ಸಂಬಂದಪಟ್ಟ ಅನೇಕ ವಿಚಾರ ಧಾರೆಗಳು ಅವರ 'ರಂಗಣ್ಣನ ಕನಸಿನ ದಿನಗಳು' ಕಾದಂಬರಿಯಲ್ಲಿ ಮೂಡಿವೆ. ಸ್ಕೂಲ್ ಇನ್ಸ್‌ಪೆಕ್ಟರ್ ಆಗಿ ಅವರು ಪಡೆದ ಜೀವನಾನುಭವಗಳು ಹಾಗೂ ಅವರು ಕಲ್ಪಿಸಿಕೊಂಡಿದ್ದ ಶಿಕ್ಷಣ ಕ್ಷೇತ್ರದಲ್ಲಿ ಆಗಬೇಕಾಗಿರುವ ಬದಲಾವಣೆಗಳು ಆ ಕೃತಿಯಲ್ಲಿ ಮೈದಾಳಿ ನಿಂತಿವೆ. ಎಂ.ಆರ್.ಶ್ರೀ.ಯವರು ಕರ್ನಾಟಕದಲ್ಲಿ ಸ್ಕೌಟ್ ಕಾರ್ಯಾಚರಣೆ ಬೆಳೆಯಲು ಕಾರಣಕರ್ತರಾಗಿರುವರು. ಅವರು ಸ್ಕೌಟ್ ಪದ್ಧತಿಯು ಬೆಳೆಯಲು ಅಗತ್ಯವಿದ್ದ ಸಾಹಿತ್ಯವನ್ನು ಸೃಷ್ಟಿಸಿದರು. ಅವರ 'ಸ್ಕೌಟ್ ಮಾಸ್ಟರುಗಳಿಗೆ ಸಲಹೆಗಳು' (ಅನುವಾದಿತ ಗ್ರಂಥ) ಹಾಗೂ 'ಸ್ಕೌಟುಗಳ ಕೈಪಿಡಿ' ಉಪಯುಕ್ತ ಕೃತಿಗಳು. ಸ್ಕೌಟುಗಳಿಗಾಗಿಯೇ ಅವರು ಬರೆದ 'ಕಂಠೀರವ ವಿಜಯ'ವನ್ನು ನೋಡಿ ಮೆಚ್ಚಿದ ಮಹಾರಾಜರು ಎಂ.ಆರ್.ಶ್ರೀ. ಅವರನ್ನು ಅರಮನೆಗೆ ಬರಮಾಡಿಕೊಂಡು

ಸನ್ಮಾನಿಸಿ ಗೌರವಿಸಿದರು. "ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟು ಅವರ ದುಡಿಮೆಯ ಮಹಾಸ್ಮಾರಕವಾಗಿದೆ. ಆ ನಿಘಂಟು ಪ್ರಕಟವಾದಾಗ ಅಂಥದೊಂದು ನಿಘಂಟು ಭಾರತದ ಇತರ ಭಾಷೆಗಳಲ್ಲಿ-ಒಂದೆರಡನ್ನು ಬಿಟ್ಟು-ಇರಲೇ ಇಲ್ಲ."[1]

ಎಂ.ಆರ್.ಶ್ರೀ. ಅವರು ಶ್ರೇಷ್ಠ ವಾಗ್ಮಿಗಳು. ಕನ್ನಡ ಸಾಹಿತ್ಯದ ಬಗೆಗೆ ಅದರಲ್ಲೂ ವೀರಶೈವ ಸಾಹಿತ್ಯದ ಬಗೆಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲ ವಿದ್ವಾಂಸರವರು. ಜರಿಯ ಪೇಟ, ಪಟ್ಟೆಯಾಗಿ ಮಡಿಸಿದ ಶಲ್ಯ, ಎದ್ದು ಕಾಣುವ ಕಿವಿಯ ಹತ್ತಕಡಕುಗಳು, ಎತ್ತರವಾದ ನಿಲುವು, ಕೆಂಬಿಳುಪಿನ ಮೈಬಣ್ಣ, ಕಾಂತಿಯುಕ್ತವಾದ ನಗುಮುಖ-ಹೀಗೆ ಹತ್ತು ಜನರಲ್ಲಿ ಎದ್ದು ಕಾಣುವ ವ್ಯಕ್ತಿತ್ವದ ಎಂ.ಆರ್.ಶ್ರೀ. ಅವರು ಭಾಷಣಕ್ಕೆ ನಿಂತರೆ ಪುಂಖಾನುಪುಂಖವಾಗಿ ಶಿವಶರಣರ ವಚನಗಳು, ಹರಿಹರನ ರಗಳೆಗಳ ಸಾಲು ಸಾಲುಗಳು, ಕನ್ನಡದ ಧೀಮಂತ ಕವಿಗಳ ಪದ್ಯಗಳ ಜೊಂಪೆ ಜೊಂಪೆ ಉಲ್ಲೇಖ. ಅವರ ನೆನಪಿನಾಳದಿಂದ ಉಕ್ಕಿ ಬರುವ ಉಲ್ಲೇಖ ಪದ್ಯಗಳನ್ನು ಕೇಳಿದಾಗ ಜನ ಮಂತ್ರಮುಗ್ಧರಾಗುತ್ತಿದ್ದರು. ಅವರದು ಕೇವಲ ಶುಷ್ಕ ಪಾಂಡಿತ್ಯವಾಗಿರಲಿಲ್ಲ. ಶ್ರೋತೃಗಳ ಮನಂಬುಗುವಂತೆ ನವಿರಾದ ಹಾಸ್ಯವನ್ನು ಬಳಸಿ ವಿವರಿಸುವ ಭಾಷಣ ಕಲೆ ಅವರಿಗೆ ಕರಗತವಾಗಿದ್ದಿತು. ಎಂ.ಆರ್.ಶ್ರೀ. ಅವರು ಕನ್ನಡಿಗರಿಗೆ ಹೆಚ್ಚು ಪರಿಚಿತರಾಗಿದ್ದುದು ಭಾಷಣಗಳ ಮೂಲಕವೇ ಎಂದರೆ ತಪ್ಪಾಗಲಾರದು.

ಎಂ.ಆರ್.ಶ್ರೀ. ಅವರು ಕನ್ನಡ ಸಾಹಿತ್ಯವನ್ನು ಆಮೂಲಾಗ್ರವಾಗಿ ಓದಿ ಗ್ರಹಿಸಿದ್ದರು. ಅವರು ವಿಜ್ಞಾನದ ವಿದ್ಯಾರ್ಥಿಯಾದರೂ ಕನ್ನಡದ ಆಕರ್ಷಣೆಗೆ ಒಳಗಾಗಿ ಶ್ರಮಪಟ್ಟು ಕನ್ನಡ ಸಾಹಿತ್ಯದಲ್ಲಿ ಪ್ರಭುತ್ವವನ್ನು ಪಡೆದಿದ್ದರು. ಅವರು ಒಂದು ಚಿಕ್ಕ ಪುಸ್ತಕವನ್ನು ವಿಮರ್ಶಿಸಬೇಕಾದ ಸಂದರ್ಭ ಒದಗಿದ್ದರಿಂದ ವಚನ ಸಾಹಿತ್ಯದ ಅಧ್ಯಯನಕ್ಕೆ ತೊಡಗಿದರು. ಈ ಆಕಸ್ಮಿಕ ಕನ್ನಡಕ್ಕೆ ದೊಡ್ಡ ಲಾಭ ತಂದಿತು. ವಚನ ಸಾಹಿತ್ಯವನ್ನು ಆಮೂಲಾಗ್ರವಾಗಿ ಓದಿ ತಿಳಿದಿರುವ ಅವರು ಅದನ್ನು ಕುರಿತು ಅಧಿಕೃತವಾಗಿ ಮಾತನಾಡಬಲ್ಲವರಾಗಿದ್ದರು. 'ವಚನಧರ್ಮಸಾರ' ಅವರ ಆಳವಾದ ವ್ಯಾಸಂಗಕ್ಕೆ, ವಿದ್ವತ್ತಿಗೆ, ಹೊಸದಾದ ಆಲೋಚನೆಗಳಿಗೆ ಸಂಕೇತವಾಗಿದೆ. "ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ವಿಹರಿಸುತ್ತ ಬರುವಾಗ ಒಂದು ಕಡೆ ತಪೋವನವನ್ನು ಪ್ರವೇಶಿಸಿದಂತೆಯೂ, ಸಿದ್ಧ ಸಾಧಕ ಋಷಿಗಳ ಸಂದರ್ಶನ ಪಡೆದು, ಅವರ ಉದಾತ್ತ ಜೀವನ ಧರ್ಮ ಬೋಧೆಗಳಿಂದ ನಮ್ಮ ಅಂತರಂಗ ಪರಿಶುದ್ಧವಾದಂತೆಯೂ, ಆತ್ಮನ ಬಂಧನಗಳು ಕಳಚಿಬಿದ್ದು ನಾವು ಮುಕ್ತರಾದಂತೆಯೂ ಒಂದು ದಿವ್ಯವಾದ ಆನಂದಾನುಭವ ಉಂಟಾಗುತ್ತದೆ. ಇಲ್ಲಿ ಪಟ್ಟಣ ವಾಸದ ಗೊಂದಲವಿಲ್ಲ, ರಾಜಾಸ್ಥಾನದ ವೈಭವ ದೃಶ್ಯಗಳಿಲ್ಲ. ತಪೋವನದ ಸಹಜ ಶಾಂತಿ, ಪರಸ್ಪರ ಪ್ರೇಮ, ಸಮತಾಭಾವ, ಸ್ವಾತಂತ್ರ್ಯ-ಇವು ಮೂರ್ತಿಮತ್ತಾಗಿ ಕಾಣುತ್ತವೆ. ಅರಣ್ಯಕಗಳಲ್ಲಿ ಉಪನಿಷತ್ತಿನ ದರ್ಶನವನ್ನು ಕಂಡಂತೆ, ಇಲ್ಲಿ ವಚನಧರ್ಮದ ದರ್ಶನವನ್ನು ಕಾಣುತ್ತೇವೆ. ಸತ್ಯದ ಹಂಬಲು ಸಾಹಿತ್ಯವಾಗಿ, ಸತ್ಯಾನ್ವೇಷಣ ಸಿದ್ಧಾಂತವಾಗಿ, ಸತ್ಯ ಸಾಕ್ಷಾತ್ಕಾರವೇ ದರ್ಶನವಾಗಿ ನಮಗೆ ಆನಂದವನ್ನುಂಟುಮಾಡುತ್ತವೆ"-ಎನ್ನುವ ಅವರ 'ವಚನ ಧರ್ಮಸಾರ'ದ ಪ್ರಾರಂಭದ ಮಾತುಗಳು ವಚನ ಸಾಹಿತ್ಯದ ಬಗೆಗೆ ಅವರಿಗಿರುವ ಗೌರವ, ಪೂಜ್ಯ ಭಾವನೆಗಳನ್ನು ತಿಳಿಯಪಡಿಸುತ್ತವೆ. ವಚನಕಾರರು ಹಾಗೂ ಅವರು ಬೋಧಿಸಿದ ಧರ್ಮದ ತತ್ತ್ವಗಳನ್ನು ಸರಳವಾಗಿ, ಅರ್ಥಗರ್ಭಿತವಾಗಿ ಹೇಳಿರುವ ವಿಧಾನ ಮೆಚ್ಚುವಂತಹದ್ದು. ಈ ಕೃತಿ ಇಂದಿಗೂ ಜನಮನ್ನಣೆ ಗಳಿಸಿರುವುದು ಗಮನಿಸಬೇಕಾದ ಸಂಗತಿಯಾಗಿದೆ.

'ಭಕ್ತಿಭಾಂಡಾರಿ ಬಸವಣ್ಣನವರು' ಎಂ.ಆರ್.ಶ್ರೀ. ಅವರ ಮಹತ್ವದ ಕೃತಿ. ಇದು ಹಲವಾರು ಮುದ್ರಣಗಳನ್ನು ಹೊಂದಿ ಜನಾದರಣೆಯನ್ನು ಪಡೆದಿದೆ. ಬಸವಣ್ಣನವರ ವ್ಯಕ್ತಿತ್ವವನ್ನು ಅವರ ವಚನಗಳ ಮೂಲಕ ಹಾಗೂ ಅವರನ್ನು ಕುರಿತು ಬಂದಿರುವ ಕೃತಿಗಳ ಮೂಲಕ ಪರಿಚಯ ಮಾಡಿಕೊಡಲಾಗಿದೆ. ಬಸವಣ್ಣನವರ ವ್ಯಕ್ತಿತ್ವದ ಪರಿಚಯ ಅತ್ಯಂತ ಸ್ಫುಟವಾಗಿ ಇಲ್ಲಿ ಮೂಡಿಬಂದಿದೆ. ಚಾಮರಸನ 'ಪ್ರಭುಲಿಂಗಲೀಲೆ'ಯನ್ನು ಎಂ.ಎಸ್. ಬಸವಲಿಂಗಯ್ಯನವರ ಜೊತೆಗೂಡಿ ಸಂಗ್ರಹಿಸಿರುವ ಎಂ.ಆರ್.ಶ್ರೀ. ಅದಕ್ಕೆ ವಿಸ್ತೃತವಾದ ಒಂದು 'ಪೀಠಿಕೆ'ಯನ್ನು ಬರೆದಿರುವರು. ವಿದ್ವಾಂಸರು ಬಹಳವಾಗಿ ಮೆಚ್ಚಿಕೊಂಡಿರುವ ಈ 'ಪೀಠಿಕೆ'ಯಲ್ಲಿ ಪ್ರಭುಲಿಂಗಲೀಲೆಯ ವಿಶೇಷತೆಯನ್ನು ವಿಶದವಾಗಿ ವಿವರಿಸಿರುವರು. ಕಾವ್ಯವನ್ನು ಅರ್ಥ ಮಾಡಿಕೊಳ್ಳಲು ಇದು ಓದುಗರಿಗೆ ಸಹಾಯ ಮಾಡಿದೆಯಷ್ಟೇ ಅಲ್ಲ, ಅವರ ಜ್ಞಾನದ ಪರಿಧಿಯನ್ನೂ ವಿಸ್ತರಿಸಿದೆ.

ಎಂ.ಆರ್.ಶ್ರೀ. ಅವರ 'ಶೂನ್ಯ ಸಂಪಾದನೆಗಳು' ಎಂಬ ಲೇಖನ ಬಹಳ ಮಹತ್ವದ್ದು. 'ಶೂನ್ಯಸಂಪಾದನೆ'ಯ ಪರಿಷ್ಕರಣಗಳಿಗೆ ಅವರು ನೀಡಿರುವ ಕಾರಣಗಳು ಇಂದಿಗೂ ನಿಲ್ಲುವಂಥ'ವಾಗಿವೆ. 'ಸಿದ್ಧರಾಮ ಚಾರಿತ್ರದ ಅಲ್ಲಮಪ್ರಭು' ಲೇಖನದಲ್ಲಿ ಸಿದ್ಧರಾಮ ಚಾರಿತ್ರದಲ್ಲಿ ಬರುವ ಸಿದ್ಧರಾಮ ಹಾಗೂ ಅಲ್ಲಮಪ್ರಭುವಿನ ಭೇಟಿಯ ಮಹತ್ವವನ್ನು ಪರಿಚಯಿಸಿ ಕೊಡಲಾಗಿದೆ. 'ವೀರಶೈವ ಪುರಾಣಗಳು' ಎಂಬ ಲೇಖನದಲ್ಲಿ ವೀರಶೈವ ಪುರಾಣಗಳ ಸಾಮಾನ್ಯ ಹಾಗೂ ವಿಶಿಷ್ಟ ಲಕ್ಷಣಗಳನ್ನು ಗುರುತಿಸಲಾಗಿದೆ. ಇಂತಹ ಪ್ರಯತ್ನ ಮೊದಲನೆಯದೆಂಬುದಾಗಿ ಈ ಲೇಖನ ಐತಿಹಾಸಿಕ ಮಹತ್ವವನ್ನು ಪಡೆಯುತ್ತದೆ. 'ವೀರಶೈವಾಮೃತ ಮಹಾಪುರಾಣ' ಮತ್ತು ಚೆನ್ನಬಸವಾಂಕನ 'ಮಹಾದೇವಿಯಕ್ಕನಪುರಾಣ'ಗಳ ಬಗೆಗಿನ ಲೇಖನ ಪರಿಚಯಾತ್ಮಕವಾಗಿದ್ದರೂ ತೌಲನಿಕವಾಗಿ ವಿವೇಚಿಸಲು ಪ್ರಯತ್ನಿಸಲಾಗಿದೆ, 'ಚೆನ್ನಬಸವಪುರಾಣ'ವೆಂಬ ಲೇಖನ ವಿಷಯವೈಪುಲ್ಯದಿಂದ ಮಹತ್ವದ್ದಾಗಿದೆ. ಎಂ.ಆರ್.ಶ್ರೀ. ಅವರು ಮೈಸೂರು ವಿಶ್ವವಿದ್ಯಾಲಯಕ್ಕಾಗಿ 'ವೀರಶೈವ ಸಾಹಿತ್ಯ ಚರಿತ್ರೆ'ಯನ್ನು ಬರೆದುಕೊಡಲು ಒಪ್ಪಿದ್ದರು. ಆದರೆ ಆ ಕೃತಿ ಪ್ರಕಟವಾಗಲಿಲ್ಲ. ಎಂ.ಆರ್.ಶ್ರೀ.ಯವರು ವೀರಶೈವ ಕವಿಗಳು ಹಾಗೂ ಅವರ ಕೃತಿಗಳ ಬಗೆಗೆ ವಿಸ್ತೃತವಾದ ಲೇಖನಗಳನ್ನು ಬರೆದಿರುವುದನ್ನು ನೋಡಿದಾಗ ಅವರ 'ವೀರಶೈವ ಸಾಹಿತ್ಯ ಚರಿತ್ರೆ'ಯ ರೂಪರೇಷೆಯ ಪರಿಚಯ ಸ್ವಲ್ಪ ಮಟ್ಟಿಗೆ ಇವುಗಳಿಂದಾಗುತ್ತದೆ. ಶ್ರೀನಿವಾಸಮೂರ್ತಿಗಳಿಗೆ ಬಹಳ ಪ್ರಿಯರಾದ ಕವಿಗಳೆಂದರೆ ಹರಿಹರ ಹಾಗೂ ಷಡಕ್ಷರಿ. ಷಡಕ್ಷರಿಯ 'ರಾಜಶೇಖರ ವಿಳಾಸ', 'ವೃಷಭೇಂದ್ರ ವಿಜಯ' ಷಡಕ್ಷರಿಯ ಶೈಲಿ ಮತ್ತು ಸ್ಥಾನನಿರ್ದೇಶನಗಳನ್ನು ವಿಷಯವಾಗಿಸಿಕೊಂಡು ನಾಲ್ಕು ಲೇಖನಗಳನ್ನು ಬರೆದಿರುವರು. ಇಲ್ಲಿ ರಾಜಶೇಖರ ವಿಳಾಸ ಹಾಗೂ ಭಾವಚಿಂತಾರತ್ನ, (ಭೀಮಕವಿಯ) ಬಸವ ಪುರಾಣ ಹಾಗೂ ವೃಷಭೇಂದ್ರ ವಿಜಯಗಳ ತೌಲನಿಕ ವಿವೇಚನೆ ನಡೆಸಿರುವುದು ಮುಖ್ಯವೆನ್ನಿಸಿದೆ. ಹರಿಹರನ 'ಗಿರಿಜಾ ಕಲ್ಯಾಣ ವಸ್ತು ರಚನೆ', 'ಹರಿಹರನ ಗಿರಿಜಾ ಕಲ್ಯಾಣ ಶೈಲಿ', 'ಹರಿಹರನ ಸ್ಥಾನ ನಿರ್ದೇಶ' -ಈ ಮೂರು ಲೇಖನಗಳಲ್ಲಿ ಹರಿಹರನ ಕೃತಿಗಳ ಸೂಕ್ಷ್ಮವಾದ ಪರಿಶೀಲನೆ ನಡೆಸಲಾಗಿದೆ ಹಾಗೂ ಹರಿಹರನ ಕವಿತಾ ಶಕ್ತಿ, ಸ್ಥಾನ ನಿರ್ಣಯಗಳನ್ನು ವಿವರಿಸಲಾಗಿದೆ.

ಎಂ.ಆರ್.ಶ್ರೀ. ಅವರ ಲೇಖನಗಳನ್ನು ಒಟ್ಟಾರೆ ಪರಿಶೀಲಿಸಿದಾಗ ಅವರ ಪ್ರಥಮ ಒಲವು ವೀರಶೈವ ಸಾಹಿತ್ಯದತ್ತ ಎಂಬುದು ವಿದಿತವಾಗುತ್ತದೆ. ಅವರು ಸಮರ್ಥರಾದ ಸಂಶೋಧಕರಷ್ಟೇ ಅಲ್ಲ, ಸಹೃದಯ ವಿಮರ್ಶಕರು. ತಮ್ಮ

ಸಂಶೋಧನೆಯಲ್ಲಿ ತಮ್ಮ ಅಭಿಪ್ರಾಯಗಳ ಮಂಡನೆಗಾಗಿ ಬಲವಾದ ಆಧಾರಗಳನ್ನು ಒದಗಿಸುವರು, ವ್ಯಾಪಕವಾದ ಅಧ್ಯಯನವನ್ನು ಮನಗಾಣಿಸುವರು, ಸಮತೋಲನವನ್ನು ಉದ್ದಕ್ಕೂ ಕಾಯ್ದುಕೊಂಡಿರುವರು, ಎಲ್ಲಿಯೂ ತಮ್ಮ ವಿರೋಧಿಗಳ ಬಗೆಗೆ ಅವಹೇಳನಕಾರಿಯಾಗಿ ನಡೆದುಕೊಂಡಿಲ್ಲ. ವಿಮರ್ಶಿಸುವಾಗ ತೌಲನಿಕ ವಿಧಾನವನ್ನು ಮೊದಲಿಗೆ ಬಳಸಿರುವರು. ಅವರ ಸಂಶೋಧನೆ ಪಾಂಡಿತ್ಯಪೂರ್ಣವಾಗಿದ್ದರೆ, ವಿಮರ್ಶೆಯ ಬರಹಗಳಲ್ಲಿ ಕಾವ್ಯಮಯತೆ ಹಾಗೂ ನಯವಾದ, ನವಿರಾದ ಶೈಲಿ ಮೈಗೂಡಿದೆ.

ಎಂ.ಆರ್.ಶ್ರೀ. ಅವರ ಸಾಹಿತ್ಯ ಸೃಷ್ಟಿ ವೈವಿಧ್ಯಮಯವಾದುದು. 'ಕಂಠೀರವ ವಿಜಯ', 'ಧರ್ಮದುರಂತ', 'ಯದುವಿಜಯ' ಮತ್ತು 'ನಾಗರಿಕ' - ಇವು ಅವರ ನಾಟಕಗಳು. ಇವುಗಳಲ್ಲಿ 'ಯದುವಿಜಯ' ಪ್ರಕಟವಾಗಿಲ್ಲ. ಸ್ಕೌಟ್‌ಗಾಗಿಯೇ ಅವರು ಬರೆದ ಕೇವಲ ಪುರುಷ ಪಾತ್ರಗಳನ್ನೊಳಗೊಂಡ ನಾಟಕ 'ಕಂಠೀರವ ವಿಜಯ'. ಕಂಠೀರವ ನರಸರಾಜಒಡೆಯರು ತಿರುಚಿನಾಪಳ್ಳಿಯ ಜಟ್ಟಿಯನ್ನು ಸೋಲಿಸಿದ ವಸ್ತುವನ್ನು 'ಕಂಠೀರವ ವಿಜಯ' ಒಳಗೊಂಡಿದೆ. ಟಿಪ್ಪುವಿನ ಕಾಲದ ಘಟನೆಯೊಂದನ್ನು ಆಯ್ದುಕೊಂಡು ಬರೆದ ನಾಟಕ 'ಧರ್ಮದುರಂತ'. "ಚಾರಿತ್ರಿಕ ಘಟನೆಯೊಂದರ ಆಧಾರದ ಮೇಲೆ ರಚಿತವಾಗಿರುವ 'ಧರ್ಮ ದುರಂತ' ನಾಟಕವು ಮಾನವೀಯತೆಯಿಂದ ದೂರವಾದ ಮೂಢನಂಬಿಕೆ, ವಿಚಾರಕ್ಕೆ ಸಿಗದ ಸಂಪ್ರದಾಯದ ಹೃದಯಹೀನತೆಗೆ ತುತ್ತಾಗುವ ಧರ್ಮ ಹೇಗೆ ದುರಂತಕ್ಕೆ ಈಡಾಗುತ್ತದೆ ಎಂಬುದನ್ನು ಕಾಣುತ್ತೇವೆ. ಇಲ್ಲಿ ಕಥಾನಾಯಕ, ಕಥಾನಾಯಕಿ ಎಂದು ಪಾತ್ರಗಳನ್ನು ಗುರುತಿಸುವುದಕ್ಕಿಂತ ಶುದ್ಧವಾದ ಪ್ರೀತಿ, ಶುದ್ಧ ಅಂತಃಕರಣದ ಮಾನವೀಯತೆಯನ್ನು ಒಂದು ಕಡೆ, ವಿಚಾರವಿಹೀನವಾದ ಗೊಡ್ಡು ಶಾಸ್ತ್ರದ ಮೇಲೆ ನಿಲ್ಲುವ ಧರ್ಮ ಇನ್ನೊಂದು ಕಡೆ ಎಂದು ಲೆಕ್ಕಿಸುವುದು ಸೂಕ್ತ."[2] 'ಧರ್ಮ ದುರಂತ'ವು ಸರಳ ರಗಳೆಯಲ್ಲಿ ರಚಿತವಾಗಿದ್ದರೂ ಇದರ ಮಧ್ಯೆ ಮಧ್ಯೆ ಗದ್ಯವೂ ಇದೆ. ತುಂಬ ವಿಸ್ತೃತವಾದ ಸ್ವಗತ ಗದ್ಯಗಳಾದ ಮೇಲೆ ಮತ್ತೆ ರಗಳೆಯಲ್ಲಿ ಸಂಭಾಷಣೆ ಕಂಡುಬರುತ್ತದೆ. ಇದು ರಂಗಪ್ರದರ್ಶನಕ್ಕೆ ಒಗ್ಗುವ ನಾಟಕವಲ್ಲ, ಓದು ನಾಟಕ.

1928ರಲ್ಲಿ ಎಂ.ಆರ್.ಶ್ರೀ. ಅವರು ತಮ್ಮ ಆತ್ಮೀಯ ಮಿತ್ರರೊಡನೆ ಪಂಪಾಯಾತ್ರೆಯನ್ನು ಮಾಡಿ ಬಂದರು. ಒಂದು ಕಾಲದಲ್ಲಿ ವೈಭವದಿಂದ ಮೆರೆದಿದ್ದ ನಾಡಿನ ಧರ್ಮ, ಸಂಸ್ಕೃತಿ, ಕಲೆಗಳ ಪ್ರತೀಕದಂತಿದ್ದ ವಿಜಯನಗರವು (ಹಂಪೆಯು) ಇಂದು ಭಗ್ನಾವಶೇಷವಾಗಿರುವುದನ್ನು ಕಂಡಾಗ ಅವರ ಮನಸ್ಸಿನಲ್ಲುಂಟಾದ ಭಾವನೆಗಳು, 'ನಾಗರಿಕ' ನಾಟಕವಾಗಿ ರೂಪಧಾರಣ ಮಾಡಿತು. ಎಂ.ಆರ್.ಶ್ರೀ. ಅವರಿಗೆ ಪ್ರಸಿದ್ಧಿಯನ್ನು ತಂದುಕೊಟ್ಟ ನಾಟಕ 'ನಾಗರಿಕ' ರಂಗಭೂಮಿಯಲ್ಲಿ ಹಲವು ಬಾರಿ ಪ್ರಯೋಗಗೊಂಡು ಜನಪ್ರಿಯತೆ ಗಳಿಸಿದೆ. 'ದೇವನೆಂಬುವನಿಲ್ಲ' ಎಂದು ನಂಬಿರುವ ನಾಗರಿಕನ ಮಾಧ್ಯಮದ ಮೂಲಕ ಶ್ರೀನಿವಾಸಮೂರ್ತಿಗಳು ಸಾಮಾಜಿಕ ಹಾಗೂ ಐತಿಹಾಸಿಕ ಅಂಶಗಳನ್ನು ಪ್ರಾಸ್ತಾಪಿಸಿರುವರು. ನಾಗರಿಕನ ನೇರವಾದ ಅನಿಸಿಕೆಗಳು ಒಂದು ಭವ್ಯ ಸಾಮ್ರಾಜ್ಯ ಹಾಳಾದುದರ ಕಹಿಯ ಹಿನ್ನೆಲೆಯಲ್ಲಿ ಮೂಡಿದುದು. ಅವನ ವ್ಯಂಗ್ಯ, ಮೂದಲಿಕೆಯ ಮಾತುಗಳು ಅವನ ವೈರಾಗ್ಯ ಮನೋಸ್ಥಿತಿಯಲ್ಲಿ ಬಿಂಬಿತವಾದುದು. ಪೂಜಾರಿ, ಭಕ್ತರು, ದೇವರು, ಯಮಧರ್ಮರಾಯ, ಋಷಿ ಹಾಗೂ ವಿದ್ಯಾರಣ್ಯ-ಇವರುಗಳೊಡನೆ ನಾಗರಿಕನು ನಡೆಸುವ ಸಂಭಾಷಣೆಯಲ್ಲಿ ಅವನ ಮನೋಸ್ಥಿತಿ ಪ್ರಕಟಗೊಳ್ಳುತ್ತವೆ. ನಾಟಕದ ಕೊನೆಯಲ್ಲಿ ನಾಗರಿಕನ ಮನೋಭಾವ ವಿದ್ಯಾರಣ್ಯರ ಬೋಧನೆಯಿಂದಾಗಿ ಪರಿವರ್ತನೆಗೊಳ್ಳುತ್ತದೆ. ಸಿಡಿಲ ಮರಿಯಂತೆ ಆರ್ಭಟಿಸುವ ನಾಗರಿಕನ ತಪ್ತ ಮನೋಸ್ಥಿತಿ ವಿದ್ಯಾರಣ್ಯರ ಹಿತವಾಣಿಯಿಂದಾಗಿ ಶಾಂತವಾಗುತ್ತದೆ. ಪಶ್ಚಾತ್ತಾಪದಗ್ಧನಾದ ನಾಗರಿಕನು ಪೂಜಾರಿಯ ಜೊತೆ "ದೈವಬಲವಿರಬೇಕು ಪುರುಷಬಲವಿರಬೇಕು ಅಲ್ಲದೊಡನೆ ಕಾರ್ಯ ಸಾಧನೆಯಹುದೆ?" ಎಂದು ಹೇಳುವಲ್ಲಿಗೆ ನಾಟಕ ಮುಕ್ತಾಯವಾಗುತ್ತದೆ.

'ರೋಲ್ಸ್ ಮೇಷ್ಟ್ರು' ನಾಟಕವನ್ನು ಎಂ.ಆರ್.ಶ್ರೀ. ಅವರು ಇಂಗ್ಲಿಷ್-ಕನ್ನಡ ನಿಘಂಟಿಗಾಗಿ ಕೆಲಸ ಮಾಡುತ್ತಿದ್ದಾಗ (1941) ಬರೆದರು. ಹಳ್ಳಿಯ ಶಾಲೆಗಳಲ್ಲಿ ಕೆಲಸ ಮಾಡುವ ಉಪಾಧ್ಯಾಯರ ಸಮಸ್ಯೆಗಳನ್ನು ಪರಿಚಯಿಸುವ ಸಲುವಾಗಿಯೇ ಬರೆದ ನಾಟಕವಿದು. ಈ ನಾಟಕವನ್ನು ಆಗ ಡಿ.ಪಿ.ಐ. ಆಗಿದ್ದ ಮೆಕಾಲ್‌ಪೇನ್ ಅವರ ಅಧ್ಯಕ್ಷತೆಯಲ್ಲಿ ಪುರಭವನದಲ್ಲಿ ಆಡಿಸಲಾಯಿತು. ಮೆಕಾಲ್‌ಪೇನ್ ನಾಟಕವನ್ನು ನೋಡಿ ನಾಟಕವನ್ನು ಪ್ರಶಂಸಿದರು, ಪಾತ್ರಗಳನ್ನು ಹೊಗಳಿದರು. 1933ರಲ್ಲಿ 'ಕವಿಯ ಸೋಲು' ಮತ್ತು ಇತರ ಕವಿತೆಗಳು ಪ್ರಕಟವಾದವು. 'ಕವಿಯ ಸೋಲು' ಎನ್ನುವುದು ಸರಳರಗಳೆಯ ಪುಟ್ಟ ನಾಟಕ. 'ರೋಲ್ಸ್ ಮೇಷ್ಟ್ರು' ಹಾಗೂ 'ರಂಗಣ್ಣನ ಕನಸಿನ ದಿನಗಳು' ಎಂ.ಆರ್.ಶ್ರೀ. ಅವರ ವೃತ್ತಿಜೀವನದ ಅನುಭವಗಳನ್ನು ಒಳಗೊಂಡಿದೆ. 'ರಂಗಣ್ಣನ ಕನಸಿನ ದಿನಗಳು' ಕಥೆಯ ಜಾತಿಗೂ ಸೇರದ, ಕಾದಂಬರಿಯ ಜಾತಿಗೂ ಸೇರದ ಒಂದು ವಿಶಿಷ್ಟ ಕೃತಿ. ಕುವೆಂಪುರವರು ಇದನ್ನು 'ಚಿತ್ರ ಕಾದಂಬರಿ' ಎಂದು ಕರೆದಿರುವರು. ಓರ್ವ ಆದರ್ಶ ಇನ್‌ಸ್ಪೆಕ್ಟರಕನ ವೃತ್ತಿಜೀವನದ ಅನುಭವ ಚಿತ್ರಗಳ ಮಾಲೆ ಇದಾಗಿದೆ. ಈ ಕೃತಿಯಲ್ಲಿ ಹಳ್ಳಿಯ ಪ್ರಾಥಮಿಕ ಶಾಲೆಗಳ ಹಾಗೂ ಉಪಾಧ್ಯಾಯರುಗಳ ನೈಜ ಸ್ಥಿತಿಯನ್ನೂ, ಅವರ ಸಮಸ್ಯೆಗಳನ್ನೂ ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಈ ಕೃತಿಯಲ್ಲಿ ಅಂಥ ಸಮಸ್ಯೆಗಳ ನಿವಾರಣೆಗೆ ಪರಿಹಾರವನ್ನೂ ಎಂ.ಆರ್.ಶ್ರೀ. ಸೂಚಿಸಿರುವರು. ಒಂದೊಂದು ಅನುಭವಗಳೂ ಸ್ವತಂತ್ರ ಕಥೆಯೋ ಎನ್ನುವಷ್ಟು ಮಟ್ಟಿಗೆ ನಿರೂಪಣೆಗೊಂಡಿವೆ. ಇಲ್ಲಿ ಬರುವ ಸಂದರ್ಭ ಸನ್ನಿವೇಶಗಳು, ವ್ಯಕ್ತಿಗಳು ನೈಜವಾಗಿವೆ. ಅನುಭವ ಕಥನವನ್ನು ನಿರೂಪಿಸುವಾಗ ಎಂ.ಆರ್.ಶ್ರೀ. ತಮಗೆ ದೈವದತ್ತವಾಗಿರುವ ತಿಳಿಹಾಸ್ಯದ ಲೇಪನವನ್ನೂ ಮಾಡಿರುವರು. ಹೀಗಾಗಿ ಹಲವು ಸನ್ನಿವೇಶ, ಪಾತ್ರಗಳು ಓದುವಾಗ ನಗೆಯುಕ್ಕಿಸುತ್ತವೆ. ಅಷ್ಟೇ ಅಲ್ಲ ಇಲ್ಲಿನ ಸಮಸ್ಯೆಗಳು ನಮ್ಮನ್ನು ಗಂಭೀರವಾಗಿ ಆಲೋಚನೆ ಮಾಡುವಂತೆ ಪ್ರೇರೇಪಿಸುತ್ತವೆ.

ಈ ಶತಮಾನದ ಎರಡನೆಯ ದಶಕದಲ್ಲಿ ಎಂ.ಆರ್.ಶ್ರೀ. ಅವರು 'ಸಾವಿತ್ರಿ' ಎನ್ನುವ ಸ್ವತಂತ್ರ ಸಾಮಾಜಿಕ ಕಾದಂಬರಿಯನ್ನು ಬರೆದರು. 1916-17ರಲ್ಲಿ 'ಕಾದಂಬರಿ ಸಂಗ್ರಹ' ಎನ್ನುವ ಮಾಸ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಇದು ಪ್ರಕಟವಾಯಿತು. ಆದರೆ ಇದು ಇಡಿಯಾಗಿ ಪುಸ್ತಕರೂಪದಲ್ಲಿ ಪ್ರಕಟವಾದದ್ದು 1949ರಲ್ಲಿ-ಶ್ರೀನಿವಾಸಮೂರ್ತಿಗಳು ಶಿಕ್ಷಣ ಇಲಾಖೆಯ ಕೆಲಸದಿಂದ ನಿವೃತ್ತರಾದ ಮೇಲೆ. ಎಂ.ಆರ್.ಶ್ರೀ. ಅವರ ತಂದೆ ಬಾಗೇಪಲ್ಲಿಯಲ್ಲಿ ಅಮಲ್ದಾರರಾಗಿದ್ದಾಗ ನಡೆದ ಒಂದು ಘಟನೆ 'ಸಾವಿತ್ರಿ' ಕಾದಂಬರಿಗೆ ವಸ್ತುವಾಗಿರುವಂತಿದೆ. 'ಸಾವಿತ್ರಿ' ಕಾದಂಬರಿಯ ಕಥಾನಾಯಕ ಮೂರ್ತಿ ತಾಯಿಲ್ಲದ ಸಾವಿತ್ರಿ ಎನ್ನುವ ಸ್ಫುರದ್ರೂಪಿ ಹುಡುಗಿಯನ್ನು ಅಂತರಂಗದಲ್ಲಿ ಪ್ರೀತಿಸುವನು. ಸಾವಿತ್ರಿಯು ಬಲಅಣ್ಣನ ಆಶ್ರಯದಲ್ಲಿ ಬೆಳೆಯುತ್ತಿದ್ದಳು. ಅವಳನ್ನು ಅವಳ ಬಲಅಣ್ಣ ವಯಸ್ಸಾದ ರಾಮಚಂದ್ರಯ್ಯ ಎನ್ನುವವರಿಗೆ ಮದುವೆ ಮಾಡಿಕೊಡಲು ತೀರ್ಮಾನಿಸುವನು. ಈ ಅನ್ಯಾಯದ ಸಂಬಂಧವನ್ನು ಮೂರ್ತಿಯು ತಪ್ಪಿಸಿ ಸಾವಿತ್ರಿಯ ಕೈಹಿಡಿಯುವುದೇ ಈ ಕಾದಂಬರಿಯ ಕಥಾವಸ್ತು. ಕಾದಂಬರಿಯ ಎರಡನೆಯ ಪರಿಚ್ಛೇದದಲ್ಲಿ ಸ್ವತಃ ಎಂ.ಆರ್.ಶ್ರೀ. ಅವರೇ ವಾಚಕರನ್ನು ಉದ್ದೇಶಿಸಿ 'ವಾಚಕರೇ' ಎಂದು ಸಂಬೋಧಿಸಿ ಹೀಗೆ ಹೇಳಿರುವರು.

"... ನಾವು ಶೃಂಗಾರ ಶೇಖರರಾದ, ರಸಿಕರಾದ ನಾಯಕ-ನಾಯಕಿಯರನ್ನು ಈ ಕಥೆಯಲ್ಲಿ ಸಂಪಾದಿಸಿಲ್ಲ. ಗೊಂಡಾರಣ್ಯದಲ್ಲಿ ಹಸಿವು ಬಾಯಾರಿಕೆಗಳನ್ನು ತಡೆದುಕೊಂಡು ಹಗಲೆನ್ನದೆ ರಾತ್ರಿಯೆನ್ನದೆ, ಕಾಂತ ಕಾಂತೆಯರನ್ನು ಹುಡುಕಿಕೊಂಡು ಹೋಗುವ ನಾಯಕ ನಾಯಕಿಯರನ್ನೂ ಪಡೆದಿಲ್ಲ. ವೀರಾಗ್ರೇಸರರಾಗಿ ಮಹತ್ಕಷ್ಟಗಳನ್ನು ಅನುಭವಿಸುವವರನ್ನೂ ತಂದಿಲ್ಲ. ನಾವು ಸುತ್ತಲೂ, ನಿತ್ಯದಲ್ಲಿ ನೋಡುವ ಸಂಗತಿಗಳನ್ನೇ ಜೋಡಿಸಿಕೊಂಡು ಅವಕ್ಕೆ ತಕ್ಕ ಪಾತ್ರಗಳ ಮುಖಾಂತರ ಈ ಕಥೆಗಳನ್ನು ಬರೆಯಲು ಉಪಕ್ರಮಿಸಿರುವೆವು."

ಎಂ.ಆರ್.ಶ್ರೀ. ಅವರ 'ಮಹಾತ್ಯಾಗ' ಕಾದಂಬರಿ ಪ್ರಕಟವಾದದ್ದು 1955ರಲ್ಲಿ. ಈ ಕಾದಂಬರಿಯನ್ನು ಬರೆಯುತ್ತಿದ್ದಾಗಲೇ ಅವರು ವಿಧಿವಶರಾದರು. ಕಾದಂಬರಿ ಪೂರ್ಣರೂಪದಲ್ಲಿ ಅಚ್ಚಿಗೆ ಹೋದಂತಿಲ್ಲ. ಕಥೆ ಅವರ ಮನಸ್ಸಿನಲ್ಲಿತ್ತು. ಆಗಾಗ ಕಾದಂಬರಿಯ ಭಾಗಗಳನ್ನು ಬರೆದು ಅಚ್ಚಿಗೆ ಒದಗಿಸುತ್ತಿದ್ದಂತಿದೆ. "ಸಂಸಾರದಲ್ಲಿ ಹೊಂದಿಕೊಂಡು ಬಾಳಬೇಕಾದರೆ ವ್ಯಕ್ತಿವ್ಯಕ್ತಿಯಲ್ಲಿಯೂ ತ್ಯಾಗದ ಮನೋಭಾವವಿರಬೇಕು. ಹಾಗಿಲ್ಲದೆ, ಜಂಭ, ಅಹಂಕಾರ, ದುರಭಿಮಾನ ಇರುವುದಾದರೆ ಸಮಸ್ಯೆಗಳು ಹುಟ್ಟಿಕೊಂಡು ಜೀವನವು ಕ್ಲೇಶಮಯವಾಗಿ ಬಿಡುತ್ತದೆ. ಒಂದು ವೇಳೆ ಯಾವುದೋ ಒಂದು ಆಕಸ್ಮಿಕ ಘಟನೆಯಿಂದಾಗಿ ಸಮಸ್ಯೆ ಹುಟ್ಟಿಕೊಂಡು ಬೆಳೆದರೂ ಅದಕ್ಕೆ ಸಂಬಂಧಪಟ್ಟವರ ತ್ಯಾಗಶೀಲ ವರ್ತನೆಯಿಂದ ಸಮಸ್ಯೆ ಪರಿಹಾರವಾಗಿ ಬಾಳಿನಲ್ಲಿ ಸುಖವು ಪುನಃ ಸ್ಥಾಪಿತವಾಗುತ್ತದೆ ಎಂಬ ನೀತಿಗಾಗಿ ಹುಟ್ಟಿರಬಹುದಾದ ಈ ಕಾದಂಬರಿಯಲ್ಲಿ ಕಥೆಯ ಕೇಂದ್ರ ಶಕ್ತಿಗಳು ಸಮಸ್ಯೆಯ ಪರಿಹಾರದ ಕಡೆಗೆ ವಾಲುತ್ತಿದ್ದಂತೆಯೇ ಕೊನೆಗೊಂಡಿದೆ...."[3] ಪ್ರೊ. ಗಿರಡ್ಡಿ ಗೋವಿಂದರಾಜ ಅವರು ಹೇಳುವಂತೆ "ಕಥೆಯ ನಿರೂಪಣೆಯಲ್ಲಿ, ವಸ್ತು ಸಂವಿಧಾನದಲ್ಲಿ, ಪಾತ್ರ ರಚನೆಯಲ್ಲಿ, ಸಮಸ್ಯೆಯ ವಿವೇಚನೆಯಲ್ಲಿ, ಹಿತಮಿತವಾದ ಶೈಲಿಯಲ್ಲಿ, ಕೊನೆಗೆ ಇವಕ್ಕೆಲ್ಲ ಮುಖ್ಯ ಕಾರಣವಾಗಿರುವ ಕಾದಂಬರಿಕಾರನ ಜೀವನ ದೃಷ್ಟಿಯಲ್ಲಿ-ಹೀಗೆ ಎಲ್ಲೆಲ್ಲಿಯೂ ಅಚ್ಚುಕಟ್ಟುತನ ಇಡಿಯ ಕಾದಂಬರಿಗೆ ವಿಶಿಷ್ಟವಾದ ಒಂದು ಬಣ್ಣ ಕೊಟ್ಟಿದೆ."[4] ಈ ಕಾದಂಬರಿಯಲ್ಲಿನ ಸಮಸ್ಯೆಯ ಕೇಂದ್ರವ್ಯಕ್ತಿ ಕಾವೇರಮ್ಮ. ಸ್ವಾಭಾವಿಕ ವಾಗಿಯೇ ಕಾದಂಬರಿಯಲ್ಲಿ ಈ ಪಾತ್ರಕ್ಕೆ ಹೆಚ್ಚಿನ ಮಹತ್ವ ಬಂದಿದೆ. ಈ ಪಾತ್ರದ ನಿರ್ವಹಣೆಯಲ್ಲಿ ಕಾದಂಬರಿಕಾರರು ಅಸಾಧಾರಣ ಜಾಣ್ಮೆ ತೋರಿದ್ದಾರೆ.

ಎಂ.ಆರ್.ಶ್ರೀ. ಅವರಿಗೆ ಕನ್ನಡ ಸಾಹಿತ್ಯ ಪರಿಷತ್ತನ್ನು ಕಟ್ಟಿ ಬೆಳೆಯಿಸುವ ಆಸೆ. ಅಂತೆಯೇ ಅದಕ್ಕಾಗಿ ಅವರು ತ್ರಿಕರಣಪೂರ್ವಕವಾಗಿ ದುಡಿದಿರುವರು. ಅದರ ಎಲ್ಲ ಸಾಹಿತ್ಯಕ ಚಟುವಟಿಕೆಗಳ ಹಿನ್ನೆಲೆಯಲ್ಲಿ ಗುಪ್ತಗಾಮಿಯಾಗಿ ಅವರ ಪರಿಶ್ರಮ ಹರಿದಿದೆ. ಕನ್ನಡಕ್ಕೆ ಧಕ್ಕೆ ಬಂದಾಗಲೆಲ್ಲಾ, ಅದರ ಸ್ಥಾನ-ಮಾನಕ್ಕೆ ಚ್ಯುತಿ ಬಂದಾಗಲೆಲ್ಲಾ, ಎಂ.ಆರ್.ಶ್ರೀ. ಹೋರಾಟ ನಡೆಸಿರುವರು. ಎಂ.ಆರ್.ಶ್ರೀ. ಅವರು ಅಧ್ಯಕ್ಷರಾಗಿದ್ದಾಗಿನ ಅವಧಿಯಲ್ಲಿ ಮೂರು ಸಾಹಿತ್ಯ ಸಮ್ಮೇಳನಗಳಾದುವು (ಸೊಲ್ಲಾಪುರ, ಮುಂಬಯಿ ಹಾಗೂ ಬೇಲೂರು). ಸೊಲ್ಲಾಪುರದ ಸಮ್ಮೇಳನಕ್ಕೆ ಎಂ.ಆರ್.ಶ್ರೀ. ಅವರೇ ಅಧ್ಯಕ್ಷರಾಗಿ ಆಯ್ಕೆಯಾದರು. ಸಮ್ಮೇಳನಕ್ಕೆ ಅಧ್ಯಕ್ಷರನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ಕನ್ನಡಕ್ಕೆ ಶ್ರಮಿಸಿರುವ ಹಿರಿಯ ವಿದ್ವಾಂಸರನ್ನು ಆಯ್ಕೆಮಾಡಿ ಗೌರವಿಸುತ್ತಿದ್ದರು. ತಮ್ಮ ಬದುಕಿನುದ್ದಕ್ಕೂ ಪ್ರಾಮಾಣಿಕರಾಗಿ ಬಾಳಿದ ಅವರಿಗೆ ಇಂಥ ವಿಷಯಗಳಲ್ಲಿ ಬಹಳ ಮಡಿವಂತಿಕೆಯೇ. ಪರಿಷತ್ತು ನಡೆಸುವ ಸಾಹಿತ್ಯೋತ್ಸವದ ಎಲ್ಲ ಜವಾಬ್ದಾರಿಗಳನ್ನು ಎಂ.ಆರ್.ಶ್ರೀ. ಅವರು ವಹಿಸುತ್ತಿದ್ದರು. ಅವರ ಕಾರ್ಯದಲ್ಲಿ ಒಂದು ಒಪ್ಪ, ಓರಣ, ಶಿಸ್ತು, ಲೆಕ್ಕಾಚಾರವಿರುತ್ತಿತ್ತು. ನಿಘಂಟಿನ ಕಾರ್ಯದ ಪುನರ್ವ್ಯವಸ್ಥೆ, ಕನ್ನಡ ನುಡಿ ಪತ್ರಿಕೆಯ ಪರಿಷ್ಕರಣ (ಮಾಸಪತ್ರಿಕೆಯಾಗಿ ಪ್ರಾರಂಭಿಸಿದುದು), ಗಮಕ ಕಲೆಗೆ ಪ್ರೋತ್ಸಾಹ, ಪ್ರತಿಭಾನ್ವಿತರನ್ನೂ, ಕಲಾವಿದರನ್ನೂ ಸನ್ಮಾನಿಸುವುದು-ಇವೆಲ್ಲ ಇವರ ಅಧಿಕಾರಾವಧಿಯಲ್ಲಿ ಆದಂತಹ ಕಾರ್ಯಗಳು.

ಎಂ.ಆರ್.ಶ್ರೀ. ಅವರು ಹೊಸಗನ್ನಡ ಸಾಹಿತ್ಯದ ಕುತೂಹಲಗಳಲ್ಲಿ ಒಂದಾಗಿರುವರು. ಅವರ ಪ್ರತಿಭೆ, ಪಾಂಡಿತ್ಯ, ಅರ್ಪಣ ಮನೋಭಾವ, ಶಿಸ್ತು, ಶುಚಿ-ರುಚಿ ಜೀವನ, ರಸಿಕತೆ, ಸೌಜನ್ಯ-ಇವೆಲ್ಲವೂ ನವೋದಯ ಕಾಲದ ವಿದ್ವಾಂಸರ ಪರಂಪರೆಗೆ ಸೇರಿದವಾಗಿದ್ದವು. ಅವರು ಉಜ್ವಲ ವಾಗ್ಮಿಗಳಾಗಿ ಸಹೃದಯರ ನೆನಪಿನ ಅಂಗಳದಲ್ಲಿ ನೆಲಸಿರುವರು. ಶ್ರೇಷ್ಠ ವಿದ್ವಾಂಸರಾಗಿ ಅವರು ಮಾಡಿರುವ ಕನ್ನಡದ ಸೇವೆ ಕನ್ನಡವಿರುವವರೆವಿಗೂ ಉಳಿಯು ವಂತಹದಾಗಿದೆ.

❑

1. ಸಾಹಿತ್ಯಾಲೋಕ : ಎಂ.ಆರ್. ಶ್ರೀನಿವಾಸಮೂರ್ತಿ (ಸಂ. : ಎನ್.ಎಸ್. ತಾರಾನಾಥ) ಡಾ|| ಹಾ.ಮಾ. ನಾಯಕರ ಮುನ್ನುಡಿ, ಪು. vii.
2. ಎಂ.ಆರ್. ಶ್ರೀನಿವಾಸಮೂರ್ತಿ ಜೀವನ ಮತ್ತು ಕಾರ್ಯ : ಹೊ.ರಾ.ಸತ್ಯನಾರಾಯಣರಾವ್, ರಾ.ಶ. ಪ್ರಸನ್ನವೆಂಕಟೇಶಮೂರ್ತಿ, ಪು. 86
3. ಕಾದಂಬರಿ : ವಸ್ತು ಮತ್ತು ತಂತ್ರ (1987) ಪು. 100.

# ತಿರುಮಲೆ ತಾತಾಚಾರ್ಯ ಶರ್ಮ

ಶಿ. ರಾಜೇಂದ್ರಪ್ಪ

ಜನ್ಮನಾಮ 'ಲಕ್ಷ್ಮೀಕುಮಾರ', ಆದರೂ ಮನೆಮಂದಿಗೆಲ್ಲ ಅಚ್ಚುಮೆಚ್ಚಿನ 'ರಾಜ' ಆಗಿದ್ದ ತಿರುಮಲೆ ತಾತಾಚಾರ್ಯ ಶರ್ಮ ಅವರು ಬಹುಮುಖ ಪ್ರತಿಭೆಯ ಅಪೂರ್ವ ಸಂಗಮವಾಗಿದ್ದು, ಅಸಾಧಾರಣ ವ್ಯಕ್ತಿತ್ವದಿಂದಾಗಿ ೨೦ನೆಯ ಶತಮಾನದ ಶಕಪುರುಷರಲ್ಲೊಬ್ಬರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಪಂಚಭಾಷಾಕೋವಿದ, ಪತ್ರಿಕೋದ್ಯಮಿ, ಸಾಹಿತಿ, ವಾಗ್ಮಿ, ದುಭಾಷಿ, ತರ್ಜುಮೆದಾರ, ಅಧ್ಯಾಪಕ, ಕಲಾವಿದ, ಶಾಸನತಜ್ಞ, ಸಂಶೋಧಕ, ಇತಿಹಾಸಕಾರ, ಹಸ್ತಪ್ರತಿ ಪ್ರೇಮಿ, ಹವ್ಯಾಸಿ ನಾಮಶಾಸ್ತ್ರಜ್ಞ, ಸ್ವಾತಂತ್ರ್ಯ ಹೋರಾಟಗಾರ, ಏಕೀಕರಣವಾದಿ ಪ್ರಕಾಶಕ, ಸಂಘಟನಾ ಚತುರ, ಸಮಾಜಸೇವಕ, ರಾಜಕಾರಣಿ–ಹೀಗೆ ಹತ್ತು ಹಲವು ವೈಶಿಷ್ಟ್ಯಗಳ ಆಗರವಾಗಿದ್ದ ಶರ್ಮರು ಕರ್ನಾಟಕದ ಸಾರಸ್ವತ ಲೋಕದ ಧ್ರುವತಾರೆಯಾಗಿದ್ದು ಯುವಪೀಳಿಗೆಗೆ ಆದರ್ಶಪ್ರಾಯರಾಗಿದ್ದಾರೆ. ಸುಮಾರು ಎಂಟು ದಶಕಗಳ ಅರ್ಥಪೂರ್ಣ ತುಂಬು ಜೀವನ ನಡೆಸಿದ ಶರ್ಮರು, ಬದುಕಿನುದ್ದಕ್ಕೂ ತಮ್ಮನ್ನು ತೊಡಗಿಸಿಕೊಂಡ ವೈವಿಧ್ಯಮಯ ಕ್ಷೇತ್ರಗಳಲ್ಲಿ ಮೂಡಿಸಿರುವ ಛಾಪು ಅದ್ವಿತೀಯ; ತೆರೆದಿಟ್ಟ ಹರವು ಅನುಪಮ; ಅವರ ಜೀವನ ಸಾಧನೆಗಳ ವಿಹಂಗಮ ನೋಟವೇ ಈ ಲೇಖನ.

ಶ್ರೀ ವೈಷ್ಣವ ಧರ್ಮೋದ್ಧಾರಕರಾದ ಶ್ರೀ ರಾಮಾನುಜಾಚಾರ್ಯರ ಸೋದರಮಾವ ಶ್ರೀ ಶೈಲನಾಥರ ವಂಶಸ್ಥರಾದ ಶ್ರೀನಿವಾಸ ತಾತಾಚಾರ್ಯ-ಜಾನಕಿ ದಂಪತಿಗಳ ಮಗನಾಗಿ ೧೮೯೭ರ ಏಪ್ರಿಲ್ ೨೭ರಂದು ಚಿಕ್ಕಬಳ್ಳಾಪುರದಲ್ಲಿ ಜನಿಸಿದ ಇವರಿಗೆ ಸಹಜವಾಗಿ ಲಭ್ಯವಿದ್ದ ವೈದಿಕ ವಾತಾವರಣ, ತೆಲುಗು ಪರಿಸರಗಳಿಂದಾಗಿ, ಶರ್ಮರು ಬಾಲ್ಯದಲ್ಲೇ ಸಂಸ್ಕೃತ, ತೆಲುಗು ಹಾಗೂ ತಮಿಳು ಭಾಷೆಗಳನ್ನು ಸರಳವಾಗಿ ಮೈಗೂಡಿಸಿಕೊಳ್ಳಲು ಸಾಧ್ಯವಾಯಿತು. ಶರ್ಮರು, ಮಕ್ಕಳಿಲ್ಲದ ಚಿಕ್ಕ ತಾತ ಶ್ರೀರಂಗಚಾರ್ಯರ ದತ್ತುಮಗನಾಗಿ ಸೂಲಿಕುಂಟೆ, ವಾಟದ ಹೊಸಳ್ಳಿ (೧೯೦೫) ಹಾಗೂ ಗೌರಿಬಿದನೂರು (೧೯೦೭)ಗಳಲ್ಲಿ ಪ್ರಾಥಮಿಕ ಶಿಕ್ಷಣ ಪಡೆದರು. ಈ ಅವಧಿಯಲ್ಲಿ ಸಾಕು ತಾಯಿ ಅಲಮೇಲಮ್ಮ (ಪಾಟ್ಯಂಮ್ಮ) ಶರ್ಮರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸಿದರು. ಶರ್ಮರು ಗೌರಿಬಿದನೂರಿನಲ್ಲಿ ಓದುತ್ತಿದ್ದಾಗ 'ವಂದೇ ಮಾತರಂ' ಚಳುವಳಿ ಗೌರಿಬಿದನೂರಲ್ಲೂ ಪ್ರತಿಧ್ವನಿಸಿದಾಗ, ಶರ್ಮರು ಗೆಳೆಯರೊಡಗೂಡಿ ಎಲ್ಲರ ಮನೆ ಬಾಗಿಲ ಮೇಲೆ 'ವಂದೇ ಮಾತರಂ' ಎಂದು ಬರೆದು ಎಳೆಯದರಲ್ಲೇ ಸ್ವಾತಂತ್ರ್ಯಪ್ರೇಮ ಮೆರೆದಿದ್ದರು.

ಇಂಗ್ಲಿಷ್ ಕಲಿಯುವ ಆಸೆಯೊಂದಿಗೆ ಚಿಕ್ಕಬಳ್ಳಾಪುರಕ್ಕೆ ಮಾಧ್ಯಮಿಕ ಶಿಕ್ಷಣ ಪಡೆಯಲು ಬಂದ ಶರ್ಮರು ಬಂಧುಗಳ ಮನೆಯಲ್ಲಿ ಉಳಿದು ಎ.ವಿ. ಸ್ಕೂಲನ್ನು ಸೇರಿದರು. ಇವರು ಅಲ್ಲಿದ್ದಾಗ, ಆ ಶಾಲೆಯ ಹಿಂದಿನ ವಿದ್ಯಾರ್ಥಿಗಳಾಗಿದ್ದ, ದಿವಾನ್ ವಿಶ್ವೇಶ್ವರಯ್ಯನವರು, ಶಾಲೆಗೆ ಬಂದು ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾಡಿದ ಭಾಷಣ, ಉತ್ಸಾಹದ ಚಿಲುಮೆಯಾಗಿದ್ದ ಶರ್ಮರ ಮೇಲೆ ಸಹಜವಾಗಿ ಗಾಢ ಪ್ರಭಾವ ಬೀರಿತು. ಮುಂದೆ ಶರ್ಮರು ಮಾಧ್ಯಮಿಕ ಶಿಕ್ಷಣಕ್ಕೆಂದು ಬೆಂಗಳೂರಿನ ಲಂಡನ್ ಮಿಷನರಿ ಶಾಲೆಗೆ ಬಂದರು. ಆ ಶಾಲೆಯ ಮುಖ್ಯೋಪಾಧ್ಯಾಯರಾದ ಇ.ಪಿ. ರೈಸ್‌ರು ಶರ್ಮರ ದೃಷ್ಟಿದೋಷವನ್ನು ನಿವಾರಿಸಿ ಕನ್ನಡಕ ನೀಡುವುದರ ಮೂಲಕ ದೃಷ್ಟಿದಾನ ಮಾಡಿಸಿದ್ದನ್ನು ಶರ್ಮ ಅವರು ಮರೆಯಲೇ ಇಲ್ಲ ! ದತ್ತಕ ತಂದೆಯ ಇಚ್ಛೆಯಂತೆ ಸೋದರತ್ತೆಯ ಮಗಳು ರಾಜಮ್ಮನನ್ನು ೧೯೧೩ರಲ್ಲಿ ವಿವಾಹವಾದರು. ಇದರಿಂದಾಗಿ ಶರ್ಮರು ತಮ್ಮ ಪ್ರೌಢಶಾಲಾ ವ್ಯಾಸಂಗವನ್ನು ಹಾಸನದಲ್ಲಿ ಹೆಂಡತಿಯ ಮನೆಯಲ್ಲಿದ್ದುಕೊಂಡೆ ೧೯೧೫ರಲ್ಲಿ ಪೂರೈಸಿದರು. ಇವರು ಅಲ್ಲಿದ್ದಾಗ ಶಾಲೆಯಲ್ಲಿ ಅಮೇಚೂರ್ ನಾಟಕ ಕ್ಲಬ್ಬನ್ನು ರಚಿಸಿ, 'ಆಚಾರ್ಯ', 'ಮೌಲ್ವಿ' ಪಾತ್ರಗಳನ್ನು ಅಭಿನಯಿಸಿ ಸಕಲರ ಮೆಚ್ಚುಗೆಗೆ ಪಾತ್ರರಾಗಿದ್ದರು.

ಮುಂದೆ ಇಂಟರ್‌ಮೀಡಿಯೆಟ್‌ಗೆಂದು ಮೈಸೂರಿನಲ್ಲಿ ಮಹಾರಾಜ ಕಾಲೇಜಿಗೆ ಸೇರಿದರು. ಅಲ್ಲಿ 'ಪೂರ್ವಮುಖಿ' ಎಂಬ ಸಾಂಸ್ಕೃತಿಕ ಗುಂಪನ್ನು ಸಂಘಟಿಸಿ ಸಹಪಾಠಿಗಳಲ್ಲಿ ನಾಡು-ನುಡಿಗಳ ಬಗ್ಗೆ ಅಭಿಮಾನ ಮೂಡಿಸಲು ಯತ್ನಿಸಿದರು. ಸಂಘದ ವತಿಯಿಂದ ಪ್ರಯೋಗಿಸಲ್ಪಟ್ಟ ನಾಟಕಗಳಲ್ಲಿ 'ಕುರುಬ', 'ಭರತ' ಮುಂತಾದ ಪಾತ್ರಗಳಲ್ಲಿ ಅಭಿನಯಿಸಿ ಎಲ್ಲರ ವಿಶ್ವಾಸಕ್ಕೂ ಪಾತ್ರರಾದರು. ಈ ಅವಧಿಯಲ್ಲಿ ಶರ್ಮರು ಪ್ರೊ. ಎನ್.ಎಸ್. ಸುಬ್ಬರಾವ್ ಹಾಗೂ ಸಿ.ಆರ್. ರೆಡ್ಡಿ ಅವರಿಂದ ಪ್ರಭಾವಿತರಾಗಿದ್ದು, ಬಿ.ಎಂ.ಶ್ರೀ. ಇವರ ಗುರುಗಳಲ್ಲೊಬ್ಬರಾಗಿದ್ದರು. ಕನ್ನಡ ಭಾಷೆ ಹಾಗೂ ಸಾಹಿತ್ಯದಲ್ಲಿ ಶರ್ಮರು ಪರಿಣತಿ ಪಡೆದದ್ದು ಆಗಲೇ. ಆದರೆ ಆರ್ಥಿಕ ತೊಂದರೆ ಹಾಗೂ ಅನಾರೋಗ್ಯಗಳಿಂದಾಗಿ ಮೈಸೂರಿನಲ್ಲಿ ಶಿಕ್ಷಣ ಮುಂದುವರಿಸಲಾಗದೆ ಶರ್ಮರು ಬೆಂಗಳೂರಿಗೆ ಬಂದು ಮಾವನ ಮನೆಯಲ್ಲೇ ಉಳಿಯಬೇಕಾಯಿತು.

ಬೆಂಗಳೂರಿನಲ್ಲೂ ಶಿಕ್ಷಣ ಮುಂದುವರಿಸಲಾಗದೆ ನಿರಾಶರಾಗಿದ್ದ ಶರ್ಮರು ೧೯೧೮ ರಲ್ಲಿ ಎ.ವಿ. ವರದಾಚಾರ್ಯರ ಅಮೆಚೂರ್ ನಾಟಕ ಮಂಡಳಿಗೆ ಸೇರುವುದರ ಮೂಲಕ ಎ.ವಿ. ವರದಾಚಾರ್ಯ, ಟಿ.ಪಿ. ಕೈಲಾಸಂ, ತಾಡಪತ್ರಿ ರಾಘವಾಚಾರ್ಯರಂತಹ ಕಲಾ ತ್ರಿರತ್ನಗಳ ಒಡನಾಟದಲ್ಲಿ ತಮ್ಮೆಲ್ಲಾ ನೋವನ್ನು ಮರೆಯಲು ಸಾಧ್ಯವಾಯಿತು. ತೆಲುಗು ನಾಟಕಗಳೇ ಹೆಚ್ಚಿನ ಸಂಖ್ಯೆಯಲ್ಲಿ ಪ್ರಯೋಗಿಸಲ್ಪಡುತ್ತಿದ್ದ ಅಂದಿನ ದಿನಗಳಲ್ಲಿ ಕನ್ನಡ ನಾಟಕಕ್ಕಾಗಿ ಒತ್ತಾಯಿಸಿ, ಪ್ರಯೋಗಿಸುವಂತೆ ಮಾಡುವಲ್ಲಿ ಶರ್ಮರು ಯಶಸ್ವಿಯಾದರು. ಇದಕ್ಕಾಗಿ ಅವರು ಹಲವಾರು ತೆಲುಗುನಾಟಕಗಳನ್ನು ಕನ್ನಡಿಸಬೇಕಾಯಿತು. ಆ ಸಂದರ್ಭದಲ್ಲಿ ನಾಟಕಗಳ ರಚನೆಗೂ ಮುಂದಾದ ಶರ್ಮರ 'ಶ್ರೀರಂಗಪಟ್ಟಣ ಪತನ', 'ಟಿಪ್ಪುಸುಲ್ತಾನ' ನಾಟಕಗಳು ಪ್ರಯೋಗಿಸಲ್ಪಟ್ಟು ಹೆಚ್ಚು ಜನಪ್ರಿಯತೆ ಗಳಿಸಿದವು. ಹುಟ್ಟುಕಲಾವಿದರಾದ ಶರ್ಮರು ಬಣ್ಣ ಬಳಿದುಕೊಂಡು ಅಭಿನಯಿಸುವುದರ ಮೂಲಕ ತಾವು ಉತ್ತಮ ಕಲಾವಿದರೆಂಬ ಅಂಶವನ್ನು ಮತ್ತೊಮ್ಮೆ ಪ್ರಕಟಿಸಿದರು. ಇದೇ ಅವಧಿಯಲ್ಲಿ ಹಯವದನರಾಯರ ಸೂಚನೆಯಂತೆ ಎಲ್. ಸ್ವಾಮಿರಾಯರು ಶರ್ಮರಿಗೆ ಕೌಟಿಲ್ಯನ 'ಅರ್ಥಶಾಸ್ತ್ರ'ವನ್ನು ಅನುವಾದಿಸುವಂತೆ ಕೋರಿದರು. ಶರ್ಮರು ಭಾಷ್ಯಾರಾಮಾಚಾರ್ಯರ ನೆರವಿನೊಂದಿಗೆ ಅದರ ಕನ್ನಡಾನುವಾದಕ್ಕೆ ಮುಂದಾದರಾದರೂ ತಾಂತ್ರಿಕ ಕಾರಣಗಳಿಂದಾಗಿ ಅದನ್ನು ಅರ್ಧಕ್ಕೆ ನಿಲ್ಲಿಸಬೇಕಾಯಿತು. ಸುಮಾರು ೧೯೧೯ರಲ್ಲಿ ಅಮೆಚೂರು ನಾಟಕ

ಕಂಪೆನಿಯವರು ಬೆಂಗಳೂರಿನಲ್ಲಿ ಹಮ್ಮಿಕೊಂಡಿದ್ದ ಲಲಿತಕಲಾ ಮೇಳದ ಕಲಾಪ್ರದರ್ಶನದ ಉಸ್ತುವಾರಿಯನ್ನು ಸಮರ್ಪಕವಾಗಿ ನಿರ್ವಹಿಸುವುದರ ಜೊತೆಗೆ ಶರ್ಮರಿಗೆ ಡಾ. ಕಜಿನ್ಸ್, ಪ್ರೊ. ದೇವಲ್ ಮುಂತಾದ ಕಲಾ ದಿಗ್ಗಜಗಳ ಪರಿಚಯವೂ ಆಯಿತು. ಜೊತೆಗೆ ಶರ್ಮರಲ್ಲಿದ್ದ ಕಲಾಸಕ್ತಿಯೂ ಹೆಮ್ಮರವಾಯಿತು.

ಸುಮಾರು ೧೯೨೦ರ ಜನವರಿಯಲ್ಲಿ ಬೆಂಗಳೂರಿಗೆ ಭೇಟಿ ನೀಡಿದ್ದ ಶಾಸನತಜ್ಞ ಹೊಸಕೋಟೆ ಕೃಷ್ಣಶಾಸ್ತ್ರಿಗಳು ತಿರುಮಲೆ ಕುಟುಂಬದ ಮಿತ್ರರಾಗಿದ್ದು ಕೇಂದ್ರ ಶಾಸನ ಇಲಾಖೆಯಲ್ಲಿ ನೂತನವಾಗಿ ಮಂಜೂರಾಗಿದ್ದ ತೆಲುಗು-ಕನ್ನಡ ರೀಡರ್ ತಾತ್ಕಾಲಿಕ ಹುದ್ದೆಗೆ ಸೇರುವಂತೆ ಶರ್ಮರನ್ನು ಆಹ್ವಾನಿಸಿದರು. ಅದರಂತೆ ಶರ್ಮರು ೧೯೨೦ರ ಫೆಬ್ರವರಿ ತಿಂಗಳಲ್ಲಿ ರೂ. ೫೦/- ಮಾಸಿಕ ಪಗಾರದ ಈ ತಾತ್ಕಾಲಿಕ ಹುದ್ದೆಗೆಂದು ಮದ್ರಾಸಿಗೆ ತೆರಳಿದರು. ಅಲ್ಲಿಂದೀಚೆಗೆ ಮೂರು ವರ್ಷಗಳ ಕಾಲ (ಫೆಬ್ರವರಿ ೧೯೨೩ರವರೆಗೆ) ಕೇಂದ್ರ ಶಾಸನ ಇಲಾಖೆಯಲ್ಲಿ ಸೇವೆ ಸಲ್ಲಿಸುವುದರ ಜೊತೆಗೆ ಹೊಸಕೋಟೆ ಕೃಷ್ಣಶಾಸ್ತ್ರಿ ಹಾಗೂ ಸಿ. ಆರ್. ಕೃಷ್ಣಮಾಚಾರಿ ಅವರ ಮಾರ್ಗದರ್ಶನದಲ್ಲಿ ಶಾಸನ ಕ್ಷೇತ್ರದಲ್ಲಿ ಅಪಾರ ಅನುಭವ ಪರಿಣತಿ ಪಡೆಯಲು ಶರ್ಮರಿಗೆ ಸಾಧ್ಯವಾಯಿತು. ಈ ಅವಧಿಯಲ್ಲಿ ಶರ್ಮರು ಸಿಂಹಾಚಲ, ಧರ್ಮಪುರಿ ಹಾಗೂ ಮಂಗಳೂರುಗಳಲ್ಲಿ ಪ್ರವಾಸಕೈಗೊಂಡು ಶಾಸನ ಪರಿವೀಕ್ಷಣೆ, ಹಾಗೂ ಶಾಸನ ಪಾಠ ಪರಿಶೀಲನೆಯಲ್ಲಿ ಪಾಲ್ಗೊಂಡರು. ಅದೇ ವರ್ಷ (೧೯೨೧) ಅಹಮದಾಬಾದಿನಲ್ಲಿ ಸಂಗೀತ ಕಚೇರಿ ನಡೆಸಲು ಶರ್ಮರ ಪತ್ನಿ ರಾಜಮ್ಮನವರಿಗೆ ಆಹ್ವಾನ ಬಂದಿದ್ದು, ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಳಲು ದಂಪತಿಗಳು ಮುಂದಾದರು. ಅಹಮದಾಬಾದಿಗೆ ಹೋಗಲು ಅನುಕೂಲವಾಗುವಂತೆ ೧೯೨೧ರ ಜನವರಿ ೧೭ರಿಂದ ಒಂದು ತಿಂಗಳ ಹಕ್ಕು ರಜೆಯನ್ನು ಪಡೆದ ಶರ್ಮರು ಮಡದಿ ರಾಜಮ್ಮನೊಂದಿಗೆ ಅಹಮದಾಬಾದಿಗೆ ತೆರಳಿದರು. ಶರ್ಮರ ಅಹಮದಾಬಾದ್ ಭೇಟಿ ಅವರಲ್ಲಿದ್ದ ದೇಶಪ್ರೇಮವನ್ನು ಜಾಗೃತಗೊಳಿಸಿತು. ಮಿಗಿಲಾಗಿ ಗಾಂಧೀಜಿಯವರ ಪ್ರಭಾವಕ್ಕೆ ದಂಪತಿಗಳು ಒಳಗಾದರು.

ಅಹಮದಾಬಾದಿನಿಂದ ಹಿಂತಿರುಗಿದ ನಂತರ ಶರ್ಮರು ಪೆನುಗೊಂಡೆ, ಗೂಟಿ ತಾಲೂಕು ಮುಂತಾದೆಡೆಗಳಲ್ಲಿ ಸಿ.ಆರ್. ಕೃಷ್ಣಮಾಚಾರಿ ಅವರೊಂದಿಗೆ ಪ್ರವಾಸ ಕೈಗೊಂಡಿದ್ದರು. ೧೯೨೨ರ ಫೆಬ್ರವರಿಯಿಂದ ೧೯೨೩ರ ಫೆಬ್ರವರಿವರೆಗೆ ಸೌ.ಇ.ಇ. IVರ ಸಂಪಾದನೆ ಹಾಗೂ ಪ್ರಕಟಣೆ ಕಾರ್ಯದಲ್ಲಿ ಹೊಸಕೋಟೆ ಕೃಷ್ಣಶಾಸ್ತ್ರಿಗಳೊಂದಿಗೆ ಕೆಲಸ ಮಾಡಲೆಂದು ಉದಕಮಂಡಲಕ್ಕೆ ನಿಯೋಜಿಸಲ್ಪಟ್ಟಿದ್ದರಿಂದ ಊಟಿಯಲ್ಲೇ ಇದ್ದು ಕೃಷ್ಣಶಾಸ್ತ್ರಿಗಳ ಕೆಲಸದಲ್ಲಿ ನೆರವಾದರು. ಇವರ ನೆರವನ್ನು ಕೃಷ್ಣಶಾಸ್ತ್ರಿಗಳು ಮುನ್ನುಡಿಯಲ್ಲಿ ದಾಖಲಿಸಿರುವುದು ಗಮನಾರ್ಹವಾಗಿದೆ. ಆದರೆ ೧೯೨೩ರ ಫೆಬ್ರವರಿಯಲ್ಲಿ ಶಾಸನ ಇಲಾಖೆಯು ಪ್ರಕಟಣೆಗಾಗಿ ತಾತ್ಕಾಲಿಕವಾಗಿ ರೂಪಿಸಿಕೊಂಡಿದ್ದ 'ತೆಲುಗು-ಕನ್ನಡ ರೀಡರ್' ಹುದ್ದೆ ರದ್ದಾದಾಗ ಶರ್ಮ ಅವರು ಅನಿವಾರ್ಯವಾಗಿ ಕೇಂದ್ರ ಶಾಸನ ಇಲಾಖೆಯನ್ನು ತ್ಯಜಿಸಬೇಕಾಯಿತು. ಇದು ಶಾಸನ ಇಲಾಖೆಗೆ ಆದ ನಷ್ಟವೆಂದೇ ಹೇಳಬೇಕು. ಶರ್ಮ ಅವರು ಈ ಇಲಾಖೆಯಲ್ಲಿದ್ದ ಅವಧಿಯಲ್ಲಿ "ಶಿಲಾಶಾಸನಗಳಲ್ಲಿ ಕಂಡು ಬಂದ ಕನ್ನಡ ಕವಿಗಳು" ಎಂಬ ಲೇಖನವನ್ನು ಕನ್ನಡದಲ್ಲಿ ಬರೆದಿದ್ದು, ಬಹಳ ಜಿಜ್ಞಾಸೆಯ ನಂತರ ಶಾಸನ ಇಲಾಖೆಯು ೧೯೨೩ರಲ್ಲಿ ಮೊದಲ ಬಾರಿಗೆ ಪ್ರಾದೇಶಿಕ ಭಾಷೆಯಲ್ಲಿದ್ದ ಈ ಲೇಖನವನ್ನು ತನ್ನ "ಮೆಮಾಯ್ರ್ಸ್" ಸರಮಾಲೆಯಲ್ಲಿ ಪ್ರಕಟಿಸಿದ್ದು ಗಮನಾರ್ಹವಾಗಿತ್ತು.

ಶರ್ಮರವರು ಶಾಸನ ಇಲಾಖೆಯಲ್ಲಿದ್ದಾಗಲೇ ಸ್ವಾತಂತ್ರ್ಯ ಚಳುವಳಿಯತ್ತ ಸೆಳೆಯಲ್ಪಟ್ಟಿದ್ದು, ಆಂಧ್ರದ ಸ್ವಾತಂತ್ರ್ಯ ಹೋರಾಟಗಾರರಾದ ಟಿ. ಪ್ರಕಾಶಂ ಅವರಂತಹವರ ಪ್ರಭಾವಕ್ಕೆ ಒಳಗಾಗಿದ್ದರು "ಗತಕಾಲವನ್ನು ಕೆದಕುವುದಕ್ಕೆ ಬದಲು ಕಣ್ಣ ಮುಂದೆ ನಿರ್ಮಾಣವಾಗುತ್ತಿರುವ ಚರಿತ್ರಾರ್ಹ ಘಟನೆಯಲ್ಲಿ ಪಾಲ್ಗೊಂಡು ಇತಿಹಾಸದ ಸೃಷ್ಟಿಕರ್ತನಾಗು" ಎಂದು ಟಿ. ಪ್ರಕಾಶಂರವರು ಶರ್ಮರಿಗೆ ಉದಕಮಂಡಲದ ಗೋದಾವರಿ ಭವನದಲ್ಲಿ ನೀಡಿದ ಸೂಚನೆ ಶರ್ಮರಲ್ಲಿ ದೇಶಪ್ರೇಮದ ಕಾರಂಜಿಯನ್ನೇ ಚಿಮ್ಮಿಸಿತು. ಈ ಹಿನ್ನೆಲೆಯಲ್ಲಿ ಕೇಂದ್ರಶಾಸನ ಇಲಾಖೆಯಲ್ಲಿ ಶರ್ಮರು ಕಳೆದುಕೊಂಡ ಹುದ್ದೆ ಅವರಿಗೆ ವರವೇ ಆಯಿತು. ಶರ್ಮರು ಮದ್ರಾಸಿನಲ್ಲಿದ್ದ ಅವಧಿಯಲ್ಲಿ ಬೆನಗಲ್ ರಾಮರಾವ್, ಪಂಜೆ ಮಂಗೇಶರಾವ್, ಗೋವಿಂದ ಪೈ ಅಂತಹವರ ಸಂಪರ್ಕ ಅಲ್ಲಿಯ ಸುಗುಣ ವಿಲಾಸಿ ಸಭೆಯಲ್ಲಿ ಲಭಿಸುವುದರೊಂದಿಗೆ ಅವರಲ್ಲಿದ್ದ ಕನ್ನಡ ಪ್ರೇಮ ಮತ್ತಷ್ಟು ಗಟ್ಟಿಯಾಗಲು ಸಾಧ್ಯವಾಯಿತು. ಅವರ ಸಂಪರ್ಕದಿಂದಾಗಿ ಗ್ರಾಮ ನಾಮಗಳ ಅಧ್ಯಯನದತ್ತ ಸೆಳೆಯಲ್ಪಟ್ಟ ಶರ್ಮರು ಮೈಸೂರು ರಾಜ್ಯದ ಎಂಟು ಜಿಲ್ಲೆಗಳ ಗ್ರಾಮನಾಮಗಳ ಅಧ್ಯಯನಮಾಡಲು ಸಾಧ್ಯವಾಯಿತು.

ಶಾಸನ ಇಲಾಖೆಯ ನೌಕರಿಯನ್ನು ಕಳೆದುಕೊಂಡ ಶರ್ಮರು ಊಟಿಯಿಂದ ಮದ್ರಾಸಿಗೆ ಬಂದು, ಅಲ್ಲಿ ಪ್ರಕಾಶಂರ 'ಸ್ವರಾಜ್ಯ' ಪತ್ರಿಕಾಲಯದ ಆಗುಹೋಗುಗಳಿಂದ ಪ್ರಭಾವಿತರಾದರು. ಮಿಗಿಲಾಗಿ ಇಂತಹ ಒಂದು ಪತ್ರಿಕೆಯನ್ನು ಕನ್ನಡದಲ್ಲೂ ತರಬೇಕೆಂದು ಹಂಬಲಿಸತೊಡಗಿದರು. ಅದೇ ಗುಂಗಿನಲ್ಲಿ ಮದ್ರಾಸಿನಿಂದ ಬೆಂಗಳೂರಿಗೆ ೧೯೨೩ರಲ್ಲಿ ಬಂದ ಶರ್ಮರು ದೇಶಿಯ ಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಲಾರಂಭಿಸಿದರು. ವಿದ್ಯಾಶಾಲೆಯಲ್ಲಿ ತುಂಟರ ಗುಂಪನ್ನು (ಕೋಲಾರ ಸಂಪದ್ಗಿರಿರಾವ್, ಕಂದಾಡೆ ಕೃಷ್ಣಯ್ಯಂಗಾರ್, ಕೆ.ಎಸ್. ಕೃಷ್ಣಯ್ಯರ್, ದ.ಕೃ. ಭಾರದ್ವಾಜಿ, ಕೈಲಾಸಂ, ಕೆ.ಎ. ವೆಂಕಟರಾಮಯ್ಯ, ಅ.ನ.ಕೃ. ಮುಂತಾದವರ ಗುಂಪು ಇದಾಗಿತ್ತು) ಕಟ್ಟಿ, ಶಾಲಾ ಪತ್ರಿಕೆಯನ್ನೂ ಆರಂಭಿಸಿ ದೇಶಪ್ರೇಮದ ವಾತಾವರಣವನ್ನು ಮೂಡಿಸಲು ಯತ್ನಿಸಿದರು. ಈ ಶಾಲೆಯಲ್ಲಿ ನಿಟ್ಟೂರು ಶ್ರೀನಿವಾಸರಾವ್, ಕೆ. ನಂಜುಂಡಯ್ಯ, ಎ.ಕೆ. ಪುಟ್ಟರಾವ್, ಕೆ.ಎಲ್. ಸುಬ್ಬರಾವ್ ಮುಂತಾದವರು ಶಿಕ್ಷಕರಾಗಿದ್ದು, ದೇಶಾಭಿಮಾನದ ಅಲೆ ಎಲ್ಲೆಡೆ ಅಬ್ಬರಿಸಲಾರಂಭಿಸಿತು. ಶರ್ಮರು ಕಾಂಗ್ರೆಸ್ ಸಮಿತಿಯ ಸದಸ್ಯರೂ ಆಗುವುದರೊಂದಿಗೆ ದೇಶಸೇವೆಗೆ ಕಂಕಣಬದ್ಧರಾದರು. ಬೆಳಗಾವಿಯಲ್ಲಿ ೧೯೨೪ರಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನಕ್ಕಾಗಿ ರಚಿಸಲ್ಪಟ್ಟ 'ಕರ್ನಾಟಕ ಕೈಪಿಡಿ' ಗ್ರಂಥದ ಇತಿಹಾಸ ಭಾಗವನ್ನು ಬರೆದ ಕೀರ್ತಿ ಶರ್ಮರದಾಗಿತ್ತು. ಬೆಳಗಾವಿ ಅಧಿವೇಶನದಲ್ಲಿ ರಾಜಮ್ಮನವರ ಸಂಗೀತ ಕಚೇರಿಯನ್ನು ಗಾಂಧೀಜಿಯವರ ಅಪೇಕ್ಷೆಯಂತೆ ಏರ್ಪಡಿಸಲಾಗಿತ್ತು. ಇದರಿಂದಾಗಿ ಶರ್ಮದಂಪತಿಗಳಿಗೆ ಗಾಂಧೀಜಿಯವರ ನಿಕಟ ಸಂಪರ್ಕ ಲಭಿಸಿತು. ಟಿ. ಪ್ರಕಾಶಂರಂತೆ ತಾವೂ ಪತ್ರಿಕೆಯನ್ನು ಆರಂಭಿಸಬೇಕೆಂಬ ಆಶಯವನ್ನು ಹೊಂದಿದ್ದ ಶರ್ಮರು ತಮ್ಮ ಮನದಾಸೆಯನ್ನು ಗಾಂಧೀಜಿಯವರ ಬಳಿ ನಿವೇದಿಸಿಕೊಂಡರು. ಗಾಂಧೀಜಿಯವರಿಂದ ಹಸಿರು ನಿಶಾನೆ ಲಭಿಸಿತು.

ಅಂದಿನ ದಿನಗಳಲ್ಲಿ ಜನಜಾಗೃತಿ ಮೂಡಿಸುವ ಕನ್ನಡ ಪತ್ರಿಕೆಗಳ ಅಗತ್ಯವಿತ್ತು. ತುಮಕೂರಿನ ವಕೀಲ ಕೆ. ರಂಗಯ್ಯಂಗಾರ್ ನಡೆಸುತ್ತಿದ್ದ 'ಮೈಸೂರು ಕ್ರಾನಿಕಲ್' ವಾರಪತ್ರಿಕೆಗೆ ಈಗಾಗಲೇ ಲೇಖನ ಬರೆಯುತ್ತಿದ್ದ ಶರ್ಮರು ೧೯೨೫ ಆಗಸ್ಟ್ ೨ರಂದು ಆ ಪತ್ರಿಕೆಯ ಜವಾಬ್ದಾರಿಯನ್ನೂ ಹೊತ್ತರು. ತತ್ಪರಿಣಾಮವಾಗಿ ಕೆಲವೇ ವಾರಗಳಲ್ಲಿ ಅದು "ವಿಶ್ವ ಕರ್ನಾಟಕ" ವಾಗಿ ಪ್ರಕಟವಾಗಲಾರಂಭಿಸಿತು. ಗಾಂಧೀ ತತ್ವದ ಪ್ರಚಾರ, ದೇಶದ ಸ್ವಾತಂತ್ರ್ಯ, ಕರ್ನಾಟಕದ ಏಕೀಕರಣ, ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಅಭ್ಯುದಯವನ್ನೇ ಕಾರ್ಯೋದ್ದೇಶವನ್ನಾಗಿಸಿಕೊಂಡು ಆರಂಭಗೊಂಡ ಶರ್ಮರ "ವಿಶ್ವಕರ್ನಾಟಕ" ವಾರಪತ್ರಿಕೆ ತನ್ನ ಧ್ಯೇಯೋದ್ದೇಶಗಳ ಈಡೇರಿಕೆಗಾಗಿ ಸಂಸ್ಥಾನಿಕ ಸರ್ಕಾರಕ್ಕೆ 'ವಾರ್' (WAR) ಪತ್ರಿಕೆ' ಆಗಿತ್ತೆಂದು ಶರ್ಮ ದಾಖಲಿಸಿದ್ದಾರೆ. ಶರ್ಮರ ಆಗಮನದಿಂದ ಕರ್ನಾಟಕದ ಪತ್ರಿಕೋದ್ಯಮ ರಂಗದಲ್ಲಿ ಹೊಸ ಆಯಾಮವೇ ಸೃಷ್ಟಿಯಾಯಿತು. ಜನಸಾಮಾನ್ಯರ ಆಶಯವನ್ನು ಬಿಂಬಿಸುವ, ಜನನಾಡಿಯನ್ನು ಮಿಡಿಯುವ ಸಾಧನವಾಗಿ ಅಭಿವ್ಯಕ್ತಗೊಳ್ಳಲಾರಂಭಿಸಿದ ಈ ಪತ್ರಿಕೆ ಬಹುಬೇಗ ನಾಡಿನುದ್ದಗಲಕ್ಕೂ ಜನಮೆಚ್ಚುಗೆ ಗಳಿಸಿತು. ಬಿ.ಎಂ.ಶ್ರೀ, ಕುವೆಂಪು, ಹೊಸಕೊಪ್ಪ ಕೃಷ್ಣರಾಯರಂತಹವರು ಈ ಪತ್ರಿಕೆಯ ಚಂದದಾರರಾಗಿದ್ದರು. ಕೆ. ಸಂಪದ್ಗಿರಿರಾವ್, ಕಂದಾಡೆ ಕೃಷ್ಣರಾವ್, ಅ.ನ.ಕೃ ರಂತಹವರು ಶರ್ಮರ ಹಿಂದಿದ್ದು, ನಿಟ್ಟೂರು ಶ್ರೀನಿವಾಸರಾಯರಂತಹವರ ಬೆಂಬಲವೂ ಇತ್ತು. 'ವಿಶ್ವಕರ್ನಾಟಕ' ಪತ್ರಿಕೆಯ ಸ್ವರೂಪ, ವಿನ್ಯಾಸ, ಅಂಕಣ ಕಲ್ಪನೆ, ಸ್ತಂಭ ವಿಭಜನೆ, ವಿಷಯ ವೈವಿಧ್ಯತೆ, ಪ್ರಾದೇಶಿಕ, ರಾಷ್ಟ್ರೀಯ, ಅಂತರಾಷ್ಟ್ರೀಯ, ಮಹತ್ವದ ವಿಷಯಗಳಿಗೆ ಸೂಕ್ತ ಆದ್ಯತೆ ಮುಂತಾದ ಹಲವಾರು ಅಂಶಗಳಿಗೆ ನಿಶ್ಚಿತ ರೂಪು ನೀಡುವ ಮೂಲಕ ಪತ್ರಿಕಾರಂಗದಲ್ಲಿ ಗಣನೀಯ ಸುಧಾರಣೆ ತರುವ ಮೂಲಕ 'ಪತ್ರಿಕಾ ಭೀಷ್ಮ' ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ನಾಡಿನ ಸ್ವಾತಂತ್ರ್ಯ ಹೋರಾಟವನ್ನು ಜನಮುಖಿಗೊಳಿಸುವ ಆಶಯವನ್ನು ಹೊಂದಿದ್ದ ಶರ್ಮರು, ಅನಾರೋಗ್ಯದಿಂದ ಬಳಲುತಿದ್ದ ಗಾಂಧೀಜಿ ೧೯೨೬ರಲ್ಲಿ ನಂದಿಬೆಟ್ಟದಲ್ಲಿ ತಂಗಿದ್ದಾಗ ಅವರ ದೈನಂದಿನ ವಿವರ ನೀಡಲು ಮುಂದಾದರೆ, ೧೯೨೭ರಲ್ಲಿ ಖಾದಿ ಪ್ರಚಾರಕ್ಕಾಗಿ ಕರ್ನಾಟಕದಲ್ಲಿ ಪ್ರವಾಸ ಕೈಗೊಂಡಿದ್ದ ಗಾಂಧೀಜಿಯವರ ಕಾರ್ಯಕ್ರಮಗಳ ವರದಿಗೆ ವಿಶೇಷ ಮಹತ್ವ ನೀಡಿದ್ದರು. ಅದೇ ವರ್ಷ ನಡೆದ ಕಣಿಯರ ಚಳುವಳಿ, ಬೆಂಗಳೂರಿನ ಬಿನ್ನಿಮಿಲ್ ಗಲಭೆಗಳಿಗೂ ಶರ್ಮರು ಗಮನ ನೀಡಿ ವಿಶೇಷ ವರದಿ ಪ್ರಕಟಿಸಿದ್ದರು, ೧೯೨೮ರಲ್ಲಿ ಜರುಗಿದ ಸುಲ್ತಾನಪೇಟೆ ಗಣಪತಿ ಗಲಭೆ ಬಗ್ಗೆ ನಿಷ್ಪಕ್ಷಪಾತ ವರದಿ ನೀಡುವುದರ ಮೂಲಕ ಸರ್ಕಾರದ ಧೋರಣೆಯನ್ನು ಉಗ್ರವಾಗಿ ವಿರೋಧಿಸಿದರು. ಇದರ ಪರಿಣಾಮವಾಗಿ ಪತ್ರಿಕೆಯನ್ನು ಸುಮಾರು ೨೦ ದಿನಗಳಷ್ಟು ಕಾಲ ಸರ್ಕಾರ ನಿರ್ಬಂಧಿಸಿತ್ತು. ೧೯೨೯ರಲ್ಲಿ ಪತ್ರಿಕಾ ಕರಾಳ ಶಾಸನವನ್ನು ಉಗ್ರವಾಗಿ ಟೀಕಿಸಿದರು. ೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹ, ೧೯೩೧ರಲ್ಲಿ ಕರನಿರಾಕರಣೆ ಹಾಗೂ ವೈಯಕ್ತಿಕ ಸತ್ಯಾಗ್ರಹಗಳ ಪರವಾಗಿ ಪತ್ರಿಕೆ ಸಾಕಷ್ಟು ಪ್ರಚಾರ ನೀಡಿತು. ೧೯೩೧ರಲ್ಲಿ ಯುಗಾದಿ ಸಂಚಿಕೆಯನ್ನು ಹೊರತಂದು ನೂತನ ಸಂಪ್ರದಾಯಕ್ಕೆ ನಾಂದಿ ಹಾಡಿದರು. ಈ ಚಳುವಳಿಯ ಸಂದರ್ಭದಲ್ಲಿ ಶರ್ಮರ ಮನೆ ಸ್ವಲ್ಪ ಹೆಚ್ಚು ಕಡಿಮೆ ಕಾಂಗ್ರೆಸ್ ಕಚೇರಿಯೇ ಆಗಿತ್ತು.

ಶರ್ಮರ ನಿರಂತರ ಪರಿಶ್ರಮ, ಸತತ ಹೋರಾಟಗಳಿಂದಾಗಿ 'ವಿಶ್ವಕರ್ನಾಟಕ' ಪತ್ರಿಕೆಯು ೧೬-೭-೧೯೩೪ರಿಂದ ದಿನಪತ್ರಿಕೆಯಾಗಿ ಪ್ರಕಟಗೊಳ್ಳುವುದರ ಮೂಲಕ ದೇಶದ ಸ್ವಾತಂತ್ರ್ಯ. ಕರ್ನಾಟಕದ ಏಕೀಕರಣ ಚಳುವಳಿಗಳಲ್ಲಿ ಮತ್ತಷ್ಟು ಪರಿಣಾಮಕಾರಿಯಾಗಿ ಪಾತ್ರವಹಿಸಲು ಸಾಧ್ಯವಾಯಿತು. ಈ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ನಿರ್ಭೀತ ವರದಿಗಳು ಸರ್ಕಾರವನ್ನು ಪೇಚಿಗೆ ಸಿಲುಕಿಸುತ್ತಿದ್ದು ಅಧಿಕಾರಿಗಳ ಬೆದರಿಕೆ ಆಮಿಷಗಳಿಗೆ ತಲೆಬಾಗದ ಶರ್ಮರ ಧೀಮಂತ ವ್ಯಕ್ತಿತ್ವ ಅನುಕರಣೀಯವಾಗಿತ್ತು. ಈ ಕಾರಣದಿಂದ ೧೯೩೫ರಲ್ಲಿ ಶರ್ಮರ ಪತ್ರಿಕೆ 'ಕರಿಪಟ್ಟಿ'ಗೆ ಸೇರಿ ನಿಷೇದಿಸಲ್ಪಟ್ಟಿತು. ಶರ್ಮರು ೧೯೩೫ರಲ್ಲಿ ರಾಷ್ಟ್ರೀಯ ಕಾಂಗ್ರೆಸಿನ ಸುವರ್ಣಮಹೋತ್ಸವದ ಅಂಗವಾಗಿ ಸ್ಮರಣ ಸಂಚಿಕೆಯನ್ನು ಹೊರತಂದರು. ಜನಪರ ನಿಲುವನ್ನು ಹೊಂದಿದ್ದ ಶರ್ಮರು ಜನಸಾಮಾನ್ಯರನ್ನು ಪ್ರತಿನಿಧಿಸಲು ೧೯೩೫ರಲ್ಲಿ ಆರಂಭಿಸಿದ 'ಬಡಬೋರೆಗೌಡ' ಅಂಕಣವು ನಿರೀಕ್ಷೆಗೂ ಮೀರಿ ಜನಾದರವನ್ನು ಗಳಿಸಿತು. ೧೯೩೮-೩೯ರಲ್ಲಿ ಪತ್ರಿಕೆಯು ವಿದುರಾಶ್ವತ್ಥ ಘಟನೆ, ಗೋಲಿಬಾರುಗಳಿಗೆ ಸಂಬಂಧಿಸಿದಂತೆ ಪ್ರಕಟಿಸಿದ ವಿವರವಾದ ವರದಿಯು ಅಂದಿನ ಸರ್ಕಾರವನ್ನು ಇಕ್ಕಟ್ಟಿನಲ್ಲಿ ಸಿಕ್ಕಿಸಿತು.

ಸಂಸ್ಥಾನದ ಸರ್ಕಾರದೊಂದಿಗೆ ಜವಾಬ್ದಾರಿ ಸರ್ಕಾರಕ್ಕಾಗಿ ಒತ್ತಾಯ ಹೇರುವುದರ ಮೂಲಕ ಸರ್ಕಾರಕ್ಕೆ ಸಿಂಹಸ್ವಪ್ನವಾಗಿದ್ದ ಈ ಪತ್ರಿಕೆಗೆ ೧೯೩೪-೩೭ರ ಅವಧಿಯಲ್ಲಿ ಮೂರು ಬಾರಿ ಎಚ್ಚರಿಕೆ ನೋಟಿಸನ್ನು ನೀಡಿದ್ದು, ೧೯೩೭ರಿಂದ ಸರ್ಕಾರ ಜಾಹಿರಾತು ನೀಡುವುದನ್ನು ನಿಲ್ಲಿಸಿತು. ಅನಾರೋಗ್ಯದಿಂದಾಗಿ ಶರ್ಮರು ೧೯೪೧ರಲ್ಲಿ ಹಾಸಿಗೆ ಹಿಡಿದಾಗ, ಅವರ ಆಪ್ತ ಮಿತ್ರ ಹಾಗೂ ೧೯೩೭ರಷ್ಟು ಹಿಂದಿನಿಂದಲೇ ಅವರೊಂದಿಗೆ ಪತ್ರಿಕೆಗಾಗಿ ದುಡಿಯುತ್ತಿದ್ದ ಸಿದ್ಧನಹಳ್ಳಿ ಕೃಷ್ಣಶರ್ಮರು ಪತ್ರಿಕೆಯ ಸಂಪೂರ್ಣ ಹೊಣೆ ಹೊತ್ತರು. ಕ್ವಿಟ್ ಇಂಡಿಯಾ ಚಳುವಳಿಗೆ ಪತ್ರಿಕೆಯು ಪೂರ್ಣ ಬೆಂಬಲ ನೀಡಿತು. 'ಸಿಡಿಲಮರಿ' ಪತ್ರವನ್ನು ಪ್ರಕಟಿಸಿದ್ದಕ್ಕಾಗಿ ಪತ್ರಿಕೆಯನ್ನು ಮೂರು ತಿಂಗಳ ಕಾಲ ನಿರ್ಬಂಧಿಸಲಾಯಿತು. ೧೯೪೪ರಲ್ಲಿ ಮತ್ತೆ ಒಂದು ವರ್ಷ ಪತ್ರಿಕೆಯನ್ನು ನಿರ್ಬಂಧಿಸಲಾಯಿತು ೧೯೪೬ರಲ್ಲಿ ದಿವಾನ್ ಮಾಧವರಾಯ ರನ್ನು ಉದ್ದೇಶಿಸಿ ಬರೆದಿದ್ದ 'ಮಾಡಿದುಣ್ಣೋ ಮಾರಾಯ' ಲೇಖನಕ್ಕಾಗಿ ಪತ್ರಿಕೆಯನ್ನು ಮುಟ್ಟುಗೋಲು ಹಾಕಿಕೊಂಡು ಎರಡು ತಿಂಗಳು ಪತ್ರಿಕೆಯನ್ನು ನಿರ್ಬಂಧಿಸಲಾಯಿತು. ಮುಂದೆ ಪತ್ರಿಕೆ ಶಾಶ್ವತವಾಗಿ ಶರ್ಮರ ಕೈಯಿಂದ ೧೯೪೬ರಲ್ಲಿ ಜಾರಿಹೋಯಿತು. ಈ ನಡುವೆ ೧೯೪೩ರಲ್ಲಿ ಮೈಸೂರಿನಲ್ಲಿ ಜರುಗಿದ 'ಮೈಸೂರು ಸಂಸ್ಥಾನದ ಪತ್ರಿಕೋದ್ಯೋಗಿಗಳ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಶರ್ಮರು ಪತ್ರಿಕೋದ್ಯಮದ ಮೂಲೋದ್ದೇಶ ಲೋಕಕಲ್ಯಾಣವಾಗಿದ್ದು, ಓದುಗರಲ್ಲಿ ಸಾಂಸ್ಕೃತಿಕ ಅರಿವು, ರಾಜಕೀಯ ಒಲವು, ನಾಗರೀಕ ತಿಳಿವು, ಜನಪರ ಒಲವನ್ನು ಮೂಡಿಸುವುದೇ ಪತ್ರಿಕೆಗಳ ಧ್ಯೇಯವಾಗಬೇಕೆಂದು ಕರೆ ಇತ್ತರು. ಮುಂದೆ ಸಂಸ್ಥಾನದಲ್ಲಿ ಜರುಗಿದ "ಮೈಸೂರು ಚಲೋ" ಚಳುವಳಿಯಲ್ಲಿ ಭಾಗವಹಿಸಿದ ಶರ್ಮರು ಬಂಧಿಸಲ್ಪಟ್ಟು ಸೆರೆಮನೆ ಸೇರಿದರು.

ಸುಮಾರು ಎರಡು ದಶಕಗಳ ಮೇಲೊಂದು ವರ್ಷದಷ್ಟು ಅವಧಿ ಜನಮನವನ್ನು ಸೂರೆಗೊಂಡ "ವಿಶ್ವಕರ್ನಾಟಕ" ಪತ್ರಿಕೆಯಲ್ಲಿ ಶರ್ಮರು ಪ್ರಕಟಿಸಿದ ಸತ್ಯನಿಷ್ಠ ವರದಿಗಳು ಸಾವಿರಾರು ; ನಾಡು, ನುಡಿ, ಸಂಸ್ಕೃತಿ, ಸಾಹಿತ್ಯ, ಕಲೆ, ಸಂಗೀತಾ, ಶಾಸನ, ಸಂಶೋಧನೆ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ರಚಿಸಿ ಪ್ರಕಟಿಸಿದ ಲೇಖನಗಳು ಹಲವಾರು. ಶರ್ಮರು ತಮ್ಮ ಪತ್ರಿಕೆಯ ಮೂಲಕ ಕನ್ನಡಿಗರನ್ನು ಸ್ವದೇಶಿ ಚಳುವಳಿ, ಸ್ವಾತಂತ್ರ್ಯ

ಸಂಗ್ರಾಮಗಳತ್ತ ಸೆಳೆಯುವಲ್ಲಿ ಯಶಸ್ವಿಯಾದುದು ಮಹತ್ವದ ಅಂಶವಾಗಿತ್ತು. ಈ ಅವಧಿಯಲ್ಲಿ ಶರ್ಮರವರ ನಾಲ್ಕಾರು ಲೇಖನ ಸಂಕಲನಗಳೂ ಪ್ರಕಟಗೊಂಡವು. ಹಸ್ತಪ್ರತಿಗಳ ಸಂಗ್ರಹದಲ್ಲೂ ನಿಸ್ಸೀಮರಾಗಿದ್ದ ಶರ್ಮರು ರಾಮರಾಯನ ಬಖೈರು, ಹೈದರನಾದರೆ ಮುಂತಾದವುಗಳನ್ನು ಸಂಪಾದಿಸಿ ಪ್ರಕಟಿಸಿದರು. ಸಿರಿಭೂವಲಯದ ಬಗ್ಗೆ ಆಸಕ್ತಿ ಹೊಂದಿದ್ದ ಇವರು ಅದನ್ನು ಉದ್ದೇಶಿಸಿ ಲೇಖನವನ್ನೂ ಬರೆದಿದ್ದರು.

'ವಿಶ್ವಕರ್ನಾಟಕ' ೧೯೪೬ರಲ್ಲಿ ಶರ್ಮರ ಹಿಡಿತದಿಂದ ದೂರವಾದ ಮೇಲೂ ಅವರು ನಾಡಿನ ಪ್ರಮುಖ ವಾರಪತ್ರಿಕೆಗಳಲ್ಲಿ, ಮಾಸಿಕಗಳಲ್ಲಿ ನಾಡಿನ ರಾಜಕಾರಣ, ಸಂಸ್ಕೃತಿ, ಸಾಹಿತ್ಯಗಳಿಗೆ ಸಂಬಂಧಿಸಿದಂತೆ ನಿರಂತರವಾಗಿ ಲೇಖನ ಬರೆಯುವುದರ ಮೂಲಕ ತಮ್ಮ ಲೇಖನಿಯನ್ನು ಚಿರನೂತನವಾಗಿ ಉಳಿಸಿಕೊಂಡಿದ್ದರು.

ಶರ್ಮ ಅವರು ೧೯೪೪-೫೧ರ ಅವಧಿಯಲ್ಲಿ ಬೆಂಗಳೂರು ನಗರಸಭಾ ಸದಸ್ಯರಾಗಿ ಸೇವೆ ಸಲ್ಲಿಸಿದರು. ನಗರದ ನೈರ್ಮಲ್ಯತೆ ಮತ್ತು ದೇವಾಲಯದ ರಕ್ಷಣೆಗೆ ವಿಶೇಷ ಗಮನ ನೀಡುವಂತೆ ಒತಾಯಿಸಿದ್ದ ಇವರು ಸಾರ್ವಜನಿಕ ಸೇವೆಗೆ ತಮ್ಮನ್ನು ಸಂಪೂರ್ಣ ಅರ್ಪಿಸಿಕೊಂಡಿದ್ದರು.

ಶರ್ಮ ಅವರು ಜೈಲಿನಲ್ಲಿದ್ದಾಗಲೇ, ಅವರನ್ನು ಕಾಸರಗೋಡಿನ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಯಿತು. ಸೆರೆಮನೆಯಿಂದ ಬಿಡುಗಡೆ ಹೊಂದಿ ಸಮ್ಮೇಳನದಲ್ಲಿ ಪಾಲ್ಗೊಂಡ ಶರ್ಮರು 'ಕನ್ನಡಕ್ಕೆ ಕನ್ನಡದ ಮೂಲಕವೇ ಮೋಕ್ಷ" ಎಂದು ಅಧ್ಯಕ್ಷ ಪೀಠದಿಂದ ಘೋಷಿಸಿದ ಇವರು ೧೯೪೭-೪೯ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಪರಿಷತ್ತಿನ ಗ್ರಂಥಭಂಡಾರ ಹಾಗೂ ಅಚ್ಚುಕೂಟಗಳು ಇವರ ಕಾಲದಲ್ಲಿ ಸುವ್ಯವಸ್ಥಿತಗೊಂಡವು. ೧೯೪೮ರಲ್ಲಿ ಗಾಂಧೀಜಿ ಹತ್ಯೆಗೆ ಈಡಾದಾಗ, ಸಾಹಿತ್ಯ ಪರಿಷತ್ತಿನ 'ಕನ್ನಡ ನುಡಿ' ಸಂಚಿಕೆಯನ್ನು 'ಗಾಂಧೀ ಸ್ಮರಣ ಸಂಚಿಕೆ'ಯಾಗಿ ಹೊರತಂದರು. ಪರಿಷತ್ತಿನಲ್ಲಿ ಸಂಶೋಧನ ವಿಭಾಗವನ್ನು ಆರಂಭಿಸಿದ ಇವರು ಶಾಸನ ವ್ಯಾಸಂಗಕ್ಕೆ ಅಗತ್ಯವಾದ ಶಾಸನಶಾಸ್ತ್ರ ತರಗತಿಯನ್ನು ಪರಿಷತ್ತಿನಲ್ಲಿ ಆರಂಭಿಸುವುದರ ಮೂಲಕ ಶಾಸನ ಅಧ್ಯಯನಕ್ಕೆ ಬೆಂಗಳೂರಿನಲ್ಲಿ ಸುಭದ್ರ ತಳಪಾಯ ಹಾಕಿದರೆಂದರೇ ಉತ್ಪ್ರೇಕ್ಷೆಯಾಗಲಾರದು. ರಾಷ್ಟ್ರೋತ್ಥಾನ ಪರಿಷತ್ತಿನೊಂದಿಗೂ ಒಡನಾಟ ಇಟ್ಟುಕೊಂಡಿದ್ದ ಇವರು ಅಲ್ಲೂ ಸಂಶೋಧನ ವಿಭಾಗವನ್ನು ಆರಂಭಿಸಿದರು. ಗಾಂಧಿ ಸಾಹಿತ್ಯ ಸಂಘ, ಲೋಕಮಾನ್ಯ ಸಂಘ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಮುಂತಾದ ಸಂಘ ಸಂಸ್ಥೆಗಳೊಂದಿಗೆ ಅವರು ನಿಕಟ ಸಂಬಂಧವನ್ನು ಹೊಂದಿದ್ದರು.

ಕರ್ನಾಟಕ ಏಕೀಕರಣ ಸಲಹಾ ಸಮಿತಿಯ ಅಧ್ಯಕ್ಷರ ಅಪೇಕ್ಷೆಯಂತೆ ಕಾರವಾರ, ಅಂಕೋಲಾ, ಭಟ್ಕಳ ಮುಂತಾದೆಡೆಗಳಲ್ಲಿ ಅವರೊಂದಿಗೆ ಪ್ರವಾಸ ಕೈಗೊಂಡಿದ್ದ ಶರ್ಮರು, ಏಕೀಕರಣಕ್ಕೆ ಸಂಬಂಧಿಸಿದಂತೆ ಹಲವಾರು ಲೇಖನಗಳನ್ನು ನಾಡಿನ ಪ್ರಧಾನ ಪತ್ರಿಕೆಗಳಿಗೆ ಬರೆದು ಜನ ಜಾಗೃತಿಯನ್ನುಂಟು ಮಾಡಿದರು.

ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸವನ್ನು ರಚಿಸಲು ರಾಜ್ಯ ಸರ್ಕಾರವು ಸಮಿತಿಯೊಂದನ್ನು ೧೯೫೧ರಲ್ಲಿ ರಚಿಸಿತು. ಈ ಸಮಿತಿಯ ಅಧ್ಯಕ್ಷರಾಗಿದ್ದ ಶರ್ಮರು ಮೊದಲ ಕಂತಾಗಿ ಕರ್ನಾಟಕದ ಸ್ವಾತಂತ್ರ ಸಂಗ್ರಾಮ (೧೮೦೦-೧೮೫೭) ಗ್ರಂಥವನ್ನು ಹೊರತಂದರಾದರೂ ಮುಂದೆ ಹಲವಾರು ಕಾರಣಗಳಿಂದಾಗಿ ಸಮಿತಿಯ ಕಾರ್ಯ ಸ್ಥಗಿತಗೊಂಡು ಶರ್ಮರಿಗೆ ನಿರಾಶೆಯುಂಟಾಯಿತು.

ರಾಜ್ಯ ಸರ್ಕಾರ ರಚಿಸಿದ್ದ ಕನ್ನಡ ಬೆರಳಚ್ಚು ಯಂತ್ರ ಸಮಿತಿಯ ಸದಸ್ಯರೂ ಆಗಿದ್ದ ಇವರು ಬೆರಳಚ್ಚು ಯಂತ್ರದ ವಿನ್ಯಾಸವನ್ನು ರೂಪಿಸಲು ನೆರವಾದರು. ಶತಾಯುಷಿಗಳಾದ ಸರ್ ಎಂ. ವಿಶ್ವೇಶ್ವರಯ್ಯನವರಿಗೆ ೧೯೬೦ರಲ್ಲಿ ಶತಮಾನೋತ್ಸವ ಆಚರಿಸಲು ಸರ್ಕಾರ ರೂಪಿಸಿದ ಶತಮಾನೋತ್ಸವ ಸಮಿತಿಯ ಅಧ್ಯಕ್ಷರಾಗಿದ್ದ ಶರ್ಮರು ವಿಶ್ವೇಶ್ವರಯ್ಯ ನವರಿಗೆ ಸಂಬಂಧಿಸಿದ ೧೦೦೦ಕ್ಕೂ ಹೆಚ್ಚು ಛಾಯಾಚಿತ್ರಗಳ ಪ್ರದರ್ಶನ ಏರ್ಪಡಿಸಿ ತಮ್ಮ ಗೌರವವನ್ನು ಸಲ್ಲಿಸಿದರು.

೧೯೬೨ರ ವೇಳೆಗಾಗಲೇ ಮಿಥಿಕ್ ಸೊಸೈಟಿಯೊಂದಿಗೆ (ಬೆಂಗಳೂರು) ತಮ್ಮನ್ನು ಗುರುತಿಸಿಕೊಂಡಿದ್ದ ಶರ್ಮರು ೧೯೬೯-೭೩ರ ಅವಧಿಯಲ್ಲಿ ಮಿಥಿಕ್ ಸೊಸೈಟಿಯ ಅಧ್ಯಕ್ಷರಾಗಿದ್ದರು. ಈ ಅವಧಿಯಲ್ಲಿ ಸಂಸ್ಥೆಯ ಗ್ರಂಥಾಲಯವನ್ನು ಸುವ್ಯವಸ್ಥಿತಗೊಳಿಸಲು ಸೂಕ್ತಕ್ರಮ ಕೈಗೊಂಡರು.

ಶರ್ಮ ಅವರು ನಾಡು-ನುಡಿಗೆ ಸಲ್ಲಿಸಿದ ಸೇವೆಯನ್ನು ಗುರುತಿಸಿದ ರಾಜ್ಯ ಸರ್ಕಾರ ಅವರಿಗೆ ೧೯೬೯ರಲ್ಲಿ 'ರಾಜ್ಯಪ್ರಶಸ್ತಿ'ಯನ್ನು ನೀಡಿತಾದರೂ ಸರ್ಕಾರದ ಧೋರಣೆಯನ್ನು ವಿರೋಧಿಸಿದ ಶರ್ಮರು, ಪ್ರಶಸ್ತಿಯನ್ನು ಸ್ವೀಕರಿಸದೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದರು. ನಿರಂತರ ಸಾಹಿತ್ಯ ಸೇವಾ ನಿರತರಾಗಿದ್ದ ಶರ್ಮರು ೧೯೬೭ರಿಂದ ಕನ್ನಡ ನುಡಿಯಲ್ಲಿ ನೂರಾರು ಲೇಖನಗಳನ್ನು ಬರೆದಿದ್ದರು. ಮಂಡ್ಯದಲ್ಲಿ ೧೯೭೦ರಲ್ಲಿ ಜರುಗಿದ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದರು. ಅದೇ ವರ್ಷ ೭೫ ವಸಂತ ತುಂಬಿದ ಶರ್ಮರಿಗೆ ನಗರದ ಜನತೆ ಸನ್ಮಾನಿಸಿ 'ಸ್ವಾತಂತ್ರ್ಯಯೋಧ' ಎಂಬ ಬಿರುದನ್ನು ನೀಡಿ ಗೌರವಿಸಿತು. ಅದೇ ವರ್ಷ (೧೯೭೦) ನಾಟಕ ಶಿರೋಮಣಿ ಎ.ವಿ. ವರದಾಚಾರ್ಯರ ಶತಮಾನೋತ್ಸವ ಸಮಿತಿಯ ಅಧ್ಯಕ್ಷರಾಗಿದ್ದ ಶರ್ಮರು ಅಭಿನಂದನ ಗ್ರಂಥವನ್ನು ಸಂಪಾದಿಸಿ ಪ್ರಕಟಿಸಿದರು. ಶರ್ಮ ಅವರ ಮಡದಿ, ಸಾಹಿತಿ, ಸಂಗೀತ ಶಾರದೆ, ದೇಶಪ್ರೇಮಿಯಾಗಿದ್ದ 'ತಿರುಮಲೆ ಭಾರತಿ' ಅವರಿಗೆ ಕರ್ನಾಟಕ ಲೇಖಕಿಯರ ಸಂಘವು ೧೯೭೨ರಲ್ಲಿ "ಭಾರತಿ" ಅಭಿನಂದನ ಗ್ರಂಥವನ್ನು ಸಲ್ಲಿಸಿ ಸನ್ಮಾನಿಸಿದಾಗ ಸಂತೋಷ ಪಟ್ಟವರಲ್ಲಿ ಶರ್ಮ ಮೊದಲಿಗರಾಗಿದ್ದರು. ಮಿಥಿಕ್ ಸೊಸೈಟಿಗೆ ಶರ್ಮರು ಅಧ್ಯಕ್ಷರಾಗಿದ್ದ ಅವಧಿಯಲ್ಲೇ ೧೯೭೩ರಲ್ಲಿ ಮಿಥಿಕ್ ಸೊಸೈಟಿಯ ವಜ್ರಮಹೋತ್ಸವವನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಆ ಸಂದರ್ಭದಲ್ಲಿ ಶರ್ಮರು ಮಾಡಿದ ಪ್ರಾಸ್ತವಿಕ ಭಾಷಣ ವಿದ್ವತ್‌ಪೂರ್ಣವಾಗಿತ್ತು.

ಹೀಗೆ ಬಾಳಿನುದ್ದಕ್ಕೂ ನಾಡು ನುಡಿಗಾಗಿ ಅರ್ಪಣಾ ಮನೋಭಾವ ದಿಂದ ದುಡಿದ ಶರ್ಮರಿಗೆ ಆತ್ಮೀಯ ಮಿತ್ರ ಸಿದ್ದನಹಳ್ಳಿ ಕೃಷ್ಣ ಶರ್ಮರ ಅಗಲಿಕೆಯ ಆಘಾತವನ್ನು ಎದುರಿಸುವುದು ದುಸಾಧ್ಯವೆನಿಸಿತು. ದಿವಂಗತ ಕೃಷ್ಣಶರ್ಮರಿಗಾಗಿ ಗಾಂಧಿ ಸಾಹಿತ್ಯ ಸಂಘದವರು ಏರ್ಪಡಿಸಿದ್ದ ಶ್ರದ್ಧಾಂಜಲಿ ಸಭೆಯಲ್ಲಿ ಮಾರನೆಯ ದಿನ ಭಾಗವಹಿಸಬೇಕಾಗಿದ್ದ ಶರ್ಮರು ೨೦-೧೦-೧೯೭೩ ರಂದು ರಾತ್ರಿ ಪ್ರೀತಿಯ ಮಡದಿ ರಾಜಮ್ಮ (ಭಾರತಿ), ಪುತ್ರರಾದ ಶ್ರೀರಂಗಾಚಾರ್, ವೆಂಕಟಾಚಾರ್ ಹಾಗೂ ಅಸಂಖ್ಯಾತ ಬಂಧು-ಮಿತ್ರರನ್ನೊಳ

ಗೊಂಡಿದ್ದ ಇಹಲೋಕವನ್ನು ತ್ಯಜಿಸಿ ಪರಲೋಕದಲ್ಲಿದ್ದ ಗೆಳೆಯ ಕೃಷ್ಣಶರ್ಮರಲ್ಲಿ ಒಂದಾಗಿ ಪ್ರಕೃತಿಯಲ್ಲಿ ಬೆರೆತು ಹೋದರು.

**ತಿ.ತಾ. ಶರ್ಮರ ಸಾಹಿತ್ಯಾವಲೋಕನ**

ಪತ್ರಿಕಾರಂಗದ ಭೀಷ್ಮರಾಗಿದ್ದ ಶರ್ಮ ಅವರ ಬರಹದಲ್ಲಿಯ ವಿಷಯ ವೈವಿಧ್ಯತೆ ವಿಶಿಷ್ಟವಾಗಿದೆ. ಶಾಸನ, ಸಾಹಿತ್ಯ, ವಿಮರ್ಶೆ, ಇತಿಹಾಸ, ಸಂಶೋಧನೆ, ಜೀವನ ಚರಿತ್ರೆ, ಅನುವಾದ, ಹಸ್ತಪ್ರತಿ ಸಂಪಾದನೆ, ನೀಳ್ಗತೆ, ಹೀಗೆ ವಿವಿಧ ಪ್ರಕಾರಗಳಿಗೆ ಸೇರಿದ ಸುಮಾರು ನಲ್ವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದ ಶರ್ಮ ಅವರು "ಬುದ್ಧನಿಂದ ಬಾಪುವರೆಗೆ" ಮಹಾನ್ ಕೃತಿಯನ್ನು ಸಿದ್ಧಪಡಿಸುವ ಮಹತ್ತರವಾದ ಯೋಜನೆಯನ್ನು ಹೊಂದಿದ್ದರಾದರು ಅದು ಈಡೇರಲಿಲ್ಲ. ಶರ್ಮರಲ್ಲಿದ್ದ ದೇಶಾಭಿಮಾನ, ಸ್ವಾತಂತ್ರ್ಯ ಪ್ರೇಮದ ಮಿಡಿತವನ್ನು ಅವರ 'ವಿಕ್ರಾಂತ ಭಾರತ', 'ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ' (೧೮೦೦-೧೮೫೭) ಹಾಗೂ 'ವಿಚಾರ ಕರ್ನಾಟಕ' ಕೃತಿಗಳ ಮೂಲಕ ಅರಿಯಬಹುದಾಗಿದೆ. ಶರ್ಮರಿಗೆ ಇತಿಹಾಸ-ಸಂಶೋಧನೆಗಳಲ್ಲಿ ಇದ್ದ ಆಸಕ್ತಿಯನ್ನು ಅವರ "ಜಗನ್ಮೋಹನ ಬಂಗಲೆಯಿಂದ ವಿದುರಾಶ್ವಥದವರೆಗೆ", "ಚಾರಿತ್ರಿಕ ದಾಖಲೆಗಳು", "ಇತಿಹಾಸದ ಸಂದರ್ಭಗಳು" ಹಾಗೂ "ಮೈಸೂರು ಇತಿಹಾಸದ ಹಳೆಯ ಘಟಕಗಳು" ಗ್ರಂಥಗಳು ಪ್ರತಿಬಿಂಬಿಸುತ್ತವೆ. ಶರ್ಮರ ಶಾಸನ ವ್ಯಾಸಂಗವನ್ನು ಅವರ "ಶಿಲಾಶಾಸನಗಳಲ್ಲಿ ಕಂಡು ಬರುವ ಕನ್ನಡ ಕವಿಗಳು", "ವಿಚಾರ ಕರ್ನಾಟಕ" ಹಾಗೂ "ನಮ್ಮ ಜನ ನಡೆಸಿದ ಜೀವನ" ಕೃತಿಗಳು ಮಾರ್ದನಿಸುತ್ತವೆ. ಶರ್ಮರ ಸಾಹಿತ್ಯ ಜ್ಞಾನವನ್ನು ಅವರ "ಕನ್ನಡ ಗದ್ಯದ ಕಥೆ", "ಪ್ರಗತಿ ಶೀಲ ಸಾಹಿತ್ಯ", "ಪ್ರೇಮಫಲ", "ಹೂಬುಟ್ಟಿ" ಮುಂತಾದ ಸಂಕಲನಗಳು ನಿರೂಪಿಸಿದರೆ, ಅವರಲ್ಲಿದ್ದ ವಿಮರ್ಶನ ಸಾಮಾರ್ಥ್ಯವನ್ನು, ಅವರ "ಮಾಸ್ತಿಯವರ ಮನೋಧರ್ಮ" ಕೃತಿ ಚೆನ್ನಾಗಿ ನಿರೂಪಿಸುತ್ತದೆ. ಯುವಪೀಳಿಗೆಯಲ್ಲಿ ರಾಷ್ಟ್ರಾಭಿಮಾನ, ಪರಂಪರೆಯ ಬಗ್ಗೆ ಗೌರವ ಮೂಡಿಸುವ ಸಲುವಾಗಿ ಶರ್ಮರು "ಶ್ರೀ ಕೃಷ್ಣ", "ಅಶೋಕ ಚಕ್ರವರ್ತಿ", "ಅಕ್ಬರ್" ಮುಂತಾದ ಪೌರಾಣಿಕ-ಚಾರಿತ್ರಿಕ ವ್ಯಕ್ತಿಗಳ ಜೀವನ ಚರಿತ್ರೆಯನ್ನಷ್ಟೇ ಅಲ್ಲದೆ "ಮೋಕ್ಷಗುಂಡಂ ಸರ್ ಎಂ. ವಿಶ್ವೇಶ್ವರಯ್ಯ", "ಬಾಲಗಂಗಾಧರ ತಿಲಕ್", "ಸರ್ದಾರ್ ವಲ್ಲಭಬಾಯಿ ಪಟೇಲ್", "ಸುಭಾಷ್ ಚಂದ್ರಭೋಸ್", "ಲಾಲಾ ರಜಪತ್‌ರಾಯ್", "ಇಂದಿರಾಗಾಂಧಿ" ಮುಂತಾದ ರಾಷ್ಟ್ರನಾಯಕರ ಜೀವನ ಚರಿತ್ರೆಗಳನ್ನು ರಚಿಸಿರುವುದು ಯುವಶಕ್ತಿಯ ಮೇಲೆ ಅವರಿಗಿದ್ದ ಭರವಸೆಯನ್ನು ಪ್ರತಿಬಿಂಬಿಸುತ್ತದೆ. ಹಸ್ತಪ್ರತಿ ಸಂಪಾದನೆಯಲ್ಲೂ ವಿಶೇಷ ಆಸಕ್ತಿ ಹೊಂದಿದ್ದ ಶರ್ಮರು "ರಾಮರಾಯನ ಬಖೈರು", "ಹೈದರ್‌ನಾಮೆ", "ಕಂಠೀರವ ನರಸರಾಜ ವಿಜಯಿ" ಮುಂತಾದ ಹಸ್ತಪ್ರತಿಗಳ ಸಂಪಾದನೆಗೆ ಮುಂದಾಗಿದ್ದು "ಸಿರಿಭೂವಲಯ" ಹಸ್ತಪ್ರತಿಯ ಬಗ್ಗೆ ವಿಶೇಷ ಆಸ್ಥೆ ಹೊಂದಿದ್ದರು. ಉತ್ತಮ ಭಾಷಾಂತರಕಾರರೂ ಆಗಿದ್ದ ಶರ್ಮರು ವೇಲನ್ ಹಾಗೂ ನೆಹರೂರವರ ಆಂಗ್ಲಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಉತ್ತಮ ವಾಗ್ಮಿಗಳಾಗಿದ್ದ ಶರ್ಮರು ಅನೇಕ ಭಾಷಣಗಳು ಕೃತಿಗಳಾಗಿದ್ದು "ಪೀಟರ್ ಜಂಗ್" ಅಂತಹ ಒಂದು ಉದಾಹರಣೆಯಾಗಿದೆ, ಶ್ರೇಷ್ಠ ಭಾಷಣ ತರ್ಜುಮೆದಾರರೂ ಆಗಿದ್ದ ಶರ್ಮರು ಗಾಂಧೀಜಿ, ನೆಹರೂ, ರಾಜಾಜಿ, ಸರೋಜಿನಿನಾಯ್ಡು ಮುಂತಾದ ರಾಷ್ಟ್ರನಾಯಕರ ತರ್ಜುಮೆ ಭಾಷಣಕಾರರಾಗಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು.

ಶರ್ಮರ ಪ್ರಕಟಿತ ಸಾಹಿತ್ಯಕ್ಕಿಂತ ದುಪ್ಪಟ್ಟು ಅಪ್ರಕಟಿತ ಸಾಹಿತ್ಯ ಲಭ್ಯವಿದ್ದು, ಅವುಗಳ ಪ್ರಕಟಣೆ ಆದಷ್ಟು ಜಾಗ್ರತೆ ಆಗಬೇಕಾಗಿದೆ. ಶರ್ಮರ "ಕವಿಜನಾಶ್ರಯ" ಸಂಶೋಧನ ಯೋಜನೆ ಕಾರ್ಯರೂಪಕ್ಕೆ ಬರಬೇಕಾಗಿದೆ. ಶರ್ಮರಿಂದ ಪ್ರಕಟವಾದ "ವಿಶ್ವಕರ್ನಾಟಕ" ಪತ್ರಿಕೆಯ ಪ್ರತಿಗಳನ್ನು ಸಂಗ್ರಹಿಸಿ ಸಂರಕ್ಷಿಸಿಡಬೇಕಾಗಿದೆ. ಪತ್ರಿಕೋದ್ಯಮಕ್ಕೆ ಶರ್ಮರು ನೀಡಿರುವ ಕೊಡುಗೆಗಳನ್ನು ಪರಿಗಣಿಸಿ, ಶರ್ಮರ ಹೆಸರಲ್ಲಿ ಪ್ರಶಸ್ತಿಯೊಂದನ್ನು ಸ್ಥಾಪಿಸಿ ಕನ್ನಡ ಪತ್ರಿಕೋದ್ಯಮದ ಶ್ರೇಷ್ಠರಿಗೆ ಪ್ರತಿವರ್ಷ ಪತ್ರಿಕಾ "ಭೀಷ್ಮ ಪ್ರಶಸ್ತಿ" ನೀಡುವುದರ ಮೂಲಕ ಶರ್ಮರ ನೆನಪು ಸದಾ ಹಸಿರಾಗಿರುವಂತೆ ಮಾಡಬೇಕಾಗಿದೆ. ಮಿಗಿಲಾಗಿ ಶರ್ಮರ ಜೀವನ ಸಾಧನೆಯನ್ನು ಚಿರಸ್ಮರಣೀಯವಾಗಿಸಲು ಅವರ ಜೀವನಚರಿತ್ರೆಯನ್ನೊಳಗೊಂಡ ಉತ್ತಮ ಕೃತಿಯೊಂದರ ಅಗತ್ಯವಿದ್ದು, ಅಂತಹ ಕೃತಿಯೊಂದನ್ನು ರಚಿಸಿ ಪ್ರಕಟಿಸುವುದರ ಮೂಲಕ ಅವರಿಗೆ ಗೌರವ ಸಲ್ಲಿಸಬಹುದಾಗಿದ್ದು, ಅಂತಹ ಪ್ರಯತ್ನ ಆದಷ್ಟು ಜಾಗ್ರತೆ ಆಗಲೆಂದು ಆಶಿಸೋಣ.

❑

# ಶಂ.ಬಾ. ಜೋಶಿ

ಮಲ್ಲೇಪುರಂ ಜಿ. ವೆಂಕಟೇಶ

ಸತ್ಯಾನ್ವೇಷಕರಾದ ಶಂ.ಬಾ. ಜೋಶಿ ಅವರು ಕನ್ನಡದಲ್ಲೇ ಪ್ರಸಿದ್ಧರಾದ ಕೆಲವೇ ಶ್ರೇಷ್ಠದರ್ಜೆಯ ವಿದ್ವಾಂಸರಲ್ಲಿ ಒಬ್ಬರು. ಹಳೆ ತಲೆಮಾರು ಮತ್ತು ಹೊಸ ತಲೆಮಾರುಗಳನ್ನು ದಾಟಿಕೊಂಡು ಬಂದಿರುವ ಶಂ.ಬಾ. ಅವರು ಮೂಲತಃ ನಾಡು ನುಡಿ ಸಂಸ್ಕೃತಿಗಳ ಬಗೆಗೆ ಆಳವಾದ ಅಧ್ಯಯನವನ್ನು ನಡೆಸುತ್ತ ಬಂದಿರುವರು. ಸಂಶೋಧನೆಯನ್ನು ಜೀವನ ಉಸಿರನ್ನಾಗಿಯೂ, ಸತ್ಯದ ಆರಾಧನೆಯನ್ನಾಗಿಯೂ ನಡೆಸುತ್ತ ಬಂದಿರುವ ಸತ್ಯಾನ್ವೇಷಕರು.

ವ್ಯಕ್ತಿ

ಈಗಿನ ಬೆಳಗಾವಿ ಜಿಲ್ಲಾ ಸವದತ್ತಿ ತಾಲ್ಲೂಕಿನ ಗುರ್ಲಹೊಸೂರು (ಈಗ ಈ ಊರು ಇಲ್ಲ. ಮಲಪ್ರಭಾ ಪ್ರವಾಹದಿಂದ ಮುಳುಗಿ ಹೋಗಿದೆ) ಅಲ್ಲಿ 1896 ಜನವರಿ 4ರಂದು ಶಂ.ಬಾ. ಅವರು ಜನಿಸಿದರು. ತಂದೆ ಬಾಳದೀಕ್ಷಿತ, 'ಜೋಶಿ' ಮನೆತನದ ಹೆಸರು. ಹುಟ್ಟಿನ ಹೆಸರು ಶಂಕರ. ಹೀಗಾಗಿ: ಶಂಕರ ಬಾಳದೀಕ್ಷಿತ ಜೋಶಿ-ಶಂ.ಬಾ. ಎಂದೇ ಪ್ರಖ್ಯಾತಿ. ಗುರ್ಲಹೊಸೂರಿನಲ್ಲೆ ಏಳನೇ ವರ್ಗದಲ್ಲಿ ಓದು. ಬಾಳಾಜಿ ಕೃಷ್ಣ ಹಳೇಪೇಟೆ ಎಂಬುವವರು ಶಂ.ಬಾ. ಅವರ ಬಾಲ್ಯದ ಗುರುಗಳು. 1914ರಲ್ಲಿ ಮಲಪ್ರಭೆಗೆ ಮಹಾಪೂರ ಬಂದಾಗ ಗುರ್ಲಹೊಸೂರು ನೀರಿನ ಮಯವಾಯಿತು. ತಮಗೆ ಆಧಾರವಾಗಿದ್ದ ಮನೆ ಜಲಮಯ-ಊರಲು ನೆಲೆಯಿಲ್ಲ. ಚಿಕ್ಕಂದೇ ತಂದೆಯ ಸಾವು. ಆದ್ದರಿಂದ ತಮ್ಮ ಅಜ್ಜಿಯ ಮನೆಯಿದ್ದ ಪುಣೆಗೆ ಹೋದರು. ಪುಣೆಗೆ ಹೋದಾಗ ಅಣ್ಣ ಭಾನುದೀಕ್ಷಿತ ಜೋಶಿ ಪುರೋಹಿತಗಾರಿಕೆ ಮಾಡಿಕೊಂಡು ಇರಲು ಹೇಳಿದರು. ಆದರೆ, ಮನಸ್ಸು ಒಗ್ಗಲಿಲ್ಲ. ಈ ಮಧ್ಯೆಯಲ್ಲಿ ಲೋಕಮಾನ್ಯ ತಿಲಕರ ದರ್ಶನ; ಇದರಿಂದಾಗಿ ದೇಶ ಸೇವೆಯ ಹುಚ್ಚು ಹತ್ತಿಕೊಂಡಿತು. ಆದರೆ ಎಷ್ಟು ದಿನ ಬೇರೊಬ್ಬರ ಮನೆಯಲ್ಲಿ ಇರಲು ಸಾಧ್ಯ? ಅಲ್ಲಿಂದ ಧಾರವಾಡಕ್ಕೆ ಪ್ರಯಾಣ. ಸರಕಾರಿ ಟ್ರೈನಿಂಗ್ ಕಾಲೇಜ್ ಪ್ರವೇಶ. 1919ರಲ್ಲಿ 'ಟ್ರೈಂಡ್' ಕನ್ನಡ ಶಿಕ್ಷಕರಾಗಿ ರ್‍ಯಾಂಕ್ ವಿದ್ಯಾರ್ಥಿ; 1920ರಲ್ಲಿ ಬೆಳಗಾವಿ ಜಿಲ್ಲಾ ಚಿಕ್ಕೋಡಿಯಲ್ಲಿ ಪ್ರಥಮ ಬಾರಿಗೆ ಶಿಕ್ಷಕ ವೃತ್ತಿ. ತಿಲಕ್‌ರ ಮರಣದಿಂದ ಮಾನಸಿಕ ವೇದನೆ; ತಮ್ಮ ಆದರ್ಶದ ಭಾವ ಹೊರಟು ಹೋದದ್ದರ ಬಗೆಗೆ ನೋವು. ಈ ನೋವು ಮಾಯವಾಗುವಂತೆ ಚಿಕ್ಕೋಡಿಗೆ ಗಾಂಧೀಜಿ ಅವರ ಆಗಮನ; ಸ್ವಯಂಸೇವಕರಾಗಿ ದುಡಿಮೆ. ಗಾಂಧೀಜಿ ಅವರ ಬಗ್ಗೆ ಭಾವನಾತ್ಮಕವಾಗಿ ಹುಚ್ಚುಹತ್ತಿ ಅವರೊಡನೆಯೇ ಬೆಳಗಾವಿ-ಧಾರವಾಡದ ತನಕ ಪ್ರಯಾಣ. ಇದರ ಫಲ-ಸರ್ಕಾರದವರ ಕ್ರೂರ ದೃಷ್ಟಿ ಇವರ ಮೇಲೆ ಬಿದ್ದುದರಿಂದ ಚಿಕ್ಕೋಡಿಯಿಂದ ಉಗರಗೋಳಕ್ಕೆ ವರ್ಗಾವಣೆ. ಅಲ್ಲೆ ಕನ್ನಡ ಮಹಾಕಾವ್ಯಗಳ ಅಧ್ಯಯನ, ಪಡೆನುಡಿಗಳ ಆಸಕ್ತಿ. ಗೋವಿಂದ ಚುಳಕಿ ಅವರ ಸಹವಾಸ. ಸರಕಾರದ ವಶೀಲಿ ಹಿಡಿದು ಬದುಕುವುದಕ್ಕೆ ದುಸ್ಸಾಧ್ಯವಾಯಿತು. ಕುಗ್ರಾಮದಲ್ಲಿದ್ದು ವಿಶೇಷ ವ್ಯಾಸಂಗಕ್ಕೆ ಅನುಕೂಲ ಇಲ್ಲದೆ ಇದ್ದುದರಿಂದ, ಕೆಲಸಕ್ಕೆ ರಾಜೀನಾಮೆ; ಧಾರವಾಡಕ್ಕೆ ಪ್ರಯಾಣ; ಅಕ್ಕನ ಮನೆಯಲ್ಲಿ ತಂಗಿದ್ದು, ಮುದವೀಡು ಅವರು ನಡೆಸುತ್ತಿದ್ದ 'ಕರ್ನಾಟಕ ವೃತ್ತ' ಮತ್ತು 'ಧನಂಜಯ' ಪತ್ರಿಕೆಗಳಿಗೆ ಸೇರಿಕೊಂಡು ಲೇಖನ ವ್ಯವಸಾಯ ಮಾಡಿದರು. ಈ ಪತ್ರಿಕೆಗಳಲ್ಲಿ ಖಾದಿ, ಅಸ್ಪೃಶ್ಯೋದ್ಧಾರದ ಬಗೆಗೆ ಲೇಖನಗಳನ್ನು ಬರೆದರು. ಅಲ್ಲಿಂದ ದಿವಾಕರರ ಆದೇಶದಂತೆ ಕೆಲಕಾಲ 'ಕರ್ಮವೀರ'ದ ಸಂಪಾದಕರಾಗಿ ದುಡಿದರು. 1924ರಲ್ಲಿ ಬೆಳಗಾವಿಯಲ್ಲಿ ನಡೆದ ಮೊದಲ ಕರ್ನಾಟಕ ಏಕೀಕರಣ ಸಮಾವೇಶಕ್ಕೆ ಕಾರ್ಯದರ್ಶಿ; ಏಕೀಕರಣದ ಕೂಗಿಗೆ ಓಗೊಟ್ಟು ದುಡಿದರು. ಸಮಾಜಸೇವೆ, ಕ್ರಾಂತಿ ವಿಚಾರಗಳು ನಡೆಯುತ್ತಿದ್ದಾಗಲೇ ಕನ್ನಡನಾಡು-ನುಡಿಯ ಪ್ರಾಚೀನತೆಯ ಬಗೆಗೆ ಕುತೂಹಲ ಅಧ್ಯಯನ ನಡೆದೇ ಇತ್ತು. ಲೇಖನಗಳ ರಚನೆ ವೈವಿಧ್ಯವಾಗಿ ಸಾಗಿತ್ತು. ಆದರೆ, ಈ ಅಲೆದಾಟದಿಂದ ಒಂದು 'ಸ್ಥಿರನೆಲೆ' ಇಲ್ಲದಾಗುವ ಭೀತಿ; ತಾತ್ಕಾಲಿಕವಾಗಿ 1926-27ರ ಅವಧಿಯಲ್ಲಿ ಕರ್ನಾಟಕ ಹೈಸ್ಕೂಲಿನಲ್ಲಿ ಶಿಕ್ಷಕ ವೃತ್ತಿ ಕೈಗೊಂಡರು. 1928ರಿಂದ 1946ರ ನಿವೃತ್ತಿಯವರೆಗೂ 'ವಿಕ್ಟೋರಿಯಾ ಹೈಸ್ಕೂಲ್' (ಈಗಿನ ವಿದ್ಯಾರಣ್ಯ ಪ್ರೌಢಶಾಲೆ)ನಲ್ಲಿ ಕನ್ನಡ ಶಿಕ್ಷಕರಾಗಿ ನೇಮಕಗೊಂಡರು. ಹಲವು ವಿದ್ಯಾರ್ಥಿಗಳಿಗೆ ವಿದ್ಯಾದಾನ. ಸಮರ್ಥ ಶಿಷ್ಯರ ಬೆಳವಣಿಗೆಗೆ ಕಾರಣರಾದರು. ಸಾಹಿತ್ಯ ಭಂಡಾರದ ಮಾಲೀಕರಾದ ಮ. ಗೋವಿಂದರಾಯರು, ಕನ್ನಡ ಸಂಸ್ಕೃತಿ ಇಲಾಖೆಯ ಸಹ ನಿರ್ದೇಶಕರಾಗಿದ್ದ ವೆಂ.ಮು. ಜೋಶಿ, ಕೃಷಿ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿರುವ ವೀ.ಚ. ಹಿತ್ತಲಮನಿ ಹೀಗೆ ನೂರಾರು ಜನ ತರುಣರು ಶಂ.ಬಾ. ಅವರ ಸಮರ್ಥ ನಿರ್ದೇಶನದಲ್ಲಿ ತಯಾರಾದವರು. ಸ್ನೇಹ ಬಳಗವಂತೂ ಅಪಾರವಾಗಿತ್ತು. ಬೆಟಗೇರಿ ಕೃಷ್ಣಶರ್ಮ, ಚುಳಕಿ ಗೋವಿಂದರಾಯರು, ಶಿವರಾಮ ಕಾರಂತ, ವಿ. ಸೀತಾರಾಮಯ್ಯ, ದೇವುಡು ನರಸಿಂಹ ಶಾಸ್ತ್ರಿ, ಬಿಂದು ಮಾಧವ ಕುಲಕರ್ಣಿ, ಕ.ವೆಂ. ರಾಘವಾಚಾರ್ಯ, ವೇದಜ್ಞ ಗಣೇಶ ರಾಮಕೃಷ್ಣ ಉಗ್ರು, ಆರ್.ವಿ. ಜಾಗೀರದಾರ್, ಗೌರೀಶ ಕಾಯ್ಕಿಣಿ, ಬೀಚಿ, ಮುಂಬಯಿ ಕಡೆ ವಿಖ್ಯಾತ ಸಮಾಜಶಾಸ್ತ್ರಜ್ಞೆ ಇರಾವತಿ ಬಾಯಿ ಕರ್ವೆ, ವಿ.ಪ್ರ. ಲಿಮಯೆ, ಈ ಪಟ್ಟಿ ಹೀಗೆ ಬೆಳೆಯುತ್ತಾ ಹೋಗುತ್ತದೆ.

ಕನ್ನಡ-ಮರಾಠಿ ಎರಡೂ ಭಾಷೆಗಳಲ್ಲಿ ಅಧ್ಯಯನ ಮತ್ತು ಬರವಣಿಗೆ ನಡೆದುವು. ಈ ಮಧ್ಯೆ ಮದುವೆ ಆಯಿತು. ಹೆಂಡತಿಯನ್ನು ಜೊತೆಗೆ ಕಟ್ಟಿಕೊಂಡು ಬದುಕನ್ನೂ, ಬದುಕಿನೊಡನೆ ಬರುವ ಬವಣೆಯನ್ನೂ ನುಂಗಿದರು. ಬದುಕಿನ ಅತ್ಯಂತ ಕಷ್ಟದಲ್ಲಿ ತಮ್ಮ ಜೊತೆಗಾಗಿ ಉದ್ದಕ್ಕೂ ಸಹಕರಿಸಿಕೊಂಡು ಬಂದದ್ದನ್ನು ಕೃತಜ್ಞತೆಯಿಂದ ಸ್ಮರಿಸುತ್ತಾರೆ. ಗಂಡನು ಮಾಡುವ ಸಂಶೋಧನೆಯ ಬಗೆಗೆ ಗೌರವ; ಆ ವಿಷಯದಲ್ಲಿ ಸಹಕಾರ. ಮಕ್ಕಳು ಮೂರು ಜನ. ಎರಡನೆಯವರು ವಿಮಲ, ಮದುವೆಯಾಗಿ ಒಬ್ಬ ಮಗಳು ಇದ್ದಾಳೆ. ನರ್ಸ ತರಬೇತಿ; ಬಾಂಬೆಯಲ್ಲಿ ವಾಸ. ಮೊದಲನೆಯ ಹಾಗೂ ಕೊನೆಯವರು ಗಂಡು ಮಕ್ಕಳು. ಚಿಕ್ಕ ಮಗು ಮಧುಕರ ಜೋಶಿ ಅಂತಾರಾಷ್ಟ್ರೀಯ ವಿಜ್ಞಾನಿ, ಅಮೇರಿಕಾದಲ್ಲಿ ವಾಸ; ಹಿರಿಯ ಮಗ ಬಲ್ಲಾಳ ಜೋಶಿ ಬಾಂಬೆಯ ಸೀಬಾದಲ್ಲಿ ವಿಜ್ಞಾನ ವೃತ್ತಿ, ನಿವೃತ್ತನಾದ ಬಳಿಕ ಇವನೂ ಅಮೇರಿಕೆಯಲ್ಲಿ ಸಂಶೋಧನ ಕಾರ್ಯದಲ್ಲಿ ಮಗ್ನನಾಗಿರುತ್ತಾನೆ. ಈಗ ಇಬ್ಬರೂ ಡಾಕ್ಟರೇಟ್ ಮಾಡಿದವರು! ಯಾವುದು ಶಂ.ಬಾ. ಅವರಿಗೆ ಸಂದರ್ಭವಶದಿಂದ ಪದವೀಧರರಾಗಲು ಸಾಧ್ಯವಾಗಲಿಲ್ಲವೋ ಅದನ್ನು ಮಕ್ಕಳು ಮಾಡಿದ್ದು ಅವರಿಗೆ ಸಂತೋಷ ತಂದಿದೆ.

ತಮ್ಮ ಜೀವಿತದ ಮೊದಲು ಕನ್ನಡ ಸಂಸ್ಕೃತಿ-ಇತಿಹಾಸ-ಭಾಷೆಯ ಅಧ್ಯಯನಕ್ಕೆ ಮೀಸಲಿರಿಸಿದರು. ಇದಕ್ಕೂ ಮುನ್ನ ಅರವಿಂದ, ವಿವೇಕಾನಂದ ಕೃತಿಗಳ ಪ್ರಭಾವ; ಗಾಂಧೀಜಿ-ತಿಲಕ್ ರಾಷ್ಟ್ರಭಕ್ತಿಯ ಪ್ರಚೋದನೆ ಇವುಗಳೊಡನೆ ಬೆಳೆದರು. ಮೊದಲಲ್ಲಿ ಅರವಿಂದರ ತತ್ತ್ವಜ್ಞಾನದಿಂದ ಸ್ಫೂರ್ತರಾದ ಶಂ.ಬಾ. ಅವರು ಅರವಿಂದರ ಜೀವನವನ್ನು ಕುರಿತು ಮೊದಲು ಗ್ರಂಥ ರಚನೆ ಮಾಡಿದರು (1921). ಅದು ಅವರು ಮೊದಲು ಬರೆದ ಪುಸ್ತಕ. ರಂಗನಾಥ ದಿವಾಕರರು 'ಉಪನಿಷತ್ ರಹಸ್ಯ' ಎಂಬ ಇಂಗ್ಲಿಷಿನಲ್ಲಿ ಖ್ಯಾತವಾದ ಪುಸ್ತಕವನ್ನು ಕನ್ನಡಕ್ಕೆ ತರಬೇಕೆಂದು ಹವಣಿಸುತ್ತಿರುವಾಗ ಅದರಲ್ಲಿ ಮನಃಶಾಸ್ತ್ರಕ್ಕೆ ಸಂಬಂಧಿಸಿದ ಅಧ್ಯಾಯದ ಅನುವಾದವನ್ನು ಜೋಶಿ ಅವರಿಗೆ ನೀಡಿದರು. ಶಾಲೆಯಲ್ಲಿ ಇಂಗ್ಲಿಷನ್ನು ಕ್ರಮಶಃ ಅಧ್ಯಯನ ಮಾಡದೇ ಇದ್ದ ಜೋಶಿ ಅವರಿಗೆ - ಅನುವಾದ ಸಮರ್ಥವಾಗಿ ಬರುತ್ತೋ ಇಲ್ಲವೊ ಎಂಬ ಅಳುಕು ಇದ್ದೇ ಇತ್ತು. ಅನುವಾದವನ್ನು ಚೆನ್ನಾಗಿ ಮಾಡಿದ್ದನ್ನು ನೋಡಿದ ದಿವಾಕರರಿಗೆ ಸಂತೋಷವಾಯಿತು. ಅದುವರೆಗೂ ಇಂಗ್ಲಿಷ್‌ನಲ್ಲಿ ತಾನು ಎಷ್ಟು ಬಲ್ಮೆಯುಳ್ಳವನೆಂಬ ಪ್ರಶ್ನೆಯಿದ್ದದ್ದು ದಿವಾಕರರ ಮಾತಿನಿಂದ ತೀರಿತು. ಒಮ್ಮೆ ಪುಣೆಯ ಡಾ. ವಿನಾಯಕರಾವ್ ಪರಾಂಜಪೆ ಎಂಬ ಖ್ಯಾತ ವಿದ್ವಾಂಸರ ಬಳಿ ಹೋಗಿದ್ದಾಗ-ಅಮೆರಿಕದಿಂದ ಬಂದಿದ್ದ ವಿದ್ವಾಂಸರೊಬ್ಬರೊಡನೆ ಒಂದು ಗಂಟೆಯ ಸುಮಾರು ಚೆನ್ನಾಗಿಯೇ ಮಾತಾಡಿದರಂತೆ. ತಮ್ಮ ಇಪ್ಪತ್ತನಾಲ್ಕನೆಯ ವಯಸ್ಸಿನಲ್ಲಿ ಇಂಗ್ಲಿಷ್ ಅಕ್ಷರಾಭ್ಯಾಸದಿಂದ ಆರಂಭ ಮಾಡಿದರು. ಕೆಲವೇ ವರ್ಷಗಳಲ್ಲಿ ಇತಿಹಾಸ, ಸಂಸ್ಕೃತಿ, ತತ್ತ್ವಜ್ಞಾನದ ಗ್ರಂಥಗಳ ವಾಚನ ಶಕ್ಯವಾಯಿತು. ಜೋಶಿ ಅವರ ಹಟಸ್ವಭಾವ ಮತ್ತು ತಿಳಿವಳಿಕೆಯನ್ನು ಪಡೆಯಬೇಕೆಂಬ ಹಂಬಲ ಇದರಿಂದ ಚೆನ್ನಾಗಿ ವ್ಯಕ್ತವಾಗುತ್ತದೆ.

ಜೋಶಿ ಅವರು ನಡೆದ ಘಟ್ಟಗಳನ್ನು ಸ್ಥೂಲವಾಗಿ ನಾಲ್ಕು ವಿಭಾಗ ಮಾಡಬಹುದೆಂದು ತೋರುತ್ತದೆ : 1896ರಿಂದ 1914ರವರೆಗಿನ ಹುಟ್ಟು, ಬಾಲ್ಯ, ವಿದ್ಯಾಭ್ಯಾಸ, ಹುದ್ದೆ, ಗುರ್ಲಹೊಸೂರಿನಿಂದ ಮರಳಿ ಧಾರವಾಡದಲ್ಲಿ ಸ್ಥಳ ಊರುವತನಕ ನಡೆದದ್ದು ಮೊದಲ ಘಟ್ಟವಾದರೆ; 1915ರಿಂದ 1930ರ ವರೆಗಿನ ಕನ್ನಡ, ಸಂಸ್ಕೃತ, ಇಂಗ್ಲಿಷ್ ಭಾಷೆಗಳ ಅಧ್ಯಯನ, ರಾಷ್ಟ್ರೀಯ ಹೋರಾಟ, ಸ್ವಾತಂತ್ರ್ಯದ ಬಗೆಗಿನ ಕಲ್ಪನೆ ಜೊತೆಗೆ ಸಂಶೋಧನಾ ಕ್ಷೇತ್ರಕ್ಕೆ ಮೊದಲ ಹೆಜ್ಜೆ ಇಟ್ಟದ್ದು ಎರಡನೇ ಘಟ್ಟ; 1930ರಿಂದ 1969ರ ವರೆಗಿನ ಕನ್ನಡ ನುಡಿ-ನಾಡುಗಳ ಬಗೆಗೆ ಅವಿಶ್ರಾಂತ ಬರವಣಿಗೆ, ಪುಸ್ತಕ ಪ್ರಕಟಣೆಗಳ ಆರಂಭ, ಆಗಲೇ ವೇದ ವ್ಯಾಸಂಗಕ್ರಮವಾದ ಅರ್ಥ ಪದ್ಧತಿಯನ್ನು ಕಂಡುಕೊಳ್ಳಬೇಕೆಂಬ ಹೊಳಹು ಮೂರನೆಯ ಘಟ್ಟವಾದರೆ; 1970ರಿಂದ ಪ್ರಸ್ತುತದವರೆವಿಗೂ ಪೂರ್ಣವಾಗಿ ವೇದವ್ಯಾಸಂಗ ಸಂಸ್ಕೃತಿ ಅಧ್ಯಯನದ ನಿಟ್ಟಿನಲ್ಲಿ ಅಖಿಲ ಭಾರತೀಯ ವಿಶಾಲ ವ್ಯಾಪ್ತಿಯ ಅಧ್ಯಯನ, ಜಾಗತಿಕ ಕ್ಷೇತ್ರದಲ್ಲಿ ಮನ್ನಣೆ.

ಶಂ.ಬಾ. ಜೋಶಿ ಅವರ ಈವರೆಗೂ ಪ್ರಕಟವಾಗಿರುವ ಗ್ರಂಥಗಳು 29. ಅವುಗಳಲ್ಲಿ 'ಕರ್ನಾಟಕ ಇತಿಹಾಸ' ಕುರಿತು ಬರೆದಿರುವ ಪುಸ್ತಕಗಳು-3 (ಕಣ್ಮರೆಯಾದ ಕನ್ನಡ-1933, ಮಹಾರಾಷ್ಟ್ರದ ಮೂಲ-1934, ಕನ್ನಡದ ನೆಲೆ-1939). ಕನ್ನಡ ಭಾಷಾ ಶಾಸ್ತ್ರಕ್ಕೆ ಸಂಬಂಧಿಸಿದವುಗಳು - 3 (ಕಂನುಡಿಯ ಹುಟ್ಟು-1937, ಎಡೆಗಳು ಹೇಳುವ ಕಂನಾಡ ಕಥೆ-1947, ಕನ್ನಡ ನುಡಿಯ ಜೀವಾಳ-1973). ಸಾಹಿತ್ಯಕ್ಕೆ ಸಂಬಂಧಿಸಿದವುಗಳು-2 (ಕರ್ಣನ ಮೂರು ಚಿತ್ರಗಳು-1947, ಕನ್ನಡ ಸಾಹಿತ್ಯ ಅಭಿವೃದ್ಧಿ-1976). ಜಾನಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ-1 (ಮಕ್ಕಳ ಒಡಪುಗಳು-1966). ತತ್ತ್ವಜ್ಞಾನಕ್ಕೆ ಸಂಬಂಧಿಸಿದಂತೆ-7 ( ಅರವಿಂದ ಘೋಷರ ಚರಿತ್ರವು-1921, ಅಗ್ನಿವಿದ್ಯೆ-1946, ದಾರಿಯ ಬುತ್ತಿ-1969, ಸೌಂದರ್ಯ ವಿಚಾರ-1949, ಸಾತತ್ಯ ಮತ್ತು ಸತ್ಯ-1975, ಶ್ರೀಮತ್ ಭಗವತ್ ಗೀತೆಯಲ್ಲಿ ಹುದುಗಿರುವ ರಾಜಯೋಗದ ಸ್ವರೂಪ-1977, ಸಾಂಸ್ಕೃತಿಕ ಮೂಲದಲ್ಲಿನ ತಾತ್ತ್ವಿಕ ಚಿಂತನಗಳು-1978). ಸಂಸ್ಕೃತಿ-ಸಮಾಜಕ್ಕೆ ಸಂಬಂಧಿಸಿದಂತೆ 6 (ರೂಢಿ ಹಾಗೂ ಭಾವಿಕ ಕಲ್ಪನೆಗಳು-1940, ಯಕ್ಷಪ್ರಶ್ನೆ ಅಥವಾ ಬರಲಿರುವ ಸಮಾಜ-1948, ಸಮಾಜ ದರ್ಶನ-1949, ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ (ಪ್ರ. ಭಾಗ)-1937, ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ (ದ್ವಿ. ಭಾಗ)1966, ಭಾಷೆ ಮತ್ತು ಸಂಸ್ಕೃತಿ-1975). ಹಿಂದೂ ಧರ್ಮಕ್ಕೆ ಸಂಬಂಧಿಸಿದಂತೆ 6 (ಶಿವರಹಸ್ಯ-1939, ಹಾಲುಮತ ದರ್ಶನ-1960, ಋಗ್ವೇದ ಸಾರ-ನಾಗ ಪ್ರತಿಮಾವಿಚಾರ-1971, ಪ್ರವಾಹ ಪತಿತರ ಕರ್ಮ ಹಿಂದೂ ಎಂಬ ಧರ್ಮ-1976, ಮಾನವಧರ್ಮದ ಆಕೃತಿ-1979, ಬುಧನ ಜಾತಕ-1982, ಬಿತ್ತಿದ್ದನ್ನು ಬೆಳಕೊ-1984). ಇದರೊಂದಿಗೆ ಅನುವಾದಿತ ಕೃತಿಗಳೂ ಇವೆ, ಅವುಗಳು 2 ಮಾತ್ರ (ಉಪನಿಷತ್ ರಹಸ್ಯ-ಮೂಲ : ರಾನಡೆ, ಅನು : ದಿವಾಕರ, ಬೇಂದ್ರೆಯವರೊಂದಿಗೆ 1928, ಶ್ರೀಮದ್ ಭಗವದ್ಗೀತಾ ಭಾಗ-1 ಮೂಲ: ಸಾತವಳೇಕರ್-1944). ಇವುಗಳಲ್ಲದೆ ಅಸಂಖ್ಯಾತ ಬಿಡಿ ಬಿಡಿ ಲೇಖನಗಳು ಬಹುಪಾಲು ನಾನಾ ಪತ್ರಿಕೆಗಳಲ್ಲಿ ಚೆದುರಿ ಹೋಗಿವೆ. ಅವುಗಳನ್ನೆಲ್ಲ ಕೂಡಿಸಿದರೆ ಬೃಹತ್ ಸಂಪುಟಗಳೇ ಆದೀತು.[1]

ಕರ್ನಾಟಕ ಏಕೀಕರಣದ ಹಂಬಲದಲ್ಲಿ ಹೋರಾಟವೆಸಗಿದ್ದ ಕಾಲ ಅದು. ಆಗ 'ಕರ್ನಾಟಕ ಗತವೈಭವ' ಬಂದಿತ್ತು. ಅದನ್ನು ಓದಿ ಜನ ಸ್ಫೂರ್ತಿಗೊಂಡಿದ್ದರು. ಆದರೆ ಜೋಶಿ ಅವರಿಗೆ ತತ್ಪೂರ್ವದಲ್ಲಿ ಈ ಕನ್ನಡನಾಡು ಎಂದರೆ ಮೊದಲಿಗೆ ಎಲ್ಲಿತ್ತು? ಈ ಜನ ಎಲ್ಲಿಂದ ಬಂದರು? ನಾನಾ ಭಾಷಾ ಸಂಪರ್ಕ, ಜನಜೀವನ, ಆಚಾರ-ವಿಚಾರಗಳ ವಿನಿಮಯ ಯಾವಾಗ, ಯಾವ ಸಂದರ್ಭದಲ್ಲಿ, ಹೇಗೆ ಆಯಿತು? ಕವಿರಾಜಮಾರ್ಗಕಾರ ಕಾವೇರಿಯಿಂದ ಗೋದಾವರಿಯವರೆವಿಗೂ ಇರುವ ನಾಡಿನ ಎಲ್ಲೆಯನ್ನು ಹೇಳುತ್ತಾನೆ. ಇದರ ವಾಸ್ತವಾಂಶವೇನು? ಹೇಗೆ ಮಹಾರಾಷ್ಟ್ರದ ಧಾರ್ಮಿಕ ಗ್ರಂಥಗಳಲ್ಲಿ ಕನ್ನಡದ ಸುಳುಹುಗಳು ಸಿಗುತ್ತಿವೆ, ಸ್ಥಳನಾಮಗಳು ಇವೆ, ಇದರ ಅರ್ಥ ಏನು? ಈ ತರದ ಪ್ರಶ್ನೆಗಳು ಮೊದಲಿಗೆ ತಲೆ ಎತ್ತಿದುವು. ಆಗ ಶಾಸನ, ಕಾವ್ಯ, ಶಾಸ್ತ್ರ ಮೊದಲಾದ ಗ್ರಂಥಗಳ ವ್ಯಾಸಂಗಕ್ಕೆ ಆರಂಭಿಸಿದರು. ಇವುಗಳ ರೂಪದಿಂದ ಬಂದ ಪ್ರಥಮ ಪ್ರಾಥಮಿಕ ಗ್ರಂಥ ಕಣ್ಮರೆಯಾದ ಕನ್ನಡ-1933. ಈ ಪುಸ್ತಕ ಹೊರಬಂದ ತರುವಾಯದಲ್ಲೆ ಇಂಥದೊಂದು ವಿಶೇಷ ಗ್ರಂಥ ಬರೆದುದಕ್ಕೆ ರಾ. ನರಸಿಂಹಾಚಾರ್ಯ, ಡಿ.ವಿ.ಜಿ., ಗೋವಿಂದ ಪೈ, ಎ. ವೆಂಕಟಸುಬ್ಬಯ್ಯರಂಥ ಹಿರಿಯರು ಅಭಿನಂದಿಸಿ ಕಾಗದ ಬರೆದದ್ದು ಜೋಶಿ ಅವರು ಈ ಕ್ಷೇತ್ರದಲ್ಲಿ ಮುಂದುವರಿಯಲು ಸಾಧ್ಯವಾಯಿತು. ನಾನು ಮಾಡುತ್ತಿರುವ ಅಧ್ಯಯನದಲ್ಲಿ ಎಲ್ಲೋ ತಥ್ಯವಿದೆಯೆಂಬ ಅಂಶ ಗಮನಕ್ಕೆ ಬಂತೆಂದು ಅವರು ಇದರಿಂದ ಸಮಾಧಾನಪಟ್ಟರು.

ಕನ್ನಡದ ನೆಲೆ (1939), ಕಣ್ಮರೆಯಾದ ಕನ್ನಡದಲ್ಲಿ ಕನ್ನಡದ ಶಕ್ತಿ-ಇಂದು ದುರ್ಬಲಗೊಂಡಿರುವುದಕ್ಕೆ ಕಾರಣವಾದ ಕಾರಣ ಮೀಮಾಂಸೆಯ

ಪ್ರಶ್ನೆ ಇದ್ದರೆ 'ಕನ್ನಡದ ನೆಲೆ'ಯಲ್ಲಿ ಕನ್ನಡಿಗರ ಮೂಲಿಗರು ಯಾರು? ಕಂನುಡಿಯ ಉಗಮ ಬೆಳವಣಿಗೆ ಸಾರ ಕುರಿತು ಬರೆದರು. ಇವೆಲ್ಲವುಗಳ ಸಾರವಾಗಿ ಮತ್ತಷ್ಟು ಹೊಸದನ್ನು ಜೋಡಿಸಿ, ತಮ್ಮ ಕನ್ನಡ ನಾಡು-ನುಡಿಯನ್ನು ಕುರಿತಾದ ವಿಷಯಕ್ಕೆ ವೇದೋಪನಿಷತ್ತು, ಪುರಾಣ ಸ್ಮೃತಿಗಳಿಂದ ಆಯ್ದು, ಜೋಡಿಸಿ, ಸ್ಥಳವ್ಯಾಸಂಗ, ಭೂಗರ್ಭಶಾಸ್ತ್ರಜ್ಞರ ಹೇಳಿಕೆ, ಮುಂತಾದವುಗಳನ್ನು ಸೇರಿಸಿಕೊಂಡು 'ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ'ಯನ್ನು ಬರೆದರು. ಈ ಪುಸ್ತಕ ಆಸಕ್ತ ವಿದ್ವಾಂಸರ ಗಮನವನ್ನು ಸೆಳೆಯಿತು. ಈ ಅಧ್ಯಯನ ನಡೆಯುತ್ತಿರುವಾಗಲೇ ಕನ್ನಡ ಭಾಷೆಯ ಒಳಸುಳಿಗಳನ್ನು ಗುರುತಿಸುವ ಭಾಷಾಶಾಸ್ತ್ರದ ವ್ಯಾಸಂಗದ ಹಿನ್ನೆಲೆಯಲ್ಲಿ 'ಕಂನುಡಿಯ ಹುಟ್ಟು' (1937) ಗ್ರಂಥ ರಚನೆ ಆಯಿತು. ಶಾಸ್ತ್ರೀಯ ವ್ಯಾಕರಣದ ಹಿನ್ನೆಲೆಯಲ್ಲಿ ಭಾಷೆಯ ಬಗೆಗೆ, ಭಾಷೆಯನ್ನು ಬೆಳೆಸುವ ಬಗೆಗೆ, ಆಸಕ್ತಿಪೂರ್ಣವಾದ ಕಾಳಜಿಯನ್ನುಂಟು ಮಾಡುವಷ್ಟು ಗ್ರಂಥದ ಆಶಯ ಇದೆ; 'ಕಂನುಡಿಯ ಹುಟ್ಟು' ಎಂಬಲ್ಲಿ ಮೂಲ ಮತ್ತು ಬೆಳವಣಿಗೆಯನ್ನು ಚೆನ್ನಾಗಿ ಗುರುತಿಸಿದ್ದಾರೆ. ಭಾಷಾವಿಷಯಕ ಜ್ಞಾನ ಶಂ.ಬಾ. ಅವರಿಗೆ ಪ್ರಗಲ್ಭವಾಗಿ ಎಷ್ಟಿತ್ತು ಎಂಬುದನ್ನು ಇವು ತಿಳಿಸುತ್ತವೆ.

ಮಹಾರಾಷ್ಟ್ರದ ಮೂಲ ಬರೆದಾಗಲೇ ಮಹಾರಾಷ್ಟ್ರದಲ್ಲಿ ಈ ಬಗೆಗೆ ಎಂಥ ಪ್ರತಿಕ್ರಿಯೆ ಸಿಗಬಹುದೆಂಬ ಕುತೂಹಲದಿಂದ ಮರಾಠಿಯಲ್ಲೆ ನವಭಾರತಕ್ಕೆ ಲೇಖನ ಬರೆದರು. ಚರ್ಚೆಗಳು ವ್ಯಾಪಕವಾಗಿ ನಡೆಯಿತು. ಅನೇಕ ವಿದ್ವಾಂಸರು ಭಾಗಿಗಳಾದರು. ಶಂ.ಬಾ. ಅವರ ವಿಚಾರಗಳಲ್ಲಿ ಸತ್ಯವಿದೆಯೆಂಬ ಅಂಶವನ್ನು ಮಹಾರಾಷ್ಟ್ರೀಯ ವಿದ್ವಾಂಸರು ಒಪ್ಪಿಕೊಂಡರು. ಸ.ಜ. ಭಾಗವತರ ಪ್ರೀತಿಯ ಒತ್ತಾಯದಿಂದ 1925ರಲ್ಲಿ ಮರಾಠಿಯಲ್ಲಿ ಈ ವಿಷಯ ಕುರಿತು ಗ್ರಂಥ ಬರೆದರು. ಮುಂಬೈಯ ಮರಾಠಿ ಸಂಗ್ರಹಾಲಯದವರು ವರ್ಷದ ಸರ್ವಶ್ರೇಷ್ಠ ಪುಸ್ತಕವೆಂದು ಪರಿಗಣಿಸಿ, ಜೋಶಿ ಅವರನ್ನು ಮುಂಬೈಗೆ ಕರೆಸಿಕೊಂಡು ಸನ್ಮಾನ ಮತ್ತು ಗೌರವಧನ ಅರ್ಪಣೆ ಮಾಡಿದರು. ಇದರಿಂದ ಜೋಶಿ ಅವರ ಹೆಸರು ಮರಾಠಿ ಜ್ಞಾನ ಕ್ಷೇತ್ರದಲ್ಲಿ ಸ್ಥಿರವಾಯಿತು. ಈ ಮಧ್ಯೆ ಭಾಷೆ-ಸಂಸ್ಕೃತಿ, ಧರ್ಮ ತತ್ತ್ವಜ್ಞಾನಗಳ ಬಗೆಗೆ ಮೌಲಿಕವಾದ ಅಧ್ಯಯನ ಮಾಡಿದ್ದುದರಿಂದ "ಹಾಲುಮತ ದರ್ಶನ"ದಲ್ಲಿ ಶೈವ ಮತ್ತು ವೈಷ್ಣವ ಸಮಸ್ಯೆಗಳ ಮೂಲಬೇರನ್ನು ಕುರಿತು ವ್ಯಾಪಕವಾಗಿ ಚರ್ಚಿಸಿದರು. ತಮ್ಮ ಈವರೆಗಿನ ಅಧ್ಯಯನಕ್ಕೆ ಪರಿಶಿಷ್ಟವಾಗಿ ಬಂದ ಈ ಗ್ರಂಥ ಅವರ ವ್ಯಾಸಂಗವನ್ನು ಮತ್ತೊಂದು ದಿಕ್ಕಿನ ಕಡೆಗೆ ಸೆಳೆದುಕೊಂಡು ಹೋಯಿತು. ಇದರ ಫಲವಾಗಿ ಬಂದವುಗಳು ಋಗ್ವೇದ ಸಾರ: ನಾಗಪ್ರತಿಮಾ ವಿಚಾರ, ಪ್ರವಾಹಪತಿತರ ಕರ್ಮ ಹಿಂದೂ ಎಂಬ ಧರ್ಮ, ಭಗವತ್‌ಗೀತೆಯಲ್ಲಿ ಹುದುಗಿರುವ ರಾಜಯೋಗದ ಸ್ವರೂಪ, ವೈವಸ್ವತ ಮನು ಪ್ರಣೀತ ಮಾನವ ಧರ್ಮದ ಆಕೃತಿ, ಬುಧನ ಜಾತಕ, ಇವೆಲ್ಲವುಗಳಲ್ಲಿ ಅನುಕ್ರಮವಾದ ಅಧ್ಯಯನ ಉಂಟು. ಈ ಮೇಲಿನ ಪುಸ್ತಕದ "ಋಗ್ವೇದಸಾರ-ನಾಗಪ್ರತಿಮಾ ವಿಚಾರ"ದಲ್ಲಿ ನಮ್ಮ ಜೀವನ-ಸಂಸ್ಕೃತಿಯನ್ನು ಅಧಃಪಾತಕ್ಕೆ ತಳ್ಳಿರುವ; ತಳ್ಳುತ್ತಿರುವ ಸಂಗತಿಗಳು ಯಾವುವು? ಋಗ್ವೇದದಲ್ಲಿಸರ್ಪಪೂಜೆ ಇರಲಿಲ್ಲ ಎಂಬ ಮಾತನ್ನು ಹಿಡಿದು-ಅಲ್ಲಿ ಪರ್ಯಾಯವಾಗಿ, ಸಾಂಕೇತಿಕವಾಗಿ ರೂಪಕದಿಂದ ಉಂಟೆಂದು ಹೇಳಿ, ಇದು ಏನನ್ನು ಸಂಕೇತಿಸುತ್ತದೆ? ಹಿಂದೂ ಎಂಬ ಪದ ಹೇಗೆ ಬಂತು? ಬರುವಳಿಯನ್ನು ಸ್ವೀಕರಿಸಿ ನಮ್ಮ ನಾಡಿನ ಹೆಸರಾದದ್ದು ಹೇಗೆ? ಈ ಪ್ರಶ್ನೆಗಳು ತಲೆಎತ್ತಿದುವು. ಇದಕ್ಕೆ ಕಾರಣವಾದ ಕಾರಣಮೀಮಾಂಸೆಯನ್ನು ತಿಳಿಯಬೇಕೆಂಬ ಹಂಬಲ ಸರ್ಪಜಾಡಿನಂತೆಯೆ ಆಯಿತು. ಅನಂತರ, ಭಗವತ್‌ಗೀತೆಯ ಆಕೃತಿ ಮತ್ತು ಆಶಯ ಏನು? ಎಂಬ ಅಂಶವನ್ನು ಹಿಡಿದು, ಕೃಷ್ಣ-ಅರ್ಜುನ, ಕುರುಕ್ಷೇತ್ರ ಈ ಸಂಕೇತಗಳು ಏನನ್ನು ನಿರೂಪಿಸುತ್ತವೆ? ಪ್ರಜ್ಞೆಯು ನಷ್ಟವಾಯಿತು ಎಂದರೇನು? ವಿವಸ್ವಾನ್ ಹಿಂದೆ ಉಳಿದು ಕೃಷ್ಣ ಕಾರಸ್ಥಾನ ಪಡೆಯುವುದರಲ್ಲಿರುವ ಸಾಂಸ್ಕೃತಿಕ ತಿರುವು-ಮುರುವು ಎಂಥದ್ದು? ಎಂಬ ಅಂಶದೊಂದಿಗೆ ಸ್ವಯಂಭೂ ಅಂದರೆ ವ್ಯಕ್ತಿ-ವಿಶಿಷ್ಟವಾದಿಗಳ ತತ್ತ್ವಜ್ಞಾನವು ಹೇಗೆ ಸಮಾಜಕ್ಕೆ ಕಂಟಕಕಾರಿ, ಬಾಳು ಬದುಕಿಗೆ ಹೇಗೆ ಆತಂಕ ಎಂಬುದನ್ನು ಶ್ರೀಮತ್ ಭಗವತ್‌ಗೀತೆಯಲ್ಲಿ ಹುದುಗಿರುವ ರಾಜಯೋಗದ ಸ್ವರೂಪ ಎಂಬ ಪುಸ್ತಕದಲ್ಲಿ ಬಗೆಬಗೆಯಾಗಿ ನಿರೂಪಿಸಿದ್ದಾರೆ. ಪ್ರವಾಹ ಪತಿತರ ಕರ್ಮ ಹಿಂದೂ ಎಂಬ ಧರ್ಮದಲ್ಲಿ ಮಾನವನು ತನ್ನ ಬಾಳಿನ ಉದ್ದಕ್ಕೂ ಹೇಗೆ ಪ್ರವಾಹ ಪತಿತನಾಗಿ ಸಾಗಿದ್ದಾನೆಂಬುದನ್ನು ವಿವರಿಸುತ್ತ-'ಹಿಂದೂ' ಎಂಬ ಶಬ್ದವನ್ನು ಕುರಿತು, ಅದರ ಆಶಯದ ಬಗೆಗೆ ದೀರ್ಘ ಚರ್ಚೆ ಮಾಡಿದ್ದಾರೆ. ಇದಕ್ಕಾಗಿ ಅವರು ವೇದೋಪನಿಷತ್ತುಗಳಿಂದ ಹಿಡಿದು, ಪಾಶ್ಚಾತ್ಯರ ಮನಃಶಾಸ್ತ್ರದವರೆಗಿನ ನೆರವನ್ನು ಪಡೆದು, ಹೊಚ್ಚ ಹೊಸದಾಗಿ ಅನೇಕ ವಿಷಯಗಳನ್ನು ಪ್ರಥಮವಾಗಿ ನಿರೂಪಿಸಿದ್ದಾರೆ. ವಿವಸ್ವಾನ್ ಮತ್ತು ಸ್ವಯಂಭೂ-ಗಳಲ್ಲಿರುವ ಆಚಾರ-ವಿಚಾರಗಳ ಆಕೃತಿ ಮತ್ತು ಆಶಯಗಳ ಸ್ವರೂಪವನ್ನು ಚೆನ್ನಾಗಿ ಗ್ರಹಿಸಿದ್ದಾರೆ. ಈ ಎರಡರ ಧಾರಣಾತ್ಮಕ (Concept) ಹಿನ್ನೆಲೆಯಲ್ಲಿ ಸಂಸ್ಕೃತಿ ಅಧ್ಯಯನ ಚೆನ್ನಾಗಿ ಆಗುತ್ತದೆಂಬ ಆಶಯ ಏನಿದೆಯೋ ಅದು ಸಮಂಜಸವಾಗಿದೆ; ಅವರ ಈಚಿನ 'ಬುಧನ ಜಾತಕ'ದಲ್ಲಿ ಋಷಿ-ಮುನಿ, ಜೀವ-ಜೀವಿತ, ಹಗಲು-ಕತ್ತಲು; ಮನುಜತ್ವ-ನರತ್ವ, ಸೂರ್ಯ-ಚಂದ್ರ, ಭಾವಾತ್ಮಕ-ಅಭಾವಾತ್ಮಕ, ಇವುಗಳಲ್ಲಿರುವ ಅಂತರವನ್ನು ಕುರಿತು ಮೊದಲಿನಂತೆ ಅನೇಕ ಶಾಸ್ತ್ರಗಳ ನೆರವಿನ ಅಧ್ಯಯನದಿಂದ ಶಂ.ಬಾ. ಅವರು ಕಂಡುಕೊಂಡಿರುವ ಅರ್ಥಗ್ರಹಣ ಪದ್ಧತಿ (methodology) ಏನಿದೆಯೋ ಇದು ಶಂ.ಬಾ. ಅವರು ಭಾರತೀಯ ಪ್ರಾಚ್ಯೇತಿಹಾಸಶಾಸ್ತ್ರಕ್ಕೆ (Indology) ಅವರು ಕೊಟ್ಟ ಅಪ್ರತಿಮ ಕೊಡುಗೆ. ಅಷ್ಟೇ ಅಲ್ಲದೆ, ಬುದ್ಧಿ ಮತ್ತು ಪ್ರಜ್ಞೆಗೂ ಇದ್ದ ಅಂತರವನ್ನು ತಿಳಿಯಲಾಗದೆ ಇದ್ದ, ಇದು ನಷ್ಟವಾದದ್ದನ್ನು ಆಧುನಿಕ ಮನಃಶಾಸ್ತ್ರದ ಮೂಲಕ ಸೂಚಿಸಿ-ಆಚಾರ ವಿಚಾರಗಳನ್ನು ಬುದ್ಧಿಗೆ ಅಧೀನವಾಗಿ ಬಾಳಿದರೆ ಎಂಥ ಆಶಯಗಳು ರೂಪುಗೊಳ್ಳುತ್ತವೆ? ಎಂಬುದನ್ನು ಬುಧನ ಜಾತಕದಲ್ಲಿ ಐನ್‌ಸ್ಟೈನ್, ರಸೆಲ್‌ರ ಪರಿಭಾಷಾ ಸಂಕೇತದಿಂದ ಚೆನ್ನಾಗಿ ನಿರೂಪಿಸಿದ್ದಾರೆ. ಬುದ್ಧಿಗೂ ಪ್ರಜ್ಞೆಗೂ ಇರುವ ಅಂತರವನ್ನು ನಾವು ತಿಳಿಯಬೇಕು. ಈ ಅಂತರ ತಿಳಿದಾಗಲೇ ತಿಳಿವಳಿಕೆ ಆಗಲು ಸಾಧ್ಯ ಎಂಬ ಅಂಶವನ್ನು ಸೂಚಿಸಿ ಭಾಷೆಯು ಮೈದೋರಲು ಬುದ್ಧಿ ಕಾರಣವಾಗಿರದೆ; ಪ್ರಜ್ಞೆ ಕಾರಣವಾಗಿದೆ. ಇದರಿಂದ ಜೀವನ-ಸಂಸ್ಕೃತಿ ಅರಿಕೆ ಬರುತ್ತದೆ, ಎಂಬ ಸಂಗತಿಯನ್ನು ಹೊಚ್ಚ ಹೊಸದಾಗಿ ಶಂ.ಬಾ. ಅವರು ನಿರೂಪಿಸಿದ್ದಾರೆ.

ಶಂ.ಬಾ. ಅವರ ಕೆಲವು ಕೃತಿಗಳ ಸಾಮಾನ್ಯ ಪರಿಚಯ ಮತ್ತು ಸ್ಥೂಲವಾದ ಆಶಯವನ್ನು ಮೇಲೆ ತಿಳಿಸಿದ್ದೇನೆ. ಆಸಕ್ತರು ಕೃತಿಯನ್ನು ಕೈಗೆತ್ತಿಕೊಂಡು ಓದಬೇಕು. ಪದಪದಗಳನ್ನು, ಅಕ್ಷರ ಅಕ್ಷರಗಳನ್ನು ಸಾಕ್ಷಾತ್ಕಾರ ಮಾಡಿಕೊಂಡು ಓದಬೇಕು. ಅದು ಶಂ.ಬಾ. ಕೃತಿಗಳ ಓದಿಗೆ ಸಹಾಯಕ ಎಂದು ನಾನು ಭಾವಿಸಿದ್ದೇನೆ.

### ಪ್ರಧಾನ ಕೃತಿಗಳ ಮುಖ್ಯಾಂಶಗಳು

ಶಂ.ಬಾ. ಅವರ ಪ್ರಧಾನ ಕೃತಿಗಳು ಐದು ಎಂದು ನನಗೆ ತೋರುತ್ತದೆ; 1971ರಲ್ಲಿ ಪ್ರಕಟವಾದ 'ಋಗ್ವೇದ ಸಾರ; ನಾಗಪ್ರತಿಮಾ ವಿಚಾರ'; 1976ರಲ್ಲಿ ಪ್ರಕಟವಾದ 'ಪ್ರವಾಹ ಪತಿತರ ಕರ್ಮ ಹಿಂದೂ ಎಂಬ ಧರ್ಮ'; 1979ರಲ್ಲಿ ಪ್ರಕಟವಾದ 'ಮಾನವಧರ್ಮದ ಆಕೃತಿ' ; 1982ರಲ್ಲಿ ಪ್ರಕಟವಾದ 'ಬುಧನ ಜಾತಕ'; 1990ರಲ್ಲಿ ಪ್ರಕಟವಾದ 'ಬತ್ತಿದ್ದನ್ನು ಬೆಳಕೋ'– ಇವು ಐದು ಶಂ.ಬಾ. ಅವರ ವಿಚಾರ, ಸಂಶೋಧನೆಗಳಿಗೆ ಹೆಗ್ಗಂಬಗಳಾಗಿವೆ. 'ನಾಗಪೂಜೆ' ಪ್ರಪಂಚದ ಸಮಸ್ತ ಸಂಸ್ಕೃತಿಯಲ್ಲೂ ಅಡಗಿದೆ. ಅದು ಅಲ್ಲಿ ದೈವತವಾಗಿ, ಆಚಾರವಾಗಿ, ವಿಚಾರವಾಗಿ ಬೆಳೆದಿದೆ. ಇದರೊಡನೆ ಅನೇಕ mythಗಳು ಮೂಡಿವೆ. ಸರ್ಪ ಸಂಕೇತವು ಭಾರತೀಯರ ಜನ-ಮನವನ್ನು ಆಳಬೇಕಾದರೆ ಇದರ ಪ್ರಭಾವ-ಪ್ರೇರಣೆಗಳಲ್ಲಿ ಇಡೀ ಸಂಸ್ಕೃತಿಯ ವಿಕಾಸದ ದಾರಿಯೇ ಇರುವುದನ್ನು ಕಂಡುಕೊಂಡರು. ಇದಕ್ಕೆ ಅವರು ನಾನಾ ದೈವತ ಕಥೆಗಳ ನೆರವನ್ನು ಪಡೆದರು. ಜಾತವೇದಾಗ್ನಿಯನ್ನು ನಾಚಿಕೇತಾಗ್ನಿಯು ನುಂಗಿ ನೊಣೆಯುವುದರ ಕಥೆಯ ಹಿನ್ನೆಲೆಯಲ್ಲಿ ಅಡಗಿರುವ ಸ್ವಾರಸ್ಯವನ್ನು ತಮ್ಮ ನಾಗಪ್ರತಿಮಾ ವಿಚಾರ ಪುಸ್ತಕದಲ್ಲಿ ನಿರೂಪಿಸಿದರು. ಸರ್ಪ ರಾತ್ರಿಯನ್ನೂ, ಲೈಂಗಿಕ ವಿಚಾರವನ್ನೂ ಪ್ರತಿನಿಧಿಸುತ್ತದೆ. ಭಾರತೀಯರ ಇಂದಿನ ಅವಸ್ಥೆಗೆ-ಜಾಗತಿಕ ಸಮಸ್ಯೆಗೆ ಕಾರಣವಾದದ್ದು ಯಾವುದು? ಎಂಬ ಅಂಶವನ್ನು ಹಿಡಿದು ಹೊರಟಾಗ ಅವರಿಗೆ ಹೊಳೆದದ್ದು ಅತಿ ಲೈಂಗಿಕತೆ ಮತ್ತು ಅತ್ಯಂತಿಕಭೋಗ. ಇವು ಮಾನವನನ್ನು, ಸಮಾಜ-ಸಂಸ್ಕೃತಿಯನ್ನು ನಷ್ಟಗೊಳಿಸುತ್ತವೆ ಎಂಬ ಅಂಶ ಅವರ ಗಮನಕ್ಕೆ ಬಂದಿತು. ವ್ಯಕ್ತಿಯ ಬಾಳುವೆ ಸಮಾಜದ ಶ್ರೇಯಸ್ಸಿನಲ್ಲಿದೆ. ಸಮಾಜವು ವ್ಯಕ್ತಿಯೊಡನೆ ಅಭಿನ್ನವಾಗಿದೆ. ನಮಗೆ ಇಂದು ಆದರ್ಶವಾಗಿರುವ ದೈವತಗಳ ಸಂಕೇತದ ವಶದಲ್ಲಿ ಬದುಕಿದ್ದೇವೆ. ಆದರೆ, ಈ ದೈವತಗಳ ಸಾಂಕೇತಿಕ ಸ್ವರೂಪ ಯಾವ ತರದ್ದು? ಇವುಗಳ ಆಶಯವೇನು? ಎಂಬ ಮೂಲಗಾಮಿದೃಷ್ಟಿ ಈ ಗ್ರಂಥದಲ್ಲಿ ಇದೆ. ವಿಷ್ಣು: ಶೇಷಶಾಯಿ (ಹಾವನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡಿದ್ದಾನೆ), ಶಿವ: ಸರ್ಪಭೂಷಣ (ಹಾವನ್ನೇ ಕೊರಳಿಗೆ ಸುತ್ತಿಕೊಂಡಿದ್ದಾನೆ) ಇದರ ರಹಸ್ಯ ಏನು? ಇದರ ಸಾಂಕೇತಿಕತೆ ಎಂಥದ್ದು? ಈ ಪ್ರಶ್ನೆಗಳ ಜಾಡನ್ನು ಹಿಡಿದು, ಶಂ.ಬಾ. ಅವರು 'ಮಾನವ ಸಂಸ್ಕೃತಿ'ಯ ಅಧ್ಯಯನಕ್ಕೆ ತಲುಪಿದರು. ಇಂದಿನ ಜೀವನವು ವೈಪರೀತ್ಯಗೊಂಡಿರುವುದಕ್ಕೆ ವರ್ತಮಾನದ ಕಾರಣವನ್ನು ಹೇಳದೆ-ಇಂದಿನ ವೈಪರಿತ್ಯತೆಗೆ, ಅಸಂಗತಿಗೆ ನಿನ್ನೆಗಳು ಹೇಗೆ ಕಾರಣವಾದವು ಎಂಬ ಅಂಶವನ್ನು ಸಮರ್ಥವಾಗಿ ನಿರೂಪಿಸಿದ್ದಾರೆ. ವಾನರನಿಂದ ನರತ್ವ ಪಡೆದು ಭಾಷೆಯ ಉಪಲಬ್ಧಿಯಿಂದ ಮನುಜತ್ವ ಪಡೆದವನು; ಮರಳಿ ನರತ್ವದತ್ತ ಹೊರಟಿದ್ದಾನಲ್ಲ? ಎಂಬ ಪ್ರಶ್ನೆ ಶಂ.ಬಾ. ಅವರನ್ನು ತಳ್ಳಿಕೊಂಡು ಹೊರಟಿತು. ಇದು ನಿಜವೇ? ಸತ್ಯವೇ ಎಂಬ ಅಂಶವು ಸತ್ಯಶೋಧನೆಯಾಗಿ ಪರಿಣಮಿಸಿತು. ಬಹಳ ಕಷ್ಟವಾದ ದಾರಿಯನ್ನು ಹಿಡಿದ ಶಂ.ಬಾ. ಅವರಿಗೆ ತಮ್ಮ ಮೂರು ದಶಕಗಳ ಈಚೆಗೆ ಇದು ಸರಿ ಎಂಬ ಅಂಶ ಒಡಮೂಡತೊಡಗಿತು. ತಾಳಮೇಳ ದೊರೆಯದ ನಿಷ್ಕರ್ಷವನ್ನು ಸ್ವೀಕರಿಸದಿರುವ ವ್ರತ ಇವರದು.

ಎರಡಿಲ್ಲದೆ ಬಾಳುವೆ ವ್ಯಕ್ತಿಯ ಜೀವನಾಧಾರವಾಗಿರಬೇಕು ಎಂಬ ತತ್ತ್ವಜ್ಞಾನವನ್ನು ಶಂ.ಬಾ. ಅವರ ಮೇಲಿನ ಕೃತಿಗಳು (ಆಂಶಿಕವಾಗಿ ಉಳಿದ ಕೃತಿಗಳಲ್ಲೂ ಈ ಧ್ವನಿ ಉಂಟೇ ಉಂಟು) ಒಂದೆಡೆ ಹೇಳುತ್ತಿದ್ದರೆ, ಈ ಎರಡಿಲ್ಲದ ಬಾಳುವೆಯನ್ನು ಒಡೆದುಕೊಂಡು ತನ್ನನ್ನು ವ್ಯಕ್ತಿವಿಶಿಷ್ಟವನ್ನಾಗಿಸಿಕೊಂಡು ಬಂದ ತತ್ತ್ವಜ್ಞಾನದ ಪರಂಪರೆಯ ಬೆಳವಣಿಗೆಯನ್ನು ಮತ್ತೊಂದು ಕಡೆ ಹೇಳುತ್ತವೆ; ಪ್ರಾಮಾಣಿಕತೆ-ಸಹೃದಯತೆ ಹೃದಯವಂತಿಕೆಗಳು ಉದ್ದಕ್ಕೂ ನಷ್ಟವಾಗಿಸುವ-ಸಾಹಿತ್ಯ ಕಲಾಕೃತಿಗಳ ಪ್ರಕಾರದ ತಳಪಾಯದಲ್ಲಿ ಚಂದ್ರ=ಸರ್ಪ=ಸ್ವಯಂಭೂ=ಮನು=ನಿನ್ನೆಯೇ-ಇಂದು-ನಾಳೆ ಇವು ಸಾತತ್ಯ, ಸಾಂಗತ್ಯ. ಅದು ಗತಿಚಕ್ರೀಯವಾಗಿರುತ್ತದೆ. ನಾಳೆ ಅನ್ನುವುದರಲ್ಲೆ 'ಪ್ರಜ್ಞೆ' ಒಡಮೂಡಿದೆ. 'ನಾಳೆ' ಎಂಬುದು ನಷ್ಟವಾದರೆ 'ಬುದ್ಧಿ'ಯು ಈ ಸ್ಥಳವನ್ನು ಆಕ್ರಮಿಸುತ್ತದೆ ಎಂಬ ಸರಳ ಸತ್ಯವನ್ನು ತಮ್ಮ ಕೃತಿಗಳಲ್ಲಿ ವಿಧವಿಧವಾಗಿ ಹೇಳಿದ್ದಾರೆ. ಶಂ.ಬಾ. ಅವರ ಕೃತಿಗಳು ಸಂಶೋಧನೆಯಾಗಿ ಒಂದೆಡೆ ಇದ್ದರೆ; ತತ್ತ್ವಜ್ಞಾನವನ್ನು ಮತ್ತೊಂದು ಕಡೆ ಹೇಳುತ್ತವೆ. ಮೇಲಿನ ವಿಚಾರಗಳು ಶಂ.ಬಾ. ಜೋಶಿ ಅವರು ಭಾರತೀಯ ಪ್ರಾಚ್ಯೇತಿಹಾಸಕ್ಕೆ ಕೊಟ್ಟಿರುವ ನೂತನ ಕೊಡುಗೆಗಳೆಂದು ಧಾರಾಳವಾಗಿ ಹೇಳಬಹುದು. ಪ್ರಧಾನವಾಗಿಯಂತೂ ಅವರು ತಮ್ಮ ಈಚಿನ ಎಲ್ಲಾ ಕೃತಿಗಳಲ್ಲೂ ಮೇಲಿನ ಅಂಶವನ್ನು ಮುಖ್ಯ ಸೂತ್ರವಾಗಿ ಹಿಡಿದುಕೊಂಡು ಹೊರಟಿದ್ದಾರೆ. 'ವಿವಸ್ವಾನ್' ಮನುವಿನ ಆರಾಧಕರಾಗಬೇಕಿದ್ದ ನಾವು, ಸ್ವಯಂ ಭೂ ಮನುವಿನ ಇಕ್ಕಟ್ಟಿಗೆ ಸಿಕ್ಕಿದ್ದೇವೆ. ಇದನ್ನು ಬಿಡಿಸಿಕೊಳ್ಳದಿದ್ದರೆ ಭಾರತಕ್ಕೆ ಏನು, ಜಾಗತಿಕಕ್ಕೆ ಉಳಿಗಾಲವಿಲ್ಲ ಎಂಬ ಕಡುಸತ್ಯವನ್ನು ಹೇಳಹೊರಟಿದ್ದಾರೆ.

### ಸಾಹಿತಿಯ ವಿಶಿಷ್ಟತೆ

ಶಂ.ಬಾ. ಅವರು ಮೂಲತಃ ವಿಚಾರವಾದಿಗಳು. ವಿಚಾರವೇ ಜೀವನದ ಬೆಳಕು ಎಂಬ ಪ್ರಜ್ಞೆಯನ್ನು ಹೊತ್ತುಕೊಂಡು ಹೊರಟವರು. ಕಂನಡ ನಾಡಿನಲ್ಲೆ ಸಮರ್ಪಕವಾದ ಜಿಜ್ಞಾಸೆಗೆ ಹೆಜ್ಜೆ ಹಾಕಿದವರು. ಶಂ.ಬಾ. ಅವರು ತಾವು ಕೈಹಾಕಿದ ಪ್ರತಿಯೊಂದರಲ್ಲೂ ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡು ಬಂದಿದ್ದಾರೆ; ಕಂಡುಕೊಂಡಿದ್ದಾರೆ. ಲಿಖಿತ ಶಾಸನಾದಿಗಳು, ಕಾವ್ಯಗಳಿಂದ ಸಂಸ್ಕೃತಿಯ ಅಧ್ಯಯನ ನಡೆಯುತ್ತಿದ್ದ ಕಾಲದಲ್ಲಿ ಆಚಾರ, ಸಂಪ್ರದಾಯ, ಜಾನಪದ ನಂಬಿಕೆಗಳನ್ನು ಲೆಕ್ಕಿಸದೆ ಸಂಸ್ಕೃತಿ ಅಧ್ಯಯನ ಮಾಡಿದರೆ ಅದರಲ್ಲಿ ಅರ್ಥವಿಲ್ಲವೆಂದು ಹೇಳಿದ್ದಾದಲ್ಲದೆ ಅದನ್ನು ಮಾಡಿ ತೋರಿಸಿದರು. ಸಂಸ್ಕೃತಿಯ ಅಧ್ಯಯನಕ್ಕೆ ಭಾಷಾಶಾಸ್ತ್ರ, ಮನಃಶಾಸ್ತ್ರ, ಜೀವಶಾಸ್ತ್ರ, ಪರಾತತ್ತ್ವಶಾಸ್ತ್ರ, ಇತಿಹಾಸ ಶಾಸ್ತ್ರ, ದೈವತಶಾಸ್ತ್ರ ಹೀಗೆ ನಾನಾ 'ಶಾಸ್ತ್ರ' ಶಾಖೆಗಳ ನೆರವಿನಿಂದ ಅಧ್ಯಯನ ಮಾಡಿದರು. ಇವೆಲ್ಲವೂ ಅವರ ಪ್ರಧಾನವಾದ ಮುಖ್ಯಾಂಶಗಳಿಗೆ ತಾಳೆ ಹೊಂದಿದುವು ! ವಿ.ಸೀ. ಅವರು ಒಂದೆಡೆ "ಅಪಾರವಾದ ಬುದ್ಧಿಮತ್ತೆಯಿಂದ ತಮ್ಮ ಅಧ್ಯಯನವನ್ನು ಸ್ಪಷ್ಟವಾಗಿಸಿಕೊಂಡ ಧೀಮಂತ ಸಂಶೋಧಕ" ಎಂದೂ; ಶಿವರಾಮಕಾರಂತರು "ನಾಡುನುಡಿಗಳ ಬಗೆಗೆ ಪ್ರಾಂಜಲ ಮನಸ್ಸಿನಿಂದ ಜನಹಿತಕ್ಕಾಗಿ, ವಿವಸ್ವನ್ ಮನು ಮಾನವಧರ್ಮದ ಬಾಳಿಗಾಗಿ ತಮ್ಮ ಜೀವನವನ್ನೇ ಮುಡಿಪಿಟ್ಟ ಸತ್ಯಾನ್ವೇಷಕ" ಎಂದೂ ಹೇಳಿದ್ದಾರೆ.

ನಮ್ಮ ನಾಡಿನ ಗಣ್ಯ ವಿದ್ವಾಂಸರಲ್ಲಿ ಮೊದಲೋದಿಗೆ ವಿಶಿಷ್ಟತೆ ಇರುವುದನ್ನು ಕಾಣಬಹುದಾಗಿದೆ; ವೈಚಾರಿಕ ನೋಟವೇ ಇಲ್ಲದ ಕಾಲದಲ್ಲಿ ಜನಕ್ಕೆ ವೈಚಾರಿಕ ಒಳನೋಟವನ್ನು ನೀಡಿದವರು ಶಂ.ಬಾ. ಅವರು ಎಂದು ಹೇಳಿದರೆ ಅತ್ಯುಕ್ತಿಯಾಗಲಾರದು. ಕಂನಾಡ ಅಧ್ಯಯನಕ್ಕಾಗಿ ವೇದೋಪ ನಿಷತ್ತುಗಳವರೆಗೂ ಅಧ್ಯಯನ ಮಾಡಿದವರು; ವರ್ತಮಾನ ಕಾಲದ ವೈರುಧ್ಯಕ್ಕೆ ಕಾರಣವೇನು ಎಂಬುದಕ್ಕೆ ನಮ್ಮ ಪ್ರಾಚೀನ ಶಾಸ್ತ್ರ ಶಾಖೆಗಳ ಆಮೂಲಾಗ್ರ ವ್ಯಾಸಂಗ ಮಾಡಿದವರು. 'ಸತ್ಯವಾಗಿರಬೇಕು. ಸತ್ಯವಾಗಿ

ಮಾತಾಡಬೇಕು', ಎಂದಾಗ ಈ 'ಸತ್ಯ' ಸ್ವರೂಪ ಏನು ಎಂಬುದನ್ನು ಆಳವಾಗಿ ಚರ್ಚಿಸಿದವರು. ಸತ್ಯದ ಜಿಜ್ಞಾಸೆಯ ಬೆನ್ನು ಹತ್ತಿದವರು; ಬಾಳದಾರಿಯ ಬೆಳಕು ಯಾವುದೆಂಬುದನ್ನು ಕಂಡುಹಿಡಿಯಲು ಹೊರಟ 'ವಿಶ್ವಾಮಿತ್ರ' ಶಂ.ಬಾ. ಅವರು. 'ಎರಡಿಲ್ಲದ ಬಾಳುವೆಯೆ ಪೂರ್ಣಕೃತಿ' ಆಚಾರ-ವಿಚಾರಗಳಲ್ಲಿ ಅಂತರ ಶಕ್ಯವಿದ್ದಷ್ಟು ಕಡಿಮೆ ಇರಬೇಕು. ಸಮಾಜಸಮಷ್ಟಿಯ ತಾನೊಂದು ಎಂಬ ಅಂಶ ಬಂದಾಗ ಜಾತಿ, ವಿವಿಧ ಧರ್ಮ, ವರ್ಗ, ವರ್ಣ ಪಂಥಾಭಿಮಾನಗಳು ಬೆಳೆಯುವುದಕ್ಕೆ ಅವಕಾಶವಿಲ್ಲ ಎಂಬ ಸಾರ್ವಕಾಲಿಕ ಸತ್ಯವನ್ನು ತಮ್ಮ ಇಳಿವಯಸ್ಸಿನಲ್ಲೂ ಹೇಳುತ್ತ ಬಂದರು. ತಮ್ಮ ಎಂಭತ್ತೆಂಟನೆಯ ವಯಸ್ಸಿನಲ್ಲೂ ಅಧ್ಯಯನ-ಬರವಣಿಗೆಯಲ್ಲಿ ಮುಳುಗಿದ ಶಂ.ಬಾ. ಅವರು ಮಾನವತಾವಾದಿ, ಮಾನವ ಧರ್ಮದ ಏಳ್ಗೆಗಾಗಿ ಅವಿಶ್ರಾಂತವಾಗಿ ದುಡಿದವರು ಆಚಾರ ವಿಚಾರಗಳೆರಡರಲ್ಲೂ ಅಂತರವಿರದೆ ಬಾಳುವ ಪ್ರಯತ್ನವಿದ್ದವರು. ಅಮಾನವರಾಗದೆ ಮಾನವರಾಗಿ ಎನ್ನುತ್ತಿದ್ದರು.

1970ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನೂ, 1971ರಲ್ಲಿ ಮೈಸೂರು ವಿಶ್ವವಿದ್ಯಾಲಯ ಡಾಕ್ಟರೇಟ್ ಪದವಿಯನ್ನೂ ಗಳಿಸಿ, 1980ರಲ್ಲಿ ಅಭಿಮಾನಿ ಮಿತ್ರರು 'ಅಧ್ಯಯನ'ಎಂಬ ಅಭಿನಂದನ ಗ್ರಂಥ ನೀಡಿದ ಸನ್ಮಾನವನ್ನೂ, 1981ರಲ್ಲಿ ಮಡಿಕೇರಿಯಲ್ಲಿ ನಡೆದ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗುರುತರ ಹೊಣೆಯನ್ನೂ ನಿರ್ವಹಿಸಿದ್ದಾರೆ. ಇದರಿಂದ ನಾಡಿನ ಜನ ಶಂ.ಬಾ. ಅವರನ್ನು ಗುರುತಿಸಿ ಗೌರವಿಸಿದಂತಾಗುತ್ತದೆ.

'ಯತ್ ರೋಚತೇ ತತ್ ಗ್ರಾಹ್ಯಮ್'
(ಯಾವುದು ರುಚಿಸುತ್ತದೋ ಗ್ರಾಹ್ಯವೆನಿಸುತ್ತದೆ.)

❑

1. ಅಧ್ಯಯನ : ಎಂ. ಚಿದಾನಂದಮೂರ್ತಿ, ಅನುಬಂಧದಿಂದ ಮೇಲಿನ ಪಟ್ಟಿಯನ್ನು ಮಾತ್ರ ತೆಗೆದುಕೊಂಡಿದ್ದೇನೆ. ಅವರಿಗೆ ನನ್ನ ಕೃತಜ್ಞತೆ. ಆದರೆ, ಈ ತರದ ವಿಷಯ ವಿಭಾಗದ ಪಟ್ಟಿ ಅಸಮರ್ಪಕ, ಏಕೆಂದರೆ, ಸಂಸ್ಕೃತಿ-ಹಿಂದೂ ಧರ್ಮ ಎರಡೂ ಬೇರೆ ಬೇರೆ ಮಾಡಿದಾಗ ಎರಡರಲ್ಲೂ ಪರಸ್ಪರ ಸಾಂಗತ್ಯ ಇರುವುದರಿಂದ ಆ ವಿಷಯದಲ್ಲಿ ಇವು ಮಿಳಿತವಾಗುತ್ತವೆ. ಆದರೆ, ಮೇಲಿನದು ಸ್ಥೂಲ ವಿಭಾಗ ಅಷ್ಟೇ ಎಂದು ನನ್ನ ಅಭಿಪ್ರಾಯ.

# ದ.ರಾ. ಬೇಂದ್ರೆ

ಜಿ.ಎಸ್. ಸಿದ್ಧಲಿಂಗಯ್ಯ

ಚಿಕಿತ್ಸೆಗೆಂದು ಮುಂಬೈಗೆ ತೆರಳಿದ್ದ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು 26-10-86ರ ದೀಪಾವಳಿಯಂದು ಮುಂಬೈನಲ್ಲಿ ಕೀರ್ತಿಶೇಷರಾದದ್ದು ಒಂದು ವಿಪರ್ಯಾಸ. ಕನ್ನಡವನ್ನು ಹಾಗೂ ಕನ್ನಡ ನಾಡನ್ನು ಅಖಂಡವಾಗಿ ಪ್ರೀತಿಸಿದ ಆ ಮಾಂತ್ರಿಕ ಕವಿ ಅಂದು ಕೀರ್ತಿ ಶರೀರಿಗಳಾದರು. ಸಾಹಿತ್ಯ ಸಮ್ಮೇಳನದಲ್ಲಿ, ಕವಿಗೋಷ್ಠಿಗಳಲ್ಲಿ ಹಾಗೂ ಸಭೆಗಳಲ್ಲಿ ಜನರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತಿದ್ದ ಗಾರುಡಿಗಾರನ ದನಿ ಇಂದು ಕನ್ನಡಿಗರಿಗೆಲ್ಲ ಗುಂಗಾಗಿದೆ. ಅರಳು ಹುರಿದಂತೆ ಮಿಂಚಿನ ಮಾತಾಡುತ್ತಿದ್ದ ಆ ಕವಿಯ ರಸಪ್ಲಾವಿತ ರಸಿಕೋಕ್ತಿಗಳು ಸವಿಯ ನೆನಪುಗಳಾಗಿವೆ. ಅಷ್ಟೇ ಅಲ್ಲ ಬೇಂದ್ರೆಯವರು ಕನ್ನಡ ಸಂಸ್ಕೃತಿಯ ಒಂದು ಅವಿಭಾಜ್ಯ ಭಾಗವಾಗಿ ಹೋಗಿದ್ದಾರೆ.

ಅಂಬಿಕಾತನಯದತ್ತ ಕಾವ್ಯನಾಮದಿಂದ ಕನ್ನಡಿಗರ ಮನೆಮಾತಾಗಿದ್ದ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು ಮನ್ಮಥನಾಮ ಸಂವತ್ಸರದ ಮಾಘ ವದ್ಯಪ್ರತಿಪದೆಯೆಂದು (31-1-1896) ಧಾರವಾಡದ ಪೋತನೀಸರ ಓಣಿಯಲ್ಲಿರುವ ಗುಣಾರಿಯವರ ಮನೆಯಲ್ಲಿ ಹುಟ್ಟಿದರು. ಅವರ ತಂದೆ ರಾಮಚಂದ್ರ ಪಂತರು (ತಾತಂಭಟ್ಟ ಎಂದೂ ಅವರನ್ನು ಕರೆಯುತ್ತಿದ್ದರು), ತಾಯಿ ಅಂಬೂತಾಯಿ. ಗಂಡಮಾಲೆಯ ರೋಗದಿಂದ ತಂದೆ ತೀರಿಕೊಂಡ ಮೇಲೆ ತನ್ನ ಇನ್ನೊಬ್ಬ ಚಿಕ್ಕಪ್ಪ ಬಂಡೋಪಂತರ ಆಶ್ರಯದಲ್ಲಿ ಬೇಂದ್ರೆಯವರ ಬಡಕುಟುಂಬ ಆಸರೆ ಪಡೆಯಿತು. ಚಿಕ್ಕಪ್ಪನ ಆಶ್ರಯ ದಲ್ಲಿಯೇ ಬಿ.ಎ. ವರೆಗಿನ ಅಭ್ಯಾಸ, ಪುಣೆಯ ಫರ್ಗೂಸನ್ ಕಾಲೇಜಿನಲ್ಲಿ ನಡೆಯಿತು.

ವಿಕ್ಟೋರಿಯ ಹೈಸ್ಕೂಲಿನಲ್ಲಿ 3 ವರ್ಷ, ಮುಂದೆ ರಾಷ್ಟ್ರೀಯ ಶಾಲೆಯಲ್ಲಿ ಉದ್ಯೋಗ. ತಮ್ಮ 28ನೆಯ ವಯಸ್ಸಿನಲ್ಲಿ ಮಾತೃ ವಿಯೋಗ, ಮಧ್ಯೆ ಸೊಂಡೂರು ಸಂಸ್ಥಾನದಲ್ಲೂ ಸ್ವಲ್ಪಕಾಲದ ನೌಕರಿ. ಒಂದು ವರ್ಷ ಅಲೆದಾಟ, 1925ರಿಂದ 1932ರ ವರೆಗೆ ವಿಕ್ಟೋರಿಯ ಹೈಸ್ಕೂಲಿನಲ್ಲಿ ವಿವಿಧ ಕ್ಷೇತ್ರಗಳಲ್ಲಿ ದುಡಿಮೆ. ನರಬಲಿ ಕವನದ ಕಾರಣವಾಗಿ 3 ತಿಂಗಳು ಹಿಂಡಲಗಿ ಕಾರಾಗೃಹ ವಾಸ ಶಿಕ್ಷೆ. ಮತ್ತೆ ಅಲೆದಾಟ, 1935ರಿಂದ 40ರ ವರೆಗೆ 5 ವರ್ಷಗಳ ಕಾಲ ನಿರುದ್ಯೋಗ. ಅನಂತರ ಅಣ್ಣಾ ಮಾಸ್ತಿ ಅವರ ಬೆಂಬಲದಿಂದ "ಜೀವನ"ದ ಸಂಪಾದಕನೆಂಬ ಗೌರವ ವೃತ್ತಿ. 1 ವರ್ಷ ಗದಗಿನ ಚೌಹಾನ

ಪ್ರೌಢಶಾಲೆಯಲ್ಲಿ ಶಿಕ್ಷಕ ವೃತ್ತಿ. ಮತ್ತೆ ಒಂದು ವರ್ಷ ಹುಬ್ಬಳ್ಳಿಯ ಇಂಗ್ಲಿಷ್ ಸ್ಕೂಲಿನಲ್ಲಿ ಅಲ್ಪಾವಧಿ ವೃತ್ತಿ. 1942-43ರಲ್ಲಿ ಪೂನಾದ ಕಾಮರ್ಸ್ ಕಾಲೇಜಿನಲ್ಲಿ ಅರ್ಧಕಾಲಿಕ (ಪಾರ್ಟ್ ಟೈಮ್) ಕನ್ನಡ ಅಧ್ಯಾಪಕ ವೃತ್ತಿ. ಅನಂತರ 1944ರಲ್ಲಿ ಸೊಲ್ಲಾಪುರದ ಡಿ.ಎ.ವಿ. ಕಾಲೇಜಿನಲ್ಲಿ ಕನ್ನಡ ಪ್ರೊಫೆಸರ್ ವೃತ್ತಿ, ಸುಮಾರು 12 ವರ್ಷಗಳ ಕಾಲ ಈ ಹುದ್ದೆಯಲ್ಲೇ ಇದ್ದ ಇವರಿಗೆ 60 ಆಯಿತೆಂದು ಅಲ್ಲಿಂದ ನಿವೃತ್ತಿಯಾಯಿತು. 1956ರಲ್ಲಿ ಎ. ಐ. ಆರ್. ಸಂಸ್ಥೆಯಲ್ಲಿ ಮೊದಲು ಪ್ರೊಡ್ಯೂಸರ್ ಆಗಿ, ಆಮೇಲೆ ಸಲಹೆಗಾರರಾಗಿ ಧಾರವಾಡದಲ್ಲಿ ಮತ್ತೆ ಒಂದು ಉದ್ಯೋಗ. ಸರ್ಕಾರಕ್ಕೆ ಆಕಾಶವಾಣಿಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಪಿ.ಎಂ. ಲಾಡ್ ಅವರ ಮೂಲಕ ದೊರೆತ ಉದ್ಯೋಗ ಅದು. ಇಡೀ ಬದುಕಿನ ತುಂಬ ಉದ್ಯೋಗ ನಿರುದ್ಯೋಗಗಳ ಚೆಲ್ಲಾಟ. ಈ ಮಧ್ಯೆಯೂ ಧೃತಿಗೆಡದ ಕವಿಚೇತನ ಬೇಂದ್ರೆಯವರದು.

ಬೇಂದ್ರೆಯವರ ವಿವಾಹವಾದದ್ದು 1919ರಲ್ಲಿ, ಹುಬ್ಬಳ್ಳಿಯಲ್ಲಿ. ನರಗುಂದದಲ್ಲಿ ಸಾರ್ವಜನಿಕ ಸೇವಾ ಇಲಾಖೆಯಲ್ಲಿ ನೌಕರರಾಗಿದ್ದ ಶ್ರೀ ಜೋಗಳೇಕರ ವಾಸುದೇವರಾಯರ ಮಗಳಾದ ರಂಗೂತಾಯಿಯೇ ಇವರ ಮಡದಿ. ಬೇಂದ್ರೆ ಮನೆತನಕ್ಕೆ ಬಂದ ಮೇಲೆ ಅವರ ಹೆಸರು ಲಕ್ಷ್ಮೀಬಾಯಿ. ಲಕ್ಷ್ಮೀಬಾಯಿ ಹಾಗೂ ಬೇಂದ್ರೆಯವರ ಸಂಸಾರ ಕಂಡದ್ದು ಹೆಚ್ಚಾಗಿ ಕಷ್ಟದ ದಿನಗಳು. ಅದರಲ್ಲಿಯೂ ಹುಟ್ಟಿದ 9 ಮಕ್ಕಳಲ್ಲಿ 6 ಮಕ್ಕಳು ಕಣ್ಣ ಮುಂದೆಯೇ ಇಲ್ಲವಾಗಿ ಉಳಿದವರು 2 ಗಂಡು ಮಕ್ಕಳು (ವಾಮನ ಬೇಂದ್ರೆ ಮತ್ತು ಪಾಂಡುರಂಗ ಬೇಂದ್ರೆ) ಮತ್ತು ಒಬ್ಬಳು ಮಗಳು ಶ್ರೀಮತಿ ಮಂಗಳ. ಬಡತನದ ಕುಲುಮೆಯಲ್ಲಿ ಬೇಯುತ್ತಿದ್ದಂತೆಯೇ ಕರುಳ ಕುಡಿಗಳು ಕಣ್ಣಮುಂದೆ ಬಾಡಿಹೋದಾಗ ಆ ದುಃಖದ ಅನುಭವವನ್ನು ಎದೆಯಲ್ಲಿ ತುಂಬಿಕೊಂಡವರು ಅವರು.

ಇಷ್ಟಾದರೂ ಬೇಂದ್ರೆಯವರ ದೃಷ್ಟಿ 'ಬಡತನ ಸಿರಿತನ ಕಡೆತನಕ ಉಳಿದಾವೇನ' ಎಂಬುದು. ಅಲ್ಲದೆ ಅವರ ಕಾವ್ಯದ ಮೂಲದೃಷ್ಟಿ-ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೇ ನೀಡುವೆನು ರಸಿಕ ನಿನಗೆ-ಎಂಬ ರಸಯೋಗಿಯ ಸಂಕಲ್ಪದಿಂದ ಪ್ರಚೋದಿತವಾದದ್ದು. ರಸವೆ ಜನನ ವಿರಸ ಮರಣ ಸಮರಸವೇ ಜೀವನ ಎಂದು ಬದುಕನ್ನು ಎದೆಗಪ್ಪಿಕೊಂಡು ಅರಳಿದ ಕಾವ್ಯಚೇತನ ಅವರದ್ದು.

ಬೇಂದ್ರೆ ಅಥವಾ ಬೇನ್‌ರೆ ಅಂದರೆ ದೇವಾಲಯಗಳಲ್ಲಿ ಋಕ್ ಮಂತ್ರಗಳನ್ನು ಪಠಿಸುವವರು ಎಂಬ ಅರ್ಥ ಇದೆಯಂತೆ (ಪುಟ 8, ಕವಿ ಚತುರ್ಮುಖ, ಮನ್ವಂತರ1, ಲೇಖಕರು-ದ.ರಾ. ಬೇಂದ್ರೆ, ಮನ್ವಂತರ ಪ್ರಕಾಶನ, ಧಾರವಾಡ, ಸಂಪಾದಕ ಜಿ.ಬಿ. ಜೋಷಿ). ಇವರ ಮೂಲ ವಂಶಜರು ಮಹಾರಾಷ್ಟ್ರದ ರತ್ನಗಿರಿಯಿಂದ ಬಂದು ಕರ್ನಾಟಕದ ಶಿರಹಟ್ಟಿಯಲ್ಲಿ ನೆಲೆಸಿದರು. ಇವರ ಮುತ್ತಜ್ಜ ರಾಮಭಟ್ಟ ಎಂಬುವವರು ಕೊನೆಗೆ ಸಂನ್ಯಾಸ ದೀಕ್ಷೆ ಪಡೆದು ಸಮಾಧಿಸ್ಥರಾದರೆ, ಬೇಂದ್ರೆಯವರ ಅಜ್ಜ ಅಪ್ಪಾಭಟ್ಟ ತಪಃಶಕ್ತಿಯ ಜೊತೆಗೆ ಕಾವ್ಯಶಕ್ತಿಯನ್ನೂ ಪಡೆದಿದ್ದರಂತೆ. ಪಾರ್ವತಿ ಪರಿಣಯ ಎಂಬ ಇವರ ಕೀರ್ತನೆ ತುಂಬಾ ಖ್ಯಾತವಾಗಿದ್ದಿತಂತೆ. ಇವರು ಸತ್ಯನಾರಾಯಣ ಕಥೆಯನ್ನೂ ರಚಿಸಿದ್ದರೆಂದು ಹೇಳುತ್ತಾರೆ.

ಬೇಂದ್ರೆಯವರ ಬದುಕಿನಲ್ಲಿ ಪ್ರಭಾವ ಬೀರಿದ ವ್ಯಕ್ತಿಗಳ ಹೆಸರುಗಳನ್ನು ಹೇಳುವುದು ಅಷ್ಟು ಸುಲಭದ ಮಾತಲ್ಲ. ಅಂಬೂತಾಯಿಯೇ ಅವರ ಬದುಕಿನ ಮೊದಲ ಪ್ರೇರಕಶಕ್ತಿ. ಅವರ ಸಂಕೇತವಾಗಿಯೇ ತಮ್ಮ ಕಾವ್ಯನಾಮವನ್ನು ಅಂಬಿಕಾತನಯದತ್ತ ಎಂದು ಮಾಡಿಕೊಂಡರು. ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು ಗೀತೆಯ ಕವಿ ಹುಯಿಲಗೋಳ ನಾರಾಯಣರಾಯರು ಇವರ ಶಿಕ್ಷಕ ವರ್ಗದಲ್ಲಿ ಒಬ್ಬರಾಗಿದ್ದರು. ಇನ್ನೊಬ್ಬ ಮಹತ್ವದ ವ್ಯಕ್ತಿಯೆಂದರೆ ಪುಣೆಯ ಫರ್ಗ್ಯೂಸನ್ ಕಾಲೇಜಿನ ಆಂಗ್ಲಭಾಷೆಯ ಪ್ರಾಧ್ಯಾಪಕರಾದ ಪಟವರ್ಧನ ಅವರು. ಬಾಲ್ಯದುದ್ದಕ್ಕೂ ಆಸರೆ ಯಾಗಿದ್ದವರು ಅವರ ಕಕ್ಕ ಬಂಡೋಪಂತರು. ಅಧ್ಯಯನ ಬೇಂದ್ರೆಯವರ ಬದುಕಿನ ಒಂದು ಅವಿಭಾಜ್ಯ ಅಂಗ. ಸಂಸ್ಕೃತ, ಕನ್ನಡ, ಇಂಗ್ಲಿಷ್ ಹಾಗೂ ಮರಾಠಿ ಸಾಹಿತ್ಯಗಳನ್ನು ಅಧ್ಯಯನ ಮಾಡಿದವರು ಅವರು. ಎಲ್ಲಕ್ಕಿಂತ ಅತಿ ಮುಖ್ಯವಾದ ವಿಷಯ ಎಂದರೆ ಇವರ ಬದುಕು ಮರಾಠಿ, ಕನ್ನಡ ದ್ವಿಭಾಷಾ ವಾತಾವರಣದಲ್ಲಿದ್ದುದು. ಕನ್ನಡದಲ್ಲಿ ಇಂಥ ದ್ವಿಭಾಷಾ, ದ್ವಿಸಂಸ್ಕೃತಿಗಳ ವಾತಾವರಣದಲ್ಲಿ ಮಾಸ್ತಿ, ಡಿ.ವಿ.ಜಿ., ಪು.ತಿ.ನ. ಅವರೂ ಇದ್ದವರೇ ಎಂದರೂ ಬೇಂದ್ರೆಯವರ ಕಾವ್ಯದಲ್ಲಿ ಮರಾಠಿ, ಕನ್ನಡ ಭಾಷಾ ಸಂಸ್ಕೃತಿಗಳ ಸಂಗಮದ ಫಲಸಮೃದ್ಧಿಯನ್ನು ಕಾಣಬಹುದಾಗಿದೆ. ಮರಾಠಿಯ ಜ್ಞಾನೇಶ್ವರಿ, ರಾಮಾಯಣ, ಮಹಾಭಾರತ, ಭಾಗವತ, ವಚನಗಳು, ಕೀರ್ತನ ಸಾಹಿತ್ಯ, ತತ್ವಜ್ಞಾನ, ಸಂಖ್ಯಾಶಾಸ್ತ್ರ, ಖಗೋಳಶಾಸ್ತ್ರ, ಜೋತಿಷ್ಯಶಾಸ್ತ್ರ, ಕಾವ್ಯಮೀಮಾಂಸೆ, ಅಲಂಕಾರ, ಉಪನಿಷತ್ತು, ಪಾಣಿನಿಯ ವ್ಯಾಕರಣ, ಕನ್ನಡ ಸಾಹಿತ್ಯ-ಹೀಗೆ ಬಹು ಮುಖ್ಯವಾದ ಅಧ್ಯಯನದಿಂದ ಸಮೃದ್ಧಗೊಂಡ ಚೇತನ ಬೇಂದ್ರೆಯವರದು. ವಿಶ್ವದ ಮಹಾಕವಿಗಳು, ಹಾಗೆಯೇ ಖಲಿಲ್ ಜಿಬ್ರಾನ್, ಜಾರ್ಜ್ ರಸೆಲ್, ಜೆ. ಕೃಷ್ಣಮೂರ್ತಿ, ಅರವಿಂದ, ಸ್ವಾಮಿ ರಾಮದಾಸ್, ಮಾರಿಸ್ ಮೆಟರ್ಲಿಂಕ್ ಇಂಥ ದಾರ್ಶನಿಕರ ಅನುಭವ ಚಿಂತನ ಸಮುದ್ರಗಳನ್ನು ಕುಡಿದ ಅಗಸ್ತ್ಯ ಇವರು. ಇಂಗ್ಲಿಷ್, ಕನ್ನಡ, ಸಂಸ್ಕೃತ ಮತ್ತು ಮರಾಠಿ ಸಾಹಿತ್ಯಗಳ ಅತ್ಯಂತ ಆತ್ಮೀಯವಾದ ಒಡನಾಟ ಪಡೆದಿದ್ದ ಈ ವ್ಯಕ್ತಿತ್ವದಲ್ಲಿ ಎರಡು ಭಾಷಾ ಸಂಸ್ಕೃತಿಗಳ ಸಂಗಮವಾಗಿದ್ದಂತೆಯೇ ನಗರ ಹಾಗೂ ಜಾನಪದ ಸಂಸ್ಕೃತಿಗಳು ಸಂಗಮಗೊಂಡಿದ್ದವು.

ಕನ್ನಡ ಕಾವ್ಯ ಪರಂಪರೆಯನ್ನು ಜೀವಂತವಾಗಿ ಮುಂದುವರೆಸುವುದರಲ್ಲಿ ಅಂಬಿಕಾತನಯದತ್ತರ ಪಾತ್ರ ಹಿರಿದಾದುದು. ಅವರ ಮೊದಲನೇ ಕವನ ಸಂಕಲನವಾದ 'ಗರಿ'ಯಲ್ಲಿ ಹೇಳಿರುವ ಈ ಮಾತುಗಳನ್ನು ಗಮನಿಸಿದರೆ ಈ ಕವಿಯ ದೃಷ್ಟಿ ವಿಶದವಾದೀತೆಂದು ಅನಿಸುತ್ತದೆ-"ಕನ್ನಡದ ಅಶರೀರವಾಣಿಯು ಸಾವಿರ ಬಾಯಿಗಳಿಂದ ತನ್ನ ಕನಸನ್ನು ಕನ್ನಡಿಸುತ್ತಿದೆ. ಆ ಸಾವಿರ ಬಾಯಿಗಳಲ್ಲಿ ನನ್ನದೊಂದು. ಅದೇ ನನ್ನ ಧನ್ಯತೆ" ಎಂದು ಸಹೃದಯರಿಗೆ ನಿವೇದಿಸಿಕೊಳ್ಳುವ ಮಾತು ಬೇಂದ್ರೆಯವರ ಪ್ರತಿಭೆಯ ದ್ಯೋತಕವಾಗಿದೆ. ಹೀಗಾದುದರಿಂದಲೇ ಕನ್ನಡದ ಎಲ್ಲ ಒಳ್ಳೆಯ ಕಾವ್ಯವು ತನ್ನದೇ ಎನ್ನುವ ನಿರ್ಮತ್ಸರದ ಅಭಿಮಾನ ತಾನೇ ತಾನಾಗಿ ಮೂಡಿತು. ಗೆಳೆಯರ ಗುಂಪನ್ನು ಕಟ್ಟಿ ವಿ.ಕೃ. ಗೋಕಾಕ, ಬೆಟಗೇರಿ ಕೃಷ್ಣಶರ್ಮ, ಮಧುರಚೆನ್ನ, ರಂ.ಶ್ರೀ. ಮುಗಳಿಯಂಥ ಕವಿಗಳ ಬಳಗವನ್ನೇ ಕಟ್ಟಿದರು. ಆ ಗುಂಪು ಕರ್ನಾಟಕದ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಇತಿಹಾಸದ ಒಂದು ಜೀವಂತ ಭಾಗವಾಗಿ ಉಳಿದಿದ್ದಷ್ಟೇ ಅಲ್ಲ ಕವಿಗೆ ಕವಿ ಮುನಿವ ಎಂಬ ಗಾದೆಯನ್ನು ಸುಳ್ಳಾಗಿಸಿತು. ಅದಕ್ಕಿಂತ ಮುಖ್ಯವಾದ ಮಾತು ಎಂದರೆ ಕನ್ನಡದ ತಮ್ಮ ಸಮಕಾಲೀನ ಕವಿಗಳನ್ನು ಕುರಿತ ಅವರ ಧೋರಣೆ. ಯುಗದ ಕವಿಗೆ, ಜಗದ ಕವಿಗೆ ನಮಸ್ಕಾರ ಎಂದು ಕುವೆಂಪು ಅವರನ್ನು ಅಭಿನಂದಿಸುತ್ತ ಅವರ ಚಿತ್ರಾಂಗದಾ ಕಾವ್ಯವನ್ನು ಕುರಿತು ಹೇಳುವಾಗ ಹಿಂದಿನ ಮಹಾಕಾವ್ಯವನ್ನು ಮೀರಿಸಲಿದೆ ಎಂದು ಅಭಿಮಾನಪಟ್ಟಿದ್ದು ಬೇಂದ್ರೆಯವರ

ಮುಕ್ತ ಪ್ರಶಂಸೆಯ ಕವಿಹೃದಯವನ್ನು ಪರಿಚಯಿಸುತ್ತದೆ. ಬೇಂದ್ರೆಯವರ ಸನಿಹಕ್ಕೆ ಹೋದ ಹೆಚ್ಚು ಕನ್ನಡ ಕವಿಗಳ ಭಾವನೆ ಹೀಗಿದೆ.

ಬೇಂದ್ರೆಯವರ ಮತ್ತೊಂದು ಮಹತ್ತರ ಸಾಧನೆ ಭಾಷೆಯನ್ನು ಕುರಿತದ್ದು. ಗರಿಯ ಆರಂಭದಲ್ಲಿ "ಇಲ್ಲಿ ತುಂಗಭದ್ರೆಯ ಉತ್ತರಾಪಥದ ದೇಶೀಯ ಮಾರ್ಗವನ್ನು ಹುಡುಕುವ ಹಾಗೆ ಹುಟ್ಟಿಸುವ ಕುರುಹಿದೆ" ಎಂದ ಬೇಂದ್ರೆಯವರ ಮಾತು ಕೇವಲ ಆಶಯವಾಗಿ ಉಳಿದಿಲ್ಲ. ಒಂದು ಕಡೆ ಮರಾಠಿ ಭಾಷೆ, ಮತ್ತೊಂದು ಕಡೆ ಕನ್ನಡ ಹೀಗೆ ದ್ವಿಭಾಷಾ ಪರಂಪರೆಯ ನೆತ್ತರೂಡಿಸಿಕೊಂಡ ಈ ಪ್ರತಿಭೆಗೆ ಉತ್ತರ ಕನ್ನಡದ ದೇಸಿ ಕೇವಲ ಉಪಭಾಷೆಯಾಗಿಲ್ಲ. ಒಂದು ಸಾಂಸ್ಕೃತಿಕ ಪರಂಪರೆಯ ಬಳುವಳಿ ಯಾಗಿ ಬಂದಿದೆ. ಆ ವರೆಗೆ ಬೇರಾವ ಕವಿಯೂ ರೂಢಿಸಿಕೊಳ್ಳಲು ಆಗದಿದ್ದ ಮಟ್ಟದಲ್ಲಿ ದೇಸಿ, ಗೇಯ ರೂಪಗಳು ಮರಾಠಿ ಗೇಯ ರೂಪಗಳೊಂದಿಗೆ ಮೇಳಗೊಂಡು ಬೇಂದ್ರೆಯವರ ಕಾವ್ಯಕ್ಕೆ ಗೇಯತೆಯ ಸೊಬಗನ್ನು ಮೂಡಿಸಿವೆ. ಬೆಳಗು, ಕುಣಿಯೋಣು ಬಾರಾ, ಯುಗಾದಿ, ಗಮ ಗಮಾ ಗಮಾಡಿಸ್ತಾವ, ನಾದಲೀಲೆ, ಕುರುಡು ಕಾಂಚಾಣ, ನೀ ಹೀಂಗ ನೋಡಬ್ಯಾಡ ನನ್ನ, ದವನದ ಹುಣ್ಣಿಮೆ, ಸಖೀಗೀತ, ಮನಸಖರಾಯ ಇಂಥ ಅನೇಕ ಕವಿತೆಗಳು ಕವಚಕುಂಡಲಧಾರಿಯಾಗಿಯೇ ಹುಟ್ಟಿದ ಕರ್ಣನಂತೆ ಗೇಯತೆಯೊಂದಿಗೇ ಮೂಡಿಬಂದಿವೆ. ಇಲ್ಲಿಯ ಗೇಯತೆಯಲ್ಲಿ ಕನ್ನಡ ಜಾನಪದ ಹಾಗೂ ಮರಾಠಿ ಭಾಷೆಯ ಅನೇಕ ಲಯಗಳು ತುಂಬಿಕೊಂಡಿದ್ದು ಎಷ್ಟೋ ಕಡೆ ಅಂಶಲಯ ಮಾತ್ರಾಲಯಗಳು ಕೈಕೈ ಹಿಡಿದು ನಡೆಯುವ ಈ ಸಿದ್ಧಿ ಕನ್ನಡಕ್ಕೆ ವಿಶಿಷ್ಟವಾದದ್ದು ಎನ್ನಬೇಕು.

ಬೇಂದ್ರೆಯವರ ಭಾಷೆ ಇವರೇ ಹೇಳಿದಂತೆ ಉತ್ತರಾಪಥದ ದೇಶೀಯ ಮಾರ್ಗವನ್ನು ಹುಡುಕುವ ಯತ್ನವಾಗಿ ಮಾತ್ರ ಉಳಿದಿಲ್ಲ; ಅವನ್ನು ಹೊಸದಾಗಿ ಹುಟ್ಟಿಸುವ ಸಿದ್ಧಿಯೂ ಆಗಿದೆ. ಹೀಗಾಗಿಯೇ ಇವರ ಕಾವ್ಯದಲ್ಲಿ ಜಾನಪದದ ಪರಂಪರೆ ಮುಂದುವರೆದ ಸೂಚನೆಯಂತೆ ಕನ್ನಡದ ಕಾವ್ಯಭಾಷೆಯ ಸಾತತ್ಯವನ್ನು ಉಳಿಸುವ ಸಿದ್ಧಿಯೂ ನಡೆದಿದೆ. ಯುಗಾದಿ, ಪುಟ್ಟವಿಧವೆಯಂಥ ಕವಿತೆಗಳು ಈ ದೃಷ್ಟಿಯಿಂದ ಪರಿಶೀಲನೆಗೆ ಅರ್ಹವಾಗಿವೆ. ಬೇಂದ್ರೆಯವರ ಭಾಷೆಗೆ ಪಾತ್ರವಾದ ಮತ್ತೊಂದು ಆಯಾಮ ಎಂದರೆ ಅದು ಗ್ರಾಮ್ಯ ಹಾಗೂ ನಗರ ಜೀವನ ಹಾಗೂ ಭಾಷೆಗಳಿಂದ ಸಮೃದ್ಧವಾದದ್ದು. "ಮೈಸೂರು, ಧಾರವಾಡ, ಮಂಗಳೂರು ಎಂಬ ಭೇದವಡಗಿ ಹಳ್ಳಿಪಳ್ಳಿಗಳಲ್ಲಿಯೂ ಹೆಣ್ಣುಗಂಡು ಎಲ್ಲರೂ ಒಂದೇ ಕನ್ನಡವನ್ನು ಆಡಬೇಕು" ಎಂಬ ಅವರ ಆಶಯ ಅವರ ಕಾವ್ಯದಲ್ಲಿ ತಕ್ಕಮಟ್ಟಿಗೆ ಸಾಧಿತವಾಗಿರುವುದನ್ನು ನೋಡಬಹುದು.

ಬೇಂದ್ರೆಯವರ ಕಾವ್ಯದ ಮತ್ತೊಂದು ವೈಶಿಷ್ಟ್ಯ ಎಂದರೆ ಬದುಕೇ ಕಾವ್ಯವಾಗುತ್ತ ಹೋಗುವ ಪವಾಡ ಸದೃಶಕ್ರಿಯೆ. ನೀ ಹೀಂಗ ನೋಡಬ್ಯಾಡ ನನ್ನ, ನಾನೊಂದು ನೆನೆದರೆ, ಸಖೀಗೀತ, ನಾದ ಲೀಲೆ, ಪಾಡು, ಹೋದ ಬುಧವಾರ-ಇಂಥ ಕವಿತೆಗಳು ಅವರ ಬದುಕಿಗೆ ತೀವ್ರವಾದ ಆಘಾತವುಂಟು ಮಾಡಿದ ಮಗನ ಸಾವು, ಸಂಸಾರದ ವಿರಸ, ತನ್ನ ಬದುಕಿನ ಕಥೆ-ವ್ಯಥೆಗಳು, ಮಡದಿ ತನ್ನನ್ನು ಬಿಟ್ಟು ಹೋದದ್ದು, ಇಂಥ ಘಟನೆಗಳಿಂದ ಮೂಡಿದವುಗಳಾಗಿವೆ. ಬದುಕೇ ಕಾವ್ಯವಾಗುವ ಸಹಜ ಕವಿ ಹೃದಯವನ್ನು ಇಂಥ ಕಡೆ ಗುರುತಿಸಬಹುದು. ಬದುಕಿಗೆ ತೀವ್ರವಾಗಿ ಸ್ಪಂದಿಸುವ ಕವಿಚೇತನವಾದ್ದರಿಂದಲೇ ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ, ಪಾತರಗಿತ್ತಿ ಪಕ್ಕಗಳ ವೈಭವಗಳನ್ನು ನವಿಲು ಗರಿಗೆದರಿದಂತೆ ಮೈತೆರೆಯುತ್ತಾ ಹೋಗುತ್ತದೆ. ಶ್ರಾವಣವಾಗಲಿ, ಧಾರವಾಡದ ಚೆಲುವಾಗಲಿ ಬದುಕಿನ ಕಾವ್ಯ ಅಥವಾ ಸುಂದರ ಮುಖವಾಗಲೀ ಈ ಪ್ರತಿಭೆಗೆ ಸದಾ ಆಹ್ವಾನವಾಗಿರುತ್ತದೆ. ಕನ್ನಡದಲ್ಲಿ ಬೇಂದ್ರೆಯವರಷ್ಟು ವಿಪುಲವಾಗಿ ಹಾಗೂ ಕಾವ್ಯಮಯವಾಗಿ ಕೌಟುಂಬಿಕ ಗೀತೆಗಳನ್ನು ರಚಿಸಿದ ಕವಿಯನ್ನು ಕಾಣುವುದು ಕಷ್ಟ. ಗಂಡು ಹೆಣ್ಣಿನ ಪ್ರೀತಿ ಹಾಗೂ ವಿರಸ ವಿಕೋಪಗಳನ್ನು ತುಂಬಾ ಕಾವ್ಯಮಯ ವಾಗಿಸಿದ ಪ್ರತಿಭೆ ಇವರದ್ದು.

ಬೇಂದ್ರೆಯವರ 27 ಕವನ ಸಂಕಲನಗಳು ಪ್ರಕಟವಾಗಿವೆ.[1] ಮಹಾಕಾವ್ಯವೊಂದನ್ನು ಅವರು ಬರೆದಿಲ್ಲ ಎಂಬುದು ನಿಜವಾದರೂ ಈ ಕವನ ಸಂಕಲನಗಳನ್ನು ಅವಲೋಕಿಸಿದಾಗ ಬದುಕನ್ನು ಅದರ ಆಳ, ವಿಸ್ತಾರ ಹಾಗೂ ವೈವಿಧ್ಯದಲ್ಲಿ ಕಂಡರಿಸಿದ ಮಹಾ ಪ್ರತಿಭೆಯೊಂದು ನಮಗೆದುರಾಗುತ್ತದೆ. ವಚನ ಪರಂಪರೆಯಲ್ಲಿ ರಚಿತವಾದ ವಿನೂತನ ಕಾಂತಿಯ ಕರುಳಿನ ವಚನಗಳು, ಮಾಂತ್ರಿಕತೆಯಿಂದ ಕಳಕಳಿಸುವ ಸುನೀತಗಳು ಅಲ್ಲದೆ ಕನ್ನಡದ ಅನುಭಾವ ಪರಂಪರೆಯನ್ನು ಮುಂದುವರೆಸಿರುವುದು ಬೇಂದ್ರೆಯವರ ಕಾವ್ಯದ ವೈಶಿಷ್ಟ್ಯವಾಗಿದೆ. ಬೆಳಗು ರೀತಿಯ ನಿಸರ್ಗ ಗೀತೆಯಿಂದ ಆರಂಭಿಸಿದ ಜೋಗಿ, ಓಂ ಸಚ್ಚಿದಾನಂದ ಇಂಥ ಕವಿತೆಗಳವರೆಗೆ ಇದರ ಹರವಿದೆ. ಕನ್ನಡದ ಪರಂಪರೆಯನ್ನು ಹಾಡಿ ಕರ್ನಾಟಕದ ಏಕೀಕರಣದ ಸಂಘಟನೆಯನ್ನು ಇವರ ಕಾವ್ಯ ನಡೆಸಿದ ರೀತಿ ಮುಖ್ಯವಾದದ್ದು. ಮಾನವನನ್ನು ಸದಾ ಕಾಡುವ ಹಸಿವು, ಬಡತನಗಳು ಕೂಡ ಅನ್ನದೇವರು, ಅನ್ನಬ್ರಹ್ಮದ ದೇಗುಲದಲ್ಲಿ ಇಂಥ ಕವಿತೆಗಳಿಗೆ ಕಾರಣವಾಗಿವೆ. ಬಂಗಾಳದಲ್ಲಿ ನಡೆದ ಮಾರಣ ಹೋಮವನ್ನು ಕುರಿತು ಬರೆದ 'ನರಬಲಿ' ಕವಿಯನ್ನು ಅಂದಿನ ಸರ್ಕಾರದ ಕೋಪಕ್ಕೂ ಗುರಿಯಾಗಿಸಿ ಸೆರಮನೆಗೆ ತಳ್ಳಿದ್ದು ಒಂದು ಐತಿಹಾಸಿಕ ಘಟನೆ. ಬದುಕಿನ ಬಡತನ, ಕಷ್ಟ-ಕಾರ್ಪಣ್ಯದ ಮಧ್ಯೆಯೂ ನಿಸರ್ಗದ ಹಾಗೂ ಬದುಕಿನ ಬಡತನ, ಕಷ್ಟ-ಕಾರ್ಪಣ್ಯದ ಮಧ್ಯೆಯೂ ನಿಸರ್ಗದ ಹಾಗೂ ಬದುಕಿನ ಸೌಂದರ್ಯವನ್ನು ಬೊಗಸೆ ಬೊಗಸೆಯಾಗಿ ಸವಿದ, ಹಾಗೆಯೇ ಬದುಕಿದ ಧೀಮಂತ ಪ್ರತಿಭೆ ಬೇಂದ್ರೆಯವರದು. ನಾದದ ನದಿಯೊಳು ಮಿಂದಾಗ ಸೂಜಿ ಹಿಂದ ದಾರದಾಂಗ ಇಂಥ ಅತ್ಯುತ್ತಮವಾದ ಅನೇಕ ಕಾವ್ಯಪಂಕ್ತಿಗಳನ್ನು ಬೇಂದ್ರೆಯವರ ಕಾವ್ಯದ ತುಂಬಾ ಕಾಣಬಹುದು. ಅದಕ್ಕೆ ಕಾರಣ ಈ ಪ್ರತಿಭೆ ವಿಶೇಷವಾಗಿ ರೂಪಕಗಳ ಮೂಲಕವೇ ಕ್ರಿಯಾತ್ಮಕವಾಗತೊಡಗುವುದು. ಉದಾಹರಣೆಯಾಗಿ ಅತ್ಯಂತ ಸರಳ ಎಂಬಂತೆ ಕಾಣುವ ಬಡವ ಬಡವಿ ಕವನವನ್ನೇ ನೋಡಬಹುದು.

ನಾನು ಬಡವಿ ಆತ ಬಡವ  
ಒಲವೆ ನಮ್ಮ ಬದುಕು  
ಬಳಸಿಕೊಂಡೆವದನೆ ನಾವು  
ಅದಕು ಇದಕು ಎದಕು  
ಹತ್ತಿರಿರಲಿ ದೂರವಿರಲಿ  
ಅವನೆ ರಂಗಸಾಲೆ  
ಕಣ್ಣುಕಟ್ಟುವಂಥ ಮೂರ್ತಿ  
ಕಿವಿಗೆ ಮೆಚ್ಚಿನೋಲೆ  
ಚಳಿಗೆ ಬಿಸಿಲಿಗೊಂದೆ ಹದನ

ಅವನ ಮೈಯ್ಯಮುಟ್ಟೆ
ಅದೇ ಗಳಿಗೆ ಮೈಯ ತುಂಬ
ನನಗೆ ನವಿರು ಬಟ್ಟೆ
ಆತ ಕೊಟ್ಟ ವಸ್ತು ಒಡವೆ
ನನಗೆ ಅವಗೆ ಗೊತ್ತು
ತೋಳುಗಳಿಗೆ ತೋಳಬಂದಿ
ಕೆನ್ನೆತುಂಬ ಮುತ್ತು
ಕುಂದುಕೊರತೆ ತೋರಲಿಲ್ಲ
ಬೇಕು ಹೆಚ್ಚಿಗೇನು?
ಹೊಟ್ಟೆಗಿತ್ತ ಜೀವಫಲವ
ತುಟಿಗೆ ಹಾಲು ಜೇನು

ಮೊದಲ ನಾಲ್ಕು ಸಾಲುಗಳಲ್ಲಿ ಅರ್ಥ ಹಂತ ಹಂತವಾಗಿ ಬೆಳೆಯುವುದನ್ನು ನೋಡಬಹುದು. ಅವರಿಬ್ಬರೂ ಬಡವರೆಂದೇ ಮೊದಲ ಸಾಲು ಆರಂಭವಾದರೂ ಎರಡನೆಯ ಸಾಲು ಈ ಇಬ್ಬರ ಬದುಕು ಪರಸ್ಪರ ಅವರಿಬ್ಬರಲ್ಲಿ ಒಂದು ಜೀವ ಮತ್ತೊಂದು ಜೀವದ ಕಡೆಗೆ ಒಲೆಯುವುದೇ ಒಲವಾಗಿ 'ಒಲೆ' ಶಬ್ದದ ಅರ್ಥಚ್ಛಾಯೆಗಳನ್ನೆಲ್ಲ ಬಳಸಿಕೊಳ್ಳುತ್ತ ಕವಿಯ ಅಭಿವ್ಯಕ್ತಿ ಶಕ್ತಿಯನ್ನು ಧ್ವನಿಸುತ್ತದೆ. ಮುಂದಿನ ಎರಡು ಸಾಲುಗಳ ಕೊನೆ ಸಾಲು ಒಲಿಯುವ ಹೃದಯವೊಂದಿದ್ದರೆ ಏನೆಲ್ಲವನ್ನು ಪಡೆಯ ಬಹುದೆಂಬುದನ್ನು ಸೂಚಿಸುತ್ತದೆ.

ಎರಡನೆಯ ಪದ್ಯದಲ್ಲಿ ಪ್ರೀತಿಯಿಂದ ಪಡೆದದ್ದೇನು ಎಂಬುದರ ಮೊದಲ ಹೆಜ್ಜೆಯಿದೆ. ಬಡವನಾದರೂ ಒಲಿದವನು ಹತ್ತಿರವೇ ಇರಲಿ, ದೂರವೇ ಇರಲಿ ತನ್ನನ್ನು ಕುಣಿಸುವ ರಂಗಸಾಲೆಯಾಗುವುದು. ಆತನ ರೂಪ ಕಣ್ಣಿಗೆ ಕಟ್ಟುವಂತೆ ಪ್ರಿಯವಾಗಿ ಕಣ್ಣಲ್ಲೆ ನೆಲಸುವುದು, ಕಣ್ಣು ಕಟ್ಟುವಂಥ ಮಾಟಗಾರಿಕೆಯಿಂದ ಕೂಡಿದ್ದು; ಕಣ್ಣುಗಳನ್ನು ತನ್ನಲ್ಲಿಯೆ ಬಂಧಿಸಿಡು ವಂಥದ್ದು ಈ ಅರ್ಥದ ಪದರಗಳನ್ನು ತೆರೆಯುವುದು. ಕಿವಿಗೆ ಕೊಡುವುದು ಮೆಚ್ಚಿನೋಲೆ ಎಂದು ಪ್ರೀತಿಯನ್ನೇ ಧಾರಾಳವಾಗಿ ಸವಿಯುವ ಭಾಗ್ಯ ಪಡೆಯುವುದು - ಈ ಪದ್ಯದಲ್ಲಿನ ಘಟ್ಟ. ಈ ಪಂಕ್ತಿಗಳಲ್ಲಿ ಅವರಿಬ್ಬರ ಮುಗ್ಧತೆ ಹಾಗೂ ಮುಕ್ತತೆಗಳು ಧ್ವನಿತವಾಗುತ್ತಿದ್ದು ಮುಂದಿನ ಪದ್ಯದಲ್ಲಿ ಈ ಪ್ರೀತಿ ಪರಾಕಾಷ್ಠೆಗೇಳುವುದನ್ನು ಗುರುತಿಸಬಹುದು. ಬೇಸಿಗೆಕಾಲ, ಚಳಿಗಾಲಗಳೆರಡರಲ್ಲೂ ಪ್ರಿಯವಾಗುವ ಬದುಕು ಪ್ರಿಯಕರನದು; ಆತನ ಮೈಯನ್ನು ಮುಟ್ಟಿದರೆ ಆತ ಕೊಡುವ ಉಡುಗೊರೆಯಾದರೂ ಪ್ರೀತಿಯದೇ ನವಿರು ಬಟ್ಟೆ. ಅದೂ ಮೈತುಂಬ ಮುಚ್ಚಿಕೊಳ್ಳುವಷ್ಟು ಪ್ರೀತಿಸುವ ಹೃದಯದ ಉಕ್ಕನ್ನು ಅವರಿಬ್ಬರ ಪ್ರಣಯದಾಟದ ಚಿತ್ರವಾದರೂ ಮುಗ್ಧವಾದದ್ದು. ಇಷ್ಟೆಲ್ಲ ಪ್ರಣಯಭರಿತವಾದ ಈ ಲೋಕದ ಕೊನೆ ಯಾವುದೆಂಬುದನ್ನು ಸೂಚಿಸುತ್ತದೆ ಕೊನೆಯ ಪದ್ಯ. ಈ ಕವಿತೆಯ ಶಿಖರ ಇದು. ಇಂಥ ಒಲವಿದ್ದರೆ ಮತ್ತೇನೂ ಬೇಡ ಎನ್ನುವ ತೃಪ್ತಿಯ ಜೊತೆಗೇ ಪ್ರಣಯ ಲೋಕದ ಆಳಕ್ಕಿಳಿಯುವ ಕೊನೆಯ ಎರಡು ಸಾಲುಗಳು ಬೇಂದ್ರೆಯವರ ಕಾವ್ಯದ ಮಾಂತ್ರಿಕತೆಗೂ ಉದಾಹರಣೆಯಾಗುತ್ತವೆ. ಇಂಥ ಪ್ರಣಯದಿಂದ ಆತ ಕೊಟ್ಟಿದ್ದೇನು ಎಂದು ಬೆರಗಾಗಬೇಕಿಲ್ಲ. ತುಟಿಯ ತುಂಬ ಹಾಲು ಜೇನು ತುಂಬುವ ಅಕ್ಕರೆ ಬದುಕಿನ ಸಮೃದ್ಧಿಯನ್ನು ಧ್ವನಿಸಿದ ಹಾಗೆಯೇ ಹೊಟ್ಟೆಗಿತ್ತ ಜೀವಫಲವ ಎಂಬ ಮಾತುಗಳು ಈ ಪ್ರಣಯದಾಟದ ಜೀವದ ಸಾತತ್ಯದ ಅಭೀಪ್ಸೆಯ ಸಾರ್ಥಕ್ಯವನ್ನೂ ವ್ಯಂಜಿಸುತ್ತವೆ. ಕೇವಲ ಮುಗ್ಧ ಪ್ರಣಯಗೀತೆಯಂತೆ ತೋರುವ ಈ ಕವಿತೆ ಕೂಡ ಮುಟ್ಟುವ ಎತ್ತರ ಅದರ ಕೊನೆಯ ಎರಡು ಸಾಲುಗಳಲ್ಲಿ ವ್ಯಂಜಿತವಾಗಿ ಮತ್ತೆ ನಾನು ಬಡವಿ ಆತ ಬಡವ ಎಂಬ ಮೊದಲ ಸಾಲಿಗೆ ತಟ್ಟನೆ ಅರ್ಥದ ತಿರುವೊಂದು ಪ್ರಾಪ್ತವಾಗಿ ಬಿಡುತ್ತದೆ, ನಿಜವಾಗಿ ಅವರು ಸಮೃದ್ಧರು ಎಂದು ಅನ್ನಿಸಿ.

ಈ ಕವಿತೆಯನ್ನು ಉದಾಹರಣೆಯಾಗಿ ತೆಗೆದುಕೊಳ್ಳುವುದಕ್ಕೆ ಒಂದು ಕಾರಣವಿದೆ. ಜೋಗಿಯಂಥ ಹೆಚ್ಚು ಸಂಕೀರ್ಣವೂ, ಕಿಂಚಿದ್ ಸ್ಪಷ್ಟವೂ ಹಾಗೂ ಆಧ್ಯಾತ್ಮಿಕವೂ ಆದ ಕವಿತೆಯನ್ನು ಬಿಟ್ಟು ಇಡೀ ಸಂಜೆಯೇ ಒಬ್ಬ ಸುಂದರ ಪ್ರಣಯಿನಿಯಾಗಿ ಎದ್ದು ಮೂಡಿಬರುವಂತೆ ಚಿತ್ರಿತವಾಗಿರುವ ಮಾಂತ್ರಿಕವಾದ, ರಾಗರತಿಯಂಥ ಕವಿತೆಯನ್ನು ಬಿಟ್ಟು ಸರಳವೂ, ಸಹಜವೂ ಆದರೆ ಬೇಂದ್ರೆಯವರ ಕಾವ್ಯ ಪಡೆಯುವ ಸಾರ್ಥಕ್ಯದ ರೀತಿಯನ್ನು ವ್ಯಂಜಿಸುವಂಥಾದ್ದು ಆಗಿದೆ ಈ ಕವಿತೆ. ಬೇಂದ್ರೆಯವರು ಅನೇಕ ಕವಿತೆಗಳನ್ನು ಅನುವಾದಿಸಿದ್ದಾರೆ. ಅವುಗಳಲ್ಲಿ ನಮ್ಮ ಕೊನೆಯ ಶರಣು ಹಾಗೂ ಮೇಘದೂತ ಕವಿತೆಗಳು ಅನುವಾದಗಳು. ಈ ಅನುವಾದವು ಪುನಃ ಸೃಷ್ಟಿಯಾಗಬಲ್ಲವು ಎಂಬುದಕ್ಕೆ ಸಾಕ್ಷಿಯಾಗಿವೆ. ಮೇಘದೂತ ಛಂದಸ್ಸಂತೂ ಬೇಂದ್ರೆಯವರ ಪ್ರತಿಭಾವಿಲಾಸದ ಆಡುಂಬೊಲವಾಗಿ ಬಿಟ್ಟಿವೆ. ಅರವಿಂದರ ಸಾವಿತ್ರಿಯನ್ನು ಮತ್ತೆ ಕೆಲವು ಕವಿತೆಗಳನ್ನು ಬೇಂದ್ರೆಯವರು ಅನುವಾದಿಸಿದ್ದಾರೆ. ಅದರಲ್ಲಿ ಬಂಗಾರದ ಹುಡುಗನಂಥ ಕವಿತೆಗಳು ಸ್ವತಂತ್ರ ಕವನವೆಂಬಂತೆ ಗಮನಾರ್ಹವಾಗಿವೆ.

ಭಾಷಣ ಹಾಗೂ ಕಾವ್ಯವಾಚನದಲ್ಲಂತೂ ಬೇಂದ್ರೆಯವರದು ಅಸದೃಶವಾದ ಸೃಜನಶೀಲ ಪ್ರತಿಭೆ. ನಾವು ಓದುವ ಕವಿತೆಯಷ್ಟೇ ಅಲ್ಲದೆ ಕವಿಗೋಷ್ಠಿಯಲ್ಲಿ ಭಾಗವಹಿಸುವ ಎಲ್ಲರೂ ಕವಿತೆಯನ್ನು ಸಹೃದಯನ ಹೃದಯಕ್ಕೆ ಮುಟ್ಟಿಸಬೇಕೆಂದು ಅವರ ಸದಾಗ್ರಹ. ವಾಸ್ತವವಾಗಿ ಬೇಂದ್ರೆಯವರ ವ್ಯಕ್ತಿತ್ವ ಕನ್ನಡಿಗರ ಮೇಲೆ ಪ್ರಭಾವ ಬೀರಿದ್ದೆ ಅವರ ಕಾವ್ಯದ ವಾಚನದ ಮೂಲಕ ಎನ್ನಬಹುದು. ಈ ಸಂದರ್ಭದಲ್ಲಿ ಇತಿಹಾಸದ ಭಾಗವಾಗಿ ಹೋಗಿರುವ ಎರಡು ವಾಚನಗಳ ಬಗ್ಗೆ ಹೇಳದಿದ್ದರೆ ಲೋಪವಾದೀತು. 1929ರ ಬೆಳಗಾವಿಯ ಸಾಹಿತ್ಯ ಸಮ್ಮೇಳನದಲ್ಲಿ ಹಕ್ಕಿ ಹಾರುತಿದೆ ನೋಡಿದಿರಾ ಕವನವನ್ನು ಓದಿದಾಗ ವಾರಿ ರುಮಾಲು ಸುತ್ತಿದ್ದ ಬೇಂದ್ರೆಯವರ ಗಾರುಡಿಗ ವ್ಯಕ್ತಿತ್ವ ಮಾಸ್ತಿಯಂಥವರನ್ನೂ ಬೆರಗುಗೊಳಿಸಿತು. ಇಡೀ ಸಭೆಯ ಎದುರಿಗೆ ಕಾಲ ಪಕ್ಷಿ ಹಾರಿಹೋದ ಅದ್ಭುತ ಅನುಭವವನ್ನು ಸೃಷ್ಟಿಸಿದ ಕಾವ್ಯ ವಾಚನದ ಮಾಂತ್ರಿಕ ಕ್ರಿಯೆ ಅಂದು ನಡೆದುಹೋಯಿತು. ಬಹುಶಃ ಬೇಂದ್ರೆಯವರ ಕಾವ್ಯ ಗರಿಬಿಚ್ಚುವುದಕ್ಕೆ ಕಾರಣವಾದ ಕವನ ಸಂಕಲನದ ಪ್ರಕಟಣೆಯ ಒತ್ತಡಕ್ಕು ಇದು ಕಾರಣವಾಯಿತೆಂಬುದನ್ನು ಮರೆಯುವಂತಿಲ್ಲ. ಈ ಕವಿತೆಯನ್ನು ಕೇಳಿದ ಮಾಸ್ತಿ ಹಾಗೂ ಬಿ.ಎಂ.ಶ್ರೀ. ಯವರ ಒತ್ತಾಸೆಯೂ ಗರಿ ಕವನ ಸಂಕಲನದ ಪ್ರಕಟಣೆಗೆ ಕಾರಣವಾದವು ಎನ್ನುತ್ತಾರೆ. ಇದೇ ಅಲ್ಲದೆ 1943ರಲ್ಲಿ ಶಿವಮೊಗ್ಗದಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಭಾಷಣ ಮಾಡುತ್ತಾ ಬೇಂದ್ರೆ ವಾಚಿಸಿದ್ದ ಗಂಗಾವತರಣ ಕವಿತೆಯ ಅನುಭವ ಎಂಥ ರೋಮಾಂಚನಕರವಾದುದೆಂಬುದನ್ನು ಇಂದಿಗೂ ಶಿವಮೊಗ್ಗೆಯ ಕೆಲವು ಹಿರಿಯರು ಹಿಗ್ಗಿನಿಂದ ನೆನೆಯುತ್ತಾರೆ. ಇಂಥ ಸೃಜನಾತ್ಮಕವಾದ ಕಾವ್ಯವಾಚನ ಕ್ರಿಯೆ ಬೇಂದ್ರೆಯವರು ವೇದಿಕೆ ಯನ್ನೇರಿದಾಗಲೆಲ್ಲ ಅಷ್ಟಿಷ್ಟು ನಡೆಯುತ್ತಲೇ ಹೋದದ್ದೆ. ಬೇಂದ್ರೆಯವರ

ವ್ಯಕ್ತಿತ್ವ ಸದಾ ಕಾವ್ಯರಚನೆ, ಕಾವ್ಯವಾಚನ, ವಿಮರ್ಶೆ, ನಾಟಕಗಳು, ಭಾಷಣಗಳು, ಹೃದಯ ಸಂವಾದ ಹಾಗೂ ಸಂಭಾಷಣೆಗಳು ಹೀಗೆ ಸದಾ ಚೈತನ್ಯಮಯವಾಗಿ ಚುರುಕಾಗಿದ್ದದ್ದು. ಈ ಮಧ್ಯೆ ವ್ಯಾಪಕವಾದ ಹಾಗೂ ಆಳವಾದ ಅಧ್ಯಯನಶೀಲತೆ. ಬೇಂದ್ರೆಯವರಲ್ಲಿದ್ದ ಚುರುಕು ವಿರಸದ ಹಂತವನ್ನು ಹಲವಾರು ಸಲ ಮುಟ್ಟಿದ್ದನ್ನು ಕನ್ನಡ ನಾಡಿನವರು ಮರೆಯುವಂತಿಲ್ಲ. ಸದಾ ಚೈತನ್ಯಮಯವಾಗಿದ್ದು ಬಹುಮುಖ ವ್ಯಕ್ತಿತ್ವದ ಅತ್ಯಂತ ಸಮರ್ಥವಾದ ಪ್ರತಿಭೆ ಬೇಂದ್ರೆಯವರದ್ದು.

ಬೇಂದ್ರೆಯವರು 14 ನಾಟಕವನ್ನು ಬರೆದಿದ್ದಾರೆ. ಅವುಗಳಲ್ಲಿ ಸಾಯೋ ಆಟ ಎಂಬ ನಾಟಕ ಸಾಹಿತ್ಯಕವಾಗಿ ಅತ್ಯಂತ ಮಹತ್ವದ್ದಾಗಿದೆ. ಬಹುಶಃ ಆ ನಾಟಕ ರಚನೆಯಾದ ಕಾಲಕ್ಕೆ •ಅಸಂಗತ ನಾಟಕಗಳ ಕಲ್ಪನೆ ಇನ್ನೂ ಕನ್ನಡದಲ್ಲಿ ಗಟ್ಟಿಗೊಂಡಿರಲಿಲ್ಲ. ಬೇಂದ್ರೆಯವರು ಸುಮಾರು 10 ವಿಮರ್ಶಾ ಗ್ರಂಥಗಳನ್ನು ಬರೆದಿದ್ದಾರೆ. ಅವರ ವಿಮರ್ಶೆಗಳು ಹಾಗೂ ಲೇಖನಗಳು ಸಾಹಿತ್ಯದ ವಿರಾಟ್ ಸ್ವರೂಪ ಎಂಬ ಗ್ರಂಥ'ದಲ್ಲಿ ದೊರಕುತ್ತವೆ. ದೃಷ್ಟಿದರ್ಶನ, ಕವಿ-ಕೃತಿ, ಕರ್ನಾಟಕ-ಮಹಾರಾಷ್ಟ್ರ ಮತ್ತು ವಿಚಾರ-ವಿವೇಕ ಎಂಬ ನಾಲ್ಕು ಭಾಗಗಳನ್ನೊಳಗೊಂಡಿರುವ ಸಾಹಿತ್ಯ ವಿರಾಟ್‌ಸ್ವರೂಪ 128 ಪ್ರಬಂಧಗಳನ್ನೊಳಗೊಂಡಿದ್ದು ಬೇಂದ್ರೆಯವರ ಅಧ್ಯಯನದ ಹರಹನ್ನೂ, ಕಾವ್ಯಮೀಮಾಂಸೆಯ ಹದವನ್ನೂ ಹಾಗೆಯೇ ಸಂಶೋಧನೆಯ ಕೆಲವು ತುಣಕುಗಳನ್ನು ಪಡೆದ ಬೃಹತ್ ಗ್ರಂಥವಾಗಿದೆ. ಈ ವಿಮರ್ಶೆಗಳಲ್ಲಿ ಎರಡು ಪ್ರಮುಖ ಅಂಶಗಳನ್ನು ಗುರುತಿಸಬಹುದಾಗಿದೆ. ಪ್ರಾಚೀನ ಹಾಗೂ ತಮ್ಮ ಕಾಲದ ಸಾಹಿತ್ಯವನ್ನು ಕವಿ ಬೇಂದ್ರೆಯವರು ಕಂಡ ದೃಷ್ಟಿ ಇಲ್ಲಿ ನಿಚ್ಚಳವಾಗಿ ಮೂಡಿಬಂದಿದೆ. ಅದರ ಜೊತೆಗೆ ರನ್ನನ ರಸದೃಷ್ಟಿ ಮೊದಲಾದವುಗಳನ್ನು ವಿಶ್ಲೇಷಿಸುವ ಇವರ ಕಾವ್ಯಮೀಮಾಂಸೆಯ ದೃಷ್ಟಿಯಲ್ಲಿ ಸೋಪಜ್ಞತೆ ಇರುವುದನ್ನು ಗುರುತಿಸಬಹುದಾಗಿದೆ.

ಬೇಂದ್ರೆಯವರು ಮರಾಠಿಯಲ್ಲೂ ಕೆಲವು ಗ್ರಂಥಗಳನ್ನು ರಚಿಸಿದ್ದಾರೆ; ಹಲವು ಗ್ರಂಥಗಳನ್ನು ಅನುವಾದಿಸಿದ್ದಾರೆ. ಅವಧೂತ ಕವಿ, ವರಕವಿ, ರಸ ಋಷಿ, ಶ್ರೇಷ್ಠಕವಿ– ಹೀಗೆ ಬಹುವಿಧವಾಗಿ ರಸಿಕರಿಂದ ಗೌರವಿಸಲ್ಪಟ್ಟ ಬೇಂದ್ರೆಯವರ ಕಾವ್ಯ ಕನ್ನಡ ಭಾಷೆ ಹಾಗೂ ಸಾಹಿತ್ಯಗಳನ್ನು ಶ್ರೀಮಂತಗೊಳಿಸಿದೆ. ಬೆಳಗು, ರಾಗರತಿ, ಶ್ರಾವಣ, ಯುಗಾದಿ, ಸಣ್ಣ ಸೋಮವಾರ, ಹಕ್ಕಿ ಹಾರುತಿದೆ ನೋಡಿದಿರಾ, ಪಾತರಗಿತ್ತಿ ಪಕ್ಕ, ಹೂತದ ಹುಣಸಿ, ಶ್ರಾವಣ ವೈಭವ, ಚಿತ್ತಿಯ ಮಳೆಯ ಸಂಜೆ ಇಂಥ ನಿಸರ್ಗವನ್ನು ಕುರಿತ ಕವಿತೆಗಳಾಗಲಿ; ಮಾಯಾಕಿನ್ನರಿ, ಹುಬ್ಬಳ್ಳಿಯಾಂವಾ, ಮನಸಖರಾಯನ ಮಗಳು ಇಂಥ ಮಾಂತ್ರಿಕ ಕವಿತೆಗಳಾಗಲಿ; ಪುಟ್ಟವಿಧವೆ, ನರಬಲಿ, ತುತ್ತಿನಚೀಲ, 33 ಕೋಟಿ, ಕನಸಿನೊಳಗೊಂದು ಕಣಸು ಇಂಥ ಸಾಮಾಜಿಕ ಕವಿತೆಗಳಾಗಲಿ; ಕೇಳಿರೊಂದು ಸೋಜಿಗದಂಥ ಬದುಕಿನ ಗಹನತೆಯ ಕಡೆಗೆ ಮನಸೆಳೆಯುವ ಕವಿತೆಯಾಗಲಿ; ಗೆಳೆಯ ಶಂಕರದೇವ, ಗುರುದೇವರಂಥ ವ್ಯಕ್ತಿತ್ವಗಳನ್ನು ಕುರಿತು ಬರೆದ ಕವಿತೆಗಳಾಗಲಿ; ಅನಂತ ಪ್ರಣಯ, ಪ್ರೀತಿ, ಇಂಥ' ಪ್ರೇಮದ ವಿವಿಧ ಮುಖಗಳನ್ನು ಕುರಿತ ಕವಿತೆಗಳಾಗಲಿ; ಬೇಂದ್ರೆಯವರ ಕವಿತೆ ತನ್ನ ಸಾಚಾತನದಿಂದ ಮೆರೆಯುತ್ತದೆ.

ಕಾವ್ಯವನ್ನು ಕುರಿತ ಬೇಂದ್ರೆಯವರು ಬರೆದಿರುವ ಕವಿತೆಗಳ ಅಧ್ಯಯನ ಕಾವ್ಯಮೀಮಾಂಸೆಗೆ ಒಂದು ಅಪೂರ್ವ ವಿಷಯ ಆಗಬಲ್ಲದು. ಅಷ್ಟೇ ಅಲ್ಲ, ನವೋದಯ ಕಾಲದ ಕವಿಗಳಲ್ಲಿ ಕಾವ್ಯಮೀಮಾಂಸೆಗೆ ಈ ವಿಷಯದಲ್ಲಿ ಪ್ರಮುಖ ಕಾಣಿಕೆ ನೀಡಿದವರು ಎಂದರೆ ಕುವೆಂಪು, ಪು.ತಿ.ನ ಮತ್ತು ದ.ರಾ. ಬೇಂದ್ರೆಯವರು ಎಂಬುದನ್ನು ಮರೆಯಲು ಸಾಧ್ಯವಿಲ್ಲ. ಕನ್ನಡ ಭಾಷೆ ಹಾಗೂ ನಾಡನ್ನು ಕುರಿತು ಬೇಂದ್ರೆಯವರ ಕವಿತೆಗಳ ಸಮುದಾಯ ಅಂದಿಗೆ ಅಗತ್ಯವಾಗಿದ್ದ ನಾಡುನುಡಿಗಳ ಪ್ರೇಮವನ್ನು ಉಕ್ಕೇರಿಸುವಲ್ಲಿ ವಹಿಸಿದ ಪಾತ್ರ ದೊಡ್ಡದು. ಅಷ್ಟೇ ಅಲ್ಲ, ಅಂತಹ ಎಷ್ಟೋ ಕವಿತೆಗಳು ಇಂದಿಗೂ ಕಾವ್ಯದೃಷ್ಟಿಯಿಂದ ಗಮನಾರ್ಹವಾಗಿಯೇ ಉಳಿದಿವೆ.

ಬೇಂದ್ರೆಯವರನ್ನು ಕನ್ನಡ ಸಾಹಿತ್ಯ ಪರಿಷತ್ತು 1943ರಲ್ಲಿ ಶಿವಮೊಗ್ಗದಲ್ಲಿ ನಡೆದ 27ನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗೌರವಿಸಿತು. 1959ರಲ್ಲಿ ಅವರ 'ಅರಳು ಮರಳು' ಕವನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಇತ್ತು ಗೌರವಿಸಿತು. ಕೇಂದ್ರ ಸರ್ಕಾರ ಪದ್ಮಶ್ರೀ ಇತ್ತು ಸನ್ಮಾನಿಸಿತು. ಮೈಸೂರು ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳು ಗೌರವ ಡಾಕ್ಟರೇಟ್ ಪದವಿ ನೀಡಿ ತಮ್ಮ ಗೌರವವನ್ನು ಸಲ್ಲಿಸಿದವು. 1969ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಇವರನ್ನು ಫೆಲೋ ಆಗಿ ಗೌರವಿಸಿ ತಮ್ಮನ್ನು ತಾನೇ ಗೌರವಿಸಿಕೊಂಡಿತು. 1974ರಲ್ಲಿ 'ನಾಕು ತಂತಿ' ಕವನ ಸಂಕಲನಕ್ಕೆ ಭಾರತದ ಅತ್ಯುಚ್ಚ ಸಾಹಿತ್ಯ ಪ್ರಶಸ್ತಿ ಜ್ಞಾನಪೀಠ ಪ್ರಶಸ್ತಿ ದೊರಕಿತು. ಎಲ್ಲಕ್ಕಿಂತ ಹೆಚ್ಚಿನದು ಎಂದರೆ ಕರ್ನಾಟಕದಲ್ಲಿ ಬೇಂದ್ರೆಯವರನ್ನು ಕರೆದು ಸತ್ಕರಿಸದ ಊರೇ ಇಲ್ಲ ಎಂಬುದು. ಮಹಾಕವಿಯೊಬ್ಬ ಬಂದು ಹೋದ ಮೇಲೆ ಮಹಾಕವಿ ಬರೆದ ಭಾಷೆ ಹಾಗೂ ಸಾಹಿತ್ಯಗಳು ಹೊಸ ಆಯಾಮವನ್ನು ಪಡೆದುಕೊಳ್ಳುತ್ತವೆ ಎಂಬ ಮಾತಿಗೆ ಜೀವಂತ ಸಾಕ್ಷಿಯಾಗಿದೆ ಬೇಂದ್ರೆಯವರ ಕಾವ್ಯ.

❑

# ದೇವುಡು

ಕೆ.ಎಸ್. ನರಸಿಂಗರಾವ್

1

ಇಪ್ಪತ್ತನೆಯ ಶತಮಾನದ ಮೂರನೆಯ ದಶಕದಿಂದಲೂ ಹೊಸಗನ್ನಡ ಸಾಹಿತ್ಯದ ಗದ್ಯಪ್ರಕಾರದ ಸರ್ವತೋಮುಖ ಬೆಳವಣಿಗೆಗಾಗಿ ದುಡಿದ ಮಹನೀಯರಲ್ಲಿ ಶ್ರೀ ದೇವುಡುರವರೂ ಓರ್ವ ಪ್ರಮುಖರು. ಧರ್ಮಶಾಸ್ತ್ರ, ಸಾಹಿತ್ಯಗಳ ಆಳವಾದ ಅಭ್ಯಾಸದಿಂದ ಉದ್ದಾಮ ವಿದ್ವಾಂಸರೂ, ಶ್ರೇಷ್ಠ ಸಾಹಿತ್ಯಕರೂ ಆಗಿದ್ದ ಅವರದು ಬಹುಮುಖವಾದ, ಧೀಮಂತ ವ್ಯಕ್ತಿತ್ವ. ಪತ್ರಿಕಾ ಸಂಪಾದಕರಾಗಿ, ರಂಗಭೂಮಿ ಹಾಗೂ ಚಲನಚಿತ್ರಗಳಲ್ಲಿ ನಟರಾಗಿ, ಉತ್ತಮ ಭಾಷಣಕಾರರಾಗಿ, ದಾರ್ಶನಿಕರಾಗಿ ಬಾಳಿದವರು ದೇವುಡು. ಇಂಥವರ ಜೀವನ ಮತ್ತು ಸಾಹಿತ್ಯದ ಪರಿಚಯ ಒಂದು ಕಾಲದ ಜನಜೀವನದ ಧೋರಣೆಗಳನ್ನೂ, ಬೆಳವಣಿಗೆಯ ಸ್ಥಿತಿಯಲ್ಲಿದ್ದ ನಮ್ಮ ಸಾಹಿತ್ಯದ ಒಲವು-ನಿಲುವುಗಳನ್ನೂ ಚರ್ಚಿಸಲು ಅಳತೆಗೋಲಾಗುವುದಲ್ಲದೆ, ಸ್ಫೂರ್ತಿದಾಯಕವೂ ಆಗಿದೆ. ದೇವುಡು ನರಸಿಂಹಶಾಸ್ತ್ರಿ ಎಂಬುದು ಪೂರ್ಣ ಹೆಸರಾದರೂ ಅವರು 'ದೇವುಡು' ಎಂದೇ ಜನಪ್ರಿಯರಾಗಿದ್ದಾರೆ.

ಮೈಸೂರಿನಲ್ಲಿ ರಾಜಪುರೋಹಿತರೂ, ಆಸ್ಥಾನ ಪಂಡಿತರೂ ಎಂದು ಹೆಸರುವಾಸಿಯಾದ ವಂಶದಲ್ಲಿ ಜನಿಸಿದವರು ದೇವುಡು. 1880ರಲ್ಲಿ ಸ್ಥಾಪನೆಯಾದ ಲಕ್ಷ್ಮೀನರಸಿಂಹ ಪ್ರೆಸ್ ಸ್ಥಾಪಕರಲ್ಲಿ ಒಬ್ಬರಾದ, ವೇದಶಾಸ್ತ್ರಸಂಪನ್ನರೆಂದು ಪ್ರಸಿದ್ಧರಾದ ಇವರ ತಂದೆ ಕಂಭಾಲೂರ ವಂಶದವರಂತೆ. ತಾಯಿ ಕೋಲಾರದ ಮಂಡಲ ವಂಶದವರಂತೆ.[1] ಇವರಿಗೆ ಮಗನಾಗಿ ದುರ್ಮುಖ ಸಂವತ್ಸರದ ಮಾರ್ಗಶಿರ ಬಹುಳ ದಶಮಿ ಮಂಗಳವಾರ 1897 ಕ್ರೈಸ್ತ ಹೊಸವರ್ಷಕ್ಕೆ ಎರಡು ದಿನ ಮುನ್ನ ದೇವುಡು ಜನಿಸಿದರು. ಐದು ವರ್ಷದ ಮಗುವಾಗಿದ್ದಾಗಲೇ ಪಿತೃವಿಯೋಗವಾಗಿ ಕುಟುಂಬಕ್ಕೆ ಭರಿಸಲಾಗದ ನಷ್ಟವಾದರೂ, ಸ್ವಚ್ಛಂದವಾಗಿ ಓದುವ ಹಂಬಲ ಇವರಿಗೆ ಉಂಟಾಗಿ ಹನ್ನೆರಡು ವರ್ಷಗಳ ವಯಸ್ಸಲ್ಲೇ ರಾಮಾಯಣ, ಭಾರತ, ಭಾಗವತ, ಬ್ರಹ್ಮಾಂಡ ಪುರಾಣಗಳನ್ನು ಓದಿ ಮುಗಿಸಿದರು. ಗಣ್ಯರ ವಂಶದಲ್ಲಿ ಹುಟ್ಟಿದ ದೇವುಡರವರು ತಮ್ಮ ಮನೆತನದ ಹಿರಿಮೆ-ಗರಿಮೆಗಳನ್ನು, ಆಚಾರ-ಸಂಪ್ರದಾಯಗಳನ್ನು ತಮ್ಮ ವ್ಯಕ್ತಿತ್ವದಲ್ಲಿ ಬೆಳೆಸಿಕೊಂಡರು.

ಬಾಲ್ಯಸಹಜ ಆಟಗಳಲ್ಲಿ ಹೇಗೊ ಹಾಗೆ ಹೆಂಗಸರು ಹೇಳುವ ಹಾಡುಗಳನ್ನು ಕೇಳುವುದರಲ್ಲೂ ಆಸಕ್ತಿ ಮತ್ತು ಉತ್ಸಾಹ. ಬೇಗಬೇಗ ಬರೆಯುತ್ತಿದ್ದುದರಿಂದ ಹೆಂಗಸರು ತಿಂಡಿ ಕೊಟ್ಟು ಇವರ ಕೈಯಲ್ಲಿ ಹಾಡು ಬರೆಸುತ್ತಿದ್ದರಂತೆ. ಚುರುಕುತನಕ್ಕೆ ಹೆಸರಾಗಿದ್ದ ಬಾಲಕ 1912ರ ವೇಳೆಗೇ ಛಂದಸ್ಸು, ವ್ಯಾಕರಣಗಳನ್ನು ಕಲಿತು ಪದ್ಯಗಳನ್ನು ರಚಿಸಿದ್ದು ಅಚ್ಚರಿಯೇನಲ್ಲ. ಒಂದು ಕಡೆ ವ್ಯಾಸಂಗ; ಮತ್ತೊಂದು ಕಡೆ ಹುಡುಗರ ಕಂಪನಿ ನಾಟಕಗಳಿಗೆ ಹಾಡು ಬರೆದು ನಟಿಸುವುದು ಜೊತೆಜೊತೆಯಲ್ಲಿ ಸಾಗಿ ರಂಗಭೂಮಿಯ ಪರಿಚಯವಾಯಿತು.

ವೈದಿಕ ವಿದ್ಯೆ ಕಲಿತವರಾಗಿದ್ದರೂ ಮುಂದೆ 1917-1922ರ ಅವಧಿಯಲ್ಲಿ ಅಧ್ಯಯನನಿರತರಾಗಿ ಬಿ.ಎ., ಎಂ.ಎ. ಪದವಿಗಳನ್ನು ಪಡೆದರು. ಆಗ ವಿದ್ವಾಂಸರಾದ ವಿ.ಸೀ. ಅವರು ಇವರ ಸಹಪಾಠಿಗಳು. ಡಾ. ರಾಧಾಕೃಷ್ಣನ್ ಇವರ ಗುರುಗಳು; ಅಲ್ಲದೆ ಪ್ರೊ. ಎಂ. ಹಿರಿಯಣ್ಣನವರ ವಿಶ್ವಾಸವೂ ಇವರಿಗಿತ್ತು. ಸಂಸ್ಕೃತ ಭಾಷೆಯನ್ನು ಐಚ್ಛಿಕ ವಿಷಯವಾಗಿ ತೆಗೆದುಕೊಂಡು ಭಾರತೀಯ ತತ್ತ್ವಶಾಸ್ತ್ರವನ್ನು ವಿಶೇಷವಾಗಿ ವ್ಯಾಸಂಗ ಮಾಡಿದ್ದು ಮುಂದಿನ ದೇವುಡುರವರ ಸಾಹಿತ್ಯ ಕೃಷಿಗೆ ಪ್ರೇರಣೆ ದೊರೆತಂತಾಯಿತು.

ಮೈಸೂರಿನ ಸದ್ವಿದ್ಯಾಶಾಲೆಯಲ್ಲಿ 1923-24-ಒಂದು ವರ್ಷ ಮುಖ್ಯೋಪಾಧ್ಯಾಯರಾಗಿ ಅಧಿಕಾರ ವಹಿಸಿದರು. ಆದರೆ ಈ ಹುದ್ದೆ ತಮ್ಮ ಸ್ವತಂತ್ರ ಪ್ರವೃತ್ತಿಗೆ ಅಡ್ಡಿಯಾಯಿತೆಂದು ಅದನ್ನು ಬಿಟ್ಟು 1925ರಲ್ಲಿ ಬೆಂಗಳೂರಿಗೆ ಕಾರ್ಯಕ್ಷೇತ್ರವನ್ನು ಬದಲಾಯಿಸಿದರು. ಹೀಗೆ ಬೆಂಗಳೂರಿಗೆ ಬರಲು ಪಂಡಿತ ತಿ.ತಾ. ಶರ್ಮ ಹಾಗೂ ಇತರ ಗೆಳೆಯರ ಸ್ನೇಹದ ಒತ್ತಾಯವೂ ಕಾರಣವಾಯಿತು.

ಬೆಂಗಳೂರಿಗೆ ಬಂದರೂ, ಬರೆಯುವ ತವಕವಿದ್ದರೂ ದೇವುಡುರವರಿಗೆ ಪುಸ್ತಕವನ್ನು ಕೊಂಡು ಓದುವ ಜನಾಭಿರುಚಿ ಕಾಣದೆ ಅಕ್ಷರ ಪ್ರಚಾರ ಕಾರ್ಯ ಕೈಗೊಳ್ಳಲು ಮನಸ್ಸಾಗುತ್ತದೆ. ಇವರ ಕಾರ್ಯ ಸರ್ಕಾರದ ಗಮನಕ್ಕೂ ಬಂದು ಅಕ್ಷರ ಪ್ರಚಾರಕ್ಕೆ ಒಂದು ವ್ಯವಸ್ಥೆ ರೂಪಿತವಾಗುತ್ತದೆ. ಕೆಂಪೇಗೌಡ ರಸ್ತೆಯಲ್ಲಿ 'ಆರ್ಯ ವಿದ್ಯಾ ಶಾಲೆ'ಯನ್ನು ಸ್ಥಾಪಿಸಿದ್ದು ದೇವುಡುರವರ ಮೊದಲ ಮಹಾಸಾಧನೆ ಎನ್ನಬಹುದು. ಅಲ್ಲಿ ಮುಖ್ಯೋಪಾಧ್ಯಾಯರಾಗಿದ್ದುಕೊಂಡು ಐದು ವರ್ಷಗಳು ತಮ್ಮ ಸ್ವತಂತ್ರ ವಿಚಾರಗಳು ಕಾರ್ಯಗತವಾಗಲು ಶ್ರಮಿಸಿದರು. ಮಕ್ಕಳ ವಿದ್ಯಾಭ್ಯಾಸದ ಮಟ್ಟ ಮೇಲಕ್ಕೆತ್ತಲು 'ಮಕ್ಕಳ ಪುಸ್ತಕ' ಮುಂತಾದ ಪ್ರಕಟಣೆ ಮಾಡಿದರು. ಒಮ್ಮೆ ಪಂಜೆ ಮಂಗೇಶರಾಯರು ದೇವುಡುರವರನ್ನು ತಬ್ಬಿಕೊಂಡು ಮಕ್ಕಳಿಗಾಗಿ ಬರೆಯುವುದನ್ನು ಮುಕ್ತಕಂಠದಿಂದ ಪ್ರಶಂಸಿಸಿದರಂತೆ ! ಈ ಅವಧಿಯಲ್ಲೇ ಅವರು 'ನವಜೀವನ' ಎಂಬ ಪತ್ರಿಕೆಗೆ ಸಂಪಾದಕರಾಗಿಯೂ ದುಡಿದರು. ಪ್ರಾಯಶಃ ಕನ್ನಡ ದಿನಪತ್ರಿಕೆಗಳಲ್ಲಿ ಕಥೆಗಳನ್ನು ಧಾರಾವಾಹಿಯಾಗಿ ಪ್ರಕಟಿಸುವ ರೂಢಿ ನವಜೀವನ ಪತ್ರಿಕೆಯಿಂದಲೇ ಬಂದಿರಲೂ ಬಹುದು.

1926ರಲ್ಲೇ ಅಮೆಚೂರ್ ಕಂಪನಿಯ ಸದಸ್ಯರಾಗಿ ನಟಶ್ರೇಷ್ಠರಾದ ರಾಘವಾಚಾರ್ಯರ ಆತ್ಮೀಯರಾಗಿ ನಚಿಕೇತ, ಮಂಡೋದರಿ, ರಾಮಕೃಷ್ಣ, ಮಾರ್ಕಂಡೇಯ, ಯಶೋಧರಾ ನಾಟಕಗಳಲ್ಲಿ ಪ್ರಧಾನ ಭೂಮಿಕೆಯಲ್ಲೇ ರಂಜಿಸಿದರು. ರಂಗನಟನೆ ದೇವುಡುರವರನ್ನು ಚಲನಚಿತ್ರ ಕ್ಷೇತ್ರಕ್ಕೆಳೆಯಿತು. ಕೆಲವು ಗೆಳೆಯರ ಸಹಕಾರದೊಡನೆ ಧ್ರುವಕುಮಾರ, ಚಿರಂಜೀವಿ ಚಿತ್ರಗಳನ್ನು ಹೊಸ ತಂತ್ರಗಳಿಂದ ನಿರ್ಮಿಸಿದರು. ಸಿನಿಮಾ ಉದ್ದಿಮೆಯನ್ನು 1930ರ ವೇಳೆಗೆ ಬಿಟ್ಟು ಶ್ರೀ ಎಸ್.ಜಿ. ಶಾಸ್ತ್ರಿಯವರ ಸಲಹೆಯ ಮೇರೆಗೆ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಕರ್ನಾಟಕ ಸಂಸ್ಕೃತಿ ಕುರಿತು ಉಪನ್ಯಾಸ ಮಾಡುವ ಸುಯೋಗ ಲಭಿಸಿತು. ಕರ್ನಾಟಕ ಪರಿಷತ್ಪತ್ರಿಕೆಯಲ್ಲಿ ಲೇಖನಮಾಲೆಯಾಗಿ ಬಂದ ಉಪನ್ಯಾಸಗಳೇ ಮುಂದೆ 1935ರಲ್ಲಿ ಪುಸ್ತಕರೂಪ ತಾಳಿತು.

ಸಂಸ್ಕೃತ ವಿದ್ಯಾ ಸಮಿತಿ, ಪಠ್ಯಪುಸ್ತಕ ಸಮಿತಿಗಳಲ್ಲೂ ದೇವುಡು ಶ್ರಮಿಸಿದ್ದಾರೆ. ಸಂಸ್ಕೃತ ಭಾಷಾ ಸಾಹಿತ್ಯಗಳ ಬಗ್ಗೆ ಅಪಾರವಾದ ಪ್ರೀತಿ, ಗೌರವಗಳಿದ್ದ ಇವರು 'ಮೂಲ ಸಂಸ್ಕೃತ' ಎಂಬ ಗ್ರಂಥ ಬರೆದು ಆ ಭಾಷೆಯನ್ನು ಜನ ಹೆಚ್ಚು ಕಲಿಯಲಿ ಎಂದು ಆಶಿಸಿದರು. ಅಖಿಲ ಭಾರತ ಮಟ್ಟದ ಸಂಸ್ಕೃತ ಸಮ್ಮೇಳನದಲ್ಲಿ ಮೈಸೂರಿನಿಂದ ಪ್ರತಿನಿಧಿಯಾಗಿ ಭಾಗವಹಿಸುವ ಅವಕಾಶ ದೇವುಡುರವರದಾಗಿತ್ತು. ತಮ್ಮ ಮುಂದಿನ ಬದುಕಿನ ಕಾಲವನ್ನು ಶ್ರೇಷ್ಠ ದರ್ಜೆಯ ಸಾಹಿತ್ಯಸೃಷ್ಟಿಗೆ ಇವರು ವಿನಿಯೋಗಿಸಿದ್ದಾರೆ.

ಯಾವ ವೃತ್ತಿಯಲ್ಲೂ ಸ್ವತಂತ್ರ ಪ್ರವೃತ್ತಿ, ಮನೋಭಾವಗಳನ್ನು ಬೆಳೆಸಿಕೊಂಡಿದ್ದವರು ದೇವುಡು. ಯಾವ ಸರಕಾರೀ ಉದ್ಯೋಗಕ್ಕೂ ಅಂಗಲಾಚದ ಸ್ವತಂತ್ರ ವ್ಯಕ್ತಿತ್ವ; ದಿಟ್ಟತನದ ಸ್ವಭಾವ. ಬಾಲಕರಾಗಿದ್ದಾಗ ಒಮ್ಮೆ ಪಾದ್ರಿಯೊಬ್ಬ ಸಭೆಯೊಂದರಲ್ಲಿ-'ಕೃಷ್ಣನು ಕೊಳಲು ಊದಿದಾಗ ಒಣಗಿದ್ದ ಗಿಡಮರಗಳೆಲ್ಲ ಚಿಗುರಿದವಲ್ಲ; ಕೈಯಲ್ಲಿದ್ದ ಕೊಳಲೇಕೆ ಚಿಗುರಲಿಲ್ಲ?' ಎಂದು ವ್ಯಂಗವಾಡಿದನಂತೆ! ಆಗ ಇವರು "ಚಿಗುರಿದರೆ ತನ್ನನ್ನು ಎಸೆದುಬಿಡುವನು ಎಂದು ಹೆದರಿಕೊಂಡು ಚಿಗುರಲಿಲ್ಲ"- ಎಂದು ಅದೇ ಧಾಟಿಯಲ್ಲಿ ಉತ್ತರ ಕೊಟ್ಟಿದ್ದರು. "ನನಗೆ ಆಗಿನಿಂದಲೂ 'ಸುಪೀರಿಯಾರಿಟಿ ಕಾಂಪ್ಲೆಕ್ಸ್'. ಅಲ್ಲದೆ, ಅದೇನೊ ಹೊಗಳಿಸಿಕೊಳ್ಳಬೇಕೆಂಬ ಆಸೆಯಿಲ್ಲ. ಯಾರ ಲೇಖನವನ್ನು ನೋಡಿದರೂ 'ಇದೋ! ಏನು ಮಹಾ?' ಎಂದು ಅದರಲ್ಲಿರುವ ದೋಷಗಳನ್ನು ಎತ್ತಿಹಾಕುವುದು-ಇಂತಹುದು ಬರೆಯದೆ ಹೋದರೆ ಏನು ನಷ್ಟ ಎನ್ನುವುದು-ಹೀಗೆ ಇತ್ತು"[2]- ಎಂದು ಅವರೇ ತಮ್ಮ ನಿರ್ದಾಕ್ಷಿಣ್ಯ ಪ್ರವೃತ್ತಿ ಬಗೆಗೆ ಪ್ರಾಮಾಣಿಕವಾಗಿ ಹೇಳಿಕೊಂಡಿದ್ದಾರೆ. ತಮ್ಮ ಮಿತ್ರರೊಡನೆಯೂ ಹೀಗೆ ವ್ಯವಹರಿಸುತ್ತಿದ್ದರು. ದೇವುಡುರವರನ್ನು ಹಿಂದಿನಿಂದಲೂ ಚೆನ್ನಾಗಿ ಬಲ್ಲ ವಿ.ಸೀ. ಯವರು ಇವರ ವ್ಯಕ್ತಿತ್ವವನ್ನು ಅಚ್ಚುಕಟ್ಟಾಗಿ ಒಂದೆಡೆ ಹೇಳಿದ್ದಾರೆ: "ಅವರು ಬೆಂಗಳೂರಲ್ಲಿದ್ದ ಹಲವರು ದೊಡ್ಡ ವ್ಯಕ್ತಿಗಳ ಬಳಕೆಯವರು. ಎಲ್ಲಿಯೇ ಆಗಲಿ ಯಾರಿಗೂ ತಲೆ ತಗ್ಗಿಸದೆ ನಿಂತ ನಿಲುವಿನವರು... ಬಂದದ್ದು ಬರಲಿ ಎಂದು ಯಾವುದಕ್ಕೂ ಕೈಯೊಡ್ಡುವ ಮನಸ್ಸು, ರೀತಿ ಎಂದಿಗೂ ಅವರದಲ್ಲ.. ಅಧಿಕಾರದಲ್ಲಿ ಇರುವವರಲ್ಲಿಯೂ, ತಮಗೆ ವಿದ್ಯಾವಿಚಾರಗಳಲ್ಲಿ ಗುರುಸದೃಶರಾದವರಲ್ಲೂ ಕೂಡ ತಗ್ಗಿ ನಡೆಯಲು ಒಪ್ಪರು...ಯಾವುದನ್ನು ಆ ಕಾಲದಲ್ಲಿ ಮೇಧಾವಿತೆ, ಸಂಪ್ರದಾಯ ಎನ್ನುತ್ತಿದ್ದರೊ ಅದಕ್ಕೆ ತರ್ಕ, ಮೀಮಾಂಸಾ, ವೇದಾಂತಗಳ ಹೃದ್ಭಾವವನ್ನೂ, ತಿರುಳನ್ನೂ ಬಳಸಿ ವಾದದಲ್ಲಿ, ಜ್ಞಾನ ಪ್ರತಿಪಾದನೆಯಲ್ಲಿ ಬಲಗೊಳಿಸುತ್ತಿದ್ದರು."[3] ಈ ಮಾತುಗಳು ದೇವುಡುರವರ ದೃಷ್ಟಿ ಧ್ಯೇಯಗಳನ್ನೂ, ಪ್ರಕಾಂಡ ಪಾಂಡಿತ್ಯವನ್ನೂ ಚಿತ್ರಿಸಲು ಸಾಕು. ಕನ್ನಡದಲ್ಲಿ ಒಂದು ವಿಶ್ವಕೋಶ ಆಗಬೇಕು; ಗೀತೆಯ ಪ್ರಚಾರವಾಗಬೇಕು-ಮುಂತಾಗಿ ಸದಾ ಕನ್ನಡ ಪರವಾದ ಚಿಂತನೆ, ಏಳಿಗೆಗಾಗಿ ಹಾತೊರೆದ ಹಿರಿಯ ಚೇತನ.

ಪತ್ನಿ ಗೌರಮ್ಮ, ಮೂವರು ಗಂಡುಮಕ್ಕಳು, ಒಬ್ಬ ಮಗಳನ್ನು ಪಡೆದ ಶ್ರೀಯುತರು, ತಮ್ಮ ಕಡೆಯ ದಿನಗಳಲ್ಲಿ ಅನಾರೋಗ್ಯದಿಂದ ಬಳಲಬೇಕಾಗಿ ಬಂತೆಂದು ತಿಳಿಯುತ್ತದೆ. 1962ರಲ್ಲಿ ಅವರ ಮರಣದ ವರ್ಷವೇ 'ಮಹಾಕ್ಷತ್ರಿಯ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿತು. ಹಸ್ತಪ್ರತಿಯಲ್ಲೇ ಉಳಿದಿದ್ದ 'ಮಹಾದರ್ಶನ' ಮೇರುಕೃತಿ 1967ರಲ್ಲಿ ಪ್ರಕಾಶನಗೊಂಡಿತು. ಜೀವನದಲ್ಲಿ ಬಂದುದನ್ನು ಹಸನ್ಮುಖರಾಗಿ ಸ್ವೀಕರಿಸುವ ವಿಶಾಲ ಮನಸ್ಸಿನ ವ್ಯಕ್ತಿಗಳು ಇಂಥವರು ವಿರಳ ಎನ್ನಬೇಕು.

2

ದೇವುಡರವರ ಬರಹ-ಸಂಖ್ಯೆ, ಗುಣಸತ್ವ ಎರಡರ ನಿಟ್ಟಿನಿಂದಲೂ ಗಮನಾರ್ಹವಾದುದಾಗಿದೆ. ತಾವು ಅಂಗೀಕರಿಸಿದ ಮೌಲ್ಯ ಸಾಮಾಜಿಕವೊ, ಧಾರ್ಮಿಕವೊ ಅದನ್ನು ತಮ್ಮ ಜೀವನದಲ್ಲೇ ಸಾಧಿಸಲು ಶ್ರಮಿಸುವುದು ಸಾಹಿತಿಯ ನಿಷ್ಠೆ ಎನ್ನುವುದಾದರೆ ಆ ಮಾತು ದೇವುಡು ಅವರಿಗೆ ಸರ್ವಥಾ ಅನ್ವಯಿಸುತ್ತದೆ. ಶಾಸ್ತ್ರ ವಿಷಯಗಳಿಂದ ಹಿಡಿದು ಸಾಮಾಜಿಕ ಎನ್ನಬಹುದಾದ ವಸ್ತುಗಳವರೆಗೆ ಅವರ ಬರವಣಿಗೆಯ ವೈವಿಧ್ಯಮಯವಾದ ಹರಹಿದೆ. ಎಂತಲೇ ವೇದೋಪನಿಷತ್ತುಗಳ ಪಾಂಡಿತ್ಯವೂ, ನವೀನ ಜನಜೀವನ ದೃಷ್ಟಿಯೂ ಅವರ ಸಾಹಿತ್ಯಸೃಷ್ಟಿಗೆ ಬೆನ್ನೆಲುಬಾಗಿದೆ. ಶಾಸ್ತ್ರವಿಷಯಕ, ಸಾಹಿತ್ಯಕ-ಎಂಬ ವಿಭಾಗಗಳಲ್ಲಿ ಅವರ ಬರಹ ನೋಡಬಹುದಾದರೂ ಅದೊಂದು ರೀತಿ ಅಧ್ಯಯನದ ವಿಧಾನವಾಗಬಹುದೇ ವಿನಾ, ಸಾಧಾರಣವಾಗಿ ವೈದಿಕಪ್ರಜ್ಞೆ, ಪಾಂಡಿತ್ಯಗಳು ಎಲ್ಲ ಕಡೆ ಅಚ್ಚೊತ್ತಿವೆ.

ವಾಸಿಷ್ಠ ರಾಮಾಯಣವೆಂದು ಹೆಸರಾದ 'ಯೋಗವಾಸಿಷ್ಠ'ವು ಅದ್ವೈತ ಸಿದ್ಧಾಂತಕ್ಕೆ ಸೇರಿದ ಗ್ರಂಥ. ವಸಿಷ್ಠರು ಶ್ರೀರಾಮನ ಚಿತ್ತ ಶಾಂತಿಗೆಂದು ಬ್ರಹ್ಮನು ಉಪದೇಶಿಸಿದ ಜ್ಞಾನವಿದ್ಯೆಯನ್ನು ಹೇಳಿದರೆಂದು ಪ್ರತೀತಿ. ಇಂಥ ಗ್ರಂಥದ 'ಸುಲಭ-ಕನ್ನಡ' ಅನುವಾದದ ಪ್ರಕಟಣೆಗೆ ದೇವುಡು ದುಡಿದಿದ್ದಾರೆ. 'ಮೀಮಾಂಸ ದರ್ಪಣ'- ಎಂಬ ಗ್ರಂಥ ವೇದಾಂತ, ಪೂರ್ವಮೀಮಾಂಸೆಗಳ ಅವರ ನೈಷ್ಠಿಕ ಅಭ್ಯಾಸಕ್ಕೆ ಕೈಗನ್ನಡಿಯಂತಿದೆ. 'ಸಂಗ್ರಹ ರಾಮಾಯಣ' ಎಂಬುದು ವಾಲ್ಮೀಕಿಯ ಮಾತುಗಳಲ್ಲೇ ರಾಮಾಯಣದ ಕಥೆಯನ್ನು ಸುಂದರವಾಗಿ ಸಂಗ್ರಹಿಸಿರುವ ಕೃತಿ. 'ಮಹಾಭಾರತದ ಮಹಾಪುರುಷರು'- ಎಂಬುದೂ ವ್ಯಾಸರ ಮಹಾಕಾವ್ಯ ಮಹಾಭಾರತದ ಬಗೆಗಿನ ಇವರ ಭಕ್ತಿ, ಪ್ರೀತಿಗೆ ದ್ಯೋತಕವಾಗಿ ಕನ್ನಡದಲ್ಲಿ ಅವತರಿಸಿದೆ.

1933ರಲ್ಲಿ ದೇವುಡು ನರಸಿಂಹಶಾಸ್ತ್ರಿ ಅವರು ಮಾಡಿದ ಉಪನ್ಯಾಸಗಳ ಸಂಕಲನ 'ಕರ್ನಾಟಕ ಸಂಸ್ಕೃತಿ' ಎಂಬುದು. ಕನ್ನಡಿಗರ ಸಾಂಸ್ಕೃತಿಕ ಮಟ್ಟ ಹಿರಿಯದಾಗಬೇಕೆಂಬ ಮಹದಾಶಯದಿಂದ ಹೊಮ್ಮಿದ ಕೃತಿಯಿದು. ಕನ್ನಡದಲ್ಲಿ ಈ ಬಗೆಯ ಪುಸ್ತಕಗಳು ವಿರಳ ಎನ್ನಬಹುದಾದ ಕಾಲದಲ್ಲಿ ರಚಿತವಾದದ್ದು, ಇಂದೂ ಒಂದು ಅಮೂಲ್ಯ ಕೊಡುಗೆಯಾಗಿ ಉಳಿದಿದೆ. ಕರ್ನಾಟಕದ ನಾನಾ ಕುಲಗಳ ಆಚಾರ ವ್ಯವಹಾರಗಳು, ಹಾಡು-ಕಥೆ-ಗಾದೆ-ಒಗಟುಗಳು, ವಿದ್ಯೆ-ವಿಹಾರ-ವಿನೋದಗಳು, ವಿಶೇಷ ಪದ್ಧತಿಗಳು-ಮುಂತಾದುವನ್ನೂ ಅವುಗಳಲ್ಲಿ ಅಂತರ್ಗತವಾಗಿರುವ ಸಂಸ್ಕೃತಿಯ ಸಾರವನ್ನು ನಿದರ್ಶನಗಳ ಸಹಿತ ವಿಮರ್ಶನ ದೃಷ್ಟಿಯಿಂದ ನೋಡಿರುವುದು ಇಲ್ಲಿನ ವಿಶೇಷ.

ಸಂಸ್ಕೃತಿಯನ್ನು ಪಾಮರ ಸಂಸ್ಕೃತಿ, ವಾಸ್ತವ್ಯ ಸಂಸ್ಕೃತಿ, ಜನತೆಯ ಸಂಸ್ಕೃತಿ ಎಂದೆಲ್ಲಾ ವಿಭಾಗಿಸಿಕೊಂಡು ವಿಚಾರ ಮಾಡಬಹುದು. ಆದರೆ, ನಮ್ಮಲ್ಲಿ ವಿದ್ಯಾವಂತ ಸಾಹಿತಿಗಳೂ ಇದ್ದಾರೆ; ಓದದೆ ಕೇಳಿ ಕಂಠಪಾಠ ಮಾಡಿ ಕಾವ್ಯ ಹೇಳುವ ನಿರಕ್ಷರಿಗಳೂ ಇದ್ದಾರೆ. ಆಶುಕವಿತ್ವದ ಶಕ್ತಿಯುಳ್ಳ ಪಾಮರರಿದ್ದಾರೆ. ಇವರೆಲ್ಲರನ್ನೂ ಒಳಗೊಂಡ ನಾಡಿನಲ್ಲಿ ಸಂಸ್ಕೃತಿ ವಿಚಾರದಲ್ಲಿ ಪಂಡಿತ, ಪಾಮರ ಎಂದು ಭೇದ ಮಾಡದೆ ಸಮಷ್ಟಿ ದೃಷ್ಟಿಯಿಂದ ಇಡಿಯಾಗಿ ಕರ್ನಾಟಕದ ಸಂಸ್ಕೃತಿಯನ್ನು ದೇವುಡುರವರು ನಿರೂಪಿಸಿದ್ದಾರೆ.

ಲಾವಣಿ, ವಿನೋದ ಪದಗಳು, ವಿಶೇಷ ಪದಗಳು ಎಂದು ಗಂಡಸರ ಹಾಡುಗಳನ್ನು ಮತ್ತು ಹೆಂಗಸರ ಹಾಡುಗಳನ್ನು ಉದಾಹರಿಸಿ ಸಾಹಿತ್ಯದ ಸೊಗಸನ್ನು ಕೊಂಡಾಡಿದ್ದಾರೆ. ಜನಪದ ಸಾಹಿತ್ಯ ಸಂಗ್ರಹ, ಸಂಶೋಧನೆಗಳು ಉಪಲಬ್ಧವಿಲ್ಲದ ಅಂದು ನರಸಿಂಹಶಾಸ್ತ್ರಿಯವರ ಈ ಕಾರ್ಯ ಸ್ತುತ್ಯಾರ್ಹವಾಗಿದೆ. ಸಂಸ್ಕೃತಿ ಎಂದರೇನು? (ಪರಿಶಿಷ್ಟ 1), ವಿವಾಹದ ವಿಧಿವಿಧಾನಗಳು (ಪರಿಶಿಷ್ಟ 2) - ಲೇಖನಗಳು ವಿಚಾರಪರವಾಗಿವೆ. ಕೆಲವು ಪ್ರಚಲಿತ ಗಾದೆ, ಒಗಟು, ಕಥೆಗಳನ್ನು ಪರಿಚಯಿಸಿದ್ದಾರೆ. ಕನ್ನಡ ನುಡಿಯ ಸಂಸ್ಕೃತಿಯಂತೆ ಕನ್ನಡ ನಡೆಯ-ಸಂಪ್ರದಾಯದ ಸಂಸ್ಕೃತಿಯನ್ನು ಸೂಕ್ಷ್ಮವಾಗಿ ನೋಡಿದ್ದಾರೆ. ಒಟ್ಟಿನಲ್ಲಿ, 'ಕರ್ನಾಟಕ ಸಂಸ್ಕೃತಿ'- ಅಂದಿನ ಶ್ರೀ ಕೃಷ್ಣರಾಜ ಒಡೆಯರ್ ಮುಂತಾದ ಗಣ್ಯರಿಂದ ಪ್ರಶಂಸೆ ಗಳಿಸಿದ, ದೇವುಡುರವರ ಆಳವಾದ ಸಂಶೋಧನೆಯ ಪರಿಣಾಮವಾಗಿ ರೂಪು ತಳೆದ ಒಂದು ಆಕರಗ್ರಂಥ ಎನ್ನಬಹುದು.

### 3

ಕಾದಂಬರಿ ಈ ಯುಗದ ಅತ್ಯಂತ ಜನಪ್ರಿಯ ಸಾಹಿತ್ಯ ಪ್ರಕಾರ. ಸಮಕಾಲೀನ ಜೀವನ ಚಿತ್ರಣಕ್ಕೆ, ಶೈಲಿ ಹಾಗೂ ವಸ್ತುವಿನಲ್ಲಿ ಅನಿರ್ಬಂಧಿತ ಸ್ವಾತಂತ್ರ್ಯ, ಸೊಗಸನ್ನು ಮೆರೆಸಲು ಹೇಳಿ ಮಾಡಿಸಿದ ರೂಪ ಕಾದಂಬರಿ. ಹೀಗಾಗಿ ದೇವುಡುರವರು ತಮ್ಮ ಪ್ರತಿಭಾ ಆವಿಷ್ಕಾರದ ಕಾರಣದಿಂದ ಚಾರಿತ್ರಿಕ, ಪೌರಾಣಿಕ ಮತ್ತು ಸಾಮಾಜಿಕ ವಲಯದ ಹಲವು ಕಾದಂಬರಿಗಳನ್ನು ನಿರ್ಮಿಸಿ ಆ ಕ್ಷೇತ್ರದಲ್ಲಿ ಮಹತ್ವದ ಸ್ಥಾನ ಗಳಿಸಿದ್ದಾರೆ.

'ಮಯೂರ' ಎಂಬ ಚಾರಿತ್ರಿಕ ಕಾದಂಬರಿ ಈ ಶತಮಾನದ ಮೂರನೇ ದಶಕದಲ್ಲಿ, ಚಾರಿತ್ರಕ ಕಾದಂಬರಿಗಳ ಸಂಖ್ಯೆ ಇಳಿಮುಖವಾಗುತ್ತಿದ್ದಾಗ ಬೆಳಕು ಕಂಡ ಕೃತಿ. ಇತಿಹಾಸದ ಬನವಾಸಿಯ ಕದಂಬರನ್ನು ವಸ್ತುವನ್ನಾಗಿ ಆಧರಿಸಿ ಸ್ವತಂತ್ರ ನಿರ್ಮಾಣ ಮಾಡಿದ್ದಾರೆ. ಚರಿತ್ರೆಯಲ್ಲಿ ಕದಂಬ ರಾಜವಂಶದ ಬಗೆಗೆ ಸಾಕಷ್ಟು ಭಿನ್ನಾಭಿಪ್ರಾಯಗಳು, ಗೊಂದಲವಿದ್ದರೂ 'ಮಯೂರ'ದ ಕಥೆ ವಾಸ್ತವಿಕ ಎನ್ನುವಂತೆ ಪರಿಣಾಮರಮಣೀಯವಾಗಿದೆ. ದೇವುಡರವರ ಕಥನ ಕೌಶಲ ಮತ್ತು ಶೈಲಿ ಇದಕ್ಕೆ ಕಾರಣ ಎನ್ನಬೇಕು. ಮಯೂರಶರ್ಮ ಬ್ರಾಹ್ಮಣ ವೇಷದ ಕ್ಷತ್ರಿಯನೇ ಎಂಬುದನ್ನು ನಿಖರಗೊಳಿಸಿ ಅವನ ಸಾಹಸದ ಕಥೆಯನ್ನು ವರ್ಣದೃಶ್ಯಗಳ ಮಾಲೆಯಂತೆ ಚಿತ್ರಿಸಲಾಗಿದೆ. ಕದಂಬ ವಂಶದ ಮಯೂರ ಅನಾಥನಾಗಿ ಪಲ್ಲವ ರಾಜ್ಯಕ್ಕೆ ಬಂದು, ಒಂದು ಕಾಲಕ್ಕೆ ತಾನೊಬ್ಬ ರಾಜವಂಶದವನೆಂದು ಅರಿತು, ಪೌರುಷದಿಂದ, ಸಮಯ ಸಾಧಿಸಿ ಶ್ರೀಶೈಲ, ಬನವಾಸಿಗಳನ್ನು ಗೆದ್ದು, ಪಲ್ಲವರ ಹುಟ್ಟಡಗಿಸುವುದು ಕಥೆ. ಪಲ್ಲವ ರಾಜಕುಮಾರಿ ಪ್ರೇಮಾವತಿಯನ್ನು ಪ್ರೇಮಿಸಿ ವಿವಾಹವಾಗುವುದು ಕಥೆಯ ಒಂದು ರಮ್ಯ ಸನ್ನಿವೇಶ.

ವಾಸ್ತವ ಘಟನೆಗಳನ್ನಾಧರಿಸಿದ ಚರಿತ್ರೆಯಲ್ಲಿ ಕಾದಂಬರಿಗೆ ವಿಷಯವಾಗುವ ಎಷ್ಟೋ ಪಾತ್ರ, ಸನ್ನಿವೇಶಗಳಿರಬಹುದು. ಆದರೆ, ಅದನ್ನು ಚರಿತ್ರೆಗೆ ಅಪಚಾರವಾಗದಂತೆ ಕಲ್ಪನೆಯ ಬಲದಿಂದ ವಿನೂತನವಾಗಿಸುವುದು ಕಾದಂಬರಿಕಾರನ ಕುಶಲತೆ. ದೇವುಡುರಂಥ ಸಮರ್ಥರೂ-'ಮಯೂರ ಒಂದು ಕಥೆ; ಅದರಲ್ಲಿ ದಿಟಕ್ಕಿಂತ ದಿಟದಂತೆ ತೋರುವ ಸಟೆಯೇ ಹೆಚ್ಚು'- ಎಂದು ವಿನಯದಿಂದ ಹೇಳಿರುವುದನ್ನು ನೋಡಿದರೆ ಚಾರಿತ್ರಿಕ ಕಾದಂಬರಿಗಳ ರಚನೆಯ ತೊಡಕು ಎಷ್ಟೆಂಬುದು ವಿದಿತವಾಗುತ್ತದೆ. "ಮಯೂರ ಕೇವಲ ಕಥೆಯೆಂದೇ ಓದಬೇಕಾದದ್ದು; ಅಭಿನವ ಮುದ್ರಾರಾಕ್ಷಸದಂತೆ ನಾಯಕ ಪ್ರತಿನಾಯಕರ ಕೌಶಲ್ಯಪೂರ್ಣವಾದ ತಂತ್ರ ಪ್ರತಿತಂತ್ರಗಳೇ ಕಥೆಯ ಜೀವಾಳವಾಗಿದೆ. ದೇವುಡು ಅವರ ಶೈಲಿಯ ಮಾರ್ಮಿಕತೆಯೊಂದೇ ಕಥೆಯ ಮೋಹಕತೆಯನ್ನು ಕಾಪಾಡಿದೆ"[4] ಎಂಬ ವಿಮರ್ಶೆ ಅರ್ಥಪೂರ್ಣ. ಮಯೂರ ಚಲನಚಿತ್ರವಾಗಿ ಯಶಸ್ವಿ ಆಗಲು ಈ ಕಾದಂಬರಿಯೇ ಸ್ಫೂರ್ತಿ ಎಂದರೂ ಆಶ್ಚರ್ಯವಲ್ಲ.

ವಿಜಯನಗರದ ಇತಿಹಾಸದ ಅವಧಿಯಲ್ಲಿ ಆಯಿತೆನ್ನಲಾದ ಒಂದು ಶೃಂಗಾರದ ಕಥೆ 'ಅವಳ ಕಥೆ'. ಕಾದಂಬರಿಯಲ್ಲಿ ಚಿನ್ನಾಸಾನಿಯ ಪಾತ್ರವೇ ಪ್ರಮುಖವಾಗಿ ಉಳಿದ ಪಾತ್ರಗಳು ಅವಳ ಸುತ್ತ ಚಿತ್ರಣವಾಗಿವೆ. ಸಾರ್ವಕಾಲಿಕವಾದ ಮಾನವ ಬದುಕಿನ ಕಾಮದ ಸಮಸ್ಯೆಯ ಜಟಿಲತೆಯನ್ನು ದೇವುಡುರವರು ಪ್ರಸ್ತುತ ಕಾದಂಬರಿಯಲ್ಲಿ ವೈಚಾರಿಕವಾಗಿ ನೋಡಿದ್ದಾರೆ.

### 4

ಕನ್ನಡ ಸಾರಸ್ವತ ಲೋಕಕ್ಕೆ ದೇವುಡುರವರ ಪೌರಾಣಿಕ ಕಾದಂಬರೀತ್ರಯ– ಮಹಾಬ್ರಾಹ್ಮಣ, ಮಹಾಕ್ಷತ್ರಿಯ ಮತ್ತು ಮಹಾದರ್ಶನ– ಇಂದೂ ಹಾಗೂ ಮುಂದೂ ಮರೆಯಲಾಗದ ಮಹಾ ಕಾಣಿಕೆಯಾಗಿದೆ. ಅವರಂತೆ ಪೌರಾಣಿಕ ವಸ್ತುವನ್ನು ದೇಶ ಕಾಲಗಳು, ಪರಿಸರ ಕಲ್ಪನೆಗಳ ಹಿನ್ನೆಲೆಯಲ್ಲಿ ನೋಡಿ ಕಲಾತ್ಮಕವಾಗಿ ಭಾಷೆಯಲ್ಲಿ ಮೂರ್ತಗೊಳಿಸಬಲ್ಲ ಸಾಮರ್ಥ್ಯ ಅಪರೂಪವೇ ಸರಿ. ತಮ್ಮ ಪ್ರತಿಭೆಗೆ ಸ್ಫೂರ್ತಿ 'ದೈವಪ್ರೇರಣೆ' ಎಂದು ದೇವುಡು ಅತ್ಯಂತ ನಿಷ್ಠೆಯಿಂದ ಹೇಳಿಕೊಂಡಿದ್ದಾರೆ.

ಸಾಮಾಜಿಕ ಮೌಲ್ಯ, ವಾಸ್ತವ ಪ್ರಜ್ಞೆ, ಮಣ್ಣಿನ ವಾಸನೆ ಮುಂತಾದ ಮಾತುಗಳೇ ಹೆಚ್ಚು ಕೇಳಿ ಬರುತ್ತಿರುವ ಈ ದಿನಗಳಲ್ಲಿ ಪುರಾಣದ ಆಕರಕ್ಕೆ ಕಾದಂಬರಿಕಾರ ತುಡಿಯುವುದು ಆಕಸ್ಮಿಕವೇ! ಹಾಗೆ ನೋಡಿದರೆ 'ಭಾರತೀಯತೆ' ಎಂಬುದೂ ಒಂದು ರಾಷ್ಟ್ರೀಯ ಮೌಲ್ಯ. ಅದರ ಉತ್ಥಾನಕ್ಕಾಗಿ ಹೋರಾಡಿದರು ಎನ್ನಲಾದ ಮಹಾ ಪುರುಷರ ಜೀವನವೂ ಸಾಂಕೇತಿಕ ಹಾಗೂ ಆದರ್ಶಪ್ರಾಯ. ಅವರು ಪುರಾಣಲೋಕದವರೇ ಇರಬಹುದು. "ಸಾಣೆಗೆ ಒಡ್ಡುವುದು ರತ್ನವನ್ನಲ್ಲದೆ ಕಲ್ಲನ್ನಲ್ಲ; ಹಾಗೆ ಮಹಾವಿಷಯಗಳನ್ನು ವಿಮರ್ಶಿಸಬೇಕೆಂಬ ಆಸೆ ಇದ್ದವರು ಮಹಾಪುರುಷರನ್ನು ಚಿತ್ರಿಸಲು ಹೊರಡದೆ ಬೇರೆ ದಾರಿ ಇದೇಯೇನು"[5]- ಎಂದು ತಮ್ಮ ಮೂಲೋದ್ದೇಶವನ್ನು ದೇವುಡು ಸ್ಪಷ್ಟಪಡಿಸಿದ್ದಾರೆ. ಅವರ ಸಂಸ್ಕೃತಿಸಂಪನ್ನ ವಿಶಾಲ ದೃಷ್ಟಿಯ ಮೂಲದಿಂದ ಮೂರು ಕೃತಿಗಳು ಉದ್ಭವಿಸಿವೆ.

'ಮಹಾಬ್ರಾಹ್ಮಣ'ದ ಕಥೆ ವೇದಕಾಲದ ಪ್ರಸಿದ್ಧವಾದ ವಸಿಷ್ಠ-ವಿಶ್ವಾಮಿತ್ರರದು. ಹತ್ತು ಹಲವು ಮೂಲಗಳಲ್ಲಿ ದೊರೆಯುವ ಕಥಾನಕವಾದರೂ ಮುಖ್ಯವಾಗಿ ರಾಮಾಯಣದ ಕಥೆಯನ್ನು ಆಧರಿಸಿ, ಪ್ರಾಸಂಗಿಕವಾಗಿ ಉಳಿದ ಅಂಶಗಳನ್ನು ಹೊಂದಿಸಿ, ಕಲ್ಪನೆಯ ಮೂಸೆಯಲ್ಲಿ ಎರಕಹೊಯ್ದ ಮಹಾಕೃತಿ 'ಮಹಾಬ್ರಾಹ್ಮಣ'. 1926ರಲ್ಲೇ ಇಂಥ ಕಾದಂಬರಿ ರಚನೆ ಬಗ್ಗೆ ದೇವುಡುರವರಿಗೆ ಹಂಬಲ ಮೂಡಿತ್ತಂತೆ! ಆದರೆ, ವ್ಯಾಸಂಗ, ಪರಿಣತಿಯಿಂದ ಆಸೆ ಕೈಗೂಡಲು ಸುಮಾರು ಇಪ್ಪತ್ತೈದು ವರ್ಷಗಳು ಕಾಯಬೇಕಾಯಿತಂತೆ.

ವಸಿಷ್ಠನ ಹೋಮಧೇನು ನಂದಿನಿಗೆ ರಾಜ ಕೌಶಿಕ ಆಸೆಪಟ್ಟು ಹಿಡಿಯಲು ಹೋಗಿ ಅದರ ಪ್ರಭಾವದಿಂದ ಹೆದರಿ ಜೀವಗಳ್ಳನಂತೆ

ಓಡಿಹೋಗಬೇಕಾಗುತ್ತದೆ. ವಸಿಷ್ಠನ ಮೇಲಿನ ಆಕ್ರೋಶ, ಸೇಡಿನ ಮನೋಭಾವ ತಪೋನಿರತನಾಗುವಂತೆ ಮಾಡಿ ತನ್ಮೂಲಕ ಸಿದ್ಧಿಗಾಗಿ ಈಶ್ವರಾನುಗ್ರಹಕ್ಕೆ ಮುಂದಾಗುತ್ತಾನೆ. ರುದ್ರನ ಅನುಗ್ರಹದಿಂದ, ಅಸ್ತ್ರಾಭಿಮಾನಿ ದೇವತೆಗಳಿಂದ ಪಡೆದ ಶಕ್ತಿಯನ್ನು ವಸಿಷ್ಠನ ಆಶ್ರಮ ನಿರ್ಮೂಲನ ಮಾಡುವ ಹೀನಕೃತ್ಯಕ್ಕೆ ಬಳಸಲು ಮುಂದಾಗಿ ಬ್ರಹ್ಮದಂಡ ದಿಂದ ಮೂರ್ಛೆಹೋಗಿ, ಎಚ್ಚತ್ತು ಸರ್ವಸಿದ್ಧಿ ಪಡೆದ ವಸಿಷ್ಠನಂತೆ ತಾನೂ ಆಗಬೇಕೆಂಬ ಮನಃ ಪರಿವರ್ತನೆಯಿಂದ ಮಹಾಬ್ರಾಹ್ಮಣನಾಗುವ ಆಸೆಯಿಂದ 'ವಿಶ್ವಾಮಿತ್ರ' ನಾಗುತ್ತಾನೆ. ಸಶರೀರನಾಗಿ ಸ್ವರ್ಗಕ್ಕೆ ಹೋಗುವ ಆಸೆ ವ್ಯಕ್ತಪಡಿಸಿದ ತ್ರಿಶಂಕುರಾಜನ ದೇಹವನ್ನು ದಿವ್ಯದೇಹವನ್ನಾಗಿ ಮಾಡಲು ಕೈಗೊಳ್ಳುವ ಯಜ್ಞ, ಕ್ಷತ್ರಿಯ ಸಹಜ ಕಾಮಕ್ರೋಧಗಳನ್ನು ಇನ್ನೂ ಬಿಡದ ಕಾರಣದಿಂದ ಪರಿಣಾಮಬೀರದೆ ಹೋಗಿ ತನ್ನ ಮಂತ್ರಬಲದಿಂದ ವಸಿಷ್ಠನ ಮಕ್ಕಳನ್ನು ವಿಶ್ವಾಮಿತ್ರ ಸಂಹರಿಸುತ್ತಾನೆ. ಹೀಗೆ ಅನುಭವಲೋಕದಲ್ಲಿ ಬೆಳೆಯುತ್ತಾ ಹೋಗುತ್ತಾನೆ. ಮುಂದೆ ದೇವಲೋಕದ ಮೇನಕೆಯೊಡನೆ ಸಂಸಾರ; ಮೇನಕೆ ಮಾನವಳಂತೆ ಸರಳವಾಗಿ ವರ್ತಿಸುತ್ತಾಳೆ. ಶಕುಂತಳೆಯ ಜನನ; ಮೇನಕಾ ನಿರ್ಗಮನದ ತರುವಾಯ ಮತ್ತೆ ವಿಶ್ವಾಮಿತ್ರನಿಗೆ ತಪಸ್ಸಿನ ಧ್ಯಾನಲೋಕ; ಬ್ರಾಹ್ಮಣ್ಯದ ಯೋಚನೆ. ಈ ನಡುವೆ ಹರಿಶ್ಚಂದ್ರನಿಗೆ ಯಜ್ಞಪಶುವಾಗಬೇಕಾಗಿ ಬಂದ ಶುನಶ್ಶೇಪನನ್ನು ತನ್ನ ಮಂತ್ರಬಲದಿಂದ ರಕ್ಷಿಸುತ್ತಾನೆ. ದೇವಗುರು ಬೃಹಸ್ಪತ್ಯಾಚಾರ್ಯರಿಂದ ದೇವರಹಸ್ಯಗಳನ್ನು ತಿಳಿದು ಗಾಯತ್ರಿ ಮಂತ್ರಾನುಷ್ಠಾನಕ್ಕೆ ತೊಡಗುತ್ತಾನೆ. ಮಹಾಸಾಧನೆ ಮಾಡಿ ಹೆಸರಿಗೆ ತಕ್ಕಂತೆ ವಿಶ್ವಾಮಿತ್ರನಾಗಿ ಗಾಯತ್ರಿದೇವಿ ದರ್ಶನಪಡೆದು ಮಂತ್ರದ್ರಷ್ಟಾರನಾಗುತ್ತಾನೆ. ಇದು ಕಾದಂಬರಿಯ ಸ್ಥೂಲ ಚಿತ್ರ.

ಕ್ಷತ್ರಿಯನಾಗಿ ಹುಟ್ಟಿ 'ಮಹಾಬ್ರಾಹ್ಮಣ'ನಾಗಲು ವಿಶ್ವಾಮಿತ್ರ ಕೈಗೊಳ್ಳುವ ಸಾಹಸಮಯ ಕಥೆ ಇಲ್ಲಿಯದು. ದೇವ-ಮಾನವ ಸಂಬಂಧಗಳು, ಯಜ್ಞಯಾಗಗಳ ಅನುಷ್ಠಾನಗಳು, ದೇವತೆಗಳು ಪ್ರತ್ಯಕ್ಷರಾಗುವುದು, ವೇದ ಕಾಲದ ಬಿಡಿಸಲಾರದ ಧರ್ಮ ವಿಚಾರಗಳು, ಮಂತ್ರಸಿದ್ಧಿ ಮುಂತಾದ ಸಂಗತಿಗಳು ದೇವುಡುರವರ ಕೈಯಲ್ಲಿ ಹದವಾಗಿ ಮೂಡಿ ಕಾದಂಬರಿಗೆ ಉಚಿತವಾದ ಆವರಣ ನಿರ್ಮಾಣಕ್ಕೆ ಪೋಷಕವಾಗಿದೆ. ಕಾಲ ದೇಶಗಳ ಕಟ್ಟಿಗೆ ಒಳಪಟ್ಟವರು ಎತ್ತುವ 'ಸಂದೇಹ'ಗಳಿಗೆ ಗ್ರಂಥದಲ್ಲೇ ಸಮಾಧಾನವಿದೆ ಎಂದು ಲೇಖಕರು ಹೇಳಿಕೊಂಡಿದ್ದಾರೆ. ಈ ಕಾದಂಬರಿ 'ಭರತಖಂಡದ ಆತ್ಮಚಿತ್ರಣ' ಎಂಬ ಅವರ ಮಾತು ಸತ್ಯ. ಹೆಜ್ಜೆ ಹೆಜ್ಜೆಗೆ ಅಹಂಭಾವವನ್ನು ತೊರೆಯುತ್ತಾ, ಬ್ರಾಹ್ಮಣರ ಪರಮಸಿದ್ಧಿಗಾಗಿ ಹಾತೊರೆಯುತ್ತಾ, ಸಾಧನಾ ನಿರತನಾಗುವ ವಿಶ್ವಾಮಿತ್ರ ಮಾನವೀಯವಾಗಿ ಬೆಳೆಯುತ್ತಾ ಸಾತ್ವಿಕ ಶಕ್ತಿಯಾಗಿ ನಮ್ಮ ಅನುಕಂಪೆಗೆ ಪಾತ್ರನಾಗುತ್ತಾನೆ. ಸಾರ್ವಕಾಲಿಕ ಅನುಭವ ಸಾಂದ್ರತೆಯಿಂದ ಕೂಡಿದ ವಿಶ್ವಾಮಿತ್ರನ ಜೀವನ ಹಾಗೂ ಅವನಿಗುಂಟಾದ ಗಾಯತ್ರೀ ಸಾಕ್ಷಾತ್ಕಾರ ನಮ್ಮ ಸಂಸ್ಕೃತಿಯ ಒಂದು ಪ್ರತೀಕ; ಪರಿಪಾಕ. ಸ್ವಾನುಭವ, ಕಲ್ಪನಾಶಕ್ತಿ, ಶಾಸ್ತ್ರ ಪರಿಚಯದಿಂದ ಆಸ್ತಿಕರಿಗೆ ಮಾತ್ರವಲ್ಲದೆ ಸಾಹಿತ್ಯಜಿಜ್ಞಾಸುಗಳಿಗೂ ಪ್ರಿಯವಾಗುವಂಥ, ಜನಮನದಲ್ಲಿ ಬೇರೂರಿರುವ ವಿಶ್ವಾಮಿತ್ರನ ಕಥೆಯ ರೇಕು ರೂಹುವಡೆದಂಥ ಮಹಾಕೃತಿಯನ್ನು ದೇವುಡು ನಿರ್ಮಿಸಿದ್ದಾರೆ.

## 5

'ಮಹಾಕ್ಷತ್ರಿಯ'-ಕಾದಂಬರಿಯ ನಾಯಕ ನಹುಷ ಮಹಾರಾಜ. ಪರಿಗ್ರಹಕ್ಕಿಂತ ತ್ಯಾಗವು ಹೆಚ್ಚೆಂದೂ, ಭೋಗಕ್ಕೆ ಅಂಟಿಕೊಳ್ಳುವ ದೇವತ್ವಕ್ಕಿಂತಲೂ ತ್ಯಾಗವನ್ನೇ ಆರಾಧಿಸುವ ಮನುಷ್ಯತ್ವವೇ ಅಧಿಕವೆಂದು ಲೋಕಕ್ಕೆ ಶ್ರುತಪಡಿಸಿದ ಮಹಾವ್ಯಕ್ತಿ ಈತ. ಯಜ್ಞಯಾಗಾದಿಗಳಿಂದ, ದಾನ ಬುದ್ಧಿ, ವೀರಗುಣಗಳಿಂದ ಇಂದ್ರನ ದರ್ಪವನ್ನು ತುಳಿದು ಇಂದ್ರಪಟ್ಟ ಪಡೆದವನು. ಉಪನಿಷತ್ತು, ಮಹಾಭಾರತ, ವಾಯುಪುರಾಣ ಮುಂತಾದ ಅನೇಕ ಮೂಲಗಳ ಕಥೆಯನ್ನು, ಪ್ರಸಂಗಗಳನ್ನು ಸ್ವೀಕರಿಸಿ, ಇದು ಹೀಗೇ ನಡೆಯಿತೇನೊ ಎನ್ನುವಂತೆ ಸರ್ವಾಂಗ ಸುಂದರವನ್ನಾಗಿಸಿದ್ದಾರೆ ದೇವುಡು.

ದೇವಲೋಕದಲ್ಲಿ ಇಂದ್ರನ ಸಭೆಯ ವರ್ಣನೆಯಿಂದ ಕಾದಂಬರಿಯ ಆರಂಭ. ಸಭೆಗೆ ದೇವಗುರು ಬೃಹಸ್ಪತ್ಯಾಚಾರ್ಯರು ತಡವಾಗಿ ಬಂದರೆಂದು ಇಂದ್ರ ಸಿಟ್ಟಾಗುವುದೂ; ಇದರಿಂದ ಮುಂದೆ ತ್ವಷ್ಟೃಬ್ರಹ್ಮನ ಮಗ ವಿಶ್ವರೂಪಾಚಾರ್ಯ ಇಂದ್ರನಿಗೆ ಧರ್ಮಾಚಾರ್ಯನಾಗಿ ದಾನವ ಪಕ್ಷಪಾತಿ ಯೆಂದು ಇಂದ್ರ ಆತನನ್ನು ವಧಿಸುವುದೂ ಕಥೆಗೆ ಅನರ್ಥಬೀಜ ವಾಗುತ್ತದೆ. ಇಂದ್ರನ ಅಹಂಕಾರ ಮುರಿಯಲು ತ್ವಷ್ಟೃ ಬ್ರಹ್ಮನಿಂದ ಕರಾಳ ವೃತ್ರಾಸುರನ ಸೃಷ್ಟಿ; ಮತ್ತೆ ಇಂದ್ರನಿಗೆ ಮನಃಕ್ಷೋಭೆಯಾಗಿ ಇಂದ್ರಪದವಿಯನ್ನು ವಿಷ್ಣುವಿನ ಅಪ್ಪಣೆಯಂತೆ ವೃತ್ರನಿಗೆ ಒಪ್ಪಿಸಿ ಒಂದು ಕಾಲಕ್ಕೆ ಆತನನ್ನು ವಧಿಸಿ, ಹತ್ಯಾ ಚಿಂತೆ ಮೂಡಿ, ಹೆದರಿ ಓಡಿಹೋಗಿ ಬಚ್ಚಿಟ್ಟುಕೊಳ್ಳುವುದೂ ಕಾದಂಬರಿಯ ಪೂರ್ವ ಭಾಗವನ್ನೆಲ್ಲ ಆವರಿಸಿರುವ ಕಥೆ.

ತೆರವಾದ ಇಂದ್ರನ ಪದವಿಗೆ ದೇವತೆಗಳ ಮತದಂತೆ ಮಧ್ಯಮ ಲೋಕದ ನಹುಷಚಕ್ರವರ್ತಿ ಎರಡು ನಿಬಂಧನೆಗಳನ್ನೊಡ್ಡಿ ಆಯ್ಕೆ ಯಾಗುವುದು; ಒಂದು, ವಿರಜಾದೇವಿಯೇ ಅಮರಾವತಿಯಲ್ಲೂ ತನ್ನ ಪತ್ನಿಯಾಗಬೇಕೆಂದು ಹೇಳಿ ಮನುಷ್ಯ ಧರ್ಮ ಬಿಡದೆ ಮರಣ ಧರ್ಮ ಹೊಂದುವುದು, ಎರಡು-ದೇವಗುರುಗಳು ಕೇಳಿದ್ದನ್ನು ರಹಸ್ಯವೆನ್ನದೆ ತನಗೆ ಹೇಳಬೇಕೆಂದು ಕೇಳಿ ಮುಂದೆ 'ತನ್ನ ಇಂದ್ರಪಟ್ಟ ಪೂರ್ಣವೆ?' ಎಂದು ಪ್ರಸಂಗವಶಾತ್ ಕೇಳಿ 'ಶಚೀಪತಿಯಾಗುವವರೆಗೂ ಪೂರ್ಣವಾಗುವುದಿಲ್ಲ' ಎಂಬ ಕಾರಣದಿಂದ ರಹಸ್ಯಭೇದನೆಯಿಂದ ಶಾಪಕ್ಕೆ ತುತ್ತಾಗುವುದು-ಇದು ನಹುಷ ಇಂದ್ರಪದವಿ ತಾತ್ಕಾಲಿಕ ಎಂದು ತಿಳಿದು ಶಚಿಯನ್ನು ಗೌರವದಿಂದ ನಡೆಸಿಕೊಳ್ಳಲು ಕಾರಣವಾಗುತ್ತದೆ. ಮುನ್ನಿನ ಇಂದ್ರ ಮಾಡಲಾಗದೆ ಬಿಟ್ಟಿದ್ದ 'ಸಪ್ತರ್ಷಿ ಶಿಬಿಕಾ' ಪೂಜೆ ಮಾಡಲು ನಹುಷ ನಿರ್ಧರಿಸಿ ಅಹಂಕಾರಶೂನ್ಯನಾಗಿ ಇಂದ್ರನ ಹತ್ಯೆಕಳೆದು ಮುನ್ನಿನ ಪದವಿಯಲ್ಲಿರುವಂತೆ ಮಾಡಿ 'ಅತೀಂದ್ರ' ಎಂದು ಹೊಗಳಿಸಿಕೊಳ್ಳುತ್ತಾನೆ. ಶಿಬಿಕೋತ್ಸವದ ಕಡೆಯಲ್ಲಿ ನಹುಷನ ಸಮಾಧಿ ಶಿಥಿಲವಾಗಿ ಆಗುವ ಅಪರಾಧಕ್ಕೆ ಅಜಗರವಾಗಿ ಹುಟ್ಟುವ ಶಿಕ್ಷೆ ವಿಧಿಸಿಕೊಂಡು ಜಗದ್ವಿಖ್ಯಾತನಾಗುತ್ತಾನೆ.

ಕಾದಂಬರಿಯ ಉತ್ತರಭಾಗವೆಲ್ಲ ನಾಯಕ ನಹುಷನ ದಿವ್ಯಚರಿತೆಯ ನ್ನೊಳಗೊಂಡಿದೆ. ಶಚಿಯೆಂದಂತೆ ನಹುಷನ ಪಾತ್ರ-'ದೇವತೆಗಳಿಗೆ, ಇಂದ್ರ ದಂಪತಿಗಳಿಗೇ ವರವನ್ನು ಕೊಡುವಂತೆ', 'ಮಹಾನುಭಾವ'ನಾಗಿ ವಿಕಾಸಗೊಂಡಿದೆ. 'ಮಹಾಕ್ಷತ್ರಿಯ' ಎಂಬ ಕಾದಂಬರಿ ಶೀರ್ಷಿಕೆ ಅನ್ವರ್ಥ ವಾಗಿದೆ. ಭೂಲೋಕದಲ್ಲಿ ರಾಜ್ಯಭಾರ ಮಾಡುತ್ತಿದ್ದ ನಹುಷನ ನ್ಯಾಯವಾದಿತನ, ಇಂದ್ರನಾದ ಮೇಲೂ ಆತ ಕಾಯ್ದುಕೊಳ್ಳುವ ಮಾನಸಿಕ ಸಮತೋಲನ, ಶಚೀಪ್ರಸಂಗ ಮುಂತಾದ ಸನ್ನಿವೇಶಗಳು ಆ ಪಾತ್ರದ ಆಂತರಿಕ ಬೆಳವಣಿಗೆಯನ್ನೂ, ಮಾನವ ಮಹೋನ್ನತಿಯನ್ನೂ ಎತ್ತಿ ಹೇಳಿದೆ. ಕಾದಂಬರಿಯ ಆರಂಭದಲ್ಲಿ ಇಂದ್ರ ಶಚಿಯನ್ನು ಕುರಿತು "ನಾವು

ಎಚ್ಚರವಾಗಿದ್ದೂ ತಪ್ಪುವುದು ಕಾಲದ ಮಹಿಮೆ" ಎಂದು ಹೇಳುವ ಮಾತು ಮುಂದಿನ ಎಲ್ಲ ಘಟನೆಗಳಿಗೆ ದಿಕ್ಸೂಚಿಯಾಗಿದೆ. ಇಂದ್ರನ ಪಾಪಪ್ರಜ್ಞೆ, ಆತಂಕ, ತಳಮಳಗಳು ಅತ್ಯಂತ ಮಾನವೀಯ ಚೌಕಟ್ಟಿನಲ್ಲಿ ಬೆಸೆದಿದ್ದು ಇನ್ನೊಂದು ಲೋಕದ ಕಥೆಯನ್ನು ಓದುತ್ತಿದ್ದೇವೆ ಎಂಬ ಭಾವನೆಯೇ ಬರುವುದಿಲ್ಲ. ಐದು ಬಾರಿ ಪುನರ್ಮುದ್ರಣಗೊಂಡಿರುವುದೇ ಈ ಕಾದಂಬರಿಯ ಜನಪ್ರಿಯತೆಗೆ ಸಾಕ್ಷಿ ಎನ್ನಬಹುದು.

6

ದೇವುಡುರವರ 'ಮಹಾದರ್ಶನ'-ಅಲೌಕಿಕತೆಯನ್ನು ಅತಿಶಯವಾಗಿ ಸಾಕ್ಷಾತ್ಕಾರಿಸಿಕೊಂಡು ಅದ್ಭುತ ಶೈಲಿಯಲ್ಲಿ ಅರಳಿದ ಕಡೆಯ ಬೃಹತ್ಕಾದಂಬರಿ. ಋಷಿ ಯಾಜ್ಞವಲ್ಕ್ಯರು ಬ್ರಹ್ಮವಿದ್ಯೆ ಸಾಧಿಸಿದ ಮಹಾನ್ ಕಥೆ. 'ಮಹಾದರ್ಶನ' ಎಂಬ ಹೆಸರು ಕಥಾವಸ್ತುವಿಗೆ ಪೂರಕವಾದ ಘಟನಾವಳಿಗಳಿಗೆ ತಕ್ಕಂತೆ ಅರ್ಥಸ್ವಾರಸ್ಯದಿಂದ ಬೆಳೆಯುತ್ತಾ ಹೋಗಿ ಯಜ್ಞವಲ್ಕ್ಯ ಹಾಗೂ ಯಾಜ್ಞವಲ್ಕ್ಯ ಇಬ್ಬರಿಗೂ ಅನ್ವಯಿಸುವಂತಿದೆ. ಕಾವ್ಯಮೂಲವಾದುದು ಕರ್ಮಕಾಂಡ; ತಪ, ದಾನ, ಅನುಗ್ರಹವಾಗ ಬೇಕಾದುದು ಬ್ರಹ್ಮವಿದ್ಯೆ. ಕರ್ಮಕಾಂಡವನ್ನವಲಂಬಿಸಿ ಯೋಗಕ್ಕೆ ಅಧ್ವರ್ಯುವೆನಿಸಿದ, ತನಗಿಂತ ಪ್ರಬಲನಾದ, ಲೋಕೋತ್ತರನಾದ ಮಗನನ್ನು ಪಡೆಯಬೇಕೆಂಬ ದೇವರಾತ ತನ್ನ ಪತ್ನಿ ಆಲಂಬಿನೀ ದೇವಿಯ ಗರ್ಭ ಪ್ರವೇಶಿಸಿದ ಮಹಾಪುರುಷ ಕರ್ಮಕಾಂಡ ಬಿಡದೆ ಬ್ರಹ್ಮವಿದ್ಯೆ ಸಾಧಿಸಲಿ ಎಂದು ಮಾಡುವ ಸಂಸ್ಕಾರಗಳು ಕಾದಂಬರಿಯ ಆದಿಭಾಗ. ಗರ್ಭಸ್ಥ ಶಿಶುವನ್ನೇ ದೇವರಾತ ದರ್ಶಿಸಿ ತನ್ನ ಸಂಶಯಗಳನ್ನು ಪರಿಹರಿಸಿಕೊಳ್ಳುವ ಭಾಗ ಅಲೌಕಿಕ ಸೌಂದರ್ಯದಿಂದ ಕೂಡಿದೆ.

ಹುಟ್ಟಿದ ಮಗುವಿಗೆ ಯಾಜ್ಞವಲ್ಕ್ಯ ಎಂದೇ ಹೆಸರಿಟ್ಟು ಜಾತಕರ್ಮ ಉಪನಯನ, ಸಕಲ ಉಚಿತ ಸಂಸ್ಕಾರಗಳನ್ನು ಮಾಡಿ ವೈಶಂಪಾಯನರ ಬಳಿ ಗುರುಕುಲವಾಸಕ್ಕೆ ದೇವರಾತ ಬಿಡುವ ವಿವರವೆಲ್ಲಾ ಅನ್ಯಾದೃಶವಾಗಿ ಚಿತ್ರಿತವಾಗಿದೆ. ಕುಲಪತಿ ವೈಶಂಪಾಯನರ ಸಿಟ್ಟಿಗೆ ಪಾತ್ರನಾಗಿ ಅಲ್ಲಿಂದ ಹೊರಟು ಋಗ್ವೇದ, ಸಾಮವೇದಗಳನ್ನರಿತು ಯಜ್ಞೇಶ್ವರನನ್ನು ದರ್ಶಿಸುತ್ತಾನೆ. ಪ್ರಾಣದೇವ, ಅಗ್ನಿದೇವರನ್ನು ಒಲಿಸಿಕೊಂಡು ಆದಿತ್ಯನನ್ನು ಅನುಸಂಧಾನ ಮಾಡಿ 'ಮಹರ್ಷಿ' ಎಂದು ಹೊಗಳಿಸಿಕೊಳ್ಳುತ್ತಾನೆ. ಇಂದ್ರದಂಪತಿಗಳ ದರ್ಶನದಿಂದ ಬ್ರಹ್ಮ ವಿದ್ಯಾಸಂಪನ್ನನಾಗುವ ಸೂಚನೆಗಳು ದೊರೆಯುತ್ತವೆ. ಧರ್ಮಚಾರಿಣಿಯಾದ ಕಾತ್ಯಾಯಿನಿ ಮುಂದಿನ ಸಾಧನೆಗೆ ಪತ್ನಿಯಾಗಿ ನೆರವಾಗುತ್ತಾಳೆ. ಆದಿತ್ಯನ ಅನುಗ್ರಹವಾಗಿ ಸರ್ವಜ್ಞತ್ವ, ಬ್ರಹ್ಮರ್ಷಿತನ ಪ್ರಾಪ್ತವಾಗುತ್ತದೆ. ಯುಜುರ್ವೇದ, ಶತಪಥ, ಬ್ರಾಹ್ಮಣಗಳ ರಚನೆಯಾಗುತ್ತದೆ. ಬ್ರಹ್ಮವಾದಿನಿ ಮೈತ್ರೇಯಿಯೂ ಪತ್ನಿಯಾಗಿರುತ್ತಾಳೆ ಬ್ರಹ್ಮವಾದಿನಿ ಗಾರ್ಗಿಯೂ ಗೌರವಿಸುವಂಥ' ಮಹಾಚೇತನವಾಗಿ ಯಾಜ್ಞವಲ್ಕ್ಯರು ಬೆಳೆಯುತ್ತಿದ್ದಂತೆ ಜನಕರಾಜನ ಯಜ್ಞಸಭೆಯಲ್ಲಿ ಶಾಕಲ್ಯಮುನಿಯಿಂದ ಸರ್ವಜ್ಞತ್ವದ ಪರೀಕ್ಷೆಯೂ ನಡೆದು ರಾಜನಿಂದ ಸರ್ವಜ್ಞ ಪಟ್ಟಾಭಿಷೇಕವಾಗುತ್ತದೆ.

ದೇವತೆಗಳು ಬೇರೆ ಬೇರೆ ಎಂದು ಖಂಡೋಪಾಸನೆ ಮಾಡಿದ್ದ ದೇವರಾತನಿಗೂ ಮಗನ ಸರ್ವಜ್ಞತ್ವ ಕಂಡು ಭ್ರಾಂತಿಯಿಂದ ಪ್ರಶ್ನಿಸುವಂತಾಗಿ ಅಭೂತಪೂರ್ವ ವಿಚಿತ್ರಾನುಭವದ ಪರಿಣಾಮವಾಗುತ್ತದೆ. ಎಲ್ಲವೂ ತಾನೇ ಆಗುವುದು ಅಮೃತತ್ವ; ಅದೇ ಮಹಾದರ್ಶನ. ಅದನ್ನು ಪಡೆದು ಧನ್ಯರಾದ ಯಾಜ್ಞವಲ್ಕ್ಯರು ಸಂನ್ಯಾಸ ಸ್ವೀಕರಿಸುತ್ತಾರೆ.

ಕನ್ನಡ-ಸಂಸ್ಕೃತ ಸಂಪನ್ನ ಭಾಷಾಸತ್ವವನ್ನು ಪುರಾಣಸಿದ್ಧ ವಸ್ತು ನಿರೂಪಣೆಯಲ್ಲಿ ಕನ್ನಡದಲ್ಲಿ ದೇವುಡುರವರಂತೆ ಮೆರೆದವರು ಯಾರು ಎನ್ನುವಷ್ಟು ಬಹುಶಃ ಉಳಿದೆರಡು ಕಾದಂಬರಿಗಳನ್ನೂ ಮೀರಿ 'ಮಹಾದರ್ಶನ' ಸಾಧಿಸಿ ತೋರಿಸಿದೆ. ವೈದಿಕ ಪ್ರಜ್ಞಾಮೂಲವಾದ ವಿಚಾರಗಳು, ತರ್ಕಸರಣಿ ಮುಂತಾದವು ಸುಲಭ ಗ್ರಾಹ್ಯವಲ್ಲವಾದರೂ ಸಾಹಿತ್ಯಕವನ್ನಾಗಿಸಲು ದೇವುಡು ಕೈಗೊಂಡಿರುವ ಸಾಹಸ ಮಾತ್ರ ಅದ್ವಿತೀಯ.

ಅಂತರಂಗ, ಮಲ್ಲಿ, ಎರಡನೆಯ ಜನ್ಮ ಮುಂತಾದ ಸಾಮಾಜಿಕ ವಸ್ತುಸಂವಿಧಾನವನ್ನೊಳಗೊಂಡ ಕಾದಂಬರಿಗಳನ್ನು ದೇವುಡು ಸೃಷ್ಟಿಸಿದ್ದಾರೆ. ಮನಸ್ಸಿನ ಸೂಕ್ಷ್ಮ ಪ್ರವೃತ್ತಿ, ದಾಂಪತ್ಯ ಜೀವನದ ಆಗು ಹೋಗುಗಳು, ಕಾಮಜೀವನದ ಸಮಸ್ಯೆಗಳನ್ನು ಈ ಕೃತಿಗಳಲ್ಲಿ ದೇವುಡು ಸಮೃದ್ಧವಾಗಿ ಪ್ರತಿಪಾದಿಸಿದ್ದಾರೆ. ಅಂತರಂಗ ಕಾದಂಬರಿಯಂತೂ ಕನ್ನಡದ ಮೊತ್ತಮೊದಲನೆಯ ಮನೋವೈಜ್ಞಾನಿಕ ಕಾದಂಬರಿಯೆಂದು ಹೆಸರು ಗಳಿಸಿದೆ. ವಾಸ್ತವವಾಗಿ ಇಲ್ಲಿ ಮಾನಸಿಕ ವಿಶ್ಲೇಷಣೆಯ ಒಳಪದರುಗಳನ್ನು ಕಾಣಬಹುದಾಗಿದೆ. ಶಾಸ್ತ್ರ-ವಿದ್ಯೆಯಂತೆ ಅಂತರಂಗಸ್ಫುರಿತ ದೃಢ ನಂಬಿಕೆಯೂ ಪ್ರಬಲ ಶಕ್ತಿಯಾಗುವ ಸಂಘರ್ಷವೂ ಅತ್ಯಂತ ಮಾರ್ಮಿಕವಾಗಿ ಚಿತ್ರಿತವಾಗಿದೆ. ವಿಸ್ತಾರ ಭಯದಿಂದ ಇವುಗಳ ಪರಿಶೀಲನೆಗೆ ಹೋಗಲಾಗಿಲ್ಲ. ಆದರೆ,-"ತನ್ನ ಅಪೂರ್ವವಾದ ಬುದ್ಧಿಶಕ್ತಿಯಿಂದ, ವಿದ್ವತ್ತೆಯಿಂದ ಪಾತ್ರಗಳ ಮನಸ್ಸನ್ನು ಪೃಥಕ್ಕರಿಸಿ ನೋಡುವ ಕಲೆ ದೇವುಡು ಅವರ ವೈಯಕ್ತಿಕ ಪ್ರತಿಭೆಯಾಗಿದೆ. ಬುದ್ಧಿ ಶಕ್ತಿ ಹಾಗೂ ನೈಜ ಪ್ರತಿಭೆಗಳನ್ನು ಸಮಾನವಾಗಿ ಮೇಳವಿಸಿಕೊಂಡ ಕೆಲವೇ ಲೇಖಕರಲ್ಲಿ ಅವರೊಬ್ಬರಾಗಿದ್ದಾರೆ"[6] ಎಂಬ ವಿಮರ್ಶೆ ಸೂಕ್ತವಾಗಿದೆ. ಹಾಗೇ ಕೆಲವು ಪಾತ್ರಚಿತ್ರಣದ ವಿಪರೀತ ದೃಷ್ಟಿಯ ಅವರ ದೌರ್ಬಲ್ಯವನ್ನು ವಿಮರ್ಶಕರು [illegible]ತಿಸಿದ್ದಾರೆ.

ಆದಿಶಂಕರರನ್ನು ಕುರಿತ 'ಮಹಾಸಂನ್ಯಾಸಿ[illegible] ಗ್ರಂಥವನ್ನು ದೇವುಡುರವರು ಪೂರ್ಣಗೊಳಿಸಲಾಗಿಲ್ಲವೆಂದು ತಿಳಿಯುತ್ತದೆ. 'ಅದೂ ಪೂರ್ಣಗೊಂಡು ದೊರೆಯುವಂತಾಗಿದ್ದರೆ'- ಎಂದು ಉದ್ಗಾರವೆಳೆಯುವುದರ ವಿನಾ ಕನ್ನಡದ ಅಭ್ಯುದಯಕ್ಕಾಗಿ ಹೋರಾಡಿದ ಈ ಮಹಾವ್ಯಕ್ತಿಗೆ ನಾವು ಸಲ್ಲಿಸುವ ಕಾಣಿಕೆಯಾದರೂ ಏನು?

❑

---

1. ವಿವರಗಳಿಗೆ 'ಕಂನಾಡ ಸಾಹಿತ್ಯಜ್ಞರ ಆತ್ಮಕಥನ' - ದೇವುಡು, ಪು. 29.
2. ಕಂನಾಡ ಸಾಹಿತ್ಯಜ್ಞರ ಆತ್ಮಕಥನ.
3. ಹಿರಿಯರು ಗೆಳೆಯರು - ವಿ.ಸೀ. ಪು.426.
4. ಯುಗಧರ್ಮ ಹಾಗೂ ಸಾಹಿತ್ಯದರ್ಶನ - ಕೆ.ಡಿ. ಕುರ್ತಕೋಟಿ, ಪು.337.
5. 'ಮಹಾಬ್ರಾಹ್ಮಣ'- ದೇವುಡು (ಮುನ್ನುಡಿ)

# ಬಿ. ಪುಟ್ಟಸ್ವಾಮಯ್ಯ

ಹೀ.ಚಿ. ಶಾಂತವೀರಯ್ಯ

ಕರ್ನಾಟಕದ ವ್ಯಾಪಾರ ಕ್ಷೇತ್ರಗಳಲ್ಲಿ ಪ್ರಸಿದ್ಧವಾದವುಗಳಲ್ಲಿ ರೇಷ್ಮೆಯೂ ಒಂದು. ಪುಟ್ಟಸ್ವಾಮಯ್ಯನವರ ಪೂರ್ವಿಕರು ರೇಷ್ಮೆ ವ್ಯಾಪಾರದ ದೃಷ್ಟಿಯಿಂದ ಬೆಂಗಳೂರಿಗೆ ಬಂದು ನೆಲೆಸಿದವರು. ರೇಷ್ಮೆ ವರ್ತಕರಲ್ಲಿ ಬಹು ಪ್ರಸಿದ್ಧರು ಬಸಪ್ಪನವರು. ಇವರ ಹೆಂಡತಿ ಮಲ್ಲಮ್ಮ. ದಂಪತಿಗಳು ಬಹು ಹಿತವಾಗಿ, ಆದರ್ಶಪ್ರಾಯವಾಗಿ ಸಂಸಾರವನ್ನು ನಡೆಸುತ್ತಿದ್ದರು. ಶಿವನಿಗೂ ಹಿತವನ್ನುಂಟು ಮಾಡುವಂತಹ ದಾಂಪತ್ಯ ಇವರದು. ಬಸಪ್ಪನವರು ವ್ಯಾಪಾರ ಮಾಡಿ ಕೇವಲ ಲಾಭ ಗಳಿಕೆಯಲ್ಲೇ ತೊಡಗಿರಲಿಲ್ಲ. ಸಾಹಿತ್ಯ, ಸಂಗೀತ ಮತ್ತು ಸಂಸ್ಕೃತಿಯತ್ತ ತಮ್ಮ ಒಲವನ್ನು ಹರಿಸಿದ್ದರು. ದಂಪತಿಗಳ ಅಪಾರ ಅಭೀಷ್ಟದಂತೆ ಮುದ್ದು ಮುದ್ದಾದ ಪುಟ್ಟ ಮಗು 'ಪುಟ್ಟಸ್ವಾಮಿ'ಯು 1897ನೆಯ ಮೇ 24ರಂದು ಜನ್ಮ ತಾಳಿದ. ಈ ಮುದ್ದುಮಗು ಮನೆಯ ಅಂಗಳಕೆ ಬೆಳಕಾಗಿ ಎಲ್ಲರ ಕಣ್ಣಿನ ಬೊಂಬೆಯಾಗಿ ಬೆಳೆಯಿತು. ಬಾಲ್ಯದಲ್ಲಿ ಈ ಚಿಣ್ಣ, ಚಟುವಟಿಕೆಯ ಕೇಂದ್ರವಾಗಿ ಕೈಗೆ ಸಿಕ್ಕಿದ ವಸ್ತುವಿನಲ್ಲಿ ಕುತೂಹಲವನ್ನು ಕಾಣುತ್ತಿತ್ತು. ಮಲ್ಲಮ್ಮ, ಬಸಪ್ಪನವರು ತಮ್ಮ ಏಕೈಕ ಪುತ್ರ ಓದಿ ವಿದ್ಯಾವಂತನಾಗಿ ದೊಡ್ಡ ಕೀರ್ತಿವಂತನಾಗಬೇಕೆಂದು ಕನಸು ಕಟ್ಟಿದ್ದರು. ಈ ಕಾರಣದಿಂದ ಪ್ರಾಥಮಿಕ ಶಾಲೆಯಲ್ಲಿರುವಾಗಲೇ ಪಾಠಕ್ಕೆ ಒಬ್ಬ ಉಪಾಧ್ಯಾಯರನ್ನು ಗೊತ್ತುಮಾಡಿ, ಪಾಠಕ್ಕಿಂತ ಹೆಚ್ಚಿನ ಜ್ಞಾನವನ್ನು ಅವರು ನೀಡುವಂತೆ ಮಾಡಿದ್ದರು ಬಸಪ್ಪನವರು.

ಮಲ್ಲಮ್ಮನವರು ವಿಶೇಷವಾಗಿ ಪುಟ್ಟಸ್ವಾಮಿಯ ಆರೈಕೆ, ಪೂರೈಕೆಗಳ ಕಡೆ ಗಮನ ಹರಿಸಿದ್ದರು. ಅಂದು ಅವರಿತ್ತ ಉತ್ತಮ ಪರಿಸರ ಪುಟ್ಟಸ್ವಾಮಯ್ಯನವರ ಭವಿಷ್ಯ ಜೀವನದ ದಾರಿದೀಪವಾಯಿತು. ಮಲ್ಲಮ್ಮನವರು ಮಗುವಿಗೆ ಹಾಲೂಡಿಸುವಾಗಲೇ "ಮಗು ಕಥೆಯಂ ರಚಿಸು, ಕಾದಂಬರಿಯಂ ಬರೆ, ಕಾವ್ಯಮಂ ಕಟ್ಟು, ಪತ್ರಿಕೋದ್ಯಮಮಂ ಬೆಳೆಸು, ನಾಟಕಂ ಆಡಿಸು, ಚಿತ್ರಮಂ ಬಿಡಿಸು, ಸಜ್ಜನತ್ವಮಂ ಪೊರೆ, ಸತ್ಯವಿದನಾಗು, ಒಳ್ಳಿದನಾಗು" ಎಂದು ಹೇಳುತ್ತ ಹಾಲೂಡಿಸಿ ಸಾಕಿದ್ದರಿಂದಲೇ ಪುಟ್ಟಸ್ವಾಮಯ್ಯನವರ ದೇಹದಲ್ಲಿ ರಕ್ತಕಣದ ಜೊತೆಗೆ ಕಥೆ, ಕಾದಂಬರಿ, ನಾಟಕ, ಕಾವ್ಯ, ಪತ್ರಿಕೋದ್ಯಮ, ಚಿತ್ರ ಮೊದಲಾದ ಸಾಹಿತ್ಯ-ಕಥೆಗಳು ಬೆರೆತು ಬಂದಿದ್ದವು. ಆದ್ದರಿಂದಲೇ ಅವರು ನಾಡಿನಲ್ಲಿ ಪತ್ರಿಕೋದ್ಯಮದ ಪಾಂಚಜನ್ಯರಾಗಿ, ಶ್ರೇಷ್ಠ ಕಾದಂಬರಿಕಾರರಾಗಿ, ಪ್ರಖ್ಯಾತ ನಾಟಕಕಾರರಾಗಿ, ವಿಖ್ಯಾತ ಚಲನಚಿತ್ರ ಕಲಾವಿದರಾಗಿ ಹಲವಾರು ರೀತಿಯಿಂದ ಉತ್ತಮತೆಯನ್ನು ಪಡೆದ 'ನಾಡವರ್ಗಳ್' ಎನಿಸಿಕೊಂಡರು.

ಪುಟ್ಟಸ್ವಾಮಯ್ಯನವರ ಬಾಳಿನ ಗಾಳಿಗೋಪುರ ಬಿರುಗಾಳಿಗೆ ಸಿಕ್ಕಿ ತತ್ತರಿಸಿತು. ಪುಟ್ಟಸ್ವಾಮಯ್ಯನವರು ಹತ್ತು ವರ್ಷದ ಹುಡುಗನಾಗಿದ್ದಾಗ, ಕಾಲನ ದಾಳಿಗೆ ಸಿಕ್ಕಿ ಅವರ ತಂದೆ ಬಸಪ್ಪನವರು ಕಾಲಾಧೀನರಾದರು, ತಾಯಿಗೆ ದಿಕ್ಕು ತೋರದಾಯಿತು. 9ನೆಯ ತರಗತಿಯಲ್ಲಿ ಓದುತ್ತಿದ್ದ 'ಪುಟ್ಟಸ್ವಾಮಿ' ಹುಡುಗನಿಗೆ ಲೌಕಿಕಜ್ಞಾನದ ಅ ಆ ಇ ಈ ಕೂಡ ಬಂದಿರಲಿಲ್ಲ. ಅನಿವಾರ್ಯವಾಗಿ ಸಂಸಾರದ ಹೊರೆಯನ್ನು ಹೊರಲೇಬೇಕಾಯಿತು. 'ಇಷ್ಟೆಲ್ಲ ಮಾಡುವುದು ಹೊಟ್ಟೆಗಾಗಿ' ಎಂಬಂತೆ ಜೀವನವನ್ನು ನಿರ್ವಹಿಸಲು ಓದುವುದನ್ನು ಬಿಟ್ಟು ದುಡಿಯಲೇಬೇಕಾಯಿತು. ತಾಯಿ ಮತ್ತು ತನ್ನ ಜೀವನ ನಡೆಯಬೇಡವೆ? ಕೆಲವು ಹಿರಿಯರ ಸಲಹೆಯಂತೆ ಖಾಸಗಿ ಸಂಸ್ಥೆಗಳಲ್ಲಿ ಕೆಲಸ ಮಾಡಲು ತೊಡಗಿದರು. ಸತ್ಯವ್ರತರಾದ ಇವರಿಗೆ ಆ ಸಂಸ್ಥೆಗಳ 'ವ್ಯಾಪಾರಂ ದ್ರೋಹ ಚಿಂತನಂ' ಎಂಬುದು ಹಿಡಿಸದೆ ತೊಳಲಾಡಿದರು. ವಾಸಿಸುವುದಕ್ಕೆ ಒಂದು ಮನೆಯನ್ನು ಬಿಟ್ಟರೆ ಬಸಪ್ಪನವರು ಅಂತಹ ಆಸ್ತಿಯನ್ನೇನೂ ಮಾಡಿರಲಿಲ್ಲ. ಹೀಗಾಗಿ ಹುಡುಗ ಪುಟ್ಟಸ್ವಾಮಿಯು ಜೀವನ ನಿರ್ವಹಿಸಲು ಅನಿವಾರ್ಯವಾಗಿ ದುಡಿಯಬೇಕಾಯಿತು.

ಖಾಸಗಿ ಸಂಸ್ಥೆಗಳ ವ್ಯಾಪಾರ ನೋಡಿ ಬೇಸತ್ತು, ತಂದೆಯ ಹಿರಿಯ ಮಿತ್ರರೊಬ್ಬರ ಸಲಹೆಯಂತೆ ಮೈಸೂರಿನಿಂದ ಪ್ರಕಟವಾಗುತ್ತಿದ್ದ 'ಮೈಸೂರು ಸ್ಟಾರ್' ವಾರಪತ್ರಿಕೆಯ ವರದಿಗಾರರಾಗಿ ಬೆಂಗಳೂರಿನಲ್ಲಿ ಕೆಲಸಕ್ಕೆ ತೊಡಗಿದರು. 1925ರಲ್ಲಿ 'ನ್ಯೂ ಮೈಸೂರು' ಎನ್ನುವ, ನಾರಾಯಣ ಶೆಟ್ಟಿಯವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ ವಾರಪತ್ರಿಕೆಯಲ್ಲಿ ಕೆಲಸಕ್ಕೆ ಸೇರಿಕೊಂಡರು. ಈ ಹಿಂದೆ ತಾವು ವರದಿಗಾರನಾಗಿ ಕೆಲಸ ಮಾಡಿದ್ದು ತುಂಬ ಸಹಾಯಕ್ಕೆ ಬಂತು. ಐದಾರು ವರ್ಷ 'ನ್ಯೂ ಮೈಸೂರ್' ಪತ್ರಿಕೆಯಲ್ಲಿ ಸೇವೆ ಸಲ್ಲಿಸಿ ಅದನ್ನು ಬಹಳ ಜನಪ್ರಿಯಗೊಳಿಸಿದರು. ಆಗ ತಾನೆ ಜನ್ಮ ತಾಳಿದ 'ಒಕ್ಕಲಿಗರ ಪತ್ರಿಕೆ'ಯ ಸಂಪಾದಕರಾಗಿ ನೇಮಕಗೊಂಡರು. ಹಕ್ಕಿಗೆ ಗರಿಮೂಡಿದಂತೆ ತಮ್ಮ ಲೇಖನಿಯನ್ನು ಪ್ರಭಾವಯುತವಾಗಿ ಬಳಸಿ ವಿಹರಿಸುತ್ತಿದ್ದರು. ಆ ಪತ್ರಿಕೆಗೊಂದು ರೂಪ ಕೊಟ್ಟರು. ಆಮೇಲೆ 'ಜನವಾಣಿ' ಪತ್ರಿಕೆಯಲ್ಲಿ ಸಂಪಾದಕೀಯ ಲೇಖನಗಳನ್ನೂ ಬರೆಯುತ್ತಿದ್ದರು. ಕ್ರಮೇಣ ಅದರ ಸಂಪಾದಕತ್ವವನ್ನು ವಹಿಸಿ 'ಜನವಾಣಿ' ಜನರಲ್ಲಿ ಅನ್ವರ್ಥಕವಾಗುವಂತೆ ಮಾಡಿದರು.

ಮೈಸೂರು ಸ್ಟಾರ್, ನ್ಯೂ ಮೈಸೂರು, ಒಕ್ಕಲಿಗರ ಪತ್ರಿಕೆ, ಜನವಾಣಿ, ಮಾತೃಭೂಮಿ ಪತ್ರಿಕೆಗಳಲ್ಲಿ ಯಥೋಚಿತವಾಗಿ ಸೇವೆ ಸಲ್ಲಿಸಿ 'ಪ್ರಜಾವಾಣಿ'ಯ ಪ್ರಥಮ ಸಂಪಾದಕರಾದರು. ಇಂದು ಅನ್ವರ್ಥವಾಗಿ 'ಪ್ರಜಾವಾಣಿ'ಯಾಗಿರುವ ಪತ್ರಿಕೆ ಜನಪ್ರಿಯತೆಯನ್ನು ಪಡೆಯಲು ಪುಟ್ಟಸ್ವಾಮಯ್ಯನವರ ದೂರದೃಷ್ಟಿಯೇ ಕಾರಣ. ಅವರು ಪ್ರಾರಂಭಿಸಿದ ಶೀರ್ಷಿಕೆಗಳು, ವಿಭಾಗಗಳು, ಸಂಪಾದಕೀಯ ಲೇಖನಗಳು ದೇಶದ ಅಭ್ಯುದಯಕ್ಕೆ ಕಾರಣವಾದವು. ಆಮೇಲೆ 'ಜನ್ಮಭೂಮಿ' ಪತ್ರಿಕೆಯ ಸಂಪಾದಕರಾದರು. ಜನ್ಮಭೂಮಿ ನಿಂತ ಮೇಲೆ ಪತ್ರಿಕೋದ್ಯಮಕ್ಕೆ ಶರಣು ಹೊಡೆದು ನಾಟಕ, ಕಾದಂಬರಿಯತ್ತ ಹೊರಳಿದರು. ಪುಟ್ಟಸ್ವಾಮಯ್ಯನವರು ಬೆಳೆಸಿದ 'ಕಿಡಿ'ಯ ಶೇಷಪ್ಪ, ಛೂಬಾಣದ ಟೀಎಸ್ಸಾರ್, ವರದಿಯ ಜಯಶೀಲರಾವ್ ಮತ್ತು ನೂರಾರು ಯುವಜನಾಂಗದ ಶಕ್ತಿಗಳನ್ನೇ ನಾವು ಕಾಣಬಹುದು. ಪುಟ್ಟಸ್ವಾಮಯ್ಯನವರು ಪತ್ರಿಕೋದ್ಯಮಕ್ಕೆ ಸಲ್ಲಿಸಿದ ಅಪಾರ ಸೇವೆಯನ್ನು ಗಮನಿಸಿ 1971ರಲ್ಲಿ ಬಿ.ಎನ್. ಗುಪ್ತ ಟ್ರಸ್ಟಿನವರು ಮೂರು ಸಾವಿರ ರೂಪಾಯಿಗಳ ವಂತಿಗೆಯನ್ನು ನೀಡಿ ಗೌರವಪೂರ್ವಕವಾಗಿ ಸನ್ಮಾನಿಸಿದರು.

ಕನ್ನಡನಾಡಿನ ಮಾಲೂರಿನ ಸೆಟ್ಟರ ವಂಶಸ್ಥರು, ತಮಿಳುನಾಡಿನ ಕಾವೇರಿಪಟ್ಟಣಂನಲ್ಲಿ ವ್ಯಾಪಾರದ ಉದ್ದೇಶದಿಂದ ಹೋಗಿ ನೆಲಸಿ ಅಲ್ಲಿನ

ಜನಮನವನ್ನು ಸೂರೆಗೊಂಡಿದ್ದರು. ಅಲ್ಲಿಯ 'ದೇಸೀಸೆಟ್ಟರು' ಬಹಳ ಖ್ಯಾತರು. 'ದೇಸೀಸೆಟ್ಟರ ಬೀದಿ' ಎಂದು ಪ್ರಸಿದ್ಧವಾದ ಅವರ ಶ್ರೇಯಾಂಶ ಇಂದಿಗೂ ಇದೆ. ದೇಸೀ ಸೆಟ್ಟರು ವ್ಯಾಪಾರಕ್ಕಾಗಿ ಆಗಾಗ್ಗೆ ಬೆಂಗಳೂರಿಗೆ ಬರುತ್ತಿದ್ದರು. ಹೀಗಾಗಿ ಪುಟ್ಟಸ್ವಾಮಯ್ಯನವರ ಪರಿಚಯವಾಗಿ ತಮ್ಮ ಮಗಳು ಮುದ್ದಮ್ಮನನ್ನು ಕೊಟ್ಟು ಮದುವೆ ಮಾಡಲು ನಿಶ್ಚಯಿಸಿದರು. ಪುಟ್ಟಸ್ವಾಮಯ್ಯನವರಿಗೆ ಹದಿನೆಂಟು ವರ್ಷ ವಯಸ್ಸು. ಸ್ವಲ್ಪಮಟ್ಟಿನ ಲೌಕಿಕ ಜ್ಞಾನ ಬಂದಿತ್ತು. ಆದರೆ ತನ್ನದು, ತನ್ನವರು ಎಂದು ಹೇಳಲು ಯಾರೂ ಇರಲಿಲ್ಲ. ಬಾಳಸಂಗಾತಿಯಾಗಿ ಮುದ್ದಮ್ಮನವರು ಬಂದ ಮೇಲೆ ಪುಟ್ಟಸ್ವಾಮಯ್ಯನವರ ಬಾಳಿನಲ್ಲಿ ಹೊಸ ಅಧ್ಯಾಯ ಪ್ರಾರಂಭವಾಯಿತು. ಎಲ್ಲೆಡೆಯಲ್ಲೂ ಹೊಸತನವನ್ನು ಕಾಣತೊಡಗಿದರು. ಪ್ರತಿಭೆಗೆ ಪುರಸ್ಕಾರ ಸಿಕ್ಕಂತಾಗಿ ಹಲವಾರು ಪತ್ರಿಕೆಗಳಲ್ಲಿ ದುಡಿದು ಕೈಸುಟ್ಟುಕೊಂಡ ಇವರು 'ಪ್ರತಿಭಾ' ಎಂಬ ತಮ್ಮದೇ ಆದ ಸ್ವತಂತ್ರ ಪತ್ರಿಕೆಯನ್ನು ಪ್ರಾರಂಭಿಸಿದರು. ಅದಕ್ಕಾಗಿ ಸಂಬಂಧಿಕರಿಂದ ಐದುನೂರು ರೂಪಾಯಿಗಳ ನೆರವನ್ನು ಪಡೆದರು. ಸ್ವತಂತ್ರವಾಗಿದ್ದು, ಸ್ವಚ್ಛಂದವಾಗಿ ದುಡಿಯಬೇಕು ಎಂಬ ಹಂಬಲ ಹೊತ್ತು ತಿರುಗಾಡಿದರು. ಕೆಲವು ದಿನ ಉತ್ಸಾಹದ ಹೊಳೆ ಹರಿದು ಪತ್ರಿಕೆಯ ಸರ್ವಾಂಗೀಣ ಪ್ರಗತಿಗೆ ಬದ್ಧರಾಗಿ ದುಡಿದರು. ಬಾಳು ಗರಿಗಟ್ಟುತ್ತಿರುವಾಗ 'ಕುಂಟೆತ್ತು ಹೊಲಕ್ಕೆ ಮಾರಿ, ಸಾಲ ಗಂಟಿಗೆ ಮಾರಿ' ಎಂಬಂತೆ ತಾವು ಸಂಬಂಧಿಕರಿಂದ ನೆರವಾಗಿ ಪಡೆದಿದ್ದ ಐದುನೂರ ರೂ.ಗಳ ವ್ಯವಹಾರ ವಿಪರೀತಕ್ಕಿಟ್ಟುಕೊಂಡು ಬಾಂಧವ್ಯಕ್ಕೆ ಎಳ್ಳು ನೀರು ಬಿಡಲು ಮುಂದಾದಾಗ ತಮಗೆ ಪಿತ್ರಾರ್ಜಿತವಾಗಿ ಬಂದಿದ್ದ ಅರಳೇಪೇಟೇಯ ಮನೆಯನ್ನು ಮಾರಿ ಸಂಬಂಧಿಕರ ಸಾಲ ತೀರಿಸಿ ಋಣಮುಕ್ತರಾದರು.

ಅವರ ಪಾಲಿಗೆ ಇದ್ದದ್ದು ಒಂದೇ; ಓದುವುದು, ಮನಸ್ಸಿಗೆ ಬಂದಾಗ ಬರೆಯುವುದು. ಹೆಚ್ಚಿನ ಗೆಳೆಯರಿಲ್ಲದ್ದರಿಂದ ಅಡ್ಡಾಡುವುದೂ ಅಪರೂಪ. ಹೀಗಾಗಿ ಸದಾ ಪುಸ್ತಕ, ಅದನ್ನು ಬಿಟ್ಟರೆ ಪತ್ರಿಕೆ ಎರಡೇ ಅವರ ಕರಭೂಷಣಗಳಾಗಿದ್ದವು. ಪತ್ರಿಕೆಗಳಲ್ಲಿ ಕೆಲಸ ಮಾಡುವಾಗ ಕೈಗೆ ಸಿಕ್ಕಿದ ಪುಸ್ತಕವನ್ನು ಓದುತ್ತಿದ್ದರು. ಅವಶ್ಯಕವಾದ ವಿಷಯಗಳನ್ನು ಗುರುತು ಹಾಕಿಕೊಳ್ಳುತ್ತಿದ್ದರು. ಇದೊಂದು ಅವರ ಹುಟ್ಟುಗುಣ. ಅವರು ಓದಿದ ಯಾವುದೇ ಪುಸ್ತಕವಾಗಲಿ ಟೀಕೆ, ಟಿಪ್ಪಣಿ, ಅಡಿಟಿಪ್ಪಣಿ, ಮುಖ್ಯಾಂಶ, ವಿಶೇಷಾಂಕಗಳಿಂದ ತುಂಬಿಹೋಗಿರುತ್ತಿತ್ತು.

ಶ್ರೀಯುತರು ತಮ್ಮ ಇಡೀ ಬಾಳಿನಲ್ಲಿ ಊಟಕ್ಕೆ, ವಸ್ತ್ರಕ್ಕೆ ಕಾಳಜಿ ಮಾಡಿಕೊಂಡವರಲ್ಲ. 'ಪಾಲಿಗೆ ಬಂದದ್ದು ಪಂಚಾಮೃತ' ಎನ್ನುತ್ತಿದ್ದರು. ಪುಸ್ತಕಗಳ ವಿಚಾರದಲ್ಲಿ ಓದಬೇಕಾದ ಪುಸ್ತಕ ಎಷ್ಟೇ ಬೆಲೆಯದ್ದಾಗಿರಲಿ ಕೊಂಡುಕೊಂಡು ಅಥವಾ ಉಳ್ಳವರಿಂದ ಎರವಲು ಪಡೆದು ಓದುತ್ತಿದ್ದರು. ಪುಟ್ಟಸ್ವಾಮಯ್ಯನವರ ಪ್ರತಿನಿತ್ಯದ ಕಾರ್ಯಕ್ರಮಗಳಲ್ಲಿ ಬಹು ಮುಖ್ಯವಾದವುಗಳೆಂದರೆ ಒಂದು ಓದು, ಇನ್ನೊಂದು ಓಡಾಟ. 'ರೀಡಿಂಗ್ ಮತ್ತು ವಾಕಿಂಗ್' ಇವೆರಡನ್ನೂ ಎಂದೂ ಯಾವ ಕಾರಣಕ್ಕಾಗಿ ತಪ್ಪಿಸಿದವರಲ್ಲ. ಮಳೆ, ಚಳಿ, ಬೇಸಿಗೆ ಯಾವುದೇ ಕಾಲವಿರಲಿ ಇವೆರಡೂ ತಪ್ಪುತ್ತಿರಲಿಲ್ಲ. ಅವರ 'ಸತತ ಅಭ್ಯಾಸ'ದ ಪ್ರಯತ್ನವೇ ಅವರ ಮೇರು ಕೃತಿಗಳ ರಚನೆಗೆ ಸಾಕ್ಷಿ.

ಪುಟ್ಟಸ್ವಾಮಯ್ಯನವರಿಗೆ ಮಕ್ಕಳಾಗಲಿಲ್ಲ. ಮುದ್ದಮ್ಮನವರು 'ಮಕ್ಕಳಿರಲಿ ಮನೆತುಂಬ' ಎಂದು ಬಯಸುತ್ತಿದ್ದರು. ಆದರೆ ವಿಧಿ ಲಿಖಿತ. ತಮ್ಮ ತಮ್ಮನ ಮಗಳು ಉಷಾಳನ್ನು ಮಗಳಾಗಿ ಸ್ವೀಕರಿಸಿ, ತಮ್ಮ ಎದುರು ಮನೆಯಲ್ಲಿ ವಾಸವಾಗಿದ್ದ ಕೋಲಾರ ಜಿಲ್ಲೆಯ ಹೋಳೂರಿನ ಸದಾಶಿವ ಅವರಿಗೆ ಕೊಟ್ಟು ಮದುವೆ ಮಾಡಿದರು. ಮೋಲಿನ ಮತ್ತು ಪ್ರಫುಲ್ಲಚಂದ್ರರು ಮೊಮ್ಮಕ್ಕಳಾಗಿ ಅಜ್ಜನ ಇಳಿ ವಯಸ್ಸಿನಲ್ಲಿ ನೆಚ್ಚಿನ ಸಂಗಾತಿಗಳಾದರು.

ಪುಟ್ಟಸ್ವಾಮಯ್ಯನವರಿಗೆ ಕೇವಲ ಬೆರಳೆಣಿಸುವಷ್ಟು ಜನ ಗೆಳೆಯರು. ಅಚ್ಚುಮೆಚ್ಚಿನ ಆತ್ಮೀಯ ಗೆಳೆಯ ಡಾ. ಎಂ. ಶಿವರಾಂ (ರಾ.ಶಿ.). ದಿನಕ್ಕೊಮ್ಮೆಯಾದರೂ ರಾಶಿಯವರನ್ನು ನೋಡಲೇಬೇಕು. ಅಸ್ತವ್ಯಸ್ತದ ಜೀವನದಲ್ಲಿ ಪುಟ್ಟಸ್ವಾಮಯ್ಯನವರು ಅಷ್ಟು ದೀರ್ಘಕಾಲ ಬಾಳಲು ಡಾಕ್ಟರ್ ರಾ.ಶಿ. ಅವರೇ ಕಾರಣ. ಟಿ.ಪಿ. ಕೈಲಾಸಂ ಮತ್ತು ಕೆ.ವಿ. ಅಯ್ಯರ್ ಅವರುಗಳು ಅಪರೂಪವಾಗಿ ಸಂಧಿಸುತ್ತಿದ್ದ ಗೆಳೆಯರು.

ಬಿ. ಪುಟ್ಟಸ್ವಾಮಯ್ಯನವರಿಗೆ ವಿಪುಲವಾದ ಕೀರ್ತಿಯನ್ನು ತಂದುಕೊಟ್ಟ ಕ್ಷೇತ್ರವೆಂದರೆ ನಾಟಕ ವಿಭಾಗ; ಕನ್ನಡ ನಾಟಕದ ಇತಿಹಾಸದಲ್ಲಿ ಪುಟ್ಟಸ್ವಾಮಯ್ಯನವರು ಕ್ರಾಂತಿ ಪುರುಷರು. 'ಗೊಡ್ಡು ಪುರಾಣ' ಎಂದು ಹೀಗಳೆಯುತ್ತಿದ್ದವರಿಗೆ ರಾಮಾಯಣ, ಮಹಾಭಾರತಗಳ ವಸ್ತುವನ್ನು ಆರಿಸಿಕೊಂಡು ವಿನೂತನವಾದ ನಾಟಕಗಳನ್ನು ರಚಿಸಿಕೊಟ್ಟರು. ಅವರ ನಾಟಕಗಳ ಸಹಸ್ರಾರು ಪ್ರದರ್ಶನಗಳು ಒಂದೇ ಸಮನೆ ಜಯಭೇರಿ ಹೊಡೆದು ಜನರಲ್ಲಿ ಕ್ರಾಂತಿಯನ್ನೆಬ್ಬಿಸಿದುವು. ಪುಟ್ಟಸ್ವಾಮಯ್ಯನವರ 'ಕುರುಕ್ಷೇತ್ರ', 'ದಶಾವತಾರ' ಮತ್ತು 'ಸಂಪೂರ್ಣ ರಾಮಾಯಣ' ನಾಟಕಗಳು ಕನ್ನಡನಾಡಿನಲ್ಲಿ ಮನೆಮಾತು. ಈ ನಾಟಕಗಳು ಹಲವಾರು ಬಾರಿ ಅಚ್ಚಾಗಿರುವುದೇ ಅಲ್ಲದೆ ನೂರಾರು ಬಾರಿ ರಂಗದ ಮೇಲೆ ಪ್ರದರ್ಶಿತವಾಗಿರುವುದು ಆ ನಾಟಕಗಳ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಅವರು 'ಕುರುಕ್ಷೇತ್ರ', 'ದಶಾವತಾರ' 'ಸಂಪೂರ್ಣ ರಾಮಾಯಣ', 'ಅಕ್ಕಮಹಾದೇವಿ', 'ಷಾಜಹಾನ್', 'ಗೌತಮಬುದ್ಧ', 'ಚಿರಕುಮಾರಸಭಾ', 'ಯಜ್ಞಸೇನಿ', 'ಸತೀತುಲಸಿ', 'ಪ್ರಚಂಡ ಚಾಣುಕ್ಯ', 'ಜಯದೇವ', 'ಅಭಿನೇತ್ರಿ', 'ಚಂಗಲೆಯ ಬಲಿದಾನ'. 'ಶ್ರೀದುರ್ಗ', 'ಬಬ್ರುವಾಹನ', 'ಬಿಡುಗಡೆಯ ಬಿಚ್ಚುಗತ್ತಿ', 'ರಾಣಿ', 'ತಾರಕವಧೆ' ಮತ್ತು 'ಇವನಲ್ಲ'– ಹೀಗೆ ಸುಮಾರು ಇಪ್ಪತ್ತಕ್ಕೂ ಹೆಚ್ಚು ನಾಟಕಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ನಾಟಕಗಳೂ ಸೇರಿವೆ. 'ಷಾಜಹಾನ್' ಇವರ ಮೊದಲನೆಯ ನಾಟಕ.

"ಪದ್ಯಂ ವಧ್ಯಂ ಗದ್ಯಂ ಹೃದ್ಯಂ" ಎಂಬ ಕವಿವಾಣಿಗೆ ಅನುಸಾರವಾಗಿ ನಾಟಕಗಳನ್ನು ಹೆಚ್ಚಾಗಿ ಗದ್ಯರೂಪದಲ್ಲಿ ಅಲ್ಲಲ್ಲಿ ಸಂಗೀತ ಸೇರಿಸಿ ಮುತ್ತು ಹವಳದಂತೆ ಒಗ್ಗೂಡಿ ಬರುವಂತೆ ಬರೆದವರಲ್ಲಿ ಬಿ. ಪುಟ್ಟಸ್ವಾಮಯ್ಯನವರು ಪ್ರಥಮರು, ಅಗ್ರಗಣ್ಯರು. ಈ ದೃಷ್ಟಿಯಿಂದ ಅವರು ನಾಟಕ ರಂಗಕ್ಕೆ ಸಲ್ಲಿಸಿದ ಸೇವೆ ಅದ್ವಿತೀಯವಾದುದು.

ನಾಟಕ ಪ್ರಪಂಚದಲ್ಲಿ 'ಪುಟ್ಟಸ್ವಾಮಯ್ಯ ಯುಗ' ವ್ಯಾಪಿಸಿಕೊಂಡಿತ್ತು. ಅವರ 'ಕುರುಕ್ಷೇತ್ರ' ನಾಟಕ ಪ್ರದರ್ಶನದಲ್ಲಿ ದಾಖಲೆಯನ್ನು ಸ್ಥಾಪಿಸಿತು. ಒಬ್ಬನೇ ನಾಟಕಕಾರನ ಹಲವು ನಾಟಕಗಳು ಈ ರೀತಿಯಲ್ಲಿ ಪ್ರಚಂಡ ಯಶಸ್ಸು ಗಳಿಸಿರುವುದು ಇಡೀ ನಾಡಿನಲ್ಲಿಯೇ ಅಪರೂಪ.

ಬಿ. ಪುಟ್ಟಸ್ವಾಮಯ್ಯನವರ ಹೆಸರು ಅವರು ರಚಿಸಿದ ಐತಿಹಾಸಿಕ ಕಾದಂಬರಿಗಳಿಂದ ಅಮರವಾಗಿದೆ. ಬಸವೇಶ್ವರರ ಇತಿಹಾಸದ ಮೇಲೆ ಹೊಸ ಬೆಳಕನ್ನು ಚೆಲ್ಲುವ, ಅವರ 'ಕ್ರಾಂತಿ ಕಲ್ಯಾಣ' ಅವರ ಅವಿರತ ಸಂಶೋಧನೆಯ

ಫಲದಿಂದ ಬಂದುದು, ಕನ್ನಡ ಕಾದಂಬರಿ ಪ್ರಪಂಚದಲ್ಲಿ ಅಮರತಾರೆ. ವಸ್ತು, ನಿರೂಪಣೆ, ಶೈಲಿ; ರಚನೆ ಮೊದಲಾದ ದೃಷ್ಟಿಯಿಂದ ವಿಮರ್ಶಿಸಿದರೂ ಅವರ ಕಾದಂಬರಿಗಳು ಪುಟಕ್ಕಿಟ್ಟ ಚಿನ್ನದಂತೆ ಬಣ್ಣವೇರಿ ಅಪರಂಜಿಗಳಾಗಿವೆ. ಪುಟ್ಟಸ್ವಾಮಯ್ಯನವರ ಕಾದಂಬರಿಗಳು ಮನೆ ಮಾತಾಗಿವೆ. ಲಿಂಗ, ವಯಸ್ಸು, ಜಾತಿ, ಧರ್ಮದ ಭೇದವಿಲ್ಲದೆ ಸರ್ವಗೃಹಗಳಲ್ಲಿಯೂ ಸರ್ವಮಂಗಳೆಯಂತೆ ನಲಿದಾಡಿದವು. ಪತ್ರಿಕೋದ್ಯಮದಲ್ಲಿ ಪುಟ್ಟಸ್ವಾಮಯ್ಯನವರು ಸತತಾಭ್ಯಾಸ ದಿಂದ ಲೋಕಾನುಭವವನ್ನು ಪಡೆದರೆ, ನಾಟಕ ರಂಗದಲ್ಲಿ ಊರೂರಿಗೂ ನಾಟಕ ಕಲೆಯನ್ನು ಕೊಂಡೊಯ್ಯುವುದರ ಜೊತೆಗೆ ಅರ್ಥ ಮತ್ತು ಯಶ ಎರಡನ್ನೂ ಸಾಧಿಸಿಕೊಂಡರು. ಕಾದಂಬರಿ ರಚನೆಯಲ್ಲಿ ಪುಟ್ಟಸ್ವಾಮಯ್ಯ ನವರು ಕೀರ್ತಿಯನ್ನು, ಧನಾರ್ಜನೆಯನ್ನು, ವ್ಯವಹಾರ ಜ್ಞಾನವನ್ನು, ಪರಮಾನಂದವನ್ನು ಪಡೆದರು. ಎಲ್ಲ ಪ್ರಯೋಜನಗಳಿಗೂ ಶಿಖರ ಪ್ರಾಯವಾಗಿ ಜನಸಾಮಾನ್ಯರ ರಸಾಸ್ವಾದನೆಗೆ ನೆರವಾದರು. ಬಿ.ಪುಟ್ಟಸ್ವಾಮಯ್ಯ ನವರ ಕೃತಿಗಳು ನಾಡಿನಲ್ಲಿ ಸಾಹಿತ್ಯ ಸಂಸ್ಕೃತಿ ಮತ್ತು ಸಂಗೀತದ ತ್ರಿವೇಣಿ ಪ್ರವಾಹವನ್ನೇ ಹರಿಸಿ ಸಾರ್ಥಕವಾದವು.

"ನಾನೊಬ್ಬ ಸಾಮಾನ್ಯ ಮನುಷ್ಯ. ಪದವೀಧರನಲ್ಲ, ಪಂಡಿತನಲ್ಲ, ವಾಗ್ಮಿಯಲ್ಲ. ತಾರುಣ್ಯದಲ್ಲಿಯೇ ಪತ್ರಿಕೋದ್ಯಮಿಯಾಗಿ ಸಾಹಿತ್ಯಾಭಿರುಚಿ ಬೆಳೆದಂತೆ, ನಾಟಕಕಾರನಾದೆ. ಕವಿ ಪ್ರತಿಭೆ ವಿಕಾಸಗೊಳ್ಳಲು ರಂಗಭೂಮಿ ಯಲ್ಲಿ ಅವಕಾಶವಿಲ್ಲವೆಂದು ಅರಿವಾದಾಗ ಕಾದಂಬರಿಗಳನ್ನು ಬರೆಯಲು ತೊಡಗಿದೆ. ಈ ರೀತಿ ಪತ್ರಿಕೋದ್ಯಮ, ರಂಗಭೂಮಿ ಮತ್ತು ಕಾದಂಬರಿ ಕ್ಷೇತ್ರಗಳಲ್ಲಿ ನನಗಾದ ಕಹಿ, ಸಿಹಿ ನೆನಪು ಅದೆಷ್ಟೋ" ಎಂದು ಬಿ. ಪುಟ್ಟಸ್ವಾಮಯ್ಯನವರು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು 1965ನೆಯ ಜನವರಿ 30 ರಂದು ಅವರನ್ನು ಸನ್ಮಾನಿಸಿದಾಗ ಈ ಮಾತುಗಳಲ್ಲಿ ಹೃದಯವನ್ನು ತೆರೆದಿಟ್ಟರು.

ಪತ್ರಿಕೋದ್ಯಮದಲ್ಲಿ ಸಾಕಷ್ಟು ಅನುಭವ ಗಳಿಸಿ, ನಾಟಕರಂಗದಲ್ಲಿ ಕೈಯಾಡಿಸಿ ಕಾದಂಬರಿ ಕ್ಷೇತ್ರಕ್ಕೆ ಧುಮುಕಿದರು. ನಾಟಕ ರಚನೆಯ ಜೊತೆಯಲ್ಲೇ ಆಗೊಮ್ಮೆ ಈಗೊಮ್ಮೆ ಕಾದಂಬರಿಯನ್ನು ಬರೆಯುತ್ತಿದ್ದರು; 1953ರಲ್ಲಿ ಅವರ ಪ್ರಥಮ ಕಾದಂಬರಿ 'ರೂಪಲೇಖಾ' ಪ್ರಕಟವಾಯಿತು. ಕೆಲವಾರು ವರ್ಷಗಳ ಮೇಲೆ ನಾಟಕಗಳನ್ನು ಬರೆಯುವುದನ್ನು ನಿಲ್ಲಿಸಿದರು. ನಂತರ ಕಾದಂಬರಿ ರಚನೆಯ ಕಡೆ ವಿಶೇಷ ಗಮನವನ್ನು ಹರಿಸಿದಾಗ 'ಅಭಿಸಾರಿಕೆ', 'ಸುಧಾಮಯೀ', 'ಮಲ್ಲಮ್ಮನ ಪವಾಡ', 'ರತ್ನಹಾರ', 'ಚಾಲುಕ್ಯ ತೈಲಪ', 'ತೇಜಸ್ವಿನಿ', 'ನಾಟ್ಯಮೋಹಿನಿ', 'ಪ್ರಭುದೇವ', ಮತ್ತು ಬಸವೇಶ್ವರನ ಕಾಲ, ಜೀವನ ಮತ್ತು ಚರಿತ್ರೆಗಳನ್ನು ಕುರಿತ 'ಉದಯ ರವಿ' (1959), 'ರಾಜ್ಯಪಾಲ', (1960), 'ಕಲ್ಯಾಣೇಶ್ವರ' (1960), 'ನಾಗಬಂಧ' (1962), 'ಮುಗಿಯದ ಕನಸು' (1962) ಮತ್ತು 'ಕ್ರಾಂತಿ ಕಲ್ಯಾಣ' (1963) ರಚಿತವಾದುವು. ಅವರ ಕಡೆಯ ಕಾದಂಬರಿ 'ಹೂವು ಕಾವು' 1974ರಲ್ಲಿ ರಚಿತವಾಯಿತು. ಅವರ ಕಾದಂಬರಿಗಳಲ್ಲಿ ಬಹಳಷ್ಟು ಕಾದಂಬರಿಗಳು ಐತಿಹಾಸಿಕ ಕಾದಂಬರಿಗಳು.

1965ರಲ್ಲಿ ಅವರ 'ಕ್ರಾಂತಿ ಕಲ್ಯಾಣ'ಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿತು. ಅದೇ ವರ್ಷ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ದೊರಕಿತು. ಅರಮನೆ, ಗುರುಮನೆ ಮತ್ತು ಜನಮನೆಗಳಿಂದ ನೂರಾರು ಪದವಿ, ಪ್ರಶಸ್ತಿಗಳನ್ನು ಪಡೆದರು.

ಪುಟ್ಟಸ್ವಾಮಯ್ಯನವರ ಬರವಣಿಗೆ ಬರಿಯ ನಾಟಕ, ಕಾದಂಬರಿ ಕ್ಷೇತ್ರಗಳಿಗೆ ಮಾತ್ರ ಮೀಸಲಾಗಲಿಲ್ಲ, ಅವರು ಸಂಸ್ಕೃತ ಅಧ್ಯಯನವನ್ನು ಆಳವಾಗಿ ನಡೆಸಿದ್ದರಿಂದ, ದೇವ ದೇವತೆಗಳಲ್ಲಿ ಭಕ್ತಿ ಹೊಂದಿದವರಾದ್ದರಿಂದ ಕೆಲವು ಸ್ತೋತ್ರ ಪದ್ಯಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ.

ತಾವೇಕೆ 'ಆತ್ಮಚರಿತ್ರೆ' ಬರೆಯಲಿಲ್ಲ? ಅಂದದ್ದಕ್ಕೆ "ಬರೆದರೆ ಸತ್ಯವನ್ನೇ ಬರೆಯಬೇಕು. ನಮ್ಮ ಜನ ಸತ್ಯವನ್ನು ಸ್ವೀಕರಿಸುವುದಿಲ್ಲ" ಎಂದು ಖಿನ್ನರಾಗಿ ಅವರೇ ಹೇಳಿದರು. ಪುಟ್ಟಸ್ವಾಮಯ್ಯನವರು ಕೋಶ ಓದಿ ಮಹಾ ಪಂಡಿತವರೇಣ್ಯರಾದರು. ಆದರೆ ದೇಶ ನೋಡುವ ಹವ್ಯಾಸಕ್ಕೆ ಹೋಗಲಿಲ್ಲ. ಪ್ರವಾಸ ಅವರಿಗೆ ಅಷ್ಟಕ್ಕಷ್ಟೆ. ಬೆಂಗಳೂರು ಮತ್ತು ಅರ್ಕಾವತಿ ಸಿಹಿ ನೀರು ಎಲ್ಲೂ ಸಿಗದೆಂದು ಅವರು ಭಾವಿಸಿದ್ದರು. ಅಂತೂ ಹೆಚ್ಚಾಗಿ ಪ್ರವಾಸ ಹೋಗುತ್ತಿರಲಿಲ್ಲ.

ಪುಟ್ಟಸ್ವಾಮಯ್ಯನವರು ಶಿಸ್ತುಗಾರರು, ಸರಳ ಜೀವಿಗಳು, ಖಾದಿ ಪಂಚೆ, ಜುಬ್ಬ, ವೆಸ್ಟ್‌ಕೋಟ್ ಟಟ್ಟೆ, ಬೂಡ್ಸು ಮತ್ತು ಮೇಲೊಂದು ಶಾಲಿನ ಹೊದಿಕೆ. ಮಿತಭಾಷಿಗಳು, ವಿನೋದಪ್ರಿಯರು, ಗೆಳೆಯರ ಗುಂಪಿನಲ್ಲಿ ತಮಾಷೆಯಲ್ಲಿ ಕಾಲ ಕಳೆಯುತ್ತಿದ್ದರು. ತಮಗೆ ಬೇಕಾದ್ದು ಮತ್ತು ಬೇಕಾದವರು ಯಾವಾಗಲೂ ಹತ್ತಿರವಿರಬೇಕು. ಮನೆಯಲ್ಲೂ ಅಷ್ಟೇ, ಪುಸ್ತಕ ರಾಶಿ ಯಾವಾಗಲೂ ಹರಡಿರುತ್ತಿತ್ತು. ಓಗು, ಬರಹ, ಚರ್ಚೆಯಲ್ಲಿ ಐಕ್ಯರಾಗಿರುತ್ತಿದ್ದರು. ಅವರು ತುಂಬ ರಸಿಕರು, ಯಾವ ಹೋಟಲಿನಲ್ಲಿ ಯಾವ ತಿಂಡಿ ರುಚಿಯಾಗಿರುತ್ತದೆ ಎಂಬ ಪಟ್ಟಿಯನ್ನೇ ಕೊಡುತ್ತಿದ್ದರು.

ಪುಟ್ಟಸ್ವಾಮಯ್ಯನವರ ಕೃತಿಗಳ ಬಗ್ಗೆ ಕನ್ನಡ ಸಾಹಿತಿಗಳು, ವಿದ್ವಾಂಸರು, ವಿಮರ್ಶಕರು ಹೇಳಿರುವ ಅಭಿಪ್ರಾಯಗಳಿಂದ ಅವರ ಸಾಹಿತ್ಯದ ಮೌಲ್ಯ ವೇದ್ಯವಾಗುತ್ತದೆ. ಕನ್ನಡ ಸಾಹಿತ್ಯ ಭಂಡಾರಕ್ಕೆ ಅವರ ಕಾಣಿಕೆ ಅಮೂಲ್ಯ ಮತ್ತು ಅಗಾಧ. ಅವರ ಸಾಧನೆಯ ಬದುಕು, ಗಳಿಸಿದ ವಿದ್ವತ್ತು, ಜನಹಿತಾಸಕ್ತಿಯ ಅಂತಃಕರಣ, ಅವರ ವ್ಯಕ್ತಿತ್ವದ ಪೂರ್ಣ ಸ್ವರೂಪ ಅವರ ಕೃತಿಗಳಲ್ಲಿ ಒಡಮೂಡಿ ಬಂದಿವೆ.

'ಪ್ರತಿಭಾನಂ ಕಾವ್ಯ ವಿದ್ಯಾ ಪ್ರಚಯ ಪರಿಚಯಂ ವೃದ್ಧ ಸೇವಾನುರಾಗಂ ಸತತಾಭ್ಯಾಸ ಪ್ರಯತ್ನ ಕವಿತೆಗೆ ನಿಯತಂ ಕಾರಣಂ" ಎನ್ನುವ ಆರ್ಯೋಕ್ತಿ ಶ್ರೀ ಬಿ. ಪುಟ್ಟಸ್ವಾಮಯ್ಯನವರನ್ನು ಕುರಿತೇ ರಚಿಸಿದಂತಿದೆ. ಹೆಸರು ಪುಟ್ಟಸ್ವಾಮಯ್ಯ, ಆದರೆ ಅವರು ಪಡೆದುದು ದೊಡ್ಡ ಕೀರ್ತಿ. ಪತ್ರಿಕೋದ್ಯಮಿ, ಚಲನಚಿತ್ರ ಸಾಹಿತಿ, ನಿರ್ದೇಶಕ, ಕಾದಂಬರಿಕಾರ, ಕಥೆಗಾರ, ನಾಟಕಕಾರ ಹಾಗೂ ಸಮಾಜ ಸೇವಕ-ಹೀಗೆ ಎಲ್ಲಾ ಒಬ್ಬರೇ ಆಗಿರುವುದು ಅಪರೂಪ. ಬಿ. ಪುಟ್ಟಸ್ವಾಮಯ್ಯನವರು ವೈವಿಧ್ಯಮಯ ಪ್ರತಿಭಾಸಂಪನ್ನರಾದ ಅಪರೂಪದ ವ್ಯಕ್ತಿಗಳು. ವಿವಿಧ ಪ್ರಕಾರಗಳ, ಆಕರಗಳ ಗಣಿಯಾಗಿದ್ದರು. ಎಳೆಯ ವಯಸ್ಸಿನಲ್ಲಿಯೇ ಸಂಸಾರದ ಭಾರವನ್ನು ಹೊತ್ತು ಓದಿಗೆ ಶರಣು ಹೊಡೆದು, ಖಾಸಗಿ ಸಂಸ್ಥೆಗಳಲ್ಲಿ ಕೆಲಸ ಮಾಡಿ ಪತ್ರಿಕೋದ್ಯಮಕ್ಕೆ ಕಾಲಿಟ್ಟು, ಚಿತ್ರರಂಗಕ್ಕೆ ಕೈಹಾಕಿ, ನಾಟಕರಂಗದತ್ತ ಕೈಯಾಡಿಸಿ, ಕಾದಂಬರಿ ಕ್ಷೇತ್ರದಲ್ಲಿ ಕ್ರಾಂತಿಯೆಬ್ಬಿಸಿದ ಧೀಮಂತರು.

ನಡೆನುಡಿ ಒಂದಾದ ಶರಣರ ಭಕ್ತಿ ಹಿತವಪ್ಪುವುದು ಶಿವಂಗೆ. ನುಡಿದಂತೆ ನಡೆವ, ನಡೆದಂತೆ ನುಡಿದರು ಪುಟ್ಟಸ್ವಾಮಯ್ಯನವರು. ಅವರು ಸರಳವಾದರೂ ಸತ್ಯಸಂಪನ್ನರಾಗಿದ್ದರು. ಯಾವುದೇ ಸಂದರ್ಭವಿರಲಿ,

ಎಂತಹುದೇ ಸನ್ನಿವೇಶವಿರಲಿ, ನಿಜವನ್ನು ಬಿಡದ 'ಸತ್ಯವ್ರತ'ರು. ಇದು ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿಯೆಂಬುದು ಅವರಿಗೆ ಗೊತ್ತಿತ್ತು. ದಾಕ್ಷಿಣ್ಯಕ್ಕೆ ಕಟ್ಟುಬಿದ್ದವರಲ್ಲ, ಅಲ್ಲದ್ದನ್ನು ಅಂದವರಲ್ಲ, ಇಲ್ಲದ್ದನ್ನು ಆಡಿದವರಲ್ಲ, ಇದ್ದದನ್ನು ಇದ್ದ ಹಾಗೆ ಹೇಳಿ ಅನೇಕ ವೇಳೆ ಬೇರೆಯವರ ಕೋಪಕ್ಕೆ ತುತ್ತಾಗುತ್ತಿದ್ದರು. ಹೀಗಾಗಿ ಅವರಿಗೆ ಬಹಳ ಜನ ಮಿತ್ರರು ಸಿಗಲಿಲ್ಲ. ಕಾರಣ ಮುಚ್ಚುಮರೆಯಿಲ್ಲದೆ ಅವರ ಗುಣಾವಗುಣಗಳನ್ನು ವಿಮರ್ಶಿಸುತ್ತಿದ್ದರು. ಅವರ ಮಾತುಗಳು ಔಷಧದ ಬೇವಿನಂತೆ ಕಹಿ. ಜೀವನದಲ್ಲಿ ಬಹುಪಾಲು ಬೇವನ್ನೇ ಉಂಡು ಜನತೆಗೆ ಬೆಲ್ಲವಿತ್ತ ಈ ಮಹಾನುಭಾವರು 25-1-1984ರಂದು ವಿಧಿವಶರಾದರು. ಕನ್ನಡದ ಜ್ಞಾನಜ್ಯೋತಿಯೊಂದು ನಂದಿ ಹೋಯಿತು.

❑

## ನಾ. ಕಸ್ತೂರಿ

ಎ.ಎಸ್. ವೇಣುಗೋಪಾಲರಾವ್

"ಕನ್ನಡಿಗರಿಗೆ ಹಾಸ್ಯಪ್ರಜ್ಞೆಯೇ ಇಲ್ಲ. ಉಲ್ಲಾಸದಿಂದ ನಗಲು ಅವರಿಗೆ ಬರುವುದೇ ಇಲ್ಲ" ಎಂಬ ಪ್ರಚಲಿತ ಟೀಕೆಯನ್ನು ಕೇಳಿ ನಾವು ಕೋಪಿಸಿಕೊಳ್ಳುವುದು ತರವಲ್ಲ. ಹಾಗೆ ಮಾಡಿದರೆ ಮೇಲಿನ ಮಾತಿಗೆ ಸಮರ್ಥನೆ ದೊರಕಿದಂತಾಗಿ ಬಿಡುತ್ತದೆ! ಸುಮ್ಮನೆ ನಕ್ಕುಬಿಡುವುದೇ ಲೇಸು. ಬೆಳದಿಂಗಳಂತೆ ಆಹ್ಲಾದಕರ ಹಾಸ್ಯ ಸಾಹಿತ್ಯವನ್ನು ಸೃಷ್ಟಿಸುವ ಕೀರ್ತಿ ಈ ಶತಮಾನದ ಮೊದಲ ದಶಕಗಳಲ್ಲಿ ಸಾಹಿತ್ಯ ರಚನೆ ಮಾಡಿದ ಕೈಲಾಸಂ, ರಾ.ಶಿ., ಶ್ರೀರಂಗ, ಕುಲಕರ್ಣಿ ಮುಂತಾದವರ ಪಾಲಿಗೆ ಬಂದಿತು. ಈ ಸಾಲಿನಲ್ಲಿ ಅಗ್ರಮಾನ್ಯರಾದವರು ನಾ.ಕ. ಎಂದೇ ಖ್ಯಾತರಾದ ನಾರಾಯಣ ಕಸ್ತೂರಿ ಅವರು. Humour ಎಂಬ ಲ್ಯಾಟಿನ್ ಶಬ್ದದ ಮೂಲ ಅರ್ಥ ಕಂಪು-ರುಚಿ ಎಂದು ಉಂಟಷ್ಟೆ? ಈ ಎರಡೂ ಗುಣಗಳನ್ನು ನಾ.ಕ. ಅವರ ನಾಟಕ-ಕಾದಂಬರಿ-ಅಣಕವಾಡು ಇತ್ಯಾದಿಗಳಲ್ಲಿ ಕಾಣಬಹುದು. "ಆಧುನಿಕ ಸಾಹಿತ್ಯದಲ್ಲಿ ಹಾಸ್ಯಕ್ಕೆಂದೇ ಹಲವು ಅಂತಸ್ತುಗಳ ಮಹಲೊಂದನ್ನು ಕಟ್ಟಿದವರು ನಾ.ಕ.. ಹಾಸ್ಯವನ್ನೇ ಖಾಯಂ ಹವ್ಯಾಸವಾಗಿ ಮಾಡಿಕೊಂಡವರು ಕಸ್ತೂರಿ... ನಗೆಯೇ ಅವರ ಲೇಖನದ ಕಸುಬು" ಎಂಬ ಮಾತುಗಳು ಕಸ್ತೂರಿಯವರ ವಿಷಯದಲ್ಲಿ ಸಾರ್ಥಕವಾದ ಪ್ರಶಂಸೆ.

"ನಾ ಎಂದರೆ ನಾಟಕದ ಕಸ್ತೂರಿ" ಎಂದು ಅವರ ಸಮಕಾಲೀನರಾದ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳು ಹೇಳಿದರೂ ಕಸ್ತೂರಿ ಬರೆದದ್ದು ನಾಟಕ ಮಾತ್ರವಲ್ಲ. ವಾಸ್ತವದಲ್ಲಿ "ಪಾತಾಳದಲ್ಲಿ ಪಾಪಚ್ಚಿ" ಎಂಬ ಶಿಶುಸಾಹಿತ್ಯ ಅವರ ಮೊದಲ ಪ್ರಕಟಣೆ (1943). ಅದು ಇಂಗ್ಲೆಂಡಿನ ಚಾರಲ್ಸ್ ಲುಡ್ವಿಗ್ ಡಾಡ್ಜ಼ಸನ್ ಅವರ ಲೋಕಪ್ರಸಿದ್ಧ "Alice in Wonder Land" ಗ್ರಂಥದ ಆಧಾರದ ಮೇಲೆ ರಚಿಸಿದ ಕೃತಿ. ಆದರೆ ಕನ್ನಡದ ಸ್ವಂತ ಕೃತಿಯಂತೆ, ಪಾಪಚ್ಚಿ ನಮ್ಮ ಮನೆಯ ಅಂಗಳದ್ದೇ ಮಗು ಎಂಬಂತೆ ಕಸ್ತೂರಿ ಚಿತ್ರಿಸಿದ್ದಾರೆ. ಗಣಿತಶಾಸ್ತ್ರ ಪ್ರಾಧ್ಯಾಪಕ ಡಾಡ್ಜ಼ಸನ್ Alice ಅನ್ನು ಸೃಷ್ಟಿಸಿದಂತೆ, ಚರಿತ್ರೆಯ ಪ್ರಾಧ್ಯಾಪಕ ಕಸ್ತೂರಿ ಪಾಪಚ್ಚಿಯನ್ನು ನಿರ್ಮಿಸಿದರು. ನೀರಸ ಬದುಕಿನ ಬಿಗಿಯಾದ ಬಂಧನದಿಂದ ಬಿಡುಗಡೆ ಹೊಂದಲು, ಮುಕ್ತ ಆಗಸದಲ್ಲಿ ಹಕ್ಕಿಯಂತೆ ಹಾರಲು ಜೀವದ ಮನಸ್ಸು ಒಂದೊಂದು ಕ್ಷಣವಾದರೂ ಬಯಸುತ್ತದಷ್ಟೆ? ಈ ಹಂಬಲದ ಮಗುಮನಸ್ಸಿನ ಪ್ರತೀಕವಾಗಿದ್ದಾಳೆ ಪುಟ್ಟ ಪಾಪಚ್ಚಿ. ಕಸ್ತೂರಿ ಈ ಕೃತಿಯ ರಚನೆಗೆ ಕೈಹಾಕಿದುದು ತುಂಬ ಅರ್ಥಪೂರ್ಣವಾದದ್ದೇ. ಅದನ್ನು ಬರೆಯಲು "ಪದೇ ಪದೇ ತಿವಿದು ಎಚ್ಚರಿಸಿದವರು" ಶ್ರೀಮಾನ್ ಕೆ.ವಿ. ಪುಟ್ಟಪ್ಪನವರು. ತಾವು ಸ್ವಭಾವತಃ ಸೋಮಾರಿ ಎಂದು ಕಸ್ತೂರಿ ಪ್ರಾಂಜಲ ಮನಸ್ಸಿನಿಂದ ಹೇಳಿಕೊಂಡಿದ್ದಾರೆ.

'ಕನ್ನಡ' ಎಂದರೂ ಎಂತಹ ಕನ್ನಡ! ಈ ಶತಮಾನದ ಆರಂಭದಲ್ಲಿ ಅಷ್ಟು ಸುಲಲಿತವಾದ ಕಸ್ತೂರಿ-ಕನ್ನಡವನ್ನು ಸೃಷ್ಟಿಸಿದುದೇ ಒಂದು ಹೆಗ್ಗಳಿಕೆ.

"ಪಾಪ! ಪಾಪಚ್ಚಿ ಅಕ್ಕನ ಪಕ್ಕ ಹುಲ್ಲಿನ ಮೇಲೆ ಎಷ್ಟು ಹೊತ್ತು ಸುಮ್ಮನೆ ಒರಗಿದ್ದಾಳು! ಒಂದೆರಡು ಸಲ, ಬಹಳ ಬೇಸರವಾಗಿ ಅಕ್ಕನ ಕೈಯಲ್ಲಿದ್ದ ಪುಸ್ತಕದ ಮೇಲೆ ಕಣ್ಣೋಡಿಸಿದಳು. ಆದರೆ ಅದರಲ್ಲಿ ಚಿತ್ರಗಳೇ ಇರಲಿಲ್ಲ. 'ಥೂ, ಚಿತ್ರಗಳಿಲ್ಲದ ಪುಸ್ತಕಗಳನ್ನು ಏಕೆ ಅಚ್ಚು ಹಾಕುತ್ತಾರೆಯೋ' ಎಂದು ಗೊಣಗಿಕೊಂಡಳು, 'ಹೂವಿಲ್ಲದ ಗಿಡ' ಎಂದುಕೊಂಡಳು." (ಪುಟ 1)

* * *

"ಮೇಜಿನ ಮೇಲೆ ಒಂದು ಸಣ್ಣ ಶೀಷೆ. ಒಂದು ಪಾವು ನೀರು ಹಿಡಿಯಬಹುದು. ಅದರ ಕತ್ತಿಗೊಂದು ಪಟ್ಟಿ. ಅದರಲ್ಲಿ "ಕುಡಿಯಿರಿ" ಎಂದು ದಪ್ಪ ದಪ್ಪ ಅಕ್ಷರಗಳಲ್ಲಿ ಅಚ್ಚುಹಾಕಿತ್ತು. ಆದರೆ ಅದನ್ನು ಓದಿದ ತಕ್ಷಣ ದಡ್ಡ ಹುಡುಗಿಯ ಹಾಗೆ ಪಾಪಚ್ಚಿ ತೆಗೆದುಕೊಂಡು ಕುಡಿದುಬಿಟ್ಟಳೆಂದು ತಿಳಿಯಬೇಡಿ...ಇಲ್ಲ ಪಾಪಚ್ಚಿ ಅಷ್ಟು ಪೆಚ್ಚು ಹುಡುಗಿಯೇನೂ ಅಲ್ಲ. ಶಾಮುವಾಗಿದ್ದರೆ ಗಬಕ್ ಎಂದು ಕುಡಿದರೂ ಕುಡಿಯುತ್ತಿದ್ದನೇನೋ?" (ಪುಟ 9)

ಎಂತಹ ಕಂಪು-ಬನಿ ಈ ಮಾತುಗಳಲ್ಲಿ!

ಇಷ್ಟು ಸೊಗಸಾದ ಕನ್ನಡವನ್ನು ಬರೆದ ಕಸ್ತೂರಿ ಕನ್ನಡಿಗರಲ್ಲ, ಅವರ ಮಾತೃಭಾಷೆ ಕನ್ನಡವಲ್ಲ ಎಂದರೆ ನಂಬುವುದೂ ಕಷ್ಟ. ಶ್ರದ್ಧೆ-ಪ್ರಾಮಾಣಿಕ ಪ್ರಯತ್ನಗಳಿದ್ದಲ್ಲಿ ಅನ್ಯ ಭಾಷೆಯೊಂದರ ಮೇಲೆ ಎಂತಹ ಪ್ರಭುತ್ವ ಸಂಪಾದಿಸಬಹುದು ಎಂಬುದಕ್ಕೆ ಮಲೆಯಾಳಂ ಭಾಷೆಯಾಡುತ್ತಿದ್ದ ಕಸ್ತೂರಿಯೇ ಸಾಕ್ಷಿ. ತಮ್ಮದೇ ತಾಯ್ನುಡಿ ಎಂಬಷ್ಟು ಲೀಲಾಜಾಲವಾಗಿ ಅವರು ಕನ್ನಡ ಬರೆದರು. ಆಶುನಾಟಕಗಳನ್ನು ನಿಂತನಿಂತಲ್ಲಿ ಕಟ್ಟಿದರು– ತಮ್ಮಂತೆಯೇ ಪ್ರತಿಭಾವಂತ ಅಭಿನಯಪಟುಗಳ ತಂಡವನ್ನೂ ಕೂಡಿಸಿ-ಆಡಿಸಿ ಜಯಭೇರಿ ಬಾರಿಸಿಬಿಟ್ಟರು. ಹೊಸ ಗಾದೆಗಳನ್ನು ಸೃಷ್ಟಿಸಿದರು, ಹೊಸ ಅರ್ಥವನ್ನು ಹಳೆಯ ಮಾತುಗಳಿಗೆ ಪೋಣಿಸಿದರು, ಅಣಕವಾಡಿದರು, ಪ್ರಬಂಧ ಬರೆದರು, ಕವನಿಸಿದರು. ತಾವು ಕನ್ನಡ ಕಲಿತದ್ದು ಮಾತ್ರವಲ್ಲ, ವಯಸ್ಕರ ಶಿಕ್ಷಣ ಸಮಿತಿಯ ಮೂಲಕ, ಹಳ್ಳಿಯ ವಯಸ್ಕರಿಗೂ-ಬಾಲಕರಿಗೂ ಕನ್ನಡ ಕಲಿಸಿದರು ಎಂದರೆ ಎಂತಹ ಸೋಜಿಗ. ಮುಖ್ಯವಾಗಿ ಅವರು ಕನ್ನಡಿಗರ ಉಲ್ಲಾಸವನ್ನು ಬೆಳೆಸಿ ಸಂತಸವನ್ನು ಹಂಚಿದರು. ಇಂದು ಅಗ್ರಮಾನ್ಯ ರಾಷ್ಟ್ರಕವಿಯೆನಿಸಿದ ಶ್ರೀ ಕುವೆಂಪು ಅವರಿಗೆ ಕಸ್ತೂರಿ ನೀಡಿದ ಸ್ನೇಹಭಾಗ್ಯ, ಪ್ರೋತ್ಸಾಹ, ಈಗಾಗಲೇ ಇತಿಹಾಸ ಪ್ರಸಿದ್ಧ. "ಮೊದಲು ನನ್ನ ಕವನಗಳ ಯೋಗ್ಯತೆಯನ್ನು ಕಂಡುಹಿಡಿದು ನನಗೆ ಉತ್ತೇಜನ ಕೊಟ್ಟವರೇ ಕಸ್ತೂರಿ ಮತ್ತು ಸಿದ್ಧೇಶ್ವರಾನಂದರು" ಎಂದು ಶ್ರೀ ಕುವೆಂಪು ಬರೆಯುತ್ತಾರೆ. ಕಾವ್ಯ ರಚನೆಗೆ ಮಾತ್ರವಲ್ಲ. ಕವಿಯನ್ನು ಆಶ್ರಮಕ್ಕೆ ಕರೆದೊಯ್ದೂ ಚಿಕಿತ್ಸೆ ಮಾಡುವಲ್ಲಿ, ಸಮಾರಂಭಗಳಲ್ಲಿ ಉಪನ್ಯಾಸಕ್ಕೆ ಪ್ರೇರಿಸುವಲ್ಲಿ, ಶಿವಮೊಗ್ಗೆ, ಚಿಕ್ಕಮಗಳೂರು, ಜೋಗ ಮುಂತಾದ ಎಡೆಗೆ ಪ್ರವಾಸದ ಸಹಭಾಗಿಯಾಗುವಲ್ಲಿ, ಚಾಮುಂಡಿಬೆಟ್ಟ, ಕುಕ್ಕರಹಳ್ಳಿ ಕೆರೆ ಬಯಲು, ಒಂಟಿಕೊಪ್ಪಲಿನ ಶ್ರೀರಾಮಕೃಷ್ಣಾಶ್ರಮ ಮುಂತಾದ ಎಡೆಯ ಸರಸ ಗಂಭೀರ ವಿನೋದ ಗೋಷ್ಠಿಗಳಲ್ಲಿ ಕಸ್ತೂರಿಯವರ ಪಾತ್ರ ಚಿರಸ್ಮರಣೀಯ. ತಮ್ಮ 'ಪಾತಾಳದಲ್ಲಿ ಪಾಪಚ್ಚಿ' ಕೃತಿಗೆ ಶ್ರೀ ಕುವೆಂಪು ಅವರಿಂದ ಪ್ರೇರಣೆ ಪಡೆದುದೂ, ತಾವು ಕವಿಯ ಸಾಹಿತ್ಯ ಕೃಷಿಗೆ ನಿರಂತರ ಪ್ರೋತ್ಸಾಹ ನೀಡಿದುದೂ ಒಂದು ಅಪೂರ್ವ ಮೈತ್ರೀಯೋಗವೆ ಸರಿ.

ಹೀಗೆ ಕನ್ನಡವನ್ನೂ, ಕನ್ನಡಿಗರನ್ನೂ ಪ್ರೀತಿಯಿಂದ ಅಪ್ಪಿಕೊಂಡ ಕಸ್ತೂರಿ ವಸ್ತುತಃ ಕೇರಳದವರು. ಅಲ್ಲಿಯೇ ಬಾಲ್ಯ ವಿದ್ಯಾಭ್ಯಾಸವನ್ನು ಮುಗಿಸಿ ಕೊಚ್ಚಿ ಸಂಸ್ಥಾನದ ತಿರುವನಂತಪುರದಲ್ಲಿ ಎಂ.ಎ., ಬಿ.ಎಲ್., ಪದವಿ ಗಳಿಸಿದವರು. ಉದ್ಯೋಗದ ಅವಶ್ಯಕತೆ ಅವರನ್ನು ಮೈಸೂರಿಗೆ ಸೆಳೆಯಿತು. ಬನುಮಯ್ಯನವರ ಪ್ರೌಢಶಾಲೆಯಲ್ಲಿ ಶಿಕ್ಷಕ ವೃತ್ತಿಯನ್ನು ಕೈಗೊಂಡರು. ಮೈಸೂರು ವಿಶ್ವವಿದ್ಯಾನಿಲಯದ ಅಂದಿನ ಕುಲಪತಿ ಬ್ರಜೇಂದ್ರನಾಥ ಸೀಲರಿಗೆ ದೇಶ ವಿದೇಶಗಳ ಪ್ರತಿಭಾವಂತರನ್ನೆಲ್ಲ ಹುಡುಕಿ ವಿಶ್ವವಿದ್ಯಾನಿಲಯಕ್ಕೆ ಆಹ್ವಾನಿಸುವ ಹಂಬಲ. ಅವರ ತೀಕ್ಷ್ಣದೃಷ್ಟಿಗೆ ಕಸ್ತೂರಿಯವರನ್ನು ಗುರುತಿಸುವುದು ತಡವಾಗಲಿಲ್ಲ. ಹೀಗಾಗಿ 1928ರಲ್ಲಿ ಮೈಸೂರು ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ಇತಿಹಾಸದ ಉಪನ್ಯಾಸಕರಾಗಿ ಅವರು ನೇಮಕಗೊಂಡರು. ಅವರ ನಿಜವಾದ ಪ್ರತಿಭೆಗೆ ತಕ್ಕ ಪ್ರಯೋಗಶಾಲೆಯಾಯಿತು ಮಹಾರಾಜಾ ಕಾಲೇಜಿನ ಸಾಂಸ್ಕೃತಿಕ ಸಂಘ. ಕಾಲೇಜಿನ ವಾರ್ಷಿಕ ಬೀಳ್ಕೊಡಿಗೆ ಸಮಾರಂಭದಲ್ಲಿ ವಿದ್ಯಾರ್ಥಿಗಳ ಕಾರ್ಯಕ್ರಮ ಮುಗಿದ ನಂತರ ಅಧ್ಯಾಪಕರು ಧಿಡೀರನೆ ನಿಂತ ನಿಲುವಿನಲ್ಲೇ ಆಶುನಾಟಕವೊಂದನ್ನು ಸೃಜಿಸಿ ಆಡಿಬಿಡುತ್ತಿದ್ದರು; ವಿದ್ಯಾರ್ಥಿಗಳ ಮನರಂಜನೆಯೇ ಮುಖ್ಯ ಉದ್ದೇಶ. ತಾವು ಅತಿಯಾಗಿ ಪ್ರೀತಿಸುತ್ತಿದ್ದ ಕಾಲೇಜನ್ನು ಬಿಟ್ಟು ಹೋಗುವ ದುಗುಡದಿಂದ ಭಾರವಾಗಿರುತ್ತಿದ್ದ ವಿದ್ಯಾರ್ಥಿಗಳ ಮನಸ್ಸು ಹಗುರಗೊಂಡು ಅರಳುತ್ತಿತ್ತು. ಹೀಗೆ ರೂಪುಗೊಂಡ ಕಸ್ತೂರಿಯವರ ಪ್ರಹಸನಗಳು ಕಾಡಾನೆ, ಗಗ್ಗಯ್ಯನ ಗಡಿಬಿಡಿ, ವರ ಪರೀಕ್ಷೆ ನಗಿಸುವುದಕ್ಕೆ ಹುಟ್ಟಿದ ನಾಟಕಗಳು, ಮುಂದೆ ಪುಸ್ತಕ ರೂಪದಲ್ಲಿ ಪ್ರಕಟಗೊಂಡು ರಾಜ್ಯದ ಮೂಲೆ ಮೂಲೆಗಳಲ್ಲಿ ಅಭಿನಯಿಸಲ್ಪಟ್ಟವು. ಅಂದಿನ ವಿದ್ಯಾರ್ಥಿ ಸಂಘಗಳಿಗೆ ನಾಟಕಕ್ಕೆ ವಸ್ತುವನ್ನು ಹುಡುಕುವಾಗ ಮೊದಲು ನೆನಪಿಗೆ ಬರುತ್ತಿದ್ದುದೇ ಕಸ್ತೂರಿಯವರ ಈ ಪ್ರಹಸನಗಳು. ಶಿವಮೊಗ್ಗ ದಾವಣಗೆರೆ ಮುಂತಾದ ಕಡೆ ಈ ನಾಟಕಗಳಲ್ಲಿ ಅವರು ಸ್ವತಃ ಪಾತ್ರ ವಹಿಸಿ ಕಳೆ ಕಟ್ಟಿಸಿದರು. ಪ್ರೊ. ಎ.ಎನ್. ಮೂರ್ತಿರಾಯರು ಗುರುತಿಸುವಂತೆ ಈ ನಾಟಕ - ಉಪನ್ಯಾಸಗಳ ಮೂಲಕ "ಕಸ್ತೂರಿ ವಿಜಯಧ್ವಜ ಹಾರಿಸಿ ಬಿಟ್ಟರು ಯಾವ ಯಾವುದಕ್ಕೋ ಅಧ್ಯಕ್ಷರಾದರು".

## 2

ಕನ್ನಡ-ಇಂಗ್ಲಿಷ್‌ಗಳನ್ನು ಕಸಿ ಮಾಡಿ ಪದಗಳನ್ನು ಸೃಷ್ಟಿಸಿದ ಕಸ್ತೂರಿ ಇಂಗ್ಲಿಷ್ ನಾಟಕವನ್ನು ಕನ್ನಡಕ್ಕೆ ರೂಪಾಂತರಿಸಿದರು. ಇಂಗ್ಲಿಷ್ ಗ್ರಂಥದ ಆಧಾರದ ಮೇಲೆ ಹೊಸ ನಾಟಕಗಳನ್ನು ಬರೆದರು. 1942ರಲ್ಲಿ ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾದ ಕಾಡಾನೆ ಪಿ.ಜಿ. ವೋಡ್‌ಹೌಸ್‌ನ ಪ್ರಹಸನದಿಂದ ಪ್ರೇರಿತವಾದರೂ ಹೀಗೆಯೇ ಪ್ರೊ. ಜನಾರ್ದನ ಸರ್ಕಾರ್ ಅವರ 'ಔರಂಗಜೇಬ್' ಕೃತಿಯ ಆಧಾರದ 'ಷಹಜಹಾನ್' ಎಂಬ ಮೂರು ಅಂಕಗಳ ನಾಟಕವನ್ನು ಅವರು 1918ರ ವೇಳೆಗೇ ರಚಿಸಿ ತಾವು ಮೊದಲು ಕೆಲಸಕ್ಕೆ ಸೇರಿದ್ದ ತ್ರಿವೇಂಡ್ರಮ್ ಶಾಲೆಯಲ್ಲಿ ಪ್ರದರ್ಶಿಸಿದ್ದರು. ಅದೇ ವರ್ಷ ಈ ಐತಿಹಾಸಿಕ ನಾಟಕ ಪ್ರಕಟವೂ ಆಯಿತು. ಔರಂಗಜೇಬನ ಪಾತ್ರವನ್ನು ಕಸ್ತೂರಿಯವರೇ ಅಭಿನಯಿಸಿದ್ದರು. ಅನಂತರ ಪ್ರತಿವರ್ಷವೂ ಶಾಲೆಯ ವಾರ್ಷಿಕೋತ್ಸವಗಳಲ್ಲಿ ಕಸ್ತೂರಿಯವರ ನಾಟಕ ಒಂದು ಅನಿವಾರ್ಯ ಕಾರ್ಯಕ್ರಮ ಎನಿಸಿತು. 'ಹೆಡ್‌ಮಾಸ್ತರ ಮಗಳು' ಕಸ್ತೂರಿಯವರದ್ದೇ ಜನಪ್ರಿಯ ರಚನೆ. ಕಸ್ತೂರಿಯವರ ಈ ನಾಟಕ ಕಾಶಿಯ ಮಹಾರಾಜರ ಎದುರೂ ಅಭಿನಯಿಸಲ್ಪಟ್ಟು ಮೆಚ್ಚಿಗೆಗೆ ಪಾತ್ರವಾಯಿತು. ಹಲವಾರು ಪೌರಾಣಿಕ-ಸಾಮಾಜಿಕ ಕಿರುನಾಟಕಗಳನ್ನು ಹೀಗೆ ನೋಡುನೋಡುತ್ತಲೇ ರಚಿಸಿ ಆಡಿಸಿಬಿಡುವ ವಿಶಿಷ್ಟ ಪ್ರತಿಭೆ ಕಸ್ತೂರಿಯವರದ್ದು. ಈ ಹವ್ಯಾಸ ಅವರ ವೃತ್ತಿ ಜೀವನದುದ್ದಕ್ಕೂ ಹರಿದು ಬಂದುದು ಮಾತ್ರವಲ್ಲ, ಮುಂದೆ ಪುಟ್ಟಪರ್ತಿಯಲ್ಲಿ ಸಾಯಿಬಾಬರ ಸಾನ್ನಿಧ್ಯ ಸೇರಿದ ಮೇಲೂ ಮುಂದುವರೆಯಿತು. "ನಾಕ" ಎಂದರೆ ನಾಟಕದ ಕಸ್ತೂರಿ ಎಂಬ ಎ.ಆರ್.ಕೃ. ಅವರ ಪ್ರಶಂಸೆಯ ಉದ್ಗಾರ ಅಕ್ಷರಶಃ ನಿಜ. 1930-40ರ ದಶಕಗಳು ಕಾಲೇಜು ರಂಗಭೂಮಿಯ ದೃಷ್ಟಿಯಿಂದ ಕಸ್ತೂರಿಯುಗವೆಂದರೂ ಉತ್ಪ್ರೇಕ್ಷೆಯಲ್ಲ.

ನೆರೆನಾಡಿನಿಂದ ಬಂದ ಈ ಮಹನೀಯರ ಕನ್ನಡ ಸೇವೆ ಇಷ್ಟಕ್ಕೆ ಮುಗಿಯಲಿಲ್ಲ. ವಯಸ್ಕರ ಶಿಕ್ಷಣದಂತಹ ಸಾಮಾಜಿಕ ಆಗತ್ಯಗಳನ್ನೂ ಅವರು ಮನಗಂಡರು. ಆಚಾರ್ಯ ಬಿ.ಎಂ.ಶ್ರೀ. ಯವರೇ ಈ ವಿಷಯದಲ್ಲಿ ಕಸ್ತೂರಿಯವರ ಮಾರ್ಗದರ್ಶಿಗಳು. 1930ರಷ್ಟು ಹಿಂದೆಯೇ ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ವಯಸ್ಕ ಶಿಕ್ಷಣ ತರಗತಿಗಳನ್ನು ಅವರು

ನಡೆಸಿದರು. 'ಕೆಂಪ ಮೈಸೂರಿಗೆ ಹೋದದ್ದು' ಎಂಬ ನಗೆ ಸಾಹಿತ್ಯವನ್ನೂ ಅವರಿಗಾಗಿ ಸೃಷ್ಟಿಸಿದರು.

ಕಸ್ತೂರಿಯವರ ಶಬ್ದಸೃಷ್ಟಿ ಗಮನಾರ್ಹ. ಈ ನೆಲೆಯಲ್ಲಿ ಅವರ ಕೊಡುಗೆ ಕಡಿಮೆಯದಲ್ಲ. 'ಅನರ್ಥಕೋಶ'ದಂತಹ ನಗೆ ನಿಘಂಟುವಿನಲ್ಲೂ ಈ ಸೃಜನಾತ್ಮಕತೆಯೇ ಕೆಲಸ ಮಾಡುತ್ತಿದೆ. ಆಲ್ ಇಂಡಿಯಾ ರೇಡಿಯೋ-ಮೈಸೂರು ನಿಲಯಕ್ಕೆ ಆಕಾಶವಾಣಿ ಎಂಬ ನಾಮಕರಣ ಮಾಡಿದವರೂ ಕಸ್ತೂರಿಯವರೇ. ಆ ಹೆಸರು ಈಗ ಎಲ್ಲ ರೇಡಿಯೋ ಕೇಂದ್ರಗಳಲ್ಲೂ ಸ್ಥಿರವಾಗಿ ನಿಂತುಬಿಟ್ಟಿದೆ. 1955ರಲ್ಲಿ ದಾವಣಗೆರೆಯ ಕಾಲೇಜಿನ ಪ್ರಾಂಶುಪಾಲ ವೃತ್ತಿಯಿಂದ ನಿವೃತ್ತರಾದ ಕಸ್ತೂರಿಯವರು ಎರಡು ವರ್ಷಗಳ ಕಾಲ ಬೆಂಗಳೂರು ಆಕಾಶವಾಣಿ ನಿಲಯದಲ್ಲಿ ಕಾರ್ಯಕ್ರಮ ನಿರ್ವಾಹಕರಾಗಿದ್ದರು ಎಂಬುದನ್ನು ಇಲ್ಲಿಯೇ ಸ್ಮರಿಸಿಕೊಳ್ಳಬಹುದು. ಈ ಸಂದರ್ಭಗಳಲ್ಲಿ ರಾ.ಶಿ. ಯವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ ಕೊರವಂಜಿ, ಶಂಕರ್ ಅವರ Shankar's Weekly ಮುಂತಾದ ನಿಯತಕಾಲಿಕಗಳಲ್ಲಿ ಕಸ್ತೂರಿಯವರ ನಗೆ ಲೇಖನಗಳನ್ನೂ, ಹೊಸಗಾದೆಗಳನ್ನೂ ಹೊಸ ಶಬ್ದಸೃಷ್ಟಿಯಲ್ಲಿ ಪಡೆದ ಸಿದ್ಧಿಯನ್ನೂ ಮನಗಾಣಬಹುದಾಗಿದೆ.

ಹೀಗೆ ನಗೆಗಾರರೆಂದೇ ಖ್ಯಾತರಾದ ಕಸ್ತೂರಿಯವರು ಆರು ನಾಟಕಗಳನ್ನು ಬರೆದರು-ಆಡಿದರು, ಆಡಿಸಿದರು (ಗಗ್ಗಯ್ಯನ ಗಡಿಬಿಡಿ, ವರ ಪರೀಕ್ಷೆ, ಕಾಡಾನೆ, ತಾಪತ್ರಯ ತಪ್ಪಿತು, ಬ್ಯಾಂಕಿನ ದಿವಾಳಿ, ರಾಮಕೃಷ್ಣಯ್ಯನ ದರ್ಬಾರು). ಗಾಳಿಗೋಪುರ, ಶಂಖವಾದ್ಯ, ರಂಗನಾಯಕಿ, ಅಲ್ಲೋಲ ಕಲ್ಲೋಲ, ಉಪಾಯ ವೇದಾಂತ, ಅನರ್ಥಕೋಶ ಇವು ಅವರ ಇತರ ಹಾಸ್ಯಪ್ರಧಾನ ಕೃತಿಗಳು. ಕಸ್ತೂರಿಯವರು ರಚಿಸಿದ 'ಅನರ್ಥ ಕೋಶ' ವಿಶ್ವಸಾಹಿತ್ಯದಲ್ಲಿಯೇ ಆ ಮಾದರಿಯಲ್ಲಿ ಆದಿಕೃತಿ, ಆದ್ಯಕೃತಿ. ಅವರ ಗಂಭೀರ ಚಿಂತನೆಗೆ ಸಾಕ್ಷಿಯಾಗಿ ನಿಲ್ಲುವಂತಹ ಮದುವೆ, ದಿಲ್ಲೀಶ್ವರನ ದಿನಚರಿ, ಅಶೋಕ, ಮುಂತಾದ ಕೃತಿಗಳನ್ನು ಕಸ್ತೂರಿ ರಚಿಸಿದ್ದಾರೆ. ಈ ಎಲ್ಲ ಕೃತಿಗಳ ವಿಸ್ತಾರ ವಿಮರ್ಶೆ ಈ ಲೇಖನದ ಪರಿಮಿತಿಗೆ ಹೊರತಾದುದು.

ಕಸ್ತೂರಿಯವರ ಮುಖ್ಯ ಉದ್ದೇಶವೇ ಸುತ್ತೆಲ್ಲ ನಗೆಯ ಕಂಪನ್ನು ಹರಡುವುದೇ ಆಗಿದೆ. ನಿಂತನಿಂತಲ್ಲೇ ನಾಟಕ ಕಟ್ಟಿ ಆಡಿಸಿಬಿಡುವ ಅವರ ವಿಶಿಷ್ಟ ಪ್ರತಿಭೆಯ ಉದಾಹರಣೆಗೆ 'ಗಗ್ಗಯ್ಯನ ಗಡಿಬಿಡಿ'ಯನ್ನು ನೋಡಬಹುದು. ಅಲ್ಲಿ ಕಾಣುವುದು ಒಂದು ಬಗೆಯ ಹುಚ್ಚು ನಗೆ. ನಾಟಕದ ನಾಯಕ ಕಿಟ್ಟು, ಅವನ ಸಹಾಯಕ ಪುಟ್ಟು. ಇಬ್ಬರೂ ಸೇರಿ ಗಗ್ಗಯ್ಯನನ್ನು ವಂಚಿಸುವ ಷಡ್ಯಂತ್ರ ಹೂಡಿ, ಪರಿಣಾಮವಾಗಿ ಕಿಟ್ಟು ತನ್ನ ಪ್ರೇಯಸಿಯನ್ನು ದಕ್ಕಿಸಿಕೊಂಡ ಕಥೆ. ನಗಿಸುವುದಲ್ಲದೆ ಬೇರೆ ಆಳವಾದ ಉದ್ದೇಶಗಳು ಇಲ್ಲಿಲ್ಲ. ಪೆಗ್ಗಿ ಬಿದ್ದ ಗಗ್ಗಯ್ಯ-ಅವನ ಗಡಿಬಿಡಿ ಹೆಜ್ಜೆ ಹೆಜ್ಜೆಗೂ ನಗೆ ಉಕ್ಕಿಸುತ್ತದೆ.

'ಕನ್ಯಾಪರೀಕ್ಷೆ'ಯ ಹಳಸಿದ ಸಂಪ್ರದಾಯವನ್ನು ಲೇವಡಿ ಮಾಡಲೆಂದೇ ತಿರುಗು ಮುರುಗು ಮಾಡಿದ ನಾಟಕ 'ವರಪರೀಕ್ಷೆ'. ಆದರೆ ಸುತ್ತಲ ಬದುಕಿನ ನೋವುಗಳಿಗೂ ಕಸ್ತೂರಿ ಸ್ಪಂದಿಸದೆ ಇಲ್ಲ. ನಗೆಯ ಹೊರಲೇಪವನ್ನು ಕಳಚಿ ಅದನ್ನು ಗುರುತಿಸಬೇಕು. ಕಸ್ತೂರಿಯವರ ಮಾನಸಪುತ್ರ 'ಸಂಪತ್ತು'. ಕಸ್ತೂರಿ ಸೃಷ್ಟಿಸಿದ 'ಚೆಂಗೂಲಿ ಚೆಲುವ'ನೂ ಮತ್ತೊಬ್ಬ ಕದೀಮನೇ. ನಗೆ ಉಕ್ಕಿಸುತ್ತಲೇ ಈ ಕೃತಿ ನಮ್ಮ ಜನದ ಪೆಗ್ಗಿತನ, ಧನಲೋಭ, ಕದೀಮರ ಕರಾಮತ್ತುಗಳನ್ನು ಚಿತ್ರಿಸುತ್ತಾ ಸುತ್ತಲ ಸಮಾಜಕ್ಕೆ ಕನ್ನಡಿ ಹಿಡಿಯುತ್ತದೆ.

'ಚಕ್ರದೃಷ್ಟಿ' ತನ್ನ ವಿಶಿಷ್ಟ ಕಥಾತಂತ್ರದಿಂದಲೇ ಗಮನ ಸೆಳೆಯುತ್ತದೆ. ಭೈರಪ್ಪನವರ 'ಅನ್ವೇಷಣ', ಪ್ರಭುಶಂಕರರ 'ಬೆರಗು' ಮುಂದೆ ಇದೇ ತಂತ್ರವನ್ನು ಬೆಳೆಸಿದುವು. ಕಡಿಬಂಡೆ ಗುಂಡಪ್ಪ ಕಾದಂಬರಿಯ ನಾಯಕ . ಅವನು ನೇರವಾಗಿ ಕೃತಿಯಲ್ಲಿ ಬಂದದ್ದೇ ಇಲ್ಲ. ಹಲವಾರು ಪಾತ್ರಗಳು ತಮ್ಮ ತಮ್ಮ ಮೂಗಿನ ನೇರಕ್ಕೆ ಗುಂಡಪ್ಪನನ್ನು ವಿಶ್ಲೇಷಿಸುತ್ತಾ ಸಾಗುತ್ತವೆ; ತಮ್ಮನ್ನೇ ತಾವು ಬಯಲು ಮಾಡಿಕೊಳ್ಳುತ್ತವೆ. ಅವರ ಚಿತ್ರಣವೆಲ್ಲ ಸತ್ಯವಲ್ಲ-ಅಲ್ಲದೆಯೂ ಇಲ್ಲ ಎಂಬಂತಹ 'ಅರ್ಧ ಸತ್ಯ'. ಗುಂಡಪ್ಪ ಮೂಲತಃ ಅಭೇದ್ಯವಾದ ಚೋದ್ಯವೇ ಆಗುತ್ತಾನೆ. ಒಂದು ಅರ್ಥದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಹೀಗೆ ಗುಟ್ಟಿನ ಗಂಟೇ ಹೌದು. ಈ ಕೃತಿಯ ಅಧ್ಯಾಯದ ಶೀರ್ಷಿಕೆಗಳೂ ಕಸ್ತೂರಿಯವರ ಪ್ರತಿಭಾಸೃಷ್ಟಿಗೆ ಸಾಕ್ಷಿ ಒದಗಿಸುತ್ತವೆ - ಈರವಾಣಿ, ಹಿಂಸಧ್ವನಿ, ಕರಕರ ಪ್ರಿಯ, ಇತ್ಯಾದಿ. ಎಲ್ಲವೂ ಅಪಸ್ವರಗಳೇ. ಕಾದಂಬರಿಯಲ್ಲಿರುವುದು ಬರಿಯ ನಗೆಯಲ್ಲ, ಕಸ್ತೂರಿ ಏರಿದ ಎತ್ತರ-ಬಿತ್ತರ.

ಕಸ್ತೂರಿಯವರ ಕಾದಂಬರಿಗಳು ನಗೆಯ ಮುಖವಾಡ ಧರಿಸಿದರೂ ಸುತ್ತಲ ಸಮಾಜದ ಬದುಕಿಗೆ ಹೆಚ್ಚಾಗಿ ಸ್ಪಂದಿಸಿವೆ. ಆದರೆ ಅವರ ನಾಟಕಗಳು ಕೇವಲ ಪ್ರಹಸನಗಳು - ನಗಿಸಿ ಸುಮ್ಮನಾಗುವ, ಚಿಂತಿಸಲು ಹೆಚ್ಚಾಗಿ ಏನನ್ನೂ ಉಳಿಸದ ನಗೆನಾಟಕಗಳು. ಹೆಚ್ಚಿನ ಆಯಾಮ ಅವುಗಳಿಗಿಲ್ಲ. ಆದರೆ ಕಸ್ತೂರಿಯವರ ಎಲ ಕೃತಿಗಳಲ್ಲೂ ಬೆರಗುಗೊಳಿಸುವುದು ಅವರ ವಿಪುಲ ಶಬ್ದಸೃಷ್ಟಿ. ಅವರನ್ನು ಆಧುನಿಕ ಶಬ್ದಬ್ರಹ್ಮ ಎನಿಸಿರುವುದು ಈ ಅಂಶವೇ.

ಅನರ್ಥಕೋಶದ ಕಸ್ತೂರಿ ಕಿಡಿಗಳು ಚುಚ್ಚುತ್ತವೆ, ಕುಕ್ಕುತ್ತವೆ, ತಲೆ ಕೆರೆಯುವಂತೆ ಮಾಡುತ್ತವೆ. ನಗೆಯನ್ನೂ ಉಕ್ಕಿಸಿ ಸಾರ್ಥಕವೆನಿಸುತ್ತವೆ. ಇಂಗ್ಲಿಷಿನ ಡೆವಿಲ್ಸ್ ಡಿಕ್‌ಶನರಿಯನ್ನೂ ಮೀರಿಸುತ್ತದೆ - ಹೊಸ ಶಬ್ದಗಳ ಸೃಷ್ಟಿಯೂ ಇಲ್ಲಿ ನಡೆದಿದೆ. ಅದು ನಿಜಕ್ಕೂ ರಸಿಕನ ರಸಸೃಷ್ಟಿ. ಕತೆ, ಲಘುಪ್ರಬಂಧ, ನಾಟಕ, ಅಣಕವಾಡುಗಳ ಮುಖಾಂತರ ನಗೆಯ ಅಲೆಯನ್ನು ಉಕ್ಕಿಸಿದ ಕಸ್ತೂರಿ ಫ್ರೆಂಚ್ ಭಾಷೆಯ ಸುಪ್ರಸಿದ್ಧ ಕಾದಂಬರಿಕಾರ ವಿಕ್ಟರ್ ಹ್ಯೂಗೋನ್ ಲೇ ಮಿಸರಬಲ್ ಕೃತಿಯನ್ನು ಕನ್ನಡಕ್ಕೆ ತಂದುಕೊಟ್ಟದ್ದು ಮೇಲುನೋಟಕ್ಕೆ ಅಚ್ಚರಿ ಎನಿಸೀತು. ಅದೊಂದು ಮಹಾ ದುಃಖದ ಕಥೆ. ಕಾದಂಬರಿಯ ನಾಯಕ ಜೀನ್ ವಾಲ್‌ಜೀನ್. ಬಡತನದ ಬೇಗೆಯನ್ನು ತಾಳಲಾರದೆ ಸಣ್ಣ ರೊಟ್ಟಿಯ ತುಣುಕೊಂದನ್ನು ಕದ್ದ ಮಹಾಪರಾಧಕ್ಕಾಗಿ ಬದುಕಿನ ಉದ್ದಕ್ಕೂ ಪಟ್ಟ ಸಂಕಟದ ಮಹಾಚರಿತ್ರೆ. ಅವನ ಎಲ್ಲ ಸದ್ಗುಣಗಳನ್ನೂ ನುಂಗಿಹಾಕಿದ, ಈ ಒಂದು ಅಪರಾಧ, ಅದಕ್ಕಾಗಿ ವರುಷಗಟ್ಟಲೆ ಜೈಲುವಾಸ, ಇತ್ಯಾದಿಗಳು ಮನಸ್ಸನ್ನು ಕಲಕಿಬಿಡುತ್ತವೆ. ಪಾಪಕಾರ್ಯದಿಂದ ಹೆಜ್ಜೆ ಹೆಜ್ಜೆಗೂ ಜೀನ್‌ವಾಲ್‌ಜೀನನನ್ನು ರಕ್ಷಿಸಿದ ಬಿಷಪ್ಪನ ಮಹಾಕರುಣೆ ಸ್ವತಂತ್ರ ಕಥೆಯಂತೆ ಜನಪ್ರಿಯವಾಗಿದೆ. ವಿಶ್ವದಾದ್ಯಂತ ಜನಪ್ರಿಯವಾದ ಈ ಕಾದಂಬರಿಯ ಸೊಗಸಾದ ಸಂಗ್ರಹಾನುವಾದವನ್ನು ಕಸ್ತೂರಿ 'ನೊಂದ ಜೀವಿ' ಎಂಬ ಸಾರ್ಥಕ ಹೆಸರಿನಿಂದ ಕರೆದಿದ್ದಾರೆ. ಕೃತಿ ಪ್ರಕಟವಾದಾಗ ನಗೆಗಾರ ಕಸ್ತೂರಿಯವರಿಗೇಕೆ ಈ ದುಃಖದ ಕತೆಯ ಗೋಳು ಎಂದು ಹುಬ್ಬು ಹಾರಿಸಿದವರುಂಟು. ಆದರೆ ನಗೆಯ

ನವಿರು ಮುಖವಾಡದ ಹಿಂದೆ ಅದೆಂತಹ ನೋವು-ಸಂಕಟಗಳನ್ನು ಬದುಕಿನಲ್ಲಿ ಈ ಜೀವ ಅನುಭವಿಸಿತು ಎಂಬುದನ್ನು ಅವರ ಜೀವನಕಥೆಯಿಂದ ಮಾತ್ರ ಅರಿಯಲು ಸಾಧ್ಯ..... ಊಹಿಸಲೂ ಅಸಾಧ್ಯ.

3

'ಕಸ್ತೂರಿ' ಎಂದು ಜನಪ್ರಿಯರಾದ ನಾ.ಕ. ಅವರ ಪೂರ್ಣನಾಮ ಕಸ್ತೂರಿ ರಂಗನಾಥ ನಾರಾಯಣ ಶರ್ಮ ಎಂದು. ಈ ಹೆಸರು ತೀರ ಉದ್ದವೆಂದು ತಂದೆ ತಾಯಿಗಳಿಗೆ ಅರಿವಾಯಿತು. ಕತ್ತರಿಸಬೇಕಾದುದೇನೋ ನಿಜ. ಆದರೆ ಮೂತಿಯನ್ನೋ ಬಾಲವನ್ನೋ? ಶರ್ಮ ಎಂಬುದು ಸಹಜವಾಗಿ ಬಿದ್ದುಹೋಯಿತು. ರಂಗನಾಥ ಎಂಬ ಮಾವನವರ ಹೆಸರನ್ನಾಗಲೀ, ನಾರಾಯಣ ಎಂಬ ಯಜಮಾನರ ಹೆಸರನ್ನಾಗಲೀ ಸಂಪ್ರದಾಯಸ್ಥ ಕುಟುಂಬದ ಅಮ್ಮ ಕೂಗಿ ಕರೆಯಲು ಸಾಧ್ಯವೇ? ಹೀಗಾಗಿ ಕಸ್ತೂರಿ ಎಂಬ ಮುದ್ದಾದ ಸಂಕ್ಷಿಪ್ತ ನಾಮ ಉಳಿಯಿತು ಎಂದು ಅವರೇ ಹೇಳಿಕೊಂಡಿದ್ದಾರೆ. ಅವರ ಜನನ 1897ರ ಡಿಸೆಂಬರ್ 25 - ಕ್ರಿಸ್‌ಮಸ್ ದಿನದಂದು. ಕೇರಳದ ಪುಟ್ಟ ಗ್ರಾಮ ತ್ರಿಪುನಿತ್ತೂರ್ ಎಂಬಲ್ಲಿ. ಗ್ರಾಮದ ಮಧ್ಯೆ ವಿಷ್ಣುನಾರಾಯಣನ ದೇವಾಲಯ. ಅವರ ತಾತ ಅಲ್ಲಿಯ ಕಾರ್ಯಕಾರ (ಎಕ್ಸಿಕ್ಯೂಟಿವ್). ಪ್ರತಿ ರಾತ್ರಿ ದೇವಾಲಯದ ಬಾಗಿಲು ಹಾಕಿ ಸೊಗಸಾದ ಪ್ರಸಾದ ತರುವುದು ಆತನ ಪ್ರಿಯವೃತ್ತಿ. ತಂದೆ ವಕೀಲರೊಬ್ಬರ ಬಳಿ ಕಾರಕೂನಿಕೆ ಮಾಡಿದರು. ಸ್ಟ್ಯಾಂಪ್‌ವೆಂಡರ್ ಸಹ ಆದರು. ತಮ್ಮ ಹದಿನೆಂಟನೆಯ ಕಿರುವಯಸ್ಸಿನಲ್ಲಿ ಹನ್ನೆರಡು ವರ್ಷದ ಹೆಣ್ಣನ್ನು ಮದುವೆಯಾದರು. ಈ ದಂಪತಿಗಳ ಏಕಮಾತ್ರ ಪುತ್ರ ಕಸ್ತೂರಿ.

ಹುಟ್ಟಿದ ಮಗು ತೀರಾ ದುರ್ಬಲ. ಅಲ್ಲದೆ ಎರಡು ಕೈಗಳಲ್ಲೂ, ಎರಡು ಕಾಲುಗಳಲ್ಲೂ ಆರಾರು ಬೆರಳುಗಳಿದ್ದವಂತೆ ! ಅಜ್ಜಿಗೆ ಇದೆಲ್ಲ ಅನಿಷ್ಟ ಎನಿಸಿ ಚಕಚಕನೆ ನಾಲ್ಕು ಹೆಚ್ಚಿನ ಬೆರಳುಗಳನ್ನು ಕತ್ತರಿಯಿಂದ ಕತ್ತರಿಸಿ ಹಾಕಿಬಿಟ್ಟಳಂತೆ - ಸಿಸೇರಿಯನ್ ಆಪರೇಷನ್ ಎಂದು ಕಸ್ತೂರಿ ಈ ನೋವನ್ನು ನಗೆಯಾಡುತ್ತಾರೆ. ಮುಂದೆ ಅದರ ಪರಿಣಾಮವಾಗಿ ಕೈಕಾಲು ಬಾತುಕೊಂಡು, ಕೀತುಕೊಂಡು ದೊಡ್ಡ ರಾಮಾಯಣವೇ ಆಗಿ ಹೋಯಿತಂತೆ. ಪ್ರಾಣಾಪಾಯದಿಂದ ಪಾರು ಮಾಡಿದವನು ತಿರುಪತಿ ತಿಮ್ಮಪ್ಪ. ಅಜ್ಜಿ ಹರಕೆ ಕಟ್ಟಿದ್ದ ಬೆಳ್ಳಿ ರೂಪಾಯಿಗಳ ಮಹಿಮೆ ಸಾಮಾನ್ಯವಲ್ಲ ಎನ್ನುತ್ತಾರೆ ಕಸ್ತೂರಿ. ಮುಂದೆ ಅಜ್ಜ-ಅಜ್ಜಿ-ಚಿಕ್ಕಪ್ಪರ ಪೋಷಣೆಯಲ್ಲೇ ಅವರು ಬೆಳೆಯಬೇಕಾಯಿತು. ಕೇವಲ ಆರು ವರ್ಷದ ಬಾಲಕನ ತಂದೆ ಮೈಲಿಬೇನೆಗೆ ತುತ್ತಾಗಿ ವಿಧಿವಶರಾಗಿಬಿಟ್ಟರು. ಮೈಲಿ ಬೇನೆ ಬಂದಾಗ "ಅಮ್ಮ ಮುತ್ತು ಚೆಲ್ಲಿಬಿಟ್ಟಿದ್ದಾಳೆ" ಎನ್ನುತ್ತಿದ್ದರಂತೆ ಆ ಕಾಲದಲ್ಲಿ. ತಂದೆಯ ಶವವನ್ನು ಕಂಡ ಬಾಲಕ ಕಸ್ತೂರಿ ಅಮ್ಮನನ್ನು ತಬ್ಬಿಕೊಂಡು ಕೇಳಿದ ಮೊದಲ ಪ್ರಶ್ನೆ - " ಮುತ್ತೆಲ್ಲ ಎಲ್ಲಿ ಚೆಲ್ಲಿದ್ದಾಳೆ ಅಮ್ಮ ತೋರಿಸು" ಎಂದು. ಇಂಥ ಮುಗ್ಧ ವಯಸ್ಸಿನಲ್ಲಿ ಪಿತೃಹೀನನಾದ ಕಸ್ತೂರಿ ಬದುಕಿನಲ್ಲಿ ಬಹುಕಾಲ ಬಡತನದ ನೋವನ್ನು ಕಟ್ಟಿಕೊಂಡೇ ಬೆಳೆಯಬೇಕಾಯಿತು. ಮೈಲಿಬೇನೆಗೆ ತುತ್ತಾದವರನ್ನು ದೂರ ಇರಿಸಿ ಸತ್ತ ಮೇಲೆ ದೇಹವನ್ನು ಸುಡಲೂ ಅಂಜುತ್ತಿದ್ದ ಕಾಲ ಅದು. ದುರ್ಮರಣಕ್ಕಾಗಿ ಮಂತ್ರವಿಧಿಯಿಂದ ಸಂಸ್ಕಾರ ಮಾಡುತ್ತಿದ್ದರಂತೆ. ಆದರೆ ಅದಕ್ಕೂ ಹಣ ಒದಗದೆ ಕಸ್ತೂರಿ ಇಪ್ಪತ್ತಮೂರು ವರ್ಷಗಳ ಅನಂತರ ರಾಮೇಶ್ವರದಲ್ಲಿ ಆ ಕಾರ್ಯ ಮಾಡಿ ಪಿತೃಋಣ ತೀರಿಸಬೇಕಾಯಿತಂತೆ.

ಇಪ್ಪತ್ತೆರಡು ವರ್ಷದ ಎಳೆಯ ವಿಧವೆ ತಾಯಿ ಹಟದಿಂದ ಬದುಕಿದರು. ಮಗನನ್ನು ವಿದ್ಯಾವಂತನಾಗಿಸುವ ಛಲ ತೊಟ್ಟರು. ಅದಕ್ಕಾಗಿ ಇದ್ದ ಬದ್ದ ಒಡವೆಗಳನ್ನೆಲ್ಲ ಮಾರಿದರು. ಪ್ರತಿಭಾವಂತ ಬಾಲಕ ಅಮ್ಮನನ್ನು ನಿರಾಸೆಗೊಳಿಸಲಿಲ್ಲ. ಕೊಚಿನ್ ಸಂಸ್ಥಾನದ ಎರ್ನಾಕುಲಂ ಮಹಾರಾಜಾ ಕಾಲೇಜಿನಲ್ಲಿ ಮಲಯಾಳಂ ಹಾಗೂ ಚರಿತ್ರೆ ವಿಶೇಷ ವಿಷಯವನ್ನಾಗಿ ತೆಗೆದುಕೊಂಡು ಎಂ.ಎ. ಗಳಿಸಿದರು. ಪರೀಕ್ಷೆಗಳಲ್ಲಿ ಐದು, ಎರಡು ರ್‍ಯಾಂಕುಗಳನ್ನು ಪಡೆಯುತ್ತಿದ್ದರೂ ಪ್ರಪ್ರಥಮ ರ್‍ಯಾಂಕ್ ಮಾತ್ರ ಹೇಗೋ ನುಸುಳಿ ಹೋಗುತ್ತಿತ್ತು. ಕಸ್ತೂರಿ ಅದನ್ನು ಹಾಸ್ಯಕ್ಕೆ ಈಡು ಮಾಡುತ್ತಾರೆ. "ಪ್ರಥಮ ರ್‍ಯಾಂಕ್ ಕಳೆದುಕೊಳ್ಳುವ ಹಟ ತೊಟ್ಟಿದ್ದೆ ನಾನು. ಅದು ಹೆಬ್ಬೆರಳ ತುದಿವರೆಗೆ ಬರುತ್ತಿತ್ತು ಅಷ್ಟೆ. ಚಿಕ್ಕಂದಿನಲ್ಲಿ ಅಜ್ಜಿ ಮಾಡಿದ ಸಿಸೇರಿಯನ್ ಆಪರೇಷನ್ ಪರಿಣಾಮ ಇದು ಎಂದು ಅಮ್ಮ ಗೊಣಗುತ್ತಿದ್ದಳು." ಆರು ಬೆರಳಿದ್ದವರು ಅದೃಷ್ಟವಂತರು ಎಂದು ಪಾಪ ಅಜ್ಜಿಗೆ ತಿಳಿದಿರಲಿಲ್ಲ ಎಂದು ಕಸ್ತೂರಿ ನಗೆಯಾಡುತ್ತಾರೆ.

ಕೇರಳದ ಶಾಲೆಯೊಂದರಲ್ಲಿ ಉಪಾಧ್ಯಾಯರಾಗಿದ್ದುಕೊಂಡೇ ಬಿ.ಎಲ್. ಪರೀಕ್ಷೆಯಲ್ಲಿ ತೇರ್ಗಡೆಯಾದರು ಕಸ್ತೂರಿ. ಆದರೆ ವಕೀಲಿ ವೃತ್ತಿ ಅವರಿಗಾಗಲೀ ಹಿರಿಯರಿಗಾಗಲಿ ಹಿಡಿಸಲಿಲ್ಲ. ಆ ಬಗ್ಗೆ ಮುಂದೆ ಮೈಸೂರಿಗೆ ಬಂದ ಮೇಲೂ ಅವರು ಪ್ರಯತ್ನಿಸಿ ವಿಫಲರಾದದ್ದುಂಟು. ವಿದ್ಯಾರ್ಥಿಗಳ ಅದೃಷ್ಟ. ಮೂವತ್ತೆರಡು ವರ್ಷಗಳ ಕಾಲ ಅವರು ಶಿಕ್ಷಕ ವೃತ್ತಿಯಲ್ಲಿ ತೊಡಗಿಕೊಂಡು ತುಂಬ ಜನಪ್ರಿಯ ಅಧ್ಯಾಪಕರೆನಿಸಿದರು. "ಡು ನಾಟ್ ಚೀಟ್-ಟೀಚ್" ಎಂದು ಅವರ ಹಿರಿಯರ ಅಪ್ಪಣೆ. ಅದನ್ನು ಕಸ್ತೂರಿ ಬದುಕಿನಲ್ಲಿ ಪಾಲಿಸಿದರು. ಇಂಥ ಪ್ರತಿಭಾವಂತನಿಗೆ ಸಹ ಉದ್ಯೋಗದ ಬೇಟೆ ಸುಲಭವೆನಿಸಲಿಲ್ಲ. ಜೊತೆಗೆ ಸಂಸಾರದ ಹೊರೆ. ವಿಧವೆ ತಾಯಿ, ವಿಧವೆ ಅತ್ತೆ, ಮದುವೆಯಾದ ಹೆಂಡತಿ.... ದಾಳಿಯಿಡುವ ನೆಂಟರ ಹಿಂಡು. ಅಮ್ಮ ಹೇಳಿದರಂತೆ "ನೋಡೋ ಮಗು ಯಾವುದಾದರೂ ದೂರ-ಹಾಗಂತ ತೀರ ದೂರವಲ್ಲದ ಊರು ಹುಡುಕೋ, ಹೋಗಿ ಬಿಡೋಣ." ಅವರು ಮೈಸೂರಿಗೆ ಬಂದದ್ದು ಹೀಗೆ. ಆ ಕಾಲದಲ್ಲಿ ಪ್ರಯಾಣವೇನೂ ಸುಲಭವಾಗಿರಲಿಲ್ಲ. ತ್ರಿವೇಂಡ್ರಂನಿಂದ ಅರವತ್ತೆಂಟು ಗಂಟೆಗಳ ಕಾಲ ದೋಣಿ, ಗಾಡಿ, ರೈಲು ಹೀಗೆಲ್ಲ ಹತ್ತಿ ಇಳಿದು ಮೈಸೂರು ತಲುಪುವಾಗ ದಸರಾ ಸಂಭ್ರಮ. ಸಂಸಾರ ಸಮೇತ ಬಂದ ಕಸ್ತೂರಿ ಛತ್ರದಿಂದ ಛತ್ರ ಅಲೆಯಬೇಕಾಯಿತು. ಕಡೆಗೆ ಒಬ್ಬ ವಿದ್ಯಾರ್ಥಿ ದೇವತೆಯಂತೆ ಇಳಿದು ಬಂದು ಒಂದು ಕೋಣೆ ಕಂ ಕಿಚನ್ ದೊರಕಿಸಿ ಕೊಟ್ಟನಂತೆ. ಉದ್ಯೋಗ ಬನುಮಯ್ಯನವರ ಕೊಲಿಜಿಯೇಟ್ ಹೈಸ್ಕೂಲಿನಲ್ಲಿ. ಮುಂದೆ ಅಲ್ಲಿಯ ಉಪಾಧ್ಯಾಯರು ಶಂಕರರಾಯರ ಸಹಕಾರದಿಂದ ಒಳ್ಳೆಯ ಮನೆಯೂ ದೊರೆಯಿತು. ಸಂಸಾರ ತೊಡಗಿತು. 1923ರಲ್ಲಿ ಮೊದಲ ಮಗು ಜನಿಸಿ ನೊಂದ ಅಜ್ಜಿಯರಿಗೆ ಹಾಗೂ ಎಳೆಯ ದಂಪತಿಗಳಿಗೆ ಸಂತಸ ತಂದ. ಹಳೆಯ ಮೈಲಿ ಬೇನೆ ತಾಯಿಯನ್ನೂ ಹೆಂಡತಿಯನ್ನೂ, ಹುಡುಕಿ ಬಂದದ್ದು ನಿಜ. ಆದರೆ ಸೂಕ್ತ ಚಿಕಿತ್ಸೆ-ಶುಶ್ರೂಷೆಯಿಂದ ಬದುಕಿಸಿಕೊಳ್ಳಲು ಈಗ ಸಾಧ್ಯವಾಯಿತು. ಬಾಲ್ಯದ ಸಹಪಾಠಿ ಗೋಪಾಲ ಮಾರಾರ್ ಈಗ ರಾಮಕೃಷ್ಣಾಶ್ರಮದ ಸ್ವಾಮಿ ಸಿದ್ಧೇಶ್ವರಾನಂದರಾಗಿ ಒಂದು ದಿನ ದಿಢೀರನೆ ಮನೆ ಬಾಗಿಲು ಬಡಿದಾಗ ಕಸ್ತೂರಿಗೇ ಸಂಭ್ರಮಾಶ್ಚರ್ಯ. ಇವರಿಬ್ಬರ ಸತತ ಯತ್ನದ ಫಲ ಮೈಸೂರಿನ

ಆಶ್ರಮ ಹಾಗೂ ಅದರ ಇಂದಿನ ನಿರಂತರ ಶೈಕ್ಷಣಿಕ ಹಾಗೂ ಅಧ್ಯಾತ್ಮ ಚಟುವಟಿಕೆಗಳು.

ಕಸ್ತೂರಿ ಮುಂದೆ ಇಂಟರ್ ಮೀಡಿಯೇಟ್ ಕಾಲೇಜಿನಲ್ಲಿ, ಅನಂತರ ಬೆಂಗಳೂರು-ದಾವಣಗೆರೆ ಕಾಲೇಜುಗಳಲ್ಲಿ ಸಲ್ಲಿಸಿದ ಸೇವೆ, ಸಂಘಟಿಸಿದ ಸಾಂಸ್ಕೃತಿಕ, ಶೈಕ್ಷಣಿಕ ಚಟುವಟಿಕೆಗಳು, ಗ್ರಾಮೋದ್ಧಾರ, ವಯಸ್ಕರ ಶಿಕ್ಷಣ, ಸಾಹಿತ್ಯ ಸೇವೆಗಳೆಲ್ಲ ಈಗ ಕನ್ನಡಿಗರಿಗೆ ಸುಪರಿಚಿತ. ನೆರೆನಾಡಿನಿಂದ ಬಂದು ಕನ್ನಡದ ಓನಾಮ ತಿಳಿಯದಿದ್ದ ಈ ವ್ಯಕ್ತಿ ಕನ್ನಡಿಗರ ಭಾಗ್ಯವನ್ನು ಹೀಗೆ ಹೆಚ್ಚಿಸಿಬಿಟ್ಟುದು ಒಂದು "ಲೆಜೆಂಡ್" ಎನಿಸಿಬಿಡುತ್ತದೆ. ಹೀಗೆ ಹಾಸ್ಯಚಕ್ರವರ್ತಿ ಎನಿಸಿದ್ದ ಈ ಕ್ರಿಯಾಶೀಲ ವ್ಯಕ್ತಿಯ ಶ್ರದ್ಧಾ ಕೇಂದ್ರ 1948ರಿಂದ ಪುಟ್ಟಪರ್ತಿಯ ಸತ್ಯಸಾಯಿ ಬಾಬಾ ಎಂಬ ವಿಚಿತ್ರ ಸತ್ಯ ಹಲವರ ಅಚ್ಚರಿ-ಅಸಮಾಧಾನ-ಕುಚೋದ್ಯಗಳಿಗೂ ಕಾರಣವಾಗಿದೆ. ಆದರೆ ಕಸ್ತೂರಿಯವರ ಬದುಕಿನ ವಿಚಿತ್ರ ಘಟನೆಗಳನ್ನೂ ತಿರುವುಗಳನ್ನೂ ಅಭ್ಯಾಸ ಮಾಡಿದರೆ ಅದೊಂದು ಅತ್ಯಂತ ಸಹಜವಾದ ಅನಿವಾರ್ಯವಾದ ಸೆಳೆತ ಎಂಬ ಅರಿವಾಗುತ್ತದೆ. 1947ರಲ್ಲಿ ಬೆಂಗಳೂರಿನ ಇಂಟರ್ ಮೀಡಿಯೆಟ್ ಕಾಲೇಜಿನಲ್ಲಿ ಅವರು ಉಪನ್ಯಾಸಕರಿದ್ದಾಗ ಪ್ರತಿಭಾವಂತ ಮಗನನ್ನು ವಿಧಿ ಸೆಳೆದುಕೊಂಡುಬಿಟ್ಟಿತು. ಸ್ವತಂತ್ರ ಭಾರತದಲ್ಲಿ ಈ ಹುಡುಗ ಉಸಿರಾಡಿದುದು ಕೇವಲ 9 ದಿನಗಳು. ನಿಜಕ್ಕೂ ಆ ದುಃಖದ ದಿನದಲ್ಲಿ ಅವರಿಗೊಂದು ಬಲವಾದ ಅವಲಂಬನ ಬೇಕಿತ್ತು. ಮಗನಷ್ಟೇ ಎಳೆಯ ಪ್ರಾಯದ ಮೋಹಕ ಬಾಬಾ ಅವರ ಹೃದಯವನ್ನು ಹಿಡಿದರು. ಮೊದ ಮೊದಲು ಈ ಬಗ್ಗೆ ಕಸ್ತೂರಿ ತೋರಿದ ಸಿನಿಕತನ, ಪ್ರತಿಭಟನೆ, ಕೋಪತಾಪಗಳೇನೂ ಕಡಿಮೆಯದಲ್ಲ. ಆದರೆ ಬದುಕಿನಲ್ಲಿ ಒದಗಿದ ಚಿತ್ರ ವಿಚಿತ್ರ ಪವಾಡ ಸದೃಶ ಸಂಗತಿಗಳು ನಾ.ಕ. ಅವರನ್ನು ಪುಟ್ಟಪರ್ತಿಗೆ ಕಟ್ಟಿಹಾಕಿದಂತೆ ತೋರುತ್ತದೆ. ಮುಖ್ಯವಾಗಿ 1948ರಿಂದಲೇ ಪುಟ್ಟಪರ್ತಿಯ ಶ್ರದ್ಧೆ ಬೆಳೆದು, ಬದುಕಿನ ಕೊನೆಯುಸಿರು ಎಳೆಯುವವರೆಗೂ ಸ್ವಾಮಿಯ ನಿಕಟವರ್ತಿ ಎನಿಸಿದ್ದರು. ಆಶ್ರಮದ "ಸನಾತನ ಸಾರಥಿ" ಎಂಬ ಹೆಸರಿನಲ್ಲಿ ಬಾಬಾರ ಉಪನ್ಯಾಸ ಪ್ರವಚನಗಳನ್ನು ಸಂಗ್ರಹಿಸಿದರು-ಇಂಗ್ಲಿಷ್ ಕನ್ನಡಗಳಿಗೂ ಅನುವಾದಿಸಿದರು. ತಮ್ಮ ಬದುಕಿನ ಕಡೆಯ ದಿನಗಳಲ್ಲಿ "Loving God" ಎಂಬ ಶೀರ್ಷಿಕೆಯಲ್ಲಿ ಸತ್ಯಸಾಯಿ ಜೀವನ ಚರಿತ್ರೆಯನ್ನೂ ಅದರ ಹಾಸುಹೊಕ್ಕಾಗಿ ತಮ್ಮ ಆತ್ಮಚರಿತ್ರೆಯನ್ನೂ ಬರೆದರು. ಅವರ ಸಹಭಾಗಿನಿ ಎಂಬತ್ತು ವರ್ಷದ ವೃದ್ಧಾಪ್ಯದವರೆಗೂ ಆಶ್ರಮವಾಸಿಯೇ ಆಗಿದ್ದರು. ವೃದ್ಧ ತಾಯಿ ಅಲ್ಲೇ ಕೊನೆಯುಸಿರೆಳೆದರು.

ಮತ್ತೊಂದು ಮುಖ್ಯ ಅಂಶವೆಂದರೆ : ಅವರ ಈ ಬರಹಗಳಲ್ಲೂ ಪಸರಿಸಿರುವ ಮೃದುವಾದ ಹಾಸ್ಯಲೇಪ. ಅವರ ಆತ್ಮಕಥೆಯ ಉದ್ದಕ್ಕೂ ಈ ಸಂಗತಿಯನ್ನು ಕಾಣಬಹುದು. ಹಿಂದಿನ ಕೃತಿಗಳಲ್ಲಿ ಸುತ್ತಲ ಬದುಕನ್ನು ಹಾಸ್ಯಕ್ಕೆ ವಸ್ತುವಾಗಿಸಿಕೊಂಡಂತೆ, ಕಸ್ತೂರಿ ತಮ್ಮನ್ನೇ ಲೇವಡಿ ಮಾಡಿಕೊಳ್ಳುತ್ತಾರೆ. ನಗು ನಗುತ್ತಲೇ ತಮ್ಮನ್ನು ಚಿತ್ರಿಸಿಕೊಳ್ಳುತ್ತಾರೆ. ಅವರ ಬದುಕಿನ ಸಂದೇಶವನ್ನು ಅಲ್ಲಿಯೇ ಕಾಣಬೇಕು. ಅವರ ಬರಹಗಳಲ್ಲಿ ಬದುಕಿನಲ್ಲಿ ಈ 'ಪರಿಹಾಸ'ವೇ ಸ್ಥಾಯಿ. ತಮ್ಮ ಆತ್ಮಕಥೆಯನ್ನು ಅವರು ಪ್ರಾರಂಭಿಸುವ ಮೋಹಕ ಮಾತುಗಳನ್ನು ಸ್ಮರಿಸಿಯೇ ಈ ಲೇಖನವನ್ನು ಮುಗಿಸಿಬಿಡಬಹುದು.

"ಈ ಬಾರಿ, 1897ರ ಕ್ರಿಸ್‌ಮಸ್ ದಿನ, ನಾನು ಭಗವಂತನ ಉಸಿರನ್ನು ಒಳಗೆ ಸೆಳೆದುಕೊಂಡೆ. ಬಾಬಾ ಹೇಳುತ್ತಾರೆ: "ಮನುಷ್ಯ ಹುಟ್ಟುವುದು ಮತ್ತೊಮ್ಮೆ ಹುಟ್ಟದಿರುವುದು ಹೇಗೆ ಎಂದು ಕಲಿಯುವುದಕ್ಕೆ" ನನ್ನ ಹಿಂದಿನ ಎಲ್ಲ ಜನ್ಮಗಳಲ್ಲೂ ಈ ರಹಸ್ಯ ನನಗೆ ದಕ್ಕದೆ ನಾನು ವಂಚಿತನಾಗಿದ್ದೆ. ಆದುದರಿಂದಲೇ ನಾನು ಮತ್ತೆ ಶಾಲೆಗೆ ಮಣ್ಣು ಹೊತ್ತೆ. ಅಮೀಬಾದಿಂದ- ಆಂಥ್ರೋಪೋಸ್‌ವರೆಗಿನ ನನ್ನ ಉದ್ದನೆಯ ಈ ಯಾತ್ರೆಯಲ್ಲಿ ಮುಕ್ತಿಯ ವರ್ಣಮಾಲೆಯನ್ನು ಏನು ಕಲಿಯಲಿಲ್ಲ- 'ಎ' ಫಾರ್ ಆತ್ಮ ಎಂಬುದನ್ನೂ ತಿಳಿಯಲಿಲ್ಲ. ಅದಕ್ಕೆಂದೇ ನಾನು ಅರೇಬಿಯನ್ ಸಮುದ್ರದ ತೀರದ ಒಂದು ಹಿಂದೂ ಕುಟುಂಬದಲ್ಲಿ ಈ ಭೂಮಿಯ ಮತ್ತೊಂದು ಯಾತ್ರೆ ಪ್ರಾರಂಭಿಸಲೆಂದೇ ಅಸಹಾಯಕ ಶಿಶುವಾಗಿ ಜನಿಸಿದೆ-ಅಂದಿನ ಕ್ರಿಸ್‌ಮಸ್ ರಾತ್ರಿಯಲ್ಲಿ."

ಇಂಥ 'ಆತ್ಮ' ಕಥೆ ಓದಿದ್ದೀರಾ? ಅದು ಕಸ್ತೂರಿಯ ಕಂಪು. ಅವರ ಪ್ರಹಸನಗಳಲ್ಲೂ, ಕಾದಂಬರಿಗಳಲ್ಲೂ, ಅಣಕುವಾಡುಗಳಲ್ಲೂ ಮಾತ್ರವಲ್ಲ ಧಾರ್ಮಿಕ ಸಾಹಿತ್ಯದಲ್ಲೂ ಕಾಣುವ ಪ್ರಸನ್ನ ಮಧುರತೆ. ಕೆಲವೊಮ್ಮೆ ಅದು ಕೆಂಡಸಂಪಿಗೆ- ಮುಖ್ಯವಾಗಿ ಮಲ್ಲಿಗೆ. ಅಲ್ಲಿಯೇ ಕಸ್ತೂರಿಯನ್ನು ಹುಡುಕಬೇಕು. ಅಥವಾ ಹುಡುಕುವ ಆಯಾಸವಾದರೂ ಏಕೆ- ಆಘ್ರಾಣಿಸಿದರೂ ಸಾಕು!

**ಉಪಕೃತಿ**


1) Loving God- Prashanthi Nilayam, II Edition 1985.

2) ಜ್ಞಾನಗಂಗೋತ್ರಿ- ಸಂಪುಟ ಐದು - (ಸಂ.) ನಿರಂಜನ.

3) ಕನ್ನಡ ವಿಶ್ವಕೋಶ- ಸಂಪುಟ ಮೂರು- ಮೈಸೂರು ವಿಶ್ವವಿದ್ಯಾಲಯ.

4) ಕಸ್ತೂರಿಯವರ ಕೃತಿಗಳು : ಪಾತಾಳದಲ್ಲಿ ಪಾಪಚ್ಚಿ, ನೊಂದಜೀವಿ, ಚೆಂಗೂಲಿ ಚೆಲುವ, ಡೊಂಕು ಬಾಲ, ಚಕ್ರದೃಷ್ಟಿ, ಅಲ್ಲೋಲ ಕಲ್ಲೋಲ, ಗಗ್ಗಯ್ಯನ ಗಡಿಬಿಡಿ, ಕಾಡಾನೆ, ವರಪರೀಕ್ಷೆ, ರಾಮಕೃಷ್ಣಯ್ಯನ ದರ್ಬಾರು, ಬ್ಯಾಂಕಿನ ದಿವಾಳಿ, ಉಪಾಯ ವೇದಾಂತ, ಅನರ್ಥಕೋಶ, ಕೆಲವು ಹಳೆಯ ಕೊರವಂಜಿಯ ಸಂಚಿಕೆಗಳು.

5) ನೆನಪಿನ ದೋಣಿಯಲ್ಲಿ-ಕುವೆಂಪು-ಶ್ರೀಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು.

6) ಚಿತ್ರಗಳು ಪತ್ರಗಳು - ಪ್ರೊ. ಎ.ಎನ್. ಮೂರ್ತಿರಾವ್ (ದ್ವಿತೀಯ ಮುದ್ರಣ- ವಿ.ಕ. ಸಮ್ಮೇಳನ ಪ್ರಕಟಣೆ)


❑

1. ವಿವರಗಳಿಗೆ : ಯುಗಧರ್ಮ ಹಾಗೂ ಸಾಹಿತ್ಯದರ್ಶನ, ಪು. 296

# ಸಂಸ

ಪ್ರಕಾಶ ಕಂಬತ್ತಳ್ಳಿ

## ಬದುಕು

ಹೆಸರಿನಷ್ಟೇ ನಿಗೂಢ ವ್ಯಕ್ತಿತ್ವ ಸಂಸರದು. 41ವರ್ಷಗಳ ಕಾಲ ಬಾಳಿದರೂ ಸಂಸರು ಸಮಾಜದ ಜೊತೆಗೆ ಒಂದುಗೂಡಲಿಲ್ಲ. ತಮ್ಮದೇ ನಿಗೂಢ ಒಂಟಿ ಬದುಕನ್ನು ಬಾಳಿದರು.

ಮೈಸೂರು ಸಂಸ್ಥಾನದ ಯಳಂದೂರು ತಾಲ್ಲೂಕಿನ ಅಗರ ಸಂಸರ ಹುಟ್ಟೂರು. ಜನನ 13-1-1898. ಹುಟ್ಟು ಹೆಸರು ಎ.ಎನ್. ಸ್ವಾಮಿ ವೆಂಕಟಾದ್ರಿ ಅಯ್ಯರ್. ತಂದೆ ನರಸಿಂಹ ಪಂಡಿತರು. ತಾಯಿ ಗೌರಮ್ಮ. ಇವರ ಕಿರಿಯ ಮಗನಾದ ಸಂಸರಿಗೆ ಯಾಕೋ ಮೊದಲಿನಿಂದಲೂ ಕುಟುಂಬದ ಪ್ರೀತಿ ದೊರೆಯಲೇ ಇಲ್ಲ. ಅಣ್ಣಂದಿರೊಂದಿಗೆ, ಚಿಕ್ಕಪ್ಪನವರೊಂದಿಗೆ ಹೊಂದಿಕೊಂಡು ಬಾಳುವುದು ಸಂಸರಿಗೆ ಸಾಧ್ಯವಾಗಲೇ ಇಲ್ಲ. 1912ರಲ್ಲಿ ತಂದೆ ನರಸಿಂಹ ಪಂಡಿತರು ನಿಧನರಾದ ಮೇಲಂತೂ ಅವರಿಗೆ ಒಂದು ರೀತಿ ಸಾಂಸಾರಿಕ ಬಂಧನ ಕಡಿದಂತಾಯಿತು. ಸಂಸರು ಒಂದಿಷ್ಟು ಪ್ರೀತಿ, ಅಕ್ಕರೆ ತೋರುತ್ತಿದ್ದುದು ತಂಗಿ ಸೀತಮ್ಮನ ಮೇಲೆ ಮಾತ್ರ. ಆಕೆಗೂ ಅಷ್ಟೇ ಕಿರಿಯಣ್ಣನ ಮೇಲೆ ಮಮತೆ ಹೆಚ್ಚು.

ಅಗರದ ಬಳಿಯ ಕುಣಗಹಳ್ಳಿಯಲ್ಲಿ ಪ್ರಾಥಮಿಕ, ಕೊಳ್ಳೆಗಾಲದ ತಾಲ್ಲೂಕು ಬೋರ್ಡ್ ಮಿಡಲ್ ಸ್ಕೂಲ್‌ನಲ್ಲಿ ಮಾಧ್ಯಮಿಕ ಶಿಕ್ಷಣ ಮುಗಿಸಿದ ಸಂಸರು, ನಂತರ ಮೈಸೂರಿನ ಮರಿಮಲ್ಲಪ್ಪ ಹೈಸ್ಕೂಲ್‌ನಲ್ಲಿ ವಿದ್ಯಾಭ್ಯಾಸ ಮುಂದುವರಿಸಿದರು. 1914ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತರು. ಆದರೆ ತೇರ್ಗಡೆಯಾಗಲಿಲ್ಲ. ಈ ಕೀಳರಿಮೆಯನ್ನು ತೊಡೆದುಕೊಳ್ಳುವುದಕ್ಕೊ ಎಂಬಂತೆ ಹಟತೊಟ್ಟು ಕನ್ನಡದಲ್ಲಿ ಪ್ರಚಂಡ ಪಾಂಡಿತ್ಯ ಗಳಿಸಿಕೊಂಡರು. ಹಾಗೆಯೇ ತಮಿಳು ಮತ್ತು ಇಂಗ್ಲಿಷನ್ನೂ ಚೆನ್ನಾಗಿಯೇ ಕಲಿತರು. 1916ರಲ್ಲೊಮ್ಮೆ ಮತ್ತು 1918ರಲ್ಲೊಮ್ಮೆ ಪುನಃ ವಿದ್ಯಾಭ್ಯಾಸವನ್ನು ಮುಂದುವರಿಸುವ ಅವರ ಪ್ರಯತ್ನಗಳೂ ಯಾಕೋ ನಿಂತು ಹೋದವು. ಆದರೆ ಆ ವೇಳೆಗಾಗಲೇ ವಿದ್ಯಾರ್ಥಿ ಸಂಸ ಮಾಯವಾಗಿ ಕವಿ ಸಂಸ ಮೂಡುತ್ತಿದ್ದ.

ಹೈಸ್ಕೂಲಿನ ಕೊನೆಯ ತರಗತಿಯಲ್ಲಿದ್ದಾಗಲೇ ಸಂಸರು 'ಕೌಶಲ' ಎಂಬ ಬಂಗಾಳಿ ಶೈಲಿಯ ಕಾದಂಬರಿಯೊಂದನ್ನು ಬರೆದು ಮುಗಿಸಿದ್ದರಂತೆ. ಈ ಕಾದಂಬರಿ 1915ರಲ್ಲಿ ಅಂದರೆ ಅವರ 17ನೇ ವಯಸ್ಸಿನಲ್ಲಿ ಪ್ರಕಟವಾಯಿತು. ಆನಂತರ ಅವರು 'ಶ್ರೀಮಂತೋದ್ಯಾನ ವರ್ಣನಂ' ಎಂಬ ಚಂಪೂ ಕಾವ್ಯವನ್ನು ರಚಿಸಿದರು. ಆ ವೇಳೆಗಾಗಲೇ ಚಿಕ್ಕಪ್ಪ, ಅಣ್ಣಂದಿರೊಡನೆ ಉಂಟಾದ ಭಿನ್ನಾಭಿಪ್ರಾಯಗಳಿಂದಾಗಿ ಸಂಸರು ಜೀವನೋಪಾಯಕ್ಕಾಗಿ ಕೆಲಸಕ್ಕೆ ತೊಡಗಬೇಕಾಯಿತು. 1919ರಿಂದ 1935ರ ವರೆಗೆ ಸುಮಾರು ಹದಿನಾರು ವರ್ಷಗಳಲ್ಲಿ ಅವರು ಮೈಸೂರಿನ ಶಾರದಾ ವಿಲಾಸ್ ಶಾಲೆ, ಮಂಗಳೂರಿನ ಪ್ರೆಸ್, ಹೆಬ್ಬಾಲೆಯ ರೂರಲ್ ಎ.ವಿ. ಹೈಸ್ಕೂಲಿನ ಮುಖ್ಯೋಪಾಧ್ಯಾಯ, ರೈಲ್ವೇ ಗುಮಾಸ್ತ, ಭದ್ರಾವತಿ ಕಬ್ಬಿಣ ಕಾರ್ಖಾನೆಯಲ್ಲಿ ಗುಮಾಸ್ತಿಕೆ, ಇತ್ಯಾದಿಯಾಗಿ ಹತ್ತೆಂಟು ಕಡೆ ಕೆಲಸ ನಿರ್ವಹಿಸಿದ್ದಾರೆ. ಆದರೆ ತಮ್ಮ ಸ್ವಭಾವದಿಂದ ಅವರು ಒಂದೆಡೆಯೂ ಕೆಲಸಕ್ಕೆ ನಿರಂತರವಾಗಿ ತೊಡಗಲಿಲ್ಲ. ತಮಗೆ ತಿಂಗಳಿಗೆ ಬೇಕಾಗಿದ್ದ ಸುಮಾರು 20-25 (ಆ ಕಾಲಕ್ಕೆ) ರೂಪಾಯಿಗಳಿಗಾಗಿ, ಯಾರಿಗೆ ಯಾಕೆ ದಮ್ಮಯ್ಯ ಗುಡ್ಡೆ ಹಾಕಬೇಕೆಂಬುದು ಅವರ ಅಭಿಪ್ರಾಯವಾಗಿತ್ತು.

ಸಂಸರು ಒಂದು ರೀತಿಯಲ್ಲಿ ಪ್ರಯೋಗಪಟು. ಆದರೆ ಆ ಪ್ರಯೋಗಗಳು ಎಷ್ಟರ ಮಟ್ಟಿಗೆ ಯಶಸ್ವಿಯಾದವೆಂಬುದು ಬೇರೆ ಮಾತು, ಆದರೂ ಅವರ ಪ್ರಯತ್ನಗಳು ಮೆಚ್ಚಬೇಕಾದ್ದೆ. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಫೇಲ್ ಆದರೂ ಧೃತಿಗೆಡದೆ ತಮ್ಮ ಸಾಹಿತ್ಯ ಚಟುವಟಿಕೆಗಳನ್ನು ಮುಂದುವರಿಸಿದರು. ಈ ತರುಣದಲ್ಲಿಯೇ 'ಅರಗಿಳಿ' ಎಂಬ ಪತ್ರಿಕೆಯನ್ನು ಹೊರಡಿಸುವ ಪ್ರಯತ್ನವೂ ನಡೆಯಿತು. ಆದರೆ ನಿರೀಕ್ಷಿತ ಹಣಕಾಸು ದೊರೆಯದೆ ಈ ಪ್ರಯತ್ನವನ್ನು ಬಿಡಬೇಕಾಯಿತು. ಇದರಿಂದ ಬೇಸತ್ತ ಸಂಸರು ಕಾಶೀಯಾತ್ರೆಗೆ ಹೊರಟು ಹೋದರು. ದೇಶಾಟನೆ ಅವರಿಗೆ ತೀರಾ ಸಹಜವೆಂಬಂತೆ ಒಗ್ಗಿ ಬಿಟ್ಟಿತು. ಕಾಲಿಗೆ ಚಕ್ರ ಕಟ್ಟಿಕೊಂಡವರಂತೆ ಅವರು 1916ರಿಂದ 1936ರ ವರೆಗೆ, ಸುಮಾರು 20 ವರ್ಷಗಳ ಕಾಲ ಒಂದೆಡೆ ನಿಲ್ಲದೆ ಊರೂರು ಅಲೆದರು. 1936ರಿಂದ 1939ರ ವರೆಗೆ ಅಂದರೆ ತಮ್ಮ ಬದುಕನ್ನು ಕೊನೆಗಾಣಿಸಿಕೊಳ್ಳುವವರೆಗೆ ಮಾತ್ರವೇ ಅವರು ಒಂದೆಡೆ ಮೈಸೂರಿನಲ್ಲಿ ನೆಲೆ ನಿಂತದ್ದು.

1919ನೆಯ ಇಸವಿ ಸಂಸರ ಬದುಕಿನಲ್ಲಿ ಮಹತ್ವದ ವರ್ಷ. ಈ ವರ್ಷ ಬೆಂಗಳೂರಿನ ಎಡಿಎ ಸಂಸ್ಥೆ ಏರ್ಪಡಿಸಿದ್ದ ಶ್ರೀ ಕಂಠೀರವ ನರಸರಾಜ ಕನ್ನಡ ನಾಟಕ ರಚನಾ ಸ್ಪರ್ಧೆಯಲ್ಲಿ ಸಂಸರ 'ಸುಗುಣ ಗಂಭೀರ' ನಾಟಕ ಎರಡನೆಯ ಬಹುಮಾನ ಪಡೆಯಿತು. ಪ್ರಥಮ ಬಹುಮಾನ ಪಡೆದದ್ದು ಕೈಲಾಸಂ ಅವರ 'ಟೊಳ್ಳುಗಟ್ಟಿ' ನಾಟಕ. ಸ್ಪರ್ಧೆಯ ತೀರ್ಪುಗಾರರಾಗಿದ್ದವರು, ಶ್ರೀ ಬಿ.ಎಂ. ಶ್ರೀಕಂಠಯ್ಯನವರು, ಬೆನಗಲ್ ರಾಮರಾಯರು ಮತ್ತು ನಂಗಪುರಂ ವೆಂಕಟೇಶ ಅಯ್ಯಂಗಾರ್ ಅವರು. ಇದರಿಂದಾಗಿ ಈ ಸ್ಪರ್ಧೆಗೆ ಮಹತ್ವ ಬಂದಿತ್ತು. ಮತ್ತು ಅದರಲ್ಲಿ ಬಹುಮಾನ ಗಳಿಸಿದ ಕೃತಿಗಳಿಗೂ ಮಹತ್ವ ಬಂದಿತ್ತು.

'ಸುಗುಣ ಗಂಭೀರ' ಸಂಸರು ರಚಿಸಿದ ಮೊದಲ ನಾಟಕ. ಈ ನಾಟಕಕ್ಕೆ ಬಹುಮಾನ ಬಂದಾಗ ಸಂಸರು ಇನ್ನೂ ಇಪ್ಪತ್ತೊಂದು ವರ್ಷದ ಯುವಕ. ನಂತರ ಬದುಕಿನ ಇಪ್ಪತ್ತು ವರ್ಷಗಳನ್ನು ಅವರು ಬಹುಮಟ್ಟಿಗೆ ನಾಟಕ ರಚನೆಗೇ ಮೀಸಲಾಗಿರಿಸಿದರು.

## ಸಂಸಾವತಾರ

ದೇಶಾಟನೆಗೈಯುತ್ತಾ, ತಾತ್ಕಾಲಿಕ ಉದ್ಯೋಗಗಳಲ್ಲಿ ತೊಡುಗುತ್ತಾ 1923ರಲ್ಲಿ ಮೈಸೂರಿಗೆ ಹಿಂತಿರುಗಿದ ಸಂಸರು 'ವಿಗಡ ವಿಕ್ರಮರಾಯ' ನಾಟಕವನ್ನು ಹೇಳಿ ಬರೆಯಿಸಿದರು. ಆದರೆ 2 ವರ್ಷಗಳ ಕಾಲ ಆ ಕೃತಿಯನ್ನು ಯಾರಿಗೂ ನೀಡದೆ ತಮ್ಮ ಬಳಿಯೇ ಭದ್ರವಾಗಿರಿಸಿಕೊಂಡಿದ್ದರು. 1925ರಲ್ಲಿ 'ಪ್ರಬುದ್ಧ ಕರ್ಣಾಟಕ' ಪತ್ರಿಕೆಯಲ್ಲಿ ಪ್ರಕಟಣೆಗೆ ನೀಡಿದರು.

ಸಂಸರು ಮಾನಸಿಕವಾಗಿ, ಈ ಅವಧಿಯಲ್ಲಿ ಬದಲಾಗುತ್ತಿದ್ದರೆಂಬುದಕ್ಕೆ ಈ ಕೆಳಗಿನ ಪ್ರಸಂಗ ಉದಾಹರಣೆಯಾಗಿದೆ. 1925ರ ವರೆಗೆ ಅವರು

ಸಾಮಾನ್ಯವಾಗಿ ತಮ್ಮ ಕೃತಿಗಳಲ್ಲಿ ತಮ್ಮ ಹುಟ್ಟು ಹೆಸರನ್ನೇ ಅಷ್ಟಿಷ್ಟು ಬದಲಿಸಿ (ಉದಾ: ಎ.ಎಸ್. ಸ್ವಾಮಿ, ವೆಂಕಟಾದ್ರಿ, ಪಂಡಿತ್, ಎ.ವಿ. ಪಂಡಿತ್, ಸ್ವಾಮಿ ವೆಂಕಟಾದ್ರಿ ಇತ್ಯಾದಿ ಹದಿಮೂರು ಹೆಸರುಗಳು- ವಿವರಗಳಿಗೆ ನೋಡಿ 'ಸಂಸ ಸ್ಮರಣೆ'- ಪುಟ. 28) ಬಳಸುತ್ತಿದ್ದವರು ಈ ಬಾರಿ 'ವಿಗಡ ವಿಕ್ರಮರಾಯ' ನಾಟಕವನ್ನು 'ಕಂಸ' ಎಂಬ ರಾಕ್ಷಸನ ಕಾವ್ಯನಾಮದೊಂದಿಗೆ ಪ್ರಕಟನೆಗೆ ನೀಡಿದರು. ಆದರೆ ಅಲ್ಲೂ ಮತ್ತೊಬ್ಬ ರಾಕ್ಷಸನಿಂದಾಗಿ (ಮುದ್ರಾ ರಾಕ್ಷಸ) ಅದು 'ಸಂಸ' ಎಂದಾಯಿತು ಮತ್ತು ಮುಂದೆ 'ಸಂಸ' ಎಂಬ ಹದಿನಾಲ್ಕನೇ ಕಾವ್ಯನಾಮವೇ ಶಾಶ್ವತವಾಗಿ ಉಳಿಯಿತು. 'ವಿಗಡ ವಿಕ್ರಮರಾಯ' ನಾಟಕ 'ಪ್ರಬುದ್ಧ ಕರ್ಣಾಟಕ'ದಲ್ಲಿ ಮೂರು ಕಂತುಗಳಲ್ಲಿ ಪ್ರಕಟವಾಗಿ ಅದರ ವಿಚಿತ್ರ ಕಾವ್ಯನಾಮದಿಂದ ಮತ್ತು ನಾಟಕದ ಸತ್ವದಿಂದಾಗಿ ಸಾಹಿತ್ಯಾಸಕ್ತರ ಗಮನ ಸೆಳೆಯಿತು.

**ಸಂಸರ ನಾಟಕಗಳು**

ಸಂಸರು 1919ರಿಂದ 1939ರ ವರೆಗಿನ 20 ವರ್ಷಗಳ ಅವಧಿಯಲ್ಲಿ ಮೈಸೂರು ಅರಸರ ಚರಿತ್ರೆಯನ್ನಾಧರಿಸಿ ಒಟ್ಟು 23 ನಾಟಕಗಳನ್ನು ರಚಿಸಿದರಂತೆ. ಅದರಲ್ಲಿ ಈಗ ಲಭ್ಯವಿರುವುದು ಕೇವಲ ಆರು ನಾಟಕಗಳು ಮಾತ್ರ. 1) ಸುಗುಣ ಗಂಭೀರ, 2) ವಿಗಡ ವಿಕ್ರಮರಾಯ, 3) ವಿಜಯನಾರಸಿಂಹ, 4) ಬಿರುದಂತೆಂಬರ ಗಂಡ, 5) ಬೆಟ್ಟದ ಅರಸು ಮತ್ತು 6) ಮಂತ್ರ ಶಕ್ತಿ. ಉಳಿದವು ಏನಾದವು ಎಂಬುದು ಊಹೆ ಅಷ್ಟೆ. ಹಾಳಾದವು ಎಂಬುದಂತೂ ನಿಜ. ಒಮ್ಮೆ ಧಾರವಾಡದಲ್ಲಿ ಯಾರೊಂದಿಗೋ ಜಗಳವಾಡಿಕೊಂಡು ಯಾರ ಮೇಲಿನ ಆಕ್ರೋಶಕ್ಕೋ ಕೆಲವು ನಾಟಕಗಳನ್ನು ಸುಟ್ಟುಬಿಟ್ಟರಂತೆ. ಇನ್ನೊಮ್ಮೆ ಮತಾಂತರ ಹೊಂದಬೇಕೆಂದು ನಿರ್ಧರಿಸಿ ಪಾದ್ರಿಯೊಬ್ಬನಿಗೆ ನ್ಯಾಸವಾಗಿ ನೀಡಿದ ಹಸ್ತಪ್ರತಿಗಳ ಪೆಟ್ಟಿಗೆ ಅಲ್ಲೇ ಉಳಿದು ಹೋಯಿತಂತೆ, ಅಂತೆ-ಕಂತೆ. ಒಟ್ಟಿನಲ್ಲಿ ಈಗ ಉಳಿದ 17 ನಾಟಕಗಳು ಲಭ್ಯವಿಲ್ಲ.

**ವಿದೇಶಿ ಪ್ರವಾಸ**

ಸಂಸರ ಸಮಕಾಲೀನ ನಾಟಕಕಾರರಾದ ಟಿ.ಪಿ. ಕೈಲಾಸಂ ಮತ್ತು ಶ್ರೀರಂಗರು ಹೆಚ್ಚಿನ ಶಿಕ್ಷಣಕ್ಕಾಗಿ ವಿದೇಶ ಪ್ರವಾಸ ಮಾಡಿದರೆ, ಸಂಸರು ಹೆಚ್ಚಿನ ಗಳಿಕೆಗಾಗಿ ವಿದೇಶ ಪ್ರವಾಸಗಳನ್ನು ಕೈಗೊಂಡಂತೆ ಕಾಣುತ್ತದೆ. ಸಂಸರ ಇತರ ನಿಗೂಢಗಳಂತೆಯೇ ಅವರ ಪ್ರವಾಸ ಚಟುವಟಿಕೆಗಳೂ ಸಹ ನಿಗೂಢವಾಗಿವೆ. ಫಿಜಿ ದ್ವೀಪಗಳು, ಟಿಬೆಟ್, ಅಫಘಾನಿಸ್ತಾನ, ಬೆಲೂಚಿಸ್ತಾನ, ಬರ್ಮಾ, ದಕ್ಷಿಣ ಆಫ್ರಿಕಾ ಮುಂತಾದ ದೇಶಗಳನ್ನವರು ಸುತ್ತಿ ಬಂದಿದ್ದಾರೆ. ಅಲ್ಲೇನು ಮಾಡಿದರು ಎಂಬ ವಿವರಗಳು ಖಚಿತವಾಗಿ ತಿಳಿದು ಬಂದಿಲ್ಲ. ಈ ದೇಶದಲ್ಲಿ ಅಲೆಯುತ್ತಿದ್ದಾಗ ಅವರು ಮಾಡಿದ ಯಾವುದೋ ಒಂದು ಕೆಲಸದಿಂದಾಗಿ ಪೊಲೀಸರು ತಮ್ಮನ್ನು ಹಿಂಬಾಲಿಸುತ್ತಿದ್ದಾರೆ ಎನ್ನುವ ಸಂಶಯ ಅವರಿಗೆ ಬಂದು ಕೊನೆಗಾಲದಲ್ಲಿ ಅವರು ಹಾಗೆ ವರ್ತಿಸುತ್ತಿದ್ದಿರಬಹುದೇ? ಇದು ಕೂಡ ಊಹೆ ಅಷ್ಟೆ.

ಮದುವೆಯಾಗದೆ ಕುಟುಂಬ ಬಂಧನದಿಂದ ಮುಕ್ತರಾಗಿದ್ದ ಮತ್ತು ಸಂಬಂಧಿಗಳ ಸಂಬಂಧಗಳನ್ನು ಬಹುಮಟ್ಟಿಗೆ ಕಡಿದುಕೊಂಡಿದ್ದ ಸಂಸರಿಗೆ ಇದರಿಂದ ಅನುಕೂಲವೇ ಆಯಿತೇನೋ. ಮುಕ್ತವಾಗಿ ತಮಗೆ ಬೇಕೆನಿಸಿದ ಕಡೆ ತಿರುಗಿ ಬಂದರು. ಫಿಜಿಯಿಂದ ಬರುವಾಗ ಸಾಕಷ್ಟು ಹಣವನ್ನು ದುಡಿದು ತಂದಿದ್ದರೆಂಬ ಸುದ್ದಿಯೂ ಇತ್ತು.

**ಮತಾಂತರ ಪ್ರಸಂಗಗಳು**

ಶ್ರೀ ಎ.ವಿ. ಸುಬ್ರಮಣ್ಯ ಅವರು ತಮ್ಮ 'ಸಂಸ ಸ್ಮರಣೆ'ಯಲ್ಲಿ ಒಂದೆರಡು ಇಂತಹ ಪ್ರಸಂಗಗಳನ್ನು ಉದಾಹರಿಸಿದ್ದಾರೆ. ಒಮ್ಮೆ ಮಂಗಳೂರಿನಲ್ಲಿ ಪಾದ್ರಿಗಳೊಂದಿಗೆ ಕ್ರಿಸ್ತಮತದ ವಿಚಾರವಾಗಿ ಎಡೆಬಿಡದೆ ಚರ್ಚೆಯಾಗಿ ಕೊನೆಗೆ ಆ ಮತದ ಹಿರಿಮೆಗೆ ಒಪ್ಪಿಕೊಳ್ಳಬೇಕಾದ ಪೇಚಿಗೆ ಸಂಸರು ಸಿಕ್ಕಿಕೊಂಡರಂತೆ. ಇದನ್ನೇ ಆಧಾರವಾಗಿಟ್ಟುಕೊಂಡು ಪಾದ್ರಿಗಳು ಕ್ರಿಸ್ತಮತಕ್ಕೆ ಸೇರುವಂತೆ ಒತ್ತಾಯಿಸಿದರಂತೆ. ವಿಧಿಯಿಲ್ಲದೆ ಒಪ್ಪಿದ ಸಂಸರಿಗೆ, ಈ ಸಮಾರಂಭಕ್ಕೆ ಇಂತಿಷ್ಟು ಹಣ ಎಂದು ಹೇಳಿದ ಪಾದ್ರಿಗಳ ಮಾತಿಗೆ 'ಈಗ ನನ್ನಲ್ಲಿ ಹಣವಿಲ್ಲ. ಆದರೆ ಹತ್ತು ನಾಟಕಗಳ ಹಸ್ತಪ್ರತಿಗಳಿವೆ. ಅವುಗಳನ್ನು ನಿಮ್ಮಲ್ಲಿ ಅಡವಿಟ್ಟು ಮುಂದಿನ ತಿಂಗಳು ಹಣ ನೀಡಿ ಬಿಡಿಸಿಕೊಳ್ಳುತ್ತೇನೆ' ಎಂದರಂತೆ. ಮತಾಂತರ ಸಮಾರಂಭದ ದಿನವೂ ನಿಶ್ಚಯವಾಯಿತು. ಆದರೆ ಸಂಶಯವೇ ಹುಟ್ಟುಗುಣವಾಗಿದ್ದ ಸಂಸರಿಗೆ ಯಾವ ಮತ ತಾನೇ ನೆಮ್ಮದಿ ತಂದೀತು. ಮನಸ್ಸಿನ ಹೊಯ್ದಾಟದಿಂದ ನಿದ್ದೆಯೇ ಬಾರದೆ ರಾತ್ರೋ ರಾತ್ರಿ ಪಾದ್ರಿಗಳನ್ನು ಎಬ್ಬಿಸಿ, "ನನ್ನ ಧರ್ಮ ನಿನ್ನದಕ್ಕಿಂತಲೂ ಶ್ರೇಷ್ಠವಾದದ್ದು. ನಿನಗೆಷ್ಟೋ ಧೈರ್ಯ, ನನ್ನನ್ನು ಮತಾಂತರಿಸಲು" ಎಂದು ಕೂಗಾಡಿ ಬಂದರಂತೆ. ಈ ಅರ್ಭಟದಲ್ಲಿ ಹಸ್ತಪ್ರತಿಗಳು ಅಲ್ಲಿಯೇ ಉಳಿದು ಹೋದವಂತೆ. ಮತ್ತೊಮ್ಮೆ ಕ್ರಿಸ್ತಮತಕ್ಕೆ ಸೇರಿದರೆ ಕೆಲಸ ದೊರೆಯಬಹುದೆಂದು ಮತಾಂತರಕ್ಕೆ ಪ್ರಯತ್ನಿಸಿದ್ದರಂತೆ.

ಬೌದ್ಧ ಭಿಕ್ಷುವಾಗಲು ಟಿಬೆಟ್ಟಿಗೆ ಹೋಗಿದ್ದರೆಂದೂ ಒಂದು ಸುದ್ದಿ. "ನೀವು ಹಣ ಕೊಡದಿದ್ದರೆ ನಾನೀಗಲೇ ಮುಸಲ್ಮಾನನಾಗಿ ಮತಾಂತರ ಹೊಂದುತ್ತೇನೆ" ಎಂದು ಹಿರಿಯಣ್ಣನಿಗೆ ಬೆದರಿಕೆ ಒಡ್ಡುತ್ತಿದ್ದರಂತೆ.

ಆದರೆ ಮೂಲತಃ ಸಂಸರಿಗೆ ಯಾವ ಮತದಲ್ಲೂ ನಂಬಿಕೆ ಇರಲಿಲ್ಲ. ಮತಾಂತರ, ಅವರಿಗೆ ಒಮ್ಮೊಮ್ಮೆ ಬೆದರಿಕೆಯ ತಂತ್ರ, ಕೆಲವೊಮ್ಮೆ ಹಣದ ಅಡಚಣೆ ಇತ್ಯಾದಿ ಪರಿಸ್ಥಿತಿಗಳ ಒತ್ತಡದಿಂದಷ್ಟೆ ಬಂದದ್ದೇ ಹೊರತು ಮನಃ ಪೂರ್ವಕವಾದದ್ದಾಗಿರಲಿಲ್ಲ. ತಾವು ಆತ್ಮಹತ್ಯೆ ಮಾಡಿಕೊಳ್ಳುವಾಗಲೂ ಸಹ "I am leaving thirty one rupees, one anna and nine paise (Rs. 31.1.9) in the purse in my pocket; this amount is, after my death for my body to be cremated, which I wish to be cremated in some open place and without any religious ceremony what so ever, as I have no faith in any religion." ಎಂದು ತಮ್ಮ ಮರಣ ಶಾಸನದಲ್ಲಿ ಬರೆದಿದ್ದಾರೆ. (ನೋಡಿ 'ಸಂಸ ಕವಿ' ಪು-26)

**ಇತರರ ಅನುಭವಗಳು**

ಹಾದಿ ಬದಿಯಲ್ಲಿ ಸಂಸರನ್ನು ಕಂಡು ಬಂಧು ಮಿತ್ರರು "ಏನು ಸ್ವಾಮಿ ಕಾಣಲೇ ಇಲ್ಲ. ಮನೆಗೆ ಬಾರಯ್ಯ" ಎಂದು ವಿಚಾರಿಸಿದರೆ, ಅವರನ್ನು "ಎಂಟಾಣೆ ಕೊಡು" ಎಂದು ಕೇಳುವುದು. ಒಂದು ರೂಪಾಯೇನಾದರೂ ಕೊಟ್ಟರೆ, ಇವನ ಠೇಂಕಾರವೆಷ್ಟೆಂದು ರೇಗಿ ಮುಖದ ಮೇಲೆ ಬಿಸಾಡಿ ಹೊರಟು ಹೋಗುವುದು ಮಾಡುತ್ತಿದ್ದರಂತೆ. ಮತ್ತೆ ತಾವೇ ಹೋಗಿ ಅವರನ್ನೇ ಐದೋ ಹತ್ತೋ ದುಡ್ಡು ಕೇಳುವುದು. ಕಡಿಮೆ ಕೊಡುವುದಕ್ಕೆ ಬಂದರೆ, "ಯೋಗ್ಯತೆಯಿದ್ದರೆ ಕೊಡು, ಇಲ್ಲವಾದರೆ ಬಿಡು" ಎಂದು ಮುಖಕ್ಕೆ ರಾಚಿದಂತೆ ಅಂದು ಬಿಡುತ್ತಿದ್ದರಂತೆ.[1]

ಮತ್ತೊಬ್ಬ ಯಾರೋ ಅವರಿಗೆ ಮೋಸ ಮಾಡಿದ. ಅದಕ್ಕೋಸ್ಕರ ಅವನನ್ನು ಬೀದಿಯಲ್ಲಿ ಮೆಟ್ಟಿನಿಂದ ಹೊಡೆದು, ನಂತರ ಪ್ರಾಯಶ್ಚಿತ್ತ ಮಾಡಿಕೊಂಡರು. ನಂತರ ಅವರ ಮೇಲೆ ಮಾತ್ರ ಛಲ. ಅವನ ಹೆಂಡತಿ ಮಕ್ಕಳ ಮೇಲೇಕೆ ಎಂದು ಅವರಿಗೆ ಬೇಕಾದ್ದನ್ನೆಲ್ಲಾ ಕೊಡಿಸಿ ಊರಿಗೆ ಊಟ ಹಾಕಿಸಿದರು. ಆಮೇಲೆ ಚಪ್ಪಲಿಯಲ್ಲಿ ಹೊಡೆಸಿಕೊಂಡವ, ಕಂಡ ಕಂಡವರ ಕೈಯಲ್ಲೆಲ್ಲಾ ಹೇಳಿ ಕಳಿಸಿದನಂತೆ "ಸ್ವಾಮಿ ಪದೇ ಪದೇ ಬಂದು ಪಾದರಕ್ಷಾ ಪ್ರಯೋಗ ಮಾಡುತ್ತಿರಲಿ. ನಾನೂ ಬಡವ, ಭಾರೀ ಸಂಸಾರವಂದಿಗ, ನನಗೆ ಭಾರ ಕಡಿಮೆಯಾಗುತ್ತದೆ. ಊರಿಗೆಲ್ಲಾ ಸಮಾರಾಧನೆಯಾಗುತ್ತದೆ" ಅಂತ.[1]

ಬದುಕಿನಲ್ಲಿ ಜಿಗುಪ್ಸೆಗೊಂಡ ಸಂಸರೊಮ್ಮೆ ತಲೆ ಬೋಳಿಸಿ ಕೌಪೀನ ಹಾಕಿಕೊಂಡು ಮದರಾಸಿನ ಸಮುದ್ರ ತೀರದ ಮರಳ ಮೇಲೆ ಕುಳಿತುಕೊಂಡರಂತೆ. ಬೇಸಿಗೆಯ ಬಿಸಿಲಿನ ಝಳಕ್ಕೆ ತಲೆ ಸಿಡಿದು ಹೋಗಲಿ ಎಂದು. ಹಾಗೇ ಜೋಮು ಹತ್ತಿದಂತಾಗಿ ಸತ್ತುಹೋದೆನೆಂದುಕೊಂಡರಂತೆ. ಆದರೆ ಸಂಜೆಯಾದಂತೆ ಮೈಗೂ, ಮನಸ್ಸಿಗೂ ತಂಪಾಗಿ ಕಣ್ತೆರೆದು ನೋಡಿದರೆ ಪ್ರಾಣ ಹೋಗುವುದಿರಲಿ, ಸುತ್ತಮುತ್ತ ಹತ್ತಿಪ್ಪತ್ತು ರೂಪಾಯಿ ಚಿಲ್ಲರೆ ಬಿದ್ದಿತ್ತಂತೆ.

ಕಥೆಗಾರ ಆನಂದರಿಗೊಮ್ಮೆ ಸಂಸರು ನಿಟ್ಟೂರು ಶ್ರೀನಿವಾಸರಾಯರ ಮಧ್ಯಸ್ತಿಕೆಯಿಂದ 'ಮಂತ್ರಶಕ್ತಿ' ನಾಟಕವನ್ನು ಓದಲು (ಅವರಿಂದ ರಸೀದಿ ಮತ್ತು ಅವರ ವಿಳಾಸ ಪಡೆದು) ಕೊಟ್ಟಿದ್ದರಂತೆ. ರಾತ್ರೋರಾತ್ರಿ ನಾಟಕ ಓದಿ ಮುಗಿಸಿ, ಬೆಳಗಾಗಿ ಬಾಗಿಲು ತೆಗೆದರೆ ಬಾಗಿಲಲ್ಲಿ ಸಂಸರು ಹಾಜರು. "ತಗೋ ನಿನ್ನ ರಸೀದಿ. ಕೊಡು ನನ್ನ ನಾಟಕ" ಎಂದು ಕೇಳಿ ಹಸ್ತಪ್ರತಿಯನ್ನು ಮರಳಿ ಕೊಂಡೊಯ್ದರಂತೆ.

ಸಂಸರಾಗಲೇ ತಮ್ಮ ಬದುಕಿನ ಕೊನೆಯ ದಿನಗಳಲ್ಲಿ ಯಾರನ್ನೂ ನಂಬದ ಸ್ಥಿತಿಗೆ ತಲುಪಿದ್ದರು. ಬಂಧುಗಳು, ನೆಂಟರನ್ನು ಎಂದೋ ದೂರ ಮಾಡಿದ್ದರು. ಸ್ನೇಹಿತರನ್ನೂ ಸಹ ನಂಬುತ್ತಿದ್ದುದು ವಿರಳವೇ. ಎಲ್ಲದಕ್ಕೂ ರಸೀದಿ ಕೊಡುವುದು-ಪಡೆಯುವುದು, ಸಣ್ಣ ಪುಟ್ಟದ್ದಕ್ಕೆಲ್ಲಾ ನೋಟೀಸು ನೀಡುವುದು, ರಿಜಿಸ್ಟರ್ ಪತ್ರ ಬರೆಯುವುದು ಮಾಡುತ್ತಿದ್ದರು.

**ಪೋಲೀಸರ ಭಯ**

ಸಂಸರಿಗೆ ಅಂಟಿಕೊಂಡ ಪೋಲೀಸರ ಭಯಕ್ಕೆ ಸೂಕ್ತ ಕಾರಣಗಳು ಲಭ್ಯವಿಲ್ಲ. ಎಲ್ಲಾ ಊಹಾಪೋಹ ಮಾತ್ರ. ಮೊದಮೊದಲಿಗೆ ಇತರರನ್ನು ಬೆದರಿಸಲು ಪೋಲೀಸ್ ಎಂಬ ಅಸ್ತ್ರವನ್ನು ಬಳಸಿಕೊಂಡ ಸಂಸರು ನಂತರ ತಾವೇ ಆ ಭ್ರಮೆಯನ್ನು ಭದ್ರವಾಗಿ ನಂಬಿಕೊಂಡರು. 1935ರಲ್ಲಿ ಕೈಟ್ಟಾದಿಂದ ಹಿಂತಿರುಗಿದ ಮೇಲೆ (ಎಲ್ಲಿ ಏನಾಗಿತ್ತೋ ಏನೋ-ಯಾರಿಗೂ ತಿಳಿಯದು) "ನಾನೊಬ್ಬ ಕ್ರಾಂತಿಕಾರಿ. ಬ್ರಿಟಿಷರು ನನ್ನನ್ನು ಅಟ್ಟಿಸಿಕೊಂಡು ಬರುತ್ತಿದ್ದಾರೆ. ಪೋಲೀಸರು ನನ್ನನ್ನು ಮುಗಿಸಿಬಿಡಲು ಯತ್ನಿಸುತ್ತಿದ್ದಾರೆ" ಎಂದು ಮನಸ್ಸಿಗೆ ಚಿಂತಾಭಾರವನ್ನು ಹತ್ತಿಸಿಕೊಂಡು ಬಿಟ್ಟಿದ್ದರು. ಅವರಿಗೇಕೆ ಇಂತಹ Persecution complex ಉಂಟಾಯಿತೋ ಯಾರೂ ತಿಳಿಯರು. ತಮ್ಮ ಬದುಕಿನ ಕೊನೆಯ 3 ವರ್ಷಗಳಂತೂ ಮೈಸೂರಿನ ಸದ್ವಿದ್ಯಾ ಶಾಲೆಯ ಸಣ್ಣ ಕೊಠಡಿಯಲ್ಲಿ, ಕಿಟಕಿ-ಬಾಗಿಲುಗಳನ್ನು ಸದಾ ಮುಚ್ಚಿಕೊಂಡು, ತಮಗೆ ತಾವೇ ಬಂಧನಕ್ಕೊಳಪಡಿಸಿಕೊಂಡು ಒಂಟಿ ಬಾಳನ್ನು ಸವೆಸಿದರು. ಬಹುಶಃ ಅವರ ವಿದೇಶ ಪ್ರವಾಸದಲ್ಲೇನಾದರೂ ಯಾವುದೊ ಘಟನೆಯಿಂದ ಜೈಲಿಗೆ ಹೋಗಬೇಕಾಗಿ ಬಂದಿರಬಹುದೇ? ಅಲ್ಲಿಂದ ತಪ್ಪಿಸಿಕೊಂಡು ಬಂದಿದ್ದಿರಬಹುದೇ? ಅಥವಾ ಅವರಿಗೆ ಬಂಗಾಳದ ಕೆಲವೊಂದು ಉಗ್ರಗಾಮಿ ಸಂಘಟನೆಗಳ ಪರಿಚಯವಿತ್ತಂತೆ. ಅಲ್ಲೇನಾದರೂ ಘಟನೆ ಸಂಭವಿಸಿ ಅದರ ಪರಿಣಾಮವಾಗಿ ಪೋಲೀಸರ ಭಯ ಹಿಡಿದಿರಬಹುದೇ? ಗೊತ್ತಿಲ್ಲ. ಕೊನೆಗಾಲದಲ್ಲಂತೂ ಪೋಲೀಸರ ಕಾಟವನ್ನು ವಿಪರೀತವಾಗಿ ಭ್ರಮಿಸಿಕೊಂಡು 183 ಪುಟಗಳ ದೂರನ್ನು ಆಗಿನ ಮೈಸೂರು ದೊರೆಗೆ ಬರೆದುಕೊಂಡಿದ್ದರಂತೆ. ವಿಪರ್ಯಾಸವೆಂದರೆ ಆಗಿನ ಮೈಸೂರು ದೊರೆಯೇ ಒಬ್ಬ ದೊಡ್ಡ ಬ್ರಿಟಿಷ್ ಏಜೆಂಟ್ ಆಗಿದ್ದರು. ಕಂಡ ಕಂಡವರನ್ನೆಲ್ಲಾ ಪೋಲೀಸ್ ಸಿಐಡಿಗಳು, ಬ್ರಿಟಿಷರ ಏಜೆಂಟರು ಎಂದು ಭಾವಿಸಿದರು. ಸ್ನೇಹಿತರುಗಳನ್ನೆಲ್ಲಾ ನೀವು ಪೋಲೀಸ್ ಇನ್‌ಫಾರ್‌ಮರ್‌ಗಳು ಎಂದು ಜರೆದರು. ಕೊನೆಗೂ ಅವರ ಭಯದ ಕಾರಣ ಅವರೊಂದಿಗೇ ಕಾಲಗರ್ಭದಲ್ಲಿ ಅಡಗಿ ಹೋಯಿತು.

**ಆತ್ಮಹತ್ಯೆ ಪ್ರಯತ್ನಗಳು**

ಸಂಸರ 14ನೆಯ ವಯಸ್ಸಿನಲ್ಲಿ ಅವರ ತೀರ್ಥರೂಪರು ನಿಧನರಾದಂದಿನಿಂದಲೂ ಸಂಸರು ಒಂದು ರೀತಿ ತಾವು ಅನಾಥರೆಂದು ಭಾವಿಸಿಕೊಂಡರು. ಸಕಾಲದಲ್ಲಿ ದೊರೆಯದ ಬಂಧುಮಿತ್ರರ ನೆರವು, ಮನೆಯ ಒಳಜಗಳಗಳು, ನಿರುದ್ಯೋಗ, ಹಣಕಾಸಿನ ದುಃಸ್ಥಿತಿ ಅವರನ್ನು ಹತಾಶೆಗೀಡು ಮಾಡಿದವು. ಯಾರೊಂದಿಗೂ ಬೆರೆಯದೆ ಒಂಟಿಯಾಗಿಯೇ ಎಲ್ಲವನ್ನೂ ನುಂಗಿಕೊಳ್ಳುತ್ತಿದ್ದ ಸಂಸರು, ಮಾನಸಿಕ ಒತ್ತಡಗಳನ್ನು ತಾಳಲಾರದೆ ತಮ್ಮ 22ನೆಯ ವಯಸ್ಸಿನಲ್ಲಿಯೇ ಆತ್ಮಹತ್ಯೆಗೆ ಯತ್ನಿಸಿದರು. ನಂತರ ಮತ್ತೊಂದು ಪ್ರಯತ್ನ ಮದರಾಸಿನ ಬೀಚ್‌ನಲ್ಲಿ. 1935ರಲ್ಲಿ ಪೂರ್ಣಯ್ಯನವರ ಛತ್ರದಲ್ಲಿ ದ್ವಾಗೊಮ್ಮೆ. ಅನಂತರ 14-2-1939ರಲ್ಲಿ ಮೈಸೂರಿನ ಸದ್ವಿದ್ಯಾ ಪಾಠಶಾಲೆಯಲ್ಲಿ ತಮ್ಮ ಆತ್ಮಹತ್ಯೆಯ ಪ್ರಯತ್ನಕ್ಕೆ ಯಶಸ್ಸು ದೊರಕಿಸಿಕೊಂಡರು.

ಗಡ್ಡಮೀಸೆಯಿಲ್ಲದ ಸಿಡುಬಿನ ಕಲೆಯ ದಪ್ಪ ಮುಖ, ಚಚ್ಚೌಕವಾಗಿದ್ದ ಕೆಳದವಡೆ, ಬೋಳು ತಲೆ, ಪೊಳ್ಳುಜುಟ್ಟು, ಆರಡಿ ಎತ್ತರದ ಗಂಭೀರ ನಿಲುವು, ಹುಸಿನಗೆ, ಈಟಿಯಂತಹ ನೋಟ, ಎಣ್ಣೆಗೆಂಪು ಮೈ ಬಣ್ಣ ಹೊಂದಿದ್ದ ಸಂಸರು ಆಡಂಬರವಿಲ್ಲದ, ಯಾವುದಕ್ಕೂ ಮುನ್ನುಗ್ಗದ, ಸದ್ದುಗದ್ದಲವಿಲ್ಲದ ಮುಖೇಡಿಯ ಜಾತಿಯ ಅಲ್ಪತೃಪ್ತ ವ್ಯಕ್ತಿ. ಎಲ್ಲರ ಮೇಲೂ ಸಂಶಯ ಪಡುತ್ತಿದ್ದ ಪ್ರಾಣಿ. ಆದರೆ ನಾಟಕ ರಚನೆಯ ವಿಷಯಕ್ಕೆ ಬಂದಾಗ ಅಸಾಧಾರಣ ಪ್ರತಿಭಾವಂತ. ತನ್ನದೇ ಶೈಲಿಯನ್ನು ರೂಢಿಸಿಕೊಂಡು ಬರೆದಿರುವ (ಈಗ ಉಳಿದಿರುವ) ನಾಟಕಗಳು ಹಟಮಾರಿ ಸಂಸರ ಅಸಾಮಾನ್ಯ ಪ್ರತಿಭೆಯ ತುಣುಕುಗಳು.

**ಸಂಸರ ಕೃತಿಗಳು**

ತಮ್ಮ ಹದಿನಾರನೆಯ ವಯಸ್ಸಿನಲ್ಲಿ (1914) ಕೃತಿ ರಚನೆಗಾರಂಭಿಸಿದ ಸಂಸರು ಒಟ್ಟು 24 ವರ್ಷಗಳ ಅವಧಿಯಲ್ಲಿ 23 ಐತಿಹಾಸಿಕ ನಾಟಕಗಳನ್ನು ಲಾಲೀ ಮತ್ತು ಮಮ್ಮಲವೆಂಬ ಐತಿಹಾಸಿಕವಲ್ಲದ ನಾಟಕಗಳನ್ನು, 5 ಪದ್ಯಕಾವ್ಯಗಳನ್ನು ಮತ್ತು 2 ಕಾದಂಬರಿಗಳನ್ನು ಬರೆದರೆಂದು ದಾಖಲೆಗಳು ತಿಳಿಸುತ್ತವೆ. ಆದರೆ ಎಲ್ಲವೂ ಲಭ್ಯವಿಲ್ಲ. ಸಂಸರು ತಮ್ಮ ಬದುಕನ್ನು ನಾಶಪಡಿಸಿಕೊಂಡಂತೆಯೇ ಹಲವು ಕೃತಿಗಳನ್ನೂ ನಾಶಪಡಿಸಿ ಬಿಟ್ಟಿದ್ದಾರೆ. ಒಟ್ಟಾರೆ ಅವರು ರಚಿಸಿದ್ದಾರೆಂದು ಹೇಳಲಾಗುವ ಕೃತಿಗಳು ಹೀಗಿವೆ :

**ಕಾದಂಬರಿಗಳು**

1) ಕೌಶಲ

2) Sherlock Homes in Jail

**ಪದ್ಯಕಾವ್ಯಗಳು**

1) ಶ್ರೀಮಂತೋದ್ಯಾನವರ್ಣನಂ 2) ಸಂಸ ಪದಂ (ಎರಡೂ ಲಭ್ಯ) 3) ಈಶ ಪ್ರಕೋಪನ 4) ನರಕದುರ್ಯೋಧನೀಯಂ 5) ಅಚ್ಚುಂಬ ಶತಕ (ಮೂರೂ ಅಲಭ್ಯ)

**ನಾಟಕಗಳು**

ಲಾಲೀ ಅಂಡ್ ಮಮ್ಮಲ (ಐತಿಹಾಸಿಕವಲ್ಲ) - ಅಲಭ್ಯ 1) ಸುಗುಣ ಗಂಭೀರ, 2) ಮಹಾಪ್ರಭು, 3) ದೃಷ್ಟಿದಾನ, 4) ಶರಣಾಗತ ಪರಿಪಾಲಕ, 5) ರತ್ನ ಸಿಂಹಾಸನಾರೋಹಣ, 6) ಮುತ್ತಿನ ಮೂಗುತಿ, 7) ರಾಜವಿಭವೋತ್ಸವ, 8) ತೆರಕಣಾಂಬಿ, 9) ಅಮಂಗಳಾಪಾಪ, 10) ಬೊಕ್ಕಳಿಕ, 11) ಬೆಟ್ಟದ ಅರಸು, 12) ಜಗಜಟ್ಟಿ, 13) ವಿಗಡ ವಿಕ್ರಮ ರಾಯ, 14) ಚಲಗಾರ ಚೆನ್ನಯ್ಯ, 15) ವಿಜಯನಾರಸಿಂಹ, 16) ಮುಸ್ತಾಫ ವಿಜಯ, 17) ತುಂಗನಿರ್ಯಾತನ, 18) ನಂಜುಂಡ ನರಿ, 19) ಶಪಥಮಂಗಳ, 20) ಹಂಗಳ, 21) ಸಂಚಿಯ ಹೊನ್ನಿ, 22) ಬಿರುದಂತೆಂಬರ ಗಂಡ, 23) ಮಂತ್ರಶಕ್ತಿ.

ಇವುಗಳಲ್ಲಿ ಉಳಿದಿರುವುದು ಕೇವಲ 6 ನಾಟಕಗಳು ಮಾತ್ರ.

| | | ರಚನೆ |
|---|---|---|
| 1) | ಸುಗುಣ ಗಂಭೀರ | 1918-19 |
| 2) | ವಿಗಡ ವಿಕ್ರಮರಾಯ | 1925 |
| 3) | ವಿಜಯನಾರಸಿಂಹ | 1926 |
| 4) | ಬಿರುದಂತೆಂಬರ ಗಂಡ | 1936 |
| 5) | ಬೆಟ್ಟದ ಅರಸು | 1936 |
| 6) | ಮಂತ್ರಶಕ್ತಿ | 1938 |

**ಲಭ್ಯ ನಾಟಕಗಳ ಪರಿಚಯ**

*1) ಸುಗುಣ ಗಂಭೀರ*

ತೊರೆಮಾವಿನಹಳ್ಳಿಯ ರೇಮಟಿ ವೆಂಕಟಾದ್ರಿನಾಯಕನ ಮಗ ಭಾಮ ನಾಯಕನು, ಅದೇ ಊರಿನ ಗೋಪಾಲಶಾಸ್ತ್ರಿಯೆಂಬುವನ ಪತ್ನಿ ತೇಜಸ್ವಿನಿಯನ್ನು ಕಾಮಿಸಿ, ಈ ಕಾರಣಕ್ಕಾಗಿ ಆಕೆಯ ಪತಿಯನ್ನು ಕೊಲೆ ಮಾಡುತ್ತಾನೆ. ಇದರಿಂದಾಗಿ ಭಾಮನ ತಂಗಿ ಅಂಬಿಕೆಯ ಪ್ರೇಮ ಜೀವನ ಹಾಳಾಗುತ್ತದೆ. ಈ ಎಲ್ಲ ಘಟನೆಗಳು ಯುದ್ಧಕ್ಕೆ ಕಾರಣವಾಗುತ್ತವೆ. ಯುದ್ಧದಲ್ಲಿ ತೊರೆ ಮಾವಿನಹಳ್ಳಿಯವರನ್ನು ಮೈಸೂರಿನ ಅರಸರು ಸೋಲಿಸುತ್ತಾರೆ. ನಂತರ ತೊರೆ ಮಾವಿನ ಹಳ್ಳಿಯ ಪ್ರಭುತ್ವವನ್ನು ಅರಸರು ತಾವೇ ವಹಿಸಿಕೊಳ್ಳುವುದಲ್ಲದೆ ಅವರಿಂದ 'ಸುಗುಣ ಗಂಭೀರ' ಎಂಬ ಬಿರುದನ್ನೂ ಸಂಪಾದಿಸಿಕೊಂಡದ್ದು ಇಲ್ಲಿಯ ಕಥೆ.

*2) ವಿಗಡ ವಿಕ್ರಮರಾಯ*

ಸಂಸರ ಪ್ರಸಿದ್ಧ ನಾಟಕಗಳಲ್ಲೊಂದು. ಅರಸರಾದ ಇಮ್ಮಡಿರಾಜ ಒಡೆಯರನ್ನು ಉಪಾಯದಿಂದ ದೂರವಿಟ್ಟು, ಅಧಿಕಾರವನ್ನೆಲ್ಲಾ ಕೈಗೆತ್ತಿಕೊಂಡು ದರ್ಪದಿಂದ ಮೆರೆದ ದಳವಾಯಿಯ ಪತನ-ಈ ನಾಟಕ. ವೀರನೂ, ಕ್ರೂರಿಯೂ ಆದ ವಿಕ್ರಮರಾಯ, ಚೆನ್ನರಂಗರಂತಹ ಸಾಮಾನ್ಯ ಊಳಿಗದವರಿಂದ ಕೊಲೆಯಾಗುತ್ತಾನೆ. ವಿಕ್ರಮರಾಯನ ಅಂತ್ಯದೊಂದಿಗೆ, ಅಂತಹ ದುಷ್ಟ ಅಧಿಕಾರಿಗಳನ್ನು ದಮನ ಮಾಡಿ ಮೈಸೂರಿನಲ್ಲಿ ರಾಜ್ಯಭಾರದ ಸ್ಥಿರತೆಯನ್ನು ಸಾಧಿಸಲು ತೊಡಗಿದ ರಣಧೀರ ಕಂಠೀರವನ ಉದಯದ ಚಿತ್ರವೂ ಈ ನಾಟಕದಲ್ಲಿ ಮೂಡಿಬಂದಿದೆ.

*3) ವಿಜಯನಾರಸಿಂಹ*

ವಿಜಯನಾರಸಿಂಹ ಎಂಬುದು ಶ್ರೀ ರಣಧೀರ ಕಂಠೀರವ ನರಸರಾಜ ಒಡೆಯರ ಪ್ರಸಿದ್ಧವಾದ ಕತ್ತಿಯ ಹೆಸರು. ಕಂಠೀರವ ನರಸರಾಜ ಒಡೆಯರು ಪಟ್ಟಕ್ಕೆ ಬಂದ ಮೇಲೆ ರಾಜ್ಯದ ಒಳ-ಹೊರಗಿನ ಶತ್ರುಗಳನ್ನು ನಿರ್ಮೂಲ ಮಾಡಿ ಗಡಿಗಳನ್ನು ವಿಸ್ತರಿಸಿ, ಗೌಡರುಗಳನ್ನು ಹದಕ್ಕೆ ತಂದುಕೊಂಡು ಸ್ವಂತ ಟಂಕಶಾಲೆಯೊಂದನ್ನು ಸ್ಥಾಪಿಸಿದರು. ಅರಸನ ಅಭ್ಯುದಯವನ್ನು ಕಂಡು ಕರುಬಿದ ತಿರುಚಿನಾಪಳ್ಳಿಯ ತಿರುಮಲನಾಯಕ, ತನಗೆಲ್ಲಿ ಮೈಸೂರವರಿಂದ ಆಪತ್ತುಂಟಾಗುವುದೋ ಎಂದು ಹೆದರಿ ಕಂಠೀರವನ ಸಂಹಾರಕ್ಕಾಗಿ ಕರುವಿಯನ್‌ನ ನೇತೃತ್ವದಲ್ಲಿ 25 ಜನ ಕಳ್ಳರನ್ನು ಕಳುಹಿಸಿಕೊಡುತ್ತಾನೆ. ಆಪ್ತನಾದ ಬಸವಮಲ್ಲನ ದ್ರೋಹದಿಂದ ಅರಸನ ಸಜ್ಜೆಮನೆ ಸೇರಿದ ಕಳ್ಳರು, ಕಂಠೀರವನ ಕೈಗತ್ತಿಯಾದ ವಿಜಯನಾರಸಿಂಹಕ್ಕೆ ಬಲಿಯಾಗುವುದು ಈ ನಾಟಕದ ಕಥೆ.

*4) ಬಿರುದಂತೆಂಬರ ಗಂಡ*

ಇದೊಂದು ಏಕಾಂಕ ನಾಟಕ. ಮೈಸೂರಿನ ಕಡಲೆ ವ್ಯಾಪಾರಿ ನಂಜಶೆಟ್ಟಿಗೆ ಅರಸರೆಂದರೆ ಅಪಾರ ಭಕ್ತಿ. ಇತರ ಪಾಳೆಯಗಾರರ ಎದುರು ಮೈಸೂರರಸರನ್ನು ಹೊಗಳುವುದು, ಅವರು ಕ್ರುದ್ಧರಾಗಿ ಬಂದರೆ ತನ್ನ ಕತ್ತಿಯಿಂದ ನಿವಾರಿಸುವುದು ಇತ್ಯಾದಿಗಳಿಂದ ಅರಸರ ಮೆಚ್ಚುಗೆ ಗಳಿಸಿರುತ್ತಾನೆ. ಹಾಗೆಯೇ ಒಮ್ಮೆ ಉಮ್ಮತ್ತೂರಿನ ಪಾಳಯಗಾತಿಯನ್ನು ಕೆರಳಿಸಿ, ತನ್ನ ದೊರೆಯ ಹೆಚ್ಚಳವನ್ನು ಮೆರೆಯುವ ಭರದಲ್ಲಿ ದೊರೆಯನ್ನು ಪ್ರಾಣಾಪಾಯಕ್ಕೆ ಸಿಲುಕಿಸುತ್ತಾನೆ. ಆದರೂ ದೊರೆ ಪಾಳಯಗಾತಿಯನ್ನೂ, ಆಕೆಯ ಗಂಡನನ್ನೂ ತಮ್ಮ ಅಡಿಯಾಳಾಗಿ ಮಾಡಿಕೊಳ್ಳುತ್ತಾರೆ. ಈ ಘಟನೆಯಿಂದಾಗಿ ನಂಜಶೆಟ್ಟಿಯ ಮೇಲೆ ಅಸಮಾಧಾನವಾದರೂ ಅವನ ರಾಜಭಕ್ತಿಗೆ ಮೆಚ್ಚಿ ಅವನು ಪ್ರೀತಿಯಿಂದ ಕೊಟ್ಟ 'ಬಿರುದಂತೆಂಬರ ಗಂಡ' ಎಂಬ ಬಿರುದನ್ನು ಜೊತೆಗೆ ನಂಜಶೆಟ್ಟಿಯ ಅಡ್ಡ ಹೆಸರಾದ 'ಅಪ್ಪಣ್ಣ' ಎಂಬುದನ್ನು ಬಿರುದಾಗಿಸಿಕೊಂಡು ಅಂದಿನಿಂದ ತಿಮ್ಮರಾಜ ಒಡೆಯರು 'ಅಪ್ಪಣ್ಣ ತಿಮ್ಮರಾಜ ಒಡೆಯ'ರಾಗುತ್ತಾರೆ.

*5) ಬೆಟ್ಟದ ಅರಸು*

ಈ ನಾಟಕದಲ್ಲಿ ದಳವಾಯಿ ಬೆಟ್ಟದ ಅರಸುವಿನ ಪತನ, ವಿಕ್ರಮರಾಯನ ಅಭ್ಯುದಯ ಚಿತ್ರಿತವಾಗಿದೆ. ದೊರೆಯಾದ ಚಾಮರಾಜ ಅರಸರ ಸೌಜನ್ಯವನ್ನೂ, ದಳವಾಯಿ ಬೆಟ್ಟದ ಅರಸುವಿನ ಸಜ್ಜನಿಕೆಯನ್ನೂ ದುರುಪಯೋಗಪಡಿಸಿಕೊಂಡು ಧೂರ್ತರಾಗುತ್ತಿದ್ದ ಹಳೆಯ ಪಯ್ಯದವರನ್ನು ನಿಯಂತ್ರಿಸಲು ಸಮರ್ಥನೊಬ್ಬ ಬೇಕಾಗಿತ್ತು. ವಿಕ್ರಮರಾಯ ಆಸ್ಥಾನವನ್ನಾ ಕ್ರಮಿಸಿದ. ತನ್ನ ಮಿತಿಯಿಲ್ಲದ ಧರ್ಮಬುದ್ಧಿಗೆ ಬೆಟ್ಟದ ಅರಸು ಬಲಿಯಾಗ ಬೇಕಾಯಿತು. ಬೆಟ್ಟದ ಅರಸುವಿನ ದುರಂತ ಈ ನಾಟಕದ ವಸ್ತು.

*6) ಮಂತ್ರ ಶಕ್ತಿ*

ಸಂಸರು ತಮ್ಮ ಮರಣಕ್ಕೆ ಮುನ್ನ ಬರೆದ ಕೊನೆಯ ನಾಟಕ. ರಣಧೀರನ ಹಿರಿಮೆಯನ್ನು ಕೊಂಡಾಡುವುದೇ ಈ ನಾಟಕದ ವಸ್ತು. ರಣಧೀರನ ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರ ಶಕ್ತಿಗಳೆಂಬ ಶಕ್ತಿತ್ರಯಗಳನ್ನು ಈ ನಾಟಕದಲ್ಲಿ ಕೊಂಡಾಡಿದ್ದಾರೆ. ಮಧುರೆಯ ತಿರುಮಲ ನಾಯಕನ ಆಪ್ತನಾದ ಕರುವಿಯನ್, ದೊಡ್ಡಮ್ಮ ಎಂಬ ವೇಶ್ಯೆಯನ್ನು ಅರಸರಲ್ಲಿಗೆ ಕಳುಹಿಸಿ ಅವರನ್ನು ಸೆರೆ ಹಿಡಿಯಲೆಳಸುತ್ತಾನೆ. ಆದರೆ ಆಕೆ ರಣಧೀರನಲ್ಲಿಯೇ ಅನುರಕ್ತಳಾಗುತ್ತಾಳೆ. ಒಟ್ಟಿನಲ್ಲಿ ಸಂಸರ ಅಚ್ಚುಮೆಚ್ಚಿನ ದೊರೆಯಾದ ರಣಧೀರನ ಉದಾತ್ತ ಗುಣಗಳನ್ನೆಲ್ಲಾ ಇಲ್ಲಿ ಸಂಗ್ರಹಿಸಿದ್ದಾರೆನ್ನಬಹುದು.

**ನಾಟಕವನ್ನು ಕುರಿತು**

ಸಂಸರ ಎಲ್ಲಾ ನಾಟಕಗಳೂ ಮೈಸೂರು ಅರಮನೆಯ ಇತಿಹಾಸವನ್ನು ಆಧರಿಸಿದವು. ಮೈಸೂರು ಅರಸರ ಬಗ್ಗೆ ಸಂಸರಿಗೇಕಿಷ್ಟು ಆಕರ್ಷಣೆ? "ಸಂಸರು ಹೈಸ್ಕೂಲು ವಿದ್ಯಾಭ್ಯಾಸದ ನಂತರ ನಂಜನಗೂಡು ಸುಬ್ರಹ್ಮಣ್ಯಯ್ಯನವರಲ್ಲೂ (ಕಾವ್ಯನಾಮ : ಶುಕ) ಕೆಲಕಾಲವಿದ್ದು ವಿಚಾರ ವಿನಿಮಯ ನಡೆಸಿದರಂತೆ. ಈ ಶುಕರಿಗೆ ಮೈಸೂರು ಚರಿತ್ರೆ ತುಂಬ ಇಷ್ಟವಾದ ವಿಷಯ. 'ಮುಮ್ಮಡಿ ಕೃಷ್ಣರಾಜ ಭೂಪಾಲ' ಇತ್ಯಾದಿ ಗ್ರಂಥಗಳನ್ನು ಆ ವೇಳೆಗೆ ಶುಕರು ಪ್ರಕಟಿಸಿದ್ದರು. ಮೈಸೂರು ಚರಿತ್ರೆಯಲ್ಲಿ ಕುತೂಹಲ ಹುಟ್ಟಿ, ಒಡೆಯರ ಸಂಸ್ಕೃತಿ ಮತ್ತು ಜಗತ್ತು ಸಂಸರನ್ನು ಸೆಳೆದು, ಒಂದು ಹಂಬಲವಾಗಿ, ಹವ್ಯಾಸವಾಗಿ, ಕೊನೆಗೆ ಜೀವಿಕೆಯಾಗಿದ್ದಕ್ಕೆ ಈ ಶುಕ ಸಹವಾಸವೂ ಕಾರಣವಾಗಿರಬಹುದು" (ಸಂಸ ಸ್ಮರಣೆ ಪು : 34). ನಂತರ ಮೈಸೂರಿನ ಓರಿಯಂಟಲ್ ಲೈಬ್ರರಿ ಮತ್ತು ಅರಮನೆಯ ಸರಸ್ವತೀ ಭಂಡಾರಗಳಲ್ಲಿ ಕುಳಿತು ಅಲ್ಲಿದ್ದ ಗ್ರಂಥರಾಶಿಯನ್ನು ಜಾಲಾಡಿ ಒಡೆಯರ ಚರಿತ್ರೆ, ಸಂಸ್ಕೃತಿ ಸಾಹಿತ್ಯಗಳನ್ನು ಕೂಲಂಕಷವಾಗಿ ವ್ಯಾಸಂಗ ಮಾಡಿ ಅವುಗಳಲ್ಲಿ ಪಾರಂಗತರಾಗಿ ಈ ಐತಿಹಾಸಿಕ ಸಾಮಗ್ರಿಯನ್ನು ನಾಟಕ ರೂಪಕ್ಕೆ ತರಲು ಅಗತ್ಯವಾದ ತಂತ್ರ-ಭಾಷೆಯನ್ನು ರೂಪಿಸಿಕೊಂಡು ಯಾರ ದಾರಿಯನ್ನು ಹಿಡಿಯದೆ ತಮ್ಮದೇ ಹೊಸ ದಾರಿಯೊಂದನ್ನು ಸಂಸರು ಸೃಷ್ಟಿಸಿಕೊಂಡರು. ಅವರ ಮುಂದೆ ಯಾವ ಮಾದರಿಗಳೂ ಇರಲಿಲ್ಲ. ಯಾವೊಂದು ಪರಂಪರೆಯೂ ಇರಲಿಲ್ಲ.

ಸಂಸರು ತಮ್ಮ ಐತಿಹಾಸಿಕ ನಾಟಕಗಳಲ್ಲೂ ಸಮಕಾಲೀನ ಪ್ರಜ್ಞೆಯನ್ನು ಉಳಿಸಿಕೊಂಡಿದ್ದಾರೆ. ಅಧಿಕಾರಕ್ಕಾಗಿ ನಡೆಯುವ ಪೈಪೋಟಿ, ಕುತಂತ್ರಗಳು, ಒಳಜಗಳಗಳು, ಗಂಡು ಹೆಣ್ಣಿನ ಸಂಬಂಧಗಳು, ಎದುರಾಳಿಯನ್ನು ಮುಗಿಸಲು ಹೆಣ್ಣನ್ನು ಅಸ್ತ್ರವನ್ನಾಗಿ ಬಳಸಿಕೊಳ್ಳುವುದು ಮುಂತಾದವುಗಳನ್ನು ಇಂದಿನ ರಾಜಕೀಯದಲ್ಲೂ ಕಾಣಬಹುದು. ರಣಧೀರನಂತಹ ಉದಾತ್ತರು, ವಿಕ್ರಮರಾಯ, ಕರುವಿಯನ್‌ನಂತಹ ದುಷ್ಟರು ಎಲ್ಲ ಕಾಲಕ್ಕೂ ಸಲ್ಲುತ್ತಾರೆ.

ಸಂಸರ ಇಪ್ಪತ್ತಮೂರು ನಾಟಕಗಳಲ್ಲಿ ಮೂರು ನಾಲ್ಕು ನಾಟಕ ಚಕ್ರಗಳನ್ನು ವಿದ್ವಾಂಸರು ಗುರುತಿಸುತ್ತಾರೆ. ಆದರೀಗ ಉಳಿದಿರುವ ನಾಟಕಗಳಲ್ಲಿ 'ಬೆಟ್ಟದ ಅರಸು', 'ವಿಗಡ ವಿಕ್ರಮರಾಯ', 'ವಿಜಯನಾರಸಿಂಹ', 'ಮಂತ್ರಶಕ್ತಿ' ನಾಟಕಗಳನ್ನು ಒಂದು ಚಕ್ರವಾಗಿ ಪರಿಗಣಿಸಬಹುದು.

ಮೈಸೂರಿನ ಇತಿಹಾಸದಲ್ಲಿ ರಣಧೀರನಿಗೆ ಒಂದು ಮಹತ್ವದ ಸ್ಥಾನವಿದೆ. ಸಡಿಲಾದ ಆಡಳಿತದಿಂದ ದಿಕ್ಕಾಪಾಲಾಗುತ್ತಿದ್ದ ಮೈಸೂರು ರಾಜ್ಯವನ್ನು ಕಾಪಾಡಿ ದುಷ್ಟರನ್ನು ಶಿಕ್ಷಿಸಿ, ರಾಜ್ಯದಲ್ಲಿ ಸ್ಥಿರತೆ ನೆಲಸುವಂತೆ ಮಾಡಿದನೀತ. ಆದ್ದರಿಂದ ಸಂಸರಿಗೆ ಅತಿಯೆನ್ನಿಸುವಷ್ಟು ವ್ಯಾಮೋಹ ರಣಧೀರನ ಮೇಲೆ. ತಮ್ಮ ನಾಟಕಗಳಲ್ಲಿ 8ಕ್ಕೂ ಹೆಚ್ಚು ನಾಟಕಗಳಲ್ಲಿ ರಣಧೀರ ಕಂಡು ಬರುತ್ತಾನೆ. ಚಾಮರಾಜ ಒಡೆಯ, ಇಮ್ಮಡಿ ರಾಜ ಒಡೆಯ ಮುಂತಾದ ಸದಾ ವಿಲಾಸ ಜೀವನದಲ್ಲೇ ಮೈಮರೆತಿರುವ ಅರಸರ ಮಧ್ಯೆ ರಣಧೀರ ತ್ರಿವಿಕ್ರಮನಂತೆ ಬೆಳೆದು ನಿಲ್ಲುತ್ತಾನೆ. ನಲವತ್ತು ವರ್ಷಗಳ ಕಾಲ 'ಉಕ್ಕಿನ ಬಿಗಿಮುಷ್ಟಿಯ ಹಿಡಿತದಿಂದ ರಾಜ್ಯವಾಳಿದ' ಇಂತಹ ರಣಧೀರ ಸಂಸರಿಗೆ ಅಚ್ಚುಮೆಚ್ಚು. ಆದ್ದರಿಂದಾಗಿ ಇತಿಹಾಸದ ರಣಧೀರನಿಗಿಂತಲೂ "ರಣಧೀರ ಎನ್ನುವ ಪರಿಪೂರ್ಣತೆಯ ಕಲ್ಪನೆಯೊಂದಕ್ಕೆ ಮನಸೋತು ನಾಟಕಗಳನ್ನು ರಚಿಸುತ್ತಾರೆ" ಹೀಗಾಗಿ ಸಂಸರ ರಣಧೀರ ಇತಿಹಾಸದ ರಣಧೀರನಿಗಿಂತಲೂ ಎತ್ತರದಲ್ಲಿದ್ದಾನೆ.

ರಣಧೀರನನ್ನು ಸಂಸರು ಒಮ್ಮೊಮ್ಮೆ ದೈವದ ಮಟ್ಟಕ್ಕೇರಿಸಿ ಬಿಡುತ್ತಾರೆ. ಮಂತ್ರಶಕ್ತಿಯಲ್ಲೊಮ್ಮೆ ಕರುವಿಯನ್, ವೇಶ್ಯೆ ದೊಡ್ಡಮ್ಮನನ್ನು ಅಟ್ಟಿಸಿಕೊಂಡು ಬರುತ್ತಿದ್ದಾಗ, ಅಸಹಾಯಕಳಾದ ದೊಡ್ಡಮ್ಮ:

> (ಮಗ್ಗುಲ್ಲಿಳ್ದ ಶಯ್ಯೆಯನ್ನೊರಗಿನಿಂತು ಏದು
> ತ್ತೇದುತ್ತ ಸೇದೆ ನೀರಲ್ಲಿ ಮಿಂದ ಚೆಮ್ಮೊಗವನ್ನು
> ಚೇಲಾಂಚಲದಿಂದ ತೊಡೆದುಕೊಂಡು
> ಕೊರಳೆತ್ತಿ ನೋಡಿ, ನಡುಗಿ, ತರಳತಾಮ್ರಾಕ್ಷಿಯಾಗಿ
> ಮೆಯ್ಯಿಮಿರ್ದೆಳ್ಪು, ಅಕಸ್ಮಾತ್ ಕಣ್ಣೊಳಸಾಗಿ
> ಒಂದೆರಡು ಹೆಜ್ಜೆ ತೂರಾಡಿ, ತಾರ ಕಣ್ಠದಿಂದ)
> ಮೊನೆಗಾರ ಮೊನೆಗಾರ (ಎಂದು ಕೂಗುತ್ತಾ
> ಮೂರ್ಛಿತಳಾಗುವಳು)

ಆಕೆಯ ಕೂಗಿಗೆ ಓಗೊಟ್ಟಂತೆ ಮೊನೆಗಾರ (ರಣಧೀರ) ಬಾಗಿಲನ್ನೊಡೆದು ಬಂದು ಆಕೆಯನ್ನು ರಕ್ಷಿಸುತ್ತಾನೆ. (ಮಂತ್ರ ಶಕ್ತಿ-ಪುಟ 405)

"ಮೈಸೂರರಸರ ಬಗ್ಗೆ ಅಪಾರ ರಾಜಭಕ್ತಿ ಹೊಂದಿದ್ದ ಸಂಸರು ಅರಸು ಮನೆತನದ ಉಜ್ವಲ ಬಿಳಿಭಾಗಗಳನ್ನಷ್ಟೇ ತೋರಿಸಬೇಕೆಂದು ಹೊರಟರೂ ಅವರ ಅಗಾಧ ಪ್ರತಿಭೆ ಅವರ ಆಶಯವನ್ನು ಮೀರಿ ಬೆಳೆದು, ಆ ಕಾಲದ ವಿಷಯಲಂಪಟ ದೊರೆಗಳನ್ನು, ಪೈಕದವರನ್ನು, ಸೂಳೆಯರನ್ನು, ಬಂಗಾರದವರನ್ನು ಅದ್ಭುತವಾಗಿ ಚಿತ್ರಿಸಿದೆ" (ಪ್ರಸನ್ನ, ನಾಟಕ; ರಂಗಕೃತಿ, ಪುಟ-107). ಬಿರುದುಗಳೆಂದರೆ ಮೈಸೂರರಸರಿಗೆ ಬಲು ಪ್ರಿಯ. ಆದರೆ ಅವುಗಳನ್ನು ದಕ್ಕಿಸಿಕೊಳ್ಳುವ ಸಾಮರ್ಥ್ಯ ಬಹಳ ಅರಸರಿಗೆ ಇರಲಿಲ್ಲ. ಮಾತಿಗೆ ಮುಂಚೆ ಉದ್ದುದ್ದನೆಯ ಬಿರುದುಗಳನ್ನು ಹೇಳಿಸಿಕೊಳ್ಳುವ ಚಟ. 'ಬಿರುದಂತೆಂಬರ ಗಂಡ' ಬಿರುದು ಬಾವಲಿಗಳ ಪ್ರದರ್ಶನಕ್ಕಾಗಿಯೇ ಬರೆದ ನಾಟಕ. ವಿಗಡ ವಿಕ್ರಮರಾಯದಲ್ಲೂ ವಿಕ್ರಮರಾಯನನ್ನು ಎದುರಿಸಿ ಹೊರಟ ಅರಸ ತನ್ನ ಬಿರುದು ಬಾವಲಿಗಳಿಂದ ಮೇಲೇರಿಸಿಕೊಳ್ಳಲೆತ್ನಿಸುತ್ತಾ ವಂದಿ ಮಾಗಧರಿಂದ ಉದ್ದುದ್ದನೆಯ ಬಿರುದುಗಳನ್ನು ಹೇಳಿಸಿಕೊಳ್ಳುತ್ತಾನೆ. ಆದರೆ ಯಾವೊಂದು ಬಿರುದುಗಳಿಲ್ಲದ ವಿಕ್ರಮರಾಯ ಮುಂದಿನ ದೃಶ್ಯಗಳಲ್ಲಿ ಅರಸನನ್ನೇ ಇಲ್ಲವಾಗಿಸಿ ಬಿಡುತ್ತಾನೆ.

ಸಂಸರಂತಹ ನಾಟಕಗಳಲ್ಲಿ ರಾಜ ಒಡೆಯ, ರಣಧೀರನಂತಹ ಶೂರರ ಜೊತೆಗೇ ವಿಕ್ರಮರಾಯ, ಕರುವಿಯನ್‌ನಂತಹ ದುಷ್ಟ ಪಾತ್ರಗಳೂ ಬೆಳೆದು

ನಿಲ್ಲುತ್ತವೆ, ಜೊತೆಗೆ ದೊಡ್ಡಮ್ಮ (ಮಂತ್ರಶಕ್ತಿ), ತೇಜಸ್ವಿನಿ, ಅಂಬಿಕೆ (ಸುಗುಣ ಗಂಭೀರ) ಯಂತಹ ಗಟ್ಟಿ ಸ್ತ್ರೀ ಪಾತ್ರಗಳೂ ಎದ್ದು ನಿಲ್ಲುತ್ತವೆ. ಚೆನ್ನರಂಗರಂತಹ ಸಾಮಾನ್ಯರೂ ಇಲ್ಲಿ ಮುಖ್ಯವಾಗಿಬಿಡುತ್ತಾರೆ.

ಸಂಸರ ನಾಟಕಗಳಿಗೆ ಏಕವಳೆಯ ಕಥಾ ವಿನ್ಯಾಸವಿಲ್ಲ. ದೃಶ್ಯಗಳು ಜೋಡಿಸಿ ಇಟ್ಟಂತೆ ಕಾಣುತ್ತವೆ. ಒಂದು ರೀತಿ ತಮಗರಿವಿಲ್ಲದೇ ಸಂಸರು ಬ್ರೆಕ್ಟ್‌ನ ಎಪಿಕ್ ತಂತ್ರ ಕಲ್ಪನೆಯನ್ನು ಅಳವಡಿಸಿಕೊಂಡುಬಿಟ್ಟಿದ್ದಾರೆ.

ಸಂಸರಿಗೆ ಮೈಸೂರು ಸಿಂಹಾಸನದ ಬಗ್ಗೆ ಅಸಂಬದ್ಧವೆನ್ನುವಷ್ಟು ರಾಜಭಕ್ತಿ. ಸಂದರ್ಭವೊದಗಿದಾಗಲೆಲ್ಲಾ ಸಿಂಹಾಸನದ ಪವಿತ್ರತೆಯನ್ನು ಸಾಧಿಸಿ ತೋರಿಸುವ ಬಯಕೆ. 'ಬೆಟ್ಟದ ಅರಸು' ನಾಟಕದಲ್ಲೊಂದು ದೃಶ್ಯ ಬರುತ್ತದೆ. ಬೆರಗುಗಣ್ಣಳಿಂದ ಸಿಂಹಾಸನವನ್ನು ವೀಕ್ಷಿಸುತ್ತಿರುವ ಯುವರಾಜನಿಗೆ, ಕಂಠೀರವ ಒಂದು ಹಿಡಿ ನೆಲ್ಲನ್ನು ತರಿಸಿ ಧಾನ್ಯವನ್ನು ಶ್ರೀಮನ್ಮಹೀಶೂರ ಸಿಂಹಾಸನದ ಮೇಲಕ್ಕೆ ತೂರಿ ಬಿಡುತ್ತಾನೆ. ಕೂಡಲೆ ನೆಲ್ಲು "ಚಳಿಚಿಟಿಲುಚಿಟಿಲೆಂದು ಘಟಘಟನೆ ಛಟ್ ಛಟ್ಟನೆ ಅರಳಾಗಿ ಸಿಡಿಯುವುದು" ಸಿಂಹಾಸನದ ಮೇಲೆ ಅರ್ಹರಲ್ಲದವರು ಕೂತರೆ ಅವರ ಗತಿಯೇನಾಗಬಹುದೆಂಬುದನ್ನು ತಿಳಿಸುವ ಬಯಕೆ ಸಂಸರಿಗೆ.

ಐತಿಹಾಸಿಕ ನಾಟಕ ರಚನೆಗೆ ಹೊಸ ಸಂಪ್ರದಾಯ ಹಾಕಿಕೊಟ್ಟ ಸಂಸರಂತಹ ನಾಟಕಕಾರರನ್ನು ಯಾವುದೇ ಗುಂಪಿನೊಂದಿಗೆ ವರ್ಗೀಕರಿಸಿ ಸೇರಿಸಿಬಿಡಲಾಗುವುದಿಲ್ಲ. ಅವರದ್ದು ತಮ್ಮದೇ ಆದ ಭಿನ್ನಮಾರ್ಗ.

ಸಂಸರ ನಾಟಕೀಯ ವಿಧಾನವೂ ಗಂಭೀರವಾದುದು. ಅಲ್ಲಿ ಹಾಸ್ಯಕ್ಕೆ ಎಡೆಯಿಲ್ಲ. ಪಾತ್ರ ರಚನೆ ಮತ್ತು ಸಂಭಾಷಣಾ ಚಾತುರ್ಯಕ್ಕೆ ಅವರ ನಾಟಕಗಳಲ್ಲಿ ಹೆಚ್ಚಿನ ಮಹತ್ವ. ಅವರ ನಾಟಕಗಳ ವಸ್ತು ವಿಸ್ತಾರ. ಪೂರ್ಣಪ್ರಮಾಣದ ಪಾತ್ರ ರಚನೆ ಸಂಸರಿಗೇ ವಿಶಿಷ್ಟವಾದದ್ದು. ಸಂಸ ಪರಂಪರೆ ಬೆಳೆಯಲಿಲ್ಲ. ಅವರು ಯಾರನ್ನೂ ಅನುಕರಿಸಲಿಲ್ಲ. ತಮ್ಮದೇ ವಿಶಿಷ್ಟ ಶೈಲಿಯನ್ನು ರೂಢಿಸಿಕೊಂಡರು. 'ಕನ್ನಡಕ್ಕೊಬ್ಬನೇ ಕೈಲಾಸಂ' ಎನ್ನುವುದನ್ನು ಒಪ್ಪುವುದಾದರೆ, ಕನ್ನಡಕ್ಕೊಬ್ಬನೇ 'ಸಂಸ' ಎನ್ನುವುದನ್ನೂ ಒಪ್ಪಬೇಕಾಗುತ್ತದೆ.

❑

1. ಎನ್.ಎಸ್. ಸೀತಾರಾಮಶಾಸ್ತ್ರಿ, 'ಸಂಸಕವಿ' (ಪು.172)
2. ಅದೇ ಪು.172.

# ಎಸ್. ವಿ. ರಂಗಣ್ಣ

ಶ್ರೀಕಂಠ ಕೂಡಿಗೆ

1

ಆಧುನಿಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಹಿರಿಯ ಸಾಹಿತಿಗಳ ಸಾಲಿನಲ್ಲಿ ರಂಗಣ್ಣನವರು ಅಗ್ರಗಣ್ಯರು. ತಾರೀಖು 24-12-1898ರಲ್ಲಿ ಜನಿಸಿದ ಅವರು ಹಾಸನ ಜಿಲ್ಲೆಯ ಸಾಲಗಾಮೆಯ ವೆಂಕಟಸುಬ್ಬಯ್ಯ-ವೆಂಕಟಲಕ್ಷ್ಮಮ್ಮನವರ ನಾಲ್ಕನೆಯ ಮಗ. ಅರಣ್ಯಾಧಿಕಾರಿ ಯಾಗಿದ್ದ ತಂದೆಯೊಂದಿಗೆ ಚಿಕ್ಕಮಗಳೂರು, ಮೊಳಕಾಲ್ಮೂರು ಮತ್ತು ಗುಬ್ಬಿಗಳಲ್ಲಿ ಪ್ರಾಥಮಿಕ ಹಾಗೂ ಪ್ರೌಢವಿದ್ಯಾಭ್ಯಾಸವನ್ನು ನಡೆಸಿದರು. ಶ್ರದ್ಧಾವಂತ ವಿದ್ಯಾರ್ಥಿ, ಇಂಗ್ಲಿಷ್‌ನಲ್ಲಿ ಹೆಚ್ಚು ಅಂಕಗಳಿಕೆ. ತತ್ಪಲವಾಗಿ 1915ರ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ದ್ವಿತೀಯ ಸ್ಥಾನ, ಹಿರಿಯರ ಮೆಚ್ಚಿಗೆ.

ಪದವಿ ಶಿಕ್ಷಣಕ್ಕಾಗಿ ಅದೇ ವರ್ಷ ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಪ್ರವೇಶ. ಆ ತಲೆಮಾರಿನ ಎಲ್ಲಾ ವಿದ್ಯಾರ್ಥಿಗಳಂತೆ ರಂಗಣ್ಣನವರೂ ಇಂಗ್ಲಿಷ್ ಮೇಲೆ ಅಪಾರ ವ್ಯಾಮೋಹ ಬೆಳಸಿಕೊಂಡಿದ್ದರು. ಅದನ್ನು ಸತ್ಯವೆಂದು ನಂಬಿದ್ದರು. ಆ ಭಾವನೆ ಹಿಂದೆ ಸರಿದು ಕನ್ನಡ ವಾಂಛಲ್ಯ ಅಂಕುರವಾಗಲು ಡಾ. ಎ.ಆರ್. ಕೃಷ್ಣಶಾಸ್ತ್ರಿಗಳು ಕಾರಣವೆಂದು ಅವರು ಸ್ಮರಿಸಿದ್ದಾರೆ. ಅಂದಿನ ದಿನಗಳಲ್ಲಿ ಬಿ.ಎ. ಪರೀಕ್ಷೆಗೆ ಯಾವ ಕನ್ನಡ ಪಠ್ಯವೂ ನಿಯತವಾಗಿರುತ್ತಿರಲಿಲ್ಲ. ವಿದ್ಯಾರ್ಥಿ ಸ್ವಯಂ ಓದಿನಿಂದ ಕನ್ನಡದಲ್ಲಿ ಆಸಕ್ತಿ ಬೆಳೆಸಿಕೊಳ್ಳಬೇಕಾಗಿತ್ತು. ಕನ್ನಡ ಸಾಹಿತ್ಯದ ಸೊಬಗು, ಶ್ರೀಮಂತಿಕೆಯನ್ನು ಕೃಷ್ಣಶಾಸ್ತ್ರಿಯವರ ಬಾಯಲ್ಲಿ ಕೇಳಿ ಉತ್ತೇಜಿತರಾದರು. ಅವರ ಸಲಹೆಯಂತೆ "ಇ.ಪಿ. ರೈಸ್ ಎಂಬಾತ ಇಂಗ್ಲಿಷ್‌ನಲ್ಲಿ ಬರೆದಿದ್ದ 'ಕನ್ನಡ ಸಾಹಿತ್ಯ' ಎಂಬ ಕೈಪಿಡಿಯನ್ನು ಕೊಂಡು ಪಠಿಸಿದಾಗ ತಾಯ್ನುಡಿಯ ಮೇಲಣ ಮಮತೆ ಗೌರವಕ್ಕೆ ತಿರುಗಿತು" ಎಂದು ಅವರು ಹೇಳಿಕೊಂಡಿದ್ದಾರೆ. ಇಂಗ್ಲಿಷ್ ಸಾಹಿತ್ಯಾಧ್ಯಯನಕ್ಕೆ ಪ್ರೊ. ಟೇಟರು ಗುರು, ಮಾರ್ಗದರ್ಶಿಯಾಗಿದ್ದಂತೆ ಕನ್ನಡ ಸಾಹಿತ್ಯಾಧ್ಯಯನಕ್ಕೆ ಎ.ಆರ್.ಕೃ. ಅವರು ರಂಗಣ್ಣನವರ ಸೃಜನಾತ್ಮಕ ಪ್ರತಿಭೆಯನ್ನು ಮೊದಲಬಾರಿಗೆ ಗುರುತಿಸಿ, ಕನ್ನಡದಲ್ಲಿ ಬರೆಯುವಂತೆ ಪ್ರೇರಣೆ ನೀಡಿದವರು ಅವರೇ. ಇಂಗ್ಲಿಷ್, ಕನ್ನಡ, ಗಣಿತ, ಭೌತವಿಜ್ಞಾನ ವಿಷಯಗಳಲ್ಲಿ ರಂಗಣ್ಣನವರು ಮೊದಲಿಗರಾಗಿ ನಿಗದಿತ ಎಲ್ಲಾ ಪದಕ ಬಹುಮಾನಗಳೊಂದಿಗೆ ಬಿ.ಎ. (1919) ಪದವೀಧರರಾದರು.

ಇಂಗ್ಲಿಷ್ ಎಂ.ಎ. ವ್ಯಾಸಂಗಕ್ಕಾಗಿ ಅವರು ಮೈಸೂರು ಮಹಾರಾಜ ಕಾಲೇಜಿಗೆ ಸೇರಿದರು. ಅದೇ ವರ್ಷ ಅಲ್ಲಿಯೇ ಇಂಗ್ಲಿಷ್ ಟ್ಯೂಟರ್ ಆಗಿ ನೇಮಕಗೊಂಡರು. 1921ರಲ್ಲಿ ಸ್ನಾತಕೋತ್ತರ ಪದವಿಯನ್ನು ಪ್ರಥಮ ರ್‍ಯಾಂಕ್ ಹಾಗೂ ಹಲವಾರು ಸುವರ್ಣ ಪದಕಗಳೊಂದಿಗೆ ಪಡೆದರು. ಅನಂತರ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದು ಕೊಂಡು ತಮ್ಮ ಅನನ್ಯ ಬೋಧನೆ, ಅಧ್ಯಯನಗಳಿಂದ ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಗುರುಗಳೆನಿಸಿಕೊಂಡರು. ಇಂಗ್ಲಿಷ್ ವಿಭಾಗದ ಮುಖ್ಯಸ್ಥ ರಾಗಿದ್ದುಕೊಂಡು ಬಹಳ ವರ್ಷ ಕಾಲ ಅದನ್ನು ಮುನ್ನಡೆಸಿದರು. ಕೆಲವು ಕಾಲ ಮಹಾರಾಜ ಕಾಲೇಜಿನ ಪ್ರಿನ್ಸಿಪಾಲರಾಗಿ ಕಾರ್ಯನಿರ್ವಹಿಸಿದರು. ಸೇವಾ ನಿವೃತ್ತಿಯ ನಂತರವೂ (1954) ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ಪರಿಷ್ಕೃತ ನಿಘಂಟು ಯೋಜನೆಯ ಪ್ರಧಾನ ಸಂಪಾದಕರಾಗಿ, ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿ ಕೆಲಸ ಮಾಡುತ್ತಾ ವಿಶ್ವವಿದ್ಯಾನಿಲಯದ ಸಂಪರ್ಕ ಹೊಂದಿದ್ದರು.

ಎಸ್.ವಿ. ರಂಗಣ್ಣನವರು ತಮ್ಮ ಪ್ರಾಮಾಣಿಕ ದುಡಿಮೆ ಮತ್ತು ರಚನಾತ್ಮಕ ಸಾಹಿತ್ಯ ಸಾಧನೆಗಾಗಿ ಹಲವಾರು ಗೌರವ ಪ್ರಶಸ್ತಿಗಳಿಗೆ ಪಾತ್ರರಾಗಿದ್ದಾರೆ. 49ನೆಯ ಅಖಿಲ ಕರ್ನಾಟಕ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ, 'ರಂಗಬಿನ್ನಪ' ವಚನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ (1965), ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಿ. ಲಿಟ್. ಪದವಿ ಮುಖ್ಯವಾದವು. 'ಬಾಗಿನ' ಅವರ ಸಾಹಿತ್ಯ ಪ್ರೇಮಿಗಳು, ಶಿಷ್ಯರು, ಅಭಿಮಾನಿಗಳಿಂದ ಅರ್ಪಿಸಲ್ಪಟ್ಟ ಅಭಿನಂದನ ಗ್ರಂಥ. ರಂಗಣ್ಣನವರ ಆಸಕ್ತಿಯ ಕ್ಷೇತ್ರಗಳು ಹಲವು. ಸಹಕಾರ, ಕ್ರೀಡೆ, ಸ್ಕೌಟ್ ಚಳವಳಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸ್ಕೌಟ್‌ದಳದ 'ರಜತಗಜ' ಪ್ರಶಸ್ತಿಗೂ ಅವರು ಪಾತ್ರರು. ಆ ಕ್ಷೇತ್ರದ ಅತ್ಯುನ್ನತ ಗೌರವ ಅದು.

## 2

ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೆಲಸ ಮಾಡಿರುವ ರಂಗಣ್ಣನವರು 25ಕ್ಕೂ ಹೆಚ್ಚಿನ ಕೃತಿಗಳನ್ನು ಪ್ರಕಟಿಸಿದ್ದಾರೆ. ವಿಮರ್ಶೆ, ಕಾವ್ಯ, ನಾಟಕ, ವಚನ ಇತ್ಯಾದಿ ಕ್ಷೇತ್ರಗಳಲ್ಲಿ ಅವರು ಕೆಲಸ ಮಾಡಿದ್ದಾರೆ. ಕೆಲವು ಪ್ರೌಢ ಚಿಂತನೆಯ ಗಂಭೀರ ಗ್ರಂಥಗಳಾದರೆ, ಇನ್ನು ಕೆಲವು ಪರಿಚಯಾತ್ಮಕ ಕಿರು ಹೊತ್ತಗೆಗಳು. ಕನ್ನಡದ ಮನೆಯಲ್ಲಿ ಕನ್ನಡವೇ ಯಜಮಾನಿ ಎಂದು ನಂಬಿರುವ ಅವರು ತಮ್ಮ ಶಕ್ತಿಯನ್ನೆಲ್ಲ ಕನ್ನಡಕ್ಕೆ ಧಾರೆ ಎರೆದಿದ್ದಾರೆ.

ಕನ್ನಡ ಸಾಹಿತ್ಯ ವಿಮರ್ಶೆಯ ಬೆಳವಣಿಗೆಗೆ ರಂಗಣ್ಣನವರ ಕಾಣಿಕೆ ಮಹತ್ವದ್ದು. ಅವರು ಕನ್ನಡದಲ್ಲಿ ಬರವಣಿಗೆ ಆರಂಭಿಸುವ ಹೊತ್ತಿಗೆ ಸಾಹಿತ್ಯ ವಿಮರ್ಶೆ ರಿಕ್ತ ಪರಿಸ್ಥಿತಿಯಲ್ಲಿತ್ತು. ಹೇಳಿಕೊಳ್ಳುವಂಥ ಕೆಲಸ ನಡೆದಿರಲಿಲ್ಲ. ಅಂಥ ಕಾಲದಲ್ಲಿ ಪ್ರಾಚೀನ ಕನ್ನಡ ಸಾಹಿತ್ಯಾಧ್ಯಯನವನ್ನು ಕೈಗೊಂಡು ಅದನ್ನು ಆಧುನಿಕ ದೃಷ್ಟಿಕೋನದಿಂದ ನೋಡುವ ಪಯತ್ನ ಮಾಡಿದರು. ಹಾಗಾಗಿ ಕನ್ನಡದಲ್ಲಿ ವಿಮರ್ಶೆಯ ಹೊಸ ಫಸಲು ಬಂತು. ವಿಮರ್ಶಕ ಪರಂಪರೆಯ ಹಳೆಯ ಸದಸ್ಯರಲ್ಲಿ ಅವರು ಮುಂಚೂಣಿಯವರಾದರು. 'ಕನ್ನಡ ಸಾಹಿತ್ಯದ ಗುಣ ದೋಷಗಳು' ಎಂಬ ಲೇಖನ ಇಂಥ ಪ್ರಯತ್ನಕ್ಕೆ ಚೊಚ್ಚಲ ಕೊಡುಗೆ. 'ಪ್ರಬುದ್ಧ ಕರ್ನಾಟಕ'ದ ಮೊದಲ ಸಂಚಿಕೆ (1919)ಯಲ್ಲಿ ಇದು ಬೆಳಕು ಕಂಡಿತು. 'ರಾಘವಾಂಕನ ಶೈಲಿ', 'ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು', 'ಸಾಹಿತ್ಯದ ಅವಶ್ಯಕತೆ' ಮುಂತಾದವು ಅನಂತರ ಬರೆದ ಲೇಖನಗಳು.

'ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು' ಎಂಬ ಲೇಖನವಂತೂ ವಿಮರ್ಶೆಯ ಯಥಾಸ್ಥಿತಿವಾದವನ್ನು ಪ್ರಶ್ನಿಸಿ ವಿಮರ್ಶಾಕ್ಷೇತ್ರದಲ್ಲಿ ಬಿರುಗಾಳಿಯನ್ನೇ ಎಬ್ಬಿಸಿತು. ಕಥಾ ಸಂವಿಧಾನದಲ್ಲಿ ಯಾವ ನೂತನತೆಯಾಗಲಿ, ಪಾತ್ರ ನಿರೂಪಣೆಯಲ್ಲಿ ಹೊಸತನವಾಗಲಿ, ವರ್ಣನೆಯಲ್ಲಿ ಸ್ವೋಪಜ್ಞತೆಯಾಗಲಿ ಇಲ್ಲದ ಕವಿ ಮುದ್ದಣ್ಣನು ಸಾಹಿತ್ಯದ ಯಾವ ಮಾನದಂಡದಿಂದಲೂ ಮೊದಲಸ್ಥಾನಕ್ಕೆ ಅರ್ಹನಾಗಲಾರನು ಎಂದು ಘೋಷಿಸಿದರು. "ಮುದ್ದಣ್ಣನ ಯಶಸ್ಸು ಹಬ್ಬಿ ಹರಡಿ ನಿಲ್ಲುವುದಕ್ಕೆ ಅವನ ಪಾತ್ರ, ಕಥೆ, ವರ್ಣನೆ ಯಾವುದೂ ಊರುಗೋಲಲ್ಲ. ಅವನ ಗದ್ಯದ ಧಾಟಿ ಮತ್ತು ಮುದ್ದಣ ಮನೋರಮಾ ಪ್ರಕರಣ ಇವೆರಡೇ ಆ ಪರಾಕ್ರಮ ಪೌರುಷವನ್ನು ಹೊಂದಿದವು" ಎಂದು ತೀರ್ಮಾನಿಸಿದರು. ವಿಮರ್ಶೆಯೆಂಬ ಉತ್ಪ್ರೇಕ್ಷಿತ ಸ್ತುತಿಗೆ ಒಗ್ಗಿ ಹೋಗಿದ್ದ ಮನಸ್ಸುಗಳನ್ನು ಈ ನಿರ್ಣಯ ತಲ್ಲಣಗೊಳಿಸಿತೇನೊ ನಿಜ. ಆದರೆ ಸ್ಥಗಿತಗೊಂಡಿದ್ದ ಸಾಹಿತ್ಯ ವಿಮರ್ಶೆಗೆ ಹೊಸ ಚಾಲನೆ ಇದರಿಂದ ಹುಟ್ಟಿತು. 'ಅರವಜ್ರ', 'ಕರ್ಣ ಪಾತ್ರದ ತೊಡಕು', 'ಕವಿ ಕುಲಗುರು', 'ಪ್ರಶಂಸೆ ಸಾಕೊ ಪರೀಕ್ಷೆ ಬೇಕೊ' : ಇಂಥ ವಿಮರ್ಶಾ ಪ್ರಯತ್ನಗಳು ಮೇಲಿನ ಬರಹದ ಗುಂಪಿಗೆ ಸೇರುತ್ತವೆ.

1959ರ ಹೊತ್ತಿಗೆ ಕಾಳಿದಾಸನ 'ಶಾಕುನ್ತಲ ನಾಟಕ ವಿಮರ್ಶೆ'ಯನ್ನು, 1960ರಲ್ಲಿ 'ಮಾಲವಿಕಾಗ್ನಿ ಮಿತ್ರ ನಾಟಕ ವಿಮರ್ಶೆ', 'ವಿಕ್ರಮೋರ್ವಶೀಯ ನಾಟಕ ವಿಮರ್ಶೆ'ಯನ್ನು ರಂಗಣ್ಣನವರು ಪ್ರಕಟಿಸಿದ್ದಾರೆ. ಆ ಮೂರು ಲೇಖನಗಳ ಸಂಯುಕ್ತ ಸಂಪುಟವೇ 'ಕಾಳಿದಾಸನ ನಾಟಕ ವಿಮರ್ಶೆ' (1969). ಆಯಾ ನಾಟಕಗಳ ಹೆಸರು, ಆಧಾರ, ಕಥಾವಸ್ತು, ಸಂವಿಧಾನ, ನಾಟಕೀಯತೆ, ಪಾತ್ರ ಚಿತ್ರಣ, ಶೈಲಿ ಇತ್ಯಾದಿಗಳನ್ನು ಸವಿವರವಾಗಿ ಇದರಲ್ಲಿ ಚರ್ಚಿಸಲಾಗಿದೆ.

ಕಾಳಿದಾಸನನ್ನು ಕುರಿತು ಮಾಡಿರುವ ಮೌಲ್ಯ ನಿರ್ಣಯ ರೂಢಿಗತ ತಿಳುವಳಿಕೆಗೆ ವಿರುದ್ಧವಾದುದು. ರಂಗಣ್ಣನವರ ವಿಶಿಷ್ಟ ಚಿಂತನ ದೃಷ್ಟಿ ಹೊಸದನ್ನು ಅನ್ವೇಷಿಸಲು ಯತ್ನಿಸಿದೆ. ಅವನನ್ನು 'ಕವಿಕುಲಗುರು' ಎಂದು ಕರೆಯುವುದರ ಬಗ್ಗೆ ಅವರಿಗೆ ಸಮ್ಮತಿ ಇಲ್ಲ. ಆದರೆ ಪ್ರಪಂಚದ ಕವಿಗಳ ಮಧ್ಯೆ ಅವನಿಗೊಂದು ಸ್ಥಾನವಿರುವುದನ್ನು ಸಮರ್ಥಿಸುತ್ತಾರೆ. "ಅವನು ಬಿಟ್ಟುಹೋಗಿರುವುದೆಲ್ಲವೂ ನಿರ್ದುಷ್ಟ, ಪರಮೋತ್ಕೃಷ್ಟ, ಅನುಪಮ, ಅದ್ವಿತೀಯವೆಂದು ಭಾಸವಾಗುವುದಿಲ್ಲ ನನಗೆ. ಕೇವಲ ಲೋಪದೋಷಗಳೇ ಅಲ್ಲ, ಪುನರುಕ್ತಿ ಕವಿಸಮಯಗಳೇ ಅಲ್ಲ, ಸಾಧಾರಣ ಮಟ್ಟದ ಬರವಣಿಗೆ ಎಷ್ಟೊ ಇದೆ ಅವನಲ್ಲಿ. ಅವನ ಅಕ್ಷರ ಅಕ್ಷರವೂ ಬೆಳ್ಳಿ, ಪಂಕ್ತಿ ಪಂಕ್ತಿಯೂ ಚಿನ್ನ ಎಂದು ನಂಬುವವರು ನಂಬಲಿ, ಹೂವಿನಿಂದೆದ್ದು ದೃಢಾಕೃತಿಯನ್ನು ತಳೆದು ಕೊನೆಗೆ ಹೂವನ್ನು ಸಾವಿಗೀಡುಮಾಡುವ ಹಣ್ಣಿನಂತೆ, ಸಂದೇಹದಿಂದೆದ್ದು ಜಿಜ್ಞಾಸೆ ಗೈದು ವೃದ್ಧಿಯಾಗಿ ಸಂದೇಹವನ್ನು ತೊಡೆದು ಹಾಕಿದ ನಿಶ್ಚಯಫಲವಾಗಬೇಕು ವಿಮರ್ಶೆ" ಎಂಬ ನಿಲುವು ಅವರದ್ದು. ಕಾಳಿದಾಸನು ಷೇಕ್ಸ್‌ಪಿಯರನಿಗೆ ಸರಿಸಮಾನನೆಂದೋ ಅವನಿಗಿಂತ ಅಧಿಕನೆಂದೊ ಹೇಳಿ ಸನ್ಮಾನಿಸುವುದನ್ನು ಅವರು ಸಲ್ಲದ ಹೇಳಿಕೆ ಎಂದಿದ್ದಾರೆ. ಆ ಇಬ್ಬರೂ ಕವಿಗಳಿಗಿರುವ ಅಂತರವನ್ನು ನಿದರ್ಶನ ಪೂರ್ವಕವಾಗಿ ತೋರಿಸಿಕೊಟ್ಟಿದ್ದಾರೆ. ಭಾಸ, ಭವಭೂತಿ, ಬಾಣ, ಭಾರತಿ, ಜಿನಸೇನ, ಮಾಘ, ಶ್ರೀಹರ್ಷ ಮುಂತಾದ ಸಂಸ್ಕೃತ ಕವಿಗಳಿಗೆ ಅವರದ್ದೇ ಆದ ವ್ಯಕ್ತಿ ವರ್ಚಸ್ಸು, ತನ್ನತನಗಳಿರುವಾಗ ಕಾಳಿದಾಸ ಹೇಗೆ

ದೊಡ್ಡಕವಿಯಾಗುತ್ತಾನೆ. ಮಹಾಕಾವ್ಯವೆಂಬ ಕೀರ್ತಿಗೆ ಭಾಜನವಾಗುವ ಅವನ 'ರಘುವಂಶ' ವಾಲ್ಮೀಕಿ ರಾಮಾಯಣಕ್ಕೆ ಹೇಗೆ ಹೊಯ್ ಕಯ್ ಆಗಬಲ್ಲದು? ಇತ್ಯಾದಿ ಪ್ರಶ್ನೆಗಳನ್ನು ಎತ್ತಿ 'ಶಾಕುಂತಲ'ವೊಂದನ್ನು ಬಿಟ್ಟರೆ ಕಾಳಿದಾಸನ ಉಳಿದೆಲ್ಲ ಕೃತಿಗಳೂ ಪರಿಪೂರ್ಣತೆಯಿಂದ ಕೆಳಗೆ, ಮಹೋನ್ನತ್ಯದಿಂದ ಎಷ್ಟೋ ಕೆಳಗೆ-ಎಂಬ ತೀರ್ಮಾನಕ್ಕೆ ಬರುತ್ತಾರೆ. 'ಮಾಲವಿಕಾಗ್ನಿಮಿತ್ರ'ವನ್ನು ಒಬ್ಬ ಪರಿಣತ ಕವಿ ಬರೆದ ಒಳ್ಳೆಯ ನಾಟಕವೆಂದು ಕರೆದು ಹಿಂದಿನ ವಿಮರ್ಶಕರು ಅದನ್ನು ಸರಿಯಾಗಿ ಬೆಲೆಕಟ್ಟಿಲ್ಲವೆಂದು ಭಾವಿಸಿದ್ದಾರೆ.

ಸಾಂಪ್ರದಾಯಿಕ ಸಾಹಿತ್ಯ ತೀರ್ಮಾನಗಳನ್ನು ಹತ್ತಾರು ಸಂಗತಿಗಳ ಹಿನ್ನೆಲೆಯಲ್ಲಿ ವಿಮರ್ಶೆಯ ಒರೆಗೆ ಹಚ್ಚುವ, ಆ ಮೂಲಕ ಸ್ವತಂತ್ರ ತೀರ್ಮಾನಗಳಿಗೆ ಬರುವ ಕ್ರಮ ಮೆಚ್ಚುವಂಥದ್ದು. ಅವರ 'ಹೊನ್ನಶೂಲ' ವಿಮರ್ಶಾ ಸಂಕಲನದ ಪ್ರಬಂಧಗಳು ಈ ಧಾಟಿಯವು. ಕಾವ್ಯಾರ್ಥ ಶೋಧನೆಗೆ ಪ್ರಶಂಸೆಗಿಂತ ಪರೀಕ್ಷೆ; ಸಾಂಪ್ರದಾಯಕ ಸಮರ್ಥನೆಗಿಂತ ವಿಚಾರಶೀಲತೆ ಅಗತ್ಯವೆನ್ನುವಂಥ ಧೋರಣೆ ಇಲ್ಲಿದೆ. ರಂಗಣ್ಣನವರು ಇಂಥ ಸ್ತೋತ್ರ ಪ್ರಶಂಸೆಯ ನಿರಾಕರಣೆಗೆ ಸಕಾರಣವಾದ ವಾದಭೂಮಿಕೆಯನ್ನು ಕೃತಿ ಸಂದರ್ಭದಿಂದಲೇ ನಿರ್ಮಿಸುತ್ತಾರೆ. ನಾಟಕಗಳ ಸಬಲ ದುರ್ಬಲ ಮುಖಗಳನ್ನು ತರ್ಕಬದ್ಧವಾಗಿ ಮುಂದಿಡುತ್ತಾರೆ. ಹೇಳಿಕೆಗಳ ಅಪ್ರಿಯತೆ ಉಂಟುಮಾಡಬಹುದಾದ ಅಪಾಯವನ್ನು ಲೆಕ್ಕಿಸದ ಸತ್ಯನಿಷ್ಠುರತೆ ಅವರದು. ಪರಾನುಸರಣೆಯ ಮಾರ್ಗವನ್ನುಲ್ಲಂಘಿಸಿ ಒಂಟಿ ಸಾಹಸಿಯಂತೆ ತೀರ್ಪುಕೊಡುವ ಮನಸ್ಸು ಖಚಿತತೆಯನ್ನು ನೆಮ್ಮಿದ್ದಾಗಿರುತ್ತದೆ. ವಿಮರ್ಶೆಯಲ್ಲಿನ ಅತಿಭಾವುಕತೆ ಮತ್ತು ಅತಿ ಹೊಗಳಿಕೆ 'ಹೊನ್ನಶೂಲ' ವಾಗುತ್ತದೆಂಬ ವಿವೇಕವನ್ನು ಹೊಂದಿದವರಾಗಿದ್ದಾರೆ.

ಪ್ರಪಂಚದ ಶ್ರೇಷ್ಠ ಸಾಹಿತ್ಯದ ದೀರ್ಘಕಾಲದ ಅಧ್ಯಯನ, ಅಗಾಧ ಪಾಂಡಿತ್ಯ, ನಿಷ್ಪಕ್ಷಪಾತ ವಿಮರ್ಶಕ ದೃಷ್ಟಿ ಅವರ ಬರಹಗಳಿಗೆ ಆತ್ಮವಿಶ್ವಾಸವನ್ನು, ಹೊಳಪನ್ನು ನೀಡಿವೆ. ಬಿಚ್ಚುಮಾತು, ಅಂಗೀಕೃತ ಮೌಲ್ಯಗಳನ್ನು ಸಾಧಾರಣವಾಗಿ ಪಕ್ಕಕ್ಕೆ ತಳ್ಳಿ ಹೊಸ ವಿಚಾರಗಳನ್ನು ಪ್ರತಿಷ್ಠಾಪಿಸುವ ಕ್ರಮ ಅನನ್ಯವಾದುದು. ಕವಿಗಳನ್ನು, ಕವಿಕೃತಿಗಳನ್ನು ಅಪಮೌಲ್ಯಗೊಳಿಸಿ ನಿರ್ದಿಷ್ಟ ಕಾವ್ಯ ಸೂತ್ರಕ್ಕೆ ಅಳವಡಿಸುವ ಹಟಮಾರಿತನ, ಅರೋಚಕತೆ ಎಂದು ಸಂಪ್ರದಾಯಸ್ಥರಿಗೆ ಅನ್ನಿಸಬಹುದು. ಹಾಗಾಗಿ ಸಾರ್ವತ್ರಿಕ ಅಂಗೀಕಾರ ದೊರೆಯದೆಯೇ ಹೋಗಬಹುದು. ಇದನ್ನೆಲ್ಲೂ ಲೆಕ್ಕಕ್ಕೆ ತೆಗೆದುಕೊಳ್ಳದೆ ಹೇಳಬೇಕಾದ್ದನ್ನು ವಸ್ತುನಿಷ್ಠವಾಗಿ, ನಿರ್ಭೀತವಾಗಿ ಹೇಳುವ ಗುಣ ಇಲ್ಲಿದೆ. ಅವರ ಅಭಿಪ್ರಾಯಗಳು ಎಲ್ಲರಿಗೂ ಸಮ್ಮತ 'ವಾಗದಿರಬಹುದು. ಆದರೆ ಅವರು ಮಂಡಿಸಿರುವ ನಿರ್ಣಯಗಳಲ್ಲಿ ಸ್ಫೋಪಜ್ಞತೆ, ಚುರುಕು ವಾದಸರಣಿ, ತರ್ಕಬದ್ಧ ವಿಚಾರಗಳು ಸಾಕಷ್ಟಿರುವುದನ್ನು ಅಲ್ಲಗಳೆಯುವಂತಿಲ್ಲ. ಆಧುನಿಕ ತಿಳುವಳಿಕೆಯ ಬೆಳಕಿನಲ್ಲಿ ಕವಿಕೃತಿಗಳ ಪುನರ್ಮೌಲ್ಯಮಾಪನಕ್ಕೆ ಯತ್ನಿಸುವ ರಂಗಣ್ಣನವರನ್ನು ಹಿರಿಯ ವಿದ್ವಾಂಸರೊಬ್ಬರು 'ವಿಮರ್ಶಕರ ಹೆಗ್ಗಡೆ' ಎಂದು ಕರೆದಿರುವುದು ಔಚಿತ್ಯಪೂರ್ಣವಾಗಿಯೆ ಇದೆ.

ಸಾಹಿತ್ಯ ಕ್ಷೇತ್ರದಲ್ಲಿ "ಚರ್ಚೆಯ ಬಾಣ ಬಿರುಸುಗಳಿಗೆ ಅವಕಾಶವಿರಬೇಕೇ ವಿನಾ ಮತ್ಸರದ ಬಿರುಗಾಳಿಗಾಗಲಿ, ಸಿಟ್ಟಿನ ಬೆಂಕಿಗಾಗಲಿ ಆಸ್ಪದವಿರಬಾರದು. ಅಭಿರುಚಿ ಹರಿತವಾಗಬೇಕಾದರೆ, ಜ್ಞಾನ ತಿಳಿಯಾಗಿ ಖಚಿತವಾಗಬೇಕಾದರೆ, ಸಂಸ್ಕೃತಿ ಬೆಳೆಯಬೇಕಾದರೆ, ಉತ್ತಮ ಚರ್ಚೆ ಅತ್ಯಗತ್ಯ" ಎನ್ನುವುದು ರಂಗಣ್ಣನವರ ಅಭಿಮತ. ಇಂಥ ಮನೋಧರ್ಮಕ್ಕೆ ಸಂಕೇತವಾಗಿದೆ ಅವರು ಬರೆದ ಹಳಗನ್ನಡ, ನಡುಗನ್ನಡ ಕವಿಗಳನ್ನು ಕುರಿತ ಲೇಖನಗಳು. ಕನ್ನಡದ ಶ್ರೇಷ್ಠ ಕವಿಗಳಾದ ಪಂಪ, ರನ್ನ, ಹರಿಹರ, ರಾಘವಾಂಕ, ಜನ್ನ, ರತ್ನಾಕರ, ಲಕ್ಷ್ಮೀಶ ಮುಂತಾದವರ ಕೃತಿ ವಿಮರ್ಶೆ ಈ ಕ್ಷೇತ್ರಕ್ಕೆ ಅತ್ಯುತ್ತಮ ಸೇರ್ಪಡೆ. ಮೂರು ಭಾಗಗಳಲ್ಲಿ ಪ್ರಕಟವಾಗಿರುವ 'ಶೈಲಿ' ರಂಗಣ್ಣನವರ ಅಗಾಧ ಪಾಂಡಿತ್ಯ, ವಿಷಯ ಕುರಿತ ಪೂರ್ಣ ಅರಿವು, ಎಚ್ಚರದ ವಿಮರ್ಶಕ ದೃಷ್ಟಿಯ ದ್ಯೋತಕ. ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಇದೊಂದು ಅಪರೂಪದ ಆಕರ. ಇವುಗಳಲ್ಲಿ ಭಾರತೀಯ ಮತ್ತು ಪಾಶ್ಚಾತ್ಯ ಸಾಹಿತ್ಯ ಚಿಂತನೆಯ ಸಮನ್ವಯವಿದೆ. ಆದರೆ ನೆಲದ ಗುಣವನ್ನು ಎರವಾಗಿಸದ ಪರಂಪರೆಯ ಪ್ರಜ್ಞೆ ಕೆಲಸ ಮಾಡಿದೆ.

ಕನ್ನಡ, ಸಂಸ್ಕೃತ ಯಾವುದೇ ಕೃತಿಗಳಾಗಿರಲಿ ಅವುಗಳ ಬೆಲೆ ಕಟ್ಟುವುದರಲ್ಲಿ ರಂಗಣ್ಣನವರ ನಿಶಿತಮತಿ ಸ್ಪಷ್ಟವಾಗಿ ಕೆಲಸಮಾಡುತ್ತದೆ. ತಾವು ಮಂಡಿಸಬೇಕಾದ ವಿಷಯದ ತಲಸ್ಪರ್ಶ ಜ್ಞಾನ, ಪೂರ್ವಾಪರಗಳನ್ನು ವಸ್ತುನಿಷ್ಠವಾಗಿ ಎದುರು ಮಾಡುವ ಬಗೆ, ವಿಷಯಸಂಗ್ರಹದಲ್ಲಿನ ಅದ್ಭುತ ಸಹನೆ, ಅದನ್ನು ನಿರ್ದಿಷ್ಟ ತರ್ಕಸರಣಿಗೆ ಅಳವಡಿಸುವ ಚತುರತೆ, ಆಯ್ಕೆಯಲ್ಲಿನ ಕಲಾಪ್ರಜ್ಞೆ ಮತ್ತು ಕೃತಿಯ ಬಗೆಗಿನ ಸೂಕ್ಷ್ಮ ಒಳನೋಟ ನಮ್ಮಲ್ಲಿ ಬೆರಗು ಹುಟ್ಟಿಸುತ್ತದೆ. ವಿಚಾರ ಎಷ್ಟೇ ಕ್ಲಿಷ್ಟವಾಗಲಿ ಅದರಲ್ಲಿ ಅಳವಡಿಸುವ ಪರಿಕರದಿಂದಾಗಿ ವಾಚನೀಯವಾಗುತ್ತವೆ. ಉಪಮೆ, ರೂಪಕ ಪ್ರತಿಮೆಗಳಂತಹ ಕಾವ್ಯಾಲಂಕಾರಗಳನ್ನು, ಕಥೆ, ಗಾದೆ, ದೃಷ್ಟಾಂತಗಳನ್ನು ವಿಷಯದ ಗುಣಧರ್ಮಕ್ಕೆ ವಿರೋಧ ಬಾರದಂತೆ ಬಳಸಿಕೊಳ್ಳುತ್ತಾರೆ. ಕೆಲವೊಮ್ಮೆ ಇವೇ ವಿಷಯದ ಏಕಾಗ್ರತೆಗೆ ಮಾರಕವಾಗುವ ಸಂಭವ ಉಂಟು. ರಂಗಣ್ಣನವರ ಸಾಹಿತ್ಯಾಭಿರುಚಿ ಸುಸಂಸ್ಕೃತವಾದದ್ದು. ಹೂತೋಟದ ನಿರ್ವಹಣೆಗೆ ಹೆಚ್ಚು ಖರ್ಚು ತಗಲುತ್ತದೆಂದು ಅದನ್ನು ಆಲೂಗಡ್ಡೆ ತೋಟವನ್ನಾಗಿ ಪರಿವರ್ತಿಸಲು ಹೇಳಿದ ತೋಟದ ಶ್ರೀಮಂತ ಮಾಲಿಕನೊಬ್ಬನ ಕಥೆಯನ್ನು ಅವರು ಉಲ್ಲೇಖಿಸಿದ್ದಾರೆ. ಸಾಹಿತ್ಯಾಸ್ವಾದನೆಗೆ ಅಭಿರುಚಿ, ಸಂವೇದನಾಶೀಲತೆ ಬೇಕೆಂಬುದಕ್ಕೆ ಅವರು ನಿದರ್ಶಿಸುವ ಕಥೆ ಇದು.

ಒಬ್ಬ ಮಹಾವಿದ್ವಾಂಸನ ಗುಣಗಳೆಲ್ಲವೂ ರಂಗಣ್ಣನವರಲ್ಲಿ ಏಕತ್ರಗೊಂಡಿರುವಂತೆ ಅನ್ನಿಸುತ್ತದೆ. ಅವರ ಪಾಶ್ಚಾತ್ಯ-ಪೌರಾತ್ಯ ಸಾಹಿತ್ಯ ದಾಹ ಅಂಥದು. ಬದುಕಿನ ಪ್ರಲೋಭನೆ, ಭೋಗಗಳನ್ನು ಬದಿಗಿಟ್ಟು ಜ್ಞಾನಾರ್ಜನೆಯಲ್ಲಿ ಅವರು ತಳೆದ ಆಸಕ್ತಿ ಇವೆಲ್ಲವನ್ನೂ ಸಾಧ್ಯವಾಗಿಸಿದೆ. ದೀರ್ಘಕಾಲದ ಅಧ್ಯಾಪನ ಹಾಗೂ ಓದಿನಿಂದ ಪಾಶ್ಚಾತ್ಯ ಸಾಹಿತ್ಯ ಭಂಡಾರವನ್ನೆ ಅಳೆದು ಸುರಿದರು. ಸಾಹಿತ್ಯ ಪರಂಪರೆಯ ನೈಜ ಅರಿವು ಹಾಗೂ ಸಮರ್ಪಕ ಸಿದ್ಧತೆಯೊಂದಿಗೆ ಯಾವುದನ್ನು ಕನ್ನಡಕ್ಕೆ ತಂದರೆ ಉಪಯುಕ್ತ ಎಂದು ಯೋಚಿಸಿ ಕಾರ್ಯಮಗ್ನರಾದರು. ಮೈಸೂರು ವಿಶ್ವವಿದ್ಯಾನಿಲಯದ ಮತ್ತು ಯೂನಿಯನ್ ಪತ್ರಿಕೆಗಳಲ್ಲಿ ಪ್ರಕಟವಾದ ಷೇಕ್ಸ್‌ಪಿಯರ್, ಸ್ಪೆನ್ಸರ್, ಕ್ಲಫ್, ವರ್ಡ್ಸ್‌ವರ್ಥ್‌ರನ್ನು ಕುರಿತ ಬರಹಗಳು ಇಂಥ ಯೋಚನೆಯ ಮೊದಲ ಕಾರ್ಯರೂಪ. 'ಲಾಲೆಗ್ರೊ' ಮತ್ತು 'ಇಲ್‌ಪೆನ್ಸೊರೋಸೊ'ಗಳನ್ನು ಕುರಿತ ವಿಮರ್ಶಾ ಲೇಖನಗಳು ಇದೇ ಗುಂಪಿಗೆ ಸೇರುತ್ತವೆ.

ಶ್ರೀ ರಂಗಣ್ಣನವರು ಅನೇಕ ಮಹತ್ವಾಕಾಂಕ್ಷೆಯ ಕೆಲಸಗಳನ್ನು ಮಾಡಲು ಅಪೇಕ್ಷಿಸಿ ಅವುಗಳಲ್ಲಿ ಕೆಲವನ್ನು ಅತ್ಯಂತ ಫಲಪ್ರದವಾಗಿ ಪೂರೈಸಿದ್ದಾರೆ. 'ಪಾಶ್ಚಾತ್ಯ ಗಂಭೀರ ನಾಟಕಗಳು' ಅಂಥ ಯಶಸ್ವಿ ಪ್ರಯತ್ನಗಳಲ್ಲಿ ಒಂದು. ದೀರ್ಘಕಾಲದ ವ್ಯಾಸಂಗ ಮತ್ತು ಪರಿಶ್ರಮದ ಅದ್ಭುತ ಕಾರ್ಯ. ರುದ್ರನಾಟಕ ಕುರಿತಂತೆ ಬಿಡಿಬರಹಗಳು ಪ್ರಕಟವಾದದ್ದನ್ನು ಬಿಟ್ಟರೆ ಇಂಥ ಸಮಗ್ರ ಗ್ರಂಥವೊಂದು ಅವರೆಗೆ ಕನ್ನಡದಲ್ಲಿ ಪ್ರಕಟ ವಾಗಿರಲಿಲ್ಲ. ದೀರ್ಘಕಾಲದ ಈ ಕೊರತೆಯೊಂದನ್ನು ರಂಗಣ್ಣನವರು 1217 ಪುಟಗಳ ಬೃಹದ್ಗ್ರಂಥದ ಮೂಲಕ ತುಂಬಿಕೊಟ್ಟಿದ್ದಾರೆ. "ನಾಟಕ ಸಾಹಿತ್ಯವನ್ನು ಕುರಿತು ಇಷ್ಟು ವ್ಯಾಪಕವಾದ ವಿಮರ್ಶಾಗ್ರಂಥ ಕನ್ನಡದಲ್ಲಿ ಮಾತ್ರವಲ್ಲ, ಬೇರೆ ಭಾರತೀಯ ಭಾಷೆಗಳಲ್ಲೂ ಅಪೂರ್ವ" ಎಂದು ಸರಿಯಾಗಿಯೇ ಕುವೆಂಪು ಗುರುತಿಸಿದ್ದಾರೆ.

ಯುರೋಪ್ ಮತ್ತು ಅಮೇರಿಕಾಗಳಲ್ಲಿ ಪ್ರಾಚೀನ ಕಾಲದಿಂದಲೂ ಇದುವರೆಗೂ ಬೆಳೆದು ಬಂದಿರುವ ರುದ್ರನಾಟಕದ ಹುಟ್ಟು, ಪ್ರಕಾರ, ಬೆಳವಣಿಗೆಯ ಪರಿಚಯವನ್ನು ಈ ಗ್ರಂಥ ಮಾಡಿಕೊಡುತ್ತದೆ. ಈಸ್ಕಿಲಸ್, ಸಾಫೊಕ್ಲಿಸ್ ಮೊದಲಾದ ಗ್ರೀಕ್ ನಾಟಕಕಾರರಿಂದ ಹಿಡಿದು ಈಚೆಗಿನ ಇಟಲಿಯ ಪಿರಾಂಡೆಲೊ, ಅಮೆರಿಕೆಯ ಟೆನಿಸ್ಸಿವಿಲಿಯಮ್ಸ್, ಅರ್ಥರ್ ಮಿಲ್ಲರ್, ಬ್ರೆಕ್ಟ್ ಅವರುಗಳವರೆಗೂ ಪ್ರಸ್ತಾಪವಿದೆ. ಒಟ್ಟು ಐವತ್ತೊಂದು ನಾಟಕಕಾರರ 301 ಗಂಭೀರ ನಾಟಕಗಳ ಚರ್ಚೆ ಬಂದಿದೆ. ಯಥೇಚ್ಛ ವಿದೇಶಿ ಸಾಹಿತ್ಯ ಸಾಮಗ್ರಿಯನ್ನು ಆಮದುಮಾಡಿಕೊಂಡು ಕೃತಿ ಶ್ರೀಮಂತಿಕೆಯನ್ನು ಹೆಚ್ಚಿಸಿಕೊಂಡಿರುವುದಂತೂ ವಿಸ್ಮಯಕಾರಿ. ಸಾಧ್ಯಮೂಲಗಳಿಂದ ತಂದು ಅಡಕುವ ವಿಪುಲ ಉದ್ಧೃತಿ, ಪುಷ್ಟೀಕರಣ ಸಾಮಗ್ರಿ, ಅಗಾಧ ಪಾಂಡಿತ್ಯ ಹಾಗೂ ಶ್ರೀಮಂತ ಸ್ಮೃತಿಶಕ್ತಿಯ ದ್ಯೋತಕ. "ಮಾನವ ಧರ್ಮ, ಮಾನವ ಚರ್ಯೆಯ ವಿಚಾರವಾಗಿ ಕೆಲವು ಗಾಢನಂಬಿಕೆಗಳ ಮೇಲೆ ಕಟ್ಟಿದ ಶಿಷ್ಟಸಂಪ್ರದಾಯ ಪ್ರಾಚೀನ ಗಂಭೀರ ನಾಟಕದ ಹಾಸುಹೊಕ್ಕು; ನಂಬಿಕೆಯ ಬುಡಕ್ಕೆ ಕೊಡಲಿ ಹಾಕಿ ಪ್ರಶ್ನೆ ಎಬ್ಬಿಸುವ ಅಸಾಂಪ್ರದಾಯಿಕತೆ ಆಧುನಿಕ ಗಂಭೀರ ನಾಟಕದ ತಿರುಳು. 'ಮನುಷ್ಯ ಬಾಳನ್ನು' ಕುರಿತ ತೀವ್ರ ಶ್ರದ್ಧೆ ಎರಡರಲ್ಲೂ ಕಣ್ಣು ಕುಕ್ಕುವಂತಿದೆ" ಎಂದು ಪರಿಭಾವಿಸುವ ರಂಗಣ್ಣನವರು ದುರಂತ ನಾಟಕವನ್ನು 'ಗಂಭೀರ ನಾಟಕ' ವೆಂದು ಕರೆದಿದ್ದಾರೆ. ಈ ವಾದವನ್ನು ಸಮರ್ಥಿಸಲು ಅವರು ನಾಟಕಗಳಿಂದಲೂ, ವಿಮರ್ಶಕರಿಂದಲೂ ಉದ್ಧರಣೆಗಳನ್ನು ಕೊಟ್ಟು ಕೃತಿಸತ್ವವನ್ನು ಹೆಚ್ಚಿಸಿದ್ದಾರೆ. ಪಾಶ್ಚಾತ್ಯ ಕವಿಗಳ ವಿವಿಧ ಗಂಭೀರ ನಾಟಕ ಪ್ರಯೋಗಗಳನ್ನು ಅವರ ನಾನಾ ಗಂಭೀರ ನೋಟದ ರೂಪುರೇಷೆಗಳನ್ನು ಪರಿಚಯಿಸುವ ಉದ್ದೇಶ ಇಲ್ಲಿ ಸಫಲವಾಗಿದೆ. ಜೊತೆಗೆ ಲೇಖಕರ ಸ್ವವಿವೇಚನೆಯ ವಿಮರ್ಶಾತ್ಮಕ ವ್ಯಾಖ್ಯಾನಗಳು, ಮೂಲದ ಭಾವಪುಷ್ಟಿಗೆ ಸರಿಹೊಂದುವ ಸಮಾನಾರ್ಥಕ ಕನ್ನಡೋಕ್ತಿಗಳು ಕೃತಿಯ ಉಪಯುಕ್ತತೆಯನ್ನು ಹೆಚ್ಚಿಸಿವೆ. ಪಾಶ್ಚಾತ್ಯ ಗಂಭೀರ ನಾಟಕಗಳನ್ನು ಕುರಿತು ಕನ್ನಡದಲ್ಲಿ ಇದುವರೆಗೆ ಬಂದ ಕೃತಿಗಳಲ್ಲಿ ಇದು ಆಚಾರ್ಯಕೃತಿ.

'ರಂಗಬಿನ್ನಪ' ರಂಗಣ್ಣನವರ ಸೃಜನಾತ್ಮಕ ಪ್ರತಿಭೆಯ ಗಮನಾರ್ಹ ಕೃತಿ. ಇದೊಂದು ಮುಕ್ತಕಗಳ ಸಂಕಲನ. ಚಿಂತನೆ, ಅನುಭವ, ವರ್ಣನೆ, ಕಲ್ಪನೆ, ಭಾವಗೀತ ಗುಣ ಏಕತ್ರ ಮೇಳೈಸಿರುವ ನಾಯಕ ಕೃತಿ. ಇಲ್ಲಿನ ರಚನೆಗಳ ಮೇಲೆ ಕನ್ನಡ ವಚನಗಳ ಪ್ರಭಾವವಿದೆ. ಲೇಖಕರು 'ವಚನದಾಸ' ತಾನೆಂದು ಕೃತಿಯ ಮುನ್ನುಡಿಯಲ್ಲಿ ಹೇಳಿಕೊಂಡಿರುವುದು ಮತ್ತು ಸ್ವತಃ ಅವುಗಳ ಅಂತಃಸ್ವರೂಪ ಈ ಮಾತನ್ನು ದೃಢಪಡಿಸುತ್ತವೆ. ರೂಪ, ಮನೋಧರ್ಮ, ಶೈಲಿ, ಅಭಿವ್ಯಕ್ತಿಗಳ ಮೇಲೆ ಅವುಗಳ ನೆರಳು ದಟ್ಟವಾಗಿ ಬಿದ್ದಿದೆ. ಆದರೆ ಸಾರ್ಥಕ ವಚನಗಳಲ್ಲಿನ ಅರ್ಥಪೂರ್ಣತೆ, ಕಾವ್ಯಗುಣ ಎಲ್ಲೆಡೆಯೂ ಇಲ್ಲಿ ಸಾಧಿತವಾಗಿದೆಯೆಂದು ಹೇಳುವುದು ಕಷ್ಟ. ಕೆಲವು 'ವಚನ ವೇಷ' ತೊಟ್ಟ ಸಾಮಾನ್ಯರಚನೆಗಳಾಗಿವೆಯೆಂದು ಹೇಳದೆ ಗತ್ಯಂತರವಿಲ್ಲ. ಆದರೆ ಹಾಗೆ ಹೇಳುವಾಗ ಉದ್ದೇಶ-ದೃಷ್ಟಿ ಧೋರಣೆಗಳಲ್ಲಿ ಎರಡೂ ವಿಭಿನ್ನ ಪರಿಸರದ ಉತ್ಪನ್ನಗಳಾಗಿರುವುದನ್ನು ಮರೆಯಬಾರದು.

1925ರಿಂದ 1963ರ ದೀರ್ಘಾವಧಿಯಲ್ಲಿ ಇವು ರಚನೆಯಾಗಿವೆ. ಮೊದಲ ಕೆಲವು ರಚನೆಗಳು 'ಪ್ರಬುದ್ಧ ಕರ್ಣಾಟಕ'ದಲ್ಲಿ ಅಜ್ಞಾತ ಹೆಸರಿನಲ್ಲಿ ಪ್ರಕಟಗೊಂಡವು. ಅನಂತರ 'ರಂಗಯ್ಯನ ವಚನಗಳು' ಎಂಬ ಹೆಸರಿನಲ್ಲಿ ಓದುಗರ ಮುಂದೆ ಬಂದು ಅನೇಕ ಪರಿಷ್ಕೃತ ಅವಸ್ಥೆಯನ್ನು ದಾಟಿ ಈಗಿನ ರೂಪ ಧರಿಸಿ ನಿಂತಿವೆ. ಇಲ್ಲಿನ ಯಾವೊಂದು ವಚನವೂ ಭಗವಂತನಿಗೆ ಮಾಡಿಕೊಂಡ ವಿಜ್ಞಾಪನೆ ಎಂಬುದು ಅವರ ನಂಬಿಕೆ. ಹಾಗಾಗಿ ಇದು 'ರಂಗಬಿನ್ನಪ'. ಎಲ್ಲಾ ವಚನಗಳೂ ಅವರ ಮನೆ ದೇವರಾದ 'ರಂಗಯ್ಯ'ನಿಗೆ ಅರ್ಪಿತ. ರಂಗಬಿನ್ನಪದ ವಸ್ತು ವೈವಿಧ್ಯಪೂರ್ಣ, ಆತ್ಮ, ದೇವರು, ಪ್ರೇಮ-ದ್ವೇಷ, ಅಜ್ಞಾನ, ಅದೃಷ್ಟವಾದ, ದಾಸ್ಯ, ಆತ್ಮಗೌರವ, ಮೋಸ, ಅನ್ಯಾಯ, ಅನುಕರಣೆ, ಹಣ, ಗಂಡ-ಹೆಂಡತಿ, ಕವಿ, ಪಾಕಕಲೆ, ನಾಗರೀಕತೆ ಇತ್ಯಾದಿ ಅನುಭವದ ತೆಕ್ಕೆಗೆ ಬಂದದ್ದಕ್ಕೆಲ್ಲಾ ವಚನರೂಪ ಕೊಡುವ ಪ್ರಯತ್ನ ಮಾಡಿದ್ದಾರೆ. ಕಾವ್ಯ ವಸ್ತುವಾಗುವ ಅರ್ಹತೆ ಅದಕ್ಕುಂಟು, ಇದು ಕ್ಷುಲ್ಲಕ, ಇದು ಸಪ್ಪೆ, ಇದು ನಿರರ್ಥಕ ಎಂದು ಯೋಚನಾಪರರು ಹೀಯಾಳಿಸ ಬಾರದೆಂಬುದು ಅವರ ಅಪೇಕ್ಷೆ. ಇಂಥ ನಿರ್ಧಾರವೇ ಪ್ರಾಯಶಃ ವಚನಗಳ ಗುಣ ನಿಯಂತ್ರಣಕ್ಕೆ ಅಡ್ಡಿಯೊದಗಿಸಿದಂತೆ ಭಾಸವಾಗುತ್ತದೆ. ಸಂಪುಟದ ಎಲ್ಲಾ 1212 ವಚನಗಳಿಗೆ ಇದೇ ಮಾತು ಹೇಳಲಾಗದು. ಹೆಚ್ಚಿನವು ಕಾವ್ಯಾತ್ಮಕ ಅಭಿವ್ಯಕ್ತಿ. ಅಂತರ್ಗತಗೊಳಿಸಿಕೊಂಡಿರುವ ಪ್ರಾಪಂಚಿಕ ಜ್ಞಾನದಿಂದಾಗಿ ನಮ್ಮ ಗಮನ ಸೆಳೆಯುತ್ತವೆ.

ನಿರ್ದಿಷ್ಟ ಆಕೃತಿಯನ್ನೇನೂ ಇವು ನೇಮವಾಗಿ ಹೊಂದಿಲ್ಲ. ಗದ್ಯ-ಪದ್ಯ, ಉದ್ದ ಪಂಕ್ತಿ, ಕಿರುಪಂಕ್ತಿ, ಪಂಕ್ತಿಭೇದ, ಗೀಟು ಇತ್ಯಾದಿಯ ಛಂದೋಮಾರ್ಗ. ಒಂದು ಸಾಲಿನಿಂದ ಹಿಡಿದು ಹತ್ತೆಂಟು ಪುಟಗಳವರೆಗೆ ಇವುಗಳ ಹರವು. ವಿನೂತನ ಭಾವ ಸಮನ್ವಯ, ದೃಷ್ಟಾಂತ-ಹೋಲಿಕೆಗಳ ಅಂತರ್‌ವಿನ್ಯಾಸಗಳಲ್ಲಿ, ಹಾಸ್ಯದ ಮಿಂಚು, ವ್ಯಂಗ್ಯದ ಚಳಕು ಮತ್ತು ನಾದದ ಏರಿಳಿತಗಳಲ್ಲಿ ಒಂದು 'ಶಬ್ದಚಿತ್ರ'ವೂ, 'ಶಬ್ದವಿಗ್ರಹ'ವೂ ಮೂಡಿನಿಲ್ಲುತ್ತದೆ. ಇವುಗಳ ಆಕೃತಿ ಗದ್ಯವೊ ಪದ್ಯವೊ ಎಂದು ಚರ್ಚಿಸುವುದಕ್ಕಿಂತ ಕರ್ಣಪ್ರಾಮಾಣ್ಯವನ್ನು ಆಧಾರವಾಗಿ ನೆಮ್ಮುವುದೇ ಸೂಕ್ತ. ರಚನೆಗಳಲ್ಲಿ ಕಾವ್ಯಾತ್ಮಕ ಮನಸ್ಥಿತಿ ಉನ್ಮುಖವಾದಾಗ ಭಾವ ಗಗನಸ್ಪರ್ಶಿಯಾಗುತ್ತದೆ, ಇಳಿಮುಖವಾದಾಗ ನಿಸ್ತೇಜವಾಗುತ್ತದೆ. ಆದರೂ ಇವುಗಳಲ್ಲಿ ಅಭಿವ್ಯಕ್ತಿಸಲ್ಪಟ್ಟ ಪ್ರಪಂಚ ಜ್ಞಾನ, ವಿವೇಕ ಮೆಚ್ಚಿಗೆಗೆ ಅರ್ಹವಾಗುತ್ತದೆ. ಒಟ್ಟಾರೆ ಜೀವನದ ಅನಂತ ಅನುಭವಗಳನ್ನು ದರ್ಶಿಸುವ ಚಿತ್ರಶಾಲೆ ಈ ಗ್ರಂಥ ವಚನ ಸಾಹಿತ್ಯದ ಸಾಧ್ಯತೆಯನ್ನು ವಿಸ್ತರಿಸಲು ಮಾಡಿದ ಪ್ರಯೋಗಶೀಲ ಯತ್ನ–ಆಧುನಿಕ ಕನ್ನಡ ಸಾಹಿತ್ಯಕ್ಕೆ ರಂಗಣ್ಣನವರ ಕೊಡುಗೆ.

"ನನ್ನ ದೃಷ್ಟಿಗೆ ಪದ ಸಂಯೋಜನೆ ಕೇವಲ ಪದ ಸಂಯೋಜನೆ ಅಲ್ಲ; ಋಜುತ್ವಕ್ಕೆ, ಪ್ರಾಮಾಣಿಕತೆಗೆ, ಶೀಲಧರ್ಮಕ್ಕೆ ಸಂಬಂಧಿಸಿದ ವ್ಯಾಪಾರ"

ಎಂದು ರಂಗಬಿನ್ನಪದ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ತಮ್ಮ ಕನ್ನಡ ಶೈಲಿ ಅಷ್ಟೇನೂ ಸರಳವಲ್ಲ, ಸರಾಗವಲ್ಲ ಎಂಬ ಅಳುಕು ಅವರನ್ನು ಕಾಡಿದಂತಿದೆ. ಕೆಲವೊಮ್ಮೆ ಅವರು ಆರಿಸಿಕೊಂಡ ವಿಷಯವೇ ಪ್ರವೇಶಕ್ಕೆ ಶ್ರಮಸಾಧ್ಯವಾದ ದುರ್ಗಮ ಕ್ಷೇತ್ರ. ಸಂಕೀರ್ಣ ವಿಷಯ, ಅಂತರಂಗದ ಸೂಕ್ಷ್ಮ ತಿರುವು-ಮುರುವುಗಳನ್ನು ಹೇಳುವಲ್ಲಿ 'ಇಂಥ' ಕ್ಲಿಷ್ಟತೆ ಪ್ರಾಪ್ತವಾಗಿರುವುದು ನಿಜ. ಆದರೆ ಅದೇ ಮಾತನ್ನು ಅವರ ಎಲ್ಲಾ ಬರಹಗಳಿಗೂ ವಿಸ್ತರಿಸಿದರೆ ಅವರ ಅನನ್ಯ ಕನ್ನಡ ಶೈಲಿಗೆ ಅಪಚಾರ ಮಾಡಿದಂತಾಗುತ್ತದೆ. ರಂಗಣ್ಣನವರ ಭಾಷಾ ಶೈಲಿಗೆ ಅವರದೇ ವೈಶಿಷ್ಟ್ಯ-ವೈಚಿತ್ರ್ಯವಿದೆ. ಸ್ಪಷ್ಟತೆ, ನಿರ್ಭೀತತೆ, ಸಾಮಾಯಿಕ ವಿಶದತೆ-ಸಂಕ್ಷಿಪ್ತತೆ, ವಿಶಿಷ್ಟ ಮತ್ತು ದೇಸಿ ರೂಪಗಳ ಬಳಕೆಯಲ್ಲಿನ ಸಮತೂಕತೆ ಅವರ ಶೈಲಿಯಲ್ಲಿ ಎದ್ದು ತೋರುವ ಗುಣಗಳು. ಚುರುಕು ಹಾಗೂ ಜಾಣ ಮಾತುಗಳು, ಕವಿ ಉಕ್ತಿಗಳು ವಾಕ್ಯಸರಣಿಯಲ್ಲಿ ಸಮರಸವಾಗಿ ಬೆರೆತುಕೊಂಡು ಅರ್ಥದ ಇನ್ನೊಂದು ಮಗ್ಗುಲನ್ನು ದರ್ಶಿಸಲು ಸಹಾಯಕವಾಗುತ್ತವೆ.

3

ಸೃಜನಶೀಲ ಬರಹ, ಗಂಭೀರ ವಿಮರ್ಶೆಗಳೊಂದಿಗೆ ಸಾಮಾನ್ಯ ಓದುಗರಿಗೂ ಉಪಯುಕ್ತವಾಗಬಲ್ಲಂಥ ವಿವಿಧ ವಿಷಯ ಕುರಿತ ಕಿರು ಹೊತ್ತಿಗೆಯನ್ನು ರಂಗಣ್ಣನವರು ಪ್ರಕಟಿಸಿದ್ದಾರೆ. ಕುಮಾರವ್ಯಾಸ, ಕುಮಾರವ್ಯಾಸ ವಾಣಿ, ರುಚಿ, ಹಾಸ್ಯ, ವಿಡಂಬನ - ಇಂಥ ಕೃತಿಗಳು ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಪುಸ್ತಕಮಾಲೆಯಲ್ಲಿ ಇವು ಅಚ್ಚಾಗಿವೆ. ಹಲವು ಆಕರಗಳಿಂದ ಮಾಹಿತಿ, ವಿವರಣೆ, ಚೇತೋಹಾರಿ ನಿರೂಪಣೆಗಳನ್ನೊಳಗೊಂಡ ಈ ಪುಸ್ತಿಕೆಗಳು ಸೀಮಿತ ಉದ್ದೇಶಕ್ಕೆ ಉಪಯುಕ್ತ.

ನಾಟಕ, ಭಾಷಾಂತರ ಮತ್ತು ಜಾನಪದ ಕ್ಷೇತ್ರಕ್ಕೂ ರಂಗಣ್ಣನವರ ಸೇವೆ ಸಂದಿದೆ. ರಾಮಾಯಣದ ವಸ್ತುವನ್ನಾಧರಿಸಿದ 'ಕಿರು ನಾಟಕಗಳು'; ಮಹಾಭಾರತವನ್ನಾಧರಿಸಿದ 'ಉತ್ತರ ಕುಮಾರ' ಎಂಬ ನಾಟಕ ಬೆಳಕು ಕಂಡಿವೆ. 'ಹರಿಶ್ಚಂದ್ರ,' ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದ ರೂಪಾಂತರ. ರಷ್ಯನ್ ಲೇಖಕ 'ಆಂಟನ್ ಚೆಕಾವ್'ನ ಹೆಸರನ್ನುಳ್ಳ ಶೀರ್ಷಿಕೆಯಲ್ಲಿ ಆತನ ಕೆಲವು ಸಣ್ಣ ಕಥೆ, ಕಿರುಕಾದಂಬರಿಯನ್ನು ಭಾಷಾಂತರಿಸಿ ಕೊಟ್ಟಿದ್ದಾರೆ. ತಮ್ಮ ಜನಪದ ಸಾಹಿತ್ಯ ಪ್ರೀತಿಯನ್ನು ರಂಗಣ್ಣನವರು 'ಕೋಲ್ ಕೋಲ್ ಕೂಡಿ ಬರಲಿ' ಎಂಬ ಗೀತಸಂಗ್ರಹವನ್ನು ಹೊರತರುವುದರ ಮೂಲಕ ತೋರಿದ್ದಾರೆ.

ಕನ್ನಡದಲ್ಲಿ ಓದುಗರ ತಿಳಿವಳಿಕೆಯನ್ನು ವಿಸ್ತರಿಸಲು ಅನುಕೂಲವಾಗುವಂಥ ಎರಡು ಕೃತಿಗಳನ್ನು - 'ನಾಟುನುಡಿ', 'ಕವಿ ಕಥಾಮೃತ'- ರಂಗಣ್ಣನವರು ರಚಿಸಿದ್ದಾರೆ. ನಾಟುನುಡಿಯ ಬೇರೆ ಬೇರೆ ರೂಪಗಳು ಕನ್ನಡ-ಸಂಸ್ಕೃತದಲ್ಲಿದ್ದರೂ ಅದನ್ನು 'ಲಘು ಸಾಹಿತ್ಯ'ದ ಗುಂಪಿಗೆ ಸೇರಿಸಿ ಅವಜ್ಞೆ ಮಾಡಲಾಗಿದೆ. ಯಾವುದು ನಮ್ಮ ಹೃದಯದಲ್ಲಿ ನಟ್ಟುನಿಲ್ಲಬಲ್ಲ ಶಕ್ತಿ ಹೊಂದಿದೆಯೊ ಅದು 'ನಾಟುನುಡಿ' (Epigram). ಇದು ಗಾತ್ರದಲ್ಲಿ ಚಿಕ್ಕದು. ಸಾಹಿತ್ಯ ಸಾಮ್ರಾಜ್ಯದ ಕಿರಿಯ ಪ್ರಕಾರವಾಗಿರುವ ಇದನ್ನು ಪಾಶ್ಚಾತ್ಯರು ಅವಜ್ಞೆಯಿಂದ ಕಾಣದೆ ಪ್ರೀತಿಯಿಂದ ಬೆಳೆಸಿರುವ ಚಿತ್ರ ಈ ಗ್ರಂಥದಲ್ಲಿ ಸಿಗುತ್ತದೆ. ಗ್ರೀಕ್ ದೇವತೆಗಳ ಸೇವೆಯ ಹೆಸರಿನಲ್ಲಿ ಅಂಕುರವಾದ ಇದು ಬೆಳೆದು ಕ್ರಮೇಣ ರೋಮ್, ಇಂಗ್ಲೆಂಡ್, ಪರ್ಷಿಯಾ, ಚೀಣಾ, ಜಪಾನ್ ಮುಂತಾದ ದೇಶಗಳಿಗೆ ಹಬ್ಬಿದ ಕುತೂಹಲಕರವಾದ ಇತಿಹಾಸ ಕೃತಿಯಲ್ಲಿ ದೊರೆಯುತ್ತದೆ. ನಾಟುನುಡಿಯ ವೈವಿಧ್ಯ, ವೈಶಿಷ್ಟ್ಯಗಳನ್ನು ಸೋದಾಹರಣವಾಗಿ ವಿವರಿಸುವ ಇದು ಕನ್ನಡದಲ್ಲಿಯೇ ವಿರಳ ಪುಸ್ತಕ.

ಜಗತ್ತಿನ ಕವಿ-ಲೇಖಕರ ಇತಿವೃತ್ತ, ಗುಣ ಸ್ವಭಾವಗಳನ್ನು ಸವಿವರವಾಗಿ ಸಂಗ್ರಹಿಸಿಕೊಡುವ ಪ್ರಯತ್ನ 'ಕವಿಕಥಾಮೃತ'. ಇಂಥ ಪುಸ್ತಕ ಕನ್ನಡದಲ್ಲಿ ಇನ್ನೊಂದಿಲ್ಲ. ಲೇಖಕರ ಕುಲ, ತಂದೆ-ತಾಯಂದಿರು, ಬಾಲ್ಯ, ತಾರುಣ್ಯ, ವಿದ್ಯಾರ್ಜನೆ, ವಾಂಛಲ್ಯ, ವೃದ್ಧಾಪ್ಯ, ಅಂತ್ಯ ಹೀಗೆ 12 ಭಾಗಗಳಲ್ಲಿ ಪುಸ್ತಕದ ವಿವರಗಳಿವೆ. "ಈ ಗ್ರಂಥ ನಾಟಕ, ಕಾದಂಬರಿ, ಕಥನ ಕಾವ್ಯದಂತೆ ಎಲ್ಲೂ ನಿಲ್ಲಿಸದೆ ಉದ್ದಕ್ಕೂ ಓದಿಬಿಡುವ ಲೇಖನವಲ್ಲ. ಅದರ ಸೌಕರ್ಯ ಬೇರೆ ವಿಧದ್ದು; ಯಾವ ಪುಟವನ್ನು ಬೇಕಾದರೂ ತೆಗೆದು ಓದಬಹುದು, ಎಲ್ಲಿ ಬೇಕಾದರೂ ಓದುವುದನ್ನು ಬಿಡಬಹುದು" ಎಂಬಂಥ ವೈಶಿಷ್ಟ್ಯವನ್ನುಳ್ಳದ್ದು. ಹಾಗಿದ್ದೂ ಕೂತಮೆಟ್ಟಿನಲ್ಲಿ ಓದಿ ಮುಗಿಸಬೇಕೆಂಬ ಪ್ರಲೋಭನೆ ಹುಟ್ಟಿಸುವ ಪುಸ್ತಕ ಇದಾಗಿದೆ.

ಬಹುಮುಖಿ ಆಸಕ್ತಿಯ ರಂಗಣ್ಣನವರು ಕನ್ನಡದಲ್ಲಿಯಂತೆ ಇಂಗ್ಲಿಷ್‌ನಲ್ಲೂ ಕೃತಿ ರಚಿಸಿದ್ದಾರೆ. Knots and Knotting; The Lady and the Ring; Old Tale Re-told; B.M. Srikantia - a profile - ಅವರು ಬರೆದ ಇಂಗ್ಲಿಷ್ ಪುಸ್ತಕಗಳು. ತಮ್ಮ ವಿದ್ಯಾಗುರುಗಳಾದ ಪ್ರೊ.ಬಿ.ಎಂ.ಶ್ರೀ. ಅವರನ್ನು ಕುರಿತ ಜೀವನಚಿತ್ರ 'Srikantia'. ಸಾಹಿತ್ಯಾಭ್ಯಾಸಿಗಳಿಗೆ ಇದೊಂದು ಉಪಯುಕ್ತ ಕೃತಿ. ರಂಗಣ್ಣನವರು ತಮ್ಮ ಇತರ ಯಾವುದೇ ಇಂಗ್ಲಿಷ್ ಪುಸ್ತಕಗಳ ಮೂಲಕ ಕನ್ನಡಿಗರ ಮನಸ್ಸಿನಲ್ಲಿ ಉಳಿಯುವುದು ಸಂಶಯವೇ. ಆದರೆ ಅವರು ತಮ್ಮನ್ನು ಮತ್ತಷ್ಟು ಸಮರ್ಥವಾಗಿ, ಸಹಜವಾಗಿ ಅಭಿವ್ಯಕ್ತಿಗೊಳಿಸಿಕೊಂಡ ಕನ್ನಡದ ಧೀಮಂತ ಕೃತಿಗಳ ಮೂಲಕ ಬಹುಕಾಲ ಉಳಿಯುತ್ತಾರೆ.

❑

# ವಿ.ಸೀ.

ಜಿ. ವೆಂಕಟಸುಬ್ಬಯ್ಯ

1

ವಿನಯನಿಧಿ, ಸ್ನೇಹವತ್ಸಲ, ಧೀಮಂತ ವಿದ್ವಾಂಸ, ವಾಗ್ಮಿ, ಉದಾರಿ, ಶುಚಿರುಚಿ ಚತುರ ವಿ.ಸೀ. ಯವರ ಸಾಹಿತ್ಯಕೃಷಿ ಬಹುಮುಖವಾದದ್ದು. ಅವರು ಮುಖ್ಯವಾಗಿ ಕವಿ, ವಿಮರ್ಶಕ. ಮಿಕ್ಕ ಎಲ್ಲ ಬಗೆಯ ಲೇಖನಗಳೂ, ಗ್ರಂಥಗಳೂ ಅವರಿಂದ ರಚಿತವಾಗಿದ್ದರೂ ನಮಗೆ ಮುಖ್ಯವಾಗಿ ಎದ್ದು ಕಾಣುವುದು ಅವರ ಈ ಎರಡು ಕಾರ್ಯಗಳು. ಕವಿಯಾಗಿ ಮಾಡಿರುವ ಕೃಷಿ, ವಿಮರ್ಶಕರಾಗಿ ನೀಡಿರುವ ದೃಷ್ಟಿ.

ಆದರೂ ವಿ.ಸೀ.ಯವರ ವ್ಯಕ್ತಿತ್ವ ಅವರ ಈ ಎಲ್ಲ ಕೃತಿಗಳಿಗಿಂತಲೂ ತುಂಬ ಮಹತ್ತರವಾಗಿತ್ತು. ಅವರು ಮಾಡಿರುವ ಕೃತಿ ರಚನೆ, ಅವರು ನೀಡಿದ ಬೋಧೆ, ಅವರ ಉಪನ್ಯಾಸಗಳು ಇವೆಲ್ಲವೂ ಆ ವ್ಯಕ್ತಿತ್ವದ ಕಿರಿಕುರುಹಾಗಿ ಮಾತ್ರ ಉಳಿಯಬಲ್ಲವು. ಅವರ ಒಟ್ಟು ಸತ್ವ ಯಾವ ಒಂದು ಕ್ಷೇತ್ರದಲ್ಲೂ ಉಳಿದು ಬರುವುದು ಸಾಧ್ಯವಿಲ್ಲ. ಮಹಾ ಧೀಮಂತನಾದ ಒಬ್ಬನ ನೂರು ಮುಖಗಳ ಸತ್ವಸಮುಚ್ಚಯ ಹೇಗೆ ತಾನೆ ಒಂದೆಡೆ ಮೈತಳೆಯಬಲ್ಲುದು. ಅವರು ಈ ಶತಮಾನದ ಕನ್ನಡ ಜನತೆಯ ಅತ್ಯಪೂರ್ವ ಪ್ರತಿನಿಧಿಯಾಗಿ ಮೆರೆದು ಮರೆಯಾಗಿದ್ದಾರೆ. ಆ ವ್ಯಕ್ತಿಯ ಒಂದು ಮುಖ ಮಾತ್ರ ಅವರ ಸಾಹಿತ್ಯ ಕೃತಿಗಳಲ್ಲಿ ಕಾಣಬರುತ್ತದೆ.

ಅವರ ಮೊದಲ ಗ್ರಂಥವಾದ 'ಪಂಪಾಯಾತ್ರೆ'ಯ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬೇಕು. ಅದು ಕನ್ನಡದ ಮೊದಲ ಪ್ರವಾಸಕಥನವಷ್ಟೇ ಅಲ್ಲ, ಒಂದು ಚಾರಿತ್ರಿಕ ಸತ್ಯದ ಪುನರ್ದರ್ಶನವಾಗಿ ಇಂದಿಗೂ ಕಂಗೊಳಿಸುತ್ತದೆ. ಹಾಳು ಹಂಪೆ ಬಾಳು ಹಂಪೆಯಾಗಿದ್ದ ಕಾಲದ ವೈಭವದ ಚಿತ್ರ ಕಣ್ಮುಂದೆ ಸುಳಿದು ನಮ್ಮನ್ನು ಎಚ್ಚರಿಸುತ್ತದೆ. ಒಂದು ರಸಿಕ ಮನೋಧರ್ಮ ಇಂಥ ಪ್ರವಾಸದಲ್ಲಿ ಆಲೋಚಿಸಬಹುದಾದ ಅನೇಕ ವಿಷಯಗಳು ಇಲ್ಲಿ ಸುಳಿದು ಬರವಣಿಗೆಗೆ ಕಾವು ಬರುತ್ತದೆ; ಓದುಗನು ಬೇರೊಂದು ಪ್ರಪಂಚಕ್ಕೆ ಸಾಗಿಬಂದವನಾಗುತ್ತಾನೆ. ಪ್ರವಾಸದಲ್ಲಿದ್ದ ಇಬ್ಬರು ಹಿರಿಯರೂ ಪರಸ್ಪರ ಸ್ನೇಹ, ವಿರೋಧಗಳ ಸಮ್ಮೇಳನವಾಗಿದ್ದರು ಎಂಬುದನ್ನು ಅವರು ಈಚೆಗೆ ಬರೆದ ಮುನ್ನುಡಿಯಿಂದ ಎತ್ತಿ ಬರೆಯುತ್ತೇನೆ. ಈ ಭಾಷೆ-ಭಾವಗಳ ಸಂಗಮದ ಸೊಗಸನ್ನು ನೋಡಿ:

"ಹೀಗಿದ್ದರೂ ಎರಡೂ ಎರಡು ಬೇರೆ ಬೇರೆ ಬಗೆಯ ಜೀವಗಳು. ಯಾವವಂಶದಲ್ಲಿ ನೋಡಿದರೂ ಒಂದಕ್ಕೆ ತೀರ ವಿರುದ್ಧ 'ಪಂಥ' ಇನ್ನೊಂದರದು. ಇವು ಸೇರಬಲ್ಲವು ಹೇಗೆ? ಸಮರಸವಾದಾವು ಹೇಗೆ? ಎಂಬಷ್ಟು ಮಟ್ಟಿನ ಭಿನ್ನತೆ ಇತ್ತು ಅವುಗಳಲ್ಲಿ. ಆಚಾರ, ವ್ರತ, ನೇಮ, ಮಡಿ, ನಿಷ್ಠುರ ವರ್ತನೆ, ನಿರ್ದಾಕ್ಷಿಣ್ಯವಾದ ಖಂಡಿತವೃತ್ತಿ, ಹಟ- ಯಜಮಾನರದಾದರೆ, ವೆಂಕಟೇಶಯ್ಯನವರದು ನಯ, ಮೃದು, ಓರ್ಪು, ಪಟ್ಟು ಹಿಡಿಯುವ ಅಗತ್ಯವಿಟ್ಟುಕೊಳ್ಳದೆ ಎಲ್ಲವನ್ನೂ ತನ್ನ ಮತಕ್ಕೆ ಒಲಿಸಿಕೊಳ್ಳುವ ಮಾರ್ಗ. ಯಾವುದನ್ನೇ ಆಗಲಿ ಒತ್ತಿನುಡಿಯದ, ಆಡದಂತೆ ಆಡಿ ತೋರಿಸುವ ಒಂದು ಕೆಳೆತನದ ಮಾರ್ಗ. ಅವರು ಸೋತಾರೆಂದು ಹೊರಗೆ ತೋರುತ್ತಿರುವಾಗ ಗೆದ್ದಿರುತ್ತಿದ್ದರು. ಯಾವುದನ್ನು ಕುರಿತೂ ಕತ್ತರಿಸಿದಂತೆ ತೀರ್ಮಾನವಾಗಿ ಆಡಿ ಮುಗಿಸರು. ಆಡಿದ ಮಾತೋ ಹಿತ, ಮಿತ, ಗಂಭೀರ. ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟಿದಂತೆ. 'ಮೆಲ್ಪು ಬಲ್ಪನ್ ಅಳಿಗುಂ' ಎಂದ ಪಂಪನ ಮಾತು, ಅವರ ಮಟ್ಟಿಗೆ ಸಲ್ಲುವುದು. ಆ ಪಂಪನು ಅವರಿಗೆ ಬಹು ಮೆಚ್ಚು. ಆ ಮಾತಿನ ಹಿಂದೆ ಇದ್ದ ಮನಸ್ಸೂ, ರಸಿಕತೆಯೂ, ಒಂದು ದೊಡ್ಡತನವೂ ಎಂಥ ಕಠಿಣ ಪ್ರಸಂಗದಲ್ಲಿಯೂ ಸರಳತೆ, ಸೌಮನಸ್ಯಗಳನ್ನು ಬೀರುತ್ತಿದ್ದವು. ಆಡುವುದು ಮಿತವಾದರೆ, ಆಡದೆ ಉಳಿಸಿಕೊಂಡ ಅವರ ಮೌನದ ಅರ್ಥ ಇನ್ನೂ ಆಳ. ಅವರನ್ನು ಅರಿತವರೆಲ್ಲರೂ, ಆ ಮೌನದ ಆಳವನ್ನೂ, ಧರ್ಮವನ್ನೂ ಕಡೆಗೆ, ಭಯಂಕರತೆಯನ್ನೂ ಬಲ್ಲರು. ಇತರರು ಕೂಗಿ, ಕನಲಿ, ರೂಪವ್ಯತ್ತಿಯನ್ನು ತೋರಿಸುತ್ತಿರುವಾಗ, ಸೌಮ್ಯವಾಗಿ ಒಂದು ಮಾತಿನಿಂದಲೋ, ಒಂದು ನಸುನಗೆಯಿಂದಲೋ, ಮೀರಿದರೆ ನಿರ್ವಿಕಾರ ಮುಖಭಾವದಿಂದಲೋ ಅಥವಾ ದವಡೆ, ತುಟಿಹಿಡಿದ ಬಿಗಿತದಿಂದಲೋ ಅವರ ಮನಸ್ಸು ಹೇಗೆ ವರ್ತಿಸುತ್ತಿದೆ ಎಂಬುದನ್ನು ಕಾಣಬಹುದಿತ್ತು. ಯಜಮಾನರದು ಒಂದೇಟಿಗೆ ಎರಡು ತುಂಡು ಎಂಬಂತೆ. ಅವರೇ ಮನಸ್ಸನ್ನು ಬದಲಾಯಿಸುವವರೆಗೂ ಅವರನ್ನು ತಿರುಗಿಸುವುದು ಹರಿಹರ ಬ್ರಹ್ಮಾದಿಗಳಿಗೂ ಶಕ್ಯವಿರುತ್ತಿರಲಿಲ್ಲ. ಅದು ಸೆಡೆತು ಬಿಗಡಾಯಿಸಿತೊ ಪಾಷಾಣವೇ ಸರಿ. ಅರೆ ನಿಮಿಷದಲ್ಲಿ ಅಯ್ಯನವರ ಮನಸ್ಸು ಹೊಸ ಸಮಾಧಾನಕ್ಕೆ ಬರಬಲ್ಲದ್ದೂ, ಸ್ಥಿತಿಜ್ಞವಾಗಿ ವರ್ತಿಸಬಲ್ಲದ್ದೂ ಆಗಿತ್ತು. ಯಜಮಾನರನ್ನು ತಿರುಗಿಸಬಲ್ಲವರು ಯಾರಾದರೂ ಇದ್ದರೆ ಅಂಥ ಅತಿ ವಿರಳರಲ್ಲಿ ವೆಂಕಟೇಶಯ್ಯನವರು ಒಬ್ಬರು. ಇಬ್ಬರಿಗೂ ಪರಸ್ಪರ ಗೌರವ, ವಿಶ್ವಾಸ ಅಷ್ಟು ಇದ್ದುದರಿಂದ ಈ ಕಾರ್ಯ ಸಾಧ್ಯವಾಗುತ್ತಿತ್ತು. ಹೀಗೆ ಒಂದು ಇನ್ನೊಂದಕ್ಕೆ ಪೂರಕ. ನಕ್ಕರೆಂದರೆ ನಿಡುಮೊಗದ ಯಜಮಾನರ ನಗುಬಿಳಿಮೋಡಗಳ ಆಟದ ಗುಡುಗಿನ ಮೊಳಗು. ಅದರ ಹಸುಮಗುವಿನಂತಹ ನಿರಾಳತೆಯನ್ನೂ, ನಿಷ್ಕಲ್ಮಷತೆಯನ್ನೂ ಕಡೆಗೆ ಅದರ ಮೈಮರೆತವನ್ನೂ ಕಾಣಬೇಕು, ಕೇಳಬೇಕು. ವೆಂಕಟೇಶಯ್ಯನವರ ನಗು ಬಹು ಚೆಲುವು. ಮುದ್ದಾಗಿ ಮಾಟವಾದ ಅವರ ದಂತಪಂಕ್ತಿ ನಗುವಿನ ಬೆಳಕಿಗೆ ಬೆಳಗಿ ಚೌಕವಾದ, ಅಗಲವಾದ ಆ ಮುಖಕ್ಕೆ ಅರಳಿದ ಹೂವಿನ ಅಥವಾ ಬಿರಿದ ಹಣ್ಣಿನ ಒಂದು ಕಾಂತಿಶ್ರೀಯನ್ನು ಕೊಡುತ್ತಿದ್ದಿತು. ತುಂಬಾ ಉದ್ವೇಗವುಂಟಾದರೆ ಮೈಸೂರಿನ ಹಾಲುಬೆಂಡೆಯಂತೆ ತೆಳುವಾಗಿ ಉದ್ದವಾದ ಅವರ ಕೈಬೆರಳುಗಳನ್ನು ಮೊಳಕಾಲವರೆಗೂ ಅಥವಾ ಇನ್ನೊಂದು ಕೈಯ ಅಂಥವೇ ನೀಳವಾದ ಬೆರಳ ಉದ್ದಕ್ಕೂ ಕೊನೆಯ ಕೊನೆವರೆಗೂ ಉಜ್ಜಿ ಅದು ಮುಗಿಯಬೇಕು. ಮೈಗೆ ಕಾವೇರಿ, ತುಟಿ ಬೆರಳು ಕಂಪಿಸಿ, ಕಣ್ಣು ಕೆಂಪಾಗಿ, ಭಾವಾವೇಶದ ಅಥವಾ ಕರ್ಕಶತೆ-ಕರುಣೆಗಳ ಸಂಚಾರ ಕಾಣಬೇಕು, ಅಡಗಬೇಕು. ಆ ಸ್ಥಿತಿಯಲ್ಲಿ ಒಂದೊಂದು ಸಲ ಅವರು ನಕ್ಕ ನಗು ವಿಚಿತ್ರ. ಅಂಥ ಒಂದೊಂದು ಸಮಯದಲ್ಲಿ ಒಂದು ಚಿಟಿಕೆ ನಸ್ಯ ಅವರ ಸ್ವಾಸ್ಥ್ಯವನ್ನು ಸಾಧಿಸಲು ನೆರವಾಗುತ್ತಿತ್ತು. ಅವರು ನಸ್ಯ ತೆಗೆದುಕೊಳ್ಳುವ ಸನ್ನಿವೇಶಗಳನ್ನು ಕುರಿತೇ ಬರೆಯಬಹುದೇನೋ! ಅದರ ಒಂದು ಅಖಂಡ ಜೀವನ ವಿಲಾಸವನ್ನು ತೋರಿಸಬಲ್ಲಷ್ಟು ವಿಷಯ ಸಿಕ್ಕೀತೆನ್ನಿಸುತ್ತದೆ."

ಇಂಥ ಗದ್ಯವನ್ನು ರಚಿಸಬಲ್ಲ ಮನಸ್ಸು ಕವಿಸತ್ವದ್ದು ಎಂದು ಬೇರೆ ಹೇಳಬೇಕೆ?

ಬಹುಶಃ ಹಾಡುಗಳಿಗಾಗಿಯೇ ಹುಟ್ಟಿದ 'ಗೀತಗಳು' ವಿ.ಸೀ. ಯವರ ಪ್ರಥಮ ಕವನ ಸಂಕಲನ. ಅದರ ಮುನ್ನುಡಿಯನ್ನು ಬಿ.ಎಂ. ಶ್ರೀಕಂಠಯ್ಯನವರು ಬರೆದಿದ್ದಾರೆ. ಅವರ ಮಾತುಗಳು ಇವು : "ಈ ಗೀತಗಳಲ್ಲಿ ಸಂಗೀತ ಕ್ರಮದಲ್ಲಿ ಹಾಡತಕ್ಕವು ಕೆಲವು; ಛಂದಸ್ಸಿಗನುಸಾರವಾಗಿ ಹೇಳತಕ್ಕವು ಕೆಲವು. ಹೊಸ ಛಂದಸ್ಸುಗಳ ಅವಶ್ಯಕತೆಯನ್ನು ತಿಳಿದ ವಿಮರ್ಶಕರು ಇಲ್ಲಿ ಕೆಲವು ಸುಂದರ ರೂಪಗಳನ್ನೂ ಕಾಣಬಹುದಾಗಿದೆ. ಭಾಷೆಯಲ್ಲಿ ಒಂದು ಬಗೆಯ ಸರಳತೆ, ಓಜಸ್ಸು, ಗಾಂಭೀರ್ಯ ತುಂಬಿದೆ. ಯುವಕರ ರಕ್ತವನ್ನು ಕುದಿಸುವ ದೇಶಾಭಿಮಾನ ಮತ್ತು ಪ್ರೇಮ; ಪ್ರಕೃತಿಮಾತೆಯ ಭಯಂಕರವಾದ ಮತ್ತು ಸೌಮ್ಯವಾದ ದರ್ಶನಗಳು; ಋತುಗಳ ಕುಣಿತ, ದೇವತಾ ವಿಷಯದಲ್ಲಿ ಮನಸ್ಸನ್ನು ತೂಗಾಡಿಸುವ ಸಂದೇಹ, ಭಕ್ತಿ; ಪಾಪದ ಭಯ, ಧರ್ಮದ ಪ್ರೀತಿ ; ಮುಖ್ಯವಾಗಿ ಎಲ್ಲ ಕಡೆಗಳಲ್ಲಿಯೂ ಕಾಣುವ ಸೂಕ್ಷ್ಮವಾದ, ಉದಾರವಾದ, ನಿರ್ಮಲವಾದ ಮನಸ್ಸು - ಇವು ಸಹಾನುಭೂತಿಯಿಂದ ನೋಡತಕ್ಕವರಿಗೆ ಈ ಗೀತೆಗಳಲ್ಲಿ ಚೆನ್ನಾಗಿ ಪ್ರತಿಬಿಂಬಿತವಾಗಿವೆ." ಕನ್ನಡದ ನವೋದಯದ ಆಚಾರ್ಯರ ಈ ವಿವೇಚನೆ ಇಂದಿಗೂ ವಿ.ಸೀ. ಯವರ ಕೃತಿಗಳಿಗೆ ತೋರ್ಗೈಯಾಗಿ ನಿಂತಿದೆ.

ತಮ್ಮ ಕವನಗಳ ಬಗ್ಗೆ ಕವಿಗಳೇ ಹೀಗೆ ಹೇಳಿದ್ದಾರೆ : "ಇಲ್ಲಿನ ಕೆಲವು ಶಬ್ದರೂಪಗಳು, ಮಿಶ್ರಪ್ರಯೋಗಗಳು ಕೆಲವರಿಗೆ ಅಸಾಧುವೆಂದು ತೋರಿಯಾವು. ದೃಷ್ಟಿಭೇದದಿಂದ ಗುಣಭೇದವು ತೋರುವುದು ಸಹಜವೇ. ಆದರೆ ಬಳಕೆಯಲ್ಲಿದ್ದು ನನ್ನ ಅರ್ಥವನ್ನು ಚೆನ್ನಾಗಿ ಹೇಳುವುವು; ಕೆಲವಕ್ಕೆ ಆಯಾ ರಾಗದ ಧಾಟಿಗಳಲ್ಲಿ ಜೀವಸ್ಥಾನವಿದೆ, ಕೆಲವಕ್ಕೆ ನನಗೆ ಬೇಕಾದ ಒಂದು ಬಗೆಯ ನಾದಗುಣವಿದೆ ಎಂದು ನಾನು ಎಣಿಸಿರುವುದರಿಂದ, ಅವುಗಳನ್ನೂ ಉಪಯೋಗಿಸಿಕೊಂಡಿದ್ದೇನೆ. ನೂರಾರು ವರ್ಷಗಳಿಗೆ ಹಿಂದೆ ರಚಿತವಾಗಿ ಹಿಂದೆ ಬಿದ್ದ ಕಾವ್ಯಭಾಷೆಯ ಆಧಾರದ ಮೇಲೆ ಏರ್ಪಟ್ಟ ವ್ಯಾಕರಣ ಸೂತ್ರಗಳನ್ನೂ, ಛಂದಸ್ಸಿನ ಕಟ್ಟಡಕ್ಕೆ ಸಂಬಂಧಿಸಿದ ನಿಯಮಗಳನ್ನೂ ಕಣ್ಣುಚುಚ್ಚುವಂತೆ ಮುಂದೆ ಹಿಡಿಯದೆ, ಜೀವಂತವಾದ, ದಿನದಿನವೂ ಬೆಳೆಯುತ್ತಿರುವ, ಬನಿಗೊಳ್ಳುತ್ತಿರುವ-ಬನಿಗೊಳ್ಳಬೇಕಾಗಿರುವ - ಈಗಿನ ಭಾಷೆಯ ಗತಿಗೆ ತಡೆಯಾಗಿ ತಂದೊಡ್ಡದೆ ; ಕವಿತೆಯಲ್ಲಿ ಕೇವಲ ಸಂಪ್ರದಾಯಬದ್ಧವಾದ ಶಬ್ದರೂಪಕ್ಕೂ, ಸಂಧಿನಿಯಮಗಳಿಗೂ, ಕಡೆಗೆ ನಿರ್ದುಷ್ಟತೆಗೂ ಮೀರಿದ ಗುಣವೊಂದಿದೆ ಎಂಬುದನ್ನು ಒಪ್ಪುವವರು ಯಾರೂ ಇಲ್ಲಿನ ದೋಷಗಳ ಕಡೆಗೆ ಹೆಚ್ಚು ಗಮನ ಹರಿಸಲಾರರೆಂದಿದ್ದೇನೆ."

ಸ್ವತಂತ್ರ ಪ್ರವೃತ್ತಿಯ ಕವಿ ಧೈರ್ಯವಾಗಿ ನುಡಿಯಬಹುದಾದ ಮಾತುಗಳನ್ನು 1931ರಲ್ಲಿಯೇ ಪ್ರಥಮ ಕವನಸಂಕಲನದಲ್ಲಿಯೇ ಹೃದಯಂಗಮವಾಗಿ ವಿವರಿಸಿ ನುಡಿದು ಅವರು ಯುವಕರ ಮನಸ್ಸನ್ನು ಗೆದ್ದರು. ಅವರ ಈ ಸಂಕಲನದಲ್ಲಿ ಪಡೆದ ಯಶಸ್ಸು ಶಾಶ್ವತವಾಗಿ ಅವರನ್ನು ನಮ್ಮ ಹಿರಿಯ ಕವಿಗಳಲ್ಲಿ ಒಬ್ಬರನ್ನಾಗಿ ಮಾಡಿತು. 'ಪ್ರಶ್ನೆ', 'ಚಿತ್ರ', 'ಯಾನ', 'ಸಮಭೂಮಿ','ಮಧುಮಾಸ', 'ವೀಣಾಗಾನ', 'ಸ್ನೇಹ', 'ಕೋಗಿಲೆ' ಮುಂತಾದ ಬಲು ಸೊಗಸಾದ ಕವನಗಳು ಈಗಲೂ ಗಾನಮಾಧುರ್ಯವನ್ನು ಬಿಂಬಿಸುತ್ತಿವೆ; ಭಾವವಿಸ್ತಾರವನ್ನು ಚಿತ್ರಿಸುತ್ತಿವೆ. ಸ್ನೇಹದ ಪೂರ್ಣ ಪ್ರಭಾವವನ್ನು ಚೆನ್ನಾಗಿ ಅರಿತಿದ್ದ, ಬಹು ಗಾಢವಾದ ಸ್ನೇಹವನ್ನು ಪಡೆದಿದ್ದ ಅವರ 'ಸ್ವರ್ಗದೊಳಗೀ ಸ್ನೇಹ ದೊರೆವುದೇನೂ' ಎಂಬ ಸಾಲು ಇಂದಿಗೂ ಅನುರಣನವಾಗುತ್ತಿದೆ. ಪ್ರಸಿದ್ಧ ವೈಣಿಕ ವಿದ್ವಾಂಸರಾದ ವೀಣೆ ವೆಂಕಟಗಿರಿಯಪ್ಪನವರ ವೀಣಾ ವಾದನವನ್ನು ಕೇಳಿ ಬರೆದ 'ವೀಣಾಗಾನ' ಬಹು ಅಪರೂಪದ ಕವನ.

ಹೀಗೆ ಪ್ರಾರಂಭವಾದ ಕವನರಚನೆ ಕನ್ನಡದ ಕೆಲವು ಅತ್ಯಂತ ಶ್ರೇಷ್ಠವಾದ ಕವನಗಳನ್ನು ಸೃಷ್ಟಿಸಿವೆ. 'ಮೃಗಶಾಲೆಯ ಸಿಂಹಗಳು', 'ಅಭೀಃ', 'ಮನೆ ತುಂಬಿಸುವುದು', 'ಗಡಿದಾಟು', 'ಶಿಲ್ಪಿ', 'ಕ್ರೋಧಕೇತನ', 'ಕಸ್ಮೈದೇವಾಯ', 'ಬಾಳಹೆದ್ದಾರಿ', 'ಪುರಂದರದಾಸರು'- ಮುಂತಾದ ಅತ್ಯುತ್ತಮ ಕವನಗಳು ವಿ.ಸೀ. ಯವರ ಇತರ ಕವನಸಂಕಲನಗಳಿಂದಲೂ ದೊರೆಯುವ ಮಣಿಗಳು. 'ಅದಲು-ಬದಲು' ಕವನ ಸಂಕಲನದ ಮುನ್ನುಡಿಯಲ್ಲಿ ಕಾವ್ಯಮೀಮಾಂಸೆಯ ತಲಸ್ಪರ್ಶಿಯಾದ ವಿಶ್ಲೇಷಣೆಯಿದೆ. ಸಂಸ್ಕಾರದ ಪರಂಪರೆಯನ್ನು ಗುರುತಿಸಲಾರದ ಜನ ಏನೇನೋ ಹೇಳಿ ಹಾರಾಡಬಹುದು. ಕಾವ್ಯದ ಹೃದಯದ ಅನ್ವೇಷಣೆ, ಸೌಂದರ್ಯದ ಸಮೀಕ್ಷೆ ಅಷ್ಟೊಂದು ಸುಲಭವಾಗಿ ಕೈಗತವಾಗುವ ವಸ್ತುವಲ್ಲ ಎಂದಿದ್ದಾರೆ. ಬಹು ನವಿರಾದ ಈ ಬರಹ ಅವರ ಮಾಗಿದ ಪರಿಣತಿಯ ಫಲ.

ವಿಮರ್ಶೆಯ ಕ್ಷೇತ್ರದಲ್ಲಿ 'ಇದಮಿತ್ಥಂ' ಎಂದು ಹೇಳುವುದು ಎಷ್ಟು ದುಷ್ಕರವಾದದ್ದೆಂಬುದನ್ನು ಅವರು ಅನೇಕ ಬಗೆಯಲ್ಲಿ ತಿಳಿಸಿಕೊಟ್ಟಿದ್ದಾರೆ. ಪೂರ್ಣ ತಿಳಿವಳಿಕೆಯಿಂದ ಬಂದ ವಿಮರ್ಶೆಗಳಲ್ಲಿ ಕೂಡ, ಮೃದು-ಉಗ್ರ ಎಂಬ ಮಾರ್ಗಗಳಿರಬಹುದು. "ಕೃತಿಯ ಸ್ವರೂಪಕ್ಕೆ ಹೊಂದುವಂತೆ ಭಾವಿಸದೆ - ಸೌಹಾರ್ದದಿಂದ ಅನುಭವಿಸುತ್ತಿರುವವರಿಗೆ ಯಾವುದೆಲ್ಲ ಹೊಳೆದು ಪ್ರಕಟವಾಗುವುದೋ, ಯುಕ್ತವೆನಿಸುವುದೋ ಅದೆಲ್ಲ ಅರ್ಥಮಂಡಲ - ಅದೆಲ್ಲ ಬೆಲೆಯ ಕಲ್ಪನೆಯೇ. ಹೊಂದದ್ದು ಅನುಚಿತ, ವಿರಸ, ಅಸಂಗತ."

ಸಹನಶೀಲವಾದ ವಿಮರ್ಶೆಗೆ ಅವರ ಮನ್ನಣೆ. "ವಿಮರ್ಶೆ ಒಂದು ಟಾರ್ಚ್‌ಲೈಟಾಗಬೇಕು. ಸಿಕ್ಕಿದ್ದನ್ನೆಲ್ಲ ಮಣ್ಣುಮುಕ್ಕಿಸುವ ಜಡ್ಜಿಯ ತೀರ್ಪಾಗಬಾರದು" ಎಂಬುದು ಆಗಾಗ ಹೇಳುತ್ತಿದ್ದ ಮಾತು. ಅಂತರಂಗದ ವಿಶ್ವಾಸ, ಮಾನವೀಯವಾದ ಸೌಹಾರ್ದ, ಸದಭಿರುಚಿಯ ಪರಿಣಾಮ - ಹೀಗಿರುವ ವಿಮರ್ಶೆ ಉಪಯುಕ್ತವಾಗಬಲ್ಲುದು ಕವಿಗೆ, ಓದುಗನಿಗೆ. ಮಿಕ್ಕಿದ್ದೆಲ್ಲ ಸ್ವಂತ ಕಹಳೆಯ ಊದು. ಅದರಿಂದ ಯಾವ ಪ್ರಯೋಜನವಿಲ್ಲ.

ಇಂಥ ನಿಶಿತವಾದ ಮತಿಯಿಂದಲೆ ಅವರು ರಚಿಸಿರುವ ಎರಡು ಮೂರು ಮುಖ್ಯ ವಿಮರ್ಶಾ ಗ್ರಂಥಗಳು ಕನ್ನಡ ಸಾಹಿತ್ಯದಲ್ಲಿ ಚಿರಸ್ಥಾಯಿಯಾಗಿರುತ್ತವೆ. 'ಕರ್ನಾಟಕ ಕಾದಂಬರಿ', 'ಅಭಿಜ್ಞಾನ ಶಾಕುಂತಲ ನಾಟಕ', 'ಅಶ್ವತ್ಥಾಮನ್' - ಈ ಮೂರೂ ಆಯಾ ವಿಷಯವನ್ನೇ ಕುರಿತ ಕನ್ನಡ ಗ್ರಂಥಗಳಲ್ಲಿ ಶಿಖರಪ್ರಾಯವಾಗಿವೆ. 'ಅಶ್ವತ್ಥಾಮನ್' ಕುರಿತ ವಿಮರ್ಶೆ, ಅವರ ಅಭಿಪ್ರಾಯಗಳನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ರಚಿಸಲಾಗಿದ್ದ 'ಆ ಗ್ರಹ' ನಾಟಕ ಇವೆರಡೂ ಒಂದು ರಸಜೋಡಿ. ಇವುಗಳ ಸ್ವಾರಸ್ಯವನ್ನು ಓದಿ ನೋಡದೆ ಕೇಳಿ ತಿಳಿಯುವುದಸಾಧ್ಯ.

ವಿ.ಸೀ. ನಾಲ್ಕು ಸ್ವಂತ ನಾಟಕಗಳನ್ನೂ ಎರಡು ಇಂಗ್ಲಿಷ್ ನಾಟಕಗಳ ಅನುವಾದಗಳನ್ನೂ ರಚಿಸಿದ್ದಾರೆ. 'ಸೊಹ್ರಾಬ್-ರುಸ್ತುಂ' ಮ್ಯಾಥ್ಯೂ ಆರ್ನಾಲ್ಡನ ಕವಿತೆಯ ನಾಟಕ ರೂಪ. 'ಆಗ್ರಹ' ಭಾರತದ ಸೌಪ್ತಿಕಪರ್ವದ ಕಥೆಯ ಅಶ್ವತ್ಥಾಮನನ್ನು ಚಿತ್ರಿಸುವ ರೂಪಕ. 'ಚ್ಯವನ' ಆಧುನಿಕ ಜೀವನದ ಸಮಸ್ಯೆಯನ್ನು ಅಧಿಕರಿಸಿ ರಚಿತವಾಗಿರುವ ನಾಟಕ. 'ಶ್ರೀಶೈಲ ಶಿಖರ' ಅವರ

ಮಿತ್ರರು ಹೇಳಿದ ಕಥೆಯ ರೂಪಾಂತರ. ಒಂದು ಹೆಣ್ಣಿನ ಬಾಳು, ಭಾವನೆಗಳ ಅಂತರವನ್ನು ಚಿತ್ರಿಸುವ ಈ ನಾಟಕ ಬಹು ಬೆಲೆ ಬಾಳುವ ತತ್ತ್ವವನ್ನು ಸಾರುತ್ತದೆ. ಮಾನವೀಯತೆಗೆ ಬೆಲೆಕೊಡುವ ಈ ನಾಟಕವೇ ಅವರ ನಾಟಕಗಳಲ್ಲಿ ಅತ್ಯುತ್ತಮವಾದುದು. ಮಿಕ್ಕೆರಡು ಅನುವಾದಗಳಲ್ಲಿ ಅನುವಾದಕನಿಗೆ ಎದುರಾಗುವ ಅನೇಕ ಸಮಸ್ಯೆಗಳನ್ನು ವಿ.ಸೀ. ಯವರೂ ಎದುರಿಸಿದ್ದಾರೆ. ಎಷ್ಟು ಸಾರ್ಥಕವಾಗಿವೆ ಈ ಅನುವಾದಗಳು ಎಂಬುದನ್ನು ನಾಟಕ ಪ್ರದರ್ಶನದಲ್ಲಿ ಅಳೆಯಬೇಕು ; ಬೆಲೆ ಕಟ್ಟಬೇಕು. ಹಾಗೆಯೇ ಅಭಿಪ್ರಾಯ ಸೂಚಿಸುವುದು ಅಷ್ಟು ಉಚಿತವಾಗಲಾರದು.

ವಿ.ಸೀ. ಸಂಪಾದಿಸಿದ್ದಷ್ಟು ಮಿತ್ರವರ್ಗ ಬೇರೆಯವರಿಗೆ ಇರುವುದು ಸಾಧ್ಯವಿಲ್ಲ. ಅವರ ವ್ಯಕ್ತಿತ್ವದ ಸತ್ವವೇ ಮೈತ್ರಿಯಿಂದ ಕೂಡಿದ್ದು. ಅವರ ಹಿರಿಯರನ್ನು, ಮಿತ್ರರನ್ನು ಕುರಿತ ಗ್ರಂಥಗಳು: 'ಮಹನೀಯರು', 'ಶಿವರಾಮಕಾರಂತರು', 'ಕಾಲೇಜ್‌ದಿನಗಳು' - ಇವುಗಳಲ್ಲಿರುವ ಚಿತ್ರ ಪರಂಪರೆ ನೆನಪಿಗೆ ಸದಾ ಹಸಿರನ್ನು ಕೊಡುತ್ತದೆ.

ಅವರ 'ಹಣಪ್ರಪಂಚ' ಕನ್ನಡ ಭಾಷೆಯಲ್ಲಿ ರಚಿತವಾದ ಅತ್ಯಮೂಲ್ಯವಾದ ಶಾಸ್ತ್ರಗ್ರಂಥ. ಹಣಪ್ರಪಂಚವನ್ನು ಓದುವಾಗ ಒಂದು ಕಾದಂಬರಿಯನ್ನು ಓದಿದಂತೆ ವಿಚಾರಗಳು ರಸವತ್ತಾಗಿರುವುದು ಕಂಡುಬರುತ್ತದೆ. ಅವರು ಕನ್ನಡದಲ್ಲಿ ಮೊದಲು ಪ್ರಯೋಗ ಮಾಡಿರುವ ಹೊಸಸೃಷ್ಟಿಯಾದ ಪದಪುಂಜಗಳೂ ಕೂಡ ನಮಗೆ ಚಿರಪರಿಚಿತವಾಗಿರುವಷ್ಟು ಅರ್ಥಪೂರ್ಣವಾಗಿವೆ.

'ಸಾಹಿತ್ಯ ವಿಮರ್ಶೆಗಳಲ್ಲಿ ಅರ್ಥ ಮತ್ತು ಮೌಲ್ಯ' ಎಂಬ ಗ್ರಂಥದಲ್ಲಿ ಮೂಡಿಬಂದಿರುವ ವಿಚಾರದ ವಿಸ್ತಾರ ಮತ್ತು ಆಳ ಅಪಾರವಾದ ಮತ್ತು ಖಚಿತವಾದ ವಿದ್ವತ್ತಿನಿಂದ ಮಾತ್ರ ಮೂಡುವುದು ಸಾಧ್ಯ. ಒಂದು ವಿಷಯವನ್ನು ಎಷ್ಟು ದೃಷ್ಟಿಗಳಿಂದ ನೋಡಬಹುದು ಎಂಬುದು ಇಲ್ಲಿ ಸ್ಪಷ್ಟವಾಗಿ ರೂಪುಗೊಳ್ಳುತ್ತದೆ. ಅಲ್ಲಲ್ಲಿ ಬರುವ "ವಿಮರ್ಶಕರೂ ಸರ್ವಜ್ಞರಂತೆ ನುಡಿಯಬೇಕಿಲ್ಲ. ಅವರಿಗೆ ಎಲ್ಲದರ, ಎಲ್ಲ ಬಗೆಯ ಪರಿಚಿತೆಯೂ ಇದೆಯೆಂಬುದನ್ನು ಯಾರು ಪ್ರಮಾಣ ಪ್ರಶಸ್ತಿ ಕೊಟ್ಟಿದ್ದಾರೆ?" ಎಂಬ ಎಚ್ಚರಿಕೆಯ ಮಾತುಗಳು ಎಷ್ಟು ಸಮಯೋಚಿತವಾಗಿವೆ ಇಂದಿಗೆ!

'ಸತ್ಯ ಮತ್ತು ಮೌಲ್ಯ' ದರ್ಶನಶಾಸ್ತ್ರ ಪರವಾದ ಗ್ರಂಥ. ಇದು ಬಹು ವ್ಯಾಪಕವಾದ ಕ್ಷೇತ್ರಗಳನ್ನು ಅಳವಡಿಸಿಕೊಂಡು ರಚಿತವಾಗಿರುವ ಗ್ರಂಥ. ಮಾನವನ ಮನಸ್ಸು ಎಷ್ಟು ಆಳವಾಗಿ ವಿಚಾರ ಮಾಡಬಹುದು ಎನ್ನುವುದನ್ನು ತೋರಿಸುವ ಗ್ರಂಥ.

ಈ ಎರಡೂ ಗ್ರಂಥಗಳೂ ಉಪನ್ಯಾಸಗಳ ವಿಸ್ತೃತರೂಪಗಳು. ಇವೊಂದೊಂದನ್ನೂ ಕುರಿತು ನಾಲ್ಕಾರು ಸಂಪುಟಗಳನ್ನು ರಚಿಸುವ ಸಾಮಗ್ರಿ ವಿ.ಸೀ. ಯವರಲ್ಲಿ ಸಂಗ್ರಹಿತವಾಗಿತ್ತು.

ಈ ಲೇಖನದಲ್ಲಿ ವಿ.ಸೀ. ಯವರ ಕೃತಿಗಳ ಪರಿಚಯಕ್ಕೆ ಪ್ರಯತ್ನ ಮಾಡಿಲ್ಲ. ದಿಕ್ಪ್ರದರ್ಶನಕ್ಕಾಗಿ ಕೆಲವಂಶಗಳನ್ನು ಗುರುತಿಸಿ ತೋರಿಸಲಾಗಿದೆ. ಒಬ್ಬ ವ್ಯಕ್ತಿ ಅವರ ಸಾಹಿತ್ಯ ಸೇವೆಯನ್ನು ಕುರಿತು Ph.D. ಪದವಿಗೆ ಮಹಾಪ್ರಬಂಧವನ್ನು ಬರೆಯುವಷ್ಟು ವಿಷಯವ್ಯಾಪ್ತಿ ಅವರ ಗ್ರಂಥಗಳಲ್ಲಿವೆ ಎಂದು ಹೇಳಿದರೆ ಸಾಕು.

ಯುವಕರಾಗಿ ಅವರು ಕೈಗೊಂಡ ವ್ರತವನ್ನು ಈ ಸಾಲುಗಳು ತಿಳಿಸುತ್ತವೆ:

ಹೋರುವೆವು ಮಲ್ಲರೊಲು ಕಾಲದೊಡನೆ
ಕಾಲವೆಮ್ಮಯದಾಗಿ ಆಗುವನಕ ;
ಗರಿಯಿಕ್ಕದೆಳೆವಕ್ಕಿ ಎಮ್ಮಾಸೆ ಇನ್ನೂ
ತುಂಬುಗರಿವಕ್ಕಿಯದು ಆಗುವನಕ, -
ಆಗಿ ಭೋರಿಡುವ ಬಿರುಗಾಳಿ ಸಮಕೂ
ಗಾಳಿ ಕಡೆ ರೆಕ್ಕೆಗಳ ಹರಡುವನಕ.

ಈ ಕಾರ್ಯದಲ್ಲಿ ಅವರ ವಿಶ್ವಾಸವೆಷ್ಟಿತ್ತೆಂಬುದನ್ನು ಅವರದೆ ಕವನವೊಂದು ಬಲು ಸುಂದರವಾಗಿ ಚಿತ್ರಿಸುತ್ತದೆ :

**ವಿಶ್ವಾಸ**

ಮಾನವನೆತ್ತರ ಆಗಸದೇರಿಗೆ
ಏರುವವರೆಗೂ ಬೆಳೆದೇವು;

ಮಾನವ ಹೃದಯಕೆ ವಿಶ್ವವಿಶಾಲತೆ
ಹಾಯುವವರೆಗೂ ಹಾದೇವು.

ತತ್ವದ ಸಿದ್ಧಿಯ ಕಾಲಕೆ ಕಾದರೆ
ಯುಗ ಯುಗಗಳು ಸಾಕಾದಾವೇ ?

ಸಖ್ಯಕೆ ಸಹನೆಗೆ ಕರುಣೆಗೆ ಒಲವಿಗೆ
ಗಡಿನುಡಿ ಅಡ್ಡಿಯ ತಂದಾವೆ ?

ಒಡೆಯುವ ಮನಗಳ ಸುಡುವ ನಿರಾಸೆಯ
ವೇಗವ ಕಟ್ಟಲೆ ತಡೆದೀತೆ?

ಮೃದು ಸೌಹಾರ್ದವು ನೋವಿಗೆ ಕರಗದೆ
ಸಾಹ್ಯಕ್ಕೆ ನುಗ್ಗದೆ ನಿಂತೀತೆ ?

ಶತ ಶತಮಾನವೂ ತಾವೊಪ್ಪುವ ತೆರ
ನವ ವಿಶ್ವಾಸವು ತೊಟ್ಟಾವು ;

ಹಿರಿಮೆಯ ಚೆಲುವಿನ ಕನಸನು ರೂಢಿಸಿ
ಪ್ರೇಮದ ಶ್ರೇಯವ ನಟ್ಟಾವು.

ಇಹದಲಿ ಒಪ್ಪಲು ಆಗದ ಪರವನು
ಬಯಕೆಯು ಕರೆವುದೆ ಕೈಚಾಚಿ ?

ಬಾಳನು ಶೋಧಿಸಿ ಶುಚಿಯನು ಬೆಳೆದರೆ
ಇಹವೇ ಅರಳದೆ ಪರವಾಗಿ ?

ಈ ನಂಬಿಕೆಯಿಂದ ಜೀವನ ನಡೆಸಿದ ವಿ.ಸೀ. ಕೊನೆಯತನಕ ನಗು ಮುಖವನ್ನು ಜಗತ್ತಿಗೆ ತೋರಿಸಿದರು; ಕಹಿ, ನೋವು, ಕಟಕಿಗಳನ್ನು ನುಂಗಿಕೊಂಡು. ಅವರ ಶಿಷ್ಯವಾತ್ಸಲ್ಯ, ಗುರುಗೌರವ, ಅಧ್ಯಯನ, ಅಧ್ಯಾಪನ, ಕಲಾಸ್ವಾದನೆ, ಎಟುಕದುದರ ಕಡೆಗೆ ಕೈಚಾಚಿ ಗೆಲ್ಲಬೇಕೆಂಬ ಸಾಹಸ, ಗೆದ್ದಾಗ ಅದನ್ನು ಡಂಗುರ ಹಾಕಿ ಸಾರದ ವಿನೀತಗುಣ- ಇತ್ಯಾದಿಗಳಿಂದ ಅವರು, ಅವರ ಕಾರ್ಯಗಳೆಲ್ಲವನ್ನು ಮೀರಿದ ದೊಡ್ಡ ಚೈತನ್ಯವಾಗಿದ್ದರು. ಆ ಚೈತನ್ಯದ ಅಲ್ಪಾಂಶ ಮಾತ್ರ ನಮಗೆ ಲಭ್ಯವಾಗಿದೆ ಬರಹದ ಮೂಲಕ. ಅವರನ್ನು ಕಂಡವರು ಆ ಮಹಾ ಸತ್ವದ ಚಿಂತನೆಯಲ್ಲಿ ಸದಾ ಆನಂದಪಡುತ್ತಾರೆ.

❑

# ಡಾ|| ಎಸ್.ಕೆ.ಕರೀಂಖಾನ್

ಡಾ.ಕೆ.ಆರ್.ಸಂಧ್ಯಾರೆಡ್ಡಿ

ಜನಪದ ಗೀತೆಗಳ ಸಂಗ್ರಹ ಹಾಗೂ ಗಾಯನದಿಂದ 40ರ ದಶಕಗಳಲ್ಲಿ ಮನೆಮನೆಯ ಮಾತಾಗಿದ್ದ ಎಸ್.ಕೆ. ಕರೀಂಖಾನ್ ಅವರದು ಬಹುಮುಖ ವ್ಯಕ್ತಿತ್ವ. ಕನ್ನಡದ ಜಾನಪದ, ರಂಗಭೂಮಿ, ಚಿತ್ರರಂಗ ಹಾಗೂ ಸಾಹಿತ್ಯ ಕ್ಷೇತ್ರಕ್ಕೆ ವಿಶಿಷ್ಟ ಕಾಣಿಕೆ ನೀಡಿರುವ ಕರೀಂಖಾನರು ಅಪ್ರತಿಮ ದೇಶಾಭಿಮಾನಿಯಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ ಹಾಗೂ ಕರ್ನಾಟಕದ ಏಕೀಕರಣಕ್ಕೆ ಹೋರಾಡಿದವರಾಗಿ ಕನ್ನಡ ನಾಡಿನ ಸಂಸ್ಕೃತಿಯಲ್ಲಿ ವಿಶಿಷ್ಟ ಸ್ಥಾನ ಗಳಿಸಿದ್ದಾರೆ.

ಕರೀಂಖಾನ್ ಅವರು ಹಾಸನ ಜಿಲ್ಲೆಯ ಸಕಲೇಶಪುರದಲ್ಲಿ ಜನಿಸಿದರು. ಆಫ್ಘಾನಿಸ್ಥಾನದಲ್ಲಿ ಯೋಧರಾಗಿದ್ದ ಅವರ ತಂದೆ ಅಬ್ದುರ್ರಹಮಾನ್‌ಖಾನ್ ಅವರು ಮನೆಕಲಹದಿಂದಾಗಿ ದೇಶಬಿಟ್ಟು ಭಾರತಕ್ಕೆ ಬಂದವರು. ಕರೀಂಖಾನರ ತಾಯಿ ಜೈನಬ್ಬಿ ಅರಬ್ ಮೂಲದವರು. ಅವರಿಗೆ ಆರು ಪುತ್ರರು, ಒಬ್ಬ ಪುತ್ರಿ, ಹೀಗೆ ಒಟ್ಟು ಏಳು ಮಂದಿ ಮಕ್ಕಳಲ್ಲಿ ಕರೀಂಖಾನ್ ನಾಲ್ಕನೆಯವರು. ಹಾಸನದಲ್ಲಿ 5ನೇ ಫಾರಂವರೆಗೆ ಕರೀಂಖಾನ್‌ರ ವಿದ್ಯಾಭ್ಯಾಸ ನಡೆಯಿತು. ಬಾಲ್ಯದಲ್ಲಿ ತಂದೆಯನ್ನು ಕಳೆದುಕೊಂಡ ಅವರು ಮುಂದೆ ಅಣ್ಣನ ಆಶ್ರಯದಲ್ಲಿ ಬೆಳೆದರು. ಕರೀಂಖಾನರ ಶೈಕ್ಷಣಿಕ ಹಾಗೂ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಅವರ ಗುರು ಆಚಂಗಿ ನಾರಾಯಣಶಾಸ್ತ್ರಿಗಳು ಬೀರಿದ ಪ್ರಭಾವ ಅಪಾರ. ನಾರಾಯಣಶಾಸ್ತ್ರಿಗಳು ಕೇವಲ ಶಿಕ್ಷಕರಾಗಿರಲಿಲ್ಲ. 'ನೀವಾರ' ಎಂಬ ಕಥಾಸಂಕಲನವನ್ನು ಆಚಂಗಿ ನಾರಾಯಣಶಾಸ್ತ್ರಿಯವರಿಗೆ ಅರ್ಪಿಸುತ್ತಾ ಕರೀಂಖಾನರು ಹೇಳಿರುವಂತೆ- ಅವರು ವೇದವೇದಿಗಳೂ ಈ, ತತ್ತ್ವಶಾಸ್ತ್ರಕೋವಿದರೂ, ಕವಿಪುಂಗವರೂ, ಅದ್ಭುತ ವಿದ್ಯಾವಂತರೂ, ಸಮತಾವಾದಿಗಳೂ ಆಗಿದ್ದರು. ಅವರು ಕರೀಂಖಾನರನ್ನು ಸಾಹಿತ್ಯ ಸೇವೆಗೆ ಪ್ರೇರೇಪಿಸಿದರು. ಶಾಸ್ತ್ರಿಗಳಿಗೆ ಸಂಗೀತ, ವೈದ್ಯ, ಜ್ಯೋತಿಷ್ಯ ಶಾಸ್ತ್ರಗಳಲ್ಲಿಯೂ ಸಾಕಷ್ಟು ಪಾಂಡಿತ್ಯವಿತ್ತು. ಇಂತಹ ಗುರುಗಳ ಮೆಚ್ಚಿನ ಶಿಷ್ಯನಾಗಿ ಬೆಳೆದ ಕರೀಂಖಾನರು ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲೂ ಅಪೂರ್ವ ಪಾಂಡಿತ್ಯ ಗಳಿಸಿದರು.

ಹೈಸ್ಕೂಲ್ ತಲುಪುವ ವೇಳೆಗೆ ಕರೀಂಖಾನರು ಜನಪದ ಸಾಹಿತ್ಯದತ್ತ ಆಕರ್ಷಿತರಾದರು. ಅವರಿಗೆ ಜನಪದ ಸಾಹಿತ್ಯದಲ್ಲಿ ಆಸಕ್ತಿ ಮೂಡುವಂತೆ ಮಾಡಿದ ಸಂದರ್ಭ ಹೀಗಿದೆ : ಹಿತ್ತಾಳೆ, ತಾಮ್ರ ಪಾತ್ರೆಗಳ ತಯಾರಿಕೆಗೆ ಪ್ರಸಿದ್ಧವಾಗಿದ್ದ ಶ್ರವಣಬೆಳಗೊಳದಿಂದ ಪಾತ್ರೆಪರಡಿಗಳನ್ನು ಗಾಡಿಗಳಲ್ಲಿ ಹೇರಿಕೊಂಡು ಊರೂರು ತಿರುಗುತ್ತ ಮಾರಾಟ ಮಾಡುತ್ತಿದ್ದ ವ್ಯಾಪಾರಿಗಳು ಸಕಲೇಶಪುರಕ್ಕೆ ಬಂದಾಗ, ಅವರ ಸರಕುಗಳನ್ನು ಇಳಿಸಿಕೊಳ್ಳುವುದಕ್ಕೆ ಕರೀಂಖಾನರ ಮನೆಯ ಮುಂದಿನ ಕೋಣೆಯನ್ನು ಬಿಟ್ಟುಕೊಡಲಾಗುತ್ತಿತ್ತು. ಸುತ್ತಲಿನ ಹಳ್ಳಿಗಳನ್ನು ತಿರುಗಿ ಬಂದ ವ್ಯಾಪಾರಿಗಳು ರಾತ್ರಿಯ ಹೊತ್ತು ಮನೆಯ ಮುಂದೆ ಗಾಡಿಗಳನ್ನು ನಿಲ್ಲಿಸಿಕೊಂಡು ಬಯಲಿನಲ್ಲಿಯೇ ಅಡುಗೆ ಮಾಡಿ ಉಂಡ ನಂತರ ಜನಪದಗೀತೆಗಳನ್ನು ಸುಶ್ರಾವ್ಯವಾಗಿ ಹಾಡಿಕೊಳ್ಳುತ್ತಿದ್ದರು. ಹೀಗೆ ಜನಪದ ಗೀತೆಗಳನ್ನು ಹತ್ತಿರದಿಂದ ಕೇಳುವ ಅವಕಾಶ ಕರೀಂಖಾನ್‌ರಿಗೆ ದೊರೆಯಿತು. ಜನಪದ ಗೀತೆಗಳ ನಾದ ಸೌಂದರ್ಯಕ್ಕೆ, ಭಾವಸೌಂದರ್ಯಕ್ಕೆ ಅವರು ಮಾರು ಹೋದರು. ಕರೀಂಖಾನರ ಅಭಿಪ್ರಾಯದಲ್ಲಿ ಶಾಸ್ತ್ರೀಯ ಸಂಗೀತದ ಬಹುತೇಕ ಕೃತಿಗಳೆಲ್ಲವೂ, ಭಗವಂತನ ಒಲುಮೆಯನ್ನು ಬೇಡುವಂಥವು. ಅಲ್ಲಿನ ರಾಗಗಳಲ್ಲಿ ದೀನಭಾವವೇ ಪ್ರಧಾನ.

ರಾಧಾಕೃಷ್ಣ ಪ್ರೇಮವನ್ನು ಕುರಿತಂತಹ ಶೃಂಗಾರ ರಸದ ಕೃತಿಗಳಲ್ಲಿಯೂ ದೈನ್ಯಭಾವವೇ ಇದೆ. ಆದರೆ ಜನಪದ ಸಾಹಿತ್ಯದಲ್ಲಿ ಉತ್ಸಾಹ ಮತ್ತು ಸ್ಫೂರ್ತಿ, ಲವಲವಿಕೆಗಳಿವೆ. ಮುಂದೆ ಕರೀಂಖಾನರು ಕಾಂಗ್ರೆಸ್ ಚಳುವಳಿ, ಕರ್ನಾಟಕದ ಏಕೀಕರಣ, ಚುನಾವಣೆ ಮೊದಲಾದುವುಗಳಿಗಾಗಿ ಕರ್ನಾಟಕದಾದ್ಯಂತ ಬಹಳಷ್ಟು ಸಲ ಕಾಲ್ನಡಿಗೆಯಲ್ಲಿ ಸಂಚಾರ ಮಾಡುತ್ತಿದ್ದರಿಂದಾಗಿ ಬೇರೆ ಬೇರೆ ಪ್ರದೇಶಗಳ ಜನಪದ ಗೀತೆಗಳನ್ನು ಕೇಳುವ, ಕಲಿಯುವ, ದಾಖಲಿಸುವ ಅವಕಾಶವೂ ಅನಾಯಾಸವಾಗಿಯೇ ಸಿಕ್ಕಿತು. ಜನಪದ ಗೀತೆಗಳ ಸಂಗ್ರಹ ಮತ್ತು ಹಾಡುಗಾರಿಕೆ ಅವರ ಹವ್ಯಾಸ ಹಾಗೂ ಜೀವನೋಪಾಯವೂ ಆಯಿತು. ಜನಪದವನ್ನು ಕರೀಂಖಾನರು ಪ್ರಚಾರದ ಮಾಧ್ಯಮವಾಗಿ ಬಳಸಿಕೊಂಡರು. ಜನಪದಗೀತೆಗಳನ್ನು ಭಾವ ತುಂಬಿ ಹಾಡುವ ಕಲೆ ಕರೀಂಖಾನರಿಗೆ ಸಿದ್ಧಿಸಿತ್ತು. ಹಳ್ಳಿಯ ಬಯಲಿನಲ್ಲಿ ಯಾವುದಾದರೊಂದು ಮರದ ಕೆಳಗೆ ನಿಂತು ಅವರು ಹಾಡಲು ಪ್ರಾರಂಭಿಸುತ್ತಿದ್ದರು. ಹಾಡಿನಿಂದ ಆಕರ್ಷಿತರಾದ ಜನ ಇವರ ಸುತ್ತ ಜಮಾಯಿಸುತ್ತಿದ್ದರು. ಹಾಡಿದ್ದು ಮುಗಿದ ನಂತರ ಕರೀಂಖಾನರು ಕಾಂಗ್ರೆಸ್ ಸದಸ್ಯತ್ವದ ಫಾರಂಗಳನ್ನು ಜನಕ್ಕೆ ಹಂಚುತ್ತಾ ಸದಸ್ಯತ್ವ ಮಾಡಿಸುತ್ತಿದ್ದರು. ಕರೀಂಖಾನರ ಹಾಡಿಗೆ ಆ ಕಾಲದ ಪಂಡಿತಪಾಮರರೆಲ್ಲ ಮಾರುಹೋಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ವಸಂತಮಹೋತ್ಸವ ಸಂದರ್ಭದಲ್ಲಿ ಕರೀಂಖಾನ್ ಜನಪದ ಗೀತೆಗಳನ್ನು ಹಾಡಿ ವೇದಿಕೆಯಿಂದ ಕೆಳಗಿಳಿದು ಬಂದ ನಂತರ, ನೀವು ಇನ್ನೊಂದೆರಡು ನಿಮಿಷ ಹಾಡಿದ್ದರೆ ನಾನು ಅತ್ತೆಬಿಡುತ್ತಿದ್ದೆ ಎಂದು ಮಾಸ್ತಿಯವರು ಹೇಳಿದರಂತೆ. ಕರೀಂಖಾನರು ಹೆಣ್ಣೊಪ್ಪಿಸುವ ಹಾಡುಗಳನ್ನು ಹಾಡುವಾಗ ಸಭೆಯಲ್ಲಿದ್ದ ಎಲ್ಲ ಹೆಣ್ಣುಮಕ್ಕಳೂ ಅತ್ತುಬಿಡುತ್ತಿದ್ದರಂತೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕಾಂಗ್ರೆಸ್ಸಿನ ಚಳುವಳಿಯಲ್ಲಿ ಭಾಗವಹಿಸಿ ಜೈಲು ಸೇರಿದ ಸಂದರ್ಭದಲ್ಲಿ ಅಲ್ಲಿದ್ದ ಜೊತೆಯ ಚಳುವಳಿಗಾರರೆಲ್ಲ ಕರೀಂಖಾನ್ ಅವರಿಗೆ ಹಾಡಿಗಾಗಿ ಮುಗಿಬೀಳುತ್ತಿದ್ದರಂತೆ. ಕರೀಂಖಾನ್‌ರಿಂದಾಗಿ ಜನಪದ ಗೀತೆಗಳು ಹೆಚ್ಚು ಪ್ರಚಾರ ಪಡೆದವು.

ಗಾಂಧೀಜಿಯವರು ವಿಶ್ರಾಂತಿಗೆಂದು ನಂದಿಬೆಟ್ಟದಲ್ಲಿ ಕೆಲವು ತಿಂಗಳುಗಳ ಕಾಲದಲ್ಲಿ ತಂಗಿದ್ದಾಗ ಗಾಂಧೀಜಿಯವರನ್ನು ಸಮೀಪದಿಂದ ಕಾಣುವ ಅವಕಾಶ ಕರೀಂಖಾನ್‌ರಿಗೆ ದೊರೆಯಿತು. ಗಾಂಧೀ ಪ್ರಭಾವದಿಂದ ಅವರು ಸ್ವಾತಂತ್ರ್ಯ ಹೋರಾಟದ ಚಳುವಳಿಯಲ್ಲಿ ಧುಮುಕಿದರು. ದೇಶಭಕ್ತಿಯ ಸಂದೇಶ ಹರಡುತ್ತಾ ಕಾಲ್ನಡಿಗೆಯಲ್ಲಿ ಊರೂರು ತಿರುಗಿದರು. ಅನೇಕಸಲ ಜೈಲು ಶಿಕ್ಷೆ ಅನುಭವಿಸಿದರು. ಈ ಅವಧಿಯಲ್ಲಿ ಉದ್ದಾಮ ಸ್ವಾತಂತ್ರ್ಯ ಹೋರಾಟಗಾರರ ಪರಿಚಯವಾಯಿತು. ಜನಪದ ಗೀತೆಗಳ ಗಾಯನ, ಅಪ್ರತಿಮ ವಾಗ್ಮಿತೆ ಹಾಗೂ ಭಾಷಣ ಶೈಲಿಗಳಿಂದ ಅವರು ಸಹ-ಚಳುವಳಿಗಾರರನ್ನು ಮೋಡಿಮಾಡಿದ್ದರು. ಜೈಲಿನಲ್ಲಿ ಗಾಂಧೀ ವಿಚಾರಗಳನ್ನು ಕುರಿತಂತೆ ಕರೀಂಖಾನರಿಂದ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದರು. ಆದರೆ

ಈ ಚಟುವಟಿಕಗಳಲ್ಲಿ ತೊಡಗಿಸಿಕೊಂಡ ಕಾರಣ ಕರೀಂಖಾನರಿಗೆ ಜೀವನೋಪಾಯ ಕಠಿಣವಾಯಿತು. ಇವರ ಚಟುವಟಿಕೆಗಳ ಪರಿಣಾಮವನ್ನು ಕುಟುಂಬದವರೂ ಅನುಭವಿಸಬೇಕಾಯಿತು. ಇವರು ಚಳುವಳಿಯಲ್ಲಿ ಭಾಗವಹಿಸಿದ್ದ ನೆಪಹೂಡಿ, ಬ್ರಿಟೀಷ್ ಅಧಿಕಾರಿಯೊಬ್ಬ ಖಾನ್ ಅವರ ಅಣ್ಣ ನಡೆಸುತ್ತಿದ್ದ ಜವಳಿ ಅಂಗಡಿಯ ಲೈಸೆನ್ಸ್ ರದ್ದುಪಡಿಸಿದನಂತೆ. ತನ್ನಿಂದ ಮನೆಯವರೆಗೆ ತೊಂದರೆಯಾಗಬಾರದೆಂದು ಅವರು ಮನೆಯಿಂದ ದೂರ ಸರಿದರು. ಹೊಟ್ಟೆಪಾಡಿಗಾಗಿ ಜನಪದಗೀತೆಗಳ ಸಂಗ್ರಹಗಳನ್ನು ತಾವೇ ಪ್ರಕಟಿಸಿ ಮಾರಿದರು. ಈ ಸಂದರ್ಭದಲ್ಲಿಯೇ ಅವರು ರಂಗಭೂಮಿ ಯತ್ತಲೂ ಆಕರ್ಷಿತರಾದರು. ನಾಟಕಗಳಿಗೆ ಕಥೆ, ಸಂಭಾಷಣೆ ಬರೆಯುವ ಕೆಲಸ ಮಾಡಿದರು. ಕೆಲವು ಕಾಲ ಧಾರವಾಡದ 'ಲೋಕಮಿತ್ರ' ಎಂಬ ಪತ್ರಿಕೆಯ ಸಂಪಾದಕರಾಗಿಯೂ ಕೆಲಸ ಮಾಡಿದರು. ಇದೆಲ್ಲವೂ ತಾತ್ಕಾಲಿಕವಾಗಿತ್ತು. Royal Indian Navy ಎಂಬ ಸಂಸ್ಥೆಯಲ್ಲಿ ಕೆಲಸ ಸಿಕ್ಕಿತು. ತಂತಿರಹಿತ ವರ್ತಮಾನ ಕಳಿಸುವ ಶಾಖೆಯಲ್ಲಿ ಇವರ ಕೆಲಸ. ಅದಕ್ಕಾಗಿ ಮುಂಬೈಗೆ ಹೋದರು. ಎಲ್ಲೆಲ್ಲಿಂದಲೋ ಊರು ಮನೆ ಬಿಟ್ಟು ಇಲ್ಲಿ ಬಂದು ಸೇರಿದ್ದ ಉದ್ಯೋಗಿಗಳಿಗೆ ಮಿಲಿಟರಿ ಬ್ಯಾಂಕ್‌ಗಳಲ್ಲಿಯೇ ವಾಸ. ಪ್ರತಿದಿನ ಸಂಜೆ ಬ್ರಿಟಿಷ್ ಅಧಿಕಾರಿಯೊಬ್ಬ ಬ್ಯಾಂಕ್‌ಗಳ ಮುಂದೆ ಬಂದು Any requests ಎಂದು ವಿಚಾರಿಸಿಕೊಳ್ಳುತ್ತಿದ್ದನಂತೆ. ಕರೀಂಖಾನ್ ಅವರು, ಊರಲ್ಲಿ ನನ್ನ ಮನೆಯವರಿಗೆ ಸರ್ಕಾರದಿಂದ ತೊಂದರೆ ಇದೆ. ದಯವಿಟ್ಟು ಅವರಿಗೆ ರಕ್ಷಣೆ ಕೊಡಿ ಎಂದು ಕೇಳಿಕೊಂಡರಂತೆ. ಕೂಡಲೇ ಆ ಅಧಿಕಾರಿ ಅದಕ್ಕೆ ತಕ್ಕ ವ್ಯವಸ್ಥೆ ಮಾಡಿದ. ಆದರೂ ಅಲ್ಲಿ ಹೆಚ್ಚುಕಾಲ ಇರುವ ಮನಸ್ಸಾಗಲಿಲ್ಲ. ಅದನ್ನು ಬಿಟ್ಟು ಬಂದರು.

ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಕರೀಂಖಾನ್ ಪ್ರಮುಖ ಪಾತ್ರ ವಹಿಸಿದರು. ಬದುಕಿನುದ್ದಕ್ಕೂ ಹೋರಾಡುತ್ತಲೇ ಬಂದ ಖಾನ್ ಅವರಿಗೆ ಭದ್ರವಾಗಿ ನೆಲೆನಿಲ್ಲುವಂತಹ ಆರ್ಥಿಕ ನೆಲೆ ಇರಲಿಲ್ಲ. ಹೀಗಾಗಿ ಅವರು ಸಂಸಾರಿಯಾಗಲೇ ಇಲ್ಲ. ಉದರಂಭರಣಕ್ಕಾಗಿಯೇ ಅವರು ಸಿನಿಮಾ ರಂಗಕ್ಕೆ ಹೋದರು. ಭಕ್ತ ಕನಕದಾಸ ನಿರ್ಮಾಪಕ ಪ್ರಸಾದ್ ಮೂವಿಸ್‌ನ ದಿ. ಆರ್. ನಾಯ್ಡು ಅವರು ಕರೀಂಖಾನ್‌ರನ್ನು ಮದ್ರಾಸಿಗೆ ಕರೆದುಕೊಂಡು ಹೋದರು. ಅಲ್ಲಿದ್ದ 10 ವರ್ಷಗಳ ಅವಧಿಯಲ್ಲಿ ಅವರು ಅನೇಕ ಚಿತ್ರಗಳಿಗೆ ಚಿತ್ರಕಥೆ, ಸಂಭಾಷಣೆ, ಹಾಡುಗಳನ್ನು ಬರೆದರು.

ಸ್ವರ್ಣಗೌರಿ ಚಿತ್ರಕ್ಕೆ ಅವರು ಬರೆದ ಹಾಡುಗಳು ಅತ್ಯಂತ ಜನಪ್ರಿಯವಾದವು. ಈ ಚಿತ್ರದ ಹಾಡುಗಳಿಗಾಗಿಯೇ ಕರೀಂಖಾನ್ ಹೆಸರು ಬಹಳ ಪ್ರಸಿದ್ಧಿ ಪಡೆಯಿತು. ಪ್ರಶಸ್ತಿಯ ಗೌರವವೂ ಪ್ರಾಪ್ತವಾಯಿತು. ಚಿತ್ರರಂಗದ ಆಗುಹೋಗುಗಳನ್ನು ಸಮೀಪದಿಂದ ನೋಡುತ್ತಿದ್ದ ಕರೀಂಖಾನ್ ಅಲ್ಲಿನ ಶೋಷಣೆ, ಅವ್ಯವಹಾರಗಳಿಂದ ಬಹಳ ನೊಂದರು. ಚಿತ್ರ ಮಾಡುವವರ ಹಾಗೆ ಚಿತ್ರ ನೋಡುವವರೂ ಕೂಡ ವಿಲಾಸಿ ಜನ, ಭೋಗಿಜನ. 'ನಾನು ಹಾಡು ಬರೆದದ್ದು ನಿಂತಾಗ ಯಾರೂ ಪ್ರಶ್ನಿಸಲಿಲ್ಲ' ಎನ್ನುವ ಕರೀಂಖಾನ್‌ರ ಮಾತು ಚಿಂತನಾರ್ಹವಾಗಿದೆ.

ಕರೀಂಖಾನ್‌ರ ಬದುಕಿನಲ್ಲಿ ಸೇವಾದಳದ ಪಾತ್ರವೂ ಮಹತ್ವದ್ದು. ಸೇವಾದಳ ಒಂದು ಜಾತ್ಯಾತೀತ ಧರ್ಮಾತೀತ ಸಂಸ್ಥೆಯಾಗಿತ್ತು. ಪುರಾಣ, ಇತಿಹಾಸ, ಸಾಹಿತ್ಯ ಕುರಿತಂತೆ ನಿತ್ಯವೂ ಉಪನ್ಯಾಸ ಕಾರ್ಯಕ್ರಮಗಳನ್ನು ನಡೆಸುವುದು ಸೇವಾದಳದ ಚಟುವಟಿಕೆಯ ಒಂದು ಅಂಗವಾಗಿತ್ತು. ಇದು ಕರೀಂಖಾನ್‌ರ ಬೌದ್ಧಿಕ ಬೆಳವಣಿಗೆಗಳಿಗೆ ಬಹಳ ಸಹಾಯಕವಾಯಿತು. ಸೇವಾದಳದ ಬೆಳವಣಿಗೆಯ ಬಗ್ಗೆ ಕರೀಂಖಾನ್ ಕಾಳಜಿ ವಹಿಸಿದರು. ಸ್ವಾತಂತ್ರ್ಯಾ ನಂತರ ಕಾಂಗ್ರೆಸ್ ಸೇವಾದಳವು ಸರಿಯಾದ ಪೋಷಣೆಯಿಲ್ಲದೆ ಸೊರಗಿ ಹೋಗಿತ್ತು.

ಈ ಸಂಬಂಧವಾಗಿ ಕರೀಂಖಾನರು ಆಗಿನ ಮುಖ್ಯಮಂತ್ರಿ ಕೆ.ಸಿ.ರೆಡ್ಡಿಯವರನ್ನು ಭೇಟಿಮಾಡಿ 'ಸೇವಾದಳ ಹೀಗೆ ಸೊರಗುತ್ತಿರುವುದು ಸರಿಯೇ' ಎಂದು ಪ್ರಶ್ನಿಸಿದರು. 'ಸೇವಾದಳವು ಕಾಂಗ್ರೆಸ್‌ನಂತಹ ಒಂದು ಪಕ್ಷಕ್ಕೆ ಸೇರಿದ ಸಂಘಟನೆಯಾಗಿರುವುದರಿಂದ ಸರ್ಕಾರ ಏನೂ ಮಾಡಲು ಬರುವುದಿಲ್ಲ. ಪಕ್ಷವೇ ಅದನ್ನು ಪೋಷಿಸಬೇಕು' ಎಂದು ರೆಡ್ಡಿಯವರು ತಿಳಿಸಿದರು. ಈ ಸಮಸ್ಯೆಗೆ ಪರಿಹಾರ ಕಂಡುಹಿಡಿಯುವ ಬಗ್ಗೆ ಸಾಕಷ್ಟು ಸಮಾಲೋಚಿಸಿದ ನಂತರ ಸೇವಾದಳದ ಹೆಸರನ್ನು 'ಭಾರತೀಯ ಸೇವಾದಳ' ಎಂದು ಬದಲಾಯಿಸುವ ನಿರ್ಣಯ ಕೈಗೊಳ್ಳಲಾಯಿತು. ಬೇಲೂರಿನಲ್ಲಿ ಕೆ.ಸಿ.ರೆಡ್ಡಿಯವರ ಅಧ್ಯಕ್ಷತೆಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಸೇವಾದಳದ ಹೆಸರನ್ನು ಭಾರತ ಸೇವಾದಳ ಎಂದು ಬದಲಾಯಿಸುವ ನಿರ್ಣಯ ಅಧಿಕೃತವಾಗಿ ಜಾರಿಗೆ ಬಂತು. ಅಷ್ಟೇ ಅಲ್ಲ ಸೇವಾದಳದ ತರಬೇತಿ ಪಡೆದವರನ್ನು ಶಾಲೆಗಳಿಗೆ ವ್ಯಾಯಾಮ ಶಿಕ್ಷಕರಾಗಿ ನೇಮಿಸಬೇಕೆಂಬ ಆಜ್ಞೆಯೂ ಹೊರಬಿತ್ತು. ಅದರಂತೆ ಸೇವಾದಳದಲ್ಲಿ ದುಡಿದ ಅನೇಕರಿಗೆ ಉದ್ಯೋಗವೂ ಸಿಕ್ಕಿತು.

ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ಸೇವಾದಳದ ಸಂಘಟನೆಗಾಗಿ ರಾಜ್ಯದಾದ್ಯಂತ ಪ್ರವಾಸ ಮಾಡಲು ಕರೀಂಖಾನ್ ಅವರನ್ನು ಆರಿಸಲಾಯಿತು. ಒಂದು ವರ್ಷ ಅತ್ಯಂತ ನಿಷ್ಠೆಯಿಂದ ಈ ಕೆಲಸ ಮಾಡಿದ ಕರೀಂಖಾನ್‌ರಿಗೆ ಸರ್ಕಾರವು ಮೊದಲೇ ತಿಳಿಸಿದಂತಹ ಭತ್ಯವನ್ನು ಕೊಡದೆ ಒಂದು ತಿಂಗಳಿಗೆ ಕೊಡಬೇಕಾದ ಮೊತ್ತವನ್ನು ಇದೇ ವರ್ಷಕ್ಕೆ ಎಂದು ನಿಗದಿಸಿದಾಗ ಇನ್ನೆಂದಿಗೂ ನಿಮ್ಮ ಕಛೇರಿಗೆ ಬರಲಾರೆ, ಎಂದು ಶಪಥ ಮಾಡಿ ಹೊರ ಬಂದರಂತೆ ಕರೀಂಖಾನ್.

ಕರೀಂಖಾನ್ ಅವರು ದುಡಿದ ಎಲ್ಲ ಕ್ಷೇತ್ರಗಳಲ್ಲಿಯೂ ಅವರಿಗೆ ಸಿಕ್ಕ ಪ್ರತಿಫಲ ಈ ರೀತಿಯದೇ ಆಗಿತ್ತು. ಕರೀಂಖಾನ್‌ರ ಮಾತಿನಲ್ಲಿಯೇ ಹೇಳುವುದಾದರೆ ಎಲ್ಲರೂ ದುಡಿಸಿಕೊಂಡು ದೂರವಿಟ್ಟರು. ಕರೀಂಖಾನರು ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಅನೇಕಸಲ ಜೈಲಿಗೆ ಹೋಗಿ ಬಂದಿದ್ದರೂ ಸ್ವಾತಂತ್ರ್ಯ ಯೋಧರಿಗೆ ದೊರೆಯಬಹುದಾಗಿದ್ದ ಗೌರವಧನ ಅವರಿಗೆ ದಕ್ಕಲಿಲ್ಲ.

ಸರ್ಕಾರವು ಕರೀಂಖಾನ್ ಅವರಿಗೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷ ಸ್ಥಾನವನ್ನು ನೀಡಿದಾಗ ಎಲ್ಲರಿಗೂ ಮತ್ತೊಮ್ಮೆ ಕರೀಂಖಾನರ ನೆನಪು ಬಂದಿತು. ಅವರಿಗೆ ಈ ಸ್ಥಾನ ನೀಡಿದ್ದನ್ನು ಕೆಲವರು ಟೀಕಿಸಿದ್ದೂ ಉಂಟು. ಆದರೆ ಹಿರಿಯ ತಲೆಮಾರಿನವರಿಗೆ ಕರೀಂಖಾನರ ಕೊಡುಗೆಯ ಬಗ್ಗೆ ಯಾವ ಸಂದೇಹವೂ ಇರಲಿಲ್ಲ. ಬಹಳ ಸೂಕ್ಷ್ಮಮನಸ್ಸಿನ ಕರೀಂಖಾನರು ತಮ್ಮ ಬಗ್ಗೆ ಟೀಕೆ ಬಂದಾಗ ಕೂಡಲೇ ರಾಜೀನಾಮೆ ಪ್ರಕಟಿಸಿದರು. ಆಗ ಸರ್ಕಾರವೇ ಅವರ ಮನೆ ಬಾಗಿಲಿಗೆ ಬಂದು ಕರೀಂಖಾನರ ಮನ ಒಲಿಸಿತು. ಯಾವ ಆರ್ಥಿಕ ಲಾಭವೂ ಇಲ್ಲದ ಈ ಗೌರವ ಹುದ್ದೆಯಲ್ಲಿ ಕರೀಂಖಾನರು ಎಂದಿನಂತೆ ನಿಸ್ಪೃಹ ಸೇವೆ ಸಲ್ಲಿಸಿದರು. ಕರೀಂಖಾನರ ಅವಧಿಯಲ್ಲಿ ಜಾನಪದ ಅಕಾಡೆಮಿಗೆ ಸರ್ಕಾರದಿಂದ

ಮೊದಲಿಗಿಂತ ಹೆಚ್ಚಿನ ಹಣ ಬಿಡುಗಡೆಯಾಯಿತು. ಕರೀಂಖಾನರು ಪ್ರದರ್ಶಕ ಕಲೆಗಳ ವಿಷಯಕ್ಕೆ ಹೆಚ್ಚು ಗಮನ ಕೊಟ್ಟರು. ಕಲೆಗಳ ಹಾಗೂ ಪ್ರದರ್ಶನಗಳ ವಿಡಿಯೋ ಚಿತ್ರೀಕರಣ ಮಾಡಲು ಯೋಜನೆ ರೂಪಿಸಿದರು. ಕರೀಂಖಾನರ ಅವಧಿಯಲ್ಲಿ ನಡೆದ ಬಹುಮುಖ್ಯ ಕೆಲಸವೆಂದರೆ ಅದುವರೆಗೆ ಅಜ್ಞಾತವಾಗಿದ್ದ ಗಿರಿಜನರ ಸಂಸ್ಕೃತಿಯ ಅಧ್ಯಯನ ಹಾಗೂ ಅವರ ಕಲೆಗಳ ದಾಖಲಾತಿ. ಗಿರಿಜನರನ್ನು ಹಾಗೇ ಅವರ ಪರಿಸರದಲ್ಲಿಯೇ ಚಿತ್ರೀಕರಿಸುವ ವಿಶೇಷ ಯೋಜನೆ ಯಶಸ್ವಿಯಾಯಿತು .'ವಿಶೇಷ ಗಿರಿಜನ ಪ್ರಶಸ್ತಿ' ನೀಡುವುದನ್ನು ಕರೀಂಖಾನ್ ಆರಂಭಿಸಿದರು. ವಿಚಾರ ಸಂಕಿರಣ ಹಾಗೂ ಕಮ್ಮಟಗಳ ಜೊತೆಗೆ ಯಕ್ಷಗಾನದ ಬಣ್ಣಗಾರಿಕೆ ಹಾಗೂ ಕಲಾ ಪ್ರದರ್ಶನದ ದಾಖಲಾತಿ, ಗಡಿನಾಡು ಪ್ರದೇಶಗಳಲ್ಲಿ ಜಾನಪದ ಮೇಳಗಳ ವ್ಯವಸ್ಥೆ ಇವು ಕರೀಂಖಾನರ ಅವಧಿಯ ವಿಶಿಷ್ಟ ಕೆಲಸಗಳು. ಕರೀಂಖಾನರ ಕಾಲದಲ್ಲಿ ಅರಂಭವಾದ ಬುಡಕಟ್ಟು ಜನಾಂಗಗಳ ಅಧ್ಯಯನ ಇಂದು ಜಾನಪದ ಅಧ್ಯಯನದಲ್ಲಿ ಒಂದು ಪ್ರತ್ಯೇಕ ಶಾಖೆಯಾಗಿ ಬೆಳೆಯುವಷ್ಟರ ಮಟ್ಟಿಗೆ ವಿಸ್ತೃತಗೊಂಡಿದೆ.

ಅನೇಕ ಪ್ರತಿಷ್ಠಿತ ಪ್ರಶಸ್ತಿಗಳೂ ಸನ್ಮಾನಗಳೂ ಕರೀಂಖಾನರಿಗೆ ದೊರೆತಿವೆ. ಕರ್ನಾಟಕ ಸರ್ಕಾರದ 'ಜನಪದಶ್ರೀ' ಪ್ರಶಸ್ತಿ, ಗುಲ್ಬರ್ಗ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿ, ಹುಬ್ಬಳ್ಳಿಯ ಮೂರು ಸಾವಿರ ಜಂಗಮ ಮಠದಿಂದ ಜಾನಪದ ಜಂಗಮ ಪ್ರಶಸ್ತಿ, ಮಂಡ್ಯದ ಜೀಶಂಪ ಜಾನಪದ ಪ್ರಶಸ್ತಿ (1995), ರಂಗಭೂಮಿ, ಚಿತ್ರರಂಗ, ಜಾನಪದ ಕ್ಷೇತ್ರದಲ್ಲಿ ಅನವರತ ಶ್ರಮಿಸಿದ ಜಾನಪದ ಹರಿಕಾರ ಎಂದು ಹಂಸಜ್ಯೋತಿ ಸಂಸ್ಥೆಯಿಂದ 1998ರಲ್ಲಿ ಹಂಸರತ್ನ ಎಂಬ ಪ್ರಶಸ್ತಿ.

**ಜನಪದ ಸಾಹಿತ್ಯ ಸಂಗ್ರಹ**

ಕರೀಂಖಾನರು ಹೆಚ್ಚಿನ ವಿದ್ಯಾಭ್ಯಾಸ ಮಾಡಲಿಲ್ಲವಾದರೂ ಜಾನಪದ, ಇತಿಹಾಸ, ಪುರಾಣ, ಮಹಾಕಾವ್ಯಗಳ ಬಗ್ಗೆ ಆಸಕ್ತಿ ಬೆಳೆಸಿಕೊಂಡು ವಿಪುಲವಾಗಿ ಓದಿಕೊಂಡವರು, ಭಾರತದ ಹಾಗೂ ಕರ್ನಾಟಕದ ಚರಿತ್ರೆಯ ಬಗ್ಗೆ ಕರೀಂಖಾನ್ ಅವರು ಹೊಂದಿರುವ ಖಚಿತವಾದ ಮತ್ತು ಅಪಾರವಾದ ಜ್ಞಾನ ವಿಸ್ಮಯ ಹುಟ್ಟಿಸುತ್ತದೆ. ಇತಿಹಾಸದ ಸಂಗತಿಗಳನ್ನು ತಮ್ಮದೇ ಆದ ದೃಷ್ಟಿಕೋನದಿಂದ ವಿಶ್ಲೇಷಿಸುವ ಸಾಮರ್ಥ್ಯ ಅವರಿಗಿದೆ. ಇದೇ ರೀತಿ ಹಿಂದೂ ಮಹಾಕಾವ್ಯ, ಪುರಾಣಗಳನ್ನು ಮೂಲದಲ್ಲಿಯೇ ಓದಿ ಅರಗಿಸಿಕೊಂಡವರು ಕರೀಂಖಾನ್. ಭಗವದ್ಗೀತೆ, ಭಾಗವತಗಳನ್ನು ಕುರಿತ ಅವರ ಓದು ಕೂಡ ವಿಸ್ಮಯ ಹುಟ್ಟಿಸುತ್ತದೆ. ನಾಟಕ ಬರೆಯುವುದಕ್ಕಾಗಿ ಅವರು ತೆಲುಗಿನಲ್ಲಿರುವ ಪೋತನನ ಭಾಗವತವನ್ನು ಓದಿಕೊಂಡರಂತೆ. ಶಿವಪುರಾಣ, ವಿಷ್ಣುಪುರಾಣಗಳನ್ನು ವ್ಯಾಪಕವಾಗಿ ಅಭ್ಯಾಸ ಮಾಡಿರುವ ಅವರು, ಈ ಪುರಾಣಗಳು ಶಿವನ ಇಲ್ಲವೇ ವಿಷ್ಣುವಿನ ಪಾರಮ್ಯ ಸಾಧಿಸುವುದಕ್ಕಾಗಿ ಯಾವ ಯಾವ ರೀತಿಯಲ್ಲಿ ಕಥೆಗಳನ್ನು ತಿರುಚುತ್ತವೆ ಎಂಬುದನ್ನು ಸಹ ಸ್ವಾರಸ್ಯಕರವಾಗಿ ನಿರೂಪಿಸುತ್ತಾರೆ. ಉರ್ದು ಸಾಹಿತ್ಯದ ಪರಿಚಯವೂ ಇರುವುದು ಕರೀಂಖಾನರ ವಿಶೇಷ. ಘಾಲಿಬ್, ಇಕ್ಬಾಲ್‌ರಂತಹ ದೊಡ್ಡ ಕವಿಗಳ ಓದಿನ ಪ್ರಭಾವವನ್ನು ಅವರು ರಚಿಸಿದ ಹಾಡುಗಳಲ್ಲಿ ಕಾಣಬಹುದು.

ಕರೀಂಖಾನ್‌ರ ಸಾಹಿತ್ಯವನ್ನು ಜಾನಪದ ಸಂಗ್ರಹಗಳು, ಕಥಾ ಸಾಹಿತ್ಯ ಮತ್ತು ನಾಟಕಗಳು, ಚಲನಚಿತ್ರ ಸಾಹಿತ್ಯ ಮತ್ತು ಇತರೆ ಹೀಗೆ ವಿಂಗಡಿಸಿ ಕೊಡು ಪರಿಶೀಲಿಸಬಹುದು.

**ಜನಪದ ಗೀತೆಗಳ ಸಂಗ್ರಹಗಳು-** ಕರೀಂಖಾನರು ಜನಪದ ಗೀತೆಗಳ ಸಂಗ್ರಹಗಳನ್ನು ಪ್ರಕಟಿಸಿದ ಕಾಲಕ್ಕೆ ಜಾನಪದದ ಇತರೆಲ್ಲ ಪ್ರಕಾರಗಳಿಂದ ಗೀತೆಗಳ ಪ್ರಕಾರವೇ ಸಂಗ್ರಾಹಕರನ್ನು ಮುಖ್ಯವಾಗಿ ಆಕರ್ಷಿಸಿತ್ತು. ಕರೀಂಖಾನ್ ಅನೇಕ ಜನಪದ ಗೀತೆಗಳ ಸಂಗ್ರಹಗಳನ್ನು ಪ್ರಕಟಿಸಿದರು.

ಒಂದು ಸಂಗ್ರಹದಲ್ಲಿ ವಿಷಯಾನುಗುಣವಾದ ವರ್ಗೀಕರಣವನ್ನು ಮಾಡಿಲ್ಲವಾದರೂ ಮೊದಮೊದಲಿನ ಗೀತೆಗಳೆಲ್ಲವೂ ದೇವರನ್ನು ಕುರಿತವು ಮತ್ತು ಸ್ತುತಿರೂಪದ ಗೀತೆಗಳು, ದೇವರು, ಗಣನಾಯ್ಕ, ಸರಸ್ವತಿ, ಶರಣು, ಹನುಮ, ಬೀರಪ್ಪ, ಗರುಡಾಳ, ಬಸವಣ್ಣ ಮುಂತಾದ ಶೀರ್ಷಿಕೆಗಳನ್ನು ಕೊಡಲಾಗಿದೆ. ತವರು, ಬಳೆಗಾರ, ಹರಕೆ, ಜೋಗುಳ, ಕಾವಲಿಯ ಹಾಡು (ಅತ್ತಿಗೆ ನಾದಿನಿಯರ ವಿರಸದ ಹಾಡು), ಕಹಿಬಾಳು (ಪಾಂಡವರ ಕಷ್ಟಗಳನ್ನು ಕುರಿತದ್ದು), ಹಗರಣ, ಬಾರುನಾ (ಪ್ರಿಯಕರನನ್ನು ಕರೆಯುವ ಗೀತೆ), ಗೋಳಿನ ಗಂಡ (ಹಾಸ್ಯ ಪ್ರಧಾನ) ... ಮೊದಲಾದ ಗೀತೆಗಳು ಇವೆ. ಹಾಸನ ಜಿಲ್ಲೆಯ ಅನೇಕ ಪ್ರಾದೇಶಿಕ ವಿವರಗಳು ಈ ಗೀತೆಗಳಲ್ಲಿ ಮೈಗೂಡಿ ಅವುಗಳ ಪ್ರಾದೇಶಿಕ ವೈಶಿಷ್ಟ್ಯತೆಯನ್ನು ಸ್ಪಷ್ಟಪಡಿಸುತ್ತವೆ. ಹಾಸನಾಂಬೆಯ ಉಲ್ಲೇಖ, ಹಾಗಲವಾಡಿ, ಮೇಗಲಪುರ, ಚುಂಚನಗಿರಿ, ಗೊರವೂರು, ಹೇಮಾವತಿ ನದಿ ಮೊದಲಾದುವುಗಳ ಪ್ರಸಕ್ತಿಯಿಂದಾಗಿ ಇವು ಹಾಸನ ಜಿಲ್ಲೆಯಲ್ಲಿಯೇ ಸ್ವತಃ ಕರೀಂಖಾನರೇ ಸಂಗ್ರಹಿಸಿದ್ದು ಎಂಬುದು ಖಾತರಿಯಾಗುತ್ತದೆ.

**ಕಥಾ ಸಾಹಿತ್ಯ ಮತ್ತು ನಾಟಕಗಳು**

ಕರೀಂಖಾನರು ವಿಪುಲವಾಗಿ ಬರೆದರು. ಆದರೆ ಅವರು ಬರೆದದ್ದೆಲ್ಲ ಪ್ರಕಟವಾಗಲಿಲ್ಲ. ಅವರು ಪ್ರಕಟಿಸಿದ ಕೃತಿಗಳಿಗಿಂತ ಅಪ್ರಕಟಿತ ಕೃತಿಗಳ ಸಂಖ್ಯೆಯೇ ಹೆಚ್ಚಾಗಿದೆ ಎನ್ನಬಹುದು. ಕರೀಂಖಾನ್ ಒಟ್ಟು ಎಷ್ಟು ಕೃತಿ ರಚಿಸಿದರು ಎಂದು ಹೇಳುವುದು ಕಷ್ಟ.

'ನೀವಾರ' ಅನುವಾದಿತ ಕಥೆಗಳು, 'ನೀಹಾರ' ಎಂಬುದು ಚಾರಿತ್ರಿಕ ಕಥಾ ಸಂಕಲನ, 'ಬಲಿದಾನಿ ಹುಸೇನ್' ಚಾರಿತ್ರಿಕ ಕಾದಂಬರಿ. 'ಮಾತೃ ಶಾಪ' ಎಂಬ ಪೌರಾಣಿಕ ಕಾದಂಬರಿಯನ್ನು ರಚಿಸಿದ್ದಾಗಿ ಸ್ವತಃ ಕರೀಂಖಾನರೇ ಹೇಳಿದರು. ಅದು ಜನಮೇಜಯರಾಯನ ಸರ್ಪಯಾಗವನ್ನು ಕುರಿತ ಕಾದಂಬರಿಯಾಗಿತ್ತಂತೆ. ಅದು ಪ್ರಕಟವಾಗಲಿಲ್ಲ. ಅದರ ಹಸ್ತಪ್ರತಿಯೂ ಈಗ ಲಭ್ಯವಿಲ್ಲ. ಕರೀಂಖಾನ್ ಅನೇಕ ನಾಟಕಗಳನ್ನು ರಚಿಸಿದರು. ಅವರು ಬರೆದ ಬಹುತೇಕ ಎಲ್ಲ ನಾಟಕಗಳೂ ರಂಗದ ಮೇಲೆ ಪ್ರಯೋಗಕ್ಕೆ ತರಬೇಕು ಎಂದು ಕೇಳಿದವರಿಗಾಗಿ ಬರೆದುಕೊಟ್ಟಂಥವು. 'ನಿರ್ದೋಷಿ'ಯನ್ನು ಸುಬ್ಬಯ್ಯನಾಯ್ಡು ಅವರಿಗಾಗಿ ಬರೆದುಕೊಟ್ಟರಂತೆ. ಹುಮಾಯೂನ್ ನಾಟಕವನ್ನು ಗುಬ್ಬಿ ವೀರಣ್ಣನವರಿಗಾಗಿ ರಚಿಸಿದ್ದು. ಸಂಸ್ಕೃತದ ಭವಭೂತಿಯ ಮಾಲತಿ ಮಾಧವವನ್ನು, ಹಾಗೇ ಲೈಲಾಮಜ್ನು ಕೃತಿಯನ್ನು ಅನುವಾದಿಸಿದ್ದಾಗಿ ತಿಳಿದುಬರುತ್ತದೆ. ಆದರೆ ಪ್ರಕಟವಾದ ನಾಟಕಗಳೆಂದರೆ 'ನಿರ್ದೋಷಿ', 'ಮಹಾಪ್ರಭು ಮಾಗಡಿ ಕೆಂಪೇಗೌಡ' ಮತ್ತು 'ಶ್ರೀ ಕೃಷ್ಣಲೀಲೆ' ಮಾತ್ರ.

'ನೀವಾರ್ಯ' ಅನುವಾದಿತ ಕಥಾಸಂಕಲನದಲ್ಲಿ ಉರ್ದುವಿನಿಂದ ಅನುವಾದಿಸಿದ ಒಟ್ಟು ಆರು ಕಥೆಗಳಿವೆ. ಕರೀಂಖಾನರು ಈ ಕೃತಿಯನ್ನು ತಮ್ಮ ಗುರು ಆಚಂಗಿ ನಾರಾಯಣ ಶಾಸ್ತ್ರಿಗಳಿಗೆ ಅರ್ಪಿಸಿದ್ದಾರೆ. ನೀವಾರದ 'ನನ್ನ ನುಡಿ'ಯಲ್ಲಿ: ಕರೀಂಖಾನರು ಹೇಳಿರುವ ಮಾತುಗಳು ಹೀಗಿವೆ:

"ಉರ್ದು ನೀಳ್ಗತೆಗಳಿಗೆ ಕನ್ನಡದ ಹೊದಿಕೆಯನ್ನು ಹೊದಿಸಿದ್ದೇನೆ, ಈ ಚಿಕ್ಕ ಹೊದಿಕೆಯಲ್ಲಿ ಜೋಡಿಸಿದ್ದೇನೆ. ಕನ್ನಡ ಸಾಹಿತ್ಯ ಜಗತ್ತಿನಲ್ಲಿ ಇಂತಹ ಕಥೆಗಳಿಗೆ ಅಭಾವವಿಲ್ಲ. ಕನ್ನಡ ಸಾಹಿತ್ಯಕ್ಕೆ ಉಪಕಾರವೆಸಗಬೇಕೆಂಬ ಉತ್ಕಟೇಚ್ಛೆಯಿಂದ ನಾನು ಈ ಕತೆಗಳನ್ನು ಹೆಣೆಯಲಿಲ್ಲ. ಅನೇಕ ವರ್ಷಗಳ ಹಿಂದೆ ಮನವು ಗಾಳಿಯ ಪೊರೆಯಂತೆ ಹಗುರವಾಗಿದ್ದಾಗ, ಗರುಡನ ಮರಿಯಂತೆ ಭಾವನಾ ಪ್ರಪಂಚದಲ್ಲಿ ವಿಹರಿಸಲು ಹವಣಿಸುತ್ತಿದ್ದಾಗ, ದುರ್ದೈವದ ವಿಹತಿಗೆ ಸಿಕ್ಕಿ ದೇಹವು ಇನ್ನೂ ಬಸವಳಿಯದೆ ಮೀನಿನ ಮರಿಯಂತೆ ಚುರುಕಾಗಿದ್ದಾಗ ನಿರುದ್ಯೋಗದ ಅನಿಷ್ಟ ವೈಧವ್ಯದುಸ್ತಮದಿಂದ ಪಾರಾಗಲು ಸಾಹಿತ್ಯದೀಪ್ತಿಗೆ ಶರಣುಹೋದೆನು. ಅಪರಿಪೂರ್ಣ ಭಾಷಾಜ್ಞಾನ ಹಾಗೂ ಪರಿಮಿತ ಬುದ್ಧಿಶಕ್ತಿಯಿಂದಲೇ ಸುಪ್ರಸಿದ್ಧ ಉರ್ದು ಸಾಹಿತಿಗಳಾದ ಸೈಯದ್ ನಸೀರ್ ಇಮಾಂ ನಸೀರ್ ಜೈದಿಯವರ 'ಸ್ವಾಭಿಮಾನ', ಅಸ್ಗರ್ ಸಾಹೇಬ್ ಪ್ರೇಮಿಯವರ 'ಸವತಿ', ಅನಾಮಿಕರವರ 'ಪೀರು', ಸುದರ್ಶನರವರ 'ಅಂಧಕಾರ', ಸಾದಿಖಿಲ್‌ಖೈರಿಯವರ 'ನಾಸ್ತಿಕ', ಅಜೀಜ್‌ಮಸ್‌ವೂದಿಯವರ 'ಸರ್ಜು'ವನ್ನು ಅನುವಾದಿಸಿದೆನು. ಈ ಅನುವಾದವನ್ನು ಸ್ನೇಹಿತರು ಮೆಚ್ಚಿದ್ದರಿಂದ ಗ್ರಂಥರೂಪದಲ್ಲಿ ತಂದಿದ್ದೇನೆ..." ಈ ಕಥೆಗಳು ನೀಳ್ಗತೆಗಳಂತಿದ್ದು ಉರ್ದು ಕಥನ ಸಾಹಿತ್ಯದ ಒಂದು ಇಣುಕು ನೋಟ ಒದಗಿಸುವಲ್ಲಿ ಸಮರ್ಥವಾಗಿವೆ. ಕರೀಂಖಾನರನ್ನು ಬದುಕಿನುದ್ದಕ್ಕೂ ಕಾಡಿದ ಬಡತನ- ಸಿರಿತನಗಳ ವಿಪರ್ಯಾಸ, ಶೋಷಣೆ, ಮತಾಂಧತೆ, ಸ್ವಾರ್ಥತೆಗಳನ್ನು ಹಾಗೂ ಪ್ರೀತಿಪ್ರೇಮಗಳ ಮಾರ್ದವತೆಯನ್ನು ಪ್ರತಿಬಿಂಬಿಸುವಂತಹ ಕಥೆಗಳನ್ನೇ ಕರೀಂಖಾನರು ಆಯ್ದುಕೊಂಡಿರುವುದನ್ನು ಇಲ್ಲಿ ವಿಶೇಷವಾಗಿ ಗಮನಿಸಬಹುದು.

ಹಿಂದೂ ಮುಸ್ಲಿಮರ ಕೋಮುಭಾವನೆ ಭುಗಿಲೆದ್ದ ಕಾಲದಲ್ಲಿ ಹಿಂದೂ ಮುಸ್ಲಿಂ ಐಕ್ಯತೆಯನ್ನು ಪ್ರತಿಬಿಂಬಿಸುವಂತಹ ಕೆಲವು ಕಥೆಗಳನ್ನು ಕರೀಂಖಾನ್ ಬರೆದರು. ಇವೆಲ್ಲವೂ ಚಾರಿತ್ರಿಕ ಘಟನೆಗಳನ್ನು ಆಧರಿಸಿದ ಕಥೆಗಳು. ಮುಸ್ಲಿಂ ಪಿತನ ಹಿಂದೂ ಪುತ್ರಿ ಮೊದಲಾದ ಕಥೆಗಳು 'ನೀಹಾರ' ಸಂಕಲನದಲ್ಲಿವೆ.

'ಬಲದಾನೀ ಹುಸೇನ್' ಕಾದಂಬರಿ ಕನ್ನಡಕ್ಕೆ ಕರೀಂಖಾನ್‌ರಿತ್ತ ಒಂದು ವಿಶಿಷ್ಟ ಕೊಡುಗೆ ಎನ್ನಬಹುದು. 1955ರಲ್ಲಿ ಪ್ರಕಟವಾದ 164 ಪ್ರಕಟಗಳ ಈ ಕಿರುಕಾದಂಬರಿ ಕರೀಂಖಾನರು ಇತಿಹಾಸದ ಘಟನೆಗಳ ಬಗ್ಗೆ ಹೊಂದಿರುವ ದೃಷ್ಟಿ, ಅವರ ರಾಜಕೀಯ ಪ್ರಜ್ಞೆ, ಸ್ವಾಭಿಮಾನ ಮತ್ತು ದೇಶಾಭಿಮಾನದ ನಿಲುವು ಹಾಗೂ ಅವರ ಅಪೂರ್ವ ಭಾಷಾ ಪಾಂಡಿತ್ಯಕ್ಕೆ ನಿದರ್ಶನವೆನ್ನಬಹುದಾದ ಕೃತಿಯಾಗಿದೆ.

ಈ ಕೃತಿಯ ಉದ್ದೇಶವನ್ನು ಕುರಿತು ಆತ್ಮ ನಿವೇದನೆಯಲ್ಲಿ ಕರೀಂಖಾನರು ಹೇಳುವ ಮಾತುಗಳಿವು "...ಮಾನವನ ನೈತಿಕ ಅವನತಿಯ ಚಿತ್ರವೊಂದನ್ನು ಇಸ್ಲಾಮೀ ಇತಿಹಾಸದಿಂದ ಆಯ್ದು ಈ ಚಿಕ್ಕ ಹೊತ್ತಿಗೆಯಲ್ಲಿ ಅಂಕಿಸಿರುತ್ತೇನೆ. ಇದು ರಾಜಕೀಯ ಚಿತ್ರಣವೇ ಹೊರತು ಮತೀಯ ಪ್ರತಿಪಾದನೆಯಲ್ಲ. ಈ ಕಥಾನಕವು ಅರಬ್ಬೀದೇಶದ ಘಟನೆಯೊಂದನ್ನು ಚಿತ್ರಿಸುತ್ತದೆಯಾದರೂ ಸ್ವಾತಂತ್ರ್ಯಾನಂತರದ ಭಾರತಕ್ಕೂ ಪರಾಮರ್ಶನ ರೂಪಿನಲ್ಲಿದೆ. ಅಧಿಕಾರ ಲಾಲಸೆಯನ್ನುಳ್ಳವನು ಹೇಗೆ ಸತ್ಯ, ಧರ್ಮ, ನೀತಿ, ನ್ಯಾಯದ ಸುಂದರೋದ್ಯಾನದಲ್ಲಿ ಕಾಡ್ಗಿಚ್ಚಿನಂತೆ ಉದ್ಭವಿಸುತ್ತಾನೆ. ಸಮಾಜದ ಮನೋಜ್ಞ ಮಂದಿರದಲ್ಲಿ ಮಧುರಲಾಸ್ಯವನ್ನೆಸಗುತ್ತಿರುವ ಶಾಂತಿಯನ್ನು ಹೇಗೆ ಕಬಳಿಸುತ್ತಾನೆ, ಹೇಗೆ ರಾಷ್ಟ್ರದ ಸರ್ವನಾಶಕ್ಕೆ ಕಾರಣನಾಗುತ್ತಾನೆ ಎಂಬುದನ್ನು ಸೂಚಿಸುತ್ತದೆ". ಇಲ್ಲಿನ ಕಥೆ ಮಹಮದ್ ಪೈಗಂಬರ್‌ರವರ ಪಿತರಾದ ಅಬ್ದುಲ್ಲಾರವರ ಪ್ರಪಿತಾಮಹ ಅಬ್ದುಲ್ ಮುನಾಫರ್ ತಲೆಮಾರಿನಿಂದಾರಂಭಿಸಿ ಕರ್ಬಲಾದಲ್ಲಿ ಮಹಮದ್ ಪೈಗಂಬರರ ದೌಹಿತ್ರರಾದ ಇಮಾಂ ಹುಸೇನರ ದುರಂತ ಬಲಿದಾನದವರೆಗೂ ವ್ಯಾಪಿಸುತ್ತದೆ.

ಕರೀಂಖಾನರ ಬಹು ನೆಚ್ಚಿನ ಮೌಲ್ಯಗಳಾದ ದೇಶಪ್ರೇಮ, ದೇಶಾಭಿಮಾನ, ಸ್ವಾಭಿಮಾನ, ಆತ್ಮಗೌರವ, ಅನ್ಯಾಯಕ್ಕೆ ತಲೆಬಾಗದ ಛಲ ಇಂಥವುಗಳನ್ನು ಪ್ರತಿನಿಧಿಸುವ ಅನೇಕ ಪಾತ್ರಗಳು ಈ ಕಥಾನಕದಲ್ಲಿ ಬರುತ್ತವೆ. ಇದಕ್ಕೆ ಪ್ರತಿಯಾಗಿ ಅಧಿಕಾರಮೋಹ, ಸ್ವಾರ್ಥಲಾಲಸೆ, ವಿಶ್ವಾಸ ದ್ರೋಹ, ದಾಯಾದಿ ಮತ್ಸರಗಳು ಇಲ್ಲಿವೆ. ಈ ಅಂಶಗಳನ್ನು ಭಾರತದ ಪರಿಸ್ಥಿತಿಯಲ್ಲಿ ಕರೀಂಖಾನ್ ಕಂಡಂಥವರು. ಹೀಗಾಗಿಯೇ ಇಂಥ ಅಂಶಗಳ ಪ್ರಸಕ್ತಿ ಬಂದ ಕೂಡಲೇ ಅವರು ಭಾವಾವೇಶದಿಂದ ಅವುಗಳ ವ್ಯಾಖ್ಯಾನಕ್ಕೆ ತೊಡಗುತ್ತಾರೆ. ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕ ವಿಚಾರಗಳ ವಿಶ್ಲೇಷಣೆಯಲ್ಲಿ ಕರೀಂಖಾನರ ಪ್ರಬುದ್ಧತೆಗೆ ಅವು ಒಳ್ಳೆಯ ನಿದರ್ಶನವಾಗುತ್ತವೆ.

ಐದಾರು ತಲೆಮಾರುಗಳ ಅವಧಿಯಲ್ಲಿ ವ್ಯಾಪಿಸಿರುವ ಘಟನಾವಳಿಗಳನ್ನು ಇಷ್ಟು ಕಿರು ಹೊತ್ತಿಗೆಯಲ್ಲಿ ನಿರೂಪಿಸಹೊರಟಿದ್ದರಿಂದ ಕಥೆಯ ಮುಖ್ಯಾಂಶಗಳನ್ನು ಹೇಳುವುದಕ್ಕೂ ಸ್ಥಳಾವಕಾಶ ಇಲ್ಲವಾಗಿರುವುದು ಈ ಕಾದಂಬರಿಯ ಮುಖ್ಯ ಕೊರತೆ. ಈ ಕಥೆಯನ್ನು ಅರಬ್ ಇತಿಹಾಸ, ಜನಜೀವನ, ಸಮಾಜದ ಒಟ್ಟು ನೋಟ ಕೊಡುವಂಥ ಒಂದು ಬೃಹತ್ ಕಾದಂಬರಿಯಾಗಿ ಬರೆದಿದ್ದರೆ ಅದು ನಿಜಕ್ಕೂ ಕನ್ನಡ ಸಾಹಿತ್ಯಕ್ಕೆ ಕರೀಂಖಾನರ ಒಂದು ಸ್ಮರಣೀಯ ಕೊಡುಗೆಯಾಗುತ್ತಿತ್ತು ಮತ್ತು ಈ ಕೆಲಸ ಕರೀಂಖಾನರಿಗೆ ಮಾತ್ರವೇ ಸಾಧ್ಯವಿತ್ತು. ಆದರೆ ಕರೀಂಖಾನರ ತಾತ್ವಿಕ ಚಿಂತನೆಯೇ ಪ್ರಧಾನವಾಗಿ, ಕಾದಂಬರಿಯು ಎಲ್ಲರಿಗೂ ಪ್ರಿಯವಾಗುವ ಅವಕಾಶವನ್ನು ಕಳೆದುಕೊಂಡಿದೆ ಅನ್ನಿಸುತ್ತದೆ. ಇಷ್ಟಾಗಿಯೂ ಕರೀಂಖಾನರ ಸತ್ವಯುತವಾದ ಭಾಷಾ ಶೈಲಿ ಹಾಗೂ ವಿಶಿಷ್ಟ ಭಾಷಾ ಪ್ರಯೋಗಕ್ಕೆ ಸಾಕ್ಷಿಯಾಗಿ ನಿಲ್ಲುವುದೇ ಈ ಕೃತಿಯ ಮಹತ್ವವಾಗಿದೆ.

140 ಪುಟಗಳ ಕಿರುಗಾತ್ರದ 'ಮಹಾಪ್ರಭು ಮಾಗಡಿ ಕೆಂಪೇಗೌಡ' ನಾಟಕದ ವಸ್ತು ಐತಿಹಾಸಿಕವಾದರೂ ಅದನ್ನು ಒಂದು ಸಾಮಾಜಿಕ ಕಥೆಯಾಗಿ ಕಾಣುವಂತೆ ಕರೀಂಖಾನ್ ನಿರ್ವಹಿಸಿದ್ದಾರೆ. ಗಂಡನನ್ನು ಕಳೆದುಕೊಂಡು ನಿರ್ಗತಿಕ ಸ್ಥಿತಿಯಲ್ಲಿದ್ದ ಬೆಂಗಳೂರು ಕೆಂಪೇಗೌಡನ ಸೊಸೆ ಕೆಂಚಮ್ಮನ ದಾರುಣ ಬದುಕು, ಬಡತನದಲ್ಲಿದ್ದರೂ ವೀರನೂ, ಸದ್ಗುಣಿಯೂ ದಯಾಪರನೂ ಆದ ಅವಳ ಮಗ ಕೆಂಪಣ್ಣನು (ಮುಂದೆ ಮಾಗಡಿ ಕೆಂಪೇಗೌಡ ಆದವನು) ಧೂರ್ತ ಪಟೇಲ ಭೈರಪ್ಪನಿಂದ ಶೋಷಣೆಗೊಳಗಾದವರನ್ನು ರಕ್ಷಿಸುವ ಮೂಲಕ ತನ್ನ ನಾಯಕತ್ವದ ಗುಣಗಳನ್ನು ತೋರ್ಪಡಿಸುವಂಥ ಸಂದರ್ಭಗಳು, ಪಟೇಲ ಭೈರಪ್ಪನಿಂದ ಕೆಂಪಣ್ಣನ ಮೇಲೆ ಹಲ್ಲೆ, ಕೆಂಪಣ್ಣನನ್ನು ಭೈರಪ್ಪನ ಅನುಯಾಯಿಗಳು ಬಂಧಿಸಲೆಂದಿದ್ದಾಗ ಹಾವೊಂದು ಹೆಡೆ ಎತ್ತಿದಾಗ ಎಲ್ಲರೂ ಭಯಗೊಂಡು ಓಡುವುದು, ಮಲಗಿದ್ದ ಕೆಂಪೇಗೌಡನ ತಲೆಯ ಬಳಿ ಹಾವು ಹೆಡೆಬಿಚ್ಚಿ ನೆರಳು ಮಾಡಿದ್ದನ್ನು ನೋಡಿದ ಶಾಸ್ತ್ರಿಗಳು ಅವನೇ ಮಾಗಡಿಯ

ದೊರೆಯಾಗುವವನು ಎಂದು ಘೋಷಿಸುವುದು, ಕೆಂಪಮ್ಮನ ಅಣ್ಣನ ಮಗಳು ಲಿಂಗಾಂಬೆಯೊಂದಿಗೆ ವಿವಾಹ ನಿಶ್ಚಯ ಹಾಗೂ ಪಟ್ಟಾಭಿಷೇಕ ಇದು ಈ ನಾಟಕದ ಮುಖ್ಯ ಕಥಾಸಾರ.

ಪ್ರಸ್ತುತ ಸಾಮಾಜಿಕ ಸ್ಥಿತಿಗತಿಗಳ ಚಿತ್ರಣ ಕೊಡುವುದಕ್ಕಾಗಿ ಪಟೇಲ್ ಭೈರಪ್ಪ ಹಾಗೂ ಧೂರ್ತ ವೀರಣ್ಣಗೌಡರ ಪಾತ್ರಗಳನ್ನು ಕರೀಂಖಾನ್ ಸೃಷ್ಟಿಸಿದ್ದಾರೆ. ಇನ್ನೊಂದು ಕಡೆ ಶೃಂಗಾರರಸ ಪೋಷಕವಾಗುವಂತೆ ಮಲ್ಲಮಲ್ಲಿಯರ ಜೋಡಿ ಇದೆ. ಕೆಂಪೇಗೌಡನ ಮಹತ್ವವನ್ನು ತೋರಿಸುವುದಕ್ಕಾಗಿ ಶ್ರೀರಂಗನಾಥ ಹಾಗೂ ಆದಿಶೇಷರ ದೈವಿಕ ಪಾತ್ರಗಳು ಕೆಂಪಣ್ಣನನ್ನು ಪರೀಕ್ಷಿಸುವ, ಹರಸುವ ದೃಶ್ಯಗಳನ್ನು ಕಲ್ಪಿಸಿಕೊಳ್ಳಲಾಗಿದೆ. ಸಮಾಜದ ಬಡವರ, ದಲಿತರ ಶೋಷಣೆ,ಅವರ ಮೇಲಿನ ದಬ್ಬಾಳಿಕೆ ಅನ್ಯಾಯಗಳನ್ನು ಕುರಿತು ತಮ್ಮ ಚಿಂತನೆಯನ್ನು ಇಲ್ಲಿಯ ಪಾತ್ರ ಸನ್ನಿವೇಶಗಳ ಮೂಲಕ ಕರೀಂಖಾನ್ ಅಭಿವ್ಯಕ್ತಿಸಿದ್ದಾರೆ. ಸಾಮಾಜಿಕ ವಿವರಗಳ ಚಿತ್ರಣಕ್ಕೆ ಎಷ್ಟು ಪ್ರಾಧಾನ್ಯತೆ ನೀಡಲಾಗಿದೆ ಎಂದರೆ ಐತಿಹಾಸಿಕ ವಸ್ತು ಇಲ್ಲಿ ಇದೆ ಎಂದೇ ಅನ್ನಿಸುವುದಿಲ್ಲ. ಕೆಂಪಣ್ಣನ ವ್ಯಕ್ತಿತ್ವ ಚಿತ್ರಣಕ್ಕಿಂತ ಪಟೇಲ್ ಭೈರಪ್ಪನ ಧೂರ್ತತನದ ಚಿತ್ರಕ್ಕೇ ಹೆಚ್ಚು ಒತ್ತು ನೀಡಲಾಗಿದೆ.

ಈ ನಾಟಕದ ವೈಶಿಷ್ಟ್ಯವೆಂದರೆ ಮಲ್ಲಮಲ್ಲಿಯರ ಸಂಭಾಷಣೆ ಮತ್ತು ಹಾಡುಗಳಿಗೆ ಇಡಿ ಇಡಿಯಾಗಿ ಜನಪದ ಗೀತೆಗಳನ್ನು ಹಾಗೂ ಗೀತೆಗಳ ಸಾಲುಗಳನ್ನು ಬಳಸಿಕೊಂಡಿರುವುದು.

**'ನಿರ್ದೋಷಿ'** ಸುಬ್ಬಯ್ಯ ನಾಯ್ಡು ಅವರಿಗಾಗಿ ಕರೀಂಖಾನರು ರಚಿಸಿಕೊಟ್ಟದ್ದು. 'ನಿರ್ದೋಷಿ' ನಾಟಕದ ವಸ್ತುವೂ ಕೂಡ ಬಲಿದಾನೀಹುಸೇನ್ ಕಾದಂಬರಿಯ ವಸ್ತುವನ್ನು ಒಳಗೊಂಡಿರುವಂಥದ್ದು. ಮಹಾಭಾರತದ ದಾಯಾದಿ ಕಲಹದ ರೀತಿ ಇಸ್ಲಾಂ ಸಮಾಜದಲ್ಲಿಯೂ ನಡೆದ ಈ ಕಲಹ ಹೇಗೆ ಸರ್ವನಾಶಕ್ಕೆ ಕಾರಣವಾಗುತ್ತದೆ ಎಂಬುದಕ್ಕೂ ಇಲ್ಲಿ ಹೆಚ್ಚು ಒತ್ತುಕೊಡಲಾಗಿದೆ. 'ಶ್ರೀಕೃಷ್ಣಲೀಲಾ' ನಾಟಕಕ್ಕೆ ಭಾಗವತದ ದಶಮಸ್ಕಂಧದ ಕಥೆಯೇ ಆಧಾರ. ಕೃಷ್ಣನ ಹುಟ್ಟಿನಿಂದ ಹಿಡಿದು ಕಂಸವಧೆಯವರೆಗಿನ ಕಥೆಯನ್ನು ನಾಟಕರೂಪದಲ್ಲಿ ಇಲ್ಲಿ ನಿರೂಪಿಸಲಾಗಿದೆ. ಈ ನಾಟಕಕ್ಕೆ ಹಿನ್ನುಡಿ ಬರೆಯುತ್ತಾ ಡಾ.ಲಕ್ಷ್ಮೀನಾರಾಯಣ ಭಟ್ಟರು "... ಶ್ರೀಕೃಷ್ಣ ಲೀಲಾ, ನಮ್ಮ ಪ್ರಾಚೀನ ಮಹಾಕಾವ್ಯ ಪುರಾಣಗಳ ಬಗ್ಗೆ ಅವರಿಗಿರುವ ತಲಸ್ಪರ್ಶಿಯಾದ ಖಚಿತವಾದ ಜ್ಞಾನವನ್ನು ಸೂಚಿಸುತ್ತದೆ. ಭಾಗವತ ಪುರಾಣಕಾವ್ಯದ ದಶಮಸ್ಕಂದವನ್ನು ಪರಿಣಾಮಕಾರಿಯಾಗಿ, ನಾಟಕೀಯವಾಗಿ, ಘಟನಾತ್ಮಕವಾಗಿ ಸೆರೆ ಹಿಡಿದಿದ್ದಾರೆ. ಸನಾತನ ಧರ್ಮದ ಮೂಲ ಆಕರಗಳೆನ್ನಬಹುದಾದ ವೈದಿಕ ಕೃತಿಗಳನ್ನು ಅವರು ಎಷ್ಟು ಶ್ರದ್ಧೆ, ಪ್ರೀತಿ, ಗೌರವಗಳಿಂದ ಆಳವಾಗಿ ಅಧ್ಯಯನ ಮಾಡಿದ್ದಾರೆ ಎನ್ನುವುದಕ್ಕೆ ಈ ಒಂದು ಕೃತಿ ಸಾಕ್ಷಿಯಾಗಿದೆ..." ಎಂದಿದ್ದಾರೆ.

ಕೇವಲ 96 ಪುಟಗಳ ಮಿತಿಯಲ್ಲಿ ಕೃಷ್ಣಲೀಲೆಯ ವಿವಿಧ ಘಟನೆಗನ್ನು ಸಹಜವಾಗಿ ಚಿತ್ರಿಸಲಾಗಿದೆ. ಇದು ನಾಟಕವಾಗಿ ಯಶಸ್ವಿಯೆ ಎಂಬ ದೃಷ್ಟಿಯಿಂದ ನೋಡಿದಾಗ ಕೃಷ್ಣಲೀಲಾ ವಿನೋದದ ಕಥೆಗಳನ್ನು ಸಂಭಾಷಣೆಯ ರೂಪದಲ್ಲಿಡುವುದಕ್ಕಷ್ಟೇ ಕರೀಂಖಾನರ ಕಲೆಗಾರಿಕೆ ಸೀಮಿತವಾಗಿರುವುದು ಕಂಡುಬರುತ್ತದೆ. ರಂಗ ತಂತ್ರಗಳ ಇತಿಮಿತಿ, ಸಾಧ್ಯತೆಗಳ ಬಗ್ಗೆ ಕರೀಂಖಾನರು ತಲೆ ಕೆಡಿಸಿಕೊಳ್ಳುವ ಗೋಜಿಗೆ ಹೋಗಿಲ್ಲ. ಪ್ರತಿಯೊಂದು ಲೀಲೆಯ ಹಿನ್ನೆಲೆಯ ಕಥೆಯನ್ನು ಫ್ಲಾಶ್‌ಬ್ಯಾಕ್ ತಂತ್ರದಲ್ಲಿ ನಿರೂಪಿಸಿರುವುದು ಗೊಂದಲ ಹುಟ್ಟಿಸುತ್ತದೆ. ರಸಭಂಗಕ್ಕೂ ಕಾರಣವಾಗಿದೆ. ಚಲನಚಿತ್ರ ಕಥೆಯಾಗಿ ಇದು ಅಳವಡಿಕೆಯಾಗಬೇಕು ಎಂಬ ದೃಷ್ಟಿಯೇ ಈ ನಾಟಕದ ಕುಂದುಕೊರತೆಗಳಿಗೆ ಮುಖ್ಯ ಕಾರಣ ಎನ್ನಬಹುದು. ಕರೀಂಖಾನರ ಇನ್ನೊಂದು ಬಗೆಯ ಸಾಹಿತ್ಯ, ಕೇಳಿದವರ ಅಗತ್ಯತೆಗೆ ತಕ್ಕಂತೆ ಸೃಷ್ಟಿಸಿದ ಸಾಹಿತ್ಯ ಬಹುಶಃ ಅವರ ಹೆಚ್ಚಿನ ಸಾಹಿತ್ಯ ಸೃಷ್ಟಿಯೆಲ್ಲ ಇಂಥ ಕಾರಣದಿಂದಲೇ ಆಗಿರುವಂಥದ್ದು. ಕರೀಂಖಾನರು ಸುಶ್ರಾವ್ಯವಾಗಿ ಜನಪದ ಗೀತೆಗಳನ್ನು ಹಾಡುತ್ತಾರೆ ಎಂಬುದಕ್ಕಾಗಿ ಜನ ಅವರನ್ನು ಸಭೆ ಸಮಾರಂಭಗಳಿಗೆ ಆಹ್ವಾನಿಸಿದ ರೀತಿಯಲ್ಲಿಯೇ ಪ್ರಕಾಶಕರು, ಚಿತ್ರ ನಿರ್ದೇಶಕರು, ನಾಟಕ ನಿರ್ಮಾಪಕ-ಕ್ಯಾಸೆಟ್ ತಯಾರಕರು ಕರೀಂಖಾನರನ್ನು ಕಥೆ ಹಾಡುಗಳಿಗಾಗಿ ಆಶ್ರಯಿಸಿದರು. ಇದರ ಫಲವಾಗಿ ಕರೀಂಖಾನರು ಅನೇಕ ಕೃತಿಗಳನ್ನು ರಚನೆ ಮಾಡಿಕೊಟ್ಟರು. ಈ ಸಾಹಿತ್ಯ ಒಂದು ನಿಲುಕಿಗೆ ದಕ್ಕುವಂಥದ್ದಲ್ಲ. ಅವರು ಮನೆಮಠ ಅಂತ ಅಂಟಿಕೊಂಡು ಕೂರಲಿಲ್ಲವಾದರೂ ಅವರು ಜಾಗ ಬದಲಾಯಿಸಿದಾಗೆಲ್ಲ ಅವರ ಬಹುಪಾಲು ಪುಸ್ತಕ, ಹಸ್ತಪ್ರತಿಗಳು ಕೈತಪ್ಪಿಹೋದವು.

ಕರೀಂಖಾನರು ಹೀಗೆ ಬೇರೆಯವರ ಅಗತ್ಯಕ್ಕಾಗಿ ಸೃಷ್ಟಿಸಿದ ಸಾಹಿತ್ಯದಲ್ಲಿ ಜೊಳ್ಳು ಗಟ್ಟಿ ಎರಡೂ ಇದೆ. ಗಟ್ಟಿಯಾದ್ದೂ ಕೂಡ ಜೊಳ್ಳಿನ ನಡುವೆ ಕಣ್ಮರೆಯಾದ ಮತ್ತು ಕಣ್ಮರೆಯಾಗುವ ಸಂಭವವೇ ಹೆಚ್ಚು. ಜೀವನೋಪಾಯಕ್ಕಾಗಿ ಇಂತಹ ಬೇಡಿಕೆಗಳಿಗೆ ಮಣಿದು ಕರೀಂಖಾನರು ರಚಿಸಿದ ಸಾಹಿತ್ಯದಲ್ಲಿ ಅವರ ವೈಯಕ್ತಿಕ ನಿಲುವು, ಪ್ರತಿಭೆ, ಪರಿಣತಿಗಳನ್ನು ನಿರೀಕ್ಷಿಸುವುದೂ ಕೂಡ ತಪ್ಪಾಗಬಹುದು. ಇಷ್ಟಾಗಿಯೂ ಕರೀಂಖಾನರ ಪ್ರತಿಭೆ, ಸಾಹಿತ್ಯ ಶಕ್ತಿಗಳನ್ನು ಪ್ರತಿಬಿಂಬಿಸುವಂತಹ ಅನೇಕ ಮೌಲಿಕ ರಚನೆಗಳು ಈ ರೀತಿಯ ಸಾಹಿತ್ಯದಲ್ಲಿ ಅಡಗಿವೆ. (ಅವುಗಳನ್ನೆಲ್ಲ ವ್ಯವಸ್ಥಿತವಾಗಿ ಸಂಗ್ರಹಿಸುವ ಕೆಲಸವನ್ನು ಯಾರಾದರೂ ವಹಿಸಿಕೊಳ್ಳುವುದು ಅಗತ್ಯ.

ಕರೀಂಖಾನರು ಚಲನ ಚಿತ್ರಕ್ಕಾಗಿ ರಚಿಸಿದ ಸಾಹಿತ್ಯದಲ್ಲಿ ಸ್ವಲ್ಪವಾದರೂ ಇಂದಿಗೂ ದಕ್ಕುತ್ತವೆ. ಅವರು ರಚಿಸಿದ ಹಾಡುಗಳು ದಾಖಲಾಗಿರುವುದರಿಂದ ಇಲ್ಲಿ ಸಮಸ್ಯೆ ಇಲ್ಲ. ಕರೀಂಖಾನರ 'ನಟವರಗಂಗಾಧರ'ದಂತಹ ಭಕ್ತಿ ಪ್ರಧಾನ ರಚನೆಗಳು 'ಬಾರೇ ನೀ ಚೆಲುವೆ'ಯಂತಹ ಮಧುರವಾದ ಹಾಡುಗಳು ಇಂದಿಗೂ ಕೂಡ ಜನಮನದಲ್ಲಿ ಭದ್ರವಾಗಿ ನೆಲೆ ಊರಿವೆ. ಕರೀಂಖಾನರು ಸುಮಾರು ೩ಂಂಕ್ಕೂ ಹೆಚ್ಚು ಚಿತ್ರಗೀತೆಗಳನ್ನು ರಚಿಸಿದರು. ಸ್ವರ್ಣಗೌರಿ, ಜೀವನತರಂಗ, ಬೇವು ಬೆಲ್ಲ, ಚಂದ್ರಕುಮಾರ, ದೇವಮಾನವ, ಜೀವನತರಂಗ, ದೊಂಬರಕೃಷ್ಣ, ರಾಜೇಶ್ವರಿ, ಪತಿತಪಾವನಿ, ಸೂಪರ್‌ನೋವಾ 455 ಮೊದಲಾದ. ಸುಮಾರು 15 ಚಿತ್ರಗಳಿಗೆ ಉತ್ತಮ ಸಾಹಿತ್ಯ ಒದಗಿಸಿದರು. 50-60ರ ದಶಕದಲ್ಲಿ ಚಿತ್ರಕಥೆ, ಸಂಭಾಷಣೆಗಳು ನಾಲ್ಕಾಣೆ ಪುಸ್ತಕಗಳ ರೂಪದಲ್ಲಿ ಪ್ರಕಟವಾಗಿ ಚಿತ್ರಪ್ರೇಮಿಗಳಿಗೆ ಲಭ್ಯವಾಗುತ್ತಿದ್ದವು. ಅಂತಹ ಸಾಹಿತ್ಯವನ್ನು ಈಗ ಹುಡುಕಿ ತೆಗೆಯಬೇಕಾಗಿದೆ. ಕರೀಂಖಾನರು ರಂಭಾಪುರಿ, ಕೂಡ್ಲಿ, ಶೃಂಗೇರಿ, ಉಡುಪಿ, ಧರ್ಮಸ್ಥಳ, ಅದಮಾರು ಸ್ವಾಮಿಗಳನ್ನು ಕುರಿತು ಸ್ವಾಗತಗೀತೆಗಳನ್ನು ರಚಿಸಿದ್ದಾರೆ. ಅವು ಅವರ ಭಾವೈಕ್ಯತಾ ಭಾವನೆಗೆ ದ್ಯೋತಕವಾಗಿವೆ. ಧರ್ಮಸ್ಥಳ ಮಂಜುನಾಥೇಶ್ವರನನ್ನು ಕುರಿತು ರಚಿಸಿದ ಹಾಡುಗಳ ಕ್ಯಾಸೆಟ್ 'ಮಂದಾರ ಧರ್ಮಸ್ಥಳ' ಎಂಬ ಹೆಸರಿನಲ್ಲಿ ಇತ್ತೀಚೆಗೆ ಬಿಡುಗಡೆಯಾಗಿದೆ. ನಾಡು, ನುಡಿಗಳನ್ನು

ಕುರಿತಂತೆಯೂ ಕರೀಂಖಾನ್ ಅನೇಕ ಒಳ್ಳೆಯ ಹಾಡುಗಳನ್ನು ಕಟ್ಟಿದ್ದಾರೆ. ಎಷ್ಟೋ ಹಾಡುಗಳು ಈಗ ಕರೀಂಖಾನರ ನೆನಪಿನಲ್ಲಿ ಮಾತ್ರ ಉಳಿದಿವೆ.

ಈಗಾಗಲೇ ಹೇಳಿದಂತೆ ಕರೀಂಖಾನರ ಸಾಹಿತ್ಯ ಅಪ್ರಕಟಿತ ರೂಪದಲ್ಲಿ ಅಲ್ಲಲ್ಲಿ ಹರಡಿಹೋಗಿದೆ. ಪ್ರಕಟಿತವಾದ ಸಾಹಿತ್ಯದ ಮುದ್ರಣಗಳು ಸಿಗುವುದೂ ಕೂಡ ಅಪರೂಪವಾಗಿದೆ. ಕರೀಂಖಾನರ ಸಾಹಿತ್ಯವನ್ನು ವ್ಯವಸ್ಥಿತವಾಗಿ ಸಂಗ್ರಹಿಸಿ, ಆಯಾ ಕೃತಿಗಳ ಮುದ್ರಣ ಹಾಗೂ ಪುನರ್‌ಮುದ್ರಣ ಮಾಡಿದರೆ ಕರೀಂಖಾನರು ನಾಡುನುಡಿಗೆ ಸಲ್ಲಿಸಿದ ನಿಸ್ವಾರ್ಥ ಸೇವೆಯನ್ನು ನಿಜವಾಗಿ ಸ್ಮರಿಸುವ ರೀತಿಯಾಗುತ್ತದೆ.

❑

# ಆನಂದಕಂದ

ಜ್ಯೋತಿ ಹೊಸೂರ

## ಪ್ರಸ್ತಾಪನೆ

'ಆನಂದಕಂದ' ಕನ್ನಡ ನಾಡಿನ ಸಾಹಿತಿಗಳಲ್ಲಿ ಅಗ್ರಗಣ್ಯರು. 'ಆನಂದಕಂದ' ಕಾವ್ಯನಾಮ ಅವರ ಬರವಣಿಗೆಯ ಅಂಕಿತ. ಬೆಟಗೇರಿ ಕೃಷ್ಣಶರ್ಮ ನಾಮಧೇಯ. ಎರಡೂ ಹೆಸರುಗಳಿಂದ ಇವರು ಕನ್ನಡದಲ್ಲಿ ಸಾಹಿತ್ಯ ಸೃಷ್ಟಿಸಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿಯ ಇವರ ಸಾಧನೆ ವೈಶಿಷ್ಟ್ಯಪೂರ್ಣವಾದುದು. ಕವನ, ಸಣ್ಣಕಥೆ, ಕಾದಂಬರಿ, ರೂಪಕ, ಚರಿತ್ರೆ, ಶಿಶುಸಾಹಿತ್ಯ, ಮೀಮಾಂಸೆ, ವಿಮರ್ಶೆ, ಸಂಶೋಧನೆ, ಸಂಪಾದನೆ, ಜಾನಪದ ಮತ್ತು ಪತ್ರಿಕಾ ಸಂಪಾದನೆ ಇವುಗಳಲ್ಲಿಯೂ ಪ್ರಥಮ ದರ್ಜೆಯ ಕಾರ್ಯ ಆನಂದಕಂದರರದು.

ಭಾರತದ ಸ್ವಾತಂತ್ರ್ಯ ಪ್ರಾಪ್ತಿ, ಕರ್ನಾಟಕತ್ವದ ಜಾಗೃತಿ ಮತ್ತು ಕರ್ನಾಟಕ ಏಕೀಕರಣಗಳಿಗೆ ತಮ್ಮ ಶಕ್ತಿ ಸರ್ವಸ್ವವನ್ನು ಧಾರೆಯೆರೆದು ದುಡಿದ ಕನ್ನಡ ಸಾಹಿತಿಗಳಲ್ಲಿ ಇವರದು ಸಿಂಹಪಾಲು.

ಆರು ದಶಕಗಳಿಗೂ ಮಿಕ್ಕಿ ಅವ್ಯಾಹತವಾಗಿ ಶ್ರೀ ಬೆಟಗೇರಿ ಕೃಷ್ಣಶರ್ಮರು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ ಬಹುಮುಖ ಕೊಡುಗೆಯನ್ನು ಪರಿಶೀಲಿಸಿ, ಮೆಚ್ಚಿ 1974ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಅವರಿಗೆ ಗೌರವ ಡಾಕ್ಟರೇಟ್ (ಡಿ. ಲಿಟ್) ಪದವಿಯನ್ನು ಕೊಟ್ಟು ಗೌರವಿಸುವ ಮೂಲಕ ತನ್ನ ಗುಣ ಗ್ರಾಹಕತೆಯನ್ನು ಪ್ರದರ್ಶಿಸಿದೆ. 1971ರಲ್ಲಿ ನಾಗಮಂಗಲದಲ್ಲಿ ಜರುಗಿದ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಅಧ್ಯಕ್ಷ ಸ್ಥಾನ ಇವರಿಗೆ ಸಿಕ್ಕಿದೆ. ಅದೇ ವರ್ಷದಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಲಭಿಸಿದೆ. ಧರ್ಮಸ್ಥಳದ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ, ನಾಡಿನ ವಿವಿಧೆಡೆಗಳಲ್ಲಿ ದೊರೆತ ಕವಿಗೋಷ್ಠಿ ಅಧ್ಯಕ್ಷತೆ, ಕಥಾಗೋಷ್ಠಿ ಅಧ್ಯಕ್ಷತೆಗಳಂತಹ ಮನ್ನಣೆಯ ಸ್ಥಾನಗಳಿಗೂ ಲೆಕ್ಕವಿಲ್ಲ. ದಿನಾಂಕ 21-2-1982ರಂದು ಕರ್ನಾಟಕದ ಸಕಲ ಜನತೆಯ ಪರವಾಗಿ ಡಾ. ಬೆಟಗೇರಿಯವರಿಗೆ ಅದ್ದೂರಿಯ ಮತ್ತು ಔಚಿತ್ಯಪೂರ್ಣವಾದ ಅಪೂರ್ವ ಸತ್ಕಾರ ಸಮಾರಂಭ ಧಾರವಾಡದಲ್ಲಿ ನಡೆಯಿತು. ಪ್ರಾ. ಜ್ಯೋತಿ ಹೊಸೂರ, ಡಾ|| ಬಸವರಾಜ ಮಲಶೆಟ್ಟಿ ಮತ್ತು ಡಾ. ನಿಂಗಣ್ಣ ಸಣ್ಣಕ್ಕಿ, ಈ ಮೂವರೂ ಸಂಪಾದಿಸಿದ 'ಬೆಳುವಲ' ಬೃಹತ್ ಅಭಿನಂದನ ಗ್ರಂಥ ಮತ್ತು 'ಕವಿಭೂಷಣ' ಸಂಸ್ಮರಣ ಸಂಪುಟಗಳನ್ನು ಅಂದು ಗೌರವಾದರಗಳಿಂದ ಅವರಿಗೆ ಅರ್ಪಿಸಲಾಯಿತು; ಸತ್ಕರಿಸಲಾಯಿತು; ಕನ್ನಡ ನುಡಿಗೆ ಮತ್ತು ನಾಡಿಗೆ ಸಲ್ಲಿಸಿದ ಸೇವೆಯನ್ನು ಸ್ಮರಿಸಿ ಹಾರ್ದಿಕ ಕೃತಜ್ಞತೆ ಸಲ್ಲಿಸಲಾಯಿತು. ಇವೆಲ್ಲ ಸ್ಥಾನ ಮಾನಗಳು ತಾನಾಗಿಯೇ ಅವರನ್ನು ಹುಡುಕಿಕೊಂಡು ಬಂದಂತಹವೆಂಬುದನ್ನು ಪರಿಭಾವಿಸಿದಾಗ ಮಾತ್ರ ಡಾ. ಬೆಟಗೇರಿ ಕೃಷ್ಣಶರ್ಮರಲ್ಲಿಯ ಅಂತಸ್ಸತ್ವದ ಪರಿಚಯವಾಗುತ್ತದೆ. ಅವರ ಸದ್ದಿಲ್ಲದ ಸೇವೆಯ ಮತ್ತು ಸಜ್ಜನಿಕೆಯ ದರ್ಶನವಾಗುತ್ತದೆ.

## ಬದುಕು

ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಸಾಹಿತ್ಯ ಸೃಷ್ಟಿ ಆರಂಭಿಸಿದ ಡಾ. ಬೆಟಗೇರಿ ಕೃಷ್ಣಶರ್ಮರು ತೊಡಕು ತೊಂದರೆಗಳ ಮಧ್ಯದಲ್ಲಿಯೇ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡ ಸ್ವಯಂಭೂ ಮೂರ್ತಿ. 1900ನೆಯ ಏಪ್ರಿಲ್ ತಿಂಗಳ 16ರಂದು ಗೋಕಾಕ ತಾಲ್ಲೂಕಿನ ಬೆಟಗೇರಿ ಎಂಬ ಹಳ್ಳಿಯಲ್ಲಿ ಜನನ. ಹನ್ನೆರಡನೆಯ ವಯಸ್ಸಿನಲ್ಲಿಯೇ ಪಿತೃ ವಿಯೋಗ. 1914ರಲ್ಲಿ ವಿಷಮಶೀತ ಜ್ವರದ ಆಕ್ರಮಣ. 21ದಿನಗಳ ಹೋರಾಟದ ನಂತರ ರೋಗದ ಹಿಡಿತ ತಪ್ಪಿ ಬದುಕಿದುದು ಒಂದು ಪವಾಡ. ಮರುವರುಷವೇ ಪ್ಲೇಗ್ ಬೇನೆಯ ಮುತ್ತಿಗೆ. ಈ ಭಯಂಕರ ಬೇನೆ ಅವರ ಕೈಕಾಲುಗಳ ಮೇಲೆ ಶಾಶ್ವತ ಪರಿಣಾಮ ಬೀರಿತು. ನಡೆಯುವಾಗ ಕಾಲುಗಳ ಹೊಯ್ದಾಟ, ಬರೆಯುವಾಗ ಕೈಗಳ ಹೊಯ್ದಾಟ ಜೀವನ ಪರ್ಯಂತದ ಬಳುವಳಿಯಾದವು. ಹದಿನೆಂಟರ ಹರೆಯದ ಮಧುರ ದಿನಗಳನ್ನು ಎದುರುಗೊಳ್ಳುತ್ತಿರುವಾಗಲೇ ತಾಯಿ ಮರಣವನ್ನಪ್ಪಿದಳು, ಬೆಟಗೇರಿಯವರು ತಲ್ಲಣಗೊಂಡರು. ಹೋರಾಡುತ್ತ, ಹೋರಾಡುತ್ತ ವ್ಯಕ್ತಿತ್ವ ರೂಪಿಸಿಕೊಂಡರು. ಮಹಾಸಾಹಿತಿಗಳಾಗಿ ಮನ್ನಣೆ ಗಳಿಸಿದರು. ಆದರೆ ಮುಪ್ಪಿನಲ್ಲಿ ಮತ್ತೊಮ್ಮೆ ಬಾಲ್ಯದಂಥದೇ ಶಾರೀರಕ ಆಘಾತ. 1977ರಲ್ಲಿ ಪಾರ್ಶ್ವವಾಯು

ವಿನಿಂದಾಗಿ ಹಾಸಿಗೆ ಹಿಡಿದರು. 1979ರಲ್ಲಿ ಅನಾರೋಗ್ಯ ಉಲ್ಬಣಿಸಿತು. ಕನ್ನಡಾಂಬೆಯ ಸೇವೆಗಾಗಿ ರೂಪರೇಷೆ ಹಾಕಿಕೊಂಡ ಕಾರ್ಯ ಪೂರ್ತಿಗೊಳಿಸ ಲಾಗಲಿಲ್ಲವೆಂಬ ಕೊರಗು ಇವರನ್ನು ಕೊರೆಯುತ್ತಿತ್ತು. ಈ ಬೇನೆಯಲ್ಲಿ ಗುಣಹೊಂದಿ ದುಡಿಯಬೇಕೆಂಬ ಅವರ ಮನದಿಚ್ಛೆ ಅಗಾಧ. ಕೆಲವು ದಿನಗಳ ಆರೈಕೆಯಿಂದಾಗಿ ಆರೋಗ್ಯ ತುಸು ಸುಧಾರಿಸಿತು. ಆದರೆ 1982ರಲ್ಲಿ ಬೇನೆಯ ಬಲ ಹೆಚ್ಚಾಯಿತು. 1982ನೆಯ ಅಕ್ಟೋಬರ್ ತಿಂಗಳ 30ನೆಯ ದಿನಾಂಕದಂದು ಡಾ. ಬೆಟಗೇರಿ ಕೃಷ್ಣಶರ್ಮರು ಧಾರವಾಡದ ತಮ್ಮ ಮನೆಯಲ್ಲಿ ಕೊನೆಯುಸಿರೆಳೆದರು.

ಶ್ರೀ ಬೆಟಗೇರಿ ಕೃಷ್ಣಶರ್ಮರು ಹೆಚ್ಚಿನ ಶಿಕ್ಷಣ ಪಡೆದವರಲ್ಲ. ಕನ್ನಡ ಮುಲ್ಕಿ ಪರೀಕ್ಷೆಯೇ (1917) ಅವರ ಕೊನೆಯ ಪರೀಕ್ಷೆ. ಆದರೆ ಕನ್ನಡ, ಸಂಸ್ಕೃತ, ಮರಾಠಿ ಭಾಷೆಗಳ ಮೇಲೆ ಅವರ ಪ್ರಭುತ್ವ ಅಪರಿಮಿತ. ಹಿಂದಿ, ಇಂಗ್ಲಿಷ್‌ಗಳನ್ನು ಬಲ್ಲವರಾಗಿದ್ದರು. ಅವರ ಭಾಷಾ ಪಾಂಡಿತ್ಯಕ್ಕೆ ಸ್ವಪ್ರಯತ್ನ ಮತ್ತು ಅಪಾರವಾದ ಜ್ಞಾನಾಕಾಂಕ್ಷೆಗಳೇ ಮೂಲ ಕಾರಣ. ಮನೆಯಲ್ಲಿಯ ಹಬ್ಬಹರಿದಿನಗಳ ಆಚರಣೆ, ಪುರಾಣ ಪುಣ್ಯಕಥೆಗಳ ಶ್ರವಣ, ಜಾನಪದರ ನಿಕಟ ಸಂಪರ್ಕದಿಂದ ಲಭಿಸಿದ ವಿಪುಲ ಸಾಹಿತ್ಯ ಲೋಕಾನುಭವ ಇವರ ಪಾಂಡಿತ್ಯ ವೃದ್ಧಿಗೆ, ಪ್ರತಿಭೆಯ ವಿಕಾಸಕ್ಕೆ ಬಹಳ ನೆರವಾದವು. ಕನ್ನಡ ಐದನೆಯ ತರಗತಿಯಲ್ಲಿದ್ದಾಗಲೇ ಗಳಗನಾಥ', ವೆಂಕಟಾಚಾರ್ಯ ಮೊದಲಾದವರ ಕಾದಂಬರಿಗಳನ್ನು ಓದಿ ಅರಗಿಸಿಕೊಂಡಿದ್ದರೆನ್ನುವುದು ಅವರ ಅಧ್ಯಯನಶೀಲತೆಗೆ ಸ್ಪಷ್ಟ ನಿದರ್ಶನ. ಇವರ ಸ್ಮರಣ ಶಕ್ತಿಯಂತೂ ಅನುಪಮವಾದುದು. ನಿಜಾರ್ಥದಲ್ಲಿ ಏಕಪಾಠಿಗಳಿವರು. ಯಾವುದೇ ಪದ್ಯ, ಶ್ಲೋಕ ಒಮ್ಮೆ ಕೇಳಿದರಾಯಿತು-ಅದು ಮುಖಪಾಠ. ತುಸು ಮರೆತಂತೆನಿಸಿದಾಗ ಹೊಳೆಯುವ ಕಣ್ಣುಗಳನ್ನು ಅರಳಿಸಿ, ಹಣೆಯನ್ನು ಬೆರಳುಗಳಿಂದ ತುಸು ತಿಕ್ಕಿಕೊಂಡರೆ ಸಾಕು ಬೇಕಾದುದು ನಾಲಿಗೆಯ ಮೇಲೆ ನಲಿಯುತ್ತಿದ್ದುದನ್ನು ಅವರ ಸಂಪರ್ಕದಲ್ಲಿದ್ದವರೆಲ್ಲ ಕಂಡುದುಂಟು.

ಹದಿನೆಂಟರ ಹರೆಯದ ಹೊತ್ತಿಗೆ ಬಗೆ ಬಗೆಯ ಆಪತ್ತುಗಳು. ತಂದೆ-ತಾಯಂದಿರ ಮರಣ ಮುಂತಾದವುಗಳಿಂದಾಗಿ ಜೀವನದ ಜವಾಬ್ದಾರಿ ಶ್ರೀ ಬೆಟಗೇರಿಯವರ ಮೈಮೇಲೆ ಬಿದ್ದಿತು. ಹುಟ್ಟು ಪ್ರತಿಭಾವಂತರೂ, ಜೀವನಾನುಭವಿಗಳೂ ಆದ ಬೆಟಗೇರಿಯವರ ಹದಗೊಂಡ ಮನಸ್ಸು ಆ ವೇಳೆಗಾಗಲೇ ಗರಿಗೆದರಿತ್ತು. ತನ್ನ ಸೃಷ್ಟ್ಯಾತ್ಮಕ ಶಕ್ತಿಯ ಅಭಿವ್ಯಕ್ತಿಗಾಗಿ ಹಾತೊರೆಯುತ್ತಲಿತ್ತು.

ಈ ಶತಮಾನದ ಇಪ್ಪತ್ತನೆಯ ದಶಕವು ಸ್ವಾತಂತ್ರ್ಯಕ್ಕಾಗಿ ಭಾರತ ದೇಶ ತವಕಿಸುತ್ತಿದ್ದ ಕಾಲ. ಸಕಲರಲ್ಲಿ ರಾಷ್ಟ್ರೀಯತೆ ಜಾಗ್ರತವಾಗುತ್ತಲಿದ್ದ ಸಮಯ. ಬೆಟಗೇರಿಯವರೂ ದೇಶಕ್ಕಾಗಿ, ನಾಡಿಗಾಗಿ ದುಡಿಯಲು ನಿರ್ಧರಿಸಿದರು. ಮತ್ತು ಸ್ವಂತ ಕಾಲ ಮೇಲೆ ನಿಲ್ಲಲೂ ನಿರ್ಧರಿಸಿದರು. ಚಿಕ್ಕಂದಿನಿಂದಲೂ ಅವರ ಸಾಹಿತ್ಯಕ ಒಲವು, ಕಾವ್ಯ ರಚನೆಯಲ್ಲಿದ್ದ ಆಸ್ಥೆ ಇವು ಪುಟಿಗೊಳ್ಳಲು ಹವಣಿಸುತ್ತಿದ್ದವು. ತಮ್ಮ ಬಯಕೆ ಈಡೇರಲು ಅನುಕೂಲವಾಗುವುದೆಂಬ ಬೆಳಗಾವಿಯಲ್ಲಿ ಪ್ರಾರಂಭವಾಗಿದ್ದ ರಾಷ್ಟ್ರೀಯ ಶಾಲೆ ಸೇರಿ ಪ್ರಾಥಮಿಕ ಶಿಕ್ಷಕರಾದರು. ಕರ್ನಾಟಕದ ಸಿಂಹರೆನಿಸಿದ್ದ ಶ್ರೀ ಗಂಗಾಧರರಾವ್ ದೇಶಪಾಂಡೆ ಮುಂತಾದವರ ಸಂಪರ್ಕದಿಂದ ಇವರ ರಾಷ್ಟ್ರೀಯತೆ ಸ್ಪಷ್ಟ ರೂಪ ಪಡೆಯಿತು. ರಾಷ್ಟ್ರೀಯತೆಯ ಜಾಗ್ರತಿಗೆ ಪೂರಕವಾಗುವ ಅನೇಕ ಹಾಡುಗಳನ್ನು ಈ ಅವಧಿಯಲ್ಲಿ ರಚಿಸಿದರು. ಭಾವತೀವ್ರತೆ ಮತ್ತು ಗೇಯತೆಯಿಂದೊಡಗೂಡಿ ಜನತೆಯಲ್ಲಿ ದೇಶಾಭಿಮಾನ ಪ್ರಜ್ವಲಿಸುವಂತೆ ಮಾಡುವಲ್ಲಿ ಈ ಹಾಡುಗಳು ಯಶಸ್ವಿಯಾದವು ; ಅತ್ಯಂತ ಜನಪ್ರಿಯವಾದವು. ಇಂಥ ಕೆಲವು ಹಾಡುಗಳು 1) ರಾಷ್ಟ್ರೀಯ ಪದ್ಯಾವಲಿ (1921), 2) ಗಾಂಧೀ ಗೀತ ಸಪ್ತಕ (1921), 3) ರಾಷ್ಟ್ರೀಯ ಪದ್ಯಮಾಲೆ (1921) ಎಂಬ ಹೆಸರಿನಿಂದ ಬೆಳಗಾವಿಯಲ್ಲಿ ಮುದ್ರಣಗೊಂಡವು. ಈ ಹಾಡುಗಳು ಹೆಜ್ಜೆ ಹಾಕುತ್ತ ತಾಳಮೇಳದೊಂದಿಗೆ ಹಾಡುತ್ತ ಪಥ ಸಂಚಲನ ಮಾಡಲು ಬಹಳ ಹೊಂದುತ್ತಿದ್ದವು. ಅಂತೆಯೇ ಈ ಹಾಡುಗಳನ್ನು ಅನೇಕರು ಹೆಜ್ಜೆಯ ಹಾಡುಗಳೆಂಬುದಾಗಿಯೇ ಅಂದು ಕರೆಯುತ್ತಿದ್ದರು.

ಬೆಳಗಾವಿಯ ವಿಶಿಷ್ಟ ಪರಿಸ್ಥಿತಿ ಇವರನ್ನು ಕೆಣಕಿತು. ಮರಾಠಿಗೆ ಮೋಹಿತರಾಗಿದ್ದ ಕನ್ನಡಿಗರ ಸ್ಥಿತಿ ಕಂಡು ಕೆರಳಿದರು. ಕನ್ನಡಕ್ಕಾಗಿ ದುಡಿಯುವ ದೀಕ್ಷೆ ಸ್ವೀಕರಿಸಿದರು. ಕನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿ, ಅದರ ಶ್ರೇಷ್ಠತೆಯನ್ನೂ, ಸವಿಯನ್ನೂ ಪ್ರಾಸಂಗಿಕವಾಗಿ ಎತ್ತಿ ತೋರಿಸಿದರು. ಈ ಕಾರ್ಯಕ್ಕಾಗಿ ಅನೇಕ ಕವನಗಳನ್ನು ಬರೆದರು. ವಿವಿಧ ಪ್ರಸಂಗಗಳಲ್ಲಿ ತಾವೇ ಹಾಡಿದರು ; ವಿದ್ಯಾರ್ಥಿಗಳ ತಂಡ ತಯಾರಿಸಿ ಹಾಡಿಸಿದರು. ತರುಣರ ಮೇಳಗಳನ್ನು ಕಟ್ಟಿ ಹುರಿದುಂಬಿಸಿದರು. ಈ ಬಗೆಯ ವಿವಿಧ ಕಾರ್ಯ ಮಾಡಿ ಕನ್ನಡಿಗರು ತಮ್ಮ ಹಿರಿಮೆ ಅರಿತುಕೊಳ್ಳುವಂತೆ ಮಾಡಿದರು. ಇವರ ಅತ್ಯಂತ ಪ್ರಸಿದ್ಧವಾದ 'ನನ್ನದು ಈ ಕನ್ನಡನಾಡು' ಮತ್ತು 'ಎನಿತು ಇನಿದು ಈ ಕನ್ನಡ ನುಡಿಯು, ಮನವನು ತಣಿಸುವ ಮೋಹನ ಸುಧೆಯು' ಎಂಬ ಕವನಗಳನ್ನು ಇದೇ ಕಾಲದಲ್ಲಿ ರಚಿಸಿದರು. ಇವರ ಕಾರ್ಯದಿಂದಾಗಿ ಬೆಳಗಾವಿಯ ಕನ್ನಡಿಗರು ಕಣ್ಣು ತೆರೆದರು. ಅದ್ಭುತ ಜಾಗ್ರತಿ ಬೆಳಗಾವಿಯಲ್ಲಿ ಉಂಟಾಯಿತು. ಆನಂದಕಂದರು ಬೆಳಗಾವಿಗೆ ಆಗಮಿಸಿದುದು ಕನ್ನಡಿಗರಿಗೆ ಒಂದು ವರದಾನವಾಯಿತು.

ಬೆಳಗಾವಿಯಲ್ಲಿದ್ದಾಗ 'ಮಾತೃಭೂಮಿ' ಎಂಬ ಪತ್ರಿಕೆಯ ಸಂಪಾದಕತ್ವದ ಹೊಣೆಯೂ ಇವರ ಮೇಲೆ ಬಂದಿತು. ಇಲ್ಲಿಯವರೆಗೆ ಕವಿಯಾಗಿದ್ದವರು ಈಗ ಗದ್ಯ ಲೇಖಕರೂ ಆಗಬೇಕಾಯಿತು. ತಮ್ಮ ನಿಷ್ಠಾಪೂರ್ಣ ಅಧ್ಯಯನಶೀಲತೆಯಿಂದ ಗದ್ಯ ರಚನೆಯಲ್ಲೂ ಸ್ವಲ್ಪ ಕಾಲದಲ್ಲೇ ಸಿದ್ಧಿ ಪಡೆದರು. ಈ ಕಾಲದಲ್ಲಿ ಅವರ ಸಾಹಿತ್ಯಕ ಮಹತ್ವಾಕಾಂಕ್ಷೆಯ ಇನ್ನೂ ವಿಶಾಲ ಕ್ಷೇತ್ರ ಮತ್ತು ಪ್ರಚೋದಕ ಪರಿಸರಕ್ಕಾಗಿ ತುಡಿಯುತ್ತಲಿತ್ತು. ಅತ್ತ ಇತ್ತ ಸುತ್ತಾಡಿದರು. 1925ರಲ್ಲಿ ಧಾರವಾಡಕ್ಕೆ ಬಂದರು. 'ಸ್ವಧರ್ಮ' ಪತ್ರಿಕೆಯ ಸಂಪಾದಕತ್ವ ವಹಿಸಿದರು. ಕನ್ನಡ ಏಳ್ಗೆಗಾಗಿ 'ಮನೋಹರ ಗ್ರಂಥಮಾಲೆ' ಪ್ರಾರಂಭಕ್ಕೆ ಕಾರಣರಾದರು. ಸದಾ ಯೋಚನೆ, ಯೋಜನೆ. ನವರಾತ್ರಿಯನ್ನು ನಾಡಹಬ್ಬವಾಗಿ ಆಚರಿಸುವಂತೆ ಕರೆಕೊಟ್ಟರು. ಅದು ಎಲ್ಲರಿಗೂ ಆಕರ್ಷಕವೆನಿಸಿತು. ಕರ್ನಾಟಕದ ಎಲ್ಲೆಡೆ ನಾಡಹಬ್ಬದ ಆಚರಣೆ ಮೊದಲಾಗಿ, ಕನ್ನಡದ ಜಾಗ್ರತಿಯ ಕಾರ್ಯಕ್ಕೆ ಅದೊಂದು ಸಾಧನವಾಯಿತು. ಆ ಪದ್ಧತಿ ಇಂದಿಗೂ ಹಲವೆಡೆ ನಡೆದು ಬರುತ್ತಿರುವುದನ್ನು ಕಂಡಾಗ ಡಾ. ಬೆಟಗೇರಿಯವರ ಮುಂಧೋರಣೆ ಮತ್ತು ವಿಧಾಯಕ ದೃಷ್ಟಿಗಳ ಪರಿಚಯ ನಮಗಾಗುವುದು.

1926ರಲ್ಲಿ ಬೆಟಗೇರಿಯವರು ಆರ್ಯವಿದ್ಯಾ ಶಾಲೆಯ ಶಿಕ್ಷಕರಾಗಿ ಬೆಂಗಳೂರಿಗೆ ಹೋದರು. ಅವರ ಪ್ರತಿಭೆ ಅರಳಲು, ಪಾಂಡಿತ್ಯ ವರ್ಧಿಸಲು ದೇವುಡು, ಮಾಸ್ತಿ ಮುಂತಾದವರ ಪರಿಚಯ ಮತ್ತು ಒಡನಾಟಗಳಿಂದಾಗಿ ಬಹಳಷ್ಟು ನೆರವಾಯಿತು. ಈ ವೇಳೆಗಾಗಲೇ ಅವರ ಕವನಗಳು ಸಾಹಿತಿಗಳ

ಬಳಗದಲ್ಲಿ ವಿಶೇಷ ಸ್ಥಾನ ಗಳಿಸಿದ್ದವು. 'ಮುದ್ದನ ಮಾತು' ಮತ್ತು 'ಅರುಣೋದಯ' ಎಂಬ ಎರಡು ಕವನಸಂಕಲನಗಳನ್ನು ಇದೇ ಅವಧಿಯಲ್ಲಿ ಪ್ರಕಟಿಸಿದರು. ಇವುಗಳಿಂದಾಗಿ ಬೆಟಗೇರಿಯವರು ಶ್ರೇಷ್ಠಕವಿಗಳ ಸಾಲಿನಲ್ಲಿ ಸೇರಿಬಿಟ್ಟರು. ಇಂಪಾದ ದನಿ, ಆಕರ್ಷಕ ಶೈಲಿಯ ಕಾವ್ಯ ವಾಚನದ ರೀತಿಗಳಿಂದ ಇವರು ಜನಮನ ಗೆದ್ದರು. ಅನಂತರ ಇವರ ಗದ್ಯಕೃತಿಗಳೂ ಹೊರಬಂದವು. 1931ರಲ್ಲಿ ಸಣ್ಣಕಥೆಗಳ ಸಂಕಲನ 'ಬಡತನದ ಬಾಳು' ಮತ್ತು ಪ್ರಥಮ ಕಾದಂಬರಿ 'ಸುದರ್ಶನ' 1933ರಲ್ಲಿ ಪ್ರಕಟವಾದವು. ಈಗ ಬೆಟಗೇರಿಯವರು ಅಗ್ರಗಣ್ಯ ಸಾಹಿತಿಗಳಾಗಿ ಮನ್ನಣೆ ಪಡೆದರು.

ಡಾ. ಬೆಟಗೇರಿ ಕೃಷ್ಣಶರ್ಮರು ಸದ್ದಿಲ್ಲದ ದುಡಿಮೆಗಾರರು; ಸಂಯೋಜಕರು. ಹೊಟ್ಟೆ ಬಟ್ಟೆಯ ಚಿಂತೆ ಸದಾ ಬೆಂಬತ್ತಿರುತ್ತಿದ್ದರೂ ಬಾಡಿಗೆಯ ಮನೆಯೇ ನೆಲೆಯಾಗಿದ್ದರೂ ಇವರ ಕರ್ತೃತ್ವಶಕ್ತಿಗೆ ಇವಾವೂ ಅಡ್ಡಿಯನ್ನುಂಟು ಮಾಡಲಿಲ್ಲ. ದೇಶ, ನಾಡು, ನುಡಿಗಳಿಗಾಗಿ ಹಲವಂದದಿಂದ ಸೇವೆಸಲ್ಲಿಸುವ ಹಂಬಿಕೆಯಲ್ಲಿಯೇ ಮನಸ್ಸು ತೊಡಗಿರುತ್ತಿತ್ತು. ಮರಾಠಿಯಲ್ಲಿಯ 'ಕಿರ್ಲೋಸ್ಕರ' ಮಾದರಿಯ ಸಾಹಿತ್ಯಕ ಪತ್ರಿಕೆ ಕನ್ನಡದಲ್ಲಿ ಬೇಕೇಬೇಕೆಂದು ಮನಸ್ಸಿನಲ್ಲಿ ಮೂಡಿತು. 1938ರಲ್ಲಿ 'ಜಯಂತಿ' ಹೆಸರಿನ ಪತ್ರಿಕೆ ಪ್ರಾರಂಭಿಸಿಯೇ ಬಿಟ್ಟರು. ಅಂದಿನ ಅತ್ಯಂತ ಮಹತ್ವದ ಪತ್ರಿಕೆಯನ್ನಾಗಿ ಅದನ್ನು ಬೆಳೆಸಿದರು. 'ಜಯಂತಿ' ಹೊಸ ಲೇಖಕರಿಗೆ ಗರಡಿಯಾಯಿತು. ಹಿರಿಯ ಬರಹಗಾರರ ಅಭಿವ್ಯಕ್ತಿಗೆ ವೇದಿಕೆ ಆಯಿತು. ಜಯಂತಿಯ ಮೂಲಕ ಹೊಸಬರನೇಕರು ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಟ್ಟು ಅತ್ಯಂತ ಶ್ರೇಷ್ಠ ಸಾಹಿತಿಗಳೆನಿಸಿದ್ದಾರೆ. ಎನ್ಕೆ, ಕಣವಿ, ಕಾಯ್ಕಿಣಿ, ಧಾರವಾಡಕರ, ಮಿರ್ಜಿ, ಸಿಂಪಿ, ಗದಗಕರ, ವಾಡಪ್ಪಿ ಮುಂತಾದವರು 'ಜಯಂತಿ'ಯಿಂದ ಬೆಳಕಿಗೆ ಬಂದವರಲ್ಲಿ ಕೆಲವರು. 'ಜಯಂತಿ' ಕೃಷ್ಣಶರ್ಮರ ಸಮರ್ಥ ಸಂಪಾದಕತ್ವದಲ್ಲಿ 23 ವರ್ಷ ಕಾಲ ಅವ್ಯಾಹತವಾಗಿ ನಡೆದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತನ್ನ ವೈಶಿಷ್ಟ್ಯದಿಂದ ಮೆರೆಯಿತು. ಬೆಟಗೇರಿಯವರು 'ಜಯಂತಿ'ಯನ್ನು ಬೆಳೆಸಿದರು. ಜಯಂತಿಯು ಕೃಷ್ಣಶರ್ಮರನ್ನು ಕನ್ನಡದ ಕಣ್ಮಣಿಯನ್ನಾಗಿ ರೂಪಿಸಿತು. ಆದರೆ ಸಾಹಿತ್ಯಕ ಪತ್ರಿಕೆಯೊಂದರ ನಿಯಮಿತ ಪ್ರಕಟಣೆ ಲಾಭದಾಯಕವಲ್ಲ. ಇವರೂ ಅನೇಕ ಅಡಚಣೆ ಎದುರಿಸಿದರು. ಆರ್ಥಿಕ ಹೊರೆಯಿಂದ ಬಳಲಿದರು. 1961ರಲ್ಲಿ ಮನಸ್ಸಿಲ್ಲದ ಮನಸ್ಸಿನಿಂದ ಅನಿವಾರ್ಯವಾಗಿ ಅದರ ಹೊಣೆಯಿಂದ ಮುಕ್ತರಾದರು.

ಡಾ. ಬೆಟಗೇರಿ ಕೃಷ್ಣಶರ್ಮರು ತಮ್ಮ ಜೀವನ ಕಾಲದಲ್ಲಿ ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ಪ್ರತಿಯೊಂದು ಪ್ರಕಾರದಲ್ಲಿಯ ಅವರ ಕೃತಿಗಳು ಆಯಾ ಪ್ರಕಾರದಲ್ಲಿ ಅಂದು ಮಾದರಿಯೆಂದು ಪರಿಗಣಿಸಲ್ಪಟ್ಟಿವೆ. ಹದಿಮೂರು ಕವನ ಸಂಕಲನ, ಏಳು ಸಣ್ಣಕಥಾ ಸಂಕಲನ, ಆರು ಕಾದಂಬರಿ, ನಾಲ್ಕು ನಾಟಕ (ರೇಡಿಯೋ ರೂಪಕ) ಸಂಕಲನ, ಒಂದು ಚರಿತ್ರೆ, ಸಂಸ್ಕೃತಿ, ವಿಮರ್ಶೆ ಮತ್ತು ಸಂಶೋಧನ ಪ್ರಬಂಧಗಳ ಸಂಕಲನ ನಾಲ್ಕು, ಜಾನಪದ ವಿವೇಚನೆ ಮೂರು, ಅನುವಾದ ಒಂದು, ಸಂಪಾದಿತ ಕೃತಿಗಳು ಹನ್ನೊಂದು, ಮಕ್ಕಳ ಸಾಹಿತ್ಯ ಕೃತಿಗಳು ನಾಲ್ಕು-ಹೀಗೆ ಒಟ್ಟಿಗೆ 54 ಕೃತಿಗಳನ್ನು ಡಾ. ಬೆಟಗೇರಿಯವರು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ್ದಾರೆ. ಪ್ರಾಸಂಗಿಕವಾಗಿ ಬರೆದು ರೇಡಿಯೋದಲ್ಲಿ ಬಿತ್ತರಗೊಂಡ ಸುಮಾರು ಇಪ್ಪತ್ತು ರೂಪಕಗಳು ಇನ್ನೂ ಅಚ್ಚಾಗಿಲ್ಲ.

ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದಂತೆ 24 ಐತಿಹಾಸಿಕ ಕಾದಂಬರಿ ಬರೆಯಬೇಕೆಂಬುದು ಅವರ ಸಂಕಲ್ಪವಾಗಿತ್ತು. ಅದು ಸಾಧ್ಯವಾಗದ್ದಕ್ಕೆ ತಮ್ಮ ಜೀವನದ ಕೊನೆಯ ಗಳಿಗೆಯಲ್ಲೂ ಹಳಹಳಿಸುತ್ತಿದ್ದರು. ಜಯಂತಿ ಅಲ್ಲದೇ ಜಯ ಕರ್ನಾಟಕ, ಸ್ವಧರ್ಮ, ಮಾತೃಭೂಮಿ, ಜನಜೀವನ ಪತ್ರಿಕೆಗಳ ಸಂಪಾದನೆಯ ಅವಧಿಯಲ್ಲಿ ಬರೆದ ವಿವಿಧ ಬಗೆಯ ಲೇಖನಗಳು ಅಸಂಖ್ಯ. ಅವುಗಳನ್ನು ಆಯ್ದು ಸಂಪಾದಿಸಿ ಪ್ರಕಟಿಸಿದಾಗ ಮಾತ್ರ ಡಾ. ಬೆಟಗೇರಿಯವರ ಬಹುಮುಖ ಪ್ರತಿಭೆಯ ನಿಚ್ಚಳ ದರ್ಶನ ಸಾಧ್ಯ. ವಿವಿಧ ಪತ್ರಿಕೆಗಳ ಸಂಪಾದನ ಕಾಲದಲ್ಲಿ ಇಪ್ಪತ್ತೊಂದು ಬಗೆಯ ಗುಪ್ತನಾಮವಿಟ್ಟುಕೊಂಡು ಪ್ರಾಸಂಗಿಕ, ಪ್ರಚೋದಕ, ವಿಮರ್ಶಕ, ವಿಶ್ಲೇಷಣಾತ್ಮಕ ಲೇಖನಗಳನ್ನು ಬರೆದುದಾಗಿ ಅವರೇ ಹೇಳುತ್ತಿದ್ದರು. ಅವುಗಳನ್ನೆಲ್ಲ ಹೆಕ್ಕಿ ಪ್ರಕಟಿಸಿದರೆ ಕನ್ನಡಕ್ಕೊಂದು ವಿಶೇಷ ನಿಧಿ ದೊರೆತಂತಾಗುವುದೆಂಬುದರಲ್ಲಿ ಸಂಶಯವಿಲ್ಲ. ನವೋದಯ ಕಾಲದ ಸಾಹಿತ್ಯಕ ಬೆಳವಣಿಗೆಯ ಘಟ್ಟ ಘಟ್ಟಗಳ ಸ್ಪಷ್ಟ ಚಿತ್ರ ಬೇಕೆಂದರೆ ಈ ಕಾರ್ಯ ಮೊದಲು ಆಗಬೇಕು.

**ಕೃತಿ ಪರಿಚಯ**

'ಆನಂದಕಂದ'ರ ಪ್ರಕಟಿತ ಕೃತಿಗಳಲ್ಲಿ ವೈವಿಧ್ಯತೆ ಹೆಚ್ಚು, ಬೆಳವಣಿಗೆ ಸ್ಪಷ್ಟ. ಪ್ರತಿಯೊಂದು ಕೃತಿಯಲ್ಲಿಯೂ ಹೊಸತನ. ಜೀವನಾನುಭವದ ಕಲಾತ್ಮಕ ಅಭಿವ್ಯಕ್ತಿಗಳಾಗಿ ಒಡಮೂಡಿರುವ ಎಲ್ಲ ಕೃತಿಗಳಲ್ಲಿ ಅವರ ಪಾಂಡಿತ್ಯ, ಪ್ರತಿಭೆ, ಪರಿಶ್ರಮಗಳ ಮುಪ್ಪುರಿ ಸ್ಪಷ್ಟವಾಗಿ ಗೋಚರಿಸುತ್ತದೆ.

**ಕಾವ್ಯ**

ಡಾ. ಬೆಟಗೇರಿಯವರ ಕವನ ಸಂಗ್ರಹಗಳು ಒಟ್ಟಿಗೆ ಹದಿಮೂರು. ಇವುಗಳಲ್ಲಿ ಐದು ಸಂಗ್ರಹಗಳು ರಾಷ್ಟ್ರೀಯ ಭಾವನೆ ಪ್ರಚೋದಕ ಗೀತೆಗಳ ಸಂಕಲನಗಳು; ಪ್ರಾರಂಭ ಕಾಲದ ರಚನೆಗಳು. ರಾಷ್ಟ್ರಾಭಿಮಾನ, ನಾಡಿನ ಅಭಿಮಾನ ಬಡಿದೆಬ್ಬಿಸುವ ಭಾವಾವೇಶದ ಹಾಡುಗಳು. ಪ್ರಾಸ, ನಾದ, ಲಯ ಇವುಗಳಿಗೇ ಇಲ್ಲಿ ಪ್ರಾಶಸ್ತ್ಯ. ಅಂದಿನ ಸ್ವಾತಂತ್ರ್ಯ ಚಳವಳಿಯ ಯೋಧರಿಗೆ ಈ ಹಾಡುಗಳು ಮಂತ್ರಗಳಾಗಿದ್ದವು. ಕಾಂಗ್ರೆಸ್ ಹಾಡುಗಳೆಂದೇ ಪ್ರಸಿದ್ಧಿ ಪಡೆದಿದ್ದವು.

1926ರಿಂದ 1981ರ ಅವಧಿಯಲ್ಲಿ ಪ್ರಕಟಗೊಂಡ ಎಂಟು ಕವನ ಸಂಗ್ರಹಗಳು ಇವರ ವಿಕಾಸಗೊಂಡ ಪ್ರತಿಭೆಯ ಫಲಗಳು. ಮುದ್ದನ ಮಾತು (1926), ಅರುಣೋದಯ (1926), ಕಾರಹುಣ್ಣಿಮೆ (1953), ವಿರಹಿಣಿ (1956), ಒಡನಾಡಿ (1956), ನಲ್ವಾಡುಗಳು (1958), ಉತ್ಸಾಹಗಾಥಾ (1972) ಇವು ಭಾವಗೀತೆಗಳ ಸಂಕಲನಗಳು. ಸಾಮಾಜಿಕನ ಸಂವಚನಗಳು (1981) ವಚನ ಗೀತೆಗಳ ಸಂಕಲನ, ವಚನದ ಮಾದರಿಯ ರಚನೆಗಳಲ್ಲಿವೆ.

'ಮುದ್ದನ ಮಾತು' ಸಾಹಿತ್ಯಕ ದೃಷ್ಟಿಯಿಂದ ಪರಿಭಾವಿಸಬೇಕಾದ ಮಹತ್ವದ ಮೊದಲ ಕೃತಿ. ಮಗುವಿನ ಮುಗ್ಧಭಾವನೆಗಳನ್ನು, ವಿಧಾಯಕ ವಿಧ್ವಂಸಕ ಪ್ರವೃತ್ತಿಗಳನ್ನು, ವಿವಿಧ ವರ್ತನೆಗಳನ್ನು ಈ ಸಂಗ್ರಹದಲ್ಲಿಯ ಸುಮಾರು 40 ಕವನಗಳಲ್ಲಿ ಕವಿ ಸುಂದರವಾಗಿ ಹಿಡಿದಿಟ್ಟಿದ್ದಾರೆ. ಭಾವಕ್ಕೆ ತಕ್ಕ ಭಾಷೆಯಿಂದ ಕವನಗಳು ಬಾಲ ಮನದ ಹಲವಾರು ಪದರುಗಳನ್ನು ಸಮರ್ಪಕವಾಗಿ ಎತ್ತಿ ತೋರಿಸುತ್ತವೆ. ಬಾಲಕ, ಪಾಲಕ ಇಬ್ಬರಿಗೂ ಉಪಯುಕ್ತ ಕವನಗಳಲ್ಲಿವೆ. ಮೊದಲ ಕೃತಿಯಾದರೂ ಹಾಗೆನಿಸು ವುದಿಲ್ಲವೆಂಬುದು ಗಮನಾರ್ಹವಾದ ಸಂಗತಿ.

ಅದೇ ವರ್ಷವೇ 'ಅರುಣೋದಯ'ವೂ ಪ್ರಕಟವಾಯಿತು. ದೇಶ ಭಕ್ತಿ, ನಾಡು-ನುಡಿ ಅಭಿಮಾನ, ನಮ್ಮ ಇತಿಹಾಸ ಮತ್ತು ಸಂಸ್ಕೃತಿ ಕುರಿತು ಹೆಮ್ಮೆ ಉಂಟಾಗುವಂತೆ ಪ್ರಚೋದಿಸುವಂಥ ಕವನಗಳೇ ಈ ಸಂಗ್ರಹದಲ್ಲಿ ಹೆಚ್ಚಾಗಿವೆ. ಅತ್ಯಂತ ಜನಪ್ರಿಯವಾಗಿ ನಾಡವರೆಲ್ಲರ ತುದಿ ನಾಲಗೆಯ ಮೇಲೆ ಅಂದು ನಲಿಯುತ್ತಿದ್ದ' ಎನಿತು ಇನಿದು ಈ ಕನ್ನಡ ನುಡಿಯು, ಮನವನು ತಣಿಸುವ ಮೋಹನ ಸುಧೆಯು' ಕವಿತೆಯು ಈ ಸಂಗ್ರಹದಲ್ಲಿಯೇ ಇದೆ.

'ಕಾರಹುಣ್ಣಿಮೆ' ವೈವಿಧ್ಯಮಯ ಕವನಗಳನ್ನೊಳಗೊಂಡ ಸಂಕಲನ. ಪ್ರಕೃತಿಯನ್ನು ಕುರಿತು ಬರೆದ ಕವನಗಳೇ ಹೆಚ್ಚು. ದೇಶ, ನಾಡು-ನುಡಿ ಕುರಿತ ಕವನಗಳೂ ಕೆಲವಿವೆ. ಕೆಲವು ಮಹಾನುಭಾವರನ್ನು ಕುರಿತ ಕವನಗಳೂ ಇವೆ. ಬಹುತೇಕ ಕವನಗಳು ಕವಿಯ ಆದರ್ಶ, ಪ್ರಕೃತಿ ಪ್ರೇಮ ಇತ್ಯಾದಿಗಳನ್ನು ಪ್ರತಿಬಿಂಬಿಸುತ್ತವೆ.

'ವಿರಹಿಣಿ', 'ಒಡನಾಡಿ' ಮತ್ತು 'ನಲ್ವಾಡುಗಳು' ಈ ಮೂರು ಸಂಕಲನಗಳು ಪ್ರಣಯ, ಪ್ರೇಮ, ವಿರಹ, ಪ್ರೀತಿ ಮುಂತಾದ ಮಧುರ ಭಾವಗಳ ಸುತ್ತ ರಚಿಸಿದ ಸುಂದರ ಕವನಗಳನ್ನು ಒಳಗೊಂಡಿವೆ. ತಿಳಿಹಾಸ್ಯ, ನಾದಯುಕ್ತ ಭಾಷೆ, ಲಯಯುಕ್ತ ಬಂಧಗಳಿಂದ ಕವನಗಳು ಮನೋಹರ ವಾಗಿವೆ. 'ನಲ್ವಾಡುಗಳು' ಸಂಗ್ರಹದಲ್ಲಿಯ ಕವನಗಳಂತೂ ಜಾನಪದ ಸೊಗಡಿನಿಂದಾಗಿ ಇಂದಿಗೂ ಕರ್ನಾಟಕದ ಎಲ್ಲೆಡೆಯ ಜನಸಾಮಾನ್ಯರ ಮನದಲ್ಲಿ ಮನೆ ಮಾಡಿಬಿಟ್ಟಿರುವುದನ್ನು ನಾವು ಕಾಣುತ್ತೇವೆ. ಅನೇಕರು ಇವು ಜಾನಪದ ಹಾಡುಗಳೆಂದೇ ಭ್ರಮಿಸಿರುವುದುಂಟು.

ಸಾಮಾಜಿಕ ಕಳಕಳಿ ಮತ್ತು ಹೊಣೆಗಾರಿಕೆಗಳಿಗೆ ಸಂಬಂಧಿಸಿದಂತೆ ವಿವಿಧ ಭಾವಗಳನ್ನೊಳಗೊಂಡ ಕೃತಿ 'ಉತ್ಸಾಹಗಾಥಾ'. ಇಲ್ಲಿಯ ಕವನಗಳಲ್ಲಿ ಆಶಾವಾದಿತ್ವ, ಮಾನವತೆಗಳಿಗೆ ಪ್ರಾಧಾನ್ಯತೆ, ವೈಚಾರಿಕತೆಗೂ ಸ್ಥಾನ ಸಿಕ್ಕಿದೆ. ಆದ್ದರಿಂದ ಇಲ್ಲಿಯ ಕವನಗಳು ಓದುಗರನ್ನು ಯೋಚನಾಮಗ್ನರ ನ್ನಾಗಿಸುತ್ತವೆ.

'ಸಾಮಾಜಿಕ ಸಂವಚನಗಳು' ವಿವಿಧ ಪ್ರಸಂಗಗಳಲ್ಲಿ ಪತ್ರಿಕೆಗಳಿಗಾಗಿ ಬರೆದ ಮುಕ್ತ ವಿಚಾರಲಹರಿಯ ಸಂಕಲನ. ಮೊನಚಾದ ಭಾಷೆ, ಪ್ರಗಲ್ಭ ವಿಚಾರಗಳಿಂದಾಗಿ ಸಂವಚನಗಳು ಮನನೀಯವಾಗಿವೆ.

ಎಂಟೂ ಕವನ ಸಂಕಲನಗಳಲ್ಲಿಯ ಕವನಗಳು ವಿವಿಧ ಭಾವ, ವಿಚಾರಗಳನ್ನೊಳಗೊಂಡು ಗೇಯಗುಣದಿಂದ ಓದುಗರನ್ನು ಸೆಳೆಯುತ್ತವೆ. ವಿಕಾಸಗೊಳ್ಳುತ್ತಾ ಸಾಗಿದ ಅವರ ಪ್ರತಿಭೆಯ ದರ್ಶನವನ್ನು ನೀಡುತ್ತವೆ. ಕಾವ್ಯಾಸಕ್ತರನ್ನು ತಣಿಸುತ್ತವೆ. ಇವರ ಕಾವ್ಯದ ಮೋಹಕತೆಯಿಂದಾಗಿ 'ಕವಿಭೂಷಣ' ಎಂಬುದಾಗಿ ಜನ ಇವರನ್ನು ಕರೆದು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಇವರಿಗೆ 'ಕವಿಭೂಷಣ' ನಿಜಕ್ಕೂ ಅನ್ವರ್ಥಕ ಬಿರುದು.

**ಸಣ್ಣಕಥೆ**

ಕನ್ನಡ ಸಣ್ಣಕಥೆಗಳ ಪ್ರಾರಂಭ ಕಾಲದಲ್ಲಿಯೇ ಕೃಷಿ ಪ್ರಾರಂಭಿಸಿದವರಲ್ಲಿ ಡಾ. ಬೆಟಗೇರಿಯವರು ಪ್ರಮುಖರು. ಇವರು (1) ಬಡತನದ ಬಾಳು (1932), (2) ಸಂಸಾರ ಚಿತ್ರ (1932), (3) ನಮ್ಮ ಬದುಕು (1939), (4) ಜನಪದ ಜೀವನ (1955), (5) ಮಾತನಾಡುವ ಕಲ್ಲು (1963), (6) ಕಳ್ಳರ ಗುರು ಮತ್ತು ಇತರ ಕಥೆಗಳು ಎಂಬ ಆರು ಕಥಾಸಂಕಲನಗಳನ್ನು ಹೊರ ತಂದಿದ್ದಾರೆ. ಇವುಗಳಲ್ಲಿಯ ಹತ್ತು ಕಥೆಗಳನ್ನು ಆಯ್ದು 'ದಶಮಂಜರಿ' ಹೆಸರಿನಿಂದ ಪ್ರಕಟಿಸಿದ್ದಾರೆ. ಇವರ ಒಟ್ಟು ಕಥೆಗಳು 43.

ತಾವು ಕಂಡುಂಡ ಜೀವನದ ಪ್ರಸಂಗಗಳನ್ನು ತಮ್ಮ ದೃಷ್ಟಿ ಧೋರಣೆಗಳ ಮೂಸೆಯಲ್ಲಿ ಪುಟಗೊಳಿಸಿ ಕಥೆಗಳನ್ನು ರಚಿಸುವುದು ಬೆಟಗೇರಿಯವರ ವೈಶಿಷ್ಟ್ಯ. ಅಂತೆಯೇ ಆದರ್ಶ ವಾಸ್ತವಗಳ ಮಧುರ ಮಿಲನ ಅವುಗಳಲ್ಲಿ ಎದ್ದು ಕಾಣುತ್ತವೆ. ಮೊದಲಿನ ಮೂರು ಸಂಗ್ರಹಗಳಲ್ಲಿಯ ಕಥೆಗಳಲ್ಲಿ ಹಳ್ಳಿಯ ಬಡತನದ ಜೀವನ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಆತ್ಮೀಯ ಸರಳ ಶೈಲಿಯಲ್ಲಿ ಚಿತ್ರಿಸಲಾಗಿದೆ. ಅನಂತರದ ಎರಡು ಸಂಗ್ರಹಗಳಲ್ಲಿ ಗ್ರಾಮೀಣ ಸಂಸ್ಕೃತಿಯಲ್ಲಿಯ ಹೊಲ, ನೆಲ, ಜಲ, ಕಲ್ಲು, ಜನ, ಜಾತ್ರೆ, ಇವೇ ಮುಂತಾದವುಗಳಿಗೆ ಸಂಬಂಧಿಸಿದ ಐತಿಹ್ಯ, ಸ್ಥಳ ಪುರಾಣಗಳನನ್ನು ತಮ್ಮ ಪ್ರತಿಭೆಯಿಂದ ಪರಿಭಾವಿಸಿ ರಚಿಸಿದ ಮನಮೋಹಕ ಕಥೆಗಳಿವೆ. ಜಾನಪದ ವಸ್ತುಗಳನ್ನು ಹೇಗೆ ಕಥೆಯಾಗಿ ಹೆಣೆಯಬಹುದೆಂಬುದಕ್ಕೆ ಇಲ್ಲಿಯ ಕಥೆಗಳೆಲ್ಲ ಉತ್ತಮ ಉದಾಹರಣೆಗಳೆನ್ನುವಂತೆ ಮೂಡಿ ಬಂದಿವೆ. ಇದು ಬೆಟಗೇರಿಯವರ ವೈಶಿಷ್ಟ್ಯ. 'ಕಳ್ಳರ ಗುರು ಮತ್ತು ಇತರ ಕಥೆಗಳು' ಎಲ್ಲ ಬಗೆಯ ವಸ್ತುಗಳನ್ನೊಳಗೊಂಡು ಸಂಕೀರ್ಣತೆ ಪ್ರದರ್ಶಿಸುತ್ತದೆ.

'ಆನಂದಕಂದ'ರ ಎಲ್ಲ ಕಥೆಗಳೂ ಅಂದು ಓದುಗರನ್ನು ರಂಜಿಸಿ, ಸಂಸ್ಕರಿಸುವಲ್ಲಿ ಯಶ ಗಳಿಸಿದುವು. ಅವರ ಕೆಲವು ಕಥೆಗಳಲ್ಲಿಯ ಪ್ರಗತಿಪರ ಧೋರಣೆ, ಆರ್ಥಿಕ ಸಮಸ್ಯೆಗಳ ವಿಶ್ಲೇಷಣೆಯಲ್ಲಿಯ ಮುಕ್ತತೆಗಳು ಇಂದಿಗೂ ಪ್ರಸ್ತುತವೆನಿಸುವಂತಿವೆ. ಪ್ರಗತಿಶೀಲರ ಮತ್ತು ದಲಿತ, ಬಂಡಾಯದವರ ವಿಚಾರಸರಣಿಯ ಬೇರುಗಳೂ ಕೆಲವು ಕಥೆಗಳಲ್ಲಿ ಸೂಚ್ಯವಾಗಿ ವ್ಯಕ್ತವಾಗಿರುವುದುಂಟು. ಇದಕ್ಕೆ ಬೆಟಗೇರಿಯವರು ಹಳ್ಳಿಯ ಜೀವನದ ಕಷ್ಟ-ನಷ್ಟ, ಶೋಷಣೆ ಕಣ್ಣಾರೆ ಕಂಡುದೇ ಮುಖ್ಯ ಕಾರಣ. ಕಥಾ ತಂತ್ರದಲ್ಲಿ ಮತ್ತು ಪಾತ್ರಗಳ ಗುಣಸ್ವಭಾವಗಳಲ್ಲಿ ಇಂದು ಕಾಣುವ ಸಂಕೀರ್ಣತೆ ಅವುಗಳಲ್ಲಿ ಇಲ್ಲದಿರಬಹುದು. ಆದರೆ ನೇರ ನಿರೂಪಣೆ, ಆತ್ಮೀಯ ಶೈಲಿ, ಅಚ್ಚಗನ್ನಡ ಭಾಷೆಯ ಬೆಡಗುಗಳಿಂದ ಶ್ರೀಯುತರ ಕಥೆಗಳು ಗಮನಾರ್ಹವಾಗಿವೆ. ಅದರಲ್ಲಿಯೂ ಜಾನಪದ ಐತಿಹ್ಯ ಮತ್ತು ಸ್ಥಳಪುರಾಣಾದಿಗಳಿಗೆ ಸಂಬಂಧಿಸಿದ ಕಥೆಗಳು ಬೆಟಗೇರಿಯವರಿಗೆ ಕಥಾಸಾಹಿತ್ಯ ಕ್ಷೇತ್ರದಲ್ಲಿ ಮನ್ನಣೆಯ ವಿಶೇಷ ಸ್ಥಾನಗಳಿಸಿಕೊಟ್ಟಿವೆ. ಇಂಥ ಕಥೆಗಳು ಇನ್ನಾರಿಂದಲೂ ಇಷ್ಟು ಸಂಖ್ಯೆಯಲ್ಲಿ ಇಂದಿಗೂ ರಚನೆಗೊಂಡಿಲ್ಲ ವೆಂಬುದನ್ನು ಗಮನಿಸಿದರೆ ಇವರ ವೈಶಿಷ್ಟ್ಯ ಇನ್ನಷ್ಟು ನಿಚ್ಚಳವಾಗುತ್ತದೆ.

**ಕಾದಂಬರಿ**

'ಆನಂದಕಂದ' ಅವರ ಐದು ಕಾದಂಬರಿಗಳು ಮಾತ್ರ ಪ್ರಕಟವಾಗಿವೆ. (1) ಸುದರ್ಶನ (1933), (2) ರಾಜಯೋಗಿ (1934), (3) ಅಶಾಂತಿಪರ್ವ (1935), (4) ಮಲ್ಲಿಕಾರ್ಜುನ (1961), (5) ಮಗಳ ಮದುವೆ (1951). ಈ ಐದರಲ್ಲಿ 'ಸುದರ್ಶನ' ಮತ್ತು 'ಮಗಳ ಮದುವೆ' ಇವೆರಡು ಸಾಮಾಜಿಕ ಕಾದಂಬರಿಗಳು. ಇನ್ನುಳಿದ ಮೂರು ಐತಿಹಾಸಿಕ ಕಾದಂಬರಿಗಳು. ಮೂರೂ ಕಾದಂಬರಿಗಳು ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ವಸ್ತುಗಳ ನ್ನೊಳಗೊಂಡಿವೆ. ಡಾ. ಬೆಟಗೇರಿಯವರು ವಿಜಯನಗರ ಸಾಮ್ರಾಜ್ಯದ ಇತಿಹಾಸಕ್ಕೆ ಸಂಬಂಧಿಸಿದ ವಸ್ತುಗಳನ್ನೊಳಗೊಂಡ 24 ಕಾದಂಬರಿ ರಚಿಸಬೇಕೆಂದು ಹೊಳಹು ಹಾಕಿಕೊಂಡಿದ್ದರು. ಈ ಕಾರ್ಯಕ್ಕೆ ಬೇಕಾಗುವ ಎಲ್ಲ ಪೂರ್ವಸಿದ್ಧತೆಯನ್ನೂ ಮಾಡಿಕೊಂಡಿದ್ದರು. ಆದರೆ ಜೀವನದ

ಹೋರಾಟ, ಇನ್ನುಳಿದ ಕಾರ್ಯ ಚಟುವಟಿಕೆಗಳ ಮಧ್ಯೆ ಆ ಮಹಾ ಕೆಲಸಕ್ಕೆ ಸಮಯ ಸಿಗದೇ ಮುಂದೆ ಮುಂದೆ ಹಾಕಲಾಯಿತು. ಅವರ ಈ ಇಚ್ಛೆ ಈಡೇರುವ ಮುನ್ನವೇ ಪಾರ್ಶ್ವವಾಯು ಮುಂತಾದ ಭೀಕರ ಬೇನೆಗಳಿಗೆ ತುತ್ತಾಗಿಬಿಟ್ಟರು. ನನ್ನಿಂದ ಈ ಕೆಲಸ ಆಗಲಿಲ್ಲವಲ್ಲವೆಂದು ಕೊರಗುತ್ತಲೇ ಕೊನೆಯುಸಿರೆಳೆದರು.

'ಸುದರ್ಶನ' ಶ್ರೀಯುತರ ಮೊದಲ ಕಾದಂಬರಿ. ಕನ್ನಡದಲ್ಲಿ ಕಾದಂಬರಿ ಸಾಹಿತ್ಯ ಪ್ರಕಾರವಿನ್ನೂ ಪ್ರಾರಂಭಿಕ ಅವಸ್ಥೆಯಲ್ಲಿದ್ದಾಗ ಹೊರಬಂದ ಕೃತಿ. ಸುದರ್ಶನನು ಈ ಕಾದಂಬರಿಯ ನಾಯಕ. ಒಮ್ಮುಖ ಪ್ರೇಮದಿಂದಾಗುವ ದುರಂತ ಚಿತ್ರಣವೇ ಕಾದಂಬರಿಯ ವಸ್ತು. ಪ್ರೇಮ ಮೋಹಗಳಲ್ಲಿಯ ವ್ಯತ್ಯಾಸ ನಿರೂಪಿಸುವುದೇ ಇಲ್ಲಿಯ ಉದ್ದೇಶ. ಕಾದಂಬರಿಕಾರರ ಉದ್ದೇಶ ಸಫಲವಾಗಿದೆ. ಕಾದಂಬರಿ ಯಶಸ್ವಿಯಾಗಿದೆ.

'ಮಗಳ ಮದುವೆ' ಅವರ ಇನ್ನೊಂದು ಸಾಮಾಜಿಕ ಕಾದಂಬರಿ. ಮುಂಬೈ ಸರಕಾರದಿಂದ 1951ರಲ್ಲಿ ಎರಡು ಸಾವಿರ ರೂಪಾಯಿಗಳ ಬಹುಮಾನ ಗಳಿಸಿದ ಕೃತಿ. ಸ್ವಾತಂತ್ರ್ಯ ಚಳುವಳಿಯನ್ನು ಹಿನ್ನೆಲೆಯಾಗಿಟ್ಟುಕೊಂಡು ಅಂದಿನ ಜನಜೀವನವನ್ನು ಇಲ್ಲಿ ಚಿತ್ರಿಸಲಾಗಿದೆ. ಒಂದು ಹೆಣ್ಣಿನ ಮದುವೆಗೆ ಎಷ್ಟೊಂದು ಎಡರು ತೊಡರುಗಳುಂಟಾ ಗುತ್ತವೆಂಬುದು ಕಥಾವಸ್ತು. ಪರಸ್ಪರ ವಿರೋಧ ಗುಣಸ್ವಭಾವ ಚಿತ್ರಣದಿಂದಾಗಿ ಕಾದಂಬರಿ ಓದಿಸಿಕೊಂಡು ಹೋಗುತ್ತದೆ. ಪಾತ್ರಗಳು ಓದುಗರ ಮನದಲ್ಲಿ ಮೂಡುತ್ತವೆ. ಕಾದಂಬರಿ ಸೊಗಸಾಗಿದೆ. ಮೂರು ಐತಿಹಾಸಿಕ ಕಾದಂಬರಿಗಳಲ್ಲಿ ಬೆಟಗೇರಿಯವರ ಪ್ರತಿಭೆ, ಪಾಂಡಿತ್ಯಗಳು ಸುಸ್ಪಷ್ಟವಾಗಿ ಅಭಿವ್ಯಕ್ತವಾಗಿದೆ. ಇತಿಹಾಸದ ಕಾಲಾನುಕ್ರಮದಂತೆ ಅವರ ಮೂರನೆಯ ಕೃತಿಯೇ ಮೊದಲನೆಯದು. ಕನ್ನಡಿಗರ ಹೆಮ್ಮೆಯ ವಿಜಯನಗರ ಸಾಮ್ರಾಜ್ಯದ ವೈಭವವು ಮಲ್ಲಿಕಾರ್ಜುನ ದೊರೆಯ ಅನಂತರ ಹೇಗೆ ಕ್ರಮವಾಗಿ ಅವನತಿಯೆಡೆಗೆ ಸಾಗಿ ಮಣ್ಣುಗೂಡಿತೆಂಬುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಲೋಸುಗ ಈ ಮೂರೂ ಕಾದಂಬರಿಗಳನ್ನು 'ಆನಂದಕಂದ'ರು ರಚಿಸಿದ್ದಾರೆ. ಮಲ್ಲಿಕಾರ್ಜುನ ದೊರೆ ಮತ್ತು ಅವನ ನಂತರದ ರಾಜಯೋಗಿಯೆನ್ನಬಹುದಾದ ರಾಜಶೇಖರರ ಕಾಲದಲ್ಲಿ ವಿಜಯುನಗರಕ್ಕೆ ಒದಗಿದ ವಿಪತ್ತಿನ ವಿವರಪೂರ್ಣ ಚಿತ್ರಣ, ಅದರಿಂದ ನಿರ್ಮಾಣವಾದ ಅಶಾಂತಿಪರ್ವದ ನಿರೂಪಣೆಗಳನ್ನು ಕಾದಂಬರಿಕಾರರು ಅತ್ಯಂತ ಸಮರ್ಪಕವಾಗಿ ಮಾಡಿದ್ದಾರೆ. ಓದುಗರು ಆರುನೂರು ವರ್ಷ ಹಿಂದೆ ಹೋಗಿ, ಅಂದಿನ ಕಾಲದಲ್ಲಿ ಬಂಧಿಗಳಾಗುತ್ತಾರೆ. ಅಂತೆಯೇ ಮೂರೂ ಕಾದಂಬರಿಗಳು ಉತ್ಕೃಷ್ಟವಾಗಿವೆ. ಐತಿಹಾಸಿಕ ಕಾದಂಬರಿಕಾರ ನಿಗಿರಬೇಕಾದ ಇತಿಹಾಸ ಜ್ಞಾನ, ಕಾಲಧರ್ಮ ಅರಿಯುವ ಪಾಂಡಿತ್ಯ, ಅಧ್ಯಯನ ಶೀಲತೆ ಮತ್ತು ಇವೆಲ್ಲವುಗಳ ಬಲದಿಂದ ಹಿಂದಿನ ಜನಜೀವನದ ರೀತಿನೀತಿ ಕಲ್ಪಿಸುವ ಕಲ್ಪಕತೆಗಳು ಡಾ. ಬೆಟಗೇರಿಯವರಲ್ಲಿ ಸಾಕಷ್ಟಿದ್ದವೆಂಬುದಕ್ಕೆ ಈ ಕೃತಿಗಳೇ ಸಾಕ್ಷಿ. ಆದ್ದರಿಂದ ಕನ್ನಡದಲ್ಲಿಯ ಈ ಮೊದಲಿನ ಐತಿಹಾಸಿಕ ಕಾದಂಬರಿ ಗಳಿಗಿಂತಲೂ ಇವರ ಈ ಕಾದಂಬರಿಗಳು ಹೆಚ್ಚು ಯಶಸ್ವಿಯಾಗಿವೆ. ಅಷ್ಟೇ ಅಲ್ಲ, ಐತಿಹಾಸಿಕ ಕಾದಂಬರಿಕಾರರಿಗೆ ಮಾದರಿಗಳೂ ಆಗಿವೆ. ಚರಿತ್ರೆಯ ವಿಭಾಗದಲ್ಲಿ ಸೇರುವ 'ಕನ್ನಡ ರಾಜ್ಯ ರಮಾರಮಣ' ಎಂಬ ಕೃತಿಯೊಂದನ್ನೂ ಇವರು ರಚಿಸಿದ್ದಾರೆ. ಈ ಕೃತಿಯೂ ಶ್ರೇಷ್ಠವಾಗಿದೆ. ಆದರೆ ವಿದ್ವಾಂಸರಾದ ವಿಮರ್ಶಕರು ಇದನ್ನು ಅಷ್ಟಾಗಿ ಗಮನಿಸಿದಂತಿಲ್ಲ.

### ಪ್ರಬಂಧಗಳು

ಡಾ. ಬೆಟಗೇರಿ ಕೃಷ್ಣಶರ್ಮರು ಸೃಜನಶೀಲ ಸಾಹಿತಿಗಳೂ ಹೌದು, ಚಿಂತನಶೀಲ ಸಂಶೋಧಕರೂ ಹೌದು; ಮೀಮಾಂಸಕರೂ, ವಿಮರ್ಶಕರೂ ಹೌದು. ಸಂಶೋಧನೆ, ಮೀಮಾಂಸೆ ಮತ್ತು ವಿಮರ್ಶೆಗೆ ಸಂಬಂಧಿಸಿದ (1) ಕರ್ನಾಟಕ ಜನಜೀವನ (1939), (2) ಸಾಹಿತ್ಯವು ಸಾಗಿರುವ ದಾರಿ (1961), (3) ನಮ್ಮ ಸಂಸ್ಕೃತಿ ಪರಂಪರೆ (1969), (4) ಸಾಹಿತ್ಯ ವಿಹಾರ (1981) ಅವರ ಈ ನಾಲ್ಕು ಗ್ರಂಥಗಳು ಅವರ ಪಾಂಡಿತ್ಯ, ಪ್ರತಿಭೆ ಹಾಗೂ ಚಿಂತನಶೀಲತೆಗಳ ಮಧುರ ಫಲಗಳು. 'ಕರ್ನಾಟಕ ಜನಜೀವನ'ದಲ್ಲಿ (1) ಕನ್ನಡಿಗರ ಕೋಟೆಕಾಳಗ, (2) ಕನಕದಾಸರು ಕಂಡ ವಿಜಯನಗರ, (3) ಚಾರಣಕವಿ ಗೋವಿಂದ ವೈದ್ಯ ಎಂಬುದಾಗಿ ಅತ್ಯಂತ ಮಹತ್ತ್ವದ ಮೂರು ಪ್ರಬಂಧಗಳಿವೆ. ಕನ್ನಡಿಗರೆಲ್ಲರು ಅರಿತುಕೊಳ್ಳಲೇಬೇಕಾದ ಪ್ರಬಂಧಗಳಿವು. ನಮ್ಮ ಅವಜ್ಞೆಗೊಳಗಾದ ಕೆಲವು ಹಳಗನ್ನಡ ಕೃತಿ ಗಳಲ್ಲಿಯೂ ಎಂಥ ಮುತ್ತು ರತ್ನಗಳಿರಬಲ್ಲುವೆಂಬುದನ್ನು ಇವುಗಳಿಂದ ನಾವು ಕಂಡುಕೊಂಡು ಬೆಟಗೇರಿಯವರ ಚಿಕಿತ್ಸಕ ಪಾಂಡಿತ್ಯಕ್ಕೆ ಬೆರಗಾಗುತ್ತೇವೆ. ಕನ್ನಡ ಸಂಸ್ಕೃತಿ ಅರಿಯಬೇಕಾದವರು ಓದಲೇಬೇಕಾದ ಪ್ರಬಂಧಗಳಿವು. ಈ ವಿಶಿಷ್ಟ ಕೃತಿ ಕನ್ನಡ ಸಂಶೋಧನ ಕೃತಿಗಳ ಸಾಲಿನಲ್ಲಿ ಅಗ್ರಗಣ್ಯ ಸ್ಥಾನಕ್ಕೆ ಅರ್ಹವಾಗಿದೆಯೆಂದು ಹೇಳಿದರೂ ಇದರ ಬಗೆಗೆ ಬಹಳ ಕಡಿಮೆ ಹೇಳಿದಂತೆಯೇ.

'ಸಾಹಿತ್ಯವು ಸಾಗಿರುವ ದಾರಿ' ಸಾಹಿತ್ಯ ಮೀಮಾಂಸೆ, ವಿಮರ್ಶೆ ಮತ್ತು ಜಾನಪದಕ್ಕೆ ಸಂಬಂಧಿಸಿದ ಉಪಯುಕ್ತ ಪ್ರಬಂಧಗಳ ಸಂಕಲನ. ಬೆಟಗೇರಿಯವರ ಚಿಂತನೆಯ ರೀತಿ ಧೋರಣೆಗಳ ಬಗ್ಗೆ ಸ್ಪಷ್ಟ ತಿಳಿವು ನಮಗಾಗುತ್ತದೆ. ಜಾನಪದಕ್ಕೆ ಸಂಬಂಧಿಸಿದ ಪ್ರಬಂಧಗಳೂ ಕೆಲವು ಇಲ್ಲಿವೆ. ಸಾಹಿತ್ಯದ ಸರಿಯಾದ ಅಭ್ಯಾಸ ಮಾಡಬೇಕೆನ್ನುವವರಿಗೆ ಅತ್ಯುತ್ತಮ ಪ್ರವೇಶಿಕ ಇದಾಗಿದೆ.

1961ರಲ್ಲಿ ಗ್ರಂಥರೂಪದಲ್ಲಿ ಪ್ರಕಟವಾದ 'ನಮ್ಮ ಸಂಸ್ಕೃತಿ ಪರಂಪರೆ' ಪ್ರತಿಯೊಬ್ಬರೂ ಅರಿತಿರಬೇಕಾದ ಅತ್ಯಂತ ಉಪಯುಕ್ತ ಮತ್ತು ಮಹತ್ವಪೂರ್ಣ ವಿಷಯಗಳನ್ನು ಕುರಿತು ಬರೆದ ಹದಿನೈದು ಪ್ರಬಂಧಗಳ ಸಂಕಲನ. ಚಾಂದ್ರಮಾನ ಸಂವತ್ಸರದ ಹನ್ನೆರಡು ತಿಂಗಳುಗಳ ಅವಧಿಯಲ್ಲಿಯ ವಿವಿಧ ಸಾಂಸ್ಕೃತಿಕ ಪರಂಪರೆ, ಆಚರಣೆ ಮತ್ತು ಅವುಗಳ ಹಿನ್ನೆಲೆ ಇತ್ಯಾದಿಗಳನ್ನು ಕುರಿತು ಬರೆದ ಮೊದಲ ಹನ್ನೆರಡು ಪ್ರಬಂಧಗಳೇ ಈ ಕೃತಿಯ ಜೀವಜೀವಾಳ. ಚೈತ್ರಮಾಸದಿಂದ ಮೊದಲ್ಗೊಂಡು ಫಾಲ್ಗುಣದವರೆಗಿನ ಎಲ್ಲ ತಿಂಗಳುಗಳಲ್ಲಿ ಜರುಗುವ ಹಬ್ಬ ಹರಿದಿನಗಳ ಹಿನ್ನೆಲೆ, ವಿಧಾನ, ಅವುಗಳ ವೈಶಿಷ್ಟ್ಯ ಮತ್ತು ಅವೆಲ್ಲವುಗಳ ಇತಿಹಾಸ, ಆಕರ ಮುಂತಾದವುಗಳ ಬಗ್ಗೆ ಆಳವಾದ ಅಧ್ಯಯನದ ಫಲಸ್ವರೂಪವಾಗಿರುವ ಖಚಿತ ವಿವರಗಳು ಈ ಪ್ರಬಂಧಗಳಲ್ಲಿವೆ. ಇನ್ನುಳಿದ (1) ಕರ್ನಾಟಕದಲ್ಲಿ ವಸಂತೋತ್ಸವ, (2) ಶಮೀ ಸಂಕೇತ, (3) ನಾಡಹಬ್ಬ ಎಂಬ ಮೂರು ಪ್ರಬಂಧಗಳಲ್ಲಿಯ ವಿಷಯವೂ ಕನ್ನಡ ಸಂಸ್ಕೃತಿ ದರ್ಶನ ಮಾಡಿಕೊಳ್ಳಲು ಅತ್ಯಂತ ಉಪಯುಕ್ತವಾಗಿದೆ. ಆದ್ದರಿಂದ ಇಲ್ಲಿಯ ಎಲ್ಲ ಹದಿನೈದು ಪ್ರಬಂಧಗಳೂ ನಮ್ಮ ಸಂಸ್ಕೃತಿ ಪರಂಪರೆಯ ಜ್ಞಾನ ನಮಗೊದಗಿಸಿ, ಎಚ್ಚರಗೊಳಿಸುವ ಮಹಾಕಾರ್ಯಮಾಡುತ್ತವೆ. ಇಂಥ ಪುಸ್ತಕಗಳು ಕನ್ನಡದಲ್ಲಿ ವಿರಳ; ಇಲ್ಲವೆಂದರೂ ನಡೆದೀತು. ಆದ್ದರಿಂದ ನಮ್ಮ ಸಂಸ್ಕೃತಿ ಪರಂಪರೆಗಳ

ಬಗ್ಗೆ ಅಧಿಕಾರವಾಣಿಯ ಸಮಗ್ರಮಾಹಿತಿ ಸಿಗುವ ಈ ಗ್ರಂಥ ಪ್ರಕಟಿಸಿದ್ದಕ್ಕಾಗಿ ಆನಂದಕಂದರನ್ನು ಎಷ್ಟು ಹೊಗಳಿದರೂ ಕಡಿಮೆಯೆನಿಸುತ್ತದೆ.

ಪ್ರಾಸಂಗಿಕವಾಗಿ ಬರೆದ ಇಪ್ಪತ್ತೆರಡು ಪ್ರಬಂಧಗಳು 'ಸಾಹಿತ್ಯ ವಿಹಾರ'ದಲ್ಲಿ ಸಂಕಲನಗೊಂಡಿವೆ. ನಾಲ್ಕು ವಿಹಾರಗಳಲ್ಲಿ ವಿಭಜನೆಗೊಂಡಿರುವ ಈ ಪ್ರಬಂಧಗಳಲ್ಲಿ ವಿವಿಧ ಬಗೆಯ ವಿಷಯಗಳಿವೆ. ಕನ್ನಡಿಗರ ಸಂಸ್ಕೃತಿ, ವಿಮರ್ಶೆ, ಸಂಶೋಧನೆ, ಜಾನಪದ ಮುಂತಾದ ಹಲವು ಬಗೆಯ ವಿಷಯಗಳನ್ನು ಕುರಿತು ಬರೆಯಲಾಗಿರುವ ಇಲ್ಲಿಯ ಪ್ರಬಂಧಗಳೂ ಉಪಯುಕ್ತವಾಗಿವೆ; ಪಾಂಡಿತ್ಯಪೂರ್ಣವಾಗಿವೆ.

**ಬಾನುಲಿ ರೂಪಕಗಳು**

ಬಾನುಲಿ ರೂಪಕಗಳ ತಂತ್ರ ವಿಶಿಷ್ಟವಾದುದು. ಕೇವಲ ಧ್ವನಿ ಮಾಧ್ಯಮದ ಮೂಲಕ ಸನ್ನಿವೇಶ, ಭಾವಗಳನ್ನು ಕೇಳುಗರ ಮನದಲ್ಲಿ ಸ್ಪಷ್ಟವಾಗಿ ಮೂಡುವಂತೆ ಯೋಜಿಸುವುದು ಮುಖ್ಯ. ಧಾರವಾಡದಲ್ಲಿ ಬಾನುಲಿ ಕೇಂದ್ರ ಪ್ರಾರಂಭವಾದೊಡನೆ ಬಾನುಲಿ ರೂಪಕಗಳ ತಂತ್ರವನ್ನು ಡಾ. ಬೆಟಗೇರಿಯವರು ಬೇಗನೆ ಕರಗತ ಮಾಡಿಕೊಂಡರು. 1950ರಿಂದ ಬಾನುಲಿ ರೂಪಕ ರಚನೆ ಪ್ರಾರಂಭಿಸಿದರು. ಒಟ್ಟಿಗೆ ಇವರ 37 ರೂಪಕಗಳು ಬಾನುಲಿಯಲ್ಲಿ ಪ್ರಸಾರಗೊಂಡಿವೆ. ಈ ರೂಪಕಗಳ ಪೈಕಿ ಕೇವಲ 17 ರೂಪಕಗಳು ಮಾತ್ರ (1) ಬೆಳವಡಿ ಮಲ್ಲಮ್ಮ (1951), (2) ಬೆಂದ ಹೃದಯ (1954), (3) ಮುಂಡರಗಿ ಗಂಡುಗಲಿ (1962), (4) ಪಂಚಗಂಗಾ (1963) ಎಂಬ ಹೆಸರುಗಳಿಂದ ನಾಲ್ಕು ಗ್ರಂಥಗಳಲ್ಲಿ ಪ್ರಕಟವಾಗಿವೆ. ಬೆಟಗೇರಿಯವರ ಸರಳ ಮತ್ತು ಆಕರ್ಷಕ ಅಭಿವ್ಯಕ್ತಿ ಶೈಲಿಯನ್ನು ತರಂಗ ರೂಪಕಗಳಲ್ಲೂ ಕಂಡುಕೊಳ್ಳಬಹುದು. ಮತ್ತು ಅಚ್ಚಗನ್ನಡ ಭಾಷೆಯ ಬಳಕೆ ಹಾಗೂ ಸನ್ನಿವೇಶಗಳ ಸಹಜತೆ ಇವರ ಎಲ್ಲ ರೂಪಕಗಳ ವೈಶಿಷ್ಟ್ಯ. ಆದ್ದರಿಂದ ಇವು ಬಾನುಲಿ ಕೇಳುಗರಿಂದ ಮೆಚ್ಚುಗೆ ಗಳಿಸಿದವೆಂದು ಬೇರೆ ಹೇಳಬೇಕಾಗಿಲ್ಲ. ಗ್ರಂಥರೂಪದಲ್ಲಿ ಪ್ರಕಟವಾದ ರೂಪಕಗಳು ರಂಗದ ಮೇಲೂ ಯಶಸ್ವಿಯಾಗಿರುವುದುಂಟು. ಇದಕ್ಕೆ ಈ ರೂಪಕಗಳ ಪರಿಣಾಮ ರಮಣೀಯತೆ ಮುಖ್ಯ ಕಾರಣ.

**ಜಾನಪದ**

ಜಾನಪದ ಕ್ಷೇತ್ರಕ್ಕೆ ಡಾ. ಬೆಟಗೇರಿಯವರು ಸಲ್ಲಿಸಿದ ಕೊಡುಗೆ ಅಪಾರ; ಅದ್ವಿತೀಯ. ಅವರು ಗ್ರಂಥ ರೂಪದಲ್ಲಿ ಸಲ್ಲಿಸಿದ ಸೇವೆಗಿಂತ ಮೌಖಿಕವಾಗಿ ಭಾಷಣ, ಚರ್ಚೆ, ವಿಚಾರವಿನಿಮಯ, ಮಾರ್ಗದರ್ಶನಗಳ ರೂಪದಲ್ಲಿ ಮಾಡಿದ ಕಾರ್ಯದ ವ್ಯಾಪ್ತಿ ಅಪರಿಮಿತ, ಅಮೂಲ್ಯ. ಕರ್ನಾಟಕದಾದ್ಯಂತದಲ್ಲಿಯ ಅನೇಕ ವಿದ್ವಾಂಸರು, ಅಭ್ಯಾಸಿಗಳು ಅವರಲ್ಲಿ ಬಂದು ವಿಚಾರ ವಿನಿಮಯ ಮಾಡುತ್ತಿದ್ದರು. ಅದೆಷ್ಟೋ ಪಿ ಎಚ್.ಡಿ. ವಿದ್ಯಾರ್ಥಿಗಳು ತಮ್ಮ ಮಾರ್ಗದರ್ಶಕರಿಗಿಂತಲೂ ಹೆಚ್ಚಿನ ನೆರವು ಮತ್ತು ಮಾರ್ಗದರ್ಶನವನ್ನು ಇವರಿಂದ ಪಡೆದುದು ಉಂಟು.

(1) ಬೀಸುವ ಕಲ್ಲಿನ ಹಾಡುಗಳು (1928), (2) ನಾಗಮಂಗಲ ಜಾನಪದ ಸಮ್ಮೇಳನದ ಅಧ್ಯಕ್ಷೀಯ ಭಾಷಣ (1971), (3) ಕನ್ನಡ ಜಾನಪದ ಸಾಹಿತ್ಯ–ಇವಿಷ್ಟು ಮಾತ್ರ ಡಾ. ಬೆಟಗೇರಿ ಕೃಷ್ಣಶರ್ಮರ ಪ್ರಕಟಿತ ಕೃತಿಗಳು. 'ಜಯಂತಿ'ಯನ್ನೊಳಗೊಂಡು ಅನೇಕ ಪತ್ರಿಕೆಗಳಲ್ಲಿ ಬರೆದ ಬಹಳಷ್ಟು ಲೇಖನಗಳು ಗ್ರಂಥರೂಪದಲ್ಲಿ ಹೊರಬಂದಿಲ್ಲ; ಅವು ಹೊರಬರುವುದು ಅತ್ಯಂತ ಅಪೇಕ್ಷಣೀಯ. ಈಗ ಪ್ರಕಟವಾಗಿರುವ ಈ ಮೂರು ಕೃತಿಗಳು ಅತಿ ಶ್ರೇಷ್ಠವಾಗಿವೆ; ಮೌಲಿಕವಾಗಿವೆ. ವಿಷಯದಲ್ಲಿಯ ಖಚಿತತೆ, ನಿರೂಪಣೆಯ ಸೊಗಸು, ವ್ಯಾಪಕ ಕ್ಷೇತ್ರಕಾರ್ಯ ಮತ್ತು ಆಳವಾದ ಅಧ್ಯಯನ ಇವೆಲ್ಲವುಗಳ ದರ್ಶನ ಅವರ ಜಾನಪದ ಕೃತಿಗಳಿಂದ ಆಗುತ್ತದೆ.

1924ರಲ್ಲಿ ಬೆಳಗಾವಿಯಲ್ಲಿ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ, ಅಲ್ಲಿಯೇ 1925ರಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಜನಪದ ಸಾಹಿತ್ಯದ ಸವಿಯನ್ನು ತಮ್ಮ ಇಂಪಾದ ಧ್ವನಿ ಮತ್ತು ಮೋಹಕ ಮಾತುಗಾರಿಕೆಯಿಂದ ಉಣಬಡಿಸಿದರು. ಅಂದಿನಿಂದ ಅವರ ಮರಣ ಕಾಲದ ವರೆಗೆ ಅವ್ಯಾಹತವಾಗಿ ಅವರ ಈ ಕಾರ್ಯ ಸಾಗಿ ಬಂದಿತು. ಅವರಲ್ಲಿಯ ಈ ಅದ್ಭುತ ಶಕ್ತಿಯನ್ನು, ಅಪಾರ ವಿಷಯ ಸಂಪತ್ತನ್ನು ಕಂಡು ಅವರಿಗೆ ನಡೆದಾಡುವ ಜಾನಪದ ವಿಶ್ವಕೋಶ ಎಂಬುದಾಗಿ ವಿದ್ವಾಂಸರು ಕರೆಯುತ್ತಿದ್ದರು. ಜನರು ಕೊಟ್ಟಿದ್ದ ಈ ಅಗ್ಗಳಿಕೆಯ ಬಿರುದಿಗಿಂತ ಹೆಚ್ಚಿಗೆ ಅವರ ಅರ್ಹತೆ ಇತ್ತೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಅವರ ಸಾಮೀಪ್ಯದಲ್ಲಿದ್ದು ಕೆಲ ಸಮಯವನ್ನಾದರೂ ಕಳೆದವರಿಗೆಲ್ಲ ಈ ಅನುಭವ ಇದೆ.

**ಸಂಪಾದನೆ**

ಡಾ. ಬೆಟಗೇರಿಯವರು ದಾಸ ಸಾಹಿತ್ಯ ಮತ್ತು ಬೇರೆ ಕೆಲವು ಗ್ರಂಥಗಳನ್ನು ಬಹಳ ಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ. ಅವರ ಪಾಂಡಿತ್ಯ, ಪ್ರತಿಭೆ, ಅಧ್ಯಯನಶೀಲತೆ ಮತ್ತು ಆಳವಾದ ಅನುಭವಗಳೆಲ್ಲ ಒಟ್ಟುಗೂಡಿದುದನ್ನು ಅವರ ಸಂಪಾದನ ಕೃತಿಗಳ ಅಭ್ಯಾಸ ಮಾಡಿದರಲ್ಲ ಕಂಡುಕೊಳ್ಳಬಹುದು.

1964ರಲ್ಲಿ ಪುರಂದರದಾಸರ ನಾಲ್ಕನೆಯ ಶತಮಾನೋತ್ಸವ ಆಚರಿಸಲಾಯಿತು. ಆ ಪ್ರಸಂಗಕ್ಕೆ ಎರಡು ವರ್ಷ ಮುಂಚಿತವಾಗಿಯೇ ಪುರಂದರದಾಸರ ಸಮಗ್ರ ಸಾಹಿತ್ಯ ಸಂಪಾದನೆ ಕಾರ್ಯ ಇವರು ಪ್ರಾರಂಭಿಸಿದರು. (1) ಪೂಜಾತತ್ತ್ವ (1963), (2) ಆರ್ತಭಾವ (1966), (3) ಮಹಾತ್ಮ್ಯ ಜ್ಞಾನ (1964), (4) ಕೃಷ್ಣಲೀಲಾ (1965), (5) ಲೋಕನೀತಿ (1966), (6) ಸಂಕೀರ್ಣಸಂಗ್ರಹ (1966) ಎಂಬ ಆರು ಸಂಪುಟಗಳಲ್ಲಿ ಪುರಂದರದಾಸರ ಸಮಗ್ರ ಸಾಹಿತ್ಯವನ್ನು ಸಂಪಾದನ ವಿಜ್ಞಾನ ಪ್ರಕಾರ ಶಾಸ್ತ್ರೀಯವಾಗಿ ಸಂಪಾದಿಸಿ, ಅಭ್ಯಾಸಪೂರ್ಣ ಪ್ರಸ್ತಾವನೆ ಬರೆದು, ವಿವರಣೆ, ಅರ್ಥಕೋಶ ನೀಡಿ ದಾಸಸಾಹಿತ್ಯದ ಅಭ್ಯಾಸಿಗಳಿಗೆ ಉಪಕಾರ ಮಾಡಿದ್ದಾರೆ. ಅವರ ಸಂಪಾದನೆಯಿಂದ ದಾಸರ ಸಮರ್ಪಕ ಚರಿತ್ರೆ ಮತ್ತು ಪರಿಶುದ್ಧಗೊಂಡ ಕೀರ್ತನೆಗಳು ದೊರೆಯುವಂತಾಗಿದೆ. ಇದೇ ಅವಧಿಯಲ್ಲಿ ಕನಕದಾಸರ ಕೀರ್ತನೆಗಳ ಶಾಸ್ತ್ರೀಯ ಸಂಪಾದನೆ ಮಾಡಿ, 'ಶ್ರೀ ಕನಕದಾಸರ ಭಕ್ತಿಗೀತೆಗಳು' (1965) ಹೆಸರಿನಿಂದ ಹೊರತಂದಿದ್ದಾರೆ. ಇಲ್ಲಿಯವರೆಗೆ ಪುರಂದರದಾಸರ ಮತ್ತು ಕನಕದಾಸರ ಕೀರ್ತನೆಗಳ ಸಂಗ್ರಹಗಳನ್ನು ಅನೇಕರು ಪ್ರಕಟಿಸಿದ್ದಾರೆ. ಆದರೆ ಅವೆಲ್ಲ ಕೇವಲ ಅಭಿಮಾನದಿಂದ ಮಾಡಿದ ಸಂಗ್ರಹಗಳಾಗಿದ್ದವೇ ಹೊರತು ಶಾಸ್ತ್ರೀಯ ಸಂಪಾದನ ಕೃತಿಗಳಾಗಿರಲಿಲ್ಲ. ಶಾಸ್ತ್ರೀಯವಾಗಿ, ಪರಿಶುದ್ಧವಾಗಿ ಮೊದಲ ಸಲ ಈ ಕಾರ್ಯ ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ.

1967ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಬ್ರಾಹ್ಮಣ ಶಾಖೆಯಲ್ಲಿ ಪ್ರಧಾನ ಸಂಶೋಧಕರಾಗಿ ಸೇರಿದ ಮೇಲೆ ಆ ಶಾಖೆಯಲ್ಲಿ ವಿದ್ಯುತ್ ಸಂಚಾರವಾಯಿತು. ಮೊದಲಿಗೆ 'ಅಕ್ರೂರ ಚರಿತ್ರೆ' ಸಂಪಾದಿಸಿದರು. 'ಮೋಹನ

ತರಂಗಿಣಿ' ಪ್ರಕಟಣೆಗೆ ಸಜ್ಜುಗೊಳಿಸಿದರು. 'ಕುಮಾರವ್ಯಾಸ ಭಾರತ'ದ ಪರಿಶುದ್ಧ ಪ್ರಕಟಣೆಗಾಗಿ ಎಲ್ಲ ಏರ್ಪಾಡು ಮಾಡಿದರು. ಇನ್ನೂ ಕೆಲವು ಯೋಜನೆ ರೂಪಿಸಿದ್ದರು. ಆದರೆ ಅಷ್ಟರಲ್ಲಿ ಸರಕಾರದ ನಿಯಮದ ಪ್ರಕಾರ ಇವರಿಗೆ ಮುಪ್ಪಾದುದರಿಂದ ಅವರು ಆ ಹುದ್ದೆಯಿಂದ ನಿವೃತ್ತರಾದರು. ವಿಶ್ವವಿದ್ಯಾಲಯದ ಆ ಶಾಖೆ ಬಡವಾಯಿತು, ಇಂದಿಗೂ ಆ ನಷ್ಟ ತುಂಬಿ ಬಂದಿಲ್ಲ.

1969ರಲ್ಲಿ 'ಪ್ರಸನ್ನ ವೆಂಕಟದಾಸರ ಭಾಗವತ' ಮತ್ತು 'ಹರಿದಾಸ ಭಕ್ತಿಸಾಧನೆ' ಎಂಬ ಎರಡು ಗ್ರಂಥಗಳನ್ನು ನೀಡಿದ್ದಾರೆ. ಇವು ಮಾದರಿ ಕೃತಿಗಳಾಗಿವೆ.

ಡಾ. ಬೆಟಗೇರಿ ಅವರು ಕನ್ನಡದ ಆಳವಾದ ಅಧ್ಯಯನದಿಂದ ಭಾಷೆಯ ಜೀವಾಳ ಅರಿತಿದ್ದರು. ಅದು ಕಾಲ ಕಾಲಕ್ಕೆ ಹೊಂದಿದ ಮಾರ್ಪಡು ತಿಳಿದಿದ್ದರು. ವ್ಯಾಕರಣದಲ್ಲಿ ಪಾರಂಗತರಾಗಿದ್ದರು. ವಿವಿಧ ಶಾಸ್ತ್ರಗಳನ್ನೆಲ್ಲ ಇವರು ಹಸ್ತಗತ ಮಾಡಿಕೊಂಡಿದ್ದರು. ಆದ್ದರಿಂದ ಇವರ ಸಂಪಾದನ ಕಾರ್ಯ ಬಹಳ ನಿಖರ 'ವಾಯಿತು, ಸಮರ್ಪಕವಾಯಿತು. ಪಾಠಾಂತರಗಳಿದ್ದಾಗ ಶುದ್ಧಪಾಠ ನಿರ್ಣಯದಲ್ಲಿ ಇವರದು ಎತ್ತಿದ ಕೈ. ಇವರ ಈ ಅದ್ಭುತ ಶಕ್ತಿಯನ್ನು ನೋಡಿ ಅವರ ಸಮಕಾಲೀನರಲ್ಲಿ ಕೆಲವರು ಹೊಟ್ಟೆಕಿಚ್ಚು ವ್ಯಕ್ತಪಡಿಸಿದುದೂ ಉಂಟು.

### ಪಠ್ಯ ಸಂಪಾದನೆ ಮತ್ತು ಇತರ

'ಜಯಂತಿ' ಪತ್ರಿಕೆಯಿಂದ ನಿವೃತ್ತರಾದ ಮೇಲೆ ಧಾರವಾಡದ ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರ್ಣಿಯವರ ಆಹ್ವಾನದ ಮೇರೆಗೆ ಕನ್ನಡ ಪ್ರಾಥಮಿಕ ಶಾಲೆಯ ತರಗತಿಗಳಿಗಾಗಿ ವಾಚನ ಮತ್ತು ಪೂರಕ ವಾಚನ ತಯಾರಿಸುವ ಜವಾಬ್ದಾರಿಯನ್ನು ಡಾ. ಬೆಟಗೇರಿಯವರು ವಹಿಸಿಕೊಂಡರು. ವಿದ್ಯಾರ್ಥಿಗಳ ವಯೋಧರ್ಮ, ಒಲವು, ಪ್ರವೃತ್ತಿಗಳನ್ನು ಗಮನದಲ್ಲಿಟ್ಟು ಕೊಂಡು ತಕ್ಕ ಭಾಷೆ, ವಿಷಯ, ಶೈಲಿಯನ್ನುಳ್ಳ ಮೂರು ವಾಚನಗಳನ್ನು ಇವರು ತಯಾರಿಸಿಕೊಟ್ಟರು. ಅವು ಶಿಕ್ಷಣತಜ್ಞರಿಂದ ಪ್ರಶಂಸೆ ಗಳಿಸಿದವು.

ಪೂರಕ ಪಠ್ಯಗಳಿಗಾಗಿ (1) ಚಂದ್ರಹಾಸ (1967), (2) ಭೀಷ್ಮ (1966), (3) ಲವಕುಶ (1962) ಮುಂತಾದ ಪುಸ್ತಕಗಳನ್ನೂ ಶ್ರೀಯುತರು ರಚಿಸಿದ್ದಾರೆ. ಇವೆಲ್ಲ ಕೃತಿಗಳು ವಿದ್ಯಾರ್ಥಿಗಳಿಂದಲೂ, ಶಿಕ್ಷಕರಿಂದಲೂ ಸ್ವಾಗತಿಸಲ್ಪಟ್ಟಿವೆ.

1927ರಲ್ಲಿ ಮಕ್ಕಳಿಗಾಗಿ 'ಬಸವಣ್ಣನವರು' ಎಂಬ ಚರಿತ್ರೆ ಗ್ರಂಥವನ್ನು ಬರೆದಿದ್ದಾರೆ. ಬಸವಣ್ಣನವರ ಕಾರ್ಯದಿಂದ ಮಕ್ಕಳ ಮನದ ಮೇಲೆ ಒಳ್ಳೆಯ ಪರಿಣಾಮ ಬೀರುವಂತೆ ಬರೆದ ಈ ಪುಸ್ತಕವೂ ಜನಪ್ರಿಯವಾಗಿದೆ.

ಸಂಸ್ಕೃತ ಭಾಷೆಯ 'ಮಧ್ಯಮ ವ್ಯಾಯೋಗ' ಎಂಬ ಕೃತಿಯನ್ನು ಕನ್ನಡಕ್ಕೆ ಅನುವಾದ ಮಾಡಿ 1924ರಷ್ಟು ಹಿಂದೆಯೇ ಪ್ರಕಟಿಸಿದ್ದಾರೆ. ಸಂಸ್ಕೃತದ ಉತ್ತಮ ಕೃತಿಗಳು ಕನ್ನಡಕ್ಕೆ ಬರಬೇಕೆಂಬ ಅವರ ಹಂಬಲದ ಪ್ರತೀಕವಾಗಿ ಇದು ಬೆಳಕು ಕಂಡಿದೆ.

### ಹಿರಿಮೆ ಮತ್ತು ವೈಶಿಷ್ಟ್ಯ

ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಎತ್ತರದ ಕೃತಿ ರಚಿಸಿದ ಬಹುಮುಖ ಪ್ರತಿಭೆಯ ಮೇಧಾವಿ ಸಾಹಿತಿಗಳು ಕನ್ನಡದಲ್ಲಿ ಕೇವಲ ಬೆರಳೆಣಿಕೆಯ ಮೇಲೆ ಎಣಿಸುವಷ್ಟು ಮಾತ್ರ ಇದ್ದಾರೆ. ಅಂಥವರಲ್ಲಿ ಡಾ. ಬೆಟಗೇರಿ ಕೃಷ್ಣಶರ್ಮರಿಗೆ ಮಹತ್ವದ ಸ್ಥಾನ ಮೀಸಲೆಂಬುದನ್ನು ಇಲ್ಲಿಯವರೆಗಿನ ಅವರ ಕೃತಿ ಪರಿಚಯದಿಂದ ಯಾರಾದರೂ ನಿರ್ಧರಿಸಬಹುದಾಗಿದೆ. ಪ್ರತಿಯೊಂದು ಸಾಹಿತ್ಯ ಪ್ರಕಾರದಲ್ಲೂ ಇವರ ಕೃತಿಗಳು ಉನ್ನತ ಮಟ್ಟ ಕಾಯ್ದುಕೊಂಡಿವೆ. 'ಒಡನಾಡಿ' ಮತ್ತು 'ನಲ್ವಾಡುಗಳು' ಈ ಭಾವಗೀತ ಸಂಕಲನಗಳು; 'ಸುದರ್ಶನ' ಮತ್ತು 'ರಾಜಯೋಗಿ' ಕಾದಂಬರಿಗಳು; 'ಮಾತನಾಡುವ ಕಲ್ಲು' ಮತ್ತು 'ಜನಪದ ಜೀವನ' ಕಥಾ ಸಂಗ್ರಹಗಳು; 'ಕರ್ನಾಟಕ ಜನಜೀವನ' ದಂಥ ಸಂಶೋಧನ ಕೃತಿ; 'ನಮ್ಮ ಸಂಸ್ಕೃತಿ ಪರಂಪರೆ'ಯಂಥ ಸಾಂಸ್ಕೃತಿಕ ಗ್ರಂಥಗಳು ಡಾ. ಬೆಟಗೇರಿ ಕೃಷ್ಣಶರ್ಮ ಅವರನ್ನು ಅಜರಾಮರಗೊಳಿಸುತ್ತವೆ; ಮತ್ತು ಸದಾಕಾಲ ಕನ್ನಡ ಸಾಹಿತ್ಯದಲ್ಲಿ ಮೇಲ್ಮಟ್ಟದಲ್ಲಿ ಉಳಿಯುತ್ತವೆ. ಜಾನಪದ ಮತ್ತು ಸಂಪಾದನ ಕ್ಷೇತ್ರಕ್ಕೆ ಸಂಬಂಧಿಸಿದ ಅವರ ಪಾಂಡಿತ್ಯ, ವಿದ್ವತ್ತು ಅಸದೃಶವಾದುದು. ಈ ಕ್ಷೇತ್ರಗಳಲ್ಲಿಯ ಇವರ ಸಾಧನೆ ಮತ್ತು ಹಾಕಿಕೊಂಡಿದ್ದ ಯೋಜನೆಗಳ ಹರವು, ಆಳಗಳನ್ನು ಬಲ್ಲವರೇ ಬಲ್ಲರು. ಈ ದಿಸೆಯಲ್ಲಿ ಬೆಟಗೇರಿಯವರದು ಗೊಮ್ಮಟ ವ್ಯಕ್ತಿತ್ವ.

ಪತ್ರಿಕಾ ಪ್ರಪಂಚದಲ್ಲಿಯ ಬೆಟಗೇರಿಯವರ ಕಾರ್ಯ ಕಣ್ಣು ಕುಕ್ಕಿಸುವಂಥದು. ಪತ್ರಿಕೋದ್ಯಮ ಸರಿಯಾಗಿ ಬೆಳೆಯದಿದ್ದ ಅಂದಿನ ಕಾಲದಲ್ಲಿ ಏಕಮುಖ ನಿಷ್ಠೆಯಿಂದ 'ಜಯಂತಿ' ಮುಂತಾದ ಪತ್ರಿಕೆಗಳ ಮೂಲಕ ಕನ್ನಡ ನಾಡು-ನುಡಿಗೆ ಸಲ್ಲಿಸಿದ ಇವರ ಸೇವೆಯ ಬಗೆಗೆ ಎಷ್ಟು ಹೇಳಿದರೂ ಕಡಿಮೆ; ಎಷ್ಟು ಹೊಗಳಿದರೂ ಕಡಿಮೆ. 'ಜಯಂತಿ' ನವೋದಯ ಕಾಲದ ಇಪ್ಪತ್ತುಮೂರು ವರುಷಗಳ ಸಾಹಿತ್ಯಕ ದಾಖಲೆಯಾಗಿದೆ; ಮತ್ತು ಬೆಟಗೇರಿಯವರ ಕರ್ತೃತ್ವ ಶಕ್ತಿಯ, ವಿದ್ವತ್ತಿನ ಮತ್ತು ಪ್ರತಿಭೆಯ ಪತಾಕೆಯಾಗಿದೆ.

ಸಾಹಿತಿ ಮತ್ತು ಕಲಾವಿದರಲ್ಲಿ ತಮ್ಮ ಕೃತಿಗಳಿಗೂ ಹಾಗೂ ಜೀವಕ್ಕೂ ಬಿಡಿಸಲಾರದ ಸಂಬಂಧವಿದೆಯೆಂದು ನಂಬಿಕೊಂಡು ಜೀವಿಸುವವರು ಬಹಳ ಕಡಿಮೆ. ಆಚಾರಕ್ಕೂ ವಿಚಾರಕ್ಕೂ ತಾಳಮೇಳವಿರದ ಬಾಳು ವ್ಯರ್ಥವೆಂದು ನಂಬಿ, ಜೀವನದುದ್ದಕ್ಕೂ ಎರಡಿಲ್ಲದ ಬಾಳುವೆ ನಡೆಸಿದವರಲ್ಲಿ ಡಾ. ಬೆಟಗೇರಿ ಕೃಷ್ಣಶರ್ಮರು ಅಗ್ರಗಣ್ಯರು. ಪಂಡಿತ-ಪಾಮರ ಎಲ್ಲರೊಂದಿಗೂ ಒಂದೇ ಬಗೆಯ ಸೌಜನ್ಯದಿಂದ ಇವರು ನಡೆದುಕೊಳ್ಳು ತ್ತಿದ್ದರು. ಕಿರಿಯ ಬರಹಗಾರರಿಗೆ ಮಾರ್ಗದರ್ಶನ ಮಾಡುವ ಕಾರ್ಯದಲ್ಲಿ, ಹುರಿದುಂಬಿಸುವ ಕೆಲಸದಲ್ಲಿ ಇವರಿಗೆ ದಣಿವೆಂಬುದಿಲ್ಲ. ಅದೆಷ್ಟೋ ಉದಯೋನ್ಮುಖ ಸಾಹಿತಿಗಳ ಕೃತಿಗಳಿಗೆ ಮುನ್ನುಡಿ ಬರೆದು ಬೆನ್ನು ಚಪ್ಪರಿಸಿದ್ದಾರೆ. ತಮ್ಮ ಬಗೆಗೆ ಯಾರು ಏನೇ ಆಡಿಕೊಳ್ಳಲಿ ಅನ್ಯರ ಬಗೆಗೆ ಇವರು ಮಾತ್ರ ಎಂದೂ ಕೆಟ್ಟದ್ದನ್ನು ಆಡಿದವರಲ್ಲ. ನಿಜವಾದ ಅರ್ಥದಲ್ಲಿ ಇವರು ಅಜಾತಶತ್ರುಗಳು; ಹದಿನಾರಣೆ ಸಜ್ಜನರು. ಇವರ ಸಾಹಿತ್ಯ ಕೃತಿಗಳ ಹಿರಿಮೆ ಮತ್ತು ವ್ಯಕ್ತಿತ್ವದ ಮಹಿಮೆ ಎರಡೂ ಒಂದಕ್ಕೊಂದು ಪೈಪೋಟಿ ನಡೆಯಿಸುವಂತಹವು. ಇವೆರಡರಲ್ಲಿಯ ಸಾಧನೆ ಸಿದ್ಧಿ ಅತ್ಯುನ್ನತ. ಡಾ. ಬೆಟಗೇರಿ ಕೃಷ್ಣಶರ್ಮರಂತೆ ಬರಹ ಮತ್ತು ಬದುಕುಗಳೆರಡರಲ್ಲಿಯೂ ಅಸದೃಶರಾದಂತಹವರೇ ಜನ-ಮನ ರೂಪಿಸುವ ನಿಜವಾದ ಸಾಂಸ್ಕೃತಿಕ ರಾಯಭಾರಿಗಳು. ಈ ಅಪರೂಪದ ಸಾಂಸ್ಕೃತಿಕ ರಾಯಭಾರಿಗೆ ಕರ್ನಾಟಕದ ಜನತೆ ಸದಾಕಾಲ ಋಣಿಯಾಗಬೇಕಾಗಿದೆ.



# ಎ.ಎನ್. ಮೂರ್ತಿರಾವ್

ಅ.ರಾ. ಮಿತ್ರ

1

ಕನ್ನಡದ ಪ್ರಬಂಧಕಾರ, ವಿಮರ್ಶಕ, ಪತ್ರಕಾರ, ಅನುವಾದಕಾರ ಎಂದು ಹಲವಾರು ಪಟ್ಟಿಗಳನ್ನು ಸಂತೋಷದಿಂದ ಹಚ್ಚಬಹುದಾದ ವ್ಯಕ್ತಿ ಶ್ರೀ ಅಕ್ಕಿಹೆಬ್ಬಾಳು ನರಸಿಂಹಮೂರ್ತಿರಾವ್. 1900ರ ಜೂನ್ ಹದಿನಾರರಂದು ಮಂಡ್ಯ ಜಿಲ್ಲೆಯ ಹೇಮಾವತಿಯ ತಡಿಯ ಒಂದು ಸುಸಂಸ್ಕೃತ ಗ್ರಾಮ ಅಕ್ಕಿಹೆಬ್ಬಾಳಿನಲ್ಲಿ ಹುಟ್ಟಿದ ಶ್ರೀಯುತರನ್ನು ಡಾ. ಪ್ರಭುಶಂಕರರು "ಮಾನವ ಚೇತನ ವಿಕಾಸದ ಹಾದಿಯಲ್ಲಿ ಒಂದು ಮೈಲಿಗಲ್ಲು" ಎಂದು ಬಣ್ಣಿಸಿದ್ದಾರೆ. ಮೂರ್ತಿರಾಯರು ಮಾಧ್ಯಮಿಕ ಶಾಲೆಯವರೆಗೆ ಅಕ್ಕಿಹೆಬ್ಬಾಳಿನಲ್ಲೇ ಅಧ್ಯಯನ ಮಾಡಿ, ಮೈಸೂರಿನ ವೆಸ್ಲಿಯನ್ ಮಿಷನ್ ಶಾಲೆಯಲ್ಲಿ ಪ್ರೌಢಶಾಲೆ ಮುಗಿಸಿ, ಮಹಾರಾಜಾ ಕಾಲೇಜಿನಲ್ಲಿ ಇಂಗ್ಲಿಷ್ ಎಂ.ಎ. ಪದವಿಯನ್ನು ಪಡೆದರು. ಅನಂತರ ಮಹಾರಾಜಾ ಕಾಲೇಜಿನಲ್ಲಿ, ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ, ಹಲವಾರು ಸರಕಾರೀ ಇಂಟರ್‌ಮೀಡಿಯೆಟ್ ಕಾಲೇಜುಗಳಲ್ಲಿ, ಬೆಂಗಳೂರಿನ ಆಚಾರ್ಯ ಪಾಠಶಾಲಾ ಕಾಲೇಜಿನಲ್ಲಿ ಆಂಗ್ಲ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ಈಗ ವಿಶ್ರಾಂತ ಜೀವನವನ್ನು ನಡೆಸುತ್ತಿದ್ದಾರೆ. ಮಹಾರಾಜಾ ಕಾಲೇಜಿನ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಸೂತ್ರಧಾರಿಯಾಗಿದ್ದ ಶ್ರೀಯುತರು ತುಂಬ ದೊಡ್ಡ ಸಹೃದಯ ಸ್ನೇಹಿತವರ್ಗವನ್ನು ಕಟ್ಟಿಕೊಂಡವರು. ಕಾಲೇಜಿನ ಸೂಪರಿಂಟೆಂಡೆಂಟರಾಗಿ, ಆಕಾಶವಾಣಿಯ ಅಧಿಕಾರಿಯಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ, ಕನ್ನಡ ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ ಹಲವಾರು ರಂಗಗಳ ಅನುಭವಗಳನ್ನು ಪಡೆದವರಾಗಿದ್ದಾರೆ. 1984ರಲ್ಲಿ ಕೈವಾರದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಗೆ ಆಯ್ಕೆಯಾದ ಮೂರ್ತಿರಾಯರು ಕನ್ನಡ ಸಾಹಿತ್ಯ ಪ್ರೇಮಿಗಳ ಪ್ರೀತಿ ಆದರಗಳಿಗೆ ಪಾತ್ರರಾಗಿದ್ದಾರೆ. ವಿದೇಶಗಳಲ್ಲೂ ಹಲವಾರು ಬಾರಿ ಪ್ರವಾಸ ಮಾಡಿ ಅಪಾರ ಲೋಕಾನುಭವಗಳನ್ನು ಪಡೆದಿದ್ದಾರೆ. ಅವರ 'ಚಿತ್ರಗಳು ಪತ್ರಗಳು' ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗೂ ಪಾತ್ರವಾಗಿದೆ. ಮಾತೃ ಸಂಸ್ಥೆಯಾದ ಮೈಸೂರು ವಿಶ್ವವಿದ್ಯಾಲಯ ಅವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿದೆ.

ಅವರ ಬರವಣಿಗೆಗೂ ವ್ಯಕ್ತಿತ್ವಕ್ಕೂ ಅವಿನಾ ಸಂಬಂಧವನ್ನು ಕಲ್ಪಿಸಿರುವ ತಂತುವೆಂದರೆ ಅವರ ಲೋಕಾಭಿರಾಮವಾದ ಹರಟೆಯ ಗುಣ. ಅವರು ತಾರುಣ್ಯದಿಂದ ಹಿಡಿದು ಇಂದಿನವರೆಗೆ ಸ್ನೇಹಿತರ ವಲಯದಲ್ಲಿ ಸಾಹಿತ್ಯಪರವಾದ ಅಥವಾ ಜೀವನಪರವಾದ ಚರ್ಚೆ ಹರಟೆಗಳಿಗೆ ಕಾವುಕೊಟ್ಟಿದ್ದಾರೆ. ಧಾರವಾಡದ 'ಗೆಳೆಯರ ಗುಂಪು' ಬೇಂದ್ರೆ, ವಿನಾಯಕ, ಮಧುರಚೆನ್ನ, ಮುಗಳಿ ಮೊದಲಾದ ಸಹೃದಯ ವಿದ್ವದ್ ಗೋಷ್ಠಿಗಳಿಂದ ಶೋಭಿಸಿದ ಖಚಿತ ಧ್ಯೇಯೋದ್ದೇಶಗಳ ಸಾಹಿತ್ಯಕ ಗುಂಪಾಗಿದ್ದರೆ; ಮೈಸೂರಿನಲ್ಲಿ ಎ.ಎನ್. ಮೂರ್ತಿರಾಯರು, ತೀ.ನಂ.ಶ್ರೀ., ಡಿ.ಎಲ್. ನರಸಿಂಹಾಚಾರ್, ನಾ. ಕಸ್ತೂರಿ, ಕುವೆಂಪು, ಜಿ.ಹನುಮಂತರಾವ್, ಬಿ.ಎಸ್. ಕೇಶವನ್, ಎನ್. ಶಿವರಾಮಶಾಸ್ತ್ರಿ, ಪು.ತಿ.ನ., ಗೊರೂರು, ಎಚ್.ಸಿ.ಕೆ. ಭಟ್ಟ ಮೊದಲಾದವರೊಡನೆ ಕಟ್ಟಿಕೊಂಡ ಅನಧಿಕೃತ ತರುಣರ ಗುಂಪು ಅದೇ ಬಗೆಯ ಕೆಲಸವನ್ನು ಕೈಗೊಂಡು ಯಶಸ್ವಿಯಾದ ಇನ್ನೊಂದು ತಂಡ ಎನ್ನಬಹುದು. ಮೂರ್ತಿರಾಯರ 'ಚಿತ್ರಗಳು ಪತ್ರಗಳು' ಕಿರುಬರಹಗಳಲ್ಲಿ ವ್ಯಕ್ತವಾಗುವಂತೆ ಈ ತರುಣರ ಗುಂಪಿನಲ್ಲಿ ಚರ್ಚೆಯ ವಿಷಯ ಕೂಡ ಕನ್ನಡ ಶಬ್ದಗಳ ಬಳಕೆಯನ್ನು ಕುರಿತ ಮುಕ್ತಿಚಿಂತನ, ಭಾವಶೈಥಿಲ್ಯದ ಬರಹಗಳ ಅಣಕ, ಮುಕ್ತ ಮನಸ್ಸಿನ ಕುಹಕಪೂರ್ಣ ಹರಟೆಗಳೇ ಆಗಿದ್ದುವಂತೆ. ಹೀಗೆ ಮೂರ್ತಿರಾಯರು ಸದ್ದಿಲ್ಲದ ಕನ್ನಡ ಚಳವಳಿ ಅದರ ಪ್ರದರ್ಶನಾರ್ಥದಲ್ಲಿ ಅಲ್ಲದೆ ಕ್ರಿಯಾತ್ಮಕ ಅರ್ಥದಲ್ಲಿ ಬೆಳೆದುಕೊಂಡು ಬಂದ ಬಗೆಯನ್ನು ತಮ್ಮ ಬರಹಗಳಲ್ಲಿ ಕಾಣಿಸಿದ್ದಾರೆ. ಈ ಗುಂಪಿನ ಸಾರಸ್ವತ ಚರ್ಚೆಯ ಮುಖ್ಯ ಸೂತ್ರಗಳನ್ನೆಲ್ಲ 'ಚಿತ್ರಗಳು ಪತ್ರಗಳು' ಗ್ರಂಥದ ಪುಟಪುಟವೂ ಪರಿಚಯಿಸಿಕೊಡುತ್ತದೆ. ಈ ಗುಂಪು ಲವಲವಿಕೆಯಿಂದ ನಡೆಸಿದ 'ಹರಟೆ'ಯ ಭಾಗವನ್ನಷ್ಟೇ ಆರಿಸಿ ಬರೆದರೆ ಆರಂಭಕಾಲದ ನವೋದಯ ಸಾಹಿತ್ಯ ರೂಪುಗೊಂಡ ಮತ್ತು ಬೆಳೆದ ಅವಧಿಯ ಒಂದು ಐತಿಹಾಸಿಕ ಸಂವಾದವನ್ನು ಸಿದ್ಧಪಡಿಸಬಹುದಾದಷ್ಟು ವಿಪುಲ ಸಾಮಗ್ರಿ ದೊರೆಯುತ್ತದೆ. ಶಬ್ದಜಿಜ್ಞಾಸೆಯಲ್ಲಿ ತುಂಬ ಕಾವು ಇರುತ್ತಿತ್ತಾದ್ದರಿಂದ ಎ.ಎನ್. ಮೂರ್ತಿರಾಯರ ಬರವಣಿಗೆಯಲ್ಲೂ ಶಬ್ದಚಿಂತನ ಕಾಣಿಸಿಕೊಂಡಿದೆ. 'ಕೃದಂತಿ' ಎಂಬ ಶಬ್ದ ಕೃತಕವಾಗಿ ಹಲ್ಲುಕಟ್ಟಿಕೊಂಡ ತಮ್ಮ ಬಗ್ಗೆಯೇ ಹುಟ್ಟಿಕೊಂಡ ಶಬ್ದವಾಗಿದೆ. ಲವಜ್ಞ (Lay man), ಉನ್ನತ ಭ್ರೂ (High Brow), ಕ್ಷಣಸಿದ್ಧ ಕಾಫಿ (Instant Coffee). ಈ ಶಬ್ದಕ್ಕೆ 'ಧಿಡೀರ್' ಎಂಬ ಅನುವಾದವೂ ಇದೆಯಷ್ಟೆ. "ಧಿಡೀರ್ ಎಂಬ ಶಬ್ದವನ್ನು ನಾನು ಇಕ್ಕಳದಿಂದಲೂ ಮುಟ್ಟಲೊಲ್ಲೆ" ಎನ್ನುತ್ತಾರೆ ಮೂರ್ತಿರಾಯರು. ಇಂಥ ಪದಗಳ ಜತೆಗೆ ಅವರು 'ಯರಲವ', 'ಶಷಸಹ' ಇಂಥ ಕಲ್ಪಿತ ಶಬ್ದಗಳ ಪಾತರಗಳನ್ನೂ ಸೃಷ್ಟಿಸಿದ್ದಾರೆ. ಜತೆಗೆ ಸಮ್ಮತಿಪ್ರದ ಸಮಾಜ (permissive society), ಪದರ ಪತ್ರ (folder), ಶೂನ್ಯಶುಭ್ರಕ ಅಥವಾ ಸೊನ್ನೆಗುದ್ದ (vacuum cleaner), ಹುಲ್ಲುಗತ್ತರಿ (lawn mower), ವೇದನಾಂತಕ, ಮದುಮುರಿವು (Divorce) ಮೊದಲಾದ ಅಸಂಖ್ಯಾತ ಶಬ್ದಗಳನ್ನು ಅನುವಾದ ರೂಪಗಳಲ್ಲಿ ಕಾಣಿಸಿದ್ದಾರೆ. ಇವರ ಈ ಬಗೆಯ ತೆರೆದ ಮನಸ್ಸಿಗೂ ಅವರ ಸ್ನೇಹವರ್ಗದ ಪ್ರಭಾವವೇ ಕಾರಣವೆನ್ನಿಸುತ್ತದೆ. ಅವರೇ ಒಂದು ಕಡೆ ಹೇಳಿದ್ದಾರೆ–"ಸ್ನೇಹದ ವಿಷಯದಲ್ಲಿ ನಾನು ಭಾಗ್ಯಶಾಲಿ. ಬಹುಶ್ರುತರು, ಸರಳ ಹೃದಯರು, ಉದಾರ ಮನಸ್ಕರು, ಆದರ್ಶವಾದಿಗಳು, ಪ್ರೀತಿ ವಿಶ್ವಾಸಗಳನ್ನು ಕೊಟ್ಟು ಪಡೆಯುವುದರಲ್ಲಿರುವ ಆನಂದವನ್ನು ಬಲ್ಲವರು - ಇಂಥವರೊಡನೆ ನನಗೆ ಆತ್ಮೀಯತೆ ಲಭಿಸಿದೆ." ಈ ಗುಂಪಿನ ಕೆಲವು ಧೋರಣೆಗಳೂ ಅವರಲ್ಲಿ ಧಾರಾಳವಾಗಿ ಅಚ್ಚೊತ್ತಿ ಬಂದಿವೆ ಎಂಬುದು ಅವರ ಬರವಣಿಗೆಯನ್ನು ಗಮನಿಸಿದರೆ ಸ್ಪಷ್ಟವಾಗುತ್ತದೆ. ಪರಿಷ್ಕಾರಪ್ರಿಯತೆ, ಪ್ರತಿಯೊಂದನ್ನು ಅನುಮಾನದಿಂದಲೇ ಪರೀಕ್ಷಿಸಿ ನೋಡುವ ತಪಾಸಣಾಶೀಲ ವಿಮರ್ಶನ ಪ್ರವೃತ್ತಿ, ನಿರೀಶ್ವರವಾದ-ಸಂದೇಹವಾದ-ಅಜ್ಞೇಯತಾವಾದ ಇತ್ಯಾದಿ ಕ್ಷೇತ್ರಗಳಲ್ಲಿ ಕಾಡುಮೇಯಲು ಹೊರಟ ಮನಸ್ಸು ಇವೆಲ್ಲ ಆ ಗುಂಪಿನಿಂದ ಇಳಿದು ಬಂದ ಗುಣಗಳೇ ಆಗಿವೆ.

ಡಾ. ಎ.ಎನ್. ಮೂರ್ತಿರಾಯರ ಬರವಣಿಗೆ ಆರು ಮುಖಗಳಲ್ಲಿ ಹರಿದುಬಂದಿದೆ:

1. **ಲಲಿತಪ್ರಬಂಧ :** 1. ಹಗಲುಗನಸುಗಳು, 2. ಅಲೆಯುವ ಮನ, 3. ಮಿನುಗು ಮಿಂಚು
2. **ವ್ಯಕ್ತಿಚಿತ್ರ ಪತ್ರಸಾಹಿತ್ಯ :** ಚಿತ್ರಗಳು ಪತ್ರಗಳು (ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿದೆ)
3. **ಪ್ರವಾಸ ಕಥನ :** ಅಪರ ವಯಸ್ಕನ ಅಮೆರಿಕಾ ಯಾತ್ರೆ (ಕರ್ನಾಟಕ ರಾಜ್ಯ ಅಕಾಡೆಮಿಯ ಪ್ರಶಸ್ತಿ ದೊರಕಿದೆ)
4. **ಸಾಹಿತ್ಯ ವಿಮರ್ಶೆ :** 1. ಷೇಕ್ಸ್‌ಪಿಯರ್, 2. ಮಾಸ್ತಿಯವರ ಕಥೆಗಳು, 3. ಬಿ. ಎಂ. ಶ್ರೀಕಂಠಯ್ಯ, 4. ಪೂರ್ವ ಸೂರಿಗಳೊಡನೆ, 5. ಸಾಹಿತ್ಯ ಮತ್ತು ಸತ್ಯ, 6. ವಿಮರ್ಶಾತ್ಮಕ ಪ್ರಬಂಧಗಳು.
5. **ಆತ್ಮಕಥೆ :** ಸಂಜೆಗಣ್ಣಿನ ಹಿನ್ನೋಟ
6. **ರೂಪಾಂತರ-ಭಾಷಾಂತರ :** 1. ಆಷಾಢಭೂತಿ (ನಾಟಕ), 2. ಮೋಲಿಯೇರನ ಎರಡು ನಾಟಕಗಳು, 3. ಚಂಡಮಾರುತ (ನಾಟಕ), 4. ಸಾಕ್ರಟೀಸನ ಕೊನೆಯ ದಿನಗಳು, 5. ಪಾಶ್ಚಾತ್ಯ ಸಣ್ಣಕಥೆಗಳು, 6. ಯೋಧನ ಪುನರಾಗಮನ, 7. ಅಮೆರಿಕನ್ ಸಾಹಿತ್ಯ

ಇಂಗ್ಲಿಷಿನಲ್ಲಿ 1. The Return to the Soil (ಶಿವರಾಮಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯ ಅನುವಾದ), 2. B.M. Srikantaiah.

ಇವುಗಳಲ್ಲಿ ಮೊದಲನೆಯ ಭಾಗ ಸ್ವಂತ ರಚನೆಗಳಿಗೆ ಒತ್ತುಕೊಟ್ಟು ವಿಸ್ತಾರವಾಗಿ ಚರ್ಚಿಸಲಾಗುತ್ತದೆ. ಉಳಿದವುಗಳನ್ನು ಪೃಥಕ್ಕಾಗಿ ವಿಶ್ಲೇಷಿಸುವ ಸಾಹಸಕ್ಕೆ ಹೋಗದೆ ಸ್ಥೂಲವಾಗಿ ಅವುಗಳ ಹಿರಿಮೆಯನ್ನು ಪ್ರಸ್ತಾಪಿಸ ಲಾಗುತ್ತದೆ.

'ಚಿತ್ರಗಳು ಪತ್ರಗಳು' ಒಂದು ಸೊಗಸಾದ ಸಂಕೀರ್ಣ ಬರಹ. ಈ ಬರಹಗಳ ವೈಶಿಷ್ಟ್ಯ ಎಂದರೆ ಮೂರ್ತಿರಾಯರು ಮಹಾರಾಜಾ ಕಾಲೇಜಿನ ಹಲವು ದಿಗ್ಗಜಗಳ ಪರಿಚಯ ಮಾಡಿಕೊಡುತ್ತಿರುವಂತೆಯೇ ಎಲ್ಲ ಲೇಖನಗಳೊಳಗಿಂದ ಮೂರ್ತಿರಾಯರ ವ್ಯಕ್ತಿತ್ವದ ಕೆಲವು ಸತ್ವಪೂರ್ಣ ಧಾತುಗಳ ಇಣುಕುನೋಟವೂ ಕಂಡುಬರುತ್ತದೆ. ಕನ್ನಡ ಗದ್ಯಶಿಲ್ಪದ ಶ್ರೇಷ್ಠ ಮಾದರಿಯ ಕೆತ್ತನೆಗಳೂ ಇಲ್ಲಿವೆ.

'ಅಪರ ವಯಸ್ಕನ ಅಮೆರಿಕಾ ಯಾತ್ರೆ'ಯಲ್ಲೂ ಎರಡು ದೇಶಗಳ ಸಾಂಸ್ಕೃತಿಕ, ಜಾನಾಂಗಿಕ ಮತ್ತು ಆರ್ಥಿಕ ವಸ್ತು ಸ್ಥಿತಿಗಳ ತೌಲನಿಕ ಪರಾಮರ್ಶೆ ತುಂಬ ಆರೋಗ್ಯಕರವಾಗಿ ಸಾಗಿದೆ.

ಅನುವಾದದಲ್ಲೂ ಅವರದು ತುಂಬ ಪಳಗಿದ ಕೈ ಎಂದು ಹೇಳಬೇಕು. ಅವರಿಗೆ ತುಂಬ ಕೀರ್ತಿ ತಂದುಕೊಟ್ಟು 'ಬೆಳಗಾಗುವುದರೊಳಗೆ' ಅವರ ಹೆಸರು ಎಲ್ಲರ ಬಾಯಲ್ಲಿ ನಲಿಯುವಂತೆ ಮಾಡಿದ ಮೊದಲ ಕೃತಿ ಕೂಡ 1931ರಲ್ಲಿ ಮೋಲಿಯೇರನ ತಾರ್ತುಫ್ ನಾಟಕದ ರೂಪಾಂತರಿತ ಕೃತಿ 'ಆಷಾಢ ಭೂತಿ'. ಸ್ವತಃ ಅನುವಾದಗಳನ್ನು ಮಾಡಿ, ಅನುವಾದ ಕೃತಿಗಳ ಬಗೆಗೆ ಚರ್ಚಿಸಿ ಅನುವಾದ ಕಲೆಯ ವಿಚಾರವಾಗಿಯೂ ಅವರು ಚಿಂತಿಸಿದ್ದಾರೆ.

ವಿಮರ್ಶೆಯನ್ನು ಕುರಿತಾದ ಜಗತ್ತು ಮೂರ್ತಿರಾಯರಿಗೆ ತುಂಬ ಪ್ರಿಯವಾದದ್ದು. ಇದರ ಪರಿಣಾಮ ಅವರ ಸಾಕಷ್ಟು ವಿಮರ್ಶನ ಬರಹಗಳು. ಮಾಸ್ತಿ, ಬಿ.ಎಂ.ಶ್ರೀ., ಷೇಕ್ಸ್‌ಪಿಯರ್, ಕಾಳಿದಾಸ, ಭವಭೂತಿ ಮೊದಲಾದವರ ಕೃತಿಗಳ ವಿಮರ್ಶೆಯಲ್ಲಿ ಒಂದು ಬಗೆಯ ಅನುಸೃಷ್ಟಿಯ ಪ್ರತಿಭೆಯನ್ನು ಕಾಣಬಹುದಾಗಿದೆ. ವಿಮರ್ಶೆಯ ವಿಧಾನವನ್ನೊಳಗೊಂಡ ಸಾಧನ ಸಾಮಗ್ರಿಗಳು ವಿಮರ್ಶೆಯ ಮಾನದಂಡಗಳು ಅವರ 'ಸಾಹಿತ್ಯ ಮತ್ತು ಸತ್ಯ', 'ಪೂರ್ವಸೂರಿಗಳೊಡನೆ' ಎಂಬ ಗ್ರಂಥಗಳ ಲೇಖನಗಳಲ್ಲಿ ಮಿಂಚಿವೆ. 'ಸಾಹಿತ್ಯ ಮತ್ತು ಕಲೆ'ಗಳನ್ನು ಕುರಿತ ಜಿಜ್ಞಾಸೆಯಂತೂ ಕನ್ನಡ ಕಾವ್ಯಮೀಮಾಂಸೆಯ ಕ್ಷೇತ್ರದಲ್ಲಿ ಅದ್ವಿತೀಯ ಬರಹಗಳ ಸಾಲಿಗೆ ಸೇರುವಂಥದ್ದಾಗಿದೆಯಲ್ಲದೆ ಅವರ ವಿಮರ್ಶನ ಚೈತನ್ಯದ ಸಾರಪೂರ್ಣವಾದ ಸ್ವೋಪಜ್ಞ ಕೃತಿಯಾಗಿದೆ. ಅವರ 'ಪೂರ್ವಸೂರಿ'ಗಳೊಡನೆ ಎಂಬ ಪ್ರಸಿದ್ಧ ವಿಮರ್ಶೆಯ ಹೊತ್ತಗೆಯಲ್ಲಿ ವಾಸ್ತವವಾಗಿ ಇರುವುದು ಎರಡೇ ಪ್ರಬಂಧ; ಒಂದು ರಾಮನ 'ಸೀತಾ ಪರಿತ್ಯಾಗ'ದ ಸಂದರ್ಭಗಳ ವಿಶ್ಲೇಷಣೆ; ಇನ್ನೊಂದು ಕಾಳಿದಾಸನ 'ಮೇಘದೂತ'ದ ಮೂರು ಕವನಗಳ ಪರ್ಯಾಲೋಚನೆ. ರಾಮನು ಎರಡು ಬಾರಿ 'ಸೀತಾ ಪರಿತ್ಯಾಗ' ಮಾಡಿದ ಪ್ರಕರಣಗಳನ್ನು ವಸ್ತುವಾಗಿರಿಸಿಕೊಂಡು ಯುದ್ಧಕಾಂಡ, ಉತ್ತರ ಕಾಂಡ, ರಘುವಂಶ, ಉತ್ತರರಾಮ ಚರಿತೆಗಳಲ್ಲಿ ಬರುವ ಆ ಪ್ರಕರಣಗಳ ಪೃಥಕ್ಕಾದ ಮತ್ತು ತೌಲನಿಕವಾದ ಜಿಜ್ಞಾಸೆಗೆ ಈ ಪ್ರಬಂಧಗಳು ಮೀಸಲಾಗಿವೆ. ಸಹೃದಯನಾದ, ಬಹು ಶ್ರುತನಾದ, ತೀವ್ರ ಶೋಧದಲ್ಲಿ ಆಸಕ್ತನಾದ 'ವಿಮರ್ಶಕ'ನೊಬ್ಬ ಈ ಪ್ರಬಂಧಗಳಲ್ಲಿ ಕಂಡು ಬರುತ್ತಾನೆ. ಕವಿ-ಕವಿಗಳನ್ನು ತೂಗಿ ನೋಡಿರುವ ಬಗೆ, ಅವರುಗಳ ಪ್ರತಿಭೆಯ ಉತ್ಕರ್ಷದ-ಅಪಕರ್ಷದ ಖಚಿತ ಸಂದರ್ಭಗಳನ್ನು ಸೂಕ್ತವಾಗಿ ಆರಿಸಿಕೊಡುವ ಬಗ್ಗೆ, ಕವಿಗಳು ಬಳಸಿರುವ ಸಾಂದರ್ಭಿಕ ಶಬ್ದಗಳ ಬೆನ್ನು ಹಿಡಿದು ಅವುಗಳ ಅಪಾರ ವ್ಯಂಜಕ ಸಾಮರ್ಥ್ಯವನ್ನು ಬೆಳಗಿಸಿರುವ ಬಗೆ ಮೊದಲಾದ ಚಿಕಿತ್ಸಕ ಗುಣಗಳಿಂದ ಈ ಬರಹಗಳು ಕನ್ನಡದಲ್ಲಿ ಅನ್ವಯ ವಿಮರ್ಶೆಯ ಶ್ರೇಷ್ಠ ಮಾದರಿಗಳಾಗಿ ನಿಲ್ಲುತ್ತವೆ. ಮೇಘದೂತದಲ್ಲಿ ಕೇವಲ ಮೂರು ಪದ್ಯಗಳನ್ನಾರಿಸಿಕೊಂಡು ಕಾಳಿದಾಸನ ಪ್ರತಿಭೆಯು ಕ್ರಮವಾಗಿ ಪರಂಪರೆಯ ಪ್ರಜ್ಞೆ, ಸಾಮಾನ್ಯತೆ, ಅನನ್ಯತೆಗಳ ಮೂರು ಮಜಲುಗಳಲ್ಲಿ ಹರಿದಿರುವ ಬಗೆಯನ್ನು ಅತ್ಯಂತ ಸಮರ್ಪಕವಾಗಿ ಮಾಡಿಕೊಟ್ಟಿದ್ದಾರೆ.[1]

ಈ ವಿಮರ್ಶೆಗಳ ಸಂದರ್ಭದಲ್ಲಿ ಮೂರ್ತಿರಾಯರು 'ಕಾವ್ಯ ಪ್ರತಿಮೆ', 'ಕಾವ್ಯಕಲೆ', ಮಿಥುಕ (Myth) ಮೊದಲಾದ ಶಬ್ದಗಳ ಲಕ್ಷಣಗಳನ್ನು ನಿರ್ದೇಶಿಸುವ ಮೀಮಾಂಸೆಯ ಕಾರ್ಯವನ್ನೂ ಸಮರ್ಥವಾಗಿ ಮಾಡಿದ್ದಾರೆ. ಎ.ಎನ್. ಮೂರ್ತಿರಾಯರ ಬರವಣಿಗೆಯ ಧೋರಣೆ ಅನುಕರಣೀಯ ವಾದದ್ದು. ಗದ್ಯಶಿಲ್ಪದ ಬಗೆಗೆ ಅವರ ಬರಹಗಳಲ್ಲೂ ಪತ್ರಗಳಲ್ಲೂ ಸ್ಪಷ್ಟವಾದ ಚಿಂತನೆಯ ಸುಳಿವುಗಳಿವೆ. ಕ್ರೀಪಾ ಪ್ರವೀಣನ ಸಾಕ್ಷ್ಯ, ಸಾಹಿತಿಗಳನ್ನು ವರ್ಗೀಕರಿಸುವ ವಿಧಾನ ಇವುಗಳನ್ನು ಕುರಿತ ಪ್ರಬಂಧಗಳಲ್ಲಿ ಅತಿಶಯೋಕ್ತಿ ಕೃತಕ ಶಬ್ದ ವಿಲಾಸ ಅತಿಭಾವುಕ ದೃಷ್ಟಿಗಳ ಖಂಡನೆಯಿದೆ. ಹೊಸ ರೀತಿಯ ಬರವಣಿಗೆ ಹೇಗಿರಬೇಕೆಂಬ ಬಗೆಗೆ ಮುಕ್ತ ಚರ್ಚೆಯಿದೆ. ಪರಿಷ್ಕಾರ ಪ್ರಿಯತೆ, ಶಬ್ದಗಳ ವಿಭಿನ್ನ ನೆರಳುಗಳನ್ನು ದುಡಿಸಿಕೊಳ್ಳುವ ಕಲಾಜಾಣ್ಮೆ ಆಳವಾದ ಸ್ವವಿಮರ್ಶೆ ಅವರ ಗದ್ಯ ಬರಹದ ಜೀವಾಳವಾಗಿದ್ದು, ಅನುಭವದ ಹತ್ತಾರು ಮಜಲುಗಳನ್ನು ಹಿಡಿದಿಡುವ ದಿಕ್ಕಿನಲ್ಲಿ ಸಾಗುತ್ತದೆ. ಈ ದೃಷ್ಟಿಯಿಂದ ಅವರನ್ನು ಆಧುನಿಕ ಗದ್ಯ ನಿರ್ಮಾಪಕರೆಂದು ಧಾರಾಳವಾಗಿ ಹೇಳಬಹುದು. ಲಲಿತ ಪ್ರಬಂಧವಾಗಲಿ, ಪುಸ್ತಕ ವಿಮರ್ಶೆಯಾಗಲಿ, ಪತ್ರಲೇಖನವಾಗಲಿ, ಕೃತಿ ಪರಿಚಯವಾಗಲಿ ವಸ್ತುವಿನ ಆಳಕ್ಕಿಳಿದು ಅದರ

ಸೂಕ್ಷ್ಮನಾಡಿಗಳನ್ನು ಹಿಡಿದು ಮಿಡಿಸುವ ಗುಣ ಅವರ ಗದ್ಯದ ಗಟ್ಟಿತನಕ್ಕೆ ನೆರವಾಗಿದೆ. ಮೂರ್ತಿರಾಯರ ಗದ್ಯಕ್ಕೆ 'ಶಿಲ್ಪದ' ಗುಣ ಮೂಡಿ ಬಂದಿರುವುದು ಈ ಬರಹಗಳಿಂದ. ಅವರ ಗದ್ಯಶಿಲ್ಪದ ಚಿಂತನೆ ಅನನ್ಯವಾದದ್ದು. ಹೇಳುವ ವಿಷಯದಂತೆಯೇ ಬಳಸುವ ಭಾಷೆಗೂ ಗಮನ ಕೊಡುವ ಮೂರ್ತಿರಾಯರ ಗದ್ಯದಲ್ಲಿ ಬಳಕೆಯ ಭಾಷೆಗೆ ಒತ್ತುಕೊಡುವ ಕಾಳಜಿಯಿದೆ. ಪ್ರತಿಮಾತ್ಮಕತೆ, ತುಂಬ ಚುರುಕಾಗಿ ಹೇಳುವ ಹ್ರಸ್ವಪ್ರಿಯತೆ, ಭಾವ ಶೈಥಿಲ್ಯ ಮುಕ್ತವಾದ ಸ್ವವಿಮರ್ಶೆ, ಶಬ್ದದ ಹತ್ತಾರು ನೆರಳುಗಳನ್ನು ಗುರುತಿಸಬಲ್ಲ ಸಾಣೆಗಾರಿಕೆ, ಸರಳ ಹಾಸ್ಯದಿಂದ ಹಿಡಿದು ಸಂಕ್ಷೋಭೆಗೆ ಒಳಗು ಮಾಡುವಷ್ಟರವರೆಗಿನ ವಿವಿಧ ಗತಿಗಳಲ್ಲಿ ವಿಚಾರವನ್ನು ನಡೆಸಬಲ್ಲ ಹದಗಾರಿಕೆ, ವಾಕ್ಯರಚನೆಯನ್ನಾಗಲೀ ವಾಕ್ಯಗಳ ರಚನೆಯನ್ನಾಗಲೀ ಕ್ರಮಬದ್ಧವಾಗಿ ಒಪ್ಪದಿಂದ ನಡೆಸಿಕೊಂಡು ಹೋಗುವ ಕಲಾಜಾಣ್ಮೆ-ಇವು ಮೂರ್ತಿರಾಯರ ಗದ್ಯ ಶಿಲ್ಪದ ವೈಶಿಷ್ಟ್ಯ ಎನ್ನಬಹುದು.

## 2

ಅನುವಾದ, ವಿಮರ್ಶೆ, ಕಿರುಚಿತ್ರ, ಪತ್ರಸಾಧನೆ, ಪ್ರವಾಸಕಥನ ಮೊದಲಾದ 'ಅನುಸೃಷ್ಟಿ'ಗಳದು ಒಂದು ತೂಕವಾದರೆ, ಅವರ ಲಲಿತ ಪ್ರಬಂಧಗಳ ಸೃಷ್ಟಿಲೋಕವೇ ಬೇರೊಂದು ತೂಕವಾಗುತ್ತದೆ. ಕನ್ನಡ ಪ್ರಬಂಧ ಪರಂಪರೆಯ ಮೊದಲ ಖಚಿತ ಮೈಲಿಗಲ್ಲು ಎಂದರೆ ಮೂರ್ತಿರಾಯರು. ಈ ಮಾತು ಐತಿಹಾಸಿಕವಾಗಿ ಅಲ್ಲದಿದ್ದರೂ ಪ್ರಭಾವ ನಿರ್ಮಾಣದ ದೃಷ್ಟಿಯಿಂದ ಮಹತ್ವದ್ದಾಗುತ್ತದೆ. ಮೂರ್ತಿರಾಯರು ಕನ್ನಡದ ಪ್ರಸಿದ್ಧ ಪ್ರಬಂಧದ ಲೇಖಕರಲ್ಲಿ ಒಬ್ಬರಾಗಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಆರಂಭಗೊಂಡ ಪ್ರಬಂಧ ಸಾಹಿತ್ಯಕ್ಕೆ ಮೊದಲಲ್ಲೇ ಒಳ್ಳೆಯ ಬೆಳೆಯನ್ನು ಕಾಣಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. 'ಹಗಲುಗನಸುಗಳು', 'ಅಲೆಯುವ ಮನ', 'ಮಿನುಗು-ಮಿಂಚು' - ಈ ಮೂರು ಪ್ರಬಂಧ ಸಂಕಲನಗಳಲ್ಲಿ ತಮ್ಮ ವಿಚಾರವಾಹಿನಿಯನ್ನು ಹರಿಸಿದ್ದಾರೆ. 'ಹಗಲು ಗನಸುಗಳು' ಮತ್ತು 'ಅಲೆಯುವ ಮನ'ದ ಕೆಲವು ಪ್ರಬಂಧಗಳ ಲಲಿತ ಮಾಧುರ್ಯವನ್ನು ಗಮನಿಸಿದರೆ 'ಲಲಿತ ಪ್ರಬಂಧ'ಗಳು ಎಂಬ ಜಾತಿಯ ಬರವಣಿಗೆಗೆ ಇವರು ಹೇಗೆ ಆಚಾರ್ಯರಾದರು ಎಂಬ ಅಂಶ ಸ್ಪಷ್ಟವಾಗುತ್ತದೆ. ಲಲಿತವಾದ ಬರವಣಿಗೆ, ಉದ್ದಕ್ಕೂ ಚಿಮ್ಮುತ್ತ ಸಾಗುವ ತಿಳಿ ಹಾಸ್ಯದ ವಾಹಿನಿ, ಹೆಣ್ಣು ಗಂಡುಗಳ, ಅದರಲ್ಲೂ ನವ ಪ್ರಣಯಿಗಳ ಮನೋವ್ಯಾಪಾರದ ಸೂಕ್ಷ್ಮ ವಿಶ್ಲೇಷಣೆ, ತುಂಬ ಜನಪ್ರಿಯವಾಗಿರುವ ವಸ್ತು-ಸಂಗತಿಗಳ ಮೇಲೆ ಬೀರುವ ವಕ್ರ-ಕಿರಣ, ಗಂಭೀರ ವಿಷಯಗಳನ್ನೆತ್ತಿಕೊಂಡು ಹಗುರವಾದ ಅಣಕು ಶೈಲಿಯಲ್ಲೇ ನಡೆಸುವ ಮಾರ್ಮಿಕ ಹೃದ್ಬೋಧಕ ವಿಮರ್ಶೆ, ಒಂದು ಕಿರು ಚಿತ್ರ ಬರೆದರೂ ಅದರಲ್ಲಿ ಕಾಣಿಸುವ ಪೂರ್ಣದೃಷ್ಟಿ, ಶೈಲಿಯ ಲಾಘವತೆಯಲ್ಲಿ ಇಣುಕಿಸುವ ವಿಚಾರ ಪುಷ್ಟಿ, ಸಣ್ಣಕಥೆ, ನಾಟಕಗಳ ಗಡಿನಾಡಿನಲ್ಲಿ ಸ್ವೇಚ್ಛೆಯಾಗಿ ವಿಹರಿಸುವ ಆವರಣ ಸೃಷ್ಟಿ, ವ್ಯಕ್ತಿ ಚಿತ್ರಣಗಳಲ್ಲಿ ತೋರುವ ಅಪೂರ್ವ ಚಿತ್ರಸೃಷ್ಟಿ, ನಿರ್ಜೀವ ವಸ್ತುಗಳ ವಿವರಣೆಯಲ್ಲಿ ಮನಗಾಣಿಸುವ ಒಂದು ನಾಟ್ಯ ಶಕ್ತಿ-ಇಂತಹ ಹಲವಾರು ಗುಣಗಳು ಮೂರ್ತಿರಾಯರ ಪ್ರಬಂಧಗಳಿಗೆ ಒಂದು ವಿಶಿಷ್ಟತೆಯನ್ನು ತಂದು ಕೊಟ್ಟಿವೆ.

ಮೂರ್ತಿರಾಯರ ಪ್ರಬಂಧಸಂಕಲನಗಳು ಒಟ್ಟು ಮೂರಿವೆ. 'ಹಗಲುಗನಸುಗಳು' ಮೊದಲನೆಯದು. ಚಾರಲ್ಸ್‌ಲ್ಯಾಮನ 'ಡ್ರೀಮ್ ಚಿಲ್ಡ್ರನ್' ಎಂಬ ಪ್ರಸಿದ್ಧ ಪ್ರಬಂಧದಂತೆ ಇಲ್ಲಿನ ಪ್ರಬಂಧಗಳಲ್ಲಿ ಒಂದು ಆತ್ಮೀಯ ಭಾವುಕತೆ ಇಣುಕುತ್ತದೆ. ಪ್ರಬಂಧಕಾರನ ಮನಸ್ಸಿನ ತುಂಬ ರಮ್ಯವಾದ ಭಾವಗಳು. ಅವಕ್ಕೆ ಪರಿಮಳಯುಕ್ತವಾದ, ಲಲಿತವಾದ ಶಬ್ದ ಕವಚಗಳನ್ನು ತೊಡಿಸುವ ಬಯಕೆ. ಈ ಕವಚಗಳ ಒಳಮೈಯಲ್ಲಿ ರಮ್ಯ, ಜುಗುಪ್ಸಿತ, ಲಾವಾರ, ನೀಚ-ಎಲ್ಲ ಭಾವನೆಗಳನ್ನೂ ಲೀಲಾಜಾಲವಾಗಿ ಹುದುಗಿಸುವ ಜಾಣ್ಮೆ ಪ್ರಬಂಧಕಾರರಿಗೆ ಸಿದ್ಧಿಸಿದೆ. ಈ ಸಂಕಲನದಲ್ಲಿ ಏಳು ಬಂಧಗಳಿವೆ. ಇವನ್ನೆಲ್ಲಾ ಪ್ರಬಂಧದ ಕಕ್ಷೆಯಲ್ಲಿ ತರುವುದು ಕಷ್ಟ. 'ಗೌರಜ್ಜಿ' ಒಂದು ವ್ಯಕ್ತಿಚಿತ್ರ ಪ್ರಬಂಧ. 'ಹೂವುಗಳು', 'ಹಗಲುಗನಸುಗಳು' ರೊಮಾಂಟಿಕ್ ಕವಿತೆಯ ಕಲ್ಪಕತೆ, ಬಣ್ಣಗಾರಿಕೆಗಳಿಂದ ಕೂಡಿದ ಪ್ರಬಂಧಗಳಾಗಿವೆ. 'ಕುರುಡ', 'ಲಲಿತೆಯ ವಿದ್ಯಾಭ್ಯಾಸ', 'ಪ್ರಣಯ ಯಾತ್ರೆ' - ಇವು ಬಹುಮಟ್ಟಿಗೆ ಕಥೆಗಳೆಂದೇ ಹೇಳಬಹುದು. 'ಗಾಡಿಯ ಪ್ರಯಾಣ' ಮೇಲಿನ ಎಲ್ಲ ಅಂಶಗಳನ್ನೂ ಹೊಂದಿರುವ ಒಂದು ವಿಶಿಷ್ಟ ಬರಹವಾಗಿದೆ.

'ಗೌರಜ್ಜಿ' ಕನ್ನಡ ಬರಹಗಾರರ ಮೇಲೆ ತುಂಬ ಪ್ರಭಾವ ಬೀರಿದ ಒಂದು ಪ್ರಬಂಧ. ಒಬ್ಬಳು ಜೀವಂತ ವ್ಯಕ್ತಿಯ ಚರ್ಯೆಗಳನ್ನು ವಿಶ್ಲೇಷಿಸಿ ಬೆಲೆ ಕಟ್ಟುವ ಪ್ರಯತ್ನವನ್ನು ಇಲ್ಲಿ ಪ್ರಬಂಧಕಾರರು ಕೈಗೊಂಡಿದ್ದಾರೆ. 'ಹಳ್ಳಿಯ ಹೆಣ್ಣುಮಗಳಾದರೂ ಕೈ ತೊಳೆದುಕೊಂಡು ಮುಟ್ಟುವ ಹಾಗೆ' ಚೆಲುವೆಯಾಗಿದ್ದ ಗೌರಜ್ಜ, ಮದುವೆಯಾದ ಮೂರೇ ವರ್ಷಗಳಲ್ಲಿ ಗಂಡನನ್ನು ಕಳೆದುಕೊಂಡು ಅತ್ತೆಯ ಮನೆಯಲ್ಲಿ ಗಾಣದೆತ್ತಿನಂತೆ ದುಡಿದು ಸದಾ ಅವರ ದುರಾಗ್ರಹಕ್ಕೆ ಪಾತ್ರಳಾಗುತ್ತಿದ್ದಾಕೆ. ತೌರುಮನೆಯನ್ನು ಸೇರಿ ಗೌರಜ್ಜಿಯೆನಿಸಿಕೊಂಡ ಮೇಲೆ ಮಕ್ಕಳಿಗೆ ಕಥೆ ಹೇಳುವಾಗ ಕೂಡ ಕೆಟ್ಟ ಮಾತಾಡಲು ಬಾರದ ಸಾಧ್ವಿ. ಹಿಂದೆ ಪಟ್ಟ ಪಾಡುಗಳಿಗೆ ಕಾಲದ ವಿನಾಯಿತಿಯನ್ನು ಕೊಟ್ಟು ಕರುಣಭಾವದಿಂದ ನೋಡುವ ಮಟ್ಟವನ್ನು ಆಕೆ ಮುಟ್ಟಿದ್ದ ಪರಿಯನ್ನು ಪ್ರಬಂಧಕಾರರು ವಿವರಿಸಿದ್ದಾರೆ.

'ಅಲೆಯುವ ಮನ' ಹದಿನಾಲ್ಕು ಸಂಕೀರ್ಣ ಬರಹಗಳ ಮೇಳ. ಮೂರ್ತಿರಾಯರ ಪ್ರಬಂಧ ಚೈತನ್ಯ ತನ್ನೆಲ್ಲ ಸತ್ವ ಸಂಪತ್ತಿಯನ್ನು ಪ್ರಕಾಶಗೊಳಿಸಿರುವುದು ಈ ಸಂಕಲನದಲ್ಲಿ. 'ಮಿನುಗು-ಮಿಂಚು' ಅವರ ಈಚಿನ ಪ್ರಬಂಧ ಸಂಕಲನ. ಇದರಲ್ಲಿ ಲಲಿತ ಪ್ರಬಂಧದ ಜಾತಿಗೆ ಸೇರುವುವು ನಾಲ್ಕೋ ಐದೋ. ಉಳಿದವು ಗಂಭೀರವಾದ ವಸ್ತುನಿಷ್ಠ ಬರಹಗಳಾಗಿವೆ (ಉದಾ. : ರೇಡಿಯೋ ನಾಟಕ ಮತ್ತು ರಂಗಭೂಮಿ; ಸಂಸ್ಕೃತಿ ಮತ್ತು ಸಾಹಿತ್ಯ-ಇ.).

ಇಂಗ್ಲಿಷ್ ಪ್ರಾಧ್ಯಾಪಕರಾಗಿ ಈ ಸಾಹಿತ್ಯದ ಪ್ರಬಂಧ ಮತ್ತು ಕಾವ್ಯ ನಾಟಕಗಳ ಸತ್ವವನ್ನು ಮೈಗೂಡಿಸಿಕೊಂಡಿದ್ದ ಎ.ಎನ್. ಮೂರ್ತಿರಾಯರ ಪ್ರಬಂಧಗಳಲ್ಲಿ ಪ್ರಬಂಧದ ಮುಖ್ಯ ಲಕ್ಷಣಗಳಾದ ಮಾನವೀಯತೆ, ಆಪ್ತತೆ, ಆತ್ಮೀಯತೆ, ಆತ್ಮನಿಷ್ಠತೆಗಳನ್ನು ಕಾಣಬಹುದು. ಇಂಗ್ಲಿಷ್ ಪ್ರಬಂಧ ಕಾರರಲ್ಲಿ ಎಡಿಸನ್‌ನ ಪ್ರಾಮಾಣಿಕತೆ ಮತ್ತು ಸದಂತಃಕರಣ, ಜಾನ್‌ಸನ್ನನ ದೃಢ ವ್ಯವಹಾರ ಜ್ಞಾನ, ಚಾರಲ್ಸ್ ಲ್ಯಾಮ್‌ನ ಅತಿರೇಕಪ್ರಿಯತೆ, ಹ್ಯಾಜ್‌ಲಿಟ್ಟನ ಭಾಷಾ ಸೌಷ್ಠವ, ಅಗಸ್ಟೀನ್ ಬಿರೆಲನ ಅದಮ್ಯ ಉತ್ಸಾಹ - ಇವೆಲ್ಲಾ ಮೂರ್ತಿರಾಯರ ಪ್ರಬಂಧಗಳಲ್ಲಿ ಮೇಳೈಸಿವೆ.

ಪ್ರಬಂಧ, ಹರಟೆ ಇವೆರಡೂ ಇಂದು ತುಂಬ ಬಳಕೆಯಲ್ಲಿರುವ ಶಬ್ದಗಳು. ಇವುಗಳ ಸ್ವರೂಪವನ್ನು ನಿರ್ಧರಿಸುವುದು ಕಷ್ಟ. ಆದರೆ ಈ ನಿಟ್ಟಿನಲ್ಲಿ ಮೂರ್ತಿರಾಯರು ಹರಟೆ ಮತ್ತು ಪ್ರಬಂಧಗಳೆರಡನ್ನೂ ಕುರಿತು ಎರಡು ಉತ್ತಮ ವಿವರಣ ಪ್ರಬಂಧಗಳನ್ನು ಬರೆದು ವಿಶ್ಲೇಷಣಾಸಕ್ತರಿಗೆ

ತುಂಬ ಉಪಕಾರ ಮಾಡಿದ್ದಾರೆ. ಮೂರ್ತಿರಾಯರು ಹರಟೆಗಳನ್ನು ಬರೆದಿದ್ದಾರೆ. ಪ್ರಬಂಧಗಳನ್ನು ಬರೆದಿದ್ದಾರೆ, ಸ್ವೇಚ್ಛಾ ಪ್ರವಾಸದ ಪರವಾನಿಗಿ ಪಡೆದುಕೊಂಡಿರುವ ಹರಟೆಯನ್ನು ಮೂರ್ತಿರಾಯರು ಯೌವನದಿಂದ ತುಂಬಿ ತುಳುಕುವ ಮುಗ್ಧೆಯ ಕಣ್ಣಿಗೆ ಹೋಲಿಸಿದ್ದಾರೆ. ಚಾಂಚಲ್ಯದಲ್ಲೇ ಅದರ ಸೊಬಗು ಅಡಗಿದೆ ಎನ್ನುತ್ತಾರೆ. ಬಿಡುವಿನ ವೇಳೆಯಲ್ಲಿ ನಾಲ್ಕಾರು ಜನ ಗೆಳೆಯರು ಕುಳಿತು ಕಡಲೆಕಾಯಿ, ಹುರಿಗಾಳು, ಕಾರದ ಪುರಿಗಳ ತಟ್ಟೆಗಳನ್ನು ಖಾಲಿ ಮಾಡುತ್ತಾ ಹರಟುತ್ತಾರಷ್ಟೆ. ಕಾರದ ಪುರಿಯ ಸೇವನೆಯಿಂದ ನಾಲಗೆಯ ರುಚಿಗ್ರಂಥಿಗಳು ಎಚ್ಚರಗೊಂಡು ನಮಗೆ ಹರ್ಷವಾಗುತ್ತದ 'ಯಾದರೂ ಹೊಟ್ಟೆ ತುಂಬಿ ಭಾರವಾಗುವುದಿಲ್ಲ. ಈ ಹೋಲಿಕೆಯನ್ನೇ ಮುಂದುವರಿಸಿ ರಾಯರು "ಹರಟೆಯಿಂದ ನಮ್ಮ ಮನಸ್ಸು ಹರ್ಷಗೊಂಡು ನಲಿದಾಡುತ್ತದೆಯಾದರೂ ಅದರ ಮೇಲೆ ಗಹನವಾದ ಚಿಂತನೆಯ ಹೊರೆ ಬಿದ್ದು ತ್ರಾಸವಾಗುವುದಿಲ್ಲ" ಎಂದು ಹೇಳಿ ಹರಟೆಯ ಮುಖ್ಯ ಸ್ವರೂಪವನ್ನು ವಿವರಿಸಿದ್ದಾರೆ. ಹರಟೆಗಾರರು ಕೊಂಕಣವನ್ನು ಸುತ್ತುತ್ತಾರೆ. ಆದರೆ ಮೈಲಾರವನ್ನು ತಲುಪುತ್ತಾರೆಂಬ ಭರವಸೆಯೇನೂ ಇಲ್ಲವಂತೆ. ಪ್ರಬಂಧವನ್ನು ಮೂರ್ತಿರಾಯರು 'ಕೋಲ್ಮಿಂಚಲ್ಲ-ಮಿನುಗು ಮಿಂಚು' ಎನ್ನುತ್ತಾರೆ. ಪ್ರಬಂಧವು ವ್ಯಕ್ತಿತ್ವದ ಹೃದಯದ ಮೂಲೆಮೂಲೆಗಳಲ್ಲೆಲ್ಲಾ ಸಂಚರಿಸಲು ಅವಕಾಶ ಕೊಡುತ್ತದೆ. ಪ್ರಬಂಧಕಾರ 'ತಾನುಂಟೋ ಮೂರು ಲೋಕ ವುಂಟೋ' ಜಾತಿಗೆ ಸೇರಿದವನು. ತನ್ನಿಂದಲೇ ಜಗತ್ತು ಎಂದು ನಂಬಿದವನು. ಹುಸಿಗೋಪ, ಚಮತ್ಕಾರ ಪ್ರದರ್ಶನ, ಚೇಷ್ಟಾಪ್ರಿಯತೆ ಇವು ಪ್ರಬಂಧಕಾರನ ಪ್ರಧಾನ ಬಂಡವಾಳ. ಆದರೂ ಅವನು ಪ್ರಾಧಾನ್ಯ ಕೊಡುವುದು ಮೇಲಿನವಕ್ಕಲ್ಲ, ನಮ್ಮ ಮನಸ್ಸನ್ನು ತಾತ್ಕಾಲಿಕವಾಗಿ ಆಕ್ರಮಿಸಿರುವ ಭಾವವೊಂದಕ್ಕೆ. ಆದ್ದರಿಂದ ಪ್ರಬಂಧಕಾರ ಶಿಸ್ತಿಗಿಂತ ಮುಖ್ಯವಾದ ಬೇರೊಂದು ಮೌಲ್ಯಕ್ಕೆ ಪ್ರಾಧಾನ್ಯ ಕೊಟ್ಟು ಸತ್ಯದ ಕಾಣದ ಮುಖಗಳ ಪರಿಚಯ ಮಾಡಿಕೊಡಲು ಪ್ರಯತ್ನಿಸುತ್ತಾನೆ.

ಈಗ ಪ್ರಾಯೋಗಿಕವಾಗಿ ಮೇಲಿನ ಹೇಳಿಕೆಗಳನ್ನು ಮೂರ್ತಿರಾಯರ ಪ್ರಬಂಧಗಳ ಸಹಕಾರದಿಂದ ಸಮರ್ಥಿಸಬಹುದು. ಮೂರ್ತಿರಾಯರ ಪ್ರಬಂಧಗಳಿಗೆ ರಮ್ಯತೆಯನ್ನು ತಂದುಕೊಟ್ಟಿರುವ ಶಕ್ತಿಗಳಲ್ಲಿ ಶಬ್ದ ಚಿತ್ರಗಳ ಕಾಣಿಕೆ ಮರಿಯುವಂಥದ್ದಲ್ಲ. ಮಾತುಗಾರಿಕೆಯ ಹದ, ಔಚಿತ್ಯ, ನವುರು, ವೈವಿಧ್ಯಗಳೆಲ್ಲ ಈ ಶಬ್ದಚಿತ್ರಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿವೆ. ಗದ್ಯಕಾವ್ಯ ಎನ್ನಬಹುದಾದಷ್ಟು ಶ್ರೀಮಂತವಾದ ಪ್ರತಿಮಾ ಸೃಷ್ಟಿಯನ್ನು ಕೆಲವು ಪ್ರಬಂಧಗಳಲ್ಲಿ ಕಾಣಬಹುದಾಗಿದೆ.

ಮೂರ್ತಿರಾಯರ ಪ್ರಬಂಧಗಳಲ್ಲಿ ಬರುವ ವರ್ಣನೆಯ ವಿವರಗಳು ತೋಟದ ವಿವಿಧ ಪತ್ರ, ಪುಷ್ಪ, ಫಲ, ವೃಕ್ಷಗಳ ಕಂಪಿನಂತೆ ಮನಸ್ಸಿನಾಳಕ್ಕೆ ಇಳಿಯುತ್ತವೆ. ಇದ್ದಕ್ಕಿದ್ದಂತೆ ಕಾವ್ಯದ ಲೇಪ ಪಡೆಯುತ್ತವೆ. ಬೆಂಗಳೂರು ಎಂಬ ಪ್ರಬಂಧದ ಈ ಸಾಲುಗಳನ್ನು ನೋಡಿ:

"ಸುತ್ತಮುತ್ತ ಇದ್ದ ಹಳ್ಳಿಗಳನ್ನೆಲ್ಲಾ ಈ ನಗರ ಭೂತ (ಬೆಂಗಳೂರು) ನುಂಗಿ ಜೀರ್ಣಿಸಿಕೊಂಡಿದೆ. ಹಣ್ಣಿನ ತೋಟಗಳು ಈಗ ಮನೆದಳಗಳಾಗಿವೆ. ವಿಲ್ಸನ್ ಗಾರ್ಡನ್ನಿನ ಹೆಸರು ಅನ್ವರ್ಥವಲ್ಲ. ಅಲ್ಲಿ ತೋಟವಿಲ್ಲ. ನರಹರಿರಾಯನ ಗುಡ್ಡದ ಮೇಲಿನ ದೇವಾಲಯ ಇನ್ನೂ ನಿಂತಿದೆ. ಸಂಜೆಗೆಂಪಿನ ಆಕಾಶದ ಹಿನ್ನೆಲೆಯ ಮೇಲೆ ಚಿತ್ರಿಸಿದಂತೆ ಅದರ ಸ್ಫುಟವಾದ ರೇಖೆಗಳು ಈಗಲೂ ಕಂಗೊಳಿಸುತ್ತವೆ. ಆದರೆ ಗುಡ್ಡದ ಇಳಿಜಾರನ್ನು ಮುಚ್ಚಿದ ಹಸುರು ವಸನವನ್ನು ಈಗಿನ ಧಾರ್ತರಾಷ್ಟ್ರರು ಸೆಳೆದು ಹಾಕಿದ್ದಾರೆ. ಅದರ ಬೆತ್ತಲೆ ಮೈಯ್ಯ ಮೇಲೆ ಇಟ್ಟಿಗೆ, ಗಾರೆಗಳ ಬಾವು ಎದ್ದು ಕಾಣುತ್ತದೆ."

ಮೂರ್ತಿರಾಯರ ಬರಹಗಳ ಒಂದು ಮರೆಯಲಾಗದ ಮೂಲ ದ್ರವ್ಯ ಎಂದರೆ ಅಲ್ಲಿನ ನವುರಾದ ಅಲೆಗಳನ್ನು ಮಿಡಿಸುತ್ತ ಸಾಗುವ ಹಾಸ್ಯವಾಹಿನಿ. ಬಳಸುವ ಶಬ್ದಗಳಲ್ಲಿ, ವಾಕ್ಯರಚನೆಯ ಧೋರಣೆಯಲ್ಲಿ, ಗಂಭೀರತೆಯ ಸೋಗಿನಲ್ಲಿ, ವಸ್ತುವಿನ ಪೃಥಕ್ಕರಣದಲ್ಲಿ - ಯಾವ ಘಟ್ಟದಲ್ಲಿ ಬೇಕಾದರೂ ಓದುಗರ ಮನಸ್ಸಿಗೆ ಕಚಗುಳಿ ಇಡುತ್ತಾ ಸಾಗುವ ಪ್ರಸನ್ನ ಗುಣ ಯಥೇಚ್ಛವಾಗಿದೆ.

ಗಾಂಪರೊಡೆಯರು ವಿದಾನಸೌಧದಲ್ಲಿ ಪ್ರೇಕ್ಷಕರ ಗ್ಯಾಲರಿಯಲ್ಲಿ ಕುಳಿತಿದ್ದರೂ ಸ್ಫೂರ್ತಿ ಬಂದಾಗ, ಭಾಷಣ ಬಿಗಿಯಲು ಎದ್ದು ನಿಂತಾಗ ಸಭಾಪತಿಗಳು ಉರಿದೆದ್ದು 'ಕುಳಿತುಕೊಳ್ಳಿ' ಎಂದು ಕೂಗಿದರೆ "ಪರವಾಗಿಲ್ಲ, ನಿಂತುಕೊಂಡೇ ಮಾತಾಡುತ್ತೇವೆ. ಸಭಾ ಮರ್ಯಾದೆಗೆ ಲೋಪ ಬರಬಾರದು," ಎಂದು ಹೇಳುವ ಅಸಂಬದ್ಧ ಮಾತು ಓದುಗರಲ್ಲಿ ನಗೆಯ ಬುಗ್ಗೆಯನ್ನೆಬ್ಬಿ ಸುತ್ತದೆ.

ದೆವ್ವಗಳು ತಾವು ಸತ್ತ ಕಡೆಯೇ ಬಿದ್ದು ಸಾಯುತ್ತವೆ ಎಂಬ ಕಲ್ಪನೆಯ ಎಳೆಯನ್ನು ಹಿಡಿದು ಮೂರ್ತಿರಾಯರು 'ಕನಿಕರದ ವ್ಯಾಜ'ದಲ್ಲಿ ತುಂಬ ಹಾಸ್ಯ ಮಾಡಿದ್ದಾರೆ. "ದೆವ್ವಗಳು ಎಲ್ಲೆಂದರಲ್ಲಿ ಹೋಗಬಲ್ಲವು- ಅವು ಪಾಸ್‌ಪೋರ್ಟ್ ಕಛೇರಿಗೆ ಅಲೆಯಬೇಕಾಗಿಲ್ಲ. ಸುಂಕದ ಕಟ್ಟೆಗಳಲ್ಲಿ ಹೇಳಿಕೆ ಕೊಡಬೇಕಾಗಿಲ್ಲ. ಟಿಕೆಟ್ಟಿಗೆ ಹಣವಿಲ್ಲವೆಂದು ಚಿಂತಿಸಬೇಕಾಗಿಲ್ಲ. ಆದರೂ ಅವುಗಳ ಬುದ್ಧಿಗೆ ಏನು ಮಂಕು ಬಡಿದಿದೆಯೋ ಗೊತ್ತಿಲ್ಲ. ದುರ್ಮರಣಕ್ಕೆ ಈಡಾದ ಎಡೆಯಲ್ಲೇ ಸುಳಿದು ಸಾಯುವುದು ಅವುಗಳ ಹಣೆಯ ಬರಹ!"

'ಕ್ಲೀಷಾ ಪ್ರವೀಣರ ಸಾಕ್ಷ್ಯ'ವಂತೂ ನಗೆ, ಲೇವಡಿ, ವ್ಯಂಗ್ಯ, ಭರ್ತ್ಸನೆ– ಎಲ್ಲ ಆಯುಧಗಳಿಂದ ಕಿಕ್ಕಿರಿದಿರುವ ಒಂದು ಹಾಸ್ಯ ಪ್ರಬಂಧ. ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ನಡೆಯುವ ಮಾದರಿ ಸಭೆಯೊಂದರ ವರದಿಯನ್ನು ಇಲ್ಲಿ ಕೊಟ್ಟಿದ್ದಾರೆ. ನಮ್ಮ ದಿನಬಳಕೆಯ ಮಾತುಗಳಲ್ಲಿ ಎಷ್ಟೊಂದು ಪೊಳ್ಳು ತುಂಬಿಕೊಂಡಿದೆ. ರೂಢಿ ಮೌಢ್ಯ ನಮ್ಮ ವಿವೇಕವನ್ನು ಹೇಗೆ ಹಾಳುಮಾಡಿದೆ ಎಂಬುದನ್ನು ತೋರಿಸುವುದೇ ಈ ಬರಹದ ಉದ್ದೇಶ.

ಪ್ರಬಂಧಗಳು ಸಾಮಾನ್ಯವಾಗಿ ತೀವ್ರ ಚಿಂತನೆ, ಅನುಶೀಲನೆಗಳ ಹೊರೆಯಿಂದ ಕುಸಿಯುವುದಿಲ್ಲ- ಎಂಬ ಮಾತಿದೆ. ಆದರೆ ತುಂಬ ಆಕರ್ಷಕವಾಗಿ, ವರ್ಣರಂಜಿತವಾಗಿ ಕಾಣುವ ಎಷ್ಟೋ ನದಿಯ ಸೇತುವೆಗಳು ಅಪಾರ ಭಾರವನ್ನು ಹೊತ್ತು ನಿಲ್ಲುವ ಜಂಘಾತ್ರಾಣ ಹೊಂದಿಲ್ಲವೆ! ಹಾಗೆ ಮೂರ್ತಿರಾಯರ ಪ್ರಬಂಧಗಳಲ್ಲಿ ರಂಜನೀಯವಾದ ಉಕ್ತಿಗಳ ಮುಖವಾಡ ಹೊತ್ತು ಸಾಂದ್ರವಾದ ತಾತ್ವಿಕ ವಿಚಾರಗಳು ಲಾಸ್ಯಮಾಡುವುದುಂಟು. ದೆವ್ವಗಳನ್ನು ಕುರಿತ ಅವರ ಪ್ರಬಂಧದ ಈ ಸಾಲು ಗಮನಾರ್ಹವಾಗಿದೆ:

"ನಾನು ಎಷ್ಟೋ ದೆವ್ವಗಳ ಕಥೆಗಳನ್ನು ಕೇಳಿದ್ದೇನೆ, ಹೇಳಿಯೂ ಇದ್ದೇನೆ.... ಮುಕ್ಕಾಲು ಮೂರು ವೀಸ ಪಾಲು ನನ್ನ ಸ್ವಂತ ಅನುಭವಕ್ಕೆ ಬಂದವಲ್ಲ. ಉಳಿದವುಗಳಿಗೆ ಪ್ರಕೃತ್ಯತೀತವಾದ ಕಾರಣವನ್ನು ಹುಡುಕುವ ಅವಶ್ಯಕತೆ ಕಂಡು ಬಂದಿಲ್ಲ......."

"ಪ್ರಕೃತ್ಯತೀತವಾದ ರಹಸ್ಯವೊಂದಿರಲಿ, ಅದನ್ನು ಹುಡುಕುವ ಪ್ರವೃತ್ತಿಯೂ ನಮ್ಮಲ್ಲಿರಲಿ ಎಂಬ ಬಯಕೆ ಬಹುಶಃ ನಮ್ಮೆಲ್ಲರಲ್ಲೂ ನೆಟ್ಟು ನಿಂತಿದೆ-ಆ ರಹಸ್ಯ ದೆವ್ವವಾಗಲಿ, ದೈವವಾಗಲಿ. ನಮ್ಮ ದೇಹದಲ್ಲಿ

ನಡೆಯುತ್ತಿರುವ 'ಜೀವ' ಎಂಬ ರಾಸಾಯನಿಕ ಕ್ರಿಯೆ ನಿಂತ ಮೇಲೂ ಏನೋ ಒಂದು ಅಂಶ ಅಳಿಯದೆ ನಿಲ್ಲುತ್ತದೆಂಬ ನಂಬಿಕೆ ನಮಗೆ ಪ್ರಿಯವಾದದ್ದು. ಅಷ್ಟು ಮಾತ್ರವಲ್ಲ ಆ ಅಂಶ ಉಳಿದಿರಲಿ, ಇಲ್ಲದಿರಲಿ, ಅದರ ಭಯದ ಅಮಲಾದರೂ ನಮಗೆ ಪ್ರಿಯವಾದದ್ದು."

ಮೂರ್ತಿರಾಯರ ಪ್ರಬಂಧಗಳಲ್ಲಿ ಉನ್ನತ ಮೌಲ್ಯಗಳ ವಿವೇಚನೆಯುಳ್ಳ, ಮಾನವನ ಜಾರಿಕೆ-ಕಾರಿಕೆಗಳನ್ನು ಸಹಾನುಭೂತಿಯಿಂದ ಅರ್ಥ ಮಾಡಿಕೊಳ್ಳಬಲ್ಲ ಸಿನಿಕ ಮನೋವೃತ್ತಿಯವನೂ, ವಿನೋದ ಶೀಲನೂ, ಸಮಾಜದ ಎಲ್ಲ ಬಗೆಯ ಜನರೊಂದಿಗೆ ಆತ್ಮೀಯವಾಗಿ ಬೆರೆಯಬಲ್ಲವನೂ, ಸಾರಗ್ರಾಹಿಯೂ ಆದ ಸಹೃದಯ ಪ್ರಬಂಧಕಾರನ ವ್ಯಕ್ತಿತ್ವ ದರ್ಶನವಾಗುತ್ತದೆ. ಪ್ರಬಂಧಕಾರನ ಪ್ರಕೃತಿ ಪ್ರಿಯತೆ, ಪ್ರಕೃತಿಯ ಅಂಶಗಳನ್ನು ವಿರೂಪಗೊಳಿಸುವ ಕೃತಕ ಅಲಂಕಾರ, ಒಪ್ಪಗಳ ಬಗೆಗೆ ರೇಜಿಗೆ, ಸದ್ದುಗದ್ದಲಗಳ ಆವರಣದಿಂದ ಪಾರಾಗಿ ಶಾಂತ, ಸರಳ ಪ್ರದೇಶಗಳಲ್ಲಿ ನೆಲಸಬಯಸುವ ಮನೋಪಾತ, ಬದಲಾಗುತ್ತಿರುವ ಸಮಾಜದ ಹೊಸ್ತಿಲಲ್ಲಿ ನಿಂತು ಹಳೆಯ ಸಂಪ್ರದಾಯದ ಕೆಲವೊಂದು ಗಟ್ಟಿದ್ರವ್ಯಗಳನ್ನು ಹೊರತೆಗೆದು ಚಲಾವಣೆಗೆ ಇಡಬಯಸುವ ಕಳಕಳಿ, ಹೊಸ ಸಂಪ್ರದಾಯದ, ವೈಜ್ಞಾನಿಕ ಮನೋಧರ್ಮದ ಬಗೆಗೆ ತೋರಬಯಸುವ ಉತ್ಸಾಹ- ಈ ಮನೋಧರ್ಮಗಳನ್ನು ಗುರುತಿಸಬಹುದಾಗಿದೆ.

ಒಟ್ಟಿನಲ್ಲಿ ಪ್ರಬಂಧರಚಕ ಮೂರ್ತಿರಾಯರದು ತುಂಬ ಆರೋಗ್ಯ ಕರವಾದ ದೃಷ್ಟಿ. ತುಂಬ ಚಟುವಟಿಕೆಯ, ವೈವಿಧ್ಯಮಯ ಜೀವನದ ಹಂಬಲ ಅಲ್ಲಿದೆ. ರಸಿಕಪ್ರವೃತ್ತಿಯ ಎಳೆಯ ದಂಪತಿಗಳ ಜಗತ್ತಿ ನಿಂದ ಹಿಡಿದು ಕಾರ್ ರಿಪೇರಿ, ಫೋನ್ ಗೊಂದಲ, ಹರಕೆಯ ಚಪಲ, ಮನೆಕಟ್ಟುವ ಬವಣೆ, ದೆವ್ವ, ಅತಿಥಿ, ಹೋಟೆಲುಗಳ ಅನುಭವ, ನಗರ ಗ್ರಾಮಗಳ ಬದುಕಿನ ಸಾಮ್ಯ ವೈಷಮ್ಯಗಳು-ಹೀಗೆ ವಿಸ್ತಾರವಾದ ಹಾಸಿನ ಮೇಲೆ ಮೂರ್ತಿರಾಯರು ಹಸಿರು ಕುಂಚವಾಡಿಸಿದ್ದಾರೆ.

'ಸಂಜೆಗಣ್ಣಿನ ಹಿನ್ನೋಟ' ಇತ್ತೀಚೆಗೆ ಪ್ರಕಟವಾದ ಅವರ ಆತ್ಮ ಕಥೆಯಾಗಿದೆ. ಅವರ ಪ್ರಬಂಧ ಸಾಹಿತ್ಯ ಹಾಗೂ ಪ್ರವಾಸ ಸಾಹಿತ್ಯದಲ್ಲಿನ ಹಲವಾರು ವಿಶಿಷ್ಟ ಗುಣಗಳು ಇಲ್ಲೂ ಕಂಡು ಬರುತ್ತವೆ. ನವುರಾದ ಹಾಸ್ಯ, ಬದುಕಿನ ಘಟನೆಗಳ, ತಿರುವುಗಳ ಬಗ್ಗೆ ನಿರ್ಲಿಪ್ತಜಿಜ್ಞಾಸೆ, ಅದೇ ಅಂತರಂಗ ವೀಕ್ಷಣೆ, ತಮ್ಮ ಒಲವು-ನಿಲವುಗಳನ್ನು ರೂಪಿಸಿದ ಮೂಲಸ್ರೋತಗಳ ಅರಸುವಿಕೆ, ವ್ಯತ್ಯಸ್ತ ಮೌಲ್ಯಗಳೊಂದಿಗೆಯೇ ಕಾಣಿಸಿಕೊಳ್ಳುವ ಸಮಸ್ಯೆಗಳ ಪೂರ್ವಾಪರ ವಿವೇಚನೆ ಮುಂತಾದವುಗಳಿಂದ ಈ ಕೃತಿ ಆತ್ಮಕಥೆಯಷ್ಟೇ ಆಗಿ ಉಳಿಯದೆ, ಎಲ್ಲ ವಿವರಗಳೊಂದಿಗೆ ಒಂದು ಕಾಲವನ್ನು ಕಣ್ಣೆದುರು ನಿಲ್ಲಿಸುತ್ತದೆ. ಅನುಭವಗಳ ಮೂಲದ್ರವ್ಯ ವ್ಯಕ್ತಿ ಬದುಕನ್ನು ರೂಪಿಸುವ ಬಗೆ ಆತ್ಮೀಯವಾಗಿ ಓದುಗರನ್ನು ತಾಗುತ್ತದೆ.

❑

---

1. ಇಷ್ಟಾದರೂ 'ತಸ್ಮಾದ್ಗಚ್ಛೇದನುಕನಖಲಂ ಶೈಲರಾಜಾವತೀರ್ಣಾಂ' ಎಂದು ಆರಂಭವಾಗುವ ಪದ್ಯದಲ್ಲಿ ಅವರು ಕಾಣಿಸಿರುವ ಅದ್ಭುತ ಗುಣದ ಗುಂಗಿನಿಂದ ಪಾರಾದ ಮೇಲೆ ಆ ಪದ್ಯವನ್ನು ನನ್ನ ಕಾವ್ಯಾನುಭವದ ಮಿತಬೆಳಕಿನಲ್ಲಿ ಸ್ವತಂತ್ರವಾಗಿ ಮತ್ತೊಮ್ಮೆ ಓದಿಕೊಂಡಾಗ ಅಷ್ಟೊಂದು ಅರ್ಥಸಂಪತ್ತಿ ಕಾಣಿಸಲಿಲ್ಲ ಎಂಬ ಯಾತನೆಯೂ ನನಗಿದೆ. 'ಗೌರೀವಕ್ತ್ರಭ್ರುಕುಟಿರಚನಾ ಯಾ ವಿಹಾಸ್ಯೇವ ಫೇನಂ' ಎಂಬ ಸಾಲಿನ ಕಾಂತಿ ಉಳಿದ ಸಾಲುಗಳಲ್ಲಿ ನನಗೆ ಕಾಣುವುದಿಲ್ಲ. 'ಶಂಭೋಃಕೇಶಃ ಗ್ರಹಣಮಕರೋತ್ ಇಂದು ಲಗ್ನೋರ್ಮಿಹಸ್ತಾ' ಎಂಬ ಮಾತಿನಲ್ಲಿ 'ತಾನು ಜಾರಿ ಬೀಳಬಹುದೆಂಬ ಭಯದಿಂದ ಶಂಭುವಿನ ಕೇಶಗಳನ್ನು ಹಿಡಿದು ನಿಲ್ಲಲು ಯತ್ನಿಸಿದಳು' ಎಂಬರ್ಥ ಮಾತ್ರ ಹೊರಡುತ್ತದಲ್ಲವೆ? ಜಾತಕಶಾಸ್ತ್ರದ ಆಧಾರದಿಂದ 'ಶಂಭು' 'ಇಂದುಲಗ್ನ'ದ ಗಂಗೆಗಿಂತ ಬಲಶಾಲಿ ಎಂಬರ್ಥವನ್ನು ಕೇಳಿದಂತೆ ನನ್ನ ನೆನಪು.

# ತಿರುಮಲೆ ರಾಜಮ್ಮ

ಎಚ್.ಎಸ್. ಪಾರ್ವತಿ

1

ದೊಡ್ಡ ಆಲದ ಮರೆಯಲ್ಲಿರುವ ಬೇರೆ ಯಾವ ಮರವೂ ಜನರ ಕಣ್ಣಿಗೆ ಕಾಣಲಾರದು. ಹಾಗೆಯೇ ಖ್ಯಾತ ವ್ಯಕ್ತಿಯ ಮಡದಿಯಾದವಳು ಸ್ವತಃ ಪ್ರತಿಭಾವಂತಳಾದರೂ, ಸಮರ್ಥಳಾದರೂ ಅವಳ ಕೀರ್ತಿ ಪತಿಯ ಕೀರ್ತಿಯ ನೆರಳಾಗಿಯಷ್ಟೇ ಕಂಡುಬರುತ್ತದೆ. ಈ ಮಾತಿಗೆ ಅಪವಾದವಾಗಿ ನಿಂತ ಅಪರೂಪದ ಮಹಿಳೆ ಶ್ರೀಮತಿ ತಿರುಮಲೆ ರಾಜಮ್ಮನವರು. ಕನ್ನಡದ ಭೀಷ್ಮ, ಪತ್ರಿಕಾಕರ್ತ, ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಧೀರ, ಈ ಎಲ್ಲವುಗಳ ಜೊತೆಗೆ ಕನ್ನಡ ಸಾಹಿತ್ಯದಲ್ಲಿ ಮೇಲ್ಮಟ್ಟದ ಸ್ಥಾನವನ್ನು ಪಡೆದಿರುವ ಟಿ.ಟಿ. ಶರ್ಮರ ಪತ್ನಿಯಾಗಿದ್ದು ಕೇವಲ ಸಾಹಿತಿ ಪತ್ನಿಯಾಗಿ ಉಳಿಯದೆ 'ಭಾರತಿ'ಯಾಗಿ ಪತಿಯಷ್ಟೇ ಕೀರ್ತಿಯನ್ನೂ, ಗೌರವವನ್ನೂ ಪಡೆದ ಶ್ರೇಯಸ್ಸು ರಾಜಮ್ಮನವರಿಗೆ ಸಲ್ಲುತ್ತದೆ. ಅವರು ಎಂತಹ ಪ್ರಭಾವಶಾಲಿ ಎನ್ನುವುದಕ್ಕೂ ಇದೊಂದೇ ನಿದರ್ಶನ ಸಾಕು.

ರಾಜಮ್ಮನವರ ತಂದೆ ರಾಘವಾಚಾರ್ಯರು ಪ್ರೌಢಶಾಲೆಯ ಉಪಾಧ್ಯಾಯರು. ಆಂಗ್ಲ ವ್ಯಾಕರಣ, ಗಣಿತ, ಸಂಸ್ಕೃತ ವ್ಯಾಕರಣಗಳಲ್ಲಿ ಪಂಡಿತರು. ತುಂಬಾ ಶಿಸ್ತಿನ ವ್ಯಕ್ತಿ. ರಾಜಮ್ಮನವರ ತಾಯಿ ಸೀತಮ್ಮ ತುಂಬಾ ಜಾಣೆ, ಉದಾರಿ. ಮನೆಯವರಿಗೂ, ಅತಿಥಿಗಳಾಗಿ ಬಂದವರಿಗೂ 'ಅನ್ನಪೂರ್ಣೆ'. ಈ ದಂಪತಿಗಳ ನಾಲ್ಕನೆಯ ಮಗಳಾಗಿ 1900ನೇ ನವೆಂಬರ್ 20ರಂದು ತುಮಕೂರಿನಲ್ಲಿ ರಾಜಮ್ಮ ಜನಿಸಿದರು.

ರಾಜಮ್ಮನಿಗೆ ಬಾಲ್ಯದಿಂದಲೂ ಎಲ್ಲ ವಿಷಯಗಳಲ್ಲೂ ಕುತೂಹಲ, ಕಲಿಕೆಯಲ್ಲಿ ಆಸಕ್ತಿ. ಮನೆಯಲ್ಲಿ ತಾಯಿ ಹಾಡುತ್ತಿದ್ದ ಕನ್ನಡ, ತೆಲುಗು ಹಾಡುಗಳು, ತಂದೆಯ ಸಂಸ್ಕೃತ ಶ್ಲೋಕಗಳು ಇವೇ ಆಕೆಗೆ ದೊರೆತ ಮೊದಲ ಶಿಕ್ಷಣ. ತಂದೆ ಹಾಸನದಲ್ಲಿದ್ದಾಗ ಅಕ್ಷರಾಭ್ಯಾಸ ಶುರುವಾಯಿತು. ಅಲ್ಲಿಯೇ ಮಿಷನ್ ಸ್ಕೂಲ್, ರಾಷ್ಟ್ರೀಯ ಬಾಲಿಕಾ ಪಾಠಶಾಲೆಗಳಲ್ಲಿ ಪ್ರಾಥಮಿಕ, ಮಾಧ್ಯಮಿಕ ವಿದ್ಯಾಭ್ಯಾಸ ನಡೆಯಿತು. ಲೋಯರ್ ಸೆಕೆಂಡರಿಗೆ ಶಿಕ್ಷಣ ಮುಗಿಯಿತು.

ರಾಜಮ್ಮನಿಗೆ ಹದಿಮೂರನೆಯ ವಯಸ್ಸಿನಲ್ಲಿಯೇ ತಾಯಿಯ ದೊಡ್ಡಪ್ಪನ ಮಗ ತಿರುಮಲೆ ತಾತಾಚಾರ್ಯ ಶರ್ಮರೊಂದಿಗೆ ವಿವಾಹ ವಾಯಿತು. ಅಂದಿನ ಪದ್ಧತಿಯಂತೆ ತಾತಾಚಾರ್ಯ ಶರ್ಮರ ವಿದ್ಯಾಭ್ಯಾಸ ಮುಗಿಯುವವರೆಗೆ ರಾಜಮ್ಮ ತವರು ಮನೆಯಲ್ಲೇ ಉಳಿದಳು. ತಂದೆಗೆ ಬೆಂಗಳೂರಿಗೆ ವರ್ಗವಾಗಿ ಅವರು ತುಳಸೀ ತೋಟದ ಬಳಿ ಮನೆ ಮಾಡಿ ನೆಲಸಿದಾಗ ರಾಜಮ್ಮನಿಗೆ ಸಂಗೀತ ಶಿಕ್ಷಣಕ್ಕೆ, ಸಾಹಿತ್ಯ ರಚನೆಗೆ ಹೆಚ್ಚಿನ ಅವಕಾಶ ದೊರೆಯಿತು.

ಒಮ್ಮೆ, ಪ್ರಸಿದ್ಧ ವಿದ್ವಾಂಸರಾಗಿದ್ದ ಪಿಟೀಲು ತಾಯಪ್ಪನವರು ರಾಜಮ್ಮನವರ ವೀಣಾವಾದನ ಕೇಳಿ ಸಂತೋಷ ಪಟ್ಟು, ಹೆಚ್ಚಿನ ಶಿಕ್ಷಣ ಪಡೆಯಲೆಂದು ವೀಣೆ ಗೋಪಾಲರಾಯರ ಪರಿಚಯ ಮಾಡಿಸಿದರು. ಅಂದಿನಿಂದ ಪ್ರಸಿದ್ಧ ವೈಣಿಕರಾಗಿದ್ದ ಗೋಪಾಲರಾಯರಲ್ಲಿ ವೀಣಾಪಾಠ ಮುಂದುವರಿದು ರಾಜಮ್ಮ ವೀಣಾವಾದನದಲ್ಲಿ ವಿದುಷಿಯೇ ಆದರು.

ರಾಜಮ್ಮನವರ ಸೋದರಮಾವಂದಿರಾದ ವಿದ್ವಾನ್ ಟಿ. ವೆಂಕಟಾಚಾರ್ಯರು ನಾಟಕಕಾರರು. ಅವರ 'ಬೋಜ ಪ್ರಬಂಧ', 'ಶ್ರೀ ಕೃಷ್ಣಲೀಲಾ', 'ಪ್ರಹ್ಲಾದ ಚರಿತ್ರೆ' ಇವೆಲ್ಲ ಆಗ್ಗೆ ತುಂಬ ಜನಪ್ರಿಯವಾಗಿದ್ದ ನಾಟಕಗಳು. ಅವರ ಪ್ರಭಾವದಿಂದಾಗಿ ರಾಜಮ್ಮನವರ ಸಾಹಿತ್ಯದ ವ್ಯವಸಾಯ ಬೆಳೆಯಿತೆಂಬುದು ನಿರ್ವಿವಾದ ವಿಷಯ. ಸಂಸ್ಕೃತ ಸಾಹಿತ್ಯದ ಪರಿಚಯ ರಾಜಮ್ಮನವರಿಗೆ ಆದದ್ದೂ ಇವರಿಂದಲೇ.

ರಾಜಮ್ಮನವರ ತಂದೆಯ ಮನೆಯವರು ತುಳಸೀತೋಟದ ಮನೆಯಲ್ಲಿದ್ದಾಗ ಅಲ್ಲಿನ ನಾಟಕ ಮಂದಿರದಲ್ಲಿ ಶಿರಹಟ್ಟಿ ಕಂಪೆನಿಯ ನಾಟಕಗಳು ನಡೆಯುತ್ತಿದ್ದವು. ಈ ಕಂಪೆನಿಯವರು ವೆಂಕಟಾಚಾರ್ಯರ ನಾಟಕಗಳನ್ನು ಅಭಿನಯಿಸುತ್ತಿದ್ದರು. ಮನೆಯವರಿಗೆಲ್ಲ ಈ ನಾಟಕಗಳಲ್ಲಿ ಆಸಕ್ತಿ. ಇದೇ ಸಂದರ್ಭದಲ್ಲಿ ಟಿ.ಪಿ. ಕೈಲಾಸಂ ಅವರ ಪರಿಚಯವೂ ಈ ಪರಿವಾರಕ್ಕೆ ಲಭಿಸಿತು.

ಇಷ್ಟರಲ್ಲಿ ತಾತಾಚಾರ್ಯರು ಇಂಟರ್ ಮೀಡಿಯಟ್‌ವರೆಗೆ ಓದಿ ಮದರಾಸಿನಲ್ಲಿ ಶಾಸನ ಇಲಾಖೆಯಲ್ಲಿ ಕೆಲಸಕ್ಕೆ ಸೇರಿದರು. ಅವರ ಕನ್ನಡ ಭಾಷಾಜ್ಞಾನ ಅಸಾಧಾರಣವಾಗಿತ್ತು. ರಾಜಮ್ಮನೂ ಪತಿಯೊಡನೆ ವಾಸಿಸಲು ಮದರಾಸಿಗೆ ಹೋದರು. ಅಷ್ಟರಲ್ಲಾಗಲೇ ಸ್ವಾತಂತ್ರ್ಯ ಚಳವಳಿ, ಅದಕ್ಕೆ ಹಿನ್ನೆಲೆಯಾಗಿ ಸಮಾಜ ಸುಧಾರಣೆಯ ಕಾರ್ಯಗಳು ದೇಶಾದ್ಯಂತ ಆರಂಭವಾಗಿದ್ದವು. ಆ ಸಂದರ್ಭದಲ್ಲಿ ಈ ವಿಷಯಗಳಿಗೆ ಸಂಬಂಧಿಸಿದ ಅನೇಕ ಭಾಷಣಗಳನ್ನು ದೇಶದ ಮುಖಂಡರಿಂದ ರಾಜಮ್ಮನವರು ಕೇಳಿದರು. ಅವುಗಳಿಂದ ಪ್ರಭಾವಿತರೂ ಆದರು. ಇದರ ಪರಿಣಾಮವಾಗಿ, ಬಾಲ್ಯ ವಿವಾಹ ನಿಷೇಧ, ಬಾಲ ವಿಧವೆಯರ ಪುನರ್ವಿವಾಹ ಈ ವಸ್ತುವನ್ನುಳ್ಳ ಮನಕಲಕುವ ಮೂರಂಕದ ಒಂದು ನಾಟಕ ರಚಿಸಿದರು. ಬಹುಶಃ ಇದೇ ರಾಜಮ್ಮನವರ ಮೊದಲ ರಚನೆ. ನಾಟಕದ ಹೆಸರು 'ಸುಖಮಾರ್ಗ'. ಅಂದಿನ ಅಮೆಚೂರ್ ನಾಟಕ ಸಂಘದವರು ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಈ ನಾಟಕಕ್ಕೆ ಬಹುಮಾನವೂ ಬಂತು.

ಈ ಮಧ್ಯೆ ರಾಜಮ್ಮನವರಿಗೆ ಮೈಸೂರಿನ ಪ್ರಖ್ಯಾತ ವೈಣಿಕರಾದ ಶೇಷಣ್ಣನವರಿಂದ ವೀಣೆ ಪಾಠವನ್ನು ಮುಂದುವರಿಸುವ ಅವಕಾಶವೂ ದೊರೆಯಿತು. ಮೊದಲೇ ಪಳಗಿದ್ದ ಕೈ ಶೇಷಣ್ಣನವರ ಶೈಲಿಯನ್ನು ಶೀಘ್ರವಾಗಿ ರೂಢಿಸಿಕೊಂಡಿತು.

ಮದ್ರಾಸಿನಲ್ಲಿದ್ದಾಗಲೇ ರಾಜಮ್ಮನವರು ಮೊಟ್ಟಮೊದಲ ಬಾರಿಗೆ ಗಾಂಧೀಜಿಯವರನ್ನು ಕಂಡರು. ಅವರೊಳಗೆ ಸುಪ್ತವಾಗಿದ್ದ ದೇಶಪ್ರೇಮ ಗಾಂಧೀಜಿಯವರ ದರ್ಶನದಿಂದ ಜಾಗೃತಗೊಂಡಿತು.

ಶರ್ಮರು ನಡೆಸುತ್ತಿದ್ದ 'ವಿಶ್ವ ಕರ್ಣಾಟಕ' ಪತ್ರಿಕೆಗೆ ರಾಜಮ್ಮನವರು ನೀಡುತ್ತಿದ್ದ ನೆರವು ಅಸಾಧಾರಣವಾದುದು. ಪತ್ರಿಕೆಯಲ್ಲಿ ಪ್ರಕಟವಾದ ತಪ್ಪುಗಳನ್ನು ತಿದ್ದಿ, ಸಂಪಾದಕರ ಮೇಜಿನ ಮೇಲೆ ಇಡುತ್ತಿದ್ದರು. ಅದನ್ನು ನೋಡಿದ ಕೂಡಲೇ ಸಂಪಾದಕರಿಗೆ ತಮ್ಮ ತಪ್ಪಿನ ಅರಿವಾಗುತ್ತಿತ್ತು.

ಸರಕಾರದವರು ಪತ್ರಿಕೆಗೆ ಸಾಕಾಗುವಷ್ಟು ಕಾಗದ ಕೊಡುತ್ತಿರಲಿಲ್ಲ. ಅಲ್ಪಸ್ವಲ್ಪ ಕೊಡುತ್ತಿದ್ದರು. ಮಿಕ್ಕುದನ್ನು ಒಂದಕ್ಕೆರಡು ಬೆಲೆ ಕೊಟ್ಟು ಕಾಳಸಂತೆಯಲ್ಲಿ ಕೊಂಡು ತರಬೇಕಾಗುತ್ತಿತ್ತು. ಕಾಗದ ಬರುವುದು ತಡವಾದರೆ ಪತ್ರಿಕೆ ಸಕಾಲದಲ್ಲಿ ಹೊರಡುತ್ತಿರಲಿಲ್ಲ. ಒಮ್ಮೆ ಹಣಕ್ಕೆ ವಿಪರೀತ ಅಡಚಣೆಯಾದಾಗ ರಾಜಮ್ಮನವರು ತಮ್ಮ ಕೈಯಲ್ಲಿದ್ದ ಚಿನ್ನದ ಬಳೆಗಳನ್ನೇ ತೆಗೆದು ವ್ಯವಸ್ಥಾಪಕರ ಕೈಯ್ಯಲ್ಲಿಟ್ಟು "ಕೂಡಲೇ ಹೋಗಿ, ಇದನ್ನು ಮಾರಿಯೋ, ಒತ್ತೆ ಇಟ್ಟೋ, ಹಣ ತಂದು ಕಾಗದ ಕೊಂಡು ಪತ್ರಿಕೆಯನ್ನು ಹೊರಡಿಸಿ" ಎಂದರು. ಶರ್ಮರು ತಮ್ಮ ಪತ್ನಿಯ ಈ ತ್ಯಾಗವನ್ನು ಕೃತಜ್ಞತೆಯಿಂದ ಜ್ಞಾಪಿಸಿಕೊಳ್ಳುತ್ತಿದ್ದರು.

ವಿವಾಹಕ್ಕೆ ಮುಂಚಿನಿಂದಲೂ ನೆಂಟಸ್ತಿಕೆ ಇದ್ದೇ ಇತ್ತು. 'ನಮ್ಮಿಬ್ಬರದೂ ಒಂದೇ ಮನೆತನ, ನಮ್ಮಿಬ್ಬರ ಸಂಸ್ಕಾರ ಒಂದೇ, ನಮ್ಮಿಬ್ಬರ ಆದರ್ಶಗಳೂ ಒಂದೇ" ಎಂದು ಶರ್ಮರು ಆಗಾಗ ಹೇಳಿಕೊಳ್ಳುತ್ತಿದ್ದರು. ಕ್ರಾಂತಿಕಾರಿ ಜೀವನವನ್ನು ನಡೆಸಿದ ಟಿ.ಟಿ. ಶರ್ಮರಿಗೆ ಅವರ ಎಲ್ಲ ಕೆಲಸಗಳಿಗೆ ಚೇತನ ಕೊಡುವ ಪತ್ನಿಯಾಗಿದ್ದರು ರಾಜಮ್ಮನವರು. ಈ ಆದರ್ಶಪತ್ನಿಗೆ ತಕ್ಕ ಪತಿ ಶರ್ಮರು. ನಾನಾಮುಖ ಪ್ರತಿಭೆಗಳಿಂದ ಶೋಭಿಸುವ ರಾಜಮ್ಮನವರ ಎಲ್ಲ ಕೆಲಸಗಳಿಗೂ ಸ್ಫೂರ್ತಿಯನ್ನು ನೀಡುವ ಶಕ್ತಿಯಾಗಿದ್ದರು ಶರ್ಮರು. "ನನ್ನ ವೈಯಕ್ತಿಕ ಜೀವನದಲ್ಲಾಗಲೀ, ವೃತ್ತಿಯಲ್ಲಾಗಲೀ ಅಪೂರ್ವ ಪ್ರಭಾವ ಬೀರಿದವರು ನನ್ನ ಪತ್ನಿಯೇ" ಎಂದು ಸ್ವತಃ ಶರ್ಮರೇ ಹೇಳಿಕೊಂಡಿದ್ದಾರೆ.

ಈ ಅಪರೂಪದ ದಂಪತಿಗಳಿಗೆ ಮೂರು ಜನ ಮಕ್ಕಳು. ಮೊದಲ ಮಗಳು ಜಯಮ್ಮ, ಎರಡನೆಯ ಮಗ ಶ್ರೀರಂಗಾಚಾರ್ಯ, ಮೂರನೆಯ ಮಗ ವೆಂಕಟಾಚಾರ್ಯ (ಬಾಪೂ). ವಿವಾಹಿತಳಾಗಿ, ಒಂದು ಮಗುವಿನ ತಾಯಿಯೂ ಆಗಿದ್ದ ತಮ್ಮ ಒಬ್ಬಳೇ ಮಗಳು 1949ರಲ್ಲಿ ಅಕಾಲ ಮೃತ್ಯುವಿಗೆ ಈಡಾದದ್ದು ರಾಜಮ್ಮನವರಿಗೆ ಭರಿಸಲಾರದ ಸಂಕಟವನ್ನು ತಂದೊಡ್ಡಿತು. ಅಂತಹ ದುಃಖವನ್ನು ಸಹಿಸುವ ಶಕ್ತಿಯನ್ನು ಅವರಿಗೆ ಕೊಟ್ಟುದು ಬಹುಶಃ ಸಂಗೀತ-ಸಾಹಿತ್ಯಗಳೇ.

## 2

ಸಂಖ್ಯೆಯ ದೃಷ್ಟಿಯಿಂದ ನೋಡಿದರೆ ತಿರುಮಲೆ ರಾಜಮ್ಮನವರ ಪ್ರಕಟಿತ ಕೃತಿಗಳು ಆರೇ. "ಹತ್ತು ಕಟ್ಟುವಲ್ಲಿ ಒಂದು ಮುತ್ತು ಕಟ್ಟು" ಎನ್ನುವಂತೆ ಅವರ ಒಂದೊಂದು ಕೃತಿಯೂ ಸತ್ವಯುಕ್ತವಾದುದು. ಅಲ್ಲದೆ ಪ್ರಕಟವಾಗದೆ ಉಳಿದಿರುವ ಲೇಖನಗಳೂ, ಹಾಡುಗಳೂ ಸಾಕಷ್ಟಿವೆ.

ರಾಜಮ್ಮನವರ ಜೀವನವನ್ನು ಪರಿಶೀಲಿಸಿದಾಗ ಹೆಚ್ಚಿನ ಶಾಲಾ ಶಿಕ್ಷಣವಿಲ್ಲದ ಈಕೆ ಸಾಹಿತ್ಯರಂಗದಲ್ಲಿ ಇಂತಹ ಸಮರ್ಥ ಬರಹಗಾರ್ತಿ ಹೇಗಾದರೆಂದು ಆಶ್ಚರ್ಯವಾಗುತ್ತದೆ. ಸಾಹಿತ್ಯದಲ್ಲೂ ಈಕೆ ಆರಿಸಿಕೊಂಡಿದ್ದು ನಾಟಕ, ಗೀತೆ ಹಾಗೂ ಪ್ರಬಂಧಗಳು. ಈ ಪ್ರಕಾರಗಳಲ್ಲಿ ಅದರಲ್ಲೂ ನಾಟಕದಲ್ಲಿ ಈಗಲೂ ಲೇಖಕಿಯರ ಸಂಖ್ಯೆ ಬೆರಳೆಣಿಕೆಯಷ್ಟು ಇಲ್ಲವೆಂಬುದನ್ನು ನೆನೆದಾಗ ಇನ್ನಷ್ಟು ಅಚ್ಚರಿ ಎನ್ನಿಸುತ್ತದೆ.

ರಾಜಮ್ಮನವರ ಮಾತೃಭಾಷೆ ತೆಲುಗು. ಮಾತಾಡುವುದಷ್ಟೇ ಅಲ್ಲದೆ ತೆಲುಗಿನಲ್ಲಿ ಓದಿ ಬರೆಯಲೂ ರಾಜಮ್ಮ ಸಮರ್ಥರಾಗಿದ್ದರು. ಮೊದಲ ತೆಲುಗು ಸಾಹಿತ್ಯವನ್ನು ಚೆನ್ನಾಗಿ ಓದಿಕೊಂಡರು. ಅದರಲ್ಲೂ ಪ್ರಸಿದ್ಧ ದೇಶಭಕ್ತ ಸಾಹಿತಿ ಎನಿಸಿಕೊಂಡಿದ್ದ 'ವೀರೇಶಲಿಂಗಂ' ಅವರ ಸಾಹಿತ್ಯವನ್ನು ಓದಿ ಮೆಚ್ಚಿಕೊಂಡರು. ಕ್ರಮೇಣ ದೇಶಭಾಷೆಯಾದ ಕನ್ನಡದಲ್ಲೂ ಆಸಕ್ತಿ ಮೂಡಿತು. ಆ ಕಾಲದ ಪ್ರಸಿದ್ಧ ಕಾದಂಬರಿಕಾರರಾದ ವೆಂಕಟಾಚಾರ್ಯ, ಗಳಗನಾಥ ಮುಂತಾದವರ ಕಾದಂಬರಿಗಳನ್ನು ಓದಿ ಕನ್ನಡದಲ್ಲಿ ಪ್ರಭುತ್ವ ಪಡೆದರು. ಪತಿ ಟಿ.ಟಿ. ಶರ್ಮರು ಕನ್ನಡಾಭಿಮಾನಿಯಾಗಿದ್ದುದೂ ಇವರ ಕನ್ನಡ ಕಲಿಕೆಗೆ ಕಾರಣವಾಗಿರಬಹುದು.

ಸಂಗೀತದಂತೆಯೇ ರಾಜಮ್ಮನವರಿಗೆ ಸಾಹಿತ್ಯದಲ್ಲೂ ಚಿಕ್ಕಂದಿನಿಂದಲೇ ಪರಿಶ್ರಮವಿತ್ತು. ಅವರು ತಮ್ಮ 18ನೆಯ ವಯಸ್ಸಿನಲ್ಲಿಯೇ ರವೀಂದ್ರನಾಥ ಠಾಕೂರರ 'ದೃಢಪ್ರತಿಜ್ಞೆ' ಎನ್ನುವ ನಾಟಕವನ್ನು ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಿದರು.

1919ರಲ್ಲಿ ಅಂದರೆ ರಾಜಮ್ಮನವರಿಗೆ 19 ವರ್ಷವಾಗಿದ್ದಾಗ 'ಸುಖಮಾರ್ಗ' ಎನ್ನುವ ಮೂರಂಕದ ಸ್ವತಂತ್ರ ನಾಟಕವನ್ನು ರಚಿಸಿದರು. ಬೆಂಗಳೂರಿನ ಅಮೆಚೂರ್ ನಾಟಕ ಸಂಘದವರು ಕನ್ನಡದಲ್ಲಿ ಹೊಸ ನಾಟಕವನ್ನು ಬರೆಸುವ ಉದ್ದೇಶದಿಂದ ನಾಟಕ ಬರೆಯುವ ಸ್ಪರ್ಧೆಯನ್ನು ಏರ್ಪಡಿಸಿದರು. ಅದರ ಫಲವಾಗಿ ಅನೇಕ ಒಂದಂಕದ ಮತ್ತು ಮೂರಂಕದ ನಾಟಕಗಳು ಸ್ಪರ್ಧೆಗೆ ಬಂದವು. ಇವುಗಳಲ್ಲಿ ಕೈಲಾಸಂ ಅವರ 'ಟೊಳ್ಳು-ಗಟ್ಟಿ' ನಾಟಕಕ್ಕೆ ಏಕಾಂಕ ನಾಟಕಗಳಿಗೆ ಮೀಸಲಾದ ಬಹುಮಾನಗಳಲ್ಲಿ ಮೊದಲನೆಯ ಬಹುಮಾನ ಬಂದಿತು. ಮೂರಂಕ ನಾಟಕಗಳ ಸ್ಪರ್ಧೆಯಲ್ಲಿ ರಾಜಮ್ಮನವರ 'ಸುಖಮಾರ್ಗ'ಕ್ಕೂ ಕೆ. ಭೀಮರಾವ್ ಎನ್ನುವವರ 'ಪೃಥ್ವೀರಾಜ' ಎನ್ನುವ ಐತಿಹಾಸಿಕ ನಾಟಕಕ್ಕೂ ಮೊದಲ ಬಹುಮಾನದ ಹಣವನ್ನು ಸಮನಾಗಿ ಹಂಚಲಾಯಿತು. ಆದರೆ ರಾಜಮ್ಮನವರ ಮೊದಲಿನ ಈ ಎರಡು ನಾಟಕಗಳೂ ಅಚ್ಚಾಗಿರುವಂತೆ ತೋರುವುದಿಲ್ಲ.

ಗಾಂಧೀಜಿಯವರ ದರ್ಶನ, ಪರಿಚಯಗಳಿಂದ ಸ್ಫೂರ್ತಿಗೊಂಡ ಮೇಲೆ ರಾಜಮ್ಮನವರು ಹೆಚ್ಚು ಹೆಚ್ಚು ಗೀತೆಗಳನ್ನು, ಮುಖ್ಯವಾಗಿ ದೇಶಭಕ್ತಿ ಗೀತೆಗಳನ್ನು ರಚಿಸಲಾರಂಭಿಸಿದರು. ಅವರು ಹೀಗೆ ರಚಿಸಿದ ಮೊದಲ ಗೀತೆ 'ದೇಶ ಸೇವಾ ನಿರತರಾಗ್ಯೆ ಲೋಗರೇ' ಎಂಬುದು. ಅನಂತರ ಅವರು ನೂರಾರು ಗೀತೆಗಳನ್ನು ರಚಿಸಿದರು. ಇವುಗಳಲ್ಲಿ 1942ರ 'ಭಾರತ ಬಿಟ್ಟು ತೊಲಗಿ' ಚಳವಳಿಯ ಸಂದರ್ಭದಲ್ಲಿ ರಚಿತವಾದ 'ರಾಷ್ಟ್ರಶಕ್ತಿಯ ವಿರಾಡ್ರೂಪಧಾರೀ ನಮೋ', ಉಪ್ಪಿನ ಸತ್ಯಾಗ್ರಹಕ್ಕೆ ಸಂಬಂಧಪಟ್ಟ 'ಸತ್ಯ ಸಂಗ್ರಾಮ ರಂಗಕೆ ಬನ್ನಿ ಬನ್ನಿ', ದೇಶಸ್ವತಂತ್ರವಾದ ಬೆಳಗ್ಗೆ ರಚಿಸಿದ 'ನಿದ್ದೆ ತಿಳಿದೆಚ್ಚರು' ಮುಂತಾದವು ಪ್ರಸಿದ್ಧವಾದ ಹಾಡುಗಳು. 'ಜೈ ಭಾರತ ಭುವಿಗೇ ಮಾತೆಗೆ' ಎನ್ನುವ ಹಾಡು ಆ ದಿನಗಳಲ್ಲಿ ಶಾಲೆಯ ಪ್ರಾರ್ಥನಾ ಗೀತೆಯಾಗಿ ವಿದ್ಯಾರ್ಥಿಗಳ ಬಾಯಲ್ಲಿ ನಲಿಯುತ್ತಿತ್ತು. ಇವಲ್ಲದೆ ಗಾಂಧೀಜಿಯವರಿಗೆ ಅತಿ ಪ್ರಿಯವಾಗಿದ್ದ 'ವೈಷ್ಣವ ಜನತೋ ತೇನೇ ಕಹಿಯೇ' ಎಂಬ ಹಾಡನ್ನು 'ವೈಷ್ಣವನವನೇ ನಿಜವೀ ಜಗದಿ' ಎಂದು ಕನ್ನಡಕ್ಕೆ ಅನುವಾದಿಸಿ ಅದನ್ನು ಗಾಂಧೀಜಿಯವರ ಮುಂದೆ ಹಾಡಿ ಅವರಿಂದಲೇ ಶಹಬಾಸ್‌ಗಿರಿಯನ್ನು ಪಡೆದಿದ್ದರು ರಾಜಮ್ಮನವರು. ಸ್ವತಃ ಸಂಗೀತಗಾರ್ತಿಯಾಗಿದ್ದರಿಂದ ಹಾಡಿಗನುಕೂಲವಾದ ಶಬ್ದಗಳನ್ನು ಜೋಡಿಸಿ, ಭಾವಕ್ಕೆ ತಕ್ಕ ರಾಗವನ್ನು ಜೋಡಿಸಿ ಸುಂದರವಾದ ಗೀತೆಗಳನ್ನು ರಚಿಸುವುದು ರಾಜಮ್ಮನವರಿಗೆ ಸುಲಭವಾಗಿತ್ತು.

'ರಾಷ್ಟ್ರಭಕ್ತಿ', 'ರಾಷ್ಟ್ರಶಕ್ತಿ' ಎಂಬ ಎರಡು ಸಂಕಲನಗಳಲ್ಲಿ ರಾಜಮ್ಮನವರ ಹಾಡುಗಳು ಸಂಗ್ರಹಿತವಾಗಿವೆ. ಇವೆರಡರಲ್ಲೂ ಸೇರಿ

ಸುಮಾರು 100 ಹಾಡುಗಳು ಪ್ರಕಟವಾಗಿವೆ. ಇವಲ್ಲದೆ ಇನ್ನೂ 20 ರಷ್ಟು ಹಾಡುಗಳು ಪ್ರಕಟವಾಗದೆ ಉಳಿದಿವೆ. ಜೊತೆಗೆ 'ಜ್ವಾಲಾಮುಖಿ' ಮತ್ತು 'ವೇದನ ನಿವೇದನ' ಎಂಬ ನೀಳ್ಗವನಗಳನ್ನು ಇವರು ರಚಿಸಿದ್ದಾರೆ.

'ಆರ್ಯ ಕೈಲಾಸಂ' ಮತ್ತು 'ವೀಣೆ ಶೇಷಣ್ಣ' ಭಾರತಿಯವರು ರಚಿಸಿದ ಎರಡು ಜೀವನ ಚಿತ್ರಗಳು. ಈ ಇಬ್ಬರು ಮಹನೀಯರು ರಾಜಮ್ಮನವರಿಗೆ ಆತ್ಮೀಯರಾಗಿದ್ದವರು. ವೀಣೆ ಶೇಷಣ್ಣನವರು ಅವರಿಗೆ ವೀಣಾವಾದನ ಕಲಿಸಿದ ಗುರುಗಳು. ಅವರ ಬಗ್ಗೆ ತುಂಬಾ ಗೌರವದಿಂದ ರಾಜಮ್ಮನವರು ಬರೆದಿದ್ದಾರೆ, ಜೊತೆಗೆ ಅವರು ಪಾಠ ಕಲಿಸುತ್ತಿದ್ದ ರೀತಿಯನ್ನೂ ವರ್ಣಿಸಿದ್ದಾರೆ.

ಕೈಲಾಸಂ ಭಾರತಿಯವರ ಕುಟುಂಬದವರಿಗೆಲ್ಲ ಆತ್ಮೀಯರಾದ ಬಂಧುವಿನಂತಿದ್ದರು. ರಾಜಮ್ಮನವರು ಕೈಲಾಸಂ ಅವರಲ್ಲಿ ಅಣ್ಣನನ್ನು ಕಂಡುಕೊಂಡವರು. ಅವರಿಗೆ ಕೈಲಾಸಂ ಅವರಲ್ಲಿ ಅಪಾರ ಅಭಿಮಾನ. ಬಾಹ್ಯಚರ್ಯೆಯಲ್ಲಿ ಅವರು ಹೇಗಾದರೂ ಇರಲಿ, ಅಂತರಂಗದ ನೈರ್ಮಲ್ಯದ ಕಡೆ ಗಮನಹರಿಸಿದರೆ ಕೈಲಾಸಂ ಋಷಿಗಳ ಪರಂಪರೆಯಲ್ಲಿ ಬಂದವರು ಎನ್ನುತ್ತಾರೆ ರಾಜಮ್ಮನವರು. ಅದಕ್ಕೆ ಅವರು 'ಆರ್ಯ' ಎನ್ನುವ ಗೌರವಕ್ಕೆ ಪಾತ್ರರಾದರು.

'ಆರ್ಯ ಕೈಲಾಸಂ' ಕೇವಲ 51 ಪುಟಗಳ ಪುಟ್ಟ ಪುಸ್ತಕ. ವಿಚಿತ್ರ ವ್ಯಕ್ತಿತ್ವದ ಕೈಲಾಸಂ ಅವರನ್ನು ಅರ್ಥಮಾಡಿಕೊಳ್ಳಬಯಸುವವರಿಗೆ ಒಂದು ಕೈಪಿಡಿಯಂತಿದೆ. ಕೈಲಾಸಂ ಅವರಂತಹ ಅದ್ಭುತ ವ್ಯಕ್ತಿಯನ್ನು ಜೀವಂತ ನಿಲ್ಲಿಸುವಂತಹ ಅನುಭವಗಳಿಂದ ಕೂಡಿದೆ ಈ ಬರಹ.

ಭಾರತಿಯವರಿಗೆ ವಿಶೇಷವಾಗಿ ಕೀರ್ತಿಯನ್ನು ತಂದುಕೊಟ್ಟಿದ್ದು ಅವರ ನಾಟಕಗಳು. ಅವೇ 'ತಪಸ್ವಿನಿ', 'ಮಹಾಸತಿ', 'ವಾತ್ಸಲ್ಯ ತರಂಗ ಲೀಲಾ' ಈ ಮೂರು ನಾಟಕಗಳು 'ಭಾರತೀರೂಪಕತ್ರಯೀ' ಎನ್ನಿಸಿಕೊಂಡಿವೆ.

1931ರಲ್ಲಿ 'ತಪಸ್ವಿನಿ' ನಾಟಕ ಪುಸ್ತಕ ರೂಪದಲ್ಲಿ ಪ್ರಕಟವಾಯಿತು. ಲಕ್ಷ್ಮಣ ಶ್ರೀರಾಮ ಸೀತೆಯರೊಂದಿಗೆ ವನವಾಸಕ್ಕೆ ಹೋದಾಗ ಆಗ ಅಯೋಧ್ಯೆಯಲ್ಲಿಯೇ ಉಳಿದಿದ್ದ ಊರ್ಮಿಳೆ ಏನು ಮಾಡಿರಬಹುದು? ಅವಳು ತನ್ನ ಪತಿಯನ್ನೇ ನಿರೀಕ್ಷಿಸುತ್ತಾ ತಪಸ್ವಿನಿಯಾಗಿ ಕಾಲಕಳೆದಳು ಎನ್ನುತ್ತಾರೆ ರಾಜಮ್ಮನವರು. ಇದೇ ವಸ್ತುವನ್ನೊಳಗೊಂಡಿದೆ ಅವರ ಈ ನಾಟಕ. ಬಿಡಿ ವೃತ್ತವನ್ನು ಉಪಯೋಗಿಸಿ ಈ ಕಾವ್ಯವನ್ನು ರಚಿಸಲಾಗಿದೆ.

ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯುತ್ತ ಡಾ. ಮಾಸ್ತಿವೆಂಕಟೇಶ ಅಯ್ಯಂಗಾರ್ಯರು ಹೇಳುತ್ತಾರೆ: "ಇಂಥ ವೃತ್ತವನ್ನು ಬರೆಯುವುದರಲ್ಲಿ ಶ್ರೀಮತಿ ರಾಜಮ್ಮನವರು ಅಸಾಧಾರಣವಾದ ಕುಶಲತೆಯನ್ನು ತೋರಿದ್ದಾರೆ. ಕನ್ನಡ ಬಿಡಿ ವೃತ್ತದ ರೂಪು ನಿಯಮಿತವಾಗುವುದಕ್ಕೆ ಈ ಕಾವ್ಯದಿಂದ ಬಹಳ ಸಹಾಯಕವಾಗುವುದೆಂಬುದರಲ್ಲಿ ಸಂದೇಹವಿಲ್ಲ. ಇಲ್ಲಿ ಸಹಜವಾದ ಕಾವ್ಯದೃಷ್ಟಿಯೂ, ಸರಳವಾದ ಕಾವ್ಯಶಕ್ತಿಯೂ ಸೇರಿ ಸುಂದರವಾದ ಒಂದು ಕಾವ್ಯವನ್ನು ನಿರ್ಮಾಣ ಮಾಡಿದೆ."

ಮಾಸ್ತಿಯಂತಹವರಿಂದ ಇಂತಹ ಪ್ರಶಂಸೆಯನ್ನು ಪಡೆಯುವುದು ಸಾಮಾನ್ಯ ವಿಚಾರವಲ್ಲ.

'ತಪಸ್ವಿನಿ' ನಾಟಕಕ್ಕೆ ಮೈಸೂರು ವಿಶ್ವವಿದ್ಯಾಲಯದ ಬಹುಮಾನವೂ ದೊರೆಯಿತು.

ಟಿ.ಟಿ. ಶರ್ಮರು ಮದರಾಸಿನಲ್ಲಿ ಪುರಾತನ ಶಾಸನಗಳ ಅನ್ವೇಷಣೆ, ಅಧ್ಯಯನ, ಸಂಶೋಧನೆ ನಡೆಸುವ ಪ್ರಾಕ್ತನ ಸಂಶೋಧನಾ ಇಲಾಖೆಯಲ್ಲಿ ಕೆಲಸಕ್ಕೆ ಸೇರಿದರು. ಅವರ ಜೊತೆಯಲ್ಲಿ ಇತಿಹಾಸ ಹಾಗೂ ಪುರಾಣ ಪ್ರಸಿದ್ಧವಾದ ಊರುಗಳನ್ನು ಸುತ್ತುವ, ಅಲ್ಲಿನ ಸ್ಥಳ ಮಹಿಮೆಯನ್ನು ತಿಳಿಸುವ ಶಾಸನಗಳನ್ನು, (ವೀರಗಲ್ಲು, ಮಾಸ್ತಿಗಲ್ಲುಗಳನ್ನು) ಕಾಣುವ ಅವಕಾಶ ರಾಜಮ್ಮನವರಿಗೆ ಒದಗಿತು. ಇದರ ಫಲವಾಗಿ ಮೂಡಿಬಂದ ನಾಟಕ : 'ಮಹಾಸತಿ'.

ಚೋಳರಾಜನ ಅಧೀನದಲ್ಲಿ ನವಿಲನಾಡಿನೊಡೆಯ ಏಚನ ಹೆಂಡತಿ ದೇಕಬ್ಬೆ (ನುಗು ನಾಡಿನ ಅರಸುಕುವರಿ) ಇಲ್ಲಿನ ಮಹಾಸತಿ. ರಾಜನ ಆಜ್ಞೆಯನ್ನು ಉಲ್ಲಂಘಿಸಿ ಏಚನು ಮಲ್ಲಯುದ್ಧದಲ್ಲಿ ತನ್ನ ದಾಯಾದಿ ಎರೆಯಂಗನನ್ನು ಕೊಲ್ಲಲು, ರಾಜ ಸಿಟ್ಟಿಗೆದ್ದು ಏಚನಿಗೆ ಮರಣದಂಡನೆ ವಿಧಿಸುತ್ತಾನೆ. ಈ ಸುದ್ದಿಯನ್ನು ಕೇಳಿದ ದೇಕಬ್ಬೆ ಸಹಗಮನ ಮಾಡಲು ನಿಶ್ಚಯಿಸಿ ಏಚನ ದೇಹವನ್ನು ಜೊತೆಗಿಟ್ಟುಕೊಂಡು ಮಹಾವೈಭವದಿಂದ ಸಹಗಮನ ಮಾಡುತ್ತಾಳೆ. 'ಮಹಾಸತಿ' ರೂಪಕಕ್ಕೆ ಇದೇ ವಸ್ತು. 1956ರಲ್ಲಿ ಈ ನಾಟಕ ಪ್ರಕಟವಾಯಿತು. ಅಂದಿನ ಅನೇಕ ವಿದ್ವಾಂಸರಿಂದ ಈ ನಾಟಕ ಪ್ರಶಂಸೆಗಳಿಸಿತು. ಈ ನಾಟಕಕ್ಕೆ ಕನ್ನಡದ ಪ್ರಸಿದ್ಧ ಸಾಹಿತಿ ಪ್ರೊ. ವಿ. ಸೀತಾರಾಮಯ್ಯನವರು ಮುನ್ನುಡಿ ಬರೆದಿದ್ದಾರೆ.

ಭಾರತೀ ರೂಪಕತ್ರಯಿಯಲ್ಲಿನ ಮೂರನೆಯ ರೂಪಕ 'ವಾತ್ಸಲ್ಯ ತರಂಗ ಲೀಲಾ'. ಈ ನಾಟಕವನ್ನು ಭಾರತಿಯವರು ತಮ್ಮ ಇಳಿ ವಯಸ್ಸಿನಲ್ಲಿ ರಚಿಸಿದರು. ಕಾಳಿದಾಸ ಮಹಾಕವಿಯ ಶಾಕುಂತಲ ನಾಟಕದ ಹಿನ್ನೆಲೆಯಲ್ಲಿ ಈ ರೂಪಕ ರಚಿತವಾಗಿದೆ. ಮೇನಕೆ ವಿಶ್ವಾಮಿತ್ರನಿಂದ ಹೆಣ್ಣುಮಗುವನ್ನು ಪಡೆಯುತ್ತಾಳೆ. ದೇವಕಾರ್ಯ ಮುಗಿದಿದ್ದರಿಂದ ದೇವಲೋಕಕ್ಕೆ ಹಿಂತಿರುಗುವಂತೆ ದೇವೇಂದ್ರ ಮೇನಕೆಗೆ ನಿರೂಪ ಕಳುಹಿಸುತ್ತಾನೆ. ಮಗುವನ್ನು ಬಿಟ್ಟು ಹೋಗಲಾರದೆ ಮೇನಕೆ ತೊಳಲಾಡುತ್ತಾಳೆ. ಕೊನೆಗೆ ಬಿಟ್ಟು ಹೋಗಲೇಬೇಕಾಗುತ್ತದೆ. ಮೇನಕೆಯ ಮನಸ್ಸಿನ ತೊಳಲಾಟವನ್ನು ಭಾರತಿಯವರು ತುಂಬಾ ಮನೋಜ್ಞವಾಗಿ ಚಿತ್ರಿಸಿದ್ದಾರೆ. ದೇವಗಣಿಕೆ ಯಾದರೇನು? ತಾಯಿ ತಾಯಿಯೇ! ಪ್ರಬಲವಾದ ಶಕ್ತಿಗೆ ಮಣಿದು ತಾನು ಹೆತ್ತ ಮಗುವನ್ನು ಬಿಟ್ಟು ಹೊರಡುವಾಗ ಆ ತಾಯಿ ಕೊರಗದಿರುವುದು ಸಾಧ್ಯವೇ? ಈ ಭಾವನೆಯೇ ಈ ರೂಪಕಕ್ಕೆ ಪ್ರೇರಣೆ. ಈ ಭಾವನೆಯಿಂದಾಗಿ ಮೇನಕಾ ಪ್ರಸಂಗಕ್ಕೆ ಒಂದು ಹೊಸ ತಿರುವು ಬಂದಿದೆ.

ಒಟ್ಟಿನಲ್ಲಿ ಪ್ರೊಫೆಸರ್ ಎಸ್.ಕೆ. ರಾಮಚಂದ್ರರಾವ್ ಅವರು ಹೇಳುವಂತೆ: 'ಭಾರತೀ ರೂಪಕತ್ರಯ' ನಮ್ಮನ್ನು ಮೂರು ಲೋಕಗಳಿಗೊಯ್ಯುತ್ತದೆ. 'ತಪಸ್ವಿನಿ'ಯಲ್ಲಿ ಲಕ್ಷ್ಮಣನ ಮಡದಿ ಊರ್ಮಿಳೆಯ ಉದಾತ್ತ ಆದರ್ಶ, 'ಮಹಾಸತಿ'ಯಲ್ಲಿ ನಾಡಿನ ಮರ್ಯಾದೆಗಾಗಿ ಸತಿಯು ಮಾಡುವ ಬಲಿದಾನ, ಮೂರನೆಯದರಲ್ಲಿ ದೇವಮಾನವರ ಸಂಕಲ್ಪದಿಂದ ಮಾನವ ಶಿಶು ತಿವಿದೆಬ್ಬಿಸುವ ಮಾತೃವಾತ್ಸಲ್ಯದ ತರಂಗಲೀಲೆ. ಅನುಭವದ ಆಳದಿಂದ, ಭಾವನೆಗಳ ಬುಗ್ಗೆಯಿಂದ ಹೊರಬಂದಿರುವ ಈ ಮೂರು ರೂಪಕಗಳೂ ಮನೋಜ್ಞವಾದವು, ಹೃದ್ಯವಾದವು."

ಈ ಪ್ರಕಟಿತ ಕೃತಿಗಳಲ್ಲದೆ ರಾಜಮ್ಮನವರ ಅನೇಕ ಹಾಡುಗಳು, ಲೇಖನಗಳು ಪುಸ್ತಕರೂಪದಲ್ಲಿ ಪ್ರಕಟವಾಗದೆ ಉಳಿದಿವೆ. ಇವರ ಅಪ್ರಕಟಿತ

ಕೃತಿಗಳಲ್ಲಿ 'ಜ್ವಾಲಾಮುಖಿ', 'ವೇದನ-ನಿವೇದನ' ಎಂಬ ನೀಳ್ಗವನಗಳು, 'ದುಂದುಭಿ', 'ಉನ್ಮತ್ತಭಾಮಿನಿ' ಎಂಬ ಕಿರುನಾಟಕಗಳು ಪ್ರಸಿದ್ಧವಾಗಿವೆ.

ಅಗ್ನಿಪರ್ವತಗಳು ಸಿಡಿದೆದ್ದಾಗ ಪ್ರಕೃತಿ ಮಾತೆಯ ಭೀಕರ ರೂಪ ಅದೆಂದು ಕಲ್ಪಿಸಿಕೊಂಡು ಶಾಂತಳಾಗೆಂದು ದೇವಿಯಲ್ಲಿ ಬೇಡುವ ಕವಿತೆ 'ಜ್ವಾಲಾಮುಖಿ'. ಇದರಲ್ಲಿ 36 ಪದ್ಯಗಳಿವೆ. ಪ್ರತಿ ಪದ್ಯಕ್ಕೂ ಆದಿಪ್ರಾಸವಿದ್ದು ನಾಲ್ಕು ಸಾಲುಗಳಿವೆ.

'ವೇದನ-ನಿವೇದನ'ದ ವಸ್ತು ದೈವದ ಅಸ್ತಿತ್ವವನ್ನು ನಂಬಿ, ಒಳಿತು-ಕೆಡಕುಗಳಲ್ಲಿ ಶ್ರದ್ಧೆ ಹೊಂದಿರುವ ಭಕ್ತಿ ಸ್ತೋತ್ರಗಳಿಂದ ಆದಿಮೂಲವನ್ನು ಸ್ತುತಿಸಿದ ಜೀವ, ದೇವನಿಂದ ಯಾವ ಬಗೆಯ ಪ್ರತಿಕ್ರಿಯೆಯೂ ಕಾಣದಿದ್ದಾಗ ರೋಸಿ ನುಡಿದ ಮಾತುಗಳಿವು. ಒಂದು ರೀತಿಯ ನಿಂದಾಸ್ತುತಿ. ಇದರಲ್ಲಿ 65 ಪದ್ಯಗಳಿವೆ.

ಭಾರತಿಯವರು ಆಗಾಗ ರಚಿಸಿದ ಲೇಖನಗಳು ತಮ್ಮದೇ ಆದ ವೈಶಿಷ್ಟ್ಯದಿಂದ ಇಂದಿಗೂ ಸ್ಫೂರ್ತಿದಾಯಕವಾಗಿವೆ. 'ಮರೆಯಲಾಗದ ಬಾಪೂ'ವಿನಲ್ಲಿ ಗಾಂಧೀಜಿಯವರ ಬಗ್ಗೆ ಭಕ್ತಿ, ಅಭಿಮಾನ ತುಂಬಿದ ಬರಹ ತುಂಬಿದ್ದರೆ, ವಾಸುದೇವಾಚಾರ್ಯರ 'ನೆನಪುಗಳು', ಪು.ತಿ.ನ. ಅವರ ಕೃತಿ 'ಅಹಲ್ಯೆ', ಗೀತಕಾರ ಜಯದೇವ ಇಂತಹ ಲೇಖನಗಳಲ್ಲಿ ಸಹೃದಯ ವಿಮರ್ಶೆಯಿದೆ. ಅವರ 'ಸ್ತ್ರೀ ವಿದ್ಯಾಭ್ಯಾಸ', 'ಶ್ರೀರಾಮನ ಪತ್ನೀ ಪ್ರೇಮ' ಇಂತಹ ಲೇಖನಗಳಲ್ಲಿ ಭಾರತಿಯವರ ಪ್ರಗತಿಪರ ಧೋರಣೆಯನ್ನು ಗುರುತಿಸಬಹುದಾಗಿದೆ. ಸಂಗೀತಕ್ಕೆ ಸಂಬಂಧಿಸಿದ 'ಸಂಗೀತ ಸ್ವರೂಪ' ಮುಂತಾದ ಲೇಖನಗಳಲ್ಲಿ ಸಂಗೀತದ ಬಗ್ಗೆ ಅವರಿಗಿರುವ ಆಳವಾದ ಜ್ಞಾನ ಗೋಚರವಾಗುತ್ತದೆ. ವಸ್ತುವೈವಿಧ್ಯದಿಂದ ಕೂಡಿದ ರಾಜಮ್ಮನವರ ಲೇಖನಗಳೆಲ್ಲ ಒಂದು ಸಂಕಲನದಲ್ಲಿ ದೊರೆಯುವಂತಾದರೆ ಅದೊಂದು ಉತ್ತಮ ಸಂಗ್ರಹವಾಗುವುದರಲ್ಲಿ ಸಂದೇಹವಿಲ್ಲ.

ಭಾರತಿ ಅವರು ತಮ್ಮ ಸಮಕಾಲೀನ ಸಾಹಿತಿಗಳಿಂದ, ಸಂಗೀತಗಾರರಿಂದ ಆದರ, ಗೌರವಗಳನ್ನು ಪಡೆದಿದ್ದವರು. ದೇಶಾಭಿಮಾನಿಗಳು, ಸಾಹಿತಿಗಳು, ಸಂಗೀತಗಾರರು ಅವರ ಮನೆಗೆ ಭೇಟಿ ಕೊಡುವುದು ಸಾಮಾನ್ಯವಾಗಿತ್ತು. ಈ ಎಲ್ಲರೊಂದಿಗೆ ಮಾತುಕತೆಗಳಲ್ಲಿ ಭಾಗವಹಿಸಿ ಅವರು ಅಪಾರ ಲೋಕಜ್ಞಾನವನ್ನು ಸಂಪಾದಿಸಿದ್ದರು. ಹಾಗೆಯೇ ಆ ಎಲ್ಲ ಹಿರಿಯರಿಂದ ಆತ್ಮೀಯತೆಯನ್ನು ಪಡೆದುಕೊಂಡಿದ್ದರು. ಈ ಮಾತಿಗೆ ಡಾ. ದ.ರಾ. ಬೇಂದ್ರೆಯವರ ಒಂದು ಕವನವನ್ನೇ ಸಾಕ್ಷಿಯಾಗಿ ಉದಾಹರಿಸಬಹುದು :

> ಭಾವಕ್ಕೆ ತಕ್ಕ ತಾಲವೂ ರಾಗವೂ ಉಂಟು
> ಭಾರತದ ಏಳಿಗೆಗೆ ಯಾವುದೋ ಕೃತಕೃತ್ಯ
> 'ಭಾರತಿ'ಯ ಬಾಳುವೆಗೆ ಆ ನಡಿಗೆಯ ನೃತ್ಯ
> ಸಾಹಿತ್ಯ ಸಂಗೀತ ಸಹಜವಾಗಿದೆ ನಂಟು.

ರಾಜಮ್ಮನವರು 1943ರಲ್ಲಿ ಶಿವಮೊಗ್ಗೆಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಮಹಿಳಾ ಗೋಷ್ಠಿಯ ಅಧ್ಯಕ್ಷೆಯಾಗಿದ್ದರು. ಆಗ ಅವರು ಮಾಡಿದ ಭಾಷಣ ವಿದ್ವತ್ಪೂರ್ಣವೂ, ವಿಚಾರಯುಕ್ತವೂ ಆಗಿದ್ದು ಗಣ್ಯರ ಮೆಚ್ಚುಗೆ ಗಳಿಸಿತು.

1968ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ರಾಜಮ್ಮನವರಿಗೆ ದೊರೆಯಿತು.

1972ರಲ್ಲಿ ತಿರುಮಲೆ ರಾಜಮ್ಮನವರನ್ನು ರಾಜ್ಯಮಟ್ಟದಲ್ಲಿ ಸನ್ಮಾನಿಸಲು ಅಭಿಮಾನಿಗಳಿಂದ ಕೂಡಿದ ಒಂದು ಸನ್ಮಾನ ಸಮಿತಿ ರಚಿತವಾಯಿತು. ರಾಜಮ್ಮನವರಿಗೆ ಸನ್ಮಾನ ಮಾಡುವ ಸುದ್ದಿ ತಿಳಿದಾಗ ಹಿರಿಯ ಸಾಹಿತಿಗಳಿಂದ, ಸಂಗೀತಗಾರರಿಂದ, ದೇಶದ ಅನೇಕ ಗಣ್ಯರಿಂದ ಬಂದ ಪ್ರತಿಕ್ರಿಯೆ ಅಸಾಧಾರಣವಾದುದು.

"ರಾಜಮ್ಮನವರು ಸಾಹಿತ್ಯ, ಸಂಗೀತ, ದೇಶಭಕ್ತಿಗಳ ತ್ರಿವೇಣಿ ಸಂಗಮ."

"ಅರ್ಧ ಶತಮಾನಕ್ಕೂ ಹೆಚ್ಚು ಕಾಲದಿಂದ ಸಾಹಿತ್ಯ, ಸಂಗೀತ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವ ರಾಜಮ್ಮನವರ ಕೃತಿಗಳು ಸಂಖ್ಯೆಯಲ್ಲಿ ಕಡಿಮೆಯಾದರೂ ಮೌಲ್ಯದ ದೃಷ್ಟಿಯಿಂದ ಹೆಚ್ಚಿನವು."

'ಭಾರತಿ' ಕಾವ್ಯನಾಮ ಇವರಿಗೆ ಅನ್ವರ್ಥವಾಗಿದೆ."

"ಇಂಥ' ಮಹಿಳೆ ಯಾವ ನಾಡು ನುಡಿಗಾದರೂ ಭೂಷಣ. ಇಂತಹವರನ್ನು ಸನ್ಮಾನಿಸಬೇಕಾದುದು ನಾಡಿನವರ ಕರ್ತವ್ಯ."

ಈ ಸಂದರ್ಭದಲ್ಲಿ ಪ್ರಕಟವಾಗಲಿದ್ದ ಅಭಿನಂದನ ಗ್ರಂಥಕ್ಕೂ ಇದೇ ಅಭಿಮಾನದಿಂದ ನಾಡಿನ ಹಿರಿಯರು, ಕಿರಿಯರು ಲೇಖನಗಳನ್ನು ಬರೆದುಕೊಟ್ಟರು. ಹಿರಿಯ ಸಾಹಿತಿಗಳಾದ ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರ ಅಧ್ಯಕ್ಷತೆಯಲ್ಲಿ 1972 ನವೆಂಬರ್ 19ರಂದು ಬೆಂಗಳೂರಿನ ಪುರಭವನದಲ್ಲಿ ರಾಜಮ್ಮನವರನ್ನು ವೈಭವದಿಂದ ಸನ್ಮಾನಿಸಲಾಯಿತು. ಇದೇ ಸಂದರ್ಭದಲ್ಲಿ 'ಭಾರತಿ' ಅಭಿನಂದನ ಗ್ರಂಥವನ್ನು ಇವರಿಗೆ ಸಮರ್ಪಿಸಲಾಯಿತು (ಸಂಪಾದಕಿ: ಎಚ್.ಎಸ್. ಪಾರ್ವತಿ).

ಇದಲ್ಲದೆ ಪತ್ರಿಕೆಗಳಲ್ಲಿ, ಆಕಾಶವಾಣಿಯಲ್ಲಿ ಹಲವಾರು ಬಾರಿ ಇವರ ಸಂದರ್ಶನಗಳು ಪ್ರಕಟವಾಗಿವೆ.

ಮೊದಲಿನಿಂದಲೂ ರಾಜಮ್ಮನವರ ದೇಹಸ್ಥಿತಿ ಅಷ್ಟಕ್ಕಷ್ಟೇ. ಆಗಾಗ ಖಾಯಿಲೆಯಿಂದ ನರಳುತ್ತಿದ್ದರು. ಆದರೆ ಅವರ ಮನಶ್ಶಕ್ತಿ ಮಾತ್ರ ಅಸಾಧಾರಣವಾದದ್ದು. ಆಕಾರ ಪುಟ್ಟದಾದರೂ ಅದರೊಳಗಿದ್ದುದು ದೃಢವಾದ ಮನಸ್ಸು. ದೇಶಾಭಿಮಾನ, ಭಾಷಾಭಿಮಾನಗಳು ಅವರಿಗೆ ರಕ್ತಗತವಾಗಿ ಬಂದಿದ್ದವು.

'ಭಾರತಿ' ಯವರಂತಹವರ ಜೀವನವೇ ಲೋಕಕ್ಕೊಂದು ಸಂದೇಶ. ಜೊತೆಗೆ ಅವರ ಕೃತಿಗಳು ಅವರ ಸಂದೇಶವನ್ನು ಸಾರುವಲ್ಲಿ ಸಮರ್ಥವಾಗಿವೆ.

❑

# ಸೇಡಿಯಾಪು ಕೃಷ್ಣಭಟ್ಟರು

ಪ್ರೊ. ಎಮ್.ರಾಮಚಂದ್ರ

೨೦೦೦ದಿಗೆ ಸುಮಾರು ಹತ್ತು ವರ್ಷಗಳ ಹಿಂದಿನ ಘಟನೆ : 26 ಜನವರಿ, 1990- ದಕ್ಷಿಣ ಕನ್ನಡದ ಕಾರ್ಕಳದ ಶ್ರೀ ಭುವನೇಂದ್ರ ಕಾಲೇಜಿನಲ್ಲಿ ಒಂದು ವಿಶಿಷ್ಟವಾದ ಸಮಾರೋಹ-ಶ್ರೀ ಸೇಡಿಯಾಪು ಕೃಷ್ಣಭಟ್ಟರ ತೈಲಚಿತ್ರವನ್ನು ಅನಾವರಣಗೊಳಿಸುತ್ತ ಅವರ ಸಮ ವಯಸ್ಕರೇ ಆಗಿದ್ದ ಡಾ|| ಶಿವರಾಮಕಾರಂತರು ಹೇಳಿದರು:

"ಪರಿಚಿತರೆಂದರೆ ಹೀಗಿರುತ್ತಾರೆ ಎಂದು ನಾನು ಸಂತೋಷದಿಂದ ಬೆರಳೆತ್ತಿ ತೋರಬಹುದಾದವರು ಕೃಷ್ಣಭಟ್ಟರು. ಅವರ ವೇಷ ಭೂಷಣ ಗಳಂತೆಯೇ ಅವರ ನಡೆನುಡಿ. ನಿರ್ಮಲ ವ್ಯಕ್ತಿತ್ವದ ವಿದ್ವಾಂಸ ಸೇಡಿಯಾಪು."

ಆರು ವರ್ಷಗಳ ಅನಂತರ 8 ಜೂನ್, 1996ರಂದು ಸೇಡಿಯಾಪು ಕೃಷ್ಣಭಟ್ಟರು ಕಾಲವಶರಾದರು. ಆಗ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳಲ್ಲು, ಅಲ್ಲಲ್ಲಿ ಜರುಗಿದ ಸಂತಾಪ ಸಂಸ್ಮರಣ ಸಭೆಗಳಲ್ಲಿ ಕಾಣಿಸಿದ, ಕೇಳಿಬಂದ ವಿಶೇಷಣಗಳು ಹೀಗೆ: ' ಪಾಂಡಿತ್ಯತವನಿಧಿ', 'ಕನ್ನಡದ ಕಾವ್ಯಾಯನ', 'ಕಾಲವಶರಾದ ಪಾರ್ಶ್ವಚೇತನ', 'ಸಾಹಿತ್ಯದ ಮೇರು', ಪಂಡಿತ ಪಂಕ್ತಿಯಲ್ಲಿ ಶಿಖರ ಸದೃಶ' ಪರಿಚಿತ 'ಪರಂಪರೆಯ ಸಾರ್ವಕಾಲಿಕ ಪ್ರತಿನಿಧಿ' ಇತ್ಯಾದಿ, ಇತ್ಯಾದಿ.

ಶ್ಲಾಘನೆಯನ್ನು ಕಾರಂತರ ಲೇಖನ, ಭಾಷಣಗಳ ಉದ್ಗಾರಗಳನ್ನು ಕ್ರೋಢೀಕರಿಸಿದಾಗ ಸೇಡಿಯಾಪು ಕೃಷ್ಣಭಟ್ಟರ ಒಂದು ಸಮಗ್ರಚಿತ್ರ ಮನಃಪಟಲದಲ್ಲಿ ಸ್ಪಷ್ಟವಾಗುತ್ತದೆ. ಪಂಡಿತರಾದ ಅವರದು ಶುಭ್ರಸುಂದರ ವ್ಯಕ್ತಿತ್ವ, ಉದ್ದಾಮ ಪಾಂಡಿತ್ಯ.

ಸೇಡಿಯಾಪು ಕೃಷ್ಣಭಟ್ಟರು ಜನಿಸಿದ್ದು ಹಿಂದಿನ (ಈಗ ಬಂಟ್‌ವಾಳ) ಪುತ್ತೂರು ತಾಲೂಕಿನ ವಿಟ್ಲ ಪೇಟೆಗೆ ಹತ್ತಿರದ ಸೇಡಿಯಾಪು ಎಂಬ ಹಳ್ಳಿಯಲ್ಲಿ, ಜೂನ್8,1902ರಲ್ಲಿ. ಅವರ ತಂದೆ ರಾಮಭಟ್ಟರು, ತಾಯಿ ಮೂಕಾಂಬಿಕೆ ಅಮ್ಮ. ಬಾಲ್ಯದಲ್ಲಿ ದುರ್ಬಲ ದೇಹಾರೋಗ್ಯ, ಕೌಮಾರ್ಯ ದಲ್ಲೇ ಪಿತೃವಿಯೋಗ ಮತ್ತು ಅನಾನುಕೂಲ ಗೃಹಸ್ಥಿತಿಗಳಿಂದ ಕೃಷ್ಣಭಟ್ಟರ ಶೈಕ್ಷಣಿಕ ಜೀವನ ಸುಗಮವಾಗಲಿಲ್ಲ, ಪೂರ್ಣವೂ ಆಗಲಿಲ್ಲ. ಹಳ್ಳಿ ಶಾಲೆಯಲ್ಲಿ ಕಾಗುಣಿತವನ್ನು ಕಲಿತು, ಪುತ್ತೂರು ಬೋರ್ಡ್ ಹೈಸ್ಕೂಲಲ್ಲಿ ಒಂಭತ್ತನೆಯ ತರಗತಿಯ ತನಕ ಓದಿದರು. - ಆ ಹೊತ್ತಿಗಾಗಲೇ ದೇಶಸ್ವಾತಂತ್ರ್ಯದ ಆಂದೋಲನ ಮಹಾಪೂರವಾಗಿ ಹಳ್ಳಿ ಹಳ್ಳಿಗೂ ನುಗ್ಗಿತ್ತು, ಗಾಂಧೀಜಿಯ ಶಾಂತವ್ಯಕ್ತಿತ್ವ ಆಬಾಲವೃದ್ಧರನ್ನೂ ಆಕರ್ಷಿಸಿತ್ತು. ಗಾಂಧೀಜಿಯ ಕರೆ ಕೃಷ್ಣಭಟ್ಟರ ಕಿವಿದೆರೆಗೆ ದೊಡ್ಡದಾಗಿ ಬಡಿಯಿತು. ಸಾಗುತ್ತಿದ್ದವರನ್ನು ನಿಲ್ಲಿಸುವುದಕ್ಕೆ ತಕ್ಕುದಾದ ಸಂದರ್ಭ ಸನ್ನಿಹಿತವಾಯಿತು- ಶಾಲೆಯಿಂದ ಹೊರಬಂದರು: ಅದೊಂದು 'Respectful exit' ಎಂದು ಅವರೇ ಹೇಳಿದ್ದಾರೆ!

ಶಾಲೆ ಬಿಟ್ಟ ಕೃಷ್ಣಭಟ್ಟರು ನೇರವಾಗಿ ಸ್ವಾತಂತ್ರ್ಯಸಮರದ ಮಹಾಪೂರಕ್ಕೆ ದುಮುಕಲಿಲ್ಲ-ಕಾರಣ ಅವರ ಅನಾರೋಗ್ಯ: ಮನಸ್ಸು ನುಗ್ಗುತ್ತಿತ್ತು. ಆದರೆ ದುರ್ಬಲ ದೇಹಸ್ಥಿತಿ ಮನಸ್ಸಿಗೆ ಮೂಗುದಾರ ಹಾಕಿ ತಡೆಯುತ್ತಿತ್ತು. ಆದುದರಿಂದ ತಮ್ಮೂರಲ್ಲೇ ಖಾದಿ ಪ್ರಚಾರ ಇತ್ಯಾದಿ- ಗಾಂಧೀಜಿಗೆ ಪ್ರಿಯವಾಗಿದ್ದ ವಿಧಾಯಕ ಕಾರ್ಯಗಳಲ್ಲಿ ನಿರತರಾದರು. ಜತೆಗೆ ಮನೆಯಲ್ಲೇ ಓದನ್ನು ಮುಂದುವರಿಸಿದರು. ಹಳ್ಳಿ ಶಾಲೆಯಲ್ಲಿ ಮಾಸ್ತರಿಕೆಯನ್ನು ಮಾಡಿದರು. ಈ ಮೂರರೊಂದಿಗೆ ಆಯುರ್ವೇದ ವೈದ್ಯಪದ್ಧತಿಯನ್ನು ಚೆನ್ನಾಗಿ ಅರಿತುಕೊಂಡರು. 1920ನೆಯ ದಶಕದ ಕೊನೆಯಲ್ಲಿ ಅವರು ಮಂಗಳೂರಿನಲ್ಲಿ ಸೇರಿ ಅಲ್ಲೊಂದು ದವಾಖಾನೆಯನ್ನು ತೆರದರು. ಅಲ್ಲಿ ಅವರಿಗೆ ಮಹಾಪಂಡಿತ ಮುಳಿಯ ತಿಮ್ಮಪ್ಪಯ್ಯನವರ ಸಾಮೀಪ್ಯವೂ, ತರುಣ ಕವಿ ಕಡೆಂಗೋಡ್ಲು ಶಂಕರ ಭಟ್ಟರ ಸಹಚಾರ್ಯವೂ ಒದಗಿದುವು. ಮದ್ದಿನಂಗಡಿಯಲ್ಲಿ ಕುಳಿತೇ ಕನ್ನಡ- ಸಂಸ್ಕೃತಗಳಲ್ಲಿ ಪ್ರಭುತ್ವವನ್ನು ಪಡೆದ ಕೃಷ್ಣಭಟ್ಟರು ಮದರಾಸು ಸರಕಾರದ ನಡೆಯಿಸುತ್ತಿದ್ದ 'ವಿದ್ವಾನ್' ಪರೀಕ್ಷಾ ಪಾರಂಗತರಾದರು. ಆ ಪದವಿಯ ಬಲದಿಂದ ಅವರಿಗೆ ಮಂಗಳೂರು ಸೆಂಟ್ ಅಲೋಸಿಯಸ್ ಹೈಸ್ಕೂಲಲ್ಲಿ ಅಧ್ಯಾಪಕ ವೃತ್ತಿ ಲಭಿಸಿತು. ಸುಮಾರು ಇಪ್ಪತ್ತು ವರ್ಷಗಳಲ್ಲಿ ಕನ್ನಡ ಪಂಡಿತರಾಗಿದ್ದ ಕೃಷ್ಣಭಟ್ಟರು 1950ರಲ್ಲಿ ಅಲೋಸಿಯಸ್ ಕಾಲೇಜಿನಲ್ಲಿ ಕನ್ನಡ 'ಟ್ಯೂಟರ್' ಆಗಿ ನಿಯುಕ್ತರಾದರು, ಮುಂದೆ 'ಲೆಕ್ಚರರ್' ಸ್ಥಾನಾರೂಢರಾದರು. 1957ರಲ್ಲಿ, ಅನಾರೋಗ್ಯ ಕಾರಣವಾಗಿ, ಅವಧಿ ಪೂರ್ವದಲ್ಲೇ ಅಧ್ಯಾಪನ ನಿವೃತ್ತರೂ ಆದರು. ಕೇವಲ ಹೈಸ್ಕೂಲು ಒಂಭತ್ತನೆಯ ತರಗತಿಯವರೆಗೆ ಮಾತ್ರ ಓದಿ, 'ಫೋರ್ಥ್ ಫಾರ್ಮ್ ಪೋಸ್ಟ್ ಗ್ರಾಜುಯೇಟ್ ಡಿಗ್ರಿ' ಹಿಡಿದು ಹೈಸ್ಕೂಲಿನಿಂದ ಹೊರಬಂದವರಾಗಿದ್ದರೂ ಅಧ್ಯಾಪಕನಾಗಿಯೇ ಕಾಲೇಜ್ ಮೆಟ್ಟಿಲನ್ನು ಏರಿದುದು ಕೃಷ್ಣಭಟ್ಟರ ಒಂದು ವಿಶೇಷತೆ !

ಸೇಡಿಯಾಪು ಕೃಷ್ಣಭಟ್ಟರದು ಸ್ವಯಂ ನಿರ್ಮಿತವಾದ ವ್ಯಕ್ತಿತ್ವ. ಜನ್ಮಯುಕ್ತವಾದ ಅನಾರೋಗ್ಯದಿಂದಾಗಿ ಅವರು ಕ್ರಮಬದ್ಧವಾಗಿ ಶಿಕ್ಷಣವನ್ನೆ ಪಡೆಯಲಾಗಲಿಲ್ಲ. ಆದರೆ ಬಾಲ್ಯದಿಂದಲೇ ತೀವ್ರವಾದ ಅಧ್ಯಯನ ಪ್ರೀತಿ, ಸ್ವತಂತ್ರವಾದ ಚಿಂತನಾಸಕ್ತಿ ಮತ್ತು ಅಸ್ಖಲಿತವಾದ ಸ್ಮರಣ ಶಕ್ತಿಗಳನ್ನು ಅವರು ಹೊಂದಿದ್ದುದರಿಂದ ತಮ್ಮಲ್ಲಿ ವಯಸ್ಸಿಗೆ ಮೀರಿದ ವೈದುಷ್ಯವನ್ನು ಸಂಪಾದಿಸಿದರು. ಮದುವೆಯೋ ಮುಂಜಿಯೋ ಮುಂತಾದ ಶುಭ ಶೋಭನ ಪ್ರಸಂಗಗಳಲ್ಲಿ ಅವರ ಓರಗೆಯವರೆಲ್ಲ ಹರಟೆ ಹೊಡೆಯುವುದರಲ್ಲೋ ಊಟ ಮಾಡುವುದರಲ್ಲೋ ತೃಪ್ತರಾಗುತ್ತಿದ್ದರೆ ಕೃಷ್ಣಭಟ್ಟರು ಯಾವುದಾದರೂ ಘನವಾದ ಗ್ರಂಥವನ್ನು ಓದುವುದರಲ್ಲಿ ಇಲ್ಲವೇ ತಮಗಿಂತ ಹಿರಿಯರೊಂದಿಗೆ ಗಂಭೀರ ವಿಚಾರಗಳನ್ನು ಚರ್ಚಿಸುವುದರಲ್ಲಿ ಮಗ್ನರಾಗುತ್ತಿದ್ದರು. ಅವರು ಈ ಗುಣ ಸ್ವಭಾವಗಳನ್ನು ತಮ್ಮ ಜೀವಿತಪೂರ್ತಿಯಾಗಿ ಉಳಿಸಿಕೊಂಡು ಬಂದರು. ಅನಾರೋಗ್ಯದಿಂದ ದೇಹವು ಜರ್ಝರಿತವಾಗಿ, ನೇತ್ರಪಾಟವ ಸಂಪೂರ್ಣ ನಷ್ಟವಾಗಿ ರುಗ್ಣ ಖಾಯಿಲೆಯಲ್ಲೇ ದಿನದ ಬಹುಭಾಗವನ್ನು ದೂಡಬೇಕಾಗಿ ಬಂದರೂ ಅಂತ್ಯಕಾಲದವರೆಗೂ ಅವರ ಚೇತನ ಶಕ್ತಿ ಹ್ರಸ್ವವಾಗಲೇ ಇಲ್ಲ. ಆರೋಗ್ಯ ತಕ್ಕ ಮಟ್ಟಿಗಿದ್ದು ಒಂದು ಕಣ್ಣಿನಲ್ಲಾದರೂ ಒಂದಿಷ್ಟು ಬೆಳಕಿದ್ದ ಅವಧಿಯಲ್ಲಿ ಕೃಷ್ಣಭಟ್ಟರು ಕುರ್ಚಿಯಲ್ಲಿ ಕುಳಿತು ಬರೆದು ಪ್ರಕಟಿಸಿದ ಪುಸ್ತಕಗಳೆಂದರೆ ಕೇವಲ ಮೂರು. ಆ ಮೇಲಿನ ಎಲ್ಲ ಗ್ರಂಥಗಳೂ ನಿಬಂಧಗಳೂ ಅವರು ಹಾಸುಗೆಯಲ್ಲಿ ಮಲಗಿಯೇ ಒಕ್ಕಣಿಸಿದ್ದು ಇಲ್ಲವೇ ಹೇಳಿ ಬರೆಯಿಸಿದ್ದು! ಅವರ ಒಟ್ಟು ಸಾಹಿತ್ಯ ವ್ಯವಸಾಯವನ್ನು ಕುರಿತು ಕೆಲವು ಮಾತುಗಳನ್ನು ಮುಂದೆ ಬರೆಯುತ್ತಿದ್ದೇನೆ:

ಸೇಡಿಯಾಪು ಕೃಷ್ಣಭಟ್ಟರ ಒಂದು ಲೇಖನಸೂತ್ರ ಇದೆ: ಅದನ್ನು ಅವರೇ ಪದ್ಯರೂಪದಲ್ಲಿ ಹೀಗೆ ಹೇಳಿದ್ದಾರೆ:

ಹೆಚ್ಚು ಬರೆದವನಲ್ಲ
ನಿಚ್ಚ ಬರೆವವನಲ್ಲ
ಮೆಚ್ಚಿಸಲು ಬರೆಯುವಭ್ಯಾಸವಿಲ್ಲ
ಇಚ್ಛೆಗೆದೆಯೊಪ್ಪಿ ಬಗೆ
ಬಿಚ್ಚಿದರೆ, ಕಣ್ಣೆ ಮಯ್
ವಿಚ್ಚುವಂದದಿ ತೀಡಿ ತಿದ್ದಿ ಬರೆವೆ.

ಕೃಷ್ಣಭಟ್ಟರು ತೊಂಭತ್ತೈದು ವರ್ಷಗಳ ತಮ್ಮ ಜೀವಿತಾವಧಿಯಲ್ಲಿ ಸುಮಾರು ಎಪ್ಪತ್ತು ವರ್ಷ ಸಾಹಿತ್ಯಕೃಷಿ ಮಾಡಿದರು- ಎಂದರೆ ಬರೆದರು ಅಥವಾ ಬರೆಯಿಸಿದರು. ಆದರೆ ಅದರ ರಾಶಿ ದೊಡ್ಡದಲ್ಲ.- ಶಾಸ್ತ್ರ, ಕಾವ್ಯ ಮತ್ತು ಕಥೆಗಳೂ ಸೇರಿದಂತೆ ಏಳು ಪುಸ್ತಕಗಳು; ಕೆಲವು ಧರ್ಮ ಪ್ರಬಂಧಗಳು ಮತ್ತು ಲೇಖನಗಳು; ಅವುಗಳೆಲ್ಲವೂ ಸೇರಿದರೆ ಒಂದು ಸಂಯುಕ್ತ ಸಂಪುಟ- ಇಷ್ಟೇ ಮೊತ್ತದಲ್ಲಿ ಹೆಚ್ಚಲ್ಲ, ಆದರೆ ಸತ್ವದಲ್ಲಿ ಅಚ್ಚ ಬಂಗಾರ.

ಸೇಡಿಯಾಪು ಕೃಷ್ಣಭಟ್ಟರ ಲೇಖನಕಾರ್ಯ ಪ್ರೌಢ'ಶಾಲಾ ವಿದ್ಯಾರ್ಥಿಯಾಗಿದ್ದಾಗಲೇ ಪ್ರಾರಂಭವಾಗಿತ್ತು. ಅಂದಿನ ಕಾಲಧರ್ಮದಂತೆ ಅವರೂ ಒಂದು ಇಂಗ್ಲೀಷ್ ಪದ್ಯ-Road after Motor- ಎಂಬುದನ್ನು ಹೊಸೆದಿದ್ದರು. ಆದರೆ ಗುರುಗಳಾದ ಉಗ್ರಾಣ ಮಂಗೇಶ ರಾಯರು ಅಂತಹ ಪ್ರಯತ್ನವನ್ನು ಪ್ರೋತ್ಸಾಹಿಸಲಿಲ್ಲ, ಕನ್ನಡದಲ್ಲೇ ಬರೆಯುವಂತೆ ಪ್ರೇರೇಪಿಸಿದರು. ಆಮೇಲೆ ಕೃಷ್ಣಭಟ್ಟರು ಲೇಖಕನಾಗಿ ಕನ್ನಡಿಗರಿಗೆ ಕಾಣಿಸಿದ್ದು ಕನ್ನಡಕುಲ ಪುರೋಹಿತ ಆಲೂರ ವೆಂಕಟರಾಯರ 'ಜಯಕರ್ನಾಟಕ'ದಲ್ಲಿ ಅವರು ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲಿ ಬರೆದ 'ಕರ್ನಾಟಕ ಕವಿತಾ ಪ್ರಪಂಚ' ವೆಂಬ ಲೇಖನ ಅಚ್ಚಾಯಿತು. ಬೆಳೆಯ ಗುಣವನ್ನು ಮೊಳಕೆಯಲ್ಲೇ ಗುರುತಿಸಿದ ವೆಂಕಟರಾಯರು, ಮುಂದೊಂದು ದಿನ ಕೃಷ್ಣಭಟ್ಟರನ್ನು ಕಂಡಾಗ, "ನಿಮ್ಮ ಲೇಖನ ಓದಿ ನಿಮ್ಮ ಅಭಿಪ್ರಾಯಗಳನ್ನು ಗಮನಿಸಿದಾಗ, ಪ್ರಾಯದಲ್ಲಿ ನೀವು ಇಷ್ಟು ಸಣ್ಣವರೆಂದು ತಿಳಿಯಲಿಲ್ಲ" ಎಂದು ಉದ್ಗರಿಸಿ, ಅವರನ್ನು ಆಲಂಗಿಸಿ ಆಶೀರ್ವದಿಸಿದರಂತೆ!

ಆದರೆ ನಿಜವಾದ ಸೇಡಿಯಾಪು ಕನ್ನಡ ಸಾರಸ್ವತಮೇಳದ ಮುಂದೆ ಅನಾವರಣಗೊಂಡದ್ದು 1932ರಲ್ಲಿ ಮಡಿಕೇರಿಯಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನದ ಉನ್ನತ ವೇದಿಕೆಯಲ್ಲಿ. ಧೀಮಂತ ಡಿ.ವಿ. ಗುಂಡಪ್ಪನವರ ಅಧ್ಯಕ್ಷತೆಯಲ್ಲಿ ಜರಗಿದ ಆ ಸಮ್ಮೇಳನದ ಗೋಷ್ಠಿಯೊಂದರಲ್ಲಿ ಕೃಷ್ಣಭಟ್ಟರು 'ಕನ್ನಡ ಛಂದಸ್ಸು' ಎಂಬ ದೀರ್ಘ ಪ್ರಬಂಧವನ್ನು ಓದಿದರು... ಆ ನಿಬಂಧ ಛಂದೋಲೋಕದಲ್ಲಿ ಒಂದು ನವದಿಗಂತವನ್ನು ತೆರೆಯಿತು. ಮೂವತ್ತರ ತರುಣನೊಬ್ಬನ ತಲಸ್ಪರ್ಶಿ ಶಾಸ್ತ್ರಜ್ಞಾನ, ಸ್ವೋಪಜ್ಞತೆ, ತರ್ಕಬದ್ಧ ವಿಚಾರ ಸರಣಿಗಳನ್ನು ಕಂಡು ತಿಳಿದ ಶ್ರೋತೃಜನ ಬೆರಗಾದರು, ಮೂಗಿನ ಮೇಲೆ ಬೆರಳೇರಿಸಿದರು. ಅಗಾಧವಾದ ಛಂದೋಂಬುಧಿಯಲ್ಲಿ ಕೃಷ್ಣಭಟ್ಟರು ಮಾಡಿದ ಅವಗಾಹನ, ನವಶೋಧನಗಳಿಂದ ಅನೇಕ ವಿದ್ವಾಂಸರು ತಮ್ಮ ಪೂರ್ವಾಭಿಪ್ರಾಯಗಳನ್ನು ಪರಾಮರ್ಶಿಸಿ, ಛಂದೋಗ್ರಂಥಗಳನ್ನು ಪರಿಷ್ಕರಿಸಬೇಕಾಯಿತು. 'ನಾನು ಕೃಷ್ಣಭಟ್ಟ ಎನಿಸಿದ್ದು ಕನ್ನಡ ಛಂದಸ್ಸಿನಿಂದ' ಎಂದು ಕೃಷ್ಣಭಟ್ಟರೇ ಹೇಳಿದ್ದಾರೆ.

ಹದಿನಾಲ್ಕು ವರ್ಷಗಳ ಅನಂತರ 1944ರಲ್ಲಿ, 'ಪ್ರಬುದ್ಧ ಕರ್ನಾಟಕ'ದ ದೀಪಾವಳಿ ಸಂಚಿಕೆಯಲ್ಲಿ ಕೃಷ್ಣಭಟ್ಟರ 'ಪಂಚಮೀ ವಿಭಕ್ತಿ' ಎಂಬ ಲೇಖನ ಪ್ರಚಾರವಾಯಿತು. ಪಂಚಮೀ ವಿಭಕ್ತಿ ಕನ್ನಡದಲ್ಲಿ ಇದೆಯೋ ಇಲ್ಲವೋ ಎಂಬ ಜಿಜ್ಞಾಸೆ ನಡೆಯುತ್ತಿದ್ದ ಆ ಕಾಲದಲ್ಲಿ ಕೃಷ್ಣಭಟ್ಟರು 'ಕನ್ನಡದಲ್ಲಿ ಪಂಚಮೀ ವಿಭಕ್ತಿ ಸಹಜವಾಗಿಯೇ ಇದೆ' ಎಂಬುದನ್ನು ಅನೇಕ ಆಧಾರಗಳಿಂದ ಪ್ರಬಲವಾಗಿ ಸಮರ್ಥಿಸಿ ನಿಸ್ಸಂದಿಗ್ಧವಾಗಿ ಸಾಧಿಸಿದರು. 'ಆ ಲೇಖನ ಭಾಷಾಭ್ಯಾಸಿಗಳ ದೃಷ್ಟಿ ಪಲ್ಲಟವಾಗಲು ಕಾರಣವಾಗಿದೆ' ಎಂದು ಡಾ. ರಂ. ಶ್ರೀ. ಮುಗಳಿಯವರಂತಹ ವಿದ್ವಾಂಸರೇ ಅದನ್ನು ಪುರಸ್ಕರಿಸಿದರು. ಈ ಎರಡು ಲೇಖನಗಳಿಂದಾಗಿ ಕನ್ನಡದ ವಿದ್ವದ್ವಲಯದಲ್ಲಿ ಕೃಷ್ಣಭಟ್ಟರಿಗೆ ಸಮಾನಿತವಾದ ಸ್ಥಾನ ಪ್ರಾಪ್ತವಾಯಿತು. ವ್ಯಾಕರಣ ಮತ್ತು ಛಂದಸ್ಸು ಈ ಎರಡು ಶಾಸ್ತ್ರಪ್ರಕಾರಗಳಲ್ಲೂ ಅವರಿಗೆ ಸಮಾನ ಆಸಕ್ತಿ ಮತ್ತು ಪ್ರಭುತ್ವ ಎಂಬುದೂ ಸ್ಥಾಪಿತವಾಯಿತು. ಪರಿಣಾಮವಾಗಿ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆ ಒಂದು ವಿಶೇಷ ಉಪನ್ಯಾಸ ಮಾಲಿಕೆಗಾಗಿ ಅವರನ್ನು ಆಮಂತ್ರಿಸಿತು. ಆ ಸಂಸ್ಥೆಯ ಆಶ್ರಯದಲ್ಲಿ 1950ರ ಅವಧಿಯಲ್ಲಿ ಕೃಷ್ಣಭಟ್ಟರು ಮಾಡಿದ ಮೂರು ಉಪನ್ಯಾಸಗಳು 'ಕನ್ನಡ ವರ್ಣಗಳು' ಎಂಬ ಶೀರ್ಷಿಕೆಯಲ್ಲಿ ಮುದ್ರಿತವಾಯಿತು. ಕನ್ನಡ ವರ್ಣಗಳ ನಿಜಸ್ವರೂಪ ಮತ್ತು ಉಚ್ಚಾರಕ್ರಮಗಳನ್ನು ತಮ್ಮ ಉಪನ್ಯಾಸಗಳಲ್ಲಿ ಸಕಾರಣವಾಗಿ ಮತ್ತು ಬುದ್ಧಿ ಸಮ್ಮತವಾಗುವಂತೆ ಪ್ರತಿಪಾದಿಸಿದ ಕೃಷ್ಣಭಟ್ಟರು ಆವರೆಗೆ ಶಕಟರೇಫ ಅಥವಾ ಬಂಡಿ 'ರ' ಎಂದು ನಿರ್ದೇಶಿತವಾಗುತ್ತಿದ್ದ ಒಂದು ವರ್ಗಕ್ಕೆ 'ಅಱ' ('ಅ' ದಂತಿರುವ 'ರ')ಎಂಬ ಉಚಿತವಾದ ಹೆಸರನ್ನು ನೀಡಿದರು.

ಸೇಡಿಯಾಪು ಕೃಷ್ಣಭಟ್ಟರು ಒಬ್ಬ ತಜ್ಞ ವೈಯಾಕರಣ, ಛಂದಶ್ಶಾಸ್ತ್ರಜ್ಞ ಮಾತ್ರವಲ್ಲ ಅವರೊಬ್ಬ ಸರಸಕವಿ ಮತ್ತು ಕಥನಕುಶಲಿ ಎಂಬುದನ್ನು ನಿದರ್ಶಿಸುವಂತೆ ಅವರ ಕೆಲವು ಕಾವ್ಯಗಳೂ ಕತೆಗಳೂ 1930 ಮತ್ತು 40ರ ದಶಕದಲ್ಲಿ ಪ್ರಕಟವಾದುವು. ಕಥನಕವನ ಅಥವಾ ಚರಿತ ಕಾವ್ಯದಲ್ಲಿ ಕೃಷ್ಣಭಟ್ಟರದು ಸಿದ್ಧಹಸ್ತವೆಂಬುದನ್ನು ಅವರ ತರುಣ ಧಮನಿ, ಅಶ್ವಮೇಧ ಕೃಷ್ಣಕುಮಾರಿ, ಪುಣ್ಯಲಹರಿಗಳೆಂಬ ನೀಳ್ಗವಿತೆಗಳು ಸಮರ್ಥಿಸುತ್ತವೆ. ಬೇರೆ ಬೇರೆ ಸಾಲುಗಳಲ್ಲಿ ಬಿಡಿಬಿಡಿಯಾಗಿ ಅಚ್ಚಾದ ಈ ಕಾವ್ಯಗಳು 1949ರಲ್ಲಿ 'ಕೆಲವು ಸಣ್ಣ ಕಾವ್ಯಗಳು' ಎಂಬ ಹೆಸರಲ್ಲಿ ಮಾತ್ರ ಸಂಗ್ರಹಗೊಂಡು ಪ್ರಕಟವಾದುವು. ವಸ್ತು, ನಿರೂಪಣಾಕ್ರಮ ಮತ್ತು ಛಂದೋಬಂಧಗಳಲ್ಲಿ ಅನನ್ಯವೂ ಆಗಿರುವ ನಾಲ್ಕು ಸಣ್ಣ ಕಾವ್ಯಗಳಲ್ಲಿ 'ಪುಣ್ಯಲಹರಿ ಅಥವಾ ಶಬರಿ' ಎಂಬುದು ರಾಮಾಯಣದ ಒಂದು ಹೃದಯಸ್ಪರ್ಶಿ ಸನ್ನಿವೇಶದಲ್ಲಿ, ವಿನೂತನವಾಗಿ, ಪರಿಚಿತನಾದ ಆದರೆ ಬಹುಪ್ರಾಚೀನವಾದ ಪಿರಿಯಕಾರವೆಂಬ ಛಂದಸ್ಸಿನಲ್ಲಿ ರಸನಿರ್ಭಾರವಾಗಿ ವರ್ಣಿತವಾಗಿದೆ. 'ಅಶ್ವಮೇಧ ಅಥವಾ ನಾಯಿಯ ಕತೆ' ಯೆಂಬುದು ಪ್ರಾಸರಹಿತ ಉತ್ಸಾಹರಗಳೆಯಲ್ಲಿರುವ ಕಥನಕಾವ್ಯಕ್ಕೆ ತನ್ನ ಒಡೆಯನಿಗಾಗಿ ಪ್ರಾಣವನ್ನೇ ಪಣಕ್ಕಿಟ್ಟ ಮತ್ತು ಅವನ ಕೈಯಿಂದಲೇ ಪ್ರಾಣವನ್ನು ಕಳಕೊಂಡ ನಾಯಿಯೊಂದರ ಸ್ವಾಮಿಭಕ್ತಿಯನ್ನು ಓದುಗನ ಕಣ್ಣೀರು ಕೋಡಿ ಹರಿಯುವಂತೆ ಚಿತ್ರಿಸಲಾಗಿದೆ. ನಾಯಿಗೆ 'ಅತಿಮಾನುಷತೆ' ಯನ್ನು ಆರೋಪಿಸದೆಯೇ ರಸಸೃಷ್ಟಿ ಮಾಡಿರುವುದು ಈ ಕಾವ್ಯದ ವೈಶಿಷ್ಟ್ಯ. 'ಕೃಷ್ಣಕುಮಾರಿ' ಎಂಬುದು ರಾಜಸ್ಥಾನದ ನಾರೀಮಣಿಯೊಬ್ಬಳ ವೀರಗಾಥೆ- ಅದೂ ಪ್ರಾಸರಹಿತ ಭಾಮಿನೀ ಷಟ್ಪದಿಯಲ್ಲಿ ಬಣ್ಣನೆಗೊಂಡು ಕರುಳನ್ನು ಹಿಂಡುತ್ತದೆ. ನಾಲ್ಕನೆಯದಾದ 'ತರುಣಧಮನಿ' ವಿಜಯನಗರದ ಕೊನೆಯ ದೊರೆ ರಾಮರಾಜ ಮತ್ತು ಮಿಹಿರೆಯೆಂಬವನ

ರಮಣೀಯ ಪ್ರಣಯ ಪ್ರಸಂಗವನ್ನು ವರ್ಣಿಸುವ ತರಲಗತಿಯ ಈ ಸರಸ ಕಾವ್ಯ. ಅದರಲ್ಲಿ ಶೃಂಗಾರರಸ ಮಡುಗಟ್ಟಿ ನಿಂತಿದೆ. ಆದರೆ ಅದು ಎಲ್ಲೂ ಅತಿಯೆನಿಸುವುದಿಲ್ಲ, ಅಶ್ಲೀಲವೂ ಆಗುವುದಿಲ್ಲ. ಪ್ರಾಚೀನ ಸಂಸ್ಕೃತ ಮಹಾ ಕಾವ್ಯಗಳ ಮಾದರಿಯಲ್ಲಿ ರೂಪಾಂತರಿತ ಶರ ಷಟ್ಪದಿಯಲ್ಲಿ ಕೃಷ್ಣಭಟ್ಟರು ಮಾಡಿದ ಒಂದು ಶ್ಲಾಘನೀಯ ಪ್ರಯತ್ನವೇ ಈ ಕಾವ್ಯಖಂಡ.

ಇಪ್ಪತ್ತು ವರ್ಷಗಳ ಅನಂತರ ಈ ನಾಲ್ಕು ನೀಳ್ಗವನಗಳೊಂದಿಗೆ ಕೃಷ್ಣಭಟ್ಟರು ಯಥಾವತ್ತಾಗಿ ಬರೆದ ಹದಿನೆಂಟು ಬಿಡಿಕವಿತೆಗಳನ್ನು ಸೇರಿಸಿ, 'ಚಂದ್ರಖಂಡ' ವೆಂಬ ಹೆಸರಲ್ಲಿ ಪ್ರಕಟಿಸಲಾಯಿತು. ಮುಂದೆ 1985ರಲ್ಲಿ ವಿಶ್ವಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ಅದು ಪುನರ್ಮುದ್ರಣ ಗೊಂಡಿತು. ಮತ್ತೆ 1994ರಲ್ಲಿ ಅದು ಪರಿವರ್ಧಿತವೂ ಅನುಬಂಧಿತವೂ ಆಗಿ ಅಚ್ಚಾಯಿತು. ಬೆಳಗಿನ ತಂಗಾಳಿ, ನೌಕೆಯಲೆನ್ನ ಕಾಳ್ಗಿರಿಸು, ತಣ್ಣನೆ ಹೊಯ್ಯಮ್ಮ, ದೀಪಕ್ಕೆ, ತುಳುನಾಡ ಹಾಡು, ಜಯ ಭಾರತಪುತ್ರನೇ ಮೊದಲಾದ ಹತ್ತಾರು ಭಾವಬಂಧುರ ಕವಿತೆಗಳನ್ನು ಈ ಸಂಕಲನದಲ್ಲಿ ಕಾಣುತ್ತೇವೆ.

ಸೇಡಿಯಾಪು ಕೃಷ್ಣಭಟ್ಟರು ರೋಚಕವಾದ ಕತೆಗಳನ್ನು ಬರೆಯಬಲ್ಲರೆಂಬುದನ್ನು ಅವರ 'ಪಳಮೆಗಳು' ಎಂಬ ಸಂಗ್ರಹವು ಪುಷ್ಟೀಕರಿಸುತ್ತದೆ. 'ಚಿನ್ನದ ಚೇಳು', 'ಚೆನ್ನಮಣೆ', 'ಧರ್ಮಮ್ಮ' ಮತ್ತು 'ನಾಗರಬೆತ್ತ' ವೆಂಬ ನಾಲ್ಕು ಕತೆಗಳು, ಯಾವುವೋ ಹೇಳಿಕೆಗಳನ್ನು ಹಿಡಿದು ಬರೆದವುಗಳು; ಕೆಲವು ಅಂಥವೋ ಅನುಭವವೋ ಆದ ವಿಶ್ವಾಸಗಳನ್ನವಲಂಬಿಸಿ ಬೆಳೆದವುಗಳು. ಇವುಗಳಲ್ಲಿ ಚಿತ್ರಿತವಾದ ಜೀವನ ಇಂದಿನದಲ್ಲ. ಆದುದರಿಂದ ಇವು "ಪಳಮೆಗಳು" ಎಂದು ಲೇಖಕ ಕೃಷ್ಣಭಟ್ಟರು ವಿವರಣೆಯನ್ನು ನೀಡಿದ್ದಾರೆ. ಆದರೆ ನಾಲ್ಕು ಕತೆಗಳ ವಸ್ತು ವೈವಿಧ್ಯ, ಕಥನಕೌಶಲ ಮತ್ತು ಭಾಷಾ ಸೌಂದರ್ಯಗಳಿಂದಾಗಿ ಅವು ಎಲ್ಲ ಕಾಲಕ್ಕೂ ಹೊಸ ಹೊಸತಾಗಿಯೇ ಉಳಿಯುತ್ತವೆ. ಓದುಗನ ರಸಜಿಹ್ವೆಗೆ ಬಗೆ ಬಗೆಯ ರುಚಿಗಳನ್ನು ಇಳಿಸುತ್ತವೆ. ನಾಲ್ಕು ಕತೆಗಳಿಗೆ ಅವುಗಳದೇ ಆಗಿರುವ ಸೊಗಸಿದ್ದರೂ 'ಚೆನ್ನಮಣೆ' ಮತ್ತು 'ನಾಗರಬೆತ್ತ' ಕನ್ನಡಕ್ಕೆ ಅತ್ಯುತ್ತಮ ಕಥೆಗಳೊಂದಿಗೆ ಸಮಾನ ಪಂಕ್ತಿ. 'ನಾಗರ ಬೆತ್ತ' ಇಂಗ್ಲೀಷಿಗೂ ಅನುವಾದಿತವಾಗಿ ಕೇಂದ್ರ ಸಾಹಿತ್ಯ ಅಕಾಡೆಮಿಯು ಪ್ರಕಟಿಸಿರುವ 'ಆ್ಯಂಥಾಲಜಿ'ಯೊಂದರಲ್ಲಿ ಸೇರಿದೆ. 1947ರಲ್ಲಿ ಮೊದಲಸಲ ಅಚ್ಚಾದ ಈ ಕತೆಗಳ ಕಟ್ಟು ಆಮೇಲೆ ಒಂಭತ್ತು ಸಲ ಮರು ಹುಟ್ಟುಗಳನ್ನು ಕಂಡಿದೆ ಎಂದರೆ ಕತೆಗಳ ಕಮನೀಯತೆ ಮನವರಿಕೆಯಾಗುತ್ತದೆ.

ದೈಹಿಕವಾದ ಅನಾರೋಗ್ಯ ಮತ್ತು ತೀವ್ರವಾದ ದೃಷ್ಟಿದೋಷಗಳಿಂದಾಗಿ ಕೃಷ್ಣಭಟ್ಟರು ಬರೆಯಬೇಕೆಂದು ಇದ್ದುದರಲ್ಲಿ ತಲೆಯಲ್ಲೇ ಉಳಿದದ್ದು ಹೆಚ್ಚು: ಕಾಗದಕ್ಕೆ ಇಳಿದದ್ದು ಕಮ್ಮಿ. ಅನಾರೋಗ್ಯದಿಂದ ಹಾಸಿಗೆ ಹಿಡಿದಾಗಲೂ ಅವರ ಮನಸ್ಸನ್ನು ದೃಢವಾಗಿ ಕ್ರಿಯಾಶೀಲವಾಗಿಯೇ ಇದ್ದು ಸಾಹಿತ್ಯ, ಶಾಸ್ತ್ರ, ಸಂಶೋಧನೆಗಳಂತಹ ಪ್ರಗಲ್ಭ ವಿಚಾರಗಳೇ ಆದನ್ನು ಆಕ್ರಮಿಸಿ ಆಳುತ್ತಿದ್ದುವು; ಹೊರಗಣ್ಣುಗಳ ಬೆಳಕು ಇಂಗುತ್ತಿದ್ದಾಗಲೂ ಒಳಗಣ್ಣು ತೆರೆದುಕೊಂಡೇ ಇರುತ್ತಿತ್ತು ಎಂಬುದನ್ನು 1975ರಿಂದ ಈಚೆ ಅವರು ಶ್ರಮವಹಿಸಿ ಬರೆದ ಅಥವಾ ಹೇಳಿ ಬರೆಯಿಸಿದ ಗ್ರಂಥಗಳು ಪ್ರಮಾಣಿಸುತ್ತವೆ. 1975ರಲ್ಲಿ ಕೃಷ್ಣಭಟ್ಟರ ಕೆಲವು ದೇಶನಾಮಗಳು' ಎಂಬ ಗ್ರಂಥ ಪ್ರಕಟವಾಯಿತು. ಅದರಲ್ಲಿ ಅವರು ಬಹುಕಾಲದಿಂದ ಬಹುವಿಧದ ವ್ಯಾಖ್ಯಾನ-ವಿವರಣೆಗಳಿಗೆ ಒಳಗಾದ 'ತುಳು' ಎಂಬ ಶಬ್ದಾರ್ಥ ವಿವೇಚನೆಯನ್ನು ಚೇರ, ಕೊಂಕಣ ಮತ್ತು ಪಾಂಡ್ಯ ಎಂಬ ದೇಶವಾಚಕಗಳ ನಿಷ್ಪತ್ತಿ ನಿರೂಪಣೆಯನ್ನು ನಿಸ್ಸಂದಿಗ್ಧವಾಗಿ ಮಾಡಿದ್ದಾರೆ. ಆ ಕುರಿತು ಅನೇಕ ವಿದ್ವಾಂಸರು ಮಾಡಿದ ತರ್ಕ, ಮುಟ್ಟಿದ ನಿಗಮನಗಳನ್ನು ಸಮಗ್ರವಾಗಿ ವಿಶ್ಲೇಷಿಸಿ ಸಾಧಾರಣವಾಗಿ ತಿರಸ್ಕರಿಸಿದ್ದಾರೆ. ಅವರದು ವಸ್ತುನಿಷ್ಠವಾದ ಕಥ್ಯಕ ದೃಷ್ಟಿಯಲ್ಲದೆ ಅಭಿಮಾನ, ವ್ಯಕ್ತಿದ್ವೇಷ, ಪೂರ್ವಗ್ರಹಗಳಲ್ಲ.

ಸೇಡಿಯಾಪು ಕೃಷ್ಣಭಟ್ಟರ ಅಗಾಧವಾದ ಶಾಸ್ತ್ರಜ್ಞಾನ, ನಿಶಿತವಾದ ಚಿಕಿತ್ಸಕ ಬುದ್ಧಿ, ನಿರ್ಮಮವಾದ ಕರ್ತವ್ಯ ದೃಷ್ಟಿ ಮತ್ತು ವಿನೂತನ ಮಾರ್ಗ ಕ್ರಮೋಣಗಳಿಗೆ ಸೂನ್ನತವಾದ ಉದಾಹರಣೆಯೆಂದರೆ 1985ರಲ್ಲಿ ಪ್ರಕಟಗೊಂಡ 'ಛಂದೋಗತಿ' ಯೆಂಬ ಗ್ರಂಥ. ಇದು ಕೃಷ್ಣಭಟ್ಟರ ಕೃತಿಗಳಲ್ಲೇ ಗಾತ್ರ ಮತ್ತು ಸತ್ವ ಎರಡರಲ್ಲೂ ಮಹತ್ವದ್ದು; ಸುದೀರ್ಘಕಾಲದ ಅವರ ವಾಙ್ಮಯತಪಸ್ಸಿನ ಪರಿಪೂರ್ಣ ಫಲವೆನಿಸಿ ಮೌಲಿಕವೂ ಚಿರಕಾಲಿಕವೂ ಆದದ್ದು. ಮುಖ್ಯ ವಿಷಯಕ್ಕೆ ಪೂರಕವೂ ಕಾರಕವೂ ಆಗಿರುವ ಅನೇಕ ವಿಚಾರಗಳನ್ನು ಅವರು ಅದರಲ್ಲಿ ಉಲ್ಲೇಖಿಸಿ ವಿವರಿಸಿದ್ದರೂ ಅದರಲ್ಲಿ ಅವರ ಪ್ರಧಾನ ಲಕ್ಷ್ಯ ಆಂಗ್ಲೇಯ ಶಾಸ್ತ್ರ ಗ್ರಂಥಗಳಲ್ಲಿ ಪ್ರಚುರವಾಗಿರುವ Rhythm ಮತ್ತು ಭಾರತೀಯ ಛಂದಶಾಸ್ತ್ರಗಳಲ್ಲಿ ನಿರ್ದೇಶಿತವಾಗುವ 'ಲಯ'ವೆಂದು ಪದಗಳು ಏಕಾರ್ಥಕವೇ ಭಿನ್ನವೇ ಎಂಬುದರ ಕೂಲಂಕಷ ವಿಶ್ಲೇಷಣೆ. ಸುದೀರ್ಘವಾದ ವಿಚಾರ ವಿಮರ್ಶೆಗಳ ಅಂತ್ಯದಲ್ಲಿ ಕೃಷ್ಣಭಟ್ಟರು 'ಲಯ'ವೆಂಬ ಪದವು ಅನುಚಿತ 'ಗತಿ'ಯೆಂಬುದೇ 'ರಿದಮ್'ಗೆ ಸಮಾನಾರ್ಥಕ ಎಂಬುದನ್ನು ವಿಪುಲ ಉದಾಹರಣೆಗಳಿಂದ ತರ್ಕಸಮ್ಮತವೂ ಬುದ್ಧಿಗ್ರಾಹ್ಯವೂ ಆಗುವಂತೆ ಪ್ರತಿಪಾದಿಸಿ ಸ್ಥಾಪಿಸಿದ್ದಾರೆ.

'ಛಂದೋಗತಿ' ಪ್ರಕಟವಾದ ನಾಲ್ಕುವರ್ಷ ಅನಂತರ ಮುದ್ರಿತವಾದದ್ದು 'ಕನ್ನಡ ಛಂದಸ್ಸು' ಎಂಬ ಗ್ರಂಥ. 1932ರಲ್ಲಿ ಮಡಿಕೇರಿ ಸಾಹಿತ್ಯ ಸಮ್ಮೇಳನದಲ್ಲಿ ಕೃಷ್ಣಭಟ್ಟರು ಬರೆದ ಅದೇ ಹೆಸರಿನ ನಿಬಂಧದ ಪರಿಷ್ಕೃತವಾಗಿ ನಾಲ್ಕು ಪರಿಶಿಷ್ಟ, ನಾಲ್ಕು ಅನುಬಂಧ ಮತ್ತೊಂದು ಅವಶಿಷ್ಟ ಸಹಿತವಾಗಿ ನೂರ ಐವತ್ತೇಳು ಪುಟಗಳಷ್ಟು ಪುಟ ವಿಸ್ತಾರವಾಗಿದೆ. ವಿಸ್ತಾರಮಾತ್ರವಲ್ಲ ವಿಷಯಗರ್ಭಿತವೂ ಆಗಿದೆ. 1930ರ ದಶಕದಲ್ಲಿ ಕನ್ನಡ ಛಂದಸ್ಸಿನ ಕ್ಷೇತ್ರದಲ್ಲಿ ಕೃಷ್ಣಭಟ್ಟರದೇ ಪ್ರಥಮವೂ ಸಾರ್ಥಕವೂ ಆದ ಪ್ರಯತ್ನ. ತ್ರಿಪದಿ ಸಾಂಗತ್ಯ, ಯತಿ ಮುಂತಾದುವುಗಳ ರೂಪಲಕ್ಷಣಗಳ ವಿಶ್ಲೇಷಣೆಯಲ್ಲಿ ಎಂಬತ್ತರ ದಶಕದಲ್ಲೂ ಅವರದೇ ಕೊನೆಯ ಮಾತು. ವ್ಯಾಕರಣದ ಕಗ್ಗಾಡಿನಲ್ಲಿ ನಿರ್ಭೀತರಾಗಿ ಸುತ್ತ ಸುಳಿಯುವಲ್ಲಿ ಸೇಡಿಯಾಪು ಕೃಷ್ಣಭಟ್ಟರು ಛಂದಸ್ಸಿನ ಹೆಗ್ಗಡಲಲ್ಲೂ ನಿರಾಯಾಸವಾಗಿ ಮುಳುಗಿ ಈಜಲೂ ಬಲ್ಲವರು.

ಸೇಡಿಯಾಪು ಕೃಷ್ಣಭಟ್ಟರು ತಮ್ಮ ತೊಂಭತ್ತನೆಯ ಹುಟ್ಟುಹಬ್ಬದ ನೆನಪಿಗೆಂಬಂತೆ ಕನ್ನಡಿಗರಿಗೆ ನೀಡಿದ ಬೆಲೆಬಾಳುವ ಕೊಡಿಗೆಯೆಂದರೆ 'ಕಥ್ಯದರ್ಶನ' ಎಂಬ ಅಪೂರ್ವ ಅಸಾಮಾನ್ಯ ಪುಸ್ತಕ. ಅದು "ಅಪೂರ್ವ ಮಾತ್ರವಲ್ಲ: ಅಪಶ್ಚಿಮ ಕೂಡ ಎಂದರೂ ತಪ್ಪಾಗಲಿಕ್ಕಿಲ್ಲ"ವೆಂದು ಹೇಳಿದ್ದಾರೆ ಖ್ಯಾತ ವಿದ್ವಾಂಸ ಬನ್ನಂಜೆ ಗೋವಿಂದಾಚಾರ್ಯರು. ಏಕೆಂದರೆ ಅನೇಕ ವರ್ಷಗಳಿಂದ ಅನೇಕ ಪಾಶ್ಚಾತ್ಯ ಪೌರಸ್ತ್ಯ ಇತಿಹಾಸಜ್ಞರು, ಪುರಾತತ್ವ ಶಾಸ್ತ್ರಿಗಳು, ಸಂಶೋಧಕ ವರೇಣ್ಯರು ಮತ್ತು ವಿದ್ವತ್ ಪ್ರಭೃತಿಗಳು ದೊಡ್ಡದಾಗಿ ಹೇಳುತ್ತ ಬಂದಿದ್ದ ಗಟ್ಟಿಯಾಗಿ ನಂಬಿದ್ದ 'ಆರ್ಯ'ರೆಂದರೆ

ಒಂದು ಜನಾಂಗ, ವರ್ಣ ಮತ್ತು ಜಾತಿ ಎಂದರೆ ವಿಶಾರ್ಥ, ಲಿಂಗ ಎಂದರೆ ಜನನೇಂದ್ರಿಯ ಎಂದು ಮುಖ್ಯವಾಗಿ ಅರ್ಥ ಕಟ್ಟಿ ಪದಚತುಷ್ಟಯದ ನಿಜವಾದ ಅರ್ಥಾನುಸಂಧಾನವನ್ನು ಕೃಷ್ಣಭಟ್ಟರು ಈ ಪುಸ್ತಕದಲ್ಲಿ ಮಾಡಿದ್ದಾರೆ. ಹೊಸ ನೆಲಗಟ್ಟಿನಲ್ಲಿ ನಿಂತು ಮಾಡಿದ್ದಾರೆ. ಆ ನಾಲ್ಕು ಪದಗಳ ಮೇಲೆ ಹೊಸ ಬೆಳಕನ್ನು ಚೆಲ್ಲಿದ್ದಾರೆ ಮತ್ತು ಅವುಗಳ ಹುರುಳನ್ನು ತೋರಿ ಹೊಸ ಬೆಲೆಯನ್ನು ಕಾಣಿಸಿದ್ದಾರೆ. ಆ ನಾಲ್ಕು ಪದಗಳಲ್ಲಿ ಮುಖ್ಯತಮವಾಗಿ 'ಆರ್ಯ' ಎಂಬುದರ ನಿಷ್ಪತ್ತಿಯನ್ನು ಹೇಳಿ ಅದರ ನಿಜಾರ್ಥವನ್ನು ಕೃಷ್ಣಭಟ್ಟರು ಅನಾವರಣ ಮಾಡಿರುವ ಕ್ರಮವಂತೂ ಅಪೂರ್ವ ಮತ್ತು ಅಸಾಮಾನ್ಯ. ಆರ್ಯವೆಂಬುದು ಜನಾಂಗವಾಚಕವಲ್ಲ ಅದು ಸಂಸ್ಕೃತಿ ಸೂಚಕವೆಂದು ಅವರು ಪ್ರತಿಪಾದಿಸಿರುವ ರೀತಿ ವಿನೂತನ, ಆಶ್ಚರ್ಯಕರ. ವಿಚಾರಕ್ಷಮ ಮತ್ತು ಸ್ವೀಕಾರ್ಹ. ಪ್ರಾಯಃ ಸಮಸ್ತ ಭಾರತೀಯ ವಾಙ್ಮಯದಲ್ಲೇ ಈ ಬಗೆಯ ಪುಸ್ತಕಗಳನ್ನು ಇದೇ ಮೊದಲನೆಯದು ಎಂದು ಹೇಳಬಹುದಾಗಿದೆ. ಪುಸ್ತಕದ ಇಂಗ್ಲಿಷ್ ಅನುವಾದವೂ Discovery of Facts ಎಂಬ ಹೆಸರಲ್ಲಿ, 1996ರ ಜೂನ್ 8ರಂದು ಕೃಷ್ಣಭಟ್ಟರ ತೊಂಬತ್ತೈದನೆಯ ಜನ್ಮದಿನದಂದು ಬಿಡುಗಡೆಗೊಂಡಿತು.

ಕೃಷ್ಣಭಟ್ಟರು 1923ರಲ್ಲಿ ಪ್ರಕಟಿಸಿದ ಪ್ರಥಮ ಲೇಖನ 'ಕರ್ನಾಟಕ ಕವಿತಾ ಪ್ರಪಂಚ'ವೆಂದು ಹಿಂದೆ ಹೇಳಿದೆ. ಅನಂತರದ ಸುದೀರ್ಘ ಕಾಲಾವಧಿಯಲ್ಲಿ ಅವರು ಅನ್ಯಾನ್ಯ ವಿಷಯಗಳನ್ನು ಕುರಿತು ಅನೇಕ ವಿಚಾರಕ್ಷಮ ಲೇಖನಗಳನ್ನು ಪ್ರಕಟಿಸಿದ್ದಾರೆ, ಉಪನ್ಯಾಸಗಳನ್ನು ಮಾಡಿದ್ದಾರೆ, ಮುನ್ನುಡಿಗಳನ್ನು ಬರೆದಿದ್ದಾರೆ: ಅವುಗಳೆಲ್ಲವನ್ನೂ ಸಂಗ್ರಹಿಸಿ 'ವಿಚಾರ ಪ್ರಪಂಚ' ವೆಂಬ ಹೆಸರಲ್ಲಿ 1992ರಲ್ಲಿ ಪ್ರಕಟಿಸಲಾಯಿತು. ಅದೊಂದು ಸಂಗ್ರಾಹ್ಯವಾದ ಉದ್ಗ್ರಂಥ. 'ವಿಚಾರ ಪ್ರಪಂಚ'ವೆಂಬ ಸಂಪುಟ ಶೀರ್ಷಿಕೆ ಸಮುಚಿತವೆನಿಸುವಂತೆ ಸಾಹಿತ್ಯವಿಚಾರ, ಭಾಷಾ ವಿಚಾರ, ಕಲಾವಿಚಾರ, ವ್ಯಕ್ತಿವಿಚಾರ ಮತ್ತು ನಾನಾ ವಿಚಾರಗಳೆಂಬ ವಿಭಾಗ ಪಂಚಕವು ಸುಮಾರು ಎಪ್ಪತ್ತು ಲೇಖನಗಳಲ್ಲಿ ಒಳಗೊಂಡಿದೆ. ಕಿರು ಟಿಪ್ಪಣಿಗಳಿರಲಿ, ದೀರ್ಘ ಲೇಖನಗಳೇ ಆಗಲಿ, ಎಲ್ಲದರಲ್ಲೂ 'ಸೇಡಿಯಾಪುತನ' ಎದ್ದುಕಾಣುತ್ತದೆ.

ಒಂದು ಸಂದರ್ಭದಲ್ಲಿ 'ಕನ್ನಡ ಕಾದಂಬರೀ ಸಾಮ್ರಾಟ' ಅ.ನ.ಕೃಷ್ಣರಾಯರು ಕೃಷ್ಣಭಟ್ಟರನ್ನು 'ಶಬ್ದನಿಧಿ'ಯೆಂದು ಕರೆದಿದ್ದರು. ಅದು ವಿಶೇಷಣ ಮಾತ್ರವಲ್ಲ, ಯಥಾರ್ಥವೂ ಹೌದು. ಶಬ್ದಾರ್ಥ ವಿಚಾರದಲ್ಲಿ ಕೃಷ್ಣ ಭಟ್ಟರ ಸಹಜಾಶಕ್ತಿ, ಸ್ಪಷ್ಟ, ನಿರ್ದಿಷ್ಟ ಚಿಂತನ ಮತ್ತು ನಿರ್ಣಯಗಳಾಗಿವೆ. ಅವರ ಕನ್ನಡ ಮಾರ್ಗಗಳು ಕೆಲವು ದೇಶ ನಾಮಗಳು, ಛಂದೋಗತಿ, ಪಥ್ಯದರ್ಶನಗಳೆಂಬ ಗ್ರಂಥಗಳೂ ಇದನ್ನು ನಿದರ್ಶಿಸುತ್ತವೆ. ಆ ಗ್ರಂಥಗಳನ್ನು ಬರೆದು ಪ್ರಕಟಿಸುವುದಕ್ಕಿಂತ ಮೊದಲೇ ಅವರು ತಮ್ಮಿಬ್ಬರು ಮಿತ್ರರೊಂದಿಗೆ 'ಕನ್ನಡ ನಿಘಂಟು'ಒಂದನ್ನು ಸಂಪಾದಿಸಿದ್ದರು. ಕನ್ನಡದಲ್ಲಿ ಕಿಟೆಲ್ ಕೋಶವನ್ನು ಬಿಟ್ಟರೆ ಬೇರೆ ಶಬ್ದಾರ್ಥಕೋಶಗಳು ಇರದಿದ್ದ ಕಾಲಕ್ಕೆ 'ಕನ್ನಡ ನಿಘಂಟು' ಮುದ್ರಿತವಾಯಿತು. ಅದು ಆಕಾರದಲ್ಲಿ ಕಿರಿದಾಗಿದ್ದರೂ ಅಡಕವಾಗಿ, ಸಾಹಿತ್ಯಾಭ್ಯಾಸಿಗಳಿಗೆ ತೀರ ಉಪಯುಕ್ತವಾಗಿದೆ.

ಸೇಡಿಯಾಪುರವರು ಸುದೀರ್ಘ ಆತ್ಮಚರಿತ್ರೆಯನ್ನೇನೂ ಬರೆದಿಲ್ಲ, ಆದರೆ ತಮ್ಮ ಜೀವನದ ಕೆಲವು ವಿಶಿಷ್ಟ ಘಟನೆಗಳನ್ನು ನಿರೂಪಿಸುವ 'ಈಶ್ವರ ಸಂಕಲ್ಪ ಅಥವಾ ದೈವಲೀಲೆ'ಯೆಂಬ ಪುಸ್ತಕವನ್ನು ರಚಿಸಿದ್ದಾರೆ. ಅದು ಕೃಷ್ಣಭಟ್ಟರ ನೀತಿ ನಿಷ್ಠೆ, ರುಚಿಸುದ್ಧಿ, ದೈವಶ್ರದ್ಧೆಯೇ ಮೊದಲಾದ ಗುಣವಿಶೇಷಗಳ ಮೇಲೆ ಕ್ಷ-ಕಿರಣವನ್ನು ಹಾಯಿಸಿ, ಅವರ ಜೀವನದ ಸಕೃದ್ದರ್ಶನವನ್ನು ಮಾಡಿಸುತ್ತದೆ.

ಕಾಲೇಜ್ ವ್ಯಾಸಂಗದ ಅವಧಿಯಲ್ಲಿ ಒಂದು ವರ್ಷ (1956-57) ಸೇಡಿಯಾಪು ಕೃಷ್ಣಭಟ್ಟರ ವಿದ್ಯಾರ್ಥಿಯಾಗುವ ಯೋಗ-ಭಾಗ್ಯಗಳು ಈ ಲೇಖಕನದಾಗಿದ್ದವು. ಆ ನಿಮಿತ್ತವಾದ ಗುರು-ಶಿಷ್ಯ ಸಂಬಂಧವು ಕಾಲಾನಂತರದಲ್ಲಿ ದೃಢವಾಗಿ ಗಾಢವಾಯಿತು. ಮಂಗಳೂರಿನಿಂದ ಅವರೂ ನಾನೂ ದೂರವಾದ ಮೇಲೆ ಅವರು ನನಗೆ ಬರೆದ ಸುಮಾರು ನಾನ್ನೂರೈವತ್ತರಷ್ಟು ಪತ್ರಗಳಲ್ಲಿ ಒಂದು ನೂರ ಆರನ್ನು ಆರಿಸಿ 'ಪತ್ರಾವಳಿ'ಯೆಂಬ ಹೆಸರಲ್ಲಿ 1991ರಲ್ಲಿ ಪ್ರಕಟಿಸಿದೆ. ಕನ್ನಡದಲ್ಲೇ ವಿಶಿಷ್ಟವಾದ, ವಿರಳವಾದ ಪತ್ರಸಾಹಿತ್ಯ ಪ್ರಭಾರಕ್ಕೆ ಆ ಪುಸ್ತಕ ಸೇರುತ್ತದೆ. "ಪಕ್ವವಾದ ವಿದ್ವತ್ತಿನ ವ್ಯಕ್ತಿತ್ವವೊಂದು ಇಲ್ಲಿ ತೆರೆದುಕೊಂಡಿರುವ ರೀತಿ ವಿಶಿಷ್ಟವಾದದ್ದು, ಸ್ವಾರಸ್ಯವಾದದ್ದು, ಲೋಕಾನುಭವ ಪೂರ್ಣವಾದದ್ದು' ಎಂದು 'ಪತ್ರಾವಳಿ'ಗೆ ಮುನ್ನುಡಿ ಬರೆದಿರುವ ಡಾ. ಹಾ.ಮಾ.ನಾಯಕರು ಶ್ಲಾಘಿಸಿದ್ದಾರೆ. .

ಕೃಷ್ಣಭಟ್ಟರು ಸರಸ ಪತ್ರ ಲೇಖಕನಾಗಿದ್ದಂತೆಯೇ ಒಬ್ಬ ಸಂಭಾಷಣಕುಶಲಿಯೂ ಆಗಿದ್ದರು. 'ಮಾತು ಮಾತು ಮಥಿಸಿ ಬಂದ ನಾದದ ನವನೀತ' ಎಂದು ಕವಿ ಬೇಂದ್ರೆಯವರು 'ಭಾವಗೀತ'ದ ಲಕ್ಷಣವನ್ನು ನಿರ್ವಹಿಸಿದ್ದಾರೆ. ಕೃಷ್ಣಭಟ್ಟರ ಮಾತುಗಳು ಅರ್ಥ ಸ್ವಾರಸ್ಯದ ಬೆಣ್ಣೆಯುಂಡೆಗಳಂತೆ ಇರುತ್ತಿದ್ದವು. 'ಹಿಡಿದರೆ ಹಿಡಿತುಂಬ, ಬಿಟ್ಟರೆ ಜಗವೆಲ್ಲ' ಎಂಬಂತೆ ಆ ಮಾತುಗಳು ಹುರುಳು-ತಿರುಳುಗಳನ್ನು ಒಳಗೊಳ್ಳುತ್ತಿದ್ದವು. 'ಪತ್ರಾವಳಿಯಂತೆ ಕೃಷ್ಣಭಟ್ಟರ ನುಡಿಮಣಿಗಳನ್ನು ಯಾರಾದರೂ ಹಿಡಿದು ಪೋಣಿಸಿದರೆ ಅದೊಂದು ಸೊಗಸಾದ ಮಾಲೆಯಾಗಿ ಕನ್ನಡ ತಾಯ ಕೊರಳನ್ನು ಸಿಂಗರಿಸಬಲ್ಲದು.

ಸೇಡಿಯಾಪು ಕೃಷ್ಣಭಟ್ಟರು ವಿನೋದವಾಗಿ ಹೇಳುವುದಿತ್ತು: "ಸಾಹಿತ್ಯದ ಸಂತೆಯಲ್ಲಿ ನನ್ನದು ಚಿಲ್ಲರೆ ಅಂಗಡಿ. ಸ್ವಲ್ಪ ಛಂದಸ್ಸು, ಸ್ವಲ್ಪ ವ್ಯಾಕರಣ ಸ್ವಲ್ಪ ಕಥೆ, ಸ್ವಲ್ಪ ಕಾವ್ಯ- ಎಲ್ಲವೂ ಸ್ವಲ್ಪಸ್ವಲ್ಪ. ಗಿರಾಕಿಗಳು ಸ್ವಲ್ಪವೇ!" "ನನ್ನದು ಉಂಭವೃತ್ತಿ" (ಬತ್ತದ ಪಯಿರು ಕೊಯ್ಯುವಾಗ ಬಿದ್ದದ್ದನ್ನು ಹೆಕ್ಕುವುದು ಎಂದು ಅರ್ಥ) ಎಂದೂ ಅವರು ಹೇಳಿದ್ದುಂಟು. ಪರಿಮಾಣದಲ್ಲಿ ಕೃಷ್ಣಭಟ್ಟರ ಸಾಹಿತ್ಯಕೃಷಿ ಸ್ವಲ್ಪವಾಗಿರಬಹುದು, ಆದರೆ ಗುಣಬಾಹುಳ್ಯದ ದೃಷ್ಟಿಯಿಂದ 'ಚಿಲ್ಲರೆ' ಸರ್ವಥಾ ಅಲ್ಲ. ಅವರದು 'ಉಂಭವೃತ್ತಿ'ಯೂ ಆಗಿರಲಿಲ್ಲ. ಅವರು ಮಾಡಿದುದೆಲ್ಲ ಸ್ವತಂತ್ರಕೃಷಿ. ಕನ್ನಡದ ಕಳದಲ್ಲಿ ಹಾಲುತುಂಬಿದ ಗಟ್ಟಿಕಾಳುಗಳನ್ನೇ ಭಿತ್ತಿ ಬೆಳೆದು, ಕೊಯ್ದಿದ್ದಾರೆ ಎಂಬುದನ್ನು ಈ ಮೊದಲು ನಿರ್ದೇಶಿಸಿದ ಅವರ ಪುಸ್ತಕಗಳೇ ಸಮರ್ಥಿಸುತ್ತವೆ. ಕೃಷ್ಣಭಟ್ಟರು ಬರೆದದ್ದು ಸಣ್ಣದಿರಲಿ, ದೊಡ್ಡದಿರಲಿ, ಶಾಸ್ತ್ರವಾಗಲಿ, ಸಾಹಿತ್ಯವಾಗಲಿ ಎಲ್ಲವೂ ಆಸಕ್ತರಿಂದಲೂ ತಜ್ಞರಿಂದಲೂ ಸ್ವೀಕೃತವಾಗಿದೆ, ಶ್ಲಾಘ್ಯವಾಗಿವೆ. ಸಾಹಿತ್ಯಕ ಸಂಘ ಸಂಸ್ಥೆಗಳೂ ಸರಕಾರವೂ ಅವರ ಕೃತಿಗಳನ್ನು ಅವರನ್ನು ಸಮುಚಿತವಾಗಿ ಪುರಸ್ಕರಿಸಿವೆ. ಹೆಚ್ಚು ಕಮ್ಮಿ ಅವರ ಎಲ್ಲ ಪುಸ್ತಕಗಳೂ ಒಂದಲ್ಲೊಂದು ಬಹುಮಾನವನ್ನೋ ಪುರಸ್ಕಾರವನ್ನೋ, ಪ್ರಶಸ್ತಿಯನ್ನೋ ಪಡೆದಿವೆ. ಕೃಷ್ಣಭಟ್ಟರು ತಮ್ಮ 'ವಿಚಾರಪ್ರಪಂಚ' ನಿಮಿತ್ತವಾಗಿ ಕರ್ನಾಟಕ ಸರಕಾರದ ಸರ್ವೋಚ್ಚ ಪ್ರಶಸ್ತಿ - ಪಂಪ ಪ್ರಶಸ್ತಿ

- ಯಿಂದ ಸನ್ಮಾನಿತರಾಗಿದ್ದಾರೆ. (ಈ ಪ್ರಶಸ್ತಿ ಪ್ರಕಟವಾದಾಗ ಕೃಷ್ಣಭಟ್ಟರು ವಿಧಿವಶರಾಗಿದ್ದರು ಎಂಬುದು ವಿಷಾದನೀಯ; ಆದರೆ ತಡವಾಗಿಯಾದರೂ ಬಂತಲ್ಲ ಎಂಬುದು ಸಂತೋಷ).

ಸೇಡಿಯಾಪು ಕೃಷ್ಣಭಟ್ಟರ ತೀಡಿ ತಿದ್ದಿದ ಬರವಣಿಗೆಯಂತೆಯೇ ಅವರ ಬದುಕು ಸಹ ಸ್ಫಟಿಕ ಸದೃಶ. ಅವರು ಆರ್ಷೇಯ ಸಂಸ್ಕೃತಿಯ ಉತ್ತಮಾಂಶಗಳನ್ನು ಮೈಯ್ಗೂಡಿಸಿಕೊಂಡಿದ್ದರು. ಗಾಂಧೀಜಿಯವರ 'ಪದಧ್ವನಿ'ಯಿಂದ ಪ್ರೇರಿತರಾಗಿದ್ದ ಕೃಷ್ಣಭಟ್ಟರು ಜೀವನಪೂರ್ತಿ ಅವರ ಮಾರ್ಗವನ್ನೇ ಅನುಸರಿಸಲು ಪ್ರಯತ್ನಿಸಿದರು. ಅವರದು ಮುಕ್ತ ಮನಸ್ಸು, ಆದರೆ ಸ್ಪಷ್ಟ ವಿಚಾರ; ಸರಳ-ಸ್ನೇಹಶೀಲ ಸ್ವಭಾವ. ಆದರೆ ಅಲ್ಪಮತಿಯಿಂದ ವಾಚಾಳಿಯಾಗಿರಲಿಲ್ಲ. ಅವರದು ಗಂಭೀರ, ನಿರ್ಭೀತ, ಸ್ವತಂತ್ರ ಮನೋಧರ್ಮ. 'ಜನ ಮೆಚ್ಚಿ ನಡಕೊಂಡರೇನುಂಟು ಲೋಕದಿ, ಮನ ಮೆಚ್ಚೆ ನಡೆ ಕೊಂಬುವುದೆ ಚೆಂದವು" ಎಂಬುದೇ ಅವರ ಆದರ್ಶ, ಜೀವನಸೂತ್ರ. ತ್ರಿಕರಣಬದ್ಧವಾದ ವ್ಯಕ್ತಿತ್ವ ಅವರದಾಗಿತ್ತು.

ಸೇಡಿಯಾಪು ಕೃಷ್ಣಭಟ್ಟರು ಬಾಲ್ಯದಲ್ಲಿ ಅನಾರೋಗ್ಯ ಪೀಡಿತ ದುರ್ಬಲ ಶರೀರಿಯಾಗಿದ್ದರೂ ಕೇವಲ ಸಂಕಲ್ಪಶಕ್ತಿ, ಮನೋದಾರ್ಢ್ಯಗಳಿಂದಾಗಿಯೇ ತೊಂಬತ್ತೈದು ವರ್ಷಗಳ ನಿಡುಗಾಲ ಬದುಕಿದರು. ತಮ್ಮ 'ತಥ್ಯದರ್ಶನ'ದ ಆಂಗ್ಲ ಅನುವಾದ ಪ್ರಕಟವಾಗಬೇಕೆಂಬುದು ಅವರ ಆಸೆಯಾಗಿತ್ತು. ಅದು ಜೂನ್ 8, 1996ರಂದು ಪೂರೈಸಿದರು. ಅಂದೇ ಅವರ ತ್ತೊಂಬತ್ತೈದನೆಯ ಜನ್ಮದಿನವೂ ಆಗಿತ್ತು. ಕೃಷ್ಣಭಟ್ಟರ ಸನ್ಮಿತ್ರ ಡಾ. ಶಿವರಾಮಕಾರಂತರು ಆ ಅನುವಾದವನ್ನು ಅನಾವರಣಗೊಳಿಸಿ, ಕೃಷ್ಣಭಟ್ಟರ ಕೈಗೊಪ್ಪಿಸಿದರು. ಅವರು ಪುಸ್ತಕದ ಪುಟಗಳ ಮೇಲೆ ಕೈಯ್ಯಾಡಿಸಿ ಸಂತೋಷಪಟ್ಟರು. ಅಂದೇ ಮಧ್ಯರಾತ್ರಿ ಅವರ ಸಾರ್ಥಕ ಜೀವ ದುರ್ಬಲ ಶರೀರವನ್ನು ತ್ಯಜಿಸಿ, ಪರಲೋಕವನ್ನು ಸೇರಿತು !

❑

## ಶಿವರಾಮ ಕಾರಂತ

ಟಿ.ಪಿ. ಅಶೋಕ

ಒಂದು ಜೀವಿತ ಅವಧಿಯಲ್ಲಿ ಒಬ್ಬ ವ್ಯಕ್ತಿ ಇಷ್ಟೆಲ್ಲ ಸಾಧಿಸಲು ಸಾಧ್ಯವೆ ಎಂಬ ವಿಸ್ಮಯವನ್ನು ಹುಟ್ಟಿಸುವಷ್ಟು ಸಾಧನೆ ಮಾಡಿರುವ ಡಾ. ಕೆ. ಶಿವರಾಮ ಕಾರಂತರು ಈ ಶತಮಾನದ ದೊಡ್ಡ ಕಲಾವಿದರು. ಕಾರಂತರ ಸಾಧನೆ ಎಷ್ಟು ದೊಡ್ಡದೆಂದರೆ, "ಆಡು ಮುಟ್ಟದ ಸೊಪ್ಪಿಲ್ಲ, ಕಾರಂತರು ಬರೆಯದ ವಿಷಯವಿಲ್ಲ", "ಕಾರಂತರು ಒಬ್ಬ ವ್ಯಕ್ತಿಯಲ್ಲ, ಅವರೊಂದು ಸಂಸ್ಥೆ", 'ಶಿವರಾಮ ಕಾರಂತರೇ ಒಂದು ವಿಶ್ವವಿದ್ಯಾಲಯ", "ಕಾರಂತರು ಒಂದು ನಡೆದಾಡುವ ವಿಶ್ವಕೋಶ" ಮುಂತಾದ ಮಾತುಗಳು ಕಾರಂತರನ್ನು ಕುರಿತ ಬರವಣಿಗೆಯಲ್ಲಿ ಈಗಾಗಲೇ ಕ್ಲೀಶೆಗಳಾಗಿ ಹೋಗಿವೆ. ಕಾರಂತರ ವೈಶಿಷ್ಟ್ಯವೆಂದರೆ ತಮ್ಮ ಬಗ್ಗೆ ಆಗಿಂದಾಗ್ಗೆ ಬರುವ ಹೊಗಳಿಕೆ ತೆಗಳಿಕೆಗಳಿಗೆ ಮನಸ್ಸು ಕೊಡದೆ ತಮ್ಮ ಕೆಲಸವನ್ನು ಶ್ರದ್ಧೆಯಿಂದ, ಏಕಾಗ್ರತೆಯಿಂದ ಮಾಡಿಕೊಂಡು ಹೋಗುವಂಥಾದ್ದು.

ಕಾರಂತರು ಅಪ್ಪ ಹಾಕಿದ ಆಲದ ಮರಕ್ಕೆ ಎಂದೂ ಜೋತು ಬಿದ್ದವರಲ್ಲ. ಅವರ ಇಡೀ ಬದುಕು ಹಲವಾರು ಪ್ರಯೋಗಗಳಿಂದ ಕೂಡಿದೆ. ಅನುಭವ ಬೆಳೆದಂತೆಲ್ಲ ಅವರು ಹಲವು ಬಾರಿ ತಮ್ಮ ಹಿಂದಿನ ನಿಲುವುಗಳನ್ನು ಬದಲಾಯಿಸಿಕೊಂಡಿದ್ದಾರೆ. ಮನುಷ್ಯ ಎಷ್ಟು ಕಲಿತರೂ ಕಲಿಯಬೇಕಾದದ್ದೇ ಬಹಳ ಎಂದು ನಂಬಿರುವ ಕಾರಂತರಿಗೆ ಈ ಬದುಕೇ ಒಂದು ದೊಡ್ಡ ಪಾಠಶಾಲೆಯಾಗಿದೆ. ಚಿಕ್ಕಂದಿನಲ್ಲೇ ಶಾಲೆ ಬಿಟ್ಟು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲುಗೊಂಡಿದ್ದ ಅವರು ಮುಂದೆ ಎಲ್ಲ ಜ್ಞಾನಶಾಖೆಗಳಲ್ಲೂ ಆಸಕ್ತಿ ಬೆಳೆಸಿಕೊಂಡದ್ದು, ಸ್ವಂತವಾಗಿ ಕಲಿತದ್ದು, ಕಲಿತದ್ದನ್ನು ಸರಳವಾದ ಕನ್ನಡದಲ್ಲಿ ಮಾತನಾಡಿದ್ದು-ಬರೆದದ್ದು ಈಗ ದಾಖಲೆಯಾಗಿದೆ. ಸಹಜವಾಗಿಯೇ ಅವರಿಗೆ ಹಲವಾರು ವಿಶ್ವವಿದ್ಯಾಲಯಗಳ ಗೌರವ ಡಾಕ್ಟರೇಟುಗಳು, ಜ್ಞಾನಪೀಠ ಪ್ರಶಸ್ತಿಯೂ ಸೇರಿದಂತೆ ಹಲವು ಹತ್ತು ಪ್ರಶಸ್ತಿಗಳು ಲಭ್ಯವಾಗಿವೆ. ಅಸಂಖ್ಯ ಗೋಷ್ಠಿಗಳ, ಸಮ್ಮೇಳನಗಳ ಅಧ್ಯಕ್ಷ ಪಟ್ಟಗಳು, ಸನ್ಮಾನಗಳು ಕಾರಂತರನ್ನು ಹುಡುಕಿಕೊಂಡು ಬಂದಿವೆ. ತುರ್ತುಪರಿಸ್ಥಿತಿಯಲ್ಲಿ ಇಂದಿರಾ ಸರ್ವಾಧಿಕಾರವನ್ನು ಧಿಕ್ಕರಿಸಿ ಕಾರಂತರು ಪದ್ಮಭೂಷಣ ಪ್ರಶಸ್ತಿಯನ್ನು ಕೇಂದ್ರ ಸರಕಾರಕ್ಕೆ ವಾಪಸು ಮಾಡಿದ್ದು ಕೂಡ ಇತಿಹಾಸದಲ್ಲಿ ಸೇರಿಹೋಗಿದೆ.

ಕಾರಂತರು ನಿಜವಾದ ಅರ್ಥದಲ್ಲಿ ಒಬ್ಬ ಬುದ್ಧಿಜೀವಿ. ಕಾರಂತರಿಗೂ ಇತರ ಲೇಖಕರಿಗೂ ಇರುವ ಒಂದು ಮುಖ್ಯ ವ್ಯತ್ಯಾಸವೆಂದರೆ ಪ್ರಾಯಶಃ ಕಾರಂತರೊಬ್ಬರೇ ಬದುಕಿನ ಎಲ್ಲ ಕ್ಷೇತ್ರಗಳಲ್ಲೂ ಆಸಕ್ತಿ ಇಟ್ಟುಕೊಂಡಿರುವುದು ಮತ್ತು ಕ್ರಿಯಾಶೀಲರಾಗಿರುವುದು. ಸಾಹಿತ್ಯ, ರಂಗಭೂಮಿ, ಚಲನಚಿತ್ರ, ವಿಜ್ಞಾನ, ಚಿತ್ರಕಲೆ, ಸಂಗೀತ, ಶಿಕ್ಷಣ, ರಾಜಕೀಯ, ಪತ್ರಿಕೋದ್ಯಮ, ಭಾಷೆ, ಸಂಸ್ಕೃತಿ-ಹೀಗೆ ಪಟ್ಟಿ ಬೆಳೆಯುತ್ತದೆ. ಕಾರಂತರು 'ಬಾಲ ಪ್ರಪಂಚ', 'ವಿಜ್ಞಾನ ಪ್ರಪಂಚ'ಗಳನ್ನು ಬರೆದಿದ್ದಾರೆ. ಸಿರಿಗನ್ನಡ ಅರ್ಥಕೋಶವನ್ನು ತಯಾರಿಸಿದ್ದಾರೆ. ಯಕ್ಷಗಾನ ಕುರಿತ ಪುಸ್ತಕಗಳನ್ನು ಬರೆದಿದ್ದಾರೆ; ಸ್ವತಃ ಹಲವು ಪ್ರಯೋಗಗಳನ್ನು ಮಾಡಿದ್ದಾರೆ. ಶಿಲ್ಪಕಲೆ, ಚಿತ್ರಕಲೆ ಕುರಿತ ಪುಸ್ತಕಗಳನ್ನು ಬರೆದಿದ್ದಾರೆ; ಸ್ವತಃ ಚಿತ್ರಗಳನ್ನು ಬರೆದಿದ್ದಾರೆ. ಚಲನಚಿತ್ರ ನಿರ್ಮಿಸಿದ್ದಾರೆ. ಐವತ್ತಕ್ಕೂ ಹೆಚ್ಚು ನಾಟಕಗಳನ್ನು ಬರೆದಿದ್ದಾರೆ;

ಹಲವಾರು ನಾಟಕಗಳನ್ನು ನಿರ್ದೇಶಿಸಿದ್ದಾರೆ.; ನಾಟಕ, ಯಕ್ಷಗಾನಗಳಲ್ಲಿ ನಟಿಸಿದ್ದಾರೆ. ವಿವಿಧ ವಿಷಯಗಳ ಬಗ್ಗೆ ಕಾರಂತರು ಬರೆದಿರುವ ಲೇಖನಗಳಿಗೆ ಲೆಕ್ಕವಿಲ್ಲ. ಕಾರಂತರ ಕೆಲವು ಬಿಡಿಬರಹಗಳನ್ನು (ಪ್ರಕಟನೆ : ಅಕ್ಷರ ಪ್ರಕಾಶನ, ಸಾಗರ) ಶೇಖರ ಇಡ್ಯ ಸಂಪಾದಿಸಿದ್ದಾರೆ. ನಲವತ್ತನಾಲ್ಕು ಕಾದಂಬರಿಗಳನ್ನೂ, ಹಲವಾರು ಪ್ರವಾಸ ಕಥನಗಳನ್ನೂ, ಆತ್ಮಚರಿತ್ರೆಯನ್ನು ಬರೆದಿದ್ದಾರೆ. ಐ.ಬಿ.ಎಚ್. ಪ್ರಕಾಶನ ಮಕ್ಕಳಿಗಾಗಿ ಪ್ರಕಟಿಸುವ ಅಮರ ಚಿತ್ರಕಥೆಗಳನ್ನು ಅನುವಾದಿಸಿದ್ದಾರೆ. ಮಕ್ಕಳ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ವಿಪುಲವಾದ ಪ್ರಯೋಗಗಳನ್ನು ನಡೆಸಿದ್ದಾರೆ. ಚುನಾವಣೆಯಲ್ಲಿ ಸ್ಪರ್ಧಿಸುವುದೂ ಸೇರಿದಂತೆ ಭಾರತದ ರಾಜಕೀಯದಲ್ಲಿ ಕ್ರಿಯಾಶೀಲ ಸಂಬಂಧ ಇಟ್ಟುಕೊಂಡಿದ್ದಾರೆ. ಕಾರಂತರ ಇತ್ತೀಚಿನ ಪುಸ್ತಕ 'ಪ್ರಾಣಿ ಪ್ರಪಂಚದ ವಿಸ್ಮಯಗಳು' (ಪ್ರ: ರವೀಂದ್ರ ಪ್ರಕಾಶನ, ಕಾರ್ಗಲ್). ಕಾರಂತರ ಎಲ್ಲ ಬರಹಗಳ ಸೂಚಿ ಇನ್ನೂ ತಯಾರಾದಂತಿಲ್ಲ. ಅಕಾಡೆಮಿ, ಪರಿಷತ್ತು ಅಥವಾ ವಿಶ್ವವಿದ್ಯಾಲಯಗಳಂಥ ಸಂಸ್ಥೆಗಳು ಇಂಥದೊಂದು ಸೂಚಿಯನ್ನು ಸಿದ್ಧಪಡಿಸಿದರೆ ಹಲವು ರೀತಿಯಲ್ಲಿ ಉಪಯೋಗವಾಗುತ್ತದೆ.

ಸಮೃದ್ಧವಾದ ಬದುಕಿನ ಸಕಲ ಸ್ತರಗಳನ್ನೂ ಅನುಭವಿಸಬೇಕು; ಅನುಭವಿಸಿದ್ದನ್ನು ಇತರರೊಂದಿಗೆ ಹಂಚಿಕೊಳ್ಳಬೇಕು ಎಂಬುದು ಕಾರಂತರ ಬದುಕಿನ ಸೂತ್ರವಾಗಿದೆ. ಆದ್ದರಿಂದಲೇ ಅವರಿಗೆ ಯಾವ ಜ್ಞಾನ ಶಾಖೆಯೂ ತನ್ನಷ್ಟಕ್ಕೆ ದೊಡ್ಡದೂ ಅಲ್ಲ, ಚಿಕ್ಕದೂ ಅಲ್ಲ. ಒಂದು ರೀತಿಯಲ್ಲಿ ಅವೆಲ್ಲ ಒಂದೇ ಸತ್ಯದ ಅನ್ವೇಷಣೆಯ ಬೇರೆ ಬೇರೆ ದಾರಿಗಳು ಅಷ್ಟೆ. ಕಾರಂತರಿಗೆ ಎಲ್ಲ ದಾರಿಗಳೂ ಚಿರಪರಿಚಿತ. ಆದ್ದರಿಂದಲೇ ಕಾರಂತರ ಬದುಕು ಬೇರೆಯಲ್ಲ; ಬರವಣಿಗೆ ಬೇರೆಯಲ್ಲ. ಅವರು ಪರಿಸರ ಮಾಲಿನ್ಯದ ಬಗ್ಗೆಯಾಗಲೀ, ಪ್ರಾಕೃತಿಕ ಸಮತೋಲನದ ಬಗ್ಗೆಯಾಗಲೀ ಶಾಸ್ತ್ರೀಯವಾಗಿ ಬರೆಯುವಷ್ಟೇ ಕಾಳಜಿಯಿಂದ ಅವುಗಳನ್ನು ಕುರಿತ ಚಳವಳಿಗಳ ನೇತೃತ್ವವನ್ನು ವಹಿಸುತ್ತಾರೆ. ಸಂಗೀತ, ಚಿತ್ರ, ನಟನೆ, ಪ್ರವಾಸ ಯಾವುದೇ ಆಗಲೀ ಸ್ವಾನುಭವದಲ್ಲಿ ಆಗಿ ಬರದೆ ಅವರಿಗೆ ತೃಪ್ತಿಯಿಲ್ಲ. ಹೀಗಾಗಿ ವಿದ್ಯಾರ್ಥಿ, ಶಿಕ್ಷಕ, ಪಂಡಿತ ಈ ಎಲ್ಲ ಅಂಶಗಳೂ ಕಾರಂತರ ಸಮಗ್ರ ವ್ಯಕ್ತಿತ್ವದಲ್ಲಿ ಒಂದಾಗುತ್ತವೆ.

ಕಾರಂತರನ್ನು ಕೆಲವರು ನಾಸ್ತಿಕರೆಂದು ಕರೆದರೆ ಮತ್ತೆ ಕೆಲವರು ಸಂಪ್ರದಾಯಶೀಲರೆಂದು ಕರೆಯುತ್ತಾರೆ. ಆದರೆ ಅವರನ್ನು ಅನಾಸ್ತಿಕರೆಂದು ಕರೆಯುವುದು ಹೆಚ್ಚು ಸೂಕ್ತವೇನೋ. ಕಾರಂತರ ಲೋಕದೃಷ್ಟಿ ಅಸಾಧಾರಣವಾದದ್ದು. ಅವರ ನಿಷ್ಠೆ ಕೇವಲ ಒಂದು ಮನುಷ್ಯ ಸಮೂಹಕ್ಕಾಗಿಯಾಗಲೀ, ಒಂದು ನಿರ್ದಿಷ್ಟ ಭೌಗೋಳಿಕ ಪರಿಸರಕ್ಕಾಗಿ ಯಾಗಲೀ ಸೀಮಿತವಾಗಿಲ್ಲ. ಇಡೀ ಬ್ರಹ್ಮಾಂಡವನ್ನು ಒಳಗೊಳ್ಳುವ ಉದಾರವಾದ ಮನಸ್ಸು ಕಾರಂತರದು. ಈ ಬ್ರಹ್ಮಾಂಡದಲ್ಲಿ ಅಸಂಖ್ಯ ನಕ್ಷತ್ರಗಳೂ, ಗ್ರಹಗಳೂ ಇದ್ದಾವೆ. ಭೂಮಂಡಲ ಈ ಅಗಾಧವಾದ ಬ್ರಹ್ಮಾಂಡದ ಒಂದು ಅತಿ ಚಿಕ್ಕಭಾಗ ಅಷ್ಟೆ. ಈ ಭೂ ಮಂಡಲದಲ್ಲಾದರೂ ಅಸಂಖ್ಯ ಬಗೆಯ ಜೀವಿಗಳಿದ್ದಾವೆ. ಈ ಜೀವ ಸಂಕುಲದಲ್ಲಿ ಮನುಷ್ಯ ಕುಲ ಒಂದು ಚಿಕ್ಕ ಗುಂಪು. ಈ ಮನುಷ್ಯ ಕುಲದಲ್ಲಿ ಹಲವು ರೀತಿಯ ಮನುಷ್ಯರಿದ್ದಾರೆ. ಆದ್ದರಿಂದ ಯಾವುದೇ ಮನುಷ್ಯನಾದವನು ತಾನೇ ಶ್ರೇಷ್ಠ, ಮೇಲು ಎಂದು ಗರ್ವಪಟ್ಟುಕೊಳ್ಳುವ ಹಾಗಿಲ್ಲ. ಅವನು ಇತರ ಎಲ್ಲಾ ಮನುಷ್ಯರೊಂದಿಗಷ್ಟೇ ಅಲ್ಲ, ಇಡೀ ಜೀವಸಂಕುಲದೊಡನೆ ಈ ಬ್ರಹ್ಮಾಂಡದಲ್ಲಿ ತನ್ನ ಉಸಿರಿರುವ ತನಕ ಬಾಳ್ವೆ ನಡೆಸಬೇಕು. ಮನುಷ್ಯ-ಅಂದರೆ ಒಂದು ಜೀವ ಘಟಕ-ತನ್ನನ್ನು ಇಡೀ ಬ್ರಹ್ಮಾಂಡದೊಂದಿಗೆ ಸಮೀಕರಿಸಿಕೊಂಡು ನೋಡಿದಾಗ ತನ್ನ ಮಿತಿಯನ್ನು ಅರಿತುಕೊಳ್ಳುತ್ತಾನೆ. ತಾನು ಬದುಕಿಗೆ ನೀಡುವುದಕ್ಕಿಂತ ಬದುಕು ತನಗೆ ನೀಡಿದ್ದು ಹೆಚ್ಚು ಎಂದು ತಿಳಿದುಕೊಳ್ಳುತ್ತಾನೆ. ಇದರಿಂದ ಅವನಲ್ಲಿ ಕೀಳರಿಮೆ ಮೂಡಬೇಕಾಗಿಲ್ಲ; ವಿನೀತಭಾವ ಬೆಳೆಯಬೇಕು. ಎಲ್ಲದರ ಬಗ್ಗೆ ಕುತೂಹಲ ಹುಟ್ಟಬೇಕು. ಎಲ್ಲವನ್ನೂ ತಿಳಿಯುವಲ್ಲಿ, ಹಂಚಿಕೊಳ್ಳುವಲ್ಲಿ, ಬದುಕನ್ನು ಮತ್ತಷ್ಟು ಸುಂದರ, ಸಮೃದ್ಧಗೊಳಿಸಿಕೊಳ್ಳುವಲ್ಲಿ ಸಾರ್ಥಕ್ಯ ಪಡೆಯಬೇಕು. ಇದು ಒಟ್ಟಾರೆ ಕಾರಂತರ ಜೀವನ ದೃಷ್ಟಿಯಾಗಿದೆ. ಕಾರಂತರ ಬಹುಮುಖ ಆಸಕ್ತಿಗಳಿಗೂ, ಲೋಕದೃಷ್ಟಿಗೂ ಎಂಥ ಸಾವಯವ ಸಂಬಂಧವಿದೆ ಎಂದು ಇದರಿಂದ ತಿಳಿದುಬರುತ್ತದೆ.

ಕಾರಂತರೇ ಕಾರಂತರ ಅತ್ಯುತ್ತಮ ವಿಮರ್ಶಕರು ಎಂಬ ಒಂದು ಮಾತು ನಮ್ಮಲ್ಲಿ ರೂಢಿ ಇದೆ. ಇದು ಎರಡು ರೀತಿಗಳಲ್ಲಿ ನಿಜವೆನಿಸುತ್ತದೆ. ಮೊದಲನೆಯದಾಗಿ ನಮ್ಮಲ್ಲಿ ಸೃಜನಶೀಲ ಸಾಹಿತ್ಯ ರಚಿತವಾದಷ್ಟು-ಪ್ರಮಾಣದಲ್ಲಿ ಮತ್ತು ಗುಣದಲ್ಲಿ-ವಿಮರ್ಶೆ ರಚಿತವಾಗಿಲ್ಲ. ನಮ್ಮ ಶ್ರೇಷ್ಠ ಲೇಖಕರಿಗೆ ಇನ್ನೂ ಅರ್ಥಪೂರ್ಣವಾದ ವಿಮರ್ಶಕ ಗೌರವ ಸಂದಾಯ ವಾಗಿಲ್ಲ. 'ಕಾರಂತ ಪ್ರಪಂಚ', 'ಸಾಧನೆ' ವಿಶೇಷಾಂಕ, 'ಸಾಕ್ಷಿ' ವಿಶೇಷಾಂಕ, 'ಕಾದಂಬರಿಕಾರನಾಗಿ ಕಾರಂತ', ಕಾರಂತರನ್ನು ಕುರಿತು ಪ್ರಕಟವಾಗಿರುವ ಲೇಖನಗಳ ಒಂದೆರಡು ಆ್ಯಂಥಾಲಜಿಗಳನ್ನು ಬಿಟ್ಟರೆ ಏನೂ ಇಲ್ಲ. ಎಸ್.ಅನಂತನಾರಾಯಣ (ಕಾರಂತರ ಕಾದಂಬರಿಗಳು), ವಿ.ಎಂ. ಇನಾಂದಾರ್ (ಕಾರಂತ: ಬದುಕು ಮತ್ತು ಬರಹ), ಟಿ.ಪಿ. ಅಶೋಕ (ಕಾರಂತರ ಕಾದಂಬರಿಗಳಲ್ಲಿ ಗಂಡು ಹೆಣ್ಣು) ಇವರನ್ನು ಬಿಟ್ಟರೆ ಬೇರೆ ಯಾರೂ ಒಂದು ಇಡೀ ಪುಸ್ತಕವನ್ನು ಕಾರಂತರನ್ನು ಕುರಿತು ಬರೆದಂತೆ ಕಾಣುವುದಿಲ್ಲ. ವಿಶ್ವ ಕನ್ನಡ ಸಾಹಿತ್ಯ ಮಾಲೆ ಪ್ರಕಟಿಸಿರುವ ಒಂದು ಪುಸ್ತಕದಲ್ಲಿ ಮತ್ತು ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿರುವ ಒಂದು ಇಡೀ ಪುಸ್ತಕದಲ್ಲಿ ಕಾರಂತರನ್ನು ಇಂಗ್ಲಿಷಿನಲ್ಲಿ ಪರಿಚಯ ಮಾಡಿಕೊಡಲಾಗಿದೆ. 'ಯಕ್ಷಗಾನ', 'ಮರಳಿ ಮಣ್ಣಿಗೆ', 'ಮೂಕಜ್ಜಿಯ ಕನಸುಗಳು', 'ಚೋಮನದುಡಿ' ಹೀಗೆ ಕೆಲವೇ ಕೆಲವು ಪುಸ್ತಕಗಳು ಮಾತ್ರ ಇಂಗ್ಲಿಷಿಗೆ ಅನುವಾದಗೊಂಡಿವೆ.

ಎರಡನೆಯದಾಗಿ, ಕಾರಂತರ ಆತ್ಮಚರಿತ್ರೆಯೇ ಅವರು ಬೆಳೆದು ಬಂದ ಕ್ರಮವನ್ನೂ, ಅವರ ಯೋಚನಾ ಸರಣಿಯನ್ನೂ, ಅವರ ಕೃತಿಗಳ ಆಶಯ, ಪ್ರೇರಣೆಗಳನ್ನೂ ಖಚಿತವಾಗಿ ನಿರೂಪಿಸುತ್ತವೆ. 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಮತ್ತು 'ಸ್ಮೃತಿಪಟಲದಿಂದ' ಭಾಗ 1, 2 ಮತ್ತು 3ರಲ್ಲಿ ಕಾರಂತರೇ ಈ ಬಗ್ಗೆ ನಿಖರವಾದ ಸೂಚನೆಗಳನ್ನು ಕೊಟ್ಟಿದ್ದಾರೆ. ಇತ್ತೀಚೆಗೆ 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಕೃತಿಯ ವಿಸ್ತೃತ ಮತ್ತು ಪರಿಷ್ಕೃತ ಆವೃತ್ತಿಯೊಂದು ಅಕ್ಷರ ಪ್ರಕಾಶನ, ಸಾಗರದಿಂದ ಬಿಡುಗಡೆಯಾಗಿದೆ. 'ಬಾಳ್ವೆಯೇ ಬೆಳಕು' ಕಾರಂತರ ಮ್ಯಾನಿಫೆಸ್ಟೊ ಎಂಬಂತಿದೆ. ನಾಲ್ವತ್ತರ ದಶಕದಲ್ಲಿಯೇ ಪ್ರಕಟಗೊಂಡ ಈ ಕಿರುಗ್ರಂಥದಲ್ಲಿ ಕಾರಂತರು ಬದುಕಿನ ಬಗ್ಗೆ ತಮ್ಮ ವಿಚಾರಗಳನ್ನು ಸ್ಪಷ್ಟವಾಗಿ, ದಿಟ್ಟವಾಗಿ ಪ್ರತಿಪಾದಿಸಿದ್ದಾರೆ. 'ಬಾಳ್ವೆಯೇ ಬೆಳಕು' ಎಂಬ ಶೀರ್ಷಿಕೆಯೇ ಕಾರಂತರ ಮನೋಧರ್ಮವನ್ನು ಸೂತ್ರೀಕರಿಸುವಂತೆ ಕಂಡುಬರುತ್ತದೆ. 'ಬಾಳ್ವೆಯೇ ಬೆಳಕು' ಮತ್ತು 'ಹುಚ್ಚು ಮನಸ್ಸಿನ ಹತ್ತು ಮುಖಗಳು'ಕೃತಿಗಳಿಗೆ ಸೃಜನಾತ್ಮಕ ಉದಾಹರಣೆಗಳೋ

ಎಂಬಂತೆ ಅವರ ಇತರ ಕೃತಿಗಳು ರಚಿತವಾದಂತಿವೆ. ಕಾರಂತರು ತಮ್ಮ ಕೃತಿಗೆ 'ಹತ್ತಾರು ಮುಖಗಳು' ಎಂಬ ಶೀರ್ಷಿಕೆ ಕೊಟ್ಟಿದ್ದರೆ ಹೆಚ್ಚು ಸಮಂಜಸವಾಗುತ್ತಿತ್ತೇನೋ ಎಂಬ ಇನಾಂದಾರರ ಮಾತುಗಳು ನೆನಪಿಗೆ ಬರುತ್ತವೆ. 'ಬಾಳ್ವೆಯೇ ಬೆಳಕು' ಒಂದು ಅಪ್ಪಟ ರ‍್ಯಾಶನಲಿಸ್ಟ್ ಕೃತಿ. ಕಾರಂತರ ನಿರ್ಲಿಪ್ತ, ಖಚಿತ, ವಿಶ್ಲೇಷಣಾತ್ಮಕ ಬರವಣಿಗೆಯ ಅತ್ಯುತ್ತಮ ಮಾದರಿ ಇದು. 'ಸ್ಮೃತಿ ಪಟಲ' ಒಂದು ದೃಷ್ಟಿಯಿಂದ ತುಂಬ ವೈಯಕ್ತಿಕ ಸ್ವರೂಪದ ಬರವಣಿಗೆ, 'ಹುಚ್ಚು ಮನಸ್ಸಿನ ಹತ್ತು ಮುಖಗಳು' ವಸ್ತುನಿಷ್ಠತೆ, ಆತ್ಮನಿಷ್ಠತೆಗಳ ಅಪೂರ್ವ ಸಂಯೋಗದಲ್ಲಿ ಬಹು ವಿಶಿಷ್ಟವಾದ ಅನುಭವವನ್ನು ಕೊಡುತ್ತದೆ. ತಿಳಿಹಾಸ್ಯವೂ ಬೆರತ ಈ ಅಪರೂಪದ ಬರವಣಿಗೆಯಲ್ಲಿ ದಕ್ಷಿಣ ಕನ್ನಡದ ಸಾಮಾನ್ಯ ಹುಡುಗನೊಬ್ಬ ತನ್ನ ಅನುಭವದ ದಿಗಂತಗಳನ್ನು ಹಂತ ಹಂತವಾಗಿ ವಿಸ್ತರಿಸಿಕೊಂಡ ಸಮರ್ಥ ಚಿತ್ರಣ ಇದೆ.

ಕಾರಂತರ ಮೇಲಿನ ಕೃತಿಗಳನ್ನು ಗಮನಿಸಿದಾಗ ಅವರು ಬದುಕನ್ನು ಗೌರವಿಸಿ, ಅದರ ಬಗ್ಗೆ ಕುತೂಹಲ ತಾಳಿ, ಅದನ್ನು ಅರಿಯುವ ಪ್ರಯತ್ನವನ್ನು ಗುರುತಿಸಿಕೊಳ್ಳುತ್ತೇವೆ. ಕಾರಂತರ ಕುತೂಹಲ ಕೇವಲ ವಿಜ್ಞಾನಿಯ ಕುತೂಹಲವಲ್ಲ. ಅದರಲ್ಲಿ ಸೌಂದರ್ಯೋಪಾಸನೆಯೂ ಸೇರಿದೆ. ಆದರೆ ಅನುಭವದ ಅಂಶಗಳು ಕಾರಂತರಲ್ಲಿ ಕಡಿಮೆ. ಇದು ಕಾರಂತರ ಒಂದು ಮಿತಿಯೆಂದೂ ಹಲವು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ. ಇದು ಚರ್ಚಿಸಬೇಕಾದ ವಿಷಯ.

ಅನುಭವಗಳು ಇಂದ್ರಿಯ ಗ್ರಾಹ್ಯವಾದ್ದರಿಂದ ಎಲ್ಲ ಇಂದ್ರಿಯಗಳ ಸಾಧ್ಯತೆಗಳನ್ನು ಹೆಚ್ಚಿಸಿಕೊಳ್ಳಬೇಕು, ಸೂತ್ರಗೊಳಿಸಿಕೊಳ್ಳಬೇಕೆಂದು ಕಾರಂತರು ಬಯಸುತ್ತಾರೆ. ಆದ್ದರಿಂದಲೇ ಕಾರಂತರು "ಕಲೆಗಾಗಿ ಕಲೆ" ವಾದವನ್ನು ಒಪ್ಪುವಂತೆ ಕಾಣುವುದಿಲ್ಲ. ಸೌಂದರ್ಯ ಮತ್ತು ಉಪಯೋಗ ಇವುಗಳನ್ನು ಪರಸ್ಪರ ಬೇರ್ಪಡಿಸಲಾಗದೆಂಬ ನೆಲೆಯಲ್ಲೇ ಅವರು ಯೋಚಿಸುತ್ತಾರೆ ಎನಿಸುತ್ತದೆ. ದೃಷ್ಟಿ, ಶ್ರವಣ, ಚಲನೆಗಳ ಸಾಧ್ಯತೆಗಳನ್ನು ವಿಸ್ತರಿಸುವ ಚಿತ್ರ, ಶಿಲ್ಪ, ಸಂಗೀತ, ಯಕ್ಷಗಾನ, ನಾಟಕ, ನೃತ್ಯ ಎಲ್ಲವೂ ಕಾರಂತರಿಗೆ ಮುಖ್ಯವಾಗುವುದು ಪ್ರಾಯಶಃ ಈ ಕಾರಣದಿಂದಲೇ. ಮನುಷ್ಯನ ಸಮಸ್ತ ಚಟುವಟಿಕೆಗಳೂ ಭಾಷೆಯ ಮೂಲಕವೇ ನಡೆಯಬೇಕಾದ್ದರಿಂದ ಶಾಬ್ದಿಕ ಭಾಷೆಯ ಜೊತೆ ಜೊತೆಗೇ ಇತರ ಎಲ್ಲ ಭಾಷೆಗಳ ಬಗ್ಗೆ ಕಾರಂತರಿಗೆ ತುಂಬ ಕುತೂಹಲ. ಈ ಕುತೂಹಲ ಎರಡು ಬಗೆಯದು: ಒಂದು ಅವುಗಳನ್ನು ಅನನ್ಯ ಸ್ವರೂಪದಲ್ಲಿ ಅರ್ಥ ಮಾಡಿಕೊಳ್ಳುವುದು. ಎರಡನೆಯದು ಅವುಗಳಲ್ಲಿ ಸ್ವತಃ ಪ್ರಯೋಗಗಳನ್ನು ನಡೆಸುವುದು. ಇವುಗಳನ್ನು ಮನುಷ್ಯನ ನಾಗರೀಕತೆಯ ಸಮಗ್ರ ಚೌಕಟ್ಟಿನಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸುವುದು. ಆದ್ದರಿಂದಲೇ ಕಾರಂತರಲ್ಲಿ ಶಿಶು ಸಹಜ ಮುಗ್ಧತೆ, ವಿಜ್ಞಾನಿಯ ಕುತೂಹಲ, ಕಲಾವಿದನ ಸೂಕ್ಷ್ಮತೆ, ತತ್ತ್ವಜ್ಞಾನಿಯ ಶೋಧಕ ಪ್ರವೃತ್ತಿ ಒಟ್ಟೊಟ್ಟಿಗೇ ಕಂಡುಬರುವುದು. 'ಸೌಂದರ್ಯ ಪ್ರಜ್ಞೆಯನ್ನು ಬೆಳೆಯಿಸಲು', 'ಸ್ವಾರ್ಥಿ ಮಾನವ', 'ನಾಗರಿಕತೆಯ ಹೊಸ್ತಿಲಲ್ಲಿ' ಮೊದಲಾದ ಕೃತಿಗಳಲ್ಲಿ ವಸ್ತು ಮೇಲುನೋಟಕ್ಕೆ ಬೇರೆ ಬೇರೆ ಎನಿಸಿದರೂ ಒಟ್ಟಾರೆ ಮನೋಧರ್ಮ ಮೇಲೆ ಸೂಚಿಸಿರುವಂಥಾದ್ದೇ ಆಗುತ್ತದೆ. ಧರ್ಮದ ಬಗ್ಗೆ ಕಾರಂತರ ಒಟ್ಟಾರೆ ನಿಲುವುಗಳಿಗೂ, ಈ ದೃಷ್ಟಿಕೋನಕ್ಕೂ ಸ್ಪಷ್ಟವಾದ ಸಂಬಂಧವೇ ಇದೆ. ಕಾರಂತರಿಗೆ ಧರ್ಮವೆಂದರೆ ಕೆಲವು ಕಟ್ಟುಪಾಡುಗಳ ವ್ಯವಸ್ಥೆ ಅಲ್ಲವೇ ಅಲ್ಲ. ಅದು ಮನುಷ್ಯ ತನಗೂ, ಪರರಿಗೂ, ಒಟ್ಟಾರೆ ಬ್ರಹ್ಮಾಂಡದೊಂದಿಗೂ ಏರ್ಪಡಿಸಿಕೊಳ್ಳುವ, ತನ್ನ ನಿತ್ಯಜೀವನದ ಉಪದ್ವ್ಯಾಪಗಳ ಮಧ್ಯದಲ್ಲೇ, ಇಲ್ಲೇ, ಈ ಕ್ಷಣದಲ್ಲೇ ಏರ್ಪಡಿಸಿಕೊಳ್ಳುವ ಸಂಬಂಧದ ಪ್ರಶ್ನೆಯಾಗುತ್ತದೆ. ಇದೂ ಕೂಡ ಸಾಪೇಕ್ಷವಾದದ್ದೇ; ಬದುಕಿನ ಗತಿಯನ್ನು ಆಧರಿಸಿಕೊಂಡದ್ದೇ ಎಂದು ಕಾರಂತರು ತಿಳಿಯುತ್ತಾರೆ. ನೀತಿ ಕುರಿತಾದ ಕಲ್ಪನೆಗಳ ಬಗ್ಗೆಯೂ ಕಾರಂತರದ್ದು ಅಂಧಶ್ರದ್ಧೆ, ಪೂರ್ವಾಗ್ರಹಗಳಿಲ್ಲದ ಮುಕ್ತದೃಷ್ಟಿ.

ಒಬ್ಬ ವಿಜ್ಞಾನಿಯ ಆಧ್ಯಾತ್ಮಿಕತೆಗೂ, ಸಂತನೊಬ್ಬನ ಆಧ್ಯಾತ್ಮಿಕತೆಗೂ ಇರುವ ವ್ಯತ್ಯಾಸಗಳನ್ನು ಗುರುತಿಸಿಕೊಂಡರೆ ಕಾರಂತರ ಲೋಕದೃಷ್ಟಿ ಸ್ಪಷ್ಟವಾಗುತ್ತದೆ. ಕಾರಂತರು ವಿರಕ್ತಿ ಮೂಲವಾದ, ಜೀವ ವಿರೋಧಿಯಾದ ಎಲ್ಲ ಮೌಲ್ಯಗಳನ್ನು ತಿರಸ್ಕರಿಸುತ್ತಾರೆ. ಪ್ರಕೃತಿಯಲ್ಲೂ ಅವರಿಗೆ ಭಾವುಕ ತನ್ಮಯತೆ ಅಷ್ಟಾಗಿ ಇಲ್ಲ. ಇದರರ್ಥ ಅವರು ಪ್ರಕೃತಿಯ ಚೆಲುವಿಗೆ ಮೈಮರೆಯಲಾರರು ಎಂದಲ್ಲ. ಅದರಲ್ಲೇ ಅವರು ಮುಳುಗಿ ಹೋಗು ವುದಿಲ್ಲ ಅಷ್ಟೆ. ಅಲ್ಲದೆ ಅನುಭವದ ಕೇವಲ ಈ ಮುಖವನ್ನಲ್ಲದೆ ಬೌದ್ಧಿಕ ಮುಖದತ್ತಲೂ ಅವರಿಗೆ ತುಂಬ ಆಸಕ್ತಿ. ಅಂದರೆ ಹೂವೊಂದನ್ನು, ಪ್ರಾಣಿಯೊಂದನ್ನು, ಕೀಟವೊಂದನ್ನು ಅದರ ಸೊಗಸಿಗಾಗಿ ಮೆಚ್ಚಿಕೊಳ್ಳುವ ಕಾರಂತರು ಅವುಗಳ ಜೈವಿಕ ಮೂಲವನ್ನು ಹುಡುಕಿಕೊಂಡು ಹೋಗುತ್ತಾರೆ. ಸೃಷ್ಟಿರಹಸ್ಯದ ವಿಸ್ಮಯ ಅಷ್ಟಕ್ಕೆ ನಿಲ್ಲದೆ ಬೌದ್ಧಿಕ ಕುತೂಹಲವನ್ನು ಪ್ರಚೋದಿಸಿ ತಿಳವಳಿಕೆಯತ್ತ, ಜ್ಞಾನದತ್ತ, ಸತ್ಯದತ್ತ ಮುಖ ಮಾಡಿಸುತ್ತದೆ. ಆದ್ದರಿಂದಲೇ ಪರಿಸರ ವಿಜ್ಞಾನದಲ್ಲಿ ಕಾರಂತರಿಗೆ ಅಷ್ಟೊಂದು ಆಸಕ್ತಿ. ಪ್ರಕೃತಿಯನ್ನು ಕಾಪಾಡಿಕೊಳ್ಳುವುದು, ಜೈವಿಕ ಸಮತೋಲನವನ್ನು ಕಾಪಾಡಿಕೊಳ್ಳುವುದು, ಮನುಷ್ಯ ತನ್ನ ಬಗ್ಗೆ ಮಾತ್ರವಲ್ಲದೆ ಸಮಸ್ತ ಜೀವಕೋಟಿಯನ್ನೂ ಗಮನದಲ್ಲಿಟ್ಟುಕೊಂಡೇ ತನ್ನ ಯೋಜನೆಗಳನ್ನು ರೂಪಿಸಿಕೊಳ್ಳುವುದು, ಆಕ್ರಮಣಶೀಲ, ಶೋಷಕ ಪ್ರವೃತ್ತಿಯನ್ನು ಹತ್ತಿಕ್ಕಿಕೊಳ್ಳುವುದು ಕಾರಂತರ ದೃಷ್ಟಿಯಲ್ಲಿ ನಿಜವಾದ ಧಾರ್ಮಿಕ ಚಟುವಟಿಕೆಗಳೇ ಎನ್ನಿಸಿಕೊಳ್ಳುತ್ತವೆ. ಧಾರ್ಮಿಕ ಸಂಘ ಸಂಸ್ಥೆಗಳನ್ನೂ, ಧರ್ಮಗುರುಗಳನ್ನೂ, ಮೂರ್ತಿಪೂಜೆ, ಭಜನೆಗಳನ್ನು ತಿರಸ್ಕರಿಸಿಯೂ ಕಾರಂತರು ಏಕೆ ನಾಸ್ತಿಕರಾಗುವುದಿಲ್ಲ ಎಂಬುದು ಈಗ ಅರ್ಥವಾಗುತ್ತದೆ. ಕಾರಂತರು ನಿಸರ್ಗದೊಂದಿಗೆ ಎಂತಹ ಆತ್ಮೀಯವಾದ, ನಿಕಟವಾದ ಸಂಪರ್ಕವನ್ನಿಟ್ಟು ಕೊಂಡಿದ್ದರೂ ಅವರ ಕಾದಂಬರಿಗಳಲ್ಲಿ ಪ್ರಕೃತಿ ತನ್ನ 'ನಿಜತ್ವ'ದಲ್ಲಿ ಅಂದರೆ ಕಾಡು ಕಾಡಾಗಿ, ಕಡಲು ಕಡಲಾಗಿ ಕಾಣಿಸಿಕೊಳ್ಳು ವುದಿಲ್ಲ ಎಂಬ ಆಕ್ಷೇಪವೂ ಇದೆ. ಇದೂ ಚರ್ಚೆಗೆ ಒಳಗಾಗಬೇಕಾದ ವಿಷಯ. ಕಾರಂತರ ವ್ಯಕ್ತಿತ್ವ ಹೋಳು ಹೋಳಾಗಿ ವಿಭಿನ್ನ ಕಲಾ ಪ್ರಕಾರಗಳಲ್ಲಿ ತನ್ನ ಅಭಿವ್ಯಕ್ತಿಯನ್ನು ಪಡೆದುಕೊಳ್ಳಲು ಯತ್ನಿಸಿದೆ ಎಂಬ ಅಭಿಪ್ರಾಯವನ್ನೂ ಗಂಭೀರವಾಗಿಯೇ ಪರಿಶೀಲಿಸಬೇಕಾಗುವುದು. ಏಕೆಂದರೆ ಕಾದಂಬರಿ ಪ್ರಕಾರದಲ್ಲಿ ಕಾರಂತರು ಎಂತಹ ಕಟು ವಾಸ್ತವವಾದಿಯಾಗಿದ್ದರೂ ಅವರು ಬರೆದು ಆಡಿಸಿರುವ ಗೀತನಾಟಕಗಳು, ಪೌರಾಣಿಕ ಪಾತ್ರಗಳನ್ನೇ ನಿರೂಪಿಸುವ ಯಕ್ಷಗಾನಗಳು, ಸಂಗೀತ, ಚಿತ್ರಗಳಲ್ಲಿ ಅವರ ಪ್ರಯೋಗಗಳು ವಾಸ್ತವಾತೀತವಾದ ಅಂಶಗಳನ್ನೂ ಒಳಗೊಳ್ಳುತ್ತದೆಯಲ್ಲವೆ? ಅಲ್ಲದೆ ಕಾರಂತರ ಪ್ರಮುಖ ಅಭಿವ್ಯಕ್ತಿ ಮಾಧ್ಯಮ ಕಾದಂಬರಿಯಾಗಿರುವುದರಿಂದ ಕಾರಂತರು ಇತರ ಕಲಾಮಾಧ್ಯಮಗಳಲ್ಲಿ, ಜ್ಞಾನ ಶಾಖೆಗಳಲ್ಲಿ ನಡೆಸಿರುವ ಅಭ್ಯಾಸ ಕಾದಂಬರಿ ರಚನೆಯಲ್ಲಿ, ಅವರ ಸಮಗ್ರ ವ್ಯಕ್ತಿತ್ವದಲ್ಲಿ ಕರಗಿ ಒದಗಿ ಬಂದಿವೆಯೆ ಎಂಬ ಪ್ರಶ್ನೆಗಳನ್ನು ಕೆಲ ವಿಮರ್ಶಕರು ಕೇಳಿದ್ದಾರೆ.

'ದೇಶ ಸುತ್ತು, ಕೋಶ ಓದು' ಎಂಬ ಗಾದೆಯನ್ನು ಕಾರಂತರಂಥ ವರನ್ನು ಗಮನಿಸಿಯೇ ಕಟ್ಟಿದ್ದಾರೋ ಏನೋ. ಕಾರಂತರ ವ್ಯಕ್ತಿತ್ವದ ಬಹು ವಿಶಿಷ್ಟ ಅಂಶವೇ ಇದೆಂದು ತೋರುತ್ತದೆ. ಅವರಿಗೆ ಬದುಕಿನೊಂದಿಗೆ ಇಂದ್ರಿಯ ಗ್ರಾಹ್ಯ ನಿಕಟ ಸಂಪರ್ಕವೂ ಬೇಕು; ಅದನ್ನು ವೈಜ್ಞಾನಿಕವಾಗಿ, ಬೌದ್ಧಿಕವಾಗಿ ನಿಜಗೊಳಿಸುವ ಆಳವಾದ ಓದೂ ಬೇಕು. ಕಾರಂತರ ಪ್ರವಾಸ ಗ್ರಂಥಗಳು ಕನ್ನಡ ಗದ್ಯದಲ್ಲಿ ಪ್ರಮುಖ ಆಕರ್ಷಣೆಗಳು. 'ಅಬೂನಿಂದ ಬರಾಮಕ್ಕೆ', 'ಅಪೂರ್ವ ಪಶ್ಚಿಮ', 'ಪೂರ್ವದಿಂದ ಅತ್ಯಪೂರ್ವಕ್ಕೆ' ಮುಂತಾದ ಕೃತಿಗಳು ನಮಗೆ ನೀಡುವ ಮಾಹಿತಿ, ಆ ಮಾಹಿತಿಯ ಬಗ್ಗೆ ಹುಟ್ಟಿಸುವ ಕುತೂಹಲ ಮುಖ್ಯವಾದದ್ದು. ಕಾರಂತರ ಪ್ರವಾಸ ಕಥನಗಳನ್ನು ಓದುವು ದೆಂದರೆ ಅವರೊಂದಿಗೆ ಪ್ರವಾಸ ಮಾಡಿದಂತೆಯೇ. ಒಂದು ಪ್ರದೇಶದ ಚಾರಿತ್ರಿಕ, ಭೌಗೋಳಿಕ, ಸಾಂಸ್ಕೃತಿಕ ವಿವರಗಳು, ಅಲ್ಲಿನ ಸಸ್ಯ, ಪ್ರಾಣಿ ಜಗತ್ತು, ಜನಜೀವನ ಯಾವುದೂ ಕಾರಂತರ ಕಣ್ಣು ತಪ್ಪಿಸಿಕೊಳ್ಳುವುದಿಲ್ಲ. ಕಾರಂತರ ಕೃತಿಗಳಲ್ಲಿ ಈ ಮಾಹಿತಿಗಳಿದ್ದರೂ ಕೇವಲ ದಾಖಲೆಗಳಾಗಿ ಮೂಡಿ ಬರದೆ ಒಟ್ಟು ಜೀವನಕ್ಕೆ ಅನ್ವಯವಾಗುವಂತೆಯೇ ಮೂಡಿಬರುವುದರಿಂದ ಮಹತ್ವಪೂರ್ಣವೆನಿಸುತ್ತದೆ. ಕಾರಂತರು 'ಪ್ರತ್ಯಕ್ಷ ಕಂಡಿದ್ದನ್ನು ಪ್ರಾಮಾಣಿಸಿ ನೋಡು'ವಂಥವರು. ಆದ್ದರಿಂದಲೇ ಅವರಿಗೆ ಗಾಸಿಪ್ಪುಗಳೂ, ಕಾಡು ಹರಟೆಗಳೂ ಸೇರುವುದಿಲ್ಲ. ಅವರಿಗೆ ಹಾಸ್ಯಪ್ರಜ್ಞೆ ಇಲ್ಲವೆಂದಲ್ಲ. ಆದರೆ ಅದು ಕೇವಲ ಜೋಕುಗಳಲ್ಲಿ ಪರ್ಯವಸಾನಗೊಳ್ಳುವ ಹಾಸ್ಯಪ್ರಜ್ಞೆಯಲ್ಲ. ಕಾರಂತರ ಹಾಸ್ಯಕ್ಕಿಂತ ವ್ಯಂಗ್ಯವೇ ಅತ್ಯಂತ ಕಟುವಾದದ್ದು. ಸಮಾಜದ ಮೌಢ್ಯವನ್ನು ಬಯಲಿಗೆಳೆಯಲು, ಧರ್ಮದ ಹೆಸರಿನಲ್ಲಿ ಜನರನ್ನು ಶೋಷಿಸುವವರನ್ನು ಬಯಲಿಗೆಳೆಯಲು ಕಾರಂತರ ವ್ಯಂಗ್ಯ, ಚಾಟಿ ಏಟಿನಂತೆ ಬಳಕೆಯಾಗುತ್ತದೆ. ತಾವೇ ಹೊರಡಿಸುತ್ತಿದ್ದ 'ವಸಂತ' ಪತ್ರಿಕೆಯಲ್ಲಿ, 'ಗ್ನಾನ', 'ದೇವದೂತರು', ಮೊದಲಾದ ಕೃತಿಗಳಲ್ಲಿ ಇದನ್ನು ಗಮನಿಸಬಹುದು. ಆದರೆ ಕಾರಂತರದು ಕೇವಲ ಮೂರ್ತಿಭಂಜಕ ಪ್ರವೃತ್ತಿ ಅಲ್ಲವಾದ್ದರಿಂದ ಅವರಿಗೆ ವ್ಯಂಗ್ಯವೇ ಒಂದು ಮೌಲ್ಯವಾಗಲಿಲ್ಲ. 'ಹಳ್ಳಿಯ ಹತ್ತು ಸಮಸ್ತರು', 'ಮೈಲಿಕಲ್ಲಿನೊಡನೆ ಮಾತುಕತೆಗಳು' ಕೃತಿಗಳಲ್ಲಿ ಕಾರಂತ ವ್ಯಕ್ತಿತ್ವದ ಮತ್ತೊಂದು ಪದರ ವ್ಯಕ್ತವಾಗುವುದನ್ನು ಕಂಡಾಗ 'ಕಾರಂತರು ಇದೇ' ಎಂದು ಹಣೆಪಟ್ಟಿ ಹಚ್ಚಲಾಗುವುದಿಲ್ಲ ಎಂಬುದನ್ನು ಗುರುತಿಸಿಕೊಳ್ಳುತ್ತೇವೆ.

ಕಾರಂತರು ತಮ್ಮ ಕಾದಂಬರಿಗಳಲ್ಲಿ ವಹಿಸುವ ಪಾತ್ರವೂ ನಿರೂಪಕ, ವೀಕ್ಷಕನದೇ. 'ಬೆಟ್ಟದ ಜೀವ', 'ಅಳಿದ ಮೇಲೆ' ಕೃತಿಗಳಲ್ಲಿ ನಿರೂಪಕನೂ ಒಂದು ಜೀವಂತ ಪಾತ್ರವಾಗುವುದುಂಟು. ಆದರೆ ಬಹಳಷ್ಟು ಕಾದಂಬರಿಗಳಲ್ಲಿ ಕಾರಂತರು ನಿರೂಪಕನ ಸರ್ವ ಸಾಕ್ಷಿತ್ವವನ್ನೇ ಕಾಣಿಸಿಕೊಡುತ್ತಾರೆ. ಕಾರಂತರ ಜೀವನ ದೃಷ್ಟಿಗೂ ಬರವಣಿಗೆಯ ಈ ಶೈಲಿಗೂ ಸಹಜವಾಗಿಯೇ ಇರುವ ಸಂಬಂಧ ಯಾರಿಗಾದರೂ ಹೊಳೆಯದೇ ಇರದು. ಚಿಕಿತ್ಸಕ ದೃಷ್ಟಿಯಿಂದ ಮನುಷ್ಯ ಸಂಬಂಧಗಳನ್ನು ಪರಿಶೀಲಿಸಿ ಸಾಪೇಕ್ಷವಾದ ಮನುಷ್ಯ ಸಂದರ್ಭಗಳಲ್ಲಿ ಅವುಗಳನ್ನು ತೂಗಿ ನೋಡಿ ಜೀವನ ವಿನ್ಯಾಸವನ್ನು ಗುರುತಿಸಿಕೊಳ್ಳುವ ಬಗೆ ಕಾರಂತರಿಗೆ ಹೆಚ್ಚು ಪ್ರಿಯವಾದದ್ದು. 'ಚೋಮನದುಡಿ', 'ಬೆಟ್ಟದ ಜೀವ', 'ಮರಳಿ ಮಣ್ಣಿಗೆ', 'ಅಳಿದ ಮೇಲೆ', 'ಕನ್ನಡಿಯಲ್ಲಿ ಕಂಡಾತ', 'ಮೈಮನಗಳ ಸುಳಿಯಲ್ಲಿ', 'ಕುಡಿಯರ ಕೂಸು', 'ಮೂಕಜ್ಜಿಯ ಕನಸುಗಳು' ಯಾವುದೇ ಭಾಷೆಯಲ್ಲಿನ ಉತ್ಕೃಷ್ಟ ಕಾದಂಬರಿಗಳು. 'ಸನ್ಯಾಸಿಯ ಬದುಕು', 'ಜಗದೋದ್ಧಾರ ನಾ', 'ಕಣ್ಣಿದ್ದೂ ಕಾಣರು', 'ಕೇವಲ ಮನುಷ್ಯರು', 'ಕನ್ಯಾಬಲಿ' ಮತ್ತು ಹಲವಾರು ನಾಟಕಗಳಲ್ಲಿ ಕಾರಂತರು ನಮ್ಮ ಸಮಾಜದ ಅನೇಕ ಹುಳುಕುಗಳನ್ನು ಎತ್ತಿತೋರಿಸಿದ್ದಾರೆ. 'ಗೊಂಡಾರಣ್ಯ', 'ಮುಗಿದ ಯುದ್ಧ', 'ಮೂಜನ್ಮ'ದಂಥ ಕಾದಂಬರಿಗಳಲ್ಲಿ ಪ್ರಮುಖ ವಸ್ತು ರಾಜಕೀಯ.

ದೇವರು, ಧರ್ಮಶಾಸ್ತ್ರಗಳು ಕಾರಂತರನ್ನು ಅಷ್ಟಾಗಿ ಕಾಡದಿದ್ದರೂ ಪರಂಪರೆ ನೀಡಿರುವ ಕೆಲ ಮೌಲ್ಯಗಳು ಎಲ್ಲ ಕಷ್ಟ ಕಾರ್ಪಣ್ಯಗಳ ನಡುವೆಯೂ ಬದುಕುವ ಸ್ಥೈರ್ಯವನ್ನು ನೀಡುತ್ತ ಬಂದಿರುವುದನ್ನು ಕಾರಂತರು ಗಮನಿಸಿದ್ದಾರೆ. ಕಾರಂತರ ಕಾದಂಬರಿಗಳಲ್ಲಿ ಕಂಡುಬರುವ ವೃದ್ಧೆಯರು ತೋರಿಸುವ ಘನತೆ, ಜೀವನ ಶ್ರದ್ಧೆಗಳು ಅಸಾಧಾರಣವಾದದ್ದು. ಪರಂಪರಾಗತ ಮೌಲ್ಯಗಳನ್ನು ಕಾರಂತರು ಎತ್ತಿ ಹಿಡಿಯುತ್ತಾರೆಂದಲ್ಲ. ಒಂದು ನಿಟ್ಟಿನಲ್ಲಿ ಜೀವನವನ್ನು ಸ್ಥಗಿತಗೊಳಿಸುವ, ಮತ್ತೊಂದು ನಿಟ್ಟಿನಲ್ಲಿ ಜೀವನಕ್ಕೆ ಸ್ಥೈರ್ಯ ತುಂಬುವ ಡಯಲೆಕ್ಟಿಕ್ ಕಾರಂತರನ್ನು ಬೆರಗುಗೊಳಿಸಿದೆ. ಈ ಮೌಲ್ಯಗಳು ಪಲ್ಲಟವಾಗುವ ಕ್ರಮವನ್ನು, ಹೊಸ ಮೌಲ್ಯಗಳ ಅನಿವಾರ್ಯ ಬೆಳವಣಿಗೆಯನ್ನು ಕಾರಂತರ ಕಾದಂಬರಿಗಳು ಸೂಕ್ಷ್ಮವಾಗಿ ಚಿತ್ರಿಸುತ್ತವೆ. ನಮ್ಮ ಅನೇಕ ಎಡಪಂಥೀಯರ ಬರವಣಿಗೆಗಿಂತ ಕುವೆಂಪು, ಕಾರಂತ, ಮಾಸ್ತಿ, ಬೇಂದ್ರೆಯವರ ಕೃತಿಗಳೇ ಮಾರ್ಕ್ಸ್‌ವಾದಿ ವಿಮರ್ಶಕರಿಗೆ ಸವಾಲಾಗುತ್ತವೆ ಎಂಬ ಒಬ್ಬ ವಿಮರ್ಶಕರ ಅಭಿಪ್ರಾಯ ಸ್ವೀಕಾರ ಯೋಗ್ಯವೆನ್ನಿಸುತ್ತದೆ. ಸುಖ-ದುಃಖಗಳ, ಏಳು-ಬೀಳುಗಳ ಪರಿಕ್ರಮದಲ್ಲೇ ಬದುಕು ಮಾಗುವ ಹದವಾಗುವ ಬಗೆಯನ್ನು ಚಿತ್ರಿಸುವ ಕಾರಂತರು ಅದಮ್ಯವಾದ ಮನುಷ್ಯನ ಸಾಮರ್ಥ್ಯವನ್ನೂ, ಘನತೆಯನ್ನೂ, ಸಾಧ್ಯತೆ ಗಳನ್ನು ಎತ್ತಿ ಹಿಡಿಯುತ್ತ ಬಂದಿದ್ದಾರೆ. ಇದಕ್ಕೆ ಅಡ್ಡಿಯಾಗುವ ಮೌಲ್ಯ ಗಳನ್ನು, ಪ್ರವೃತ್ತಿಗಳನ್ನು ಕಟುವಾಗಿ ಟೀಕಿಸಿದ್ದಾರೆ. ಚೆಲುವನ್ನು ಹಿಡಿದಿದ್ದಾರೆ; ಚೆಲುವನ್ನು ಉಳಿಸಿಕೊಳ್ಳುವ, ಬೆಳೆಸಿಕೊಳ್ಳುವ ಹಲವು ಹತ್ತು ಸಾಧ್ಯತೆಗಳನ್ನು ತೋರಿಸಿಕೊಟ್ಟಿದ್ದಾರೆ.

ಕಾರಂತರು ಸಂಪ್ರದಾಯವನ್ನು ಪೋಷಿಸುವುದಿಲ್ಲವಾದರೂ ತಮ್ಮ ಹಬ್ಬ ಹರಿದಿನಗಳು, ಜಾತ್ರೆ ಉತ್ಸವಗಳು, ದೇವಾಲಯಗಳು, ವಿವಿಧ ಬಗೆಯ ಶಿಲ್ಪಗಳು, ಚಿತ್ರಗಳು ಅವರಲ್ಲಿ ಉತ್ಸಾಹ ಹುಟ್ಟಿಸಿವೆ. ಮೂಕಜ್ಜಿ, ತಿಪ್ಪಕ್ಕರನ್ನು ಕುತೂಹಲದಿಂದ ನೋಡುವಂತೆಯೇ ಜನಜೀವನ, ಸಂಸ್ಕೃತಿ, ನಂಬಿಕೆಗಳು ಪ್ರತಿಫಲಿತವಾಗುವ ಪ್ರತಿಯೊಂದು ಆಚರಣೆಯೂ ಅವರಲ್ಲಿ ವಿಸ್ಮಯ ಹುಟ್ಟಿಸಿದೆ, ಅದರ ಮೂಲವನ್ನು ಹುಡುಕಲು ಪ್ರೇರೇಪಿಸಿದೆ. ಕಾರಂತರು ಸ್ವಾತಂತ್ರ್ಯೋತ್ತರ ಭಾರತದ ರಾಜಕೀಯವನ್ನು ಸರಿಯಾಗಿ ಗ್ರಹಿಸಿಲ್ಲವೆಂದೂ, ಗಂಡು-ಹೆಣ್ಣಿನ ಸಂಬಂಧದ ಕಲ್ಪನೆಗಳಲ್ಲಿ ವ್ಯಕ್ತವಾಗು ವಂಥ ಕ್ರಾಂತಿಕಾರತೆ ಆರ್ಥಿಕ, ರಾಜಕೀಯ ವಿಚಾರಗಳಲ್ಲಿ ವ್ಯಕ್ತವಾಗುವು ದಿಲ್ಲವೆಂದೂ ಕೆಲ ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಕಾರಂತರ ಸೃಜನಶೀಲ ಕೃತಿಗಳೇ ಸುಮಾರು ನೂರರಷ್ಟಿವೆ. ಬಿಡಿಬರಹಗಳು, ಭಾಷಣಗಳಿಗೆ ಲೆಕ್ಕವಿಲ್ಲ. ಇವೆಲ್ಲವನ್ನೂ ಸಮಗ್ರವಾಗಿ ಗಮನಿಸಿ ಕಾರಂತರನ್ನು ಬೆಲೆಕಟ್ಟುವ ಕಾರ್ಯ ಪ್ರಾರಂಭವಾಗಬೇಕಾಗಿದೆ.

❑

# ಮಧುರಚೆನ್ನ

ಜಿ.ಎಸ್. ಕಾಪಸೆ

ಕನ್ನಡದಲ್ಲಿ ನವೋದಯದ ಕಾಲ ಪ್ರಾರಂಭವಾಗುತ್ತಿರುವ ಸಂದರ್ಭದಲ್ಲಿಯೇ ಮಧುರಚೆನ್ನರು ಕಾವ್ಯರಚನೆಗೆ ತೊಡಗಿದ್ದುದು ಕಂಡುಬರುತ್ತದೆ. ಅವರು ತಮ್ಮ ಕಾವ್ಯ ರಚನೆಯ ಎರಡು ಮಹತ್ವದ ಘಟ್ಟಗಳನ್ನು 33ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷ ಭಾಷಣದಲ್ಲಿ ಸೂಚಿಸಿದ್ದಾರೆ. ಮೊದಲನೆಯ ಘಟ್ಟ 'ಮಾತ್ರಾ ಮತ್ತು ಗಣಗಳ ನಿಯಮಗಳಿಂದ ಕೂಡಿದ ಸಾಮಾನ್ಯ ಪದ್ಯಗಳನ್ನು ರಚಿಸಲಿಕ್ಕೆ ಆರಂಭ ಮಾಡಿದ್ದು'. ಆಗಿನ್ನೂ ಅವರು ಪ್ರಾಥಮಿಕ ಶಾಲೆಯ ವಿದ್ಯಾರ್ಥಿ. 1918ರ ಸುಮಾರಿನಲ್ಲಿಯೇ ಅವರು ಕಾವ್ಯರಚನೆಗೆ ತೊಡಗಿದ್ದರು. ಪ್ರಾಥಮಿಕ ಶಾಲೆಯ ಆಗಿನ ವಿದ್ಯಾರ್ಥಿಗಳು ಮೇಲಿನ ತರಗತಿಗಳಿಗೆ ಬಂದಾಗ ಛಂದಸ್ಸನ್ನು ಕಲಿಯುವುದು ಸಾಮಾನ್ಯ ವಾಡಿಕೆಯಾಗಿತ್ತು. ಚಂಪೂ, ಷಟ್ಪದಿ, ತ್ರಿಪದಿ, ಸಾಂಗತ್ಯ ಮುಂತಾದ ಛಂದೋಬಂಧಗಳ ಸ್ಪಷ್ಟ ತಿಳಿವಳಿಕೆ ಅವರಿಗೆ ಆಗುತ್ತಿತ್ತು. ಹಾಗಿರುವ ಸಂದರ್ಭದಲ್ಲಿ ಮುಧರಚೆನ್ನರು ನಮ್ಮ ಪ್ರಾಚೀನ ಕಾವ್ಯದ ಮಾದರಿಯಲ್ಲಿ ಅಥವಾ ಅವುಗಳನ್ನು ಅನುಕರಣೆ ಮಾಡಿ ಕಂದ, ವೃತ್ತ ಮತ್ತು ಷಟ್ಪದಿಗಳಲ್ಲಿ ಕವಿತೆಗಳನ್ನು ಬರೆದಿರುವರು. ಈ ಪದ್ಯಗಳು ಅವರ ಪ್ರಾರಂಭದ ಪ್ರಯತ್ನಗಳು.

ಎರಡನೆಯ ಘಟ್ಟ 'ಭಾವವೇ ಕವಿತೆಯ ಜೀವ' ಎಂದು ಅರಿತುಕೊಂಡದ್ದು. ಇದು 1922ರ ಕಾಲಮಾನ. ಅದೇ ತಾನೆ ಬೆಳಕಿಗೆ ಬರುತ್ತಿದ್ದ ಅಂಬಿಕಾತನಯ ದತ್ತರ ಕವಿತೆಗಳು ಕವಿತೆಯ ಜೀವ ಭಾವವೆಂಬುದನ್ನು ಮಧುರಚೆನ್ನರ ಗಮನಕ್ಕೆ ತಂದುಕೊಟ್ಟವೆಯಲ್ಲದೆ, ವಚನ ಶಾಸ್ತ್ರದ ಪ್ರಥಮ ಸಂಪುಟವೂ ಅವರ ಮೇಲೆ ಪ್ರಭಾವ ಬೀರಿದೆ. ಕಾಳಿದಾಸನ ಶಾಕುಂತಲ ನಾಟಕವನ್ನು ಅವರು ಅಧ್ಯಯನ ಮಾಡಿದ್ದೂ ಕೂಡ ಆಗಲೇ. ಹೀಗಾಗಿ ಅವರು ಛಂದೋಬದ್ಧ ಕವಿತೆಯಿಂದ ರಸವತ್ತಾದ ಭಾವಗೀತಕ್ಕೆ ಒಲಿದುಬಿಡುತ್ತಾರೆ. ಇದರ ಪರಿಣಾಮವಾಗಿ ಅವರು ಬರೆದ ಕವಿತೆಗಳು 'ನರ್ತಕಿ ನೀನಾದೆ', 'ಧ್ರುವ' ಇತ್ಯಾದಿಗಳು.

ಈ ಎರಡು ಘಟ್ಟಗಳ ನಂತರ ಇನ್ನೊಂದು ತಿರುವೂ ಅವರ ಕಾವ್ಯದಲ್ಲಿದೆ. ಅದು ವಿಶೇಷವಾಗಿ ವಸ್ತುವಿಗೆ ಸಂಬಂಧಿಸಿದ್ದು. ಆಧ್ಯಾತ್ಮಿಕ ಸಾಧನೆಗೆ ತೊಡಗಿದ ಅವರ ಮೇಲೆ ರವೀಂದ್ರನಾಥ ಠಾಕೂರ, ಎ.ಇ. ಮತ್ತು ಅರವಿಂದರ ಕಾವ್ಯ ಹಾಗೂ ಸಾಹಿತ್ಯ ಕೃತಿಗಳು ಪ್ರಭಾವ ಬೀರಿದ್ದರ ಪರಿಣಾಮವಾಗಿ ತಮ್ಮ ಸಾಧಕ ಜೀವನದ ಅನುಭವಗಳನ್ನು ಕಾವ್ಯವಾಗಿ ಸುವುದರ ಕಡೆಗೆ ಅವರು ಗಮನ ಹರಿಸುತ್ತಾರೆ. ಛಂದೋಬದ್ಧತೆಯಿಂದ ಭಾವದ ಕಡೆಗೆ, ಭಾವದಿಂದ ಅನುಭಾವದ ಕಡೆಗೆ ಅವರ ಕಾವ್ಯಶಕ್ತಿ ಹೊರಳಿ, ಅಲ್ಲಿಯೇ ತನ್ನ ಸಿದ್ಧಿಯನ್ನು ಪಡೆದುಕೊಳ್ಳುತ್ತದೆ.

ಮಧುರಚೆನ್ನರ ಕಾವ್ಯಕ್ಕೆ ಪ್ರೇರಣೆ ಹೊರಗಿನಿಂದ ಬಂದುದಲ್ಲ. ಅವರ ಕಾವ್ಯ ಕನ್ನಡ ಕಾವ್ಯ ಪರಂಪರೆಯಲ್ಲಿಯೇ ರೂಪಗೊಳ್ಳುತ್ತ, ಆಧುನಿಕ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ನವೋದಯದ ಲಕ್ಷಣಗಳೆಲ್ಲ ಅವರ ಕಾವ್ಯ ಹೊಂದಿರುವುದು ಒಂದು ಸಾಮಯಿಕ ದೃಷ್ಟಿ. ಬೇಂದ್ರೆಯಂಥವರ ಗಾಢ-ಸಂಬಂಧ ಈ ದೃಷ್ಟಿಗಿರುವ ಒಂದು ಪ್ರೇರಕ ಶಕ್ತಿ ಎಂದು ಹೇಳಬಹುದು. ಈ ಸಂದರ್ಭದಲ್ಲಿ ಗಮನಿಸಬೇಕಾದ ಇನ್ನೊಂದು ಮಹತ್ವದ ಸಂಗತಿಯಿದೆ. ಅದೆಂದರೆ ಜನಪದ ಸಾಹಿತ್ಯ. ಮಧುರಚೆನ್ನರು ತಮ್ಮ ಕಾವ್ಯರಚನೆಯ ಪ್ರಾರಂಭದ ದಿನಗಳಲ್ಲಿಯೇ ಜನಪದ ಸಾಹಿತ್ಯದ ಸೊಬಗಿಗೆ ಮಾರುಹೋಗಿದ್ದಾರೆ. 1923ರಲ್ಲಿ ವಿಜಾಪುರದಲ್ಲಿ ಸೇರಿದ ಒಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ಹಳ್ಳಿಯ ಹಾಡುಗಳು' ಕುರಿತು ಅವರು ಪ್ರಬಂಧ ಮಂಡಿಸಿದ್ದು, ಅವರು ಜನಪದ ಸಾಹಿತ್ಯದಲ್ಲಿ ಆಗಲೆ ಇರಿಸಿಕೊಂಡ ಶ್ರದ್ಧೆಗೆ ಸ್ಪಷ್ಟ ಕುರುಹಾಗಿದೆ. ಈ ಜನಪದ ಸಾಹಿತ್ಯದ ಲಯ, ಭಾಷೆ, ನುಡಿಗಟ್ಟು ಮುಂತಾದವುಗಳು ಮಧುರಚೆನ್ನರ ಕಾವ್ಯದಲ್ಲಿ ಮಹತ್ವದ ಪಾತ್ರವಾಗಿದ್ದನ್ನು ಯಾರೂ ಗುರುತಿಸಬಹುದಾಗಿದೆ. ಹೀಗೆ ಮಧುರಚೆನ್ನರ ಕಾವ್ಯ ಅವರ ಅನುಭಾವಿಕ ಸಾಧನೆಯ ಅನುಭವಗಳ ಅಭಿವ್ಯಕ್ತಿ ವಾಹಕವಾಗಿ, ಜನಪದ ಸಾಹಿತ್ಯದ ಸತ್ವವನ್ನು ಮೈಗೂಡಿಸಿಕೊಂಡು, ನಮ್ಮ ನವೋದಯ ಕಾವ್ಯಸ್ವರೂಪದಲ್ಲಿಯೇ ಒಂದು ವಿಶೇಷ ಕೊಡುಗೆಯಾಗಿ ಕಾಣಿಸಿಕೊಳ್ಳುತ್ತದೆ.

ಮಧುರಚೆನ್ನರ ಕಾವ್ಯ ಮತ್ತು ಇತರ ಸಾಹಿತ್ಯ ಅವರ ಬದುಕಿನ ಪಡಿನೆಳಲಾಗಿರುವುದು ವ್ಯಕ್ತಿನಿಷ್ಠ (Subjective) ಸಾಹಿತ್ಯದ ಒಂದು ಪೈಲಾಗಿ ಕಾಣುತ್ತದೆ. 'ನನ್ನನಲ್ಲ', 'ಮಧುರಗೀತ' ದಂಥ ಕವಿತೆಗಳನ್ನು 'ಪೂರ್ವರಂಗ', 'ಕಾಳರಾತ್ರಿ', 'ಬೆಳಗು' ಮತ್ತು 'ಆತ್ಮ ಸಂಶೋಧನೆ' ಈ ಗದ್ಯಗ್ರಂಥಗಳನ್ನು ಅವರ ವೈಯಕ್ತಿಕವಾದ ಸಾಧನೆಯಿಂದ ಬೇರ್ಪಡಿಸುವುದು ಸಾಧ್ಯವೇ ಇಲ್ಲ. ಅವರ ಜೀವನಕ್ಕೂ ಈ ಕೃತಿಗಳಿಗೂ ಇರುವ ಸಂಬಂಧ- ಅವಿನಾಭಾವ ಸಂಬಂಧ. ವಚನಕಾರರ ವಚನಗಳಂತೆ ಈ ಸಾಹಿತ್ಯವೆಲ್ಲ ಮಧುರಚೆನ್ನರ ಜೀವನದ ಸಹಸೃಷ್ಟಿ (by product) ಆಗಿ ಬಂದದ್ದು. ಈ ಕಾರಣದಿಂದ ಅವರ ಜೀವನವನ್ನು ಅರಿತುಕೊಂಡೇ ಅವರ ಸಾಹಿತ್ಯವನ್ನು ಅಭ್ಯಸಿಸಬೇಕಾದ ಅವಶ್ಯಕತೆಯಿದೆ.

ಮಧುರಚೆನ್ನರು ಜನಿಸಿದ್ದು 1903 ಜುಲೈ 31ರಂದು. ಅವರು ಹುಟ್ಟಿದ ಊರು ಹಲಸಂಗಿಯ ನೆರೆ ಊರಾದ ಹಿರೇಲೋಣಿಯಾದರೂ ಅವರ ಬದುಕೆಲ್ಲ ಕಳೆದದ್ದು ಹಲಸಂಗಿಯಲ್ಲಿಯೇ. ಅವರ ಶಿಕ್ಷಣ 1921ರಲ್ಲಿ ಮುಲ್ಕೀ ಪರೀಕ್ಷೆ ಪಾಸಾಗುವುದರೊಂದಿಗೆ ಮುಕ್ತಾಯಗೊಳ್ಳುತ್ತದೆ. ಅವರ ಸಂಶೋಧನೆ, ಜನಪದ ಸಾಹಿತ್ಯದ ಅಧ್ಯಯನ, ಆಧ್ಯಾತ್ಮಿಕ ಸಾಹಿತ್ಯದ ವ್ಯಾಸಂಗ, ಬಹುಭಾಷೆಗಳ ಅಭ್ಯಾಸ ಮುಂತಾದವುಗಳೆಲ್ಲ ಅವರ ಅನನ್ಯವಾದ ಸಾಹಿತ್ಯೋಪಾಸನೆಯ ಪ್ರತೀಕಗಳಾಗಿವೆ. ಅವರ ಈ ಉಪಾಸನೆ ವಿದ್ಯಾರ್ಥಿ ಜೀವನದ ಹಂತದಲ್ಲಿಯೇ ಪ್ರಾರಂಭವಾಗುತ್ತದೆ. ಗೆಳೆಯರಿಗೆ ಪತ್ರ ಬರೆಯುವಾಗ, ಅಭ್ಯಾಸದ ಕೆಲವು ಸಂಗತಿಗಳನ್ನು ನೆನಪಿಟ್ಟುಕೊಳ್ಳುವಾಗ ಪದ್ಯರಚನೆಗೆ ತೊಡಗಿಕೊಳ್ಳುತ್ತಾರೆ. 1921ರಲ್ಲಿ ಮುಲ್ಕೀ ಪರೀಕ್ಷೆಗೆ ಕುಳಿತ ಅವರು ಜಿಲ್ಲೆಗೆ ಪ್ರಥಮ ಸ್ಥಾನ ಪಡೆದದ್ದು ಆ ಕಾಲದಲ್ಲಿಯ ಅವರ ವ್ಯಾಸಂಗದ ಮಹತ್ವವನ್ನು ಎತ್ತಿ ತೋರಿಸುತ್ತದೆ. ಅನಂತರ ಇಂಗ್ಲಿಷ್ ಶಾಲೆಗೆ ಹೋಗುವ ಅವಕಾಶ ದೊರೆಯದಿದ್ದರೂ ಖಾಸಗಿಯಾಗಿ ಒಂದಿಷ್ಟು ಇಂಗ್ಲಿಷಿನ ಪರಿಚಯ ಮಾಡಿಕೊಳ್ಳುತ್ತಾರೆ. ವಿಜಾಪುರದಲ್ಲಿ ಶ್ರೀ ಕೊಣ್ಣೂರ ಹಣಮಂತರಾಯರ ಸನ್ನಿಧಾನವನ್ನು ಕೆಲಕಾಲ ಪಡೆದ ಅವರು, ಕೊಣ್ಣೂರರವರು ಹೊರಡಿಸುತ್ತಿದ್ದ 'ಕಾವ್ಯಗುಚ್ಛ' ಪತ್ರಿಕೆಗೆ ಪ್ರಾಚೀನ ಕವಿತೆಗಳ

ಸರಳಾನುವಾದ ಬರೆಯುತ್ತಾರೆ. ಈ ಕಾಲದಲ್ಲಿಯೇ ಅವರು ಬೇಂದ್ರೆಯವರನ್ನು ಕಂಡದ್ದು, 'ಜಯಕರ್ನಾಟಕ' ಪತ್ರಿಕೆಯ ಸಂಬಂಧವನ್ನು ಬೆಳೆಸಿಕೊಂಡದ್ದು. ಇಲ್ಲಿಂದ ಪ್ರಾರಂಭವಾದ ಅವರ ಸಾಹಿತ್ಯಕ ಕಾರ್ಯ ಅವರ ಜೀವನದುದ್ದಕ್ಕೂ ಬೆಳೆಯುತ್ತ ಹೋಗುತ್ತದೆ.

ಮಧುರಚೆನ್ನರ ಬದುಕಿನ ಇನ್ನೊಂದು ಆಯಾಮವೆಂದರೆ ಅವರ ಆಧ್ಯಾತ್ಮಿಕ ಸಾಧನೆ:

ಹನ್ನೆರಡು ತುಂಬಿಲ್ಲ ಕನ್ನಕ್ಕಿ ನಾನಂದು
ನನ್ನ ನಲ್ಲನ ಕತೆಗೆ ಮರುಳುಗೊಂಡೆ
ಇನ್ನೇನು ಹೇಳುವೆನು ಇಂದಿಗಿಪ್ಪತ್ತಾರು
ಈಸೊಂದು ದಿನಕರಗಿ ಗೊತ್ತುಗೊಂಡೆ.

ಎಂದು 'ನನ್ನನಲ್ಲ'ದಲ್ಲಿ ಮಧುರಚೆನ್ನರು ತಮ್ಮ ಆತ್ಮಕಥೆಯನ್ನು ಹೇಳಿಕೊಂಡಿದ್ದಾರೆ. ಅವರು ತಮ್ಮ ಹನ್ನೆರಡನೆಯ ವಯಸ್ಸಿನ ಸುಮಾರಿಗೆ ದೇವರನ್ನು ಕಾಣುವ ಹಂಬಲವುಳ್ಳವರಾಗುತ್ತಾರೆ. ಸುಮಾರು ಹದಿನಾಲ್ಕು ವರ್ಷಗಳ ಕಾಲ ಸಾಧನೆಯಲ್ಲಿ ಹೋರಾಡಿ ದೇವನನ್ನು ಅರಿತುಕೊಳ್ಳುತ್ತಾರೆ. ಅನಂತರದಲ್ಲಿಯೂ ತಮ್ಮ ಸಾಧನೆಯನ್ನು ಮುಂದುವರಿಸಿ ಅವರು ತಮ್ಮ ಧ್ಯೇಯವನ್ನು ಈಡೇರಿಸಿಕೊಳ್ಳುತ್ತಾರೆ. ಅವರ ಆಧ್ಯಾತ್ಮಿಕ ಸಾಧನೆಯ ಕಥನ ಅವರ ಗದ್ಯಕೃತಿಗಳಾದ 'ಪೂರ್ವರಂಗ', 'ಕಾಳರಾತ್ರಿ', 'ಬೆಳಗು' ಮತ್ತು 'ಆತ್ಮಸಂಶೋಧನೆ' ಇವುಗಳಲ್ಲಿ ಮನೋಜ್ಞವಾಗಿ ಪ್ರಕಟಗೊಂಡಿದೆ. ಅದರ ವಿವರಣೆ ಇಲ್ಲಿ ಅನಗತ್ಯ. ಶರಣರ ಷಟ್‌ಸ್ಥಲ ಸಾಧನೆಯನ್ನೂ, ಶ್ರೀ ಅರವಿಂದರ ಪೂರ್ಣಯೋಗದ ಸಾಧನೆಯನ್ನು ಸಮತೂಕದಿಂದ ಹೊಂದಿಸಿಕೊಂಡ ಅವರ ಜೀವನವೆಲ್ಲ ಯೋಗವೇ ಆಗಿತ್ತೆಂದು ಹೇಳಬಹುದು. ಸಾಹಿತ್ಯಕವಾಗಿ ನಾವು ಅವರನ್ನು ಅನುಭಾವಿ ಕವಿಯೆಂದು ಗುರುತಿಸುತ್ತಿದ್ದರೂ ಅವರು ಈ ಶತಮಾನದ ಒಬ್ಬ ಮಹಾನ್ ಶರಣರೇ ಆಗಿದ್ದುದನ್ನು ಅವರ ಸಂಪರ್ಕದಲ್ಲಿ ಬಂದ ಪ್ರತಿಯೊಬ್ಬರೂ ಅರಿತ ವಿಷಯವೇ ಆಗಿದೆ. ಹೀಗಿರುವ ಅವರು 1952 ಆಗಸ್ಟ್ 15ರಂದು ನಮ್ಮನ್ನಗಲಿದರು.

ಐವತ್ತು ವರ್ಷಗಳ ಅವರ ಜೀವಮಾನದಲ್ಲಿ ಸಾಧನೆಯ ಸಂಘರ್ಷವೇ ಹೆಚ್ಚಾಗಿದೆ. ರತ್ನಾಕರವರ್ಣಿ ಧ್ಯಾನಕ್ಕೆ ಬೇಸರಾದಾಗ ಕಾವ್ಯ ರಚಿಸಿದಂತೆ, ಮಧುರಚೆನ್ನರೂ ಅದೇ ತರಹದಲ್ಲಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕಾರ್ಯಮಾಡಿದ್ದಾರೆ. ಮಧುರಚೆನ್ನರನ್ನು ಕನ್ನಡಿಗರಿಂದು ಗುರುತಿಸುವುದು ಅವರೊಬ್ಬ ಮಹತ್ವದ ಕವಿಗಳೆಂದು. ಅವರ 'ನನ್ನನಲ್ಲ' ಮರೆತರೂ ಮರೆಯಲಾಗದ ಒಂದು ಅನುಭಾವ ಗೀತ.

ಮಧುರ ಚೆನ್ನರ ಒಟ್ಟು ಕಾವ್ಯಸೃಷ್ಟಿ ವಿಪುಲವಾಗಿಲ್ಲ. ಅವರು ಪ್ರಕಟಿಸಿದ್ದು ಒಂದೇ ಒಂದು ಕವನ ಸಂಕಲನವನ್ನು. ಈ ಸಂಕಲನದಲ್ಲಿ ಎರಡು ಪ್ರಮುಖ ನೀಳ್ಗತೆಗಳಿವೆ : 1. ನನ್ನನಲ್ಲ, 2. ಮಧುರಗೀತ. ಉಳಿದುವೆಲ್ಲ ಭಾವಗೀತೆಗಳು. ನೂರು ಪದ್ಯಗಳಿಂದೊಡಗೂಡಿದ 'ನನ್ನನಲ್ಲ' ನಮ್ಮ ಭಾವಗೀತ ಪ್ರಪಂಚದ ಒಂದು ಶತಕವೆಂದೂ ಹೇಳಬಹುದು. ಈ 'ನನ್ನನಲ್ಲ' ಅವರ ಈ ಹದಿನಾಲ್ಕು ವರುಷಗಳ ಆಧ್ಯಾತ್ಮಿಕ ಸಾಧನೆಯನ್ನು ಚಿತ್ರಿಸುತ್ತದೆ. ದೇವರ ಹೆಸರನ್ನು ಕೇಳಿ, ಅವನನ್ನು ಕಾಣಲು ಹಂಬಲಿಸಿದ್ದು, ಚೇತನಾಚೇತನಗಳಲ್ಲಿ ಅವನ ಕುರುಹು ತಿಳಿಸಲು ಕೇಳಿಕೊಂಡದ್ದು, ಅವನನ್ನು ಕಾಣದ ನಿರಾಶೆಯಲ್ಲಿ ತೊಳಲಾಡಿದ್ದು, ಅವನ ಕುರುಹು ಅರುಣೋದಯದ ಅನುಭವದಂತೆ ಕಾಣಿಸಿಕೊಂಡಾಗ ತನ್ಮಯತೆಯಿಂದ ಅದನ್ನು ಬಣ್ಣಿಸಿದ್ದು ಮುಂತಾದವುಗಳೆಲ್ಲ ಈ ಗೀತದಲ್ಲಿ ಅನನ್ಯವಾದ ರೀತಿಯಲ್ಲಿ ಚಿತ್ರಿತವಾಗಿದೆ. ಈ ಕವಿತೆಯ ವಿಶೇಷತೆಯಿರುವುದು ಸತಿ-ಪತಿಭಾವದ ಭಕ್ತಿಯಲ್ಲಿ. ಮಧುರಚೆನ್ನರು ಭಕ್ತ ಸತಿಯಾಗಿ ದೇವ ಪತಿಯನ್ನು ಕಾಣುವ ತವಕದಲ್ಲಿರುವುದು ತಾನೇ ತಾನಾಗಿ ಇಲ್ಲಿ ವ್ಯಕ್ತವಾಗಿದೆ.

'ಹನ್ನೆರಡು ತುಂಬಿಲ್ಲ ಕನ್ನಕ್ಕಿ ನಾನಂದು. ನನ್ನನಲ್ಲನ ಕತೆಗೆ ಮರುಳುಗೊಂಡೆ' ಎಂಬಲ್ಲಿ ಅವರ ಕನ್ಯತನ ಭಕ್ತನ ಒಂದು ನಿಲುವಾಗಿ ಪ್ರಕಟಗೊಂಡಿದೆ. ಈ ಸಂದರ್ಭದಲ್ಲಿಯ ಅವರ ಭಕ್ತಿಯ ತಳಮಳ ತುಂಬ ಗಾಸಿಗೊಳಿಸುವಂತಿದ್ದರೂ ಅತ್ಯಂತ ಅಕೃತವಾಗಿದೆ.

ದೇವರಾಯನ ಹೆಸರನೇಕೆ ಕೇಳಿದೆನಮ್ಮ
ನಾನೇಕೆ ನಂಜು ನುಂಗಿದೆನೆ ತಾಯೀ,
ಯಾವ ಕಡೆಗೂ ಮಗ್ಗಲೂರಗೊಡದಮ್ಮಯ್ಯ
ಈ ನೋವ ನಾ ತಾಳಲೆಂತೇ ತಾಯೀ.

ಅವರ ಮಧುರಭಕ್ತಿಯ ಈ ನೋವು ಆರ್ತನಾದವಾಗಿ ಅವರ ಕವಿತೆಯ ಆರಂಭದ ಘಟ್ಟದಲ್ಲಿ ಕೇಳಿಸುತ್ತದೆ. ಈ ಅಭೀಪ್ಸೆ ಅವರ ಸಾಧನೆಯ ಮೊದಲ ಹಂತವೂ ಅಹುದು.

'ಯಾವ ದೇಶಾಂತರದೊಳೆಲ್ಲಿ ನಲ್ಲನ ವಾಸ, ಕಂಡವರನೆಲ್ಲಾರೆ ಕಾಣಬಹುದೇ?' ಎಂದು ಹಲವಾರು ಜನರನ್ನು ಕೇಳಿ ತಿಳಿಯಲು ಯತ್ನಿಸಿದ್ದು ಒಂದು ವಿಫಲ ಪ್ರಯತ್ನವಾಗುತ್ತದೆ. ತಾಳ್ಮೆಗಲಿಸುವ, ತಪ್ಪುಹೊರಿಸುವ, ಆಶೆಹಚ್ಚುವ, ಆಶೆಹರಿಯುವ, ಧೈರ್ಯ ಹೇಳುವ, ದಿಕ್ಕುಗೆಡಿಸುವ ಹೀಗೆ ಅವರನ್ನು ತೂಗುಯ್ಯಾಲೆಗೆ ಗುರಿಮಾಡಿಬಿಡುವ ಪ್ರತಿಕ್ರಿಯೆಗಳನ್ನು ಮಧುರಚೆನ್ನರು ಕಾವ್ಯವಾಗಿಸಿದ್ದುದು ಒಂದು ವಿಶೇಷ. ಹಲವು ಬಗೆಯ ಭಾವಗಳನ್ನು ಅಭಿವ್ಯಕ್ತಗೊಳಿಸುವ ಇಲ್ಲಿಯ ಕಾವ್ಯ ವಿವರಣೆಯಂತೆ ಸಾಗಿಯೂ ಕಾವ್ಯದ ಧ್ವನಿಶಕ್ತಿಯನ್ನು ಉಳಿಸಿಕೊಳ್ಳುತ್ತದೆ.

ಯಾರ ಕೇಳಿದರಿಲ್ಲ ಯಾರು ಹೇಳಿದರಿಲ್ಲ
ಯಾರ ಬಳಿಯಲಿ ಅತ್ತುಕರೆದರಿಲ್ಲ
ಯಾರ ಕಡೆಗೇನುಂಟು ಮೀರಿಮಿಕ್ಕಿದ ಮಾತು
ಯಾರಾರ ಬಳಿಗು ನೆಲೆಕಾಣಲಿಲ್ಲ.

ಈ ಅವಸ್ಥೆಯಲ್ಲಿ ಪ್ರಕೃತಿಯೊಡನೆ ಪರಮಾತ್ಮನ ಅನುಸಂಧಾನ ನಡೆಸುವುದು ಅವರಿಗೆ ಒಂದು ಉಪಾಯವಾಗಿ ಹೊಳೆದು, ನವಿಲು, ಮೀನು, ಹೊನ್ನಿ, ಕೋಗಿಲೆ, ಗಿಳಿ ಮೊದಲಾಗಿ ಜೀವಚೇತನಗಳಿಗೆ ಮೊರೆಯಿಡುತ್ತಾರೆ. ಅಕ್ಕಮಹಾದೇವಿ ಒಂದು ವಚನದಲ್ಲಿ ಗಿಳಿ, ಕೋಗಿಲೆ, ದುಂಬಿ, ಹಂಸಗಳಿಗೆ ಕೇಳಿದ ರೀತಿಯೇ ಇಲ್ಲಿ ಹಲವು ಪದ್ಯಗಳ ಮೂಲಕ ಪ್ರಕಟಗೊಳ್ಳುತ್ತದೆ. ಭಾವಗೀತದ ಸಹಜಬಂಧಕ್ಕೆ ಜೀವಚೇತನಗಳ ಸ್ವರೂಪ ವೈಶಿಷ್ಟ್ಯಗಳು ಬೆರೆತು ಕವಿತೆ ಮತ್ತೆ ಮತ್ತೆ ಓದಿಸಿಕೊಳ್ಳುತ್ತ ಸಹೃದಯರ ಅಂತರಂಗದ ಮೇಲೆ ಲಾಸ್ಯವಾಡುತ್ತದೆ. ಈ ಬಗೆಯ ಅಭಿವ್ಯಕ್ತಿ ಕನ್ನಡ ಕಾವ್ಯದಲ್ಲಿಯೇ ವಿಶಿಷ್ಟವಾದದ್ದೆಂದು ಹೇಳಬಹುದು. ವಿಪ್ರಲಂಬ ಶೃಂಗಾರದ ಮಾಧುರ್ಯವನ್ನು ಪಡೆದುಕೊಂಡು ಕವಿಯ ಉತ್ಕಟಭಾವವನ್ನು ಪ್ರಕಟಿಸುವ ಈ ಭಾಗ ಅತ್ಯಂತ ಮನೋಜ್ಞವಾಗಿದೆ. ಉದಾಹರಣೆಗೆ ಈ ಎರಡು ಪದ್ಯಗಳನ್ನು ಗಮನಿಸಬಹುದು:

ನಿಲ್ಲು ನಿಲ್ಲೆಲೆ ನವಿಲೆ ನಿನ್ನ ಕಣ್ಣುಗಳೇಸು
ಕಣ್ಣಬಣ್ಣಗಳೇಸು ಎಣಿಸಲಾರೆ,
ಎಲ್ಲಿ ರೂಪಿಸಿದವನು ಎಲ್ಲಿ ತಾನಡಗಿದನೆ
ತಾಳಲಾರದು ಜೀವ ಹೇಳಬಾರೆ.
ಪಿಳುಕಿಸಿದ ಸಿರಿಗಣ್ಣು ಸುತ್ತು ಚಿನ್ನದ ರೇಖೆ
ಬೆಳ್ಳಿಮಿರುಗಿನ ಮೈಯಕಾಂತಿ ನಿನಗೆ,
ತಿಳಿಗಂಗೆ ನಿಮ್ಮವ್ವ ಮೀನಮೂರುತಿ ತಿಳಿಸೊ
ನನ್ನೊಡೆಯನಡಗಿರುವನಾವ ಕಡೆಗೆ.

ತಾಳಲಾರದ ಜೀವಕ್ಕೆ ತಂಗಾಳಿಯಾಗಿ ದೇವನ ಅಸ್ತಿತ್ವದ ಅನುಭವ ಕವಿಗೆ ಬಂದುಬಿಡುತ್ತದೆ. ಈ ಅನುಭವವನ್ನು ಮಧುರಚೆನ್ನರು ತಮ್ಮ 'ಪೂರ್ವರಂಗ' ಗ್ರಂಥದಲ್ಲಿ ಬ್ರಹ್ಮಸಂಸ್ಪರ್ಶ ಅಥವಾ ವಿಶ್ವಪ್ರಜ್ಞೆ ಎಂದು ಹೆಸರಿಸಿದ್ದಾರೆ. ಅದು ಈ ಕವನದಲ್ಲಿ ಅಭಿವ್ಯಕ್ತಗೊಂಡದ್ದು ಹೀಗೆ:

ಬಂತು ಬಂತೆಲೆ ಬಂತು, ಬಂತು ಘನಸಿರಿ ಬಂತು
ಬಂತೆಂದರೂ ಇದ್ದುದಿದ್ದೇ ಇತ್ತು,
ಬಂತು ಬೆಳಗೆಂಬಂತೆ ಬಂತು ಹೊಳೆ ಬಂದಂತೆ
ಇದ್ದದ್ದೆ ತುಂಬಿ ತುಳುತುಳುಕುತ್ತಿತ್ತು.

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
ನಿಶ್ಶಬ್ದವಿದ್ದರೂ ಮೌನವಲ್ಲ,
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ.

ಇಲ್ಲಿಯ ಅನುಭಾವದ ಅಭಿವ್ಯಕ್ತಿ ಶಬ್ದಕ್ಕೆ ಮೀರಿದ ಅನುಭವವನ್ನು ವ್ಯಕ್ತಪಡಿಸುತ್ತದೆ. ಡಾ. ವಿ.ಕೃ. ಗೋಕಾಕ ಅವರು ಹೇಳಿದಂತೆ ".....ಆತ್ಮದ ದಿವ್ಯಾರುಣೋದಯದ ಶ್ರೀಮದ್ಗಂಭೀರ ವರ್ಣನೆ ಈ ಅದ್ಭುತ ಶಬ್ದ-ರಂಗದ ನಿಶ್ಶಬ್ದತೆಯನ್ನು ಅನುಭವಿಸಿಯೇ ನೋಡಬೇಕು. ಇಲ್ಲಿ ಅನುಭವದ ಆಳ ದರ್ಶನ ಧಬೆಧಬೆಯಾಗಿ ಧುಮ್ಮಿಕ್ಕಿದೆ. ಆ ಧವಲಗಂಗೆಯ ಧಾವವನ್ನು ನಿಂತು ನೋಡಬೇಕು".[1] ಈ ಅನುಭವವು ಮಧುರಚೆನ್ನರಿಗೆ ಬೆಳಗೆಂಬಂತೆ, ಹೊಳೆಬಂದಂತೆ ಬಂದಿದೆ. ದ್ಯಾವಾಪೃಥಿವಿಯ ಜೀವ ತುಂಬಿತುಳುಕುವ ಕಾಂತಿ, ಶಾಂತಿಗಳು ಜಗದೊಡಲು ಜಗ-ಜೀವ ಜ್ಯೋತಿ ತುಂಬಿ ಕಂಡಿವೆ. ಅಷ್ಟಲ್ಲದೆ ಅದೊಂದು ಸುತ್ತು ಮುತ್ತೂ, ಒಳಗೂ ಹೊರಗೂ, ಕೆಳಗು ಮೇಲೂ, ಎತ್ತೆತ್ತಲೂ ಇರುವ ದಿವ್ಯಸ್ಪರ್ಶವಾಗಿದೆ.

'ನನ್ನನಲ್ಲ'ದಲ್ಲಿ ಕವಿಯ ವೈಯಕ್ತಿಕ ಸಾಧನೆ, ಹೋರಾಟ, ಸಿದ್ಧಿ, ಅನುಭವ-ಅನುಭಾವಗಳು ಪ್ರಕಟವಾಗಿದ್ದರೂ ಅವು ಸಾರ್ವತ್ರಿಕ ಅನುಭಾವ ಪ್ರಜ್ಞೆಯನ್ನು ಮೂಡಿಸುತ್ತವೆ. ವಿಶ್ವದ ಯಾವುದೇ ಅನುಭಾವ ಕಾವ್ಯದೊಂದಿಗೆ ಸರಿತೂಗಿ ನಿಲ್ಲಬಲ್ಲ ಶಕ್ತಿಯೂ ಈ ಕಾವ್ಯಕ್ಕಿರುವುದನ್ನು ಡಾ. ಗೋಕಾಕರಂಥವರು ಗುರುತಿಸಿದ್ದಾರೆ.

ಮಧುರಚೆನ್ನರ ಇನ್ನೊಂದು ನೀಳ್ಗವನ ಮಧುರಗೀತ. ಇದೊಂದು ಸ್ನೇಹಸೂಕ್ತ, ಸಖ್ಯಯೋಗ ಗೀತ. ಇದು ಕೂಡ 'ನನ್ನನಲ್ಲ'ದ ಮಾದರಿಯದೆ. ರೂಪದಲ್ಲಿ, ಒಟ್ಟು ಗಾತ್ರದಲ್ಲಿ ಅದನ್ನು ಯಥಾವತ್ತಾಗಿ ಹೋಲುತ್ತದೆ. ವಸ್ತು ಮಾತ್ರ ಗೆಳೆತನಕ್ಕೆ, ಅದರ ತಾತ್ವಿಕ ವಿವೇಚನೆಗೆ, ಸ್ವಾನುಭವದ ಅನಿಸಿಕೆಗಳಿಗೆ ಸಂಬಂಧಿಸಿದ್ದಾಗಿದೆ. ಐದು ಭಾಗಗಳಲ್ಲಿ ಹರಡಿಕೊಂಡಿರುವ ಈ ಕವಿತೆಯಲ್ಲಿ ಪ್ರೇಮ, ಮೋಹ, ಮಾನವನ ಹುಟ್ಟು, ದೇವನ ಅಸ್ತಿತ್ವ, ಗೆಳೆತನದ ಆದರ್ಶ ಮುಂತಾದವುಗಳೆಲ್ಲ ನಿರೂಪಿತವಾಗಿವೆ.

ದೇವಲೀಲೆಯೋ ಕಾಣೆ ಕರ್ಮಜಾಲವೋ ಕಾಣೆ
ಅದು ನಮ್ಮ ಬುದ್ಧಿಯಾಚೆಗಿನ ಮಾತು,
ಯಾವುದೇನೇ ಇರಲಿ ಪ್ರೀತಿಯಂಥಾ ವಸ್ತು
ಭವದಲ್ಲಿ ಕಾಣೆ ಮನಗಂಡ ಮಾತು.

ಇದು ಮಧುರಚೆನ್ನರ ಪ್ರೀತಿಯ ಅನನ್ಯವಾದ ಅನುಭವ. ಗೆಳೆತನದ ಕುಲಕೋಟಿಗೆ ಬೆಳಕಾಗಬಲ್ಲ ಹಲವು ಅನುಭವಗಳು ಇಲ್ಲಿ ಮೂಡಿನಿಂತಿವೆ. 'ಮಧುರಚೆನ್ನ' ಎಂಬುದು ನಮಗೆಲ್ಲ ಗೊತ್ತಿರುವಂತೆ ಅವರ ಕಾವ್ಯನಾಮ. ಆದರೆ ಅದರ ಇಂಗಿತ ವಿಶಿಷ್ಟವಾದುದು. ಅದು ಈ ಪದ್ಯದಲ್ಲಿ ಪ್ರಕಟವಾದದ್ದು ಹೀಗೆ:

ಜನರಾಡಿಕೊಳಬಹುದು ನನಗು ನಿನಗೂ ಕೂಡೆ
ಅವರೇನು ಬಲ್ಲರೋ ಒಳನಿಧಾನ,
ನನಗೆ ನೀನತಿ ಮಧುರ, ನಿನಗೆ ನಾ ಬಲುಚೆನ್ನ
ಹೀಗಂತಲೇ ನಾವು 'ಮಧುರಚೆನ್ನ'

'ಮಧುರ' 'ಚೆನ್ನ' ಎಂಬ ಪದಗಳ ಅರ್ಥವಂತಿಕೆ ಧ್ವನಿಪೂರ್ಣವಾಗಿದ್ದರೂ ಅವು ವಾಸ್ತವ ಸತ್ಯವೊಂದನ್ನು ತಿಳಿಸಿಕೊಡುತ್ತವೆ. 'ಮಧುರ' ಎಂಬುದು 'ಮಧುರಚೆನ್ನ'ರ ಗೆಳೆಯನ ಹೆಸರು. ರೂಢಿಯಲ್ಲಿ ಆತನನ್ನು 'ಮಾದಣ್ಣ' ಎಂದು ಕರೆಯಲಾಗುತ್ತದೆ. 'ಚೆನ್ನ' ಎಂಬುದು ಕವಿಯ ನಿಜವಾದ ಹೆಸರಿನ ಪೂರ್ವಾರ್ಧ. ಅವರ ಹೆಸರು 'ಚೆನ್ನಮಲ್ಲಪ್ಪ' ಎಂಬುದು. ಮಧುರ+ಚೆನ್ನ =ಮಧುರಚೆನ್ನ ಆಗಿದ್ದನ್ನು ಗಮನಿಸಿದಾಗ ಕವಿಯ ಸ್ನೇಹದ ಅವಿನಾಭಾವ ಸಂಬಂಧದ ಪರಿಚಯ ನಮಗಾಗುತ್ತದೆ. ಪ್ರೀತಿ ಲೌಕಿಕ ಅನುಭವವಾಗಿದ್ದರೂ ಅದರ ಅಂತರ್ಯದಲ್ಲಿ ಆಧ್ಯಾತ್ಮಿಕ ಆದರ್ಶ ಬೆರೆತುಕೊಂಡಿದೆ. ಅದರಿಂದಾಗಿ ಇದು ವಿಶಿಷ್ಟ ರುಚಿಯನ್ನು ನೀಡುತ್ತದೆ. ಶ್ರೀ ಚೆನ್ನವೀರ ಕಣವಿಯವರು ಈ ಕವಿತೆಯ ಬಗ್ಗೆ ಬರೆಯುತ್ತ "ಆಧ್ಯಾತ್ಮಿಕ ಅನುಭವದಲ್ಲಿ ಮಿಂದೆದ್ದ ಈ ಸ್ನೇಹ ಸೂಕ್ತವನ್ನು, ಅದರ ಸೂಕ್ಷ್ಮ ಪರಿಗಳನ್ನು ಆತ್ಮಸಂಶೋಧನೆಯ ರೀತಿಯಲ್ಲಿ ಅಷ್ಟೇ ತಿಳಿಯಾಗಿ, ಕಾವ್ಯಮಯವಾಗಿ ಹೇಳಿದ ಕೀರ್ತಿ ಹೊಸಗನ್ನಡದಲ್ಲಿ ನಿಸ್ಸಂದೇಹವಾಗಿ ಮಧುರಚೆನ್ನರದೇ"[2] ಎಂದಿರುವುದು ಒಂದು ವಾಸ್ತವ ಸತ್ಯ.

'ನನ್ನ ನಲ್ಲ', 'ಮಧುರಗೀತ'ಗಳನ್ನುಳಿದು ಬೇರೆ ಭಾವಗೀತಗಳನ್ನು ಗಮನಿಸುವಾಗಲೂ ಅವರ ಆಧ್ಯಾತ್ಮಿಕ ಸಾಧನೆ ಕಣ್ಣಮುಂದೆ ಬಂದು ನಿಲ್ಲುತ್ತದೆ. 'ಸಲಿಗೆಯ ಸಲ್ಲಾಪ', 'ನೋಂಪಿ', 'ಕೆಸರೊಳಗಿನ ಕಮಲ', 'ದ್ಯಾವಾಪೃಥಿವಿ' ಈ ಮುಂತಾದವುಗಳು ಅವರ ದೈವೀಶ್ರದ್ಧೆಯನ್ನು, ದೈವೀ ಸಾನ್ನಿಧ್ಯಕ್ಕಾಗಿ ನಡೆಸಿದ ಅಂತಃಕರಣ ತುಂಬಿದ ಹೋರಾಟವನ್ನು ಒಂದಿಲ್ಲ ಒಂದು ರೀತಿಯಿಂದ ಚಿತ್ರಿಸುತ್ತವೆ. 'ಸಲಿಗೆಯ ಸಲ್ಲಾಪ'ದಲ್ಲಿ :

ನೀ ಹುಟ್ಟಿಸಿದರೆ ಹುಟ್ಟಿದೆನಲ್ಲದೆ ನನಗಿಲ್ಲಿತ್ತೇನು
ನೀ ಹುಟ್ಟಿಸಿದವ ಹೊರಳಿ ನೋಡದಿರೆ ಗತಿಯೆನಗಿನ್ನೇನು?

ಎಂದು ಮುಂತಾಗಿ ಪ್ರಶ್ನಿಸುವಲ್ಲಿ ಒಂದು ಬಗೆಯ ಮುನಿಸು ವ್ಯಕ್ತವಾಗುತ್ತಿದ್ದು, 'ನೋಂಪಿ'ಯಲ್ಲಿ ಋಷಿಸದೃಶವಾದ ನಿಷ್ಠೆ ಪ್ರಕಟಗೊಳ್ಳುತ್ತದೆ.

ಹತ್ತೂ ನಿಟ್ಟಿಗೆ
ಹೊತ್ತಿಸಿ ಉರಿಯನು
ನಿತ್ತೆನು ನಾ ಕಿತ್ತಡಿಯಾಗಿ
ಹತ್ತೂ ನಿಟ್ಟಿಗೆ
ಹೊತ್ತಿಸಿ ಉರಿಯನು
ಕುತ್ತೆನು ನಾ ಮಾಸತಿಯಾಗಿ

ಇಲ್ಲಿಯ ಅಚಲ ನಿಷ್ಠೆಯಲ್ಲಿ ಅವರ 'ತನು ನಿಸದಿಗೆಗಲ್ಲಾಗು'ತ್ತದೆ, 'ಮನ ಮಾಸ್ತಿಯ ಕಲ್ಲಾಗು'ತ್ತದೆ.

'ಕೆಸರೊಳಗಿನ ಕಮಲ' ಒಂದು ಪ್ರತಿಮಾನಿಷ್ಠ ಕವಿತೆ. ಇಲ್ಲಿಯ ಕಮಲದ ಪ್ರತಿಮೆ ಮಧುರಚೆನ್ನರ ಆತ್ಮವನ್ನು ಪ್ರತಿನಿಧಿಸುತ್ತದೆ. ಯಾವುದೋ ಕರ್ಮದಿಂದ ಕೆಸರಲ್ಲಿ ಬಿದ್ದ ಕಮಲ, ಯಾವುದೋ ಪುಣ್ಯದಿಂದ ಮುಖವೆತ್ತಿ ಮೇಲಕ್ಕೆದ್ದು, ದೇವಪತಿಯ ಧ್ಯಾನದಲ್ಲಿ ಲೀನವಾಗುವುದು ಈ ಪದ್ಯದ ಒಟ್ಟು ತಾತ್ಪರ್ಯ.

ಮಧುರಚೆನ್ನರ 'ದೇವತಾ ಪೃಥಿವಿ' ದ.ರಾ. ಬೇಂದ್ರೆಯವರು ನುಡಿದಂತೆ ಅವರ ಕೃತಿ ಸತಿಯ ಶಿರೋರತ್ನ. ಈ ಕವಿತೆಯ ವಸ್ತು - ಮಧುರಚೆನ್ನರು ತಮ್ಮ 'ಬೆಳಗು' ಕೃತಿಯಲ್ಲಿ ತಿಳಿಸಿಕೊಟ್ಟಂತೆ "ಪರ್ಯಾಯದಿಂದ (indirectly) ಈಶ ಪ್ರೇರಕತ್ವವನ್ನು ಒಪ್ಪಿಕೊಂಡ ಜೀವವು ಈಗ ತೀರ ಪ್ರತ್ಯಕ್ಷವಾಗಿ (directly) ಮತ್ತು ಅವಿಚ್ಛಿನ್ನವಾಗಿ ಅದನ್ನು ಅನುಭವಿಸಲೆಳಸುತ್ತದೆ" ಎಂಬ ಸಾಧನೆಯ ಒಂದು ಹಂತವನ್ನು ಒಳಗೊಂಡಿದೆ. ಅಂದರೆ ಪೃಥ್ವಿಯ ದೈವತ್ವ ಮತ್ತು ತಾಯ್ತನಗಳನ್ನು ಶ್ರದ್ಧೆಯಿಂದ ಒಪ್ಪಿಕೊಂಡ ಕವಿ ಒಂದು ಹಸಿವೆಯನ್ನು ಹಿಂಗಿಸಿಕೊಂಡು ಇನ್ನೊಂದು ಹಸಿವೆಗೆ (ಕೇವಲದ ಹಸಿವೆಗೆ) ಬಾಯ್ದೆರೆದಿದ್ದಾನೆ.

ಹಸವೀಗಿ ಮೊಲೆಯುಂಡೆ ಕಸಿವೀಸಿಗೇನುಳ್ಳೆ
ಹಾಲೊಲ್ಲೆ ಸಾಕು ಬಿಗಿದಪ್ಪೆ | ತಾಯಮ್ಮ
ಮಲಗಿರುವ ತಾಯಿ ಪೃಥಿವಿ ||

ಮೊಲೆಹಾಲು ರುಚಿಗೊಂಡು ಮನದ್ಹಾಲ ಬಯಸೀನ
ಗುಟುಗುಟುಕಿಗೊಮ್ಮೆ ಮಿಕಿಮಿಕಿ | ಏಳಮ್ಮ
ಮಲಗಿರುವ ತಾಯಿ ಪೃಥಿವಿ ||

ದೈವತ್ವದ ಬಾಹ್ಯಸ್ವರೂಪದ ಸೌಂದರ್ಯವನ್ನು ಅನುಭವಿಸಿದ ಕವಿ, ಅದಕ್ಕೆ ಮಿಗಿಲಾಗಿ ಅಂತರಂಗದ ಐಸಿರಿಯನ್ನು ಕಾಣಲು ಹಂಬಲಿಸುತ್ತಿರುವುದು ಇಲ್ಲಿ ಕಂಡುಬರುತ್ತದೆ. ಈ ಕವಿತೆಯ ವಿಶೇಷತೆಗಳನ್ನು ಗುರುತಿಸುತ್ತ ಶ್ರೀ ಕೀರ್ತಿನಾಥ ಕುರ್ತಕೋಟಿಯವರು "ದೇವತಾ ಪೃಥಿವಿ'ಯಲ್ಲಿಯ ತಾತ್ತ್ವಿಕ ಅನುಭವ ಉಂಡ ಊಟದಷ್ಟು ನೈಜವಾಗಿದೆ, ವಾಸ್ತವವಾಗಿದೆ. ಅನುಭವದ ಆರ್ತತೆ ಒಮ್ಮೆ ನಿಟ್ಟುಸಿರಾಗಿ ಇನ್ನೊಮ್ಮೆ ಮೂಕರೋದನವಾಗಿ ಕೇಳುತ್ತದೆ. ಉತ್ಕಟವಾದ ವಾತ್ಸಲ್ಯ ಭಾವದಲ್ಲಿ ಕವಿ ತನ್ನ ವ್ಯಕ್ತಿತ್ವವನ್ನೆಲ್ಲ ಕರಗಿಸಿ ಹಾಡಿದಂತಾಗಿದೆ. ತ್ರಿಪದಿಯನ್ನು ಇಷ್ಟು ಸಮರ್ಥವಾಗಿ ಹಿಂದೆ ಯಾರೂ ಬಳಸಿಕೊಂಡಿರಲಿಲ್ಲ"[3] ಎಂದಿರುವುದು ಮಧುರಚೆನ್ನರ ಅನುಭವ ಮತ್ತು ಅಭಿವ್ಯಕ್ತಿಗಳೆರಡರ ಅಗ್ಗಳಿಕೆಗೆ ಹಿಡಿದ ಕನ್ನಡಿಯಾಗಿದೆ.

ಮಧುರಚೆನ್ನರ ಇನ್ನುಳಿದ ಭಾವಗೀತಗಳಲ್ಲಿ 'ಸುಖದುಃಖ', 'ಸುಖಿ ಜೀವನ', 'ಧ್ರುವ', 'ಉಷಾದೇವಿ', 'ರೋಹಿಣಿ', 'ಮಾವಿನಗೊಲ್ಲೆ' ಮುಂತಾದವುಗಳು ಭಾವ, ಭಾಷೆ, ಲಯ ಮುಂತಾದವುಗಳಿಂದ ಕನ್ನಡದ ಅತ್ಯುತ್ತಮ ಭಾವಗೀತಗಳ ಮಾಲಿಕೆಗೆ ಸೇರುತ್ತವೆ. ಜನಪದರೊಂದಿಗೆ ಬದುಕಿದ, ಜನಪದ ಭಾಷೆ, ಲಯಗಳನ್ನು ಹುಟ್ಟಿನೊಂದಿಗೇ ಮೈಗೂಡಿಸಿ ಕೊಂಡು ಬಂದ ಮಧುರಚೆನ್ನರು ತಮ್ಮ ಹಲವು ಭಾವಗೀತಗಳಲ್ಲಿ ಜನಪದ ಸತ್ವವನ್ನು ಸೂರೆಗೊಳಿಸಿದ್ದು ಅತ್ಯಂತ ಮಹತ್ವದ ಸಂಗತಿಯಾಗಿದೆ. "ಹೊಸಗನ್ನಡ ಕಾವ್ಯಕ್ಕೆ ಜಾನಪದ ಸತ್ವವನ್ನು ತುಂಬಿ, ಆತ್ಮಚಿಂತನೆಯ ಅನುಭಾವ ಮಾರ್ಗದಲ್ಲಿ ಅದನ್ನು ನಡೆಸಿಕೊಂಡು ಹೋಗಿ, ಕೃತಕೃತ್ಯರಾದ ಮಧುರಚೆನ್ನರು ಕೆಲವೇ ಕೃತಿಗಳನ್ನು ನೀಡಿದ್ದರೂ ಅವುಗಳ ಚೆಲುವು ಎಂದಿಗೂ ಮಾಸದಂತಹದು"[4] ಎಂಬ ಚೆನ್ನವೀರ ಕಣವಿಯವರ ವಿಮರ್ಶೆ ಅಕ್ಷರಶಃ ಒಪ್ಪಿಕೊಳ್ಳುವಂತಹದಾಗಿದೆ.

ಮಧುರಚೆನ್ನರ ಪದ್ಯ ಸಾಹಿತ್ಯದಲ್ಲಿ 'ವಿನೋದ ಕುಸುಮಾವಳಿ' ಎಂಬ ಕಾವ್ಯರೂಪಕವನ್ನು ಗಣಿಸಬಹುದು. 1921ರಲ್ಲಿ ಅಂದರೆ ಮಧುರಚೆನ್ನರ 18ನೆಯ ವಯಸ್ಸಿನಲ್ಲಿ ರಚಿತವಾದ ಈ ಕೃತಿ ಈಚೆಗೆ ಪ್ರಕಟಗೊಂಡಿದ್ದು, ಕಂದ, ಷಟ್ಪದಿ ಮುಂತಾದ ಬಂಧಗಳಲ್ಲಿ ಮೂಡಿಬಂದ ವಿನೋದಪೂರ್ಣ ರೂಪಕವಿದು.[5] ಕವನಕ್ರಿಯೆಯಲ್ಲಿ ಮಧುರಚೆನ್ನರ ತೀರ ಆರಂಭಕಾಲದ ಕವಿತಾ ರಚನೆಯ ಸಾಮರ್ಥ್ಯಕ್ಕೆ ಇದೊಂದು ನಿದರ್ಶನವಾಗಿದೆ. ಸಾಹಿತ್ಯಕವಾಗಿ ಇದರಲ್ಲಿ ಹೇಳಿಕೊಳ್ಳುವಂಥ ವಿಶೇಷತೆಗಳೇನೂ ಇಲ್ಲ.

ಮಧುರಚೆನ್ನರ ಗದ್ಯಕೃತಿಗಳಲ್ಲಿ 'ಪೂರ್ವರಂಗ', 'ಕಾಳರಾತ್ರಿ', 'ಬೆಳಗು' ಮತ್ತು 'ಆತ್ಮಸಂಶೋಧನೆ' ಇವು ಅವರ ಆಧ್ಯಾತ್ಮಿಕ ಸಾಧನೆಯನ್ನು ಚಿತ್ರಿಸುವ ಸೃಜನಶೀಲ ಕೃತಿಗಳೆಂದು ಹೇಳಬಹುದು. ಕೊನೆಯ ದೊಂದನ್ನುಳಿದು, ಇತರ ಮೂರು ಕೃತಿಗಳ ತಂತ್ರ ವಿಶಿಷ್ಟವಾಗಿದೆ. 'ಕನ್ನಡ ನುಡಿಯಲ್ಲಿ ಈ ಬಗೆಯ ಪುಸ್ತಕಗಳು ಇನ್ನೂ ಹುಟ್ಟಿಲ್ಲ' ಎಂದು ಹೇಳಬಹುದಾದ ಕಾಲದಲ್ಲಿ ಅವುಗಳ ರಚನೆಯಾಗಿದೆ. ಇದು ಒಂದು ಆತ್ಮವೃತ್ತವಾಗಿದ್ದರೂ ತಂತ್ರ ವೈಶಿಷ್ಟ್ಯದಿಂದಾಗಿ ಅದು ಬೇರೆ ರೂಪವನ್ನು ತಳೆದಿದೆ. ಇದು ವ್ಯಕ್ತಿಯ ಆಧ್ಯಾತ್ಮಿಕ ಸಾಧನೆಯನ್ನು ಕಾದಂಬರಿ ರೀತಿಯಲ್ಲಿ ಚಿತ್ರಿಸುವ ಕೃತಿ. ಒಬ್ಬ ಲೇಖಕನು ತನ್ನನ್ನು ತನ್ನಿಂದ ಬೇರ್ಪಡಿಸಿ, ಸಾಕ್ಷೀಪ್ರಜ್ಞೆಯಿಂದ ತನ್ನ ಜೀವನವನ್ನೇ ಪುನಃ ಸೃಷ್ಟಿಸುವುದು ಇಲ್ಲಿ ನಡೆಯುವ ಕಾರ್ಯ. ಮಧುರಚೆನ್ನರು ತಮ್ಮನ್ನು ಬೇರ್ಪಡಿಸಿ ನೋಡುವಾಗ 'ಜ್ಞಾನಭಿಕ್ಷು'ವಾಗಿ, ಗ್ರಂಥದ ನಾಯಕರಾಗಿ ತಮ್ಮ ಪಾತ್ರ ನಿರ್ವಹಿಸುತ್ತಾರೆ. 'ಪೂರ್ವರಂಗ'ದಲ್ಲಿ ಅವರ ಆರಂಭದ ಸಾಧನೆ, ಅದರ ಹೊಯ್ದಾಟ, ಹೋರಾಟಗಳು ಚಿತ್ರಿತವಾಗಿದ್ದರೆ, 'ಕಾಳರಾತ್ರಿ'ಯಲ್ಲಿ ಆತ್ಮನ ಕಾಳರಾತ್ರಿಯ ಕಷ್ಟಕರವಾದ ಅನುಭವವಿದೆ. ಬೆಳಗಿನಲ್ಲಿ ಜ್ಞಾನೋದಯವಾದ ಅಥವಾ ದೇವನ ಇರುವಿಕೆಯ ಅರಿವು ಮೂಡಿದ್ದುದರ ಪರಿಚಯವಿದೆ. 'ಆತ್ಮ ಸಂಶೋಧನೆ' ಯಥಾಪ್ರಕಾರ ಆತ್ಮಕಥೆಯಾಗಿ ಅವರ ಆಧ್ಯಾತ್ಮ ಯಾತ್ರೆಯ ಕೊನೆಯ ಘಟ್ಟದ ಸಂಗತಿಗಳನ್ನು ನಿರೂಪಿಸುತ್ತದೆ. ಮೂವತ್ತನೆಯ ವಯಸ್ಸಿನಲ್ಲಿಯೇ 'ಪೂರ್ವರಂಗ', 'ಕಾಳರಾತ್ರಿ' ಮತ್ತು 'ಬೆಳಗು'ಗಳನ್ನು ಬರೆದು ಮುಗಿಸಿದ್ದೂ ಕೂಡ ಸಾಹಿತ್ಯಕವಾಗಿ ಮಧುರಚೆನ್ನರ ಒಂದು ದೊಡ್ಡ ಸಾಧನೆ ಎನಿಸುತ್ತದೆ. ಅವರ ಜ್ಞಾನಲಾಲಸೆ, ಸಾಧನೆಯಲ್ಲಿ ತೋರಿದ ಅವಿಶ್ರಾಂತ ಪರಿಶ್ರಮ, ಹಲವು ಭಾಷೆಗಳ ಆಧ್ಯಾತ್ಮಿಕ ಸಾಹಿತ್ಯದ ಅಧ್ಯಯನ ಮುಂತಾದವುಗಳನ್ನು 'ಕಾಳರಾತ್ರಿ'ಗೆ ಮುನ್ನುಡಿ ಬರೆಯುತ್ತ ದ.ರಾ. ಬೇಂದ್ರೆ ಯವರು ಮುಕ್ತಕಂಠದಿಂದ ಪ್ರಶಂಸಿಸಿದ್ದು ಉತ್ಪ್ರೇಕ್ಷೆಯೇನಲ್ಲ.

'ಪೂರ್ಣಯೋಗದ ಪಥದಲ್ಲಿ', 'ಕನ್ನಡಿಗರ ಕುಲಗುರು' ಇತ್ಯಾದಿಗಳು ಅವರ ಚಿಂತನಶೀಲ ಗದ್ಯಕೃತಿಗಳು. 'ವಿಸರ್ಜನ' (ರವೀಂದ್ರನಾಥ ಠಾಕೂರರ ನಾಟಕ), 'ಮಾತೃವಾಣಿ' (ಶ್ರೀಮಾತೆಯವರ 'ವರ್ಡ್ಸ್ ಆಫ್ ದಿ ಮದರ್') ಈ ಕೆಲವು ಅನುವಾದಿತ ಗ್ರಂಥಗಳೂ ಇವೆ.

ಮುಖ್ಯವಾಗಿ ಗಮನಿಸಬೇಕಾದದ್ದು ಬೇರೆ ಬೇರೆ ಪತ್ರಿಕೆಗಳಲ್ಲಿ ಚದರಿಹೋದ ಅವರ ಸಂಶೋಧನಾತ್ಮಕ ಲೇಖನಗಳನ್ನು, ಒಟ್ಟು ಹದಿನಾಲ್ಕು ಲೇಖನಗಳನ್ನು ಅವರು ಪ್ರಕಟಿಸಿದ್ದು, 'ವಿಜಾಪುರ ಶಾಸನ', 'ಅಭಿನವ ಪಂಪ ಮಹಾಕವಿ ಬರೆದ ವಿಜಾಪುರ ಶಿಲಾಲಿಪಿ', 'ಪ್ರಾಚೀನ ಕಾಲದ ಒಬ್ಬ ನಟಶ್ರೇಷ್ಠ ಹಾಗೂ ಒಬ್ಬ ಕವಿ', 'ಅರ್ಜುನವಾಡದ ಶಾಸನ' ಈ ಮುಂತಾದವುಗಳು ನಮ್ಮ ಸಾಹಿತ್ಯ ಚರಿತ್ರೆಯ ಮೇಲೆ ಹೊಸ ಬೆಳಕು ಬೀರಿವೆ. ಅರವಿಂದ ಸಾಹಿತ್ಯ, ಶರಣ ಸಾಹಿತ್ಯ, ಜನಪದ ಸಾಹಿತ್ಯ, ಭಾಷಾಶಾಸ್ತ್ರ ಇತ್ಯಾದಿ ವಿಷಯಗಳನ್ನು ಕುರಿತು ಅವರು ಬರೆದ ಹಲವು ಲೇಖನಗಳು ಆಯಾ ಕ್ಷೇತ್ರಗಳಲ್ಲಿ ಕಾರ್ಯಮಾಡುವವರಿಗೆ ಅತ್ಯಂತ ಉಪಯುಕ್ತ ಸಾಮಗ್ರಿಯಾಗಿವೆ.

ಹಲಸಂಗಿ ವಿಜಾಪುರ ಜಿಲ್ಲೆಯ ಉತ್ತರದ, ಸೊಲ್ಲಾಪುರ ಗಡಿ ಪ್ರದೇಶಕ್ಕೆ ಹತ್ತಿರದಲ್ಲಿರುವ ಒಂದು ಸಣ್ಣ ಹಳ್ಳಿ. ಈ ಹಳ್ಳಿಯಲ್ಲಿಯೇ ಒಂದು ಗೆಳೆಯರ ಗುಂಪನ್ನು ಅವರು ಕಟ್ಟಿಕೊಂಡಿದ್ದರು. ಸಿಂಪಿ ಲಿಂಗಣ್ಣ, ಕಾಪಸೆ ರೇವಪ್ಪ, ಪಿ. ಧೂಲಾ ಇವರೆಲ್ಲ ಅಲ್ಲಿಯ ಸಾಹಿತ್ಯ ಸ್ನೇಹಿತರು, ಸ್ನೇಹಿತರೂ ಎನ್ನುವುದಕ್ಕಿಂತ ಸೋದರರು ಎಂದು ಕರೆಯುವುದೇ ಹೆಚ್ಚು ಸೂಕ್ತವಾದದ್ದು. ಈ ಹಲಸಂಗಿ ಗೆಳೆಯರು ನವೋದಯ ಸಾಹಿತ್ಯಕ್ಕೆ ತಮ್ಮ ಕೊಡುಗೆಗಳನ್ನು ನೀಡಿದ್ದಲ್ಲದೆ ಪ್ರಪ್ರಥಮವಾಗಿ ಜನಪದ ಸಾಹಿತ್ಯದಲ್ಲಿ ಅಮೂಲ್ಯವಾದ ಕೆಲಸವನ್ನು ಮಾಡಿದ್ದಾರೆ. 'ಗರತಿಯ ಹಾಡು', 'ಮಲ್ಲಿಗೆ ದಂಡೆ', 'ಜೀವನ ಸಂಗೀತ' ಈ ಜನಪದ ಹಾಡುಗಳ, ಲಾವಣಿಗಳ ಸಂಗ್ರಹಗಳು ಇಂದಿಗೂ ಅನುಪಮ ಕೊಡುಗೆಗಳಾಗಿಯೇ ಉಳಿದಿವೆ.

ಧಾರವಾಡ ಗೆಳೆಯರ ಗುಂಪಿನ ಗೆಳೆಯರೂ ಆಗಿದ್ದ ಹಲಸಂಗಿ ಗೆಳೆಯರು ತನ್ಮೂಲಕವೂ ನಾಡುನುಡಿಯ ಸೇವೆ ಮಾಡಿದ್ದಾರೆ. ಹಲಸಂಗಿ ಗೆಳೆಯರಲ್ಲಿಯೇ 'ಮಧುರಚೆನ್ನ'ರದು ಅಪರೂಪದ ವ್ಯಕ್ತಿತ್ವ. ಅವರಂಥವರು ಅವರೇ ಎನ್ನುವಷ್ಟು ಅನುಭಾವದ ಸಾಧನೆಯಿಂದ, ಸಾಹಿತ್ಯಕ ಹಿರಿಮೆಯಿಂದ, ಗೆಳೆಯ ಗುಂಪಿನ ಬಾಂಧವ್ಯದಿಂದ, ಅರವಿಂದ ಮಂಡಳದ ಸತ್ಸಂಗದಿಂದ ತಮ್ಮ ಪ್ರಭಾವಮುದ್ರೆಯನ್ನು ಮೂಡಿಸಿದ್ದಾರೆ. ಬೇಂದ್ರೆಯವರು ಒಂದು ಪದ್ಯದಲ್ಲಿ ಅವರನ್ನು ನೆನೆದುಕೊಳ್ಳುತ್ತ, ಅವರ ಅಸದೃಶವಾದ ಗೆಳೆತನವನ್ನು ಕುರಿತು ಆಡಿದ ಮಾತು ಎಂದೆಂದೂ ಮರೆಯದಂತಹದಾಗಿದೆ:

> 'ಮಧುರ ಗೀತ'ವ ಹಾಡಿ 'ನನ್ನ ನಲ್ಲ'ನ ಒಲಿಸಿ
> ಹಲಸಂಗಿ ನಾಡಿನಲಿ ನೆಲಿಸಿ ನಿಂತ
> ನನ್ನ 'ಚೆನ್ನ'ನಿಗೆಣೆಯ ಗೆಣೆಯರಾರಾರಿಹರು
> ಅವನೆ ಅವನಿಗು ಹೆಚ್ಚು ಅವನಿಗಿಂತ

❑

---

1. 'ಶ್ರೀ ಮಧುರಚೆನ್ನರ ಭಾವಗೀತ' (ಲೇಖನ) ವಿ.ಕೃ. ಗೋಕಾಕ, ಜಯಕರ್ನಾಟಕ, ಸಂ. 31, ಸಂ, 12.
2. 'ಸಾಹಿತ್ಯ ಚಿಂತನ', ಚೆನ್ನವೀರ ಕಣವಿ. ಪು. 122.
3. 'ಯುಗಧರ್ಮ ಹಾಗೂ ಸಾಹಿತ್ಯದರ್ಶನ' (ದ್ವಿ.ಮು.1983), ಕೆ.ಡಿ. ಕುರ್ತಕೋಟಿ, ಪು.83.
4. 'ಸಾಹಿತ್ಯಚಿಂತನ' (ಪ್ರ.ಮು.1966), ಚೆನ್ನವೀರ ಕಣವಿ, ಪು. 124.
5. 'ವಿನೋದ ಕುಸುಮಾವಳಿ', ಡಾ|| ಜಿ.ಎಸ್. ಕಾಪಸೆಯವರ 'ಮಧುರಚೆನ್ನ-ಜೀವನ ಹಾಗೂ ಕೃತಿಗಳ ಸಮೀಕ್ಷೆ' - ಸಂಪ್ರಬಂಧದಲ್ಲಿ ಅನುಬಂಧವಾಗಿ ಪ್ರಕಟಗೊಂಡಿದೆ

# ಗೊರೂರು ರಾಮಸ್ವಾಮಿ ಅಯ್ಯಂಗಾರ್

ಸಿ.ಪಿ. ಕೃಷ್ಣಕುಮಾರ್

1

ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಆಧುನಿಕ ಕನ್ನಡ ಸಾಹಿತ್ಯದ ಹಿರಿಯ ತಲೆಮಾರಿನ ಲೇಖಕರಲ್ಲೊಬ್ಬರು; ಪ್ರಥಮ ಶ್ರೇಣಿಯವರು ಕೂಡ.

ಗೊರೂರರು 1904ರಲ್ಲಿ ಹಾಸನ ಜಿಲ್ಲೆಯ ಗೊರೂರು ಗ್ರಾಮದಲ್ಲಿ ಜನಿಸಿದರು. ಅವರ ತಂದೆ ಶ್ರೀನಿವಾಸ ಅಯ್ಯಂಗಾರ್, ತಾಯಿ ಲಕ್ಷ್ಮಮ್ಮ. ತಮ್ಮ ಹಳ್ಳಿಯಲ್ಲಿ ಲೋಯರ್ ಸೆಕೆಂಡರಿ ಶಿಕ್ಷಣವನ್ನು ಮುಗಿಸಿದ ಗೊರೂರರು ಹಾಸನದ ಸರ್ಕಾರಿ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಗಾಂಧೀಜಿಯ ಅಸಹಕಾರ ಚಳವಳಿಯಿಂದ ಆಕರ್ಷಿತರಾಗಿ ಶಿಕ್ಷಣಕ್ಕೆ ವಿದಾಯ ಹೇಳಿದರು. ಅನಂತರ ಅವರು ಗಾಂಧೀಜಿಯ ಆಶ್ರಮವನ್ನು ಸೇರಿ, ಗುಜರಾತಿನ ವಿದ್ಯಾಪೀಠದ ವಿದ್ಯಾರ್ಥಿಯಾದರು. ಬಳಿಕ ಮದರಾಸಿನ 'ಲೋಕಮಿತ್ರ' ಎಂಬ ಕನ್ನಡ ಪತ್ರಿಕೆಯ ಉಪಸಂಪಾದಕರಾಗಿ, 'ಆಂಧ್ರ ಪತ್ರಿಕೆ' ಮತ್ತು 'ಭಾರತಿ' ಪತ್ರಿಕೆಗಳ ಕನ್ನಡ ಸಮಾಚಾರ ಲೇಖಕರಾಗಿ ಸ್ವಲ್ಪಕಾಲ ಕೆಲಸ ಮಾಡಿ, ಕೆಂಗೇರಿಯ ಗುರುಕುಲಾಶ್ರಮವನ್ನು ಸೇರಿದರು. ಹರಿಜನೋದ್ಧಾರ ಅದರ ಮುಖ್ಯ ಕಾರ್ಯವಾಗಿತ್ತು; ಅದನ್ನು ಗೊರೂರರು ಶ್ರದ್ಧೆಯಿಂದ ನಿರ್ವಹಿಸಿದರು. ಆಮೇಲೆ ಬೆಂಗಳೂರಿನ ಅಖಿಲ ಭಾರತ ಚರಕ ಸಂಘದ ಖಾದಿ ವಸ್ತ್ರಾಲಯದ ಸಂಚಾಲಕರಾದರು. ಅಲ್ಲಿಯೆ ಅವರ ಸಾಹಿತ್ಯ ಸೇವೆ ಮೊದಲಾಯಿತು. 1933ರಲ್ಲಿ ಗೊರೂರರು ತಮ್ಮ ಗ್ರಾಮಕ್ಕೆ ಮರಳಿ, ಮೈಸೂರು ಗ್ರಾಮ ಸೇವಾ ಸಂಘವನ್ನು ಸ್ಥಾಪಿಸಿ, ಖಾದಿ ಪ್ರಚಾರ, ಹರಿಜನೋದ್ಧಾರ, ವಯಸ್ಕರ ಶಿಕ್ಷಣ, ಗ್ರಾಮ ಕೈಗಾರಿಕೆಗಳು ಮುಂತಾದ ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿದರು. 1942ರ 'ಚಲೇ ಜಾವ್' ಚಳವಳಿಯಲ್ಲಿ ಅವರು ಭಾಗವಹಿಸಿ, ತುರಂಗವಾಸವನ್ನು ಅನುಭವಿಸಿದರು. ಸ್ವಾತಂತ್ರ್ಯ ಬಂದ ಮೇಲೆ ಮೈಸೂರಿನಲ್ಲಿ ಪ್ರಜಾ ಸರ್ಕಾರ ಸ್ಥಾಪನೆಗಾಗಿ ನಡೆದ ಚಳವಳಿಯಲ್ಲೂ ಭಾಗವಹಿಸಿದರು. ಅದು ಸ್ಥಾಪಿತವಾದ ಮೇಲೆ ಸುಮಾರು ಹನ್ನೆರಡು ವರ್ಷ ಕಾಲ ರಾಜ್ಯದ ವಿಧಾನಪರಿಷತ್ತಿನ ಸದಸ್ಯರಾಗಿದ್ದರು. ಈ ಅವಧಿಯಲ್ಲಿ ಕರ್ನಾಟಕದ ಏಕೀಕರಣಕ್ಕಾಗಿ ಅವರು ದುಡಿದರು.

ಗೊರೂರರು ಅನೇಕ ಗೌರವಗಳನ್ನು, ಪ್ರಶಸ್ತಿಗಳನ್ನು ಪಡೆದಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ 1974ರಲ್ಲಿ ಗೌರವ ಡಿ.ಲಿಟ್. ಪದವಿಯನ್ನು ನೀಡಿತು. ಅವರು 1982ರಲ್ಲಿ ಸಿರಸಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಅವರ 'ಅಮೆರಿಕದಲ್ಲಿ ಗೊರೂರು' ಗ್ರಂಥಕ್ಕೆ 1980ರ ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿದೆ.

2

ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಸಾಹಿತ್ಯ ಸೃಷ್ಟಿ ಸಮೃದ್ಧವಾದುದು. ಪ್ರಬಂಧ, ಕಥೆ, ಕಾದಂಬರಿ, ಪ್ರವಾಸ ಕಥನ, ವಿಮರ್ಶೆ, ಜೀವನ ಚಿತ್ರ, ಭಾಷಾಂತರ-ಹೀಗೆ ಅನೇಕ ಪ್ರಕಾರಗಳಿಗೆ ಅವರ ಕೊಡುಗೆ ಸಂದಿದೆ. ಆದರೂ ಗೊರೂರರ ಸಿದ್ಧಿ, ಪ್ರಸಿದ್ಧಿಗಳಿಗೆ ಮುಖ್ಯವಾದ ಆಧಾರ, ಅವರ ಪ್ರಬಂಧಗಳು. ಅವು ದಶಕಗಳಿಂದ ಕನ್ನಡಿಗರಿಗೆ ಶುದ್ಧ ಸಂತೋಷವನ್ನೆಸುತ್ತಿವೆ, ಇಂದಿಗೂ ಅವುಗಳ ಸ್ವಾರಸ್ಯ ಬತ್ತಿಲ್ಲ. ತಮ್ಮ ಪ್ರಬಂಧ ಸಾಹಿತ್ಯದಿಂದ ನಾಡನ್ನು ನಗಿಸಿ ನಲಿಸಿದ್ದಾರೆ ಗೊರೂರರು. ಹಾಗೆ ನೋಡಿದರೆ, ನಮ್ಮ ಜನತೆಗೆ ನಗೆಯನ್ನು ಕಲಿಸಿದವರಲ್ಲಿ ಅವರು ಪ್ರಮುಖರು ಎನ್ನಬಹುದು. ಗೊರೂರರದು ಹಾಸ್ಯಯೋಗ.

ಗೊರೂರು ಗ್ರಾಮ, ಹೇಮಾವತಿ ನದಿ-ಈ ಎರಡೂ ಗೊರೂರರ ಸಾಹಿತ್ಯದಿಂದ ಅಮರವಾದುವು. ಹೇಮಾವತಿ ಆ ಸಾಹಿತ್ಯ ಸಮಸ್ತಕ್ಕೂ ಸ್ಫೂರ್ತಿ. ಹೀಗೆ ಒಂದು ಊರಿನೊಡನೆ, ನದಿಯೊಡನೆ ಅಭಿನ್ನತೆ ಸಾಧಿಸಿದ ಲೇಖಕರು ಎಲ್ಲಿಯೂ ವಿರಳವೇ. ಇದರಿಂದ ಗೊರೂರರ ವಾಙ್ಮಯಕ್ಕೆ ಪ್ರಾದೇಶಿಕಸ್ವರೂಪ ಪ್ರಾಪ್ತವಾಗಿದ್ದರೂ ಅದೊಂದೆ ಅವರ ಬರವಣಿಗೆಯ ವೈಶಿಷ್ಟ್ಯವಲ್ಲ. ಅವರು ಕೊಡುವ ಜೀವನ ಚಿತ್ರಣ ಪ್ರಾದೇಶಿಕವಾಗಿರುವಂತೆ ಪ್ರಾತಿನಿಧಿಕವೂ ಆಗಿದೆ ಎಂಬುದನ್ನು ಮರೆಯಬಾರದು.

ಗಾಂಧೀವಾದಿ ಗೊರೂರರ ಜಾನಪದ ಪ್ರಜ್ಞೆ ಅದ್ಭುತವಾದುದು. ಅವರು ಹೇಳುತ್ತಾರೆ : "ನಾನು ಸಾಹಿತಿಗಿಂತ ಹೆಚ್ಚಾಗಿ ಜನಸಾಮಾನ್ಯರ ಮನುಷ್ಯ"[1] ಇದು ಅವರ ನಂಬಿಕೆ; "ಜಾನಪದ ಗುಣಗಳನ್ನೂ, ಶಕ್ತಿಯನ್ನೂ ಹೆಚ್ಚು ಹೆಚ್ಚು ನೋಡಿದಂತೆ, ಭಾರತವನ್ನು ಆಧುನಿಕ ನಾಗರಿಕತೆಯ ಸರ್ವನಾಶದಿಂದ ತಪ್ಪಿಸಬಲ್ಲದು ಅದೊಂದೆ ಎಂಬ ನಂಬಿಕೆ ದೃಢವಾಗುತ್ತದೆ."[2] ಈ ಜಾನಪದ ಮತ್ತು ಜನಪರ ದೃಷ್ಟಿಯ ಹಿನ್ನೆಲೆಯಲ್ಲಿ ಗೊರೂರರ ಹಾಸ್ಯಪ್ರಜ್ಞೆ ಯಶಸ್ವಿಯಾಗಿ ಕೆಲಸ ಮಾಡಿದೆ.

ಗೊರೂರರ ಬರವಣಿಗೆಯಲ್ಲಿ ಕಲೆಯ ಪ್ರಯತ್ನ ಕಾಣುವುದಿಲ್ಲ; ಯಾವುದೇ ತಂತ್ರದ ಪ್ರಯೋಗವಾಗಲಿ, ಸಂಕೇತ ಪ್ರತೀಕ ಪ್ರತಿಮೆಗಳ ನಿರ್ಮಾಣವಾಗಲಿ ಅವರ ಕೃತಿಗಳಲ್ಲಿ ಗೋಚರಿಸುವುದಿಲ್ಲ. ಯಾವುದನ್ನು ಅವರು ಅಮೂರ್ತವಾಗಿ, ಅಸ್ಪಷ್ಟವಾಗಿ ಉಳಿಸುವುದಿಲ್ಲ. ತಾವು ಕಂಡುಂಡದನ್ನು ಗೊರೂರರು ಸಹಜವಾಗಿ, ಸಲೀಸಾಗಿ, ಆಕರ್ಷಕವಾಗಿ ಹೇಳಿಕೊಂಡು ಹೋಗುತ್ತಾರೆ. ಅವರದು ಪ್ರಜ್ಞಾಪೂರ್ವಕ ಕೌಶಲವಲ್ಲ, ಸಹಜ ಕಲೆ; "Art consists in concealing art" ಎಂಬ ಹೇಳಿಕೆಗೆ ಉತ್ತಮ ದೃಷ್ಟಾಂತ. ಎಷ್ಟೋ ಕಡೆ ಗೊರೂರರ ವಾಕ್ಯ ರಚನೆ 'ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ' ಎಂಬ ಉಕ್ತಿಯನ್ನು ನೆನಪಿಗೆ ತರುತ್ತದೆ; ಪರಿಷ್ಕಾರ ಸಾಲದು ಎಂಬ ಅನಿಸಿಕೆಯನ್ನುಂಟುಮಾಡುತ್ತದೆ. ಆದರೆ ಅವರ ನಿರೂಪಣೆ ಒಟ್ಟಿನಮೇಲೆ ಮಾಡುವ ಪರಿಣಾಮ, ಬೀರುವ ಮೋಡಿ ಅಸಾಧಾರಣವಾದದ್ದು.

ಗೊರೂರರ ಪ್ರಬಂಧಗಳನ್ನು ಮೊದಲು ಲಕ್ಷಿಸಬಹುದು. 'ಹಳ್ಳಿಯ ಚಿತ್ರಗಳು', 'ಗರುಡಗಂಬದ ದಾಸಯ್ಯ', 'ನಮ್ಮ ಊರಿನ ರಸಿಕರು', 'ಬೆಟ್ಟದ ಮನೆಯಲ್ಲಿ ಮತ್ತು ಇತರ ಪ್ರಬಂಧಗಳು', 'ಕಥೆಗಳು ಮತ್ತು ವಿನೋದ ಚಿತ್ರಗಳು', 'ಬೆಸ್ತರ ಕರಿಯ', 'ಹೇಮಾವತಿಯ ತೀರದಲ್ಲಿ ಮತ್ತು ಇತರ ಪ್ರಬಂಧಗಳು'- ಈ ಸಂಕಲನಗಳಲ್ಲಿ ಗೊರೂರರ ಪ್ರಬಂಧಗಳು ಕಥೆಗಳೊಡನೆ ಸಂಕಲಿತವಾಗಿವೆ. ಅವರ ಪ್ರಬಂಧಗಳನ್ನು ಅವರ ಕಥೆಗಳಿಂದ ಬೇರ್ಪಡಿಸು

ವುದು ಕಷ್ಟ. ಏಕೆಂದರೆ, ಪ್ರಬಂಧಗಳಲ್ಲಿ ಕಥಾಂಶ ದಟ್ಟವಾಗಿ ಸೇರಿಕೊಂಡಿರುತ್ತದೆ. ಆದ್ದರಿಂದ ಗೊರೂರರ ಪ್ರಬಂಧಗಳು, 'ಪ್ರಬಂಧ' ಶಬ್ದದ ನಿಷ್ಕೃಷ್ಟವಾದ ಅರ್ಥಕ್ಕಿಂತ ಹೆಚ್ಚಿನ ವ್ಯಾಪ್ತಿಯುಳ್ಳವೆಂಬುದು ಗಮನಾರ್ಹ.

ತಮ್ಮ ಪ್ರಬಂಧಗಳಲ್ಲಿ-ಇತರ ಕೃತಿಗಳಲ್ಲಿ ಕೂಡ-ಗೊರೂರು ಈಗ ಕಾಣಸಿಗದ ಅಥವಾ ತ್ವರಿತವಾಗಿ ಮರೆಯಾಗುತ್ತಿರುವ ಹಳ್ಳಿಯ ಬದುಕನ್ನು ಅದರ ಎಲ್ಲ ಮುಖಗಳೊಡನೆ ಚಿತ್ರಿಸುವುದರಲ್ಲಿ ಸಫಲರಾಗಿದ್ದಾರೆ. ಗ್ರಾಮೀಣ ಜನಜೀವನದಲ್ಲಿ ಅವರು ಒಂದಾಗಿ ಬಾಳಿದ್ದರಿಂದ ಇದು ಸಾಧ್ಯವಾಗಿದೆ. ಅವರ ಕೃತಿಗಳಲ್ಲಿ ಕಂಡುಬರುವ ಪಾತ್ರ ವೈವಿಧ್ಯ ಅಪಾರವಾದುದು; ಅಲ್ಲಿ ಗ್ರಾಮದ ಎಲ್ಲ ವೃತ್ತಿಗಳ, ಎಲ್ಲ ಜಾತಿಗಳ ಜನರೂ ಇದ್ದಾರೆ-ಹಾರುವರಿಂದ ಹರಿಜನರತನಕ. ('ನಮ್ಮ ಎಮ್ಮೆಗೆ ಮಾತು ತಿಳಿಯುವುದೇ?' ಎಂಬ ಪ್ರಬಂಧದಲ್ಲಿ ಪ್ರಾಣಿ ಪಾತ್ರವೂ ಉಂಟು). ಆದರೆ ಜಾತಿ-ಮತ-ಭೇದಗಳನ್ನು ಮೀರಿ ಎಲ್ಲರನ್ನೂ ಒಗ್ಗೂಡಿಸುವ ಕೆಲವು ಸೂತ್ರಗಳನ್ನು ಗೊರೂರರು ಗುರುತಿಸಿ, ಅವುಗಳಿಗೆ ಒತ್ತುಕೊಡುವುದರ ಮೂಲಕ ಸಾಮರಸ್ಯಯುತವಾದ ಒಂದು ಸಮಷ್ಟಿಯ ಚಿತ್ರವನ್ನು ಮೂಡಿಸುತ್ತಾರೆ. ಅವರ ಲೇಖಣಿ ಚಲನ ಛಾಯ ಬಿಂಬಗ್ರಾಹಿಯೂ ಆಗಿ, ಗ್ರಾಮಜೀವನದಲ್ಲಿ ಮಹತ್ವದ ಪಾತ್ರ ವಹಿಸುವ ಉತ್ಸವಗಳು, ಹಬ್ಬ ಹರಿದಿನಗಳು, ಜನಪದ ಕಲೆಗಳು, ಜನತೆಯಲ್ಲಿ ರೂಢವಾಗಿರುವ ಆಚಾರ ವಿಚಾರ, ನಂಬಿಕೆ ನಡಾವಳಿಗಳು ಎಲ್ಲವನ್ನೂ ಯಥಾವತ್ತಾಗಿ, ಸಜೀವವಾಗಿ ಸೆರೆಹಿಡಿದಿದೆ. ಗ್ರಾಮೀಣ ಸಂಸ್ಕೃತಿಯ ವಿಶ್ವರೂಪವನ್ನೆ ಅಲ್ಲಿ ಕಾಣಬಹುದು.[3] "ಗೊರೂರರ ಕೃತಿಗಳು ಬರಬರುತ್ತ ಹಳ್ಳಿಗಳ ಮಹಾ ಭಾರತಗಳೆ ಆಗುತ್ತಿವೆ" ಎಂಬ ವಿ.ಕೃ. ಗೋಕಾಕರ ಮಾತೊಂದು ಉಲ್ಲೇಖನೀಯವಾಗಿದೆ.

ನಾಗರಿಕರು ಶುಷ್ಕವೆಂದು ಭಾವಿಸುವ ಜನಪದ ಜೀವನದಲ್ಲಿ ಎಂತಹ ಸ್ವಾರಸ್ಯವಿದೆ, ಚೆಲುವಿದೆ ಎಂಬುದನ್ನು, ಸಾಮಾನ್ಯ ಜನ ಎಂತಹ ರಸಿಕರೆಂಬುದನ್ನು ಗೊರೂರರು ತಮ್ಮ ಬರಹಗಳಲ್ಲಿ ಎತ್ತಿ ತೋರಿಸಿದ್ದಾರೆ; ದೈನಂದಿನ ಬದುಕಿನ ಸಾಮಾನ್ಯ ಘಟನೆಗಳಲ್ಲಿ ಮತ್ತು ಸಂಗತಿಗಳಲ್ಲಿ ಹುದುಗಿರುವ ವಿಶೇಷತೆಯನ್ನು ಬಣ್ಣಿಸಿದ್ದಾರೆ. ಅವರು ಎಲ್ಲವನ್ನೂ, ಎಲ್ಲರನ್ನೂ ಅವಲೋಕಿಸುವುದು ಹಾಸ್ಯ ಕಣ್ಣಿನಿಂದ. ಗೊರೂರರ ಹಾಸ್ಯದ ಕೃತಕವಾದುದಲ್ಲ; ಎಲ್ಲಿಯೂ ಶಬ್ದ ಚಮತ್ಕಾರವನ್ನು ಆಶ್ರಯಿಸಿದ್ದಲ್ಲ. ಅದು ಒಂದು ಘಟನೆಯಿಂದ, ಸನ್ನಿವೇಶದಿಂದ ಸ್ವಾಭಾವಿಕವಾಗಿ ನಿಷ್ಪನ್ನವಾದುದೆ ಹೊರತು ಹೊರಗಿನಿಂದ ಹೊರಿಸಿದ್ದಲ್ಲ. ಕೆಲವೊಮ್ಮೆ ಗೊರೂರರು ಹಾಸ್ಯಕ್ಕಾಗಿ ಉತ್ಪ್ರೇಕ್ಷೆಯನ್ನು ಅವಲಂಬಿಸಿದರೂ ಅದು ಅಸಹಜವೆನಿಸುವುದಿಲ್ಲ. ಉತ್ಪ್ರೇಕ್ಷೆಯೂ ಹಾಸ್ಯದ ಒಂದು ಬೇರು ತಾನೇ?

ಗೊರೂರರ ಹಾಸ್ಯ ಹೇಗೆ ನಿರರ್ಗಳವೋ ಹಾಗೆ ನಿರ್ಮಲವೂ ಹೌದು. ಅದರ ಹಿಂದೆ ಆಕ್ರೋಶವಿಲ್ಲ, ಸಿನಿಕತನವಿಲ್ಲ; ಸಹಾನುಭೂತಿಯಿದೆ, ಮಾನವೀಯ ಅಂತಃಕರಣವಿದೆ. ಗೊರೂರರ ವಿನೋದಲಹರಿಯಲ್ಲಿ ಅನುಭವಕ್ಕೆ ಬರುವುದು ಜೇನುತುಪ್ಪದ ಸವಿಯೇ ವಿನಾ ಜೇನ್ನೊಣದ ಕುಟುಕು ಮುಳ್ಳಲ್ಲ. ಜೀವನವನ್ನು, ಜನವನ್ನೂ ಪ್ರೀತಿಸುವ ಪ್ರವೃತ್ತಿ ಗೊರೂರರದು. ಆದರೆ ಎಲ್ಲ ವರ್ಗದ ಜನರಲ್ಲೂ ಮನೆ ಮಾಡಿಕೊಂಡಿರುವ ಲೋಪದೋಷಗಳನ್ನೂ, ಅಜ್ಞಾನ-ಅವಗುಣಗಳನ್ನೂ ಅವರು ವಸ್ತುನಿಷ್ಠವಾಗಿ ನೋಡಿ, ಯಾರ ಮನಸ್ಸಿಗೂ ನೋವಾಗದಂತೆ ಹಾಸ್ಯ ವಿಡಂಬನೆಗಳಿಗೆ ಗುರಿಮಾಡಬಲ್ಲರು; ತನ್ಮೂಲಕ ಆ ಅಂಕುಡೊಂಕುಗಳ ತಿದ್ದುಪಡಿಗೆ ನೆರವಾಗಬಲ್ಲರು. ಗೊರೂರರ ಗೇಲಿಗೆ ಅವರ ಜಾತಿಯ ಜನ ಕೂಡ ಹೊರಗಲ್ಲ ಎಂಬುದು ಮಹತ್ವದ ಸಂಗತಿ. ಉದಾಹರಣೆಗೆ, "ನಮ್ಮಲ್ಲಿ ಒಬ್ಬೊಬ್ಬರೂ ಒಂದೊಂದು ಕಸುಬನ್ನು ಆರಿಸಿಕೊಳ್ಳುವಂತೆ ಕೆಲವರು ಮಡಿಯನ್ನೇ ಕಸುಬಾಗಿ ಆರಿಸಿಕೊಂಡಿದ್ದಾರೆ" ಎಂಬ ಕರ್ಮಠ ವಿಡಂಬನವನ್ನು ಗಮನಿಸಬಹುದು. ಅಂತೆಯೆ, ನಾಮಧಾರಣ ಪ್ರಕರಣವನ್ನು ಕುರಿತು "ಇದು ಅಯ್ಯಂಗಾರಿಗಳಿಗೆ ಒಂದು ವಿಧವಾದ ಮೊಹರಂ" ಎಂಬ ಟೀಕೆ. ಅಷ್ಟೇಕೆ, ಗೊರೂರರು ತಮ್ಮನ್ನು ತಾವೆ ಗೇಲಿಗೆ ಒಳಗುಮಾಡಿಕೊಳ್ಳಬಲ್ಲರು; ಈ ಚಿತ್ರವನ್ನು ನೋಡಿ : "ನಾನು ಗರುಡಗಂಬವನ್ನು ಕೈಯಲ್ಲಿ ಹಿಡಿದುಕೊಂಡು ಹೋಗುತ್ತಿದ್ದುದನ್ನು ಜನರು ಕಂಡು, 'ಇವನಿಗೆ ಜೋಳಿಗೆ, ಜಾಗಟೆ ಇಲ್ಲ. ಆದರೂ ಇವನೂ ದಾಸಯ್ಯನೇ ಸಂದೇಹವಿಲ್ಲ' ಎಂದು ಯೋಚಿಸಿದ್ದರು. ನನ್ನ ವೇಷವೇನೋ ಸ್ವಲ್ಪಮಟ್ಟಿಗೆ ಜಾಗಟೆ, ಜೋಳಿಗೆಯ ಗುರುವಿಗೆ ಸಮಾನವಾಗಿಯೇ ಇದ್ದಿತು. ಮಾಸಿದ ಒಂದು ಬಿಳಿಯ ಖಾದಿಯ ದಟ್ಟಿ, ಮಿತಿಮೀರಿ ಬೆಳೆದ ದೇಹಕ್ಕೆ, ಬಿಗಿಯಾಗಿ ಮೇಲಕ್ಕಾಗಿದ್ದ ಒಂದು ಅಂಗಿ. ಅದರ ಮೇಲೆ ಹೊದೆದುಕೊಂಡಿದ್ದ ಕೊಳೆಯಾದ ಅಂಗವಸ್ತ್ರ. ಹೆಗಲ ಮೇಲೆ ನೇತಾಡುತ್ತಿದ್ದ ಅದರ ತುದಿಯಲ್ಲಿ ಕಟ್ಟಿದ್ದ ಸೌತೆಕಾಯಿಯ ಗಂಟು. ವೈದಿಕರಾದ ನಮ್ಮ ತಂದೆಯವರು ಬೆಂಗಳೂರಿಗೆ ಬರುವರೆಂದು ವದಂತಿ ಇದ್ದುದರಿಂದ ಮುಖ ಕ್ಷೌರ ಮಾಡಿಸದೆ ಬೆಳೆಸಿದ್ದ, ಚೂಪಾದ, ಅರದಂತಿದ್ದ ಕರಿಯ ಗಡ್ಡ, ಇವು ಆಗಿನ ನನ್ನ ವೇಷದ ಕೆಲವು ವೈಚಿತ್ರ್ಯಗಳು." ಈ ಬಗೆಯ ನಿರ್ಲಿಪ್ತತೆ ಎಲ್ಲರಲ್ಲೂ ಇರುವುದಿಲ್ಲ. 'ಆಚಾರ ಕೆಟ್ಟರೂ ಆಕಾರ ಕೆಡಬಾರದು', 'ಹಾರುವಯ್ಯ ಹಜಾಮನಾದುದು' ಮುಂತಾದ ಪ್ರಬಂಧಗಳು ಯಾರನ್ನೂ ಗಹಗಹಿಸಿ ನಗುವಂತೆ ಮಾಡಬಲ್ಲುವು.

ಗೊರೂರರ ಹಾಸ್ಯಮನೋಧರ್ಮದ ವ್ಯಕ್ತಿತ್ವದಲ್ಲಿ ಬಾಳಿನ ಬಗೆಗೆ ಉತ್ಸಾಹವಿದೆ, ನಿಷ್ಠೆಯಿದೆ; ಅವರ ಬರಹಗಳು ಈ ಗುಣಗಳನ್ನು ಓದುಗರಲ್ಲೂ ಪ್ರೇರಿಸುತ್ತವೆ. ಈ ಹಾಸ್ಯದೃಷ್ಟಿ ಪಲಾಯನವಾದಕ್ಕೊಂದು ಮುಸುಕಲ್ಲ. (ಗೊರೂರರಿಗೆ ಪೂಜ್ಯರಾದ ಗಾಂಧೀಜಿ ಹಾಸ್ಯಪ್ರಿಯರಾಗಿದ್ದರಷ್ಟೆ). 'ಬೈಲುಹಳ್ಳಿ ಸರ್ವೆ'ಯ ಕಥೆಯಲ್ಲಿ, ಸರ್ವೆ ಮುಗಿದ ಮೇಲೆ ಊರಿಗೆ ಹೋದ ಮೋಜಿನಿದಾರರು ನಾಣಿಗೆ ಬರೆದ ಪತ್ರದ ಕೊನೆಯಲ್ಲಿ ಹೀಗೆನ್ನುತ್ತಾರೆ: "ನನ್ನ ಇಷ್ಟು ವರ್ಷದ ಅನುಭವದಲ್ಲಿ ನೂರಾರು ಹಳ್ಳಿಗಳನ್ನು ನೋಡಿದ್ದೇನೆ, ಅಳೆದಿದ್ದೇನೆ. ಎಲ್ಲಾ ಕಡೆಯೂ ಒಂದೇ ಸಮ, ಒಂದೇ ಗೋಳು, ಒಂದೇ ದಾರಿದ್ರ್ಯ, ಒಂದೇ ಕೊಳಕು, ಅಜ್ಞಾನ. ಬೈಲಹಳ್ಳಿಯಲ್ಲೂ ಅದೇ ಅಜ್ಞಾನ, ಅದೇ ಗೋಳು. ಆದರೆ ನಿಮ್ಮ ಉತ್ಸಾಹದಿಂದ ಆ ಗೋಳು ಸ್ವಲ್ಪ ತಲೆತಗ್ಗಿಸಿತು. ಅಳುವುದಕ್ಕೆ ಸಾವಿರ ಕಾರಣವಿದ್ದು ನಗುವುದಕ್ಕೆ ಒಂದು ಕಾರಣವಿದ್ದರೆ ಆ ಕಾರಣವನ್ನೇ ನೀವು ಬಲಪಡಿಸಿ ನಗುತ್ತಿದ್ದೀರಿ. ನೋವು ಗೋಳುಗಳ ಹಿಂದೆ ಹೊಂಚುಹಾಕುತ್ತಿರುವ ನಗೆಯನ್ನು ಹಿಡಿಯುವುದೇ ಜೀವನದ ತಿರುಳು. ಅದೇ ನಮ್ಮ ಮುಂದಲ ಉತ್ಸಾಹಕ್ಕೆ ಕಾರಣ." ಇದು ಲೇಖಕರ ನಿಲುವೂ ಹೌದು.

'ನಮ್ಮ ಊರಿನ ರಸಿಕರು' ಗೊರೂರರ ಪ್ರಬಂಧ ಸಮುದಾಯದಲ್ಲಿ ಒಂದು ವಿಶಿಷ್ಟ ಕೃತಿ. ಇದನ್ನು 'ಚಿತ್ರ ಕಾದಂಬರಿ' ಎಂದು ಕರೆಯಲಾಗಿದೆ. "ಈ ಕೃತಿಯಲ್ಲಿ ಬರುವ ವ್ಯಕ್ತಿಗಳು ಬಿಡಿಬಿಡಿಯಾಗಿ ಕಂಡರೂ ಅವರೆಲ್ಲರೂ ವಿಶಿಷ್ಟ ಜೀವನದ ಪರಸ್ಪರ ಸಂಬಂಧವುಳ್ಳ ಗ್ರಾಮ ಸಮಾಜದ ಅವಯವಗಳಾಗಿ" ಚಿತ್ರಿತರಾಗಿದ್ದಾರೆ. ಇದರಲ್ಲಿ ಬರುವ ಶಾಲು ಸಾಬಿಯ ಪಾತ್ರ ಮರೆಯಲಾಗದ್ದು.

'ಹೇಮಾವತಿಯ ತೀರದಲ್ಲಿ' ಗೊರೂರರ ಅತ್ಯುತ್ತಮ ಪ್ರಬಂಧಗಳಲ್ಲೊಂದು. ಇದು 'ರಮ್ಯ ಚಿತ್ರಗಳ ಒಂದು ಚಿತ್ರಶಾಲೆ'. ಅದರ ಪ್ರಾರಂಭವಿದು: "ಹೇಮಾವತಿ ನದಿಯು ನಮ್ಮೂರ ಉಸಿರು. ನದಿಯ ದಡದಲ್ಲಿ ನಿಂತುಕೊಂಡು ನೋಡಿದರೆ ನದಿ ನಮ್ಮೂರ ಬಳಿ ಇರುವಷ್ಟು ಸುಂದರವಾಗಿ, ಸೊಗಸಾಗಿ ಮತ್ತೆಲ್ಲೂ ಇಲ್ಲವೆಂದು ಯಾರಿಗಾದರೂ ತೋರುವುದು. ನರಸಿಂಹಸ್ವಾಮಿ ದೇವಸ್ಥಾನದ ಮುಂದುಗಡೆಯಿಂದ ಎಡಗಡೆಯೂ, ಬಲಗಡೆಯೂ ನೋಡಿದರೆ ನೂರಾರು ತೋಪುಗಳ ಗೊಂಚಲುಗಳು ಕಣ್ಣಿಗೆ ವಿಶ್ರಾಂತಿಯನ್ನು ಕೊಡುವುವು. ನದಿಯ ಎರಡು ದಡಗಳಲ್ಲೂ ಮರದ ಕೊಂಬೆಗಳು ನದಿಯ ಮೇಲೆ ಬಾಗಿದ್ದು ನೀರನ್ನು ಮುತ್ತಿಡುತ್ತಾ ನದಿಯ ರೆಪ್ಪೆಗಳಂತೆ ಕಾಣುವುವು. ನದಿಯಿಂದ ಮೇಲೆ ಪಶ್ಚಿಮಕ್ಕೆ ಒಂದು ಮೈಲಿ ಹೋದರೆ ಈಶ್ವರನನ್ನು ತಪಸ್ಸಿಗೆ ಆಕರ್ಷಿಸುವಷ್ಟು ರಮಣೀಯವೂ, ಶಾಂತವೂ ಆದ ಸಂಗಮ ಮತ್ತು ತೋಪು. ಹೇಮಾವತೀ ನದಿಯು ನಮ್ಮ ಪ್ರಾಂತಕ್ಕೇ ಜೀವವನ್ನು ಕೊಡುವ ಜೀವನಾಡಿ. ಅದರ ಸ್ಪರ್ಶದಿಂದ ಪವಿತ್ರವೂ, ಚೆನ್ನೂ ಆದ ನಮ್ಮ ನಾಡು ದೇವಲೋಕದ ನಂದನವನಕ್ಕೆ ಎಣೆಯಾದುದು. "ಹೇಮಾವತಿಯ ಬಣ್ಣನೆ ಹೀಗೆಯೇ ಕಾವ್ಯಗಂಧಿಯಾಗಿ ಮುಂಬರಿಯುತ್ತದೆ; ಒಟ್ಟಿನಲ್ಲಿ ಪ್ರಬಂಧ ಒಂದು ನೀಳ ಭಾವಗೀತೆಯಾಗಿದೆ. ಗೊರೂರರು ಯಾವುದೇ ಒಂದು ಗ್ರಾಮೀಣ ಅಥವಾ ನಾಗರಿಕ ಪರಿಸರವನ್ನಾಗಲಿ ಒಳಗಣ್ಣಿಗೆ ಪರಿಸ್ಫುಟವಾಗುವಂತೆ ವರ್ಣಿಸಬಲ್ಲರು. ಆ ವರ್ಣನೆಗಳಲ್ಲಿ ಎಷ್ಟೋ ಕಡೆ ಅವರ ಕವಿಮನೋ ವೃತ್ತಿಯ ವಿಲಾಸ ಕಾಣಿಸುತ್ತದೆ. ಕನ್ಯಾಕುಮಾರಿಯ ಕಡಲು, ಬಿಂದಿಗಮ್ಮನ ಜಾತ್ರೆ, ಶಿವರಾತ್ರಿ ಇತ್ಯಾದಿಗಳ ವರ್ಣನೆಗಳು ಕಾವ್ಯ ಪ್ರತಿಭೆಯ ಸಮೀಚೀನ ನಿದರ್ಶನಗಳು.

ನಾಗರಿಕತೆಯ ಪ್ರಭಾವದಿಂದ ನಾವು ಅಮೂಲ್ಯವಾದುದೇನನ್ನೊ ಕಳೆದುಕೊಂಡೆವು ಎಂಬ ವಿಷಣ್ಣತೆ ಗೊರೂರರ ಪ್ರಬಂಧಗಳಲ್ಲಿ ವ್ಯಕ್ತವಾಗುತ್ತದೆ. ಎಂದರೆ, ಹಳೆಯ ಅನಿಷ್ಟ ವ್ಯವಸ್ಥೆ ಯಥಾವತ್ತಾಗಿ ಉಳಿದು ಬರಬೇಕಿತ್ತು ಎಂಬುದು ಗೊರೂರರ ಅಭಿಪ್ರಾಯವಲ್ಲ. ವಾಸ್ತವವಾಗಿ ಅವರದು ಪ್ರಗತಿಪರ ಧೋರಣೆ; ಹಳತು-ಹೊಸತುಗಳ ಸಮನ್ವಯದಲ್ಲಿ ವಿಶ್ವಾಸವುಳ್ಳದ್ದು. ನಾಗರಿಕತೆ, ವಿಜ್ಞಾನಗಳು-ಮನುಕುಲಕ್ಕೆ ಲಾಭದಾಯಕವಾಗಿದ್ದರೂ-ಜನಜೀವನದ ಶಾಂತಿ, ಸಮಾಧಾನ ಸೌಮನಸ್ಯಗಳನ್ನು ಅಳಿಸಿವೆ. ಕೆಲವು ಮೌಲ್ಯಗಳಿಗೆ ಮಾರಕವಾಗಿವೆ ಎಂಬುದನ್ನು ಯಾರೂ ಒಪ್ಪಬೇಕು. 'ಸೇತುವೆ' ಎಂಬ ಪ್ರಬಂಧದ ಅಂತ್ಯದಲ್ಲಿ ಗೊರೂರರು ತೆಗೆಯುವ ಉದ್ಗಾರ ಅರ್ಥವತ್ತಾಗಿದೆ : "ಅದರ (ನದಿಯ) ಮೇಲೆ ಬಿದ್ದ ಸೇತುವೆ ಅದಕ್ಕೂ ನಮಗೂ ನಡುವೆ ಬಿದ್ದಂತೆ ತೋರುತ್ತಿದೆ." 'ನಮ್ಮ ಹೊಲೆಯ ಒಂದು ಅನುಭವ'ದ ಕಡೆಯಲ್ಲಿ ಬರುವ "ಈಗ ಹನುಮನು ಇಲ್ಲ; ಸೇತುವೆ ಇದೆ" ಎಂಬ ಮಾತು ಕೂಡ ಧ್ವನಿಪೂರ್ಣ. ಹನುಮ ಬಹಳಷ್ಟನ್ನು ಸಂಕೇತಿಸುತ್ತಾನೆ (ಆದರೆ ಅದರ ಅರಿವು ಪ್ರಾಯಶಃ ಗೊರೂರರಿಗಿಲ್ಲ!). ಗೊರೂರರ ಕೃತಿಗಳನ್ನು ಓದಿದ ಮೇಲೆ, ವಾಚಕರಲ್ಲೂ ಒಂದು ನಷ್ಟದ ಭಾವನೆ ಹುಟ್ಟದಿರುವುದಿಲ್ಲ.

'ಗರುಡಗಂಬದ ದಾಸಯ್ಯ' ಕೃತಿಯ ಮುನ್ನುಡಿಯಲ್ಲಿ ದ.ರಾ. ಬೇಂದ್ರೆಯವರು ಹೀಗೆಂದಿದ್ದಾರೆ: "ಒಬ್ಬ ಅರಸುಗಳೆ, ಹಜಾಮರೆ, ಹಾರುವರೆ, ತುರುಕರೆ, ದಾಸಯ್ಯಗಳೆ, ಬಯಲಾಟದವರೆ, ಸುಭೇದಾರರೆ, ಶಾನುಭೋಗರೆ, ಹೊಲೆಯರೆ-ಇವರೆಲ್ಲರನ್ನೂ ಒಂದು ಮಾಲೆಯಲ್ಲಿ ಪೋಣಿಸಿದ ವಿಕಟ ಕವಿತ್ವವು ಪ್ರಶಂಸನೀಯವೆಂದು ಯಾರು ಹೇಳಲಿಕ್ಕಿಲ್ಲ? ಹಾಸ್ಯವು ಸಾಮ್ಯವಾದಿ; ವ್ಯಂಗ್ಯಸರಣಿಯ ಗಾದೆ ಮಾತಿನ ಲೇಹ್ಯಗಳು, ಕಟಕಿಯ ಮಾತಿನ ತಿರುಪಿನ ಕಷಾಯಗಳು, ಹಾಸ್ಯಗರ್ಭಿತ ಉಪಮೆ ದೃಷ್ಟಾಂತಗಳ ಪಾಚಕ ರೇಚಕಗಳು, ಅತಿಶಯೋಕ್ತಿಯ ಗುಳಿಗೆಗಳು, ತತ್ವದ ಭಸ್ಮಗಳು-ಇವೆಲ್ಲವು ಸಾಮಾಜಿಕ ರುಗ್ಣತೆಯನ್ನು ಕಳೆಯುವ ಇವರ ಹಾಸ್ಯ-ವೈದ್ಯಕದಲ್ಲಿ ಉಚಿತ ಪ್ರಯೋಜನಕಾರಿಯಾದುದನ್ನು ಅಡಿಗಡಿಗೆ ಕಂಡು ಹೀಗೆಯೇ ಈ ಕಲೆಯು ನಮ್ಮ ಜನಮನದ ಕೊಳೆಯನ್ನು ಕಳೆದು ಬೆಳಗುವಂತಿರಲಿ ಎಂದು ಹರಸುವಂತಾಗುವುದು. ಗೊರೂರವರ ಕಲೆಯು ಎಲ್ಲಿಂದಲೊ ರಫ್ತಾಗಿ ಬಂದ ಸೀಮೆ ಛಾಪಿನ ಸರಕಲ್ಲ. ಅದು ಜಾನಪದ ಜೀವನದಲ್ಲಿ ಹುದುಗಿದ್ದರೂ ಹರಿಯುತ್ತಿದ್ದ ಹಾಸ್ಯದ ಹೊಳೆಯನ್ನು ಕಂಡುಹಿಡಿದು, ಅದನ್ನು ಬಣ್ಣಿಸಬಲ್ಲ ಸ್ವಭಾವ ಸಿದ್ಧವಾದ ವಚನ ವೈಖರಿಯು." ಇದು ಗೊರೂರರ ಸಾಹಿತ್ಯಕ್ಕೆಲ್ಲ ಅನ್ವಯಿಸಬಲ್ಲ ಹೇಳಿಕೆ.

ಗೊರೂರರ ಕಾದಂಬರಿಗಳು ನಾಲ್ಕು : 'ಹೇಮಾವತಿ', 'ಪುನರ್ಜನ್ಮ', 'ಮೆರವಣಿಗೆ' ಮತ್ತು 'ಊರ್ವಶಿ'. ನಾಲ್ಕೂ ಒಳ್ಳೆಯ ಕಾದಂಬರಿಗಳೇ. ಸಂಪ್ರದಾಯಶರಣರಾದ ಗ್ರಾಮೀಣ ಸಮಾಜದಲ್ಲಿ ಸುಧಾರಣೆಯ ಗಾಳಿ ಬೀಸಿದ ಪರಿಯನ್ನು ಚಿತ್ರಿಸುತ್ತದೆ 'ಹೇಮಾವತಿ'; ನೂತನ ವಿಚಾರಗಳಿಗೆ ಮನ ತೆರೆದ ಯುವಕರು ಹಳ್ಳಿಯಲ್ಲಿ ಹೇಗೆ ಹೊಸ ವಾತಾವರಣವನ್ನು ಸೃಜಿಸಿದರು ಎಂಬುದನ್ನದು ಹೇಳುತ್ತದೆ. ಪಂಚಮರನ್ನು ಉದ್ಧರಿಸುವುದು ಹೇಗೆ ಎಂಬ ಪ್ರಶ್ನೆಯನ್ನು ಲೇಖಕರು ಇದರಲ್ಲಿ ಎತ್ತಿ, ಉತ್ತರವನ್ನೂ ಕೊಟ್ಟಿದ್ದಾರೆ. ಅವರನ್ನು ಪ್ರೀತಿ, ಅನುಕಂಪಗಳಿಂದ ಕಾಣಬೇಕು, ಅವರಿಗೆ ಶಿಕ್ಷಣ ಕೊಡಬೇಕು, ಆರೋಗ್ಯ ನಿಯಮಗಳನ್ನು ಹೇಳಿಕೊಡಬೇಕು. ಈ ಪರಿವರ್ತನೆ ಒಂದೆರಡು ದಿನಗಳಲ್ಲಿ ಆಗುವಂಥದಲ್ಲ; ಎಲ್ಲರ ಮನವೊಲಿಸಿ, ನಿಧಾನವಾಗಿ ಸಾಧಿಸಬೇಕಾದ್ದು.

'ಪುನರ್ಜನ್ಮ' ಸ್ವಾತಂತ್ರ್ಯ ಸಂಗ್ರಾಮ ಕಾಲದ ಒಂದು ಆದರ್ಶಪೂರ್ಣ ಕತೆಯನ್ನು ಬಿತ್ತರಿಸುತ್ತದೆ. ನಮ್ಮ ಸ್ವಾತಂತ್ರ್ಯ ಎಂತಹ ತಪಸ್ಸಿನ ಮತ್ತು ಶ್ರಮದ ಫಲ ಎಂಬುದನ್ನು ಮನಗಾಣಿಸುವ ಕಾದಂಬರಿ, 'ಮೆರವಣಿಗೆ'. ಒಬ್ಬ ವಿಮರ್ಶಕರ ಪ್ರಕಾರ "ಇದು ಕತೆಯಲ್ಲ, ಕಾದಂಬರಿಯಲ್ಲ, ಪ್ರಬಂಧವೂ ಅಲ್ಲ, ಸಾಚಾ ಅನುಭವಗಳ ಮೆರವಣಿಗೆ". ಇದರಲ್ಲಿ, ಈಗಿನ ಮಠಾಧಿಪತಿಗಳ ಮೇಲೆ ಗೊರೂರರು ಮಾಡಿರುವ ಆಕ್ರಮಣ ಅವಶ್ಯವಾಗಿ ಗಮನಿಸಬೇಕಾದುದು : "ಕಾಲಾನುಕಾಲಕ್ಕೆ ಧರ್ಮವನ್ನೂ ಮತಪದ್ಧತಿಗಳನ್ನೂ ಬದಲಾಯಿಸಿ, ಸಮಾಜವನ್ನು ಆಧುನಿಕವಾಗಿ ಮಾಡುತ್ತಿದ್ದ ಆ ಪೂರ್ವದ ಋಷಿಗಳೆಲ್ಲಿ? ಈಗಿನ ಈ ಮಠಾಧಿಪತಿಗಳಾದರೂ ಏನು ಮಾಡುತ್ತಿದ್ದಾರೆ; ಸಂಸಾರಿಕರಂತೆ ತಾವೂ ಅರಮನೆಗಳ ಮುಂದೆಯೂ ಅಧಿಕಾರಿಗಳ ಮುಂದೆಯೂ ಬಾಲ ಬಡಿಯುತ್ತಾ ಶಿಷ್ಯರೆನಿಸಿಕೊಳ್ಳುವ ಕುರಿಗಳ ತಲೆ ಒಡೆದು ಒಂದೊಂದು ಆಳು ಎತ್ತರದ ಕೊಳಗದಪ್ಪಲೆಗಳಲ್ಲಿ ಪಾಯಸ ಜಿಲೇಬಿ ಮಾಡಿಸಿ ಮೋಟಾರಿನಲ್ಲಿ ತಿರುಗುತ್ತಾ ತಮ್ಮ ಮೆರವಣಿಗೆಗಳನ್ನು ಮಾಡಿಕೊಳ್ಳುವ ಈ ಮಠದ ಪಾಳೆಯಗಾರರು, ಆಧುನಿಕ ಜಗತ್ತಿನ ಬದಲಾಯಿಸಿದ ಪರಿಸ್ಥಿತಿಗಳು ಎದುರಿಗೆ ಎದ್ದು ನಿಂತಾಗ ಯಾವ ಹಳೆಯ ಓಲೆಗರಿಯ ಧೂಳನ್ನು ಕೊಡುವುತ್ತಿದ್ದಾರೆ?.... ಈ ಸಮಾಜದ ಆಸ್ತಿತ್ವ ಉಳಿಯ ಬೇಕಾದರೆ ನಾವು ಅವಲಂಬಿಸಬೇಕಾದ ಆಧುನಿಕ ಮಾರ್ಗಗಳಾವುವು? ತ್ಯಜಿಸಬೇಕಾದ ಪ್ರಾಚೀನ ರೋಗಗಳಾವುವು? ಧರ್ಮವನ್ನೂ ವಿಜ್ಞಾನವನ್ನೂ

ಬೆರೆಸುವುದು ಹೇಗೆ? ಇವುಗಳನ್ನೆಲ್ಲ ಈ ಗುರುಗಳು ಎನ್ನಿಸಿಕೊಳ್ಳುವವರು ತಮ್ಮ ಮಠಗಳನ್ನೆ ಪ್ರಯೋಗ ಕ್ಷೇತ್ರಗಳನ್ನಾಗಿ ಮಾಡಿಕೊಂಡು ತೋರಿಸಬೇಡವೆ? ಅದು ಬಿಟ್ಟು ಏನು ಬರಲಿ ಏನು ನಡೆಯಲಿ? ಯಾವ ಪ್ರಶ್ನೆ ಏಳಲಿ? ಎಲ್ಲದಕ್ಕೂ ಸಾವಿರ ವರುಷದ ಕೆಳಗೆ ಹೇಳಿದ ಬುಕ್ಕಿನಲ್ಲಿ ಏನಿದೆ ಅದಕ್ಕೆ ಸರಿಹೋಗುತ್ತದೆಯೋ, ಅದಕ್ಕೆ ಸರಿ ಹೋಗದಿದ್ದರೆ ಅದಕ್ಕೆ ಜಗತ್ತಿನಲ್ಲಿ ಜಾಗವೇ ಇಲ್ಲ". ಇಲ್ಲಿ ಪ್ರಕಟವಾಗಿರುವ ವೈಚಾರಿಕ ಮನೋಭಾವ ಮತ್ತು ವಿವೇಕಪರತೆ ಸ್ತುತ್ಯವಾಗಿವೆ.

ಕೆಟ್ಟಗಳಿಗೆಯೊಂದರಲ್ಲಿ, ತನ್ನ ತಪ್ಪೇನೂ ಇಲ್ಲದೆ, ಜಾರಿದ ಹೆಣ್ಣೊಬ್ಬಳು ಮುಂದೆ ಎಚ್ಚತ್ತು ಆತ್ಮೋದ್ಧಾರ ಮಾಡಿಕೊಂಡು ಸಮಾಜಕ್ಕೂ ಸೇವೆ ಸಲ್ಲಿಸಿದ ಕರುಣಾಜನಕ ಕಥೆ 'ಊರ್ವಶಿ'ಯಲ್ಲಿದೆ. ಇದನ್ನು ಒಬ್ಬ ವಿಮರ್ಶಕರು ಕನ್ನಡದ 'ಪುನರುತ್ಥಾನ' (Resurrection) ಎಂದು ಕರೆದಿದ್ದಾರೆ.

ಈ ಎಲ್ಲ ಕಾದಂಬರಿಗಳಲ್ಲೂ ಗೊರೂರರು 'ಕಲೆಗಾಗಿ ಕಲೆ' ಎಂಬ ತತ್ತ್ವವನ್ನು ಪುರಸ್ಕರಿಸದೆ, ಗ್ರಾಮಗಳ ಪುನರುಜ್ಜೀವನವನ್ನು ಕುರಿತು ಗಾಂಧೀವಾದದ ಬೆಳಕಿನಲ್ಲಿ ಚಿಂತನ ಮಾಡಿದ್ದಾರೆ; ಆರೋಗ್ಯಶಾಲಿಯಾದ ಮೌಲ್ಯಪ್ರಜ್ಞೆಯನ್ನು ತೋರಿದ್ದಾರೆ. ಎಷ್ಟೋ ಕಡೆ ಚಿತ್ರಣದ ಸರಳತೆಯನ್ನು ಅವರ ಸಮರ್ಥ ಕಥನಕಲೆ ಮರೆಸಿಬಿಡುತ್ತದೆ.

'ವೈಯ್ಯಾರಿ', 'ಶಿವರಾತ್ರಿ', 'ಉಸಬು', 'ಗೋಪುರದ ಬಾಗಿಲು', 'ಕಮ್ಮಾರ ವೀರ ಭದ್ರಾಚಾರಿ', 'ಕನ್ಯಾಕುಮಾರಿ ಮತ್ತು ಇತರ ಕಥೆಗಳು'- ಇವು ಗೊರೂರರ ಕಥಾ ಸಂಗ್ರಹಗಳು (ಹಿಂದೆ ಹೇಳಿದ ಪ್ರಬಂಧ ಸಂಕಲನಗಳಲ್ಲೂ ಕತೆಗಳಿವೆ). ಹಳ್ಳಿಯ ಜೀವನ, ಪೇಟೆಯ ಜೀವನ ಎರಡಕ್ಕೂ ಸಂಬಂಧಿಸಿದ ಕತೆಗಳನ್ನು ಗೊರೂರರು ಬರೆದಿದ್ದಾರೆ. ಅವರ ಎಲ್ಲ ಕತೆಗಳಲ್ಲೂ ವಾತಾವರಣ ಸ್ಪಷ್ಟವಾಗಿ ರೂಪುಗೊಳ್ಳುತ್ತದೆ. ಪಾತ್ರಗಳಲ್ಲಿ ವೈವಿಧ್ಯವಿದ್ದರೂ, ಒಳತೋಟಿ ಯಿಲ್ಲವೆಂದೇ ಹೇಳಬೇಕು. ಆದರೆ ಈ ಕೊರತೆಯನ್ನು ಕತೆ ಹೇಳುವ ಜಾಣ್ಮೆ ಮುಚ್ಚುತ್ತದೆ. 'ಬೂತಯ್ಯನ ಮಗ ಅಯ್ಯು' ಮಾತ್ರ ಗೊರೂರರ ಶ್ರೇಷ್ಠತಮ ಕಥೆ; ಸಂಕೀರ್ಣವಾದ ಅನುಭವವನ್ನು ತಾಳಿಕೊಂಡದ್ದು. ಅದರಲ್ಲಿ ಮನುಷ್ಯ ಸ್ವಭಾವವನ್ನು ಲೇಖಕರು ಸತ್ವಯುತವಾಗಿ ವಿಶ್ಲೇಷಿಸಿದ್ದಾರೆ. ದ್ವೇಷದ ನೆಲೆಯಲ್ಲಿ ಭೀಕರವಾಗಿ ಮೊದಲಾಗುವ ಕತೆ ಸ್ನೇಹದ ನೆಲೆಗೆ ಬೆಳೆದು, ತಿಳಿಯಾಗಿ ಮುಗಿಯುತ್ತದೆ. "ಮುಗ್ಧತೆಗೆ ಸೆರೆಯಾಗದ ಆದರ್ಶತ್ವ, ಸರಳೀಕರಣಕ್ಕೆ ಸೆರೆಯಾಗದ ವಾಸ್ತವಿಕತೆ, ಅನುಕಂಪವನ್ನು ಬಿಡದ ತಿಳಿಹಾಸ್ಯ, ಮಾನವ ಸ್ವಭಾವದಲ್ಲಿ ನೈಜವಾದ ಮತ್ತು ಉದಾರವಾದ ಆಸಕ್ತಿ-ಇವು ಅವರ ಕಥಾಸಾಹಿತ್ಯಕ್ಕೆ ಜೀವವನ್ನೂ ಬೆಲೆಯನ್ನೂ ತಂದಿವೆ."[4]

ಗೊರೂರರ ಪ್ರವಾಸ ಕಥನ, 'ಅಮೆರಿಕದಲ್ಲಿ ಗೊರೂರು'. ಇದು ಅವರು ಮಾತ್ರ ಕೊಡಬಹುದಾದ್ದು. ಅಮೆರಿಕವನ್ನು ಕುರಿತ ಪ್ರವಾಸ ಕಥನಗಳು ನಮ್ಮಲ್ಲಿ ಅನೇಕ ಇವೆ; ಗೊರೂರರದು ಅವುಗಳಂತಲ್ಲ. ಇಲ್ಲಿಯೂ ಅವರ ಹಾಸ್ಯಪ್ರಜ್ಞೆ ಮೇಲುಗೈಯಾಗಿದೆ. ತಮ್ಮ ಕಥನದ ಆರಂಭದಲ್ಲಿ ಅವರು ಹೇಳುತ್ತಾರೆ : "ನನ್ನದು ಅಲೆಮಾರಿ ಸ್ವಭಾವ. ಯಾವ ಬಂಧನಕ್ಕೂ ಸಿಕ್ಕದೆ 'ಹರಕೆ ಪರದೇಶಿಯಂತೆ' ಗ್ರಾಮೈಕ ರಾತ್ರಿಯಾಗಿ, ಈ ರಾಷ್ಟ್ರದ ನೆಲ, ನೀರು, ಪರ್ವತ ಶ್ರೇಣಿ, ದೇವಾಲಯ, ವಿಶಾಲವಾದ ಅದ್ಭುತ ಬಯಲು, ಪ್ರಕೃತಿ ವೈಚಿತ್ರ್ಯಗಳನ್ನು ಅನುಭವಿಸುತ್ತ ಗುರುತು ಪರಿಚಯವಿಲ್ಲದ ಯಾವುದೋ ಕಡೆ ಕಂತೆ ಒಗೆಯಬೇಕೆಂಬುದು ನನ್ನ ಇಷ್ಟ."[5] ಗೊರೂರರ ಸಾಹಿತ್ಯಕ್ಕೆ ಅನನ್ಯತೆಯನ್ನು ತಂದುಕೊಟ್ಟಿರುವುದು ಈ ಪರಿವ್ರಾಜಕ ಪ್ರವೃತ್ತಿಯೆ. ಅಮೆರಿಕದ ಎಲ್ಲ ಬಗೆಯ ಜನರೊಡನೆ ಸುಲಭವಾಗಿ ಮಿಳಿತರಾಗಿ ಪಡೆದ ವಿಶಿಷ್ಟವಾದ-ಎಷ್ಟೋ ಸಲ ವಿಚಿತ್ರವಾದ-ಅನುಭವಗಳಲ್ಲಿ ಈ ಗ್ರಂಥದಲ್ಲಿ ಗೊರೂರರು ಮನೋಜ್ಞವಾಗಿ ನಿರೂಪಿಸಿದ್ದಾರೆ. 'ಅಮೆರಿಕದಲ್ಲಿ ಗೊರೂರು' ಅತ್ಯಂತ ಧ್ವನಿಪೂರ್ಣವಾದ ಶೀರ್ಷಿಕೆ. ಅದು ಪೂರ್ವ ಪಶ್ಚಿಮಗಳನ್ನೂ ನಗರ ಗ್ರಾಮಗಳನ್ನೂ ಹಳತು ಹೊಸತನ್ನು ಸಂಕೇತಿಸುತ್ತದೆ. ಅಮೆರಿಕದಲ್ಲಿ ಗೊರೂರು ಕಳೆದುಹೋಗುವುದಿಲ್ಲ; ವಿವಿಧ ಸ್ತರಗಳಲ್ಲಿ ಮೈದೋರುತ್ತದೆ. ಇದು ಈ ಪುಸ್ತಕದ ವಿಶೇಷ."[6]

ಗೊರೂರರ ಸಾಹಿತ್ಯಕ್ಕೊಂದು ಗಂಭೀರವಾದ ಮುಖವೂ ಉಂಟೆಂಬು ದನ್ನು ನೆನಪಿಡಬೇಕು. ಅವರು ನಗಿಸಬಲ್ಲರಷ್ಟೆ ಅಲ್ಲ, ಚಿಂತನ ಮಂಥನ ಗಳಲ್ಲೂ ಮಗ್ನರಾಗಬಲ್ಲರು. "ವೈಚಾರಿಕತೆಯನ್ನಾಗಲಿ ಕಲ್ಪಕ ಶಕ್ತಿಯನ್ನಾಗಲಿ ಅವರಿಂದ ಅಪೇಕ್ಷಿಸಲಾಗದು"[7] ಎಂಬ ಹೇಳಿಕೆ ಸತ್ಯವಲ್ಲ. ಗೊರೂರರ ಪ್ರಬಂಧ, ಕಥೆ, ಕಾದಂಬರಿಗಳಲ್ಲೂ ವೈಚಾರಿಕತೆಯ ಸುಳುಹುಗಳುಂಟು. ಒಂದು ಸಣ್ಣ ನಿದರ್ಶನ ಕೊಡಬಹುದು. 'ನಮ್ಮ ಊರಿನ ರಸಿಕರು' ಕೃತಿಯಲ್ಲಿ ಒಂದೆಡೆ ವೈದಿಕ ಬಾಲ ವಿಧವೆಯೊಬ್ಬಳ ವಿಷಯ ಬರುತ್ತದೆ. ಅವಳಿಗೆ ಮನೆಯವರು ತಲೆಬೋಳಿಸಿ, ಕೆಂಪು ಸೀರೆ ಉಡಿಸಿ, ಮೂಲೆ ಗುಂಪು ಮಾಡಿದ ಹೀನ ಪ್ರಕ್ರಿಯೆಗೆ ಒಬ್ಬ ಶೂದ್ರ ಆಳಿನ ಪ್ರತಿಕ್ರಿಯೆಯಿದು : "ಅದ್ಯಾಕ ಬುದ್ಧಿ ಹನ್ನೊಂದು ವರ್ಷದ ಹಸುಗೂಸ್ಗೆ ಇನ್ನೊಂದು ಮದ್ವೆ ಮಾಡೋಕಾಗ್ದಿತ್ರ?" ಗೊರೂರರ ನವೀನ ದೃಷ್ಟಿ ಮಾತ್ರವಲ್ಲದೆ, ಮೇಲುವರ್ಗದ ಸಂಪ್ರದಾಯ ಶಠತೆಗೂ ಕೆಳವರ್ಗದವರ ಮಾನವೀಯ ಧೋರಣೆಗೂ ಇರುವ ವೈಷಮ್ಯ ಕೂಡ ಇಲ್ಲಿ ಧ್ವನಿತವಾಗುತ್ತದೆ.

ಲೇಖಕರ ಆಲೋಚನಶೀಲತೆಗೆ ಸ್ಪಷ್ಟ ಸಾಕ್ಷಿಯಾಗಿದೆ, ಅವರ 'ಸಾಹಿತ್ಯರಶ್ಮಿ'. ಇದರಲ್ಲಿನ ಲೇಖನಗಳಲ್ಲಿ ಸಾಹಿತ್ಯ ಮಾತ್ರವಲ್ಲದೆ, ಶಿಲ್ಪಕಲೆ, ಚಿತ್ರಕಲೆ, ಶಿಕ್ಷಣ, ವೃತ್ತಪತ್ರಿಕೆ, ಜೀವನ ತತ್ತ್ವ ಮುಂತಾದ ಹಲವಾರು ವಿಷಯಗಳು ಚರ್ಚಿತವಾಗಿವೆ. ಗೊರೂರರ ಬಹುಮುಖವಾದ ಅಭಿರುಚಿ, ಪಾಂಡಿತ್ಯ, ವಿಮರ್ಶನ ಶಕ್ತಿಗಳು ಇಲ್ಲಿ ಅನಾವರಣಗೊಂಡಿವೆ. ಒಂದೊಂದು ಲೇಖನದಲ್ಲೂ ಅವರು ಉದ್ದಿಷ್ಟ ವಿಷಯಗಳನ್ನು ಸರಳವಾಗಿ, ಸ್ಪಷ್ಟವಾಗಿ ಪರಿಚಯಿಸುತ್ತಾರೆ. ಸಾಹಿತ್ಯ ವಿಷಯಕ ಬರಹಗಳಲ್ಲಿ ಗೊರೂರರ ವಿಮರ್ಶೆ ಪ್ರಧಾನವಾಗಿ ಪರಿಚಯಾತ್ಮಕ ಅಥವಾ ವರ್ಣನಾತ್ಮಕವಾದರೂ, ಅದಕ್ಕೊಂದು ಬೆಲೆ ಉಂಟೇ ಉಂಟು. 'ಜನಪದ ಜೀವನ ಮತ್ತು ದರ್ಶನ' ಗೊರೂರರ ಈ ಬಗೆಯ ಇನ್ನೊಂದು ಪುಸ್ತಕ. ಜನಪದ ಸಾಹಿತ್ಯದ ಸಂಗ್ರಹ ಮತ್ತು ವಿವೇಚನೆಯ ಕಾರ್ಯವನ್ನೂ ಮಾಡಿದ್ದಾರೆ ಗೊರೂರರು. (ತಮ್ಮ ಪ್ರಬಂಧಗಳಲ್ಲಿ ಕೆಲವೆಡೆ ಜನಪದ ಗೀತೆಗಳನ್ನು ಅವರು ಉದ್ಧರಿಸಿದ್ದಾರೆ).

ಒಟ್ಟಿನಲ್ಲಿ ಕನ್ನಡಕ್ಕೆ ಗೊರೂರರ ಮುಖ್ಯವಾದ ಕೊಡುಗೆಯೇನು? ಅದನ್ನು ಕುವೆಂಪು ಅವರ ನುಡಿಗಳಲ್ಲಿ ಹೀಗೆ ಸಂಗ್ರಹಿಸಬಹುದು:

"ಚಾರ್ಲ್ಸ್ ಡಿಕನ್ಸ್, ಆಲಿವರ್ ಗೋಲ್ಡ್ ಸ್ಮಿತ್, ಎ.ಜಿ. ಗಾರ್ಡಿನರ್ ಮುಂತಾದ ಇಂಗ್ಲಿಷ್ ಲೇಖಕರ ಬರವಣಿಗೆಯನ್ನು ಓದಿ, ಅಲ್ಲಿನ ವಿವಿಧ ರೀತಿಯ ಹಾಸ್ಯವನ್ನು ಚಪ್ಪರಿಸಿದ್ದ ನಮಗೆ ಕನ್ನಡದಲ್ಲಿ ಅಂಥ ಹಾಸ್ಯದ ಅರಕೆ ದೊಡ್ಡ ಕೊರಗನ್ನೇ ಉಂಟುಮಾಡಿತ್ತು. ಆ ಅರಕೆಯನ್ನು ಹೋಗಲಾಡಿ ಸಿದ ಕೆಲವೇ ಲೇಖಕರಲ್ಲಿ ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರರು ನಿಶ್ಚಯವಾಗಿಯೂ ಅಗ್ರಸ್ಥಾನದಲ್ಲಿದ್ದಾರೆ....."

"ಅವರ ಬರವಣಿಗೆಯಲ್ಲಿ ನಾನು ಮನಸಾರ ಮೆಚ್ಚಿರುವ ಮತ್ತೊಂದು ಅಂಶ ಹೆಚ್ಚು ಕಡಿಮೆ ಈಗ ಸಂಪೂರ್ಣವಾಗಿ ಕಣ್ಮರೆಯಾಗಿ ಹೋಗಿರುವ ನಮ್ಮ ಗ್ರಾಮೀಣ ಜೀವನದ ವಿವಿಧ ಮುಖಗಳ ನಿರ್ಮಲವಾದ ವರ್ಣನೆ ... ನೀರಸ ಎಂದು ತೋರುವ ಗ್ರಾಮೀಣ ಜೀವನದ ಸ್ವಾರಸ್ಯಕರ ಅಂಶಗಳನ್ನು ಎತ್ತಿ ತೋರಿಸಿ, ಗೊರೂರರು ಅವುಗಳನ್ನು ಅಮರಗೊಳಿಸಿದ್ದಾರೆ....."[8]

ಗೊರೂರರ ಸಾಹಿತ್ಯದಲ್ಲಿ ಮಿತಿಗಳಿಲ್ಲವೆಂದಲ್ಲ. ಅವರು ಬದುಕಿನ ಸುಮುಖವನ್ನೆ ಹೆಚ್ಚಾಗಿ ಕಂಡು ಕಂಡರಿಸಿದ್ದಾರೆ, ದುರ್ಮುಖವನ್ನಲ್ಲ. ಅವರ ಕಣ್ಣು ಬಾಳಿನ ಸಾಮಾನ್ಯ ಸರಳ ಸಂಗತಿಗಳನ್ನು ಆರಿಸಿಕೊಳ್ಳುತ್ತದೆಯೆ ಹೊರತು ಗಹನವಾದುದರ ಅನ್ವೇಷಣೆಗೆ ಪ್ರಯತ್ನಿಸುವುದಿಲ್ಲ. ಆದ್ದರಿಂದ ಜೀವನದ ಎಲ್ಲ ಸ್ತರಗಳ ದರ್ಶನ ಅಲ್ಲಿ ನಮಗೆ ಆಗುವುದಿಲ್ಲವೆನ್ನಬೇಕು. ಗ್ರಾಮಜೀವನವಾದರೂ ಅವರಿಂದ ಸಮಗ್ರವಾಗಿ ಚಿತ್ರಿತವಾಗಿದೆ ಎಂದು ಹೇಳುವುದು ಕಷ್ಟ. ಬ್ರಾಹ್ಮಣರ ಬದುಕನ್ನು ಚಿತ್ರಿಸುವಂತೆ ಬ್ರಾಹ್ಮಣೇತರ ಕೆಳವರ್ಗದವರ ಬದುಕಿನ ಸಕಲ ವಿವರಗಳನ್ನು ಅವರು ಕೊಡಲಾರರು. ಇದು ಅನಿವಾರ್ಯವಾದ ಉಪಾಧಿ. ಕುವೆಂಪು ಅಥವಾ ಎಚ್.ಎಲ್. ನಾಗೇಗೌಡರ ಕೃತಿಗಳೊಡನೆ ಗೊರೂರರ ಕೃತಿಗಳನ್ನು ಹೋಲಿಸಿ ನೋಡಿದಾಗ ಈ ಅಂತರ ವೇದ್ಯವಾಗುತ್ತದೆ. ಆದರೆ ಗೊರೂರರು ಕೊಟ್ಟಿರುವಷ್ಟು ಮಾತ್ರ ಬಹು ಗಟ್ಟಿಯಾದುದು.

ಗೊರೂರರ ಬರವಣಿಗೆ ಅಪರೂಪದ್ದು ಮತ್ತು ಅವರಿಗೇ ಅನುರೂಪವಾದದ್ದು; ಮತ್ತೊಬ್ಬ ಗೊರೂರರು ನಮ್ಮಲ್ಲಿಲ್ಲ; ಅವರು ಚಿತ್ರಿಸಿದಂಥ ಸಮಾಜವೂ ಈಗ ಉಳಿದಿಲ್ಲ.

❑

---

1. 'ಗೊರೂರು ಗೌರವ ಗ್ರಂಥ', ಸಂ. ಹಾ.ಮಾ. ನಾಯಕ, ಪು. 37
2. ಅದೇ.
3. ಈ ಕಾರಣದಿಂದ ಗೊರೂರರ ಕೃತಿಗಳು ಸಾಂಸ್ಕೃತಿಕ ಅಧ್ಯಯನಕ್ಕೆ ಒಳ್ಳೆಯ ಆಕರಗಳಾಗಿರುತ್ತವೆ. ಈ ದಿಶೆಯಲ್ಲಿ ಶಿವರಾಮೇಗೌಡ ನಾಗವಾರ ಅವರ 'ಗೊರೂರರ ಕೃತಿಗಳು: ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಕೃತಿಯನ್ನು ಹೆಸರಿಸಬಹುದು.
4. ಎಲ್.ಎಸ್. ಶೇಷಗಿರಿರಾವ್, 'ಗೊರೂರು ಗೌರವ ಗ್ರಂಥ' ಪು. 189.
5. 'ಅಮೆರಿಕದಲ್ಲಿ ಗೊರೂರು', ಪು.1.
6. ಹಾ.ಮಾ. ನಾಯಕ, ಅದೇ ಪುಸ್ತಕದ 'ನುಡಿತೋರಣ', ಪು.xi.
7. ಕೆ.ಡಿ. ಕುರ್ತಕೋಟಿ, 'ಯುಗಧರ್ಮ ಹಾಗೂ ಸಾಹಿತ್ಯದರ್ಶನ', ಪು.152.
8. 'ಗೊರೂರು ಗೌರವಗ್ರಂಥ' ಪು.457.

## ಜಿ.ಬಿ. ಜೋಶಿ

---

ವಿ. ಚಂದ್ರಶೇಖರ ನಂಗಲಿ

### 1

'ಜಡಭರತ' ಹಾಗೂ 'ಅನಾಮಧೇಯ' ಎಂಬ ಕಾವ್ಯನಾಮಗಳಿಂದ ಕೃತಿರಚನೆ ಮಾಡಿರುವ ಪದ್ಮಶ್ರೀ ಜಿ.ಬಿ. ಜೋಶಿಯವರು (ಗೋವಿಂದ ಭೀಮಾಚಾರ್ಯ ಜೋಶಿ) ಧಾರವಾಡ ಜಿಲ್ಲೆಯ ಗದಗ ತಾಲ್ಲೂಕಿನ ಹೊಂಬಳದಲ್ಲಿ 29-7-1904 ರಂದು ಜನಿಸಿದವರು. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಇಂಟರ್ ಆರ್ಟ್ಸ್ ವರೆಗೆ ಶಿಕ್ಷಣವನ್ನು ಪೂರೈಸಿದ ಇವರು ಬದುಕಿನಲ್ಲಿ ಸಂಪಾದಕ-ಪ್ರಕಾಶರಾಗುವ ಮೂಲಕ ಸಾಹಿತ್ಯ ವ್ಯವಸಾಯವನ್ನೇ ವೃತ್ತಿ-ಪ್ರವೃತ್ತಿಗಳನ್ನಾಗಿ ಸ್ವೀಕರಿಸಿದ್ದಾರೆ. ಜೋಶಿಯವರು ಕಳೆದ ಐವತ್ತೈದು ವರ್ಷಗಳಿಂದ ಬೆಳೆಸಿಕೊಂಡು ಬಂದ ಮನೋಹರ ಗ್ರಂಥ ಮಾಲೆ ಕನ್ನಡನಾಡಿನ ಪ್ರತಿಷ್ಠಿತ ಪ್ರಕಾಶನ ಸಂಸ್ಥೆಗಳಲ್ಲಿ ಒಂದಾಗಿದೆ. ಧಾರವಾಡದಲ್ಲಿ ದ.ರಾ. ಬೇಂದ್ರೆಯವರ ನೇತೃತ್ವದಲ್ಲಿ ಸ್ಥಾಪಿತವಾಗಿದ್ದ ಗೆಳೆಯರ ಗುಂಪಿನ ಸದಸ್ಯರೂ ಆಗಿದ್ದ ಜಡಭರತರು ಕವನ, ಕಾದಂಬರಿ, ಸ್ವಪ್ನ ಕಥನ, ನಾಟಕ ಕೃತಿಗಳನ್ನು ರಚಿಸಿದ್ದಾರೆ. ಮುಖ್ಯವಾಗಿ ನಾಟಕಕಾರನಾಗಿಯೇ ಹೆಸರು ಮಾಡಿರುವ ಜಡಭರತರು 1982ರಲ್ಲಿ ರಾಜ್ಯ ನಾಟಕ ಅಕಾಡೆಮಿಯ ಪ್ರಶಸ್ತಿಯನ್ನೂ, 1989ರಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿಯನ್ನೂ ಪಡೆದಿದ್ದಾರೆ.

ಪ್ರಥಮ ಪ್ರಕಟಿತ ಕೃತಿ 'ಧರ್ಮಸೆರೆ'ಯಿಂದ ಹಿಡಿದು 'ಪರಿಮಳದವರು' ವರೆಗೆ ಒಟ್ಟು ಒಂಬತ್ತು ಕೃತಿಗಳನ್ನು ಜಡಭರತರು ಹೊರ ತಂದಿದ್ದಾರೆ.[1] ಜಡಭರತರ ಸಮಗ್ರ ಕೃತಿಗಳ ವಿಮರ್ಶೆ ಇದುವರೆಗೆ ನಡೆದಿಲ್ಲ.

ಸ್ವಾತಂತ್ರ್ಯಪೂರ್ವದಿಂದಲೂ ಕೃತಿರಚನೆ ಮಾಡುತ್ತಿರುವ ಜಡಭರತರು ವಿಶೇಷವಾಗಿ ಸ್ವಾತಂತ್ರ್ಯೋತ್ತರದ ಸ್ಥಿತಿಗತಿಗಳಿಗೆ ಸ್ಪಂದಿಸಿರುವ ರೀತಿ ಅಭ್ಯಾಸಪೂರ್ಣವಾಗಿದೆ. ಲೇಖಕನೊಬ್ಬ ತನ್ನ ದೇಶ-ಕಾಲ-ಪರಿಸರಗಳಿಗೆ ಸ್ಪಂದಿಸುವ ಬಗೆ, ಇದರ ಬಗ್ಗೆ ಸಹೃದಯರು ನಡೆಸುವ ವಿಮರ್ಶೆ-ವಿಶ್ಲೇಷಣೆಗಳು ನಮ್ಮನ್ನು ಬದುಕಿನ ಅರ್ಥಪೂರ್ಣ ಗ್ರಹಿಕೆಗೆ ಅಣಿಗೊಳಿಸುವುದರಿಂದ ಸಾಹಿತ್ಯಾಭ್ಯಾಸವು ನನ್ನ ದೃಷ್ಟಿಯಲ್ಲಿ ಜೀವನಾನುಭವದ ವಿಶ್ಲೇಷಣೆಯೇ ಆಗಿದೆ. ಜಡಭರತರ ಕೃತಿಗಳಲ್ಲಿ ಮುಖ್ಯವಾಗಿ ಸ್ವಾತಂತ್ರ್ಯೋತ್ತರದ ಸ್ಥಿತಿಗತಿಗಳು, ಕುಸಿಯುತ್ತಿರುವ ಮೌಲ್ಯ ವ್ಯವಸ್ಥೆ, ನಶಿಸಿ ಹೋಗುತ್ತಿರುವ ಗ್ರಾಮೀಣ ಜೀವನ, ಧರ್ಮದ ಸಾಂಸ್ಥಿಕ ನೆಲೆಯ ಅವ್ಯವಹಾರಗಳು-ಹೀಗೆ ಸಮಕಾಲೀನ ಮನುಷ್ಯ ಜೀವನದ ವಿಕೃತ ಗತಿಯ ಹಲವು ಮುಖಗಳನ್ನು ಮನಗಾಣಬಹುದಾಗಿದೆ. ಈ ಆಶಯಗಳೇ ಜಡಭರತರ ಕೃತಿಗಳಲ್ಲಿ ಕಂಡು ಬರುವ ವಿಚಾರಗಳಾಗಿರುವುದರಿಂದ ರೂಕ್ಷವಾದ ಆದರ್ಶವಾದ-ಕನಸುಣಿತನ-ಭಾವಾತಿರೇಕಗಳು ಇವರ ಕೃತಿಗಳಲ್ಲಿ ಕಂಡು ಬರುವುದಿಲ್ಲ. ಇಂತಹ ಪರಿಣತಿಯನ್ನು ಜಡಭರತರು ಒಮ್ಮೆಗೆ ಸಾಧಿಸದೆ, ಕ್ರಮೇಣ ಸಾಧಿಸಿದರೆಂಬುದು ಅವರ 'ಚೊಚ್ಚಲು' ಎನ್ನಬಹುದಾದ ಕೃತಿಗಳ ಪರಿಶೀಲನೆಯಿಂದ ತಿಳಿದು ಬರುತ್ತದೆ. 1926 ರಿಂದ 1932ರ ವರೆಗೆ ರಚಿಸಿದಂ ಒಟ್ಟು ಮೂವತ್ತೆರಡು ಕವನಗಳನ್ನುಳ್ಳ 'ಜೀವಫಲ' ಕವನ ಸಂಕಲನದಲ್ಲಿ ಭಾವುಕತೆಯೇ ಪ್ರಧಾನವಾಗುವುದನ್ನು ಗಮನಿಸಬಹುದು. ದೈವಕೃಪೆಯ ಬಗ್ಗೆ ದೈನ್ಯಭಾವದ ಯಾಚನೆ, ತಾಯಿ ಪ್ರೀತಿಯ ಧಾರೆ, ಸ್ನೇಹ ನೀಡುವ ಚೈತನ್ಯ, ಬಾಳಿನ ಆಸೆ-ನಿರಾಸೆಗಳು ಇಲ್ಲಿನ ಕವನಗಳ ಬಹು ಮುಖ್ಯ ವಸ್ತುವಾಗಿವೆ. ಮಸಣದಲ್ಲಿ ಬಿದ್ದಿರುವ ತಲೆಬುರುಡೆಯನ್ನು ಕಂಡು ಮನಸೇಚ್ಛೆಯಾಗಿ ಹರಿಯಬಿಡುವ ಗತಲಹರಿಗಳಲ್ಲಿ 'ಭಾವುಕತೆ'ಯೇ ವಿಜೃಂಭಿಸಿಬಿಡುತ್ತದೆ. ಇಲ್ಲಿನ ಕವನಗಳೆಲ್ಲವೂ ಮಿತ ಯಶಸ್ಸಿನ ರಚನೆಗಳೆಂಬ ಅರಿವು ಸ್ವತಃ ಜಡಭರಿತರಿಗೆ ಇತ್ತೆಂದು ತೋರುತ್ತದೆ. ಆದ್ದರಿಂದಲೇ ಈ ಮಾಧ್ಯಮಕ್ಕೆ ಶಾಶ್ವತವಾದ ವಿದಾಯವನ್ನು ಹೇಳಿದ ಜಡಭರತರು ಮುಂದೆ ತಮ್ಮ ನಾಟಕಗಳಲ್ಲಿನ ಹಾಡುಗಳಿಗೂ ಕೂಡ ಬೇಂದ್ರೆ, ಕುರ್ತಕೋಟಿಯವರಿಗೆ ಮೊರೆ ಹೋಗಿದ್ದಾರೆ, ಕವಿಯಾಗಿ ಸಾಧಿಸಲಾಗದ ಯಶಸ್ಸನ್ನು ಜಡಭರತರು ಕಥನಕಾರನಾಗಿ ಸಾಧಿಸಿದ್ದಾರೆಂಬುದು ಧರ್ಮಸೆರೆ (ಕಾದಂಬರಿ), ಜಡಭರತನ ಕನಸುಗಳು (ಸ್ವಪ್ನ ಕಥನ) ಕೃತಿಗಳ ಪರಿಶೀಲನೆಯಿಂದ ವ್ಯಕ್ತವಾಗುತ್ತದೆ.

## 2

'ಧರ್ಮಸೆರೆ'ಯಲ್ಲಿ ಬದುಕುವುದಕ್ಕಾಗಿ ಹೋರಾಟ ನಡೆಸುವ, ಪ್ರತಿಕೂಲ ಪರಿಸ್ಥಿತಿಯ ಎದುರಲ್ಲಿ ಮುಖಾಮುಖಿಯಾಗಿ ನಿಲ್ಲುವ ಹೆಣ್ಣಿನ ದಿಟ್ಟತನವನ್ನು ಕಾಣಿಸುವ ಪ್ರಯತ್ನವಿದೆ. ಇದನ್ನು ಹೀಗೆ ವಿವರಿಸಬಹುದು: ವನಮಾಲಿ ಮೂಕಳಾದರೂ ಪ್ರತಿಕೂಲ ಪರಿಸ್ಥಿತಿಯ ಎದುರು 'ಧ್ವನಿ' ಎತ್ತುವ (=ಹೋರಾಡುವ) ದಿಟ್ಟತನವನ್ನು ಹೊಂದಿರುತ್ತಾಳೆ. ಇದನ್ನು ತೌಲನಿಕವಾಗಿ ಸ್ಪಷ್ಟಪಡಿಸಲೋಸುಗವೇ ಜಡಭರತರು ಮೀನಾಕ್ಷಿಯ ಪಾತ್ರ ಕಲ್ಪನೆ ಮಾಡಿದ್ದಾರೆ. ಮೀನಾಕ್ಷಿ ಕಲಿತ ಹೆಣ್ಣು. ತನ್ನದೇ ಆದ ಮಧುರ ಸ್ವಪ್ನಗಳನ್ನು, ಆದರ್ಶಗಳನ್ನು ಕಟ್ಟಿಕೊಂಡ ಹೆಣ್ಣು. ಆದರೆ ಪರಿಸ್ಥಿತಿಯ ಒತ್ತಡಗಳಿಗೆ ಮಣಿದು ಬಾಯಿದ್ದೂ ಕೂಡ 'ಧ್ವನಿ' ಎತ್ತಲಾಗದ ಸ್ಥಿತಿಯಲ್ಲಿ (=ಮೂಕಳಾಗಿ) ಬದುಕಿಗೆ ತನ್ನನ್ನು ಒಪ್ಪಿಸಿಕೊಳ್ಳುತ್ತಾಳೆ. ಹೀಗೆ ಒಳಗೊಳಗೆ ತಳಮಳದಿಂದ ತುಡಿಯುವ ಮೀನಾಕ್ಷಿಯ ಮೂಕ ಸಂಕಟ, ಇರುವುದನ್ನು ಒಪ್ಪಿಕೊಂಡು ಬದುಕಿನ ಹೋರಾಟ ನಡೆಸುವ ವನಮಾಲಿಯ ಮೂಕ ಸಂಕಟದೊಂದಿಗೆ ಸಾದೃಶ್ಯ ಸಂಬಂಧವೊಂದನ್ನು ಧ್ವನಿಸುತ್ತದೆ. ಬಾಳಿನ ಪಯಣದಲ್ಲಿ 'ಕೊಟ್ಟ ಕುದುರೆ'ಯನ್ನು ಒಪ್ಪಿಕೊಂಡು ಬದುಕಲು ಸೆಣಸುವ ವನಮಾಲಿ, 'ಹಲ್ಲಣ'ವ (=ತಳಮಳ) ಹೊತ್ತು ಬಳಲುವ ಮೀನಾಕ್ಷಿಗಿಂತಲೂ ಮಿಗಿಲಾದ ದಿಟ್ಟ ವ್ಯಕ್ತಿತ್ವವನ್ನು ಹೊಂದಿದ್ದಾಳೆ. ಆದ್ದರಿಂದಲೇ, ನಿರಾಶೆಯ ಕಪ್ಪು ನೆರಳಲ್ಲು ಬೆಳಕಿನ ಆಶಾಕಿರಣಗಳನ್ನು ಕಾಣಲು ತಹತಹಿಸುವ ಪಾತ್ರಕಲ್ಪನೆಯನ್ನು ಜಡಭರತರ ಕೃತಿಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದು.

'ಜಡಭರತನ ಕನಸುಗಳು' ಆದ್ಯಂತವಾಗಿ ಒಂದು ಸ್ವಪ್ನ ಕಥನವಾಗಿದೆ. ಅನುಕ್ರಮಣಿಕೆಯಿಲ್ಲದ ಕನಸುಗಳನ್ನು ಒಂದು ಖಚಿತವಾದ ಕಥೆಯ ಚೌಕಟ್ಟು ಮತ್ತು ವಿಚಾರಗಳ ಅನುಕ್ರಮಣಿಕೆಗೆ ಹೊಂದಿಸಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ.[2] ಜಾನಪದ ಕಥೆಗಳಲ್ಲಿ ಸಾಮಾನ್ಯವಾಗಿ ಕಂಡುಬರುವ 'ಫ್ಯಾಂಟಸಿ' ಈ ಕೃತಿಯ ವಿವರಗಳಲ್ಲೂ ಕಾಣಬಹುದು. 'ದಿವ್ಯ ಸಂದೇಶ'ವೆಂಬ ಮೊದಲ ಪ್ರಕರಣದಲ್ಲಿ ಅಶರೀರವಾಣಿಯಿಂದ ಸ್ಫೂರ್ತಗೊಂಡು 'ದಿವ್ಯಾಗ್ನಿಯ' ಅನ್ವೇಷಣೆಗೆ ಹೊರಡುವ ರಾಜನೊಬ್ಬನ ವಿವರಗಳಿವೆ. ಈ ರಾಜ ಅಶರೀರವಾಣಿಯ ನಿರ್ದೇಶನಕ್ಕೊಳಪಟ್ಟು ಪರಾಧೀನನಾಗಿ ಹೊರಟವನು. ಈ ಪರಾಧೀನತೆಯೇ ರಾಜನನ್ನು ಅನ್ವೇಷಣೆಯ ಉದ್ದಕ್ಕೂ ಕೈಹಿಡಿದು ಮುನ್ನಡೆಸುತ್ತದೆ. ಈ ಮಾತಿನ ಸಮರ್ಥನೆಗಾಗಿ ರಾಜನಿಗೆ ಅಲ್ಲಲ್ಲಿ ಮಾರ್ಗದರ್ಶನ ನೀಡುತ್ತಾ ಅವನ ಕಣ್ಣುಗಳಿಗೆ 'ದರ್ಶನದ್ರವ್ಯ'ವನ್ನು ಹಚ್ಚುವ ಬಿಳಿಗಡ್ಡದ ಮುದುಕನನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಈ ದರ್ಶನ ದ್ರವ್ಯದ ಲೇಪನದ ನಂತರ ರಾಜನಿಗೆ ತಾನು ಇದುವರೆಗೆ ಹಾದುಬಂದ ಬಗೆಬಗೆಯ ಅವಸ್ಥಾಂತರಗಳ ಒಟ್ಟು ಕ್ರಿಯಾಸರಣಿಯಲ್ಲಿಯೇ ದಿವ್ಯಾಗ್ನಿಯಲ್ಲಿ ಹುದುಗಿರುವುದು ಗೋಚರಿಸುತ್ತದೆ. ಆದರೆ ಬದುಕಿನಲ್ಲಿ ತೊಡಗಿದ ಕ್ರಿಯಾಸರಣಿಯ ಮೂಲಕ ಎದೆಯಲ್ಲಿ ಸ್ಫುರಿಸುವ ದಿವ್ಯಾಗ್ನಿಯು ಅರ್ಥ ತಿಳಿಯದ ರಾಜ ಅದನ್ನು ಮತ್ತೆ ಕಾಣಲು, ಪಡೆಯಲು ಬಿಳಿಗಡ್ಡದ ಮುದುಕನ ಬಳಿ ದರ್ಶನದ್ರವ್ಯವನ್ನು ಬೇಡಿ ತೆಗೆದುಕೊಳ್ಳುತ್ತಾನೆ. ತನ್ನ ಹೃದಯದಿಂದ ಹೊರತಾದ ದಿವ್ಯಾಗ್ನಿಯನ್ನು ಜನತೆಯ ಹೃದಯಗಳಿಗೆ ಮುಟ್ಟಿಸುವಲ್ಲಿ ರಾಜ ವಿಫಲನಾಗುತ್ತಾನೆ. ಆದ್ದರಿಂದಲೇ ರಾಜ ಮತ್ತೆ ತನ್ನ ರಾಜ್ಯಕ್ಕೆ ಹಿಂದಿರಗಿದಾಗ ರಾಜ್ಯದ ಜನತೆ ಅವನನ್ನು ಗುರುತಿಸುವುದೂ ಇಲ್ಲ. ಅವನ ದಿವ್ಯಾಗ್ನಿ-ಪ್ರದರ್ಶನಗಳು ನಿರರ್ಥಕ ಸಾಧನಗಳಾಗುತ್ತವೆ.

ಈ ಕೃತಿಯಲ್ಲಿ ಬರುವ 'ದಿವ್ಯಾಗ್ನಿ'ಗೆ ಏನು ಅರ್ಥ ? ಅದು ಏನನ್ನು ಸಂಕೇತಿಸುತ್ತದೆ? ಎಂಬ ಪ್ರಶ್ನೆಗೆ, ಅವರವರ ಭಾವಕ್ಕೆ ಅವರವರ ದರ್ಶನಕ್ಕೆ ತಕ್ಕಂತೆ ಎಂದು ಉತ್ತರಿಸಬೇಕಾಗುತ್ತದೆ. ದಿವ್ಯಾಗ್ನಿಯನ್ನು ವಿವರಿಸುತ್ತಾ 'ರೊಮ್ಯಾಂಟಿಕ್ ಯುಗದ ಹೊಸ ತಿಳುವಳಿಕೆ" ಎಂದು ಅರ್ಥ ಹೇಳಿರುವ ಕುರ್ತಕೋಟಿಯವರು "ಆಧುನಿಕ-ಕನ್ನಡದ ಸಾಹಿತ್ಯ ಪ್ರಯತ್ನಗಳ ಹಿಂದೆ ತುಡಿಯುತ್ತಿದ್ದ ಆಶೋತ್ತರಗಳನ್ನೂ, ಸಂಕಲ್ಪ ಸಿದ್ಧಿಗಳನ್ನೂ ಈ ಕೃತಿಯಲ್ಲಿ ಸುಲಭವಾಗಿ ಗುರುತಿಸಬಹುದಾಗಿದೆ"- ಎನ್ನುತ್ತಾರೆ.[3] ಈ ಕೃತಿಯ ರಾಜನಲ್ಲಿ ಸಂಕಲ್ಪವೇನೋ ಇದೆ. ಆದರೆ, ಯಾವ 'ಸಿದ್ಧಿ'ಯೂ ಇಲ್ಲವೆಂಬುದನ್ನು

ಮನಗಂಡಾಗ ಕುರ್ತಕೋಟಿಯವರ ಅಭಿಪ್ರಾಯವು ದೂರಾನ್ವಯವೆಂಬುದು ಸ್ಪಷ್ಟವಾಗುತ್ತದೆ. ವಾಸ್ತವವಾಗಿ ಸ್ವಾತಂತ್ರ್ಯೋತ್ತರದಲ್ಲಿ ಪ್ರಕಟಗೊಂಡ 'ಜಡಭರತನ ಕನಸುಗಳು' ಕೃತಿಯ ದಿವ್ಯಾಗ್ನಿಗೆ 'ಸ್ವಾತಂತ್ರ್ಯ ಜ್ಯೋತಿ' ಎಂಬ ಅರ್ಥವಲಯವೇ ಹೆಚ್ಚು ಸೂಕ್ತವೆನಿಸುತ್ತದೆ. ಏಕೆಂದರೆ, ಈ ಕೃತಿಯ ರಾಜ ದಿವ್ಯಾಗ್ನಿಯನ್ನು ಜನತೆಯ ಹೃದಯಗಳಿಗೆ ಮುಟ್ಟಿಸುವಲ್ಲಿ ವಿಫಲನಾಗುವಂತೆಯೇ 'ಸ್ವಾತಂತ್ರ್ಯಜ್ಯೋತಿ' (=ದಿವ್ಯಾಗ್ನಿ) ಜನತೆಯ ಹೃದಯಗಳಿಗೆ ತಲುಪಿಲ್ಲವೆಂಬುದು ಸ್ವಾತಂತ್ರ್ಯೋತ್ತರ ಭಾರತದ ಸ್ಥಿತಿಗತಿಗಳನ್ನು ಪರಿಭಾವಿಸಿದಾಗ ಸ್ಪಷ್ಟವಾಗುತ್ತದೆ. ಜಡಭರತರು ಇದೇ ಆಶಯವನ್ನು ಪ್ರಧಾನವಾಗಿಟ್ಟುಕೊಂಡು ಮುಂದೆ ನಾಟಕಗಳನ್ನು ರಚಿಸಿರುವುದು ನನ್ನ ಮಾತಿಗೊಂದು ಸ್ಪಷ್ಟನೆಯಾಗಿದೆ.

### 3

ಸ್ವಾತಂತ್ರ್ಯೋತ್ತರ ಭಾರತದ ಬಹು ಮುಖ್ಯ ಸಮಸ್ಯೆಗಳಲ್ಲಿ ಒಂದಾದ ನಗರೀಕರಣ ಮತ್ತು ಗ್ರಾಮ ಜೀವನಗಳ ನಡುವಣ ಸಂಘರ್ಷವನ್ನೂ, ಒಂದು ಮತ್ತೊಂದರ ಮೇಲೆ ಬೀರುವ ದುಷ್ಪರಿಣಾಮಗಳನ್ನೂ ಅಭಿವ್ಯಕ್ತಗೊಳಿಸುತ್ತಿರುವ 'ಮೂಕಬಲಿ' ಜಡಭರತರ ಕಲಾಕೃತಿಗಳಲ್ಲೆ ಅತ್ಯುನ್ನತವಾಗಿದೆ. 'ನಾಗರಕೋಟೆ' ಒಂದು ದೊಡ್ಡ ಪಟ್ಟಣವಾಗಿದ್ದರೆ, 'ಹಾಲಳ್ಳಿ' ಒಂದು ಕುಗ್ರಾಮವೆಂಬ ಸಂಗತಿಯೇ ಹೃದಯಸ್ಪರ್ಶಿಯಾಗಿದೆ. 'ನಾಗರಕೋಟೆ' ಮತ್ತು 'ಹಾಲಳ್ಳಿ' ಗಳ ನಡುವೆ ಗಂಡು-ಹೆಣ್ಣಿನ ಧ್ವನಿ ರಮ್ಯತೆಯನ್ನು ನಾಟಕಕಾರರು ಸೃಷ್ಟಿಸಿದ್ದಾರೆ. 'ನಾಗರ ಕೋಟೆ' ಪುರುಷನ ದರ್ಪ ದೌರ್ಜನ್ಯಗಳನ್ನು ಪ್ರತಿನಿಧಿಸಿದರೆ, 'ಹಾಲಳ್ಳಿ' ಹೆಣ್ಣಿನ ಮಾರ್ದವ ಲಾಲಿತ್ಯಗಳನ್ನು ಪ್ರತಿನಿಧಿಸುತ್ತದೆ. ದರ್ಪಿಷ್ಟ ಗಂಡು ಮುಗ್ಧ ಹೆಣ್ಣನ್ನು ಶೋಷಿಸುವಂತೆ ನಗರೀಕರಣಗೊಳ್ಳುತ್ತಿರುವ ನಾಗರಕೋಟೆ ಅಮಾಯಕ ಹಾಲಳ್ಳಿಯನ್ನು ಶೋಷಣೆ ಮಾಡುತ್ತದೆ.

ಈ ಪುರುಷ ಪ್ರಧಾನ ಸಮಾಜದಲ್ಲಿ ಗಂಡಿನ ಶೋಷಣೆ ಸರ್ವ ವ್ಯಾಪ್ತಿಯಾಗಿದ್ದು ಬಹು ಸೂಕ್ಷ್ಮವಾಗಿರುವಂತೆಯೇ, 'ಮೂಕಬಲಿ' ನಾಟಕದಲ್ಲಿ ನಾಗರಕೋಟೆಯು ನಡೆಸುವ ಶೋಷಣೆ ಸರ್ವವ್ಯಾಪಕವಾಗಿದ್ದು ಬಹು ಸೂಕ್ಷ್ಮವಾಗಿದೆ. ಇದನ್ನು ದೃಶ್ಯೀಕರಿಸುವಲ್ಲಿ, ನಾಟಕಕಾರರು ತೋರಿರುವ ಸಂಯಮ ಮತ್ತು ನಿರ್ಲಿಪ್ತತೆಗಳು ಪ್ರಶಂಸಾರ್ಹವಾಗಿವೆ. ನಾಗರಕೋಟೆ ಕಣ್ಣಿಗೆ ಕಾಣದಂತೆ ಹಿನ್ನೆಲೆಯಲ್ಲಷ್ಟೆ ಉಳಿದುಬಿಡುತ್ತದೆ. ಶೋಷಕರ ಅಸ್ತಿತ್ವ ರಂಗಭೂಮಿಯ ಮೇಲೆ ನೇರವಾಗಿ ಪ್ರಕಟಗೊಳ್ಳದಿದ್ದರೂ ಅವರ ದರ್ಪ ದೌರ್ಜನ್ಯಗಳೇ ನಾಟಕ ಕ್ರಿಯೆಯ ಚಾಲಕ ಶಕ್ತಿಯಾಗಿದ್ದು ಶೋಷಣೆಯ ವಿರಾಟ್ ಸ್ವರೂಪವನ್ನು ಮನದಟ್ಟು ಮಾಡಿಕೊಡುತ್ತದೆ. ಹೀಗೆ, ಸಾಮಾಜಿಕ ವಾಸ್ತವತೆಯೊಂದನ್ನು ಪರೋಕ್ಷವಾಗಿ ಅನಾವರಣಗೊಳಿಸುವ ಕ್ರಮ 'ಮೂಕಬಲಿ' ನಾಟಕದ ವಿಶಿಷ್ಟತೆ ಎನ್ನಬಹುದು. ಇದನ್ನು ಆದ್ಯಂತವಾಗಿ ಗಮನಿಸಿದಾಗ ನಾಟಕದ 'ಕ್ರಿಯೆ' ಸಾಗಿದಂತೆಲ್ಲ ಪ್ರಕೃತಿಯ ಪ್ರಕೋಪಗಳು ಮತ್ತು ಮನುಷ್ಯ ಜೀವನದ ವಿಕೃತಿಗಳನ್ನು ನಾಟಕಕಾರರು ಒಟ್ಟೊಟ್ಟಿಗೆ ಹೇಳಲು ಯತ್ನಿಸಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಕವಿಯುವ ಕತ್ತಲೆ, ಭೋರೆಂಬೊ ಮಳೆಗಾಳಿ, ಗುಡುಗು ಸಿಡಿಲು - ಇವು ಪ್ರಕೃತಿಯ ಪ್ರಕೋಪಗಳನ್ನು ಪ್ರತಿನಿಧಿಸುವ ವಿವರಗಳಾಗಿವೆ. ಇವನ್ನು ಮನುಷ್ಯ ಸಹಿಸಿಕೊಳ್ಳುತ್ತಾನೆ ; ಇವುಗಳ ಪರಿಣಾಮ ದಮನಕಾರಿಯಾದುದಲ್ಲ ಎಂಬುದಿಲ್ಲಿ ಗಮನಾರ್ಹ! ಇದರೊಟ್ಟಿಗೆ ಅಭಿವ್ಯಕ್ತಗೊಂಡಿರುವ ನ್ಯಾಯ ಪಂಚಾಯಿತಿ, ಗಾಂಜಾಬಡಕರ ಗುಂಪು, ಗಲಭೆ ಗದ್ದಲ, ಹಾಳುಸುರಿಯುವ ಹಾಲಕ್ಕಿ ತೋಟ, ಹೊಡೆದಾಟಗಳು, ಉರುಳುವ ಹೆಣಗಳು ಇತ್ಯಾದಿ ವಿವರಗಳು ಮನುಷ್ಯ ಜೀವನದ ವಿಕೃತಿಗಳನ್ನು ಹೇಳುತ್ತವೆ. ಇವೆಲ್ಲ ವಿಕೃತಿಗಳ ಮೂಲ ನಗರೀಕರಣ ಗೊಳ್ಳುತ್ತಿರುವ ನಾಗರಕೋಟೆಯಿಂದ ಎಂಬುದು ಗಮನಿಸಬೇಕಾದ ಸಂಗತಿಯಾಗಿದ್ದು ಇದಕ್ಕೆ ತುತ್ತಾಗುವ ಮುಗ್ಧ ಹಾಲಳ್ಳಿಯ ದುರಂತ, ಪ್ರೇಕ್ಷಕರ ಮನ ಮಿಡಿಯುವ ಅಂಶವಾಗಿದೆ.

ಇಲ್ಲೆಲ್ಲ ನಾಟಕಕಾರರು ಲೋಕಾನುಭವದೊಂದಿಗೆ ಮುಖಾಮುಖಿ ಯಾಗುವ ಸ್ವಾನುಭವವನ್ನು ಸೃಷ್ಟಿಸಿದ್ದಾರೆ. ಇದು ನಾಟಕಕ್ಕೊಂದು ವಿಶಿಷ್ಟ ಜೀವನ ದರ್ಶನವನ್ನು ಕೊಟ್ಟಿದೆ. ವೈಯಕ್ತಿಕ ವಾಸ್ತವತೆಯೇ (Individual and realistic) ತನ್ನ ಪರಿಣಾಮ ಕ್ರಮದಲ್ಲಿ ಸಾರ್ವತ್ರಿಕ ಸಾಂಕೇತಿಕತೆ ಯಾಗುವ (General and Symbolic) 'ವಸ್ತುನಿಷ್ಠ ಗತಿ ತರ್ಕ'ವು ಇದರಿಂದ ಸಾಧ್ಯವಾಗಿದೆ.

'ಮೂಕಬಲಿ' ನಾಟಕದಲ್ಲಿ ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶವೆಂದರೆ 'ಸಂಕೇತ ಸಮೃದ್ಧಿ'. ಈ ಅಂಶವನ್ನು 'ಮೂಕ ಬಲಿ'ಗೆ ಬರೆದ ಸುದೀರ್ಘ ಮುನ್ನುಡಿಯಲ್ಲಿ ಶಂಕರ ಮೊಕಾಶಿಯವರು ಸ್ಪಷ್ಟಪಡಿಸಿದ್ದಾರೆ. ತುಪ್ಪ ತೀರಿದ ನೀರಾಂಜನ, ಪಂಜರದಿಂದ ಹಾರಿಹೋದ ಗಿಳಿ, ಒಮ್ಮೆ ಚಿರ್ಚದ ಬಾಯಿಂದ ತಪ್ಪಿಸಿಕೊಂಡಿದ್ದರೂ ಅಪಾಯವನ್ನು ಲೆಕ್ಕಿಸದೆ ಮತ್ತೆ ಮತ್ತೆ ಕಣ್ಣೀ ಉಚಿಗೊಂಡು ಹೋಗುತ್ತಲೇ ಇರುವ ನಾಗ್ಯಾ, ಶೀನಪ್ಪ ಒರೆಸುವ ಕಂದೀಲು, ತೋಟದ ಕಪ್ಪಲಿ ಹೊಡೆಯುವ ದನಿಯಿಲ್ಲದ ಬೆಳಗು- ಇವೆಲ್ಲ ಸಂಕೇತಗಳು ನಾಟಕದ ಕ್ರಿಯೆಯೊಂದಿಗೆ ರೂಪಿಸಿಕೊಳ್ಳುವ ಧ್ವನಿವಿನ್ಯಾಸಗಳು ಈ ನಾಟಕವನ್ನು ಶ್ರೇಷ್ಠ ಕಲಾಕೃತಿಯನ್ನಾಗಿ ಮಾಡಿವೆ. ತೋಟದ ಕಪ್ಪಲಿ ಹೊಡೆಯುವ ದನಿಯಿಲ್ಲದ ಬೆಳಗು-ಎಂಬ ಸಂಗತಿ ತನ್ನ ಧ್ವನಿಶಕ್ತಿಯಿಂದ ನಾಗರಕೋಟೆಯ ದವಡೆಯಲ್ಲಿ ನಲುಗಿ ಹೋಗುತ್ತಿರುವ 'ಹಾಲಳ್ಳಿ' ಗ್ರಾಮ ಜೀವನದ ಅಂತ್ಯವನ್ನು ಸಮರ್ಥವಾಗಿ ಸಂಕೇತಿಸುತ್ತದೆ. ಗ್ರಾಮೀಣ ಬದುಕಿನ ಸೃಷ್ಟಿಶೀಲತೆಯ ಸಾವನ್ನು ಸಾರಿ ಹೇಳುತ್ತಿರುವ ಕೂಸಿನ ಸಾವಿನೊಂದಿಗೆ ನಾಟಕ ಧ್ವನಿಪೂರ್ಣವಾಗಿ ಮುಕ್ತಾಯಗೊಳ್ಳುತ್ತದೆ.

ಇವರ 'ಕದಡಿದ ನೀರು' ನಾಟಕವೂ ಸ್ವಾತಂತ್ರ್ಯೋತ್ತರ ಭಾರತದ ಸ್ಥಿತಿಗತಿಗಳನ್ನು, ಮುಖ್ಯವಾಗಿ ರಾಜಕೀಯ ವಿಷಮತೆಯನ್ನು ಗ್ರಾಮೀಣ ಬದುಕಿನ ಹಿನ್ನೆಲೆಯಲ್ಲಿ ನಿರೂಪಿಸುವ ಕ್ರಿಯಾ ವಿನ್ಯಾಸವನ್ನು ರೂಪಿಸಿಕೊಂಡಿದೆ. ಈ ನಾಟಕದ ಮೇಲೆ ಆಗಿರುವ ಅನ್ಯ ಪ್ರಭಾವಗಳನ್ನು ವಿಮರ್ಶಕರು ಈಗಾಗಲೇ ಗುರುತಿಸಿದ್ದಾರೆ.[4]

ವ್ಯಕ್ತಿ ಮತ್ತು ಸಮಾಜಕ್ಕೆ ಸಂಬಂಧಿಸಿದ ಹದಗೆಟ್ಟ ಸ್ಥಿತಿಗತಿಗಳನ್ನು ಸ್ವಾತಂತ್ರ್ಯೋತ್ತರ ಭಾರತದ ಗ್ರಾಮೀಣ ಬದುಕಿನ ಹಿನ್ನೆಲೆಯಲ್ಲಿ ನಿರೂಪಿಸಿರುವುದು 'ಕದಡಿದ ನೀರು' ನಾಟಕದ ಮುಖ್ಯ ಉದ್ದೇಶವಾಗಿದೆ. ಮಿಕಗಳ ಮೇಲೇರಿ ಹೋದ ನಾಯಿ ಕಾಳ್ಯಾ (ನೇಪಥ್ಯದಲ್ಲಿ) ವಿಕಾರವಾಗಿ ಅರಚಿಕೊಳ್ಳುವ ಕೂಗಿನೊಂದಿಗೆ ನಾಟಕ ಆರಂಭಗೊಳ್ಳುತ್ತದೆ. ಶಿವಪ್ಪ ಮತ್ತು ಪಾರ್ವತಿಯರ ಸಂವಾದದಿಂದ ಮುಂದುವರೆಯುವ ಈ ನಾಟಕದಲ್ಲಿ ಕ್ರಿಯೆಗಳ ಬೆಳವಣಿಗೆಯ ಜೊತೆಯಲ್ಲೆ ಅರ್ಥಪೂರ್ಣವಾದ ಸಂಕೇತಗಳ ಬಳಕೆಯಿದೆ. ಆರಂಭದಲ್ಲೆ ಕೇಳಿ ಬರುವ ಗವಿ ಸಿದ್ದಪ್ಪನವರ ಚಪಗೊಡ್ಡಿಯ ಪ್ರಸಂಗ ಇದಕ್ಕೊಂದು ಉದಾಹರಣೆ. ಇತರರಿಗೆ ತೀರ ಅನುದ್ದೇಶಿತವೆಂಬಂತೆ ತೋರುವ ಈ ಪ್ರಸಂಗ ತನ್ನ ಕುಟುಂಬಕ್ಕೆ ಮುಂದೆ ಒದಗಬಹುದಾದ

ಅನರ್ಥಗಳ ಮುನ್ಸೂಚನೆಯಂತೆ ಶಿವಪ್ಪನಿಗೆ ಭಾಸವಾಗುತ್ತದೆ. ಬೆಳೆಯನ್ನು ಹಾಳುಮಾಡುವ ಮಿಕಗಳ ಹಾವಳಿಯ ಬಗ್ಗೆ ಗಂಡ-ಹೆಂಡಿರು ಮಾತನಾಡಿ ಕೊಳ್ಳುತ್ತಾ..."ಕೈಗೆ ಬಂದ ಬೆಳೆ ಬಾಯಿಗೆ ಬರದ್ಹಾಗಾಗೇತಿ" ಎಂದು ಹೇಳುವ ಮಾತಿನಲ್ಲಿ ಇಡೀ ನಾಟಕದ ಮುಖ್ಯಧ್ವನಿಯನ್ನು ಗುರುತಿಸಬಹುದು. 'ಕೈಗೆ ಬಂದ ಬೆಳೆ - ಮಿಕಗಳ ಹಾವಳಿ' ಎಂಬಂಥ ಮಾತುಗಳು ಸ್ವಾತಂತ್ರ್ಯೋತ್ತರ ಭಾರತದ ಸ್ಥಿತಿಗತಿಗಳನ್ನು ಧ್ವನಿಸಿಬಿಡುತ್ತವೆ.

ಗಾಂಧಿ ತತ್ವಗಳ ನೆರಳಲ್ಲಿ ನಾಯಿಕೊಡೆಗಳಂತೆ ರೂಪುಗೊಂಡ ಸಮಾಜಘಾತುಕ ಶಕ್ತಿಗಳ ಸ್ಪಷ್ಟ ಸೂಚನೆಗಳನ್ನು ನೀಡುವ ಶಿವಪ್ಪ (ಪು. 7) ಈ ನಾಟಕದಲ್ಲಿ ಬದುಕಿನ 'ಸತ್' ಶಕ್ತಿಯನ್ನು ಪ್ರತಿನಿಧಿಸಿದರೆ, ಸುದ್ದ ಮಾತಾಡಲು ನಿರಾಕರಿಸುವ ಗೂಳಪ್ಪ (ಪುಟ. 18) ಬದುಕಿನ 'ಅಸತ್' ನೆಲೆಯನ್ನು ಪ್ರತಿನಿಧಿಸುತ್ತಾನೆ. ಗೂಳಪ್ಪನ ಆಕ್ರಮಣಶೀಲವ್ಯಕ್ತಿತ್ವಕ್ಕೆ ಅನುಸಾರವಾಗಿ ನಾಟಕದ ಆರಂಭದಲ್ಲೆ 'ಗೂಳಪ್ಪನ ಗಾಳ' ಶಿವಪ್ಪನ ಕುಟುಂಬದ ಗಂಟಲಿಗೆ ಬಿದ್ದುದರ ಉಲ್ಲೇಖವಿದೆ. ಜಡಭರತರು ಗೂಳಪ್ಪನ ಪಾತ್ರ ಕಲ್ಪನೆ ಮಾಡುವಾಗ ಅವನನ್ನು ವ್ಯಕ್ತಿಯಾಗಿ ಮಾತ್ರ ಗ್ರಹಿಸದೆ, ವ್ಯವಸ್ಥೆಯೊಂದರ ಚಾಲಕ ಶಕ್ತಿಯಾಗಿಯೂ ಗುರುತಿಸಿದ್ದಾರೆ: "ಸರಕಾರನಃ ಅಂವಾ ಆಗಿ ಕುಂತಾಗ" ಎಂಬ ಶಂಕರನ ಮಾತುಗಳಲ್ಲಿ ಇದನ್ನು ಗುರುತಿಸಬಹುದು. ಆದ್ದರಿಂದಲೇ 'ವ್ಯಕ್ತಿ' ಗೂಳಪ್ಪ ಸತ್ತರೂ ಅವನು ಹುಟ್ಟುಹಾಕಿದ 'ವ್ಯವಸ್ಥೆ' ಸಾಯದೆ ಉಳಿಯುತ್ತದೆ. ಇಂತಹ ವ್ಯವಸ್ಥೆಯ ಎದುರಲ್ಲಿ ವ್ಯಕ್ತಿಯಾಗಿಯೇ ಉಳಿದುಕೊಳ್ಳುವ ಶಿವಪ್ಪ, ಶಂಕರನಂತಹವರು ಸೋಲುವುದು ಅನಿವಾರ್ಯವಾಗುತ್ತದೆ. ಶಿವಪ್ಪನ ತೋಟದ ಬಾವಿಯ ಮೇಲೆ ಗೂಳಪ್ಪನ ಮೂರ್ತಿ ಪ್ರತಿಷ್ಠಾಪನೆ ವಿಜೃಂಭಣೆಯಿಂದ ನೆರವೇರುತ್ತದೆ. ಮಹಾತ್ಮ ಗಾಂಧಿ ಮತ್ತು ಗೂಳಪ್ಪನ ಹೆಸರುಗಳಲ್ಲಿ ಒಟ್ಟಿಗೆ ಜಯಕಾರವಾಗುತ್ತಿದ್ದಂತೆಯೇ ಹುಚ್ಚುನಾಯಿ ಕಾಳ್ಯಾ ಜೊತೆಯಲ್ಲೆ ಶಿವಪ್ಪನೂ ಕೊನೆಯುಸಿರೆಳೆಯುವುದರೊಂದಿಗೆ ನಾಟಕ ಮುಕ್ತಾಯಗೊಳ್ಳುತ್ತದೆ.

ಈ ನಾಟಕದ ವಿಶಿಷ್ಟವಾದ ಅಂಶವೆಂದರೆ, ಮಾತುಮಾತಿಗೆ "ರಣ ಉಗ್ರ ರಣ ಉಗ್ರ" ಎಂದು ಬಡಬಡಿಸುವ ಹುಚ್ಚ ರಾಚ್ಯಾನ ಪಾತ್ರ ಕಲ್ಪನೆ. ಜೀವಶಕ್ತಿಯನ್ನು ದಹಿಸುತ್ತಿರುವ ಉರಿಜ್ವಾಲೆಗಳನ್ನು; ಬದುಕೊಂದು 'ಉಗ್ರ ರಣ'ವಾಗಿರುವುದನ್ನು ಹುಚ್ಚು ರಾಚ್ಯಾನ ಬಡಬಡಿಕೆಗಳು ಪ್ರತಿನಿಧಿಸುತ್ತವೆ. ಮೇಲುನೋಟಕ್ಕೆ ವಿಲಕ್ಷಣವಾಗಿ ಅಸಂಬದ್ಧವೆಂಬಂತೆ ತೋರುವ ಹುಚ್ಚ ರಾಚ್ಯನ ಮಾತುಗಳಲ್ಲಿ ಬದುಕಿನ ಒಳನೋಟಗಳನ್ನು, ಸಾಮಾಜಿಕ ಜಾಗ್ರತಿಯನ್ನು ಸ್ಪಷ್ಟವಾಗಿ ಕಾಣಬಹುದು.

'ರವಿ ಕಾಣದ್ದನ್ನು ಕವಿ ಕಂಡ' ಎಂಬಂತಹ ಕಲಾಕಾರನ ಕಣ್ಣುಗಳನ್ನುಳ್ಳ ಹುಚ್ಚ ರಾಚ್ಯಾ ಈ ನಾಟಕದಲ್ಲಿ ಸಾಮಾಜಿಕ ಜಾಗ್ರತಿಯ 'ವಿಕ್ಷಿಪ್ತ' ಸಂಕೇತದಂತೆ ಕಂಡುಬರುತ್ತಾನೆ. ಮಲ್ಲಿಯ ಮೇಲೆ ನಡೆದ ಅತ್ಯಾಚಾರದಿಂದ ತೀವ್ರವಾಗಿ ಪರಿತಪಿಸುವ ರಾಚ್ಯಾ "ಮಬ್ಬಗಾವಳದಾಗ ಮೀಸಲ ಮುರದುಹೋತು" - ಎಂದು ವಿಷಾದಿಸುತ್ತಾನೆ. ಈ ಬಗ್ಗೆ ಶಂಕರನೊಡನೆ ರಾಚ್ಯಾ ನಡೆಸುವ ಸಂವಾದ ದೃಶ್ಯವು ನಾಟಕದಲ್ಲಿ ಉಜ್ವಲವಾಗಿ ಅಭಿವ್ಯಕ್ತಗೊಂಡಿದೆ. ಈ ಸಂವಾದದಲ್ಲಿ ರಾಚ್ಯಾ ಬೂದಿ ಮುಚ್ಚಿದ ಕೆಂಡದಂತೆ ಕುದಿಯುತ್ತಿರುವ ಶಂಕರನನ್ನು ತೀವ್ರವಾಗಿ ಪ್ರಚೋದಿಸಿ ಗೂಳಪ್ಪನ ಬಲಿ ಕಾರ್ಯದ ಅವಶ್ಯಕತೆಯನ್ನು ಪರೋಕ್ಷವಾಗಿ ಮನದಟ್ಟು ಮಾಡುತ್ತಾನೆ :

"ಇಂದು ಕಾಳ ಅಮಾಸಿ.... ದ್ಯಾಮಪ್ಪಗ ಕ್ವಾಣಾ ಕಡೂ ದಿನ ಇದು....." (ಪು.64).

ಇಲ್ಲಿ ಪ್ರಸ್ತಾಪಿತವಾಗಿರುವ ಅಮಾವಾಸ್ಯೆ, ಕೋಣನ ಬಲಿಗಳು ಬರಿಯ ಬಾಹ್ಯ ವಿವರಗಳಾಗಿ ಉಳಿಯದೆ ನಾಟಕದ ಕ್ರಿಯೆಯ ಜೊತೆ ಸಂಬಂಧವನ್ನು ಪಡೆದಿರುವುದು ಸ್ಪಷ್ಟವಾಗಿದೆ. ಈ ನಾಟಕದ ಅಂತ್ಯವನ್ನು ಕುರಿತು ಕೆ.ಮರುಳಸಿದ್ದಪ್ಪನವರು ಹೇಳಿರುವ ಅಭಿಪ್ರಾಯವೊಂದು ಉಲ್ಲೇಖನಾರ್ಹವಾಗಿದೆ:

"ಗ್ರಾಮೀಣ ಸಮಾಜದ ಭವಿಷ್ಯಸೂಚಿಯಂತೆ ಗೂಳಪ್ಪನ ಅನುಯಾಯಿಗಳು ಮತ್ತು ಬಂಗಾರಸೆಟ್ಟಿಯಂತಹವರು ಉಳಿದು, ಶಿವಪ್ಪ ಮತ್ತು ಶಂಕರನಂತಹವರು ನಿರ್ನಾಮವಾಗುತ್ತಾರೆ."[5]

ಕನ್ನಡ ಸಾಹಿತ್ಯದ ಮಹತ್ವದ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ ಪ್ರಾದೇಶಿಕ ಆವರಣ, ಗ್ರಾಮೀಣ ಬದುಕಿನ ಹಿನ್ನೆಲೆಗಳನ್ನು ಜಡಭರತರ ನಾಟಕಗಳಲ್ಲೂ ಗುರುತಿಸಬಹುದಾಗಿದೆ. 'ಮೂಕಬಲಿ'ಯಿಂದಲೇ ಆರಂಭಗೊಂಡ ಈ ಬಗೆಯ ಅಭಿವ್ಯಕ್ತಿ 'ಕದಡಿದ ನೀರು' ನಾಟಕದಲ್ಲೂ ಮುಂದುವರೆದಿದೆ. ಸಂಸ್ಕೃತ ಸಾಹಿತ್ಯದಲ್ಲಿ 'ಮೃಚ್ಛಕಟಿಕ'ದಂತಹ ನಾಟಕಗಳಿಗೆ ಸಲ್ಲುವ ಸ್ಥಾನ, ಕನ್ನಡ ಸಾಹಿತ್ಯದಲ್ಲಿ ಜಡಭರತರ ಇವೆರಡು ನಾಟಕಗಳಿಗೆ ಸಲ್ಲುತ್ತದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, 'ಮೂಕಬಲಿ' ನಾಟಕದಲ್ಲಿ ಅನನ್ಯ ಸ್ವೋಪಜ್ಞತೆಯನ್ನು ಮೆರೆದ ಜಡಭರತರು 'ಕದಡಿದ ನೀರು' ನಾಟಕದಲ್ಲಿ ಅನ್ಯ ಪ್ರಭಾವಗಳನ್ನು ಅರಗಿಸಿಕೊಂಡು ಯಶಸ್ವಿಯಾದರೆಂಬುದು. ಆದರೆ, ಮುಂದಿನ ನಾಟಕಗಳಲ್ಲಿ ಜಡಭರತರು ಈ ಬಗೆಯ ಕೌಶಲ ಮತ್ತು ಪಕ್ವತೆಗಳಿಗೆ ಎರವಾಗಿರುವುದು ಕಂಡು ಬರುತ್ತದೆ. ಈ ಮಾತಿಗೆ 'ಆ ಊರು ಈ ಊರು' ಒಂದು ಉತ್ತಮ ಉದಾಹರಣೆಯಾಗಬಲ್ಲದು.

4

ಸುಮಾರು ಆರು ಸರ್ತಿ ತಿದ್ದಿ ತೀಡಿ ಪ್ರಕಟಿಸಿದ 'ಮೂಕಬಲಿ' ನಾಟಕವನ್ನು "...... ಮುಂದಿನ ಹದಿನೈದು ವರ್ಷಗಳಲ್ಲಿ ಅದನ್ನೇ ಮತ್ತೆ ಮತ್ತೆ ತಿದ್ದಿ ತೀಡಿ ಸಂಸ್ಕಾರಗೊಳಿಸಿ......", 'ಆ ಊರು ಈ ಊರು' ನಾಟಕವನ್ನು ರಚಿಸಿರುವೆನೆಂದು ಜಡಭರತರೇ ಹೇಳಿಕೊಂಡಿದ್ದಾರೆ.

ಮುಸ್ಸಂಜೆಯ 'ಸೂರ್ಯಾಸ್ತ'ದ ವಾತಾವರಣದಿಂದ ಆರಂಭವಾಗುವ 'ಮೂಕಬಲಿ' ನಾಟಕವು ತೋಟದ ಕಪ್ಪಲಿ ಹೊಡೆಯುವ ದನಿಯಿಲ್ಲದ ಬೆಳಗಿನೊಂದಿಗೆ ಧ್ವನಿಪೂರ್ಣವಾಗಿ ಮುಕ್ತಾಯಗೊಳ್ಳುತ್ತದೆ. ಕಾಳಕತ್ತಲೆಯ ಹಿನ್ನೆಲೆಯಲ್ಲಿ ಪ್ರಕಟಗೊಳ್ಳುವ ನಾಗರಕೋಟೆಯ ಪಾಶವೀಕೃತ್ಯಗಳಿಗೆ ಮುಗ್ಧ ಹಾಲಳ್ಳಿಯೇ ಮೂಕಬಲಿಯಾಗುವ ದಾರುಣ ಚಿತ್ರದಲ್ಲಿ ಕಾಲ-ಕ್ರಿಯೆ-ಸ್ಥಳದ ಐಕ್ಯತ್ರಯಗಳು ತಾನೇ ತಾನಾಗಿ ಮುಪ್ಪುರಿಗೊಂಡಿವೆ. ಇಂತಹ ಧ್ವನಿಪೂರ್ಣ ರಚನೆಯನ್ನು ವಿಘಟನೆಗೆ ಈಡು ಮಾಡಿ ವಿಸ್ತಾರವಾಗಿ ಬೆಳೆದಿರುವ 'ಆ ಊರು ಈ ಊರು' ನಾಟಕ ಅಂಗೈ ಹುಣ್ಣಿಗೆ ನಿಲುವು ಕನ್ನಡಿ ಇಟ್ಟಂತೆ ತೋರುತ್ತದೆ.

ಗಿರೀಶ್ ಕಾರ್ನಾಡ್, ಕೀರ್ತಿನಾಥ ಕುರ್ತಕೋಟಿಯವರು ಸೂಚಿಸಿದ ಸಂಸ್ಕರಣಗಳನ್ನು ಮೈಗೂಡಿಸಿಕೊಂಡಿರುವ ನಾಟಕದಲ್ಲಿ ಒತ್ತಾಯವಾಗಿ

ಹೇರಿದಂತಿರುವ ಹಲವು ಸಂಕೇತಗಳು ಕಾಣಿಸಿಕೊಂಡಿವೆ. ಅಂದರೆ 'ಮೂಕಬಲಿ' ನಾಟಕದಲ್ಲಿ ಕಂಡುಬರುವ ಸಾರ್ಥಕ ಸಂಕೇತಗಳು ಈ ನಾಟಕದಲ್ಲಿ ಹಿಂಜಿ ಎಳೆದಂತೆ, ಮತ್ತಷ್ಟು ಒಜ್ಜೆ ಹೇರಿದಂತೆ ತೋರಿ ಬರುತ್ತದೆ. ಉದಾಹರಣೆಗೆ, ಬುದ್ಧಿಮಾಂದ್ಯ ಬಾಲಕ ಬಂಡಿಯನ್ನು ನಡುಮನೆಯ ಕಂಬಕ್ಕೆ ಕಟ್ಟಿಹಾಕಿರುವ ಸರಪಣಿ - ವಾಸುದೇವನ ತಲೆಯಂತೆ ಕೆಟ್ಟು ನಿಂತುಹೋದ ಗೋಡೆ ಗಡಿಯಾರ - ನಾನಾ ಹೇಳಿಕೊಳ್ಳುವ ಭಜಗೋವಿಂದಂ ಭಜ .... ಮೂಢಮತೇ .... ಎಂಬ ನಿತ್ಯ ಪಲ್ಲವಿ - ಶ್ಯಾಮ ತಂದ ಚದುರಂಗದ ಸೆಟ್ಟನ್ನು ಆರಂಭದಲ್ಲಿ ಆಡಲು ನಿರಾಕರಿಸುವ ವಾಸುದೇವ ಕೊನೆಗೆ ಚದುರಂಗದಲ್ಲಿ ಪಡೆಯುವ ಪರಿಣತಿ-ಸಿಡಿಲು ಮಳೆಯಿಂದ ಬಿದ್ದುಹೋಗುವ ಗೋಪಾಳ ನಾಯಕರ ಹಿತ್ತಿಮನೆಯ ಗೋಡೆ-ಭಾವಿಗೆ ಬಿದ್ದ ಗೂಳಿಯನ್ನು ಯುಕ್ತಿಯಿಂದ ಮೇಲಕ್ಕೆ ಎತ್ತಿಸುವ ರಿಪೇರಿ ಶೀನಪ್ಪ-ನದಿಯಲ್ಲಿ ಸೆಳವು ಜೋರಿದ್ದರೂ ಲೆಕ್ಕಿಸದೆ ನಾವನ್ನು ಏರಿ ದಡ ಕಾಣುವ ಸುಶೀಲಾ, ಶೀನಪ್ಪ-ಚಿಕ್ಕ ಮುಳ್ಳು ದೊಡ್ಡ ಮುಳ್ಳು ಒಂದಕ್ಕೊಂದು ಆತುಕೊಂಡಂತೆ (=ಮಿಲನ) 'ಬಾರಾ ಬಜೆ' ಹೊಡೆಯುವ ಗೋಡೆ ಗಡಿಯಾರ-ಹೀಗೆ ಮುಂದುವರೆಯುವ ಸಂಕೇತಗಳು 'ಆ ಊರು ಈ ಊರು' ನಾಟಕದಲ್ಲಿ 'ಸಂಕೇತಕ್ಕಾಗಿ ಸಂಕೇತ' ಎಂಬಂತಹ ಒತ್ತಾಯದ ಅನುಭವವನ್ನುಂಟು ಮಾಡುತ್ತವೆ. ಜೊತೆಗೆ, ರಾಮಣ್ಣನಿಗೆ ಧ್ರುವನೆಂಬ ಮತ್ತೊಂದು ಮಗುವನ್ನು ಹುಟ್ಟಿಸಿ, ತಾಯಿ ಸೀತಕ್ಕಳಿಗೆ ಪರಲೋಕವನ್ನು ಕಾಣಿಸುವುದು ನಾಟಕಕಾರರ ಕೃತಕ ರಚನಾ ವಿನ್ಯಾಸಕ್ಕೊಂದು ಉದಾಹರಣೆಯಾಗುತ್ತದೆ. 'ಮೂಕಬಲಿ' ನಾಟಕದಲ್ಲಿ ಮಗುವಿನ ಸಾವು ಪಡೆದುಕೊಳ್ಳುವ ದುರಂತ ವಿನ್ಯಾಸ, ಹೃದಯಸ್ಪರ್ಶಿಯಾದ ವಾತಾವರಣಗಳನ್ನು 'ಆ ಊರು ಈ ಊರು' ನಾಟಕದಲ್ಲಿನ ಸೀತಕ್ಕಳ ಸಾವು ಸೃಷ್ಟಿಸುವುದಿಲ್ಲ. ಒಬ್ಬ ಅತ್ಯುತ್ತಮ ನಟ ತನ್ನ ಜೀವಮಾನದ ಅತ್ಯುತ್ತಮ ಅಭಿನಯವನ್ನು ಪುನಃ ಅನುಕರಿಸುವುದು ದುರಂತವೆಂಬ ಮಾತೊಂದನ್ನು ಕೇಳಿದ್ದೇನೆ. ಇದೇ ಮಾತನ್ನು ಜಡಭರತರ 'ಆ ಊರು ಈ ಊರು' ನಾಟಕಕ್ಕೂ ಅನ್ವಯಿಸಬಹುದಾಗಿದೆ.[6]

ಕೀರ್ತಿನಾಥ ಕುರ್ತಕೋಟಿಯವರ ಸಂಸ್ಕರಣಗಳು ಮತ್ತು ಬನ್ನಂಜೆ ಗೋವಿಂದಾಚಾರ್ಯರು ಬರೆದುಕೊಟ್ಟ ಸಂಸ್ಕೃತ ಸಂಭಾಷಣೆಗಳನ್ನು ಅಳವಡಿಸಿಕೊಂಡಿರುವ 'ಸತ್ತವರ ನೆರಳು' ದ್ವಿಭಾಷಾ ನಾಟಕವಾಗಿದ್ದು, ದೃಶ್ಯ ಮಾಧ್ಯಮದ ಸಂವಹನದಲ್ಲಿ ಸಮಸ್ಯೆಗಳನ್ನು ತಂದೊಡ್ಡುವ ಕೃತಿಯಾಗಿದೆ. ನಾಟಕದ ಕೊನೆಯಲ್ಲಿ ಕೊಟ್ಟಿರುವ ಕನ್ನಡಾನುವಾದದ ಬೆಂಬಲವಿಲ್ಲದಿದ್ದರೆ ಈ ನಾಟಕದ ಪ್ರದರ್ಶನದ ಮಾತಿರಲಿ! ನಾಟಕದ ಓದು ಕೂಡ 'ದುಸ್ಸಾಹಸ'ವಾಗಿ ಬಿಡುವ ಅಪಾಯಗಳನ್ನೊಳಗೊಂಡಿದೆ.

'ಸತ್ತವರ ನೆರಳು' ಮುಖ್ಯವಾಗಿ ಧರ್ಮದ ಸಾಂಸ್ಥಿಕ ನೆಲೆಯ ಅವ್ಯವಹಾರಗಳನ್ನು ಅನಾವರಣಗೊಳಿಸುವ ನಾಟಕವಾಗಿದೆ. ಭ್ರಮೆಗಳನ್ನು ಸೃಷ್ಟಿಸಿ, ಪೋಷಿಸುವ ಧರ್ಮದ ಸಾಂಸ್ಥಿಕ ನೆಲೆಯ ಎದುರಿಗೆ ನಿಲ್ಲಲಾರದ ವೈಯಕ್ತಿಕ ಮಟ್ಟದ ಪ್ರತಿಭಟನೆಯ 'ನಿಸ್ಸತ್ವ' ಮತ್ತು 'ನಿರ್ವೀರ್ಯ'ಗಳನ್ನು ಹೇಳುವುದು ಈ ನಾಟಕದ ಮುಖ್ಯ ಉದ್ದೇಶವಾಗಿದೆ. ಯಾವುದೇ ವ್ಯವಸ್ಥೆಯ ವಿರುದ್ಧ ಒಡಮೂಡುವ ಪ್ರತಿಭಟನೆ ವೈಯಕ್ತಿಕ ಮಟ್ಟವನ್ನೂ ಮೀರಿ ಸಂಘಟನೆಯ ಮೂಲಕ ಸಾಮುದಾಯಿಕ ಸ್ವರೂಪವನ್ನು ಪಡೆಯುವುದು ಅದರ ಜೀವಂತಿಕೆಗೆ ಸಾಕ್ಷಿಯಾಗುತ್ತದೆ. ವೈಯಕ್ತಿಕ ಮಟ್ಟದಲ್ಲೇ ಉಳಿದುಕೊಳ್ಳುವ ಪ್ರತಿಭಟನೆ ಭದ್ರವಾಗಿ ಬೇರೂರಿದ ಧಾರ್ಮಿಕ ವ್ಯವಸ್ಥೆಯ ಗರ್ಭದಲ್ಲಿ ಕರಗಿ ಹೋಗುತ್ತದೆ. 'ಸತ್ತವರ ನೆರಳು' ನಾಟಕದಲ್ಲಿ ಧಾರ್ಮಿಕ ಸಂಸ್ಥೆಯ ಅವ್ಯವಹಾರಗಳ ವಿರುದ್ಧ ಹೋರಾಡುವ ಮೂರು ಪಾತ್ರಗಳನ್ನು ಜಡಭರತರು ಸೃಷ್ಟಿಸಿದ್ದಾರೆ : ತಾತ್ವಿಕ ಜಿಜ್ಞಾಸೆಯ ಮೂಲಕ 'ಮಠದ' ಬೆವರಿಳಿಸುವ ಜರ್ಮನ್ ಕನ್ಯೆ ; ಸಾಮಾಜಿಕ ಜಾಗ್ರತಿಯನ್ನುಂಟುಮಾಡಲು ಸಾಧ್ಯವಾಗದೆ ಶಿರೋರತ್ನವನ್ನು ಕಳೆದುಕೊಂಡ ಅಶ್ವತ್ಥಾಮನಂತೆ ಹಪಹಪಿಸುವ ಅಳಪುಡಿ ಶೀನ ; ತನ್ನದಲ್ಲದ ವೃಂದಾವನಕ್ಕೆ ತಾನೇ ಮೂಕಸಾಕ್ಷಿಯಾಗಿ ನಿಲ್ಲಬೇಕಾಗಿ ಬಂದ ನಾರಾಯಣ - ಇವರೆಲ್ಲರೂ ಭಿನ್ನ ಮಾರ್ಗಗಳಿಂದ ಧರ್ಮದ ಸಾಂಸ್ಥಿಕ ನೆಲೆಯ 'ಆವರಣ' ಭಂಗ ಮಾಡಲು ಯತ್ನಿಸಿದವರು. ಆದರೆ ಇವೆಲ್ಲ ಪ್ರಯತ್ನಗಳು ಮೂಲತಃ ವೈಯಕ್ತಿಕ ಮಟ್ಟದ ಪ್ರತಿಭಟನೆಗಳಾಗಿರುವುದರಿಂದ ಇವುಗಳನ್ನು ಅರಗಿಸಿಕೊಳ್ಳುವ ಸಾಮರ್ಥ್ಯ ಧರ್ಮದ ಸಾಂಸ್ಥಿಕ ನೆಲೆಗೆ ಇರುತ್ತದೆ - ಎಂಬ ಸಾರ್ವತ್ರಿಕ ಸತ್ಯವನ್ನು ನಾಟಕ ಹೇಳಲು ಹೊರಟಿದೆ.

ಈ ನಾಟಕದಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ, ಅಳಪುಡಿ ಶೀನ ಮತ್ತು ನಾರಾಯಣ - ಇವರಿಬ್ಬರಲ್ಲಿ ಮಾತ್ರ ಅಂತರಂಗ ನಿರೀಕ್ಷಣೆ ಅಥವಾ ಸ್ವಾತ್ಮ ವಿಮರ್ಶೆಯನ್ನು ಸ್ಪಷ್ಟವಾಗಿ ಕಾಣಬಹುದು. ಆದ್ದರಿಂದಲೇ ಇವರಿಬ್ಬರಿಗೇ ಅಂತರಂಗ ಮತ್ತು ಬಹಿರಂಗಗಳ ವೈರುದ್ಧ್ಯಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಜ್ಞಾನದ ಸೋಗು ಧರಿಸಿದವರ 'ಕರ್ತೃತ್ವ' ಶಕ್ತಿಯೇ ಸಾಮಾಜಿಕ ದುಷ್ಪರಿಣಾಮಗಳಿಗೆ ಕಾರಣವಾದ ಬಗೆಯನ್ನು ಇಲ್ಲಿ ಕಾಣಬಹುದು.

> "ಉರಿಯೋ ದಂಡಕಾಷ್ಠ ಬೆನ್ನು ಹತ್ತೇದ ನನಗ ಅಕಾ ಬಂತು ದಂಡಕಾಷ್ಠ, ಉರಿ ಬಂತು, ಉರಿ ಬಂತು."

ಎಂದು ಬಡಬಡಿಸುವ ಶೀನ "ಶಿರೋರತ್ನ ಕಳಕೊಂಡೀನಿ" ಎನ್ನುತ್ತಾನೆ. ಇದು ಒಂದು ದೃಷ್ಟಿಯಲ್ಲಿ ಬುದ್ಧಿಶಕ್ತಿಯನ್ನು ಕಳೆದುಕೊಂಡ ಜನಸಮುದಾಯದ ಅಭಿವ್ಯಕ್ತಿಯೂ ಆಗಿದೆ. ಧರ್ಮದ ಆಕ್ಟೋಪಸ್ ಹಿಡಿತಕ್ಕೆ ಸಿಕ್ಕಿ ಪ್ರಜ್ಞೆಯನ್ನು ಕಳೆದುಕೊಳ್ಳುವ ಜನತೆ ಶಿರೋರತ್ನವನ್ನು ಕಳೆದುಕೊಂಡ ಅಶ್ವತ್ಥಾಮನಿದ್ದಂತೆ. ಈ ಹಿನ್ನೆಲೆಯಿಂದ ನೋಡಿದರೆ ಉರಿಯೋ ದಂಡಾಕಾಷ್ಠ ಒಬ್ಬ ಶೀನನ ಬೆನ್ನು ಹತ್ತಿರುವುದಲ್ಲ ; ಅದು ಇಡೀ ಬದುಕಿನ ಬೆನ್ನೆಲುಬನ್ನೇ ದಹಿಸುವಂಥದು...."ಎಲ್ಲಾ ನಾಶಮಾಡು ಅಂತ ಮಂತ್ರಿಸಿ ಬಿಟ್ಟ ನಾರಾಯಣಾಸ್ತ್ರ ಇದು ಈ ದಂಡಕಾಷ್ಠ."

ದಿವಾಣ ಕೃಷ್ಣಾಚಾರ್ಯರ ಉದ್ದೇಶ ಸಾಧನೆಗೆ 'ಮೂಕ ಯಜ್ಞಪಶು' ವಿನಂತೆ ನಡೆದು ಬರುವ ನಾರಾಯಣ ಒಂದು ರೀತಿಯಲ್ಲಿ ಧ್ವನಿಸತ್ತವನು. ಧರ್ಮದ ಸಾಂಸ್ಥಿಕ ನೆಲೆಯ ಬಲಿಪಶು ಇವನು. ಇವನಲ್ಲಿ ಒಂದು ಧ್ವನಿ ಹುಟ್ಟಲು, ತನ್ನನ್ನು ತಾನು ಸಾಕ್ಷಾತ್ಕರಿಸಿಕೊಳ್ಳಲು ಶೀನನ ವಾಕ್ಯಾರ್ಥ ದರ್ಶನವೇ ಪ್ರೇರಣೆಯಾಗುತ್ತದೆ. ಶೀನ ಮತ್ತು ನಾರಾಯಣರ ಮುಖಾಮುಖಿ ಈ ನಾಟಕದ ಉಜ್ವಲ ಸನ್ನಿವೇಶಗಳಲ್ಲಿ ಒಂದು ಅಳಪುಡಿ ಶೀನನ ಕಥೆ ಮುಗಿದು ನಾರಾಯಣನ ಹೊಸ ಅಧ್ಯಾಯ ಪ್ರಾರಂಭವಾಗುವ ಈ ಸನ್ನಿವೇಶದಲ್ಲಿ ಒಂದು ಬಗೆಯ ಪರಕಾಯ ಪ್ರವೇಶವನ್ನು ಮನಗಾಣಬಹುದು.

ಇಲ್ಲಿ ಶೀನನು ಕಂಡುಕೊಂಡ ಸತ್ಯವನ್ನು ಹಾಗೂ ತನ್ನ ಸ್ವಾನುಭವದ ವಾಸ್ತವವನ್ನು ಲೋಕಕ್ಕೆ ಬಿತ್ತರಿಸುವ ವಕ್ತಾರನಾಗಿ, ಉತ್ತರಾಧಿಕಾರಿಯಾಗಿ

'ನಾರಾಯಣ' ಕಾಣಿಸಿಕೊಳ್ಳುತ್ತಾನೆ. ಧರ್ಮದ ಸಾಂಸ್ಥಿಕ ನೆಲೆಯ ಹುತ್ತದಿಂದಲೇ ಒಡಮೂಡುವ ಅರ್ಥವಂತಿಕೆಗೆ 'ಶ್ರೀಪಾದಗುಣನಿಧಿ ತೀರ್ಥ - ನಾರಾಯಣ' ಒಂದು ಸಂಕೇತವಾಗಿ ಬಿಡುತ್ತಾನೆ. ಆದರೆ, ಸಂಘಟನೆಯ ಅಗ್ನಿಸ್ಪರ್ಶವಿಲ್ಲದ ನಾರಾಯಣನ ವ್ಯಕ್ತಿನಿಷ್ಠವಾದ ಪ್ರತಿಭಟನೆಗೆ ಧರ್ಮದ ಸಾಂಸ್ಥಿಕ ನೆಲೆಯ ಅವ್ಯವಹಾರಗಳನ್ನು ಬಯಲುಗೊಳಿಸುವ ಸಾಮರ್ಥ್ಯವಿಲ್ಲ. ದಿವಾಣ ಕೃಷ್ಣಾಚಾರ್ಯರನ್ನು ಬಿಟ್ಟರೆ, ಇನ್ನೂ ಯಾರೂ ಅವನನ್ನು ಗುರುತಿಸುವುದಿಲ್ಲ. ತಾನು ಬದುಕಿದ್ದರೂ ತನ್ನ ಕಣ್ಮುಂದೆಯೇ ತನ್ನ ಸಾವಿನ ಪುಣ್ಯ ಪುರಾಣವನ್ನು ಬಿತ್ತರಿಸುತ್ತಿರುವ ಮಠದ ಧ್ವನಿವರ್ಧಕದ ಎದುರಿಗೆ ಅಸಹಾಯಕನಾಗಿ ಕೈಚೆಲ್ಲುವ ನಾರಾಯಣನ ವ್ಯಕ್ತಿತ್ವ ಮುಖ್ಯವಾಗಿ 'ನಿಸ್ಸತ್ವ' ಮತ್ತು 'ನಿರ್ವೀರ್ಯ'ಗಳನ್ನೇ ಪ್ರತಿನಿಧಿಸುತ್ತದೆ.

ಪಾಶವೀಶಕ್ತಿಗಳ ವಿರುದ್ಧ ಸಾಮುದಾಯಿಕ ಸಂಘಟನೆಯಿಲ್ಲದ ವ್ಯಕ್ತಿನಿಷ್ಠ ಪ್ರತಿಭಟನೆ ಪರಿಣಾಮದಲ್ಲಿ ನಿರರ್ಥಕಗೊಳ್ಳುವ ಬಗೆಯನ್ನೇ 'ಸತ್ತವರ ನೆರಳು' ಎತ್ತಿ ಹಿಡಿದಿದೆ. ಇದರಿಂದ ತಿಳಿದುಬರುವ ಸಂಗತಿಯೆಂದರೆ, ಈ ನಾಟಕ ತನ್ನ ಒಟ್ಟು ವಿನ್ಯಾಸದಲ್ಲಿ ಪ್ರತಿಭಟನೆಯ ಸಾರ್ಥಕಗೊಳ್ಳಬೇಕಾದರೆ ಅದು ಮೊದಲಿಗೆ ಸಾಮುದಾಯಿಕ ಸಂಘಟನೆಯ ಅಗ್ನಿಸ್ಪರ್ಶವನ್ನು ಒಳಗೊಳ್ಳಬೇಕಾದ ಅನಿವಾರ್ಯತೆಯನ್ನು ಹೇಳುತ್ತಿದ್ದು ತನ್ಮೂಲಕ ಸಾರ್ವತ್ರಿಕವೆನ್ನಬಹುದಾದ ಸತ್ಯವನ್ನು ಪ್ರತಿಪಾದಿಸುತ್ತಿದೆ.

5

ತಮ್ಮ ಮೊದಲ ನಾಟಕಗಳಲ್ಲಿ ವ್ಯಕ್ತಿಗಿಂತಲೂ ವ್ಯಕ್ತಿಗಳನ್ನು ರೂಪಿಸುವ ಸಾಮಾಜಿಕ ಸ್ಥಿತಿಗತಿಗಳಿಗೆ ಹೆಚ್ಚಿನ ಪ್ರಾಧಾನ್ಯವನ್ನು ಕೊಟ್ಟಿರುವ ಜಡಭರತರು ಮುಂದಿನ ನಾಟಕ 'ನಾನೇ ಬಿಜ್ಜಳ'ದಲ್ಲಿ ಮನುಷ್ಯ ವ್ಯಕ್ತಿತ್ವದ ಸೂಕ್ಷ್ಮ ವೈರುದ್ಯಗಳಿಗೆ, ಅಂತರಂಗದ ಅನ್ವೇಷಣೆಗೆ ಹೆಚ್ಚಿನ ಪ್ರಾಧಾನ್ಯವನ್ನು ಕೊಟ್ಟಿದ್ದಾರೆ. (= ನವ್ಯಕಾವ್ಯದ ಪ್ರಭಾವವೋ ಏನೋ! ?) ವಸ್ತುವಿನ ಮಟ್ಟದಲ್ಲಿ ಆಗಿರುವ ಈ ಮಾರ್ಪಾಟು ಜಡಭರತರ ಸಮಗ್ರ ಕೃತಿಗಳ ವಿಶ್ಲೇಷಣಾ ದೃಷ್ಟಿಯಿಂದ ಗುರುತಿಸಬೇಕಾದ ಅಂಶವಾಗಿದೆ. ತಮ್ಮ ಮೊದಲ ನಾಟಕಗಳಲ್ಲಿ ಕನ್ನಡ ಜನರ ಗ್ರಾಮೀಣ ಬದುಕು ಮತ್ತು ಸಾಮಾಜಿಕ ಸಂವೇದನಗಳಿಗೆ ಧ್ವನಿಯಾಗಿ ಬಂದ ಜಡಭರತರು ವಸ್ತುವಿನ ಆಯ್ಕೆಗಾಗಿ ಇತಿಹಾಸ, ಪುರಾಣಗಳ ಕಡೆಗೆ ದೃಷ್ಟಿಯನ್ನು ಹಾಯಿಸಲಿಲ್ಲ. ಆದರೆ 'ನಾನೇ ಬಿಜ್ಜಳ' ಮತ್ತು 'ಪರಿಮಳದವರು' ಎಂಬ ಕೊನೆಯೆರಡು ನಾಟಕಗಳು ಇತಿಹಾಸ, ಪುರಾಣಗಳನ್ನಾಧರಿಸಿದ ಕೃತಿಗಳಾಗಿವೆ. ಅಂದಮಾತ್ರಕ್ಕೆ 'ನಾನೇ ಬಿಜ್ಜಳ' ನಾಟಕವನ್ನು ಐತಿಹಾಸಿಕವೆಂದಾಗಲೀ, 'ಪರಿಮಳದವರು' ನಾಟಕವನ್ನು ಪೌರಾಣಿಕವೆಂದಾಗಲೀ ಸರಳೀಕರಿಸುವುದು ಸರಿಯಲ್ಲ. ಇತಿಹಾಸ, ಪುರಾಣಗಳನ್ನು ವಸ್ತುವನ್ನಾಗಿ ಸ್ವೀಕರಿಸುವ ಯಾವುದೇ ಲೇಖಕ ತನ್ನ ದೃಷ್ಟಿಕೋನಕ್ಕೆ ತಕ್ಕಂತೆ 'ನಿತ್ಯನೂತನ' ವರ್ತಮಾನಕ್ಕೆ ಸಲ್ಲುವ ಮೌಲ್ಯಗಳನ್ನಷ್ಟೇ ಪ್ರತಿಪಾದನೆ ಮಾಡಿರುತ್ತಾನೆ.

'ನಾನೇ ಬಿಜ್ಜಳ' ನಾಟಕವು ಅಸ್ತಿತ್ವವಾದಿ ತತ್ವಜ್ಞಾನದ ಹಿನ್ನೆಲೆಯಲ್ಲಿ ಮನುಷ್ಯ ವ್ಯಕ್ತಿತ್ವದ ಸೂಕ್ಷ್ಮ ವೈರುಧ್ಯಗಳನ್ನು ಪ್ರತಿಪಾದಿಸುವ ಪಿರಾಂಡೆಲ್ಲೊನ 'ನಾಲ್ಕನೇ ಹೆನ್ರಿ' ನಾಟಕದ ಕನ್ನಡ ರೂಪಾಂತರವಾಗಿದೆ. ಭ್ರಮೆ ಮತ್ತು ವಾಸ್ತವ, ಅಸ್ವಸ್ಥತೆ ಮತ್ತು ಚಿತ್ತಸ್ವಾಸ್ಥ್ಯಗಳ ನಡುವೆ ತೊಳಲಾಡುವ ಮನುಷ್ಯನ ಅಸ್ತಿತ್ವವಾದಿ ಬಿಕ್ಕಟ್ಟುಗಳನ್ನು ದೃಶ್ಯೀಕರಿಸುವ ಪ್ರಯತ್ನ 'ನಾಲ್ಕನೇ ಹೆನ್ರಿ' ನಾಟಕದಲ್ಲಿದೆ. ತನ್ನಿಂದ ಆಚೆಗಿರುವ ವಾಸ್ತವ ಜಗತ್ತಿನ ಕ್ರೌರ್ಯಗಳಿಗೆ ಪ್ರತಿಯಾಗಿ ತನ್ನದೇ ಆದ ಸ್ವ-ವಿರಚಿತ ಪ್ರಪಂಚದ ಪ್ರತ್ಯೇಕತೆಯೊಂದಿಗೆ ಒಂದಾಗುವ ನಾಲ್ಕನೇ ಹೆನ್ರಿ ಒಮ್ಮೆಗೆ ದುರಂತನಾಯಕ ಮತ್ತು ವಿದೂಷಕ (= ಹ್ಯಾಮ್ಲೆಟ್ ಮತ್ತು ಪೆಟ್ರೌಷ್ಕ) ಎರಡೂ ಆಗಿದ್ದಾನೆಂದು ಆಂಗ್ಲ ವಿಮರ್ಶಕರು ಗುರುತಿಸಿದ್ದಾರೆ.[1] ಇದೇ ಬಗೆಯ ಆಶಯ ಮತ್ತು ವಿನ್ಯಾಸ ಕ್ರಮಗಳನ್ನು ಆಯ್ಕೆ ಮಾಡಿಕೊಂಡ ಜಡಭರತರು 'ನಾನೇ ಬಿಜ್ಜಳ' ನಾಟಕವನ್ನು ರೂಪುಗೊಳಿಸಿದ್ದಾರೆ.

ಈ ನಾಟಕದ ಗ್ರಹಿಕೆಗೆ ಸಂಬಂಧಬಟ್ಟ ಕೆಲವು ಸೂಚನೆಗಳನ್ನು ಜಡಭರತರು ಕೃತಿಯ ಮುನ್ನುಡಿಯಲ್ಲಿ ನೀಡಿದ್ದಾರೆ. ಅವರ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಬಹುದು : ಮೂಕಬಲಿ, ಕದಡಿದ ನೀರು, ಸತ್ತವರ ನೆರಳು ನಾಟಕಗಳಲ್ಲಿ ಮೂಡಿಬಂದಿರುವ ಹುಚ್ಚು ಪಾತ್ರಗಳಿಗೆ ಕಿರೀಟವಿಟ್ಟಂತೆ, ಹುಚ್ಚಿನ ಪದರು ಪದರು ಬಿಡಿಸಿ ತೋರಿಸುವ ಒಬ್ಬ ಪರಮಾವಧಿ ಹುಚ್ಚನ ಪಾತ್ರ ನಿರ್ಮಿಸಬೇಕೆಂಬ ಆಕಾಂಕ್ಷೆಯಿಂದ 'ನಾನೇ ಬಿಜ್ಜಳ' ನಾಟಕವನ್ನು ರಚಿಸಲಾಗಿದೆ. ಜಡಭರತರ ಈ ಅಭಿಪ್ರಾಯವನ್ನು ಪುಷ್ಟೀಕರಿಸುವ ಹೇಳಿಕೆಯೊಂದನ್ನು ಕೀರ್ತಿನಾಥ ಕುರ್ತಕೋಟಿಯವರು ಸಹ ನೀಡಿದ್ದಾರೆ.[7] ಆದ್ದರಿಂದ ಜಡಭರತರ ಮೊದಲ ನಾಟಕಗಳಿಗೂ ಮತ್ತು 'ನಾನೇ ಬಿಜ್ಜಳ' ನಾಟಕಕ್ಕೂ ಇರುವ ಪರಸ್ಪರ ಸಂಬಂಧಗಳನ್ನು ಕುರಿತು ಪರಿಶೀಲಿಸುವುದು ಅವಶ್ಯವೆನಿಸುತ್ತದೆ. ಜಡಭರತರ ಮೊದಲ ನಾಟಕಗಳಲ್ಲಿ ಅದಮ್ಯವಾದ ಜೀವನ ಶ್ರದ್ಧೆ, ಸಾಮಾಜಿಕ ಜಾಗ್ರತಿಯ ಕಳಕಳಿಗಳು ಸ್ಪಷ್ಟವಾಗಿ ಅಭಿವ್ಯಕ್ತಗೊಂಡಿವೆ. 'ಮೂಕಬಲಿ'ಯ ರುದ್ರಪ್ಪ, 'ಕದಡಿದ ನೀರು' ನಾಟಕದ ರಾಚ್ಯಾ, 'ಸತ್ತವರ ನೆರಳು' ನಾಟಕದ ಅಳಪುಡಿ ಶೀನ ಇವರೆಲ್ಲರೂ 'ಹುಚ್ಚು' (abnormal) ಎನ್ನಬಹುದಾದ ಅಂಶದಲ್ಲಷ್ಟೆ ಸಮಾನ ಧರ್ಮಿಗಳಾಗಿದ್ದು ಉಳಿದಂತೆ ಸ್ಪಷ್ಟವಾದ ವಿಭಿನ್ನ ವ್ಯಕ್ತಿತ್ವವನ್ನು ಹೊಂದಿದ್ದಾರೆ. ಇದನ್ನು ನಿರ್ಲಕ್ಷಿಸಿ ಇವರನ್ನೆಲ್ಲ ಒಂದೇ ಎಂಬಂತೆ ಪರಿಗಣಿಸುವ ನಾಟಕಕಾರ ಪರಿಮಿತ ದೃಷ್ಟಿಕೋನವನ್ನೇ ಎತ್ತಿ ಹಿಡಿಯುವ ಅಗತ್ಯ ವಿಮರ್ಶಕನಿಗೆ ಇಲ್ಲವಾದ್ದರಿಂದ 'ನಾನೇ ಬಿಜ್ಜಳ' ನಾಟಕದ ನಾಯಕನನ್ನು ಹಿಂದಿನ ನಾಟಕಗಳ ಮುಂದುವರೆದ ಹಾಗೂ ಪರಮಾವಧಿ ನೆಲೆಯ ಪಾತ್ರವೆಂದು ಪರಿಗಣಿಸಬೇಕಾಗಿಲ್ಲ. ರುದ್ರಪ್ಪ, ರಾಚ್ಯ, ಅಳಪುಡಿ ಶೀನರಲ್ಲಿ [illegible]ಗೊಂಡಿರುವ ಜೀವನ ಶ್ರದ್ಧೆ, ಸಾಮಾಜಿಕ ಜಾಗ್ರತಿಯ ಅಂಶಗಳನ್ನು ನಾವು 'ದೇಸಾಯಿ ಬಿಜ್ಜಳ'ನ ಅಸ್ತಿತ್ವವಾದಿ ತತ್ವಜ್ಞಾನದಲ್ಲಿ ಕಾಣಲು ಸಾಧ್ಯವಿಲ್ಲ. ಮೇಲಾಗಿ ರುದ್ರುಪ್ಪ, ರಾಚ್ಯ, ಅಲಪುಡಿ ಶೀನ-ಇವರೆಲ್ಲರೂ ಸಾಮಾಜಿಕ ನೆಲೆಯ ವ್ಯಕ್ತಿತ್ವದ ಚಿತ್ರಗಳಾಗಿ ಮೂಡಿಬಂದಿದ್ದಾರೆ. ಆದರೆ, 'ದೇಸಾಯಿ ಬಿಜ್ಜಳ' ಅಸ್ತಿತ್ವವಾದಿ ತತ್ವಜ್ಞಾನದ ವ್ಯಕ್ತಿನಿಷ್ಠ ಅಭಿವ್ಯಕ್ತಿಯಾಗಿದ್ದು ಮನುಷ್ಯ ವ್ಯಕ್ತಿತ್ವದ ಸೂಕ್ಷ್ಮ ವೈರುಧ್ಯಗಳ ಶೋಧಕನಾಗಿ ಮೂಡಿಬಂದಿದ್ದಾನೆ.

ಇತಿಹಾಸ ಮತ್ತು ವರ್ತಮಾನ, ನಾಟಕ ಮತ್ತು ಜೀವನ, ಭ್ರಮೆ ಮತ್ತು ವಸ್ತವ, ಅಸ್ವಸ್ಥತೆ ಮತ್ತು ಚಿತ್ರಸ್ವಾಸ್ಥ್ಯ-ಹೀಗೆ ಹಲವು ದ್ವಂದ್ವಗಳ ನಡುವೆ ತೊಳಲಾಡುವ ಮನುಷ್ಯನ ಅಸ್ತಿತ್ವವಾದಿ ಬಿಕ್ಕಟ್ಟುಗಳ ದೃಶ್ಯೀಕರಣವೇ 'ನಾನೇ ಬಿಜ್ಜಳ' ನಾಟಕದ ಮುಖ್ಯ ಆಶಯವಾಗಿದೆ. ಭ್ರಮೆ ಮತ್ತು ವಾಸ್ತವಗಳ ಸುಳಿಯಲ್ಲಿ ಸಿಲುಕಿ ಎರಡು ಮುಖಗಳಾಗಿ ವ್ಯವಹರಿಸುವ 'ದೇಸಾಯಿ ಬಿಜ್ಜಳ'ನಂತೆಯೇ ಇತರ ಪಾತ್ರಗಳೂ ಮೂಡಿಬಂದಿವೆ. ಈ ನಾಟಕದಲ್ಲಿ ಸಾಮಾಜಿಕವಾದ ಸಂದರ್ಭ ಮತ್ತು ಸನ್ನಿವೇಶಗಳಿಂದ ರೂಪುಗೊಳ್ಳುವ ಒಂದೇ

ಒಂದು ಪಾತ್ರವೂ ಮೂಡಿಬಂದಿಲ್ಲವೆಂಬ ಸಂಗತಿ ಈ ನಾಟಕದ ಮೇಲಾಗಿರುವ ಅಸ್ತಿತ್ವವಾದಿ ತತ್ವಜ್ಞಾನದ ದಟ್ಟ ಪ್ರಭಾವಕ್ಕೊಂದು ಸ್ಪಷ್ಟ ನಿದರ್ಶನವಾಗಿದೆ. ಇಲ್ಲಿ ನಾಟಕಕಾರರು ಮನುಷ್ಯನ ವ್ಯಕ್ತಿತ್ವವನ್ನು ಸಾಮಾಜಿಕ ನೆಲೆಯಲ್ಲಿಟ್ಟು ನೋಡುವ ವ್ಯಕ್ತಿನಿರಪೇಕ್ಷ ದೃಷ್ಟಿಯಿಂದ ವಿಮುಖರಾಗಿ ವ್ಯಕ್ತಿನಿಷ್ಠವಾದ ಶುದ್ಧ ನೈತಿಕ ನೆಲೆಯಿಂದಲೇ ಮನುಷ್ಯನ ವ್ಯಕ್ತಿತ್ವದ ಚಿತ್ರಣವನ್ನು ನೀಡಿರುವುದರಿಂದ ಒಳಮುಖಿ (Intrinsic) ದೃಷ್ಟಿಯೇ ವಿಜೃಂಭಿಸಿದೆ. ಮನುಷ್ಯ ವ್ಯಕ್ತಿತ್ವವನ್ನು ರೂಪಿಸುವ ಸಾಮಾಜಿಕ ಸ್ಥಿತಿಗತಿಗಳು, ಆವರಣಗಳು ಹಿಂದೆ ಸರಿದು ವ್ಯಕ್ತಿನಿಷ್ಠವಾದ ಸ್ವ-ವಿರಚಿತ ಪ್ರಪಂಚದ ಪ್ರತ್ಯೇಕತೆಯೇ ಎದ್ದು ಕಾಣುತ್ತದೆ. ಈ ನಾಟಕದ ಕೊನೆಯಲ್ಲಿ ತನ್ನನ್ನು ಸಮೀಪಿಸುತ್ತಿರುವ "ನಾಲ್ವರು ಗೆಳೆಯರನ್ನು" ಕಂಡು ದೇಸಾಯಿ ಬಿಜ್ಜಳ ಹೇಳುವ ಮಾತುಗಳು ಇವು :

> "ಈಗ .... ಹೌದು ಈಗ .... ನೀವು ನನ್ನ ಹತ್ತಿರ ಬರಬೇಕು....
> ಬರ್‍ರಿ .... ಇನ್ನೂ ಹತ್ತಿರ .... ಹತ್ತಿರ .... ಹತ್ತಿರ .... ಇನ್ನೂ"

ಮೃತ್ಯು ಸಂಬಂಧವಾದ ಇಲ್ಲಿನ ಅಂತ್ಯವು ಕಾಮೂ ಹೇಳಿದ "ಗಂಭೀರವಾದ ಚಿಂತನೆಗೆ ಒಳಗಾಗಲು ತಾತ್ವಿಕವಾಗಿ ಅರ್ಹವಾದ ಒಂದೇ ಒಂದು ವಿಷಯವೆಂದರೆ ಆತ್ಮಹತ್ಯೆಯೊಂದೇ"- ಎಂಬ ಅಭಿಪ್ರಾಯವನ್ನೇ ಸಮರ್ಥಿಸುತ್ತಿದೆ. ಒಟ್ಟಿನಲ್ಲಿ ತಮ್ಮ ಮೊದಲ ನಾಟಗಳಲ್ಲಿ ಒಡಮೂಡಿರುವ ಗ್ರಾಮೀಣ ಜನತೆಯ ಸಹಜ ಜೀವನ ದರ್ಶನದಿಂದ ವಿಮುಖರಾದ ಜಡಭರತರು 'ನಾನೇ ಬಿಜ್ಜಳ' ನಾಟಕದ ಮೂಲಕ ಮನುಷ್ಯ ವ್ಯಕ್ತಿತ್ವದ ಸೂಕ್ಷ್ಮ ವೈರುಧ್ಯಗಳಿಗೆ, ಅಂತರಂಗದ ಅನ್ವೇಷಣೆಗೆ ಹೆಚ್ಚಿನ ಪ್ರಾಧಾನ್ಯವನ್ನು ಕೊಟ್ಟಿದ್ದಾರೆ.

### 6

'ಪರಿಮಳದವರು' ಎಂಬ ನಾಟಕ ಜಡಭರತರ ಇತ್ತೀಚಿನ ಕೊನೆಯ ನಾಟಕವಾಗಿದೆ. ಮಂತ್ರಾಲಯದ ರಾಘುವೇಂದ್ರಸ್ವಾಮಿಗಳ ಪುರಾಣವನ್ನಾಧರಿಸಿದ ಈ ನಾಟಕ ಕೃತಿಗೆ 'ಶ್ರೀ ರಾಘುವೇಂದ್ರಸ್ವಾಮಿಗಳ ಜೀವನ--ನಾಟಕ'ವೆಂಬ ಉಪಶೀರ್ಷಿಕೆಯೂ ಇದೆ. ಮುಖ್ಯವಾಗಿ ಸಂನ್ಯಾಸದ ವಿಕೃತಗತಿಯನ್ನು ಹೇಳಲು ಹೊರಟಿರುವ ಈ ನಾಟಕದಲ್ಲಿ ಎತ್ತಿಕೊಂಡಿರುವ ವಸ್ತು ವಿಷಯಗಳು ಜಡಭರತರಿಗೆ ಅಪರಿಚಿತವಾದುದೇನೂ ಅಲ್ಲ. ಒಂದು ದೃಷ್ಟಿಯಲ್ಲಿ 'ಸತ್ತವರ ನೆರಳು' ನಾಟಕದಲ್ಲೂ ಸಂನ್ಯಾಸದ ವಿಕೃತಗತಿಯ ನಿರೂಪಣೆಯನ್ನು ಕಾಣಬಹುದು. 'ಪರಿಮಳದವರು' ನಾಟಕದ ಶೀರ್ಷಿಕೆಗೆ ಸಂಬಂಧಪಟ್ಟಂತೆ ಕೆ.ಎಸ್. ನರಸಿಂಹಸ್ವಾಮಿಯವರ ಕವಿತೆಯ ಸಾಲೊಂದನ್ನು ನೆನೆಯಬಹುದು :

> "ಇಹದ ಪರಿಮಳವಿರದ ಹಾದಿ ಹಿಡಿದು
> ಬದುಕು ದುರ್ಬಲವಾಯಿತು
> ಕವಿತೆ ನೀರಸವಾಯಿತು"

ಎಂಬುದೇ ಈ ನಾಟಕದ ಮುಖ್ಯ ಧ್ವನಿಯಾಗಿದೆ. ಬದುಕಿನ ನಂದನವನಕ್ಕೆ ವಿಮುಖನಾಗುವ ವೆಂಕಣ್ಣ ಸಂನ್ಯಾಸಿಯಾಗಿ ವೃಂದಾವನಸ್ಥನಾಗುವ ವಿಕೃತಗತಿಯನ್ನು ನಾಟಕ ದೃಶ್ಯೀಕರಿಸುತ್ತದೆ. ಇದರೊಂದಿಗೆ ಬದುಕಿನ ವಿಕೃತಿಗತಿಯ ಹಲವು ಮುಖಗಳನ್ನು ಕಾಣಿಸುವುದೂ ಈ ನಾಟಕದ ಉದ್ದೇಶವಾಗಿರುವಂತೆ ತೋರುತ್ತದೆ; ಹೆಂಗಸರ ಮೋರೆ, ಮೊಲೆ ನೋಡುತ್ತಾ ಜೊಲ್ಲು ಸುರಿಸುವ ಮೇಸ್ತ್ರಿ ಭೀಮಸಿಂಗ - "ಕಳವಾದ ಮನೀ ಹಾಂಗ" ಭಣಗುಡುತ್ತಿರುವ ಮನೆಯಲ್ಲಿ ಸಂಸಾರ ಸಾಗಿಸಬೇಕಾದ ಸರಸ್ವತಿ-ಜಯಪತ್ರದ ಚೆಂಬತ್ತಿ ದೇಶಾಟನೆ ಮಾಡುತ್ತಾ ಸಂಚರಿಸುವ ವೆಂಗಿಮಂಡಲದ ವೈಣಿಕ-ಧರ್ಮಶ್ರದ್ಧೆ ಮತ್ತು ಕಲಾಶ್ರದ್ಧೆಗಳ ಮೂಲಕ 'ಮಾನವ ಪ್ರಾಣ'ವನ್ನು 'ಪಣದಾಟ'ವನ್ನಾಗಿ ಅಂಗೀಕರಿಸುವ ಚೇವಪ್ಪನಾಯಕ .... ಇವರೆಲ್ಲರೂ ಬದುಕಿನ ವಿಕೃತಗತಿಯ ಹಲವು ಮುಖಗಳ ಅಭಿವ್ಯಕ್ತಿಯೇ ಆಗಿದ್ದಾರೆ.

ಜಡಭರತರು ಈ ನಾಟಕದಲ್ಲಿ ಜೀವನಪ್ರೀತಿ ಹಾಗೂ ಜೀವನ ಶ್ರದ್ಧೆಗಳಿಗೆ ಎರವಾದ ಎರಡು 'ಅತಿ' (Extremity)ಗಳನ್ನು ತೌಲನಿಕ ದೃಷ್ಟಿಯಿಂದ ಮಂಡಿಸಿದ್ದಾರೆ: ವೃಂದಾವನ ನಿರ್ಮಾಣದ ಆರಂಭದ ದೃಶ್ಯದಲ್ಲಿ ಕಾಣಿಸಿಕೊಳ್ಳುವ ದಾರಿಹೋಕ ಗಂಡ-ಹೆಂಡತಿಯರ ಪ್ರಸಂಗ ಈ ದೃಷ್ಟಿಯಿಂದ ಗಮನಾರ್ಹ ! ಬಿಸಿಲಲ್ಲಿ ನಡೆದು ಬಳಲಿ ಬೇಯುತ್ತಿರುವ ತನ್ನ ಹೆಂಡತಿ-ಮಕ್ಕಳ ಕಡೆ ನೋಡದ, ಅವರೊಂದಿಗೆ ಪ್ರತಿಸ್ಪಂದಿಸದ ದಾರಿಹೋಕ ಗಂಡ ತನ್ನ ಪಾಡಿಗೆ ತಾನು ತಣ್ಣಗೆ ನೀರು ಕುಡಿದು ತನ್ನವರ ವಿಷಯದಲ್ಲಿ ದಿವ್ಯನಿರ್ಲಕ್ಷ್ಯ ತೋರುತ್ತಾನೆ. ತೀರ ವ್ಯಾವಹಾರಿಕವಾಗಿ ತೋರುವ ಇಲ್ಲಿನ ಸಂಬಂಧ ಒಂದು 'ಅತಿ' ಎನ್ನಿಸಿದರೆ, ವೆಂಕಣ್ಣ ತನ್ನ ಸಂಸಾರದ ಬಗ್ಗೆ ತೋರುವ ದಿವ್ಯನಿರ್ಲಕ್ಷ್ಯವೂ ಇನ್ನೊಂದು 'ಅತಿ'ಯಾಗಿ ತೋರುತ್ತದೆ. ತರ-ತಮ ಭಾವವನ್ನು ಮೀರಿ ನಿಲ್ಲುವ ಇವೆರಡು 'ಅತಿ'ಗಳು ಮೂಲತಃ ಜೀವನ ಪ್ರೀತಿ ಹಾಗೂ ಜೀವನಶ್ರದ್ಧೆಗಳಿಗೆ ಎರವಾದ ಅಭಿವ್ಯಕ್ತಿಗಳೇ ಆಗಿವೆ. ಈ ಬಗೆಯ ಜೀವನ ಕ್ರಮಗಳಿಗೆ ಸಮಾಧಿ ಕಟ್ಟಬೇಕಾದ ಧ್ವನಿಯನ್ನು ನಾಟಕದ ಒಟ್ಟು ವಿನ್ಯಾಸದಲ್ಲಿ ಗುರುತಿಸಬಹುದು. ಆದ್ದರಿಂದ ಈ ನಾಟಕದ ಅಂತ್ಯವನ್ನು ದುರಂತವೆನ್ನಲಾಗದು ! ಬದುಕನ್ನು ನಿಷೇಧಾತ್ಮಕಗೊಳಿಸುವ (Negative) ಒಲವು ನಿಲುವುಗಳು ಕೊನೆಗೆ ಗೋರಿಗಳಾಗಿ ರೂಪುಗೊಳ್ಳಲೇಬೇಕಾದ ಗುಣಾತ್ಮಕ ನೆಲೆಯೊಂದನ್ನು (Positive) ನಾಟಕ ಎತ್ತಿ ಹಿಡಿದಿದೆ.

> "ಸಂನ್ಯಾಸದ್ದು ವಿಕೃತ ಗತಿ ... ಮೇಲಿಂದ ಕೆಳಗ
> ಬರಬೇಕು... ನೆಲದೊಳಗೆ ಬೇರು ಇಳಿದ
> ಮಾಲೆ ನಕ್ಷತ್ರದ ಹೂವು ಅರಳಿಸಬೇಕು...
> ಅದು ಪರಿಮಳದ ಪಥ"-

ಎಂಬ ಮಾತುಗಳನ್ನು ಸಂನ್ಯಾಸಿಯಾದ ವೆಂಕಣ್ಣನ ಮೂಲಕವೇ ಹೇಳಿಸಿರುವುದು ಈ ನಾಟಕದ 'ಏಕೈಕ' ಅಂತರಂಗ ಪರಿವೀಕ್ಷಣೆಗೆ ಕಾರಣವಾಗಿದೆ. ಈ ಬಗೆಯ ಪರಿವೀಕ್ಷಣೆಯಿಂದ ಪ್ರಕಟಗೊಳ್ಳುವ ಸಾಕ್ಷಾತ್ಕಾರ ದರ್ಶನವನ್ನು ಕಿತ್ತಸೆಯುವ ಅಂತ್ಯವನ್ನು ನಾಟಕದಲ್ಲಿ ಕಲ್ಪಿಸಲಾಗಿದೆ. ವೃಂದಾವನದ ಎದುರಲ್ಲಿ ಕುಳಿತುಕೊಂಡು ಚಂದ್ರಮತಿ ಮಧ್ಯಮಾವತಿ ರಾಗವನ್ನು ಬಾರಿಸುತ್ತಾಳೆ:

> "ಆಗ ಪರಿಮಳವು ಎಲ್ಲ ಕಡೆಗೂ ಹಬ್ಬುವುದು
> ನೆರೆದವರೆಲ್ಲರೂ ಮೂಗು ಏರಿಸಿ 'ಏನಿದು
> ಪರಿಮಳ! ಎಲ್ಲಿಂದ ಬಂತೀ ಪರಿಮಳ...?'
> ಅತ್ತಿತ್ತ ನೋಡುವರು"

ಎಂಬಂತಹ ವಿವರಣೆಯು ನಾಟಕದ ಕೊನೆಯಲ್ಲಿ ಪ್ರಕಟಗೊಂಡಿದೆ. ಸಂನ್ಯಾಸದ ವಿಕೃತ ಗತಿಯನ್ನು ಆಯ್ಕೆಮಾಡಿಕೊಂಡು, ನೆಲದೊಳಗೆ ಬೇರು ಇಳಿಯುವುದಕ್ಕೆ ಮುನ್ನವೇ ನಕ್ಷತ್ರದ ಹೂವನ್ನು ಅರಳಿಸ ಹೊರಟು

ಪರಿಮಳದ ಪಥಕ್ಕೆ ಎರವಾದ ವೆಂಕಣ್ಣನ, ಶ್ರೀ ರಾಘವೇಂದ್ರ ಸ್ವಾಮಿಗಳ, ವೃಂದಾವನದಿಂದ ಎಲ್ಲ ಕಡೆಗೂ ಹಬ್ಬುವ ಪರಿಮಳ, ನಾಟಕದ ಒಟ್ಟು ವಿನ್ಯಾಸದಲ್ಲಿ ಪ್ರಕಟಗೊಳ್ಳುವ ಸಾಕ್ಷಾತ್ಕಾರ ದರ್ಶನವನ್ನೆ ಅಣಕಿಸುವಂತೆ ತೋರುತ್ತದೆ. "ನಾವು ಪರಿಮಳದವರು"- ಎಂಬ ವೃಂದಾವನ ಧ್ವನಿಗೆ ಹೇಗೆ ಅರ್ಥೈಸಬೇಕೋ ತಿಳಿಯುವುದಿಲ್ಲ. ಈ ಬಗ್ಗೆ ಡಾ. ಕೆ.ವಿ. ನಾರಾಯಣ ಅವರು 'ಪರಿಮಳ'ವೆನ್ನುವುದು ರಾಘವೇಂದ್ರಸ್ವಾಮಿಗಳ ವ್ಯಾಖ್ಯಾನ ಗ್ರಂಥದ ಹೆಸರೂ ಆಗಿದೆ ಎಂದು ನನಗೆ ತಿಳಿಸಿದರು. ಹಾಗೆ ನೋಡಿದರೂ ಪರಿಮಳದ ಪಥಕ್ಕೆ ಎರವಾಗಿ 'ಪರಿಮಳ'ವನ್ನು ಸೃಷ್ಟಿಸಿದ್ದೇ ಒಂದು ವಿರೋಧಾಭಾಸವಾಗಿ ತೋರುತ್ತದೆ.

❑

---

1. ಧರ್ಮಸೆರೆ (1934), ಜಡಭರತನ ಕನಸುಗಳು (1949), ಮೂಕಬಲಿ (1956), ಜೀವನ ಫಲ (1957), ಕದಡಿದ ನೀರು (1963), ಆ ಊರು ಈ ಊರು (1973), ಸತ್ತವರನೆರಳು (1974), ನಾನೇ ಬಿಜ್ಜಳ (1979), ಪರಿಮಳದವರು (1987).
2. 'ಜಡಭರತನ ಕನಸುಗಳು' ಕೃತಿಯ ಉದ್ದಕ್ಕೂ ಅಲ್ಲಲ್ಲಿ ಕಾಣಿಸಿರುವ ದಿನಾಂಕಗಳು ಅನುಕ್ರಮಣಿಕೆಯಿಲ್ಲದವು ಎಂಬುದನ್ನಿಲ್ಲಿ ಗಮನಿಸಬೇಕು.
3. ವಿಮರ್ಶೆಯ ವಿನಯ (ನಾಟಕ ಪ್ರಕಾರ) ಸಂ.3, ಪು.88, ಮನೋಹರ ಗ್ರಂಥಮಾಲಾ, ಧಾರವಾಡ, 1985.
4. i) ಎಲ್.ಎಸ್. ಶೇಷಗಿರಿರಾವ್ : ಹೊಸಗನ್ನಡಸಾಹಿತ್ಯ, ಪು. 246, 1975.
   ii) ದಿವಸ್ಪತಿ ಹೆಗಡೆ ; ಅನಾಮಧೇಯರ ಕದಡಿದನೀರು ಕೃತಿಚೌರ್ಯವೆ ? ತರಂಗ, ಜನವರಿ, 15, 1989.
5. ಆಧುನಿಕ ಕನ್ನಡ ನಾಟಕ, ಕೆ. ಮರುಳಸಿದ್ಧಪ್ಪ, ಪು.301 ; ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು, 1983.
6. ಆಧುನಿಕ ಕನ್ನಡ ನಾಟಕ : ಕೆ. ಮರುಳಸಿದ್ಧಪ್ಪ, ಪು. 299.
7. David L. Hirst, Tragicomedy. P - 106, The Critical Idiom Serie, Methuen Publication, London and Newyork, 1984.
8. The Tradition of Karnataka Theatre, K.D. Kurtkoti, P. 47, Karnataka Natak Academy, Bangalore, 1986.

# ಕಡೆಂಗೋಡ್ಲು ಶಂಕರಭಟ್ಟ

ಬಿ.ಎ. ವಿವೇಕ ರೈ

## 1

ಆಧುನಿಕ ಕನ್ನಡ ಸಾಹಿತ್ಯದ ಮಹತ್ವದ ಕವಿಗಳಲ್ಲಿ ಕಡೆಂಗೋಡ್ಲು ಶಂಕರಭಟ್ಟರು ಪ್ರಮುಖರು. ಅವರು ಹುಟ್ಟಿದ್ದು ದಕ್ಷಿಣ ಕನ್ನಡ ಜಿಲ್ಲೆಯ ವಿಟ್ಲದಿಂದ ಸುಮಾರು ಎಂಟು ಮೈಲು ದೂರದ ಪೆರುವಾಯಿ ಗ್ರಾಮದ ಕಡೆಂಗೋಡ್ಲು ಎಂಬ ಊರಿನಲ್ಲಿ. ಶಂಕರ ಭಟ್ಟರ ಜನ್ಮದಿನ 104, ಆಗಸ್ಟ್. ಅವರ ತಾಯಿ ಗೌರಮ್ಮ; ತಂದೆ ಈಶ್ವರಭಟ್ಟರು. ಅವರದ್ದು ಕೃಷಿ ಪ್ರಧಾನ ವೃತ್ತಿ. ಶಂಕರಭಟ್ಟರ ಬಂಧುವಾದ, ಕನ್ನಡ ಸಾಹಿತ್ಯದ ಹಿರಿಯ ಸಂಶೋಧಕರಾದ ಮುಳಿಯ ತಿಮ್ಮಪ್ಪಯ್ಯನವರು ಶಂಕರ ಭಟ್ಟರ ಶಿಕ್ಷಣಕ್ಕೆ ಪ್ರೋತ್ಸಾಹವನ್ನು ಕೊಟ್ಟವರು. ಪ್ರಾಥಮಿಕ ವಿದ್ಯಾಭ್ಯಾಸವನ್ನು ಮನೆಯ ಸಮೀಪದ ಹಳ್ಳಿಯ ಶಾಲೆಯಲ್ಲಿ ಮುಗಿಸಿದ ಶಂಕರಭಟ್ಟರು ಮುಳಿಯ ತಿಮ್ಮಪ್ಪಯ್ಯನವರ ಪ್ರೇರಣೆಯಿಂದ ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಅಭ್ಯಾಸವನ್ನು ನಡೆಸಿದರು. ಮಂಗಳೂರಿನಲ್ಲಿ ಮುಳಿಯ ತಿಮ್ಮಪ್ಪಯ್ಯನವರ ಮನೆಯಲ್ಲಿ ವಾಸವಾಗಿದ್ದ ಶಂಕರಭಟ್ಟರಿಗೆ ಸಾಹಿತ್ಯದ ಪರಿಸರ ಸಹಜವಾಗಿಯೇ ಪ್ರಾಪ್ತವಾಯಿತು, ಕೆನರಾ ಹೈಸ್ಕೂಲಿನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿದ್ದ ಅಚ್ಯುತ ಬಾಳಿಗರ ಪ್ರಭಾವ ವಿದ್ಯಾರ್ಥಿ ಶಂಕರಭಟ್ಟರ ಸಾಹಿತ್ಯ ಶಕ್ತಿಯನ್ನು ಹೆಚ್ಚಿಸಿತು. 1920ರ ಜನವರಿ 12ರ ತನಕ ಕೆನರಾ ಹೈಸ್ಕೂಲಿನಲ್ಲಿ ಶಿಕ್ಷಣ ಪಡೆದ ಶಂಕರ ಭಟ್ಟರು ಕಾಲೇಜು ಪ್ರವೇಶಿಸುವ ಸಂದರ್ಭದಲ್ಲಿ ಭಾರತ ಸ್ವಾತಂತ್ರ್ಯ ಸಂಗ್ರಾಮದ ಕರೆಗೆ ಓಗೊಟ್ಟು ತಮ್ಮ ಶಾಲಾ ಶಿಕ್ಷಣವನ್ನು ಕೈಬಿಟ್ಟರು. 1920ರಲ್ಲಿ ಗಾಂಧೀಜಿಯವರು ಮಂಗಳೂರಿಗೆ ಬಂದು ಸಾರ್ವಜನಿಕ ಸಭೆಯಲ್ಲಿ ನೀಡಿದ ಸತ್ಯಾಗ್ರಹ ಸಂದೇಶವು ಶಂಕರಭಟ್ಟರ ದೇಶಾಭಿಮಾನವನ್ನು ಉದ್ದೀಪನಗೊಳಿಸಿತು. ದಕ್ಷಿಣ ಕನ್ನಡದಲ್ಲಿ ಕಾರ್ನಾಡ್ ಸದಾಶಿವರಾಯರ ಸ್ವಾತಂತ್ರ್ಯ ಹೋರಾಟದ ಆದರ್ಶದಿಂದ ಪ್ರಭಾವಿತರಾದ ಶಂಕರಭಟ್ಟರು ರಾಜಕೀಯ ಆಂದೋಲನಕ್ಕೆ ಧುಮುಕಿ ಸ್ವಯಂಸೇವಕರಾಗಿ ಸತ್ಯಾಗ್ರಹದಲ್ಲಿ ಭಾಗವಹಿಸಿದರು.

ಸ್ವಾತಂತ್ರ್ಯ ಹೋರಾಟಕ್ಕಾಗಿ ಶಾಲೆ ಬಿಟ್ಟ ಶಂಕರ ಭಟ್ಟರು ಮಂಗಳೂರಿನ ಗುಜರಾತ್ ವಿದ್ಯಾಪೀಠದಲ್ಲಿ ಎಸ್.ಎಸ್.ಎಲ್.ಸಿ. ಮುಗಿಸಿದರು (1920). ಬಳಿಕ ಧಾರವಾಡದ ಶಿಕ್ಷಣ ಸಮಿತಿಯ 'ಸ್ನಾತಕ' ಪರೀಕ್ಷೆಯಲ್ಲಿ ಉಚ್ಚ ಶ್ರೇಣಿಯಲ್ಲಿ ತೇರ್ಗಡೆಯಾದರು.

ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಲು ವಿದ್ಯಾಭ್ಯಾಸವನ್ನು ತ್ಯಜಿಸಿದವರಿಗಾಗಿ ಕಾರ್ನಾಡ್ ಸದಾಶಿವರಾಯರು ಮಂಗಳೂರಿನಲ್ಲಿ ಸ್ಥಾಪಿಸಿದ ತಿಲಕ ವಿದ್ಯಾಲಯವೆಂಬ ರಾಷ್ಟ್ರೀಯ ಪಾಠಶಾಲೆಯಲ್ಲಿ ಶಂಕರಭಟ್ಟರು ಅಧ್ಯಾಪಕರಾಗಿ ಸೇರಿದರು. ಆ ಶಾಲೆಯ ಆರಂಭದಿಂದ ಅದು ಮುಚ್ಚುವವರೆಗೂ ಶಂಕರಭಟ್ಟರು ಕನ್ನಡ ಅಧ್ಯಾಪಕರಾಗಿ ಅಲ್ಲಿ ಕೆಲಸ ಮಾಡಿದರು.

1929ರಲ್ಲಿ ಮಂಗಳೂರಿನ ಸೈಂಟ್ ಆಗ್ನೆಸ್ ಕಾಲೇಜ್ ಎಂಬ ಮಹಿಳಾ ವಿದ್ಯಾಸಂಸ್ಥೆಯಲ್ಲಿ ತೆರವಾದ ಕನ್ನಡ ಪ್ರಾಧ್ಯಾಪಕರ ಹುದ್ದೆಗೆ ಅರ್ಹರನ್ನು ನೇಮಿಸಲು ಸಂಸ್ಥೆಯವರು ಪಂಜೆ ಮಂಗೇಶರಾಯರನ್ನು ವಿನಂತಿಸಿಕೊಂಡಾಗ ಪಂಜೆಯವರು ಸೂಚಿಸಿದ್ದು ಶಂಕರ ಭಟ್ಟರ ಹೆಸರನ್ನು. 1929ರಿಂದ 1964ರವರೆಗೆ 35 ವರ್ಷಗಳ ಕಾಲ ಶಂಕರ ಭಟ್ಟರು ಮಂಗಳೂರಿನ ಸೈಂಟ್ ಆಗ್ನೆಸ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸಾವಿರಾರು ಮಂದಿ ವಿದ್ಯಾರ್ಥಿನಿಯರಲ್ಲಿ ಕನ್ನಡದ ಒಲವನ್ನು ಮೂಡಿಸಿದರು.

ಪತ್ರಿಕೋದ್ಯಮ ಕಡೆಂಗೋಡ್ಲು ಶಂಕರಭಟ್ಟರ ಒಲವಿನ ಕ್ಷೇತ್ರಗಳಲ್ಲಿ ಒಂದು. ಮಂಗಳೂರಿನಲ್ಲಿ ಮತ್ತು ಎ.ಬಿ. ಶೆಟ್ಟಿಯವರು ನಡೆಸುತ್ತಿದ್ದ 'ನವಯುಗ' ವಾರಪತ್ರಿಕೆಯಲ್ಲಿ ಶಂಕರ ಭಟ್ಟರು ಪತ್ರಕರ್ತರಾಗಿ ಸೇರಿದರು (1926). 1926ರಿಂದ 1928ರವರೆಗೆ ನವಯುಗ ಪತ್ರಿಕೆಯಲ್ಲಿ ಪತ್ರಕರ್ತರಾಗಿ ಕೆಲಸ ಮಾಡಿದ ಶಂಕರ ಭಟ್ಟರು 1928ರಲ್ಲಿ ಮಂಗಳೂರಿನಲ್ಲಿ ಆರಂಭವಾದ 'ರಾಷ್ಟ್ರಬಂಧು' ವಾರಪತ್ರಿಕೆಯ ಸಂಪಾದಕರಾದರು. 'ರಾಷ್ಟ್ರಬಂಧು' ಪತ್ರಿಕೆಯಲ್ಲಿ ಅದರ ಸ್ಥಾಪನೆಯಿಂದ 1953ರವರೆಗೆ ಸಂಪಾದಕರಾಗಿ ಆ ಪತ್ರಿಕೆಯ ಉಳಿವು ಮತ್ತು ಬೆಳವಿಗಾಗಿ 25 ವರ್ಷಗಳ ಕಾಲ ದುಡಿದ ಶಂಕರ ಭಟ್ಟರು ಅದರ 'ರಜತೋತ್ಸವ' ಸಂಚಿಕೆಯನ್ನು ಪ್ರಕಟಿಸಿ ತಮ್ಮ ಧೋರಣೆಗೆ ಒಗ್ಗದ ಕಾರಣ ಆ ಪತ್ರಿಕೆಯ ಕೆಲಸವನ್ನು ಬಿಟ್ಟರು. ರಾಷ್ಟ್ರಬಂಧುವಿನ ಸಂಬಂಧವನ್ನು ಕಳಚಿಕೊಂಡ ಬಳಿಕ 'ರಾಷ್ಟ್ರಮತ' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿ ತಮ್ಮ ಬದುಕಿನ ಕೊನೆಯವರೆಗೂ (1968) ಅದರ ಸಂಪಾದಕರಾಗಿ ಕಾರ್ಯ ನಿರ್ವಹಿಸಿದರು.

ಶಂಕರ ಭಟ್ಟರ ವಿವಾಹ 1926ರಲ್ಲಿ, ಸೇಡಿಯಾಪು ಸೀತಾರಾಮ ಭಟ್ಟರ ಎರಡನೆಯ ಮಗಳು ಕಮಲಮ್ಮ ಅವರೊಡನೆ. ಶಂಕರ ಭಟ್ಟರಿಗೆ ಮೂವರು ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು. ಕೆ. ಈಶ್ವರ ಭಟ್ಟ, ಡಾ. ಕೆ. ಸೀತಾರಾಮ ಭಟ್ಟ ಮತ್ತು ಬಾಲಕೃಷ್ಣ ಭಟ್ಟ–ಗಂಡು ಮಕ್ಕಳು; ಮಾಲತಿ (ಈಗ ದಿವಂಗತ) ಮತ್ತು ನಳಿನಿ–ಹೆಣ್ಣು ಮಕ್ಕಳು.

1968ರ ಮೇ 17ರಂದು ತಮ್ಮ ಮನೆ ಕಡೆಂಗೋಡ್ಲುವಿನಿಂದ ಮಂಗಳೂರಿಗೆ ಪ್ರಯಾಣ ಹೊರಟಿದ್ದ ಶಂಕರ ಭಟ್ಟರು, ಬಸ್ಸು ಸುಮಾರು ಒಂದೆರಡು ಮೈಲು ದೂರ ಕ್ರಮಿಸಿದಾಗ ಹೃದಯ ಸ್ತಂಭನವಾಗಿ ಬಸ್ಸಿನಲ್ಲಿಯೇ ನಿಧನರಾದರು. ಅರವತ್ತನಾಲ್ಕು ವರ್ಷದ ಶಂಕರ ಭಟ್ಟರ ಬಹುಮುಖ ಸಾಧನೆಯ ಬದುಕು ಕೊನೆಗೊಂಡಿತು.

## 2

ಕಡೆಂಗೋಡ್ಲು ಶಂಕರಭಟ್ಟರ ಸಾಹಿತ್ಯ ಸೃಷ್ಟಿಯು ಸಾಹಿತ್ಯ ಪ್ರಕಾರದ ವಿವಿಧ ಮುಖಗಳಲ್ಲಿ ಕಾಣಿಸಿಕೊಂಡಿದೆ. 'ಘೋಷಯಾತ್ರೆ' (1920), 'ಗಾಂಧಿ ಸಂದೇಶ' (1920), 'ವಸ್ತ್ರಾಪಹರಣ'(1921), 'ಕಾಣಿಕೆ'(1927), 'ನಲ್ಮೆ' (1932), 'ಹಣ್ಣುಕಾಯಿ' (1933), 'ಪತ್ರಪುಷ್ಪ' (1965)- ಇವು ಕಡೆಂಗೋಡ್ಲು ಅವರ ಕಾವ್ಯ ಸಂಕಲನಗಳು. 'ಉಷೆ' (1924), 'ಹಿಡಂಬೆ' (1928), 'ವಿರಾಮ' (1935), 'ಯಜ್ಞಕುಂಡ'(1932), 'ಅಜಾತಶತ್ರು' (1927), 'ಗುರುದಕ್ಷಿಣೆ' (1953), 'ಮಹಾಯೋಗಿ' (1915)- ಇವು ಏಳು ಕಡೆಂಗೋಡ್ಲು ಅವರ ಪ್ರಕಟಿತ ನಾಟಕಗಳು. 'ಧೂಮಕೇತು' (1935), 'ದೇವತಾ ಮನುಷ್ಯ' (1947), 'ಲೋಕದ ಕಣ್ಣು' (1948)- ಇವು ಅವರ ಸಾಮಾಜಿಕ ಕಾದಂಬರಿಗಳು. 'ರಾಜನ ಬಳೆ', (1947), 'ಹಿಂದಿನ ಕಥೆಗಳು'(1914), 'ದುಡಿಯುವ ಮಕ್ಕಳು' , (1953)- ಇವು ಕಡೆಂಗೋಡ್ಲು ಅವರ ಸಣ್ಣ ಕಥೆಗಳ ಮೂರು ಸಂಕಲನಗಳು. 'ವಾಙ್ಮಯ ತಪಸ್ಸು' (1963) ಇದು ಅವರ ಸಾಹಿತ್ಯ ವಿಮರ್ಶೆ- ಉಪನ್ಯಾಸಗಳ ಸಂಕಲನ. 'ಸ್ವರಾಜ್ಯ ಯುದ್ಧ' (1920)- ಇದು ಮೋತಿಲಾಲ್ ನೆಹರೂ ಅವರ ಭಾಷಣದ ಅನುವಾದ. ಇದಲ್ಲದೆ ಅವರ ಅನೇಕ ಲಲಿತ ಪ್ರಬಂಧಗಳು, ಸಂಕೀರ್ಣ ಲೇಖನಗಳು, ಗ್ರಂಥ ವಿಮರ್ಶೆಗಳು, ಬಿಡಿ ಕವನಗಳು, ಬಿಡಿ ಕಥೆಗಳು, ಕಂಠೀರವ, ತರಂಗ (ಮಂಗಳೂರು ಮಿತ್ರ ಮಂಡಳಿ), ಉದಯ ಭಾರತ, ರಂಗಭೂಮಿ, ಯುಗಪುರುಷ, ಜ್ಯೋತಿ, ಕರ್ನಾಟಕ ನಂದಿನಿ, ಸಾಹಿತ್ಯ ಪರಿಷತ್ಪತ್ರಿಕೆ, ಕರ್ನಾಟಕ ಕೇಸರಿ, ನವಶಕ್ತಿ, ಜಯಕರ್ನಾಟಕ, ಸುವಾಸಿನಿ, ಪ್ರಭಾತ, ಕನ್ನಡ ನುಡಿ, ಕನ್ನಡ ಧುರೀಣ, ಪ್ರಜಾಮತ, ಭಕ್ತಿ ಸಂದೇಶ, ರಾಷ್ಟ್ರಬಂಧು, ರಾಷ್ಟ್ರಮತ-ಇಂತಹ ಪತ್ರಿಕೆಗಳಲ್ಲಿ, ಸಂಚಿಕೆಗಳಲ್ಲಿ ಪ್ರಕಟವಾಗಿವೆ. ಅವರ 'ಹೆಣ್ಣು' ಎಂಬ ಕವನ 'ನಡೆದು ಬಂದ ದಾರಿ' ಸಂಪುಟ ಒಂದರಲ್ಲಿ ಅಚ್ಚಾಗಿದೆ. ಪತ್ರಕರ್ತನಾಗಿ ರಾಷ್ಟ್ರಬಂಧು ಮತ್ತು ರಾಷ್ಟ್ರಮತ ಗಳಲ್ಲಿ ಅವರು ಬರೆದ ಲೇಖನಗಳು, ಅಂಕಣಗಳು ಬೇರೆಯೇ ಹೆಚ್ಚಿನ ಪ್ರಮಾಣದಲ್ಲಿ ಸಿಗುತ್ತವೆ. ಇಷ್ಟಲ್ಲದೆ ಕಡೆಂಗೋಡ್ಲು ಶಂಕರ ಭಟ್ಟರ ಅಪ್ರಕಟಿತ ಕಾದಂಬರಿಗಳು, ನಾಟಕಗಳು ಸಾಕಷ್ಟು ಸಂಖ್ಯೆಯಲ್ಲಿ ಉಪಲಬ್ಧವಾಗಿವೆ (ಈ ಅಪ್ರಕಟಿತ ಸಾಹಿತ್ಯ ಸಂಪುಟ ರೂಪದಲ್ಲಿ ಪ್ರಕಟಗೊಳ್ಳುವುದು ತೀರ ಅಗತ್ಯ.)

ಕಡೆಂಗೋಡ್ಲು ಅವರ ಕಾವ್ಯ ರಚನೆಯು ಅವರ ವಿದ್ಯಾರ್ಥಿ ದೆಸೆಯಲ್ಲಿಯೇ 'ಘೋಷಯಾತ್ರೆ' ಕೃತಿಯ ಮೂಲಕ ಸ್ಪಷ್ಟವಾಗಿ ಆರಂಭವಾಯಿತು. ಮೂರು ಸಂಧಿಗಳ ನೂರಮೂವತ್ತೈದು ಪದ್ಯಗಳ ಹರಹಿನಲ್ಲಿ ರೂಪುಗೊಂಡಿರುವ 'ಘೋಷಯಾತ್ರೆ' ಹೆಸರಿಗೆ ಮಹಾಭಾರತದಲ್ಲಿರುವ 'ಘೋಷಯಾತ್ರೆ'ಯ ಕಥೆಯನ್ನು ಒಳಗೊಂಡಿದೆ. ಆದರೆ ನಿಜವಾಗಿ ಪರಕೀಯರ ಹಿಡಿತಕ್ಕೆ ಒಳಗಾದ ಭಾರತೀಯ ರಾಜಕೀಯ ಸ್ಥಿತಿಯನ್ನು ಇದರಲ್ಲಿ ವ್ಯಂಜಿಸಲಾಗಿದೆ. ಇದರ ಮೊದಲನೆಯ ಸಂಧಿ ಚೌಪದಿಯಲ್ಲಿ; ಎರಡನೆಯದು ಕುಸುಮ ಷಟ್ಪದಿಯಲ್ಲಿ; ಮೂರನೆಯದು ಮಂದಾನಿಲ ರಗಳೆಯ ಛಂದಸ್ಸಿನಲ್ಲಿದೆ. ಈ ಖಂಡಕಾವ್ಯದಲ್ಲಿ ದುರ್ಯೋಧನನನ್ನು ಖಳನಾಯಕನನ್ನಾಗಿ ಚಿತ್ರಿಸಿ ಆತನ ನೀಚತನಕ್ಕೆ ತಕ್ಕ ಶಿಕ್ಷೆಯನ್ನು ಚಿತ್ರಾಂಗದನಿಂದ ಮಾಡಿಸುವ ವಿವರ ಬರುತ್ತದೆ. ಕಡೆಂಗೋಡ್ಲು ಅವರ 'ಗಾಂಧಿ ಸಂದೇಶ' ವಾರ್ಧಕ ಷಟ್ಪದಿಯಲ್ಲಿ ಬರೆದಿರುವ ಕಾವ್ಯ. ಇದರ ವಸ್ತು ಗಾಂಧೀಜಿಯವರು ಭಾರತದಲ್ಲಿ ಅಸಹಕಾರ ಚಳವಳಿಯನ್ನು ಆರಂಭಿಸಿದುದು. ಅದಕ್ಕಿಂತ ಮೊದಲಿನ ಭಾರತದ ಹೀನ ಸ್ಥಿತಿ, ಅಹಿಂಸೆಯ ಮಹತ್ವ, ಕಾಂಗ್ರೆಸ್ ಅಸಹಕಾರವನ್ನು ಅಂಗೀಕರಿಸಿದುದು, ಅಸಹಕಾರದ ಕಾರ್ಯ ವಿಧಾನಗಳು- ಇವುಗಳ ವರ್ಣನೆ ಇಲ್ಲಿ ದೊರೆಯುತ್ತದೆ. ಸಾಂಪ್ರದಾಯಿಕ ಕಾವ್ಯಗಳ ಮಾದರಿಯಲ್ಲಿ ಆರಂಭವಾಗುವ 'ಗಾಂಧಿ ಸಂದೇಶ' ಶ್ಲೇಷೆಯಿಂದ ಗಾಂಧಿ, ತಿಲಕ, ಲಾಲಾ ಲಜಪತರಾಯರನ್ನು ಸ್ಮರಿಸುತ್ತದೆ. ಗಾಂಧೀಜಿಯವರ ಅಸಹಕಾರ ಚಳವಳಿಯ ವಿವಿಧ ಹಂತಗಳ ನಿರೂಪಣೆ ಇದೆ. ಆ ಕಾಲದ ರಾಜಕೀಯ ವೈಷಮ್ಯ ಮತ್ತು ಘಟನೆಗಳ ದಾಖಲೆಯಿದೆ. ಶಬ್ದ ಪ್ರಾಸ, ಶ್ಲೇಷೆ, ಮಡಿ, ಅನುಪ್ರಾಸ ಇಂತಹ ಛಂದೋಲಕ್ಷಣಗಳು ಲಕ್ಷ್ಮೀಶನಂತಹ ಪ್ರಾಚೀನ ಕನ್ನಡ ಕವಿಗಳ ಪ್ರಭಾವಕ್ಕೆ ಗಾಂಧಿ ಸಂದೇಶದ ವಾರ್ಧಕ ಷಟ್ಪದಿಗಳು ಒಳಗಾಗಿರುವುದನ್ನು ತೋರಿಸುತ್ತದೆ. ಭಾರತದಲ್ಲಿ ಸ್ವಾತಂತ್ರ್ಯ ಹೋರಾಟದ ವಸ್ತುವುಳ್ಳ ಇನ್ನೊಂದು ಕವನ 'ವಸ್ತ್ರಾಪಹರಣ' ಬಾಲಕವಿ ಕಡೆಂಗೋಡ್ಲು ಅವರ ಮೂರನೆಯ ಈ ಕಾವ್ಯವಸ್ತು ಮತ್ತು ನಿರ್ವಹಣೆಯ ದೃಷ್ಟಿಯಿಂದ ಘೋಷಯಾತ್ರೆ ಮತ್ತು ಗಾಂಧಿ ಸಂದೇಶಗಳ ಮಾದರಿಯನ್ನೂ ನೆನಪಿಸುತ್ತದೆ. 'ವಸ್ತ್ರಾಪಹರಣ'ದಂತಹ ಮಹಾಭಾರತದ ಕಥಾವಸ್ತುವನ್ನು ಭಾರತ ಸ್ವಾತಂತ್ರ್ಯ ಸಂಗ್ರಾಮದ ಸಮಗ್ರ ಚಿತ್ರಣವನ್ನು ಕೊಡಲು ಬಳಸಿಕೊಳ್ಳಲಾಗಿದೆ. ಐವತ್ತನಾಲ್ಕು ಭಾಮಿನಿ ಷಟ್ಪದಿಗಳಿಂದ ಕೂಡಿದ ಈ ಖಂಡ ಕಾವ್ಯದಲ್ಲಿ ಭಾರತದ ಮಾನಿನಿಯ ವಸ್ತ್ರಾಪಹರಣವನ್ನು ಆಧುನಿಕಯುಗದ ಕಲಿಪುರುಷ ದುರ್ಯೋಧನನು ತನ್ನ

ಅಧಿಕಾರಿಗಳಾದ ದುಶ್ಶಾಸನರಿಂದ ಮಾಡಿಸಿದಾಗ ಮೋಹನದಾಸ (ಗಾಂಧೀಜಿಯ) ಚಕ್ರ(ಚರಕ)ದಿಂದ ಆಕೆಯ ಮಾನರಕ್ಷಣೆ ಆಯಿತು ಎನ್ನುವ ಕಥಾನಕವಿದೆ. ಶ್ಲೇಷೆ, ಸಮಾಸೋಕ್ತಿಯ ಚಮತ್ಕೃತಿ, ಶಬ್ದಜಾಲಗಳಿಂದ ರಾಷ್ಟ್ರ ನಾಯಕರ ಹೆಸರುಗಳನ್ನು ಪ್ರಕಟಿಸುವ ಚಮತ್ಕಾರ- ಈ ತಂತ್ರ ಕಾವ್ಯದುದ್ದಕ್ಕೂ ಕಾಣಿಸುತ್ತವೆ. ಕಡೆಂಗೋಡ್ಲು ಅವರ ಮೇಲೆ ವಿಶೇಷ ಪ್ರಭಾವ ಬೀರಿದ ಗಾಂಧೀ ತತ್ವ, ಸ್ವಾತಂತ್ರ್ಯ ಹೋರಾಟದ ಪ್ರೇರಣೆ- ಇವು ಅವರ ಆರಂಭದ ಮೂರು ಕಾವ್ಯಗಳ ಕಾವ್ಯಧರ್ಮವಾಗಿ ಕಾಣಿಸಿಕೊಂಡಿವೆ

ಕಡೆಂಗೋಡ್ಲು ಅವರ 'ಕಾಣಿಕೆ' ಕವನ ಸಂಕಲನ (127)ದಲ್ಲಿ ಒಟ್ಟು ಹದಿನೆಂಟು ಕವನಗಳಿವೆ. ನವೋದಯ ಕಾವ್ಯ ಪರಂಪರೆಯ ಭಾವಗೀತೆಗಳ ಮಾದರಿಯಲ್ಲಿ ಇವು ಪ್ರಕಟವಾಗಿವೆ. ಚೌಪದಿ, ಸೀಸಪದ್ಯ, ಉತ್ಸಾಹ ಪದ್ಯದಂತಹ ಪ್ರಾಚೀನ ಕನ್ನಡ ಛಂದೋರೂಪಗಳನ್ನು ಹೆಚ್ಚಾಗಿ ಬಳಸಿದ್ದರೂ, ಪ್ರಯೋಗಶೀಲ ಭಾಗಗಳು ಸಾಕಷ್ಟು ದೊರೆಯುತ್ತವೆ. ಸಂಕಲನದ ಶೀರ್ಷಿಕೆಯನ್ನು ಸೂಚಿಸುವ 'ಕಾಣಿಕೆ' ಕವನದಲ್ಲಿ ಕೀರ್ತಿಯ ಕಾಮನೆಯನ್ನು ಕವಿ ಕರ್ಮದ ಫಲದ ಮೇಲಿನ ಅನಾಸಕ್ತಿಯನ್ನು ಕವಿ ಸಾರುತ್ತಾರೆ. ಉದಾತ್ತವಾದ ಹಂಬಲ, ತನ್ನ ಪರಿಮಿತಿಯ ಕಲ್ಪನೆ, ಭಕ್ತಿಪೂರ್ವಕ ಸಮರ್ಪಣಾ ಭಾವ- ಈ ಮನೋಧರ್ಮವನ್ನು ಅನೇಕ ಕವನಗಳು ಕಾವ್ಯರೂಪಗಲ್ಲಿ ಹೇಳುತ್ತವೆ. ಸಾವಿನ ಬಗ್ಗೆ ಕವಿಗಿರುವ ನಿರ್ಲಿಪ್ತತೆಯನ್ನು ಸಾರುವ 'ವಿತಕಿನಿತುಪಚಾರ', ಜೀವನದ ನಶ್ವರತೆ ಯಲ್ಲಿಯೂ ಮಾನವೀಯತೆಯನ್ನು ದರ್ಶಿಸುವ 'ಭಿಕ್ಷುಕ', ಕವನಗಳು ಕವಿಯ ಮನೋಧರ್ಮವನ್ನು ತಿಳಿಸುತ್ತವೆ. ಸಾವು ಮತ್ತು ನೋವು ಕಡೆಂಗೋಡ್ಲು ಕವಿತೆಗಳಲ್ಲಿ ಮತ್ತೆ ಮತ್ತೆ ಕಾಣಿಸುತ್ತದೆ. ನಿರಾಶಾವಾದಕ್ಕೆ ಹೆಚ್ಚಿನ ಮಹತ್ವ ಅನೇಕ ಕಡೆ ದೊರೆತಿದೆ. ಕಡೆಂಗೋಡ್ಲು ತಮ್ಮ ಬದುಕಿನಲ್ಲಿ ಕಳೆದುಕೊಂಡ ಅನೇಕ ಬಂಧುಗಳ ನೆನಪು 'ಕಾಣಿಕೆ'ಯ ಕವನಗಳಲ್ಲಿ ಬಹುಪಾಲು ಸ್ಥಾಯಿಯಾಗಿ ನಿಂತಂತೆ ಭಾಸವಾಗುತ್ತವೆ 'ಮಸಣ' ಮತ್ತು 'ಹಳೆಯ ನೆನಪು'- ಎರಡು ದೀರ್ಘ ಶೋಕಗೀತೆಗಳು. ಮೂವತ್ತು ಪದ್ಯಗಳ 'ಮಸಣ' ಮತ್ತು ಹದಿನಾರು ಪದ್ಯಗಳ 'ಹಳೆಯ ನೆನಪು'- ಆಪ್ತರ ಸಾವಿನ ನೋವನ್ನು ಕಾವ್ಯದಲ್ಲಿ ಚಿತ್ರಿಸಿದ ದಾಖಲೆಗಳು. ಕಡೆಂಗೋಡ್ಲು ಅವರ ಉನ್ನತ ಕಾವ್ಯಾಭಿವ್ಯಕ್ತಿಯ ಸರಿಯಾದ ಮೊದಲ ಹೊಳಹು ಸಿಗುವುದು 'ಕಾಣಿಕೆ'ಯ ಕೆಲವು ಕವನಗಳಲ್ಲಿ.

ಕನ್ನಡ ನವೋದಯ ಕಾವ್ಯದ ಸಂದರ್ಭದಲ್ಲಿ ಮತ್ತು ಕನ್ನಡ ಕಾವ್ಯದ ಸಂದರ್ಭದಲ್ಲಿ ಮತ್ತು ಕನ್ನಡ ಕಾವ್ಯದ ಇತಿಹಾಸದಲ್ಲಿ ಕಡೆಂಗೋಡ್ಲು ಅವರ ಸ್ಥಾನವನ್ನು ಗುರುತಿಸಲು ಇರುವ ಬಹಳ ಮುಖ್ಯ ಕೃತಿಯೆಂದರೆ 'ನಲ್ಮೆ' ಕಾವ್ಯಸಂಕಲನ. ಹೊನ್ನಿಯ ಮದುವೆ, ಮಾದ್ರಿಯ ಚಿತೆ ಮತ್ತು ಮುರಲೀ ನಾದ- ಈ ಮೂರು ಕಥನಕವನಗಳು ಕಡೆಂಗೋಡ್ಲು ಕಾವ್ಯ ಪ್ರತಿಭೆಯ ಬಹು ಪ್ರಮುಖ ಅಭಿವ್ಯಕ್ತಿಗಳಾಗಿ ಉಳಿದುಕೊಂಡಿವೆ. ಕಥನ ಕವನವು ಕಡೆಂಗೋಡ್ಲು ಅವರ ಸಹಜ ಕಾವ್ಯಮಾಧ್ಯಮ ಎನ್ನುವುದಕ್ಕೆ ಈ ರಚನೆಗಳು ಉತ್ತಮ ನಿದರ್ಶನಗಳಾಗಿವೆ. ಈ ಮೂರು ಕಥನ ಕವನಗಳಲ್ಲಿ ಕಾವ್ಯಸಿದ್ಧಿಯ ನೆಲೆಯಲ್ಲಿ 'ಮಾದ್ರಿಯ ಚಿತೆ' ಮೊದಲನೆಯದು. 'ನಲ್ಮೆ'ಯೆಂಬ ಮೌಲ್ಯವು 'ಮಾದ್ರಿಯ ಚಿತೆ', 'ಹೊನ್ನಿಯ ಮದುವೆ' ಮತ್ತು 'ಮುರಲೀನಾದ' ಕಥನಕವನಗಳಲ್ಲಿ ಸಮಾನವಾದುದು ಮತ್ತು ಸ್ಥಾಯಿಯಾ ದುದು. ಆದರೆ ನಲ್ಮೆಯ ಒಳಹೊರಗು, ಸಂಕೀರ್ಣತೆ, ನಿರ್ವಹಣೆ ಮತ್ತು ಅದರ ಬೆನ್ನಟ್ಟಿ ಬರುವ ದುರಂತಗಳು ಇತರ ಸೃಜನಶೀಲ ನಿರ್ಮಿತಿಯಲ್ಲಿ 'ಮಾದ್ರಿಯ ಚಿತೆ' ಕನ್ನಡದ ಒಂದು ಶ್ರೇಷ್ಠ ಕಥನಕವನ. ಮಹಾಭಾರತದ ಪಾಂಡು -ಮಾದ್ರಿಯರ ಮಿಲನ ದುರಂತದ ಕಥಾವಸ್ತು ಕಡೆಂಗೋಡ್ಲು ಅವರ ವಿಸ್ತೃತ ಕ್ಯಾನ್‌ವಾಸಿನಲ್ಲಿ ತನ್ನೆಲ್ಲ ಸೂಕ್ಷ್ಮಗಳನ್ನು ಅಭಿವ್ಯಕ್ತಿಸುವ ಕೆಲಸವನ್ನು ಮಾಡಿದೆ. ಕಡೆಂಗೋಡ್ಲು ಅವರ ತಾತ್ವಿಕತೆಯು ಈ ಕೃತಿಯ ಪ್ರಾಸ್ತಾವಿಕದಲ್ಲಿ ನೇರವಾಗಿಯೂ ಕಥಾಭಾಗದವಲ್ಲಿ ಅನ್ವಯಿಕವಾಗಿಯೂ ಅಭಿವ್ಯಕ್ತಗೊಂಡಿದೆ. 'ಆರಾದರೇನವರ ಒಳಬಾಳು ಬೇರಿಹುದು, ಒರೆ ಬೇರೆ ಒಳಬಾಳು ಬೇರೆ; ಜೋಡಾಗಿ ಸೇರಿದರೆ ಒಂದಾಗಿ ತೋರುವುದು, ಅದರಂತೆ ಬಾಳುವೆಯ ಮೋರೆ' ಎನ್ನುವ ಸಾಲುಗಳು ಕಡೆಂಗೋಡ್ಲು ಕಾವ್ಯಮನೋಧರ್ಮದ ತಾತ್ವಿಕತೆಯ ನೆಲೆಯನ್ನು ಸೂಚಿಸುತ್ತದೆ. 'ಶಕ್ತಿ ಮತ್ತು ಬಳಕೆಯ ಬಗೆಗಿನ ಎಚ್ಚರವನ್ನು ಕವಿ ಧ್ವನಿಪೂರ್ಣವಾಗಿ ತಿಳಿಸುತ್ತಾರೆ- "ಅನುಭವವು ಸವಿಯಲ್ಲ- ಅದರ ನೆನಪೇ ಸವಿಯು, ಅದ ಕದ್ದು ಮೇಯದೆಯೆ ಮನವು? ಆಗ ಮೂಸೆಯ ಚಿನ್ನದಂತೆ ನೀರಪ್ಪುದೆದೆ ಕರಗುತಲ್ಲಲ್ಲಿ ಚೆಲ್ಲುವುದು". ಸಹಜ ಹಾಗೂ ಆಕರ್ಷಕವಾದ ಕನ್ನಡ ಕಾವ್ಯಶೈಲಿ, ಪುರಾತನ ಕಥೆಯೊಂದಕ್ಕೆ ಕವಿ ಕೊಡುವ ವಿಶಿಷ್ಟ ತಿರುವು, ಅದರಲ್ಲಿ ಅಡಕವಾಗಿರುವ ಕವಿದರ್ಶನ, ಸಾಲು ಸಾಲುಗಳಲ್ಲಿ ಕುತೂಹಲ, ಆತಂಕ ಭಾವಗಳನ್ನು ಉದ್ದೀಪಿಸುತ್ತಾ ಕೊಂಡೊಯ್ಯುವ ಕಾವ್ಯರಚನೆ- ಇಂತಹ ಕೆಲವು ವಿಶಿಷ್ಟಗುಣಗಳಿಂದಾಗಿ 'ಮಾದ್ರಿಯ ಚಿತೆ' ಎಲ್ಲಾ ಕಾಲಕ್ಕೂ ಸಂಗತವಾಗುವ ಒಂದು ಕಥನ ಕವನ. 'ಹೊನ್ನಿಯ ಮದುವೆ' ನಲ್ಮೆಯ ಇನ್ನೊಂದು ದುರಂತ ಮುಖವನ್ನು ಚಿತ್ರಿಸುವ ಕಥನ ಕವನ. ಚೆನ್ನ-ಹೊನ್ನಿಯರ ಬಿರಿಮುಗುಳ ಪ್ರೇಮ ಮತ್ತು ಅದಕ್ಕೆ ಒದಗಿದ ಅಡ್ಡಿಆತಂಕಗಳು, ಪರಿಣಾಮದ ದುರಂತ-ಇದು 'ಹೊನ್ನಿಯ ಮದುವೆ'ಯ ಮುಖ್ಯ ತಂತು. 'ಮಾದ್ರಿಯ ಚಿತೆ'ಯಂತೆಯೇ 'ಹೊನ್ನಿಯ ಮದುವೆ' ಯಲ್ಲಿಯೂ ಮುಂದೆ ಹೆಜ್ಜೆಯಿಟ್ಟು ಕಥೆಯ ಗತಿಯನ್ನು ಮುಂದುವರಿಸುವ ಮತ್ತು ನಿರ್ಧರಿಸುವ ಕೆಲಸವನ್ನು ಹೆಣ್ಣು ಮಾಡುತ್ತಾಳೆ (ಹೊನ್ನಿ). ಒಲಿದವರು ಒಂದಾಗಲು ಸಾಧ್ಯವಾಗದೆ ದುರಂತ ಮರಣದಲ್ಲಿ ಒಂದಾಗುವುದು- ಈ ಅರ್ಥದಲ್ಲಿ ಪಾಂಡು-ಮಾದ್ರಿ ಮತ್ತು ಚೆನ್ನ-ಹೊನ್ನಿ ಈ ಸಮೀಕರಣದಲ್ಲಿ ಸಂವಾದಿತನ ಇದ್ದರೂ 'ಹೊನ್ನಿಯ ಮದುವೆ' ಕೃತಿಯ ವಿಶಿಷ್ಟತೆಯಿರುವುದು ಅದರ ಸ್ಥಳೀಯತೆ, ಲೌಕಿಕತೆ ಮತ್ತು ಸಹಜತೆಗಳಲ್ಲಿ. "ಪಡುವಣ ಕಡಲಿನ ತೆಂಗಿನ ಮಡಲಿನ ಮರೆಯಲಿ ಮೆರೆವುದು ನಾಡೊಂದು" ಎಂದು ಮೊದಲಾಗುವ ಈ ಕಥನಕವನ ಪಡುವಣ ತೀರದ ಕನ್ನಡ ನಾಡಿನ ಕಾರ್ಗಾಲದ ವೈಭವದ ವರ್ಣನೆಯ ಸಹಿತ ಜನಪದ ಪರಿಸರವೊಂದರ ಸಹಜತೆಯನ್ನು ದೇಸಿ ಕನ್ನಡದಲ್ಲಿ ಹೆಚ್ಚು ಸಹಜವಾಗಿ ಮತ್ತು ಪರಿಣಾಮಕಾರಿಯಾಗಿ ಕೊಡುತ್ತದೆ. ಜನಪದ ಹೆಣ್ಣೊಬ್ಬಳ ಸಹಜ ಸಂಕೋಚ ಮತ್ತು ಅಕೃತಿಮ-ಪ್ರೇಮ ಇವು ಜೊತೆಗೂಡಿ ವಾಸ್ತವಿಕ ಬದುಕಿನೊಡನೆ ಹೊಂದಾಣಿಕೆ ಆಗಲು ಅಸಾಧ್ಯವಾಗಿ ಹೇಗೆ ದುರಂತದ ನಿರ್ಮಾಣವಾಗುತ್ತದೆ ಎನ್ನುವುದನ್ನು ಈ ಕಥಾನಕ ತಿಳಿಸುತ್ತದೆ. ಪ್ರೀತಿಸಿದ ಎರಡು ಮನಸ್ಸುಗಳಲ್ಲಿ ಯಾವುದನ್ನೂ ನೋಯಿಸಲು ಸಾಧ್ಯವಾಗದ ಒಂದು ವ್ಯಕ್ತಿತ್ವ ತನ್ನ ದ್ವಂದ್ವದಿಂದ ಬಿಡುಗಡೆ ಹೊಂದಲು ಆತ್ಮಹತ್ಯೆಯಂತಹ ದುರಂತವನ್ನು ಆಹ್ವಾನಿಸುವ ಅನಿವಾರ್ಯತೆಯ ಹಿಂದಿನ ಪರಿಸರವನ್ನು 'ಹೊನ್ನಿಯ ಮದುವೆ' ತೋರಿಸುತ್ತದೆ. 'ಮುರಲೀನಾದ' ಕಥನಕವನವು 'ನಲ್ಮೆ'ಯ ನಿರ್ವಹಣೆಯನ್ನು ಹೆಚ್ಚು ಗಂಭೀರವಾಗಿ ಗೌರವಗರ್ಭಿತವಾಗಿ ಅಂತರಾತ್ಮಗೀತದ ಮಾದರಿಯಲ್ಲಿ ಮಾಡುತ್ತದೆ. ಈ ಕವನವು ಗೋಲ್ಡ್‌ಸ್ಮಿತ್ ಕವಿಯ 'ಹರ್ಮಿಟ್' ಕವನದ ಅನುವಾದದಂತಿದೆ ಎಂಬ ಅಭಿಪ್ರಾಯವಿದೆ. ಗಂಡು-ಹೆಣ್ಣಿನ ವಿರಹ, ಆದರ್ಶ ಪ್ರೇಮದ ಸ್ವರೂಪ ಮತ್ತು ಸಾಧನೆ ಇವುಗಳನ್ನು ತಾತ್ವಿಕವಾಗಿ ಚರ್ಚಿಸಲಾಗಿದೆ.

ಕಡೆಂಗೋಡ್ಲು ಅವರ 'ಹಣ್ಣುಕಾಯಿ' ಸಂಕಲನದಲ್ಲಿ ಇಪ್ಪತ್ತೊಂದು ಬಿಡಿ ಕವನಗಳಿವೆ. ದೇಶಪ್ರೇಮ, ಗಂಡುಹೆಣ್ಣಿನ ನಲ್ಮೆ, ಬದುಕಿನ ನೋವುಗಳು,

ಸೌಂದರ್ಯದ ಶೋಧ – ಇವು ಇಲ್ಲಿನ ಕವನಗಳ ವಸ್ತು. ಕಡೆಂಗೋಡ್ಲು ಅವರನ್ನು ಸಾಕಷ್ಟು ಆವರಿಸಿದ ಗಂಡು-ಹೆಣ್ಣಿನ ಆಕರ್ಷಣೆಯ ಬಗೆಗಳ ಚಿತ್ರಣ ಕೆಲವು ಕವನಗಳಲ್ಲಿ ದೊರೆಯುತ್ತದೆ. 'ಪಂಡಿತರ ಪಯಣ'ದಂತಹ ವಿಡಂಬನ ಕವನದಲ್ಲಿ ಕರ್ಮರಹಿತ ಶುಷ್ಕ ಜ್ಞಾನವನ್ನು, ಮಡಿವಂತಿಕೆಯನ್ನು ಕವಿ ವಿಡಂಬಿಸುತ್ತಾರೆ. ಅವರ ಸಾಮಾಜಿಕ ಪ್ರಜ್ಞೆಯನ್ನು ಈ ಕವನ ಪ್ರಕಟಿಸುತ್ತದೆ. 'ಇಹಪರ', 'ತೊಟ್ಟಿಲು', 'ಸಸಿ'- ಈ ಕವನಗಳಲ್ಲಿ ಬದುಕಿನ ವಾಸ್ತವಿಕತೆ, ಬದುಕಿನ ವ್ಯರ್ಥಪರದಾಟ, ಬದುಕಿನ ನಿರಂತರ ಪ್ರವಾಹ- ಈ ರೀತಿ ಬದುಕಿನ ಒಳಹೊಕ್ಕು ಅನ್ವೇಷಿಸುವ ತಾತ್ವಿಕತೆ ಪ್ರಧಾನವಾಗಿದೆ.

'ಪತ್ರಪುಷ್ಪ' ಕವನ ಸಂಕಲನದಲ್ಲಿ ಒಳಗೊಂಡಿರುವ ಇಪ್ಪತ್ತ ಮೂರು ಕವನಗಳು ಸುಮಾರು ಮೂವತ್ತೈದು ವರ್ಷಗಳ ಅವಧಿಯಲ್ಲಿ ಕವಿ ಕಡೆಂಗೋಡ್ಲು ಬರೆದ ರಚನೆಗಳು. 1929ರಿಂದ 1963ರ ಕಾಲಾವಧಿಯಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಕವನಗಳು ಇಲ್ಲಿ ಒಟ್ಟು ಸೇರಿರುವ ಕಾರಣ ಕಡೆಂಗೋಡ್ಲು ಕಾವ್ಯವ್ಯಕ್ತಿತ್ವದ ಭಿನ್ನ ಮತ್ತು ಸಮ್ಮಿಶ್ರ ರೂಪಗಳು ಇಲ್ಲಿ ಗೋಚರಿಸುತ್ತವೆ. ತೀರ ಸಾಧಾರಣ ಸರಳ ಕವನಗಳಿರುವಂತೆಯೇ ಪಾಂಡಿತ್ಯಪೂರ್ಣ ರಚನೆಗಳು ಕಾವ್ಯತ್ವದ ಸಹಜ ರಚನೆಗಳು ಇಲ್ಲಿ ದೊರೆಯುತ್ತವೆ. ನವೋದಯ ಕಾವ್ಯ ಸಂದರ್ಭದ ಛಂದೋವೈವಿಧ್ಯ, ಭಾಷಾವೈವಿಧ್ಯ ಮತ್ತು ವಸ್ತುವೈವಿಧ್ಯದ ಎಲ್ಲಾ ಮಾದರಿಗಳು ಇಲ್ಲಿ ಸಿಗುತ್ತವೆ. ದೇಶಪ್ರೇಮ, ಪ್ರಕೃತಿ, ವಿಜ್ಞಾನ ಇಂತಹ ವಿಷಯಗಳನ್ನು ಕಾವ್ಯವನ್ನಾಗಿಸಿದಂತೆಯೇ, ಮಹಾಪುರುಷರಾದ ವಿದ್ಯಾರಣ್ಯ, ಗಾಂಧೀಜಿ ಮತ್ತು ವಿವೇಕಾನಂದರನ್ನು ಕುರಿತ ವ್ಯಕ್ತಿಚಿತ್ರರೂಪದ ಕವನಗಳು ಇಲ್ಲಿವೆ.

ಕಡೆಂಗೋಡ್ಲು ಅವರ 'ಹೆಣ್ಣು' ಎಂಬ ಕಥನಕವನದಲ್ಲಿ ಹೆಣ್ಣಿನ ಬದುಕಿನ ವಿವಿಧ ಹಂತಗಳನ್ನು, ವೈಷಮ್ಯಗಳನ್ನು, ದುರಂತಗಳನ್ನು ಕವಿ ಚಿತ್ರಿಸಿದ್ದಾರೆ. ಮಾರ ಮತ್ತು ತಿಮ್ಮಗೌಡನಂತಹ ವಿರುದ್ಧ ವ್ಯಕ್ತಿತ್ವಗಳ ನಡುವೆ ಸಾವನ್ನು ಮೀರಿ ನಿಲ್ಲುವ ಹೆಣ್ಣೊಬ್ಬಳ ಚಿತ್ರವನ್ನು, ಅದರ ವಿವಿಧ ಎಳೆಗಳನ್ನು ಕವಿ ಕಂಡರಿಸಿದ್ದಾರೆ. ಕ್ಷಾಮ ಮತ್ತು ಎರಡನೆಯ ಮಹಾಯುದ್ಧದ ದುರಂತ ಪರಿಣಾಮಗಳ ಹಿನ್ನೆಲೆಯಲ್ಲಿ ಕಥನಕವನದ ಒಟ್ಟು ದುರಂತ ಹೆಚ್ಚು ಅರ್ಥಪೂರ್ಣವಾಗುತ್ತದೆ.

ಕಡೆಂಗೋಡ್ಲು ಅವರ 'ಉಷೆ' ಪೌರಾಣಿಕ ಕಥಾವಸ್ತುವುಳ್ಳ ಒಂದು ನಾಟಕ. ಭಾಗವತದಲ್ಲಿರುವ 'ಉಷಾ-ಅನಿರುದ್ಧ'ರ ಪ್ರಣಯ ಕಥೆಯನ್ನು ನಾಟಕವನ್ನಾಗಿ ಪರಿವರ್ತಿಸಲಾಗಿದೆ. 'ಉಷಾ' ನಾಟಕದ ಭಾಷೆ ಗಂಭೀರವಾದುದು. ನಾಟಕದ ಸಂವಿಧಾನ ಮತ್ತು ವಸ್ತುರಚನೆ ಹೆಚ್ಚು ಸಮರ್ಪಕವಾಗಿಲ್ಲ. 'ಹಿಡಿಂಬೆ' ನಾಟಕವು ಐದು ಅಂಕಗಳ ಗದ್ಯನಾಟಕ. ಮಹಾಭಾರತದ ಹಿಡಿಂಬೆಯ ಪಾತ್ರವನ್ನು ಈ ನಾಟಕದಲ್ಲಿ ಕೇಂದ್ರವನ್ನಾಗಿ ಇರಿಸಿಕೊಳ್ಳಲಾಗಿದೆ. ಯಕ್ಷಗಾನದ ಪ್ರಭಾವ ಈ ನಾಟಕದ ಮೇಲೆ ಗಾಢವಾಗಿದೆ. ಸಂಭಾಷಣೆಗಳು ದೀರ್ಘವಾಗಿವೆ. 'ಗುರುದಕ್ಷಿಣೆ' ಒಂದು ಕಿರುನಾಟಕ. ಇದರ ಕಥಾವಸ್ತುವೂ ಮಹಾಭಾರತದ್ದು. ದ್ರೋಣನು ತನ್ನ ಶಿಷ್ಯ ಅರ್ಜುನನಿಂದ ದ್ರುಪದನನ್ನು ಕಟ್ಟಿಸಿ ತನ್ನ ಕಾಲಬುಡಕ್ಕೆ ತರಿಸುವುದು ಇಲ್ಲಿನ ಕಥಾವಸ್ತು. ಮೊದಲನೆಯ ದೃಶ್ಯದಲ್ಲಿ ದ್ರೋಣ-ದ್ರುಪದರ ಸಂಭಾಷಣೆ, ಎರಡನೆಯದರಲ್ಲಿ ಪ್ರಧಾನವಾಗಿ ದ್ರೋಣಾರ್ಜುನರ ಮಾತುಕತೆ, ಮೂರನೆಯದರಲ್ಲಿ ದ್ರೋಣ–ದ್ರುಪದರ ಪುನರ್ಮಿಲನ ಮತ್ತು ಸಲ್ಲಾಪ ಇಲ್ಲಿ ಚಿತ್ರಿತವಾಗಿದೆ. ಸರಳವಾದ ಸಂವಿಧಾನದಲ್ಲಿ ರೂಪಿತವಾದ ನಾಟಕವು ದ್ರೋಣ ದ್ರುಪದರ ಸಂಬಂಧದ ತಾತ್ವಿಕತೆಯನ್ನು ಹೆಚ್ಚು ಸೂಕ್ಷ್ಮವಾಗಿ ಚರ್ಚಿಸಲು ಹೋಗಿಲ್ಲ. 'ಯಜ್ಞಕುಂಡ' ಕಡೆಂಗೋಡ್ಲು ಅವರ ಒಂದು ಐತಿಹಾಸಿಕ ನಾಟಕ. ಏಳು ಅಂಕಗಳ ಇಪ್ಪತ್ತೇಳು ದೃಶ್ಯಗಳ ಹರಹಿನ ಈ ನಾಟಕದಲ್ಲಿ ಆಹೋಮವಿನ ರಾಜ ಪರ್ವತಸಿಂಗನ ಮಗಳು ಲೀಲಾವತಿಯ ಮೇಲೆ ಮಹಮ್ಮದ್ ಷಹನು ಬೀರಿದ ಕಾಮಜ್ವಾಲೆಗೆ ಆಹೋಮ ನಗರವೇ ಯಜ್ಞಕುಂಡವಾಗಿ, ಕೊನೆಗೆ ಲೀಲಾವತಿಯೇ ಷಹನನ್ನು ಆ ಯಜ್ಞಕ್ಕೆ ಪೂರ್ಣಾಹುತಿ ಕೊಟ್ಟು ತಾನೂ ಹುತಾತ್ಮಳಾಗುವ ಕಥೆ ಈ ನಾಟಕದ ವಸ್ತು. ದೀರ್ಘವಾದ ಸಂಭಾಷಣೆಗಳು, ಶಾಸ್ತ್ರೀಯ ವಿಧಾನದ ನಾಟಕ ಸಂವಿಧಾನ, ಇಂತಹ ದೃಷ್ಟಿಯಿಂದ ನಾಟಕ ಹೆಚ್ಚು ಬಿಗಿಯಾಗಿದೆ, ಆದರೆ ವಿಶೇಷ ಪರಿಣಾಮಕಾರಿಯಾಗಿಲ್ಲ.

'ಮಹಾಯೋಗಿ' ಒಂದು ಪೌರಾಣಿಕ ಏಕಾಂಕ ನಾಟಕ. ಮಹಾಭಾರತದ ಆದಿಪರ್ವ-ಸಂಭವಪರ್ವದಲ್ಲಿನ ಮಾಂಡವ್ಯನ ಕಥಾನಕ ವನ್ನು ಇಲ್ಲಿ ನಾಟಕವನ್ನಾಗಿಸಲಾಗಿದೆ. ಇದರಲ್ಲಿ ಧರ್ಮದ ಸೂಕ್ಷ್ಮಗಳ ಜಿಜ್ಞಾಸೆ, ಹಿಂಸೆಯ ಸಂಕೀರ್ಣತೆಯ ವಿವೇಚನೆಯನ್ನು ಮಾಡಲಾಗಿದೆ. ದಾರ್ಶನಿಕತೆಯೇ ಪ್ರಧಾನವಾಗಿರುವ ನಾಟಕ ಇದು.

'ವಿರಾಮ' ಒಂದು ಏಕಾಂಕ ನಾಟಕ. ಇವರ ವಸ್ತು ಸಾಮಾಜಿಕ ವಾದುದು. ಹಾಸ್ಯಮಯವಾಗಿ ಸಾಗುವ ನಾಟಕವು ಕೊನೆಯಲ್ಲಿ ವಿರಾಮದ ಭಿನ್ನ ಅರ್ಥಗಳನ್ನು ಬಿಚ್ಚಿಕೊಳ್ಳುತ್ತದೆ. ರಾಮಕೃಷ್ಣಯ್ಯ, ಸೀತಮ್ಮ, ದಿನಕರ - ಒಂದು ಕುಟುಂಬದ ಮೂವರು ಸದಸ್ಯರು - ವಿರಾಮ ಹೊಂದಿದ ಶಿರಸ್ತೆದಾರ, ಅವನ ಹೆಂಡತಿ, ಮಗ - ಇವರ ಸುತ್ತ ಈ ನಾಟಕ ಹೆಣೆದುಕೊಂಡಿದೆ.

'ಅಜಾತಶತ್ರು' ಒಂದು ಪೌರಾಣಿಕ ಏಕಾಂಕ ನಾಟಕ. ಅಜಾತ ಶತ್ರುವಾದ ಯುಧಿಷ್ಠಿರನು ಕೃಷ್ಣನ ಪ್ರೇರಣೆಯಿಂದ ಕರ್ತವ್ಯಮಗ್ನನಾಗುವಂತೆ ಮಾಡುವ ದೃಶ್ಯವುಳ್ಳದ್ದು ಈ ಕೃತಿ. ಕೃಷ್ಣ ಮತ್ತು ಯುದಿಷ್ಠಿರ - ಈ ಎರಡೇ ಪಾತ್ರಗಳ ಮೂಲಕ ಈ ಕಿರುನಾಟಕ ರಚನೆಯಾಗಿದೆ.

ಕಡೆಂಗೋಡ್ಲು ಅವರ ಕಾದಂಬರಿಗಳು ಮೂರು - 'ಧೂಮಕೇತು', 'ದೇವತಾ ಮನುಷ್ಯ' ಮತ್ತು 'ಲೋಕದ ಕಣ್ಣು' 136-48ರ ಅವಧಿಯಲ್ಲಿ ಈ ಮೂರು ಕಾದಂಬರಿಗಳು ಪ್ರಕಟವಾಗಿವೆ. ಈ ಅವಧಿಯಲ್ಲಿ ಕನ್ನಡದಲ್ಲಿ ಬಂದಿರುವ ಕೆಲವು ಪ್ರಮುಖ ಕಾದಂಬರಿಗಳಿಗೆ ಹೋಲಿಸಿದಾಗ ಕಡೆಂಗೋಡ್ಲು ಅವರ ಕಾದಂಬರಿಗಳ ಸಾಧನೆ ವಿಶಿಷ್ಟವಾದದ್ದೆಂದು ಅನ್ನಿಸುವುದಿಲ್ಲ. ವಸ್ತು ಧೋರಣೆಗಳ ದೃಷ್ಟಿಯಿಂದ ಈ ಕಾದಂಬರಿಗಳು ಸಾಮಾನ್ಯದರ್ಜೆಯವು. ಆದರೆ ಸಂವಿಧಾನ, ಭಾಷೆ ಮತ್ತು ತಂತ್ರದ ದೃಷ್ಟಿಯಿಂದ ಈ ಕಾದಂಬರಿಗಳು ಹೆಚ್ಚು ಗಮನ ಸೆಳೆಯುತ್ತವೆ. ದಕ್ಷಿಣ ಕನ್ನಡದ ಕನ್ನಡ ದೇಸಿ ಪದಗಳನ್ನು ಸಂಸ್ಕೃತ ಪದಗಳೊಡನೆ ಉಚಿತವಾಗಿ ಬಳಸಿದ ಗದ್ಯ ಈ ಕಾದಂಬರಿಗಳಲ್ಲಿ ಸಿಗುತ್ತದೆ. ಆದರೆ ಹಳಗನ್ನಡ ಗದ್ಯದ ಬಿಗಿ ಅನೇಕ ಬಾರಿ ಇದನ್ನು ಕೃತಕವನ್ನಾಗಿಸಿದ ಸಂದರ್ಭಗಳೂ ಇವೆ. ಈ ದೃಷ್ಟಿಯಲ್ಲಿ 'ದೇವತಾ ಮನುಷ್ಯ' ಹೆಚ್ಚು ಯಶಸ್ವಿಯಾದ ಕಾದಂಬರಿ. 'ಧೂಮಕೇತು' ಶ್ರೀಧರನೆಂಬ ಪಾತ್ರದ ಸುತ್ತ ಬೆಳೆಯುತ್ತದೆ. ನೈತಿಕ ಉದ್ದೇಶವೊಂದು ಕಾದಂಬರಿಯ ಹಿನ್ನೆಲೆಯಲ್ಲಿದೆ. ರಾಮಾಯಣದ ಕಥೆಯನ್ನು ಲೌಕಿಕ ರೂಪದಲ್ಲಿ ಹೇಳಿದಂತೆ ಇದರ ಕಥಾವಸ್ತು ಕಾಣಿಸುತ್ತದೆ. ಸೀತೆ, ಮಂಡೋದರಿ, ರಾವಣರಂತಹ ರಾಮಾಯಣದ ಪಾತ್ರಗಳ ಹೋಲಿಕೆ ಈ ಅಭಿಪ್ರಾಯವನ್ನು ಸಮರ್ಥಿಸುತ್ತವೆ. ಕಥೆಯನ್ನು ರೋಮಾಂಚಕವಾಗಿ, ಕುತೂಹಲಕಾರಿಯಾಗಿ ಹೇಳಿಕೊಂಡು ಹೋಗುವ ರಚನೆಯ ಬಿಗಿಯಿಂದಾಗಿ ಮಾತ್ರ ಈ ಕಾದಂಬರಿ ಆಸಕ್ತಿದಾಯಕವಾಗಿದೆ. 'ದೇವತಾ ಮನುಷ್ಯ' ಕಾದಂಬರಿಯ ವಸ್ತು ಹಣ ಮತ್ತು ಸಾಮಾಜಿಕ ಸಂಬಂಧಗಳ

ನಡುವೆ ಇರುವ ನಂಟು. ಹಣ ವ್ಯಕ್ತಿಗಳ ನಿರ್ಧಾರವನ್ನೂ, ನಡವಳಿಕೆಯನ್ನೂ ನಿರ್ಧರಿಸುತ್ತದೆ. ಮೊದಲು ಬಡವ'ನಾಗಿದ್ದ ಧನಸೆಟ್ಟಿ ವ್ಯಾಪಾರದಿಂದ, ಕುಟಿಲ ತಂತ್ರಗಳಿಂದ ಶ್ರೀಮಂತ'ನಾಗುತ್ತಾನೆ. ಶ್ರೀಮಂತರಾದ ರಾಯರು ಈ ದುಡ್ಡಿನ ಆಟದಲ್ಲಿ ಬದುಕಲು ಸಾಧ್ಯವಾಗದೆ ನಿಧಾನವಾಗಿ ಸೋಲುತ್ತಾ ಬರುತ್ತಾರೆ. ಈ ಶತಮಾನದ ಇಪ್ಪತ್ತರ ದಶಕದಲ್ಲಿ ಹಳ್ಳಿಗಳಲ್ಲಿ ತನ್ನ ಜಾಲವನ್ನು ಬೀಸಿದ ವ್ಯಾಪಾರೀವರ್ಗ ಮತ್ತು ಆ ಮೂಲಕದ ಸಾಮಾಜಿಕ ಬದಲಾವಣೆಗಳನ್ನು ಈ ಕಾದಂಬರಿ ಗುರುತಿಸುತ್ತದೆ. ಬದುಕಿನ ಮೌಲ್ಯಗಳ ವಿಶ್ಲೇಷಣೆ ಮಾಡುವ ದೃಷ್ಟಿಯಿಂದ ಕಡೆಂಗೋಡ್ಲು ಕಾದಂಬರಿಗಳಲ್ಲಿ ಸರಳವಾದ ಅರ್ಥದಲ್ಲಾದರೂ ದೇವತಾ ಮನುಷ್ಯ ಹೆಚ್ಚು ಮುಖ್ಯವಾದ ಕಾದಂಬರಿ. ಕಾದಂಬರಿಯ ರೂಪವಿನ್ಯಾಸದ ದೃಷ್ಟಿಯಿಂದ ಈ ಕಾದಂಬರಿ ಹೆಚ್ಚು ಯಶಸ್ವಿಯಾಗಿದೆ. ಆಸ್ತಿ-ಹಣದಿಂದಾಗುವ ಕೆಡುಕನ್ನು ಚಿತ್ರಿಸುವ ಈ ಕಾದಂಬರಿ ಕೆಲವು ಸರಳ ಸಮೀಕರಣದಲ್ಲಿ ನಿರ್ವಹಣೆ ಮಾಡಿದರೂ ಸಮಸ್ಯೆಗಳ ಎಳೆಗಳನ್ನು ಸ್ವಲ್ಪ ಪ್ರಮಾಣದಲ್ಲಾದರೂ ತೋರಿಸುವ ಪ್ರಯತ್ನ ಮಾಡಿದೆ. ಕಾದಂಬರಿಯ ಪ್ರಧಾನ ಕಾಳಜಿ ಕೆಡಕಿನಿಂದುಂಟಾಗುವ ದುರಂತದ ಚಿತ್ರಣವಾದ್ದರಿಂದ ಕಾದಂಬರಿಯ ಮುಖ್ಯ ಗಮನ ಧನಸೆಟ್ಟಿ ಒಡ್ಡುವ ತಂತ್ರಗಳ ಜಾಲದ ಮೇಲೆಯೇ ಕೇಂದ್ರೀಕೃತವಾಗಿದೆ. ಆದ್ದರಿಂದ ಕಾದಂಬರಿ ನೇರ ಮತ್ತು ಸರಳವಾಗಿದೆ. 'ಲೋಕದ ಕಣ್ಣು' ಕಾದಂಬರಿ ಪತ್ರಿಕೋದ್ಯಮದ ವೃತ್ತಿಯ ನೆಲೆ ಬೆಲೆಗಳಿಗೆ ಸಂಬಂಧಿಸಿದ್ದು. ಪ್ರಾಮಾಣಿಕ ಪತ್ರಿಕೋದ್ಯಮದ ಹಂಬಲದಿಂದ ಸಂಗ್ರಾಮ ಪತ್ರಿಕೆ ನಡೆಸುವ ಪ್ರಭಾಕರ, ಅವನ ಸಂಗಾತಿಯಾಗಿ ಅವನ ಕೆಲಸದಲ್ಲಿ ಭಾಗಿಯಾಗಿ ದುಡಿಯುವ ಹೆಂಡತಿ ಕಾಮಾಕ್ಷಿ, ತನ್ನ ಲೇಖನಗಳ ಮೂಲಕ ಪತ್ರಿಕೆಗಳಿಗೆ ಜೀವ ತುಂಬುತ್ತಿದ್ದ ಶ್ಯಾಮಣ್ಣ ಹೀಗೆ ಒಂದು ಕುಟುಂಬದಂತೆ ಬದುಕುತ್ತಿದ್ದ ಮೂವರು ವ್ಯಕ್ತಿಗಳ ಸುತ್ತ ಈ ಕಾದಂಬರಿ ಬೆಳೆಯುತ್ತದೆ. ಧೂಮಕೇತುವಿನಂತೆಯೇ 'ಲೋಕದ ಕಣ್ಣು' ಕಾದಂಬರಿಯಲ್ಲಿ ನೋವಿಗೆ ಕಾರಣವಾಗಿರುವುದು ಕಾಮ. ಅದಕ್ಕಾಗಿಯೇ ಕಾದಂಬರಿಯ ಕೇಂದ್ರ ಪಾತ್ರದ ಹೆಸರನ್ನು ಧ್ವನಿಪೂರ್ಣವಾಗಿ 'ಕಾಮಾಕ್ಷಿ' ಎಂದು ಇಟ್ಟಿರಬೇಕು ! ಕಾಮಾಕ್ಷಿಯಿಂದ ಪ್ರೇಮಭಂಗಿತನಾದ ನಾಗೇಶನು ಪ್ರತೀಕಾರಕ್ಕಾಗಿ ಹೂಡುವ ತಂತ್ರಗಳೇ ಕಾದಂಬರಿಯ ಬಹುಭಾಗವನ್ನು ತುಂಬಿದೆ. ಗಂಡ-ಹೆಂಡಿರ ನಡುವಣ ಬಿರುಕನ್ನು ಸಾಕಷ್ಟು ಪರಿಣಾಮಕಾರಿ ಯಾಗಿ ಕಾದಂಬರಿ ಚಿತ್ರಿಸುತ್ತದೆ. ಪ್ರಭಾಕರ-ಕಾಮಾಕ್ಷಿಯರ ದುರಂತದ ಚಿತ್ರಣ ಸೂತ್ರಬದ್ಧ ರಚನೆಯ ರೀತಿಯಲ್ಲಿದೆ. ಭಾಷೆ ಶೈಲಿ ಹೆಚ್ಚು ಪರಿಣಾಮಕಾರಿಯಾಗಿಲ್ಲ. ನೈತಿಕತೆಯ ತಿರುಳನ್ನು ಈ ಕಾದಂಬರಿ ಒಳಗೊಂಡಿದೆ. ಈ ಮಾತು ಕಡೆಂಗೋಡ್ಲು ಅವರ ಉಳಿದ ಕಾದಂಬರಿ ಗಳಿಗೂ ಅನ್ವಯವಾಗುತ್ತದೆ.

ಕಡೆಂಗೋಡ್ಲು ಅವರ ಕಥಾ ಸಂಕಲನಗಳು ಮೂರು - 'ಹಿಂದಿನ ಕಥೆಗಳು', 'ಗಾಜಿನ ಬಳೆ' ಮತ್ತು 'ದುಡಿಯುವ ಮಕ್ಕಳು'. ಆರು ಕಥೆಗಳ ಸಂಕಲನ 'ಹಿಂದಿನ ಕಥೆಗಳು' ರಚನೆಗಳು ಸರಳ ಮತ್ತು ಸ್ಪಷ್ಟ. 'ದೊಡ್ಡಣ್ಣ' ಅತಿಭಾವುಕತೆ ಉಳ್ಳ ಕಥಾವಸ್ತುವುಳ್ಳದ್ದು. ಮಕ್ಕಳ ಮನಸ್ಸಿನ ರೀತಿಗಳನ್ನು ಅವಲೋಕಿಸುವ, ನೀತಿಬೋಧಕ ಉದ್ದೇಶವುಳ್ಳ ಕಥೆ 'ದೊಡ್ಡಣ್ಣ'. 'ಅದ್ದಿಟ್ಟು' ಗಂಡ ಮತ್ತು ಅತ್ತೆಯ ಅನಾದರಕ್ಕೆ ಬಲಿಯಾಗುವ ಅಸಹಾಯಕ ಹೆಣ್ಣಿನ ಮೂಕಸಂಕಟವನ್ನು ಚಿತ್ರಿಸುವ ಕಥೆ. ಸಾಂಕೇತಿಕ ಅರ್ಥವುಳ್ಳ 'ಅದ್ದಿಟ್ಟು' ಶೀರ್ಷಿಕೆಯು ಸಾಂಪ್ರದಾಯಿಕ ಹೆಣ್ಣು ಶಾರದೆಯು ಅನುಭವಿಸುವ ದುಃಖಕ್ಕೆ ಮತ್ತು ದುರಂತಕ್ಕೆ ಸಮರ್ಪಕ ವಸ್ತುಪ್ರತಿರೂಪಕವನ್ನು ಕೊಡುತ್ತದೆ. ಕಥಾ ನಿರೂಪಣೆಯಲ್ಲಿ ಸಂಯಮ ಇದ್ದರೂ ಸಂವಿಧಾನದಲ್ಲಿ ತೀರ ಸರಳತೆ ಈ ಕಥೆಯಲ್ಲಿದೆ. 'ಹೊಡೆಯುವ ಗಡಿಯಾರ', 'ಕೈದಿ' ಮತ್ತು 'ಹುಚ್ಚು ಹುಡುಗಿ' ಕಥೆಗಳಲ್ಲಿ ಮನರಂಜನೆಯ ಭಿನ್ನಮುಖಗಳ ಅಭಿವ್ಯಕ್ತಿ ಇದೆ. ಗಂಡ-ಹೆಂಡಿರ ಸಮರಸ ಜೀವನದ ರಮ್ಯ ಚಿತ್ರವುಳ್ಳ 'ಹೊಡೆಯುವ ಗಡಿಯಾರ', ರಸಿಕತೆಗೆ ಹೆಚ್ಚು ಒತ್ತು ಕೊಟ್ಟರೂ ಅದರ ಕೊನೆಯು ದುಃಖವನ್ನು ಸೂಚಿಸುತ್ತದೆ. ಅತಿ ಆಚಾರ ನಿಷ್ಠೆ, ವಿಷಮಜ್ವರದಿಂದ ವೆಂಕಮ್ಮನ ಸಾವಿಗೆ ಕಾರಣವಾಗು ವಲ್ಲಿ ಸೂಕ್ಷ್ಮ ಎಚ್ಚರವಿದೆ. ಕೈದಿ ದಿನಕರ ಮತ್ತು ಅಧಿಕಾರಿಯ ಮಗಳು ಲೀಲೆಯ ಪ್ರಣಯ ಕಥೆ 'ಕೈದಿ'ಯು ಪ್ರೇಮವನ್ನು ಆದರ್ಶಗೂಡಿಸುವ ನಾಟಕೀಯವಾಗಿ ಕಾಣಿಸುವ ಒಂದು ಸಾಧಾರಣ ಕಥೆ. 'ಹುಚ್ಚು ಹುಡುಗಿ' ಕಥೆಯ ಹೀರಾ ಮತ್ತು ಪ್ರಭುಗಳ ಪ್ರೇಮ ಸಂಬಂಧವನ್ನು ನಿರ್ವಹಿಸುವಲ್ಲಿ ಕಥೆಗಾರರು ಪ್ರಗತಿಶೀಲ ನಿಲುವನ್ನು ಪ್ರಕಟಿಸುತ್ತಾರೆ. 'ಅಪರೂಪ ದರ್ಶನ'- ಈ ಕಥೆಗಳಿಗಿಂತ ಬೇರೆಯಾಗಿ ನಿಲ್ಲುತ್ತದೆ. ಈ ಕಥೆಯ ನಾಯಕ ಮೋಹನರಾಯ ಸೋಗುತನದ ವ್ಯಕ್ತಿತ್ವಕ್ಕೆ ಸಂಕೇತವಾಗುತ್ತಾನೆ. ಭಟ್ಟರ ಪಾತ್ರ ಪ್ರಾಮಾಣಿಕತೆಯ ಪ್ರತೀಕವಾಗಿದೆ. ನೈತಿಕತೆಯನ್ನು ತೀರ ವಾಚ್ಯವಾಗಿ ಈ ಕಥೆ ಸಾರುತ್ತದೆ. 'ಗಾಜಿನ ಬಳೆ' ಸಂಕಲನದಲ್ಲಿ ಇರುವ ಐದು ಕಥೆಗಳು- 'ಗಾಜಿನ ಬಳೆ', 'ಶಾಮರಾಯನ ವಕಾಲತ್ತು', 'ಒಂದು ನಾಟಕ', 'ನನ್ನ ಪತ್ರ' ಮತ್ತು 'ಸಂದೇಶ'. ಈ ಕಥೆಗಳು 1930-35ರ ಅವಧಿಯಲ್ಲಿ ರಚನೆಯಾದುವುಗಳು. ಇಲ್ಲಿನ ಹೆಚ್ಚಿನ ಕಥೆಗಳಲ್ಲಿ ಸ್ತ್ರೀಯರು ಪ್ರಧಾನ ಭೂಮಿಕೆಯಲ್ಲಿದ್ದಾರೆ. ಸಾಂಪ್ರದಾಯಿಕ ಅಭಿಪ್ರಾಯಗಳನ್ನು ಪ್ರಶ್ನಿಸುವ ಧೋರಣೆ ಸಾಮಾನ್ಯವಾಗಿ ಇಲ್ಲಿನ ಸ್ತ್ರೀ ಪಾತ್ರಗಳಲ್ಲಿ ಕಾಣಿಸುತ್ತದೆ. 'ಗಾಜಿನ ಬಳೆ'ಯ ಮಾಲಿನಿ, 'ಶ್ಯಾಮರಾಯರ ವಕಾಲತ್ತು'ವಿನ ಚೆನ್ನಮ್ಮ, 'ಒಂದು ನಾಟಕ'ದ ಪ್ರಭಾವತಿ-ಇವರು ತಮ್ಮ ಕೌಟುಂಬಿಕ ಪರಿಸರವನ್ನು ಮೀರಲು ಪ್ರಯತ್ನಿಸುವ ಹೆಣ್ಣುಗಳು. ಈ ಅರ್ಥದಲ್ಲಿ ಕಡೆಂಗೋಡ್ಲು ಅವರ ಮನೋಧರ್ಮ ಪ್ರಗತಿಶೀಲವಾದದ್ದು. ಆದರೆ ಈ ಪಾತ್ರಗಳು ಒಂದೇ ಎರಕದ ಪಡಿಯಚ್ಚುಗಳಂತೆ, ವೈಯಕ್ತಿಕತೆಗೆ ಸಂಬಂಧಿಸಿದಂತೆ ಮಾತ್ರ ಪ್ರತಿಭಟಿಸಿ ಯಾವುದೇ ವೈಚಾರಿಕ ನೆಲೆಗಟ್ಟು ಇಲ್ಲದೆ ಚಿತ್ರಿತವಾಗಿವೆ. ಈ ಅರ್ಥದಲ್ಲಿ ಈ ಕಥೆಗಳಲ್ಲಿ ಸಾಮಾಜಿಕತೆಗಿಂತ ಹೆಚ್ಚಾಗಿ ಕೌಟುಂಬಿಕ ಚಿತ್ರಣದ ಚೌಕಟ್ಟು ಪ್ರಧಾನವಾಗಿದೆ. 'ನನ್ನ ಪತ್ರ' ಕಥೆ ಪತ್ರಗಳ ಅದಲು ಬದಲಾಗುವಿಕೆಯಿಂದ ಗಂಡ-ಹೆಂಡಿರ ನಡುವೆ ಏರ್ಪಡುವ ವಿರಸ ಮತ್ತು ಅದರ ನಿವಾರಣೆಯ ಮೂಲಕದ ಸರಸ – ಇದನ್ನು ಸ್ವಾರಸ್ಯವಾಗಿ ನಿರೂಪಿಸುವ ಹಾಸ್ಯಪ್ರಜ್ಞೆಯ ವಸ್ತುವುಳ್ಳದ್ದು. 'ಸಂದೇಹ' ಕಥೆ ದುರಂತ ವಸ್ತುವಿನಿಂದ ಕೂಡಿದ್ದು ಸಾಮಾಜಿಕ ಮತ್ತು ನೈತಿಕ ಪ್ರಶ್ನೆಗಳನ್ನು ಒಳಗೊಂಡಿದೆ. 'ಗಾಜಿನ ಬಳೆ' ಸಂಕಲನದ ಎಲ್ಲಾ ಕಥೆಗಳಲ್ಲೂ ಸಮಸ್ಯೆಗಳಿಗೆ ನಿರ್ದಿಷ್ಟ ಪರಿಹಾರವನ್ನು ಸೂಚಿಸುವ ಯಾಂತ್ರಿಕ ಸಂವಿಧಾನ ಗೋಚರಿಸುತ್ತದೆ. ಆದರೆ ಭಾಷೆ ಶೈಲಿಯ ದೃಷ್ಟಿಯಿಂದ ಈ ಕಥೆಗಳು ತಮ್ಮ ಸಹಜತೆ ಮತ್ತು ಅಚ್ಚುಕಟ್ಟುತನಗಳಿಂದ ಆತ್ಮೀಯವಾಗಿವೆ ಮತ್ತು ಆಧುನಿಕವಾಗಿವೆ. 'ದುಡಿಯುವ ಮಕ್ಕಳು', 'ಚೂರಿಯ ಕಥೆ' ಮತ್ತು 'ಹಣೆಯಲ್ಲಿ ಬರೆದುದು'-ಈ ಮೂರು ಕಥೆಗಳ ಸಂಕಲನ 'ದುಡಿಯುವ ಮಕ್ಕಳು'. ವಸ್ತುವಿನ ದೃಷ್ಟಿಯಿಂದ ಈ ಕಥೆಗಳನ್ನು ಹೆಚ್ಚು ಸಾಮಾಜಿಕ ಎನ್ನಬಹುದು. ಒಕ್ಕಲು ಸೋಮಪ್ಪ ಮತ್ತು ಧನಿ ತಿಮ್ಮಣ್ಣನಾಯಕರ ನಡುವಿನ ವರ್ಗ ಸಂಘರ್ಷದ ವಸ್ತುವುಳ್ಳ 'ದುಡಿಯುವ ಮಕ್ಕಳು' ಕಥೆಯಲ್ಲಿ ಮೇಲುವರ್ಗದ ದರ್ಪ, ಕೆಳವರ್ಗದ ಹುಡುಗನೊಬ್ಬನ ಮೇಲೆ ಆಕ್ರಮಣ ಮಾಡುವಂತಹ ಬರ್ಬರ ನಡವಳಿಕೆಯ ಚಿತ್ರಣವಿದೆ. ವ್ಯಂಗ್ಯ ವಿಡಂಬನೆಗಳು ಈ ಕಥೆಯಲ್ಲಿ ಪ್ರಧಾನವಾಗಿದೆ. ಸಮಾಜವಾದದ ಎಳೆ ಇಲ್ಲಿ ಕಾಣಿಸುತ್ತದೆ. 'ಚೂರಿಯ ಕಥೆ' ಹೆಚ್ಚು ಹರಹುಳ್ಳ ಪರಿಣಾಮಕಾರಿಯಾದ ರಚನೆ. ಹಿಂದು-ಮುಸ್ಲಿಂ ದ್ವೇಷದ ಹಿನ್ನೆಲೆಯುಳ್ಳ ಈ ಕಥಾವಸ್ತು ಜಾತಿ ಧರ್ಮಗಳ ಬಾಹ್ಯ ಪೊರೆಗಳಿಗಿಂತ ಹೆಚ್ಚು ಆಳವಾಗಿ ಮನುಷ್ಯ ಸಂಬಂಧಗಳ ಸಾಧ್ಯತೆಗಳನ್ನು ಚರ್ಚಿಸುತ್ತದೆ. ನಗರೀಕರಣದಿಂದ ಉದ್ಭವಿಸುವ ಸಹಬಾಳ್ವೆಯ ಸಮಸ್ಯೆ ಯನ್ನು ಕಥೆಗಾರರು ಗ್ರಾಮೀಣ ಬದುಕಿನ ನೆಮ್ಮದಿಗೆ ವೈದೃಶ್ಯವಾಗಿ ಇಲ್ಲಿ ತರುತ್ತಾರೆ. 'ಹಣೆಯಲ್ಲಿ ಬರೆದುದು' ಒಂದು ಸಾಮಾನ್ಯ ಸಿನಿಮೀಯ ಮಾದರಿಯ ಕಥೆ. ಪಾತ್ರ

ಚಿತ್ರಣದಲ್ಲಿ ವಿಶೇಷ ಕಲೆಗಾರಿಕೆಯೇನೂ ಇಲ್ಲ. ನವೋದಯದ ಕಾಲದ ಮೌಲ್ಯಗಳನ್ನು ಬಹುಪಾಲು ಶಂಕರಭಟ್ಟರು ತಮ್ಮ ಕಥೆಗಳಲ್ಲಿ ಅಳವಡಿಸಿದ್ದಾರೆ. ಮೂರು ಸಂಕಲನಗಳ ವಸ್ತು, ಶೈಲಿ, ಧೋರಣೆ ಮತ್ತು ನಿರ್ವಹಣೆಗಳಲ್ಲಿ ಕಾಣುವ ಭಿನ್ನತೆಗಳು ಕಡೆಂಗೋಡ್ಲು ಅವರ ಸಾಹಿತ್ಯ ಬದುಕಿನ ಹರಹನ್ನು ಪ್ರತಿನಿಧಿಸುತ್ತವೆ.

1932ರಿಂದಲೇ ಮೌಲಿಕ ಸಾಹಿತ್ಯ ವಿಮರ್ಶನ ಲೇಖನಗಳನ್ನು ಬರೆಯುತ್ತ ಬಂದ ಕಡೆಂಗೋಡ್ಲು ಅವರ 'ವಾಙ್ಮಯ ತಪಸ್ಸು' (167) ಅಂತಹ ಹನ್ನೆರಡು ಪ್ರಬಂಧಗಳ ಸಂಕಲನ. 'ಕನ್ನಡ ನುಡಿಯ ಹಿಂದು ಮುಂದು', 'ಕನ್ನಡ ನುಡಿಯ ಏಳಿಗೆ'ಯಂತಹ ಲೇಖನಗಳು ಕನ್ನಡ ಭಾಷೆಯ ಹಿಂದು ಮತ್ತು ಮುಂದಿನ ವಿವರಗಳನ್ನು, ಯೋಜನೆಗಳನ್ನು, ಕನಸುಗಳನ್ನು ಬಿಂಬಿಸುತ್ತವೆ. 'ಕವಿ ಲಕ್ಷ್ಮೀಶ', 'ನಾರಣಪ್ಪನ ಪ್ರತಿಭೆ', ಶ್ರೀಕಂಠಯ್ಯನವರ ಹೆದ್ದಾರಿ'-ಈ ಲೇಖನಗಳಲ್ಲಿ ಈ ಮೂವರು ಕವಿಗಳ ಕೃತಿಗಳ ವೈಶಿಷ್ಟ್ಯವನ್ನು ವಿವರಿಸಲಾಗಿದೆ. ಒಂದು ಅರ್ಥದಲ್ಲಿ ಇವು ಮೂರೇ ಈ ಸಂಕಲನದ ಸ್ಪಷ್ಟವಾದ ವಿಮರ್ಶನ ಲೇಖನಗಳು. 'ವಸ್ತುಕ-ವರ್ಣಕ', 'ಕವಿ ಕಾವ್ಯ ತತ್ತ್ವ ಮೀಮಾಂಸೆ', 'ವಾಙ್ಮಯ ಶಕ್ತಿ', 'ವಾಙ್ಮಯ ತಪಸ್ಸು' - ಈ ಪ್ರಬಂಧಗಳಲ್ಲಿ ಸಾಹಿತ್ಯದ ಸೈದ್ಧಾಂತಿಕ ಸ್ವರೂಪವನ್ನು ಸಂಶೋಧನಾತ್ಮಕವಾಗಿ ಮತ್ತು ತಾತ್ವಿಕವಾಗಿ ಚರ್ಚಿಸಲಾಗಿದೆ. ಕಾರವಾರ ಸಾಹಿತ್ಯ ಸಮ್ಮೇಳನ (1965)ದ ಅಧ್ಯಕ್ಷ ಭಾಷಣದ 'ವಾಙ್ಮಯ ತಪಸ್ಸು'ವಿನಲ್ಲಿ ಭಾಷೆಗಳ ಸ್ಥಾನಮಾನ, ಸಾಹಿತ್ಯದ ಶಕ್ತಿ ಮತ್ತು ಸಾಧ್ಯತೆಗಳು, ಹೊಸ ಸಾಹಿತ್ಯದ ಪ್ರವರ್ತತೆ, ಕಾದಂಬರಿಗಳ ಗಣ್ಯತೆ, ಪತ್ರಿಕೆ ಪ್ರಪಂಚದ ಮಹತ್ತ್ವ, 'ಹೊಸತನ'ದ ಮೀಮಾಂಸೆ-ಇವುಗಳನ್ನು ವಿವೇಚಿಸುವುದರ ಜೊತೆಗೆ ಮುನ್ನೋಟದ ಭಾಗದಲ್ಲಿ ಕನ್ನಡ ನಾಡಿನಲ್ಲಿ ಮತ್ತು ಸಾಹಿತ್ಯದಲ್ಲಿ ಆಗಬೇಕಾದ ಮೌಲಿಕ ಪ್ರಾಪ್ತವ್ಯಗಳನ್ನು ಉಲ್ಲೇಖಿಸಲಾಗಿದೆ. 'ಕನ್ನಡದಲ್ಲಿ ಪ್ರಬಂಧ ವ್ಯವಸಾಯ' ಲೇಖನವು ಪ್ರಬಂಧ ಸಾಹಿತ್ಯ ಪ್ರಕಾರದ ಹಿನ್ನೆಲೆ ಮತ್ತು ಸ್ವರೂಪವನ್ನು ಪರಿಚಯಿಸುತ್ತದೆ. 'ನಿಸರ್ಗದ ದರ್ಶನ'ದಲ್ಲಿ ಪ್ರಕೃತಿಯ ಸ್ವರೂಪವನ್ನು ವಿವೇಚಿಸಿ ಕಾವ್ಯ ಮತ್ತು ಪ್ರಕೃತಿಯ ಸಂಬಂಧವನ್ನು ಕುರಿತು ಜಿಜ್ಞಾಸೆ ಮಾಡಲಾಗಿದೆ. "ಕನ್ನಡದಲ್ಲಿ ತತ್ಸಮ ತದ್ಭವಗಳು" ಎನ್ನುವ ಲೇಖನವು ಕನ್ನಡ ಭಾಷಾಶಾಸ್ತ್ರದ ಅಧ್ಯಯನ ದೃಷ್ಟಿಯಿಂದ ಬಹಳ ಮುಖ್ಯ ಸಂಶೋಧನಾತ್ಮಕ ಅಂಶಗಳನ್ನು ಒಳಗೊಂಡಿದೆ.

ಕಡೆಂಗೋಡ್ಲು ಅವರ ಅಪ್ರಕಟಿತ ಬರಹಗಳು-ಕಾದಂಬರಿ, ಕಥೆ ನಾಟಕ, ಕಾವ್ಯ ಇತ್ಯಾದಿ ಉಪಲಬ್ಧವಾಗಿವೆ. 'ಭೂತಾಳ ಪಾಂಡ್ಯ'ನ ಕಥೆಯನ್ನು ನಿರೂಪಿಸುವ ನೀಳ್ಗವನದಂತಹ ರಚನೆಗಳು ದೊರೆತಿವೆ. ಈ ಅಪ್ರಕಟಿತ ಸಾಹಿತ್ಯವೆಲ್ಲ ಪ್ರಕಟಗೊಂಡಾಗ ಕಡೆಂಗೋಡ್ಲು ಸಾಹಿತ್ಯದ ಮರು ಅವಲೋಕನ ಇನ್ನಷ್ಟು ವ್ಯಾಪಕವಾಗಿ ನಡೆಯಬಹುದು.

❑

## ಶ್ರೀರಂಗ

ಎನ್ಕೆ

'ತಲೆ ತುಂಬ ವಿಚಾರ, ಹೊಟ್ಟೆ ತುಂಬ ನಗೆ' ಎಂದು ಐವತ್ತು ವರ್ಷಗಳ ಹಿಂದೆ 'ಕಾಮದಹನ' ಎಂಬ ಶ್ರೀರಂಗರ ಆಯ್ದ ನಾಟಕ ಸನ್ನಿವೇಶಗಳ ಸಂಕಲನವೊಂದರ ರಕ್ಷಾಪುಟದ ಮೇಲೆ ಹೇಳಿದ ಮಾತು. 'ಹರಿಜನ್ವಾರ'ವು ಧಾರವಾಡದ ಬ್ರಾಹ್ಮಣರ ಓಣಿಗಳಲ್ಲಿ ಕಂಪನ ಎಬ್ಬಿಸಿದ್ದ ಕಾಲವದು. ಅದುವರೆಗೆ ಶ್ರೀರಂಗರು ಬರೆದಿದ್ದ ನಾಟಕಗಳ ಜೀವಾಳದ ಮಾತು ಇದು. ಇದರೊಂದಿಗೆ ಇನ್ನೊಂದು ಮಾತನ್ನೂ 'ಹರಿಜನ್ವಾರ' ಸೇರಿಸುತ್ತದೆ - ಮನದಣಿ ವಿಡಂಬನೆ. 'ಹರಿಜನ್ವಾರ', 'ಯಮನ ಸೋಲು', 'ಸರ್ಕಸಿನ ಸರಸ್ವತಿ'ಗಳಲ್ಲಿಯ ವಿಡಂಬನೆ ಹರಿತವಾದ ಹಾಸ್ಯದಿಂದ ಕೂಡಿದ್ದು. 'ಹರಿಜನ್ವಾರ' ನಾಟಕದ ಶೀರ್ಷಿಕೆಯಲ್ಲಿಯೇ ಶ್ರೀರಂಗರ ಕಲ್ಪನಾಶಕ್ತಿಯ ವಿಲಾಸವನ್ನು ಕಾಣುತ್ತೇವೆ. 'ಹರಿಜನ್ವಾರ'ವು ಹರಿಜನವಾರವೂ ಆಗುತ್ತದೆ; ಹರಿ, ಜನಿವಾರ ಎಂದೂ ಆಗುತ್ತದೆ. ವೇಣಕ್ಕನೆಂಬ ಗೃಹಿಣಿ ಅಸ್ಪೃಶ್ಯ ಅನಾಥ ಮಗುವನ್ನು ಮುಟ್ಟಿ ಎತ್ತಿಕೊಂಡಾಗ 'ಹರಿಜನ', ವಾರ', ವಸಂತನೆಂಬ ನಾಯಕನ ದೃಷ್ಟಿಯಲ್ಲಿ ಅದು 'ಹರಿ, ಜನಿವಾರ'.. ಹೀಗೆ ಶ್ರೀರಂಗರ ಶೀರ್ಷಿಕೆಗಳೆ ನಾಟಕದ ಜೀವಾಳಕ್ಕೆ ಶ್ರೀಕಾರ ಹೇಳುತ್ತವೆ.

ಶ್ರೀರಂಗರು ಏಕಾಂಕಗಳನ್ನೆ ಬರೆದಿರಲಿ, ಅನೇಕಾಂಕಗಳನ್ನೇ ಬರೆದಿರಲಿ ಸ್ವಾತಂತ್ರ್ಯಪೂರ್ವದ ಅವರ ನಾಟಕಗಳೆಲ್ಲವೂ ಸಾಮಾಜಿಕ ವಿಡಂಬನೆಗಳು. 'ಬ್ರಾಹ್ಮಣ ಸಮಾಜದ ಟೀಕೆ' ಆಗಿನ ನಾಟಕಗಳ ಗುರಿಯಾಗಿದ್ದಿತೆಂದು ಸಾಮಾನ್ಯ ಅಭಿಪ್ರಾಯ. ಪರದೇಶಕ್ಕೆ ಹೋಗಿ ಬಂದವನೆಂದು ಮನೆಯಲ್ಲಿ ಪರಕೀಯತೆಯ ದೃಷ್ಟಿಯಿಂದ ನಡೆಸಿಕೊಂಡಾಗ, ಬ್ರಾಹ್ಮಣ ಸಮಾಜವು ಅಸಡ್ಡೆಯಿಂದ ಕಂಡಾಗ, ಸ್ವತಃ ಶ್ರೀರಂಗರು ನೌಕರಿಗಾಗಿ ತಮ್ಮ ಸ್ವಾಭಿಮಾನಕ್ಕೆ ಚ್ಯುತಿ ಬರುತ್ತಿದೆಯೆಂಬ ಭಾವನೆಯುಂಟಾದಾಗ ಮೂಡಿದ ಸಂವೇದನೆಗಳ ಫಲವಾಗಿ 'ಉದರವೈರಾಗ್ಯ'ವೆಂಬ ನಾಟಕ ನಿರ್ಮಾಣವಾಯಿತು.

ಶ್ರೀರಂಗರ ನಾಟಕಗಳ ಹಲವಾರು ಶೀರ್ಷಿಕೆಗಳು ದಾಸರ ಕೀರ್ತನೆಗಳ, ಶರಣರ ವಚನಗಳ ಸಾಲುಗಳಿಂದ (ಪೌರಾಣಿಕ ಸಂಕೇತಗಳಿಂದ) ಮಿಂಚಿ ಮೂಡಿರುವುದು ಅರ್ಥವತ್ತಾಗಿದೆ. ಆಕರ್ಷಕ ಶೀರ್ಷಿಕೆ, ರಂಗಭೂಮಿಯ ಪ್ರಯೋಗದ ಸ್ಪಷ್ಟ, ಖಚಿತ ಕಲ್ಪನೆ ಶ್ರೀರಂಗರ ನಾಟಕಗಳ ವೈಶಿಷ್ಟ್ಯ. ಅವರ ರಂಗಸೂಚನೆಗಳೆ ಸುಂದರ ಸಾಹಿತ್ಯಕ ಶಬ್ದಚಿತ್ರಗಳಾಗಿ ಅಭಿನಯಿಸುವವರಿಗೆ ಅನುಕೂಲವಾಗಿರುತ್ತವೆ. ಅವರ ಬರವಣಿಗೆ ಕರಡು ಪ್ರತಿ, ಪಕ್ಕಾ ಪ್ರತಿ ಎಂಬುದಿಲ್ಲ. ಎಲ್ಲಾ ಪದ ನಿಚ್ಚಳ ಪದ ಪರಿಪೂರ್ಣ ಲೇಖನ. ಆ ಕಾಲಕ್ಕೆ - ಎಂದರೆ ಐವತ್ತು ವರ್ಷಗಳ ಹಿಂದೆ ಶ್ರೀರಂಗರು ನಾಟಕರಂಗ ಪ್ರವೇಶ ಮಾಡಿದಾಗ - ಪ್ರತ್ಯೇಕ ನಿರ್ದೇಶಕ, ನಿರ್ಮಾಪಕ, ಇಫೆಕ್ಟ್ಸ್‌ಮ್ಯಾನ್ ಹೀಗೆಲ್ಲಾ ಒಂದು ನಾಟಕ ಪ್ರಯೋಗದ ಅನೇಕ ಏಜೆಂಟರ ನಿರ್ಮಾಣವಾಗಿರಲಿಲ್ಲ.

ಹೆಚ್ಚಾಗಿ ನಾಟಕಕಾರ ಶ್ರೀರಂಗರೆ ನಾಟಕಗಳನ್ನು ಪ್ರೊಡ್ಯೂಸ್ ಮಾಡುತ್ತಿದ್ದ ರಲ್ಲದೆ, ಧಾರವಾಡ ನಾಟ್ಯ ವಿಲಾಸಿ ಸಂಘವನ್ನೂ ಸ್ಥಾಪಿಸಿ ತಮ್ಮ ನಾಟಕ ನಿರ್ಮಿತಿಗಳೊಂದಿಗೆ ಸಂಘವನ್ನು ಸಚೇತನವಾಗಿ ಎರಡು ದಶಕಗಳಿಗೂ ಮೇಲ್ಪಟ್ಟು ನಡೆಸಿಕೊಂಡು ಬಂದು ವಿಲಾಸಿ ರಂಗಭೂಮಿಯ ನಿರ್ಮಾಪಕ ರೆನಿಸಿ ಊರೂರಿಗೂ ಹೋಗಿ ನಾಟಕ ಪ್ರಯೋಗಗಳನ್ನು ಮಾಡಿಬಂದರು.

ಐವತ್ತು ವರ್ಷಗಳ ಹಿಂದೆಯೆ 'ಅಶ್ವಮೇಧ' ಎಂಬ ಪೌರಾಣಿಕ ವ್ಯಂಗ್ಯ ಶೀರ್ಷಿಕೆಯಿಂದ ಕಂಗೊಳಿಸುವ ನಾಟಕದಲ್ಲಿ ಮಗಳಿಗಾಗಿ ನಡೆಯುವ ವರಾನ್ವೇಷಣೆಯ ಒದ್ದಾಟವನ್ನು ನಗೆ, ವಿಡಂಬನೆಗಳ ಹಿಂದೆ ಕರುಣೆಯ ಛಾಯೆ ಬೀರಿ ವರ್ಣಿಸಿದ್ದಾರೆ. ಇಲ್ಲಿಯೂ ಬ್ರಾಹ್ಮಣರ ವಿಡಂಬನೆಯಿದೆ. ಆದರೆ ಕೊನೆಯಲ್ಲಿ ಹಡೆದ ಮಗಳನ್ನು ಅಶ್ವಮೇಧ ಕುದುರೆಯಂತೆ ಹಣೆಗೆ - 'ಉರ್ವಿಯೊಳ್ ವೆಂಕಪ್ಪ ಪಡೆದ ಕುವರಿ ಕಮಲೆಯೊರ್ವಳ್.....' ಎಂದು ಮೊದಲಾಗಿ ಯಾರಾದರೂ ಉದರ ನಿರ್ವಾಹ ಶಕ್ತಿಯುಳ್ಳ ಯುವಕ ಇವಳನ್ನು ತಡೆಯಬಹುದು ಎಂಬ - ಫಲಕ ಹಚ್ಚಿ ಬಿಟ್ಟು ಬಿಡುವ ದೃಶ್ಯವೂ ಅತಿಶಯೋಕ್ತಿಯೆನಿಸಿದರೂ ವಿಡಂಬನೆ ಎಷ್ಟು ಪ್ರಭಾವೀಯಾಗಬಲ್ಲದು ಎಂಬುದನ್ನು ತೋರಿಸಿ ಕೊಡುತ್ತದೆ. ಕೈಲಾಸಂರ 'ಬಹಿಷ್ಕಾರ', ಬೇಂದ್ರೆಯವರ 'ನಗೆಯ ಹೊಗೆ'- ವಿವಾಹಗಳ ಸಮಸ್ಯೆಯನ್ನೆ ಎತ್ತಿಕೊಂಡು ದುರಂತ ಚಿತ್ರಗಳಾಗಿ ಮೂಡಿ ಬಂದಿವೆ. ಶ್ರೀರಂಗರ ನಾಟಕಗಳಲ್ಲಿ ಭಾವುಕತೆ ಕಡಿಮೆಯೆನಿಸಿದರೂ ಅವರ ವಿಡಂಬನೆಯ ಬೌದ್ಧಿಕತೆ ತಲೆದೂಗಿಸುತ್ತದೆ. ಆದರೂ 'ಪ್ರಪಂಚ ಪಾಣಿಪತ್ತಿ'ನ ಶ್ರೀಪತಿ-ನಿಂಗ, 'ಹರಿಜನ್ವಾರ'ದ ವೇಣಕ್ಕ ಸಾಕಷ್ಟು ಭಾವುಕತೆಯನ್ನು ಕೆಣಕುತ್ತವೆ. ಒಟ್ಟಿನ ಮೇಲೆ ಶ್ರೀರಂಗರ ವೈಶಿಷ್ಟ್ಯ ವೈಚಾರಿಕತೆ.

ಅರ್ಧ ಶತಮಾನದ ಹಿಂದೆ ಶ್ರೀರಂಗರು - ಯಾವ ಪ್ರಚಾರಕ್ಕೂ ಅಲ್ಲದೆ ಸ್ವಯಂ ಪ್ರೇರಣೆಯಿಂದ - 'ಸಂಸಾರಿಗ ಕಂಸ' ಬರೆದಿರುವುದು ಒಂದು ಮರೆಯದ ಮೈಲಿಗಲ್ಲು. ಸಂತಾನ ನಿರೋಧದ ಅಗತ್ಯವನ್ನು ಇಲ್ಲಿ ಮನಗಾಣಿಸಿ ಕೊಟ್ಟಿದ್ದಾರೆ. ಶ್ರೀರಂಗರ ಸಾಮಾಜಿಕ ಪ್ರಜ್ಞೆ ಬಹುಮುಖಿ. ಸಾಂಸಾರಿಕ ಸಮಸ್ಯೆ, ದಾಯಾದಿತನದ ಸಮಸ್ಯೆ, ನಿರುದ್ಯೋಗಿ ತರುಣರ ಸಮಸ್ಯೆ, ಸಂಪ್ರದಾಯ-ಪ್ರಗತಿಗಳ ಸಂಘರ್ಷಗಳನ್ನು 'ಪ್ರಪಂಚ ಪಾಣಿಪತ್ತು', 'ನರಕದಲ್ಲಿ ನರಸಿಂಹ', 'ಸರ್ಕಸಿನ ಸರಸ್ವತಿ' ಮೊದಲಾದ ನಾಟಕಗಳಲ್ಲಿ ತುಡುಕಿದ್ದಾರೆ. ತರುಣರಲ್ಲಿ ದೇಶದ ಆಶೆಯನ್ನು ಕಾಣದೆ ನಿರಾಶೆಗೊಂಡ ತ್ವೇಷ ಒಂದೆಡೆಗೆ, ಅವರ ಭವಿಷ್ಯದ ಬಗ್ಗೆ ಇರುವ ಕಾಳಜಿ ಇನ್ನೊಂದೆಡೆಗೆ ಕೂಡಿಕೊಂಡು 'ಜರಾಸಂಧಿ' ರೂಪುಗೊಂಡಿದೆ. ವಿದೇಶದಿಂದ ಮರಳಿದ ಶ್ರೀರಂಗರು ಮುಂಬಯಿಯಲ್ಲಿ ನಿರುದ್ಯೋಗದ ದಿನಗಳನ್ನು ನೂಕುತ್ತಿದ್ದಾಗ ಅಚಾನಕವಾಗಿ ಯಾವುದೋ ನಿಟ್ಟಿನಿಂದ ಸೂಸಿಬರುತ್ತಿದ್ದ ಸಂಗೀತದ ಜಾಡು ಹಿಡಿದು ಸಾಗಿದಾಗ ಸಂಧಿಸಿದ ವೇಶ್ಯೆಯೊಬ್ಬಳು ಈ ತರುಣನನ್ನು ಕಂಡು, ಹೊಸ್ತಿಲೊಳಗೆ ಸ್ವಾಗತಿಸುತ್ತ - 'ನಾವು ಬೀದಿಯ ವೇಶ್ಯೆಯರಲ್ಲ, ಕಲಾವಂತರು' ಎಂದು ನುಡಿದಾಗ, 'ಹಾಗೆ ನೋಡಿದರೆ ನನ್ನ ವಿದ್ಯೆಯ ವ್ಯಭಿಚಾರ ಮಾಡುತ್ತಿರುವ ನಾನೇ ವೇಶ್ಯೆ' ಎಂದುಕೊಂಡರು. ಇದೇ ಸಂವೇದನೆಯ 'ಮುಕ್ಕಣ್ಣ, ವಿರಾಟ ಪುರುಷ'ರನ್ನು ಮೂಡಿಸಿತು. 'ಅಧಿಕಮಾಸ' ಎಂಬ ಇನ್ನೊಂದು ಸಾಮಾಜಿಕ ನಾಟಕ ಸ್ಫೂರ್ತಿಗೊಂಡ ಸನ್ನಿವೇಶ ಇನ್ನೊಂದು ತರಹ. ರೈಲು ಪ್ರಯಾಣದಲ್ಲಿ ಏಕಾಂಗಿಯಾಗಿದ್ದ ಬಸುರಿಯೊಬ್ಬಳ ಕಣ್ಣು, ಶೋಕದಿಂದ ಕೆಂಪಾಗಿರುವುದನ್ನು ನೋಡಿ ತಮ್ಮ ಇಂಗ್ಲೆಂಡ್ ಜೀವನದ ಒಂದು ಅನುಭವವನ್ನು ಸ್ಮರಿಸಿಕೊಳ್ಳುತ್ತಾರೆ. ಬ್ಯಾಂಕಿನಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ತರುಣಿ ಭಾರತೀಯ ಒಬ್ಬ ಯುವಕನಿಂದ ವಂಚಿತಳಾಗುತ್ತಾಳೆ. ಬಸುರಿಯಾದ ಆಕೆಯ ಭವಿಷ್ಯವೇನು? ತರುಣಿಯರನ್ನು ವಂಚಿಸುವ ಯುವಕರನ್ನು ಅಧಿಕಮಾಸವೆಂಬ ಪ್ರತ್ಯೇಕ ತಿಂಗಳಲ್ಲಿ ಹಿಡಿದು ತಂದು ಮದುವೆ ಮಾಡಿಸಬೇಕು ಎಂಬ ವಿಚಾರ ಸ್ಫುರಿಸಿ 'ಅಧಿಕ ಮಾಸ' ನಾಟಕದ ಅವತಾರವಾಯಿತು. ನಿರುದ್ಯೋಗಿ ತರುಣರ ಕನ್ಯಾಪರೀಕ್ಷೆ, ವೈವಾಹಿಕ ಭವಿಷ್ಯಗಳ ಚಿಂತನೆಯ ಫಲವಾಗಿ 'ದರಿದ್ರ ನಾರಾಯಣ' ಎಂಬ ವಿಡಂಬನೆ ಮೂಡಿಬಂತು.

ನಾಟಕ ಶತಕವಲ್ಲದೆ ಶ್ರೀರಂಗರ ಬತ್ತಳಿಕೆಯಲ್ಲಿ ಕಾದಂಬರೀ ದಶಕ, ವೈಚಾರಿಕ ಗ್ರಂಥಗಳ ಅಷ್ಟಕ, ಇದರೊಂದಿಗೆ 'ಸಾಹಿತಿಯ ಆತ್ಮಜಿಜ್ಞಾಸೆ' ಎಂಬ ಸ್ವಗತ-ಸ್ವಸಮೀಕ್ಷೆ, ಇಂಗ್ಲಿಷ್ ವಿಮರ್ಶಾ ಗ್ರಂಥಗಳು, ಪರಭಾಷಾನುವಾದಿತ ನಾಟಕಗಳು, ಹರಟೆಗಳು, ಪ್ರಬಂಧಗಳು, ಕವನ ಸಂಕಲನ, ಇನ್ನೂ ಹಸ್ತಪ್ರತಿ ರೂಪದಲ್ಲಿ ಉಳಿದ ಇತರ ಬರವಣಿಗೆ ಎಲ್ಲಾ ಸೇರಿ ಸುಮಾರು ನೂರಿಪ್ಪತ್ತರಷ್ಟು ಗ್ರಂಥಗಳು. ಅವರ ಇತ್ತೀಚಿನ 'ಭರತ ನಾಟ್ಯ ಶಾಸ್ತ್ರ'ದ ಬೃಹತ್ ರಚನೆಯು ಶ್ರೀರಂಗರ ರಂಗ ತಪಸ್ಸಿನ ಪಕ್ವಫಲವಾಗಿದೆ. ವಿದ್ಯಾರ್ಥಿದೆಸೆಯಲ್ಲಿಯೆ ಬರೆದು ಆಮೇಲೆ ಕಳೆದು ಹೋದ ಶ್ರೀರಂಗರ 'ಧರ್ಮ ವಿಜಯ', 'ಪ್ರಣಯಭಂಗ' ಇಲ್ಲವೆ 'ಸ್ವಾರ್ಥ ತ್ಯಾಗ' ಎಂಬ ನಾಟಕಗಳು ಗಾಂಧೀಜಿ ಅಸಹಕಾರ ಚಳುವಳಿಯ ವಸ್ತುವುಳ್ಳವಾಗಿದ್ದುವು.

ಗಾಂಧೀಜಿಯವರ ಬಲಗೈಯಾಗಿದ್ದ ದೃಢಕಾಯದ ಶೌಕತ್ ಅಲಿಯನ್ನು ಭೀಮನಿಗೆ ಹೋಲಿಸಿ, ಗಾಂಧೀಜಿಯನ್ನು ಧರ್ಮರಾಯನಿಗೆ ಹೋಲಿಸಿ ಬ್ರಿಟಿಶರನ್ನು ಕೌರವರನ್ನಾಗಿ ಮಾಡಿ ಬರೆದ 'ಧರ್ಮವಿಜಯ' ನಾಟಕವು 'ಬ್ರಿಟಿಷ್-ಭಾರತ ಯುದ್ಧ ಕತೆ'ಯಾಗಿದೆ. ಈ 'ಧರ್ಮ ವಿಜಯ'ದಿಂದ ರಂಗ ಭಾರತದವರೆಗೆ ಮಹಾಭಾರತದ ಸಾದೃಶ್ಯಗಳನ್ನು ತಂದು ಸಮಕಾಲೀನ ಸಾಮಾಜಿಕ, ರಾಜಕೀಯ ಕಥಾವಸ್ತುಗಳನ್ನು ಶಿಲ್ಪಿಸುವ ಶ್ರೀರಂಗರ ಒಂದು ತಂತ್ರ ವಿಶೇಷವು ಅವರ ನಾಟಕಗಳಿಗೆ ಒಂದು Allegoryಯ ಧ್ವನಿಯನ್ನು ನೀಡಿದೆ.

ಹೀಗೆ ಶ್ರೀರಂಗರ ನಾಟ್ಯ ಸೃಷ್ಟಿಯ ಬೀಜಗಳನ್ನು ಅವರ ವಿದ್ಯಾರ್ಥಿ ದೆಸೆಯಿಂದಲೆ ಗುರುತಿಸುತ್ತೇವೆ. ಆಗಿನಿಂದಲೆ ಅವರ ಮಹಾಭಾರತ ಜಿಜ್ಞಾಸೆ, ರಾಷ್ಟ್ರಪ್ರಜ್ಞೆಯೊಂದಿಗೆ ಹೆಣೆದುಕೊಂಡು ಬೆಳೆದು ಬಂದಿದೆ. ಅವರ ಇತ್ತೀಚಿನ 'ರಂಗಭಾರತ'ದಲ್ಲಿ ಮಹಾಭಾರತದ ಕಥೆ ಆಧುನಿಕವಾಗಿ ಸಾಮಾಜಿಕ ಸ್ವರೂಪ ತಾಳಿ ತಂತ್ರ ಕಲಾ ಕೌಶಲ್ಯದಿಂದ ನಾಟಕವಾಗಿ ಅರಳಿದೆ. ಅಂದಿನ ಧೃತರಾಷ್ಟ್ರ ಇಂದಿನ 'ಧರ್ತಪ್ಪ', ಅಂದಿನ ಸಂಜಯ ಇಂದಿನ 'ನಂಜಪ್ಪ'. ಇಬ್ಬರಲ್ಲೂ 'ದ್ವಾಪರಯುಗದೊಳಗಿನ ಗೆಣೆತನ'ದ ಸ್ಮೃತಿ ಅಡಗಿದೆ. ಆಗಿನ ಕಾಲದ ಕಣ್ಣಿಲ್ಲದ ಕುರುಡು ರಾಜ ಧೃತರಾಷ್ಟ್ರ, 'ಈಗಿನ ಕಾಲದ ಕುರುಡ ಪ್ರಜಾ!' ಹೀಗೆ 'ಹಿಂದಿನವರು ಇಂದಿನವರು ಎಲ್ಲಾ ಒಂದೇ'. ಮನುಷ್ಯನ ಸ್ವಭಾವ ಗುಣಗಳು ಅಂದು ಇದ್ದಂತೆಯೆ ಇಂದೂ ಇವೆ. 'ಇಲ್ಲದ್ದನ್ನು ಇದೆಯೆಂದು ತೋರಿಸಿ ಸುಖವನ್ನು ಹಚ್ಚಿಕೊಳ್ಳುವಂತೆ', ಸಾಮಾನ್ಯರನ್ನು ಪ್ರಚಾರದಿಂದ ಮೋಸಗೊಳಿಸುವ 'ಸಂಜಯ'ರು ಅಂದಿನಂತೆ ಇಂದೂ ಮುಂದಾಳುಗಳ ಸೇವೆಯಲ್ಲಿ ನಿಷ್ಣಾತರಾಗಿದ್ದಾರೆ. 'ಕಾಮ-ಲೋಭ-ಮದ-ಮೋಹ-ಮತ್ಸರಗಳ ಸ್ಥೂಲ ಸಂಕೇತಗಳಾಗಬಹುದಾದ ಐದು ಮಹಾಭಾರತ ಘಟನೆಗಳ ನ್ನಾಯ್ದುಕೊಂಡು ಕಾಲಸೂತ್ರದಲ್ಲಿ ಭೂತ ವರ್ತಮಾನಗಳನ್ನು ಹೆಣೆಯ ಲಾಗಿದೆ' ಎಂದು ಶ್ರೀರಂಗರು 'ರಂಗ ಭಾರತ'ದ ಸಮಕಾಲೀನ ಸಮನ್ವಯತೆಯ ಬಗ್ಗೆ ಹೇಳಿದ್ದಾರೆ ('ನನ್ನ ನಾಟ್ಯ ನೆನಪುಗಳು'-ಪುಟ 27).

ಉಪ್ಪು-ಹುಳಿ ತಿನ್ನುವ ಮನುಷ್ಯ ದೇಹದೊಳಗಿನ ಕಾಮ ಪ್ರವೃತ್ತಿಯು ಆತನ ಸಂಸ್ಕಾರ, ವಿವೇಕದ ಬೆಳವಣಿಗೆ, ಸಭ್ಯತೆಗಳೊಂದಿಗೆ ಬೆಳೆಯುತ್ತ ಪ್ರೇಮವಾಗಿ ಮಾರ್ಪಡುವ ವಿಕಾಸದ ಅವಶ್ಯಕತೆಯನ್ನು ಯಾರೂ ಅಲ್ಲಗಳೆಯರು. ಶ್ರೀರಂಗರು ತಮ್ಮ ಇತ್ತೀಚಿನ 'ಇದು ಭಾಗ್ಯ ಇದು ಭಾಗ್ಯ', 'ನೀ ಮಾಯೆಯೊಳಗೊ' ಮೊದಲಾದ ನಾಟಕಗಳಲ್ಲಿ ಲೈಂಗಿಕ ವಿಚಾರವನ್ನು ತಮಗೇ ಆಶ್ಚರ್ಯವೆನಿಸುವ ರೀತಿಯಲ್ಲಿ ರಂಗಭೂಮಿಯ ಬೆಳಕಿನಲ್ಲಿ ಬಹಿರಂಗವಾಗಿ ಚರ್ಚಿಸಿದ್ದಾರೆ. 'ಪ್ರಾಣಿಗಳಲ್ಲಿ ಕಾಮವೆಂಬ

ಶಕ್ತಿ ನೈಸರ್ಗಿಕವಾಗಿದೆ; ಸಾಮಾಜಿಕ ಜೀವನವನ್ನು ಕಟ್ಟಿಕೊಂಡ ಮನುಷ್ಯ ಪ್ರಾಣಿಯ ಸಾಮಾಜಿಕ ವ್ಯಕ್ತಿತ್ವ ಆ ಶಕ್ತಿಯ ಸಫಲತೆ ವಿಫಲತೆಗಳಿಗಾಗಿಯೂ ವಿಶಿಷ್ಟವಾಗಿ ರೂಪಿಸಲ್ಪಡುತ್ತಿದೆ. ಸಂಪ್ರದಾಯದ ಕವಿಗಳೂ, ನಾಟಕಕಾರರೂ ಈ 'ಕಾಮ'ವನ್ನು'ಪ್ರೇಮ' ವನ್ನಾಗಿ ಮಾರ್ಪಡಿಸಿ ಸಾಮಾಜಿಕ ಜೀವನದಲ್ಲಿಯ ಕಾಮಕ್ಕೆ ಮಡಿವಂತಿಕೆಯನ್ನು ಒದಗಿಸಿಕೊಟ್ಟರು.' (ನಾಟ್ಯ ನೆನಪುಗಳು. ಪು.250). ಗಂಡು-ಹೆಣ್ಣು-ಲೈಂಗಿಕತೆ-ಕಾಮ ವಸ್ತು ಒಂದು ಶಿಕ್ಷಣವಾಗಿ ನಾಟಕದಲ್ಲಿ ಬರಬೇಕಾದುದು ಅಗತ್ಯವಿದೆ ಎಂದು ನಾಟಕಕಾರರಿಗೆ ಅನಿಸಿದೆ. ಕಾಮತತ್ವವನ್ನು 'ಟ್ಯಾಕಲ್' ಮಾಡುವುದು ಶಿಕ್ಷಣ, 'ಟಿಕಲ್' ಮಾಡುವುದು ಅವಲಕ್ಷಣ. ನಾಟಕಕಾರ ಸದುದ್ದೇಶದಿಂದ ಲೈಂಗಿಕತೆಯನ್ನು ಟ್ಯಾಕಲ್ ಮಾಡಿದರೆ ಪ್ರೇಕ್ಷಕನು ಅದರಿಂದ ಟಿಕಲ್ ಆದರೆ ಅದು ಪ್ರೇಕ್ಷಕನ ಕೀಳುಅಭಿರುಚಿಯನ್ನು ತೋರುತ್ತದೆ. ಶ್ರೀರಂಗರು 'ಅನಾದಿ' ಕಾದಂಬರಿಯಲ್ಲೂ 'ಗೆಳೆಯ ನೀನು ಹಳೆಯ ನಾನು' ಎಂಬ ನಾಟಕದಲ್ಲೂ ಪ್ರೇಮ ತತ್ವಕ್ಕೆ ಕ್ಷಕಿರಣ ಹಿಡಿದಿದ್ದಾರೆ. 'ಸಂಜೀವಿನಿ', 'ಸಾವಿತ್ರಿ' ನಾಟಕಗಳಲ್ಲಿ ಪ್ರೇಮದ ಉದಾತ್ತೀಕರಣವಿದೆ

ಸಾಮಾಜಿಕ ಸಮಸ್ಯೆಗಳನ್ನೂ ತುಡುಕುವಾಗ ಶ್ರೀರಂಗರು ವಿಡಂಬನೆ, ವ್ಯಂಗ್ಯ, ವಿರೋಧ, ಪ್ರತೀಕಾರ, ಹಾಸ್ಯಪಹಾಸ್ಯಗಳನ್ನೂ ಬಳಸುತ್ತ ಸಂಪ್ರದಾಯ-ಪ್ರಗತಿ; ಧಾರ್ಮಿಕತೆ-ವೈಜ್ಞಾನಿಕತೆ; ಅಂಧ ಶ್ರದ್ಧೆಗಳು-ವೈಚಾರಿಕತೆ; ಹಳೆಯ ಪೀಳಿಗೆ-ಹೊಸ ಪೀಳಿಗೆಗಳ ದೃಷ್ಟಿಕೋನಗಳ ಸಂಘರ್ಷಗಳನ್ನು ಎತ್ತಿಕೊಳ್ಳುತ್ತಾರೆ. ಈ ಕ್ರಮದಲ್ಲಿ ಯುವಕರನ್ನೂ ಮುದುಕರನ್ನೂ ಡಂಭಾಚಾರಿಗಳನ್ನೂ ಅಪ್ರಾಮಾಣಿಕರನ್ನೂ ರಂಗಸ್ಥಳದಲ್ಲಿ ಅವಹೇಳನೆಗೆ ಗುರಿಮಾಡಿದರೂ ಯಾವ ಕ್ಷಣದಲ್ಲೂ ಜೀವನದ ಬಗ್ಗೆ ಜಿಗುಪ್ಸೆ ತಾತ್ಸಾರವನ್ನು ನಾಟಕಕಾರರು ತೋರುವುದಿಲ್ಲ. ಬದುಕಿನಲ್ಲಿ ಲವಲವಿಕೆಯನ್ನು ಮೂಡಿಸಿ ಉತ್ಸಾಹ, ಆಶಾವಾದಿತ್ವಗಳನ್ನು ಸಮಾಜದಲ್ಲಿ ತುಂಬಲು ತವಕಿಸುತ್ತಾರೆ. 'ಸಂಧ್ಯಾಕಾಲ'ದ ನಾಯಕ, 'ಸಂಸಾರಿಗ ಕಂಸ'ದ ವಿಧವೆ ಕೃಷ್ಣಾಬಾಯಿ ಮತ್ತು ರಾಮಣ್ಣ, 'ನರಕದಲ್ಲಿ ನರಸಿಂಹ'ದ ನಾಯಕ, ಹರಿಜನ್ವಾರದ 'ವಸಂತ', 'ಭಾರತ ಭಾಗ್ಯವಿಘಾತ'ದ ವ್ಯಕ್ತಿ (ಎಂದರೆ ಸ್ವರ್ಗಸ್ಥ ಶ್ರೀರಂಗರ ಭೂಮಿಗಿಳಿದ ಭೂತ) ಇವರೆಲ್ಲ ಸಮಾಜದ ಅನ್ಯಾಯಗಳ ವಿರುದ್ಧ ಕೊರಲೆತ್ತುವ ಪ್ರತಿರೋಧಕ ಧ್ವನಿಗಳು. ಶ್ರೀರಂಗರ ಒಂದೊಂದು ಸಾಮಾಜಿಕ ನಾಟಕವೂ ಜೀವನದ ಒಂದೊಂದು 'ಮಾಡೆಲ್‌ಉ'. ಗಾಂಧೀ ಚಳವಳಿಯಲ್ಲಿ ಭಾಗವಹಿಸಿ ಜೇಲಿಗೆ ಹೋಗುವುದಕ್ಕಿಂತ ನಾಟಕ ಬರೆದು ತನ್ನ ವಿಚಾರಗಳಿಂದ ಸವಾಜದ ಒಳಿತಿಗೆ ಸಹಕಾರ ನೀಡುವುದು ಹೆಚ್ಚಿನದೆಂದು ಬಗೆದು ಶ್ರೀರಂಗರು ಲೇಖನಿಯ ಒಡನಾಟ ಕೂಡಿದಂತಿದೆ. ಜಾತಿ ಪದ್ಧತಿ, ಅಸ್ಪೃಶ್ಯತೆ, ಸ್ತ್ರೀ ಸ್ವಾತಂತ್ರ್ಯ-ಸಮಾನತೆ, ಮೊದಲಾದ ಪ್ರಶ್ನೆಗಳು ಶ್ರೀರಂಗರ ಪಾತ್ರಗಳ ಬಾಯಲ್ಲಿ ಉತ್ತರ ಪಡೆದವು. ಸಾವಿರಾರು ವರ್ಷಗಳಿಂದ ದೇವ-ಧರ್ಮ-ಸಂಪ್ರದಾಯ, ಅವಿಭಕ್ತ ಕುಟುಂಬ ಪುರುಷನ ಮೇಲ್ಮೆ, ಸ್ತ್ರೀಯ ಅಧೀನತೆ ಮತ್ತು-'ಈಚಿನ 3-4 ನೂರು ವರ್ಷಗಳಲ್ಲಿ ವಿದೇಶೀಯರ ರಾಜಕೀಯ ಅಧಿಕಾರ, ಅವುಗಳ ದಬ್ಬಾಳಿಕೆ-ಇವುಗಳಿಂದಲೆ ಬೆಳೆದಿತ್ತು ನಮ್ಮ ಸಮಾಜ.' ವ್ಯಕ್ತಿಪೂಜೆಯ ಬೀಜ ರಾಜಕೀಯ ಗೊಬ್ಬರದಲ್ಲಿ ನೆಟ್ಟು ಅದರಿಂದುಂಟಾದ ಫಲಪ್ರಾಪ್ತಿ ಯಾವುದೆಂದರೆ ವ್ಯಕ್ತಿತ್ವ ಮಾರಿಕೊಂಡ ಶೂನ್ಯತೆ! ಎರಡನೆಯ ಮಹಾಯುದ್ಧದ ತರುವಾಯ ಪ್ರಗತಿಪರ ವಿಚಾರ ಪ್ರಭಾವಕ್ಕೆ ಸಿಕ್ಕ ಈಗಿನ ತರುಣರು ವ್ಯಕ್ತಿ ಪೂಜಕ ಅಂಧ ಶ್ರದ್ಧಾಳುಗಳೂ ಆಗಲಿಲ್ಲ, ಸ್ವತಂತ್ರ ವಿಚಾರಿಗಳೂ ಆಗಲಿಲ್ಲ ಎಂಬ ನಿರಾಸೆ ಶ್ರೀರಂಗರದು. 'ಸಂಧ್ಯಾ ಕಾಲ', 'ಜರಾಸಂಧಿ', 'ನರಕದಲ್ಲಿ ನರಸಿಂಹ', 'ಶತಾಯು-ಗತಾಯು' ಮೊದಲಾದ ನಾಟಕಗಳಲ್ಲಿ ಶ್ರೀರಂಗರ ಮೇಲಿನ ವಿಚಾರಗಳೆಲ್ಲ ರೂಪಿತವಾಗಿವೆ

ಭಾರತವು 1947ರಲ್ಲಿ ಸ್ವತಂತ್ರವಾಯಿತು. ಅದೇ ವರುಷ ಪ್ರಕಟವಾದ ಶ್ರೀರಂಗರ 'ಪುರುಷಾರ್ಥ' ಕಾದಂಬರಿ ರಾಜಕೀಯ ವಿಚಾರಗಳನ್ನು ನೀಡಲು ಮೂಡಿಬಂತು. ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಪ್ರಮುಖ ಭಾಗವಹಿಸಿ, ಸರಕಾರೀ ಸೇವೆಯ ನಿಷ್ಠೆ ಕಾಪಾಡಿಕೊಂಡು ಬರಲಿಲ್ಲವೆಂದು ಮೇಲಧಿಕಾರಿಗಳು ಶ್ರೀರಂಗರನ್ನು ಮುಂಬಯಿಗೆ ವರ್ಗಾಯಿಸಿದರು. ಸ್ವಾಭಿಮಾನಿ ಶ್ರೀರಂಗರು ಸರಕಾರ ನೌಕರಿಗೆ ತ್ಯಾಗಪತ್ರ ಸಲ್ಲಿಸಿದರು. 'ಆರ್.ವಿ. ಜಾಗಿರದಾರ' ಇದ್ದವರು 'ಆದ್ಯ ರಂಗಾಚಾರ್ಯ' ಆದರು. ಇದು ಅವರ ಜೀವನ ಮಾರ್ಗದಲ್ಲಿ ದೊಡ್ಡದೊಂದು ತಿರುವು. ಅದರಂತೆ, ಅವರ ರಂಗಸಾಹಿತ್ಯ ಮಾರ್ಗದಲ್ಲೂ ಒಂದು ಪರಿವರ್ತನೆಯ ಪರ್ವ. ಇನ್ನು ಮುಂದಿನ ಶ್ರೀರಂಗರ ನಾಟಕಗಳೆಲ್ಲ ಹೆಚ್ಚಾಗಿ ರಾಜಕೀಯ ವಿಚಾರಗಳ ರೂಪಾಯಣಗಳೆ. ಗಾಂಧಿಹತ್ಯೆಯು ಶ್ರೀರಂಗರ ಮೇಲೆ ದೊಡ್ಡ ಆಘಾತವನ್ನುಂಟುಮಾಡಿತು. ಈ ತಳಮಳ, ಕಳವಳದಿಂದ ಹೊರಹೊಮ್ಮಿ ಬಂದ ನಾಟಕ-'ಶ್ಲೋಕ ಚಕ್ರ'! (1950); ಗಾಂಧೀಜಿ ಕೊಲೆಯ ನಂತರ ಗಾಂಧೀತ್ವ, ಗಾಂಧೀ-ತತ್ವದ ಬೆನ್ನು ಹತ್ತಿದ 'ಜಯರಾಮ'ನಂತಹರಿಗೆ 'ಶೋಕಚಕ್ರ'. ಗಾಂಧೀ ಟೊಪ್ಪಿಗೆಯ ಬೆನ್ನು ಹತ್ತಿದ 'ಹನ್ಮಂತಪ್ಪ'ನಂತಹ ಫಡಪೋಶಿ ಪೊಳ್ಳು ಪುಢಾರಿಗಳ ಪಾಲಿಗೆ ಅಶೋಕ ಚಕ್ರ! 'ಶೋಕ ಚಕ್ರ'ದ 'ಹನುಮಂತಪ್ಪ'ನಿಂದ 'ಭಾರತ ಭಾಗ್ಯವಿಘಾತ'ದ 'ವಿದೂಷಕನ'ನ ವರೆಗೆ ಶ್ರೀರಂಗರ ನಾಟ್ಯ ಲೇಖನಿಯಿಂದ 'ವಿಚಾರಿಗಳ ಮಸಿ'ಯಿಂದ ಮನೆಮುರುಕ, ತಲೆತಿರುಕ ಜೊಳ್ಳುನಾಯಕರ ರಾಜಕಾರಣದ ಜೇಡಜಾಲಗಳೆ ಹೆಣೆದುಕೊಂಡು ಬಂದಿವೆ. ಚುನಾವಣೆ ಆಸಕ್ತಿಯ ಹೊರತಾಗಿ ಇವರಿಗೆ ಬೇರೇನೂ ಉದ್ದೇಶವಿಲ್ಲ. ಸ್ಥಾನಿಕ ಸಂಸ್ಥೆ, ವಿಧಾನಸೌಧ, ಕೇಂದ್ರಾಡಳಿತದವರೆಗೂ ಈ ಜಾತಿ, ಗುಂಪುಗಾರಿಕೆ, ಅಧಿಕಾರದ ಹಪಹಪಿ! ಈ ಶಾಸಕರು ಜನತಾ ಹಿತಸಾಧಕರಲ್ಲ, ಸ್ವಾರ್ಥಸಾಧಕರು. ಇವರಿಗಿರುವುದು vested interest, ಅಲ್ಲದೆ larger interest ಅಲ್ಲ. ಪಕ್ಷಾಂತರ ಮಾಡಿ ಹಣದ ಬೆಲೆಗೆ ವ್ಯಕ್ತಿತ್ವದ ವೌಲ್ಯಗಳನ್ನು ವಾರಿಕೊಳ್ಳುವ ಈ ಛೀಮಾರಿಗಳಿಗೆ ಒಂದು ಮಂತ್ರಿ ಪದವಿ ದೊರೆತರೆ ಅದೇ ಪುರುಷಾರ್ಥ!

ಶ್ರೀರಂಗರಿಗೆ ತನ್ನ ಬಾಲ್ಯದ ಸಮಾಜ ಬೆಳೆಯದೆ ಹಾಗೆಯೆ ಇದೆಯಲ್ಲ ಎಂಬ ಕಾಳಜಿ. ಹಿರಿಯರು, ಕಿರಿಯರು ಕೂಡಿಯೆ 'ಬೆತ್ತಲೆ ಮಾಡಿ ನಿಲ್ಲಿಸೋಣ' ಎನಿಸಿತು; 'ಜೀವನ ಜೋಕಾಲಿ' ಕಟ್ಟಿತು. ಜೋಕಾಲಿ ಏನೊ ತೂಗುತ್ತದೆ, ಮುಂದೆ ಹೋಗುತ್ತದೆ, ಆದರೆ ಮತ್ತೆ ಹಿಂದೆ ಬರುತ್ತದೆ. ಚಲನವಿದ್ದರೂ ಪ್ರಗತಿಯೆಂಬುದು ಶೂನ್ಯ. ಇದು ನಮ್ಮ ಸಮಾಜ. ಇದಕ್ಕೆ 'ಜೀವನ ಜೋಕಾಲಿ' ಎಂಬ ಹೆಸರು ತಾನಾಗಿಯೆ ಹೊಳೆದುಬಂತು. ವಂಚಕವೃತ್ತಿಯಲ್ಲಿ ಮುದುಕರು-ಯುವಕರು ಒಂದೇ, ಎಂದು ತೋರಿಸಲು ರಂಗತಂತ್ರ ಯೋಜನೆ. ರಂಗಭೂಮಿ ಇಬ್ಭಾಗವಾಯಿತು, ಅತ್ತ ಹಿರಿಯರ ತಂಡ, ಇತ್ತ ಕಿರಿಯರ ತಂಡ. ವಸ್ತುವಿಗೆ ಅನುಗುಣವಾಗಿ ತಂತ್ರ ಮೂಡಿ ಬರುತ್ತದೆಂದು ಶ್ರೀರಂಗರು ಹೇಳುತ್ತಾರೆ. ಅದರಂತೆ ಪಾತ್ರಗಳು ನುಡಿದಂತೆ ತಾವು ಸಂಭಾಷಣೆ ಬರೆಯುವುದಾಗಿಯೂ ನುಡಿದಿದ್ದಾರೆ. (ಎರಡು ಸಂಸಾರಗಳ ಜೀವನ ಪ್ರವಾಹ ಒಂದೇ ಎಂದು ತೋರಿಸಲಿಕ್ಕೂ ರಂಗಭೂಮಿ ಇಬ್ಭಾಗವಾಗಿ ಈ ಮನೆಯ ಯಜಮಾನನ ಪ್ರಶ್ನೆಗೆ ಆ ಮನೆಯ ಯಜಮಾನಿ ತನ್ನ ಗಂಡನಿಗೆ ಉತ್ತರ ಕೊಟ್ಟರೂ ಅದು ಈ ಮನೆಯ ಯಜಮಾನನಿಗೇ ಉತ್ತರಿಸಿದಂತಾಗುತ್ತದೆ. ಇದು 'ಪ್ರಪಂಚ ಪ್ರವಾಹ'.)

ತಮ್ಮ ವಯಸ್ಸಿನ 50ರಲ್ಲಿ ಬರೆದ 'ಶತಾಯು ಗತಾಯು' ಮುದುಕರ, ಯುವಕರ, ವಿಷಯ ವಿಚಾರಗಳ ಎರಡು ಚಿತ್ರಣಗಳು. ವ್ಯಕ್ತಿಯೊಬ್ಬ ನೂರು ವರ್ಷ ಬಾಳಿದ ಅನ್ನೋದೆ ಮಹತ್ವದ ಸಾಧನೆಯೆ ? ಎಂಬ ಪ್ರಶ್ನೆಗೆ ಇಲ್ಲಿ

ಉತ್ತರದ ಧ್ವನಿ. ಜೀವನದ ಸ್ಥಿತಿಗತಿಗಳನ್ನು ಅರ್ಥಮಾಡಿಕೊಳ್ಳಲಾರದ ತರುಣರು ಗತಾಯುಗಳಾಗಿ ಕಾಲಕ್ಕೆ ತಕ್ಕಂತೆ, ವಯಸ್ಸಿಗೆ ತಕ್ಕಂತೆ ನಡೆಯುವ ಮುದುಕರು ಶತಾಯುವಾಗಿ ಅನೇಕ ದ್ವಂದ್ವಗಳ ಮೇಲೆ ಎದ್ದು ನಿಂತಿದೆ ಈ ನಾಟಕ. ತಲೆಮಾರುಗಳ ಅಂತರದಿಂದ ಉದ್ಭವಿಸುವ ಸಮಸ್ಯೆಗಳು ರಾಜಕೀಯ ಸಮಸ್ಯೆಗಳ ಜೊತೆಗೆ ಸಮಾಂತರವಾಗಿ ಶ್ರೀರಂಗ ವಿಚಾರ ಕಾಸಾರವನ್ನು ಕಲಕಿವೆ.

1948ರಲ್ಲಿ ರಚಿಸಿದ 'ಜರಾಸಂಧಿ'ಯಲ್ಲಿ ಸ್ವತಂತ್ರ ಭಾರತದ ಕಾಂಗ್ರೆಸ್ ಕರ್ತರು ತಾವಷ್ಟೇ ಗಂಡಸರು, ಬ್ರಿಟಿಷ್ ಕಾಲದ ನೌಕರಶಾಹಿಗಳು ಷಂಡರು ಎಂಬ ಅಭಿಪ್ರಾಯದ ಸತ್ಯಾಸತ್ಯತೆಯನ್ನು ನಾಟಕಕಾರರು ಬರೆದು ನೋಡಿದ್ದಾರೆ.

1949ರಲ್ಲಿ ನೌಕರಿಗೆ ರಾಜೀನಾಮೆ ಕೊಟ್ಟು ಗೃಹಸ್ಥರಾದ ಆದ್ಯರು ಮತ್ತೊಮ್ಮೆ ನಿರುದ್ಯೋಗದ ರಾಹುಗ್ರಹಣಕ್ಕೆ ಒಳಗಾದರು; ಅನೇಕ ಕಷ್ಟ ಕಾರ್ಪಣ್ಯಗಳನ್ನು ಎದುರಿಸಿದರು. ಬೆಳೆಯುತ್ತಿರುವ ಮಕ್ಕಳ ಜವಾಬುದಾರಿ, ಸಾಂಸಾರಿಕ ತಾಪತ್ರಯ, ಮಿತ್ರರು ದೂರ ಸರಿದುದರಿಂದ ಪಸರಿಸಿದ ಸ್ನೇಹದ ಕಪ್ಪು ಛಾಯೆ-ಈ ಎಲ್ಲ ಕಾರಣಗಳಿಂದಾಗಿ, 'ಜೀವನ ಜೋಕಾಲಿ'ಯಿಂದ ಇತ್ತೀಚಿನ ನಾಟಕಗಳಲ್ಲಿ ಸಾಮಾಜಿಕ ಸಮಸ್ಯೆಗಳಿಂದ ಆ ಸಮಾಜ ಕರ್ತೃವಾದ ಮನುಷ್ಯನ ಸ್ವಭಾವವೆ ಮೂಲವಸ್ತುವಾಗುತ್ತಿದೆ' ಎಂದು ನುಡಿದಿದ್ದಾರೆ ಶ್ರೀರಂಗರು. (ನನ್ನ ನಾಟ್ಯ ನೆನಪುಗಳು, ಪು. 252). ಹೊಟ್ಟೆಯನ್ನು ಒಬ್ಬ ಹಮಾಲನೂ ಹೊರುತ್ತಾನೆ, ಬುದ್ಧಿಜೀವಿಯೂ ಹೊರುತ್ತಾನೆ. ಆದರೆ ಬುದ್ಧಿಜೀವಿಗೆ ಹಮಾಲನಾಗಿ ಹೊಟ್ಟೆ ಹೊರಕೊಳ್ಳ ಲಾದೀತೆ ? ಬುದ್ಧಿ ಜೀವಿಯು ಭೀಮಕಾಯನೂ ಆಗಿರಬೇಕು. ಮಹಾ ಭಾರತದ ವೀರ ಭೀಮಸೇನನಂತಾಗಿರಬೇಕು. ಆ ವೀರ ಭೀಮಸೇನ ಬುದ್ಧಿಜೀವಿಯೇ? ಕೇವಲ ದೇಹಶಕ್ತಿಯುಳ್ಳ ವ್ಯಕ್ತಿಯೆ ? ಆ ಭೀಮಸೇನ ಎಂಥವನು ? ನಾಟಕಕಾರನ ಅಂತರ್ವಾಣಿ ನುಡಿಯುತ್ತದೆ- 'ಹೇಳುವೆನು ಕೇಳು ಜನಮೇಜಯ!' ಆ ಧ್ವನಿ ಹೇಳಿದಂತೆ ಲಿಪಿಕಾರನಾಗಿ ನಾಟಕಕಾರ ಬರೆದುಕೊಂಡುದೆ 'ಕೇಳು ಜನಮೇಜಯ' ಆಯಿತು. ತಂತ್ರ, ವಸ್ತು, ವಿಚಾರ, ಶೈಲಿ ಎಲ್ಲ ದೃಷ್ಟಿಯಿಂದಲೂ ಅಪೂರ್ವ. 'ಹರಿಜನ್ವಾರ', 'ಶೋಕ ಚಕ್ರ'ಗಳಂತೆ ಇದೂ ಒಂದು ಮರೆಯದ ಮೈಲುಗಲ್ಲು– 'ಕೇಳು ಜನಮೇಜಯ'. ಭಾರತೀಯ ಇತರ ಭಾಷೆಗಳಲ್ಲೂ ಅನುವಾದ ಹೊಂದಿತು. ರೇಡಿಯೊ ರಾಷ್ಟ್ರೀಯ ನಾಟಕ ಕಾರ್ಯಕ್ರಮವಾಗಿ ಪ್ರಸಾರವಾಯಿತು, ಈ ವೈಚಾರಿಕ ನಾಟಕ. (ಬಹುಶಃ ಇದೇ ಮೊದಲನೆಯ ಕನ್ನಡ ರಾಷ್ಟ್ರೀಯ ಕಾರ್ಯಕ್ರಮವೊ ಏನೊ !) ಕೇಂದ್ರ ಸರ್ಕಾರದ ನೌಕರ (ಡ್ರಾಮಾ ಪ್ರೊಡ್ಯೂಸರ್)ನಾಗಿ ತಾನು ಮಾಡಬೇಕಾದ ಅವಹೇಳನಕರವಾದ ದುಡೆ (ಅಯೋಗ್ಯ ಸಾಮಗ್ರಿಯನ್ನು ಆಕಾಶವಾಣಿಯಲ್ಲಿ ಮಾರುವುದು)ಗೆ ಹೇಸಿಕೊಂಡ ಕ್ಷಣದಲ್ಲಿ ಕಾಣಿಸಿಕೊಂಡಿತು ಈ 'ಕೇಳು ಜನಮೇಜಯ'. 'ನಾಟಕ ಚಟುವಟಿಕೆಯ ಉದ್ದೇಶವೇ ಹೊಟ್ಟೆಹೊರೆದು ಕೊಳ್ಳುವುದು' ಎಂದು ನಾಟಕದ ಸೂತ್ರಧಾರ (ಶ್ರೀರಂಗನಾಗಿ) ಹೇಳುತ್ತಾನೆ.

ಪಾಶ್ಚಾತ್ಯ ರಂಗಭೂಮಿ, ನಮ್ಮ ಸಂಪ್ರದಾಯಿಕ ರಂಗಭೂಮಿ ಇವೆರಡರ ತಾಂತ್ರಿಕತೆಯ ನಡುವೆ ಮೂರನೆಯ ಒಂದು ತಂತ್ರ ಇಲ್ಲಿ ಕಾಣಿಸಿಕೊಳ್ಳುತ್ತದೆ- ನಾಟಕಕಾರನ ಪಾತ್ರಗಳು, ಪ್ರೇಕ್ಷಕರು ಇವರ ನಡುವೆ 'ಲಿಯಜಾನ್ ಆಫೀಸರ್'ನಂತೆ ಬರುವ ಸೂತ್ರಧಾರನ ನಿರ್ಮಾಣವೆ ಈ ಹೊಸ ತಂತ್ರ. (ಮುಂದೆ ಕೆಲವು ನಾಟಕಕಾರರು ಶ್ರೀರಂಗರ 'ಕೇಳು ಜನಮೇಜಯ'ದ ತಂತ್ರವನ್ನು ಅನುಸರಿಸಿದರು.) ಪ್ರೇಕ್ಷಕರ ಸಮಾಜದ ಮನೋರಂಗದ ಮೇಲೆ ಸುಳಿದಾಡುವ ಮಾನವ ಸ್ವಭಾವಗಳೆ ರಂಗಭೂಮಿಗೆ ನಡೆದು ಹೋಗಿ ಅಲ್ಲಿ ಬರಿ ಅಸ್ಥಿಪಂಜರದಂತೆ ನಿಂತಿರುವ (ಅಥವಾ ಕುರ್ಚಿ, ಸ್ಟೂಲುಗಳ ಮೇಲೆ ಕುಳಿತಿರುವ) ಪಾತ್ರಗಳನ್ನು ಪ್ರವೇಶಿಸಿ, ಪ್ರಾಣ ತುಂಬಿ ನುಡಿಸುತ್ತವೆ, ನಡೆಸುತ್ತವೆ. ಇದೂ ಒಂದು ಈ ನಾಟಕದ ಹೊಸ ತಂತ್ರ. (ಈ ತಂತ್ರವನ್ನು ಶ್ರೀರಂಗರಿಂದ ಯಾರೂ ಯಶಸ್ವಿಯಾಗಿ ಎತ್ತಿಕೊಂಡಂತಿಲ್ಲ.) ಹೀಗೆ ಸಮಾಜದ ಒಬ್ಬ 'ಸಾಮಾನ್ಯಪ್ಪ', ಒಬ್ಬ 'ಮುಂದಾಳು', ಒಬ್ಬ 'ಅನುಭವಿಕ', ಒಬ್ಬ 'ಯುವಕ', ಒಬ್ಬ 'ಯುವತಿ', ಒಬ್ಬ 'ಮುಂದಾಳು' ಸೂತ್ರಧಾರನ ಮೂಲಕ ಇಲ್ಲಿಯ ಮೂರು ಅಂಕಗಳನ್ನು ನಡೆಸಿಕೊಡುತ್ತಾರೆ. ಜೀವನ ಮಟ್ಟವನ್ನು ಎತ್ತರಿಸಬೇಕೆಂದು ಕನವರಿಸುವ 'ಮುಂದಾಳು'- 'ಈ ಬಾಡಿಗೆ ಭೂಲೋಕ ಸಾಕಾಯ್ತು. ಯಾಂತ್ರಿಕ ಬದುಕು ಸಾಕು. ಹುಟ್ಟು ಸಾವುಗಳ ಚಕ್ರವೂ ಸಾಕು. ಸಾಯೋದನ್ನೆ ತಪ್ಪಿಸಿದರೆ ಮನುಷ್ಯನ ಜೀವನ ಮಟ್ಟ ದೇವತ್ವದ ಪರಮಾವಧಿಗೆ ಮುಟ್ಟೀತು' ಎಂದು ನುಡಿದಾಗ, ಆತನ ಮಾತಿನ ಸೂತ್ರವನ್ನೇ ಎತ್ತಿಕೊಂಡು ಅನುಭವದ ಮುದುಕ, ಉತ್ಸಾಹದ ಯುವಕ, ಇಚ್ಛಾಶಕ್ತಿಯ ಯುವತಿ, ಕ್ರಿಯಾಶಕ್ತಿಯ ಸಾಮಾನ್ಯಪ್ಪ ಎಲ್ಲರೂ ಬದುಕಿನ ಬಗ್ಗೆ ತಂತಮ್ಮ ಭಾಷ್ಯವನ್ನು ನೀಡುತ್ತಾರೆ. ಈ ಮಾದರಿ ವ್ಯಕ್ತಿಗಳ ಅಂತರಂಗ, ಬಹಿರಂಗ, ರಣರಂಗವೆಂಬ ಮೂರಂಕಗಳ ಈ ನಾಟಕ ಬಿಚ್ಚಿಕೊಳ್ಳುತ್ತದೆ. ಕಲೆ, ಸಾಹಿತ್ಯ, ಸಂಸ್ಕೃತಿ, ಜನಜೀವನ, ಮನುಷ್ಯ ಸ್ವಭಾವ ಇವುಗಳ ಸಂಬಂಧವನ್ನು ಈ ನಾಟಕದಲ್ಲಿ ಕಾಣುತ್ತೇವೆ.

ಜೀವನ ಮತ್ತು ಸಾಹಿತ್ಯಗಳ ಅಂತರ, ಆದರ್ಶಗಳನ್ನು ಕುರಿತು ಚರ್ಚಿಸುವ 'ಕತ್ತಲೆ-ಬೆಳಕು' ಎಂಬ ನಾಟಕವೂ 'ಕೇಳು ಜನಮೇಜಯ' ಸಮಯಕ್ಕೇ ಸಾಕಾರಗೊಂಡಿತು. ಈ ನಾಟಕದ ಸಂದರ್ಭ ಮನೋರಂಜಕ ವಾಗಿದೆ. ಒಬ್ಬ ಪ್ರಕಾಶಕರ ಬೇಡಿಕೆಗೆ ಬರೆಯುವುದಾಗುವುದಿಲ್ಲವೆಂದು ನಾಟಕಕಾರ ಶ್ರೀರಂಗ, ಬರೆಯಲೇಬೇಕೆಂಬ ಆಗ್ರಹ ಪ್ರಕಾಶಕರದು. ಕೊನೆಗೆ ಪ್ರಕಾಶಕರ ಸತ್ಯಾಗ್ರಹಕ್ಕೆ ಸೋತು ನಾಟಕ ಬರೆಯಲೊಪ್ಪಿದರೆ, ಇದೇ ಸಂದರ್ಭವನ್ನೆ ವಸ್ತುವಾಗಿ ಮಾಡಿಕೊಂಡರು. ಸಾಹಿತ್ಯ ಕಲೆಗಳ ಪ್ರಶ್ನೆಗಳನ್ನು ಜೀವನದ ಪ್ರಶ್ನೆಗಳ ಎದುರುಬದಿಗಿರಿಸಿ ಒಂದರ ಮೇಲೆ ಇನ್ನೊಂದು ಬೆಳಕು ಚೆಲ್ಲುವಂತೆ ನಾಟಕ ರೂಪಗೊಳ್ಳುತ್ತದೆ-ಜೀವನ ಸಾಹಿತ್ಯದ 'ಮಾಡಲ್' ಆಗಿ. ನಾಟಕಕಾರನು, ಕಣ್ಣೆದುರು ಜೀವನವು ತನ್ನ ವೈವಿಧ್ಯದೊಂದಿಗೆ ಕಡೆದುಕೊಂಡು ಬಿದ್ದಿರುವಾಗ ಕಣ್ಣುಮುಚ್ಚಿ ಕಲ್ಪಿತ ಕಥೆಗಳನ್ನು ಬರೆಯುವುದು ತಪ್ಪು ಎಂದು ಬಗೆಯುತ್ತಾನೆ. ನಾಟಕಕಾರನ ಮನೆಯಲ್ಲೇ ಜೀವನದ ಜೀವಂತ ಪಾತ್ರಗಳು ಬಂದು ಘಟನೆಗಳಂತೆ ನಡೆಸುತ್ತವೆ. ಜೀವನದ ಕತ್ತಲೆಗೆ ಸಾಹಿತ್ಯದ ಬೆಳಕು ಎಂದು ಹೊಳೆಯಿಸುತ್ತದೆ 'ಕತ್ತಲೆ-ಬೆಳಕು' ನಾಟಕ.

ಜಗತ್ತಿನಲ್ಲೆ ಅತಿ ದೊಡ್ಡ ಪ್ರಜಾಪ್ರಭುತ್ವವೆನಿಸಿದ ಭಾರತದಲ್ಲಿ ಪ್ರಭುಗಳೆನಿಸಿಕೊಳ್ಳುವ ಪ್ರಜೆಗಳಿಗೆ ಶಿಕ್ಷಣವಾಗಲಿ, ಭವಿತವ್ಯದ ಆಕಾಂಕ್ಷೆಯಾಗಲಿ ಬೇಡವೆ ? ತಮ್ಮ ಪವಿತ್ರ ಮತವನ್ನು ಚಲಾಯಿಸುವ ವಿವೇಕ ಗೊತ್ತಿರಬೇಡವೆ? ಇಂತಹ ಪ್ರಜಾಪ್ರಭುತ್ವವೆಂದರೆ ಬರಿ 'ಲೊಳಲೊಟ್ಟೆ'-ಎಂದು ಸಾರುವ ತೀಕ್ಷ್ಣ ವಿಡಂಬನೆ 'ಉತ್ತಮ ಪ್ರಭುತ್ವ ಲೊಳಲೊಟ್ಟೆ'ಯನ್ನು ಅನುಸರಿಸಿ ಬಂದವು 'ಯಾರಿಗೆ ಮಾಡ್ತಿ ಮ್ಯಾಂ', 'ಭಾರತ ಭಾಗ್ಯವಿಧಾತ' ಮೊದಲಾದವು. ಶ್ರೀರಂಗರ ರಾಜಕೀಯ ವಿಚಾರಗಳನ್ನು ಪ್ರತಿನಿಧಿಸುವ ಮೈಲುಗಲ್ಲುಗಳು. ಶ್ರೀರಂಗರ ರಾಜಕೀಯ ಪ್ರಜ್ಞೆ ಈ ನಾಟಕಗಳಲ್ಲಿ ಚುರುಕಾಗಿ ಕಾರ್ಯಮಾಡಿದೆ. ಮಣ್ಣಿನ ಮೂರ್ತಿಗಳಂತಹ ಮುಂದಾಳುಗಳು ನಮ್ಮ, ಪ್ರಜಾಪ್ರಭುಗಳಾದರೆ ಡೆಮಾಕ್ರಾಸಿಯ ಭವಿಷ್ಯ?

'ಭಾರತ ಭಾಗ್ಯವಿಧಾತಾ!' ಹೆಸರೇ ಸೂಚಿಸುವಂತೆ ಇಂದು ದೇಶದಲ್ಲಿ ನಡೆದಿರುವ ನಮ್ಮ ಪ್ರಜಾರಾಜ್ಯದ ವಿಡಂಬನೆಗೆ ಇಲ್ಲಿಯ 'ವಿದೂಷಕ'

ನಾಯಕ ಒಂದು ಜೀವಂತ ಪ್ರತೀಕವಾಗಿದ್ದಾನೆ. ಅವನ ಮೂರ್ಖ ನಾಯಕತ್ವಕ್ಕೆ ಮೊದಲ ದೃಶ್ಯದಿಂದಲೆ ದೃಷ್ಟಾಂತಗಳು ಪ್ರದರ್ಶಿತವಾಗುತ್ತವೆ. ಬೆಳಿಗ್ಗೆ ಹತ್ತು ಹೊಡೆದು ಏಳೂವರೆ ಮಿನೀಟಿಗೆ ಸಭೆ ಸೇರಬೇಕಿತ್ತು ಮಂತ್ರಿಮಂಡಳದ್ದು. ಆದರೆ ಯಾರೂ ಬಂದಿರಲಿಲ್ಲ! ಸೋಜಿಗವೆಂದರೆ ಎಲ್ಲ ಹದಿನೈದು ಮಂತ್ರಿಗಳೂ ಏಕಕಾಲಕ್ಕೆ ಗತಪ್ರಾಣರಾಗಿದ್ದರಂತೆ! ಹೇಗಿದೆ ನಮ್ಮ ಯೂನಿಟಿ? -ಎಂಬ ಸಮಾಧಾನ ವಿದೂಷಕನಿಗೆ. ದುರ್ದೈವದಿಂದ ಎಲ್ಲರೂ ತಂತಮ್ಮ ಕುರ್ಚಿಗೆ ಅಂಟಿಕೊಂಡೇ ಅಂತರ್ಧಾನರಾಗಿದ್ದರಂತೆ. ಹೀಗಿದೆ ಕುರ್ಚಿಯ ಮಾಯೆ! ಮುಂದೆ ರಾಷ್ಟ್ರೀಕೃತ ಸ್ಮಶಾನ ಯಾತ್ರೆ! ಮುಖಂಡ ವಿದೂಷಕನ ಮಸಣ ಭಾಷಣ! ಆಮೇಲೆ ಮತ್ತೆ ತನ್ನ ಮೆಜಾರಿಟಿ ಸಂಪಾದಿಸಲು ಲಕ್ಷಗಟ್ಟಲೆ ಹಣ ಖರ್ಚುಮಾಡಿ ಪಕ್ಷಾಂತರಿಗಳನ್ನು ಕೊಂಡುಕೊಳ್ಳುತ್ತಾನೆ. ತನ್ನ ಬಹುಮತ ನಿಶ್ಚಿತ ಆಯಿತು ಎಂದು ಘೋಷಿಸಿದಾಗ ಜಯಜಯಕಾರದ ಮಧ್ಯದಲ್ಲಿ ಮುಖಂಡ ವಿದೂಷಕನ ಕೊರಳಿಗೆ ಚಪ್ಪಲ್ ಹಾರ ಬೀಳುತ್ತದೆ! 'ಜನಗಣಮನ ಅಧಿನಾಯಕ ಜಯಹೇ ಭಾರತ ಭಾಗ್ಯ ವಿಧಾತಾ' ಎಂದು ಹೇಳುವಾಗ 'ವ್ಯಕ್ತಿ' (ಈ ವ್ಯಕ್ತಿ ಹೊಲಸು ರಾಜಕೀಯಕ್ಕೆ ಹೇಸಿ ಸ್ವರ್ಗಸ್ಥನಾಗಿ ಒಂದು ವರ್ಷದ ಮೇಲೆ ಭೂತನಾಗಿ ಭೂಮಿಗೆ ಅವತರಿಸಿದ ಶ್ರೀರಂಗ) ಭಾರತ ಭಾಗ್ಯ 'ವಿಘಾತ" ಎಂದು ತಿದ್ದುಪಡಿ ಸೇರಿಸುತ್ತಾನೆ.

ರಾಜಕೀಯ ವಿಡಂಬನೆಗಳಲ್ಲಿ 'ಭಾರತ ಭಾಗ್ಯ ವಿಘಾತ' ಹೆಚ್ಚು ಜೀವಂತ, ಹೆಚ್ಚು ಪ್ರಚಲಿತ ಎನಿಸುತ್ತದೆ. ರಾಜನಾರಾಯಣರಂತಹ ಒಬ್ಬ ವಿದೂಷಕ ಪುಢಾರಿಯ ಚಿತ್ರವನ್ನು ಇಲ್ಲಿಯ ವಿದೂಷಕ ನೆನಪಿಗೆ ತರುತ್ತಾನೆ.

ಶ್ರೀರಂಗರನ್ನು ಕಂಪನಿ ನಾಟಕದ ಟ್ರಂಪ್ ಕಾರ್ಡ್ ಎನಿಸಿದ 'ಲಂಚಾವತಾರ' ಕಾಡದೆ ಬಿಟ್ಟಿಲ್ಲ. ಆದರೆ ಈ ಕಂಪನಿ ವಸ್ತುವನ್ನು ತಮ್ಮದೆ ಧಾಟಿಯ ವಿಡಂಬನೆಯಾಗಿ ಮೂಡಿಸಿದ್ದಾರೆ. ತಮ್ಮ 'ಹುಟ್ಟಿದ್ದು ಹೊಲೆ ಯೂರಿ'ನಲ್ಲಿ. ಲಂಚ ಕೊಂಡ ಪ್ರಜ್ಞಾವಂತ ವ್ಯಕ್ತಿಯನ್ನು ಇಲ್ಲಿ ಆತ್ಮ ನಿರೀಕ್ಷಣೆಗೆ ಗುರಿಪಡಿಸುತ್ತಾರೆ. ವಿವೇಕಿಯಾದ ವ್ಯಕ್ತಿಯೂ ಲಂಚಕ್ಕೆ ಪಕ್ಕಾಗುವ ಅನಿವಾರ್ಯ ಪರಿಸ್ಥಿತಿ. ಈ ಅಂತರಂಗ ಪರೀಕ್ಷಣವೆ ಈ ನಾಟಕದ ಜೀವಾಳ.

ಇಂದಿನ ವಿಜ್ಞಾನದ ಗುರಿಯೇನು ? ಮನುಕುಲ ಸಂಹಾರವೆ ? 'A tiger kills but not as artistically as man' ಎಂಬ ದೊಸ್ತೋವ್‌ಸ್ಕಿ ಉಕ್ತಿಯಂತೆ ಇಂದಿನ ವಿಜ್ಞಾನದ ಅಣ್ವಸ್ತ್ರ ಶೋಧ ಲೋಕವನ್ನೆ ಪ್ರಳಯಗೊಳಿಸಬಲ್ಲದು. ಸಾವಿಗೆ ಬೇರೆ ಸಾಧನವೇ ಬೇಕಿಲ್ಲವೆಂದು ಹೇಳುವ 'ದಾರಿ ಯಾವುದಯ್ಯ ವೈಕುಂಠಕೆ' - ವ್ಯಂಗ್ಯ ನಾಟಕವಾಗಿ ದಾಸರ ಉಕ್ತಿಯನ್ನೇ ಅಣಕಿಸಿತು. ಅತ್ಯಾಧುನಿಕ ಅಣ್ವಸ್ತ್ರಗಳನ್ನು ಪಡೆದ ಶಕ್ತಿಶಾಲಿ ರಾಷ್ಟ್ರಗಳು ಲೋಕವನ್ನು ಮೂರನೆಯ ವಿಶ್ವಮೇಧದ ಭಯದಲ್ಲಿ ಕೆಡವಿರುವಾಗ ಶ್ರೀರಂಗರ ಈ ನಾಟಕವು ಎಚ್ಚರದ ಗಂಟೆಯಾಗಿದೆ.

ಶ್ರೀರಂಗರ ನಾಟಕಗಳು ತಿಳಿಯುವುದಿಲ್ಲ ಎಂಬ ಒಂದು ಸಾಮಾನ್ಯ ಪ್ರತಿಕ್ರಿಯೆ ಶ್ರೀರಂಗರ ಕಿವಿಯನ್ನೂ ಮುಟ್ಟಿದೆ. 'ತೇಲಿಸೊ ಇಲ್ಲ ಮುಳುಗಿಸೊ' ಎಂಬ ನಾಟಕದ ವಿವರಣೆಯಲ್ಲಿ ಈ ಮಾತನ್ನೆತ್ತಿಕೊಂಡು, ಇಂತಹ ನಾಟಕಗಳನ್ನೆ ಬರೆಯುತ್ತ - 'ಈ ಲೇಖಕನು ಕೊನೆಗೆ ತನಗೆಯೆ ತಿಳಿಯದ ನಾಟಕಗಳನ್ನು ಬರೆಯತೊಡಗಿದನು' ಎಂಬ ಅಭಿಪ್ರಾಯವೂ ಮೂಡಬಹು ದೆಂದು ನುಡಿದಿರುವುದು ಮೋಜೆನ್ನಿಸುತ್ತದೆ. 'ತೇಲಿಸೊ ರಂಗ ಇಲ್ಲ ಮುಳುಗಿಸೊ' ನಾಟಕವು ಕೇವಲ ಪ್ರೇಕ್ಷಾಗೃಹದ ಪ್ರತಿಕ್ರಿಯೆಗಳನ್ನೆ ರಂಗಸ್ಥಳದ ವಸ್ತುವಾಗಿ ಮೂಡಿಕೊಂಡಿದೆ.

ಶ್ರೀರಂಗರು ಕಳೆದ ಅರ್ಧ ಶತಮಾನದಿಂದ ನಾಟಕಗಳನ್ನು ಬರೆದು, ವಿಲಾಸಿ ರಂಗಭೂಮಿಯನ್ನು ಕಟ್ಟಿ, ಅದನ್ನೂ ಜೀವಂತವಾಗಿ ಉಳಿಸಿಕೊಂಡು ಬಂದು ಇಂದಿಗೂ ತಮ್ಮ ಸೃಜನಶೀಲತೆಯಿಂದ 'ರೆಲೆವಂಟ್' ಆಗಿ ಉಳಿದಿದ್ದಾರೆ. ಸಮಕಾಲೀನ ಆಗುಹೋಗುಗಳಿಗೆ ಸ್ಪಂದಿಸುವ ಶ್ರೀರಂಗರ ನಾಟ್ಯ ಲೇಖನಿ ಸುಸಂಬದ್ಧ, ಅಸಂಬದ್ಧ ಲೇಬಲ್ಲುಗಳನ್ನು ಮೀರಿ ನಿರಂತರವೂ, ನವನವೋನ್ಮೇಷಶಾಲಿನಿಯಾದ ಪ್ರಜ್ಞೆಯನ್ನು ಬೆಳೆಸಿಕೊಂಡು ಬಂದಿದೆ. ಪ್ರಯೋಗಶೀಲತೆಯಲ್ಲಿ, ತಂತ್ರ ನಾವೀನ್ಯದಲ್ಲಿ, ಶೈಲಿಯ ನವ್ಯತೆಯಲ್ಲಿ, ಅತ್ಯಾಧುನಿಕತೆಯನ್ನು ತೋರುತ್ತ ಬಂದಿರುವ ಇವರ ಪ್ರತಿಭೆಗೆ ಸವಕಳಿಯೆಂಬುದಿಲ್ಲ. ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಯಾವುದೆ ಕಥಾವಸ್ತು ಇರಲಿ ಅವುಗಳನ್ನು ಅರ್ಥೈಸುವಲ್ಲಿ ಸಮಕಾಲೀನ ಪ್ರಜ್ಞೆಯನ್ನು ತೋರುತ್ತಾರೆ. 'ಸಂಜೀವಿನಿ', 'ಸಾವಿತ್ರಿ', 'ಸಿರಿಪುರಂದರ'ಗಳಲ್ಲಿ ಲೋಕೋತ್ತರ ಶಕ್ತಿಗಳು ಕಾರ್ಯ ಮಾಡಿದರೂ ಅವು ಸಾಂಕೇತಿಕವಾಗಿ ಸಮಕಾಲೀನತೆಯನ್ನು ಸೂಚಿಸುತ್ತವೆ. 'ಸಂಪದ್ಧರ್ಮ'ದಲ್ಲಿ ಮಹಾಭಾರತದ ವನಪರ್ವದಲ್ಲಿ ವಿಶ್ವಾಮಿತ್ರನು ಕ್ಷಾಮ ಕಾಲದಲ್ಲಿ ಮೊದಲು ತಾನು ಬದುಕಬೇಕೆಂದು ನಾಯಿಯ ಮಾಂಸ ತಿನ್ನುವ ಸನ್ನಿವೇಶವು ಆಪದ್ಧರ್ಮವಲ್ಲ, ಸಂಪದ್ಧರ್ಮ ಎಂಬುದು ನಾಟಕಕಾರರ ಅರ್ಥೈಸುವಿಕೆ. ದೇವೇಂದ್ರನಿಗೆ ವಿಶ್ವಾಮಿತ್ರನನ್ನು ಘಟ್ಟು ಮಾಡುವುದಿದೆ. ಅದಕ್ಕಾಗಿಯೆ ಭೂಮಿಯ ಮೇಲೆ ದ್ವಾದಶ ಕ್ಷಾಮವನ್ನುಂಟು ಮಾಡುತ್ತಾನೆ. ಜನ-ದನ ಹೊಟ್ಟೆಗಿಲ್ಲದೆ ಒದ್ದಾಡಿ ಸಾಯುವಾಗ ವಿಶ್ವಾಮಿತ್ರ ಮೊದಲು ತಾನು ಬದುಕಬೇಕು, ಎಂದರೆ ಲೋಕ ಬದುಕೀತು ಎಂದು ಹೊಲೆಯನ ಪಾಲಿನ ನಾಯಿಯ ಮಾಂಸವನ್ನು ಅಪಹರಿಸಿ, ಅದು ಆಪದ್ಧರ್ಮವೆಂದು ಸ್ವಾಹಾ ಮಾಡುತ್ತಾನೆ. ಇದು ಆಪದ್ಧರ್ಮವಲ್ಲ, ಸಂಪದ್ಧರ್ಮ ಎಂಬುದು ನಾಟಕಕಾರರ ಧ್ವನಿತಾರ್ಥ. ಶ್ರೀರಂಗರ ಪ್ರಭಾವೀ ಏಕಾಂಕಗಳಲ್ಲಿ ಇದು ವಿಶಿಷ್ಟವಾದುದು.

ವಿಲಾಸಿ ರಂಗ ವಿಧಾತರೆಂದು ಶ್ರೀರಂಗರು ಆದ್ಯರು. ಪ್ರಗತಿಶೀಲ, ನವ್ಯ ನಾಟಕಕಾರರೆಂದೂ ಅವರು ಆದ್ಯರು. ತಂತ್ರ, ಪ್ರಯೋಗಾತ್ಮ ಕಲೆಯ ದೃಷ್ಟಿಯಿಂದ ಅವರು ಒಂದು ಹೈ-ವೇ ಹಾಕಿಕೊಟ್ಟಿದ್ದಾರೆ. Unity of time, Unity of space ದೃಷ್ಟಿಯಿಂದ ಶ್ರೀರಂಗರ ನಾಟಕಗಳು ಪರಿಪೂರ್ಣವಾಗಿವೆ. ಅವರ ಒಂದೊಂದು ಅಂಕ, ಒಂದೊಂದು ದೃಶ್ಯ. ರಂಗ ಪ್ರದರ್ಶನದ ದೃಷ್ಟಿಯಿಂದ ಅವರ ನಾಟಕಗಳು ಅತ್ಯಂತ ಅನುಕೂಲ. ಹೆಚ್ಚು ದೃಶ್ಯಾವಳಿಗಳನ್ನು ಬದಲಿಸುವ ಗೊಂದಲವಿಲ್ಲದೆ ನಾಟಕವು ಬೆಳವಣಿಗೆಯನ್ನು ಕಾಣುತ್ತದೆ. ಒಂದು ಪಾತ್ರದ ಮಾರ್ಮಿಕ ನಿರೂಪಣೆಯಲ್ಲಿಯೆ ಘಟನೆಯ ಆಗುಹೋಗನ್ನು ರಂಗದ ಮೇಲೆ ಪ್ರದರ್ಶಿಸಿದಂತೆ ಕಲ್ಪನೆ ಕೊಡುವ ಅವರ ಕುಶಲತೆ ಅವರದೆ. ('ಶೋಕ ಚಕ್ರ'ದ ಕಾರಕೂನ, 'ಪ್ರಪಂಚ ಪಾಣಿಪತ್ತಿ'ನ ನಿಂಗಪ್ಪನ ನಿರೂಪಣೆಗಳನ್ನು ನೋಡಬೇಕು.)

ಇಂದು ರಂಗ ಪ್ರಯೋಗದ ತಂತ್ರ ಶ್ರೀರಂಗರ ತಂತ್ರವನ್ನು ಮೀರಿಸಿದಂತೆ ಕಂಡರೂ ನಾಟಕ ರಚನೆಯಲ್ಲಿ ಸ್ವಂತಿಕೆ ಇಲ್ಲದೆ (ಅನುವಾದ, ರೂಪಾಂತರಗಳೆ ಹೆಚ್ಚು), ಪ್ರಯೋಗ ತಂತ್ರದಲ್ಲಿ ಪಾಶ್ಚಾತ್ಯ ಅನುಕರಣದ ಹೊರತಾಗಿ ಇನ್ನೇನೂ ಇಲ್ಲದೆ, ನಾಟಕಕಾರನ ಕೃತಿಯನ್ನು ನಿರ್ದೇಶಕನು ತನ್ನ ಪ್ರತಿಷ್ಠೆಯ ಅವಶ್ಯಕತೆಗಳಿಗೆ ತಕ್ಕಂತೆ ಮಾರ್ಪಡಿಸಿಕೊಂಡು ಒಮ್ಮೊಮ್ಮೆ ಮೂಲ ನಾಟಕದ ಜೀವಾಳವನ್ನೆ ಹಿಚುಕಿಬಿಡಬಹುದೆಂಬ ಭಯ ಶ್ರೀರಂಗರಿಗೂ ಇದ್ದಿರಬೇಕು. ಅಂತೆಯೆ ಅವರಿಗೆ ಈ ಕೈಗಡದ ತಂತ್ರ ನಾವೀನ್ಯ production ನ ಈ unwieldy ಪರಿಕರ ಅಷ್ಟೊಂದು ಪಸಂದಿಲ್ಲ. (ಪಾಶ್ಚಾತ್ಯ ರಂಗಭೂಮಿಯ ಪ್ರತ್ಯಕ್ಷ ಅನುಭವವಿದ್ದೂ ಅನುಕರಣೆಯ ಗುಲಾಮಗಿರಿ ಅವರಿಗೆ ಬರಲಿಲ್ಲ.) ಒಟ್ಟು ಶ್ರೀರಂಗರು ಹೇಳುವುದಿಷ್ಟೆ - "ನಾಟಕವನ್ನೇನೊ ಬರೆದಿದ್ದೇನೆ. ರಂಗದ ಮೇಲೆ ಪ್ರಯೋಗಿಸಿ ತೇಲಿಸಿರಿ, ಇಲ್ಲವೆ ಮುಳುಗಿಸಿರಿ. ಅದರ ಹೊಣೆ ನನ್ನದಲ್ಲ."

❑

# ಕುವೆಂಪು

ಪ್ರಭುಶಂಕರ

ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ ಕುವೆಂಪು ಅವರ ಸಾಹಿತ್ಯಕ ಬೆಳವಣಿಗೆ, ಸಾಧನೆ, ಸಿದ್ಧಿಗಳಿಂದ, ಅವರು ಇತರ ಕವಿಗಳ ಮೇಲೆ ಬೀರಿದ ಪ್ರಭಾವದಿಂದ ಕಂಗೊಳಿಸುತ್ತದೆ. ಕಾವ್ಯ, ನಾಟಕ, ಸಣ್ಣ ಕಥೆ, ಕಾದಂಬರಿ, ವಚನ, ಕವನ, ಮಹಾಕಾವ್ಯ, ಸಾಹಿತ್ಯ ವಿಮರ್ಶೆ - ಈ ಒಂದೊಂದು ಪ್ರಕಾರದಲ್ಲೂ ಗಣನೀಯವಾದ ಕೊಡುಗೆಯನ್ನು ಕುವೆಂಪು ನೀಡಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದ ಯಾವುದೇ ಪ್ರಕಾರವನ್ನು ಕುರಿತು ಅಧ್ಯಯನ ನಡೆಸುವಾಗಲೂ ಕುವೆಂಪುರವರ ಕೃತಿಗಳನ್ನು ಹೊರತುಗೊಳಿಸಿದರೆ ಆ ಅಧ್ಯಯನ ಅಸಂಪೂರ್ಣ ಎನ್ನುವಷ್ಟರ ಮಟ್ಟಿಗೆ ಪ್ರತಿಯೊಂದು ವಿಭಾಗದಲ್ಲೂ ಗಟ್ಟಿಕೃತಿಗಳನ್ನು ಅವರು ರಚಿಸಿದ್ದಾರೆ. ಕನ್ನಡಕ್ಕೆ ರಾಷ್ಟ್ರಮಟ್ಟದ ಖ್ಯಾತಿಯನ್ನು ತಂದುಕೊಟ್ಟ ಮೊದಲಿಗರಲ್ಲಿ ಅವರೂ ಒಬ್ಬರು. ಇಂಗ್ಲಿಷ್ ಮುಂತಾದ ಯೂರೋಪಿಯನ್ ಭಾಷೆಗಳಿಗೆ ಅವರ ಕೃತಿಗಳು ಅನುವಾದಗೊಂಡಾಗ ಕನ್ನಡಕ್ಕೆ ಅಂತರರಾಷ್ಟ್ರೀಯ ಮಟ್ಟದ ಖ್ಯಾತಿಯೂ ದೊರಕುತ್ತದೆ ಎಂಬುದು ಸ್ಪಷ್ಟವಾಗಿಯೇ ಇದೆ.

ಕುವೆಂಪು ಅವರ ಪೂರ್ಣ ಹೆಸರು ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಬಳಿ ಹರಿಯುತ್ತಿರುವ ತುಂಗಾ ನದಿಯನ್ನು ದಾಟಿ ಒಂಬತ್ತು ಮೈಲು ಹೋದರೆ ಕಾಡಿನ ನಡುವೆ ಬೆಟ್ಟಕ್ಕೆ ಅಂಟಿ ಕೊಂಡಂತೆ ಇರುವ ಮನೆ ಕುಪ್ಪಳ್ಳಿ, ಅದೇ ಅವರ ಊರು. ಅವರು ಹುಟ್ಟಿದ್ದು ಮಾತ್ರ ಕೊಪ್ಪಕ್ಕೆ ಸಮೀಪದ ಹಿರೇಕೊಡಿಗೆಯಲ್ಲಿ, ತಮ್ಮ ತಾಯಿಯ ತವರುಮನೆಯಲ್ಲಿ 1904ನೇ ಇಸವಿ ಡಿಸೆಂಬರ್ 29ನೇ ತಾರೀಖು. ಕುವೆಂಪು ಬೆಳೆದದ್ದು ಕುಪ್ಪಳ್ಳಿಯಲ್ಲಿ. ಸುತ್ತ ದಟ್ಟವಾದ ಕಾಡು, ಮುಗಿಲು ಮುಟ್ಟುತ್ತಿರುವ ಪರ್ವತ ಪಂಕ್ತಿಗಳು. ಹೀಗಾಗಿ ಅವರ ಮನೆ ತುಂಬ ಸುಂದರವಾದ ಪರಿಸರದಲ್ಲಿದೆ. ಪಕ್ಕದ ದಟ್ಟವಾದ ಕಾಡಿನಲ್ಲಿ ಅವರು ಚಿಕ್ಕವರಾಗಿದ್ದ ಕಾಲಕ್ಕೆ ಜಿಂಕೆ, ಹುಲಿ, ಕಾಡುಹಂದಿ ಇತ್ಯಾದಿ ಪ್ರಾಣಿಗಳು ಯಥೇಚ್ಛವಾಗಿದ್ದುವು. ನೂರಾರು ಬಗೆಯ ಹಕ್ಕಿಗಳು ಕೂಡ. ವರ್ಷದಲ್ಲಿ ಆರು ತಿಂಗಳು ಮಳೆ. ದಟ್ಟವಾದ ಕಪ್ಪು ಮೋಡಗಳ ಮೆರವಣಿಗೆ, ಸಿಡಿಲು ಗುಡುಗುಗಳ ಆರ್ಭಟ. ಮಳೆ ಇಲ್ಲದಾಗ, ಬಾನು ಶುಭ್ರ ನೀಲಿ ಮೈಯಲ್ಲಿ ಮಿಂಚನ್ನು ತುಳುಕಿಸುವಷ್ಟು ಸುಂದರವಾದ ಸೂರ್ಯೋದಯ, ಚಂದ್ರೋದಯ, ಸೂರ್ಯಾಸ್ತಗಳು. ಇವೆಲ್ಲಕ್ಕೆ ಹಿನ್ನೆಲೆಯಾಗಿ ತುಂಗೆಯ ಮಂಜುಳ ಗಾನ. ಹಿರಿಯರ ಜೊತೆ ಬಾಲಕನು ಪಾಲ್ಗೊಳ್ಳುತ್ತಿದ್ದ ಹುಲಿ, ಹಂದಿ, ಮೀನುಗಳ ಷಿಕಾರಿ. ಈ ಎಲ್ಲವೂ ಕವಿ ಶಿಶುವಿನ, ಕವಿ ಬಾಲಕನ, ಕವಿ ತರುಣನ ಚೇತನದ ಆಳಕ್ಕೆ ನದಿಯಾಗಿ, ಜಲಪಾತವಾಗಿ ಧುಮ್ಮಿಕ್ಕಿ ಮಡುಗಟ್ಟಿ ನಿಂತುವು. ಅವನ ದೇಹದ ರಕ್ತದ ಭಾಗವಾಗಿ ಹರಿಯತೊಡಗಿದುವು.

ಕವಿ ಬಾಲಕನಿಗೆ ಚಿಕ್ಕಂದಿನಿಂದಲೇ ಸಾಹಿತ್ಯ ಸಂಸ್ಕಾರವೂ ದೊರಕಿತು. ಮನೆಯಲ್ಲಿ ತಂದೆ, ಚಿಕ್ಕಪ್ಪ ಇಬ್ಬರೂ ಸಾಹಿತ್ಯಾಸಕ್ತರು. ಜೈಮಿನಿ ಭಾರತ, ತೊರವೆ ರಾಮಾಯಣಗಳ ವಾಚನ ಮನೆಯಲ್ಲಿ ನಡೆಯುತ್ತಿತ್ತು. ಬಾಲಕ ಅದನ್ನು ಆಸಕ್ತಿಯಿಂದ ಕೇಳುತ್ತಿದ್ದ.

ಹುಡುಗನಿಗೆ ಜೊತೆಯ ಇತರ ಬಾಲಕರೊಡನೆ, ಮನೆಯೇ ಶಾಲೆಯೂ ಆಯಿತು. ಅನೇಕ 'ಐಗಳು' ಬಂದು ಹೋಗಿ ಮಾಡಿ ವಿದ್ಯಾಭ್ಯಾಸ ಕುಂಟುತ್ತಾ ನಡೆಯಿತು. "ಕಡೆಗೆ ರೋಮನ್ ಕ್ಯಾಥೊಲಿಕ್ ಜಾತಿಗೆ ಸೇರಿದ ಮಂಗಳೂರು ಆನಂದರಾಯರೆಂಬ ನವೀನ ರೀತಿಯ ಐಗಳು ದಯಮಾಡಿಸಿದರು." ಅವರು ಕವಿಯ ಚೇತನಕ್ಕೆ ಇಂಗ್ಲಿಷ್ ಭಾಷೆ ಸಾಹಿತ್ಯಗಳ ವಿದ್ಯುತ್ ಸ್ಪರ್ಶವನ್ನು ನೀಡಿದರು. ಮುಂದೆ ಪುಟ್ಟಪ್ಪನವರಿಗೆ ಸುಮಾರು ಎಂಟುವರ್ಷ ವಯಸ್ಸಾಗಿದ್ದಾಗ ಅವರನ್ನು ಸಮೀಪದ ತೀರ್ಥಹಳ್ಳಿಗೆ ಕರೆದೊಯ್ದು ಅಲ್ಲಿ ಶಾಲೆಗೆ ಸೇರಿಸಿದರು. ಈ ಮಧ್ಯೆ ಅವರ ಕುಟುಂಬಕ್ಕೆ ಮೊದಲನೆಯ ಮಹಾಯುದ್ಧದಿಂದ ತುಂಬಲಾರದ ನಷ್ಟ ಉಂಟಾಯಿತು. ತಂದೆ ಧೈರ್ಯ ಗುಂದಿ ಊರನ್ನು ಬಿಟ್ಟು ತೀರ್ಥಹಳ್ಳಿಗೆ ವಲಸೆ ಹೋದರು. ಅನಂತರ, ಸ್ವಲ್ಪ ಸಮಯದಲ್ಲೇ ಹೆಂಡತಿಯನ್ನು, ಪುಟ್ಟಪ್ಪನವರನ್ನು, ಅವರಿಗಿಂತ ಚಿಕ್ಕವರಾದ ಇಬ್ಬರು ಹೆಣ್ಣುಮಕ್ಕಳನ್ನು ಬಿಟ್ಟು ತೀರಿಕೊಂಡರು.

ಪುಟ್ಟಪ್ಪನವರ ವಿದ್ಯಾಭ್ಯಾಸ ಮೈಸೂರು ಹಾರ್ಡ್‌ವಿಕ್ ಹೈಸ್ಕೂಲಿನಲ್ಲಿ ಮುಂದುವರಿಯಿತು. ಷೆಲ್ಲಿ, ವರ್ಡ್ಸ್‌ವರ್ತ್, ಕೀಟ್ಸ್ ಮುಂತಾದ ಆಂಗ್ಲ ಕವಿಗಳ ಕವನಗಳನ್ನು ಸ್ವತಂತ್ರವಾಗಿ ಓದುವ ಶಕ್ತಿ ಅವರಿಗೆ ಬಂದಿತ್ತು. ಟಾಲ್‌ಸ್ಟಾಯ್ ಮುಂತಾದವರ ಕಾದಂಬರಿಗಳು, ಪೌರ್ವಾತ್ಯ, ಪಾಶ್ಚಾತ್ಯ ತತ್ವಜ್ಞರ ಚಿಂತನಶೀಲ ಬರವಣಿಗೆಗಳು ; ಅವರ ಭಾವ, ಬುದ್ಧಿಗಳಿಗೆ ಪುಷ್ಟಿ ನೀಡಿದುವು. ಶ್ರೀರಾಮಕೃಷ್ಣಾಶ್ರಮದ ಮೈಸೂರು ಶಾಖೆಯ ಅಧ್ಯಕ್ಷರಾದ ಶ್ರೀ ಸ್ವಾಮಿ ಸಿದ್ಧೇಶ್ವರಾನಂದರು ಬಾಲಕನಿಗೆ ತುಂಬ ಪ್ರಿಯರಾಗಿ ಅವನ ಸಕಲ ಯೋಗಕ್ಷೇಮಗಳನ್ನು ವಹಿಸಿಕೊಂಡರು. ಸರ್ವಧರ್ಮ ಸಮನ್ವಯಾ ಚಾರ್ಯರಾದ ಶ್ರೀರಾಮಕೃಷ್ಣರೂ ಅವರ ಶಿಷ್ಯರಾದ ಸ್ವಾಮಿ ವಿವೇಕಾ ನಂದರೂ ಪುಟ್ಟಪ್ಪನವರಿಗೆ ಆದರ್ಶವ್ಯಕ್ತಿಗಳಾದರು, ಅವರ ಚೇತನ ಸಮಸ್ತವನ್ನೂ ಆಕ್ರಮಿಸಿಕೊಂಡರು.

ಇಂಗ್ಲಿಷ್ ಕವಿಗಳ ಕವನಗಳ ಸಮ್ಮೋಹನ, ಇಂಗ್ಲಿಷ್ ಭಾಷೆ ಛಂದಸ್ಸುಗಳ ಮೇಲಣ ಪ್ರಭುತ್ವ ಇವು ಬಾಲಕನಲ್ಲಿ ಹೊಸ ಆಸೆ ಆಕಾಂಕ್ಷೆಗಳನ್ನು ಅರಳಿಸಿದವು. ಹದಿನೆಂಟರ ಹರೆಯದ ಪುಟ್ಟಪ್ಪ 1922ರಲ್ಲಿ ತಮ್ಮ ಇಂಗ್ಲಿಷ್ ಕವನಗಳ ಪುಟ್ಟ ಸಂಕಲನವೊಂದನ್ನು 'ಬಿಗಿನರ್ಸ್‌ಮ್ಯೂಸ್' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಆಗಿನ್ನೂ ಅವರು ಹೈಸ್ಕೂಲು ಮೂರನೆಯ ತರಗತಿಯ ವಿದ್ಯಾರ್ಥಿ. ಕವನಗಳನ್ನು ಓದಿದ ಮಿತ್ರರೂ, ಹಿರಿಯರೂ ಕವನಗಳ ಭಾಷೆಗೆ, ಉಪಮೆ ರೂಪಕಗಳಿಗೆ, ವಸ್ತು ವೈವಿಧ್ಯಕ್ಕೆ, ಕಲ್ಪನಾ ಚಾತುರ್ಯಕ್ಕೆ ಮಾರುಹೋದರು. ಆಕಸ್ಮಿಕ ಎಂಬಂತೆ ಮೈಸೂರಿಗೆ ಬಂದಿದ್ದ ಐರಿಷ್ ಕವಿ ಜೇಮ್ಸ್ ಕಸಿನ್ಸ್ ಅವರಿಗೆ ಪುಟ್ಟಪ್ಪನವರು ತಮ್ಮ ಕವನಗಳನ್ನು ತೋರಿಸಿದರು. ಕವನಗಳನ್ನು ಓದಿದ ಜೇಮ್ಸ್ ಕಸಿನ್ಸ್ ಮೆಚ್ಚಿ ಪ್ರೋತ್ಸಾಹಿಸು ವುದರ ಬದಲು 'ರವೀಂದ್ರರು ತಮ್ಮ ತಾಯಿನುಡಿಯಾದ ಬಂಗಾಳಿಯಲ್ಲಿ ಬರೆದಂತೆ, ನೀನು ನಿನ್ನ ತಾಯಿನುಡಿಯಾದ ಕನ್ನಡದಲ್ಲಿ ಬರೆ, ಉತ್ತಮ ಕವಿಯಾಗುತ್ತೀಯ" ಎಂದರು. ಆ ಕ್ಷಣಕ್ಕೆ ಅದನ್ನು ಒಪ್ಪದ ಪುಟ್ಟಪ್ಪನವರು ಪ್ರಯೋಗ ಮಾಡಿದರೆ ತಪ್ಪೇನು ಎಂದು ತಮ್ಮದೇ 'ಏಪ್ರಿಲ್' ಎಂಬ ಆಂಗ್ಲಕವನವನ್ನು 'ಚೈತ್ರ-ವೈಶಾಖ' ಎಂದು ಅನುವಾದಿಸಿ ಪ್ರಕಟಿಸಿದರು. ಕವಿಯ ಜೀವನವಾಹಿನಿ ಇಂಗ್ಲಿಷಿನಿಂದ ಕನ್ನಡದ ಕಡೆಗೆ ತಿರುಗಿ ಹರಿಯ ತೊಡಗಿತು.

ಕೆ.ವಿ. ಪುಟ್ಟಪ್ಪನವರ ವಿದ್ಯಾಭ್ಯಾಸ ಮುಂದುವರಿಯಿತು. ಎಂಟ್ರೆನ್ಸ್ ಪರೀಕ್ಷೆಯಲ್ಲಿ ರಸಾಯನ ಶಾಸ್ತ್ರ ಮತ್ತು ಜೀವವಿಜ್ಞಾನಗಳನ್ನೂ, ಬಿ.ಎ. ತರಗತಿಯಲ್ಲಿ ಮನಶ್ಶಾಸ್ತ್ರ ಮತ್ತು ತತ್ವಶಾಸ್ತ್ರಗಳನ್ನೂ ಅಧ್ಯಯನದ ವಿಷಯಗಳಾಗಿ ಆರಿಸಿಕೊಂಡರು.

ಈ ಮಧ್ಯೆ ಅವರಿಗೆ ತೀವ್ರವಾದ ಅನಾರೋಗ್ಯವುಂಟಾಯಿತು. ಅವರನ್ನು ಆಸ್ಪತ್ರೆಗೂ ಸೇರಿಸಬೇಕಾಯಿತು. ಆಸ್ಪತ್ರೆಯಿಂದ ಅವರು ಹಿಂದಿರುಗಿದ್ದು ತಾವು ಅದುವರೆಗೂ ವಾಸಿಸುತ್ತಿದ್ದ ಸಣ್ಣ ಕೋಣೆಗಲ್ಲ, ಶ್ರೀರಾಮಕೃಷ್ಣಾಶ್ರಮಕ್ಕೆ. ಅದಕ್ಕೆ ನೆರವಾದದ್ದು ಅವರ ಗುರುಗಳಾದ ಶ್ರೀ ನಾ. ಕಸ್ತೂರಿಯವರು. ಆಶ್ರಮದಲ್ಲಿ ಔದಾರ್ಯದ ಆಶ್ರಯವಿತ್ತವರು ಶ್ರೀ ಸ್ವಾಮಿ ಸಿದ್ಧೇಶ್ವರಾನಂದರು. ಮುಂದೆ ಹನ್ನೆರಡು ವರ್ಷಗಳ ಕಾಲ, ಓದು ಮುಗಿದು ಅಧ್ಯಾಪಕ ವೃತ್ತಿಯಲ್ಲಿ ತೊಡಗಿದಾಗಲೂ ಪುಟ್ಟಪ್ಪನವರಿಗೆ ಶ್ರೀ ರಾಮಕೃಷ್ಣಾ ಶ್ರಮವೇ ಮನೆಯಾಯಿತು.

ಪುಟ್ಟಪ್ಪನವರ ಕನ್ನಡ ಕವನಗಳು ಜನಪ್ರಿಯವಾದವು. ವಿದ್ಯಾಥಿಗಳು ಮಾತ್ರವಲ್ಲದೆ ಅವರ ಅಧ್ಯಾಪಕ ವರ್ಗದವರೂ ವಿದ್ಯಾರ್ಥಿ ಕವಿಯನ್ನು ಮೆಚ್ಚಿ ಪ್ರಶಂಸಿಸಿದರು. ಹಾಗೆ ಹೃದಯ ಶ್ರೀಮಂತಿಕೆಯನ್ನು ತೋರಿದ ಮಹನೀಯರಲ್ಲಿ ಪ್ರಾಧ್ಯಾಪಕರುಗಳಾದ ಪ್ರೊ.ಟಿ.ಎಸ್. ವೆಂಕಣ್ಣಯ್ಯನವರೂ, ಪ್ರೊ.ಎ.ಆರ್.ಕೃಷ್ಣಶಾಸ್ತ್ರಿಗಳೂ ಮಾತ್ರವಲ್ಲದೆ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದು ಹೊಸಗನ್ನಡ ಕಾವ್ಯದ ದಿಕ್ಕುದೆಸೆಗಳನ್ನು ರೂಪಿಸುತ್ತಿದ್ದ ಪ್ರೊ.ಬಿ.ಎಂ. ಶ್ರೀಕಂಠಯ್ಯನವರೂ ಸೇರಿದ್ದರು. ತಮ್ಮ ಮೇಲೆ "ಅಹೇತುಕ ಸ್ವರೂಪದ ವಿಶ್ವಾಸದಿಂದ ಪ್ರಭಾವ ಬೀರಿದವರಲ್ಲಿ ಪ್ರೊ. ವೆಂಕಣ್ಣಯ್ಯನವರು ಪೂಜ್ಯ ಸಿದ್ಧೇಶ್ವರಾನಂದರಿಗೆ ದ್ವಿತೀಯ ಮಾತ್ರರಾಗಿದ್ದರು" ಎಂದು ಪುಟ್ಟಪ್ಪನವರು ಕೃತಜ್ಞತೆಯ ಮಾತುಗಳಾನ್ನಾಡಿದ್ದಾರೆ.

1924ರಲ್ಲಿ ಪುಟ್ಟಪ್ಪನವರು ಮಹಾತ್ಮಾ ಗಾಂಧೀಜಿಯವರ ದರ್ಶನ ಪಡೆದರು. ರಾಜಕೀಯ ಇವರ ಮೇಲೆ ಏನೂ ಪ್ರಭಾವ ಬೀರಲಿಲ್ಲ. ಆಧ್ಯಾತ್ಮ-ಕಾವ್ಯ ಇವೇ ಅವರ ಎರಡು ಕಣ್ಣುಗಳಾದವು.

ಎಂ.ಎ. ತರಗತಿಯಲ್ಲಿ ಪುಟ್ಟಪ್ಪನವರು ಆರಿಸಿಕೊಂಡ ವಿಷಯ ತತ್ವಶಾಸ್ತ್ರ. ಆದರೆ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಯವರ ಒಲುಮೆಯ ಒತ್ತಾಯದಿಂದ ಅದೇ ವರ್ಷ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಆರಂಭವಾದ ಕನ್ನಡ ಎಂ.ಎ.ಗೆ ಸೇರಿದರು. ತಮ್ಮ ಈ ಗುರುಗಳು ತಮ್ಮ ಮನವೊಲಿಸಿ ಕನ್ನಡವನ್ನೇ ಅಧ್ಯಯನದ ವಿಷಯವನ್ನಾಗಿ ಆಯ್ಕೆ ಮಾಡಿಕೊಳ್ಳಲು ತಾವು ನಿಶ್ಚಯಿಸುವಂತೆ ಮಾಡಿದ ಕ್ಷಣವನ್ನು ಕುವೆಂಪು "ಅಮೃತ ಕ್ಷಣ" ಎಂದು ಕರೆದಿದ್ದಾರೆ. ಕವಿಯ ಬದುಕಿನ ದಿಕ್ಕು ಇದರಿಂದ ಬದಲಾಯಿಸಿದಂತೆ ಕನ್ನಡ ಸಾಹಿತ್ಯದ ದಿಕ್ಕೂ ಬದಲಾದದ್ದು ಐತಿಹಾಸಿಕ ದಾಖಲೆಯಾಗಿ ಉಳಿದಿದೆ.

ವಿದ್ಯಾರ್ಥಿಯಾಗಿಯೇ ಪುಟ್ಟಪ್ಪನವರು ಅನೇಕ ಕವನಗಳನ್ನು ರಚಿಸುತ್ತಾ ಹೋದರು. ಎ.ಆರ್.ಕೃಷ್ಣಶಾಸ್ತ್ರಿಗಳ ಒತ್ತಾಯದಿಂದ ಅವರು ಏರ್ಪಡಿಸಿದ್ದ ಕವಿ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದರು. ಅವರನ್ನು ನೋಡುವುದಕ್ಕೆ ಜನ ಸೇರುತ್ತಿದ್ದುದರಲ್ಲಿ ಏನು ಆಶ್ಚರ್ಯವಿರಲಿಲ್ಲ. ಏಕೆಂದರೆ ಕೃಷ್ಣಶಾಸ್ತ್ರಿಗಳು ವರ್ಣಿಸಿರುವಂತೆ ವಿದ್ಯಾರ್ಥಿಯಾಗಿದ್ದಾಗ ಅವರು "ಬೇಲೂರು ಗುಡಿಯ ಗೋಡೆಯ ಮೇಲೆ ಕೆತ್ತಿದ್ದ ದೇವತಾ ವಿಗ್ರಹದಂತೆ" ಇದ್ದರು. ಅನಂತರ ತಾರುಣ್ಯ ಅವರಿಗೆ ಇನ್ನೂ ಅತಿಶಯವಾದ ಸೌಂದರ್ಯ, ಆಕರ್ಷಣೆಗಳನ್ನು ನೀಡಿತು.

ಎಂ.ಎ. ತರಗತಿಗೆ ಸೇರಿದ ಮೊದಲಲ್ಲಿ 'ಜಲಗಾರ', ಅನಂತರ 'ಯಮನ ಸೋಲು' ನಾಟಕಗಳನ್ನು ಪುಟ್ಟಪ್ಪನವರು ರಚಿಸಿದರು. ಅವೆರಡೂ ಭಾರೀ ಯಶಸ್ಸನ್ನು ಗಳಿಸಿದುವು. 'ಸರಳ ರಗಳೆ'ಯನ್ನು ಮೊತ್ತಮೊದಲ ಬಾರಿಗೆ ಯಶಸ್ವಿಯಾಗಿ ನಾಟಕದ ರಚನೆಗೆ ಬಳಸಿಕೊಂಡ ಕೀರ್ತಿ ಅವರದು. ಈಗಾಗಲೇ ಅವರು 'ಅಮಲನ ಕಥೆ' ಎಂಬ ತಮ್ಮ ಪ್ರಪ್ರಥಮ ಕನ್ನಡ ಪುಸ್ತಕದಿಂದಲೂ, 'ಬೊಮ್ಮನಹಳ್ಳಿ ಕಿಂದರಜೋಗಿ' (ರಾಬರ್ಟ್ ಬ್ರೌನಿಂಗ್‌ನ The Pied-Piper of Hamelin ಕೃತಿಯ ರೂಪಾಂತರ) ನೀಳ್ಗವನದಿಂದಲೂ ಕನ್ನಡ ನಾಡಿನ ಕಾವ್ಯ-ಪ್ರಿಯರ ಹೃದಯದಲ್ಲಿ ಶಾಶ್ವತವಾದ ಸ್ಥಾನವನ್ನು ಗಳಿಸಿಕೊಂಡಿದ್ದರು. ಈ ನಾಟಕಗಳು ಅವರಿಗೆ ಇನ್ನೂ ಹೆಚ್ಚಿನ ಯಶಸ್ಸನ್ನು ತಂದುವು.

1929 ಪುಟ್ಟಪ್ಪನವರ ಬದುಕಿನಲ್ಲಿ ಅತ್ಯಂತ ಮಹತ್ವದ ವರ್ಷ. ಅದು, ಅವರು ಎಂ.ಎ. ಪದವಿ ಗಳಿಸಿಕೊಂಡ ವರ್ಷವೆಂದಲ್ಲ, ಈ ವೇಳೆಗೆ ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿದ್ದ ಬಿ.ಎಂ. ಶ್ರೀಕಂಠಯ್ಯನವರು ಪುಟ್ಟಪ್ಪನವರನ್ನು ಕನ್ನಡ ಅಧ್ಯಾಪಕರಾಗಿ ನೇಮಿಸಿದ ವರ್ಷ ಎಂದು ಮಾತ್ರವಲ್ಲ - ಆಧ್ಯಾತ್ಮಿಕ ದೃಷ್ಟಿಯಿಂದಲೂ ಅದು ಅವರಿಗೆ ಮಹತ್ವದ ವರ್ಷ. ಸ್ವಾಮಿ ಸಿದ್ಧೇಶ್ವರಾನಂದರು ಪುಟ್ಟಪ್ಪನವರನ್ನು ದೂರದ ಬಂಗಾಳದ ಬೇಲೂರು ಮಠಕ್ಕೆ ಕರೆದೊಯ್ದು ಶ್ರೀ ರಾಮಕೃಷ್ಣ ಪರಮಹಂಸರ ಅಂತರಂಗ ಶಿಷ್ಯರೂ, ಶ್ರೀ ರಾಮಕೃಷ್ಣ ಮಹಾಸಂಘದ ಮಹಾಧ್ಯಕ್ಷರೂ ಆದ ಶ್ರೀ ಸ್ವಾಮಿ ಶಿವಾನಂದರಿಂದ ಮಂತ್ರದೀಕ್ಷೆ ಕೊಡಿಸಿದರು.

1930ರಲ್ಲಿ ಕುವೆಂಪುರವರ ಮೊಟ್ಟಮೊದಲ ಕವನ ಸಂಕಲನ 'ಕೊಳಲು' ಪ್ರಕಟವಾಯಿತು. ಅದಕ್ಕೆ ಮುನ್ನುಡಿ ರೂಪದ ಆಶೀರ್ವಾದ ನೀಡುತ್ತಾ ಬಿ.ಎಂ. ಶ್ರೀಕಂಠಯ್ಯನವರು ಈ ಮಾತುಗಳನ್ನು ಹೇಳಿದರು: "ಜೀವಾನಂದ, ಬ್ರಹ್ಮಾನಂದ, ಕಾವ್ಯಾನಂದಗಳನ್ನು ತಮ್ಮ ಶಕ್ತಿಗನುಗುಣವಾಗಿ ಅಂತಃಕರಣದಲ್ಲಿ ತುಂಬಿಕೊಳ್ಳುತ್ತಾ ಹಕ್ಕಿ ಹಾಡಿದಂತೆ ಸುಖವಾಗಿ ಹಾಡುವವರು ಪುಟ್ಟಪ್ಪನವರು. ಇವರ ತಿರುಳುಗನ್ನಡ ನುಡಿಗಳು, ಇಂಪಾದ ಹೊಸಹೊಸ ಮುದ್ದು ಪದ್ಯಗಳು, ಸರಳ ಶೈಲಿ, ಭಾವೋದ್ರೇಕ, ಗೀತ ಪ್ರವಾಹ, ಇವುಗಳ ಹೊಡೆತದಲ್ಲಿ ಏನಾದರೂ ತಪ್ಪುಗಳು ಒಂದು ವೇಳೆ ಬಿದ್ದಿದ್ದರೂ ಅವು ಕಾಣದಂತೆ ಮುಚ್ಚಿಹೋಗುವುವು. ನೂರು ದೋಷಗಳಿದ್ದರೂ ಜೀವವಿದ್ದರೆ ಕಾವ್ಯ ಕಾವ್ಯವೇ. ಒಂದು ತಪ್ಪಿಲ್ಲದಿದ್ದರೂ ಜೀವವಿಲ್ಲದ ಕಾವ್ಯ ಕಾವ್ಯವೇ ಅಲ್ಲ. ಪುಟ್ಟಪ್ಪನವರ ಉತ್ತಮ ಕವನಗಳಲ್ಲಿ ಈ ಜೀವವಿದೆ ; ಆತ್ಮವಿದೆ ; ಇರುವುದರಿಂದ ಅಮೃತತ್ವದ ಸಾರವಿದೆ."

'ಕೊಳಲಿ'ನ ಅತ್ಯುತ್ಕೃಷ್ಟವಾದ ಕವನಗಳಲ್ಲಿ ಒಂದಾದ 'ಸುಗ್ಗಿ ಬರುತಿದೆ' ಎಂಬುದರ ಮೊದಲ ಚರಣ ಹೀಗಿದೆ :

ಅಡಿಯ ಗೆಜ್ಜೆ ನಡುಗೆ, ಹೆಜ್ಜೆಯಿಡುತ ಸುಗ್ಗಿ ಬರುತಿದೆ !<br>
ಸುಗ್ಗಿ ಬರೆ ಹಿಗ್ಗಿ ತಿರೆ ಸಗ್ಗ ಸೊಗವ ತರುತಿದೆ !<br>
ಕಣಿವೆಯಿಳಿದು ತೆಮರನೇರಿ,<br>
ತರುಗಳಲ್ಲಿ ತಳಿರ ಹೇರಿ,<br>
ಹೊಸತು ಜೀವಕಳೆಯ ಬೀರಿ,<br>
ಸುಗ್ಗಿ ಮೂಡುತಿರುವುದು !<br>
ಬನದ ಬಿನದದಿನಿದು ನಿನದ ಮನದೊಳಾಡುತಿರುವುದು !

ಕನ್ನಡದ ಶ್ರೇಷ್ಠ ಚಿಂತಕರೂ, ವಿದ್ವಾಂಸರೂ, ಸ್ವಯಂ ಸಾಹಿತಿಗಳೂ ಆದ ದಿವಂಗತ ಶ್ರೀ ಡಿ.ವಿ. ಗುಂಡಪ್ಪನವರು ಈ ಪಂಕ್ತಿಗಳನ್ನು ಉದ್ಧರಿಸಿ ಹೇಳಿ "ಇದನ್ನು ಬರೆಯುವ ಕವಿಗಳಿದ್ದಾರೆ. ಇನ್ನು ಕನ್ನಡಕ್ಕೆ ಭಯವಿಲ್ಲ" ಎಂದು ಉದ್ಗರಿಸಿದರಂತೆ !

1933ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಕವಿ ಸಮ್ಮೇಳನಕ್ಕೆ ಪುಟ್ಟಪ್ಪನವರು ಅಧ್ಯಕ್ಷರಾದರು. 1936ರಲ್ಲಿ ಅವರ ಖಂಡಕಾವ್ಯ 'ಚಿತ್ರಾಂಗದಾ' ಪ್ರಕಟವಾಯಿತು. 'ಚಿತ್ರಾಂಗದಾ' ಕನ್ನಡದ ಮೊದಲ ಖಂಡಕಾವ್ಯ. ವರ್ಣನೆಗಳ ಸ್ವಾರಸ್ಯಕ್ಕೆ, ಸರಳ ರಗಳೆ ಕಥೆಯೊಂದನ್ನು ನಿರರ್ಗಳವಾಗಿ ಸಾಗಿಸಿಕೊಂಡು ಹೋಗಬಹುದು ಎಂಬುದಕ್ಕೆ, ಉಪಮೆ, ಮಿಶ್ರೋಪಮೆ, ಮಹೋಪಮೆಗಳ (ಕೊನೆಯದಂತೂ ಮೊದಲ ಬಾರಿಗೆ ಕನ್ನಡದಲ್ಲಿ ಕಾಣಿಸಿಕೊಂಡದ್ದು ಇಲ್ಲೇ) ವೈಭವಕ್ಕೆ ಕುವೆಂಪುರವರ ಈ ಖಂಡಕಾವ್ಯವನ್ನೇ ನೋಡಬೇಕು. ಲಕ್ಷ್ಮೀಶನ 'ಚಿತ್ರಾಂಗದೆ' ಮತ್ತು ರವೀಂದ್ರರ 'ಚಿತ್ರಾ' ಈ ಕವಿಗೆ ಸ್ಫೂರ್ತಿ ನೀಡಿದ್ದಾರೆ. ಕವಿಯ ಪ್ರಕಾರ "ಈ ಚಿತ್ರಾಂಗದೆ ಆ ಚಿತ್ರಗಳೆರಡನ್ನೂ ಕೂಡಿಸಿ ತಯಾರಾದವಳಲ್ಲ ; ಅವುಗಳಿಂದ ಮೂಡಿ ಸೃಷ್ಟಿಯಾಗಿದ್ದಾಳೆ. ಗಣಿತಕರ್ಮವಾಗಿಲ್ಲ ; ಕಲಾಕೃತಿಯಾಗಿದ್ದಾಳೆ."

1937ರಲ್ಲಿ ಕುವೆಂಪು ದೇವಂಗಿಯ ರಾಮಣ್ಣಗೌಡರ ಪುತ್ರಿ ಶ್ರೀಮತಿ ಹೇಮಾವತಮ್ಮನವರನ್ನು ಮದುವೆಯಾದರು. ಅವರ ದೃಷ್ಟಿಯಲ್ಲಿ "ಒಲುಮೆ ಒಂದು ದಿವ್ಯ ರಕ್ಷೆ ಇಹ ಸಮಸ್ಯೆಗೆ/ಮದುವೆ ಅದಕೆ ಮಧುರ ದೀಕ್ಷೆ ಗೃಹ ತಪಸ್ಯೆಗೆ." ಅವರಿಗೆ ಪ್ರೇಮದ ಸತಿ ಭಗವತಿಯೂ ಆಗಿ ರಕ್ಷಿಸಿದರು, ಪ್ರೀತಿಸಿದರು. "ತಾಯ ಚರಣ ಕಿರಣವೊಂದು ಕೃಪೆಯೊಳೆನ್ನ ಹೊರೆಯಲೆಂದು ನಿನ್ನ ರೂಪದಿಂದ ಬಂದು ಸಲಹುತಿರುವುದೆನ್ನನಿಂದು." ಸಂಸಾರ ಅವರಿಗೆ ಪೂಜೆಯಾಯಿತು : "ಶ್ರೀಮಾತೆಯ ಪಾದದಲಿ ಮಕ್ಕಳು ನಾಲ್ವರು ನಾಲ್ವೆರಳು ಸಹಧರ್ಮಿಣಿ ಸತಿ ಹೆಬ್ಬೆರಳು! ಶ್ರೀ ಗುರುವಾಶೀರ್ವಾದದಲ್ಲಿ ಸಂಸಾರವೆ ಪೂಜೆ !"

ಕುವೆಂಪು ಪ್ರಧಾನತಃ ಕವಿ. ಅವರಿಗೆ ಕಾದಂಬರಿಯೂ ತಮ್ಮ ಅನುಭವ ಅಭಿವ್ಯಕ್ತಿ ಮಾಧ್ಯಮವಾಗಬಹುದು ಎಂಬುದನ್ನು ಊಹಿಸುವುದೂ ಸಾಧ್ಯವಿರಲಿಲ್ಲ. ಅವರು ಥಾಮಸ್ ಹಾರ್ಡಿಯ 'ದಿ ರಿಟರ್ನ್ ಆಫ್ ದಿ ನೇಟಿವ್', ಅನಟೋಲ್ ಫ್ರಾನ್ಸಿಸ್‌ನ 'ಥಾಯಿ' ಮುಂತಾದ ಕಾದಂಬರಿಗಳನ್ನು ಮೆಚ್ಚಿಕೊಂಡಿದ್ದರು ನಿಜ. ಆದರೆ ಆ ಕ್ಷೇತ್ರದಲ್ಲಿ ತಾವೂ ಶಾಶ್ವತವಾದ ಕೊಡುಗೆಯನ್ನು ನೀಡುವುದು ಸಾಧ್ಯ ಎಂಬುದು ಅವರಿಗೆ ಅನುಭವ ಸತ್ಯವಾದದ್ದು ಟಾಲ್‌ಸ್ಟಾಯ್ ಅವರ 'ರಿಸರೆಕ್ಷನ್' ಕಾದಂಬರಿಯನ್ನು ಓದಿದಾಗ. ಮಲೆನಾಡಿನ ಪ್ರಕೃತಿ ಸೌಂದರ್ಯದಂತೆಯೇ ಜನಜೀವನವನ್ನು ತೆರೆದ ಕಣ್ಣುಗಳಿಂದ, ತೆರದ ಹೃದಯದಿಂದ ನೋಡಿದ್ದ ಕವಿಗೆ ಕನ್ನಡದಲ್ಲಿ ಗಾತ್ರದಲ್ಲಿ ಬೃಹತ್ತಾದ, ಗುಣದಲ್ಲಿ ಮಹತ್ತಾದ ಕಾದಂಬರಿಯೊಂದನ್ನು ರಚಿಸುವುದು ಕಷ್ಟವಾಗಲಿಲ್ಲ. 1933ರಿಂದ 36ರ ವರೆಗೆ ಅವರು ಕಾದಂಬರಿಯ ರಚನೆಯಲ್ಲಿ ತೊಡಗಿದರು. 1938ರಲ್ಲಿ 'ಕಾನೂರು ಹೆಗ್ಗಡಿತಿ' ಪ್ರಕಟ ವಾಯಿತು. ಕನ್ನಡದಲ್ಲಿ ಆ ಪ್ರಮಾಣದಲ್ಲಿ ರಚಿತವಾದ ಪ್ರಪ್ರಥಮ ಸಾಮಾಜಿಕ ಕಾದಂಬರಿ ಅದೇ. ಅದರ ವೈಶಿಷ್ಟ್ಯಗಳು ಅನೇಕ : ಐವತ್ತು ಅರವತ್ತು ವರ್ಷಗಳ ಹಿಂದಿನ ಮಲೆನಾಡಿನ ಕಾಡು ಬೆಟ್ಟಗಳ ಚಿತ್ರಣ ; ವಿವಿಧ ರೀತಿಯ ಬೇಟೆಗಳ ವಾಸ್ತವಿಕ ವರ್ಣನೆ ; ಕನ್ನಡ ನಾಡಿನ ಇತರ ಭಾಗಗಳಿಗಿಂತ ತೀರ ಭಿನ್ನವಾಗಿದ್ದ ಪ್ರದೇಶವೊಂದರ ಜನಜೀವನದ ಆತ್ಮೀಯವಾದ ಪರಿಚಯ ; ಆಳವಾದ ಜೀವನಾನುಭವದ ರಮ್ಯ ನಿರೂಪಣೆ; ತೀವ್ರವಾದ ರಾಗದ್ವೇಷಗಳ ವರ್ಣರಂಜಿತ ವ್ಯಾಖ್ಯಾನ ; ಸಮಯೋಚಿತವಾದ ಹಾಸ್ಯ ; ಮಲೆನಾಡಿಗೇ ವಿಶಿಷ್ಟವಾದ ಕನ್ನಡ ಭಾಷೆಯ ಸೊಗಸು ; ಕವಿ ಎಚ್ಚರದಿಂದ ಕಾಯ್ದಿರಿಸಿರುವ ಸಾಮಾಜಿಕ ಪ್ರಜ್ಞೆ ; ಮಣ್ಣನ್ನು ನಿಜವಾಗಿ ಬಲ್ಲ ವಿರಳ ಲೇಖಕರಲ್ಲಿ ಒಬ್ಬರಾದ ಈ ಕವಿ ಸಹಜವಾಗಿ, ಅಪ್ರಯತ್ನ ಪೂರ್ವಕವಾಗಿ, ವ್ಯಾಪಕವಾಗಿ ಹೊಮ್ಮಿಸಿರುವ ಮಣ್ಣಿನ ವಾಸನೆ; ಇನ್ನೂ ಅನೇಕ. ಪಶ್ಚಿಮದ ಮತ್ತು ಪೂರ್ವದ ಸಾಹಿತ್ಯಕೃತಿಗಳಲ್ಲಿ ಶ್ರೇಷ್ಠವಾದದ್ದರಲ್ಲಿ ಬಹುಭಾಗವನ್ನು ಓದಿ ಹೃದ್ಗತಮಾಡಿಕೊಂಡಿದ್ದ ಹಿರಿಯ ವಿದ್ವಾಂಸರೊಬ್ಬರು ಬರೆದಿದ್ದಾರೆ : "ಕುವೆಂಪುರವರು ಇನ್ನೇನನ್ನೂ ಬರೆಯದೆ 'ಕಾನೂರು ಹೆಗ್ಗಡಿತಿ'ಯನ್ನು ಮಾತ್ರ ರಚಿಸಿದ್ದರೂ ಕನ್ನಡ ಸಾಹಿತ್ಯ ಲೋಕದಲ್ಲಿ ಅವರ ಕೀರ್ತಿ ಚಿರಸ್ಥಾಯಿಯಾಗಲು ಸಾಕಾಗುತ್ತಿತ್ತೆಂದು ನಿಶ್ಶಂಕೆಯಿಂದ ನುಡಿಯ ಬಹುದು."

ಇದೇ ಸಂದರ್ಭದಲ್ಲಿ ಕುವೆಂಪು ಅವರ ಇನ್ನೊಂದು ಕಾದಂಬರಿ ಯನ್ನೂ- 'ಮಲೆಗಳಲ್ಲಿ ಮದುಮಗಳು' - ಪ್ರಸ್ತಾಪಿಸಬಹುದು. ಕಾನೂರು ಹೆಗ್ಗಡತಿ ಪ್ರಕಟವಾದ ಸುಮಾರು ಮೂವತ್ತು ವರ್ಷಗಳ ಬಳಿಕ ಪ್ರಕಟವಾದದ್ದು ಅದು. ಮೊದಲ ಕಾದಂಬರಿಗಿಂತ ಗಾತ್ರದಲ್ಲಿ ಇದು ಇನ್ನೂ ದೊಡ್ಡದು. ಕಾಲದ ದೃಷ್ಟಿಯಿಂದ ಈ ಕಾದಂಬರಿಯ ಘಟನೆಗಳು 'ಕಾನೂರು ಹೆಗ್ಗಡಿತಿ'ಯ ಘಟನೆಗಳಿಗಿಂತ ಮೊದಲು ನಡೆದವು ಎನ್ನಬೇಕು. ಮೊದಲನೆಯ ಕಾದಂಬರಿ ಬದುಕಿನ ಸ್ವರೂಪವನ್ನು ಚಿಂತಿಸಿ, ಭಟ್ಟಿಯಿಳಿಸಿ ಜೀವನ ದರ್ಶನವನ್ನು ಸಾರಿದರೆ, ಈ ಎರಡನೆಯದು ಬದುಕಿನ ಯಥಾಸ್ಥಿತಿಯನ್ನು ತೆರೆದು ತೋರಿಸುತ್ತದೆ. ಮಳೆಬಿದ್ದ ಅನಂತರದ 'ಮಣ್ಣಿನ ವಾಸನೆ' ಈ ಕಾದಂಬರಿಯಲ್ಲಿ, ಮಾತ್ರವೇ ಶುದ್ಧಾಂಗವಾಗಿ ದೊರಕುತ್ತದೆ. ಇದರ ವಸ್ತು 'ಶುದ್ಧ ಕಾಮ'. ಪುಟ್ಟಪ್ಪನವರು ಇಲ್ಲಿ ಕಾಮಕ್ಕೆ ಉದಾತ್ತತೆಯ ದರ್ಬಾರು ಪೋಷಾಕನ್ನಾಗಲಿ, ನಮ್ಮ ಇತರ ಅನೇಕ ಲೇಖಕರು ಆರೋಪಿಸುವ ಬಡತನದ ಚಿಂದಿಯನ್ನಾಗಲಿ ಉಡಿಸಿಲ್ಲ. ಕಾಮ ಮತ್ತು ಅದರ ಸಹಚರಿಯಾದ ಜೀವಕಾಮಗಳು ಇಲ್ಲಿ ಸಹಜ ಸ್ಥಿತಿಯಲ್ಲಿ, ಸ್ವಚ್ಛಂದವಾಗಿ ವಿಹರಿಸಿವೆ. ಒಬ್ಬರು ವಿದ್ವಾಂಸರು ಈ ಕಾದಂಬರಿಯನ್ನು ಹೀಗೆ ವಿಮರ್ಶಿಸಿದ್ದಾರೆ: "ಚರ್ವಿತ ಚರ್ವಣವಾಗಿ ಸಾಗಿಬಂದ ಸಾಹಿತ್ಯಮಾರ್ಗ ದಲ್ಲಿ ಅನಿವಾರ್ಯವೆನಿಸಿದ ಬದ್ಧಕಥಾ ಚೌಕಟ್ಟಿನ ಕಟ್ಟು ಕಳಚಿಕೊಂಡ ಕಾದಂಬರಿ, ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ವೈಶಿಷ್ಟ್ಯಪೂರ್ಣ ಕೃತಿಯಾಗಿ, 'ಒಳಸೂತ್ರ'ವೇ ಇಲ್ಲದಿದ್ದರೂ ಬಿಗಿಯನ್ನು ಕಳೆದುಕೊಳ್ಳದೆ, ಬರುವ ಗಾಂಭೀರ್ಯವನ್ನು ಕಾದುಕೊಂಡು, ಹೋಲಿಸೋಣವೆಂದರೆ ಇನ್ನೊಂದಿಲ್ಲದ ಕೃತಿಯಾಗಿದೆ". ಕನ್ನಡದ ಅತ್ಯುತ್ತಮ ಕಾದಂಬರಿಗಳು 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು'.

1939ರಲ್ಲಿ ಕನ್ನಡ ಉಪಪ್ರಾಧ್ಯಾಪಕರಾಗಿ ಬಡ್ತಿ ಪಡೆದ ಕುವೆಂಪು 1945ರಲ್ಲಿ ಕನ್ನಡ ಪ್ರಾಧ್ಯಾಪಕರೂ ಇಲಾಖೆಯ ಮುಖ್ಯಸ್ಥರೂ ಆಗಿ ನೇಮಕಗೊಂಡರು. 1949ರಲ್ಲಿ ಅವರ ಮೇರುಕೃತಿ 'ಶ್ರೀರಾಮಾಯಣ ದರ್ಶನಂ' ಪ್ರಕಟವಾಯಿತು.

ಭಾರತೀಯರ ಕನಸು ಮನಸುಗಳನ್ನೆಲ್ಲಾ ವ್ಯಾಪಿಸಿ ಅವರ ಪ್ರಜ್ಞಾವಸ್ಥೆಯಲ್ಲಿ ಮಾತ್ರವಲ್ಲದೆ ಅವರ ಅಪ್ರಜ್ಞಾವಸ್ಥೆಯಲ್ಲೂ, ಸುಪ್ತ ಪ್ರಜ್ಞೆಯಲ್ಲೂ ನೆಲಸಿ ಭಾರತೀಯ ಜನಜೀವನವನ್ನು ಒಂದಲ್ಲ ಒಂದು ರೀತಿಯಲ್ಲಿ ನಿಯಂತ್ರಿಸುತ್ತಿರುವ ಕೃತಿ ಮಹರ್ಷಿ ವಾಲ್ಮೀಕಿಗಳ ರಾಮಾಯಣ. ಆದ್ದರಿಂದ ಅಂಥ ರಾಮಾಯಣದ ಕಥೆಯನ್ನು ಆಧಾರವಾಗಿಟ್ಟುಕೊಂಡು ಒಂದು ದೊಡ್ಡ ಕಾವ್ಯವನ್ನು ಬರೆಯಬೇಕು ಎಂಬ ಆಸೆ ತುಂಬ ಚಿಕ್ಕವಯಸ್ಸಿನಲ್ಲಿಯೇ ಪುಟ್ಟಪ್ಪನರ ಮನಸ್ಸಿನಲ್ಲಿ ಮೊಳೆತದ್ದರಲ್ಲಿ ಆಶ್ಚರ್ಯವಿಲ್ಲ. 1930ರಲ್ಲಿಯೇ 'ಸಮುದ್ರ ಲಂಘನ' ಎಂಬ ಖಂಡ ಕಾವ್ಯವನ್ನು ಸಾಂಪ್ರದಾಯಿಕ ಛಂದಸ್ಸಿನಲ್ಲಿ ರಚಿಸಿದರು. ಅದು ಅಂತಹ ಯಶಸ್ಸು ಕಾಣಲಿಲ್ಲ. ಅದಕ್ಕೂ ನಾಲ್ಕು ವರ್ಷಗಳ ಹಿಂದಿನಿಂದಲೇ ಕವಿ ಮಹಾಕಾವ್ಯಕ್ಕೆ ಸರಿಯಾದ ಮಹಾಛಂದಸ್ಸನ್ನು ಹುಡುಕುತ್ತಲೆ ಇದ್ದರು. ಹತ್ತು ವರ್ಷಗಳ ಅನ್ವೇಷಣೆಯಿಂದ ಅವರಿಗೆ ತಮ್ಮ ನೂತನ ಮಹಾಕಾವ್ಯಕ್ಕೆ ಬೇಕಾದ ಮಹಾಛಂದಸ್ಸು ಗೋಚರವಾಯಿತು.

ಒಂಭತ್ತು ವರ್ಷಗಳ ರಸತಪಸ್ಸಿಯಿಂದ 1945ರ ಕೊನೆಯ ವೇಳೆಗೆ ತಮ್ಮ 25,000 ಪಂಕ್ತಿಗಳ ಮಹಾಕಾವ್ಯವನ್ನು ಮುಗಿಸಿದರು.

ಕಥೆ ಹಳೆಯದು ನಿಜ. ಹೊಸ ಕಥೆಯನ್ನೇಕೆ ಸೃಷ್ಟಿಸಲಿಲ್ಲ ಎಂದರೆ ಕವಿ ತಮ್ಮ ಮಹಾಕಾವ್ಯದ ಆದಿಯಲ್ಲಿ ಹೀಗೆ ಮರು ಪ್ರಶ್ನೆ ಹಾಕಿದ್ದಾರೆ: "ಕಲೆಯನಲ್ಲದೆ ಶಿಲ್ಪಿ ಶಿಲೆಯನೇಂ ಸೃಷ್ಟಿಪನೆ." ಮುಂಚೆ ವಾಲ್ಮೀಕಿ ಮಹರ್ಷಿಗಳು ಸೃಷ್ಟಿಸಿದ್ದೇ ಹೌದು, ತಪಸ್ಸಿನಿಂದ ಸಾಕ್ಷಾತ್ಕಾರ ಮಾಡಿಕೊಂಡದ್ದೇ ಹೌದು. ಆದರೆ ಕುವೆಂಪು ಅದನ್ನು ಉತ್ತಮಪಡಿಸುತ್ತೇನೆ ಎಂದು ಹೊರಡಲಿಲ್ಲ. ಈ ಯುಗದ ಹೊಸ ಕಾಣ್ಕೆಯ ಹಿನ್ನಲೆಯಲ್ಲಿ ಹೊಸ ರೀತಿಯಿಂದ ಹೇಳುತ್ತೇನೆ ಎಂದರು. ಅವರ ಕಣ್ಣಿನಲ್ಲಿ ರಾಮಾಯಣ ಬರಿಯ ಕಥೆಯಲ್ಲ, ಇತಿಹಾಸವೂ ಅಲ್ಲ. ಅಲೌಕಿಕ ಸತ್ಯಗಳನ್ನು ಪ್ರತಿಮಿಸುವ ಸತ್ಯಸ್ಯ ಸತ್ಯ ಘಟನೆ. ಶ್ರೀರಾಮ ಆ ಲೋಕದಿಂದ ಅವತರಿಸಿ ಬಂದು ಈ ಲೋಕ ಸಂಭವೆಯಾದ ಸೀತೆಯನ್ನು ವರಿಸುತ್ತಾನೆ. ಆ ನೆಪದಿಂದ ಮೃತ್‌ಶಕ್ತಿಯನ್ನು–ಎಂದರೆ ಬರೀ ಇಂದ್ರಿಯ ಜಗತ್ತೇ ಸತ್ಯ ಎಂಬುದನ್ನು-ಮರ್ದಿಸಿ ಚೈತನ್ಯದ ಶಕ್ತಿಯನ್ನು ಎಂದರೆ ಆತ್ಮದ ಶಕ್ತಿಯನ್ನು ಬೆಳಗುತ್ತಾನೆ.

ಕುವೆಂಪು ಕೃತಿಯಲ್ಲಿ ಕಥೆಯಲ್ಲಿ ಕೆಲವು ಬದಲಾವಣೆಗಳಾಗಿವೆ, ಮೂಲಕ್ಕೆ ಅಪಚಾರ ಮಾಡುವಂತಲ್ಲ, ಮೂಲದ ಉದ್ದೇಶಕ್ಕೆ ಪೂರಕವಾಗಿ. ಸೀತೆಯ ಅಗ್ನಿಪ್ರವೇಶದ ಸಂದರ್ಭದಲ್ಲಿ ರಾಮನೂ ಅಗ್ನಿ ಪ್ರವೇಶ ಮಾಡಿ ಜಗತ್ತಿಗೆ ತನ್ನ ಶೀಲ ಶುದ್ಧಿಯನ್ನೂ ತೋರಿಸಿ ಸೀತೆಯೊಡನೆ ಹೊರಬರುತ್ತಾನೆ.

ಕುವೆಂಪುರವರ ವಿಶೇಷ ದರ್ಶನದ ಕೆಲವು ಅಂಶಗಳು ಹೀಗಿವೆ: ಒಂದು ವಿರಾಟ್ ಮನಸ್ಸು-ಎಂದರೆ ವಿಶ್ವವ್ಯಾಪಿಯೂ ಸರ್ವಶಕ್ತವೂ ಆದ ಮನಸ್ಸು-ಜಗತ್ತನ್ನು ಹಾಸುಹೊಕ್ಕಾಗಿ ನೇಯ್ದು ಆಳುತ್ತಿದೆ. ಅದು ಎಲ್ಲ ಜೀವಿಗಳನ್ನೂ ಸೂಕ್ಷ್ಮಾತಿಸೂಕ್ಷ್ಮವಾದ ಸೂತ್ರದಿಂದ ಬಂಧಿಸಿದೆ. ಜೀವಿಗಳು ಸ್ವತಂತ್ರರಲ್ಲ, ಆದರೂ ಸ್ವತಂತ್ರರು ಎಂಬ ಭಾವನೆಯನ್ನು ಆ ವಿರಾಟ್ ಮನಸ್ಸು ಅವರಿಗೆ ನೀಡಿದೆ. ರಾಮ, ಸೀತೆ, ರಾವಣ, ಮಂಡೋದರಿ, ಮಂಥರೆ ಯಾರೇ ಆದರೂ ಆ ವಿಧಿಯ (ವಿರಾಟ್ ಮನಸ್ಸಿನ) ಹಸ್ತದಲ್ಲಿ ಸೂತ್ರದ ಗೊಂಬೆಗಳು. ಅದು ಕುಣಿಸಿದಂತೆ ಅವರು ಕುಣಿಯಲೇ ಬೇಕು.

ಎರಡನೆಯ ಅಂಶ ಪ್ರತಿಯೊಂದು ಜೀವಿಗೂ-ರಾವಣನೇ ಆಗಲಿ-ಉದ್ಧಾರವಿದ್ದೇ ಇದೆ. ಎಲ್ಲ ಪಾತ್ರಗಳೂ ಅಂತಿಮವಾಗಿ ಆತ್ಮಸಾಕ್ಷಾತ್ಕಾರದ ಕಡೆಗೆ ಯಾತ್ರೆ ಹೊರಟಿದ್ದಾರೆ.

ಮೂರನೆಯದಾಗಿ ಈ ಯುಗಧರ್ಮವಾದ ಅಹಿಂಸೆಯೂ, ವಿಜ್ಞಾನವು ತೆರೆದ ಹೊಸ ಲೋಕಗಳೂ ಈ ಕಾವ್ಯದಲ್ಲಿ ಸೂಕ್ತ ರೀತಿಯಲ್ಲಿ ಮೈದೋರಿವೆ. ರೂಪಕ, ಮಿಶ್ರೋಪಮೆ, ಮಹೋಪಮೆಗಳು ಕಾವ್ಯಕ್ಕೆ ಹೊಸ ಮೆರುಗನ್ನು ನೀಡಿವೆ. ಒಟ್ಟಿನಲ್ಲಿ 'ಶ್ರೀರಾಮಾಯಣ ದರ್ಶನಂ' ಒಂದು ಮಹೋನ್ನತ ಸಿದ್ಧಿ. ಕವಿಯನ್ನು ಮಾತ್ರವಲ್ಲದೆ ಕನ್ನಡವನ್ನೂ ವಿಶ್ವಸಾಹಿತ್ಯದ ಉನ್ನತ ವೇದಿಕೆಯಲ್ಲಿ ಸ್ಥಾಪಿಸಿರುವ ಕೃತಿ.

ಕುವೆಂಪು ಷೇಕ್ಸ್‌ಪಿಯರನ ಎರಡು ನಾಟಕಗಳನ್ನು ರೂಪಾಂತರಗೊಳಿಸಿ ಕನ್ನಡಿಗರಿಗೆ ನೀಡಿದ್ದಾರೆ. 'ದಿ ಟೆಂಪೆಸ್ಟ್' ನಾಟಕವನ್ನು 'ಬಿರುಗಾಳಿ' ಎಂಬ ಹೆಸರಿನಿಂದ, 'ಹ್ಯಾಮ್ಲೆಟ್' ನಾಟಕವನ್ನು 'ರಕ್ತಾಕ್ಷಿ' ಎಂಬ ಹೆಸರಿನಿಂದ. ಟೆಂಪೆಸ್ಟ್ ಸೊಗಸಾದ ಕೃತಿ, ಉತ್ತಮ ನಾಟಕ ಅಲ್ಲ. ಆದರೆ ಅದರಲ್ಲಿನ ಭಾವದ ಸಾಂದ್ರತೆ, ದ್ವೇಷಕ್ಕಿಂತ ಕ್ಷಮೆಯೇ ಮುಖ್ಯ ಎಂಬ ಭಾವನೆ ಪುಟ್ಟಪ್ಪನವರನ್ನು ಆಕರ್ಷಿಸಿದೆ. ಮೂಲದಿಂದ ಪುಟ್ಟಪ್ಪನವರು ಮಾಡಿರುವ ಅಲ್ಪಸ್ವಲ್ಪ ಬದಲಾವಣೆ ಕೃತಿಯ ಸತ್ವವನ್ನು ಹೆಚ್ಚಿಸಿದೆ. 'ಹ್ಯಾಮ್ಲೆಟ್' ನಾಟಕದಿಂದ ವಸ್ತುವನ್ನು ಪಡೆದರೂ ಕುವೆಂಪು 'ರಕ್ತಾಕ್ಷಿ' ಸ್ವತಂತ್ರ ಕೃತಿಯೆಂಬಂತೆಯೇ ಓದಿಸಿಕೊಂಡು ಹೋಗುತ್ತದೆ. ಲಕ್ಷ್ಮೀಶನ ಸೀತಾಪರಿತ್ಯಾಗದ ಭಾಗದಿಂದ ಪ್ರೇರಿತವಾದ ನಾಟಕ 'ವಾಲ್ಮೀಕಿಯ ಭಾಗ್ಯ' (1931). ಅದೇ ಅವಧಿಯ ಇನ್ನೊಂದು ನಾಟಕ 'ನನ್ನ ಗೋಪಾಲ' ಮಕ್ಕಳಿಗಾಗಿ ಬರೆದದ್ದು. ಮತ್ತೊಂದು 'ಸ್ಮಶಾನ ಕುರುಕ್ಷೇತ್ರ'. ಕವಿ ಇದನ್ನು ಕುರಿತು ಹೇಳಿರುವ ಮಾತುಗಳು ನಾಟಕದ ಸ್ವರೂಪವನ್ನೂ, ಉದ್ದೇಶವನ್ನೂ ಸ್ಪಷ್ಟವಾಗಿ ವಿವರಿಸುತ್ತವೆ; "ಇದೊಂದು ಪ್ರತಿಮಾ ಸೃಷ್ಟಿ. ಯುದ್ಧದ ದುರಂತತೆ, ಅನ್ಯಾಯ, ಕ್ರೌರ್ಯ, ವಿನಾಶನ, ಅವಿವೇಕ, ದುರ್ಲಂಘ್ಯ ವಿಧಿ, ಸರ್ವ ವಿಫಲತೆ, ಸಂಸ್ಕೃತಿಯ ಸಾವು-ಇವಕ್ಕೆ ಪ್ರತಿಮೆ. ಒಂದೊಂದು ಯುದ್ಧವೂ ಪ್ರಾರಂಭವಾಗುವಾಗ ಅದು ಯುದ್ಧವನ್ನೆ ಕೊನೆಗಾಣಿಸುವ ಜಗತ್ತಿನ ಕೊನೆಯ ಅನಿವಾರ್ಯ ಸಂಕಟವೆಂದು ಸಾರುತ್ತೇವೆ. ಅನ್ಯಾಯವೆಲ್ಲ ತೊಲಗಿ ನ್ಯಾಯ ಸ್ಥಾಪನೆಯಾಗುವುದೆಂದು ಸಾರುತ್ತೇವೆ. ಕಲಿ ಹೋಗಿ ಕೃತಯುಗ ಪ್ರಾರಂಭವಾಗುತ್ತದೆಂದು. ಆದರೆ? ಮತ್ತೆ! ವಿಶೇಷತೆಗಾಗಿ ಸಾಮಾನ್ಯರ ಆಹುತಿ. ಸಂಸ್ಕೃತಿ, ನಾಗರಿಕತೆ, ಪ್ರಗತಿ ಎಲ್ಲ ಶ್ಮಶಾನ ರುದ್ರನ ಮೆಯ್ಗೆ ಭಸ್ಮಲೇಪನವಾಗುತ್ತದೆ. ಸರಿ. ಪುನರ್ ಸೃಷ್ಟಿಯ ಪ್ರಾರಂಭ, ನಾಟಕಾರಂಭ; ವಿಶ್ವಲೀಲೆ ಸಾಗುತ್ತದೆ." ಪುಟ್ಟಪ್ಪನವರು ಈ ನಾಟಕದಲ್ಲಿ ಪ್ರಸಿದ್ಧರ ಜೊತೆಗೆ ಕೆಲವು ಅಪ್ರಸಿದ್ಧ ಪಾತ್ರಗಳನ್ನೂ ಸೃಷ್ಟಿಸಿದ್ದಾರೆ. ಇಪ್ಪತ್ತಾರು ವರ್ಷ ವಯಸ್ಸಿನ ತಾರುಣ್ಯದಲ್ಲಿಯೇ ಕುವೆಂಪು ಜೀವನವನ್ನು ಸಮಗ್ರವಾಗಿ ನೋಡಿ, ಬದುಕಿಗೆ ಏನೇನೂ ಅರ್ಥವಿಲ್ಲ ಎಂಬುದನ್ನು, ಅಥವಾ ಬದುಕಿನ ಅರ್ಥ ಇಷ್ಟೇ ಎಂಬುದನ್ನು ನಿರ್ಣಯಿಸಿ ಕಾವ್ಯವಾಣಿ ಯಲ್ಲಿ ಮಹಾದೇವನ ಮಹಾರುದ್ರನ ಬಾಯಲ್ಲಿ ಈ ಕೆಳಗೆ ಕಂಡಂತೆ ಹಾಡಿಸಿರುವುದು ಆಶ್ಚರ್ಯದ ಸಂಗತಿಗಳಲ್ಲಿಒಂದಾಗಿದೆ :

ಎಲ್ಲ ದಾನಗಳು, ಎಲ್ಲ ಧರ್ಮಗಳು<br>
ಕಡೆಗಿಲ್ಲಿಗೇ - ಎನ್ನ ಬಳಿಗೆ !<br>
ಎಲ್ಲ ಪಾಪಗಳು, ಎಲ್ಲ ಎಲ್ಲ ಪುಣ್ಯಗಳು<br>
ಕಡೆಗೊಂದು ನಗೆಗೇ - ಭಸ್ಮಮೆನಗೆ !

ಅವರ ನಾಟಕಗಳ ಪಂಕ್ತಿಯಲ್ಲಿ ಕಲೆಯ ದೃಷ್ಟಿಯಿಂದಲೂ, ದರ್ಶನ ದೃಷ್ಟಿಯಿಂದಲೂ ಅತ್ಯಂತ ಉತ್ತಮವಾದದ್ದು 'ಬೆರಳ್‌ಗೆ-ಕೊರಳ್'. ಅಲ್ಲಿನ ಮೂರು ದೃಶ್ಯಗಳನ್ನು ಕವಿ 'ಗುರು', 'ಕರ್ಮ' ಮತ್ತು 'ಯಜ್ಞ' ಎಂದು ಕರೆದಿದ್ದಾರೆ. ಏಕಲವ್ಯನ ಬೆರಳನ್ನು ದಕ್ಷಿಣೆಯಾಗಿ ಕೇಳಿ, ಅವನ ಮಾತೃ ಶಾಪಕ್ಕೆ ತುತ್ತಾಗಿ ದ್ರೋಣರು ತಮ್ಮ ಕೊರಳನ್ನೇ ಬಲಿಯಾಗಿ ತೆತ್ತರು ಎಂಬುದು ಕುವೆಂಪು ಅವರ ಕಾಣ್ಕೆ.

ಕುವೆಂಪು ಸಾವಿರಾರು ಕವನಗಳನ್ನು ರಚಿಸಿದ್ದಾರೆ. ಕಾದಂಬರಿ, ಸಣ್ಣಕಥೆ, ವಿಚಾರ ಸಾಹಿತ್ಯ, ನಾಟಕಗಳು ಈ ಎಲ್ಲ ಸೃಜನಶೀಲ ಸಾಹಿತ್ಯ ಪ್ರಕಾರಗಳಿಗೂ ಅವರ ಕೊಡುಗೆ ಮಹತ್ತರವಾಗಿದೆ. ಕಾವ್ಯ ಮೀಮಾಂಸೆಯ ಕ್ಷೇತ್ರಕ್ಕಂತೂ ಅವರು ನೀಡಿರುವ ಕೊಡುಗೆ ಅಪೂರ್ವವಾದುದು. ವಿದ್ವಾಂಸರೊಬ್ಬರ ಹೇಳಿಕೆ ಹೀಗಿದೆ: "ಲಾಕ್ಷಣಿಕರೂ, ಕಾವ್ಯಮೀಮಾಂಸಕರೂ ಯಾವುದನ್ನು ಬುದ್ಧಿ ಬಲದಿಂದ ದೀರ್ಘವಾಗಿ ವಿಚಾರಮಾಡಿ ಸೂತ್ರರೂಪದಲ್ಲಿ ಹೇಳಿದರೋ ಅದನ್ನು ಕುವೆಂಪು ಪ್ರತಿಭಾ ಮಾತ್ರದಿಂದ ಬೆರಳೆತ್ತಿ ತೋರಿಸುತ್ತಾರೆ." ಸ್ವಯಂ ಕವಿಹೃದಯದ ಕಾಳಿದಾಸ, ಷೇಕ್ಸ್‌ಪಿಯರ್ ಅಂಥವರು ಕಾವ್ಯವನ್ನು ಕುರಿತು ವಿಶ್ಲೇಷಿಸಿದ್ದರೆ ಹೇಗಿರಬಹುದಾಗಿತ್ತೋ ಹಾಗಿದೆ ಕುವೆಂಪು ಕಾವ್ಯ ಮೀಮಾಂಸೆಯನ್ನು ಕುರಿತು ಬರೆದಿರುವ ಲೇಖನಗಳು. ಅವರದು 'ದರ್ಶನ ವಿಮರ್ಶೆ'.

ಕುವೆಂಪು ಭಾವಪೂರ್ಣವಾಗಿ ಕಾವ್ಯರಚನೆ ಮಾಡಿದವರಾಗಿ ಅವರ ನಿಶಿತವಾದ ಬುದ್ಧಿಯ ಫಲ ಸಮಾಜದ ಸರ್ವ ಸ್ತರದವರಿಗೂ ದೊರೆತಿಲ್ಲ ಎಂದು ಭಾವಿಸಲು ಏನೇನೂ ಕಾರಣವಿಲ್ಲ. ಅವರದು ಪ್ರಧಾನತಃ ವಿಚಾರಶೀಲ ವ್ಯಕ್ತಿತ್ವ, ಕ್ರಾಂತಿಕಾರಕ ಮನೋಭಾವ. ಸಮಾಜದಲ್ಲಿನ ಎಲ್ಲ ವಿಧವಾದ ಅಸಮಾನತೆಗಳೂ ಹೋಗಬೇಕು ಎಂದು ಉಗ್ರವಾಗಿ ಗದ್ಯದಲ್ಲಿ, ಹೃದಯಂಗಮವಾಗಿ ಪದ್ಯದಲ್ಲಿ ವಾದಿಸಿದ್ದಾರೆ. ಅವರು ಮೌಢ್ಯಕ್ಕೆ ಪರಮ ಶತ್ರು. ಜಾತಿಪದ್ಧತಿ ನಿರ್ಮೂಲಗೊಳ್ಳದೆ ಈ ದೇಶದ ಜನರ ಉದ್ಧಾರ ಅಸಾಧ್ಯ ಎಂದು ಒತ್ತಿ ಒತ್ತಿ ಹೇಳಿದ್ದಾರೆ. ಅವರು ಹಗಲಿರುಳೂ ಈಗ ಜಪಿಸುತ್ತಿದ್ದುದು "ವಿಶ್ವಮಾನವ ಮಂತ್ರ". ತಮ್ಮ 85ನೆಯ ಈ ವಯಸ್ಸಿನಲ್ಲೂ ಮುಂದಿನ ಜನಾಂಗವಾದರೂ 'ವಿಶ್ವಮಾನವ ಸಂದೇಶ'ವನ್ನು ಕೇಳಿ ಉದ್ಧಾರವಾಗುತ್ತದೆ ಎಂಬ ಅಚಲವಾದ ನಂಬಿಕೆ ಅವರಿಗಿದೆ. ಕೆಲ ವರ್ಷಗಳ ಹಿಂದೆ ಅವರ ಪ್ರಿಯ ಸತಿ ತೀರಿಕೊಂಡರು. ಅಂದಿನಿಂದ ಅವರು ಈಗ ಏಕಾಂಗಿಯಾದ ತಪಸ್ವಿ. "ಜಾತಿ, ದೇಶ ಭಾಷೆ ಇವುಗಳ ಕಿರು ಪ್ರಪಂಚದಿಂದ ಮನುಷ್ಯ ಒಂದಲ್ಲ ಒಂದು ದಿನ ಹೊರಬಂದು ವಿಶಾಲವಾದ ವಿಶ್ವಮಾನವನಾಗುತ್ತಾನೆ ಎಂಬ ವಿಶ್ವಾಸದಿಂದ ಜೀವನ ನಡೆಸುತ್ತಿದ್ದಾರೆ. "ಯಾವ ವ್ಯಕ್ತಿಯೂ ಯಾವುದೇ ಜಾತಿಯ ಶಿಶುವಲ್ಲ ; ಪ್ರತಿಯೊಬ್ಬ ವ್ಯಕ್ತಿಯ ಹೃದಯದಲ್ಲೂ ಅವನದೇ ಆದ ಧರ್ಮ ಇದೆ. ಈ ಜಗತ್ತಿನಲ್ಲಿ ಎಷ್ಟು ಜನ ವ್ಯಕ್ತಿಗಳಿದ್ದಾರೆಯೋ ಅಷ್ಟು ಧರ್ಮಗಳಿರಲಿ" ಎಂಬ ಸ್ವಾಮಿ ವಿವೇಕಾನಂದರ ವಾಣಿ ಮಾನವತೆಯ ಜೀವನ ಧರ್ಮವಾಗಲಿ ಎಂಬ ಹಾರೈಕೆ ಅವರದು.

ತನ್ನ ಮೆಚ್ಚಿನ ಕವಿಗೆ ಕನ್ನಡದ ಜನತೆ, ಸರ್ಕಾರ, ವಿಶ್ವವಿದ್ಯಾ ನಿಲಯಗಳು, ಕೇಂದ್ರ ಸರ್ಕಾರ, ರಾಜ್ಯ ಸಾಹಿತ್ಯ ಅಕಾಡೆಮಿ, ಕೇಂದ್ರ ಅಕಾಡೆಮಿ - ಎಲ್ಲ ಬಗೆಯ ಅತ್ಯುನ್ನತ ಗೌರವಗಳನ್ನು ನೀಡಿವೆ. 1955ರಲ್ಲಿ ಕುವೆಂಪು ತಾವು ಓದಿ, ಅಧ್ಯಾಪಕ, ಪ್ರಾಧ್ಯಾಪಕರಾಗಿದ್ದ ಮೈಸೂರು ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರಾದರು. ಅದೇ ವರ್ಷ ಪ್ರಪ್ರಥಮ ಬಾರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ತನ್ನ ಪ್ರಶಸ್ತಿಗಳನ್ನು ನೀಡಿತು. ಪ್ರಥಮ ಬಾರಿಗೆ ಕನ್ನಡದ ಕೃತಿ "ಶ್ರೀ ರಾಮಾಯಣದರ್ಶನಂ"ಗೆ ಆ ಪ್ರಶಸ್ತಿ ದೊರಕಿತು. 1956ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವೂ, 1966ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯವೂ, 1969ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯವೂ, 1985ರಲ್ಲಿ ಗುಲ್ಬರ್ಗ ವಿಶ್ವವಿದ್ಯಾನಿಲಯವೂ ಗೌರವ ಡಿ.ಲಿಟ್. ಪದವಿಯನ್ನು ನೀಡಿದವು. 1956ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ನೇಮಕಗೊಂಡರು. 1957ರಲ್ಲಿ ಧಾರವಾಡದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. 1958ರಲ್ಲಿ ಭಾರತ ಸರ್ಕಾರವು 'ಪದ್ಮಭೂಷಣ' ಪ್ರಶಸ್ತಿ ನೀಡಿತು. 1964ರಲ್ಲಿ ಕರ್ನಾಟಕ ಸರ್ಕಾರ 'ರಾಷ್ಟ್ರಕವಿ' ಎಂದು ಘೋಷಿಸಿತು. 1968ರಲ್ಲಿ ಅವರ ಶಿಷ್ಯರೂ, ಅಭಿಮಾನಿಗಳೂ 'ಗಂಗೋತ್ರಿ' ಎಂಬ 1100 ಪುಟಗಳ ಬೃಹತ್ ಗೌರವ ಗ್ರಂಥವನ್ನು ಅರ್ಪಿಸಿದರು. ಅದೇ ವರ್ಷ ಭಾರತದಲ್ಲಿ ಒಂದು ಸಾಹಿತ್ಯ ಕೃತಿಗೆ ದೊರಕಬಹುದಾದ ಅತ್ಯುಚ್ಚ ಪ್ರಶಸ್ತಿ 'ಜ್ಞಾನಪೀಠ ಪ್ರಶಸ್ತಿ' 'ಶ್ರೀರಾಮಾಯಣದರ್ಶನಂ' ಕೃತಿಗೆ ದೊರಕಿತು. 'ಪಂಪ ಪ್ರಶಸ್ತಿ'ಯ ಪ್ರಪ್ರಥಮ ಪುರಸ್ಕಾರವೂ 1988ರಲ್ಲಿ ಆ ಕೃತಿಗೆ ದೊರಕಿತು.

ಈ ಎಲ್ಲ ಗೌರವಗಳು, ನಿಜವಾಗಿ ಹಿಮಾಚಲ ಭಾರವಾಗ ಬಹುದಾಗಿದ್ದುವು, ಹೂ ಹಗುರವಾಗಿ ಅವರನ್ನು ಅಲಂಕರಿಸಿವೆ. ಶಾಂತ ಭಾವದ ಅವರ ತಪೋಜೀವನ ಪರ್ಣಕುಟಿಯಂತಹ ಅವರ ಮನೆ 'ಉದಯರವಿ'ಯಲ್ಲಿ ಮಂದಗತಿಯಲ್ಲಿ ಮುಂದುವರಿದಿದೆ.

❑

# ಸಿಂಪಿ ಲಿಂಗಣ್ಣ

ಸೂಗಯ್ಯ ಹಿರೇಮಠ

ಪಂಚನದಿಗಳು ಹರಿದರೂ ಬರಗಾಲ ಪ್ರದೇಶವೆಂದೇ ಹೆಸರಾದ ಬಿಜಾಪುರ ಜಿಲ್ಲೆ, ಜನಪದ ಹಾಗೂ ವಚನಸಾಹಿತ್ಯದ ಸಂಗ್ರಹ, ಸಂಪಾದನೆಗೆ ಹೆಸರಾದಂತೆ ಸಾಹಿತ್ಯ, ಸಂಗೀತ ಹಾಗೂ ಆಧ್ಯಾತ್ಮದ ಸಂಗಮ ಕೇಂದ್ರ. ಇಂಥ ವಿಶಿಷ್ಟ ಜಿಲ್ಲೆಯ ಇಂಡಿ ತಾಲೂಕಿನ 'ಚಡಚಣ' ಎಂಬ ದೊಡ್ಡ ಗ್ರಾಮದಲ್ಲಿ ಹುಟ್ಟಿದ ಶ್ರೀ ಸಿಂಪಿ ಲಿಂಗಣ್ಣನವರು ಕರ್ನಾಟಕದ 'ಜಾನಪದ ರತ್ನ'ರೆಂದೆ ಖ್ಯಾತರಾದರು.

ಲಿಂಗಣ್ಣನವರ ಹಿರಿಯರು ಮೊಗಲಾಯಿ ಇಲಾಖೆಗೆ ಸೇರಿದ 'ಶಾಲಬಿದರಿ' ಗ್ರಾಮದ ಗೌಡರು. ನಾಡಗೌಡರಿಗೆ ಕಾಣಿಕೆ ಕೊಡದಕ್ಕಾಗಿ ಊರು ಬಿಟ್ಟು ಕಲಬುರ್ಗಿ ಜಿಲ್ಲೆಯ ಚಿಂತಾಪುರ ತಾಲೂಕಿನ ಶಾಂತಾಬಾದದಲ್ಲಿ ಕೆಲದಿನ ತಂಗಿದರು. ನಂತರ ಚಡಚಣದಲ್ಲಿ ನೆಲೆ ನಿಂತರು. ಹೊಲಿಗೆ ಕಾಯಕ ಮಾಡುವುದರಿಂದ 'ಸಿಂಪಿ'ಗರು ಆದರು. ನೂಲಿಗೆ ಬಣ್ಣ ಹಾಕುವುದರಿಂದ 'ಬಣಗಾರ'ರೆನಿಸಿದರು. ಶಿವಯೋಗಿ-ಸಾವಿತ್ರಿಯರೆಂಬ ಶರಣ ದಂಪತಿಗಳ ಹೊಟ್ಟೆಯಲ್ಲಿ ಮೂರನೆಯ ಮಗನಾಗಿ ದಿನಾಂಕ 10-02-1905 ರಂದು ಜನಿಸಿದರು. ತಂದೆ ತಾಯಿ ಹುಟ್ಟಿದ ಮಗುವಿಗೆ ಅಜ್ಜನ ಹೆಸರು 'ನಾಗಪ್ಪ'ನೆಂದು ನಾಮಕರಣ ಮಾಡಿದರು. ನಾಗಪ್ಪನ ಅಜ್ಜಿ ತನ್ನ ಗಂಡನ ಹೆಸರು ಕರೆಯದೆ 'ನಾಗಲಿಂಗ'ನೆಂದು ಕರೆದಳು. ಜನರು 'ಲಿಂಗಪ್ಪ'ನೆಂದರು. ಒಮ್ಮೆ ಬರವಣಿಗೆಯೊಂದಕ್ಕೆ 'ಲಿಂಗಪ್ಪ'ನೆಂದು ಬರೆದುದನ್ನು ಶ್ರೀ ಮಧುರಚೆನ್ನರು ನೋಡಿ ಲಿಂಗಪ್ಪನಾಗುವುದು ಬೇಡ ಲಿಂಗಣ್ಣನಾಗಿರೆಂದು ಹರಸಿ ತಿದ್ದಿದರು. ಅಂದಿನಿಂದ ಸಿಂಪಿ ಲಿಂಗಣ್ಣನವರೆಂದೇ ಪ್ರಸಿದ್ಧಿ ಪಡೆದರು.

## ಬಾಲ್ಯ ಜೀವನ

ಸಿಂಪಿ ಲಿಂಗಣ್ಣನವರು ಬಡತನದಲ್ಲಿಯೇ ಹುಟ್ಟಿ ಬಡತನದಲ್ಲಿಯೇ ಬೆಳೆದರೂ, ಅವರ ಮನೆ ಜನಪದ ಕಲೆ-ಸಾಹಿತ್ಯದ ತೌರಾಗಿತ್ತು. ತಂದೆ ಶಿವಯೋಗಿ ಬಯಲಾಟದ ಪಾತ್ರ ಮಾಡುವುದರಲ್ಲಿ ಪ್ರಸಿದ್ಧ. ಅಣ್ಣ ಈರಪ್ಪ ಕರಡಿ ಮಜಲು ಬಾರಿಸುವುದರಲ್ಲಿ ನಿಸ್ಸೀಮ. ತಂದೆಯ ಹೆಗಲ ಮೇಲೆ ಕುಳಿತು ಕರಡಿ ಮಜಲಿನ ನಾದಗತ್ತಿಗೆ

ತಲೆದೂಗುವನು. ಲಾವಣಿ ಹಾಡಿಗೆ, ಕುಣಿತದ ಹೆಜ್ಜೆಯ ಗೆಜ್ಜೆನಾದ ಕೇಳಿ ಆನಂದಿಸುವನು. ಹುಟ್ಟಿದ ಎರಡು ವರ್ಷಗಳಲ್ಲೆ ತಾಯಿ ಸಾವಿತ್ರಿ-ತೀರಿಕೊಂಡಳು. ಅಜ್ಜಿ ದಾನವ್ವನ ಆಶ್ರಯದಲ್ಲಿ ಬೆಳೆದನು. ಮುಂದೆ ಕೆಲದಿನಗಳಲ್ಲಿ ಅಜ್ಜಿಯೂ ಸತ್ತಳು. ಆಯಿ ಮತ್ತು ತಾಯಿ ಸತ್ತ ಮೇಲೆ ಸೋದರತ್ತೆ ಈರವ್ವನ ಆಶ್ರಯದಲ್ಲಿ ಬೆಳೆದನು. ತಂದೆ ಶಿವಯೋಗಿಯೇ ಸರ್ವಸ್ವವಾಗಿ ಗಾವಠಿ ಶಾಲೆಗೆ ಸೇರಿದರು. ಚಿಕ್ಕವನಿದ್ದಾಗ ನಾಗಲಿಂಗ ದುಂಡು ಮುಖದ ಆಕರ್ಷಕ ಹುಡುಗ, ಅಷ್ಟೆ ಚೂಟಿಯಾಗಿದ್ದ. ಓದುವುದರೊಂದಿಗೆ ಊರಿನಲ್ಲಿ ಆಡುವ ಬಯಲಾಟ ನಾಟಕಗಳನ್ನು ನೋಡುವುದರಲ್ಲಿ ಮೈಮರೆಯುವನು. 1914ರಲ್ಲಿ ಬಂದ ಪ್ಲೇಗು ರೋಗಕ್ಕೆ ತಂದೆ ಬಲಿಯಾದರು. ಆಗ ಲಿಂಗಣ್ಣನವರು 5ನೆಯದಲ್ಲಿ ಓದುತ್ತಿದ್ದರು. ಮನೆಯಲ್ಲಿ ಅಣ್ಣ ಈರಪ್ಪ ಲಿಂಗಣ್ಣನವರೇ ಉಳಿದರು. ಅಣ್ಣ ಸೀರೆ ನೆಯ್ದು ಹಣ ಗಳಿಸಿದರೆ ಲಿಂಗಣ್ಣ ಶಾಲೆಯ ಬಿಡುವಿನ ದಿನ ಸಂತೆಯಲ್ಲಿ ಉಪ್ಪು ಮಾರುವನು. ಜೀವನ ನಿರ್ವಹಣೆಗೆ ಹಣದ ಕೊರತೆ ಬರಲಿಲ್ಲ. ಆದರೆ ತಾವೆ ಅಡಿಗೆ ಮಾಡಿಕೊಳ್ಳುವುದು ಸರಳವಾಗಿರಲಿಲ್ಲ. ತಂದೆಗೆ ಸಾಯುವಾಗ ಮಾತುಕೊಟ್ಟಂತೆ ಸೋದರತ್ತೆಯ ಮಗ 'ಸಿದರಾಯ' ಗಂಡ ಬಿಟ್ಟ ತನ್ನ ತಂಗಿ 'ಗುರಮ್ಮ'ಳನ್ನು ಅಣ್ಣ ಈರಪ್ಪನಿಗೆ ಕೊಟ್ಟು ಮರು ಮದುವೆಯಾದ ನಂತರ ಲಿಂಗಣ್ಣನಿಗೆ ಅಡುಗೆ ಮಾಡುವುದು ತಪ್ಪಿತು. ಆ ವರ್ಷ 5ನೆಯದರಲ್ಲಿ ಉತ್ತಮವಾಗಿ ತೇರ್ಗಡೆಯಾಗಿ ಮುಂದಿನ ವರ್ಗಕ್ಕೆ ಸೇರಿದರು. ಅತ್ತೆಯ ಸಲಹೆ ಮೇರೆಗೆ ಸಂತೆಯಲ್ಲಿ ಕುಂತು ಚಿಲುಮೆ ಮಾರಿದರು. ಆಡು ಕಾಯ್ದರು. ಗುರಮ್ಮನು ಹೇಳುವ ಗರತಿ ಹಾಡುಗಳು ಲಿಂಗಣ್ಣನವರಿಗೆ ಜನಪದ ಸಾಹಿತ್ಯದ ಹುಚ್ಚು ಹಿಡಿಸಿತು.

**ಚೆನ್ನಮಲ್ಲಪ್ಪರ ಭೇಟಿ**

ಹಲಸಂಗಿ-ಚಡಚಣಕ್ಕೆ ಹತ್ತಿರದ ಊರು. ಅದರಲ್ಲಿ ಹಲಸಂಗಿ ಚೆನ್ನಮಲ್ಲಪ್ಪರ ಬೀಗರು ಚಡಚಣದಲ್ಲಿ ಲಿಂಗಣ್ಣನವರ ಮನೆಯಲ್ಲಿ ಬಾಡಿಗೆ ಇದ್ದಿದರಿಂದ ಸಹಜವಾಗಿಯೇ ಬಂದ ಶ್ರೀ ಮಧುರಚೆನ್ನರು ಲಿಂಗಣ್ಣನವರಿಗೆ ಪರಿಚಯವಾದರು. ಮಧುರಚೆನ್ನರ ಮಾತುಕತೆಗಳ ಪ್ರಭಾವಕ್ಕೆ ಒಳಗಾದರು. ಇಬ್ಬರಲ್ಲಿ ಗಾಢ ಪ್ರೀತಿ ಬೆಳೆಯಿತು. ಜೀವನದ ಗೆಳೆಯರಾದರು. 1922ರಲ್ಲಿ ಲಿಂಗಣ್ಣವನರು ಮುಲ್ಕೀ ಪರಿಕ್ಷೆಯಲ್ಲಿ ಜಿಲ್ಲೆಗೆ ಪ್ರಥಮರಾಗಿ ಪಾಸಾದರು. ಮುಂದೆ ಓದುವುದಕ್ಕೆ ಹಣವಿರಲಿಲ್ಲ. ನಿರುದ್ಯೋಗಿಯಾಗದೆ ಅಣ್ಣನೊಂದಿಗೆ ಮಗ್ಗ ನೆಯ್ದನು. ಆದರೆ ಓದುವ ಹವ್ಯಾಸ ಬತ್ತಲಿಲ್ಲ. ತಾರುಣ್ಯದಲ್ಲಿ ತುಂಬಿ ತುಳುಕುವ ಲಿಂಗಣ್ಣ ಕುಸ್ತಿ ಪಟುವಾದರು. ಹರೆಯದ ಮನಸ್ಸು ಸುಮ್ಮನೆ ಕೂಡಲಿಲ್ಲ, ಚಡಚಣದಲ್ಲಿಯೇ ಗೆಳೆಯರ ಗುಂಪು ಕಟ್ಟಿ 'ವಾಗ್ವಿಲಾಸ' ಎಂಬ ಹೆಸರಿನ ವಾಚನಾಲಯ ತೆರೆದರು. ಊರಿನ ಜನರಿಂದ 800 ಗ್ರಂಥಗಳನ್ನು ಸಂಗ್ರಹಿಸಿ ಜನರಿಗೆ ಓದುವ ಹವ್ಯಾಸ ಹಚ್ಚಿದರು. ಗೆಳೆಯರೊಂದಿಗೆ "ಮುದ್ದು". ಎಂಬ ಕೈಬರಹದ ವಾರಪತ್ರಿಕೆ ಹೊರಡಿಸಿದರು. ಹಲಸಂಗಿ ಚೆನ್ನಮಲ್ಲಪ್ಪವನರು, ಸಿಂಪಿ ಲಿಂಗಣ್ಣವನರು ಕೂಡಿ ತಮ್ಮದೇ ಆದ 'ಹಲಸಂಗಿ ಗೆಳೆಯರ' ಗುಂಪು ಕಟ್ಟಿದರು. ಅದಕ್ಕಾಗಿ ಇಬ್ಬರೂ ಹಗಲಿರುಳು ದುಡಿದರು. ಇಬ್ಬರೂ ಒಂದೇ ದೇಹದ ಎರಡು ಜೀವಿಗಳಾಗಿದ್ದರು. ಆಧ್ಯಾತ್ಮದ ಅನುಭಾವದ ಸಾಧನೆಯಲ್ಲಿ ಹಲಸಂಗಿ ಚೆನ್ನಮಲ್ಲಪ್ಪನವರು ಹಿರಿಯರು. ಆದರೆ ಅವರ ಮಾರ್ಗದರ್ಶನ, ಒಡನಾಟದಲ್ಲಿ ಸಿಂಪಿ ಲಿಂಗಣ್ಣವನರು ಅಷ್ಟೇ ಎತ್ತರಕ್ಕೆ ಬೆಳೆದರು. ಬೇಗನೆ ಕೆಲಸ ದೊರೆಯದರಿಂದ ಪ್ರಾಥಮಿಕ ಶಿಕ್ಷಕರ ಟ್ರೇನಿಂಗ್ ಪಡೆಯಲು ಆಯ್ಕೆಯಾಗಿ ಧಾರವಾಡಕ್ಕೆ ಹೋದರು. ಅಲ್ಲಿ ಅನೇಕ ಪ್ರಸಿದ್ಧ ಸಾಹಿತಿಗಳಾದ ಶಂಬಾ, ಬೇಂದ್ರೆ, ಆಲೂರರ ಪರಿಚಯ ಮಾಡಿಕೊಂಡರು.

**ದಾಂಪತ್ಯ ಜೀವನ**

ಶಿಕ್ಷಕರ ಟ್ರೇನಿಂಗ್ ಮುಗಿಸಿ 'ಬತಗುಣಕಿ' ಗ್ರಾಮಕ್ಕೆ ಶಿಕ್ಷಕರೆಂದು ನೇಮಕವಾದ ಕೂಡಲೆ, ಮೊದಲೆ ನಿಶ್ಚಿತವಾದಂತೆ ಚಡಚಣದಲ್ಲೆ ಇದ್ದ ಕೇಶಟ್ಟಿ ಮನೆಯ ಕನ್ನೆ 'ಸೊಲಬವ್ವ' ನೊಂದಿಗೆ 1928ರ ವೈಶಾಖದಲ್ಲಿ ಮದುವೆಯಾದರು. ಹೆಂಡತಿಗೂ ಅಕ್ಷರಾಭ್ಯಾಸ ಮಾಡಿಸಿದರು. ಬದುಕನ್ನು ತುಂಬಾ ಪ್ರೀತಿಸುವ ಲಿಂಗಣ್ಣ ನವರು ಸಮೃದ್ಧಿಜೀವನ ನಡೆಸಿದರು. ಯಾವುದಕ್ಕೂ ಹೆಂಡತಿಗೆ ಕೊರತೆ ಮಾಡದೆ ಸಂಸಾರವನ್ನು ತೂಗಿಸಿಕೊಂಡವರು, ಜನಪದ ಬದುಕನ್ನು ರೂಢಿಸಿಕೊಂಡಿದ್ದರು. ಅವರಿಗೆ ಜೀವನವೇ ಸಾಹಿತ್ಯವಾದಂತೆ ಜನಪದ ಸಾಹಿತ್ಯವೇ ಜೀವನವಾಗಿತ್ತು. ಆದರೆ ಮೊದಲ ಅವರ ದಾಂಪತ್ಯ ಸುಖ ಕೊನೆಯವರೆಗೂ ಉಳಿಯಲಿಲ್ಲ. ಮೊದಲ ಹೆಂಡತಿ ಸೊಲಬವ್ವ ನಾಲ್ಕು ಮಕ್ಕಳ ಕೊಟ್ಟು, 20 ವರ್ಷ ಬಾಳ ಸಂಗಾತಿಯಾಗಿದ್ದು ತೀರಿಕೊಂಡರು.

ನಾಲ್ಕು ಮಕ್ಕಳ ವಿದ್ಯಾಭ್ಯಾಸ, ಶಿಕ್ಷಕ ವೃತ್ತಿ ಮಾಡುತ್ತ ಊಟ-ಉಪಚಾರ ಮಾಡಲು ತೊಂದರೆಯಾಯಿತು. ಗೆಳೆಯರ ಒತ್ತಾಯದ ಮೇರೆಗೆ 1948ರಲ್ಲಿ ಚಡಚಣದ ಕೇಶಟ್ಟಿ ಮನೆತನದ ಬಾಲ ವಿಧವೆ ಶಿವಮ್ಮನವರನ್ನು ಪುನರ್ವಿವಾಹವಾದರು. ಶಿವಮ್ಮನವರ ಹೊಟ್ಟೆಯಿಂದ ಇಬ್ಬರು ಹೆಣ್ಣು ಮಕ್ಕಳು ಇಬ್ಬರು ಗಂಡು ಮಕ್ಕಳು ಜನಿಸಿದರು. ಲಿಂಗಣ್ಣವನರು ಬಾಳಿನಲ್ಲಿ ಬಂದ ಕಹಿಯನ್ನು ಸಿಹಿಯಾಗಿ ಪರಿವರ್ತಿಸಿದರು. ಲಿಂಗಣ್ಣನವರ ಮನೆ ತುಂಬಿದ ಸಂಸಾರ, ಮನಸ್ಸು ಕೂಡ ಅಷ್ಟೇ ಪರಿಪೂರ್ಣವಾದುದು, ಪಕ್ವವಾದುದು. ತನ್ನಂತೆ ತಮ್ಮ ಮಕ್ಕಳಿಗಾಗಿ ಆ ಸಂಸ್ಕಾರ ನೀಡಿದರು. ಅವರ ಮಕ್ಕಳಲ್ಲಿ ವೀರೇಂದ್ರ ಸಿಂಪಿ, ಈಶ್ವರ ಸಿಂಪಿ ಹಾಗೂ ಭುವನೇಶ್ವರಿಯವರು ಸಾಹಿತ್ಯಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ. ಲಿಂಗಣ್ಣನವರು ಅತ್ಯಂತ ರಸಿಕರು. ಜನಪದ ರಸಋಷಿಗಳಾದಂತೆ ರಸಿಕತೆ ಅವರ ಜೀವನ ತತ್ವವಾಗಿತ್ತು.

**ವೃತ್ತಿ ಜೀವನ**

ಸಿಂಪಿ ಲಿಂಗಣ್ಣನವರು ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಸುಮಾರು 35ವರ್ಷ ಸೇವೆ ಸಲ್ಲಿಸಿದರು. ಸರಳಜೀವಿಗಳು, ಸದಾ ಚಿಂತನಶೀಲರು, ಕ್ರಿಯಾಶೀಲ ವ್ಯಕ್ತಿತ್ವ, ವೈಚಾರಿಕ ಮನೋಧರ್ಮದವರು. ಆಧುನಿಕ ಸೌಲಭ್ಯಗಳಿಲ್ಲದ ಅಂದಿನ ಹಳ್ಳಿಗಳಲ್ಲಿ ಹಳ್ಳಿಗರಾಗಿ ಜನರೊಂದಿಗೆ ಹೊಂದಿಕೊಂಡು ಮಕ್ಕಳಿಗೆ ಜ್ಞಾನ ನೀಡಿದರು. ವೃತ್ತಿ ಪ್ರಾಮಾಣಿಕರಾಗಿದ್ದು ಕಂಡದ್ದನ್ನು ಕಂಡಂತೆ ಹೇಳುವ ನಿಷ್ಠುರರು. ಬತಗುಣಕಿ, ಇಂಗಳೇಶ್ವರ, ಹಲಸಂಗಿ, ಇಂಡಿ ಮುಂತಾದ ಊರುಗಳಲ್ಲಿ ಶಿಕ್ಷಕರಾಗಿ, ಮುಖ್ಯಾಧ್ಯಾಪಕರಾಗಿ ಕೆಲವು ವರ್ಷ ಶಿಕ್ಷಣಾಧಿಕಾರಿಗಳಾಗಿ ಸೇವೆ ಸಲ್ಲಿಸಿದರು. ಶಾಲೆಗಳಲ್ಲಿ ನಾಡಹಬ್ಬ, ಗಣೇಶೋತ್ಸವಗಳನ್ನು ಆಚರಿಸಿ ಪ್ರಸಿದ್ಧ ಸಾಹಿತಿಗಳಿಂದ ಭಾಷಣ ಮಾಡಿಸಿ ಜನರಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಮೂಡಿಸಿದರು. 'ಕಮತಿಗ' ವಾರಪತ್ರಿಕೆ ಹೊರಡಿಸಿ ಹೊಸ ಬರಹಗಾರರಿಗೆ ಪ್ರೋತ್ಸಾಹ ನೀಡಿದರು. ರಾಷ್ಟ್ರೀಯ ಲಾವಣಿ ರಚಿಸಿ, ಹಾಡಿಸಿ, ಸ್ವಾತಂತ್ರ್ಯ ಚಳುವಳಿಗೆ ಕುಮ್ಮಕ್ಕು ನೀಡಿದರೆಂದು ಬೇರೆ ಊರಿಗೆ 'ಶಿಕ್ಷಾತರೀಕ ವರ್ಗ'ವಾದರು. ಅಸ್ಪೃಶ್ಯತೆಯನ್ನು ಎತ್ತಿ ತೋರಿಸುವ 'ಮರ ಮುಚ್ಚಕ' ನಾಟಕ ರಚಿಸಿ, ಆಡಿಸಿ, ಸಮಾಜದ ಬಹಿಷ್ಕಾರಕ್ಕೆ ಒಳಗಾದರು. ಯಾವ ಊರಿಗೆ ವರ್ಗವಾಗಿ ಹೋದರು ಸಿಂಪಿ ಲಿಂಗಣ್ಣನವರು ತಮ್ಮ ಕೆಲಸವನ್ನು ನಿಲ್ಲಿಸಿದವರಲ್ಲ. ಓದುವುದು, ಓದಿಸುವುದು, ಬರೆಯುವುದು, ಆಡಿಸುವುದು ಅವರ ನಿತ್ಯದ ಕರ್ಮದಲ್ಲಿ ಒಂದಾಗಿತ್ತು.

ಶುಭ್ರ, ಖಾದಿಧೋತರ, ಖಾದಿಶರ್ಟು, ಮೇಲೊಂದು ಕೋಟು, ತಲೆಯ ಮೇಲೆ ಗಾಂಧಿಟೋಪಿ ಇವು ಅವರ ನಿತ್ಯದ ಉಡುಪುಗಳಾದರೂ ಅವರ ಪರಿಶುದ್ಧ ಜೀವನವನ್ನೇ

ಪ್ರತಿಬಿಂಬಿಸುತ್ತಿದ್ದವು. 'ಮಾಸ್ತರರೆಂದರೆ ಸಿಂಪಿಲಿಂಗಣ್ಣನವರು, ಇದ್ದರೆ ಇಂಥ ಮಾಸ್ತರರಿರಬೇಕು' ಎಂದು ಜನರಿಂದ ಹೊಗಳಿಸಿಕೊಂಡರು. ಶಿಕ್ಷಕ ವೃತ್ತಿಯಿಂದ ನಿವೃತ್ತರಾದ ಮೇಲೆ ಸುಮ್ಮನೆ ಕೂಡದೆ ಚಡಚಣದ ಸಂಗಮೇಶ್ವರ ಮತ್ತು ಇಂಡಿಯ ಶಾಂತೇಶ್ವರ ಸಂಸ್ಥೆಯ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯಗಳಲ್ಲಿ ಗೌರವ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ಅಪಾರ ವಿದ್ಯಾರ್ಥಿಗಳ ಮೆಚ್ಚುಗೆ ಗಳಿಸಿದರು.

**ಆಧ್ಯಾತ್ಮ ಜೀವನ**

ಬಾಲ್ಯದ ಗೆಳೆಯರಾದ ಮಧುರಚೆನ್ನರ ಒಡನಾಟದಿಂದ ಸಿಂಪಿ ಲಿಂಗಣ್ಣನವರಲ್ಲಿಯೂ ಆಧ್ಯಾತ್ಮದ ಒಲವು ಮೂಡಿತು. ಆಧ್ಯಾತ್ಮದಲ್ಲಿ ಸಿಂಪಿಯವರು ಶ್ರೀ ಮಧುರ ಚೆನ್ನರ ಎತ್ತರಕ್ಕೆ ಏರದಿದ್ದರೂ ಅವರ ಸಾಧನೆ ಕಡಿಮೆಯಿದ್ದಿಲ್ಲ. ಮನಸ್ಸಿನ ಏಕಾಗ್ರತೆಗೆ ಚಿಕ್ಕಂದಿನಿಂದಲೇ ಯೋಗಾಸನ ಗಳನ್ನು ರೂಢಿಸಿಕೊಂಡಿದ್ದರು. ಶ್ರೀ ಮಧುರಚೆನ್ನರ ಸಂಪರ್ಕ ಬೆಳೆದು 1936ರಲ್ಲಿ ಹಲಸಂಗಿ ಗೆಳೆಯರೆಲ್ಲರೂ ಸೇರಿ ಅರವಿಂದ ಗ್ರಂಥಮಾಲೆಯನ್ನು ಪ್ರಾರಂಭಿಸಿದರು. ನಾಡಿನ ಗಣ್ಯ ಲೇಖಕರ ಕೃತಿಗಳನ್ನು ಅರವಿಂದ ಗ್ರಂಥಮಾಲೆಯಿಂದ ಪ್ರಕಟಿಸಿದರು. ಮುಂದೆ 1928ರಲ್ಲಿ ಶ್ರೀ ಮಧುರ ಚೆನ್ನರು ಅರವಿಂದರ ವಿಚಾರಗಳನ್ನು ಕನ್ನಡಿಗರಿಗೆ ತಿಳಿಸಲು 'ಅಮೃತ' ಎಂಬ ಕನ್ನಡ ಮಾಸಿಕ ತೆಗೆದರು. ಆಗ ಗೆಳೆಯರ ಗುಂಪು 'ಶ್ರೀ ಅರವಿಂದ ಮಂಡಲ'ವಾಗಿ ಮಾರ್ಪಾಡಾಯಿತು. ಅಂದಿನಿಂದ ಈ ಗೆಳೆಯರಿಗೆ ಸಾಹಿತ್ಯವೇ ಸಾಧನೆ, ಜೀವನವೇ ಗುರಿಯಾದಂತೆ ಮಂಡಲ ದವರಿಗೆ ಜೀವನವೇ ಸಾಧನವಾಗಿ, ಆಧ್ಯಾತ್ಮವೇ ಗುರಿಯಾಯಿತು. 1943ರಲ್ಲಿ ಶ್ರೀ ಅರವಿಂದರ ಆಶ್ರಮಕ್ಕೆ ಸಂದರ್ಶನವಿತ್ತು 'ಪೂರ್ಣಯೋಗ' ಪಥದಲ್ಲಿ ಸಾಮರಸ್ಯ ಪಡೆದರು. ಶ್ರೀ ಮಾತಾರವಿಂದರ ಪರಮ ಭಕ್ತರಾಗಿ ದಿವ್ಯಜೀವನ ಸಾಗಿಸಿದರು. "ಒಬ್ಬ ಹಳ್ಳಿ ಹುಡುಗನು ಶ್ರೀ ಅರವಿಂದರ ಪೂರ್ಣಯೋಗಾಧಿ ದೇವತೆಯಾದ ಶ್ರೀ ಮಾತೆಯವರ ಪಾದದವರೆಗೆ ಯಾತ್ರೆ ಮಾಡಿ, ಅದನ್ನು ತನ್ನ ಜೀವನ ಯೋಗದ ರಾಜಮಾರ್ಗ ಮಾಡಿಕೊಂಡಿದ್ದುದು ಸಣ್ಣ ತಪಸ್ಸಲ್ಲ" ಎಂದು ದ.ರಾ.ಬೇಂದ್ರೆಯವರು ಹೇಳಿರುವುದರಲ್ಲಿ ಸತ್ಯವಿದೆ.

ಹಳ್ಳಿಯಲ್ಲಿ ಹುಟ್ಟಿ ಹಳ್ಳಿಯಲ್ಲೆ ಬೆಳೆದು ಶಿಕ್ಷಕನಾಗಿ, ಸಾಹಿತಿಯಾಗಿ, ಯಾವ ಬಲವಿಲ್ಲದೆ ಸ್ವ ಪ್ರಯತ್ನದಿಂದ ಹಲವು ಕಾರ್ಯಗಳನ್ನು ನಾಡಿನ ಜನಮೆಚ್ಚುವಂತೆ ಮಾಡಿ, ಸಾಹಿತ್ಯದಲ್ಲಿ ಸಿದ್ಧಹಸ್ತರಾದಂತೆ ಆಧ್ಯಾತ್ಮದಲ್ಲಿಯೂ ಸಿದ್ಧಿಯನ್ನು ಪಡೆದು ದಿ. 05-03-1993ರಂದು ತಮ್ಮ ಅಪಾರ ಗೆಳೆಯರನ್ನು ಬಿಟ್ಟು ಅಗಲಿದರು.

**ಸಾಹಿತ್ಯ**

ನವೋದಯ ಕನ್ನಡ ಸಾಹಿತ್ಯದಲ್ಲಿ ಸಿಂಪಿ ಲಿಂಗಣ್ಣನವರದು ಎದ್ದು ಕಾಣುವ ಹೆಸರು. ತೀರ ಚಿಕ್ಕಂದಿನಿಂದಲೇ ಅಂದರೆ 6ನೇಯದು ಕಲಿಯುತ್ತಿರುವಾಗಲೇ 'ಪ್ರಾಮಾಣಿಕತನ' ಎಂಬ ನಿಬಂಧ ಬರೆದು ಶಿಕ್ಷಣಾಧಿ ಕಾರಿಯಿಂದ ಸೈ ಎನಿಸಿಕೊಂಡವರು. 1922ರಲ್ಲಿ 'ಸಾವಿನ ಸಮಸ್ಯೆ' ಎಂಬ ಏಕಾಂಕ ನಾಟಕ ಬರೆದು ಸಾಹಿತ್ಯಕ್ಷೇತ್ರವನ್ನು ಪ್ರವೇಶಿಸಿದರು. ಮುಂದೆ ಬರವಣಿಗೆಯನ್ನು ಒಂದು ವೃತ್ತಿಯಂತೆ ಸ್ವೀಕರಿಸಿ ವೈವಿಧ್ಯಮಯ ಕೃತಿಗಳನ್ನು ರಚಿಸಿರುವರು. ಅವರು ಬರೆದ ಕೃತಿಗಳನ್ನು ವಿಷಯಕ್ಕನುಗುಣವಾಗಿ ಹೀಗೆ ವಿಂಗಡಿಸಬಹುದು : 1) ಜನಪದ ಸಾಹಿತ್ಯ 2) ಕವನ ಸಂಕಲನಗಳು 3) ಪ್ರಬಂಧಗಳು 4) ಜೀವನ ಚರಿತ್ರೆಗಳು 5) ಸಣ್ಣಕಥೆ ಹಾಗೂ ಕಾದಂಬರಿ 6) ಏಕಾಂಕ ನಾಟಕಗಳು 7) ಮಕ್ಕಳ ಹಾಗೂ ನವ ಸಾಕ್ಷರರ ಸಾಹಿತ್ಯ 8) ಅನುವಾದಿತ ರಾಮತೀರ್ಥರ ಸಾಹಿತ್ಯ 9) ಅರವಿಂದರ ಸಾಹಿತ್ಯ ಹೀಗೆ ವಿವಿಧ ಪ್ರಕಾರಗಳಲ್ಲಿ ಸುಮಾರು 100ರಷ್ಟು ಉತ್ಕೃಷ್ಟ ಗ್ರಂಥಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿದ ಸಾಹಿತ್ಯ ಸಾರ್ವಭೌಮರು. ಸಿಂಪಿಯವರು ಹೆಚ್ಚಾಗಿ ಬರೆದದ್ದು ಗದ್ಯದಲ್ಲಿ, ಕಾವ್ಯ ಬರೆದರೂ ಗದ್ಯಕ್ಕೆ ಒಲಿದಿರುವರು. ಹಳ್ಳಿಯ ಬಾಳಿನ ಮುತ್ತು ರತ್ನಗಳಾದ ಜನಪದ ಸಾಹಿತ್ಯದ ಹಾಡು, ಕಥೆ, ಗಾದೆ, ಒಗಟು, ನುಡಿಗಟ್ಟುಗಳನ್ನು ಅಪಾರವಾಗಿ ಸಂಗ್ರಹಿಸಿ, ಸಂಪಾದಿಸಿ ಕೊಟ್ಟುದಲ್ಲದೆ, ಆಯಾ ಸಂಗ್ರಹಗಳಿಗೆ ವಿಚಾರಾತ್ಮಕ, ವಿಶ್ಲೇಷಣಾತ್ಮಕ ಪ್ರಸ್ತಾವನೆಗಳನ್ನು ಬರೆದಿರುವರಲ್ಲದೆ ಅನೇಕ ಲೇಖನಗಳನ್ನು ಪ್ರಕಟಿಸಿರು ವರು. ಅವರು ಬರೆದ ಗದ್ಯ ಕೃತಿಗಳು ಆಧುನಿಕ ಗದ್ಯ ಸಾಹಿತ್ಯದಲ್ಲಿ ಮಹತ್ವ ದ್ದಾಗಿವೆ.

**1) ಜನಪದ ಸಾಹಿತ್ಯ**

ಲಿಂಗಣ್ಣನವರ ಅತ್ತಿಗೆ ಗುರುಬಾಯಿ ಜನಪದ ತವನಿಧಿ ಆಗಿದ್ದಳು. ಅವಳು ಹೇಳುವ "ಕರಿಯಂಗಿ ಕಸೂತಿ ತಲೆ ತುಂಬ ಜಾವುಳ ಅಂಗಳದಾಗ ನವಿಲಾಟ ಲಿಂಗಯ್ಯನಾಟ ವಿಪರೀತ" ಎನ್ನುವ ಹಾಡು ಅವರಲ್ಲಿ ಚಿಕ್ಕಂದಿನಿಂದಲೇ ಜನಪದ ಸಾಹಿತ್ಯದ ಬೀಜ ಬಿತ್ತಿತು. ಮನೆಯ ಪರಿಸರವೇ ಜನಪದ ಕಲೆಯ ತೌರಾಗಿತ್ತು. ತಂದೆ ತಾಯಿ ಅಣ್ಣರ ಜನಪದ ಕಲೆಗಳು, ಊರಿನ ಬಯಲಾಟಗಳು ಲಿಂಗಣ್ಣನವರ ಮೇಲೆ ಜನಪದ ಸಾಹಿತ್ಯದ ಗಾಢ ಪ್ರಭಾವ ಬೀರಿದವು. ಜನಪದ ಸಾಹಿತ್ಯದ ಸಾವಿಗೆ ಮಾರುಹೋಗಿ ಮುಂದೆ ಅವರು ಆ ಸಾಹಿತ್ಯದ ಸಂಗ್ರಹ ಸಂಪಾದನೆಯನ್ನೇ ಜೀವನದ ಉಸಿರನ್ನಾಗಿ ಮಾಡಿಕೊಂಡರು. ಹಲಸಂಗಿ ಗೆಳೆಯರಾದ ಶ್ರೀ ಮಧುರ ಚೆನ್ನ, ಕಾಪಸೆ ಶೀನಪ್ಪ, ಪಿ.ಧೂಲಾ ಅವರೊಂದಿಗೆ ಸೇರಿ ಜನಪದ ಸಾಹಿತ್ಯದ ಪ್ರಮುಖ ಹಾಗೂ ಮಾರ್ಗದರ್ಶಿ ಸಂಗ್ರಹಗಳಾದ 'ಗರತಿಯ ಹಾಡು' 'ಜೀವನ ಸಂಗೀತ', 'ಮಲ್ಲಿಗೆದಂಡೆ' ಮುಂತಾದ ಗ್ರಂಥಗಳು ಅವರಿಗೆ ಜನಪ್ರಿಯತೆಯನ್ನು ತಂದುದಲ್ಲದೆ, ನಾಡಿನ ವಿದ್ವಾಂಸರಿಂದ ಪ್ರಶಂಸೆಗೆ ಪಾತ್ರರಾದರು.

'ಗರತಿಯ ಹಾಡು', 'ಜೀವನ ಸಂಗೀತ' ಸಂಗ್ರಹಗಳು ಇಂದಿಗೂ ಕಾವ್ಯದ ದೃಷ್ಟಿಯಿಂದ ಅದ್ವಿತೀಯ ಸಂಗ್ರಹಗಳೆಂದು ಆಧುನಿಕ ಸಾಹಿತ್ಯದ ಪ್ರಸಿದ್ಧ ವಿಮರ್ಶಕರಾದ ಗಿರಡ್ಡಿ ಗೋವಿಂದರಾಜರು ಅಭಿಪ್ರಾಯ ಪಟ್ಟರು. ಉತ್ತರ ಕರ್ನಾಟಕದ ಜನಪದ ಕತೆಗಳು ಎಂಬ ಗ್ರಂಥದಲ್ಲಿ ಸುಮಾರು 73 ಕಥೆಗಳನ್ನು ಸಂಗ್ರಹಿಸಿ ಅವುಗಳನ್ನು ಶಾಸ್ತ್ರೀಯವಾಗಿ ಎಂಟು ವಿಭಾಗಗಳಲ್ಲಿ ವಿಂಗಡಿಸಿ ದ್ದಾರೆ. ಈ ಕೃತಿಯ ಕುರಿತು ದಿವಂಗತ ಡಾ.ಬಿ.ಬಿ.ಹೆಂಡಿಯವರು ನಮ್ಮ ಜನಾಂಗದ ನಾಗರಿಕತೆಯ ವಿವಿಧ ಘಟ್ಟಗಳನ್ನು ಈ ಕಥೆಗಳು ಪ್ರತಿನಿಧಿಸುತ್ತ ವೆಂದು ಹೇಳಿರುವುದು ಸಮಂಜಸವಾಗಿದೆ.

1954ರಲ್ಲಿ ಸಂಪಾದಿಸಿದ 'ಗರತಿಯ ಬಾಳು' ಕೃತಿಯಲ್ಲಿ ಗರತಿ ಬಾಲ್ಯ ದಿಂದ ಬೆಳೆದು ಬಂದ ವಿವಿಧ ಘಟ್ಟಗಳ ಜೀವನಾನುಭವ ಅಲ್ಲದೆ, ಅವಳು ಲೋಕವನ್ನೇ ಉದ್ಧರಿಸಿದ ಲೋಕಮಾತೆ ಎಂದು ವ್ಯಾಖ್ಯಾನಿಸಿದ್ದಾರೆ. ಹಾಗೂ ಜನಪದ ಗಾದೆ, ಒಗಟು, ಒಡಪು, ಅಡ್ನಗತೆ, ಬಯಲಾಟದ ಹಾಡು, ಪಡೆನುಡಿಗಳನ್ನು ಸಂಗ್ರಹಿಸಿ ವ್ಯವಸ್ಥಿತವಾಗಿ ವಿಮರ್ಶಿಸಿದ 'ಜನಪದ ಜೀವಾಳ' ಎಂಬ ಮೌಲಿಕ ಗ್ರಂಥವು ಜನಪದ ಸಾಹಿತ್ಯದ ಅಧ್ಯಯನಕ್ಕೆ ಅಡಿಗಲ್ಲಾಗಿದೆ. ಈ ಪುಸ್ತಕದ ವಿಮರ್ಶೆ ಮಾಡಿದ ಖ್ಯಾತಕವಿ ಚೆನ್ನವೀರ ಕಣವಿಯವರು "ಜನಪದ ಸತ್ವದಿಂದ ಪರಿಪುಷ್ಟವಾದ ಸಿಂಪಿಯವರ ಪರಿಪಕ್ವ ಭಾವಕೋಶದ ಅಭಿವ್ಯಕ್ತಿಯನ್ನೇ ಇಲ್ಲಿ ಕಾಣಬಹುದು" ಎಂದು ಹೇಳಿರುವರು.

ಉತ್ತರ ಕರ್ನಾಟಕದ ವೈವಿಧ್ಯಮಯ ಜನಪದ ಹಾಡುಗಳನ್ನು ಪರಿಚಯಿಸುವುದು 'ಉತ್ತರ ಕರ್ನಾಟಕದ ಜನಪದ ಗೀತೆಗಳು' ಎಂಬ ಗ್ರಂಥವಾದರೆ, ಅಡ್ಡಕಥೆ ದೃಷ್ಟಾಂತ ಕಥೆಗಳ ಸ್ವಾರಸ್ಯವನ್ನು ಸ್ವಲ್ಪದರಲ್ಲೇ ತಿಳಿಸುವುದು. 'ಕಿರಿದರೊಳ್ ಪಿರಿದರ್ಥದ ಚಲಕ' ಎಂಬ ಉಪನ್ಯಾಸ ಗ್ರಂಥ. ಉತ್ತರ ಕರ್ನಾಟಕದ ಪ್ರಸಿದ್ಧ

ಲಾವಣಿಗಳ ಸಂಗ್ರಹವಾದ 'ಲಾವಣಿಗಳು' ಎಂಬ ಗ್ರಂಥದಲ್ಲಿ ಲಾವಣಿಗಳ ಹುಟ್ಟು, ಸ್ವರೂಪ, ಬೆಳವಣಿಗೆಯನ್ನು ಕುರಿತು ವಿವೇಚಿಸಿದ್ದಾರೆ.

ಜನಪದ ಸಾಹಿತ್ಯ ಸಂಸ್ಕೃತಿಯನ್ನು ಕುರಿತು ಪ್ರಬುದ್ಧ ಪ್ರಬಂಧಗಳ ಸಂಕಲನ 'ಹೆಡೆಗೆ ಜಾತ್ರೆ'ಯಾದರೆ, ಹೆಣ್ಣು, ಮಗಳು, ಸೊಸೆ, ಸತಿ, ತಾಯಿಯಾಗುವ 'ಗರತಿಯ ನಾಲ್ಕು ಅವತಾರಗಳನ್ನು ಹಾಡಿನ ಮೂಲಕ ವ್ಯಾಖ್ಯಾನಿಸಿರುವ ಗ್ರಂಥ 'ಗರತಿಯ ಬಾಳ ಸಂಹಿತೆ'. ಗಾದೆಗಳ ಮೂಲ ಸ್ವರೂಪ, ಅರ್ಥ ವ್ಯಾಪ್ತಿ ಅವುಗಳಲ್ಲಿರುವ ಕಾವ್ಯಾಂಶ ಮತ್ತು ಪ್ರಭಾವ ಕುರಿತು ವಿಶ್ಲೇಷಿಸಿರುವ 'ಗಾದೆಗಳ ಗಾರುಡಿ' ಗ್ರಂಥ ಕುರಿತು ಗಾದೆಯ ವೇದವನ್ನು ಕ್ರೋಢೀಕರಿಸಿದ ಇಂದಿನ ವೇದವ್ಯಾಸರೆಂದು ಶ್ರೀ ಎನ್ನೆಯವರು ಅಭಿಪ್ರಾಯ ಪಟ್ಟರು. ಸಿಂಪಿಲಿಂಗಣ್ಣನವರು 100 ಕೃತಿಗಳನ್ನು ರಚಿಸಿದರೂ ಜನಪದ ಕೃತಿಗಳು ಚಿರಂತನವಾದವು. "ಜಾನಪದ ಸಾರ ಸರ್ವಸ್ವವನ್ನು ಅಧ್ಯಯನ ಮಾಡಿರುವ ಲಿಂಗಣ್ಣನವರು ಇಟ್ಟ ಹೆಜ್ಜೆಯ ಗುರುತು ಉಸುಕಿನ ಮೇಲೆ ಇಟ್ಟಂತದ್ದಲ್ಲ ಅದು ಕಲ್ಲಿನ ಮೇಲೆ ಕಡೆದು ನಿಲ್ಲಿಸಿದಂತಹದ್ದು. ಬಹಳ ಕಾಲ ಉಳಿಯುವಂತಹದ್ದು" ಎಂದು ಗೊ.ರು.ಚನ್ನಬಸಪ್ಪನವರು ಹೇಳಿರುವುದರಲ್ಲಿ ಸತ್ಯಾಂಶವಿದೆ. ಹಳ್ಳಿಯ ಬಾಳಿನಲ್ಲಿ ಬೆರತು ಜನಜೀವನ ಮಾತು ಕತೆ ಸಂಗ್ರಹಿಸಿ ಸಂಪಾದಿಸಿ ವಿಮರ್ಶಿಸಿ ಬದುಕಿದ ಲಿಂಗಣ್ಣವನರು "ಜಾನಪದ ಜಂಗಮ ವಿಶ್ವವಿದ್ಯಾಲಯವೇ" ಆಗಿದ್ದರು.

**2) ಕವನ ಸಂಕಲನಗಳು**

ಕನ್ನಡ ಸಾಹಿತ್ಯದ ನವೋದಯ ಸಂದರ್ಭದಲ್ಲಿ ಸಿಂಪಿ ಲಿಂಗಣ್ಣವನರು ಕವಿತೆಗಳನ್ನು ಬರೆದರು. 1936ರಲ್ಲಿಯೇ ಅವರು ಹಿಂದಿಯ ಪ್ರಸಿದ್ಧ ಕವಿ ರಾಮನರೇಶ ತ್ರಿಪಾಠಿಯವರು ಬರೆದ 'ಮಿಲನ' ಎಂಬ ಖಂಡಕಾವ್ಯವನ್ನು ಪ್ರಥಮವಾಗಿ ಕನ್ನಡಕ್ಕೆ ಅನುವಾದಿಸಿದವರು. ಅವರ ಅನುವಾದ ಕೃತಿ ಮೂಲ ಕೃತಿ ಎನ್ನುವಷ್ಟೆ ಜನರ ಹೃದಯವನ್ನು ಸೂರೆಗೊಂಡಿತು. ಆ ಕೃತಿಯಿಂದ ಲಿಂಗಣ್ಣನವರಲ್ಲಿ ಅಡಗಿದ ಕವಿಪ್ರತಿಭೆ ಪರಿಚಯವಾಯಿತು. ಅರವಿಂದರ ಅನುಯಾಯಿಗಳಾದ ಹತ್ತು ವರ್ಷಗಳ ನಂತರ ಆಧ್ಯಾತ್ಮದ ಅನುಭಾವ ಗೀತವಾದ 62 ಕವನಗಳಿಂದ ಕೂಡಿದ 'ಮುಗಿಲ ಜೇನು' ಎಂಬ ಹೊಸ ಸಂಕಲನ ನೀಡಿದರು. 1968ರಲ್ಲಿ ಬಸವಣ್ಣವನರ ಜೀವನ ಹಾಗೂ ಸಾಧನೆಗಳನ್ನು ಕುರಿತು ಬರೆದ 63 ಕವನಗಳ ಸಂಕಲನವೇ 'ಶ್ರುತಾಶ್ರುತ'. ಇದಕ್ಕೆ ಮುನ್ನುಡಿ ಬರೆದ ಪ್ರೊ.ಸ.ಸ.ಮಾಳವಾಡರು "ಹರಿಹರನ ರಗಳೆಗಳಲ್ಲಿಯ ನಿರ್ಗಳ ಓಟ, ಮಿಕ್ಕ ಕೃತಿಗಳಲ್ಲಿಯ ಅರ್ಥಭಾವ ಮೇಳೈಸಿವೆ" ಎಂದರೆ, ವಿಮರ್ಶಕ ಶ್ರೀ ಸುಮತೀಂದ್ರ ನಾಡಿಗರು "ತಮ್ಮ ಗೌರವ ಮತ್ತು ಭಕ್ತಿಗಳನ್ನು ಬಸವಣ್ಣವನರಿಗೆ ಅರ್ಪಿಸುವುದು, ತಾವು ಬಸವಣ್ಣನವರನ್ನು ಅರ್ಥಮಾಡಿಕೊಂಡ ರೀತಿಯನ್ನು ತಮ್ಮ ನಾಡವರಿಗೆ ತಿಳಿಸುವುದು ಸಿಂಪಿಯವರ ಉದ್ದೇಶವಾಗಿ ಕಾಣುತ್ತದೆ. ಮಹಾತ್ಮರೊಬ್ಬರ ಆದರ್ಶವನ್ನು ಕಣ್ಣೆದುರಿಗಿಡುವುದರಲ್ಲಿ ಇದು ಗಮನಾರ್ಹವಾಗಿದೆ" ಎಂದು ಅಭಿಪ್ರಾಯ ಪಟ್ಟಿರುವರು. ಈ ಕೃತಿಯಲ್ಲಿ ಬಸವಣ್ಣವರ ಸಂದೇಶ, ಅರವಿಂದರ ದರ್ಶನ, ಹಾಗೂ ಕರ್ನಾಟಕ ಸಂಸ್ಕೃತಿಯ ಸಂಗಮವನ್ನು ಕಾಣಬಹುದಾಗಿದೆ. 1976ರಲ್ಲಿ 'ಸಾಯಕೊಲ್' ಎಂಬುದು ಸಿಂಪಿ ಲಿಂಗಣ್ಣವನರ ಜನಪದ ಭಾಷಾ ಸೊಗಡಿನ, ಲಯದ, ಕಾವ್ಯವಾಗಿದೆ. ಸ್ವಾತ್ರಂತ್ರ್ಯದ ನಂತರ ಹಳ್ಳಿಯ ಜನಜೀವನದಲ್ಲಿ ಕಾಣುವ ಹಲವಾರು ಸಮಸ್ಯೆಗಳನ್ನು ಕುರಿತು ವಿಡಂಬನೆ ಬರೆದ ಕವನಗಳ ಸಂಗ್ರಹವಿದು. ಹಳ್ಳಿಗರ ಬಾಳ ಸುಧಾರಣೆಯ ವಿಚಾರಕ್ಕೆ ಹೆಚ್ಚು ಒತ್ತು ಕೊಟ್ಟಿರುವದರಿಂದ ಕಾವ್ಯಾಂಶ ಕೊರತೆಯಾಗಿದೆ. 1956ರಲ್ಲಿ ಶ್ರೀ ಅರವಿಂದಾಶ್ರಮದ ಶ್ರೀ ಮಾತೆಯವರ ಅನುಭಾವದ ನುಡಿಗಳನ್ನೇ ಬೋಧಪ್ರದವಾಗಿ ಪದ್ಯರೂಪದಲ್ಲಿ ರಚಿಸಿದ ಕೃತಿಯೇ 'ಮಾತೃವಾಣಿ' 'ಪೂಜಾಗದ್ಯಗೀತೆಗಳು' ಮತ್ತು 'ನಮಸ್ಕಾರ' ಗ್ರಂಥಗಳೆರಡು ಉನ್ನತ ಭಾವ, ಉದಾತ್ತ ಅನುಭಾವ ನಿರ್ಮಲ ಮನಸ್ಸು, ಕಲ್ಪನಾ ವಿಲಾಸ, ಪರಿಶುದ್ಧ ಭಕ್ತಿಯಿಂದ ಅಲಂಕಾರಿಕ ಸೂತ್ರಬದ್ಧವಾದ ಲಲಿತ ಗದ್ಯ ಗೀತಗಳಾಗಿವೆ ಇವುಗಳಲ್ಲಿ ಲಿಂಗಣ್ಣನವರ ಅನುಭಾವದ ಎತ್ತರ ಭಕ್ತಿಯ ವಿಸ್ತಾರವನ್ನು ಕಾಣಬಹುದಾಗಿದೆ. ಇಷ್ಟೊಂದು ಕವನ ಸಂಕಲನಗಳನ್ನು ಹೊರತಂದಿದ್ದರೂ ಲಿಂಗಣ್ಣನವರು ಗದ್ಯ ಲೇಖಕರೆಂದೇ ಪ್ರಸಿದ್ಧರಾಗಿದ್ದಾರೆ.

**3) ಪ್ರಬಂಧ ಸಂಕಲನಗಳು**

ಕನ್ನಡ ಗದ್ಯ ಸಾಹಿತ್ಯದಲ್ಲಿ ಆದ್ಯ ಲೇಖಕರಾದಂತೆ ಲಿಂಗಣ್ಣನವರು ಪ್ರಸಿದ್ಧ ಪ್ರಬಂಧಕಾರರು ಆಗಿದ್ದರು. ಸುಮಾರು 15 ಪ್ರಬಂಧ ಸಂಕಲನಗಳು ಪ್ರಕಟವಾಗಿವೆ. ವಿಷಯಕ್ಕನುಗುಣವಾಗಿ 1) ಭಾರತದ ಇತಿಹಾಸ ಸಂಸ್ಕೃತಿಗೆ ಸಂಬಂಧಿಸಿದ ಪ್ರಬಂಧಗಳು, 2) ವೈಚಾರಿಕ ಪ್ರಬಂಧಗಳು, 3) ಕನ್ನಡ ಭಾಷೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಪ್ರಬಂಧಗಳು, 4) ವಿವಿಧ ವ್ಯಕ್ತಿಯ ವಿಡಂಬನೆ ಮತ್ತು ಹರಟೆಯ ಪ್ರಬಂಧಗಳು, 5) ಹಳ್ಳಿಯ ಜೀವನ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಪ್ರಬಂಧಗಳು.

**ಭಾರತದ ಇತಿಹಾಸ ಸಂಸ್ಕೃತಿಗೆ ಸಂಬಂಧಿಸಿದ ಪ್ರಬಂಧಗಳು**

ಹಳ್ಳಿಯಲ್ಲಿಯೇ ಜನಿಸಿ ಹಳ್ಳಿಯಲ್ಲಿಯೇ ಜೀವನ ಕಳೆದ ಲಿಂಗಣ್ಣನವರ ಅಸಾಧಾರಣ ಪ್ರತಿಭೆ ಬಾಲ್ಯದಿಂದಲೂ ರಾಷ್ಟ್ರೀಯತೆ ಮತ್ತು ಆಧ್ಯಾತ್ಮವನ್ನು ಹಲಸಂಗಿ ಗೆಳೆಯರ ಬಳಗದೊಂದಿಗೆ ಒಡಗೂಡಿ ಬಸವಣ್ಣ, ರಾಮತೀರ್ಥ, ವಿವೇಕಾನಂದ, ರಾಮಕೃಷ್ಣ ಪರಮಹಂಸ ಹಾಗೂ ಶ್ರೀ ಅರವಿಂದರ ಪ್ರಭಾವಕ್ಕೆ ಒಳಗಾಗಿರುವುದರಿಂದ ಆ ಮಹಾಪುರುಷರ ವಿಚಾರಧಾರೆ ಮತ್ತು ಜೀವನ ಸಿದ್ಧಾಂತವನ್ನೇ ತಮ್ಮ ಪ್ರಬಂಧದಲ್ಲಿ ವಿವರಿಸಿದ್ದಾರೆ.

ಆಧುನಿಕ ಭಾರತದ ಇತಿಹಾಸ, ಸಂಸ್ಕೃತಿಯ ಜೊತೆಗೆ ಸ್ವಾತಂತ್ರ್ಯ ಚಳುವಳಿ ಹಾಗೂ ಪ್ರಾಚೀನ ಭಾರತದ ಜೀವನ ಮೌಲ್ಯಗಳನ್ನು ಸಾಮಾನ್ಯರಿಗೂ ತಿಳಿಯುವಂತೆ ಅರ್ಥಪೂರ್ಣವಾಗಿ ಹಾಗೂ ಸರಳ ಭಾಷೆಯಲ್ಲಿ "ಭಾರತಭವ್ಯ", 'ಸಿದ್ಧತೆ', 'ಭಾರತಕ್ಕೆ ಸ್ವರಾಜ್ಯ ದೊರೆತದ್ದೇಕೆ?', 'ಭಾರತೀಯ ಸಂಸ್ಕೃತಿಯ ಸಂಘಟನೆ', 'ಬಾಳ ಬೇಸಾಯ' ಮುಂತಾದ ಪ್ರಬಂಧಗಳಲ್ಲಿ ಕಾಲಕಾಲಕ್ಕೆ ಭಾರತದಲ್ಲಿ ಬೆಳೆದು ಬಂದ ಧಾರ್ಮಿಕ, ಸಾಂಸ್ಕೃತಿಕ, ವೈಚಾರಿಕ ಆಂದೋಲನಗಳು ಕರ್ನಾಟಕದಲ್ಲಿ ಹೇಗೆ ನಡೆದವೆಂಬುದನ್ನು ವಿವರವಾಗಿ ಚರ್ಚಿಸಿದ್ದಾರೆ.

**ವೈಚಾರಿಕ ಪ್ರಬಂಧಗಳು**

ಸಿಂಪಿ ಲಿಂಗಣ್ಣನವರು ಸಂಪ್ರದಾಯವಾದಿಗಳಲ್ಲ. ಪರಂಪರೆಯಲ್ಲಿಯ ಹೊಸ ಬದಲಾವಣೆಗಳನ್ನು ತೆರೆದ ಮನಸ್ಸಿನಿಂದ ಸ್ವಾಗತಿಸಿದರು. ಧರ್ಮದಲ್ಲಿ ಜಡಗಟ್ಟಿದ ನೀತಿಗಳನ್ನು ಮೀರಿ ಬೆಳೆದರು. ಜನರಿಗೆ ಹರಿತವಾದ ವಿಚಾರಗಳನ್ನು ನೀಡಿ ಎಚ್ಚರಿಸುವಲ್ಲಿ ಸಿದ್ಧಹಸ್ತರು. ಅವರ ಪ್ರಖರ ವೈಚಾರಿಕತೆಯನ್ನು ನಿರೂಪಿಸುವ ಪ್ರಬಂಧ ಗ್ರಂಥ 'ಜೀವನ ದೃಷ್ಟಿ'ಯಾದರೆ, 'ಸತ್ಯಕಾಮ' ಮತ್ತು 'ಸರ್ವಜ್ಞ'ರ ಚರಿತ್ರಾತ್ಮಕ ಪ್ರಬಂಧಗಳಲ್ಲಿದ್ದೆ, ಶಿವಾನುಭವ ಹಾಗೂ ಮಾನವನ ಸಾರ್ಥಕ ಬದುಕಿನ ಬಗ್ಗೆ ಸರಳವಾಗಿ ಸಾಮಾನ್ಯರಿಗೂ ತಿಳಿಯುವಂತೆ ಬರೆದಿರುವರು. 'ಬದುಕಿನ ಬೆಲೆ' ಗ್ರಂಥದಲ್ಲಿ ಆಧ್ಯಾತ್ಮಜೀವನದ ಗಹನ ವಿಷಯಗಳ ವಿವೇಚನೆ ಇದೆ. 'ಬಾಳಬುತ್ತಿ'ಯಲ್ಲಿ ನಿತ್ಯಜೀವನದಲ್ಲಿ ಕಂಡುಬರುವ ಅನೇಕ ಸಮಸ್ಯೆಗಳಿಗೆ ಶರಣರ ಮತ್ತು ಶ್ರೀ ಅರವಿಂದರ ವಿಚಾರಗಳಿಂದ ಪರಿಹಾರವನ್ನು ಸೂಚಿಸಿದ್ದಾರೆ. ಅವರ ಪ್ರತಿಯೊಂದು ಪ್ರಬಂಧದಲ್ಲಿ ತೀಕ್ಷ್ಣವಾದ ವೈಚಾರಿಕ ಪ್ರತಿಷ್ಠೆ ಹಾಗೂ ಜಾನಪದ ನಿಷ್ಠೆಗಳ ಅಪರೂಪ ಸಂಗಮವನ್ನು ಕಾಣಬಹುದಾಗಿದೆ.

**ಕನ್ನಡ ಸಂಸ್ಕೃತಿಗೆ ಸಂಬಂಧಿಸಿದ ಪ್ರಬಂಧಗಳು**

'ಸ್ವರ್ಗದೋಲೆಗಳು' ಲಿಂಗಣ್ಣನವರ ಜನಪ್ರಿಯ ಪ್ರಬಂಧ ಕೃತಿ. ಕನ್ನಡ ನಾಡಿನ ಕವಿಪುಂಗವರು, ವೀರರಾಜರು, ತತ್ವಜ್ಞಾನಿಗಳು ಹಾಗೂ ಸಮಾಜ ಸುಧಾರಕರು ಸತ್ತು ಸ್ವರ್ಗ ಸೇರಿ, ಅಲ್ಲಿಂದಲೇ ಇಂದಿನ ಕನ್ನಡಿಗರಿಗೆ ತಮ್ಮ ಜೀವನ ಸಂದೇಶವನ್ನು ಓಲೆಗಳ ಮೂಲಕ ನೀಡಿದಂತೆ ನಿರೂಪಿಸಲಾಗಿದೆ. ಕರ್ನಾಟಕದ ಸಂಸ್ಕೃತಿಯನ್ನೆ ಈ ಕೃತಿ ಪರಿಚಯಿಸುತ್ತದೆ.

'ಸ್ನ್ಯಾಪಿದಿಬ್ಬ' ಇದರಲ್ಲಿ ಕನ್ನಡ ನಾಡಿನ ಮೂವತ್ತು ಮಹತ್ವದ ಪ್ರೇಕ್ಷಣೀಯ ಸ್ಥಳಗಳ ಕುರಿತು ಕಾವ್ಯಮಯ ಗದ್ಯದಲ್ಲಿ ಬರೆಯಲಾಗಿದೆ. ಜನಪದ ಭಾಷೆಯಿಂದ ಓದುಗರ ಮನ ಸೆರೆಹಿಡಿಯುತ್ತದೆ. ಕನ್ನಡ ಸಾಹಿತ್ಯವನ್ನು ತಮ್ಮ ಕೃತಿಗಳಿಂದ ಶ್ರೀಮಂತಗೊಳಿಸಿದ ರತ್ನಾಕರ, ಹರಿಹರ, ಪುರಂದರದಾಸ, ಜೇವರ್ಗೀ ಷಣ್ಮುಖ ಸ್ವಾಮಿಗಳ ಜೀವನ-ಸಾಹಿತ್ಯ-ಮೌಲ್ಯಗಳ ಕುರಿತು ವಿಮರ್ಶಾತ್ಮಕವಾಗಿ ಬರೆದ ಗ್ರಂಥ 'ಸಾಹಿತ್ಯ ಸಂಪರ್ಕ' ವಾಗಿದೆ.

**ವ್ಯಕ್ತಿ ಚಿತ್ರ, ವಿಡಂಬನೆ-ಹರಟೆ ಪ್ರಬಂಧಗಳು**

ಸಿಂಪಿಯವರು ರಸಿಕರು, ಅವರ ಬರವಣಿಗೆಯಲ್ಲಿ ಹಾಸ್ಯಪ್ರಜ್ಞೆಯೂ ಒಂದು. ಅವರು ಮಾತಾಡಿದರೂ ಬರೆದರೂ ಹೊಟ್ಟೆ ಹುಣ್ಣಾಗುವಂತೆ ನಗಿಸುವುದರಲ್ಲಿ ನಿಸ್ಸೀಮರು. ಸ್ವಾತಂತ್ರ್ಯೋತ್ತರದ ಹಳ್ಳಿಗಳಲ್ಲಿ ಪುಢಾರಿ ರಾಜಕಾರಣಿಗಳು ಮಾಡುವ ಹುನ್ನಾರಗಳನ್ನು 'ಅಸ್ತವ್ಯಸ್ತ' ಕೃತಿಯಲ್ಲಿ ವಿಂಗಡಿಸಿದರೆ; ಹಳ್ಳಿಗರ ನೈಜಸ್ಥಿತಿಯನ್ನು ಅರಿಯಲು, ಭಾರತ ಮಾತೆಯೇ ಗ್ರಾಮಗಳಿಗೆ ಭೇಟಿಕೊಡುವಂತೆ ಕಲ್ಪಿಸಿ 'ಮಕ್ಕಳಿವರೇನಮ್ಮ' ಕೃತಿಯಲ್ಲಿ ಎಚ್ಚರಿಸಿದ್ದಾರೆ. ವಿವಿಧ ಕ್ಷೇತ್ರದಲ್ಲಿ ಪ್ರಸಿದ್ಧರಾದ ಹಳ್ಳಿಯ ಹತ್ತು ಜನರ ಕುರಿತು ವ್ಯಕ್ತಿಚಿತ್ರಗಳನ್ನು ಹಾಸ್ಯ, ವಿಡಂಬನೆ ಮತ್ತು ಕಲ್ಪನಾ ಶಕ್ತಿಯಿಂದ ಅಂದಿನ ಸಮಾಜವಲೋಕನವನ್ನು "ದಿಟ್ಟಿಸಿ ನೋಡಿದರೆ" ಕೃತಿಯಲ್ಲಿ ನೀಡಿದ್ದಾರೆ. 'ನೂರು ಗಡಿಗೆ ಒಂದು ಬಡಿಗೆ' ಸಿಂಪಿಯವರ 108 ಪ್ರಬಂಧಗಳ ಸಂಕಲನವಾಗಿದ್ದು, ಇದು ಹಳಸಲಾಗದ ಚಿರಂತನ ಹಾಗೂ ನಿತ್ಯ ನೂತನ ಮೌಲ್ಯಗಳಿಂದ ಕೂಡಿದೆ. "ದೇಶದ ಪ್ರಸ್ತುತ ಪರಿಸ್ಥಿತಿಯ ಕುರಿತು ಹಳ್ಳಿಯ ಮಗನೊಬ್ಬನ ಪ್ರಾಮಾಣಿಕ ಪ್ರತಿಕ್ರಿಯೆ ಇದೆಂದು" ಡಾ.ಜಿ.ಎಸ್. ಶಿವರುದ್ರಪ್ಪನವರು ಅಭಿಪ್ರಾಯಪಟ್ಟಿದ್ದಾರೆ.

ತಮ್ಮ ಹಳ್ಳಿಯ ಜೀವನ-ಸಂಸ್ಕೃತಿ ಸುತ್ತಲಿನ ಗ್ರಾಮೀಣ ಪರಿಸರದಲ್ಲಿ ಆಚರಿಸುವ ಎಳ್ಳಮಾಸೆಯ ಚರಗದೂಟ, ಹೋಳಿಹಬ್ಬ, ಸೀತನಿಸಮಾರಂಭ, ಬಯಲಾಟ ಹಾಗೂ ಹಳ್ಳಿಗರ ಸರಳಜೀವನ ನೀತಿ, ಕಲೆಗಳು 'ಒಂದು ತಲೆಮಾರಿನ ಹಿಂದೆ' ಕೃತಿಯಲ್ಲಿ ಕಣ್ಣಿಗೆ ಕಟ್ಟುವಂತೆ ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಹಳ್ಳಿಯಲ್ಲಿ ಹಿಂದೆ ಪ್ರದರ್ಶಿತವಾಗುವ ಬಯಲಾಟಗಳು, ಜೀವನ ಬದಲಾದಂತೆ ಹೇಗೆ ನಾಟಕಕ್ಕೆ ಬದಲಾದವು ಎಂಬುದರ ಬಗ್ಗೆ ಸುದೀರ್ಘವಾಗಿ ನಿರೂಪಿಸಿದ್ದಲ್ಲದೆ, ಹಳ್ಳಿಯ ಕಲಾರಸಿಕರ ಜೀವನದ ಚಿತ್ರಗಳನ್ನು ಬಿಡಿ ಬಿಡಿಯಾಗಿ ಬಿಚ್ಚಿಟ್ಟಿದ್ದಾರೆ.

**೪) ಜೀವನ ಚರಿತ್ರೆಗಳು**

ಬಹುಮುಖ ವ್ಯಕ್ತಿತ್ವದ ಸಿಂಪಿ ಲಿಂಗಣ್ಣನವರು ಅನೇಕ ಜೀವನ ಚರಿತ್ರೆಗಳನ್ನು ಬರೆದಿರುವರು. ತಮ್ಮ ಜೀವನದ ವಿವಿಧ ಘಟನೆಗಳೊಂದಿಗೆ, ಶ್ರೀ ಮಧುರಚೆನ್ನ, ಬೇಂದ್ರೆ, ಬಸವಣ್ಣ, ರಾಮಕೃಷ್ಣಪರಮಹಂಸ, ಟ್ಯಾಗೋರ, ರಾಮತೀರ್ಥ, ಶ್ರೀಮಾತೆ, ಶ್ರೀ ಅರವಿಂದರನ್ನು ಕುರಿತು, ಅವರ ಬಾಲ್ಯಜೀವನ, ಸಾಧನೆ, ಸಿದ್ಧಿಗಳಲ್ಲದೆ, ಆಧ್ಯಾತ್ಮಿಕ ಜೀವನದ ಸಂದೇಶವನ್ನು ಬಹು ಅರ್ಥಪೂರ್ಣವಾಗಿ ವಿವೇಚಿಸಿದ್ದಾರೆ.

'ಮೂವತ್ತೈದು ವರ್ಷ', 'ಕನ್ನಡ ಕುಲದೀಪ ಬಸವಣ್ಣನವರ ಜೀವನ', 'ಪ್ರಿಯದರ್ಶಿ ಅಶೋಕ', 'ಶ್ರೀ ಮಧುರ ಚೆನ್ನರ ಸ್ಮೃತಿಗಳು', 'ಅವರ ಜೀವನ ಮತ್ತು ಕಾರ್ಯ', 'ವಿಶ್ವಕವಿ', 'ಸಿಡಿಲು ಸನ್ಯಾಸಿ', 'ಮಹಾತ್ಮಾಂತಿಯ-ಮಹಾಮನು' ಮುಂತಾದ ಕೃತಿಗಳು ಕನ್ನಡ ಸಾಹಿತ್ಯದ ಜೀವನ ಚರಿತ್ರೆಗಳಲ್ಲಿ ಮೈಲಿಗಲ್ಲಾಗಿವೆ.

**೫) ಸಣ್ಣಕತೆ ಮತ್ತು ಕಾದಂಬರಿ**

ಲಿಂಗಣ್ಣನವರು ಹೆಚ್ಚಾಗಿ ಕತೆಗಳನ್ನು ಬರೆದಿಲ್ಲ. ಆದರೆ ಬೇರೆ ಭಾಷೆಯ ಉತ್ತಮ ಕತೆಗಳನ್ನು ಕನ್ನಡ ಭಾಷೆಗೆ ಭಾಷಾಂತರಿಸಿದ್ದಾರೆ. ಅವರ ಮೊದಲ ಕಥಾಸಂಕಲನಗಳು 'ಕಣ್ಮಸುಕು' ಮತ್ತು 'ಮಧುವನ' ಪ್ರಕಟವಾದರೂ ಅವರಿಗೆ ಪ್ರಸಿದ್ಧಿ ತರಲಿಲ್ಲ. ಆದರೆ ವಿಶ್ವ ವಿಖ್ಯಾತ ಸಾಹಿತಿ ಟಾಲ್‌ಸ್ಟಾಯ್‌ರ ಏಳು ಕತೆಗಳನ್ನು ಹಿಂದಿಗೆ ಭಾಷಾಂತರಿಸಿದ ಪ್ರೇಮಚಂದರ ಕೃತಿಯನ್ನು ಕನ್ನಡದಲ್ಲಿ 'ಪವಿತ್ರಜೀವನ' ಎಂಬ ಹೆಸರಿಟ್ಟು ಅನುವಾದಿಸಿ ಪ್ರಕಟಿಸಿದರು. ಇದು ಉತ್ತಮ ಅನುವಾದ ಕಥಾಸಂಕಲನವೆಂದು ಪ್ರಸಿದ್ಧಿ ಪಡೆಯಿತು. ಅನಂತರ ಶ್ರೀ ಅರವಿಂದಾಶ್ರಮದ ಶ್ರೀ ಮಹಾಮಾತೆಯರ ಜೀವನ-ಸಂದೇಶ ಕುರಿತು ವಿವರಿಸುವ 'ಸುಂದರ ಕತೆಗಳು', ಶ್ರೀ ಸಿದ್ಧೇಶ್ವರ ಸ್ವಾಮಿಗಳು ಪ್ರವಚನದಲ್ಲಿ ಹೇಳಿದ ದೃಷ್ಟಾಂತ ಕತೆಗಳನ್ನು ಸಂಗ್ರಹಿಸಿ 'ಡಾಳಿಸಿದ ದೀಪ' ಎಂದು ಹೆಸರಿಟ್ಟು ಪ್ರಕಟಿಸಿದರು. ಉತ್ತರ ಕರ್ನಾಟಕದ ಹಿಂದಿನ ತಲೆಮಾರಿನ ಜನರ ರೀತಿ-ನೀತಿ ಕುರಿತು ಮನೋಜ್ಞವಾಗಿ ಬರೆದ ಕತೆಗಳ ಸಂಕಲನ 'ಸತ್ಯಕತೆಗಳು' ಇಷ್ಟೊಂದು ಸಣ್ಣಕತೆಗಳನ್ನು ಆ ಕಾಲದಲ್ಲಿ ಬರೆದರೂ ಲಿಂಗಣ್ಣನವರು ಕತೆಗಾರರೆಂದು ಪ್ರಸಿದ್ಧಿ ಪಡೆಯಲಿಲ್ಲ.

**ಕಾದಂಬರಿ 'ಬೆಟ್ಟದ ಹೊಳೆ'**

ಒಂದು ನೂರು ಕೃತಿಗಳನ್ನು ರಚಿಸಿದರೂ ಲಿಂಗಣ್ಣನವರು ಬರೆದ ಕಾದಂಬರಿ ಕೇವಲ ಒಂದು ಎಂದರೆ ಆಶ್ಚರ್ಯವಾಗುತ್ತದೆ. 'ಬೆಟ್ಟದ ಹೊಳೆ' ಕಾದಂಬರಿ ಬರೆದದ್ದು 1946ರಲ್ಲಿ. ಹಳ್ಳಿಯ ಬಡ ಯುವಕನೊಬ್ಬ ಕಷ್ಟ ಅನುಭವಿಸಿ ಶಿಕ್ಷಕನಾಗಿ, ಆದರ್ಶವ್ಯಕ್ತಿ ಹಾಗೂ ಸಾಹಿತಿಯಾಗಿ, ಅನುರೂಪ ಳಾದ ಹೆಂಡತಿ ಪಡೆದು ಸುಖ ಸಂಸಾರಿಯಾದುದನ್ನೆ ಚಿತ್ರಿಸುತ್ತದೆ. ಒಂದು ರೀತಿಯಲ್ಲಿ ಇದು ಸಿಂಪಿ ಲಿಂಗಣ್ಣನವರ ಆತ್ಮಚರಿತ್ರೆಯೇ ಆಗಿದೆ. ಗಟ್ಟಿ ಕಥಾವಸ್ತುವಿನ ಶ್ರೇಷ್ಠ ಕಾದಂಬರಿ ಆಗದಿದ್ದರೂ "ಒಂದು ಕಾದಂಬರಿ ಹೇಗೆ ಬರೆಯಬಹುದೆಂಬುದಕ್ಕೆ ಈ ಚಿಕ್ಕ ಕಾದಂಬರಿ ನಿದರ್ಶನವೆಂದು" ಶ್ರೀ ಚನ್ನವೀರಕಣವಿಯವರು ವಿಮರ್ಶಿಸಿದ್ದಾರೆ.

**೬) ಏಕಾಂಕ ನಾಟಕಗಳು**

ಚಿಕ್ಕವರಿದ್ದಾಗಲೆ ಹಳ್ಳಿಯಲ್ಲಿ ಬಯಲಾಟ, ನಾಟಕ ನೋಡಿದ ಲಿಂಗಣ್ಣನವರು ತಾವೇ ಅನೇಕ ನಾಟಕ ಬರೆದು ಆಡಿದರು, ಆಡಿಸಿದರು. ಅವರು ಬರೆದ ಪ್ರಥಮ ಕೃತಿ 'ಮರೆಮುಚ್ಚು'ಕ. ಇದು ಅಸ್ಪೃಶ್ಯತೆ ವಿರುದ್ಧ ನಾಟಕ ಬರೆದು ಆಶಿಸಿ ಸಂಪ್ರದಾಯ ಜನರಿಂದ ಅಂದು ಬಹಿಷ್ಕಾರಕ್ಕೆ ಒಳಗಾದರು. ಅವರ ಪ್ರಕಟಿತ ಪ್ರಥಮ ನಾಟಕ 'ಜನಜೀವನ' (1928) ಇದು ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು ಎಂದು ಸಾರುವ ಮೂರಂಕಿನ ನಾಟಕ ಬರೆದು ಪ್ರದರ್ಶಿಸಿ, ಜನ ಮೆಚ್ಚುಗೆ ಪಡೆದರು. ಗ್ರಾಮೀಣ ಜನರ ಪುಂಡಾಟಿಕೆಯ ವಸ್ತುವನ್ನೊಳಗೊಂಡ 'ಚಂಡಾಳ ಚೌಕಡಿ' ಮತ್ತು 'ಪೃಥ್ವಿರಾಜ' ಎಂಬ ನಾಟಕಗಳು ಪ್ರದರ್ಶನವಾದರೂ ಪ್ರಕಟವಾಗಿಲ್ಲ. ನಂತರ 'ಭರತ'ನೆಂಬ ಕಾವ್ಯನಾಮದಿಂದ 'ಮೊದಲನೆಯ ದೇಶದ್ರೋಹಿ' ಎಂದು ಹೆಸರಿಟ್ಟು ಪೃಥ್ವಿರಾಜ ಮತ್ತು ಅಲೆಕ್ಸಾಂಡರನ ಹೋರಾಟವನ್ನೆ ಚಿತ್ರಿಸಿರುವರು. ತಾವು ಬರೆದ ಮೂರಂಕಿನ ನಾಟಕಗಳನ್ನೇ ಏಕಾಂಕರೂಪಕ್ಕೆ ತಂದು 'ಸಪ್ತಪದಿ' ಎಂಬ ಏಳು ಏಕಾಂಕ ನಾಟಕಗಳ ಸಂಗ್ರಹ ಹೊರ ತಂದರು. ಅವರು ಪ್ರಸಿದ್ಧ ನಾಟಕಕಾರರಾಗಿ ಹೆಸರು ಮಾಡಲಿಲ್ಲ. ಕೊನೆಗೆ ಅವರು ಜಾನಪದ ಅಧ್ಯಯನಕ್ಕೆ ಹೆಚ್ಚು ಒಲಿದರು.

೭) ಮಕ್ಕಳ ಹಾಗೂ ನವ ಸಾಕ್ಷರರ ಸಾಹಿತ್ಯ

ಚಿಕ್ಕಮಕ್ಕಳಿಗಾಗಿ ಅನೇಕ ಜೀವನ ಚರಿತ್ರೆ ಬರೆದಿರುವರು. ಆದರೆ ಮಕ್ಕಳಿಗಾಗಿ ಲಿಂಗಣ್ಣನವರು ಹಾಡು ಬರೆದಿಲ್ಲ. ಅವರು ಬರೆದ ವಿಶ್ವಾಮಿತ್ರನ ಸಾಹಸ, ಲೊಬೊಲೊಬೊ, ಭಗವಾನ ಬುದ್ಧದೇವ, ಕವಿ ಮತ್ತು ಕವಿಚರಿತೆ, ಶ್ರೀ ಅರವಿಂದ, ಹಾವಿನಾಳ ಕಲ್ಲಯ್ಯ, ನಾಮದೇವ ಮುಂತಾದ ಶರಣರ ಮತ್ತು ದಾರ್ಶನಿಕರ ಕುರಿತು ಸುಮಾರು 12 ಗ್ರಂಥಗಳನ್ನು ರಚಿಸಿರುವರು. ಇವು ಮಕ್ಕಳ ಬುದ್ಧಿ ಮತ್ತು ಚರಿತ್ರೆಯನ್ನು ಬೆಳೆಸುವಲ್ಲಿ ಪ್ರಮುಖವಾಗಿವೆ. ಅಲ್ಲದೆ ನವಸಾಕ್ಷರರಿಗಾಗಿ ಅವರಿಗೆ ತಿಳಿಯುವಂತೆ ಹಳ್ಳಿಯ ಆರೋಗ್ಯ, ಹರಿಜನ ಸಮಸ್ಯೆ, ಉತ್ತಮ ಜೀವನ, ಅಂದ ಚೆಂದ ಕುರಿತು ಹಳ್ಳಿಗಾರರಿಗೆ ತಿಳುವಳಿಕೆ ನೀಡುವ ಮಹತ್ವದ ಕೃತಿಗಳಾಗಿವೆ.

೮) ಅನುವಾದಿತ ರಾಮತೀರ್ಥರ ಸಾಹಿತ್ಯ

ಲಿಂಗಣ್ಣನವರಿಗೆ ಶ್ರೀ ಅರವಿಂದರ ಪ್ರಭಾವವಿದ್ದಂತೆ, ಪಂಜಾಬದ ಸಂತ ಶ್ರೀ ರಾಮತೀರ್ಥರ ಪ್ರಭಾವಕ್ಕೂ ಒಳಗಾಗಿರುವರು. ಮರಾಠಿಯಲ್ಲಿ ಪ್ರಕಟವಾದ ರಾಮತೀರ್ಥರ ಉಪನ್ಯಾಸಗಳನ್ನು ಅಧ್ಯಯನ ಮಾಡಿ, ಅವರ ಜೀವನ ಮತ್ತು ಉಪದೇಶಗಳನ್ನು ಕನ್ನಡಕ್ಕೆ ಅನುವಾದಿಸಿರುವರು. 'ಭಾರತ ಸಮಸ್ಯೆ' ಎಂಬ ಅನುವಾದ ಕೃತಿಯಲ್ಲಿ ಭಾರತೀಯರ ಐಕ್ಯತೆಯ ಕೊರತೆಗೆ ವ್ಯವಹಾರ ಜ್ಞಾನದ ಅಭಾವ ಮತ್ತು ಮಿತಿಮೀರಿದ ಜನಸಂಖ್ಯೆಯೆ ಕಾರಣವೆಂದು ವಿವರಿಸಿದ್ದಾರೆ. ಹರ್ಡೇಕರ್ ಮಂಜಪ್ಪನವರ ನಂತರ ರಾಮತೀರ್ಥರ ಸಾಹಿತ್ಯವನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟ ಕೀರ್ತಿ ಸಿಂಪಿಯವರಿಗೆ ಸಲ್ಲುತ್ತದೆ.

೯) ಶ್ರೀ ಅರವಿಂದರ ಸಾಹಿತ್ಯ

ಶ್ರೀ ಅರವಿಂದರ ಪರಮ ಭಕ್ತರಾದ ಶ್ರೀ ಮಧುರ ಚೆನ್ನರ ಗೆಳೆಯರಾದ ಶ್ರೀ ಸಿಂಪಿ ಲಿಂಗಣ್ಣನವರು ಅರವಿಂದರನ್ನು ತಮ್ಮ ಗುರುಗಳೆಂದೆ ಭಾವಿಸಿದರು. ಶ್ರೀ ಅರವಿಂದರ ಹೆಸರಿನ ಗ್ರಂಥಮಾಲೆ ತೆರೆದು ಅವರ ಉಪದೇಶಗಳನ್ನು ಪ್ರಕಟಿಸಿ, ಪ್ರಚಾರ ಮಾಡಿದರು. 1960 ರಲ್ಲಿ ಅವರ ಹೆಸರಿನಿಂದಲೆ ಪ್ರಕಾಶನ ತೆಗೆದು ವರ್ಷಕ್ಕೆ 4 ಪುಸ್ತಕಗಳಂತೆ ಸುಮಾರು 80 ಪುಸ್ತಕಗಳನ್ನು ಪ್ರಕಟಿಸಿ, ಹಳ್ಳಿಪಟ್ಟಣಗಳಿಗೆ ಹೊತ್ತು ಮಾರಿದ ಧೀರರು. ಶ್ರೀ ಅರವಿಂದರ ಸಾಹಿತ್ಯವನ್ನು ಹಿಂದಿ, ಬಂಗಾಲಿಯಿಂದ ಕನ್ನಡ ಭಾಷೆಗೆ ಅನುವಾದಿಸಿ, ಕರ್ನಾಟಕದ ಆಧ್ಯಾತ್ಮಿಕ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ ನೀಡಿದ್ದಾರೆ. ಗದ್ಯಪದ್ಯದಲ್ಲಿ ಸುಮಾರು 12ಕ್ಕೂ ಹೆಚ್ಚು ಕೃತಿಗಳನ್ನು ಅರವಿಂದರ ವಿಚಾರಧಾರೆಯ ವಸ್ತು ಒಳಗೊಂಡಿದ್ದು, ಕನ್ನಡ ಸಾಹಿತ್ಯಕ್ಕೆ ವಿಶೇಷ ಕಾಣಿಕೆಯಾಗಿವೆ.

ಹೀಗೆ ಡಾ|| ಸಿಂಪಿ ಲಿಂಗಣ್ಣನವರು ಕನ್ನಡ ನಾಡಿನ ಹಿರಿಯ ಜಾನಪದ ವಿದ್ವಾಂಸರಾಗಿ, ಭಾಷಣಕಾರರಾಗಿ, ಪ್ರಕಾಶಕರಾಗಿ ಮತ್ತು ಆಧ್ಯಾತ್ಮಿಕ ವಾದಿಗಳಾಗಿ ಕನ್ನಡ ಸಾಹಿತ್ಯ ಶ್ರೀಮಂತಗೊಳಿಸಿದಂತೆ, ಕನ್ನಡಿಗರ ಮನ ಗೆದ್ದವರು. ಬಿಸಿಲ ನಾಡಿನ ಅನುಭವಗಳನ್ನು ಕುರಿತು ವೈವಿಧ್ಯಮಯ ಕೃತಿಗಳನ್ನು ಬರೆದು 'ಬಯಲ ನಾಡಿನ ಬೈರವರಾಗಿದ್ದಾರೆ. ಆಧುನಿಕ ಕನ್ನಡ ಗದ್ಯಸಾಹಿತ್ಯ ನಿರ್ಮಾಪಕರಲ್ಲಿ ಆದ್ಯರಾಗಿರುವರು.

❑

## ಪು.ತಿ.ನ.

ಎಚ್.ಎಸ್. ರಾಘವೇಂದ್ರರಾವ್

ಆಧುನಿಕ ಕನ್ನಡ ಸಾಹಿತ್ಯದ, ಅದರಲ್ಲೂ ನವೋದಯ ಕಾವ್ಯದ ಉನ್ನತ ಸಾಧಕರಲ್ಲಿ ಒಬ್ಬರಾದ ಶ್ರೀ ಪು.ತಿ. ನರಸಿಂಹಚಾರ್ ಅವರ ಬರವಣಿಗೆಯ ಸಂಕ್ಷಿಪ್ತ ಪರಿಚಯ ಕೂಡ ವಿಮರ್ಶಕರಿಗೆ ಒಂದು ಸವಾಲು. ಅವರು ರಚಿಸಿರುವ ಸಾಹಿತ್ಯದ ವಾಚನ, ಅಧ್ಯಯನ ಮತ್ತು ವಿಮರ್ಶೆಗಳು, ಆಸಕ್ತ ಓದುಗರ ಸೀಮಿತವಲಯಕ್ಕೆ ಮಾತ್ರ ಮೀಸಲಾಗಿರುವುದನ್ನು ನಮ್ಮ ಕಾಲದ ಸಾಂಸ್ಕೃತಿಕ ಸಂದರ್ಭದ ಅನಿವಾರ್ಯ ದುರಂತಗಳಲ್ಲಿ ಒಂದೆಂದು ನಾನು ತಿಳಿಯುತ್ತೇನೆ. ಒಂದು ನಿರ್ದಿಷ್ಟ ಮನೋಧರ್ಮ ಮತ್ತು ಕೆಲವು ಬಗೆಯ ಪೂರ್ವ ಸಿದ್ಧತೆಗಳನ್ನು ಹೊಂದಿರುವ ಓದುಗನು, ಇವರ ಕವಿತೆಯಲ್ಲಿ ಅನನ್ಯವಾದ, ವಿಶಿಷ್ಟವಾದ ಲಕ್ಷಣಗಳನ್ನು, ಚೆಲುವನ್ನು ಗುರುತಿಸಬಹುದು. ಕವಿತೆಯ ಹಿಂದಿನ ಪ್ರೇರಣೆಗಳಾದ ವೈಚಾರಿಕತೆ ಮತ್ತು ಭಾವಾರ್ಭಟಗಳ ಸುಂದರ ಸಂಯೋಜನೆಯು ಇವರ ಉತ್ತಮ ಕಾವ್ಯದಲ್ಲಿ ಆಗುವ ಹಾಗೆ, ಆ ಕಾಲದ ಬೇರೆ ಯಾವ ಕವಿಯಲ್ಲಿಯೂ ಆಗುವುದಿಲ್ಲ ವೆಂದು ನನ್ನ ತಿಳಿವಳಿಕೆ. ಆದರೆ ಇಷ್ಟೆ, ಇಲ್ಲಿನ ಚಿಂತನೆಯು ಖಚಿತವಾದ ಐಂದ್ರಿಯಿಕ ಅನುಭವಗಳ ಮಂಡನೆಯೊಂದಿಗೆ ಮೂರ್ತರೂಪ ತಳೆಯುವ ಸಾಧಾರಣ ಚಿಂತನೆಯಲ್ಲ. ಬುದ್ಧಿಗ್ರಾಹ್ಯವಾದ ಪರಿಕಲ್ಪನೆಗಳ ನೆಲೆಯಲ್ಲಿಯೇ ಮೈದಳೆದು, ಆಗಾಗ ಅನುಭವ ಪ್ರತಿಮೆಗಳ ನೆರವು ಬೇಡಿದರೂ, ಸದಾ ಅಮೂರ್ತ ಚಿಂತನೆಯ ಕಡೆಗೆ ಜಿಗಿಯಲೆಳಸುವ ಕವಿತೆ ಇವರದು. ಕವಿತೆಯಲ್ಲಿರುವ ಭಾವನೆಗಳ ಮಾತು ಹಾಗೆಯೆ. ಅವು ಮನುಷ್ಯ ಸಂಬಂಧಗಳ ನೆಲೆಯಲ್ಲಿ ಪರಸ್ಪರ ಮೂಡುವ ಭಾವನೆಗಳಲ್ಲ ; ಅದರ ಮನುಷ್ಯ ಸಂಬಂಧಗಳ ಭಾವನಾಮಯತೆಯನ್ನು ಬಲ್ಲ ಅಂತರ್ಮುಖಿಯೊಬ್ಬನ ನಿರ್ಲಿಪ್ತ ಸ್ಥಿತಿಯಲ್ಲಿ ಮೂಡಬಹುದಾದ ವಿಚಾರದೀಪ್ತವಾದ ಭಾವನೆಗಳವು. ಈ ಮಾತುಗಳು ಅವರ ನಾಟಕಗಳಿಗೆ ಅನ್ವಯವಾಗುವುದಿಲ್ಲವಾದ್ದರಿಂದಲೇ ಅವು ಹೆಚ್ಚು ಜನಪ್ರಿಯ ವಾಗಿವೆಯೆಂದು ತೋರುತ್ತದೆ. ಆದರೆ ಜನಪ್ರಿಯತೆಯು ಉತ್ತಮ 'ಕವಿತೆ'ಯ ಅನಿವಾರ್ಯ ಮಾನದಂಡವಲ್ಲ. ಕನ್ನಡ ಕವಿತೆಯ ಜಗತ್ತಿನ ಒಂದು ಮುಖ್ಯ ಭಾಗವಾಗಿ ಇವರ ಕಾವ್ಯ ಎಂದೆಂದಿಗೂ ಇರುತ್ತದೆ. ಆ ಕವಿತೆಯನ್ನು ಬಿಟ್ಟುಬಿಟ್ಟರೆ, ಆ ಭಾಗ ಬೇರೆಲ್ಲೂ ಸಿಗುವುದಿಲ್ಲವೆನ್ನುವ ಮಟ್ಟಿಗೆ ಅವರ ಬರವಣಿಗೆ ಅನನ್ಯವಾದುದು.

1

ಪುರೋಹಿತ ತಿರುನಾರಾಯಣ ಅಯ್ಯಂಗಾರ್ ನರಸಿಂಹಚಾರ್ ಅವರು, ಶ್ರೀವೈಷ್ಣವ ಧರ್ಮದ ತೀರ್ಥಕ್ಷೇತ್ರಗಳಲ್ಲಿ ಒಂದಾದ ಮೇಲು ಕೋಟೆಯಲ್ಲಿ ನೆಲೆಸಿದ್ದ

ವೈದಿಕ ಮನೆತನಕ್ಕೆ ಸೇರಿದವರು. ಅವರ ಹಿರಿಯರು ಕೆಲವು ಶತಮಾನಗಳ ಹಿಂದೆ ತಮಿಳುನಾಡಿನ ತಿರುವಳ್ಳೂರಿನಿಂದ ಮೇಲುಕೋಟೆಗೆ ಬಂದವರು. ವೇದ, ಉಪನಿಷತ್ತು, ಆಗಮ, ತರ್ಕ, ಪುರಾಣ ಮುಂತಾದ ಹತ್ತು ಹಲವು ಜ್ಞಾನ ಶಾಖೆ ಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದ್ದ ಶ್ರೀ ತಿರುನಾರಾಯಣ ಅಯ್ಯಂಗಾರ್ ಮತ್ತು ಗೊರೂರಿನ ಶ್ರೀರಂಗಮ್ಮ ಇವರ ಮೊದಲ ಮಗನಾಗಿ, 1905ರಲ್ಲಿ ಪು.ತಿ.ನ. ಜನಿಸಿದರು. ಅವರ ಬಾಲ್ಯದ ದಿನಗಳ ಭೌತಿಕ ಪರಿಸರಕ್ಕೂ ಸಾಮಾಜಿಕ-ಸಾಂಸ್ಕೃತಿಕ ಪರಿಸರಕ್ಕೂ ಇರುವ ಅಂತರ ಮಹತ್ವಪೂರ್ಣವಾದುದು. ನಾಗರಿಕರಿಗೆ ಲಭ್ಯವಿಲ್ಲದ ನಿಸರ್ಗವು ಅವರನ್ನು ಸುತ್ತುವರಿದ ಒಂದು ವಾಸ್ತವತೆಯಾದರೆ, ಗ್ರಾಮದಲ್ಲಿದ್ದರೂ ಗ್ರಾಮೀಣವಲ್ಲದ ಬೌದ್ಧಿಕತೆಯು ಇವರನ್ನು ಪೋಷಿಸಿದ ಮತ್ತೊಂದು ವಾಸ್ತವತೆ'ಯಾಗಿತ್ತು. ಸಾಕಷ್ಟು ಕಟ್ಟುನಿಟ್ಟಿನದೇ ಆದ ಬಾಹ್ಯನಿಯಂತ್ರಣಗಳು, ಸಹಜವಾದ ಬುದ್ಧಿಯನ್ನು ಬೆಳೆಸಿದ ಹಾಗೆ, ಅಂತರ್ಮುಖತೆ ಮತ್ತು ಸಂಕೋಚದ ಸ್ವಭಾವಗಳು ಕನಸುಣಿಯಾದ ಕವಿಯೊಬ್ಬನಿಗೆ ತವರಾದವು. ಸಾಹಸಿಯಾದರೂ ಶಾಲೀನವಾದ, ಧೀಮಂತವಾದರೂ ಕಡಿಮೆ ಮಾತಿನ ವ್ಯಕ್ತಿತ್ವವೊಂದು ಕ್ರಮೇಣ ಬೆಳೆಯಿತು. ಈ ಹಿನ್ನೆಲೆಯನ್ನು ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ತಮ್ಮ ದೀರ್ಘಲೇಖನವೊಂದರಲ್ಲಿ ಚೆನ್ನಾಗಿ ವಿವರಿಸಿದ್ದಾರೆ.[1]

ಕ್ರಮಬದ್ಧವಾದ ಸಂಸ್ಕೃತ ಪಾಠಶಾಲೆಯ ವಿದ್ಯಾಭ್ಯಾಸಕ್ಕೆ ಸಮಾನಾಂತರ'ವಾಗಿ ಪಾಶ್ಚಾತ್ಯ ವಿದ್ಯಾಭ್ಯಾಸವನ್ನು ಕೂಡ ಪಡೆದಿದ್ದು ಪು.ತಿ.ನ. ಅವರ ಶೈಕ್ಷಣಿಕ ಹಿನ್ನೆಲೆಯ ವಿಶಿಷ್ಟ ಅಂಶ. ಎರಡೂ ಪದ್ಧತಿಗಳ ಉತ್ತಮಾಂಶ ಗಳನ್ನು ಮೈಗೂಡಿಸಿಕೊಂಡು, ಆರ್ಷೇಯತೆ ಮತ್ತು ಆಧುನಿಕತೆಗಳ ಅತ್ಯುತ್ತಮ ಸಮನ್ವಯವನ್ನು ಸಾಧಿಸಿಕೊಳ್ಳಲು ಅವರಿಗೆ ಸಾಧ್ಯವಾಯಿತು. ಮನೆ, ಮೇಲುಕೋಟೆಯ ಪ್ರಾಥಮಿಕ ಪಾಠಶಾಲೆ, ಸಂಸ್ಕೃತ ಪಾಠಶಾಲೆ, ಮೈಸೂರಿನ ಮಹಾರಾಜಾ ಕೊಲಜಿಯೇಟ್ ಹೈಸ್ಕೂಲು ಮತ್ತು ಮಹಾರಾಜ ಕಾಲೇಜುಗಳು ಅವರು ಓದಿದ ಶಿಕ್ಷಣ ಸಂಸ್ಥೆಗಳು. ಅವರು 1926ರಲ್ಲಿ ಬಿ.ಎ. ಪದವಿಯನ್ನು ಪಡೆದರು. ತತ್ವಶಾಸ್ತ್ರ, ವೇದಾಂತದರ್ಶನ, ಸಂಸ್ಕೃತಗಳು ಅವರ ವ್ಯಾಸಂಗದ ವಿಷಯಗಳು. ಅವರು ಫ್ರೆಂಚ್ ಭಾಷೆಯನ್ನು ಕಲಿತವರು. ವಿಮರ್ಶಕರು ಗುರುತಿಸಿರುವಂತೆ ಅವರದು ಕಾಳಿದಾಸ ಮತ್ತು ವರ್ಡ್ಸ್‌ವರ್ತ್‌ರಿಂದ ಪ್ರಭಾವಿತರಾದ ಮನೋಧರ್ಮ. ಗುರುಗಳಲ್ಲಿ ಎಂ. ಹಿರಿಯಣ್ಣನವರು ಮತ್ತು ಸ್ನೇಹಿತರಲ್ಲಿ ತೀ.ನಂ.ಶ್ರೀ., ನಂ. ಶಿವರಾಮ ಶಾಸ್ತ್ರಿ ಮುಂತಾದವರು ಇವರ ಕಾವ್ಯ ರಚನೆಗೆ ಪ್ರೇರಕಶಕ್ತಿಗಳಾದರು. ಅವರೇ ಹೇಳುವಂತೆ, "ನನ್ನ ಈ ವೈಲಕ್ಷಣ್ಯವನ್ನು ಪ್ರೋತ್ಸಾಹಿಸಿದವರು ಪ್ರಾಜ್ಞರಾದ ಗುರುಗಳು, ಸ್ನೇಹಿತರು. ಇಂಥ ಮನೀಷಿಗಳಾದ ಹಿತೈಷಿಗಳನ್ನು ಪಡೆದುದು ನನ್ನ ಅದೃಷ್ಟ. ದೈನಂದಿನ ಜೀವನ ಕ್ರಮದಲ್ಲೂ, ಪಠ್ಯಜ್ಞಾನ ಸಂಪಾದನೆ ಯಲ್ಲೂ ಅಸಡ್ಡೆಯನ್ನು ತೋರಿ, ಏಕಾಂತ ಪ್ರಿಯನೂ, ಅನಾಸಕ್ತನೂ ಆದ ನನ್ನಲ್ಲಿ ಈ ಸೂಕ್ಷ್ಮಮತಿಗಳು ರಸಜಾಗರಾನು ಭೂತಿಗಳನ್ನು, ತೀವ್ರವಾಗಿ ಪಡುವ ಲಕ್ಷಣವನ್ನು ಹೇಗೋ ಅರಿತು ಕೊಂಡರು."[2]

ಇವುಗಳ ಜೊತೆಗೆ ಅವರು ಕನ್ನಡ ಸಾಹಿತ್ಯದ ಅದರಲ್ಲೂ ಕಾವ್ಯದ ಪರಿಚಯವನ್ನು ಹೇಗೆ ಪಡೆದುಕೊಂಡರೋ ಎಂಬ ಸಂಶಯ ಸಹಜವಾಗಿಯೇ ಮೂಡುತ್ತದೆ. "ಮಿಡ್ಲ್ ಸ್ಕೂಲಿನಲ್ಲಿ ನಮಗೆ ಒಳ್ಳೆಯ ಪುಸ್ತಕಗಳಿದ್ದವು. ನಾಗಚಂದ್ರ, ಕನಕದಾಸ, ಪುರಂದರದಾಸ, ಸರ್ವಜ್ಞ, ಸುಗುಣರತ್ನಕರಂಡ, ಚೂಡಾರತ್ನ, ತ್ರಿಪದಿ, ಸಾಂಗತ್ಯ, ಗೋವಿನ ಕಥೆ, ಎಸ್.ಜಿ. ನರಸಿಂಹಾಚಾರ್ಯ ಮುಂತಾದವರ ಇಂಗ್ಲಿಷ್ ಭಾಷಾಂತರ ಪದ್ಯಗಳು. ಹೀಗೆ ಕಂದ, ವೃತ್ತ, ಷಟ್ಪದಿ, ತ್ರಿಪದಿ, ಸಾಂಗತ್ಯ, ಆಧುನಿಕ ಕವಿತೆಯ ಪೂರ್ವ ರೂಪವಾದ ರಗಳೆ, ಚೌಪದಿ ಎಲ್ಲವುಗಳ ಪರಿಚಯ ಆಗಲೇ ಆಗಿತ್ತು. ಆಶ್ಚರ್ಯ ಎಂದರೆ, ನಾನು ಮೇಲುಕೋಟೆಯ ಸ್ಕೂಲಿನಲ್ಲಿ ಪ್ರಾತಃಸ್ಮರಣೀಯ ಗುರುಗಳಾದ ದಿವಂಗತ ಶ್ರೀಮಾನ್ ಮಂತ್ರಿ ಸಂಪತ್ಕು ಮಾರಾಚಾರ್ಯ, ಹೆಮ್ಮಿಗೆ ದೇಶಿಕಾಚಾರ್, ಪರಮಿ ಪದ್ಮನಾಭಯ್ಯ ಇವರ ಕೈಯಲ್ಲಿ ಕಲಿತ ಕನ್ನಡವೇ ನನ್ನ ಕನ್ನಡ ಶಾಲೆಗಳ ತಳಹದಿ. ಹೈಸ್ಕೂಲಿನಲ್ಲಾಗಲೀ, ಕಾಲೇಜಿನಲ್ಲಾಗಲೀ ನನಗೆ ಕನ್ನಡ ಪಠ್ಯಪುಸ್ತಕಗಳ ಸ್ಪರ್ಶವೇ ಇರಲಿಲ್ಲ."[3] ಪು.ತಿ.ನ. ಅವರ ಕಾವ್ಯಭಾಷೆಯ ಗ್ರಾಂಥಿಕತೆಗೆ ಕಾರಣ ಇಲ್ಲಿರುವಂತೆ ತೋರುತ್ತದೆ. ಮನೆಯಲ್ಲಿ ತಮಿಳು, ಶಾಲೆಯಲ್ಲಿ ಸಂಸ್ಕೃತಗಳ ನಡುವೆ ಹನ್ನೆರಡು ತುಂಬುವುದರೊಳಗೆ ಕಲಿತ ಕನ್ನಡ ಎಷ್ಟರ ಮಟ್ಟಿಗೆ ತಾನೇ ಆಡುಮಾತಿನ ಕನ್ನಡದ ಹತ್ತಿರ ಬಂದೀತು? ಇದರ ಬಗ್ಗೆ ಸ್ವತಃ ಅವರಿಗಿರುವ ಅಧೈರ್ಯವು, "ಹರಿಹರನೇ ಮುಂತಾದ ಕವಿಗಳನ್ನು ನಾನು ಮೊದಲೇ ಓದಿದ್ದರೆ ಕವಿತೆಯನ್ನೇ ಬರೆಯುತ್ತಿಲ್ಲವೇನೋ"[4] ಎಂಬ ಅವರದೇ ಮಾತುಗಳಲ್ಲಿ ವ್ಯಕ್ತವಾಗುತ್ತದೆ. ಆದರೆ ಈ ಅಪರಿಚಯದಿಂದ ಅವರ ಬರವಣಿಗೆ ಪೆಡಸಾದರೂ ಅವರ ಬರವಣಿಗೆಗೆ ಹೊಸದೊಂದು ಆಯಾಮ ಬಂತು. ಅವರ ಸಮಗ್ರ ಬರವಣಿಗೆಯಲ್ಲಿ ಪ್ರಾದೇಶಿಕತೆಯ ಬದಲಾಗಿ ಒಂದು ಬಗೆಯ ಭಾರತೀಯವಾದ ತುಡಿತಗಳು ಮೂಡಿಬಂದವು. ಒಟ್ಟು ನಮ್ಮ ಸಂಸ್ಕೃತಿಗೆ ವಿಶಿಷ್ಟವಾದ ಹಲವು ಮೌಲ್ಯಗಳ ಗ್ರಹಣ ಮತ್ತು ಅಭಿವ್ಯಕ್ತಿಗಳು ಸಾಧ್ಯವಾದವು.

ಈ ಬಗೆಯ ಶೈಕ್ಷಣಿಕ ಹಿನ್ನೆಲೆಯಲ್ಲದೆ ಅಂದಿನ ಕಾಲದ ಮೈಸೂರು ನಗರಕ್ಕೆ ವಿಶಿಷ್ಟವಾದ ಸಂಸ್ಕೃತಿ, ಕಲೆ ಮತ್ತು ರಸಿಕತೆಗಳಿಂದ ನಿಬಿಡವಾದ ವಾತಾವರಣವು ಇವರ ಕಾವ್ಯ ವ್ಯಕ್ತಿತ್ವಕ್ಕೆ ನಿಸರ್ಗಪ್ರೀತಿ ಮತ್ತು ತತ್ವಜಿಜ್ಞಾಸೆಗಳ ಜೊತೆಗೆ ಸೌಂದರ್ಯಾನ್ವೇಷಣೆಯ ಮತ್ತೊಂದು ಅಂಶವನ್ನು ಸೇರಿಸಿದಂತೆ ಕಾಣುತ್ತದೆ. ಶಾಸ್ತ್ರೀಯ ಸಂಗೀತ, ಕಂಪನಿ ನಾಟಕಗಳು, ತಮಿಳು ಹಾಗೂ ಇಂಗ್ಲಿಷಿನ ಸಂಗೀತ ರೂಪಕಗಳು ಹೀಗೆಯೇ ಹತ್ತು ಹಲವು ಸಂಗತಿಗಳು ಇವರ ಸೃಜನಶೀಲತೆಗೆ ನೀರೆರೆದಿರಬೇಕು. ಹೊರಗಿನ ಜಗತ್ತಿಗೆ ಒಂದು ಚೆಲುವು ಇರುವಂತೆ, ಕಲಾಕೃತಿಗೂ ತನ್ನದೇ ಆದ ಒಂದು ಬಂಧದ ಚೆಲುವಿರುತ್ತದೆ ಎಂಬ ತಿಳಿವಳಿಕೆ ಆ ವಯಸ್ಸಿನ ಕವಿಗೆ ಬಹು ಮುಖ್ಯ.

1926ರಲ್ಲಿ ಬಿ.ಎ. ಪದವಿಯನ್ನು ಪಡೆದ ಹೊಸದರಲ್ಲಿಯೇ ಪ್ರಾರಂಭವಾದ ಪು.ತಿ.ನ. ಅವರ ವೃತ್ತಿಜೀವನವು ಅವರ ಬದುಕಿನ ಕುತೂಹಲಗಳಲ್ಲಿ ಒಂದು. ಸಂಪ್ರದಾಯಬದ್ಧರೂ, ದೇಶಭಕ್ತರೂ ಆದ ಈ ಕವಿ, "ಹುಲ್ಲುಗಾವಲಿನ ಹೂತಮರಗಳ ಎಲೆಗಳು ಬಡಿಸುವ ಬಾನ ಬಿಂದುಗಳ ಲೆಕ್ಕದೊಳಾಯ್ತು ನನ್ನಾಸಕ್ತಿ"[5] ಎಂದು ಬಹಿರಂಗವಾಗಿಯೇ ನಿವೇದಿಸುವ ಈ ಅಂತರ್ಮುಖಿ ಮೈಸೂರು ಸೈನ್ಯದ ಮುಖ್ಯಾಧಿಕಾರಿಗಳ ಕಚೇರಿಯಲ್ಲಿ ಶೀಘ್ರಲಿಪಿಕಾರ/ಆಪ್ತ ಗುಮಾಸ್ತರಾಗಿ, ಕಚೇರಿಯ ಮ್ಯಾನೇಜರ್ ಆಗಿ, ಸ್ವಾತಂತ್ರ್ಯಾನಂತರ ಪ್ರಥಮ ದರ್ಜೆ ಗುಮಾಸ್ತರಾಗಿ, ಕೊನೆಗೆ ಶಾಸನಸಭಾ ಕಚೇರಿಯಲ್ಲಿ ಸಂಪಾದಕರಾಗಿ ಮೂವತ್ತಾಲ್ಕು ವರ್ಷಗಳ ದೀರ್ಘಕಾಲವನ್ನು ಕಳೆಯುತ್ತಾರೆ. ತಮ್ಮ ಕೆಲಸವನ್ನು ಅತ್ಯಂತ ಪ್ರಾಮಾಣಿಕತೆಯಿಂದ ನಿರ್ವಹಿಸಿ, ಬ್ರಿಟಿಷ್ ಅಧಿಕಾರಿಗಳ ಮೆಚ್ಚುಗೆಯನ್ನು ಸಂಪಾದಿಸಿದರೂ ಕೂಡ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಉರುಬಿನ ಆ ದಿನಗಳಲ್ಲಿ ಸಂವೇದನಾಶೀಲವಾದ ಕವಿಯ ಅಂತರಂಗದಲ್ಲಿ ನಡೆದಿರಬಹುದಾದ ತುಮುಲವನ್ನು ಊಹಿಸಿಕೊಳ್ಳಬಹುದು. ಆ ಹೋರಾಟದಲ್ಲಿ ತಾನು ಸಕ್ರಿಯವಾಗಿ ಭಾಗವಹಿಸಲಿಲ್ಲವೆನ್ನುವುದು ಕವಿಯ ಮನದ ಒಳಕೊರಗುಗಳಲ್ಲಿ ಒಂದಾಗಿ ಉಳಿದಿದೆ. ಆದರೆ ಆ ಕಾಲದಲ್ಲಿ ರಚಿಸಿದ ಹಲವು ಕವಿತೆಗಳಲ್ಲಿ ಮತ್ತು ವಿಕಟಕವಿ ವಿಜಯದಂತಹ ನಾಟಕದಲ್ಲಿ ಅವರ ಒಳಗುದಿ ಪ್ರಕಟವಾಗಿದೆ.

ಅವರ ಪ್ರವೃತ್ತಿಗೆ ಹೆಚ್ಚು ಹತ್ತಿರವಾದ ವೃತ್ತಿಯನ್ನು ಅವರು ನಿವೃತ್ತಿಯ ನಂತರದ ದಿನಗಳಲ್ಲಿ ಪಡೆದರು. ಕನ್ನಡ ವಿಶ್ವಕೋಶದ ಕಚೇರಿಯಲ್ಲಿ ಮತ್ತು ಮೈಸೂರು ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್-ಕನ್ನಡ ನಿಘಂಟಿನ ಸಂಪಾದಕರಾಗಿ ಅವರು ಎಂಟು ವರ್ಷಗಳನ್ನು ಕಳೆದರು. ಈ ಅವಧಿಯಲ್ಲಿ ಅವರು ವ್ಯಾಸಂಗ, ಕಾವ್ಯರಚನೆ, ಸ್ನೇಹ ಸಂಪಾದನೆಗಳಂತಹ ಪ್ರಿಯ ಕಾರ್ಯಗಳಲ್ಲಿ ತಲ್ಲೀನರಾದಂತೆ ಕಾಣುತ್ತದೆ. ನಂತರದ ಹದಿನೆಂಟು ವರ್ಷಗಳ ವಿಶ್ರಾಂತಿ ಜೀವನವು, ಇನ್ನಷ್ಟು ಅಂತರ್ಮುಖವಾಗಿ, ತನ್ನ ಅಂತರಂಗದ ಆಸಕ್ತಿಗಳ ಶೋಧನೆಯಲ್ಲಿ, 'ತಪಃಸ್ವಾಧ್ಯಾಯನಿರತ'ರಾಗಿ ಬಾಳುವುದಕ್ಕೆ ಮೀಸಲಾಗಿದೆ.

1925ರಲ್ಲಿ ಹೆಮ್ಮಿಗೆ ಗ್ರಾಮದ ಶ್ರೀರಂಗಾಚಾರ್ಯ ಮತ್ತು ಶ್ರೀಮತಿ ಎಗ್ಗಮ್ಮನವರ ಮಗಳಾದ ಶ್ರೀಮತಿ ಶೇಷಮ್ಮನವರನ್ನು ಮದುವೆಯಾದ ಪು.ತಿ.ನ. ಅವರು ಸುಮಾರು ಅರವತ್ತು ವರ್ಷಗಳ ತುಂಬು ಕೌಟುಂಬಿಕ ಜೀವನವನ್ನು ನಡೆಸಿದ್ದಾರೆ. ಏಳು ಜನ ಹೆಣ್ಣು ಮಕ್ಕಳು ಮತ್ತು ಒಬ್ಬ ಮಗನ ತಂದೆಯಾದ ಇವರದು ಕೆಳ ಮಧ್ಯಮ ವರ್ಗದಿಂದ ಉನ್ನತ ಮಧ್ಯಮ ವರ್ಗದವರೆಗೆ ಬುದ್ಧಿಶಕ್ತಿಯ ನೆರವಿನಿಂದಲೇ ಚಲಿಸಿದ ಜೀವನ ಕ್ರಮ.

ಜನಪ್ರಿಯತೆ ಮತ್ತು ಪ್ರಶಸ್ತಿಗಳಿಗೆ ಇವರು ಅಪರಿಚಿತರೇನೂ ಅಲ್ಲ. 'ಹಂಸದಮಯಂತಿ ಮತ್ತು ಇತರ ರೂಪಕಗಳು' ಎಂಬ ಕೃತಿಗಾಗಿ ಪಡೆದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1966), 1971ರಲ್ಲಿ ಪ್ರಾಪ್ತವಾದ ಮೈಸೂರು ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ ಮತ್ತು 1981ರಲ್ಲಿ ಚಿಕ್ಕಮಗಳೂರಿನಲ್ಲಿ ನಡೆದ 53ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಗಳನ್ನು ಇಲ್ಲಿ ಹೆಸರಿಸಬಹುದು. ಶ್ರೀ ಸು.ರಂ. ಎಕ್ಕುಂಡಿಯವರು ಪು.ತಿ.ನ. ಅವರನ್ನು ಕುರಿತ ಕಿರುಪುಸ್ತಕ ವೊಂದನ್ನು ರಚಿಸಿದ್ದಾರೆ. 'ಯದುಗಿರಿಯ ವೀಣೆ' ಪು.ತಿ.ನ. ಅವರನ್ನು ಕುರಿತ ಕವಿತೆಗಳ ಸಂಕಲನ. ಪು.ತಿ.ನ. ಅಭಿನಂದನ ಗ್ರಂಥವಾದ 'ಯದುಗಿರಿ' 1981ರಲ್ಲಿ ಪ್ರಕಟವಾಯಿತು.

## 2

ಪು.ತಿ.ನ. ಅವರ ಸಾಹಿತ್ಯಸೃಷ್ಟಿಯು ಕಾವ್ಯ, ನಾಟಕ, ಲಲಿತ ಪ್ರಬಂಧ, ಭಾವ ಪ್ರಬಂಧ, ಕಾವ್ಯಾರ್ಥ ಚಿಂತನೆ, ಅನುವಾದ ಮುಂತಾದ ಹಲವು ಪ್ರಕಾರಗಳಲ್ಲಿ ಹಂಚಿಕೊಂಡಿದೆ. ಆದರೆ ಅವರ ಬರವಣಿಗೆಯ ಎಲ್ಲ ಬಗೆಗಳಲ್ಲೂ ಹರಡಿಕೊಂಡಿರುವುದು ಕವಿಯ ಮನಸ್ಸು ಮತ್ತು ದೃಷ್ಟಿಕೋನ. ಅವರ ಮೊದಮೊದಲ ಕವಿತೆಗಳು 'ಕಿರಿಯ ಕಾಣಿಕೆ' (1928) ಮತ್ತು 'ತಳಿರು' (1930) ಎಂಬ ಕವನಸಂಗ್ರಹಗಳಲ್ಲಿ ಕಾಣಿಸಿಕೊಂಡವು. ಪ್ರಬುದ್ಧ ಕರ್ನಾಟಕ, ಜಯಕರ್ನಾಟಕಗಳಂತಹ ಪತ್ರಿಕೆಗಳಲ್ಲಿಯೂ ಅವರು ಕಾಣಿಸಿಕೊಂಡು, ಮಾಸ್ತಿ, ಬಿ.ಎಂ.ಶ್ರೀ., ಡಿ.ವಿ.ಜಿ., ಹಿರಿಯಣ್ಣನವರಂತಹವರ ಮೆಚ್ಚುಗೆಗೆ ಪಾತ್ರರಾದರು. ಅವರ ಮೊದಲ ಸಂಕಲನವಾದ 'ಹಣತೆ' 1933ರಲ್ಲಿ ಮಾಸ್ತಿಯವರ ಮುನ್ನುಡಿಯೊಂದಿಗೆ ಪ್ರಕಟವಾಯಿತು. ಅದರ ನಂತರ ಅವರು ಮಾಂದಳಿರು (1936), ಶಾರದಾಯಾಮಿನಿ (1944), ಗಣೇಶ ದರ್ಶನ (1947), ರಸ ಸರಸ್ವತಿ (1954), ಮಲೆದೇಗುಲ (1955), ಹೃದಯ ವಿಹಾರಿ (1960), ಇರುಳ ಮೆರಗು (1974) ಮತ್ತು ಹಳೆ ಬೇರು ಹೊಸ ಚಿಗುರು (1981) ಎಂಬ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವರು ಮಾಡಿರುವ ಕಾವ್ಯಾನುವಾದದ ಪ್ರಸ್ತಾಪ ನಂತರ ಬರುತ್ತದೆ. ಕಳೆದ ಎರಡು ಮೂರು ದಶಕಗಳಲ್ಲಿ ಇವರ ಕಾವ್ಯನಿರ್ಮಾಣ ಕಾರ್ಯವು ಕೊಂಚ ಇಳಿಮುಖವಾಗಿರುವಂತೆ ಕಾಣಿಸಿದರೆ, ಅದಕ್ಕೆ ಅವರ ಇಳಿವಯಸ್ಸಿಗಿಂತ ಹೆಚ್ಚಾಗಿ ಅವರ ಕಾವ್ಯಕ್ಕೆ ಲಭಿಸಿರುವ ಉಗುರುಬೆಚ್ಚಗಿನ ಪ್ರತಿಕ್ರಿಯೆಯೂ ಕಾರಣವೆನಿಸುತ್ತದೆ. ತನ್ನ ಕವಿತೆಯನ್ನು ಅಕ್ಷರಸ್ಥರೆಲ್ಲರೂ ಓದಿ ಮೆಚ್ಚಬೇಕೆಂದು ಯಾವ ಕವಿಯೂ ನಿರೀಕ್ಷಿಸುವುದಿಲ್ಲ. ಆದರೆ ತನ್ನ ಕಾವ್ಯವು ಬಯಸುವ ಪೂರ್ವಸಿದ್ಧತೆಗಳನ್ನು ಪಡೆದಿರುವ ಕೆಲವೇ ಕೆಲವು ಓದುಗರು-ಸಹೃದಯರ ವಲಯ ಎಂತಹ ಕವಿಗೂ ಅನಿವಾರ್ಯ.

ಪು.ತಿ.ನ. ಅವರು ಅನುಭವ ಮತ್ತು ಭಾವನೆಗಳಿಗೆ ಕಾವ್ಯರಚನೆಯಲ್ಲಿ ಕೊಡುವ ಸ್ಥಾನವು ಇತರ ಕವಿಗಳಲ್ಲಿ ಇರುವುದಕ್ಕಿಂತ ಭಿನ್ನವಾಗುತ್ತದೆ. ಒಂದು ಅನುಭವದ ಭೌತಿಕ ವಿವರಗಳಾಗಲೀ ಅಥವಾ ಆ ಅನುಭವದ ನೇರ ಪರಿಣಾಮವಾಗಿ ಮೂಡುವ ವಿಚಾರಗಳಾಗಲೀ ಅವರಿಗೆ ಮುಖ್ಯವಲ್ಲ. ಅನುಭವವು ಚಿಂತನಾಲಹರಿಯ ಪ್ರಾರಂಭಕ್ಕೆ ಪ್ರಚೋದಕವಾಗಿ ಮಾತ್ರ ಅವರ ಮುಖ್ಯ ಕವನಗಳಲ್ಲಿ ವರ್ತಿಸುತ್ತದೆ. ಅನುಭವವು ಅಂತರಂಗದ ಕೊಳಕ್ಕೆ ಬೀಳುವ ಕಲ್ಲಿನಂತೆ, ಅಲೆಗಳೇನಿದ್ದರೂ ಕೊಳಕ್ಕೆ ಸೇರಿದ್ದೇ ವಿನಾ ತಳದಲ್ಲಿ ಮುಳುಗಿಹೋದ ಕಲ್ಲಿನದಲ್ಲ. ಆದ್ದರಿಂದಲೇ ಇವರ ಕವನ ಶರೀರದ ಇಟ್ಟಿಗೆಗಳು ಅಮೂರ್ತ ಚಿಂತನ ಘಟಕಗಳೇ ವಿನಾ ಅನುಭವದ ವಿವರಗಳಲ್ಲ. ಆದ್ದರಿಂದಲೇ ಇವರಿಗೆ ಸ್ವಾನುಭವ ಪ್ರಾಮಾಣ್ಯದಲ್ಲಿ ಅಷ್ಟು ನಂಬಿಕೆಯಿಲ್ಲ. "ಕಾವ್ಯದ ಮೂಲ ಸಾಮಗ್ರಿ ಪ್ರಾಮಾಣಿಕ ಜ್ಞಾನ ಕವಿ ಸ್ವಾನುಭೂತಿಯೊಂದರಿಂದಲೇ ಅದನ್ನು ಪಡೆಯಬೇಕಾಗಿಲ್ಲ. ತನ್ನ ಸ್ನೇಹಿತರಿಂದ ಪಡೆಯಬಹುದು; ಅರಿಷಡ್ವರ್ಗಗಳ ಪ್ರಬಲ ಪ್ರಭಾವಕ್ಕೆ ಒಳಗಾಗಿ ವಿನಾಶದ ದಾರಿ ಹಿಡಿದ ಇತರರಿಂದ ಪಡೆಯಬಹುದು; ಏಕೆ, ಕನಸಿನಿಂದಲೂ ಪಡೆಯಬಹುದು."[6] ಆದ್ದರಿಂದಲೇ ಅನೇಕರ ಕವಿತೆಗಳು ಮುಕ್ತಾಯವಾಗುವ ಕಡೆ, ಈ ಕವಿಯ ಕವಿತೆ ಪ್ರಾರಂಭವಾಗುತ್ತದೆ. ಇವರಿಗೆ ಅನುಭವ ಒಂದು 'ಲಾಚಿಂಗ್ ಪ್ಯಾಡ್' ಇದ್ದ ಹಾಗೆ. ನಾಟಕಗಳ ಆಚೆಗೆ, ಈ ಕವಿಗೆ ಕಥನಕ್ರಮ ಒಗ್ಗಿ ಬರದಿರುವುದಕ್ಕೆ ಅನುಭವದ ವಿವರಗಳನ್ನು ಕುರಿತಾದ ಈ ಅನಾದರ ಕೂಡ ಕಾರಣವೆಂದು ಕಾಣುತ್ತದೆ. ಈ ಬಗೆಯ ತತ್ವವೂ ಕೂಡ ಅನುಭವ ಸಾಹಿತ್ಯವನ್ನು ಸಮರ್ಥಿಸಿಕೊಳ್ಳುವ ವಿಧಾನವೆನ್ನುವವರಿಗೆ ನಾನು ಉತ್ತರ ಕೊಡಲಾರೆ. ಆದರೆ ಅನುಭವದ ಹಂಗಿಲ್ಲದ ಚಿಂತನೆ ಅಸಾಧ್ಯವೆಂದು ನನಗೆ ತೋರುವುದಿಲ್ಲ.

ಕವಿತೆಯು ಓದುಗರಲ್ಲಿ ಎಂತಹ ಭಾವನೆಗಳನ್ನು ಮೂಡಿಸಬೇಕು ಎಂಬುದು ಎರಡನೆಯ ಪ್ರಶ್ನೆ. ಇಲ್ಲಿ ಪು.ತಿ.ನ. ಅವರು ಭಾರತೀಯ ಕಾವ್ಯಮೀಮಾಂಸೆಯ ಪರಿಕಲ್ಪನೆಗಳಿಂದ ಪ್ರಭಾವಿತರಾಗಿದ್ದಾರೆ. ಅವರ ಪ್ರಕಾರ ಕವಿತೆಯ ಗುರಿ ಭಾವೋದ್ರಿಕ್ತ ಸ್ಥಿತಿಯ ಉಪಶಮನವೇ ಹೊರತು ಅಂತಹ ಸ್ಥಿತಿಯನ್ನು ಪ್ರಚೋದಿಸುವುದಲ್ಲ. ದಿನನಿತ್ಯದ ಅನುಭವಗಳು ಮೂಡಿಸುವ ಭಾವನೆಗಳನ್ನೇ ಕವಿತೆಯೂ ಮೂಡಿಸಿದರೆ ಅದು ಸಫಲ ಕವಿತೆ ಅಲ್ಲ. ಭಾವನೆಗಳಿಂದ ಕಲಕಿಹೋದ ಮನಸ್ಸನ್ನು, ಗಾಢವಾದ ಆಲೋಚನೆಯ ಮೂಲಕ ಸಮಾಧಾನ ಸ್ಥಿತಿಗೆ ಕರೆದೊಯ್ಯುವುದನ್ನು ಇವರು ಕವಿತೆಯ ಗುರಿಯೆಂದು ತಿಳಿಯುತ್ತಾರೆ. ಚಿಂತನೆಯಿಂದ ಉಪಶಮನ ವಾಗಲಾರದ ವಾಸ್ತವದ ದಾರುಣತೆಯನ್ನು ಇವರ ಕವಿತೆಯು ಸೆರೆಹಿಡಿಯಹೋಗುವುದಿಲ್ಲ. ಅಲ್ಲದೆ ಇವರು ನಿರೀಕ್ಷಿಸುವ ಮಟ್ಟದ ಚಿಂತನಾಶಕ್ತಿಯಿಲ್ಲದ ಮನುಷ್ಯರೇ ಬಹುಸಂಖ್ಯಾತ ರಾಗಿರುವುದರಿಂದ, ಅಂತಹವರಿಗೆ ಇವರು ಸೂಚಿಸುವ ಪರಿಹಾರ, ಪರಿಹಾರವೇ ಅಲ್ಲ. ಇವರ ಕವಿತೆಯ ಅಗಮ್ಯತೆಗೆ ಚಿಂತನಶೀಲವಾದ ಮನಃಸ್ಥಿತಿಯು ಅಪರೂಪ ವಾಗಿರುವುದೂ ಕಾರಣ. ಮನುಷ್ಯರ ನಡುವಿನ ಪರಸ್ಪರ ಸಂಬಂಧಗಳು ಮತ್ತು ಅಂತಹ ಸಂಬಂಧಗಳ ಪರಿಣಾಮವಾದ ವರ್ತನೆಯು ಭಾವನೆಗಳಿಂದಲೇ ನಿಯಂತ್ರಿತವಾಗಿದೆ ಯೆಂಬುದು ಇವರಿಗೆ ತಿಳಿಯದೆ ಇಲ್ಲ. ಆದರೆ ಅಂತಹ ಸಾಮಾನ್ಯರು ಇವರ ಕನಿಕರಕ್ಕೆ ಮಿತ್ರರಾಗುವರೇ ವಿನಾ ಅವರನ್ನೂ ಸಹೃದಯರಾಗಿಸುವ ಪ್ರಯತ್ನಕ್ಕೆ ಇವರು ತೊಡಗುವುದಿಲ್ಲ. ಪು.ತಿ.ನ.ರವರು ಸೃಷ್ಟಿಸುವ ಪಾತ್ರಗಳೆಲ್ಲವೂ ಅವರಂತೆಯೇ ಅಂತರಂಗ ಪರಿವೀಕ್ಷಣೆ ಮತ್ತು ಚಿಂತನೆಗಳಲ್ಲಿ ತೊಡಗುವುದು ಸಹಜವೆನ್ನಿಸುವುದಿಲ್ಲ.

ಕವಿತೆಯ ಭಾಷೆಯ ಬಗ್ಗೆ ಕೂಡ ಇವರ ವಿಚಾರಗಳು ವಿಭಿನ್ನವಾಗಿವೆಯೆಂದು ಹೇಳಬೇಕು. ಭಾಷೆಯ ಪ್ರಾದೇಶಿಕತೆ ಮತ್ತು ಆಡು ಮಾತಿನ ಗುಣಗಳನ್ನು ಅದರ

ಶಕ್ತಿಯನ್ನು ಕಡಿಮೆ ಮಾಡುತ್ತವೆಂದು ಅವರು ನಂಬುತ್ತಾರೆ. "ತನ್ನ ಪ್ರಾದೇಶಿಕತೆ ಹಾಗೂ ವರ್ಗವೈಶಿಷ್ಟ್ಯವನ್ನು ಆದಷ್ಟು ಕಳೆದುಕೊಂಡ ಹೊರತು ಭಾಷೆಯ ವಿಚಾರ ಪ್ರವಹಣ ಸಾಮರ್ಥ್ಯ, ಭಾವವ್ಯಂಜನ ಕೌಶಲ ಹಾಗೂ ಸರ್ವಾದರಣೀಯ ವ್ಯಾಪ್ತಿ ಹೆಚ್ಚಲಾರದು. ಆಡುಮಾತು ಉಪಭಾಷೆಯಾಗಿಯೇ ಉಳಿಯದೆ ಭಾಷೆಯ ದರ್ಜೆಗೇರುವುದೂ ಸಾಹಿತ್ಯ 'ಆಲೋಚನಾಮೃತ' ವೆನಿಸುವುದೂ ಸಂಸ್ಕರಣದಿಂದ."[7]

ಪು.ತಿ.ನ. ಅವರು ಬರೆಯುವಂತಹ ಕವಿತೆಗೆ, ಈ ವಿಚಾರಗಳು ನೂರಕ್ಕೆ ನೂರರಷ್ಟು ಸರಿಯಿರಬಹುದು. ಆದರೆ ಕೆ.ಎಸ್. ನರಸಿಂಹಸ್ವಾಮಿಯವರ ಹಾಗೆ ಅವರು ಪ್ರಯೋಗಕ್ಷಮತೆಯನ್ನು ಮೈಗೂಡಿಸಿಕೊಂಡಿದ್ದರೆ ಅವರ ಕವಿತೆಯು ಇನ್ನಷ್ಟು ಲೋಕಗಳನ್ನು ಅನಾವರಣ ಮಾಡಬಹುದಿತ್ತೆಂದು ತೋರುತ್ತದೆ. ಚಿಂತನಶೀಲತೆಯು, ಶಿಷ್ಟಭಾಷೆಯೊಂದಿಗೆ ಸೇರಿಕೊಂಡಾಗ, ನಿಜವಾದ ನೋವಿನಿಂದ ಕವಿಯನ್ನು ಸಂರಕ್ಷಿಸುವ ಕವಚವಾಗಿಬಿಡುತ್ತದೆ. ನೋವಿಗೆ ತನ್ನನ್ನು ಒಡ್ಡಿಕೊಂಡ ಮನಸ್ಸು ಬೇಂದ್ರೆಯವರಂತೆ ಸಮಗ್ರ ಮನುಕುಲದ ನೋವನ್ನು ಧ್ವನಿಸುವ ಕವಿತೆಗಳನ್ನು ಸೃಷ್ಟಿಸುತ್ತದೆ.

ಅನೇಕರು ಈಗಾಗಲೇ ಗುರುತಿಸಿರುವ ಹಾಗೆ ಪು.ತಿ.ನ. ಅವರು 'ಪರಕಾಯ ಪ್ರವೇಶ'ದಲ್ಲಿ ಸಿದ್ಧಿಯನ್ನು ಪಡೆದವರು. ನಮ್ಮ ಸಂಸ್ಕೃತಿಯ ಸಾರಭೂತಸಂಗತಿಗಳನ್ನು ಪ್ರತೀಕಗಳ ರೂಪದಲ್ಲಿ ಹಿಡಿದಿಡುವ ಪುರಾಣಗಳ ಜಗತ್ತು ಅವರಿಗೆ ಸ್ವಂತ ಮನೆಯಂತೆ ಪರಿಚಿತ. ವರ್ತಮಾನದ ಬದುಕಿನ ಅರ್ಥವನ್ನು ಶೋಧಿಸುವುದಕ್ಕೆ ಅವರು ಮಾಡಿಕೊಳ್ಳುವ ಬುದ್ಧಿಪೂರ್ವಕ ಆಯ್ಕೆಯು ಪೌರಾಣಿಕ ಆವರಣವಾಗಿರುತ್ತದೆ. ಈ ಮಾತಿಗೆ ಅಹಲ್ಯೆ ನಾಟಕಕ್ಕಿಂತ ಉತ್ತಮ ನಿದರ್ಶನ ಬೇರಿಲ್ಲ. ಸುತ್ತಲಿನ ನಿಸರ್ಗದ ವಿವರಗಳನ್ನು ವರ್ಣಿಸುವುದಕ್ಕೆ ಪೌರಾಣಿಕ ಪ್ರತಿಮೆಗಳನ್ನು ಕೊಡುವುದರಿಂದ ಹಿಡಿದು, ಪ್ರಾಚೀನರಾದರೂ ಸಾರ್ವಕಾಲಿಕರಾದ ಪಾತ್ರಗಳ ನಿರ್ಮಾಣದವರೆಗೆ ಅವರ ಪುರಾಣನಿಬಿಡಮತಿ ಸಕ್ರಿಯವಾಗಿದೆ. ಆದರೆ ಕನ್ನಡ ಕಾವ್ಯದ ವಾಚಕಲೋಕವು ಪು.ತಿ.ನ ರವರಿಗೆ ಪರಿಚಿತವಾದ ಸಾಂಸ್ಕೃತಿಕ ಆವರಣದಿಂದ ದೂರ ಸರಿದಂತೆಲ್ಲ ಅವರ ಕವಿತೆಯು ಅಜ್ಞಾತವಾಸಕ್ಕೆ ಗುರಿಯಾಗುವುದು ಅನಿವಾರ್ಯವೆಂದು ತೋರುತ್ತದೆ.

ಪು.ತಿ.ನ. ಅವರ ಕವಿತೆಯ ಬಗ್ಗೆ ಮತ್ತೆ ಮತ್ತೆ ಹೇಳಲಾಗಿರುವ ಇನ್ನೊಂದು ಮಾತು ಅವರ ಭಾಗವತಪ್ರಜ್ಞೆಗೆ ಸಂಬಂಧಿಸಿದ್ದು. ಅವರ ಹಲವು ಗೀತ ನಾಟಕಗಳಲ್ಲಿ ಮತ್ತು ರಂಗವಲ್ಲಿಯಂತಹ ಕವಿತೆಗಳಲ್ಲಿ, ಅವಿಚಾರಿತ ರಮಣೀಯವಾದ ಭಕ್ತಿ, ನಂಬಿಕೆಗಳನ್ನೇ ಮೂಲ ನೆಲೆಯಾಗಿ ಹೊಂದಿರುವ ಪಾತ್ರಗಳ ಸೃಷ್ಟಿಯಾಗಿರುವುದು ನಿಜ. ಆದರೆ ಸ್ವತಃ ಪು.ತಿ.ನ. ಅವರು ಜ್ಞಾನಯೋಗದ ಕಡೆಗೆ ತೋರಿಸುವಷ್ಟು ಆಸಕ್ತಿಯನ್ನು ಕೇವಲ ಭಕ್ತಿಯ ಕಡೆಗೆ ತೋರಿಸುವುದಿಲ್ಲ. ಮಲೆದೇಗುಲದಂತಹ ಕವಿತೆಗಳಲ್ಲಿ ಸ್ಪಷ್ಟವಾಗಿ ಗೋಚರಿಸುವಂತೆ ಅವರದು ಆಲೋಚನೆಯ ಮೂಲಕ ದೇವರ ಪರಿಕಲ್ಪನೆಯನ್ನು ಕಂಡುಕೊಳ್ಳುವ ದಾರಿ. ಅದೊಂದು ಬಗೆಯ ಚಿಂತನ ತಪಸ್ಸು. ಆದರೆ ಇದರ ಹಿಂದೆ ಪಾರಂಪರಿಕವಾಗಿ ಬಂದ ಆಸ್ತಿಕತೆಯ ಮೂಲಭಿತ್ತಿ ಇದ್ದೇ ಇರಬಹುದು. ಹೃದಯ ಹೇಳಿದ ಮಾತಿಗೆ ಪುರಾವೆಗಳನ್ನು ಹುಡುಕದ ಸಮಾಧಾನಪಡಲಾರದ ಮನಸ್ಸು ಅವರದು. ಅವರೇ ಹೇಳುವಂತೆ,

"ನನ್ನ ಮನಕೊ ನೀನೊಂದನುಮಾನ
ನನ್ನೆದೆಗೂ ನಿನ್ನರಿತ ಸುಮಾನ"[8]

ಪು.ತಿ.ನ. ಅವರು ಕನ್ನಡ ಕಾವ್ಯದಲ್ಲಿ ಒಂದು ದ್ವೀಪದಂತೆ ಇರುವುದಕ್ಕೆ ಕಾರಣವಾದ ಸಂಗತಿಯೆಂದರೆ, ಕವಿತೆಯ ರೂಪಣ ಕ್ರಿಯೆಯಲ್ಲಿ ಅವರು ತೋರಿಸಿದ ಸ್ಥಗಿತತೆಯೆಂದು ಕಾಣುತ್ತದೆ. 'ಹಣತೆ'ಯಿಂದ ಹಿಡಿದು ಇತ್ತೀಚಿನ ಸಂಕಲನದವರೆಗೆ, ಅವರು ಕನ್ನಡ ಕಾವ್ಯದ ಇತಿಹಾಸದಲ್ಲಿ ಆದ ಸ್ಥಿತ್ಯಂತರಗಳ ಬಗ್ಗೆ ಅನಾಸಕ್ತರಾಗಿಯೇ ಉಳಿದು ಬಿಟ್ಟಿದ್ದಾರೆ. ಜಿ.ಎಸ್. ಶಿವರುದ್ರಪ್ಪನವರು ಒಂದು ಕಡೆ ಹೇಳಿರುವಂತೆ, "ಪು.ತಿ.ನ ಅವರಷ್ಟು, ನವೀನಕಾಲದಲ್ಲಿಯೂ ಸಂಪ್ರದಾಯ ಪ್ರಜ್ಞೆಯುಳ್ಳ ಕವಿ ಬೇರ ಇಲ್ಲವೇನೋ ಎನ್ನುವಂತೆ ಅವರ ಕವಿತೆ ಭಾಗವತ ಪರಂಪರೆಯಲ್ಲಿ ಧ್ಯಾನಸ್ಥವಾಗಿದೆ."[9] ಈ ಅನಾಸಕ್ತಿ ಕಾವ್ಯವನ್ನು ಕೇವಲ ಒಂದು ಮಾಧ್ಯಮವಾಗಿ ಪರಿಗಣಿಸಿದುದರ ಪರಿಣಾಮವೇನೋ ಎಂಬ ಶಂಕೆಗೆ ಆಸ್ಪದವಿದೆ. ತನ್ನಷ್ಟಕ್ಕೆ ಮೌಲಿಕವಾದರೂ ವಿಕಸನಶೀಲವಲ್ಲದ ಕವಿತೆ, ಬದಲಾದ ಕಾಲದಲ್ಲಿ ಸಂವಹನ ಸೌಲಭ್ಯದಿಂದ ವಂಚಿತವಾಗುತ್ತದೆ. ತಕ್ಷಣಕ್ಕೆ ಬೇಕಾದ ನಿಜಗಳನ್ನು ನುಡಿಯುವುದಿಲ್ಲ, ನುಡಿದರೂ ಅದನ್ನು ಕೇಳಿಸಿಕೊಳ್ಳುವ ವ್ಯವಧಾನ ವಾಚಕಲೋಕಕ್ಕಿರುವುದಿಲ್ಲ.

ಕೊನೆಯದಾಗಿ ಪು.ತಿ.ನ. ಅವರ ಕಾವ್ಯದಲ್ಲಿ ಇದೆಯೆಂದು ಹೇಳಲಾದ ಕ್ಲಿಷ್ಟತೆಯ ಬಗ್ಗೆ ಒಂದೆರಡು ಮಾತು. ಹಾಗೆ ನೋಡಿದರೆ ಪು.ತಿ.ನ. ಅವರಲ್ಲಿ ಇರುವುದು ಕೇವಲ ಶಾಬ್ದಿಕ ಕ್ಲಿಷ್ಟತೆ ಮಾತ್ರ. ಅವರು ಬಳಸುವ ಅಪರೂಪದ ಪದಗಳ ಅರ್ಥವನ್ನು ತಿಳಿದುಕೊಂಡು ವಾಕ್ಯಾನ್ವಯವನ್ನು ಗ್ರಹಿಸಿದಾಗ ಅವರ ಕಾವ್ಯವು ಸರಳವಾಗಿಯೇ ಅರ್ಥವಾಗುತ್ತದೆ. ಹಾಗೆ ನೋಡಿದರೆ ಅವರ ಕಾವ್ಯದಲ್ಲಿ ತಾರ್ಕಿಕ ಅಸ್ಪಷ್ಟತೆಯಾಗಲೀ, ವ್ಯಾಕರಣಾತ್ಮಕ ಅಸ್ಪಷ್ಟತೆ ಯಾಗಲೀ ಇಲ್ಲ. ಒಂದು ನೆಲೆಯಲ್ಲಿ ಬೇಂದ್ರೆ ಮತ್ತು ಕುವೆಂಪು ಅವರ ಕವಿತೆಗಳಿಗಿಂತ ಇವರ ಕವಿತೆಗಳು ಹೆಚ್ಚು ಸರಳವಾಗಿರುತ್ತವೆ.

ನಾನು ಮೇಲೆ ಗುರುತಿಸಿರುವ ಅಂಶಗಳು ನಾನು ಅರ್ಥಮಾಡಿಕೊಂಡ ಹಾಗೆ ವಸ್ತುಸ್ಥಿತಿಯ ನಿರೂಪಣೆಯೇ ಹೊರತು ಆಕ್ಷೇಪಣೆಯಾಗಲೀ, ಸಮರ್ಥನೆಯಾಗಲೀ ಅಲ್ಲ. ಇವರ ಅನೇಕ ಕವನಗಳು, ಕನ್ನಡ ಕಾವ್ಯಕ್ಕೆ ಶ್ರೀಮಂತಿಕೆಯನ್ನು ತಂದುಕೊಟ್ಟಿವೆಯೆನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. 'ಯದುಗಿರಿಯ ಮೌನ ವಿಕಾಸ' ದಿಂದ ಹಿಡಿದು 'ಶರ್ವರೀ ಸುಷಮೆ'ಯ ವರೆಗಿನ ನೂರಾರು ಕವಿತೆಗಳ ಕಾವ್ಯ ಸೌಂದರ್ಯವನ್ನು ವಿಮರ್ಶೆಯ ಮಾತುಗಳಲ್ಲಿ ವಿವರಿಸುವುದು ಅಸಾಧ್ಯ.

* * *

ಪು.ತಿ.ನ. ಅವರು ಪ್ರಕಟಿಸಿರುವ ನಾಟಕಗಳ ಸಂಖ್ಯೆಯು ಅವರ ಕವನ ಸಂಕಲನಗಳ ಸಂಖ್ಯೆಗಿಂತ ಕಡಿಮೆಯೇನಲ್ಲ. ಕನ್ನಡದಲ್ಲಿ, ಸಮಕಾಲೀನ ರಂಗಭೂಮಿಗೆ ಸಮಾನಾಂತರವಾಗಿಯೇ ಬೆಳೆದು ಬಂದು, ಪ್ರದರ್ಶಿತ ವಾಗದಿರುವ ಸಾಹಿತ್ಯಕ ನಾಟಕಗಳ ಒಂದು ಪರಂಪರೆಯೇ ಇದೆ. ಅದರಲ್ಲೂ ಶಾಸ್ತ್ರೀಯ ಸಂಗೀತದ ಖಚಿತ ಹಿನ್ನೆಲೆಯುಳ್ಳ ಪು.ತಿ.ನ. ಅವರ ಗೀತ ನಾಟಕಗಳು ಸಾಕಷ್ಟು ಪ್ರಬುದ್ಧವಾಗಿರುವ ನಮ್ಮ ಕಾಲದ ರಂಗಭೂಮಿಗೆ ಕೂಡ ಸವಾಲಾಗಿವೆ.

ಅಹಲ್ಯೆ, ಗೋಕುಲ ನಿರ್ಗಮನ, ಶಬರಿ, ಕವಿ, ದೋಣಿಯ ಬಿನದ, ವಿಕಟಕವಿ ವಿಜಯ, ಹಂಸದಮಯಂತಿ ಮತ್ತು ಇತರ ರೂಪಕಗಳು, ಶ್ರೀರಾಮ ಪಟ್ಟಾಭಿಷೇಕ, ಸತ್ಯಾಯನ ಹರಿಶ್ಚಂದ್ರ ಮತ್ತು ಜಾಹ್ನವಿಗೆ ಜೋಡಿದೀವಿಗೆ ಎಂಬ ನಾಟಕಗಳನ್ನು ಅವರು ರಚಿಸಿದ್ದಾರೆ. ಇವುಗಳಲ್ಲಿ ಒಂದು ಕೂಡಾ ಸಂಪೂರ್ಣವಾಗಿ ಗದ್ಯವನ್ನು ಅವಲಂಬಿಸಿಲ್ಲ. ಯಾವ ನಾಟಕದಲ್ಲೂ ಸಮಕಾಲೀನ ಬದುಕು ಕೇಂದ್ರವಸ್ತುವಾಗಿಲ್ಲ. ಹಲವು ನಾಟಕಗಳು ಆಕಾಶವಾಣಿಯಲ್ಲಿ ಪ್ರಸಾರವಾಗಿದ್ದರೂ, ರಂಗ ಪ್ರದರ್ಶನ ಕಂಡಿರುವುದು ಅತ್ಯಪರೂಪ.

ಈ ನಾಟಕಗಳಿಗೆ ಹಲವು ಪ್ರೇರಣೆಗಳಿವೆ. ಯಕ್ಷಗಾನ, ಬಯಲಾಟಗಳಂತಹ ಜಾನಪದ ರಂಗ ರೂಪಗಳು, ಶಾಸ್ತ್ರೀಯ ಸಂಗೀತದ ರೂಪಕಗಳು, ಪಾಶ್ಚಾತ್ಯ ಗೀತ ನಾಟಕಗಳು, ಸಂಪೂರ್ಣವಾಗಿ ಸಂಗೀತಮಯವಾದ ತಮಿಳು ನಾಟಕಗಳು ಇತ್ಯಾದಿ. ಇವರ ನಾಟಕಗಳು ಕುವೆಂಪು ಅವರ ಹಲವು ಕೃತಿಗಳಂತೆ ಕೇವಲ ಪದ್ಯನಾಟಕಗಳಲ್ಲ.

ಸಂಗೀತ ಮತ್ತು ಸಾಹಿತ್ಯಗಳ ಅರ್ಥಪೂರ್ಣ ಸಮನ್ವಯ ಇವರಲ್ಲಿ ಸಾಧ್ಯವಾಗಿದೆ. ಅದರಲ್ಲೂ ನಾದಮಾಧುರ್ಯವೇ ಮೇಲುಗೈಯಾದ ಹಾಡುಗಳಲ್ಲಿ ಅರ್ಥವು ನಮ್ಮ ವಾಗ್ಗೇಯಕಾರರ ಕೃತಿಗಳಲ್ಲಿರುವಂತೆಯೇ ಗೌಣವಾಗುತ್ತದೆ. ಆದರೆ ಸಾಹಿತ್ಯಭಾಗವು ಮಾಡಲಾರದ ಭಾವಸಂವಹನವನ್ನು ಸಂಗೀತವು ನಿರ್ವಹಿಸಿರುವುದರಿಂದ ಒಟ್ಟು ಪರಿಣಾಮಕ್ಕೆ ಧಕ್ಕೆ ಬರುವುದಿಲ್ಲ. ನಿಸರ್ಗವರ್ಣನೆಯೇ ಕೇಂದ್ರವಾದ ವಸಂತ ಚಂದನ, ವರ್ಷ-ಹರ್ಷಗಳಂತಹ ರೂಪಕಗಳಲ್ಲಿ ಕಥಾಂಶ ಗೌಣ. ಆಳವಿಲ್ಲದ ಪಾತ್ರಗಳು ನಾಟಕೀಯ ಸನ್ನಿವೇಶಗಳಿಗೆ ಅವಕಾಶ ಕೊಡುವುದಿಲ್ಲ. ಬಹುಮಟ್ಟಿಗೆ ಒಂದು ಭಾವವೇ ರೂಪಕದ ತುಂಬ ಅನುಸ್ಯೂತವಾಗಿ ಹರಿಯುತ್ತದೆ. ಡಾ. ಕೆ. ಮರುಳ ಸಿದ್ಧಪ್ಪನವರು ತಮ್ಮ ಲೇಖನವೊಂದರಲ್ಲಿ ಗುರುತಿಸುವಂತೆ ಇವು ಸುಂದರ ಚಲನಚಿತ್ರಗಳಾಗಿ ಯಶಸ್ವಿಯಾಗಬಲ್ಲವು. ಏಕೆಂದರೆ ಅಲ್ಲಿ ರಂಗಭೂಮಿಗೆ ನಿಲುಕದ ದೃಶ್ಯ ವೈಭವವನ್ನು ಸಾಕ್ಷಾತ್ಕರಿಸಬಹುದು. ಇವುಗಳಿಗಿಂತ ಹೆಚ್ಚು ದೃಢವಾದ ಕಥೆಯ ಹಂದರವನ್ನು ಒಳಗೊಂಡಿರುವ ಹಂಸದಮಯಂತಿ, ಹರಿಣಾಭಿಸರಣದಂತಹ ಕೃತಿಗಳಲ್ಲಿ ಮೂಲಕಥೆಗೆ ಕೊಂಚವೂ ಧಕ್ಕೆ ತರದಂತೆ, ಸಂಗೀತದ ನೆರವಿನಿಂದಲೇ ಪೌರಾಣಿಕವಾದ ವಾತಾವರಣವನ್ನು ಸೃಷ್ಟಿಸುವ ಪ್ರಯತ್ನವಿದೆ. ಸಹೃದಯನ ಭಾವಲೋಕವು ಸಾಕಷ್ಟು ಶ್ರೀಮಂತವಾಗಿದ್ದರೆ ಈ ನಾಟಕಗಳು ಒಂದು ಬಗೆಯ ಗುಂಗನ್ನು ಮೂಡಿಸಬಲ್ಲವು.

ಸ್ವಲ್ಪ ಮಟ್ಟಿಗೆ ಜಾನಪದ ಅಂಶಗಳನ್ನು ಒಳಗೊಂಡಿರುವ ಸರಳ ಪ್ರೇಮಕಥೆಯಾದ 'ದೋಣಿಯ ಬಿನದ'ವಾಗಲೀ, ಜಗತ್ತಿನ ನೋವು-ನಲಿವುಗಳನ್ನು ನಿರ್ಲಿಪ್ತವಾಗಿ ಪರಿಭಾವಿಸಿ, ಕಲೆಯಾಗಿ ಪರಿವರ್ತಿಸುವ ಕವಿಕಾರ್ಯವನ್ನು ವಿಜೃಂಭಿಸುವ 'ಕವಿ' ಯಾಗಲೀ, ಗೇಯತೆಯ ಬೆಂಬಲದಿಂದ ಆಕರ್ಷಕವಾಗಿವೆಯೇ ಹೊರತು, ತಮ್ಮೊಳಗೆ ಅಡಗಿರುವ ನಾಟಕೀಯತೆಯಿಂದಲ್ಲ. 'ಶಬರಿ' ಕೂಡ ಈ ಮಾತಿಗೆ ಅಪವಾದವಲ್ಲ.

'ವಿಕಟ ಕವಿ ವಿಜಯ' ತನ್ನ ಕಾಲದ ರಾಜಕೀಯ ಪರಿಸ್ಥಿತಿಯ ಬಗ್ಗೆ ಕವಿಯ ಅಂತರಂಗದಲ್ಲಿ ಮೂಡಿರುವ ಪ್ರತಿಸ್ಪಂದನಗಳನ್ನು ಪ್ರತಿಮಾ ರೂಪದಲ್ಲಿ ಕಂಡರಿಸುವ ಪ್ರಯತ್ನ. ಇದರ ವಸ್ತುಗಳನ್ನು ಸ್ವತಃ ಪು.ತಿ.ನ. ಅವರೇ ಅತ್ಯುತ್ತಮವಾಗಿ ಹೇಳುತ್ತಾರೆ. "ಹೊರಗಿನ ಪರಿಸ್ಥಿತಿ ಹದಗೆಟ್ಟು ರೂಕ್ಷವಾಗಿರುವಾಗ, ಯಾತನೆಯಿಂದ ವಿಷಮವಾಗಿ ಅಂತಃಪ್ರಕೃತಿ ಅಸ್ವಸ್ಥವಾಗಿರುವಾಗ ಬದುಕು ಭಾರವಾಗುತ್ತದೆ... ಆಗ ನನ್ನ ಜೀವ ಈ ನಾಟಕದ ಕೃತಕಾವರಣದಲ್ಲಿ ರಕ್ಷೆಗೊಂಡು ಅಂದಿನ ಇತಿಹಾಸದೊಳಹೊಕ್ಕು ಬಾಳಿತು. ಬಾಹ್ಯಪ್ರಕೃತಿಯ ನೈಷ್ಠುರ್ಯವನ್ನು ಆದಷ್ಟು ಕಡಿಮೆ ಮಾಡಿ ಅದನ್ನು ನನ್ನ ಒಳಗೆ ಹೊಂದಿಸಿಕೊಳ್ಳಬೇಕೆಂದು ಈ ನಾಟಕದ ದೊರೆಯನ್ನು ಸೃಷ್ಟಿಸಿದೆ ನನ್ನ ಆತ್ಮ ತನ್ನ ಆಕ್ರಂದನವನ್ನು ಹತೋಟಿಗೆ ತಂದುಕೊಂಡು ಹೊರಗಿನ ಪರಿಸ್ಥಿತಿಗೆ ಅಭಿಮುಖವಾಗಿ ನಿಲ್ಲುವ ದಾರ್ಢ್ಯವನ್ನು ಪಡೆಯಲು ವಿಕಟಕವಿಯನ್ನು ರೂಪಿಸಿದೆ. ಧ್ಯೇಯದ ಉದ್ದೀಪ್ತಿಗಾಗಿ ಗಾಂಧೀಜಿಯಂತಹ ಜನನಾಯಕನೊಬ್ಬನನ್ನು ಈ ಕೃತಕ ಪ್ರಪಂಚಕ್ಕೆ ತಂದೆ. ಹೀಗೆ ಈ ಧ್ಯೇಯದ ಅವಕಾಶದಲ್ಲಿ, ಈ ದೊರೆ ಮತ್ತು ಈ ವಿಕಟಕವಿಯ ನಡುವೆ, ಕಲಾ ಸ್ವಪ್ನದ ಮೆರುಗನ್ನು ಹೊಂದಿ, ಭಾರತದಲ್ಲಿ ನಡೆದ ಸ್ವಾತಂತ್ರ್ಯ ಸಮಾರಂಭದ ವಿಪ್ಲವ ಒಂದು ದೇಶೀಯ ಸಂಸ್ಥಾನದಲ್ಲಿ ಹೇಗೆ ತಲೆಯಿಟ್ಟಿತು ಎಂಬ ಇತಿಹಾಸ ಈ ನಾಟಕದಲ್ಲಿ ಹಾದುಹೋಗಿದೆ." ಸಮಕಾಲೀನ ಸಂಗತಿಗಳನ್ನು, ಪ್ರಾಚೀನದ ಚೌಕಟ್ಟಿನಲ್ಲಿಟ್ಟು ಪರಿಶೀಲಿಸುವ ಈ ಪ್ರಯತ್ನವು, ಪಾತ್ರಗಳನ್ನು ರಕ್ತಮಾಂಸಗಳ ಮನುಷ್ಯರೆಂದು ಪರಿಗಣಿಸದೆ ನಿರ್ದಿಷ್ಟ ಗುಣಸಾಮಗ್ರಿಗಳ ಪ್ರತಿನಿಧಿಯೆಂದು ನೋಡುವ ದೋಷಕ್ಕೆ ಪಕ್ಕಾಗಿದೆ. ನಾಟಕವನ್ನು-ಬಾಹ್ಯಾನುಭವದ ತೀವ್ರತೆಯನ್ನು ಹಿಡಿತಕ್ಕೆ ತಂದುಕೊಳ್ಳುವ ಪ್ರಯತ್ನವಾಗಿ ನೋಡುವುದರಿಂದ ನಾಟಕ ಕ್ರಿಯೆಗೆ ಬೇಕಾದ ತೀವ್ರತೆ ಮಾಯವಾಗುತ್ತದೆ.

ಇನ್ನು ಉಳಿದಿರುವುದು ಪು.ತಿ.ನ. ಅವರ ಅತ್ಯುತ್ತಮ ನಾಟಕಗಳಾದ 'ಗೋಕುಲ ನಿರ್ಗಮನ' ಮತ್ತು 'ಅಹಲ್ಯೆ'ಗಳು. ಎರಡೂ ತಮ್ಮ ಪುರಾಣ ಮೂಲದಲ್ಲಿಯೇ ಭಾವನಿರ್ಭರವಾದ, ಹೃದಯ ವಿದ್ರಾವಕವಾದ ವಸ್ತುವನ್ನು ಒಳಗೊಂಡಿವೆ. ಕೃಷ್ಣನ ಬದುಕಿನಲ್ಲಿ ಮಹತ್ವದ ಘಟ್ಟವೊಂದನ್ನು ಆರಿಸಿಕೊಂಡು ಅವನಲ್ಲಾದ ಪರಿವರ್ತನೆಯು ಅವನ ಸುತ್ತಲಿನವರ ಮೇಲೆ ಬೀರುವ ಪರಿಣಾಮವನ್ನು ಚಿತ್ರಿಸುವುದು ಗೋಕುಲ ನಿರ್ಗಮನದ ವಸ್ತು. ಪೂರ್ವ ಯೌವನದ ಧೀರಲಲಿತ ವ್ಯಕ್ತಿತ್ವವನ್ನು, ವೇಣು ವಿಸರ್ಜನದಂತಹ ಸಾಂಕೇತಿಕ ಕ್ರಿಯೆಯಿಂದ ತ್ಯಜಿಸಿ, ಜೀವನದ ಜವಾಬ್ದಾರಿಗಳನ್ನು ನಿರ್ವಹಿಸಲು ಕೃಷ್ಣನು ಸಿದ್ಧನಾಗುವ ಸನ್ನಿವೇಶವು ಇನ್ನಿಲ್ಲವೆನ್ನುವಷ್ಟು ಹೃದಯಂಗಮವಾಗಿ, ಸ್ವಪ್ನೋಪಮವಾಗಿ ಮೂಡಿಬಂದಿದೆ. ಇಲ್ಲೊಂದು ಮುಖ್ಯ ಮಾತು, ಪು.ತಿ.ನ. ರವರ ಕವಿತೆಗಳಿಗಿಂತ ಅವರ ಇವೆರಡು ನಾಟಕಗಳ ಹಾಡುಗಳು ಹೆಚ್ಚು ಜನರ ಮನಸ್ಸನ್ನು ಆಕರ್ಷಿಸುತ್ತವೆ. ಕಾರಣ ಹೀಗಿದೆ: ಕವಿತೆಯ ನಿರೂಪಕನಾಗಿ ಸ್ವತಃ ತಮ್ಮಲ್ಲಿ ಉಂಟುಮಾಡಿಕೊಳ್ಳಲು ಸಿದ್ಧರಿಲ್ಲದ ಭಾವನಾಮಯತೆಯನ್ನು ಅವರು ನಾಟಕದ ಪಾತ್ರಗಳಲ್ಲಿ ಮೂಡಿಸುತ್ತಾರೆ. ಭಾವನೆಗಳ ಅಲ್ಲೋಲಕಲ್ಲೋಲವಾದ ಜಗತ್ತನ್ನು ದೂರದಿಂದ ಪರಿಶೀಲಿಸಿ, ಚಿಂತಿಸುವ ನೆಲೆಯಲ್ಲಿ ಕವಿತೆಗಳು ರಚಿತವಾದರೆ ನಾಟಕದ ಹಾಡುಗಳು ತಮ್ಮ ಒಳನೆಯ್ಗೆಯಲ್ಲಿ ಆ ಭಾವನಾತಲ್ಲೀನತೆಯನ್ನೇ ಹೊಂದಿವೆ. ನಾಟಕದ ಪಾತ್ರಗಳ ಒಳಗಿನಿಂದ ನೇರವಾಗಿ ಚಿಮ್ಮುವ ಹಾಡುಗಳು ಆಲೋಚಿಸಲಾರದಷ್ಟು ತತ್ಕಾಲೀನವಾಗಿವೆ

ಗೋಕುಲ ನಿರ್ಗಮನವು ಎರಡು ನೆಲೆಗಳಲ್ಲಿ ಸಾಂಕೇತಿಕವಾಗುತ್ತದೆ. ಪ್ರತಿಯೊಬ್ಬನೂ ಕೂಡ ಗರಿಹಗುರವಾದ ಬಾಲ್ಯದಿಂದ, ಕರ್ತವ್ಯ ಪ್ರಜ್ಞೆಯಿಂದಲೇ ಭಾರವಾದ ಪ್ರೌಢಾವಸ್ಥೆಯನ್ನು ಪ್ರವೇಶಿಸಬೇಕಾಗುತ್ತದೆ. ಗತಿಸಿದ ಸ್ಥಿತಿಗಾಗಿ ನಾಸ್ಟಾಲ್ಜಿಕ್(Nostalgic) ಆಗುವುದು ತೀರಾ ಸಹಜ. ಆ ನೆಲೆಯಲ್ಲಿ ಕೃಷ್ಣನ ಪರಿವರ್ತನೆಯು ನಮ್ಮೆಲ್ಲರಲ್ಲಿ ಜರುಗಬೇಕಾದ ಸ್ಥಿತ್ಯಂತರವೂ ಹೌದು. ಇನ್ನೊಂದು ನೆಲೆಯಲ್ಲಿ ಈ ಕತೆಯು ಭಾರತೀಯ ಸಂಸ್ಕೃತಿ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳ ನಡುವಿನ ಸಂಘರ್ಷವನ್ನು ಧ್ವನಿಸುತ್ತಿದೆ ಎಂಬ ವ್ಯಾಖ್ಯಾನವೊಂದು ಕೂಡಾ ಬಂದಿದೆ. ಇದನ್ನು ಡಾ. ಕೆ. ಮರುಳಸಿದ್ಧಪ್ಪನವರು ತುಂಬಾ ಸಮರ್ಥವಾಗಿ "ಪುರಾಣ ಕತೆಯೊಂದು ಸಂಸ್ಕೃತಿಯ ಇತಿಹಾಸವನ್ನೇ ಧ್ವನಿಸುವಂತೆ ಅದನ್ನಿಲ್ಲಿ ಬಳಸಿಕೊಳ್ಳಲಾಗಿದೆ......ನಾಗರೀಕತೆಯ ಸೋಂಕಿಲ್ಲದೆ ಮುಗ್ಧವಾಗಿ, ಸರಳವಾಗಿದ್ದ ಭಾರತೀಯ ಸಂಸ್ಕೃತಿ ಪಶ್ಚಿಮದ ಯಂತ್ರ ನಾಗರೀಕತೆಯ ಬಿರುಗಾಳಿಗೆ ಸಿಕ್ಕಿ ಕೃಷ್ಣನನ್ನು ಕಳೆದುಕೊಂಡ ಗೋಕುಲದಂತೆ ಪರಂಪರೆಯೊಂದಿಗೆ ಸಂಬಂಧವನ್ನು ಕಳೆದುಕೊಂಡು ಅನಾಥವಾಯಿತೆಂಬ ಒಳದನಿಯೊಂದು ನಾಟಕದುದ್ದಕ್ಕೂ ಕೇಳಿಬರುತ್ತದೆ..... ಹೀಗೆ 'ಗೋಕುಲ ನಿರ್ಗಮನ', ಸಂಕ್ರಮಣಾವಸ್ಥೆಯಲ್ಲಿರುವ ಸಂಸ್ಕೃತಿಯೊಂದರ ದುಃಖದ ತೀವ್ರತೆಯನ್ನು ಸಾಂಕೇತಿಕವಾಗಿ ಧ್ವನಿಸುವುದರೊಂದಿಗೆ ಪೌರಾಣಿಕವಾಗಿ ಭಾಗವತ ಪರಂಪರೆಯ ಒಂದು ಅದ್ಭುತ ಕಥೆಯೂ ಆಗಿದೆ. ಪುರಾಣದ ನೆಲೆಯಿಂದ ನೋಡಿದಾಗ ಕೃಷ್ಣಭಕ್ತಿಯ ಆವೇಗ ನಾಟಕದ ಜೀವವಾಹಿನಿಯಾಗಿದೆ"[10]. ಪು.ತಿ.ನ ರವರ ಸಾರ್ವಕಾಲಿಕ ಮಹತ್ವವನ್ನು ತಿಳಿಯಲು ಇಂತಹ ವ್ಯಾಖ್ಯಾನಗಳು ತುಂಬಾ ನೆರವಾಗುತ್ತವೆ.

ಇವೆಲ್ಲದರ ಜೊತೆಗೆ ಸಂಗೀತ ಮತ್ತು ಸಾಹಿತ್ಯಗಳ ಪರಸ್ಪರ ಸಾಹಚರ್ಯವು ಇಷ್ಟೊಂದು ಫಲಪ್ರದವಾಗಿರುವುದು ಇಡೀ ಕನ್ನಡ ಸಾಹಿತ್ಯದಲ್ಲಿಯೇ ಅಪೂರ್ವ. ಒಂದರ ಶಕ್ತಿಯನ್ನು ಹೆಚ್ಚಿಸಲು ಮತ್ತೊಂದು ಎಡೆಬಿಡದೆ ದುಡಿಯುತ್ತದೆ. ಈ ನಾಟಕದ ಸ್ವಪ್ನಸದೃಶ ವಾಸ್ತವತೆಯನ್ನು, ರಂಗದ ಮೇಲೆ ತರುವ ತಾಂತ್ರಿಕ ಪರಿಣತಿಯನ್ನು ನಮ್ಮ ರಂಗಭೂಮಿ ಸಂಪಾದಿಸಿಕೊಳ್ಳಬೇಕೆಂಬ ಆಸೆ ನನಗಿದೆ.

'ಅಹಲ್ಯೆ'ಯು ಪು.ತಿ.ನ. ರವರ ಅತ್ಯುತ್ತಮ ಸಾಹಿತ್ಯ ಸೃಷ್ಟಿಗಳಲ್ಲಿ ಒಂದು. ರಾಮಮಹಿಮೆಯ ಪ್ರದರ್ಶನಕ್ಕೆಂದು ಮೀಸಲಾಗಿರುವ ಪುರಾಣಕಥೆಯೊಂದರ ಅಂತರಂಗದೊಳಗೆ, ಎಲ್ಲ ಕಾಲ-ದೇಶಗಳ ಮನುಷ್ಯ ಹೃದಯಗಳಲ್ಲಿಯೂ ನಡೆಯುತ್ತಿರಬಹುದಾದ ತುಮುಲಗಳನ್ನು ಗುರುತಿಸಿ, ಸಮಗ್ರಕಥೆಯನ್ನು ಪುನಃ ಸೃಷ್ಟಿಸಿರುವುದು ಈ ಕೃತಿಯ ಹೆಚ್ಚುಗಾರಿಕೆ. ಗಂಡು-ಹೆಣ್ಣಿನ ನಡುವಿನ ಒಲವು ಪಡೆಯಬಹುದಾದ ತಾರಕ-ಮಾರಕ ಮುಖಗಳನ್ನು ಅಹಲ್ಯೆಯ ಬದುಕಿನ ಏರು-ಪೇರುಗಳ ಮೂಲಕ ಚಿತ್ರಿಸಿರುವ ಈ ಕೃತಿಯಲ್ಲಿ, ದಾಂಪತ್ಯ ಜೀವನದ ಚೌಕಟ್ಟಿನೊಳಗಿನ ಪ್ರೀತಿಯನ್ನು ಸಮರ್ಥಿಸಿ, ವಿವಾಹ ಬಾಹಿರ ಪ್ರಣಯವು ದುರಂತಕರವೆಂದು ಪ್ರತಿಪಾದಿಸುವ ದೃಷ್ಟಿಕೋನವನ್ನು ಸ್ಪಷ್ಟವಾಗಿ ಗುರುತಿಸಬಹುದು. ಆದರೆ ನಾಟಕದ ಮಹತ್ವವಿರುವುದು ಪತನೋನ್ಮುಖವಾದ ಪಾತ್ರಗಳ ಒಳಗನ್ನು ಅತ್ಯಂತ ಸಹಾನುಭೂತಿಯಿಂದ, ಪ್ರೀತಿಯಿಂದ ಅರ್ಥಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ. ಅಹಲ್ಯೆ, ಗೌತಮ, ಇಂದ್ರ ಇವರೆಲ್ಲರೂ ಭಾವತೀವ್ರತೆಯ ಬಿರುಗಾಳಿಯಲ್ಲಿ ಸಿಕ್ಕ ತರಗೆಲೆಗಳಾಗಿ ಬಿಡುವುದನ್ನು ತುಂಬಾ ಚೆನ್ನಾಗಿ ಮೂಡಿಸಲಾಗಿದೆ. ಆದರೆ ಗೌತಮ-ಮದನರ ಹಾಗೆ ತಪಸ್ಸಿನ ಮೂಲಕ ಜೀವನದ ಗೋಜಲುಗಳನ್ನು ಬಿಡಿಸಿಕೊಳ್ಳುವ ಸಾಮರ್ಥ್ಯ ನಮ್ಮಲ್ಲಿ ಅನೇಕರಿಗಿಲ್ಲ. ರಾಮಾ ಗಮನವೂ ಅಂತೆಯೇ ಮಂಗಳಾಂತ್ಯದ ಪ್ರೇರಣೆಗಳ ಪರಿಣಾಮವಷ್ಟೇ. ಆದ್ದರಿಂದ ದುರಂತದಲ್ಲಿ ಮುಕ್ತಾಯವಾಗುವ ಪೂರ್ವಾಂಕ ನಮ್ಮನ್ನು ತಟ್ಟುವ ಹಾಗೆ ಉಳಿದೆರಡು ಭಾಗಗಳು ಆತ್ಮೀಯವಾಗುವುದಿಲ್ಲ. ಆದರೆ ಸಮಸ್ಯೆಗಳಿಗೆ ತರ್ಕಬದ್ಧವಾದ, ಸುಸಮರ್ಥಿತವಾದ ಪರಿಹಾರಗಳನ್ನು ಹುಡುಕದೆ ಪು.ತಿ.ನ. ಅವರ ನಿಶಿತಮತಿ ವಿರಮಿಸುವುದಿಲ್ಲ. ನಾಟಕದ ಚಿಂತಾನಾಂಶವು ಕೆನೆಗಟ್ಟಿರುವ, ಮಧ್ಯಮಾಂಕದ ಗೌತಮನ ಪ್ರಬುದ್ಧ ನಿಲುವುಗಳು ನಮಗೆ ಸಮರಸ ಜೀವನದ ಸಂದೇಶವಾಗಿ ರಮ್ಯವೆನಿಸುತ್ತವೆ. ಆದರೆ ಮನುಷ್ಯ ಪ್ರವೃತ್ತಿಜನ್ಯ ಪರಿಮಿತಿಗಳಿಂದ ಅನುಭವ ಸಾಧ್ಯವೆನಿಸುವುದಿಲ್ಲ. ಆದರೂ ಈ ನಾಟಕದಲ್ಲಿ ಸಾಧ್ಯವಾಗಿರುವ ಆವರಣ ಸೃಷ್ಟಿ ಮತ್ತು ಅಂತರಂಗ ಪರಿವೀಕ್ಷಣೆಗಳು ಅಸಾಧಾರಣವಾದವು. ಭಾಷೆ ಮತ್ತು ಭಾವಗಳ ಮೈತ್ರಿಯು ಇಲ್ಲಿ ಸಿದ್ಧಿಸಿರುವ ಪ್ರಮಾಣದಲ್ಲಿ ಪು.ತಿ.ನ. ಅವರ ಬೇರಾವ ಕೃತಿಯಲ್ಲಿಯೂ ಸಿದ್ಧಿಸಿಲ್ಲ. ಇಲ್ಲಿಯೂ ಕೂಡ ಹಾಡುಗಳಿವೆ, ವರ್ಣನೆಗಳಿಗೆ ತಮ್ಮದೇ ಆದ ಚೆಲುವಿದೆ.

ಪು.ತಿ.ನ. ರವರ ಕೆಲವು ನಾಟಕಗಳ ಈ ಪರಿಶೀಲನೆಯು, ರಂಗ ಭೂಮಿಯಿಂದ ದೂರವುಳಿದಾಗಲೂ, ಸಾಹಿತ್ಯಕ ಸಾಧನೆಯಲ್ಲಿ ಅನುಪಮ ವಾಗಿರುವ ಕನ್ನಡ ನಾಟಕಗಳ ಸಮುದಾಯಕ್ಕೆ ಅವುಗಳನ್ನು ಸೇರಿಸುವುದರ ಔಚಿತ್ಯವನ್ನು ಮನಗಾಣಿಸಿರಬಹುದು. ನವೋದಯ ಸಾಹಿತಿಗಳ ಬಹುಪಾಲು ಸೃಷ್ಟಿಯು ಈ ಗುಂಪಿಗೆ ಸೇರುತ್ತದೆ.

* * *

ಕಾವ್ಯ ಮತ್ತು ನಾಟಕಗಳ ನಂತರ ಪರಿಶೀಲಿಸಬೇಕಾದ ಕ್ಷೇತ್ರವೆಂದರೆ ಲಲಿತಪ್ರಬಂಧ ಮತ್ತು ಭಾವಪ್ರಬಂಧಗಳು. ಪು.ತಿ.ನ.ರವರು 'ರಾಮಾಚಾರಿಯ ನೆನಪು', 'ಧ್ವಜರಕ್ಷಣೆ', 'ರಥಸಪ್ತಮಿ ಮತ್ತು ಇತರ ಚಿತ್ರಗಳು', 'ಈಚಲುಮರದ ಕೆಳಗೆ', 'ಧೇನುಕಪುರಾಣ' ಮತ್ತು 'ಯದುಗಿರಿಯ ಗೆಳೆಯರು' ಎಂಬ ಗದ್ಯಸಂಕಲನಗಳನ್ನು ಪ್ರಕಟಿಸಿದ್ದಾರೆ. ಇವುಗಳ ಪೈಕಿ 'ರಾಮಾಚಾರಿಯ ನೆನಪು', ಅವರ ಮೊದಲ ಕವನ ಸಂಕಲನವಾದ 'ಹಣತೆ'ಗಿಂತ ಮುಂಚಿತವಾಗಿ, 1931ರಲ್ಲಿ ಪ್ರಕಟವಾಯಿತೆನ್ನುವುದು ಕುತೂಹಲದ ಸಂಗತಿ.

ಇಲ್ಲಿನ ಬಹುಪಾಲು ಬರಹಗಳು ಕಥೆ ಹಾಗೂ ಲಲಿತ ಪ್ರಬಂಧಗಳ ಗಡಿರೇಖೆಗಳ ನಡುವೆ ಚಲಿಸುತ್ತಿರುತ್ತವೆ. ಏಕೆಂದರೆ ಇವು ಬಹುಮಟ್ಟಿಗೆ ನಿರ್ದಿಷ್ಟ ಅನುಭವ ಪ್ರೇರಿತವೂ, ಘಟನಾಕೇಂದ್ರಿತವೂ ಆಗಿರುತ್ತವೆ. ಆದ್ದರಿಂದಲೇ ಅನುಭವ ಕಥನವು ಇಲ್ಲಿ ಅನಿವಾರ್ಯ. ಆದರೆ ನೆನಪಿನ ಗೂಡಿನಿಂದ ಹಕ್ಕಿ ತೆಗೆದ ಅನುಭವಕ್ಕೆ ಅಂಟಿಕೊಂಡು, ಅದನ್ನು ಪಡೆದ ಕಾಲದ ಭಾವಸಮಗ್ರವೆಲ್ಲವೂ ಪುನಾರಚಿತವಾಗುತ್ತದೆ. ಲೇಖಕರ ಮನಸ್ಸಿನಲ್ಲಿ ಕಳೆದುಹೋದ ಕಾಲಖಂಡಗಳ ಬಗ್ಗೆ ಇರುವ ಹಳಹಳಿಕೆಯ ಭಾವನೆಯು ಓದುಗನನ್ನೂ ಆವರಿಸುತ್ತದೆ. ಇಲ್ಲಿನ ಹಳಹಳಿಕೆಯು ವೈದಿಕ ಪರಿಸರಕ್ಕಾಗಿ ಅಲ್ಲ, ಪ್ರತಿಯೊಬ್ಬನೂ ಕೂಡ ಕೊಳೆದುಕೊಂಡು ಪರಿತಪಿಸುವ ಬಾಲ್ಯ ಹಾಗೂ ಪೂರ್ವತಾರುಣ್ಯಗಳ ಮುಗ್ಧ, ಸರಳ, ಆದರ್ಶಪರ ಮನಃಸ್ಥಿತಿಗಾಗಿ. 'ಕೃಷ್ಣಶಾಸ್ತ್ರಿಯ ತ್ಯಾಗ'ದಂತಹ ಕಥೆಯಲ್ಲಿ ಕಂಡುಬರುವ ತ್ಯಾಗವಾಗಲೀ, 'ಧ್ವಜರಕ್ಷಣೆ'ಯ ಮುಕುಂದನ ದೇಶಭಕ್ತಿಯಾಗಲೀ ಈ ಬಗೆಯದು. ಇಲ್ಲಿನ ಕಥಾಚಿತ್ರಗಳು ಹಲವು ಕಡೆ ಲೇಖಕರ ಚಿಂತನೆಗಳ ಕೋಟನ್ನು ನೇತುಹಾಕುವ ಮೊಳೆಯಾಗಿ ಬಿಡುತ್ತವೆ. ವೆಂಕೋಬರಾಯರು ಕವಿತೆಯೊಂದನ್ನು ಓದಿ ವಿಮರ್ಶಿಸಿದ ಬಗೆಯು ಹೊಸಗನ್ನಡ ಕವಿತೆಯ ಮೌಲಿಕತೆಯನ್ನು ಸ್ಥಾಪಿಸುವ ಸಫಲ ಪ್ರಯತ್ನ ಮಾಡುತ್ತದೆ.

'ಈಚಲ ಮರದ ಕೆಳಗೆ ಮತ್ತು 'ಧೇನುಕ ಪುರಾಣ'ಗಳಲ್ಲಿ ಇನ್ನೊಂದು ಬಗೆಯ ಪ್ರಬಂಧಗಳಿವೆ. ಇಲ್ಲಿ ಮತ್ತೆ ಪು.ತಿ.ನ. ರವರ ಕವಿತೆಗಳ ಹಾಗೆ, ಚಿಂತನಪರತೆಯೇ ಕೇಂದ್ರವಾಗುತ್ತದೆ. 'ಭೀತಿ ಮೀಮಾಂಸೆ, 'ಕವಿಯ ಮೂಲಕ ಒಂದು ದಿನ' ಮುಂತಾದ ಪ್ರಬಂಧಗಳಲ್ಲಿ ಸಾಮಾನ್ಯರಿಗಿಂತ ಭಿನ್ನವಾದ ವಿಚಾರಲಹರಿಯ ಬೆನ್ನು ಹಿಡಿದು, ಹೊಸದೆನಿಸುವ ಜಗತ್ತಿಗೆ ಪ್ರವೇಶ ಕೊಡುವ ಬಗೆಯನ್ನು ಗುರುತಿಸಬಹುದು. ಇಲ್ಲಿನವು ಲಲಿತ ಪ್ರಬಂಧಗಳಿಗೆ ಕೊಂಚ ಭಾರವೆನಿಸಿ, ಗಂಭೀರವಾಗಿ ಬಿಡುತ್ತವೆ. ಈ ಗಾಂಭೀರ್ಯ ಕೂಡ ತಾಳ್ಮೆಯಿಂದ ಓದಿದಾಗ ಪ್ರಬಂಧಕ್ಕೆ ಹೊಸದೊಂದು ಆಯಾಮವನ್ನು ಕೊಡುತ್ತವೆ. 'ರಥಸಪ್ತಮಿ'ಯಲ್ಲಿರುವ ಪ್ರಬಂಧಗಳು 'ಭಾವ'ಚಿತ್ರಗಳಾದರೆ ಈ ಲೇಖನಗಳು 'ಚಿಂತನ' ಚಿತ್ರಗಳು.

'ದೀಪರೇಖೆ'ಯು ಧರ್ಮದ ವಿವಿಧ ನೆಲೆಗಳನ್ನು ಕುರಿತು ಚಿಂತಿಸುವ ಪ್ರಬಂಧಗಳ ಸಂಕಲನ, ಸಂಕೀರ್ಣ ಸ್ವರೂಪದ್ದು. 'ದೇವರು' ಎಂಬ ತಲೆಬರಹದಿಂದ ಹಿಡಿದು 'ಪುರಂದರದಾಸರ ಕೆಲವು ನುಡಿಗಟ್ಟುಗಳು'ವರೆಗೆ ಇಲ್ಲಿನ ಲೇಖನಗಳ ವ್ಯಾಪ್ತಿಯಿದೆ. ತಮ್ಮ ವಿಚಾರಗಳನ್ನು ಸೃಜನಶೀಲ ಕೃತಿಗಳ ಚೌಕಟ್ಟಿನೊಳಗೆ ಹಿಡಿದಿಡುವ ಬಂಧನದಿಂದ ಮುಕ್ತರಾದ ಕವಿ ತಮ್ಮ ವಿಚಾರಗಳನ್ನು ನಿರಾತಂಕವಾಗಿ ಮಂಡಿಸುವುದನ್ನು ಇಲ್ಲಿ ನೋಡಬಹುದು.

* * *

ಪು.ತಿ.ನ. ಅವರ ಸಾಹಿತ್ಯ ತತ್ವ ಮತ್ತು ಕಾವ್ಯಮೀಮಾಂಸೆಗಳನ್ನು ಕುರಿತ ಎರಡು ಕೃತಿಗಳನ್ನು ರಚಿಸಿದ್ದಾರೆ. ಅವು 'ಕಾವ್ಯ ಕುತೂಹಲ'ಮತ್ತು'ರಸಪ್ರಜ್ಞೆ'. ಅವರ ಕಾವ್ಯಮೀಮಾಂಸೆಯು ಅವರ ಕಾವ್ಯ ಸಮರ್ಥನೆಯೂ ಆಗಿದೆಯೆಂದರೆ ಅದು ಆಕ್ಷೇಪಣೆಯ ಮಾತಲ್ಲ. ಏಕೆಂದರೆ ಯಾವುದೇ ಸೃಜನಶೀಲ ಕವಿಯು ರೂಪಿಸುವ ಸಾಹಿತ್ಯ ತತ್ವವು ಅವನ ಬರವಣಿಗೆಯ ಬಗೆಯನ್ನು ಕುರಿತಾದ ವ್ಯಾಖ್ಯಾನವೂ, ಸಮರ್ಥನೆಯೂ ಆಗಿರುವುದು ಅನಿವಾರ್ಯ ಹಾಗೂ ಸಹಜ. ಪು.ತಿ.ನ. ಅವರ ವಿಚಾರವು ಸಾಹಿತ್ಯವನ್ನು ಕುರಿತು ಸಮಕಾಲೀನ ಗ್ರಹಿಕೆಗಳಿಗಿಂತ ವಿಭಿನ್ನವಾಗಿದೆ. ಅವರದು ಭಾರತೀಯ ಕಾವ್ಯಮೀಮಾಂಸೆಯ ವಿಚಾರಗಳಿಂದ ಹಾಗೂ ಆ ವಿಚಾರಗಳಿಗೆ ಲಕ್ಷ್ಯವಾದ ಮಹಾಕಾವ್ಯಗಳಿಂದ ಪ್ರಭಾವಿತವಾದ ಮನಸ್ಸು. ಈಗಾಗಲೇ ಹೇಳಿರುವಂತೆ, ಅವರ ಪ್ರಕಾರ ಸಾಹಿತ್ಯಾನುಭವವು ಚಿತ್ತಶಾಂತಿಯನ್ನು, ಸಮಾಧಾನವನ್ನು ಕೊಡುವುದರ ಮೂಲಕ ಮಾನಸಿಕ ಆರೋಗ್ಯವನ್ನು ಉತ್ತಮಪಡಿಸುವಂತಹುದಾಗಿರಬೇಕೇ ಹೊರತು, ಮನಸ್ಸನ್ನು ಭಾವೋದ್ರಿಕ್ತ ಸ್ಥಿತಿಗೆ ಕರೆದುಕೊಂಡು ಹೋಗಿ, ಅಲ್ಲಿಯೇ ಬಿಟ್ಟುಬಿಡು

ವುದಲ್ಲ. ಈ ಕ್ಷೇತ್ರದಲ್ಲಿ ಇವರಿಗಿರುವ ಪರಿಣತಿ ಮತ್ತು ಹಿನ್ನೆಲೆಯನ್ನು ಶ್ರೀ ಎಸ್. ಎಲ್. ಭೈರಪ್ಪನವರು ತುಂಬಾ ಚೆನ್ನಾಗಿ ಹೇಳುತ್ತಾರೆ.

"ದರ್ಶನ ಶಾಸ್ತ್ರವನ್ನು ಖಚಿತವಾಗಿ ಅಧ್ಯಯನ ಮಾಡಿರುವವರು ವಿಮರ್ಶೆಯ ಮಟ್ಟದಲ್ಲಿ ಬರೆದರೂ ಆ ಬರವಣಿಗೆಗೆ ಮೀಮಾಂಸೆಯ ಅರ್ಥಶಕ್ತಿಯಿರುತ್ತದೆ. ......ಬರೀ ಸಾಹಿತ್ಯವನ್ನಲ್ಲ, ಅವರು ಭಾರತೀಯ ದರ್ಶನ ಶಾಸ್ತ್ರದ ವಿವಿಧ ಪಂಥಗಳನ್ನು ಅಭ್ಯಾಸ ಮಾಡಿದ್ದಾರೆ. ಕಾವ್ಯ ಕ್ರಿಯೆಯು ಸೃಜನಶಕ್ತಿಯ ಯಾವ ಹಂತದಲ್ಲಿ ನಡೆಯುತ್ತದೆ, ನಡೆಯಬೇಕು, ಈ ಹಂತಕ್ಕೂ ಮನುಷ್ಯನ ಉಚ್ಚ ಅನುಭವವು ಮುಟ್ಟುವ ಇತರ ಹಂತಗಳಿಗೂ ಇರುವ ಸೂಕ್ಷ್ಮ ಸಂಬಂಧ ವ್ಯತ್ಯಾಸಗಳೇನು ಎಂಬುದನ್ನು ತಮ್ಮದೇ ಆದ ಧಾಟಿಯಲ್ಲಿ ಆಲೋಚಿಸಿದ್ದಾರೆ. ಸ್ವತಂತ್ರ ವಿಚಾರದ ಚಾಲಕ ಶಕ್ತಿಯಾದ ಕಲ್ಪನಾಶೀಲತೆಯಂತೂ ಈ ಕವಿಗೆ ಸಹಜವಾಗಿಯೇ ಇದೆ. ಪ್ರತಿಯೊಂದು ಕ್ಷಣದಲ್ಲಿಯೂ ಸಂಸ್ಕೃತ ಸಾಹಿತ್ಯ ಪರಂಪರೆಯಿಂದ ತನ್ನನ್ನು ತಾನು ಸ್ವತಂತ್ರಗೊಳಿಸಿಕೊಳ್ಳಲು ಹೊಗುತ್ತಾ, ಆದರೆ ಅದೇ ಪರಂಪರೆಯ ಸತ್ವದಿಂದಲೇ ಬೆಳೆದು ಪರಂಪರೆಯನ್ನು ಮುಂದುವರೆಸುವ ಗುಣವು ಅವರ ಕಾವ್ಯದಲ್ಲಿ ಕಾಣುತ್ತದೆ."[11] ಭೈರಪ್ಪನವರು ಸರಿಯಾಗಿಯೇ ಹೇಳುವಂತೆ ಪು.ತಿ.ನ. ಅವರು ಭಾರತೀಯ ಕಾವ್ಯಮೀಮಾಂಸೆಯ ಮೂಲತತ್ವಗಳಿಗೆ ಸಮ್ಮತಿಯನ್ನು ಸೂಚಿಸಿಯೂ, ಆಧುನಿಕತೆಯ ಅನ್ವೇಷಣೆಯನ್ನು ಸತತವಾಗಿ ನಡೆಸಿದವರು. ಅವರು ಕೊಡಬಯಸುವ ಕಾವ್ಯಾನುಭವವು ರಸಾನುಭವಕ್ಕೆ ಅದರಲ್ಲೂ ಶಾಂತರಸದ ಅನುಭವಕ್ಕೆ ಹತ್ತಿರವಾದುದು. ಎಂ. ಹಿರಿಯಣ್ಣ ನವರು ಇವರ ಗೀತೆಗಳ ಬಗ್ಗೆ ಹೇಳುವ, "ಇವರ ಗೀತೆಗಳ ವಿಶ್ರಾಂತಿ ಸ್ಥಾನವಾದ ಭಕ್ತಿಭಾವ ಅಥವಾ ಶಾಂತರಸಕ್ಕೆ ಉಳಿದ ವರ್ಣನಾತಿ ಶಯಗಳೆಲ್ಲ ಅಂಗವಾಗಿ ಅದನ್ನು ಪರಿಪೋಷಿಸುವುವು. ಹೊರಗಿನ ಆಕಾರದಲ್ಲಿ ಇವರ ಕವಿತೆ ಹಿಂದಿನವರ ಶೈಲಿಗಿಂತ ಭಿನ್ನವಾಗಿದ್ದರೂ ಈ ಭಾವ ಅಥವಾ ರಸದ ಪಾರಮ್ಯದಲ್ಲಿ ಅದು ಅತ್ಯುತ್ತಮವಾದ ಪ್ರಾಚೀನ ಕಾವ್ಯ ಸರಣಿಯನ್ನೇ ಅನುಸರಿಸುವುದು"[12] ಎಂಬ ಮಾತು ಅವರ ಕಾವ್ಯಮೀಮಾಂಸೆಗೂ ಅನ್ವಯಿಸುತ್ತದೆ. ಎಂದರೆ ಪರಿಭಾಷೆ ಬೇರೆಯೇ ವಿನಾ ಪರಿಕಲ್ಪನೆಗಳಲ್ಲ. 'ಭವನಿಮಜ್ಜನ ಚಾತುರ್ಯ', 'ಲಘಿಮಾ ಕೌಶಲ'ಗಳಂತಹ ಮಾತುಗಳಿಂದ ಮೂಡಿಬರುವ ವಿಚಾರಗಳು ಕನ್ನಡ ಕಾವ್ಯಮೀಮಾಂಸೆಯ ಸಂದರ್ಭದ ಮಟ್ಟಿಗೆ ಹೊಸವು. 'ಕಾವ್ಯ ಕುತೂಹಲ'ದ ಹಲವು ಲೇಖನಗಳು 'ರಸೋ ವೈ ಸಃ', 'ತಪೋನಂದನ' ಮುಂತಾದ ಕೃತಿಗಳೊಂದಿಗೆ ಹೆಗಲೆಣೆಯಾಗಿ ನಿಂತು ನವೋದಯದ ಸಾಹಿತ್ಯ ತತ್ವಕ್ಕೆ ತಮ್ಮದೇ ಕಾಣಿಕೆ ನೀಡುತ್ತವೆ. ಸಂಸ್ಕೃತ ಪದ ಬಾಹುಳ್ಯದಿಂದ ಭಾಷೆಯು ಕೊಂಚ ಪೆಡಸೆನಿಸಿದರೂ ಇವನ್ನು ಓದದಿದ್ದರೆ ಆ ಸಂದರ್ಭದ ನಮ್ಮ ತಿಳುವಳಿಕೆ ಪೂರ್ಣವಾಗುವುದಿಲ್ಲ. ಈ ವಿಚಾರಗಳ ಸಂಗ್ರಹವಾದ ನಿರೂಪಣೆಯೂ ಪ್ರಸ್ತುತ ಲೇಖನದ ಸಂದರ್ಭದಲ್ಲಿ ಸಾಧ್ಯವಿಲ್ಲ.

* * *

ಪು.ತಿ.ನ. ಅವರು ಅನುವಾದ ಸಾಹಿತ್ಯಕ್ಕೂ ತಮ್ಮದೇ ಆದ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಗಯಟೆ ಕವಿಯ ಫೌಸ್ಟ್ ಎಂಬ ಮಹಾಕಾವ್ಯದ ಮೊದಲ ಭಾಗ, ಥಾಮಸ್‌ಮನ್ ಬರೆದ ಕಾದಂಬರಿಯ 'ಬದಲಿಸಿದ ತಲೆಗಳು'ಎಂಬ ಅನುವಾದ ಪಾಶ್ಚಾತ್ಯ ಸಾಹಿತ್ಯದಿಂದ ಕನ್ನಡಕ್ಕೆ ಬಂದವು. ಕನ್ನಡ ಭಗವದ್ಗೀತೆ ಮತ್ತು ಮಹಾಪ್ರಸ್ಥಾನ ಸಂಸ್ಕೃತದಿಂದ ಬಂದವು. 'ಸಮಕಾಲೀನ ಭಾರತೀಯ ಸಾಹಿತ್ಯ' ಮತ್ತು 'ನಮ್ಮಾಳ್ವಾರ್' ಎಂಬ ಕೃತಿಗಳನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ನಮ್ಮಾಳ್ವಾರ್ ಅವರ ನೂರು ತಮಿಳು ಸೂಕ್ತಿಗಳ ಕನ್ನಡ ರೂಪ ಸಿರಿಬಾಯನುಡಿ. ಅನುವಾದಕ್ಕಾಗಿ ಆರಿಸಿಕೊಂಡ ಕೃತಿಗಳಲ್ಲೂ ಅನುವಾದಕರ ಮನೋಧರ್ಮ ಜಾಗೃತವಾಗಿದೆ. ಅನುವಾದಗಳು ತೃಪ್ತಿಕರವಾಗಿವೆಯೆಂದು ಹೇಳುವ ಅಧಿಕಾರ ಕೂಡ ನನಗಿಲ್ಲ. ಅದರ ಬಗೆಗಿನ ಚರ್ಚೆಯನ್ನು 'ಮೂಲ'ಗಳ ಮೇಲೆ ಪ್ರಭುತ್ವವಿರುವವರು ಮಾತ್ರ ಮಾಡಬೇಕು.

ಇದುವರೆಗೆ ಮಾಡಿದ್ದು ಈ ಹಿರಿಯರ ಸಮಗ್ರ ಸಾಹಿತ್ಯ ಸೃಷ್ಟಿಯ ಅತಿಸ್ಥೂಲ ಪರಿಚಯ. ಇಲ್ಲಿಯೂ ನಾನು ಮಾಹಿತಿಗಳನ್ನು, ಕಥಾಸಾರಾಂಶವನ್ನು ಒದಗಿಸುವುದಕ್ಕಿಂತ ಹೆಚ್ಚಾಗಿ ವ್ಯಾಖ್ಯಾನ, ವಿಮರ್ಶೆಗಳಿಗೆ ಹೆಚ್ಚು ಮಹತ್ವ ಕೊಟ್ಟಿದ್ದೇನೆ. ಪು.ತಿ.ನ. ಅವರ ಕೃತಿಗಳ ಅಧ್ಯಯನ ಪೂರ್ವ ಪೀಠಿಕೆಯಾಗಿಯೋ ಅಥವಾ ಅಂತಹ ಅಧ್ಯಯನದ ನಂತರ ಓದಿಗಾಗಿಯೋ ನನ್ನ ಲೇಖನವನ್ನು ಬಳಸಬಹುದೇ ವಿನಾ ಆ ಅಧ್ಯಯನದ ಬದಲಾಗಿ ಅಲ್ಲ. ಅವರ ಸೃಜಲಶೀಲ ಕೃತಿಗಳು ಕೊಡುವ ಆನಂದವನ್ನು ತೃಪ್ತಿಯನ್ನು ವಿಮರ್ಶಾಲೇಖನಗಳು, ಪರಿಚಯಗಳು ಹೇಗೆ ತಾನೇ ಕೊಡಬಲ್ಲವು?

## 3

ಈ ಕೊನೆಯ ಭಾಗದಲ್ಲಿ ಪುನರುಕ್ತಿಯ ಆಕ್ಷೇಪಣೆಗೆ ಅವಕಾಶ ಮಾಡಿಕೊಟ್ಟರೂ ಪರವಾಗಿಲ್ಲವೆಂದುಕೊಂಡು, ಪು.ತಿ.ನ. ಅವರ ಸಾಧನೆ ಮತ್ತು ಸಮಕಾಲೀನ ಮಹತ್ವವನ್ನು ಕುರಿತು ಕೆಲವು ನಿರ್ಣಯಾತ್ಮಕವಾದ ಮಾತುಗಳನ್ನು ಮಂಡಿಸುತ್ತೇನೆ.

ದಿನದಿಂದ ದಿನಕ್ಕೆ ವಿದ್ಯಾವಂತರ ಸಂಖ್ಯೆಯು ಹೆಚ್ಚುತ್ತಿದ್ದರೂ, ಗಂಭೀರವಾದ ಸಾಹಿತ್ಯದಲ್ಲಿ, ಅದರಲ್ಲೂ ಪು.ತಿ.ನ.ರವರಂತಹ ನಮ್ಮದೇ ಆದರೂ ನಮಗೆ 'ಅನ್ಯ'ವೆನಿಸುವ ಬರವಣಿಗೆಯಲ್ಲಿ ಆಸಕ್ತಿ ತೋರಿಸುವವರ ವಲಯವು ಸಂಕುಚಿತವಾಗುತ್ತಾ ಬಂದಿದೆ. ಈ ರೀತಿಯ ಅನಾದರಕ್ಕೆ ಕಾರಣವಾದ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಸಂಗತಿಗಳ ಪರಿಶೀಲನೆಯು ಕುತೂಹಲಕಾರಿಯಾದುದು. ನಮ್ಮ 'ಇಂದಿನ' ಜೀವನವು ಹೊರಗಿನ ಪ್ರಭಾವಗಳಿಗೆ ಒಳಗಾಗುತ್ತಿರುವ ತೀವ್ರತೆಯ ಮೂಲಕ ನಾವು ಗತಕಾಲದೊಂದಿಗಿನ ಸಂಬಂಧದ ಕೆಲವು ಎಳೆಗಳನ್ನು ಕಡಿದುಕೊಳ್ಳುವಂತೆ ಆಗಿದೆ. ಆದ್ದರಿಂದ ಈ ಕವಿಯು ಮೊದಲ ಪೂರ್ವಾಗ್ರಹ ಪೀಡಿತ ಮನಸ್ಸಿಗೆ ಅಪ್ರಸ್ತುತರಾಗಿ ತೋರಬಹುದು. ಆದರೆ ಈ ಅಪ್ರಸ್ತುತತೆಯು ಕೇವಲ ತೋರಿಕೆಯು ಮಾತ್ರ. ಏಕೆಂದರೆ ಈ ಕವಿಯ ಗದ್ಯ-ಪದ್ಯಗಳನ್ನು ಎಚ್ಚರಿಕೆಯನ್ನು ಓದಿದವರಿಗೆ, ಇವರ ಮನಸ್ಸು ಸಮಸ್ತ ವೈಜ್ಞಾನಿಕ ಪ್ರಗತಿಯನ್ನು ತನ್ನ ಗ್ರಹಿಕೆಯೊಳಗೆ ತೆಗೆದುಕೊಳ್ಳುವಷ್ಟು ಆಧುನಿಕ ವಾಗಿರುವುದು ಗೊತ್ತಾಗುತ್ತದೆ. ಆದರೆ ಆಧುನಿಕವಾದುದನ್ನು ಪ್ರಾಚೀನ ತಿಳಿವಳಿಕೆಯ ಒರೆಗಲ್ಲಿನಲ್ಲಿ ಪರೀಕ್ಷಿಸುವ ಪ್ರಯತ್ನವನ್ನು ಇವರು ಮಾಡುತ್ತಾರೆ. ಕಳೆದ ಎರಡು ದಶಕಗಳಲ್ಲಿ ಓರಿಯೆಂಟಲ್ ಆದ ಚಿಂತನೆಗೆ ಪಾಶ್ಚಾತ್ಯ ಬುದ್ಧಿಜೀವಿಗಳು ಕೊಡುತ್ತಿರುವ ಮಹತ್ವವನ್ನು ಅರಿತಿರುವವರಿಗೆ ಪು.ತಿ.ನ. ಅವರ ಔಚಿತ್ಯ ತಕ್ಷಣ ಗೋಚರಿಸುತ್ತದೆ.

ತಾನು ರೂಪಿಸಿಕೊಂಡಿರುವ ಮಹತ್ವದ ಮೌಲ್ಯಗಳು ಪೀಳಿಗೆಯಿಂದ ಪೀಳಿಗೆಗೆ ಹರಿದು ಬರಲೆಂದು, ಒಂದು ಸಂಸ್ಕೃತಿಯು ಕೆಲವು ಬಹಿರಂಗದ ಪರಿಕರಗಳನ್ನು ರೂಪಿಸಿಕೊಂಡಿರುತ್ತದೆ. ಹಬ್ಬ-ಹುಂದಿನ-ಉತ್ಸವಗಳ ಆಚರಣೆಯಿಂದ ಹಿಡಿದು ಪುರಾಣ, ಸಂಗೀತ, ಶಿಲ್ಪ, ಸಾಹಿತ್ಯಗಳವರೆಗೆ ಹಲವು ಅಂಶಗಳು ಇಂತಹ ಪರಿಕರಗಳಾಗಿ ಕೆಲಸಮಾಡುತ್ತವೆ. ಇಂತಹ ಪರಿಕರಗಳು ಇಲ್ಲವಾದರೆ ಆ ಸಂಸ್ಕೃತಿಯ ಸ್ರೋತವೇ ಕತ್ತರಿಸುತ್ತದೆ. ಈ ರೀತಿಯಾಗುವುದರ ಬಗೆಗೆ ಹಳಹಳಿಕೆ ಅನಗತ್ಯ. ಅಂತಹ ಬದಲಾವಣೆಯು ಎಷ್ಟೋ ಅಂಶಗಳಲ್ಲಿ ಆರೋಗ್ಯಕರವೂ, ಅಪೇಕ್ಷಣೀಯವೂ ಆಗಿರಬಹುದು. ಆದರೆ ಹಾಗೆ ಮುಂದುವರಿಯದೆ ಹೋದ ಸಾಮಾಗ್ರಿಗಳ ಮಹಾ

ಉಗ್ರಾಣವಾಗಿ ಸಾಹಿತ್ಯವು ಕೆಲಸ ಮಾಡುತ್ತದೆ. ಪು.ತಿ.ನ. ರವರ ಸಾಹಿತ್ಯವು ಇಂತಹ ಹೊಣೆಗಾರಿಕೆಯನ್ನು ನಿರ್ವಹಿಸುತ್ತಿರುವುದರಿಂದಲೇ, ನಮ್ಮ ನೆನ್ನೆಗಳ ಜೊತೆಗಿನ ಕೊಂಡಿಯಾಗಿ ಮಹತ್ವಪೂರ್ಣವಾಗಿದೆ.

ಅಂದಿನ ಮನುಷ್ಯ, ಇಂದಿನ ಮನುಷ್ಯ ಎಂಬ ಅಂತರವಿಲ್ಲದೆ ಎಲ್ಲ ಕಾಲದ ಮನುಷ್ಯರಿಗೂ ಪ್ರಸ್ತುತವಾದ ಅಂತರಂಗದ ತಲ್ಲಣಗಳನ್ನು ಮಂಡಿಸುವುದರ ಸಂಗಡವೇ, ಅವುಗಳ ಪರಿಹಾರವನ್ನು ಕುರಿತೂ ಚಿಂತಿಸುವುದರಿಂದ ಇವರ ಬರವಣಿಗೆಗೆ ತಾತ್ವಿಕವಾದ ಮಹತ್ವವಿದೆ.

ಇವೆಲ್ಲಕ್ಕಿಂತ ಹೆಚ್ಚಾಗಿ, ಭಾಷೆಯನ್ನು ಮಾಧ್ಯಮವಾಗಿ ಬಳಸಿಕೊಳ್ಳುವ ಕಲೆಯಾದ ಸಾಹಿತ್ಯವನ್ನು ಮಾತ್ರ ಪರಿಗಣಿಸಿದಾಗಲೂ ಪು.ತಿ.ನ. ಅವರ ಹಲವು ಕೃತಿಗಳು ಕಾಲದ ಪರೀಕ್ಷೆಯಲ್ಲಿ ಗೆಲ್ಲುತ್ತವೆ. ಕನ್ನಡ ಸಾಹಿತ್ಯದ ನಿರ್ಮಾಪಕರ ಸರಣಿಯಲ್ಲಿ ಶ್ರೀ ಪು.ತಿ. ನರಸಿಂಹಾಚಾರ್ ಅವರಿಗೆ ಮಹತ್ವದ ಸ್ಥಾನವೊಂದು ಮೀಸಲಾಗಿದೆಯೆನ್ನುವುದು ನಿರ್ವಿವಾದ ಸಂಗತಿ.

### ಆಧಾರ ಗ್ರಂಥ ಸೂಚಿ


1. ಪು.ತಿ.ನ. ಅವರ ಸಮಗ್ರ ಕೃತಿಗಳು.
2. ಯದುಗಿರಿ: ಪು.ತಿ.ನ. ಅಭಿನಂದನ ಗ್ರಂಥ
3. ಪು.ತಿ.ನರಸಿಂಹಾಚಾರ್ (ಜೀವನ ಚರಿತ್ರೆ): ಸು.ರಂ. ಎಕ್ಕುಂಡಿ
4. ಯದುಗಿರಿಯ ವೀಣೆ: ಪು.ತಿ.ನ. ಅವರನ್ನು ಕುರಿತ ಕವನ ಸಂಕಲನ.
5. ಕನ್ನಡ ನಾಟಕ ಸಮೀಕ್ಷೆ: ಡಾ. ಕೆ. ಮರುಳಸಿದ್ದಪ್ಪ.
6. ಗತಿಬಿಂಬ: ಡಾ. ಜಿ.ಎಸ್. ಶಿವರುದ್ರಪ್ಪ.
7. ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಪ್ರಭಾವ: ಎಸ್.ಅನಂತನಾರಾಯಣ
8. ಪು.ತಿ.ನ: ಅಪ್ರಕಟಿತ ಲೇಖನ: ಎಚ್.ಎಸ್. ವೆಂಕಟೇಶ ಮೂರ್ತಿ.


❑

1. ಮುನ್ನುಡಿ (ಪುತಿನ–ಸಮೀಪದೃಷ್ಟಿ) : ಗೊರೂರು ರಾಮಸ್ವಾಮಿ ಅಯ್ಯಂಗಾರ್ ; ಯದುಗಿರಿಯ ವೀಣೆ : 1973
2. ಕಾವ್ಯಕುತೂಹಲ : 1966 ; ಪು. 158.
3. ಯದುಗಿರಿ : 1981 ; ಪು. 622.
4. ಯದುಗಿರಿಯ ವೀಣೆ : 1981 : ಪು. 28
5. ರಸಸರಸ್ವತಿ : 1954 : ಪು. 40.
6. ಯದುಗಿರಿ : 1981 ; ಪು. 628.
7. ಇರುಳ ಮೆರುಗು ; 1974 : ಪುಟ vi
8. ಸಮಕಾಲೀನ ಕನ್ನಡ ಕವಿತೆ - ಭಾಗ 1 : ಪು. 14.
9. ಗತಿಬಿಂಬ : ಜಿ.ಎಸ್. ಶಿವರುದ್ರಪ್ಪ ; ಪು. 83.
10. ಕನ್ನಡ ನಾಟಕ ಸಮೀಕ್ಷೆ :1986 : ಕೆ. ಮರುಳಸಿದ್ಧಪ್ಪ : ಪು.63
11. ಯದುಗಿರಿ: 1981: ಪು. 74
12. ಮಾಂದಳಿರು: 1936: ಪು. 5-6

# ರಾ.ಶಿ.

ಅನುಪಮಾ ನಿರಂಜನ

ವೃತ್ತಿಯಲ್ಲಿ ವೈದ್ಯರಾದ ಡಾ. ಎಂ. ಶಿವರಾಂ ಪ್ರವೃತ್ತಿಯಲ್ಲಿ ಲೇಖಕರಾಗಿ ರಾ.ಶಿ. ಎಂಬ ಕಾವ್ಯನಾಮವನ್ನು ಇರಿಸಿಕೊಂಡರು. ತಮ್ಮ ಹೆಸರಿನ ಎರಡು ಪದಗಳ ಪ್ರಥಮಾಕ್ಷರಗಳನ್ನು ತಿರುವು ಮುರುವು ಮಾಡಿ 'ರಾ.ಶಿ.' ಎಂದಿಟ್ಟುಕೊಂಡೆ, ಎಂಬುದು ಅವರದೇ ಹೇಳಿಕೆ.

ನಗಲು ಬರದೆ ಮುಗುಮ್ಮಾಗಿ ಕುಳಿತಿದ್ದ ಕನ್ನಡಿಗರಿಗೆ ನಗಲು ಕಲಿಸಿಕೊಟ್ಟವರು ರಾಶಿ, ತಮ್ಮ 'ಕೊರವಂಜಿ' ಮಾಸಪತ್ರಿಕೆಯ ಮುಖಾಂತರ. ತಮ್ಮ ವೈದ್ಯಕೀಯ ವೃತ್ತಿಯಲ್ಲಿ ರೋಗಿಗಳ ದೈಹಿಕ ಬಾಧೆಗಳಿಗೆ ಔಷಧಿ ಕೊಡುವಾಗ, ಅನೇಕ ಕಾಹಿಲೆಗಳ ಮೂಲ ಮಾನಸಿಕವಾದದ್ದು ಎಂಬುದನ್ನು ಅರಿತು ಮನಃಶಾಸ್ತ್ರ ಅಭ್ಯಸಿಸಿದರು. ಮನಸ್ಸಿನ ಮೂಲವನ್ನು ಹುಡುಕುತ್ತಾ ಹೊರಟ ಅವರಿಗೆ ಜರಾಮರಣ ಭೀತಿಯನ್ನು ತೊರೆಯುವ 'ಆನಂದ'ದ ಅನ್ವೇಷಣೆಯೂ ಮುಖ್ಯವಾಯಿತು. ಈ ದಿಸೆಯಲ್ಲಿ ಅವರು ತತ್ವಶಾಸ್ತ್ರ (Philosophy), ಉಪನಿಷತ್ತು ಮತ್ತು ಭಗವದ್ಗೀತೆಯ ವಿಪುಲ ಅಧ್ಯಯನ ವನ್ನು ಮಾಡಿದರು. ಹೀಗೆ ಜ್ಞಾನಿ ಮತ್ತು ಚಿಂತನಕಾರ ಎಂಬ ಹೆಗ್ಗಳಿಕೆಗೂ ಅವರು ಪಾತ್ರರಾದರು.

ಜೀವನದಲ್ಲಿ ಪ್ರತಿಯೊಂದನ್ನು ತಿಳಿಯಬೇಕು ಎನ್ನುವ ಅವರ ಕುತೂಹಲ ಅನನ್ಯವಾದದ್ದು. ಒಬ್ಬ ಕೂಲಿಕಾರನಿಂದ ಹಿಡಿದು ಸಿನಿಮಾತಾರೆ ಯವರೆಗೂ ಅವರ ಆಸಕ್ತಿಯ ವಲಯ ಹಬ್ಬಿತ್ತು. ಪ್ರತಿಯೊಬ್ಬರ ಬದುಕಿನಿಂದಲೂ ಅವರು ಪಾಠಗಳನ್ನು ಕಲಿಯುತ್ತಿದ್ದರು, ನಮ್ರತೆಯಿಂದ. ಅಪಾರ ಅರಿವಿನ ಖನಿಯಾಗಿದ್ದರೂ ಅಹಂಕಾರದಲ್ಲೂ ಸೋಂಕಿರಲಿಲ್ಲ. ಅವರ ನಡೆನುಡಿ, ಬರಹಗಳಲ್ಲಿ ಪ್ರಧಾನ ಸ್ರೋತವಾದದ್ದು ಅನುಕಂಪ. ಬೆಂಗಳೂರು ಮೆಡಿಕಲ್ ಕಾಲೇಜಿನ ಉಗಮಕ್ಕೆ ಅವರು ಮುಖ್ಯ ಕಾರಣರು. ಡಾ.ಎಂ.ಶಿವರಾಂ ಕಿರ್ಲೋಸ್ಕರ್ ಕಂಪನಿಯ ನಿರ್ದೇಶಕ ಮಂಡಲಿ ಯಲ್ಲಿದ್ದರು. ಎಂ.ಐ.ಟಿ.ಎಲ್. ಕಂಪನಿಯ ಕಾರ್ಯನಿರ್ವಾಹಕ ನಿರ್ದೇಶ ಕರೂ ಆಗಿದ್ದುದೊಂದು ವಿಶೇಷ. ಅವರ ಸ್ನೇಹಿತರಲ್ಲಿ ಸಾಹಿತಿಗಳಿದ್ದರು, ವಿಜ್ಞಾನಿಗಳಿದ್ದರು, ಚಿಂತನಕಾರರಿದ್ದರು, ಈ ಹಿನ್ನೆಲೆಯೇ ಅವರ ಬಹುಮುಖ ವ್ಯಕ್ತಿತ್ವಕ್ಕೆ ಮೂಲ.

### ವೈವಿಧ್ಯಮಯ ವ್ಯಕ್ತಿತ್ವ

ರಾಶಿಯವರದು ಎತ್ತರದ ದುಂಡುದೇಹ. ಚಿನ್ನದ ಮೈ ಬಣ್ಣ. ದುಂಡು ಮುಖದಲ್ಲಿ ಪ್ರಾಮುಖ್ಯವಾಗಿ ಕಾಣುತ್ತಿದ್ದುದು ದಟ್ಟವಾಗಿದ್ದ ಹುಬ್ಬುಗಳು. ಮೊದಲ ನೋಟಕ್ಕೆ ಗಡುಸು ಭಾವ ಎನಿಸಿದರೂ ಅವರ ಅಂತಃಕರಣ ಮಾತ್ರ ತಿಳಿಗೊಳದಂತೆ ನಿರ್ಮಲ. ಕಣ್ಣನೋಟ ಕಂಡುದ್ದೆಲ್ಲವನ್ನೂ ಅಚ್ಚುಕಟ್ಟಾಗಿ ದಾಖಲೆ ಮಾಡಿಕೊಳ್ಳುವಷ್ಟು ಸೂಕ್ಷ್ಮ. ನಡಿಗೆಯಲ್ಲಿ ಗತ್ತು ಗಮ್ಮತ್ತು. ತಮ್ಮ ಮುಖವನ್ನು 'ಗೋರಿಲ್ಲಾ ಮುಖ' ಎಂದೂ, ಹುಬ್ಬುಗಳನ್ನು 'ಕಂಬಳಿಹುಳುಗಳು' ಎಂದೂ ರಾಶಿ ತಮ್ಮನ್ನು ತಾವೇ ಗೇಲಿ ಮಾಡಿಕೊಂಡ ದ್ದುಂಟು. ಇಂಥ ನಗೆಯೇ ಅವರ ವೈಶಿಷ್ಟ್ಯ. ಹಾಸ್ಯ ನವಿರು. ಆದರೆ ಅಷ್ಟೇ ಚುರುಕು ಮುಟ್ಟಿಸುವಂಥದು. ಅವರು ಇದ್ದೆಡೆಯಲ್ಲೆಲ್ಲಾ ತಿಳಿನಗು ಕಾರಂಜಿಯ ಹಾಗೆ ಚಿಮ್ಮುತ್ತಿತ್ತು. ಮಾತು ಮಾತಿಗೆ 'ಜೋಕು'ಗಳು, ಇವಕ್ಕಾಗಿ ಅವರು ತಿಣುಕುತ್ತಿರಲಿಲ್ಲ. ಅತ್ಯಂತ ಸ್ವಾಭಾವಿಕವಾದ ಅಷ್ಟೇ ಸಲೀಸಾಗಿ ಹಾಸ್ಯ ಧುಮುಕುತ್ತಿತ್ತು.

ವೈದ್ಯರಾದ ಡಾ. ಶಿವರಾಂ ತಮ್ಮ ರೋಗಿಗಳಿಗೆ ಅತ್ಯಂತ ಆಪ್ತರು. ರೋಗಿ ಯಾವ ವಯಸ್ಸಿನವನೇ ಇರಲಿ, ಕೆಲವೇ ನಿಮಿಷಗಳಲ್ಲಿ ಅವನ ಅಂತರಂಗ ಅವರಿಗೆ ತಿಳಿಯುತ್ತಿತ್ತು. ರೋಗ ಪತ್ತೆ ಹಚ್ಚುವುದರಲ್ಲಿ ಅವರು ನಿಷ್ಣಾತರು. ಕರಾರುವಾಕ್ಕಾಗಿ ಚಿಕಿತ್ಸೆ, ಜೊತೆಗೆ ನಗೆಯ ಮದ್ದು. ಆದ್ದರಿಂದಲೇ ಅವರು ಹೇಳಿದ್ದು: "ವೈದ್ಯ ದಿಟವಾಗಿ ರೋಗಿಗಳ ಸ್ನೇಹಿತ, ಮಾರ್ಗದರ್ಶಿ, ತಾತ್ವಿಕಗುರು, ಈ ಧ್ಯೇಯವೇ ವೈದ್ಯರಿಗೆ ಬಾಳಬೆಳಕಾಗಿರುವುದು...." (ಮನೋನಂದನ)

ಸಾಹಿತಿಗಳ ಬಗ್ಗೆ ಅಪಾರಗೌರವ. ಸಾಹಿತ್ಯಕ ಮಿತ್ರರಿಗೆ ವಯಸ್ಸಿನ ಅಂತರವಿರಲಿಲ್ಲ. ಕಿರಿಯ ವಯಸ್ಸಿನವರು ಅಪರೂಪದ ಕೃತಿ ರಚಿಸಿದರೆ ತುಂಬು ಮನಸ್ಸಿನಿಂದ ಪ್ರಶಂಸಿಸುತ್ತಿದ್ದರು. ಅಸೂಯೆಯ ಲವಲೇಶವೂ ಅವರಿಗೆ ಇರಲಿಲ್ಲ. ಅವರೊಂದಿಗಿನ ಮಾತು ಯಾವಾಗಲೂ ಚೇತೋಹಾರಿ, ಯಾಕೆಂದರೆ ಅವರು 'ಓಡಾಡುವ ವಿಶ್ವಕೋಶ'ವಾಗಿದ್ದರು. ಯಾರೇ ಆಗಲಿ ಅವರ ಬಳಿ ಯಾವ ಸಮಸ್ಯೆಯನ್ನೂ ತೆಗೆದುಕೊಂಡು ಹೋದರೂ ಅದನ್ನು ಅತ್ಯಂತ ಸಹಾನುಭೂತಿಯಿಂದ ಕೇಳಿ ಅದಕ್ಕೆ ಸಹೃದಯತೆಯಿಂದ ಪರಿಹಾರ ಸೂಚಿಸುತ್ತಿದ್ದರು.

ಮಕ್ಕಳನ್ನು ರಾಶಿಯವರು ಅಯಸ್ಕಾಂತದಂತೆ ಆಕರ್ಷಿಸುತ್ತಿದ್ದರು. ಮೊದಲ ನೋಟಕ್ಕೆ ಅವರನ್ನು ಕಂಡು ಮಕ್ಕಳು ಹೆದರಿದರೂ ಕೆಲವೇ ಕ್ಷಣಗಳಲ್ಲಿ ಅವರ ಆಪ್ತರಾಗಿ ಬಿಡುತ್ತಿದ್ದರು. ರಾಶಿಯವರು ಹೇಳುತ್ತಿದ್ದ, ದೆವ್ವ, ಪಿಶಾಚಿ, ಕಳ್ಳರ ಕತೆಗಳು ಮಕ್ಕಳ ಮನಸ್ಸನ್ನು ಸೂರೆ ಹೊಡೆದರೆ ಅವರ ಹತ್ತಿರವಿರುತ್ತಿದ್ದ ಪೆಪ್ಪರ್‌ಮಿಂಟ್‌ಗಳು ಬಾಯನ್ನು ಸಿಹಿ ಮಾಡು ತ್ತಿದ್ದವು.

### ನಾಗಾಲ್ಯಾಂಡಿನ ನಾಯಕ

ರಾಶಿಯವರದು ತುಂಬು ಸಂಸಾರ. ಧರ್ಮಪತ್ನಿ ನಾಗಮ್ಮನವರು (ತಮ್ಮ ಮನೆಯನ್ನು ನಾಗಾಲ್ಯಾಂಡ್ ಎಂದು ತಮಾಷೆಯಾಗಿ ಕರೆಯುತ್ತಿದ್ದರು ರಾಶಿ). ಶಿವಕುಮಾರ್, ಓಂಪ್ರಕಾಶ್, ರಾಮಸ್ವಾಮಿ ಗಂಡು ಮಕ್ಕಳು:ವಿಮಲಾ, ಕಮಲಾ, ಲೀಲಾ ಮುದ್ದಿನ ಹೆಣ್ಣು ಮಕ್ಕಳು. ಮನೆಗೆ ಬಂದವರಿಗೆಲ್ಲಾ ಊಟ ತಿಂಡಿಗಳ ಉಪಚಾರವಾಗುತ್ತಿತ್ತು. ಅಡುಗೆ ಅಚ್ಚುಕಟ್ಟಾಗಿರಬೇಕೆಂದು ಅವರು ಬಯಸುತ್ತಿದ್ದರು. ಬೋಂಡಾ, ಹುರಿಗಾಳು ಕಂಡರೆ ಅವರಿಗೆ ಬಲು ಪ್ರೀತಿ. ಉಡುಪಿನ ವಿಷಯದಲ್ಲಿ ಅವರು ಟಾಕೋ ಠೀಕು. ತಾವು ಮನನ ಮಾಡುತ್ತಿದ್ದ ವಿಚಾರಗಳ ಬಗ್ಗೆ ಕೆಲವೊಮ್ಮೆ "ಈ ಬಗ್ಗೆ ನೀನೇನು ಹೇಳುತ್ತಿ?" ಎಂದು ಮಕ್ಕಳನ್ನೇ ಕೇಳುವಷ್ಟು ಸಹೃದಯರು. ಒಮ್ಮೆ ಡಿ.ವಿ.ಜಿ. ಅವರನ್ನು ಕಂಡು ಬಂದ ಅವರ ಮಗಳು "ಡಿ.ವಿ.ಜಿ. ನಿಮ್ಮನ್ನು ತುಂಬಾ ಕೇಳಿದರು", ಎಂದು ಹೇಳಿದಾಗ ರಾಶಿ "ಎಷ್ಟಕ್ಕೆ?" ಎಂದು ಚಟಾಕಿ ಹಾರಿಸಿದರು.

ಇನ್ನೊಮ್ಮೆ ಹೆಂಡತಿ ತೌರಿಗೆ ಹೊರಟಿದ್ದಾಗ "ಮನೆಕಡೆ ಯೋಚ್ನೆ ಮಾಡಬೇಡ, ನಾನೂ ಹೆಣ್ಣು ಮಕ್ಕಳೂ ಸೇರ್‍ಕೊಂಡು ಅಡುಗೆ ಮಾಡ್ಕೋ ತೀವಿ, ಆದ್ರೆ ಕೂದಲು ಯಾವಾಗ ಹಾಕ್ಬೇಕು ಅನ್ನೋದನ್ನ ಹೇಳಿಹೋಗು" ಎಂದಿದ್ದರು.

ಡಾ. ಶಿವರಾಂ ಒಬ್ಬ ವಿಜ್ಞಾನಿಯೊಡನೆ ಗಹನ ಚರ್ಚೆ ಮಾಡಬಲ್ಲವ ರಾಗಿದ್ದರು. ಸಾಹಿತಿಗಳ ಜೊತೆ ಅಷ್ಟೇ ಸಲೀಸಾಗಿ ಪ್ರಪಂಚದ ಎಲ್ಲ ದೇಶಗಳ ಸಾಹಿತ್ಯದ ಬಗ್ಗೆ ಮಾತಾಡಲು ಶಕ್ತರಾಗಿದ್ದರು. ಆದರೆ ಮಗುವೊಂದನ್ನು ಕಂಡಾಗ ಲಲ್ಲೆ ಹೊಡೆಯಲು ಅವರು ಸಿದ್ಧರು. ಇಂಥ ಅಪರೂಪದ ಗುಣಗಳೇ ಅವರು ಅಪೂರ್ವ ವ್ಯಕ್ತಿ ಎನಿಸಿಕೊಳ್ಳಲು ಕಾರಣವಾದವು.

### ಕನ್ನಡಕ್ಕೊಬ್ಬಳೆ 'ಕೊರವಂಜಿ'

ರಾಶಿ ಎಂದ ಕೂಡಲೇ ಮೊದಲು ನಮ್ಮ ಕಣ್ಣ ಮುಂದೆ ನಿಲ್ಲುವ ಚಿತ್ರ 'ಕೊರವಂಜಿ'ಯದು. ಅದು ಹುಟ್ಟಿದ್ದು ಹೇಗೆ?

ಡಾ. ಶಿವರಾಂ ಅವರು ಸೆಂಟ್ರಲ್ ಕಾಲೇಜಿನಲ್ಲಿ ಬಿ. ಎ. ಓದುತ್ತಿದ್ದಾಗ ಬಿಡುವಿನ ವೇಳೆಯನ್ನು ವಾಚನಾಲಯದಲ್ಲಿ ಕಳೆಯುತ್ತಿದ್ದರು, ಹೋಟೆಲಿಗೆ ಹೋಗಲು ಹಣವಿಲ್ಲದೆ. ಅಲ್ಲಿ ಇಂಗ್ಲಿಷಿನ ಹಾಸ್ಯಪತ್ರಿಕೆ 'ಪಂಚ್' ಸಾಪ್ತಾಹಿಕ ಅವರಿಗೆ ಬಲುಪ್ರಿಯವಾಯಿತು. ಆ ಪತ್ರಿಕೆಯಲ್ಲಿ ಸಮಕಾಲೀನ ಜೀವನದ ವಿಶ್ಲೇಷಣೆಯನ್ನು ಕಟಕಿ, ವ್ಯಂಗ್ಯ ಮತ್ತು ಚತುರೋಕ್ತಿಗಳಿಂದ ಮಾಡುವ ರೀತಿ ಅವರಿಗೆ ಮೆಚ್ಚುಗೆಯಾದುದರಿಂದ ಅದನ್ನು ತಮ್ಮ ಸಂಭಾಷಣೆಗಳಲ್ಲಿ ಅಳವಡಿಸಿಕೊಂಡರು. ಮುಂದೆ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದಾಗ ಬಾಹ್ಯಜೀವನದಲ್ಲಿ ಅವರಿಗೆ ಕೈಲಾಸಂರ ಪರಿಚಯವಾಯಿತು.

"ಕೈಲಾಸಂ ಅವರ ಉಜ್ವಲ ಕಲ್ಪನೆಗಳ ಮತ್ತು ಅವರು ಅದನ್ನು ಅಭಿವ್ಯಕ್ತಿಸುವ ರೀತಿ ನನ್ನನ್ನು ದಂಗುಬಡಿಸಿತು. ವೈಯಕ್ತಿಕ ಜೀವನದಲ್ಲಿ ಮಾತ್ರವಲ್ಲ ಸಾಮಾಜಿಕ ಜೀವನದಲ್ಲೂ ಹಾಸ್ಯ ಶುಚೀಕರಣ ಶಕ್ತಿಯುಳ್ಳದ್ದು. ಇದು ಒಳಗಿನದನ್ನು ಹೆಚ್ಚು ನಿಚ್ಚಳವಾಗಿ ತಿಳಿಯಲು ಸಹಾಯ ಮಾಡುವಂಥದು. ನಾನು ಅರಿತಿರುವ ವಿಶಾಲ ಪ್ರಜ್ಞೆಯ ಬಹುಭಾಗ ನಾನು ಕೈಲಾಸಂ ಅವರಿಂದ ಪಡೆದದ್ದು" (ಕೈಲಾಸಂ ಅಂಡ್ ಐ).

ರಾಶಿಯವರ ಮಾತುಗಳು ಲವಲವಿಕೆಯಿಂದಲೂ ಚತುರೋಕ್ತಿ ಮತ್ತು ಹಾಸ್ಯಗಳಿಂದಲೂ ಕೂಡಿರುತ್ತಿದ್ದುದನ್ನು ಗಮನಿಸಿದ ಅವರ ಮಿತ್ರರು, "ಇವನ್ನೆಲ್ಲಾ ಬರೆಯಬಾರದೇಕೆ?" ಎಂದು ಪ್ರಚೋದಿಸುತ್ತಿದ್ದರು. ಕೈಲಾಸಂ ಮತ್ತು ನಾ. ಕಸ್ತೂರಿಯವರ ಸ್ನೇಹದಲ್ಲಿ ರಾಶಿ ಕನ್ನಡ ಸಾಹಿತ್ಯಕ್ಕೆ ಹೊಸತೊಂದು ಆಯಾಮ ನೀಡಿದರು, ಕನ್ನಡದ ಹಾಸ್ಯ ಪತ್ರಿಕೆ 'ಕೊರವಂಜಿ'ಯನ್ನು ಆರಂಭಿಸುವುದರ ಮೂಲಕ.

"I owed my ಕೊರವಂಜಿ to Kailasam" ಎಂದು ರಾಶಿಯವರೇ ಒಂದು ಸಂದರ್ಭದಲ್ಲಿ ಹೇಳಿದ್ದಾರೆ.

ಕೊರವಂಜಿ ಪತ್ರಿಕೆಯ ಉದ್ದೇಶ ಹೀಗಿತ್ತು:

"ವಾರ್ತೆ ಮತ್ತು ಘಟನೆಗಳನ್ನು ತಿಳಿಹಾಸ್ಯದ ಹಿನ್ನೆಲೆಯಲ್ಲಿ ಕಣಿ ಹೇಳುವಂತೆ ವರದಿ ಮಾಡುವುದೇ ಈ ಪತ್ರಿಕೆಯ ಗುರಿಯಾಗಿತ್ತು. ಕಣಿ ಹೇಳಲು ಕನ್ನಡ ಸಾಹಿತ್ಯದ ನಾನಾ ಪ್ರಕಾರಗಳನ್ನು ಬಳಸಿಕೊಂಡದ್ದೇ ಅಲ್ಲದೆ, ಪ್ರಪಂಚದ ಇತರ ಭಾಷಾ ಸಾಹಿತ್ಯದಲ್ಲಿ ನೂತನವಾಗಿ ಬಂದ ಪ್ರಕಾರಗಳನ್ನು ಕನ್ನಡಕ್ಕೆ ಅಳವಡಿಸಿಕೊಂಡಿತು. ಪಂಚಪಂಕ್ತಿ (ಲಿಮರಿಕ್ಸ್), ಅಣಕವಾಡು, ಲಘುಪದ್ಯ, ಹರಟೆ ಮುಂತಾದ ಹೊಸಪ್ರಕಾರಗಳನ್ನು ಒದಗಿಸಿಕೊಟ್ಟಿತು. ತಿಳಿವಿನೊಂದಿಗೆ ತಿಳಿಹಾಸ್ಯ ಒದಗಿಸುತ್ತಿದ್ದ 'ಉರಿಗಾಳು' ತುಂಬಾ ಪ್ರಸಿದ್ಧವಾಯಿತು".[1]

'ಕೊರವಂಜಿ' ಆರಂಭವಾದದ್ದು 1947ರಲ್ಲಿ.

ತಮ್ಮ ಬಿಡುವಿಲ್ಲದ ವೈದ್ಯಕೀಯ ವೃತ್ತಿಯ ಜೊತೆಗೆ ರಾಶಿ ಕೊರವಂಜಿಯನ್ನು ಬೆಳೆಸಲು ತುಂಬಾ ಶ್ರಮಪಟ್ಟರು. ಆ ಪತ್ರಿಕೆಯಲ್ಲಿ ತಾವು ಬರೆದದ್ದೇ ಅಲ್ಲದೆ ಅನೇಕ ಹಾಸ್ಯ ಬರಹಗಾರರನ್ನೂ, ವ್ಯಂಗ್ಯ ಚಿತ್ರಕಾರರನ್ನೂ ಬೆಳಕಿಗೆ ತಂದರು.

"ಪ್ರತಿ ತಿಂಗಳ ಮೂರನೆಯ ವಾರ ರಾತ್ರಿ 9ರಿಂದ 11ರ ವರೆಗೆ ಕೊರವಂಜಿಗೆ ಲೇಖನಗಳನ್ನು ಬರೆಯಲು ಕುಳಿತುಕೊಳ್ಳುತ್ತಿದ್ದೆ. ಹತ್ತು ಹದಿನೈದು ನಿಮಿಷಗಳು 'ಪಂಚ್' ಪತ್ರಿಕೆ ಓದುವ ಹೊತ್ತಿಗೆ ಹೊಸ ವಿಚಾರಗಳು ಸ್ಫುರಿಸುತ್ತಿದ್ದವು. ಅದನ್ನು ಕೇಳಿದಾಗ ಒಮ್ಮೆ ಕೈಲಾಸಂ ನನ್ನ ಕೊಠಡಿಯಲ್ಲಿದ್ದವರು ಹೀಗೆಂದರು: 'ಆಹಾ! ಇದೆಷ್ಟು ಸೂಕ್ಷ್ಮ, ಭವ್ಯ! ಆದರೆ ಇಡೀ ನಿಮ್ಮ 'ಮಹಿಷಾಸುರನ ಊರಿ'ನಲ್ಲಿ ಕನಿಷ್ಠ ಇಬ್ಬರಾದರೂ ಇಂಥ ಸವಿಯಾದ ಶುದ್ಧಹಾಸ್ಯವನ್ನು ಮೆಚ್ಚಬಲ್ಲವರಿದ್ದಾರಾ? ನಿಮ್ಮ ರಾಜ್ಯದಲ್ಲಿರುವ ಇವು ಕೋಣಗಳು. 'ಇದು ಜೋಕು, ನಗು' ಎಂದು ಹೇಳಿದರಷ್ಟೇ ನಕ್ಕಾವು. ಇಂಥಾ ಅಪರೂಪದ ಹಾಸ್ಯಕ್ಕೆ ಸ್ವಾಗತ, ಆದರೆ ಇದನ್ನು ಅರ್ಥ ಮಾಡಿ ಕೊಂಡು ಆಸ್ವಾದಿಸುವ ಓದುಗರು ಇದಕ್ಕೆಂದೂ ಸಿಗಲಾರರು" (ಕೈಲಾಸಂ ಅಂಡ್ ಐ).

ಕೈಲಾಸಂ ಹಾಗಂದದ್ದು ಕೇಳಿ ರಾಶಿಯವರಿಗೆ ಸಹಜವಾಗಿಯೇ ಸಿಟ್ಟು ಬಂತು. ಆದರೆ ಅದರ ವಾಸ್ತವಾಂಶದ ಅರಿವಾದುದು ಇಪ್ಪತ್ತೈದು ವರ್ಷಗಳ ಬಳಿಕ, 'ಕೊರವಂಜಿ' ನಿಲ್ಲಿಸುವ ಕಾಲ ಬಂದಾಗ. ಆಗಲೂ ಅವರು ದುಗುಡಗೊಳ್ಳದೆ ಹಿತವಾದ ನಗೆಯಿಂದಲೇ ಕೊರವಂಜಿಯನ್ನು ಬೀಳ್ಕೊಟ್ಟರು.

"ಹೋಗಿ ಬರ್ತೀನಿ ಅಂದ್ಯಾಮ್ಮಾ? ಇಷ್ಟು ದಿನ ನೀನು ಒಳಗೆ ಇದ್ದದ್ದೇ ನನಗೆ ಗೊತ್ತಿರಲಿಲ್ಲ".[2]

'ಕೊರವಂಜಿ' ನಿಂತರೂ ಅವರು ಸೃಷ್ಟಿಸಿದ ಹಾಸ್ಯ ಪರಂಪರೆ ನಿರಂತರವಾಗಿ ಸಾಗುತ್ತಿರುವುದು, ಕನ್ನಡದ ಎಲ್ಲಾ ಪತ್ರಿಕೆಗಳಿಗೂ ಅದು ಹಬ್ಬಿ ನಿಂತಿರುವುದು ಗಮನಾರ್ಹ.

### ಹಾಸ್ಯ ಸಂಕಲನಗಳು

ರಾಶಿಯವರ ಮೊದಲ ಸಂಕಲನ 'ತುಟಿ ಮೀರಿದುದು' ಪ್ರಕಟವಾದದ್ದು 1937ರಲ್ಲಿ. ಇದು ಲಘು ಹರಟೆ ಮತ್ತು ಕವನಗಳ ಗುಚ್ಛ. ಆ ಪುಸ್ತಕದ ಮುಖಪುಟಗಳ ಮೇಲೆ ಒಂದು ದೊಡ್ಡ ಕತ್ತರಿಯಿತ್ತು. ಅದರ ಹಿಡಿಕೆಯಲ್ಲೊಂದು ಗ್ರಂಥ ಮುಂದೆ ರಾಶಿ ಎಂಬ ಬರಹ. ಗ್ರಂಥಕರ್ತೃ ರಾಶಿ ಬೇರೆಡೆ ಓದಿದ ಜೋಕುಗಳನ್ನು ಕತ್ತರಿಸಿ ಬರೆದ ರಾಶಿ ಈ ಪುಸ್ತಕ-ಎಂದು ತಮ್ಮ ಮೇಲೆ ತಾವೇ ಚಟಾಕಿ ಹಾರಿಸಿಕೊಂಡಿದ್ದರು.

'ಕೊರವಂಜಿ'ಯಲ್ಲಿ ಪ್ರಕಟವಾದ ಅವರ ಲೇಖನಗಳು ಮುಂದೆ ನಾಲ್ಕಾರು ಹೊತ್ತಗೆಗಳಾಗಿ ಹೊರಬಂದವು. ಕೊರವಂಜಿ ಕಂಡ ನಗು ಸಮಾಜ(1975), ಕೊರವಂಜಿ ಕಂಡ ನಗು ದರ್ಬಾರಿಗಳು (1979) 'ಕೊರವಂಜಿ ಕಂಡ ನಗು ವ್ಯಕ್ತಿಗಳು (1979) ಇವುಗಳಲ್ಲಿ ಮುಖ್ಯವಾದವು. ಈ ಲೇಖನಗಳ ನಾಯಕರೆಲ್ಲಾ ಸಮಾಜದ ಕೆಳಸ್ತರದಿಂದ ಬಂದ ಸಾಮಾನ್ಯ ಜನರು ಎಂಬುದು ಗಮನಾರ್ಹ. ಜೇಬುಗಳ್ಳ ಜಿಮ್ಮಿ, ಪೋಲೀಸು ಪೇದೆ ಗುಂಡಯ್ಯ, ಹಸ್ತ ಸಾಮುದ್ರಿಕದವ, ಜಟಕಾ ಸಾಬಿ, ಸೆಕ್ರೇಟರಿಯೇಟ್‌ನ ಗುಮಾಸ್ತ ಶಾಮಸೇನರಾಯ, ಸಬ್‌ರಿಜಿಸ್ಟ್ರಾರ್ ಕಚೇರಿಯ ಜವಾನ ಮಲ್ಲಯ್ಯ, ಕ್ಯಾಂಟೀನಿನ ಹುಡುಗ ರಾಮಲಿಂಗು ...... ವೈವಿಧ್ಯಮಯ ಪಾತ್ರಗಳ ಮೆರವಣಿಗೆ, ಇವುಗಳಲ್ಲಿ ಇಣುಕುವ ಹಾಸ್ಯ ಥಟ್ಟನೆ ತುಟಿ ಬಿರಿಸಿ ನಗುವಂಥದು. ಸರಕಾರದ, ಸಮಾಜದ ಭ್ರಷ್ಟಾಚಾರವನ್ನು ಸೂಕ್ಷ್ಮವಾಗಿ ಬಯಲಿಗೆಳೆದು ನಮ್ಮನ್ನು ಆಲೋಚನಾ ಪರರಾಗಿ ಬಾಳುವಂಥದು. ವಾಕ್ಯ ಪ್ರಯೋಗಗಳೂ ಅಷ್ಟೇ ಸೊಗಸು. ಉದಾಹರಣೆಗೆ ಇವು:

'ನಮ್ಮ ಸರಕಾರವೇ ದೊಡ್ಡ ಜೇಬುಗಳ್ಳನ ತರಹ ನಮ್ಮ ಹಣವನ್ನು ಕಸಿಯುತ್ತೆ, ಆ ಕಾರಣ ಈ ಅಲ್ಪ ಜೇಬುಗಳ್ಳನ ಮೇಲೆ ಕನಿಕರ, ಯಥಾರಾಜಾ ತಥಾಪ್ರಜಾ ಅನಿಸಿತು'.

(ಕೊರವಂಜಿ ಕಂಡ ನಗು ವ್ಯಕ್ತಿಗಳು)

"ಮಾನ ಮರ್ಯಾದೆ ಅಂತ ಕಾಳಜಿ ಮಾಡೋರು ವಿನೋದ ಸೌಧಕ್ಕೆ ಹೋಗ್ತಾರಾ?"

(ಕೊರವಂಜಿ ಕಂಡ ನಗು ವ್ಯಕ್ತಿಗಳು)

"ನಿನ್ನ ಕೈಯಲ್ಲಿ ಕುಬೇರನ ರೇಖೆಯಿದೆ" ಎಂದು ಹಸ್ತ ಸಾಮುದ್ರಿಕದವ ಜಟಕಾ ಸಾಬಿಗೆ ಹೇಳಿದಾಗ ಅವನು ಒಂದು ರೂಪಾಯಿ ಎಸೆದು ಭುಗ್ ಅಂತ ಎದ್ದುಹೋಗುವ ದೃಶ್ಯ.

"ಸರಕಾರ ಇರೋ ಜಾಗ, ದೇವರು ಹ್ಯಾಗೆ ಇರುಕ್ಕೆ ಸಾಧ್ಯ?"

(ಕೊರವಂಜಿ ಕಂಡ ನಗು ವ್ಯಕ್ತಿಗಳು)

"ನಮ್ಮ ಹೆಬ್ಬಿ ಗುಬ್ಬಾಲೆಯಲ್ಲಿ ಸರಕಾರ ಪೊರಕೆ ಎತ್ತಬೇಕಾದರೆ ಸಚಿವರು ಆಗಮಿಸಬೇಕು."

"ರಾಜ ಮಹಾರಾಜರೇ ಹೇಳಹೆಸರಿಲ್ಲದಿರುವಾಗ ಅದಾವ ದರ್ಬಾರುಗಳು? ಕಾಣಬೇಕಾದರೆ ಭೇಟಿಮಾಡಿ ಸಣ್ಣಪುಟ್ಟ ಕಚೇರಿಗಳನ್ನು: ಅಲ್ಲಿ ನೋಡಿ ದರ್ಬಾರು ದೌಲತ್ತುಗಳನ್ನು".

(ಕೊರವಂಜಿ ಕಂಡ ನಗು ದರ್ಬಾರಿಗಳು)

ಈ ಎಲ್ಲಾ ಲೇಖನಗಳಲ್ಲಿ ಎದ್ದು ಕಾಣುವ ಅಂಶ ವ್ಯಕ್ತಿ ಚಿತ್ರಗಳು ಕರಾರುವಾಕ್ಕಾಗಿರುವುದು. ಹಸ್ತ ಸಾಮುದ್ರಿಕನ ಹಣೆಯ ಮೇಲಿನ ಅಡ್ಡಗೆರೆಯ ಗಂಧವಾಗಲೀ, ಕುಳಿತಲ್ಲೇ ಗೊರಕೆ ಹೊಡೆಯುವ ಜವಾನನ ಧಿಮಾಕಾಗಲೀ ಪ್ರತಿಯೊಂದರಲ್ಲೂ ಇರುವ ಅಚ್ಚುಕಟ್ಟುತನ, ದೀನ ದಲಿತರ ಬಗ್ಗೆ ಇರುವ ಕನಿಕರ, ಕಾಳಜಿಗಳೊಂದಿಗೆ, ಸಮಾಜ ಹಾಗೂ ಸರಕಾರಗಳ ಟೊಳ್ಳುತನವನ್ನು ಬಯಲಿಗೆಳೆಯುವುದರಿಂದ ಈ ಕೃತಿಗಳು ಇಂದಿನ ಸಾಂಸ್ಕೃತಿಕ ಸಂದರ್ಭದಲ್ಲಿ ಮಹತ್ವಪೂರ್ಣ ಕೊಡುಗೆಗಳೆನಿಸುತ್ತವೆ

ರಾಶಿಯವರು ಕಳ್ಳಕಾಕರು, ಪಿಶಾಚಿಗಳು, ಅಪ್ಸರೆಯರು ಇವರನ್ನು ಸಂಕೇತಪೂರ್ಣವಾಗಿ ಬಳಸಿಕೊಳ್ಳುತ್ತಾರೆ. ಅವರ 'ಜಗ್ಗೋಜಿ', ಹೊತ್ತಗೆ "ಹೆಸರು ಕೇಳಿದರೇ ಎದೆ ಝುಗ್ ಅನ್ನುತ್ತೆ", ಅಂಥವನ ಚಿತ್ರಣ. ಈ ಜಗ್ಗೋಜಿ ಕಳ್ಳನಾದರೂ ಸದ್ಬುದ್ಧಿಯ ಕಳ್ಳ. ಹಣವಂಥನ್ನು ದೋಚಿ ಬಡವರಿಗೆ ಸಹಾಯ ಮಾಡುವಂಥವನು. 'ಪೊಂತಿಯಾನೋ' ಕಿರು ಕಾದಂಬರಿ: "ರಕ್ತವನ್ನು ಹೀರುವ ಪೊಂತಿಯಾನೋ ಶಾಕಿನಿ ಡಾಕಿನಿಗಳಂತಹ ಪಿಶಾಚಿಗಳ ಕಲ್ಪನೆ ನಾಡಮಾನವನ ಮನಸ್ಸಿನಲ್ಲಿ ಉದ್ಭವಿಸಿರಬಹುದಾದ ರೀತಿಯನ್ನು ಕುರಿತ ಕಥೆ" (ಪೊಂತಿಯಾನೊ). ಮಲಯ, ಸಿಂಗಪುರಗಳ ಹಿನ್ನೆಲೆಯಲ್ಲಿ ಈ ಪಿಶಾಚಿಯ ಕಥೆಯನ್ನು ಸೃಷ್ಟಿಸಿರುವುದು ಗಮನಾರ್ಹ.

'ನಗುಸರಿಸಿ ಅಪ್ಸರೆಯರು'ಕಥಾ ಸಂಕಲನದಲ್ಲಿ, ಹೊರಗೆ ಅತ್ಯಂತ ಸಭ್ಯರಾಗಿ ಕಂಡರೂ ಒಳಗೊಳಗೆ ಬೇರೆಯ ಸ್ತರದಲ್ಲಿ ಬದುಕುವ ಜನರನ್ನು ಕುಣಿಸುವವರು ಕಲ್ಪನೆಯ ಅಪ್ಸರೆಯರು ಎಂಬ ಸೂಚನೆಯಿದೆ. "ಅಪ್ಸರೆಯರು ಚಿರಂಜೀವಿಗಳು, ಸೌಭಾಗ್ಯವತಿಯರು, ಈಗಲೂ ನಮ್ಮ ಮನಸ್ಸಿನ ಊಹಾಪೋಹ ಗುಹೆಗಳಲ್ಲಿ ಶಾಶ್ವತ ನೆಲೆಸಿ ನನಸಿನಲ್ಲಿಯೂ, ಕನಸಿನಲ್ಲಿಯೂ ಲಲ್ಲೆಯಾಡುತ್ತ ಕಾಡಿ ಕೆಡವಿ ಕುಣಿಸುತ್ತಾರೆ". (ನಗುಸರಿಸಿ ಅಪ್ಸರೆಯರು)

ಮನುಷ್ಯನ ಮೆದುಳು ಬೆಳೆದು ಅವನು ಸುಸಂಸ್ಕೃತನೆನಿಸಿಕೊಂಡರೂ ಮೃಗದ ಗುಣಗಳು ಅವನಲ್ಲಿ ಇನ್ನೂ ಇದ್ದು ಅವನು ಮುಖವಾಡಗಳನ್ನು ಹಾಕಿಕೊಂಡು ಹಾಗೆ ವರ್ತಿಸುತ್ತಾನೆ ಎಂಬುದನ್ನು 'ಮೃಗಶಿರ'ದ ಕಥೆಗಳು ವರ್ಣಿಸುತ್ತವೆ.

**ಚೆಂದದೂರಿಗೆ ಹೋಗೋಣು**

'ಸಾಕ್ಷಿ ಸಂಕಲಿಕೆ' ರಾಶಿಯವರ ಅನುಭವಾಮೃತವನ್ನು ತುಂಬಿಕೊಂಡ ಕವನ ಸಂಕಲನ 1964ರಲ್ಲಿ ಪ್ರಕಟವಾಯಿತು.

> ಸಂಕಲಿಕೆಯೊಲವನು ವಿಜ್ಞಾನ ಸಾಕ್ಷಿಯನು
> ಮೇಳೈಸಿ ನುಡಿಯುವೆನು

–ಎಂದು ಆರಂಭವಾಗುವ ಗೀತೆಗಳು 'ಚೆಂದದೂರಿಗೆ ಹೋಗೋಣು' ಎಂಬ ಅತ್ಯಂತ ಪ್ರಬುದ್ಧವಾದ, ಬಾಳಿನ ಸಾರವನ್ನೆಲ್ಲಾ ಕುರಿತ ಕವನದಿಂದ ಮುಕ್ತಾಯಗೊಳ್ಳುತ್ತದೆ

> ಚೆಂದದೂರಿಗೆ ಹೋಗಿ ನಾವು
> ಬಂಧನಗಳನು ಕಳಚೋಣ

"ಮನನ ಮಾಡಿ ಚೆಂದದೂರಿಗೆ ಹೋದರೆ, ಯಾವ ಬೇನೆಯೇ ಬರಲಿ, ಏನೇ ಸಂಕಟ ಉಂಟಾಗಲಿ, ಆಗಲೂ ಮಂದಸ್ಮಿತರಾಗಿಯೇ ಇದ್ದು ಎಲ್ಲವನ್ನೂ ಜಯಿಸಬಹುದು" ಎಂಬ ಗೂಢಾರ್ಥವುಳ್ಳ ಈ ಕವನ ಅತ್ಯಂತ ಮೌಲಿಕ. (ಸಾಕ್ಷಿ ಸಂಕಲಿಕೆ).

ರಾಶಿಯವರ ಕಾದಂಬರಿಗಳಲ್ಲಿ 'ಪಂಪಾಪತಿಯ ಕೃಪೆ' ಮುಖ್ಯವಾದದ್ದು. ವಿಜಯನಗರದ ಕಾಲದ ಚಿತ್ರಣವಿರುವ ಈ ಐತಿಹಾಸಿಕ ಕಾದಂಬರಿ ಇಂದಿಗೂ ಪ್ರಸ್ತುತ. ಯಾಕೆಂದರೆ ಕಾದಂಬರಿಯಲ್ಲಿರುವ ಪಾತ್ರಗಳು, ಘಟನೆ, ಸನ್ನಿವೇಶಗಳು ಸಮಕಾಲೀನ ಮಾತ್ರವಲ್ಲ, ಸರ್ವಕಾಲಿಕ ಮೌಲ್ಯವುಳ್ಳದ್ದಾಗಿದೆ. ಸಾಮಾಜಿಕವಾಗಿ ಅಮಿನಾ-ಹನುಮಯ್ಯರ ಸಂಬಂಧ ಹಿಂದು-ಮುಸ್ಲಿಂ ಐಕ್ಯವನ್ನು ಸಾರಿಹೇಳುತ್ತದೆ. ಕಾದಂಬರಿಯಲ್ಲಿ ವರ್ಣಿತ ವಾಗಿರುವ ಗುಪ್ತಚರ್ಚೆಯ ಜಾಲ ದಂಗುಬಡಿಸುವಂಥದು. ಜಗತ್ತಿನಲ್ಲಿ ಎಲ್ಲೆಡೆಯೂ ಇಂಥವು ಇಂದಿಗೂ ನಡೆಯುತ್ತಲೇ ಇವೆ

**ಕೊರವಂಜಿಯ ಪಡುವಣ ಯಾತ್ರೆ**

ರಾಶಿಯವರು ಪ್ರವಾಸ ಕಥನವನ್ನೂ ಬರೆದಿದ್ದಾರೆ. 'ಕೊರವಂಜಿಯ ಪಡುವಣ ಯಾತ್ರೆ'ಯಲ್ಲಿಯೂ ರಾಶಿಯವರ ನಗೆದೃಷ್ಟಿ ರಾರಾಜಿಸಿದೆ. ಪ್ರವಾಸ ಮುನ್ನ ರಾಶಿ ತಮ್ಮ ಸಾಕುಮಗಳು ಕೊರವಂಜಿಯ ಜೊತೆಗೆ ತಮ್ಮ ಮನದ ತಾಕಲಾಟವನ್ನು ಹೇಳಿಕೊಳ್ಳುತ್ತಾರೆ:

"ಕಾಣದ ದೇಶದಲ್ಲಿ ಸಕತ್ ಕಾಹಿಲೆ ಬಿದ್ದು ಘಟ ಒಪ್ಪಿಸುವ ಹಾಗಾದರೆ, ಕಡೆಗಾಲದಲ್ಲಿ ಕನ್ನಡದಲ್ಲಿ ತಿಳಿದವರ ಹತ್ತಿರ ಹೋಗಿ ಬರ್ತೀನಿ, ನೀವೆಲ್ಲಾ ಚೆನ್ನಾಗಿರಿ, ಅಂತ ಚರಮ ಸಂದೇಶ ಹೇಳಲೂ ಆಗುವುದಿಲ್ಲ ಎಂದು ಯೋಚನೆ ಆರಂಭವಾಗಿದೆ". (ಕೊರವಂಜಿಯ ಪಡುವಣ ಯಾತ್ರೆ).

'ಕೊರವಂಜಿಯ ಪಡುವಣ ಯಾತ್ರೆ' ಕನ್ನಡದಲ್ಲೇ ವಿಶಿಷ್ಟವಾದ ಪ್ರವಾಸ ಕಥನ ಸಾಮಾನ್ಯವಾಗಿ ಪಾಶ್ಚಾತ್ಯ ದೇಶಗಳನ್ನು ಸುತ್ತಾಡಿ ಬಂದ ಇತರರು ಅಲ್ಲಿನ ವಿಖ್ಯಾತ ಮ್ಯೂಸಿಯಂಗಳನ್ನೋ, ಮುಂದುವರಿದ ಯಂತ್ರವಿಜ್ಞಾನವನ್ನೋ ಗಿಳಿಗಳಂತೆ ಹೊಗಳುತ್ತಾರೆ. ರಾಶಿಯವರು ಅಂಥ ಯಾವುದರ ವರ್ಣನೆಯನ್ನೂ ಮಾಡಿಲ್ಲ. ಅವರ ಸನಿಹ ಸುಳಿದ ಮನುಷ್ಯರ ವರ್ಣನೆ, ಅವರ ನಡವಳಿಕೆಗಳು, ಇವರು ಪ್ರತಿಕ್ರಿಯಿಸಿದ ರೀತಿ, ತಮಾಷೆಗಳು ಇವನ್ನು ಓದಿದಾಗ ನಗು ತುಟಿ ತುಂಬಿ ತುಳುಕುತ್ತದೆ. ಸ್ಟಾಕ್ ಹೋಂ 'ಸ್ಟಕ್ ಹೋಂ' ಆಗಿದೆ; ಕೋಪನ್ ಹ್ಯಾಗನ್ 'ಕೋಪಣ ಹ್ಯಾಗನ' ಆಗಿದೆ. ವಿದೇಶದಲ್ಲಿ ಇಂಡಿಯಾದ ನರಕುರಿಗಳು ಪಾಡುಬಿದ್ದು ಸಾಮಾನು ಕೊಳ್ಳುವ ರೀತಿ, ಸುಸ್ತಾಗುವುದು ಇವೆಲ್ಲ ಅವರ ಹಾಸ್ಯಕ್ಕೆ ವಸ್ತುಗಳಾಗಿವೆ. ಪ್ರಪಂಚದಲ್ಲಿ ಎಲ್ಲೆಡೆ ಹೋದರೂ 'ಮನುಷ್ಯ ಎಲ್ಲ ಕಡೆಯೂ ಒಂದೇ' ಎಂಬ ಸತ್ಯ ಈ ಹೊತ್ತಗೆಯಲ್ಲಿ ಅಡಕವಾಗಿದೆ

## ಮನೋನಂದನ

ಡಾ. ಶಿವರಾಂ ಅವರ ಅತ್ಯಂತ ಪ್ರಮುಖ ಪುಸ್ತಕಗಳು 'ಮನೋನಂದನ' 'ಮನಮಂಥನ' ಮತ್ತು 'ಆನಂದ'.

ಮನೋದೈಹಿಕ ಬೇನೆಗಳ ವಿಸ್ತೃತ ಅಧ್ಯಯನವಿರುವ ಹೊತ್ತಗೆ 'ಮನೋನಂದನ'. ಮನೋದೈಹಿಕ ಬೇನೆಗಳಿಗೆ ರೋಗಿಯ ಆಳ ಮನಸ್ಸಿನ ಭಯವೋ, ಆತಂಕವೋ ಕಾರಣವಾಗಿರುತ್ತದೆ. ಇಂಥ ಕಾಹಿಲೆಗಳಿಗೆ ಚಿಕಿತ್ಸೆ ನೀಡಬೇಕಾದರೆ ವೈದ್ಯನಿಗೆ ರೋಗಿಯ ಮನಸ್ಸು ಮತ್ತು ದೇಹಗಳ ಪರಿಚಯ ಸ್ಪಷ್ಟವಾಗಿರಬೇಕು. ಚಿಕಿತ್ಸೆ ಯಶಸ್ವಿಯಾಗಬೇಕಾದರೆ ರೋಗಿಯ ಸಹಕಾರವೂ ಅತ್ಯಗತ್ಯ. ಆದ್ದರಿಂದ ಇಂಥ ಬೇನೆಗಳ ಮೂಲ ಸ್ವರೂಪ ಏನು ಎಂಬುದನ್ನು ವೈದ್ಯ ಮತ್ತು ರೋಗಿ ಇಬ್ಬರೂ ಅರಿತರೆ ಒಳ್ಳೆಯದು. ಆ ದಿಸೆಯಲ್ಲಿ ಇಬ್ಬರಿಗೂ ಕೈಪಿಡಿಯಾಗುವಂತಹ ಪುಸ್ತಕ 'ಮನೋನಂದನ'.

ಈ ಪುಸ್ತಕದ ಮುನ್ನುಡಿಯಲ್ಲಿ ಡಾ. ಶಿವರಾಂ ಅವರು, "ಮನೋ ದೈಹಿಕ ಬೇನೆಗಳು ವಿಚಿತ್ರ ರೂಪಗಳನ್ನು ಪ್ರದರ್ಶಿಸುತ್ತವೆ. ಹೀಗಿರಬಹುದು ಎಂದು ತರ್ಕ ಮಾಡಿ ನಿರ್ಣಯಿಸಿ ಚಿಕಿತ್ಸೆ ನೀಡಿದೆ. ಆದರೆ ಅನಿರೀಕ್ಷಿತವಾಗಿ ತಿಳಿದು ಬಂದ ಸಂಗತಿಯಿಂದ ರೋಗ ಗುಣವಾಯಿತು" ಎನ್ನುತ್ತಾ ಎಂಟು ಜನ ರೋಗಿಗಳ ಮಾನಸಿಕ ತೊಳಲಾಟದ ಕತೆಗಳನ್ನು ನಮೂದಿಸಿ, ರೋಗಿಗಳಿಂದ ಕಲಿತ ಪಾಠಗಳನ್ನು ಮನಮುಟ್ಟುವಂತೆ ವರ್ಣಿಸಿದ್ದಾರೆ (ಮನೋನಂದನ). ಅನಂತರ ಬರೀ ಇಂಥ ಕತೆಗಳಿಂದ ಪ್ರಯೋಜನವಿಲ್ಲ, ಸಾಕಷ್ಟು ಆಳಕ್ಕೆ ಇಳಿಯಬೇಕು. ಮಾನವನ ಮನಸ್ಸನ್ನು ವಿವರವಾಗಿ ಅಧ್ಯಯನ ಮಾಡಬೇಕು, ಎಂಬ ಹಂಬಲದೊಂದಿಗೆ ಎರಡನೆಯ ಭಾಗವನ್ನು ಬರೆದರು. "ಮನಸ್ಸಿನ ವಿಷಯವನ್ನು ಬರೆದರೆ, ಮಾನಸಿಕ ತೊಂದರೆಗಳು ಹೇಗೆ ದೇಹದ ಮೇಲೆ ಪರಿಣಾಮ ಮಾಡಬಹುದು ಎನ್ನುವುದು ತಿಳಿಯಲು ಸುಲಭ. ಮನಸ್ಸಿನ ದೃಢತೆಯನ್ನು, ಸಮಾಧಾನವನ್ನು ಸಾಧಿಸಲು ಇರುವ ಎಲ್ಲ ಮಾರ್ಗಗಳನ್ನೂ ಸರಳವಾಗಿ ತಿಳಿಸೋಣ ಅನ್ನಿಸಿತು" (ಮನೋನಂದನ).

ಮನಸ್ಸು ಎಂದರೇನು? ಅದು ಎಲ್ಲಿದೆ? ಎಂಬಂಥ ಗಹನ ವಿಚಾರ ಗಳನ್ನೂ ಕೂಡ ತುಂಬಾ ಸರಳವಾಗಿ ಜನಸಾಮಾನ್ಯರಿಗೆ ಅರ್ಥವಾಗುವ ಹಾಗೆ ಬರೆದಿದ್ದಾರೆ. ಅವರ ಪ್ರಕಾರ, ಮೆದುಳಿನ ಸೆರಿಬ್ರಂನಲ್ಲಿ ಭಾವನಾ ಕೇಂದ್ರಗಳಿರುವ ಲಿಂಬಿಕ್‌ಸಿಸ್ಟಮ್‌ನಲ್ಲಿ ಹಾಗೂ ಮೆದುಳನ್ನು ತೋಯಿಸುವ ಸೆರಿಬ್ರೊಸ್ಪೈನಲ್ ದ್ರವದಲ್ಲಿ ಮನಸ್ಸು ಕಾರ್ಯ ನಡೆಸುತ್ತದೆ" (ಮನೋನಂದನ).

ಮನಸ್ಸಿನ ನಿಸ್ವಾರ್ಥ ಚಟುವಟಿಕೆಯು ಕುತೂಹಲದಿಂದ ಕೆರಳಿದಾಗ ವೈಜ್ಞಾನಿಕ ಪ್ರಗತಿ ಸಾಧ್ಯವಾಗುತ್ತದೆ. ಅನುಕಂಪದಿಂದ ತುಂಬಿದಾಗ ವೈಜ್ಞಾನಿಕ ಕಲೆಯ ವಿವಿಧ ರೂಪಗಳು ಪ್ರಕಟವಾಗಿ ಕಾಲದೇಶಾತೀತವಾಗಿ ನಿಲ್ಲುತ್ತವೆ. ಇಂಥ ಕಲೆ, ರಚಿಸಿದವರ ಮನಸ್ಸಿಗೂ ನೋಡುವವರ ಮನಸ್ಸಿಗೂ ಉಲ್ಲಾಸ ಆನಂದಗಳನ್ನೀಯುತ್ತವೆ. ಆದ್ದರಿಂದಲೇ ಈ ಚಟುವಟಿಕೆಗಳತ್ತ ಮನುಷ್ಯ ಮನಸ್ಸು ಹಾಯಿಸಿದರೆ ಅವನಿಗೆ ಶಾಂತಿ ಸಮಾಧಾನಗಳು ದೊರಕುತ್ತವೆ-ಎಂಬುದನ್ನು ಡಾ. ಶಿವಾರಾಂ ಈ ಹೊತ್ತಗೆಯಲ್ಲಿ ಪ್ರತಿಪಾದಿಸಿದ್ದಾರೆ. ಅನುಭವ ಹಾಗೂ ಅಧ್ಯಯನಗಳ ಹದವಾದ ಮಿಶ್ರಣವಿರುವ 'ಮನೋನಂದನ' ಅನೇಕರ ಮನದಳಲನ್ನು ನಿವಾರಿಸಬಲ್ಲ ಸಂಜೀವಿನಿ.

"ಇದು ನನಗೆ ತುಂಬ ಇಷ್ಟವಾದ ಕೃತಿ", ಎಂದು ಡಾ. ಶಿವರಾಂ ಅವರೇ ಹೇಳಿಕೊಂಡಿದ್ದಾರೆ.[3]

## ಸಮುದ್ರ ಮಂಥನ-ಮನಮಂಥನ

ಮಾನಸಿಕ ರೋಗಗಳ ಬಗ್ಗೆ ಅಪಾರ ಮಾಹಿತಿ ಇರುವ 'ಮನ ಮಂಥನ'ಕ್ಕೆ 1976ರಲ್ಲಿ ರಾಜ್ಯ ಸಾಹಿತ್ಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗಳು ಲಭಿಸಿದವು. ಇಂಥ ಬೃಹತ್ ಪುಸ್ತಕವನ್ನು ರಚಿಸಲು ಪ್ರೇರಣೆ ಹೇಗೆ? ಎಂಬ ಬಗ್ಗೆ ಡಾ. ಶಿವರಾಂ ಹೀಗೆ ಹೇಳಿದ್ದಾರೆ:

"ನನ್ನ ಜೀವನಕ್ಕೆ ಅತ್ಯಗತ್ಯವಾಗದೆ ಇರುವ ಜ್ಞಾನಾರ್ಜನೆಯು ಮತ್ತು ಕಲಿತ ಜ್ಞಾನವನ್ನು ಪ್ರಸಾರಮಾಡುವುದು, ಇವೆರಡೂ ನಿಸ್ವಾರ್ಥ ಚಟುವಟಿಕೆಗಳು. ಜ್ಞಾನಾರ್ಜನೆಯನ್ನು ಕುತೂಹಲವು ನನ್ನ ಮನಸ್ಸಿನಲ್ಲಿ ಪ್ರಚೋದಿಸಿತು. ಅನುಕಂಪವು ಜ್ಞಾನಪ್ರಸಾರ ಮಾಡುವಂತೆ ಪ್ರೇರೇಪಿಸಿತು". (ಮನಮಂಥನ)

ಚೆಪ್ಪು, ಶಿವಲೀಲೆ, ಭೂತ ಪಿಶಾಚಿ, ಭಯ ಇವು ಮಾನಸಿಕ ರೋಗಗಳಲ್ಲದೆ ಬೇರೆಯಲ್ಲ. ಮನುಷ್ಯ ಭ್ರಾಂತಿಗಳನ್ನು ಹಠದಿಂದ ಮೆಟ್ಟುತ್ತಾನೆ. ತೋರಮನಸ್ಸಿನಿಂದಾಚೆಗೆ ಅಂತಹ ಯೋಚನೆಗಳನ್ನು ದಬ್ಬುತ್ತಾನೆ. ಆಗ ಅಂಥ ಭ್ರಾಂತಿರೂಪಿನ ಯೋಚನೆಗಳು ಆಳ ಮನಸ್ಸಿನ ಹಗೇವುಗಳಲ್ಲಿ ಶೇಖರವಾಗುತ್ತವೆ. ಒತ್ತಡ ವಿಪರೀತವಾದಾಗ ಅದು ಹೆಚ್ಚಿನ ರೂಪದಲ್ಲಿ ಹೊರಹೊಮ್ಮುತ್ತದೆ. ಇದು ಆತಂಕ, ಪ್ಯಾರಾನಾಯ್ಡ್ ಅವಸ್ಥೆ ಹಿಸ್ಟೀರಿಯಾ, ಒಬ್ಸೆಷನಲ್ ಬೇನೆ, ಸ್ಕೀಜೋ ಫ್ರೆನಿಯಾ ಮುಂತಾದ ವಿವಿಧ ಬಗೆಯ ಮಾನಸಿಕ ರೋಗಗಳಲ್ಲಿ ಒಂದಾಗಿರಬಹುದು. ಇವನ್ನೆಲ್ಲಾ ಕಥಾ ದೃಷ್ಟಾಂತಗಳ ಮೂಲಕ ಓದುಗರ ಕಣ್ಣಿಗೆ ಕಟ್ಟುವಂತೆ ಡಾ. ಶಿವರಾಂ ವಿವರಿಸಿದ್ದಾರೆ.

ಮನೆಯಲ್ಲಿ ಒಬ್ಬನಿಗೆ ಹುಚ್ಚೋ ಚೆಪ್ಪೋ ಶಿವಲೀಲೆಯೋ ಬಡಿದರೆ, ದೈಹಿಕ ಕಾಹಿಲೆಗಳಿಗಿಂತ ಹೆಚ್ಚಾಗಿ ಮನೆಯವರೆಲ್ಲರ ನೆಮ್ಮದಿ ಕೆಡುತ್ತದೆ. ಮೊದಲ ಹಂತದಲ್ಲೇ ಇವನ್ನು ಗುರುತಿಸಿ ಚಿಕಿತ್ಸೆ ಕೈಗೊಂಡರೆ ಕಾಹಿಲೆ ಪೂರ್ಣವಾಗುತ್ತದೆ ಎಂಬುದನ್ನು ಈ ಹೊತ್ತಗೆ ಮನಗಾಣಿಸುತ್ತದೆ.

'ಮನಮಂಥನ'ದ ಎರಡನೆಯ ಭಾಗದಲ್ಲಿ ಮನಸ್ಸಿನ ಸ್ಥೂಲ ಪರಿಚಯವಿದೆ. ಮನಸ್ಸು ಹೇಗೆ ಕೆಲಸ ಮಾಡುತ್ತದೆ? ಅದರ ಕಾರ್ಯಕ್ರಮ ಹಳಿ ತಪ್ಪುವುದು ಹೇಗೆ? ಎಂಬ ವಿವರಗಳಿವೆ. ಮಾನವನ ಬದುಕಿನ ವಿವಿಧ ಮಜಲುಗಳಲ್ಲಿ, ಪ್ರಬುದ್ಧತೆ ಹೊಂದುವ ಮನಸ್ಸು ಅತಿ ಆಸೆ, ತೀವ್ರ ನಿರಾಸೆ, ಆತಂಕಗಳಿಂದ ಹೇಗೆ ಛಿದ್ರವಾಗಿ ಒಡೆಯಬಹುದು ಎಂಬ ವಿಶ್ಲೇಷಣೆ ಪರಿಣಾಮಕಾರಿಯಾಗಿದೆ. ದೇಹವನ್ನು ಆರೋಗ್ಯವಾಗಿಟ್ಟುಕೊಳ್ಳುವುದರ ಮುಖಾಂತರ ಮನಸ್ಸನ್ನು ಸುಸ್ಥಿತಿಯಲ್ಲಿಡಬಹುದು ಎಂಬುದನ್ನು ಒತ್ತಿ ಹೇಳಿದ್ದಾರೆ. ಪುರಾಣಕತೆಯಾದ ಸಮುದ್ರಮಂಥನದ ದೃಷ್ಟಾಂತ ತೆಗೆದುಕೊಂಡು ಅದನ್ನು ಮನಸ್ಸಿನ ಮಂಥನಕ್ಕೆ ಹೋಲಿಸಿರುವುದೂ ಅಪೂರ್ವವಾದ ಅನುಭವ ನೀಡಿ ಹೊಸಚಿಂತನೆಗಳಿಗೆ ದಾರಿ ಮಾಡಿ ಕೊಡುತ್ತದೆ. ಮನಸ್ಸಿನ ವಿಶ್ಲೇಷಣೆ ಹಾಗೂ ಆಧುನಿಕ ಚಿಕಿತ್ಸಾ ವಿಧಾನಗಳನ್ನು ಪುರಾತನ ಮನನಿಗರ ಜ್ಞಾನವನ್ನೂ ಹೋಲಿಸುವುದರ ಮುಖಾಂತರ, ವೈಜ್ಞಾನಿಕ ಅರಿವು ಮತ್ತು ಪುರಾತನ ಮನನಿಗರ ಜ್ಞಾನದ ಸಮನ್ವಯಕ್ಕೆ ಯತ್ನಿಸುವುದು ಶ್ಲಾಘನೀಯ.

## ಆನಂದಾನುಭವ

'ಆನಂದ' ಇಂಗ್ಲಿಷಿನಲ್ಲಿ ರಚಿತವಾಗಿರುವ ಕೃತಿ. ಡಾ. ಶಿವರಾಂ ಅವರ ಅನುಕಂಪ, ಮಾನವೀಯ ದೃಷ್ಟಿ ಮೇರು ಶಿಖರ ಮುಟ್ಟಿರುವುದರ ಸಂಕೇತ ಈ ಹೊತ್ತಗೆ. ಮನುಷ್ಯನಾದವನಿಗೆ ಆನಂದದ ಅನುಭವ ಪರಮೋತ್ಕೃಷ್ಟ ವಾದುದು. ಆ ಆನಂದ ದೊರಕುವುದು ಹೇಗೆ? ಮನಸ್ಸನ್ನು ಧಾರಣ, ಧ್ಯಾನ, ಸಮಾಧಿಗಳಿಂದ ಸಜ್ಜುಗೊಳಿಸಿ ಆ ಬಳಿಕ ಆನಂದದ ಅನುಭವ ಪಡೆಯಬಹುದು. ಈ ಸಿದ್ಧಿಯನ್ನು ನಮ್ಮ ಪುರಾತನ ಮನನಿಗರು ಪಡೆದರು. ಇತ್ತೀಚೆಗೆ ನರಕ್ರಿಯಾ ಶಾಸ್ತ್ರದ ಪ್ರಯೋಗಗಳಿಂದ ಕೂಡ ಇಂಥ ಆನಂದದ ಸ್ಥಿತಿ ಮುಟ್ಟಲು ಸಾಧ್ಯವೆಂದು ತಿಳಿದು ಬಂದಿದೆ. ಡಾ. ಶಿವರಾಂ ಹೇಳುವಂತೆ:

"ನಾನು ನರಕ್ರಿಯಾಶಾಸ್ತ್ರವನ್ನು ಅಭ್ಯಸಿಸಲಾರಂಭಿಸಿದೆ. ಹಾಗೆಯೇ ಉಪನಿಷತ್ತು ಮತ್ತು ಭಗವದ್ಗೀತೆಗಳ ಅಧ್ಯಯನವನ್ನೂ ಮಾಡಿದೆ. ನರಕ್ರಿಯಾಶಾಸ್ತ್ರದ ಅಭಿವ್ಯಕ್ತಿ ಉಪನಿಷತ್ತು ಮತ್ತು ಗೀತೆಗಳ ಅಭಿವ್ಯಕ್ತಿಗಿಂತ ಭಿನ್ನವಾದದ್ದು. ಆದರೆ ಈ ಸಮಾನಾಂತರ ಅಧ್ಯಯನದಿಂದ ನನಗೆ ಕಂಡದ್ದು-ಇಂದಿನ ಆಧುನಿಕ ನರಕ್ರಿಯಾಶಾಸ್ತ್ರದ ಪ್ರಯೋಗಗಳ ಉನ್ನತಾಭಿಪ್ರಾಯಗಳು ಸನಾತನ ಉಪನಿಷತ್ ಮತ್ತು ಗೀತೆಗಳಲ್ಲಾಗಲೇ ಇದ್ದವೆಂಬುದು."(ಆನಂದ)

ಡಾ. ಓಲ್ಡ್ಸ್ ಎಂಬ ಖ್ಯಾತ ವಿಜ್ಞಾನಿ, 'ಮೆದುಳಿನಲ್ಲಿ ಸುಖಾನುಭವ ಕೇಂದ್ರಗಳಿವೆ" ಎಂಬುದನ್ನು ಕಂಡು ಹಿಡಿದ. ಇಲಿಯೊಂದರ ಮೆದುಳಿನ ಬುಡದಲ್ಲಿ ವಿದ್ಯುತ್ ಸರಳನ್ನು ಈತ ನೆಲೆಗೊಳಿಸಿದ. ಇಲಿ ಸನ್ನೆಗೋಲನ್ನು ಮುಟ್ಟಿದಾಗಲೆಲ್ಲ ಈ ಜಾಗ ಉದ್ರೇಕಿತಗೊಳ್ಳುತ್ತಿತ್ತು. ಇಂಥ ಅನುಭವ ಅದಕ್ಕೆ ತುಂಬ ಪ್ರಿಯವಾಯಿತು ಎಂಬುದು, ಅದು ಪದೇ ಪದೇ ಸನ್ನೆಗೋಲನ್ನು ಮೀಟುವುದರಿಂದ ತಿಳಿಯಿತು. ಇಲಿಗೆ ಆಹಾರ, ಲೈಂಗಿಕ ಆಸಕ್ತಿ ಇವೆಲ್ಲವುಗಳಿಂದ ಈ ಸುಖಾನುಭವವೇ ಮುಖ್ಯವಾಯಿತು.

ಈ ಸುಖಾನುಭವದ ಕೇಂದ್ರವನ್ನು ಡಾ. ಶಿವರಾಂ 'ಆನಂದಕೇಂದ್ರ' ವೆಂದು ಕರೆದಿದ್ದಾರೆ. ಇದು ಮನುಷ್ಯನ ಮೆದುಳಿನ ಬುಡದಲ್ಲಿ ನಿದ್ರೆಯ ಮತ್ತು ಭಯದ ಕೇಂದ್ರದ ಅಕ್ಕಪಕ್ಕವಿರಬಹುದು, ಎಂಬ ನಿರ್ಧಾರಕ್ಕೆ ಬಂದಿದ್ದಾರೆ. ಆನಂದಾನುಭವ ವಾದ ಮನುಷ್ಯನಿಗೆ ಜೀವನದ ಇತರ ಸುಖಾನುಭವಗಳೆಲ್ಲ ಕ್ಷುಚಿತ್ತಾಗಿ ಕಾಣುತ್ತವೆ. ಆಗ ಅವನಿಗೆ ಜರಾಮರಣ, ನೋವು, ಹಸಿವು ಇವು ಯಾವುದರ ಭಯವೂ ಇರು ವುದಿಲ್ಲ.

ನಮ್ಮ ಪುರಾತನ ಋಷಿಗಳು ದೇಹವನ್ನು ಸುಸ್ಥಿತಿಯಲ್ಲಿಟ್ಟುಕೊಂಡು ಮನೋ ನಿಗ್ರಹದ ಮುಖಾಂತರ ಈ ಆನಂದ ಕೇಂದ್ರಗಳನ್ನು ಸ್ವಯಂ ಉದ್ರೇಕಿಸಿಕೊಳ್ಳುತ್ತಿದ್ದರು. ಇದನ್ನೇ ಅವರು ಆತ್ಮಸಾಕ್ಷಾತ್ಕಾರ, ಬ್ರಹ್ಮ ಸಾಕ್ಷಾತ್ಕಾರ, ಸಾಯುಜ್ಯ ಮುಂತಾದ ಪದಗಳಿಂದ ವರ್ಣಿಸಿದರು. ಆದ್ದರಿಂದ ಎಲ್ಲ ಧರ್ಮಗಳ ಮೂಲ ಉದ್ದೇಶವೂ ವ್ಯಕ್ತಿಯನ್ನು ಆನಂದಾನುಭವದ ಕಡೆಗೆ ಒಯ್ಯುವುದೇ ಆಗಿದೆ.

ಆಲಯದ ಅರಿವಾಗೆ ಬಯಲಜ್ಞಾನವು ಬಹುದು<br>
ಮಹಕರುಣೆ ಕಣ್‌ತೆರಸೆ ಹಾದಿಯೆರಡೂ ಒಂದು

(ಸಾಕ್ಷಿ ಸಂಕಲಿಕೆ).

"ಬಯಲು ಎಂದರೆ ಹೊರಗಿನ ವಿಶ್ವ. ಆಲಯ ಎಂದರೆ ಒಳಗಿನ ಮನಸ್ಸು. ತಾತ್ವಿಕರು ಕಂಡುಕೊಂಡಿರೋ ಸತ್ಯ ಇದೇನೆ. ಇದನ್ನು ಬ್ರಹ್ಮಾವಸ್ಥೆ ಅಂತ ನಾನು ಕರೆಯೋದಕ್ಕೆ ಹೋಗೋದಿಲ್ಲ. ಯಾಕೇಂದ್ರೆ ಭೂಲೋಕದ ತುಂಬ ಇರೋರೆಲ್ಲ ನರಕುರಿಗಳು"[4].

ಹೀಗೆ ಡಾ. ಶಿವರಾಂ ವಿಜ್ಞಾನಿ ಮತ್ತು ಮನಸಿಗ ಇಬ್ಬರೂ ಮಾಡ ಬಹುದಾದ ಕೆಲಸವನ್ನು ಒಬ್ಬರೇ ನಿರ್ವಹಿಸಿದ್ದಾರೆ.

ಪ್ರಾಚೀನ ಮತ್ತು ಅರ್ವಾಚೀನ ನಂಬುಗೆಗಳು ಮತ್ತು ಪ್ರಯೋಗ ಗಳೆರಡಕ್ಕೂ ತಾಳೆ ಹಿಡಿದಿರುವುದರಿಂದಲೇ 'ಆನಂದ' ಪ್ರಜ್ಞಾವಂತರಿಗೆಲ್ಲ ಅಪೂರ್ವ ಕೊಡುಗೆ ಯಾಗಿದೆ. ಉಪನಿಷತ್ತು ಮತ್ತು ಭಗವದ್ಗೀತೆಗಳಲ್ಲಿ ಮಾನವನ ಮನಸ್ಸಿನ ಬಗ್ಗೆ ಅಗಾಧ ಪರಿಜ್ಞಾನ ಅಡಕವಾಗಿರುವುದರಿಂದ ಅವನ್ನು ಅಭ್ಯಸಿಸುವುದರ ಮೂಲಕ, ನಮ್ಮ ಮನಃಶಾಸ್ತ್ರಜ್ಞರು ಹೊಸ ದಿಸೆಗಳಿಗೆ ನಡೆಯಬಹುದೆಂಬ ಆಶಯವನ್ನು ಡಾ. ಶಿವರಾಂ ವ್ಯಕ್ತಪಡಿಸಿದ್ದಾರೆ. ಮುಂದೆಯೂ ಇಂತಹ ಪುಸ್ತಕಗಳು ಕನ್ನಡದಲ್ಲಿ ಪ್ರಕಟವಾಗಬೇಕು ಎಂಬ ಅಪೇಕ್ಷೆ ಅವರಿಗಿತ್ತು. ಆದ್ದರಿಂದ 1974ರಲ್ಲಿ ಜ್ಞಾನ ವಿಜ್ಞಾನ ಪರಿಷತ್ತು ಸ್ಥಾಪಿಸಿದರು. ಪ್ರಾಚೀನ ಮತ್ತು ಅರ್ವಾಚೀನ ಜ್ಞಾನದ ತುಲನಾತ್ಮಕ ಅಧ್ಯಯನಕ್ಕೆ ಸಂಬಂಧಿಸಿದ ಪುಸ್ತಕಗಳ ಪ್ರಕಟಣೆಗೆ ಈ ಪರಿಷತ್ತು ನೆರವನ್ನೀಯುತ್ತದೆ.

**ರಾಶಿ ವೈಶಿಷ್ಟ್ಯ**

ನಗೆಗಾರರಾಗಿ ಸಾಹಿತ್ಯಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದ ರಾಶಿಯವರದು ವಿಶಿಷ್ಟ ಬಗೆಯ ಹಾಸ್ಯಪ್ರಜ್ಞೆ. ಇದು ತುಂಬಾ ನವಿರು ಆದರೂ ತೀಕ್ಷ್ಣ. ಇನ್ನೊಬ್ಬರನ್ನು ನೋಯಿಸುವ ಮಾತಿಲ್ಲ. ಆದರೂ ಜನರು-'ನರಕುರಿಗಳು' ತಮ್ಮ ಅಂತರಂಗವನ್ನು ತಾವೇ ನೋಡಿಕೊಂಡು ನಗುವಂತೆ ಮಾಡಿದ ವಿಪುಲ ಬರಹಗಳಿಗೆ ರಾಶಿಯವರದೇ ವಿಶಿಷ್ಟ ಮುದ್ರೆಯಿದೆ.

ರಾಶಿಯವರ ಜ್ಞಾನದಾಹ ಮತ್ತು ಜೀವನೋತ್ಸಾಹ ಎಂಥವರನ್ನೂ ಬೆರಗುಗೊಳಿಸುವಂಥದು. "ಅನುಕಂಪ, ದಯೆ, ಪ್ರೇಮ, ಕರುಣೆ, ಒಲವು ಇವೆಲ್ಲವೂ ವೈಜ್ಞಾನಿಕ ಶಕ್ತಿಗಿಂತ ಮನುಷ್ಯನ ಬಾಳಿನಲ್ಲಿ ಹೆಚ್ಚು ಶಕ್ತಿಯುಳ್ಳವು ಅನಿಸಿತು. ಇದು ಏಕೆ ಎಂದು ಮನನ ಮಾಡಲಾರಂಭಿಸಿದೆ." (ಸಾಕ್ಷಿ ಸಂಕಲಿಕೆ). ಇದರಿಂದಾಗಿ ಮನಃ ಶಾಸ್ತ್ರ, ಮನೋವಿಶ್ಲೇಷಣೆ, ತತ್ವಶಾಸ್ತ್ರ ಮುಂತಾದವುಗಳ ಬಗ್ಗೆ ಅಧ್ಯಯನ ಮತ್ತು ಚಿಂತನೆ ಆರಂಭವಾಯಿತು. ತತ್ಫಲವಾಗಿ ಕನ್ನಡ ಸಾಹಿತ್ಯಕ್ಕೆ ಅಪೂರ್ವವೆನಿಸಿದ 'ಮನೋನಂದನ', 'ಮನಮಂಥನ', 'ಆನಂದ' ಮುಂತಾದ ಗ್ರಂಥಗಳು ಸೃಷ್ಟಿಯಾದವು. ಗಹನವಾದ ವಿಚಾರಗಳನ್ನು ಅತ್ಯಂತ ಸರಳವಾಗಿ ದೃಷ್ಟಾಂತಗಳ ಮೂಲಕ ವಿವರಿಸುವುದು ಅವರ ಗೆಲುವಿನ ಗುಟ್ಟು. ವಿಜ್ಞಾನಿಯ ಕುತೂಹಲ, ಮನಸಿಗನ ಅನುಕಂಪ ಸಮರಸವಾಗಿ ಬೆರೆತದ್ದ ರಿಂದಲೇ ಚಿಂತನೆಗಳ ಸಮನ್ವಯ ಮಾಡಿದವರಲ್ಲಿ ಡಾ. ಶಿವರಾಂ ಮೊದಲಿಗರು. ಆದ್ದರಿಂದಲೇ ಅವರು ಕನ್ನಡದ ರಸಋಷಿ.

❑

1. ಸುಧಾ, ನವೆಂಬರ್ 6, 1983.
2. ಕೊರವಂಜಿ, ಶುಭಮಂಗಳ ಸಂಪುಟ 1967.
3. ಉದಯವಾಣಿ, ದೀಪಾವಳಿ ಸಂಚಿಕೆ, 1982.
4. ಉದಯವಾಣಿ, ದೀಪಾವಳಿ ಸಂಚಿಕೆ, 1982.

# ಡಾ.ಆ.ನೇ.ಉಪಾಧ್ಯೆ

ಡಾ. ಎಸ್.ಪಿ. ಪದ್ಮಪ್ರಸಾದ್

## ಯಾರಿವರು?

ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಯ ಗೌರವ ಯಾರಿಗಾದರೂ ಸಿಕ್ಕರೆ ಒಲ್ಲೆನೆನ್ನುವುದುಂಟೇ? 'ಅಸಂಭವ' ಎನ್ನುವುದು ಸಾಮಾನ್ಯ ಉತ್ತರವಾದರೂ ಇಂಥ ಅಸಂಭವಗಳೂ ಒಂದೆರಡು ಬಾರಿ ಘಟಿಸಿರುವ ಅಪರೂಪದ ಉದಾಹರಣೆಗಳಿವೆ. ನಮ್ಮ ಕನ್ನಡ ಸಾಹಿತ್ಯ ಪರಿಷತ್ತು ಸಂಘಟಿಸುವ 'ಕನ್ನಡ ಸಾಹಿತ್ಯ ಸಮ್ಮೇಳನ'ದ ಇತಿಹಾಸದಲ್ಲಿ ಹೀಗೆ ಕನಿಷ್ಟ ಎರಡು ಬಾರಿ ಹೀಗೆ ನಡೆದಿದೆ. ಒಂದು ಬಾರಿ ತೀ.ನಂ.ಶ್ರೀ ಅವರು ತಮ್ಮ ಪಾಲಿಗೆ ಬಂದಿದ್ದು ಈ ಸಾಹಿತ್ಯಲೋಕದ ಅತ್ಯುನ್ನತ ಗೌರವವನ್ನು ನನಗಿಂತ ಡಿ.ಎಲ್. ನರಸಿಂಹಾಚಾರ್ ಇದಕ್ಕೆ ಹೆಚ್ಚು ಅರ್ಹರು ಎಂದು ಅದನ್ನು ಅತ್ತ ತಿರುಗಿಸಿದರು'. ಇನ್ನೊಮ್ಮೆ ಹೀಗೆ ಒಲ್ಲೆ ಎಂದವರು ಅಂತರಾಷ್ಟ್ರೀಯ ಖ್ಯಾತಿಯ ಪ್ರಾಕೃತ ವಿದ್ವಾಂಸ ಡಾ. ಆದಿನಾಥ ನೇಮಿನಾಥ ಉಪಾಧ್ಯೆ ಅವರು. ಇವರು 1967ರಲ್ಲಿ ಶ್ರವಣಬೆಳಗೊಳದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ (ಆಗಿನ್ನೂ ಈ ಸಮ್ಮೇಳನಗಳಿಗೆ 'ಅಖಿಲ ಭಾರತ .....' ಎಂಬ ವಿಶ್ಲೇಷಣ ಅಂಟಿಸುತ್ತಿರಲಿಲ್ಲ. ಈ ಪದ್ಧತಿ ಎಷ್ಟೊ ವರ್ಷಗಳ ನಂತರ ಶಿವಮೊಗ್ಗದಲ್ಲಿ ಪ್ರೊ. ಎಸ್.ವಿ. ರಂಗಣ್ಣನವರ ಅಧ್ಯಕ್ಷತೆಯಲ್ಲಿ ನಡೆದ 49ನೇ ಕನ್ನಡ ಸಾಹಿತ್ಯ ಸಮ್ಮೇಳನದಿಂದ ಆರಂಭವಾಯಿತು. ಅದು ಶ್ರೀ ಜಿ. ನಾರಾಯಣ ಅವರು ಪರಿಷತ್‌ನ ಅಧ್ಯಕ್ಷರಾಗಿದ್ದ ಕಾಲ) ಅಧ್ಯಕ್ಷ ರಾಗಿದ್ದರು. ಅವರನ್ನು ಈ ಸ್ಥಾನ ಸ್ವೀಕರಿಸಲು ಒಪ್ಪಿಸುವುದೇ ಕಷ್ಟವಾಯಿತು. ಆ ಬಗ್ಗೆ ಆಗ ಪರಿಷತ್ತಿನ ಕಾರ್ಯದರ್ಶಿಯಾಗಿದ್ದ ಡಾ. ಹಂಪ ನಾಗರಾಜಯ್ಯ ಹೀಗೆ ಬರೆದಿದ್ದಾರೆ. "...ಆಗ ನಾನು ಪರಿಷತ್ತಿನ ಕಾರ್ಯದರ್ಶಿ, ಅವರನ್ನು ಅಧ್ಯಕ್ಷತೆಗೆ ಒಪ್ಪಿಸಲು ಪ್ರಯಾಸವಾಯಿತು. ಅದೊಂದು ಅಪರೂಪದ ಅನುಭವ. ಎರಡು ಕಾರಣಗಳಿಂದ ತಮಗೆ ಸಂಕೋಚವಾಗುತ್ತಿದೆ ಎಂದು ಅವರು ವಿವರಿಸಿದರು : ಒಂದು, ತಾವು ಕನ್ನಡದಲ್ಲಿ ಮಾಡಿರುವ ಬರವಣಿಗೆ ಕಡಿಮೆಯಾಗಿ, ಇಂಗ್ಲೀಷಿನಲ್ಲಿ ವಿಫುಲವಾಗಿ ಬರೆದಿರುವುದರಿಂದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಲು ಒಪ್ಪಿಕೊಂಡರೆ ಔಚಿತ್ಯವಿರುತ್ತದೆಯೆ ಎಂಬುದು. ಎರಡು, ತಮಗಿಂತ ಹಿರಿಯರಿದ್ದಾರೆ. ಅವರಿಗೆ ಈ ಮರ್ಯಾದೆ ಸಲ್ಲುವ ಮೊದಲು ತಾವು ಒಪ್ಪಿಕೊಳ್ಳುವುದು ತಪ್ಪಾಗುವುದಿಲ್ಲವೆ - ಎಂಬುದು. ಅವರು ಹುಟ್ಟು ಕನ್ನಡಿಗರಾಗಿ ಕನ್ನಡದಲ್ಲೂ ಬರವಣಿಗೆ ಮಾಡಿರುವುದನ್ನೂ, ಇಂಗ್ಲೀಷಿನಲ್ಲಿ ಬರೆದಿರುವುದರಿಂದ ಕನ್ನಡದ ಸಂಗತಿಗಳನ್ನು, ಸಾಹಿತ್ಯ ಕೃತಿಗಳನ್ನು ಜಗತ್ತಿಗೆ ಪರಿಚಯಿಸಿ ಮಹದುಪಕಾರವೆಸಗಿರುವುದನ್ನೂ, ಕನ್ನಡಕ್ಕೂ ಹೊರನಾಡಿಗೂ ಜೀವಂತ ಸಂಪರ್ಕವಾಗಿರುವುದರಿಂದ ಆಗಿರುವ ಪ್ರಯೋಜನಗಳನ್ನೂ ಮನದಟ್ಟು ಮಾಡಿದ ಮೇಲೇ ಅಧ್ಯಕ್ಷತೆಗೆ ಒಪ್ಪಿಗೆ ಕೊಟ್ಟಿದ್ದು. ಆಗಲೂ ಮೊದಲು ಅಜೀವ ಸದಸ್ಯತ್ವದ ಹಣ ಕೊಟ್ಟು ರಶೀದಿ ಬರಸಿ ಆಮೇಲೇ 'ಆಗಲಿ' ಎಂದರು. ಸಮ್ಮೇಳನದ ಕಾಲದಲ್ಲಿ ತೆಗೆದ ಭಾವ ಚಿತ್ರಗಳ ಸಂಪುಟವನ್ನು ತಾವೇ ಹಣತೆತ್ತು ಪಡೆದರು. ಈ ಬಗೆಯ ಆದರ್ಶ ಹೊಂದಿರುವ ದೊಡ್ಡವರು ಅಪರೂಪ"[2].

ಡಾ. ಆ.ನೇ. ಉಪಾಧ್ಯೆ ಅವರದ್ದು ತುಂಬಿದ ಕೊಡದಂತಹ ವ್ಯಕ್ತಿತ್ವ. ಸಂಸ್ಕೃತ, ಪ್ರಾಕೃತ, ಕನ್ನಡ, ಮರಾಠಿ, ಹಿಂದಿ ಹಾಗೂ ಇಂಗ್ಲೀಷ್ ಭಾಷೆಗಳಲ್ಲಿ ಪ್ರಭುತ್ವ ಹೊಂದಿದ್ದವರು. ತಾಡವೋಲೆಗಳಲ್ಲಿ ಹುದುಗಿದ್ದ ಅದೆಷ್ಟೋ ಪ್ರಾಕೃತ, ಅರ್ಧಮಾಗಧಿ, ಸಂಸ್ಕೃತ, ಕನ್ನಡ ಗ್ರಂಥಗಳನ್ನು ತುಂಬ ಶಾಸ್ತ್ರೀಯವಾಗಿ ಸಂಪಾದನೆ ಮಾಡಿ, ವಿಸ್ತೃತವಾದ ಅಮೂಲ್ಯ ಪ್ರಸ್ತಾವನೆ ಮತ್ತು ಅನುಬಂಧಗಳೊಡನೆ ಅವನ್ನು ಪ್ರಕಟಿಸಿ, ಭಾರತೀಯ ವಿದ್ವತ್ ಲೋಕಕ್ಕೆ ಅವರು ಸಲ್ಲಿಸಿರುವ ಸೇವೆ ಅಮೂಲ್ಯವಾದದ್ದು. ರಾಷ್ಟ್ರದ ಪ್ರಖ್ಯಾತ ಸಂಶೋಧನ ಸಂಸ್ಥೆಗಳಲ್ಲಿಯೂ, ಪ್ರಕಾಶನ ಸಂಸ್ಥೆಗಳಲ್ಲಿಯೂ ಸಲಹೆ ಗಾರರಾಗಿದ್ದುಕೊಂಡು ಅವರು ಮಾಡಿಸಿದ ವಿದ್ವತ್ ಕಾರ್ಯಗಳು ಈ ಕ್ಷೇತ್ರಕ್ಕೇ ಅನೇಕ ಹೊಸ ಬೆಳಕನ್ನು ಕೊಟ್ಟವು. 'ಕರ್ನಾಟಕದ ಆದ್ಯ ಅರ್ಕಿಯಾಲಜಿಸ್ಟ್' ಎಂಬ ಖ್ಯಾತಿಗೆ ಪಾತ್ರರಾದ, ಖ್ಯಾತ ವಿದ್ವಾಂಸ ಪ್ರೊ. ಕೆ.ಜಿ. ಕುಂದಣಗಾರ ಅವರ ಬದುಕಿಗೆ ಒಂದು ನೆಲೆ ಕಲ್ಪಿಸಿದ್ದು, ಖ್ಯಾತ ಲೇಖಕ ಮಿರ್ಜಿ ಅಣ್ಣಾರಾಯ ಅವರನ್ನು ಒಬ್ಬ ವಿದ್ವಾಂಸರನ್ನಾಗಿ ರೂಪಿಸಿದವರು ಪ್ರೊ. ಆ.ನೇ. ಉಪಾಧ್ಯೆ ಅವರೇ. ಭಾರತೀಯ ಜ್ಞಾನಪೀಠ, ಸೊಲ್ಲಾಪುರದ ಜೀವರಾಜ ಗ್ರಂಥಮಾಲೆಯಂಥ ಸಂಸ್ಥೆಗಳ ಮೂಲಕ ಅನೇಕಾನೇಕ ವಿದ್ವತ್‌ಪೂರ್ಣ ಹೆಬ್ಬೊತ್ತಗೆಗಳು ಹೊರಬರುವಂತೆ ಆದದ್ದು ಪ್ರೊ. ಉಪಾಧ್ಯೆ ಅವರ ಪರಿಶ್ರಮದ ಫಲ. ಜ್ಞಾನೋಪಾಸನೆಯನ್ನು ಒಂದು ವ್ರತದಂತೆ ಕೈಗೊಂಡು ಅದರ ಸಾಧನೆಯೊಂದೇ ತಮ್ಮ ಪ್ರಪಂಚವೆಂಬಂತೆ ಬದುಕಿದ ಋಷಿ ಸದೃಶವ್ಯಕ್ತಿ ಡಾ. ಅ.ನೇ. ಉಪಾಧ್ಯೆ ಅವರು. ಅವರು ವಿದ್ವತ್ತಿನ ಅರಮನೆಯಲ್ಲಿ ಅನೇಕ ಸಾಲುದೀಪಗಳನ್ನು ಹಚ್ಚಿಟ್ಟವರು. ಸ್ವತಃ ಅವರ ವ್ಯಕ್ತಿತ್ವವೇ ಒಂದು ನಂದಾದೀಪ.

### ಹುಟ್ಟು ಬಾಲ್ಯ ಬೆಳವಣಿಗೆ

ಡಾ. ಆ.ನೇ. ಉಪಾಧ್ಯೆ ಅವರ ಪೂರ್ಣ ಹೆಸರು ಆದಿನಾಥ ನೇಮಿ ನಾಥ ಉಪಾಧ್ಯೆ ಎಂದು. ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನಲ್ಲಿ ಸದಲಗಾ ಎಂಬ ಗ್ರಾಮವಿದೆ. ಅಲ್ಲಿನ ಒಂದು ಸಾಮಾನ್ಯ ಜೈನಪುರೋಹಿತ ಕುಟುಂಬದಲ್ಲಿ ಹುಟ್ಟಿದ ಮಗು ಈ ಆದಿನಾಥ. ತಂದೆಯ ಹೆಸರು ನೇಮಿನಾಥ. ತಾಯಿ ಚಂದ್ರಾಬಾಯಿಯವರು. ಜೈನರಲ್ಲಿ ಪೌರೋಹಿತ್ಯ ಮಾಡುವವರಿಗೆ - ಉಪಾಧ್ಯೆ, ಪಂಡಿತ, ಬಸ್ತಿಪಂಡಿತ - ಹೀಗೆ ಯಾವುದಾದ ರೊಂದು ಅಡ್ಡ ಹೆಸರು (Sur Name) ಉತ್ತರ ಕರ್ನಾಟಕದಲ್ಲಿ ಇರುತ್ತದೆ. ಈಗಲೂ ಇದೇ ರೂಢಿ. ಈ ಕಾರಣದಿಂದ ಈ ಮನೆತನಕ್ಕೆ 'ಉಪಾಧ್ಯೆ' ಎಂಬುದು ವಂಶನಾಮವಾಗಿತ್ತು.

ಆದಿನಾಥರ ಮೂಲ ಹೆಸರು ಕಲ್ಲಪ್ಪ. ಹಾಗೆ ಕರೆಯುವುದರ ಹಿಂದಿರುವ ಕಾರಣ ಮನೋವೇದಕವಾದದ್ದು. ಈ ಮಗುವಿಗಿಂತ ಮೊದಲು ನೇಮಿನಾಥ ಚಂದ್ರಾಬಾಯಿ ದಂಪತಿಗಳಿಗೆ ನಾಲ್ವರು ಗಂಡುಮಕ್ಕಳು ಹುಟ್ಟಿದ್ದರು. ಆದರೆ ಆ ನಾಲ್ಕು ಮಕ್ಕಳೂ ತೀರಾ ಚಿಕ್ಕ ವಯಸ್ಸಿನಲ್ಲೇ ತೀರಿಕೊಂಡು ತಾಯ್ತಂದೆ ಗಳ ಒಡಲಲ್ಲಿ ಸಂಕಟದ ಕಿಚ್ಚು ಹಚ್ಚಿದ್ದವು. ಅನಂತರ ಹುಟ್ಟಿದ ಈ ಐದನೆಯ ಮಗುವಾದರೂ ಗಟ್ಟಿಮುಟ್ಟಾಗಿ ಕಲ್ಲಿನಂತೆ ಬಾಳಲಿ ಎಂಬ ಆಶಯದಿಂದ ಈ ಮಗುವಿಗೆ 'ಕಲ್ಲಪ್ಪ' ಎಂದು ಹೆಸರಿಟ್ಟರು[3], ಕಲ್ಲಪ್ಪ ಹುಟ್ಟಿದ್ದು 1906ರ ಫೆಬ್ರುವರಿ ಎರಡನೇ ದಿನದಂದು.

ಕಲ್ಲಪ್ಪ ಬೆಳೆದು ದೊಡ್ಡವನಾಗುತ್ತಿದ್ದಂತೆ ಸದಲಗಾ ಗ್ರಾಮದಲ್ಲಿಯೇ ಪ್ರಾಥಮಿಕ ಶಾಲೆಗೆ ಸೇರಿದರು. ಶಾಲೆಗೆ ಸೇರಿಸುವಾಗ ಇವರ ಹೆಸರನ್ನು 'ಆದಿನಾಥ' ಎಂದು ಬರೆಸಲಾಯಿತು. ಇದು ಜೈನರ ಇಪ್ಪತ್ನಾಲ್ಕು ತೀರ್ಥಂಕರರ ಪೈಕಿ ಮೊದಲನೆಯ ತೀರ್ಥಂಕರನ ಹೆಸರು. ಹೀಗೆ 'ಕಲ್ಲಪ್ಪ' ಎಂದಿದ್ದು ಮಗು ಆದಿನಾಥ ನೇಮಿನಾಥ ಉಪಾಧ್ಯೆ ಆದ.

ತಂದೆ ನೇಮಿನಾಥ ಉಪಾಧ್ಯೆಯವರು ಬೇಗನೇ ತೀರಿಕೊಂಡರು. ಮಗುವನ್ನು ಲಾಲಿಸಿ ಪೋಷಿಸುವ ಹೊಣೆ ತಾಯಿ ಚಂದ್ರಾಬಾಯಿ ಹಾಗೂ ಅಜ್ಜನ ಮೇಲೆ ಬಿದ್ದಿತು. ಸ್ವಲ್ಪ ಜಮೀನು ಸಹ ಇದ್ದು ಒಕ್ಕಲುತನವನ್ನು ಇವರು ನಡೆಸುತ್ತಿದ್ದರು.

ಸದಲಗಾ ಮತ್ತು ಶಮನೇವಾಡಿಗಳ ಸರ್ಕಾರಿ ಕನ್ನಡ ಶಾಲೆಗಳಲ್ಲಿ ಬಾಲಕನ ಪ್ರಾಥಮಿಕ ಶಿಕ್ಷಣ ನಡೆಯಿತು. ನಂತರ ಪ್ರೌಢಶಾಲೆಗೆ ಸೇರಲೆಂದು ಬೆಳಗಾವಿಗೆ ಹೋಗಬೇಕಾಯಿತ. ಅಲ್ಲಿಯ ಮಾಣಿಕಭಾಗ ಎಂಬಲ್ಲಿ ಜೈನ ಬೋರ್ಡಿಂಗ್ ಇತ್ತು. ಇದೊಂದು ಉಚಿತ ವಿದ್ಯಾರ್ಥಿನಿಲಯ. ಆದಿನಾಥ ಇಲ್ಲಿದ್ದುಕೊಂಡು ಸಮೀಪದಲ್ಲಿಯೇ ಇದ್ದ 'ಕೋಟೆ ಜಿ.ಶಿ. ಸ್ಕೂಲ್' ಎಂದು ಕರೆಯಲ್ಪಡುತ್ತಿದ್ದ 'ಗಿಲಗಿಂಜಿ ಅರಟಾಳ ಹೈಸ್ಕೂಲ್'ಗೆ ಸೇರದನು. ಹೈಸ್ಕೂಲಿನಲ್ಲಿ ವಿದ್ಯಾರ್ಥಿವೇತನವೂ ಸಿಕ್ಕಿತು. 'ಮಾಣಿಕಭಾಗ ದಿಗಂಬರ ಜೈನ ಬೋರ್ಡಿಂಗ್'ನಲ್ಲಿ ಪ್ರತಿದಿನವೂ ಧಾರ್ಮಿಕ ಶಿಕ್ಷಣವನ್ನು ಕ್ಲುಪ್ತಕಾಲದಲ್ಲಿ ನೀಡಲಾಗುತ್ತಿತ್ತು. ಪ್ರಖ್ಯಾತ ಜೈನ ವಿದ್ವಾಂಸರೂ ಮೈಸೂರು ಅರಮನೆಯ ಆಸ್ಥಾನ ಪಂಡಿತರೂ ಆದ ಪಂಡಿತ್ ಎ. ಶಾಂತಿರಾಜಶಾಸ್ತ್ರಿ ಅವರು ('ಮಹಾಪುರಾಣ'ವನ್ನು ಕನ್ನಡಕ್ಕೆ ಅನುವಾದಿಸಿದವರು) ವರ್ಷಕ್ಕೊಂದು ಬಾರಿ ಈ ವಿದ್ಯಾರ್ಥಿ ನಿಲಯಕ್ಕೆ ಭೇಟಿಕೊಟ್ಟು ಕೆಲವು ದಿನಗಳ ಕಾಲ ತಂಗಿದ್ದು ವಿದ್ಯಾರ್ಥಿಗಳಿಗೂ ಅಲ್ಲಿಗೆ ಬರುತ್ತಿದ್ದ ಶ್ರಾವಕರಿಗೂ ಜೈನಧರ್ಮ, ಶಾಸ್ತ್ರ, ಸಾಹಿತ್ಯಗಳ ಬಗ್ಗೆ ಪ್ರವಚನ ನೀಡುತ್ತಿದ್ದರು. ಇದು ಬಹುಶಃ ಆದಿನಾಥನಲ್ಲಿ ಧರ್ಮ, ಸಾಹಿತ್ಯಗಳ ಬಗ್ಗೆ ಅಭಿರುಚಿ ಕೆರಳಿಸಿದ ಮೊಟ್ಟಮೊದಲ ಸಂಗತಿ. ಕೈಗೆ ಸಿಕ್ಕ ಪುಸ್ತಕಗಳನ್ನು ಲಕ್ಷ್ಯಗೊಟ್ಟು ತಿರುವಿ ಹಾಕುವ, ತಕ್ಕಮಟ್ಟಿಗೆ ಅರ್ಥಮಾಡಿಕೊಳ್ಳುವ ಆಸಕ್ತಿ ಸಾಮರ್ಥ್ಯಗಳು ಬೆಳೆದದ್ದು ಈ ಅವಧಿಯಲ್ಲಿಯೇ.

ಅಧ್ಯಯನದ ಕಡೆ ಆದಿನಾಥನ ಒಲವನ್ನು ತಿರುಗಿಸಿದ ಇನ್ನೊಂದು ಅಂಶವೆಂದರೆ ಸದಲಗಾದ ಅವರ ಮನೆಯಲ್ಲಿದ್ದ ಗ್ರಂಥಭಂಡಾರ. ಈ ಗ್ರಂಥ ಭಂಡಾರದಲ್ಲಿ ಪ್ರಾಕೃತ, ಅಪಭ್ರಂಶ ಕಾವ್ಯಗಳು, ಶಬ್ದಮಣಿ ದರ್ಪಣ, ಹಳಗನ್ನಡ ಗ್ರಂಥಗಳು, ತೆಲುಗು - ಕನ್ನಡ ದೇವನಾಗರಿ ಲಿಪಿಯಲ್ಲಿನ ಗ್ರಂಥಗಳನ್ನು ರಜೆಗೆ ಮನೆಗೆ ಬಂದಾಗಲೆಲ್ಲಾ ಓದುವ ಅಭ್ಯಾಸ ಬೆಳೆಯಿತು. ಸಣ್ಣ ಹುಡುಗ ಈ ಗ್ರಂಥಗಳನ್ನು ಒರಟೊರಟಾಗಿ ಎಳೆದು ಹಾಳುಮಾಡಿ ಬಿಟ್ಟಾನು ಎಂಬ ಸಹಜ ಭಯದಿಂದ ಅಜ್ಜ ಈ ಹುಡುಗನನ್ನು ಪುಸ್ತಕದ ಬೀರುವಿನಲ್ಲಿ ಕೈಹಾಕದಂತೆ ಬೆದರಿಸುತ್ತಿದ್ದರು. ಆದರೆ ಹುಡುಗನಿಗೆ ಆ ಗ್ರಂಥಲೋಕದಲ್ಲಿ ವಿಹರಿಸುವ ಬಯಕೆ ; ಹೀಗಾಗಿ ಅಜ್ಜನ ಕಣ್ಣು ತಪ್ಪಿಸಿ ಅಲ್ಲಿಂದ ಪುಸ್ತಕಗಳನ್ನೆತ್ತಿಕೊಂಡು ಓದುತ್ತಿದ್ದ.

**ವಿದ್ಯಾಭ್ಯಾಸದಲ್ಲಿ ಪ್ರಗತಿ**

ಆದಿನಾಥ 1923ರಲ್ಲಿ ಮೆಟ್ರಿಕ್ಯುಲೇಷನ್ ಮುಗಿಸಿದನು. ಕಾಲೇಜು ಶಿಕ್ಷಣ ಪಡೆಯುವ ಆಸೆ, ಆದರೆ ಬಡತನ. ಇಂಥ ವೇಳೆಯಲ್ಲಿ ನೆರವಿಗೆ ಬಂದವರು ಅಂದು ಕೊಲ್ಹಾಪುರ ದಿವಾನರಾಗಿದ್ದ ಅಣ್ಣಾಸಾಹೇಬ ಲಠ್ಠೆ ಅವರು. ಅವರು ಸಂಪನ್ನ ವ್ಯಕ್ತಿ. ಸಂಸ್ಥಾನಾಧೀಶರೊಡನೆಯೂ ಜೈನ ಸಮಾಜದಲ್ಲೂ, ಸಾರ್ವಜನಿಕರಿಂದಲೂ ಒಳ್ಳೆಯ ಸಂಬಂಧ, ಸದಭಿಪ್ರಾಯಗಳನ್ನು ಸಂಪಾದಿಸಿಕೊಂಡಿದ್ದ ವ್ಯಕ್ತಿ. ಇವರ ನೆರವಿನಿಂದ ಕೊಲ್ಹಾಪುರದ ರಾಜಾರಾಮ ಕಾಲೇಜು ಸೇರಿದರು. ಸ್ವಲ್ಪ ಕಾಲದ ನಂತರ ಅದನ್ನು ತೊರೆದು ಅದಕ್ಕಿಂತಲೂ ಚಿಕ್ಕ ಊರಾದ ಸಾಂಗ್ಲಿಯಲ್ಲಿದ್ದ, ರಾಜಾರಾಮ ಕಾಲೇಜಿಗಿಂತಲೂ ಹೆಚ್ಚು ಹೆಸರುವಾಸಿಯಾಗಿದ್ದ ವಿಲಿಂಗ್ಡನ್ ಕಾಲೇಜನ್ನು ಸೇರಿದರು. ಸಂಸ್ಕೃತ ಮತ್ತು ಅರ್ಧಮಾಗಧಿ ವಿಷಯಗಳನ್ನು ಪ್ರಧಾನ ವಿಷಯಗಳನ್ನಾಗಿ ಆರಿಸಿಕೊಂಡು ಬಿ.ಎ. ಪದವಿಯನ್ನು 1928ರಲ್ಲಿ ಪಡೆದರು.

ಅಲ್ಲಿಂದ ಮುಂದೆ ಉಪಾಧ್ಯೆ ಪುಣೆಯ 'ಭಂಡಾರಕರ್ ಓರಿಯೆಟಲ್ ರಿಸರ್ಚ್ ಇನಸ್ಟಿಟ್ಯೂಟ್' ಸೇರಿದರು. ಅಂತಾರಾಷ್ಟ್ರೀಯ ಖ್ಯಾತಿಯ ಪ್ರಾಚ್ಯ ವಿದ್ಯಾ ವಿದ್ವಾಂಸರೂ ಸದಾಕಾಲಕ್ಕೂ ಪ್ರಾತಃಸ್ಮರಣೀಯರೂ ಆದ ಡಾ.ಪಿ.ಎಲ್. ವೈದ್ಯ, ವಿ.ಎಸ್. ಸುಕ್ತಂಕರ್, ಪ್ರೊ. ಎಸ್.ಕೆ. ಬಿಳವಲಕರ್ ಇವರುಗಳ ಪರಿಚಯ, ಮಾರ್ಗದರ್ಶನ, ವಾತ್ಸಲ್ಯ ಇವರಿಗೆ ಲಭ್ಯವಾಯಿತು. ಆ ಮಹನೀಯರು ಇವರ ವಿದ್ವತ್ ಜೀವನದ ರೂವಾರಿಗಳಾದರು. ಸಂಶೋಧನೆ, ಗ್ರಂಥ ಸಂಪಾದನೆಯ ಮರ್ಮಗಳನ್ನೆಲ್ಲ ಇವರಿಗೆ ತಿಳಿಸಿಕೊಟ್ಟ ನಿಸ್ವಾರ್ಥ ಗುರುಗಳವರು. ಇವರ ಸಾಹಚರ್ಯದಲ್ಲಿ ಉಪಾಧ್ಯೆ ಮುಂಬೈ ವಿಶ್ವವಿದ್ಯಾಲಯದ ಎಂ.ಎ. ಪದವಿ ಪಡೆದರು (1930).

**ಅಧ್ಯಾಪಕ ವೃತ್ತಿ**

ಎಂ.ಎ. ಮುಗಿಯುತ್ತಿದ್ದಂತೆ ಕೊಲ್ಹಾಪುರದ ರಾಜಾರಾಮಕಾಲೇಜಿನಲ್ಲಿ ಅರ್ಧಮಾಗಧಿ ಅಧ್ಯಾಪಕರಾಗಿ ನೇಮಕಗೊಂಡ ಉಪಾಧ್ಯೆ ತಮ್ಮ ವಿದ್ವತ್ತು ಹಾಗೂ ಬೋಧನಾ ಸಾಮರ್ಥ್ಯದಿಂದಾಗಿ ಮುಂದೆ ಮೂರೇ ವರ್ಷಗಳಲ್ಲಿ (1933) ಪ್ರಾಧ್ಯಾಪಕರಾಗಿ ಬಡ್ತಿ ಪಡೆದರು.

ಮುಂದೆ ತಮ್ಮ ಮೂವತ್ಮೂರು ವರ್ಷಗಳ ದೀರ್ಘಕಾಲದ ಅಧ್ಯಾಪಕ ವೃತ್ತಿಯನ್ನು ರಾಜಾರಾಂ ಕಾಲೇಜಿನಲ್ಲಿಯೇ ನಡೆಸಿದರು.

ಮುಂದೆ 1938ರಲ್ಲಿ ಅಂದರೆ ತಮ್ಮ 33ನೇ ವಯಸ್ಸಿನಲ್ಲಿ ಮುಂಬೈ ವಿಶ್ವವಿದ್ಯಾಲಯದಿಂದ ಡಿ.ಲಿಟ್. ಪದವಿ ಪಡೆದರು.

ಮುಂಬೈ ವಿಶ್ವವಿದ್ಯಾಲಯವು ಸಂಶೋಧಕರಿಗೆ ಪ್ರಖ್ಯಾತ ಸ್ಪ್ರಿಂಜರ್ ರಿಸರ್ಚ್ ಸ್ಕಾಲರ್‌ಶಿಪ್, ಡಾ. ಉಪಾಧ್ಯೆಯವರಿಗೆ ಅದೇ ವರ್ಷ ದೊರಕಿತು. 1939ರಿಂದ 1942ರವರೆಗೆ ಮೂರು ವರ್ಷಗಳ ಕಾಲ ಈ ಯೋಜನೆಯಡಿಯಲ್ಲಿ ಸಂಶೋಧನೆ ನಡೆಸಿದರು. ಇದೇ ಅವಧಿಯಲ್ಲಿ ಹೈದರಾಬಾದಿನಲ್ಲಿ ನಡೆದ ಅಖಿಲಭಾರತ ಪ್ರಾಚ್ಯವಿದ್ಯಾ ಸಮ್ಮೇಳನದಲ್ಲಿ, ಪ್ರಾಕೃತ, ಪಾಲಿ, ಬೌದ್ಧಧರ್ಮ ಮತ್ತು ಜೈನಧರ್ಮಕ್ಕೆ ಸಂಬಂಧಿಸಿದ ವಿಭಾಗದ ಅಧ್ಯಕ್ಷತೆಯ ಗೌರವ ಅವರಿಗೆ ಪ್ರಾಪ್ತವಾಯಿತು (1941). ಆಗಿನ್ನೂ ಅವರಿಗೆ ಮೂವತ್ತೈದು ವರ್ಷ :

ತಮ್ಮ ತಾಯಿ ಎಂದರೆ ಉಪಾಧ್ಯೆ ಅವರಿಗೆ ಪಂಚಪ್ರಾಣ. ಇವರ ವಿದ್ವತ್ ಗ್ರಂಥಗಳು ಪ್ರಕಟವಾಗಿ ಖ್ಯಾತಿಲತೆ ಹಬ್ಬುತ್ತಿದ್ದಂತೆ ಜರ್ಮನಿಗೆ ಬರಬೇಕೆಂದು ಒಂದು ಆಮಂತ್ರಣ ಬಂದಿತು. ತಾಯಿ ಮಗನನ್ನು ಅಷ್ಟು ದೂರ ಕಳಿಸಲು ಒಪ್ಪಲಿಲ್ಲ. ಸರಿ. ಜರ್ಮನಿಗೆ ಹೋಗುವುದನ್ನೇ ಬಿಟ್ಟುಬಿಟ್ಟರು. ಇಂಥ ಮತ್ತೊಂದು ಪ್ರಸಂಗವೂ ಮುಂದೆ ಬಂದಿತು. ಧಾರವಾಡದ

ಕರ್ನಾಟಕ ಕಾಲೇಜಿನಲ್ಲಿ ಅರ್ಧಮಾಗಧಿ ವಿಭಾಗವನ್ನು ಅಭಿವೃದ್ಧಿಪಡಿಸಲೆಂದು ಕುಲಪತಿ ಡಾ.ಡಿ.ಸಿ. ಪಾವಟೆಯವರು ಉಪಾಧ್ಯೆಯವರನ್ನು ಅಲ್ಲಿಗೆ ಕರೆ ತರುವ ಯೋಜನೆ ಹಾಕಿದರು (1956). ಮುಪ್ಪಿನ ತಾಯಿ ಕೊಲ್ಹಾಪುರ ಬಿಡ ಲೊಲ್ಲೆನೆಂದಿದ್ದರಿಂದ ಉಪಾಧ್ಯೆ ಧಾರವಾಡಕ್ಕೂ ಬರಲೊಪ್ಪಲಿಲ್ಲ. ಕೊಲ್ಹಾ ಪುರವೇ ಅವರ ಜೀವಮಾನದ ಕರ್ಮಭೂಮಿಯಾಯಿತು.

1963ರಲ್ಲಿ ನಿವೃತ್ತರಾದ ಬಳಿಕ ಒಂಭತ್ತು ವರ್ಷ ಯು.ಜಿ.ಸಿ. ಫೆಲೋ ಶಿಪ್‌ನಡಿಯಲ್ಲಿ ಸಂಶೋಧನ ಕಾರ್ಯ ಮುಂದುವರೆಸಿದರು (1963-72).

ಮೈಸೂರು ವಿಶ್ವವಿದ್ಯಾಲಯದಲ್ಲಿ 'ಜೈನಶಾಸ್ತ್ರ ಮತ್ತು ಪ್ರಾಕೃತ ಅಧ್ಯಯನ ವಿಭಾಗ 1971ರಲ್ಲಿ ಆರಂಭವಾಯಿತು. ಅದರ ಮುಖ್ಯಸ್ಥರಾಗಿ ಬರಬೇಕೆಂಬ ಆಹ್ವಾನವನ್ನು ಸ್ವೀಕರಿಸಿ ಅಲ್ಲಿಗೆ ಬಂದ ಡಾ. ಉಪಾಧ್ಯೆ ಆ ವಿಭಾಗವನ್ನು ಕಟ್ಟಿ ಬೆಳೆಸಿದರು. ಮೈಸೂರು ಬೆಂಗಳೂರುಗಳಲ್ಲಿನ ಸಾಹಿತ್ಯ ಸಂಶೋಧಕರಿಗೆ ಉಪಾಧ್ಯೆ ಸ್ಫೂರ್ತಿಯಾದರು. ತರುಣ ಸಂಶೋಧಕರನ್ನು ಪ್ರೇರಿಸಿದರು.

ಮೈಸೂರಿನಿಂದ ನಿವೃತ್ತಿ ಪಡೆದು ಹೊರಡುವ ಮುನ್ನ ಅವರಿಗೆ ರಾಷ್ಟ್ರಕವಿ ಕುವೆಂಪು ಅವರ ಅಧ್ಯಕ್ಷತೆಯಲ್ಲಿ ಹೃದಯಸ್ಪರ್ಶಿ ಬೀಳ್ಕೊಡುಗೆ ಸಮಾರಂಭ ನಡೆಯಿತು. ಬೆಂಗಳೂರಲ್ಲೂ ಬೀಳ್ಕೊಡುಗೆ ಸಮಾರಂಭಗಳು ನಡೆದವು. ಅಕ್ಟೋಬರ್ ಮೊದಲ ವಾರದಲ್ಲಿ ಬೆಂಗಳೂರಿಂದ ಕೊಲ್ಹಾಪುರ ತಲುಪುತ್ತಿದ್ದಂತೆ ತೀವ್ರ ಹೃದಯಘಾತಕ್ಕೆ ಒಳಗಾದ ಈ ಆಚಾರ್ಯರನ್ನು ನೇರವಾಗಿ ಆಸ್ಪತ್ರೆಗೆ ಸೇರಿಸಲಾಯಿತು. ಮುಂದೆ ಒಂದೆರಡೇ ದಿನಗಳಲ್ಲಿ ತಾ. 8-10-1975ರಂದು ಈ ಸಾರಸ್ವತ ತಪಸ್ವಿ ಕಣ್ಮುಚ್ಚಿದರು, ಶಾಶ್ವತವಾಗಿ.

ಅವರ ಆಕಸ್ಮಿಕ ಅಗಲಿಕೆಯನ್ನು ಡಾ. ಹಂಪನಾ ಹೀಗೆ ವರ್ಣಿಸುತ್ತಾರೆ: ದೀಪದ ಕುಡಿ ಆರುವಂತೆ ತಟಕ್ಕನೆ ಕಣ್ಮರೆಯಾದರು. ಸಂಶೋಧನೆಯ ದೊಡ್ಡ ಹಡಗು ತನ್ನೆಲ್ಲ ಸರಕಿನೊಂದಿಗೆ ಮುಳುಗಿತು. (ಡಾ. ಹಂಪನಾ- ಪೂರ್ವೋಕ್ತ ಗ್ರಂಥ ಪು. 43)

**ಉಪಾಧ್ಯೆ ಬರಹಗಳು**

'ಡಾ. ಆ.ನೇ. ಉಪಾಧ್ಯೆಯವರು ಬರಹವನ್ನು ಲಾಘವವಾಗಿ ತೆಗೆದು ಕೊಳ್ಳಲಿಲ್ಲ. ಅವರು ಯಾವಾಗಲೂ ಲೇಖನಕೃಷಿ ಗಂಭೀರವಾದ ಶ್ರಮದ ವ್ಯವಸಾಯವೆಂದು ನಂಬಿದರು. ಏನೇ ವಿಷಯ ಆರಿಸಿಕೊಂಡರೂ, ತತ್ಸಂಬಂಧ ವಾದ ಲಭ್ಯ ಮಾಹಿತಿಗಳನ್ನು ಕೂಲಂಕಷವಾಗಿ ಜಾಲಾಡುತ್ತಿದ್ದರು. ಅದಷ್ಟೂ ಮೂಲ ಸಾಮಗ್ರಿ ಶೋಧನೆಗೆ ತೊಡಗುತ್ತಿದ್ದರು'.[4]

'...ಅವರ ಮಟ್ಟದ ವಿದ್ವತ್ತನ್ನು ಹೊಂದುವ ಆಕಾಂಕ್ಷೆಯನ್ನಾದರೂ ಯಾರಾದರೂ ಇಟ್ಟುಕೊಳ್ಳಬಹುದೇ ಎಂಬುದೂ ಸಹ ಸಂಶಯಾಸ್ಪದ... ಜೈನ ಅಧ್ಯಯನದ ಇತಿಹಾಸವು ಡಾ. ಉಪಾಧ್ಯೆ ಅವರ ಕೊಡುಗೆಯ ಉಲ್ಲೇಖ ವಿಲ್ಲದೆ ಖಂಡಿತಾ ಪೂರ್ಣವಾಗದು[5].

ಡಾ. ಉಪಾಧ್ಯೆ ಅವರು ಪ್ರಮುಖವಾಗಿ ಗ್ರಂಥಸಂಪಾದನಾ ಕ್ಷೇತ್ರದಲ್ಲಿ ಕೆಲಸ ಮಾಡಿದವರು. ಅವರನ್ನು 'ಗ್ರಂಥ ಸಂಪಾದನಾಚಾರ್ಯ' ಎಂದೇ ಅವ ರಿಂದ ಪ್ರೇರಣೆ ಪಡೆದವರಲ್ಲೊಬ್ಬರಾದ ಡಾ. ಹಂಪನಾ ವರ್ಣಿಸಿದ್ದಾರೆ. ಅದಕ್ಕೆ ಹೊಂದಿಕೊಂಡಂತೆ ಸಾಹಿತ್ಯ, ಇತಿಹಾಸ, ಭಾಷಾ ಶಾಸ್ತ್ರ, ಶಬ್ದನಿಷ್ಪತ್ತಿ - ಇತ್ಯಾದಿ ಶಾಖೆಗಳಲ್ಲಿ ಪ್ರಾವೀಣ್ಯ ಪಡೆದಿದ್ದವರು.

ಡಾ. ಉಪಾಧ್ಯೆ ತಮ್ಮ ಮೊದಲ ಸಂಶೋಧನ ಲೇಖನ ಬರೆದದ್ದು 1929ರಲ್ಲಿ 'Samanthabhadra-an outstanding personality' ಎಂಬ ಲೇಖನ ಅದು. ಸಮಂತಭದ್ರರೆಂಬ ಪ್ರಸಿದ್ಧ ಜೈನಾಚಾರ್ಯರನ್ನು ಕುರಿತ ಲೇಖನ ಅದು. ಅವರು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿದ ಮೊದಲ ಗ್ರಂಥ 'ಪಂಚಸುತ್ತಂ' ಎಂಬುದು. ಅದು ಒಬ್ಬ ಅಜ್ಞಾತ ಕವಿಯಿಂದ ರಚಿತವಾಗಿದ್ದ ಪ್ರಾಕೃತ ಕೃತಿ. ಇದು ಜೈನ ಸಿದ್ಧಾಂತ ಗ್ರಂಥ. ಇದಕ್ಕೆ ಬರೆದ ವಿಸ್ತೃತ ಪ್ರಸ್ತಾವನೆಯಲ್ಲಿ ಆ ಕೃತಿಯ ವಸ್ತು ಮತ್ತು ಪ್ರತಿಪಾದಿತ ಸಿದ್ಧಾಂತ ವನ್ನು ಹಲವು ಮಗ್ಗುಲುಗಳಿಂದ ಚರ್ಚಿಸಿದ್ದಾರೆ. ಇದನ್ನು ಇಷ್ಟೊಂದು ಪ್ರಬುದ್ಧವಾಗಿ ಸಂಪಾದಿಸಿ ಪ್ರಕಟಿಸಿದಾಗ ಅವರಿಗಿನ್ನೂ ಕೇವಲ 29 ವರ್ಷ (1935). ಆಗಿನ್ನೂ ಅವರಿಗೆ ಡಾಕ್ಟರೇಟ್ ಬಂದಿರಲಿಲ್ಲ. ಈ ತರುಣ ಸಂಪಾದಿಸಿದ ಈ ಮಹತ್ವದ ಗ್ರಂಥದ ಬಗ್ಗೆ ವಿದೇಶೀ ವಿದ್ವಾಂಸರಾದ - ಷೂಬ್ರಿಂಗ್, ಎಲ್.ಡಿ. ಬಾರ್ನೆಟ್, ವಿಂಟರ್‌ನಿಟ್ಸ್ ಮೊದಲಾದ ಖ್ಯಾತ ಪಂಡಿತರು ಮುಕ್ತಕಂಠದ ಪ್ರಶಂಸೆ ಮಾಡಿದರು.

ಅದರ ಮರುವರ್ಷ (1935) ಅವರು ಮತ್ತೊಂದು ಮಹಾಕೃತಿಯ ಸಂಪಾದನಾ ಕಾರ್ಯ ಮುಗಿಸಿ ಪ್ರಕಟಿಸಿದರು. ಅದು ಕುಂದಕುಂದಾ ಚಾರ್ಯರೆಂಬ ಮತ್ತೊಬ್ಬ ಪ್ರಸಿದ್ಧ ಜೈನಾಚಾರ್ಯರ ಪ್ರಾಕೃತ ಗ್ರಂಥ - 'ಪ್ರವಚನ ಸಾರ'. ಈ ಗ್ರಂಥದ ಅಧ್ಯಯನ ಟಿಪ್ಪಣಿಯನ್ನು ಅವರು ತಮ್ಮ 21ನೆಯ ವಯಸ್ಸಿನಿಂದಲೇ ಆರಂಭಿಸಿದ್ದರು. ಈ ಗ್ರಂಥದ ಪೀಠಿಕೆಯಲ್ಲಿ ಗ್ರಂಥ ಸಂಪಾದನೆಗೆ ಬಳಸಿದ ಹಸ್ತಪ್ರತಿಗಳ ಸ್ವರೂಪ, ಕುಂದಕುಂದಾ ಚಾರ್ಯರ ಕಾಲ ಮತ್ತು ಜೀವನ, ಈ ಕೃತಿಯಲ್ಲಿ ನಿರೂಪಿತವಾಗಿರುವ ಜೈನ ತತ್ವ ವಿಚಾರ -ಇವೆಲ್ಲವನ್ನೂ ವಿವರವಾಗಿ ಚರ್ಚಿಸಿದ್ದಾರೆ.

ಈ ಪುಸ್ತಕವನ್ನೂ ಇದಕ್ಕಿಂತ ಹಿಂದೆ ಪ್ರಕಟಿಸಿದ ತಮ್ಮ ಸಂಪಾದಿತ ಕೃತಿಗಳನ್ನೂ ಸಂಪ್ರಬಂಧಗಳನ್ನೂ ಒಟ್ಟಾಗಿ ಸೇರಿಸಿ ಮುಂಬೈ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸಿದಾಗ ಆ ಕೃತಿಗಳು ಹೊರಸೂಸುವ ವಿದ್ವತ್ ಪ್ರತಿಭೆಯನ್ನೂ ಸಂಪಾದನಾ ಕಾರ್ಯದಲ್ಲಿನ ವಿಚಕ್ಷಣತೆಯನ್ನೂ ಜ್ಞಾನದ ನಿರ್ದುಷ್ಟತೆಯನ್ನೂ ಗಮನಿಸಿದ ಪರೀಕ್ಷಕರು ಬೆರಗಾದರು. ಸಂತೋಷದಿಂದ ಅವರಿಗೆ ಡಿ. ಲಿಟ್. ಪದವಿಗೆ ಶಿಫಾರಸ್ಸು ಮಾಡಿದರು. ಇವರ ಗುರುಗಳಾದ ಡಾ. ಪಿ.ಎಲ್. ವೈದ್ಯ ಹಾಗೂ ಡಾ. ಸುಕ್ತಂಕರ್ ಇವರುಗಳು ತುಂಬುಹೃದಯ ದಿಂದ ಇವರನ್ನು ಹೊಗಳಿ 'ಗುರುವನ್ನು ಮೀರಿಸಿದ ಗುರುವಾಗಿದ್ದೀರಿ' ಎಂದು ಮೆಚ್ಚಿದರು. ಅನಂತರ ಇವರಿಗೆ ಸ್ಪ್ರಿಂಜರ್ ಫೆಲೋಶಿಪ್ ದೊರತದ್ದು ಡಾ. ಸುಕ್ತಂಕರ್ ಅವರ ಶಿಫಾರಸ್ಸಿನಿಂದಲೇ.

ತಮ್ಮ ಜೀವಿತಾವಧಿಯಲ್ಲಿ ಉಪಾಧ್ಯೆ ಮಾಡಿದ ವಿದ್ವತ್‌ಕಾರ್ಯ ಬೃಹತ್ ಮಹತ್ತುಗಳಲ್ಲಿ ಘನವಾದದ್ದು. ಅವರು ಬರೆದಿರುವ, ಸಂಪಾದಿಸಿರುವ ಗ್ರಂಥಗಳ ಸಂಖ್ಯೆ ಮೂವತ್ತು. ವಿದ್ವತ್ ಪ್ರಬಂಧಗಳ ಸಂಖ್ಯೆ ಸುಮಾರು ಇನ್ನೂರು. ಪುಸ್ತಕ ವಿಮರ್ಶೆಗಳು ಎಪ್ಪತ್ತೈದು.

ಅನ್ಯ ಸಮಾನಧರ್ಮ ವಿದ್ವಾಂಸರ ಜೊತೆ ಸೇರಿಯೂ ಅನೇಕ ಕೃತಿ ಗಳನ್ನು ಉಪಾಧ್ಯೆಯವರು ಸಂಪಾದಿಸಿಕೊಟ್ಟಿದ್ದಾರೆ. ಪ್ರೊ. ಕೆ.ಜಿ.ಕುಂದಣಗಾರ ರೊಡನೆ ಸೇರಿ ಎರಡು ಕನ್ನಡ ಕಾವ್ಯಗಳನ್ನು ಸಂಪಾದಿಸಿದ್ದಾರೆ. ಇವುಗಳೆಂದರೆ - ಚಿನ್ಮಯ ಚಿಂತಾಮಣಿ (1930) ಹಾಗೂ ಜ್ಞಾನಭಾಸ್ಕರ ಚರಿತೆ (1931), ಅಧ್ಯಾಪನ ವೃತ್ತಿಗೆ ಸೇರಿದ ಆರಂಭದಲ್ಲಿಯೇ ಈ ಕೃತಿಗಳು ಪ್ರಕಟ ವಾಗಿರುವುದನ್ನೂ ಗಮನಿಸಬೇಕು. ಇವೆರಡೂ ನಡುಗನ್ನಡದ ಸಣ್ಣ ಕಾವ್ಯಗಳು.

ಡಾ. ಉಪಾಧ್ಯೆಯವರು ಕನ್ನಡದಲ್ಲಿ ಇಪ್ಪತ್ತೊಂದು ಲೇಖನಗಳನ್ನೂ, ಮೂರು ಪುಸ್ತಕಗಳನ್ನೂ ಬರೆದಿದ್ದಾರೆ. ಈ ಮೂರು ಪುಸ್ತಕಗಳಲ್ಲಿ ಎರಡು ಮೇಲೆ ಉಲ್ಲೇಖಿಸಿರುವ ಸಂಪಾದಿತ ಕಾವ್ಯಗಳು. ಇನ್ನೊಂದು ಮೂರು ಉಪನ್ಯಾಸಗಳ ಸಂಗ್ರಹ. ಅದೊಂದೇ - ಉಪಾಧ್ಯೆಯವರು ಕನ್ನಡದಲ್ಲಿ ಬರೆದಿರುವ ಸ್ವತಂತ್ರ ಕೃತಿ. ಆ ಕೃತಿಯ ಹೆಸರು - 'ಪಾಲಿ ಮತ್ತು ಪ್ರಾಕೃತ'. ಇದು ಇವರು 1966ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗದ ಆಶ್ರಯದಲ್ಲಿ ಇದೇ ವಿಚಾರದಲ್ಲಿ ನೀಡಿದ ಮೂರು ಉಪನ್ಯಾಸಗಳ ಸಂಕಲನ. ಇದರಲ್ಲಿನ ಮೊದಲನೆಯ ಉಪನ್ಯಾಸದಲ್ಲಿ ಅವರು ಬೌದ್ಧಧರ್ಮ ಹಾಗೂ ಪಾಳಿ ಭಾಷೆಗಳಿಗಿರುವ ಬಿಡಿಸಲಾಗದ ಬಾಂಧವ್ಯವನ್ನು ವಿವರಿಸಿದ್ದಾರೆ. ನಂತರದ ಉಪನ್ಯಾಸವು ಪಾಳಿ ಮತ್ತು ಪ್ರಾಕೃತಗಳ ಸಂಬಂಧವನ್ನೂ ಮೂರನೆಯದು ಪ್ರಾಕೃತಕ್ಕೂ ಕನ್ನಡಕ್ಕೂ ಇರುವ ಸಂಬಂಧವನ್ನೂ ವಿವರಿಸುತ್ತದೆ.

ಕನ್ನಡನಾಡಿನಲ್ಲಿ ಹುಟ್ಟಿ, ಕನ್ನಡ, ಸಂಸ್ಕೃತ, ಪ್ರಾಕೃತ – ಹೀಗೆ ವಿವಿಧ ಭಾಷೆಗಳಲ್ಲಿ ಕಾವ್ಯಗಳನ್ನು ಶಾಸ್ತ್ರಗ್ರಂಥಗಳನ್ನೂ ರಚಿಸಿದ ಪ್ರತಿಭಾವಂತ ಕವಿಗಳು, ಆಚಾರ್ಯರು ಆಗಿ ಹೋಗಿದ್ದಾರೆ. ಅವರನ್ನು, ಅವರ ಕೃತಿಗಳ ಮಹತ್ವವನ್ನು ಕುರಿತು ಉಪಾಧ್ಯೆಯವರು ಇಂಗ್ಲೀಷಿನಲ್ಲಿ, ಹಿಂದಿಯಲ್ಲಿ ಲೇಖನಗಳನ್ನು ಬರೆದಿದ್ದಾರೆ. ಇದರಿಂದಗಾಗಿ ಕನ್ನಡ ಸಾಹಿತ್ಯ ಹಾಗೂ ಇಲ್ಲಿನ ಮಹಾಪ್ರತಿಭೆಯ ಪೂರ್ವಸೂರಿಗಳ ಬಗೆಗೆ ತಿಳಿಯಲು ಸಾಧ್ಯವಾಯಿತು.

ಡಾ. ಉಪಾಧ್ಯೆ ಕೆಲವು ಮಹತ್ವಪೂರ್ಣ ಗ್ರಂಥಗಳನ್ನೂ ಡಾ. ಹೀರಾ ಲಾಲ್ ಜೊತೆ ಸೇರಿ ಸಂಪಾದಿಸಿದ್ದಾರೆ. ಡಾ. ಹೀರಾಲಾಲ್ ಜೈನ್, ಉಪಾಧ್ಯೆಯವರಿಗಿಂತ ಹಿರಿಯರು. ಭಾರತದ ಈ ಕಾಲದ ಪ್ರಕಾಂಡ ಪಂಡಿತರ ಲ್ಲೊಬ್ಬರು. ಇಬ್ಬರೂ ಸಮಾನ ಆಸಕ್ತಿಯುಳ್ಳವರು ಹಾಗೂ ಇಬ್ಬರ ಕಾರ್ಯಕ್ಷೇತ್ರವೂ ಒಂದೇ. ಉಪಾಧ್ಯೆಯವರಿಗೆ ಬಹುಕಾಲ ಬೆಂಬಲ ನೀಡಿದ ವರು ಇವರು. ಈ ಇಬ್ಬರ ಅಪೂರ್ವ ವಿದ್ವಜ್ಜೋಡಿ ಜೈನಶಾಸ್ತ್ರಕ್ಕೆ ಸಂಬಂಧಿಸಿದ ಹಲವು ಗ್ರಂಥಗಳನ್ನು ಸಂಪಾದಿಸಿತು.

ಹೀಗೆ ಇವರಿಬ್ಬರೂ ಕೂಡಿ ಸಂಪಾದಿಸಿದ ಗ್ರಂಥಗಳ ಪೈಕಿ ಶಿಖರಪ್ರಾಯ ವಾದುದೆಂದರೆ 'ಧವಲಾ' ಗ್ರಂಥದ ಸಂಪಾದನೆ. ಜೈನಾಗಮಗಳ ಸಾರ ಸಂಗ್ರಹವನ್ನು ಒಳಗೊಂಡಿರುವ ಈ ಪ್ರಾಕೃತ ಮಹದ್ಗ್ರಂಥದ ಏಕೈಕ ಹಸ್ತಪ್ರತಿ ಮೂಡುಬಿದಿರೆಯಲ್ಲಿತ್ತು. ಬಹುಕಷ್ಟದಿಂದ ಈ ಪ್ರತಿಯ ಒಂದು ನಕಲನ್ನು ತಯಾರಿಸಿಕೊಳ್ಳಲಾಗಿತ್ತು. ಡಾ. ಉಪಾಧ್ಯೆ ಮತ್ತು ಡಾ. ಹೀರಾಲಾಲ್ ಜೈನ್ ಇಬ್ಬರೂ ಕೂಡಿ ವರ್ಷಗಟ್ಟಲೆ ಶ್ರಮದಿಂದ ಗ್ರಂಥಸಂಪಾದನೆಯ ಆಧುನಿಕ ಮತ್ತು ಶಾಸ್ತ್ರೀಯ ತತ್ವಗಳನ್ನೆಲ್ಲ ಅನ್ವಯಿಸಿ ಸಂಪಾದಿಸಿ ಭಾಷಾಂತರ ಸಮೇತ ಹದಿನಾರು ಸಂಪುಟಗಳಲ್ಲಿ ಭಾರತೀಯ ಜ್ಞಾನಪೀಠದ ಮೂಲಕ ಪ್ರಕಟಿಸಿದರು. ಪ್ರತಿ ಸಂಪುಟವೂ ಐನೂರು ಪುಟಗಳ ಪ್ರಮಾಣದ್ದು. ಅಂದರೆ - ಇಡೀ 'ಧವಲಾ' ಗ್ರಂಥ ಒಟ್ಟು ಎಂಟುಸಾವಿರ ಪಟ್ಟುಗಳಷ್ಟು ವಿಸ್ತಾರದ್ದು. ಇದೊಂದೇ ಕೆಲಸ ಮಾಡಿದ್ದರೂ ಅವರಿಗೆ ವಿಶ್ವವಿಖ್ಯಾತಿ ಖಾತ್ರಿಯಾದ ದ್ದಾಗಿತ್ತು. ಇದು ಹಿಮಾಲಯದುನ್ನತಿಗೆ ಸಾಟಿಯಾದ ಗ್ರಂಥ ಸಂಪಾದನಾ ಕಾರ್ಯ. ಜೈನ ಆಗಮತತ್ವವನ್ನು ಅಭ್ಯಾಸ ಮಾಡಬೇಕೆನ್ನುವ ಯಾರಿಗೇ ಆಗಲಿ, ಇದೊಂದು ಮೂಲಭೂತ ಅಧಿಕೃತ ಆಧಾರಗ್ರಂಥ.

ನಲವತ್ತು ವರ್ಷಗಳ ದೀರ್ಘ ಸಾಹಚರ್ಯದ ಗೆಳೆಯರಾಗಿದ್ದ ಹೀರಾಲಾಲ್ ಜೈನ ಮತ್ತು ಉಪಾಧ್ಯೆಯವರು ಎಷ್ಟೋ ವೇಳೆ ವಿದ್ವತ್ ವಿಷಯವಾಗಿ ಭರ್ಜರಿ ಝಟಾಪಟಿ ನಡೆಸಿದ್ದುಂಟು. ಆದರೂ ಅವರ ಸ್ನೇಹ ಸ್ನಿಗ್ಧತೆ ಹಾಗೆಯೇ ಉಳಿದಿತ್ತು. ವಿದ್ವಾಂಸರ ನಡುವೆ ಇರಬೇಕಾದ ಬಾಂಧವ್ಯಕ್ಕೆ ಈ ಇಬ್ಬರ ಸ್ನೇಹ ಒಂದು ಅತ್ಯುತ್ತಮ ಉದಾಹರಣೆಯಾಗಿತ್ತು.

ಇವರಿಬ್ಬರೂ ಕೂಡಿ ಸಂಪಾದಿಸಿದ ಇತರ ಕೆಲವು ಗ್ರಂಥಗಳೆಂದರೆ - ಆತ್ಮಾನುಶಾಸನ (ಸಂಸ್ಕೃತ ಗ್ರಂಥ) 'ಪಂಚವಿಂಶತಿ', ಆತ್ಮಾನುಶಾಸನ, (ಸಂಸ್ಕೃತ) ತಿಲೋಯ ಪಣ್ಣತ್ತಿ, ಭಾಗ 1 ಮತ್ತು 2 (ಪ್ರಾಕೃತ, ಹಿಂದಿ ಮತ್ತು ಇಂಗ್ಲೀಷ್ ಎರಡೂ ಭಾಷೆಗಳಲ್ಲಿ ಇದರ ಪ್ರಸ್ತಾವನೆ ಇದೆ) ಬೃಹತ್ ಕಥಾಕೋಶ (ಸಂಸ್ಕೃತದ ಸುಪ್ರಸಿದ್ಧ ಕಥಾಕೋಶ) ಇತ್ಯಾದಿ.

ಡಾ. ಉಪಾಧ್ಯೆಯವರು ಸ್ವತಂತ್ರವಾಗಿ ಸಂಪಾದಿಸಿರುವ ಕೆಲವು ಮಹತ್ವ ಪೂರ್ಣ ಕೃತಿಗಳೆಂದರೆ - ಆನಂದ ಸುಂದರಿ (ಪ್ರಾಕೃತ - ನಾಟಕ), ಉಷಾಣಿರುದ್ಧ (ಪ್ರಾಕೃತ ಕಾವ್ಯ) ಕಾರ್ತಿಕೇಯಾನು ಪ್ರೇಕ್ಷ್ಯಾ - ಪ್ರಾಕೃತ, - ಜೈನ ಸಿದ್ಧಾಂತ ಗ್ರಂಥ) ಕುವಲಯ ಮಾಲಾಕಹಾ (ಕುವಲಯಾಲಾ ಕಥಾ - ಪ್ರಾಕೃತ - ಶೃಂಗಾರ ಪ್ರಧಾನ ಕಾವ್ಯ - ಎಂಟನೇ ಶತಮಾನದ್ದು) ಕಥಾಕೋಶ (ಸಂಸ್ಕೃತ - ಗದ್ಯಕೃತಿ) ಜಂಬೂದೀವ ಪಣ್ಣತ್ತಿ ಸಂಗ್ರಹ (ಪ್ರಾಕೃತ ಶಾಸ್ತ್ರ ಗ್ರಂಥ - ಹತ್ತನೇ ಶತಮಾನದ್ದು) ಧೂರ್ತಾಖ್ಯಾನ - ಎ ಕ್ರಿಟಿಕಲ್ ಸ್ಟಡಿ– ವಿಶಿಷ್ಟವಾದೊಂದು ವಿಡಂಬನ ಕಥಾಕೋಶ -ಅಸಂಬದ್ಧವಾದ ಕತೆಗಳ ಸಂಗ್ರಹ - ಸಂಸ್ಕೃತದ್ದು), ಚಂದ್ರಲೇಖಾ (ಪ್ರಾಕೃತ ನಾಟಕ - ಸಟ್ಟಕ ಎಂಬ ಪ್ರಕಾರಕ್ಕೆ ಸೇರಿದ್ದು), ಪ್ರವಚನ ಸಾರ (ಆಚಾರ್ಯ ಕುಂದಕುಂದರ ಮಹತ್ಕೃತಿಗಳ ಲ್ಲೊಂದು. ಪ್ರಾಕೃತ ಗ್ರಂಥ - ಜೈನಾಗಮಕ್ಕೆ ಸಂಬಂಧಿಸಿದ್ದು. ಅನ್ಯ ಟೀಕಾ ಕಾರರು ಸಂಸ್ಕೃತ, ಹಿಂದಿಗಳಲ್ಲಿ ಬರೆದಿರುವ ಟೀಕೆಗಳನ್ನೂ ಅಳವಡಿಸಲಾಗಿದೆ. ಇಂಗ್ಲೀಷ್‌ನಲ್ಲಿ ವಿಸ್ತೃತ ವಿಮರ್ಶೆ ಬರೆದಿದೆ. ಕನ್ನಡದ ಭರತೇಶ ವೈಭವದ ಮೇಲೆ ಈ ಕೃತಿಯ ಪ್ರಭಾವವಿದೆ). ಪುಣ್ಯಾಸ್ರವ ಕಥಾಕೋಶ (ಸಂಸ್ಕೃತ).

ಈ ಗ್ರಂಥಗಳಲ್ಲಿ ಪ್ರತಿಯೊಂದಕ್ಕೂ ವಿವರವಾದ ಉಪೋದ್ಘಾತವನ್ನು ಬರೆದು ಅದರಲ್ಲಿ ಹಸ್ತಪ್ರತಿಯ ವಿವರಗಳು, ಕವಿಯ ಕಾಲ, ದೇಶ ಜೀವನ ವಿವರಗಳು, ಪಡೆದ ಮತ್ತು ಬೀರಿದ ಪ್ರಭಾವಗಳು ಮತ್ತು ವಿಷಯ ವಿವೇಚನೆ, ಅಲ್ಲಿ ಉಲ್ಲಿಖಿತವಾಗಿರುವ ಗಾದೆಗಳು ಅನ್ಯಗ್ರಂಥದ ಪದ್ಯಗಳು ಇತ್ಯಾದಿಗಳಿಗೆ ಮೂಲ ಯಾವುದು ಎಂಬುದರ ವಿವರ - ಇಂಥ ಎಲ್ಲ ಮಾಹಿತಿಗಳ ಶೋಧಪೂರ್ಣ ವಿವರವಿದೆ. ಕೆಲವು ಉಪೋದ್ಘಾತಗಳಂತೂ ಒಂದೊಂದು ಪಿಎಚ್.ಡಿ. ನಿಬಂಧದಷ್ಟು ಬೆಲೆಯುಳ್ಳವು.

ಮೇಲೆ ಉಲ್ಲೇಖಿಸಿದ ಗ್ರಂಥಗಳಲ್ಲದೆ ಇಂಗ್ಲೀಷಿನಲ್ಲಿ ಬರೆದಿರುವ ಎರಡು ಕೃತಿಗಳು ಪ್ರಸಿದ್ಧವಾಗಿದೆ. 'ಪ್ರಾಕೃತ ಲಾಂಗ್ವೇಜಸ್ ಅಂಡ್ ಲಿಟರೇಚರ್' ಎಂಬುದು ನಾಲ್ಕು ಉಪನ್ಯಾಸಗಳ ಸಂಗ್ರಹ. ಪುಣೆ, ವಿಶ್ವ ವಿದ್ಯಾಲಯದಿಂದ ಪ್ರಕಟವಾದದ್ದು (1971). ಇನ್ನೊಂದು ಗೋವಿಂದ ಪೈ - ಮ್ಯಾನ್ ಆಫ್ ಲಿಟರ್ಸ್ ಎಂಬುದು (1976).

ಕನ್ನಡದಲ್ಲಿ ಅವರು - ವರಾಂಗಚರಿತೆ, ವಡ್ಡಾರಾಧನೆ, ಆದಿಪುರಾಣ, ಧರ್ಮಪರೀಕ್ಷೆ, ಜೀವಸಂಬೋಧನೆ - ಈ ಕಾವ್ಯಗಳನ್ನು ಕುರಿತು, ಪ್ರಾಕೃತ ಭಾಷೆ, ಕವಿ ರನ್ನ ಇತ್ಯಾದಿಗಳನ್ನು ಕುರಿತು ಲೇಖನಗಳನ್ನು ಬರೆದಿದ್ದಾರೆ. ಅವರು ಕನ್ನಡದಲ್ಲಿ ಬರೆದಿರುವುದಕ್ಕಿಂತ ಕನ್ನಡದಲ್ಲಿರುವುದನ್ನು ಕುರಿತು ಇಂಗ್ಲೀಷಿನಲ್ಲಿ ಬರೆದಿರುವುದೇ ಬಹಳ.

ಗ್ರಂಥ ಸಂಪಾದನೆಯಲ್ಲಿ ಉಪಾಧ್ಯೆ ಹೊಸದಾದ ಪರಿಪುಷ್ಟವಾದ ಹೊಸ ರಾಜಮಾರ್ಗವೊಂದನ್ನು ನಿರ್ಮಿಸಿಕೊಟ್ಟರು. ಆ ರೀತಿ ಹೊಸ ಪಂಥವನ್ನು

ನಿರ್ಮಿಸಿದ್ದೇ ಒಂದು ಸೃಜನಶೀಲ ಕಾರ್ಯ. ಅವರು ಹಾಕಿಕೊಟ್ಟ ಪದ್ಧತಿಯನ್ನು 'ಉಪಾಧ್ಯೆ ಪಂಥ' (Upadhya School of Critical methodology in editing clasical texts) ಎಂದು ಈ ಕ್ಷೇತ್ರದ ಸರ್ವೋತ್ತಮ ಆಚಾರ್ಯರುಗಳು ಪ್ರಶಂಸಿಸಿದ್ದಾರೆ.

ಉಪಾಧ್ಯೆಯವರ ಅದ್ಭುತ ವಿದ್ವತ್ತಿಗೆ, ಬರವಣಿಗೆಯಲ್ಲಿನ ನಿಖರತೆಗೆ ಮೆಚ್ಚಿದವರ ಪಟ್ಟಿ ಬಹು ದೊಡ್ಡದು. ಇವೆಲ್ಲ ದಾಖಲೆಯಲ್ಲಿರುವ ಅಂಶ ಗಳು. ಜರ್ಮನಿಯ ವಿದ್ವಾಂಸರಾದ ಡಾ. ಡಬ್ಲ್ಯೂ, ಷುಬ್ರಿಂಗ್, ಡಾ. ಎಂ. ವಿಂಟರನಿಟ್ಜ್, ಡಾ. ಎ.ಬಿ. ಕೀತ್, ಡಾ. ಲುಡ್ವಿಗ್ ಆಲ್ಸಡಾರ್ಫ್, ಇಟಲಿಯ ಡಾ. ಎಲ್. ನೌಲಿ– ಇಂಥ ವಿದೇಶೀ ಸೂರಿಗಳಲ್ಲದೆ, ಭಾರತದ ಶ್ರೇಷ್ಠ ಪಂಡಿತರುಗಳಾದ - ಪಂಡಿತ ನಾಥೂರಾಮ ಪ್ರೇಮಿ, ರಾ. ನರಸಿಂಹಾ ಚಾರ್, ಆರ್. ಶಾಮಾಶಾಸ್ತ್ರಿ, ಪ್ರೊ. ಸುನೀತಿ ಕುಮಾರ ಚಟರ್ಜಿ (ಇವರು 26 ಭಾಷೆಗಳನ್ನು ಬಲ್ಲವರಾಗಿದ್ದು ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರೂ ಆಗಿದ್ದರು) ಹೆಚ್. ಡಿ. ವೇಲಣಕರ್, ಎಂ. ಗೋವಿಂದ ಪೈ, ಪ್ರೊ. ಎಂ. ಹಿರಿಯಣ್ಣ, ಎಸ್.ಎಂ. ಕತ್ರೆ, ಸಿ.ಡಿ. ದೇಶಮುಖ್ – ಇಂಥ ಇನ್ನೂ ನೂರಾರು ಮಹಾನುಭಾವರಿಂದ ನಿರ್ಮತ್ಸರ ಪ್ರಶಂಸೆ ಪಡೆದ ಯಶೋಜೀವಿ ಡಾ. ಆ.ನೇ. ಉಪಾಧ್ಯೆ ಅವರು.

ಈ ಮಹಾವಿದ್ವಾಂಸನ ಆಕಸ್ಮಿಕ ನಿಧನ ವಿಶ್ವದೆಲ್ಲೆಡೆಯ ಪ್ರಾಚ್ಯ ವಿದ್ಯಾ ವಿದ್ವಾಂಸರನ್ನು ಶೋಕತಪ್ತರನ್ನಾಗಿಸಿತು. 'ಭಾರತೀಯ ಜ್ಞಾನಪೀಠ' ಎಲ್ಲೆಡೆಯ ತನ್ನ ಕಛೇರಿಗಳನ್ನು ಆ ದಿನ ಮುಚ್ಚಿ ತನ್ನ ಗೌರವ ಸಲ್ಲಿಸಿತು. ಇವರು ಸತ್ತ ದಿನವೇ (9-10-1975) ಬೆಂಗಳೂರು ಆಕಾಶವಾಣಿ ಇವರ ಸಂದರ್ಶನ ವನ್ನು ಪ್ರಸಾರಮಾಡಿತು. ಇವರ ಬಗ್ಗೆ ಅನೇಕ ಶ್ರದ್ಧಾಂಜಲಿ ಲೇಖನಗಳು, ಕವಿತೆಗಳು ಪ್ರಕಟವಾದವು.

'ಡಾ. ಆ.ನೇ. ಉಪಾಧ್ಯೆ ಎಂಬುದು ಸಂಶೋಧನೆಗೆ ಇನ್ನೊಂದು ಹೆಸರು. ಅವರಂಥ ಸಂಶೋಧಕ ವಿದ್ವಾಂಸರು ಯಾವ ಭಾಷೆಗಾದರೂ ದೊಡ್ಡ ಸಂಪತ್ತು, ಆಸ್ತಿ. ಆದರೆ ಅಂಥವರು ಶತಮಾನಕ್ಕೊಮ್ಮೆ ಬಂದರೂ ಸಂತೋಷವೇ. ಮಹಾಕವಿ ಯುಗಕ್ಕೊಮ್ಮೆ ಬರುತ್ತಾನಂತೆ : ಮಹಾ ಸಂಶೋಧಕರೂ ಅಷ್ಟೆ (ಹಂಪನಾ ಪೂರ್ವೋಕ್ತ ಗ್ರಂಥ, ಪು. 42) ಡಾ. ಉಪಾಧ್ಯೆಯವರ ಬದುಕು, ಕಾರ್ಯಗಳ ಶ್ರೇಷ್ಠತೆಯ ಬಗ್ಗೆ ಇದಕ್ಕಿಂತ ಉತ್ತಮ ಶ್ಲಾಘನೆ ಬಹುಶಃ ಅಸಾಧ್ಯ.

❑

---

1. ಡಾ. ಎಂ. ಚಿದಾನಂದಮೂರ್ತಿ, 'ಪಾಂಡಿತ್ಯರಸ' ಪು 99, ಪ್ರ : ಕನ್ನಡ ವಿ.ವಿ., ಹಂಪೆ 2000
2. ಡಾ. ಹಂಪ ನಾಗರಾಜಯ್ಯ - 'ಡಾ. ಆ.ನೇ. ಉಪಾಧ್ಯೆ' ಪ್ರ : ಜೈನ ಅಧ್ಯಯನ ಸಂಸ್ಥೆ 1996
3. ಇದೊಂದು ಜಾನಪದ ನಂಬಿಕೆ. ಮಕ್ಕಳು ಹೀಗೆ ಎಳವೆಯಲ್ಲೇ ತೀರಿಕೊಳ್ಳುತ್ತಿದ್ದರೆ ಅಥವಾ ಮಕ್ಕಳು ಸುರಕ್ಷಿತವಾಗಿ ಬೆಳೆಯುವ ಬಗ್ಗೆ ಅನುಮಾನವಿದ್ದರೆ ಅವು ಕಲ್ಲಿನಂತೆ, ತಿಪ್ಪೆಯಂತೆ, ಮುಳ್ಳುಕಂಟಿಯಂತಾದರೂ ಬೆಳೆದು ತಮ್ಮ ಕಣ್ಣೆದುರಿಗಿರಲಿ - ಎಂಬ ಆಶಯದಿಂದ ಮಕ್ಕಳಿಗೆ ಕಲ್ಲಪ್ಪ, ಗುಂಡಪ್ಪ, ತಿಪ್ಪಯ್ಯ, ಮುಳ್ಳಯ್ಯ ಇತ್ಯಾದಿ ಹೆಸರುಗಳನ್ನು ಇಡುವುದು ಕರ್ನಾಟಕದಲ್ಲೆಲ್ಲೂ ಕಂಡುಬರುತ್ತದೆ. ಇನ್ನೂ ವಿಚಿತ್ರವೆಂದರೆ - 'ಬಿಸಾಡು' ಎಂದು ಕೂಡ ಮಕ್ಕಳಿಗೆ ಹೆಸರಿಡುತ್ತಿದ್ದುದುಂಟು. ಗಂಡು ಮಗುವಾದರೂ ಕೂಡ ಹುಟ್ಟಿದೊಡನೆ ಮೂಗು ಚುಚ್ಚುತ್ತಿದ್ದುದೂ ಇದೇ ಕಾರಣಕ್ಕೆ - ಅವು ದೃಷ್ಟಿ ತಾಗಿ ಸಾಯದಿರಲಿ ಎಂದು.
4. ಡಾ. ಹಂಪ ನಾಗರಾಜಯ್ಯ, ಡಾ. ಆ.ನೇ. ಉಪಾಧ್ಯೆ. ಪು 13
5. ಪ್ರೊ. ಎಸ್. ಬಿ. ದೇವ್ (1981) ಡಾ. ಹಂಪನಾ ಅವರ ಗ್ರಂಥದಲ್ಲಿ ಉಲ್ಲೇಖಿತ ಪು. 15

# ತ.ಸು.ಶಾಮರಾಯ

ಡಾ. ಬೈರಮಂಗಲ ರಾಮೇಗೌಡ

ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕಿನ ತಳುಕು ಗ್ರಾಮವನ್ನು ಹೊಸಗನ್ನಡ ಸಾಹಿತ್ಯದಲ್ಲಿ ಮತ್ತೆ ಮತ್ತೆ ನೆನಪಿಸಿಕೊಳ್ಳುವಂತೆ ಮಾಡಿದ ಇಬ್ಬರು ಸಹೋದರರಲ್ಲಿ ಮೊದಲಿಗರು ಟಿ.ಎಸ್. ವೆಂಕಣ್ಣಯ್ಯನವರು. ಅವರು ಕುವೆಂಪು ಅವರಂಥ ಮಹಾಕವಿಯ ಗುರುಗಳಾಗಿ ಅವರ ಅನನ್ಯ ಭಕ್ತಿ, ಅಖಂಡ ಪ್ರೀತಿಗಳಿಗೆ ಪಾತ್ರರಾಗಿದ್ದವರು. ಇನ್ನೊಬ್ಬರು 'ವೆಂಕಣ್ಣಯ್ಯನವರಂಥ ಗುರುಗಳಿಂದ ಪಾಠ ಕೇಳುವ ಮತ್ತು ಅವರನ್ನು ನೋಡುವ ಭಾಗ್ಯ ನಮಗೆ ದೊರೆಯಲಿಲ್ಲವಲ್ಲ' ಎಂದು ಹಳಹಳಿ ಸುವವರಿಗೆ ಅವರೆಲ್ಲ ಗುಣ ಸ್ವಭಾವಗಳನ್ನು ಪ್ರತಿನಿಧಿಸುತ್ತಿದ್ದ ಅವರ ತಮ್ಮ ತ. ಸು. ಶಾಮರಾಯರು. ಹೀಗೆ ಸಹೋದರರಿಬ್ಬರು ಸಾಹಿತ್ಯಲೋಕದ ದಿಗ್ಗಜಗಳಾಗಿ ಸಹೃದಯರ ಗೌರವಾದರ ಸ್ಮರಣೆಗಳಿಗೆ ಪಾತ್ರರಾಗಿರುವ ಅಪರೂಪದ ಉದಾಹರಣೆಯಾಗಿ ಕಾಣಿಸಿಕೊಳ್ಳುವವರು ವೆಂಕಣ್ಣಯ್ಯ ಮತ್ತು ಶಾಮರಾಯರು. ತಂದೆಯನ್ನು ಬಾಲ್ಯದಲ್ಲೇ ಕಳೆದುಕೊಂಡ ಶಾಮರಾಯರಿಗೆ ಕನ್ನಡದ ಪ್ರಥಮ ಪ್ರಾಧ್ಯಾಪಕರೆಂದು ಕರೆಸಿಕೊಂಡ ಅಣ್ಣ ಟಿ.ಎಸ್. ವೆಂಕಣ್ಣಯ್ಯನವರಲ್ಲೇ ಆಶ್ರಯ. ಅಣ್ಣನವರೇ ಅವರಿಗೆ ಆದರ್ಶ. ತಾವು ಮಾಡುವ ಪ್ರತಿಯೊಂದು ಕೆಲಸದಲ್ಲಿ, ತೆಗೆದುಕೊಳ್ಳುತ್ತಿದ್ದ ತೀರ್ಮಾನಗಳಲ್ಲಿ 'ದೇವತಾ ಮನುಷ್ಯ' ರೆಂದೇ ಹೆಸರಾಗಿದ್ದ ಅಣ್ಣ ವೆಂಕಣ್ಣಯ್ಯನವರನ್ನು ನೆನಪಿಸಿಕೊಂಡೇ ಮುಂದುವರಿಯುತ್ತಿದ್ದರು. ಅಣ್ಣನ ಪ್ರಭಾವದಿಂದಲೇ ಶಾಮರಾಯರ ಬದುಕು ರೂಪುಗೊಂಡಿತ್ತು. ಹಾಗಾಗಿ ಶಾಮರಾಯರನ್ನು ವೆಂಕಣ್ಣಯ್ಯನವರ ಪ್ರತಿರೂಪವೆಂದೇ ಕರೆದರೆ ಅತಿಶಯೋಕ್ತಿಯೆನಿಸುವುದಿಲ್ಲ.

ಸಾಹಿತ್ಯಚರಿತ್ರೆಕಾರರಾಗಿ, ಪ್ರಾಚೀನ ಕಾವ್ಯ ಹಾಗೂ ಶಾಸ್ತ್ರ ಗ್ರಂಥಗಳ ಸಂಪಾದಕರಾಗಿ, ಹಲವಾರು ಉತ್ತಮ ಗ್ರಂಥಗಳ ಕರ್ತೃ ಹಾಗೂ ಪ್ರಕಾಶಕರಾಗಿ, ಗುರುಪರಂಪರೆಯ ಆದರ್ಶಶಿಕ್ಷಕರಾಗಿ ವಿಶಿಷ್ಟ ಛಾಪು ಮೂಡಿಸಿದ ತಳುಕಿನ ಸುಬ್ಬಣ್ಣ ಶಾಮರಾಯರು ಹುಟ್ಟಿದ್ದು ೧೯೦೯ರ ಜೂನ್ ೧೭ರಂದು, ಚಳ್ಳಕೆರೆಯಲ್ಲಿ ಪ್ರಾಥಮಿಕ ಶಿಕ್ಷಣ, ಮಲೆಬೆನ್ನೂರಿನಲ್ಲಿ ಮುಲ್ಕಿ ಪರೀಕ್ಷೆ ತೇರ್ಗಡೆ, ಬೆಂಗಳೂರಿನ ನ್ಯಾಷನಲ್ ಹೈಸ್ಕೂಲ್‌ನಲ್ಲಿ ಆಗಿನ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣತೆ. ದಾವಣಗೆರೆ ಸಮೀಪದ ಆಲೂರು ಗ್ರಾಮದಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ವೃತ್ತಿ ಆರಂಭವಾಯಿತಾದರೂ ಮನಸ್ಸನ್ನು ತುಂಬಿಕೊಂಡಿದ್ದ ಉನ್ನತ ವ್ಯಾಸಂಗದ ಹಂಬಲ ಶಿಕ್ಷಕವೃತ್ತಿಗೆ ಅಂಟಿಕೊಳ್ಳಲು ಬಿಡದೆ ಮೈಸೂರಿಗೆ ಎಳೆದುತಂದಿತು. ಯುವರಾಜಾ ಕಾಲೇಜಿನಲ್ಲಿ ಕನ್ನಡ, ಸಂಸ್ಕೃತ, ಲಾಜಿಕ್ ವಿಶೇಷ ವಿಷಯಗಳೊಂದಿಗೆ ವಿದ್ಯಾಭ್ಯಾಸ ಆರಂಭಿಸಿ ಇಂಟರ್‌ಮೀಡಿಯಟ್‌ನಲ್ಲಿ ನಾಲ್ಕನೇ ರ್‍ಯಾಂಕ್‌ಗಳಿಸಿ ಮತ್ತೆ ಚಿತ್ರದುರ್ಗದ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕರಾಗಿ ಸೇರಿಕೊಂಡರಾದರೂ ಮಾಧ್ಯಮಿಕ ಶಾಲಾ ಶಿಕ್ಷಕನಾಗಿ ಪಾಠ ಹೇಳುವುದು ಅವರಿಗೆ ರುಚಿಸಲಿಲ್ಲ. ಪ್ರೈಮರಿ ಸ್ಕೂಲಿನ ಮೇಷ್ಟರ ಹುದ್ದೆಯ ಪ್ರಾರಂಭಿಕ ದಿನಗಳಲ್ಲಿ ನಡೆದ ಎರಡು ಪ್ರಸಂಗಗಳು ಇಲ್ಲಿ ಉಲ್ಲೇಖನೀಯ. ಒಂದು ನಿಕ್ಕರ್, ಒಂದು ನೆಟ್ ಬನಿಯನ್ ಶಾಮರಾಯರ ಅಂದಿನ ದಿರುಸು. ಹಾಕಿಕೊಳ್ಳಲು ಒಂದು ಒಳ್ಳೆಯ ಷರಟೂ ಇಲ್ಲ. ಅಣ್ಣ ಕೃಷ್ಣರಾಯರು ತಮ್ಮ ಒಂದು ಷರ್ಟನ್ನೇ ಹಾಕಿಕೊಂಡು ಸ್ಕೂಲಿಗೆ ಹೋಗುವಂತೆ ತಿಳಿಸಿದರು. ಆತ್ಮಾಭಿಮಾನಿ ಶಾಮರಾಯರು ಇದಕ್ಕೊಪ್ಪಲಿಲ್ಲ. ತಮ್ಮ ಮಾತು ಕೇಳದ್ದಕ್ಕೆ ಅಣ್ಣ ನಾಲ್ಕು ಬಿಗಿದರು. ಏಟು ತಿಂದ ಶಾಮರಾಯರು ಮನೆ ಬಿಟ್ಟು ಪರಾರಿಯಾದರು. ಅಣ್ಣ ಅಟ್ಟಿಸಿಕೊಂಡು ಹೋಗಿ ಎಳೆತಂದು ಮತ್ತೆ ನಾಲ್ಕು ಬಿಗಿದು ವಿದ್ಯಾರ್ಥಿಗಳ ಮುಂದೆ ದೂಡಿದರು. ಹೊಸ ಮೇಷ್ಟ್ರು ಅಳುತ್ತಲೇ ಪಾಠ ಪ್ರಾರಂಭಿಸಿದರು ! ಮತ್ತೊಮ್ಮೆ, 'ಲಂಕಾದಹನ' ನಾಟಕದಲ್ಲಿ ಅಂಗದನ ಪಾತ್ರ ಮಾಡಿದ್ದ ಶಾಮರಾಯರು ಅದರ ಸ್ಫೂರ್ತಿಯಿಂದ ಹೊರಬರದೆ ನಾಟಕ ಮುಗಿದ ಮೇಲೂ ಕತ್ತಿ ಹಿಡಿದು ಊರಲ್ಲೆಲ್ಲಾ ಕುಣಿದಾಡಿದರು. ಕತ್ತಿ ಹಿಡಿದುಕೊಂಡೇ ಶಾಲೆಗೂ ಬಂದರು. ಮುಖ್ಯೋಪಾಧ್ಯಾಯರಿಗೆ ದೂರು ಹೋಯಿತು. ಮುಖ್ಯೋಪಾಧ್ಯಾಯರು "ಕತ್ತಿ ಹಿಡಿದು ಊರಲೆಲ್ಲಾ ಅಂಗದನ ಪಾತ್ರ ಮಾಡ್ತೀಯೇನೋ?" ಎಂದು ನಾಲ್ಕು ಬಿಗಿದು "ನಡಿ ಕ್ಲಾಸಿಗೆ" ಎಂದು ಆಜ್ಞಾಪಿಸಿದರು. ಶಾಮರಾಯರು ಅಳುತ್ತ ಕ್ಲಾಸಿಗೆ ಪ್ರವೇಶಿಸಿದರು. ಈ ಬಲವಂತದ 'ಮೇಷ್ಟ್ರುಗಿರಿ' ಅವರಿಗೆ ಬೇಕಿರಲಿಲ್ಲ. ಹೆಚ್ಚಿನ ವಿದ್ಯಾಭ್ಯಾಸ ಮಾಡಬೇಕೆಂಬ ಆಸಕ್ತಿ ಅವರನ್ನು ಮತ್ತೆ ಮೈಸೂರಿಗೇ ಎಳೆಯಿತು. ಕನ್ನಡದ ಆಚಾರ್ಯಪುರುಷರೆನಿಸಿಕೊಂಡಿದ್ದ ಬಿ. ಎಂ. ಶ್ರೀಕಂಠಯ್ಯ, ಕುವೆಂಪು, ಡಿ. ಎಲ್. ನರಸಿಂಹಚಾರ್, ತೀ. ನಂ. ಶ್ರೀಕಂಠಯ್ಯ ಮೊದಲಾದ ಗುರುಶ್ರೇಷ್ಠರ ಮಾರ್ಗದರ್ಶನದಲ್ಲಿ ೧೯೪೦ರಲ್ಲಿ ಬಿ. ಎ. ಆನರ್ಸ್ ಪದವಿಯನ್ನು ಸುವರ್ಣ ಪದಕದೊಂದಿಗೆ ಪಡೆದುಕೊಂಡರು. ಅವರು ಯುವರಾಜ ಕಾಲೇಜಿನ ಅಧ್ಯಾಪಕರೆಲ್ಲ ಸೇರಿ ಅಲ್ಲಿ 'ಕಾಸಿನ ಸಂಘ'ವನ್ನು ಸ್ಥಾಪಿಸಿಕೊಂಡಿದ್ದಂತೆ ಯುವರಾಜ ಕಾಲೇಜಿನ ವಿದ್ಯಾರ್ಥಿಗಳು 'ಗುದ್ದಿನ ಸಂಘ' ನಿರ್ಮಿಸಿಕೊಂಡಿದ್ದರು. ಮಾತಿನ ಮಧ್ಯೆ ಯಾರಾದರೂ ಒಂದು ಇಂಗ್ಲಿಷ್ ಪದ ಸೇರಿಸಿದರೆ ಒಂದು ಗುದ್ದು ತಿನ್ನಬೇಕಾಗುತ್ತಿತ್ತು. ಶಾಮರಾಯರೇ ಅಲ್ಲಿ ಅತಿಕಡಿಮೆ ಗುದ್ದು ತಿನ್ನುತ್ತಿದ್ದ ವಿದ್ಯಾರ್ಥಿ! ಎಲ್ಲ ಅಧ್ಯಾಪಕರಿಗೂ ಅಚ್ಚುಮೆಚ್ಚಿನ ವಿದ್ಯಾರ್ಥಿಯಾಗಿದ್ದ ಶಾಮರಾಯರು ಪರೀಕ್ಷೆಯಲ್ಲಿ ಶೇ. ೮೦ರಷ್ಟು ಅಂಕಗಳನ್ನು ಪಡೆದು ನಾಲ್ಕನೆಯ ರ್‍ಯಾಂಕ್‌ನಲ್ಲಿ ಉತ್ತೀರ್ಣರಾದರು. ತೀ. ನಂ.ಶ್ರೀ.ಯವರು ಈ ವಿಚಾರವಾಗಿ ಶಾಮರಾಯರ ಅಣ್ಣನಿಗೆ ಪತ್ರ ಬರೆದು ವಿದ್ಯಾರ್ಥಿಯ ಪ್ರೌಢಿಮೆಯನ್ನು ಕೊಂಡಾಡಿದ್ದುಂಟು. ಶಿಕ್ಷಕವೃತ್ತಿ ಅವರನ್ನು ಮತ್ತೆ ಕೈಬೀಸಿ ಕರೆಯಿತು. ಉಪನ್ಯಾಸಕರಾಗಿ ಹಲವೆಡೆ ಸೇವೆ ಸಲ್ಲಿಸಿದರು. ಐದುನೂರಕ್ಕೂ ಹೆಚ್ಚು ಪುಟಗಳಲ್ಲಿ ಕನ್ನಡ ನಾಟಕಗಳ ವಿಸ್ತೃತವಾದ ಅಧ್ಯಯನವನ್ನು ಕುವೆಂಪು ಅವರ ಮಾರ್ಗದರ್ಶನದಲ್ಲಿ ನಡೆಸಿ ಸಿದ್ಧಪಡಿಸಿದ 'ಕನ್ನಡ ನಾಟಕಗಳು' ಸಂಶೋಧನಾ ಪ್ರಬಂಧಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಎಂ. ಎ. ಪದವಿ ಗಳಿಸಿದರು. 'ಕನ್ನಡ ನಾಟಕ' ಒಂದು ಪ್ರೌಢ ಪ್ರಬಂಧ. ಶಾಮರಾಯ ಸಂಶೋಧನ, ವಿಮರ್ಶನ ಸಾಮರ್ಥ್ಯಗಳಿಗೆ ನಿಚ್ಚಳ ನಿದರ್ಶನ. ನಾಟಕ ಕಲೆಯ ಸ್ವರೂಪ, ಹುಟ್ಟು, ಬೆಳವಣಿಗೆಗಳನ್ನು ಅವಲೋಕಿಸಿ, ಭಾಷಾಂತರ ರೂಪಾಂತರಗಳು ಸೇರಿದಂತೆ ಕನ್ನಡ ನಾಟಕಗಳ ಇತಿಹಾಸವನ್ನು ಇದರಲ್ಲಿ ಕೊಟ್ಟಿದ್ದಾರೆ. ಬಹಳ ಹಿಂದೆಯೇ ಸಿದ್ಧವಾದ ಈ ಕೃತಿಯಲ್ಲಿ ಸಮೀಕ್ಷೆ ಯಾವುದೋ ಒಂದು ಹಂತಕ್ಕೆ ನಿಂತಿದೆಯಾದರೂ ಹೊಸಗನ್ನಡದ ಸಾಹಿತ್ಯ ಚರಿತ್ರೆಯ ಒಂದು ಆಕರ ಗ್ರಂಥವಾಗಿ ಈ ಕೃತಿ ರೂಪುಗೊಂಡಿರುವುದಂತೂ ನಿಜ. ಎಂ. ಎ. ಪದವೀಧರರಾದ ಮೇಲೆ

ಶಾಮರಾಮರು ತಮ್ಮ ಬಹುಕಾಲದ ಆಸೆಯಂತೆ ಮೈಸೂರು ವಿಶ್ವವಿದ್ಯಾನಿಲಯ ಪ್ರವೇಶಿಸಿ ಮಹಾರಾಜಾ ಕಾಲೇಜಿನಲ್ಲಿ ಉಪನ್ಯಾಸಕರಾಗಿ, ಪ್ರಾಸಾರಾಂಗದ ನಿರ್ದೇಶಕರಾಗಿ, ಗ್ರಂಥಪಾಲಕರಾಗಿ ತಮ್ಮದೇ ಆದ ವಿಶಿಷ್ಟ ಛಾಪು ಮೂಡಿಸಿದರು. ಪ್ರಸಾರಾಂಗದ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ ಒಂದು ವರ್ಷದ ಅವಧಿಯಲ್ಲಿ ಇಪ್ಪತ್ತಾರು ಪಠ್ಯಪುಸ್ತಕಗಳನ್ನು ಪ್ರಕಟಿಸಿದ ಕೀರ್ತಿ ಶಾಮರಾಯರದು. ಇವರ ಕಾಲದಲ್ಲಿ ನೂರಾರು ಉಪಯುಕ್ತ ಪುಸ್ತಕಗಳು ಪ್ರಕಟವಾಗಿ, ಕರ್ನಾಟಕದ ಮೂಲೆ ಮೂಲೆಗಳಲ್ಲಿ ಸಹಸ್ರಾರು ಪ್ರಚಾರೋಪನ್ಯಾಸಗಳು ಜರುಗಿ ಪ್ರಸಾರಾಂಗದ ಕೀರ್ತಿ ದೇಶಾದ್ಯಂತ ಹರಡಿತು. ಆಗ ಉತ್ತರ ಪ್ರದೇಶದ ರಾಜ್ಯಾಪಾಲರಾಗಿದ್ದ ವಿ. ವಿ. ಗಿರಿಯವರು ಪ್ರಸಾರಾಂಗಕ್ಕೆ ಭೇಟಿ ನೀಡಿ ಅಲ್ಲಿ ನಡೆಯುತ್ತಿದ್ದ ಸಾಹಿತ್ಯ ಚಟುವಟಿಕೆಗಳನ್ನು ಕಂಡು ಆಶ್ಚರ್ಯಗೊಂಡು ಪ್ರಸಾರಾಂಗದ ಕಾರ್ಯವನ್ನು ಮನಸಾರೆ ಪ್ರಶಂಸಿಸಿದರು. ಲೋಕಸಭಾಧ್ಯಕ್ಷರಾಗಿದ್ದ ಎಸ್. ವಿ. ಕೃಷ್ಣಮೂರ್ತಿರಾಯರು ಪ್ರಸಾರಾಂಗಕ್ಕೆ ಭೇಟಿ ನೀಡಿ ಅಪಾರ ಮೆಚ್ಚುಗೆ ವ್ಯಕ್ತಪಡಿಸಿದ್ದಲ್ಲದೆ ಪ್ರಸಾರಾಂಗ ಕಾರ್ಯಕಲಾಪಗಳನ್ನು ಕಂಡು 'ಇಲ್ಲಿ ಅದ್ಭುತ ಕಾರ್ಯ ನಡೆದಿದೆ' ಎಂದು ಉದ್ಗಾರವೆಳೆದರು. ಈ ಎಲ್ಲ ಘಟನೆಗಳಿಂದ ಶಾಮರಾಯರ ವಿರುದ್ಧ ಕೆಲವರ ಅಸೂಯೆ ಗರಿಗೆದರಿ ನಿಂತಿತಾದರೂ ಕುವೆಂಪು ಅವರ ಬೆಂಬಲವಿದ್ದುದರಿಂದ ಯಾವುದೇ ಕೆಡುಕು ಸಂಭವಿಸಲಿಲ್ಲ.

ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕ ವರ್ಗದಲ್ಲಿದ್ದ ಕುವೆಂಪು, ಡಿ.ಎಲ್. ನರಸಿಂಹಾಚಾರ್, ಎಸ್.ವಿ. ಪರಮೇಶ್ವರಭಟ್ಟ ಮೊದಲಾದ ಸಿದ್ಧ ಪ್ರಸಿದ್ಧರೊಡನೆ ಅವರಿಗೆ ಹೆಗಲೆಣೆಯಾಗಿ ಕೆಲಸ ಮಾಡಿ 'ವಿದ್ಯಾರ್ಥಿ ವತ್ಸಲ'ರೆಂದು ಕೀರ್ತಿವಂತರಾದವರು ತ. ಸು. ಶಾಮರಾಯರು. ವಿದ್ಯಾರ್ಥಿಗಳ ಗುಂಪು ಇದ್ದಲ್ಲಿ ತ.ಸು.ಶಾಮರಾಯರಿರುತ್ತಿದ್ದರು. ಕುವೆಂಪು, ಡಿ.ಎಲ್.ಎನ್. ಅವರನ್ನು ಮಾತನಾಡಿಸಲು ಹಿಂದೇಟು ಹೊಡೆಯುತ್ತಿದ್ದ ವಿದ್ಯಾರ್ಥಿಗಳು ಶಾಮರಾಯರೊಂದಿಗೆ ನಿರ್ಭಯವಾಗಿ ಬೆರೆಯುತ್ತಿದ್ದರು. ಶಾಮರಾಯರಿರುವಲ್ಲಿ ಹಾಸ್ಯ, ವಿನೋದ, ಗಲಾಟೆಗಳಿಗೇನೂ ಕೊರತೆಯಿರುತ್ತಿರಲಿಲ್ಲ. ಬಡ ವಿದ್ಯಾರ್ಥಿಗಳ ಪಾಲಿಗೆ ರಾಯರ ಮನೆ ಯಾವಾಗಲೂ ತೆರೆದುಕೊಂಡೇ ಇರುತ್ತಿತ್ತು. ಅನ್ನಕ್ಕೆ ಗತಿಯಿಲ್ಲದ ವಿದ್ಯಾರ್ಥಿಗಳಿಗೆ ಉಚಿತ ವಿದ್ಯಾರ್ಥಿ ನಿಲಯಗಳಲ್ಲೋ, ಉಚಿತ ಊಟಕ್ಕೆ ಬೇರೆಲ್ಲಾದರೂ ವ್ಯವಸ್ಥೆ ಮಾಡಿಕೊಡುವ ಮೂಲಕವೋ ಆಶ್ರಯದಾತರಾಗಿದ್ದರು. ವಿದ್ಯಾರ್ಥಿಗಳಿಂದ ಒಳ್ಳೆಯತನವನ್ನು, ಓದಿನಲ್ಲಿ ಶ್ರದ್ಧೆಯನ್ನು ಬಯಸುತ್ತಿದ್ದ ಶಾಮರಾಮರಲ್ಲಿ ಜಾತಿ ಮತಗಳ ವಿಚಾರ ಎಂದೂ ಸುಳಿದದ್ದಿಲ್ಲ. ಶಿಷ್ಯರು ಯಾವುದೇ ವಯಸ್ಸಿನವರಾದರೂ ಶಾಮರಾಯರು ಅವರನ್ನು 'ಮಗು' ಎಂದೇ ಕರೆಯುತ್ತಿದ್ದರು. ಅವರ ಶಿಷ್ಯರಿಗೂ ಈ ಸಂಬೋಧನೆಯೇ ಪ್ರಿಯವಾಗಿತ್ತು. ರಾಯರು ನಿವೃತ್ತರಾದ ಮೇಲೂ ಅವರ ಬಳಿಗೆ ಮನೆಪಾಠಕ್ಕಾಗಿ ಬರುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ ಬಹು ದೊಡ್ಡದೇ ಆಗಿತ್ತು. ವಿದ್ಯಾದಾನ ಒಂದು ಪವಿತ್ರ ಕರ್ತವ್ಯ ಎಂಬ ಭಾವನೆ ಅವರದು. ತಮ್ಮ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆ ಹೊಂದಿದ ಅಥವಾ ಬದುಕಿನಲ್ಲಿ ಅತ್ಯುತ್ತಮ ಸಾಧನೆ ಮಾಡಿದ ವಿಚಾರ ತಿಳಿದಾಗ ಅವರಿಗಾಗುತ್ತಿದ್ದ ಆನಂದ ಅಷ್ಟಿಷ್ಟಲ್ಲ. ನಿರ್ವ್ಯಾಜ ಅಂತಃಕರಣ, ವಾತ್ಸಲ್ಯ ಮತ್ತು ಶ್ರದ್ಧಾಪೂರ್ಣ ಅಧ್ಯಾಪನ ಕಾರ್ಯ - ಇವೇ ವಿದ್ಯಾರ್ಥಿಗಳನ್ನು ಸದಾ ಅವರತ್ತ ಸೆಳೆಯುತ್ತಿದ್ದ ಆಕರ್ಷಣ ಶಕ್ತಿಗಳಾಗಿದ್ದವು.

ಸ್ವತಃ ಬಡತನದ ಬವಣೆಯಲ್ಲಿ ಬೆಂದಿದ್ದ ಶಾಮರಾಯರಿಗೆ ಬಡವರ ವಿಚಾರದಲ್ಲಿ ತುಂಬ ಅನುಕಂಪ. ವಾರಾನ್ನದ ಹುಡುಗರು ವರ್ಷ ಪೂರ್ತಿ ಮನೆಮಕ್ಕಳ ಹಾಗೆಯೇ ಅವರ ಮನೆಯಲ್ಲಿರುತ್ತಿದ್ದರು. ದಾನ ಕೊಡುವ ಯೋಗ್ಯತೆಯನ್ನು ದೇವರು ಕೊಟ್ಟಿರುವಾಗ ನಾವೇಕೆ ಕೈಹಿಡಿಯಬೇಕು. ನಾವು ಕೊಟ್ಟಿದ್ದಕ್ಕೆ ಹತ್ತರಷ್ಟನ್ನು ಭಗವಂತ ಕೊಡುತ್ತಾನೆನ್ನುವ ನಂಬಿಕೆ ಅವರದಾಗಿತ್ತು. ಸ್ವಭಾವತಃ ಉದಾರಿಗಳಾದ ಶಾಮರಾಯರು ಇನ್ನೊಬ್ಬರಿಗೆ ಕೊಟ್ಟ ಹಣಕ್ಕೆ ಎಂದೂ ಲೆಕ್ಕವಿಡುತ್ತಿರಲಿಲ್ಲ. ಯಾರಾದರೂ ಹಣ ಹಿಂದಿರುಗಿಸದಿದ್ದರೂ ರಾಯರು ಅದಕ್ಕಾಗಿ ವ್ಯಥೆಪಡುತ್ತಿರಲಿಲ್ಲ. ಲಭ್ಯವಿದ್ದಷ್ಟೇ ನಮಗೆ ಉಳಿಯುತ್ತದೆ. ಕಳೆದು ಹೋದುದಕ್ಕೆ ವ್ಯಥೆಯೇಕೆ ಎಂಬ ಭಾವನೆ ಅವರದು. ಹಾಗಾಗಿ ಮನೆಗೆ ಬರುತ್ತಿದ್ದ ಸಾಧುಸಂತರಿಗೆ, ಮಠಮಾನ್ಯಗಳಿಗೆ ಅವರು ಕೈಮೀರಿ ಕಾಣಿಕೆ ನೀಡುತ್ತಿದ್ದರು. ಸಮಯಾಸಮಯಗಳ ಪರಿವೆಯಿಲ್ಲದೆ ಬಂದವರನ್ನು ನಗೆಮೊಗದಿಂದ ಸ್ವಾಗತಿಸಿ ಸತ್ಕರಿಸುವ ಅತಿಥಿ ಪ್ರಿಯತೆ, ಔದಾರ್ಯಗಳು ಶಾಮರಾಯರಿಗೆ ವಂಶಪರಂಪರೆಯಿಂದ ಬಂದ ಗುಣಗಳಾಗಿದ್ದವು. ಪತಿಗನುಕೂಲೆಯಾದ ಸತಿಯಾಗಿ ಶ್ರೀಮತಿ ಸುಬ್ಬುಲಕ್ಷ್ಮಿಯವರು ಎಂದೂ ಯಾವುದಕ್ಕೂ ಗೊಣಗದೆ ಗಾಣದೆತ್ತಿನಂತೆ ದುಡಿಯುತ್ತಿದ್ದ ರಾಯರ ಮನೆ ಒಂದು ಛತ್ರವೇ ಆಗಿತ್ತು. ಮನೆಗೆ ಯಾವುದೇ ಕೆಲಸಕ್ಕೆ ಬಂದವರಾಗಲಿ ಅವರಿಂದ ಆತಿಥ್ಯ ಪಡೆಯದೆ ಹೋಗುವಂತೆಯೇ ಇರಲಿಲ್ಲ.

ಪ್ರಾಥಮಿಕ ಶಾಲೆಯ ಮಾಸ್ತರಿಕೆಯಿಂದ ತಮ್ಮ ವೃತ್ತಿಜೀವನವನ್ನು ಪ್ರಾರಂಭಿಸಿ ವಿಶ್ವವಿದ್ಯಾನಿಯಲಯ ಸ್ನಾತಕೋತ್ತರ ತರಗತಿಗಳಿಗೆ ಪಾಠ ಹೇಳುವವರೆಗೆ ಸ್ವಸಾಮರ್ಥ್ಯದಿಂದ ಏರಿನಿಂದ ಶಾಮರಾಯರು ಒಬ್ಬ ಅನನ್ಯ ಅಧ್ಯಾಪಕರಾಗಿದ್ದರು. ವಿದ್ಯಾರ್ಥಿಗಳ ಮನಸ್ಸಿನಲ್ಲಿ ನಿಲ್ಲುವಂತೆ ಪಾಠ ಹೇಳುವ ಕಲೆಯಲ್ಲಿ ಅವರು ಪರಿಣತರಾಗಿದ್ದರು. ಅಧ್ಯಾಪಕರ ಕೆಲಸವೆಂದರೆ ವಿಸ್ತಾರವಾದ ಓದು ಮತ್ತು ವ್ಯಾಪಕವಾದ ಬರವಣಿಗೆ ಎಂದವರು ದೃಢವಾಗಿ ನಂಬಿದ್ದರು. ಹಾಗೆಯೇ ನಡೆದುಕೊಂಡ ಅವರು ಸುಮಾರು ಎಪ್ಪತ್ತು ವರ್ಷಗಳ ಕಾಲ ವಿರಾಮವಿಲ್ಲದಂತೆ ಬರೆದರು. ಅಧ್ಯಾಪಕ ವೃತ್ತಿ ಮತ್ತು ಬರವಣಿಗೆಗಳ ನಡುವೆ ಕನ್ನಡ ಪುಸ್ತಕಗಳ ಪ್ರಕಾಶನದ ಹವ್ಯಾಸವನ್ನೂ ಇಟ್ಟುಕೊಂಡಿದ್ದ ಅವರು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಮೂಲಕ ಕೆಲವಾರು ಅತ್ಯುತ್ತಮ ಕೃತಿಗಳನ್ನು ಹೊರತಂದರು. ತಮ್ಮ ಸ್ವಂತ ಪ್ರಕಾಶನದ ಪುಸ್ತಕಗಳನ್ನು ವಿಮರ್ಶೆಗಾಗಿ ಪತ್ರಿಕೆಗಳಿಗೆ ಕಳುಹಿಸಿಕೊಡಲಾಗದಷ್ಟು ಕಾರ್ಯಭಾರದಲ್ಲಿ ಅವರು ಮುಳುಗಿಹೋಗಿದ್ದರು. ಶಾಮರಾಯರ ಬರವಣಿಗೆಯ ಹರಹು ತುಂಬ ವಿಸ್ತಾರವಾದದ್ದು. ಅದು ಕೋಶ, ವ್ಯಾಕರಣ, ಸಾಹಿತ್ಯ ಚರಿತ್ರೆ-ಸಂಶೋಧನೆ-ವಿಮರ್ಶೆ, ಕಾವ್ಯಸಂಗ್ರಹ, ಸಂಪಾದನೆ, ಕಥೆ, ಕಾದಂಬರಿ, ಜೀವನ ಚರಿತ್ರೆ, ಬಾಲಸಾಹಿತ್ಯ, ಅನುವಾದ ಮತ್ತು ಇತರ ಎಂದು ಹಲವು ಮುಖಗಳಲ್ಲಿ ಹರಿದಿದೆ; ಐವತ್ತಕ್ಕೂ ಹೆಚ್ಚು ಸತ್ವಪೂರ್ಣ ಕೃತಿಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ಕಾಣಿಕೆಯಾಗಿ ನೀಡಿದೆ.

ಸಂಶೋಧಕರಿಗೆ ಆಕರ ಗ್ರಂಥದಂತಿರುವ 'ಶಿವಶರಣ ಕಥಾರತ್ನ ಕೋಶ'ಕ್ಕೆ ಗ್ರಂಥ ಸಂಪಾದನೆ ಮತ್ತು ಸಂಶೋಧನೆಯ ದೃಷ್ಟಿಯಿಂದ ಅಗ್ರಸ್ಥಾನ ಸಲ್ಲುತ್ತದೆ. ೨೫ ಆಕರಗಳಿಂದ ವಿಷಯ ಸಂಗ್ರಹಿಸಿ, ಈ ಮೂಲಗಳನ್ನು ಮಥಿಸಿ, ಕಥೆಗಳ ಸಾರವನ್ನು ಸುಂದರವಾದ ಹೊಸಗನ್ನಡ ದಲ್ಲಿ ನಿರೂಪಿಸಿ, ಎಂಟು ಉಪಯುಕ್ತ ಅನುಬಂಧಗಳನ್ನು ಸೇರ್ಪಡೆಗೊಳಿಸಿ ಈ ಕೃತಿಯನ್ನು ಸಿದ್ಧಪಡಿಸಲು ರಾಯರು ಕಾಲು ಶತಮಾನಕ್ಕೂ ಹೆಚ್ಚು ಕಾಲ

ಸಾರಸ್ವತ ಕೃಷಿ ನಡೆಸಬೇಕಾಯಿತೆಂದರೆ ಇದರ ಮಹತ್ವವನ್ನು ಪ್ರತ್ಯೇಕವಾಗಿ ವಿವರಿಸಬೇಕಾಗಿಲ್ಲ. ಕನ್ನಡದಲ್ಲಿ ಮೂಡಿಬಂದಿರುವ ಬಸವಪುರಾಣ, ಶಿವತತ್ವ ಚಿಂತಾಮಣಿ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಮೊದಲಾದ ಸಂಕಲನಗಳ ಎತ್ತರದಲ್ಲಿ ನಿಲ್ಲುವ ಎಲ್ಲ ಅರ್ಹತೆಗಳನ್ನು 'ಶಿವಶರಣ ಕಥಾರತ್ನಕೋಶ' ಪಡೆದುಕೊಂಡಿದೆ. ಈ ಕಥೆಗಳನ್ನು ರಾಮಾಯಣ ಮಹಾ ಭಾರತ ಕಥೆಗಳೊಂದಿಗೆ ಹೋಲಿಸಿ ನೋಡಿದಾಗ ಇವುಗಳ ನಿಜವಾದ ಬೆಲೆಯನ್ನು ಒರೆಹಚ್ಚಿದಂತಾಗುತ್ತದೆ. ಈ ಕೃತಿ ಶಿವಶರಣರ ವಿಚಾರದಲ್ಲಿ ಹೊಸ ಬೆಳಕನ್ನು ಚೆಲ್ಲುವುದು. ವಚನಗಳು ದೊರೆಯದಿರುವ ವಚನಕಾರರ ಹೆಸರುಗಳನ್ನು ಉಲ್ಲೇಖಿಸುವುದು, ಹೊಸ ವಚನಕಾರರ ಅಂಕಿತಗಳನ್ನು ಸೂಚಿಸುವುದು ಇತ್ಯಾದಿಗಳ ಮೂಲಕ ವೀರಶೈವ ಕಾವ್ಯಗಳ ಕೈಪಿಡಿಯಾಗಿ ರೂಪುಗೊಂಡಿದೆ.

ಹಿನ್ನೆಲೆಗಳ ನಿರೂಪಣೆ, ಕವಿಚರಿತ್ರೆ ಮತ್ತು ಕಾಲಗಳ ನಿರ್ಣಯ, ಮುಖ್ಯ ಕೃತಿಗಳ ವಿಮರ್ಶೆ, ಕವಿಗಳ ಮೇಲೆ ಆದ ಮತ್ತು ಕವಿಗಳು ಬೀರಿದ ಪ್ರಭಾವ ಇವೇ ಮೊದಲಾದ ಅಂಶಗಳನ್ನು ಸಂಗ್ರಹವಾಗಿಯೂ ಸಾರವತ್ತಾಗಿಯೂ ಅಡಕವಾಗಿಯೂ ನಿರೂಪಿಸಬೇಕಾದ ಸಾಹಿತ್ಯ ಚರಿತ್ರೆಯ ರಚನೆ ಅತ್ಯಂತ ತೊಡಕಾದ ಕೆಲಸ. ಇಂಥ ಕಷ್ಟಕಾರ್ಯವನ್ನು ಶಾಮರಾಯರು ತಮ್ಮ ಸಾಹಿತ್ಯ ಚರಿತ್ರೆಗಳಲ್ಲಿ ಸಹೃದಯ ಮೆಚ್ಚುವಂತೆ ನಿರ್ವಹಿಸಿದ್ದಾರೆ. ಜನಸಾಮಾನ್ಯರು ಓದಿಕೊಂಡು ವಿಷಯದ ಸ್ವಾರಸ್ಯವನ್ನು ಗ್ರಹಿಸಲು ಅನುಕೂಲವಾಗುವಂತೆ ಅತಿ ವಿಸ್ತಾರವೂ ಅಲ್ಲದ, ಅತಿ ಸಂಗ್ರಹವೂ ಆಗಿರದ ರೀತಿಯಲ್ಲಿ ರಚಿಸಿದ್ದಾರೆ. ರಸಸ್ಯಂದಿಯಾದ ವಾಕ್ಯಗಳಿಂದಲೂ, ಕವಿಗಳ ಹಿರಿಮೆಯನ್ನು ಸಾರುವ ಪ್ರಶಸ್ತಿಗಳಿಂದಲೂ ಮಿನುಗುವ ಪುಟಗಳಲ್ಲಿ ಸಾಹಿತ್ಯದ ಒಟ್ಟುನೋಟ ವಾಚಕರಿಗೆ ದೊರಕುತ್ತದೆ. ಸಾವಿರಕ್ಕೂ ಹೆಚ್ಚಿನ ವರ್ಷಗಳಲ್ಲಿ ನಮ್ಮವರು ಸಾಧಿಸಿದ್ದೇನೆಂಬುದು ಸ್ಪಷ್ಟವಾಗುತ್ತದೆ.

ಶಾಮರಾಯರು ರಚಿಸಿದ ವಿಮರ್ಶಾತ್ಮಕ ಕಿರುಹೊತ್ತಗೆಗಳಲ್ಲಿ ಮೊದಲನೆಯದು 'ರತ್ನಾಕರ ವರ್ಣಿ'. ಇದರಲ್ಲಿ ಕವಿಚರಿತ್ರೆ, ಭರತೇಶ ವೈಭವದ ಮೂಲ, ಕಥಾಸಾರ, ಕಥಾವಸ್ತು, ಕವಿ ಮಾಡಿಕೊಂಡಿರುವ ಬದಲಾವಣೆಗಳು, ಕವಿಕಾವ್ಯ ದೃಷ್ಟಿ, ಕಾವ್ಯ ಗುಣಗಳು, ಮೆಚ್ಚಿಕೆಯಾದ ಪಾತ್ರಗಳು, ಭರತನ ಸಂಸಾರದ ಚಿತ್ರ, ರತ್ನಾಕರನ ಶೈಲಿ, ಸಾಹಿತ್ಯದಲ್ಲಿ ರತ್ನಾಕರನ ಸ್ಥಾನ ಮುಂತಾದ ಅಧ್ಯಾಯಗಳಿವೆ. ತಿಳಿಯಾದ ಭಾಷೆಯಲ್ಲಿ ವಿಪುಲವಾದ ಉದಾಹರಣೆಗಳ ಮೂಲಕ ರತ್ನಾಕರನ ಬೃಹದ್ಗ್ರಂಥವನ್ನು ಪುಟ್ಟ ಕನ್ನಡಿಯಲ್ಲಿ ಸ್ಪಷ್ಟವಾಗಿ ಪರಿಚಯಿಸಿದ್ದಾರೆ. ಪ್ರಚಾರ ಪುಸ್ತಕ ಮಾಲೆಗೆ ಬರೆದ 'ಮುದ್ದಣ' ಕಿರುಹೊತ್ತಗೆಯಲ್ಲಿ ಕವಿ ಪರಿಚಯ, ಕವಿಯ ಕಾವ್ಯಗಳು, ಶ್ರೀ ರಾಮಾಶ್ವಮೇಧಂ, ಮುದ್ದಣನ ವೈಶಿಷ್ಟ್ಯ ಎಂಬ ನಾಲ್ಕು ಪ್ರಕರಣಗಳಿವೆ. ಹೊತ್ತಗೆಯ ಅರ್ಧಭಾಗ ರಾಮಾಶ್ವಮೇಧದ ಪ್ರಶಂಸೆಗೆ ಮೀಸಲಾಗಿದೆ. ಪ್ರಖರ ಶೈಲಿ, ಮೊನಚಾದ ಮಾತುಗಳಲ್ಲಿ ಕವಿಯ ಕೃತಿಗಳನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ವಿವೇಚಿಸಲಾಗಿದೆ. ಬೆಂಗಳೂರು ವಿಶ್ವವಿದ್ಯಾಲಯದ ಪ್ರಚಾರೋಪನ್ಯಾಸ ಮಾಲೆಯ ಕಿರುಹೊತ್ತಗೆಯಾಗಿ ಬಂದ 'ಪಂಪ' ಕೃತಿಯಲ್ಲಿ ಮೊದಲ ಮಾತು, ಕವಿಚರಿತ್ರೆ, ಪಂಪನ ಕಾವ್ಯಗಳು, ಕಡೆಯ ಮಾತು ಎಂಬ ನಾಲ್ಕು ಭಾಗಗಳಿವೆ. ಪಂಪನ ಕಾವ್ಯ ಗಳು ಇಂದಿಗೂ ಅಗ್ರಸ್ಥಾನದಲ್ಲಿ ನಿಂತಿರುವುದಕ್ಕೆ ಅವನ ಪ್ರತಿಭೆ, ಪಾಂಡಿತ್ಯ, ಲೋಕಾನುಭವ, ಕಲ್ಪನಾವಿಲಾಸಗಳೇ ಮುಖ್ಯ ಕಾರಣಗಳೆಂದು ನಿರೂಪಿಸಿದ್ದಾರೆ.•

ಹೊಸಗನ್ನಡ ಗದ್ಯಸಾಹಿತ್ಯದ ಮಕುಟಪ್ರಾಯ ಕೃತಿಗಳಲ್ಲಿ ಒಂದಾದ ಎ. ಆರ್. ಕೃಷ್ಣಾಶಾಸ್ತ್ರಿಗಳ 'ವಚನ ಭಾರತ'ದಿಂದ ಸ್ಫೂರ್ತಿಗೊಂಡು ಶಾಮರಾಯರು 'ವಚನ ರಾಮಾಯಣ' ಮತ್ತು 'ವಚನ ಭಾಗವತ' ಕೃತಿಗಳನ್ನು ರಚಿಸಿದರು. ಮೂಲವನ್ನು ಭಾಷಾಂತರಿಸಲು ಹೋಗದೆ ಅಲ್ಲಿನ ವಿಷಯಗಳನ್ನು ಸಾರವತ್ತಾಗಿಯೂ ಸಂಗ್ರಹವಾಗಿಯೂ ಸರಳವಾದ ತಿಳಿಗನ್ನಡದಲ್ಲೂ ತರಬೇಕೆಂಬ ರಾಯರ ಉದ್ದೇಶ ಸಫಲವಾಗಿದೆ. ಮೂಲದ ಸೊಗಸು ವಚನ ರೂಪದಲ್ಲೂ ಮಿಂಚುವಂತೆ ಸ್ವಾರಸ್ಯಕರ ರೀತಿಯಲ್ಲಿ ಕಥಾಭಾಗವನ್ನು ಸಂಗ್ರಹಿಸಿ ಜನಸಾಮಾನ್ಯರೂ ಈ ಮಹತ್ಕೃತಿಗಳ ಸಾರಸರ್ವಸ್ವವನ್ನರಿಯಲು ಶಾಮರಾಯರು ಅನುವು ಮಾಡಿಕೊಟ್ಟು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಶಾಮರಾಯರು ಗ್ರಂಥ ಸಂಪಾದನೆ ಮತ್ತು ಸಂಗ್ರಹಕಾರ್ಯಗಳಂಥ ಕ್ಲಿಷ್ಟ ಕೆಲಸಗಳಲ್ಲೂ ತಮ್ಮನ್ನು ಆಸಕ್ತಿಯಿಂದ ತೊಡಗಿಸಿಕೊಂಡು ಅಲ್ಲೂ ತಮ್ಮ ಪ್ರತಿಭೆ, ವಿದ್ವತ್ತುಗಳನ್ನು ತೋರ್ಪಡಿಸಿದ್ದಾರೆ. ಕುಮಾರವ್ಯಾಸ ಭಾರತದ ಆದಿಪರ್ವ, ಸಭಾಪರ್ವ, ಅರಣ್ಯಪರ್ವ, ವಿರಾಟಪರ್ವ, ಉದ್ಯೋಗಪರ್ವ ಸಂಗ್ರಹಗಳನ್ನೊಳಗೊಂಡ 'ಕನ್ನಡ ಮಹಾಭಾರತ ಸಂಗ್ರಹ ಭಾಗ-೧' ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ 'ಕುಮಾರವ್ಯಾಸ ಭಾರತ'ಗಳನ್ನು ಹೊರತಂದಿದ್ದಾರೆ. ಹತ್ತು ಸಾವಿರ ಪದ್ಯಗಳನ್ನೊಳಗೊಂಡ ಭಾರತವನ್ನು ೧೭೦೦ ಪದ್ಯಗಳಿಗೆ ಅಳವಡಿಸಿ, ಕವಿಕಾವ್ಯದ ಬಗೆಗೆ ಪೀಠಿಕೆ, ಅರ್ಥಕೋಶಗಳನ್ನು ನೀಡಿದ್ದಾರೆ. ಪ್ರಕ್ಷಿಪ್ತ ಭಾಗಗಳಿಂದ ಕೂಡಿ ಕ್ಲಿಷ್ಟತೆಗಳ ಸರಮಾಲೆಯಾಗಿರುವ ಪರ್ವಗಳನ್ನು ಅಭ್ಯಾಸ ಮಾಡಿ ಸೂಕ್ತಪಾಠಗಳನ್ನು ಆಯ್ದು ಸಂಪಾದಿಸುವ ತೊಡಕುಗಳನ್ನು ಅವರು ದಾಟಿರುವ ರೀತಿ ಅವರ ಅನನ್ಯ ಪ್ರತಿಭೆ, ವ್ಯುತ್ಪತ್ತಿಗಳ ದ್ಯೋತಕವಾಗಿದೆ. ಹತ್ತು ಸಾವಿರ ಸಾಂಗತ್ಯಗಳ 'ಭರತೇಶ ವೈಭವ'ದ ಕಥೆಗೆ ಯಾವ ಕುಂದೂ ಉಂಟಾಗದಂತೆ ಉತ್ತಮ ವರ್ಣನಾ ಭಾಗಗಳನ್ನು ಬಿಡದಂತೆ ೨೮೦೦ ಪದ್ಯಗಳಲ್ಲಿ ಸಂಗ್ರಹಿಸಿರುವುದೊಂದು ಸಾಹಸದಂತೆ ತೋರುತ್ತುದೆ. ಬಹು ವಿಸ್ತಾರವಾದ ಪೀಠಿಕಾ ಭಾಗದಲ್ಲಿ ಕವಿಯ ಕಾಲದೇಶಾದಿಗಳನ್ನು ವಿವರಿಸಿ, ಕಥಾಸಾರ, ಕಥೆಯ ಮೂಲ, ಬೆಳವಣಿಗೆ, ವರ್ಣನೆಗಳಲ್ಲಿ ಕವಿಯ ಹೆಚ್ಚುಗಾರಿಕೆ ಇವುಗಳನ್ನು ಸಹೃದಯರಿಗೆ ಪರಿಚಯಿಸಿರುವ ರೀತಿ ಉಪಯುಕ್ತವಾಗಿದೆ. ಎರಡು ಸಾವಿರ ಪದ್ಯಗಳನ್ನೊಳಗೊಂಡ ಲಕ್ಷ್ಮೀಶನ 'ಜೈಮಿನಿ ಭಾರತ'ವನ್ನು ೯೦೦ ಪದ್ಯಗಳಲ್ಲಿ ಅಳವಡಿಸಿ ಸಂಗ್ರಹಿಸಿದ್ದಾರೆ. ಪೀಠಿಕೆಯಲ್ಲಿರುವ ಕವಿಕಾವ್ಯ ವಿಮರ್ಶೆಯಿಂದ ಕವಿ ಮತ್ತು ಕಾವ್ಯದ ಪರಿಚಯ ಸುಲಭವಾಗಿ ಆಗುವಂತೆ ಮಾಡಿದ್ದಾರೆ. ಅರ್ಥಕೋಶ ಕಾವ್ಯಾಭ್ಯಾಸಿಗಳಿಗೆ ಉಪಯುಕ್ತವಾಗಿದೆ. ಆಚಣ್ಣ ಕವಿಯ ಪ್ರೌಢ ಚಂಪೂಕಾವ್ಯ 'ವರ್ಧಮಾನ ಪುರಾಣ'ವನ್ನು ಎಲ್ಲರೂ ಓದಿ ಅರ್ಥ ಮಾಡಿಕೊಳ್ಳಲು ಸಹಾಯಕವಾಗುವಂತೆ ಗದ್ಯಾನುವಾದವನ್ನು ನೀಡಿದ್ದಾರೆ. ಚಂಪೂಕಾವ್ಯಗಳನ್ನು ಓದಿ ಅರ್ಥಮಾಡಿಕೊಳ್ಳುವವರೇ ವಿರಳವಾಗಿರುವಾಗ ಅದನ್ನು ಹೊಸಗನ್ನಡಕ್ಕೆ ತರುವ ಧೀಮಂತಿಕೆ ಶಾಮರಾಯರಂಥವರಿಗೆ ಮಾತ್ರವೇ ಸಾಧ್ಯ. ರನ್ನನ ಪ್ರೌಢ ಕಾವ್ಯವಾದ 'ಅಜಿತ ಪುರಾಣ'ವನ್ನು ಇತರರೊಂದಿಗೆ ಸಂಗ್ರಹಿಸಿ, ಕವಿ ಕೃತಿಗಳ ವಿಮರ್ಶೆ ಅರ್ಥಕೋಶಗಳನ್ನು ನೀಡಿ ಸಾಮಾನ್ಯ ಓದುಗರೂ ರನ್ನನ ಪ್ರತಿಭಾವಿಲಾಸವನ್ನರಿಯಲು ಸಹಾಯ ಮಾಡಿದ್ದಾರೆ. ಅಲ್ಲಿ ಹಬ್ಬಿರುವ ಕರ್ಮ ಪ್ರಕೃತಿ, ಲೋಕ ವಿಭಾಗ, ಜೀವಸ್ವರೂಪ ಮೊದಲಾದ ಮತ ಪ್ರಕ್ರಿಯೆಗಳ ಮಳೆಯನ್ನು ಸವರಿ ಕಾವ್ಯ ರಸಾಸ್ವಾದನಕ್ಕೆ ಅನುವು ಮಾಡಿಕೊಟ್ಟಿದ್ದಾರೆ. 'ಕರ್ಣಾಟಕ ಶಬ್ದಾನುಶಾಸನಂ'

ಎಂಬ ವ್ಯಾಕರಣ ಗ್ರಂಥವನ್ನು ವಿದ್ಯಾರ್ಥಿಗಳಿಗಾಗಿ ಸಂಪಾದಿಸಿ ಅದನ್ನು ಕೂಲಂಕಷವಾಗಿ ವಿಮರ್ಶಿಸಿದ್ದಾರೆ. ಅಭ್ಯಾಸಿಗಳಿಗೆ ಅತ್ಯುಪಯುಕ್ತವಾದ ಪರಿಶಿಷ್ಟವನ್ನು ಒದಗಿಸಿದ್ದಾರೆ. ಇತರರೊಂದಿಗೆ ಸಂಪಾದಿಸಿರುವ 'ಶಬ್ದ ಮಣಿದರ್ಪಣಂ' ಕನ್ನಡ ವ್ಯಾಕರಣ ಲೋಕದಲ್ಲಿ ಚಿರಸ್ಥಾಯಿಯಾಗಿ ಉಳಿಯುವ ಕೃತಿ. ಮುನ್ನುಡಿಯಲ್ಲಿ ಕೃತಿ ಮತ್ತು ಕೃತಿಗಾರನ ಬಗೆಗೆ ಮಾಹಿತಿಗಳನ್ನು ಒದಗಿಸಿರುವುದಲ್ಲದೆ ವಿದ್ಯಾರ್ಥಿಗಳ ದೃಷ್ಟಿಯಿಂದ ವಿಶೇಷ ವಿಷಯಗಳನ್ನು ಅಲ್ಲಲ್ಲಿಯೇ ಕೊಟ್ಟು ಕನ್ನಡ ಭಾಷಾಭ್ಯಾಸಿಗಳೆಲ್ಲರಿಗೂ ಅತ್ಯಗತ್ಯವಾಗಿ ಬೇಕಾದ ಪುಸ್ತಕವಾಗುವಂತೆ ರೂಪಿಸಲಾಗಿದೆ.

ಶಾಮರಾಯರ ಸಂಕೀರ್ಣ ಕೃತಿಗಳ ಪೈಕಿ 'ಕಥಾವಲ್ಲರಿ' ಎಂಟು ಪ್ರಾಚೀನ ಕಾವ್ಯಗಳಿಂದ ಆರಿಸಿದ ಕಥೆಗಳನ್ನು ನಿರೂಪಿಸುವ ಗದ್ಯಕೃತಿ. ಈ ಕಥೆಗಳಿಗೆ ಮೂಲವಾದ ಕಾವ್ಯಗಳು ಕನ್ನಡ ಸಾಹಿತ್ಯಾಸಕ್ತರಿಗೆ ಪರಿಚಿತವಾದರೂ ಲೇಖಕರು ಗದ್ಯರೂಪದಲ್ಲಿ ಸರಳವಾಗಿ ಮತ್ತು ಮನನೀಯವಾಗಿ ಹೇಳಿಕೊಂಡು ಹೋಗಿರುವ ರೀತಿ ವಿಶಿಷ್ಟವಾದುದಾಗಿದೆ. ಅನಗತ್ಯ ವಿವರಗಳಿಲ್ಲದ ನಿರೂಪಣಾ ಶೈಲಿ ಅಪ್ಯಾಯಮಾನವಾಗಿದೆ. ರಾಯರ ಸಂಯಮಪೂರ್ಣ ಬರವಣಿಗೆಗೆ ಇದು ನಿದರ್ಶನದಂತಿದೆ. ಸಿಖ್ ಪಂಥ ಬೆಳೆಯಲು ಕಾರಣೀಭೂತರಾದ ಗುರುನಾನಕರ ಜೀವನ ಚರಿತ್ರೆ ಶಾಮರಾಯರಿಂದ 'ಗುರುನಾನಕ್' ಕೃತಿಯಾಗಿ ಮೈತಳೆದಿದೆ. ಸಾಮಾನ್ಯ ಓದುಗರಿಂದಲೂ ವಿದ್ವಾಂಸರಿಂದಲೂ ಮೆಚ್ಚುಗೆಗಳಿಸಿರುವ ಕೃತಿಯಿದು. ಇದರಲ್ಲಿ ಹೃದ್ಯವಾದ ಬರವಣಿಗೆ ಮತ್ತು ವಿಷಯ ನಿರೂಪಣೆ ಮನಮುಟ್ಟುವಂತಿವೆ. ಸರಳತೆ, ಕಾವ್ಯ ಲಾಲಿತ್ಯಗಳು ಎದ್ದುಕಾಣುತ್ತವೆ. ನಾನಕ್‌ರ ಜೀವನ, ಸಿದ್ಧಾಂತ, ಸಾಧನೆಗಳೆಲ್ಲ ಸುಂದರವಾದ ಶೈಲಿಯಲ್ಲಿ ಚಿತ್ರಿಸಲ್ಪಟ್ಟಿವೆ. ಕನ್ನಡ ತನ್ನ ಶಕ್ತಿಯನ್ನು ಮತ್ತೆ ಮೈದುಂಬಿಸಿಕೊಳ್ಳುತ್ತಿದ್ದ ೨೦ನೇ ಶತ ಮಾನದ ಪೂರ್ವಾರ್ಧ ಕಾಲದಲ್ಲಿದ್ದು ನಾಡು ನುಡಿಗಳ ಬೆಳವಣಿಗೆಗೆ ಶ್ರಮಿಸಿದ ಮಹನೀಯರೂ ರಾಯರ ಸ್ವಂತ ಅಣ್ಣಂದಿರೂ ಆಗಿದ್ದ ಟಿ. ಎಸ್. ವೆಂಕಣ್ಣಯ್ಯನವರನ್ನು ಕುರಿತು ಬರೆದ ಕೃತಿ 'ತಳುಕಿನ ವೆಂಕಣ್ಣಯ್ಯ'. ಮೇಧಾವಿ ಮತ್ತು ಧೀಮಂತ ವ್ಯಕ್ತಿಯಾಗಿದ್ದವರ ಬದುಕನ್ನು ಸಂಕ್ಷಿಪ್ತವಾಗಿಯೂ ಸಮರ್ಪಕವಾಗಿಯೂ ಚಿತ್ರಿಸುವಲ್ಲಿ ಶಾಮರಾಯರು ಯಶಸ್ವಿಯಾಗಿದ್ದಾರೆ. ವೆಂಕಣ್ಣಯ್ಯನವರ ತಮ್ಮನಾಗಿದ್ದರೂ ರಾಯರು ಎಲ್ಲಿಯೂ ಮಮಕಾರ ತೋರದ ಸಂಯಮಪೂರ್ಣ ಬರವಣಿಗೆಯನ್ನು ಕಾದುಕೊಂಡಿದ್ದಾರೆ.

ಆಧ್ಯಾತ್ಮಿಕ ರಂಗದಲ್ಲಿ ಸಾಧನೆಗೈದ ನಾಲ್ವರು ವ್ಯಕ್ತಿಗಳನ್ನು ಕುರಿತು ಶಾಮರಾಯರು ನಾಲ್ಕು ಕೃತಿಗಳನ್ನು ರಚಿಸಿದರು. ಗೋಲ್ಕೊಂಡದ ರಾಜನಲ್ಲಿ ನೌಕರಿಯಲ್ಲಿದ್ದು ಸೆರೆವಾಸ ಅನುಭವಿಸಿದರೂ ರಾಮಧ್ಯಾನವನ್ನು ಬಿಡದೆ ಭದ್ರಾಚಲದಲ್ಲಿ ನೆಲೆ ನಿಂತು ಪ್ರಸಿದ್ಧರಾದ ರಾಮದಾಸರನ್ನು ಕುರಿತು ಬರೆದ ಕೃತಿ 'ಭದ್ರಾಚಲ ರಾಮದಾಸರು'. ಧಾರವಾಡ ಜಿಲ್ಲೆಯಲ್ಲಿ ಹುಟ್ಟಿ ತಪಸ್ವಿಗಳಾಗಿ ದಕ್ಷಿಣ ಭಾರತದ ಪುಣ್ಯಕ್ಷೇತ್ರಗಳಲ್ಲೆಲ್ಲಾ ಸಂಚರಿಸಿ ತಮ್ಮ ಧ್ಯಾನ ಮಹಿಮೆಯನ್ನು ಲೋಕಕಲ್ಯಾಣಕ್ಕೆ ಬಳಸಿದ ಶೇಷಾಚಲರ ಜೀವನ, ಮಹಿಮೆಗಳನ್ನು ಪರಿಚಯಿಸುವ ಕೃತಿ 'ಶ್ರೀ ಶೇಷಾಚಲರು'. ರಾಜಾಸ್ಥಾನ ಪ್ರಾಂತದ ಕ್ಷತ್ರಿಯ ಮನೆತನದಲ್ಲಿ ಹುಟ್ಟಿದ್ದರೂ ವಿರಕ್ತಯೋಗಿಯ ಜೀವನ ನಡೆಸಿದ ತಪಸ್ವಿನಿಯವರನ್ನು ಕುರಿತ ಕೃತಿ 'ಶ್ರೀ ತಪಸ್ವಿಜಿ ಮಹಾರಾಜ್'. ಇದನ್ನು ರಾಯರು 'ನೀಲ ಮೇಘ' ಎಂಬ ಗುಪ್ತನಾಮದಿಂದ ಬರೆದರು. ಪೋಸ್ಟ್ ಮಾಸ್ಟರ್ ಆಗಿದ್ದ ವೆಂಕಟರಾಮಯ್ಯನವರು ಸನ್ನಡತೆ ಮತ್ತು ತ್ಯಾಗದಿಂದ ಲೋಕಕಲ್ಯಾಣ ಸಾಧಿಸಿದ್ದಕ್ಕೆ ಜೀವಂತ ಸಾಕ್ಷಿಯಾದ ಕತೆಯನ್ನು ನಿರೂಪಿಸುವ ಕೃತಿ 'ಸ್ವಾಮಿ ಶ್ರೀ ಚಿದಂಬರ'. 'ಲವ -ಕುಶ' ಎಂಬ ಕಿರುಹೊತ್ತಗೆ ಕಿರಿಯ ಓದುಗರಿಗೆ ಹಿರಿಯರ ಪರಿಚಯವನ್ನು ಪರಿಣಾಮಕಾರಿಯಾಗಿ ಮಾಡಿಕೊಡುವ ಕೃತಿ. ಹರಿಹರನ 'ಅಕ್ಕಮಹಾದೇವಿ ರಗಳೆ' ಮೂಲ ಕಾವ್ಯವನ್ನು ಮನದಟ್ಟು ಮಾಡಿಕೊಳ್ಳಲು ಸೂಕ್ತ ಮಾರ್ಗದರ್ಶಕ ಒದಗಿಸುವ ಕೃತಿ 'ಹರಿಹರನ ಉಡುತಡಿಯ ಅಕ್ಕಮಹಾದೇವಿಯ ರಗಳೆ'. ಅತಿ ವಿಸ್ತಾರಕ್ಕೆ ಅವಕಾಶವಿಲ್ಲದಂತೆ ಇದರಲ್ಲಿ ವಿಷಯ ನಿರೂಪಣೆ ಮಾಡಿರುವ ರೀತಿ ಸೊಗಸಾಗಿದೆ. ಕೃತಿಯ ತಿರುಳನ್ನು ಉಣಬಡಿಸುವ ಪ್ರಸ್ತಾವನೆ ಓದುಗರ ಗಮನವನ್ನು ಕೇಂದ್ರೀಕರಿಸುವಷ್ಟು ಆಕರ್ಷಕವಾಗಿದೆ. ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಟಣೆಯಾದ 'ಕುಮಾರವ್ಯಾಸ ಭಾರತದ ನಿಘಂಟು' ಆ ಮಹಾಕಾವ್ಯದ ಅಧ್ಯಯನಕ್ಕೊಂದು ಸಮಗ್ರ ಕೈಪಿಡಿ. ಅಕಾರಾದಿಯಾಗಿರುವ ಕಠಿಣ ಪದಗಳನ್ನು ಓದುಗರು ಸುಲಭವಾಗಿ ಗುರುತಿಸಿ ಅರ್ಥ ತಿಳಿಯಬಹುದು. ಅನುಬಂಧದಲ್ಲಿ ಪೌರಾಣಿಕ ವ್ಯಕ್ತಿಗಳ ಬಗ್ಗೆ ಟಿಪ್ಪಣಿ ಕೊಟ್ಟಿರುವುದು ಇದರ ಉಪಯುಕ್ತತೆಯನ್ನು ಹೆಚ್ಚಿಸಿ ಉತ್ತಮ ಪರಾಮರ್ಶನ ಗ್ರಂಥವಾಗಲು ಸಹಕಾರಿಯಾಗಿದೆ. ರಾಯರ ಪಾಂಡಿತ್ಯ ಹಾಗೂ ಪೌರಾಣಿಕ ಪ್ರಜ್ಞೆ ಇಲ್ಲಿ ಬಿಂಬಿತವಾಗಿವೆ.

ಇವುಗಳಲ್ಲೆಲ್ಲ ಎತ್ತಿ ಹೇಳಬೇಕಾದ ಕೃತಿಯೆಂದರೆ 'ಮೂರು ತಲೆಮಾರು'. ಇದು ಶಾಮರಾಯರ ಕುಟುಂಬದ ವೃತ್ತಾಂತವನ್ನು ನಿರೂಪಿಸುವ ವಿನೂತನ ಶೈಲಿಯ ಗದ್ಯಕೃತಿ. ಇದರಲ್ಲಿ ಕಾದಂಬರಿಯ ಸೊಗಸೂ, ಸಣ್ಣಕಥೆಯ ತೀವ್ರತೆಯೂ ಹದವಾಗಿ ಬೆರೆತಿವೆ. ತಳುಕಿನ ವೆಂಕಣ್ಣಯ್ಯನವರ ಮನೆತನದ ಮೂರು ತಲೆಮಾರುಗಳ ಅದ್ಭುತ ಚಿತ್ರಣ ಇದರಲ್ಲಿ ದೊರೆಯುತ್ತದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಇದೊಂದು ಮಹತ್ವದ ಗ್ರಂಥವೆಂದು ಪರಿಗಣಿಸಲ್ಪಟ್ಟಿದೆ. ಇಷ್ಟೆಲ್ಲ ಬಿಡುವಿಲ್ಲದ ಅಧ್ಯಾಪಕ, ಪ್ರಕಾಶಕ, ಲೇಖಕ ಚಟುವಟಿಕೆಗಳ ನಡುವೆಯೂ ಶಾಮರಾಯರು ಪ್ರಬುದ್ಧ ಕರ್ನಾಟಕ, ವಿದ್ಯಾವಾಹಿನಿ, ಸೇವಾಸದನ, ವಸಂತ ಮುಂತಾದ ನಿಯತಕಾಲಿಕೆಗಳ ಸಂಪಾದಕರಾಗಿ ಸೇವೆಸಲ್ಲಿಸಿ ಆ ಪತ್ರಿಕೆಗಳ ಗುಣಮಟ್ಟವನ್ನು ಎತ್ತರಿಸಿದ್ದುಂಟು.

ತಿದ್ದಿಬಾಚಿದ ತಲೆಗೂದಲು, ಗರಿ ಮುರಿಯದ ಜುಬ್ಬ, ಹಾಲುಬಿಳುಪಿನ ಕಚ್ಚೆಪಂಚೆ, ಮೇಲೊಂದು ಶಲ್ಯ, ಪದೇ ಪದೇ ಮೂಗಿಗೇರಿಸುತ್ತಿದ್ದ ನಶ್ಯ: ಇದು ಶಾಮರಾಮರ ಪರಿಪೂರ್ಣವಾದ ಚಿತ್ರ. ನಶ್ಯವನ್ನು ಅವರು ಬದುಕಿನ ಕೊನೆಯತನಕ ಬಿಡಲಿಲ್ಲ. ನಶ್ಯ ಬಿಡುವಂತೆ ವೈದ್ಯರು ನೀಡಿದ ಸಲಹೆಯನ್ನು ಅವರು ಸ್ವೀಕರಿಸಲಿಲ್ಲ. ಸಾವಿಗೆ ಸಮೀಪವರ್ತಿಯಾಗಿದ್ದ ಶಾಮರಾಯರನ್ನು ನೋಡಲು ಹೋಗಿದ್ದ ಹಾ. ಮಾ. ನಾಯಕರು ನಶ್ಯದ ಡಬ್ಬಿಗಾಗಿ ತಡಕಾಡುತ್ತಿದ್ದ ಅವರನ್ನು "ಏನು ಸಾರ್, ಈಗಲೂ ನೀವು ನಶ್ಯ ಹಾಕುವುದನ್ನು ಬಿಡಲಿಲ್ಲವೆ?' ಎಂದು ಕೇಳಿದರಂತೆ. ಅದಕ್ಕೆ ಶಾಮರಾಯರು "ಅಭ್ಯಾಸ ನನ್ನನ್ನು ದಾಸನನ್ನಾಗಿ ಮಾಡಿಕೊಂಡಿದೆ. ಪ್ರಾಣ ಬಿಟ್ಟಾಗಲೇ ಅದು ನನ್ನನ್ನು ಬಿಡುವುದು" ಎಂದರಂತೆ. ಶಾಮರಾಯರೇ ತಿಳಿದಿದ್ದಂತೆ ಅವರಿಗೂ ನಶ್ಯಕ್ಕೂ ಅಂಟಿದ್ದ ನಂಟಿನ ಕೊನೆಯಾದದ್ದು ಮಾತ್ರ ಸಾವಿನಲ್ಲೇ. ಕೊನೆಯ ಎರಡು ಮೂರು ವರ್ಷಗಳ ಕಾಲ ಶಾಮರಾಯರು ತೀವ್ರ ಅನಾರೋಗ್ಯದಿಂದ ಬಳಲಿದರು. ಆರೋಗ್ಯ ಉತ್ತಮಗೊಳ್ಳುತ್ತಿರುವಂತೆ ತೋರಿ ಮತ್ತೆ ವಿಷಮತೆಗೆ ಜಾರುತ್ತಿತ್ತು. ಈಗ ಅವರು ಚೆನ್ನಾಗಿ

ಚೇತರಿಸಿಕೊಂಡಿದ್ದಾರೆ, ಇನ್ನೇನು ಭಯವಿಲ್ಲ ಎಂದು ಭರವಸೆಯಿರಿಸಿಕೊಂಡಿದ್ದಾಗಲೇ ೧೯೯೮ ಆಗಸ್ಟ್ ೨೧ರಂದು ಲೌಕಿಕದ ಬದುಕಿಗೆ ವಿದಾಯ ಹೇಳಿಬಿಟ್ಟರು. ಎಷ್ಟೋ ಜನರ ಪಾಲಿಗೆ ಗೆಳೆಯ, ತತ್ವಶಾಸ್ತ್ರ ಹಾಗೂ ಮಾರ್ಗದರ್ಶಕರಾಗಿ ತಮ್ಮ ಅಂತಃಕರಣ ತುಂಬಿಕೊಂಡಿದ್ದ ಉದಾತ್ತ ಮಾನವರೂ ಆಗಿದ್ದ ಅವರ ಜಾಗದಲ್ಲಿ ಇನ್ನೊಬ್ಬರನ್ನು ಊಹಿಸಿಕೊಳ್ಳುವುದು ಕಷ್ಟ.

ಹಲವಾರು ಪ್ರಶಸ್ತಿ ಪುರಸ್ಕಾರಗಳಿಗೆ ಪಾತ್ರರಾಗಿದ್ದ ಶಾಮರಾಯರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳ ಜೊತೆಗೆ ೧೯೯೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪಿಸಿದ್ದ 'ಚಾವುಂಡರಾಯ ಪ್ರಶಸ್ತಿ'ಯ ಗೌರವವು ಪ್ರಪ್ರಥಮವಾಗಿ ಸಂದಿತು. ಆದರೆ ಅದೇ ಕನ್ನಡ ಸಾಹಿತ್ಯ ಪರಿಷತ್ತಿನ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗುವ ಗೌರವ ಎಲ್ಲ ಅರ್ಹತೆಗಳಿದ್ದೂ ಯಾಕೋ ಏನೋ ತಪ್ಪಿಹೋಯಿತು. ಶಾಮರಾಯರ ಕೊನೆಗಾಲದಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿ ನೀಡಿ ಉನ್ನತ ಪರಂಪರೆಯನ್ನು ಗೌರವಿಸಿತು. ಅವರಿಗೆ ಈ ಗೌರವ ಸಂದಾಗ ಘಟಿಕೋತ್ಸವದಲ್ಲಿ ಹಾಜರಿದ್ದ ವಿದ್ಯಾರ್ಥಿಗಳಿಗೆಲ್ಲ ರೋಮಾಂಚನವಾಯಿತು. ಅವರ ಉತ್ತರ ರೂಪದ ಭಾಷಣ ವಿದ್ಯಾರ್ಥಿಗಳ ಕಣ್ಣಲ್ಲಿ ನೀರಾಡಿಸಿತು. ಕನ್ನಡಿಗರಿಗೆ ಪಿತೃಸದೃಶ ವ್ಯಕ್ತಿಯಂತಿದ್ದ ತ. ಸು. ಶಾಮರಾಯರು ತಾವು ಬರೆದುದಕ್ಕಿಂತ ಹೆಚ್ಚಾಗಿ, ಹಲವಾರು ಶ್ರೇಷ್ಠಕವಿಗಳನ್ನೂ, ಲೇಖಕರನ್ನೂ, ಶಿಕ್ಷಕರನ್ನೂ ರೂಪಿಸಿದವರು. ವಿದ್ವತ್ತು, ವಿನಯ, ಮಾನವೀಯತೆ ಮತ್ತು ಆದರ್ಶಪ್ರಾಯವಾದ ಶಿಕ್ಷಕ ವೃತ್ತಿಯ ಒಂದು ವಿಶಿಷ್ಟ ಮಾದರಿಯಾಗಿ ಅವರು ಸದಾ ಸ್ಮರಣೀಯರು.

❑

# ರಂ. ಶ್ರೀ. ಮುಗಳಿ

ಪಾ.ಶ. ಶ್ರೀನಿವಾಸ

ಡಾ. ರಂಗನಾಥ ಶ್ರೀನಿವಾಸ ಮುಗುಳಿಯವರು ಕನ್ನಡ ಸಾಹಿತ್ಯ ಲೋಕದಲ್ಲಿ ಏಕೆ ಜೀವನದಲ್ಲಿ ಕೂಡ 'ರಸಿಕ ರಂಗ'ರೆಂದೆ ಚಿರಪರಿಚಿತರು. 'ರಸಿಕ' ಎಂಬ ವಿಶೇಷಣವನ್ನು ಅನ್ವರ್ಥವಾಗಿ ತಮ್ಮ ಹೆಸರಿಗೆ ಅಂಟಿಸಿಕೊಂಡು ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಟ್ಟ ಅವರು ಆಧುನಿಕ ಕನ್ನಡ ಸಾಹಿತ್ಯದ, ಎರಡನೆಯ ಪೀಳಿಗೆಯ ಪ್ರಮುಖ ವಿದ್ವಾಂಸ ಕವಿಗಳ ಸಾಲಿನಲ್ಲಿ ವಿರಾಜಿಸುತ್ತಿದ್ದಾರೆ. ಈ ಶತಮಾನದ ಮೂರು ಮತ್ತು ನಾಲ್ಕನೆಯ ದಶಕಗಳಲ್ಲಿ ಉತ್ತರಕರ್ನಾಟಕದ ಧಾರವಾಡದಲ್ಲಿ ವರಕವಿ ಬೇಂದ್ರೆಯವರ ನಾಯಕತ್ವದಲ್ಲಿ ಸಾಹಿತ್ಯದೀಪವನ್ನು ಹೊತ್ತಿಸಿ ಮನೆಮನೆಗೆ ಕನ್ನಡ ಕಾವ್ಯದ ಬೆಳಕನ್ನು ಮುಟ್ಟಿಸಿದ ಗೆಳೆಯರ ಗುಂಪಿನ ಶೋಧನೆಯಲ್ಲಿ ಡಾ. ಮುಗಳಿಯವರೂ ಒಂದು ಪ್ರಮುಖ ಹೆಸರಾಗಿ ಉಳಿದಿದ್ದಾರೆ. ಕಾವ್ಯ, ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಸಾಹಿತ್ಯ ಚರಿತ್ರೆ ಮೊದಲಾದ ಪ್ರಕಾರಗಳಲ್ಲಿ ಕನ್ನಡ ಸರಸ್ವತಿಯ ಬಹುಮುಖ ದರ್ಶನ ಮಾಡಿಸಿದ ಡಾ. ಮುಗುಳಿಯವರ ಸಾಹಿತ್ಯ ಸೇವೆ ವೈವಿಧ್ಯಮಯವಾದುದು. ಕನ್ನಡ ಸಾಹಿತ್ಯ ಚರಿತ್ರೆಯ ಪ್ರಮುಖ ಶಿಲ್ಪಿಯಾಗಿ ಅವರ ಕೀರ್ತಿ ಭಾರತದುದ್ದಕ್ಕೂ ಹರಡಿದೆ. ಕರ್ನಾಟಕ-ಮಹಾರಾಷ್ಟ್ರಗಳ ಗಡಿನಾಡಿನ ಸಾಂಗಲಿಯ ಕಾಲೇಜೊಂದರಲ್ಲಿ ಪ್ರಾಧ್ಯಾಪಕ ರಾಗಿ, ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದ ಅವರು 'ಗಡಿ ನಾಡಿನ ಕನ್ನಡ ದೀಪ', 'ಕನ್ನಡ ಪಾರಿಜಾತ' ಎಂಬ ಬಿರುದುಗಳನ್ನು ಹೊತ್ತು ಕನ್ನಡ ಮತ್ತು ಮರಾಠಿ ಭಾಷಾ ಸಾಹಿತ್ಯಗಳ ಸ್ನೇಹ ಸೇತುವೆಯಾಗಿ, ಭಾಷಾಬಾಂಧವ್ಯವನ್ನು ಬೆಸೆದಿದ್ದಾರೆ.

**ವ್ಯಕ್ತಿ ಪರಿಚಯ**

ಮುಗಳಿಯವರು ಧಾರವಾಡ ಜಿಲ್ಲೆಯ ಹೊಳೆ ಆಲೂರಿನಲ್ಲಿ ಜುಲೈ 15, 1906ರಲ್ಲಿ ಜನಿಸಿದರು. ಬಿಜಾಪುರ ಜಿಲ್ಲೆಯ ಬಾಗಲಕೋಟೆ, ಮುದ್ದೇಬಿಹಾಳ ಮೊದಲಾದೆಡೆಗಳಲ್ಲಿ ವಕೀಲಿ ವೃತ್ತಿ ಮಾಡುತ್ತ ಕ್ರಿಮಿನಲ್ ಲಾಯರೆಂದು ಆ ಕಾಲದಲ್ಲಿ ಪ್ರಸಿದ್ಧರಾಗಿದ್ದ ಮುಗುಳಿ ಶ್ರೀನಿವಾಸರಾಯರು ಇವರ ತಂದೆ. ಮುಗುಳಿ ಶ್ರೀನಿವಾಸರಾಯರಿಗೆ ಸಂಗೀತ, ನಾಟಕಗಳಲ್ಲಿ ವಿಶೇಷ ಅಭಿರುಚಿ ಇತ್ತು. ನಾಟಕ ಸಂಘಗಳನ್ನು ಕಟ್ಟಿ, ಆ ಕಾಲದಲ್ಲಿ ಪ್ರಸಿದ್ಧವಾಗಿದ್ದ ಮರಾಠಿ ರಂಗಭೂಮಿಯ ಎದುರು ಕನ್ನಡ ನಾಟಕಗಳನ್ನು ಆಡಿಸುವ ಹುಚ್ಚು ಅವರಿಗಿತ್ತು. ತಂದೆಯಲ್ಲಿದ್ದ ಈ ಕಲಾ ರಸಿಕತೆ ರಂಗನಾಥನಿಗೂ ದತ್ತವಾಗಿ ಸೇರಿದುದರಲ್ಲಿ ಅತಿಶಯವೇನೂ ಇಲ್ಲ. ತಂದೆಯಲ್ಲಿ ಸೀಮಿತವಾಗಿದ್ದ ಕಲೆಯ ಒಲವು ಮಗನಲ್ಲಿ ತನ್ನ ಸೀಮೆಯನ್ನು ದಾಟಿ ಬೆಳೆಯಿತಷ್ಟೆ.

ರಂಗಣ್ಣ ಬಾಲ್ಯದಿಂದಲೂ ಭಾವಜೀವಿ. ಪ್ರಕೃತಿಯ ಅಸೀಮ ಚೆಲುವನ್ನು ಕಂಡು ಆದರ್ಶದ ಕಲ್ಪನೆಗಳನ್ನು ಹೊಸೆಯುತ್ತ, ಕನಸಿನಲ್ಲಿ ಕಾವ್ಯದ ಮಜಲುಗಳನ್ನು ನಿರ್ಮಿಸುತ್ತಾ ಮೇಲೇರಿದವನು. ಅವನ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣ ಬಾಗಲಕೋಟೆ, ಬಿಜಾಪುರಗಳಲ್ಲಾಯಿತು. ಬಿಜಾಪುರದ ಪ್ರೌಢಶಾಲೆಯಲ್ಲಿ ಕಲಿಯುತ್ತಿರುವಾಗ ಅಂದರೆ 1920ರಲ್ಲಿ ಮಹಾತ್ಮ ಗಾಂಧಿಯವರ ಅಸಹಕಾರ ಆಂದೋಲನದಿಂದ ಪ್ರಭಾವಿತನಾಗಿ ಅವನಲ್ಲಿದ್ದ ದೇಶಪ್ರೇಮ ಜಾಗೃತವಾಯಿತು. ಚಳವಳಿಯಲ್ಲಿ ಪಾಲ್ಗೊಂಡು, ಶಾಲೆಗೆ ವಿಮುಖನಾದ. ಮತ್ತೆ ಹಿರಿಯರ ಒತ್ತಡದಿಂದ 1924ರಲ್ಲಿ ಮೆಟ್ರಿಕ್ ಪರೀಕ್ಷೆಯನ್ನು ಕಟ್ಟಿ, ಉತ್ತೀರ್ಣನಾಗಿ, ಶಾಲೆಯಿಂದ ಹೊರಬಂದು, ಧಾರವಾಡದ ಕರ್ನಾಟಕ ಕಾಲೇಜು ಸೇರಿದ.

ಕರ್ನಾಟಕ ಕಾಲೇಜು ಸೇರಿದ ಆರಂಭದ ದಿನಗಳಲ್ಲೇ ಅವರ ಬದುಕಿಗೆ ಹೊಸ ತಿರುವು ನೀಡುವ ಅಪೂರ್ವ ಘಟನೆಯೊಂದು ನಡೆಯಿತು. 1924ರ ಮಾರ್ಚ್ ತಿಂಗಳಲ್ಲಿ ಧಾರವಾಡದ ವಿಕ್ಟೋರಿಯ ಹೈಸ್ಕೂಲಿನಲ್ಲಿ ವರಕವಿ

ಬೇಂದ್ರೆಯವರನ್ನು ಕಾಣುವ ಅಪೂರ್ವ ಅವಕಾಶ ಅವರಿಗೊದಗಿತು. ಬೇಂದ್ರೆಯವರು ಆಗ ಆ ಶಾಲೆಯಲ್ಲಿ ಶಿಕ್ಷಕರಾಗಿದ್ದರು. ಬೇಂದ್ರೆಯವರ ಪ್ರಥಮ ಸಂದರ್ಶನ ಭಾಗ್ಯದಿಂದಲೆ ಮುಗಳಿಯವರ ಭಾವಜೀವನ ಸೆಲೆಯೊಡೆದು ಕವಿ ಕಲ್ಪನೆಗಳು ಗರಿಬಿಚ್ಚಿ ಹಾರಾಡತೊಡಗಿದವು. ಆ ಗಾರುಡಿಗನ ಚೇತನ ಚಿಲುಮೆಯಿಂದ ಪುಟಿಪುಟಿದು ಬಂದ ಮಾತಿನ ಮೋಡಿಯನ್ನು ಅಂದಿನ ತರುಣ ಮುಗಳಿಯವರು ಮುಗ್ಧ ಶಿಶುವಿನಂತೆ ಆಲಿಸಿ, ಆನುಭವಿಸಿ ಅವರನ್ನು ತನ್ನ 'ಕಾವ್ಯಗುರು'ವನ್ನಾಗಿ ಮನದಲ್ಲೇ ಸ್ವೀಕರಿಸಿದರು. ಅವರಲ್ಲಿದ್ದ ಕನ್ನಡದ ಪ್ರೇಮ, ಕಾಲೇಜಿನ ಕನ್ನಡ ಚಟುವಟಿಕೆಗಳಲ್ಲಿ ಮುಂದಾಗಿ ವಿಕಾಸಗೊಳ್ಳುತ್ತಿತ್ತು. ತಮ್ಮ ವಾಕ್ಪಟುತ್ವದಿಂದ, ಮಧುರ ಕಂಠದ ಭಾವಗೀತೆಗಳ ಗಾಯನದಿಂದ, ಬಹುಮಂದಿಯ ಮೆಚ್ಚುಗೆಗೆ ಪಾತ್ರರಾದರು. ತಮ್ಮ ಹೊರಗಿನ ಚಟುವಟಿಕೆಗಳಿಂದ ವ್ಯಾಸಂಗವನ್ನು ಕಡೆಗಾಣಿಸದೆ-1928ರಲ್ಲಿ ಸಂಸ್ಕೃತ, ಕನ್ನಡ, ಇಂಗ್ಲಿಷ್‌ಗಳಲ್ಲಿ ಬಿ. ಎ. ಪದವೀಧರರಾಗಿ, ಉತ್ತಮ ಶ್ರೇಣಿಯ ವಿದ್ಯಾರ್ಥಿಗೆ ಲಭಿಸುವ 'ದೀಪದ ಮೆಡಲ್' ಮತ್ತು ದಕ್ಷಿಣಾಫೆಲೋ ವೇತನವನ್ನು ದಕ್ಕಿಸಿಕೊಂಡರು.

1930ರಲ್ಲಿ ಕರ್ನಾಟಕ ಕಾಲೇಜಿನಲ್ಲಿ ಸ್ನಾತಕೋತ್ತರ ಅಭ್ಯಾಸದಲ್ಲಿ ಕನ್ನಡವನ್ನು ಮುಖ್ಯ ವಿಷಯವಾಗಿ ವ್ಯಾಸಂಗ ಮಾಡಿ, ಉತ್ತಮ ವಿದ್ಯಾರ್ಥಿಯಾಗಿ ಎಂ.ಎ. ಪದವಿಯನ್ನು, ವಿದ್ಯಾರಣ್ಯ ಪಾರಿತೋಷಕದೊಂದಿಗೆ ಪಡೆದರು. ಮುಗಳಿಯವರಿಗೆ-ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ತಾವು ತಿಲಕ, ಗೋಖಲೆಯವರಂತೆ ಶಿಕ್ಷಕನಾಗಿ ಶಿಕ್ಷಣಕ್ಷೇತ್ರದಲ್ಲಿ ದುಡಿಯಬೇಕೆಂಬ ಆಶೆ. ಅದಕ್ಕಾಗಿ ಬಿ. ಟಿ. ಪರೀಕ್ಷೆಯನ್ನು ಮಾಡಿಕೊಂಡರು. ಸ್ವಲ್ಪ ಕಾಲ ಹುಬ್ಬಳ್ಳಿಯ ನ್ಯೂ ಇಂಗ್ಲಿಷ್ ಶಾಲೆಯಲ್ಲಿ ಶಿಕ್ಷಕರಾಗಿ ಕೆಲಸ ಮಾಡಿದರು. ಆದರೆ ಅಷ್ಟರಿಂದ ಅವರಿಗೆ ತೃಪ್ತಿಸಿಗಲಿಲ್ಲ. ತಮ್ಮ ಆಪ್ತ ಮಿತ್ರರೊಬ್ಬರ ಆಸ್ಥಾಪೂರ್ವಕ ಪ್ರಯತ್ನದಿಂದ 1933ರಲ್ಲಿ ಮಹಾರಾಷ್ಟ್ರದ ಸಾಂಗಲಿಯ ವಿಲ್ಲಿಂಗ್ಡನ್ ಆ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಪ್ರವೇಶ ಮಾಡಿದರು. ಅದೇ ಕಾಲೇಜಿನ ಅಧ್ಯಾಪಕ, ಪ್ರಾಧ್ಯಾಪಕ, ಉಪ-ಪ್ರಾಚಾರ್ಯ ಮತ್ತು ಪ್ರಾಚಾರ್ಯ ಪದವಿಗಳನ್ನು ಅಲಂಕರಿಸಿ, ತಮ್ಮ ಜೀವನ ಮತ್ತು ಸಾಹಿತ್ಯಾನುಭವಗಳನ್ನು ವಿಸ್ತರಿಸಿಕೊಂಡು ಬೆಳೆದರು. 1966ರಲ್ಲಿ ಅಲ್ಲಿಂದ ನಿವೃತ್ತರಾಗುವವರೆಗೆ, ಬದುಕಿನ ಬಹು ಮುಖ್ಯವಾದ ಘಟ್ಟವನ್ನು ಅಲ್ಲಿ ಕಳೆದು ಮಹತ್ತರವಾದ ಸಾಹಿತ್ಯ ಕೃತಿಗಳನ್ನು ನಿರ್ಮಿಸಿದರು. ಅವರ ಆಚಾರ್ಯ ಕೃತಿ, ಕನ್ನಡ ಸಾಹಿತ್ಯ ಚರಿತ್ರೆ ರೂಪು ತಳೆದುದು ಅಲ್ಲೆ. ಈ ಕೃತಿ ಅವರಿಗೆ ಪುಣೆ ವಿಶ್ವವಿದ್ಯಾನಿಲಯದ ಡಿ.ಲಿಟ್. ಪದವಿ ಪ್ರಶಸ್ತಿಯನ್ನೂ, ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನೂ ತಂದುಕೊಟ್ಟು, ಅವರ ಕೀರ್ತಿ ಭಾರತ ವ್ಯಾಪಿಯಾಗುವಂತೆ ಮಾಡಿತು. ಪುಣೆ ವಿಶ್ವ ವಿದ್ಯಾನಿಲಯದ ಪ್ರಥಮ ಡಿ.ಲಿಟ್. ಪದವಿ, ಕನ್ನಡ ಲೇಖಕರೊಬ್ಬರಿಗೆ ದೊರೆತದ್ದು ಅವರ ಒಂದು ಅಪೂರ್ವ ಸಾಧನೆ ಯಾಯಿತು.

ಡಾ. ಮುಗಳಿಯವರು ಸಾಂಗಲಿಯ ವಿಶ್ರಾಮ ಭಾಗದ ವಿಲ್ಲಿಂಗ್ಡನ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದ ಅವಧಿ, ಅವರ ಬದುಕಿನಲ್ಲಿ ಅತ್ಯಂತ ರಸಮಯ ಘಟ್ಟವೆನ್ನಬಹುದು. ಕಾಲೇಜಿನ ಅಧ್ಯಾಪನ ಕ್ರಿಯೆಯೊಂದಿಗೆ, ಅವರ ಸಾಹಿತ್ಯಕ ಆಲೋಚನೆಗಳು, ಭಾವನೆಗಳು ಒಡನೊಡನೆ ಬೆಳೆದು, ಹಲವು ಕವಲುಗಳಾಗಿ ಒಡೆದು ಬರವಣಿಗೆಯ ರೂಪತಳೆದವು. ಬಾಳುರಿ, ಅನ್ನ, ಕಾರಣಪುರುಷ ಕಾದಂಬರಿಗಳು; ಬಾಸಿಗ, ಅಪಾರ ಕರುಣೆ, ಓಂ ಅಶಾಂತಿಃ ಕವನ ಸಂಕಲನಗಳು; ಸೇವಾ ಪ್ರದೀಪ, ಅಕ್ಕಮಹಾದೇವಿ, ಪಾವನ ಪಾವಕ, ನಾಮಧಾರಿ ಮೊದಲಾದ ನಾಟಕಗಳು; ರನ್ನನ ಕೃತಿರತ್ನ, ಸಾಹಿತ್ಯೋಪಾಸನೆ, ತವನಿಧಿ, ಕನ್ನಡ ಸಾಹಿತ್ಯದಲ್ಲಿ ಸರಸ್ವತಿಯ ದರ್ಶನ ಮೊದಲಾದ ಕೊರತೆಯನ್ನು ನೀಗಿಸಿದ ಕನ್ನಡ ಸಾಹಿತ್ಯ ಚರಿತ್ರೆ-ಇವೆಲ್ಲ ಮುಗಳಿಯವರ ದೀರ್ಘ ಕಾಲದ ಸಂವೇದನೆ, ಹಳಗನ್ನಡ-ನಡುಗನ್ನಡ-ಹೊಸಗನ್ನಡ ಸಾಹಿತ್ಯ ಕೃತಿಗಳ ಸತತಾಭ್ಯಾಸ ಪರಿಶ್ರಮ, ಪಾಂಡಿತ್ಯ ವಿವೇಚನೆಗಳಿಂದ ಮೂಡಿ ಬಂದ ಮುಕ್ತಾಫಲಗಳು.

ತಮ್ಮ ಬರವಣಿಗೆಯಲ್ಲದೆ, ಕನ್ನಡನಾಡಿನ, ಮಹಾರಾಷ್ಟ್ರದ ಸಾಹಿತಿ ಮಿತ್ರರುಗಳ ಸಂಸರ್ಗದಿಂದ ಪಡೆದ ವಿಚಾರ ವಿವೇಚನೆ, ಅಧ್ಯಾಪನ ವೃತ್ತಿಯಿಂದ ಪಡೆದ ಅನುಭವ, ಚಿಂತನಶೀಲತೆ-ಇವುಗಳನ್ನು ತಮ್ಮ ವಿದ್ಯಾರ್ಥಿ ಮಿತ್ರರಿಗೆ ಧಾರೆಯೆರೆಯುತ್ತ-ಅವರಲ್ಲಿರುವ ಸಾಹಿತ್ಯ ಚಿಂತನ, ಪ್ರತಿಭೆಗಳು ವಿಕಾಸಗೊಳ್ಳುವಂತೆ ಮಾಡಿದರು. ಅಂದಿನ ಕಿರಿಯರಿಗೆಲ್ಲ ಸ್ನೇಹ ವಾತ್ಸಲ್ಯಗಳ ಆದರ್ಶ ಗುರುವಾದರು. ಡಾ. ಮುಗಳಿಯವರು ವಿಲ್ಲಿಂಗ್ಡನ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾಗಲೆ, ಡಾ. ವಿನಾಯಕ ಕೃಷ್ಣ ಗೋಕಾಕರು ಆಂಗ್ಲ ಪ್ರಾಧ್ಯಾಪಕರಾಗಿ ಇವರನ್ನು ಕೂಡಿಕೊಂಡರು. ಅವರಿಬ್ಬರ ಮಧುರ ಸ್ನೇಹದ ಕುಡಿಯಾಗಿ ಕಾಲೇಜಿನ 'ವರುಣ ಕುಂಜ' ಹುಟ್ಟಿಕೊಂಡಿತು. ಈ ಸಾಹಿತ್ಯ ಕೂಟದಲ್ಲಿ ಅಂದಿನ ಯುವ ಪೀಳಿಗೆಯ ಲೇಖಕರೊಂದಿಗೆ ಕಲೆತು ವಿನೋದಮಯ ಮುಕ್ತ ವಾತಾವರಣದಲ್ಲಿ ಸಾಹಿತ್ಯ, ಕಾವ್ಯಶಾಸ್ತ್ರಗಳನ್ನು ಕುರಿತು ಪ್ರಬಂಧಗಳನ್ನು ಮಂಡಿಸುವುದು, ಚರ್ಚಿಸುವುದು ಮೊದಲಾದ ಕಾರ್ಯಕ್ರಮಗಳನ್ನು ಹಾಕಿಕೊಂಡು, ಕಿರಿಯರಲ್ಲಿ ಕನ್ನಡದ ಅಭಿರುಚಿ ಬೆಳೆಸಿ, ಮಾರ್ಗದರ್ಶನ ಮಾಡಿದರು. ಕವಿ ಮುಗಳಿಯವರೊಂದಿಗೆ ವಿಮರ್ಶಕ ಮುಗಳಿಯವರ ಚೇತನ ವಿಕಾಸವಾದುದು ಇಲ್ಲೆ ಎನ್ನಬೇಕು.

ಡಾ. ಮುಗಳಿಯವರು ಸಾಂಗಲಿಯಲ್ಲಿದ್ದುಕೊಂಡೇ ಧಾರವಾಡದ ಗೆಳೆಯರ ಗುಂಪಿನ ಸದಸ್ಯರಾಗಿ ಸಲ್ಲಿಸಿರುವ ಸೇವೆ, ನವೋದಯ ಕಾಲದ ಸಾಹಿತಿಗಳಿಗೆಲ್ಲ ತೀರ ಪರಿಚಿತವಾದ ವಿಷಯ. ಮುಗಳಿಯವರ ವ್ಯಕ್ತಿತ್ವವನ್ನು ರೂಪಿಸುವುದರ ಗೆಳೆಯರ ಗುಂಪಿನ ಪಾತ್ರವು ಅಷ್ಟೇ ಮಹತ್ತರವಾದುದು. ವರಕವಿ ಬೇಂದ್ರೆಯವರ ಸುತ್ತ ಬೆಳೆದ ಈ ಗುಂಪಿನಲ್ಲಿ ಆಲೂರ ವೆಂಕಟರಾಯರು, ಗೋಕಾಕ್, ಮಧುರ ಚೆನ್ನ (ಹಲಸಂಗಿ ಚೆನ್ನಪ್ಪ), ಆನಂದಕಂದ (ಬೆಟಗೇರಿ ಕೃಷ್ಣಶರ್ಮ), ಪ್ರಹ್ಲಾದ ನರೇಗಲ್ಲ, ಶಂಬಾ ಜೋಷಿ ಮೊದಲಾದ ಅತಿರಥಮಹಾರಥರಿದ್ದ ರಥದ ಸಾರಥ್ಯವನ್ನು ವಹಿಸಿ ನಡೆಸಿದವರು ಮುಗಳಿಯವರು. ಅವರಲ್ಲಿದ್ದ ಸ್ನೇಹಗುಣ, ಸಂಕಲ್ಪಬಲ, ಸಂಘಟನಾ ಶಕ್ತಿ, ಕಾರ್ಯಶ್ರದ್ಧೆಗಳಿಗೆ ಗೆಳೆಯರ ಗುಂಪಿನ ಹಿರಿಯ ಲೇಖಕರು ಮಾರು ಹೋಗಿದ್ದರು. ಈ ಶತಕದ ಮೂರನೆಯ ದಶಕದಲ್ಲಿ ಗೆಳೆಯರ ಗುಂಪಿನ ಮುಖಪತ್ರವೆನಿಸಿಕೊಂಡು ಪ್ರಸಿದ್ಧವಾಗಿದ್ದ 'ಜಯ ಕರ್ನಾಟಕ', 'ಜೀವನ' ನಿಯತಕಾಲಿಕಗಳ ನಿರ್ವಹಣೆಯಲ್ಲಿ ಮುಗಳಿಯವರದು ಸಕ್ರಿಯ ಪಾತ್ರವಾಗಿತ್ತು. ಸ್ವಲ್ಪ ಕಾಲ ಅಂದರೆ ಕ್ರಿ. ಶ. 1940ರಿಂದ 43ರ ವರೆಗೆ ಸಾಂಗಲಿಯಲ್ಲಿದ್ದುಕೊಂಡು 'ಜೀವನ' ಪತ್ರಿಕೆಯ ಸಂಪಾದಕನ ಹೊಣೆ ಹೊತ್ತು ನಡೆಸಿದರು. ಗೆಳೆಯರ ಗುಂಪು ಸಿಡಿದು ಚದುರಿಹೋದ ಮೇಲೆ, ಅದರಲ್ಲಿದ್ದ ಕೆಲವರು, ಗಣ್ಯಸಾಹಿತಿಗಳನ್ನು ಕೂಡಿಸಿಕೊಂಡು, ಮಿತ್ರ ಜಿ.ಬಿ. ಜೋಶಿ (ಜಡಭರತ)ಯವರು ಮನೋಹರ ಗ್ರಂಥಮಾಲೆಯನ್ನು ಹುಟ್ಟು ಹಾಕಿದರು. ಈ ಮಾಲೆಯ ಪ್ರಕಟಣೆಗಳಿಗೆ ಮುಗಳಿಯವರು ಸಾಹಿತ್ಯ ಸಲಹೆಗಾರರಲ್ಲಿ ಒಬ್ಬರಾಗಿ ನೇಮಕವಾದರು.

ಗಡಿನಾಡಿನಲ್ಲಿ ಅರಳಿದ ಹಲವು ಮಂದಿ ಸಾಹಿತಿಗಳಿಗೆ ಮುಗಳಿಯವರು ಮಾರ್ಗದರ್ಶಕರೂ, ಆದರ್ಶಪ್ರಾಯರೂ ಆದರು. ಅಥಣಿಯ ಗ್ರಂಥಮಾಲೆ, ಸೇಡಬಾಳದ ಮಿರ್ಜಿ ಅಣ್ಣಾರಾಯರ ಶಾಂತಿ ಸೇವಾ ಸದನ, ಶಮನೇವಾಡಿಯ ಸ್ನೇಹ ಪ್ರಕಾಶನ, ಸಾಂಗಲಿಯ ಕಾವ್ಯ ಪ್ರಕಾಶನ ಸಮಿತಿ, ಇವೆಲ್ಲ ಮುಗಳಿಯವರು ಬೆಳಗಿಸಿದ ಪ್ರಕಾಶನ ದೀಪಮಾಲೆಗಳು.

ಸಾಂಗಲಿಯ ವಿಲ್ಲಿಂಗ್ಡನ್ ಕಾಲೇಜಿನ ಪ್ರಾಚಾರ್ಯ ಪದವಿಯಿಂದ ನಿವೃತ್ತರಾದ ಮೇಲೆ ಡಾ. ಮುಗಳಿಯವರು ಕನ್ನಡನಾಡಿನ ರಾಜಧಾನಿ ಬೆಂಗಳೂರಿಗೆ ಬಂದು ನೆಲೆಸಿದರು. ಅರವತ್ತು ವರ್ಷಕ್ಕೆ ನಿವೃತ್ತಿ ಎಂಬುದು ಮುಗಳಿಯವರ ವಿಷಯದಲ್ಲಿ ಅಪವಾದವಾಯಿತು. ಅವರ ಪ್ರತಿಭಾವಂತ ವಿದ್ವತ್ಪೂರ್ಣ ಚೇತನಕ್ಕೆ ನಿವೃತ್ತಿಯ ಸುಳಿವೇ ಹತ್ತಲಿಲ್ಲ. 1960-67ರಲ್ಲಿ ಅಂದಿನ ವಿಶಾಲ ಮೈಸೂರು ಸರ್ಕಾರದವರು ಅವರನ್ನು ಅಲ್ಪಾವಧಿಗೆ ಕನ್ನಡ ಸಂಸ್ಕೃತಿ ಇಲಾಖೆಯ ಪ್ರಧಾನಾಧಿಕಾರಿಯಾಗಿ ನೇಮಿಸಿಕೊಂಡು ಅವರ ಸೇವೆಯನ್ನು ಬಳಸಿಕೊಂಡರು. 1967ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಪ್ರಾಧ್ಯಾಪಕರಾಗಿರಲು ಹಾಗೂ ಮುಖ್ಯಸ್ಥರಾಗಿ ಹೊಣೆ ಹೊರಲು, ಅವರಿಗೆ ಕರೆ ಬಂತು. ಆಲ್ಲಿ ಮೂರು ವರ್ಷಗಳ ಕಾಲ ಮುಖ್ಯಸ್ಥರಾಗಿದ್ದುಕೊಂಡು, ಮುಂದೆ ವಿಕಸನಗೊಂಡ, ಕನ್ನಡ ಅಧ್ಯಯನ ಕೇಂದ್ರಕ್ಕೆ ತಳಪಾಯ ಹಾಕಿದರು. 1970ರಿಂದ 73ರ ವರೆಗೆ ಯು.ಜಿ.ಸಿ. ಪ್ರಾಧ್ಯಾಪಕರಾಗಿ, ಸಂಶೋಧನೆ ನಡೆಸಿ 'ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು' ಎಂಬ ಶ್ರೇಷ್ಠ ಸಂಶೋಧನ ಗ್ರಂಥವನ್ನು ಬರೆದು ಪ್ರಕಟಿಸಿದರು. ಅದರ ನಂತರವೂ, ಬೆಂಗಳೂರು ವಿಶ್ವವಿದ್ಯಾಲಯದವರು ಅವರ ಸೇವೆಯನ್ನು ಬಿಟ್ಟುಕೊಡದೆ, ಕನ್ನಡ ಅಧ್ಯಯನ ಕೇಂದ್ರವು ಯೋಜಿಸಿದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟಗಳಿಗೆ ಕಾರ್ಯನಿರ್ವಾಹಕ ಸಂಪಾದಕರನ್ನಾಗಿ ಅವರನ್ನು ನೇಮಿಸಿದರು. ಸಾಹಿತ್ಯ ಚರಿತ್ರೆಯ ವಿಷಯದಲ್ಲಿ ಅವರಿಗಿದ್ದ ವಿಶೇಷ ಪರಿಣತಿ, ನಿಲುಗಾಲದ ಅನುಭವಗಳ ಸದುಪಯೋಗವನ್ನು ಈ ರೀತಿ ಪಡೆದುಕೊಂಡಿದ್ದುದು ಮುಗಳಿಯವರ ಕಾರ್ಯಕ್ಷಮತೆಗೆ ಅಪೂರ್ವ ಸಾಕ್ಷಿಯಾಗಿದೆ.

### ಕೃತಿ ಪರಿಚಯ

ವಿದ್ವಾಂಸರಾಗಿ, ಸಾಹಿತಿಯಾಗಿ ಮುಗಳಿಯವರ ಸೇವೆ ವೈವಿಧ್ಯಮಯವಾದುದು. ಕಥೆ, ಕಾದಂಬರಿ, ನಾಟಕ, ಕಾವ್ಯ, ಪ್ರಬಂಧ, ಜೀವನ ಚರಿತ್ರೆ, ಸಾಹಿತ್ಯ ಚರಿತ್ರೆ, ವಿಮರ್ಶೆ-ಹೀಗೆ ಹಲವು ಪ್ರಕಾರಗಳಲ್ಲಿ ಕೈಯಾಡಿಸಿ ಅವುಗಳಲ್ಲಿ ತಮ್ಮ ವ್ಯಕ್ತಿತ್ವದ ಮುದ್ರೆಯೊತ್ತಿದ್ದಾರೆ. ಈವರೆಗೆ, ಮೇಲೆ ತಿಳಿಸಿದ ಪ್ರಕಾರಗಳಲ್ಲಿ ಮೂವತ್ತೇಳು ಕೃತಿಗಳನ್ನು ಅವರು ಪ್ರಕಟಿಸಿದ್ದಾರೆ. ಅವರ ಎಪ್ಪತ್ತೆಂಟು ವರ್ಷಗಳ ತುಂಬು ಜೀವನದಲ್ಲಿ - ಕೃತಿಗಳ ಸಂಖ್ಯೆಗೆ ಬೆಲೆಕೊಡದೆ ಗುಣಗ್ರಾಹ್ಯತೆಗೆ ಆದ್ಯತೆ ನೀಡಿದ್ದಾರೆ. ಸಂವೇದನೆ, ಅನುಭವ, ಪಾಂಡಿತ್ಯ, ವಿವೇಚನೆಗಳಿಂದ ಅವರ ಕೃತಿಗಳು ಗಮನಾರ್ಹವೆನಿಸಿಕೊಂಡು ನವೋದಯ ಕಾಲದ ಕನ್ನಡದ ಕೆಲವು ಅಗತ್ಯಗಳನ್ನು ಪೂರೈಸಿವೆ. ಹಳೆಯ ತಲೆಮಾರಿನ ವಿದ್ವಾಂಸ, ಕವಿಗಳಲ್ಲಿರುವಂತೆ, ಆಳವಾದ ಚಿಂತನೆ, ದರ್ಶನಗಳಿಂದ, ವಿಚಾರ ವಿಮರ್ಶೆಗಳಿಂದ ಅವರ ಕೃತಿಗಳು ಮೇಲ್ತರಗತಿಯವೆನ್ನಿಸಿವೆ. ಅವರ ಸೃಜನಶೀಲ ಬರಹಗಳಲ್ಲಿ, ನವೋದಯ ಕಾಲದ ಭಾವುಕ, ಚಿಂತನ ಶೀಲ, ಆದರ್ಶ ಕನಸುಗಾರ ಮುಗಳಿಯವರ ದರ್ಶನವಾದರೆ, ಸೃಜನೇತರ, ವಿಮರ್ಶೆ ಮೊದಲಾದ ಬರಹಗಳಲ್ಲಿ ಪೂರ್ವಕಾಲ ಪರಂಪರೆಯಲ್ಲಿನ ಪರಿಶ್ರಮ, ಪ್ರಾಧ್ಯಾಪಕತನದ ವೈದುಷ್ಯ ವಿವೇಚನೆ ಇದ್ದು ಸರಳ ನಿರೂಪಣೆಯಲ್ಲಿ ಪಳಗಿದ ಶಾಸ್ತ್ರಕೋವಿದನ ದರ್ಶನವಾಗುತ್ತದೆ.

### ಕಾದಂಬರಿಗಳು: ಕಥೆಗಳು

1934ರಲ್ಲಿ ಬಾಳುರಿ ಕಾದಂಬರಿಯ ಮೂಲಕ ತಮ್ಮ ಚೊಚ್ಚಲು ಕೃತಿಯನ್ನು ಪ್ರಕಟಿಸಿದ ಡಾ. ಮುಗಳಿಯವರು, ಕಾದಂಬರಿ ಕ್ಷೇತ್ರದಲ್ಲಿ ಬಾಳುರಿ, ಕಾರಣಪುರುಷ, ಅನ್ನ ಮತ್ತು ಅಗ್ನಿವರ್ಣ ಎಂಬ ನಾಲ್ಕು ಕಾದಂಬರಿಗಳನ್ನು ರಚಿಸಿದ್ದಾರೆ. ಇತ್ತೀಚೆಗೆ 1982ರಲ್ಲಿ ಪ್ರಕಟವಾದ ಅಗ್ನಿವರ್ಣ ಕಾದಂಬರಿಯನ್ನು ಬಿಟ್ಟರೆ ಉಳಿದ ಮೂರು ಕಾದಂಬರಿಗಳೂ ಸ್ವಾತಂತ್ರ್ಯ ಪೂರ್ವದಲ್ಲಿ ಅಂದರೆ ಸುಮಾರು ಮೂವತ್ತೈದು ವರ್ಷಗಳಿಗೂ ಹಿಂದೆ ಇದ್ದ ಗಾಂಧೀ ಯುಗದ ಪರಿಸರದಲ್ಲಿ ರಚಿತವಾದುವುಗಳು. ಸಹಜವಾಗಿ ಅವುಗಳಲ್ಲಿ ಅಂದಿನ ತರುಣ ಪೀಳಿಗೆಯಲ್ಲಿದ್ದ ಭಾವಾವೇಶ, ದೇಶಪ್ರೇಮ, ನಾಡ ಅಭಿಮಾನ, ಬಡತನ, ನಿರುದ್ಯೋಗಗಳಲ್ಲಿ ಸಿಕ್ಕಿ ನರಳುವ ಜನರನ್ನು ಕುರಿತ ಅನುಕಂಪ, ಆತಂಕಗಳು ವ್ಯಕ್ತವಾಗಿವೆ. 'ಬಾಳುರಿ'ಯಲ್ಲಿ ಬಡತನ, ನಿರುದ್ಯೋಗಗಳ ಸುಳಿಗೆ ಸಿಕ್ಕಿಕೊಂಡ ಸಾಮಾನ್ಯ ಆದರ್ಶವಾದಿ ಯೊಬ್ಬನ ಚಿತ್ರಣವಿದ್ದರೆ. 'ಅನ್ನ' ಕಾದಂಬರಿಯಲ್ಲಿ ಬಂಗಾಳದ ಬರಗಾಲ ಪೀಡಿತ ಜನರ ಅಸಹಾಯಕ ಸ್ಥಿತಿಗೆ ಮರುಗಿ ತನ್ನ ಮತ್ತು ತನ್ನ ಕುಟುಂಬದ ಹಿತವನ್ನು ಬದಿಗೊತ್ತಿ, ಸೇವೆ ಮಾಡಲು ಹೊರಟ ತರುಣನೊಬ್ಬನ ದುರಂತ ಬಾಳಿನ ಚಿತ್ರಣವಿದೆ. 'ಕಾರಣ ಪುರುಷ'ದಲ್ಲಿ ಕರ್ನಾಟಕ ಏಕೀಕರಣದ ಸಮಸ್ಯೆಯೊಂದಿಗೆ, ನಿರುದ್ಯೋಗ, ಬಡತನದ ಸಮಸ್ಯೆಗಳು ಪ್ರಾಸಂಗಿಕವಾಗಿ ಸೇರಿಕೊಂಡಿವೆ. ಮುಖ್ಯವಾಗಿ ಗಾಂಧೀಯುಗದ ಬಾಳಿಗೊಂದು ಆದರ್ಶಬೇಕೆಂಬ ಹಂಬಲವನ್ನು ಈ ಮೂರು ಕಾದಂಬರಿಗಳ ನಾಯಕರೂ ವ್ಯಕ್ತಪಡಿಸುತ್ತಾರೆ. ಇವರು ಸಮಾಜದ ಮಧ್ಯಮವರ್ಗದಲ್ಲಿ ಆರ್ಥಿಕವಾಗಿ, ಅಸಹಾಯಕ ಸ್ಥಿತಿಯಲ್ಲಿರುವ ಕುಟುಂಬಗಳಿಂದ ಬಂದವರಾದುದರಿಂದ, ಉನ್ನತ, ಆದರ್ಶ, ಧ್ಯೇಯಗಳನ್ನಿಟ್ಟುಕೊಂಡು, ಹಲವು ಕಷ್ಟ ಪರಿಸ್ಥಿತಿಗಳಿಗೆ ಸಿಕ್ಕಿ ನರಳುತ್ತಾರೆ. ಸಮಾಜದ ಹಿರಿಯರಲ್ಲಿರುವ ಸ್ವಾರ್ಥ, ಅಧಿಕಾರದ ಆಸೆ, ಪದವಿ, ಹಣದ ವ್ಯಾಮೋಹ, ಕಾಮ ಜೀವನ-ಈ ವರ್ತುಲದಲ್ಲಿ ಸಿಕ್ಕಿಕೊಂಡು, ತಮ್ಮ ಧ್ಯೇಯ ಸಾಧನೆಗೆ ಬೇಕಾದ ಕಾರ್ಯಶಕ್ತಿಯ ಅಭಾವದಿಂದ ಪರಿಸ್ಥಿತಿಯನ್ನು ಎದುರಿಸಲಾರದೆ ಅಸಹಾಯಕರಾಗಿ ಉಳಿಯುತ್ತಾರೆ. ಬಾಳುರಿಯ 'ಜಗಣ್ಣ', ಕಾರಣ ಪುರುಷದ 'ವಾಮಣ್ಣ' ಮತ್ತು ಅನ್ನದ 'ಅಮೃತ' ಎಲ್ಲರೂ ಹೆಚ್ಚು ಕಮ್ಮಿ ಒಂದೇ ಎರಕದ ಸ್ವಭಾವವುಳ್ಳ ಪಾತ್ರಗಳಾಗಿವೆ. ಈ ನಾಯಕ ಪಾತ್ರಗಳಿಗೆ ಸಂಸಾರವು ಒಂದು ತೊಡರಾಗಿ, ಸಮಾಜದ ಕಲ್ಲುಬಂಡೆಯಂತಿರುವ ದುಷ್ಟಶಕ್ತಿಗಳನ್ನು ಎದುರಿಸುವ ಭೀಮಬಲವಿಲ್ಲದೆ ಸೊರಗುವುದು-ಸ್ತ್ರೀ ಪಾತ್ರಗಳು ಸಂಪ್ರದಾಯಪ್ರಿಯತೆಯಿಂದ ಗಂಡಿನ ಸಹಾನುವರ್ತಿಗಳಾಗಿ ಸೀಮಾತೀತ ಸಹನೆಯನ್ನು ಮೈಗೂಡಿಸಿಕೊಂಡು ವ್ಯವಹರಿಸುವುದು, ಇವು ಮುಗಳಿಯವರ ಕಾದಂಬರಿಗಳಲ್ಲಿ ಕಾಣುವ ಕೆಲವು ಮುಖ್ಯ ಅಂಶಗಳಾಗಿವೆ. ಆದರೆ ಮುಗಳಿಯವರ ಜೀವನದೃಷ್ಟಿಯಲ್ಲಿ ಸೂಕ್ಷ್ಮ ಕಲೆಗಾರಿಕೆಯ ಸೇರಿರುವುದರಿಂದ ಅವರ ಕಾದಂಬರಿಗಳು ಚೆನ್ನಾಗಿ ಓದಿಸಿಕೊಳ್ಳುತ್ತವೆ. ಅವರು ತಮ್ಮ ಕಾದಂಬರಿಗಳಲ್ಲಿ ತಂದುಕೊಂಡಿರುವ ವಿಸ್ತಾರವಾದ ಹರವು, ಜೀವನ ದರ್ಶನ, ವೈಚಾರಿಕತೆ, ದೇಶೀ ಶೈಲಿಯ ಸಂಭಾಷಣೆಯ ಸೊಗಡು, ನಾಯಕ-ಪೋಷಕ ಪಾತ್ರಗಳ ಸ್ವಭಾವ ಚಿತ್ರಣ, ಸನ್ನಿವೇಶಗಳ ಕಲ್ಪನೆ-ಇವು ಅವರ ಕಾದಂಬರಿಗಳಿಗೆ ಅರ್ಥತುಂಬಿ ಉಳಿದ ದುರ್ಬಲ ಗುಣಗಳನ್ನು ಮರೆಮಾಚಿ, ನವೋದಯ ಕಾಲದಲ್ಲಿ ಬಂದ ಭಾವಪ್ರಧಾನ ಲಕ್ಷಣವುಳ್ಳ ಪ್ರಮುಖ ಕಾದಂಬರಿಗಳ ನಡುವೆ ಗಮನಾರ್ಹ ಕೃತಿಗಳೆನಿಸಿಕೊಳ್ಳುತ್ತವೆ.

ಒಂದೇ ಒಂದಾದರೂ ಮುಗಳಿಯವರು 'ಕನಸಿನ ಕೆಳದಿ' ಎಂಬ ಪ್ರಾತಿನಿಧಿಕವಾದ ಉತ್ತಮ ಸಣ್ಣಕಥೆಗಳ ಸಂಕಲನವೊಂದನ್ನು ನೀಡಿ, ತಮ್ಮ ಸೂಕ್ಷ್ಮ ಕಥೆಗಾರಿಕೆಯ ನೈಪುಣ್ಯವನ್ನು ತೋರಿದ್ದಾರೆ. ಈ ಸಂಕಲನದಲ್ಲಿ ಕನಸಿನ ಕೆಳದಿ, ವಿತಂತು ವೇಶ್ಯೆ, ಕೂಟಪ್ರಶ್ನೆ, ನೀರಿನ ನಾರಪ್ಪ ಮೊದಲಾದ ಹನ್ನೊಂದು ಕಥೆಗಳು ಸೇರಿವೆ. ಈ ಕಥೆಗಳು ಸಮಕಾಲೀನ ಬದುಕಿನ ವಿವಿಧ ಸ್ತರಗಳೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡು, ನಿರುದ್ಯೋಗ, ಬಡತನ, ಮಧ್ಯಮ ವರ್ಗದ ಬದುಕಿನ ಇಕ್ಕಟ್ಟಿನ ಪರಿಸ್ಥಿತಿ, ವೇಶ್ಯೆಯ ಬಾಳು, ಪ್ರೇಮದ ಕೋಮಲ ಭಾವನೆಯ ವಿಕಾಸ-ಹೀಗೆ ಹಲವು ಹತ್ತು ಪದರಗಳಲ್ಲಿ ಬಿಚ್ಚಿಕೊಳ್ಳುತ್ತವೆ. 'ಕನಸಿನ ಕೆಳದಿ'ಯಲ್ಲಿ ಪ್ರೇಮದ ಸಮಸ್ಯೆಯು ಕನಸಿನ ರೂಪದಲ್ಲಿ ಮೈತಳೆದರೆ 'ವಿತಂತು ವೇಶ್ಯೆ'ಯಲ್ಲಿ ವೇಶ್ಯೆಯೊಬ್ಬಳ ಆತ್ಮಕಥನ ರೂಪದಲ್ಲಿ ಸಮಸ್ಯೆಯ ಸ್ವರೂಪವನ್ನು ಸಾಮಾಜಿಕ ಪರಿಸರದ ಹಿನ್ನೆಲೆಯಲ್ಲಿ ಮುಗಳಿಯವರು ಬಿಡಿಸಲು ಪ್ರಯತ್ನಿಸಿದ್ದಾರೆ. 'ನೀರಿನ ನಾರಪ್ಪ', 'ಕೂಟ ಪ್ರಶ್ನೆ', 'ವೇದಾಂತಿ', 'ಕ......ಚ್ಚು'–ಮೊದಲಾದ ಕಥೆಗಳು ಪಾತ್ರನಿಷ್ಠವಾದ ವ್ಯಕ್ತಿ ಚಿತ್ರಣಗಳಾದರೆ, 'ಆಯುಷ್ಮರ್ಮಿ', 'ಕನಸಿನ ಕೆಳದಿ', 'ಮಂಜಿನ ಮನೆ', 'ಕಲ್ಯಾಣಮಂಟಪ' ಮೊದಲಾದುವು ಘಟನಾ ಪ್ರಧಾನ ಕಥಾಚಿತ್ರಗಳು. ಅಚ್ಚುಕಟ್ಟಾದ ನಿರೂಪಣೆ, ಕಥೆಗಾರಿಕೆಯ ನಯ, ಸಮಸ್ಯೆಗಳನ್ನು ಕುರಿತು ಸಾಮಾಜಿಕ ಪ್ರಜ್ಞೆ ಇವುಗಳಿಂದ ಅವರ ಸಣ್ಣಕಥೆಗಳು, ಸಣ್ಣಕಥೆಗಳ ಪ್ರಕಾರದಲ್ಲಿ ವಿಶಿಷ್ಟಸ್ಥಾನಗಳಿಸಿಕೊಂಡಿವೆ.

**ಕವನ ಸಂಕಲನಗಳು**

ನವೋದಯ ಕಾಲದ, ಎರಡನೆಯ ಪೀಳಿಗೆಯ ಕವಿಗಳಾಗಿ ಮುಗಳಿಯವರು ಸುಮಾರು ನಲ್ವತ್ತು ವರುಷಗಳ ಹರಹಿನಲ್ಲಿ ನೂರಾರು ಕವಿತೆಗಳನ್ನು ಬರೆದು ಆರು ಕವಿತಾ ಸಂಕಲನಗಳಲ್ಲಿ ಹೊರತಂದಿದ್ದಾರೆ. 'ಬಾಸಿಗ', 'ಅಪಾರ ಕರುಣೆ', 'ಓಂ ಅಶಾಂತಿಃ'- ಇವು ಅವರ ಕವಿ ಜೀವನದ ಆರಂಭಕಾಲದ ಕವನಗಳನ್ನು ಒಳಗೊಂಡಿವೆ. 'ನಿತ್ಯ ನಿರಂತರ', 'ನವ ಮಾನವ' ಮತ್ತು 'ಮಣಿ ಮಾಲೆ' ಇವು ಅವರ ಜೀವನದ ಪ್ರಬುದ್ಧಾವಸ್ಥೆಯಲ್ಲಿ ಮೈದೋರಿದವು. ಸೌಂದರ್ಯ ಮುಗ್ಧತೆ, ನಿಸರ್ಗ ಪ್ರಿಯತೆ, ಆದರ್ಶದ ಕನಸುಗಳು, ಗೆಳೆತನ, ಪ್ರಣಯ, ದೈವಿಕ ಕೃಪೆ, ಇಂಥ ಅಮೂರ್ತ ಭಾವಗೋಚರ ವಸ್ತುಗಳು ಇವರ ಆರಂಭಕಾಲದ ಭಾವಗೀತೆಗಳಲ್ಲಿ ಪ್ರಮುಖವಾಗಿ ಮೆರೆದಿವೆ. ತಮ್ಮ ಜೀವನದ ರಸಿಕ ದೃಷ್ಟಿಯನ್ನು ಕವಿತೆಗಳಲ್ಲಿ ವಿಸ್ತರಿಸಿದ್ದಾರೆ. ಅವರ 'ಮಲ್ಲಿಕಾ, ಬಕುಲ, ಚಂಪಕ', 'ಮಂದಾರ ಹೂವೆ', 'ಚೇತರಿಸಿಕೊಂಡೇಳು ಚೇತನದ ಚೆಲುವೆ', 'ಅಪರಂಪಾರ', 'ಎಂಥನಾಡಿದು ಎಂಥ ಕಾಡಾಯಿತು' ಮೊದಲಾದ ಭಾವಗೀತೆಗಳಲ್ಲಿ ಗೇಯತೆಯ ಸೊಬಗಿನೊಂದಿಗೆ, ಭಾಷೆಯ ಲಾಲಿತ್ಯವೂ ಕೂಡಿ, ಬಾಯಿಂದ ಬಾಯಿಗೆ ಮಿಂಚಿವೆ.

'ಬಾಸಿಗ'ದ ಕವಿತೆಗಳಲ್ಲಿ ಭಕ್ತಿ, ಪ್ರಕೃತಿ ಸೌಂದರ್ಯ, ರಾಷ್ಟ್ರೀಯ ಭಾವನೆ, ಸಂಸಾರ ವಾತ್ಸಲ್ಯ-ಮೊದಲಾದ ಭಾವಗಳು ಉತ್ಕಟವಾಗಿ ಹರಿದಿವೆ. 'ಅಪಾರ ಕರುಣೆ'ಯಲ್ಲಿ ನಿಸರ್ಗ ಪ್ರೇಮ, ನಾಡನ್ನು ಕುರಿತ ಅಭಿಮಾನ-ಮೊದಲಾದ ಭಾವಗಳು ಅಭಿವ್ಯಕ್ತಿ ತಳೆದಿವೆ. 'ಓಂ ಅಶಾಂತಿಃ' ವ್ಯಕ್ತಿಗತವಾದ ಆತ್ಮನಿವೇದನಾ ರೂಪದ ಭಾವಗಳಿಂದ ಇಂದಿನ ವಿಷಮ ಪರಿಸ್ಥಿತಿಯ ಮೂಲಕ ವ್ಯಗ್ರಗೊಂಡ ಮನಸ್ಸಿನ ಚಿತ್ರವನ್ನು ನೀಡುತ್ತದೆ. ಅಶಾಂತಿಯ ಗರ್ಭದಿಂದ ಶಾಂತಿಯು ಅವತರಿಸಬೇಕೆಂಬ ಆಶಾವಾದದ ಕಲ್ಪನೆ ರೂಪಕವಾಗಿ ಮೈದಾಳಿದೆ. ಬೆಳದಿಂಗಳು, 'ಹುಣ್ಣಿಮೆ ಚಂದ್ರ', 'ಸಂಜೆ ಮತ್ತು ಮಳೆ'- ಮೊದಲಾದ ನಿಸರ್ಗಪರ ಭಾವಗೀತೆಗಳಲ್ಲಿ ಸೃಷ್ಟಿಯ ಸೌಂದರ್ಯಾನುಭವದ ರಸನಿಮಿಷಗಳನ್ನು ಸೆರೆಹಿಡಿದಿಟ್ಟಿದ್ದಾರೆ. 'ಬಯಲ ಮಾವು', 'ಕಾರಣ ಪುರುಷ', 'ಮೀನುಗಾರ'- ಮುಂತಾದ ಕವಿತೆಗಳು ಮುಗಳಿಯವರ ಆಧ್ಯಾತ್ಮ ಚಿಂತನೆಗೆ ಜೀವನ ದರ್ಶನಕ್ಕೆ ನಿದರ್ಶನಗಳಾಗಿ, ಸುಂದರ ರೂಪಕಗಳಾಗಿ ಮೂಡಿ ಬಂದಿವೆ. ತನ್ನನ್ನು ಬಿಸಿಲಿಗೆ ಒಡ್ಡಿ ಲೋಕದ ಜನರಿಗೆ ಹಣ್ಣು ಹಂಪಲು ನೀಡಿ ತಂಪೆರೆಯುವ ಬಯಲು ಮಾವು ವೀರ ತಪಸ್ವಿಯ ಅಚೇಯ ಆತ್ಮದ, ಅವಿಚಲ ಶ್ರದ್ಧೆಯ, ಅಳಿಯಲಾರದ ಬಲದ ಪ್ರತೀಕವಾಗಿ ಕಂಡರೆ, ಮೀನುಗಾರ-ಕಾಲದ ಪ್ರತಿನಿಧಿಯಾಗಿ, ಜೀವನದಲ್ಲಿ ಆಮಿಷಗಳನ್ನು ಒಡ್ಡಿ ಸೌಂದರ್ಯ ಸಾಗರದಿಂದ ಎತ್ತಿ ಬುಟ್ಟಿಗೆ ಹಾಕಿ ಕೊಳ್ಳುವ ಧೂರ್ತನಂತೆ ಕಾಣುತ್ತಾನೆ.

ಮುಗಳಿಯವರ ಕವಿತೆಗಳಲ್ಲಿ 'ಮಂದಾರ ಹೂವು' ಆಕಾಶವಾಣಿಯಲ್ಲಿ ಮತ್ತೆ ಮತ್ತೆ ಪ್ರಸಾರವಾಗಿ, ಜನರ ಬಾಯಿಂದ ಬಾಯಿಗೆ ಹರಿದು ವಿಶೇಷ ಮನ್ನಣೆಗಳಿಸಿ, ಜನಪ್ರಿಯವಾಗಿದೆ. ದೇವೇಂದ್ರನ ನಂದನವನದ ಹೂವಾಡ ಗಿತ್ತಿಯರು ನಂದನದಲ್ಲಿ ಬೆಳೆದ ಮಂದಾರ ಹೂವನ್ನು ಭೂಲೋಕದಲ್ಲಿ ಮಾರಲು ಹೊತ್ತು ತಿರುಗುತ್ತಾರೆ. ಯಾರೂ ಕೊಳ್ಳದ ಆ ಹೂವನ್ನು ಬೇಸತ್ತು ನಂದನದ ಕೆರೆಗೆ ಎಸೆಯುತ್ತಾರೆ. ದೇವಲೋಕದ ಹೂವಿಗೆ ಮರ್ತ್ಯಲೋಕದಲ್ಲಿ ಬೆಲೆ ಇಲ್ಲವಾಗುತ್ತದೆ. ಮರ್ತ್ಯರನ್ನು ಬೆರಗುಗೊಳಿಸುವ, ಸುವಾಸನೆಯ ಕಂಪು ಮಂದಾರಕ್ಕಿಲ್ಲ. ಹೀಗೆ ಬಾಳಿನ ಮೌಲ್ಯ ಅಪಮೌಲ್ಯಗಳನ್ನು ಕುರಿತ ಸುಂದರ ರೂಪಕವಾಗಿ ಈ ಕವನ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ. ಪದಗಳು ಲಯಬದ್ಧವಾಗಿ ನಾಟ್ಯಗತಿಯಿಂದ ಸಾಗಿ ಜನಪದ ಶೈಲಿಯ ಗೇಯತೆಯಿಂದ ಮರುಳು ಗೊಳಿಸುತ್ತದೆ.

ಅವರ ಈಚಿನ ಕವನ ಸಂಕಲನಗಳಾದ 'ನವಮಾನವ','ನಿತ್ಯ ನಿರಂತರ' ಮತ್ತು 'ಮಣಿಮಾಲೆ'ಗಳಲ್ಲಿ ಮುಗಳಿಯವರ ಜೀವನಾನುಭವದ ಹಲವು ಸ್ತರಗಳು ಸಂಕೀರ್ಣವಾಗಿ ಮೂಡಿಬಂದಿವೆ. ಇವುಗಳಲ್ಲಿ ಹೆಚ್ಚು ವೈವಿಧ್ಯಕ್ಕೆ ಅವಕಾಶವಿಲ್ಲವಾದರೂ ಅನುಭವದಿಂದ ಪಕ್ವವಾದ ಜೀವನದೃಷ್ಟಿಯಿಂದ ಅವು ನಮ್ಮ ಗಮನವನ್ನು ಸೆಳೆಯುತ್ತವೆ.

ಸೂಕ್ಷ್ಮ ಅಂತಃಕರಣ ಸಂವೇದನೆಗಳಿಂದ ಕೂಡಿದ ಮುಗಳಿಯವರ ಕಾವ್ಯ ಅಭಿಜಾತ ಪರಂಪರೆಯ ಮರ್ಯಾದೆಯನ್ನು ದಾಟದೆ, ರಸ ಸಂಪ್ರದಾಯದ ಮೇರೆಯಲ್ಲಿ ಸಾಗುತ್ತದೆ. ಅವರು ತಮ್ಮದು ಭಕ್ತ ಕವಿಯ ಅಂತರಂಗ ಎಂದು ಹೇಳಿಕೊಂಡಿದ್ದಾರೆ. ಜೀವನದ ಸುಖ ದುಃಖ, ನೋವು ನಲಿವುಗಳನ್ನು ಭಕ್ತನ ಪ್ರಾಮಾಣಿಕ ಸಂವೇದನೆಯ ಮೂಲಕ ಸುಕುಮಾರ ಶೈಲಿಯಲ್ಲಿ ತಮ್ಮ ಕವನಗಳಲ್ಲಿ ಅರ್ಥೈಸಲು ಪ್ರಯತ್ನಿಸಿದ್ದಾರೆ.

**ನಾಟಕಗಳು**

ಮುಗಳಿಯವರು ನಾಟಕಕಾರರಾಗಿಯೂ ಯಶಸ್ವಿ ಪ್ರಯೋಗಗಳನ್ನು ನಡೆಸಿದ್ದಾರೆ. ಸೇವಾ ಪ್ರದೀಪ (1936)ದಿಂದ ಆರಂಭವಾದ ಅವರ ನಾಟಕ ರಚನೆ, ಅಕ್ಕಮಹಾದೇವಿ, ಪಾವನ ಪಾವಕ, ನಾಮಧಾರಿ, ವಿಜಯ ಸಾಮ್ರಾಜ್ಯ, ಮನೋರಾಜ್ಯ, ಧನಂಜಯ ಮತ್ತು ಅಪೂರ್ವ ಎಂಬ ಹಲವಂಕಗಳ ನಾಟಕಗಳನ್ನೂ ಎತ್ತಿದ ಕೈ ಎಂಬ ಏಕಾಂಕ ನಾಟಕಗಳ ಸಂಗ್ರಹವನ್ನೂ ಕನ್ನಡ ನಾಟಕ ರಂಗಕ್ಕೆ ಒಪ್ಪಿಸಿ ಉತ್ತಮ ನಾಟಕಕಾರರೆಂದೂ ಪ್ರಸಿದ್ಧರಾಗಿದ್ದಾರೆ. 'ಸೇವಾ ಪ್ರದೀಪ' ಮತ್ತು 'ವಿಜಯ ಸಾಮ್ರಾಜ್ಯ' ಇವು ವಿಜಯನಗರದ ಇತಿಹಾಸವನ್ನು ಕುರಿತ ಐತಿಹಾಸಿಕ ನಾಟಕಗಳು.

'ಅಕ್ಕಮಹಾದೇವಿ'- ಶಿವಶರಣೆ ಮಹಾದೇವಿಯಕ್ಕನ ಆಧ್ಯಾತ್ಮಿಕ ಉನ್ನತಿಯನ್ನು ಹಂತಹಂತವಾಗಿ ಚಿತ್ರಿಸುವ ಮೂರು ಅಂಕಗಳ ನಾಟಕ, ಆಕೆಯ ವಚನಗಳನ್ನು ಆಧರಿಸಿ ಕಾವ್ಯಮಯ ಶೈಲಿಯಲ್ಲಿ ಬರೆದ ಸುಂದರ ದೃಶ್ಯ ರೂಪಕ. 'ಪಾವನ ಪಾವಕ', ಜಡಭರತರ ಕನಸುಗಳನ್ನು ವಿನೂತನ ತಂತ್ರದಿಂದ ದೃಶ್ಯರೂಪಕ ವಾಗಿ ಅಳವಡಿಸಿ ರಚಿಸಲಾದ ನಾಲ್ಕು ಸಂಕಲನ. ಇಂಥ ಕನಸಿನ ರೂಪಕಗಳು ಪಾಶ್ಚಾತ್ಯ ಸಾಹಿತ್ಯದಲ್ಲಿ ಹಲವೆಡೆ ಕಾಣಿಸಿಕೊಂಡಿದ್ದರೂ ಕನ್ನಡದಲ್ಲಿ ಇದರ ನಿರೂಪಣೆ ತಂತ್ರ ಹೊಸದು.

ಇವರ ನಾಟಕಗಳಲ್ಲಿ 'ನಾಮಧಾರಿ' ಹೆಚ್ಚು ಜನಪ್ರಿಯತೆಯನ್ನು ಗಳಿಸಿ ಯಶಸ್ವೀ ರಂಗ ಪ್ರಯೋಗಗಳನ್ನು ಕಂಡು ಪ್ರಸಿದ್ಧವಾಗಿದೆ. ವಿನೋದ ನಿಷ್ಠವಾದ ಈ ನಾಟಕದಲ್ಲಿ, ಪದವಿ, ಪ್ರತಿಷ್ಠೆಗಳಿಗಾಗಿ ಹಂಬಲಿಸುವ, ಸಮಾಜದಲ್ಲಿನ ಅಪಾತ್ರ ಜನರನ್ನು ಬಯಲಿಗೆಳೆಯುತ್ತಾರೆ. ಸಮಾಜದ ಎಲ್ಲ ವರ್ಗದ ಜನರಲ್ಲೂ ಇಂಥ ಅಪಹಾಸ್ಯಕ್ಕೀಡಾಗುವ ಅನರ್ಹ ಮಂದಿ ಇರುತ್ತಾರೆ ಎಂಬುದನ್ನು ಉತ್ತಮ ಹಾಸ್ಯ ರಂಜನೆಯಿಂದ, ನೈಜ ಸಂಭಾಷಣೆಯ ಮೂಲಕ ಚಿತ್ರಿಸಿದ್ದಾರೆ. ಇವರ ಉಳಿದ ಸಾಮಾಜಿಕ ನಾಟಕಗಳಲ್ಲೂ ಸಮಾಜದ ಬಹುಮುಖ ವೇಷಗಳನ್ನು ಹಾಸ್ಯ ಮತ್ತು ದೇಶೀ ಸಂಭಾಷಣೆಯ ಮೂಲಕ-ಯಶಸ್ವಿಯಾಗಿ ಚಿತ್ರಿಸಿದ್ದಾರೆ. 'ಮನೋರಾಜ್ಯ', 'ಧನಂಜಯ' ಮತ್ತು 'ನಾಮಧಾರಿ' ನಾಟಕಗಳಲ್ಲಿ ಒಂದೇ ಸ್ವಭಾವದ ಪಾತ್ರಗಳು ಬೇರೆ ಬೇರೆ ಪರಿಸರಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಇವುಗಳಲ್ಲಿ ಬ್ರಾಹ್ಮಣ ಸಮಾಜದ ಸಂಪ್ರದಾಯ ಶರಣ ಅಧಿಕಾರಿಗಳ ಪಾತ್ರವನ್ನು ಮುಗಳಿಯವರು ಅತ್ಯಂತ ಸಹಜವಾಗಿ ಚಿತ್ರಿಸುತ್ತಾರೆ. ತಮ್ಮ ಸಾಮಾಜಿಕ ನಾಟಕಗಳಲ್ಲಿ ಪಾತ್ರಗಳ ಸ್ವಭಾವ ಮತ್ತು ನಾಟಕದ ಘಟನೆಗಳಿಗೆ ಸೂಕ್ಷ್ಮ ಗಮನ ನೀಡಿ, ಆಡುಮಾತಿನ ದೇಶೀಶೈಲಿಯಲ್ಲಿ ಹಾಸ್ಯದ ಹೊನಲು ಹರಿಸುವುದರಲ್ಲಿ ಯಶಸ್ವಿಯಾಗಿದ್ದಾರೆ. ಮುಗಳಿಯವರು ತಮ್ಮ ಸ್ವಂತ ನಾಟಕಗಳಲ್ಲದೆ ಟಿ.ಪಿ.ಕೈಲಾಸಂ ಅವರ 'ಹೋಂರೂಲ್' ಮತ್ತು 'ಬಂಡ್ವಾಳವಿಲ್ಲದ ಬಡಾಯಿ' ನಾಟಕಗಳನ್ನು ಧಾರವಾಡದ ದೇಸಿಗೆ ಅನು ವಾದಿಸಿ ಪ್ರಕಟಿಸಿದ್ದಾರೆ.

**ವಿಮರ್ಶೆ: ಸಾಹಿತ್ಯ ಚರಿತ್ರೆ**

ಕವಿಯಾಗಿ, ಕಾದಂಬರಿಕಾರರಾಗಿ, ನಾಟಕಕಾರರಾಗಿ ಮುಗಳಿಯವರು ಕನ್ನಡ ಸಾಹಿತ್ಯದಲ್ಲಿ ಬೀರಿದ ಪ್ರಭಾವಕ್ಕಿಂತ ವಿಮರ್ಶಕರಾಗಿ ಅವರು ಸಾಧಿಸಿ ತೋರಿದ ಹೆಜ್ಜೆ ಗುರುತುಗಳು ಅತ್ಯಂತ ಗಮನಾರ್ಹವಾಗಿವೆ. ಅವರನ್ನು ಪ್ರಧಾನವಾಗಿ, ಸಹೃದಯ ವಿಮರ್ಶಕ, ಸಾಹಿತ್ಯ ಚರಿತ್ರೆಕಾರರೆಂದೇ ವಿಮರ್ಶ ಕರು ಗೌರವಿಸಿದ್ದಾರೆ. ನಮ್ಮ ಹಳೆಯ ಪೀಳಿಗೆಯ ವಿದ್ವಾಂಸರುಗಳಾದ ಗೋವಿಂದ ಪೈ, ಮುಳಿಯ ತಿಮ್ಮಪ್ಪಯ್ಯ, ಡಿ.ಎಲ್. ನರಸಿಂಹಾಚಾರ್, ತೀ.ನಂ. ಶ್ರೀಕಂಠಯ್ಯ, ಮೊದಲಾದ ವಿದ್ವಾಂಸರಂತೆ ಹಳಗನ್ನಡ ಕಾವ್ಯಾ ಲೋಕನ ಕರ್ಮದಲ್ಲಿ ಮುಗಳಿಯವರೂ ಪರಿಣತರು. ಅಷ್ಟೇ ಅಲ್ಲ ಹೊಸ ಬಗೆಯ ಸಾಹಿತ್ಯ ಪ್ರಕಾರಗಳಲ್ಲಿ ಬಂದ ಗ್ರಂಥ ರಾಶಿಗಳತ್ತ ತಮ್ಮ ಅವಲೋಕನ ಕ್ರಿಯೆಯನ್ನು ಶ್ರದ್ಧೆಯಿಂದ ನಡೆಸಬಲ್ಲರು. ತಮ್ಮ ಎಂಬತ್ತರ ಅಂಚಿನಲ್ಲೂ ಕನ್ನಡ ಸಾಹಿತ್ಯದಲ್ಲಿ ಇತ್ತೀಚೆಗೆ ನಡೆಯುತ್ತಿರುವ ಆಗು ಹೋಗುಗಳನ್ನು ಓದಿ ತಿಳಿದುಕೊಳ್ಳುವ ಕುತೂಹಲ, ಸಹೃದಯತೆಗಳು ಅವರಲ್ಲಿವೆ. ಇಂಥ ತೆರದ ಮನಸ್ಸಿನ ಅಧ್ಯಯನದಿಂದ ಅವರ ವಿಮರ್ಶನ ಬರವಣಿಗೆಗಳು ರುಚಿ ಶುಚಿಗಳೆರಡನ್ನೂ ಕಾಪಾಡಿಕೊಂಡು ಶ್ರೀಮಂತವಾಗಿವೆ. ವಿಮರ್ಶಕನಿಗಿರಬೇಕಾದ ಇತಿಹಾಸ ಪ್ರಜ್ಞೆ, ಹೃದಯ ಸಂಪತ್ತಿ, ಆಳವಾದ ಪಾಂಡಿತ್ಯ, ಗುಣ ಪಕ್ಷಪಾತ ದೃಷ್ಟಿ ಇವೆಲ್ಲವೂ ಅವರಲ್ಲಿವೆ. ಅವರ, ರನ್ನನ ಕೃತಿರತ್ನ, ತವನಿಧಿ, ಸಾಹಿತ್ಯೋಪಾಸನೆ, ಇಂಗ್ಲಿಷಿನಲ್ಲಿ ಬರೆದ Heritage of Karnataka, ಕನ್ನಡ ಸಾಹಿತ್ಯ ಚರಿತ್ರೆ, ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ಕನ್ನಡ ಸಾಹಿತ್ಯದಲ್ಲಿ ಸರಸ್ವತಿಯ ದರ್ಶನ ಇವು ವಿಮರ್ಶೆಯ ಸಂಪ್ರದಾಯಕ್ಕೆ ಅವರಿತ್ತ ಮುಖ್ಯ ಕೊಡುಗೆಗಳು.

ಪಂಪನ ದೇಶೀಯ ಸೊಬಗು, ರನ್ನನ ನಾಟ್ಯಮಯ ಶೈಲಿ, ಆಂಡಯ್ಯನ ಅಚ್ಚಗನ್ನಡದೊಲವು, ಕನ್ನಡ ಸಾಹಿತ್ಯ ಸರಸ್ವತಿಯ ವಿಶ್ವ ರೂಪದ ಹರವು, ಚಂಪೂವಿನ ಮೂಲದ ಶೋಧನೆ, ದೇಶೀ ಮತ್ತು ಮಾರ್ಗ ಛಂದೋ ಬಂಧಗಳ ಐತಿಹಾಸಿಕ ಬೆಳವಣಿಗೆ-ಹೀಗೆ ಹಲವು ಹತ್ತು ವಿಷಯಗಳಲ್ಲಿ ಅವರ ವಿಮರ್ಶನ ಲೇಖನಿ ಹರಿದಿದೆ. ತವನಿಧಿಯಲ್ಲಿ-ಹಳಗನ್ನಡ ಸಾಹಿತ್ಯದ ಅವ ಲೋಕನ ಕ್ರಮವನ್ನು ಅನುಸರಿಸಿ ಪಂಪ, ರಾಘವಾಂಕ, ನಯಸೇನ, ಆಂಡಯ್ಯ, ಮುದ್ದಣ, ತಿರುಮಲಾರ್ಯ– ಹೀಗೆ ಬೇರೆ ಬೇರೆ ಕಾಲಾವಧಿಯ ಪ್ರಮುಖ ಕವಿಗಳ ವಿಲಕ್ಷಣ ಗುಣಗಳನ್ನು ಗುರುತಿಸಿ ವಿಮರ್ಶೆಯ ಒರೆಗೆ ಹಚ್ಚಿ ಬೆಲೆಕಟ್ಟಿದ್ದಾರೆ. ಸಾಹಿತ್ಯೋಪಾ ಸನೆಯಲ್ಲಿ ಹೊಸಗನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಕಾದಂಬರಿ, ಕಾವ್ಯ, ನಾಟಕ, ಸಣ್ಣಕತೆ, ಏಕಾಂಕ ನಾಟಕ ಮೊದಲಾದ ಹೊಸ ಬಗೆಯ ಪ್ರಕಾರಗಳು ಸಾಧಿಸಿರುವ ಗಟ್ಟಿತನವನ್ನು, ಇವುಗಳ ರೂಪಲಕ್ಷಣ ವಿವೇಚನೆಯನ್ನು ಕುರಿತು ಚಿತ್ರಿಸಿದ್ದಾರೆ. ಅದರಲ್ಲಿನ ಹೊಸ ಕಾವ್ಯದ ಗದ್ಯತನ, ಕನ್ನಡ ಕಾದಂಬರಿಗಳು ಮುಂತಾದ ಲೇಖನಗಳು ಸಿಂಹಾವಲೋಕನ ಕ್ರಮದಲ್ಲಿದ್ದು ಮುಗಳಿಯವರ ವಿಮರ್ಶೆಯಲ್ಲಿನ ಎಚ್ಚರ, ಅಲಿಪ್ತ ಗುಣಗಳಿಗೆ ಸಾಕ್ಷಿಯಾಗಿವೆ. ಈ ಎರಡು ವಿಮರ್ಶಾ ಗ್ರಂಥಗಳಲ್ಲಿರುವ ಲೇಖನಗಳು ಮುಗಳಿಯವರಿಗೆ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆಯಲು ಪೂರ್ವರಂಗವನ್ನು ನಿರ್ಮಿಸಿವೆಯೆನ್ನಬಹುದು.

ಅಲ್ಲಮನ 'ಮಾತೆಂಬುದು ಜ್ಯೋತಿರ್ಲಿಂಗ'ವೆಂಬ ವಚನೋಕ್ತಿಯ ಶೀರ್ಷಿಕೆಯುಳ್ಳ ಅವರ ಪ್ರಬಂಧ ಸಂಕಲನ ಸಂಕೀರ್ಣಗ್ರಂಥ ಜಾತಿಗೆ ಸೇರಿದುದು. ಕಲೆಗಾಗಿ ಕಲೆ, ಅಬಲೆಯರ ಬಲ, ಅಭಿರುಚಿಯ ಆವಿಷ್ಕಾರ, ಮುಂತಾದ ವೈಚಾರಿಕ ಪ್ರಬಂಧಗಳೂ 'ಸಾಹಿತ್ಯ ಮತ್ತು ಪರಂಪರೆ', 'ಕನ್ನಡ ಸಾಹಿತ್ಯದ ವೈಶಿಷ್ಟ್ಯ' ಮುಂತಾದ ಸಾಹಿತ್ಯಕ ಪ್ರಬಂಧಗಳೂ, 'ನನ್ನ ಕೆಲವು ಯುದ್ದೋತ್ತರ ಯೋಜನೆಗಳು, 'ನಾದುರಸ್ತ', ಮೊದಲಾದ ಲಘು ಹರಟೆ ಗಳೂ ಇದರಲ್ಲಿ ಸೇರಿವೆ.

ಮುಗಳಿಯವರು ಇಂಗ್ಲಿಷಿನಲ್ಲಿ ಬರೆದ Heritage of Karnataka- ಕರ್ನಾಟಕದ ಸಾಹಿತ್ಯ-ಸಾಂಸ್ಕೃತಿಕ ಪರಂಪರೆಯನ್ನು ವಿಶ್ವಕ್ಕೆ ಪರಿಚಯಿಸುವ ಅಪೂರ್ವ ಸಾಹಸವೆನ್ನಬೇಕು. ಇದರಲ್ಲಿ ಕರ್ನಾಟಕದ ರಾಜಕೀಯ ಇತಿಹಾಸ, ಸೈನಿಕ ಜೀವನ, ಧಾರ್ಮಿಕ ಇತಿಹಾಸ, ಕಲೆ, ಸಾಹಿತ್ಯ ಮೊದಲಾದುವುಗಳನ್ನು ಕುರಿತು ತಮಗಿಂತ ಹಿಂದೆ ಇದ್ದ ವಿದ್ವಾಂಸರ ಅಭಿಪ್ರಾಯಗಳನ್ನು ಕ್ರೋಢೀ ಕರಿಸಿ, ವ್ಯಾಖ್ಯಾನಿಸಿ, ತಾವು ಕಂಡ ಹೊಸ ವಿಚಾರಗಳನ್ನು ಪರಿಚಯ ಮಾಡಿ ಕೊಟ್ಟಿದ್ದಾರೆ. ಈ ಗ್ರಂಥವನ್ನು 1976ರಲ್ಲಿ ಶ್ರೀ ಕೆ.ಜಿ. ಶಾಸ್ತ್ರೀ ಮತ್ತು ಎಸ್.ಪಿ. ಪಾಟೀಲ ಅವರು 'ಕರ್ನಾಟಕದ ಸಾಂಸ್ಕೃತಿಕ ಪರಂಪರೆ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ.

**ಸಾಹಿತ್ಯ ಚರಿತ್ರೆ**

ಮುಗಳಿಯವರ ಎಲ್ಲ ವಿಮರ್ಶನ ಗ್ರಂಥಗಳಿಗೂ ಕಿರೀಟಪ್ರಾಯ ವಾಗಿರುವ ಕನ್ನಡ ಸಾಹಿತ್ಯ ಚರಿತ್ರೆ-ಹಲವು ವಿಷಯಗಳಲ್ಲಿ ಒಂದು ಅಪೂರ್ವ

ಗ್ರಂಥವೆನಿಸಿಕೊಂಡಿದೆ. ಪ್ರಾಚೀನ ಕಾವ್ಯ, ಶಾಸ್ತ್ರಗಳ ಜ್ಞಾನ, ಇತಿಹಾಸ ಪ್ರಜ್ಞೆ, ಭಾರತೀಯ ರಸ ಸಂಪ್ರದಾಯದ ತಿಳುವಳಿಕೆ, ಮೌಲ್ಯಮಾಪನ ಸಾಮರ್ಥ್ಯ- ಇವುಗಳನ್ನು ಶೋಧನೆಗೆ ಒಳಪಡಿಸುವ ಈ ಕೃತಿ-ಮುಗಳಿಯವರ ಸತ್ವಪರೀಕ್ಷೆಯ ಕೃತಿಯೂ ಹೌದು. ಅವರ ಹಲವು ವರ್ಷಗಳ ಬೋಧನ ಅನುಭವ ಮತ್ತು ಸಂಶೋಧನೆಯ ಫಲವಾಗಿ ಮೂಡಿ ಬಂದ ಈ ಕೃತಿ - ಬಹುಕಾಲದಿಂದ ಕನ್ನಡದಲ್ಲಿದ್ದ ಕೊರತೆಯನ್ನು ನೀಗಿಸಿ ಸಾಹಿತ್ಯಾಭ್ಯಾಸಿಗಳಿಗೆ ಅನಿವಾರ್ಯ ಆಧಾರಗ್ರಂಥವಾಗಿ ತನ್ನ ವಿಶಿಷ್ಟ ಮರ್ಯಾದೆಯನ್ನು ಉಳಿಸಿಕೊಂಡಿದೆ. 1952ರಲ್ಲಿ ಇದು ಪ್ರಕಟವಾಗುವ ಮೊದಲು -ಕನ್ನಡ ಸಾಹಿತ್ಯ ಚರಿತ್ರೆಯ ಅಧ್ಯಯನಕ್ಕೆ ಇದ್ದ ಆಕರ ಗ್ರಂಥಗಳು–ಆರ್. ನರಸಿಂಹಾ ಚಾರ್ಯರ ಕವಿಚರಿತೆಯ ಮೂರು ಸಂಪುಟಗಳು, ರೈಸ್, ಕಿಟೆಲ್, ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಬರೆದ ಸಾಹಿತ್ಯ ಚರಿತ್ರೆಯ ಸ್ಥೂಲ ಬರಹಗಳು, ಕನ್ನಡ ಕೈಪಿಡಿಯಲ್ಲಿ ಬಿ. ಎಂ. ಶ್ರೀ.ಯವರು ಬರೆದ ಅಪೂರ್ಣ ಭಾಗ ಇವುಗಳು ಮಾತ್ರ. ಕನ್ನಡ ಸಾಹಿತ್ಯವನ್ನು ವಿಶೇಷ ಅಧ್ಯಯನಕ್ಕೆ ಆರಿಸಿಕೊಂಡ ವಿದ್ಯಾರ್ಥಿಗಳಿಗೆ ಇದರಿಂದ ಉಂಟಾಗುತ್ತಿದ್ದ ತೊಂದರೆಯನ್ನು ಗಮನಿಸಿ, ಸಾಂಗಲಿಯಲ್ಲಿ ಪ್ರಾಧ್ಯಾಪಕರಾಗಿದ್ದ ಸಮಯದಲ್ಲಿ ಪಡೆದ ಪ್ರಾಚೀನ ಸಾಹಿತ್ಯ ಬೋಧನೆಯ ಅನುಭವವನ್ನು ಧಾರೆಯೆರೆದು ಈ ಆಚಾರ್ಯ ಕೃತಿಯನ್ನು ಸೃಷ್ಟಿಸುವ ಸಾಹಸಕ್ಕೆ ಅವರು ಕೈ ಹಾಕಿದರು. ಸಾಹಿತ್ಯ ಚರಿತ್ರೆಯ ಬೋಧನೆಗಾಗಿ ಅವರು ಬರೆದುಕೊಂಡ ಟಿಪ್ಪಣಿ ಈ ಗ್ರಂಥ ಬರವಣಿಗೆಗಾಗಿ ಕೈಗೊಂಡ ಹಲವು ವರ್ಷಗಳ ಪ್ರಾಚೀನ ಶಾಸನ ಮತ್ತು ಕಾವ್ಯಗಳ ಅಧ್ಯಯನ, ಸಂಶೋಧನೆ-ಕನ್ನಡ ಸಾಹಿತ್ಯ ಚರಿತ್ರೆಯಂಥ ಪೂರ್ಣ ಪ್ರಮಾಣದ ಗ್ರಂಥದ ಸೃಷ್ಟಿಗೆ ಕಾರಣವಾದವು.

ಸಾಹಿತ್ಯ ಚರಿತ್ರೆಯ ರಚನೆಯಲ್ಲಿ ಮುಗಳಿಯವರು ಅನುಸರಿಸಿರುವ ಮಾರ್ಗ ನಿರ್ದಿಷ್ಟವಾದುದು. ಸಾವಿರ ವರ್ಷಕ್ಕೂ ಮೇಲ್ಪಟ್ಟು ಬೆಳೆದು ಬಂದಿರುವ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆಯುವ ಕೆಲಸ ಅಷ್ಟೇನೂ ಸುಗಮವಾದುದಲ್ಲ. ಅವರ ಸಾಹಿತ್ಯ ಚರಿತ್ರೆಯ ಕಾಲ ವಿಭಜನೆಯ ಕ್ರಮ ಆಧುನಿಕ ದೃಷ್ಟಿಯಿಂದ ಕೂಡಿದೆ. ಅದುವರೆಗಿದ್ದ ಭಾಷೆಯ ಅವಸ್ಥೆ ಮತ್ತು ಮತ ಪ್ರಾಬಲ್ಯಗಳ ಕ್ರಮವನ್ನು ಬಿಟ್ಟು, ಕನ್ನಡ ಸಾಹಿತ್ಯೋದಯದ ಕಾಲದ ಪರಿಸ್ಥಿತಿಗಳನ್ನು ದೀರ್ಘವಾಗಿ ಪೀಠಿಕೆಯಲ್ಲಿ ಚರ್ಚಿಸಿ, ಪಂಪ ಪೂರ್ವಯುಗ, ಪಂಪಯುಗ ಮತ್ತು ಬಸವ ಯುಗಗಳೆಂದು ಮೂರು ಸ್ಥೂಲ ಭಾಗಗಳಲ್ಲಿ ರಚಿಸಲಾಗಿದೆ. ಕನ್ನಡ ಕಾವ್ಯಗಳಿಗೆ ಆದಿ ಮತ್ತು ಶ್ರೇಷ್ಠ ಕವಿ ಪಂಪನು ಹೇಗೋ, ಕನ್ನಡ ಸಾಹಿತ್ಯವನ್ನು ಜನಸಾಮಾನ್ಯರೆಡೆಗೆ ಸೆಳೆದೊಯ್ದ ಬಸವನೂ ಅಷ್ಟೇ ಮುಖ್ಯನಾಗಿದ್ದಾನೆ. ಹಳಗನ್ನಡ, ನಡುಗನ್ನಡ ಕಾವ್ಯಗಳಿಗೆ ಈ ಇಬ್ಬರು ಶ್ರೇಷ್ಠರು ಸೀಮಾಪುರುಷರಾಗಿದ್ದಾರೆ. ಈ ದೃಷ್ಟಿಯಿಂದ ಅವು ಅನುಸರಿಸಿದ ವಿಭಜನೆಯ ಕ್ರಮ, ವಿಚಾರಣೀಯವಾಗಿದೆ. ಆಯಾ ಯುಗದ ಪ್ರಮುಖ ಗ್ರಂಥಕಾರರ ಪಟ್ಟಿ, ತಾತ್ಕಾಲಿಕ ಜೀವನ ಪರಿಸ್ಥಿತಿಯ ಚಿತ್ರಣ, ಯುಗದ ಸಾಹಿತ್ಯ ವೈಶಿಷ್ಟ್ಯಗಳ ಹಿನ್ನೆಲೆಯಲ್ಲಿ ಹಿರಿಯ, ಕಿರಿಯ ಕವಿಗಳೆಲ್ಲರ ಕೃತಿ ಪರಿಚಯ, ವಿಮರ್ಶೆ, ತಾವೂ ಎತ್ತರಕ್ಕೆ ಮುಟ್ಟಿ ಕನ್ನಡದ ಎತ್ತರವನ್ನು ಹೆಚ್ಚಿಸಿರುವ ಎಂಟು-ಹತ್ತು ಪ್ರಮುಖ ಪ್ರತಿಭಾಶಾಲಿ ಕವಿಗಳನ್ನು, ಅವರ ಕೃತಿಗಳನ್ನು ಕುರಿತ ದೀರ್ಘ ವಿಮರ್ಶೆ, ಗ್ರಂಥಾಂತ್ಯದಲ್ಲಿ ಕನ್ನಡ ಸಾಹಿತ್ಯದ ವೈಶಿಷ್ಟ್ಯ, ವೈಲಕ್ಷಣ್ಯಗಳನ್ನು ಕುರಿತ ಸಮಾಲೋಚನೆ-ಅನುಬಂಧದಲ್ಲಿ ಇದುವರೆಗೆ ಪ್ರಮುಖ ಕವಿಗಳನ್ನು ಕುರಿತು ಬಂದಿರುವ ವಿಚಾರ ವಿಮರ್ಶೆಗಳ ಗ್ರಂಥ, ಲೇಖನಗಳ ಸುದೀರ್ಘ ಪಟ್ಟಿ – ಹೀಗೆ ಅವರ ಸಾಹಿತ್ಯ ಚರಿತ್ರೆಯ ಅವಲೋಕನ ಕ್ರಮ ಸಾಗುತ್ತದೆ.

ಕವಿಗಳ ಕಾಲ ನಿರ್ಣಯ ಮತ್ತು ಕೃತಿ ವಿಮರ್ಶೆಗಳನ್ನು ಕುರಿತು ಅದುವರೆಗೆ ಬಂದ ವಿದ್ವಾಂಸರ, ವಿಮರ್ಶಕರ ಅಭಿಪ್ರಾಯಗಳನ್ನು ಕ್ರೋಢೀಕರಿಸಿ, ಚರ್ಚಿಸಿ, ತಮ್ಮ ಅಭಿಮತವನ್ನು ಅಂತಿಮವಾಗಿ ತಿಳಿಸುವಾಗ ಮುಗಳಿಯವರು ಒಂದು ಬಗೆಯ ಸಮನ್ವಯ ಮಾರ್ಗವನ್ನು ಕಂಡು ಕೊಂಡಿದ್ದಾರೆ. ಪರಸ್ಪರ ವಿರುದ್ಧವಾದ ಎರಡು ವಿಚಾರಗಳನ್ನು, ನಿರ್ಣಯಗಳನ್ನು ಅವುಗಳ ಸಂದರ್ಭದ ಹಿನ್ನೆಲೆಯಲ್ಲಿ ಪರಿಶೀಲಿಸಿ, ಮಧ್ಯಮ ಮಾರ್ಗವೊಂದನ್ನು ಆರಿಸಿಕೊಳ್ಳುವುದು ಮುಗಳಿಯವರ ವಿಮರ್ಶೆಯ ಮಾರ್ಗವಾಗಿದೆ. ಕನ್ನಡ ಸಾಹಿತ್ಯದ ನೆಲೆ-ಬೆಲೆಯನ್ನು ಅರಿಯುವಲ್ಲಿ, ಸಾಹಿತ್ಯದ ಜನಜೀವನದ ಸಂಸ್ಕೃತಿಯ ಸಮಗ್ರ ಚಿತ್ರವನ್ನು ಕಣ್ಣೆದುರು ರೂಪಿಸುವಲ್ಲಿ ಮುಗಳಿಯವರು ಯಶಸ್ವಿಯಾಗಿದ್ದಾರೆ. ಈ ಕಾರ್ಯ ನಿರ್ವಹಣೆಗೆ ಬೇಕಾದ ಪೂರ್ವ ಪಾಂಡಿತ್ಯ ಸಿದ್ಧತೆ ಮುಗಳಿಯವರಲ್ಲಿದೆ. ಇತಿಹಾಸದ ಬೆಳವಣಿಗೆಯನ್ನು ಗುರುತಿಸುತ್ತ ಹೋಗುವಾಗ, ಎಲ್ಲಿಯೂ ಎಳೆ ತಪ್ಪುವುದಿಲ್ಲ. ಮುಗಳಿಯವರು ಬರೆದ ಮೇಲೆ ಹಲವು ಸಾಹಿತ್ಯ ಚರಿತ್ರೆಗಳು ಕನ್ನಡದಲ್ಲಿ ಬಂದಿದ್ದರೂ ಈ ಗ್ರಂಥದ ಮಹತ್ವವೇನೂ ಕಡಿಮೆಯಾಗಿಲ್ಲ. ಕನ್ನಡ ಸಾಹಿತ್ಯ ಚರಿತ್ರೆಯಲ್ಲದೆ ಕನ್ನಡ ಸಾಹಿತ್ಯದ ಇತಿಹಾಸ ಎಂಬ ಮತ್ತೊಂದು ಗ್ರಂಥವನ್ನು ಕನ್ನಡ ಮತ್ತು ಇಂಗ್ಲಿಷ್‌ಗಳಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ ಇವರು ರಚಿಸಿ ಕೊಟ್ಟಿದ್ದಾರೆ. ಈ ಕೃತಿಯನ್ನು ಭಾರತದ ಹಲವು ಭಾಷೆಗಳಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯವರೆ ಅನುವಾದಿಸಿ ಪ್ರಕಟಿಸಿದ್ದಾರೆ.

ಮುಗಳಿಯವರ ಸಾಹಿತ್ಯ ಚರಿತ್ರೆಯ ಲಕ್ಷಣವುಳ್ಳ ಮತ್ತೊಂದು ಗ್ರಂಥ 'ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು'. ಕನ್ನಡ ಸಾಹಿತ್ಯದಲ್ಲಿ ಆರಂಭ ಕಾಲದಿಂದ ಕನ್ನಡ ಕವಿಗಳಿಂದ ಕೈಯಾಡಿಸಲ್ಪಟ್ಟ ಛಂದೋರೂಪಗಳನ್ನು ಕುರಿತು, ಅವುಗಳ ಇತಿಹಾಸ, ಲಕ್ಷಣಗಳನ್ನು ಕುರಿತು, ದೀರ್ಘವಾಗಿ ಚರ್ಚಿಸಿದ್ದಾರೆ. ಶಾಸನಗಳಲ್ಲಿ ಕಂಡ ತೀರ ಮೊದಲಿನ ಸಾಹಿತ್ಯ ರೂಪಗಳು ಕವಿರಾಜಮಾರ್ಗದಲ್ಲಿ ಉಲ್ಲೇಖಿಸಿರುವ ಚತ್ತಾಣ, ಬೆದಂಡೆ, ಒನಕೆವಾಡು ಮೊದಲಾದವುಗಳನ್ನು ಕುರಿತು ವಿಚಾರ ವಿಮರ್ಶೆ, ಚಂಪೂ ಕಾವ್ಯಗಳ ಬೆಳವಣಿಗೆ, ಕಂದ, ವೃತ್ತ, ಅಷ್ಟಕ, ಶತಕ, ವಚನ ಸಾಹಿತ್ಯ, ಇತರ ಗದ್ಯ, ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ, ಗೀತ ಮೊದಲಾದ ದೇಶೀ ಮತ್ತು ಮಾರ್ಗಶೈಲಿಯ ಛಂದೋರೂಪಗಳನ್ನು ಕುರಿತು ವಿಸ್ತಾರವಾದ ಅಧ್ಯಯನ, ವಿಮರ್ಶೆಗಳನ್ನೊಳಗೊಂಡ ಈ ಕೃತಿ ಸಾಹಿತ್ಯ ವಿದ್ಯಾರ್ಥಿಗಳಿಗೆ ಒಂದು ಮಹತ್ವದ ಆಧಾರ ಗ್ರಂಥವಾಗಿದೆ.

### ಜೀವನ ಚರಿತ್ರೆ

ಇತ್ತೀಚೆಗೆ ಮುಗಳಿಯವರು ಆತ್ಮಕಥನ ರೂಪದ 'ಜೀವನ ರಸಿಕ' ಎಂಬ ಕೃತಿಯನ್ನೂ, 'ಅರವಿಂದ ಮಕರಂದ' ಎಂಬ ಜೀವನ ಚರಿತ್ರೆಯನ್ನೂ ರಚಿಸಿ ಪ್ರಕಟಿಸಿದ್ದಾರೆ. ತಮ್ಮ ಆತ್ಮಚರಿತ್ರಪರ ಕೃತಿಯಲ್ಲಿ, ಒಬ್ಬ ಭಾವಜೀವಿಯಾಗಿ ತಮ್ಮ ಬದುಕಿನ ಹಿನ್ನೋಟವನ್ನು, ಮೂರನೆಯ ವ್ಯಕ್ತಿಯ ಪರಿಚಯ ರೂಪದಲ್ಲಿ ಕೊಟ್ಟಿದ್ದಾರೆ. ಇದರಲ್ಲಿ ಮುಗಳಿಯವರು ಬದುಕಿನ ವಾಸ್ತವ ವಿವರಗಳ ಅಭಾವದಿಂದ ಕೊರತೆಯೆನಿಸಿದರೂ, ಅವರು ಸಾಹಿತಿಯಾಗಿ, ಜೀವನ ರಸಿಕನಾಗಿ ಬೆಳೆದು ಬಂದ ದಾರಿಯಲ್ಲಿ ಎದುರಿಸಿದ ಹಲವು ಸಮಸ್ಯಾತ್ಮಕ ಸಂದರ್ಭಗಳ ಪರಿಚಯ ಮಾಡಿಕೊಡುತ್ತಾರೆ. ತಮ್ಮ ಜೀವನ ಶ್ರದ್ಧೆ, ಪ್ರಕೃತಿಪ್ರೇಮ, ತಮ್ಮ ಬದುಕಿನ ಮೇಲೆ ಬೇಂದ್ರೆ,

ಅರವಿಂದ,ಮಾತೆಯರ ಪ್ರಭಾವ, ಸಂಗೀತ ಕಲೆಯ ಆಸಕ್ತಿ, ಸಾಂಗಲಿಯಲ್ಲಿ ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ, ವಿವಿಧ ಹಂತಗಳಲ್ಲಿ ಎದುರಿಸಿದ ಸಮಸ್ಯೆಗಳು, ವಿದೇಶ ಪ್ರವಾಸದ ಅನುಭವ, ಭಾಷಾ ಬಾಂಧವ್ಯವನ್ನು ಕುರಿತು ಅವರು ತಳೆದ ಧೋರಣೆ, ಬೆಂಗಳೂರಿಗೆ ಬಂದು ನೆಲೆಸಿದ ಮೇಲೆ, ಭಾಷೆ, ಶಿಕ್ಷಣಗಳನ್ನು ಕುರಿತು ಅವರು ರೂಢಿಸಿಕೊಂಡ ಅಭಿಪ್ರಾಯಗಳು, ಸಾಹಿತ್ಯ ಅಕಾಡೆಮಿ, ಪರಿಷತ್ತುಗಳೊಡನೆ ಅವರ ಸಂಬಂಧ, ತಮ್ಮ ಕೆಲವು ಸಾಹಿತ್ಯ ಕೃತಿಗಳು ರೂಪುಗೊಂಡ ಬಗೆ-ಹೀಗೆ ಹಲವು ವಿಷಯಗಳನ್ನು ಭಾವಜೀವಿಯ ಮುಗ್ಧಮನಸ್ಸಿನಿಂದ ನಿರೂಪಿಸಿದ್ದಾರೆ.

### ವ್ಯಕ್ತಿ-ವೈಶಿಷ್ಟ್ಯ

ಮುಗಳಿಯವರು ಸಾಹಿತ್ಯ ಹಾಗೂ ಸಾಮಾಜಿಕ ಜೀವನರಂಗದಲ್ಲಿ ದುಡಿದು ಹಲವು ಗೌರವ ಪದವಿಗಳಿಗೆ ಪಾತ್ರರಾಗಿದ್ದಾರೆ. ಸಾಂಗಲಿಯಲ್ಲಿ ಪ್ರಾಧ್ಯಾಪಕರಾಗಿದ್ದಾಗ 1937ರಲ್ಲಿ ಪುಣೆಯ ಡೆಕ್ಕನ್ ಎಜ್ಯುಕೇಶನ್ ಸೊಸೈಟಿಯ ಆಜೀವ ಸದಸ್ಯತನ ಅವರಿಗೆ ಲಭ್ಯವಾಯಿತು. 1953ರಲ್ಲಿ ಅವರ ಕನ್ನಡ ಸಾಹಿತ್ಯ ಚರಿತ್ರೆ, ಎರಡು ಅಪೂರ್ವ ಪ್ರಶಸ್ತಿಗಳನ್ನು ಅವರಿಗೆ ತಂದುಕೊಟ್ಟಿತು. ಒಂದು, ಪುಣೆ ವಿಶ್ವವಿದ್ಯಾನಿಲಯದ ಡಿ.ಲಿಟ್. ಪದವಿ, ಮತ್ತೊಂದು ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರ. ಹಲವು ಬಾರಿ ಕನ್ನಡ ಸಾಹಿತ್ಯ ಸಮ್ಮೇಳನಗಳ ಗೋಷ್ಠಿಗಳಿಗೆ ಅಧ್ಯಕ್ಷರಾಗುವ ಅವಕಾಶವನ್ನು ಪಡೆದ ಅವರನ್ನು 1963ರಲ್ಲಿ ತುಮಕೂರಿನ ಬಳಿಯ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ಸಾಹಿತ್ಯ ಸಮ್ಮೇಳನಕ್ಕೆ ಪರಿಷತ್ತು ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು. 1964ರಲ್ಲಿ ಇಂಕಾ ಸಂಸ್ಥೆಯ ಪರವಾಗಿ ಸ್ವಿಜರ್‌ಲೆಂಡ್ ದೇಶದ ಫ್ರಿಬುವಿನಲ್ಲಿ ನಡೆದ ಜಾಗತಿಕ ಸಾಹಿತ್ಯ ಸಮ್ಮೇಳನದಲ್ಲಿ ಅವರು ಕನ್ನಡವನ್ನು ಪ್ರತಿನಿಧಿಸಿ ತಮ್ಮ ಪ್ರಬಂಧದಿಂದ ವಿದೇಶದಲ್ಲಿ ಕನ್ನಡದ ಕೀರ್ತಿಯನ್ನು ಬೆಳೆಸಿದರು.

ಕೇಂದ್ರ ಸಾಹಿತ್ಯ ಅಕಾಡೆಮಿಗೂ, ಮುಗಳಿಯವರಿಗೂ ಇರುವ ನಂಟು ಹಲವು ವರ್ಷಗಳದ್ದು. ಸುಮಾರು ಹತ್ತು ವರ್ಷಗಳ ಕಾಲ ಅವರು ಅದರ ಸಾಮಾನ್ಯಸಭೆ ಮತ್ತು ಕಾರ್ಯಕಾರಿ ಸಮಿತಿಗಳಲ್ಲಿ ಸದಸ್ಯರಾಗಿದ್ದುಕೊಂಡು ಸಕ್ರಿಯವಾಗಿ ಭಾಗವಹಿಸಿ ರಚನಾತ್ಮಕವಾದ ಸಲಹೆಗಳನ್ನು ಕೊಡುತ್ತ ಬಂದು 'ಅಕಾಡೆಮಿಯ ಮನಃಸಾಕ್ಷಿಯ ಸಂರಕ್ಷಕ' ಎಂದು ಅದರ ಅಧ್ಯಕ್ಷರೊಬ್ಬರಿಂದ ಪ್ರಶಂಸೆ ಗಳಿಸಿದ್ದಾರೆ.

ಮುಗಳಿಯವರ ಕನ್ನಡ ಭಾಷೆಯ ಮೇಲಿನ ಪ್ರೇಮ, ಎಂದೂ ಇತರ ಭಾಷೆಗಳ ಮೇಲೆ ಕ್ರೋಧವನ್ನು ತಳೆಯುವ ಮಟ್ಟಕ್ಕೆ ಇಳಿಯಲಿಲ್ಲ. ಕನ್ನಡ ಭಾಷೆಯ ಉನ್ನತಿಯನ್ನು ಕಾಣಲು ಅವರು ಬಳಸಿದ ಮಾರ್ಗ ಚಳವಳಿಯದಲ್ಲ, ರಚನಾತ್ಮಕ ವಿಧಾನದ್ದು. ಕರ್ನಾಟಕ ಅವರಿಗೆ ಹೆತ್ತ ತಾಯಿ, ಮಹಾರಾಷ್ಟ್ರ ಹೊತ್ತ ತಾಯಿ. ಮರಾಠಿಗರ ಒತ್ತಡದಿಂದ ನಾಡಿನಗಡಿಯಲ್ಲಿ ಕನ್ನಡ ಸೊರಗುತ್ತಿದೆಯೆಂಬ ನೋವಿನಿಂದ ಅದಕ್ಕೆ ಶಕ್ತಿ, ಪ್ರೇಮಗಳನ್ನು ತುಂಬಲು, ಗಡಿನಾಡಿನಲ್ಲಿ ಕನ್ನಡ ಶಾಲೆಯನ್ನು ತೆರೆದರು. ಕನ್ನಡದ ಪ್ರಾಚೀನ ಕವಿಗಳನ್ನು, ಸಂತರನ್ನು ಕುರಿತು ಉಪನ್ಯಾಸ, ಪ್ರವಚನಗಳನ್ನು ನಡೆಸಿದರು. ಮರಾಠಿ ಭಾಷಾಭಿಮಾನಿಗಳೂ ಸೈ ಎಂದು ತಲೆದೂಗುವಂತೆ ಕೆಲಸ ಮಾಡಿ ಕನ್ನಡದ ಗೌರವ ಹೆಚ್ಚಿಸಿದರು. ಭಾಷಾ ಬಾಂಧವ್ಯವನ್ನು ಕುರಿತು ವಿಶಾಲ ಧೋರಣೆಗಳನ್ನು ತಳೆದರು. ಕನ್ನಡ, ಮರಾಠಿ ಭಾಷೆಗಳೆರಡರಲ್ಲೂ ಸರಿಸಮವಾದ ಪ್ರಭುತ್ವದಿಂದ ಮಾತಾಡಬಲ್ಲವರೆಂಬ ಪ್ರಶಂಸೆಗಳಿಸಿದರು. ಭಾಷೆ ಇರುವುದು ಕೂಡಿಸುವುದಕ್ಕಾಗಿ ಕೆಡಿಸುವುದಕ್ಕಲ್ಲ ಎಂಬುದು ಅವರು ತಳೆದ ನಿಶ್ಚಿತ ಧೋರಣೆ.

ಮುಗಳಿಯವರ ವಿರಾಮ ಕಾಲದ ಹವ್ಯಾಸಗಳಲ್ಲಿ ಸಂಗೀತ ಸಾಧನೆಯು ಮುಖ್ಯವಾದುದು. ಸಂಗೀತವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿ, ತಮ್ಮ ಬಿಡುವಿನ ವೇಳೆಯಲ್ಲಿ ಸಿತಾರ್, ವೀಣೆಗಳನ್ನು ನುಡಿಸುತ್ತ, ಮನಶ್ಶಾಂತಿ ಪಡೆಯುವುದು ಅವರಿಗೆ ತುಂಬ ಪ್ರಿಯವಾದುದು. ಇನಿದಾದ ಶಾರೀರವುಳ್ಳ ಅವರು, ಭಾವಗೀತೆಗಳನ್ನು ಭಾವಪರವಶತೆಯಿಂದ ಹಾಡಬಲ್ಲರು. ಕೀರ್ತಿಗೊಬ್ಬ ಮಗ, ಆರತಿಗೊಬ್ಬ ಮಗಳಿರುವ ಮುಗಳಿಯವರ ಅಚ್ಚುಕಟ್ಟಾದ ಸಂಸಾರ ಆದರ್ಶಪ್ರಾಯವಾಗಿದೆ. ಅವರ ಧರ್ಮಪತ್ನಿ ಸೌ. ರಾಧಾಭಾಯಿಯವರು ಮುಗಳಿಯವರಂತೆ ಕುಟುಂಬ ವತ್ಸಲರಾಗಿ, ಉತ್ತಮ ಗೃಹಿಣಿಯಾಗಿ ಮುಗಳಿಯವರ ಮಹತ್ಸಾಧನೆಗೆ ಅಂತರಂಗದ ಬೆಂಬಲ ನೀಡುತ್ತ ಬಂದಿದ್ದಾರೆ.

ಸಂಪ್ರದಾಯಶರಣ ಮನೆತನದ ವಾತಾವರಣದಲ್ಲಿ ಬೆಳೆದು ಬಂದಿದ್ದರೂ, ಜೀವನ ರಸಿಕದೃಷ್ಟಿ, ವಿಶಾಲಹೃದಯ ಸಂಪತ್ತು, ಸ್ನೇಹ ಸೌಜನ್ಯಗಳು ತುಂಬಿದ ಗುಣಗ್ರಾಹಿ ನಡವಳಿಕೆಯಿಂದ ಬದುಕಿನಲ್ಲಿ, ಲೋಕಮಾನ್ಯ ಗುಣಗಳನ್ನು ಅವರು ರೂಢಿಸಿಕೊಂಡು ಬಂದಿದ್ದಾರೆ. ಕವಿ ಬೇಂದ್ರೆಯವರ, ಶ್ರೀ ಅರವಿಂದ, ಮಾತೆಯರ ದಿವ್ಯಪ್ರಭಾವದಲ್ಲಿ ಮುಳುಗಿ, ದೈವಿಕ ಹಾಗೂ ಮಾನವೀಯ ಮೌಲ್ಯಗಳಿಗೆ ಸ್ಪಂದಿಸುತ್ತ ಸ್ನೇಹಿತರ, ಬಂಧುಗಳ, ಬಳಗದ ನಡುವೆ ತಮ್ಮ ಬದುಕನ್ನು ವಿಸ್ತರಿಸಿ ಕೊಂಡಿದ್ದಾರೆ.

❑

# ಡಿ.ಎಲ್.ನರಸಿಂಹಾಚಾರ್ಯ

ಟಿ.ವಿ. ವೆಂಕಟಾಚಲ ಶಾಸ್ತ್ರೀ

1

ಕನ್ನಡ ನಾಡಿನ ತಮ್ಮ ಕಾಲದ ಪ್ರಸಿದ್ಧ ವಿದ್ವಾಂಸರಲ್ಲಿ ಅಗ್ರಗಣ್ಯರೆನಿಸಿ, ಕನ್ನಡ ಭಾಷೆ ಸಾಹಿತ್ಯಗಳ ಸಂಶೋಧನೆ ಕ್ಷೇತ್ರದಲ್ಲಿ ಮೌಲಿಕವೂ ಮಾರ್ಗದರ್ಶಕವೂ ಆದ ಹಲವಾರು ಕೆಲಸಗಳನ್ನು ಮಾಡಿ ಕೀರ್ತಿಶಾಲಿಗಳಾದವರು ಡಿ.ಎಲ್.ನರಸಿಂಹಾಚಾರ್ಯರು. ಇವರ ಪೂರ್ತಿ ಹೆಸರು ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ ಎಂದು. ವ್ಯವಹಾರದ ಸೌಲಭ್ಯಕ್ಕೆ ತಮ್ಮ ಕಾಲದವರಿಗೆ ಅವರು ಡಿ.ಎಲ್.ಎನ್. ಆಗಿದ್ದರು. ಇವರು 27-10-1906ರಂದು ಚಿಕ್ಕನಾಯಕನ ಹಳ್ಳಿಯಲ್ಲಿ ತಮ್ಮ ತಾಯಿಯ ತಂದೆ ಅಣ್ಣಾಸ್ವಾಮಿ ಅಯ್ಯಂಗಾರರ ಮನೆಯಲ್ಲಿ ಹುಟ್ಟಿದರು. ಇವರ ಬಾಲ್ಯ ವಿದ್ಯಾಭ್ಯಾಸ ಸಬ್‌ರಿಜಿಸ್ಟ್ರಾರ್ ಕಛೇರಿಯ ಗುಮಾಸ್ತೆಯಾಗಿದ್ದ ತಂದೆ ಶ್ಯಾಮಯ್ಯಂಗಾರ್ಯರ ಕಾಲಕಾಲದ ವರ್ಗಾವಣೆ ಕಾರಣವಾಗಿ ಪಾವಗಡ, ಮಧುಗಿರಿ, ಶಿರಾ, ತುಮಕೂರು ಹೀಗೆ ಬೇರೆ ಬೇರೆ ಕಡೆಗಳಲ್ಲಿ ನಡೆಯಿತು. ಬಳಿಕ ಉನ್ನತ ವ್ಯಾಸಂಗ ಬೆಂಗಳೂರು, ಮೈಸೂರುಗಳಲ್ಲಿ ಸಾಗಿತು.

ಡಿ.ಎಲ್.ಎನ್. ಸುಸಂಸ್ಕೃತವಾದ ವಾತಾವರಣದಲ್ಲಿ ಹುಟ್ಟಿ ಬೆಳೆದವರು. ಅನಂತರದ ಅವರ ವಿದ್ಯಾಸಾಧನೆಯಲ್ಲಿ ಇದರಿಂದ ತುಂಬ ಸಹಾಯವಾಯಿತು. ತಂದೆಯ ತಂದೆ ದೊಡ್ಡಬೆಲೆ ಕೃಷ್ಣಮಾಚಾರ್ಯರು ವೃತ್ತಿಯಲ್ಲಿ ಅಧ್ಯಾಪಕ ರಾಗಿದ್ದವರು; ತಾಯಿಯ ತಂದೆ ಸರ್ಕಾರಿ ಉದ್ಯೋಗದಲ್ಲಿದ್ದವರು, ಭಾರತ ವಾಚನದಲ್ಲಿ ಹೆಸರಾದವರು. ಅಜ್ಜನ ಸೊಗಸಾದ ಭಾರತವಾಚನ ಮೊಮ್ಮಗನ ಸಾಹಿತ್ಯಾಭಿರುಚಿಗೆ ಅಂಕುರಾರ್ಪಣ ಮಾಡಿತು. ಹೀಗಾಗಿ ಡಿ.ಎಲ್.ಎನ್. 12ರ ಬಾಲ್ಯದಲ್ಲಿಯೇ 'ಜೈಮಿನಿ ಭಾರತ' ಓದಿದರು; ಅದರ ಬಹುಭಾಗವನ್ನು ಬಾಯಿಪಾಠ ಮಾಡಿದರು. ಆಗಲೇ 'ರಾಜಶೇಖರ ವಿಳಾಸ' ಮೊದಲಾದ ಪ್ರೌಢಗ್ರಂಥಗಳ ಕಡೆಗೂ ಅವರ ದೃಷ್ಟಿ ಹರಿದಿತ್ತು. ತುಮಕೂರಿನಲ್ಲಿ ಪ್ರೌಢಶಾಲೆಯ ಓದು ಸಾಗಿದ್ದಾಗ 4ನೆಯ ಫಾರಂಗೆ ಬರುವ ಹೊತ್ತಿಗೆ ಅವರು 'ಪದ್ಯಸಾರ'ದ 2 ಸಂಪುಟಗಳು, 'ಗದಾಯುದ್ಧ', 'ಛಂದೋಂಬುಧಿ' ಓದಿಕೊಂಡಿದ್ದರು. ಹಸ್ತಪ್ರತಿಗಳನ್ನು ಓದುವ ಕುತೂಹಲವೂ ಕಣ್ಣು ತೆರೆಯುತ್ತಿತ್ತು. ತಮಗೆ ತುಮಕೂರಿನ ಸಲ್ಲಪ್ಪ ಎಂಬುವರ ಮನೆಯಲ್ಲಿ ದೊರೆತ ಮೈಸೂರು ಇತಿಹಾಸವಿದ್ದ ಹಸ್ತಪ್ರತಿಯನ್ನು ಓದಿ, ಆಗಲೇ ಅದನ್ನು ಇಂಗ್ಲಿಷಿಗೆ ಭಾಷಾಂತರಿಸುವ ಸಾಹಸ ಮಾಡಿದ್ದರು. ಮುಂದೆ ಆ ಕಾಗದದ ಹಸ್ತಪ್ರತಿಯೂ, ಭಾಷಾಂತರವೂ ಇತಿಹಾಸತಜ್ಞ ಎಂ. ಎಚ್. ಕೃಷ್ಣರ ಕೈ ಸೇರಿತು.

ಡಿ.ಎಲ್.ಎನ್. ತುಮಕೂರು ಪ್ರೌಢಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದಾಗ, ಶಾಲಾ ಪತ್ರಿಕೆ School Folkನಲ್ಲಿ ಅವರ ಮೊದಲ ಕನ್ನಡ ಬರಹ 'ದೊಡ್ಡ ಮನುಷ್ಯನು ಯಾರು?' ಪ್ರಕಟವಾಯಿತು. ಅಲ್ಲಿಯೇ The Story of a cotton seed ಎಂಬ ಇಂಗ್ಲಿಷ್ ಬರಹವೂ ಬೆಳಕು ಕಂಡಿತು. ಖಾಸಗಿಯಾಗಿ ಅವರು ಸಂಸ್ಕೃತವನ್ನು ಕಲಿತು 'ರಘುವಂಶ', 'ಚಂಪೂ ರಾಮಾಯಣ'ಗಳನ್ನು ಓದಿಕೊಂಡರು. ಗೆಳೆಯರ ಮೂಲಕ ಇಂಗ್ಲಿಷ್ ಕಾದಂಬರಿಯ ರುಚಿಯೂ ಹತ್ತಿತು. ನಾಗವರ್ಮನ 'ಕಾವ್ಯಾಲೋಕನ'ದ ಪ್ರತಿಯೊಂದನ್ನು ಅವರು 1922ರಲ್ಲಿ ತಮ್ಮ ಹದಿನಾರರ ಹರೆಯದಲ್ಲಿಯೇ ತಮ್ಮಲ್ಲಿ ಸಂಗ್ರಹಿಸಿಟ್ಟುಕೊಂಡುದು ನೋಡಿದರೆ, ಮುಂದೆ ಅವರು ವಿಖ್ಯಾತ ಹಳಗನ್ನಡ ವಿದ್ವಾಂಸರಾಗಿ ಬೆಳೆಯಲು ಮೆಟ್ಟಿಲುಗಳು ಸಿದ್ಧವಾಗುತ್ತಿದ್ದುದು ವಿದಿತವಾಗುತ್ತದೆ. 1924ರಲ್ಲಿ ಅವರು ಎಂಟ್ರೆನ್ಸ್ ವಿದ್ಯಾರ್ಥಿಯಾಗಿದ್ದಾಗ ಮೊದಲ ಸಲ ಆಚಾರ್ಯ ಬಿ.ಎಂ.ಶ್ರೀ. ಅವರ, Stories from Aeneid ಎಂಬ ಪಠ್ಯಪುಸ್ತಕದ ಮೇಲಿನ ಉಪನ್ಯಾಸವನ್ನು ಕೇಳಿ ವಿಸ್ಮಯಗೊಂಡರು; ಅವರತ್ತ ಆಕರ್ಷಿತರಾದರು.

ಮುಂದೆ ಡಿ.ಎಲ್.ಎನ್. ಉನ್ನತ ವ್ಯಾಸಂಗಕ್ಕೆ ಬೆಂಗಳೂರು ಸೆಂಟ್ರಲ್ ಕಾಲೇಜು ಸೇರಿದರು (1924). ಹೆಚ್ಚು ಅಂಕಗಳಿಸಿಯೂ ವಿಜ್ಞಾನ ವಿಭಾಗದಲ್ಲಿ ಮುಂದುವರಿಯಲು ಸ್ಥಾನ ದೊರೆಯದೆ, ಭಾಷೆ, ಭೌತ ಮತ್ತು ರಸಾಯನ ಶಾಸ್ತ್ರಗಳನ್ನೊಳಗೊಂಡ ಆರ್ಟ್ಸ್ ವಿಭಾಗದಲ್ಲಿ ಸೇರಿ, 1927ರಲ್ಲಿ ತಮ್ಮ ಬಿ.ಎ. ಪರೀಕ್ಷೆ ಮುಗಿಸಿದರು. ಆಗ ಅವರಿಗೆ ಕನ್ನಡದಲ್ಲಿ ಹೆಚ್ಚು ಅಂಕಗಳನ್ನು ಪಡೆದುದರಿಂದ ಕೇಣಿ ಸಿದ್ಧಪ್ಪನವರ ಚಿನ್ನದ ಪದಕ ಮತ್ತು ಭಾಸ್ಕರಮ್ಮಾಳ್ ಬಹುಮಾನ ದೊರೆತವು. ಬಿ.ಎ. ಎರಡನೆಯ ವರ್ಷದಲ್ಲಿದ್ದಾಗಲೇ ಅವರು ಬರೆದು ಓದಿದ 'ಕರ್ನಾಟಕ ಸಾಹಿತ್ಯದಲ್ಲಿ ಪ್ರಕೃತಿ ವರ್ಣನೆ' ಎಂಬ ಸುದೀರ್ಘವೂ ಪ್ರೌಢವೂ ಆದ ಪ್ರಬಂಧ, ಅನಂತರದಲ್ಲಿ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ (13-3-28) ಪ್ರಕಟವಾಯಿತು. ಆವರೆಗೆ ನರಸಿಂಹಾಚಾರ್ಯರು ಬೆಳೆಸಿಕೊಂಡಿದ್ದ ವ್ಯಾಸಂಗಪ್ರಿಯತೆ, ಸಂಶೋಧನಾಸಕ್ತಿ, ಹಳಗನ್ನಡ ಭಾಷೆ ಸಾಹಿತ್ಯಗಳ ಪ್ರೌಢಿಮೆಗೆ ಈ ಬರಹ ಕನ್ನಡಿ ಹಿಡಿಯುತ್ತದೆ; ಅಲ್ಲದೆ ಅವರು ಮುಂದೆ ಸಾಗಲಿದ್ದ ದಾರಿಯನ್ನೂ ಸೂಚಿಸುತ್ತದೆ. ಈ ಅವಧಿಯಲ್ಲಿ ತರುಣರಿಗೆ ಸಹಜವಾಗಿರುವಂತೆ ಇವರಲ್ಲಿಯೂ ಪದ್ಯರಚನೆಯ ಆಕಾಂಕ್ಷೆ ಇಣುಕಿತ್ತು; ಒಂದೆರಡನ್ನು ಬರೆದೂ ಇದ್ದರು. ಆದರೆ ಅವು ಗುರುಗಳ ಮನಸ್ಸಿಗೆ ಬರಲಿಲ್ಲವೆಂದು ತೋರಿದಾಗ, ಆ ಹವ್ಯಾಸವನ್ನು ಕೈಬಿಟ್ಟರು, ಅದಕ್ಕಾಗಿ ಮುಂದೆ ಎಂದೂ ವಿಷಾದಪಡಲಿಲ್ಲ.

ಅದು ಹೊಸಗನ್ನಡ ನವೋದಯ ಎಳಬಿಸಿಲಿನ ಕಾಲ. 1927ರಲ್ಲಿ, ಮೈಸೂರು ಮಹಾರಾಜ ಕಾಲೇಜಿನಲ್ಲಿ ಶ್ರೀಯವರ ಪ್ರಯತ್ನದ ಫಲವಾಗಿ ಕನ್ನಡ ಎಂ.ಎ. ಆರಂಭವಾಯಿತು. ಮೈಸೂರಿಗೆ ತಾಯಿಯೊಂದಿಗೆ ಆಕಸ್ಮಿಕವಾಗಿ ಬಂದಿದ್ದ ಡಿ.ಎಲ್.ಎನ್. ಅವರು, ನೌಕರಿಗೆ ಸೇರುವ ತಮ್ಮ ಅಪೇಕ್ಷೆಯನ್ನು ಹಿಂದಿಕ್ಕಿ, ಕನ್ನಡ ಎಂ.ಎ. ತರಗತಿಗೆ ಸೇರಿಕೊಂಡರು. ಬಾಡಿಗೆ ಕೊಠಡಿಯ ವಾಸ, ಬಡವಿದ್ಯಾರ್ಥಿಗಳ ಸಲುವಾಗಿ ಇದ್ದ ವಿಶ್ವವಿದ್ಯಾನಿಲಯದ ಹೋಟಲು ಊಟ, ಹೀಗೆ ಎರಡು ವರ್ಷಗಳ ವ್ಯಾಸಂಗದ ಬಳಿಕ ಅವರು, 1929ರಲ್ಲಿ ಪ್ರಥಮ ದರ್ಜೆ, ಪ್ರಥಮಸ್ಥಾನದೊಂದಿಗೆ ಕನ್ನಡ ಎಂ.ಎ. ಪದವಿಯಲ್ಲಿ ಉತ್ತೀರ್ಣರಾದರು. ಅಂದು ಅವರಿಗೆ ವಿದ್ಯಾಗುರುಗಳಾಗಿದ್ದವರು ಎಂದರೆ, ಬಿ.ಎಂ.ಶ್ರೀಕಂಠಯ್ಯ, ಟಿ.ಎಸ್. ವೆಂಕಣ್ಣಯ್ಯ, ಟಿ.ಎನ್.ಸುಬ್ಬರಾಯಶಾಸ್ತ್ರಿ, ಆರ್.ಅನಂತಕೃಷ್ಣಶರ್ಮ, ಸಿ.ಆರ್.ನರಸಿಂಹಶಾಸ್ತ್ರಿ ಮತ್ತು ಡಿ.ಶ್ರೀನಿವಾಸಚಾರ್ಯ. ಎ.ಆರ್.ಕೃಷ್ಣಶಾಸ್ತ್ರಿಗಳೂ ಕೆಲವು ಕಾಲ ಅಧ್ಯಾಪಕರಾಗಿದ್ದರು. ಸಹಪಾಠಿಗಳಾಗಿದ್ದವರು ಎಂದರೆ ಕೆ.ವಿ.ಪುಟ್ಟಪ್ಪ (ಕುವೆಂಪು), ಡಿ.ಕೆ. ಭೀಮಸೇನರಾವ್, ಎನ್. ಅನಂತರಂಗಾಚಾರ್, ಕೆ.ವೆಂಕಟರಾಮಪ್ಪ, ಎಂ.ನಾಗೇಶಾಚಾರ್, ಬಿ.ನಂಜುಂಡಯ್ಯ,

ಬಿ.ಎಸ್.ವೆಂಕಟರಾಮಯ್ಯ ಮತ್ತು ಎಂ.ಎ. ಅಳಸಿಂಗಾಚಾರ್ಯ. ಡಿ.ಎಲ್.ಎನ್. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅದೇ ತಾನೇ ಆರಂಭವಾಗಿದ್ದ ಕನ್ನಡ ಎಂ.ಎ ಪದವಿಯ ಮೊದಲ ತಂಡದ ಪದವೀಧರರಲ್ಲಿ ಮೊದಲ ದರ್ಜೆ, ಮೊದಲ ಸ್ಥಾನವನ್ನು ಪಡೆದು ಉತ್ತೀರ್ಣರಾಗಿ ವಿಶ್ವ ವಿದ್ಯಾನಿಲಯದ ಮೊದಲನೆಯ ಉಪಕುಲಪತಿಗಳಾದ (ಕನ್ನಡ ಸಾಹಿತ್ಯ ಸಮ್ಮೇಳನದ ಮೊದಲನೆಯ ಅಧ್ಯಕ್ಷರೂ ಆದ) ಎಚ್.ವಿ.ನಂಜುಂಡಯ್ಯ ನವರ ಸ್ವರ್ಣಪದಕವನ್ನು ಗಳಿಸಿದುದು ಒಂದು ಯೋಗಾಯೋಗವೆನ್ನ ಬಹುದು. ಅದೇ ವರ್ಷವಷ್ಟೇ (1929) ವಿಶ್ವವಿದ್ಯಾನಿಲಯ ಕನ್ನಡಕ್ಕೆ ಪ್ರಪ್ರಥಮವಾಗಿ ಸಂಶೋಧನ ವೇತನದ ಅವಕಾಶವನ್ನು ಕಲ್ಪಿಸಿತ್ತು; ಅದನ್ನು ಪಡೆದುಕೊಂಡು ಕನ್ನಡದ ಮೊದಲ ಸಂಶೋಧನ ವಿದ್ಯಾರ್ಥಿಯಾಗುವ ಭಾಗ್ಯವನ್ನೂ ಅವರು ತಮ್ಮದಾಗಿ ಮಾಡಿಕೊಂಡರು. ಹೀಗೆ ದೊರೆತ ಅವಕಾಶವನ್ನು ಬಳಸಿಕೊಂಡು, ಅವರು 'ವೀರಶೈವ ಸಾಹಿತ್ಯದ ಆರಂಭಕಾಲ'ವನ್ನು ಕುರಿತು ಅಭ್ಯಾಸಮಾಡಿ, ನಿಯಮಿತ ಅವಧಿಗಿಂತ ಮುಂಚೆಯೇ ತಮ್ಮ ನಿಬಂಧವನ್ನು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದರು. ಅದರ ಕೆಲವು ಭಾಗ 'ಕೆಲವರು ವಚನಕಾರರು' ಎಂಬ ಹೆಸರಿನಿಂದ 'ಪ್ರಬುದ್ಧ ಕರ್ನಾಟಕ' ಪತ್ರಿಕೆಯಲ್ಲಿ (19-1,4) ಈಚೆಗೆ ಪ್ರಕಟವಾಯಿತು.

ಡಿ.ಎಲ್.ನರಸಿಂಹಾಚಾರ್ಯರು 1930ರಲ್ಲಿ ಮೈಸೂರಿನ ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ರೆಸಿಡೆಂಟ್ ಕನ್ನಡ ಪಂಡಿತರಾಗಿ ಕೆಲಸಕ್ಕೆ ನೇಮಕವಾದಂದಿನಿಂದ ಅವರ ವೃತ್ತಿಜೀವನ ಮೊದಲಾಯಿತು. ಆಗ್ಗೆ ಅವರ ಸಂಬಳ ಮಾಹೆಯಾನ 80 ರೂಪಾಯಿ. ಈ ಕೆಲಸದ ಜೊತೆಗೆ 25ರೂ. ಸಂಭಾವನೆ ಪಡೆದು ಮಹಾರಾಜ ಕಾಲೇಜಿನಲ್ಲಿ ಒಪ್ಪೊತ್ತಿನ ಉಪಾನ್ಯಾಸಕರಾಗಿಯೂ ಪಾಠಹೇಳುತ್ತಿದ್ದರು. ವಿದ್ಯಾರ್ಥಿದೆಸೆಯಲ್ಲಿಯೂ, ಈ ಅವಧಿಯಲ್ಲಿಯೂ ಅವರು ಪ್ರಾಚೀನ ಕನ್ನಡ ಗ್ರಂಥಗಳನ್ನು, ಅವು ಮುದ್ರಿತವಿರಲಿ, ಹಸ್ತಪ್ರತಿ ರೂಪದಲ್ಲಿರಲಿ, ಸಾಕಷ್ಟು ಮಟ್ಟಿಗೆ ವ್ಯಾಸಂಗ ಮಾಡಿದರು. ರೈಸ್ ಅವರ ಕಾಲದಿಂದ ಸಜ್ಜಾಗುತ್ತ ಬಂದಿದ್ದ ಪ್ರಾಚ್ಯವಿದ್ಯಾಸಂಶೋಧನ ಸಂಸ್ಥೆಯ ಗ್ರಂಥ ಭಂಡಾರದ ಪೂರ್ಣ ಪ್ರಯೋಜನವನ್ನು ಪಡೆದುಕೊಂಡರು. ಇಲ್ಲಿ ಪಂಡಿತರಾಗಿದ್ದ ಅವಧಿಯಲ್ಲಿ 'ಸಕಲವೈದ್ಯ ಸಂಹಿತಸಾರಾರ್ಣವ' ಎಂಬ ವೈದ್ಯಗ್ರಂಥವನ್ನೂ, 'ಕುಮಾರವ್ಯಾಸ ಭಾರತ'ದ ಭೀಷ್ಮಪರ್ವವನ್ನೂ ಅಚ್ಚುಕಟ್ಟಾಗಿ ಸಂಪಾದಿಸಿದರು. 1932ರಲ್ಲಿ ಶ್ರೀಯವರು ಮಹಾರಾಜ ಕಾಲೇಜಿನಲ್ಲಿಯೇ ಪೂರ್ಣಕಾಲದ ಉಪನ್ಯಾಸಕರಾಗಿ ನೇಮಕಗೊಂಡರು. ಆಗ್ಗೆ ಅವರ ಸಂಬಳ ತಿಂಗಳಿಗೆ 120ರೂ. ಇದಾದ 7 ವರ್ಷಗಳ ಮೇಲೆ, 1939ರಲ್ಲಿ ಮೈಸೂರಿನಲ್ಲಿಯೇ ಇಂಟರ್‌ಮೀಡಿಯೇಟ್ ಕಾಲೇಜಿಗೆ-ಈಗಿನ ಯುವರಾಜ ಕಾಲೇಜಿಗೆ-ಕನ್ನಡ ಉಪನ್ಯಾಸಕರಾಗಿ ಬಂದರು. 1941ರಲ್ಲಿ ಮತ್ತೆ ಮಹಾರಾಜ ಕಾಲೇಜಿಗೆ ಬಂದು ಬಳಿಕ 1945ರಲ್ಲಿ ಉಪಪ್ರಾಧ್ಯಾಪಕರೆನಿಸಿ, ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ಹೋದರು. ಮೂರು ವರ್ಷಗಳ ಮೇಲೆ, 1948ರಲ್ಲಿ ಮತ್ತೆ ಮಹಾರಾಜ ಕಾಲೇಜಿಗೆ ಹಿಂದಿರುಗಿ,1954ರ ವರೆಗೆ ಅಲ್ಲಿದ್ದು, ಆ ವರ್ಷ ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿನ ಪ್ರಧಾನ ಸಂಪಾದಕರಾಗಿ ಅಧಿಕಾರ ವಹಿಸಿಕೊಂಡು ಬೆಂಗಳೂರಿಗೆ ತೆರಳಿದರು. ಅಲ್ಲಿ ಎರಡು ವರ್ಷಗಳಿದ್ದು, 1956ರಲ್ಲಿ ಪ್ರಾಧ್ಯಾಪಕ ಪದವಿಗೆ ಬಡ್ತಿ ಪಡೆದು, ಅಲ್ಲಿಂದ ಮಹಾರಾಜ ಕಾಲೇಜಿಗೆ ಮರಳಿದವರು, 31-3-1962ರಲ್ಲಿ ಅಧ್ಯಾಪಕ ವೃತ್ತಿಯಿಂದ ನಿವೃತ್ತರಾದರು. ಆದರೆ ತಮ್ಮ ವೃತ್ತಿಜೀವನದ ಉದ್ದಕ್ಕೆ ನಡೆಸಿಕೊಂಡು ಬಂದಿದ್ದ ಅಧ್ಯಯನ, ಸಂಶೋಧನ ಮತ್ತು ಲೇಖನ ಕಾರ್ಯಗಳಿಂದ ಅವರು ನಿವೃತ್ತರಾಗಲಿಲ್ಲ; ಅವನ್ನು ಇನ್ನೂ ಚುರುಕು ಗೊಳಿಸಿದರು. 1963ರಿಂದ ಸುಮಾರು 6 ವರ್ಷಗಳ ಕಾಲ ಅವರು ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಸಂಶೋಧಕ ವಿದ್ವಾಂಸರಾಗಿ 'ಕನ್ನಡ ಗ್ರಂಥ ಸಂಪಾದನೆ' (1964) ಹಾಗೂ 'ಪಂಪಭಾರತ ದೀಪಿಕೆ' (1971) ಎಂಬ ಎರಡು ಶ್ರೇಷ್ಠಗ್ರಂಥಗಳನ್ನು ರಚಿಸಿದರು.; ಹಲವು ವಿದ್ವತ್‌ಪೂರ್ಣ ಲೇಖನಗಳನ್ನು ಬರೆದು ಪ್ರಕಟಿಸಿದರು. ಆಗಲೇ ತೀ.ನಂ.ಶ್ರೀ.ಯವರ ನಿಧನದಿಂದ ತೆರವಾಗಿದ್ದ ಕನ್ನಡ-ಕನ್ನಡ ನಿಘಂಟಿನ ಅಧ್ಯಕ್ಷ ಸ್ಥಾನವನ್ನೂ ಪ್ರಧಾನ ಸಂಪಾದಕತ್ವದ ಜವಾಬ್ದಾರಿಯನ್ನೂ ವಹಿಸಿಕೊಂಡರು (1966). ತಮ್ಮ ಬದುಕಿನ ಕೊನೆಯವರೆಗೂ (7-5-1971) ಈ ಕಾರ್ಯವನ್ನು ಅವರು ನಿಷ್ಠೆಯಿಂದಲೂ, ಶ್ರದ್ಧೆಯಿಂದಲೂ ನಿರ್ವಹಿಸಿದರು.

ಆಚಾರ್ಯರು ಮೈಸೂರು ವಿಶ್ವವಿದ್ಯಾನಿಲಯ ಹಾಗೂ ಸರ್ಕಾರದ ವಿದ್ಯಾ ಇಲಾಖೆಗಳ, ಉಸ್ಮಾನಿಯ ಮೊದಲಾದ ಬೇರೆ ವಿಶ್ವವಿದ್ಯಾನಿಲಯಗಳ ವಿವಿಧ ವಿದ್ಯಾಸಮಿತಿಗಳಲ್ಲಿಯೂ, ಮಂಡಲಿಗಳಲ್ಲಿಯೂ ತಮ್ಮ ಪ್ರಾಮಾಣಿಕ ಸೇವೆಯನ್ನು ಸಲ್ಲಿಸಿದರು. 1959-69ರ ಅವಧಿಯಲ್ಲಿದ್ದ ಪ್ರಬುದ್ಧ ಕರ್ನಾಟಕದ ಪ್ರಧಾನ ಸಂಪಾದಕರಾಗಿದ್ದು, ಆ ಪತ್ರಿಕೆಯ ಬೆಳವಣಿಗೆಗೆ ಶ್ರಮಿಸಿದರು. ಕನ್ನಡ ನಿಘಂಟು ಯೋಜನೆಗೆ ಎ.ಆರ್.ಕೃಷ್ಣಶಾಸ್ತ್ರಿಗಳೂ, ತೀ.ನಂ.ಶ್ರೀಕಂಠಯ್ಯನವರೂ ಅಧ್ಯಕ್ಷರಾಗಿದ್ದಾಗ, ಅವರ ಅನಂತರದಲ್ಲಿಯೂ ಅದರ ಪ್ರಬಲವಾದ ಒತ್ತಾಸೆಯಾಗಿದ್ದು, ಶಕ್ತಿಯಾಗಿದ್ದು, ಆ ಯೋಜನೆ ಸುಭದ್ರವಾಗಿಯೂ, ಸುವ್ಯವಸ್ಥಿತವಾಗಿಯೂ ಮುನ್ನಡೆಯಲು ಬಹುವಾಗಿ ದುಡಿದರು. ಪರಿಷತ್ತಿನ ಸುವರ್ಣ ಮಹೋತ್ಸವದ ಸಮಯದಲ್ಲಿ (1970), ಇವರ ಸಮಕ್ಷಮದಲ್ಲಿಯೇ ನಿಘಂಟಿನ ಮೊದಲನೆಯ ಸಂಪುಟ ಬಿಡುಗಡೆಯಾಯಿತು.

ಕನ್ನಡ ಭಾಷೆ ಸಾಹಿತ್ಯಗಳಿಗೆ ವಿಶೇಷವಾಗಿ ಸಂಪಾದನ, ಸಂಶೋಧನ ಶಾಖೆಗಳಿಗೆ, ಡಿ.ಎಲ್.ಎನ್. ಅವರು ಸಲ್ಲಿಸಿದ ವಿಶೇಷ ಸೇವೆಯಿಂದಾಗಿ, ಅವರನ್ನು 1960ರಲ್ಲಿ ಬೀದರ್‌ನಲ್ಲಿ ನಡೆದ 41ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಯಿತು. ಈ ಸಂದರ್ಭದ ಸವಿನೆನಪಿಗಾಗಿ ಇವರ ವ್ಯಕ್ತಿತ್ವ, ವಿದ್ವತ್ತುಗಳನ್ನು ಕುರಿತ 'ಜ್ಞಾನೋಪಾಸಕ' ಎಂಬ ಅಭಿನಂದನ ಗ್ರಂಥವನ್ನು ಇವರಿಗೆ ಅರ್ಪಿಸಿ ಸನ್ಮಾನಿಸಲಾಯಿತು. ಹೀಗೆಯೇ 1961ರಲ್ಲಿ 'ಉಪಾಯನ' ಎಂಬ ಇನ್ನೊಂದು ಬೃಹತ್ ಗ್ರಂಥವನ್ನು ಅವರಿಗೆ ಒಪ್ಪಿಸಿ ಗೌರವಿಸಲಾಯಿತು. ಆಚಾರ್ಯರ ವ್ಯಕ್ತಿತ್ವ, ಕೃತಿಗಳನ್ನು ಕುರಿತ ಹಾಗೆ, ಅವರಿಗೆ ಪ್ರಿಯವಾಗಿದ್ದ ವ್ಯಾಸಂಗ ಕ್ಷೇತ್ರಗಳನ್ನು ಕುರಿತ ಹಾಗೆ ಈ ಎರಡು ಗೌರವ ಗ್ರಂಥಗಳೂ ಅಗಾಧ ಪ್ರಮಾಣಭೂತ ಸಾಮಗ್ರಿಯನ್ನು ಒಳಗೊಂಡಿವೆ. ಅದೇ ವರ್ಷ(1967) ಹಿಂದಿನ ಮೈಸೂರು ಸರ್ಕಾರ ಇವರಿಗೆ ರಾಜ್ಯಪ್ರಶಸ್ತಿಯನ್ನಿತ್ತು ಗೌರವಿಸಿತು. 1969ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಇವರ ಅಪಾರವಾದ ವಿದ್ವತ್ತನ್ನು ಮನ್ನಿಸಿ ಗೌರವ ಡಿ.ಲಿಟ್. ಪದವಿಯನ್ನು ನೀಡಿತು.

ಡಿ.ಎಲ್.ಎನ್. 'ಇದೀಗ ಪುರುಷಾಕೃತಿ' ಎಂದು ಹೇಳುವಂತೆ ನೋಟಕ್ಕೆ ಎತ್ತರದ ಆಳು; ಆ ಎತ್ತರಕ್ಕೆ ತಕ್ಕಂತೆ ದೊಡ್ಡ ದೇಹ. ಬಣ್ಣ ಎಣ್ಣೆಗೆಂಪು; ತುಂಬಿಕೊಂಡ ಮಾಟವಾದ ಮೈಗೆ ಒಪ್ಪುವ ಮುಗುಳುನಗೆಯ ಮುದ್ದು ಮುಖ. ವಿನಯ ವಿದ್ವತ್ತುಗಳ ಭಾರಕ್ಕೋ ಎನ್ನುವಂತೆ ಬಿಲ್ಲಿನಂತೆ ಸ್ವಲ್ಪ ಬಗ್ಗಿದ ಬೆನ್ನು, ಪ್ರಯತ್ನದಿಂದ ಎತ್ತಿ ಇಡುತ್ತಿರುವಂತೆ ತೋರುವ

ತೋರಹೆಜ್ಜೆಗಳ ಮಂದ ನಡಿಗೆ. ತಡೆದು ತಡೆದು ಆಡುತ್ತಿರುವಂತೆ ಕಂಡರೂ ದೃಢವಾಗಿ ಹೊರಡುವ ಸ್ಪಷ್ಟೋಕ್ತಿ. ಮಾತಿನ ಮರ್ಮವನ್ನು ಕೇಳುವವರಿಗೆ ಮನವರಿಕೆ ಮಾಡಬೇಕೆಂದು ಹವಣಿಸಿದಾಗ-ತಲೆತಗ್ಗಿ, ಕಣ್ಣು ಅರೆಮುಚ್ಚಿ, ಬುದ್ಧಿಯಾಳಕ್ಕೆ ಇಳಿಯುತ್ತಿರುವಂತೆ ತೋರುವ ಒಳನೋಟ; ಶೂನ್ಯದತ್ತ ಹಾಯುವ ತುಂಬು ಹಸ್ತದ ಬಲಗೈ ಬೀಸು, ಏರಿಳಿಯುವ ಉಸಿರಿನ ಹಾಸು. ಒಟ್ಟು ನೋಟದಲ್ಲಿ ಒಂದು ಭವ್ಯಾಕೃತಿ, ಕಿವಿಗೊಟ್ಟು ಆಲಿಸಬೇಕಾದ ಅಧಿಕಾರವಾಣಿ. ವೇಷವೋ? ಮಾಟವಾಗಿ ತಿದ್ದಿದ ಕ್ರಾಪನ್ನು ಒಳಗಡಗಿಸಿದ ಒಪ್ಪವಾದ ಜರಿಪೇಟ; ಮುಚ್ಚುಕೋಟು; ಸೊಗಸಾಗಿ ಉಟ್ಟ ಶುಭ್ರವೂ, ನವುರೂ ಆದ ಕಚ್ಚೆಪಂಚೆ. ಇದು 40-50ರ ಹರೆಯದಲ್ಲಿ ಡಿ.ಎಲ್.ಎನ್. ಅವರ ನಿಲವು.

## 2

ಡಿ.ಎಲ್.ಎನ್. ನರಸಿಂಹಾಚಾರ್ಯರು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಸುಮಾರು 70-80 ಸಂಶೋಧನ ಮತ್ತು ಸಮೀಕ್ಷಾ ಲೇಖನಗಳನ್ನು ಬರೆದು ನಾಡಿನ ವಿದ್ವತ್ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಇವುಗಳಲ್ಲಿ ಬಹುಪಾಲು, ಕನ್ನಡ ಭಾಷೆ ಸಾಹಿತ್ಯಗಳ ಪ್ರಮುಖವೂ, ಜಟಿಲವೂ ಆದ ಸಮಸ್ಯೆಗಳನ್ನೂ, ಸಂಗತಿಗಳನ್ನೂ ಕುರಿತವಾಗಿವೆ. ಅವರು ಬರೆದ ಸಮೀಕ್ಷಾ ಲೇಖನಗಳಲ್ಲಿಯೂ ಏನಾದರೂ ಹೊಸ ಸಂಗತಿಗಳು ಇದ್ದೇ ಇರುತ್ತಿದ್ದವು. ಬರವಣಿಗೆಯಲ್ಲಿ ಹಿತಮಿತ ಎಂಬುದು ಅವರಿಟ್ಟುಕೊಂಡ ಧ್ಯೇಯವಾದ್ದರಿಂದ, ಒಮ್ಮೆ ಬರೆದುದನ್ನು ಮತ್ತೆ ಬೇರೆ ರೂಪದಲ್ಲಿ, ಸಂದರ್ಭದಲ್ಲಿ ಬರೆಯುವುದಾಗಲಿ, ಆ ಕುರಿತು ಚರ್ಚಿಸುವುದಾಗಲಿ ಅವರಿಗೆ ಸೇರುತ್ತಿರಲಿಲ್ಲ. ಒಂದು ಬರಹದಲ್ಲಿ ಒಂದಕ್ಕಿಂತ ಹೆಚ್ಚು ಸಮಸ್ಯೆಗಳಿಗೆ ಪರಿಹಾರ ಕಾಣಿಸುವುದು ಅವರ ಸಾಮಾನ್ಯ ರೀತಿಯಾಗಿತ್ತು. ಔಚಿತ್ಯವನ್ನು ಹಿಡಿದು ಮಾತುಗಳ ಬಳಕೆ, ವಿಷಯಾಂತರವಾಗದಂತೆ ಉದ್ದೇಶಿತ ವಿಷಯದ ನಿರೂಪಣೆ, ತರ್ಕಶುದ್ಧವಾಗಿ ವಸ್ತುವಿನ ಪ್ರತಿಪಾದನೆ, ಏರಿಳಿತಗಳಿಗೆ ಅವಕಾಶ ಕೊಡದೆ ಸಮಗತಿಯಲ್ಲಿ ಸಾಗುವ ಸಹಜಶೈಲಿ, ರಾಗದ್ವೇಷ ವಿರಹಿತವಾದ ಮನೋಧರ್ಮ- ಈ ಮುಂತಾದವುಗಳಿಂದ ಅವರ ಬಹುಪಾಲು ಎಲ್ಲ ಬರಹಗಳೂ ಒಂದು ಕಲಾಕೃತಿಯೆಂಬಂತೆ ರೂಪತಳೆದು ವಾಚಕರ ಪರಿಶೀಲನೆಗೆ ಸಿದ್ಧವಾಗುತ್ತಿದ್ದುವು. ಅವರ ಬಿಡಿಬರಹಗಳಲ್ಲಿ 'ಸಿದ್ಧರಾಮಚರಿತೆ', 'ಸುಕುಮಾರ ಚರಿತೆ'ಗಳ ಪೀಠಿಕೆಗಳನ್ನೂ, ಅಗ್ಗಳದೇವ, ರುದ್ರಭಟ್ಟ, ಪೊನ್ನನ 'ಭುವನೈಕ ರಾಮಾಭ್ಯುದಯ', 'ಜನ್ನನೂ ವಾದಿರಾಜನೂ', ಮುಂತಾದ ಕವಿಕಾವ್ಯ ವಿಚಾರಗಳನ್ನೂ 'ಕುಮಾರವ್ಯಾಸನ ದೃಷ್ಟಿಯಲ್ಲಿ ಕರ್ಣ', 'ಕಣ್ಮರೆಯಾದ ಕನ್ನಡ', 'ಮಹಾರಾಷ್ಟ್ರದ ಮೂಲ', 'ಮರಳಿಮಣ್ಣಿಗೆ' ಈ ಕೆಲವು ವಿಮರ್ಶೆಗಳನ್ನೂ, ಛಂದಸ್ಸು ಗ್ರಂಥ ಸಂಪಾದನೆಗಳನ್ನು ಕುರಿತ 'ಮಾನಸೋಲ್ಲಾಸದಲ್ಲಿ ಛಂದಸ್ಸು', 'ಕುಮುದೇಂದು ರಾಮಾಯಣದ ಪರಿಷ್ಕರಣ ವಿಚಾರ', 'ಬಸವಣ್ಣನವರ ಕೆಲವು ವಚನಗಳ ಪಾಠ' ಎಂಬುವನ್ನು, 'ಕನ್ನಡದಲ್ಲಿ ಶಬ್ದರಚನೆ' ಹಾಗೂ 'ಪೊರಸು', 'ಬಾದುಬೆ', 'ಕಾಳಸೆ', 'ಡಂಗಹಾಕು', 'ಮದನಾವತಾರ', 'ಬರಡಗೆ', 'ಪಂಬಿಂಗಾಸು', 'ಗುಯ್ಯಲ್', 'ಮೇಹು', 'ಈಚೆಲ್' ಇತ್ಯಾದಿ ಶಬ್ದಾರ್ಥ ವಿಚಾರದ ಭಾಷಾಶಾಸ್ತ್ರ ಸಂಬಂಧವಾದವನ್ನು, 'ಲಕ್ಷ್ಮೀಶನ ಕಾಲ', 'ಅಭಿನವ ಪಂಪ', 'ಸಾಹಿತ್ಯ ಚರಿತ್ರೆಯ ಸ್ವರೂಪ' ಇತ್ಯಾದಿ ಸಂಕೀರ್ಣ ಬರಹಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

ಪ್ರಾಚೀನ ಮತ್ತು ಮಧ್ಯಕಾಲೀನ ಸಾಹಿತ್ಯ ವಿಶೇಷವಾಗಿ ಡಿ.ಎಲ್.ಎನ್. ಅವರ ವಿಹಾರ ಕ್ಷೇತ್ರವಾಗಿತ್ತು. ಆ ಕ್ಷೇತ್ರದ ಸಾಹಿತ್ಯಕೃತಿಗಳ ವಿಮರ್ಶೆ ಮತ್ತು ಚರಿತ್ರೆ, ಛಂದಸ್ಸು, ಗ್ರಂಥ ಸಂಪಾದನೆ, ಶಬ್ದಾರ್ಥವಿಚಾರ ಇವು ಅವರಿಗೆ ಪ್ರಿಯವಾದ ವಿಷಯಗಳಾಗಿದ್ದವು. ಅವರು ಸ್ವತಂತ್ರವಾಗಿಯೂ ಬೇರೆ ವಿದ್ವಾಂಸರೊಂದಿಗೆ ಸೇರಿಯೂ ಸಂಪಾದಿಸಿರುವ ಗ್ರಂಥಗಳೆಲ್ಲ ಬಹುಮಟ್ಟಿಗೆ ಶಾಸ್ತ್ರೀಯವಾದ ಗ್ರಂಥ ಸಂಪಾದನೆಯ ನಿಯಮಗಳಿಗೆ ಅನುಸಾರವಾಗಿ ಸಂಪಾದಿತವಾಗಿವೆಯಲ್ಲದೆ, ವಿದ್ವತ್‌ಪೂರ್ಣವಾದ ಪೀಠಿಕೆ, ಟಿಪ್ಪಣಿಗಳು, ಶಬ್ದಕೋಶ ಮೊದಲಾದ ಸಹಾಯಕ ಸಾಮಗ್ರಿಯನ್ನು ಒಳಗೊಂಡಿವೆ. ಉಳಿದ ಗ್ರಂಥಗಳು ಕವಿಕಾವ್ಯವಿಚಾರ, ಶಬ್ದಾರ್ಥವಿಚಾರ, ಗ್ರಂಥ ಸಂಪಾದನೆ, ವ್ಯಾಖ್ಯಾನ ಈ ಕ್ಷೇತ್ರಗಳಿಗೆ ಸಂಬಂಧಿಸಿವೆ. ಈ ಕೃತಿಮಾಲಿಕೆಯಲ್ಲಿ, ಒಂದೊಂದರ ಬಗ್ಗೆಯೂ ಕೆಲವು ಪರಿಚಯದ ಮಾತುಗಳನ್ನು ಹೇಳಬಹುದಾಗಿದೆ :

(ಅ) 1 'ಸಕಲವೈದ್ಯಸಂಹಿತಾಸಾರಾರ್ಣವ' (1932) : ಕಳಲೆ ವೀರರಾಜೇಂದ್ರನ (ಸು 1720) ವೈದ್ಯಗ್ರಂಥದ ಮೊದಲ ಭಾಗವಿದು. ವ್ಯಾಧಿಗಳ ಸ್ವರೂಪ, ಪರೀಕ್ಷೆ, ನಿದಾನಗಳನ್ನು ಕುರಿತಿದೆ. ಪ್ರಸ್ತಾವನೆಯಲ್ಲಿ ಸಂಪಾದಕರು ಕವಿವಿಚಾರವನ್ನು ವಿಸ್ತಾರವಾಗಿ ಚರ್ಚಿಸಿದ್ದಾರೆ.

2. 'ಕರ್ಣಾಟಕ ಮಹಾಭಾರತ : ಭೀಷ್ಮಪರ್ವ' (1933) : ಹೊಸ ರೀತಿಯಲ್ಲಿ ಶುದ್ಧವಾಗಿ ಸಂಪಾದಿಸಿರುವ 'ಕುಮಾರ ವ್ಯಾಸಭಾರತ'ದ ಯುದ್ಧ ಪಂಚಕದಲ್ಲಿ ಮೊದಲನೆಯದು. ಆಧಾರಪ್ರತಿಯ ಆಯ್ಕೆ, ಪಾಠನಿರ್ಣಯ ಮುಂತಾದುವುಗಳಲ್ಲಿ ಗ್ರಂಥ ಸಂಪಾದನ ತತ್ತ್ವಗಳನ್ನು ಲಕ್ಷಿಸಿದೆ. ಈ ಮೊದಲೇ ಡಿ.ಎಲ್.ಎನ್. ಅವರು ಟಿ.ಎಸ್.ವೆಂಕಣ್ಣಯ್ಯ, ತೀ.ನಂ.ಶ್ರೀ. ಯವರೊಂದಿಗೆ ಭೀಷ್ಮಪರ್ವದ ಒಂದು ಸಂಗ್ರಹ ಸಿದ್ಧಪಡಿಸಿದ್ದರು (1930).

3. 'ಪಂಪರಾಮಾಯಣ ಸಂಗ್ರಹ' (1936) : ನಾಗಚಂದ್ರನ (ಸು. 1100)' ಪಂಪರಾಮಾಯಣ'ದ ಸಂಗ್ರಹ; ಸಾಮಾನ್ಯ ವಾಚಕರು, ವಿದ್ಯಾರ್ಥಿಗಳಿಗಾಗಿ ಸಿದ್ಧಮಾಡಿದ್ದು. ಮೈಸೂರು ವಿಶ್ವವಿದ್ಯಾನಿಲಯದ ಅತ್ಯುತ್ತಮ ಕಾವ್ಯಸಂಗ್ರಹಗಳಲ್ಲಿ ಇದೂ ಒಂದು. ಪೀಠಿಕೆಯಲ್ಲಿ, ಕವಿಯ ಇತಿವೃತ್ತ, ಜೈನ ರಾಮಾಯಣಗಳು, ವಿಮಲಸೂರಿ ನಾಗಚಂದ್ರರ ರಾವಣ ಪಾತ್ರದ ವಿಮರ್ಶೆ, ಕಥಾಸರಣಿಯಲ್ಲಿ ಮಾರ್ಪಾಟುಗಳು, ರವಿಷೇಣನ ಪ್ರಭಾವ, ಶೈಲಿ ಮತ್ತು ವ್ಯಕ್ತಿತ್ವ ಮತ್ತು ಉಪಸಂಹಾರ ಎಂಬ ಭಾಗಗಳಲ್ಲಿ ಕೃತಿಕಾರ ಹಾಗೂ ಕೃತಿಯ ವಿವರ ವಿಶ್ಲೇಷಣೆಯಿದೆ. ಪ್ರಕಟವಾದ ಕಾಲಕ್ಕೆ ಈ ಬಗೆಯ, ಈ ವಿಸ್ತಾರದ ಕಾವ್ಯ ವಿಮರ್ಶೆ ತುಂಬ ವಿರಳವಾಗಿತ್ತು.

4 'ವಡ್ಡಾರಾಧನೆ' (1949) : ಪ್ರಾಚೀನ ಕನ್ನಡ ಗದ್ಯಗ್ರಂಥ; ಇದನ್ನು ಗುರುತಿಸಿ, ಸುಮಾರು 8 ಪ್ರತಿಗಳ ಆಧಾರದ ಮೇಲೆ ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಸಿದ್ಧಿಗೆ ತಂದ ಕೀರ್ತಿ ಡಿ.ಎಲ್.ಎನ್. ಅವರಿಗೆ ಸೇರಿದೆ. ಇಲ್ಲಿ ಉಪಸರ್ಗಕೇವಲಿಗಳನ್ನು ಕುರಿತ 19 ಕಥೆಗಳು ಸರಳವೂ, ರೋಚಕವೂ ಆದ ದೇಶಿಯ ಶೈಲಿಯಲ್ಲಿ ನಿರೂಪಿತವಾಗಿದ್ದು, ಕನ್ನಡ ಗದ್ಯಸಾಹಿತ್ಯದಲ್ಲಿ ಇದಕ್ಕೆ ವಿಶಿಷ್ಟ ಸ್ಥಾನವಿದೆ. ಸಂಪಾದಕರು 1970ರ ಪರಿಷ್ಕರಣದಲ್ಲಿ ಕವಿಕೃತಿಸಂಬಂಧವಾದ ವಿಸ್ತಾರವಾದ ಪೀಠಿಕೆ ಬರೆದಿದ್ದಾರೆ. ಈಚೆಗೆ ಈ ಕೃತಿಯ ಕರ್ತೃ, ಆಕರ, ವಸ್ತು, ಭಾಷೆ, ಶೈಲಿಗಳ ವಿಷಯದಲ್ಲಿ ಹೆಚ್ಚಿನ ಶೋಧನೆ ನಡೆಯುತ್ತಿದೆ.

5. 'ಸಿದ್ಧರಾಮ ಚರಿತೆಯ ಸಂಗ್ರಹ' (1951) : ವೆಂಕಣ್ಣಯ್ಯನವರೊಂದಿಗೆ ಸೇರಿ ಸಂಪಾದಿಸಿದ್ದ ರಾಘವಾಂಕನ 'ಸಿದ್ಧರಾಮ ಚಾರಿತ್ರ'ದ ಸಂಗ್ರಹ. ವಿಸ್ತಾರವಾದ ಪೀಠಿಕೆಯಲ್ಲಿ ಕವಿಯ ಇತಿವೃತ್ತ, ಸಿದ್ಧರಾಮನ ಐತಿಹಾಸಿ

ಕತೆ ಮತ್ತು ಮೂರ್ತಿ ಸ್ವರೂಪ, ಕಥಾಸಾರ, ಕಥೆಯ ಮೂಲ ಮತ್ತು ಬೆಳವಣಿಗೆ, ಕೃತಿವಿಮರ್ಶೆ, ಸಿದ್ಧರಾಮನ ಲಿಂಗವಂತಿಕೆಯ ಸಮಸ್ಯೆ ಇವೆಲ್ಲ ನಿರೂಪಿತವಾಗಿವೆ. ಉಪಯುಕ್ತ ಶಬ್ದಕೋಶ, ಟಿಪ್ಪಣಿಗಳಿವೆ.

6. 'ಶಬ್ದಮಣಿದರ್ಪಣಂ' (1959) : ಕೇಶಿರಾಜನ (ಸು.1260) ಈ ಖ್ಯಾತ ಹಳಗನ್ನಡ ವ್ಯಾಕರಣವನ್ನು ಎರಡು ಓಲೆಯ, ಎರಡು ಮುದ್ರಿತ ಪ್ರತಿಗಳ ಆಧಾರದ ಮೇಲೆ ಹೊಸದಾಗಿ ಸಂಪಾದಿಸಲಾಗಿದೆ. ಈಗ ಸಿದ್ಧವಾಗಿರುವ ಪರಿಷ್ಕರಣಗಳಲ್ಲೆಲ್ಲಾ ಇದೇ ಹೆಚ್ಚು ಪ್ರಮಾಣ ಭೂತವಾದುದು. ಇದರ ಪ್ರಸ್ತಾವನೆಯಲ್ಲಿ ಸೂತ್ರ, ವೃತ್ತಿ ಮತ್ತು ಪ್ರಯೋಗಗಳಿಗೆ ಸಂಬಂಧಿಸಿದ ಪಾಠಸಮಸ್ಯೆಗಳನ್ನೂ, ಮೂಲಪಾಠ ನಿರ್ಣಯ, ಪ್ರಯೋಗಗಳ ಆಕರ, ಕೇಶಿರಾಜನ ವ್ಯಕ್ತಿತ್ವ ಇವನ್ನೂ ವಿವೇಚಿಸಿದೆ. ಈಚೆಗೆ ಈ ಪರಿಷ್ಕರಣ ಹಲವು ಮುದ್ರಣಗಳನ್ನು ಕಂಡಿದೆ.

[ಅ] 7. 'ಸಿದ್ಧರಾಮ ಚಾರಿತ್ರ' (1941) : ರಾಘವಾಂಕನ ಕೃತಿಯನ್ನು ಡಿ.ಎಲ್.ಎನ್. ಅವರು ವೆಂಕಣ್ಣಯ್ಯನವರೊಂದಿಗೆ ಸೇರಿ ಸಂಪಾದಿಸಿದ್ದಾರೆ. 4 ಪ್ರತಿಗಳ ಸಹಾಯದಿಂದ ಶ್ರಮ ಸಾಧ್ಯವಾದ ಈ ಪರಿಷ್ಕರಣ ಸಿದ್ಧವಾಗಿದ್ದು, ಹೆಚ್ಚಿನ ಜವಾಬ್ದಾರಿಯನ್ನು ಡಿ.ಎಲ್.ಎನ್. ಅವರು ನಿರ್ವಹಿಸಿದ್ದಾರೆ. ಕವಿಯ ಇತಿವೃತ್ತ ಮುಂತಾಗಿ ಅನೇಕ ವಿಷಯಗಳನ್ನು ತಲಸ್ಪರ್ಶಿಯಾಗಿ ವಿವೇಚಿಸಿ, ಪೀಠಿಕೆಯನ್ನು ಡಿ.ಎಲ್.ಎನ್. ಅವರೇ ಬರೆದಿದ್ದಾರೆ.

8. 'ಸುಕುಮಾರ ಚರಿತಂ' (1954) : ಶಾಂತಿನಾಥ ಕವಿಯ (ಸು. 1060) ಈ ಕೃತಿಯನ್ನು ಡಿ.ಎಲ್.ಎನ್., ತ.ಸು.ಶಾಮರಾವ್ ಅವರೊಂದಿಗೆ ಸೇರಿ ಸಂಪಾದಿಸಿದ್ದಾರೆ. 2. ಹಸ್ತಪ್ರತಿಗಳನ್ನಾಧರಿಸಿ ಸಿದ್ಧವಾಗಿರುವ ಈ ಕೃತಿ ಅಸಮರ್ಪಕ ಹಸ್ತಪ್ರತಿಗಳ ದೆಸೆಯಿಂದಾಗಿ ತಕ್ಕಮಟ್ಟಿಗೆ ಮಾತ್ರ ಸಂಪಾದಿತವಾಗುವುದು ಸಾಧ್ಯವಾಗಿದೆ. ಕವಿಯ ಇತಿವೃತ್ತ, ಕಥಾಸಾರ, ಕಥೆಯ ಮೂಲ ಹಾಗೂ 'ವಡ್ಡಾರಾಧನೆ'ಯೊಂದಿಗೆ ತುಲನೆ, ಕೃತಿ ವಿಮರ್ಶೆ, ಕನ್ನಡದ ಇತರ ಸುಕುಮಾರ ಚರಿತೆಗಳು, ಭಾಷೆ-ಶೈಲಿ-ಛಂದಸ್ಸುಗಳು, ಗ್ರಂಥಪಾಠ-ಇವು ಪೀಠಿಕೆಯಲ್ಲಿ ಯಥಾಕ್ರಮದಲ್ಲಿ ನಿರೂಪಿತವಾಗಿದೆ. ಕವಿಕೃತಿ ಪರಿಚಯಕ್ಕೆ ನೆರವಾಗುವ ಪರಿಶಿಷ್ಟ ಶಬ್ದ ಕೋಶಗಳೂ ಸೇರಿವೆ.

9. 'ಗೋವಿನ ಹಾಡು' (1960) : ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಗಾಗಿ ಸಿದ್ಧಮಾಡಿದ ಈ ಜನಪ್ರಿಯ ಕಥನಗೀತೆಯನ್ನು ಪ್ರಚಲಿತ ಪೇಟೆಮುದ್ರಣದ ಜೊತೆಗೆ 2 ಕೈಬರಹದ ಪ್ರತಿಗಳ ಸಹಾಯದಿಂದ ಮೊದಲ ಸಲ ಶುದ್ಧವಾಗಿ ಸಂಪಾದಿಸಿ ಪ್ರಕಟಿಸಿದೆ.

10. 'ಹಂಪೆಯ ಹರಿಹರ' (1939) : ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಯ ಕಿರುಹೊತ್ತಗೆ. ಹರಿಹರನ ಜೀವನ, ವ್ಯಕ್ತಿತ್ವ ಕೃತಿಗಳನ್ನು ಪರಿಚಯಿಸುವ ಸೊಗಸಾದ ಸರಳ ನಿರೂಪಣೆ ಇಲ್ಲಿಯದು.

11. 'ಶಬ್ದವಿಹಾರ' (1956) : ಪ್ರಾಚೀನ ಕನ್ನಡ ಕಾವ್ಯಗಳಲ್ಲಿಯ ಕೆಲವು ಸಮಸ್ಯಾತ್ಮಕ ಶಬ್ದಗಳ ಅರ್ಥಗಳನ್ನೂ ನಿಷ್ಪತ್ತಿಗಳನ್ನೂ ಚರ್ಚಿಸಿ ನಿರ್ಣಯಿಸುವ ವಿದ್ವತ್ಪೂರ್ಣ ಲೇಖನ ಸಂಗ್ರಹ. ಈ ಬಗೆಯ ಪುಸ್ತಕಗಳಲ್ಲಿ ಇದೇ ಮೊದಲನೆಯದೆಂದು ತೋರುತ್ತದೆ.

12. 'ಕನ್ನಡ ಗ್ರಂಥ ಸಂಪಾದನೆ' (1964) : ಪಾಶ್ಚಾತ್ಯ ವಿದ್ವಾಂಸರು ವ್ಯವಸ್ಥೆಗೊಳಿಸಿರುವ ಗ್ರಂಥ ಸಂಪಾದನೆಯ ತತ್ವಗಳನ್ನು ಕನ್ನಡದ ಪ್ರಾಚೀನ ಮಧ್ಯಕಾಲೀನ ಕೃತಿಗಳಿಗೆ ಅನ್ವಯಿಸಿ, ಗ್ರಂಥಗಳನ್ನು ಸಂಪಾದಿಸುವ ರೀತಿ ನೀತಿಗಳನ್ನು ಸವಿಸ್ತರವಾಗಿ, ಸೋದಾಹರಣವಾಗಿ ವಿವರಿಸುವ ಗ್ರಂಥ. ಕನ್ನಡದಲ್ಲಿ ಇದು ಮೊದಲ ಪ್ರಯತ್ನ; ಇತರ ಆಧುನಿಕ ಭಾರತೀಯ ಭಾಷೆಗಳಲ್ಲಿಯೂ ಇಂತಹ ಗ್ರಂಥ ರಚಿತವಾಗಿಲ್ಲ ಎನ್ನುತ್ತಾರೆ. ಡಿ.ಎಲ್.ಎನ್. ಅವರಿಗೆ ಖ್ಯಾತಿ ತಂದ ಈ ರಚನೆ ಅವರ ವಿದ್ವತ್ತಿಗೂ ಕೈಗನ್ನಡಿಯಾಗಿದೆ. ಶಾಸ್ತ್ರ ವಿಷಯವಾಗಿ ಗ್ರಂಥಸಂಪಾದನೆಯನ್ನು ಅಭ್ಯಾಸ ಮಾಡಬೇಕೆನ್ನುವವರಿಗೆ, ಈ ಕಾಲದ ಕನ್ನಡ ಗ್ರಂಥ ಸಂಪಾದಕರಿಗೆ ಈ ಗ್ರಂಥ ಒಂದು ಕೈಪಿಡಿ.

13. 'ಪಂಪಭಾರತ ದೀಪಿಕೆ' (1971) : ಪಂಪ ಕವಿಯ (941) 'ವಿಕ್ರಮಾರ್ಜುನ ವಿಜಯ'ಕ್ಕೆ ಮೊದಲ ಬಾರಿಗೆ ಬರೆಯಲಾದ ಸವಿಸ್ತರ ವ್ಯಾಖ್ಯಾನಗ್ರಂಥ. ಈ ವ್ಯಾಖ್ಯಾನ ಪ್ರತಿಪದಾರ್ಥ ಸಹಿತವಾಗಿ, ವ್ಯಾಕರಣ, ಛಂದಸ್ಸು, ಪೂರ್ವಕಥಾವೃತ್ತಾಂತ, ಶಬ್ದಾರ್ಥನಿರ್ಣಯ, ಆಕರಗ್ರಂಥಗಳು ಮುಂತಾದ ಅನೇಕ ವಿಷಯಗಳನ್ನು ಒಳಗೊಂಡು ನಿರೂಪಿತವಾಗಿದೆ. ಅಲ್ಲದೆ ಅಲ್ಲಲ್ಲಿ ಗ್ರಂಥಪಾಠದ ಸಯುಕ್ತಿಕ ಪರಿಷ್ಕರಣಕಾರ್ಯವೂ ನಡೆದಿದೆ. ಡಿ.ಎಲ್.ಎನ್. ಅವರ ಭಾಷಾ ಪಾಂಡಿತ್ಯವನ್ನು ನಿದರ್ಶಿಸುವ ಕೃತಿಯಿದು.

14. ಪೀಠಿಕೆಗಳು ಲೇಖನಗಳು (1971) : ಡಿ.ಎಲ್.ಎನ್. ಅವರ ಸಂಪಾದಿತ ಗ್ರಂಥಗಳ ಪೀಠಿಕೆಗಳು, 'ಹಂಪೆಯ ಹರಿಹರ', 'ಶಬ್ದವಿಹಾರ'ಗಳಂತಹ ಕಿರುಹೊತ್ತಗೆಗಳ ಬರಹಗಳು, ಮುನ್ನುಡಿಗಳು, ಗ್ರಂಥ ವಿಮರ್ಶೆಗಳು, ಸಂಶೋಧನ ಮತ್ತು ಸಾಮಾನ್ಯ ಲೇಖನಗಳು ಇವೆಲ್ಲಾ ಇಲ್ಲಿ ಒಗ್ಗೂಡಿವೆ. ಪೀಠಿಕೆಗಳು, ಕವಿಕಾವ್ಯ ವಿಚಾರ, ವಿಮರ್ಶೆ, ಛಂದಸ್ಸು, ಗ್ರಂಥ ಸಂಪಾದನೆ, ಕನ್ನಡ ನಿರುಕ್ತ, ಸಂಕೀರ್ಣ ಎಂಬ ವಿಭಾಗಗಳಲ್ಲಿ ಹೀಗೆ ಸೇರಿರುವ ಒಟ್ಟು ಬರಹಗಳ ಸಂಖ್ಯೆ 91, ಪುಟಗಳು 1100. ಕನ್ನಡ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳಿಗೆ, ವಿದ್ವಾಂಸರಿಗೆ, ಸಮಾನವಾಗಿ ಬೇಕಾಗಿರುವ ಆಕರವಿದು. ಅಲ್ಲದೆ ಸಂಶೋಧಕರಿಗೆ ಮಾದರಿಯಾಗಿರುವ ಒಂದು ಮಾರ್ಗದರ್ಶಕ ಗ್ರಂಥ ಎಂದೂ ಹೇಳಬಹುದು.

15. ಆಯ್ದ ಲೇಖನಗಳು : ಇದು ಡಿ.ಎಲ್.ಎನ್. ಅವರ ಮರಣೋತ್ತರ ಕಾಲದಲ್ಲಿ ಬೇರೆಯವರಿಂದ ಸಂಕಲಿತವಾದ ಲೇಖನ ಸಂಗ್ರಹ.

**3**

ಡಿ.ಎಲ್. ನರಸಿಂಹಾಚಾರ್ಯರು ಸಮರ್ಥ ಹಾಗೂ ಶ್ರದ್ಧಾವಂತ ಅಧ್ಯಾಪಕರು; ಶ್ರೇಷ್ಠ ದರ್ಜೆಯ ಹಾಗೂ ಬಹುಮುಖ ವ್ಯಾಸಂಗದ ವಿದ್ವಾಂಸರು. ಅವರು ಸುಮಾರು 40 ವರ್ಷಗಳಿಗೂ ಹೆಚ್ಚು ಕಾಲ ಕನ್ನಡ ಭಾಷೆ ಸಾಹಿತ್ಯಗಳ ಅಭಿವೃದ್ಧಿಗೆ ತಮ್ಮ ಶಕ್ತಿ ಸರ್ವಸ್ವವನ್ನೂ ವಿನಿಯೋಗಿಸಿದರು. ಅದನ್ನು ತಮ್ಮ ಬದುಕಿನ ದೀಕ್ಷೆಯನ್ನಾಗಿ ಗ್ರಹಿಸಿ, ಮೊದಲು ಅವುಗಳಲ್ಲಿ ತಾವು ಪ್ರೌಢಿಮೆಯನ್ನು ಗಳಿಸಿಕೊಂಡರು. ಆ ಗಳಿಕೆಯ ಫಲವನ್ನು ಚಿಂತನ, ವಿಚಾರ ವಿಮರ್ಶೆ, ಸಿದ್ಧಾಂತಗಳ ರೂಪದಲ್ಲಿ ಹಲವು ವರ್ಷಗಳವರೆಗೆ ವಿದ್ಯಾರ್ಥಿಗಳಿಗೆ ಅಧ್ಯಾಪನದ ಮೂಲಕ, ವಾಚಕರಿಗೆ ಬರಹಗಳ ಮೂಲಕ ಶ್ರೋತೃಗಳಿಗೆ ಉಪನ್ಯಾಸಗಳ ಮೂಲಕ ಹಂಚಿದರು.

ಪೌರ್ವಾತ್ಯ ಪಾಶ್ಚಾತ್ಯ ಸಾಹಿತ್ಯಗಳ ಅಧ್ಯಯನದಿಂದ ಪಕ್ವಗೊಂಡ ಅವರ ಸಾಹಿತ್ಯಜ್ಞಾನ, ತರ್ಕ ಶುದ್ಧವಾದ ವಿಮರ್ಶೆಯ ರೀತಿ, ಸಮಯಕ್ಕೆ ಒದಗುವ ಹಾಗೆ ಸಂಗತಿ ಸಂದರ್ಭಗಳನ್ನೂ ಬಳಕೆಗೆ ನೀಡುತ್ತಿದ್ದ ಜ್ಞಾಪಕಶಕ್ತಿ ಇವೆಲ್ಲಾ ವಿದ್ವಾಂಸರ ಶ್ರೇಣಿಯಲ್ಲಿ ಅವರನ್ನು ಎತ್ತರದಲ್ಲಿ ನಿಲ್ಲುವಂತೆ ಮಾಡಿದ್ದವು. ಭಾಷೆ, ವ್ಯಾಕರಣ, ನಿಘಂಟು, ಗ್ರಂಥಸಂಪಾದನೆ, ಛಂದಸ್ಸು, ಸಾಹಿತ್ಯ ಚರಿತ್ರೆ, ಪ್ರಾಚೀನ ಸಾಹಿತ್ಯ ಕೃತಿಗಳ ವಿಮರ್ಶೆ ಇವನ್ನು ತಮ್ಮ ಕಾರ್ಯಕ್ಷೇತ್ರದ ಪ್ರಮುಖ ವಿಷಯಗಳನ್ನಾಗಿ ಹಿಡಿದು, ಆ ಒಂದೊಂದರಲ್ಲಿಯೂ ಗಾಢ, ಅವಿರಾಮಶೀಲ ಸಂಶೋಧನಗಳ ಮೂಲಕ ಕನ್ನಡ ವಿದ್ವತ್ತಿನ ಸೀಮೆಯನ್ನು ವಿಸ್ತರಿಸಿದರು, ಪರಿಷ್ಕರಿಸಿದರು. ಕನ್ನಡ ಭಾಷೆಸಾಹಿತ್ಯಗಳ ಮೂಲಾಧಾರ ಗಳನ್ನು ಕಟ್ಟಿದರು; ಗಟ್ಟಿ ಮಾಡಿದರು. ಅವರ ಬೆಲೆಯುಳ್ಳ ಕೊಡುಗೆಗಳು ನಿರಂತರ ಅಧ್ಯಯನ ಅಧ್ಯಾಪನಗಳು, ವೈಜ್ಞಾನಿಕ ದೃಷ್ಟಿಯ ಅನುಸಂಧಾನ ಸಂಶೋಧನ ಕೌಶಲಗಳ ಫಲವಾಗಿ ಮೂಡಿಬಂದವಾದ್ದರಿಂದ ತಾಳಿ ಬಾಳತಕ್ಕವಾಗಿವೆ. ಜ್ಞಾನೋಪಾಸನೆಯೇ ಜೀವಿತ ಸಾರ್ಥಕ್ಯವಾದ್ದರಿಂದ, ಭಾಷೋಜ್ಜೀವನವೇ ಜೀವನಧ್ಯೇಯವಾದ್ದರಿಂದ ಅವರ ನುಡಿಯಲ್ಲಿ, ಕೃತಿಯಲ್ಲಿ ಶುದ್ಧ ಅಭಿರುಚಿ, ಪ್ರತಿಭಾಪ್ಲಾವಿತ ಬುದ್ಧಿವೈಶದ್ಯ, ಗಾಢ ಸಂಶೋಧನಾ ಸಾಮರ್ಥ್ಯ, ನಿಷ್ಪಕ್ಷ ವಿಚಾರಧಾರೆ, ಪ್ರಖರ ವಿಶ್ಲೇಷಕ ಪಟುತ್ವ, ವಸ್ತುನಿಷ್ಠೆಯ ಛಲಗಾರಿಕೆ, ಚಿರಕಾಲಿಕವಾದ ಸತ್ತ್ವ- ಈ ಗುಣ ಗಳೆಲ್ಲಾ ಮಿಗಿಲಾಗಿ ಪ್ರತಿಫಲಿಸಿ ತೋರುತ್ತಿದ್ದುವು.

"ಡಿ.ಎಲ್.ಎನ್.ಎಂದರೆ ಪಾಂಡಿತ್ಯ, ಪಾಂಡಿತ್ಯ ಎಂದರೆ ಡಿ.ಎಲ್.ಎನ್. ಎನ್ನುವುದು ಕನ್ನಡ ಬಲ್ಲವರಲ್ಲೆಲ್ಲಾ ಈಗ ರೂಢಿಯ ಭಾವನೆಯಾಗಿದೆ"- ಎಂಬುದಾಗಿ ಅವರ ಆಪ್ತಮಿತ್ರರೂ ವಿಖ್ಯಾತ ಕನ್ನಡ ವಿದ್ವಾಂಸರೂ ಆಗಿದ್ದ ಪ್ರೊ. ತೀ.ನಂ.ಶ್ರೀಕಂಠಯ್ಯನವರು ಈಗ ಸುಮಾರು 25 ವರ್ಷಗಳ ಹಿಂದೆ ಆಡಿದ ಪ್ರಶಸ್ತಿಯ ಮಾತಿನಲ್ಲಿ ಯಾವ ಅತಿ ಶಯೋಕ್ತಿಯೂ ಇಲ್ಲವೆಂದೂ ಅದು ನ್ಯಾಯವಾಗಿಯೇ ಸಂದ ಮೆಚ್ಚು ಮಾತೆಂದೂ ಆ ಕಾಲವನ್ನೂ ಆ ಇಬ್ಬರು ಘನವಿದ್ವಾಂಸರನ್ನೂ ಬಲ್ಲವರೆಲ್ಲಾ ಸುಲಭವಾಗಿ ತಿಳಿಯಬಲ್ಲರು.

❑

# ತೀ.ನಂ.ಶ್ರೀಕಂಠಯ್ಯ

ಎಚ್.ಜಿ. ಸಣ್ಣಗುಡ್ಡಯ್ಯ

1

ತೀರ್ಥಪುರದ ನಂಜುಂಡಯ್ಯ ಶ್ರೀಕಂಠಯ್ಯ ಎಂಬ ಇವರನ್ನು ತೀ.ನಂ.ಶ್ರೀ. ಎಂದೇ ಕರೆಯುತ್ತಿದ್ದುದು ರೂಢಿ. ಕನ್ನಡ ನವೋದಯದ ಸಾರಸ್ವತ ಕ್ಷೇತ್ರದಲ್ಲಿ ಶ್ರೀ ಎಂಬ ಸಂಕ್ಷೇಪಕದಿಂದ ಪ್ರಸಿದ್ಧರಾಗಿದ್ದ ಮೂವರಲ್ಲಿ ತೀ.ನಂ.ಶ್ರೀ. ಮೂರನೆಯವರು. ಪ್ರಸಿದ್ಧಿಯಲ್ಲಿ ಬಿ.ಎಂ.ಶ್ರೀ. ಅವರಿಗೆ ಮಾತ್ರ ಎರಡನೆಯವರು. ಕನ್ನಡ ಸಾಹಿತ್ಯಕ್ಕೆ ಮಹಾಕವಿಯೊಬ್ಬನನ್ನು ಕೊಟ್ಟ ಕೀರ್ತಿ ಒಂದು ಶಾನುಭೋಗರ ಕುಟುಂಬಕ್ಕೆ ಸಲ್ಲುತ್ತದೆ. ಹಾಗೆಯೇ ಹೊಸಗನ್ನಡದ ಸಾಹಿತ್ಯದ ಇತಿಹಾಸದ ವಿದ್ವತ್ತು, ವಾಗ್ಮಿತೆ, ಶಿಕ್ಷಕನಾಗಿ ಪಡೆದ ಜನಪ್ರಿಯತೆ ಮತ್ತು ಮಾನವೀಯವಾದ ನಡವಳಿಕೆಗೆ ಹೆಸರಾದ ತೀ.ನಂ.ಶ್ರೀಯವರನ್ನು ಕೊಟ್ಟ ಕೀರ್ತಿ ತುಮಕೂರು ಜಿಲ್ಲೆಯ ಚಿಕ್ಕನಾಯಕ ನಹಳ್ಳಿ ತಾಲೂಕಿನ ತೀರ್ಥಪುರ ಎಂಬ ಹಳ್ಳಿಯ ಒಂದು ಸಾಧಾರಣ ಶಾನುಭೋಗರ ಕುಟುಂಬದ್ದು. ಚಿಕ್ಕನಾಯಕನಹಳ್ಳಿ ವಿಜಯನಗರ ಸಾಮ್ರಾಜ್ಯ ಒಡೆದ ಮೇಲೆ ತಲೆಯೆತ್ತಿಕೊಂಡ ಪಾಳೆಯಪಟ್ಟುಗಳಲ್ಲಿ ಒಂದಾದ ಹಾಗಲ ವಾಡಿಯ ಚರಿತ್ರೆಯ ಮೂಲಕ ಪರಿಚಿತವಾಗಿದೆ. ಚಿಕ್ಕನಾಯಕನಹಳ್ಳಿಯ ಪೂರ್ವಕ್ಕೆ ಸುಮಾರು ಹದಿನೇಳು ಮೈಲಿ ದೂರವಿದ್ದ ಹಾಗಲವಾಡಿ ಹಾಳಾಗಲು ಆ ಸಂಸ್ಥಾನದ ಮಂತ್ರಿಯಾಗಿದ್ದ ಬ್ರಾಹ್ಮಣ ಕುಟುಂಬದವರು ಬಂದು ತೀರ್ಥಪುರದಲ್ಲಿ ನೆಲೆಸಿದರಂತೆ. ಇವರೇ ತೀ.ನಂ.ಶ್ರೀ. ಯವರ ಪೂರ್ವಜರು. ಆ ಕುಟುಂಬದ ಹಿರಿಯರಾದ ಶಾನುಭೋಗ ನಂಜುಂಡಯ್ಯ ನವರು ತೀ.ನಂ.ಶ್ರೀಯವರ ತಂದೆ, ತಾಯಿ ಶ್ರೀಮತಿ ಭಾಗೀರಥಮ್ಮ.

ತೀ.ನಂ.ಶ್ರೀ. ಜನಿಸಿದ್ದು 1906ರಲ್ಲಿ. ಹುಟ್ಟಿದ ಒಂಬತ್ತು ವರ್ಷಕ್ಕೇ ಅವರು ತಾಯಿಯನ್ನು ಕಳೆದುಕೊಂಡರು. ಸೋದರಿಯೊಬ್ಬಳೊಡನೆ ಬೆಳೆದದ್ದು ವಿಧವೆಯಾದ ತಮ್ಮ ಸೋದರತ್ತೆಯ ಆರೈಕೆಯಲ್ಲಿ. ಮನೋ ವೈಕಲ್ಯಕ್ಕೆ ಗುರಿಯಾಗಿದ್ದ ಸೋದರಿಯನ್ನು ಅಕಾಲದಲ್ಲಿ ಕಳೆದುಕೊಂಡು, ಜೀವನದಲ್ಲಿ ಸುಖ-ನೆಮ್ಮದಿಗಳ ಕಾಲ ಬರುವ ಮೊದಲೇ ಸೋದರತ್ತೆಯನ್ನೂ ಕಳೆದು ಕೊಂಡು ಮುಂದೆ ಹನ್ನೆರಡು ವರ್ಷದವಳಾದ ತನ್ನ ಹಿರಿಯಮಗಳನ್ನೂ ಕಳೆದುಕೊಂಡ ತೀ.ನಂ.ಶ್ರೀ. ಹೆಣ್ಣು ಮಕ್ಕಳ ಬಗೆಗೆ ಮಮತೆಯನ್ನೂ, ಸ್ತ್ರೀಯರ ಬಗೆಗೆ ಗೌರವಾದರಗಳನ್ನೂ ತೋರಿಸುತ್ತಿದ್ದರು. 'ಹೆಣ್ಣು ಮಕ್ಕಳ ಪದಗಳು' ಎಂಬ ಹೆಸರಿನಲ್ಲಿ ಅವರು ಕನ್ನಡ ಜಾನಪದ ಕಾವ್ಯದ ಸಾರವೆನ್ನಬಹುದಾದ ಹಾಡುಗಳ ಪುಸ್ತಕವೊಂದನ್ನು ಸಂಪಾದಿಸಿದುದೂ, ರನ್ನನ 'ಅಜಿತ ಪುರಾಣ'ದ ಪ್ರಸ್ತಾವನೆಯಲ್ಲಿ ಬರುವ ಸಾಧ್ವಿ ಅತ್ತಿಮಬ್ಬೆಯನ್ನು ಕುರಿತ ಅವರ ಲೇಖನ, 'ಕೆರೆಗೆ ಹಾರ' ಎಂಬ ಅಪರೂಪದ ಜಾನಪದ ಕಥನಗೀತೆ ಯನ್ನು ಕುರಿತು ಬರೆದು, ಮಾಡಿದ ಪ್ರಚಾರ ಮತ್ತು 'ಮಹಾದೇವಿಯಕ್ಕನ ಕೆಲವು ವಚನಗಳು' ಎಂಬ ಸಂಶೋಧನ ಲೇಖನದಲ್ಲಿ ಅವರು ಕನ್ನಡದ ನಾರೀರತ್ನ ಮಹದೇವಿಯಕ್ಕನ ಆತ್ಮಕಥೆಯ ಅಂಶಗಳ ಬಗೆಗೆ ತೋರಿಸುವ ಅನುಕಂಪ-ಇವು ಸ್ತ್ರೀಯರ ಬಗೆಗಿನ ಅವರ ಭಾವನೆಗಳಿಗೆ ದ್ಯೋತಕವಾಗಿವೆ.

ತಾಯಿಯನ್ನು ಕಳಕೊಂಡದ್ದರಿಂದ ತೀ.ನಂ.ಶ್ರೀ. ತನ್ನ ಒಬ್ಬ ಅಣ್ಣ (ದೊಡ್ಡಪ್ಪನವರ ಮಗ) ಮತ್ತು ಅತ್ತಿಗೆಯರನ್ನು ಆಶ್ರಯಿಸಬೇಕಾಯಿತು.

ತೀರ್ಥಪುರದಲ್ಲಿ ಪಾಠಶಾಲೆಯೊಂದು ಇದ್ದಿತೆಂಬುದೇ ಹೆಚ್ಚಿನ ವಿಷಯ. ತೀ.ನಂ.ಶ್ರೀ. ಈ ಹಳ್ಳಿಯ ಶಾಲೆಯಲ್ಲಿ ಕಲಿತು 1916ರಲ್ಲಿ ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಮಾಧ್ಯಮಿಕ ಶಾಲೆಯ ವ್ಯಾಸಂಗಕ್ಕೆ ಚಿಕ್ಕನಾಯಕನ ಹಳ್ಳಿಗೆ ಹೋಗಬೇಕಾಯಿತು. ಅಲ್ಲಿ ತಮ್ಮ ದೊಡ್ಡಪ್ಪನವರ ಮಗಳ ಮನೆಯ ಆಶ್ರಯ ಸಿಕ್ಕಿತು. ಮುಂದೆ ಪ್ರೌಢಶಾಲಾ ವ್ಯಾಸಂಗಕ್ಕಾಗಿ ತುಮಕೂರಿನ ಸರ್ಕಾರಿ ಕೊಲಿಜಿಯೇಟ್ ಹೈಸ್ಕೂಲ್ ಸೇರಿದರು, ಇದು 1919ರಲ್ಲಿ. ತೀ.ನಂ.ಶ್ರೀ. ಕನ್ನಡದ ಉಪಪ್ರಾಧ್ಯಾಪಕರಾಗಿ ಬೆಂಗಳೂರಿನ ಇಂಟರ್ ಮೀಡಿಯೇಟ್ ಕಾಲೇಜಿಗೆ 1943ರಲ್ಲಿ ವರ್ಗವಾಗಿ ಬರುವ ತನಕ ಸೋದರತ್ತೆ ಲಕ್ಷ್ಮೀದೇವಮ್ಮನವರು ಅವರಿಗೆ ಪೋಷಕಿ ಎಂಬಂತಿದ್ದರು.

ಚಿಕ್ಕನಾಯಕನಹಳ್ಳಿಯ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಇಂಗ್ಲೀಷ್ ಒಂದೇ ಪಠ್ಯ ವಿಷಯವಾಗಿದ್ದುದರಿಂದ ಪಠ್ಯೇತರ ವಿಷಯಗಳನ್ನು ಓದುವುದಕ್ಕೂ, ಸಂಸ್ಕೃತ ಭಾಷೆಯನ್ನು ಕಲಿಯುವುದಕ್ಕೂ ತೀ.ನಂ.ಶ್ರೀ. ಯವರಿಗೆ ಅವಕಾಶ ಸಿಕ್ಕಿತು. ಅಲ್ಲಿನ ಕೈಗಾರಿಕಾ ತರಬೇತಿ ಶಾಲೆಯ ಗುಮಾಸ್ತೆಯಾಗಿದ್ದ ಭೈರಪ್ಪ ಎಂಬ ಮಹಾಶಯರು ತಮ್ಮ ಮನೆಯಲ್ಲಿ ಸಣ್ಣದೊಂದು ಪುಸ್ತಕ ಭಂಡಾರವನ್ನು ಸ್ಥಾಪಿಸಿದ್ದರಂತೆ. ಅದರಲ್ಲಿ ಕೃಷ್ಣಸೂಕ್ತಿ, ಸದ್ಬೋಧ ಚಂದ್ರಿಕೆ, ಮಧುರವಾಣಿ ಮೊದಲಾದ ಪತ್ರಿಕೆಗಳು ಸಿಗುತ್ತಿದ್ದವು. ಬಿಂಡಿಗನವಿಲೆ ವೆಂಕಟಾಚಾರ್ ಮತ್ತು ಗಳಗನಾಥರು ಬರೆದಿದ್ದ ಅನುವಾದಿತ ಕಾದಂಬರಿಗಳನ್ನು ಆಗಲೇ ತೀ.ನಂ.ಶ್ರೀ. ಓದಿದ್ದರೆಂದು ತಿಳಿದುಬರುತ್ತದೆ. ಆಗಲೇ ಸಂಸ್ಕೃತ ತರಗತಿಗಳಿಗೆ ಸೇರಿ ಕಾಳಿದಾಸನ ರಘುವಂಶದ ಅನೇಕ ಶ್ಲೋಕಗಳು ಕಂಠಸ್ಥವಾಗುವಷ್ಟು ಅಭ್ಯಾಸಮಾಡಿದ್ದರು. ಅವರ ಸಾಹಿತ್ಯ ಪ್ರೇಮ ಮೊಳೆತದ್ದು ಇಲ್ಲಿ ಎಂದು ಭಾವಿಸಬಹುದು.

ಪ್ರೌಢಶಾಲೆಯಲ್ಲಿ ಅವರು ಕನ್ನಡವನ್ನು ದ್ವಿತೀಯ ಭಾಷೆಯಾಗಿ ಆರಿಸಿ ಕೊಂಡದ್ದಕ್ಕೆ ಅವರ ತಂದೆ ಆಕ್ಷೇಪಿಸಿದರಂತೆ. ಮುಂದೆ ತೀ.ನಂ.ಶ್ರೀ. ಸಂಸ್ಕೃತ ವನ್ನೂ, ಕನ್ನಡವನ್ನೂ ಒಟ್ಟಿಗೆ ಕಲಿತು ಎರಡರಲ್ಲೂ ವಿದ್ವತ್ತನ್ನು ಗಳಿಸಿ ತಂದೆಯವರ ಆಕ್ಷೇಪಕ್ಕೆ ಸಮಜಾಯಿಷಿಕೊಟ್ಟರು ಎನ್ನಬಹುದು. ತೀ.ನಂ.ಶ್ರೀ. ಯವರ ಬರೆಯುವ ಹವ್ಯಾಸ ಪ್ರಾರಂಭವಾದದ್ದು ತುಮಕೂರಿನ ಪ್ರೌಢಶಾಲೆ ಯಲ್ಲಿ ಓದುತ್ತಿದ್ದಾಗಲೇ. ಶಾಲೆಯ ಪತ್ರಿಕೆ 'ಸ್ಕೂಲ್ ಪೋಕ್'ನಲ್ಲಿ ಇವರು ಬರೆದ 'ಮೈ ಮದರ್' ಎಂಬ ಇಂಗ್ಲಿಷ್ ಲೇಖನ ಶಾಲೆಯ ಉಪಾಧ್ಯಾ ಯರುಗಳ ಮತ್ತು ಸಹಪಾಠಿಗಳ ಮೆಚ್ಚುಗೆಯನ್ನು ಪಡೆದಿತ್ತು. ಇದೇ ಸುಮಾರಿನಲ್ಲಿ ಅವರು ಪ್ಲೇಗಿನಿಂದ ತೀರಿಕೊಂಡ ತಮ್ಮ ಬಾಲ್ಯಮಿತ್ರನೊಬ್ಬ ನನ್ನು ನೆನೆದು 'ಮಿತ್ರ ವಿಲಾಪಂ' ಎಂಬ ಶೋಕಗೀತೆಯನ್ನು, ಕಂದ ವೃತ್ತಗಳ ರೂಪದಲ್ಲಿ ಬರೆದರು. ಆಗ ಅವರಿಗೆ ಹದಿನಾರರ ವಯಸ್ಸು. ಈ ಪದ್ಯಗಳ ಭಾಷೆ ಪರಿಷ್ಕಾರವಾಗಿದ್ದು ಛಂದಸ್ಸು ಮತ್ತು ವ್ಯಾಕರಣಗಳ ಜಾಗ ಖಚಿತ ವಾಗಿರುವುದು ತಿಳಿಯುತ್ತದೆ.

1923ರಲ್ಲಿ ಇವರು ಎಂಟ್ರೆನ್ಸ್ ಪರೀಕ್ಷೆಯನ್ನು ಮುಗಿಸಿ ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಬಿ.ಎ. ಪದವಿಗೆ ಪ್ರವೇಶ ಪಡೆದರು. ಪದವಿ ತರಗತಿಯಲ್ಲಿ ಪಠ್ಯವಿಷಯಗಳಾಗಿ ಮೊದಲ ಭಾಗದಲ್ಲಿ ಕಡ್ಡಾಯ ಇಂಗ್ಲಿಷ್ ಭಾಷೆಯ ಜೊತೆಗೆ ಐಚ್ಛಿಕವಾಗಿ ಕನ್ನಡವನ್ನೂ, ಎರಡನೆಯ ಭಾಗದಲ್ಲಿ ಅರ್ಥಶಾಸ್ತ್ರ, ರಾಜ್ಯಶಾಸ್ತ್ರಗಳ ಜೊತೆಗೆ ಸಂಸ್ಕೃತವನ್ನು ಐಚ್ಛಿಕ ವಿಷಯ ವಾಗಿಯೂ ಅಭ್ಯಾಸ ಮಾಡಿದರು. ಮುಂದೆ ಸಂಸ್ಕೃತ ಪ್ರಾಧ್ಯಾಪಕರಾಗಿ ನಿವೃತ್ತರಾದ ನಂ. ಶಿವರಾಮ ಶಾಸ್ತ್ರಿ ಮತ್ತು ಕನ್ನಡದ ಕವಿಯಾಗಿ ಪ್ರಸಿದ್ಧರಾದ ಪು.ತಿ.ನರಸಿಂಹಾಚಾರ್ ಇವರುಗಳು ಬಿ.ಎ. ತರಗತಿಗಳಲ್ಲಿ ತೀ.ನಂ.ಶ್ರೀ. ಯವರ ಸಹಪಾಠಿಗಳು. ಕಾಲೇಜಿನ ಬೋಧಕವರ್ಗದಲ್ಲಿ ಅಂತರ ರಾಷ್ಟ್ರೀಯ ಖ್ಯಾತಿಯ ಪ್ರೊ. ಎಂ. ಹಿರಿಯಣ್ಣ (ಸಂಸ್ಕೃತ), ಬಿ.ಎಂ.ಶ್ರೀ., ಟಿ.ಎಸ್. ವೆಂಕಣ್ಣಯ್ಯ ಮುಂತಾದವರಿದ್ದರು. ತೀ.ನಂ.ಶ್ರೀ. ಕಾಲೇಜನ್ನು ಪ್ರವೇಶಿಸಿದಾಗ ಪ್ರಿನ್ಸಿಪಾಲ್ ಆಗಿದ್ದವರು ಅರ್ಥಶಾಸ್ತ್ರದ ಪ್ರೊ. ಎನ್.ಎಸ್. ಸುಬ್ಬರಾಯರು. ಅನಂತರ ಬಂದವರು ಆಂಗ್ಲ ಪ್ರಿನ್ಸಿಪಾಲ್ ಪ್ರೊ. ಜೆ.ಸಿ.ರಾಲೋ.

1926ರಲ್ಲಿ ತೀ.ನಂ.ಶ್ರೀ.ಯವರು ಬಿ.ಎ. ಪದವಿಯನ್ನು ಪ್ರಥಮ ಸ್ಥಾನದಲ್ಲಿ ಪಡೆದು ಪದವೀದಾನ ಸಮಾರಂಭದಲ್ಲಿ ಆರು ಸ್ವರ್ಣ ಪದಕಗಳನ್ನೂ, ಒಂದು ಬಹುಮಾನವನ್ನೂ ನಾಲ್ವಡಿ ಕೃಷ್ಣರಾಜಒಡೆಯರ ಕೈಯಿಂದ ಸ್ವೀಕರಿಸಿದರು. ಆಗಿನ್ನೂ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ.ಎ. ಪದವಿ ವ್ಯಾಸಂಗದ ವ್ಯವಸ್ಥೆ ಆಗಿರಲಿಲ್ಲ. ಆದುದರಿಂದ ತೀ.ನಂ.ಶ್ರೀ. ಇಂಗ್ಲಿಷ್ ಎಂ.ಎ. ತರಗತಿಗೆ ಸೇರಿದರು. 1928ರಲ್ಲಿ ಅವರು ಎಂ.ಸಿ.ಎಸ್. ಪರೀಕ್ಷೆಯನ್ನು ಕೂಡ ತೆಗೆದುಕೊಂಡದ್ದರಿಂದ ಎಂ.ಎ. ಪರೀಕ್ಷೆಗೆ ಕುಳಿತುಕೊಳ್ಳಲಾಗಲಿಲ್ಲ. ಸಾಹಿತ್ಯೋಪಾಸನೆಗೆ ತಮ್ಮನ್ನು ತೆತ್ತು ಕೊಂಡಿದ್ದ ಇವರಿಗೆ ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ಮೂರನೆಯ ಸ್ಥಾನ ಮಾತ್ರ ದೊರೆಯಿತಾದರೂ ಅದರಿಂದ ಕಂದಾಯ ಇಲಾಖೆಯ ಪ್ರೊಬೇಷನರ್ ಹುದ್ದೆ ಸಿಕ್ಕಿ ಶ್ರೀರಂಗಪಟ್ಟಣಕ್ಕೆ ನೌಕರಿಯ ಮೇಲೆ ಹೋಗ ಬೇಕಾಯಿತು. ಆದರೆ ಎರಡೇ ತಿಂಗಳಲ್ಲಿ ಅದನ್ನು ತ್ಯಜಿಸಿ ಮೈಸೂರಿನ ಇಂಟರ್‌ಮೀಡಿ ಯೇಟ್ ಕಾಲೇಜಿನಲ್ಲಿ ಅಧ್ಯಾಪಕರಾಗಿ ನೇಮಕಗೊಂಡು ಹಿಂದಕ್ಕೆ ಬಂದರು.

1929ರಲ್ಲಿ ಪರೀಕ್ಷೆಗೆ ಕುಳಿತು ಇಂಗ್ಲಿಷ್ ಎಂ.ಎ. ಪದವಿಯನ್ನು ಪ್ರಥಮ ಸ್ಥಾನದಲ್ಲಿ ಪಡೆದರು. ಅಲ್ಲದೆ ತಮ್ಮ ಪ್ರೀತಿಯ ಮಾತೃಸಂಸ್ಥೆ ಮಹಾರಾಜ ಕಾಲೇಜಿಗೆ ವರ್ಗವೂ ಆಯಿತು. ಅದೇ ವರ್ಷ ತಮ್ಮ ತಂದೆ ಯನ್ನು ಕಳೆದುಕೊಂಡ ದೌರ್ಭಾಗ್ಯವೂ ಅವರದಾಯಿತು. ಅಷ್ಟರಲ್ಲಿ ಮಹಾರಾಜ ಕಾಲೇಜಿನಲ್ಲಿ ಕನ್ನಡ ಎಂ.ಎ. ವ್ಯಾಸಂಗವೂ ಪ್ರಾರಂಭ ವಾಗಿದ್ದುದರಿಂದ ಅಧ್ಯಾಪಕ ವೃತ್ತಿಯ ಜೊತೆಗೇ ಕನ್ನಡ ಎಂ.ಎ. ಪರೀಕ್ಷೆಗೂ ಅಭ್ಯಾಸ ಮಾಡಿ 1931ರಲ್ಲಿ ಪ್ರಥಮ ಸ್ಥಾನದಲ್ಲಿ ಉತ್ತೀರ್ಣರಾದರು. ಆಗಲೂ ಪದವೀದಾನ ಸಮಾರಂಭದಲ್ಲಿ ಮೂರು ಸುವರ್ಣ ಪದಕಗಳು ಬಂದವು.

1926ರಲ್ಲಿ ಬಿ.ಎ. ಪರೀಕ್ಷೆ ಇನ್ನು ಒಂದು ತಿಂಗಳಿದೆ ಎನ್ನುವಾಗ ತೀ.ನಂ.ಶ್ರೀ. ಯವರಿಗೆ ಜಯಲಕ್ಷ್ಮಿ ಅವರೊಂದಿಗೆ ಮದುವೆಯಾಯಿತು. ಅವರ ವಧು ನೆರೆಯ ತಾಲ್ಲೂಕು ಕೇಂದ್ರ ತುರುವೆಕೆರೆಯವರು. ಬಾಲ್ಯ ವಿವಾಹವೆಂದೇ ಎನ್ನಬಹುದಾದ ಇದರಿಂದ ಅವರ ಓದು, ಸಾಹಿತ್ಯಾ ಭ್ಯಾಸಗಳಿಗೆ ಧಕ್ಕೆಯೇನೂ ಆದಂತೆ ಕಾಣಲಿಲ್ಲ. ಅವರ ಹಿರಿಯ ಮಗಳು ಹುಟ್ಟಿದುದು 1931ರಲ್ಲಿ. 1932ರಲ್ಲಿ ಅವರ ಪ್ರಥಮ ಕೃತಿ 'ಒಲುಮೆ' ಪ್ರಕಟವಾಯಿತು. 1936ರಲ್ಲಿ ಎರಡನೆಯ ಮಗಳು ನಾಗರತ್ನ, 1942ರಲ್ಲಿ ಮಗ ನಾಗಭೂಷಣ ಜನಿಸಿದರು. ಈ ಅವಧಿಯಲ್ಲೇ ಅವರಿಗೆ ಎರಡು ಗಂಡು ಮಕ್ಕಳು ಜನಿಸಿ ಶೈಶವದಲ್ಲಿ ತೀರಿಕೊಂಡಿದ್ದುವು. ಇದ್ದ ಒಬ್ಬಳೇ ತಂಗಿ ಸಾವಿತ್ರಮ್ಮ ಗುಣಹೊಂದದ ಮಾನಸಿಕ ಅಸ್ವಾಸ್ಥ್ಯದಿಂದ ನರಳುತ್ತಿದ್ದರು. 1943ರಲ್ಲಿ ತೀ.ನಂ.ಶ್ರೀ. ಯವರಿಗೆ ಉಪಪ್ರಾಧ್ಯಾಪಕರಾಗಿ ಬಡತಿ ದೊರೆತ

ಸುದ್ದಿ ಪತ್ರಿಕೆಯಲ್ಲಿ ಪ್ರಕಟವಾದಂದೇ ಅವರ ಸೋದರತ್ತೆ ಲಕ್ಷ್ಮೀದೇವಮ್ಮ ನವರು ತೀರಿಕೊಂಡಿದ್ದರು. ಅನಂತರ ನಾಲ್ಕು ತಿಂಗಳಲ್ಲೇ ಹಿರಿಯ ಮಗಳು ವಿಶಾಲಾಕ್ಷಿ ತನ್ನ ಹನ್ನೆರಡನೇ ವಯಸ್ಸಿನಲ್ಲಿ ತೀರಿಕೊಂಡಳು. ಹೀಗಾಗಿ ಅವರ ಬದುಕಿನ ತಕ್ಕಡಿ ಸುಖಕ್ಕಿಂತಲೂ ದುಃಖದ ಕಡೆಗೇ ಹೆಚ್ಚು ತೂಗಿದಂತೆ ಕಾಣುತ್ತದೆ.

ತೀ.ನಂ.ಶ್ರೀ. ಯವರು ಅಮಲ್ದಾರ್ ಹುದ್ದೆಯನ್ನು ಬಿಟ್ಟು ಅಧ್ಯಾಪಕ ವೃತ್ತಿಗೆ ಮರಳಿದುದಕ್ಕೆ ಕಾರಣವನ್ನು ಊಹಿಸುವುದು ಕಷ್ಟವಲ್ಲ. ತಾವು ಬಿಟ್ಟು ಬಂದ ಮಹಾರಾಜ ಕಾಲೇಜಿನಲ್ಲಿ ಪ್ರೊ. ರಾಲೋ, ಪ್ರೊ. ಮೆಂಕಿಂಟಾಷ್, ಪ್ರೊ. ರಾಧಾಕೃಷ್ಣನ್, ಪ್ರೊ. ವಾಡಿಯಾ, ಪ್ರೊ. ಎಂ. ಹಿರಿಯಣ್ಣ, ಬಿ.ಎಂ.ಶ್ರೀ., ಪ್ರೊ. ಟಿ.ಎಸ್. ವೆಂಕಣ್ಣಯ್ಯ ಮುಂತಾದ ವಿದ್ವಜ್ಜನರು ಒಂದೆಡೆ ಇದ್ದು ಹದಗೊಳಿಸಿದ್ದ ಸಾಂಸ್ಕೃತಿಕ-ಸಾಹಿತ್ಯಕ ವಾತಾವರಣ ಅವರನ್ನು ಕೈಬೀಸಿ ಕರೆದಿರಬೇಕು. ತೀ.ನಂ.ಶ್ರೀ. ಮಹಾರಾಜ ಕಾಲೇಜಿಗೆ ಬಂದದ್ದು ಈ ಅವಧಿಯಲ್ಲೇ. ಅವರು ರೆವಿನ್ಯೂ ಇಲಾಖೆಗೆ ಹೋಗದೆ, ಇಂಗ್ಲಿಷ್ ಬೋಧಕರಾಗದೆ, ಸಂಸ್ಕೃತ ಇಲಾಖೆಗೆ ಸರಿಹೋಗದೆ ಕನ್ನಡ ಅಧ್ಯಾಪಕ ರಾದದ್ದಕ್ಕೆ ಅವರ ಕನ್ನಡ ಪ್ರೇಮ ಎಷ್ಟು ಕಾರಣವೋ ಬಿ.ಎಂ.ಶ್ರೀ. ಮತ್ತು ಟಿ.ಎಸ್. ವೆಂಕಣ್ಣಯ್ಯನವರುಗಳೂ ಅಷ್ಟೇ ಕಾರಣ ಅಥವಾ ಅವೆರಡೂ ಬೇರೆ ಬೇರೆ ಕಾರಣಗಳಲ್ಲ. ಬಿ.ಎಂ.ಶ್ರೀ. ಅವರಿಂದ ಆರಂಭವಾಗಿದ್ದ ಕನ್ನಡದ ಪ್ರಚಾರ, ಬರವಣಿಗೆಯ ಕಾರ್ಯ, ಕನ್ನಡದ ಅಧ್ಯಯನಕ್ಕೆ ಬೇಕಾದ ಭೂಶೋಧನೆ ಮತ್ತು ಅಸ್ತಿಭಾರ ನಿರ್ಮಾಣ-ಈ ಎಲ್ಲಾ ಕಾರ್ಯಗಳಿಗೆ ದೀಕ್ಷೆಗೊಳ್ಳುವ ತರುಣ ವಿದ್ವಾಂಸರುಗಳ ಪಡೆಯನ್ನು ಕಟ್ಟುವ ಕೆಲಸ-ಇವು ಹೊಸಗನ್ನಡ ಸಾಹಿತ್ಯದ ಇತಿಹಾಸದಲ್ಲಿ ನವೋದಯ ಯುಗವೆಂದು ಪ್ರಸಿದ್ಧ ವಾಗಿವೆ. ಅಧ್ಯಾಪಕರಾಗಿ ವೃತ್ತಿಯನ್ನು ಆರಂಭಿಸಿದ ತೀ.ನಂ.ಶ್ರೀ. ಯವರಂಥ ವರು ತಮ್ಮ ವೃತ್ತಿಧರ್ಮಕ್ಕೆ ಚ್ಯುತಿ ಬಾರದಂತೆ ನಿತ್ಯದ ಅಧ್ಯಾಪನ ಅಧ್ಯಯನ ಗಳನ್ನು ನಿಷ್ಠೆಯಿಂದ ಮಾಡುತ್ತ, ಬಿಡುವಿನ ಹೊತ್ತಿನಲ್ಲಿ ಶ್ರೀಯವರು ಆರಂಭಿಸಿದ್ದ ಕನ್ನಡದ ಕೈಂಕರ್ಯವನ್ನು ನೆರವೇರಿಸಬೇಕಾಗಿತ್ತು.

1943ರಲ್ಲಿ ಉಪ ಪ್ರಾಧ್ಯಾಪಕರಾಗಿ ದೊರೆತ ಬಡತಿಯ ಜೊತೆಗೇ ಅವರಿಗೆ ಬೆಂಗಳೂರಿನ ಇಂಟರ್‌ಮೀಡಿಯೇಟ್ ಕಾಲೇಜಿಗೆ ವರ್ಗವೂ ಆಯಿತು. ಮತ್ತೆ ಅವರು 1957ರ ವರೆಗೆ ಮೈಸೂರಿಗೆ ಹಿಂತಿರುಗುವು ದಾಗಲಿಲ್ಲ. ಬೆಂಗಳೂರಿನಲ್ಲಿ ಪ್ರೊ. ಮೂರ್ತಿರಾವ್ ಮತ್ತು ಪು.ತಿ.ನರಸಿಂಹಾ ಚಾರ್ ಅವರುಗಳ ಜೊತೆ ಸಿಕ್ಕತು. ಮಾಸ್ತಿಯವರಂತಹ ಹಿರಿಯ ಲೇಖಕರ ಹತ್ತಿರದ ಸಂಪರ್ಕ, ಸ್ನೇಹಗಳು ದೊರೆತವು. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಅವಕಾಶ ಉಂಟಾ ಯಿತು. ತಮಗೆ ಅತ್ಯಂತ ಆಪ್ತವಾಗಿದ್ದ ಕನ್ನಡ ನಿಘಂಟಿನ ಸಿದ್ಧತೆಯ ಕಾರ್ಯ ದಲ್ಲಿ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿ ಮೊದಲಾದವರ ಜೊತೆ ದುಡಿಯ ತೊಡಗಿದರು. ಈ ನಡುವೆ 1948ರ ನವೆಂಬರ್‌ನಿಂದ 1950ರ ಜನವರಿ ವರೆಗೆ ಮೈಸೂರು ಸಂವಿಧಾನ ಪರಿಷತ್ತಿನಲ್ಲಿ ಅವರು ಭಾಷಾಂತರಕಾರರಾಗಿ ಕೆಲಸ ಮಾಡಿದರು. 1948 ಮತ್ತು 50ರಲ್ಲಿ ಎರಡು ಸಲ ಕೆಲವೇ ತಿಂಗಳ ಕಾಲ ದಾವಣ ಗೆರೆಯ ಕಾಲೇಜಿನಲ್ಲಿ ಸೂಪರಿಂಟೆಂಡೆಂಟ್ ಆಗಿ ಕೆಲಸ ಮಾಡಿ ಬರಬೇಕಾಯಿತು. 1951ರಲ್ಲಿ ಕೆಲವು ತಿಂಗಳಕಾಲ ಕೋಲಾರ ಕಾಲೇಜಿನ ಸೂಪರಿಂಟೆಂಡೆಂಟ್ ಆಗಿ ಇದ್ದು ಬಂದರು.

1952ರಲ್ಲಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯ ತೀ.ನಂ.ಶ್ರೀ. ಯವರ ಸೇವೆಯನ್ನು ಎರವಲಾಗಿ ಪಡೆಯಿತು. ಕರ್ನಾಟಕ ವಿಶ್ವವಿದ್ಯಾ ನಿಲಯದ ಪ್ರಥಮ ಕನ್ನಡ ಪ್ರಾಧ್ಯಾಪಕರಾಗಿ ಅಲ್ಲಿಗೆ ಹೋದವರು ಐದು ವರ್ಷಗಳ ಕಾಲ ಅಲ್ಲಿ ಕನ್ನಡ ಅಧ್ಯಯನಕ್ಕೆ ಬೇಕಾದ ತಳಹದಿಯನ್ನು ಹಾಕಿದರು. ಆಗ ಕನ್ನಡ ಎಂ.ಎ. ಓದುವ ವಿದ್ಯಾರ್ಥಿಗಳ ಕೊರತೆ ಇದ್ದಿ ತಾದರೂ ಆ ಅವಧಿಯಲ್ಲಿ ಅವರ ಶಿಷ್ಯರಾಗಿದ್ದ ಕೆಲವರು ಈಗ ಭಾಷಾ ವಿಜ್ಞಾನಿಗಳಾಗಿದ್ದಾರೆ, ಪ್ರಸಿದ್ಧ ಲೇಖಕರೂ ಆಗಿದ್ದಾರೆ.

ಧಾರವಾಡದ ಅವರ ಸೇವೆಯ ಅವಧಿ ಇನ್ನೊಂದು ಕಾರಣಕ್ಕೆ ಮುಖ್ಯ ವಾಯಿತು. ಪುಣೆಯ ಡೆಕ್ಕನ್ ಕಾಲೇಜಿನ ಭಾಷಾ ವಿಜ್ಞಾನ ಪೀಠದೊಂದಿಗೆ ಅವರಿಗೆ ಸಂಪರ್ಕ ಬೆಳೆಯಿತು. ಆ ಸಂಸ್ಥೆ ನಡೆಸುತ್ತಿದ್ದ ಭಾಷಾಶಾಸ್ತ್ರದ ಬೇಸಗೆಯ ಶಾಲೆಯಲ್ಲಿ ಅಧ್ಯಾಪಕರಾಗಿ ಭಾಗವಹಿಸಿದರು. ಪ್ರಸಿದ್ಧರಾದ ಪ್ರಾಚ್ಯ ಮತ್ತು ಪಾಶ್ಚಾತ್ಯ ಭಾಷಾ ವಿಜ್ಞಾನಿಗಳಾದ ಡಾ. ಸುನೀತಿಕುಮಾರ್ ಚಟರ್ಜಿ, ಕ್ಯಾಲಿಫೋರ್ನಿಯ ವಿ.ವಿ. ನಿಲಯದ ಡಾ. ಎಂ.ಬಿ. ಎಮೆನೋ ಮೊದಲಾದವರ ಪರಿಚಯ, ಸ್ನೇಹಗಳು ಅಲ್ಲಿ ದೊರೆತುವು. ಇದೇ ಸಂದರ್ಭದಲ್ಲಿ ಅಮೆರಿಕದ ರಾಕ್‌ಫೆಲರ್ ಪ್ರತಿಷ್ಠಾನದ ಗೌರವ ವೇತನದ ಮೇಲೆ ಅಧ್ಯಯನಕ್ಕಾಗಿ ವಿದೇಶಕ್ಕೆ ಹೋಗುವ ಅವಕಾಶದೊರೆಯಿತು. 1955-56ರಲ್ಲಿ ಎಂಟು ತಿಂಗಳ ಕಾಲ ಅಮೆರಿಕದ ಮಿಶಿಗನ್ ಮತ್ತು ಪೆನ್ಸಿಲ್ವೇನಿಯಾ ವಿ.ವಿ.ನಿಲಯಗಳಲ್ಲಿ ಅಧ್ಯಯನ ಮಾಡಿ ಬಿಡುವಿನ ವೇಳೆಯಲ್ಲಿ ಅಮೆರಿಕದ ಕೆಲವು ಪ್ರೇಕ್ಷಣೀಯ ಸ್ಥಳಗಳನ್ನು ನೋಡಿದರು. ಒಂದು ತಿಂಗಳು ಇಂಗ್ಲೆಂಡಿನಲ್ಲಿ ಕಳೆದು, ಫ್ರಾನ್ಸ್-ಇಟಲಿ ಮೊದಲಾದ ಯುರೋಪಿನ ರಾಷ್ಟ್ರಗಳಲ್ಲಿ ಒಂದು ತಿಂಗಳು ಪ್ರವಾಸ ಮಾಡಿ ಸ್ವದೇಶಕ್ಕೆ ಮರಳಿದರು.

ಧಾರವಾಡದಲ್ಲಿ ಅವರ ಸೇವೆಯ ಅವಧಿ ಮುಗಿದು 1957ರ ಜನವರಿ ಯಲ್ಲಿ ಶ್ರೀಕಂಠಯ್ಯನವರು ಮೈಸೂರಿನ ಮಹಾರಾಜ ಕಾಲೇಜಿಗೆ ಕನ್ನಡ ಪ್ರಾಧ್ಯಾಪಕರಾಗಿ ಹಿಂತಿರುಗಿದರು. ಅವರು ಮತ್ತೆ ಮಹಾರಾಜ ಕಾಲೇಜಿಗೆ ಬಂದದ್ದರಿಂದ ಅಲ್ಲಿನ ಅಧ್ಯಾಪಕರುಗಳು ಮತ್ತು ವಿದ್ಯಾರ್ಥಿಗಳ ಮೈಯಲ್ಲಿ ನವಚೈತನ್ಯ ಹರಿಯಿತು. ಆಗ ತಾನೆ ಡಾ. ಕೆ.ವಿ. ಪುಟ್ಟಪ್ಪನವರು ಮಹಾರಾಜ ಕಾಲೇಜಿನ ಪ್ರಿನ್ಸಿಪಾಲ್ ಹುದ್ದೆಯಿಂದ ಮೈಸೂರು ವಿ.ವಿ.ನಿಲಯದ ಉಪಕುಲಪತಿಯ ಸ್ಥಾನಕ್ಕೇರಿದ್ದರು. ಕನ್ನಡದ ಮುಖ್ಯಸ್ಥರ ಸ್ಥಾನ ಶ್ರೀಕಂಠಯ್ಯ ನವರಿಗಾಗಿ ತೆರವಾಗಿತ್ತು. ತೀ.ನಂ.ಶ್ರೀ.ಯವರು ವಿ.ವಿ.ನಿಲಯಕ್ಕೆ ಮರಳಿ ದುದರಿಂದ ಆದ ಸಂತೋಷವನ್ನು ಸ್ನೇಹಿತರೂ, ವಿದ್ಯಾರ್ಥಿಗಳೂ ಓಲಗದ ಸ್ವಾಗತದಲ್ಲಿ ವ್ಯಕ್ತಪಡಿಸಿದರು.

ಕಾಲೇಜಿನಲ್ಲಿ ಪಾಠ ಹೇಳುತ್ತ, ಬೆಂಗಳೂರಿನಲ್ಲಿ ನಡೆಯುತ್ತಿದ್ದ ನಿಘಂಟು ಸಮಿತಿಯ ಸಭೆಗಳಲ್ಲಿ ಭಾಗವಹಿಸುತ್ತ ಮೂರು ವರ್ಷಗಳು ಕಳೆದವು. ಕನ್ನಡ ನಿಘಂಟಿನ ಮೊದಲ ಪುಟಗಳ ಮಾದರಿ ಈ ಅವಧಿಯಲ್ಲಿ ಪ್ರಕಟವಾಯಿತು. ಅಷ್ಟರಲ್ಲಿ ಪದವಿ ತರಗತಿಗಳಿಂದ ಸ್ನಾತಕೋತ್ತರ ಅಧ್ಯಯನ ಮತ್ತು ಸಂಶೋಧನ ವಿಭಾಗಗಳನ್ನು ಪ್ರತ್ಯೇಕಿಸುವ ಯೋಜನೆಯ ಅನ್ವಯ ಮಾನಸಗಂಗೋತ್ರಿಯ ಸ್ನಾತಕೋತ್ತರ ಕೇಂದ್ರದ ಮೊದಲ ಪ್ರಾಧ್ಯಾಪಕರಾಗಿ ತೀ.ನಂ.ಶ್ರೀ. ಯವರು ಮಹಾರಾಜಾ ಕಾಲೇಜಿನಲ್ಲಿದ್ದ ಸ್ನಾತಕೋತ್ತರ ವಿಭಾಗವನ್ನು ಮಾನಸಗಂಗೋತ್ರಿಗೆ ಸಾಗಿಸಿಕೊಂಡು ಹೋದರು. ಅಲ್ಲಿ ಕನ್ನಡ ಅಧ್ಯಯನ ಕೇಂದ್ರದ ತಳಹದಿಯನ್ನು ಭದ್ರ ಮಾಡಿ 62ನೇ ಮಾರ್ಚ್ ತಿಂಗಳ ಅಂತ್ಯದಲ್ಲಿ, ಮೂವತ್ತನಾಲ್ಕು ವರ್ಷಗಳ ಸೇವೆಯ ನಂತರ ತೀ.ನಂ.ಶ್ರೀ. ನಿವೃತ್ತರಾದರು. ಆದರೆ ಅವರಿಗೆ ಬಿಡುವು ಸಿಕ್ಕಲಿಲ್ಲ. ಯು.ಜಿ.ಸಿ. ಪ್ರಾಧ್ಯಾಪಕರಾಗಿ ಅಧ್ಯಯನ ಕೇಂದ್ರದಲ್ಲಿ ಕೆಲಸವನ್ನು ಮುಂದುವರಿಸಿದುದರ

ಜೊತೆಗೆ ಕನ್ನಡ ನಿಘಂಟಿನ ಕೆಲಸದಲ್ಲಿ ತಮ್ಮ ಬಹುಮಟ್ಟಿನ ವೇಳೆಯನ್ನು ಕಳೆದರು. 1958ರಲ್ಲಿ ಅವರು ನಿಘಂಟು ಸಮಿತಿಯ ಅಧ್ಯಕ್ಷರೂ ಆಗಿದ್ದರು.

1962ರಲ್ಲಿ, ತಾವು ನಿವೃತ್ತಿ ಹೊಂದಿದ ವರ್ಷ, ಮೈಸೂರಿನಲ್ಲಿ ಸಿ.ಐ.ಟಿ.ಬಿ. ಮೂಲಕ ಮನೆಯೊಂದನ್ನು ಕೊಂಡುಕೊಂಡರು. ಶ್ರೀಕಂಠಯ್ಯನವರ ಬಳಗ, ಅವರ ಅತಿಥಿ ಸತ್ಕಾರ ಗುಣ, ಅವರಲ್ಲಿದ್ದ ಗ್ರಂಥರಾಶಿ- ಇವುಗಳನ್ನು ಗಮನಿಸಿದಾಗ ಅವರು ನಿವೃತ್ತಿಯವರೆಗೂ ಒಂದು ಸ್ವಂತ ಮನೆ ಮಾಡಿಕೊಳ್ಳುವುದಕ್ಕೂ ಆಗದೆ ಹೋಗಿದ್ದುದು. ಹೆಚ್ಚು ಕಡಿಮೆ ಆ ಕಾಲಕ್ಕೆ ಲೇಖಕರು ಮತ್ತು ವಿದ್ವಾಂಸರಿಗಿದ್ದ ದುಸ್ಥಿತಿಯನ್ನು ಸೂಚಿಸುತ್ತದೆ.

1966ರ ಆಗಸ್ಟ್ ತಿಂಗಳಲ್ಲಿ ಶಿಕ್ಷಣ ಸಚಿವಾಲಯದ ವತಿಯಿಂದ ದೆಹಲಿಯಲ್ಲಿ ತಂತ್ರಜ್ಞಾನ ಪರಿಭಾಷೆಯ ತಜ್ಞರುಗಳ ಸಭೆ ಸೇರಲಿತ್ತು. ಅದಕ್ಕಾಗಿ ಶ್ರೀಕಂಠಯ್ಯನವರಿಗೆ ದೆಹಲಿಗೆ ಹೋಗುವ ಅಗತ್ಯ ಒದಗಿತು. ಈಗಲಾದರೂ ತಮ್ಮ ಪತ್ನಿಗೆ ತಾಜಮಹಲ್ ಮುಂತಾದ್ದನ್ನು ತೋರಿಸಬೇಕೆಂಬ ಬಯಕೆ ಅವರನ್ನು ಬಾಧಿಸಿತು. ತಮ್ಮ ಇಂಜಿನಿಯರ್ ಅಳಿಯ ಮತ್ತು ಮಗಳ ಸಂಸಾರ ಬಿಹಾರದ ರಾಂಚಿಯಲ್ಲಿದ್ದುದರಿಂದ ಹಾಗೂ ಒಬ್ಬನೇ ಮಗ ಕಲ್ಕತ್ತಾದಲ್ಲಿ ವ್ಯಾಸಂಗ ಮಾಡುತ್ತಿದ್ದುದರಿಂದ, ಪ್ರವಾಸದಿಂದ ಹಿಂದಕ್ಕೆ ಬರುವಾಗ ಅವರನ್ನೆಲ್ಲ ನೋಡಿಬರುವ ಅವಕಾಶವೂ ಉಂಟಾಗಿ ಶ್ರೀಕಂಠಯ್ಯನವರು ಪತ್ನೀ ಸಮೇತರಾಗಿ ಮೈಸೂರಿನಿಂದ ದೆಹಲಿಗೆ ಹೊರಟರು. ದೆಹಲಿ ಆಗ್ರಾಗಳ ಪ್ರವಾಸ ಮುಗಿಸಿ ರಾಂಚಿಗೆ ಬಂದರು. ಅಲ್ಲಿ ಮಗಳು ಮತ್ತು ಅಳಿಯ ಮತ್ತು ಮೊಮ್ಮಗಳ ಜೊತೆ ಒಂದು ವಾರ ಸುಖವಾಗಿ ಕಳೆಯಿತು. ತಮ್ಮ ಪತ್ನಿಗೆ ದೆಹಲಿ ತಾಜಮಹಲುಗಳನ್ನು ತೋರಿಸಿಕೊಂಡು ಬಂದ ಬಗ್ಗೆ ಅವರಿಗೆ ಸಂತೋಷವಾಗಿತ್ತು. 'ಮಧುಚಂದ್ರ ವೇನೋ ತುಂಬಾ ಚೆನ್ನಾಗಿ ನಡೆಯಿತು; ಕೇವಲ ನಲವತ್ತು ವರ್ಷ ತಡವಾಯಿತು ಅಷ್ಟೆ !' ಎಂದು ಅವರು ಕಲ್ಕತ್ತಕ್ಕೆ ಬಂದಾಗ ಮಗನೊಡನೆ ವಿನೋದವಾಡಿದರು. ಕಲ್ಕತ್ತಾದಲ್ಲಿ ತಮ್ಮ ಸ್ನೇಹಿತರ ಮನೆಯಲ್ಲಿ ಉಳಿದಿದ್ದಾಗ ಸೆಪ್ಟೆಂಬರ್ ಏಳನೆಯ ತಾರೀಖು ಬೆಳಗಿನ ಎಂಟುಗಂಟೆಯ ಸಮಯದಲ್ಲಿ ಅನಿರೀಕ್ಷಿತವಾಗಿ ಬಂದ ಹೃದಯಾಘಾತ ಅವರನ್ನು ಎಲ್ಲರಿಂದ ಅಗಲಿಸಿತು. ಕರ್ನಾಟಕಕ್ಕೆ ಬಂದದ್ದು ಅವರ ಸಾವಿನ ಸುದ್ದಿ ಮಾತ್ರ. ಅವರ ಅಂತ್ಯ ಸಂಸ್ಕಾರ ಕಲ್ಕತ್ತದ ವಿದ್ಯುತ್ ಚಿತಾಗಾರದಲ್ಲಿ ನಡೆಯಿತು. ಅವರ ಮಿತ್ರರು, ಬಂಧುಗಳು, ಅಭಿಮಾನಿಗಳು, ಶಿಷ್ಯರು ಎಲ್ಲರಿಗೂ ಈ ಸುದ್ದಿ ನಂಬಲಾರದಷ್ಟು ಕ್ಷಿಪ್ರವಾಗಿತ್ತು, ಎಲ್ಲರೂ ದಿಗ್ಭ್ರಾಂತರಾದರು. "ಇಂತಹ... ಮಹಾನುಭಾವರನ್ನೂ ವಿಧಿ ಲೆಕ್ಕಿಸುವುದಿಲ್ಲ ಎಂದ ಮೇಲೆ ಜೀವಿತಕ್ಕಿನ್ನೇನು ಬೆಲೆಯಿದೆ ? ದಿಗ್ ಭೋ ವಿಧೇಃ" ಎಂದು ಭಾಸಕವಿ ಉದ್ಗಾರ ತೆಗೆದದ್ದು ಇಂತಹ ಸಂದರ್ಭವನ್ನು ಕಂಡೇ.

**2**

ಬಿ.ಎಂ.ಶ್ರೀ. ಅವರಂತೆಯೇ ತೀ.ನಂ.ಶ್ರೀ. ಅವರ ದೊಡ್ಡತನವೂ ಅವರ ಕೃತಿಗಳಿಗಿಂತ ಅವರ ವ್ಯಕ್ತಿತ್ವದಲ್ಲಿಯೇ ಉಳಿದು ಹೋಗುವಂಥದ್ದಾಗಿತ್ತು. ಒಂದರ್ಥದಲ್ಲಿ ಅವರ ಬದುಕು ಒಂದು ಈಡೇರದ ಮಹದಾಸೆ (Mission). ಅದರ ಬಹುಭಾಗ ಮುಂದೆ ಬರಲಿರುವ ಇನ್ನೂ ಹೆಚ್ಚಿನ ಮಹತ್ವದ ಕೆಲಸವೊಂದಕ್ಕಾಗಿ ಮಾಡಿಕೊಳ್ಳುತ್ತಿದ್ದ ಸಿದ್ಧತೆ ಎಂಬಂತಿದ್ದಿತು.

ಅವರು ಬಿಟ್ಟು ಹೋಗಿರುವ ಕೃತಿಗಳಲ್ಲೂ ಬಹುಮಟ್ಟಿಗೆ ಅವರು ನಲವತ್ತೈದು ವರ್ಷ ಪ್ರಾಯದವರಾಗಿರುವುದಕ್ಕೆ ಮುಂಚೆಯೇ ಬರೆದಂಥವು. ಕಾವ್ಯಮೀಮಾಂಸೆ ಅಥವಾ ಭಾಷೆಯನ್ನು ಕುರಿತು ಅವರು ಬರೆಯಬಹುದಾಗಿದ್ದ ಇನ್ನೂ ಮಹತ್ವದ ಕೃತಿಗಳಿಗೆ ಬೇಕಾದ ಸಿದ್ಧತೆಯೆಲ್ಲವೂ ಅವರು ಮಾಡಿಕೊಂಡಿದ್ದ ಟಿಪ್ಪಣಿಗಳ ಹಸ್ತಪ್ರತಿಯಲ್ಲಿ ಉಳಿದು ಹೋಗುವುದು ಅನಿವಾರ್ಯವಾಯಿತು.

ತೀ.ನಂ.ಶ್ರೀ.ಯವರನ್ನು ನೆನೆಯುವವರಿಗೆ ಮೂರು ಕ್ಷೇತ್ರಗಳಲ್ಲಿ ಅವರು ಅದ್ವಿತೀಯವಾಗಿ ನಿಲ್ಲುತ್ತಾರೆ: ಮೊದಲನೆಯದು, ಅವರು ಕನ್ನಡದಲ್ಲಿ ಬರೆದು ಬಿಟ್ಟುಹೋದ 'ಭಾರತೀಯ ಕಾವ್ಯ ಮೀಮಾಂಸೆ' ಎಂಬ ಉದ್ದಾಮ ಕೃತಿಯಲ್ಲಿ. ಆ ವಿಷಯದಲ್ಲಿ ಅದನ್ನು ಮೀರಿಸುವಂಥಾದ್ದು ಮುಂದೆ ಬಂದೀತೋ ಹೇಳಲಾಗುವುದಿಲ್ಲ. ಎರಡನೆಯದು, ಅವರು ಕನ್ನಡ ಅಧ್ಯಯನ ಕೇಂದ್ರಗಳಲ್ಲಿ ಭಾಷಾ ವಿಜ್ಞಾನದ ಅಭ್ಯಾಸಕ್ಕೆ ಮಾಡಿದ ಪೂರ್ವ ಸಿದ್ಧತೆ ಮತ್ತು ಕನ್ನಡ ನಿಘಂಟಿಗೆ ಅವರ ಪರಿಶ್ರಮದ ಕಾಣಿಕೆ. 1935ರ ಸುಮಾರಿನಿಂದ ಪ್ರಾರಂಭಿಸಿ ಅವರು ಅಲ್ಲಿ ಇಲ್ಲಿ ಬರೆದು ಮಂಡಿಸಿದ ಏಳೆಂಟು ಇಂಗ್ಲೀಷ್ ಲೇಖನಗಳು, ಎಂಟು ಹತ್ತು ಕನ್ನಡ ಲೇಖನಗಳು ಮತ್ತು ಗ್ರಂಥರೂಪದಲ್ಲಿ ಬಂದ 'ಕನ್ನಡ ಮಧ್ಯಮ ವ್ಯಾಕರಣ' ಇವಿಷ್ಟರಿಂದಲೇ ಭಾಷಾಶಾಸ್ತ್ರದ ಅಭ್ಯಾಸಕ್ಕೆ ಅವರು ಒದಗಿಸಿದ ಪೂರ್ವಸಿದ್ಧತೆಯನ್ನು ನಿರ್ಣಯಿಸಬರುವುದಿಲ್ಲ. ಇದಲ್ಲದೆ, ಭಾರತೀಯ ಭಾಷೆಗಳಿಗೆ ಶೀಘ್ರಲಿಪಿ, ತಾರು (ಟೆಲಿಗ್ರಾಫ್)ಯೋಜನೆ, ಏಕರೂಪದ ಲಿಪಿತತ್ವ ಇವುಗಳ ಆವಿಷ್ಕಾರಕ್ಕಾಗಿ ಭಾರತ ಸರ್ಕಾರದವರು ಹಾಕಿದ ಬೃಹತ್ ಯೋಜನೆಯ ಅಂಗವಾಗಿ ಕನ್ನಡದ ಧ್ವನಿಮಾ ಅಕೃತಿಮಾಗಳ ಆಗಮನ 'ಸಂಖ್ಯಾ ಸಾಮರ್ಥ್ಯ (Phonemic and Morphemic Frequency Count For Kannada)ದ ಯೋಜನೆಗೆ ಪುಣೆಯ ಡೆಕ್ಕನ್ ಕಾಲೇಜಿನ ಎಂ.ಆರ್. ರಂಗನಾಥ್ ಅವರನ್ನು ಒಪ್ಪಿಸಿ ಅದಕ್ಕೆ ಮಾರ್ಗದರ್ಶನವನ್ನು ಕೊಟ್ಟರು. ಎಂಟು ನೂರು ಪುಟಗಳ, ಒಂದು ಲಕ್ಷಕ್ಕೂ ಮಿಕ್ಕ ಪದಗಳಿಂದ ಕೂಡಿದ, ಈ ಕೃತಿ ಪ್ರಕಟವಾದದಂದು ತೀ.ನಂ.ಶ್ರೀ. ಯವರ ದೊಡ್ಡದೊಂದು ಕನಸು ನನಸಾಗಿ ಕನ್ನಡಿಗರಿಗೆ ದೊರೆಯಲಿದೆ. ಅವರು ಮೈಸೂರು ಸಂವಿಧಾನ ಪರಿಷತ್ತಿನಲ್ಲಿ ಭಾಷಾಂತರಕಾರರಾಗಿ ಕೆಲಸ ಮಾಡಿದಾಗ ಕನ್ನಡವನ್ನು ಆಡಳಿತ ಭಾಷೆಯಾಗಿ ಅಣಿಗೊಳಿಸುವ ಸಾಹಸಕ್ಕೆ ಸಾಕಷ್ಟು ಅಮೂಲ್ಯವಾದ ಕೊಡುಗೆಗಳನ್ನು ಕೊಟ್ಟಿರಬೇಕು. 1940ರಲ್ಲಿ ಭಾರತದ ಸಂವಿಧಾನ ಪರಿಷತ್ತಿನ ಅಧ್ಯಕ್ಷರು ಕರೆದಿದ್ದ ಭಾಷಾ ವಿಜ್ಞಾನಿಗಳ ಸಭೆಯ ಪ್ರತಿನಿಧಿಯಾಗಿ ಇವರು ಭಾರತ ದೇಶದ ಮುಖ್ಯಸ್ಥರಿಗೆ ಸೂಚಿಸಿದ 'ರಾಷ್ಟ್ರಪತಿ' ಎಂಬ ಹೆಸರು ಅಂಗೀಕೃತವಾಯಿತು. 1957ರಲ್ಲಿ ದೆಹಲಿಯಲ್ಲಿ ನಡೆದ ಪ್ರಾಚ್ಯ ಸಮ್ಮೇಳನದ ದ್ರಾವಿಡ ಸಂಸ್ಕೃತಿ ಗೋಷ್ಠಿಯ ಅಧ್ಯಕ್ಷರಾಗಿ, ಗದಗಿನಲ್ಲಿ ನಡೆದ ನಲವತ್ತಮೂರನೆಯ ಸಾಹಿತ್ಯ ಸಮ್ಮೇಳನದ ಭಾಷಾ ಬಾಂಧವ್ಯಗೋಷ್ಠಿಯ ಅಧ್ಯಕ್ಷರಾಗಿ, 1958ರಲ್ಲಿ ಮೈಸೂರಿನಲ್ಲಿ ನಡೆದ ಭಾಷಾ ಶಾಸ್ತ್ರದ ಬೇಸಗೆ ಶಾಲೆಯ ಸ್ಥಳೀಯ ನಿರ್ದೇಶಕರಾಗಿ, 1960ರಲ್ಲಿ ಅಖಿಲ ಭಾರತ ಭಾಷಾ ವಿಜ್ಞಾನಿಗಳ ಸಂಘದ ಅಧ್ಯಕ್ಷರಾಗಿದ್ದು ಅವರು ಭಾಷಾ ಶಾಸ್ತ್ರದ ಅಧ್ಯಯನ ಮತ್ತು ಬೆಳವಣಿಗೆಗೆ ಚಾಲನೆಯನ್ನು ಕೊಟ್ಟರು. 1965ರಲ್ಲಿ ದೆಹಲಿ ವಿಶ್ವ ವಿದ್ಯಾನಿಲಯದ ಭಾಷಾಶಾಸ್ತ್ರ ವಿಭಾಗದ ಪ್ರಾಧ್ಯಾಪಕ ಸ್ಥಾನಕ್ಕೆ ಅವರಿಗೆ ಬಂದ ಆಹ್ವಾನ ಅವರ ವಿದ್ವತ್ತಿಗೆ ಸಂದ ಪುರಸ್ಕಾರವಾದರೂ ಅವರು ಅದನ್ನು ನಿರಾಕರಿಸಿದುದು ಕನ್ನಡಕ್ಕಾಗಿ ಅವರು ಮಾಡ ಬೇಕಾಗಿದ್ದ ಕೆಲಸಕ್ಕೆ ಕೊಟ್ಟ ಆದ್ಯತೆಯೇ ಸರಿ.

ಭಾಷೆಗಾಗಿ, ಭಾಷಾಶಾಸ್ತ್ರಕ್ಕಾಗಿ ಅವರು ಮಾಡಿದ ದುಡಿಮೆಯನ್ನು ಕನ್ನಡದ ನಿಘಂಟಿಗಾಗಿ ಅವರು ಪಟ್ಟ ಪರಿಶ್ರಮದಿಂದ ಪ್ರತ್ಯೇಕಿಸುವಂತಿಲ್ಲ.

ತಮ್ಮ ಕೊನೆಯ ವರ್ಷಗಳ ಬಹುಮಟ್ಟಿನ ಸಮಯವನ್ನು ನಿಘಂಟು ರಚನೆಯ ಸಿದ್ಧತೆಗಾಗಿ ಮೀಸಲಿರಿಸಿದರು. ಕನ್ನಡ ಭಾಷಾ ಶಾಸ್ತ್ರದ ಪರಿಭಾಷೆ, ನಿರೂಪಣಾ ವಿಧಾನಗಳಿಗೆ ಹೇಗೊ ಹಾಗೆಯೇ ನಿಘಂಟಿನ ರಚನಾ ವಿಧಾನ, ಅರ್ಥವಿವರಣೆ ಚಿಹ್ನೆಗಳು-ಇವುಗಳಿಗೆಲ್ಲ ತೀ.ನಂ.ಶ್ರೀ.ಯವರ ವಿದ್ವತ್ತು ವಿಪುಲವಾದ ಕೊಡುಗೆಯನ್ನು ಕೊಟ್ಟಿದೆ. ಭಾಷಾಶಾಸ್ತ್ರಕ್ಕೆ ಅವರು ತಮ್ಮನ್ನು ಎಷ್ಟೊಂದು ಅರ್ಪಿಸಿಕೊಂಡಿದ್ದರು ಎಂದರೆ ಕಾವ್ಯಲಕ್ಷಣದ ಪ್ರಸಾರದ ಸಂದರ್ಭದಲ್ಲಿ 'Language is poetry' ಎಂದು ಹೇಳುವುದಾದರೆ ಅದಕ್ಕೆ ಅನುವಾಕ್ಯವಾಗಿ 'Linguistics is Poetics' ಎಂದು ಹೇಳಬಹುದು ಎನ್ನುತ್ತಿದ್ದರು.

ಮೂರನೆಯದು, ಅವರು ಪ್ರಾಧ್ಯಾಪಕರಾಗಿ, ಭಾಷಣಕಾರರಾಗಿ ಸಂಪಾದಿಸಿದ್ದ ಜನಾನುರಾಗ. ಜನಪ್ರಿಯತೆಗೆ ಸುಲಭವಾಗಿ ಅಂಟುವ ಪೊಳ್ಳುತನಕ್ಕೆ ಅವಕಾಶ ಮಾಡಿಕೊಡದೆ ಖ್ಯಾತರಾಗಿದ್ದವರು ಅವರು. ಮೈಸೂರು ವಿ.ವಿ. ನಿಲಯದಲ್ಲಿ ಅವರು ಪ್ರಾಧ್ಯಾಪಕರಾಗಿದ್ದಾಗ ಛಂದಸ್ಸು, ಕಾವ್ಯಮೀಮಾಂಸೆ ಮತ್ತು ಭಾಷಾ ಶಾಸ್ತ್ರ-ಮೂರನ್ನೂ ಅವರ ಬಾಯಲ್ಲಿಯೇ ಕೇಳಬೇಕು ಎಂದು ವಿದ್ಯಾರ್ಥಿಗಳು ಆಸೆಪಡುವಂಥ ಸ್ಥಿತಿ ಇತ್ತು. ಮೂರು ವಿಷಯಗಳಲ್ಲೂ ಅವರ ವಿದ್ವತ್ತು ಅದ್ವಿತೀಯವಾಗಿತ್ತು. ಅವರ ಬೋಧನ ಕಲೆಯೂ ಇದಕ್ಕೆ ಕಾರಣವಾಗಿತ್ತು.

ತೀ.ನಂ.ಶ್ರೀ. ಯವರ ವಿದ್ವತ್ತು, ಬಹುಶ್ರುತತ್ವಗಳನ್ನು ಬಲ್ಲವರೆಲ್ಲರೂ ಇವರು ಹೆಚ್ಚು ಬರೆಯದೇ ಇದ್ದುದಕ್ಕೆ ವಿಷಾದಿಸುವವರೇ. ಆಗಿನ ಅಧ್ಯಾಪಕರಲ್ಲಿ ಬಹುಜನರ ಪ್ರತಿಭೆ ಬರವಣಿಗೆಯಲ್ಲಿ ಹೊರ ಹೊಮ್ಮದೇ ಇದ್ದುದಕ್ಕೆ ಅಧೈರ್ಯ ಅಥವಾ ಆತ್ಮವಿಶ್ವಾಸದ ಅಭಾವ ಕಾರಣವಿರಬಹುದೇ ಎಂದು ಪ್ರೊ. ಮೂರ್ತಿರಾಯರು ಶಂಕೆಪಡುತ್ತಾರೆ; ತೀ.ನಂ.ಶ್ರೀ.ಯವರಲ್ಲಿ ಕ್ರಮಶ್ರದ್ಧೆ, ಕರ್ಮ ಶ್ರದ್ಧೆಗಳ ಹೋರಾಟ ನಡೆದು ಕ್ರಮಶ್ರದ್ಧೆಯ ಕೈ ಸ್ವಲ್ಪ ಮೇಲಾಯಿತೇನೊ ಎಂದು ಅನುಮಾನ ಪಡುತ್ತಾರೆ. 'ಕಿಂ ಪಾಂಡಿತ್ಯಂ? ಪರಿಚ್ಛೇದಃ' ಎಂಬ ಸಂಸ್ಕೃತದ ಹೇಳಿಕೆಯನ್ನು ತೀ.ನಂ.ಶ್ರೀ. ಮತ್ತೆ ಮತ್ತೆ ನೆನಪಿಸುತ್ತಿದ್ದರು. ಪರಿಚ್ಛೇದ, ನಿಷ್ಪಕ್ಷತೆಗಳ ಶೋಧನೆಯಲ್ಲಿ, ಸಂಶಯ ನಿವಾರಣೆಗಾಗಿ ಅವರು ಹಲವು ವರ್ಷಗಳವರೆಗೆ ಕಾಯ್ದದ್ದುಂಟು. ತರಗತಿಗಳಿಗೆ ಸಿದ್ಧತೆಯಿಲ್ಲದೆ ಅವರು ಸಾಮಾನ್ಯವಾಗಿ ಹೋಗುತ್ತಿರಲಿಲ್ಲ. ಸಾರ್ವಜನಿಕ ಭಾಷಣಗಳಿಗೆ ತಯಾರಾಗದೆ ಹೋಗುವುದು ಶ್ರೋತೃಗಳಿಗೆ ಮಾಡಿದ ಅವಮಾನ ಎಂಬ ನಿಷ್ಠುರತೆ ಅವರದು. ಮನೆಯಲ್ಲಿದ್ದೂ ಇಲ್ಲ ಎನಿಸಿ ಕೊಳ್ಳುವ ಅಸೌಜನ್ಯ, ಅಸಾಮಾಜಿಕ, ನಡವಳಿಕೆ ಅವರಲ್ಲಿ ಇರಲಿಲ್ಲ. ನಿರಂತರ ಓದು, ಸಹೃದಯ ಗೋಷ್ಠಿ, ನಡುನಡುವೆ ಒಪ್ಪಿಕೊಳ್ಳಬೇಕಾ ಗುತ್ತಿದ್ದ ಉಪನ್ಯಾಸ ಕಾರ್ಯಕ್ರಮಗಳು, ಅಧ್ಯಾಪಕ ವೃತ್ತಿಯಲ್ಲಿ ಅವರಿಗಿದ್ದ ಗೌರವಾದರ-ಇವೆಲ್ಲ ಸೇರಿ ಅವರು ಹೆಚ್ಚು ಬರೆಯದಂತಾಗಿರಬೇಕು. ಸಾರ್ವಜನಿಕ ಭಾಷಣ ಮತ್ತು ತರಗತಿಯ ಪಾಠಗಳಲ್ಲಿ ಅವರ ಅಭಿಪ್ರಾಯ. ಆಲೋಚನೆಗಳು ಅಭಿವ್ಯಕ್ತಿ ಪಡೆದು ಆ ಮೂಲಕವೂ ಅವರಿಗೆ ತೃಪ್ತಿ ಸಿಕ್ಕುತ್ತಿರಬಹುದು ಎಂದು ಅವರ ಮಗ ಪ್ರೊ. ಟಿ.ಎಸ್. ನಾಗಭೂಷಣ ಭಾವಿಸುತ್ತಾರೆ.

ಬರೆಯಲಾಗದೆ ಇದ್ದುದಕ್ಕೆ ಅವರಲ್ಲಿ ಕೊರಗೂ ಇದ್ದಿತು. 'ಓದು ಬರಹಕ್ಕೆ ಶತ್ರು' ಎಂದು ಗಾದೆ ಕಟ್ಟಿ ಅವರು ತಮ್ಮ ಕೊರಗನ್ನು ತೇಲಿಸುತ್ತಿದ್ದರು. 'ಮಾತೂ ಬರಹಕ್ಕೆ ಶತ್ರು' ಎಂದು ಅವರ ಮಿತ್ರ ಪು.ತಿ.ನ. ಪ್ರತಿ ಗಾದೆಯನ್ನು, ಅರೆ ಮೆಚ್ಚುಗೆಯಲ್ಲಿ, ಅರೆ ಆಕ್ಷೇಪದಲ್ಲಿ ಹೇಳುತ್ತಿದ್ದರು.

## 3

ತೀ.ನಂ.ಶ್ರೀ. ಅವರ ಪ್ರತಿಭೆ, ವಿದ್ವತ್ತುಗಳು, ಅವರ ಆಸಕ್ತಿಯ ಪರಧಿಯೊಳಗೆ ಬರುವ ವಿಷಯಗಳು ಮತ್ತು ಜೀವಿತಾವಧಿಯಲ್ಲಿ ಅವರಿಗಿದ್ದ ಪ್ರಸಿದ್ಧಿಗಳನ್ನು ಪರಿಗಣಿಸಿದರೆ ಅವರು ಬರೆದ ಗ್ರಂಥಗಳ ಸಂಖ್ಯೆ ಕಡಿಮೆ ಯೆಂದೇ ಎಲ್ಲರ ಅಭಿಪ್ರಾಯ. ಅವರ ಹೆಸರಿನಲ್ಲಿ ಪ್ರಕಟವಾಗಿರುವ ಕೃತಿಗಳ ಸಂಖ್ಯೆ ಹದಿನಾಲ್ಕು ಮಾತ್ರ. ಅವುಗಳಲ್ಲಿ ಮೂರು ಅವರ ಮರಣಾನಂತರ ಪ್ರಕಟವಾದವು. ಇವಲ್ಲದೆ ಇಂಗ್ಲಿಷ್‌ನಲ್ಲಿ ಬರೆದ ಭಾಷೆ, ವ್ಯಾಕರಣ ಮತ್ತು ಸಾಹಿತ್ಯಗಳನ್ನು ಕುರಿತು ಬರೆದ ಸುಮಾರು ಹತ್ತೊಂಬತ್ತು ಲೇಖನಗಳು ಗ್ರಂಥ ರೂಪದಲ್ಲಿ ಬರೆದ ವಿವಿಧ ಕಡೆ ಚದುರಿಹೋಗಿವೆ. ಇತ್ತೀಚೆಗೆ 'Imagination in Indian Poetics and other literary papers' ಎಂಬ ಅಂಕಿತದಲ್ಲಿ ತೀ.ನಂ.ಶ್ರೀ. ಯವರ ಇಂಗ್ಲಿಷ್ ಲೇಖನಗಳ ಸಂಗ್ರಹವನ್ನು ಮೈಸೂರಿನ ಗೀತಾ ಬುಕ್ ಹೌಸ್‌ನವರು ಪ್ರಕಟಿಸಿದ್ದಾರೆ. ಅಲ್ಲದೆ ಭಾಷಾಶಾಸ್ತ್ರ ಕುರಿತ ಅವರ ಲೇಖನಗಳ ಸಂಗ್ರಹ ಅಚ್ಚಿಗೆ ಸಿದ್ಧವಾಗಿದೆ ಎಂದು ತಿಳಿದು ಬಂದಿದೆ. ಏಳೆಂಟು ಕನ್ನಡ ಲೇಖನಗಳು ಈಗ ಪ್ರಕಟವಾಗಿರುವ ಯಾವ ಸಂಗ್ರಹದಲ್ಲಿಯೂ ಸೇರದೆ ಉಳಿದುಕೊಂಡಿವೆ. ಗ್ರಂಥರೂಪದಲ್ಲಿ ಪ್ರಕಟ ವಾಗಿರುವ ಅವರ ಕೃತಿಗಳನ್ನು ಸ್ಥೂಲವಾಗಿ ಸೃಜನ, ಶಾಸ್ತ್ರ, ಸಂಪಾದನೆ ಮತ್ತು ವಿಮರ್ಶೆ ಎಂದು ನಾಲ್ಕು ವಿಧವಾಗಿ ಪರಿಶೀಲಿಸಬಹುದು. ಈ ವಿಭಾಗ ಕಾಲಾನುಕ್ರಮವಾಗಿ ಕಾಣದಿರಬಹುದು ಮತ್ತು ಶಾಸ್ತ್ರದೊಳಗೆ ವಿಮರ್ಶೆ, ವಿಮರ್ಶೆಯೊಳಗೆ ಶಾಸ್ತ್ರ ಬೆರೆಯಬಹುದು.

### ಸೃಜನ

'ಒಲುಮೆ' (1932, ಮೊದಲ ಮುದ್ರಣ): ಇದು ತಿ.ನಂ.ಶ್ರೀ.ಯವರ ಮೊಟ್ಟ ಮೊದಲ ಕೃತಿ. ಪಾಶ್ಚಾತ್ಯ ರಮ್ಯ ಸಂಪ್ರದಾಯದ ಕಾವ್ಯದಿಂದ, ಸಂಸ್ಕೃತ ಸಾಹಿತ್ಯದಲ್ಲಿನ ಮುಕ್ತಗಳಿಂದ ಪ್ರಭಾವಿತರಾಗಿ ಶ್ರೀಯವರ 'ಇಂಗ್ಲೀಷ್ ಗೀತೆಗಳು' ರಚನೆಯಿಂದ ಸ್ಫೂರ್ತಿ ಹೊಂದಿ ತಿ.ನಂ.ಶ್ರೀ. ಅವರು ತಾರುಣ್ಯದಲ್ಲಿ ಬರೆದ ಕವಿತೆಗಳ ಸಂಕಲನ ಇದು. ಗಾತ್ರದಲ್ಲಿ ಚಿಕ್ಕದಾದರೂ ಕೆ.ಎಸ್. ನರಸಿಂಹಸ್ವಾಮಿಯವರೇ ಮೊದಲಾಗಿ ಕನ್ನಡದ ಅನೇಕ ಹೊಸ ಕವಿಗಳಿಗೆ ಸ್ಫೂರ್ತಿಯ ಬಾಗಿಲನ್ನು ತೆರೆದ ಪದ್ಯಗಳು ಇದರಲ್ಲಿವೆ. ಸಹಜ ಸ್ಫೂರ್ತಿಯಿಂದ ಬರೆದ ಪದ್ಯಗಳಾದರೂ ಗಾಂಭೀರ್ಯಕ್ಕೆ ಇನ್ನೊಂದು ಹೆಸರು ಎಂಬಂತಿದ್ದ ತೀ.ನಂ.ಶ್ರೀ.ಯವರು ಇವುಗಳ ಪ್ರಕಟನೆ, ಮರು ಪ್ರಕಟನೆಗಳ ವಿಷಯದಲ್ಲಿ ಸಂಕೋಚ, ಮುಜುಗರಗಳನ್ನು ಅನುಭವಿಸಿದಂತೆ ಕಾಣುತ್ತದೆ. ಇವುಗಳನ್ನು ಕುರಿತು ಕನ್ನಡದ ಹಿರಿಯ ಲೇಖಕ ಮಾಸ್ತಿಯವರು "ಈ ಪದ್ಯಗಳು ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಬಿಡುವಾಗಿ ಬಿಟ್ಟಿದ್ದ ಸ್ಥಳವನ್ನು ಫಲವತ್ತಾಗಿ ಮಾಡಿವೆ....ಇಷ್ಟರಲ್ಲೇ ಅವರ ಕವನಗಳ ಇನ್ನೊಂದು ಪುಸ್ತಕ, ಇದಕ್ಕಿಂತ ಸ್ವಲ್ಪ ದಪ್ಪನಾಗಿರತಕ್ಕದ್ದು, ಬರಬೇಕೆಂದು ನಮಗೆಲ್ಲ ಆಸೆ" ಎಂದು ಬರೆದರು. ಆಸೆ, ಆದೇಶ ಎರಡೂ ಆಗಿದ್ದ ಈ ವಿಮರ್ಶೆ ಬಂದ ಮೇಲೂ ತೀ.ನಂ.ಶ್ರೀ.ಯವರು ಇನ್ನೊಂದು ಸಂಕಲನವನ್ನು ಪ್ರಕಟಿಸಲಿಲ್ಲ. ಓದಿದವರೆಲ್ಲ ಇಂಥ ಪದ್ಯಗಳು ಇನ್ನಷ್ಟು ಇರಬೇಕಾಗಿತ್ತು ಎಂದು ಆಸೆ ಪಡುವಂತೆ ಮಾಡಿದ ಅಪರೂಪದ ಪ್ರೇಮಗೀತೆಗಳ ಸಂಕಲನ 'ಒಲುಮೆ'.

'ನಂಟರು' (ಮೊದಲ ಮುದ್ರಣ 1962): ಇದು ಅವರ ತಡವಾಗಿ ಪ್ರಕಟವಾದ ಪ್ರಬಂಧಗಳ ಸಂಕಲನ. ತೀ.ನಂ.ಶ್ರೀ.ಯವರು 'ಪ್ರಬಂಧ ವೆನ್ನುವುದು ಮಂದಶ್ರುತಿಯ ಭಾವಗೀತ' ಎಂದು ತಿಳಿದಿದ್ದರು. 1928ರಲ್ಲಿ

ಭಾರತೀದಾಸ ಎಂಬ ಕಾವ್ಯನಾಮದಲ್ಲಿ ಬರೆದ 'ನಂಟರು' ಎಂಬುದೂ ಇದರಲ್ಲಿ ಸೇರಿದೆ. ಸಂಕಲನ ಪ್ರಕಟವಾದ ವರ್ಷ ಬರೆದ ಮೂರು ಪ್ರಬಂಧಗಳೂ ಕೂಡಿ ಇದರಲ್ಲಿ ಹದಿಮೂರು ಪ್ರಬಂಧಗಳು ಮಾತ್ರ ಇವೆ. ಇಷ್ಟೊಂದು ವಿರಳವಾಗಿ ಲಿಖಿತವಾದ ಈ ಪ್ರಬಂಧಗಳಲ್ಲೂ ಅವುಗಳ ಸಾರ್ವಕಾಲಿಕ ಮನೋಹರತೆಗಾಗಿ ಉಳಿಯುವ ನಾಲ್ಕೈದು ಪ್ರಬಂದಗಳಿವೆ. 'ನೆಗಡಿ', 'ತಗುಣೆ', 'ಪ್ರವಾಸಿಯ ಪೆಟ್ಟಿಗೆಗಳು' ಇವು ಅಂಥ ಪ್ರಬಂಧಗಳು. 'ತಾರೆಗಳು' ಮುಂತಾದ ಮೂರು ಕಿರು ಪ್ರಬಂಧಗಳು ಭಾವಗೀತೆಗಳಂತೆ ಮಿನುಗುವ ನುಡಿಚಿತ್ರಗಳೇ ಸರಿ.

'ಬಿಡಿ ಮುತ್ತು'(1970): ಅಮರ ಶತಕ ಮತ್ತು ಇತರ ಕೆಲವು ಪ್ರಸಿದ್ಧ ಸಂಸ್ಕೃತ ಸುಭಾಷಿತ ಸಂಕಲನಗಳಿಂದ ಆರಿಸಿದ 215 ಮುಕ್ತಕಗಳ ಕನ್ನಡ ಅನುವಾದ ಇದು. ತೀ.ನಂ.ಶ್ರೀ.ಯವರು ಕಾಲಕಾಲಕ್ಕೆ ಸಂಗ್ರಹಿಸಿ ಅನುವಾದ ಮಾಡಿಟ್ಟುಕೊಂಡ ಪದ್ಯಗಳು ಇದರಲ್ಲಿವೆ. ಇವುಗಳಲ್ಲಿ ಕೆಲವು ಮಾತ್ರ ಅವರ 'ಒಲುಮೆ'ಯ ಮೊದಲ ಆವೃತ್ತಿಯಲ್ಲಿ ಬೆಳಕು ಕಂಡಿದ್ದವು. ಅವುಗಳೆಲ್ಲ ಒಟ್ಟಾಗಿ ಗ್ರಂಥರೂಪದಲ್ಲಿ ಪ್ರಕಟ ವಾದದ್ದು ತೀ.ನಂ.ಶ್ರೀ. ಅವರು ಕಾಲವಾದ ನಾಲ್ಕು ವರ್ಷಕ್ಕೆ ! ಹೆಣ್ಣು, ಸಂತಾನ ಭಾಗ್ಯ, ಋತು ಸೌಂದರ್ಯ, ದಾರಿದ್ರ್ಯ, ಭಕ್ತಿ, ವಿದ್ವತ್ತು ಮುಂತಾದ ವಿಷಯ ವೈವಿಧ್ಯದಿಂದ ಕೂಡಿದ ನಲವತ್ತೆರಡು ಶೀರ್ಷಿಕೆಗಳಡಿಯಲ್ಲಿ ಅಚ್ಚಾಗಿರುವ ಈ ಸುಂದರವಾದ ಸುಭಾಷಿತಗಳು ಕನ್ನಡಕ್ಕೆ ತೀ.ನಂ.ಶ್ರೀ.ಯವರ ಒಂದು ವಿಶೇಷ ಕೊಡುಗೆ.

'ರಾಕ್ಷಸನ ಮುದ್ರಿಕೆ' (1942 ಮೊದಲ ಮುದ್ರಣ): ಇದು ವಿಶಾಖದತ್ತನ ಪ್ರಸಿದ್ಧವಾದ ಸಂಸ್ಕೃತ ನಾಟಕ 'ಮುದ್ರಾರಾಕ್ಷಸ'ದ ರೂಪಾಂತರ. ಮೂಲದ ಯತಾವತ್ತಾದ ಅನುವಾದ ಹಿಂದೆ ಬಂದಿತ್ತಾದರೂ ಹೊಸ ರಂಗಭೂಮಿಯ ಮೇಲೆ ಪ್ರದರ್ಶಿಸುವುದಕ್ಕೆ ಯೋಗ್ಯವಾಗುವಂತೆ ಕನ್ನಡದಲ್ಲಿ ರೂಪಾಂತರಿಸಬೇಕೆಂದು ಪ್ರೊ. ವೆಂಕಣ್ಣಯ್ಯನವರು ಕೊಟ್ಟ ಸಲಹೆಯಂತೆ ತೀ.ನಂ.ಶ್ರೀ.ಯವರು ಇದನ್ನು ಕನ್ನಡಕ್ಕೆ ತಂದರು. 'ಮುದ್ರಾರಾಕ್ಷಸ' ಸಂಸ್ಕೃತ ಸಾಹಿತ್ಯದಲ್ಲಿ ಒಂದು ಗಂಡು ನಾಟಕ. ಕಥಾನಾಯಕಿಯ ಅಥವಾ ಶೃಂಗಾರ ರಸದ ನೆರವಿಲ್ಲದೆ ರಚಿತವಾದ ಏಕೈಕ ಪ್ರಸಿದ್ಧ ನಾಟಕ ಎನ್ನುವುದರ ಜೊತೆಗೆ ಐತಿಹಾಸಿಕವೆನ್ನಬಹುದಾದ ರಾಜಕೀಯ ವಿದ್ಯಮಾನಗಳನ್ನು ಅವಲಂಬಿಸಿ ಕಟ್ಟಿದ ಕಥೆ ಇದರ ವಸ್ತು. ರಾಜಕೀಯ ಕುಟಿಲತೆಯ ನಡುವೆಯೂ ಅಕುಟಿಲ ಸ್ನೇಹದ ಮೌಲ್ಯವನ್ನು ಎತ್ತಿಹಿಡಿಯುವ ಮೈತ್ರಿಯ ವಿಜಯ ಎನ್ನಬಹುದಾದ ಈ ಕೃತಿ ವಿಶೇಷ ರೀತಿಯ ವೀರರಸವನ್ನು ಪ್ರತಿಪಾದಿಸುತ್ತದೆ. ವಿಪುಲವಾದ ಸಂಸ್ಕೃತ ನಾಟಕ ಸಾಹಿತ್ಯದಿಂದ ಶ್ರೀಕಂಠಯ್ಯನವರು ಅನುವಾದಕ್ಕೆ ಇದನ್ನೇ ಆಯ್ಕೆ ಮಾಡಿಕೊಂಡದ್ದರಲ್ಲಿ, ಅನುವಾದಿತ ಪದ್ಯ-ಗದ್ಯ ಭಾಗಗಳ ಸಹಜ ಮನೋಹರತೆಯಲ್ಲಿ ಅವರ ಸದಭಿರುಚಿಯನ್ನೂ, ವಿದಗ್ಧತೆಯನ್ನೂ ಕಾಣಬಹುದು.

**ಶಾಸ್ತ್ರ**

'ಕನ್ನಡ ಮಧ್ಯಮ ವ್ಯಾಕರಣ' (1939, ಮೊದಲ ಮುದ್ರಣ): ಸುಮಾರು 182 ಪುಟಗಳ ಈ ವ್ಯಾಕರಣ ಗ್ರಂಥ ಹೊಸಗನ್ನಡ ಭಾಷೆಯ ಅಭ್ಯಾಸ ಮತ್ತು ಬೆಳವಣಿಗೆಗೆ ಪೂರಕವಾಗಿ ಉದ್ದೇಶಿಸಿ ರಚಿತವಾದ ವ್ಯಾಕರಣ ಗ್ರಂಥಗಳ ತ್ರಿವೇಣಿಯಲ್ಲಿ (ಇನ್ನೆರಡು: ಎ.ಎನ್. ನರಸಿಂಹಯ್ಯನವರ 'ಕನ್ನಡ ಪ್ರಥಮ ವ್ಯಾಕರಣ'; ಎಸ್.ಐ.ಶಿವರಾಮಯ್ಯನವರ 'ಕನ್ನಡ ಪ್ರೌಢ ವ್ಯಾಕರಣ') ಅತ್ಯಂತ ಜನಪ್ರಿಯವಾದ ಪುಸ್ತಕ. ಇದಕ್ಕೆ ಕಾರಣ ಈ ಗ್ರಂಥದ ಹಿನ್ನೆಲೆಗೆ ಇದ್ದ ಭಾಷಾ ಶಾಸ್ತ್ರೀಯ ದೃಷ್ಟಿ. ವ್ಯಾಕರಣ ಗ್ರಂಥದಲ್ಲಿ ಸೂತ್ರಗಳಿಗಿಂತ ಹೆಚ್ಚಾಗಿ ವಿವರಣೆಗಳು, ವಿವರಣೆಗಳಿಗಿಂತ ಹೆಚ್ಚಾಗಿ ಉದಾಹರಣೆಗಳು ಬಂದರೆ ವಿದ್ಯಾರ್ಥಿಗಳಿಗೆ ಕ್ಲೇಶ ಕಡಿಮೆಯಾಗಿ ಆಸಕ್ತಿ ಹೆಚ್ಚುತ್ತಾ ಹೋಗಬಹುದು ಎಂಬ ಆದರ್ಶವನ್ನು ಇಟ್ಟುಕೊಂಡು ಉದಾಹರಣೆಯ ವಾಕ್ಯಗಳಲ್ಲಿ ಸ್ವಾರಸ್ಯ ವೈವಿಧ್ಯಗಳನ್ನು ಕಾಯ್ದುಕೊಂಡು ಬರೆದಂಥ ವ್ಯಾಕರಣ ಇದು. ಇದರಲ್ಲಿ ಕನ್ನಡ ವ್ಯಾಕರಣಗಳ ಪರಂಪರೆಯ ಕೆಲವು ನಿರಾಧಾರವಾದ ಪದ್ಧತಿಗಳನ್ನು ಧೈರ್ಯವಾಗಿ ಉಲ್ಲಂಘಿಸಿ ನೂತನವಾದ ವಿಧಾನಗಳನ್ನು ಅನುಸರಿಸಿದೆ. ಹೀಗೆ ನಿರೂಪಿಸಿದ ಅಂಶಗಳಿಗೆ ಕನ್ನಡ ಭಾಷಾಚರಿತ್ರೆಯಲ್ಲಿ ದೃಢವಾದ ಆಧಾರಗಳಿದ್ದವು. ಕನ್ನಡ ಮಾತಿನ ರೂಢಿ ಮಕ್ಕಳಿಗೆ ಪರಿಚಯವಾಗಿ ವ್ಯಾಕರಣವನ್ನು ಪಾಠ ಹೇಳುವುದು ಪ್ರಿಯವಾದ ಕೆಲಸವಾಗಬೇಕೆಂದು ತೀ.ನಂ.ಶ್ರೀ. ಇದರಲ್ಲಿನ ಸಾವಿರಾರು ಉದಾಹರಣೆಗಳನ್ನು ಸಂಯೋಜಿಸಿದರು. ಈ ಪ್ರಯೋಗಗಳನ್ನು ಓದುತ್ತ ಹೋಗುವ ಕನ್ನಡದ ಅಭ್ಯಾಸಿಗಳಿಗೆ ತೀ.ನಂ.ಶ್ರೀ.ಯವರು ಮತ್ತು ಅವರ ತಲೆಮಾರಿನ ಕನ್ನಡಿಗರ ಒಂದು ಆಲೋಚನಾ ವಿಧಾನವೇ ಅರಿವಿಗೆ ಬರುತ್ತದೆ.

'ಭಾರತೀಯ ಕಾವ್ಯ ಮೀಮಾಂಸೆ' (ಮೊದಲ ಮುದ್ರಣ 1953): ಶಾಸ್ತ್ರ ಸಾಹಿತ್ಯಗಳ ಅಭ್ಯಾಸಕ್ಕೆ ತೀ.ನಂ.ಶ್ರೀ. ಅವರು ಕನ್ನಡಿಗರಿಗೆ ಕೊಟ್ಟ ಸಾರ್ಥಕ ಕೊಡುಗೆ ಇದು. ಅವರ ಹೆಸರು ಈ ಗ್ರಂಥ ಮತ್ತದರ ವಿಷಯಗಳ ಜೊತೆ ಚಿರಕಾಲ ಉಳಿಯಬಹುದೆಂಬಂತೆ ಕಾಣುತ್ತದೆ. ಇದನ್ನು ಬರೆಯಲು ಪ್ರೇರಣೆ ಕೊಟ್ಟು ನೇಮಿಸಿದವರು ಆಚಾರ್ಯ ಬಿ.ಎಂ.ಶ್ರೀ.ಯವರು. ಬರೆಯತೊಡಗಿದಾಗ ಜೊತೆಗೆ ನಿಂತು ನೆರವು ಕೊಟ್ಟವರು ಪ್ರೊ. ಎಂ. ಹಿರಿಯಣ್ಣನವರು. ಒಂದು ರೀತಿಯಲ್ಲಿ ಈ ಇಬ್ಬರು ಆಚಾರ್ಯ ಪುರುಷರಿಗೆ ತೀ.ನಂ.ಶ್ರೀ.ಯವರು ಕೊಟ್ಟ ಗುರುದಕ್ಷಿಣೆಯೇ ಈ ಗ್ರಂಥ ಎನ್ನಬಹುದು. ತೀ.ನಂ.ಶ್ರೀ.ಯವರಿಗೆ ಈ ಗ್ರಂಥದ ಹೃದಯವೆನ್ನ ಬಹುದಾದ ರಸಧ್ವನಿ ತತ್ವವನ್ನು ಪಾಠ ಹೇಳಿದ್ದವರು ಪ್ರೊ. ಹಿರಿಯಣ್ಣನವರು. ಇದರ ರಚನೆಯ ಕಾರ್ಯವನ್ನು ಕೈಗೆತ್ತಿಕೊಂಡಾಗ ಪ್ರಾಧ್ಯಾಪಕ ಪದವಿಯಿಂದ ನಿವೃತ್ತರಾಗಿದ್ದ ಹಿರಿಯಣ್ಣನವರು ಮತ್ತೊಮ್ಮೆ ಆನಂದವರ್ಧನನ 'ಧ್ವನ್ಯಾಲೋಕ'ವನ್ನು ಪಾಠ ಮಾಡಲು ಒಪ್ಪಿಕೊಂಡರಂತೆ. ಒಂದೂವರೆ ವರ್ಷಕಾಲದ ಈ ವಿಶೇಷ ಪಾಠದ ಅನುಭವ ಅನಿರ್ವಚನೀಯವಾಗಿದ್ದಿತೆಂದು ತೀ.ನಂ.ಶ್ರೀ. ಹೇಳಿಕೊಂಡಿದ್ದಾರೆ. ಬರವಣಿಗೆ ಮುಗಿದಾಗ ಅದರ ಅನೇಕ ಅಧ್ಯಾಯಗಳನ್ನು ಓದಿ ಅದರ ಪರಿಷ್ಕರಣ ಕಾರ್ಯಕ್ಕೂ ಅವರು ನೆರವಾದರಂತೆ.

476 ಪುಟಗಳ ಈ ಗ್ರಂಥ ಭಾರತೀಯ ಕಾವ್ಯಲಕ್ಷಣಶಾಸ್ತ್ರ ಗ್ರಂಥಗಳ ಪರಂಪರೆಯನ್ನು ಸಾವಿರ ಪುಟಗಳಲ್ಲಿ ಹೇಳಲಾರದಷ್ಟು ಸಮಗ್ರವಾಗಿ ಪರಿಚಯ ಮಾಡಿಕೊಡುತ್ತದೆ. 'No Indian Language has a book that can even distantly approach Bharathiya Kavya Mimamse' ಎಂದು ಪ್ರೊ. ಡಿ.ಎಲ್.ಎನ್. ಹೇಳಿದ್ದು ನಿರಾಧಾರವಾದ ಮಾತಲ್ಲ. ತೌಲನಿಕ ಕಾವ್ಯಮೀಮಾಂಸಾ ಶಾಸ್ತ್ರಕ್ಕೆ ಭರತಖಂಡದ ಕೊಡುಗೆ ರಸ-ಧ್ವನಿ-ಔಚಿತ್ಯ ತತ್ವಗಳು. ಇವುಗಳ ಸಾರವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಆಧುನಿಕ ಗ್ರಂಥ ಕನ್ನಡದಲ್ಲಿ ಇರಲಿಲ್ಲ. ಈ ಕೊರತೆಯನ್ನು ತೀ.ನಂ.ಶ್ರೀ.ಯವರ ಗ್ರಂಥ ತುಂಬಿತು. ಇದು ಹೊರ ಬಂದ ಕಾಲಕ್ಕೆ ಇಂಗ್ಲಿಷ್ ಭಾಷೆಯಲ್ಲಿ ಕೂಡ ಈ ವಿಷಯವನ್ನು ಕುರಿತ ಒಂದು ಸಮಗ್ರ ಕೃತಿ ಇರಲಿಲ್ಲವೆಂಬುದು ಈ ಗ್ರಂಥದಲ್ಲಿ ಬಳಸಿಕೊಂಡಿರುವ ಪರಾಮರ್ಶನ ಗ್ರಂಥಗಳ ಪಟ್ಟಿಯಿಂದ

ತಿಳಿಯುತ್ತದೆ. ಗ್ರಂಥದ ಮನೋಹರತೆಯನ್ನು ಹೆಚ್ಚಿಸಿರುವ ಇನ್ನೊಂದು ವಿಶೇಷವೆಂದರೆ ಇದನ್ನು ಓದಿ ಮುಗಿಸಿದಾಗ ಭಾರತೀಯ ಕಾವ್ಯ ಮೀಮಾಂಸೆಯ ಪರಿಚಯವಾದ ಅನುಭವದ ಜೊತೆಗೆ ಕನ್ನಡ ಸಾಹಿತ್ಯವನ್ನು ದಿಗ್ದರ್ಶನ ಮಾಡದ ಅನುಭವವಾಗುತ್ತವೆ. ಏಕೆಂದರೆ ಇಲ್ಲಿ ಬರುವ ಶ್ರೇಷ್ಠ ಕಾವ್ಯಗಳೆಲ್ಲದರಿಂದಲೂ ಅನರ್ಘ್ಯವಾದ ರಸದುಂಬಿಗಳನ್ನು ಆರಿಸಿ ಕೊಟ್ಟಿದ್ದಾರೆ. ಸದ್ಯಕ್ಕೆ ತೀ.ನಂ.ಶ್ರೀ.ಯವರ ಪ್ರಕಟಿತ ಕೃತಿಗಳಲ್ಲಿ ಇದೇ ಅವರ Magnum opus ಆಗಿ ಉಳಿಯುವ ಗ್ರಂಥ. ಈ ಗ್ರಂಥಕ್ಕೆ 'ಪಂಪ ಪ್ರಶಸ್ತಿ' ಲಭಿಸಿದೆ. ಕೃತಿ ಪ್ರಕಟವಾದ 26 ವರ್ಷಗಳ ನಂತರ ಪ್ರಶಸ್ತಿ ಬಂದಿದ್ದರೂ, ಆ ಕೃತಿಯ ಮಹತ್ವ ಮತ್ತು ಪ್ರಭಾವ ತಲೆಮಾರುಗಳು ಕಳೆದರೂ ಕಡಮೆಯಾಗದು ಎಂಬುದಕ್ಕೆ ಸಾಕ್ಷಿಯಾಗಿದೆ ಎನ್ನಬಹುದು.

**ಸಂಪಾದನೆ**

'ಹೆಣ್ಣುಮಕ್ಕಳ ಪದಗಳು'(1941): ತೀ.ನಂ.ಶ್ರೀ.ಯವರು ತಾವು ಆಯ್ದು ಸಂಪಾದಿಸಿದ ಜನಪದ ಗೀತೆಗಳ ಸಂಗ್ರಹವನ್ನು 'ಹೆಣ್ಣು ಮಕ್ಕಳ ಪದಗಳು' ಎಂದು ಕರೆದಿರುವುದು ಉಚಿತವಾಗಿದೆ. ಈ ಗೀತೆಗಳನ್ನು ಓದು ವವರ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುವ ವಸ್ತು ಹೆಣ್ಣಿನ ಹೃದಯ. ಕನ್ನಡ ನಾಡಿನ ಗ್ರಾಮೀಣ ಮಹಿಳೆಯ ನಲಿವು-ನೋವುಗಳು, ಅವಳನ್ನು ಬಾಧಿಸಿದ ಸಮಸ್ಯೆಗಳು ಈ ತ್ರಿಪದಿಗಳಲ್ಲಿ ಜೀವಸ್ರೋತವಾಗಿ ಹರಿದಿವೆ. ಗರತಿಯ ಹಾಡುಗಳೆಂದು ಪ್ರಸಿದ್ಧವಾಗಿದ್ದ ಈ ಗೀತೆಗಳನ್ನು ತೀ.ನಂ.ಶ್ರೀ. ಬಹುವಾಗಿ ಮೆಚ್ಚಿಕೊಂಡಿದ್ದರು. ಅವರ ಕಾವ್ಯ ಮೀಮಾಂಸೆ ಗ್ರಂಥದಲ್ಲಿ ಕಾವ್ಯದ ಅತ್ಯಂತ ಶ್ರೇಷ್ಠವಾದ ಮಾದರಿಗಳಿಗೆ ಇವುಗಳಲ್ಲಿ ಕೆಲವನ್ನು ಉದಾಹರಣೆಗಳಾಗಿ ಕೊಟ್ಟಿದ್ದಾರೆ.

'ಹರಿಹರ ಕವಿಯ ನಂಬಿಯಣ್ಣನ ರಗಳೆ' (1946): ಶ್ರೀ ಕಂಠಯ್ಯನವರು ತಮ್ಮ ವಿದ್ವತ್ತು ಮತ್ತು ಗ್ರಂಥ ಸಂಪಾದನ ಶಾಸ್ತ್ರದ ಜ್ಞಾನಗಳನ್ನು ಧಾರೆಯೆರೆದು ಸಂಪಾದಿಸಿದ ಪ್ರಾಚೀನ ಕನ್ನಡ ಕಾವ್ಯ ಇದು. ಹರಿಹರನ ಅತ್ಯತ್ಕೃಷ್ಟ ಕಥೆಗಳಲ್ಲಿ ಒಂದಾದ ಇದನ್ನು ಮೊಟ್ಟಮೊದಲು ಸಂಪಾದಿಸಿ ಪ್ರಕಟಿಸಿದ ಕೀರ್ತಿ ತೀ.ನಂ.ಶ್ರೀ. ಯವರದು. ಓಲೆ ಮತ್ತು ಕಾಗದದ ಹಸ್ತಪ್ರತಿಗಳನ್ನು ಉಪಯೋಗಿಸಿಕೊಂಡು ವಿಶೇಷ ಪರಿಶ್ರಮದಿಂದ ಸಂಪಾದಿಸಿದ ಈ ಅಪರೂಪದ ಗ್ರಂಥವನ್ನು ಅವರು ಪ್ರೊ. ಟಿ.ಎಸ್. ವೆಂಕಣ್ಣಯ್ಯನವರಿಗೆ ಅರ್ಪಿಸಿದ್ದಾರೆ. ಪ್ರೊ. ಟಿ.ಎಸ್. ವೆಂಕಣ್ಣನವರು ಹರಿಹರನ 'ಬಸವರಾಜ ದೇವರ ರಗಳೆ'ಯನ್ನು ಸಂಪಾದಿಸುತ್ತಿದ್ದಾಗ ಶ್ರೀಕಂಠಯ್ಯನವರೂ, ಡಿ.ಎಲ್. ನರಸಿಂಹಾಚಾರ್ಯರೂ ಅವರೊಡನೆ ದುಡಿದಿದ್ದರು. ವೀರಶೈವ ಸಾಹಿತ್ಯದ ವಿಶೇಷ ಅಧ್ಯಯನ ಮತ್ತು ನಂಬಿಯಣ್ಣನ ರಗಳೆಯ ಸಂಪಾದನ ಕಾರ್ಯಕ್ಕೆ ಇದು ಸ್ಫೂರ್ತಿಯನ್ನು ಕೊಟ್ಟಿರಬೇಕು. ಈ ಗ್ರಂಥಕ್ಕೆ ಪೂರಕವಾಗಿ ಇನ್ನೊಂದು ಸಂಪುಟದಲ್ಲಿ ಸಂಪಾದನ ಕಾರ್ಯದ ಸಮಸ್ಯೆಗಳು, ಇತರ ಭಾಷೆಗಳಲ್ಲಿ ದೊರೆಯುವ ಸೌಂದರ ನಂಬಿಯ ವೃತ್ತಾಂತಗಳು, 'ನಂಬಿಯಣ್ಣನ ರಗಳೆ' ಕಾವ್ಯದ ವಿಮರ್ಶೆ ಮುಂತಾದವುಗಳನ್ನು ಒಳಗೊಂಡ ವಿಸ್ತಾರವಾದ ಪೀಠಿಕೆ ಮತ್ತು ಟಿಪ್ಪಣಿ ಶಬ್ದಕೋಶಗಳನ್ನು ಪ್ರಕಟಿಸುವ ಉದ್ದೇಶವನ್ನು ತೀ.ನಂ.ಶ್ರೀ.ಯವರು ಇದರ ಮುನ್ನುಡಿಯಲ್ಲಿ ವ್ಯಕ್ತಪಡಿಸಿದ್ದರು. ಆ ಸಂಪುಟ ಪ್ರಕಟವಾಗಲೇ ಇಲ್ಲ. ಅದಕ್ಕಾಗಿ ಅವರು ಮಾಡಿದ್ದ ಅಧ್ಯಯನ ಮತ್ತು ಸಿದ್ಧತೆಗಳು ಕನ್ನಡದ ಅಭ್ಯಾಸಿಗಳಿಗೆ ದೊರೆಯದೆ ಹೋದವು.

'ರನ್ನ ಕವಿಯ ಗದಾಯುದ್ಧ ಸಂಗ್ರಹಂ' (ಮೊದಲ ಮುದ್ರಣ 1949): ತೀ.ನಂ.ಶ್ರೀ. ಸಂಪಾದಿಸಿದ ಇನ್ನೊಂದು ವಿದ್ವತ್ಪೂರ್ಣ ಕೃತಿ ಇದು. ತೊಂಬತ್ತೆರಡು ಪುಟಗಳಷ್ಟು ಪಠ್ಯಭಾಗವಿರುವ ಈ ಸಂಗ್ರಹಕ್ಕೆ ಕೊಟ್ಟಿರುವ ಟಿಪ್ಪಣಿಗಳು ನೂರಾಹದಿನಾರು ಪುಟಗಳಷ್ಟು. ಈ ಟಿಪ್ಪಣಿಗಳು ಹಳಗನ್ನಡ ಭಾಷೆ ಕಾವ್ಯಗಳನ್ನು ಅಭ್ಯಾಸ ಮಾಡುವವರಿಗೆ ಒಂದು ಅನನ್ಯವಾದ ವಸ್ತುಕೋಶವಾಗಿರುವುದಲ್ಲದೆ ಹಳೆಯ ಕಾವ್ಯಗಳಿಗೆ ಬರೆಯಬೇಕಾದ ಟಿಪ್ಪಣಿಗಳಿಗೆ ಒಂದು ಮಾದರಿಯೂ ಆಗಿವೆ. 1895ರಷ್ಟು ಹಿಂದೆ ಇಬ್ಬರು ವಿದ್ವಾಂಸರುಗಳು ಈ ಕಾವ್ಯವನ್ನು ಸಂಪಾದಿಸಿ ಪ್ರಕಟಿಸಿದ್ದರಾದರೂ ಅದರಲ್ಲಿ ಹಲವು ಕೊರತೆಗಳಿದ್ದುವು. ಮೂಲ ಮಾತೃಕೆಗಳ ನಕಲುಗಳನ್ನು ಅಭ್ಯಸಿಸಿ ಮಾಡಬೇಕಾಗಿದ್ದ ಇನ್ನೊಂದು ಪರಿಷ್ಕರಣದ ಅಗತ್ಯವನ್ನು ಈ ಕೃತಿ ಪೂರೈಸಿತು. ಇದರ ಟಿಪ್ಪಣಿಗಳಲ್ಲಿ ಕೊಟ್ಟಿರುವ ವಿವರಣೆಗಳಿಗೆ ತಿದ್ದುಪಡಿ ಕೊಡುವಂಥ ಸಂದರ್ಭಗಳೂ, ವಿವಾದಕ್ಕೆ ಎಡೆಮಾಡಿರುವ ಅಭಿಪ್ರಾಯಗಳು ಇಂದಿಗೂ ವಿರಳ.

**ವಿಮರ್ಶೆ**

ತೀ.ನಂ.ಶ್ರೀ.ಯವರ ವಿಮರ್ಶೆ 'Appreciate and do otherwise' ಎಂಬ ಉದಾರ ದೃಷ್ಟಿಯದು. ಅದರ ವಿಧಾನ ವರ್ಣನಾತ್ಮಕ. ಅವರು ಬರೆದ ವಿಮರ್ಶಾ ಕೃತಿಗಳ ಸಂಖ್ಯೆ ಕೂಡ ಕಡಮೆ.

'ಪಂಪ' (ಮೊದಲ ಮುದ್ರಣ1939): ಪಂಪನು ಕನ್ನಡದ ಆದಿಕವಿ. ಕನ್ನಡದ ಶ್ರೇಷ್ಠ ಕವಿಗಳ ಸಾಲಿನಲ್ಲೂ ಅವನಿಗೇ ಮೊದಲ ಸ್ಥಾನ. ಇಂಥವನ ಬಗೆಗೆ ಸುಮಾರು ನೂರು ವರ್ಷಗಳಲ್ಲಿ ('ವಿಕ್ರಮಾರ್ಜುನ ವಿಜಯ' ಮೊದಲು ಪ್ರಕಟವಾದದ್ದು 1898) ಕನ್ನಡದಲ್ಲಿ ಬಂದಿರುವ ಗಮನಾರ್ಹವಾದ ವಿಮರ್ಶೆಯ ಗ್ರಂಥಗಳು ಮೂರು ಮಾತ್ರ: ತೀ.ನಂ.ಶ್ರೀ. ಯವರ 'ಪಂಪ', ದಿ. ಮುಳಿಯ ತಿಮ್ಮಪ್ಪಯ್ಯನವರ 'ನಾಡೋಜ ಪಂಪ' ಮತ್ತು ಐ.ಬಿ.ಹೆಚ್. ಪ್ರಕಾಶನ ಸಂಸ್ಥೆಯಿಂದ ಪ್ರಕಟವಾದ, ದಿವಂಗತ ವಿ.ಸೀ. ಸಂಪಾದಿಸಿದ, 'ಪಂಪ'. ಈ ಮೂರರಲ್ಲಿ ತೀ.ನಂ.ಶ್ರೀ.ಯವರ ಪುಸ್ತಕವೇ ಅತ್ಯಂತ ಚಿಕ್ಕದು. ಇದು ಮೈಸೂರು ವಿ.ವಿ.ನಿಲಯದ ಪ್ರಚಾರೋಪನ್ಯಾಸ ಮಾಲೆಗಾಗಿ ತಯಾರಿಸಿದ ಪ್ರವಚನ ಟಿಪ್ಪಣಿ ಮಾತ್ರ. ಆದರೂ ಪಂಪನ ಬಗೆಗೆ ತತ್‌ಕ್ಷಣದ ಪರಿಚಯ ಬೇಕೆಂದರೆ ಇದನ್ನೇ ಓದಬೇಕು ಮತ್ತು ಮಿಕ್ಕೆರಡು ಪುಸ್ತಕಗಳನ್ನು ಓದಿದ ಮೇಲೂ ಈ ಪುಸ್ತಕವನ್ನೇ ಮತ್ತೆ ಓದಬೇಕು ಅನಿಸದೆ ಇರದು. ಸರ್ವಾಂಗ ಸುಂದರವಾಗಿ ಕಂಡರಿಸಿದ ಪಂಪನ ಅಖಂಡ ಚಿತ್ರ ಸಿಗುವುದು ಇದರಲ್ಲೇ. ತೀ.ನಂ.ಶ್ರೀ.ಯವರ ಬರವಣಿಗೆಯ ಸ್ಫುರದುತ್ಸಾಹ ದಿಂದ ಕೂಡಿದ ನಿರರ್ಗಳತೆಯ ಒಂದು ಮಾದರಿಯನ್ನು ಈ ಪುಸ್ತಕದಲ್ಲಿ ಕಾಣಬಹುದು. ನಮಗೆ ದೂರವಾದ ಹಳಗನ್ನಡದಲ್ಲಿ ಬರೆದ, ಅದರಿಂದಲೇ ಕಠಿಣವಾದ, ಪಂಪನ ಕಾವ್ಯ ಕನ್ನಡ ಸಾರಸ್ವತ ಲೋಕದಲ್ಲಿ ಜನಪ್ರೀತಿಯನ್ನು ಸಂಪಾದಿಸಿದ್ದರೆ ಅದು ತೀ.ನಂ.ಶ್ರೀ.ಯವರಂಥ ಪ್ರವಚನಕಾರರು ಮತ್ತು ಲೇಖಕರಿಂದ. ಒಂದು ಹೆಜ್ಜೆ ಮುಂದುವರಿದು ಹೇಳುವುದಾದರೆ ಈ ಪುಸ್ತಿಕೆಯಲ್ಲಿ ಪಂಪನ ವ್ಯಕ್ತಿತ್ವದ ದರ್ಶನವಾದಂತೆಯೇ ತೀ.ನಂ.ಶ್ರೀ.ಯವರ ಮನೋಧರ್ಮ, ವ್ಯಕ್ತಿತ್ವಗಳ ದರ್ಶನವೂ ಆಗುತ್ತದೆ.

ಕನ್ನಡದ ಕವಿತೆಗಳಲ್ಲಿ ತೀ.ನಂ.ಶ್ರೀ.ಯವರ ಪ್ರಥಮ ಆಯ್ಕೆ ಪಂಪನೇ ಎಂದು ಹೇಳಬಹುದು. ಈ ಪುಸ್ತಿಕೆಯ ಕಡೆಯಲ್ಲಿ ಒಪ್ಪಬಹುದಾದಂಥ ಕಾರಣಗಳನ್ನು ಕೊಟ್ಟು ಸಂಸ್ಕೃತದ ಕವಿ ಕಾಳಿದಾಸನ ಜೊತೆಗೆ ಪಂಪನನ್ನು

ಹೋಲಿಸುತ್ತ "ಇವರಿಬ್ಬರಲ್ಲಿ ಹಿರಿಯವನು ಕಾಳಿದಾಸ- ಕಾಲದಲ್ಲಿ ಮಾತ್ರವಲ್ಲ, ಪ್ರತಿಭೆಯಲ್ಲಿ ಕೂಡ. ಇದನ್ನೊಪ್ಪಿ ಕೊಂಡು, ಧೈರ್ಯವಾಗಿ ಈ ಮಾತನ್ನು ಹೇಳಬಹುದು : ಪಂಪನು ಕನ್ನಡದ ಕಾಳಿದಾಸ" ಎಂದು ಹೇಳಿದ್ದಾರೆ. ತೀ.ನಂ.ಶ್ರೀ.ಯವರ ಈ ತೀರ್ಪು ಇನ್ನೂ ವಿವಾದಕ್ಕೆ ಒಳಗಾಗಿಲ್ಲ.

'ಕಾವ್ಯ ಸಮೀಕ್ಷೆ' (ಮೊದಲ ಮುದ್ರಣ 1947): ಇದು ಐದು ಸಮೀಕ್ಷಾ ಲೇಖನಗಳ ಸಂಕಲನ. ಪುಸ್ತಕ 1942ರಲ್ಲಿ ಪ್ರಕಟವಾಗಿದ್ದರೂ ಅಲ್ಲಿನ ಲೇಖನಗಳು 1942ಕ್ಕಿಂತ ಹಿಂದೆ ಬರೆದವು. ಒಂದು ಲೇಖನದ ಭಾಗವಂತೂ 1933ರಷ್ಟು ಹಿಂದೆ ಬರೆದದ್ದು. ಈ ಎಲ್ಲ ಲೇಖನಗಳಲ್ಲೂ ತೀ.ನಂ.ಶ್ರೀ.ಯವರ ಆರಂಭದ ಬರವಣಿಗೆಯ ಲಕ್ಷಣಗಳೆನ್ನಬಹುದಾದ ವಿದ್ವತ್ತಿನ ಭಾರವನ್ನು ಕಾಣಬಹುದು. ಇವುಗಳ ವಿಶೇಷವೆಂದರೆ ಅಲ್ಲಿನ ಸೂಕ್ಷ್ಮವಾದ ವಿವರಗಳು, ನಿರ್ಣಯಗಳು (ಉದಾಹರಣೆಗೆ, 'ಕಾಳಿದಾಸನ ನಾಟಕಗಳಲ್ಲಿ ದುರಂತ ವಸ್ತುವಿನ್ಯಾಸ' ಎಂಬ ದೀರ್ಘ ಲೇಖನ) ವಿವಾದವನ್ನು ಉಂಟು ಮಾಡುವಂಥವು. ಮೊದಲೆರಡು ಲೇಖನಗಳು ಕಾಳಿದಾಸನ ನಾಟಕದ ವಸ್ತು ಮತ್ತು ಪಾತ್ರಗಳನ್ನು ಕುರಿತವು. ಶ್ರೀಯವರ 'ಅಶ್ವತ್ಥಾಮನ್', 'ಪಾರಸಿಕರು' ಈ ನಾಟಕಗಳ ರಚನೆಯಿಂದ ಪ್ರಾರಂಭವಾಗಿದ್ದ ಪಾಶ್ಚಾತ್ಯ ರುದ್ರನಾಟಕಗಳ ಬಗೆಗಿನ ಹೊಸ ಪ್ರೇಮದ ಹಿನ್ನೆಲೆಯಲ್ಲಿ ಭಾರತೀಯ ನಾಟಕಗಳ ವಸ್ತುವಿನಲ್ಲಿದ್ದ ಸಹಜ ದುರಂತವನ್ನು ಸುಖಾಂತವಾಗಿ ಮಾರ್ಪಡಿಸುತ್ತಿದ್ದ ನಮ್ಮ ಕವಿಗಳ ವಿವೇಕವನ್ನು ಒರೆಹಚ್ಚಿ ನೋಡುವ ಪ್ರಯತ್ನ ಮೊದಲ ಲೇಖನದಲ್ಲಿದೆ. ಶಾಕುಂತಲವನ್ನು ಕುರಿತ ಎರಡನೆಯ ಲೇಖನದಲ್ಲಿ ಕಾಳಿದಾಸನ ದೃಷ್ಟಿಯನ್ನು ಅನುಮೋದಿಸಿದಲ್ಲದೆ ವಿಧಿಯಿಲ್ಲ ಎಂಬ ನಿಲುವಿಗೆ ತೀ.ನಂ.ಶ್ರೀ. ಬಂದಂತೆ ಕಾಣುತ್ತದೆ. ಆದ್ದರಿಂದಲೇ ಶಾಕುಂತಲವನ್ನು ಬೇಷರತ್ತಾಗಿ ಮೆಚ್ಚಿಕೊಂಡಿದ್ದಾರೆ. ಮೊದಲ ಲೇಖನ ಇತ್ತ ಕಾಳಿದಾಸನ ವೈಯಕ್ತಿಕ ವಿವೇಕದ ಟೀಕೆಯೂ ಅಲ್ಲದ, ಅತ್ತ ಭಾರತೀಯ ಜೀವನದ ವಿವೇಕ ಟೀಕೆಯೂ ಅಲ್ಲದ ಒಂದು ವಿಫಲ ಜಿಜ್ಞಾಸೆಯಾಗಿದೆ. ಈ ಎರಡೂ ಲೇಖನಗಳ ಒಟ್ಟು ತಾತ್ಪರ್ಯವೆಂದರೆ ಕಾಳಿದಾಸನು ತನ್ನ 'ಮಾಲವಿಕಾಗ್ನಿಮಿತ್ರ' ಮತ್ತು 'ವಿಕ್ರಮೋರ್ವಶೀಯ' ನಾಟಕಗಳಲ್ಲಿ ಸೋತಿದ್ದಾನೆ, ಶಾಕುಂತಲ ನಾಟಕದಲ್ಲಿ ಗೆದ್ದಿದ್ದಾನೆ ಎಂಬುದು. ದುರಂತವೇ, ಸುಖಾಂತವೇ ಎಂಬ ಚರ್ಚೆ ಗೌಣವಾಗುತ್ತದೆ. ಮೂರನೆಯ ಲೇಖನ ಕನ್ನಡ ಕವಿ ಜನ್ನನ ಎರಡು ಕಾವ್ಯಗಳನ್ನು ಕುರಿತದ್ದು; ಈ ಪ್ರಣಯ ಕಾವ್ಯಗಳಲ್ಲಿ ವರ್ಣಿತವಾಗಿರುವ ವಿಧಿವಿಲಾಸದ ನಿಗೂಢತೆಯ ಜಿಜ್ಞಾಸೆ. ಕವಿಗಳ ಪ್ರತಿಭೆ, ಲೋಕಾನುಭವಗಳು ಧಾರ್ಮಿಕ ಉದ್ದೇಶದ ನಿರ್ಬಂಧಕ್ಕೆ ಸಿಕ್ಕಿದಾಗ ಇಂಥ ಹುಸಿ ಜಿಜ್ಞಾಸೆಗೆ ಅವಕಾಶವಾಗುತ್ತದೆ. ನಾಲ್ಕನೆಯ ಲೇಖನ ಕುಮಾರವ್ಯಾಸನ ಭಾರತದ ಶೃಂಗಾರ ಸನ್ನಿವೇಶಗಳನ್ನು ಕುರಿತ ವಿವೇಚನೆ; ವೀರರಸವನ್ನೂ, ವೈರಾಗ್ಯವನ್ನೂ ಚಿತ್ರಿಸುವಾಗಿನ ಪರಿಣತಿಯನ್ನೇ ಶೃಂಗಾರದ ಚಿತ್ರಣದಲ್ಲೂ ತೋರಿಸಬಲ್ಲ ಕುಮಾರವ್ಯಾಸನ ಸವ್ಯಸಾಚಿತ್ವದ ಮುಕ್ತ ಪ್ರಶಂಸೆ. 'ಮಹದೇವಿಯಕ್ಕನ ಕೆಲವು ವಚನಗಳು' ಎಂಬ ಐದನೆಯ ಲೇಖನ ಹೆಚ್ಚು ಸಂಯಮದಿಂದ ಕೂಡಿದ್ದು ಸಂಶೋಧನಾತ್ಮಕವಾಗಿದೆ. ಒಟ್ಟಾರೆ ಈ ಯಾವ ಲೇಖನವೂ ತೀ.ನಂ.ಶ್ರೀ.ಯವರನ್ನು ಒಬ್ಬ ವಿಮರ್ಶಕರನ್ನಾಗಿ ಪ್ರತಿಷ್ಠಾಪಿಸುವುದಿಲ್ಲ; ಬದಲಾಗಿ ಅವರ ವಿದ್ವತ್ತು ಮತ್ತು ಬಹುಶ್ರುತತ್ವಗಳನ್ನೇ ಪ್ರಕಾಶಕ್ಕೆ ತರುತ್ತದೆ.

'ಸಮಾಲೋಕನ' (ಮೊದಲ ಮುದ್ರಣ1958); ತೀ.ನಂ.ಶ್ರೀ. ಅವರು ಮೊದಲಿನಿಂದ ಆಗಾಗ ಬರೆದ ಹಲವು ಬಗೆಯ ಇಪ್ಪತ್ತೈದು ಲೇಖನಗಳನ್ನು ಒಟ್ಟು ಗೂಡಿಸಿರುವ ಸಂಕಲನ ಇದು. ಇದರಲ್ಲಿನ ಹತ್ತು ಲೇಖನಗಳು ಭಾಷೆ, ವ್ಯಾಕರಣ ಮತ್ತು ಛಂದಸ್ಸನ್ನು ಕುರಿತಂಥವು. ಇವು ಅವರ ಶಾಸ್ತ್ರಸಾಹಿತ್ಯ ವಿಭಾಗಕ್ಕೆ ಬರ ಬೇಕಾದವು. ಇನ್ನುಳಿದವು ಪತ್ರಿಕೆಗಳಿಗೆ ಬರೆದ ವಿಮರ್ಶೆಗಳು, ವಿಶೇಷ ಸಂಚಿಕೆಗಳಿಗೆ ಬರೆದ ಲೇಖನಗಳು, ವಿಶೇಷ ಸಮಾರಂಭಗಳಲ್ಲಿ ಮಾಡಿದ ಉಪನ್ಯಾಸಗಳು ಮತ್ತು ಗ್ರಂಥಗಳಿಗೆ ಬರೆದ ಪ್ರಸ್ತಾವನೆಗಳು ಇತ್ಯಾದಿ. 'ಇಂಗ್ಲೀಷ್ ಗೀತೆಗಳು' ಮತ್ತು 'ಅಹಲ್ಯೆ' ಲೇಖನಗಳು ಅದೇ ಹೆಸರಿನ ಎರಡು ಪ್ರಸಿದ್ಧ ಹೊಸಗನ್ನಡ ಪುಸ್ತಕಗಳಿಗೆ ಬರೆದ ಪ್ರಸ್ತಾವನೆಗಳು. ಇವು ಆ ಕೃತಿಗಳನ್ನು ಕುರಿತ ತಲಸ್ಪರ್ಶಿಯಾದ ಲೇಖನಗಳಾಗಿದ್ದು ಆ ಬಗೆಗೆ ಇಲ್ಲಿ ಬಂದಿರುವುದಕ್ಕಿಂತ ಹೆಚ್ಚು ವಿವರವಾದ ಪರಿಶೀಲನೆ ಬೇರೆಯವರಿಂದ ಇದುವರೆಗೆ ನಡೆದಿಲ್ಲ. ಇವು ತೀ.ನಂ.ಶ್ರೀ.ಯವರಿಗೆ ವಿಶಿಷ್ಟವಾದ ಸಹೃದಯತೆ ಮತ್ತು ವಿದ್ವತ್ತುಗಳ ಹದವಾದ ಮಿಶ್ರಣದಿಂದ ಕೂಡಿವೆ. ಭಾಷೆ ಮತ್ತು ವ್ಯಾಕರಣಕ್ಕೆ ಸಂಬಂಧಿಸಿದ ಲೇಖನಗಳ ಬಗೆಗೆ ಹೇಳುವುದಾದರೆ ಉದಾ.: 'ಕುದುರೆ', 'ಕರ್ನಾಟಕ', 'ಗೊಮ್ಮಟ' ಇತ್ಯಾದಿ) ಅವು ವಿದ್ವತ್ತಿನ ನಿಷ್ಪಕ್ಷಪಾತತೆಯೊಂದಿಗೆ ಮನೋರಂಜಕವಾಗಿಯೂ ಇವೆ. ಭಾಷೆ, ವ್ಯಾಕರಣಗಳನ್ನು ಕುರಿತು ತೀ.ನಂ.ಶ್ರೀ.ಯವರಷ್ಟು ತಿಳಿಯಾಗಿ ಹೇಳಬಲ್ಲವರು ಕನ್ನಡ ಲೇಖಕರಲ್ಲಿ ವಿರಳ, 'ಅಮರವಾಣಿ' ಎಂಬ ಲೇಖನ ಒಂದು ಸಂಸ್ಕೃತ ವಿದ್ಯಾಪೀಠದ ಘಟಿಕೋತ್ಸವದಲ್ಲಿ ಮಾಡಿದ ಸಮಾರಂಭ ಭಾಷಣವಾಗಿದ್ದು, ಸಂಸ್ಕೃತ ಭಾಷೆ ಮತ್ತು ಸಂಸ್ಕೃತ-ಕನ್ನಡಗಳ ಸಂಬಂಧವನ್ನು ಕುರಿತ ಒಂದು ಗಂಭೀರವಾದ ವಿವೇಚನೆಯಾಗಿದೆ.

ಈ ಸಂಕಲನದಲ್ಲಿ ಛಂದಸ್ಸಿಗೆ ಸಂಬಂಧಿಸಿದ ನಾಲ್ಕು ಲೇಖನಗಳಿವೆ. ಒಂದು 'ಅಪೂರ್ವ' ಷಟ್ಪದಿಯ ಲಕ್ಷಣ ಕುರಿತ ಸಂಶೋಧನಾ ಲೇಖನ. ಉಳಿದ ಮೂರು ಹೊಸಗನ್ನಡ ಛಂದಸ್ಸಿನ ಅಭ್ಯಾಸಕ್ಕೆ ಅಸ್ತಿಭಾರ ಎನ್ನಬಹುದಾದ ಮಹತ್ವದ ಲೇಖನಗಳು. ಈ ಲೇಖನಗಳಲ್ಲಿ ಹೊಸ ಕಾವ್ಯಕ್ಕೆ ಸಂಸ್ಕೃತ ಛಂದೋವೃತ್ತಗಳ ಅಳವಡಿಕೆಯಲ್ಲಿ ಉಂಟಾದ ಕೊರತೆಗಳನ್ನು ಸ್ಪಷ್ಟಪಡಿಸಿ ಅದಕ್ಕೆ ಹೊಸ ಮಟ್ಟುಗಳ ಅವಶ್ಯಕತೆ ಹೇಗೆ ಉಂಟಾಯಿತು ಎಂಬುದನ್ನು ಮನವರಿಕೆ ಮಾಡಿಕೊಟ್ಟಿದೆ. ಒಂದು ರೀತಿಯಲ್ಲಿ ಇದು ಹೊಸ ಕವಿಗಳು ಮಾಡಹೊರಟಿದ್ದ ಸಹಜ ಪ್ರಯೋಗಗಳ ಸಮರ್ಥನೆ. ಸಂಪ್ರದಾಯಸ್ಥರು ಮೂಗು ಮುರಿಯುತ್ತಿದ್ದ ಸಂದರ್ಭದಲ್ಲಿ ತೀ.ನಂ.ಶ್ರೀ.ಯವರು ಅವುಗಳನ್ನು ಬಲವಾಗಿ ಸಮರ್ಥಿಸಿ ಅವು ನಮ್ಮ ಹಿಂದಿನ ಕಾವ್ಯದಲ್ಲೇ ಇದ್ದು ವಿರಳವಾಗಿ ತಲೆಯೆತ್ತಲು ಪ್ರಯತ್ನಿಸುತ್ತಿದ್ದ, ಕನ್ನಡದ ಜನಪದ ಸಾಹಿತ್ಯದಲ್ಲಿ ಪ್ರಚುರವಾಗಿದ್ದು ವಿದ್ವತ್ ಮನ್ನಣೆಯನ್ನು ಪಡೆಯದೆ ಇದ್ದ ದೇಶೀಯ ವಸ್ತುವೇ ಹೊರತು ಪರಕೀಯವಲ್ಲ ಎಂಬುದನ್ನು ಮನವರಿಕೆ ಮಾಡಿಕೊಟ್ಟರು. ಅದನ್ನು ಅವರು 'ಬಹಿಷ್ಕೃತರನ್ನು ಉದ್ಧರಿಸುವ ಕಾರ್ಯ' ಎಂದಿದ್ದಾರೆ. ಕನ್ನಡ ಛಂದಸ್ಸಿಗೆ ಈ 'ಸುಖಸಂಚಾರ'ದ ಸೌಲಭ್ಯ ಉಂಟಾದದ್ದು ಇಂಗ್ಲಿಷ್ ಸಾಹಿತ್ಯದ ಸಂಪರ್ಕದಿಂದಲೇ ಎಂಬುದನ್ನು ಅವರು ಒಪ್ಪುತ್ತಾರೆ. ಇನ್ನೊಂದು ಲೇಖನದಲ್ಲಿ ಹೊಸ ಕಾವ್ಯದ ಲಯ ಪ್ರಭೇದಗಳನ್ನು ಅವುಗಳ ಸಕಲ ಸಂಕೀರ್ಣತೆಗಳೊಡನೆ ಬಿಡಿಸಿ ವಿವರಿಸಿದ್ದಾರೆ. ಅದರ ಮುಂದಿನ 'ಮಾತ್ರೆ, ಮುಡಿ, ಪದ್ಮಗಣ' ಎಂಬ ಲೇಖನದಲ್ಲಿ ಸಾಮಾನ್ಯ ದೃಷ್ಟಿಗೆ ನಿಯಮಗಳ ಉಲ್ಲಂಘನೆಯಂತೆ ಕಾಣುವ ವೈವಿಧ್ಯಗಳನ್ನೆಲ್ಲಾ ಪಟ್ಟಿಮಾಡಿ, ಅವು ಕೂಡಾ ದ್ರಾವಿಡ ಛಂದಸ್ಸಿನ ಅಂಶಗಣದಿಂದ ಸ್ಫುರಿಸಿದವು ಎಂಬುದನ್ನು ಗುರುತಿಸಿ, ಹೊಸ ಹೆಸರುಗಳನ್ನು ಕೊಟ್ಟು ಅವುಗಳ ಅಭ್ಯಾಸಕ್ಕೆ ಒಂದು ಶಾಸ್ತ್ರೀಯವಾದ ವ್ಯವಸ್ಥೆಯನ್ನು ಕಲ್ಪಿಸಿದ್ದಾರೆ. ಅವರು ಈ ಲೇಖನಗಳಲ್ಲಿ

ಕೊಟ್ಟ ಮುಡಿ, ಪದ್ಮಗಣ, ಗಣಪರಿವೃತ್ತಿ, ಕಂಪಿತ ಮೊದಲಾದ ಪದಗಳು ಈಗಾಗಲೇ ಹೊಸ ಛಂದಸ್ಸಿನ ಅಧ್ಯಯನದಲ್ಲಿ ಸುಪರಿಚಿತವಾಗಿವೆ. ಈ ಲೇಖನಗಳು ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ತೀ.ನಂ.ಶ್ರೀ.ಯವರು ಕೊಟ್ಟ ಮಹತ್ವದ ಕೊಡುಗೆ ಅನ್ನುವುದರ ಜೊತೆಗೆ ಈ ಲೇಖನಗಳನ್ನು ಓದಿದಾಗ ಅದುತನಕ ಬಂದಿರುವ ಕನ್ನಡ ನವೋದಯ ಕಾವ್ಯವನ್ನೆಲ್ಲಾ ಪರಿವೀಕ್ಷಿಸಿದ ತೃಪ್ತಿಯುಂಟಾಗುತ್ತದೆ. ತೀ.ನಂ.ಶ್ರೀ.ಯವರ ಕಾವ್ಯ ಮೀಮಾಂಸೆ, ಛಂದೋಧ್ಯಯನದ ಲೇಖನಗಳು ಮತ್ತು ಸಂಶೋಧನ ಲೇಖನಗಳು ಕೂಡ ಮನೋಹರವಾದ ಪದ್ಯ, ಪದ್ಯಭಾಗ ಮತ್ತು ಪ್ರಸಂಸೆಗಳಿಂದ ಆಕೀರ್ಣವಾಗಿರುವುದು ಅವುಗಳ ಒಂದು ಅನನ್ಯ ವೈಶಿಷ್ಟ್ಯ.

'ಕಾವ್ಯಾನುಭವ' (1970): ಈ ಲೇಖನಗಳ ಸಂಕಲನ ತೀ.ನಂ.ಶ್ರೀ.ಯವರ ಪ್ರಕಟಿತ ಪುಸ್ತಕಗಳಲ್ಲಿ ಕೊನೆಯದು. ಇದು ಪ್ರಕಟವಾಗುವ ನಾಲ್ಕು ವರ್ಷ ಮೊದಲೇ ಅವರು ತೀರಿಕೊಂಡಿದ್ದರು. 'ಗದಾಯುದ್ಧವೂ ಸ್ವೀಕರಣ ವಿಚಾರವೂ', 'ಚತ್ವಾಣ ಮತ್ತು ಬೆದಂಡೆ' ಮುಂತಾದ ಅವರ ಪ್ರಸಿದ್ಧವಾದ ಆರು ಲೇಖನಗಳ ಜೊತೆಗೆ ಕೆಲವು ಮುನ್ನುಡಿಗಳು, ಪ್ರಬುದ್ಧ ಕರ್ನಾಟಕ ಮೊದಲಾದ ಪತ್ರಿಕೆಗಳಿಗೆ ಬರೆದ ಸಣ್ಣಪುಟ್ಟ ಲೇಖನಗಳು, ಆಕಾಶವಾಣಿಯಲ್ಲಿ ಪ್ರಸಾರವಾದ ಭಾಷಣಗಳು ಮೊದಲಾದ ಹದಿನೇಳು ಇತರೆ ಲೇಖನಗಳಿವೆ. ಇವುಗಳಲ್ಲಿ ಹಲವನ್ನು ಅಮುಖ್ಯವಾದವುಗಳೆಂದು ಗಣಿಸಬಹುದಾದರೂ ಕಾಲ ಮತ್ತು ಸಂಬಂಧಿಸಿದ ವ್ಯಕ್ತಿಗಳ ದೃಷ್ಟಿಯಿಂದ ಕುತೂಹಲಕಾರಿಯಾಗಿವೆ. ಮುಖ್ಯ ಲೇಖನಗಳಲ್ಲಿ 'ಗದಾಯುದ್ಧ'ವನ್ನು ಕುರಿತದ್ದು ಕನ್ನಡ ಸಾಹಿತ್ಯ ಚರಿತ್ರೆಯ ವಿದ್ಯಾರ್ಥಿಗಳಿಗೆ ಅತ್ಯುಪಯುಕ್ತ ಲೇಖನವಾಗಿದ್ದು ತೀ.ನಂ.ಶ್ರೀ.ಯವರೇ ಸಂಪಾದಿಸಿದ 'ಗದಾ ಯುದ್ಧ ಸಂಗ್ರಹಂ' ಗ್ರಂಥದ ಒಂದು ಪರಿಶಿಷ್ಟ ಭಾಗವೆಂದು ಭಾಗವೆಂದು ಭಾವಿಸಬಹುದು. ಇನ್ನುಳಿದ ಲೇಖನಗಳಲ್ಲಿ 'ಕನ್ನಡ-ಸಂಸ್ಕೃತ: ವಾದ ಭೂಮಿ' ಎಂಬುದು ಅತ್ಯಂತ ಗಮನಾರ್ಹವಾದುದು. ಇದನ್ನು 'ಸಮಾಲೋಕನ'ದಲ್ಲಿ ಸೇರಿರುವ 'ಅಮರವಾಣಿ' ಎಂಬ ಸಂಸ್ಕೃತವನ್ನು ಕುರಿತ ಲೇಖನದೊಡನೆ ಕೂಡಿಸಿ ಓದಿಕೊಂಡರೆ ಸಂಸ್ಕೃತ ಭಾಷೆಯನ್ನೂ, ಸಂಸ್ಕೃತ ಮತ್ತು ಕನ್ನಡಗಳ ಸಂಬಂಧ ಮತ್ತು ಸ್ಥಾನಮಾನಗಳನ್ನು ಕುರಿತು ಹೇಳಬೇಕಾದುದೆಲ್ಲವನ್ನೂ ಹೇಳಿದಂತೆ ಆಗುತ್ತದೆ. ಕನ್ನಡವನ್ನು ಇತರ ಭಾಷೆಗಳ ಸಂದರ್ಭದಲ್ಲಿ ಕುರಿತು ಹೇಳುವಾಗ, ಕನ್ನಡ ಕವಿಗಳನ್ನು ಸಂಸ್ಕೃತ ಅಥವಾ ಇಂಗ್ಲಿಷ್ ಭಾಷೆಯ ಕವಿಗಳ ಜೊತೆಗಿರಿಸಿ ಮಾತನಾಡುವಾಗ ತೀ.ನಂ.ಶ್ರೀ.ಯವರು ಮಮತೆ, ಅಭಿಮಾನಗಳಿಗೆ ಎಲ್ಲೂ ಬಲಿಬೀಳುವುದಿಲ್ಲ. ಅವರ ಅಭಿಪ್ರಾಯಗಳು ಯಾವ ಕಾರಣಕ್ಕೂ ತೂಕ ತಪ್ಪುವುದಿಲ್ಲ.

❑

# ಅ.ನ.ಕೃ.

ಚ. ಶ್ರೀನಿವಾಸರಾಜು

"ಕನ್ನಡವನ್ನು ಒಂದು Cause ಎಂದು
ಕಟ್ಟಿಕೊಂಡು ಬದುಕಿದವರುಂಟು ;
ಕಾಸಿಗೋಸ್ಕರವಾಗಿ ಕನ್ನಡವನ್ನು
ಕಟ್ಟಿಕೊಂಡು ಬದುಕಿದವರುಂಟು.

ಕೃಷ್ಣರಾಯರು ಮೊದಲಿನ ವರ್ಗಕ್ಕೆ ಸೇರಿದವರು" ಎಂದು ಡಾ. ಜಿ.ಪಿ. ರಾಜರತ್ನಂ, ಅ.ನ.ಕೃ. ನೆನಪಿಗಾಗಿ ಪ್ರಕಟಿಸಿದ 'ಸ್ನೇಹದ ದೀಪ'ದ ಮೊದಲಲ್ಲೇ ಸಾರಿದ್ದಾರೆ. ಅ.ನ.ಕೃ. ನಿಜದ ನೇರಕ್ಕೆ ನಡೆದು ಬದುಕನ್ನು ತೇದವರು. ಗಂಡುಗುಣ ಅವರ ಪ್ರಧಾನ ಲಕ್ಷಣ. ಸದಾ ಹಿರಿಯರಲ್ಲಿ ಪ್ರೀತಿ, ವಿಶ್ವಾಸ ತೋರುತ್ತಾ, ಕಿರಿಯರಲ್ಲಿ ವಾತ್ಸಲ್ಯಮಯಿಯಾಗಿ ಬಾಳಿದವರು.

**ಹಿನ್ನೆಲೆ**

ಅರಕಲಗೂಡು ನರಸಿಂಗರಾಯ ಕೃಷ್ಣರಾಯ, ಅ.ನ.ಕೃ. ಎಂದು ಸಂಕ್ಷಿಪ್ತನಾಮದಿಂದ ಕನ್ನಡನಾಡಿನಲ್ಲಿ ಜನಪ್ರಿಯರಾಗಿ, ಸುಮಾರು ನಾಲ್ಕು ದಶಕಗಳ ಕಾಲ ಕನ್ನಡವನ್ನು, ಕರ್ನಾಟಕವನ್ನು ಕಟ್ಟಲು ಶ್ರಮಿಸಿದರು. 250 ಕೃತಿಗಳನ್ನು ರಚಿಸಿದರು. ಅವರ ವೈವಿಧ್ಯಮಯ ಬರವಣಿಗೆಗಳ ನಡುವೆ ಅವರನ್ನು ಮುಖ್ಯವಾಗಿ ಗುರುತಿಸುವುದು ಕಾದಂಬರಿಕಾರರಾಗಿ. ಪ್ರಚಂಡ ಉತ್ಸಾಹ ಮತ್ತು ಚೈತನ್ಯಗಳಿಂದ ಅವರು ಎಷ್ಟು ಜನಪ್ರಿಯರಾಗಿದ್ದರೋ ಅಷ್ಟೇ ಬಿನ್ನಾಭಿಪ್ರಾಯಗಳ ಕೇಂದ್ರವಾಗಿದ್ದರು. ಅವರ ಇಡೀ ಬದುಕನ್ನು ಪರಿಶೀಲಿಸಿದಾಗ ಮುಖ್ಯವಾಗಿ ಕಂಡುಬರುವ ಮನೋಧರ್ಮ 'ಕರ್ನಾಟಕತ್ವ'. ಅ.ನ.ಕೃ. ಅವರ ಬದುಕನ್ನು ಮರೆತು ಕೇವಲ ಅವರ ಸಾಹಿತ್ಯ ನಿರ್ಮಿತಿಯನ್ನು ಮಾತ್ರ ಗಮನಿಸುವುದರಿಂದ ಅವರ ಧೀಮಂತ ವ್ಯಕ್ತಿತ್ವ ಪೂರ್ಣವಾಗುವುದಿಲ್ಲ. ಅವರು ಮತ್ತು ಅವರ ಸಮಕಾಲೀನರು ಬರೆದ ಬರಹಗಳಿಂದ ಅವರ ಸಾಧನೆಯನ್ನು, ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡುವ ಒಂದು ಪ್ರಯತ್ನ ಈ ನೋಟ.

ಅರಕಲಗೂಡು ಹಾಸನ ಜಿಲ್ಲೆಯಲ್ಲಿ ಒಂದು ಚಿಕ್ಕ ಊರು. ಅ.ನ.ಕೃ. ವಂಶಜರು ಬಾಳಿ ಬದುಕಿದ ಸ್ಥಳ. ಅ.ನ.ಕೃ. ತಾತ ಕೃಷ್ಣಪ್ಪನವರು ಪಾಳೇಗಾರರಿಗೆ ಸಲಹೆಗಾರರಾಗಿದ್ದವರು, ದೊಡ್ಡ ವಿದ್ವಾಂಸರು. ಕನ್ನಡ ಮತ್ತು ತೆಲುಗಿನಲ್ಲಿ ಕೃತಿ ರಚನೆಯನ್ನು ಮಾಡಿದವರು. ತಂದೆ ನರಸಿಂಗರಾಯರು ಕಂದಾಯ ಇಲಾಖೆಯಲ್ಲಿ ಕೆಲಸದಲ್ಲಿದ್ದರೂ, ಆಗಿನ ಬೆಂಗಳೂರಿನ

ಸಾಂಸ್ಕೃತಿಕ ವಲಯದಲ್ಲಿ ಮರೆಯಲಾಗದ ಹೆಸರು. ಜೊತೆಗೆ ಅನೇಕ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ. ರಾಯರು ರಾಜಕೀಯವಾಗಿ ಆಂಗ್ಲರ ಪರವಾದ ನಿಲುವನ್ನು ತಳೆದಿದ್ದವರು. ಅ.ನ.ಕೃ. ತಾಯಿ ಅನ್ನಪೂರ್ಣಮ್ಮ, ಶ್ರದ್ಧಾಭಕ್ತಿಗಳಿಂದ, ಮಾಧ್ವ ಸಂಪ್ರದಾಯದ ಧಾರ್ಮಿಕ ಮನೋ. ಧರ್ಮ ಉಳ್ಳವರು. 9ನೇ ಮೇ, 1908ರಂದು ಅ.ನ.ಕೃ. ಈ ತಂದೆ - ತಾಯಿಯ ಮೂರನೆಯ ಮಗನಾಗಿ ಕೋಲಾರದಲ್ಲಿ ಜನಿಸಿದರು. ಇವರ ಬಾಲ್ಯ ಜೀವನದ ಮೇಲೆ ಅಚ್ಚಳಿಯದ ಪ್ರಭಾವ ಬೀರಿದ್ದು ಬೆಂಗಳೂರಿನ ದೇಶೀಯ ವಿದ್ಯಾಶಾಲೆ, ಕೆ. ಸಂಪದ್ಗಿರಿರಾಯರು, ಕಂದಾಡೆ ಕೃಷ್ಣಯ್ಯಂಗಾರ್‌ರ ಪಾಠ ಪ್ರವಚನಗಳಿಂದ ಗಟ್ಟಿಗೊಂಡು, ತಾರುಣ್ಯದಲ್ಲೇ ಗಾಂಧೀಜಿ, ಆಲೂರು ವೆಂಕಟರಾಯರು, ಮುದವೀಡು ಕೃಷ್ಣರಾಯರು, ಪಂಡಿತ ತಾರಾನಾಥ, ಕೈಲಾಸಂ ಪ್ರಭಾವಕ್ಕೆ ಒಳಗಾಗಿ ತಮ್ಮ ಮುಂದಿನ ಬದುಕನ್ನು ರೂಪಿಸಿ ಕೊಂಡರು.

### ಹೋರಾಟದ ಬದುಕು

ಶಾಲಾ ಜೀವನದಲ್ಲಿ ಬಿ. ವೆಂಕಟಾಚಾರ್ಯ ಹಾಗೂ ಗಳಗನಾಥ ಅನುವಾದಿತ ಕಾದಂಬರಿಗಳ ಓದು ಮತ್ತು ಎಂ.ಎಸ್. ಪುಟ್ಟಣ್ಣನವರ ಕೃತಿಗಳ ಅಧ್ಯಯನ ಮುಂದೆ ಕಾದಂಬರಿಯನ್ನೇ ಅ.ನ.ಕೃ. ತಮ್ಮ ಸೃಜನಶೀಲ ಮಾಧ್ಯಮವಾಗಿ ಆರಿಸಿಕೊಳ್ಳಲು ಪ್ರೇರಣೆ ಒದಗಿಸಿತು. ತಮ್ಮ ಹದಿನಾರನೆಯ ವಯಸ್ಸಿನಲ್ಲೇ ತಂದೆಯ ಸ್ನೇಹಿತರಾದ ಅಭಿಜಾತ ನಟ ಎ.ಪಿ. ವರದಾಚಾರ್ ಒಡ್ಡಿದ ಸವಾಲಿಗೆ ಉತ್ತರವಾಗಿ, ಒಂದೇ ರಾತ್ರಿಯಲ್ಲಿ 'ಮದುವೆಯೋ ಮನೆಹಾಳೋ'(1924) ನಾಟಕವನ್ನು ಬರೆದರು. 1928ರಲ್ಲಿ 'ಶಾಂತಿನಿಕೇತನ'ದ ವಿದ್ಯಾಭ್ಯಾಸ ಪದ್ಧತಿಗೆ ಆಕರ್ಷಿತರಾಗಿ ರವೀಂದ್ರನಾಥ ಠಾಗೂರ್ ಮತ್ತು ನಂದಲಾಲ್ ಬೋಸ್ ಮುಂತಾದ ಕಲಾವಿದರೊಂದಿಗೆ ಕೆಲವು ತಿಂಗಳುಗಳ ಕಾಲ ಇದ್ದು, ಕನ್ನಡದ ಮೇಲಿನ ಅಭಿಮಾನದಿಂದ ಕನ್ನಡ ನಾಡಿಗೆ ಹಿಂದಿರುಗಿದರು. ಸಣ್ಣಕಥೆಗಳಿಗೇ ಮೀಸಲಾದ 'ಕಥಾಂಜಲಿ' ಮಾಸ ಪತ್ರಿಕೆಯನ್ನು ಪ್ರಾರಂಭಿಸಿದರು. ಆನಂದ, ರಾಶಿ, ರಾಜರತ್ನಂ, ಕೆ. ಗೋಪಾಲಕೃಷ್ಣರಾಯ ಮುಂತಾದ ಪ್ರತಿಭಾನ್ವಿತ ಲೇಖಕರನ್ನು ಬೆಳಕಿಗೆ ತಂದರು. ಅಂದಿನ 'ವಿಶ್ವ ಕರ್ನಾಟಕ'ದಲ್ಲಿ ಕರ್ನಾಟಕದ ಬಗ್ಗೆ ಅನೇಕ ಲೇಖನಗಳನ್ನು ಪ್ರಕಟಿಸಿದರು. 1930ರಲ್ಲಿ ಧಾರವಾಡದಲ್ಲಿ ನಡೆದ ಮೊದಲ ನಾಟಕ ಸಮ್ಮೇಳನಕ್ಕೆ ಅತಿಥಿಯಾಗಿ ಹೋದರು. ಅನಂತರ ತಮ್ಮ ಕನಸಿನ ಅಖಂಡ ಕರ್ನಾಟಕದ ಸಂಘಟನೆಗಾಗಿ ಹಲವಾರು ಬಾರಿ ಕನ್ನಡನಾಡನ್ನು ಸುತ್ತಾಡಿದರು. "ಆ ಕಾಲದಲ್ಲಿ ಕೃಷ್ಣರಾಯರಂತೆ ಹೊಸ ಹೊಸ ಪುಸ್ತಕಗಳನ್ನು ಕೊಂಡು ಓದುತ್ತಿದ್ದ ಇನ್ನೊಬ್ಬರನ್ನು ನಾನು ಕಾಣೆ" ಎಂದು ರಾಜರತ್ನಂ ಒಂದು ಕಡೆ ಜ್ಞಾಪಿಸಿಕೊಂಡಿದ್ದಾರೆ. ಅ.ನ.ಕೃ. ಕನ್ನಡ ಮತ್ತು ಇಂಗ್ಲಿಷಿನಲ್ಲಿ ಉತ್ತಮ ವಾಗ್ಮಿಗಳಾಗಿ ಪಂಡಿತ ಪಾಮರರನ್ನು ತಲೆದೂಗುವಂತೆ ಮಾಡುತ್ತಿದ್ದ ವಿಷಯ ಇಂದು ದಂತಕಥೆಯಾಗಿದೆ.

ಅ.ನ.ಕೃ. ಮದುವೆಗೆ ಮೊದಲು ಕನ್ನಡದಲ್ಲಿ ಮೊದಲನೆಯ ಬಾರಿಗೆ 'ಪ್ರಣಯ ಗೀತೆಗಳು' (1930) ಸಂಕಲನವನ್ನು ಸಂಪಾದಿಸಿ ಪ್ರಕಟಿಸಿದರು. ತಮ್ಮ 24ನೆಯ ವಯಸ್ಸಿನಲ್ಲಿ ಹೈದರಾಬಾದಿನ ಎಚ್.ವಿ. ಕೃಷ್ಣರಾಯರ ಮಗಳಾದ ವಿಶಾಲಾಕ್ಷಿಯ ಕೈಹಿಡಿದರು. ಇವರೇ ಮುಂದೆ ವಾಸಂತಿದೇವಿಯಾದರು. ಅವರ ಹೈದರಾಬಾದ್, ಮುಂಬಯಿಗಳ ಓಡಾಟ ಕಾಲದಲ್ಲಿ ಚಿತ್ರಕಲೆಯ ಬಗ್ಗೆ ಆಸಕ್ತಿಯನ್ನು ತಳೆದರು. 1932ರಲ್ಲಿ ಬರೆದ 'ಭಾರತೀಯ ಚಿತ್ರಕಲೆಯಲ್ಲಿ ರಾಜಾರವಿವರ್ಮನ ಸ್ಥಾನ' ಕನ್ನಡದಲ್ಲಿ ಚಿತ್ರಕಲಾ ವಿಮರ್ಶೆ ಒಳಗೊಂಡ ಮೊದಲ ಪುಸ್ತಕ. ಅವರು ಕರ್ನಾಟಕ, ಹಿಂದೂಸ್ಥಾನಿ ಸಂಗೀತ ಸಂಪ್ರದಾಯಗಳ ಬಗ್ಗೆ ತೋರಿದ ಪ್ರೀತಿ, ಅದಕ್ಕಾಗಿ ಅವರು ಮಾಡಿದ ಪರಿಚಾರಿಕೆ ಅನೇಕ ಕಲಾವಿದರ ಪ್ರೀತಿ, ವಿಶ್ವಾಸಗಳನ್ನು ಗಳಿಸಿಕೊಟ್ಟಿತು. ಇವರಲ್ಲಿ ಪ್ರಮುಖರೆಂದರೆ ಖಾನ್ ಅಬ್ದುಲ್ ಕರೀಂಖಾನ್, ಸವಾಯ್ ಗಂಧರ್ವ, ಹಾಲೀಂ ಜಾಫರ್, ಬಿಡಾರಂ ಕೃಷ್ಣಪ್ಪ, ಟಿ. ಚೌಡಯ್ಯ, ದೇವೇಂದ್ರಪ್ಪ, ಚಿಕ್ಕರಾಮರಾಯ, ಮಲ್ಲಿಕಾರ್ಜುನ ಮನ್ಸೂರ್, ವೆಂಕಟಪ್ಪ, ಮಿಣಜಗಿ. ಇವರಲ್ಲಿ ಅನೇಕರ ವ್ಯಕ್ತಿಚಿತ್ರಗಳನ್ನು 'ಕರ್ನಾಟಕ ಕಲಾವಿದರು',' 'ಬರಹಗಾರನ ಬದುಕು' ಪುಸ್ತಕಗಳಲ್ಲಿ ಕಣ್ಣಿಗೆ ಕಟ್ಟುವಂತೆ ಬಿಡಿಸಿದ್ದಾರೆ.

1935ರಲ್ಲಿ ಪತ್ರಿಕೋದ್ಯಮ ಅ.ನ.ಕೃ. ಅವರನ್ನು ಮುಂಬಯಿಗೆ ಸೆಳೆಯಿತು. The Bombay Chronicle ಮತ್ತು The Illustrated Weekly of Indiaದಲ್ಲಿ ಅನೇಕ ಲೇಖನಗಳನ್ನು ಬರೆದರು. ಮತ್ತೆ ಅವರಿಗೆ ಕನ್ನಡ ನಾಡಿನಿಂದ ಕರೆಬಂತು. 1936-37ರಲ್ಲಿ 'ವಿಶ್ವವಾಣಿಯ' ಸಂಪಾದಕರಾಗಿ 1939ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನುಡಿ'ಯ ಮೊದಲ ಸಂಪಾದಕರಾದರು. ಅಂದಿನ ಕರ್ನಾಟಕ ರಾಜಕೀಯ, ಆರ್ಥಿಕ ಸ್ಥಿತಿಗತಿಗಳು, ಕನ್ನಡ ಇವುಗಳನ್ನು ಕುರಿತು ಅನೇಕ ಲೇಖನಗಳನ್ನು ಹರಿತವಾಗಿ ಬರೆದರು. 1945ರಲ್ಲಿ ಮುಧೋಳದಲ್ಲಿ ನಡೆದ ಕರ್ನಾಟಕ ಏಕೀಕರಣ ಸಭೆಯಲ್ಲಿ ಭಾಗವಹಿಸಿದ್ದರು. ಕನ್ನಡ-ಹಿಂದಿ ವಾಗ್ವಾದದಲ್ಲಿ ಕನ್ನಡ ಪರವಾದ ದಿಟ್ಟ ನಿಲುವನ್ನು ತಳೆದು 'ಕನ್ನಡನುಡಿ' ಸಂಪಾದಕತ್ವವನ್ನು ಬಿಟ್ಟುಕೊಟ್ಟರು. ಅವರ ಮುನ್ನೋಟದ ಅರಿವು ನಿಜವಾಗಿದೆ. ಹಿಂದಿ ಸಂಖ್ಯಾಬಲದಿಂದ, ಹಣ ಬಲದಿಂದ, ಅಧಿಕಾರಬಲದಿಂದ, ಭಾವೈಕ್ಯತೆಯ ಮುಖವಾಡದಿಂದ ಕನ್ನಡ ನಾಡಿನಲ್ಲೇ ಕನ್ನಡಕ್ಕೆ ಇಂದು ದೊಡ್ಡ ಸವಾಲಾಗಿದೆ. ಅವರು ಕನ್ನಡ ಕೆಲಸಕ್ಕಾಗಿ ಯಾರನ್ನು ಬೇಕಾದರೂ ಎದುರು ಹಾಕಿಕೊಳ್ಳಲು ಹಿಂಜರಿಯುತ್ತಿರಲಿಲ್ಲ.

### ಪ್ರಗತಿಶೀಲ ಸಾಹಿತ್ಯ ಚಳವಳಿ

ನಲವತ್ತರಲ್ಲಿ ಪ್ರಗತಿಶೀಲ ಸಾಹಿತ್ಯ ಚಳವಳಿ ಕನ್ನಡ ಸಾಹಿತ್ಯದ ಹೊಸ ತಿರುವಿಗೆ, ಲವಲವಿಕೆಗೆ, ವಾಗ್ವಾದಕ್ಕೆ ಕೇಂದ್ರಬಿಂದುವಾಯಿತು. ತ.ರಾ.ಸು., ಶ್ರೀರಂಗ, ನಿರಂಜನ, ಬಸವರಾಜ ಕಟ್ಟೀಮನಿ, ಚದುರಂಗ, ಎಸ್.ಅನಂತನಾರಾಯಣ, ಮಾ.ನಾ.ಚೌಡಪ್ಪ, ಡಿ.ಕೆ. ಭಾರದ್ವಾಜ, ಕುಮಾರ ವೆಂಕಣ್ಣ, ನಾಡಿಗೇರ ಕೃಷ್ಣರಾಯ, ಅರ್ಚಕ ವೆಂಕಟೇಶ, ತಿಪ್ಪೇಶ್ವರ ದೊಡ್ಡಮನಿ ಮುಂತಾದವರು ಈ ಚಳವಳಿಯ ಮುಂಚೂಣಿಯಲ್ಲಿದ್ದರು. 1935ರಲ್ಲಿ ಇ.ಎಂ.ಫಾರ್ಸ್ಟರ್ ಅಧ್ಯಕ್ಷತೆಯಲ್ಲಿ ಪ್ಯಾರೀಸ್‌ನಲ್ಲಿ ಪ್ರಗತಿಶೀಲರ ಪ್ರಥಮ ಅಧಿವೇಶನ ನಡೆಯಿತು. 1936ರಲ್ಲಿ ಪ್ರೇಮಚಂದರ ಅಧ್ಯಕ್ಷತೆಯಲ್ಲಿ ಭಾರತೀಯ ಲೇಖಕರ ಪ್ರಥಮ ಪ್ರಗತಿಶೀಲ ಸಮ್ಮೇಳನ ಲಕ್ನೋದಲ್ಲಿ ಜರುಗಿತು. ನವೋದಯದ ನಂತರ ಈ ಹೊಸ ವಿಚಾರ ಧಾರೆಯ ಗಾಳಿ ಕನ್ನಡನಾಡಿನ ಕಡೆಗೂ ಬೀಸಿತು. ಆಗ ಭಾರತದಲ್ಲಿ ಸಂಕ್ರಮಣ ಕಾಲ. ಭಾರತ ಕಮ್ಯುನಿಸ್ಟ್ ಪಕ್ಷದ ಉದಯ, ಕಾಂಗ್ರೆಸಿನಲ್ಲಿ ಸೋಷಲಿಸ್ಟ್ ಪಂಥದ ಬಂಡಾಯ, ಎರಡನೇ ಮಹಾಯುದ್ಧದ ಕಾವು, ಬುದ್ಧಿಜೀವಿಗಳಿಗೆ ಹೊಸ ಸಮಾಜದ ಕನಸು, ಹೊಸ ಮೌಲ್ಯಗಳ ಹುಡುಕಾಟಕ್ಕೆ ಈ ಘಟನೆಗಳು ಪ್ರೇರಣೆ ಒದಗಿಸಿದವು. ಸಂಪ್ರದಾಯ ಮನೋಭಾವ, ಮೂಢನಂಬಿಕೆ, ಜನಸಾಮಾನ್ಯರ ಶೋಷಣೆ, ಮುಂತಾದುವನ್ನು ನೆಲಸಮಮಾಡಿ, ಅಲ್ಲಿ ಹೊಸ ಸಮಾಜದ ನಿರ್ಮಾಣದ ಆಸೆ-ಆಕಾಂಕ್ಷೆಗಳನ್ನು ಪೂರ್ಣಗೊಳಿಸುವ ದೃಷ್ಟಿ

ಯಿಂದ ಮಾನವತಾವಾದ ಮೇಲುಗೈ ಪಡೆಯಿತು. ಹೊಸ ಬರಹಗಾರ ಅತೀತವಾದ ಕಲ್ಪನಾ ಲೋಕದಲ್ಲಿ ಮುಖ ಮರೆಸಿಕೊಳ್ಳದೆ ಆರೋಗ್ಯವಂತ ಸಮಾಜದಲ್ಲಿನ ಸೌಂದರ್ಯವನ್ನು ಕಾಣಬೇಕು ಎಂಬುದರ ಕಡೆ ಒತ್ತು ಬಿದ್ದಿತು. ರಷ್ಯಾದ ಅಕ್ಟೋಬರ್ ಕ್ರಾಂತಿಯ ಫಲವಾಗಿ ಲೇಖಕರು ಸಾಮಾಜಿಕ ವಾಸ್ತವತೆಯ ಕಡೆ ಗಮನ ಹರಿಸಿದರು. ಕನ್ನಡ ನಾಡಿನಲ್ಲಿ ಈ ಚಳವಳಿಯ ಪ್ರಭಾವ ಕಥಾ ಸಾಹಿತ್ಯ, ನಾಟಕ, ಸಿನಿಮಾಗಳಲ್ಲಿ ಕಾಣಿಸಿಕೊಂಡಿತು. 1943ರ ನವೆಂಬರ್‌ನಲ್ಲಿ ಕರ್ನಾಟಕ ಪ್ರಗತಿಶೀಲರ ಸಂಘ ಅ.ನ.ಕೃ. ಮುಂದಾಳತ್ವದಲ್ಲಿ ಸ್ಥಾಪನೆಗೊಂಡಿತು. 1944ರಲ್ಲಿ ಈ ಸಂಘ 'ಪ್ರಗತಿಶೀಲ ಸಾಹಿತ್ಯ', 'ಮ್ಯಾಕ್ಸಿಂ ಗಾರ್ಕಿ ಸಂಸ್ಮರಣ ಗ್ರಂಥ', 'ರಸ ಋಷಿ' ಗ್ರಂಥಗಳನ್ನು ಪ್ರಕಟಿಸಿತು. ಈ ಚಳವಳಿ ಅ.ನ.ಕೃ. ಅವರನ್ನು ಮತ್ತಷ್ಟು ಜನಪ್ರಿಯಗೊಳಿಸಿತು. ಅವರು ಆ ದಶಕದ ಪ್ರಮುಖವಾಣಿಯಾದರು. ಆದರೆ ಭಾರತೀಯ ಸಂಸ್ಕೃತಿಯ ಪುನರುತ್ಥಾನದ ಒತ್ತಾಸೆ ಹೆಚ್ಚಿದಂತೆ, ಗಾಂಧೀಜಿಯ ಪ್ರಭಾವಲಯ ವಿಸ್ತರಿಸಿದಂತೆ, ಕರ್ನಾಟಕತ್ವದ ಕಲ್ಪನೆ ರೂಪತಳೆದಂತೆ ಪ್ರಗತಿಶೀಲ ಸಾಹಿತ್ಯದ ಚಳವಳಿಯ ಕಾವು ಕ್ರಮೇಣ ಕಡಿಮೆಯಾಯಿತು. ಕೆಲವು ಲೇಖಕರು ಪರಿಸರದ ಸಂಬಂಧವನ್ನು ಕಡಿದುಕೊಂಡು, ಜನಜೀವನದ ಬಗ್ಗೆ, ಹಳ್ಳಿಗಳಿಗೇ ಹೋಗದೆ ಹಳ್ಳಿಯ ಬದುಕಿನ ಬಗ್ಗೆ, ವೈಭವದಲ್ಲಿದ್ದುಕೊಂಡು ಕಾರ್ಮಿಕರ ಬಗ್ಗೆ ಬರೆಯಲು ಪ್ರಾರಂಭಿಸಿದ್ದರಿಂದ ಪ್ರಚಾರದ ರೀತಿಯ ಹೇಳಿಕೆಗಳೇ ಹೆಚ್ಚಾಗಿ, ಕೃತಕ ವಾತಾವರಣ ಸೃಷ್ಟಿಯಾಯಿತು ಎಂಬುದು ಅಂದಿನ ಸಂಪ್ರದಾಯವಾದಿಗಳ ಆಕ್ಷೇಪಣೆ. ಅ.ನ.ಕೃ. ಸೃಜನಶೀಲ ಕೃತಿಗಳಲ್ಲಿ ಕಂಡುಬರುವ ನೈತಿಕ ಉನ್ನತಿಯ ದೃಷ್ಟಿಗೂ, ಅವರು ಬದುಕಿದ ರೀತಿಗೂ ಬಿರುಕು ಬಹಿರಂಗವಾಗಿ ಕಾಣಿಸಿಕೊಂಡಿದ್ದರಿಂದ; ಪ್ರಗತಿಶೀಲ ಲೇಖಕರಲ್ಲಿ ಹಲವರು ಸಾಂಪ್ರದಾಯಿಕ ಶಿಕ್ಷಣವನ್ನು ನಾನಾ ಕಾರಣಗಳಿಂದ ಪಡೆದುಕೊಳ್ಳಲಾಗದೆ, ನವೋದಯ ಮತ್ತು ನವ್ಯ ಸಾಹಿತಿಗಳ ಉಪೇಕ್ಷೆಗೆ ಕಾರಣವಾದ್ದರಿಂದ; ಬಹುಪಾಲು ಪ್ರಗತಿಶೀಲ ಲೇಖಕರು ಸಂಪ್ರದಾಯವಾದಿಗಳ ಹಾಗೂ ವಾಮವಾದಿಗಳ ಮೆಚ್ಚುಗೆಯ ವಲಯದಲ್ಲಿ ಬರಲಾಗದ್ದರಿಂದ; ಅವರಲ್ಲೇ ಕಂಡುಬಂದ ಸ್ವಮೋಹ ಮತ್ತು ದ್ವಂದ್ವಗಳಿಗೆ ಸಿಲುಕಿ ಪ್ರಗತಿಶೀಲ ಚಳವಳಿ ಶಿಥಿಲಗೊಂಡಿರಬಹುದು. ಸಾಹಿತ್ಯದಲ್ಲಿ ಯಾವುದು ಸರಿ, ಯಾವುದು ತಪ್ಪು ಎಂಬ ವಾಗ್ವಾದವೇ ದೊಡ್ಡದಾಗಿ ಬೆಳೆದು ಸೃಜನಶೀಲತೆಯ ಕಲಾತ್ಮಕತೆ ಕುಂಠಿತಗೊಂಡಿತು. ಒಟ್ಟಿನಲ್ಲಿ, ಪ್ರಗತಿಶೀಲ ಸಾಹಿತ್ಯ ಚಳವಳಿ ಜನಸಾಮಾನ್ಯರ ಬದುಕನ್ನು ಸಾಹಿತ್ಯದ ವಲಯದಲ್ಲಿ ತಂದಿತು. ಸಾಹಿತ್ಯ, ಸೌಂದರ್ಯಗಳ ನೆಲೆಯನ್ನು ಜನಜೀವನದ ಬದುಕಿನಲ್ಲಿ ಕಾಣಲು ಪ್ರಯತ್ನಿಸಿತು. ಭಾಷೆಯ ಬಿಗಿಯನ್ನು ಕಡಿಮೆ ಮಾಡಿ ಜನಸಾಮಾನ್ಯರ ಕಡೆಗೆ ಹೊರಳಿತು. 'ವಾಹಿನಿ' ಪ್ರಕಾಶನ ಕಿರುಹೊತ್ತಿಗೆಗಳ ಮೂಲಕ ಅಸಂಖ್ಯಾತ ಓದುಗರನ್ನು ಸೃಷ್ಟಿಸಿತು. ನೂರಾರು ಹಿರಿಯ, ಕಿರಿಯ ಲೇಖಕರನ್ನು ಅರಳಿಸಿತು. ಅ.ನ.ಕೃ. ಅಭಿಮಾನಿ ಬಳಗ ಅವರ ಶ್ರೇಷ್ಠ ಕಾದಂಬರಿಯಾದ 'ಸಂಧ್ಯಾರಾಗ' ಕೃತಿಯನ್ನು ಕುರಿತು ರಸ ವಿಮರ್ಶೆಯ 'ಸಂಧ್ಯಾರಾಗ ಪ್ರಶಸ್ತಿ'ಯನ್ನು ಅರ್ಪಿಸಿತು.

ಅ.ನ.ಕೃ. ಮಣಿಪಾಲದಲ್ಲಿ ನಡೆದ 42ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. 1969ರಲ್ಲಿ ಕನ್ನಡ ಸಾಹಿತ್ಯ ಅಕಾಡೆಮಿಯು ಪ್ರಶಸ್ತಿಯನ್ನು ನೀಡಿತು. 1970ರಲ್ಲಿ ಮೈಸೂರು ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿಯಿತ್ತು ಗೌರವಿಸಿತು. ಅದೇ ವರ್ಷ ಅ.ನ.ಕೃ. ಕನ್ನಡ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ನೇಮಕಗೊಂಡರು. ಕೊನೆಯುಸಿರಿನವರೆಗೂ ನಾಡುನುಡಿಯ ಬಗ್ಗೆ ಮುಂಚೂಣಿಯ ಹೋರಾಟಗಾರರಾಗಿಯೇ ಇದ್ದರು. ಅ.ನ.ಕೃ. ಮತ್ತು ಎಂ.ರಾಮಮೂರ್ತಿ ಅಂದಿನ ಪರಿಸ್ಥಿತಿಯ ಗಂಭೀರತೆಯನ್ನು ಅರಿತು ಆರಂಭಿಸಿದ ಕನ್ನಡ ಚಳವಳಿ ಈಗ ಇತಿಹಾಸದ ಮಾತಾಗಿದೆ. ಅ.ನ.ಕೃ. 63ನೆಯ ವಯಸ್ಸಿನಲ್ಲಿ 8ನೇ ಜುಲೈ 1971ರಂದು ಬೆಂಗಳೂರಿನಲ್ಲಿ ನಿಧನರಾದರು. ಭಾರತೀಯ ಶಿಲ್ಪಶಾಸ್ತ್ರಗಳನ್ನು ಹಾಗೂ ಚಿತ್ರಕಲೆಯ ಇತಿಹಾಸವನ್ನು ಕುರಿತ ಸಂಪುಟಗಳನ್ನೂ, ಕಾದಂಬರಿ ರೂಪದಲ್ಲಿ ರಾಮಾಯಣ-ಮಹಾಭಾರತ ಬರೆಯಬೇಕೆಂಬ ಹಂಬಲವನ್ನು ಹೊಂದಿದ್ದರು. ಸದಾ ಜನರ ಮಧ್ಯೆ ಇರುವುದು ಅವರಿಗೆ ಪ್ರಿಯವಾಗುತ್ತಿತ್ತು. ಅವರು ಏಕಕಾಲದಲ್ಲಿ ಕರ್ನಾಟಕತ್ವವನ್ನು, ಭಾರತೀಯತೆಯನ್ನು ಹಾಗೂ ಮಾನವೀಯತೆಯನ್ನು ಮೈಗೂಡಿಸಿಕೊಂಡು ತುಂಬು ವ್ಯಕ್ತಿತ್ವವನ್ನು ರೂಪಿಸಿಕೊಂಡರು. ಪ್ರಗತಿಶೀಲ ಚಳವಳಿಯಲ್ಲಿ ಪರಂಪರೆಯನ್ನು ಬದಲಾಯಿಸುವ ಧ್ವನಿ ಇದ್ದರೂ ಅ.ನ.ಕೃ. ಅದನ್ನು ಸಂಪೂರ್ಣವಾಗಿ ಅನುಮೋದಿಸಿರಲಿಲ್ಲ ಎಂಬುದು ಅವರ ಬದುಕು-ಬರಹಗಳಿಂದ ವ್ಯಕ್ತವಾಗುತ್ತದೆ. ಕನ್ನಡ ನಾಡು-ನುಡಿಗೆ ಹಿರಿಮೆ, ಘನತೆ ಹಾಗೂ ಗೌರವವನ್ನು ತಂದುಕೊಡುವುದು ಅವರಲ್ಲಿ ಸದಾ ಸ್ಥಾಯಿಯಾಗಿದ್ದ ಜೀವನ ದರ್ಶನ. ಹೀಗೆ ಆ ಸಂಕ್ರಮಣ ಯುಗದಲ್ಲಿ ಒಬ್ಬರೇ ಎಲ್ಲಾ ಕಾರ್ಯಗಳನ್ನು ಮಾಡಬೇಕಾಗಿ ಬಂದಿದ್ದರಿಂದ ಅವರ ಪ್ರತಿಭೆ ಹಾಗೂ ಶಕ್ತಿ ಹಂಚಿಹೋದವು. ಆದ್ದರಿಂದ ಅ.ನ.ಕೃ. ಅವರ ನಿಜವಾದ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಲು ನಾಡಿನ ಸಾಂಸ್ಕೃತಿಕ ಚರಿತ್ರೆಯ ಹಿನ್ನೆಲೆಯಿಂದ ನೋಡಬೇಕು.

**ಕಥಾ ಸಾಹಿತ್ಯ**

ಅ.ನ.ಕೃ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ನವೀನ ಪ್ರಯೋಗಗಳನ್ನು ನಡೆಸಿದ್ದಾರೆ. ಆದರೆ ಅವರಿಗೆ ಕೀರ್ತಿಯನ್ನು ತಂದುಕೊಟ್ಟದ್ದು ಕಾದಂಬರಿ ಮಾಧ್ಯಮ. ಅವರು ಅವ್ಯಾಹತವಾಗಿ ಒಂದರ ಮೇಲೊಂದು ಕಾದಂಬರಿಗಳನ್ನು ಬರೆಯುತ್ತಾ ಹೋದರು. ಬರವಣಿಗೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡರು. ಕೃತಿಗಳ ಸಂಖ್ಯೆಯ ದೃಷ್ಟಿಯಿಂದ, ಪ್ರಯೋಗಗಳ ದೃಷ್ಟಿಯಿಂದ, ವಸ್ತು ವೈವಿಧ್ಯದಿಂದ, ಮಾಂತ್ರಿಕ ಶೈಲಿಯ ಮೋಡಿಯಿಂದ ಒಂದು ಪೀಳಿಗೆಯ ಬರಹಗಾರರ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದರು. ನಾಲ್ಕು ಮತ್ತು ಐದನೆಯ ದಶಕದಲ್ಲಿ ಕಾದಂಬರಿಯನ್ನು ಪ್ರಮುಖ ಅಭಿವ್ಯಕ್ತಿ ಪ್ರಕಾರವನ್ನಾಗಿ ರೂಪಿಸಿದರು. ಅವರ 'ಮಿಂಚು', 'ಅದೃಷ್ಟ ನಕ್ಷತ್ರ' ಮುಂತಾದ ಕಥಾ ಸಂಕಲನಗಳಲ್ಲಿ ಹಾಗೂ ಕಾದಂಬರಿಗಳಲ್ಲಿ ಮುಖ್ಯವಾಗಿ ಮಾನವೀಯ ಧೋರಣೆಯನ್ನು. ಸಾಮಾನ್ಯನಿಗೆ ಬದುಕಿನಲ್ಲಿ ಘನತೆಯನ್ನು ತಂದುಕೊಡುವ ಪ್ರಯತ್ನ ಮಾಡಿದರು.

ಅ.ನ.ಕೃ. ಬದುಕಿನ ನೂರಾರು ಸಾಧ್ಯತೆಗಳನ್ನು ಕಾದಂಬರಿಯ ಕಕ್ಷೆಯಲ್ಲಿ ತಂದರು. ಸಮಾಜಕ್ಕೂ, ವ್ಯಕ್ತಿಗೂ ಇರುವ ಸಂಬಂಧವನ್ನು ಬಲಪಡಿಸಿದರು. ಅವರ ಕಾದಂಬರಿಗಳಲ್ಲಿ ಕೇಳಿಸುವ ಒಳದನಿ ಎಂದರೆ ಆಧುನಿಕ ಜೀವನದ ಒತ್ತಡ ಸಂಪ್ರದಾಯ ಜೀವನವನ್ನು ಶಿಥಿಲಗೊಳಿಸುತ್ತಿರುವುದರ ಚಿತ್ರ; ಕೌಟುಂಬಿಕ ಜೀವನದಲ್ಲಿ ಕಂಡು ಬರುವ ಏರಿಳಿತಗಳು; ಮದುವೆ ಲೈಂಗಿಕತೆ ವಿಷಯಗಳು; ಕಲಾವಿದರ ಪ್ರಪಂಚ; ಸಮಾಜದಲ್ಲಿ ಕಂಡು ಬರುವ ವಿಕೃತಿಗಳು. ಅವರು ತಮ್ಮ ಕೃತಿಗಳಲ್ಲಿ ನಾಲ್ಕನೆಯ ಮತ್ತು ಐದನೆಯ ದಶಕದಲ್ಲಿ ಬದಲಾಗುತ್ತಿರುವ ಸಾಂಸ್ಕೃತಿಕ ಚರಿತ್ರೆಯನ್ನು ದಾಖಲಿಸಿದ್ದಾರೆ.

'ಉದಯರಾಗ', 'ಸಂಧ್ಯಾರಾಗ', 'ಸಾಹಿತ್ಯ ರತ್ನ', 'ಕನ್ನಡಮ್ಮನ ಗುಡಿಯಲ್ಲಿ', 'ದೀಪಾರಾಧನೆ', 'ನಟಸಾರ್ವಭೌಮ', 'ಚಿತ್ರವಿಚಿತ್ರ', 'ಬಣ್ಣದ

ಬದುಕು', 'ಹೊನ್ನೆ ಮೊದಲು', ಕೃತಿಗಳಲ್ಲಿ ಅ.ನ.ಕೃ. ಕಲಾವಿದರ ಜೀವನದ ಸೋಲುಗೆಲುವುಗಳನ್ನು ತೆರದಿಟ್ಟಿದ್ದಾರೆ. ಆದರೆ ಬಹುಪಾಲು ಕಾದಂಬರಿಗಳಲ್ಲಿ ವಸ್ತುನಿಷ್ಠತೆ, ಕಲಾತ್ಮಕತೆಯ ಅಭಾವ ಕಂಡುಬರುತ್ತದೆ. ಅ.ನ.ಕೃ. ಸಾಮಾಜಿಕ ವಾಸ್ತವಿಕತೆಯನ್ನು ಒಪ್ಪಿಕೊಂಡಿದ್ದರೂ ಅವರ ಸೃಜನಶೀಲ ಕ್ರಿಯೆಯಲ್ಲಿ ಆದರ್ಶ, ವೈಭವೀಕರಣ ಮೇಲುಗೈ ಪಡೆದಿರುವುದನ್ನು ಕಾಣಬಹುದು. ಅವರ ಮೊದಲ ಕಾದಂಬರಿಗಳಲ್ಲಿ ಕಥಾನಾಯಕರು ಸಾಮಾನ್ಯವಾಗಿ ಯಶಸ್ಸನ್ನು ಪಡೆಯುತ್ತಾರೆ. ಅನಂತರದ ಕಾದಂಬರಿಗಳಲ್ಲಿ ಸಾಮಾನ್ಯವಾಗಿ ಪತನದ ಚಿತ್ರವನ್ನು ಕಾಣಬಹುದು. ಅವರ ಧಾವಂತ ಮಾಂತ್ರಿಕ ಸಂವಾದ ಶೈಲಿ ಅವರು ಆರಿಸಿಕೊಂಡ ಕಥಾವಸ್ತುಗಳನ್ನು ಕಲಾತ್ಮಕವಾಗಿ ಅರಳುವುದರಿಂದ ವಂಚಿಸಿದೆ. ಸಮಕಾಲೀನ ಬದುಕನ್ನು ಕಥಾ ಸಾಹಿತ್ಯವಾಗಿ ರೂಪಾಂತರಿಸುವ ಆತುರದಲ್ಲಿ ಅತ್ಯುತ್ತಮ ಕಾದಂಬರಿಗಳನ್ನು ಅವರಿಂದ ಪಡೆಯಲಾಗಲಿಲ್ಲ.

ಅ.ನ.ಕೃ. ಸುಮಾರು ಅರವತ್ತರ ದಶಕದಲ್ಲಿ ಬರೆದ ಕಾದಂಬರಿಗಳು ಬದಲಾಗುತ್ತಿರುವ ಸಮಾಜದ ಬಗ್ಗೆ ತೋರಿದ ಪ್ರತಿಕ್ರಿಯೆಗಳಾಗಿವೆ. ಹಳ್ಳಿಯ ಬದುಕು, ಕುಟುಂಬದ ವಿಘಟನೆಯನ್ನು ಕುರಿತು ಚಿಂತಿಸಿದ್ದಾರೆ. 'ಗೃಹಲಕ್ಷ್ಮಿ', 'ರುಕ್ಮಿಣಿ', 'ತಾಯಿ-ಮಕ್ಕಳು'. 'ಆಶೀರ್ವಾದ', 'ಅನುಗ್ರಹ, 'ಹೆಂಗರುಳು',- ಕಾದಂಬರಿಗಳಲ್ಲಿ ಈ ನೆಲದ ಸಂಸ್ಕೃತಿಯ ವ್ಯಾಖ್ಯಾನವನ್ನು ಮಾಡುವುದ ರೊಂದಿಗೆ ತಮ್ಮ ಸಾಂಪ್ರದಾಯಿಕ ಮನಸ್ಸಿನ ಮನೋಧರ್ಮವನ್ನು ; ಪರಿ ವರ್ತನೆಯ ಸಮಾಜದಲ್ಲಿ ಹೆಣ್ಣು ಅನುಭವಿಸುವ ದುರಂತದ ಚಿತ್ರವನ್ನು ಕೊಟ್ಟಿದ್ದಾರೆ.

ಪಂಡಿತ ತಾರಾನಾಥ ಅ.ನ.ಕೃ. ಅವರ ಪ್ರಥಮ ಕಾದಂಬರಿಗೆ ಕಥಾವಸ್ತುವನ್ನು ಸೂಚಿಸಿದರು. ಆ ಕೃತಿಯೇ 'ಜೀವನಯಾತ್ರೆ'. ಈ ಕೃತಿಯಿಂದ ಸಮಾಜದಲ್ಲಿನ ಗಂಡು-ಹೆಣ್ಣಿನ ಸಂಬಂಧಗಳ ವಿಶ್ಲೇಷಣೆ ಪ್ರಾರಂಭವಾಗಿ 'ಶ್ರೀಮತಿ', 'ಮುಡಿಮಲ್ಲಿಗೆ', 'ಧರ್ಮಪತ್ನಿ', 'ಕಾಂಚನ ಗಂಗಾ', 'ಕಾಗದದ ಹೂ' ಕಾದಂಬರಿಗಳಲ್ಲಿ ಮುಂದುವರಿದು ಅವರನ್ನು ಅತ್ಯಂತ ವಿವಾದಕ್ಕೆ ಗುರಿ ಮಾಡಿದ 'ನಗ್ನಸತ್ಯ', 'ಶನಿ ಸಂತಾನ', 'ಸಂಜೆ ಗತ್ತಲು' ಕಾದಂಬರಿಗಳಲ್ಲಿ ಪ್ರಮುಖವಾಗಿ ಕಾಣಿಸಿಕೊಂಡಿದೆ. ಈ ಕೃತಿಗಳು ಸಮಸ್ಯೆಯ ಮೇಲೆ ಹೊಸ ಬೆಳಕನ್ನು ಚೆಲ್ಲಿದರೂ ಪಾತ್ರ ಪೋಷಣೆ ಮತ್ತು ಸಂವಿಧಾನದ ಶಿಥಿಲತೆಯಿಂದ ಸೋತಿವೆ. ಲೈಂಗಿಕ ಸಂಬಂಧ ಹಾಗೂ ವೇಶ್ಯಾಜೀವನವನ್ನು ಕುರಿತು ಬರೆದ ಕಾದಂಬರಿಗಳು ಅಂದಿನ ಸಾಹಿತ್ಯ ಲೋಕದಲ್ಲಿ ದೊಡ್ಡ ವಾಗ್ವಾದದ ಅಲೆ ಗಳನ್ನು ಎಬ್ಬಿಸಿದವು. ಸಂಪ್ರದಾಯಗಳು ಮತ್ತು ಪ್ರಗತಿಶೀಲ ಲೇಖಕರೇ ಇದನ್ನು ವಿರೋಧಿಸಿದರು. ಅ.ನ.ಕೃ. ತಮ್ಮನ್ನು ಸಮರ್ಥಿಸಿಕೊಳ್ಳಲು 'ಸಾಹಿತ್ಯ ಮತ್ತು ಕಾಮ ಪ್ರಚೋದನೆ' ಎಂಬ ವಿಶಿಷ್ಟ ಕೃತಿಯನ್ನು ರಚಿಸಬೇಕಾಯಿತು.

ಕಾದಂಬರಿಗಳಲ್ಲಿ ಅ.ನ.ಕೃ. ಸಮಾಜ ಸುಧಾರಣೆಯ, ನೈತಿಕ ಉನ್ನತಿಯ ದೃಷ್ಟಿಕೋನ ಉಳ್ಳವರಾದವರೂ, ಅವನ್ನು ಕಲಾತ್ಮಕ ಕೃತಿಗಳನ್ನಾಗಿ ಮಾರ್ಪಡಿಸುವಾಗ ಅನುಸರಿಸಿದ ಸರಳೀಕರಣ ವಿಧಾನ ಅವನ್ನು ಪೇಲವ ಗೊಳಿಸಿದವು. 'ಹೇಗಾದರೂ ಬದುಕು', 'ಮನೆಯಲ್ಲಿ ಮಹಾಯುದ್ಧ', 'ಪಶ್ಚಾತ್ತಾಪ', 'ಪುನರಾವತಾರ' ಕಾದಂಬರಿಗಳಲ್ಲಿ ರಾಜಕೀಯ, ಅಸ್ಪೃಶ್ಯತೆ ಗಳನ್ನು ಕುರಿತು ಬರೆದಿದ್ದರೂ ಅವುಗಳು ಯಶಸ್ವಿಯಾಗಿಲ್ಲ. ಅ.ನ.ಕೃ. ತಮ್ಮ ಬದುಕಿನ ಉತ್ತರಾರ್ಧದಲ್ಲಿ ಹೆಚ್ಚು ಸಾರ್ವಜನಿಕ ವ್ಯಕ್ತಿ ಆಗಿದ್ದರಿಂದಲೋ ಏನೋ ಅವರ ಕೃತಿಗಳಲ್ಲಿ ಆಳವಾದ ಚಿಂತನೆ ಮೂಡಲು ಸಾಧ್ಯವಾಗಲಿಲ್ಲ. ಈ ರೀತಿಯ ಕಥಾವಸ್ತುವನ್ನು ನಿರ್ವಹಿಸುವುದರಲ್ಲಿ ಸಮಸ್ಯೆ ಮೇಲುಪದರ ದಲ್ಲಿ ನಿಲ್ಲುವುದೇ ವಿನಾ ಸಮಸ್ಯೆಯ ನಿಜವಾದ ವಿಶ್ಲೇಷಣೆ ಸಾಧ್ಯವಾಗುವು ದಿಲ್ಲ. ಅವರು ಎಲ್ಲವನ್ನೂ ಒಂದು 'ಟೈಪ್'ನಲ್ಲಿ ಜನಪ್ರಿಯಗೊಳಿಸಲು ಪ್ರಯತ್ನಿಸಿದರು.

ಅ.ನ.ಕೃ. ಅವರು 'ಯಲಹಂಕ ಭೂಪಾಲ' ಮತ್ತು 'ಕಿತ್ತೂರು ರಾಣಿ ಚೆನ್ನಮ್ಮ' ಮತ್ತು ವಿಜಯನಗರ ಸಾಮ್ರಾಜ್ಯವನ್ನು ಕುರಿತ ಐತಿಹಾಸಿಕ ಕಾದಂಬರಿ ಮಾಲೆಯನ್ನು ರಚಿಸಿದ್ದಾರೆ. ಈ ಕಾದಂಬರಿಗಳ ಮುಖ್ಯ ಗುಣವೆಂದರೆ ಕರ್ನಾಟಕ ಚರಿತ್ರೆಯನ್ನು ಜನಪ್ರಿಯಗೊಳಿಸುವುದು. ಓದು ಗರಲ್ಲಿ ನಾಡು-ನುಡಿಯ ಬಗ್ಗೆ ಅಭಿಮಾನ ಮೂಡುವಂತೆ ಮಾಡುವುದು. ಅ.ನ.ಕೃ. ಒಂಭತ್ತು ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಕಾಮನಬಿಲ್ಲು (ಭಾಗ 1 ಮತ್ತು 2) ಸಂಕಲನಗಳನ್ನು ದೇಶವಿದೇಶದ ಉತ್ತಮ ಕಥೆಗಳನ್ನು ಆಯ್ಕೆ ಮಾಡಿ ಸುದೀರ್ಘವಾದ ಉಪಯುಕ್ತ ಮುನ್ನುಡಿಗಳನ್ನು ಬರೆದಿದ್ದಾರೆ. ಈ ರೀತಿಯ ಪ್ರಯತ್ನ ಕನ್ನಡದಲ್ಲಿ ಇದೇ ಮೊದಲು. ಅ.ನ.ಕೃ. ಕಥೆಗಳು ಅತ್ಯುತ್ತಮ ಎನಿಸಿಕೊಳ್ಳದಿದ್ದರೂ ಸಣ್ಣಕಥೆಗಳ ರಚನೆಯಲ್ಲಿ ಹೊಸ ದಾರಿಗಳನ್ನು ತೋರಿದವು. ಇವರ ಕಥಾಸಾಹಿತ್ಯದಲ್ಲೂ ವರ್ಣನೆಗೆ ಹೆಚ್ಚು ಅವಕಾಶವಿಲ್ಲ. ಮೊದಲ ಕಾದಂಬರಿಯಾದ 'ಜೀವನ ಯಾತ್ರೆ'ಯಲ್ಲಿ ಸ್ವಲ್ಪ ಮಟ್ಟಿಗೆ ವರ್ಣನೆ ಕಂಡುಬಂದರೂ ಅನಂತರ ಅದು ಮರೆಯಾಯಿತು. ಆದರೂ ಓದುಗರನ್ನು ಹಿಡಿದಿಡುವಲ್ಲಿ ಯಶಸ್ವಿಯಾದರು. ಕಥಾ ಸಾಹಿತ್ಯದ ದಿಗಂತಗಳನ್ನು ವಿಸ್ತರಿಸಿದರು. ಅವರ ಸಾಹಿತ್ಯ ಕೃತಿಗಳು ಅಂದಿನ ಸಮಾಜದ ಸಂಕ್ರಮಣ ಸ್ಥಿತಿಗಳನ್ನು ಅಧ್ಯಯನ ಮಾಡುವ ಸಮಾಜ ವಿಜ್ಞಾನಿಗೆ ಆಕರಗಳು.

**ಪ್ರದರ್ಶನ ಕಲೆ**

ಅ.ನ.ಕೃ. ಸಾಹಿತ್ಯ ಜೀವನವನ್ನು ಪ್ರಾರಂಭಿಸಿದ್ದೇ ನಾಟಕದಿಂದ. ಕೈಲಾಸಂ, ಶ್ರೀರಂಗರು ನಾಟಕಗಳನ್ನು ಬರೆಯಲು ಪ್ರಾರಂಭಿಸಿದ ಕಾಲದಲ್ಲೇ ಇವರು ನಾಟಕಗಳನ್ನು ಬರೆದರೂ ಕೊನೆಗೆ ಅವರ ಆಯ್ಕೆ ಕಾದಂಬರಿ. ನಾಟಕಕಾರರಾಗಿ, ನಟರಾಗಿ ಅಂದಿನ ಗುಬ್ಬಿ ವೀರಣ್ಣ. ಮಹಮದ್ ಪೀರ್, ಬಳ್ಳಾರಿ ರಾಘವ, ನಾಗೇಂದ್ರರಾವ್, ಹಂದಿಗನೂರು ಸಿದ್ಧರಾಯಪ್ಪ, ಸುಬ್ಬಯ್ಯ ನಾಯ್ಡು, ವರದಾಚಾರ್, ಹಿರಣ್ಣಯ್ಯ, ಕೃಷ್ಣಮೂರ್ತಿ, ಮಳವಳ್ಳಿ ಸುಂದರಮ್ಮ, ಜಯಮ್ಮ ಮುಂತಾದ ಅಸಂಖ್ಯಾತ ಗೆಳೆಯರ ಸ್ನೇಹವಲಯ ವನ್ನು ಕಟ್ಟಿಕೊಂಡು ಅವರ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಸಹಾಯಕ ರಾದರು. ಅಂದಿನ ನಾಟಕದ ರೀತಿ-ನೀತಿಗಳ ಬಗ್ಗೆ, ಪ್ರಯೋಗಗಳ ಬಗ್ಗೆ ಅನೇಕ ಲೇಖನಗಳನ್ನು 'ರಂಗಭೂಮಿ'ಯಲ್ಲಿ ಸುದೀರ್ಘವಾಗಿ ಚರ್ಚಿಸಿದ್ದಾರೆ. 'ಆದದ್ದೇನು?', 'ಗುಬ್ಬಚ್ಚಿ ಗೂಡು', 'ಧರ್ಮಸಂಕಟ', 'ವಿಶ್ವಧರ್ಮ', 'ಬಣ್ಣದ ಬೀಸಣಿಗೆ' ಮುಂತಾದ ನಾಟಕಗಳಲ್ಲಿ ಹಿಂದೂ-ಮುಸ್ಲಿಂ ಸಮಸ್ಯೆಯನ್ನು ಹಾಗೂ ಸ್ತ್ರೀಯರ ಬಗ್ಗೆ ಅವರಿಗಿರುವ ಕಳಕಳಿಯನ್ನು ಗುರುತಿಸಬಹುದು. ಪೌರಾಣಿಕ ನಾಟಕಗಳಾದ 'ಸ್ವರ್ಣಮೂರ್ತಿ', 'ಹಿರಣ್ಯಕಶಿಪು' ಪಾತ್ರಚಿತ್ರಣ ಗಳಲ್ಲಿ ಹೊಸ ಬಗೆಯ ನಿಲುವನ್ನು ಕಾಣಬಹುದು. ಇವು ಕನ್ನಡ ನಾಟಕದ ಮೈಲುಗಲ್ಲುಗಳಾಗದಿದ್ದರೂ, ಪ್ರಾರಂಭದ ಪ್ರಯೋಗಗಳೆಂದು ಮನ್ನಣೆ ಪಡೆದಿವೆ. ಅ.ನ.ಕೃ. ಚಲನಚಿತ್ರ ಜಗತ್ತಿನೊಂದಿಗೂ ನಿಕಟ ಸಂಬಂಧವನ್ನು ಇರಿಸಿಕೊಂಡಿದ್ದರು. 'ಜೀವನನಾಟಕ', 'ಸ್ತ್ರೀರತ್ನ' ಚಿತ್ರಗಳಿಗೆ ಸಂಭಾಷಣೆಯನ್ನು ಬರೆದರು. ಆ ಪ್ರಪಂಚ ಅವರನ್ನು ಹೆಚ್ಚು ಆಕರ್ಷಿಸಲಿಲ್ಲ. ಆದರೆ ಅದರ ಅನುಭವವನ್ನು ತಮ್ಮ ಕಾದಂಬರಿಗಳಲ್ಲಿ ಬಳಸಿಕೊಂಡರು. ಬೆಂಗಳೂರಿನಲ್ಲಿ

ಕನ್ನಡ ಚಿತ್ರಗಳನ್ನು ಕಡ್ಡಾಯವಾಗಿ ಪ್ರದರ್ಶಿಸಬೇಕೆಂದು 1962ರಲ್ಲಿ ಹೂಡಿದ ಚಳವಳಿ ಇಂದು ಫಲ ನೀಡುತ್ತಿದೆ.

**ಸಂಕೀರ್ಣ**

ಅ.ನ.ಕೃ. ಕೇವಲ ಕಥಾ ಸಾಹಿತ್ಯ ನಾಟಕಗಳಿಗೆ ಮಾತ್ರ ಸೀಮಿತವಾದ ಬರಹಗಾರರಾಗಿರಲಿಲ್ಲ. ಅವರು ಜೀವನ ಚರಿತ್ರೆ, ವ್ಯಕ್ತಿಚಿತ್ರಗಳು. ವಿಮರ್ಶೆ, ಕಲಾವಿಮರ್ಶೆ. ಆತ್ಮಕಥನ ಮತ್ತು ಪ್ರಚಾರ ಸಾಹಿತ್ಯವನ್ನು ರಚಿಸಿದ್ದಾರೆ. ಇವರ ಸಾಹಿತ್ಯ ವಿಮರ್ಶೆ ಕಥೆ, ಕಾದಂಬರಿಗಳಿಗೆ ಸೀಮಿತಗೊಂಡಿದೆ. ಅ.ನ.ಕೃ. ಅವರ ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿಯ ಅಧ್ಯಯನಗಳು ಅವರ ವಿಶಾಲ ಮನೋಧರ್ಮವನ್ನೂ ರಸ ವಿಮರ್ಶೆಯ ದೃಷ್ಟಿಯನ್ನೂ ಸೂಚಿಸುತ್ತವೆ. ಅವರು ಶೈವಸಾಹಿತ್ಯದ ಬಗ್ಗೆ ತೋರಿದಷ್ಟು ಆಸಕ್ತಿ ಇತರ ಹಳಗನ್ನಡ ಕವಿಗಳ ಮೇಲೆ ತೋರಲಿಲ್ಲ. ಅವರ ಗದ್ಯ ರಚನೆಯಲ್ಲಿ ಬಹುಕಾಲ ಉಳಿದುಕೊಳ್ಳುವುದು ಕಲಾ ವಿಮರ್ಶೆ. ಆದರೆ ಈ ಪರಂಪರೆ ಮುಂದುವರಿಯಲಿಲ್ಲ. ಅವರ 'ನನ್ನನ್ನು ನಾನೇ ಕಂಡೆ' ಮತ್ತು 'ಬರಹಗಾರನ ಬದುಕು' ಅವರ ಸಾಹಿತ್ಯದ ಮನೋಧರ್ಮವನ್ನು ಒಳಗೊಂಡಿದ್ದು ಸಾಹಿತ್ಯಕ ನೆನಪುಗಳನ್ನು ದಾಖಲಿಸಿವೆ. ಇಲ್ಲಿ ಕೂಡ ತಮ್ಮ ಬದುಕಿನ ವಸ್ತುನಿಷ್ಠ ಆತ್ಮ ಪರಿವೀಕ್ಷಣೆಯನ್ನು ನಡೆಸಲು ಸಾಧ್ಯವಾಗಿಲ್ಲ. ಆದ್ದರಿಂದ ಈ ಕೃತಿಗಳು ಚಾರಿತ್ರಿಕವಾಗಿ ಮುಖ್ಯವಾಗುತ್ತವೆ. ಅವರು ಬಿಡಿಸಿದ 'ಕರ್ನಾಟಕ ಕಲಾವಿದರು', ಕನ್ನಡ ಕುಲರಸಿಕರು' ವ್ಯಕ್ತಿಚಿತ್ರಗಳು ಕನ್ನಡಕ್ಕೆ ಸಂದ ಅಪೂರ್ವ ಕೊಡುಗೆ. ಇಲ್ಲಿ ಅ.ನ.ಕೃ. ಅವರು ಹಿತಮಿತವಾದ ಸಂಯಮ ಶೈಲಿಯನ್ನು, ಉತ್ತಮ ಅಭಿರುಚಿಯನ್ನು ಹಾಗೂ ಕಲಾತ್ಮಕತೆಯನ್ನು ಮೆರೆದಿದ್ದಾರೆ. ಅ.ನ.ಕೃ. ಗದ್ಯಶೈಲಿಯನ್ನು ರೂಪಿಸಿದ ರೂವಾರಿಗಳಲ್ಲಿ ಒಬ್ಬರು. ಕನ್ನಡ ಗದ್ಯಶೈಲಿಗೆ ಹಿತವಾದ ಹದವನ್ನೂ, ಸಂವಾದ ನಿರೂಪಣೆಯನ್ನೂ ತಂದುಕೊಟ್ಟರು.

**ಕೊನೆಯ ಮಾತು**

ಅ.ನ.ಕೃ. ತಮ್ಮ ಬದುಕು-ಬರಹಗಳ ಮೂಲಕ ಕಂಡುಕೊಳ್ಳಲು ಪ್ರಯತ್ನಿಸಿದ್ದು 'ಕರ್ನಾಟಕತ್ವ'ದ ದರ್ಶನ: ಕರ್ನಾಟಕ ಸಂಸ್ಕೃತಿಯ ಪುನರುತ್ಥಾನ'. ಅಂದಿನ ಬದಲಾವಣೆಯ ಬಿರುಗಾಳಿಯಲ್ಲೂ ಕನ್ನಡತನ ಆರದಂತೆ ನೋಡಿಕೊಳ್ಳುವ ಪ್ರಯತ್ನದಲ್ಲಿ; ಕನ್ನಡಿಗರಿಗೆ ಕನ್ನಡದ ಬಗ್ಗೆ ಅಭಿಮಾನ ಮೂಡಿಸುವ ಪ್ರಯತ್ನದಲ್ಲಿ; ತಮ್ಮ ಇಡೀ ಪ್ರತಿಭೆಯನ್ನೂ, ಸಾಮರ್ಥ್ಯ ಶಕ್ತಿಗಳನ್ನೂ ಧಾರೆ ಎರೆದರು. ಕನ್ನಡ ನಾಡಿನ ಸರ್ವತೋಮುಖದ ಅಭಿವೃದ್ಧಿಯ ಬಗ್ಗೆ ನಾಡಿನ ಉದ್ದಗಲ ಅನೇಕ ಬಾರಿ ಸುತ್ತಾಡಿ, ಭಾಷಣಗಳನ್ನು ಮಾಡಿ ಎಚ್ಚರಿಸಿದರು. ಜನಸಾಮಾನ್ಯ ಓದುಗರಿಗೆ ಸಾಹಿತ್ಯ ರಚನೆ ಮಾಡಿದರು. ಅಪಾರ ಜನಪ್ರಿಯತೆಯನ್ನು ಸಂಪಾದಿಸಿದರು. ಅ.ನ.ಕೃ. ಹೆಸರು ಕನ್ನಡಿಗರ ಆತಿಥ್ಯ, ಘನತೆ, ಗೌರವದ ಸಂಕೇತ, ಅ.ನ.ಕೃ. ನಾಡು ಮರೆಯಲಾಗದ ಸಾಂಸ್ಕೃತಿಕ ಸೇನಾನಿ.

❑

# ಜಿ.ಪಿ.ರಾಜರತ್ನಂ

ನೀಲತ್ತಹಳ್ಳಿ ಕಸ್ತೂರಿ

1

"ಆಚೆ ಜಡೆ, ಈಚೆ ಜಡೆ
ನಡುವೆ ಊವಿನ ಸೇತುವೆ"

–ಇದು ಜಿ.ಪಿ.ರಾಜರತ್ನಂ ಅವರ ಒಂದು ಪದ್ಯದ ಮೊದಲ ಸಾಲುಗಳು.

ಕನ್ನಡ ನವೋದಯ ಕಾಲದ ಬಹು ಜನಪ್ರಿಯ ಸಾಹಿತಿ ಆದ ಅ.ನ.ಕೃಷ್ಣರಾಯರು ನಿಧನರಾದಾಗ, ಅವರಿಗೆ ಶ್ರದ್ಧಾಂಜಲಿ ಕಾರ್ಯಕ್ರಮವೊಂದು ವಿಶಿಷ್ಟರೀತಿಯಲ್ಲಿ ನಡೆಯಿತು, ಬೆಂಗಳೂರು ಮಲ್ಲೇಶ್ವರದ ಗಾಂಧೀ ಸಾಹಿತ್ಯ ಸಂಘದಲ್ಲಿ. ಜಿ.ಪಿ ರಾಜರತ್ನಂ ಆ ವರ್ಷ ಪೂರಾ ತಿಂಗಳಿಗೆ ಒಂದರಂತೆ ಸ್ಮಾರಕ ಉಪನ್ಯಾಸ ಮಾಡಿದರು. ವಿಷಯ ಹಲವು; ಸಾಹಿತ್ಯ, ನಾಟಕ, ಧರ್ಮ, ನೀತಿ ಇತ್ಯಾದಿ. ಉಪನ್ಯಾಸವನ್ನು ಹಾಗೆಯೇ ಮಾತಿನಲ್ಲಿ ಮುಗಿಸಿ ಬಿಡುವುದು ರಾಜರತ್ನಂ ಅವರ ಜಾಯಮಾನ ಅಲ್ಲ. ಈ ತಿಂಗಳ ಉಪನ್ಯಾಸವನ್ನು ಮುಂದಲ ತಿಂಗಳ ಸಭೆಯ ವೇಳೆಗೆ ಮುದ್ರಿಸಿ ಪುಸ್ತಿಕೆಯಾಗಿ ಪ್ರಕಟಿಸುತ್ತಿದ್ದರು. ಆ ವರ್ಷದ ಕೊನೆಗೆ ಆ ಹನ್ನೆರಡೂ ಉಪನ್ಯಾಸಗಳನ್ನು ಒಟ್ಟಾಗಿ ಸೇರಿಸಿ 'ಸ್ನೇಹದ ಸೇತುವೆ' ಎಂದು ಪ್ರಕಟಿಸಿದರು.

'ಸೇತುವೆ' ಪದ ರಾಜರತ್ನಂಗೆ ಪ್ರಿಯ, ವಿಶೇಷ ಅರ್ಥವುಳ್ಳದ್ದು. ವಿಭಿನ್ನ ವಿಚಾರಗಳ ನಡುವೆ, ಕ್ಷೇತ್ರಗಳ ನಡುವೆ, ಬಣಗಳ ನಡುವೆ, ಮಾರ್ಗಗಳ ನಡುವೆ, ಯುಗಗಳ ನಡುವೆ. ಜನಕೂಟಗಳ ನಡುವೆ, ಮತ ಧರ್ಮಗಳ ನಡುವೆ. ಒಲವುಗಳ ನಡುವೆ, ರುಚಿಗಳ ನಡುವೆ, ವ್ಯಕ್ತಿಗಳ ನಡುವೆ, ವಯೋತಂಡಗಳ ನಡುವೆ ಸಂಪರ್ಕ ಅಗತ್ಯ ಅಲ್ಲವೆ? ರಾಜರತ್ನಂ ಅಂಥ ಸೇತುವೆ ಆಗಿದ್ದರು.

ಬದುಕಿನ ಎಲ್ಲ ವಿಷಯಗಳಲ್ಲಿಯೂ ಹಾಗೆಯೇ, ಅವರದು ಸಮನ್ವಯ ದೃಷ್ಟಿ, ಸರ್ವೋದಯ ದೃಷ್ಟಿ, ಸಾಹಿತ್ಯವಾಗಲಿ, ಧರ್ಮನೀತಿ ಆಗಲಿ, ಮತವಾಗಲಿ ಎಲ್ಲವೂ ಬದುಕಿಗೆ ನೇರ ಸಂಬಂಧಿಸಿದವು. ಪೃಥಕ್ಕಾಗಿ ನಿಲ್ಲಬಾರದಂಥವು. ಪರಸ್ಪರ ಸಂಪರ್ಕ, ಸಂಬಂಧ, ಸಮನ್ವಯ ಇಟ್ಟುಕೊಂಡಿರಬೇಕಾದಂಥವು.

ಇತರ ಕ್ಷೇತ್ರಗಳ ಮಾತು ಹಾಗಿರಲಿ-ಅವು ಎಷ್ಟೇ ಮುಖ್ಯ ಆದರೂ, ಸಾಹಿತ್ಯದ ಬಗ್ಗೆ ನಾವು ನೋಡೋಣ.

ರಾಜರತ್ನಂ ಹಳೆಗನ್ನಡದಲ್ಲಿ ಪರಿಣತರು. ಜೊತೆಗೆ ಹೊಸಗನ್ನಡದ ನಾನಾ ಅಲೆಗಳ ಆಟವನ್ನು ಕಂಡಿದ್ದರು. ಹಾಗಾಗಿ ಹಳೆ-ಹೊಸಗನ್ನಡದ ನಡುವೆ ಸೇತುವೆ ಆದರು.

ಎಳೆಯ ಮಕ್ಕಳಿಗೆ ಅಗತ್ಯವಾದ ತಿಳಿಯಾದ ಸಾಹಿತ್ಯವನ್ನು ರಚಿಸಿ ಕೊಟ್ಟರು. ಬೆಳೆದವರ ಗಟ್ಟಿಹಲ್ಲಿಗೆ ತಕ್ಕುದಾದ ಪುಷ್ಟಿಕರ ವಿಚಾರದ ಉಂಡೆಗಳನ್ನು ಕಟ್ಟಿಕೊಟ್ಟರು. ಹಾಗೆಯೆ ದೊಡ್ಡವರ ಮೆಲುಕಿಗೆ ಚಿಂತನೆಯ ಗ್ರಾಸವನ್ನು ಒದಗಿಸಿದರು. ಹೀಗೆ ಮಕ್ಕಳಿಂದ ಮುದುಕರವರೆಗೆ ಸೇತುವೆ ಆದರು.

'ಸರ್ವಧರ್ಮ ಸಮನ್ವಯ' ಅವರು ನಂಬಿದ್ದ ಇನ್ನೊಂದು ಮೌಲ್ಯ. ವೇದೋಪನಿಷತ್ತಿನ ವಾಕ್ಯಗಳು, ಬುದ್ಧ-ಅಶೋಕರ ಮಾತುಗಳು, ಗಾಂಧೀ ವಾಣಿ ಹಾಗೂ ಸತ್ಯಸಾಯಿಯವರ ಮಾತುಗಳು ಎಲ್ಲವೂ ಅವರಿಗೆ ಈ ನಿಟ್ಟಿನಲ್ಲಿ ಬಲವಾದ ಆಧಾರವನ್ನು ಒದಗಿಸಿದ್ದವು. ಅಂತೆಯೆ ಅವರು ಜಗತ್ತಿನ ನಾನಾ ಧರ್ಮಗಳನ್ನು ಸಮಾನಾಸಕ್ತಿಯಿಂದ ಶ್ರದ್ಧೆಯಿಂದ ಅಧ್ಯಯನ ಮಾಡಿದರು. ಜನತೆಗೆ ತಿಳಿಯ ಹೇಳಿದರು. ಮತಗಳ ಮಳೆಬಿಲ್ಲನ್ನು ಕಟ್ಟಿ ತೋರಿಸಿದರು. ಮತ ಮತಗಳ ನಡುವೆ ಸಂಪರ್ಕ ಸೇತು ಆದರು.

ಸಾಹಿತ್ಯದ ದೃಷ್ಟಿಯಿಂದ ಅತ್ಯಂತ ಪ್ರಮುಖ ಎನಿಸಿಕೊಂಡ ಇನ್ನೊಂದು ಸಂಪರ್ಕ ಅವರು ರಚಿಸಿದ್ದು ಅವರ ಸಾಹಿತ್ಯ ಪರಿಚಾರಿಕೆಯ ಕೆಲಸ. ತಮ್ಮದು ಬೇರೆಯವರದು ಎಂಬ ಭೇದ ಇಲ್ಲದೆ ಎಲ್ಲರ ಸಾಹಿತ್ಯವನ್ನೂ ಅವರು ಜನರಿಗೆ ಪರಿಚಯ ಮಾಡಿ ಕೊಟ್ಟರು. 'ತಾ ಕಂಡ ಶಿವಪಥವ ಎಲ್ಲರಿಗೆ ತೋರ್ಪ' ಶಿವಶರಣರಂತೆ ಅವರು ತಾವು ಸಾಹಿತ್ಯದಲ್ಲಿ ಕಂಡ ಬೆಳಕನ್ನು ಸವಿದ ಸ್ವಾರಸ್ಯವನ್ನು ನಾಡಿಗೆಲ್ಲ ಹಂಚಲು ಹೆಣಗಿದರು. ಇದರಿಂದಾಗಿ ರಾಜರತ್ನಂ ಸಾಹಿತಿಗಳಿಗೂ ಜನಕ್ಕೂ ನಡುವೆ ಸೇತುವೆ ಆಗಿದ್ದರು. ನವೋದಯ ಕಾಲದಲ್ಲಿ ಕನ್ನಡ ಸಾಹಿತ್ಯವನ್ನು ಜನತೆಯ ಹತ್ತಿರಕ್ಕೆ ಕೊಂಡೊಯ್ದು ಮುಟ್ಟಿಸುವ ಕೆಲಸ ಏನು ನಡೆಯಿತು ಅದರಲ್ಲಿ ಭೀಮಪಾಲು ಜಿ.ಪಿ. ರಾಜರತ್ನಂ ಅವರದು:

ಸಾಹಿತ್ಯ ರಚನೆ ಎಷ್ಟು ಅಗತ್ಯವೋ, ಅದರ ಪ್ರಸಾರ ಪರಿಚಯ ಗುಣಗ್ರಹಣ ಅಷ್ಟೇ ಅಗತ್ಯ. ಸಾಹಿತ್ಯ 'ಚರ' ಆಗದೆ, ಕಟ್ಟುಗಳಲ್ಲೋ ಬೀರುಗಳಲ್ಲೋ ಪ್ರೆಸ್ಸುಗಳಲ್ಲೋ ಸರ್ಕಾರಿ ಗೋದಾಮುಗಳಲ್ಲೋ 'ಸ್ಥಿರ' ಆಗಿ ಕೂತರೆ ಏನು ಪ್ರಯೋಜನ? ಜನರಿಗೆ ತಲುಪಬೇಡವೇ ? ಅವರ ಗಮನಕ್ಕೆ ಬರಬೇಡವೇ ? ಭಗವಂತನಾದ ಬುದ್ಧನ ಬೋಧೆಯನ್ನು ನಾಡಲ್ಲೆಲ್ಲಾ ಹರಡಲು 'ಗಂಧವಾಹಿ'ಗಳಾಗಿ ಭಿಕ್ಕುಗಳು ಅಲೆದಾಡಿದರು. ರಾಜರತ್ನಂ ಹಾಗೆಯೇ 'ಸಾಹಿತ್ಯ ಭಿಕ್ಕು' (ನೋಡಲೂ ಭಿಕ್ಕುವಿನ ಹಾಗೆಯೇ ಇದ್ದರಲ್ಲ!) ಆಗಿದ್ದರು. ಸಾಹಿತ್ಯ ಪರಿಚಾರಿಕೆ ಅವರಿಗೆ ಒಂದು ತಪಸ್ಸೇ ಆಗಿತ್ತು, ಯೋಗವೇ ಆಗಿತ್ತು.

ಜಿ.ಪಿ.ರಾಜರತ್ನಂ ಹುಟ್ಟಿದ್ದು ಡಿಸೆಂಬರ್ 5, 1908. ಪಾಂಡಿತ್ಯ ನೀತಿ ನೇಮಕಗಳಿಗೆ ಹೆಸರಾಂತ ಗುಂಡ್ಲು ಪಂಡಿತ ವಂಶ. ತಂದೆ ಗೋಪಾಲಕೃಷ್ಣ ಅಯ್ಯಂಗಾರ್ ಮೈಸೂರು ಜಿಲ್ಲೆಯಲ್ಲಿ ಒಳ್ಳೆಯ ಉಪಾಧ್ಯಾಯರೆಂದು ಹೆಸರು ಪಡೆದವರು. ಹಲವಾರು ಉಪಾಧ್ಯಾಯರ ವಂಶ ಅದು. ಒಬ್ಬ ಹಿರಿಯರು ಗುಂಡ್ಲು ಪಂಡಿತ ಲಕ್ಷ್ಮಣಾಚಾರ್ ಖ್ಯಾತ ಆಯುರ್ವೇದ ಪಂಡಿತರು. ಅಧ್ಯಯನ, ಅಧ್ಯಾಪನ, ಹೀಗೆ ರಾಜರತ್ನಂಗೆ ಮನೆತನದಿಂದ ಮೈಗೂಡಿಬಂದ ಬಳುವಳಿ.

ಅವರಿಗೆ ತಾಯೊಲವು ಸಿಕ್ಕಿದ್ದು ಸ್ವಲ್ಪ ಮಾತ್ರ, ಅನಂತರ ಅಜ್ಜಿಯ ಅಕ್ಕರೆ, ಆಮೇಲೆ ತಂದೆಯೇ ತಾಯಿ,ತಂದೆ ಎಲ್ಲಾ. ಹೆಸರು ಇದ್ದರೆ ಏನು, ತಂದೆ ಬಡ ಮೇಷ್ಟ್ರು ! ಅಂದಿನ ಬಡಕುಟುಂಬ, ಶಿಸ್ತು ಸಂಯಮಗಳಿಗೆ ಅಂಟಿಕೊಂಡ ಕುಟುಂಬ, ಆಚಾರ ನೇಮಗಳನ್ನು ಬಿಡದ ಕುಟುಂಬ ಎಂಥೆಂಥ ಪಾಡು ಪಡಬೇಕಿತ್ತೊ ಎಲ್ಲವೂ ಇತ್ತು ರಾಜರತ್ನಂ ಪಾಲಿಗೆ. 'ನೋವೆಲ್ಲ ಪಾವಕ' ಎನ್ನುವುದು ಅವರಿಗೆ ಪ್ರಿಯವಾಗಿದ್ದ ವಿಷಯ. ಬಾಳ ಅನುಭವ, ಕಷ್ಟ ಕಾರ್ಪಣ್ಯಗಳ ಮೂಸೆಯಲ್ಲಿ ಗಟ್ಟಿ ಆಸಾಮಿಯಾಗಿ ಅವರು ರೂಪುಗೊಂಡರು.

ಹಳೆಗನ್ನಡದ ಭವ್ಯ ಪದ್ಯಗಳು ರಾಜರತ್ನಂರಲ್ಲಿ ಬೇರೂರಿದವು. ಸಾವಿರ ವರ್ಷದ ಹಿಂದಿನ ರನ್ನಕವಿಯ 'ನೆಗಪಿ ವರೂಥಮಂ ವಸುಧೆ ನುಂಗಿದುದಂ' ಎಂಬ ವೃತ್ತ ಇಂದಿನ ಈ ರತ್ನನ ಮನಸ್ಸನ್ನು ತುಂಬಿತು. ಕನ್ನಡಕ್ಕೆ ಸೆಳೆಯಿತು. ಆ ರನ್ನನದೇ ಮಾತಿನ ಗಾಂಭೀರ್ಯ, ಘನತೆ, ಚಿತ್ರಣ, ಆತ್ಮಪ್ರತ್ಯಯ, ಸ್ವಾಭಿಮಾನ, ಛಾತಿ ರಾಜರತ್ನಂರಲ್ಲೂ ಮೂಡಿದ್ದು ಆಶ್ಚರ್ಯವೇನಲ್ಲ. ಅಂತೆಯೇ ಆಚಾರ್ಯ ಬಿ.ಎಂ.ಶ್ರೀ. ಅವರು

> "ವಸುಧೆಯೊಳಗೊಂದು ರತ್ನಮಿಂ
> ದೆಸೆದಿರ್ದುದು ಪಲವು ರತ್ನವಿಲ್ಲೆಂಬಿನಮೇಂ
> ಮಸುಳಿಸಿದನೊ ಬಹುರತ್ನಾ
> ವಸುಂಧರಾಯೆಂಬ ವಾಕ್ಯಮಂ ಕವಿರತ್ನ

ಎಂಬ ಆ ರನ್ನನ ಮಾತನ್ನು ಇಂದು ಈ ರತ್ನ ಮಸುಳಿದ್ದಾನೆ" ಎಂದರು.

1931ರಲ್ಲಿ ಅವರು ಕನ್ನಡ ಎಂ.ಎ. ಮುಗಿಸಿದರು. ಕೆಲಸಕ್ಕಾಗಿ ಅಲೆತ. ತಂದೆಯವರ ಬದಲಿಗೆ ಶಾಲೆಯಲ್ಲಿ ಆಗಾಗ ಮಾಸ್ತರಿಕೆ. ಎಂ.ವಿ. ಗೋಪಾಲ ಸ್ವಾಮಿ ಅವರ ಶಿಶುವಿಹಾರದಲ್ಲಿ ಮಾಸ್ತರಿಕೆ - ಇವೆಲ್ಲ ಬಾಳಿಗೆ ಸ್ಥಿರತೆ ಒದಗಿಸಲಿಲ್ಲ. ಹೈದರಾಬಾದಿಗೆ ಹೋದರೆ, ಅಲ್ಲಿ ಇವರ ಖಾದಿ ಉಡುಪು ಅನುಮಾನಕ್ಕೆ ಎಡೆಗೊಟ್ಟಿತು. ಹೊರಗಿನವರಿಗೆ ಅವಕಾಶ ಇಲ್ಲ ಎಂದು ತಿಳಿಯಿತು. ಬೆಂಗಳೂರಿನ ಜನಗಣತಿ ಕಚೇರಿಯಲ್ಲಿ 'ಸಾರ್ಟರ್' ಕೆಲಸಕ್ಕೆ ಪ್ರಯತ್ನಿಸಿದರು. ಅಲ್ಲಿ ಅಧಿಕಾರಿ ಆಗಿದ್ದ 'ಶ್ರೀನಿವಾಸ'ರು [ಮಾಸ್ತಿ] ಆಗಲೇ ಇವರ ಸಾಹಿತ್ಯದ ಚಟುವಟಿಕೆಯನ್ನು ಬಲ್ಲವರು. ಸಾಹಿತ್ಯದ ಕೆಲಸವನ್ನೇ ಮುಂದುವರಿಸಬೇಕೆಂದೂ ಅದಕ್ಕಾಗಿ ತಾವು ನೆರವು ನಿಲ್ಲುವುದಾಗಿಯೂ ಹೇಳಿದರು. 'ರತ್ನ ದಮ್ಮಯ್ಯ ಎಂದು ಒಪ್ಪಿದ'. ಪರಿಣಾಮ ರಾಜರತ್ನಂ ಅವರ ಬೌದ್ಧ ಅಧ್ಯಯನ, ಅದರಿಂದ ಕನ್ನಡಕ್ಕೆ ಆದ ಲಾಭ ಬೌದ್ಧ ಸಾಹಿತ್ಯ ಹಾಗೂ ಸಾಹಿತಿ ರಾಜರತ್ನಂ !

ಶಿಶುವಿಹಾರದ ಮಾಸ್ತರಿಕೆಯ ಅನುಭವ ಎಳೆಯ ಮಕ್ಕಳು ಹಾಡಿ ಕೊಂಡು ನಲಿದು ಕುಣಿಯುವಂತೆ ಹಾಡುಗಳನ್ನು ರಚಿಸಲು ಪ್ರಚೋದಿಸಿತು. ಪ್ರಖ್ಯಾತ ಪದ್ಯ 'ತುತ್ತೂರಿ' ಬಂತು. ಅದೇ ಮಾದರಿಯ ಅನೇಕ ಪದ್ಯ ಬಂದವು. ಶಿವರಾಮ ಕಾರಂತರು ಪುತ್ತೂರಿನ ಬಾಲವನದಲ್ಲಿ ನಡೆಸುತ್ತಿದ್ದ ಮಕ್ಕಳ ಮೇಳದ ಅನುಭವಗಳಿಂದ ಈ ಶಿಶುಸಾಹಿತ್ಯ ರಚನೆ ಬಲಗೊಂಡಿತು. ಕನ್ನಡದಲ್ಲಿ ಶಿಶುಸಾಹಿತ್ಯ ಪ್ರಕಾರವನ್ನು ರಾಜರತ್ನಂ ಪೋಷಿಸಿ ಬೆಳೆಸಿದರು.

ಅದು ರಾಷ್ಟ್ರೀಯ ಜಾಗೃತಿಯ ಬಿರುಗಾಳಿಯ ಕಾಲ. ರಾಜರತ್ನಂ ನೇರವಾಗಿ ಅದರಲ್ಲಿ ಒಳಗೊಳ್ಳದಿದ್ದರೂ, ಅದನ್ನು ಮನಸಾ ಸ್ವೀಕರಿಸಿದರು. ಖಾದಿಯ ಉಡುಪು ಬಾಳಿನ ವ್ರತವೇ ಆಯಿತು ಕೊನೆಯವರೆಗೂ. ನೆಹರೂ ಅವರ ಒಂದು ಭಾಷಣ 'ಗಂಡುಗೊಡಲಿ'ಯಂಥ ಉತ್ತಮ ವಿಶಿಷ್ಟ ನಾಟಕಕ್ಕೆ ಪ್ರೇರಕವಾಯಿತು.

ಅದೇ ಸುಮಾರಿಗೆ ಮದುವೆ. ಆದರೆ ಅನಿಶ್ಚಿತ ಸ್ಥಿತಿ, ಪತ್ನಿ ಲಲಿತಮ್ಮ ನವರ ಕಾಯಿಲೆಗಳಿಂದಾಗಿ ಸಂಸಾರ ನೇರ್ಪುಗೊಂಡಿರಲಿಲ್ಲ. ಆ ದುಗುಡ ಭಾರದ ನಡುವೆಯೆ, ಮೈಸೂರಿನ ಹೆಂಡದ ಅಂಗಡಿಯ ದೃಶ್ಯಗಳು ರಾಜರತ್ನಂರಲ್ಲಿ ವಿಚಿತ್ರವಾದ, ವಿಶಿಷ್ಟವಾದ ಪ್ರತಿಕ್ರಿಯೆ ಉಂಟು ಮಾಡಿದವು. ಪರಿಣಾಮ ಅನನ್ಯ ಕೃತಿ 'ಎಂಡಕುಡುಕ ರತ್ನ'. ಆ ಪುಸ್ತಿಕೆಯ ಪ್ರಕಟಣೆಗೆ ಹಣ ಇಲ್ಲದೆ, ತಮ್ಮ 'ತಾರೆ' ಕವನಕ್ಕೆ ವಿಶ್ವವಿದ್ಯಾನಿಲಯದಿಂದ ಬಂದಿದ್ದ, ತಾವು ಹೆಂಡತಿಗೆ ಕೊಟ್ಟಿದ್ದ ಬಿ.ಎಂ.ಶ್ರೀ. ಚಿನ್ನದ ಪದಕವನ್ನೇ ಒತ್ತೆ ಇಟ್ಟು ಸಾಲ ಪಡೆದದ್ದು, ರಾಜರತ್ನಂ ಅವರ ಸಾಹಿತ್ಯದ ಆಸಕ್ತಿ, ಛಲ, ನಿಷ್ಠೆಗಳಿಗೆ ನಿದರ್ಶನ ಆದ ಪ್ರಸಂಗ, ಮನ ಕಲಕುವ ಪ್ರಸಂಗ. 14 ಪದ್ಯಗಳ 'ಎಂಡಕುಡುಕ ರತ್ನ' ಕೃತಿಗೆ ಪುಟ್ನಂಜಿ ಪದಗಳು, ಮುನಿಯನ ಪದಗಳು ಸೇರಿಕೊಂಡು 77 ಪದಗಳ 'ರತ್ನನ ಪದಗಳು' ಕೃತಿ ಆಯಿತು. ಮಡಿಕೇರಿ ಸಾಹಿತ್ಯ ಸಮ್ಮೇಳನದಲ್ಲಿ ಆ ಪದಗಳು ಎಬ್ಬಿಸಿದ ಕೋಲಾಹಲ, ಪಡೆದ ಪ್ರಚಾರ, ಜನಪ್ರಿಯತೆಗಳು ಅಸೂಯೆ ಹುಟ್ಟಿಸುವ ಹಾಗಿದ್ದವು. 'ರತ್ನನ ಪದಗಳು' ಏಳೆಂಟು ಮುದ್ರಣ ಕಂಡು, ಇಂದಿಗೂ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಮಾರಾಟವಾಗುತ್ತಿರುವ ನಾಲ್ಕಾರು ಅಪರೂಪದ ಕನ್ನಡ ಪುಸ್ತಕಗಳಲ್ಲಿ ಒಂದು ಎಂಬ ವಿಕ್ರಮವನ್ನು ಉಳಿಸಿಕೊಂಡಿದೆ.

ಕಾಯಿಲೆ ಬಿದ್ದ ಲಲಿತಮ್ಮ ಏಳಲಿಲ್ಲ, ಅದಕ್ಕೇ ತುತ್ತಾದರು. ಕಂಗೆಟ್ಟ ರಾಜರತ್ನಂ ಅವರ ಬದುಕನ್ನು ತುಂಬಲು ಶ್ರೀಮತಿ ಸೀತಮ್ಮನವರು ಹಿಂದೆಯೆ ಬಂದರು. ಈ ವಿವಾಹದ ನಂತರ ರಾಜರತ್ನಂ ಅವರ ಬದುಕು ಸ್ಥಿರಗೊಂಡಿತು, ನೆಲೆಗೊಂಡಿತು. ಅವರ ಸಾಹಿತ್ಯಕೃಷಿಗೂ ಬೇಕಾದಷ್ಟು ಇಂಬು ದೊರಕಿತು.

1928ರಿಂದ 38ರ ವರೆಗಿನ ಹತ್ತು ವರ್ಷ ರಾಜರತ್ನಂ ಅವರ ಬದುಕಿನಲ್ಲಿ ಒಂದು ಮುಖ್ಯ ಘಟ್ಟ, ಪರ್ವಕಾಲ, ಬಡತನ, ನಿರುದ್ಯೋಗ, ಬದುಕಿಗೆ ಆಧಾರವಾಗಿದ್ದ ತಂದೆ, ಅಣ್ಣಂದಿರ ಮರಣ, ಹೊಟ್ಟೆಪಾಡಿಗಾಗಿ ಪರದಾಟ, ಹೆಂಡತಿಯ ಕಾಯಿಲೆ, ಮರಣ, ಬದುಕೇ ಬೇಡ ಎನಿಸುವಂಥ ಸ್ಥಿತಿ - ಇದು ಒಂದು ಪಕ್ಷ. ಸಾಹಿತ್ಯಕ್ಕೆ ಸಿಕ್ಕ ಪ್ರಚೋದನೆ, ಪ್ರೇರಣೆ, ಪ್ರೋತ್ಸಾಹಗಳು, ಎಂ.ಎ. ಪರೀಕ್ಷೆ ಯಲ್ಲಿ ತೇರ್ಗಡೆ, ಕೆಲವೇ ವರ್ಷ ಆದರೂ ದೊರೆತ ಪತ್ನಿಯ ಒಲವು, ಆಕೆ ಹೋದ ಮೇಲೆ ಕೈ ಹಿಡಿದ ಸೀತಮ್ಮನವರ ಸಹಕಾರ, ಮಾವಂದಿರುಗಳಿಂದ ಒದಗಿಬಂದ ನೆರವು, ಮಾಸ್ತಿಯವರ ಪ್ರೋತ್ಸಾಹ, ಮಡಿಕೇರಿ ಸಾಹಿತ್ಯ ಸಮ್ಮೇಳನದಲ್ಲಿ ಸಿಕ್ಕ ಪ್ರಸಿದ್ಧಿ, 'ಗಂಡು ಗೊಡಲಿ' ನಾಟಕ, 'ಚೀನಾದೇಶದ ಬೌದ್ಧ ಯಾತ್ರಿಕರು', 'ಧರ್ಮದಾನಿ ಬುದ್ಧ', 'ಬುದ್ಧನ ಜಾತಕಗಳು' ಮುಂತಾದ ಬೌದ್ಧಕೃತಿಗಳ ರಚನೆ, 'ಭಗವಾನ್ ಮಹಾವೀರ', 'ಶ್ರೀ ಗೋಮಟೇಶ್ವರ', 'ಮಹಾವೀರನ ಮಾತುಕತೆ', 'ಭಗವಾನ್ ಪಾರ್ಶ್ವನಾಥ' ಮೊದಲಾದ ಜೈನ ಸಾಹಿತ್ಯ ಸೃಷ್ಟಿ, ಅನನ್ಯ ಕೃತಿ 'ರತ್ನನ ಪದಗಳು', 'ತುತ್ತೂರಿ', 'ಕಡಲೆಪುರಿ', 'ಗುಲಗಂಜಿ', 'ಕಂದನ ಕಾವ್ಯಮಾಲೆ' ಇತ್ಯಾದಿ ಶಿಶುಸಾಹಿತ್ಯ ರಚನೆ, ಇತರ ಅನೇಕ ಕೃತಿಗಳ ಪ್ರಕಟನೆ, ಮೂರು ಕೃತಿಗಳಿಗೆ ಬಹುಮಾನಗಳು, 'ಗೌತಮ ಬುದ್ಧ' ಕೃತಿ - ಪಠ್ಯವಾಗಿ ಕೈಗೆ ನಾಲ್ಕು ಕಾಸು, ಉತ್ತಮ ಸಾಹಿತಿ, ವಾಗ್ಮಿ ಎಂಬ ಹೆಸರು - ಇವೆಲ್ಲ ಇನ್ನೊಂದು ರಂಗು.

1938ರಲ್ಲಿ ದೊರೆತ ಕಾಲೇಜು ಕನ್ನಡ ಪಂಡಿತ ಹುದ್ದೆ ರಾಜರತ್ನಂ ಅವರ ಬದುಕಿಗೆ ಸ್ಥಿರತೆಯನ್ನು ತಂದಿತ್ತಿತು. ಅಲ್ಲಿಂದ 1964ರಲ್ಲಿ ನಿವೃತ್ತ ರಾಗುವವರೆಗೆ ಮೈಸೂರು, ಬೆಂಗಳೂರು, ಶಿವಮೊಗ್ಗ, ತುಮಕೂರು ಮುಂತಾದ ಊರುಗಳಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ಜ್ಞಾನದಾನ ಮಾಡಿದರು; ಸಾಹಿತ್ಯಾಸಕ್ತಿಯನ್ನು ತುಂಬಿದರು. ನಿವೃತ್ತರಾದಾಗ ಅವರು 'ಕನ್ನಡ ರೀಡರ್'. ಆಮೇಲೆಯೂ ಒಂದೆರಡು ವರ್ಷ ಯು.ಜಿ.ಸಿ. ಅಧ್ಯಾಪಕ ರಾಗಿ ಕೆಲಸ ಮಾಡಿದರು. ಅಲ್ಲದೆ ಇನ್ನೂ ಅಷ್ಟು ಕಾಲ ನ್ಯಾಷನಲ್ ಕಾಲೇಜು, ಎಂ.ಇ.ಎಸ್.ಕಾಲೇಜು, ಸತ್ಯಸಾಯಿ ಕಾಲೇಜುಗಳಲ್ಲಿ ನಾನಾ ವಿಷಯಗಳ ಬಗ್ಗೆ ಬೋಧನೆ ನಡೆಸಿದರು.

ಕಾಲೇಜಿನ ಕೆಲಸ ರಾಜರತ್ನಂ ಅವರ ಬದುಕಿನ ಇನ್ನೊಂದು ಪುಟವನ್ನು ತುಂಬಿತು. ಅದೆಂದರೆ ವಿದ್ಯಾರ್ಥಿಗಳ ಸಾಹಿತ್ಯಕೃಷಿಗೆ ಪ್ರೇರಣೆ. ವಿದ್ಯಾರ್ಥಿ ಗಳಿಂದ ಬರೆಯಿಸಿದ ಲೇಖನಗಳನ್ನು ಅಚ್ಚುಮಾಡಿ ಪ್ರಕಟಿಸಿದರು. 'ನಮ್ಮ ನಮ್ಮವರು', 'ವಿದ್ಯಾರ್ಥಿ ವಿಚಾರ ವಿಲಾಸ', 'ಗಂಧದ ಹುಡಿ', 'ನಮ್ಮ ಬೇಂದ್ರೆ ಯವರು', 'ಬಾಲ ಸರಸ್ವತಿ', 'ಹೂವಿನ ಪೂಜೆ' ಇತ್ಯಾದಿಗಳು ಇಂತಹ ಕೃತಿಗಳು. ಇದರಿಂದಾಗಿ ಹಲವಾರು ತರುಣರು ಸಾಹಿತಿಗಳಾಗುವುದಕ್ಕೂ, ನೂರಾರು ತರುಣರು ಸಾಹಿತ್ಯಸೇವಕರಾಗುವುದಕ್ಕೂ ಇಂಬು ದೊರೆಯಿತು. ಇಂದು ಖ್ಯಾತನಾಮರಾಗಿರುವ ಹಲವಾರು ಸಾಹಿತಿಗಳು ಹಾಗೆ ತಯಾರಾದವರೇ.

ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ ಕನ್ನಡನಾಡಿನ ಹಳೆಯ ಸಾಹಿತ್ಯ ಸಂಸ್ಥೆಗಳಲ್ಲಿ ಒಂದು. ಪ್ರೊ. ಎ.ಆರ್.ಕೃ. ಸ್ಥಾಪಿಸಿದ್ದು ರಾಜರತ್ನಂ ಅದಕ್ಕೆ ಜೀವಕಳೆ ತುಂಬಿದರು. ಸುಮಾರು 30 ಕೃತಿಗಳನ್ನು ಸಂಘದಿಂದ ಪ್ರಕಟಿಸಿದರು. ತಾವೇ ಹೊತ್ತು ತಿರುಗಾಡಿ ಮಾರಿದರು. ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆ, ಗಾಂಧೀ ಸಾಹಿತ್ಯ ಸಂಘ ಮೊದಲಾದ ಸಂಸ್ಥೆಗಳ ನಿಕಟ ಸಂಬಂಧ ಇಟ್ಟುಕೊಂಡಿದ್ದರು. ಅಲ್ಲಿ ಹಾಗೂ ಇತರ ಅನೇಕ ಕಡೆಗಳಲ್ಲಿ ಸಾವಿರಾರು ಭಾಷಣಗಳಿಂದ ಸಾಹಿತ್ಯ, ಧರ್ಮ, ನೀತಿ ಇತ್ಯಾದಿ ವಿಷಯಗಳನ್ನು ಜನರಿಗೆ ತಿಳಿಯಹೇಳಿದರು.

1938ರ ಬಳ್ಳಾರಿ ಸಾಹಿತ್ಯ ಸಮ್ಮೇಳದ ಲೇಖಕರ ಗೋಷ್ಠಿ ಅಧ್ಯಕ್ಷತೆ, 1945ರ ರಬಕವಿ ಸಮ್ಮೇಳನದ ಗೋಷ್ಠಿ ಅಧ್ಯಕ್ಷತೆ, 1976ರಲ್ಲಿ ಕಾರ್ಕಳದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಹಾಗೂ ಹೊಂಬುಚ ದಲ್ಲಿ ಶಿವಮೊಗ್ಗ ಜಿಲ್ಲಾ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ, 1969ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1970ರಲ್ಲಿ ರಾಜ್ಯೋತ್ಸವ ಪ್ರಶಸ್ತಿ, 1977ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪ್ರಶಸ್ತಿ, 1969ರಲ್ಲಿ ಮಲ್ಲೇಶ್ವರದ ನಾಗರಿಕರಿಂದ ಪುಸ್ತಕ ಮಾರಾಟದ ನಿಧಿಯ ಅರ್ಪಣೆಯ ವಿಶಿಷ್ಟ ಸನ್ಮಾನ, ಎಲ್ಲಕ್ಕೂ ಕಿರೀಟ ಪ್ರಾಯವಾಗಿ 1978ರಲ್ಲಿ ದೆಹಲಿಯಲ್ಲಿ ಸುವರ್ಣ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ - ಇವು ರಾಜರತ್ನಂ ಅವರಿಗೆ ಸಂದ ಗೌರವಗಳು. 1979ರ ಧರ್ಮಸ್ಥಳದ ಸಾಹಿತ್ಯ ಸಮ್ಮೇಳನದಲ್ಲಿ ಮಕ್ಕಳ ಸಾಹಿತ್ಯ ಗೋಷ್ಠಿಯ ಅಧ್ಯಕ್ಷತೆಯೆ ಕೊನೆಯದು.

1967ರಲ್ಲಿ ಎರಡನೆ ಪತ್ನಿ ಸೀತಮ್ಮನವರು ನಿಧನರಾದರು. ಆ ಎರಡನೆಯ ದಾಂಪತ್ಯದ ಸ್ಫೂರ್ತಿ 'ನಾಗನ ಪದಗಳು' ಕೃತಿಗೆ ಹಿನ್ನೆಲೆ ಒದಗಿಸಿತು. ಒಬ್ಬ ಮಗ, ಇಬ್ಬರು ಹೆಣ್ಣು ಮಕ್ಕಳ ನೆಮ್ಮದಿಯ ಸಂಸಾರ ಅವರದು. 1928-38ರ ತಮ್ಮ ಬದುಕನ್ನು 'ಹತ್ತು ವರುಷ' ಕೃತಿಯಲ್ಲಿ ಚಿತ್ರಿಸಿದ್ದಾರೆ. ಅದರ ಎರಡನೆಯ ಮುದ್ರಣವನ್ನು ತಮ್ಮ ಇಬ್ಬರು ಪತ್ನಿಯರ ನೆನಪಿಗೂ ಅರ್ಪಿಸಿದರು.

ರಾಜರತ್ನಂ ದೈಹಿಕವಾಗಿ, ಮಾನಸಿಕವಾಗಿ ಒಳ್ಳೆಯ ದಾರ್ಢ್ಯವನ್ನು ಪಡೆದಿದ್ದರು. ಅಂಗಸಾಧನೆ ಮಾಡಿದ ಬಲವಾದ ಮೈಕಟ್ಟು, ಸವಾಲು ಹಾಕುವ ಹುರುಪು. ಅಧ್ಯಯನ, ಅನುಭವ, ಆತ್ಮಗೌರವ, ಅಭಿಮಾನಗಳ ವ್ಯಕ್ತಿತ್ವ. ಎಣೆಯಿಲ್ಲದ ಸೊಗಸಾದ ಭಾಷಣಕಾರರು, ಕಂಚಿನ ಕಂಠ. ಮಕ್ಕಳಿಂದ

ಮುದುಕರವರೆಗೂ ಎಲ್ಲರ ಮನಸೆಳೆವ, ಮನತುಂಬುವ ಮಾತುಗಾರಿಕೆ, ಓದುಗಾರಿಕೆ. ಸಾಮಾನ್ಯವಾಗಿ ಆರೋಗ್ಯದ ಬದುಕು, ಎಳೆತನದಲ್ಲಿ ಒಮ್ಮೆ ಕಾಯಿಲೆ. 1969ರಲ್ಲಿ ಬಂದದ್ದು ತೀವ್ರ ಕಾಯಿಲೆ, ಚೇತರಿಸಿಕೊಂಡದ್ದು ಪವಾಡ. ತಾವು ನಂಬಿದ್ದ ದೈವದ ಕೃಪೆ ಎನ್ನುವುದು ಅವರ ದೃಢವಿಶ್ವಾಸ. 1979ರ ಮಾರ್ಚಿ 11ರಂದು ಧರ್ಮಸ್ಥಳ ಸಾಹಿತ್ಯ ಸಮ್ಮೇಳನದಿಂದ ಹಿಂದಿರುಗಿಬಂದರು. ಮಾರ್ಚಿ 13ರ ಮಧ್ಯಾಹ್ನ ಒಮ್ಮೆಲೇ ಹೃದಯಾಘಾತಕ್ಕೆ ಒಳಗಾಗಿ ತಮ್ಮ ನೆಮ್ಮದಿಯ ನಾಡಿಗೆ ನಡೆದುಬಿಟ್ಟರು.

ಅವರ ನಿಧನಾನಂತರ, ಅವರ ಶಿಷ್ಯರು, ಅಭಿಮಾನಿಗಳು ಸೇರಿ ಒಂದು ಸ್ಮಾರಕ ಸಮಿತಿಯನ್ನು ರಚಿಸಿಕೊಂಡು ಹಲವಾರು ಸಂಸ್ಮರಣ ಕಾರ್ಯಕ್ರಮಗಳನ್ನು ನಡೆಸಿದರು. 'ರಾಜಮಾರ್ಗ' ಎಂಬ ಸಂಸ್ಮರಣ ಗ್ರಂಥವನ್ನು ಪ್ರಕಟಿಸಿದರು. ಅವರ ಜೀವನ ದರ್ಶನ, ಕಾರ್ಯ, ಸಾಹಿತ್ಯ ಪರಿಚಯಗಳ ಹೆಬ್ಬೊತ್ತಿಗೆ, 'ಆರದ ಬೆಳಕು' ಎಂಬ ಅವರ ಜೀವನ ಚರಿತ್ರೆಯೂ ಪ್ರಕಟವಾಗಿದೆ. (ಇದೇ ಲೇಖಕನದು). ಈ ಗ್ರಂಥಗಳಿಂದ ಬಂದ ಹಣವನ್ನು ರಾಜರತ್ನಂ ಅವರಿಗೆ ಪ್ರಿಯವಾದ ಸಾಹಿತ್ಯ ಸಂಸ್ಕೃತಿಗಳ ಕಾರ್ಯವನ್ನು ನಡೆಸಲು ಹಲವು ಸಂಘ ಸಂಸ್ಥೆಗಳಿಗೆ ದತ್ತಿಗಳನ್ನು ನೀಡಲಾಗಿದೆ.

3

ರಾಜರತ್ನಂ ಅವರ ಸಾಹಿತ್ಯ ಸೇವೆಗೆ ಎರಡು ಮುಖ. ಒಂದು ಸಾಹಿತ್ಯ ಸೃಷ್ಟಿ, ಎರಡು ಸಾಹಿತ್ಯ ಪರಿಚಾರಿಕೆ. ಬಹು ಮಂದಿ ಲೇಖಕರು ಸಾಹಿತ್ಯ ಸೃಷ್ಟಿಗೆ ನಿಲ್ಲುತ್ತಾರೆ. ರಾಜರತ್ನಂ ಹಾಗಲ್ಲ, ತಾವೇ ಸ್ವತಃ ಉದ್ದಾಮ ಬರಹಗಾರರು. ಕಾವ್ಯಸೃಷ್ಟಿಗೆ ಬೇಕಾದ ಪ್ರತಿಭೆ, ವ್ಯಕ್ತಿತ್ವ, ಅಭ್ಯಾಸ ಮೂರು ದ್ರವ್ಯಗಳ ಸಮೃದ್ಧಿ ಪಡೆದಿದ್ದವರು. ಅದರ ಫಲವನ್ನೇ ಅವರ ಅನೇಕ ಕೃತಿಗಳಲ್ಲಿ, ವಿಶೇಷತಃ 'ರತ್ನನ ಪದಗಳು', 'ನಾಗನ ಪದಗಳು', 'ಗಂಡುಗೊಡಲಿ' ಮುಂತಾದವುಗಳಲ್ಲಿ ನಾವು ಕಾಣುತ್ತೇವೆ. ಜೊತೆಗೆ ಅವರು 'ಸಾಹಿತ್ಯ ಪರಿಚಾರಿಕೆ'ಯ ವ್ರತ ಕೈಗೊಂಡದ್ದು ಅವರ ವೈಶಿಷ್ಟ್ಯ.

ಹೀಗೆಂದರೆ ಅವರ ಸಾಹಿತ್ಯ ಸೃಷ್ಟಿಯ ಬೆಲೆ ಏನು ತಗ್ಗದು. ಅವರದು ಸ್ವಂತಿಕೆ ತುಳುಕುವ ಸಾಹಿತ್ಯ ಕಾರ್ಯ, ಹುಲುಸಾದುದು. ಸಾಹಿತ್ಯದ ಹಲವು ಪ್ರಕಾರಗಳನ್ನು ರಾಜರತ್ನಂ ಶ್ರೀಮಂತಗೊಳಿಸಿದರು. ಹಲವು ಪ್ರಕಾರಗಳಲ್ಲಿ ಅಡ್ಡಾಡಿ ಅಂದಗೊಳಿಸಿದರು. ಕವಿತೆ, ಕಥೆ, ನಾಟಕ, ಲಲಿತ ಪ್ರಬಂಧ, ಜೀವನ ಚರಿತ್ರೆ, ವಿಮರ್ಶೆ, ಮಕ್ಕಳ ಸಾಹಿತ್ಯ, ಧಾರ್ಮಿಕ ಸಾಹಿತ್ಯ, ವಿಚಾರ ಸಾಹಿತ್ಯ- ಈ ಹಲವು ಬಗೆಗಳಲ್ಲಿ ಅವರ ಪಾಂಡಿತ್ಯ ಪ್ರತಿಭೆ ಪರಿಣತಿಗಳು ಪಳಚ್ಚನೆ ಪ್ರಕಾಶಿಸಿವೆ.

'ರತ್ನನ ಪದಗಳು' ರಾಜರತ್ನಂ ಅವರ ವಿಶಿಷ್ಟ ಕೊಡುಗೆ. ಅಂದಿಗೂ ಅಷ್ಟೆ, ಇಂದಿಗೂ ಅಷ್ಟೆ, ಅಸಮಾನವಾಗಿ ಉಳಿದಿದೆ. ಅದರಲ್ಲಿರುವ ಜೀವನ ದರ್ಶನ, ಕುಡುಕನೆಂಬ ಹೀಯಾಳಿಕೆಗೆ ಒಳಗಾದ ಬಡವನೊಬ್ಬನ ಕಾಣ್ಕೆ, ಆತನ ನೋವು, ನಲಿವು, ಒಲವು, ಗೆಲವು, ಸೋಲು, ಜೊತೆಗೆ ಆರ್ಥಿಕ ವಿಷಮತೆ, ಶೋಷಣೆಗಳ ಬಗ್ಗೆ ಆಕ್ರೋಶದ ಪ್ರತಿಭಟನೆಯ ದನಿ, ಬದುಕಿನ ಬಗ್ಗೆ ನಲ್ಮೆಯ ನೋಟ, ಬಡವನ ಶೃಂಗಾರ. ಹಾಸ್ಯ ರಸಪ್ರಜ್ಞೆ, ಆ ಧಾಟಿ! ಕನ್ನಡದಲ್ಲೆ ಅಸಮಾನ! ಕೈಲಾಸಂ ಪ್ರಭಾವ ಇರಬಹುದು, ಉಮರ್ ಖಯಾಮ್‌ನ ರುಬೈಯಾತಿನ ಪ್ರಭಾವ ಎನ್ನುತ್ತಾರೆ ಕೆಲವರು. ಹಿಂದಿಯ 'ಬಚ್ಚನ್' ಕವಿಯ 'ಮಧುಶಾಲಾ' ಕೃತಿಯ ಪ್ರಭಾವ ಎಂದರು ಕೆಲವರು. ಆದರೆ ಇವೆಲ್ಲ ಅವರವರ ಅನಿಸಿಕೆ. 'ರತ್ನನ ಪದ' ರತ್ನನದೇ-ಯಾರ ಕಾಪಿಯೂ ಅಲ್ಲ-ಅದನ್ನು ರಾಜರತ್ನಂ ಅವರೇ ಸ್ಪಷ್ಟಪಡಿಸಿದ್ದಾರೆ. ಈ ಬಗ್ಗೆ ಒಬ್ಬ ಹಾಸ್ಯ ಲೇಖಕರು ಯಾವುದೋ ಕುತ್ಸಿತ ಬುದ್ಧಿಯಿಂದ ಕಿತಾಪತಿ ಮಾಡಿದಾಗ, ರಾಜರತ್ನಂ ಅದಕ್ಕೆ ಸರಿಯಾಗಿ ಉತ್ತರ ಕೊಡಬೇಕಾಯಿತು. ಏನೇ ಇರಲಿ 'ರತ್ನನ ಪದ' ಲಕ್ಷ ಲಕ್ಷ ಕನ್ನಡಿಗರನ್ನು ನಲಿಸಿದ, ಅಳಿಸಿದ, ನಗಿಸಿದ ಕೃತಿ. ಭಾಷೆಯ ಪೊಗರು, ಭಾವದ ನವಿರು, ಕಲ್ಪನೆಯ ಸೊಗಸು, ಛಂದಸ್ಸಿನ ವೈವಿಧ್ಯ-ಎಲ್ಲವೂ ಸೇರಿ ಒಂದು ವಿಚಿತ್ರ ಪಾಕವಾಗಿದೆ. ಇಂದು ದಲಿತ-ಬಂಡಾಯಗಳು ಸಾಹಿತ್ಯ ವೃಕ್ಷದ ಹೊಸ ರೆಂಬೆಗಳಂದುಕೊಂಡು ಚಿಗುರುತ್ತವೆ. ಆದರೆ ನಲವತ್ತು ವರ್ಷಗಳ ಹಿಂದಿನ ಕೃತಿ 'ರತ್ನನ ಪದ'ದಲ್ಲಿಯೆ, ದಲಿತರ ದನಿಯನ್ನು, ಬಂಡಾಯದ ದನಿಯನ್ನು ಕೇಳಬಹುದಾಗಿದೆ.

ಇದಕ್ಕೆ ತಮ್ಮನ ಹಾಗೆ ಬಂದ 'ನಾಗನ ಪದಗಳು' ಇಂಥದೇ ಪ್ರತಿಭೆಯ ಫಲ. ಜೀವನ ದರ್ಶನ ಸ್ವಲ್ಪ ಬೇರೆ. ಇಲ್ಲಿ ನೆಮ್ಮದಿಯ ಸಂಸಾರ ಚಿತ್ರಣವಿದೆ. ಪ್ರಾಮಾಣಿಕವಾಗಿ ದುಡಿದು ಹೊಟ್ಟೆಪಾಡು ನಡೆಸಿಕೊಳ್ಳುತ್ತಾ, ಕಾಪೇಯ ಇಲ್ಲದಂತೆ ಬದುಕುತ್ತ, ಹೆಂಡಿರು ಮಕ್ಕಳನ್ನು ಅಕ್ಕರೆಯಿಂದ ಸಾಕುತ್ತಾ, ಬಾಳಯಾನಕ್ಕೆ ನಂಬಿಕೆಯ ಒಂದು ಚುಕ್ಕಾಣಿಯನ್ನು ಇಟ್ಟುಕೊಂಡು ಸಾಗುತ್ತ, ನಲಿವಿನಿಂದ ನಡೆಯುವವನ ಚಿತ್ರಣ ಇಲ್ಲಿದೆ.

ಈ ಎರಡೂ ಕೃತಿಗಳಲ್ಲಿ ರಾಜರತ್ನಂ ಅವರ ಸ್ವಂತಿಕೆ, ಪ್ರತಿಭೆ ಮಿಂಚಿವೆ.

ನಾಟಕಗಳಲ್ಲಿ 'ಗಂಡುಗೊಡಲಿ' ಎದ್ದು ಕಾಣುವ ಕೃತಿ. ಪರಶುರಾಮನ ಧರ್ಮವೀರದ ಮೊರೆತ. ಅನ್ಯಾಯ, ಅಧರ್ಮದ ವಿರುದ್ಧ ಬಂಡೆದ್ದ ಪರಶುರಾಮ ಆ ಕಾಲದ ಭಾರತೀಯ ಕ್ರಾಂತಿವೀರನ ಪ್ರತೀಕ. ಕೊನೆಗೆ ಆತನ ವೀರಕ್ರೋಧ ಹಣ್ಣಾಗಿ ಶಾಂತಕ್ಕೆ ತಿರುಗುವುದೂ ಸೂಚಿತವಾಗಿದೆ. ರಂಗದ ಮೇಲೆ ಸಾರ್ಥಕಗೊಂಡು ಮೆರೆದ ನಾಟಕವಿದು.

'ಪುರುಷ ಸರಸ್ವತಿ' ಕಾವ್ಯವಂತೂ ವಿಡಂಬನ ಸಾಹಿತ್ಯಕ್ಕೆ ಸೊಗಸಾದ ಉದಾಹರಣೆಯಾಗಿ ನಿಂತಿದೆ. ರಾಜರತ್ನಂ ಎಷ್ಟು ಗಂಭೀರ, ಗಹನ ವಿದ್ವಾಂಸರೂ, ಲೇಖಕರೂ, ಭಾಷಣಕಾರರೂ ಆಗಿದ್ದರೋ, ಅಷ್ಟೇ ಉನ್ನತ ಹಾಸ್ಯಗಾರರೂ ಆಗಿದ್ದರು. ಆ ಹಾಸ್ಯರಸ-ವಿಡಂಬನೆ, ಅಣಕ, ಲಘು ಪ್ರಬಂಧ, ಟೀಕೆ, ವ್ಯಂಗ್ಯ ಮೊದಲಾದ ನಾನಾ ಬಗೆಗಳಲ್ಲಿ ಮೆರೆದಿದೆ ಅವರ ಅನೇಕ ಕೃತಿಗಳಲ್ಲಿ. 'ನಿರ್ಭಯಾಗ್ರಫಿ' ಎಂಬ ಹೆಸರಿನಲ್ಲಿ ಅವರ ಲೇಖನಗಳು ಇಂಥ ವಿಡಂಬನ ವೈವಿಧ್ಯಕ್ಕೆ ಮೊನಚಿಗೆ ಉತ್ತಮ ನಿದರ್ಶನಗಳು.

ಕನ್ನಡದಲ್ಲಿನ ಜೈನ-ಬೌದ್ಧ ಸಾಹಿತ್ಯ ಪ್ರಕಾರಗಳಲ್ಲಿ ರಾಜರತ್ನಂ ಅವರದು ಭೀಮಪಾಲು. ಮಾಸ್ತಿಯವರ ಪ್ರೇರಣೆಯಿಂದ ಆರಂಭವಾದ ಬೌದ್ಧ ಸಾಹಿತ್ಯದ ಕೆಲಸಕ್ಕಾಗಿ ಅವರು ಪಾಳಿಭಾಷೆಯನ್ನೇ ಕಲಿತು, ಮೂಲ ಕೃತಿಗಳನ್ನು ಅಧ್ಯಯನ ಮಾಡಿ, ಆ ಬೋಧೆಯ ಆಸರವನ್ನೂ, ಧರ್ಮಪದವನ್ನೂ, ಜಾತಕ ಕಥೆಗಳನ್ನೂ ಕನ್ನಡಕ್ಕೆ ಕೊಟ್ಟರು.

ರಾಜರತ್ನಂ, 'ಗೌತಮ ಬುದ್ಧ' ಪುಸ್ತಕದಲ್ಲಿ 'ತೀರ್ಥಕರು' ಎಂಬ ಪದ ಬಳಸಿದ್ದಕ್ಕೆ, ಜೈನರು 'ತೀರ್ಥಂಕರರು' ಎಂದು ಭಾವಿಸಿಕೊಂಡು ಆಕ್ಷೇಪಿಸಿದ್ದು, ರಾಜರತ್ನಂ ಅವರನ್ನು ಜೈನ ಶಾಸ್ತ್ರದ ಅಧ್ಯಯನಕ್ಕೆ ಪ್ರಚೋದಿಸಿತು. ಅದರಂತೆ ಅವರು ಅಧ್ಯಯನ ಮಾಡಿ, 'ಮಹಾವೀರನ ಮಾತುಕತೆ', 'ಗೋಮಟೇಶ್ವರ', 'ಭಗವಾನ್ ಮಹಾವೀರ', 'ಭಗವಾನ್ ಪಾರ್ಶ್ವನಾಥ', 'ಜೈನರ ಅರವತ್ತು ಮೂವರು' ಮೊದಲಾದ ಕೃತಿಗಳನ್ನು ರಚಿಸಿದರು.

ಇಂಥದೇ ಶ್ರದ್ಧೆಯಿಂದ ಅವರು ಪ್ರಪಂಚದ ಇತರ ಮತಗಳ ಸ್ವಾರಸ್ಯಗಳನ್ನು ತಮ್ಮ ಅನೇಕ ಭಾಷಣಗಳಲ್ಲಿ ತಿಳಿಸಿ ಹೇಳಿದರು.

ರಾಜರತ್ನಂ ಕನ್ನಡಕ್ಕೆ ಕೊಟ್ಟ ಇನ್ನೊಂದು ವಿಶಿಷ್ಟ ಕೊಡುಗೆ ಅವರ ಶಿಶುಸಾಹಿತ್ಯ. ಪಂಜೆ ಮಂಗೇಶರಾವ್, ಹೊಯಿಸಳ, ಎಂ.ಎನ್. ಕಾಮತ್, ಇತ್ಯಾದಿ ಮಹನೀಯರು ಮೊದಲೇ ಈ ನಿಟ್ಟಿನಲ್ಲಿ ಕೆಲಸ ಮಾಡಿದ್ದರು. ರಾಜರತ್ನಂ ಆ ತೋಟವನ್ನು ಹುಲುಸಾಗಿ ಬೆಳೆಸಿದರು. ಮಕ್ಕಳ ಮೇಲಿನ ಅವರ ಅಕ್ಕರೆ, ಅವರಿಗಾಗಿ ಒಳ್ಳೆಯ ಸಾಹಿತ್ಯ ಒದಗಿಸುವ ಕಾಳಜಿ, ಬೇರೆ ಬೇರೆ ವಯಸ್ಸಿನ ಮಕ್ಕಳ ಮಾನಸಿಕ ಮಟ್ಟಕ್ಕೆ ಸೂಕ್ತವಾಗುವಂತೆ ಯಾವ ಯಾವ ವಿಚಾರವನ್ನು ಎಷ್ಟೆಷ್ಟು ಒದಗಿಸಬೇಕೊ ಆ ಕೌಶಲ, ಆ ಸಾಹಿತ್ಯದ ಆಕರ್ಷಕ ಅಚ್ಚುಕಟ್ಟು, ಚಿತ್ರ, ಅಕ್ಷರ ವಿನ್ಯಾಸಗಳು, ಹದವಾದ ಭಾಷೆ, ಹಾಡಲು, ಕುಣಿಯಲು, ಅಭಿನಯಿಸಲು, ಓದಿಕೊಳ್ಳಲು ಸರಾಗವಾಗಿ ಒದಗಿ ಬರುವಂತಹ ಶೈಲಿ-ಇವೆಲ್ಲದರಿಂದ ರಾಜರತ್ನಂ ಅವರ ಶಿಶುಸಾಹಿತ್ಯ ಕನ್ನಡದ ಒಂದು ಗಮನಾರ್ಹ ಭಾಗವಾಗಿದೆ. ಬಹುಪಾಲು ಲೇಖಕರು, ಓದುಗರು ನಿರ್ಲಕ್ಷಿಸುವ ಪ್ರಕಾರ ಶಿಶುಸಾಹಿತ್ಯ, ಅದರ ಅಗತ್ಯವನ್ನು ಅರಿತು ಅದಕ್ಕಾಗಿ ದುಡಿದವರು ಕಡಿಮೆ. ರಾಜರತ್ನಂ ಅಂತಹ ಕೆಲವೇ ಕೃಷಿಕಾರರಲ್ಲಿ ಅಗ್ರಗಣ್ಯರು. ಇದರಿಂದಾಗಿ ರಾಜರತ್ನಂ ನಮ್ಮ ಮಕ್ಕಳಿಗೆ ತುಂಬ ಪ್ರಿಯರು. ಅವರ ಅನೇಕ ಕವನಗಳು ಸಾವಿರಾರು ಮಕ್ಕಳಿಗೆ ಖುಷಿ ಕೊಟ್ಟಿವೆ, ಇಂದಿಗೂ ಕೊಡುತ್ತಿವೆ. ಅವರ 'ಕಂದನ ಕಾವ್ಯಮಾಲೆ' ಮಕ್ಕಳ ಸಾಹಿತ್ಯ ಹೇಗಿರಬೇಕು ಎಂಬುದಕ್ಕೆ ಒಂದು ಮಾದರಿ.

'ಸಾಹಿತ್ಯ ಪರಿಚಾರಿಕೆ' ಎಂದು ಯಾವುದನ್ನು ರಾಜರತ್ನಂ ಕರೆದು ಕೊಳ್ಳುತ್ತಿದ್ದರೊ, ಆ ಕೆಲಸದ ಗುರಿ, ಸಾಹಿತ್ಯವನ್ನು ಜನರಿಗೆ ಮುಟ್ಟಿಸುವುದು, ಜನರಲ್ಲಿ ಸಾಹಿತ್ಯದ ಒಲವನ್ನು ಹೆಚ್ಚಿಸುವುದು, ಒಳ್ಳೆಯ ಕೃತಿಗಳನ್ನು (ಯಾವುದೇ ಆಗಿರಲಿ) ಜನರ ಕಣ್ಣಮುಂದೆ ಕಾಣುವ ಹಾಗೆ ತೋರಿಸುವುದು. ಇದಕ್ಕಾಗಿ ರಾಜರತ್ನಂ ನಾಲ್ಕಾರು ಬಗೆಯ ಕೆಲಸ ಮಾಡಿದರು. ಅನೇಕ ಹಳೆಗನ್ನಡ ಕಾವ್ಯಗಳಿಗೆ ಅರ್ಥ, ವಿವರಣೆ ಬರೆದು ಪ್ರಕಟಿಸಿದರು. ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಸಾಹಿತ್ಯ ಕೃತಿಗಳ ಬಗ್ಗೆ 'ಜ್ಞಾಪಕರೂಪ'ದ ಪರಿಚಯಗಳನ್ನು ಸಿದ್ಧಗೊಳಿಸಿದರು. ತಮ್ಮ ಶಿಷ್ಯರ ಸಾಹಿತ್ಯಪ್ರವೃತ್ತಿಗೆ ಪ್ರೇರಣೆಕೊಟ್ಟು, ಹಲವರನ್ನು ಬರವಣಿಗೆಗೆ ತೊಡಗಿಸಿದರು, ಆ ಶಿಷ್ಯರ ಕೃತಿಗಳನ್ನು ಪ್ರಕಟಿಸಿ ಪ್ರಸಾರ ಮಾಡಿದರು. ಹೀಗೆಯೇ ಸಂಸ, ರಾಶಿ, ವಿಸೀ, ಕೆ.ವಿ. ಅಯ್ಯರ್, ಬಿ.ಜಿ.ಎಲ್. ಸ್ವಾಮಿ, ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿ, ಎಸ್.ಜಿ. ಶಾಸ್ತ್ರಿ, ಆರ್. ಎಲ್. ನರಸಿಂಹಯ್ಯ ಮೊದಲಾದ ಇತರರ ಕೃತಿಗಳನ್ನು ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘದಿಂದಲೋ, ಇಲ್ಲವೇ ವೈಯಕ್ತಿಕವಾಗಿಯೋ ಪ್ರಕಟಿಸಿ ಪ್ರಸಾರಮಾಡಿದರು. ಮಾಸ್ತಿ, ಡಿ.ವಿ.ಜಿ., ಗೋವಿಂದ ಪೈ, ಕೈಲಾಸಂ, ಸಂಸ, ಎ.ಆರ್. ಕೃಷ್ಣಶಾಸ್ತ್ರಿ, ಬಿ.ಎಂ.ಶ್ರೀ., ಪಂಜೆ ಮಂಗೇಶರಾವ್ ಮೊದಲಾದ ಅನೇಕ ಸಾಹಿತಿಗಳ ಕೃತಿಗಳ ಬಗ್ಗೆ ಬರಹ, ಭಾಷಣಗಳ ಮೂಲಕ ಜನಮನಗಳನ್ನು ಸೆಳೆದರು. ತಮ್ಮ ಹಾಗೂ ಇತರರ ಕೃತಿಗಳನ್ನು ಹೊತ್ತುಹೊತ್ತು ಮಾರಿದರು. ಮೇಲಾಗಿ ತಮಗೆ ಗುರುಸ್ಥಾನದಲ್ಲಿದ್ದ ಆಪ್ತರಾಗಿದ್ದ, ಬಿ.ಎಂ.ಶ್ರೀ., ಎ.ಆರ್.ಕೃ., ಕೈಲಾಸಂ, ವೆಂಕಣ್ಣಯ್ಯ, ಗೋವಿಂದ ಪೈ, ಅ.ನ.ಕೃ. ಹಾಗೂ ತಮ್ಮ ಪತ್ನಿಯರುಗಳ ನೆನಪಿನಲ್ಲಿ ನಾನಾ ಸಂಸ್ಥೆಗಳಲ್ಲಿ ದತ್ತಿಗಳನ್ನು ಏರ್ಪಡಿಸಿ, ಉಪನ್ಯಾಸ, ಪುರಸ್ಕಾರ ಇತ್ಯಾದಿ ಕಾರ್ಯಕ್ರಮಗಳಿಗೆ ವ್ಯವಸ್ಥೆ ಮಾಡಿದರು. ಹೀಗೆ ಕೊಟ್ಟಿರುವ ದಾನವೇ ಸುಮಾರು ಮೂವತ್ತು ಸಾವಿರ ರೂಪಾಯಿಗಳಷ್ಟು ! ಕೈಲಾಸಂ ಬಗ್ಗೆ ಅನೇಕ ಪುಸ್ತಕಗಳನ್ನು ಬರೆದರು. ಹಾಗೆಯೇ ಗಾಂಧೀ ವಿಚಾರದ ಬಗ್ಗೆಯೂ ಹಲವು ಕೃತಿಗಳನ್ನು ರಚಿಸಿದರು. ದುಂಬಿ ಎಲ್ಲ ಹೂವುಗಳಿಂದ ರಸ ಹೀರಿ, ಆರೋಗ್ಯಕರವಾದ, ಪುಷ್ಟಿಯುತವಾದ, ಸವಿಯಾದ ಜೇನನ್ನು ಒದಗಿಸುವ ಹಾಗೆಯೇ, ರಾಜರತ್ನಂ 'ಭ್ರಮರಕ್ಕಾಗಿ' ಲೋಕದ ಎಲ್ಲ ಕಡೆಗಳಿಂದ, ಎಲ್ಲ ಮಹಾಪುರುಷರಿಂದ, ಎಲ್ಲಾ ಮಹಾಕೃತಿಗಳಿಂದ, ತಮ್ಮ ಅನುಭವದಿಂದ, ಕುತೂಹಲಪೂರಿತ ಅವಲೋಕನದಿಂದ ಸಂಗ್ರಹಿಸಿದ ವಿಚಾರ ಮಧುವನ್ನು ಮನಮುಟ್ಟುವಂತೆ ರುಚಿಕಟ್ಟಾಗಿ ಜನಕ್ಕೆ ಒದಗಿಸಿದರು. 'ವಿಚಾರ ತರಂಗ', 'ಕಿರಣಾನುಭವ', 'ಸಭಾ ವಿನಯ' ಹಾಗೂ ಮೇರು ಕೃತಿ 'ವಿಚಾರ ರಶ್ಮಿ' ಎಂಬವು ಬಾಳಸಂಗಾತಿಯಾಗುವಂಥ ಕೃತಿಗಳು.

ಇವೆಲ್ಲ ಅವರ ಸಾಹಿತ್ಯ ಪರಿಚಾರಿಕೆಯ ನಾನಾ ಮುಖಗಳು.

### 4

ರಾಜರತ್ನಂ ಅವರ ಕನ್ನಡಪ್ರೇಮ ಆಳವಾದದ್ದು. 'ಪರ್ಪಂಚ ಇರೋತನಕ ಕನ್ನಡ ಪದಗೊಳ್ ನುಗ್ಲಿ' ಎಂಬ ಆಸೆ, ಆಸ್ಥೆ, ಆ ಪ್ರೇಮ ಭಾವನೆ ಮಾತ್ರವಾಗಿ, ಆವೇಶ ಮಾತ್ರವಾಗಿ, ಘೋಷಣೆ ಮಾತ್ರವಾಗಿ ಇರಲಿಲ್ಲ. ಕನ್ನಡ ಉಳಿಯಲು, ಬೆಳೆಯಲು ರಚನಾತ್ಮಕವಾಗಿ ಏನೇನು ಮಾಡಬೇಕೊ ಅದನ್ನೆಲ್ಲ ಮಾಡಲೆಂದೇ ಅವರು ಬದುಕಿನುದ್ದಕ್ಕೂ ಶ್ರಮಿಸಿದರು. ಅನೇಕ ವೇಳೆ ಸ್ವಂತ ರಚನೆಯನ್ನು ಬದಿಗಿಟ್ಟು, ಇತರರ ಕೃತಿಗಳನ್ನು ಪ್ರಸಾರಮಾಡಿದರು. 'ಕವಿಗೆ ಕವಿ ಮುನಿವನ್' ಎಂಬ ಮಾತನ್ನು 'ಕವಿಗೆ ಕವಿ ಮಣಿವನ್' ಎಂದು ಮಾರ್ಪಡಿಸಿ, ಅದರಂತೆ ತಾವೇ ನಡೆದುಕೊಂಡರು. 'ಕನ್ನಡವಾಗಲಿ, ಸಾಹಿತ್ಯವಾಗಲಿ, ಎಲ್ಲಕ್ಕೂ ಮುಖ್ಯ ಬದುಕು, ಅದು ಶುಚಿಯಾಗ ಬೇಕು, ರುಚಿಯಾಗಬೇಕು' ಎಂದರು, ಹಾಗೆಯೇ ಬಾಳಿದರು. ಕನ್ನಡದ ಕೃತಿಗಳ ಅಧ್ಯಯನ, ಅಭ್ಯಾಸ, ಪ್ರಚಾರಗಳಿಗೆ ತಮ್ಮನ್ನು ತಾವೇ ಅರ್ಪಿಸಿಕೊಂಡರು. ತಾವು ನೆಮ್ಮಿಕೊಂಡ ನಂಬಿಕೆಗಳಿಗೆ, ತಾವು ಇಟ್ಟುಕೊಂಡ ಆದರ್ಶಗಳಿಗೆ, ಅನುಗುಣವಾಗಿ ಸಮರ್ಪಣ ಭಾವದಿಂದ ದುಡಿದರು.

ಆಧುನಿಕ ಕನ್ನಡ ಲೋಕದಲ್ಲಿ ರಾಜರತ್ನಂ ಅವರದು ಎದ್ದುಕಾಣುವ ಹೆಸರು, ಅವರ ವ್ಯಕ್ತಿತ್ವದ ಹಾಗೆಯೇ. ಸಾಹಿತಿಗಳ ಸಾಲಿನಲ್ಲಿ ಸ್ಪಷ್ಟವಾಗಿ ಕಾಣುವ ಹೆಸರು. ತನ್ನದೇ ಆದ ಘನತೆ, ಗಾಂಭೀರ್ಯ, ಮಹತ್ತುಗಳಿಂದ ಮೆರೆವ ವ್ಯಕ್ತಿತ್ವ. ಹಾಗೆಯೆ ಅವರ ಕೆಲಸವೂ. 150ಕ್ಕೂ ಹೆಚ್ಚಿನ ಸಂಖ್ಯೆಯ ಅವರ ಕೃತಿರಾಶಿ ವೈವಿಧ್ಯ ಪೂರ್ಣವಾದ ಕೊಡುಗೆ. ಅವರ ಶಿಶುಸಾಹಿತ್ಯ, ಹಾಸ್ಯಸಾಹಿತ್ಯ, ಕಾವ್ಯ, ನಾಟಕಗಳು, ವಿಚಾರರಶ್ಮಿಗಳು, ವಿಶಿಷ್ಟವಾದ ರಚನೆಗಳು. ಅವುಗಳಿಂದ ಇಂದಿನ ಕನ್ನಡದ ಸಿರಿ ಹೆಚ್ಚಿದೆ. ಎಲ್ಲಕ್ಕಿಂತ ಹೆಚ್ಚಾಗಿ, ಸಾಹಿತ್ಯವನ್ನು ಪಂಡಿತರ ಮನೆಗಳಿಂದ, ಬೀರುಗಳ ಕತ್ತಲೆಯಿಂದ ಬಿಡಿಸಿ, ಹೊರತಂದು, ಜನರ ಮುಂದೆ ನಿಲ್ಲಿಸಿ, ತೋರಿಸಿ, ಮನಂ ಬುಗಿಸಲು ಅವರಿಗಿದ್ದ ಕಾಳಜಿ, ಅದಕ್ಕಾಗಿ ಅವರು ಪಟ್ಟ ಪಾಡು, ಮಾಡಿದ ತ್ಯಾಗ, ಅನುಭವಿಸಿದ ಕಷ್ಟನಷ್ಟ, ಎದುರಿಸಿದ ನಿಷ್ಠುರ, ಆದರೂ ಜಗ್ಗದ ಪಟ್ಟು, ಧೀಮಂತಿಕೆ ಇವು ನವೋದಯ ಕಾಲದ ಅತ್ಯಂತ ದೊಡ್ಡ ಸಾಧನೆ ಎಂದರೆ ತಪ್ಪಾಗಲಾರದು.

ಸಾಹಿತಿಯಾಗಿ, ಸಾಹಿತ್ಯದ ಸೇವಕರಾಗಿ, ವಿಚಾರ ಸಂಸ್ಕೃತಿಗಳ ಪ್ರಸಾರಕ್ಕಾಗಿ, ಮಕ್ಕಳ ನೆಚ್ಚಿನ ಕವಿಯಾಗಿ, ಭಾಷಣಕಾರರಾಗಿ, ಕನ್ನಡ ಮರೆಯಲಾಗದ ಪದಗಳನ್ನು ಹೇಳುವ 'ರತ್ನ'ನಾಗಿ, 'ನಾಗ'ನಾಗಿ, ರಾಜರತ್ನಂ ಚಿರಕಾಲ ಉಳಿದುಕೊಳ್ಳುತ್ತಾರೆ ಎಂಬುದು ಉತ್ಪ್ರೇಕ್ಷೆಯೇನಲ್ಲ.

❑

# ವಿ.ಕೃ.ಗೋಕಾಕ್

ಎಸ್ಕೆ

1

**ಡಾ.** ವಿನಾಯಕ ಕೃಷ್ಣ ಗೋಕಾಕ್ ! ಹೆಸರು ನೆನೆದೊಡನೆಯೆ ನಮ್ಮ ಕಣ್ಣಮುಂದೆ ನಿಲ್ಲುವ ಚಿತ್ರ ಅಂತರ್ರಾಷ್ಟ್ರೀಯ ಖ್ಯಾತಿಯ ಎತ್ತರದ ವ್ಯಕ್ತಿ; ಕನ್ನಡ ಕದ ಹಿಂದಿನ ಆಳವಾದ ಒಳನೋಟದ ಕಣ್ಣು, ಗಂಭೀರ ಧ್ವನಿ, ಗಂಭೀರ ನಿಲುವು. ಎಪ್ಪತ್ತೇಳರ ಈ ಪರಿಪಕ್ವ ವ್ಯಕ್ತಿತ್ವದ ಹಿಂದೆ ಶೈಕ್ಷಣಿಕ ಕ್ಷೇತ್ರದಲ್ಲಿ ಆಡಳಿತ ನಿರ್ವಹಿಸಿದ ಕುಲಪತಿಯ ವರ್ಚಸ್ಸಿದೆ, ಶಿಕ್ಷಣವೇತ್ತನ ವೈಚಾರಿಕ ಪ್ರಗಲ್ಭತೆ ಇದೆ, ಪ್ರಾಧ್ಯಾಪಕನ ಪ್ರತಿಭೆ ಇದೆ, ಅನುಭವ ತಪಸ್ಸಿದೆ, ಅನುಭಾವ ಸಿದ್ಧಿಯಿದೆ, ಪ್ರಪಂಚ 'ಪಯಣಿಗ'ನ ವಿಶಾಲ ಜ್ಞಾನವಿದೆ, ಬೌದ್ಧಿಕ ಔನ್ನತ್ಯವಿದೆ, ಸೃಜನಶೀಲ ಕವಿಯ ಅಂತಃಸ್ಫುರಣವಿದೆ, ಯೋಗಿಯ ನಿಷ್ಕಾಮ ಬುದ್ಧಿಯಿದೆ.

'ಸಂಕೀರ್ಣತೆ' ವಿನಾಯಕರ ಬದುಕು-ಬರಹಗಳ ಗುರುತು-ಗುರಿಗಳೆನ್ನ ಬಹುದು. 'ನಾನೊಬ್ಬ ಸಂಕೀರ್ಣತೆಯ ಉಪಾಸಕ' ಎಂದೂ ಅವರು ಹೇಳುವುದುಂಟು. ಬದುಕಿನ ತಿರುವುಗಳಲ್ಲಿ ಏಕಕಾಲಕ್ಕೆ ಸುಖ-ದುಃಖಗಳ ಪರಮಾವಧಿಯನ್ನೆ ಅನುಭವಿಸುತ್ತ ಸಂಕೀರ್ಣತೆಯ ಮಾರ್ಗದಲ್ಲಿ ಬಾಳ ಕಡಲನ್ನು ಪಯಣಿಸಿದೆ ಅವರ ಜೀವನನೌಕೆ. ಆಕ್ಸ್‌ಫರ್ಡ್ ಪದವಿ ಪಡೆಯ ಲೆಂದು, ಶೆಲ್ಲಿಯ ನಾಡ ನೆಲದ ಹಿಡಿಮಣ್ಣು ತರಲೆಂದು ಹಡಗನ್ನೇರಿದರು. ಆಕ್ಸ್‌ಫರ್ಡ್ ಬಿ.ಎ. ಪದವಿ ಪರೀಕ್ಷೆಗೆ ಕುಳಿತರು. ಪ್ರಥಮ ತರಗತಿಯ ಯಶಸ್ಸು ಪಡೆಯುವ ಭರವಸೆ. ಇನ್ನೂ ಮೌಖಿಕ ಪರೀಕ್ಷೆ ಆಗುವುದಿತ್ತು, ತತ್ಪೂರ್ವದಲ್ಲಿ ಕಾಂಟಿನೆಂಟಲ್ ಪ್ರವಾಸಕ್ಕೆಂದು ಹೊರಟರೆ ದಾರಿಯಲ್ಲಿ (ಎಡಿನ್ ಬರೋದಲ್ಲಿ) ತೀವ್ರತರವಾದ ಕರುಳು ಬೇನೆಯಿಂದ ಬಳಲುತ್ತ ಶೀಘ್ರ ಶಸ್ತ್ರಚಿಕಿತ್ಸೆಗೆ ಒಳಗಾಗಬೇಕಾಯಿತು. ಈ ಜೀವ-ಸಾವಿನ ಜೋಕಾಲಿ ಯಲ್ಲಿ ದೈವದ ಗೊಂಬೆಯಾಗಿ, ಸರಿ, ಹಾಗಾದರೆ 'ವೈವಾ' ತಪ್ಪಿಹೋಯಿತು, ಆಕ್ಸ್‌ಫರ್ಡ್ ಪ್ರಥಮ ವರ್ಗದ ಆಸೆ ಹುಸಿಯಾಯಿತು ಎಂದು ಕಳವಳಿ ಸುತ್ತಿರುವಾಗ ಅವರ ಈ ದುರ್ದೈವದ ಪರಿಸ್ಥಿತಿಯನ್ನರಿತ ಪರೀಕ್ಷಕರು 'ವೈವಾ' ಇಲ್ಲದೇನೆ ಗೋಕಾಕರ ಲಿಖಿತ ಪರೀಕ್ಷೆಯ ಉಜ್ವಲ performanceನಿಂದ ಪರಮ ಸಂತುಷ್ಟರಾಗಿ ಅವರಿಗೆ ಪ್ರಥಮ ವರ್ಗದ ತೇರ್ಗಡೆಯನ್ನು ಕೊಟ್ಟು ಅವರ ವಿದ್ವತ್ತೆಯನ್ನು ಗುರುತಿಸಿದರು (1938). ಗುಣಕೆ ಮತ್ಸರವಿಲ್ಲ, ಪ್ರೋತ್ಸಾಹವುಂಟು ವಿದ್ಯಾಪಕ್ಷಪಾತಿಗಳಲ್ಲಿ. ಇದೂ ದೈವೀಕೃಪೆಯೇ. ವಿನಾಯಕರ ಬದುಕಿನ ತಿರುವುಗಳಲ್ಲಿ ಅದೇ ಕಾಲಕ್ಕೆ ಪೌರುಷ, ಸುದೈವ, ದುರ್ದೈವಗಳ ಮೇಲಾಟಗಳ ಒಂದು ಸಂಕೀರ್ಣ ಸಂಭೂತಿಯನ್ನು ನಾವು ಗುರುತಿಸಬಹುದಾಗಿದೆ. 'Complexity is of the essence of life' ಎಂದು ಒಂದೆಡೆ ಗೋಕಾಕರು ಹೇಳಿದ್ದಾರೆ.[1]

ಇದಕ್ಕೆ ಮೊದಲು ಧಾರವಾಡ ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿ ಎಂ.ಎ. ಪರೀಕ್ಷೆಗೆ ಕಟ್ಟುವ ಮೊದಲು ಬಿಕ್ಕಟ್ಟೊಂದು ತಲೆದೋರಿತು. ಅವರ ತಾಯಿಗೆ ಗಂಭೀರ ಕಾಯಿಲೆ. ಅಂತಹದರಲ್ಲಿಯೆ ತಾಯಿಯ ಒತ್ತಾಯಕ್ಕೆ ಮಣಿದು ಮದುವೆಯ ಹಡಗನ್ನೇರುವ ಪ್ರಸಂಗ. ಈ ಕೈ ಮೀರಿದ ಪ್ರಸಂಗ ಗಳಿಂದಾಗಿ ಎಂ.ಎ. ಪರೀಕ್ಷೆಗೆ ಕೂಡದೆ drop ತೆಗೆದುಕೊಳ್ಳಬೇಕೆಂದಾಗ ತಂದೆ ಕೃಷ್ಣರಾಯರು ತಮ್ಮ ಭವಿಷ್ಯಜ್ಞಾನದಿಂದ ಅವರಿಗೆ ಕಾಲ ಅನುಕೂಲವಾಗಿದೆ ಎಂದು ಪರೀಕ್ಷೆಗೆ ಕಟ್ಟಲು ಒತ್ತಾಯಿಸಿದರು. ವಿನಾಯಕರು ಮುಂಬಯಿಗೆ ತೆರಳಿದರು. ಪರೀಕ್ಷೆಗೆ ಕುಳಿತುಕೊಂಡರು. ತಮ್ಮ ಸವಣೂರಿಗೆ ಮರಳಿದರು. ಫಲಿತಾಂಶದ ತಂತಿ ಬಂತು - ಪ್ರಥಮ ವರ್ಗದಲ್ಲಿ ಪ್ರಥಮ ಎಂದು ! ಈ ಸಂಕೀರ್ಣತೆಯ ಮೈಲುಗಲ್ಲು 1931.

ಆಕ್ಸ್‌ಫರ್ಡ್ ಪ್ರಥಮ ಶ್ರೇಣಿಯ ಕಿರೀಟ ಧರಿಸಿ ಸಾಂಗ್ಲಿಯ ಡಿ.ಇ. ಸೊಸೈಟಿಯ 'ವಿಲಿಂಗ್‌ಡನ್ ಕಾಲೇಜ್'ನ ಪ್ರಾಚಾರ್ಯ ಪಟ್ಟವನ್ನೇರಿದರು (1938). ಸಾಂಗ್ಲಿ ಕಾಲೇಜನ್ನು ಸ್ವಲ್ಪೇ ಅವಧಿಯಲ್ಲಿ ಆಕ್ಸ್‌ಫರ್ಡ್ ಮಾದರಿ ಯಾಗಿಸಿದರು. ಆದರೇನು, ಸ್ವಲ್ಪೇ ಅವಧಿಯಲ್ಲಿ ಅವರ ಸ್ವಾಭಿಮಾನಕ್ಕೆ ಧಕ್ಕೆ ತರುವಂತಹ ಅಸೂಯೆಯ ಕೈವಾಡದ ಘಟನೆ ನಡೆದು ರಾಜೀನಾಮೆ ನೀಡಿ 'ವಿಪುಲಾಚ ಪೃಥಿವೀ' ಎಂದುಕೊಂಡು ನಿರುದ್ಯೋಗದ ನಿಶಾನೆ ಹೊತ್ತು ತಮ್ಮ ದೈವಪರೀಕ್ಷೆಯ ಶೋಧಕ್ಕೆ ಹೊರಟರು. ಹೈದರಾಬಾದ್‌ನಲ್ಲಿ ಒಂದು ನೆಲೆ ದೊರಕಿತು. ಆದರೆ ಅಲ್ಲಿಯೂ ಸ್ವಾಸ್ಥ್ಯ ದೊರಕದೆ ರಾಜಾಸ್ಥಾನದ ಮರಳುಗಾಡಿನ ವೀಸನಗರ ಸಂಸ್ಥಾನಕ್ಕೆ ತೆರಳಿ ಹೊಸ ಮಹಾವಿದ್ಯಾಲಯದ ಶಿಲ್ಪಿಯಾಗಿ ಕಾರ್ಯ ಮಾಡಿದರು (1946). ವೀಸನಗರಕ್ಕೆ ಅವರನ್ನು ಕೊಂಡೊಯ್ದ ದೈವ, ಸಂಸ್ಥಾನ ವಿಲೀನೀಕರಣ (1949) ದೊಂದಿಗೆ ಅವರ ವೀಸನಗರದ ಸಂಸ್ಥಾನ ಸೇವೆ ಮುಂಬಯಿ ರಾಜ್ಯದ ಸರಕಾರೀ ಸೇವೆಯಾಗಿ ಪರಿವರ್ತಿತವಾಗಿ ಅವರನ್ನು ಕೊಲ್ಹಾಪುರಕ್ಕೆ, ಆಮೇಲೆ ಕರ್ನಾಟಕ ಕಾಲೇಜಿನ ಪ್ರಾಚಾರ್ಯ ಪೀಠಕ್ಕೆ ತಂದು ಮುಟ್ಟಿಸಿತು (1952). ಯಾವ ಕಾಲೇಜಿನ ಉಚ್ಚ ಶ್ರೇಣಿಯ ವಿದ್ಯಾರ್ಥಿಯಾಗಿದ್ದರೊ ಅದೇ ಕಾಲೇಜಿನ ಪ್ರಾಚಾರ್ಯರಾಗಿ ಬಂದುದೂ ಒಂದು ದೈವದ ಕೈವಾಡವೆ ಎನ್ನಬೇಕು. ಇದು ಗೋಕಾಕರ ಒಂದು ಕನಸೂ ಆಗಿತ್ತು. ಸದಭೀಪ್ಸೆ, ಸತ್ಕೃಪೆ ಎರಡೂ ಇಲ್ಲಿ ಮಿಳಿತ ವಾಗಿದ್ದವು. 1909 ಆಗಸ್ಟ್ 9ರಂದು ಜನ್ಮಿಸಿದ ವಿನಾಯಕರ ಪ್ರಾಥಮಿಕ ಮತ್ತು ಹೈಸ್ಕೂಲ್ ವಿದ್ಯಾಭ್ಯಾಸ ಸವಣೂರಿನಲ್ಲಾಯಿತು. ಮೊದಲು ನವಾಬರ ಚಿಕ್ಕ ಸಂಸ್ಥಾನವಾಗಿದ್ದ ಈ ಊರು ಈಗ ಧಾರವಾಡ ಜಿಲ್ಲೆಯ ತಾಲ್ಲೂಕು ಸ್ಥಳವಾಗಿದೆ. ಇವರ ತಂದೆಗೆ ಅಲ್ಲಿ ವಕೀಲಿ ವೃತ್ತಿ. ವಿದ್ಯಾರ್ಥಿ ವಿನಾಯಕರು ಅಲ್ಲಿಯೆ ಇಂಗ್ಲಿಷ್ ಶಾಲೆಯ ಶಿಕ್ಷಕರಾಗಿದ್ದ ತಮ್ಮ ಅಜ್ಜಂದಿರ ಉತ್ತೇಜನ ದಿಂದ ಕನ್ನಡ, ಇಂಗ್ಲಿಷ್ ವಾಚನಾಭಿರುಚಿಯನ್ನು ಹೆಚ್ಚಿಸಿಕೊಂಡರು. ಕೈಗೆ ಸಿಕ್ಕ ಎಲ್ಲ ಕಥೆ, ಕಾದಂಬರಿ, ಕವಿತೆಗಳನ್ನು ಓದಿ ಮುಗಿಸಿದರು. ಇವರ ಸೃಜನಶೀಲ ಚಾಳ್ಮೆ ಇಂಗ್ಲಿಷ್ ಕವನ ರಚನೆಗೆ ಇಂಬುಗೊಟ್ಟಿತು. ಲಾಂಗ್ ಫೆಲೊ, ವರ್ಡ್ಸ್‌ವರ್ತ್, ಟೆನಿಸನ್, ಶೆಲ್ಲಿ ವಿನಾಯಕರ ಸ್ಫೂರ್ತಿಯ ಕವಿಗಳಾದರು. ಮ್ಯಾಟ್ರಿಕ್ ಪರೀಕ್ಷೆಗಾಗಿ 'ಗಿನೀವಿಯರ್' ಎಂಬ ದೀರ್ಘಕಥನ ಕಾವ್ಯವೊಂದನ್ನು ಓದಿದ ಪ್ರೇರಣೆಯಿಂದಾಗಿ 'ಲೀಲಾ' ಎಂಬ ಕಥನಕಾವ್ಯ ವೊಂದನ್ನು ಇಂಗ್ಲಿಷ್‌ನಲ್ಲಿ ರಚಿಸಿದರು. ಮುಂದೆ ಕೀಚಕ-ಸೈರಂಧ್ರಿ ಪ್ರಸಂಗ ವನ್ನೂ ಇಂಗ್ಲಿಷ್ ದೀರ್ಘ ಕವನವಾಗಿ ಹೆಣೆದರು. ಹೀಗೆ ಸವಣೂರಿನ ವಿದ್ಯಾರ್ಥಿಜೀವನ ಕವಿ ವಿನಾಯಕರ ಒಂದು ಗರಡಿಸಾಧನೆಯಾಯಿತು.

1925ರಲ್ಲಿ ಕಾಲೇಜ್ ಕಟ್ಟೆ ಹತ್ತಿದ ಮೇಲೆ ವಿನಾಯಕರ ಬದುಕಿನ ಹಾಗೂ ಬರವಣಿಗೆಯ ಎರಡನೆಯ ಘಟ್ಟಕ್ಕೆ ಮೊದಲಾಗುತ್ತದೆ. ವಿನಾಯಕರ ಇಂಗ್ಲಿಷ್ ಕಾವ್ಯಪ್ರತಿಭೆಗೆ ಕನ್ನಡದ ಪ್ರಣಾಳಿಕೆ ಒದಗುತ್ತದೆ, ಕವಿ

'ಅಂಬಿಕಾತನಯದತ್ತ'ರಿಂದ. ಕನ್ನಡ ಕಾವ್ಯದೊಂದಿಗೆ ತರುಣ ಕವಿಗಳನ್ನೂ ನಿರ್ಮಾಣ ಮಾಡಿದ ಬೇಂದ್ರೆ ಮಾಸ್ತರರು ಒಂದು ಚುಂಬಕ ಶಕ್ತಿಯಾಗಿ ವಿನಾಯಕರನ್ನು ಸೆಳೆದರು. ವಿನಾಯಕರು ಬೇಂದ್ರೆ ಅವರ ಗೆಳೆಯರ ಗುಂಪಿನ ಪ್ರಮುಖ ಸದಸ್ಯರಾದರು. ಬೇಂದ್ರೆ ಅವರನ್ನು 'ಕಾವ್ಯ ಗುರು' ಎಂದು ಪರಿಗಣಿಸಿದರು. ತರುಣ ಗೋಕಾಕರ ಪ್ರತಿಬೆ, ಆಂಗ್ಲ ಕಾವ್ಯ ಸಾಹಿತ್ಯದ ಮೇಲಿನ ಅವರ ಪ್ರಭುತ್ವ, ಅವರ ಇಂಗ್ಲಿಷ್ ಕಾವ್ಯ ರಚನೆಯ ರೀತಿಯನ್ನು ನೋಡಿ ಬೇಂದ್ರೆಯವರು- 'ಗೋಕಾಕ್‌ರು ಕನ್ನಡದಲ್ಲಿ ತಮ್ಮ ಕಾವ್ಯ ಪ್ರತಿಭೆಯನ್ನು ಹರಿಬಿಟ್ಟರೆ ಅವರ ಕಾವ್ಯಕ್ಕೂ, ಕನ್ನಡಕ್ಕೂ ಒಳ್ಳೆಯ ಭವಿಷ್ಯವಿದೆ' ಎಂದು ಹೇಳಿ ಕೊಂಡರು. ಅಂದೇ ವಿನಾಯಕರು 'ಕರಿಷ್ಯೇ ವಚನಂತವ' ಎಂಬಂತೆ ಕನ್ನಡ ಕವಿಯಾಗಿ ಪರಿವರ್ತಿತಗೊಂಡರು. ಅಂದಿನ ದಿನ, ಆ ವೇಳೆ, ಆ ಸ್ಥಳ ಇಂದಿಗೂ ವಿನಾಯಕರ ಸ್ಮೃತಿಯಲ್ಲಿ ಹಸಿರು ಹಸಿರಾಗಿ ಉಳಿದಿವೆ. "ಅಂದಿನಿಂದ ನನ್ನ ಆತ್ಮವನ್ನು ತಣಿಸು ವಂತಹ (ಕನ್ನಡ) ಕಾವ್ಯವನ್ನು ಬರೆಯತೊಡಗಿದೆ. ಬೇರೆ ಇನ್ನಾವ ವಿಮರ್ಶಕನಿಗೆ ನಾನು ಅಂಜುತ್ತಿದ್ದರೆ ಅದು ಬೇಂದ್ರೆಯವರಿಗೆ.... ಹೀಗೆ ನನ್ನ ಚಿಕ್ಕ ವಯಸ್ಸಿನಲ್ಲಿ ನಾನು ಶ್ರೀ ಬೇಂದ್ರೆಯವರ ಶಿಷ್ಯನಾಗಿದ್ದೆ. ಆಮೇಲೆ ನಾನು ಪ್ರೌಢ ದಶೆಗೆ ಬಂದಾಗ ಈ ನಮ್ಮ ಗುರು-ಶಿಷ್ಯ ಸಂಬಂಧವು ಗೆಳೆತನದಲ್ಲಿ ಮಾರ್ಪಟ್ಟಿತು" ಎಂದು 'The Dream of Geleyara Gumpu' ಎಂಬ ತಮ್ಮ ಇಂಗ್ಲಿಷ್ ಲೇಖನದಲ್ಲಿ ಕಾಣಿಸಿದ್ದಾರೆ.

ಮಹಾಯೋಗಿ ಶ್ರೀ ಅರವಿಂದರಲ್ಲಿ, ಮಹಾಮಾತೆಯವರಲ್ಲಿ ಅಪಾರ ಶ್ರದ್ಧೆ ವಹಿಸಿ ಅವರ 'ದಿವ್ಯಜೀವನ'ದ ಅಭ್ಯಾಸ, ಅನುಸಂಧಾನ, ಅನುಷ್ಠಾನಗಳಲ್ಲಿ ಮುಂದುವರಿದು 'Sri Aurobindo Seer and Poet' ಎಂಬ ಸ್ಫೂರ್ತಿದಾಯಕ ಗ್ರಂಥ ವನ್ನು ಪ್ರಕಟಿಸಿದರು. ಗೋಕಾಕರು ತಮ್ಮ ಆಧ್ಯಾತ್ಮ ಗುರುಗಳೆಂದು ಪಂತಬಾಳೇ ಕುಂದ್ರಿ ಮಹಾರಾಜರು, ಶ್ರೀ ಮಾತಾರವಿಂದರು, ಭಗವಾನ್ ಶ್ರೀ ಸತ್ಯಸಾಯೀಬಾಬಾ-ಈ ವಿಭೂತಿ ಪುರುಷರನ್ನು ನಂಬಿ ನಡೆದುಕೊಂಡು ಬಂದಿರುವ ಅಂಶವನ್ನಿಲ್ಲಿ ನೆನೆಯಬಹುದು.

ಗೋಕಾಕರು ಬಾಳಿನಲ್ಲಿ, ಕಾವ್ಯದಲ್ಲಿ, ಸಾಹಿತ್ಯದಲ್ಲಿ ಒಬ್ಬ ಪಯಣಿಗರು, Explorer. ಬಾಳ ಪಯಣಿಗರಾಗಿ ದೈವ ಓಡಾಡಿಸಿದ ಕಡೆಗೆಲ್ಲ ದೈವೀಶ್ರದ್ಧೆಯ ಬೆಂಡು ಹಿಡಿದುಕೊಂಡು ತೇಲುತ್ತ ಬಂದವರು. ನಾಲ್ಕೂ ದಿಕ್ಕಿಗೆ ಓಡಾಡಿ ಅವರ ದೃಷ್ಟಿ ವಿಶಾಲಗೊಂಡಿತು.

ಹೀಗೆ ಬಾಳಜೋಕಾಲಿಯನ್ನು ಜೀಕುತ್ತಲೆ ಕರ್ನಾಟಕ ಕಾಲೇಜ್ ಪ್ರಾಚಾರ್ಯ ಪದವಿ ಅವರನ್ನು ಹುಡುಕಿಕೊಂಡು ಬಂದಿತೆನ್ನುವಾಗ ನಾಲ್ಕು ತಿಂಗಳು ಅಮೇರಿಕದ ವಿಶ್ವವಿದ್ಯಾಲಯಗಳ ಅಭ್ಯಾಸ, ಆಡಳಿತ ಕ್ರಮ, ಪರೀಕ್ಷಾ ಸುಧಾರಣೆಯ ಕ್ರಮಗಳನ್ನು ಅಭ್ಯಸಿಸಲೆಂದು ಭಾರತದಿಂದ ಹೊರಟ ಒಂದು ನಿಯೋಗದ ನಾಯಕರಾಗಿ ಅಮೇರಿಕ ವನ್ನು ಸುತ್ತಾಡಿ ಬಂದರು (1958). ಅಮೇರಿಕದ ಪ್ರವಾಸ, ಅಲ್ಲಿಯ ವಿದ್ವಾಂಸರ, ಜಿಜ್ಞಾಸುಗಳ ಸಹವಾಸ, ಹಾಗೆಯೆ ಅಲ್ಲಿಯ ವಿದ್ಯಾರ್ಥಿಗಳ ಉಚ್ಛೃಂಕಲ ಜೀವನ ಕವಿ ವಿನಾಯಕರ ಮೇಲೆ ವಿಚಿತ್ರ ಪರಿಣಾಮ ಬೀರಿದವು. ತತ್ಪರಿಣಾಮವಾಗಿ ಅವರ 'ಇಂದಿಲ್ಲ ನಾಳೆ' ಹೊಸ ಚಂಪೂಕಾವ್ಯ ಹೊರ ಬಂತು. ಮೂರು ತಿಂಗಳ ಅಮೇರಿಕದ ಪ್ರವಾಸ ಮುಗಿಸಿಕೊಂಡು ಬರುವಷ್ಟರಲ್ಲಿ ಗೋಕಾಕರು ಹೈದರಾಬಾದ್‌ನಲ್ಲಿ Central Institute of English Studies ಎಂಬ ಸಂಸ್ಥೆಯ ನಿರ್ದೇಶಕರಾಗಿ (1959) ಅದನ್ನು ಸ್ಥಾಪಿಸಿ ಬೆಳೆಸುವ ದೊಡ್ಡ ಹೊಣೆ ಇವರ ಪಾಲಿಗೆ ಬಂತು. ಹೈದರಾಬಾದ್‌ನಲ್ಲಿ ಏಳು ವರ್ಷಗಳ ವಾಸ್ತವ್ಯ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗಿನ ಭಾರತದ ಇಂಗ್ಲಿಷ್ ಅಭ್ಯಾಸೀ ಶಿಕ್ಷಕರ ಬಹು ಸಂಪರ್ಕವನ್ನು ತಂದಿತು.

1936ರಲ್ಲಿ ಪ್ರಥಮ ಬಾರಿಗೆ ಇಂಗ್ಲೆಂಡಿಗೆ ಭೇಟಿಕೊಟ್ಟ ಗೋಕಾಕರಿಗೆ ಆನಂತರ ಮತ್ತೆ ಎರಡು ಸಲ 1962 ಮತ್ತು 1965ರಲ್ಲಿ ಪುನಃ ಪ್ರಯಾಣ ಪ್ರಸಂಗ. 1965ರಲ್ಲಿ ಕ್ರೇಂಬ್ರಿಜ್‌ನಲ್ಲಿ ನಡೆದ ಕಾಮನ್‌ವೆಲ್ತ್ ರಾಷ್ಟ್ರಗಳ 'ಆಂಗ್ಲ ಸಾಹಿತ್ಯ ಶಿಕ್ಷಣ ಸಮ್ಮೇಳನ'ದಲ್ಲಿ ಭಾರತದ ಪ್ರಾತಿನಿಧ್ಯ ವಹಿಸಿದರು. ಇದಕ್ಕೂ ಮೊದಲು 1957ರಲ್ಲಿ P.E.N. ಸಂಸ್ಥೆಯ ಭಾರತದ ಪ್ರತಿನಿಧಿಯಾಗಿ ಜಪಾನಿಗೆ ಭೇಟಿ. 1959ರಲ್ಲಿ ಅಂತರ್ರಾಷ್ಟ್ರೀಯ ಕವಿಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಲು ಬೆಲ್ಜಿಯಂಗೆ ಭೇಟಿ, 1960ರಲ್ಲಿ ಪೂರ್ವ ಆಫ್ರಿಕಾಗೆ ಭೇಟಿ – ಹೀಗೆ ವಿದೇಶ ಪ್ರವಾಸಗಳು ವಿನಾಯಕರ ಬದುಕು-ಬರವಣಿಗೆಯ ವಿಚಾರಧಾರೆಯ ಹಿನ್ನೆಲೆಯ ಪ್ರೇರಕ ಶಕ್ತಿಯಾಗಿ ಕಾರ್ಯ ಮಾಡಿವೆ.

1950ರಲ್ಲಿ ಮುಂಬಯಿ ಕನ್ನಡ ಸಾಹಿತ್ಯ ಸಮ್ಮೇಳನದ ಕಾವ್ಯ ಗೋಷ್ಠಿಯ ಅಧ್ಯಕ್ಷರಾಗಿ ನವ್ಯಕಾವ್ಯ ಪರಂಪರೆಯ ನವೀನ ಘೋಷಣೆ ಮಾಡಿದರೆ, 1958ರಲ್ಲಿ ಬಳ್ಳಾರಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಕನ್ನಡ ಸಾಹಿತ್ಯದ ಹೊಸ ಒಲವುಗಳಿಗೆ ದಿಕ್‌ಸೂಚಿ ನೀಡಿದರು. 1960ರಲ್ಲಿ ಅವರ ಸಾಹಿತ್ಯ ಸಾಧನೆಗಳನ್ನು ಗುರುತಿಸಿ ಭಾರತ ಸರಕಾರದಿಂದ 'ಪದ್ಮಶ್ರೀ' ಪ್ರಶಸ್ತಿ, ಅವರ 'ದ್ಯಾವಾ ಪೃಥಿವಿ'ಗೆ ಕೇಂದ್ರ ಅಕಾಡೆಮಿ ಪ್ರಶಸ್ತಿ.

ಶೈಕ್ಷಣಿಕ ಕ್ಷೇತ್ರದಲ್ಲಿ ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ, ಶಿಕ್ಷಣ ವೇತ್ತರಾಗಿ ಅವರು ಗೈದ ಸೇವೆಯನ್ನು ಗುರುತಿಸಿ 1966ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಯ ಗೌರವ, 1981ರಲ್ಲಿ ಭಗವಾನ್ ಶ್ರೀ ಸತ್ಯ ಸಾಯಿಬಾಬಾ ಅವರಿಂದ ಸ್ಥಾಪಿಸಲ್ಪಟ್ಟ 'ಪ್ರಶಾಂತಿ ನಿಲಯ'ದ ಪೂರ್ಣ ವಿದ್ಯಾಪೀಠದ ಕುಲಪತಿಯ ಗೌರವಗಳು ವಿನಾಯಕರನ್ನರಸಿಕೊಂಡು ಬಂದವು.

ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಯಾಗಿ, ಮುಂದೆ ಪ್ರಶಾಂತಿ ನಿಲಯದ ಕುಲಪತಿಯಾಗಿ ನಿವೃತ್ತರಾಗಿ ಈಗ ಬೆಂಗಳೂರಿನ ತಮ್ಮ 'ಮೀರಾ ಕಾಟೇಜ್'ನಲ್ಲಿ ವಿಶ್ರಾಂತಿ ಜೀವನವನ್ನು ನಡೆಸುತ್ತಲೂ, 'ವಿನಾಯಕ ಸಮಗ್ರ ಸಾಹಿತ್ಯ'ದ ಪುನರ್ಮುದ್ರಣದ ಹದಿನಾರು ಸಂಪುಟಗಳ ಪ್ರಕಟಣೆಯ ಸಂಪಾದನೆಯನ್ನು ಯೋಚಿಸುತ್ತ ವಾಙ್ಮಯ ಯೋಗಿಯಾಗಿ ಚಿಂತನಶೀಲ ಬಾಳಿನ ಈ ಸಂಜೆಯಲ್ಲಿ ವಿನಾಯಕ ಕೃಷ್ಣ ಗೋಕಾಕರು ಕಳೆದ ಎರಡೂವರೆ ದಶಕಗಳಿಂದ ತಮ್ಮಬಾಳನೌಕೆಯ ಚುಕ್ಕಾಣಿಯನ್ನು ಭಗವಾನ್ ಶ್ರೀ ಸತ್ಯ ಸಾಯಿಬಾಬಾ ಅವರಿಗೆ ಹಸ್ತಾಂತರಿಸಿ ಅರ್ಪಿತ ಜೀವನವನ್ನು ನಡೆಸಿದ್ದಾರೆ.

## 2

ವಿನಾಯಕರ ಕಾವ್ಯ, ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ, ಇತರ ಗದ್ಯಸಾಹಿತ್ಯ, ಶೈಕ್ಷಣಿಕ ಮತ್ತು ಆಧ್ಯಾತ್ಮಿಕ ಸಾಹಿತ್ಯ ರಚನೆಯನ್ನು ಏಳು ಮುಖ್ಯ ಕಾಲಾವಧಿಗಳಲ್ಲಿ ವಿಂಗಡಿಸಬಹುದಾಗಿದೆ.

I. 1925ರ ವರೆಗೆ ವಿದ್ಯಾರ್ಥಿ ವಿನಾಯಕರ ಇಂಗ್ಲಿಷ್ ಕಾವ್ಯ ರಚನೆಯ ಕಾಲ. 'The Sky Line' ಎಂಬ ಇಂಗ್ಲಿಷ್ ಕವನ ಸಂಗ್ರಹವೂ ಸಿದ್ಧವಾಗಿತ್ತು.

II. 1925-1936 ವಿನಾಯಕರ ಕನಸುಗಾರಿಕೆಯ ಕಾವ್ಯ ಜೀವನದ ಎರಡನೆಯ ಅಧ್ಯಾಯ. ಬೇಂದ್ರೆ ಸ್ಫೂರ್ತಿಯಿಂದ ಇಂಗ್ಲಿಷ್ ಮ್ಯೂಜ್ ಕನ್ನಡ

ಕಾವ್ಯಲಕ್ಷ್ಮಿಯಾಗಿ ಪರಿವರ್ತಿತಳಾದಳು. ಗೆಳೆಯರ ಗುಂಪಿನ ಸದಸ್ಯರಾಗಿ 'ನವೋದಯ ಕಾಲ'ದ ಕಾವ್ಯ, ನಾಡಹಬ್ಬದ ಚಟುವಟಿಕೆಗಳು. ಈ ಅವಧಿಯ ಮುಖ್ಯ ಕಾವ್ಯ ಪ್ರಕಟಣೆಗಳು- 'ಕಲೋಪಾಸಕ' ಮತ್ತು 'ಪಯಣ' (ಭಾವಗೀತಗಳ ಸಂಗ್ರಹ). ಈ ಸಂಗ್ರಹಗಳಲ್ಲಿ ಕನಸು, ಕಣಸುಗಳೆರಡೂ ಕಾವ್ಯವಾಗಿ ಸೂರೆ ಗೊಂಡವು. ಇತ್ತ ಇಂಗ್ಲಿಷ್ ಕವನಗಳೂ ಬರುತ್ತಲೆ ಇದ್ದವು. ಟಾಗೂರ್, ಶ್ರೀ ಅರವಿಂದರು, ಯೇಟ್ಸ್, ಎ.ಇ., ಖಲಿಲ್ ಜಿಬ್ರಾನ್, ಶೆಲ್ಲಿ ಮೊದಲಾದ ಕವಿಗಳ ಅಭ್ಯಾಸದ ತೀವ್ರ ಪರಿಣಾಮ ಇದು. ಮುಂದೆ 'Song of Life' ಎಂಬ ಲಿರಿಕಲ್ ಸಂಗ್ರಹ ಸಂಕಲಿತವಾಯಿತು. 'ಮುನಿದ ಮಾರಿ' ('ತುಳಸಿ' ಎಂಬುದು ಮೊದಲ ಶೀರ್ಷಿಕೆ) ಎಂಬ ಏಕಾಂಕ ನಾಟಕ, 'ಜನನಾಯಕ' ಎಂಬ ನಾಲ್ಕಂಕದ ದೊಡ್ಡ ನಾಟಕ, 'ಇಜ್ಜೋಡು' ಎಂಬ ಕಾದಂಬರಿ ಇವು ಅದೇ ಅವಧಿಯ ಸಾಮಾಜಿಕ ಪ್ರಜ್ಞೆಯ ಬರವಣಿಗೆಯಾಗಿ ಈ ಅವಧಿಯ ಸಂಕೀರ್ಣತೆಯ ನಿದರ್ಶನಗಳಾಗಿವೆ.

III. 1936-1940. ಈ ಅವಧಿಯಲ್ಲಿ ವಿನಾಯಕರ ಸಾಮಾಜಿಕ ಪ್ರಜ್ಞೆಗೊಂದು ನೆರೆ ಬಂತು. ಇದೊಂದು ಕ್ರಾಂತಿಯ ಕಾಲವೆಂದು ಹೇಳಬೇಕು ವಿನಾಯಕರ ಬರವಣಿಗೆಯಲ್ಲಿ. 'ಸಮುದ್ರಗೀತಗಳು' ವಿನಾಯಕರ 'ನವ್ಯ ಕಾವ್ಯ'ಕ್ಕೆ ನಾಂದಿ ಯಾಯಿತು. ಸ್ವಚ್ಛಂದ ಛಂದ, ನಿಸರ್ಗ ಸಾಮಾಜಿಕ ಪ್ರಜ್ಞೆ, ಹೊಸಕಾವ್ಯ ಪ್ರಕಾರ, ಹೊಸ ಸಾಹಿತ್ಯ ಉದಯಿಸಿದವು. 'ಸಮುದ್ರ ದಾಚೆಯಿಂದ' ಎಂಬ ಗದ್ಯಕೃತಿ ಕನ್ನಡಕ್ಕೆ ಹೊಸ ಪ್ರವಾಸ ಸಾಹಿತ್ಯದ ಕೊಡುಗೆಯಾಯಿತು. ಇಜ್ಜೋಡು ಕಾದಂಬರಿ 'ಸಮುದ್ರಯಾನ'ಕ್ಕೆ ಬೆಳೆಯಿತು. ಕನಸುಗಳಿಗೆ ವಿದಾಯ ಹೇಳುವ ಕಾಲ ಬಂತು. 'ಹೋಗಿ ಬರುವೆನು ನನ್ನ ಎಳೆಯ ಕನಸುಗಳೆ' ಎಂದು ಹಾಡಿ ಕಾವ್ಯಪ್ರಜ್ಞೆ ಸಾಮಾಜಿಕ ಪ್ರಜ್ಞೆಗಳು ಸಮೃದ್ಧವಾಗಿ ನೆಲೆಗೊಂಡ ಕಾಲವಿದು. 'ವಿಮರ್ಶಕ ವೈದ್ಯ'ದಂತಹ ವ್ಯಂಗ್ಯ ವಿಡಂಬನೆಯ ನಗೆನಾಟಕ ವಿಮರ್ಶೆಯ ಸೀಮೆಗಳನ್ನು ಗುರುತಿಸಿತು. 'ಅಭ್ಯುದಯ' ಎಂಬ ಸುನೀತ (ಸಾನೆಟ್) ಸಂಗ್ರಹದಲ್ಲಿ ನವ್ಯ ಜಾತಿಯ ಕವಿತೆಗಳು, ಮಾರ್ಕ್ಸಿಸ್ಟ್ ಕವಿತೆಗಳು, ಹೊಸ ತಂತ್ರದ ಕವಿತೆಗಳು ಗುರು ತಿಸಲ್ಪಟ್ಟಿವೆ.

IV. 1940-1950ರ ಅವಧಿಯಲ್ಲಿ ಕನಸಿನ ಜಾಗದಲ್ಲಿ ಸಮತಾವಾದಿ ಉದಿಸಿದನೆಂದು ವಿನಾಯಕರು ತಿಳಿದಿದ್ದರೂ ಕನಸುಣಿತನವು ಅವರನ್ನು ಬಿಟ್ಟು ಹೋಗಲಿಲ್ಲ. ಆದರೆ ಇದು ಆದರ್ಶದ ಗುರಿಯಲ್ಲಿ ಗುರುತಿಸಲ್ಪಟ್ಟಿತು. ಜೊತೆಗೆ ಸಮಾಜವಾದ ದೃಷ್ಟಿಯೂ ಬೆಳೆಯಿತು. ಶ್ರೀ ಅರವಿಂದರ 'Life Divine' ದ ಪ್ರಭಾವವೂ ಮೂಡಿತು. ವ್ಯಕ್ತಿತ್ವ ವಿಕಾಸ ಹಾಗೂ ಸಮಷ್ಟಿ ಪ್ರಜ್ಞೆಗಳು ಒಂದೇ ದಿವ್ಯವ್ಯಕ್ತಿತ್ವದ ಅಂಶಗಳಾಗುವುದು ಅನಿವಾರ್ಯವೆಂಬುದು Life Divineನಲ್ಲಿ ಪ್ರಸ್ತಾಪಿಸಲ್ಪಟ್ಟಿತ್ತು. ಈ ಸಮನ್ವಯವನ್ನು ಅಂಗೀಕರಿಸುತ್ತ ಅದನ್ನು 'ಸಮರಸವೇ ಜೀವನ' ಎಂಬ ಬೃಹತ್ ಕಾದಂಬರಿಯಾಗಿ ಬೆಳೆದ ಮೂಲ 'ಇಜ್ಜೋಡಿ'ನಲ್ಲಿ ನರಹರಿಯ ಜೀವನ ಸಾಫಲ್ಯದಲ್ಲಿ ಮೂಡಿಸಿದರು. 'ಬಾಳದೇಗುಲದಲ್ಲಿ' ಎಂಬ ಕವನಮಾಲೆಯ ರಚನೆಯಲ್ಲಿ ಜಗತ್ತಿನ ಸಮನ್ವಯ ಸೂತ್ರಗಳು ಕಾಣಿಸಿಕೊಂಡವು. 'ಯುಗಾಂತರ' ನಾಟಕದಲ್ಲಿ ಅನುಭವ ಹಾಗೂ ಮಾರ್ಕ್ಸ್‌ವಾದಗಳು ಪ್ರೀತಿ-ಕರುಣೆಗಳೆಂಬ ಮಾನವತಾ ವಾದದಲ್ಲಿ ಸಮನ್ವಯಗೊಳ್ಳಬಹುದೆಂಬ ಆಶಾವಾದ ತಲೆದೋರಿತು. 'ಜೀವನ ಪಾಠಗಳು' ಎಂಬ ಪ್ರಬಂಧ ಗ್ರಂಥಮಾಲಿಕೆ ಇದರ ಸೂತ್ರ ಹಿಡಿದು ನಿಬಂಧಿಸಿತು. 'The Poetic approach to Language' ಎಂಬ ಉಪನ್ಯಾಸ ಸಂಗ್ರಹ, ಕಾವ್ಯ ಭಾಷೆಯನ್ನು ಕುರಿತ ವಿನಾಯಕರ ಸಂಶೋಧಕ ದೃಷ್ಟಿಯನ್ನು ಎತ್ತಿ ತೋರಿಸುತ್ತದೆ. 'ಸಾಹಿತ್ಯದಲ್ಲಿ ಪ್ರಗತಿ' ಎಂಬ ಅವರ ಭಾಷಣ ಸಮನ್ವಯವಿಲ್ಲದ ಪ್ರಗತಿ ಅರ್ಥಹೀನವೆಂಬುದನ್ನು ತೋರಿಸಿತು.

V. 1950-1965ರ ಅವಧಿ ಪ್ರಯೋಗಗಳ ಕಾಲವಾಗಿದೆ. ಹೊಸ ಅನುಭವಗಳನ್ನು ಅರಗಿಸಿಕೊಂಡ ಬೆಳವಣಿಗೆಯನ್ನಿಲ್ಲಿ ನೋಡುತ್ತೇವೆ. 'ಉಗಮ', 'ಕಾಶ್ಮೀರ' ಎಂಬ ಸ್ವಚ್ಛಂದ ಛಂದದಲ್ಲಿಯ ಕಾವ್ಯ ಪ್ರಬಂಧಗಳು ಈ ಪಕ್ವ ಕಾಲಾವಧಿಯಲ್ಲಿ ಫಲಿಸಿವೆ. ಸಮುದ್ರಗೀತಗಳ ಸ್ವಚ್ಛಂದವೆ ಇಲ್ಲಿ ಮುಂದುವರಿದಿದ್ದರೂ ಅದನ್ನಿಲ್ಲಿ ಕಾವ್ಯಮಯತೆಯೊಂದಿಗೆ ಪ್ರಯೋಗಿಸಿ ದ್ದುಂಟು. 'ಉಗಮ'ವು ಗದ್ಯಪದ್ಯಗಳ ಮಧ್ಯವರ್ತಿ ರಚನೆಯಾಗಿದೆ. ಚಂಪೂ ಶೈಲಿಯಲ್ಲಿಯೆ ರಚಿತವಾದ 'ತ್ರಿವಿಕ್ರಮರ ಆಕಾಶಗಂಗೆ'ಯನ್ನಿಲ್ಲಿ ನೆನೆಯ ಬಹುದು. ಕಾವ್ಯಪ್ರಬಂಧದ ಮಿಶ್ರ ರೀತಿ 'ಕಾಶ್ಮೀರ'ದ ಪ್ರಬಂಧಗಳ ಒಂದು ಅವಶ್ಯಕತೆಯಾಗಿದೆ. ವಿನಾಯಕರ ಪ್ರಯೋಗಗಳೆಲ್ಲವೂ ಒಂದು ಹೊಸ ಸಂದರ್ಭದ ಅವಶ್ಯಕತೆಯಾಗಿಯೆ ಅನುಷ್ಠಾನಕ್ಕೆ ಬಂದಿವೆ.

'ನವ್ಯ ಕವಿತೆಗಳು', 'ಊರ್ಣನಾಭ' ಎಂಬ ಸಂಗ್ರಹಗಳಲ್ಲಿ ನವ್ಯತೆ ನೆಲೆಗೊಂಡಿದೆ. 'ದ್ಯಾವಾ ಪೃಥಿವಿ' ಈ ಅವಧಿಯ ನವ್ಯ ನೀಳ್ಗವಿತೆ. 1950ರ ಸಾಹಿತ್ಯ ಸಮ್ಮೇಳನದ ಗೋಕಾಕರ ಕಾವ್ಯಗೋಷ್ಠಿಯ ಅಧ್ಯಕ್ಷೀಯ ಭಾಷಣ ಆಧುನಿಕ ಕಾವ್ಯ ಮಾರ್ಗದಲ್ಲಿ ಒಂದು ಹೊಸ ಅಧ್ಯಾಯವನ್ನು ಆರಂಭಿಸಿತು. 'ಇಂದಿಲ್ಲ ನಾಳೆ' ವಿನಾಯಕರ ಅಮೆರಿಕದ ಯಾತ್ರಾನುಭವದ ರಸಸಿದ್ಧಿಯ ಹೊಸ ಪ್ರಯೋಗ, ಹೊಸ ವಿಚಾರಗಳ ಚಂಪೂರೂಪ.

ಇದೇ ಅವಧಿಯ 'ತ್ರಿಶಂಕುವಿನ ಪ್ರಜ್ಞಾ ಪ್ರಭಾತ' ಅವರ ಮುಂಬರುವ ರಸ ದರ್ಶನಗಳ ಸಿದ್ಧಿಯ ಶಿಖರವೆನಿಸಿದ 'ಭಾರತ ಸಿಂಧು ರಶ್ಮಿ' ಮಹಾ ಕಾವ್ಯದ 'ಮಿಡಿ'.

VI. 1966-1971. ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಯಾಗಿ ಮೊದಲಾಗುವ ವಿನಾಯಕರ ಬದುಕು ಸಿಮ್ಲಾದಿಂದ ಮರಳಿ ಬೆಂಗಳೂರಿಗೆ ಬರುವವರೆಗೆ ವಿಸ್ತರಿಸುತ್ತದೆ. ಈ ಅವಧಿಯಲ್ಲಿ ಅರಳಿದ 'ಸಿಮ್ಲಾ ಸಿಂಫನಿ' ಸಂಕೀರ್ಣತೆಯ ಒಂದು ಹೊಸಹೆಜ್ಜೆ. ವಸ್ತು, ಪ್ರತಿಮೆ, ಸಂಕೇತಗಳಲ್ಲಿ ಬಹುವಿಧ ಸ್ತರಗಳನ್ನಿಲ್ಲಿ ಕಾಣುತ್ತೇವೆ.

ಮಹಾಕಾವ್ಯದ ಒಂದು ಮಹಾಸನ್ನಿವೇಶದಂತಿರುವ 'ಬಸವಣ್ಣನವರ ಕೊನೆಯ ದಿನ'ದಲ್ಲಿ ವೀರಶೈವ ಆಂದೋಲನದ ನನೆಕೊನೆಗಳೆಲ್ಲ ಸೇರಿಬರು ವಂತೆ ಅದರ ತಿರುಳು, ಭವಿಷ್ಯವೆಲ್ಲವೂ ಮೂಡುವಂತೆ ಆ ಸನ್ನಿವೇಶಗಳನ್ನು ಸಂಕೀರ್ಣವಾಗಿ ನಿರೂಪಿಸಲಾಗಿದೆ. 'Narahari Prophet of New India' (ನವಭಾರತ ಪ್ರವಾದಿ ನರಹರಿ) ಎಂಬ ಇಂಗ್ಲಿಷ್ ಕಾದಂಬರಿ 'ಸಮರಸವೇ ಜೀವನ'ದ ಕಥಾಸತ್ವದೊಡನೆ ನರಹರಿಯ ವ್ಯಕ್ತಿತ್ವದ ವಿಕಾಸ ಪರಿಪೂರ್ಣತೆ ಯನ್ನು ಚಿತ್ರಿಸುವ ಆಧ್ಯಾತ್ಮ ವಸ್ತುವುಳ್ಳ ಅಪೂರ್ವ ಕೃತಿ. ಸಾಧಕನೊಬ್ಬನ ಪೂರ್ಣಸಿದ್ಧಿ, ಆಶ್ರಮಜೀವನದ ಸಮಗ್ರ ತಿರುಳಿನ ಚಿತ್ರಣ. ಓರ್ವ ಮಹಾವ್ಯಕ್ತಿಯ ಮಾತೃಭೂಮಿಯ ಭಕ್ತಿ, ಆತನ ಪ್ರತಿಭೆಯ ಸಾರದವರೆಗೆ ವೈವಿಧ್ಯಪೂರ್ಣ ಬರವಣಿಗೆಯಾಗಿದೆ ನರಹರಿ ಕಾದಂಬರಿ.

VII. 1971-1980. ಹೀಗೆ ರೂಪಗೊಂಡ ವಿನಾಯಕರ ಸಂಕೀರ್ಣತೆಯ ಆರಾಧನೆ 1971-80ರ ಕಾಲಾವಧಿಯಲ್ಲಿ ತನ್ನ ಸಾಫಲ್ಯವನ್ನುಕಂಡಿತು.

ಈ ಸಂಕೀರ್ಣತೆಯ ಪಾರಮ್ಯ 'ಭಾರತ ಸಿಂಧು ರಶ್ಮಿ' ಎಂಬ ಮಹಾಕಾವ್ಯದಲ್ಲಿದೆ. ವಿಶ್ವಮಾನವನಾಗಿ, ಬ್ರಹ್ಮರ್ಷಿಯಾಗಿ, ವೇದದ್ರಷ್ಟಾರ

ನಾಗಿ, ಕ್ಷತ್ರಿಯ ರಾಜ ಮಹಾಯೋಗಿಯಾಗಿ ಮೆರೆದ ವಿಶ್ವಾಮಿತ್ರರನ್ನು ಕೇಂದ್ರವಾಗಿರಿಸಿಕೊಂಡು ಆರ್ಯ-ದಸ್ಯು ಸಂಸ್ಕೃತಿಗಳ ಸಂಗಮ, ಸಪ್ತ ಸಿಂಧೂ ದೇಶಗಳೊಡನೆ ಭಾರತ ಭೂಮಿಯ ಅನೇಕ ಭಾಗಗಳ ಸಮಾವೇಶ, ಋಷಿಗಳ ಹಾಗೂ ಕ್ಷತ್ರಿಯ ವೀರರ ಸಮಾಗಮ; ದರ್ಶನ ವೇದಾಂತಗಳೊಡನೆ ಚಿತ್ರಿತ ವಾದ ಸಾಮಾನ್ಯ ಜನಜೀವನ, ಯುದ್ಧ, ಅಶ್ವಮೇಧಯಾಗ, 'ಸತಿ' ಹೋಗುವ ಸಂದರ್ಭಗಳು ಒಂದೆಡೆಗಿದ್ದರೆ ಇನ್ನೊಂದೆಡೆಗೆ ಶೃಂಗಾರ, ಪ್ರೇಮ, ತಪಸ್ಸು; ಒಂದೆಡೆಗೆ ವಿಡಂಬನ ಚಿತ್ರಗಳಿದ್ದರೆ ಇನ್ನೊಂದೆಡೆಗೆ ಸಾತ್ವಿಕ ಜೀವನ, ಕರುಣೆ, ಹಾಸ್ಯಗಳೊಡನೆ ರೌದ್ರ, ಭಯಾನಕ, ಬೀಭತ್ಸ; ಶೈಲಿಯಲ್ಲಿ ಪಂಚೀಕರಣ ಗೊಂಡ ಕಾವ್ಯ ಪದ ಸಮುಚ್ಚಯದ, ವಿವಿಧ ಕನ್ನಡಗಳನ್ನು ಅಳವಡಿಸಿಕೊಂಡ ಮೆಚ್ಚುಗನ್ನಡ ಭಾಷೆ; ಪೌರ್ವಾತ್ಯ ಪಾಶ್ಚಾತ್ಯ; ನೈಸರ್ಗಿಕ ನಾಗರಿಕ; ಪ್ರತಿಮೆ, ಉಪಮೆಗಳನ್ನೊಳಗೊಂಡ ಚಿತ್ರಸೃಷ್ಟಿ; ಮೂಡಣ, ಪಡುವಣ ಲಕ್ಷಣಗಳನ್ನು ಅರಗಿಸಿಕೊಂಡ ಕಥಾವಸ್ತು ಹಾಗೂ ಕಾವ್ಯದ ರಚನಾಕ್ರಮ, ಸರಳ ರಗಳೆಯಲ್ಲಿ ತನ್ನ ವೈಶಿಷ್ಟ್ಯಗಳನ್ನು ಕಂಡುಕೊಂಡ ಸಂಕೀರ್ಣ ಛಂದಸ್ಸು-ಹೀಗೆ ಸಂಕೀರ್ಣತೆಗಳ ಸಂಗಮವಾಗಿದೆ ಈ ಅಪೂರ್ವ ಮೇರು ಕೃತಿ. ಇದೇ ಅವಧಿಯ ಇಂಗ್ಲಿಷ್ ಗ್ರಂಥ ರಚನೆ:

i) India and World Culture

ii) Bendre-Poet and Seer

iii) Sri Aurobindo-Seer and Poet

iv) An integral view of Poetry

v) Coleridge's Aesthetics

vi) Bhagavan Sri Satya Sai Baba

vii) Concept of Indian Literature

3

ಕನ್ನಡ ಸಾಹಿತ್ಯದಲ್ಲಿ ವಿನಾಯಕರು ಪರಂಪರೆಗಳ ಪ್ರವರ್ತಕರಾಗಿದ್ದಾರೆ. ನವೋದಯ ಕವಿಯಾಗಿ ಪಂಪನ ಚಂಪೂ ಕಾವ್ಯ ಪರಂಪರೆಗೆ ಆಧುನಿಕತೆಯ ಒಪ್ಪನಿತ್ತರು. 'ತ್ರಿವಿಕ್ರಮರ ಆಕಾಶಗಂಗೆ' (1933ರ ರಚನೆ) ಪರೋಕ್ಷವಾಗಿ ವಿನಾಯಕರ ವ್ಯಕ್ತಿಚಿತ್ರವೇ ಆಗಿದ್ದು, ಗದ್ಯ-ಪದ್ಯ ಸಮುಚ್ಚಯ ಕಾವ್ಯವಾಗಿದೆ. ಇದೇ ಧಾಟಿಯಲ್ಲಿ 1965ರಲ್ಲಿ ಎಂದರೆ ಸುಮಾರು ಮೂರು ದಶಕಗಳ ತರುವಾಯ ಪ್ರಕಟವಾದ 'ಇಂದಿಲ್ಲ ನಾಳೆ' ಅಮೇರಿಕದ ನಾಗರಿಕ ಜೀವನವನ್ನು ಚಿತ್ರಿಸುವ ಇನ್ನೊಂದು ಚಂಪೂರೂಪವಾಗಿದೆ. ಹೀಗೆ ಆಧುನಿಕ ಯುಗದಲ್ಲಿ ಚಂಪೂ ಪರಂಪರೆಯನ್ನು ಪುನಃ ಪ್ರಯೋಗಿಸಿದವರು ವಿನಾಯಕರೊಬ್ಬರೆ. ಈ ಪ್ರಯೋಗಶೀಲತೆ ವಿನಾಯಕರ ಕಾವ್ಯರಚನೆಗೆ ಒಂದು ಅವಶ್ಯಕ ಮಾಧ್ಯಮವಾಗಿರುವಂತೆ ಅವರ ಪ್ರಯೋಗ ಪ್ರಿಯತೆಯೂ ಆಗಿದೆ. 1946ರಲ್ಲಿ ಪ್ರಕಟಗೊಂಡಿದ್ದರೂ 'ಅಭ್ಯುದಯ'ದಲ್ಲಿ ಅಡಕವಾದ ಎಪ್ಪತ್ತಕ್ಕೂ ಮೇಲ್ಪಟ್ಟ 'ಸುನೀತ'ಗಳು ಅದಕ್ಕೂ ಒಂದೂವರೆ ದಶಕ ಪೂರ್ವದಲ್ಲಿ ಪುಣೆಯಲ್ಲಿ ಪ್ರಾಧ್ಯಾಪಕರಾಗಿದ್ದಾಗ ವಿನಾಯಕರು 'ಅಂಬಿಕಾತನಯ ದತ್ತ'ರೊಂದಿಗೆ (ಆಗ ಅವರೂ ಪುಣೆಯಲ್ಲೇ ಇರುತ್ತಿದ್ದರು) ನಡೆಸಿದ ಕಾವ್ಯಕ್ರೀಡಾ ಪ್ರಯೋಗ ವಾಗಿತ್ತು. ಶ್ರೀನಿವಾಸರು 'ಮಲಾರ'ದಲ್ಲಿ ಆರಂಭಿಸಿದ ಸುನೀತಗಳ ಬಳ್ಳಿಯ ದಾಂಗುಡಿಯಾಗಿ ಬೆಳೆದಿತ್ತು ಈ ವಿನಾಯಕ ಸುನೀತ ಪ್ರಯೋಗ.

'ಕೊಡದಿರು ಶರಧಿಗೆ ಷಟ್ಪದಿಯ ದೀಕ್ಷೆಯನು' ಎಂದು ಸಾರುವ 'ಸಮುದ್ರ ಗೀತಗಳು' 1940ರ ಸುಮಾರಿಗೆ ವಿನಾಯಕ ಕಾವ್ಯ ಪಡೆದ ಕ್ರಾಂತಿಕಾರಿ ತಿರುವಿನ ಘೋಷಣೆಯಾಗಿವೆ. "ಹೋಗಿ ಬರುವೆನು ನನ್ನ ಎಳೆಗನಸುಗಳೆ.... ಸಾಕಿನ್ನು ಕನಸಿನ ದಿವ್ಯದೀವಟಿಗೆ, ಸಾಕು ವಂದನೆ ಇನ್ನು ಒಲವೆಂಬ ನಟಿಗೆ" ಎಂಬ ಹೊಸಹೆಜ್ಜೆಯ ಕೂಗು ಕವಿ ತಳೆದ ಹೊಸ ನೋಟದ ಸೂಚನೆಯಾಗಿದೆ. ಮುಂದಿನ ನವ್ಯಕಾವ್ಯದ ಮುಂಗುರುತಾಗಿದೆ. ಬಿಳಿಯರ ನೆಲದಲ್ಲಿ ಭಾರತೀಯನು ಅನುಭವಿಸುವ ವರ್ಣದ್ವೇಷದ ಅವಹೇಳನೆ ವಿನಾಯಕರ ಸಂವೇದನೆಯನ್ನು ತೀವ್ರವಾಗಿ ಕೆಣಕುತ್ತದೆ. ಮಾರ್ಕ್ಸ್ ವಿಚಾರಗಳು ಅವರ ಸಾಮಾಜಿಕ ಪ್ರಜ್ಞೆಯನ್ನು ಪ್ರಜ್ವಲ ಗೊಳಿಸುತ್ತವೆ. ಇದೆಲ್ಲದರ ಫಲಿತಾಂಶ ಸಮುದ್ರ ಗೀತಗಳು-ವಸ್ತು, ಶೈಲಿ, ದೃಷ್ಟಿ, ನಿಲುವು, ಒಲವು, ಭಾಷೆ, ಲಯಗಳಲ್ಲಿ ಪೂರ್ಣ ಪರಿವರ್ತನೆ.

1950 ಮುಗಿಯುವುದರಲ್ಲಿತ್ತು. ಅದರೊಂದಿಗೆ ಶತಮಾನದ ಪೂರ್ವಾರ್ಧವು ಮುಗಿದು ಉತ್ತರಾರ್ಧವು ಉದಯವಾಗುವುದರಲ್ಲಿತ್ತು. ಇಂತಹ ಒಂದು ಮಹತ್ವದ ಮುಹೂರ್ತದಲ್ಲಿ ಭಾರತದ ಮಹಾದ್ವಾರವೆನಿಸಿದ ಮುಂಬಯಿ ನಗರದಿಂದ ನವ್ಯಕಾವ್ಯದ ಅರುಣೋದಯದ ಘೋಷಣೆ ವಿನಾಯಕರಿಂದ. ಸಂದರ್ಭ ಕನ್ನಡ ಸಾಹಿತ್ಯ ಸಮ್ಮೇಳನ, ರಾಷ್ಟ್ರಕವಿ ಗೋವಿಂದ ಪೈಗಳ ಅಧ್ಯಕ್ಷತೆ. ಸಮುದ್ರದಾಚೆಯಿಂದ ಮುಂಬಯಿ ಗೇಟ್‌ವೇ ಮೂಲಕವೇ ಮೂವತ್ತು ವರ್ಷಗಳ ಹಿಂದೆ ನವೋದಯದ ಸರಕುಗಳು ಬಂದಿಳಿದಿದ್ದವು. ಈಗ ವಿನಾಯಕರು ಚುಕ್ಕಾಣಿ ಹಿಡಿದ ನವ್ಯಕಾವ್ಯದ ಹಡಗೂ ಬಂದಿಳಿದಿತ್ತು. (ಮುಂದೆ ಅಡಿಗರಿಂದ ಈ ನವ್ಯಕ್ಕೆ ಹೊಸ ದೀಕ್ಷೆ, ಹೊಸ ಆಯಾಮ.)

ವಿನಾಯಕರ ಮಹಾಕಾವ್ಯದ ಒಂದು ನವೀನ ಮಾದರಿಯಾಗಿ ಮೂಡಿ ಬಂತು 1953ರ ಅವರ 'ಬಾಳದೇಗುಲದಲ್ಲಿ'. ಇದೊಂದು ಕಾವ್ಯಮಂದಿರ, ಕವಿ ಅದರ ಪೂಜಾರಿ. ಬಾಳೇ ಆತನ ದೇವತೆ. 'ಈ ಯುಗದ ಈ ಜಗದ ಕಾಣ್ಕೆಗಳ ಮೊಗಸಾಲೆ' ಈ ಬಾಳದೇಗುಲ. ಇಡಿಯ ಕಾವ್ಯವೆ ಒಂದು ಮಹಾಪ್ರತಿಮೆ. ಈ ದೇಗುಲದ ಪ್ರಾಂಗಣದಲ್ಲಿ ಕೌಟುಂಬಿಕ, ಸಾಮಾಜಿಕ, ಕರ್ಮಯೌಗಿಕ, ಜ್ಞಾನಶೀಲ, ಸೌಂದರ್ಯ ಪ್ರಜ್ಞಾತ್ಮಕ ಹಾಗೂ ಮುಕ್ತ ಎಂಬ ಸಪ್ತ ವರ್ಣಕ ಗುಂಪುಗಳ ಮಾದರಿಗಳ ಒಂದು ಇಂದ್ರಧನುರ್ದರ್ಶನವೆ ಮಾನವ ಕೋಟಿಯ ಜೀವನ ಪೂರ್ಣಿಮೆ ಆದರ್ಶವಾಗಿ ನಿಲ್ಲುತ್ತದೆ. ಬಾಳಬಟ್ಟೆಯಲ್ಲಿ ಪರಮಾಗಮದ ದರ್ಶನವೆ ಈ ಕಾವ್ಯದ ಕೇಂದ್ರ ಗುರಿ.

'ದ್ಯಾವಾ ಪೃಥಿವೀ' 1957ರಲ್ಲಿ ಪ್ರಕಟಗೊಂಡು ನವೀನ ಕಲ್ಪನೆ, ನವ್ಯ ತಂತ್ರಗಳಿಂದ ಹತ್ತು ಎಸಳುಗಳ ಒಂದು ಹೊಸ ಪ್ರಯೋಗವೇ ಆಗಿದೆ. ಹೊಸ ಅನುಭವ, ಹೊಸ ಅಭಿವ್ಯಕ್ತಿಗಳಿಂದಾಗಿ 50ರ ದಶಕದ ಕನ್ನಡ ಕಾವ್ಯದ ಮಹತ್ವದ ಮೈಲುಗಲ್ಲೆನಿಸಿದೆ. ಆಕಾಶಭೂಮಿಗಳ ಭೌಮದರ್ಶನದ ಪ್ರತೀಕ ಕಾವ್ಯ ಇದು. ನೆಲದಿಂದ ಮುಗಿಲ ನೋಟ, ಮುಗಿಲಿನಿಂದ (ಅರ್ಥಾತ್ ವಿಮಾನದಿಂದ) ನೆಲದ ನೋಟ ಹೀಗೆ ಈ ಭೂಮದರ್ಶನ. ಮೋಡವು ಇಲ್ಲಿ ಒಂದು ವ್ಯಕ್ತಿ, ಚೈತ್ಯಶಕ್ತಿ, 'ನವನೀರದ' ಸಂಕೇತದಲ್ಲಿ ವಿನಾಯಕರು ನವಮಾನವಾವತಾರದ ವಿಕಾಸ ಕಲ್ಪನೆಯನ್ನು ಸೂಚಿಸಿದ್ದಾರೆ. ಇಲ್ಲಿಯ 'ನೀರದ' ಹಾಗೂ ಭಾರತೀಯ ಪುರಾಣ ಕಲ್ಪನೆಗಳ ಒಂದು ಸಮನ್ವಯದ ಪ್ರತಿಮೆ. ಆಧ್ಯಾತ್ಮಿಕ ಒಲುಮೆ, ಶ್ರೀ ಅರವಿಂದರ ಕಾವ್ಯ ದರ್ಶನದ ಪ್ರೇರಣೆ, ಶೆಲ್ಲಿ ಶೇಕ್ಸ್‌ಪಿಯರರ ಸ್ಫೂರ್ತಿ ಇವೆಲ್ಲವೂ ಪ್ರಭಾವಿಯಾಗಿ ಕಾರ್ಯ

ಮಾಡಿವೆ. 'ದ್ಯಾವಾ ಪೃಥಿವೀ' ಮಹಾಕಾವ್ಯದತ್ತ ಸಾಗಿರುವ ಯಶಸ್ವಿ ಪ್ರಯೋಗ.

ವಿನಾಯಕರ ಕಾವ್ಯಮಾರ್ಗದ ಐದನೆಯ ಹಂತದ 'ಇಂದಿನ ನಾಳೆ' multi storeyed ಅಮೆರಿಕನ್ ಕಟ್ಟಡದಂತಿದೆ. ಈ ವೈವಿಧ್ಯಮಯ ಜೀವನ ದರ್ಶನವುಳ್ಳ ಈ ಕೃತಿ ವಿನಾಯಕರ ಎರಡನೆಯ ಚಂಪೂ ಪ್ರಯೋಗ. 'ತ್ರಿವಿಕ್ರಮರ ಆಕಾಶಗಂಗೆ'ಯ ಚಂಪೂತಂತ್ರ ಇಲ್ಲಿ ಹೆಚ್ಚು ಹರಳುಗಟ್ಟಿದೆ. ಒಂದು ಆಧುನಿಕ ಉನ್ನತ ದೇಶದ ನಾಗರಿಕತೆಯೂ, ಅದರ ಅರ್ಥಪೂರ್ಣ ದೃಶ್ಯಗಳೂ, ಸನ್ನಿವೇಶಗಳೂ ಕವಿತೆಗಳಾಗಿ ಅರಳಿವೆ. ಇಲ್ಲಿ ಬರುವ ಗದ್ಯವು ಇವೆಲ್ಲವುಗಳ ಏಕಸೂತ್ರತೆಯನ್ನು ಕಾಯುತ್ತದೆ. ನಾಲ್ಕು ತಿಂಗಳ ಈ ಅಮೆರಿಕದ ಯಾತ್ರೆ, ಕವಿಯಲ್ಲಿ ಮೂಡಿಸಿದ ಸಂವೇದನೆಗಳೆಲ್ಲವೂ ಅಲ್ಲಿಯ ಜನಜೀವನ, ಸಂಸ್ಕೃತಿ, ನಾಗರಿಕತೆಯ ಬಗ್ಗೆ ಒಂದು ತಾತ್ವಿಕ ಸಮೀಕ್ಷೆ ಯನ್ನು ನೀಡುತ್ತವೆ. ಅಲ್ಲಿಯ ಉದ್ಯಮಶೀಲತೆಯ ಬಗ್ಗೆ, ಪವಾಡಾತ್ಮಕ ಪ್ರಗತಿಯ ಬಗ್ಗೆ ಒಂದು ಸರ್ವತೋಮುಖವಾದ ದರ್ಶನವನ್ನು 'ಇಂದಿಲ್ಲ ನಾಳೆ' ನಮ್ಮ ಮುಂದೆ ಇರಿಸುತ್ತದೆ. ಭಾರತದ ಅಪೌರುಷೇಯತ್ವದ ನಂಬಿಕೆ, ಅಮೆರಿಕದ ಪೌರುಷ ಪ್ರತ್ಯಯ ಎರಡೂ ಸಮಸಮನಾಗಿ ನಿರೂಪಿತವಾಗಿವೆ.

ಇನ್ನುಳಿದ 'ಸಿಮ್ಲಾ ಸಿಂಫನಿ', 'ಭಾಗವತ ನಿಮಿಷಗಳು' ತಂತಮ್ಮ ರೀತಿಯ ಹೊಸ ಪ್ರಯೋಗಗಳಾಗಿವೆ. ಸಿಮ್ಲಾ ಸಿಂಫನಿಯ ಕವನಗಳೆಲ್ಲವೂ ವಿನಾಯಕರ ಸಿಮ್ಲಾ ವಾಸ್ತವ್ಯ(1970-71)ದ ಕಾವ್ಯ ರಚನೆಯಲ್ಲಿ ಮೂಡಿ ಬಂದ ನಿಸರ್ಗದ ನವೀನ ಪ್ರತೀಕಗಳಾಗಿವೆ.

'ತ್ರಿಶಂಕುವಿನ ಪ್ರಜ್ಞಾ ಪ್ರಭಾತ'ವು (1965) ವಿನಾಯಕರ ಮುಂಬರುವ ಮಹಾಕಾವ್ಯದ ಮುನ್ನೆಳಲಾಗಿದೆ. ಆ ಮಹಾಕಾವ್ಯಕ್ಕೆ ಇದೊಂದು ಅಣುಕಾವ್ಯ ಇಲ್ಲವೆ ಇನ್ನೊಂದು 'ಮಿಡಿ' ಕಾವ್ಯ. ಆಧುನಿಕ ಮಾನವನ ಅನಿಶ್ಚಿತ ಜೀವನದ ಸಂಕೇತ ದಂತಿರುವ ತ್ರಿಶಂಕುವಿನ ಕಥೆ, ವಿಶ್ವಾಮಿತ್ರನ ಘೋರ ತಪಸ್ಸು, ತ್ಯಾಗ, 'ಅನ್ಯಮಿಂದ್ರಂ ಕರಿಷ್ಯಾಮಿ' ಎಂಬ ಕ್ರತುಶಕ್ತಿ ಇಲ್ಲಿ ವಿಸ್ತೃತವಾಗಿ ಚಿತ್ರಿತವಾಗಿದೆ. ಮುಂದೆ 'ಭಾರತ ಸಿಂಧು ರಶ್ಮಿ' ಮಹಾಕಾವ್ಯದಲ್ಲಿ ವಿಶ್ವಾಮಿತ್ರರ ಪೂರ್ಣ ಪಾತ್ರವು ರಮ್ಯವಾಗಿ, ರೋಮಾಂಚಕವಾಗಿ ಅರಳುತ್ತದೆ. ಒಂದು ಪೌರಾಣಿಕ ಕಥೆಯನ್ನು ಆಧುನಿಕ ಸಾಮಾಜಿಕ ಪ್ರಶ್ನೆಗೆ ಅನ್ವಯಿಸುವಂತೆ ದುಡಿಸಿಕೊಂಡ ನವ್ಯಕಾವ್ಯದ ಶಿಖರ ಸಾಧನೆ 'ತ್ರಿಶಂಕು ಪ್ರಜ್ಞಾಪ್ರಭಾತ'. ಅನಾಥ ಪ್ರಜ್ಞೆಯ ಒಬ್ಬ ತ್ರಿಶಂಕುವಿಗಾಗಿ ತನ್ನ ತಪಃಶಕ್ತಿಯ ಹ್ರಾಸ ಮಾಡಿಕೊಂಡ ವಿಶ್ವಾಮಿತ್ರ ಬ್ರಹ್ಮನ ಉಪದೇಶದಿಂದ ಮತ್ತೆ ತಪಗೈಯುತ್ತಾನೆ, ಮತ್ತೆ ಗುರಿ ತಲುಪುತ್ತಾನೆ. ಪೂರ್ಣತೆಯೆ ಇಂದಿನ ಮಾನವನು ಸಾಧಿಸಬೇಕಾದ ಸ್ವರ್ಣಧ್ಯೇಯ. ಅದಕ್ಕಾಗಿ ಆರೋಹಣ. 'ವಿಶ್ವದೊಳಗೆಲ್ಲಿಹುದು ಪತನವಿರದಾ ರೋಹಣ?' ಪತನವು ತಪನವಾದಾಗ ಮತ್ತೆ ಆರೂಢತ್ವ.

'ಕಲೋಪಾಸಕ'ದಿಂದ 'ಭಾರತ ಸಿಂಧು ರಶ್ಮಿ'ಯವರೆಗೆ ವಿನಾಯಕ ಕಾವ್ಯಪ್ರಜ್ಞೆ ಒಂದು ವಿಕಾಸ ಕ್ರಮವನ್ನು ಅನುಸರಿಸಿಕೊಂಡು ಬಂದಿದೆ. ಕ್ರಮೇಣ ಅವರ ಕಾವ್ಯಪ್ರಜ್ಞೆ ಅಂತಃಸ್ಫುರಣದ ಭಾಷೆಯಾಗಿ ಕಾರ್ಯ ಮಾಡುವುದನ್ನು ಕಾಣುತ್ತೇವೆ. 'ಭಾರತ ಸಿಂಧು ರಶ್ಮಿ' ಮಹಾಕಾವ್ಯ ವಿನಾಯಕರ ಅಂತಃಸ್ಫುರಣದ ಪೂರ್ಣ ವಿಕಾಸವನ್ನು ನಿದರ್ಶಿಸುತ್ತದೆ. ವೇದ ದ್ರಷ್ಟಾರನ ಕ್ರಾಂತದೃಷ್ಟಿಯನ್ನಿಲ್ಲಿ ಗುರುತಿಸಬಹುದು. 1972ರಿಂದ 1978ರ ವರೆಗೆ ಈ ಮಹಾಕಾವ್ಯದ ಸೃಜನಕಾರ್ಯದ ಕಾಲಾವಧಿಯೆಂದರೆ ವಿನಾಯಕ ವಾಙ್ಮಯ ತಪಶ್ಚರ್ಯೆ.

ವಿನಾಯಕರ ಮೂವತ್ತೈದು ಸಾವಿರ ಸಾಲುಗಳ Magnum opus ಎನಿಸಿದ 'ಭಾರತ ಸಿಂಧು ರಶ್ಮಿ' ಎಂಬ ಈ ಮಹಾಕಾವ್ಯದ ಮೈಕಟ್ಟಿನಲ್ಲಿ ಮೂಡಣ ಪಡುವಣಗಳು ಸುಂದರವಾಗಿ ಬೆರೆತಿವೆ. ಮಹಾಕಾವ್ಯದ ಸ್ವರೂಪ, ವಸ್ತು, ವರ್ಣನೆ, ಯುಗಪ್ರಜ್ಞೆ, ಜನಾಂಗ ಸಂಸ್ಕೃತಿ, ಜೀವನ ದರ್ಶನ, ಕಾವ್ಯ ಸಂದೇಶ-ಹೀಗೆ ಮೂಡಣ ಪಡುವಣಗಳ ಮಹಾಕಾವ್ಯ ರಚನಾತಂತ್ರ, ಲಕ್ಷಣ, ವ್ಯಾಪ್ತಿ, ವೈಶಿಷ್ಟ್ಯಗಳೆಲ್ಲವೂ ಇಲ್ಲಿವೆ. ವೈದಿಕ ವಸ್ತುವನ್ನಾಯ್ದುಕೊಂಡು ಮಹಾಕಾವ್ಯವನ್ನಾಗಿಸಿದ ಯತ್ನ ಭಾರತೀಯ ಸಾಹಿತ್ಯದಲ್ಲಿ ಇದೇ ಪ್ರಥಮ. ಅಂತೆಯೆ 'ಭಾರತ ಸಿಂಧು ರಶ್ಮಿ'ಯ ಮಹಾಕಾವ್ಯ ಕಲ್ಪನೆ, ರಚನೆಗಳು ವಿಶ್ವಸಾಹಿತ್ಯಕ್ಕೆ ವಿನಾಯಕರು ನೀಡಿರುವ 'ಕಾಣ್ಕೆ', ಕಾಣಿಕೆ. ಆಧುನಿಕ ಕನ್ನಡ ಕಾವ್ಯದಲ್ಲಿ 'ರಾಮಾಯಣ ದರ್ಶನ', 'ಭಾರತ ಸಿಂಧು ರಶ್ಮಿ', 'ಭವ್ಯ ಮಾನವ' ಎಂಬ ಮೂರು ಮಹಾಕಾವ್ಯಗಳು ವಿಶ್ವ ಶಿವಪುರುಷನಿಗೆ ಕನ್ನಡವು ನೀಡಿದ ಮೂರು ಕಣ್ಣುಗಳಾಗಿವೆ. ಶ್ರೀ ಅರವಿಂದರ 'ಸಾವಿತ್ರಿ'ಯ ದಾರ್ಶನಿಕತೆ 'ರಶ್ಮಿ' ಯಲ್ಲೂ ಮೂಡಿ ಇದನ್ನೂ ಒಂದು ಅಧ್ಯಾತ್ಮಿಕ ಮಹಾ ಕಾವ್ಯವನ್ನಾಗಿಸಿದೆ. ಇಲ್ಲಿಯ ಆಧ್ಯಾತ್ಮಿಕ ಬೆಳವಣಿಗೆಯನ್ನು ವಿಶ್ವಾಮಿತ್ರ ಪಾತ್ರದ ಬೆಳವಣಿಗೆ ಗುಂಟ ಗುರುತಿಸಬಹುದು. "ಸಂಸ್ಕೃತ ಲಾಕ್ಷಣಿಕರು ಉಲ್ಲೇಖಿಸಿರುವ ನವರಸಗಳಿರಲಿ, ಅಷ್ಟಾದಶ ವರ್ಣನೆ ಗಳಿರಲಿ, ರೂಪಕಾದಿ ವರ್ಣನೆಗಳಿರಲಿ, ಧೀರೋದಾತ್ತಾದಿ ವರ್ಣನೆಗಳಿರಲಿ, ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳ ಕಾಂತಾಸಮ್ಮಿತ ಉಪದೇಶ ವಿರಲಿ ಎಲ್ಲಕ್ಕೂ ಈ ಸುದೀರ್ಘ ಕೃತಿಯಲ್ಲಿ ಹೊಸ ರೀತಿಯ ಆವಿಷ್ಕೃತಿಯಿದೆ...." ಎಂದು ಡಾ. ಕೆ.ಕೃಷ್ಣಮೂರ್ತಿ ಅವರು ಈ ಮಹಾಕಾವ್ಯದ ಬಗ್ಗೆ ಅಭಿಪ್ರಾಯಿಸಿದ್ದಾರೆ. ಭಾರತ, ಸಿಂಧು, ರಶ್ಮಿ ಎಂಬ ಮೂರು ಪದಗಳಿಗೆ ಇಲ್ಲಿ ಹೊಸ ಅರ್ಥ ಬಂದಿದೆ. ಕೃತ್ಸು ಭಾರತ ಕುಲಕ್ಕೆ ಸೇರಿದ ಸುದಾಸನು ದಾಶರಾಜ್ಞ ಯುದ್ಧದಲ್ಲಿ ವಿಜಯಿಯಾದ ಗುರುತಿಗಾಗಿ ಈ ದೇಶಕ್ಕೆ 'ಭಾರತ' ಎಂಬ ಹೆಸರು ಖ್ಯಾತವಾಯಿತು. 'ಸಿಂಧು' ಎನ್ನುವುದು ಅಸ್ತಿತ್ವ ಪ್ರವಾಹ (stream of existence); 'ರಶ್ಮಿ' ಎಂದರೆ ಪ್ರಜ್ಞೆಯ ಕಿರಣ. ರಶ್ಮಿ ಸಿಂಧುವಿನಲ್ಲಿ ಲೀನವಾದಾಗ ಮನುಷ್ಯ ಜೀವನ ಪರಿಪೂರ್ಣ. ಅರಿವು ಮತ್ತು ಇರವು, ಸತ್ ಚಿತ್ ಎರಡೂ ಒಂದಾಗುವುದೆ 'ಆಪೋಜ್ಯೋತಿ' ಬೆರೆತು ರಸೋs ಮೃತವಾದಂತೆ.

'ಭಾರತ ಸಿಂಧು ರಶ್ಮಿ'ಯ ವಸ್ತು ಪುರಾತನ, ಅದರ ವ್ಯಂಜನ ಸಮ ಕಾಲೀನ. ಅದರ ಸಂದೇಶ ಸರ್ವಕಾಲೀನ. ವೈದಿಕಪ್ರಜ್ಞೆಯಲ್ಲಿ ಆಧುನಿಕತೆಯ ಸಂವಿತ್ತು ಇದರ ಗುಣ ವಿಶೇಷಣ.

ವಿಶ್ವಾಮಿತ್ರ ಪಾತ್ರದ ಸಂಕೀರ್ಣತೆ 'ಭಾರತ ಸಿಂಧು ರಶ್ಮಿ'ಯ ಉದ್ದಕ್ಕೂ ಸ್ಫುಟವಾಗಿ ಬೆಳೆದು ಬಂದಿದೆ. ಈ ಮಹಾಕಾವ್ಯದ ಹಿಂದಿನ ಆಧ್ಯಾತ್ಮ ಶಕ್ತಿಯೆ ವಿಶ್ವಾಮಿತ್ರ. ಊರ್ವೀದೇವಿ-ಗಾಥಿರಾಜರ ಉದರದಲ್ಲಿ ಜನಿಸಿದ ವಿಶ್ವರಥ, ವಿದ್ಯಾಸಂಪನ್ನನಾಗಿ ಯೌವರಾಜ್ಯಾಭಿಷೇಕಕ್ಕೆ ಮೊದಲು ಸಪ್ತ ಸಿಂಧೂ ದೇಶದ ಸಂಚಾರ ಕೈಕೊಂಡು ಭರತಕುಲ ಚಕ್ರವರ್ತಿಯಾಗಲಿರುವ ಸುದಾಸನನ್ನು ಸಂಧಿಸುತ್ತಾನೆ. ಅಲ್ಲಿ ಸುದಾಸನ ತಂಗಿ ಸಾಂಕೃತಿಯನ್ನು ಕಂಡು ಪ್ರೀತಿಸಿ ಆಕೆಯನ್ನು ವಿವಾಹವಾಗುತ್ತಾನೆ. ಮುಂಬರುವ ದಾಶರಾಜ್ಞ ಯುದ್ಧದಲ್ಲಿ ಸಾದಾಸನ ಪಕ್ಷ ವಹಿಸಿ, ತನ್ನ ತಪಃಸಿದ್ಧಿಯ ಬಲದಿಂದ ಮಂತ್ರಾಸ್ತ್ರಗಳನ್ನು ಯೋಜಿಸಿ ಆತನ ಗೆಲುವಿಗಾಗಿ ತ್ಯಾಗ ಮನೋಭಾವದಿಂದ ಹೆಣಗಾಡಿ ಯಶಸ್ವಿಯಾಗುತ್ತಾನೆ. ವಿಶ್ವರಥನು, ವಿಶ್ವಾಮಿತ್ರನಾಗಿ ಮುಂದೆ ವಿಶ್ವಮಾನವ

ನಾಗಿ ಬೆಳೆಯುತ್ತಾನೆ. 'ಮನುಕುಲದ ಶ್ರೇಯವೆ ನನ್ನ ಮೂಲ ಹೆಗ್ಗುರಿಯಿಂದು' ಎಂದು ಸಾರುತ್ತಾನೆ.

"ಇವ ಆರ್ಯ, ಇವ ದಸ್ಯು
ಇವ ದಾಸನೆಂದೆಣಿಸಿ ನರಕ ನಿರ್ಮಿಸುವೆವಾವು
ಒಂದೆ ನೆಲದಲಿ ನೆಲಸಿ ಒಂದೆ ಜಲವಿರೆ, ಫಲಿಸಿ-
ನಮ್ಮ ಧರ್ಮದಲಿ ಸರ್ವಧರ್ಮಗಳ ತಿರುಳುಂಡು
ಬಾಳಿರಲು ತಲೆಯೆತ್ತುವುದು ಮಹಾಮಾನವಧರ್ಮ"

ಹೀಗೆ ನುಡಿದ ವಿಶ್ವಾಮಿತ್ರರು ವಿಶ್ವಪ್ರಜ್ಞೆಯ ವಿಶ್ವ ಕುಟುಂಬಿ ಯಾಗುತ್ತಾರೆ. ಮಾನವ ಧರ್ಮಿಯೆನಿಸಿ ವಿಶ್ವಮಾನವನೆನಿಸುತ್ತಾರೆ. ವಿಶ್ವಮಾನವತೆಯ ವಿಶ್ವಾಮಿತ್ರರ ಉಸಿರೆ ಗಾಯತ್ರಿ, ದೃಷ್ಟಿಸಾವಿತ್ರಿ, ಮನ ಉನ್ಮನ, ಬುದ್ಧಿ ಆತ್ಮದ ವೃದ್ಧಿ, ಮೃದುಹಾಸ ಚಿತ್‌ಶಕ್ತಿ ವಿಲಾಸ; ಅಂತರ್ಬಾಹ್ಯ ಶುಚಿ ತೊಳಗಿದ ಅವರ ತನು ಅಗ್ನಿ ಶಿಖೆ. ಇಂತಹ ಚಿರ ವಿಭೂತಿಯಾದ ವಿಶ್ವಾಮಿತ್ರರು ವಿಶ್ವಮಾನವತೆಯನ್ನು ಮೀರಿ ಬೆಳೆದ ಕಥೆಯೆ 'ಭಾರತ ಸಿಂಧು ರಶ್ಮಿ'; ವಿನಾಯಕ ಕಾವ್ಯಸೃಷ್ಟಿಯ ಮೇರು ಶಿಖರ. ವಿನಾಯಕ ಕವಿತಾ ಸರಿತೆಗಳೆಲ್ಲವೂ ಈ ಮಹಾಕಾವ್ಯಸಾಗರದಲ್ಲಿ ಸಮಾವೇಶ ಗೊಂಡಂತೆಯೇ ಸರಿ-ಎಂದು ಭಾವಿಸಿ ಇನ್ನುಳಿದ ಸಂಕಲನ, ಸಂಗ್ರಹಗಳ ವಿವರ ವಿಮರ್ಶೆಗಳಿಗೆ ಕೈಹಾಕಿಲ್ಲ.

1935ರಲ್ಲಿ 'ಇಜ್ಜೋಡು' ಎಂಬ ಹೆಸರಿನಲ್ಲಿ ಸಮರಸವೇ ಜೀವನ ಮಹಾ ಕಾದಂಬರಿಯ ಪೂರ್ವಭಾಗ ಪ್ರಕಟವಾದಾಗ ಜನರಲ್ಲಿ ಅದರ ಶೀಲಾಶ್ಲೀಲತೆಯ ಬಗ್ಗೆ ಒಂದಿಷ್ಟು ಆಡಿಕೆ ಉಂಟಾಯಿತು. ಆಗಿನ ಓದುಗರಿಗೆ ಇದು ವಾಡಿಕೆಯ ಗಳಗನಾಥರ ಕಾದಂಬರಿಯಾಗಿರಲಿಲ್ಲ. ಆನಂದಕಂದರ ಸ್ವತಂತ್ರ ಸಾಮಾಜಿಕ ಕಾದಂಬರಿಯಾದ 'ಸುದರ್ಶನ' ವಾಚಕರಲ್ಲಿ ಒಂದು ಹೊಸರುಚಿಯನ್ನು ಮೂಡಿಸಿತ್ತು. ಆದರೆ 'ಇಜ್ಜೋಡು' ಉತ್ತರ ಕರ್ನಾಟಕದ ಒಂದು ಪ್ರಾದೇಶಿಕ ಪ್ರಾತಿನಿಧಿಕ ಕಾದಂಬರಿಯೆಂದು ವೈಶಿಷ್ಟ್ಯಪೂರ್ಣವೆನಿಸಿತು. ಆಧುನಿಕ ಕಾದಂಬರಿ ಸಾಹಿತ್ಯದಲ್ಲಿ ಇಜ್ಜೋಡು ಒಂದು ಹೊಸ ಮೈಲುಗಲ್ಲು ಎನಿಸಿತು.

ಮುಂದೆ 'ಇಜ್ಜೋಡು' ಬೃಹದಾಕಾರವಾಗಿ ಬೆಳೆದು 'ಸಮರಸವೇ ಜೀವನ' ಎಂಬ ಪುನರ್ನಾಮಕರಣ ಹೊಂದಿ 1320 ಪುಟಗಳ ಡೆಮಿ ಆಕಾರದ 'ಸರ್ವಾಂಗಪೂರಿತ' ಕಾದಂಬರಿಯಾಗಿ ಅರಳಿತು (1956). ಈ ಮಹಾ ಕಾದಂಬರಿ ವಿನಾಯಕರು 22 ವರ್ಷದ ಪ್ರಾಯದವರಿದ್ದಾಗ ಆರಂಭವಾಗಿ 22 ವರ್ಷ ಕಾಲ ಅವರ ತಲೆಯಲ್ಲಿ ತಾಂಡವವಾಡಿ ಕಾಗದದ ಮೇಲೆ ಮೂಡಿಬಂದುದು 44 ವರ್ಷ ಪ್ರಾಯದವರಿದ್ದಾಗ, ಪ್ರಕಟಗೊಂಡುದು ಮೂರು ವರ್ಷಗಳ ನಂತರ.

'ಸಮರಸವೇ ಜೀವನ' ಈಗ ನೂರು ವರ್ಷಗಳ ಹಿಂದಿನ ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ ಆಗುಹೋಗುಗಳ ಸಾಕ್ಷಿಚಿತ್ರವಾಗಿ ಸ್ವತಂತ್ರ ಸಾಮಾಜಿಕ ಕಾದಂಬರಿಗೆ ಒಂದು ಸ್ಥಿರ ಸ್ವರೂಪವನ್ನೂ, ವಿಶ್ವ ವೈಶಾಲ್ಯವನ್ನೂ ನೀಡುವ ವೈಶಿಷ್ಟ್ಯಗಳನ್ನು ಹೊಂದಿದೆ. ಈ ಒಂದು ಕಾದಂಬರಿಯಲ್ಲಿ ಗೋಕಾಕರು ಬರೆಯಬಹುದಾಗಿದ್ದ ಹತ್ತಾರು ಕಾದಂಬರಿಗಳ ಸತ್ವವೆಲ್ಲಾ ಅಡಗಿದೆ. ನರಹರಿ, ವಿಷ್ಣು, ಶೀನು ಎಂಬ ಸ್ನೇಹಿತರು ಬದುಕಿದ ಕಾಲು ಶತಮಾನದ ಜೀವನ ವಿಕಾಸ ಈ ಸಾವಿರದ ಪುಟಗಳಲ್ಲಿ ಹರಹುಗೊಂಡಿದೆ. ಉತ್ತರ ಕರ್ನಾಟಕದ ವರದಾ ನದಿಯಲ್ಲಿ ಉಗಮಿಸಿ, ಕೃಷ್ಣೆ, ಗೋದಾವರಿ ಗಳನ್ನು ದಾಟಿ, ಮಹಾರಾಷ್ಟ್ರವನ್ನು ಸುತ್ತಿ ಸಮುದ್ರದಾಚೆಗೆ ತನ್ನ ಮೈಚಾಚಿ ಮತ್ತೆ ಭಾರತಕ್ಕೆ ಮರಳಿ ಆರ್ಯಾವರ್ತದ ನರ್ಮದಾ ತೀರದ 'ಪೂರ್ಣ ಜೀವನ ಕೇಂದ್ರ'ವೆಂಬ ವಿಕಸಿತ ಜೀವನದ ಒಂದು ಪ್ರತೀಕವಾಗಿ ಮುಕ್ತಾಯ ಗೊಳ್ಳುತ್ತದೆ. ಇಂಗ್ಲಿಷ್‌ನಲ್ಲಿ ರಚಿತವಾದ 'Narahari the Prophet of New India' (ಇದರ ಕನ್ನಡ ಅನುವಾದವೂ ಆಗಿದೆ) ಈ ಮಹಾ ಕಾದಂಬರಿಗೆ ಕಲಶವಿಟ್ಟಂತಿದೆ.

ಈ ಕೃತಿಗೆ ಮಹಾಕಾದಂಬರಿಯ ಘನತೆ, ಮಹತ್ವಗಳನ್ನು ತಂದು ಕೊಡುವ ಅಂಶವೆಂದರೆ ಇಲ್ಲಿ ಚಿತ್ರಿತವಾಗಿರುವ ಮಾನವೀಯತೆಯ ವೈವಿಧ್ಯ, ವೈಪುಲ್ಯ, ವೈಶಾಲ್ಯಗಳು. ಭಾರತದಲ್ಲಿಯೆ ಹುಟ್ಟಿ, ಭಾರತದ ಹಳ್ಳಿಗಳಲ್ಲಿ ಬೆಳೆದು, ಭಾರತದ ಹಳ್ಳಿಯಲ್ಲಿಯೆ ಹುಡಿಯಾದ ಮೊಗ್ಗಾವಿಯ ಮನೆತನಗಳ ಜನ, ತಾಸಗಾವಿಯ ಶ್ರೀಮಂತರು, ಗಂಗೇಲೂರಿನ ಹಳ್ಳಿಯ ಬಂಧುಗಳ ಬಳ್ಳಿ ಇಂತಹ ಜನರೆಲ್ಲ ತಮ್ಮದೇ ಆದ ಬದುಕನ್ನು ನಡೆಸಿ ಕೊನೆಯುಸಿ ರೆಳೆದರು. ಕಾದಂಬರಿಯನ್ನು ಓದುತ್ತಿದ್ದಂತೆ ನಮ್ಮ ಮುಂದೆಯೆ ನಾಲ್ಕನೆಯ ತಲೆಮಾರಿನವರೆಗೆ ಪಾತ್ರಗಳು ಕಾಲಚಕ್ರ ಉರುಳಿದಂತೆ ಬೆಳೆದು ನಿಂತಾಗ ದಶಕ ದಶಕಗಳಷ್ಟು ನಾವೂ ದೊಡ್ಡವರಾಗಿದ್ದೇವೆಯೊ ಎನಿಸುತ್ತದೆ. ಅಂತೂ ಅಂಬಿಕಾತನಯದತ್ತರ 'ರಸವೆ ಜನನ ವಿರಸ ಮರಣ ಸಮರಸವೇ ಜೀವನ' ಎಂಬ ಕಾವ್ಯಸತ್ವವೆ ಈ ಕಾದಂಬರಿಯಾಗಿ ಅರಳಿ ನಿಂತಿದೆ ಎನ್ನಬಹುದು.

ಗದ್ಯ-ಪದ್ಯ ಎರಡೂ ಪ್ರಕಾರಗಳ ವಿನಾಯಕರ ಸಾಹಿತ್ಯ ಗ್ರಂಥಗಳು - ಇಂಗ್ಲಿಷ್ ಬರವಣಿಗೆಯೂ ಸೇರಿ - ಸುಮಾರು ಅರುವತ್ತರಷ್ಟಾದರೆ ಗದ್ಯ-ಪದ್ಯ ಪ್ರಕಾರಗಳೆರಡೂ ಮೂವತ್ತು ಮೂವತ್ತು ಆಗಬಹುದು. ಪ್ರಾಧ್ಯಾಪಕ ರಾಗಿ, ಪ್ರಾಚಾರ್ಯರಾಗಿ, ಕುಲಪತಿ ಗಳಾಗಿ ಶೈಕ್ಷಣಿಕ ವಿಚಾರವಾಗಿ ಅವರು ವಿವಿಧ ವಿಶ್ವವಿದ್ಯಾಲಯಗಳ ವೇದಿಕೆಗಳ ಮೇಲಿಂದ ನೀಡಿದ ಉಪನ್ಯಾಸ ಸಂಗ್ರಹಗಳಲ್ಲದೆ 'ಪ್ರಶಾಂತಿ ನಿಲಯ'ದಲ್ಲಿ ಪ್ರಾಥಮಿಕ ಮಟ್ಟದ ಮಕ್ಕಳಿಗಾಗಿ ತಯಾರಿಸಿದ ಇಂಗ್ಲಿಷ್ ಕ್ರಮಿಕ ಪುಸ್ತಕಗಳನ್ನೂ ನಾವು ಮರೆಯುವಂತಿಲ್ಲ. ಸತ್ಯ, ಧರ್ಮ, ಶಾಂತಿ, ಪ್ರೇಮ ಮತ್ತು ಅಹಿಂಸೆ ಎಂಬ ಶ್ರೀ ಸತ್ಯಸಾಯಿ ಬಾಬಾ ಅವರು ರೂಪಿಸಿದ ಶಿಕ್ಷಣ ಕ್ಷೇತ್ರದ ಪಂಚಶೀಲ ತತ್ವಗಳ ಮೇಲೆ ಶಿಕ್ಷಣವೇತ್ತ ಡಾ. ಗೋಕಾಕರು ಹೊಸ ಮೌಲ್ಯಾಧಾರಿತ ಕ್ರಾಂತಿಕಾರಿ ಶಿಕ್ಷಣ ಧೋರಣೆಯ ರೂವಾರಿಯಾಗಿ ಕಾರ್ಯ ಮಾಡಿದ್ದಾರೆ. 'The Satya Sai Theory of Education' ಎಂಬ ಬರವಣಿಗೆ ಡಾ. ಗೋಕಾಕರು ಶಿಕ್ಷಣ ಲೋಕಕ್ಕೆ ಸಲ್ಲಿಸಿದ ಹೊಸ ಕಾಣಿಕೆ. ನಮ್ಮ ರಾಜ್ಯದ ಆಡಳಿತ ಭಾಷೆ ಕನ್ನಡವಾಗಿ ಸ್ವೀಕೃತವಾಗಲಿಕ್ಕೆ 'ಗೋಕಾಕ್ ವರದಿ'ಯೆ ಕಾರಣ. ಆರು ವರ್ಷಗಳ ಹಿಂದೆ ಕರ್ನಾಟಕದ ತುಂಬೆಲ್ಲ ಬಿಸಿಬಿಸಿ ಚಳವಳಿಯ ಬಿರುಗಾಳಿ ಯನ್ನೆಬ್ಬಿಸಿದ 'ಗೋಕಾಕ್ ವರದಿ' ರಾಜ್ಯ ಭಾಷೆಯ ಆದ್ಯತೆಯನ್ನೂ, ಸ್ಥಾನ ಮಾನಗಳನ್ನು ಕಟ್ಟುನಿಟ್ಟಾಗಿ ನಿರೂಪಿಸುವ documentary ಸಾಹಿತ್ಯವಾಗಿದೆ. 'ಗೋಕಾಕ್ ವರದಿ'ಯ ಲೇಖಕ ಡಾ. ವಿ.ಕೃ. ಗೋಕಾಕರು ಮಹಾ ಕಾವ್ಯ ಕರ್ತೃ ವಿನಾಯಕರಿಗಿಂತ ಹೆಚ್ಚು ಲೋಕಪ್ರಸಿದ್ಧಿಯನ್ನು ಪಡೆದರು.

'ಪಯಣಿಗ' ವಿನಾಯಕರ ಪ್ರವಾಸ ಸಾಹಿತ್ಯ, ಸಾಹಿತ್ಯ ಪ್ರಪಂಚಕ್ಕೆ ಒಂದು ಅದ್ವಿತೀಯ ಕೊಡುಗೆ. ಅವರ 'ಸಮುದ್ರದಾಚೆಯಿಂದ' ಎಂಬ ಪ್ರವಾಸ ಸಾಹಿತ್ಯ ಬಹುಬಗೆಯ ಸಾಹಿತ್ಯೋದ್ದೇಶವನ್ನು ಈಡೇರಿಸುತ್ತದೆ. ಬಿಳಿಯ ಜನರು ಭಾರತೀಯರನ್ನೂ, ಆಫ್ರಿಕನ್‌ರನ್ನೂ ಕಪ್ಪುಜನರೆಂದು ಹಳದಿಯ

ಕನ್ನಡಕದಿಂದ ನೋಡುವ ಜಿಗುಪ್ಸಾ ಭಾವನೆಗೆ, ವರ್ಣದ್ವೇಷ ನೀತಿಗೆ ತೀವ್ರ ಮದ್ದನ್ನು ಕೊಟ್ಟಿದ್ದಾರೆ ತಮ್ಮ ಈ ಗ್ರಂಥದಲ್ಲಿ ಬರುವ ಪತ್ರಗಳಲ್ಲಿ. ಅದೇ ಕಾಲಕ್ಕೆ ಇಂಗ್ಲೆಂಡಿನ ಸಾಂಸ್ಕೃತಿಕ, ಸಾಹಿತ್ಯಕ, ಕಲಾತ್ಮಕ, ಗತಕಾಲದ ಘನತೆಗಳ ಬಗ್ಗೆ ಸಾಂಸ್ಕೃತಿಕ ದೃಷ್ಟಿಯಿಂದ ನಿಚ್ಚಳವಾಗಿ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಬಿಳಿಯರ ಸ್ವಾರ್ಥ, ಅಧಿಕಾರಶಾಹೀ ಲಾಲಸೆ, ಕುಟಿಲ ರಾಜಕಾರಣ, ಭೇದ ನೀತಿ ಇವುಗಳನ್ನೆಲ್ಲ ತೀವ್ರವಾದ, ಹರಿತವಾದದ ಭಾಷೆಯಲ್ಲಿ ಟೀಕಿಸಿದ್ದಾರೆ. ಆದರೆ ಷೇಕ್ಸ್‌ಪಿಯರ್, ಶೆಲ್ಲಿ, ವರ್ಡ್ಸ್‌ವರ್ತ ರಂತಹ ಅಮರಕವಿಗಳನ್ನು ಪಡೆದ ಈ ಆಂಗ್ಲನಾಡಿಗೆ ಗೌರವದ ವಂದನೆ ಸಲ್ಲಿಸುತ್ತಾರೆ. ಮುಖ್ಯವಾಗಿ 'ಇಲ್ಲೆ ಇರು ಅಲ್ಲಿ ಹೋಗಿ ಮಲ್ಲಿಗೆಯನು ತರುವೆನು' ಎಂಬುದೆ ಈ ಸಮುದ್ರದಾಚೆಯ ಸಂಚಾರ ಕೈಗೊಂಡುದರ ಉದ್ದೇಶ. 'ಸಮುದ್ರದೀಚೆಯಿಂದ' 1957ರಲ್ಲಿ ಟೋಕಿಯೋದಲ್ಲಿ ಜರುಗಿದ P.E.N. ಕಾಂಗ್ರೆಸ್‌ಗೆ ಪ್ರತಿನಿಧಿಯಾಗಿ ಭೇಟಿಕೊಟ್ಟ ಸಂದರ್ಭದ ವಿಷಯ. ವಿಮಾನ ಪ್ರವಾಸ, ಪ್ರತಿನಿಧಿಗಳ ಸಹವಾಸ, ಹೋಟೆಲ್ ವಾಸ ಮೊದಲಾದ ಮಧುರ ವೃತ್ತಾಂತದೊಂದಿಗೆ ಪಾಂಡಿಚೇರಿ ಮಾತೆಯ ವರು ಹಿಂದೆ ಜಪಾನಿಗೆ ಹೋದಾಗ ಅಲ್ಲಿ ಕಿಯೋಟೋದಲ್ಲಿ ನಿಕಟಸ್ನೇಹ ಪಡೆದಿದ್ದ ಶ್ರೀಮತಿ ಕೊಬಾ ಯಾಶಿ ಅವರನ್ನು ಕಂಡು ಹಿಂದೆ ಮಾತೆಯವರು ವಾಸವಾಗಿದ್ದ ಆ ಸ್ಥಳಕ್ಕೆ ಭೇಟಿಕೊಟ್ಟು ಆ ಸನ್ನಿವೇಶ ಪ್ರೇರಣೆಯಿಂದ ರಚಿಸಿದ ಕವನಗಳು, ಈ ಎಲ್ಲ ವರ್ಣನೆ ಒಂದು ಅಂತರಂಗಸ್ಪರ್ಶಿಯಾದ ಭಾವಗೀತದಂತೆ ಮೂಡಿ ಬಂದಿದೆ. ಇದರೊಂದಿಗೆ ಜಪಾನ್ ದೇಶದ ಉದ್ಯಮಶೀಲ ಜನ, ಮನೆ ಮನೆಯೂ ಅಲ್ಲಿ ಒಂದು ಕೈಗಾರಿಕೆಯಾದ ಬಗೆ, ಜಪಾನೀಯರ ಜಹಗೀರಿ ಪದ್ಧತಿ, ಕೃಷಿ ವ್ಯವಸಾಯ, ಅವರ ಊಟ ಉಪಚಾರ, ವೇಷ-ಭಾಷೆ ಎಲ್ಲವನ್ನೂ ಕಂಡ ಕವಿದೃಷ್ಟಿ ಕೌತುಕಕಾರಿಯಾಗಿದೆ. ಮಿಸೆಸ್ ವೊಖಾವಾ ಜಪಾನಿ ಪದ್ಧತಿ ಯಲ್ಲಿ ಇವರನ್ನು ಸ್ವಾಗತಿಸಿದ ಬಗೆ ಮನೋರಂಜಕ. ಅಲ್ಲಿಯ ಅಲ್ಪೋ ಪಹಾರದ ವೈಶಿಷ್ಟ್ಯವೂ ಅಷ್ಟೇ ರಂಜಕ, ರೋಚಕ. ಪ್ರವಾಸ ಸಾಹಿತ್ಯ ಒಂದು ಶಿಕ್ಷಣವೂ ಹೌದು, ಶುದ್ಧ ಮನರಂಜನೆಯೂ ಹೌದು, ಸಾಹಿತ್ಯ ಪ್ರಚೋದನೆಯೂ ಹೌದು ಎಂಬ ಮಾತನ್ನು ಗೋಕಾಕರ ಪ್ರವಾಸ ಸಾಹಿತ್ಯ ಎತ್ತಿ ತೋರುತ್ತಿದೆ.

ಕವಿಯಾಗಿ, ಕಾದಂಬರಿಕಾರರಾಗಿ, ಪ್ರವಾಸ ಪ್ರಬಂಧಕಾರರಾಗಿ ಹೆಸರು ಮಾಡಿದ ವಿನಾಯಕರು ನಾಟಕ ರಂಗದಲ್ಲೂ ಪರಿಶ್ರಮ ಮಾಡಿದ್ದಾರೆ. ಇವರ 'ಜನನಾಯಕ' (1936), 'ಯುಗಾಂತರ'ಗಳು ರಂಗಭೂಮಿಯ ಯಶಸ್ವಿ ಪ್ರಯೋಗಗಳಾಗಿವೆ. 'ವಿಮರ್ಶಕ ವೈದ್ಯ' ನಗೆ ವಿಡಂಬನೆಗಳ ಮೂಲಕ ಸಮಾಜದ ಅಂಕುಡೊಂಕುಗಳನ್ನು ಒಂದಿಷ್ಟು ಅತಿ ರಂಜನೆಯಿಂದ ತಿದ್ದುವ 'ಸತ್ಯ ಹಾಗೂ ಔಚಿತ್ಯ'ಗಳ ತತ್ವವನ್ನು ಸಮರ್ಥಿಸುತ್ತದೆ. ನವೋದಯ ಪೂರ್ವದ ಷಟ್ಪದೀ ಕಾವ್ಯ ರಚನೆಯ ಹುಮ್ಮಸ್ಸು, ನವೋದಯ ಕಾಲದಲ್ಲೂ ಇರುವ ಅತಿ ರಮ್ಯತೆ ಮತ್ತು ಇತರ ಒರೆ ಕೋರೆಗಳೂ ಇಲ್ಲಿ ವಿಡಂಬನೆಗೆ ಪಕ್ಕಾಗಿವೆ.

ವಿನಾಯಕರ 'ಜನನಾಯಕ' ಶಕ್ತಿ-ವ್ಯಕ್ತಿಗಳ ನಡುವೆ ನಡೆದ ಚಿರಂತನ ಕಲಹವನ್ನು ಚಿತ್ರಿಸುತ್ತದೆ. ಹಳ್ಳಿಯ ದೇಸಾಯರ ದುಶ್ಯಕ್ತಿಯ ವಿರುದ್ಧ ಎದ್ದ ದಬ್ಬಾಳಿಕೆ, ಆತ್ಮಾಹುತಿಗಳ ದುರಂತ ನಾಟಕ ಇದು. ಸಾಮಾಜಿಕ ಪ್ರಜ್ಞೆಯನ್ನು ಬಡಿದೆಬ್ಬಿಸುವ ಈ ಆವಿದ್ಧ ಪ್ರಯೋಗ ವಸ್ತುನಿಷ್ಠ ವೈಚಾರಿಕ ನಾಟಕ. ಆದರೆ, ಇದರ ಹತ್ತು ವರ್ಷಗಳ ನಂತರ ರಚಿತವಾದ ವಿನಾಯಕರ 'ಯುಗಾಂತರ' ಭಾರತವು ಸ್ವಾತಂತ್ರ್ಯಸೂರ್ಯನ ಅರುಣೋದಯವನ್ನು ಕಾಣುತ್ತಿರುವ ಕಾಲದ ಒಂದು ಸಾಮಾಜಿಕ ಚಿತ್ರ. ನಾಯಕ ಕೋಸಲೇಂದ್ರನ ಸೌಂದರ್ಯೋ ಪಾಸನೆಯ ಕನಸುಣಿ ಕವಿದೃಷ್ಟಿಗೆ ವಿರುದ್ಧವಾಗಿ ನಾಯಿಕೆ ಮೃಣಾಲಿನಿ ಮಾರ್ಕ್ಸ್ ವಿಚಾರಗಳ ಒಂದು ಸಣ್ಣ ಕಾರಖಾನೆ. ಆಕೆಯ ಸಮಾಜವಾದಿ ವಿಚಾರಗಳು ಕೋಸಲೇಂದ್ರನ ಶ್ರದ್ಧೆ, ಪ್ರೇಮ, ಮಾನವತೆಯ ಕಲ್ಪನೆಗಳಿಗೆ ತೀರ ವ್ಯತಿರಿಕ್ತವಾದ ನಾಸ್ತಿಕತೆ, ವಾಸ್ತವಿಕತೆ, ಕಾರ್ಮಿಕತೆ ಗಳ ಒಂದು ಸಂತೆ. ಇಂದು ನಮ್ಮ ಸಮಾಜಕ್ಕೆ ಬೇಕಾಗಿರುವುದು ಇವೆರಡು ಆದರ್ಶಗಳ ಒಂದು ಸಮನ್ವಯ ಎಂಬುದೆ ನಾಟಕದ ಆಶಯ. ಅಂತೆಯೆ ಇದನ್ನು 'ಹೊಸ ಬಾಳಿನ ಸುಕುಮಾರ ಪ್ರಯೋಗ' ಎಂದು ಕರೆಯಲಾಗಿದೆ. ಇಲ್ಲಿ ಚಿತ್ರಿತವಾಗಿರುವುದು ಒಂದು ಬೌದ್ಧಿಕ ಸಮಸ್ಯೆಯೆಂಬುದಕ್ಕಿಂತ ಉಜ್ಜೀವನದ ಒಂದು ಪರಿ ಎಂಬ ನಾಟಕಕಾರರ ಆಶಯ ನಾಟಕದ ಆದರ್ಶವಾಗಿದೆ. 'ಮುನಿದರೆ ನಾರಿ' ಎಂಬ ನಾಲ್ಕು ದೃಶ್ಯಗಳ ಚಿಕ್ಕ ನಾಟಕವು ಒಂದು ಪ್ರಭಾವೀ ದುರಂತ. ರಾಮಣ್ಣನ ಹೆಂಡತಿ ಹಾದಿ ಬಿಟ್ಟವಳೆಂದು ಮಗಳನ್ನು ಶೀಲವಂತಳನ್ನಾಗಿ ಬೆಳೆಯಿಸ ಬೇಕೆಂದು ಬೇರೆಡೆ ಒಕ್ಕಲಾಗಿಟ್ಟರೆ ಆ ಬಾಡಿಗೆ ಮನೆಯ ಯಜಮಾನನೊಡನೆ ಆಕೆ ಸಲುಗೆ ಬೆಳೆಸಿ ರಾಮಣ್ಣನ ಎದೆಯೊಡೆಯುವ ಆವಿದ್ಧತೆಗೆ ಅವಕಾಶ ಮಾಡಿಕೊಡುತ್ತಾಳೆ.

ಪ್ರವಾಸ ಸಾಹಿತ್ಯ, ನಾಟಕ, ಕಾದಂಬರಿ ಹೊರತಾಗಿ ವಿನಾಯಕರ ಗದ್ಯ ಸಾಹಿತ್ಯ ಪ್ರಬಂಧಗಳು, ಪತ್ರಗಳು, ವಿಮರ್ಶೆ ಮೊದಲಾದ ಪ್ರಕಾರಗಳನ್ನೊಳ ಗೊಂಡಿದೆ. ಅವರ ಪ್ರಬಂಧಗಳು ಕೂಡ ವೈವಿಧ್ಯಮಯ. ಕೆಲವು ಚಿಂತನ ಪರವೂ, ವಸ್ತುನಿಷ್ಠವೂ ಆಗಿದ್ದರೆ ಇನ್ನು ಕೆಲವು ಭಾವನಾಪರವೂ, ವ್ಯಕ್ತಿನಿಷ್ಠವೂ ಆಗಿವೆ. ಗೋಕಾಕರು ಹಲವಾರು ವೇದಿಕೆಗಳಿಂದ ಹಲವಾರು ವಿಷಯಗಳನ್ನು ಕುರಿತು ಮಾಡಿದ ಶಾಸ್ತ್ರೀಯ, ಚಿಂತನಪರ, ವೈಜ್ಞಾನಿಕ, ವಿಮರ್ಶಾತ್ಮಕ, ತಾತ್ವಿಕ ಉಪನ್ಯಾಸಗಳದೇ ಒಂದು ಗಂಭೀರ ಪ್ರಬಂಧ ಪ್ರಕಾರವಾಗಿ ಕನ್ನಡ, ಇಂಗ್ಲಿಷ್ ಎರಡರಲ್ಲೂ ನಿರ್ಮಾಣವಾಗಿದೆ. 'ಅರ್ಪಣ ದೃಷ್ಟಿ' ಎಂಬ ದೀರ್ಘ ಉಪನ್ಯಾಸವೊಂದು ಭಕ್ತಿಸಾಹಿತ್ಯದ ತನ್ನದೇ ಆದ ಒಂದು ಪ್ರಬಂಧ ಪ್ರಕಾರವಾಗಿದೆ. ವಿನಾಯಕರ ಆತ್ಮಶ್ರದ್ಧೆ, ಭಕ್ತಿ, ವಿಶ್ವಾಸಗಳೆ ಇಲ್ಲಿಯ ಪ್ರಬಂಧ ಗಳಾಗಿವೆ. ವಿನಾಯಕರು ಕೆಲವು ಚರಿತ್ರ ಪ್ರಬಂಧಗಳನ್ನೂ ಬರೆದಿದ್ದಾರೆ. ಹಿಂದೆ 'ಜೀವನ' ಪತ್ರಿಕೆಯಲ್ಲಿ ಇವರು ಬರೆಯುತ್ತಿದ್ದ, ಇತರರಿಂದ ಬರೆಯಿಸುತ್ತಿದ್ದ ಕನ್ನಡ ಕೋಟೆ ಗಳನ್ನು ಕುರಿತ ಸುಂದರ ಪ್ರಬಂಧಮಾಲಿಕೆ ಇವರ ಸಂಪಾದಕತ್ವದಲ್ಲಿ 'ಇಂದಿನ ಕರ್ನಾಟಕ' ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಯಿತು. ಅದೇ ರೀತಿ ಅದೇ ಪತ್ರಿಕೆಯಲ್ಲಿ ಇದೇ ಲೇಖಕರು ಬರೆಯುತ್ತಿದ್ದ 'ವನಮಾಲಿಯ ಒಲವಿನ ಓಲೆಗಳು' ಎಂಬ ಪತ್ರ ಪ್ರಬಂಧಗಳು ಪರಿಷ್ಕೃತವಾಗಿ 'ಜೀವನ ಪಾಠಗಳು' ಎಂಬ ಶೀರ್ಷಿಕೆಯಲ್ಲಿ ಗ್ರಂಥಸ್ಥವಾಗಿ ಬಂದವು. 'ಚೆಲುವಿನ ನಿಲುವು' ಎಂಬ ಲಲಿತ ಪ್ರಬಂಧ ಸಂಕಲನ ಗೋಕಾಕರ ಗದ್ಯ ಬರವಣಿಗೆಯ ಬೆಡಗಿನ ಶೈಲಿಗೆ ಒಂದು ಮಾದರಿಯಾಗಿದೆ. ಇಲ್ಲಿಯ 'ದೈವ' ಎಂಬ ಪ್ರಬಂಧದಲ್ಲಿಯ ಅನುಭವ ಕಥನವಂತೂ ಅಂತಃಕರಣವನ್ನು ಸ್ಪರ್ಶಿಸುವ ಗದ್ಯ ಕಾವ್ಯವಾಗಿದೆ.

ವಿಮರ್ಶಾಶಾಸ್ತ್ರಕ್ಕೆ ವಿನಾಯಕರು ಅಮೋಘ ಕೊಡುಗೆಯನ್ನು ನೀಡಿ ದ್ದಾರೆ. ಅವರು ಕಾಲೇಜ್ ವಿದ್ಯಾರ್ಥಿಯಾಗಿದ್ದಾಗಲೆ ವಿಮರ್ಶೆಗೆ ತೊಡಗಿ ದರು. ಗೆಳೆಯರ ಗುಂಪಿನ 'ಜಯ ಕರ್ನಾಟಕ'ದ ಅವರ ಕುವೆಂಪು, ಶ್ರೀರಂಗ, ಕಾರಂತರ ಕೃತಿ ವಿಮರ್ಶೆಗಳು ಆಗಿನ ಪ್ರತಿಷ್ಠಿತ ಸಾಹಿತಿಗಳ ಗಮನ ಸೆಳೆದವು. ಅಲ್ಲಲ್ಲಿ ಕೆಲವು ವಿಮರ್ಶೆಗೆ ಒಂದಿಷ್ಟು ತೀವ್ರ ಪ್ರತಿಕ್ರಿಯೆಯೂ ಬಂತು.

ವಿಮರ್ಶಕನೆಂದರೆ ಕಾವ್ಯ ಸಾಹಿತ್ಯಗಳ ಸತ್ವ, ತತ್ವಗಳನ್ನು ಗುರುತಿಸಿ ಆ ಆಳತೆಗೋಲಿನಿಂದ ಕೃತಿಗಳ ವಸ್ತುನಿಷ್ಠ ಮೌಲೀಕರಣ ಮಾಡುವವ ಎಂಬುದು ಗೋಕಾಕರ ವಿಮರ್ಶನ ದೃಷ್ಟಿ. 'ಇಂದಿನ ಕನ್ನಡ ಕಾವ್ಯದ ಗೊತ್ತು ಗುರಿಗಳು' ಎಂಬ ಗ್ರಂಥದಲ್ಲಿ ಕಾವ್ಯ, ಸಾಹಿತ್ಯ, ಕಾವ್ಯದಲ್ಲಿ ವ್ಯಕ್ತಿತ್ವ ನಿರೂಪಣೆ, ಕಾವ್ಯ ದಲ್ಲಿ ಸ್ಫೂರ್ತಿ ಸಾಧನೆಗಳು, ಕಾವ್ಯದಲ್ಲಿ ಹಾಸ್ಯ ವಿಡಂಬನೆ ಎಂದು ಮೊದಲಾದ ವಿಷಯಗಳ ಶಾಸ್ತ್ರೀಯ ಚರ್ಚೆ ಇದೆ. 1974ರಲ್ಲಿ ಬೆಂಗಳೂರಿನಲ್ಲಿ ಗೋಕಾಕರ ನೇತೃತ್ವದಲ್ಲಿ ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದ ಒಂದು ಅಪೂರ್ವ ಶಿಬಿರವು ಜರುಗಿ, ಅಲ್ಲಿ ಮಂಡಿಸಲಾದ ಮೂವತ್ತೆರಡು ತತ್ವಗಳನ್ನು ಕುರಿತ ಪ್ರಬಂಧಗಳ ಸಂಗ್ರಹವು 'ವಿಮರ್ಶಾ ತತ್ವಗಳು ಮತ್ತು ಪ್ರಾಯೋಗಿಕ ವಿಮರ್ಶೆ' ಎಂಬ ಶೀರ್ಷಿಕೆಯಲ್ಲಿ ಅವರ ಸಂಪಾದಕತ್ವದಲ್ಲಿಯೆ ಪ್ರಕಟಗೊಂಡಿತು. ವಿನಾಯಕರು ಪಾಶ್ಚಾತ್ಯ ಹಾಗೂ ಪೌರ್‍ವಾತ್ಯ ರಸವಿಚಾರ ಮತ್ತು ಸೌಂದರ್ಯ ತತ್ವಗಳನ್ನು ಕುರಿತು ನಡೆಸಿದ ದೀರ್ಘ ಆಲೋಚನೆಗಳು ಇಂಗ್ಲಿಷ್‌ನಲ್ಲಿ 'An integral View of Poetry' ಎಂಬ ಅದ್ವಿತೀಯ ಸಮನ್ವಯ ದೃಷ್ಟಿಯ ವಿವೇಚನೆಯ ಗ್ರಂಥದಲ್ಲಿ ಚರ್ಚಿಸಲ್ಪಟ್ಟಿವೆ. ಕೋಲರಿಜ್‌ನ ರಸ ಶಾಸ್ತ್ರವನ್ನು ಕುರಿತ ಅವರ 'Coleridge's Aesthetics' (ಕವಿ ಕೋಲರಿಜ್‌ನ ರಸಶಾಸ್ತ್ರ) ಪ್ರಥಮ ಬಾರಿಗೆ ಕೋಲರಿಜ್‌ನ ಕಾವ್ಯ ವಿಮರ್ಶೆಯಲ್ಲಿಯ ವೈದಿಕ ದೃಷ್ಟಿಯ ಪ್ರಭಾವವನ್ನೂ, ಪರಾತ್ಪರ ತತ್ವದ ವಿವೇಚನೆಯನ್ನು ಸರಿಯಾಗಿ ಗುರುತಿಸಿ ಅರ್ಥೈಸುತ್ತದೆ. ಮನೋವೈಜ್ಞಾನಿಕ ತಳ ಹದಿಯ ಮೇಲೆ ರೂಪಿಸಲ್ಪಟ್ಟ ರಸಶಾಸ್ತ್ರದ ದಾರ್ಶನಿಕತೆಯನ್ನು ವಿಮರ್ಶಕ ಗೋಕಾಕರು ಸತ್ಯ ನಿಷ್ಠೆಯಿಂದ ವಿವರಿಸಿದ್ದಾರೆ. ಚತುರ್ಮುಖ ಸೌಂದರ್ಯವನ್ನು ಐಂದ್ರಿಯಕ ಸೌಂದರ್ಯ, ಕಲ್ಪನಾತ್ಮಕ ಸೌಂದರ್ಯ, ಬೌದ್ಧಿಕ ಸೌಂದರ್ಯ ಹಾಗೂ ಆತ್ಮಿಕ ಸೌಂದರ್ಯ ಎಂದು ಡಾ.ಗೋಕಾಕರು ಗುರುತಿಸಿರುವುದು ಕೀಟ್ಸ್, ಬ್ರೌನಿಂಗ್, ಮೇಸ್‌ಫೀಲ್ಡ್ ಮೊದಲಾದವರ ಆಲೋಚನೆಗಳನ್ನು ಅಳವಡಿಸಿಕೊಂಡು ಶ್ರೀ ಅರವಿಂದರ ಆತ್ಮಿಕ ಸೌಂದರ್ಯ ವಿಚಾರವನ್ನು ಎತ್ತಿ ಹಿಡಿದಿದೆ. 'ನವ್ಯತೆ' ಎಂಬ ವಿಮರ್ಶಾ ಪ್ರಬಂಧ ಸಂಕಲನದಲ್ಲಿ ನವ್ಯಕಾವ್ಯ ಜನಕರಾಗಿ ಡಾ. ಗೋಕಾಕರು ಹೇಳುವ ಕೊನೆಯ ಮಾತು, ವಿಚಾರಗಳೆಲ್ಲ ಹರಳುಗೊಂಡಿವೆ.

ವಿನಾಯಕರ ಇಂಗ್ಲಿಷ್ ಬರವಣಿಗೆಯ ಗುಣ, ಗಾತ್ರ, ಸತ್ವ ಸ್ವರೂಪ ಗಳನ್ನು ಗುರುತಿಸದೆ ವಿನಾಯಕ ಸಾಹಿತ್ಯ ಸಮೀಕ್ಷೆ ಪೂರ್ಣವೆನಿಸಲಾರದು. ವಿನಾಯಕರ ಕಾವ್ಯಶ್ರೀ ಅವತಾರವಾದುದು ಇಂಗ್ಲಿಷ್‌ನಲ್ಲಿಯೆ. ಬೇಂದ್ರೆ ಪ್ರೇರಣೆಯಿಂದಾಗಿ ಕನ್ನಡದಲ್ಲಿ ಕಾವ್ಯರಚನೆಗೆ ತೊಡಗಿ ಉಭಯ ಭಾಷಾ ಸವ್ಯಸಾಚಿ ಕವಿಯೆನಿಸಿದರು. Song of Life, In Life's Temple ಮತ್ತು Kashmir ಎಂಬ ಮೂರು ಕವನ ಸಂಗ್ರಹಗಳಲ್ಲಿ ಕೊನೆಯವೆರಡು ಮೂಲ ಕನ್ನಡದ ಅನುವಾದಗಳಾಗಿವೆ. 'ವಿನಾಯಕರ ಇಂಗ್ಲಿಷ್ ಅನುವಾದಗಳು ಕೇವಲ ಅವರ ರೂವಾರಿತನದ (technical accomplishment) ಲಕ್ಷಣ ವಲ್ಲ. ಅವರ ಕಾವ್ಯ ಜಾತಿಯೆ ಗಟ್ಟಿ ಬೆನ್ನೆಲವಿನ ಜಾತಿ'- ಎಂದು ಡಾ.ಶಂಕರ ಮೊಕಾಶಿ ಪುಣೇಕರ ಹೇಳುತ್ತಾರೆ (ವಿನಾಯಕ ವಾಙ್ಮಯ ಪು. 412). ಸೃಜನಶೀಲ ಗದ್ಯರಚನೆಯಲ್ಲಿ ಎದ್ದುಕಾಣುವ ಕೃತಿ ಅವರ 'Narahari the Prophet of New India' ಎಂಬ ಕಾದಂಬರಿ. ಇದು 'ಸಮರಸವೇ ಜೀವನ'ದ ಮುಂದುವರಿಕೆಯಾಗಿದ್ದರೂ ತನ್ನಷ್ಟಕ್ಕೆ ತಾನು ಸ್ವಯಂಪೂರ್ಣವಾಗಿದೆ. ಇಲ್ಲಿ ಮೂಲ ಪಾತ್ರಗಳೆಲ್ಲ ನರಹರಿ ಶಿಲ್ಪಿಸಿದ ನರ್ಮದಾ ತೀರದ ಪೂರ್ಣಜೀವನದ ಪ್ರತೀಕವಾಗಿದ್ದು 'ಪೂರ್ಣಕೇಂದ್ರ'ದಲ್ಲಿ ಒಂದುಗೂಡುತ್ತದೆ. ಗೋಕಾಕರ 'Bhagavan Sri Satya Sai Baba' ಎಂಬ ರಮ್ಯ ಬರವಣಿಗೆ ಸುಂದರವಾದ ಭಾವಗೀತೆಯಂತಿದೆ. ಗೋಕಾಕರ ಇಂಗ್ಲಿಷ್ ಶೈಲಿಯ ಹದ, ಹವಣಿಕೆಗಳ ಬೆಡಗನ್ನೂ ಇಲ್ಲಿ ಸಾಲು ಸಾಲಿಗೆ ಕಾಣುತ್ತೇವೆ. 'Sri Aurobindo, Seer and Poet' ಎಂಬ ಸ್ಫೂರ್ತಿದಾಯಕ ಗ್ರಂಥದಲ್ಲಿ 'What Sri Aurobindo means to me' ಎಂಬ ಅಧ್ಯಾಯವಂತೂ ಓದುಗನ ನರನರಗಳನ್ನೂ ನಲುಗಾಡಿಸಿಬಿಡುವಂತಹ ರೋಮಹರ್ಷಣೀಯವಾದ ಒಂದು ವ್ಯಕ್ತಿನಿಷ್ಠ ಪ್ರಬಂಧವಾಗಿದೆ. 'ಸಾವಿತ್ರಿ'ಯ ವಿವೇಚನೆಯಲ್ಲಿಯ 'ದಿವ್ಯಜೀವನ' ತತ್ವ ರಹಸ್ಯ, ಕಾವ್ಯ ವೈಖರಿ, ಸಾಂಕೇತಿಕತೆ, ಆಧ್ಯಾತ್ಮಿಕ ಮಹಾಕಾವ್ಯದ ಅದರ ಅಪೂರ್ವ ಲಕ್ಷಣಗಳು, ಸಾವಿತ್ರಿಯಲ್ಲಿ ದೈವದ ಪಾತ್ರ ಮೊದಲಾದ ವಿವೇಚನೆ ಶ್ರೇಷ್ಠ ಮಟ್ಟದ್ದಾಗಿದೆ. 'Sri Aurobindo made an epic of an episode in Vyasa with novel spiritual implications' ಎಂಬ ಒಂದು ಮಾತು ಗೋಕಾಕರ ವಿಮರ್ಶೆಯ ಜೀವಾಳವಾಗಿದೆ. ವರಕವಿ ಬೇಂದ್ರೆ ಅವರನ್ನು ಕುರಿತ 'Bendre, Poet and Seer' ಎಂಬ ರಸವತ್ತಾದ ಕೃತಿ-ಬೇಂದ್ರೆ ಯಾವ ಎತ್ತರ, ಬಿತ್ತರ, ಉತ್ತರೋತ್ತರಗಳಿಗೆ ಬೆಳೆದರು ಎಂಬ ಅವರ ವಿರಾಟ್ ಮೂರ್ತಿ ದರ್ಶನವನ್ನು ಹೆಚ್ಚಾಗಿ ಅವರ ಕವನಗಳ ಮೂಲಕವೆ ಅಳೆದು ತೋರಿದ್ದಾರೆ. ಬೇಂದ್ರೆ ಕವನಗಳ ಹಲವಾರು ಇಂಗ್ಲಿಷ್ ಅನುವಾದಗಳಲ್ಲಿ ಮೂಲದ ಗತ್ತು, ಲಯ, ಕುಣಿತ, ಭಾಷೆಯ ಬೆಡಗುಗಳು ಅಚ್ಚಳಿಯದಂತೆ ಬಂದಿವೆ. 'The Concept of Indian Literature' ಎಂಬ ವ್ಯಾಪಕ ಸಮೀಕ್ಷೆಯಲ್ಲಿ ಡಾ. ಗೋಕಾಕರು ಭಾರತೀಯ ಸಾಹಿತ್ಯಾಭ್ಯಾಸಿಗೆ ಒಂದು ಅವಿಸ್ಮರಣೀಯ ದಿಕ್‌ಸೂಚಕ ಗ್ರಂಥವನ್ನು ನೀಡಿದ್ದಾರೆ. ಇದರ ವಿವೇಚನಾ ರೀತಿ ಈ ಗ್ರಂಥಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ. 'India and World Culture', 'In defence of Jesus Christ and other Avtars', 'Some Aspects of Hindu Culture' ಎಂಬ ಗ್ರಂಥಗಳು ಹೆಚ್ಚಾಗಿ ಡಾ. ಗೋಕಾಕರ ಉಪನ್ಯಾಸ ಪ್ರಬಂಧಗಳಾಗಿದ್ದು ಭಾರತೀಯ ಸಂಸ್ಕೃತಿ, ಜಾಗತಿಕ ಸಂಸ್ಕೃತಿ - ಇವುಗಳ ತೌಲನಿಕ ವಿವೇಚನೆ, ಧರ್ಮದ ನಿಜವಾದ ತಿರುಳು, ಅವತಾರಗಳ ಸಾಂಕೇತಿಕ ಮಹತ್ವ, ritualsim ಮತ್ತು spiritualism - ಎಂಬ ಮೌಲ್ಯಗಳು ಈ ಮೇಲ್ಕಾಣಿಸಿದ ಗ್ರಂಥಗಳ ಗುರಿಗಳಾಗಿವೆ. 'A poetical approach to Language' ಇದು ಕೂಡ ಉಪನ್ಯಾಸಗಳ ಪ್ರಬಂಧಗಳೇ. ಭಾಷೆಯನ್ನು ಕಾವ್ಯದ ಹಾದಿಯಿಂದ ಹುಡುಕ ಹೊರಟರೆ ಭಾಷೆಯ ಕಾವ್ಯವನ್ನು ತನ್ನ ಒಡಲೊಳಗಿಟ್ಟುಕೊಂಡಿರುವುದು ಕಂಡುಬರುವುದು. ಈ ಮಾತನ್ನು ಸಮರ್ಥಿಸಲು ಮನೋರಂಜಕವಾದ ಉದಾಹರಣೆಗಳನ್ನಿಲ್ಲಿ ಕಾಣುತ್ತೇವೆ. ಈ ಗ್ರಂಥದ ರಚನೆಯ ಕಾವ್ಯಮಯ ಕಾವ್ಯಶಾಸ್ತ್ರಕ್ಕೆ ಮಹತ್ವದ ಕಾಣಿಕೆಯೆಂದರೆ ಡಾ. ಗೋಕಾಕರ 'An integral view of Poetry'. "Next to God Shakespeare is a great creator" ಎಂದು ನುಡಿವ ಡಾ. ಗೋಕಾಕರು ಯಾವ ಶ್ರದ್ಧೆಯಿಂದ ಷೇಕ್ಸ್‌ಪಿಯರ್‌ನನ್ನು ಕಂಡರು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಇದೇ ಶ್ರದ್ಧೆಯಿಂದಲೆ ಅವರು ಇಂಗ್ಲಿಷ್ ಮ್ಯೂಜನ್ನು ಒಲಿಸಿಕೊಂಡರು. ಇಂಗ್ಲಿಷ್ ಗದ್ಯದಲ್ಲಿಯೂ ಆ ಕಾವ್ಯಲಕ್ಷ್ಮಿಯನ್ನು ಪ್ರಸನ್ನಗೊಳಿಸಿದರು.

❑

# ದಿನಕರ ದೇಸಾಯಿ

ಜಿ. ಶಂಕರಯ್ಯ

ಕುಮಟ ತಾಲ್ಲೂಕಿನ ಅಂತರವಳ್ಳಿ ಗ್ರಾಮದ ಹಂಡದೊಕ್ಕಲ ದೇಸಾಯಿ ಮನೆತನಕ್ಕೆ ಸೇರಿದ, ಪ್ರಾಥಮಿಕ ಶಾಲಾಶಿಕ್ಷಕ ಶ್ರೀ ದತ್ತಣ್ಣ ಶ್ರೀ ದಿನಕರ ದೇಸಾಯಿ ಅವರ ತಂದೆ. ಜನನ 10-9-1909 ಅಂಕೋಲೆಯಲ್ಲಿ. ಶ್ರೀ ದೇಸಾಯಿ ಅವರು ಮೊದಲು ಅಲಗೇರಿಯಲ್ಲಿ ಮೂರು ವರ್ಷಗಳೂ, ನಂತರ ಕಾರವಾರ ಮತ್ತು ಅಂಕೋಲೆಯಲ್ಲಿಯೂ ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿ ಬೆಂಗಳೂರಿನಲ್ಲಿ ಆಗ ತಾನೆ ಪ್ರಾರಂಭವಾದ ಇಂಟರ್‌ಮಿಡಿಯಟ್ ಕಾಲೇಜಿನ ಪ್ರಥಮ ತಂಡದ ವಿದ್ಯಾರ್ಥಿಯಾಗಿ ಸೇರಿಕೊಂಡರು. ಆಗ ಅವರಿಗೆ ಶ್ರೀ ವಿ. ಸೀತಾರಾಮಯ್ಯ ಅವರು ಕನ್ನಡ ಅಧ್ಯಾಪಕರಾಗಿದ್ದರು. ಅಲ್ಲಿಂದ ಮುಂದಕ್ಕೆ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ತಮ್ಮ ಪದವಿ ವಿದ್ಯಾಭ್ಯಾಸವನ್ನು ಮುಂದುವರೆಸಿದರು. ಅವರು ತಮ್ಮ ಬಿ.ಎ. ಪದವಿಗೆ ಆರಿಸಿಕೊಂಡ ವಿಷಯಗಳು ರಾಜ್ಯಶಾಸ್ತ್ರ, ಇತಿಹಾಸ ಮತ್ತು ಕನ್ನಡ. ಅಲ್ಲಿಯೂ ಕನ್ನಡದಲ್ಲಿ ವಿಶೇಷ ಆಸಕ್ತಿಯನ್ನು ತೋರಿಸುತ್ತಿದ್ದ ಅವರಿಗೆ ಶ್ರೀ ಟಿ.ಎಸ್. ವೆಂಕಣ್ಣಯ್ಯ ಗುರುಗಳಾಗಿ ದೊರೆತರು. ಬಿ.ಎ. ಪದವಿ ಪರೀಕ್ಷೆಯಲ್ಲಿ ಅವರು ಪ್ರಥಮ ವರ್ಗದಲ್ಲಿ ಉತ್ತೀರ್ಣರಾದರಲ್ಲದೇ 'ಚಾಂಡಿ ಪಾರಿತೋಷಕ'ವನ್ನು ಪಡೆದರು. ಮುಂಬೈ ವಿಶ್ವವಿದ್ಯಾನಿಲಯದಿಂದ 1931ರಲ್ಲಿ ಶ್ರೀ ದೇಸಾಯಿ ಅವರು ಎಂ.ಎ. ಪದವಿಯನ್ನು ಪಡೆದರಲ್ಲದೆ ಕಲ್ಯಾಣಿ ಚಾಲುಕ್ಯರನ್ನು ಕುರಿತು ವಿದ್ವತ್‌ಪೂರ್ಣ ಪ್ರಬಂಧವನ್ನು ರಚಿಸಿದರು. ಅಲ್ಲದೆ ಮರುವರ್ಷವೇ ಕಾನೂನು ಪದವಿ ಪಡೆದರು.

ಅವರಿಗೆ ವಿದ್ಯಾರ್ಥಿದೆಸೆಯಿಂದಲೂ ಕನ್ನಡದ ಬಗ್ಗೆ ವಿಶೇಷವಾದ ಆಸಕ್ತಿಯಿದ್ದು ಅವರು ಅಂಕೋಲೆಯ ಎಡ್ವರ್ಡ್ ಹೈಸ್ಕೂಲಿನಲ್ಲಿ ಓದುತ್ತಿದ್ದಾಗಲೇ ಕಮಟಾದಿಂದ ಪ್ರಕಾಶಿತವಾಗುತ್ತಿದ್ದ ಶ್ರೀ ರಾಮಗಣೇಶ ಯಾಜಿ ಅವರು ಸಂಪಾದಕರಾಗಿದ್ದ 'ಕಾನಡಾ ಧುರೀಣ' ವಾರಪತ್ರಿಕೆಯಲ್ಲಿ ಕೆಲವು ಕವನಗಳನ್ನು ಪ್ರಕಟಿಸಿದ್ದರು. ಅವರ ಕನ್ನಡ ಪ್ರೇಮಕ್ಕೆ ಮುಂದೆ ಬೆಂಗಳೂರಿನಲ್ಲಿ ಶ್ರೀ ವಿ.ಸೀ. ಅವರಿಂದಲೂ ವಿಶೇಷವಾದ ಪ್ರೋತ್ಸಾಹ ದೊರೆಯಿತು. ಅವರು ಇಂಟರ್‌ಮೀಡಿಯಟ್ ಓದುತ್ತಿದ್ದ ಸಂದರ್ಭದಲ್ಲಿ ಧಾರವಾಡದಿಂದ ಶ್ರೀ ಆಲೂರರ ನೇತೃತ್ವದಲ್ಲಿ ಪ್ರಕಾಶಿತವಾಗುತ್ತಿದ್ದ 'ಜಯಕರ್ನಾಟಕ' ದಲ್ಲಿ ಕವನಗಳನ್ನು ಬರೆಯುತ್ತಿದ್ದರು. ಮೈಸೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಶ್ರೀ ಬಿ.ಎಂ.ಶ್ರೀ ಅವರು ತಂದ 'ಕಿರಿಯರ ಕಾಣಿಕೆ' ಕವನ ಸಂಗ್ರಹದಲ್ಲಿ ಇವರ ನಾಲ್ಕು ಕವನಗಳು ಪ್ರಕಟವಾದವು. ಆ ವೇಳೆಗೆ ಶ್ರೀ ಅವರ 'ಇಂಗ್ಲಿಷ್ ಗೀತೆ'ಗಳು ಪ್ರಕಟವಾಗಿದ್ದು ಉತ್ಸಾಹಿ ಯುವಕರಾದ ಶ್ರೀ ದೇಸಾಯಿ ಅವರ ಮೇಲೆ ವಿಶೇಷ ಪ್ರಭಾವವನ್ನು ಬೀರಿತು. ಈ ಅವಧಿಯಲ್ಲಿ ಬರೆದ ಅವರ ಕೆಲವು ಕವನಗಳು ಸಾಕಷ್ಟು ಉತ್ತಮ ಮಟ್ಟದವುಗಳಾಗಿದ್ದವು. ಕೆಲವಂತೂ ಮುಂದೆ 1950ರಲ್ಲಿ ಪುಸ್ತಕರೂಪದಲ್ಲಿ ಪ್ರಕಟವಾದಾಗ ಜನಪ್ರಿಯವೂ ಅನ್ನಿಸಿಕೊಂಡವು. ಇಷ್ಟಾದರೂ ಶ್ರೀ ದೇಸಾಯಿ ಅವರು ಕಾನೂನು ಪದವಿಯನ್ನು ಪಡೆದಂದಿನಿಂದ 1950ರ ವರೆಗೆ ಹೆಚ್ಚಿನ ಸಾಹಿತ್ಯಕೃಷಿಯನ್ನೇನೂ ಮಾಡಿದಂತೆ ಕಂಡುಬರುವುದಿಲ್ಲ. ಈ ಅವಧಿಯಲ್ಲಿ ಅವರು ತಮ್ಮನ್ನು ತಾವು ಸಂಪೂರ್ಣವಾಗಿ ಸಮಾಜಸೇವೆ ಹಾಗೂ ಕಾರ್ಮಿಕ ಸಂಘಟನೆಗಳ ಕಾರ್ಯದಲ್ಲಿ ಅರ್ಪಿಸಿಕೊಂಡಿರುವುದು ಕಂಡುಬರುತ್ತದೆ. 1931ರಲ್ಲಿ ಕಾನೂನು ಪದವಿಯನ್ನು ಪಡೆದ ಅವರು ಬೆಳಗಾವಿಯಲ್ಲಿ ವಕೀಲಿ ವೃತ್ತಿಯನ್ನು ಮಾಡಿದರು. ಅಲ್ಲಿಯೇ ಅವರು 1937ರಲ್ಲಿ ವಿವಾಹವಾದರು. 'ಇಂದು' ಧರ್ಮಪತ್ನಿಯ ಹೆಸರು.

ಶ್ರೀ ದೇಸಾಯಿ ಅವರು ಶ್ರೀ ಗೋಖಲೆ ಅವರಿಂದ ಸ್ಥಾಪಿತವಾಗಿದ್ದ 'ಭಾರತ ಸೇವಾ ಸಮಾಜ'ದ ಕಡೆಗೆ ಆಕರ್ಷಿತರಾಗಿ 1935ರಲ್ಲಿ ಅದರ ಸದಸ್ಯರಾಗ ಬಯಸಿದರಾದರೂ ಅದು ಅಷ್ಟು ಸುಲಭವಾಗಿ ಕೈಗೂಡಲಿಲ್ಲ. ಅದಕ್ಕಾಗಿ ಅವರು ವಿಶೇಷ ಪ್ರಯತ್ನವನ್ನೇ ಮಾಡಬೇಕಾಗಿ ಬಂತು. ಕೇಂದ್ರ ಅಸೆಂಬ್ಲಿಯ ಸದಸ್ಯರಾದ ಶ್ರೀ ಎನ್.ಎಂ. ಜೋಶಿ ಅವರು ಇವರನ್ನು ದೆಹಲಿಗೆ ಕರೆದುಕೊಂಡು ಹೋಗಿ ಅಸೆಂಬ್ಲಿ ಗ್ಯಾಲರಿಯಲ್ಲಿ ಕಾರ್ಯಕಲಾಪದ ವೇಳೆಯಲ್ಲಿ ಕುಳ್ಳಿರಿಸಿ ಕಂಡದ್ದನ್ನು 'ಬರೆ' ಎಂದು ಹೇಳಿದರು. ಇವರು ತಾವು ಅಲ್ಲಿ ಕಂಡದ್ದನ್ನು ಸುಮಾರು 40 ಲೇಖನಗಳಲ್ಲಿ ಬರೆದರು. ಅವೆಲ್ಲಾ 'ಸಂಯುಕ್ತ ಕರ್ನಾಟಕ'ದಲ್ಲಿ ಹಾಗೆಯೇ ಪ್ರಕಟವಾದವು. ಜೋಶಿ ಇದನ್ನು ಮೆಚ್ಚಿಕೊಂಡ ಕಾರಣವಾಗಿ ಹಾಗೂ ಬೆಳಗಾವಿ ಜಿಲ್ಲೆಯ ಗೋಕಾಕದ ಗಿರಣಿ ಕಾರ್ಮಿಕರ ಸಂಪನ್ನು ನಾಲ್ಕಾರು ತಿಂಗಳು ಅತ್ಯಂತ ಉಚಿತವಾಗಿ ನಿರ್ವಹಿಸಿಕೊಂಡು ಹೋದ ಸಲುವಾಗಿ ಇವರಿಗೆ ಭಾರತ ಸೇವಾ ಸಮಾಜದ ಆಜೀವ ಸದಸ್ಯತ್ವ ದೊರೆಯಿತು. 1936ರಲ್ಲಿ ಶ್ರೀ ದೇಸಾಯಿ ಅವರು ಮುಂಬೈ ಹಡಗು ಕೆಲಸಗಾರರ ಸಂಘಟನೆಗೆ ತೊಡಗಿದರು. ಅದನ್ನು ಭಾರತದಲ್ಲೇ ಅತ್ಯಂತ ದೊಡ್ಡದಾದ ಕಾರ್ಮಿಕ ಸಂಘಟನೆಯಾಗಿ ಸ್ಥಾಪಿಸಿ ಯಶಸ್ಸು ಪಡೆದರು. ಮುಂದೆ ಮುಂಬೈ ಪ್ರಾಂತೀಯ ಟ್ರೇಡ್ ಯೂನಿಯನ್ ಕಾಂಗ್ರೆಸಿನ ಪದಾಧಿಕಾರಿಯಾದರು. ಹಿಂದ್ ಮಜ್‌ದೂರ್ ಸಭಾದ ಪ್ರಧಾನ ಕಾರ್ಯದರ್ಶಿಯಾದರು. ಮುಂಬೈಯನ್ನೇ ತಮ್ಮ ಮನೆಯನ್ನಾಗಿ ಮಾಡಿ ಕೊಂಡ ಇವರು 1948ರಿಂದ 62ರ ವರೆಗೆ ಸತತವಾಗಿ ಮುಂಬೈ ನಗರ ಸಭೆಯ ಸದಸ್ಯರಾಗಿದ್ದರು. 1952ರಲ್ಲಿ ಲೋಕಸಭೆಗೆ ಸ್ಪರ್ಧಿಸಿ ಸೋತರೂ 1967ರಲ್ಲಿ ಚುನಾಯಿತರಾದರು. 1945-46ರಲ್ಲಿ ಹಾಗೂ 1959ರಲ್ಲಿ ಇವರು ಅಮೆರಿಕ, ಇಂಗ್ಲೆಂಡ್, ಯೂರೋಪುಗಳಲ್ಲಿ ಕಾರ್ಮಿಕರ ಸಂಘಗಳ ಪ್ರತಿನಿಧಿಯಾಗಿ ವಿಶೇಷವಾದ ಪ್ರವಾಸಗಳನ್ನು ಕೈಗೊಂಡರು. ಈ ಮಧ್ಯೆ 1940ರಲ್ಲಿ ಸ್ವಂತ ಜಿಲ್ಲೆಯಾದ ಉತ್ತರ ಕನ್ನಡದಲ್ಲಿ ರೈತರ ಸಂಘಟನೆಗಾಗಿ ದುಡಿದರು. 1942ರಲ್ಲಿ ಬಿಜಾಪುರದಲ್ಲುಂಟಾದ ಭೀಕರ ಕ್ಷಾಮದ ಮೇಲ್ವಿಚಾರಣೆಯನ್ನು ನೋಡಿಕೊಂಡರು. 1953ರಲ್ಲಿ ಅಂಕೋಲೆಯಲ್ಲಿ 'ಕೆನರಾ ವೆಲ್‌ಫೇರ್ ಟ್ರಸ್ಟ್' ಒಂದನ್ನು ಸ್ಥಾಪಿಸಿ ಜಿಲ್ಲೆಯ ವಿದ್ಯಾಭಿವೃದ್ಧಿಗೆ ಪ್ರೋತ್ಸಾಹ ನೀಡಿದರು. ಆ ಸಂಸ್ಥೆ ಇಂದು ಎರಡು ಪ್ರಥಮ ದರ್ಜೆ ಕಾಲೇಜು ಮತ್ತು ಹದಿನೈದು ಹೈಸ್ಕೂಲ್‌ಗಳನ್ನು ಯಶಸ್ವಿಯಾಗಿ ನಡಸುತ್ತಿದೆ. ಇದೇ ಸಂದರ್ಭದಲ್ಲಿಯೇ ಅವರು 'ಜನಸೇವಕ' ಪತ್ರಿಕೆಯನ್ನು ಸ್ಥಾಪಿಸಿದರು. ಭಾಷಾವಾರು ಪ್ರಾಂತ ರಚನೆಯ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದರು. 'ಭಾರತೀಯ ಪ್ರಾಥಮಿಕ ಶಿಕ್ಷಣ' ಮತ್ತು 'ಕೂಲಿಕಾರರ ಸಮಸ್ಯೆಗಳು' ಎಂಬ ಎರಡು ಪುಸ್ತಕಗಳನ್ನು ಇಂಗ್ಲಿಷಿನಲ್ಲಿ ಬರೆದು ಪ್ರಕಟಿಸಿದರು. ಹೀಗೆ ಮೂಲತಃ ಕವಿಯಾದ ಶ್ರೀ ದೇಸಾಯಿ ಅವರು ರಾಜಕಾರಣ, ಸಮಾಜಸೇವೆ, ಕಾರ್ಮಿಕ ಸಂಘಟನೆಗಳ ಸುಳಿಯಲ್ಲಿ ಸಿಕ್ಕಿಕೊಂಡು 1935ರಿಂದ ತಮ್ಮ ಕೊನೆಗಾಲದವರೆಗೂ ತಮ್ಮ

ಆದರ್ಶಗಳ ಸಾಧನೆಗೆ ಅನವರತ ಶ್ರದ್ಧೆ, ಆಸಕ್ತಿಗಳಿಂದ ದುಡಿದರು. ರಾಜಕಾರಣದಲ್ಲಿ ಪ್ರಗತಿಯಾಗಬೇಕಾದರೆ ಸಾಮಾಜಿಕ ನ್ಯಾಯ ಮತ್ತು ಜನತಂತ್ರ ಜನಜೀವನದಲ್ಲಿ ಹಾಸುಹೊಕ್ಕಾಗಿ ಸೇರಬೇಕು ಎಂದು ನಂಬಿದ ಅವರು ಸಮಾಜವಾದೀ ವ್ಯವಸ್ಥೆಯನ್ನು ವಿಶೇಷವಾಗಿ ನಂಬಿದ್ದರು. ಸಮತೆ, ಸಮೃದ್ಧಿಯ ಕನಸನ್ನು ಕಟ್ಟಿಕೊಂಡು ನಿರಂತರ ಕಾರ್ಯಶೀಲರಾಗಿ ದುಡಿದರು. ಎಲ್ಲಿಯೂ ಅವರು ಅಸಡ್ಡೆ, ಅಶಿಸ್ತುಗಳನ್ನು ಸಹಿಸರು. ಸಮಾಜದಲ್ಲಿ ಅವರು ಕಂಡ, ಅನುಭವಿಸಿದ ಅನೀತಿ, ಅಶ್ರದ್ಧೆ, ಭ್ರಷ್ಟಾಚಾರ ಇವುಗಳಿಗಾಗಿ ನೊಂದರು. ರಾಜಕೀಯ ಮುಂದಾಳುಗಳ ಅಯೋಗ್ಯ ವರ್ತನೆಗೆ ಸಿಡಿದೆದ್ದರು. ಅವರ ಮನಸ್ಸಿನ ಉದ್ವಿಗ್ನತೆ ಅವರ ಭಾಷಣಗಳಲ್ಲಿ ಎದ್ದುಕಾಣುತ್ತಿತ್ತು. ಅಂತೆಯೇ ಶ್ರೀ ದೇಸಾಯಿ ಅವರು ಈ ರಾಜಕೀಯ ಬ್ರಷ್ಟಾಚಾರ, ಸಾಮಾಜಿಕ ಅನ್ಯಾಯಗಳನ್ನು ಅನಾವರಣಗೊಳಿಸಲು ಲೇಖನಿಯನ್ನು ಉಪಯೋಗಿಸಿದರು. ಚುಟುಕುಗಳು ಮೈತಳೆದವು. ಎಲ್ಲೆಲ್ಲಿಯೂ ವ್ಯಾಪಿಸಿರುವ ಹುಳುಕರನ್ನು, ಹುಳುಕನ್ನು ಅನೀತಿ, ಅನಾಚಾರಗಳನ್ನು ನೇರವಾಗಿ, ಮಾರ್ಮಿಕವಾಗಿ, ಹಾಸ್ಯವಾಗಿ ವ್ಯಥೆತುಂಬಿದ ಧ್ವನಿಯಲ್ಲಿ ಓದುಗರ ಮುಂದಿಟ್ಟರು.

1957ರಲ್ಲಿ ಅವರು ಚುಟುಕುಗಳನ್ನು ಬರೆಯಲು ಪ್ರಾರಂಭಿಸುವುದಕ್ಕೆ ಮೊದಲೇ ತಮ್ಮ ಸಾರ್ವಜನಿಕ ಸೇವೆಯಲ್ಲಿ ಬಿಡುವು ಮಾಡಿಕೊಂಡು ಎಂಬಂತೆ 1950ರಲ್ಲಿ 69 ಕವಿತೆಗಳ ಸಂಕಲನವಾದ 'ಕವನ ಸಂಗ್ರಹ' ವೊಂದನ್ನು ಪ್ರಕಟಿಸಿದರು. ಇಲ್ಲಿಯ 'ದೀನಗಿಂತ ದೇವ ಬಡವ' ಮತ್ತು 'ಬಂಗಾಳದ ಬರಗಾಲ' ಮೊದಲಾದ ಪದ್ಯಗಳು ಅತ್ಯಂತ ಜನಪ್ರಿಯವನ್ನಿಸಿ ಕೊಂಡವು. 1958ರಲ್ಲಿ ಪ್ರಕಟವಾದ 'ಹೂಗೊಂ ಚಲು' ಕವನ ಸಂಕಲನದ 'ಹಿನ್ನುಡಿ', 'ಸಂಸಾರದ ಭಾಗ್ಯ', 'ಗಡಿಯಾರ', 'ತರುಣರ ದಸರೆ' ಮೊದಲಾದ ಮಕ್ಕಳ ಪದ್ಯಗಳು ಜನಪ್ರಿಯವಾದವು. ಮಕ್ಕಳಿಗಾಗಿಯೇ ಮೀಸಲಾದ 'ಮಕ್ಕಳ ಗೀತೆಗಳು' ಮತ್ತು 'ಮಕ್ಕಳ ಪದ್ಯಗಳು' ಮಕ್ಕಳ ಮನಸ್ಸನ್ನು ಸೂರೆಗೊಳ್ಳುತ್ತವೆ.

ಈ ಎರಡೂ ಕವನ ಸಂಕಲನಗಳ ಪದ್ಯಗಳು ಕಂದ, ವೃತ್ತ ಮೊದಲಾದ ಹಳೆಯ ಛಂದಗಳಲ್ಲಿ ರಚಿತವಾಗಿದ್ದರೂ ಭಾವನಿರ್ಭರತೆ ಸಹಜಾಭಿವ್ಯಕ್ತಿ ಇವುಗಳಲ್ಲಿ ಎದ್ದುಕಾಣುತ್ತದೆ. 'ಹೂಗೊಂಚಲಿಗೆ' ಪ್ರಸ್ತಾವನೆ ಬರೆಯುತ್ತಾ "ಇಲ್ಲಿ ನವ್ಯತೆ ಇಲ್ಲ ಆದರೆ ಆಧುನಿಕತೆ ಮತ್ತು ಪ್ರಗತಿಶೀಲತೆ ಇದೆ" ಎಂದಿದ್ದಾರೆ. ನಿಜವಾದ ಕಾವ್ಯ, ಅವರ ದೃಷ್ಟಿಯಲ್ಲಿ ಅದೆಂದಿಗೂ ಹಳತಾಗುವುದಿಲ್ಲ, ಮಾಸುವುದಿಲ್ಲ. ಬೇಕೆಂದೇ ಫ್ಯಾಷನ್ನಿಗಾಗಿ 'ಮಾರ್ಗ', 'ತಂತ್ರ' ಗಳನ್ನು ಅಳವಡಿಸಿಕೊಳ್ಳುವ ಕವಿಗಳ ಬಗೆಗೆ ಅವರಿಗೆ ಸಹಾನುಭೂತಿಯಿಲ್ಲ. ಕಾವ್ಯ ಯಾವುದೇ ಪದ್ಧತಿಗೆ ಕಟ್ಟುಬೀಳದೆ ಹೃದಯದಿಂದ ಸಹಜವಾಗಿ ಮೂಡಿಬಂದುದಾಗಿರಬೇಕು.

ಕುರುಡು ಸಂಪ್ರದಾಯದ ಬಗೆಗೆ ಅವರ ವಿರೋಧವಿದೆ. ಸಾಮಾಜಿಕ ಅನ್ಯಾಯ, ಅಸಮಾನತೆಗಳಿಗಾಗಿ ರೋಷವಿದೆ. ಸುತ್ತಮುತ್ತಿನ ಅನ್ಯಾಯ, ಅನಾಚಾರಗಳಿಗೆ ಸಿಡಿದೆದ್ದ ಅವರ ಪ್ರತಿಕ್ರಿಯೆಗೆ ಚುಟುಕ ಸೊಗಸಾದ ಅಭಿವ್ಯಕ್ತಿ ಸ್ವರೂಪವನ್ನು ನೀಡುತ್ತದೆ. ಅವರೇ ಹೇಳುವಂತೆ ದೀರ್ಘ ಕವನಗಳನ್ನು ಬರೆಯಲು ಅವರಿಗೆ ಬೇಸರ. ಕವನ ಚಿಕ್ಕದಾದಷ್ಟು ಚೊಕ್ಕವಾಗುತ್ತದೆ, ಮೆಚ್ಚಿಕೆಯಾಗುತ್ತದೆ. 'ಕವನ ಸಂಗ್ರಹ'ದಲ್ಲಿ ಚುಟುಕುಗಳು ಇಲ್ಲ. ಆದರೆ ಹೂಗೊಂಚಲಲ್ಲಿ ಅವುಗಳ ವಿಭಾಗವೇ ಇದೆ. ಅವರು 1957ರಿಂದೀಚೆಗೆ ಚುಟುಕಗಳನ್ನು ಬರೆಯಲು ಪ್ರಾರಂಭಿಸಿ ಬೆಳೆಸಿದರು ಎನ್ನಬೇಕು. ಈ ಮೊದಲು ಚುಟುಕಗಳನ್ನು ಹೋಲುವ ಕಿರುನುಡಿಗಳು, ಪದ್ಯಗಳು ಇರಲಿಲ್ಲವೆಂದಲ್ಲ, ಹಲವಾರು ವೀರಶೈವ ವಚನಕಾರರ ವಚನಗಳು ಚುಟುಕದ ಭಾವತೀವ್ರತೆ, ವಿಡಂಬನೆ, ರೋಷಾವೇಶಗಳನ್ನು, ಅಸಹಿಸ್ಣುತೆ ಗಳನ್ನು ಸಹಜವಾಗಿಯೇ ಪ್ರತಿಬಿಂಬಿಸುತ್ತವೆ. ಅಲ್ಲದೆ ಸರ್ವಜ್ಞ ವಚನ ಗಳನ್ನೂ ಇದೇ ಜಾತಿಯವು ಎನ್ನಬಹುದು. ಈ ಗುಂಪಿಗೆ ಸುಭಾಷಿತಗಳನ್ನು ಸೇರಿಸಬಹುದೇನೋ. ಶ್ರೀ ದೇಸಾಯಿ ಅವರು ಇವುಗಳೆಲ್ಲದರಿಂದಲೂ ಸ್ಫೂರ್ತಿಯನ್ನು ಪಡೆದಿದ್ದಾರೆ. ಅಲ್ಲದೆ ಬ್ಲೇಕ್ ಕವಿಯ ಪ್ರಭಾವವೂ ಇವರ ಮೇಲೆ ಅಪಾರವಾಗಿ ಆಗಿದೆ.

ಆದರೆ ಇಲ್ಲಿ ಎಚ್ಚರದಿಂದ ಗಮನಿಸಬೇಕಾದ ಒಂದು ಅಂಶವೆಂದರೆ ಸರ್ವಜ್ಞನ ವಚನಗಳು ಅಥವಾ ವಚನಕಾರರ ವಚನಗಳಲ್ಲಿ ಅಭಿವ್ಯಕ್ತ ವಾಗಿರುವ ಭಾವನೆಗಳೂ ಸಾಮಾಜಿಕ ಅನ್ಯಾಯಗಳ ಪ್ರತಿಕ್ರಿಯೆಗಳೇ ಆಗಿದ್ದರೂ ಅವು ಕೇವಲ ಪ್ರತಿಕ್ರಿಯೆಗಳಷ್ಟೇ ಅಲ್ಲ, ಆಳವಾದ ಅನುಸಂಧಾನ, ಅಭಿವ್ಯಕ್ತಿಯ ಕಾವ್ಯಮಯತೆ ಹಾಗೂ ರಸಜ್ಞತೆಗಳು ಅಲ್ಲಿ ಎದ್ದು ಕಾಣುತ್ತವೆ. ಆ ಮಟ್ಟದ ಅಭಿವ್ಯಕ್ತಿ ದೇಸಾಯಿ ಅವರಲ್ಲಿ ಕಡಿಮೆ ಎನ್ನದೆ ವಿಧಿಯಿಲ್ಲ. ಕಾರಣ ದೇಸಾಯಿ ಅವರ ಅಭಿವ್ಯಕ್ತಿ ಹಸಿಅಭಿವ್ಯಕ್ತಿ; ಕಂಡೊಡನೆ ಕಂಡರಿಸುವ ಕಾತರದ ಕೈಂಕರ್ಯ. ಹೃದಯದಲ್ಲಿ ನಾಂದು ತಾವಾಗಿಯೇ ಮೈ ಪಡೆದ ಅಭಿವ್ಯಕ್ತಿಗಳನ್ನಿಸದೇ ಮನಸ್ಸಿನ ಮಟ್ಟದಿಂದಲೇ ಮೇಲೆ ಹಾಯ್ದು ನುಡಿಗಿಡಿ ಗಳಾಗಿವೆ. ಉದಾಹರಣೆಗೆ ಬಸವಣ್ಣನವರ 'ಕಲ್ಲ ನಾಗರ ಕಂಡರೆ ಹಾಲನೆರೆ ಯೆಂಬರು; ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ', 'ಕನ್ನಡಿಯ ನೋಡುವ ಅಣ್ಣಗಳಿರಾ ಜಂಗಮವ ನೋಡಿರೇ', 'ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ' ಮೊದಲಾದ ಅನೇಕಾನೇಕ ವಚನಗಳಲ್ಲಿ ಸಾಮಾಜಿಕ ಮೂಡನಂಬಿಕೆ, ಸ್ವಾನು ರಕ್ತಿಗಳನ್ನು ಖಂಡಿಸುವುದು, ಸಮಾಜದ ಅನೇಕ ರೋಗಗಳನ್ನು ಕುರಿತು ತೀವ್ರವಾದ ಆಶಂಕೆ, ಭಯ, ಉದ್ವಿಗ್ನತೆಗಳನ್ನು ಕಡೆಗೆ ಕೋಪ, ತಾಪಗಳನ್ನು ವ್ಯಕ್ತಪಡಿಸುವುದು, ವಿಡಂಬನೆಯ ಉಪಯೋಗವನ್ನು ಅಷ್ಟೇ ಹರಿತವಾಗಿ ಉಪಯೋಗಿಸಿಕೊಂಡಿರುವುದು ಸ್ಪಷ್ಟವಾಗುತ್ತದೆ. ಆದರೆ ಇಲ್ಲಿ ಆ ಭಾವಗಳೆಲ್ಲಾ ಆಳದಿಂದ, ಅನುಕಂಪೆಯಿಂದ, ಶ್ರೇಯೋಭಿಲಾಷೆ ಯಿಂದ ಹರಿದುಬಂದಿದೆ. ಈ ಭಾವತೀವ್ರತೆ ದೇಸಾಯಿ ಅವರ ಚುಟುಕುಗಳಲ್ಲಿ ಕಂಡುಬರು ತ್ತದೆ. ಆದರೆ ಇವುಗಳ ವೈಶಿಷ್ಟ್ಯವಿರುವುದು ಬೇರೆ ದೃಷ್ಟಿಯಲ್ಲಿ. ಇವರ ಚುಟುಕಗಳ ತೀವ್ರತೆ, ಮೊನಚು, ಒಗಚು, ಖಾರ, ಹರಿತ ಅಪಾರ. ಮಾತಿನ ಮೋಡಿ ಬೆಡಗು ಸಾಕಷ್ಟು ಆಕರ್ಷಣೀಯವಾಗಿದೆ. ವಿಡಂಬನೆಗೆ ಅವರು ಹೆಚ್ಚಿನ ಪಾತ್ರವನ್ನಿತ್ತಿದ್ದಾರೆ. ಅದು ಸಹಜವೂ ಹೌದು. ಸಮಕಾಲೀನ ಜೀವನದ ಸಕಲ ಮುಖಗಳನ್ನು, ಸಮಸ್ತ ವ್ಯವಹಾರವನ್ನು ತಕ್ಕೈಸಿ ತಮ್ಮ ಪ್ರತಿಕ್ರಿಯೆಯನ್ನು ತೋರಲು ಅವರು ಹವಣಿಸಿದ್ದಾರೆ. ಸಾವಿರಾರು ಚುಟುಕ ಗಳನ್ನು ದಿಕ್ಕುದಿಕ್ಕಿಗೆ ಪುಂಖಾನುಪುಂಖವಾಗಿ ಬಾಣಗಳಂತೆ ಎಸೆದಿದ್ದಾರೆ. ಅವುಗಳಲ್ಲಿ ಕೆಲವು ಓದುಗರ ಹೃದಯವನ್ನಷ್ಟೇ ಅಲ್ಲದೆ 'ಕಾರಣಕರ್ತ್ಯ'ಗಳ ಹೃದಯವನ್ನು ಮುಟ್ಟಿರಲೇಬೇಕು. ಅವರೇ ಹೇಳುವಂತೆ "ಚುಟುಕುಗಳ ಛಂದಸ್ಸು ಬಹಳ ಪ್ರಾಚೀನ, ಮಾತನಾಡುವ ಶೈಲಿ ನೂತನ ವಿಧಾನ". ಅವು ಅವರ ಜೀವನದ ಅನುಭವಸಾರ; ಅಲ್ಲದೆ ಅವರ ನಂಬಿಕೆಯಂತೇ ಚುಟುಕ ವಾಗಿರಬೇಕು. 'ಅನವರತ ಸತ್ಯ' ಆದರೆ 'ಅದರ ಕೊನೆಗಿರಲಿ ಹರಿತ ಇದರಿಂದ ಎಚ್ಚರಾಗುವನು ಜಡಭರತ', 'ಇದು ಡೊಂಕು ವಂಕಿಯಾದರೂ ಆ ವಂಕಿಯೊಳಗಿರಲಿ ಕೆಂಡಗಳ ಬೆಂಕಿ' ಅಲ್ಲದೆ 'ಭಾಷೆಯೊಳಗಿರಲಿ ಮದ್ದು, ಸಪ್ಪಳಕ್ಕೆ ಓಡಿಹೋಗುವುದು ರಣಹದ್ದು' ಇಷ್ಟಾದರೂ ಚುಟುಕವೆಂದು ಪ್ರಾಣಘಾತಕವಲ್ಲ ಮರ್ಮಭೇದಕವಷ್ಟೆ. 'ಚುಟುಕವೆಂಬುದು ಸಾಹಿತಿಯ

ಬಿರುಸುಬಾಣ, ಮರ್ಮ ಭೇದಿಸಿದರೂ ಉಳಿಯುವುದು ಪ್ರಾಣ'. ಶ್ರೀ ದೇಸಾಯಿ ಅವರ ಚುಟುಕುಗಳ ಹಿನ್ನೆಲೆ, ವಾಸ್ತವಿಕತೆ ಮತ್ತು ರಾಜಕೀಯ ಚಟುವಟಿಕೆ. ಅಲ್ಲಿ ಕಂಡುಬರುವ ಅನೇಕ ರೀತಿಯ ಅನ್ಯಾಯ, ಭ್ರಷ್ಟಾಚಾರಗಳು ಇವರ ಕಾವ್ಯಕ್ಕೆ ಗ್ರಾಸ, ಅವರ ಅನುಭವ ಪರಿಶ್ರಮಗಳು ಶುಚಿ, ರುಚಿಗಳಿಂದ ಕೂಡಿದ್ದು ದಿನ ನಿತ್ಯದಲ್ಲಿ ಕಾಣುವ, ಅನುಭವಿಸುವ ಅನ್ಯಾಯ, ಅನಾಚಾರಗಳ ವಿರುದ್ಧ ಗಂಭೀರವಾಗಿ, ನಿಷ್ಠುರವಾಗಿ, ನಿಸ್ಪೃಹತೆಯಿಂದ, ದುಃಖದಿಂದ, ಕೋಪದಿಂದ, ಆಕ್ರೋಶದಿಂದ, ವಕ್ರೋಕ್ತಿಯಿಂದ, ವಿಡಂಬನೆಯಿಂದ ಹಲವು ರೀತಿಯಲ್ಲಿ ಅವುಗಳಿಗೆ ಅವರು ಪ್ರತಿಕ್ರಿಯಿಸಿದ್ದಾರೆ. ಇಲ್ಲಿ ಆತ್ಮಾನುಸಂಧಾನವೂ ಇಲ್ಲದಿಲ್ಲ. 'ನನ್ನ ಸಂಗಡ ನಾನೇ ಜಗಳಾಡಬಲ್ಲೆ, ಈ ಜಗಳದಲ್ಲಿ ಹುಟ್ಟುವುದು ಕಾವ್ಯನಲ್ಲೆ' ಅವರ ಕಾವ್ಯದ ವ್ಯಾಪ್ತಿ ಜೀವನದಷ್ಟು ವಿಶಾಲ, ಕವಿ ಕಾವ್ಯಗಳನ್ನು ಕುರಿತು 'ಕವಿಗಳಲ್ಲೂ ಉಂಟು ತರತರದ ಜಾತಿ, ನಾ ಕುಣಿಸುವುದು ವಿಡಂಬನೆಯ ಕೋತಿ, ಕೆಲವು ಕವಿಪುಂಗವರ ಕಾವ್ಯ ನಾಜೂಕು ಯಾರಿಗೂ ಅರ್ಥವಾಗದ ಜೋಕು' ಎಂಬಲ್ಲಿ ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನು ಶೈಲಿಯನ್ನು ಆರಿಸಿಕೊಂಡಿರುವುದರ ಜೊತೆಗೆ ಮಾರ್ಮಿಕವಾಗಿ ಕಾವ್ಯ ಎಲ್ಲರಿಗೂ ಅರ್ಥವಾಗಬೇಕೆಂಬುದನ್ನು ಸೂಚಿಸುತ್ತಾರೆ. ಅವರ ದೃಷ್ಟಿಯಲ್ಲಿ ಕವಿತೆ 'ರಸಬಾಳೆ, ದ್ರಾಕ್ಷಿ, ದಾಳಿಂಬೆ, ಹುಳಿನಿಂಬೆ ಮತ್ತೆ ಹಾಗಲಕಾಯಿ ಕೂಡ. ಅದು ಅವರ ಖಾಸಗೀ ಆಸ್ತಿ', 'ಜೀವನದ ಜೇನು ಭಾವನೆಯ ಗಣಿಯಿಂದ ತೆಗೆದ ಬಂಗಾರ'. ಕವಿಯ ಕೆಲಸ ಕೇವಲ ಸೌಂದರ್ಯ ಸೃಷ್ಟಿಯಲ್ಲ, ಸಾಮಾಜಿಕ ಅನ್ಯಾಯ, ಅನಿಷ್ಟಗಳನ್ನು ಅವನು ಹೋಗಲಾಡಿಸುವವನೂ ಆಗಬೇಕು.

> ನಾನೊಬ್ಬ ಭಂಗಿ, ಮಡಿವಾಳನೂ ಹೌದು ;
> ತೊಳೆಯುವೆನು ಅಂಗಿ, ಮತ್ತೆ ಕ್ಷೌರಿಕನಾಗಿ
> ಕೆತ್ತುವೆನು ಬೋಳು

ಕನ್ನಡವನ್ನು ಸರ್ಕಾರದ ಭಾಷೆಯನ್ನಾಗಿ ತರುವಲ್ಲಿ ತಾಳಿದ ತಾಮಸ ಮನೋಭಾವವನ್ನು ಕುರಿತು ಅವರು ಹೇಳಿರುವುದು :

> ಕನ್ನಡಾಂಬೆಗೆ ಇವರು ಹಾಕುವರು ಹಾರ
> ಆಂಗ್ಲನುಡಿಯಲ್ಲಿ ನಡೆಸುವರು ಸರ್ಕಾರ
> ಕೇಳಿದರೆ ಹೇಳುವರು ಒಂದು ದಿನ ತಾಳಿ
> ಆಮೇಲೆ ಕೂಗಲಿದೆ ಕನ್ನಡದ ಕೋಳಿ

ಕನ್ನಡ ನಾಡು ನುಡಿಯ ಬಗ್ಗೆ ಅವರ ಅಭಿಮಾನವನ್ನು

> ಹಿಂದಿರುಗಿ ಬಂದರೂ ತ್ರಿಭುವನವ ಸುತ್ತಿ
> ಎಂದಿಗೂ ಇರಲೆಂಬೆ ತಾಯ್ನಾಡ ಬುತ್ತಿ

ಎಂಬಲ್ಲಿ ಮನಗಾಣಬಹುದು.

> ಭಾಷೆ ಎಂಬುದು 'ಕವಿಗಳ ತಮಾಷೆ'
> ಭಾಷೆಯೊಳಗಿರಬೇಕು ನರನ ಅಭಿಲಾಷೆ
> ಭಾಷೆ ಮಾನವನ ಶಕ್ತಿ ಪವನಗಳ ಉಕ್ತಿ
> ಭಾಷೆಯಿಂದಲೇ ನಮಗೆ ಜೀವನದ ಮುಕ್ತಿ.

ಅದು ವಿಡಂಬನೆಯ ಬಂದೂಕು ಕೂಡ.

> ಅದರಲ್ಲಿ 'ಶಬ್ದ ನಾವೀನ್ಯ'ವಿರಬೇಕು.
> ಆಗ ರಸಿಕತೆಗೆ ಬರವಣಿಗೆಯಾಗುವುದು ಮಾನ್ಯ

ಅಲ್ಲದೆ,

> 'ಭಾಷೆ ವಿದ್ಯುತ್ತಾಗಿ ಕೊಡಬೇಕು ಷಾಕು?'

ಈ ಭಾಷೆಯ ಷಾಕನ್ನು ಅವರು ಸಾರ್ಥಕವಾದ ರೀತಿಯಲ್ಲಿ ಕೊಟ್ಟು ಎಚ್ಚರಿ ಸುತ್ತಿರುವುದನ್ನು ನಾವು ಎಲ್ಲೆಲ್ಲಿಯೂ ಕಾಣುತ್ತೇವೆ. ಸರಳ ಭಾಷೆಯೇ ಸುಗಮವಾಗಿ ಅರ್ಥವನ್ನು ಕೊಡುವುದರಿಂದ ಅದು ನೇರವಾಗಿ ಹೃದಯ ಗಮ್ಯವಾಗುತ್ತದೆ.

ಕಾಳಸಂತೆಯನ್ನು ಕುರಿತು:

> ಆಹಾರಧಾನ್ಯಗಳ ಕಳ್ಳದಾಸ್ತಾನು
> ತೆಗೆಯಲಾರನು ಹುಡುಕಿ ಆಗಸದ ಭಾನು
> ಸೂರ್ಯ ಪರಮಾತ್ಮನಿಗೆ ದಶಕೋಟಿ ಕಣ್ಣು
> ಇದ್ದರೂ ವ್ಯರ್ಥವೆಂದನು ನಮ್ಮ ಸಣ್ಣು.

ತೆರಿಗೆ ಭಾರವನ್ನು ಕುರಿತು:

> ಎಷ್ಟು ಹೇರಿದರೇನು ತೆರಿಗೆಗಳ ಭಾರ
> ಜನರ ಸಲುವಾಗಿಯೇ ಉಂಟು ಸರಕಾರ
> ಭಾರವಾದರೆ ತಾರೆಯ ಮೇಲಿರುವ ವಜ್ಜೆ
> ಮೆಲ್ಲಮೆಲ್ಲನೆ ನಡೆದು ಹಾಕೋಣ ಹೆಜ್ಜೆ.
>
> ನಮ್ಮ ಪ್ರತಿನಿಧಿ
> ಲೋಕಸಭೆಯಲ್ಲಿ ಹೋಗಿ
> ಎಲೆಅಡಿಕೆ ತಿಂದ ಮಂತ್ರಿ ಹೇಳಿದ ಹಾಗೆ
> ಕೈಮೇಲಕೆತ್ತಿ ತೆಗೆದುಕೊಂಡನು ಭತ್ಯ....

ಕೋರ್ಟಿನ ವ್ಯವಹಾರ :

> ಅಪ್ರತಿಮವಾದದ್ದು ಕೋರ್ಟು ವ್ಯವಹಾರ
> ಸಿಬ್ಬಂದಿಗಳಿಗೆ ಪ್ರತಿದಿವಸ ಆಹಾರ
> ಎರಡು ಕಡೆಯಿಂದಲೂ ತಿನ್ನಲು ವಕೀಲ
> ವಾದಿ ಪ್ರತಿವಾದಿಗಳು ಮಾಡಿದರು ಸಾಲ.

ಆಕಾಶವಾಣಿಗೆ :

> ಆಕಾಶವಾಣಿಯಲಿ ಕೇಳಿದೆನು ಸುದ್ದಿ
> ಹೇಳಿದರು ಸರ್ಕಾರಿ ಗಾಣದಲಿ ತಿದ್ದಿ
> ಪ್ರತಿದಿವಸವೂ ಕೇಳಿ ಹಾಳಾಯ್ತು ಬುದ್ಧಿ
> ಇದಕೆಂಬೆ ನರನ ಮಾನಸಿಕ ಅಭಿವೃದ್ಧಿ.
> ಬಡಜನರನ್ನುದ್ಧಾರ ಮಾಡ ಹೊರಟ ಸರ್ಕಾರ
> ವೇಗದಿಂದೋಡುವುದು ನಮ್ಮ ಸರ್ಕಾರ
> ಮುಂದೆ ಸಾಗಿದೆ ಹಾಗೆ ಹಿಂದಿನ ಸಮಸ್ಯೆ.

ನಮ್ಮ ರಾಜಕಾರಣ ಮತ್ತು ಅದರ ಪ್ರಯೋಜನ :

> ಇದು ನಮ್ಮ ರಾಜಕಾರಣದ ವಟವೃಕ್ಷ
> ಇದಕೆನ್ನುವರು ಮಗನೆ ಆಡಳಿತ ಪಕ್ಷ
> ಬಲು ದೊಡ್ಡದಾದರೂ ಮರದ ವಿಸ್ತಾರ
> ಅಮಟೆಕಾಯಿಗೂ ಸಣ್ಣ ಹಣ್ಣಿನಾಕಾರ.

ಪಕ್ಷ ಬದಲಾಯಿಸಿದ ರಾಜಕಾರಣಿ :

> ಇಲ್ಲಿಂದ ಅಲ್ಲಿ ಹಾರಿದ ಬಳಿಕ ಈತ
> ಆಗಿಬಿಟ್ಟನು ರಾಜಕೀಯದಲಿ ಪ್ರೇತ
> ಕುನ್ನಿಯೂ ಈಗ್ಗೆ ನೋಡುವುದಿಲ್ಲ ಮೂಸಿ
> ಆಗಬಾರದು ಯಾರೂ ಇಂಥ ಪರದೇಸಿ.

ಭ್ರಷ್ಟಾಚಾರಿಗಳಿಗೆ ಅವರು ಕೊಡುವ ಸೂಚನೆ :

> ಈ ಪ್ರಜಾರಾಜ್ಯದಲಿ ಬೇಕಷ್ಟು ಶಾಯಿ
> ಕುಡಿದರು ಕಪ್ಪು ಆಗುವುದಿಲ್ಲ ಬಾಯಿ
> ಇದುವೆ ಬ್ಲಾಟಿಂಗ್ ಪೇಪರಿನ ಮಹಾ ಕೆಲಸ
> ದವಡೆಯಲಿ ಇಟ್ಟು ಕೇಳಿ ಪ್ರತಿಯೊಂದು ದಿವಸ.

ಮಾತಿನ ರಾಜಕೀಯ :

> ರಾಜಕಾರಣದಲ್ಲಿ ಅತಿಯಾಗಿ ಮಾತು
> ಬಡವರಿಗೆ ಪ್ರತಿದಿವಸ ಕೇಸರಿಬಾತು
> ಕನಸು ಮುಗಿಯುವ ಮೊದಲೇ ತಿನ್ನಿ ಬೇಕಷ್ಟು
> ಬಡಿಸುವನು ನವಭಾರತದ ಸೋಪಲಿಸ್ಟು.

ರಾಜಕಾರಣಿಗಳು :

> ರಾಜಕಾರಣದಲ್ಲಿ ಆಡುಗಳ ಜಾತಿ
> ಮೈದೋರಿ ಬಡ ಭಾರತಾಂಬೆಯ ಫಜೀತಿ
> ಸಿಕ್ಕಿ ಸಿಕ್ಕಿದ ಗಿಡಕ್ಕೇ ಹಚ್ಚಿದವು ಬಾಯಿ
> ಹೂಬಿಡದೆ ಬಂಜೆಯಾಯಿತು ಲೋಕಶಾಹಿ.

ಹೀಗೆ ದೇಸಾಯಿ ಅವರ ಮಾತುಗಳು ನೇರ, ಸ್ಪಷ್ಟ. ವಿವರಣೆ ಅನಾವಶ್ಯಕ. ದೇಸಾಯಿ ಅವರ ಲೇಖನಿಯ ಕುಂಚದಿಂದ ಹೊರಬರುವ (ವ್ಯಂಗ್ಯ) ಚಿತ್ರಗಳ ಸರಮಾಲೆ ಅನಂತ. 'ಆಹಾರಧಾನ್ಯಗಳ ಕೊರತೆಯಿರುವ ತನಕ ಮೂಷಿಕನ ಬೆನ್ನೇರಿ ಕೂಡುವನು ಬೆನಕ'. ಕಾರಣ ಇಲ್ಲಿಯ ಸಹವಾಸದಲ್ಲಿರುವ ಪ್ರಯೋಜನ ಬೇರೆ ಎಡೆಯಲಿಲ್ಲ.

ಹಿಂದಿ, ಇಂಗ್ಲಿಷ್ ತಾಯ್ನುಡಿಗಳ ಹೊರೆಹೊತ್ತ ವಿದ್ಯಾರ್ಥಿಗಳು 'ಆಂಗ್ಲ ಭಾಷೆಯ ಜೊತೆಗೆ ಹಿಂದಿ ಕಡ್ಡಾಯ, ಶೀಘ್ರದಲಿ ಮಕ್ಕಳಿಗೆ ಬಂತು ಮುದಿ ಪ್ರಾಯ."

'ಸುಡುಗಾಡಿಗಟ್ಟಿದರೂ ಗಳಿಸುವೆನು ಗಂಟು' ಎಂಬ ಸೆಟ್ಟಿ; 'ಜೀವನದ ಸಂತೋಷ ಹೋಗುವುದು ಜಾರಿ' ಎಂಬ ಬ್ರಹ್ಮಚಾರಿ; 'ತುಸು ಕೊಟ್ಟರೂ ಕೊನೆಗೆ ಸಾಕಷ್ಟು ಆಸ್ತಿ' ಗಳಿಸಿಕೊಂಬ ಶಾನುಭೋಗ, ಕಳ್ಳಬಜಾರಿನಲಿ ಲಕ್ಷಲಕ್ಷಗಟ್ಟಲೆ ಗಳಿಸಿದ ದೇಶಸೇವಕ ಮಂತ್ರಿ, ಉನ್ನತ ಅಧಿಕಾರಿಗಳವರೆಗೆ ಮೆರವಣಿಗೆ ನಮ್ಮ ಕಣ್ಣಮುಂದೆ ಸಾಗುತ್ತದೆ. ಶ್ರೀ ದೇಸಾಯಿಯವರು ಜನಸಾಮಾನ್ಯನ ಪ್ರತಿನಿಧಿಯಾಗಿ ದೇಶದ ರಾಜಕೀಯವನ್ನು, ಸಾಮಾಜಿಕ ವ್ಯವಸ್ಥೆಯನ್ನು ನೋಡಿ, ಅನುಭವಿಸಿ ಸಾಹಿತಿಯಾಗಿ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ್ದಾರೆ. ಸಾಮಾನ್ಯ ಭಾಷೆಯಲ್ಲಿ ಸಾಮಾನ್ಯ ಭಾವನೆಗಳನ್ನು ಸಮರ್ಪಕವಾದ ರೀತಿಯಲ್ಲಿ ಓದುಗರ ಮನಮುಟ್ಟುವಂತೆ ಹೇಳುವಲ್ಲಿ ಅವರು ಸಫಲರಾಗಿದ್ದಾರೆ. ಕವಿಹೃದಯದ ಮಿಡಿತ, ತುಡಿತಗಳ ಸಮಾಜ ವಾದಿಯಾದ ಸಾಮಾಜಿಕ ಕಾರ್ಯಕರ್ತನ ಹೃದಯದಲ್ಲಿ ಮಿಡಿದು ವ್ಯಕ್ತಿ ಯನ್ನು ಮೇಲೆತ್ತಿವೆ. ಒಬ್ಬ ವ್ಯಕ್ತಿ ಮಾಡಬಹುದಾದುಕ್ಕಿಂತಲೂ ಮಾಡ ಬಯಸಿದ್ದು ಗಮನಾರ್ಹ. ಅಂತೆಯೇ ಶ್ರೀ ದೇಸಾಯಿ ತಾವು ಚುಟುಕಗಳನ್ನು ಬರೆಯುವ ಮುಖಾಂತರ ಸಾಧಿಸಿರುವುದಕ್ಕಿಂತಲೂ ಚುಟುಕಗಳ ಆಶಯದಲ್ಲಿ ಸಾಧಿಸಿರುವುದು ವಿಶೇಷ ಗೌರವಕ್ಕೆ ಪಾತ್ರವಾದದ್ದು. ಇವರು ಚುಟುಕಗಳು ವಸ್ತು, ವಿಷಯ, ರೀತಿಗಳಿಂದ ಯಾವುದೇ ರೀತಿಯಲ್ಲಿ ವಿಭಾಗಕ್ಕೆ ನಿಲುಕುವಂಥವಲ್ಲ. ಅದು ಚುಟುಕಗಳ ಗುಣವೂ ಅಲ್ಲ. ಹೀಗಾಗಿ ಅವುಗಳು ಓದುಗನ ಮನಸ್ಸಿನ ಮೇಲೆ ಉಂಟುಮಾಡುವ ಪರಿಣಾಮ ಒಂದೊಂದು ಚುಟುಕದ ವಸ್ತು, ಬಂಧ, ಶೈಲಿಗಳನ್ನು ನೋಟದ ನಾವೀನ್ಯ ವನ್ನು ನೆಮ್ಮಿರುತ್ತದೆ. ಚುಟುಕಗಳಲ್ಲಿ ಮಾತಿನ ಮೊನಚು ಅಥವಾ ವಿಡಂಬನೆಯೇ ಮುಖ್ಯ ಆಯುಧವಾಗಿದ್ದು ಚಾಟಿಯಂತೆ ಬಡಿದೇಳಿಸುವ ಅವರು ಅದನ್ನು ಉಪಯೋಗಿಸಿಕೊಂಡಿರುವುದು ಉದ್ದಕ್ಕೂ ಕಂಡು ಬರುತ್ತದೆ. ತೀರ ಸಾಮಾನ್ಯ ನಿರಪೇಕ್ಷವೆಂದು ಕಂಡುಬರುವ ಅನೇಕ ಚುಟುಕಗಳು ಇಲ್ಲಿವೆ. ಜೀವನದ ಸರ್ವವ್ಯವಹಾರವನ್ನು ವಿಡಂಬನ ದೃಷ್ಟಿಯಿಂದ ನೋಡುವುದು ಬೇರೆಯಾದರೆ ವಿಡಂಬನೆ ಮಾಡುವುದೇ ಬೇರೆಯಾಗುತ್ತದೆ. ಈ ಸೂಕ್ಷ್ಮವಾದ ಸೀಮಾರೇಖೆಯನ್ನು ಶ್ರೀ ದೇಸಾಯಿ ಎಚ್ಚರವಹಿಸಿ ಗೌರವಿಸಿರುವುದು ಕಂಡು ಬರುತ್ತದೆ. ಅನ್ಯಾಯಕ್ಕೆ ಕುದಿವ ಮನ, ನ್ಯಾಯಕ್ಕೆ ಮನಸೋಲುವ ಸೌಜನ್ಯ ತೋರಿಸುತ್ತದೆ. ಕೆಟ್ಟದ್ದಕ್ಕೆ ಕೋಪಗೊಳ್ಳುವ ಮನ ಒಳ್ಳೆಯದನ್ನು ನೆನೆದು ಗೌರವಿಸುತ್ತದೆ. ಇದು ಶ್ರೀ ದೇಸಾಯಿ ಅವರ ಸಹಜವಾದ ಹಿತಾಹಿತ ದೃಷ್ಟಿಯನ್ನು ಒಳಗೊಂಡ ಸೌಜನ್ಯಪರವಾದ ಜೀವನದ ದೃಷ್ಟಿಯ ಪ್ರತೀಕ.

ನವಭಾರತದ ಕನಸನ್ನು ಹೊತ್ತು ಶ್ರೀ ದೇಸಾಯಿ ಅವರು ಹರೆಯದ ಉತ್ಸಾಹಕ್ಕನುಗುಣವಾಗಿ ಸಮಾಜಸೇವೆಯಲ್ಲಿ ತೊಡಗಿ ಕೂಲಿಕಾರರ ಕಷ್ಟಪಾಡಿನ ಮಧ್ಯೆ ತಮ್ಮ ಜೀವಿತದ ಬಹುಭಾಗವನ್ನು ಸವೆಸಿದರೂ ಆಜನ್ಮವಾಗಿ ಹುದುಗಿದ್ದ ಕವಿಹೃದಯ ಅವರಲ್ಲಿ ಕಾವಾರದೆ ಚುಟುಕಗಳ ರೂಪದಲ್ಲಿ ಕೊನೆಯವರೆಗೂ ಬಿಸಿಯಾಗಿಯೇ ಇದ್ದು ಜೀವನದುದ್ದಕ್ಕೂ ಜೀವನದೊಡನೆ ಸ್ಪಂದಿಸುತ್ತಾ ಹೋದ ಹೆಜ್ಜೆಯ ಗುರುತುಗಳಾಗಿ ಅವರು ಬಿಟ್ಟುಹೋಗಿರುವ ಚುಟುಕಗಳು ಅನೇಕರಿಗೆ ಈ ದಿಸೆಯಲ್ಲಿ ಮಾರ್ಗದರ್ಶನ ನೀಡಲಿವೆ.

ನವೋದಯ ಸಾಹಿತ್ಯದಲ್ಲಿ ನವೀನವಾದ ಅನೇಕ ಪರಂಪರೆಗಳು ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಕನ್ನಡದ ಬಳಕೆಗೆ ಬಂದಿರುವುದು ಗೊತ್ತಿರುವ ವಿಚಾರ. ಹಾಗೆಯೇ ಶ್ರೀ ದೇಸಾಯಿ ಅವರು 'ಲಿಮರಿಕ್'ಗಳನ್ನು ಕನ್ನಡಕ್ಕೆ ತಂದು ಜನಪ್ರಿಯ ಗೊಳಿಸಿದ್ದಾರೆ.

ಸಣ್ಣಪದ್ಯಗಳ ಮುಖಾಂತರ ದೊಡ್ಡ ಹೆಸರು ಪಡೆದವರು ಶ್ರೀ ದೇಸಾಯಿ ಅವರು.

❑

# ಸಂ.ಶಿ.ಭೂಸನೂರಮಠ

ಸಾ.ಶಿ. ಮರುಳಯ್ಯ

1

'ಶೂನ್ಯಸಂಪಾದನೆಯ ಪರಾಮರ್ಶೆ'ಯ ಮೂಲಕ ಬಹುಶ್ರುತ ವಿಮರ್ಶಕರೆಂದು ಪ್ರಸಿದ್ಧಿ ಪಡೆದ ಪ್ರೊ.ಎಸ್.ಎಸ್. ಭೂಸನೂರಮಠರವರು ಹುಟ್ಟಿದ್ದು ನವೆಂಬರ್ 7, 1910ರಂದು ಧಾರವಾಡ ಜಿಲ್ಲಾ ರೋಣ ತಾಲ್ಲೂಕಿನ ನಿಡಗುಂದಿಯಲ್ಲಿ. ಪೂರ್ಣ ಹೆಸರು ಸಂಗಯ್ಯ ಶಿವಮೂರ್ತಯ್ಯ ಭೂಸನೂರಮಠ. ತಂದೆ ಶಿವಮೂರ್ತಯ್ಯನವರು, ತಾಯಿ ರಾಚಮ್ಮ. ಸಂಗಯ್ಯನವರಿಗೆ ಇಬ್ಬರು ಅಕ್ಕಂದಿರು, ಒಬ್ಬರು ಅಣ್ಣ. ಆದರೆ ಉಳಿದವರು ಇವರೊಬ್ಬರೇ ಅಪ್ಪನ ಕಿರಿ ಹೆಂಡತಿ ಮಗನಾಗಿ. ಕಲಿತದ್ದು ನಿಡಗುಂದಿಯ ಕನ್ನಡ ಶಾಲೆಯಲ್ಲಿ. ಮಾಧ್ಯಮಿಕ ಶಾಲಾ ಶಿಕ್ಷಣ ಗದಗ ಮತ್ತು ಹುಬ್ಬಳಿ ಗಳಲ್ಲಿ, ಕಾಲೇಜು ವಿದ್ಯಾಭ್ಯಾಸ ಕೊಲ್ಲಾಪುರದಲ್ಲಿ.

ಭೂಸನೂರಮಠರು ಹುಟ್ಟಿದ ಮನೆ, ಬೆಳೆದ ಮನೆ ಎರಡೂ ಬಡತನಕ್ಕೆ ಹೆಸರಾದವುಗಳು. ಆದರೆ ಗೌರವಕ್ಕೆ ಅಷ್ಟೇ ಪಾತ್ರವಾದವುಗಳು. ತಂದೆಯರ ಅಲ್ಪ ಸ್ವಲ್ಪ ಕೃಷಿ ಮತ್ತು ವ್ಯಾಪಾರಗಳಿಂದ ಹೊಟ್ಟೆಪಾಡು ನಡೆಯುತ್ತಿತ್ತು. ಆದರೆ ಶಿಕ್ಷಣಕ್ಕೆ ಹಣದ ಅಭಾವ. ಬಾಲಕ ಸಂಗಯ್ಯ ಗದಗಿನಲ್ಲಿ ಪೆಟ್ರೋಲ್ ಬಂಕ್ ಒಂದರಲ್ಲಿ ಪಂಪ್ ಒತ್ತುವ ಕೆಲಸ ಗಿಟ್ಟಿಸಿಕೊಂಡ. ಅದರಿಂದ ತುತ್ತಿನ ಚೀಲಕ್ಕೆ ತಾತ್ಕಾಲಿಕ ತೃಪ್ತಿಯೇನೋ ಸಿಕ್ಕಿತು, ಆದರೆ ಮನಸ್ಸಿಗೆ, ಬುದ್ಧಿಗೆ ನೆಮ್ಮದಿ ದೊರೆಯಲಿಲ್ಲ. ಕಲಿಯಬೇಕೆಂಬ ಮಹದಾಸೆ ಇಟ್ಟುಕೊಂಡಿದ್ದ ಆ ಬಾಲಕನಿಗೆ ದೈವ ಮಾನವ ರೂಪದಲ್ಲಿ ಬಂದು ನೆರವಾಯಿತು, ಶಿಕ್ಷಣ ಮುಂದುವರಿಯಿತು. ಗದಗಿನಲ್ಲಿ ಇಂಗ್ಲಿಷ್ ಶಾಲೆಯಲ್ಲಿ ಅಧ್ಯಯನ, ಮನೆಯಲ್ಲಿ ಸಂಗೀತ ಶಿಕ್ಷಣ ಎರಡೂ ಕ್ರಮವಾಗಿ ನಡೆದುವು. ಶಾಲಾ ಶಿಕ್ಷಣ ಮುಗಿದಿರಲಿಲ್ಲ. ಅಷ್ಟರಲ್ಲೇ ಮದುವೆ ಬಂದೊದಗಿತು. ಸಂಗಯ್ಯ ಭೂಸನೂರಮಠರ ವಿವಾಹ ಅವರ ಹದಿನೇಳನೇ ವಯಸ್ಸಿನಲ್ಲಿ ಕೊಸಗಲ್ಲು ಪಾರ್ವತೀದೇವಿಯವರೊಡನೆ ನೆರವೇರಿತು. 1931ರಲ್ಲಿ ಮ್ಯಾಟ್ರಿಕ್ ಮುಗಿಯಿತು. 1933ರಲ್ಲಿ ತಂದೆ ತೀರಿಕೊಂಡರು. ಕುಂಟುತ್ತಾ ನಡೆಯುತ್ತಿದ್ದ ಶಿಕ್ಷಣಕ್ಕೆ ಸೊಂಟ ಮುರಿದಂತಾಯಿತು. ಆದರೂ ಪ್ರತಿಭಾವಂತ ವಿದ್ಯಾರ್ಥಿ ವೇತನ ದೊರೆಯಿತು. ಎ.ಟಿ. ಸಾಸನೂರ, ಪತ್ರಾವಳಿ, ಸ.ಸ.ಮಾಳವಾಡ, ಕೆ.ಜಿ. ಕುಂದಣಕಾರ ಮೊದಲಾದ ಗುರುಗಳ ಕೃಪೆ ಮತ್ತು ಆಶೀರ್ವಾದಗಳ ಬೆಂಬಲದಿಂದ ಬಿ.ಎ. ಮುಗಿಸಿ, ಕೊಲ್ಲಾಪುರ ಕಾಲೇಜಿಗೆ ಸೇರಿ, ಮುಂಬಯಿ ವಿಶ್ವವಿದ್ಯಾಲಯದಿಂದ ಕನ್ನಡ ಎಂ.ಎ. ಪದವಿ ಪಡೆದರು, ಪ್ರಥಮ ರ್‍ಯಾಂಕ್‌ಗಳಿಸಿದರು.

ಬೆಳಗಾವಿಯ ಲಿಂಗರಾಜಾ ಕಾಲೇಜ್, ಧಾರವಾಡದ ಕರ್ನಾಟಕ ಕಾಲೇಜುಗಳಲ್ಲಿ ಅಧ್ಯಾಪಕ ವೃತ್ತಿ ಆರಂಭವಾಯಿತು. ಹುದ್ದೆ ಹಂಗಾಮಿಯಾದ್ದರಿಂದ ಕೆಲಸ ಹೋಯಿತು. ಧರ್ಮಪತ್ನಿ ಪಾರ್ವತಮ್ಮನವರು ರಾಜಶೇಖರ, ದಾಕ್ಷಾಯಿಣಿ ಮತ್ತು ಮಹಾದೇವಿ ಎಂಬ ಮೂವರು ಮಕ್ಕಳನ್ನು ಬಿಟ್ಟು 1942ರಲ್ಲಿ ತೀರಿಕೊಂಡರು. ದೈವ ಸಹಾಯದಿಂದ ಲಿಂಗರಾಜಾ ಕಾಲೇಜಿನಲ್ಲಿ ಖಾಯಂ ಕೆಲಸ ಸಿಕ್ಕಿತು. ಎರಡನೆಯ ಮದುವೆಯೂ ಆಯಿತು, 1944ರಲ್ಲಿ ಕೊಟಬಾಗಿ ಹಿರೇಮಠದ ಗೌರಾದೇವಿಯವರೊಡನೆ. ಕುಮಾರಿ ವಿಜಯಾ ಮತ್ತು ಸುಭಾಷ್ ಎಂಬ ಎರಡು ಮಕ್ಕಳೂ ಆದುವು. ಇಪ್ಪತ್ತು ಮೂರು ವರ್ಷಗಳವರೆಗೆ ಲಿಂಗರಾಜಾ ಕಾಲೇಜಿನಲ್ಲಿ ಸೇವೆಸಲ್ಲಿಸಿ, 1966ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕನ್ನಡ ಪ್ರಾಧ್ಯಾಪಕರಾದರು. 1969ರಲ್ಲಿ ಅವರ ವಾತ್ಸಲ್ಯದೇವತೆ ತಾಯಿ ರಾಚಮ್ಮ ತೀರಿಕೊಂಡರು. 1976ರಲ್ಲಿ ಸೇವೆಯಿಂದ ಸಂಪೂರ್ಣ ನಿವೃತ್ತಿ ಹೊಂದಿ 'ಪರಂಜ್ಯೋತಿ'ಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾರೆ.

2

ಪ್ರೊ.ಸಂ.ಶಿ. ಭೂಸನೂರಮಠರವರ ಕೃತಿಗಳು ಸಂಖ್ಯೆಯಲ್ಲಿ ಕಿರಿಯವು, ಸತ್ತ್ವದಲ್ಲಿ ಹಿರಿಯವು. ಇವರ ಕೃತಿಗಳು ಒಟ್ಟು ಹದಿಮೂರು. ಅವುಗಳಲ್ಲಿ 'ಶೂನ್ಯ ಸಂಪಾದನೆಯ ಪರಾಮರ್ಶೆ' ಮತ್ತು 'ಭವ್ಯಮಾನವ' ಸೃಜನಾತ್ಮಕ ಕೃತಿಗಳು; ಉಳಿದವು-'ಭಕ್ತಿ ಸುಧಾಸಾರ' (1945), 'ಗುರುರಾಜ ಚಾರಿತ್ರ' (1950), 'ಮೋಳಿಗೆ ಮಾರಯ್ಯ' ಮತ್ತು 'ರಾಣಿ ಮಹಾದೇವಿಯವರ ವಚನಗಳು' (ರೆ. ಉತ್ತಂಗಿ ಚೆನ್ನಪ್ಪನವರೊಡನೆ; 1950), 'ಮೋಳಿಗಯ್ಯನ ಪುರಾಣ', 'ಲಿಂಗ ಲೀಲಾ ವಿಲಾಸ ಚಾರಿತ್ರ' (1956), 'ಪ್ರೌಢರಾಯನ ಕಾವ್ಯ' (1957), 'ಶೂನ್ಯಸಂಪಾದನೆ' (1958), 'ವಚನ ಸಾಹಿತ್ಯ ಸಂಗ್ರಹ' (1965), 'ಏಕೋತ್ತರ ಶತಸ್ಥಲ' (1974), 'ಶೂನ್ಯಸಂಪಾದನೆಯ ಪರಾಮರ್ಶೆಯ ಸಂಗ್ರಹ' (1978), 'ಶೂನ್ಯಸಂಪಾದನೆ' (ಇಂಗ್ಲಿಷ್ ಅನುವಾದ), ಸಂಪುಟ II (1968), ಸಂಪುಟ III (1969), ಸಂಪುಟ IX (1970)-ಇವು ಸಂಪಾದಿತ ಕೃತಿಗಳು.

'ಪರಾಮರ್ಶೆ' ಗೂಳೂರ ಸಿದ್ಧವೀರಣ್ಣೊಡೆಯನ 'ಶೂನ್ಯಸಂಪಾದನೆ'ಗೆ ಬರೆದ ಒಂದು ವಿಶಿಷ್ಟ ವ್ಯಾಖ್ಯಾನ. ಅದುವರೆಗೂ ಆಗಿರದಿದ್ದ ಆ ಮಹತ್ವದ ಕೃತಿಯನ್ನು ಕುರಿತ ಸಮಗ್ರ ಸಂಶೋಧನೆ ಹಾಗೂ ಸ್ತುತ್ಯಪ್ರಯತ್ನದ ಸಾರ್ಥಕ ಸಾಹಿತ್ಯ ರಚನೆ. ಭೂಸನೂರಮಠರಿಗೆ 'ಶೂನ್ಯಸಂಪಾದನೆ' ಒಂದು ಕಮನೀಯ ಕಾವ್ಯವಾಗಿಯಾಗಲಿ ಅಥವಾ ಒಂದು ಧರ್ಮ-ದರ್ಶನಗಳನ್ನು ಎತ್ತಿಹಿಡಿಯುವ ಪಠ್ಯಪುಸ್ತಕವಾಗಿಯಾಗಲಿ ಗೋಚರಿಸಿಲ್ಲ. ಮಾನವನಲ್ಲಿ ವಿಶ್ವಮಾನವ ಪ್ರಜ್ಞೆಯನ್ನು ಯುಗಯುಗಕ್ಕೂ ಜಾಗೃತಗೊಳಿಸಬಲ್ಲ ಸತ್ತ್ವಶಾಲೀ ರಚನೆಯಾಗಿ ಕಂಡಿದೆ. ಜೀವ-ದೇವರ ಐಕ್ಯಾನು ಸಂಧಾನದ ಅನಿರ್ವಚನೀಯ ಪರಿಣಾಮದ ಪ್ರಾಪ್ತಿ ಅಲ್ಲಾಗಿದೆ. ಬುವಿಯಲ್ಲಿ ಆವಿರ್ಭವಿಸಿದ ಆತ್ಮವು ಸ್ವಯಂ ಸಾಹಸದಿಂದ ವಿಕಾಸಗೊಂಡು, ಕ್ರಮೇಣ ಅರಿವು ಮರೆವುಗಳೆರಡನ್ನೂ ನೀಗಿಕೊಂಡು ನಿರ್ಮಲ ನಿರಂಜನ ಜ್ಯೋತಿಯಾಗಿ, ಕಡೆಯಲ್ಲಿ ನಾದಬಿಂದು ಕಳಾತೀತವಾದ ಮಹೋನ್ನತಿಯ ಮಜಲಿನಲ್ಲಿ 'ಶಿವ' ಅಥವಾ 'ಶೂನ್ಯ' ಆಗುವ ಬೃಹದ್ದರ್ಶನ ಅಲ್ಲಿ ಬಿತ್ತರಗೊಂಡಿದೆ. ಅದು ಅನುಭಾವದ ಕೆನೆ, ಆಧ್ಯಾತ್ಮದ ತೆನೆ. ಕೇವಲ ಅನುಭಾವವನ್ನೇ ತನ್ನ ಮೂಲದ್ರವ್ಯವನ್ನಾಗಿಸಿಕೊಂಡ ಶೂನ್ಯ ಸಂಪಾದನೆಗೆ ವೈಜ್ಞಾನಿಕ ವಿಶ್ಲೇಷಣೆ ಇತ್ತು, ಅದರ ಮೂಲನೆಲೆಯನ್ನು ಗುರುತಿಸಿದ್ದಾರೆ ತಮ್ಮ ಪರಾಮರ್ಶೆಯಲ್ಲಿ. ಶೂನ್ಯ ಸಂಪಾದನೆಯದು ಅಧ್ಯಾತ್ಮ ಸಾಹಿತ್ಯ. ಪರಾಮರ್ಶೆಯದು ದರ್ಶನ ವಿಮರ್ಶೆ; ಅದು ಶಬ್ದದೊಳಗಣ ನಿಶ್ಶಬ್ದ, ಇದು ನಿಶ್ಶಬ್ದಗರ್ಭಿತ ಶಬ್ದರೂಪ; ಅದು ನಿಜದ ನಿರಾಳಲಿಂಗ, ಇದು ಪ್ರಜ್ವಲಿಸುವ ದಿವ್ಯಪ್ರಭೆಯ ಜ್ಯೋತಿ; ಅದು ನಿರಂಜನ ನಿರುಪಾಧಿಕ, ಇದು ರಂಜನ ಪ್ರತಿಪಾದಕ; ಅದರದು ಸತ್ಯಾರ್ಥದ ಆವಿಷ್ಕಾರ, ಇದರದು ನಿತ್ಯಾರ್ಥ ಪ್ರಕಾಶ ಪರಿಷ್ಕಾರ; ಅದರದು ಅವರೋಹಣ ಕರ್ಮ, ಇದರದು ಆರೋಹಣ ಕ್ರಿಯೆ;

ಅಲ್ಲಿ ನಿತ್ಯಸತ್ಯದ ಆವಿಷ್ಕರಣ ಸಾಧ್ಯ, ಇಲ್ಲಿ ಅದರ ಪೃಥಕ್ಕರಣ ವೇದ್ಯ. ಪ್ರಭುದೇವರ ಶೂನ್ಯಸಂಪಾದನೆಯನ್ನು ಸೃಜನಾತ್ಮಕ ಕಾವ್ಯ (creative poetry) ಎಂದು ಕರೆಯುವುದಾದರೆ, ಭೂಸನೂರಮಠರ 'ಪರಮಾರ್ಶೆ'ಯನ್ನು ಒಂದು ಸೃಜನಾತ್ಮಕ ವಿಮರ್ಶೆ (creative criticism) ಎಂದು ಘೋಷಿಸಬಹುದು. ಅದು 'ನೆಲದ ಅಚ್ಚರಿ'ಯಾದರೆ, ಇದು ಅಚ್ಚರಿಯ ಅಚ್ಚರಿ !

3

ಭವ್ಯ ಮಾನವ ಶಿಲ್ಪದಲ್ಲಿ ಶೈಥಿಲ್ಯವಿದ್ದರೂ ಕಥಾವಸ್ತು (Story) ಮತ್ತು ಕವಿಯ ವಸ್ತು (Theme) ಇವುಗಳ ಸಹಯೋಗದಲ್ಲಿ ಒಂದು ವಿನೂತನ ಸಿದ್ಧಿ ಇದೆ. ಕವಿ ಕಥೆಯನ್ನು ಇತಿಹಾಸದಿಂದಲೇ ಆಯ್ದಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಬದುಕು ಮಾಡಿದ ಮಹಾಮಾನವರಲ್ಲಿ ಒಬ್ಬಳಾದ ಅಕ್ಕನ ಆಧ್ಯಾತ್ಮ ಜೀವನವನ್ನು ಕೈಗೆತ್ತಿಕೊಂಡಿದ್ದಾರೆ. ಅವಳ ಅತ್ಯಂತ ಜನಪ್ರಿಯ ಕಥೆಗೆ ಗುರುಚೆನ್ನಮಲ್ಲ ಮತ್ತು ಶಿಷ್ಯ ಗಿರಿಮಲ್ಲರ ಕಥಾನಕಗಳನ್ನು ಜೋಡಿಸಿದ್ದಾರೆ. ಮೊದಲು ಮೂಡಿಬಂದ 'ಸಮರಸ' ಎಂಬ ಶೀರ್ಷಿಕೆಯ ನೀಳ್ಗವನ, ಇಪ್ಪತ್ತು ವರ್ಷಗಳಾದ ಮೇಲೆ 'ಭವ್ಯ ಮಾನವ' ಮಹಾಕಾವ್ಯಕ್ಕೆ ಪೀಠಿಕಾ ಸಂಧಿಯಾಯಿತು, 'ಕಲ್ಯಾಣಕಾಂಡ'ವೆಂಬ ಅಭಿಧಾನ ತಳೆದು. ಮುಂದೆ ಆರುಕಾಂಡಗಳ ಸುಮಾರು ಒಂಬೈನೂರು ಪುಟಗಳ ಬೃಹತ್ ಕಾವ್ಯ ರೂಪುಗೊಂಡಿತು. ಅಕ್ಕ, ಗುರುಮಲ್ಲ ಮತ್ತು ಗಿರಿಮಲ್ಲರಷ್ಟೇ ಸಮಗ್ರ ಕಾವ್ಯವನ್ನು ನಡೆಸಿಕೊಡುತ್ತಾರೆ. ಗುರುಮಲ್ಲರು ಲೋಕಲೋಕಗಳನ್ನು, ಕಲೆ ವಿಜ್ಞಾನಗಳನ್ನು ಬಲ್ಲ ಮಹಾಮೇಧಾವಿ ಪುರುಷರಾಗಿ ಚಿತ್ರಿತರಾಗಿದ್ದಾರೆ. ಅವರ ಬೋಧೆಯಲ್ಲಿ ನಯವಿದೆ, ನೀತಿಯಿದೆ, ವಿಜ್ಞಾನವಿದೆ, ವೈಚಾರಿಕತೆ ಇದೆ, ಅನುಭಾವವಿದೆ, ಆಧ್ಯಾತ್ಮವಿದೆ, ಆಧುನಿಕತೆ ಎದ್ದುಕಾಣುವಷ್ಟು ದಟ್ಟವಾಗಿದೆ. ಅವರು ವಿಚಾರವಾದಿಗಳು; ಅಷ್ಟೇ ಮಟ್ಟದ ತ್ರಿಕಾಲ ಜ್ಞಾನಿಗಳು; ಭವ್ಯ ಮಾನವ ಪ್ರಜ್ಞೆ ಉಳ್ಳವರು; ಸಮಷ್ಟಿಯ ವ್ಯಷ್ಟಿ ರೂಪ ಅಥವಾ ವ್ಯಕ್ತರೂಪ, ಅವರ ಅನುಭವ, ಅಕ್ಕನ ಅನುಭಾವ, ಗಿರಿಮಲ್ಲನ ಅನುಷ್ಠಾನ ಇವುಗಳಿಂದ ಮುಪ್ಪುರಿಗೊಂಡಿದೆ ಈ ಮಹಾಕಾವ್ಯ.

ತನ್ನರಿವು ತನಗಿಲ್ಲ, ತನ್ನಿರವು ತನಗಿಲ್ಲ
ತನ್ನೊಳಗೆ ತಿರುಗಾಡಿ ಬಾಳುವೆಯ ನಡೆಸಿರುವ
ವಿಶ್ವಬ್ರಹ್ಮಾಂಡಗಳ ತನ್ನ ಸಂಪದದರಿವು
ತನಗಿಲ್ಲ ತನಗಿಲ್ಲ ಕೋಟಿ ನೇತ್ರದ ಕುರುಡು
ಆಕಾಶ ಬ್ರಹ್ಮ ರಾತ್ರಿಯ ಮಹಾಕತ್ತಲೆಗೆ

-ಪುಟ 247

ಅಂತಹ ಕತ್ತಲೆಯ ಕಾಂಡದಿಂದ ಕಲ್ಯಾಣದೆಡೆಗೆ ಬರಬೇಕು.

ಜಗದ್ವೇಶ್ಯ ನಿಜಃ ಕಾಯಃ
ಸ್ವಯಂ ಬ್ರಹ್ಮೇತಿ ವೇದನಾತ್

(ಯಾವಾಗ ತಾನೇ ಬ್ರಹ್ಮ ಎಂಬ ಅರಿವು ಮೂಡಿತೋ ಆಗಲೇ ಜಗತ್ತು ತನ್ನ ಕಾಯ ಆಯಿತು.)

ಅಂದ ಬಳಿಕ ಜಗತ್ತಿನ ಯಾವುದೇ ಮೂಲೆಯಲ್ಲಿ ಏನೇ ನೋವು ನಲಿವಾಗಲಿ, ಅದು ತನ್ನದಲ್ಲಾದ, ತನಗಾದ ನೋವು, ನಲಿವು ಎಂಬ ಭಾವನೆ ಬಲಿಯಬೇಕು. ಪ್ರಾಣಿಪ್ರಪಂಚಕ್ಕಷ್ಟೇ ಅಲ್ಲ, ವೃಕ್ಷ ಪ್ರಪಂಚಕ್ಕೆ ನೋವಾದರೂ ತನಗೆ ನೋವಾದಂತೆ ಎಂದು ಭಾವಿಸಿ ಸಕಲಕ್ಕೂ ಸ್ಪಂದಿಸುವ ಮನೋಧರ್ಮ ಮೂಲಭೂತವಾದದ್ದಾಗಿರಬೇಕು. ವಿಶ್ವ ವಿಸ್ತಾರವೂ ತಾನು, ಬ್ರಹ್ಮಮಯನೂ ತಾನು ಎಂಬ ಭವ್ಯಭಾವನೆ ಇಲ್ಲಿನ ಭವ್ಯಮಾನವನದು.

ಈ ಕಾವ್ಯದ ಭವ್ಯಮಾನವ ಕಲ್ಪನೆಯೇ ಅದ್ಭುತವಾದುದು. ಕವಿ ಕೊಟ್ಟ ಭವ್ಯಮಾನವದ ಅರ್ಥ ಭವಿಷ್ಯ ಮಾನವ ಎಂದು, ಇಂಗ್ಲಿಷಿನ Super man ಎಂದಲ್ಲ. ಮನುಕುಲಕ್ಕಾಗಿ ಮೀಸಲಿರುವ The grand future! ಅಂದರೆ ಪರಮ ಭವ್ಯತೆ, ಭೂತ ಮತ್ತು ವರ್ತಮಾನಗಳು ಯಾವ ಭವಿಷ್ಯದ ಕಡೆಗೆ ನಡೆದಿವೆ, ನಡೆಯಬೇಕು ಎಂಬ ಸೂಚನೆ. ಜೀವಾತ್ಮ ವಿಶ್ವಾತ್ಮನಾಗಬೇಕು ಎಂಬ ಹಂಬಲ; ಅಪೂರ್ಣ ಪರಿಪೂರ್ಣತ್ವಕ್ಕೇರುವುದು. 'ಮಾನವತೆ' ಅದರ ಅಡಿಗಲ್ಲು. ಆ ಭವ್ಯ ಮೌಲ್ಯ ಸದಾ ಬೆಳಗಬೇಕು; ಜಾತಿ ಎಂಬ ಸೂತಕ, ಸ್ವಾರ್ಥವೆಂಬ ಮೈಲಿಗೆಗಳನ್ನು ಕಳಚಿ ದೂರ ಬಿಸಾಡಬೇಕು. ದೇಶ, ಭಾಷೆ, ಮತ, ಮತವನ್ನು ಬೆಂಬಲಿಸುವ ವಿಚಿತ್ರ ದೈವ ನಿರ್ಮಾಣ ಇವೆಲ್ಲವುಗಳಿಗೂ ಅತೀತವಾಗಬೇಕು. ಸಂಕುಚಿತತೆಯ. ಸಂಕೋಲೆಯಲ್ಲಿ ಸ್ಥಗಿತವಾಗಬಾರದು, ಅವನು ವಿಶ್ವಾತ್ಮನಾಗಬೇಕು, ವಿಶ್ವಮಾನವನೆನಿಸಬೇಕು.

ಆದರೆ ವಾಸ್ತವತೆಯನ್ನು ಮರೆತು ಮೆರೆಯಬೇಕೆಂದು ಅರ್ಥವಲ್ಲ. ನೆಲ ಬಿಟ್ಟು ಸಾಧನೆ ಇಲ್ಲ, ಪಂಚಭೂತಗಳಾದ ಗಾಳಿ, ನೀರು, ನೆಲ, ಬೆಳಕು, ಆವರಣ ಇವುಗಳನ್ನು ಬಿಡಲು ಬರುವುದಿಲ್ಲ, ಅವುಗಳನ್ನೇ ಬಳಸಿಕೊಂಡು ಮಾನವ ಬೆಳೆಯುಬೇಕು, ಬೆಳಗಬೇಕು.

'ಬಯಲು ಬೆಂಕಿಯನೊಡೆದು ನೀರು ಗಾಳಿಯ ಸೀಳಿ,
ಮಣ್ಣಮುಚ್ಚಳ ತೆರೆದು ಮೂಡಿಹುದು ಮೂಡಿಹುದು,
ಪ್ರಾಣವಿಲ್ಲದ ಪಂಚಭೂತ ಗರ್ಭವ ದಾಟಿ
ಉದ್ಭವಿಸಿ ತೋರಿಹುದು ನವ್ಯ ನಿರ್ಮಾಣ.

-ಪುಟ 249

ಈ ಪರಿಭಾವನೆಯೇ ಇಲ್ಲಿಯ ಭವ್ಯತೆಯಾಗಿದೆ.

ಹೇಗೆ ಸ್ವಪ್ರಕಾಶಿತ ವಸ್ತುವಾದ ಸೂರ್ಯನಿಂದ ಸಕಲ ಸೃಷ್ಟಿ ಅಂಕುರಿಸಿತೊ ಹಾಗೆ ಮಾನವನ ಮೇಧಾವಿತನದಿಂದ ವಿಶ್ವ ಜಗತ್ತಿನ ಸಮಗ್ರ ಪ್ರಗತಿ; ಸರ್ವೋತ್ಕೃಷ್ಟಸಾಧನೆ. ಅವನ ಸಾಹಸ ಸೀಮೆಯರಿಯದ್ದು. ಭೂಮಿಯಿಂದ ಭೂಮದವರೆಗೆ, ಅಣುವಿನಿಂದ ಘನದವರೆಗೆ, ಸೂರ್ಯ, ಚಂದ್ರ, ತಾರಾ ನಿಹಾರಿಕೆಗಳನ್ನು ಸುತ್ತಿಬರಬಲ್ಲ ಅದಮ್ಯ ಪ್ರವೃತ್ತಿ ಅದರದು. ಚಂದ್ರಲೋಕಕ್ಕೆ ಚೈತ್ರಯಾತ್ರೆ ಹೋಗಿ, ಚುಕ್ಕೆಗಳ ಕೂಡೆ ಚಕ್ಕಂದ ಆಡಿಬರುವ ಪ್ರಚಂಡ ಸಾಹಸಿ ಇದ್ದಾನೆ ಇಂದು ಮಾನವ. ಸುರಲೋಕವನ್ನು ನಿರ್ಮಿಸಿದವನೂ ಅವನೇ, ಸ್ವರ್ಗವನ್ನು ಭೂಮಿಗಿಳಿಸಿದವನೂ ಅವನೇ, ರಾಕೆಟ್ ಹಡೆದವನೂ ಅವನೇ, ರಾಮಾಯಣವನ್ನು ಬರೆದವನೂ ಅವನೇ, ಗೀತೆಯನ್ನು ಬರೆದವನೂ ಅವನೇ, ಗೆಲಾಕ್ಸಿಯಲ್ಲಿ ವಿಹರಿಸುವವನೂ ಅವನೆ, ಬುದ್ಧ, ಬಸವ, ಶಂಕರ, ಏಸು, ಪೈಗಂಬರ್, ಜೊರಾತುಷ್ಟ್ರ ಎಲ್ಲರೂ ಮಾನವರೆ. ಆದರೆ ತಮ್ಮ ಸೇನೆ, ಸಾಧನೆಗಳಿಂದಾಗಿ ಮಹಾಮಾನವರಾದವರು. ಮಾನವನಿಗೆ ಅಸಾಧ್ಯವೆಂಬುದೇ ಇಲ್ಲ. ಅವನೇ ಎಲ್ಲ ಸೃಷ್ಟಿ, ಸ್ಥಿತಿ, ಲಯಕಾರರ ಪ್ರತಿರೂಪಿಯಾಗಿ ನಿಂತಿದ್ದಾನೆ ಇಂದು ಮಾನವ. ಅವನ ಸಾಹಸದ ಕಕ್ಷೆಗೆ ಅಳವಡದ ಕಾರ್ಯವೇ ಇಲ್ಲ. ತಾನೆಲ್ಲವನ್ನೂ ಸಾಧಿಸಿ ತೋರಿಸುವ, ಸಿದ್ಧಿಸಿಕೊಳ್ಳುವ ಪ್ರಚಂಡ ಸಾಹಸ ಪ್ರವೃತ್ತಿ ಅವನಲ್ಲಿದೆ. ಮನ ಬಂದರೆ ಬದುಕು ಕೊಡಬಲ್ಲ, ಬೇಡವಾದರೆ ಅದನ್ನು ಕಿತ್ತುಕೊಳ್ಳಲೂ ಬಲ್ಲ. ಆದ್ದರಿಂದ ಮಾನವ ಸರ್ವೋತ್ತಮನಾಗಿದ್ದಾನೆ.

ಸಾಗರದ ತೆರೆ ಮಸಗಿ ಮುಖವನಪ್ಪಳಿಸಿದರು,
ಮೀನು, ಮೊಸಳೆಗಳೆದ್ದು ನುಂಗ ಬರಲಿ,
ಬಿರುಗಾಳಿ ಬೀಸಲಿ ಆಕಾಶ ಗುಡುಗಲಿ,
ಪ್ರಳಯ ಕಾಲದ ಮೋಡ ಒಡೆದು ಬೀಳಲಿ ಮೇಲೆ.
ಕತ್ತಲೆಯ ಸಾಗರವನೀಸುತ್ತ ಮೇಲುಗಡೆ
ನಿಜ ಬೆಳಗು ಮೆಲ್ಲಮೆಲ್ಲಗೆ ಕಂದೆರೆವ ಕಡೆ
ಉರಿ ಬರಲಿ, ಸಿರಿ ಬರಲಿ, ದಿವ್ಯಭವ್ಯದ ಕಡೆ
ಸರ್ವಾಂಗದೊಳು ತನ್ನ ಎಚ್ಚರದೊಳಿರ್ದು
ಮೇಲೇರಿ ಈಸಿಹನು ನಿಜನಿರಾಳದ ಕಡೆ. - ಪುಟ 288

ಆದ್ದರಿಂದ ಶಿವ ಸರ್ವೋತ್ತಮನಲ್ಲ, ವಿಷ್ಣು ಸರ್ವೋತ್ತಮನಲ್ಲ ಯಾವ ಕಲ್ಪನೆಯ ಕುಸುಮವೂ ಸರ್ವೋತ್ತಮ ಅಲ್ಲ; ಮಾನವ ಸರ್ವೋತ್ತಮ; ಸರ್ವಶ್ರೇಷ್ಠ! ಅವನು ಬಯಲುಬ್ರಹ್ಮ, ವಿಯನ್ ಪುರುಷ, ವಿರಾಟ್ ಪುರುಷ,

ಶಿವನು ಆಡಿದ ಲೀಲೆ ಕೃಷ್ಣ ಮಾಡಿದ ಕ್ರೀಡೆ,
ಜೈನ ತೀರ್ಥಂಕರರು ಗೌತಮ ಮಹಾಬುದ್ಧ
ಮನು ಮುನೀಶ್ವರ ತಪಸ್ವಿಗಳು ದ್ರಷ್ಟಾರರು
ಕಣ್ಣ ಮುಂದಿರುವರೇ? ನಡೆ ನಡೆಯುತಿಹರೆಂತು?
ವರ್ತಮಾನವು ಅಂತೆ ವರ್ತಿಷ್ಯಮಾನವು
ಹೀಗೆ ಮೂಡುತಲಿಹುದು ಬೆಳೆದಾಡುತಿಹುದೆಂತು? - ಪುಟ 233

ಇಂತಹ ನಿತ್ಯಸಾಕ್ಷಿಯಾಗಿ ನಿಂತವನು ಮಾನವ. ಈ ಬಗೆಯ ಮಾನವ ಪಾರಮ್ಯ ಪ್ರತಿಪಾದನೆಯೇ ಭವ್ಯ ಮಾನವ ದರ್ಶನ ಅಥವಾ ಕವಿ ಕಂಡು ಕಂಡರಿ ಸಿದ ಆಧುನಿಕತೆ. ಇದು ಇಂದು ಇದ್ದು ನಾಳಿನ ಕಡೆಗೆ ಕೈಚಾಚು ವಂತಹದು. ಇದು ಹೊಸಗನ್ನಡದ ಹೊಸ ಕಾವ್ಯ.

**4**

ಗ್ರಂಥಸಂಪಾದನೆ ಶಾಸ್ತ್ರವೂ ಹೌದು, ಕಲೆಯೂ ಹೌದು. ಹತ್ತಾರು ಹಸ್ತಪ್ರತಿ ಗಳನ್ನಿಟ್ಟುಕೊಂಡು ಅವುಗಳನ್ನು ವಂಶಾನುಕ್ರಮವಾಗಿ ಜೋಡಿಸಿ ಕೊಂಡು, ಪ್ರತಿಯೊಂದಕ್ಕೂ ಒಂದೊಂದು ಸಂಕೇತವಿತ್ತು ಪಾಠಗಳನ್ನು ಓದಿ, ಸ್ವೀಕೃತ ಪಾಠವನ್ನು ಪ್ರಸಿದ್ಧಿಸಿ, ಅದರ ಔಚಿತ್ಯದ ಬಗ್ಗೆ ಸಮರ್ಥನೆ ನೀಡಿ ಪ್ರಕಟಿಸುವವರೆಗಿನ ಹೊಣೆ ಗ್ರಂಥಸಂಪಾದನಕಾರದು. ತಾನು ಸಂಪಾದಿಸಿದ ಕೃತಿಯ ಚೆಲುವು-ಚೆದುರುಗಳನ್ನು ಹೆಕ್ಕಿ ಪಾತ್ರಗಳನ್ನು ತೆರೆದು ಕವಿಯ ಧ್ಯೇಯ, ಧೋರಣೆ ದರ್ಶನಾದಿಗಳನ್ನು ಎಳೆಎಳೆಯಾಗಿ ತೆಗೆದು ತೋರುವಲ್ಲಿ ಒಂದು ಪ್ರಸ್ತಾವನೆ ಸಿದ್ಧವಾಗುತ್ತದೆ. ಅದು ಗ್ರಂಥಸಂಪಾದನ ಕಾರನ ಸ್ವೋಪಜ್ಞತೆಗೆ ನಿಂತ ಜ್ವಲಂತ ನಿದರ್ಶನವಾಗುತ್ತದೆ. ಗ್ರಂಥಕಾರನನ್ನು ಗುರುತಿಸುವಲ್ಲಿ ಸ್ಖಾಲಿತ್ಯಗಳನ್ನು ಸರಿಪಡಿಸುವಲ್ಲಿ ಅವನ ಪ್ರತಿಭೆ ಸದಾ ಎಚ್ಚೆತ್ತಿರುತ್ತದೆ. ಅವನ ಕರ್ತವ್ಯ ಅತ್ಯಂತ ಜವಾಬ್ದಾರಿಯಿಂದ ಕೂಡಿದ್ದು, ತಾನೂ ಉಳಿದು ಪೂರ್ವಕವಿಯನ್ನೂ ಬದುಕಿಸಬೇಕಾಗುತ್ತದೆ. ಅಂತೆಯೇ ಅವನಲ್ಲಿ ಪರಕಾಯ ಪ್ರವೇಶ ಮಾಡಬಲ್ಲ ಅಸಾಮಾನ್ಯ ವಿದ್ಯೆಯು ಇರಬೇಕು. ಆಗಲೇ ಅವನ ಕಾರ್ಯ ಮೆಚ್ಚಿತವಾಗುವುದು. ಪ್ರತಿಭೆ, ವ್ಯುತ್ಪತ್ತಿ, ಅಭ್ಯಾಸಗಳೆಂಬ ಕಾವ್ಯ ಹೇತುಗಳು ಕಲೆಗಷ್ಟೇ ಮೀಸಲಲ್ಲ. ಗ್ರಂಥ ಸಂಪಾದಕನಿಗೂಬೇಕು. ರಾಜಶೇಖರನು ಹೇಳುವಂತೆ ಚಿತ್ತ ಸ್ವಾಸ್ಥ್ಯ, ಪ್ರತಿಭೆ, ಅಭ್ಯಾಸ, ಭಕ್ತಿ, ವಿದ್ವತ್ತು, ಬಹುಶ್ರುತತ್ವ, ಗಾಢವಾದ ಸ್ಮೃತಿಶಕ್ತಿ, ಅದಮ್ಯ ಉತ್ಸಾಹ – ಈ ಅಷ್ಟಮಾತೃಕೆಯರು ಸೃಜನಶೀಲ ಕವಿಯ ತಾಯಂದಿರು. ಇವರು ಗ್ರಂಥಸಂಪಾದಕನ ಮಾತೆಯರೂ ಹೌದು.

ಈ ಹಿನ್ನೆಲೆಯಲ್ಲಿ ಭೂಸನೂರಮಠರ ಕೆಲವು ಸಂಪಾದಿತ ಕೃತಿಗಳ ಮೇಲೆ ನಮ್ಮ ದೃಷ್ಟಿ ಹರಿಸೋಣ.

ಘನಮಠದ ಶಿವಯೋಗಿಗಳು ಬರೆದ ಹತ್ತಾರು ತತ್ತ್ವಪದಗಳ ಸುಂದರ ಸಂಗ್ರಹವೇ 'ಭಕ್ತಿಸುಧಾಸಾರ'. ಭಕ್ತಿ ಇಲ್ಲಿ ಭಾಗೀರಥಿಯಾಗಿ ಹರಿದಿದೆ. ಘನಮಠಾರ್ಯರ ಸಂಗೀತಪ್ರಜ್ಞೆಗೆ ಇದು ಸಾಕ್ಷಿಯಾಗಿದೆ. ಇದನ್ನು 'ಭಕ್ತಿ ಸುಧಾಸಾರ' ಎನ್ನುವುದಕ್ಕಿಂತ 'ಘನಮಠಾರ್ಯರ ತತ್ತ್ವಪದಗಳು' ಎಂದಿದ್ದರೆ ಒಳಿತಿತ್ತು ಎಂದು ಅಭಿಪ್ರಾಯಪಟ್ಟಿದ್ದಾರೆ ಸಂಪಾದಕರು.

ಕ್ರಿ.ಶ. 1650ರದ್ದೆಂದು ಹೇಳುವ ಸಿದ್ಧನಂಜೇಶನ 'ಗುರುರಾಜ ಚಾರಿತ್ರ' ಒಂದು ಧಾರ್ಮಿಕ ಗ್ರಂಥ. ಇದು ವೀರಶೈವದ ಒಂದು ಇತಿಹಾಸ ಗ್ರಂಥವೂ ಹೌದು. ಹನ್ನೆರಡನೆಯ ಶತಮಾನದ ವೀರಶೈವ, 15ನೇ ಶತಮಾನದ ವಿರಕ್ತಪಂಥ, ಅನಂತರದ ಅದರ ಬೆಳವಣಿಗೆ ಇತ್ಯಾದಿಗಳನ್ನು ಕುರಿತು ಬರೆದಿದ್ದಾನೆ ಸಿದ್ಧನಂಜೇಶ. ಸಂಪಾದಕ ಭೂಸನೂರಮಠರು ಇದಕ್ಕೆ ತೊಂಬತ್ತು ಪುಟಗಳಷ್ಟು ಸವಿಸ್ತಾರ ಪ್ರಸ್ತಾವನೆ ಬರೆದಿದ್ದಾರೆ.

ಕ್ರಿ.ಶ.1525ರವನೆನ್ನಲಾದ ಕವಿ ಗೌರಾಂಕನ 'ಮೋಳಿಗಯ್ಯನ ಪುರಾಣ' ಮತ್ತೊಂದು ವೀರಶೈವ ಧಾರ್ಮಿಕ ಗ್ರಂಥ. ಈ ಸಾಂಗತ್ಯ ಕೃತಿಗೆ ವಿಸ್ತೃತ ಪ್ರಸ್ತಾವನೆ ಬರೆಯುತ್ತಾ ಸಂಪಾದಕರು ಸಾಂಗತ್ಯ ಛಂದಸ್ಸಿನ ಅನೇಕ ಮಗ್ಗುಲು ಗಳನ್ನು ಪರಿಚಯಿಸಿದ್ದಾರೆ. ರೆ. ಉತ್ತಂಗಿಯವರ ಸಹ ಸಂಪಾದಕತ್ವದಲ್ಲಿ ಮೋಳಿಗೆ ಮಾರಯ್ಯ ಮತ್ತು ರಾಣಿ ಮಹಾದೇವಿಯವರ ವಚನಗಳನ್ನು ಅಚ್ಚು ಕಟ್ಟಾಗಿ ಸಂಕಲಿಸಿಕೊಟ್ಟಿದ್ದಾರೆ.

ವಿಜಯನಗರದ ಸಾಮ್ರಾಟ ಇಮ್ಮಡಿ ಪ್ರೌಢದೇವರಾಯನ ಕಾಲ [1419-1446] ವೀರಶೈವ ಧರ್ಮ, ಸಾಹಿತ್ಯ ಸಂಸ್ಕೃತಿಗಳ ಪುನರುತ್ಥಾನದ ಕಾಲ. ಅಂದು ಬೆಳಕು ಕಂಡ ಕೃತಿಗಳಲ್ಲಿ ಕಲ್ಲುಮಠದ ಪ್ರಭುದೇವನ 'ಲಿಂಗಲೀಲಾವಿಲಾಸ ಚಾರಿತ್ರ'ವನ್ನೂ, ಜಕ್ಕಣಾರ್ಯನ 'ಏಕೋತ್ತರ ಶತಸ್ಥಲ' ವನ್ನೂ ಸಂಪಾದಿಸಿ, ಪ್ರಸಿದ್ಧಿಸಿದ್ದಾರೆ ಭೂಸನೂರ ಮಠರವರು.

ಮೇಲಿನವೆರಡೂ ವೀರಶೈವಪರವಾದ ಧಾರ್ಮಿಕ ಗ್ರಂಥಗಳು. ಅವು ಗಳೊಡನೆ ಸೇರುವ ಮತ್ತೊಂದು ಮಹತ್ವದ ಗ್ರಂಥ, ಕ್ರಿ.ಶ. 1525ರಲ್ಲಿದ್ದ ಅದೃಶ್ಯಕವಿಯ 'ಪ್ರೌಢರಾಯನ ಕಾವ್ಯ'. ಸಂಪಾದಕರು ಇದಕ್ಕೆ ಒಂದು ಸುದೀರ್ಘ ಪ್ರಸ್ತಾವನೆ ಬರೆದಿದ್ದಾರೆ; ಆಧುನಿಕ ರೀತಿಯ ವೈಜ್ಞಾನಿಕ ಗ್ರಂಥ ಸಂಪಾದನೆಗೆ ಇದು ಮಾದರಿಯಾಗಿದೆ.

ಭೂಸನೂರಮಠರು ಶ್ರೇಷ್ಠ ವಿದ್ವಾಂಸರು, ಬಹುಶ್ರುತರು, ಸಮರ್ಥ ಗ್ರಂಥ ಸಂಪಾದನಕಾರರು ಎಂಬುದಕ್ಕೆ ಗೂಳೂರು ಸಿದ್ಧವೀರಣ್ಣೊಡೆಯನ ಶೂನ್ಯಸಂಪಾದನೆ ನೋಡಬೇಕು. ಪಾಠ ಪರಿಷ್ಕರಣದಲ್ಲಿ, ಪಾಠ ನಿರ್ವಹಣೆ ಯಲ್ಲಿ, ಕಾಲ, ದೇಶ, ನಿರ್ಣಯದಲ್ಲಿ ತುಂಬಾ ಖಚಿತತೆ ಇದೆ. ಅಧ್ಯಯನ ದಲ್ಲಿ ಅಚ್ಚುಕಟ್ಟಿದೆ. ಇದರ ಜೊತೆಯಲ್ಲೆ ವಿವೇಚಿಸಬೇಕಾದ ಕೃತಿ ಶೂನ್ಯ ಸಂಪಾದನೆಯ ಇಂಗ್ಲಿಷ್ ಅನುವಾದ. ಪ್ರೊ. ಮೆನೆಜಿಸ್‌ರವರ ಸಹಯೋಗ ದಲ್ಲಿ ಶ್ರೇಷ್ಠಮಟ್ಟದ ಭಾಷಾಂತರ ಸಂಪುಟಗಳನ್ನು ಹೊರ ತಂದಿದ್ದಾರೆ ಭೂಸನೂರಮಠರವರು.

ಅರವತ್ತಾರು ವಚನಕಾರರ 2,139 ವಚನಗಳ ಬೃಹದ್‌ಸಂಗ್ರಹ, ವಚನ ಸಾಹಿತ್ಯಸಂಗ್ರಹ. ಔಚಿತ್ಯಪೂರ್ಣ ಶೀರ್ಷಿಕೆಗಳೊಂದಿಗೆ ಇಪ್ಪತ್ತೊಂದು ಅಧ್ಯಾಯಗಳಲ್ಲಿ ಇದನ್ನು ಯೋಜಿಸಿದ್ದಾರೆ.

ಇಂತಹ ವೈಜ್ಞಾನಿಕ ಸಂಪಾದನ, ತಲಸ್ಪರ್ಶಿ ಅಧ್ಯಯನ ಇವುಗಳಿಂದಾಗಿ ಪ್ರೊ. ಭೂಸನೂರಮಠರು ನಿಷ್ಠಾವಂತ ಸಂಶೋಧಕ, ಪ್ರಾಮಾಣಿಕ ಗ್ರಂಥ ಸಂಪಾದನಕಾರ, ವಸ್ತುನಿಷ್ಠ ದೃಷ್ಟಿಯುಳ್ಳ ವಿಮರ್ಶಕ ಹಾಗೂ ದಾರ್ಶನಿಕ ಕವಿ ಎಂಬ ಗೌರವಕ್ಕೆ ಪಾತ್ರರಾಗಿದ್ದಾರೆ. ಇವರು ಪರಿಚಿತರಿಗೆ ಪ್ರಕಾಂಡ ಪಂಡಿತರು, ಅಪರಿಚಿತರಿಗೆ ಸಾಕ್ಷಾತ್ ಮರುಳುಶಂಕರದೇವ !

ಮೌಲಿಕ ಕೊಡುಗೆಯಿತ್ತ ಭೂಸನೂರಮಠರ ಸ್ಥಾನ ನಿರ್ದೇಶನ ಸಂದಿಗ್ಧ ಅಲ್ಲ. ಅವರು ಭಾವುಕ ಕವಿಯಾಗಿದ್ದಾರೆ, ಚಿಕಿತ್ಸಾ ಚತುರ ವಿಮರ್ಶಕರಿದ್ದಾರೆ. ಪ್ರತಿಭೆ, ವ್ಯುತ್ಪತ್ತಿಗಳೆರಡನ್ನೂ ಸಮಪ್ರಮಾಣದಲ್ಲಿ ದುಡಿಸಿಕೊಂಡು, ಅವುಗಳ ಮೂಲಕ ಸಂಶೋಧನೆಗೆ ಜೀವ ತುಂಬುವ ದಕ್ಷತೆಯೂ ಅವರಲ್ಲಿದೆ. ಅವರು ತುಂಬು ಅನುಭಾವಿಗಳು. ಅನುಭಾವವೇ ಅವರ ಮಹಾಕಾವ್ಯದ ಜೀವರಸ. ಅನುಭಾವದಾಗರವಾದ ವಚನಸಾಹಿತ್ಯ ಅವರ ಅನುಭೂತಿಗೆ ಪ್ರೇರಕವೂ ಹೌದು, ಪರಿಣಾಮವೂ ಹೌದು. ಶೂನ್ಯಸಂಪಾದನೆಯ ಪರಿಷ್ಕರಣ ಸಂದರ್ಭದಲ್ಲಿ ಅವರು ನಿಜಕ್ಕೂ ಶರಣಸ್ಥಲದ ಶರಣರಾಗಿ ಗೋಚರಿಸುತ್ತಾರೆ. ಶಿವಯೋಗ ಅವರ ಪಾಲಿಗೆ ಸಹಜಯೋಗ ! ಅದರಿಂದಾಗಿ ವಚನವೈಭವವನ್ನು ಗುರುತಿಸುವೆಡೆಯಲ್ಲಿ ಭೂಸನೂರಮಠರ ದುಡಿಮೆಯನ್ನು ಮರೆಯಲಾಗದು.

ಸಂಶೋಧನೆ ಮತ್ತು ಗ್ರಂಥಸಂಪಾದನೆಗಳಲ್ಲಿ ಅವರದು ಬಹು ದೊಡ್ಡ ಹೆಸರು. ಹಳಗನ್ನಡ ಕಾವ್ಯಗಳನ್ನು ಅಚ್ಚುಕಟ್ಟಾಗಿ ಸಂಪಾದಿಸಿಕೊಡುವಲ್ಲಿ ಅವರು ಅದ್ವಿತೀಯರು. ಆ ಕ್ಷೇತ್ರದಲ್ಲಿ ಕೃಷಿಮಾಡಬಯಸುವವರಿಗೆ ಭೂಸನೂರಮಠರು ಆದರ್ಶಮಾರ್ಗದರ್ಶಕರು. ಪ್ರಾಚೀನ ಕಾವ್ಯಗಳನ್ನು, ಅವುಗಳ ವಂಶಾನುಕ್ರಮದಲ್ಲಿ ಜೋಡಿಸಿಕೊಂಡು, ಅಧ್ಯಯನ ಯೋಗ್ಯ ಸಂಕೇತಗಳನ್ನಿಟ್ಟುಕೊಂಡು, ಸ್ಖಾಲಿತ್ಯವಿದ್ದೆಡೆಯಲ್ಲಿ ಸೂಕ್ತ ಶಬ್ದವನ್ನು ಪ್ರತಿಯೋಜಿಸಿ, ಅದಕ್ಕೊಂದು ಅರ್ಥಪೂರ್ಣ ಪ್ರಸ್ತಾವನೆಯನ್ನು ಬರೆದು, ಉಪಯುಕ್ತ ಅರ್ಥಕೋಶದೊಂದಿಗೆ ಗ್ರಂಥವನ್ನು ಪರಿಷ್ಕರಿಸಿ, ಪ್ರಕಟಿಸುತ್ತಾರೆ. ಪ್ರತಿ ಸಂಪಾದನಗ್ರಂಥವೂ ಅವರ ವಸ್ತುನಿಷ್ಠ ವಿಮರ್ಶೆಯಿಂದಾಗಿ ತನ್ನ ತೂಕವನ್ನು ಹೆಚ್ಚಿಸಿಕೊಂಡಿದೆ. ಅಂದ ಮೇಲೆ ಅವರನ್ನು ಗ್ರಂಥಸಂಪಾದನೆಯಲ್ಲಲ್ಲದೆ ಬೇರೆಲ್ಲಿ ಗುರುತಿಸಲು ಸಾಧ್ಯ?

❑

## ಜಯಲಕ್ಷ್ಮಿ ಶ್ರೀನಿವಾಸ್

ಡಾ. ನಿರುಪಮಾ

ಇಪ್ಪತ್ತನೇ ಶತಮಾನದ ಆರಂಭಿಕ ಪಾಶ್ಚಾತ್ಯ ಸಾಹಿತ್ಯ ಹಾಗೂ ಸಂಸ್ಕೃತಿಗಳ ಪ್ರಭಾವದಿಂದ ರೂಪುಗೊಂಡ ನವೋದಯ ಸಾಹಿತ್ಯ, ಈ ನೆಲದ ಒತ್ತಾಸೆಗಳನ್ನು ಮೈಗೂಡಿಸಿಕೊಂಡು ಹಂತಹಂತವಾಗಿ ಬೆಳೆಯ ತೊಡಗಿತ್ತು. ಅಂದಿನ ದಿನಗಳಲ್ಲಿ ಸಮಗ್ರ ಭಾರತದ ಸವಾಲಾಗಿದ್ದ ಸ್ವಾತಂತ್ರ್ಯಾಕಾಂಕ್ಷೆಯ ಅಲೆ ದೇಶಾದ್ಯಂತ ಹರಡಿ ಸೂಕ್ಷ್ಮಸಂವೇದಿಗಳಾದ ಕವಿಗಳನ್ನೂ, ಸಾಹಿತಿಗಳನ್ನೂ ಹೋರಾಟಕ್ಕೆ ಸಜ್ಜುಗೊಳಿಸಿತ್ತು. ಜೊತೆಗೆ ಅಂದಿನ ಸಮಾಜದಲ್ಲಿ ವ್ಯಾಪಕವಾಗಿದ್ದ ವರ್ಣಾಶ್ರಮದ ಕಟ್ಟುನಿಟ್ಟುಗಳು, ಬೇರೂರಿದ್ದ ಸಂಪ್ರದಾಯ ಶರಣ್ಯತೆ, ಮೂಢನಂಬಿಕೆಗಳು ಅತಿಯಾಗಿ ಮಹಿಳೆಯರ ಬದುಕನ್ನು ನರಕಸದೃಶವಾಗಿ ಮಾಡಿದ್ದವು. ಸಮಾಜ ಸುಧಾರಕರನೇಕರು ದುಷ್ಟಪದ್ಧತಿಗಳನ್ನು ಚಳುವಳಿಗಳ ಮೂಲಕ ತೊಡೆದು ಹಾಕಲು ಕಂಕಣಬದ್ಧರಾದರು.

ಈ ಹಿನ್ನೆಲೆಯಲ್ಲಿ ಭಾರತದ ಇತರ ಭಾಷೆಗಳಂತೆ ಕನ್ನಡ ಸಾಹಿತ್ಯವು ರೂಪು - ರೀತಿಗಳೆರಡರಲ್ಲಿಯೂ ಒಂದು ಕ್ರಾಂತಿಕಾರಕ ಬದಲಾವಣೆಯನ್ನು ಪಡೆಯಿತು. 19ನೇ ಶತಮಾನದ ಅಂತ್ಯದವರೆಗೂ ಧಾರ್ಮಿಕ ಹಾಗೂ ಆಧ್ಯಾತ್ಮಿಕ ನೆಲೆಯಲ್ಲಿ ಬಹುತೇಕ ಕಾವ್ಯ ಪ್ರಕಾರದಲ್ಲಿಯೇ ರಚಿತವಾಗುತ್ತಿದ್ದ ಕನ್ನಡ ಸಾಹಿತ್ಯ ಕಾಲಕ್ರಮೇಣ ಈ ಹೊಸದೃಷ್ಟಿ, ಹೊಸ ಹೊಸ ಬಗೆಯ ಚಿಂತನೆ, ಆದರ್ಶಗಳನ್ನು ಮೈಗೂಡಿಸಿಕೊಂಡು ಅರಳತೊಡಗಿತು. ಹೀಗಾಗಿ ಅಂದಿನ ಲೇಖಕರಿಗೆ ದೇಶಪ್ರೇಮ, ದೇಶಭಕ್ತಿ, ಬ್ರಿಟಿಷರನ್ನು ತೊಲಗಿಸುವತ್ತ ತೀವ್ರ ರೀತಿಯ ತುಡಿತ, ಸ್ವಾತಂತ್ರ್ಯಾಕಾಂಕ್ಷೆ, ಕುಲಮತ ಭೇದಗಳ ನಿರ್ಮೂಲನೆ ಇವುಗಳ ಜೊತೆಗೆ ಬಾಲ್ಯವಿವಾಹ, ವಿಷಮ ವಿವಾಹಗಳನ್ನು ಖಂಡಿಸಿ ವಿಧವಾವಿವಾಹವನ್ನು ಪ್ರೋತ್ಸಾಹಿಸುವುದು - ಇವೇ ಅವರ ಸಾಹಿತ್ಯದ ಪ್ರಮುಖ ವಸ್ತುಗಳಾದವು. ಒಟ್ಟಿನಲ್ಲಿ ಅಂದಿನ ಲೇಖಕರು ಸಮಾಜದ ಆದರ್ಶವನ್ನೇ ತಮ್ಮ ಆದರ್ಶವನ್ನಾಗಿ ಸ್ವೀಕರಿಸಿದ್ದರು. ಹೀಗಾಗಿ ಅಂದಿನ ಸಮಾಜಸುಧಾರಣೆಯ ಕ್ರಾಂತಿಯಲ್ಲಿ ಸಾಹಿತ್ಯವೂ ತನ್ನ ಪಾತ್ರವನ್ನು ನಿರ್ವಹಿಸಿತು. ಆ ಕಾಲದಲ್ಲಿ ಬಂದ ಸಾಹಿತ್ಯ ಅಂದಂದಿನ ಸಮಾಜದ ಜೀವನವನ್ನೂ ಪ್ರತಿಬಿಂಬಿಸುತ್ತ ಜನರಲ್ಲಿನ ಮೂಢನಂಬಿಕೆಗಳನ್ನು ಹೋಗಲಾಡಿಸುವ ಪ್ರಯತ್ನ ಮಾಡಿತು. ಈ ಅವಧಿಯಲ್ಲಾದ ಸ್ತ್ರೀ ಸುಧಾರಣಾ ಚಳುವಳಿಯ ಫಲವಾಗಿ ಹಲವಾರು ಮಹಿಳೆಯರು ಶಾಲಾ ಕಾಲೇಜುಗಳಿಗೆ ಹೋಗಿ ವಿದ್ಯಾವಂತರಾದರು. ಜನರನ್ನು ಜಾಗೃತಗೊಳಿಸಲು ಕೆಲಮಹಿಳೆಯರು ಸಾಹಿತ್ಯರಚನೆಗೆ ತೊಡಗಿದರು. ಈ ಕಾಲದಲ್ಲಿ ಬರೆಯತೊಡಗಿದ

ನಂಜನಗೂಡಿನ ತಿರುಮಲಾಂಬಾರಿಂದ ಹಿಡಿದು ಆರ್. ಕಲ್ಯಾಣಮ್ಮ, ಶ್ಯಾಮಲಾ ಬೆಳಗಾಂವ್‌ಕರ್, ಬೆಳಗೆರೆ ಜಾನಕಮ್ಮ, ಸರಸ್ವತಿ ರಾಜವಾಡೆ, ತಿರುಮಲೆ ರಾಜಮ್ಮ, ಕೊಡಗಿನ ಗೌರಮ್ಮ, ಜಯಲಕ್ಷ್ಮಿ ಶ್ರೀನಿವಾಸನ್ ಮುಂತಾದವರು ದೇಶಭಕ್ತಿಯ ಜೊತೆಗೆ ವಿಗ್ರಹಾರಾಧಕರ ಶಾಠ್ಯತೆಯನ್ನೂ ಬಾಲ್ಯವಿವಾಹ, ವಿಷಮವಿವಾಹಗಳನ್ನು ಖಂಡಿಸುತ್ತ ಪ್ರಚಲಿತ ಸಾಮಾಜಿಕ ಮೌಲ್ಯಗಳ ಹಾಗೂ ಮೂಢನಂಬಿಕೆಗಳ ಬಗೆಗೆ ಚಿಕಿತ್ಸಕ ದೃಷ್ಟಿಯಿಂದ ನೋಡಿ ಕಥೆ, ನಾಟಕ, ಕಾದಂಬರಿ, ಕವನಗಳನ್ನು ಬರೆದರು.

ಶ್ರೀಮತಿ ಜಯಲಕ್ಷ್ಮಿ ಶ್ರೀನಿವಾಸನ್ 1911ರ ಡಿಸೆಂಬರ್ 12ರಂದು ಶ್ರೀಮತಿ ಸೀತಾಲಕ್ಷ್ಮಿ ಮತ್ತು ಶ್ರೀ ಎ.ವಿ. ರಾಮನಾಥನ್ ದಂಪತಿಗಳಿಗೆ ಹಿರಿಯ ಮಗಳಾಗಿ ಜನಿಸಿದರು. ಈಕೆಯ ತಂದೆ ರಾಜಮಂತ್ರಪ್ರವೀಣ ವಿ.ವಿ. ರಾಮನಾಥನ್ ಮೈಸೂರು ಸಂಸ್ಥಾನದ ಮೆಂಬರ್ ಆಫ್ ಕೌನ್ಸಿಲ್ ಆಗಿದ್ದು ನಿವೃತ್ತಿ ಹೊಂದಿದ ಬಳಿಕ ಭರತಪುರ ಸಂಸ್ಥಾನದ ದಿವಾನರಾಗಿದ್ದರು.

ಜಯಲಕ್ಷ್ಮಿಯವರ ಮನೆಮಾತು ತಮಿಳಾಗಿದ್ದು ತಾಯಿ ತಮಿಳುನಾಡಿನ ಕಡೆಯವರಾದ್ದರಿಂದ ಬಾಲ್ಯದಲ್ಲಿಯೇ ಜಯಲಕ್ಷ್ಮಿ ತಮಿಳು ಕಲಿತಿದ್ದರು. ತಮ್ಮ ತಾಯಿ ಓದಲು ತರಿಸುತ್ತಿದ್ದ ಪತ್ರಿಕೆಗಳನ್ನೂ, ಕಥೆ ಕಾದಂಬರಿಗಳನ್ನೂ ಓದುತ್ತಿದ್ದರು. ನಂತರ ಶಾಲೆಯಲ್ಲಿ ಕನ್ನಡದಲ್ಲಿ ವಿದ್ಯಾಭ್ಯಾಸವಾಯಿತು. ಜಯಲಕ್ಷ್ಮಿ ತುಂಬಾ ಚಿಕ್ಕವಯಸ್ಸಿನಲ್ಲಿಯೇ ಪುಟ್ಟಪುಟ್ಟ ಪದ್ಯಗಳನ್ನು ಕಥೆಗಳನ್ನು ಬರೆಯುವ ಗೀಳು ಬೆಳೆಸಿಕೊಂಡವರು.

ಜಯಲಕ್ಷ್ಮಿಯ ತಂದೆ ಮೈಸೂರಿನ ಡೆಪ್ಯೂಟಿಕಮಿಷನರ್ ಆಗಿದ್ದಾಗ ಈಕೆಗೆ ಮದುವೆಯಾಯಿತು. ಜಯಲಕ್ಷ್ಮಿ ಹೈಸ್ಕೂಲಿನ ಒಂಬತ್ತನೇ ತರಗತಿಯಲ್ಲಿದ್ದರು. ಈಕೆಯ ಪತಿ ಆಗ್ಗೆ ತುಮಕೂರಿನಲ್ಲಿ ಡೆಪ್ಯೂಟಿ ಕಮಿಷನರ್ ಆಗಿದ್ದ ಎಸ್. ಕುಪ್ಪೆಸ್ವಾಮಿ ಅಯ್ಯರ್ ಹಾಗೂ ಶ್ರೀಮತಿ ಗೌರಮ್ಮ ದಂಪತಿಗಳ ಮಗನಾದ ಕೆ. ಶ್ರೀನಿವಾಸನ್ ಐ.ಎ.ಎಸ್. ಪದವಿಗೇರಿ ನಂತರ ಮೈಸೂರು ಸಂಸ್ಥಾನದ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಹೀಗೆ ಮೊದಲಿನಿಂದಲೂ ಜಯಲಕ್ಷ್ಮಿ ಉನ್ನತ ದರ್ಜೆಯ ಅಧಿಕಾರಿಯ ಮಗಳಾಗಿ ಅಂತಹುದೇ ವಿದ್ಯಾವಂತ ಸಂಪನ್ನ ಕುಟುಂಬ ಸೇರಿದ್ದವರು.

ಮದುವೆಯಾಗಿ ಅತ್ತೆಯ ಮನೆಗೆ ಹೋದ ನಂತರ ತಾನು ಕಥೆ, ಇತ್ಯಾದಿಗಳನ್ನು ಬರೆಯಬಹುದೋ ಬಾರದೋ ಎಂಬ ಶಂಕೆ, ಅಳುಕು ಇತ್ತಂತೆ. ಆದರೆ ಪುಣ್ಯವಶಾತ್ ಈಕೆಯ ಪತಿ ಮತ್ತು ಅತ್ತೆ-ಮಾವ ಈಕೆಯ ಸಾಹಿತ್ಯ ರಚನೆಗೆ ಪ್ರೋತ್ಸಾಹವಿತ್ತಿದ್ದರಿಂದ ಗೃಹಿಣಿಯ ಧರ್ಮದೊಂದಿಗೆ ರಚನಾವ್ಯಾಸಂಗವನ್ನು ಮುಂದುವರೆಸಿದರು. ಮೊದಮೊದಲು ತಮಿಳಿನಲ್ಲಿ ಬರೆಯುತ್ತಿದ್ದ ಜಯಲಕ್ಷ್ಮಿ ಕ್ರಮೇಣ ಪತಿಯ ಪ್ರೋತ್ಸಾಹದಿಂದ ಕನ್ನಡದಲ್ಲೂ ಬರೆದು ಪತ್ರಿಕೆಗಳಿಗೆ ಕಳಿಸತೊಡಗಿದರು. ಕೆಲವೊಮ್ಮೆ ಒಂದೋ ಎರಡೋ ಹಿಂತಿರುಗಿ ಬಂದಾಗ ಅವರ ಪತಿ ಸ್ವತಃ ಉತ್ತೇಜನವಿತ್ತು ಬರೆಸುತ್ತಿದ್ದರು.

ಜಯಲಕ್ಷ್ಮಿ 1929ರಲ್ಲಿ 'ಗ್ರಾಮೋದ್ಧಾರಕ ರಾಮಚಂದ್ರ'ಎಂಬ ಕೃತಿಯನ್ನು ಬರೆದಾಗ ಅದು ಬೆಂಗಳೂರಿನಲ್ಲಿ ಪ್ರಕಟಿತವಾಗುತ್ತಿದ್ದ 'ಅರ್ಥಸಾಧಕ' ಪತ್ರಿಕೆಯಲ್ಲಿ ಪ್ರಕಟಗೊಂಡು ನಂತರ ಪುಸ್ತಕರೂಪದಲ್ಲಿ ಬಂದಿತು. ನಂತರ 'ಸುಶೀಲೆ ಮತ್ತು ಶಿಶುಸಂರಕ್ಷಣೆ'ಎಂಬ ಆರೋಗ್ಯದ ಕುರಿತು ಬರೆದ ಪುಸ್ತಕ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿಯವರು ಪ್ರಕಟಿಸಿ ರಾಜ್ಯಾದ್ಯಂತ ಹಂಚಿದರು. ಈಕೆ ಇದೇ ವಸ್ತುವನ್ನಿಟ್ಟುಕೊಂಡು ತಮಿಳಿನಲ್ಲಿ 'ರಾಮಚಂದ್ರನ್', 'ರುಕ್ಮಿಣಿ' ಎಂಬ ಎರಡು ಕೃತಿಗಳನ್ನು ಬರೆದರು. ಅವು ಸಹ ಇದೇ ಕಾಲದಲ್ಲಿ ಪ್ರಕಟವಾದವು.

ಈಕೆ 'ಮೊಗ್ಗು' ಎಂಬ ಮಕ್ಕಳ ಕಥಾಸಂಕಲನವನ್ನು ಬರೆದಾಗ ಡಾ.ಮಾಸ್ತಿಯವರು ತುಂಬ ಚೆನ್ನಾಗಿದೆ ಎಂದು ಬೆನ್ನುತಟ್ಟಿ ಅದಕ್ಕೆ ಮುನ್ನುಡಿಯನ್ನು ಬರೆದರು. ಶ್ರೀಮತಿ ಜಯಲಕ್ಷ್ಮಿ ಇಂಗ್ಲಿಷ್‌ನಿಂದ 'ಸರೋಜನಳಿನಿ' ಎಂಬ ಜೀವನಚರಿತ್ರೆಯನ್ನು ಈ ಕಾಲದಲ್ಲಿಯೇ ಅನುವಾದ ಮಾಡಿ ಪ್ರಕಟಿಸಿದ್ದರು.

ಈ ಅವಧಿಯಲ್ಲಿಯೇ ಜಯಲಕ್ಷ್ಮಿ, ಕೆ.ಎಸ್. ವೆಂಕಟರಮಣಿ ಅವರ ಸಂಪಾದಕತ್ವದಲ್ಲಿ ಬರುತ್ತಿದ್ದ 'ಭಾರತರಮಣಿ'ವಾರಪತ್ರಿಕೆಗಾಗಿ, ನಾಟಕಗಳನ್ನು, ಸಣ್ಣಕತೆಗಳನ್ನು, ಲಘುಬರಹಗಳನ್ನು ಬರೆಯುತ್ತಿದ್ದರು. ಇವರು ಬರೆದ ಪ್ರತಿಯೊಂದು ಲೇಖನವೂ ಆ ಪತ್ರಿಕೆಯಲ್ಲಿ ಪ್ರಕಟವಾಗಿ ಜನಪ್ರಿಯತೆ ಪಡೆದವು. ಹೀಗಾಗಿ ತಮಿಳು ಸಾರಸ್ವತಲೋಕದಲ್ಲಿ ಈಕೆಯ ಹೆಸರು ಮನೆಮಾತಾಯಿತು.

1930 ರ ಅವಧಿಯಲ್ಲಿ ಮಂಗಳೂರಿನ ಪಂಜೆಮಂಗೇಶರಾಯರು ಪ್ರಕಟಿಸುತ್ತಿದ್ದ 'ಕಂಠೀರವ' ಪತ್ರಿಕೆಯಲ್ಲಿ ಈಕೆಯ ಹಲವಾರು ಲೇಖನ, ಸಣ್ಣಕತೆಗಳನ್ನು, ಎರಡು ಕಾದಂಬರಿಗಳನ್ನು ಪ್ರಕಟವಾದವು, ಇವುಗಳ ಪೈಕಿ 'ಕುಮುದಿನೀ-ಕೃಪಾಶಂಕರ್' ಎಂಬ ಕಾದಂಬರಿಯನ್ನು ಶ್ರೀ ಪಂಜೆಯವರೇ ಪುಸ್ತಕರೂಪದಲ್ಲಿ ಪ್ರಕಟಿಸಿದರು.

ನಂತರ ಮುಂಬಯಿಯಲ್ಲಿ ಪ್ರಕಟವಾಗುತ್ತಿದ್ದ 'ನವಜೀವನ' ಪತ್ರಿಕೆಯ ಬೇಡಿಕೆಯ ಮೇರೆಗೆ ಪ್ರತಿ ತಿಂಗಳೂ ಈಕೆ ಕಥೆ, ಕಾದಂಬರಿ, ಬಿಡಿಲೇಖನಗಳನ್ನು ಕಳುಹಿಸತೊಡಗಿದರು. ಹೀಗಾಗಿ ಅವರ ಹೆಸರು ಕನ್ನಡದಲ್ಲಿ ಓದುಗರಿಗೆ ಚಿರಪರಿಚಿತವಾಯಿತು. ನಂತರ ಧಾರವಾಡದ 'ಜಯಂತಿ, ವಿಶ್ವ ಕರ್ನಾಟಕ, ಜಯಕರ್ನಾಟಕ, ಸಂಯುಕ್ತ ಕರ್ನಾಟಕ'ದವರು ಈಕೆಯ ಲೇಖನಗಳನ್ನು ಪ್ರಕಟಿಸತೊಡಗಿದರು. ಬೆಂಗಳೂರಿನ ಪ್ರಜಾಮತ, ಜನವಾಣಿ, ಸುಬೋಧ, ಜೀವನ, ಸರಸ್ವತಿ, ಕೊರವಂಜಿ, ನಗುವನಂದ ಪತ್ರಿಕೆಗಳಲ್ಲಿ ಈಕೆಯ ರಚನೆಗಳು ಪ್ರಕಟವಾಗತೊಡಗಿ ಜಯಲಕ್ಷ್ಮಿಗೆ ಆ ಕಾಲದ ಹೆಸರಾಂತ ಸಾಹಿತಿಗಳ ಮೆಚ್ಚುಗೆ ಮತ್ತು ಪರಿಚಯ ಹೆಚ್ಚು ಹೆಚ್ಚಾಗಿ ಬೆಳೆಯತೊಡಗಿತು. ಹೀಗಾಗಿ ಕನ್ನಡ ಮತ್ತು ತಮಿಳು ಈ ಎರಡೂ ಭಾಷೆಗಳಿಗೆ ಸೇತುವೆಯಂತಿದ್ದ ಜಯಲಕ್ಷ್ಮಿ, ಸಿ.ಕೆ. ವೆಂಕಟರಾಮಯ್ಯ, ಅ.ನ. ಕೃಷ್ಣರಾವ್, ಮಾಸ್ತಿ, ದೇವುಡು, ಜಿ.ಪಿ. ರಾಜರತ್ನಂ ಮುಂತಾದವರ ಲೇಖನ, ಸಣ್ಣಕತೆ, ಕಾದಂಬರಿಗಳನ್ನೂ ತಮಿಳಿಗೆ ಅನುವಾದ ಮಾಡಿದರು. ಇವು ಆ ಕಾಲದ ಸುಪ್ರಸಿದ್ಧ ತಮಿಳು ಪತ್ರಿಕೆಗಳಾದ 'ಕಲ್ಕಿ', 'ಆನಂದವಿಗಡನ್', 'ಭಾರತರಮಣಿ', 'ವಸಂತಂ', 'ಭಾರತಿ', 'ದೇವಿ', 'ಚಿಂತಾಮಣಿ', 'ಜಗನ್ಮೋಹಿನಿ', 'ಮಾಗೈ' 'ಕಲೈಮಗಳ್', 'ಉದಯ', 'ಕಾವೇರಿ', 'ಸ್ವದೇಶಿ ಮಿತ್ರನ್' ಮುಂತಾದ ಪತ್ರಿಕೆಗಳಲ್ಲಿ ಪ್ರಕಟಗೊಂಡವು. ಜಯಲಕ್ಷ್ಮಿ ಅನುವಾದಗಳನ್ನಲ್ಲದೇ ತಮ್ಮ ಅನೇಕ ಸ್ವಂತ ಕೃತಿಗಳನ್ನು ಈ ತಮಿಳು ಪತ್ರಿಕೆಗಳಿಗಾಗಿ ಬರೆದುಕೊಟ್ಟರು.

ಹೀಗೆ ತಮಿಳುಭಾಷೆಗೆ ಕನ್ನಡ ಸಾಹಿತ್ಯದ ಅಮೂಲ್ಯ ಕೃತಿಗಳನ್ನು ಪರಿಚಯಿಸುತಲೇ ಜಯಲಕ್ಷ್ಮಿ 'ಕಲ್ಕಿಕೃಷ್ಣಮೂರ್ತಿ', 'ಸರಸ್ವತಿ' ಪತ್ರಿಕೆ ಸಂಪಾದಕಿ ಆರ್. ಕಲ್ಯಾಣಮ್ಮ, 'ಮಕ್ಕಳ ಮಂಟಪ'ದ ಸಂಪಾದಕ ಬಿ. ಎಸ್.

ಜಯದೇವಿಯವರ ಮದುವೆ ೧೯೨೮ರಲ್ಲಿ ಬಹಳ ವೈಭವದಿಂದ ನಡೆಯಿತು. ಆಗ ಮದುಮಗಳಿಗೆ ಕೇವಲ ಹದಿನಾಲ್ಕು ವರ್ಷ. ಮದುಮಗನಿಗೆ ಹದಿನಾರು ವರ್ಷ. ಆದರೆ ಪ್ರಾರಂಭದ ದಾಂಪತ್ಯ ಜೀವನದಲ್ಲಿ ಜಯದೇವಿಯವರು ಅಸಹನೀಯ ಯಾತನೆಗಳನ್ನು ಉಂಡು ಬಾಳಿದರು. ಮನೆತುಂಬ ವಯಸ್ಸಾದ ಹೆಂಗಸರು. ಎಲ್ಲರೂ ಸಂಕುಚಿತ ಮನಸ್ಸಿನವರು. ತವರಿನಲ್ಲಿದ್ದಾಗ. ಸಭೆ-ಸಮಾರಂಭಗಳಲ್ಲಿ ಧೈರ್ಯದಿಂದ ಭಾಗವಹಿಸುತ್ತಿದ್ದ ಜಯದೇವಿಯವರಿಗೆ ಮನೆಯಲ್ಲಿ ಯಾವ ಸ್ವಾತಂತ್ರ್ಯವೂ ಇರಲಿಲ್ಲ. ಮನೆಯ ಪಡಸಾಲೆಗೆ ಬಂದರೂ 'ನಾಚಿಕೆ ಇಲ್ಲದವಳೆಂದು' ಬೈಗುಳು ತಿನ್ನಬೇಕಾಗಿತ್ತು. ಅವರ ತಾಯಿಯನ್ನು ಹಂಗಿಸಲು ಭಾಷಣದಾಕಿ ಮಗಳೇ' ಎಂದು ಹೀಯಾಳಿಸುತ್ತಿದ್ದರು.

ನಸುಕಿನಲ್ಲಿ ಎದ್ದು ಮನೆಗೆಲಸ ಪ್ರಾರಂಭಿಸಿದರೆ ರಾತ್ರಿ ಹನ್ನೆರಡು ಘಂಟೆಗೆ ಕೆಲಸ ಮುಗಿಸಿ ಮಲಗಲು ಬರಬೇಕಾಗುತ್ತಿತ್ತು. ಆಗ ತಾಯಿಯ ದುರ್ಬೋಧೆಯಿಂದ ಪತಿಯೂ ಜಯದೇವಿಯವರನ್ನು ಶಿಕ್ಷಿಸಲು ಆ ಮಧ್ಯರಾತ್ರಿಯಲ್ಲಿ ನಿಲ್ಲುವಂತೆ ಹೇಳುತ್ತಿದ್ದ ಕಾಲುಸೋತಾಗ, ಅವರು ಕಂಬನಿಗರಿಯುತ್ತಿದ್ದರು. 'ಅಲ್ಲಿಯೇ ಬಿದ್ದುಕೋ' ಎಂದು ಗಂಡನ ಆಜ್ಞೆ ಆದಾಗ ನೆಲದ ಮೇಲೆಯೇ ಸೋತು ಮಲಗುತ್ತಿದ್ದರು. ಆದರೆ ಅವರ ಸಹನಶೀಲತೆ-ಶಾಂತಸ್ವಭಾವಗಳು ಮನೆಯವರನ್ನು ಗೆದ್ದವು. ಮನೆಯವರು ಮಗಳಂತೆ ಅವರನ್ನು ಪ್ರೀತಿಸಿ ಆದರಿಸತೊಡಗಿದರು. ಮರಾಠಿಯಲ್ಲಿ ಆರನೆಯ ವರ್ಗದವರಿಗೆ ಕಲಿತಿದ್ದ ಜಯದೇವಿಯವರು ಇಬ್ಬರು ಮಕ್ಕಳಾದ ನಂತರ ಕನ್ನಡ ಕಲಿತು ವಚನಸಾಹಿತ್ಯವನ್ನು ಅಧ್ಯಯನ ಮಾಡಿದರು. ಮುಂದೆ ಅದೇ ಅವರ ಸಾಹಿತ್ಯ ರಚನೆಗೆ ದಾರಿದೀಪವಾಯಿತು. ಮನೆಯವರ ಪ್ರೋತ್ಸಾಹದಿಂದ ವೀರಶೈವ ಮಹಾಸಭೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಲ್ಲದೇ ಅನೇಕ ಸಲ ಅದಕ್ಕೆ ಅಧ್ಯಕ್ಷೆಯೂ ಆಗಿದ್ದರು. ದಾಂಪತ್ಯವು ಐದು ಮಕ್ಕಳಿಂದ ಮಧುರವಾಯಿತು. ದೇಶಪ್ರೇಮ, ಶರಣನಿಷ್ಠೆ, ಗಾಂಧೀವಾದಗಳು ಅವರ ಬದುಕಿನ ಹೆಗ್ಗುರಿಗಳಾದವು. ಸೊಲ್ಲಾಪುರದ ಸಿದ್ಧರಾಮೇಶ್ವರನ ಗುಡಿಗೆ ಹೋಗಿ ಬಂದ ಮೇಲೆಯೇ ಅವರ ಊಟ, ಅದು ಎಷ್ಟು ತಡವಾದರೂ ಸರಿ.

ವೀರಶೈವ ಮಹಾಸಭೆಗಳಲ್ಲಿ ಇವರ ಭಾಷಣಗಳನ್ನು ಕೇಳಿದ ಬ್ರಿಟಿಷರು 'ಲಿಂಗಾಯತ ಬಟಾಲಿಯನ್'ಗಾಗಿ ಭಾಷಣಮಾಡಲು ಕೇಳಿಕೊಂಡಾಗ ತಾಯಿಯವರು ನಿರಾಕರಿಸಿದರು. ಇದರಿಂದ ಮನೆಯಲ್ಲಿ ವಿರಸವುಂಟಾದಾಗಲೂ ಅವರು ಒಪ್ಪಲಿಲ್ಲ. ಬರಬರುತ್ತ 'ಮಹಿಳಾ ಜ್ಞಾನಮಂದಿರ'ಕ್ಕೆ ಅನಿವಾರ್ಯವೆನಿಸುವಷ್ಟು ಅದರ ಕಾರ್ಯ - ಕಲಾಪಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಹೈದರಾಬಾದಿನಲ್ಲಿ ರಜಾಕಾರರ ಆಕ್ರಮಣದಿಂದ ಅನಾಥರಾದವರಿಗೆ ನಿರಾಶ್ರಿತರಾದವರಿಗೆ ಪ್ರೀತಿಯ ಆಶ್ರಯ ನೀಡಿ ಜಯದೇವಿಯವರು ತಮ್ಮ ಸೇವಾ ಕಾರ್ಯದಿಂದಲೇ ಎಲ್ಲರಿಂದಲೂ 'ತಾಯಿ' ಎನಿಸಿಕೊಂಡು ಆಗಿನಿಂದ ಜಯದೇವಿತಾಯಿಯಾದರು. ಅವರ ಸಮಾಜಸೇವೆ, ಹಲವಾರು ಕ್ಷೇತ್ರಗಳಲ್ಲಿ ಅವರ ದುಡಿಮೆಯನ್ನು ಗರಿಮೆಯನ್ನು ಗೌರವಿಸುವಂತಾಯಿತು.

ಸೊಲ್ಲಾಪುರದಲ್ಲಿ ಒಮ್ಮೆ ಕಾಲರಾ ದಾಳಿ ಮಾಡಿದಾಗ ಜಯದೇವಿ ತಾಯಿಯವರು ಅಲ್ಲಲ್ಲಿ ನಾಗರಿಕರ ಸಭೆ ಕರೆದು ಭಾಷಣಗಳ ಮೂಲಕ ಜನರಲ್ಲಿ ಧೈರ್ಯ ತುಂಬಿ ಅಗತ್ಯಸೇವೆಯನ್ನು ಒದಗಿಸಿದರು. ಗಾಂಧೀಜಿಯವರ ತತ್ವಗಳಿಗೆ ಮಾರುಹೋಗಿ ನೂಲುವ, ಸ್ವದೇಶಿ ಬಟ್ಟೆಯನ್ನು ತೊಡುವ ವ್ರತ ತೊಟ್ಟು ಜ್ಞಾನಮಂದಿರದಲ್ಲೂ ಅದನ್ನು ಕಾರ್ಯರೂಪಕ್ಕೆ ತಂದರು. ಮೊದಲ ಸ್ವಾತಂತ್ರ್ಯೋತ್ಸವವನ್ನು ಕೂಡ ಅವರು ಜ್ಞಾನಮಂದಿರದ ಮಹಿಳೆಯರೊಂದಿಗೆ ಇಪ್ಪತ್ನಾಲ್ಕು ಗಂಟೆಗಳವರೆಗೆ ನೂಲು ತೆಗೆಯುವ ಸ್ಪರ್ಧೆಯನೇರ್ಪಡಿಸಿ ವಿಶಿಷ್ಟವಾಗಿ ಆಚರಿಸಿದರು. ೧೫.೮.೧೯೪೭ರಂದು ಗೌರವ್ವಬಾಯಿ ವಾರದ ಅವರಿಂದ ಧ್ವಜಾರೋಹಣವಾಯಿತು. ಬಡವರಿಗೆ ಅನ್ನದಾನ ಮಾಡುವ ಸಮಿತಿಗೆ ಬಾಬಾ ಸಾಹೇಬ ವಾರದ ಅವರು ಅಧ್ಯಕ್ಷರಾಗಿದ್ದರು. ಶ್ರೀಮಂತರ ದೇಣಿಗೆಯಿಂದ ಅಂದು ಸಿದ್ಧರಾಮನ ಗುಡಿಯ ಪಾಗಾರದ ತುಂಬ ಬಡವರಿಗೆ ಅನ್ನದಾನ ನಡೆಯಿತು. ಅಂದು ರಮಜಾನದ ದಿನವಾದ್ದರಿಂದ ರಾತ್ರಿಯೂ ಮುಸ್ಲಿಂ ಬಂಧುಗಳಿಗಾಗಿ ಅನ್ನದಾನ ನಡೆಯಿತು. ಜನದಟ್ಟಣೆ ಹೆಚ್ಚಾಗಿ ಅದು ಇನ್ನೊಂದು ದಿನಕ್ಕೆ ಮುಂದುವರಿಯಿತು. ಇದರ ಹಿಂದೆ ತಾಯಿಯವರ ಶ್ರಮ ಎಷ್ಟಿತ್ತೆಂಬುದರ ಅರಿವಾಗುವದು.

ಸ್ತ್ರೀ ಶಿಕ್ಷಣದ ಕುರಿತು ಜಯದೇವಿ ತಾಯಿಯವರು ಅಪಾರ ಆಸಕ್ತಿ -ಕಾಳಜಿ ಹೊಂದಿದ್ದರು. "ಸ್ತ್ರೀಯರು ಸುಶಿಕ್ಷಿತರಾಗುವುದು ಧರ್ಮಸಮ್ಮತ. ಕೇವಲ ಪುರುಷರಷ್ಟೇ ಉಚ್ಚಶಿಕ್ಷಣ ಹೊಂದುವದರಿಂದ ಅಷ್ಟು ಉಪಯೋಗವಾಗುವುದಿಲ್ಲ. ಯಾಕೆಂದರೆ ಎಲೆಗಳ ಮೇಲೆ ನೀರೆರಚುವದರಿಂದ ಗಿಡಕ್ಕೆ ಉಪಯೋಗವಿಲ್ಲವಷ್ಟೇ. ಬೇರಿಗೆ ನೀರು ಹಾಕುವದರಿಂದ ಗಿಡಕ್ಕೆಲ್ಲ ಪ್ರಯೋಜನವಾಗುವಂತೆ ಸ್ತ್ರೀಶಿಕ್ಷಣವು ಸಮಾಜದೇಳ್ಗೆಗೆ ಅತ್ಯವಶ್ಯಕ."

"ಸುವ್ಯವಸ್ಥಿತ ಸಮಾಜರಚನೆಗೆ ಸುಸಂಸ್ಕೃತ ಜನಾಂಗಬೇಕು. ಸುಸಂಸ್ಕೃತಿ ಸ್ತ್ರೀಶಿಕ್ಷಣದ ತವರು ಮನೆ, ಸುಖ - ಶಾಂತಿ ನೆಲೆಸುವಂತೆ ಮಾಡುವದು ಧರ್ಮದ ಗುರಿ, ದುಃಖಕ್ಕೆ ಅಜ್ಞಾನ, ಬಡತನ, ವರ್ಗಕಲಹ ಕಾರಣ. ಇವೆಲ್ಲ ಇಲ್ಲದಂತೆ ಸಮಾಜ ರಚನೆಯಾಗಲು ಶಿಕ್ಷಣ, ಅದರಲ್ಲೂ ಸ್ತ್ರೀ ಶಿಕ್ಷಣ ಹೆಚ್ಚು ಮುಖ್ಯ" ಎಂದು ತಮ್ಮ ಭಾಷಣಗಳಲ್ಲಿ ಯಾವಾಗಲೂ ಪ್ರಸ್ತಾಪಿಸುತ್ತಿದ್ದರು. "ಮಹಿಳಾ ಜ್ಞಾನಮಂದಿರದ ಜಯದೇವಿಬಾಯಿ ಕನ್ಯಾಶಾಲಾ" ಸ್ಥಾಪಿತವಾಗಿ ಅಲ್ಲಿ ಮರಾಠಿ ಬದಲು ಕನ್ನಡ ಕಲಿಯಲು ಹೆಣ್ಣುಮಕ್ಕಳಿಗೆ ಸಾಧ್ಯವಾದದ್ದು ತಾಯಿಯವರ ಪ್ರಯತ್ನದಿಂದ. ವಿದ್ಯಾರ್ಥಿನಿಯರನ್ನು ಪ್ರೋತ್ಸಾಹಿಸಲು ಶಾಲೆ-ಕಾಲೇಜುಗಳಲ್ಲಿ ನಗದು ಬಹುಮಾನ, ಪರ್ಯಾಯ ಫಲಕಗಳನ್ನು ಕೂಡ ಮಾಡಿದ್ದರು. ಅವರ ಧನಸಹಾಯದಿಂದ ಧಾರವಾಡದ ಜಯದೇವಿತಾಯಿ ಮಾಧ್ಯಮಿಕಶಾಲೆ ಮತ್ತು ಹುಬ್ಬಳ್ಳಿಯ ಭಾರತಿ ಹೈಸ್ಕೂಲುಗಳು ಈಗಲೂ ಇವೆ.

ಔದ್ಯೋಗಿಕ ಕೇಂದ್ರ ಸಂಸ್ಥೆಗಳಲ್ಲಿ ಸಾಕ್ಷರತಾ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ಹೀಗೆ ಸೊಲ್ಲಾಪುರ ಕೇಂದ್ರಕ್ಕೆ ತಾಯಿಯವರು ನಾಮಕರಣ ಗೊಂಡ ಸದಸ್ಯರಾಗಿದ್ದರು. ಅಲ್ಲಿ ಬಹುಮಾನ - ಪ್ರಶಸ್ತಿಗಳನ್ನು ನೀಡುವ ಮೂಲಕ ಕಾರ್ಮಿಕರಲ್ಲಿ ಕನ್ನಡ ಕಲಿಯುವ ಆಸಕ್ತಿಯನ್ನು ಮಾಡಿಸಿದ್ದರು. ೨ ವರ್ಷಗಳಲ್ಲಿ ೨೫ ವರ್ಗಗಳನ್ನು ಪ್ರಾರಂಭಿಸಲು ಕಾರ್ಮಿಕ ಸೇವಾಸಂಘವು ಕೇಳಿಕೊಳ್ಳುವಷ್ಟು ಅದು ಜನಪ್ರಿಯ ವಾಗಿತ್ತು. ಅದೇ ಸಮಯದಲ್ಲಿ ಅಲ್ಲೂಗೆ ಪ್ರೌಢಶಿಕ್ಷಣ ಅಧಿಕಾರಿಗಳಾಗಿ ಸದಾನಂದ ನಾಯಕರೆಂಬ ಅಧಿಕಾರಿಗಳು ಆಗಮಿಸಿ ಜಯದೇವಿ ತಾಯಿಯವರೊಂದಿಗೆ ೧೨೫ ಕೇಂದ್ರಗಳನ್ನು ತೆರೆಯಲು ಸಾಧ್ಯವಾಯಿತು. ಆದರೆ ಇದರಿಂದ ಭೀತರಾದ ಮರಾಠಿಗರು ಆ ಆಧಿಕಾರಿಯ ವರ್ಗವನ್ನು ತಕ್ಷಣ ತಂತಿಯ ಮೂಲಕ ಮಾಡಿಸಿದರು. ಆ ಸಮಯದಲ್ಲಿ ಮುಂಬಯಿಯ ಶಾಸನ ಸಭೆಯಲ್ಲಿ ೪೫ ಜನ ಕನ್ನಡ ಶಾಸಕರಿದ್ದರು. ಅವರೆಲ್ಲರಿಗೂ ಜಯದೇವಿಯವರು ದೂರು ನೀಡಿದರೂ ಯಾರೂ ಏನೂ ಮಾಡಲಿಲ್ಲ. ತಾಯಿಯ ಹೃದಯ ನೊಂದಿತು. ಆದರೂ ಅವರು ಪ್ರಯತ್ನ

ಬಿಡಲಿಲ್ಲ. ಕಾರ್ಮಿಕರಲ್ಲದ ವ್ಯಾಪಾರಸ್ಥರಿಗೆ ಓದುವ ಆಸಕ್ತಿ ಬೆಳೆಸಲು ತಮ್ಮ ಸ್ವಂತ ಖರ್ಚಿನಲ್ಲಿ ಪುಸ್ತಕ - ಪತ್ರಿಕೆಗಳನ್ನು ತರಿಸಿಕೊಡುತ್ತಿದ್ದರು. ಕನ್ನಡ ವಿದ್ಯಾರ್ಥಿಗಳಿಗೆ ಸ್ವತಃ ಸ್ಕಾಲರಶಿಪ್ ಕೊಡಮಾಡಿದ್ದರು.

ವರದಕ್ಷಿಣೆ ಪದ್ಧತಿಯನ್ನು ಅವರು ಪ್ರತಿಭಟಿಸುತ್ತಿದ್ದರು. ಸ್ತ್ರೀ - ಪುರುಷರ ಸಮಾನತೆಯನ್ನು ಗೌರವಿಸುತ್ತಿದ್ದರು. ಆದರೆ ನಾರೀಗೌರವ ರಕ್ಷಣೆಯ ಬಗ್ಗೆ ಕಾಳಜಿ ಹೊಂದಿದವರಾಗಿದ್ದರು. ವಿಶ್ವಹಿಂದೂ ಪರಿಷತ್ತಿನ ಮಹಿಳಾ ಸಮ್ಮೇಳನದ ಅಧ್ಯಕ್ಷೆಯಾಗಿ ಭಾಷಣ ಮಾಡುವಾಗ "ಸ್ತ್ರೀಯರನ್ನು ಮಾತೆ ಎಂದು ಭಾವಿಸಿ ಪೂಜಿಸುವ ಭಾರತೀಯ ಸಂಸ್ಕೃತಿಯ ದೃಷ್ಟಿಕೋನಕ್ಕೆ ವಿರುದ್ಧವಾಗಿ ಪಾಶ್ಚಿಮಾತ್ಯ ಅಂಧಾನುಕರಣೆಯ ಫಲವಾಗಿ ಚಲನಚಿತ್ರ. ಭಿತ್ತಿಪತ್ರಗಳಲ್ಲಿ, ಜಾಹೀರಾತಿನ ಕರಪತ್ರಗಳಲ್ಲಿ ಸ್ತ್ರೀಯರ ನಾನಾ ವಿಧವಾದ ಅಸಭ್ಯ ಭಾವಭಂಗಿಗಳನ್ನು ಪ್ರದರ್ಶಿಸುತ್ತಿರುವುದು. ಸ್ತ್ರೀಯರ ಕುಲಕ್ಕೆ ಎಸಗುತ್ತಿರುವ "ಘೋರ ಅಪಚಾರ" ಎಂಬ ಮಾತುಗಳನ್ನು ತುಂಬಾ ನೊಂದುಕೊಂಡು ನುಡಿದಿದ್ದರು.

ಬಸವ ಮತ್ತು ಗಾಂಧೀತತ್ವಗಳ ಅನುಸರಣೆಯಾಗಿ ಅಸ್ಪೃಶ್ಯರ ಸೇವೆಯನ್ನು ತಾಯಿಯವರು ಮನಮುಟ್ಟಿ ಮಾಡಿದ್ದಾರೆ. ಸೊಲ್ಲಾಪುರ ಮತ್ತು ಬಾರ್ಶಿಗಳಲ್ಲಿದ್ದ ರಿಮ್ಯಾಂಡ್‌ಹೋಮ್, ಹರಿಜನಸಂಘ, ಗಾಂಧೀ ವಸ್ತ್ರಾಲಯಗಳಿಗೆ ಜಯದೇವಿತಾಯಿಯವರ ಪ್ರೇರಣೆ - ಬೆಂಬಲಗಳು ಮುಖ್ಯವಾಗಿದ್ದವು. ಹರಿಜನ ಕೇರಿಗಳಿಗೆ ಭೇಟಿ ನೀಡಿ ಅಲ್ಲಿ ಸ್ವಾವಲಂಬನೆ - ಸಾಕ್ಷರತೆ. ಕೈಗಾರಿಕೆಗಳನ್ನು ಕಲಿಯಲು ಹುರಿದುಂಬಿಸುತ್ತಿದ್ದರು. ಯಾವ ಊರಿಗೇ ಹೋಗಲಿ ಹರಿಜನ ಕೇರಿಯನ್ನು ಭೇಟಿಯಾಗಿಯೇ ಬರುತ್ತಿದ್ದರು. ಅಸ್ಪೃಶ್ಯ ನಿವಾರಣೆಗೆ 'ಶರಣಸಮಾಜ'ವೆಂಬ ಸಂಘವನ್ನು ಸ್ಥಾಪಿಸಿದ್ದರು. ಈ ಸಂಘಟನೆಯಲ್ಲಿ ಹರಿಜನ, ಗಿರಿಜನ, ಹರಳಯ್ಯ ಸಮಾಜ, ಮಡಿವಾಳ ಸಮಾಜ, ಗೌಳಿಗ ಇನ್ನಿತರರೆಲ್ಲ ಸೇರಿಕೊಂಡು ಜಾತ್ಯಾತೀತ ಸಮಾಜರಚನೆ. ಅಂತರ್ಜಾತಿ ವಿವಾಹಗಳನ್ನು ಮಾಡುವದು– ಇವೇ ಮೊದಲಾದ ಗುರಿಗಳನ್ನಿಟ್ಟುಕೊಂಡಿದ್ದರು.

ರಜಾಕಾರರ ದೌರ್ಜನ್ಯದ ದಿನಗಳಲ್ಲಿ ನಿರಾಶ್ರಿತರಿಗಾಗಿ ಅವರು ತಮ್ಮ ೪೦ ಎಕರೆಯ ಹೊಲದಲ್ಲಿ ಶಿಬಿರಗಳನ್ನು ಹಾಕಿಕೊಟ್ಟರು. ಮಕ್ಕಳ ವಿದ್ಯಾಭ್ಯಾಸಕ್ಕೆಂದು ಮಾಧ್ಯಮಿಕ ಶಾಲೆ ಪ್ರಾರಂಭಿಸಿದರು. ಭಾಲ್ಕಿಯ ಪೂಜಾ ಚೆನ್ನಬಸವಪಟ್ಟದ ದೇವರು, ತಾಯಿಯವರು ಸೇರಿಕೊಂಡು ಹೊರಗಡೆ ಉರ್ದು ಬೋರ್ಡನ್ನು ನೇತುಹಾಕಿ ಒಳಗಡೆ ಕನ್ನಡ ಕಲಿಸುತ್ತಿದ್ದರು. ನೇತ್ರದಾನ ಶಿಬಿರದಲ್ಲಿ ಡಾ.ಮೋದಿಯವರನ್ನು ಕರೆಸಿ, ೧೫೦ ಜನರ ಶಸ್ತ್ರಕ್ರಿಯೆಯಾದಾಗ ಅವರ ಊಟ - ವಸತಿ - ನೀರಿನ ವ್ಯವಸ್ಥೆ ಎಲ್ಲವನ್ನು ತಾಯಿಯವರು ನಿರ್ವಹಿಸಿದರು. ಸಹಕಾರ ಆಂದೋಲನದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. "ತಲೆಗೊಬ್ಬ ಹಿರಿಯ, ಕುಲಕ್ಕೊಬ್ಬ ಗುರುವಾಗಿ ನೆಲೆಗಾಣದೆ ನಿಂತ ಮಾನವತೆಯು ಸಹಕಾರ ಸೂತ್ರದಿಂದ ತಮಗೂ ದೇಶಕ್ಕೆ ಹಿತವನ್ನು ತರುವಂತಾಗಲಿ" ಎಂದು ಹಾರೈಸಿದ್ದಾರೆ. ಕುಟುಂಬ ಯೋಜನೆಯ ಬಗ್ಗೆ ಕೂಡ ಅವರು ಹೋದ ಹೋದಲ್ಲೆಲ್ಲ ಭಾಷಣ ಮಾಡಿ ಜನಜಾಗೃತಿ ಮೂಡಿಸುವಲ್ಲಿ ಶ್ರಮಿಸಿದ್ದಾರೆ. ಹೀಗೆ ಅವರ ಸಾಮಾಜಿಕ ಸೇವೆ ಬಹುಮುಖಿಯಾಗಿ ಹರಿದಿದೆ.

ಜಯದೇವಿಯವರು ಗಾಂಧೀಯವರ ಹತ್ಯೆಯಾದಾಗ ಕೌಟುಂಬಿಕ ಸಮಸ್ಯೆಗಳಿಂದ ಬಹಳ ನೊಂದುಕೊಂಡಿದ್ದರು. ಪತಿಯ ಮರಣ, ಆಸ್ತಿಯ ಗೃಹಕಲಹ, ಮೈದುನ ಆಸ್ತಿಗಾಗಿ ಕೋರ್ಟು ಕಟ್ಟೆ ಹತ್ತುವಂತೆ ಮಾಡಿದರು. ಅದೇ ಸಂದರ್ಭದಲ್ಲಿ ಮೆಟ್ಟಲು ಮೇಲಿನಿಂದ ಬಿದ್ದ ತಾಯಿಯವರು ಬೆನ್ನು ನೋವಿನಿಂದ ಬಳಲುತ್ತಿದ್ದರು. ಮನೆಯಲ್ಲಿ ವೃದ್ಧ ಅತ್ತೆಯವರು ಪುಟ್ಟ ಮಕ್ಕಳು, ಅಪಾರವಾದ ಆಸ್ತಿಯ ನಿರ್ವಹಣೆ ಇವೆಲ್ಲ ಆಘಾತಗಳ ನಡುವೆಯೂ ಅವರು ವಿಚಲಿತರಾಗದೆ, ಎಲ್ಲವನ್ನು ನಿಭಾಯಿಸಿದರು. ಇದಕ್ಕೆ ಅವರ ಮಾನಸಿಕ ಒಲವೇ ಕಾರಣ ಅಂಥದರಲ್ಲೂ ಸಾಂಸಾರಿಕ ಜಂಜಡಗಳಲ್ಲಿ ಮುಳುಗದೇ ದೇಶಸೇವೆಗೆ ಮುಂದಾದರು.

"ಗಾಂದೀಜಿಯವರು ಹತರಾಗಿದ್ದು ಒಬ್ಬ ಮುಸ್ಲಿಂನಿಂದ" ಎಂಬ ಸುಳ್ಳುವದಂತಿ ದಟ್ಟವಾಗಿ ಹಬ್ಬಿ, ವರ್ಗಕಲಹಕ್ಕೆ ಕಾರಣವಾಗಬಹುದಾಗಿದ್ದ ಪ್ರಕ್ಷುಬ್ದ ವಾತಾವರಣದಲ್ಲಿ ತಾಯಿಯವರು ಪ್ರಮುಖಸ್ಥಳಗಳಲ್ಲಿ ಭಾಷಣ ಮಾಡಿ ಜಾತೀಯ ಸೌಹಾರ್ದತೆಯನ್ನು ಕಾಪಾಡುವಲ್ಲಿ ಕಾರಣರಾದರು.

ಹೈದರಾಬಾದ್‌ನ ಗಲಭೆಯಲ್ಲಿ, ಪಾಕಿಸ್ತಾನವು ಬಂಗಾಲದ ಮೇಲೆ ದಾಳಿ ಮಾಡಿದಾಗ, ಭಾರತದ ಮೇಲೆ ಚೀನಾ ಆಕ್ರಮಣವಾದಾಗ ಗೋವಾ ವಿಮೋಚನೆಗೆ ಹೀಗೆ ಅನೇಕ ಸಂದರ್ಭಗಳಲ್ಲಿ ತಾಯಿಯವರು, ಸಾಹಿತ್ಯದ ಮೂಲಕ - ಭಾಷಣಗಳ ಮೂಲಕ, ಸಂಘಟನೆಗಳ ಮೂಲಕ ಸ್ಪಂದಿಸಿದ್ದಾರೆ. ರಾಜಕೀಯ ಸ್ಥಾನ - ಮಾನಗಳನ್ನು ಅವರು ಕನ್ನಡದ ಹೋರಾಟಕ್ಕೆ, ಏಕೀಕರಣಕ್ಕಾಗಿ ಬಿಟ್ಟುಕೊಟ್ಟಿದ್ದಾರೆ. ಸೊಲ್ಲಾಪುರವು ಕರ್ನಾಟಕಕ್ಕೆ ಸೇರಬೇಕೆಂಬುದು ತಾಯಿಯವರ ಬದುಕಿನ ಬಹುದೊಡ್ಡ ಕನಸಾಗಿತ್ತು. ಕಾಂಗ್ರೆಸ್ ಪಕ್ಷಕ್ಕೆ ಆಗ ನಿರ್ಮಲಾ ರಾಜೆ ಬೋಸ್ಲೆಯವರಿಗೆ ಟಿಕೆಟ್ ಕೊಡಿಸಿದ್ದೇ ತಾಯಿಯವರು, ಆದರೆ ಈ ಬೋಸ್ಲೆತಾಯಿ ಚುನಾವಣೆಯಲ್ಲಿ ಆರಿಸಿ ಬಂದನಂತರ ಅಕ್ಕಲಕೋಟ - ಸೊಲ್ಲಾಪುರಗಳು ಮಹಾರಾಷ್ಟ್ರಕ್ಕೆ ಸೇರಬೇಕೆಂದು ಗೊತ್ತುವಳಿ ತರಲು ಕಾರಣರಾದರು. ಜಯದೇವಿಯವರು ಇದರಿಂದಾಗಿ ನೊಂದುಕೊಂಡರು ರಾಷ್ಟ್ರಭಾಷೆಯ ಬಗ್ಗೆಯ - ಬಹು ಭಾಷಾಕಲಿಕೆಗಳ ಬಗ್ಗೆ ಅವರ ಒಲವಿತ್ತು. ಕನ್ನಡ ಸಾಹಿತಿಗಳು ಬೇರೆ ಭಾಷೆಗಳನ್ನು ಕಲೆತು, ಕನ್ನಡದ ಸಾರವನ್ನು ಬೇರೆ ಭಾಷಿಕರಿಗೆ ಪರಿಚಯಿಸಬೇಕೆಂದು ಒಂದು ಭಾಷಣದಲ್ಲಿ ಹೇಳಿದ್ದಾರೆ.

ಕನ್ನಡ ಪಟ್ಟಣವಾದ ಸೊಲ್ಲಾಪುರವು ಇಂದು ಮರಾಠೀ ತಾಲ್ಲೂಕುಗಳ ಜಿಲ್ಲಾಸ್ಥಳವಾಗಿ ಮಾರ್ಪಟ್ಟಿದೆ. ಈ ನಗರದ ಒಂದೇ ಒಂದು ಸಣ್ಣ ಭಾಗವು, ಮರಾಠೀ ಹಳ್ಳಿಗಳ ಜೊತೆ ಸಂಪರ್ಕಿಸುತ್ತಿದ್ದು ಸುತ್ತಲಿನ ಎಲ್ಲ ತಾಲೂಕು - ಹಳ್ಳಿಗಳು ಕನ್ನಡ ಪ್ರದೇಶಗಳು. ಸೊಲ್ಲಾಪುರವು ಔದ್ಯೋಗಿಕ ಕೇಂದ್ರವಾಗುವದಕ್ಕೆ ಶ್ರಮಿಸಿದವರು ಕನ್ನಡಿಗರು ೧೮೬೮ರವರೆಗೆ ಸೊಲ್ಲಾಪುರವು ಕಲಾವಿದಗಿ ಜಿಲ್ಲೆಯ ಒಂದು ಭಾಗವಾಗಿತ್ತು. ಸೊಲ್ಲಾಪುರವನ್ನು ಕರ್ನಾಟಕಕ್ಕೆ ಸೇರಿಸಲು ತಾಯಿಯವರು ಪಟ್ಟ ಶ್ರಮ ಅಷ್ಟಿಷ್ಟಲ್ಲ. ಅಖಂಡ ಕರ್ನಾಟಕ ರಚನೆಗಾಗಿ ಅವರು ಅವಿರತ ಪ್ರವಾಸಗಳನ್ನು ಕೈಗೊಂಡರು. ಅಕ್ಕನ ಜಯಂತಿ, ಬಸವಜಯಂತಿ, ನಾಡಹಬ್ಬ, ಅಕ್ಕನ ಬಳಗ ಇವೇ ವೇದ್ಯವೇದಿಕೆಗಳನ್ನು ಬಳಸಿಕೊಂಡು ಕನ್ನಡ ಪ್ರಚಾರ ಮಾಡಿದರು. ತಮ್ಮ ಮನೆಯಿಂದಲೇ ಹಿಟ್ಟು-ಅಕ್ಕಿ ಕಟ್ಟಿಕೊಂಡು, ಅಡಿಗೆಯ ಸಾಮಗ್ರಿ, ಅತ್ತೆ-ಮಕ್ಕಳು ಆಳುಗಳ ಸಮೇತ ಕಾರುಗಳಲ್ಲಿ ಹೊರಡುತ್ತಿದ್ದರು. ಇದಕ್ಕಾಗಿ ೧೯೫೦ರಲ್ಲಿ 'ಕನ್ನಡಕೋಟೆ' ಯನ್ನು ಸ್ಥಾಪಿಸಿ ಅಕ್ಷರಶಃ ತನು-ಮನ-ಧನಗಳನ್ನು ಕನ್ನಡಕ್ಕಾಗಿ ಅರ್ಪಿಸಿಕೊಂಡರು. ಸೊಲ್ಲಾಪುರದಲ್ಲಿ ಮಲ್ಲಿಕಾರ್ಜುನ ದೇವಾಲಯದಲ್ಲಿ ಜಯದೇವಿಯವರು ಸಭೆ ಕರೆದು, ಅಲ್ಲಿಯ ನಿರ್ಣಯದಂತೆ ೧೫ ಹಳ್ಳಿಗಳ

ಸಂದರ್ಶನಮಾಡಿ ಅಲ್ಲಲ್ಲಿ ಕರ್ನಾಟಕ ಸಂಘ, ಅಕ್ಕನ ಬಳಗಗಳನ್ನು ಸ್ಥಾಪಿಸಿದರು. ಗಡಿಪ್ರದೇಶಗಳಲ್ಲೂ ಜನಜಾಗ್ರತಿಯ ಅವಶ್ಯಕತೆ ಇತ್ತು. ಸೊಲ್ಲಾಪುರದಲ್ಲಿಯ ಸುತ್ತು ಮುತ್ತ ಜನಗಣತಿಯ ಸಂದರ್ಭದಲ್ಲಿ, ಮಾತೃಭಾಷೆ ಕಾಲಂನಲ್ಲಿ 'ಕನ್ನಡ' ಎಂದು ನಮೂದಿಸಲು ಅವರು ಹಗಲು -ರಾತ್ರಿ ಶ್ರಮಿಸಿದರು.ಈ ಶ್ರಮದಿಂದಾಗೇ ಕನ್ನಡಿಗರ ಜನಸಂಖ್ಯೆ ಹೆಚ್ಚೆಂದು ಸರಕಾರವು ಮನಗಾಣುವಂತಾಯಿತು. ಆದರೆ ಮರಾಠಿಗರ ಕುತಂತ್ರದಿಂದ ಇದೇನೂ ಪ್ರಯೋಜನಕ್ಕೆ ಬರದೇ ಹೋಯಿತು.

ಹೈದ್ರಾಬಾದದ ಅನೇಕ ಭಾಗಗಳಲ್ಲಿ ಕನ್ನಡಿಗರು ವಲಸೆಹೋಗಿದ್ದರು. ಅವರೆಲ್ಲರಿಗೆ ಬೆಂಬಲವಾಗಿ ನಿಂತು ಕನ್ನಡತನವನ್ನು ಅಲ್ಲಿ ಉಳಿಸಿದರು. ಅಲ್ಲಲ್ಲಿ ಕನ್ನಡ ಶಾಲೆಗಳನ್ನು ಪ್ರಾರಂಭಿಸಿದರು. ಸ್ವಯಂಸೇವಾ ಶಿಕ್ಷಕರನ್ನು ಕಳಿಸಿದರು. ಮರಾಠಿಶಾಲೆಗಳು ಮುಚ್ಚಿದವು. ಆಗಿನ ಮುಖ್ಯಮಂತ್ರಿಗಳು "ಕನ್ನಡ ಶಾಲೆಗಳಿಗೆ ಕನ್ನಡ ಶಿಕ್ಷಕರೇ ಸಿಗುವುದಿಲ್ಲ" ಎಂಬ ಕಾರಣ ಮುಂದೊಡ್ಡಿದಾಗ ತಾಯಿಯವರು ಸ್ವಂತ ಖರ್ಚಿನಿಂದ ನಾಲ್ಕುನೂರು ಜನ ಶಿಕ್ಷಕರನ್ನು ನೇಮಿಸಿದ್ದು ಅವರ ಕನ್ನಡಪ್ರೇಮಕ್ಕೆ ಸಾಕ್ಷಿಯಾಗಿದೆ. ಕನ್ನಡಿಗರು ಅವರಿಗೆಷ್ಟು ಋಣಿಯಾಗಿದ್ದರೂ ಸಾಲದೇನೋ. ಧಾರವಾಡ ಮತ್ತು ವಿಜಾಪುರಗಳಲ್ಲಿ ಕನ್ನಡಶಾಲೆಗಳ ಪ್ರಾರಂಭಕ್ಕೆ ಡೆಪ್ಯೂಟಿ ಚೆನ್ನಬಸಪ್ಪನವರು ಮತ್ತು ಫ. ಗು. ಹಳಕಟ್ಟಿಯವರು ಕಾರಣರಾದಂತೆ ಹೈದರಾಬಾದ ಕರ್ನಾಟಕದಲ್ಲಿ ತಾಯಿಯವರೇ ಕಾರಣರಾಗಿದ್ದರು. ಆದರೂ ಸೊಲ್ಲಾಪುರವು ಕೈಬಿಟ್ಟಾಗ ತಾಯಿಯವರು ಪಟ್ಟ ವ್ಯಥೆ ಅಷ್ಟಿಷ್ಟಲ್ಲ. ಮಂತ್ರಿಗಳವರೆಗೂ ಆಯೋಗವನ್ನು ಕಳಿಸಿದರೂ ನಿಷ್ಫಲವಾಯಿತು. ಕನ್ನಡ ಕರ್ನಾಟಕಕ್ಕೆ ತಮ್ಮನ್ನೇ ಅರ್ಪಿಸಿಕೊಂಡ ತಾಯಿಯವರನ್ನು ಚರಿತ್ರೆಯು ನೆನಪಿಟ್ಟುಕೊಳ್ಳಲಿಲ್ಲ. ದಿ. ಆರ್. ಆರ್ ದಿವಾಕರರಿಂದ ರಚಿತವಾದ 'ಕರ್ನಾಟಕ ಏಕೀಕರಣದ ಕಥೆ' ಕೃತಿಯಲ್ಲಿ ಜಯದೇವಿ ತಾಯಿಯವರ ಹೆಸರೇ ಪ್ರಸ್ತಾಪವಾಗಿಲ್ಲ!

ಇಂದಿರಾಗಾಂಧಿಯವರು ಬೆಂಗಳೂರಿಗೆ ಬಂದಾಗ ಮಹಾಜನ ಆವೇಗದ ತೀರ್ಪನ್ನು ಶೀಘ್ರಜಾರಿಗೆ ತರಬೇಕೆಂದು ಜಯದೇವಿಯವರು ಮನವಿಯನ್ನ ರ್ಪಿಸಿದರು. ಇಂದಿರಾಗಾಂಧಿಯವರು ಪರಿಶೀಲಿಸುವದಾಗಿ ಮಾತೂ ಕೊಟ್ಟಿ ದ್ದರು. ಆದರೆ ಕನ್ನಡದ ರಾಜಕಾರಣಿಗಳ ಔದಾಸೀನ್ಯದಿಂದ ಮಹಾರಾಷ್ಟ್ರದವರ ಪ್ರಾಬಲ್ಯದಿಂದ ತಾಯಿಯವರ ಆಸೆ ಕೈಗೂಡದೇ ಹೋಯಿತು. ಈ ನೋವು ಅವರನ್ನು ಕೊನೆಯವರೆಗೆ ಬಾಧಿಸಿತು. ಅವರ ಕರ್ನಾಟಕದ ಮೇಲಿನ ಮೋಹವೇ ಬಸವಕಲ್ಯಾಣಕ್ಕೆ ಅವರನ್ನು ಕರೆಯಿತು.

ಜಯದೇವಿತಾಯಿಯವರ ಚೈತನ್ಯ ಅವರನ್ನು ಸಾಹಿತ್ಯ ರಚನೆಗೂ ಪ್ರೇರೇಪಿಸಿತು. ಕನ್ನಡ - ಮರಾಠಿ ಎರಡರಲ್ಲೂ ಅವರು ಸಿದ್ಧಹಸ್ತರು. ಒಟ್ಟು ಅವರು ಹದಿನಾಲ್ಕು ಕೃತಿಗಳನ್ನು ಪ್ರಕಟಿಸಿದಾರೆ. ಕನ್ನಡ ಕೃತಿಗಳು- ೧) ಜಯಗೀತೆ ೨) ತಾಯಿಯ ಪದಗಳು ೩) ಶ್ರೀ ಸಿದ್ಧರಾಮ ಪುರಾಣ ೪) ತಾರಕ ತಂಬೂರಿ ೫) ಬಂದೇವು ಕಲ್ಯಾಣಕೆ ೬) ಸಾವಿರದ ಪದಗಳು ೭) ಅರುವಿನಾಗರದಲ್ಲಿ (ಸಂ)

ಮರಾಠಿ ಕೃತಿಗಳು- ೧) ಸಿದ್ಧವಾಣಿ ೨) ಬಸವದರ್ಶನ ೩) ಸಮೃದ್ಧ ಕರ್ನಾಟಕಾಂಚೆ ರೂಪರೇಷೆ ೪) ಮಹಾಯೋಗಿನಿ ೫) ಸಿದ್ಧರಾಮಾಂ ಚಿ ತ್ರಿವಿಧಿ ೬) ಬಸವವಚನಾಮೃತ ೭) ಶೂನ್ಯ ಸಂಪಾದನೆ

**ತಾಯಿಯವರ ಅಪ್ರಕಟಿತ ಕೃತಿಗಳು**

೧) ಬಸವಣ್ಣನವರ ವಚನಗಳು (ಆಯ್ದ ಆರುನೂರು ವಚನಗಳನ್ನು ಮರಾಠಿಗೆ ರೂಪಾಂತರಿಸಿದ್ದಾರೆ).

೨) ನೀಲಮ್ಮನ ವಚನಗಳು - ೧೨೧ ವಚನಗಳನ್ನು ಅನುವಾವಿಸಿದ್ದಾರೆ.

೩) ಅಕ್ಕಮಹಾದೇವಿಯ ಪುರಾಣ - (ಸುಮಾರು ೨೧೫೦ ಪದ್ಯಗಳು ಸ್ವತಂತ್ರ ಮರಾಠಿ ಕೃತಿ) ಇವುಗಳಲ್ಲಿ ೪೦೦ ವಚನಗಳ ಅನುವಾದವೂ ಸೇರಿದೆ.

೪) ಹುತಾತ್ಮ ಹರಳಯ್ಯ-ಮಧುವಯ್ಯರ ಜೀವನಚರಿತ್ರೆ (ಸ್ವತಂತ್ರ ಕೃತಿ ಮರಾಠಿಯಲ್ಲಿ) ೨೬೦ ಪದ್ಯಗಳು.

೫) ಮರಾಠಿ ಅನುಭಾವ ಪದಗಳು (ಸ್ವತಂತ್ರ) ೮೯ತ್ರಿಪದಿಗಳು.

೬) ಅಮರ ಬಾಪೂಜಿ ತ್ರಿಪದಿಗಳು (ಹಿಂದಿ) ೮೬೦ ತ್ರಿಪದಿಗಳು.

೭) ಸಿದ್ದರಾಮೇಶ್ವರ ಪುರಾಣ - (ಕನ್ನಡ ಮೂಲದಿಂದ ಕೆಲವು ಮಾರ್ಪಾಡುಗಳೊಂದಿಗೆ ಸ್ವತಂತ್ರ ೩೫೦೦ ಪದ್ಯಗಳು) ೩೪೨೫ ತ್ರಿಪದಿಗಳು. ಇವುಗಳಲ್ಲಿ ೧೯ ವಚನಗಳ ಅನುವಾದವು ಸೇರಿದೆ.

೮) ಸಿದ್ದರಾಮೇಶ್ವರ ಜಾವಿಬದ್ದ (ಮರಾಠಿ ಛಂದಸ್ಸು) ೭೭೩ಪದ್ಯಗಳು.

೯) ಅನುಭಾವ ಶರಣರು, ಸಂಕೀರ್ಣ ಪದಗಳು (ಕನ್ನಡ) ಒಟ್ಟು ೪೦೦೦ ತ್ರಿಪದಿಗಳು.

೧೦) ದಾನಮ್ಮದೇವಿಯ ತ್ರಿಪದಿಗಳು ೫೬ (ಕನ್ನಡ)

೧೧) ಶೂನ್ಯ ಸಂಪಾದನೆ - ಮಹಾರಾಷ್ಟ್ರ ಶಾಸನ ಸಾಹಿತ್ಯ ಆಣಿ ಸಂಸ್ಕೃತಿ ಮಂಡಳ, ಪೂಣಾ (ಆ್ಯಡೆಡ್ ಬೈ-ಲಕ್ಷ್ಮಣ ಶಾಸ್ತ್ರೀ ಜ್ಯೋಶಿ) ಅವರು ವಹಿಸಿದ ಕಾರ್ಯದಲ್ಲಿ ಮುಗಿಯುತ್ತಾ ಬಂದಿದೆ.

ಜಯಗೀತೆ - ೪೦ ಸುಂದರ - ಸುಮಧುರ ಗೀತೆಗಳ ಗೊಂಚಲು. ಈ ಜಯಗೀತೆ ಪ್ರಕಟವಾದದ್ದು ತಾಯಿಯವರ ೪೦ನೆಯ ವಯಸ್ಸಿನಲ್ಲಿ. ಆಗಲೇ ಅವರ ಅಂತರಂಗವು ಸಾಧನೆಯ ಹೊಯ್ದಾಟದಲ್ಲಿತ್ತು. ಅವರ ಭಕ್ತ-ನಿಷ್ಠೆಯ ಚಡಪಡಿಕೆಯನ್ನು ಇಲ್ಲಿಯ ಅನೇಕ ಕವನಗಳಲ್ಲಿ ಕಾಣಬಹುದಾಗಿದೆ. 'ಮಂಗಳದ ಮಹಿಮೆ' ಎಂಬ ಕವಿತೆಯಲ್ಲಿ–

> ಮನದ ಮದವೆಲ್ಲ
> ಮುರಿದು ತಾ ಎಲ್ಲ
> ಪೃಥಿವಿಯಲ್ಲಿ ಅಣುವಿನೊಳು ಒಂದು ಅಣುವು
> ಗೂಡಿ ತಿರುಗುತಿದೆ ಶಕ್ತಿರೂಪ
> ಅಳಿಸಿ ಜೀವವ್ಯಾಪ ತನ್ನ ತಾಪಲೋಪ

ಅಣು - ಅಣುವಿನೊಡಗೂಡಿ ಒಂದಾಗಿ ಹೊಸೆದ ಮಹತ್ತು ಭಕ್ತಿಯಾಗಿ ಪರಿಣಮಿಸುವಂತೆ ಅವರ ಭಾವ ಭಕ್ತಿಮಯವಾಗಿದೆ ಎನ್ನುತ್ತಾರೆ. ಡಾ. ಚೆನ್ನಾಂಬಿಕಾ ಪಾವಟೆ ಅವರು. ಅವರೇ ಮುಂದುವರಿದು ಹೇಳುವ ಈ

ಮಾತುಗಳು ಗಮನಾರ್ಹವಾಗಿವೆ. "ಜಯಗೀತ" ಕವನದ ಶಿರೋನಾಮೆಯೆ ಕಾವ್ಯದ ಉದ್ದೇಶವನ್ನು ಸ್ಪಷ್ಟಪಡಿಸುವಂತಿದೆ. "ಅರಿಯೆನಾ ಶಾಸ್ತ್ರವನು ತರ್ಕ ಮೀಮಾಂಸೆಯನು ವೇದ ವ್ಯಾಕರಣಗಳನು" 'ಶಬ್ದಸಂಪತ್ತಿಯಲ್ಲಿ ಸಂಗೀತ ಸೊಬಗಿಲ್ಲ ಕಾವ್ಯದ ಕುಶಲತೆ ಇಲ್ಲ! ಇವೆಲ್ಲವನ್ನು ಅರಿಯುವ ಇಚ್ಛೆಯೂ ನನಗಿಲ್ಲ. ನನ್ನ ಆಲಾಪವೇ ಎಲ್ಲ ಜಯಗೀತಕದುವೆ ಸೊಲ್ಲು ಎನ್ನುವಲ್ಲಿ ಶಾಸ್ತ್ರ ತರ್ಕಮೀಮಾಂಸೆ, ಶಬ್ದಸಂಪತ್ತಿ, ಕಾವ್ಯಕುಶಲತೆಯ ಸೀಮಿತ ಪರಿಧಿಯನ್ನು ಮಿಕ್ಕಿ ಅತಾರ್ಕಿತ ಭಾವನೆಯ ತಾದಾತ್ಮ್ಯಕತೆಯಲ್ಲಿ ಅವರು ಮಗ್ನರಾಗಿರುವರು. ಹೀಗಾಗಿ ಭಕ್ತಿಪೂರಿತವಾಗಿ ಹೊರಹೊಮ್ಮಿದ ಜಯಗೀತ ಯಾವುದೇ ಕಟ್ಟು, ನಿರ್ಬಂಧನೆಗೆ ಸೀಮಿತಗೊಂಡ ಕಾವ್ಯಸೃಷ್ಟಿಯಾಗಿರದೇ ಪ್ರಕೃತಿಯ ಅಣು-ರೇಣು ತೃಣ-ರಾಷ್ಟ್ರಗಳಲ್ಲಿ ತುಂಬಿ ತುಳುಕುವ ಆ ಭವ್ಯದಿವ್ಯನ ಅರಿಯುವಿಕೆಯ ಮಾಧ್ಯಮವೆನಿಸುತ್ತದೆ.

ತಾರಕ ತಂಬೂರಿ-

ತಾರಕ್ಕ ತಂಬೂರಿಯ ನಾನದಕೆ ನುಡಿಸುವೆ । ತಾರ ತಂಬೂರಿಯ
ಗುರುವಿನ ಅಗಣಿತ ಮಹಿಮೆಯ ಸಾರುವೆ । ತಾರ ತಂಬೂರಿಯ

ಎಂದು ಹಾಡಿದ ತಾಯಿಯವರ 'ತಾರಕ ತಂಬೂರಿ'ಕೃತಿಯು 'ಜಯಸಿದ್ದರಾಮಾ' ಅಂಕಿತದಲ್ಲಿ ಪಲ್ಲವಿಸಿದ ಅನುಭವಜನ್ಯ ಕವನಗಳ ಭಾವತೀವ್ರತೆಯ ಸಂಕಲನವಾಗಿದೆ. ೩೯ ಕವಿತೆಗಳಿಂದ ಅಲಂಕೃತಗೊಂಡ ಈ ರಚನೆ, ತಾಯಿಯವರ ಪರಿಪಕ್ವ ಆಧ್ಯಾತ್ಮ ಸಾಧನೆಯನ್ನು ಕಟ್ಟಿಕೊಟ್ಟಿದೆ.

ನಿತ್ಯದಾಸೋಹದ ಮನೆಯ ತೊತ್ತು ಕೆಲಸದಿ ಮನವ
ಅತ್ತಿತ್ತ ಸುಳಿಯದಂತೆ ಸಲವು ಸಿದ್ಧರಾಮ ॥
ಕುಲಭೇದವ ಬಿಡಿಸಿ ಛಲ ಸತ್ಯಾಚಾರದ ಹಿಡಿಸಿ
ಶೀಲದ ಮರ್ಮವ ತಿಳಿಸಿ ಸಲವು ಸಿದ್ಧರಾಮ ॥

ಇಲ್ಲಿ ತಾಯಿಯವರ ಅಂತರಾಳದ ಆರ್ತಭಕ್ತಿಯ ಪರಾಕಾಷ್ಠೆಯನ್ನು ಕಾಣಬಹುದಾಗಿದೆ. ಜೊತೆಗೆ ಆರೋಗ್ಯಪೂರ್ಣವಾದ ಸಮಾಜಮುಖಿಯಾದ ಕಳಕಳಿಯೂ ವ್ಯಕ್ತವಾಗಿದೆ. ಹನ್ನೆರಡನೆಯ ಶತಮಾನದಲ್ಲಿ ನವಸಮಾಜ ನಿರ್ಮಾಣದಲ್ಲಿ ತೊಡಗಿಸಿಕೊಂಡ ಶರಣೆಯರ ವಚನಗಳ ಆಶಯವನ್ನೇ ನಾವಿಲ್ಲಿ ಗುರುತಿಸಬಹುದು.

"ತಾರಕ ತಂಬೂರಿಯಲ್ಲಿ ದ್ವಿಪದಿ, ಜಾನಪದ ಶೈಲಿಯ ಭಾವಗೀತೆ ಗಳಿವೆ. ಇವನ್ನು ಹಾಡುಗಬ್ಬವೆಂದು ಕರೆಯಬಹುದಾಗಿದೆ. ಈ ಹಾಡುಗಬ್ಬ ಕನ್ನಡ ಸಾಹಿತ್ಯದ ವಿಶಿಷ್ಟ ಕೊಡುಗೆ. ತತ್ವ, ಆಧ್ಯಾತ್ಮ, ಸಾಧನೆ, ಅನುಭವ, ಆತ್ಮಸೌಂದರ್ಯಗಳಿಂದ ಕೂಡಿದ ಇದು ಕನ್ನಡ ಸಾಹಿತ್ಯದ ಅಂತಃಸತ್ವವನ್ನು ವ್ಯಕ್ತಪಡಿಸಿದೆ. ದೇಸೀಯತೆ, ಗೇಯತೆ. ಹಾಡುಗಬ್ಬದ ಉತ್ತಮ ಲಕ್ಷಣಗಳು. ಪ್ರಸ್ತುತ ಪರಿಸರದ ಸಮಾಕಾಲೀನ ಸುಂದರ ಅಭಿವ್ಯಕ್ತಿ ಹಾಡುಗಬ್ಬದ ಪ್ರಮುಖ ಅಂಶ. ಇದು ಈ ನೆಲದ ಹಾಡು. ಈ ಮಣ್ಣಿನ ಹಾಡು" ಎಂದು ಡಾ. ಚೆನ್ನಾಂಬಿಕಾ ಪಾವಟೆ ಅವರು ಸರಿಯಾಗಿ ಗುರುತಿಸಿದ್ದಾರೆ. ಹಾಗೆಯೇ ತಾಯಿಯವರ ಅಭಿಮಾನಿ ಶ್ರೀ ಬಿ.ಎಸ್. ಸ್ವಾಮಿ ಅವರು "ಅಂತಃಕರಣದ ಕರುಣೆ ತುಂಬಿ ತುಳುಕಿದಾಗ ಹೊಮ್ಮಿಬಂದ ನಾದ ತರಂಗಗಳೇ ಈ ಭಾವಗೀತೆಗಳು. ಹೃದಯ ತಂಬೂರಿಯನ್ನು ಮೀಟಿದಾಗ ಮಾಡಿದ ಈ ಪದಗಳಿಗೆ ಸಹಜತೆಯೇ ಜೀವನಾಡಿ. ಚಿತ್ತದ ಪದರುಗಳಲ್ಲಿ 'ಜಯಸಿದ್ದರಾಮನ' ಅಪರಿಮಿತ ಮಮತೆ-ವಾತ್ಸಲ್ಯಗಳು, ಸಹಜಯೋಗದ ಸಾಧನೆಯ ನಿಲುವಿನತ್ತ ಕರೆದೊಯ್ಯುತ್ತವೆ. 'ತಾಯಿಯ ಪದ'ಗಳಿಂದ ಜನಪದ ಸಾಹಿತ್ಯವನ್ನು ಪುನರುಜ್ಜೀವನಗೊಳಿಸಿ, 'ಸಿದ್ಧರಾಮೇಶ್ವರ ಪುರಾಣ'ದಿಂದ ತ್ರಿಪದಿಯ ಹಿರಿಮೆಯನ್ನು ಹೆಚ್ಚಿಸಿ, 'ತಾರಕ ತಂಬೂರಿ'ಯಿಂದ ಕನ್ನಡ ನಾಡಿನ ಅನುಭವ ಪದಗಳ ಪರಂಪರೆಯನ್ನು ಮುನ್ನಡೆಸುವಲ್ಲಿ ತಾಯಿಯವರದು ಅಸೀಮ ಸಾಹಸದ ಸಾಧನೆಯಾಗಿದೆ" ಎಂದು ಹೇಳಿರುವರು.

## ಸಾವಿರದ ಪದಗಳು

೧೯೮೬ರಲ್ಲಿ 'ಸಾವಿರದ ಪದಗಳು' ಸಂಕಲನದ ರೂಪದಲ್ಲಿ ಪ್ರಕಟ ಗೊಂಡಿದೆ. ತಾಯಿಯವರು ರಚಿಸಿದ ನಾಲ್ಕುಸಾವಿರ ಪದ್ಯಗಳಲ್ಲಿ ಸಾವಿರ ಪದ್ಯಗಳನ್ನು ಆಯ್ಕೆ ಮಾಡಿಕೊಂಡು ಈ ಸಂಕಲನವನ್ನು ರೂಪಿಸಲಾಗಿದೆ. ಇಲ್ಲಿ ದೈವದ ಕುರಿತಾಗಿ ಭಕ್ತಿಗೀತೆಗಳು, ಶಿವಶರಣ-ಶರಣೆಯರ ಕುರಿತು ಭಾವಗೌರವ ನುಡಿಗಳು ಮತ್ತು ಶ್ರೇಷ್ಠ ಜೀವಿಗಳ ಪುಣ್ಯಸ್ಮರಣೆಗಳು– ಹೀಗೆ ಮೂರುವಿಧದಲ್ಲಿ ಇದು ಮುಪ್ಪುಗೊಂಡಿದೆ.

ತಾಯಿಯವರದು ಮೂಲತಃ ದೈವೀಭಕ್ತಿಯ ವ್ಯಕ್ತಿತ್ವ. ಅವರು ಅನೇಕ ಪುಣ್ಯಕ್ಷೇತ್ರಗಳನ್ನು ದರ್ಶಿಸಿದ್ದಾರೆ. ಆಗೆಲ್ಲ ಅವರ ಭಕ್ತಿ, ತ್ರಿಪದಿಗಳಲ್ಲಿ ಸುಂದರವಾಗಿ ಸ್ಫುಟವಾಗಿ ಮೂಡಿನಿಂತಿದೆ. ಆದಿಲಿಂಗ, ಗಣಪತಿ-ತಿರುಪತಿ-ಚಾಮುಂಡೇಶ್ವರಿ, ಭುವನೇಶ್ವರಿ. ಧರ್ಮಸ್ಥಳದ ಮಂಜುನಾಥ, ಕೊಟ್ಟೂರು ಬಸವೇಶ್ವರ, ಅಷ್ಟಗ್ರಹ, ಮಾಣಿಕ್ಯಗಿರಿಯ ಮೇಲೆ ಲಿಂಗಸ್ಥಾಪನೆ, ಶ್ರೀಶೈಲ– ಹೀಗೆ ಅನೇಕ ದೈವೀಸ್ವರೂಪಗಳು ತಾಯಿಯವರ ದೈವಿಕವಾಣಿಯಲ್ಲಿ ಪೂಜೆಗೊಂಡಿವೆ.

ಶಿವಶರಣ - ಶರಣೆಯರ ಬಗ್ಗೆ ಹೇಳುವಾಗ ಬಸವಣ್ಣನವರಿಗೆ ಯಾವಾಗಲೂ ತಾಯಿಯವರು ಪ್ರಥಮಸ್ಥಾನ ನೀಡಿದ್ದಾರೆ.

ಬಸವ ತುಳಿದ ದಾರಿ । ವಸುಧೀಗೆ ಉಪಕಾರಿ
ದೆಸೆದಿಕ್ಕುಗಳಲ್ಲಿ ಕೀರುತಿ ಹರಡಿತ್ತು
ಶಶಿಧರನ ಹೊತ್ತ ಬಸವಣ್ಣ

ಎಂದು ಮನದುಂಬಿ ಬಸವಣ್ಣನವರನ್ನು ಕೊಂಡಾಡಿದ್ದಾರೆ.

ತಾಯಿಯವರ ವ್ಯಕ್ತಿತ್ವದ ಅನೇಕ ಆಯಾಮಗಳಲ್ಲಿ ಅವರ ಮಾತೃ ಭಾಷೆಯ ಅಭಿಮಾನವು ಒಂದು. ಸೊಲ್ಲಾಪುರವನ್ನು ಕರ್ನಾಟಕಕ್ಕೆ ಸೇರಿಸುವಲ್ಲಿ ಅವರ ಬದುಕನ್ನೇ ಮುಡಿಪಾಗಿಟ್ಟರು.

ಸೊಲ್ಲಾಪುರದೊಳಗ ಸೊಲ್ಲಾ ಅಡಗಿಸಬ್ಯಾಡೋ
ನಿಲ್ಲೆಂದು ತಾಯಿನುಡಿ ನಿಲ್ಲಿಸು । ಸಿದ್ಧರಾಮ
ಅಲ್ಲಗಳೆದವರಿಗೆ ತಿಳಿಹೇಳು ॥

ಇನ್ನೊಂದು ಕಡೆಗೆ-

ಕನ್ನಡತಾಯಿ ನುಡಿ । ಮನ್ನಿಸಿ ಮಾತನಾಡು
ಅನ್ಯಕ್ಕೆ ಮರುಳಾಗದಿರು । ಮರುಳೇ ನೀ
ಕನ್ನಡಿಗನೆಂಬುದು ಮರೀಬೇಡ

ಎಂದು ಕನ್ನಡತನದ ಬಗ್ಗೆ ಕನ್ನಡಿಗನ ಬಗ್ಗೆ ಎಚ್ಚರದ ಮಾತುಗಳನ್ನು ಬಹಳ ಕಳಕಳಿಯಿಂದ ಹೇಳಿದ್ದಾರೆ.

ತಾಯಿಯವರ ಲೋಕದರ್ಶನ ಅಪಾರವಾದುದು. ಹಂತಿಯ ಪದಗಳಲ್ಲಿ ರೈತನ ಕಷ್ಟ - ನಷ್ಟಗಳನ್ನು ಮಾರ್ಮಿಕವಾಗಿ ಹೇಳಿದ್ದಾರೆ. ಸರ್ವಜ್ಞನನ್ನು ವಿಶೇಷವಾಗಿ ಚಿತ್ರಿಸಿದ್ದಾರೆ. ತಮ್ಮ 'ಸಿದ್ಧರಾಮ ಪುರಾಣ'ದ ತ್ರಿಪದಿ ಮಾಧ್ಯಮಕ್ಕೆ ಸರ್ವಜ್ಞನೇ ಕಾರಣ ಎನ್ನುತ್ತಾರೆ. ಒಂದು ಭಾಗದಲ್ಲಿ ಅವನನ್ನು ಕುರಿತು,

ತಾಯಿಯ ಪದಗಳು । ರಾಯಸಿದ್ದನ ಕಾವ್ಯ<br>
ಹಾಯಾಗಿ ನಿನ್ನ ಧಾಟಿ ನಡೆಸಿದೆ । ಸರ್ವಜ್ಞ<br>
ಛಾಯೆ ಇರಲಿ ನಿನ್ನ ಕಡೆತನಕ ॥

ಎಂದು ಮನದುಂಬಿ ಅವನಿಗೆ ಕೃತಜ್ಞತೆಗಳನ್ನು ಸಲ್ಲಿಸಿದ್ದಾರೆ.

ತಾಯಿಯ ಪದಗಳು - "ತಾಯ್ತನದ ಹಿರಿಮೆಯಿಂದ ಕೂಡಿದ ಈ ಪದಗಳು ಮಾನವ ಕುಲಕ್ಕೆ ನೀಡಿದ ಸಂಹಿತೆಗಳು. ತಾಯಿಹೃದಯದ ನೀತಿಯುಕ್ತವಾದ ವಾತ್ಸಲ್ಯಪೂರ್ಣ ನುಡಿಗಳು ಇಲ್ಲಿವೆ. ವೀರಶೈವಧರ್ಮದ ದರ್ಶನ ತತ್ವವಿಲ್ಲದೆ, ಕಾವ್ಯತತ್ವ ಇಲ್ಲಿದೆ. ಇವೆಲ್ಲಕ್ಕಿಂತ ಹಿರಿದಾಗಿ ಮನದ ಮಲಿನತೆಯನ್ನು ತೊಳೆದು, ಸಂಸಾರವನ್ನು ಶಿವಸಾರವನ್ನಾಗಿಸುವ ದಿವ್ಯ ಬೋಧನೆ ಇದೆ. ಬುದ್ಧಿ ಭಾವವನುಜ್ಜಿ, ನಡತೆಯನ್ನು ತಿದ್ದಿ, ಸೋಹಂ ಭಾವವನ್ನು, ದಾಸೋಹಂ ಭಾವದ ರೂಪದಲ್ಲಿ ಪರಿವರ್ತಿಸುವ ಪ್ರಯತ್ನ ಇಲ್ಲಿದೆ. ಮಾನವಕುಲದ ಆತ್ಮೋನ್ನತಿಯ ಮಾರ್ಗದರ್ಶನ ಇಲ್ಲಿದೆ" ಎಂದು ಹೇಳುತ್ತಾ 'ತಾಯಿಯ ಪದಗಳು' ರಚನೆಯ ಸಾರಸಂಗ್ರಹವನ್ನೇ ಡಾ. ಚೆನ್ನಾಂಬಿಕಾ ಪಾವಟೆಯವರು ಇಲ್ಲಿ ಕಟ್ಟಿಕೊಟ್ಟಿದ್ದಾರೆ:

ವರವಾದ ಪರಸಾದ ಕರೆದು ನಾ ನೀಡುವೆ<br>
ವರಭಕ್ತೀಲಿ ನೀವು ಉಣಬೇಕು । ಅದು ನಿಮಗ<br>
ಪರತರ ಸುಖವ ಕೊಟ್ಟೀತ ॥

ಎಂದು ತಮ್ಮ ಕಾವ್ಯದ ಉದ್ದೇಶವನ್ನು ಸಾರಿದ್ದಾರೆ. ಈ ಪದ್ಯಗಳಲ್ಲಿ ಸಂಸಾರಮೋಹನಿರಸನವನ್ನು, ಶರಣಸತಿಭಾವವನ್ನು, ಆತ್ಮಜ್ಞಾನವನ್ನು ಮತ್ತು ಶಿವಶರಣರ ಕುರಿತು ಆರಾಧನಾ ಭಾವವನ್ನು, ದೇಶಾಭಿಮಾನವನ್ನು, ಐತಿಹಾಸಿಕ ಪ್ರಜ್ಞೆಯನ್ನು ಹೀಗೆ ಅನೇಕ ಸಂಗತಿಗಳನ್ನು ತಮ್ಮ ಲೋಕಾನುಭವದ ಹಿನ್ನೆಲೆಯಲ್ಲಿ ತುಂಬ ಅರ್ಥಪೂರ್ಣವಾಗಿ, ಸೊಗಸಾಗಿ ಮನದುಂಬುವಂತೆ ರಚಿಸಿದ್ದಾರೆ. ಈ ಕೃತಿಯ ಕೊನೆಯಲ್ಲಿ ಅವರು ತಮ್ಮ ಮಾನಸಿಕ ಸ್ಥಿತಿಯನ್ನು ವರ್ಣಿಸಿದ್ದಾರೆ:

ಬರೆದೆನೆನ್ನುವ ಭಾವ ಬರಿದಾಯಿತೆನಗವ್ವ ಕರದೇನೆನ್ನುವ ಭಕುತಿ ಬಯಲಾಯ್ತು । ತಾಯವ್ವ ಕೊರಗೇನೆಂಬುವ ಮನಮಾಯ್ತು. ಸಿದ್ಧರಾಮ - ಇದು ತಾಯಿಯವರು ಮಕ್ಕಳಿಗಾಗಿ ರಚಿಸಿದ ಸರಸ ಗದ್ಯಕೃತಿ, ಪುರಾಣದ ಮುಖ್ಯ ಘಟನೆಗಳನ್ನು ಆಯ್ದುಕೊಂಡು, ಸಿದ್ಧರಾಮನ ಜೀವನವನ್ನು ಐತಿಹಾಸಿಕ ದೃಷ್ಟಿಯಿಂದ ಮಕ್ಕಳ ಮನೋಜಗತ್ತನ್ನು ಗೆಲ್ಲುವಲ್ಲಿ ಈ ಕೃತಿ ಸಮರ್ಥವಾಗಿದೆ. ಮಹಾಕಾವ್ಯ ರಚನೆಯಲ್ಲಿ ಸಿದ್ಧಹಸ್ತರಾದ ತಾಯಿಯವರು ಗದ್ಯಸಾಹಿತ್ಯದಲ್ಲೂ ತಮ್ಮ ಕೌಶಲ್ಯವನ್ನು ಮೆರೆದಿದ್ದಾರೆ. ಮಕ್ಕಳ ಮನಸ್ಸನ್ನು ಭಾವುಕತೆಯಿಂದ ದೂರವಿರಿಸಿ ವಾಸ್ತವಾಂಶಗಳಿಗೆ ಇಲ್ಲಿ ಹೆಚ್ಚು ಒತ್ತು ಕೊಟ್ಟದ್ದು ಒಂದು ವಿಶೇಷ 'ಸಿದ್ಧರಾಮೇಶ್ವರ ಪುರಾಣ' ದಲ್ಲಿಯ, ಕೈಲಾಸದ ವರ್ಣನೆ, ಸುಗ್ಗಲದೇವಿ, ಮುದ್ದುಗೌಡರ ಭೂಲೋಕಜನನ, ಅಂಧಕಾಸುರ..... ಇಂಥ ಅನೇಕ ಸಂಗತಿಗಳನ್ನು ಕೈಬಿಟ್ಟಿದ್ದಾರೆ. ಇದರಿಂದ ಮಕ್ಕಳಲ್ಲಿ ವೈಚಾರಿಕಪ್ರಜ್ಞೆ ಬೆಳೆಯಲಿ ಎಂಬ ಅವರ ಸದಾಶಯ ಇಲ್ಲಿ ಸುವ್ಯಕ್ತವಾಗಿದೆ. ಸೊಲ್ಲಾಪುರದ ಆಡುಮಾತಿನ ಸೊಗಡು ಈ ಕೃತಿಯ ಸೊಗಸನ್ನು ಹೆಚ್ಚಿಸಿದೆ.

ಸಿದ್ಧರಾಮ ಪುರಾಣ - ಡಾ. ಚೆನ್ನಾಂಬಿಕಾ ಪಾವಟೆ ಅವರು ಈ ಕೃತಿಯ ಬಗ್ಗೆ ಹೀಗೆ ಅಭಿಪ್ರಾಯ ಪಡುತ್ತಾರೆ: "ಜನಸಾಮಾನ್ಯರಿಗೆ ತಿಳಿವ ಸರಳಮಾರ್ಗದಲ್ಲಿ ತ್ರಿಪದಿಯ ಸಹಜ ಮಾಧ್ಯಮದಲ್ಲಿ ಪ್ರಪ್ರಥಮ ಬಾರಿಗೆ ರಚಿಸಿದ ಅಮೂಲ್ಯ ಕೃತಿರತ್ನ 'ಸಿದ್ಧರಾಮೇಶ್ವರ ಪುರಾಣ' ೨೦ನೆಯ ಶತಮಾನದ ಮೇರುಕೃತಿ. ಇದು ಇಂಥ ಮಹಾಕೃತಿಯ ನಿರ್ಮಾಣದ ಮೊದಲ ಶ್ರೇಯಸ್ಸು, ಶಿವಶರಣೆಯರೂ, ತತ್ವನಿಷ್ಠರೂ, ಅನುಭಾವಿಗಳೂ ಆದ ಶ್ರೀಮತಿ ಜಯದೇವಿ ತಾಯಿ ಲಿಗಾಡೆಯವರಿಗೆ ಸಲ್ಲುತ್ತದೆ. ಮಹಾ ಬದುಕಿನ ಅನುಭಾವಪೂರ್ಣ ಮಹಾಕಾವ್ಯವಿದು. ತಾಯಿಯವರ ಅನುಭಾವ ತಾನೇತಾನಾಗಿ ಬಚ್ಚಿಟ್ಟ ಬಯಕೆ ಫಲವಾದ ಕೃತಿ ಇದು. ಕನ್ನಡ ತಾಯಂದಿರು ಪ್ರಾಚೀನ ಕಾಲದಿಂದ ಉಳಿಸಿಕೊಂಡು ಬಂದ ತ್ರಿಪದಿಯ ಸಹಜ ಮಾಧುರ್ಯ ಇಲ್ಲಿದೆ. ಹಾಡಿನ ಬಂಧ, ಛಂದ, ಬೆಡಗು, ಲಯಗತಿ, ಧಾಟಿ, ಎಲ್ಲವೂ ಕನ್ನಡದ ಪರಿಪಾಕ, ಕನ್ನಡ ಸಂಸ್ಕೃತಿಯ ರಸಘಟ್ಟ ಇಲ್ಲಿ ಘನೀಭೂತಗೊಂಡಿದೆ..... ಈ ಕೃತಿಯಲ್ಲಿ ಭಕ್ತಿ ಇದೆ. ಪ್ರಸಾದವಾಣಿ ಇದೆ. ಬದುಕಿನ ಸಿಹಿ - ಕಹಿಗಳ ರಸಪಾಕವಿದೆ. ಮೃತ್ಯುವನ್ನು ಗೆದ್ದಮಹದೇವನ ಮಹಿಮಾ ಪೂರ್ಣದರ್ಶನವಿದೆ. ಭಾಷೆಯಲ್ಲಿ ಜಾನಪದ ಗತ್ತು, ಅನುಭಾವದ ಪ್ರೌಢಿಮೆ, ಹೆಚ್ಚು ಮಡುಗಟ್ಟಿ ನಿಂತಿವೆ. ರಸವಿದೆ, ತತ್ವವಿದೆ. ಶರಣ ಸಂದೇಶವಿದೆ. ಅನುಭಾವದ ಆಳ, ರಸಾನುಭೂತಿಯ ಗಾಢತೆ, ಭಾಷೆಯ ಹದ, ಭಾವ ತಲ್ಲೀನತೆ, ಕಾವ್ಯಕ್ಕೆ ಸಮೃದ್ಧಿಯನೊದಗಿಸಿವೆ. ತಾಯಿ ಹಾಡುಗಬ್ಬದ ಮೂಲಕ ಶಿವತತ್ವವನ್ನು, ಶಿವತೇಜವನ್ನು ಬಿತ್ತಿ ಬೆಳೆದು ಅನುಭವದ ಅಡುಗೆ ಮಾಡಿ ಉಣ ಬಡಿಸಿರುವರು. ಅಂತೆಯೆ ಇದು ಹೊಸ ಯುಗಕ್ಕೆ ನಾಂದಿ ೪೧ ಸಂಧಿಗಳ ೪೧೦೦ ಪದ್ಯಗಳ ೧೦ ವರ್ಷಗಳ ವಾಙ್ಮಯ ತಪಸ್ಸಿನ ಫಲ ಈ ಕೃತಿಯಾಗಿದೆ".

ಎಲ್ಲ ಬಲ್ಲವಳೆಂಬ ಇಲ್ಲವದು ಭ್ರಮೆ ಎನಗೆ<br>
ಬಲ್ಲವರ ಪಾದ ಹಿಡಿಯುವೆ - ಬಲ್ಲಿದರು<br>
ಕಲಿಸಿರಿ ಮತ್ತೆ ನುಡಿಸಿರಿ

ಎಂದು ತಮ್ಮ ವಿನೀತಭಾವವನ್ನೇ ಮೆರೆದಿದ್ದರೂ, ಶ್ರೀ ಸಿದ್ಧರಾಮ ಪುರಾಣವು ಕನ್ನಡದ ಅಪರೂಪ ಕೃತಿಗಳಲ್ಲಿ ಒಂದು ಎಂಬುದರಲ್ಲಿ ಅನುಮಾನವಿಲ್ಲ. ಶ್ರೀ ವಿ. ಕೃ. ಗೋಕಾಕ ಅವರು, ಈ ಕೃತಿಯನ್ನು ಕುರಿತು, "ಮಹಿಳಾ ಹೃದಯದ ರಸಾನುಭವ ತನ್ನ ಸಂಪತ್ತನ್ನೆಲ್ಲಾ ಈ ಕೃತಿಯಲ್ಲಿ ಸೂರೆಮಾಡಿಕೊಂಡಿದೆ. ಹಿಂದೆ ಅನಾಮಧೇಯವಾಗಿ ತನ್ನ ದುಃಖ ಸುಖ, ಭಕ್ತಿಗಳನ್ನು ಜಾನಪದ ತ್ರಿಪದಿಯಲ್ಲಿ ತೋಡಿಕೊಂಡ ತಾಯಿಯ ಹೃದಯ ಇಂದು ಪ್ರಜ್ಞಾಪೂರ್ವಕವಾಗಿ ಅದೇ ಸೊಗಸಿನ ಹಾಡನ್ನು ಹಾಡಿದೆ. ಜಯದೇವಿ ತಾಯಿಯವರ ಈ ಕೃತಿ ಘನವಾದುದು. ಅದಕ್ಕೂ ಘನತರವಾಗಿ ಅದರ ಹಿಂದೆ ಚಾರಿತ್ರ್ಯ ನಿಂತಿದೆ....." ಎಂದಿದ್ದಾರೆ. ಶ್ರೀ. ಜಿ. ಪಿ. ರಾಜರತ್ನಂ ಅವರು - "ತಾಯಿ ಜಯದೇವಿಯವರು ಹತ್ತು ವರ್ಷಗಳ ತಪಸ್ಸಿನಿಂದ ಆರುನೂರು ಪುಟಗಳ ಈ ಬೃಹತ್‌ಕೃತಿಯನ್ನು ರಚಿಸಿದ್ದಾರೆ. ಇಂಥ ಕಾವ್ಯಗಳಲ್ಲಿ ಮೊದಲನೆಯದು ಮಾಸ್ತಿಯವರ 'ನವರಾತ್ರಿ', ಎರಡನೆಯದು ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ', ಮೂರನೆಯದು

'ಶ್ರೀ ಸಿದ್ಧರಾಮ ಪುರಾಣ', ಕವಯಿತ್ರಿ ಸೊಲ್ಲಾಪುರದ ಕನ್ನಡ ಕೋಟೆಯ ತಾಯಿ ಜಯದೇವಿ, ಇವರು ಸಂಚಿಯ ಹೊನ್ನಮ್ಮನ ನಂತರ ಕಾವ್ಯರಚನೆಯಲ್ಲಿ ಯಶಸ್ಸು ಸಾಧಿಸಿದವರು. ಇನ್ನೂ ಒಂದು ವಿಶೇಷವೆಂದರೆ ಸರ್ವಜ್ಞ ಕವಿಯ ತ್ರಿಪದಿ ಛಂದಸ್ಸಿನಲ್ಲಿ ನಾಲ್ಕು ಸಾವಿರ ಪದ್ಯಗಳ ಮಹಾಕಾವ್ಯ ರಚಿಸಿದವರು ಎಂಬುದರಲ್ಲಿ ಸಂದೇಹವಿಲ್ಲ" ಎಂದು ಮನಸಾರೆ ಮೆಚ್ಚಿಕೊಂಡಿದ್ದಾರೆ. ಶ್ರೀ ನಿರಂಜನ ಅವರು, "ಇಲ್ಲಿ ಭಾವಕ್ಕೆ ಭಾಷೆ ಮಣಿದಿದೆ, ಹೊನಲಾಗಿ ಹರಿದಿರುವ ತರ್ಕಾತೀತವಾದ ಭಕ್ತಿ, ಅದಕ್ಕೆ ಹಿಮ್ಮೇಳವಾಗಿ ಪದಗಳ ನಾದಮಾಧುರ್ಯ, ಈ ಶತಮಾನದ ಕನ್ನಡ ಕಾವ್ಯ ಹಿಡಿದಿರುವ ದಾರಿಗಿಂತ ಇದು ತೀರಾ ಭಿನ್ನ. ಆದರೆ ಇದು ಪ್ರಾಚೀನ ಸಾಹಿತ್ಯ, ಕಡಿದಾದ ಹೆದ್ದಾರಿಗಳಲ್ಲೊಂದು. ಇಂತಹ ಹಾದಿಯಲ್ಲಿ ನಡೆದು ಕಾವ್ಯವನ್ನು ಹೊಸ ಎತ್ತರಕ್ಕೆ ಮುಟ್ಟಿಸಿದ್ದಾರೆ ಅವರ ಮಾರ್ಗ ಈ ಕಾಲದೊಂದು ಅಪೂರ್ವ ಸಾಧನೆಯಾಗಿದೆ" ಎಂದು ಕೃತಿಯ ಮೌಲಿಕತೆಯನ್ನು ಬಣ್ಣಿಸಿದ್ದಾರೆ. ಆದರೂ ಈ ಕೃತಿಗೆ ಸಿಗಬೇಕಾದಷ್ಟು ಸ್ಥಾನಮಾನಗಳು ಸಾಹಿತ್ಯದಲ್ಲಿ ಸಿಕ್ಕಲಿಲ್ಲವೆನ್ನುವದು ನೋವಿನ ಸಂಗತಿ.

ತಾಯಿಯವರು ಹಲವು ಕ್ಷೇತ್ರಗಳಲ್ಲಿ ಆಸಕ್ತಿ ವಹಿಸಿ ಕಾರ್ಯ ನಿರತರಾಗಿದ್ದರು. ಅದರ ಸಾಧನೆಯ ಹೆಗ್ಗುರುತು ಸಾಹಿತ್ಯ ಕ್ಷೇತ್ರ. ಮಹಿಳಾ ಸಂಘಟನೆಗಳು, ಸೇವಾದಳ, ಲಿಂಗಾಯಿತ ಪರಿಷತ್ತು, ಸಾಕ್ಷರತಾ ಮಂಡಲಿ, ಕರ್ನಾಟಕ ವಿದ್ಯಾವರ್ಧಕ ಸಂಘ, ವಿಶ್ವವಿದ್ಯಾಲಯಗಳಲ್ಲಿ ಒಂದಲ್ಲ ಒಂದು ಬಗೆಯಲ್ಲಿ ಕ್ರಿಯಾಶೀಲರಾಗಿದ್ದರು. ರಾಜ್ಯ ಸಾಹಿತ್ಯ ಮತ್ತು ಲಲಿತಕಲಾ ಅಕಾಡೆಮಿಗಳ ಪ್ರಶಸ್ತಿ. ೧೯೭೪ರಲ್ಲಿ ಮಂಡ್ಯದಲ್ಲಿ ನಡೆಸಿ ೪೮ನೆಯ ಕನ್ನಡಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಕರ್ನಾಟಕ ವಿಶ್ವವಿದ್ಯಾಲಯದ ಜಾನಪದ ಸಮ್ಮೇಳನದ ಅಧ್ಯಕ್ಷತೆ, ಕರ್ನಾಟಕ ವಿಶ್ವವಿದ್ಯಾಲಯದ ಡಿ.ಲಿಟ್. ಪದವಿ ಮೊದಲಾದ ಪ್ರಶಸ್ತಿ ಗೌರವಗಳು ಅವರಿಗೆ ಸಂದಿವೆ.

ಅರುವಿನಾಗರದಲ್ಲಿ - ೧೪೮೭ ತ್ರಿಪದಿಗಳಲ್ಲಿ ೧೦ ಜನ ಶರಣರ ಗೀತ ಗೊಂಚಲಗಳನ್ನು ಇದು ಒಳಗೊಂಡಿದೆ. ೧೯೯೦ರಲ್ಲಿ ಇದನ್ನು ಸುಂದರವಾಗಿ ಸಂಪಾದಿಸಿದವರು, ಕನ್ನಡದ ಹಿರಿಯ ಸಾಹಿತಿ ಡಾ. ಸಾ. ಶಿ. ಮರುಳಯ್ಯನವರು. ವೀರಶೈವಧರ್ಮದ ತತ್ವವನ್ನು ಒಳಗೊಂಡ ಅತ್ಯಂತ ಸತ್ವಯುತ ಶೈಲಿಯ ಕೃತಿ ಇದು. ಇಲ್ಲಿ ತಾಯಿಯವರು ಮುಖ್ಯವಾಗಿ 'ಷಟ್‌ಸ್ಥಲ' ಬೆಳವಣಿಗೆಯನ್ನು ನಿರೂಪಿಸುತ್ತಾರೆ. ಅಷ್ಟಾವರಣ ಅಂಗವಾದ ಪಂಚಾಚಾರ ಪ್ರಾಣವಾದ ವೀರಶೈವಕ್ಕೆ ಷಟ್‌ಸ್ಥಲವು ಆತ್ಮವಾಗಿದೆ. ಇದು ಲಿಂಗಾಂಗ ಸಾಮರಸ್ಯದ ಗುರಿಯನ್ನು ಹೊಂದಿದೆ.

ಮಹಾಲಿಂಗ ಮಲಗಿದ ಮಹಾದಾಕಾಶದಿ
ಅಹಾಹಾ ತೊಟ್ಟಿಲು ತೂಗುವದು ಕಂಡೆ ನಾ
ಇಹಪರದ ಆಚೆ ಆಚೆಯ ||

ಎಂದು ಭಗವಂತನ ವಿಶ್ವರೂಪವನ್ನು ಮನಗಂಡುದನ್ನು ವರ್ಣಿಸುತ್ತಾರೆ. ಈ ದೇಹವನ್ನು ಪರಮಾತ್ಮಾನ ಆವಾಸಸ್ಥಾನವನ್ನಾಗಿ ರೂಪಿಸಬೇಕು. ಮನದಲ್ಲಿ ಅರಿವಿನ ಬೆಳಕು ಮೂಡುವದೇ ಆಗ. ಈ ದೇಹ ಮನಸ್ಸುಗಳೇ ಪರತತ್ವವನ್ನು ಹೊಂದಿರುವ ಅರುವಿನ ಆಗರ. ಇದಕ್ಕೆ ಕಠಿಣವಾದ ಶ್ರಮ ನಿಸ್ಸೀಮವಾದ ನಿಷ್ಠೆಬೇಕು. ಅದನ್ನು ಸಾಧಿಸಿದವರು ತಾಯಿಯವರು. ಅದನ್ನೇ ಈ ಕೃತಿಯಲ್ಲಿ ಬಿಂಬಿಸಿದ್ದಾರೆ.

ಎದೆಯ ಬಟ್ಟಲದೊಳಗೆ । ಸದಯ ಸದ್ಗುಣದ
ಸುಧೆ ತುಂಬಿ ತಾನೆ ತುಳುಕುತ್ತಿತ್ತು - ನೋಡವ್ವ
ಸದಮಲ ಶರಣರ ದಯೆಯಿಂದ ||

ಇದು ತಾಯಿಯವರು ಅನುಭಾವದಿಂದ ದೈವೀಸ್ವರೂಪಿಗಳಾದ ಬಗೆ.

ಮರಾಠಿ ಸಾಹಿತ್ಯ - ಬಸವೇಶ್ವರ, ಸಿದ್ಧರಾಮೇಶ್ವರರ ವಚನಗಳನ್ನು ತಾಯಿಯವರು ಮರಾಠಿಗೆ ಅನುವಾದಿಸಿದ್ದಾರೆ. ಇವಲ್ಲದೆ 'ಬಸವದರ್ಶನ', 'ಮಹಾಯೋಗಿನಿ', 'ಸಿದ್ಧರಾಮಾಂಚಿ ತ್ರಿಪದಿ' ಮರಾಠಿ ತ್ರಿಪದಿಯಲ್ಲಿ 'ಅಕ್ಕಮಹಾದೇವಿ ಪುರಾಣ' ಇದರಿಂದಾಗಿ ಮರಾಠಿಯಲ್ಲಿ ಇಲ್ಲದ 'ತ್ರಿಪದಿ' ಛಂದಸ್ಸನ್ನು ಮರಾಠಿ ಭಾಷೆಗೆ ಪರಿಚಯಿಸಿದಂತಾಯಿತು. ಮತ್ತೊಂದು ಮಹತ್ವದ ಕೃತಿ; ಸಮೃದ್ಧ ಕರ್ನಾಟಕಕಾಂಚೆ ರೂಪರೇಖಾ ! ಹೀಗೆ ಮರಾಠಿಯಲ್ಲೂ ಕೃತಿರಚನೆ ಮಾಡಿ ಮರಾಠಿ-ಕನ್ನಡ ಬಾಂಧವ್ಯಕ್ಕೆ ತಾಯಿಯವರು ಸೇತುವೆಯಾದರು.

ಮರಾಠಿಸಾಹಿತ್ಯದ ಸಮ್ಮೇಳನಾಧ್ಯಕ್ಷ, ಶ್ರೀ ತರ್ಕತೀರ್ಥಲಕ್ಷ್ಮಣ ಶಾಸ್ತ್ರೀ ಜೋಶಿಯವರು, ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ, "ಈ ಮರಾಠಿ ಕೃತಿಯಲ್ಲಿ ಭಕ್ತಿ ಮತ್ತು ನೀತಿಗಳ ಸುಂದರ ಮಿಲನವಾಗಿದೆ. ಅವರು ಸ್ವರಾತ್ಮಕವಾದ ಸುಮಧುರವಾದ ಒಂದು ಪ್ರತ್ಯೇಕ ಶೈಲಿಯನ್ನು ಮರಾಠಿಯಲ್ಲಿ ತಂದಿದ್ದಾರೆ. ಇವರ ಕೃತಿಯನ್ನೋದಿದ ನಮಗೆ ಕನ್ನಡದ ಬಗ್ಗೆ ಆದರವನ್ನು ಬೆಳೆಸಬೇಕೆಂಬ ಇಚ್ಛೆಯಾಗುತ್ತದೆ ಎಂಬ ಮಾತೇನೂ ಸಣ್ಣದಲ್ಲ" ಎಂದು ಹೃದಯದುಂಬಿ ಸಾರಿದ್ದಾರೆ. ಉಭಯಭಾಷಾ ಪರಿಣಿತರಾದ ತಾಯಿಯವರು ಕನ್ನಡಕ್ಕೆ ತಂದು ಕೊಟ್ಟ ಕೀರ್ತಿ ಇದು.

ತಾಯಿಯವರ ಜೀವನದ ಮಹತ್ವದ ದಾಖಲೆಗಳು -

೧) ೧೯೩೪ - ವೀರಶೈವ ಸಾಹಿತ್ಯ ಸಭೆಯ ಅಧ್ಯಕ್ಷೆ. ಮಹಿಳಾ ಸಮ್ಮೇಳನದ ಸ್ವಾಗತಾಧ್ಯಕ್ಷೆ.

೨) ಸೊಲ್ಲಾಪುರದಲ್ಲಿ ಸೇರಿದ ಮೂವತ್ತು ಮೂರನೆಯ ಕನ್ನಡ ಸಾಹಿತ್ಯ ಸಮ್ಮೇಳನದ, ಮಹಿಳಾ ಅಧಿವೇಶದಲ್ಲಿ ಸ್ವಾಗತಭಾಷಣ.

೩) ೧೯೫೪ - ಅಮರಗಣಾಧೀಶ್ವರರ ಸ್ಮಾರಕ ಮಹೋತ್ಸವದ ಮಹಿಳಾಪರಿಷತ್ತಿನ ಉದ್ಘಾಟಕಿ.

೪) ಅಖಿಲಭಾರತ ಹತ್ತನೆಯ ಶಿವಾನುಭವ ಸಮ್ಮೇಳನದ ಮಹಿಳಾ ಪರಿಷತ್ತಿನ ಅಧ್ಯಕ್ಷೆ.

೫) ಅಖಿಲಭಾರತ ವೀರಶೈವ ಮಹಿಳಾಪರಿಷತ್ತಿನ ಉದ್ಘಾಟಕಿ.

೬) ೧೯೪೪ - ರಾಷ್ಟ್ರೀಯ ಸೇವಾದಲದ ಪ್ರೌಢ ಸ್ತ್ರೀ ಶಾಖೆಯನ್ನು ಪ್ರಾರಂಭ ಮಾಡಿದ್ದು.

೭) ೧೯೪೪ - ಸೊಲ್ಲಾಪುರದ ಪ್ರೌಢಶಿಕ್ಷಣ ಸಮಿತಿಗೆ-ನಿರೀಕ್ಷಕಿ.

೮) ೧೯೪೪ - ಹೈದ್ರಾಬಾದ್ ಲಿಂಗಾಯಿತ ಪರಿಷತ್ತಿನ ಹಿತಚಿಂತಕಿ ಹಾಗೂ ಮಹಿಳಾ ಸಮಿತಿಯ ಕಾರ್ಯದರ್ಶಿ.

೯) ೧೯೫೦ - ಮುಂಬೈನಲ್ಲಿ - ಕನ್ನಡ ಸಾಹಿತ್ಯ ಸಮ್ಮೇಳನದ, ಮಹಿಳಾ ಗೋಷ್ಠಿಯ ಅಧ್ಯಕ್ಷೆ.

೧೦) ೧೯೫೧ - ಕಾರ್ಮಿಕ ಸಾಕ್ಷರ ಮಂಡಳಿಗೆ ಸದಸ್ಯೆ.

೧೧) ೧೯೫೫ - ಕರ್ನಾಟಕ ವಿಶ್ವವಿದ್ಯಾಲಯದ ಸಿನೇಟರ ಆಗಿ ನೇಮಕ.

೧೨) ೧೯೫೫ - ೫೭ - ಕರ್ನಾಟಕ ವಿದ್ಯಾವರ್ಧಕ ಸಂಘದ ಉಪಾಧ್ಯಕ್ಷೆ.

೧೩) ಏಕೀಕರಣಕ್ಕಾಗಿ ಅವಿರತ ದುಡಿದ - ಗಡಿನಾಡ ಸಿಂಹಿಣಿ.

೧೪) ೧೯೬೦ - ಬೀದರ್‌ನಲ್ಲಿ ನಡೆದ ೪೧ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಮಹಿಳಾ ಪರಿಷತ್ತಿನ ಅಧ್ಯಕ್ಷೆ.

೧೫) ೧೯೬೫ -'ಸಿದ್ಧರಾಮ ಪುರಾಣ'ದ ಬಿಡುಗಡೆಯ ಸಮಾರಂಭ.

೧೬) ೧೯೬೮ - ಮೈಸೂರು ರಾಜ್ಯ ಸಾಹಿತ್ಯ ಮತ್ತು ಲಲಿತಕಲಾ ಅಕಾಡೆಮಿ ಪ್ರಶಸ್ತಿ

೧೭) ೧೯೭೨ - ಷಷ್ಠ್ಯಬ್ದಿಯ ಆಚರಣೆ.ದೇಶದ ಪ್ರಮುಖರು, ಲಕ್ಷಾಂತರ ಅಭಿಮಾನಿಗಳು ಪಾಲ್ಗೊಂಡಿದ್ದರು.

೧೮) ೧೯೭೪ - ಮಂಡ್ಯದಲ್ಲಿ ನಡೆದ ೪೮ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಆಧ್ಯಕ್ಷೆಯಾಗಿ ಸರ್ವಾನುಮತದಿಂದ ಆಯ್ಕೆಯಾದರು.

೧೯) ೧೯೭೪ - ಕರ್ನಾಟಕ ವಿಶ್ವವಿದ್ಯಾಲಯದ ಜಾನಪದ ಸಮ್ಮೇಳನದ ಅಧ್ಯಕ್ಷೆ.

೨೦) ೧೯೨೬ - ಕರ್ನಾಟಕ ವಿಶ್ವವಿದ್ಯಾಲಯವು ಡಿ.ಲಿಟ್. ಪದವಿ ನೀಡಿತು.

೨೧) ೧೯೭೭ - ಕರ್ನಾಟಕ ರಾಜ್ಯ ಸರಕಾರವು ಕರ್ನಾಟಕ ಸಾಹಿತ್ಯ ಅಕಾಡೆಮಿಗೆ ಸದಸ್ಯ ಎಂದು ನಾಮಕರಣ ಮಾಡಿತು.

೧೯೪೬ರಲ್ಲಿ ಪತಿವಿಯೋಗ, ೫೬ರಲ್ಲಿ ತಂದೆಯ ಮರಣ, ೭೪ರಲ್ಲಿ ತಾಯಿಯ ಅಗಲುವಿಕೆ - ಹೀಗೆ ಎಲ್ಲ ದುರಂತಗಳನ್ನು ಸಹಿಸಿಕೊಂಡು ಅವರು ಸಮಾಜ - ಸಾಹಿತ್ಯ - ಭಾಷೆಗೆ ಸಲ್ಲಿಸಿದ ಸೇವೆ ಅನನ್ಯ.

ಒಬ್ಬಳು ಹೆಣ್ಣುಮಗಳು, ಒಂದು ಜೀವಮಾನದಲ್ಲಿ ಅದೂ ತನ್ನ ಇತಿ - ಮಿತಿಗಳಲ್ಲೇ ಇಷ್ಟೊಂದು ಬಗೆಯ ಸಾಧನೆಗಳನ್ನು ಸಾಧಿಸಿದ್ದು ಇತಿಹಾಸ ದಲ್ಲೇ ಅಪರೂಪವೆನ್ನಬಹುದು. ಅವರ ಶ್ರಮಕ್ಕೆ ತಕ್ಕ ಫಲವನ್ನು ಅವರು ಕಾಣಲಿಲ್ಲ. ಯಾವ ಅಧಿಕಾರವನ್ನೂ ಬಯಸಲಿಲ್ಲ. ಒಂದು ಕ್ಷಣವನ್ನು ವ್ಯರ್ಥವಾಗಿ ಕಳೆಯಲಿಲ್ಲ. ನಾಡಿಗಾಗಿ - ನುಡಿಗಾಗಿ - ಮಹಿಳೆಯರಿಗಾಗಿ - ಕಾರ್ಮಿಕರಿಗಾಗಿ - ಅಸ್ಪೃಶ್ಯರಿಗಾಗಿ ಮಾಡಿದ ಅವರ ಸೇವೆ-ಚಿಂತನೆಗಳು ಸ್ಮರಣೀಯವಾಗಿದೆ. ಆದರೆ ಸ್ಮರಣೆಯೊಂದೇ ಸಾಕೇ?

❑

# ಬೀchi

ಅ.ರಾ.ಮಿತ್ರ

> ನಿನ್ನಂತೆ ನೀನಾಗು ನಿನ್ನ ನೀ ಅರಿ ಮೊದಲು
> ಚೆನ್ನೆಂದು ದೊಡ್ಡವರ ಅನುಕರಿಸ ಬೇಡ
> ಏನಾಯ್ತು ಮರಿಕತ್ತೆ? ಚೆಲುವಿತ್ತು, ಮುದ್ದಿತ್ತು
> ತನ್ನಪ್ಪನಂತಾಗಿ ಹಾಳಾಯ್ತೊ ತಿಂಮ
>
> - (ಅಂದನಾ ತಿಂಮ)

ಬರಹಗಾರನ ವೈಯಕ್ತಿಕ ಪ್ರತಿಭೆ ಜಡ ಅನುಕರಣೆಯ ಮರಳಿನಲ್ಲಿ ಇಂಗಿ ಹೋಗಬಾರದು. ಇದು ಬೀchi ಅವರ ದೃಷ್ಟಿಕೋನ. ಈ ದೃಷ್ಟಿಯನ್ನು ಕಂಡೇ ಇರಬೇಕು ತುಂಬ ಗಂಭೀರ ಬರಹಗಾರರಾದ ಶಂ.ಬಾ. ಜೋಶಿ ಯವರು ಬೀchi ಯವರನ್ನು "ತನ್ನನ್ನು ತಾನೇ ರೂಪಿಸಿಕೊಂಡ ಅಪೂರ್ವ ಸ್ವಯಂಭೂ" ಎಂದು ವರ್ಣಿಸಿದ್ದಾರೆ. ಬೀchi ಪ್ರಸಿದ್ಧ ಇಂಗ್ಲಿಷ್ ಕಾದಂಬರಿಗಳ ನಗೆತುಣುಕುಗಳ ಭಾವಸಾಮಗ್ರಿಯನ್ನು ಕನ್ನಡಕ್ಕೆ ಇಳಿಸಿದ್ದಾರೆ ನಿಜ. ಆದರೆ ಅವರ ಭಾಷಾಪ್ರಜ್ಞೆಯಲ್ಲಿ ಕನ್ನಡದ ಛಾಪು ಇದೆ. ಶಬ್ದದ ವಿಶಿಷ್ಟ ಸತ್ವದಿಂದಲೇ ವಿಚಾರಗಳನ್ನು ಬೆದಕಬೇಕೆಂಬ ಆರೋಗ್ಯಕರ ವ್ಯಂಗ್ಯಶೀಲತೆಯಿದೆ. "ಮಾನವನ ಬಾಳು ಗೋಪುರದ ಗಡಿಯಾರ. ತಲೆ ಎತ್ತಿದರೆ ಮಾತ್ರ ಕಾಣುತ್ತದೆ. ಎತ್ತಲು ತಲೆ ಎಂಬುದೊಂದುಬೇಕು. ಎತ್ತಬೇಕು ಅಂಬುದು ಅದಕ್ಕೆ ತೋಚಬೇಕು, ಅಲ್ಲವೆ? ಆದಕ್ಕಾಗಿ ಮನುಷ್ಯನೆಂಬ ಪ್ರಾಣಿ ಊರ್ಧ್ವಮುಖಿ. ಗಡಿಯಾರ ಅಂಬುದು ಅದಕ್ಕೆ ತೋಚಬೇಕು. ಬರೀ ಕಂಡರೂ ಸಾಲದು. ಅದರ ಮುಳ್ಳುಗಳ ಲೆಕ್ಕಾಚಾರ ತಿಳಿದಿರಬೇಕು". ಹೀಗೆ ಶಬ್ದಮುಖವಾಗಿ ಪ್ರತಿಮಾತ್ಮಕವಾಗಿ ಬರೆಯುವ ಶಕ್ತಿಯನ್ನು ಅವರು ರೂಢಿಸಿಕೊಂಡಿದ್ದಾರೆ. ಈ ಬಗೆಯ ವ್ಯಂಗ್ಯ ಶೈಲಿಯೇ ಅವರ ದೊಡ್ಡ ಕೊಡುಗೆ.

ಭಾಷೆಯ ಬೇರುಗಳೊಳಗೆ ನೀರಿನಂತೆ ಇಳಿದುಕೊಂಡು ಅದರ ಒಳಮೈಯ ಇಕ್ಕಟ್ಟಾದ ಸ್ಥಳಗಳನ್ನೆಲ್ಲ ಶೋಧಿಸುವ ಕೆಲಸ ಕೈಗೊಂಡವರು ಬೀchi. ಇದರ ಪರಿಣಾಮವಾಗಿ ಶಬ್ದದ ಬೆನ್ನಹತ್ತಿ ಅದರ ವಕ್ರಗತಿಗಳನ್ನೆಲ್ಲ ತೋರಿಸಿಕೊಡುವುದು, ಹಾಸ್ಯದೃಷ್ಟಿಯನ್ನಿರಿಸಿಕೊಂಡು ಶಬ್ದದ ಆಚೆ ಈಚೆಯ ವಿಚಾರದ ಮಗ್ಗುಲುಗಳನ್ನು ತೋರಿಸಿ ಕೊಡುವುದು ಅವರಿಗೆ ಸಾಧ್ಯವಾಯಿತು. ಈ ದೃಷ್ಟಿಯಿಂದ ಹಾಸ್ಯ ವಿಶ್ಲೇಷಣೆ ಶಬ್ದಶೋಧಗಳೆರಡನ್ನೂ ಒಂದೇ ಮೈಯಲ್ಲಿ ಸಾಧಿಸಿದ ಕೀರ್ತಿ ಬೀchiಯವರಿಗೆ ಸಲ್ಲುತ್ತದೆ. ಆಧುನಿಕ ಕನ್ನಡ

ಹಾಸ್ಯ ಪರಂಪರೆ ಬಹುಮುಖಿಯಾದದ್ದು. ಆರ್.ನರಸಿಂಹಾಚಾರ್, ಗೊರೂರು, ಪಡಕೋಣೆ ರಮಾನಂದರಾಯ ಇವರುಗಳಲ್ಲಿ ಹಾಸ್ಯ ಪ್ರಸಂಗಗಳ ನವಿರಾದ ವಸ್ತುವಿವರಣೆಯಿದೆ. ರಾಶಿ, ರಾಜರತ್ನಂ, ಎ.ಎನ್. ಮೂರ್ತಿ ರಾವ್, ಲಾಂಗೂಲಾಚಾರ್ಯ ಇವರುಗಳ ಹಾಸ್ಯದಲ್ಲಿ ಆತ್ಮೀಯತೆಯ ಲೇಪವಿದೆ. ನಾಡಿಗೇರ್ ಸೋದರರು, ನಾ. ಕಸ್ತೂರಿ, 'ಎನ್.ಕೆ.', ಎಚ್.ಕೆ.ರಂಗನಾಥ್ ಇವರುಗಳು ಶುದ್ಧಹಾಸ್ಯದ ಅಬ್ಬರದ ದರ್ಶನ ಮಾಡಿಕೊಡುತ್ತಾರೆ. ಶ್ರೀರಂಗ, ಕಾರಂತ ಇವರ ಹಾಸ್ಯದ ಹಿನ್ನೆಲೆಯಲ್ಲಿ ವಿಚಾರದ ಬೆಟ್ಟವೇ ಇರುತ್ತದೆ. ರಾ.ಕು., ಅ.ರಾ.ಸೇ., ದಾಶರಥಿ ದೀಕ್ಷಿತ್, ಸುನಂದಮ್ಮ ಮೊದಲಾದವರು ತಮ್ಮ ವಿಚಿತ್ರ ದೃಷ್ಟಿಕೋನದಿಂದ ಹಾಸ್ಯಪ್ರಕರಣಗಳನ್ನು ಮಥಿಸುತ್ತಾರೆ. ಬೀchi ಶಬ್ದದ ಬೆನ್ನು ಹಿಡಿದು ಹಾಸ್ಯದ ಒಳಸೆಲೆಗಳನ್ನು ಶೋಧಿಸುವ ಅನನ್ಯ ಪಂಥದ ಬರಹಗಾರರಾಗಿದ್ದಾರೆ.

"ಬೀchi". ಕನ್ನಡ-ಹೂಣ ಲಿಪಿಗಳ ಎರಡು ತಲೆ ಕರುವಿನಂತೆ ವಿಚಿತ್ರವಾಗಿ ಕಾಣುವ ಈ ಹೆಸರು ನಿಜವಾಗಿ ಅಚ್ಚಕನ್ನಡದ 'ಬೀಚಿ'ಯೇ. ಅವರ ನಿಜವಾದ ಹೆಸರು ಹೆದರಿಕೆ ಹುಟ್ಟಿಸುವಂತ ಬಲಶಾಲಿಯಾದ ಹೆಸರೇ. ರಾಯಸಂ ಭೀಮಸೇನರಾವ್. ಈ ಬಗ್ಗೆ ಅವರೇ ವಿವರಣೆ ನೀಡಿದ್ದಾರೆ:

"ಪಾರ್ಥಸಾರಥಿ ಪಾಚು ಆಗುತ್ತಾನೆ. ನಾರಾಯಣ ನಾಣಿ. ಅಂತೆಯೇ ಭೀಮಸೇನ ಬೀಚಿಯಾದ ಅವರಿವರ ಬಾಯಲ್ಲಿ, ಹಾಗಾದುದೇ ಒಳಿತಾಯಿತು. ಸದಾ ಕರುಳಿನ ಬೇನೆಯಿಂದ ನರಳುವ ಈ ಹೊಟ್ಟೆರೋಗಿ 'ಭೀಮಸೇನ' ಹೇಗಾದಾನು?" ಹೀಗಾಗಿ ಈ 'ಕಾಚಿಕಡ್ಡಿ ಪೈಲುವಾನ' ಅವರ ಅಮ್ಮನ ಮುದ್ದಿನ ನುಡಿಗತ್ತರಿಗೆ ಸಿಲುಕಿ 'ಬೀಚಿ'ಯಾದ.

ಅವರ ಜೀವನ ಚರಿತ್ರೆಯ ಒಂದು ಪುಟ ಅವರೇ ಬರೆದ 'ಬೀchi ಲೈಫೋಗ್ರಫಿ'ಯಲ್ಲಿದೆ:

| | | |
|---|---|---|
| ಹುಟ್ಟಿದ ತಾರೀಖು | : | 23-4-1913 |
| ಶಿಕ್ಷಣ | : | ಎಸ್.ಎಸ್.ಎಲ್.ಸಿ. ಪಾಸು 1930 |
| ನೌಕರಿಗೆ ಸೇರಿದ್ದು | : | ಪೋಲೀಸ್ ಖಾತೆಯಲ್ಲಿ ಅಟೆಂಡರ್ 1931 |
| ಪ್ರಥಮ ಲೇಖನ ಮುದ್ರಣ | : | ಪ್ರಜಾಮತ (ಮದ್ರಾಸ್) 1933. |
| ಮದುವೆ | : | ಜಮಖಂಡಿ ಶ್ರೀನಿವಾಸಾಚಾರ್ಯರ ಮಗಳು ಸೌ. ಸೀತಾಬಾಯಿ ಅವರೊಡನೆ. 1933 (ಶ್ರಾವಣ) |
| ಪ್ರಥಮ ಸಂತಾನ | : | 1940 |
| ಪ್ರಥಮ ಪುಸ್ತಕ ಪ್ರಕಟನೆ | : | 1946 |
| ಕೆಲಸದಲ್ಲಿ ಬಡತಿ | : | ಸೂಪರಿಂಟೆಂಡೆಂಟ್, ಸ್ಪೆಷಲ್ ಬ್ರಾಂಚ್ ಸಿ.ಐ.ಡಿ ಬೆಂಗಳೂರು (ರಾಜ್ಯದಲ್ಲಿ ಈ ತರಹದ ಹುದ್ದೆ ಇದೊಂದೇ) |
| ಪಿಂಚಣಿ | : | 1968 |
| ಪಿಂಚಣಿ ಹಣ | : | ರೂ.133 |
| ವಿಶೇಷ ಉಲ್ಲೇಖನೀಯ ಸಂಗತಿಗಳು | : | ಹುಟ್ಟುವುದು, ಮದುವೆ. |

ಬೀchi ಹರಪನಹಳ್ಳಿಯ ಹುರುಪಿನ ಜೀವ. ಅವರೇ ತಮ್ಮ ಬಾಲ್ಯದ ಬಗೆಗೂ ಹೇಳಿಕೊಂಡಿದ್ದಾರೆ: "ಪರಾವಲಂಬಿ ಜೀವಿ ನಾನಲ್ಲ. ಹುಟ್ಟುತ್ತಲೇ ತಂದೆ, ತಾಯಿ ಇಲ್ಲ. ಬಡವರಾದ ಸೋದರತ್ತೆ ಅವರು ಉಳಿದ ತಂಗಳ ಹಾಕಿ ಸಾಕಿದರು....ಎಸ್ಸೆಸ್ಸೆಲ್ಸಿ ಮುಗಿಸುವುದೇ ಒಂದು ಪ್ರಯಾಸವಾಯಿತು-ಶಾಲೆಗೆ ಫೀಜು ಕಟ್ಟುವುದಕ್ಕೆ ಗತಿಯಿಲ್ಲದೆ. ಅಲ್ಲಿಗೆ ಮುಗಿಯಿತು ವಿದ್ಯಾಭ್ಯಾಸದ ಕತೆ". ಅವರಿಗೆ ಬಾಲ್ಯದಲ್ಲಿ ಅಕ್ಷರಭ್ಯಾಸವಾದದ್ದು ತೆಲುಗಿನಲ್ಲಿ. ಸೋದರಮಾವ ವೃತ್ತಿಯಲ್ಲಿ ಅರ್ಚಕರು. ಅವರ ಮನೆಯಲ್ಲಿ 'ಮೇಲುಕರಟದ ತುರಿಯಿಂದ ಬೆಳೆದವನು' ಎಂದು ಬೀchi ಅಭಿಮಾನದಿಂದ ಹೇಳಿಕೊಳ್ಳುತಾರೆ. ಅವರು ಕನ್ನಡ ಕಲಿತದ್ದೇ ಎಸ್.ಎಸ್.ಎಲ್.ಸಿ. ವೇಳೆಗೆ (ಅಥವಾ ಆಗಲೂ ಅಲ್ಲ. I learnt Kannada after I became an author-ಇದು ಅವರದೇ ಮಾತು) ಪೋಲೀಸ್ ಇಲಾಖೆಯಲ್ಲಿ ಅಖಂಡವಾಗಿ ಮೂವತ್ತೆರಡು ವರ್ಷ ಸೇವೆ. ಬಹುಶಃ ಇವರ ಹುಡುಕುಗಣ್ಣು, ಚುಚ್ಚು ಮಾತು, ಝಾಡಿಸುವ ಮನೋಧರ್ಮ ಇವೆಲ್ಲ ಬಹುಮಟ್ಟಿಗೆ ಆ ಡಿಪಾರ್ಟ್‌ಮೆಂಟಿನ ಪ್ರಸಾದ ಎನ್ನಿಸುತ್ತದೆ. ಇದನ್ನು ಮನಸ್ಸಿನಲ್ಲಿರಿಸಿಕೊಂಡೇ ಎಂ.ಎನ್.ವ್ಯಾಸರಾವ್ ಬೀಚಿಯವರನ್ನು ಕುರಿತ ಒಂದು ಪದ್ಯದಲ್ಲಿ-

ಕಾಲಮಾನಗಳನಾಚೆ ನೂಕಿ
ಸವೆದು ಸತ್ತವುಗಳ ಬೆದಕಿ ಕೆದಕಿ
ಸದಾ ತನಿಖೆಯಲ್ಲಿರುವ ಮನಸು

ಎಂದಿದ್ದಾರೆ.

ಬೀchi ಬರವಣಿಗೆಗೆ ಇಳಿದದ್ದು ಒಂದು ಆಕಸ್ಮಿಕವೇ. ಅದರಲ್ಲೂ ಹಾಸ್ಯದ ಬರವಣಿಗೆಗೆ ಅವರಿಗೆ ಪ್ರೇರಣೆ ಬಂದದ್ದು ಇನ್ನೊಂದು ಆಕಸ್ಮಿಕ. ಹಾಸ್ಯಪ್ರಜ್ಞೆಯೇನೋ ಅವರಲ್ಲಿ ಧಾರಾಳವಾಗಿತ್ತು. ಆದ್ದರಿಂದ ಏನನ್ನೂ ಬರೆಯದಿದ್ದರೂ ಹಾಸ್ಯಗಾರರಾಗಿರುವವರನ್ನು ಅವರು ಮೆಚ್ಚಿದ್ದಾರೆ:

"ಎಂದು ನೀನು ಹಾಸ್ಯ ಲೇಖಕನಾದಿ? ಎಂಬುದಕ್ಕೆ ಉತ್ತರ ಸಿಕ್ಕೀತು. ಆದರೆ ನೀನೆಂದು ಹಾಸ್ಯಗಾರನಾದಿ ಎಂಬ ಪ್ರಶ್ನೆಗೆ ಉತ್ತರ ಹೇಳುವುದು ತುಂಬ ಕಷ್ಟ. ಹಾಸ್ಯಗಾರ ಅವನು ಹುಟ್ಟುವ ಮೊದಲೇ ಹಾಸ್ಯಗಾರನಾಗಿರುತ್ತಾನೆ. ಆಮೇಲೆ ಅವನು ಲೇಖಕನಾದರೆ ಹಾಸ್ಯ ಲೇಖಕನಾಗುತ್ತಾನೆ. ಇಲ್ಲದಿದ್ದರೆ ಬರಿಯ ಹಾಸ್ಯಗಾರನಾಗಿಯೇ ಉಳಿಯುತ್ತಾನೆ. ಅಂಥ ಹುಟ್ಟು ಹಾಸ್ಯಗಾರರು ನಮ್ಮಲ್ಲಿ ಹೇರಳವಾಗಿದ್ದಾರೆ.

"ಬೀchi ಅವರಿಗೆ ಬರೆಯುವ ಅಭ್ಯಾಸ ಇರಲಿಲ್ಲ ಮಾತ್ರವಲ್ಲ. 'ಕನ್ನಡದಲ್ಲಿ ಬರೆಯುವುದು ಓದುವುದು ಅಷ್ಟೇನೂ ಗೌರವದ ಕೆಲಸವಲ್ಲ', ಎಂಬ ಭಾವನೆಯೂ ಇತ್ತು. ಕನ್ನಡ ಸಾಹಿತ್ಯ ಗ್ರಂಥಗಳ ಪರಿಚಯವೇ ಇಲ್ಲದಿದ್ದ ಬೀchiಯಂಥ ತರುಣನನ್ನು ಸಾಹಿತ್ಯ ಜಗತ್ತಿನ ಗುರುತ್ವಾಕರ್ಷಣೆಗೆ ಒಳಪಡಿಸಿದವರೆಂದರೆ ಅ.ನ.ಕೃಷ್ಣರಾಯರು. ಅವರ ಸಂಧ್ಯಾರಾಗ ಬೀchi ಯವರ ಮನಸ್ಸನ್ನು ಸೆಳೆದ ಕಾದಂಬರಿ. ಈ ಕಾದಂಬರಿಯ ಪರಿಚಯವಾದುದೂ ಒಂದು ಸ್ವಾರಸ್ಯಕರ ವಿಷಯವೇ. ಇವರ ಪತ್ನಿ ಕನ್ನಡ ಭಕ್ತೆ. ಕನ್ನಡ ಪುಸ್ತಕ ಓದುವ ಹವ್ಯಾಸ ಆಕೆಯದು. ಬೀchi ಸ್ವಲ್ಪ ತಿರಸ್ಕಾರದ

ಭಾವದಿಂದಲೇ ಒಂದು ಪುಸ್ತಕದ ಅಂಗಡಿಗೆ ಹೋದರಂತೆ. "ಒಂದು ಕನ್ನಡದ ಪುಸ್ತಕ ಕೊಡಿ. ಯಾವುದಾದರೂ ಚಿಂತೆಯಿಲ್ಲ. ರೈಲ್ವೆ ಟೈಮ್ ಟೇಬಲ್ ಪುಸ್ತಕ ಕೊಟ್ಟರೂ ಅಡ್ಡಿಯಿಲ್ಲ. ಆದರೆ ಕನ್ನಡದಲ್ಲಿ ಅಚ್ಚಾಗಿರಬೇಕು' ಎಂದರಂತೆ! ಪುಣ್ಯಕ್ಕೆ ಅಂಗಡಿಯಾತ ಕೊಟ್ಟ ಪುಸ್ತಕ 'ಸಂಧ್ಯಾರಾಗ'. ಅದನ್ನು ಓದಿದ ಬೀchi ಸದ್ದಿಲ್ಲದೆ ಕನ್ನಡ ಪ್ರೇಮಿಯಾದರು. ಬಳ್ಳಾರಿಯಲ್ಲಿದ್ದ ಗೆಳೆಯ ಕೋ. ಚೆನ್ನಬಸಪ್ಪ ಅವರ ಕಾಟದಿಂದ, ಕೋ.ಚೆ.ಸಂಪಾದಕರಾಗಿದ್ದ ರೈತವಾಣಿ ವಾರಪತ್ರಿಕೆಯಲ್ಲಿ 'ಬೇವಿನಕಟ್ಟೆ ತಿಂಮ' ಎಂಬ ಸ್ಥಿರ ಶೀರ್ಷಿಕೆಯಲ್ಲಿ ಹಾಸ್ಯ ಲೇಖನಗಳನ್ನು ಬರೆದು ಅನಂತರ ಪಾ.ಪು.ಅವರ 'ವಿಶಾಲ ಕರ್ನಾಟಕ' ದಿನಪತ್ರಿಕೆಯಲ್ಲಿ 'ಕೆನೆ ಮೊಸರು' ಸ್ಥಿರ ಶೀರ್ಷಿಕೆಯಡಿಯಲ್ಲಿ ನಿತ್ಯವೂ ಹರಟೆಗಳನ್ನು ಬರೆದರು.

ಅವರು ನಾಟಕ ಪ್ರೇಮಿಯೂ ಆಗಿದ್ದರು. ಒಂದು ನಾಟಕ ಬರೆದು ಬಳ್ಳಾರಿಯ ಜನರ ಕೆಂಗಣ್ಣಿನ ಕೃಪೆಗೆ ಪಾತ್ರರಾದರು. ಅವರು ಬರೆದ ಮೊದಲ ನಾಟಕ "ಯದ್ವಾತದ್ವಾ ಅಥವಾ ದೇವರ ಆತ್ಮಹತ್ಯೆ" ಬರೆದ ಹುರುಪಿನಲ್ಲೇ ಗೆಳೆಯರನ್ನು ಕೂಡಿಸಿ ಬಳ್ಳಾರಿಯಲ್ಲಿ ಆಡಿಯೂ ಬಿಟ್ಟರು. ಬೀchiಯವರೇ ದೇವರ ವೇಷ ಹಾಕಿ ರಂಗಭೂಮಿಯ ಮೇಲೆ ಟೈಯಿಂದ ಉರುಲು ಹಾಕಿಕೊಂಡು 'ಆತ್ಮಹತ್ಯೆ' ಮಾಡಿಕೊಂಡರು. ಮರುದಿನ ಅವರ ಅವಸ್ಥೆ ಬೇಡ. ಉತ್ತಮ ಜಾತಿಯವರೆಂದು ಭ್ರಮಿಸಿಕೊಂಡ ಅನೇಕರು ಬೀchiಯ ಮೇಲೆ ತಮ್ಮ ಜುಟ್ಟಿನಿಂದಲೇ ಕೆಂಡ ಕಾರಿದರಂತೆ. ಆ ಜನಗಳ ತಪೋಜ್ವಾಲೆ ಎಂದೋ ತಣ್ಣಗಾಗಿದ್ದರಿಂದ ಬೀchiಯವರು ಬಳ್ಳಾರಿ ರಾಘವರ ಸಕಾಲಿಕ ಸಹಾಯದಿಂದಾಗಿ ಉಳಿದುಕೊಂಡರಂತೆ.

1946ರಲ್ಲಿ ಪ್ರಕಟಿತಗೊಂಡ 'ರೇಡಿಯೋ ನಾಟಕಗಳು'ದಿಂದ ಹಿಡಿದು ತಾವು ತೀರಿಕೊಳ್ಳುವವರೆಗೂ ಬೀchi ಬರವಣಿಗೆಗೆ ವಿಶ್ರಾಂತಿ ಎಂಬುದೇ ಇರಲಿಲ್ಲ. ಐವತ್ತಕ್ಕೂ ಹೆಚ್ಚಿನ ಕೃತಿಗಳನ್ನು ನೀಡಿದ ಅವರ ರಚನೆಗಳಲ್ಲಿ ಹಲವಾರು, ಪುನರ್ ಮುದ್ರಣದ ಭಾಗ್ಯವನ್ನು ಕಂಡಿವೆ. 'ತಿಂಮನ ತಲೆ' ಯಂತೂ ಹನ್ನೊಂದಕ್ಕೂ ಹೆಚ್ಚಿನ ಬಾರಿ ಮುದ್ರಣಗೊಂಡಿದೆ. ಬೀchi ಸತ್ಕಾರ ಸಮಿತಿಯವರು ಅವರ ಅರವತ್ತನೇ ಹುಟ್ಟುಹಬ್ಬದ ಸನ್ಮಾನದ ಸಂದರ್ಭದಲ್ಲಿ ಬೆಳಗಾಂವಿಯಿಂದ ಮಿರ್ಜಿ ಅಣ್ಣಾರಾಯ, ಕೃಷ್ಣಕೊಲ್ಹಾರ ಕುಲಕರ್ಣಿ ಇವರುಗಳ ಸಂಪಾದಕತ್ವದಲ್ಲಿ ಹೊರತಂದಿರುವ 'ತಿಂಮಾಯಣ'ದ ಪರಿವಿಡಿಗಳಲ್ಲಿ ಅವರ ಕೃತಿಗಳ ಪೂರ್ಣವಿವರ ಇದೆ. ಬೀchiಯವರ ಬರವಣಿಗೆಯನ್ನು ಮುಖ್ಯವಾಗಿ ಕಾದಂಬರಿ, ನಾಟಕ, ಕಥೆ, ಹರಟೆ, ಪದ್ಯ ಎಂದು ವಿಂಗಡಿಸಬಹುದು. ಅವರ 'ದಾಸಕೂಟ' ಕನ್ನಡದಲ್ಲಿಯೇ ಮೊತ್ತ ಮೊದಲ ಹಾಸ್ಯಪ್ರಧಾನ ಕಾದಂಬರಿ. ಇದರ ಒಂದು ಪಾತ್ರದ ಬೆಳವಣಿಗೆ ಮುಂದಿನ 'ಸತೀ ಸೂಳೆ' ಕಾದಂಬರಿಯ ವಸ್ತು. 'ಸರಸ್ವತಿ ಸಂಹಾರ', 'ಖಾದಿ ಸೀರೆ', 'ಬೆಂಗಳೂರು ಬಸ್ಸು', 'ದೇವನ ಹೆಂಡ', 'ಏರದ ಬಳೆ', 'ಮೇಡಮ್ಮನ ಗಂಡ', 'ಟೆಂಟ್ ಸಿನೆಮಾ', 'ಆರಿದ ಚಹಾ', 'ಬಿತ್ತಿದ್ದೇ ಬೇವು' ಮೊದಲಾದ ಮೂವತ್ತಕ್ಕೂ ಹೆಚ್ಚಿನ ಕಾದಂಬರಿಗಳನ್ನು ಅವರು ಬರೆದಿದ್ದಾರೆ. ಕನ್ನಡದಲ್ಲಿ ಬರುತ್ತಿದ್ದ ಬರಿಯ ಕಾಲ್ಪನಿಕವಾದ ಅಸಂಬದ್ಧ ಪತ್ತೇದಾರಿ (detective) ಕಾದಂಬರಿಗಳ ವ್ಯಂಗ್ಯಾನುಕರಣದ ಫಲವಾಗಿ ಅವರ 'ಸತ್ತವನು ಎದ್ದು ಬಂದಾಗ' ಎಂಬ 'Defective' ಕಾದಂಬರಿ ಮೂಡಿತು. ಸಾಯದೇ ಇದ್ದವನನ್ನು ಶೋಧಿಸುವ ಮೋಜಿನ ಈ ಕಾದಂಬರಿ ತುಂಬ ಜನಪ್ರಿಯ ವಾಯಿತು. ಅನಕೃ ಅವರನ್ನು ತಮ್ಮ ಗುರುವಾಗಿ ಸ್ವೀಕರಿಸಿದ ಬೀchi ತಮ್ಮ ವಿಶಿಷ್ಟ ವ್ಯಂಗ್ಯಶೈಲಿಯನ್ನು ಮಾತ್ರ ಉಳಿಸಿಕೊಂಡು ಜನಪ್ರಿಯತೆ, ರೋಚಕತೆ, ರೋಮಾಂಚಕತೆಗಳ ವೈಭವದ ಜಾಡಿನಲ್ಲಿ ನುಗ್ಗಿಬಿಟ್ಟರು. ಕಾದಂಬರಿಕಾರ ಬೀchiಯವರು ಕಂಡ ಜಗತ್ತು ಬೇರೆ. ಪೋಲೀಸ್ ವಿಭಾಗಲ್ಲಿದ್ದುದರಿಂದ ಸಾಮಾನ್ಯರಿಗೆ ತಲಸ್ಪರ್ಶಿಯಾಗಿ ಕಾಣದ ಒಂದು ಅಧೋಲೋಕ ಇವರ ಕಣ್ಣಿಗೆ ಬಿದ್ದು ಸಮಾಜದ ಈ ವರ್ಗದ ಜನರ ಸಮಸ್ತ ಅನುಭವವನ್ನು ಸೆರೆಹಿಡಿಯಲು ಯತ್ನಿಸಿದ್ದಾರೆ. ಇವರೊಂದಿಗೆ ಬದುಕಿನಲ್ಲಿ ಸಂಪನ್ನತೆಯ ಪರ್ವತಗಳಂತೆ ತಲೆಎತ್ತಿ ನಿಲ್ಲಬಯಸುವ ಜನರನ್ನೂ ಬೆರೆಸುತ್ತಾರೆ. ಪ್ರಣಯ ಚಿಂತನದ ರೋಚಕ ವರ್ಣನೆಗೆ ಮನ ಸೋತಿದ್ದಾರೆ. ಕಾದಂಬರಿ ಕಾರರಾಗಿ ಅವರು ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಮೌಲ್ಯಗಳ ಪತನವನ್ನು ವ್ಯಾಖ್ಯಾನಿಸುತ್ತಾರೆ. ದೇಶದ ಸ್ವಾತಂತ್ರ್ಯದ ಸಂಧಿಕಾಲದಲ್ಲಿ ಅವರು ಬರೆದ 'ದಾಸಕೂಟ' ಇಂಥ ಮೌಲ್ಯಗಳ ಸ್ಥಿತಿಸ್ಥಾಪಕ ಗುಣವನ್ನು ಬಯಲಿಗೆಳೆಯುವ ಒಂದು ಸಾರ್ಥಕ ಪ್ರಯತ್ನ. ರಾಷ್ಟ್ರನಾಯಕರ ಮತ್ತು ಅವರ ಅನು'ನಾಯಿ'ಗಳ ವ್ಯಕ್ತಿತ್ವದ ಸುತ್ತ ಬೆಳೆದುಕೊಳ್ಳುವ ಪೊಳ್ಳು, ಕ್ರಿಯಾ ಹೀನತೆಯನ್ನು ವಾಗಾಡಂಬರದಿಂದ ಮೆಚ್ಚಿಕೊಳ್ಳುವ ಪ್ರವೃತ್ತಿ ಮತ್ತು ಜನತೆಯ ಸಮಯ ಸಾಧಕವೃತ್ತಿ ಬಾಲಬಡುಕುತನಗಳಿಂದಾಗಿ ಮರೆಯಲ್ಲೇ ನರಳುವ ಪ್ರಾಮಾಣಿಕತೆ-ಈ ಎರಡು ರಾಜಕೀಯ ಪತನಗಳನ್ನು ಅವರು ಹಲವಾರು ಕಾದಂಬರಿಗಳಲ್ಲಿ ವಿಶ್ಲೇಷಿಸಲು ಯತ್ನಿಸಿದ್ದಾರೆ. ಸಮಾಜದ ಕಂದಾಚಾರಗಳು ಮತ್ತು ವರ್ಗ ಕಲಹಗಳು ಸಿಡಿಸುತ್ತಿರುವ ಸಾಮಾಜಿಕ ಬೇನೆಗಳನ್ನು ಅವರ 'ಎಲ್ಲರೂ ಸಂಪನ್ನರೇ', 'ಸರಸ್ವತಿಯ ಸಂಹಾರ' ಮೊದಲಾದ ಕೃತಿಗಳು ಪರಿಚಯಿಸಲು ಯತ್ನಿಸಿವೆ. ಮೂರನೆಯ ಬಗೆಯ ಕಾದಂಬರಿಗಳಲ್ಲಿ ಲೈಂಗಿಕ ಕಾಮನೆಗಳು ತುಂಬ ಕಟ್ಟುಪಾಡಿಗೆ ಒಳಗಾದಾಗ ಏನೇನು ವಿಕಾರಗಳನ್ನು ತಾಳಬಹುದು ಎಂಬ ವಿವರಗಳಿವೆ. ಅಸಹಜ ಮನೋವಿಕಾರಗಳಿಂದ ನರಳುವ ಪಾತ್ರಗಳ ವರ್ಣನೆ ಈ ಕಾದಂಬರಿಗಳಲ್ಲಿವೆ. ಇಲ್ಲಿ ಕಾದಂಬರಿಗಳ ವಸ್ತುವಿಗಿಂತ ಬೀchiಯವರ ಅಪೂರ್ವ ವ್ಯಂಗ್ಯ ನಿರೂಪಣ ಪದ್ಧತಿಯ ವೀಕ್ಷಕ ವಿವರಣೆ ಮತ್ತು ಶಬ್ದ ಜಾಲಗಳ ಮಶಾಲಿನಲ್ಲಿ ಉತ್ಸವದೇವರೇ ಮಾಯವಾಗುವ ಭಯವೂ ಉಂಟು. ನಿರೂಪಕನಾದ ಬೀchiಯವರ 'ಭಾಷಣ ಪ್ರಿಯತೆ'' ಯಿಂದಾಗಿ ವಸ್ತು ಕಳೆಗೆಡುವ ಸಂಭವಕ್ಕೂ ಈ ಬಗೆಯ ಕಾದಂಬರಿಗಳು ಲಕ್ಷ್ಯಗಳಾಗಬಲ್ಲವು. ನೈಜಲೋಕದಿಂದಲೇ ಅಪಾರವಾದ ವೈವಿಧ್ಯಮಯ ಪಾತ್ರಗಳನ್ನು ಎತ್ತಿಕೊಳ್ಳಬಲ್ಲ ಬೀchi ನಾಲ್ಕು ಗ್ರಾಮು ಸೆರೆ (ಹೆಂಡ) ಎಂಟು ಗ್ರಾಮು ಕೋಪದ ಕಂಡಕ್ಟರ್ ಕೇಶವರಾಯ, ಬಸವಿ, ಬಸಮ್ಮ, ಚಂದ್ರಮ್ಮ, ಆಚಾರ್ಯರು, ಶಿವಮ್ಮ, ಇನ್‌ಸ್ಪೆಕ್ಟರ್ ಶಾಮಣ್ಣ, ಕಾಲೇಜು ಕನ್ಯೆಯರು ಇಂಥ ನೂರಾರು ಜೀವಂತ ಪಾತ್ರಗಳನ್ನು ಕಾಣಿಸಿಕೊಟ್ಟಿದ್ದಾರೆ.

ಬೀchiಯವರಿಗೆ ತುಂಬ ಕೀರ್ತಿ ತಂದುಕೊಟ್ಟ ಕೃತಿಗಳ ಪೈಕಿ ಹನ್ನೊಂದನೆಯ ಅವತಾರ, ರೇಡಿಯೋ ನಾಟಕಗಳು ಇವೆರಡು ಮುಖ್ಯವಾದವು. 'ಏಕೀಕರಣ'ದಂಥ ರೇಡಿಯೋ ನಾಟಕ ಕರ್ನಾಟಕದ ಸಮಗ್ರತೆಯ ಆಶಯದಲ್ಲಿಯೂ ಅದರ ಭಾಷಾವೈವಿಧ್ಯಗಳನ್ನು ವಿಪುಲ ಸಾಕ್ಷ್ಯಾಧಾರಗಳಿಂದ ಪ್ರದರ್ಶಿಸುವ ಶುದ್ಧಾಂಗ ಹಾಸ್ಯನಾಟಕ. 'ಹನ್ನೊಂದನೆಯ ಅವತಾರದ' ಎರಡು ನಾಟಕಗಳಲ್ಲೂ "ದೇ.ಭ" ಎಂದು ಬೀchi ಜನಪ್ರಿಯಗೊಳಿಸಿದ ದೇಶಭಕ್ತ ಹೇಗೆ ನಮ್ಮ ದೇಶದ 'ಹನ್ನೊಂದನೆಯ ಅವತಾರ'ವಾಗಿದ್ದಾನೆ ಎಂಬುದನ್ನು ತುಂಬ ಅಬ್ಬರದಿಂದ ವ್ಯಂಗ್ಯವಾಗಿ ಕಾಣಿಸಲಾಗಿದೆ. ನವರಾಜಕಾರಣಿಗಳಿಂದ ನಮ್ಮ ರಾಜಕೀಯ ಹಾಗೂ ನೈತಿಕ ಮೌಲ್ಯ ಹೇಗೆ ಕುಸಿಯುತ್ತಿವೆ ಎಂಬುದರ ಧ್ವನಿಪೂರ್ಣ ಸಮೀಕ್ಷೆಯೂ ಈ ನಾಟಕಗಳಲ್ಲಿವೆ.

ಬೀchiಯವರ ಬರವಣಿಗೆಯ ಕಾವಿನಿಂದ ಪುಷ್ಪಗೊಂಡವುಗಳೆಂದರೆ ಅವರ ಹಾಸ್ಯ ಬರಹಗಳು, ಚುಟುಕಗಳು, ನಗೆಹನಿಗಳು, ತಿಂಮ ದರ್ಶನಗಳು, ತಿಂಮರಸಾಯನಗಳು, ಹರಟೆಗಳು, ತಿಂಮನ ತಲೆ, ಹುಚ್ಚು ಹುರುಳು, ಚಿನ್ನದ ಕಸ, ಬೆಳ್ಳಿ ತಿಂಮ ನೂರೆಂಟು ಹೇಳಿದ, ಅಮ್ಮಾವ್ರ ಕಾಲ್ಗುಣ, ಹೆಂಡತಿ ನಕ್ಕಾಗ, ಸಂಪನ್ನರಿದ್ದಾರೆ ಎಚ್ಚರಿಕೆ, ಉತ್ತರ ಭೂಪ, ತಿಂಮಿಕ್ಸನರಿ, ಅಂದನಾ ತಿಂಮ ಮೊದಲಾದ ಹಾಸ್ಯಕೃತಿಗಳು ವಾಸ್ತವವಾಗಿ ಬೀchi ಕಥೆ ಬರೆಯಲಿ, ಹರಟೆ ಬರೆಯಲಿ, ನಾಟಕ, ಕಾದಂಬರಿಯನ್ನೇ ಬರೆಯಲಿ ಅವರ ಮೊದಲ ಗಮನ ಮಾತಿನ ಕಡೆಗೆ. ಹೀಗಾಗಿ ಅವರ ವಿಚಾರಗಳ ಸಂಚಾರದ ವೇಗ ಕಡಿಮೆ, ಮಾತಿನ ಪ್ರವಾಹದಲ್ಲಿ ಸೆಳೆತ ಹೆಚ್ಚು ಎಂಬ ಆಕ್ಷೇಪಣೆಗೆ ಅವಕಾಶವಿದೆಯಾದರೂ ಅವರು ಮಾತನ್ನು ಹರಡಿಸುವ ಬಗೆಯನ್ನು ಅವರ ಹರಟೆಗಳು ಚೆನ್ನಾಗಿ ದುಡಿಸಿಕೊಂಡಿವೆ. ಅವರ ಯಾವುದೇ ಪ್ರಬಂಧ ತೆಗೆದುಕೊಂಡರೂ (ಉದಾ: ಸ್ವಂತ ಸುಳ್ಳುಗಾರರು, ಆ ದಡ ಕಂಡವರು, ಕಾರ್ಪೋರೇಷನ್ ಕಸದ ಗಾಡಿ, ನರ-ಸಿಂಹ, ಪಂಚಷಷ್ಠಿ ಕಸಾಸ ನಾಟಕಂ, ಯಾರೀ ನಾಗರಾಜ, ಇತ್ಯಾದಿ) ವಸ್ತುವಿನ ಗುರುತ್ವಾ ಕರ್ಷಣೆಯಿಂದ ತೀರ ತಪ್ಪಿಸಿಕೊಳ್ಳದ ಹಾಗೆ ಅದರ ಮೆಲುವಲಯದಲ್ಲಿ ಮಾತಿನ ಕೋಶ ಹಾರಾಡುತ್ತಿರುತ್ತದೆ. ಬೀchi ವಿಷಯವನ್ನು ಹರಡುವ ರೀತಿಯೇ ಹಾಗೆ. ಗೀತಾ ಕುಲಕರ್ಣಿ ಒಂದು ಬೇಸರದ ಗಳಿಗೆಯಲ್ಲಿ ಬೀchiಯವರಿಗೆ ತನ್ನ 'ಒಂಟಿ'ತನವನ್ನು ತೋಡಿಕೊಂಡಿದ್ದಾರೆ ಇವರು ಪತ್ರದಲ್ಲಿ "ಇಂದು 'ಒಂಟಿ'ಯಾದವಳು ನಾಳೆ 'ಆನಿ' (ಆನೆ)ಯಾಗುತ್ತಿದ್ದೀಯೆ" ಎಂದು ಉತ್ತರ ಕೊಟ್ಟರಂತೆ. ತಿಂಮನನ್ನು ನಾಯಿಗೆ ಹೋಲಿಸುತ್ತಾ ಸರಳವಾಗಿ ಆರಂಭಿಸುವ ಬೀchi ಆ ಪ್ರತಿಮೆಯ ಅಂತರಂಗಕ್ಕೇ ಇಳಿದುಬಿಡುತ್ತಾರೆ:

"ಕಚ್ಚುವದೊಂದೇ ತಿಂಮನ ಕಸುಬಲ್ಲ. ಚಿನ್ನಾಟವಾಡುತ್ತಾ ಒಡೆಯನ ಕೈ ಮೈ ನೆಕ್ಕುತ್ತ ಮಮತೆಯ ನಾಯಿಯಂತೆ ಇಡೀ ಸಮಾಜವನ್ನೇ ನೆಕ್ಕುತ್ತಾನೆ-ತನ್ನ ಉರುಟಾದ ನಾಲಿಗೆಯಿಂದ. ಗಾಯವಿದ್ದವರಿಗೆ ನೋವಾಗಬಹುದು, ನಂಜಾಗಬಹುದು, ಗುಣವೂ ಆಗಬಹುದು. ಮನಸ್ಸಿನಂತೆ ಮಹದೇವ".

ಇದು 'ತಿಂಮ' ಕನ್ನಡದಲ್ಲಿ ಬೆಳೆದ ಬಗೆಯೂ ಹೌದು. ಬೀchi ಬೆಳೆದ ಬಗೆಯೂ ಹೌದು. ಬೀchi ಎಲ್ಲ ವಿಷಯಗಳಲ್ಲೂ ತಲೆಹಾಕಲು ಒಂದು ಒಳ್ಳೆಯ ಪಾತ್ರ ಪ್ರತಿಮೆಯನ್ನು ಬಳಸಿಕೊಂಡರು. ಅದೇ ತಿಂಮ, ಬೀchi, ತಿಂಮತನ ಈ ಶಬ್ದಗಳನ್ನು ವ್ಯಾಪಕ ಅರ್ಥದಲ್ಲಿ ಬಳಸಿದ್ದಾರೆ. 'ಬಿಂದು' ಕನ್ನಡದ ಎಲ್ಲ ವರ್ಗಾಕ್ಷರಗಳ ಮುಂದೆ ಸಮಾನವಾಗಿ ಬರುವ ಶಬ್ದ ಅಲ್ಲವೆ? ತಿಂಮ 'ತಿಮ್ಮ'ನಾಗದೆ 'ತಿಂಮ'ನಾದದ್ದೂ ಇಂಥ ಒಂದು ವಿಶಿಷ್ಟ ಉಪಯೋಗ ಕ್ಕಾಗಿಯೇ. ಇವನು ಹುಟ್ಟಿದ್ದೂ ಒಂದು ವಿಚಿತ್ರ ಸನ್ನಿವೇಶದಲ್ಲೇ. ಬೀchi ಒಮ್ಮೆ ಆಸ್ಪತ್ರೆಯಲ್ಲಿ ನರಳುತ್ತಿದ್ದರಂತೆ. (ಅಂದರೆ ಮನೆಯಲ್ಲಿ ನರಳುತ್ತಲೇ ಇರಲಿಲ್ಲ ಎಂದರ್ಥವಲ್ಲ, ಇರಲಿ!) ಹೊತ್ತು ಕಳೆಯಲು ತುಂಬ ಓದುತ್ತಿದ್ದರು. ವೋಡ್‌ಹೌಸ್‌ನ 'ಆಮ್ನಿ ಬಸ್', 'ಥ್ಯಾಂಕ್ಯೂ ಜೀವ್ಸ್' ಇವು ಗಳನ್ನು ಓದುತ್ತಿದ್ದಾಗ ಕನ್ನಡದಲ್ಲೂ ಜೀವ್ಸ್ ನಂತಹ ಒಂದು ಪಾತ್ರದ ಸೃಷ್ಟಿ ಅಗತ್ಯ ಎಂದುಕೊಂಡರು. ಫಲವಾಗಿ 'ತಿಂಮ' ಹುಟ್ಟಿಕೊಂಡ. ತಿಂಮನ ವಿಷಯದಲ್ಲಿ ಬೀchi ಹೀಗೆ ಹೇಳುತ್ತಾರೆ:

"ತಿಂಮ ಯಾರು?"

"ಯಾವೊಬ್ಬ ತಿರುಮಲರಾಯನನ್ನಾಗಲಿ, ತಿಂಮಪ್ಪನನ್ನಾಗಲಿ ಮುಂದಿಟ್ಟುಕೊಂಡು ಇದನ್ನು ಬರೆದಿಲ್ಲ.

"ಮಕ್ಕಳ ಆಟದಲ್ಲಿ, ಗೆಳೆಯರ ಕೂಟದಲ್ಲಿ, ಹಿರಿಕಿರಿಯರ ಕಿರಿಹಿರಿತನ ಗಳಲ್ಲಿ, ಚತುರರ ಹೆಡ್ಡತನದಲ್ಲಿ, ದಡ್ಡರ ದೊಡ್ಡತನದಲ್ಲಿ ಕಂಡು ಕೇಳಿದ ಚೇಷ್ಟೆಗಳಿಗೆಲ್ಲಾ - ಪಾಪ! ತಿಂಮನನ್ನೇ ನಾಯಕನನ್ನಾಗಿ ಒಡ್ಡಿದ್ದೇನೆ.

"ತಿಂಮನ ನಗು ದೇಹವಾದರೆ ಆ ನಗುವಿನ ಹಿಂದೆ ಹುದುಗಿ ಕೊಂಡಿರುವ ನೋವೇ ಜೀವ, ಅದನ್ನು ಗುರುತಿಸದಿದ್ದರೆ ದೊರೆಯುವುದು ತಿಂಮನ ಹೆಣ ಮಾತ್ರ".

ಬೀchiಯವರ ಭಾಷಾಸಾಧನೆಗೆ ಸಹಾಯಕವಾಗಿರುವ ಅವರ ಶ್ರವಣಾ ಭಿರುಚಿ ಉನ್ನತಮಟ್ಟದ್ದು. ಕೇಳಿದ ಮಾತನ್ನು ಅದೇ ಉಚ್ಚಾರ ಕ್ರಮದಲ್ಲಿ ಉಲ್ಲೇಖಿಸಲು ಅವರು ಪ್ರಯತ್ನಿಸುತ್ತಾರೆ. ಜನ ಬಳಸುವ ಒಂದು ಶಬ್ದಕ್ಕೆ ಏನೆಲ್ಲ ಅರ್ಥ, ಅನರ್ಥ, ಅಪಾರ್ಥ, ಹೀನಾರ್ಥ, ನಾನಾರ್ಥಗಳನ್ನು ಕಲ್ಪಿಸಬಹುದು, ಶಬ್ದವನ್ನು ಹದವಾಗಿ ತಿರುವಿ ಬಿಡಿ ಭಾಗಗಳನ್ನು ಹೇಗೆ ತೆರೆದಿಡಬಹುದು ಎಂದು ತಿಳಿಯಬಯಸುವವರು ಬೀchiಯವರ ಬರಹದ ವೈಖರಿಯನ್ನು ಗಮನಿಸಬೇಕು. ಚಿಕ್ಕನುಂಗುರಕೆ ಮನಸೋತ ನಾರಿಯಂತೆ ಅವರು ಧ್ವನಿಯ ಮೋಡಿಗೆ ಮರುಳಾಗುತ್ತಾರೆ. ಅವರ ಮಾತುಗಳ ಹಿಂದೆ ಈ ಧ್ವನಿಸಂಪತ್ತನ್ನು ಸೂರೆಮಾಡುವ ದೃಷ್ಟಿಕೋನವಿದೆ. "ಆಕಾರ ಏನಿದ್ದ ರೇನು? ಆಡಿರುವದಷ್ಟೇ ಮುಖ್ಯ. ಅಂತೆ ಶಬ್ದಕ್ಕಲ್ಲ ಧ್ವನಿಗೆ ಪ್ರಾಧಾನ್ಯ. ಇದನ್ನು ಗುರುತಿಸಿದರೆ ನನಗೆ ಉಪಕಾರ" ಎನ್ನುತ್ತಾರೆ ಬೀchi. ಹೀಗಾಗಿ ಅವರಿಗೆ ಸಾಹಿತ್ಯ ಪರಿಷತ್ತಿನ 'ಕನ್ನಡ-ಕನ್ನಡ ನಿಘಂಟು' ಅಂದ ಕೂಡಲೇ "ಹೆರಲಾರದ ಬಸುರಿ' ಎಂಬ ವ್ಯಾಖ್ಯಾನ ಸಾಧ್ಯವಾಗುತ್ತದೆ. 'ಆಕಳಿಕೆ'ಯಲ್ಲಿ ಅವರು ಲೀಲಾಜಾಲವಾಗಿ ಆssssಕಳಿಕೆಯನ್ನು ಕಾಣುತ್ತಾರೆ. 'ಮಗಳನ್ನು ಬೆಂಗಳೂರಿಗೆ ಕೊಟ್ಟಿದೆ' ಎಂದು ಯಾರೋ ಅಂದರೆ 'ಆ.... ಇಡೀ ಬೆಂಗಳೂರಿಗೆ? - ಎನ್ನುತ್ತಾರೆ. ಸೀತಾ ಪರೀಕ್ಷಣ ಮಾಡಿದ ರಾಮನನ್ನು ಅವರ ಭಾಷಾಮುಖ ಕಂಡಿರುವ ಬಗೆ ಹೀಗಿದೆ:

"ಶ್ರೀರಾಮ ಅಸಲು ಅಕ್ಕಸಾಲಿಗ-ಹೆಂಡತಿಯನ್ನೇ ಬೆಂಕಿಯಲ್ಲಿ ಪುಟಕ್ಕೆ ಹಾಕಿ ಪರೀಕ್ಷೆ ಮಾಡಿದ."

ಹರಟೆಯಲ್ಲಿ ಬೀಚಿಯವರ ಈ ಭಾಷಾವಿಲಾಸವನ್ನು ಒಂದು ಉದಾಹರಣೆಯಿಂದ ಗಮನಿಸಬಹುದು. 'ಆ ದಡ ಕಂಡವರು' ಎಂಬ ಹಾಸ್ಯ ಪ್ರಬಂಧ ಇದು. ಪುರೋಹಿತರೊಬ್ಬರು ಬೆಳಗ್ಗೆ ಹನ್ನೊಂದಕ್ಕೆ ನಾಯಕನ ಮನೆಗೆ ಬರುತ್ತಾರೆ. ಮಧ್ಯಾಹ್ನ ಹನ್ನೆರಡಕ್ಕೆ ಏಳುವ ನಾಯಕ ಈ 'ಬಾಗಿಲು ಬಡಿವ ಜನರ' ಮೇಲೆ ಸಿಟ್ಟು ಮಾಡಿಕೊಳ್ಳುವ ರೀತಿ ನೋಡಿ:

"ಬಾಗಿಲು ಬಡಿಯುವ ಮೂರ್ಖರಿಗೆ ಬುದ್ಧಿ ಕಲಿಸಬೇಕಾದರೆ ಒಂದೇ ಮಾರ್ಗ-ಬಡಗಿಯನ್ನು ಕರೆಯಿಸಿ ಆ ಬಾಗಿಲನ್ನೇ ತೆಗೆಯಿಸಿ ಒಳಕ್ಕೆ ಇಡ ಬೇಕು".

ಈ ಶಾಸ್ತ್ರಿಯ ಹೆಸರು 'ಲೋಕಕಲ್ಯಾಣಶಾಸ್ತ್ರಿ', 'ಪರೋಪಕಾರವೇ ತನ್ನ ವ್ಯಂಗ್ಯ ಮನೋಧರ್ಮ ಎಂದು ಅವಕಾಶ ಸಿಕ್ಕಾಗಲೆಲ್ಲ ಹೇಳಿಕೊಳ್ಳುವ ಜಾತಿ. ಅರ್ಥಮಾಡಿ ಕೊಳ್ಳಲಾರದ ಹುಂಬ. "ಹುಚ್ಚುಮುಂಡೆ ಗಂಡ ಎಂದು ಒಬ್ಬಳು ಬೈದರೆ ಅವಳು ನನ್ನನ್ನು ಗಂಡ ಅಂದಳು ಎಂದು ಹೆಮ್ಮೆಯಿಂದ ಊರಲ್ಲೆಲ್ಲ ಹೇಳಿಕೊಂಡು ಬರುವ" ಭಂಡ. ಅವರು ನಾಯಕನನ್ನು ಎಲ್ಲಿಗೋ ಕರೆದೊಯ್ಯಬೇಕಿತ್ತು. ತಾವು ಬರುವ ಮೊದಲೇ ನಾಯಕ ಸ್ನಾನ ಮಾಡಿರುತ್ತಾ ನೆಂದು ಅವರು ತಿಳಿದಿದ್ದರಂತೆ. ನಾಯಕ ಹೇಳುತ್ತಾನೆ:

"ತಮ್ಮ ದರ್ಶನ ಮಾಡಿಕೊಂಡ ನಂತರ ಹೇಗೂ ಮತ್ತೊಮ್ಮೆ ಸ್ನಾನ ಆಗಬೇಕು. ಎರಡೆರಡು ಸ್ನಾನ ಆಗುವುದು ತಪ್ಪಿತು ಸಧ್ಯ". ಬಂದ ಶಾಸ್ತ್ರಿಗಳು ಆಚಾರವಂತರು. ವಯಸ್ಸಾದವರು. ಆ ದಡ ಕಂಡವರು. ಅವರು ಕಾಫಿ ಕುಡಿಯಲಿಲ್ಲ. ಅಮಾವಾಸ್ಯೆ ದಿನ ಮುಖ ತೊಳೆಯದೆ ನಾಯಕ ಕಾಫಿ ಹೀರುವುದನ್ನು ಆಕ್ಷೇಪಿಸಿರುತ್ತಾರೆ.

ಯಾರೋ ಹಿರಿಯ ಅಧಿಕಾರಿಗಳು ನಾಯಕನ ಸ್ನೇಹಿತರಂತೆ. ಅವರಿಂದ ಒಂದು ಉಪಕಾರ ಗಿಟ್ಟಿಸಿಕೊಳ್ಳಲು ಶಾಸ್ತ್ರಿ ಬಂದಿದ್ದರು. ನಾಯಕನಿಗೆ ಬೇಸರ.

"ಸ್ನೇಹಕ್ಕಾಗಿ ಸ್ನೇಹ ಎಂಬುದು ಬೇಡವೇ ಬೇಡ ಈ ಜೀವನದಲ್ಲಿ? ಬ್ಯಾಂಕ್ ಚೆಕ್‌ನಂತೆ ಸ್ನೇಹ ವಿಶ್ವಾಸಗಳನನ್ನೂ ಕ್ಯಾಷ್ ಮಾಡಿಸಬೇಕೆ?"

ಶಾಸ್ತ್ರಿಗಳು ನಾಯಕನಿಗೆ ಮೈ ಕೈ ತಗುಲಿಸುತ್ತ ಮಾತಾಡುತ್ತಾರೆ. ನಾಯಕನ ವ್ಯಾಖ್ಯಾನ:

"ಅದು ಅವರ ಅಭ್ಯಾಸ-ಇದಕ್ಕೆ ಕಾರಣ, ಹೆಚ್ಚಾಗಿ ಸ್ತ್ರೀಯರೊಂದಿಗೆ ಶಾಸ್ತ್ರಿಗಳ ವ್ಯವಹಾರವೆಲ್ಲ".

ಅವರು ಬಂದದ್ದು ಯಾಕೆ ಗೊತ್ತೆ? ನಾಯಕ ತನ್ನ ಸ್ನೇಹಿತರಾದ ಸಾಹೇಬರಿಗೆ ಹೇಳಿ ಶಾಸ್ತ್ರಿಗಳ ಅಣ್ಣನ ಮಗನನ್ನು ಕೆಲಸದಿಂದ ಡಿಸ್‌ಮಿಸ್ ಮಾಡಿಸಬೇಕಂತೆ. ಕಾರಣ ಅವನು ಶಾಸ್ತ್ರಿಗಳ ವೈರಿಯಾಗಿದ್ದ ಅಣ್ಣನ ಮಗ ಅಲ್ಲವೆ? ಅವನಿಂದ ತೊಂದರೆಯಾಗಿದೆಯೇ ಎಂಬ ನಾಯಕನ ಪ್ರಶ್ನೆಗೆ ಅವರ ಉತ್ತರ:

"ಅವನು ಸುಖವಾಗಿ ಇರುವುದೇ ನಮಗೆ ತೊಂದರೆ ಅಲ್ಲವೇನಯ್ಯ? ಅವನನ್ನು ಕೆಲಸದಿಂದ ತೆಗೆಸಿಹಾಕಿ ಅನ್ನಾನ್ನ ಗತಿಕನ್ನ ಮಾಡಿಸಬೇಕು ನಾನು. ಭಿಕ್ಷೆ ಬೇಡಬೇಕು ಅವನು. ನಾವು ನೋಡಬೇಕು ಅದನ್ನ".

ವಾಸ್ತವವಾಗಿ ಈ ಪ್ರಬಂಧದಲ್ಲಿ ವಸ್ತು ಹೆಚ್ಚೇನೂ ಇಲ್ಲ. ಆದರೆ ಅದರ ಸುತ್ತ ಕಾವು ಕೊಡುತ್ತ ಅಡ್ಡಾದಿಡ್ಡಿ ಹರಡಿಕೊಳ್ಳುತ್ತ ಹೋಗುವ 'ಭಾಷಾಮುಖ'ವನ್ನು ಗಮನಿಸಿದರೆ ಅವರ ಶೈಲಿಯ ಪರಿಚಯ ಮಾಡಿಕೊಳ್ಳ ಬಹುದಾಗಿದೆ. ಆ ಮುದುಕ ಬ್ರಾಹ್ಮಣ, ಆಚಾರವಂತ ಅಂತ ಹೇಳಿಕೊಳ್ಳೋ ಬ್ರಾಹ್ಮಣ ನಿಜವಾಗಿ ಅಂದು ತರ್ಪಣ ಬಿಟ್ಟು ಬಂದದ್ದು ತನ್ನ ಮಾನವೀಯ ಗುಣಗಳಿಗೆ ಎಂಬುದನ್ನು ಈ ಪ್ರಬಂಧ ಸ್ಪಷ್ಟವಾಗಿ ಸಾರುತ್ತದೆ. ಬೀಚಿಯವರು ವಸ್ತು ವ್ಯಾಖ್ಯಾನದ ಜತೆಗೆ ಪ್ರಾಸಂಗಿಕವಾಗಿ ಬರುವ ಸಂಪರ್ಕದ ಮಾತು ಗಳನ್ನು ತಿರುಚಿ ನಾನಾ ಮೂಲೆಗಳಿಗೆ ಎಳೆದೊಯ್ಯುವ ಶಬ್ದವ್ಯಾಖ್ಯಾನವನ್ನೂ ಮಾಡುತ್ತ ಹೋಗುತ್ತಾರೆ. ಅವರ ಬರಹಗಳ ವಿಶಿಷ್ಟ ದ್ರವ್ಯ ಇದೇ. ಉತ್ತಮ ವಾಗ್ಮಿಯೂ ಆಗಿದ್ದ ಬೀchi ಈ ಭಾಷಾವೈಶಿಷ್ಟ್ಯವನ್ನೇ ಮೆರೆಸಿ ಜನರ ಮನಸ್ಸನ್ನು ಗೆದ್ದುಗೊಂಡಿದ್ದರು. ಐವತ್ತಕ್ಕೂ ಹೆಚ್ಚಿನ ಗ್ರಂಥಗಳನ್ನು ಬರೆದ ಬೀchiಯವರ ಯಾವ ಪುಸ್ತಕ ತೆರೆದರೂ ಇಂಥ-ಬೀchiಯವರದೆಂದು ಗುರುತಿಸಬಲ್ಲಂಥ-ವಿಶಿಷ್ಟಶೈಲಿಯ ದರ್ಶನವಾಗುತ್ತದೆ.

❑

1. ಉದಾ "ಥೂ ಇದು ವ್ಯಭಿಚಾರದ ಕಥೆ, ಅದು ಕುಡಿತದ ಕಥೆ ಎಂದು ಅರೆದಷ್ಟ ಮಡಿವಂತರು ಮೂಗುಮುರಿದರೆ ಅದು ಕೃತಿಕಾರನ ಅಪರಾಧವೆ? ಇಂದು ಜೀವನದಲ್ಲಿ ವ್ಯಭಿಚಾರವೇ ಇಲ್ಲವೇನು ಹಾಗಾದರೆ? ಆ ದಯಾಮಯನಾದ ದೇವನ ದಯದಿಂದ ವ್ಯಭಿಚಾರ ಇಂದೂ ಇದೆ, ಹಿಂದೂ ಇದ್ದಿತು, ಮುಂದೂ ಇರುತ್ತದೆಂಬುದರಿಂದಲೇ ಪಾತಿವ್ರತ್ಯಕ್ಕೆ ಸದಾ ಬೆಲೆ ಇದೆ...."

# ಎಸ್.ವಿ. ಪರಮೇಶ್ವರ ಭಟ್ಟ

ಪಾ.ಶ. ಶ್ರೀನಿವಾಸ

'ಕನ್ನಡದ ಕಾಳಿದಾಸ'ನೆಂದೇ ಹೆಸರು ಮಾಡಿರುವ ಪ್ರೊ. ಎಸ್.ವಿ.ಪರಮೇಶ್ವರ ಭಟ್ಟರು, ಕನ್ನಡ ನವೋದಯ ಕಾಲದ ಪ್ರಮುಖ ವಿದ್ವಾಂಸರೂ, ಕವಿಗಳೂ ಆಗಿ, ಮೆಚ್ಚಿನ ಪ್ರಾಧ್ಯಾಪಕರಾಗಿ ಪ್ರಾಜ್ಞ ಜನ ಮನದಲ್ಲಿ ನೆಲಸಿದ್ದಾರೆ. ಕಾವ್ಯ, ವಚನ, ಮುಕ್ತಕ, ಅನುವಾದ, ವಿಮರ್ಶೆಗಳಿಂದ ಅವರ ಸೃಜನಶೀಲತೆ ಹಾಗೂ ವಿದಗ್ಧತೆಗಳು ಪ್ರಕಾಶಗೊಂಡಿವೆ. ಸಾವಿರಾರು ಸಂಖ್ಯೆಯ ಶಿಷ್ಯ ಸಮುದಾಯದ ಹೃದಯಗಳಲ್ಲಿ ಉತ್ತಮ ಉಪನ್ಯಾಸಕರಾಗಿ ತಮ್ಮ ಪ್ರಭಾವವನ್ನು ಅಚ್ಚೊತ್ತಿದ್ದಾರೆ. ತಮ್ಮ ನಿತ್ಯ ಬದುಕಿನಲ್ಲಿ ಅಳವಡಿಸಿಕೊಂಡಿರುವ ಸರಳತೆ, ವಿನೋದಪ್ರಿಯತೆಗಳಿಂದ, ಹಿರಿಯರು, ಕಿರಿಯರೆಲ್ಲರ ಹೃದಯಗಳಲ್ಲಿ ಅಪಾರ ಸ್ನೇಹವನ್ನು ಗಳಿಸಿಕೊಂಡಿದ್ದಾರೆ. ಸಂಕಟದ ಸಮಯದಲ್ಲಿಯೂ ಸಮಯ ಪ್ರಜ್ಞೆಯಿಂದ ವರ್ತಿಸಿ, ಸಮರಸದ ಭಾವನೆಗಳನ್ನು ರೂಢಿಸಿಕೊಂಡು ಬಂದಿರುವ ಭಟ್ಟರು, ಬದುಕಿನ ಕಠಿಣ ಸನ್ನಿವೇಶಗಳಲ್ಲಿಯೂ ಸ್ಥಿತಪ್ರಜ್ಞರಾಗಿ ಬಾಳಿ, ಬಾಳಿಗೊಂದು ಅರ್ಥ ತಂದಿದ್ದಾರೆ. ಈ ಹಿರಿಯ ಸಜ್ಜನ ಕವಿಯ ಜೀವನ ಹಲವರಿಗೆ ಆದರ್ಶಪ್ರಾಯವಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಮೂಲದವರಾದ, ಪರಮೇಶ್ವರ ಭಟ್ಟರ ಹಿರಿಯರು, ಬಾಳಿ ಬದುಕಿದ್ದು, ಕುವೆಂಪು ಅವರಿಗೆ ಸ್ಫೂರ್ತಿದಾಣವಾಗಿದ್ದ ಮಲೆನಾಡಿನ ತೀರ್ಥಹಳ್ಳಿಯ ಸೆರಗಿನಲ್ಲಿ. ಅವರ ತಂದೆ ಸದಾಶಿವರಾಯರು ವೈದಿಕ ಕುಲದವರಾದರೂ ಲೌಕಿಕಕ್ಕೆ ಬೇಕಾದ ಇಂಗ್ಲಿಷ್, ಕನ್ನಡಗಳಲ್ಲಿ ಶಿಕ್ಷಣ ಪಡೆದು, ತೀರ್ಥಹಳ್ಳಿಯ ಸಮೀಪದ ಮಾಳೂರಿನಲ್ಲಿ ಶಾಲಾ ಉಪಾಧ್ಯಾಯರಾಗಿದ್ದರು. ಸದಾಶಿವರಾಯರು ಮತ್ತು ಲಕ್ಷ್ಮಮ್ಮನವರ ಕುಲಪುತ್ರರಾಗಿ 1914, ಫೆಬ್ರವರಿ 8ರಂದು ಮಾಳೂರಿನಲ್ಲಿ ಪರಮೇಶ್ವರರ ಜನನವಾಯಿತು. ಅವರು ಹುಟ್ಟುವ ಮುಂಚೆ, ಸದಾಶಿವರಾಯ ದಂಪತಿಗಳಿಗೆ ಇಬ್ಬರು ಹೆಣ್ಣುಮಕ್ಕಳಾಗಿದ್ದರು. ರಾಯರಿಗೆ ತಂದೂರಿಗೆ ವರ್ಗವಾದಾಗ, ಬಾಲಕ ಪರಮೇಶ್ವರನಿಗೆ ಖಾಸಗಿಯಾಗಿ ಪಾಠಹೇಳಿ, ಲೋಯರ್ ಸೆಕೆಂಡರಿ ಪರೀಕ್ಷೆ ಕಟ್ಟಿಸಿದರು. ತಂದೆಯವರು ಉಪಾಧ್ಯಾಯರಾಗಿದ್ದುದರಿಂದ ಪರಮೇಶ್ವರನು ಪ್ರೌಢಶಾಲೆಗೆ ಸೇರುವ ಮುನ್ನವೆ ಹಲವಾರು ಕನ್ನಡ ಪುಸ್ತಕಗಳನ್ನು ಮಗನಿಗೆ ಓದಲು ತಂದು ಕೊಡುತ್ತಿದ್ದರು. ತೀರ್ಥಹಳ್ಳಿಯಲ್ಲಿ ಪ್ರೌಢಶಾಲೆಗೆ ಸೇರುವ ಹೊತ್ತಿಗೆ, ಅವನು ಬಿ. ವೆಂಕಟಚಾರ್ಯರು ಅನುವಾದಿಸಿದ ಬಂಕಿಮ ಚಂದ್ರರ 'ದೇವಿ ಚೌಧುರಾಣಿ' ಕಾದಂಬರಿಯನ್ನು ಓದಿ ಮುಗಿಸಿದ್ದನು. ಕುವೆಂಪು ಅವರ 'ಬೊಮ್ಮನ ಹಳ್ಳಿಯ ಕಿಂದರಿ ಜೋಗಿ' ಕಥನ ಕವನವು ಅವನಿಗೆ ಬಾಯಿಪಾಠವಾಗಿತ್ತು. 'ಗೋವಿನ ಹಾಡು' ಓದಿ ಕಣ್ಣೀರು ಕರೆದಿದ್ದನು.

ತಂದೆಯವರಿಗೆ ಯಕ್ಷಗಾನ, ನಾಟಕಗಳಲ್ಲಿ ಆಸಕ್ತಿ, ಹವ್ಯಾಸಗಳಿದ್ದುದರಿಂದ, ಮಗನನ್ನು ಬಯಲಾಟಗಳಿಗೆ ಕರೆದುಕೊಂಡು ಹೋಗುತ್ತಿದ್ದರಷ್ಟೇ ಅಲ್ಲ, ಅವನಿಗೂ ಕಾಲಿಗೆ ಗೆಜ್ಜೆ ಕಟ್ಟಿ, ಮುಖಕ್ಕೆ ಬಣ್ಣಹಚ್ಚಿ ರಂಗ ಪ್ರವೇಶ ಮಾಡಿಸಿ, ಕುಣಿಸಿ ನೋಡಿ ಆನಂದಪಟ್ಟರು. ಅವನ ಬಾಲಕೃಷ್ಣ, ಉತ್ತರೆಯ ವೇಷಗಳು ಅವರಿಗೆ ಮೆಚ್ಚುಗೆಯಾಗಿದ್ದವು.

ಎಸ್‌ವಿಪಿ. ಅವರಿಗೆ ತಂದೆ ಸದಾಶಿವರಾಯರೆ ಮೊದಲ ಗುರು. ಇವರ ಚಿಕ್ಕಪ್ಪ ಪಟೇಲು ವಿದ್ವಾಂಸರಾಗಿದ್ದರು. ಅವರ ಮಗ ಲಕ್ಷ್ಮಣ ಶಾಸ್ತ್ರೀ, ವಾಸುದೇವಾಚಾರ್ಯರು ಮತ್ತು ಚನ್ನಕೇಶವಯ್ಯನವರಲ್ಲಿ ಸಂಗೀತ ಕಲಿತು, ಸರ್ಕಾರಿ ಶಾಲೆಗಳಲ್ಲಿ ಸಂಗೀತದ ಉಪಾಧ್ಯಾಯರಾಗಿ ಸೇವೆ ಸಲ್ಲಿಸಿದರು. ಇದರಿಂದ, ಎಸ್‌ವಿಪಿ. ಯವರ ಕುಟುಂಬಕ್ಕೆ ಸಂಗೀತ ಕಲೆಗಳಲ್ಲಿ ಆಸಕ್ತಿ ಇದ್ದುದು ತಿಳಿದುಬರುತ್ತದೆ. ಪರಮೇಶ್ವರನು ತೀರ್ಥಹಳ್ಳಿ ಪ್ರೌಢಶಾಲೆಯಲ್ಲಿ ಕಲಿಯುತ್ತಿರುವಾಗ, ಪಂಡಿತ ಕಮಕೋಡು ನರಸಿಂಹ ಶಾಸ್ತ್ರಿಗಳು ಗುರುಗಳಾಗಿದ್ದರು. ಶಾಸ್ತ್ರಿಯವರು ಆಧುನಿಕ ದೃಷ್ಟಿಯುಳ್ಳ ಕನ್ನಡ ಪಂಡಿತರು, ವಿದ್ವಾಂಸಕವಿಗಳು, ಉತ್ತಮ ಶಿಕ್ಷಕರೂ ಎನಿಸಿಕೊಂಡಿದ್ದರು. ಇವರು ಪರಮೇಶ್ವರ ಭಟ್ಟರಲ್ಲಿ ಸುಪ್ತವಾಗಿದ್ದ ಕಾವ್ಯಪ್ರತಿಭೆಯನ್ನು ಗುರುತಿಸಿ, ಅವನಲ್ಲಿ ಕಾವ್ಯಾಸಕ್ತಿ ಹುಟ್ಟಿಸಿದರು. ತಂದೆಯವರ ನಂತರ ಅವರನ್ನು ಎರಡನೆಯ ಗುರುವಾಗಿ, ನೆನೆಸಿಕೊಂಡು ಭಟ್ಟರು ಕೃತಜ್ಞತೆಗಳನ್ನು ಸಲ್ಲಿಸಿದ್ದಾರೆ.

ತೀರ್ಥಹಳ್ಳಿಯ ಪ್ರೌಢಶಾಲೆಯಲ್ಲಿ ಶಿಕ್ಷಣ ಮುಗಿಸಿದ ಮೇಲೆ ಭಟ್ಟರು ಎಸ್.ಎಸ್.ಎಲ್.ಸಿ. ಪರೀಕ್ಷೆ ಕಟ್ಟಿದರು. ಆದರೆ ಆ ಪರೀಕ್ಷೆಯಲ್ಲಿ ಪೂರ್ಣ ಯಶಸ್ಸು ಪಡೆಯದೆ, ಬೆಂಗಳೂರಿಗೆ ಬಂದು, ಕೋಟೆ ಹೈಸ್ಕೂಲಿನ ಬೆಳಗಿನ ತರಗತಿಗಳನ್ನು ಸೇರಿ, ಅಭ್ಯಾಸಮಾಡಿ, ಮತ್ತೆ ಪರೀಕ್ಷೆ ಕಟ್ಟಿ ಉತ್ತೀರ್ಣರಾದರು. ಪರಮೇಶ್ವರಭಟ್ಟರಿಗೆ ಬೆಂಗಳೂರಿನ ವಾಸ್ತವ್ಯ, ಬದುಕಿನಲ್ಲಿ ಹೊಸ ತಿರುವುಗಳನ್ನುಂಟು ಮಾಡಲು ಕಾರಣವಾಯಿತು. ಮುಂದೆ ಬೆಂಗಳೂರು ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ವ್ಯಾಸಂಗ ಮುಂದುವರಿಸಿದಾಗ, ಎ.ಆರ್. ಕೃಷ್ಣಶಾಸ್ತ್ರಿಗಳು, ವಿ. ಸೀತಾರಾಮಯ್ಯ, ಕೆ.ವೆಂಕಟರಾಮಪ್ಪ, ಡಿ.ವಿ. ಶೇಷಗಿರಿರಾಯರು, (ಡಿವಿಜಿ ಯವರ ಸೋದರರು) ಮೊದಲಾದ ಸಾಹಿತ್ಯಲೋಕದ ಹಿರಿಯ ಪ್ರಾಧ್ಯಾಪಕರುಗಳು ಅವರಿಗೆ ಕನ್ನಡ ಬೋಧಿಸಿದ್ದರಿಂದ, ಅವರಲ್ಲಿದ್ದ ಸಾಹಿತ್ಯಾಭಿರುಚಿ ಜಾಗೃತವಾಯಿತು. ಕವಿತೆಗಳನ್ನು ಬರೆಯುವ ಹುಚ್ಚು ಹಿಡಿಯಿತು. ಅವರಲ್ಲಡಗಿದ್ದ ಕವಿಚೇತನವನ್ನು ಮೊದಲು ಪ್ರಕಾಶಕ್ಕೆ ತಂದವರು, ಕೆ. ನರಸಿಂಹ ಶಾಸ್ತ್ರಿಗಳಾದರೆ, ಆ ಹಣತೆಗೆ ತೈಲವೆರೆದು, ನಿರಂತರ ಬೆಳಗುವಂತೆ ಮಾಡಿದ ಮಹನೀಯರು ಕವಿ, ಪ್ರಾಧ್ಯಾಪಕ ವಿ.ಸೀ. ಅವರು. ಬೆಂಗಳೂರಿಂದ ಪ್ರಕಟವಾಗುತ್ತಿದ್ದ 'ಕಲಾ', 'ಸುಬೋಧ', 'ಸರಸ್ವತಿ', 'ವಿಶ್ವವಾಣಿ' ಮೊದಲಾದ ನಿಯತ ಕಾಲಿಕೆಗಳಲ್ಲಿ ಇಂಟರ್‌ಮೀಡಿಯಟ್ ಕಾಲೇಜು ಪತ್ರಿಕೆಯಲ್ಲಿ ಅವರ ಕವನಗಳು ಅಚ್ಚಾಗತೊಡಗಿದ್ದವು. 'ಸಿರಿಗನ್ನಡಿಗರ ಡಿಂಗರಿಗ' ಎಂಬ ಕಾವ್ಯನಾಮವನ್ನು ಹೊತ್ತು ಪ್ರಕಟವಾಗುತ್ತಿದ್ದ ಅವರ ಕವಿತೆಗಳನ್ನು ಕಂಡು ಮೆಚ್ಚಿದ ಅ.ನ. ಕೃಷ್ಣರಾಯರು, ಒಮ್ಮೆ ಅವರನ್ನು ಭೇಟಿಯಾದಾಗ "ಏನು ಭಟ್ಟರೆ, ನಿಮ್ಮ ಬಿರುದು ಅದ್ಭುತವಾಗಿ ಗಡಗಡಿಸುತ್ತಿದೆಯಲ್ಲ" ಎಂದು ಹಾಸ್ಯಮಾಡಿದಾಗ, ಭಟ್ಟರು ಆ ಕಾವ್ಯನಾಮವನ್ನು ಕೈಬಿಟ್ಟರಂತೆ !

ಹೀಗೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹಿರಿಯರ ನೆರವಿನಿಂದ ಪರಮಾಸಕ್ತಿಯನ್ನು ಬೆಳೆಸಿಕೊಂಡ ಪರಮೇಶ್ವರ ಭಟ್ಟರು, ಮುಂದೆ ಕನ್ನಡದಲ್ಲಿ ಬಿ.ಎ. (ಆನರ್ಸ್), ಎಂ.ಎ. ಪದವಿಗಳನ್ನು ಪಡೆಯುವ ಗುರಿಯಿಟ್ಟು

ಕೊಂಡರು. 1934ರಲ್ಲಿ ಮೈಸೂರು ಮಹಾರಾಜಾರವರ ಕಾಲೇಜಿನಲ್ಲಿ ಆನರ್ಸ್ ವಿದ್ಯಾರ್ಥಿಯಾಗಿ ಸೇರಿದರು. ಮೊದಲ ವರ್ಷದ ತರಗತಿಯಲ್ಲಿ ಅವರೊಬ್ಬರೇ ವಿದ್ಯಾರ್ಥಿ, ದ್ವಿತೀಯ ವರ್ಷದ ತರಗತಿಗಳಲ್ಲಿ ಭಟ್ಟರ ಬಹುಕಾಲದ ಒಡನಾಡಿಗಳಾಗಿದ್ದ ಎಚ್.ಎಂ. ಶಂಕರನಾರಾಯಣ ರಾಯರೂ, ಜಿ. ವೆಂಕಟಸುಬ್ಬಯ್ಯನವರೂ ಹಿರಿಯಣ್ಣಂದಿರಾಗಿದ್ದರು. ಆಚಾರ್ಯ ಬಿ.ಎಂ.ಶ್ರೀ. ಮತ್ತು ಟಿ.ಎಸ್. ವೆಂಕಣ್ಣಯ್ಯನವರು ಹಿರಿಯ ಪ್ರಾಧ್ಯಾಪಕರು. ಒಬ್ಬನೆ ವಿದ್ಯಾರ್ಥಿಯಾದುದರಿಂದ, ಗುರು-ಶಿಷ್ಯ ಸಂಬಂಧವು ಹಿತವೂ, ಆತ್ಮೀಯವೂ ಆಗಿತ್ತು. ಭಟ್ಟರು ಎಂ.ಎ. ತರಗತಿಗೆ ಬರುವ ಹೊತ್ತಿಗೆ, ಆಚಾರ್ಯ ತೀ.ನಂ.ಶ್ರೀ. ಮತ್ತು ಡಿ.ಎಲ್. ನರಸಿಂಹಚಾರ್ಯರು ಗುರು ವೃಂದದಲ್ಲಿ ಸೇರಿದರು. ಇದರಿಂದ, ಸಾಹಿತ್ಯ ಶಿಕ್ಷಣದ ಭದ್ರವಾದ ಬುನಾದಿ ಭಟ್ಟರಿಗೆ ದೊರೆತಂತಾಯಿತು.

ಶ್ರೀ ಕುವೆಂಪು ಅವರ ಪಾಠ ಕೇಳುವ ಅವಕಾಶ ಪರಮೇಶ್ವರ ಭಟ್ಟರಿಗೆ ದೊರೆಯದೆ ಹೋದರೂ ಅವರ ಕವಿಚೇತನ ಹಾಗೂ ವ್ಯಕ್ತಿತ್ವಗಳ ಪ್ರಭಾವ ಅವರ ಮೇಲೆ ವಿಶೇಷವಾಗಿ ಆಯಿತು. ತರಗತಿಯ ಆಚೆ ಅವರಿಂದ ಎಸ್‌ವಿಪಿ ಯವರು ಕಲಿತ ವಿಷಯಗಳು ಹಲವಾರು. ಕುವೆಂಪು ಅವರನ್ನು ಮೊದಲ ಸಲ ಕಂಡಾಗಲೆ ಮಾನಸಿಕ ಗುರುವಾಗಿ ಸ್ವೀಕರಿಸಿದರು. ಆ ಸಮಯದಲ್ಲಿ ರಾಮಾಯಣ ದರ್ಶನದ ರಚನೆಯಲ್ಲಿ ತೊಡಗಿದ್ದ ಕುವೆಂಪು ಅವರು, ಮುಗಿದ ಭಾಗಗಳನ್ನು ಭಟ್ಟರನ್ನು ಕೂರಿಸಿಕೊಂಡು ಓದಿ ಹೇಳುತ್ತಿದ್ದರಂತೆ. ನಾ. ಕಸ್ತೂರಿ ಅವರೊಂದಿಗೆ ಸೇರಿಕೊಂಡು ಎಸ್‌ವಿಪಿ ಅವರು ಕುವೆಂಪು ಅವರ 'ರಕ್ತಾಕ್ಷಿ' ನಾಟಕದಲ್ಲಿ ಕೂಡ ಅಭಿನಯಿಸಿದರು.

ಎಂ.ಎ. ತರಗತಿಯಲ್ಲಿ ಓದುತ್ತಿರುವಾಗ, ವರ್ಡ್ಸ್‌ವರ್ತ್ ಕವಿಯ 'ಮೈಕೇಲ್' ಎಂಬ ಕವನವನ್ನು ಆಧರಿಸಿ 'ಮಾಚಯ್ಯ' ಎಂಬ ಕಥನ ಕವನ ಬರೆದು ಬಿ.ಎಂ.ಶ್ರೀ. ಸ್ವರ್ಣಪದಕ ಗಳಿಸಿದ್ದು, ಎಂ.ಎ. ಪರೀಕ್ಷೆಯಲ್ಲಿ ಮೊದಲ ದರ್ಜೆಯಲ್ಲಿ ಉತ್ತೀರ್ಣರಾಗಿ ಚಿನ್ನದ ಪದಕವನ್ನು ಗಿಟ್ಟಿಸಿದ್ದು, ಅವರ ಮುಂದಿನ ಸಾಹಿತ್ಯಕ ಸಾಧನೆಗಳಿಗೆ ದಾರಿದೀಪವಾದವು.

ಪರಮೇಶ್ವರ ಭಟ್ಟರು ಮೊದಲು ಅಧ್ಯಾಪಕರಾಗಿ ಕೆಲಸ ಮಾಡಿದ್ದು ಮೈಸೂರು ಮಹಾರಾಣಿ ಕಾಲೇಜಿನಲ್ಲಿ; ಇಂಟರ್ ಮೀಡಿಯಟ್ ತರಗತಿಯ ವಿದ್ಯಾರ್ಥಿನಿಯರಿಗೆ ಪಾಠ ಹೇಳುವ ಮೂಲಕ, ಬಹುಬೇಗ ಒಳ್ಳೆಯ ಉಪನ್ಯಾಸಕರೆಂದು ಕೀರ್ತಿಗಳಿಸಿದರು. ಮುಂದೆ ತುಮಕೂರು, ಶಿವಮೊಗ್ಗ ಮೊದಲಾದೆಡೆಗಳಲ್ಲಿಯೂ, ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಅಧ್ಯಾಪಕರಾಗಿ ಮೆಚ್ಚುಗೆ ಗಳಿಸಿಕೊಂಡರು. 1940-ಅವರ ಜೀವನದಲ್ಲಿ ಪ್ರಮುಖ ಘಟ್ಟವಾಯಿತು. ಗೃಹಸ್ಥ ಜೀವನದ ಪ್ರವೇಶ ಮತ್ತು ಕುವೆಂಪು ಅವರ ಮುನ್ನುಡಿ ರೂಪದ ಹರಕೆಯ ಕವನದೊಂದಿಗೆ ಅವರ ಮೊದಲ ಕವನ ಸಂಗ್ರಹ 'ರಾಗಿಣಿ'ಯ ಪ್ರಕಟಣೆ, ಎರಡೂ ಅವರ ಜೀವನದ ಮೇಲೆ ವಿಶೇಷ ಪರಿಣಾಮ ಮಾಡಿದ ಸಂದರ್ಭಗಳಾದವು. ಡಾ|| ಎಚ್.ಕೆ. ರಂಗನಾಥರ ಸೋದರಿ ಶ್ರೀಮತಿ ರಾಜಲಕ್ಷ್ಮಿಯನ್ನು ಬಾಳಸಂಗಾತಿಯಾಗಿ ಸ್ವೀಕರಿಸಿ, ಬದುಕಿನ ದುರ್ಭರ ಸನ್ನಿವೇಶಗಳಲ್ಲಿಯೂ, ಆಕೆಯ ಕೈಹಿಡಿದು, ಮುನ್ನಡೆಸಿ ಮುನ್ನಡೆದರು. ಗೃಹಸ್ಥಜೀವನವನ್ನು ಒಂದು ವ್ರತವಾಗಿ ಸ್ವೀಕರಿಸಿ, ಬದುಕು ಸಾಹಿತ್ಯಗಳೆರಡನ್ನು ಸತ್ಯಶೋಧನೆಯ ಮಾರ್ಗವಾಗಿ ಕಲ್ಪಿಸಿಕೊಂಡು ಕನ್ನಡ ಸಾರಸ್ವತ ಲೋಕದ ಕಣಜಕ್ಕೆ ತಾವು ಬೆಳೆದ ಸಾಹಿತ್ಯ ಸಿರಿಯನ್ನು ತುಂಬಿಸಿದರು.

ಶಿವಮೊಗ್ಗೆಯ ಕಾಲೇಜಿನಲ್ಲಿ ಅಧ್ಯಾಪಕರಾಗಿರುವಾಗ, ಭಟ್ಟರು ಕಾಳಿದಾಸನ ಋತುಸಂಹಾರವನ್ನು ಅನುವಾದಿಸಿ, ತಮ್ಮ ಮುಂದಿನ ಸಂಸ್ಕೃತ ಕಾವ್ಯ-ನಾಟಕಗಳ ಪರಿವರ್ತನ ಕಾರ್ಯಕ್ಕೆ ನಾಂದಿ ಹಾಡಿದರು. ಆವೇಳೆಗಾಗಲೆ ಹಲವಾರು ಭಾವಗೀತೆಗಳನ್ನು ಬರೆದು ಕವಿಯಾಗಿ ಖ್ಯಾತರಾಗಿದ್ದರು. ಅಡಿಸನ್, ಬೇಕನ್, ಸ್ಟೀಲ್, ಲ್ಯಾಂಬ್ ಮೊದಲಾದ ಆಂಗ್ಲಕವಿಗಳ ಪ್ರಬಂಧಗಳನ್ನು ಅನುವಾದಿಸಿ ಪ್ರಕಟಿಸಿದರು. ಈ ಸಂದರ್ಭದಲ್ಲಿ ಅವರ ಧರ್ಮಪತ್ನಿಯವರ ಆರೋಗ್ಯ ಕೆಟ್ಟಿದುದರಿಂದ ಜೀವನದಲ್ಲಿ ಸಂಕಟದ ಸಮಯಗಳು ಎದುರಾದವು. ಶಿವಮೊಗ್ಗೆಯಿಂದ ಮೈಸೂರಿಗೆ ವರ್ಗ ಮಾಡಿಸಿಕೊಂಡು, ಶ್ರೀಮತಿ ಮತ್ತು ಮಕ್ಕಳೊಡನೆ ಮೈಸೂರಿನಲ್ಲಿ ದೀರ್ಘಕಾಲ ನೆಲಸಿದರು. ಮುಂದಿನ ಜೀವನದುದ್ದಕ್ಕೂ ಅನಾರೋಗ್ಯ ಕ್ಕೊಳಗಾದ ತಮ್ಮ ಶ್ರೀಮತಿಯವರನ್ನು ಮಗುವಿನಂತೆ ನೋಡಿಕೊಳ್ಳುತ್ತ ಜೀವನದಲ್ಲಿ ವಿಚಲಿತರಾಗದೆ, ಸಾಹಿತ್ಯ ವ್ಯಾಸಂಗ ಬರವಣಿಗೆಗಳನ್ನು ಮುಂದುವರೆಸಿದರು. ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಿ.ಎ. ಮತ್ತು ಎಂ.ಎ. ತರಗತಿಗಳಿಗೆ ಪಾಠ ಹೇಳುವ ಅವಕಾಶ ದೊರೆತು, ವಿದ್ಯಾರ್ಥಿ ಸಮೂಹದ ನಡುವೆ, ಸರಸ ವಿನೋದಪ್ರಿಯ ಪ್ರಾಧ್ಯಾಪಕರೆನಿಸಿಕೊಂಡು ಸಂಕಟಗಳನ್ನು ಮರೆಯುತ್ತಿದ್ದರು.

ಮೈಸೂರಿಗೆ ಬಂದು ನೆಲಸಿದ ಮೇಲೆ, ಅವರ ಹಳೆಯ ಒಡನಾಡಿಗಳಾದ ಎಚ್.ಎಂ. ಶಂಕರನಾರಾಯಣರಾಯರ, ಸಹಜೀವನದ ಭಾಗ್ಯ ಭಟ್ಟರಿಗೆ ದೊರೆತು ಅವರ ಪ್ರೋತ್ಸಾಹದಿಂದ ಬರವಣಿಗೆಯ ಕಾರ್ಯ ನಿರಂತರವಾಗಿ ಸಾಗಿತು. ಕಾಳಿದಾಸನ 'ಕುಮಾರ ಸಂಭವ', 'ಮೇಘದೂತ', 'ರಘುವಂಶ', 'ಮಾಳವಿಕಾಗ್ನಿಮಿತ್ರ', 'ಅಭಿಜ್ಞಾನ ಶಾಕುಂತಲ'ಗಳಂಥ ಮಹತ್ವದ ಅನುವಾದಗಳು ಸೃಷ್ಟಿಯಾದವು. ಕೃಷ್ಣಮೂರ್ತಿಪುರದ ರಾಮ ಅಯ್ಯರ್ ರಸ್ತೆಯಲ್ಲಿ ಶಂಕರನಾರಾಯಣ ರಾಯರೂ, ಭಟ್ಟರೂ ಅಕ್ಕಪಕ್ಕದಲ್ಲಿ ವಾಸಿಸುತ್ತಿದ್ದರು. ಭಟ್ಟರ ಕೃತಿಗಳನ್ನು ರಾಯರು ತಮ್ಮ 'ಶಾರದಾ ಮಂದಿರ' ಪ್ರಕಾಶನದ ಮೂಲಕ ಬೆಳಕಿಗೆ ತಂದರು. ಭಟ್ಟರು ಸಂಪಾದಿಸಿದ ಮುದ್ದಣ್ಣ ಕವಿಯ 'ಶ್ರೀ ರಾಮಪಟ್ಟಾಭಿಷೇಕ' ಮತ್ತು 'ಅದ್ಭುತರಾಮಾಯಣ' ಗಳು ಉಷಾಸಾಹಿತ್ಯಮಾಲೆಯ ಮೂಲಕ, ಹೊರ ಬಂದವು. 1960ರಲ್ಲಿ ಕುವೆಂಪು ಅವರ ಕನಸಿನ ಕೂಸಾಗಿ ಮಾನಸಗಂಗೋತ್ರಿ ಜನ್ಮತಾಳಿದಾಗ, ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪರಮೇಶ್ವರಭಟ್ಟರು ಪ್ರವಾಚಕರಾಗಿ ಹಲವು ಕಾಲ ಕೆಲಸ ಮಾಡಿದರು. ತಮ್ಮ ಸ್ವಂತ ಕೃತಿಗಳ ಪ್ರಕಟಣೆಗೆ ಸರಸ ಸಾಹಿತ್ಯ ಪ್ರಕಾಶನವೆಂಬ ಹೆಸರಲ್ಲಿ ಪುಸ್ತಕೋದ್ಯಮವನ್ನು ಕೈಕೊಂಡರು.

1968ರಲ್ಲಿ ಕುಲಪತಿಗಳಾಗಿದ್ದ ದೇ. ಜವರೇಗೌಡರ ಪ್ರೋತ್ಸಾಹ ಉತ್ತೇಜನಗಳಿಂದ ಆರಂಭವಾದ ಮಂಗಳೂರಿನ ಸ್ನಾತಕೋತ್ತರ ಅಧ್ಯಯನ ಕೇಂದ್ರಕ್ಕೆ ಪರಮೇಶ್ವರಭಟ್ಟರು ಪ್ರಾಧ್ಯಾಪಕರು ಮತ್ತು ನಿರ್ದೇಶಕರಾಗಿ, ಹೋಗಲು ಒಪ್ಪಿಕೊಂಡರು. ಆ ಕೇಂದ್ರಕ್ಕೆ ಅವರೆ ಮಂಗಳ ಗಂಗೋತ್ರಿಯೆಂದು ನಾಮಕರಣ ಮಾಡಿ, ಅದರ ಸಮಗ್ರ ವಿಕಾಸದ ಶಿಲ್ಪಿಯೆನಿಸಿಕೊಂಡರು. ದಕ್ಷಿಣ ಕನ್ನಡ ಜಿಲ್ಲೆಯ ತುಂಬ ಜನಪ್ರಿಯ ವ್ಯಕ್ತಿಯಾಗಿ, ಮಂಗಳ ಗಂಗೋತ್ರಿಯನ್ನ ಜಿಲ್ಲೆಯ ಜನರ ಸಾಹಿತಿಗಳ ಸಾಂಸ್ಕೃತಿಕ ದೇಗುಲವಾಗಿ ಪರಿವರ್ತಿಸಿ, ಅದಕ್ಕೆ ಕಳಶ ಪ್ರಾಯರಾದರು. ಅವರ ಶಿಷ್ಯವರ್ಗದ ಲಕ್ಕಪ್ಪಗೌಡ, ಚಂದ್ರಶೇಖರ ಐತಾಳ (ಗುಂಡ್ಮಿ) ಮತ್ತು ವಿವೇಕ ರೈರಂಥ ತರುಣ ಅಧ್ಯಾಪಕರನ್ನು ಕೂಡಿಕೊಂಡು 'ಪಲಚಂವಿ' ಎಂಬ ಪ್ರಕಾಶನವನ್ನು ಆರಂಭಿಸಿ ಅಮೂಲ್ಯ ಕೃತಿಗಳನ್ನು ಹೊರತಂದರು.

ಕವಿ ಪರಮೇಶ್ವರ ಭಟ್ಟರ ಸೃಜನಶೀಲ ಬರವಣಿಗೆಯ ಬಹುಮುಖ ಸೃಷ್ಟಿಯಾದುದು, ಸಂಸ್ಕೃತ ಸಾಹಿತ್ಯ ಸಾಗರದ ಬಹುಬಗೆಯ ರತ್ನಗಳು ಕನ್ನಡಕ್ಕೆ ಲಭ್ಯವಾದುದು, ಅವರು 'ಮಂಗಳ ಗಂಗೋತ್ರಿ'ಯ ಅಧ್ಯಕ್ಷರಾಗಿರುವಾಗಲೆ. ಅವರೆ ಹೇಳಿಕೊಂಡಿರುವಂತೆ ಮಂಗಳೂರಲ್ಲಿ ಅವರು ಕಳೆದ ದಿನಗಳು, ಬಂಗಾರದ ದಿನಗಳು. ಮಂಗಳಗಂಗೋತ್ರಿ-ದಕ್ಷಿಣಕನ್ನಡ ಜಿಲ್ಲೆಯ ಸಂಸ್ಕೃತಿಗೆ ಮುಕುಟವೆನಿಸಿದ ಯಕ್ಷಗಾನ ಕಲೆ-ಪಡುವಣ ನೆಲದುದ್ದಕ್ಕೂ ಸೆರಗಿನಂತೆ ಚಾಚಿದ ಉಪ್ಪುಕಡಲು-ಜಿಲ್ಲೆಯ ಜನರ ಲವಲವಿಕೆಯ ಸೌಜನ್ಯಪೂರ್ಣ ಸ್ನೇಹ ಹಸ್ತ-ಮುಖ್ಯವಾಗಿ ಈ ನಾಲ್ಕು ಆಕರ್ಷಣೆಗಳು, ಅವರಲ್ಲಿದ್ದ ಸಾಹಿತ್ಯ ಹಾಗೂ ಕಲಾಭಿಜ್ಞತೆಯನ್ನು ಶ್ರೀಮಂತಗೊಳಿಸಿದವು. ಮಂಗಳೂರಲ್ಲಿ ಅವರು ಗಳಿಸಿದ ಜನಪ್ರಿಯತೆ ಎಷ್ಟು ಗಾಢವಾಗಿತ್ತೆಂದರೆ, ಅವರನ್ನು ಬಿಟ್ಟು ಜಿಲ್ಲೆಯ ಯಾವೊಂದು ಸಾಂಸ್ಕೃತಿಕ ಉತ್ಸವಗಳು, ಚಟುವಟಿಕೆಗಳು ನಡೆಯುತ್ತಿರಲಿಲ್ಲ. ಅವರ ವಿನೋದ ಪ್ರಿಯತೆ, ಸರಸ ಮಾತುಗಾರಿಕೆಗಳಿಂದ, ಒಳ್ಳೆಯ ವಾಗ್ಮಿ ಎಂಬ ಕೀರ್ತಿಗೆ ಭಾಜನರಾದರು. ಶ್ರೀಮತಿಯವರ ಅಸ್ವಸ್ಥತೆಯಿಂದ, ಕೌಟುಂಬಿಕ ಸಮಸ್ಯೆಗಳು ಹಲವು ಅವರನ್ನ ಕಾಡುತ್ತಿದ್ದರೂ, ಸ್ಥಿತಪ್ರಜ್ಞರಾಗಿ, 'ಅಳು ನುಂಗಿ ನಗುವೊಮ್ಮೆ, ನಾನೂನು ನಕ್ಕೇನ' ಎಂಬ ಬೇಂದ್ರೆಯವರ ನುಡಿಗಳಂತೆ ಬಾಳುವುದನ್ನು ಕಲಿತರು. ಸಜ್ಜನ ಸಲ್ಲಾಪ, ಕಾವ್ಯ ಸಲ್ಲಾಪಗಳಲ್ಲಿ ಜೀವನದ ಸಂಕಟ ಸನ್ನಿವೇಶಗಳನ್ನು ಮರೆತರು. ಸ್ನಾತಕಪೂರ್ವ ತರಗತಿಗಳಿರಲಿ, ಸ್ನಾತಕೋತ್ತರ ತರಗತಿಗಳೇ ಇರಲಿ, ಕಾವ್ಯ ಕೃತಿಗಳ ಸೊಗಸನ್ನು ಹಾಸ್ಯ ಪರಿಲೇಪನದೊಂದಿಗೆ ಮನಂಬುಗುವಂತೆ ವರ್ಣಿಸಿ, ಶಿಷ್ಯಗಣದ ಹೃದಯ ಸೂರೆಗೊಂಡರು. ಗುರು ಪರಂಪರೆಗೆ ಗೌರವ ತಂದುಕೊಟ್ಟ ಶ್ರೇಷ್ಠ ಪ್ರಾಧ್ಯಾಪಕರುಗಳ ಸಾಲಿನಲ್ಲಿ ಪ್ರೊ|| ಎಸ್.ವಿ.ಪಿ. ವಿರಾಜಿಸಿದರು.

ನಿವೃತ್ತರಾದ ಅವರನ್ನು ದಕ್ಷಿಣ ಕನ್ನಡ ಜಿಲ್ಲೆಯ ಜನರು ಭಾರವಾದ ಮನಸ್ಸಿನಿಂದ ಬೀಳ್ಕೊಂಡ ಮೇಲೆ ಭಟ್ಟರು ಮತ್ತೆ ಮೈಸೂರಿನ ತಮ್ಮ ಸ್ವಂತ ನೆಲೆಯನ್ನು ಸೇರಿಕೊಂಡರು. ಕೆಲವು ಕಾಲ ವಿಶ್ವವಿದ್ಯಾಲಯ ಧನ ಸಹಾಯ ಆಯೋಗದ ನೆರವಿನಿಂದ ಗೌರವ ಪ್ರಾಧ್ಯಾಪಕರಾಗಿ ಮಾನಸಗಂಗೋತ್ರಿಯಲ್ಲಿ ಕೆಲಸಮಾಡಿ, 'ರಸಋಷಿ ಕುವೆಂಪು ಕವಿ ಕಾವ್ಯ ಪರಿಚಯ' ಎಂಬ ಪ್ರೌಢ ಪ್ರಬಂಧವನ್ನು ಬರೆದು ಮುಗಿಸಿದರು. ನಿವೃತ್ತಿಯು ಮತ್ತೆ ಅವರ ಬರವಣಿಗೆಯ ಪ್ರವೃತ್ತಿಮಾರ್ಗವನ್ನು ತೆರೆಯಿತು.

**ಸೃಜನಶೀಲ ಸಾಹಿತ್ಯ**

ಎಸ್.ವಿ.ಪಿ ಯವರು ಕನ್ನಡ ನವೋದಯ ಕಾಲದ ಉಚ್ಛ್ರಾಯ ಸ್ಥಿತಿಯ ಎರಡನೆಯ ಘಟ್ಟದಲ್ಲಿ ಬಂದ ಬಹುಶ್ರುತ ವಿದ್ವಾಂಸ ಬರಹಗಾರರು, ಕವಿಗಳು, ಭಾವಗೀತೆ, ವಚನ, ಮುಕ್ತಕಗಳೇ ಮೊದಲಾಗಿ ಸಾವಿರಾರು ಸಂಖ್ಯೆಯ ಸೃಜನಶೀಲ ಕಾವ್ಯಗಳನ್ನು ಸೃಷ್ಟಿಸಿದರಲ್ಲದೆ, ಸಂಸ್ಕೃತದ ಪ್ರಸಿದ್ಧ ಮಹಾಕವಿಗಳ ಕಾವ್ಯ, ನಾಟಕ, ಗೀತೆ, ಮುಕ್ತಗಳ ನೇಕವನ್ನು ಅನುವಾದಗಳಲ್ಲಿ ತಂದು, ಮರುಸೃಷ್ಟಿ ಮಾಡಿದ್ದಾರೆ. ಹಲವು ಮಹಾಸಂಪುಟಗಳಲ್ಲಿ ಬಂದ ಅವರ ಅನುವಾದ ಸಾಹಿತ್ಯವು ವಿಸ್ಮಯ ಹುಟ್ಟಿಸುವಂತಿದೆ. ಇನ್ನುಳಿದ ಅವರ ರಚನೆಗಳಲ್ಲಿ ವಿಮರ್ಶೆ, ಉಪನ್ಯಾಸಗಳು, ಪ್ರಬಂಧಗಳು, ಮುನ್ನುಡಿಗಳು, ಗ್ರಂಥ ಸಂಪಾದನೆ, ಸ್ವಂತ ಸೃಷ್ಟಿಯ ಗಾದೆಗಳು ಒಗಟುಗಳು ಎಲ್ಲವೂ ಸೇರಿ, ಪ್ರಯೋಗ ವೈವಿಧ್ಯವನ್ನು ತೋರುತ್ತವೆ.

ಎಸ್.ವಿ.ಪಿ. ಅವರು ಪ್ರಮುಖರಾಗಿ ಕವಿಗಳು. ಕವಿಯಾಗಿಯೂ ಅವರು ಪ್ರಯೋಗಶೀಲರು. ಸ್ವಂತ ರಚನೆಗಳಲ್ಲಾಗಲೀ, ಅನುವಾದಗಳ ಲ್ಲಾಗಲೀ; ಎದ್ದು ಕಾಣುವ ಗುಣವೆಂದರೆ, ಈ ಪ್ರಯೋಗಶೀಲತೆ. ಅವರ ಕಾವ್ಯರಾಶಿಯಲ್ಲಿ ಭಾವಗೀತೆ, ವಚನ, ಮುಕ್ತಕ, ಸಾಂಗತ್ಯ, ತ್ರಿಪದಿ, ಏಳೆ, ಷಟ್ಪದಿಯ ವಿವಿಧ ರೂಪಗಳು ಎಲ್ಲವೂ ಸೇರಿವೆ. ಹೊಸತನದ ಭಾವಗೀತೆಯ ರಚನೆಯೊಂದಿಗೆ, ಕನ್ನಡ ದೇಸಿ ಛಂದಸ್ಸಿಗೆ ಮರುಜನ್ಮಕೊಟ್ಟ ವಿದಾತರೂ ಎನಿಸಿಕೊಂಡಿದ್ದಾರೆ. ಪ್ರಾಚೀನ ಸಾಹಿತ್ಯದಲ್ಲಿಯೇ ಅಪರೂಪವಾಗಿರುವ, ಎರಡು ಸಾಲಿನ ಏಳೆಯನ್ನು ಮತ್ತೆ ಪ್ರಯೋಗಿಸಿ, ಅದಕ್ಕೆ ನಾವೀನ್ಯವನ್ನು ತಂದುಕೊಟ್ಟದ್ದು ಭಟ್ಟರ ವಿಶಿಷ್ಟ ಕಾಣಿಕೆಯಾಗಿದೆ.

ಕುವೆಂಪು ಅವರ ಹರಕೆಯೊಂದಿಗೆ ಹೊರಬಂದ 'ರಾಗಿಣಿ' ಕವನ ಸಂಕಲನದಿಂದ ತೊಡಗಿ, ಅವರ ಸ್ವಂತ ಕವಿತಾರಚನೆ ಹಲವು ಮಜಲುಗಳಲ್ಲಿ ಮುಂದುವರಿದು, ಕಾವ್ಯಲೋಕವನ್ನು ಶ್ರೀಮಂತಗೊಳಿಸಿದೆ. ನವೋದಯ ಕಾಲದ ಆಶೋತ್ತರ, ಕನಸುಗಳು, ನಿಸರ್ಗಪ್ರಿಯತೆ, ಪ್ರೇಮಾರಾಧನೆ ಎಲ್ಲವೂ ಅವರ ಕವಿತೆಗೆ ವಸ್ತುಗಳಾಗಿವೆ. ಸಮಕಾಲೀನ ಸಾಮಾಜಿಕ ಬದುಕು, ಆಧುನೀಕರಣದ ಸಮತೆ-ವಕ್ರತೆಗಳು, ನೋವು ನಲಿವುಗಳು, ಅವರ ಭಾವಗೀತೆ, ವಚನ ಮುಕ್ತಕಗಳಲ್ಲಿ ಸಹಜ ಅಭಿವ್ಯಕ್ತಿ ಪಡದಿವೆ. ರಾಗಿಣಿ, ಗಗನ ಚುಕ್ಕಿ, ಅಂಚೆಯಪೆಟ್ಟಿಗೆ, ಕೃಷ್ಣಮೇಘ, ಸಂಜೆ ಮಲ್ಲಿಗೆ ಮೊದಲಾದವು ಅವರ ಕವನ ಸಂಗ್ರಹಗಳು; ಮಾಚಯ್ಯ, ಜಹನಾರ ನೀಳ್ಗವನಗಳು; ಚಂದ್ರವೀಧಿ, ಇಂದ್ರಚಾಪ, ತುಂಬೆಹೂ, ಚಿತ್ರಕಥೆ ಮೊದಲಾದವು ಮುಕ್ತಕ ಸಂಗ್ರಹಗಳು; ಉಪ್ಪುಕಡಲು, ಪಾಮರ, ಉಂಬರ ಇವು ವಚನ ಸಂಕಲನಗಳು-ಈ ಎಲ್ಲ ಕೃತಿಗಳಲ್ಲೂ ಭಟ್ಟರ ಪ್ರಯೋಗಶೀಲ ಪ್ರವೃತ್ತಿ ಎದ್ದು ಕಾಣುವಂಥದು.

ಅವರ ಪ್ರಕೃತಿ ಮತ್ತು ಪ್ರಣಯ ಗೀತಗಳು ಪದಲಾಲಿತ್ಯ, ಭಾವ ಸಂಯೋಜನೆಗಳಿಂದ ನಮ್ಮನ್ನು ಸೆರೆಹಿಡಿಯುತ್ತವೆ. ಅಲ್ಲಿ ಕನಸುಗಳು ತೇಲಾಡುತ್ತವೆ. 'ತಿಳಿ ಮುಗಿಲ ತೊಟ್ಟಿಲು, ಮಲಗಿರುವ ಚಂದಿರನ ಗಾಳಿ ಜೋಗುಳ ಹಾಡಿ ತೂಗುವ ಹಾಗೆ', 'ಗರಿಮುದುರಿ ಮಲಗಿದ್ದ ಹಕ್ಕಿ ಗೂಡುಗಳಲ್ಲಿ ಇರುಳು ಹೊಂಗನಸೂಡಿ ಸಾಗುವ ಹಾಗೆ' ಪ್ರತಿಮಾ ರೂಪದ ಚಿತ್ರಗಳು ಅಲ್ಲಿ ಸಿಗುತ್ತವೆ. 'ನೂರು ವರುಷಗಳಲ್ಲಿ, ಒಮ್ಮೆ ಸುಳಿದೊಂದಿರುಳ ಹೊಂಗನಸೆ ಸಾಕು, ನೂರು ಭೃಂಗಗಳಲೊಮ್ಮೆ ಸುಳಿದೊಂದಳಿಯ ಸುಖ ಸಂಗ ಸಾಕು' ಎಂಬ ಧನ್ಯೋಸ್ಮಿ ಭಾವನೆಯನ್ನು ಕವಿ ತಳೆಯುತ್ತಾರೆ. 'ನೌಕಾ ಕ್ರೀಡನವೆಳೆಸಿದವಾಗಲೆ ತುಂಗೆಯ ಶೀತಲ ವೇಳೆಯಲ್ಲಿ ನಲಿದೆವು, ಒಲಿದೆವು ಆನಂದಿಸಿದೆವು ರಾಸಕ್ರೀಡೆಯ ಲೀಲೆಯಲಿ' ಮುಂತಾದ 'ಭಾವಗೀತೆ'ಯ ಸಾಲುಗಳಲ್ಲಿ ಪ್ರಕೃತಿ ಪ್ರಣಯಗಳ ಸಂಗಮದಲ್ಲಿ ರಾಧಾಕೃಷ್ಣರ ಸಮಾಗಮದ ಸಮರ್ಪಣ ಭಾವವಿದ್ದರೆ, ದಾಂಪತ್ಯ ಜೀವನ ಗೀತಗಳಲ್ಲಿ ನೋವುಂಡು ನಲಿದ ಸಮರಸಭಾವಗಳು ಕೊನೆಗೊಳ್ಳುತ್ತವೆ. 'ಹಗಲಿನುದ್ದಕು ಬಿಸಿಲ ಬೇಗೆಯೇ ಇದ್ದರೇನು ಹೇ ಸಖಿ, ಸಂಜೆಯ ಹೊತ್ತಿಗೆ ಕಡಲ ಗಾಳಿಗೆ ಮೈಯನೊಡ್ಡುವ ಸುಖವ ನೆನೆಯುತ, ನಾ ಸುಖಿ' ಎಂದು ಸಹಿಷ್ಣುಶೀಲ ಪ್ರವೃತ್ತಿಯನ್ನು ಕವಿ ಬೆಳೆಸಿಕೊಳ್ಳುತ್ತಾರೆ. ಒಂದೊಂದು ಕಾಲದಲ್ಲಿ 'ಒಂದೊಂದು ರೀತಿಯಲ್ಲಿ, ಒಂದೊಂದು ಸುಖವಿಹುದು, ದುಃಖವಿಹುದು; ಅದರದರ ಕಾಲದಲ್ಲಿ ಸುಖ ದುಃಖಗಳ ಸವಿದ ಬಾಳು ಹಸನಾಗಿಪುದೆ ಸೃಷ್ಟಿಯೊಸಗೆ' ಎಂಬ ತಾತ್ತ್ವಿಕ ನೆಲೆಗೆ ಕವಿ ತಲುಪುತ್ತಾರೆ. ಪರಮೇಶ್ವರ ಭಟ್ಟರ ಭಾವಗೀತೆಗಳ ಮೇಲೆ ಕುವೆಂಪು, ಬೇಂದ್ರೆ ಮೊದಲಾದ

ಹಿರಿಯ ಕವಿಗಳ ಪ್ರೇರಣೆ ಪ್ರಭಾವಗಳು ಇರುವುದು ನಿಜವಾದರೂ, ಭಾಷೆ ಮತ್ತು ಭಾವನಾ ಸಂಪತ್ತಿಗೆ ಅವರಲ್ಲಿ ಕೊರತೆಯಿರಲಿಲ್ಲವೆನಿಸುತ್ತದೆ.

ಪರಮೇಶ್ವರಭಟ್ಟರು 1965 ಮತ್ತು 66ರಲ್ಲಿ ಪ್ರಕಟಿಸಿದ ಮುಕ್ತಕ ಸಂಗ್ರಹಗಳು ಇಂದ್ರಚಾಪ ಮತ್ತು ಚಂದ್ರವೀಥಿ, ಮುಕ್ತಕ ಸಾಹಿತ್ಯಕ್ಕೆ ಅವರ ಅಪೂರ್ವ ಕೊಡುಗೆಗಳು. ಇವುಗಳೊಂದೊಂದರಲ್ಲೂ 700 ಮುಕ್ತಕಗಳಿವೆ. ಇವು ಕನ್ನಡದ ಗಾಥಾಸಪ್ತಶತಿಗಳೆಂದು ಪ್ರಸಿದ್ಧವಾಗಿವೆ. ಸಾಂಗತ್ಯರೂಪದ ಈ ಮುಕ್ತಕಗಳಲ್ಲಿ ಆಧುನಿಕ ಸಮಕಾಲೀನ ಬದುಕಿನ ವಿವಿಧ ಚಿತ್ರಗಳಿವೆ. ಕವಿಯೇ ಹೇಳುವಂತೆ, ಈ ಶತಮಾನದ ಗಾಳಿ, ನೀರು, ಬೆಳಕುಗಳ ನೆರವಿನಿಂದ, ಬದುಕಿ ಬಾಳುತ್ತಿರುವ ಕವಿಯು ಕಂಡುಂಡ ಸಂಗತಿಗಳು ಇವುಗಳ ವಸ್ತುಗಳಾಗಿವೆ. ಒಮ್ಮೆ ಹಾಸ್ಯದ ಸೆಳೆಮಿಂಚು ರೇಖುಗಳು ಹರಿದು, ಕೆಲವೊಮ್ಮೆ ವಿಷಾದದ ನೆರಳು ಕವಿದು, ವಾಸ್ತವ ಬದುಕಿನ ವಿಪರ್ಯಾಸಗಳನ್ನು ಗುರುತಿಸುತ್ತವೆ. ಅಂಥ ಕೆಲವು ತುಣುಕುಗಳನ್ನು ನಾವಿಲ್ಲಿ ನೋಡಬಹುದು.

1. ಚಂದ್ರವೀಥಿ -ಬಳೆಯಿಲ್ಲ ಕೈಯೊಳು, ಹೂವಿಲ್ಲ ಮುಡಿಯೊಳು
ಕುಂಕುಮವಿಲ್ಲ ಹಣೆಯೊಳು ಚೆಲುವಿಲ್ಲ ತನುವೊಳು,
ಗೆಲುವಿಲ್ಲ ಮನದೊಳು
ಓದಿದ ನಮ್ಮ ಹೆಣ್ಣವಳು.

* * *

1. ಇಂದ್ರಚಾಪ -ಕಾಫಿಗೆ ಸಕ್ಕರೆ ಹೆಚ್ಚಾಯಿತೆಂದೆನು
ಅಷ್ಟಕ್ಕೆ ಇಷ್ಟೇಕೆ ಸಿಟ್ಟೆ
ನಾಲಗೆ ಸಿಹಿಯಾಯಿತಾದರೂ ಮನವನು
ಕಹಿ ಮಾಡಿ ಬಿಟ್ಟೆ.

* * *

ಮೇಲಕ್ಕೆ ಹತ್ತಿರಿ, ಮುಂದಕೆ ಬನ್ನಿರಿ
ಎಂದು ಕಂಡಕ್ಟರು ಕರೆಯೆ
ಉಳಿದೆಲ್ಲ ಕಡೆಯೊಳು ಹಿಂದಕೆ ತಳ್ಳಿಸಿ
ಕೊಂಡವನಾನಂದಕೆಣೆಯೆ!

ಭಟ್ಟರು ರಚಿಸಿದ 'ಸುರಗಿಯ ಸುರಹೊನ್ನೆ'ಯಲಿ ಏಳುನೂರು ತ್ರಿಪದಿಗಳೂ 'ತುಂಬೆಹೂ'ನಲ್ಲಿ ಏಳುನೂರು ಏಳೆಗಳೂ ಬಿಡಿಮುತ್ತುಗಳಂತೆ ಶೋಭಿಸುತ್ತವೆ. 'ಜ್ಯೋತಿಗೆ ಬೆನ್ನಾಗಿ ಕೂತುಕೊಂಡರೆ, ನೀನು; ಜ್ಯೋತಿಯ ಬೆಳಕು ಸುತ್ತಲು ಇದ್ದರು ಜ್ಯೋತಿ ಕಾಣುವುದೆ ಸರಸಿಯೆ' ಎಂಬ ತ್ರಿಪದಿಯಲ್ಲಾಗಲೀ, 'ಕರವಾಗ ಹಿತವಾಗಿ ಕೆರೆದ ಮೇಲುರಿಯುವ ತುರಿಯ ಹಾಗಿಹುದು ಜಗವಿದು' ಎಂಬ ಏಳೆಯಲ್ಲಾಗಲೀ, ಲೋಕಾನುಭವದ ಮಾತುಗಳು, ಲೋಕಜೀವನದ ಸಂಕೀರ್ಣತೆಗೆ ಕನ್ನಡಿ ಹಿಡಿಯುತ್ತವೆ.

ಶಿವಶರಣರ ಕಾಲದಿಂದ ತೊಡಗಿ, ಆಧುನಿಕ ಕಾಲದವರೆಗೆ, ಜೀವಂತ ಕಾವ್ಯವಾಹಿನಿಯಾಗಿ ಹರಿದು ಬರುತ್ತಿರುವ ವಚನ ಸಾಹಿತ್ಯದ ಸಮೃದ್ಧ ಬೆಳೆಗೆ ಕನ್ನಡದಲ್ಲಿ ಕೊರತೆಯಿರಲಿಲ್ಲ. ಬೇಂದ್ರೆ, ಜಚನಿ, ಎಸ್.ವಿ. ರಂಗಣ್ಣ, ಸಿದ್ದಯ್ಯ ಪುರಾಣಿಕ, ಚಂದ್ರಶೇಖರ ಐತಾಳ ಮೊದಲಾದವರಂತೆ, ಎಸ್‌ವಿಪಿಯವರೂ ಆಧುನಿಕ ವಚನಗಳನ್ನು ಸಾವಿರಾರು ಸಂಖ್ಯೆಯಲ್ಲಿ ಬರೆದು, ಸೃಷ್ಟಿಸಿ ವಚನಬ್ರಹ್ಮರೆಂದು ಕರೆಸಿಕೊಂಡರು. ಅವರ ಮುಕ್ತಕ ಸಾಹಿತ್ಯದಲ್ಲಿರುವಂತೆ, ಇಲ್ಲಿಯ ಸಮಕಾಲೀನ ಬದುಕಿನ, ಸಮಷ್ಟಿ ಜೀವನದ ವಿವಿಧ ಅನುಭವಗಳಿಗೆ ರೂಪ ಕೊಟ್ಟಿದ್ದಾರೆ. ಮೊದಲ ಗುರು ಅವರ ತಂದೆಯವರೇ ಆದ್ದರಿಂದ, 'ಸದಾಶಿವಗುರು' ಎಂಬ ಅಂಕಿತದಲ್ಲಿ ಅವರ ನೆನಪಿಗೆ ಅಂಕಿತಗೊಳಿಸಿದ್ದಾರೆ. ಹಾಸ್ಯ, ವಿಷಾದ, ಗಾಂಭೀರ್ಯ, ಆತ್ಮಾವಲೋಕನ, ಜೀವನ ಜಿಜ್ಞಾಸೆ-ಎಲ್ಲವೂ ಅಲ್ಲಿ ಮಡುಗಟ್ಟಿವೆ. ಕೆಲವೊಮ್ಮೆ ಈ ವಚನಗಳು ದೀರ್ಘವಾದಾಗ ವಾಚ್ಯವೂ ಆಗುತ್ತವೆ. ಸಮಕಾಲೀನ ಪರಿಸ್ಥಿತಿಯ ವಿರೋಧಾಭಾಸಗಳನ್ನೆ ಗುರುತಿಸುವ ಕೆಲವು ವಚನಗಳ ಸಾಲುಗಳು ಇಂತಿವೆ. 'ನಮ್ಮ ದೇಶಕ್ಕೆ ಸ್ವಾತಂತ್ರ್ಯದ ಜತೆಗೆ ಸ್ವೈರ ಬಂತು; ಮಗುವಿನ ಮಾತಿನ ಜತೆಗೆ ಉಗ್ಗು ಬಂದಂತೆ ಸದಾಶಿವಗುರು, 'ನಾವು ಸಬಲರೆ? ನಮಗೆ ಕಾನೂನಿನ ರಕ್ಷೆಯಿದೆ; ನಾವು ಅಬಲರೆ? ನಮಗೆ ಕಾನೂನಿನ ಶಿಕ್ಷೆಯಿದೆ'. ಮಗು, ಅಪ್ಪ, ಅಮ್ಮ, ಎನ್ನುವುದಕ್ಕಿಂತಲೂ ಡ್ಯಾಡಿ, ಮಮ್ಮಿ ಎಂದು ಕರೆಸಿಕೊಳ್ಳುವುದರಲ್ಲಿಯೇ ಹೆಮ್ಮೆ ಪಡುವ ಈಗಿನ ತಂದೆ ತಾಯಿಗಳ ರೋಗದ ವಿಶ್ಲೇಷಣೆ ಮಾಡುತ್ತ ಭಟ್ಟರು ಹೇಳುವ ಮಾತಿದು. 'ಇದು ಬಹಳ ಹಳೆಯ ರೋಗ; ಇವರ ಹಿರಿಯರು ಹುಲ್ಲೂರಿನಲ್ಲಿ ನೊಣದ ಕಾಟವೆಂಬುದಕೆ, ತೃಣ ಪೇರಿಯೊಳು ಮಕ್ಷಿಕ ಬಾಧೆಯೆಂದವರು'. ಸಸ್ಯಶಾಮಲ ಕಾಡುಮೇಡುಗಳಿಂದಾವೃತವಾದ ಮಲೆನಾಡಿನಲ್ಲಿ ಹುಟ್ಟಿ, ಬಯಲು ಸೀಮೆಯಲ್ಲಿ ಬಹುಕಾಲ ಉದ್ಯೋಗ ಮಾಡಿ, ನಿವೃತ್ತಿಯಂಚಿ ನಲ್ಲಿರುವಾಗ, ಪಡುವಣಕಡಲ ಸೆರಗಿನಲ್ಲಿ ಕೆಲವು ಕಾಲ ನೆಲಸಿದ ಪರಮೇಶ್ವರ ಭಟ್ಟರಿಗೆ 'ಉಪ್ಪುಕಡಲು' ಆತ್ಮಾವಲೋಕನ, ಜಿಜ್ಞಾಸೆಗಳಿಗೆ ಗ್ರಾಸ ಒದಗಿಸಿತು. ಕಡಲಿನ ಅಗಾಧತೆಯ ಮುಂದೆ, ಮನುಷ್ಯತನದ ಇತಿಮಿತಿಗಳು ಗೋಚರವಾದವು; ಅದರ ಫಲವಾಗಿ 'ಉಪ್ಪುಕಡಲು', 'ಪಾಮರ', 'ಉಂಬರ' ಮೊದಲಾದ ವಚನ ಸಂಕಲನಗಳು ಅವರಿಂದ ಸೃಷ್ಟಿಯಾದವು.

**ಅನುವಾದ ಸಾಹಿತ್ಯ**

ಪ್ರೊ. ಪರಮೇಶ್ವರಭಟ್ಟರು ರಚಿಸಿದ ಸ್ವಂತ ಕಾವ್ಯಧಾರೆಯ ಪ್ರಮಾಣ ಒಂದು ತೂಕವಾದರೆ, ಅವರ ಅನುವಾದ ಸಾಹಿತ್ಯ ಸೃಷ್ಟಿಯ ಪ್ರಮಾಣ ಮತ್ತೊಂದು ತೂಕ. ವಿದ್ಯಾರ್ಥಿಯಾಗಿದ್ದಾಗ, ವರ್ಡ್ಸ್‌ವರ್ತ್ ಕವಿಯ ಮೈಕೇಲ್ (ಮಾಚಯ್ಯ) ಕೃತಿಯಿಂದ ತೊಡಗಿದ ಅವರ ಅನುವಾದ ಕಾರ್ಯ, ವಿರಾಮವಿಲ್ಲದೆ ಅವರ ವೃದ್ಧಾಪ್ಯದವರೆಗೂ ನಿರಂತರವಾಗಿ ಮುಂದುವರಿದುಕೊಂಡು ಬಂದಿರುವುದು, ಅದನ್ನು ತಪಸ್ಸಾಗಿಸಿಕೊಂಡ ಅವರ ಸಾಧನೆಯೆನ್ನಬೇಕು. ಕಾಲಕಾಲಕ್ಕೆ ಸಂಸ್ಕೃತ ಸಾಹಿತ್ಯ ಮಹಾನದಿಯಿಂದ, ಸಾರವತ್ತಾದ ನೀರನ್ನು ಬೊಗಸೆ ಬೊಗಸೆಯಾಗಿ ಮೊಗೆದು ಕನ್ನಡ ತೋಟಕ್ಕೆ ಹಾಯಿಸಿ, ಫಲಭರಿತ ತೆಂಗು ಕೌಂಗುಗಳನ್ನು ಬೆಳೆಸಿದ್ದಾರೆ. ಕಾಳಿದಾಸ, ಭಾಸ, ಭವಭೂತಿ, ಶ್ರೀಹರ್ಷ, ಅಶ್ವಘೋಷ, ಹಾಲ, ಅಮರು, ಜಯದೇವ ಮೊದಲಾದ ಅತಿರಥ ಮಹಾರಥರೆಲ್ಲರೂ ಕನ್ನಡದಲ್ಲಿ ಸಮಗ್ರವಾಗಿ ಪರಿಚಯವಾಗುವಂತೆ ಮಾಡಿದ ಉಪಕಾರವನ್ನು ಮರೆಯುವಂತಿಲ್ಲ. ಈ ಮಹಾಕವಿಗಳ ಒಂದೆರಡು ಕೃತಿಗಳನ್ನೂ ರಸವತ್ತಾದ ಕೆಲಭಾಗಗಳನ್ನು ಭಾಷಾಂತರಿಸಿದವರು ಹಲವರು ಸಿಗುತ್ತಾರೆ. ಆದರೆ ಅವರ ಸಮಗ್ರ ಕಾವ್ಯ-ನಾಟಕಗಳನ್ನು ಮಹಾಸಂಪುಟಗಳಲ್ಲಿ ತರುವ ಪ್ರಯತ್ನ ಕನ್ನಡದಲ್ಲೇಕೆ, ಭಾರತದ ಯಾವ ಭಾಷೆಯಲ್ಲೂ ಕೇಳಿಬರುವುದಿಲ್ಲ. ಕಾವ್ಯರೂಪದ ಕನ್ನಡಾನುವಾದಗಳೊಂದಿಗೆ, ಅವುಗಳ ಮೂಲ ಸಂಸ್ಕೃತ ಪಾಠಗಳನ್ನು ಒದಗಿಸಿ, ತೌಲನಿಕ ಅಧ್ಯಯನಕ್ಕೂ ಹಾದಿ ಸುಲಭವಾಗಿಸಿದ್ದಾರೆ.

ಸಂಸ್ಕೃತ ಕಾವ್ಯ ಲಯ, ಛಂದೋವಿನ್ಯಾಸಗಳಿಗೆ ಹತ್ತಿರವಾದ ಉತ್ಸಾಹ, ಲಲಿತ, ಮಂದಾನಿಲ ಲಯಗಳನ್ನು ಬಳಸಿ, ಅಲ್ಲಲ್ಲಿ ಭಾಮಿನಿ, ಸಾಂಗತ್ಯ ರೂಪಗಳನ್ನು ವೈವಿಧ್ಯಕ್ಕಾಗಿ ತಂದು, ಮೂಲ ಕಾವ್ಯಗಳಿಗೆ ಅಪಚಾರವಾಗದ ರೀತಿಯಲ್ಲಿ ಅನುವಾದ ಮಾಡಿದ್ದಾರೆ. ಕಾಳಿದಾಸನ ಮೇಘದೂತ, ಋತು ಸಂಹಾರ, ರಘುವಂಶ, ಕುಮಾರ ಸಂಭವಗಳಂಥ ಕಾವ್ಯಗಳಾಗಲೀ, ಶಾಕುಂತಲ, ವಿಕ್ರಮೋರ್ವಶೀಯ, ಮಾಳವಿಕಾಗ್ನಿಮಿತ್ರ, ಭಾಸನ ಪ್ರತಿಮಾ, ಊರು ಭಂಗ ಮೊದಲಾದ ನಾಟಕಗಳಾಗಲೀ, ಪರಮೇಶ್ವರಭಟ್ಟರ ಪಾಂಡಿತ್ಯ ವಿದಗ್ಧತೆಗಳೊಂದಿಗೆ, ಸ್ವಂತ ಕವಿತಾ ಪ್ರತಿಭೆಯನ್ನೂ ಪರಿಚಯ ಮಾಡಿ ಕೊಡುತ್ತವೆ. ಮೂಲ ಶಾಕುಂತಲದ "ತವಾಸ್ಮಿ ಗೀತರಾಗೇಣ ಹಾರಿಣಾ ಪ್ರಸಭಂ ಹೃತಃ ಏಷ ರಾಜೇವ ದುಷ್ಯಂತ ಸ್ಕಾರಂಗೇಣಾತಿರಂ ಹಸಾ" ಎಂಬ ಸಾಲುಗಳು ಕವಿ ಪರಮೇಶ್ವರಭಟ್ಟರ ಮಾತಿನಲ್ಲಿ ಅಡಕವಾಗಿ ಮೂಡಿ ಬಂದಿರುವ ರೀತಿ ಇದು : 'ಮನ ಸೆಳೆಯುವ ಈ ರಾಗದೆ ಹೃತನಾದೆನು ಭರದೆ! ಅತಿವೇಗದೆ ಸಾರಂಗದೆ ದೃಷ್ಯಂತನ ತೆರದೆ!' ಹದವಾಗಿ ಬೆಂದ ಪಕ್ವಾನ್ನದ ರುಚಿ ನೋಡಲು, ಒಂದಗುಳು ಸಾಲದೆ?

ವಿಮರ್ಶೆ

ಕಾವ್ಯ ಮತ್ತು ಅನುವಾದಗಳಿಗೆ ಹೋಲಿಸಿದರೆ ಎಸ್.ವಿ.ಪಿಯವರು ಬರೆದ ವಿಮರ್ಶಾ ಲೇಖನಗಳ ಸಂಖ್ಯೆ ಪ್ರಮಾಣದಲ್ಲಿ ಕಮ್ಮಿಯಾದರೂ ಅವು ಸಾಹಿತ್ಯಾಭ್ಯಾಸಿಗಳಿಗೆ ದಾರಿದೀಪದಂತಿವೆ. ನವೋದಯ ಕಾಲದಲ್ಲಿ ಪ್ರಚಲಿತವಾದ ರಸವಿಮರ್ಶೆಯ ಹಾದಿಯಲ್ಲಿ ಪ್ರಾಚೀನ, ಅರ್ವಾಚೀನ ಕಾವ್ಯಗಳಲ್ಲಿರುವ ಕಾವ್ಯಸೌರಭವನ್ನು ಹಿಂಡಿ ತೆಗೆದು ರಸಿಕರಿಗೆ ಹಂಚುವ ಕೆಲಸ ಅವರದು. 'ಅಕ್ಕಮಹಾದೇವಿ', 'ಭಾವಗೀತೆ', 'ಸೀಳುನೋಟ' - ಇವು ಅವರ ಪ್ರಮುಖ ವಿಮರ್ಶಾಕೃತಿಗಳು. ಪ್ರಚಾರೋಪನ್ಯಾಸ ಮಾಲೆಯ ಪುಸ್ತಿಕೆಗಳಾಗಿ ಹೊರಬಂದ, 'ಅಕ್ಕಮಹಾದೇವಿ' ಮತ್ತು 'ಭಾವಗೀತೆ'ಗಳು, ಆಯಾ ವಿಷಯದ ಕಾವ್ಯ ಪರಿಚಯದ ಕೈಗನ್ನಡಿಗಳಾದರೆ, 'ಸೀಳುನೋಟ' ಅವರ ಹದಗೊಂಡ ಸಾಹಿತ್ಯ ವಿಚಾರ ವಿಮರ್ಶೆಯ ಕೃತಿ. 'ಪಂಪನು ಬೆಳಗಿರುವ ಲೌಕಿಕ ಚಿತ್ರ'ವಾಗಲಿ, 'ಕುವೆಂಪು ಅವರ ಕವಿತೆಗಳಲ್ಲಿ ಪ್ರಕೃತಿಯ ದರ್ಶನ ಮತ್ತು ವಿಕಾಸ'ಗಳನ್ನು ಗುರುತಿಸುವ ರೀತಿಯಾಗಲೀ, ವರ್ಣನಾತ್ಮಕ ವಿಮರ್ಶೆಯ 'ಸೀಳುನೋಟ'ವನ್ನು ಒದಗಿಸುತ್ತವೆ. ನಿವೃತ್ತರಾದ ಮೇಲೆ ಯುಜಿಸಿ ಪ್ರಾಧ್ಯಾಪಕರಾಗಿ, ಅವರು ಬರೆದ ಪ್ರೌಢಪ್ರಬಂಧ 'ರಸಋಷಿ ಕುವೆಂಪು, ಕವಿ ಕಾವ್ಯ ಪರಿಚಯ'ವನ್ನು ಕುವೆಂಪು ಅವರು ಬದುಕಿದ್ದಾಗಲೇ ಸಿದ್ಧಪಡಿಸಿದ್ದರು. ಅದನ್ನು ಕುವೆಂಪು ಅವರು ಓದಿ ಮೆಚ್ಚಿಕೊಂಡಿದ್ದರೆಂದು ತಿಳಿದು ಬರುತ್ತದೆ. ಕಾವ್ಯ ಪ್ರವೇಶಕ್ಕೆ ವಿದ್ಯಾರ್ಥಿಗಳನ್ನು, ಸಹೃದಯರನ್ನು ಅನುಗೊಳಿಸುವ ಅವರ ವಿಮರ್ಶೆಗಳು, ಸಂಪ್ರದಾಯ ಮಾರ್ಗದ ವಿಮರ್ಶೆಗಳ ಸಾಲಿಗೆ ಸೇರುತ್ತವೆ.

ಸುಮಾರು ಎಂಭತ್ತೈದು ವರ್ಷಗಳ ಸುದೀರ್ಘ ಬಾಳನ್ನು, ಸಾರ್ಥಕ ರೀತಿಯಲ್ಲಿ ಕ್ರಿಯಾಶೀಲರಾಗಿ ಕಳೆದ ಪರಮೇಶ್ವರ ಭಟ್ಟರು, ಕನ್ನಡ ನಾಡು ನುಡಿಗೆ ತಿಲಕ ಪ್ರಾಯರಾಗಿದ್ದಾರೆ. ಅವರನ್ನರಸಿಕೊಂಡು ಹಲವು ಗೌರವ ಪ್ರಶಸ್ತಿಗಳು ಬಂದಿದ್ದರೂ ಭಟ್ಟರ ಸಾಧನೆ, ಆ ಪ್ರಶಸ್ತಿಗಳಿಗಿಂತ, ಎತ್ತರದಲ್ಲಿ ನಿಂತಿದೆಯೆಂದು ನಮಗನಿಸದಿರದು. ಅವರ ಅಭೂತಪೂರ್ವ ಅನುವಾದ ಕಾರ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೂ ದೊರೆತಿದೆ. ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು 'ಪೂರ್ಣ ಕುಂಭ', 'ಪರಮೇಶ್ವರ ಪ್ರಶಸ್ತಿ' ಮೊದಲಾದ ಅಭಿನಂದನ ಗ್ರಂಥಗಳಿಂದ ನಾಡಿನ ಜನತೆ ಅವರನ್ನು ಗೌರವಿಸಿ ಸನ್ಮಾನಿಸಿದ್ದಾರೆ. 'ತುಂಬಿದ ಕೊಡ ತುಳುಕುವುದಿಲ್ಲವೆಂಬಂತೆ' ಯಾವೊಂದು ಸದ್ದು ಅಬ್ಬರಗಳಿಲ್ಲದೆ, ವಿನಯವಂತರಾಗಿ ಕನ್ನಡ ಸಾಹಿತ್ಯ ಪರಂಪರೆಯನ್ನು ಶ್ರೀಮಂತಗೊಳಿಸಿದ ಅವರ ಸಾಧನೆಗಳು, ಗುಂಪು, ಪ್ರಚಾರಗಳಿಗೆ ಪಕ್ಕಾಗದೆ ಹೋದುದರಿಂದ, ಅವರು ಕೆಲವೊಂದು ಮುಖ್ಯ ಗೌರವಗಳಿಂದ ವಂಚಿತರಾಗಿ ಉಳಿದು ಹೋದುದು, ನಮ್ಮ ಗಮನಕ್ಕೆ ಬರದೆ ಇರದು.

ಸಂಪ್ರದಾಯ ಮಡಿವಂತಿಕೆಗಳಿಂದ ದೂರವಾಗಿ, ರಾಗೋದ್ರೇಕಗಳಿಗೆ ಪಕ್ಕಾಗದೆ, ಸಮರಸ ಗುಣಗ್ರಾಹಿಯಾಗಿ ಪ್ರಜ್ಞಾವಂತರಾಗಿ ನಡೆದು, ಕನ್ನಡ ಸಾಹಿತ್ಯ ಕ್ಷಿತಿಜವನ್ನು ವಿಸ್ತರಿಸಿದವರು ಪ್ರೊ. ಪರಮೇಶ್ವರ ಭಟ್ಟರು; ಇಂದಿಗೂ ಕುಟುಂಬ ವತ್ಸಲರಾಗಿ, ಮಕ್ಕಳ ಮೊಮ್ಮಕ್ಕಳ ಪ್ರೀತಿ ವಾತ್ಸಲ್ಯಗಳ ಆಸರೆಯಲ್ಲಿ ಉಡುಪಿಯಲ್ಲಿರುವ ತಮ್ಮ ಮಗನೊಂದಿಗೆ, ತಮ್ಮ ಬಾಳಿನ ಪಕ್ವವಾದ ವಯಸ್ಸಿನಲ್ಲಿ ನೆಮ್ಮದಿಯ ಜೀವನವನ್ನು ಕಳೆಯುತ್ತಿರುವುದು, ನಮ್ಮ ನಾಡಿನ ಭಾಗ್ಯವೆನ್ನಬೇಕು.

❑

# ಕೆ.ಎಸ್. ನರಸಿಂಹಸ್ವಾಮಿ

ಎಚ್.ಎಸ್. ವೆಂಕಟೇಶ ಮೂರ್ತಿ

1

20ನೇ ಶತಮಾನದ ಕನ್ನಡ ಕಾವ್ಯ ಸಂದರ್ಭದಲ್ಲಿ ಕೆ.ಎಸ್.ನರಸಿಂಹ ಸ್ವಾಮಿ ಅವರದ್ದು ಬಹುಮುಖ್ಯ ಹೆಸರು. 1943ರಲ್ಲಿ ಇವರ ಮೊದಲ ಕವಿತಾ ಸಂಗ್ರಹ 'ಮೈಸೂರು ಮಲ್ಲಿಗೆ' ಪ್ರಕಟವಾಯಿತು. ಈಗಾಗಲೇ 18ನೆ ಮುದ್ರಣ ಕಂಡಿರುವ ಈ ಕೃತಿಯ ಜನಪ್ರಿಯತೆಯನ್ನು ಮೀರಿಸುವ ಇನ್ನೊಂದು ಕಾವ್ಯ ಕೃತಿ ಪ್ರಾಯಶಃ ಕನ್ನಡದಲ್ಲಿ ಇಲ್ಲ. 'ಮೈಸೂರು ಮಲ್ಲಿಗೆ' ಯಿಂದ ಇತ್ತೀಚಿನ ನವಪಲ್ಲವ (1983)ದ ವರೆಗೆ ಕೆ.ಎಸ್.ನ. ನಡೆದು ಬಂದಿರುವ ಹಾದಿ ಮಹತ್ವದ ಅನೇಕ ತಿರುವುಗಳನ್ನು ಹೊಂದಿರುವಂಥದ್ದು. ಕನ್ನಡದಲ್ಲಿ ಕಾಲಕಾಲಕ್ಕೆ ಆದ ಕಾವ್ಯಕ್ರಾಂತಿಗಳಲ್ಲಿ ಫೀನಿಕ್ಸ್‌ನಂತೆ ತಮ್ಮನ್ನು ನವೀಕರಿಸಿಕೊಂಡು ಹೊಸಹುಟ್ಟು ಪಡೆಯುತ್ತಾ ಘನವಾದ ಕಾವ್ಯ ರಚಿಸುತ್ತಾ ಹೋದದ್ದು ಕೆ.ಎಸ್.ನ. ಅವರ ಹೆಗ್ಗಳಿಕೆ. ಮಧುರವಾದ, ಆದರೆ ಅನನ್ಯವಾದ, ತಮ್ಮ ಪ್ರೇಮ-ದಾಂಪತ್ಯದ ಕಾವ್ಯದ ನೆಲೆಯಿಂದ, ಬದುಕಿನ ನಿಷ್ಠುರ ವಿನ್ಯಾಸಗಳನ್ನು ಗುರುತಿಸುವ 'ತೆರೆದ ಬಾಗಿಲು' ಕವನಗಳವರೆಗೆ ನಡೆದ ಈ ಕವಿಯ ಕಾವ್ಯದ ಒಡೆದು ತೋರುವ ಬೆಳವಣಿಗೆ ಬೆರಗು ಹುಟ್ಟಿಸುವಂಥದ್ದು. ಈ ಕವಿಯ ಕಾವ್ಯ ಈಗ ಕನ್ನಡ ಸಂಸ್ಕೃತಿಯ ಬಹು ಮುಖ್ಯಆಸ್ತಿಯಾಗಿ ಪರಿಣಮಿಸಿದೆ.

ಕೆ.ಎಸ್.ನ. ಮಂಡ್ಯ ಜಿಲ್ಲೆಯ ಕಿಕ್ಕೇರಿಯಲ್ಲಿ 26-1-1915ರಂದು ಜನಿಸಿದರು. ತಂದೆ ಕಿಕ್ಕೇರಿ ಸುಬ್ಬರಾಯರು. ತಾಯಿ ಹೊಸ ಹೊಳಲು ನಾಗಮ್ಮನವರು. ಮೈಸೂರಿನ ಮೈಸೂರು ಟ್ರೈನಿಂಗ್ ಕಾಲೇಜಿನ ಸಂಸ್ಥೆಗಳಲ್ಲಿ ಈ ಕವಿ ಆರಂಭದ ಶಿಕ್ಷಣವನ್ನೂ ಮುಂದೆ ಮಹಾರಾಜ ಹೈಸ್ಕೂಲಿನಲ್ಲಿ ಪ್ರೌಢ ಶಿಕ್ಷಣವನ್ನೂ ಪಡೆದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಜೂನಿಯರ್ ಬಿ.ಎ. ಮುಗಿಸುವಲ್ಲಿ ಅವರ ಓದು ಅಪೂರ್ಣವಾಗಿ ಮುಕ್ತಾಯವಾಯಿತು. 1936ರಲ್ಲಿ ವೆಂಕಮ್ಮನವರೊಂದಿಗೆ ತಿಪಟೂರಿನಲ್ಲಿ ಅವರ ವಿವಾಹವಾಯಿತು. 1937ರಲ್ಲಿ ಸರ್ಕಾರಿ ನೌಕರಿ ಸೇರಿ ಮೈಸೂರು, ನಂಜನಗೂಡು, ಬೆಂಗಳೂರಿನಲ್ಲಿ ತಮ್ಮ ಸೇವಾವಧಿ ಮುಗಿಸಿ 1970ರಲ್ಲಿ ನೌಕರಿಯಿಂದ ನಿವೃತ್ತರಾಗಿ, ಸದ್ಯ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಕೆ.ಎಸ್.ನ. ದಂಪತಿಗಳಿಗೆ ನಾಲ್ವರು ಗಂಡುಮಕ್ಕಳು, ನಾಲ್ವರು ಹೆಣ್ಣುಮಕ್ಕಳು. ಜೀವನದ ಉದ್ದಕ್ಕೂ ಆರ್ಥಿಕ ಕ್ಲೇಶ, ಸಾಂಸಾರಿಕ ತಾಪತ್ರಯಗಳಲ್ಲಿ ಬದುಕನ್ನು ತೇಯುತ್ತಾ ಬಂದರೂ ಅದರ ಚೆಲುವನ್ನು ತೆರೆದು ತೋರುತ್ತಾ, ಜೀವನ ಮುಖಿಯಾದ ಕಾವ್ಯವನ್ನು ತಮ್ಮ ವೈಯಕ್ತಿಕ ಬದುಕಿನ ನೆಲೆಯಿಂದಲೇ ಎತ್ತಿಕೊಡುತ್ತಾ ಹೋದದ್ದು ಈ ಕವಿಯ ವೈಶಿಷ್ಟ್ಯ.

ಸಾಂಸ್ಕೃತಿಕವಾಗಿ ಕೆ.ಎಸ್. ನರಸಿಂಹಸ್ವಾಮಿ ಅವರಿಗೆ ಕನ್ನಡ ಜನತೆ ತೋರುತ್ತಾ ಬಂದಿರುವ ಪ್ರೀತಿ ಗೌರವ ಅಪಾರ. ಮೈಸೂರು ಮಲ್ಲಿಗೆಗೆ ದೇವರಾಜಬಹದ್ದೂರ್ ಬಹುಮಾನ, ಶಿಲಾಲತೆಗೆ ಮೈಸೂರು ರಾಜ್ಯದ ಸಂಸ್ಕೃತಿ ಪ್ರಸಾರ ಶಾಖೆಯ ಬಹುಮಾನ, 1970ರಲ್ಲಿ 'ಚಂದನ' ಸಂಭಾವನ ಗ್ರಂಥ, ತೆರೆದ ಬಾಗಿಲು ಸಂಗ್ರಹಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕೆ.ಎಸ್.ನ. ಪಡೆದ ಗೌರವ-ಪ್ರಶಸ್ತಿಗಳಲ್ಲಿ ಇವು ಕೆಲವು ಮಾತ್ರ.

ಕೆ.ಎಸ್.ನರಸಿಂಹಸ್ವಾಮಿ ಅವರು ಈವರೆಗೆ 9 ಕವಿತಾ ಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ನವೋದಯದ ಕಾವ್ಯ ಸಂದರ್ಭದಲ್ಲಿ ಹೆಸರು ಮಾಡಿದ್ದ ಈ ಕವಿ ತಮ್ಮ ಸುಕುಮಾರ ಜಗತ್ತಿನಿಂದ, ನಿಷ್ಠುರವಾದ ಬದುಕಿನ ಸಂದರ್ಭಕ್ಕೆ ಹೊರಳಿದ್ದು 'ಶಿಲಾಲತೆ'ಯಲ್ಲಿ. ಆದ್ದರಿಂದ ಆ ಸಂಗ್ರಹಕ್ಕೆ ಒಂದು ಐತಿಹಾಸಿಕ ಮಹತ್ವವಿದೆ. ತಮ್ಮ ಕಾವ್ಯಜೀವನದ ಮುಖ್ಯಘಟ್ಟ ಗಳಲ್ಲಿ ಕನ್ನಡದ ಸಾಹಿತ್ಯಲೋಕದ ಮುಖ್ಯವ್ಯಕ್ತಿಗಳನೇಕರ ಸಂಪರ್ಕ, ಸ್ನೇಹವನ್ನು ಕೆ.ಎಸ್.ನ. ಪಡೆದದ್ದು ಬಹು ಮುಖ್ಯವಾದ ಸಂಗತಿ. ತಮ್ಮ ಕಾವ್ಯಜೀವನದ ಮೊದಲ ಘಟ್ಟದಲ್ಲಿ ಎ.ಆರ್. ಕೃಷ್ಣಶಾಸ್ತ್ರಿ, ಕುವೆಂಪು, ತೀ.ನಂ.ಶ್ರೀ. ಮೊದಲಾದವರ ನಿಕಟಸಂಪರ್ಕ ಕೆ.ಎಸ್.ನ. ಅವರಿಗೆ ಇತ್ತು. ತಮ್ಮ ಕಾವ್ಯ ಜೀವನದ ಎರಡನೇ ಘಟ್ಟದಲ್ಲಿ ವಿಸೀ, ಅಡಿಗ ಮೊದ ಲಾದವರ ಸ್ನೇಹ ಕೆ.ಎಸ್.ನ. ಅವರದಾಗಿತ್ತು. ಅವರ ಕಾವ್ಯದ ಬೆಳವಣಿಗೆಯಲ್ಲಿ ಸ್ವಂತ ಪ್ರತಿಭೆ, ಮಾಧ್ಯಮ ನಿಷ್ಠೆ, ಜೀವನ ಪಕ್ವತೆಗಳು ಮುಖ್ಯವೆನ್ನಬಹುದಾದರೂ, ಅವರು ಕಾಲಕಾಲಕ್ಕೆ ಪಡೆದ ಸ್ನೇಹಸಂಪರ್ಕ ಪ್ರಭಾವವನ್ನೂ ಕಡೆಗಣಿಸಲಿಕ್ಕೆ ಬರುವುದಿಲ್ಲ.

ಕೆ.ಎಸ್.ನ. ಪ್ರಧಾನವಾಗಿ ಕವಿಯಾದರೂ ಅವರ ಅನುವಾದಿತ ಕೃತಿಗಳ ಮೌಲಿಕತೆಯನ್ನು ಕಡೆಗಣಿಸುವಂತಿಲ್ಲ. ಮಾರಿಯ ಕಲ್ಲು (ಕಿರುಗತೆಗಳು), ಉಪವನ (ಪ್ರಬಂಧ-ವಿಮರ್ಶೆ), ದಮಯಂತಿ (ಗದ್ಯರೂಪದಲ್ಲಿ ಕತೆ) ಅವರ ಸ್ವತಂತ್ರ ಕೃತಿಗಳು. ಯುರಿಪಿಡಿಸ್‌ನ ಮೀಡಿಯಾ, ಮಾರ್ಕ್‌ಟ್ವೇಯ್ನ್‌ನ ಹಕಲ್‌ಬರಿಫಿನ್ನನ ಸಾಹಸಗಳು ಅವರ ಮುಖ್ಯ ಅನುವಾದ ಕೃತಿಗಳು. ಅವರ ಅನೇಕ ಕನ್ನಡ ಕವಿತೆಗಳು ಇಂಗ್ಲಿಷ್, ಹಿಂದಿ, ಉರ್ದು ಭಾಷೆಗಳಿಗೆ ಅನುವಾದಗೊಂಡಿರುವುದನ್ನೂ ಇಲ್ಲಿ ನೆನೆಯಬಹುದು. ತಮ್ಮ ಗಂಭೀರ ಕಾವ್ಯದ ಜೊತೆ ಜೊತೆಗೇ ಚೆಲುವಾದ ಗೀತೆಗಳನ್ನೂ ಬರೆದುಕೊಂಡು ಬಂದಿರುವುದು ಕೆ.ಎಸ್.ನ. ಅವರ ಕಾವ್ಯದ ಇನ್ನೊಂದು ವಿಶೇಷ. ಅವರ ಇತ್ತೀಚಿನ 'ನವಪಲ್ಲವ'ದಲ್ಲೂ ಸೊಗಸಾದ ಗೀತೆಗಳಿವೆ. ಕೆ.ಎಸ್.ನ. ಅವರ ಗೀತೆಗಳನ್ನೂ, ಮೈಸೂರು ಮಲ್ಲಿಗೆಯ ಭಾವಗೀತೆಗಳನ್ನೂ ಅನೇಕ ಗಾಯಕರು ದಶಕಗಳಿಂದ ಹಾಡುತ್ತಾ ಬಂದಿದ್ದು, ಅವು ಕಾವ್ಯವನ್ನು 'ಓದದ' ಜನತೆಗೂ ತಲುಪುವುದು ಸಾಧ್ಯವಾಗಿದೆ. ಅವರ ಜನಪ್ರಿಯ ಮೈಸೂರು ಮಲ್ಲಿಗೆ ಈಗ ಸಿ.ಅಶ್ವತ್ಥರ ರಾಗ ಸಂಯೋಜನೆಯಲ್ಲಿ ಧ್ವನಿಮುದ್ರಿಕೆಯಾಗಿಯೂ ಹೊರ ಬಂದು ಅಪಾರ ಜನಪ್ರೀತಿಯನ್ನು ಸೂರೆಮಾಡುತ್ತಿದೆ.

2

ಕೆ.ಎಸ್.ನ. ಕವಿಯೆಂದೇ ಪ್ರಮುಖರಾದುದರಿಂದ ಸವಿವರ ವಿಶ್ಲೇಷಣೆಗೆ ಅವರ ಕಾವ್ಯವನ್ನೇ ಈ ಭಾಗದಲ್ಲಿ ಮುಖ್ಯವಾಗಿ ಗಮನಿಸುತ್ತಿದ್ದೇನೆ.

1943ರಲ್ಲಿ ಪ್ರಕಟವಾದ ಮೈಸೂರು ಮಲ್ಲಿಗೆ ಕನ್ನಡ ಪ್ರೇಮ-ಕಾವ್ಯದಲ್ಲಿ ಅನನ್ಯವಾದುದು ಎಂಬುದು ನಿಜವಾದರೂ, ಇದರ ಮೊದಲ ಎಳೆಗಳು ಕಾಣಿಸಿಕೊಳ್ಳುವುದು ಆಚಾರ್ಯ ಬಿ.ಎಂ.ಶ್ರೀ. ಅವರ ಇಂಗ್ಲಿಷ್ ಗೀತೆಗಳಲ್ಲಿ. ಈ ಐತಿಹಾಸಿಕ ಮಹತ್ವದ ಕೃತಿಯಲ್ಲಿ ಬರ್ನ್ಸ್ (Burns) ಕವಿಯ Duncan Gray (ಮಾದ-ಮಾದಿ), O my Love's like a red, red rose (ನನ್ನ

ಪ್ರೇಮದ ಹುಡುಗಿ), Ae Fond Kiss (ಒಂದು ಮುತ್ತು). Bonnie Doon (ಬಿಟ್ಟ ಹೆಣ್ಣು), Landor ಕವಿಯ Rose Aylmer (ಪದುಮ) ಮೊದಲಾದ ಅನುವಾದಿತ ಕೃತಿಗಳನ್ನು ನೋಡಿದರೆ ಮೈಸೂರು ಮಲ್ಲಿಗೆಯ ಕವಿತೆಯ ಭಾಷೆ, ವಸ್ತು, ಲಯಗಳ ಮೇಲೆ ಇಂಗ್ಲೀಷ್ ಗೀತೆಗಳ ಪ್ರಭಾವವನ್ನು ಗುರುತಿಸಬಹುದು.

ಇಂಗ್ಲೀಷ್ ಗೀತೆಗಳಲ್ಲಿ ಕಾಣಿಸಿಕೊಂಡ ಪ್ರೇಮಕವಿತೆಗಳ ಪ್ರಭಾವ, ಕೆ.ಎಸ್.ನ. ಅವರ ಮೈಸೂರು ಮಲ್ಲಿಗೆಗೂ ಮೊದಲು ಕಾಣಿಸಿಕೊಳ್ಳುವುದು ತೀ.ನಂ.ಶ್ರೀ. ಅವರ 'ಒಲುಮೆ' ಸಂಗ್ರಹದಲ್ಲಿ (1932). ಈ ಸಂಗ್ರಹ ಕೂಡ ಕೆ.ಎಸ್.ನ. ಅವರನ್ನು ಪ್ರಭಾವಿಸಿದ ಹಾಗಿದೆ.

ಹೆಚ್ಚಾಗಿ ವಿವಾಹಪೂರ್ವ ಮತ್ತು ಹೊಸ ದಾಂಪತ್ಯ ಹರಯದ ಹೆಣ್ಣುಗಂಡುಗಳ ಒಲವು, ವಿರಹಗಳ ಸುಕುಮಾರ ಜಗತ್ತನ್ನು ಕನ್ನಡಕ್ಕೆ ತಂದು ಮನ್ನಣೆಗಳಿಸಿದವರು ಕೆ.ಎಸ್.ನ. ಮಾತ್ರ ಎನ್ನಬೇಕು.

ತಮ್ಮವು ಪ್ರೇಮಕವಿತೆಗಳಲ್ಲ, ದಾಂಪತ್ಯಕವಿತೆಗಳೆಂದು ಕೆ.ಎಸ್.ನ. ಈಚೆಗೆ ಹೇಳಿದ್ದು ಅರ್ಥಪೂರ್ಣ. ಮೈಸೂರು ಮಲ್ಲಿಗೆಯ ಬಹಳಷ್ಟು ಕವಿತ ದಾಂಪತ್ಯಗೀತೆಗಳೇ ಆಗಿವೆ. ದಶಕಗಳ ಹಿಂದಣ ಸಾವಧಾನದ ಬದುಕಿನ ಚಿತ್ರಣ ಇಲ್ಲಿದೆ. ಮಧ್ಯಮವರ್ಗ, ಕೆಳವರ್ಗದ ಸಮಾಜವೇ ಇಲ್ಲಿ ಕಾಣಿಸತಕ್ಕದ್ದು. ಹೆಚ್ಚಾಗಿ ಕವಿತೆಗಳ ಉದ್ದಕ್ಕೂ ಒಂದು ಗ್ರಾಮೀಣ ಪರಿಸರದ ಚಿತ್ರಣವಿದೆ. ನವಿಲೂರು, ಹೊನ್ನೂರು ಮೊದಲಾದುವು ಈ ಗ್ರಾಮೀಣ ಜಗತ್ತಿನ ಪ್ರಾತಿನಿಧಿಕ ನೆಲೆಗಳು. ಮೈಸೂರು ಮಲ್ಲಿಗೆಯ ಕವಿತೆಗಳು ಎಷ್ಟರಮಟ್ಟಿಗೆ ಈ ನೆಲದವಾಗಿವೆಯೆಂದರೆ, ಅವುಗಳ ಹಿಂದೆ ಬರ್ನ್ಸ್ ಕವಿಯ ಪ್ರಭಾವವಿದೆ ಎಂದು ಹೇಳಲಿಕ್ಕೆ ಆಗುವುದಿಲ್ಲ. ಡಿ.ವಿ.ಜಿ. ಅವರು ಮೈಸೂರು ಮಲ್ಲಿಗೆಯ ಮುನ್ನುಡಿಯಲ್ಲಿ ಗುರುತಿಸಿರುವಂತೆ ಸ್ವಾಭಾವಿಕತೆ, ಸರಳತೆ, ಋಜುತೆಗಳೇ ಈ ಕಾವ್ಯದ ಮುಖ್ಯಲಕ್ಷಣಗಳಾಗಿವೆ.

ಒಟ್ಟಾರೆ ನಮ್ಮಲ್ಲೇ ಇದ್ದ ಜಾನಪದ ಕಾವ್ಯ ಮತ್ತು ಪಾಶ್ಚಾತ್ಯ ಪ್ರೇಮ ಕಾವ್ಯದ ಪ್ರಭಾವದಿಂದ ವಿಶಿಷ್ಟವಾದ, ಈ ಮಣ್ಣಿನ ಮಲ್ಲಿಗೆಯ ವಾಸನೆ ಕೊಡುವ ಚೆಲುವಾದ ಕವಿತೆಯನ್ನು ಕೆ.ಎಸ್.ನ. ನಿರ್ಮಿಸಿದವರು ಎನ್ನಬಹುದು.

ಮೈಸೂರು ಮಲ್ಲಿಗೆಯ ನಂತರ ಸುಮಾರು ಒಂದು ದಶಕದ ಕಾಲ ಕೆ.ಎಸ್.ನ. ಇದೇ ಬಗೆಯ ಕಾವ್ಯವನ್ನು ರಚಿಸುತ್ತಾ ಹೋದರು. ಐರಾವತ (1945), ದೀಪದ ಮಲ್ಲಿ (1947), ಉಂಗುರ(1949), ಇರುವಂತಿಗೆ (1952) ಗಳಲ್ಲಿ ಮೈಸೂರು ಮಲ್ಲಿಗೆಗಿಂತ ತೀರ ಭಿನ್ನವಾದ ಕವಿತೆಗಳನ್ನೇನು ನಾವು ನೋಡುವುದಿಲ್ಲ. ಅದರೆ ಈ ಕವಿಯಲ್ಲಿ ಮುಂದೆ ಕಾಣುವ ಕೆಲವು ವಿಶಿಷ್ಟ ಕಾಳಜಿಗಳಿಗೆ ಸೂಚನೆ ಈ ಸಂಗ್ರಹಗಳಲ್ಲಿ ಇದೆ ಎಂಬುದು ಮುಖ್ಯ ಸಂಗತಿ. 'ಹೀಗಾಯಿತು' ಕವಿತೆಯಲ್ಲಿ ಇವರನ್ನು ವಿಚಾರಿಸಿಕೊಂಡು ಹೋದ ವ್ಯಕ್ತಿಯೊಬ್ಬನ ಬಗೆಗಿನ ಚಿಂತನೆ ಇದೆ. ನಮ್ಮ ಕ್ಷೇಮವನ್ನು ಚಿಂತಿಸುವ ಈ ಶುಭದ ಕಲ್ಪನೆ ತೆರೆದ ಬಾಗಿಲು ಸಂಗ್ರಹದ ಕವಿತೆಗಳಲ್ಲಿ ಇರುವುದು ನೋಡಬಹುದು. ದೀಪದ ಮಲ್ಲಿ ಸಂಗ್ರಹದಲ್ಲಿರುವ 'ಕಾವೇರಿ ಸ್ನಾನ' ಎಂಬ ಕವಿತೆಯಲ್ಲಿ ಮಾಸ್ತಿಯವರ ಕಥನದ ಧಾಟಿ, ನವುರು ಹಾಸ್ಯ, ಸರಳರಗಳೆಯ ನಡೆ, ಆಡುಮಾತಿನ ಸೊಗಸಾದ ಬಳಕೆ ಕಾಣುತ್ತದೆ.

1949ರ ಉಂಗುರದಲ್ಲಿ ಅವಿಭಕ್ತ ಕುಟುಂಬಗಳ ವಿಭಜನೆಯಂತಹ ಸಂಧಿಕಾಲದ ಆಧುನಿಕ ವಸ್ತು ಕಾಣಿಸಿಕೊಂಡಿದೆ, ಹಾಗೇ ರಾಜಕೀಯ ಆಸಕ್ತಿ ತೋರುವ ಕೆಲವು ಕವಿತೆಗಳೂ ಇವೆ. ಡೊಮಿನಿಯನ್ ಜನನ, ಗಾಂಧೀಜಿಯ ಪಾದಕ್ಕೆ ಇದೇ ನಾಡು, ಮಾತು ಬೇಸರವಾಗಿದೆ-ಕವಿತೆಗಳಲ್ಲಿ ಹೊಸ ಸಮಾಜದ ಬಗ್ಗೆ, ಆಸೆ-ಆತಂಕ-ಆಕ್ರೋಶಗಳು ವ್ಯಕ್ತವಾಗುತ್ತಾ ಕವಿಯ ಸಂದಿಗ್ಧ ಮನಃಸ್ಥಿತಿಯನ್ನು ಚಿತ್ರಿಸುತ್ತವೆ. ಕೆ.ಎಸ್.ನ. ಅವರ ಇನ್ನೊಂದು ಮುಖ್ಯ ವಸ್ತು 'ದೇವರು, ಸೃಷ್ಟಿ, ಜೀವಿ'ಯ ಸಂಬಂಧದ ಆಸಕ್ತಿ ಕೂಡ ಕೆಲವು ಕವಿತೆಗಳಲ್ಲಿ ಕಾಣಿಸಿಕೊಂಡಿದೆ. ಪ್ರಥಮರಾಜನಿಗೆ, ಅಹೋರಾತ್ರಿಗಳಲಿ ಬಿಡದು ನನ್ನ ಬಿಡದು ನಿನ್ನ ದನಿ ಆ ಬಗೆಯ ಕವಿತೆಗಳು.

ಮಲ್ಪೆಯಲ್ಲಿ ಎಂಬ ಕಥನ ಧಾಟಿಯ ಕವಿತೆ ಬಿ.ಎಂ.ಶ್ರೀ. ಅವರ ಕಾರಿಹೆಗ್ಗಡೆಯ ಮಗಳನ್ನು ನೆನಪಿಸಿದರೆ, ಅನ್ನದ್‌ತಪ್ಲೆ, ನನ್‌ಲಚ್ಚಿ ಜಿ.ಪಿ.ರಾಜರತ್ನಂ ಅವರ ರತ್ನನ ಪದಗಳ ನೆನಪು ತರುತ್ತವೆ. ಹಿಂದೆಯೇ ಪ್ರಸ್ತಾಪಿಸಿದಂತೆ ಕಾವೇರಿ ಸ್ನಾನ ಮಾಸ್ತಿಯವರ ಕಥನಕವನಗಳ ನೆನಪು ತರುತ್ತದೆ. ಒಟ್ಟಾರೆ, ಮೈಸೂರು ಮಲ್ಲಿಗೆಯ ಅಭೂತಪೂರ್ವ ಯಶಸ್ಸಿನ ನಂತರ ಕೆ.ಎಸ್.ನ. ಒಂದು ಕಡೆ ತಮ್ಮನ್ನೇ ತಾವು ಅನುಸರಿಸತೊಡಗಿದರೆ, ಇನ್ನೊಂದು ಕಡೆ ಧಾಟಿ ಧೋರಣೆಗಾಗಿ ಹುಡುಕಾಟದಲ್ಲೂ ಇದ್ದರು ಎಂಬುದು ಮುಖ್ಯ. ಛಂದಸ್ಸಿನ ದೃಷ್ಟಿಯಿಂದಲೂ ಸಾಂಗತ್ಯ, ಸಾನೆಟ್, ಬ್ಲಾಂಕ್‌ವರ್ಸ್‌ಗಳನ್ನು ಶೋಧಿಸತೊಡಗಿದ್ದರು. ಜೊತೆಗೆ ಫ್ರೀವರ್ಸಿನ ಪ್ರಯೋಗಗಳೂ ನಡೆಯತೊಡಗಿದ್ದವು. ಈ ಎಲ್ಲ ಪ್ರಯೋಗಗಳೂ ಒಂದು ಸಾಫಲ್ಯ ಕಂಡದ್ದು 1958ರ ಶಿಲಾಲತೆ ಸಂಗ್ರಹದಲ್ಲಿ ಎನ್ನಬೇಕು.

### 3

ದೇವರು-ಸೃಷ್ಟಿ-ಜೀವಿಯ ಸಂಬಂಧ, ಕಾಲದ ವಸ್ತು, ರಾಜಕೀಯ ಸಾಮಾಜಿಕ ವಸ್ತು ಶಿಲಾಲತೆ ಸಂಗ್ರಹದಲ್ಲಿ ಕಾಣಿಸಿಕೊಳ್ಳುತ್ತವೆ. ಸಾರ್ವಕಾಲಿಕ ಎನ್ನಬಹುದಾದ ಸಂಗತಿಗಳ ಜೊತೆ ಜೊತೆಗೆ ಸಮಕಾಲೀನ ಎನ್ನಬಹುದಾದ ಸಂಗತಿಗಳ ಬಗ್ಗೆಯೂ ಕವಿ ಇಲ್ಲಿ ಆಸಕ್ತಿಯನ್ನು ತೋರತೊಡಗುತ್ತಾರೆ. ಪ್ರೀತಿಯ ಬಗ್ಗೆ ಇಲ್ಲಿ ಕವಿತೆಗಳು ಇವೆಯಾದರೂ ರಮ್ಯತೆ, ಕನಸುಗಾರಿಕೆ ಕಡಿಮೆಯಾಗಿ, ಪ್ರೀತಿಯ ದುರಂತದ ಮುಖವನ್ನೂ ಈ ಸಂಗ್ರಹದಲ್ಲಿ ಕಾಣಿಸಲಾಗಿದೆ. ಅಫ್ರೋದಿತೆ, ರಾತ್ರಿಯಲಿ ದೂರದ ಎಲ್ಲೋ ಓಲಗ, ನಲವತ್ತರ ಚೆಲುವೆ, ನೀನಿಲ್ಲದ ಮನಸು, ಕೇಳಬೇಡ ಎಲ್ಲಿಗೆ ಈ ಮಾದರಿಯ ಕವಿತೆಗಳು.

ದೇಶ ಮತ್ತು ಸ್ವಾತಂತ್ರ್ಯದ ಬಗೆಗಿನ ಈ ಸಂಗ್ರಹದ ಕವಿತೆಗಳು ಮುಖ್ಯವಾಗಿ ವಿಡಂಬನೆಯ ಧಾಟಿಯನ್ನು ಪಡೆಯುತ್ತವೆ. ಬರಿಗೊಡಗಳಿಗೆ ಸಮಾಧಾನ ಈ ದೃಷ್ಟಿಯಿಂದ ಬಹುಮುಖ್ಯ ಕವಿತೆ. ಅಮೂರ್ತವಾದ ಕಾಲದ ಬಗ್ಗೆ ಚಿಂತಿಸುವ ಗಡಿಯಾರದಂಗಡಿಯ ಮುಂದೆ, ಸೃಷ್ಟಿ-ಜೀವಿ-ದೈವದ ಬಗ್ಗೆ ಚಿಂತಿಸುವ ಬಿಳಿಯ ಹೂಗಳ ಕವಿತೆ ಗೋರಿಗಳ ಮೇಲೆ, ಇಡದಿರು ನನ್ನ ನಿನ್ನ ಸಿಂಹಾಸನದ ಮೇಲೆ, ಬೆಳಗಿನ ಮಂಜು-ಚಿರಂತನವೆನ್ನಬಹುದಾದ ವಸ್ತುವನ್ನು ಶೋಧಿಸುವ ಈ ಕವಿತೆಗಳಲ್ಲಿ ಪ್ರತಿಮಾ ಮಾರ್ಗ ಮುಖ್ಯ ವಾಗುತ್ತದೆ. ಕೆ.ಎಸ್.ನ. ಕಾವ್ಯದ ವಿಶಿಷ್ಟ ಶಕ್ತಿ ಎನ್ನಿಸುವ ಚಿತ್ರಕ ಶಕ್ತಿ ವರ್ಣನೆಗೆ ಬರದೆ, ಪ್ರತಿಮಾ ನಿರ್ಮಿತಿಗೆ ಒದಗತೊಡಗುತ್ತದೆ. ಚೆಲುವಾದ ಚಿತ್ರಗಳಿಗೂ ಅವು ಹೊಮ್ಮಿಸಬೇಕಾದ ದಾರುಣತೆಗೂ ಒಂದು ಆಂತರಿಕ ಸಂಘರ್ಷವೂ ಏರ್ಪಡುತ್ತದೆ. ಈ ಸಂಗತಿಯನ್ನು ವಿಮರ್ಶಕರು ಚರ್ಚಿಸಿದ್ದಾರೆ. ಕೀರ್ತಿನಾಥ ಕುರ್ತುಕೋಟಿ ಅವರ ಪ್ರಕಾರ 'ಕೆ.ಎಸ್.ನ. ಅವರಲ್ಲಿ ವಸ್ತುಪ್ರಜ್ಞೆ ಹಾಗೂ ಕಲಾಪ್ರಜ್ಞೆಗಳೆರಡೂ ದೂರ ಸಿಡಿದು ನಿಂತಿವೆ',

ಈ ವಾದವನ್ನು ಒಪ್ಪದ ವಿಮರ್ಶಕರೂ ಇದ್ದಾರೆ. ಮೈಸೂರು ಮಲ್ಲಿಗೆಯ ಸುಕುಮಾರಲೋಕದಿಂದ ಕೆ.ಎಸ್.ನ. ಶಿಲಾಲತೆಯ ಕಾವ್ಯದ ನೆಲೆಗೆ ಬರಲೇ ಬಾರದಿತ್ತೆಂದು ವಾದಿಸುವ ವಿಮರ್ಶೆಯೂ ಇದೆ. ಬರಿಯ ನವ್ಯತೆಯನ್ನೆ ಕಾವ್ಯವೆಂದು ಕರೆಯಲಾದೀತೆ ಎಂಬ ಅನುಮಾನದ ದನಿ ಎತ್ತಿದವರೂ ಇದ್ದಾರೆ. ಒಂದು ಬಗೆಯ ಮಿಶ್ರ ಪ್ರತಿಕ್ರಿಯೆ ಬಂದುದೂ ನಿಜವಾದರೂ, ಶಿಲಾಲತೆ ಕೆ.ಎಸ್.ನ. ಅವರ ಕಾವ್ಯ ಇತಿಹಾಸದಲ್ಲಿ ಒಂದು ಪ್ರಮುಖವಾದ ಘಟ್ಟವಾಗಿದ್ದು ಶಿಲ್ಪ, ಪ್ರತಿಮೆ, ಭಾಷೆ, ವಸ್ತು ಹಾಗೂ ಜೀವನ ದರ್ಶನಗಳ ದೃಷ್ಟಿಯಿಂದ ಹೊಸತನ ಕಾಣಿಸಿಕೊಂಡಿರುವುದನ್ನು ಮನಗಾಣಬಹುದು.

ಅಡಿಗರ ಕಾವ್ಯ ಸಂದರ್ಭಕ್ಕೆ ಕೆ.ಎಸ್.ನ. ತಮ್ಮದೇ ರೀತಿಯ ಉತ್ತರ ನೀಡುವ ಮೂಲಕ ತಮ್ಮ ಕಾವ್ಯದ ಅನನ್ಯತೆ ಸಾಧಿಸುತ್ತಿದ್ದುದು ಮಾತ್ರವಲ್ಲ, ಅಡಿಗರ ಊರ್ಧ್ವಮುಖತೆಗೆ ಕೆ.ಎಸ್.ನ. ಅವರ ದೈನಿಕದ ದನಿ ಪಡೆದ ಕಾವ್ಯ ಎದುರಾಗುತ್ತಾ ಆಲ್ಟರ್‌ನೇಟೀವ್ ಆದ ಸಮತೋಲನವನ್ನು ತರುತ್ತಿತ್ತು ಎಂಬುದು ಮುಖ್ಯ. ವೈವಿಧ್ಯಮಯ ದನಿಗಳು ಸಾಂಸ್ಕೃತಿಕ ಅರಕೆಯನ್ನು ತುಂಬುವ ಮಹತ್ಕಾರ್ಯ ನಿರ್ವಹಿಸುತ್ತವೆ ಎಂಬ ಕಾರಣದಿಂದ ಕನ್ನಡ ನವ್ಯ ಸಂದರ್ಭದಲ್ಲಿ ಕೆ.ಎಸ್.ನ. ಕಾವ್ಯ ಬಹುಮುಖ್ಯ ಸ್ಥಾನ ಪಡೆಯುತ್ತದೆ.

ಭಾಷೆ, ಲಯ, ಧಾಟಿಯಲ್ಲಿ ಮಾತ್ರವಲ್ಲ ಧೋರಣೆಯಲ್ಲೂ ಅಡಿಗರಿಗಿಂತ ಸ್ಪಷ್ಟವಾಗಿ ಭಿನ್ನವಾಗುವ ಮೂಲಕ ನರಸಿಂಹಸ್ವಾಮಿ ಬದುಕಿನ ಇನ್ನೊಂದು ಸಾಧ್ಯತೆಯನ್ನು ತೋರಿಸುತ್ತಾರೆ. ಅವರದ್ದು ಈ ಬದುಕಿಗೆ ಬದ್ಧವಾದ ಜೀವನ ದೃಷ್ಟಿ. ಅವರೇ ಸಂದರ್ಶನವೊಂದರಲ್ಲಿ ಹೇಳಿದಂತೆ-"ನಾವು ಸೋಲುಗಳಿಂದ ಮುಂದೆ ಬರ್‍ತಾ ಇದೀವಿ. ಬದುಕನ್ನ ಒಪ್ಕೋಬೇಕು. ಬದುಕಬೇಕು ಚೆನ್ನಾಗಿ. ಭೂಮಿ ಚೆನ್ನಾಗಿದೆ. ಸುಂದರವಾಗಿದೆ. ದೇವ್ರು ಇದ್ರೆ ನೋಡ್ಕೊಳ್ಳಿ, ಭೂಮಿ ಸತ್ಯ".

ಮೈಸೂರು ಮಲ್ಲಿಗೆಯಿಂದ ತೆರೆದ ಬಾಗಿಲುವರೆಗೆ ಇದೇ ಅವರ ಜೀವನ ತತ್ವ ಎನ್ನಬಹುದು. ಶಿಲಾಲತೆಯಲ್ಲಿ ಬರುವ 'ಇಡದಿರು ನಿನ್ನ ಸಿಂಹಾಸನದ ಮೇಲೆ' ಎಂಬ ಕವಿತೆ ಒಂದು ರೀತಿಯಲ್ಲಿ ಅವರ ಮ್ಯಾನಿಫೆಸ್ಟೋ ಕವಿತೆಯಾಗಿದೆ.

ಕಾಣದ ದೈವವನ್ನು ನೆಚ್ಚದೆ, ಕಾಣುವ ಭೂಮಿಯನ್ನು ಒಪ್ಪಿಕೊಳ್ಳುತ್ತಾ, ಬದುಕುವ ಛಲ ಹಿಡಿದ ಈ ಧೋರಣೆ ದೈನಿಕಗಳಿಗೆ ಮೀರದ ಸಾಮಾನ್ಯ ಸ್ತರದ ಬದುಕಿಗೆ ನಿಜವಾದ ಅರ್ಥವಂತಿಕೆಯನ್ನು ನೀಡಬಲ್ಲದು.

ಈ ತಾತ್ವಿಕ ಚಿಂತನೆಯಲ್ಲಿ ಕೆ.ಎಸ್.ನ. ಅವರಲ್ಲಿ ತಂದೆ-ತಾಯಿ-ಮಗ ಈ ಮೂಲಪ್ರತಿಮೆಗಳನ್ನು ಒಳಗೊಳ್ಳುವ ಕೌಟುಂಬಿಕ ಚಿತ್ರದ ಮೂಲಕವೇ ನಡೆಯುತ್ತದೆ. ಮೈಸೂರು ಮಲ್ಲಿಗೆಯ ಕುಟುಂಬ, ಮುಂದಿನ ಸಂಗ್ರಹಗಳಲ್ಲಿ ಇಡೀ ದೇಶಕ್ಕೆ ಅನ್ವಯಿಸುವಂತೆ ಹಿಗ್ಗಿತ್ತು. ಈಗಂತೂ ಅದು ದೃಷ್ಟಿಯನ್ನೇ ಆವರಿಸುವಂತೆ ಮತ್ತಷ್ಟು ಹಿಗ್ಗಿದೆ. ಆದರೆ 'ಮನೆ' ಮಾತ್ರ ಈ ಕಾವ್ಯದ ಕೇಂದ್ರ ಪ್ರತಿಮೆಯಾಗಿ ಉಳಿದುಕೊಂಡಿದೆ.

ಕೆ.ಎಸ್.ನ. ಅವರ ಕಾವ್ಯದ ಬೆಳವಣಿಗೆಯ ದೃಷ್ಟಿಯಿಂದ 'ತೆರೆದ ಬಾಗಿಲು' ಇನ್ನೊಂದು ಮಹತ್ವದ ತಿರುವು. ನಿರಲಂಕಾರತೆ, ಸರಳತೆ, ಸಹಜತೆ, ನಾಟಕೀಯತೆ, ತೆರೆದ ಬಾಗಿಲು ಕವಿತೆಗಳ ಮುಖ್ಯ ಲಕ್ಷಣವಾಗಿದೆ. ಅವರ ಕಾವ್ಯದ ಪಕ್ವ ಕಾಲದಲ್ಲಿ ಎಸ್ರಾಪೌಂಡ್ ಮತ್ತು ಅವನ ಕ್ಯಾಂಟೋಸ್‌ಗಳು ಅವರ ಮೇಲೆ ಗಾಢ ಪ್ರಭಾವ ಬೀರಿದಂತಿದೆ. ಪ್ರೀತಿಯ ವಸ್ತು ಕೂಡ ಇಲ್ಲಿ ಚಿಂತನೆಯ ನೆಲದಲ್ಲಿ ಮಂಡಿತವಾಗುತ್ತದೆ; ಭಾವನೆಯ ನೆಲೆಯಲ್ಲಿ ಅಲ್ಲ. ಮುಪ್ಪು, ಒಂಟಿತನ, ಸಾವು ಈ ಸಂಗ್ರಹದ ಮುಖ್ಯ ವಸ್ತುಗಳೆನ್ನಬಹುದು. ಮಾಸ್ತಿಯವರ ಕಾವ್ಯದ ಪ್ರಭಾವವನ್ನು ಅಚ್ಚರಿಹುಟ್ಟಿಸುವಂತೆ ಸ್ವಧರ್ಮಕ್ಕೆ ಒಗ್ಗಿಸಿಕೊಂಡಿರುವುದು ಈ ಸಂಗ್ರಹದ ಇನ್ನೊಂದು ವೈಶಿಷ್ಟ್ಯ. ತೆರೆದ ಬಾಗಿಲು ಸಂಗ್ರಹದ ಬಹಳಷ್ಟು ಕವಿತೆಗಳಲ್ಲಿ ನಾಟಕೀಯ ಸ್ವಗತದ ಧಾಟಿಯಿದೆ. ಕಥೆಯನ್ನು ನೆಪಕ್ಕೆ ಇಳಿಸಿ, ಕಥನವನ್ನು ಉಳಿಸಿಕೊಂಡು, ಇಡೀ ಕವಿತೆಯೇ ಒಂದು ರೂಪಕವಾಗುವ, ಪ್ರಬಂಧ ಧ್ವನಿ ನೀಡುವ ಸಹಜ ಕಾವ್ಯ ನಿರ್ಮಾಣವನ್ನು ಕೆ.ಎಸ್.ನ. ಇಲ್ಲಿ ಮಾಡಿದ್ದಾರೆ.

"ತೆರೆದ ಬಾಗಿಲಿನಲ್ಲಿ ಮನುಷ್ಯನ ಅಸ್ತಿತ್ವದ ಅಂಚಿನಲ್ಲಿ ನಿಂತು ಬದುಕಿನ ಬಾಗಿಲನ್ನೇ ಅಷ್ಟು ಓರೆಮಾಡಿ ಅದರಾಚಿನ ರಹಸ್ಯದ ಅನುಭವವಾಗುವಂತೆ ಮಾಡಿದ್ದಾರೆ" ಎಂಬುದು ಒಪ್ಪತಕ್ಕ ಮಾತು.

ಕುಂಕುಮ ಭೂಮಿ, ತೆರೆದ ಬಾಗಿಲು, ಆರತಿಯ ಸಂಜೆ, ಸಾಕುಮಗ, ಕುಶಲಪ್ರಶ್ನೆ, ರೈಲ್ವೆ ನಿಲ್ದಾಣದಲ್ಲಿ, ಸಂಧ್ಯಾರಾಗ, ಇವನ ಹುಟ್ಟಿದ ಹಬ್ಬ- ಈ ಕವಿತೆಗಳು ಸಂಗ್ರಹದ ಬಹುಮುಖ್ಯ ಕವಿತೆಗಳು. ಸಂಗ್ರಹದ ಏನು, ಕನ್ನಡ ಕಾವ್ಯದ ಬಹುಮುಖ್ಯ ಕವಿತೆಗಳು ಹೌದು.

"ತೆರೆದ ಬಾಗಿಲು ಕವನದಲ್ಲಿ ನರಸಿಂಹಸ್ವಾಮಿ ವೈಯಕ್ತಿಕ ಜಗತ್ತನ್ನು ನುಡಿಕಟ್ಟಿಗೆ ಬಗ್ಗಿಸಿಕೊಳ್ಳುವ ಯತ್ನ ಬೆರಗುಗೊಳಿಸುವಷ್ಟು ಯಶಸ್ವಿಯಾಗಿದೆ..... ಸಾವಿನ ದುರಂತ, ಸಾವಿನ ತಮಾಷೆ, ಸಾವಿನ ಅಬ್ಸರ್ಡಿಟಿ- ಮೂರನ್ನೂ ತೋರುವ ಈ ಕವನ ಪ್ರೇಮ, ವಿರಹ, ಒಬ್ಬಂಟಿತನದ ಅವರ ವಸ್ತುಗಳನ್ನು ಅನುಭವದ ತುಟ್ಟತುದಿಗೆ ತಂದು ನೋಡುವ ಪ್ರಯತ್ನವಾಗಿಯೂ ನೋಡಬಹುದು. ಮತ್ತೊಂದು ಕುತೂಹಲಕರ ಸಂಗತಿ, ಕವಿಯ ಶೈಲಿಯ ಮತ್ತು ಚಿತ್ತಾರಕ್ಕಿಂತ ವಸ್ತುವಿನ ಮೇಲೆ ನಮ್ಮ ಗಮನ ನೆಡುತ್ತದೆ."[1]

ಲೋಕಾಭಿರಾಮ ಶೈಲಿಯಲ್ಲಿ ತೆರೆದ ಬಾಗಿಲು ಕವನ ಪ್ರಾರಂಭವಾಗುತ್ತದೆ. ಆಡುಮಾತು ಮತ್ತು ಧಾಟಿಯನ್ನು ಕಾವ್ಯವಾಗಿಸುವ ಈ ರೀತಿ ಆಶ್ಚರ್ಯ ತರಿಸುತ್ತದೆ.

"ಇರುಳ ಬಾಗಿಲ ಮುಂದೆ ಹಣೆಯೊಡೆದ ಹಗಲಂತೆ  
ಕೆಂಪಾಗಿ ಮುಗಿದಿತ್ತು ಒಂದು ಸಂಜೆ"  
"ಅನಿಲ ಸೀಮೆಯಲಿ ಉರುಳಿ ಹೋಗುತಿದೆ  
ಮಣ್ಣಿನೊಂದು ಮುತ್ತು"

"ಹುಚ್ಚಿ ಬೇವಿನ ತಲೆಗೆ ಹಕ್ಕಿ ಹಾಡಿನ ಹೆಡಿಗೆ"

ಮುಂತಾದ ಕೆ.ಎಸ್.ನ. ಅವರ ಚಿತ್ರಮಯವಾದ ಉಜ್ವಲ ಸಾಲುಗಳನ್ನು ಹಿಂದೆ ನೋಡಿದವರಿಗೆ, 'ತೆರೆದ ಬಾಗಿಲು' ಕವಿತೆಯ ಅಬ್ಬರವಿಲ್ಲದ, ಕಣ್ಣುಕುಕ್ಕದ, ನಿರಾಡಂಬರ ಭಾಷೆ ಆಶ್ಚರ್ಯ ಹುಟ್ಟಿಸಿತು. ಕವಿಯ ಶೈಲಿ ಮತ್ತು ಚಿತ್ತಾರಕ್ಕಿಂತ ವಸ್ತುವಿನ ಮೇಲೆ ನಮ್ಮ ಗಮನ ನೆಡುವಂತಾಗುವುದು ಇದರಿಂದಾಗಿಯೇ. ತೆರೆದ ಬಾಗಿಲು ಕವಿತೆಯಲ್ಲಿ ದಿನನಿತ್ಯದ ರೂಢಿಮಾತಿನಲ್ಲಿ ಸಾವಿನಂತಹ ಸೂಕ್ಷ್ಮವನ್ನು ಚಿಂತಿಸುವ ಪ್ರಯತ್ನ ಅದ್ಭುತವಾಗಿದೆ. ಸಾವಿನ ಸ್ಪರ್ಶ ಯಜಮಾನ ತನ್ನ ಅನುಭವವನ್ನು ನೆಂಟನಿಗೆ ವಿವರಿಸುವಾಗ ಅದರ ಗಾಢತೆಯನ್ನು ಆದಷ್ಟು ತೆಳ್ಳಗಾಗಿಸಲು ಹಾಸ್ಯ,

ಜಾಣತನ, ವ್ಯಂಗ್ಯಗಳನ್ನು ತನ್ನ ಅರಿವಿಲ್ಲದೆಯೇ ಬಳಸುತ್ತಾ ಹೋಗುತ್ತಾನೆ. ಕವನ ಮನುಷ್ಯನ ದೌರ್ಬಲ್ಯದ ಮೂಲವನ್ನು ಹುಡುಕುತ್ತದೆ. ಭೀತಿಯನ್ನು ಪ್ರಕಟಿಸುವ ನೆಪದಲ್ಲೇ ಹುದುಗಿಸುವ ಅವನ ವಿಚಿತ್ರ ಮನಸ್ಸನ್ನು ಕ್ರಮಕ್ರಮವಾಗಿ ತೆರೆಯುತ್ತಾ ಹೋಗುತ್ತದೆ. ಸಾವಿನ ಆಘಾತಗಳು ಇಲ್ಲಿ ಘಟನೆಗಳ ಮೂಲಕ ವ್ಯಂಜಿಸಲ್ಪಡುವುದರಿಂದ, ಆ ಆಘಾತಗಳು ಓದುಗರಿಗೆ ಹತ್ತಿರವಾಗಿ, ಅದರ ಬಿಸಿ ಅವರಿಗೂ ತಾಗುತ್ತದೆ.

ರೈಲ್ವೆ ನಿಲ್ದಾಣದ ಗಜಿಬಿಜಿಯಲ್ಲಿ ತಾಯಿ-ಮಗಳು-ಮಗುವಿನ ನಡುವಿನ ವಾತ್ಸಲ್ಯ ಅಭಿವ್ಯಕ್ತವಾಗುವ ರೀತಿ ರೈಲ್ವೆ ನಿಲ್ದಾಣದಲ್ಲಿ ಎಂಬ ಇನ್ನೊಂದು ಕವಿತೆಯಲ್ಲಿ ಪರಿಣಾಮಕಾರಿಯಾಗಿ ಬಂದಿದೆ. ಅತ್ಯಾಧುನಿಕ ಆಧುನಿಕ ಯಾಂತ್ರಿಕ ಪರಿಸರ ಮತ್ತು ಭಾವದ ಸೆಲೆಯ ಸೂಕ್ಷ್ಮಾಭಿವ್ಯಕ್ತಿ ಇವನ್ನು ಒಂದೇ ನೆಲೆಯಲ್ಲಿ ಜೋಡಿಸಿ ಕೊಟ್ಟಿರುವುದು ಈ ಕವಿತೆಯ ಯಶಸ್ಸೆನ್ನಬಹುದು.

'ಇವನ ಹುಟ್ಟಿದ ಹಬ್ಬ'ದಲ್ಲಿ ಮುಪ್ಪು ಒಂಟಿತನ ಮತ್ತು ಬಡತನದ ಸಂಗತಿ ಒಳಹೆಣಿಗೆ ಪಡೆದು ಅಬ್ಬರವಿಲ್ಲದೆಯೇ ವಿಷಾದದ ದನಿ ಹೊಮ್ಮುತ್ತದೆ. ಆ ವಿಷಾದದ ನಡುವೆಯೂ ಶುಚಿಯಾದ ಬದುಕು ಮಾತ್ರ ನೀಡುವ ವಿಚಿತ್ರ ಸಮಾಧಾನವೂ ಇದೆ.

> ಉಡುಗೊರೆಗಳಿಲ್ಲ; ಕೊಡುವವರಿಲ್ಲ ಉಟ್ಟಿದ್ದು
> ಬೆಳ್ಳಗಿರುವುದೆ ಇವನಿಗೊಂದು ಹರುಷ.
> ಅಡುಗೆಯೂ ಸುಲಭ, ಪಥ್ಯದ್ದು, ಎರಡರ ಜತೆಗೆ
> ಇಂದಿನ ವಿಶೇಷ ಬೆಲ್ಲದ ಪಾಯಸ
>
> (ಇವನ ಹುಟ್ಟಿದ ಹಬ್ಬ: ತೆರೆದ ಬಾಗಿಲು)

ಒಟ್ಟಾರೆ ತೆರೆದ ಬಾಗಿಲು ಸಂಗ್ರಹ ಅದ್ಭುತವಾದ ಸ್ವಭಾವೋಕ್ತಿಯ ಕಾವ್ಯ.

1] ಈ ಸಲವೂ ತಂದೆಯವರದು ಬರುವ ಶನಿವಾರ

(ತೆರೆದ ಬಾಗಿಲು)

2] ಗಂಜಿಯಿಂದಗುಳು ಬೇರ್ಪಡುವ ಸಮಯದ ನೋವನನುಭವಿಸಿ
ಮುಗಿಸಿದೊಂದೆರಡು ತಾಸಿನ ಬಳಿಕ

(ಆರತಿಯ ಸಂಜೆ)

3] ಹಣ್ಣುಗಳು ನಿಲ್ಲಲಾರವು. ಬೇಗ ಹಂಚಿ ಬಿಡು

(ಸಂಧ್ಯಾರಾಗ)

4] ಕೈಚೀಲ ಹಿಡಿದು ಧಿಮ್ಮೆಂದು ಪೇಟೆಗೆ ಹೊರಟ

(ಇವನ ಹುಟ್ಟಿದ ಹಬ್ಬ)

ಮುಂತಾದ ಸಾಲುಗಳಲ್ಲಿ ಕಾಣುವುದು ಕನ್ನಡಕ್ಕೆ ಸಹಜವಾದ ಮಾತಿನ ಬನಿ. ಅಲಂಕಾರದ ಹಂಗಿಲ್ಲದೆ ಈ ಸಹಜೋಕ್ತಿಯಲ್ಲಿ ಅದ್ಭುತ ಕಾವ್ಯದ ಪರಿಣಾಮ ತರುವುದು ಸಾಧ್ಯ ಎಂದು ತೋರಿಸಿಕೊಟ್ಟವರು ಕೆ.ಎಸ್.ನ.

'ನಿರಾಶೆ ಬದುಕಿನ ಅರ್ಥವಲ್ಲ' ಎನ್ನುವ ಕವಿ ಕೆ.ಎಸ್. ನರಸಿಂಹಸ್ವಾಮಿ, ಬದುಕಿನಲ್ಲಿ ಪ್ರೀತಿ ಇಟ್ಟವರು; ಬದುಕಿನಲ್ಲಿ ಪ್ರೀತಿ ಹುಟ್ಟಿಸುವ ಕಾವ್ಯ ಬರೆದವರು. ವಿಕ್ಷಿಪ್ತಗೊಳ್ಳುತ್ತಿರುವ ಆಧುನಿಕ ಮನಸ್ಸಿಗೆ ಇಂಥ ಕಾವ್ಯದ ಅಗತ್ಯವನ್ನು ಒತ್ತಿ ಹೇಳಬೇಕಾದ್ದಿಲ್ಲ.

❑

# ಎಚ್.ಎಲ್.ನಾಗೇಗೌಡ

**ಡಾ.ಚಕ್ಕೆರೆ ಶಿವಶಂಕರ್**

ಮೇಲುನೋಟಕ್ಕೆ ಸಿಪ್ಪೆ ತೆಗೆಯದ ಬಲಿತ ತೆಂಗಿನಕಾಯಿಯಂತೆ ಗಡುಸಾಗಿ ಕಾಣುವ, ಮಾತಿಗೆ ಕುಳಿತಾಗ ಯಾವುದೇ ಹಿಡಿತ, ಬಿಗು, ದರ್ಪ, ಅಹಂಗಳಿಲ್ಲದೆ ಸರಸ ಸ್ನೇಹದ ವಾತಾವರಣವನ್ನು ಸೃಷ್ಟಿಸುವ ಎಚ್.ಎಲ್. ನಾಗೇಗೌಡರು ಆಧುನಿಕ ಕನ್ನಡ ಸಾಹಿತ್ಯ, ಅನುವಾದ ಸಾಹಿತ್ಯ ಮತ್ತು ಕನ್ನಡ ಜಾನಪದ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಬೆರಳೆಣಿಕೆ ಮಂದಿಗಳಲ್ಲಿ ಒಬ್ಬರು. ಕನ್ನಡ ನಾಡು, ನುಡಿ, ಸಂಸ್ಕೃತಿಗೆ ಅಚ್ಚಳಿಯದ ಸೇವೆ ಸಲ್ಲಿಸುತ್ತಿರುವ ಗೌಡರದು ಬಹುಮುಖ ಪ್ರತಿಭೆ. ಅಧಿಕಾರಿಯಾಗಿ, ಕವಿಯಾಗಿ, ಕಥೆಗಾರರಾಗಿ, ಅನುವಾದಕರಾಗಿ, ಕಾದಂಬರಿಕಾರರಾಗಿ, ಜಾನಪದ ಸಂಗ್ರಾಹಕ, ಸಂಶೋಧಕ, ಸಾಂಸ್ಥಿಕ ಜಾನಪದ ನಿರ್ಮಾತೃವಾಗಿ ಎಚ್.ಎಲ್. ನಾಗೇಗೌಡರು ನಾಡಿಗೆ ಬಹುದೊಡ್ಡ ಕೊಡುಗೆ ನೀಡಿದ್ದಾರೆ. ದಕ್ಷ ಆಡಳಿತಗಾರರಾಗಿ ಆಡಳಿತಯಂತ್ರಕ್ಕೆ ನಿಷ್ಠಾವಂತ ಸೇವೆಯನ್ನು ಸಲ್ಲಿಸಿದರು. ಪ್ರತಿಭಾವಂತ ಲೇಖಕರಾಗಿ ಕನ್ನಡ ಸಾಹಿತ್ಯ, ಜಾನಪದವನ್ನು ಬೆಳೆಸಿದ್ದಾರೆ. ಒಬ್ಬ ವ್ಯಕ್ತಿ ತನ್ನ ಜೀವಿತದ ಅವಧಿಯಲ್ಲಿ ಇಷ್ಟೆಲ್ಲವನ್ನು ಸಾಧಿಸಲು ಸಾಧ್ಯವೆ? ಎಂದು ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂತೆ ಮಾಡಿರುವ ಇವರ ಸಾಧನೆ ಇವರ ವ್ಯಕ್ತಿತ್ವದಷ್ಟೇ ಘನಿಷ್ಠವಾದುದು.

ಒಂದು ಕಾಲಕ್ಕೆ ತೆಂಗಿನಕಾಯಿ ವ್ಯಾಪಾರಕ್ಕೆ ಪ್ರಸಿದ್ಧಿ ಪಡೆದಿದ್ದ, ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಹೆರಗನಹಳ್ಳಿ ನಾಗೇಗೌಡರ ಹುಟ್ಟೂರು. ಬಸ್ಸು, ಬೈಸಿಕಲ್ಲುಗಳನ್ನೇ ಕಂಡರಿಯದ ಊರಾಗಿತ್ತು. ಇಂತಹ ಸಣ್ಣಹಳ್ಳಿಯಲ್ಲಿ 1915ರ ಫೆಬ್ರವರಿ 11ರಂದು 'ದೊಡ್ಡಮನೆ' ಕುಟುಂಬದಲ್ಲಿ ಜನಿಸಿದ ನಾಗೇಗೌಡರ ದೊಡ್ಡಮನೆ ಅಕ್ಷರಶಃ ಸಂಖ್ಯಾಬಲದಿಂದಲೂ ದೊಡ್ಡದಾಗಿಯೇ ಇತ್ತು. ಮೂರು ಜನ ಅಣ್ಣತಮ್ಮಂದಿರು, ಅವರ ಹೆಂಡತಿ ಮಕ್ಕಳು, ನಾಲ್ಕೈದು ಜನ ಅಕ್ಕತಂಗಿಯರು ಅವರ ಮಕ್ಕಳುಗಳು, ಮೂರ್ನಾಲ್ಕು ಜನ ಹೆಣ್ಣುಮಕ್ಕಳು, ಆಳುಕಾಳು, ದನಕರ ಕುರಿ ಕೋಳಿ ಹೀಗೆ. ಆದರೆ

ಸಂಖ್ಯಾಬಲದಿಂದಲ್ಲದೆ ಗುಣ, ಸಂಪತ್ತು ಮತ್ತು ಸಂಸ್ಕೃತಿಯ ಲೆಕ್ಕದಲ್ಲೂ ಸಹ ಅದು ದೊಡ್ಡಮನೆಯೆ ಆಗಿದ್ದಿತು.

ನಾಗೇಗೌಡರು ಹುಟ್ಟಿದ್ದು ತಾಯಿಯ ತವರುಮನೆ 'ಬಂಗಲಿ'ಯಲ್ಲಿ. ಹುಟ್ಟಿದ ಮೂರೇ ವರ್ಷಕ್ಕೆ ಹೆತ್ತತಾಯಿ ಇನ್‌ಫ್ಲೂಯೆಂಜಾ ಬಂದು ಸಾವನ್ನಪ್ಪಿದರು. ಅಜ್ಜಿಯ ಅಂದರೆ ತಂದೆಯ ತಾಯಿಯ ಆರೈಕೆಯಲ್ಲಿ ಬೆಳೆದ ಗೌಡರಿಗೆ ತಾಯಿಯ ಮುಖ ಕಂಡ ನೆನಪಿಲ್ಲ. ಬಾಲ್ಯದಲ್ಲೇ ಸಿಡುಬು ರೋಗಕ್ಕೆ ತುತ್ತಾಗಿ ಬದುಕಿ ಉಳಿದದ್ದೊಂದು ಪವಾಡವೇ ಸರಿ.

ದೊಡ್ಡಮನೆಯ ವಿಶಾಲವಾದ ಜಗಲಿಯೇ ಇವರ ಕೂಲಿಮಠ. ತಿಂಗಳಿಗೆ 2-3 ರೂಪಾಯಿ ಸಂಬಳ ಪಡೆಯುತ್ತಿದ್ದ ಓಚಯ್ಯನವರೇ ಗೌಡರ ಗುರು. ಜಗುಲಿಯ ಮೂಲೆಯಲ್ಲಿ ಹರಡಿದ ಸಣ್ಣಮರಳೇ ಸ್ಲೇಟು, ಬೆರಳೇ ಬಳಪ. ಮರಳಿನ ಮೇಲೆ ಬೆರಳಿನಿಂದ ತಿದ್ದುವಾಗ ಗಾಯವಾದೀತೆಂದು, ಊರಿನ ತೋಟದ ಬೇಲಿಗಳಲ್ಲಿ ಬೆಳೆಯುತ್ತಿದ್ದ ಗಜ್ಜುಗ ತಂದು ಅರ್ಧಕ್ಕೆ ಕೊಯ್ದು ತಿದ್ದುವ ಬೆರಳಿಗೆ ಧರಿಸಿಕೊಂಡು ಅಕ್ಷರ ತಿದ್ದುತ್ತಿದ್ದರು. 'ಸ್ವಾಮಿದೇವನೆ ಲೋಕಪಾಲನೆ', 'ಅಮರಾ ನಿರ್ಜರಾ ದೇವ', 'ಧರಣಿ ಮಂಡಲ ಮಧ್ಯದೊಳಗೆ' ಹೀಗೆ ಸ್ತೋತ್ರ ಮತ್ತು ಗೀತೆಗಳನ್ನು ಹಾಗೂ ನೂರರವರೆಗೂ ಮಗ್ಗಿಯನ್ನು ಉರುಹೊಡೆಯುವುದು ದಿನನಿತ್ಯದ ಕೆಲಸ. ತಂದೆಗೆ ಮಗನನ್ನು ಏನಾದರೂ ಮಾಡಿ ಅಮಲ್ದಾರ್ ಮಾಡಿಸಬೇಕೆಂಬ ಆಸೆ. ಕೂಲಿಮಠ ಮುಗಿದ ಮೇಲೆ ಪ್ರಾಥಮಿಕ ಶಾಲೆಗೆ ಪಕ್ಕದ ಹಳ್ಳಿಗೆ ಪ್ರಯಾಣ. ಅಕ್ಷರ ಕಲಿಯಲು ಮತ್ತು ತಿದ್ದಲು ಮರಳು-ಬೆರಳಿನಿದಂದ, ಸ್ಲೇಟು-ಬಳಪಕ್ಕೆ ಬಡ್ತಿ. ಸಂಜೆ ಮನೆಗೆ ವಾಪಸಾದ ಕೂಡಲೇ ಮನೆಪಾಠ, ಓದುವುದು, ಹೇಳಿ ಬರೆಯಿಸುವುದು. ಈ ಶಾಲೆಯಲ್ಲಿ ಪ್ರತೀ ಶುಕ್ರವಾರ ಸರಸ್ವತಿ ಪೂಜೆ. ಪ್ರಾಥಮಿಕ ಶಾಲೆ ಪೂರೈಸಿ ಲೋಯರ್ ಸೆಕೆಂಡರಿಗೆ ದಾಖಲಾಗಲು ಮತ್ತೊಂದು ಹಳ್ಳಿಯ ಪ್ರಯಾಣ. ಈ ಹಳ್ಳಿಯಲ್ಲಿದ್ದುದು ಕನ್ನಡ ಲೋಯರ್ ಸೆಕೆಂಡರಿ. ಸರಿಯಾಗಿ ಪಾಠ ಒಪ್ಪಿಸದಿದ್ದರೆ ಬೆತ್ತ, ರೂಲುದೊಣ್ಣೆ ಬಡಿತ. ಬೆತ್ತ, ಪಾಠ ಹೇಳುವ ಶಾಲೆ ಒಂದೆಡೆಯಾದರೆ, ಪರೀಕ್ಷೆ ಕಟ್ಟುವುದು ಮತ್ತೊಂದೆಡೆ. ಮೂವತ್ತು ಮೈಲಿ ದೂರದ ಕುಣಿಗಲ್‌ನಲ್ಲಿ ಪರೀಕ್ಷೆ ಕಟ್ಟಿ ಕನ್ನಡ ಲೋಯರ್ ಸೆಕೆಂಡರಿ ಪಾಸ್ ಮಾಡಿದ ನಾಗೇಗೌಡರು ಆ ಕಾಲದಲ್ಲಿ ಹೆರಗನಹಳ್ಳಿ ಸುತ್ತ ಸುದ್ದಿ ಮಾಡಿದ್ದರಂತೆ.

ಕನ್ನಡ ಲೋಯರ್ ಪರೀಕ್ಷೆ ಪಾಸಾದ ನಂತರ ಇಂಗ್ಲೀಷ್ ಲೋಯರ್ ಸೆಕೆಂಡರಿ ಪಾಸು ಮಾಡಲು ದೂರದ ಚನ್ನರಾಯಪಟ್ಟಣಕ್ಕೆ ಪ್ರಯಾಣ. 1930ರಲ್ಲಿ ಅದನ್ನು ಪಾಸ್ ಮಾಡಿ ಹೈಸ್ಕೂಲು ವಿದ್ಯಾಭ್ಯಾಸಕ್ಕಾಗಿ ಚನ್ನಪಟ್ಟಣಕ್ಕೆ ಆಗಮನ. ಆಗ ದೇಶದಲ್ಲಿ ಸ್ವಾತಂತ್ರ್ಯ ಹೋರಾಟದ ಬಿರುಸಿನ ವಾತಾವರಣ. ದೇಶಭಕ್ತಿಯ ಕಾವು. ಚನ್ನಪಟ್ಟಣ ದಲ್ಲೇ ಜರುಗಿದ ಪ್ರಜಾಪಕ್ಷ ಸಮ್ಮೇಳನದಲ್ಲಿ ತಾವೂ ಸ್ವಯಂ ಸೇವಕರಾಗಿ ದುಡಿದು ವಿದೇಶಿ ವಸ್ತುಗಳನ್ನು ಸುಟ್ಟರು; ಖಾದಿಬಟ್ಟೆಯನ್ನು ಧರಿಸಿದರು. ಊರಿಗೆ ಹಿಂತಿರುಗಿದಾಗ ಅಟ್ಟದ ಮೇಲಿದ್ದ ಹಳೆಯ ಚರಕ ಹೊರ ತೆಗೆದು ರಿಪೇರಿ ಮಾಡಿ ನೂಲು ನೂತು ಬಟ್ಟೆ ನೇಯಿಸಿ ಧರಿಸಿದರು. ಊರಿನ ಹರಿಜನರಿಗೆ ಹೆಂಡ ಕುಡಿಯಬೇಡಿರೆಂದು ಬೋಧಿಸಿದರು.

1933ರಲ್ಲಿ ಹೈಸ್ಕೂಲು ವಿದ್ಯಾಭ್ಯಾಸ ಮುಗಿಸಿ ಇಂಟರ್ ಮೀಡಿಯಟ್ ಕಾಲೇಜಿಗೆ ಸೇರಲು ಪ್ರಥಮ ಬಾರಿಗೆ ಬೆಂಗಳೂರಿಗೆ ಬಂದರು. ಸೆಂಟ್ರಲ್ ಕಾಲೇಜಿನ ಎದುರಿಗಿರುವ ಈಗಿನ ಸರ್ಕಾರಿ ಕಾಲೇಜೇ ಆಗಿನ ಇಂಟರ್ ಮೀಡಿಯಟ್ ಕಾಲೇಜು. ವಿಶ್ವೇಶ್ವರಪುರದಲ್ಲಿದ್ದ ಒಕ್ಕಲಿಗರ ಹಾಸ್ಟಲ್‌ನಲ್ಲಿ ಉಳಿದುಕೊಂಡು ಕಾಲೇಜು ವಿದ್ಯಾಭ್ಯಾಸ ಪ್ರಾರಂಭಿಸಿದರು. ಹಾಸ್ಟಲಿಗೆ ಹತ್ತಿರದಲ್ಲಿದ್ದ ಶ್ರೀ ರಾಮಕೃಷ್ಣಾಶ್ರಮಕ್ಕೆ ತಪ್ಪದೆ ಭೇಟಿ ಕೊಡುತ್ತಿದ್ದರು. ಸರೋಜಿನಿ ನಾಯ್ಡು, ರೈಟ್ ಆನರಬಲ್ ಶ್ರೀನಿವಾಸಶಾಸ್ತ್ರಿಗಳಂತಹ ಪ್ರಸಿದ್ಧ ವಾಗ್ಮಿಗಳ ಭಾಷಣ ಕೇಳುವ ಅವಕಾಶ, ನ್ಯಾಷನಲ್ ಹೈಸ್ಕೂಲ್ ಮೈದಾನ ದಲ್ಲಿ ಮಹಾತ್ಮ ಗಾಂಧೀಜಿಯವರನ್ನು ನೋಡುವ, ಅವರ ಭಾಷಣ ಕೇಳುವ ಪುಣ್ಯ ಲಭಿಸಿತು.

ಕಾಲೇಜಿನಲ್ಲಿ ಬಿ.ಎಂ.ಶ್ರೀ. ಇಂಗ್ಲೀಷ್ ಕಲಿಸಿದರೆ, ವಿ.ಸೀ. ಕನ್ನಡ ಕಲಿಸುತ್ತಿದ್ದರು. ಹಿಂದಿ ಕಲಿಕೆ ಚಳುವಳಿ ಬಲವಾಗಿದ್ದುದರಿಂದ ಸಿ.ರಂಗಾಚಾರ್ ಎಂಬ ಸಂಸ್ಕೃತ ಮೇಷ್ಟ್ರು ಕಾಲೇಜಿನಿಂದ ಹೊರಗೆ ಕಲಿಸುತ್ತಿದ್ದ ಹಿಂದಿಯನ್ನು ಅಭ್ಯಾಸಮಾಡಿ 'ಪ್ರಥಮ' ಮತ್ತು 'ಪ್ರವೇಶ' ಪರೀಕ್ಷೆಗಳನ್ನು ಒಂದೇ ವರ್ಷದಲ್ಲಿ ಪಾಸು ಮಾಡಿದರು.

ಇಂಟರ್ ಮೀಡಿಯಟ್ ಪಾಸಾದ ನಂತರ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಬಿ.ಎಸ್‌ಸಿ. ಪದವಿಗೆ ಸೇರಿದರು. ತಂದೆ ಲಿಂಗೇಗೌಡರಿಗೆ ಮಗ ಲಾ ಓದಬೇಕೆಂಬ ಆಸೆ. ಕಾರಣ ಆವತ್ತಿನ ದಿನಗಳಲ್ಲಿ ಲಾಯರುಗಳಿಗೆ ಸಿಗುತ್ತಿದ್ದ ಗೌರವ, ಫೀಜು, ಸುಖ ಮತ್ತಾರಿಗೂ ಇರಲಿಲ್ಲ. ಅಲ್ಲದೆ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡುತ್ತಿದ್ದ ಪ್ರಮುಖರುಗಳೆಲ್ಲಾ ಲಾಯರು ಗಳೇ ಆಗಿದ್ದುದೂ ಸಹ ಮತ್ತೊಂದು ಕಾರಣವಾಗಿತ್ತು. ತಂದೆಯ ಬಯಕೆಯನ್ನು ಅಲ್ಲಗಳೆಯದ ಮಗ ಬೆಂಗಳೂರಿನಲ್ಲಿ ಕಾಲೇಜಿದ್ದರೂ ತಂದೆಯ ಇಷ್ಟದಂತೆ ಮೈಸೂರಿಗೆ ಬಂದು ಮಹಾರಾಜ ಕಾಲೇಜಿಗೆ ಸೇರಿದರು. ವಿ.ಎಲ್.ಡಿಸೌಜಾ, ಎ.ಆರ್. ವಾಡಿಯಾ, ಟಿ.ಎಸ್. ವೆಂಕಣ್ಣಯ್ಯ, ಎ.ಆರ್. ಕೃಷ್ಣಶಾಸ್ತ್ರಿ, ತೀ.ನಂ. ಶ್ರೀಕಂಠಯ್ಯ, ಡಿ.ಎಲ್.ನರಸಿಂಹಾಚಾರ್ ಮುಂತಾದ ಅತಿರಥ ಮಹಾರಥರ ಗರಡಿಯಲ್ಲಿ ಪಳಗಿದರು.

ನಾಗೇಗೌಡರು ಬುದ್ಧಿವಂತ, ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದರು. ಮಾಧ್ಯಮಿಕ ಶಾಲೆಗೆ ಸೇರಿದಂದಿನಿಂದಲೂ ಅವರಿಗೆ ಸ್ಕಾಲರ್‌ಷಿಪ್ ಇಲ್ಲವೆ ಫ್ರೀಷಿಪ್ ಬರುತ್ತಿತ್ತು. ದೊಡ್ಡಮನೆಯ ದೊಡ್ಡ ಸಂಸಾರವನ್ನು ನಿಭಾಯಿಸಲು ಸಾಧ್ಯವಾಗದೆ ಹೆಣಗಾಡುತ್ತಿದ್ದ ತಂದೆ ಲಿಂಗೇಗೌಡರಿಗೆ ತನ್ನ ವಿದ್ಯಾಭ್ಯಾಸದ ಖರ್ಚು ಹೊರೆಯಾಗದಂತೆ ನೋಡಿಕೊಂಡು ಪದವಿಯನ್ನು ಗಳಿಸಿದರು. 1937ರಲ್ಲಿ ಬಿ.ಎಸ್‌ಸಿ. ಪದವಿ ಪಡೆದ ಗೌಡರು ಇಡೀ ನಾಗಮಂಗಲ ತಾಲ್ಲೂಕಿಗೆ ಒಕ್ಕಲಿಗರಲ್ಲಿ ದ್ವಿತೀಯ ಗ್ರಾಜುಯೇಟ್ ಎಂದು ಹೆಸರಾದರು. ಈ ಸುದ್ದಿ ನಾಡಿನ ತುಂಬಾ ಹರಡಿತು. ಬಿ.ಎಸ್‌ಸಿ. ಪದವಿ ಪಡೆದ ನಂತರ ಎಲ್‌ಎಲ್.ಬಿ. ಅಧ್ಯಯನಕ್ಕಾಗಿ, ಮೈಸೂರು ಸಂಸ್ಥಾನದಲ್ಲಿ ಆಗ ಎಲ್ಲಿಯೂ ಲಾ ಕಾಲೇಜು ಇರದಿದ್ದ ಪ್ರಯುಕ್ತ ಪೂನಾಕ್ಕೆ ಪ್ರಯಾಣ ಮಾಡಿದರು. ಪೂನಾ ಲಾ ಕಾಲೇಜಿನಲ್ಲಿ ಆವತ್ತಿನ ಹಿಂದೂ ಮಹಾಸಭಾ ಮುಖಂಡರಾಗಿದ್ದ ಎಲ್.ಬಿ. ಭೂಪಟಕರ್ ಹಿಂದೂ ಲಾ ಪ್ರಾಧ್ಯಾಪಕರು. ಮುಂದೆ ಹೆಸರಾಂತ ಕ್ರಿಮಿನಲ್ ಲಾಯರೆನಿಸಿಕೊಂಡ ಬೆಂಗಳೂರಿನ ದೇವದಾಸ್ ಸಹಪಾಠಿ. ಪುಣೆಯಲ್ಲಿಯೂ ಗೌಡರ ದೇಶಭಕ್ತಿ ಕಡಿಮೆಯಾಗಿರಲಿಲ್ಲ. ಲಾ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಊರಿಗೆ ಮರಳಿದರು.

ಎರಡು ಪದವಿಗಳನ್ನು ಪಡೆದಿದ್ದರೂ ಉದ್ಯೋಗವಿಲ್ಲದೆ ಮುಂದೇನು ಮಾಡಬೇಕೆಂಬ ಭವಿಷ್ಯದ ಚಿಂತೆ ಕಾಡುತ್ತಿದ್ದಾಗ ತಂದೆಯವರ ಬುದ್ಧಿವಾದದಂತೆ ಬೆಂಗಳೂರಿಗೆ ಬಂದು ಲಾಯರ್ ಹೆಚ್.ಸಿ. ದಾಸಪ್ಪ

ನವರನ್ನು ಕಂಡರು. ಅವರ ಹಿತವಚನಗಳನ್ನು ಪಾಲಿಸಿ ಕೇಂದ್ರೀಯ ನೇಮಕಾತಿ ಮಂಡಳಿಗೆ ಕೆಲಸಕ್ಕೆ ಅರ್ಜಿ ಹಾಕಿದಾಗ ದೊರೆತದ್ದು ಮುನ್ಸಿಫ್ ಕೋರ್ಟ್ ಹೆಡ್ ಮುನ್ಷಿ ಕೆಲಸ. ನಾಗೇಗೌಡರ ವೃತ್ತಿಜೀವನ ಆರಂಭವಾದದ್ದು, ತರೀಕೆರೆ ತಾಲ್ಲೂಕು ನರಸಿಂಹರಾಜಪುರದಲ್ಲಿ 50 ರೂ. ಸಂಬಳದೊಂದಿಗೆ. 'ಎಡೆಹಳ್ಳಿ' ಎನ್ನುವುದು ನರಸಿಂಹರಾಜಪುರಕ್ಕೆ ಮೊದಲಿದ್ದ ಹೆಸರು. ಊರಿಗೆ ತಕ್ಕ ಕೋರ್ಟು. ನಾಗೇಗೌಡರ ವೈವಾಹಿಕ ಋಣಾನುಬಂಧವೂ ಕೂಡಾ ನರಸಿಂಹರಾಜಪುರದ ವೃತ್ತಿಜೀವನದೊಂದಿಗೆ ಬೆರೆತುಕೊಂಡು ಬಂದಿತು. ನರಸಿಂಹರಾಜಪುರದಲ್ಲಿ ಅವರು ಉಳಿದುಕೊಂಡಿದ್ದ ಮನೆ ಮಾಲೀಕರ ತಂಗಿಯಾದ ಶ್ರೀಮತಿ ಲಕ್ಷ್ಮಮ್ಮನವರನ್ನು ವಿವಾಹವಾದರು. ಕಂಕಣಬಲ ದೊಂದಿಗೆ ಗೌಡರ ಅದೃಷ್ಟಯೋಗವು ಕೂಡಿ ಬಂದಿತು. ವಿವಾಹನಂತರ ಮೈಸೂರು ಸಿವಿಲ್ ಸರ್ವಿಸ್ ಸ್ಪರ್ಧಾ ಪರೀಕ್ಷೆ ಬರೆದು 25ನೇ ರ್‍ಯಾಂಕ್ ಪಡೆದು ರೆವಿನ್ಯೂ ಪ್ರೊಬೆಷನರಿ ಅಧಿಕಾರಿಯಾಗಿ ಆಯ್ಕೆಯಾದರು. 1941ರಲ್ಲಿ ಗೆಜೆಟೆಡ್ ಹುದ್ದೆ ದೊರೆಯುವುದರೊಂದಿಗೆ ತಿಂಗಳಿಗೆ 80ರೂ. ಸಂಬಳ ದೊರೆಯಲಾರಂಭಿಸಿತು. ವಿವಿಧ ಇಲಾಖೆಗಳಲ್ಲಿ ವಿವಿಧ ರೀತಿಯ ತರಬೇತಿ ಪಡೆದು ಪ್ರೊಬೇಷನರಿ ಪೂರೈಸಿ 1943ರಲ್ಲಿ ಹರಿಹರದ ಅಮಲ್ದಾರರಾಗಿ ನೇಮಕಗೊಂಡರು. ಹರಿಹರದಲ್ಲಿದ್ದಾಗ ಬಡಜನರಿಗೆ ಇವರು ಸಲ್ಲಿಸಿದ ಸೇವೆ ಗೌಡರನ್ನು ಜನಾನುರಾಗಿಗಳನ್ನಾಗಿಸಿತು. 1947ರಲ್ಲಿ ತಂದೆ ಕೊನೆಯುಸಿ ರೆಳೆದರು. ಅದೇ ವರ್ಷದಲ್ಲಿ ಗೌಡರಿಗೆ ಅಸಿಸ್ಟೆಂಟ್ ಕಮಿಷನರಾಗಿ ಬಡ್ತಿ ಲಭಿಸಿತು.

ನಾಗೇಗೌಡರು 1941ರಲ್ಲಿ ಗೆಜೆಟೆಡ್ ಅಧಿಕಾರಿಯಾಗಿ ಆಯ್ಕೆಯಾದ ನಂತರ ಎಲ್ಲಿಯೂ ತಿರುಗಿ ನೋಡಲಿಲ್ಲ. ಆಸಕ್ತಿ, ಅಭ್ಯಾಸ, ಕಠಿಣ ಪರಿಶ್ರಮ, ಕೆಲಸದಲ್ಲಿ ಶ್ರದ್ಧೆ, ನಿಷ್ಠೆಗಳ ಫಲವಾಗಿ ಅಧಿಕಾರದ ಒಂದೊಂದೇ ಮೆಟ್ಟಲು ಗಳನ್ನೇರುತ್ತಾ ಮುನ್ನಡೆದರು. 1943ರಿಂದ ಹರಿಹರ ಮತ್ತು 1945ರಿಂದ ದಾವಣಗೆರೆ ತಾಲ್ಲೂಕುಗಳಲ್ಲಿ ಅಮಲ್ದಾರರಾಗಿ, 1947ರಿಂದ ಅಸಿಸ್ಟೆಂಟ್ ಕಮಿಷನರ್ ಆಗಿ ಬಡ್ತಿ ಪಡೆದು ಹಾಸನ ಜಿಲ್ಲಾಭಿವೃದ್ಧಿ ಅಧಿಕಾರಿಯಾಗಿ, 1948ರಿಂದ ಸರ್ಕಾರದ ವಿದ್ಯಾ ಇಲಾಖೆ ಸಹಾಯಕ ಕಾರ್ಯದರ್ಶಿಯಾಗಿ, 1950ರಿಂದ ಚಿಕ್ಕಬಳ್ಳಾಪುರದ ಸಬ್‌ಡಿವಿಜನ್ ಅಧಿಕಾರಿಯಾಗಿ, 1952ರಿಂದ ರಾಜ್ಯದ ರೆವಿನ್ಯೂ ಕಮಿಷನರ್ ಅವರ ಪ್ರಥಮ ಅಸಿಸ್ಟೆಂಟರಾಗಿ, 1953ರಿಂದ ಮೈಸೂರು ಜಿಲ್ಲಾ ಫುಡ್ ಅಸಿಸ್ಟೆಂಟ್ ಮತ್ತು ಮೈಸೂರು ನಗರದ ರೇಷನಿಂಗ್ ಆಫೀಸರ್ ಆಗಿ, 1955ರಿಂದ ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಆಡಳಿತ ಮಂಡಳಿಯ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು. 1958ರಿಂದ 61ರವರೆಗೆ ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆಯ ಮ್ಯಾನೇಜಿಂಗ್ ಡೈರೆಕ್ಟರಾಗಿದ್ದಾಗ, ಅಂದರೆ 1960ರಲ್ಲಿ ನಾಗೇಗೌಡರು ಐ.ಎ.ಎಸ್. ಶ್ರೇಣಿಗೆ ಆಯ್ಕೆಯಾದರು. ನಂತರ, 1961ರಿಂದ ಶಿವಮೊಗ್ಗ ಜಿಲ್ಲೆ, 1963ರಿಂದ ಚಿಕ್ಕಮಗಳೂರು ಜಿಲ್ಲೆ, 1965ರಿಂದ ದಕ್ಷಿಣ ಕನ್ನಡ ಜಿಲ್ಲೆಗಳ ಜಿಲ್ಲಾಧಿಕಾರಿ ಗಳಾಗಿ ಅತ್ಯುತ್ತಮವಾದ ಸೇವೆ ಸಲ್ಲಿಸಿ ಜನಪ್ರಿಯತೆ ಪಡೆದರು. 1969ರಲ್ಲಿ ರಾಜ್ಯದ ಲೇಬರ್ ಕಮೀಷನರ್ ಆಗಿ ಅಧಿಕಾರ ವಹಿಸಿಕೊಂಡರು. 1972ರಲ್ಲಿ ಸರ್ವೆ ಇಲಾಖೆ ಮುಖ್ಯಾಧಿಕಾರಿಯಾಗಿದ್ದು, ಎಂಡೋಮೆಂಟ್ ಕಮೀಷನರ್ ಆದರು.

ವಿವಿಧ ಇಲಾಖೆಗಳಲ್ಲಿ ಅಪಾರ ಅನುಭವ ಪಡೆದು ನುರಿತ ಆಡಳಿತ ಗಾರರೆಂದು ಹೆಸರು ಮಾಡಿದ್ದ ಗೌಡರನ್ನು ಕರ್ನಾಟಕ ಸರ್ಕಾರವು 1973ರಲ್ಲಿ ರಾಜ್ಯದ ಲೋಕ ಸೇವಾ ಆಯೋಗದ ಸದಸ್ಯರನ್ನಾಗಿ ನೇಮಿಸಿತು. ಸುಮಾರು 6 ವರ್ಷಗಳ ಕಾಲ ಲೋಕ ಸೇವಾ ಆಯೋಗದ ಸದಸ್ಯರಾಗಿದ್ದ ನಾಗೇಗೌಡರು ಸಾವಿರಾರು ಗ್ರಾಮೀಣ ಪ್ರತಿಭೆಗಳನ್ನು ಗುರುತಿಸಿ ಅವರಿಗೆ ಉದ್ಯೋಗ ನೀಡಿದ್ದಾರೆ.

ನಾಗೇಗೌಡರು ತಮ್ಮ 40 ವರ್ಷಗಳ ವೃತ್ತಿ ಜೀವನದಲ್ಲಿ ಎಲ್ಲಿಯೂ ಯಾರಿಂದಲೂ ಬೆರಳು ಮಾಡಿ ತೋರಿಸಿಕೊಂಡವರಲ್ಲ. ಕರ್ತವ್ಯನಿಷ್ಠೆ, ಶ್ರದ್ಧೆ ಶಿಸ್ತಿನಿಂದ ದುಡಿದಿದ್ದಾರೆ. ಶಿವಮೊಗ್ಗ ಜಿಲ್ಲಾಧಿಕಾರಿಗಳಾಗಿದ್ದಾಗ ಗ್ರಾಮಾಭಿ ವೃದ್ಧಿಯನ್ನು ಕುರಿತಾದಂತೆ ಕಲ್ಪವೃಕ್ಷ ಮಾಸ ಪತ್ರಿಕೆಯ ಪ್ರಕಟಣೆಗೆ ಕಾರಣರಾದುದಲ್ಲದೆ, ಶಿವಮೊಗ್ಗದಲ್ಲಿ ವಸ್ತುಸಂಗ್ರಹಾಲಯವನ್ನು ಸ್ಥಾಪನೆ ಮಾಡಿದ ಯಶಸ್ಸು ಗೌಡರದು. ದಕ್ಷಿಣಕನ್ನಡ ಜಿಲ್ಲೆಯಲ್ಲಂತೂ ನಾಗೇಗೌಡರ ಹೆಸರು ಹೇಳಿದರೂ ಸಾಕು ಈವತ್ತಿಗೂ ಅಲ್ಲಿನ ಜನರು ನೆರವಾಗುತ್ತಾರೆ; ಆವತ್ತಿನ ದಿನಗಳನ್ನು ನೆನಪಿಸಿಕೊಳ್ಳುತ್ತಾರೆ. ಇಷ್ಟಾಗಿಯೂ ತಮ್ಮ ವೃತ್ತಿ ಬದುಕಿನಲ್ಲಿ ಒಂದೇ ಒಂದು Bad Remarkಗೆ ಒಳಗಾಗಿದ್ದನ್ನು ಈಗಲೂ ಗೌಡರು ನೆನಪಿಸಿಕೊಳ್ಳುತ್ತಾರೆ. 'ಒಮ್ಮೆ ಮೈಸೂರು ಮಹಾರಾಜರು ತಿರುಪತಿಗೆ ಹೋಗಬೇಕಾಗಿದ್ದು, ಅದಕ್ಕೆ ತಕ್ಕ ವ್ಯವಸ್ಥೆ ಮಾಡಬೇಕೆಂದು ಅರಮನೆಯ ನಿರೂಪ ಬಂದಿತ್ತು. ಆದರೆ ಆಗ ರೆವಿನ್ಯೂ ಕಮೀಷನರ್ ಹೆಡ್‌ಕ್ವಾರ್ಟರ್ಸ್ ನಲ್ಲಿರದೆ ಸಂಚಾರದಲ್ಲಿದ್ದರು. ಅವರ ಪರವಾಗಿ ಸಹಾಯಕರಾಗಿದ್ದ ನಾಗೇಗೌಡರು ಸ್ವಾತಂತ್ರ್ಯವಹಿಸಿ ಆದೇಶ ಹೊರಡಿಸಿದ್ದನ್ನು ಸಹಿಸಲಾಗದ ರೆವಿನ್ಯೂ ಕಮೀಷನರ್ ಆ ವರ್ಷದ ಗೋಪ್ಯವರದಿಯಲ್ಲಿ ನಾಗೇಗೌಡರ ಬಗ್ಗೆ "He takes too much for granted" ಎಂದು ನಮೂದಿಸಿದ್ದರು.

ಸರ್ಕಾರದ ಅನೇಕ ಹುದ್ದೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ನಾಗೇಗೌಡರ ಕರ್ತವ್ಯನಿಷ್ಠೆ, ಪ್ರಮಾಣಿಕತೆ, ಪ್ರತಿಭೆ, ಸಂಘಟನಾಶಕ್ತಿಗಳನ್ನು ಗುರುತಿಸಿದ ರಾಜ್ಯ ಸರ್ಕಾರವು ವಿಧಾನಪರಿಷತ್ತಿನ ಸದಸ್ಯರನ್ನಾಗಿ ನಾಮಕರಣ ಮಾಡಿರುತ್ತದೆ. ರಾಜಕಾರಣದಿಂದ ದೂರವೇ ಉಳಿದಿರುವ ಗೌಡರು ಕನ್ನಡ ಸಾಹಿತ್ಯ ಮತ್ತು ಜಾನಪದದ ಬೆಳವಣಿಗೆಗೆ ಮತ್ತಷ್ಟು ಸೇವೆ ಸಲ್ಲಿಸಲು ಅವರಿಗೆ ಈ ಹುದ್ದೆ ನೆರವಾಗುತ್ತದೆ.

ನಾಗೇಗೌಡರ ವಯಸ್ಸು 84. ಆದರೂ ಅವರಲ್ಲಿನ್ನೂ ಗ್ರಾಮೀಣ ಮುಗ್ಧತೆ, ಸರಳತೆಗಳು ಹಸಿಯಾಗಿಯೇ ಉಳಿದುಕೊಂಡಿವೆ. ಯಾವುದನ್ನೇ ಆಗಲಿ ನೇರವಾಗಿ ಹೇಳುವ ಪ್ರವೃತ್ತಿ ಅವರದು. ಸಂಕೋಚರಹಿತ ಸರಸ ಸ್ವಭಾವ. ಬದುಕಿನ ಉದ್ದಕ್ಕೂ ರೂಢಿಸಿಕೊಂಡು ಬಂದ ಶಿಸ್ತು, ಪ್ರಾಮಾಣಿ ಕತೆ, ಇಳಿ ವಯಸ್ಸಿನಲ್ಲಿಯೂ ಕುಳಿತು ಮಾಡುವ ಜಾಯಮಾನ, ಎಂಥವ ರಿಂದಲೂ ಕೆಲಸ ತೆಗೆದುಕೊಳ್ಳುವ ಚಾಕಚಕ್ಯತೆ ನಾಗೇಗೌಡರಲ್ಲಿದೆ.

ನಾಗೇಗೌಡರದು ಬಹುಮುಖ ಪ್ರತಿಭೆ: ಬಹುಮುಖ ಸಾಧನೆ. ಒಂದು ಕೈಯಲ್ಲಿ ಆಡಳಿತ ಸೂತ್ರವನ್ನು, ಮತ್ತೊಂದು ಕೈಯ್ಯಲ್ಲಿ ಲೇಖನಿಯನ್ನು ಹಿಡಿದು ಶ್ರೀಸಾಮಾನ್ಯರ ಮತ್ತು ಸಾಹಿತ್ಯಸರಸ್ವತಿಯ ಸೇವೆಯನ್ನು ಸಮರ್ಥವಾಗಿ ನಿರ್ವಹಿಸುತ್ತಾ ಬಂದಿದ್ದಾರೆ. ಗೌಡರು ವೃತ್ತಿಪರ ಲೇಖಕರಲ್ಲ; ಪ್ರವೃತ್ತಿಪರ ಲೇಖಕರು. ಓದಿದ್ದು ಬಿಎಸ್‌ಸಿ, ಎಲ್‌ಎಲ್‌ಬಿ; ಸೇರಿದ್ದು ಆಡಳಿತ ಕ್ಷೇತ್ರ. ಆಸಕ್ತಿ ಮೂಡಿದ್ದು ಕನ್ನಡ ಸಾಹಿತ್ಯ ಮತ್ತು ಜಾನಪದದಲ್ಲಿ. ಇಂಗ್ಲೀಷ್ ಮತ್ತು ಕನ್ನಡ ಭಾಷೆಗಳೆರಡರಲ್ಲೂ ಉತ್ತಮ ಪಾಂಡಿತ್ಯ, ಪ್ರಭುತ್ವ ಪಡೆದಿರುವ ನಾಗೇಗೌಡರು ಕವಿಯಾಗಿ, ಕಥೆಗಾರರಾಗಿ, ಕಾದಂಬರಿಕಾರರಾಗಿ, ಭಾಷಾಂತರಕಾರರಾಗಿ, ಪ್ರವಾಸಕಥನಕಾರರಾಗಿ, ಆತ್ಮಚರಿತ್ರಕಾರರಾಗಿ,

ಜಾನಪದ ಕರ್ತಾರರಾಗಿ ನಾಡಿಗೆ ನೀಡಿರುವ ಕೊಡುಗೆ ಅಮೂಲ್ಯವಾದುದು. ಅವರ ಜೀವನಾನುಭವದ ವ್ಯಾಪ್ತಿ ಎಷ್ಟು ವಿಶಾಲ, ಅಪರಿಮಿತ ಎಂಬುದಕ್ಕೆ ಅವರು ರಚಿಸಿರುವ ಕೃತಿಗಳೇ ಸಾಕ್ಷಿ.

**ಸೃಜನಶೀಲ ಕೃತಿಗಳು**

**1) ನಾನಾಗುವೆ ಗೀಜಗನ ಹಕ್ಕಿ:** ನಾಗೇಗೌಡರು ತಮ್ಮ ತಾರುಣ್ಯದಲ್ಲಿ ರಚಿಸಿದ ಕವನಗಳ ಸಂಕಲನ. ಪುಣೆಯಲ್ಲಿ ಲಾ ಓದುತ್ತಿದ್ದಾಗ ಅಲ್ಲಿನ ಪ್ರಕೃತಿ ಸೌಂದರ್ಯವನ್ನು ಕಂಡು ಮೂಕವಿಸ್ಮಿತರಾಗಿ ರಚಿಸಿದ ಬಹುಪಾಲು ಕವಿತೆಗಳು ಈ ಸಂಕಲನದಲ್ಲಿವೆ. ಈ ಕವನಸಂಕಲನದ ಸೃಷ್ಟಿಯ ಕಾಲ ನವೋದಯ ಕಾವ್ಯ ರೂಪುಗೊಳ್ಳುತ್ತಿದ್ದ ಸಂದರ್ಭ. ಹಕ್ಕಿಯ ಹಾಡಿನಂತೆ ಸಹಜವಾಗಿ, ಸುಲಲಿತವಾಗಿ ಹೊರಹೊಮ್ಮಿದ ಈ ಸಂಕಲನದ ಕವನಗಳಲ್ಲಿ ಮುಗ್ಧತೆ, ಕುತೂಹಲ, ಸರಳತೆ, ಬಾಲ್ಯದ ಬಗೆಗಿನ ನೆನಪುಗಳ ಕನವರಿಕೆ, ಹರೆಯದ ತುಡಿತ ಗ್ರಾಮೀಣ ಬದುಕಿನ ಅನನ್ಯಪ್ರೀತಿ, ನಿಸರ್ಗ ಪ್ರೀತಿ ಎಲ್ಲವೂ ಧಾರಾಳವಾಗಿ ಕಂಡು ಬರುತ್ತದೆ. ಸರೋಜಿನಿ ದೇವಿಯವರ ಕೆಲವು ಕವನಗಳ ಅನುವಾದ ಮತ್ತು ವೆರಿಯರ್ ಎಲ್ವಿನ್‌ರು ಸಂಗ್ರಹಿಸಿರುವ ಕೆಲವು ಛತ್ತೀಸ್‌ಘರ್ ಜನಪದ ಗೀತೆಗಳ ಅನುವಾದವನ್ನು ಸಹ ಈ ಸಂಕಲನದಲ್ಲಿ ಸೇರಿಸಲಾಗಿದೆ. ಗೌಡರ ಸ್ವತಂತ್ರ ರಚನೆಗಳಂತೆಯೇ ಅನುವಾದಿತ ಕವನಗಳೂ ಸಹ ಸುಂದರವಾಗಿವೆ, ಆಸ್ವಾದನಾರ್ಹವಾದುವುಗಳಾಗಿವೆ. ಹರೆಯದ ಆದರ್ಶಪರತೆ, ವಾಸ್ತವಿಕತೆಯ ವಿಚಾರಶಕ್ತಿ, ನಿಸರ್ಗಪ್ರೀತಿ, ಹಳ್ಳಿಗಾಡಿನ ಬದುಕಿನ ಎಳೆತ ಇವೆಲ್ಲವೂ ಒಟ್ಟಾಗಿ ಮೇಳೈಸಿರುವ 'ನಾನಾಗುವೆ ಗೀಜಗನ ಹಕ್ಕಿ' ಕವನ ಸಂಕಲನವು ಅವರು ಕವಿಯಾಗಿ ಬೆಳೆಯಬಲ್ಲವರಾಗಿದ್ದ ರೆಂಬುದಕ್ಕೆ ಉತ್ತಮ ನಿದರ್ಶನವಾಗಿ ಉಳಿದು ಬಂದಿದೆ.

**2) ಕಥೆ-ವ್ಯಥೆ:** ಎಂಟು ನೀಳ್ಗವನಗಳನ್ನು ಒಳಗೊಂಡಿರುವ ಕಥೆ-ವ್ಯಥೆ ಕವನ ಸಂಕಲನವು ನಾಗೇಗೌಡರ ಕಾವ್ಯ ಸ್ಫಂತಿಕೆಯನ್ನು ಮೆರೆಯುತ್ತದೆ. ಬದುಕಿನ ಬಗ್ಗೆ ಕವಿಗಿರುವ ಕಳಕಳಿ, ಸಾಮಾಜಿಕ ಅನಿಷ್ಟಗಳನ್ನು ಕುರಿತಾದ ಹೇವರಿಕೆ, ಆದರ್ಶ-ವಾಸ್ತವ, ಸತ್ಯ-ಮಿಥ್ಯಗಳ ತಾಕಲಾಟ ಇಲ್ಲಿನ ಕವನಗಳಲ್ಲಿ ಕಂಡುಬರುತ್ತದೆ. ಸಂಗ್ರಹದ ಮೊದಲಿನ ನಾಲ್ಕು ಕವನಗಳು ಪ್ರಸಿದ್ಧ ಕವಯತ್ರಿ ತೋರುದತ್ತಳ ಇಂಗ್ಲೀಷ್ ಕವನಗಳ ಭಾವಾನುವಾದಗಳಾಗಿವೆ. ನಾಗೇಗೌಡರ ಕಾವ್ಯಾಭಿವ್ಯಕ್ತಿ ಅವರ ಮಾತಿನಷ್ಟೇ ನೇರವಾದುದು, ಸರಳ ವಾದುದು, ಸ್ಪಷ್ಟವಾದುದು.

**3) ಕಂಡು ಕೇಳಿದ ಕಥೆಗಳು:** ನಾಗೇಗೌಡರದು ಹಾಸ್ಯ ಮಿಶ್ರಿತ ಗದ್ಯಶೈಲಿ. ಇವರ ಬರವಣಿಗೆಗೆ ಓದಿಸಿಕೊಂಡು ಹೋಗುವ ಅತ್ಯುತ್ತಮ ಗುಣವಿರು ವುದರಿಂದ ಈ ಕಥಾ ಸಂಕಲನದಲ್ಲಿನ ಯಾವುದೇ ಪ್ರಸಂಗವು ಎಲ್ಲಿಯೂ ಕೇವಲ ವರದಿಯಾಗಿ ಪರಿಣಮಿಸದೆ ಸಾಹಿತ್ಯಕ ಮೌಲ್ಯವನ್ನು ಅಂತರ್ಗತಿಸಿ ಕೊಂಡು ಓಟವನ್ನು ಮುಂದುವರಿಸುತ್ತದೆ. ಎಂಟು ಕಥೆಗಳಿಂದ ಕೂಡಿದ ಈ ಕಥಾ ಸಂಕಲನದಲ್ಲಿ ತಾವು ಕಂಡಿದ್ದನ್ನು ಮತ್ತು ಇತರರಿಂದ ಕೇಳಿದ್ದನ್ನು ಕಥೆಯಾಗಿಸಿದ್ದಾರೆ. ಎಲ್ಲಿಯೂ ಕಲ್ಪನೆ ಇಲ್ಲ, ಯಥಾವತ್ ಬದುಕಿನ ಚಿತ್ರಣ. ಸಮಾಜದಲ್ಲಿ ದಿನನಿತ್ಯ ನಡೆಯುತ್ತಿರುವ ಅನ್ಯಾಯ, ದಬ್ಬಾಳಿಕೆ, ಬಡರೈತರು ತಮ್ಮ ಅವಿದ್ಯೆ, ಅಜ್ಞಾನ, ಮೌಢ್ಯಗಳಿಂದಾಗಿ ಅನುಭವಿಸುತ್ತಿರುವ ತೊಂದರೆಗಳು, ನಿರಪರಾಧಿಗಳು ತಮ್ಮದಲ್ಲದ ತಪ್ಪಿಗೆ ಅಪರಾಧಿಗಳಾಗಿ ಪರಿಣಮಿಸುವುದು ಇತ್ಯಾದಿ ಇಲ್ಲಿನ ಕಥೆಗಳ ವಸ್ತು. ಮಗಳ ಮದುವೆಗೆಂದು ಸಾಲ ಮಾಡಿ, ಸರಿಯಾದ ಸಮಯಕ್ಕೆ ಸಾಲ ತೀರಿಸಲಾಗದೆ ಇದ್ದಬದ್ದ ಜಮೀನು ಸಾಲ ನೀಡಿದವನ ಪಾಲಾಗಿ ನಿರ್ಗತಿಕನಾಗುವ "ಸಿದ್ದಣ್ಣನ ಸಂಸಾರ"ದಂತಹ ಕಥೆಗಳು ಗ್ರಾಮೀಣ ಭಾರತದಲ್ಲಿ ಅಸಂಖ್ಯಾತ. ಮನೆಯಲ್ಲಿ ಹುಚ್ಚೆಳ್ಳು ತುಂಬಿದ ಪಾಸಾಲೇಲಿ ದೊರೆತ ಮೂರು ಬೆಳ್ಳಿ ನಾಣ್ಯಗಳಿಂದ ವ್ಯಾಪಾರ ಪ್ರಾರಂಭಿಸಿ ಅದ್ದೂರಿ ಶ್ರೀಮಂತಿಕೆಯನ್ನು ಗಳಿಸಿದ ಬೆಟ್ಟೇಗೌಡನ ಕಥೆ 'ಮೂರು ರೂಪಾಯಿ'. ಸಮಾಜದಲ್ಲಿ ನಡೆಯುವ ಮೋಸ, ಸುಳ್ಳು, ತಟವಟ, ವ್ಯಾವಹಾರಿಕ ಜಾಣ್ಮೆ, ಅನ್ಯಾಯ ಎಲ್ಲವನ್ನೂ ಚಿತ್ರಿಸುತ್ತದೆ.

'ಕಂಡು ಕೇಳಿದ ಕಥೆಗಳು' ನಾಗೇಗೌಡರ ಮೊದಲ ಕಥಾ ಸಂಕಲನ. ಕಥೆಗಾರರ ಭಾಷೆ ಮತ್ತು ಅಭಿವ್ಯಕ್ತಿ ನೇರ, ಸರಳ, ಸ್ಪಷ್ಟ. ಆಡುಮಾತಿ ನಲ್ಲಿಯೇ ನಿರೂಪಿಸಿದ್ದಾರೆ. ಜನಪದ ನುಡಿಗಟ್ಟುಗಳು, ಗಾದೆಗಳ ಬಳಕೆ ಯಥೋಚಿತವಾಗಿದೆ. ಕಥಾವಸ್ತುವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುವುದರಲ್ಲಿ ನಾಗೇಗೌಡರದು ಪಳಗಿದ ಲೇಖನಿ.

**4) ಖೈದಿಗಳ ಕಥೆಗಳು:** ಖೈದಿಗಳನ್ನು ಭೇಟಿ ಮಾಡಿ ಅವರ ಮಾತು ಗಳನ್ನು ಧ್ವನಿಮುದ್ರಿಸಿಕೊಂಡು, ಅವರ ಬದುಕಿನ ಸುಖ-ದುಃಖಗಳನ್ನು ಅರಿತು ಕಥೆಗಳನ್ನು ಹೆಣೆದಿದ್ದಾರೆ. ಇಲ್ಲಿ ಬರುವ ಪಾತ್ರಗಳೆಲ್ಲವೂ ಜೀವಂತ ಪಾತ್ರಗಳು. ಈ ಕಥಾ ಸಂಕಲನದಲ್ಲಿ ಒಟ್ಟು ಹದಿನಾರು ದಾಖಲೆಗಳಿದ್ದು ಅದರಲ್ಲಿ ಆರನ್ನು ಖುದ್ದಾಗಿಯೂ, ಉಳಿದ ಹತ್ತನ್ನು ಫೀಮೇಲ್ ಜೈಲರ್ ತಮ್ಮ ಅಧಿಕಾರದಲ್ಲಿದ್ದಾಗ ಕಂಡದ್ದನ್ನು ನಿರೂಪಿಸಲಾಗಿದೆ. ಮತ್ಸರ, ದ್ವೇಷ, ಅಸೂಯೆ, ಆವೇಶ, ಈರ್ಷ್ಯೆ, ರೊಚ್ಚು, ದ್ರೋಹ, ಲೈಂಗಿಕತೆಯ ಕಾರಣ ಗಳಿಂದಾಗಿ ಜನರು ಅಪರಾಧಿಗಳಾಗುವುದು, ಸರಳಿನ ಹಿಂದಿದ್ದಾಗ ಅವರು ತಮ್ಮ ತಪ್ಪಿಗೆ ಪಡುವ ಪರಿತಾಪ, ಪಶ್ಚಾತ್ತಾಪ, ತಪ್ಪನ್ನು ಮರೆತು ಋಜು ಮಾರ್ಗದಲ್ಲಿ ನಡೆಯಬೇಕೆಂಬ ಅಭೀಪ್ಸೆಯನ್ನು ವ್ಯಕ್ತಪಡಿಸುವುದು ಎಲ್ಲವೂ ಓದುಗರ ಮನ ಮಿಡಿಯುವಂತೆ ಮಾಡುತ್ತವೆ.

**5) ದೊಡ್ಡಮನೆ:** ನಶಿಸುತ್ತಿರುವ ನಮ್ಮ ಸಂಸ್ಕೃತಿಯ ಚಿತ್ರವನ್ನು ಗುಣ-ಗಾತ್ರಗಳೆರಡರಲ್ಲೂ ಬೃಹತ್ತಾಗಿ ಚಿತ್ರಿಸುವ ಪ್ರಾದೇಶಿಕ ಕಾದಂಬರಿ 'ದೊಡ್ಡಮನೆ'. ಬಯಲು ಸೀಮೆಯ ರೈತಾಪಿ ಬದುಕಿನ ದುರಂತ ಚಿತ್ರಣ ಕಾದಂಬರಿಯಲ್ಲಿ ಹೆಪ್ಪುಗಟ್ಟಿದೆ. ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆ ಯಾಗುವ ಗ್ರಾಮೀಣ ಬದುಕಿನ ಸ್ಥಿತ್ಯಂತರಗಳ ದಾಖಲಾತಿ. ಮೂರು ತಲೆಮಾರುಗಳ ಬದುಕಿನ ಸುದೀರ್ಘ ಚಿತ್ರಣ. ಶಿಥಿಲವಾಗುತ್ತಿರುವ ಅವಿಭಕ್ತ ಕೌಟುಂಬಿಕ ವ್ಯವಸ್ಥೆಯನ್ನು ಉಳಿಸಿಕೊಳ್ಳುವ ಮತ್ತು ಅದರ ನಾಶವನ್ನೇ ಬಯಸುವ ಕಾಲ ಹಾಗೂ ವ್ಯಕ್ತಿ ಸಂಘರ್ಷ ಕಾದಂಬರಿಯುದ್ದಕ್ಕೂ ಒಡಮೂಡಿದೆ.

ದೊಡ್ಡಮನೆ ನಂಜೇಗೌಡರು ಅವಿಭಕ್ತ ಕುಟುಂಬದ ಕೇಂದ್ರವ್ಯಕ್ತಿ ಲಿಂಗೇಗೌಡ, ದೊಡ್ಡಮನೆಯ ಘನತೆಯನ್ನು ಉಳಿಸಿಕೊಳ್ಳಲು ಕಾದಂಬರಿ ಯುದ್ದಕ್ಕೂ ಹೋರಾಡುತ್ತಾನೆ. ಆದರೆ ರಂಗೇಗೌಡ ದೊಡ್ಡಮನೆ ಒಡೆದು ಹೋಳಾಗುವಂತೆ ಮಾಡಲು ಎಲ್ಲ ಬಗೆಯ ಕುತಂತ್ರಗಳನ್ನು ನಡೆಸುತ್ತಾನೆ. ಈ ಹೋರಾಟದಲ್ಲಿ ರಂಗೇಗೌಡನಿಗೇ ಜಯ ಲಭಿಸುತ್ತದೆ. ದೊಡ್ಡಮನೆ ಒಡೆದು ಹೋಳಾಗುತ್ತದೆ. ಬಯಲು ಸೀಮೆಯ ಜನಪದದ ಬಾಂಧವ್ಯ, ಗ್ರಾಮೀಣ ಬದುಕಿನ ಸುಖ-ದುಃಖದ ಚಿತ್ರಗಳು, ಕ್ರೋಧ, ರೋಷ, ಸಣ್ಣತನಗಳನ್ನು ಸವಿವರವಾಗಿ, ಪರಿಣಾಮಕಾರಿಯಾಗಿ ಚಿತ್ರಿಸುವ ಮೂಲಕ ಕಾದಂಬರಿಕಾರರು ತಮ್ಮ ಗ್ರಾಮೀಣ ಬದುಕಿನ ಅನುಭವಗಳ ಪರಿಪಕ್ವತೆ ಯನ್ನು ಮೆರೆದಿದ್ದಾರೆ.

'ದೊಡ್ಡಮನೆ' ಕಾದಂಬರಿಗೆ ಸಾಹಿತ್ಯಕ ಮೌಲ್ಯವಷ್ಟೇ ಅಲ್ಲದೆ, ಸಾಂಸ್ಕೃತಿಕ ಮೌಲ್ಯವೂ ಇದೆ. ಕಾದಂಬರಿಯುದ್ದಕ್ಕೂ ಗೋಚರಿಸುವ ಹಬ್ಬ ಹರಿದಿನಗಳು, ಅಡುಗೆ, ಊಟೋಪಚಾರಗಳು, ವೇಷಭೂಷಣಗಳು, ಮನೆಯ ಮಾದರಿಗಳು, ಜಾತ್ರೆ-ಆಚರಣೆ-ಸಂಪ್ರದಾಯಗಳು, ಗತಿಸಿದ ಸಂಸ್ಕೃತಿಯೊಂದರ ಚಿತ್ರಣವನ್ನು ಮತ್ತೆ ಕಟ್ಟಿಕೊಡುತ್ತವೆ. ಭಾಷೆಯ ದೃಷ್ಟಿಯಿಂದಲಂತೂ ಕನ್ನಡದ ಕಾದಂಬರಿ ಕ್ಷೇತ್ರದಲ್ಲೇ ಅತ್ಯಂತ ವಿಶಿಷ್ಟವಾದುದು. ಕಾದಂಬರಿಯುದ್ದಕ್ಕೂ ಬಳಕೆಯಾಗಿರುವ ಆಡುಮಾತು, ಜನಪದ ನುಡಿಗಟ್ಟುಗಳು, ಬೈಗುಳಗಳು, ಗಾದೆ, ಒಗಟುಗಳು ಅಧ್ಯಯನಕ್ಕೆ ಆಕರಗಳಾಗಿವೆ.

**6) ಸೊನ್ನೆಯಿಂದ ಸೊನ್ನೆಗೆ:** ಜನಪದ ಕಥೆಯೊಂದರ ಎಳೆ ಹಿಡಿದು ಹುಟ್ಟಿಕೊಂಡ ಈ ಕಾದಂಬರಿಯ ಆಶಯ ಕೆಟ್ಟವರು ಕೊನೆಗೆ ಕೆಟ್ಟದ್ದನ್ನೇ ಅನುಭವಿಸುತ್ತಾರೆ ಎಂಬುದು. ಮೈಲಾರದ ಮೂಲಪುರುಷರ ಚರಿತ್ರೆಯ ಮೂಲಕ ಆರಂಭವಾಗುವ ಕಾದಂಬರಿಯು ಊರದೇವರ ಒಕ್ಕಲಾಗದೆ, ಊರವನಾಗದೆ ಉಳಿದ ಚನ್ನಯ್ಯನ ದುರಾಸೆಯ ಫಲವಾಗಿ ಶಾಪಕ್ಕೊಳಗಾಗಿ ಆತನ ವಂಶವೇ ನಿರ್ನಾಮವಾಗುವುದರೊಂದಿಗೆ ಮುಕ್ತಾಯಗೊಳ್ಳುತ್ತದೆ. ಧೂಪದ ಚನ್ನ ಈ ಕಾದಂಬರಿಯ ಕಥಾನಾಯಕನಾಗಿದ್ದರೂ, ಸಂಗಣ್ಣ ಮತ್ತು ಕುಂಡಪ್ಪ ಈ ಕಾದಂಬರಿಯ ಎರಡು ತಲೆಮಾರುಗಳ ಪ್ರತಿನಿಧಿಗಳಾಗಿ ಕಂಡುಬರುತ್ತಾರೆ. ನಾಗೇಗೌಡರ ವಿಶಿಷ್ಟತೆ ಇರುವುದು ಅವರು ತಮ್ಮ ಬರವಣಿಗೆಯಲ್ಲಿ ಕಟ್ಟಿಕೊಡುವ ಜನಪದ ಸಂಸ್ಕೃತಿಯ ಚಿತ್ರಣದಲ್ಲಿ. ಜನಪದ ಸಂಸ್ಕೃತಿಯ ಸಮೃದ್ಧ ವಿವರಗಳು ಈ ಕಾದಂಬರಿಯ ಉದ್ದಕ್ಕೂ ಚಲ್ಲಾಡಿವೆ. ತಾವು ಕಂಡುಂಡ ಗ್ರಾಮೀಣ ಬದುಕನ್ನು ರಸವತ್ತಾಗಿ ವರ್ಣಿಸುವಲ್ಲಿ ನಾಗೇಗೌಡರು ಎತ್ತಿದ ಕೈ.

**7) ಭೂಮಿಗೆ ಬಂದ ಗಂಧರ್ವ:** ಮಾಸ್ತಿಯವರ 'ಸುಬ್ಬಣ್ಣ', ಅ.ನ.ಕೃ. ಅವರ 'ಸಂಧ್ಯಾರಾಗ', ತ.ರಾ.ಸು. ಅವರ 'ಹಂಸಗೀತೆ' ಪರಂಪರೆಯಲ್ಲಿ ಮೂಡಿ ಬಂದ ಮತ್ತೊಂದು ಶ್ರೇಷ್ಠಕೃತಿ ನಾಗೇಗೌಡರ 'ಭೂಮಿಗೆ ಬಂದ ಗಂಧರ್ವ'. ಭೈರವಿ ಕೆಂಪೇಗೌಡರ ಬದುಕನ್ನು ಚಿತ್ರಿಸುವ ಈ ಕಾದಂಬರಿಯನ್ನು ಕುರಿತು ಪ್ರೊ. ವಿ.ಕೃ.ಗೋಕಾಕ್ ಹೀಗೆ ಅಭಿಪ್ರಾಯ ಪಡುತ್ತಾರೆ: "ಭೈರವಿ ಕೆಂಪೇಗೌಡರೆಂಬ ಖ್ಯಾತ ಸಂಗೀತಗಾರರ ಜೀವನದ ಸರ್ವ ಸ್ವಾರಸ್ಯವನ್ನು 'ಭೂಮಿಗೆ ಬಂದ ಗಂಧರ್ವ' ಎಂಬ ಶ್ರೇಷ್ಠ ಕಾದಂಬರಿಯಲ್ಲಿ ಒದಗಿಸಿಕೊಟ್ಟು ಕನ್ನಡನಾಡಿನ ಮನದಲ್ಲಿ ಶಾಶ್ವತವಾಗಿ ಇರುವಂತೆ ಮಾಡಿದ್ದಾರೆ." ನಾಗೇಗೌಡರಿಗೆ ಭೈರವಿ ಕೆಂಪೇಗೌಡರ ಬಗ್ಗೆ ಅಪಾರ ಅಭಿಮಾನವಿದೆ. ಪರಿಣಾಮವಾಗಿ ಆತನನ್ನು ಪವಾಡ ಪುರುಷನ ಮಟ್ಟಕ್ಕೇರಿಸಿದ್ದಾರೆ. ಚರಿತ್ರೆಯಲ್ಲಿ ಹೆಸರಾದ ಹತ್ತು ಹಲವು ಪಾತ್ರಗಳು ಕಾದಂಬರಿಯಲ್ಲಿ ಗೋಚರಿಸುತ್ತವೆ.

**8) ನನ್ನೂರು:** ನಾಗೇಗೌಡರ ಹುಟ್ಟೂರಾದ ಹೆರಗನಹಳ್ಳಿಯ ಕಳೆದುಹೋದ ಜನಸಮುದಾಯದ ಬದುಕಿನ ಚಿತ್ರಣ. ತಾವು ಹುಟ್ಟಿದ ಊರಿನ, ಕಂಡ ವ್ಯಕ್ತಿಗಳ ಬದುಕಿನ ಯಥಾವತ್ತಾದ, ರಸವತ್ತಾದ ಅಭಿವ್ಯಕ್ತಿ. ಈ ಸಂಕಲನದಲ್ಲಿ ಕಂಡು ಬರುವ ಎಲ್ಲಾ ವ್ಯಕ್ತಿಗಳು ಹೆರಗನಹಳ್ಳಿಯ ಮಣ್ಣಿನಿಂದ ಮೂಡಿ ಬಂದವರು. ತೆರೆದ ಕಣ್ಣುಗಳಿಂದ ತಮ್ಮೂರಿನ ಬದುಕನ್ನು ಬಿಚ್ಚುಮನಸ್ಸಿನಿಂದ ಚಿತ್ರಿಸಿದ್ದಾರೆ. ಈ ಕೃತಿಯನ್ನು ಕುರಿತು ಕುವೆಂಪು ಅವರು "ಒಂದು ಊರಿನ ಜನ, ಬಾಳು, ಸಂಸ್ಕೃತಿ, ಮೇಲು ಕೀಳು, ಆಚಾರ, ಮತ, ಮೌಢ್ಯ, ಕೆಚ್ಚು, ಗ್ರಾಮೀಣ ರಸಿಕತೆ, ಬಲದೌರ್ಬಲ್ಯ, ಎಲ್ಲವೂ ಸಮಗ್ರವಾಗಿ ದೃಗೋಚರವಾಗಿ ನಿಮ್ಮ ಊರು 'ನನ್ನೂರು' ಆಗಿಬಿಡುತ್ತದೆ. ಇಂಥ ಗ್ರಾಮ ಜೀವನದ ಅಪೂರ್ವ ಪರಿಚಯದ ಕೃತಿ ಕನ್ನಡಕ್ಕೆ ಒಂದು ಹೊಸ ಕೊಡುಗೆಯಾಗಿದೆ" ಎಂದು ಅಭಿಪ್ರಾಯಪಟ್ಟಿದ್ದಾರೆ.

ನಾಗೇಗೌಡರ ನನ್ನೂರು ಕೇವಲ ಒಂದು ಊರಿನ ಚಿತ್ರವಲ್ಲ. ಗ್ರಾಮೀಣ ಭಾರತದ ಇಂತಹ ಹತ್ತು ಹಲವು ಊರು-ಜನ-ಬದುಕುಗಳ ಪ್ರತಿನಿಧಿಯಾಗಿದೆ. ಗ್ರಾಮೀಣ ಬದುಕಿನ ಸೊಗಡು ಕೃತಿಯ ಉದ್ದಕ್ಕೂ ಪಡಿಮೂಡಿದೆ. ಊರಿನ ಸಂಸ್ಕೃತಿ, ಆಚಾರ, ವಿಚಾರ, ನಂಬಿಕೆ, ನಡವಳಿಕೆ, ಹಬ್ಬಹರಿದಿನಗಳು, ಆಚರಣೆ, ಸಂಪ್ರದಾಯಗಳಷ್ಟೇ ಅಲ್ಲದೆ ನಿರ್ದಿಷ್ಟ ಜನಸಮುದಾಯದ ಸೇಡು, ಸ್ನೇಹ, ರಸಿಕತೆ, ಉದಾತ್ತತೆಗಳೂ ಸಹ ಇಲ್ಲಿ ಅಭಿವ್ಯಕ್ತಿ ಪಡೆದಿವೆ. ಗೊಬ್ಬರದ ಗುಲಾಬಿ, ಘನತೆಯ ಗೌಡರು, ದಸರೆಯ ದಾಸಪ್ಪ, ಆಯಿತೇ ಆಚಾರ್‍ರು, ಅರ್ಜಿಕೊಂಡಲ್ಲನಂತಹ ಮನೋಜ್ಞ ವ್ಯಕ್ತಿಚಿತ್ರಗಳು ಎಲ್ಲರ ಮನಸ್ಸನ್ನು ತಮ್ಮೆಡೆಗೆ ಸೆಳೆದುಕೊಳ್ಳುತ್ತವೆ. ಕೃತಿಯಲ್ಲಿ ಬಳಕೆಯಾಗಿರುವ ಜನಪದ ಬೈಗುಳಗಳು, ನುಡಿಗಟ್ಟುಗಳು, ಗಾದೆ ಮಾತುಗಳು ಬರವಣಿಗೆಗೆ ಮೊನಚು ಮತ್ತು ಅನನ್ಯತೆಯನ್ನು ತಂದು ಕೊಟ್ಟಿದ್ದು ಅತ್ಯುತ್ತಮ ಜಾನಪದ ಕೃತಿಯಾಗಿಯೂ ಕೂಡಾ ಕಂಗೊಳಿಸುತ್ತದೆ.

**9) ಬೆಟ್ಟದಿಂದ ಬಟ್ಟಲಿಗೆ :** ಕಾಫಿಯ ಉಗಮ, ವಿಲಾಸ, ವ್ಯಾಪ್ತಿ, ವೈಶಿಷ್ಟ್ಯಗಳನ್ನು ಅಂಕಿ-ಅಂಶಗಳೊಡನೆ ಸರಳವಾಗಿ ನಿರೂಪಿಸುವ ಈ ಕೃತಿಯು ನಾಗೇಗೌಡರು ಕನ್ನಡ ಸಾಹಿತ್ಯಕ್ಕೆ ನೀಡಿದ ಅಪರೂಪದ ಕೊಡುಗೆ. ಚಿಕ್ಕಮಗಳೂರು ಜಿಲ್ಲಾಧಿಕಾರಿಗಳಾಗಿದ್ದಾಗ ಅಲ್ಲಿನ ಕಾಫಿ ತೋಟಗಳ ಪ್ರತ್ಯಕ್ಷಾನುಭವ, ಕಾಫಿ ತೋಟದ ಮಾಲೀಕರುಗಳ ಒಡನಾಟ ಈ ಕೃತಿಯ ಹುಟ್ಟಿಗೆ ಕಾರಣ. ಅಧ್ಯಯನಶೀಲತೆ, ವಿಷಯ ಸಂಗ್ರಹಣೆ, ಭಾಷಾ ಶೈಲಿ ಎದ್ದು ಕಾಣುವ ಅಂಶಗಳು.

**10) ಸರೋಜಿನಿ ದೇವಿ :** 1879ರ ಫೆಬ್ರವರಿ 18ರಲ್ಲಿ ಹೈದರಾಬಾದಿನ ಸುಶಿಕ್ಷಿತ ಬ್ರಾಹ್ಮಣ ಮನೆತನದಲ್ಲಿ ಹುಟ್ಟಿದ ಸರೋಜಿನಿದೇವಿನಾಯ್ಡು ಅವರ ಜೀವನ ಚರಿತ್ರೆ. ಸರೋಜಿನಿಯವರ ಸೌಂದರ್ಯಪ್ರಜ್ಞೆ, ಸ್ವಚ್ಛ ಬದುಕು ನಾಗೇಗೌಡರನ್ನು ಸರೋಜಿನಿಯವರ ಜೀವನಚರಿತ್ರೆ ಬರೆಯಲು ಪ್ರೇರೇಪಿಸಿರಬಹುದು. ಸೌಂದರ್‍ಯಾರಾಧಕಿ, ನಿಸರ್ಗೋಪಾಸಕಿಯಾದ ಸಹೃದಯ ಸರೋಜಿನಿಯ ಕಾವ್ಯ ಬದುಕು, ಹೋರಾಟದ ಬದುಕನ್ನು ಸರಳವಾಗಿ, ಸ್ವಾರಸ್ಯಕರವಾಗಿ ನಿರೂಪಿಸಿದ್ದಾರೆ. 'ಸರೋಜಿನಿ ಕಟ್ಟುಕವಿಯಲ್ಲ, ಹುಟ್ಟುಕವಿ' ಎಂದು ಅಭಿಮಾನ ಪಡುವ ಕೃತಿಕಾರರು ಪ್ರತಿಯೊಂದು ಅಧ್ಯಾಯಕ್ಕೂ ನೀಡಿರುವ ಶೀರ್ಷಿಕೆಗಳು ಅರ್ಥಗರ್ಭಿತವಾಗಿವೆ.

**11) ನಾ ಕಂಡ ಪ್ರಪಂಚ :** ಜಗತ್ತಿನ ಪೂರ್ವ ಮತ್ತು ಪಶ್ಚಿಮ ದೇಶಗಳನ್ನು ಸಂದರ್ಶಿಸಿ ಬಂದ ನಾಗೇಗೌಡರು ಅಲ್ಲಿನ ಜನಜೀವನ, ಸಂಸ್ಕೃತಿ, ಸಂಪ್ರದಾಯ ಇವೇ ಮೊದಲಾದುವುಗಳನ್ನು ಕುರಿತಾದಂತೆ ತಮ್ಮ ಎಂದಿನ ಸರಸಮಿಶ್ರಿತ ಶೈಲಿಯಲ್ಲಿ ನಿರೂಪಿಸಿರುವ ಪ್ರವಾಸ ಕಥನ. ಪುಸ್ತಕವನ್ನು ಓದುತ್ತಾ ಹೋದಂತೆ ಗೌಡರು ವರ್ಣಿಸುತ್ತಿರುವ ಸ್ಥಳಗಳಿಗೆ ನಾವೇ ಭೇಟಿ ನೀಡಿದಂತೆ ಅನುಭವವಾಗುತ್ತದೆ. ಕಣ್ಣಿಗೆ ಕಟ್ಟುವಂತೆ ಚಿತ್ರಿಸುವ ಕಲೆ ಗೌಡರಿಗೆ ಕರಗತವಾಗಿದೆ. 'ನಾ ಕಂಡ ಪ್ರಪಂಚ' ವಿವರಗಳಿಂದ ಕೂಡಿದ್ದು ಕೇವಲ ಅಂಕಿ-ಅಂಶಗಳ ದಾಖಲೆಯಾಗಿರದೆ ಸಾಹಿತ್ಯಕ ಮೌಲ್ಯದಿಂದ ಕೂಡಿದ ಕೃತಿಯಾಗಿದೆ.

ಅನುವಾದ ಕೃತಿಗಳು

**1) ಕೆನಿಲ್ ವರ್ತ್ :** ತನ್ನ ಬದುಕಿನಲ್ಲಿ ಅನೇಕ ಲಾವಣಿಗಳು, ಹಲವಾರು ಕಾದಂಬರಿಗಳನ್ನು ರಚಿಸಿ ಅಪಾರಯಶಸ್ಸು ಗಳಿಸಿ 1832ರಲ್ಲಿ ಮರಣ ಹೊಂದಿದ ಸರ್ ವಾಲ್ಟರ್ ಸ್ಕಾಟ್‌ನ ಕಾದಂಬರಿ ಕೆನಿಲ್‌ವರ್ತ್. ಸ್ಕಾಟ್‌ನ ಭಾಷೆ ಕನ್ನಡದ ಜಾಯಮಾನಕ್ಕೆ ಒಗ್ಗುವಂಥದ್ದಲ್ಲ. ಆದರೆ ನಾಗೇಗೌಡರು ಅದನ್ನು ಸಮರ್ಥವಾಗಿ ದುಡಿಸಿಕೊಂಡು ಕನ್ನಡಕ್ಕೆ ಒಗ್ಗಿಸಿದ್ದಾರೆ. ಕಾದಂಬರಿಯ ನಾಯಕಿ ಅಮಿ ಮತ್ತು ನಾಯಕ ಲೀಸೆಸ್ಟರ್‌ನ ಭವಿಷ್ಯವನ್ನು ನಿರ್ಣಯಿಸುವ ಭವನದ ಹೆಸರೇ ಕೆನಿಲ್‌ವರ್ತ್. ಕಾದಂಬರಿ ಯುದ್ದಕ್ಕೂ ನಡೆಯುವ ಎಲ್ಲಾ ಘಟನೆಗಳಿಗೂ ಈ ಭವನವು ನಿರ್ಣಾಯಕ ತಿರುವನ್ನು ಕೊಡುತ್ತಾ ಹೋಗುತ್ತದೆ. ದುರಂತದಲ್ಲಿ ಕೊನೆಗೊಳ್ಳುವ ಈ ಕಾದಂಬರಿಯಲ್ಲಿ ಇಂಗ್ಲೆಂಡಿನ ಆ ಕಾಲದ ಜನಸಮುದಾಯದ ಬದುಕು, ಸಂಸ್ಕೃತಿ, ಸಂಪ್ರದಾಯ, ಆಚಾರ ವಿಚಾರಗಳು, ನಂಬಿಕೆ ನಡಾವಳಿಗಳು ಇಡಿಕಿರಿದಿವೆ. ನಾಗೇಗೌಡರು ಮೂಲದ ಸೊಗಡನ್ನು, ಅಂದಚಂದವನ್ನು ಎಲ್ಲಿಯೂ ಬಿಟ್ಟುಕೊಡದೆ, ಕಥೆಯ ಓಟಕ್ಕೆ ಧಕ್ಕೆ ತಗುಲದಂತೆ ಸಮರ್ಪಕವಾಗಿ ಸಂಗ್ರಹಾನುವಾದ ಮಾಡಿದ್ದಾರೆ. ಅವರ ಅನುವಾದದಲ್ಲಿ ಕ್ಲಿಷ್ಟತೆಯಾಗಲಿ, ಜಟಿಲತೆಯಾಗಲಿ ಕಂಡುಬರುವುದಿಲ್ಲ. ಸರಾಗವಾಗಿ ಓದಿಸಿಕೊಂಡು ಹೋಗುತ್ತದೆ.

**2) ಮಾರ್ಕೋಪೋಲೋ ಪ್ರವಾಸ ಕಥನ :** ಮಾರ್ಕೊಪೋಲೋ ಪ್ರವಾಸ ಕಥನ ಕನ್ನಡ ಪ್ರವಾಸ ಸಾಹಿತ್ಯ ಭಂಡಾರಕ್ಕೆ ನಾಗೇಗೌಡರು ಕೊಟ್ಟ ಅತ್ಯುತ್ತಮ ಕೊಡುಗೆ. ಮಧ್ಯ ಏಷ್ಯದ ಅನೇಕ ಭಾಗಗಳ ಬಗ್ಗೆ, ವಿಸ್ತಾರವಾದ ಚೀನಾ ಸಾಮ್ರಾಜ್ಯದ ಬಗ್ಗೆ ಮಾರ್ಕೊಪೋಲೋನದೆ ಅಧಿಕೃತವಾದ ಹೇಳಿಕೆ. ಕನ್ನಡಿಗರಿಗೆ ಇದರ ತಿಳುವಳಿಕೆ ಇರಲೆಂಬ ಸದುದ್ದೇಶದಿಂದ ದೇಜಗೌ ಈ ಕೃತಿಯನ್ನು ಅನುವಾದಿಸಲು ನಾಗೇಗೌಡರನ್ನು ಪ್ರೇರೇಪಿಸಿದರು. ಸಂಕ್ಷಿಪ್ತವಾದ ಸಂಗ್ರಹಾನುವಾದ ಪುನರಾವರ್ತನೆಗಳಿಂದ ಹೊರತಾಗಿದೆ. ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಹೇಳಬೇಕಾದುದನ್ನು ಸ್ಪಷ್ಟವಾಗಿ ತಿಳಿಯಪಡಿಸುತ್ತಾರೆ.

**3) ವೆರಿಯರ್ ಎಲ್ವಿನರ ಗಿರಿಜನ ಪ್ರಪಂಚ:** ಇಂಗ್ಲೆಂಡಿನಲ್ಲಿ ಹುಟ್ಟಿ ಪಾದ್ರಿಯಾಗಿ ಭಾರತಕ್ಕೆ ಬಂದು, ಗಾಂಧೀಜಿಯ ಪ್ರಭಾವಕ್ಕೆ ಒಳಗಾಗಿ, ಭಾರತೀಯ ಸಂಸ್ಕೃತಿಗೆ ಮನಸೋತು, ಭಾರತೀಯ ಗಿರಿಜನರ ಬದುಕಿನ ಅಧ್ಯಯನ-ಉದ್ಧಾರಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಗಿರಿಜನ ಕನ್ಯೆಯನ್ನೇ ಮದುವೆಯಾಗಿ ಭಾರತದ ಪೌರತ್ವವನ್ನು ಪಡೆದು ಇಲ್ಲಿಯೇ ನೆಲೆ ನಿಂತ ಎಲ್ವಿನರು ಮೊದಲಿಗೆ ಮಾನವತಾವಾದಿ, ನಂತರದಲ್ಲಿ ಮಾನವ ವಿಜ್ಞಾನಿ. ಇವರ ಆತ್ಮಚರಿತ್ರೆಯೇ 'The Tribal world of Verrier Elvin'. ಇಂತಹ ಮಹಾನ್ ವ್ಯಕ್ತಿಯ ಆತ್ಮಚರಿತ್ರೆಯನ್ನು ಕನ್ನಡಕ್ಕೆ ಅನುವಾದಿಸುವುದರ ಮುಖಾಂತರ ಮಾನವವಿಜ್ಞಾನ, ಜಾನಪದ, ಸಮಾಜ ವಿಜ್ಞಾನ ಕ್ಷೇತ್ರಗಳನ್ನು ಕನ್ನಡದಲ್ಲಿ ಅರಿಯಬಲ್ಲವರಿಗೆ ಮಹದುಪಕಾರ ಮಾಡಿದ್ದಾರೆ ನಾಗೇಗೌಡರು. ಈ ಕೃತಿಯನ್ನು ಕುರಿತು ಡಾ. ಹಾ.ಮಾ. ನಾಯಕ್ "ಇದು ಬರಿಯ ಕಥನವಲ್ಲ. ಇದರಲ್ಲಿ ಚರಿತ್ರೆ, ಭೂಗೋಳ, ಮಾನವಶಾಸ್ತ್ರ, ಜಾನಪದ ಎಲ್ಲವೂ ಹೆಣೆದುಕೊಂಡಿವೆ. ನಿಮ್ಮ ಹಾಸ್ಯ, ವ್ಯಂಗ್ಯ, ವಿಡಂಬನೆಗಳು ಜೊತೆಗೆ ರಸಿಕತೆ ಯಾರನ್ನೂ ಆಕರ್ಷಿಸುತ್ತವೆ" ಎಂದು ಪ್ರಶಂಸಿಸಿದ್ದಾರೆ. ಎಲ್ವಿನ್‌ರ ಬರವಣಿಗೆಯ ಸೊಬಗನ್ನು ಆಸ್ವಾದಿಸಿ ಅನುವಾದಿಸಿರುವ ಗೌಡರು ಅತ್ಯಂತ ಆತ್ಮೀಯವಾಗಿ ಕೃತಿಯನ್ನು ಅನುವಾದಿಸಿದ್ದಾರೆ. ವಿದ್ವತ್ಪೂರ್ಣವಾದ ಪೀಠಿಕೆಯನ್ನು ಬರೆದು, ಕ್ರೈಸ್ತಮಿಷನರಿಗಳ ಸಮಗ್ರ ಮಾಹಿತಿ ನೀಡಿರುವುದಲ್ಲದೆ, ಎಲ್ವಿನ್ನರ ಸಾಧನೆಗಳನ್ನು ತಿಳಿಸಿಕೊಟ್ಟಿದ್ದಾರೆ. ಕೃತಿಯ ಪೀಠಿಕೆಯು ಕೃತಿಯ ಮಹತ್ವವನ್ನು ವೃದ್ಧಿಗೊಳಿಸಿದೆ.

**4) ಪ್ರವಾಸಿ ಕಂಡ ಇಂಡಿಯಾ :** ಅನಾದಿಕಾಲದಿಂದಲೂ ಜಗತ್ತಿನ ನಾನಾ ಮೂಲೆಗಳಿಂದ ನಾನಾ ಕಾರಣಗಳಿಗಾಗಿ ಭಾರತಕ್ಕೆ ಪ್ರವಾಸಿಗರು ಬಂದು ಹೋಗಿದ್ದಾರೆ: ಬರುತ್ತಿದ್ದಾರೆ. ಕೆಲವರು ಇಲ್ಲಿನ ಬದುಕು, ಸಂಸ್ಕೃತಿಯನ್ನು ಅರಿಯಲು ಬಂದರೆ ಮತ್ತೆ ಕೆಲವರು ವ್ಯಾಪಾರ ವಹಿವಾಟು ಮಾಡಿ ಧನ ಸಂಪಾದನೆಗೆ ಬಂದಿದ್ದಾರೆ. ಇನ್ನು ಕೆಲವರು ಧರ್ಮಪ್ರಚಾರ, ತೀರ್ಥಯಾತ್ರೆ, ಪುಣ್ಯಪ್ರಾಪ್ತಿಗಾಗಿ ಬಂದು ಹೋಗಿದ್ದಾರೆ. ಹೀಗೆ ಬಂದವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಭಾರತದ ಬಗ್ಗೆ, ಭಾರತೀಯರ ಬಗ್ಗೆ, ಇಲ್ಲಿನ ಜನರ ಬದುಕು, ಸಂಸ್ಕೃತಿಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಂತಮ್ಮ ಭಾಷೆಗಳಲ್ಲಿ ಬರೆದಿದ್ದಾರೆ. ಅವೆಲ್ಲವೂ ಬಹುತೇಕ ಇಂಗ್ಲೀಷ್ ಭಾಷೆಯಲ್ಲಿವೆ. ಹೀಗೆ ಇಂಗ್ಲೀಷ್‌ಭಾಷೆಯಲ್ಲಿ ಹುದುಗಿ ಹೋಗಿದ್ದ ಹತ್ತು ಹಲವು ಪ್ರವಾಸಿಗಳ ದಾಖಲೆಗಳನ್ನು ಹುಡುಕಿ, ಕ್ರೋಢೀಕರಿಸಿ ಅಧ್ಯಯನ ಮಾಡಿ ಅವುಗಳೆಲ್ಲವನ್ನು ಕನ್ನಡಕ್ಕೆ ತಂದ ಕೀರ್ತಿ ಎಚ್.ಎಲ್. ನಾಗೇಗೌಡರದು.

'ಪ್ರವಾಸಿ ಕಂಡ ಇಂಡಿಯಾ' ಎಂಬ ಶೀರ್ಷಿಕೆಯಲ್ಲಿ ಏಳು ಬೃಹತ್ ಸಂಪುಟಗಳನ್ನು (ಎಂಟನೆಯದು ಅಚ್ಚಿನಲ್ಲಿದೆ) 1964ರಿಂದ ಅನುವಾದಿಸುತ್ತಾ ಬಂದಿರುವ ನಾಗೇಗೌಡರು ಈ ಸಂಪುಟಗಳುದ್ದಕ್ಕೂ ಓದುಗರಿಗೆ ಸಾಹಿತಿಗಳಾಗಿ, ವಿಮರ್ಶಕರಾಗಿ, ಇತಿಹಾಸಕಾರರಾಗಿ ಮತ್ತು ಭಾಷಾಂತರಕಾರರಾಗಿ ಗೋಚರಿಸುತ್ತಾರೆ. ಸುಮಾರು 500 ಪುಟಗಳಷ್ಟಿರುವ ಮೊದಲ ಸಂಪುಟದಲ್ಲಿ ಕ್ರಿ.ಪೂ. 5ನೆಯ ಶತಮಾನದಿಂದ ಕ್ರಿ.ಶ 14ನೆಯ ಶತಮಾನದವರೆಗಿನ ಒಟ್ಟು 38 ಗ್ರೀಕ್, ರೋಮನ್, ಚೀನಾ ಮತ್ತು ಅರಬ್ ಪ್ರವಾಸಿಗಳ, ಭೂಗೋಳ ಶಾಸ್ತ್ರಜ್ಞರ ಹಾಗೂ ಇತಿಹಾಸಕಾರರ ಭಾರತದ ಬಗೆಗಿನ ವರ್ಣನೆ, ವೃತ್ತಾಂತ ವಿವರಗಳನ್ನು ಅನುವಾದಿಸಿದ್ದಾರೆ. ಎರಡನೆಯ ಸಂಪುಟದಲ್ಲಿ ಕ್ರಿ.ಶ. 13ನೆಯ ಶತಮಾನದಿಂದ 17ನೆಯ ಶತಮಾನದ ಕೊನೆಯವರೆಗೆ ಭಾರತವನ್ನು ಸಂದರ್ಶಿಸಿದ 23 ಪ್ರವಾಸಿಗಳ ಕಥನವನ್ನು ನೀಡಿದ್ದಾರೆ. ಕರ್ನಾಟಕದ ಇತಿಹಾಸವನ್ನು ಕುರಿತಾದಂತೆ ಹಾಗೂ ವಿಜಯನಗರ ಸಾಮ್ರಾಜ್ಯದ ಬಗ್ಗೆ ಹೆಚ್ಚಿನ ವಿವರಗಳು ಈ ಸಂಪುಟದಲ್ಲಿ ಲಭ್ಯವಿರುವುದರಿಂದ ಕನ್ನಡಿಗರಿಗೆ ಈ ಸಂಪುಟ ಬಹುಮುಖ್ಯವಾದುದಾಗಿದೆ. ವಿಷಯ ವೈವಿಧ್ಯ ಮತ್ತು ನಿರೂಪಣೆಯ ದೃಷ್ಟಿಯಿಂದ ಸ್ವಾರಸ್ಯಕರವಾಗಿದ್ದು ಕ್ರಿ.ಶ. 1579ರಿಂದ 1619 ರವರೆಗೆ ಭೇಟಿ ನೀಡಿದ 16 ಮಂದಿ ಐರೋಪ್ಯ ಪ್ರವಾಸಿಗಳ ಕಥನಗಳನ್ನು ಕಟ್ಟಿಕೊಡುತ್ತಾರೆ. 'ಜಗತ್ತಿನ ಬಗ್ಗೆ ಹತ್ತು ಜನರು ಹೇಳುವುದನ್ನು ಕೇಳುವುದಕ್ಕಿಂತ ಒಂದು ಬಾರಿ ಕಣ್ಣಿಂದ ನೋಡುವುದು ಉತ್ತಮ' ಎಂಬ ಅಭಿಪ್ರಾಯವನ್ನಿರಿಸಿಕೊಂಡು ಪ್ರವಾಸ ಹೊರಟ ಇಟಲಿಯ ಲೋಡೋವಿಕೊದಿವತ್ತಿಯಾನಿಂದ (1506-1508) ಜರ್ಮನಿಯ ಮಾಡೆಲ್ ಸ್ಲೊ (1638-1640)ವರೆಗಿನ 15 ಮಂದಿ ಪ್ರವಾಸಿಗಳ ವರ್ಣನೆಗಳನ್ನು ನಾಲ್ಕನೆಯ ಸಂಪುಟವು ಒಳಗೊಂಡಿದ್ದರೆ, ಐದನೆಯ ಸಂಪುಟದಲ್ಲಿ ಫ್ರಾನ್ಸ್ ದೇಶದ ಫ್ರಾನ್ಸ್‌ಸ್ವಾಸ್ ಬೆರ್‌ನ್ಯೇ (1658-1667) ಮತ್ತು ಬ್ಯಾಪ್ಟಿಸ್ಟ್ ಟಾವೆರ್‌ನ್ಯೇ (1641-1667) ಎನ್ನುವ ಇಬ್ಬರು ಪ್ರವಾಸಿಗರ ಕಥನಗಳಿವೆ. ಆರನೆಯ ಸಂಪುಟವು ಇಟಲಿಯ ಏಕೈಕ ಪ್ರವಾಸಿಯಾದ ಮನೂಚಿಯ ಕಥನಕ್ಕೆ ಮೀಸಲಾಗಿದ್ದರೆ, ಏಳನೆಯ ಸಂಪುಟವು ಕ್ರಿ.ಶ.1608ರಿಂದ 1686ರವರೆಗಿನ

ಅವಧಿಯಲ್ಲಿ ಭಾರತಕ್ಕೆ ಭೇಟಿ ನೀಡಿದ ಹತ್ತುಮಂದಿ ವಿದೇಶಿ ಪ್ರವಾಸಿಗರ ಕಥನಗಳ ಅನುವಾದ ಸಂಗ್ರಹವಾಗಿದೆ.

ಈ ಸಂಪುಟಗಳ ವಿಶೇಷವೆಂದರೆ, ನಾಗೇಗೌಡರು ಮೊದಲ ಸಂಪುಟದಲ್ಲಿಯೇ ಪ್ರಾಮಾಣಿಕವಾಗಿ ನಿವೇದಿಸಿಕೊಂಡಿದ್ದಾರೆ. ಭಾರತಕ್ಕೆ ಸಂಬಂಧಿಸಿದಂತೆ ವಿವಿಧ ದೇಶದ, ವಿವಿಧ ಉದ್ದೇಶದ ಪ್ರವಾಸಿಗಳ ವರದಿ-ವೃತ್ತಾಂತಗಳನ್ನು ಬೇರೆ ಬೇರೆ ಆಕರಗಳಿಂದ ಸಂಗ್ರಹಿಸಿ, ಕನ್ನಡಿಸಿ, ಅವಶ್ಯವಾದಲ್ಲಿ ಅಡಿಟಿಪ್ಪಣಿಗಳನ್ನು ಕೊಟ್ಟು ಪ್ರವಾಸಿಗಳ ಹೇಳಿಕೆ ಸರಿಯೆ, ತಪ್ಪೆ ಎಂಬುದನ್ನು ವಿಶ್ಲೇಷಿಸಿ ವೈಜ್ಞಾನಿಕ ಸಂಗ್ರಹ ಮಾಡಿರುತ್ತೇನೆ. ಇತಿಹಾಸವಾಗಲೀ, ಸಾಹಿತ್ಯವಾಗಲೀ ತಮ್ಮ ಅಭ್ಯಾಸ ವಿಷಯ ಆಗಿರಲಿಲ್ಲವೆಂದೂ ಈ ಕೆಲಸದಲ್ಲಿ ಅನೇಕ ಲೋಪದೋಷಗಳನ್ನು ಕಾಣಲು ಸಾಧ್ಯವೆಂದು' ತಿಳಿಸುತ್ತ ತಮ್ಮದಲ್ಲದ ಕ್ಷೇತ್ರದಲ್ಲಿ ಕೆಲಸ ಮಾಡಿದ್ದಕ್ಕೆ ಆ ಕ್ಷೇತ್ರದ ತಜ್ಞರ ಕ್ಷಮೆ ಬೇಡಿರುವುದು ಗೌಡರ ದೊಡ್ಡಗುಣವನ್ನು ತೋರಿಸುತ್ತದೆ.

ಪ್ರತಿಯೊಬ್ಬ ಪ್ರವಾಸಿಯ ಪ್ರವಾಸಕಥನವನ್ನು ವಿವರಿಸುವುದಕ್ಕೆ ಮೊದಲು ಗೌಡರು ಆ ಪ್ರವಾಸಿಯ ಜೀವನ ಮತ್ತು ವ್ಯಕ್ತಿತ್ವವನ್ನು ಪರಿಚಯಿಸುತ್ತಾರೆ. ಪ್ರವಾಸಿಗಳ ಹೇಳಿಕೆಗಳನ್ನು ತಿದ್ದಿ ಸರಿಯೆ ಇಲ್ಲವೆ ತಪ್ಪೆ ಎಂಬುದಕ್ಕೆ ಆಧಾರ ಸಹಿತ ಅಡಿಟಿಪ್ಪಣಿಗಳಲ್ಲಿ ವಿವರಿಸಿದ್ದಾರೆ. ಸುದೀರ್ಘವಾದ ಉಪಯುಕ್ತ ಪ್ರಸ್ತಾವನೆ, ಗ್ರಂಥಋಣ ನೀಡಿರುವುದರಿಂದ ಗ್ರಂಥದ ಉಪಯುಕ್ತತೆ ಇಮ್ಮಡಿಸಿದೆ. ನಾಗೇಗೌಡರ ಭಾಷೆ ಸರಳವೂ, ಸ್ಪಷ್ಟವೂ ಆಗಿರುವುದರಿಂದ ನಿರೂಪಣೆ ಸೊಗಸಾಗಿದೆ, ಸ್ವಾರಸ್ಯಕರವಾಗಿದೆ, ಸರಾಗವಾಗಿದೆ. ಇಂತಹುದೊಂದು ಅದ್ಭುತವಾದ, ಮಹತ್ತರವಾದ ಕಾರ್ಯವನ್ನು ನಿರ್ವಹಿಸುವುದರ ಮೂಲಕ ನಾಗೇಗೌಡರು ಕನ್ನಡಿಗರೆಲ್ಲರ ಕೃತಜ್ಞತೆಗಳಿಗೆ ಪಾತ್ರರಾಗಿದ್ದಾರೆ. ರಾಷ್ಟ್ರಕವಿ ಕುವೆಂಪು ಪ್ರವಾಸಿ ಕಂಡ ಇಂಡಿಯಾ ಸಂಪುಟಗಳ ಬಗ್ಗೆ ಹೀಗೆ ಹೇಳಿದ್ದಾರೆ: "ಪ್ರವಾಸಿ ಕಂಡ ಇಂಡಿಯಾ" ನಾಗೇಗೌಡರ ವಿದ್ವತ್ತಿಗೂ, ಅವರ ಅನುಪಮ ಸಾಹಸಕ್ಕೂ ಕನ್ನಡಿಯಾಗಿದ್ದು, ಕನ್ನಡ ಸಾಹಿತ್ಯಕ್ಕೊಂದು ಅಪೂರ್ವ ಅದ್ವಿತೀಯ ಕೊಡುಗೆಯಾಗಿದೆ. ಸುಮಾರು ಎರಡೂವರೆ ಸಾವಿರ ವರ್ಷಗಳ ಬಹು ವರ್ಣರಂಜಿತವೂ ನಾನಾ ವಿಧ ಮನೋಧರ್ಮ ಸಂಪ್ರದಾಯ ಸಮೃದ್ಧವೂ ಆದ ಭಾರತೀಯ ಜೀವನದ ಇತಿಹಾಸದ ಪುನಸೃಷ್ಟಿ ಇಲ್ಲಿ ನಡೆದಿದೆ. ಇತಿಹಾಸಕಾರರಿಗೆ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಕೃಷಿ ಮಾಡುವವರಿಗೆ, ಸಮಾಜ ಹಾಗೂ ಜನಾಂಗ ವಿಜ್ಞಾನಿಗಳಿಗೆ, ಜಾನಪದ ವಿದ್ವಾಂಸರಿಗೆ, ಪುರಾತತ್ತ್ವ ಸಂಶೋಧಕರಿಗೆ, ಸಾಹಿತಿಗಳಿಗೆ ಇದೊಂದು ತವನಿಧಿ ರೂಪದ ಆಕರಗ್ರಂಥವಾಗಿದೆ. ಸೀಮಾಕೃತಿಯಂತಿರುವ ಈ ಅಮೂಲ್ಯಗ್ರಂಥ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದೆ."

### ಜಾನಪದ

ನಾಗೇಗೌಡರ ಮತ್ತೊಂದು ಆಸಕ್ತ ಕ್ಷೇತ್ರ ಜಾನಪದ. ಕನ್ನಡ ಜಾನಪದಕ್ಕೆ ಅವರು ಸಲ್ಲಿಸಿರುವ ಸೇವೆ ಅವಿಸ್ಮರಣೀಯವಾದುದು. ಸಾಹಿತ್ಯಕವಾಗಿ, ಸಾಂಘಿಕವಾಗಿ, ಸಾಂಸ್ಥಿಕವಾಗಿ ಜಾನಪದಕ್ಕೆ ಅವರು ನೀಡಿರುವ ಕೊಡುಗೆ ಅತ್ಯಂತ ಅಮೂಲ್ಯವಾದುದು.

ಜನಪದ ಕಲೆ, ಸಾಹಿತ್ಯ, ಸಂಸ್ಕೃತಿ ನಾಗೇಗೌಡರ ಬದುಕಿನ ಉಸಿರು. ಹುಟ್ಟಿನಿಂದಲೇ ಜಾನಪದ ಪ್ರೀತಿ ಅವರಲ್ಲಿ ರಕ್ತಗತವಾಗಿತ್ತು. ತಾವು ಬಿ.ಎಸ್‌ಸಿ. ಓದುತ್ತಿರುವಾಗಲೇ ಜನಪದ ಸಾಹಿತ್ಯ ಸಂಗ್ರಹದತ್ತ ಗಮನ ಹರಿಸಿದ್ದರು. ಜನಪದ ಸಾಹಿತ್ಯದ ಬಗ್ಗೆ ಅವರಿಗೆ ಅಪಾರವಾದ ಒಲವು. ಸಾಹಿತ್ಯ ಸಂರಕ್ಷಣೆಯ ಬಗ್ಗೆ ಅಪರಿಮಿತವಾದ ಉತ್ಸಾಹ. ಸರ್ಕಾರದ ಅಧಿಕಾರಿಯಾಗಿದ್ದಾಗ ಗ್ರಾಮೀಣರ ಒಡನಾಟದಿಂದಾಗಿ ಅವರ ಮನಸ್ಸು ಜಾನಪದದತ್ತ, ಜನಪದ ಸಂಸ್ಕೃತಿಯನ್ನು ಬೆಳೆಸುವತ್ತ, ಸಂಸ್ಕೃತಿಯ ಪ್ರತಿಬಿಂಬಗಳಾದ ಗ್ರಾಮೀಣ ವಸ್ತುಗಳನ್ನು ಉಳಿಸುವತ್ತ ತುಡಿಯಲಾರಂಭಿಸಿತು. "ಜಾನಪದ ಸಂಗ್ರಹಣೆ, ಸಂಪಾದನೆ, ಧ್ವನಿಮುದ್ರಣ ಕಾರ್ಯ ಮೊದಲು ಆಗಬೇಕಾದ ಕೆಲಸ. ನಾಗರೀಕತೆಯ ಸೋಂಕಿನಿಂದಾಗಿ ಜಾನಪದ ಮೂಲೆಗುಂಪಾಗುತ್ತಿದೆ. ಆ ದಿಸೆಯತ್ತ ಸಾಹಿತಿಗಳು, ವಿದ್ವಾಂಸರು, ಬುದ್ಧಿಜೀವಿಗಳು ಗಮನ ಹರಿಸಬೇಕು. ಒಬ್ಬೊಬ್ಬ ಜಾನಪದ ಕಲಾವಿದ ಸತ್ತಾಗಲೂ ಒಂದೊಂದು ಗ್ರಂಥಭಂಡಾರವೇ ಮುಳುಗಿಹೋದ ಹಾಗೆ" ಎಂದು ಪರಿತಪಿಸಿದ ಅವರು ಜಾನಪದಕ್ಷೇತ್ರಕ್ಕೆ ತಮ್ಮನ್ನು ಒಪ್ಪಿಸಿಕೊಂಡರು. 1971ರ ಅಕ್ಟೋಬರ್ 27, 28 ಮತ್ತು 29 ಈ ಮೂರು ದಿನಗಳ ಕಾಲ ನಾಗಮಂಗಲದಲ್ಲಿ 'ಅಖಿಲ ಕರ್ನಾಟಕ ಜಾನಪದ ಸಮ್ಮೇಳನ' ನಡೆಯಲು ಮೂಲ ಕಾರಣರಾದರು. ರಾಷ್ಟ್ರಕವಿ ಕುವೆಂಪುರವರನ್ನು ಬರಮಾಡಿಕೊಂಡು ಜಾನಪದ ತೇರು ಮುನ್ನಡೆಯಲು ಕಾರಣಕರ್ತರಾದರು. ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಗಳಾಗಿದ್ದಾಗ ಅವರು ಮಂಗಳೂರಿನಲ್ಲಿ ನಡೆಸಿದ ಜನಪದ ಕಲಾ ಮಹೋತ್ಸವಗಳು ಮತ್ತು ಅಖಿಲ ಕರ್ನಾಟಕ ದ್ವಿತೀಯ ಜಾನಪದ ಮಹಾಸಮ್ಮೇಳನವು ಜಾನಪದಕ್ಷೇತ್ರದ ಅಚ್ಚಳಿಯದ ದಾಖಲೆಗಳು.

ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಸಮಿತಿಗಳನ್ನು ಬಳಸಿಕೊಂಡು ಕ್ಷೇತ್ರ ಕಾರ್ಯಕರ್ತರನ್ನು ಪ್ರತಿ ಜಿಲ್ಲೆಗೂ ನೇಮಿಸಿ ಜನಪದ ಕಲೆಗಳ ಬಗ್ಗೆ ವ್ಯಾಪಕವಾಗಿ ಮಾಹಿತಿ ಸಂಗ್ರಹಕಾರ್ಯವನ್ನು ನಡೆಸಿದರು. ಅನೇಕ ಜಿಲ್ಲೆಗಳಲ್ಲಿ ಜಿಲ್ಲಾ ಮಟ್ಟದ ಕಲಾ ಮಹೋತ್ಸವಗಳು ನಡೆದವು. ರಾಜ್ಯಮಟ್ಟದ ಕಲಾ ಮಹೋತ್ಸವವಂತೂ ಅತ್ಯಂತ ಅದ್ದೂರಿಯಾಗಿ ನಡೆಯಿತು. ಕರ್ನಾಟಕದ ಜನಪದ ಕಲೆಗಳ ಬಗ್ಗೆ ಗ್ರಂಥಗಳ ಪ್ರಕಟಣೆ, ಜನಪದ ಕಲೆಗಳ ಚಲನ ಚಿತ್ರೀಕರಣ, ನಾಡಿನ ಜನಪದ ಸಾಹಿತ್ಯದ ಪ್ರಕಟಣೆ ಇಂಥ ಕೆಲವು ಪ್ರಮುಖ ಚಟುವಟಿಕೆಗಳ ಹಿನ್ನೆಲೆಯಲ್ಲಿ ನಾಗೇಗೌಡರ ಜಾನಪದ ಆಸಕ್ತಿ ವಿಶೇಷವಾಗಿ ಕೆಲಸ ಮಾಡಿರುವುದನ್ನು ಕಾಣಬಹುದು.

"ನಾಡಿನ ಜನಸಂಖ್ಯೆಯಲ್ಲಿ ಶೇ.20ರಷ್ಟಿರುವ ನಗರವಾಸಿಗಳನ್ನು ತೃಪ್ತಿಪಡಿಸುವ ಸಂಗೀತ, ನಾಟಕ, ನೃತ್ಯ ಮೊದಲಾದ ಕಲೆಗಳಿಗೆ ಒಂದೊಂದಕ್ಕೂ ಪ್ರತ್ಯೇಕ ಅಕಾಡೆಮಿಗಳಿರುವುದಾದರೆ ಹಳ್ಳಿಗಳಲ್ಲಿ ವಾಸಿಸುವ ಶೇ. 80ರಷ್ಟು ಗ್ರಾಮೀಣ ಜನತೆಯ ಬಾಳಿಗೆ ರಸವುಣಿಸಿ ಅವರ ಮನಸ್ಸನ್ನು ತಣಿಸುವ ಜನಪದ ಕಲೆ, ಸಾಹಿತ್ಯಗಳಿಗೆ ಒಂದು ಅಕಾಡೆಮಿ ಬೇಡವೆ?" ಎಂದು ಸರ್ಕಾರವನ್ನು ಬಲವಾಗಿ ಒತ್ತಾಯಿಸಿ 'ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ'ಯ ಸ್ಥಾಪನೆಗೆ ಕಾರಣರಾದರು. ಎರಡು ಅವಧಿಗಳ ಕಾಲ ಅಕಾಡೆಮಿಯ ಅಧ್ಯಕ್ಷರಾಗಿ ಸಮರ್ಥವಾಗಿ ಕಾರ್ಯನಿರ್ವಹಿಸಿದರು.

ಜನಪದ ಕಲಾವಿದರನ್ನು ಕಂಡರೆ ನಾಗೇಗೌಡರಿಗೆ ಅನನ್ಯವಾದ ಪ್ರೀತಿ. ಅವರ ಕ್ಷೇಮಾಭ್ಯುದಯದ ಬಗ್ಗೆ ಅಪಾರವಾದ ಕಾಳಜಿ. ಅವರಿಗಾಗಿ ಗೌಡರು ಸಾಕಷ್ಟು ಹಣ ಖರ್ಚು ಮಾಡಿದ್ದಾರೆ. ಕಷ್ಟ, ಕಾಯಿಲೆ ಎಂದು ಬಂದವರಿಗೆ ಹಣ ಕೊಟ್ಟಿದ್ದಾರೆ; ಅವರ ಮಕ್ಕಳುಗಳಿಗೆ ಕೆಲಸ ಕೊಡಿಸಿದ್ದಾರೆ. ಮನೆ ಮಾರು, ಜಮೀನು ಕೊಡಿಸಿದ್ದಾರೆ. ಈವತ್ತಿಗೂ ಕನ್ನಡನಾಡಿನ ಯಾವುದೇ ಭಾಗದಲ್ಲಿ ಜಾನಪದ ಸಮ್ಮೇಳನಗಳು ಜರುಗಿದರೂ ಅಲ್ಲಿಗೆ ಭೇಟಿ ನೀಡಿ,

ಕಲಾವಿದರ ಕಲಾಪ್ರದರ್ಶನಗಳನ್ನು ವೀಕ್ಷಿಸಿ, ಅವರ ಯೋಗಕ್ಷೇಮ ವಿಚಾರಿಸಿ ಸೂಕ್ತ ಉತ್ತರ ಪಡೆದು ಸಂಭಾವನೆ ಕೊಟ್ಟು ಗೌರವಿಸಿದ್ದಾರೆ. ಸೋಬಾನೆಯವರು, ಕೋಲಾಟದವರು, ಗೊಂಬೆಯಾಟದವರು, ದೊಂಬಿದಾಸರು, ಹೆಳವರು ಅನೇಕ ಬಗೆಯ ಕಲಾವಿದರನ್ನು ಬರಮಾಡಿಕೊಂಡು ಅವರ ನಡುವೆ ಕಾಲ ಕಳೆಯುವುದೆಂದರೆ ನಾಗೇಗೌಡರಿಗೆ ಇನ್ನಿಲ್ಲದ ಆನಂದ.

ಜನಪದ ಕಲೆ, ಸಂಸ್ಕೃತಿ, ಆಚರಣೆಗಳನ್ನು ಕುರಿತಾದಂತೆ ನಾಗೇಗೌಡರ ಮಾರ್ಗದರ್ಶನದಲ್ಲಿ ಮೂಡಿ ಬಂದ 'ಸಿರಿಗಂಧ' ಎಂಬ ಶೀರ್ಷಿಕೆಯ ಜಾನಪದ ದಾಖಲಾತಿ ಸಾಕ್ಷ್ಯಚಿತ್ರವು ನೂರಾಎಂಟು ಕಂತುಗಳಲ್ಲಿ ಬೆಂಗಳೂರು ದೂರದರ್ಶನದಲ್ಲಿ ಪ್ರಸಾರವಾಗಿದ್ದು ಆಬಾಲವೃದ್ಧರಾದಿಯಾಗಿ ಎಲ್ಲರ ಮನಸ್ಸನ್ನು ರಂಜಿಸಿದೆ.

**ಸಾಹಿತ್ಯಕ ಜಾನಪದ ಸಾಧನೆ**

ಸಂಘ ಸಂಸ್ಥೆಗಳ ಮೂಲಕ ಜಾನಪದ ಚಟುವಟಿಕೆಗಳಿಗೆ ಪ್ರೇರಕರಾಗಿ ನಿಂತ ನಾಗೇಗೌಡರು ಅತ್ಯುತ್ತಮ ಜಾನಪದ ಸಂಗ್ರಾಹಕ, ಸಂಶೋಧಕರಾಗಿ ಹೆಸರಾಗಿದ್ದಾರೆ.

**1) ಸೋಬಾನೆ ಚಿಕ್ಕಮ್ಮನ ಪದಗಳು:** ನಾಗೇಗೌಡರು ಸಂಗ್ರಹಿಸಿ, ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ 'ಸೋಬಾನೆ ಚಿಕ್ಕಮ್ಮನ ಪದಗಳು' ಕನ್ನಡ ಜನಪದ ಗೀತ ಸಂಗ್ರಹಗಳಲ್ಲಿ ಅತ್ಯುತ್ತಮ ಕೃತಿಯಾಗಿದೆ. ತಮ್ಮ ಹುಟ್ಟೂರಾದ ಹೆರಗನ ಹಳ್ಳಿಯ ಸೋಬಾನೆ ಚಿಕ್ಕಮ್ಮನಂಥ ಪ್ರತಿಭಾವಂತ ಕಲಾವಿದೆಯ ಸಮಗ್ರ ಸಾಹಿತ್ಯವನ್ನು ಸಂಗ್ರಹಿಸುವುದರ ಮೂಲಕ ಕನ್ನಡಕ್ಕೆ ಉಳಿಸಿಕೊಟ್ಟಿದ್ದಾರೆ. ಚಿಕ್ಕಮ್ಮನೆಂದರೆ ನಾಗೇಗೌಡರಿಗೆ ಅಪಾರವಾದ ಗೌರವ. ಆಕೆಯ ಸಾಹಿತ್ಯವನ್ನು ಮತ್ತೆ ಮತ್ತೆ ಸಂಗ್ರಹಿಸಿ ಮರೆತುಹೋದ ಭಾಗಗಳನ್ನು ಹೆಕ್ಕಿ ತೆಗೆದಿದ್ದಾರೆ. ಜೀಶಂಪ ಹೇಳುವಂತೆ 'ಹೆರಗನ ಹಳ್ಳಿ'ಯ ಮುರುಕಲು ಮನೆಯೊಂದರಲ್ಲಿ ಎಷ್ಟೋ ವರ್ಷ ಅಜ್ಞಾತಳಾಗಿ ಉಳಿದಿದ್ದ ಚಿಕ್ಕಮ್ಮ ತನ್ನ 80-90ರ ವಯಸ್ಸಿನಲ್ಲಿ ನಾಗೇಗೌಡರ ಜಾನಪದ ಜೋಳಿಗೆಗೆ ತನ್ನ ಸಮಸ್ತ ಸಾಹಿತ್ಯವನ್ನು ಧಾರೆ ಎರೆದು ತನ್ನ ಜನ್ಮವನ್ನು ಸಾರ್ಥಕಪಡಿಸಿಕೊಂಡಳು. ಚಿಕ್ಕಮ್ಮನ ಸಾಹಿತ್ಯವನ್ನು ಹಿಡಿದಿಟ್ಟ ನಾಗೇಗೌಡರು ತಾವೂ ಕೃತಕೃತ್ಯರಾದರು.."

'ಸೋಬಾನೆ ಚಿಕ್ಕಮ್ಮನ ಪದಗಳು' ಸಂಕಲನವು ಕನ್ನಡ ಜನಪದ ಗೀತ ಸಂಗ್ರಹಗಳಲ್ಲಿ ಅನೇಕ ದೃಷ್ಟಿಗಳಿಂದ ಮುಖ್ಯವಾದುದಾಗಿದ್ದು ತನ್ನದೇ ಆದ ಸ್ಥಾನವನ್ನು ಕಾಯ್ದುಕೊಂಡಿದೆ. ಕಾಲದ ದೃಷ್ಟಿಯಿಂದ, ಸತ್ವದ ದೃಷ್ಟಿಯಿಂದ, ಹಾಡುಗಳಲ್ಲಿನ ಶ್ರೀಮಂತ ಗುಣದ ದೃಷ್ಟಿಯಿಂದ ಆದ್ಯಕೃತಿ ಎನಿಸಿಕೊಂಡಿದೆ. ನಾಗೇಗೌಡರದು ಅಚ್ಚುಕಟ್ಟಾದ ಸಂಗ್ರಹ ಕಾರ್ಯ. ಸಂಪಾದನೆಯ ಹಂತದಲ್ಲಿ ಪ್ರಯೋಗಗಳನ್ನು ಕೈಗೊಂಡಿದ್ದಾರೆ. ಚಿಕ್ಕಮ್ಮನ ಹಾಡುಗಳ ವಿವಿಧ ಧಾಟಿಗಳನ್ನು ಕಾಯ್ದಿಡುವ ಮಹತ್ತರ ಕೆಲಸವನ್ನು ಕೈಗೊಂಡಿರುವುದಲ್ಲದೆ ಆ ಹಾಡುಗಳಿಗೆ ಸ್ವರ ಪ್ರಸ್ತಾರ ಹಾಕಿಸಿ ಅವುಗಳನ್ನು ಶಾಸ್ತ್ರೀಯವಾದ ಧಾಟಿಗಳಲ್ಲಿ ಕ್ರಮಬದ್ಧಗೊಳಿಸಿ ಸಂಗೀತ ಬಲ್ಲವರಿಂದ ಏಕ ಕ್ರಮದಲ್ಲಿ ಹಾಡುವಂತಹ ಅನುಕೂಲ ಮಾಡಿಕೊಟ್ಟಿರುವ ಮೊತ್ತಮೊದಲ ಪ್ರಯತ್ನ ಅವರದಾಗಿದೆ.

ಮದುವೆ ಹಾಡುಗಳ ಮಟ್ಟಿಗಂತೂ ಇದು ಹೆಚ್ಚು ಸಮಗ್ರವಾದ ಸಂಗ್ರಹವಾಗಿದೆ. ಸೋಬಾನೆ ಚಿಕ್ಕಮ್ಮನ ಜೀವನಚರಿತ್ರೆಯನ್ನು ವಕ್ತೃವಿನ ನಿರೂಪಣಾ ವಿಧಾನದೊಂದಿಗೆ ಅತ್ಯಂತ ಆಪ್ತವಾಗಿ ದಾಖಲಿಸಿರುವುದು ಗಮನಾರ್ಹ ಅಂಶವಾಗಿದೆ. ಕೃತಿಯ ಮಹತ್ವವನ್ನು ಹೆಚ್ಚಿಸಿರುವ ಹಲವಾರು ಅಂಶಗಳಲ್ಲಿ ಬಹುಮುಖ್ಯವಾದುವು. ಹಾಡುಗಳಿಗೆ ಸಂಬಂಧಿಸಿದಂತೆ ನಾಗೇಗೌಡರು ಒದಗಿಸಿರುವ ಟಿಪ್ಪಣಿಗಳು, ಬಹುಮಟ್ಟಿಗೆ ಸಮರ್ಪಕವಾಗಿದ್ದು, ಹಾಡುಗಳ ಅರ್ಥ ತಿಳಿಯಲು, ಸಂಬಂಧಪಟ್ಟ ಜನರ ಜೀವನ ಕ್ರಮ ಮತ್ತು ನಂಬಿಕೆ, ಸಂಪ್ರದಾಯಗಳನ್ನರಿಯಲು ನೆರವಿಗೆ ಬರುತ್ತದೆ. ವಿಷಯ ನಿರೂಪಣೆಯಲ್ಲಿ ಅನೇಕ ವಿವರಗಳಿವೆ. ಸಂಪಾದಕರು ತಮ್ಮ ಗಾಢವಾದ ಜಾನಪದ ತಿಳುವಳಿಕೆಯಿಂದ ಅನೇಕ ಶಬ್ದಗಳಿಗೆ ಅರ್ಥಗಳನ್ನು ನೀಡಿರುತ್ತಾರೆ. ಈ ಎಲ್ಲಾ ಕಾರಣಗಳಿಂದಾಗಿ 'ಸೋಬಾನೆ ಚಿಕ್ಕಮ್ಮನ ಪದಗಳು' ಕೃತಿಯ ಸಂಗ್ರಹ ಮತ್ತು ಸಂಪಾದನಾ ಕಾರ್ಯವು ಸಮಗ್ರವೂ, ಪರಿಪೂರ್ಣವೂ ಆಗಿರುತ್ತದೆ.

**2) ಪದವವೆ ನಮ್ಮ ಎದೆಯಲ್ಲಿ :** ನಾಗೇಗೌಡರು ಸಂಪಾದಿಸಿ, ಬೆಂಗಳೂರು ವಿಶ್ವವಿದ್ಯಾಲಯವು ಪ್ರಕಟಿಸಿರುವ ಈ ಗೀತಸಂಕಲನದಲ್ಲಿ ಹನ್ನೊಂದು ದಳಗಳಿದ್ದು, ಒಂದೊಂದು ದಳದಲ್ಲೂ ಒಂದೊಂದು ಪ್ರಕಾರಕ್ಕೆ ಸಂಬಂಧಪಟ್ಟ ಗೀತೆಗಳಿವೆ. ಈ ಬೃಹತ್ ಗೀತ ಸಂಕಲನದಲ್ಲಿ ಸೋಬಾನೆ ಪದಗಳು, ಒಸಗೆ ಪದಗಳು, ಹಚ್ಚೆ ಹೊಯ್ಯುವ ಪದಗಳು, ಮಕ್ಕಳ ಪದಗಳು, ಕೋಲಾಟದ ಪದಗಳು, ಲಾಲಿ ಪದಗಳು, ಬಾಂಧವ್ಯದ ಪದಗಳು, ದೇವಿ ಮತ್ತು ದೇವರು, ಹಾಡ್ಗತೆಗಳು, ಹೊಗಳುವ ಪದಗಳು ಇತ್ಯಾದಿ ಪ್ರಕಾರಗಳಿವೆ. ಈ ಸಂಕಲನದಲ್ಲಿರುವ ಗೀತೆಗಳನ್ನು ಗಂಡಸರು, ಹೆಂಗಸರು ಮತ್ತು ಮಕ್ಕಳುಗಳಿಂದ ಬೇರೆ ಬೇರೆ ಪ್ರದೇಶಗಳಲ್ಲಿ, ಬೇರೆ ಬೇರೆ ಅವಧಿಯಲ್ಲಿ ಸಂಗ್ರಹಿಸಿದ್ದಾರೆ. ಇಲ್ಲಿನ ಗೀತಸಾಹಿತ್ಯದ ವಕ್ತೃಗಳು ವಿಭಿನ್ನ ಸಂಸ್ಕೃತಿ, ವಿಭಿನ್ನ ವಯೋಮಾನಕ್ಕೆ ಸೇರಿದವರಾದುದರಿಂದ ಅವರು ಹಾಡಿರುವ ಸಾಹಿತ್ಯದಲ್ಲಿಯೂ ಅದರ ಪರಿಣಾಮವು ಗೋಚರಿಸುತ್ತದೆ.

ಸಂಶೋಧಕರ ಆಸಕ್ತಿಗೆ ಕಾರಣವಾದ, ಸಾಹಿತ್ಯದ ಸ್ವಾರಸ್ಯದಿಂದ ಕೂಡಿದ ಇಪ್ಪೊಂದು ಬಗೆಯ ಗೀತೆಗಳು ಈ ಸಂಕಲನದಲ್ಲಿ ಲಭ್ಯವಿರುವುದರಿಂದ ಇದೊಂದು ಮಹತ್ವಪೂರ್ಣ ಸಂಕಲನ.

**3) ಕರ್ನಾಟಕದ ಜನಪದ ಕಥೆಗಳು:** ನಾಗೇಗೌಡರ ಮೂರನೆಯ ಸಂಕಲನವಾದ ಈ ಕೃತಿಯು ಜನಪದ ಕಥೆಗಳ ಸಂಕಲನ. ಸಮಗ್ರ ಕರ್ನಾಟಕದ ಸಂಸ್ಕೃತಿಯನ್ನು ಅಧ್ಯಯನ ಮಾಡುವ ದೃಷ್ಟಿಯಿಂದ ಈ ಸಂಗ್ರಹ ಮಹತ್ವದ್ದಾಗಿದೆ. ಈ ಸಂಕಲನದಲ್ಲಿ ಕರ್ನಾಟಕದ 19 ಜಿಲ್ಲೆಗಳನ್ನು ಪ್ರತಿನಿಧಿಸುವ ಸುಮಾರು ನೂರು ಕಥೆಗಳಿವೆ. ಇದರಿಂದ ಕಥೆಗಳಲ್ಲಿ ವೈವಿಧ್ಯವಿದೆ. ಕಥೆಗಳ ಸಾಂಸ್ಕೃತಿಕ ಪರಿಸರ ವಿಭಿನ್ನವಾಗಿದ್ದು, ಭಾಷಾ ವೈವಿಧ್ಯವಿರುವುದರಿಂದ ಕನ್ನಡ ಜನಪದ ಕಥೆಗಳ ಒಂದು ಗಮನಾರ್ಹ ಸಂಕಲನ.

**4) ಹೆಳವರು ಮತ್ತು ಅವರ ಕಾವ್ಯಗಳು :** ಸುಮಾರು 15 ವರ್ಷಗಳ ಸಂಶೋಧನೆಯ ಫಲವಾಗಿ ರೂಪುಗೊಂಡ ಕೃತಿ. 63 ಪುಟಗಳಷ್ಟು ಸುದೀರ್ಘವಾದ ಪ್ರಸ್ತಾವನೆಯೊಂದಿಗೆ 378 ಪುಟಗಳಲ್ಲಿ ಹೆಳವರು ಮತ್ತು ಅವರ ಕುಲಗಳ ಮೂಲ ಹಾಗೂ ಅವರು ಹಾಡುವ ಕಾವ್ಯಗಳನ್ನು ವಿಸ್ತಾರವಾಗಿ ನಿರೂಪಿಸಿದ್ದಾರೆ. ಅನುಬಂಧದಲ್ಲಿ ಹೆಳವರ ಬಗ್ಗೆ ಇರುವ ಪುರಾಣ, ಕಥೆ, ಶಾಸನವನ್ನು ಸಂಪಾದಿಸಿಕೊಟ್ಟಿದ್ದಾರೆ. ಹೆಳವರನ್ನು ಕುರಿತಾದ ಹೆಚ್ಚಿನ ಅಧ್ಯಯನಕ್ಕೆ ಈ ಕೃತಿ ಆಕರಗ್ರಂಥ.

**5) ಎಸೆನ್ಸಿಯಲ್ಸ್ ಆಫ್ ಕರ್ನಾಟಕ ಫೋಕ್‌ಲೋರ್ :** ಕರ್ನಾಟಕದ ಜಾನಪದ ಪರಂಪರೆಯನ್ನು ಕನ್ನಡೇತರರಿಗೆ ಮತ್ತು ಪಾಶ್ಚಾತ್ಯರಿಗೆ ತಿಳಿಯಪಡಿಸುವ ಉದ್ದೇಶದಿಂದ ನಾಗೇಗೌಡರು ವಿಶ್ರಾಂತ ಇಂಗ್ಲೀಷ್ ಪ್ರಾಧ್ಯಾಪಕರಾದ ಎಚ್.ಎ.ರಾಮಕೃಷ್ಣ ಅವರೊಂದಿಗೆ ಸೇರಿ ಸುಮಾರು 400 ಪುಟಗಳ ಇಂಗ್ಲೀಷ್ ಕೃತಿಯನ್ನು ರಚಿಸಿದ್ದಾರೆ. Essentials of Karnataka Folklore ಎಂಬ ಈ ಕೃತಿಯು ಸುಮಾರು 64 ವರ್ಣಚಿತ್ರಗಳನ್ನು, 16 ಕಪ್ಪು ಬಿಳುಪು ಚಿತ್ರಗಳನ್ನು ಒಳಗೊಂಡಿದೆ. ಇವೆಲ್ಲವೂ ಕರ್ನಾಟಕ ಜನಪದ ಕಲೆಗಳಿಗೆ ಸಂಬಂಧಪಟ್ಟ ಚಿತ್ರಗಳಾಗಿರುತ್ತವೆ. ಸಮಗ್ರ ಕರ್ನಾಟಕ ಜಾನಪದವನ್ನು ಸ್ಥೂಲವಾಗಿ ಪರಿಚಯಿಸುವ ಈ ಕೃತಿಯು ಕನ್ನಡೇತರರಿಗೆ ಹೆಚ್ಚಿನ ಮಾಹಿತಿಯನ್ನು ಒದಗಿಸಿಕೊಡುತ್ತದೆ.

**6) ಕನ್ನಡ ಜಾನಪದ ಕೋಶ :** ಕನ್ನಡದಲ್ಲಿ ಅನೇಕ ನಿಘಂಟುಗಳಿವೆ. ಆದರೆ ಪ್ರತ್ಯೇಕವಾಗಿ ಜಾನಪದಕ್ಕೆ ಮೀಸಲಾದ ಶಬ್ದಾರ್ಥ ನಿಘಂಟು ಎಂಬುದಿರಲಿಲ್ಲ. ಈ ಕೊರತೆಯನ್ನು ಮನಗಂಡ ನಾಗೇಗೌಡರು, ಬಳಕೆ ತಪ್ಪುತ್ತಿರುವ ಗ್ರಾಮೀಣ ಶಬ್ದಗಳನ್ನು ಗುರುತಿಸಿ ಅವುಗಳ ಅರ್ಥ, ವಿಶೇಷಾಂಶಗಳು, ಪ್ರಯೋಗಗಳೊಂದಿಗೆ ಕನ್ನಡ ಜಾನಪದ ಕೋಶವನ್ನು ರಚಿಸುವ ಯೋಜನೆಯನ್ನು ಹಮ್ಮಿಕೊಂಡರು. ಫಲವಾಗಿ ನಾಗೇಗೌಡರ ಪ್ರಧಾನ ಸಂಪಾದಕತ್ವದಲ್ಲಿ ಸುಮಾರು ಒಂದು ಸಾವಿರ ಪುಟಗಳ ವ್ಯಾಪ್ತಿಯಲ್ಲಿ ಸುಮಾರು 15000ಕ್ಕೂ ಹೆಚ್ಚು ಜನಪದ ಶಬ್ದಗಳನ್ನು ಸಂಗ್ರಹಿಸಿ ಅವುಗಳಿಗೆ ಅರ್ಥ, ಪ್ರಯೋಗ, ವಿಶೇಷಾಂಶಗಳನ್ನು ನೀಡಿ ಕನ್ನಡ ಜಾನಪದ ಕೋಶವನ್ನು ಹೊರತಂದಿದ್ದಾರೆ. ಜಾನಪದ ಆಸಕ್ತರು, ವಿದ್ಯಾರ್ಥಿಗಳು, ಅಭ್ಯಾಸಿಗಳಿಗೆ ಇದೊಂದು ಅಮೂಲ್ಯವಾದ ಆಕರ ಗ್ರಂಥ. ಈ ಕೋಶವನ್ನು ಟಿ.ಆರ್.ಮಹಾದೇವಯ್ಯನವರು ಸಂಪಾದಿಸಿಕೊಟ್ಟಿದ್ದಾರೆ.

ಮೇಲಿನ ಜಾನಪದ ಕೃತಿಗಳೇ ಅಲ್ಲದೆ ನಾಗೇಗೌಡರ ಪ್ರಧಾನ ಸಂಪಾದಕತ್ವದಲ್ಲಿ, ಚಕ್ಕೆರೆ ಶಿವಶಂಕರ್ ಸಂಪಾದಿಸಿಕೊಟ್ಟಿರುವ 'ಮೈಲಾರಲಿಂಗನ ಕಾವ್ಯ'ವು ಗೊರವರ ಸಂಸ್ಕೃತಿಯ ಮೂಲ ಪುರುಷನಾದ ಮೈಲಾರಲಿಂಗ ತುಪ್ಪದ ಮಲ್ಲಮ್ಮನನ್ನು ಲಗ್ನವಾದ ಕಥೆಯನ್ನು ಅತ್ಯಂತ ಸ್ವಾರಸ್ಯಕರವಾಗಿ ನಿರೂಪಿಸುತ್ತದೆ. ಈ ಕಾವ್ಯವನ್ನು ಗೊರವರ ಕೆಂಚಮಲ್ಲಯ್ಯ ಹಾಡಿದ್ದಾರೆ. ಎಸ್.ಪಿ. ಪದ್ಮಪ್ರಸಾದ್ ಸಂಪಾದಿಸಿ ಕೊಟ್ಟಿರುವ 'ಗ್ರಾಮದೇವತೆ ಮಾರಮ್ಮ' ಕೃತಿಯು ಮಾರಮ್ಮನ ಪುರಾಣವನ್ನು ನಿರೂಪಿಸುತ್ತದೆ. ಈ ಕಾವ್ಯವನ್ನು ನೆಲಮಂಗಲದ, ಚೌಡಿಕೆ ಸುಬ್ಬಯ್ಯ ಹಾಡಿದ್ದಾರೆ. ಇವುಗಳೇ ಅಲ್ಲದೆ 'ಹಾಡಾನ ಬನ್ನಿ ದನಿಯೆತ್ತಿ', 'ಹಾವು ತುಳಿದೇನೆ' ಎಂಬ ಗ್ರಾಮದೇವತೆ ಮಾಲಿಕೆಗಳ ಚಿಕ್ಕ ಪುಸ್ತಿಕೆಗಳು ಸಹ ನಾಗೇಗೌಡರ ಸಂಪಾದಕತ್ವದಲ್ಲಿ ಪ್ರಕಟವಾಗಿವೆ.

**7) ಜಾನಪದ ಜಗತ್ತು :** ನಾಗೇಗೌಡರ ಪ್ರಧಾನ ಸಂಪಾದಕತ್ವದಲ್ಲಿ ಕಳೆದ 30 ವರ್ಷಗಳಿಂದ ಪ್ರಕಟವಾಗುತ್ತಾ ಬಂದಿರುವ ಕನ್ನಡದ ಏಕೈಕ ತ್ರೈಮಾಸಿಕ ಪತ್ರಿಕೆ 'ಜಾನಪದ ಜಗತ್ತು' ಪ್ರತ್ಯೇಕವಾಗಿ ಜಾನಪದಕ್ಕೆ ಮೀಸಲಾದ ಪತ್ರಿಕೆ. ಕರ್ನಾಟಕ ಜಾನಪದಕ್ಕೆ ಸಂಬಂಧಪಟ್ಟಂತೆ ಎಲ್ಲಾ ವಿಚಾರಗಳನ್ನು ಪ್ರಕಟಿಸುತ್ತಾ ಬಂದಿರುವ ಈ ಪತ್ರಿಕೆಯು ಹೊರತಂದಿರುವ ಮಡಿಲಕ್ಕಿ, ಹೂವು-ಹೊಂಬಾಳೆ, ಸ್ಥಳನಾಮಗಳು, ಮಾರಮ್ಮ, ದೆವ್ವ ಜನಪದ ಮುಂತಾದ ವಿಶೇಷ ಸಂಚಿಕೆಗಳು ಜನಪದ ವಿದ್ಯಾರ್ಥಿಗಳು, ಆಸಕ್ತರು, ಸಂಶೋಧಕರುಗಳಿಗೆ ಅತ್ಯಂತ ಉಪಯುಕ್ತವಾದುದಾಗಿದೆ.

**ಸಾಂಸ್ಥಿಕ ಸಾಧನೆ**

ಸುಮಾರು 40 ವರ್ಷಗಳ ಸಾರ್ಥಕ ಸೇವಾವಧಿ 1978ರಲ್ಲಿ ಕೊನೆಗೊಂಡಾಗ ನಾಗೇಗೌಡರ ವಿಶ್ರಾಂತಿ ಜೀವನದ ಅವಿಶ್ರಾಂತತೆಯ ಹೊಸ ಬದುಕು ಆರಂಭವಾಯಿತು. ನಾಗೇಗೌಡರು ನಿವೃತ್ತಿ ಹೊಂದಿದ ಅನಂತರ, ಅವರ ಅಭಿನಂದನ ಸಮಾರಂಭದಲ್ಲಿ ಸಾರ್ವಜನಿಕರು ಪ್ರೀತಿಯಿಂದ ನೀಡಿದ 1,15,100ರೂಗಳ ನಿಧಿಯನ್ನು ಪುದುವಟ್ಟನ್ನಾಗಿರಿಸಿ 1979ರಲ್ಲಿ ಕರ್ನಾಟಕ ಜಾನಪದ ಟ್ರಸ್ಟ್‌ನ್ನು ಪ್ರಾರಂಭಿಸಿದರು. ಜಾನಪದ ಟ್ರಸ್ಟಿನ ಪ್ರಾರಂಭದೊಳಗೆ ಅವರ ಜನಪದ ಚಟುವಟಿಕೆಗಳು ನಿರಂತರವಾಗಿ ಮುನ್ನಡೆದವು. ನಾಡಿನಾದ್ಯಂತ ಲೆಕ್ಕವಿಲ್ಲದಷ್ಟು ಬಾರಿ ಸಂಚರಿಸಿ, ಸಾವಿರಾರು ಕಲಾವಿದರನ್ನು ಭೇಟಿಯಾಗಿ ಜನಪದ ಗೀತೆ, ಕಥೆ, ಗಾದೆ, ಒಗಟು ಮೊದಲಾದ ಜನಪದ ಸಾಹಿತ್ಯ ಪ್ರಸಾರಗಳನ್ನು ಧ್ವನಿಮುದ್ರಿಸಿಕೊಂಡರು. ಪ್ರಸ್ತುತ ನಾಗೇಗೌಡರ ಧ್ವನಿಮುದ್ರಣ ಭಂಡಾರದಲ್ಲಿ ಸುಮಾರು 1500 ಗಂಟೆಗಳ ಕಾಲ ಕೇಳಬಹುದಾದಷ್ಟು ಧ್ವನಿಮುದ್ರಿಕೆಗಳಿವೆ. ಜನಪದ ಕಲೆ, ಹಬ್ಬ, ಜಾತ್ರೆ, ಆಚರಣೆ ಮೊದಲಾದವುಗಳ ಛಾಯಾಚಿತ್ರ ದಾಖಲಾತಿ ಮಾಡಿದರು. ಪ್ರಸ್ತುತ ಒಂದು ಸಾವಿರಕ್ಕೂ ಹೆಚ್ಚು ವರ್ಣ ಪಾರದರ್ಶಿಕೆಗಳು ಅವರ ಛಾಯಾಚಿತ್ರ ಭಂಡಾರದಲ್ಲಿವೆ. ನಾಡಿನಾದ್ಯಂತ ಸಂಚರಿಸಿ ವಿಡಿಯೋ ಚಿತ್ರೀಕರಣ ನಡೆಸಿದ್ದಾರೆ. ಬೆಂಗಳೂರು ದೂರದರ್ಶನದಲ್ಲಿ ಪ್ರಸಾರವಾದ ನೂರಾಎಂಟು ಕಂತುಗಳ 'ಸಿರಿಗಂಧ' ಜನಪದ ಧಾರಾವಾಹಿ ಚಿತ್ರೀಕರಣವು ಸೇರಿದಂತೆ ಸುಮಾರು 800 ಗಂಟೆಗಳಿಗೂ ಹೆಚ್ಚು ಕಾಲ ನೋಡಬಹುದಾದ ವಿಡಿಯೋ ಕ್ಯಾಸೆಟ್‌ಗಳು ವಿಡಿಯೋ ಭಂಡಾರದಲ್ಲಿವೆ. ಹಳ್ಳಿಗಾಡಿನ ಮೂಲ ಗಾಯಕರು ಹಾಡಿರುವ ಮೂಲ ಸಾಹಿತ್ಯ, ಮೂಲ ಧಾಟಿಗಳನ್ನು ಒಳಗೊಂಡ ಸುಮಾರು 300 ಆಡಿಯೋ ಕ್ಯಾಸೆಟ್‌ಗಳನ್ನು ಮಾರುಕಟ್ಟೆಗೆ ಬಿಡುಗಡೆ ಮಾಡುವ ಯೋಜನೆಯಲ್ಲೀಗ ನಾಗೇಗೌಡರು ಕಾರ್ಯತತ್ಪರರಾಗಿದ್ದಾರೆ.

ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ರಾಮನಗರದ ಬಳಿ ಸುಮಾರು 15 ಎಕರೆ ಪ್ರದೇಶದಲ್ಲಿ ಸ್ಥಾಪಿಸಲಾಗಿರುವ 'ಜಾನಪದ ಲೋಕವು' ನಾಗೇಗೌಡರು ಕಂಡ ಹಲವು ವರ್ಷಗಳ ಕನಸಿನ ಕೂಸು. ಈ ಕನಸು ಅವರ ಕಠಿಣ ಪರಿಶ್ರಮ, ಸಂಘಟನಾ ಶಕ್ತಿಯ ಬಲದಿಂದಾಗಿ 1994ರ ಮಾರ್ಚ್ 12ರಂದು ನನಸಾಯಿತು. ಈ ಐದು ವರ್ಷಗಳಿಂದೀಚೆಗೆ ಜನಪದ ಲೋಕವು ದೇಶದ ಅತ್ಯಂತ ಮಹತ್ವದ ಸಾಂಸ್ಕೃತಿಕ ಕೇಂದ್ರವಾಗಿ ಬೆಳವಣಿಗೆ ಕಂಡಿದೆ.

ಜಾನಪದ ಲೋಕದ ಮಹತ್ವದ ಆಕರ್ಷಣೆಯೇ ಅದರ ಮಹಾದ್ವಾರ. ಹರಿಗೆ ಮತ್ತು ಕೊಂಬುಗಳಿಂದ ಅಲಂಕೃತವಾದ ವಿಶಾಲ ಮಹಾದ್ವಾರ. ಇಕ್ಕೆಲಗಳಲ್ಲಿ ಎತ್ತರದ ನಂದೀಧ್ವಜಗಳು. ಶೈವ ಮತ್ತು ವೈಷ್ಣವ ಸಂಪ್ರದಾಯಗಳೆರಡರ ಸಮ್ಮಿಲನ ಈ ಮಹಾದ್ವಾರದ ರಚನೆಯಲ್ಲಡಗಿದೆ. ಒಳಹೊಗುತ್ತಿದ್ದಂತೆ ಎದ್ದು ಕಾಣುವ ಬೀಸುವ ಕಲ್ಲಿನ ಅರ್ಥಪೂರ್ಣವಾದ ಲೋಕದ ಲಾಂಛನ. ಕೋಣಗಳನ್ನು ಕಟ್ಟಿ ಎಳೆಸುತ್ತಿದ್ದ ಬೃಹತ್ತಾದ ಬೀಸುವ ಕಲ್ಲು. ಅಡಿಗೆ ಮನೆಯ ವಿವಿಧ ವಸ್ತುಗಳ ಸಂಗ್ರಹಾಲಯವಾದ ಲೋಕಮಾತಾ ಮಂದಿರ, ಚಿತ್ರದಲ್ಲೇ ಚಿತ್ತ ಸೆಳೆಯುವ ಚಿತ್ರಕುಟೀರ. ಸುಮಾರು ಐದು ಸಾವಿರ ಅದ್ಭುತ ವಸ್ತುಗಳ ವೈವಿಧ್ಯಮಯ ಸಂಗ್ರಹಾಲಯ ಲೋಕಮಹಲ್ ವಿಶ್ರಾಂತಿ ಮಂದಿರ. ಪುರುಷೋತ್ತಮ ಕುಟೀರ, ಕಲಾವಿದರು ತಂಗಲೆಂದೇ ನಿರ್ಮಿಸಿರುವ ತೊಟ್ಟಿ ಕಂಬಗಳನ್ನುಳ್ಳ ದೊಡ್ಡಮನೆ, ಕಲ್ಲಿನಲ್ಲಿ ಕತೆ ಹೇಳುವ ಶಿಲ್ಪ ಮೇಳ, ಆಯಗಾರದ ಮೇಳ, ಜಾನಪದ ಲೋಕವನ್ನು ವೀಕ್ಷಿಸಲೆಂದು ಬರುವವರನ್ನು ಹರಸಲೆಂದೇ ಇಲ್ಲಿ ನೆಲೆಯಾಗಿರುವ

ಲೋಕಪ್ರಿಯ ಮಹಾಗಣಪತಿ ದೇವಸ್ಥಾನ, ಸುಮಾರು 800ರಿಂದ 1000 ಮಂದಿ ಕುಳಿತುಕೊಳ್ಳಬಹುದಾದ ಗ್ರೀಕ್ ಮಾದರಿಯ ಬೃಹತ್ತಾದ ಬಯಲು ರಂಗ ಮಂದಿರ, ಮಕ್ಕಳ ಮನರಂಜನೆಗೆ ಎತ್ತಿನಗಾಡಿ ಸವಾರಿ, ಕುದುರೆ ಸವಾರಿ, ಆಟವಾಡಲು ವಿಶಾಲವಾದ ಆಟದ ಮೇಳ ಇತ್ಯಾದಿ ಎಲ್ಲವೂ ಜಾನಪದ ಲೋಕದಲ್ಲಿದೆ.

ಕರಕುಶಲ ಕಲಾವಿದರು ಈ ಕೇಂದ್ರದಲ್ಲಿದ್ದುಕೊಂಡು ಕರಕುಶಲ ವಸ್ತುಗಳನ್ನು ತಯಾರಿಸುತ್ತಿದ್ದಾರೆ. ಡೊಳ್ಳುಕುಣಿತ, ಸುಗ್ಗಿ ಕುಣಿತ, ಕೋಲಾಟ, ಗೊರವರ ಕುಣಿತ ಇವೇ ಮೊದಲಾದ ಕಲೆಗಳ ತರಬೇತಿ ನೀಡಿ ಜಾನಪದ ಲೋಕದ್ದೇ ಆದ ಕಲಾತಂಡಗಳನ್ನು ರೂಪಿಸಲಾಗಿದೆ. ಬೆಂಗಳೂರು ವಿಶ್ವ ವಿದ್ಯಾಲಯವು ಜಾನಪದ ಲೋಕವನ್ನು ಸಂಶೋಧನಾ ಕೇಂದ್ರವಾಗಿ ಮಾನ್ಯ ಮಾಡಿದೆ. ಈಗಾಗಲೇ ನಾಲ್ಕು ಸಂಶೋಧನಾ ವಿದ್ಯಾರ್ಥಿಗಳು ಪಿಎಚ್.ಡಿ. ಪದವಿಗಾಗಿ ಜಾನಪದ ಲೋಕದ ಮುಖಾಂತರ ಸಂಶೋಧನೆ ನಡೆಸುತ್ತಿದ್ದಾರೆ. ಡಾ|| ಚಕ್ಕೆರೆ ಶಿವಶಂಕರ್ ಸಂಶೋಧನಾ ಕೇಂದ್ರವನ್ನು ನಿರ್ವಹಿಸುತ್ತಿದ್ದಾರೆ. ಜಾನಪದ ಮಹಾವಿದ್ಯಾಲಯವು ಪ್ರಾರಂಭವಾಗಿದ್ದು, ಇದಕ್ಕೆ ಬೆಂಗಳೂರು ವಿಶ್ವವಿದ್ಯಾಲಯ ಸಂಯೋಜನಾ ಅನುಮೋದನೆ ನೀಡಿದೆ. ಈ ಮಹಾವಿದ್ಯಾ ಲಯದಲ್ಲಿ ಜಾನಪದ ಡಿಪ್ಲೊಮೋ ಮತ್ತು ಜಾನಪದ ಸರ್ಟಿಫಿಕೇಟ್ ಕೋರ್ಸ್‌ಗಳು ಪ್ರಾರಂಭವಾಗಿದ್ದು, ಕ್ರಮವಾಗಿ 44 ಮತ್ತು 15 ವಿದ್ಯಾರ್ಥಿ ಗಳು ಈ ಕೋರ್ಸ್‌ಗಳಲ್ಲಿ ತುಂಬಾ ಉತ್ಸಾಹದಿಂದ ಪಾಲ್ಗೊಳ್ಳುತ್ತಿದ್ದಾರೆ.

ಪ್ರತಿ ವರ್ಷ ಜಾನಪದ ಅಭಿರುಚಿ ಶಿಬಿರ, ಜಾನಪದ ಸಂಶೋಧನಾ ಕಮ್ಮಟ, ವಿಚಾರ ಸಂಕಿರಣಗಳನ್ನು ನಿಯತವಾಗಿ ನಡೆಸಲಾಗುತ್ತಿದೆ. ಸುಸಜ್ಜಿತವಾದ ಜಾನಪದ ಗ್ರಂಥಾಲಯ ಒಂದನ್ನು ಸ್ಥಾಪಿಸಲಾಗಿದೆ. ಮಾರ್ಚ್ ತಿಂಗಳಲ್ಲಿ ಲೋಕೋತ್ಸವ, ಅಕ್ಟೋಬರ್ ತಿಂಗಳಲ್ಲಿ ದಸರಾ ಸಮಾರಂಭ, ಜುಲೈ ತಿಂಗಳಿನಲ್ಲಿ ಗಾಳಿಪಟ ಉತ್ಸವಗಳನ್ನು ನಿಯತವಾಗಿ ನಡೆಸಿಕೊಂಡು ಬರಲಾಗುತ್ತಿದೆ. ಒಟ್ಟಿನಲ್ಲಿ ಜಾನಪದ ಕಲಾವಿದರ ಪಾಲಿಗೆ ಜಾನಪದ ಕಾಶಿ ಎನಿಸಿಕೊಂಡಿರುವ ಜಾನಪದ ಲೋಕವು ವಿದ್ವಾಂಸರು, ಆಸಕ್ತರು, ಸಂಶೋಧಕರ ಪಾಲಿಗೆ ಅಮೂಲ್ಯವಾದ ಆಕರ ಜಗತ್ತು. ಸಂಶೋಧಕರಿಗೆ ಸಹಸ್ರಾರು ಗ್ರಾಮೀಣ ವಸ್ತುಗಳು, ಧ್ವನಿಮುದ್ರಿಕೆಗಳು, ಉತ್ತಮ ಗ್ರಂಥ ಭಂಡಾರ, ಆಡಿಯೋ ಮತ್ತು ವಿಡಿಯೋ ಕ್ಯಾಸೆಟ್‌ಗಳು, ಗ್ರಾಮೀಣ ಪ್ರೇಕ್ಷಕರ ಸಲುವಾಗಿ ಜನಪದ ಕಲಾ ಮಹೋತ್ಸವಗಳು, ಆಸಕ್ತರಿಗೆ ಅಭಿರುಚಿ ಮೂಡಿಸುವ ಶಿಬಿರಗಳು, ಜನಪದ ಕಲೆಗಳ ತರಬೇತಿ ಶಿಬಿರಗಳು ಹೀಗೆ ಬೇಕೆನಿಸುವ ಎಲ್ಲ ಅಗತ್ಯಗಳನ್ನು ಪೂರೈಸುವ ಜಾನಪದ ಲೋಕವು ಜಗತ್ತಿನ ಅತ್ಯುತ್ತಮ ಜಾನಪದ ಕೇಂದ್ರಗಳಲ್ಲಿ ಒಂದಾಗಿದೆ. ಜಗತ್ತಿನ ಜಾನಪದ ಭೂಪಟದಲ್ಲಿ ಕರ್ನಾಟಕದ ಛಾಪನ್ನು ಮೂಡಿಸಿದ ಯಶಸ್ಸು ಶ್ರೀ ನಾಗೇಗೌಡರದು.

ಜಾನಪದ ಲೋಕದ ಉದ್ಘಾಟನೆಯೊಂದಿಗೆ, ಇದುವರೆಗೂ ನಿರ್ಲಕ್ಷ್ಯಕ್ಕೆ ಗುರಿಯಾಗಿದ್ದ ಜನಪದ ಕಲಾವಿದರನ್ನು ಗುರುತಿಸಿ ಪ್ರೋತ್ಸಾಹಿಸುವ, ಗೌರವಿಸುವ, ಸನ್ಮಾನಿಸುವ ಕೆಲಸವನ್ನು ನಾಗೇಗೌಡರು ಮಾಡುತ್ತಿದ್ದಾರೆ. ಪ್ರತೀ ವರ್ಷ ಮಾರ್ಚ್ ತಿಂಗಳಿನಲ್ಲಿ ಜಾನಪದ ಲೋಕದಲ್ಲಿ ಆಚರಿಸುವ ಲೋಕೋತ್ಸವ ಕಾರ್ಯಕ್ರಮದಲ್ಲಿ ಅತ್ಯುತ್ತಮ ಕಲಾವಿದರುಗಳನ್ನು ಆಯ್ಕೆ ಮಾಡಿ ಜಾನಪದ ಲೋಕ ಪ್ರಶಸ್ತಿ ನೀಡುವುದರೊಂದಿಗೆ ನೆನಪಿನ ಕಾಣಿಕೆ, ನಗದು, ಸೀರೆ, ಪಂಚೆ, ಸನ್ಮಾನ ಪತ್ರಗಳನ್ನಿತ್ತು ಗೌರವಿಸುತ್ತಾ ಬಂದಿದ್ದಾರೆ.

ಇನ್ನೂ ಹತ್ತು ಹಲವು ಯೋಜನೆಗಳು ನಾಗೇಗೌಡರ ಚಿಂತನೆಯಲ್ಲಿವೆ. ಮುಖ್ಯವಾಗಿ ತಾವು ಕಳೆದ 35 ವರ್ಷಗಳಿಂದ ನಾಡಿನಾದ್ಯಂತ ಧ್ವನಿ ಮುದ್ರಿಸಿ ಕೊಂಡಿರುವ ಧ್ವನಿಸುರುಳಿಗಳಲ್ಲಿರುವ ಜನಪದ ಸಾಹಿತ್ಯವನ್ನು ಹಸ್ತಪ್ರತಿಗಿಳಿಸಿ, ಉತ್ತಮವಾಗಿ ಸಂಪಾದಿಸಿ ಅವುಗಳನ್ನು ಪ್ರಕಟಿಸುವ ಯೋಜನೆ. ಸುಮಾರು 10,000 ಪುಟಗಳಷ್ಟಾಗಬಹುದಾದ ಜನಪದದ ಸಾಹಿತ್ಯ ಅವರ ಧ್ವನಿಸುರುಳಿ ಗಳಲ್ಲಿ ಹುದುಗಿದೆ. ಅದು ಬೆಳಕು ಕಾಣಬೇಕಾದರೆ ಕನಿಷ್ಠ 20 ಲಕ್ಷ ರೂಗಳ ನೆರವು ಅಗತ್ಯ. ಇದಕ್ಕಾಗಿ ನಾಡಿನಾದ್ಯಂತ ದೊರೆಯಬಹುದಾದ ದಾನಿಗಳನ್ನು ಹುಡುಕ ಹೊರಟಿದ್ದಾರೆ ನಾಗೇಗೌಡರು.

ನಾಗೇಗೌಡರು ಸಾಹಿತ್ಯ ಮತ್ತು ಜಾನಪದ ಕ್ಷೇತ್ರದಲ್ಲಿ ಸಲ್ಲಿಸಿರುವ ಅಮೋಘ ಸೇವೆಗಾಗಿ ಹತ್ತು ಹಲವು ಪ್ರಶಸ್ತಿಗಳು ಅವರನ್ನು ಹುಡುಕಿ ಕೊಂಡು ಬಂದಿವೆ. ನಾಡಿನ ಸಂಘ ಸಂಸ್ಥೆಗಳು ಮತ್ತು ಸರ್ಕಾರ ಅವರನ್ನು ಸನ್ಮಾನಿಸಿ, ಗೌರವಿಸುವುದರ ಮೂಲಕ ತಮ್ಮ ಘನತೆಯನ್ನು ಹೆಚ್ಚಿಸಿ ಕೊಂಡಿವೆ.

1974ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ
1988ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ
1990ರಲ್ಲಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ
1992ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಫೆಲೋಶಿಪ್
1999ರಲ್ಲಿ ಜಾನಪದ ಮೇರು; ಪ್ರೇರಣಾ ಪ್ರಶಸ್ತಿ

**ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಕೃತಿಗಳು**

ನನ್ನೂರು - 1965
ವೆರಿಯರ್ ಎಲ್ವಿನರ್ ಗಿರಿಜನ ಪ್ರಪಂಚ (ಅನುವಾದ) - 1966
ಸೋಬಾನೆ ಚಿಕ್ಕಮ್ಮನ ಪದಗಳು (ಜನಪದ ಸಾಹಿತ್ಯ) - 1972
ಪದವವೆ ನಮ್ಮ ಎದೆಯಲ್ಲಿ (ಜನಪದ ಸಾಹಿತ್ಯ) - 1976
ನಾ ಕಂಡ ಪ್ರಪಂಚ (ಪ್ರವಾಸ ಸಾಹಿತ್ಯ) - 1986

ನಾಗೇಗೌಡರ ಆತ್ಮಕಥೆ 'ನಾಗಸಿರಿ' ಶೀರ್ಷಿಕೆಯಲ್ಲಿ ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗಿದೆ. ನಾಗೇಗೌಡರ ಬದುಕು-ಜನಪದ ಯಾತ್ರೆ-ವಿದೇಶ ಯಾತ್ರೆ-ರಾಜಕಾರಣಕ್ಕೆ ಸಂಬಂಧಪಟ್ಟ ಈ ನಾಲ್ಕು ಬೃಹತ್ ಸಂಪುಟಗಳು ನಾಗೇಗೌಡರು ಬಾಳಿದ ಬಗೆ, ಬಾಳಿನುದ್ದಕ್ಕೂ ತಪ್ಪದೆ ಅನುಸರಿಸಿಕೊಂಡು ಬಂದ ಶಿಸ್ತು, ಪ್ರಾಮಾಣಿಕತೆ, ಕರ್ತವ್ಯನಿಷ್ಠೆ, ಇವುಗಳನ್ನು ಸುದೀರ್ಘವಾಗಿ ಪರಿಚಯಿಸುತ್ತವೆ. ನಾಗೇಗೌಡರಿಗೆ ವಿಶ್ರಾಂತಿ ಎಂಬುದಿಲ್ಲ. ಅವರು ಸದಾ ಕಾರ್ಯತತ್ಪರರು. ಅವರ ಚಿಂತನೆಯ ಮೂಸೆಯಲ್ಲಿರುವ ಇನ್ನು ಹಲವಾರು ಯೋಜನೆಗಳನ್ನು ಕಾರ್ಯರೂಪಕ್ಕೆ ತರುವ ಮಾನಸಿಕ ದೃಢತೆ ಮತ್ತು ಆತ್ಮವಿಶ್ವಾಸ, ಅಂತಃಶ್ಚೈತನ್ಯ ಅವರಲ್ಲಿದೆ.

❑

# ಭಾರತೀಸುತ

ಅ.ರಾ.ಮಿತ್ರ

ಅಪ್ಪಟ ಪ್ರಾದೇಶಿಕ ವಸ್ತು ಪಾತ್ರಗಳಿಗೆ ಒತ್ತುಕೊಡುವ ಕಥಾರಚನೆ, ಪ್ರಾದೇಶಿಕ ಉಪಭಾಷೆಗಳ ಆಡುಮಾತಿನ ಶಬ್ದಗಳ ಸಲೀಲ ಸಮ್ಮಿಶ್ರಣ, ದಲಿತ ಪಾತ್ರಗಳ ಬದುಕಿನ ಹೋರಾಟದ ಸೂಕ್ಷ್ಮ ಚಿತ್ರಣ-ಇವುಗಳು ಭಾರತೀಸುತರಿಂದ ಪ್ರಾದೇಶಿಕ ಸಾಹಿತ್ಯಕ್ಕೆ ಸಂದ ದೊಡ್ಡ ಕೊಡುಗೆಯೆಂದು ಹೇಳಬಹುದು. ಭಾರತೀಸುತರ ಬಹುತೇಕ ಕಥೆ, ಕಾದಂಬರಿಗಳಲ್ಲಿ ಕೆಳ ವರ್ಗದ ಕುಗ್ರಾಮವಾಸದ ಮಣ್ಣಿಗೇ ಅಂಟಿಕೊಂಡ ಜನ ಬದುಕಿನೊಂದಿಗೆ ನಡೆಸಿದ ಮುಖಾಮುಖಿಯ ದಟ್ಟವಾದ ವಿವರಗಳ ಕಥಾನಕ ದೊರೆಯುತ್ತದೆ. ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳ, ಕೊಡಗಿನ ಮತ್ತು ನೆರೆಯ ಕೇರಳದ ಪ್ರಾಕೃತಿಕ ದೃಶ್ಯಪರಂಪರೆಯ ವಿಸ್ತಾರವಾದ ವರ್ಣನೆಯೊಂದಿಗೆ ಆ ಗಿರಿಜನರ ವಾಸ್ತವ ಜೀವನ ಪದ್ಧತಿಗಳು ಮೇಳವಿಸಿಕೊಂಡಿದ್ದು ಅಪ್ಪಟ ಗ್ರಾಮೀಣ ಜೀವನ ದರ್ಶನ ಮೂಡಿಬರಲು ಸಹಾಯಕವಾಗಿದೆ.

ಭಾರತೀಸುತರು ಸಾಹಿತ್ಯದ ಹಲವಾರು ಶಾಖೆಗಳಲ್ಲಿ ಕೈ ಆಡಿಸಿದ್ದಾರೆ. ಕಾದಂಬರಿ, ಸಣ್ಣಕಥೆ, ಶಿಶುಸಾಹಿತ್ಯರಚನೆ, ವಯಸ್ಕರಿಗಾಗಿ ಸಾಹಿತ್ಯರಚನೆ ಮತ್ತು ಅನುವಾದ-ಇವು ಅವರ ರಚನೆಯ ಮುಖ್ಯ ಮುಖಗಳಾಗಿವೆ. ಸ್ವಂತ ಜೀವನದಲ್ಲೂ ಅಪಾರ ಅನುಭವದ ರಾಶಿಯನ್ನು ಹೊತ್ತು ತಂದ ಜೀವ ಅವರದು.

ಭಾರತೀಸುತ ಅವರ ಕಾವ್ಯನಾಮ, ಶಾನಭಾಗ್ ರಾಮಯ್ಯ ನಾರಾಯಣ ರಾವ್ ಇದು ಅವರ ಪೂರ್ಣನಾಮ. ಮಡಿಕೇರಿಗೆ ಆರು ಮೈಲಿ ದೂರದಲ್ಲಿರುವ ಬಿಳಿಗೇರಿ ಗ್ರಾಮದ ಶಾನಭಾಗ ವಂಶದಲ್ಲಿ ಹುಟ್ಟಿದ ವ್ಯಕ್ತಿ ಇವರು. ಈ ಮನೆತನದ ಪೂರ್ವಿಕರು ಕೊಡಗಿನ ಅರಸರ ಕಾಲದಲ್ಲಿ ಶಾನುಭೋಗರಾಗಿದ್ದು ವೈಭವದ ಜೀವನ ನಡೆಸುತ್ತಿದ್ದರು. ಇವರ ತಂದೆಯ ಕಾಲಕ್ಕಾಗಲೇ ಈ ಕುಟುಂಬವನ್ನು ಬಡತನ ಆವರಿಸಿತ್ತು. 1915ರ ಮೇ 15ನೇ ತಾರೀಖಿನಂದು ಜನಿಸಿದ ಭಾರತೀಸುತರು ಮಡಿಕೇರಿಯ ಪ್ರೌಢಶಾಲೆಯಲ್ಲಿ ಪಂಜೆಯವರ ಶಿಷ್ಯರಾಗಿದ್ದರು. ಚಿಕ್ಕಂದಿನಿಂದಲೇ ಸಾಹಿತ್ಯರಚನೆಯ ಕಡೆ ಮನಸ್ಸು ಒಲಿದು 13ನೇ ವಯಸ್ಸಿನಲ್ಲಿಯೇ ಬರವಣಿಗೆಯನ್ನು ಆರಂಭಿಸಿದರು. ಆಗ ಸ್ವಾತಂತ್ರ್ಯ ಆಂದೋಲನದ ಸಮಯ. ಸ್ವಾತಂತ್ರ್ಯಕ್ಕಾಗಿ ಹೋರಾಡುವ ಹುಮ್ಮಸ್ಸು ಬಲಿದು ಪ್ರೌಢಶಾಲೆಯಲ್ಲಿ ಇದ್ದಾಗಲೇ ಸ್ವಾತಂತ್ರ್ಯ ಚಳುವಳಿಯ ಕಹಳೆಯನ್ನು ಊದಿದರು. ಪೋಲೀಸರಿಂದ ಅವರೇ ಹೇಳಿಕೊಳ್ಳುವಂತೆ "ಬೆತ್ತದ ಕೋಲಿನ ಮಂಗಳಾರತಿ"ಯಾಯಿತು. ಸರಕಾರಿ ಶಾಲೆಯಿಂದ ಅವರ ಉಚ್ಚಾಟನೆಯೂ ಆಯಿತು. ಹೀಗೆ ವ್ಯಾಸಂಗಕ್ಕೆ ತಿಲಾಂಜಲಿ ಕೊಟ್ಟು 1930ರಲ್ಲಿ ಸತ್ಯಾಗ್ರಹದಲ್ಲಿ ಭಾಗಿಯಾಗದ ಅವರನ್ನು ಸರಕಾರ 1932ರಲ್ಲಿ ಕೊಡಗಿನಿಂದ ಉಚ್ಚಾಟಿಸಿತು. ಕೇರಳದ ವೈನಾಡಿನಲ್ಲಿ ಸರಕಾರ ಅವರನ್ನು ಬಂಧಿಸಿತು. ಕಣ್ಣಾನೂರು, ತಿರುಚನಾಪಳ್ಳಿಗಳಲ್ಲಿ ಸೆರೆಮನೆವಾಸವಾಯಿತು. ಸೆರೆಮನೆಯಲ್ಲಿದ್ದಾಗ ಕೇರಳದ ಪ್ರಸಿದ್ಧ ಸಮಾಜವಾದಿ ಮುಖಂಡರುಗಳಾದ ನಂಬೂದಿರಿಪಾಡ್, ಎ.ಕೆ. ಗೋಪಾಲನ್ ಮೊದಲಾದ ಪ್ರಸಿದ್ಧವ್ಯಕ್ತಿಗಳ ಸಂಪರ್ಕ ಲಭಿಸಿತು. ಸಮಾಜವಾದಿ ಚಿಂತನ ಪದ್ಧತಿ ಮತ್ತು ದಲಿತರ ಬಗೆಗೆ ವಿಶೇಷ ಪ್ರೇಮ ಅವರಿಗೆ ಮೂಡಿದುದು ಈ ಅವಧಿಯಲ್ಲಿ.

ಸೆರೆಮನೆಯಿಂದ ಬಿಡುಗೆಯಾದ ನಂತರ ತಮ್ಮ ಮನೆಯವರ ಮತ್ತು ಬಂಧುಗಳ ತಿರಸ್ಕಾರಕ್ಕೆ ಗುರಿಯಾಗಿ ಅವರು ಮಡಿಕೇರಿಗೆ ಹೋಗುವ ಪ್ರಯತ್ನ ಕೈಬಿಟ್ಟು ಕಲ್ಲಿಕೋಟೆ ಬಂದರಿನಲ್ಲಿ ದಿನಗೂಲಿಯಾಗಿ ಕೆಲಸಕ್ಕೆ ಸೇರಿಕೊಂಡರು. ಕೆಲಸ ಇಲ್ಲದ ದಿನ ಬೀದಿ ಅಲೆದಾಟ, ಹೊಟ್ಟೆಗಿಲ್ಲದ ದಿನ ಭಿಕ್ಷಾವೃತ್ತಿ ಮತ್ತು ಬಂದರಿನ ಬಯಲಿನಲ್ಲಿ ವಾಸ. ಈ ಬಗೆಯ ಬದುಕನ್ನು 1936ರ ವರೆಗೆ ನಡೆಸಿದ ಭಾರತಿಸುತರು 1936ರಿಂದ 6 ವರ್ಷಗಳವರೆಗೆ ಕೇರಳದ ವೈನಾಡಿನ ಎಸ್ಟೇಟಿನಲ್ಲಿ ಕಾಫಿ ತೋಟದ ಉಸ್ತುವಾರಿ ಕೆಲಸದಲ್ಲಿ ನಿಂತರು. ಅಲ್ಲಿದ್ದ ಪ್ರಸಿದ್ಧ ಕನ್ನಡಿಗ ಜಮೀನ್ದಾರ್ ಮಣಿಯಂಗೂಡು ಜಿನಚಂದ್ರಗೌಡರ ಪ್ರೋತ್ಸಾಹದಿಂದ ಭಾರತೀಸುತರ ಕನ್ನಡ ಕೃತಿ ರಚನೆ ಆರಂಭವಾಯಿತು. ಅವರ ಮೊದಲ ಕೃತಿ ಶೇಷಾಚಲ ಗ್ರಂಥಮಾಲೆಯಲ್ಲಿ ಪ್ರಕಟಣೆಗೊಂಡು ಅವರಿಗೆ ಜನಪ್ರಿಯತೆಯನ್ನು ತಂದುಕೊಟ್ಟಿತು. ಹೀಗೆ ರಾಜಕೀಯ ಹೋರಾಟಗಾರರಾದರೂ ಅವರು ಸ್ವಾತಂತ್ರ್ಯ ಬಂದನಂತರ ಸರಕಾರದ ತಾಮ್ರಪತ್ರ ಪುರಸ್ಕಾರಕ್ಕಾಗಲೀ ಸಂತ್ರಸ್ತರಿಗೆ ಮತ್ತು ಅವರ ಕುಟುಂಬಕ್ಕೆ ಸರಕಾರ ನೀಡಿರುವ ಸೌಲಭ್ಯಗಳನ್ನಾಗಲೀ ತೆಗೆದುಕೊಳ್ಳದೆ ನಿಜವಾದ ಅರ್ಥದಲ್ಲಿ ಸ್ವತಂತ್ರರಾಗಿಯೇ ಉಳಿದರು.

1941ರಲ್ಲಿ ನಾಗವೇಣಿ ಎಂಬ ಮಹಿಳೆಯ ಕೈಹಿಡಿದ ಭಾರತೀಸುತರು 1942ರಲ್ಲಿ ಕೊಡಗಿನ ರಾಮಸ್ವಾಮಿ ಕಣಿವೆಯಲ್ಲಿ ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರಾಗಿ ನೇಮಕಗೊಂಡರು. 1945ರಲ್ಲಿ ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ವಿದ್ವಾನ್ ಪದವಿ ಪಡೆದು ಮಡಿಕೇರಿ ಮತ್ತು ವಿರಾಜಪೇಟೆಗಳಲ್ಲಿ 1973ರ ವರೆಗೆ ಪ್ರೌಢಶಾಲೆಯ ಕನ್ನಡ ಪಂಡಿತರಾಗಿ ದುಡಿದು ಸೇವೆಯಿಂದ ನಿವೃತ್ತರಾದರು. 1976ನೇ ಏಪ್ರಿಲ್ 4ನೇ ತಾರೀಕು ತಮ್ಮ 61ನೆಯ ವಯಸ್ಸಿನಲ್ಲಿ ಭಾರತೀಸುತರು ನಿಧನ ಹೊಂದಿದರು. 1976ರಲ್ಲಿ ಸಾಹಿತ್ಯ ಅಕಾಡೆಮಿಯಿಂದ ಮರಣೋತ್ತರ ಪ್ರಶಸ್ತಿ ಅವರಿಗೆ ಲಭಿಸಿದೆ.

ಭಾರತೀಸುತರ ಬರವಣಿಗೆಯೂ ಸಮೃದ್ಧವಾದದ್ದು. 30ಕ್ಕೂ ಮಿಕ್ಕಿದ ಅವರ ಕಾದಂಬರಿಗಳಲ್ಲಿ ನಾಲ್ಕು ಅನುವಾದಿತ ಕಾದಂಬರಿಗಳು. ನಾಲ್ಕು ಅವರ ಮರಣಾನಂತರ ಪ್ರಕಟವಾದ ಕಾದಂಬರಿಗಳು. ಪೃಥ್ವೀರಾಜ ಅವರ ಮೊದಲ ಕಾದಂಬರಿಯಾದರೆ '1928ರಲ್ಲಿ ಪ್ರಕಟಗೊಂಡ ಬಂಗಾರದ ಬಳೆ ಅವರ ಮೊದಲ ಕಥೆಯಾಗಿದೆ. 25ಕ್ಕಿಂತಲೂ ಹೆಚ್ಚು ಶಿಶುಸಾಹಿತ್ಯ ಪ್ರಕಾರದ ಗ್ರಂಥಗಳನ್ನು ಅವರು ರಚಿಸಿದ್ದಾರೆ. ತಲೆತಿರುಕ ಯೋಧ, ಇರಾನಿನ ವೀರರು, ದೊರೆ ಮಗಳು, ಕಾಲಯಾನ ಮೊದಲಾದುವು ಅವರ ಅನುವಾದಿತ ಅಥವಾ ರೂಪಾಂತರಿ ಕೃತಿಗಳು. ಹೆಚ್.ಜಿ.ವೆಲ್ಸ್‌ನ Time Machine ಗ್ರಂಥದಿಂದ ಪ್ರಭಾವಿತವಾದ ಕಾಲಯಾನ ಎಂಬ ಕೃತಿಯಲ್ಲಿ ಕಾಲಯಂತ್ರವೊಂದನ್ನು ಕಲ್ಪಿಸಿ ಭವಿಷ್ಯಲೋಕದ ಊಹಾರೂಪವೊಂದನ್ನು ಎಳೆಯುವ ಪ್ರಯತ್ನ ಮಾಡಿದ್ದಾರೆ. ತಲೆತಿರುಕ ಯೋಧ ಸರ್ವಾಂಟಿಸನ Don Quixote ಗ್ರಂಥವನ್ನು ಅಳವಡಿಸಿಕೊಂಡ ಒಂದು ಸುಂದರ ಪುನಃಸೃಷ್ಟಿ. ಇದರಲ್ಲಿ ಭಾರತೀಸುತರ ಶೈಲಿ ಸರಳತೆಯಿಂದ, ವರ್ಣನಾಮಯತೆಯಿಂದ, ಅಗತ್ಯವೆನಿಸಿದಾಗ ಕೃತಕ ಗಾಂಭೀರ್ಯದಿಂದ ಮಿಂಚುತ್ತದೆ. ವೀರಾಭಾಸವನ್ನು ಸ್ಫೋಟಿಸುವ ಹಾಸ್ಯ ಸಂದರ್ಭಗಳಿಂದ ಇಡಿಕಿರಿದ ಈ ಕೃತಿ ಒಂದು ಸುಂದರ ರೂಪಾಂತರವಾಗಿದೆ.

ಅವರ 'ಇರಾನಿನ ವೀರರು' ಇಂಗ್ಲೀಷಿನ ಆಧಾರದಿಂದ ಸೊಹ್ರಾಬ್ ಮತ್ತು ರುಸುಂ್ತ ಇವರನ್ನು ಕೇಂದ್ರದಲ್ಲಿರಿಸಿಕೊಂಡು ಇವರ ಹಿಂದಿನ ಮತ್ತು ಮುಂದಿನ ತಲೆಮಾರಿನವರ ಕೆಲವರ ಸ್ಥೂಲ ಪರಿಚಯವನ್ನು ಮಾಡಿಕೊಡುತ್ತದೆ. ವಯಸ್ಕರ ಶಿಕ್ಷಣದಲ್ಲೂ ಸಾಕಷ್ಟು ಆಸಕ್ತಿ ವಹಿಸಿದ್ದ ಭಾರತೀಸುತರು ಹಲವಾರು ಕಮ್ಮಟಗಳಲ್ಲಿ ಭಾಗವಹಿಸಿ ಚಿಂತನೆ ಮರುಚಿಂತನೆಗಳ ಕಾವಿನಿಂದ ಪುಷ್ಟಿಗೊಂಡ ಮಲ್ಲಿಗೆಹಳ್ಳಿಯ ಜಾಣರು, ಡಾ. ಜಾಕೀರ್ ಹುಸೇನ್ ಎಂಬ ಹೊತ್ತಿಗೆಗಳನ್ನು ರಚಿಸಿದ್ದಾರೆ. ಇವರು ವಯಸ್ಕರಿಗಾಗಿ ಬರೆದ "ಸೊಳ್ಳೆ ಹರಡುವ ರೋಗಗಳು" ಎಂಬ ಕೃತಿ ಕೇಂದ್ರ ಸರಕಾರದ ಬಹುಮಾನವನ್ನೂ ಪಡೆದಿದೆ. ಮಕ್ಕಳಸಾಹಿತ್ಯ ಕ್ಷೇತ್ರದಲ್ಲೂ ಇವರ ರಚನೆ ಬೆರಗುಗೊಳಿಸುವಷ್ಟಿದೆ. ಕಳ್ಳರ ಫಜೀತಿ, ಮಂತ್ರದ ಕೊಳಲು, ಹುಲಿಗಳ ದಿಬ್ಬಣ, ಹನ್ನೊಂದು ಹಂಸಗಳು (ಮೂಲ Han Anderson), ನಳದಮಯಂತಿ ಮೊದಲಾದ 25ಕ್ಕೂ ಹೆಚ್ಚು ಕೃತಿಗಳು ಪ್ರಕಾಶಗೊಂಡಿವೆ. ಅಲ್ಲದೆ ಅವರ ಬದುಕು, ಬರಹಗಳನ್ನು ಕುರಿತ ಅಭಿನಂದನ ಗ್ರಂಥ 'ಬ್ರಹ್ಮಗಿರಿ'ಯೂ ಪ್ರಕಟಗೊಂಡಿದೆ.

ಭಾರತೀಸುತರಿಗೆ ಹೆಚ್ಚಿನ ಮನ್ನಣೆ ತಂದುಕೊಟ್ಟ ಗ್ರಂಥಗಳೆಂದರೆ ಅವರ ಕಥೆಗಳು ಮತ್ತು ಕಾದಂಬರಿಗಳು ಸ್ವಭಾವತಃ, ನಿರಂಜನರು ಹೇಳುವಂತೆ, ಭಾರತೀಸುತರು ಮಿತಭಾಷಿ. ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡು ಕಾರ್ಪಣ್ಯದ ಜೀವನ ನಡೆಸಿದವರು. ಆದರ್ಶಕ್ಕೆ ಬೆನ್ನು ಹತ್ತಿದವರು. ಹಾ.ಮಾ.ನಾಯಕರು ಹೇಳುವಂತೆ "ತಣ್ಣೀರನ್ನು ಆರಿಸಿ ಕುಡಿಯುವ ಪ್ರವೃತ್ತಿಯವರು". 1938ರಲ್ಲಿ ಪ್ರಕಟವಾದ ಅವರ ಅಪರೂಪದ ಕವಿತೆಯೊಂದರಲ್ಲಿ ಕಾವೇರಿ ನದಿಯನ್ನು ಕುರಿತು ಅವರು ಹೇಳಿರುವ "ಏಕಾಂಗಿ ನಾನಾಗಿ ಗಮಿನಿಸುತಿಹೆನು ನಾನು" ಎಂಬ ಮಾತು ಅವರಿಗೇ ಹೆಚ್ಚಾಗಿ ಅನ್ವಯಿಸುತ್ತದೆ. ಸದಾ ಪುಸ್ತಕವನ್ನು ಓದುವ ಅಭ್ಯಾಸಶೀಲತೆಯನ್ನು ಬೆಳೆಸಿಕೊಂಡ ಅವರು ಗ್ರಾಮೀಣ ಜೀವನದ ನೂರಾರು ಸಮಸ್ಯೆಗಳ ಎಳೆಗಳನ್ನು ತಲಸ್ಪರ್ಶಿಯಾಗಿ ಅರಿತುಕೊಂಡಿದ್ದಾರೆ. ಅವರ ಕೃತಿಗಳಲ್ಲೆಲ್ಲಾ ಈ ಅನುಭವದ ಮತ್ತು ಓದುಗಾರಿಕೆಯ ಫಲ ಎದ್ದು ಕಾಣುತ್ತವೆ. ಕರ್ನಾಟಕದಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿ ಆರಂಭವಾಗುವುದಕ್ಕೂ ಮೊದಲಿಗೆ ಅವರು ದಲಿತರ ಹಾಗೂ ಶೋಷಿತರ ಬಾಳುವೆಯನ್ನು ಚಿತ್ರಿಸುವ ಮಾನವೀಯತೆಯನ್ನು ತೋರಿದ್ದರು ಎಂಬುದಕ್ಕೆ 'ಜಯಂತಿ' ಮಾಸಪತ್ರಿಕೆಯಲ್ಲಿ ಪ್ರಕಟವಾಗಿದ್ದ ಅವರ ಕಥೆಗಳೇ ಸಾಕ್ಷಿ.

ಭಾರತೀಸುತರ ಸಣ್ಣಕಥೆಗಳಲ್ಲಿ ವರ್ಣರಂಜಿತ ಪ್ರಾದೇಶಿಕತೆ ಮತ್ತು ಸ್ಥಾನಿಕ ಸಂದರ್ಭಗಳಿಂದ ಚಿಮ್ಮುವ ಕಥಾನಕಗಳನ್ನು ಕಾಣಬಹುದಾಗಿದೆ. ಚಿಂಬ ಹಿಡಿದ ಮೀನು, ಕರೆಗೆ ಓಗೊಟ್ಟ ಕಾರ್ಡೀಲಿಯಾ, ಬೆಂಕಿಯಲ್ಲಿ ಬೆಂದವಳು, ಪ್ರೇಮ ಪಂಚಮಿ ಮತ್ತು ಮಾದಯ್ಯ ಮತ್ತು ವೇಣುವಿನ ಕೊನೆಯ ದಿನಗಳು ಇವು ಮುಖ್ಯವಾದುವು. ಎಲ್ಲ ಕಥೆಗಳಲ್ಲೂ ಗ್ರಾಮೀಣ ಜೀವನದ ಹತ್ತಾರು ಒಳಸುಳಿಗಳನ್ನು ಕಾಣಬಹುದಾಗಿದೆ.

ಚಿಂಬ ಹಿಡಿದ ಮೀನು ಕೊಡಗಿನ ಗಿರಿಜನರ ಜೀವನಚಿತ್ರಣವನ್ನು ನೀಡುವ ಆರು ಕಥೆಗಳನ್ನು ಒಳಗೊಂಡಿದೆ. ಸಾಮಾಜಿಕ, ಸಾಂಸ್ಕೃತಿಕ ವಿವರಗಳೊಂದಿಗೆ, ಸಮಕಾಲೀನ ರಾಜಕಾರಣದ ಚಿತ್ರಗಳನ್ನೂ ಇಲ್ಲಿ ಕಾಣಬಹುದಾಗಿದೆ. ಬೇಟೆಯ ಘಟನೆಗಳನ್ನು ಅರ್ಥಪೂರ್ಣವಾಗಿ ಕಥೆಯ ವ್ಯಕ್ತಿಗಳ ಕ್ರಿಯೆಗೆ ಹೊಂದಿಸಿರುವ ತಿಮ್ಮುಡುವಿನ ಹುಲಿ ಬೇಟೆ ಒಂದು ಸೊಗಸಾದ ಬೇಟೆಯ ಚಿತ್ರಣವಾಗಿದೆ. ಸೇನೆಯಿಂದ ಹಿಂದಕ್ಕೆ ಬಂದ ತಿಮ್ಮುಡು ಈಡುಗಾರನಾಗಿ ಕೋವಿ ಹಿಡಿದು ತಿರುಗಾಡುತ್ತಿದ್ದ. ನೆರೆಮನೆಯ ಚೆಂಗಪ್ಪನ ಮಗಳು ಚೋಂದುವನ್ನು ತುಂಬ ಕಷ್ಟೆಂದು ಮದುವೆಯಾಗಲು ಹಿಂಜರಿದಾಗ ಒಂದು ಬೇಟೆಯ ಸಂದರ್ಭದಲ್ಲಿ ಚೋಂದು ಶಕ್ತಿ ಉಡುಗಿ ಕುಸಿದ ತಿಮ್ಮುಡುವಿನ ಆರೈಕೆ ಮಾಡಿ ಅವನ ಮನಸ್ಸನ್ನು ಗೆದ್ದ ಕಥೆ ಇಲ್ಲಿದೆ. ಮುದಿವಯಸ್ಸಿನವರು ಎಳೆಯರನ್ನು ಮದುವೆಯಾಗುವುದು, ವಿವಾಹಿತ ಗಂಡು ಹೆಣ್ಣುಗಳು ಮರೆಬಾಳ್ವೆಯನ್ನು ನಡೆಸುವುದು, ಕಳ್ಳಗರ್ಭ ಧರಿಸುವುದು, ವಿವಾಹಿತ ಸ್ತ್ರೀಯರ ಅಪಹಾರ, ಓಡಿಹೋಗಿ ಕಳ್ಳಬಾಳ್ವೆ ನಡೆಸಿದ ಹೆಂಗಸರ ಭ್ರಮನಿರಸನಗಳು, ಕಳ್ಳತನ, ಕಾಡುಪ್ರಾಣಿಗಳ ಕೈಗೆ ಸಿಕ್ಕುವ ಪ್ರಸಂಗಗಳು ಈ ಕಥೆಗಳಲ್ಲಿ ಹಾಸುಹೊಕ್ಕಾಗಿ ಮೂಡಿವೆ.

ಬೆಂಕಿಯಲ್ಲಿ ಬೆಂದವಳು ಸಂಕಲನದ ಕಥೆಗಳಲ್ಲೂ ಪ್ರಾದೇಶಿಕ ವಸ್ತು ಪಾತ್ರಗಳ ಶೋಭೆ ಎದ್ದು ಕಾಣುತ್ತದೆ. ಮಲಮಗನ ಕರೆ ಎಂಬ ಕಥೆಯಲ್ಲಿ ನಾಯಕನ ಎರಡನೆಯ ಹೆಂಡತಿ ಬೋಜಮ್ಮ ಮಲಮಗನನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದು ತನಗೊಬ್ಬ ಮಗ ಹುಟ್ಟಿದ ಮೇಲೆ ಮಲಮಗನು ಆ ಮಗುವಿಗೆ ಕೊಡುವ ಕಾಟದಿಂದ ರೋಸಿಹೋಗಿ ವಿಷಪ್ರಾಶನ ಮಾಡಿಸಿ ಮಲಮಗನನ್ನು ಕೊಲ್ಲುತ್ತಾಳೆ. ಅನಂತರ ಪಾಪಪ್ರಜ್ಞೆಯಿಂದ ಬಹುಕಾಲ ನರಳಿ ನಿದ್ರಾಸಂಚಾರದ ಕೇಡು ತಗುಲಿ ಅಪಘಾತದಿಂದ ಸಾಯುತ್ತಾಳೆ. ಈ ಕಥೆಯಲ್ಲಿ ಬರುವ ಸೂಕ್ಷ್ಮ ಕೌಟುಂಬಿಕ ವಿವರಗಳು ಅಪೂರ್ವವಾಗಿವೆ.

ಅವರ ಕಥೆಗಳಲ್ಲೆಲ್ಲಾ ತುಂಬ ಸಾರ್ಥಕವಾದ ಸಣ್ಣಕಥೆ ಎಂದರೆ 'ಟೊಳ್ಳು ನಂದೀ ಮರ'. ಪ್ರತೀಕನಿಷ್ಠತೆ ಭಾರತೀಪ್ರಿಯರಿಗೆ ತುಂಬ ಪ್ರಿಯವಾದದ್ದು. ದಾರ ಕಿತ್ತ ಗಾಳೀಪಟ, ಹಲ್ಲು ಕಳಚಿದ ಹಾವು, ದಾರಿಯಲ್ಲಿ ಬಿದ್ದ ಹೂವು, ಕತ್ತಲೆ ಹರಿಯಿತು, ಜೇನು ಕಹಿ ಮೊದಲಾದ ಕಥೆಗಳಂತೆಯೇ ಈ ಕಥೆಯಲ್ಲೂ ಟೊಳ್ಳು ನಂದೀಮರ ವಿಷಮ ದಾಂಪತ್ಯದಿಂದ ನರಳಿದ ಒಬ್ಬ ಶ್ರೀಮಂತ ವ್ಯಕ್ತಿಯೊಂದಿಗೆ ಸಮೀಕರಣಗೊಂಡಿದೆ. ಕೊಡಗಿನ ಒಬ್ಬ ಪ್ರಸಿದ್ಧ ಕಾಫಿಪ್ಲಾಂಟರ್ ಶ್ರೀಮಂತ ಚೆಂಗಪ್ಪನೇ ಇವರು ಸೂಚಿಸುವ ನಂದೀಮರ. ಚೊಂದಕ್ಕ ಇವನ ಹೆಂಡತಿ. ಮುದ್ದಿನ ಮಗ ಚೆಂಗಮಣಿ ಮತ್ತು ಚಂದಕ್ಕಿಯರನ್ನು ಕೈಬಿಟ್ಟು ಚೆಂಗಪ್ಪ ಬೆಡಗಿನ ಹುಡುಗಿ ರೀಟಾಳ ಕೈಹಿಡಿದು ಮುಂದೆ ಭಾರಿ ಮಾನಸಿಕ ವಿಪ್ಲವಕ್ಕೆ ಒಳಗಾಗುತ್ತಾನೆ. ಹಲವಾರು ವರ್ಷಗಳ ನಂತರ ಮಗನೇ ತನ್ನ ಬಳಿ ಎಂಜನಿಯರಿಂಗ್ ಚಾಕರಿಗೆ ಅಭ್ಯರ್ಥಿಯಾಗಿ ಬಂದಾಗ ಗುರುತುಹಿಡಿದು ಭಾವೋನ್ಮಾದವನ್ನು ಪ್ರದರ್ಶಿಸುತ್ತಾನೆ. ಮಗ ಹೊರಟುನಿಂತಾಗ ತನ್ನ ಮತ್ತು ಚೊಂದಕ್ಕನ ವಿರಸವೃತ್ತಾಂತವನ್ನು ಒಂದು ದೀರ್ಘಪತ್ರದಲ್ಲಿ ಬರೆದು ಒಂದು ಲಕೋಟೆಯಲ್ಲಿ ಸಾವಿರ ರೂಪಾಯಿಗಳೊಂದಿಗೆ ಕೊಟ್ಟು ಕಳುಹಿಸುತ್ತಾನೆ. ಆದರೆ ಅವರು ನಿರ್ದಾಕ್ಷಿಣ್ಯವಾಗಿ ಹಣವನ್ನು ಹಿಂತಿರುಗಿಸಿದಾಗ ಇವನ ಬದುಕು ಹದಗೆಡುತ್ತದೆ. ಮದ್ಯ ಕುಡಿದರೂ ನಿದ್ದೆಬಾರದ ಹಂತಕ್ಕೆ ತಲುಪಿ ಸಾಯುತ್ತಾನೆ. ಅನಿರೀಕ್ಷಿತವಾದ ತಿರುವುಗಳನ್ನು ಪಡೆಯುತ್ತ ಅನಗತ್ಯವಾಗಿ ಬೆಳೆಯುತ್ತ ಹೋಗುವ ಕಥೆ ಇದಾಗಿದ್ದರೂ ಹಳೆಯ ನೆನಪುಗಳು ಚೆಂಗಪ್ಪನನ್ನು ಕಾಡುವ ಬಗೆ ಆತನ ಮನಸ್ಸಿನಲ್ಲಿ ಟೊಳ್ಳು ನಂದೀಮರ ಬೆಂಕಿಹೊತ್ತಿ ಉರಿದ ಚಿತ್ರ ಗಾಢವಾಗಿ ನಮ್ಮ ಮನಸ್ಸನ್ನು ಕಲಕುತ್ತದೆ. ಘನತೆ, ಕೊಬ್ಬುಗಳಿಂದ ಮೆರೆದ ಶ್ರೀಮಂತ ವ್ಯಕ್ತಿಯ ಸೂಕ್ತ ಪ್ರತಿಮೆಯಾದ ಟೊಳ್ಳುನಂದೀಮರ ಕನ್ನಡದ ಉತ್ತಮ ಕಥೆಗಳ ಸಾಲಿನಲ್ಲಿ ನಿಲ್ಲಬಲ್ಲ ಕಥೆಯಾಗಿದೆ.

ನನ್ನ ಅತ್ತಿಗೆ, ದೂರ ಹೋದಳು, ಮನೆಗೆ ಬಂದ ಮಹಾಬಲಿ, ಗಿಳಿಯು ಪಂಜರದೊಳಿಲ್ಲ, ಪೆಟ್ರೀಷಿಯಾ, ಕಂದನನ್ನು ಕದ್ದವನು ಮತ್ತು ಇಲಿ ಮತ್ತು ಹಾವು ಇವು ಭಾರತೀಸುತರ ನೀಳ್ಗತೆಗಳು ಅಥವಾ ಕಿರು ಕಾದಂಬರಿಗಳು. ವಿಭಿನ್ನ ಮತಧರ್ಮದ ಪ್ರೇಮಿಗಳ ಆಕಾಂಕ್ಷೆ ನೆರವೇರಲು ಸಾಧ್ಯವಾಗದ ರೀತಿಯಲ್ಲಿ ಸಮಾಜದ ಘಟನೆಗಳು ಬೆಳೆಯುತ್ತ ಹೋದ ಬಗೆ ದೂರ ಹೋದಳು ಎಂಬ ನೀಳ್ಗತೆಯಲ್ಲಿದ್ದರೆ, ಅತ್ತಿಗೆಯನ್ನು ಆರಾಧ್ಯ ದೈವವೆಂದು ಪೂಜ್ಯಭಾವದಿಂದ ನೋಡಿ ಅವಳ ಮಟ್ಟದಿಂದ ಹೆಂಡತಿಯನ್ನು ಅಳೆದು ನಿರಾಶೆಗೊಂಡ ಸುಶಿಕ್ಷಿತ ತರುಣನೊಬ್ಬನ ಪಾಡು ನನ್ನ ಅತ್ತಿಗೆ ಎಂಬ ಕಿರು ಕಾದಂಬರಿಯಲ್ಲಿ ಚಿತ್ರಿತಗೊಂಡಿದೆ. ಓಣಂ ಹಬ್ಬದ ಮೂರು ದಿನಗಳಲ್ಲಿ ಬಲಿ ತನ್ನ ನಾಡನ್ನು ನೋಡಲು ಬರುತ್ತಾನೆ ಎಂಬ ಪೌರಾಣಿಕ ಆಶಯವನ್ನು ಸಮೀಕರಿಸಿಕೊಂಡ ಕಥಾವಸ್ತುವನ್ನು ಹೊಂದಿರುವ ಮನೆಗೆ ಬಂದ ಮಹಾಬಲಿ, ಸ್ವಾತಂತ್ರ್ಯಪೂರ್ವ ಘಟನಾವಳಿಗಳನ್ನು ಬಿಚ್ಚುತ್ತ ಹೋಗುವ ಪೆಟ್ರೀಷಿಯಾ ಅವೆರಡೂ ಭಾರತೀಸುತರ ಕಿರು ಕಾದಂಬರಿಗಳೇ ಆಗಿವೆ. ಇವರ ನೀಳ್ಗತೆಗಳಲ್ಲಿ ಕಳ್ಳಸಾಗಾಣಿಕೆ, ಸಟ್ಟಾಚಟ, ವ್ಯಭಿಚಾರ, ಕಳ್ಳತನ, ಜೀವಹಿಂಸೆ, ಕಿರುಕುಳ, ಹೊಡೆದಾಟ ಮೊದಲಾದ ಕೆಳಜಗತ್ತಿನ ವೈಲಕ್ಷಣಗಳು ಮಿಂಚುತ್ತವೆ. ಇವೆಲ್ಲ ನೆಲದ ಪಾತ್ರಗಳೇ ಆಗಿದ್ದು ಮಣ್ಣಿನ ಮಕ್ಕಳ ನಿತ್ಯಜೀವನದ ಸತ್ಯದರ್ಶನ ವನ್ನು ಸಮರ್ಪಕವಾಗಿ ಮಾಡಿಕೊಡುತ್ತವೆ.

ಭಾರತೀಸುತರ ಕಾದಂಬರಿಗಳ ಹರಹು ದೊಡ್ಡದು. ಕೊಡಗು, ಕೇರಳ ಮತ್ತು ದಕ್ಷಿಣ, ಉತ್ತರ ಕನ್ನಡ ಜಿಲ್ಲೆಗಳ ಸಾಮಾನ್ಯ ಜನ ಜೀವನದ ಸೂಕ್ಷ್ಮ ಪರಿಚಯ ಮಾಡಿಕೊಡುವ ಹಲವಾರು ಪ್ರಾದೇಶಿಕ ಕಾದಂಬರಿಗಳು ಈ ಪ್ರಕಾರದ ಕಥಾನಕಕ್ಕೆ ಭಾರತೀಸುತರ ಒಂದು ದೊಡ್ಡ ಕೊಡುಗೆ ಎಂದು ಹೇಳಬಹುದು. ಹೀಗಾಗಿ ಪ್ರಾದೇಶಿಕ ಕಾದಂಬರಿಗಳನ್ನು ಕುರಿತು ಚರ್ಚಿಸುವಾಗ ಭಾರತೀಸುತರನ್ನು ಮರೆಯುವಂತಿಲ್ಲ. ಸ್ವಾತಂತ್ರ್ಯ ಹೋರಾಟದ ಹಲವು ಮಜಲುಗಳನ್ನು ಚಿತ್ರಿಸುವ ಕೆಲವು ರಾಜಕೀಯ ಕಾದಂಬರಿಗಳನ್ನೂ, ಪ್ರೇಮ ಜೀವನದ ಹಲವಾರು ವಿಷಮ ಸಂಬಂಧಗಳನ್ನು ಚರ್ಚಿಸುವ ಸಾಮಾಜಿಕ ಪ್ರಣಯ ಕಾದಂಬರಿಗಳನ್ನೂ ಸ್ವಾತಂತ್ರ್ಯೋತ್ತರ ಸಮಾಜ ಜೀವನದ ಪ್ರಣಯಗಳನ್ನು ಗುರುತಿಸುವ ಸಾಮಾಜಿಕ ಕಾದಂಬರಿಗಳನ್ನೂ, ಐತಿಹಾಸಿಕ ಕಾದಂಬರಿಗಳನ್ನೂ, ಭಾರತೀಸುತರು ಬರೆದಿದ್ದಾರೆ. ಅವರ ಬಯಲುದಾರಿ, ಎಡಕಲ್ಲು ಗುಡ್ಡದ ಮೆಲೆ, ಹುಲಿಯ ಹಾಲಿನ ಮೇವು ಮೊದಲಾದ ಕಾದಂಬರಿಗಳು ಚಿತ್ರಲೋಕಕ್ಕೂ ಕಾಲಿರಿಸಿ ಅವರಿಗೆ ಕೀರ್ತಿಯನ್ನು ತಂದುಕೊಟ್ಟಿವೆ. ಸ್ವಾತಂತ್ರ್ಯ ಬಂದ ಸಮಯದಲ್ಲಿ ದೇಶ ಇಬ್ಭಾಗವಾದಾಗ ಗಡಿನಾಡಿನ ಜನತೆಯ ಮತಾಂಧತೆ, ಕ್ರೌರ್ಯ, ಹತಾಶೆ ಮೊದಲಾದುವುಗಳನ್ನು ವಿವರಿಸುವ ಒಂದು ಕಾಲ್ಪನಿಕ ರಾಜಕೀಯ ಕಾದಂಬರಿಯನ್ನು ಬರೆದಿದ್ದಾರೆ. ಹಾಗೆಯೇ ಪ್ರತ್ಯಕ್ಷದರ್ಶನ ಮಾಡದಿದ್ದರೂ ಪತ್ರಿಕಾವರದಿಯ ಮತ್ತು ಪುಸ್ತಕಗಳ ಆಧಾರದಿಂದ ಬಂಗ್ಲಾದೇಶದ ವಿಮೋಚನೆಯ ಹಂತಗಳನ್ನು ಕುರಿತ ಒಂದು ಕಾಲ್ಪನಿಕ ರಾಜಕೀಯ ಕಾದಂಬರಿಯನ್ನು ಬರೆದಿದ್ದಾರೆ.

ಪ್ರಾದೇಶಿಕ ಕಾದಂಬರಿಗಳ ರಚನೆಯಲ್ಲಿ ಭಾರತೀಸುತರು ಅಪೂರ್ವ ರುಚಿಯನ್ನು ತೋರಿದ್ದಾರೆ. ಉತ್ತರ, ದಕ್ಷಿಣ ಕನ್ನಡ ಜಿಲ್ಲೆಗಳ ಗ್ರಾಮೀಣ ಪರಿಸರಗಳನ್ನು ವಕ್ರರೇಖೆ ಮುಂತಾದ ಕಾದಂಬರಿಗಳಲ್ಲಿ ಚಿತ್ರಿಸಿದ್ದರೆ ; ವೈನಾಡಿನ ಪಣಿಯ ಜನಾಂಗದ ದಲಿತ ಜೀವನವನ್ನು ಗಿರಿಕನ್ನಿಕೆ, ಕೊಳಲಿನ ಕರೆ, ಹುಲಿಬೋನು ಮೊದಲಾದ ಕೃತಿಗಳಲ್ಲಿ ಚಿತ್ರಿಸಿದ್ದಾರೆ. ಆನುಷಂಗಿಕವಾಗಿ ಪಣಿಯರೆಂಬ ಅಸ್ಪೃಶ್ಯ ಜನಾಂಗದ ಬದುಕಿನ ಎಲ್ಲ ಮಜಲುಗಳನ್ನೂ ತಡಕಿದ್ದಾರೆ. ಇವರ ಹಬ್ಬ ಹರಿದಿನಗಳು, ಬೇಟೆ, ಕಳ್ಳತನ, ಊಳಿಗ, ಕಳ್ಳ ಪ್ರಣಯಗಳು, ಕಷ್ಟ ಸಹಿಷ್ಣುತೆ, ಸೇವಾನಿಷ್ಠೆ ಮತ್ತು ನಿತ್ಯಜೀವನದ ವೀಕ್ಷಣ ವಿವರಣೆ ಅವರ ಕೃತಿಗಳಲ್ಲಿ ಅದ್ಭುತವಾಗಿ ಮೂಡಿಬಂದಿದೆ. ಅಶಿಷ್ಟ ಜನಾಂಗಗಳ ಸಾಮಾಜಿಕ ತೌಲನಿಕ ಅಧ್ಯಯನವೂ ಈ ಕಾದಂಬರಿಗಳ ಒಂದು ಉಪ ಹುಟ್ಟುವಳಿ ಎನ್ನಬಹುದು. ಇವೆಲ್ಲಕ್ಕಿಂತ ಹೆಚ್ಚಾಗಿ ಕೊಡಗಿ ನಂಥ ಅಪ್ಪಟ ಮಲೆನಾಡಿನಲ್ಲಿ ತಮ್ಮ ಬದುಕಿನ ಬಹುಭಾಗವನ್ನು ಕಳೆದ ಭಾರತೀಸುತರು ಕರ್ನಾಟಕದಲ್ಲೇ ವಿಶಿಷ್ಟವಾಗಿರುವ ಕೊಡಗಿನ ಸಾಂಸ್ಕೃತಿಕ, ಚಾರಿತ್ರಿಕ, ಕೌಟುಂಬಿಕ ಮತ್ತು ಪ್ರಾಕೃತಿಕ ಜಗತ್ತುಗಳ ಅಖಂಡ ದರ್ಶನವನ್ನೇ ಅನೇಕ ಕಾದಂಬರಿಗಳಲ್ಲಿ ಮೂಡಿಸಿದ್ದಾರೆ ಎನ್ನಬಹುದು.

ಬೆಟ್ಟಗುಡ್ಡಗಳ ನಾಡಿನ ಜೀವನ ಪದ್ಧತಿ, ಕಾಫಿ, ಏಲಕ್ಕಿ, ಕಿತ್ತಳೆ ತೋಟಗಳ ಕೃಷಿಲೋಕ, ಅಲ್ಲಿಯ ಶ್ರೀಮಂತ ಪ್ಲಾಂಟರುಗಳ ವಿಲಾಸ ಜೀವನ, ಕೂಲಿ ಜನಾಂಗದವರ ಜೀವನ ವಿಧಾನ, ಕೊಡಗರ ಹಬ್ಬ ಹರಿ ದಿನಗಳು, ಸಾಂಸ್ಕೃತಿಕ, ಸಾಮಾಜಿಕ ಕೂಟಗಳು, ದಟ್ಟವಾದ ಅರಣ್ಯ ಸಂಪತ್ತಿನ ಮಳೆ-ಮಂಜಿನ ವಿವರಗಳು ಇವೆಲ್ಲ ಅವರ ಕೃತಿಗಳಲ್ಲಿ ಸಹಜವಾಗಿ ಆಶ್ರಯ ಪಡೆಯುತ್ತವೆ. ನಾಟಿ ಓಟದಿಂದ ಹಿಡಿದು ಜಾನಪದ ಜೀವನದವರೆಗೆ, ಕೀಟಲೋಕಗಳಿಂದ ಹಿಡಿದು ವನ್ಯಪ್ರಾಣಿಗಳವರೆಗೆ ಎಲ್ಲದರ ಪರಿಚಯ ಮಾಡಿಕೊಟ್ಟಿದ್ದಾರೆ. ಗ್ರಾಮೀಣ ಜೀವನದ ಒಳದಾರಿಗಳನ್ನು, ಪ್ರಣಯದ ಹತ್ತಾರು ಮುಖಗಳನ್ನೂ, ಸಮಾಜದ ನಿಮ್ನಸ್ತರದಲ್ಲಿ ಬದುಕುವ ಜನತೆಯ ಬಣ್ಣಗಳನ್ನೂ ಅವರು ಸೂಕ್ಷ್ಮವಾಗಿ ತಮ್ಮ ಪ್ರಾದೇಶಿಕ ಕಾದಂಬರಿಗಳಲ್ಲಿ ಕಂಡರಿಸಿದ್ದಾರೆ. ಕೆಳಮಧ್ಯಮ ವರ್ಗಗಳ ಜನರ ವ್ಯವಹಾರಗಳ ಅಂತರ್ ದರ್ಶನ ಮಾಡಿಕೊಟ್ಟಿರುವ ಪ್ರತಿಭಾನ್ವಿತ ಲೇಖಕರ ಸಾಲಿಗೆ ಇವರನ್ನು ಸೇರಿಸ ಬಹುದು.

ತಮ್ಮ ಪ್ರಣಯ ಕಥೆಗಳಲ್ಲಿ ಹಾಗೂ ಕೆಲವು ಸಾಮಾಜಿಕ ಕಾದಂಬರಿ ಗಳಲ್ಲಿ ಗಾಲ್ಸ್‌ವರ್ದಿ, ಲಾರೆನ್ಸ್ ಮೊದಲಾದವರ ಕೃತಿಗಳ ಅನುಕರಣ ಯಥೇಚ್ಛವಾಗಿದ್ದರೂ ಭಾರತೀಸುತರು ಮಾನವೀಯ ಕಾಮಭಾವವನ್ನು ಬರಿಯ ಇಂದ್ರಿಯಕ ಮಟ್ಟದಲ್ಲೇ ಅತಿರಂಜಿಸಿ ವರ್ಣಿಸುವ ರೋಚಕ ಕಾರ್ಯವನ್ನು ಮಾಡಿದ್ದಾರೆ ಎನಿಸುವುದರಿಂದ ಅವುಗಳ ವಿಮರ್ಶೆಗೆ ತೊಡಗದೆ ಅವರ ಎರಡು ಯಶಸ್ವೀ ಕಾದಂಬರಿಗಳಾದ ಹುಲಿಯ ಹಾಲಿನ ಮೇವು ಎಂಬ ಪ್ರಾದೇಶಿಕ, ಐತಿಹಾಸಿಕ ಕಾದಂಬರಿಯನ್ನೂ, ವಾಲ್ಮೀಕ ಎಂಬ ರಾಜಕೀಯ ವ್ಯಂಗ್ಯಧ್ವನಿಯುಳ್ಳ ಕಾದಂಬರಿಯನ್ನೂ ಪ್ರಾತಿನಿಧಿಕವಾಗಿ ಪರಿಚಯಮಾಡಿ ಕೊಡಬಹುದು.

'ಹುಲಿಯ ಹಾಲಿನ ಮೇವು' ಒಂದು ಬೃಹತ್ ಕಾದಂಬರಿ. ಕೊಡಗರ ಬದುಕಿನ ವಿಶಿಷ್ಟ ದ್ರವ್ಯಗಳಲ್ಲಿ ವೀರಜೀವನವನ್ನು ಕುರಿತು ಪಂಜೆ ಮಂಗೇಶ ರಾಯರು : 'ಯಾರು ಮೆದ್ದರೊ ಇಲ್ಲಿ ಪೂರ್ವದಿ ಹುಲಿಯ ಹಾಲಿನ ಮೇವನು' ಎಂಬ ರೂಪಕವನ್ನು ಬಳಸಿದ್ದರು. ಭಾರತೀಸುತರು ಅದನ್ನೇ ಈ ಕಾದಂಬರಿಯ ಶೀರ್ಷಿಕೆಯಾಗಿ ಮಾಡಿಕೊಂಡಿದ್ದಾರೆ. ಕೊಡಗಿನ ಒಳನಾಡಿ ನಲ್ಲೆಲ್ಲ ಸಂಚರಿಸಿ ಕೊಡವ ಭಾಷೆಯನ್ನೂ, ಸಂಸ್ಕೃತಿಯನ್ನೂ, ಇತಿಹಾಸ ವನ್ನೂ ಅರಿತಿರುವ ಭಾರತೀಸುತರು ತಮ್ಮ ಬದುಕಿನ ಸಾರವತ್ತಾದ ಭಾಗವನ್ನೂ ಕಳೆದಿದ್ದು ಕೊಡಗಿನಲ್ಲೇ. ಆದ್ದರಿಂದ ಕೊಡಗರ ಜೀವನವನ್ನು ಕುರಿತ ಇಂಥದೊಂದು ಕಾದಂಬರಿಯನ್ನು ರಚಿಸಬೇಕೆಂಬ ಹಂಬಲ ಅವರಲ್ಲಿ ಮೂಡಿದ್ದು ಸಹಜವಾಗಿಯೇ ಇದೆ.

ಕೊಡಗು ಜನಾಂಗದ 'ವಿಶ್ವಕೋಶ' ಎಂದು ಪ್ರಸಿದ್ಧಿ ಪಡೆದಿರುವ 'ಹುಲಿಯಹಾಲಿನ ಮೇವು' ತನ್ನ ಶೀರ್ಷಿಕೆಗೆ ತಕ್ಕಂತೆ ಒಂದು ಗುಡ್ಡಗಾಡಿನ ವಿಶಿಷ್ಟ ಸಂಪ್ರದಾಯದ ಜನತೆಯ ಮನೋಧರ್ಮವನ್ನು ತಲಸ್ಪರ್ಶಿಯಾಗಿ ಪರಿಚಯಮಾಡಿಕೊಡುತ್ತದೆ. ಕೊಡಗಿನ ಚರಿತ್ರೆಯಲ್ಲಿ ಒಂದು ಆಯಕಟ್ಟಾದ ಅವಧಿಯನ್ನು ಹಿಡಿದು ಒಬ್ಬ ಮುಖ್ಯದೊರೆ ದೊಡ್ಡವೀರರಾಜನ ಕಾಲದಲ್ಲಿ ನಡೆದ ಕೊಡಗಿನ ಪುನಸ್ಸಂಘಟನೆಯನ್ನು ರೂಪಿಸುವ ದೃಷ್ಟಿಯನ್ನಿಟ್ಟು ಕೊಂಡಿದ್ದಾರೆ ಕಾದಂಬರಿಕಾರರು. ಇದನ್ನು ಅಚ್ಚುಕಟ್ಟಾಗಿ ಐತಿಹಾಸಿಕ ಸಾಮಗ್ರಿಗಳ ಬಳಕೆಯಿಂದ ತುಂಬಿರುವುದೇ ಅಲ್ಲದೆ ಇದರ ಹಿನ್ನೆಲೆಯಲ್ಲಿ ಸಮಗ್ರ ಕೊಡವ ಜೀವನವನ್ನೂ ಅದರ ಹತ್ತಾರು ಎಳೆಗಳ ಸಮೇತ ಮುಂದು ವರಿಸುವುದೇ ಕಾದಂಬರಿಕಾರರ ಉದ್ದೇಶವಾಗಿದೆ.

ಐತಿಹಾಸಿಕ ಕಾದಂಬರಿಗಳ ರಚನಾತಂತ್ರಕ್ಕೆ ಅನುಗುಣವಾಗಿ ಭಾರತೀಸುತರು ಇಲ್ಲಿ ಚೆಂಗುಮಣಿ ಎಂಬ ಕಾಲ್ಪನಿಕ ವ್ಯಕ್ತಿಯನ್ನು ಕಾಣಿಸಿದ್ದಾರೆ. ಈತನ ವ್ಯಕ್ತಿತ್ವ ಸಹಜವಾಗಿ ಮೂರು ಶತಮಾನಗಳ ಹಿಂದಿನ ಕೊಡಗಿನ ಗ್ರಾಮೀಣ ವೀರತರುಣನ ನೆನಪನ್ನು ತರುತ್ತದೆ. ಈತ ಕಡುಬಡವ. ಕೊಡಗಿನ ಒಂದು ವಿಶಿಷ್ಟ ಸ್ಪರ್ಧೆಯಾದ ನಾಟಿ ಓಟದ ಹಿನ್ನೆಲೆಯಲ್ಲಿ ನಾಡತಕ್ಕನ ಮಗಳಾದ ಪೂವಿ ಮತ್ತು ಚೆಂಗುಮಣಿಯರ ಪರಿಚಯ ಉಂಟಾಗಿ ಪರಸ್ಪರ ಪ್ರೀತಿ ಬೆಳೆಯುತ್ತದೆ. ಸ್ಥಾನಮಾನವಿಲ್ಲದೆ ಅಲೆಯುತ್ತಿದ್ದ ಚೆಂಗುಮಣಿ ಇನ್ನೊಂದು ವಿಶಿಷ್ಟ ಬೇಟೆಯ ಸಂದರ್ಭದಲ್ಲಿ ಕೊಡಗಿನ ದೊರೆ ಚಿಕ್ಕವೀರರಾಜನ ಜೀವ ಉಳಿಸಿ ಆತನ ಅಂಗರಕ್ಷಕನಾಗಿ ನೇಮಕ ಹೊಂದು ತ್ತಾನೆ. ನಾಡತಕ್ಕನ ಇಷ್ಟಕ್ಕೆ ವಿರುದ್ಧವಾಗಿ ಪೂವಿಯ ಕೈಹಿಡಿಯುತ್ತಾನೆ. ಈ ಪ್ರಸಂಗದಿಂದ ನಾಡತಕ್ಕನಿಗೆ ಕೊಡಗಿನ ಪರಕೀಯ ದೊರೆ ದೊಡ್ಡವೀರರಾಜನ ಮೇಲಿದ್ದ ಹಗೆತನ ಬೆಳೆದು ಅಂತರ್ಯುದ್ಧಕ್ಕೆ ನಾಂದಿಯಾಗುತ್ತದೆ. ನೆರೆಯ ರಾಜ್ಯವಾದ ಕೋಟೆಯಂಗಡಿಯ ದೊರೆ ನಾಡತಕ್ಕನ ಸ್ನೇಹ ಬೆಳೆಸಿ ರಾಜನ ಮೇಲೆ ಏರಿಬರುತ್ತಾನೆ. ಇತ್ತ ಈ ಸಂಧಿಯನ್ನು ಬಳಸಿಕೊಂಡು ಮೈಸೂರಿನ ಅರಸರೂ ಯುದ್ಧಹೂಡುತ್ತಾರೆ. ಕೊಡಗಿನ ದೊರೆ ಇವನ್ನೆಲ್ಲಾ ಯಶಸ್ವಿಯಾಗಿ ಎದುರಿಸಿ ಗೆಲ್ಲುತ್ತಾನೆ. ಕದನದಲ್ಲಿ ಚೆಂಗುಮಣಿ ವೀರಮರಣ ಪಡೆಯುತ್ತಾನೆ. ಇದಿಷ್ಟು ಸ್ಥೂಲವಾಗಿ ಕಥೆಯ ಹಂದರ.

ಚೆಂಗುಮಣಿಯ ಕಥೆಯ ಬೆನ್ನಿಗೇ ಕಾದಂಬರಿಕಾರರು ಕೊಡಗಿನ ಜಾನಪದ ಜೀವನ, ಕುಟುಂಬ ಪದ್ಧತಿ, ಮದುವೆಯ ವಿಧಿವಿಧಾನಗಳು, ಹಾಡುಗಳು, ಬೇಟೆ, ಕುಡಿತ, ಯುದ್ಧ, ಅಂತಃಕಲಹಗಳು, ಸಾಮಾಜಿಕ ಕಟ್ಟು ಪಾಡುಗಳು, ಆಡಳಿತ ನೀತಿ, ನೆರೆರಾಜ್ಯಗಳೊಂದಿಗಿನ ಸಂಘರ್ಷ-ಸ್ನೇಹಗಳು, ರಾಜ-ಪ್ರಜೆಯ ಸಂಬಂಧ, ಅರಣ್ಯಜೀವನ, ಭಾಷೆ ಇಂಥ ನೂರಾರು ವಿವರಗಳನ್ನು ಸಜೀವವಾಗಿ ಚಿತ್ರಿಸುವುದರಲ್ಲಿ ಯಶಸ್ವಿಯಾಗಿದ್ದಾರೆ. ಐತಿಹ್ಯ, ಐತಿಹಾಸಿಕ ದಾಖಲೆಗಳು, ಪ್ರವಾಸಿಗಳ ವರದಿಗಳು, ಪುರಾಣಕಥೆಗಳು, ಶಾಸನ ಸಾಮಗ್ರಿ, ಜನಪದ ಗೀತೆಗಳು, ಗ್ರಂಥಗಳು ಮೊದಲಾದ ಎಲ್ಲ ಬಗೆಯ ಸಾಕ್ಷ್ಯಗಳನ್ನೂ ವಿಪುಲವಾಗಿ ಸಂಗ್ರಹಿಸಿ ಕಥೆಯಲ್ಲಿ ಪ್ರಾಸಂಗಿಕವಾಗಿ ವಿಶ್ಲೇಷಿ ದ್ದಾರೆ. ಹೀಗಾಗಿ 'ಹುಲಿಯ ಹಾಲಿನ ಮೇವು' ಕಾದಂಬರಿ ಕೇವಲ ಐತಿಹಾಸಿಕ ಕಾದಂಬರಿ ಮಾತ್ರ ಆಗದೆ ಕೊಡವ ಸಂಸ್ಕೃತಿಯ ಒಂದು ಸಂಗ್ರಹಾಲಯವೂ ಆಗಿದೆ. ಕೊಡವ ಸಂಸ್ಕೃತಿಯ ಒಂದು ಒಳನೋಟ ಸಾಧ್ಯವಾಗುವಂತೆ ಮಾಡಿ ಭಾರತೀಸುತರು ಚಾರಿತ್ರಿಕ ಪ್ರಾದೇಶಿಕ ಕಾದಂಬರಿಗೆ ಒಂದು ಹೊಸ ಆಯಾಮವನ್ನು ಒದಗಿಸಿದ್ದಾರೆ.

'ವಲ್ಮೀಕ' ಎಂಬ ಕಾದಂಬರಿ ಕಲಾ ಪ್ರಾಮಾಣಿಕತೆಯಿಂದ ರಾಜಕೀಯ ಅನುಭವವೊಂದನ್ನು ಅದರ ಎಲ್ಲ ಕ್ಲೇಶ ದ್ವಂದ್ವಗಳೊಂದಿಗೂ ವಿವರಿಸಿ ಅದಕ್ಕೆ ತಕ್ಕ ಪ್ರತಿಮಾ ವ್ಯವಸ್ಥೆಯನ್ನೂ ಅಚ್ಚುಕಟ್ಟಾಗಿ ದುಡಿಸಿಕೊಂಡು ಸಾರ್ಥಕವಾಗಿದೆ.

ವಲ್ಮೀಕ ಒಂದು ರಾಜಕೀಯ ಹಿನ್ನೆಲೆಯುಳ್ಳ ಕಾದಂಬರಿ. ಒಬ್ಬ ಪ್ರತಿಭಾವಂತ ಸಾಹಿತ್ಯ ವಿದ್ಯಾರ್ಥಿ ಅಧ್ಯಾಪನ ಕಾರ್ಯವನ್ನು ಬಿಟ್ಟು ಐ.ಎ.ಎಸ್.ನಲ್ಲಿ ಆಯ್ಕೆಯಾಗಿ ಜಿಲ್ಲಾಧಿಕಾರಿಯಾಗುತ್ತಾನೆ. ಜಿಲ್ಲಾಧಿಕಾರಿ ಯಾಗುವ ಸೂಕ್ಷ್ಮಜೀವಿಗೆ ಇಂದಿನ ರಾಜಕೀಯ ಬಾಹುಳ್ಯದ ಜೀವನದಲ್ಲಿ ಯಾವ ಸ್ಥಾನವಿದೆಯೆಂಬುದನ್ನು ಅನುಭವದಿಂದ ತಿಳಿದುಕೊಳ್ಳುತ್ತ ಹೋಗು ತ್ತಾನೆ. ಅವನ ಖಾಸಗಿ ಅನ್ನಿಸಿಕೆಗಳ ಮತ್ತು ಸರಕಾರಿ ಅಧಿಕಾರಿಯಾಗಿ ಕೊಡುತ್ತಾ ಹೋಗುವ ಆದೇಶಗಳ ನಡುವಣ ಅಂತರ ಬೆಳೆಯುತ್ತಲೇ ಹೋಗುತ್ತದೆ. ಸರಕಾರದ ಜಮೀನಿನಲ್ಲಿ ಹರಿಜನರು ಹತ್ತಾರು ವರ್ಷಗಳಿಂದ ವಾಸ್ತವ್ಯ ಮಾಡಿಕೊಂಡಿದ್ದರೂ, ಹಿಂದಿನ ಸರಕಾರದ ಮಂತ್ರಿಗಳು ಆ ನೆಲ ಹರಿಜನರಿಗೇ ಸೇರಿದ್ದೆಂದು ಬಾಯ್ದೆರೆಯಾಗಿ ಹೇಳಿದ್ದರೂ ಕೊನೆಗೆ ಪುಢಾರಿಯೊಬ್ಬನ ಮಧ್ಯ ಪ್ರವೇಶದಿಂದ ಆ ಜಮೀನು, ಪಕ್ಕದಲ್ಲಿ ಹದಿನೈದು ಎಕರೆಯಷ್ಟು ಜಮೀನಿನ ಒಡೆಯನಾಗಿದ್ದ ಒಬ್ಬ ಶ್ರೀಮಂತನಿಗೆ ಮಾರಾಟವಾಗ ಬೇಕೆಂದು ಸರಕಾರ ತೀರ್ಮಾನಿಸುತ್ತದೆ. ಸ್ಥಾನಿಕ ವಿದ್ಯಮಾನಗಳನ್ನೂ ಸ್ಥಳ ಪರಿಶೀಲನೆಯಿಂದ ಖುದ್ದಾಗಿ ತಿಳಿದು ಹರಿಜನರ ಪರವಾಗಿ ಶಿಫಾರಸು ಮಾಡಿದ್ದ ಜಿಲ್ಲಾಧಿಕಾರಿ ತನ್ನ ಇಷ್ಟಕ್ಕೆ ವಿರುದ್ಧವಾಗಿ ಸರಕಾರಿ ಹುಕುಮನ್ನೂ ತಾನೇ ಚಲಾಯಿಸಬೇಕಾಗುತ್ತದೆ. ತಾನೇ ಜಿಲ್ಲಾಶ್ರೇಷ್ಠನೆಂದು ಅಧಿಕೃತವಾಗಿ ಮಾನಿತನಾಗಿದ್ದರೂ ಎಂ.ಎಲ್.ಎ.ಗಳ ಮರ್ಜಿಯನ್ನನುಸರಿಸಬೇಕಾಗುತ್ತದೆ. ಇಂಥ ದ್ವಂದ್ವಗಳ ಜೊತೆಗೆ ಲಂಚ ತಿಂದು ಸಿಕ್ಕಿಕೊಂಡ ಅಧಿಕಾರಿಯೊಬ್ಬ ನಾಯಕನ ಬಳಿಗೆ ತನ್ನ ಹೆಂಡತಿಯನ್ನೇ ಸಂಧಾನಕ್ಕಾಗಿ ಕಳಿಸುತ್ತಾನೆ. ಗಂಡನಿಂದ ಬೆನ್ನ ಮೇಲೆ ಬರೆಯ ಶಿಕ್ಷೆಗೆ ಒಳಗಾಗಿ ಒತ್ತಾಯದಿಂದಾಗಿ ನಾಯಕನ ಬಳಿಗೆ ಬರುವ ಆಕೆ ಹಣ ಮತ್ತು ಶೀಲ ಎರಡನ್ನೂ ಒಪ್ಪಿಸಲು ಸಿದ್ಧಳಾಗುತ್ತಾಳೆ. ಈ ಸೂಕ್ಷ್ಮವನ್ನರಿತ ನಾಯಕ ಅವಳನ್ನು ಓಡಿಸಿ ಗೆದ್ದೆನೆಂದು ಕೊಂಡರೆ ಮರುದಿನ ಅವಳ ಹೆಣ ಬಾವಿಯಲ್ಲಿ ತೇಲಿ ಈತನ ನಿರ್ಣಯ ಗಳನ್ನು ಕೆಣಕುತ್ತದೆ.

ಬರಿಯ ಸಂಕೇತಗಳಿಂದಲೇ ಇಲ್ಲಿಯ ಸನ್ನಿವೇಶಗಳು ಬೆಳೆಯುತ್ತ ಹೋಗುತ್ತವೆ. ಟೈಪಿಸ್ಟಳ ಪ್ರಲೋಭನೆಗೆ ಸಿಕ್ಕಿಬೀಳುವುದರಲ್ಲಿದ್ದಾಗ ನಾಯಕನ ಮನೋವಿಕಾರವನ್ನು, ಕೂಡಲೇ ಅದು ಸ್ತಿಮಿತಕ್ಕೆ ಬಂದ ಬಗೆಯನ್ನೂ ಒಂದು ಸೊಳ್ಳೆಯ ಹಾರಾಟದ ಸಂಕೇತ ಸಮರ್ಥವಾಗಿ ಧ್ವನಿಸುತ್ತದೆ. ಗ್ಲಾಸಿನಲ್ಲಿ ಉಕ್ಕಿ ಚೆಲ್ಲಿದ ಕಳ್ಳಿನ ನೊರೆ ಅದರ ತಳದಲ್ಲಿರುವ ಹುಳಿವಾಸನೆಯ ಹೆಂಡ, ಈ ಚಿತ್ರವೂ ಕಾದಂಬರಿಯಲ್ಲಿ ಅರ್ಥಪೂರ್ಣವಾಗಿ ಬೆಳೆಯುತ್ತದೆ.

ಕೊನೆಯಲ್ಲಿ ಕಾದಂಬರಿಯ ಶೀರ್ಷಿಕೆಗೆ ನೆರವಾಗುವ ಹುತ್ತದ ಪ್ರಕರಣ ವನ್ನು ಸಮರ್ಪಕವಾಗಿ ಬಳಸಿಕೊಂಡಿದ್ದಾರೆ. ಗೆದ್ದಲಿನ ಹುತ್ತ ಜಿಲ್ಲಾಧಿಕಾರಿಯ ಕಚೇರಿಯ ಆವರಣದಲ್ಲಿ ಬೆಳೆದಿದೆ ಎಂಬುದು ಅಧಿಕಾರ ಯಂತ್ರದಲ್ಲಿನ ಒಳ ಪೊಳ್ಳನ್ನು ಧ್ವನಿಸುತ್ತದೆ. ಈ ಹುತ್ತಕ್ಕೆ ಊರಿನ ಹೆಂಗಸರು ಒಮ್ಮೊಮ್ಮೆ ಕುಂಕುಮ ಹಚ್ಚಿ, ಹಾಲೆರೆದು ಪೂಜಿಸಿ ಹೋಗುತ್ತಿದ್ದರಂತೆ. ಅಂದರೆ ಸರಕಾರದ ಅಧಿಕಾರ ಯಂತ್ರವನ್ನು ಓಲೈಸುವ ಭಕ್ತಶಿಖಾಮಣಿಗಳು ಎಲ್ಲ ಕಾಲದಲ್ಲೂ ಇರುತ್ತಾರೆಂಬುದನ್ನು ಈ ಚಿತ್ರ ಮನವರಿಕೆ ಮಾಡಿಕೊಡುತ್ತದೆ.

ಆವರಣವನ್ನು ಅಂದಗೆಡಿಸುವ ಇಂಥ ಹುತ್ತವನ್ನು ತೆಗೆದುಹಾಕುವುದು ಜಿಲ್ಲಾಧಿಕಾರಿಗೆ ಬರುವ ಮೊದಲ ಯೋಚನೆ. ಆದರೆ ಭ್ರಷ್ಟಾಚಾರದ ನಿರ್ಮೂಲನಕ್ಕೆ ಪ್ರಾಮಾಣಿಕವಾಗಿ ಪ್ರಯತ್ನಿಸುವ ಕಳಕಳಿ ನಾಯಕನಲ್ಲಿದೆ ಎಂಬುದು ಸೂಚಿತವಾಗುತ್ತದೆ. ಮುಂದೆ ಆ ಹುತ್ತವನ್ನು ಕೆಡಿಸಲು ಪ್ರಯತ್ನಿಸಿದ್ದ ಹಿಂದಿನ ಒಬ್ಬ ಅಧಿಕಾರಿಯ ವಿಷಯ ಪ್ರಸ್ತಾಪಿತವಾಗಿದ್ದು ಆತ ಅನುಭವಿಸಿದ ಬವಣೆಗಳ ವರ್ಣನೆಯಿದೆ. ಅಂದರೆ ಪ್ರತಿಯೊಂದು ದುಷ್ಕಾರ್ಯದ ಹಿಂದೆಯೂ ಒಂದೊಂದು ಐತಿಹ್ಯದಂತಹ ಕಥೆ ಹರಡಿ ಕೊಂಡು ಪೌರಾಣಿಕ ಕಥನದ ಮಾದರಿಯಲ್ಲಿ ಬೆಳೆಯುತ್ತ ಹೋಗಿರುವು ದನ್ನು ಕಾಣಬಹುದು. ಒಂದು ವ್ಯವಸ್ಥೆಯನ್ನು ಪ್ರತಿರೋಧಿಸಲು ಹೊರಟವರು ಆ ವ್ಯವಸ್ಥೆಯ ವಿಕೃತ ಭಾರದಡಿಯಲ್ಲಿ ಹೇಗೆ ನರಳಬೇಕಾಗುತ್ತದೆಂಬುದನ್ನು ಸೂಚಿಸುತ್ತದೆ.

ಹೀಗೆ ವಲ್ಮೀಕ ಕಾದಂಬರಿ ಸಮಕಾಲೀನ ಭ್ರಷ್ಟಗಾಳಿಯೆಂಬುದು ರಾಜಕೀಯ ಹಾಗೂ ಸ್ವಕೀಯ ಜೀವನವನ್ನು ಕಲುಷಿತಗೊಳಿಸಲು ಎಂಥೆಂಥ ಸನ್ನಾಹ ನಡೆಸುತ್ತದೆ ಎಂಬುದನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿದೆ. ಸಂಕೇತಗಳಲ್ಲೇ ಬೆಳೆಯುತ್ತ ಹೋಗಿ ಕೊನೆಗೆ ಒಂದು ವಿಷಾದದ ನೆಲೆಗೆ ತಂದು ನಿಲ್ಲಿಸುತ್ತದೆ. ಕಾರ್ಯಕುಶಲಿಯಾದರೂ ವಶೀಕರಣದ ಬುದ್ಧಿ ಇಟ್ಟುಕೊಂಡಿರುವ ಟೈಪಿಸ್ಟ್ ಹುಡುಗಿ; ಸಮಾಜಸೇವಕಿಯಾದರೂ ಉನ್ನತ ವರ್ಗದೊಂದಿಗೇ ಕಾಲಕಳೆಯ ಬಯಸಿ ಮಕ್ಕಳ ವಿದ್ಯಾಭ್ಯಾಸದ ನೆಪದಲ್ಲಿ ನಗರ ಸೇರಿದ ಹೆಂಡತಿ ಲಾವಣ್ಯ; ಆಳುವ ಪಕ್ಷದವತಿಯಿಂದ ರಂಜಕ ಉಪನ್ಯಾಸಗಳನ್ನು ಬಿಗಿಯುತ್ತಿದ್ದರೂ ಹೊಲೆಯರಿಗೆ ನ್ಯಾಯವಾಗಿ ಸೇರಬೇಕಾದ ಭೂಮಿಯನ್ನು ತನ್ನ ಸ್ನೇಹಿತನಿಗೆ ದಕ್ಕುವಂತೆ ಆಜ್ಞೆ ತರುವ ಪುಢಾರಿ, ಬಡ ಹರಿಜನರ ವಕ್ತಾರನಾದರೂ ಹಿಂಸೆಯಲ್ಲೇ ನಂಬಿಕೆಯುಳ್ಳ ರೈತರ ಮುಖಂಡ ಬಾಲಯ್ಯ, ಇಂಥ ಇಮ್ಮುಖದ ವ್ಯಕ್ತಿಗಳ ನಡುವೆ ತನ್ನ ಸ್ವಂತದ ಆದರ್ಶ, ಕಠಿಣ ವಾಸ್ತವಗಳ ದ್ವಂದ್ವವನ್ನು ಎದುರಿಸುತ್ತ ಹೋಗುವ ನಾಯಕನ ಸೋಲು- ಗೆಲುವು, ದೌರ್ಬಲ್ಯ, ಜಿಗುಟುತನ, ಚಾಣಾಕ್ಷತೆ, ಸಮಯಸ್ಫೂರ್ತಿ ಎಲ್ಲವೂ ಅರ್ಥಪೂರ್ಣವಾಗುತ್ತ ಹೋಗುತ್ತವೆ. ಉತ್ತಮ ಪುರುಷದ ಮಾಧ್ಯಮದಲ್ಲಿ ಕಥೆಯನ್ನು ನಿರ್ವಹಿಸಿರುವ ಕಾದಂಬರಿಕಾರರು ನಾಯಕನ ನಿಷ್ಠುರ ಕಾಳಜಿಗಳ ಹಿನ್ನೆಲೆಯಲ್ಲಿ ಪರಿಸ್ಥಿತಿಗಳನ್ನೆಲ್ಲ ತೂಗಿ ತೋರಿರುವ ಬಗೆ ಕಲಾತ್ಮಕವಾಗಿದೆ.

ಭಾರತೀಸುತರು ಅಗಾಧವಸ್ತು ದರ್ಶನದ ಒಳನೋಟಗಳಿದ್ದ ಧೀಮಂತ ರಾದರೂ ಅವುಗಳ ಸೂಕ್ಷ್ಮ ಸಂಬಂಧಗಳನ್ನು ಸಮರ್ಥವಾಗಿ ವಿಶ್ಲೇಶಿಸಬಲ್ಲ ಭಾಷಾಪ್ರಜ್ಞೆಯನ್ನು ರೂಢಿಸಿಕೊಳ್ಳಲು ಅಸಮರ್ಥರಾಗಿರುವುದು ಒಂದು ವಿಪರ್ಯಾಸವಾಗಿದೆ. ಅವರ ಸೋಲುಗಳನ್ನು ಪಟ್ಟಿಮಾಡುವುದೇನೂ ಕಷ್ಟವಲ್ಲ. ಅಸಹಜ ಗ್ರಾಂಥಿಕ ಶಬ್ದ ಸಂವಾದ, ಭಾಷಣ ರೂಪದ ನೈತಿಕ ವ್ಯಾಖ್ಯಾನ ಪ್ರಿಯತೆ, ಸಾಮಾನ್ಯರ ಬಾಯಲ್ಲಿ ಪಂಡಿತೋಕ್ತಿಗಳನ್ನಾಡಿಸುವ ವಿಸಂಗತಿ, ರಂಜನೆಯ ಹಂತದಲ್ಲೇ ಉಳಿದುಬಿಡುವ ಕಥಾನುಕೂಲವಾದರೂ ಭಾವಶೈಥಿಲ್ಯದಿಂದ ನರಳುವ ಪಾತ್ರ ನಿರ್ಮಾಣ, ಮಾನವ ಸ್ವಭಾವದ ವಿಶಿಷ್ಟ ವಿಕಾರಗಳನ್ನಾಗಲಿ ಒಳಬೇರುಗಳನ್ನಾಗಲಿ ಶೋಧಿಸದೆ ಬರಿಯ ಪಡಿಯಚ್ಚಿನ ಮಾದರಿಗಳನ್ನು ನೀಡುತ್ತ ಹೋಗುವ ಸೂತ್ರಪ್ರಿಯತೆ, ಹೆಚ್ಚು ಘರ್ಷಣೆ ಗಿಳಿಯದೆ ಮಾರ್ಗವನ್ನು ರೂಪಿಸಿಕೊಳ್ಳುವ ಸರಳ ಸಮೀಕರಣ ಪ್ರವೃತ್ತಿ, ಕೆಲವೆಡೆ ಪ್ರಾದೇಶಿಕ ಪ್ರಕೃತಿ ಚಿತ್ರಗಳನ್ನು ಕಥೆಯ ವಸ್ತು ಪಾತ್ರಗಳೊಂದಿಗೆ ಮೇಳವಿಸದೆ ಬರಿಯ ಹಿನ್ನೆಲೆಯ ದೃಶ್ಯವಾಗಿ ಹೊರಚ್ಚಾಗಿ ಉಳಿಸಿಬಿಡುವ ದ್ವಿಧಾವೃತ್ತಿ ಮೊದಲಾದ ದೌರ್ಬಲ್ಯಗಳು ಅವರಲ್ಲಿ ತುಂಬಿಕೊಂಡಿವೆ. ಭಾವುಕ ವಾಚಕರಿಗೆ ಮಾತ್ರ ಪ್ರಿಯವಾಗುವ ರೋಚಕ ಪ್ರವೃತ್ತಿಯೂ ಅವರ ಬರವಣಿಗೆಯ ಹಿನ್ನೆಲೆಯಲ್ಲಿ ಸೇರಿಕೊಂಡಿದೆ.

ಭಾರತೀಸುತರು ಸ್ವಾತಂತ್ರ್ಯಪೂರ್ವ ಕಾಲದಿಂದ ಹಿಡಿದು ಸ್ವಾತಂತ್ರ್ಯೋತ್ತರ ಕಾಲದವರೆಗಿನ ಎಲ್ಲ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ ಬೆಳವಣಿಗೆಗಳನ್ನು ಗ್ರಾಮೀಣ ಪರಿಸರದ ಹಿನ್ನೆಲೆಯಿಂದಲೇ ವ್ಯಾಖ್ಯಾನಿಸಿ ರುವುದು ಗಮನಿಸಬೇಕಾದ ಅಂಶವಾಗಿದೆ. ಪ್ರಾದೇಶಿಕತೆಯ ಮುದ್ರೆಯನ್ನು ಗಾಢವಾಗಿ ಒತ್ತಿಸಿಕೊಂಡ ಹಲವಾರು ಕೃತಿಗಳು ಅವರಿಂದ ರಚಿತವಾಗಿವೆ. ಸ್ವತಃ ಆಂದೋಲನಕಾರರಾಗಿದ್ದು ಸೆರೆಮನೆ ವಾಸವನ್ನೂ, ಕಷ್ಟಕಾರ್ಪಣ್ಯ ಗಳನ್ನೂ ಅನುಭವಿಸಿದ್ದ ಭಾರತೀಸುತರು ಬಡವರ, ಆದಿವಾಸಿಗಳ ನೋವಿಗೆ ತುಂಬ ಭಾವನಾತ್ಮಕವಾಗಿ ಸ್ಪಂದಿಸುವ ಮನೋಧರ್ಮದವರು. ಅಪ್ಪಟ ಗಾಂಧೀವಾದಿ, ಆದರ್ಶಗಳನ್ನು ತಲೆಯಲ್ಲಿ ತುಂಬಿಕೊಂಡವರು. ಉದಾತ್ತ ವರ್ಗದ ನೈತಿಕ ಚಿಂತನ ಪದ್ಧತಿಯ ನೆಲಗಟ್ಟಿನಿಂದ ಕೆಳವರ್ಗದ ಜನರ ಬದುಕನ್ನು ವ್ಯಾಖ್ಯಾನಿಸಲು ಹೊರಟವರು. ಅಲ್ಲದೆ ಜನಪ್ರಿಯತೆ ಗಳಿಸ ಬಹುದಾದ ಪ್ರಣಯ ವಸ್ತುಗಳ ರೋಚಕ ವಿವರಣೆಗೆ ಮನಸೋತವರು. ಹೀಗಾಗಿ ಅವರ ಗ್ರಾಮೀಣ ದಟ್ಟ ಅನುಭವದ ಸತ್ತ್ವವನ್ನು ಮೆಚ್ಚುವ ನಮ್ಮ ಮನಸ್ಸಿನ ಒಳಸೆಲೆಗಳಲ್ಲೇ ಅವರ ಬರಹದ ಭಾಷೆಯೂ ಮೇಲಿನ ದ್ವಂದ್ವದಿಂದ ಪಾರಾಗದಿರುವುದು ಅವರ ಸೋಲಿನ ಇನ್ನೊಂದು ಮುಖ ವಾಗಿದೆ. ಪ್ರಾದೇಶಿಕ ಬದುಕಿಗೇ ಅಂಟಿಕೊಂಡ ಬರಹಗಾರ ಭಾರತೀ ಸುತರು ಕೆಳವರ್ಗದ ಜನಸಮುದಾಯದ ಆಶೋತ್ತರಗಳಿಗೆ ಧ್ವನಿ ಕೂಡಿಸಿದವರೆಂಬ ಸಮಾಧಾನದ ಹಿನ್ನೆಲೆಯಲ್ಲಿ ಅವರ ಬರಹದ ದೌರ್ಬಲ್ಯಗಳನ್ನು ಅವಗಣಿಸ ಬಹುದು. ಯಂಬ್ರಾಂದ್ರಿ, ನಂಜಿ, ದೇಚು, ಮರಿಪಾಪ, ಮೊರವ ಮೊದಲಾದ ಅಸಂಖ್ಯಾತ ಗ್ರಾಮೀಣ ಪಾತ್ರಗಳಿಂದಾಗಿ ಮಲೆನಾಡಿನ ದೃಶ್ಯ ಜಗತ್ತಿನ ನೂರಾರು ಕಿರುಚಿತ್ರಗಳಿಂದಾಗಿ ಪ್ರಾದೇಶಿಕ ಕೃತಿ ಜಗತ್ತಿನಲ್ಲಿ ಅವರ ಹೆಸರು ಸ್ಮರಣೀಯವಾಗಿ ನಿಲ್ಲುತ್ತದೆ.

❑

ಎಸ್.ಬಿ. ಚಂದ್ರಮೋಹನ್

'ಚದುರಂಗ' ಕಾವ್ಯನಾಮದಿಂದಲೇ ಖ್ಯಾತರಾಗಿರುವ ಶ್ರೀ ಎಂ. ಸುಬ್ರಹ್ಮಣ್ಯರಾಜು ಅರಸುರವರದು ಬಹುಮುಖ ಪ್ರತಿಭೆ. ಕಾದಂಬರಿ, ಸಣ್ಣಕಥೆ, ನಾಟಕ ಸಾಹಿತ್ಯ, ಅಷ್ಟೇ ಅಲ್ಲದೆ ಸಿನಿಮಾ ಮತ್ತಿತರ ಕಲೆಗಳಲ್ಲೂ ಕೈಯಾಡಿಸಿದ ಪ್ರಯೋಗಶೀಲರು.

ಚದುರಂಗ ಅವರು ಹುಟ್ಟಿದ್ದು ಜನವರಿ 1,1916ರಲ್ಲಿ. ಕಲ್ಲಹಳ್ಳಿಯ ಮುದ್ದುರಾಜ ಅರಸು ಮತ್ತು ಗೌರಮ್ಮಣ್ಣಿ ದಂಪತಿಗಳ ಹದಿಮೂರನೆಯ ಮಗ. ಇವರ ವಂಶದ ಪೂರ್ವಿಕರಲ್ಲಿ ಒಬ್ಬನಾದ ಮಂಗರಸ ಕವಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖಿತನಾದವನು. ಜಯನೃಪ ಕಾವ್ಯ, ಸೂಪಶಾಸ್ತ್ರ ಮುಂತಾದುವು ಅವನ ರಚನೆಗಳು. ಸುಬ್ರಹ್ಮಣ್ಯರಾಜು ಅರಸುರವರ ಹಿರಿಯ ಅಣ್ಣನವರಿಗೆ ಮೈಸೂರಿನ ರಾಜಮನೆತನದ ಸಂಬಂಧ ಆಗಿದ್ದರಿಂದ ಬಾಲಕ ಚದುರಂಗರಿಗೆ ರಾಜಮನೆತನದ ಒಡನಾಟ ಸಹಜವಾಗಿಯೇ ಪ್ರಾಪ್ತ ವಾಯಿತು. ಮೈಸೂರಿನ ಕೊನೆಯ ಅರಸರಾದ ಜಯಚಾಮರಾಜ ಒಡೆಯರ ಓರಗೆಯವರಾಗಿ, ಇವರು ಮೈಸೂರಿನ ರಾಯಲ್ ಶಾಲೆಯಲ್ಲಿ ವಿದ್ಯಾಭ್ಯಾಸ ಆರಂಭಿಸಿದರು. ಮುಂದೆ ಬೆಂಗಳೂರಿನ ಇಂಟರ್‌ಮೀಡಿಯಟ್ ಕಾಲೇಜ್ ಹಾಗೂ ಮೈಸೂರಿನ ಮಹಾರಾಜಾ ಕಾಲೇಜುಗಳಲ್ಲಿ ಇವರ ವಿದ್ಯಾಭ್ಯಾಸ ಮುಂದುವರಿಯಿತು. ವೈದ್ಯರಾಗ ಬೇಕೆಂದು ಹೊರಟವರು ಆ ವಿಷಯಗಳಲ್ಲಿ ಆಸಕ್ತಿ ಮೂಡದೇ ರಾಜ್ಯಶಾಸ್ತ್ರ, ಮನಃಶಾಸ್ತ್ರ ಮತ್ತು ಸಮಾಜ ಶಾಸ್ತ್ರಗಳಲ್ಲಿ ಓದಿ ಬಿ.ಎ. ಪದವಿಯನ್ನು ಪಡೆದರು. ಪುಣೆಯಲ್ಲಿ ಕಾನೂನು ಮತ್ತು ಎಂ.ಎ. ಕಲಿಯಲು ಸೇರಿದರಾದರೂ ಕಾರಣಾಂತರಗಳಿಂದ ಅದನ್ನು ಮುಂದು ವರೆಸಲಾಗಲಿಲ್ಲ.

ಚದುರಂಗರಿಗೆ ಬಾಲ್ಯದಿಂದಲೂ ಕಥೆಗಳನ್ನು ಕೇಳುವ ಮತ್ತು ಸೃಷ್ಟಿಸಿ ಹೇಳುವ ಆಸಕ್ತಿ. ತಾಯಿಯವರಿಂದ ಕೇಳಿದ ರಾಮಾಯಣ, ಮಹಾಭಾರತ, ಪುರಾಣ ಮತ್ತು ಜಾನಪದ ಕಥೆಗಳನ್ನು ತಮ್ಮ ಓರಗೆಯ ರಾಜಮನೆತದ ಎಳೆಯರಿಗೆ ಇವರು ಹೇಳುತ್ತಿದ್ದರು. ಜತೆಗೆ ಅರಮನೆಯ ದಾದಿಯರು ಮತ್ತಿತರರು ಹೇಳಿದ ಕಥೆಗಳು ಇವರಲ್ಲಿ ಪುನರ್ ಸೃಷ್ಟಿಯಾಗುತ್ತಿದ್ದವು. ಬಹುಶಃ ಇವರೊಳಗಿದ್ದ ಕಥೆಗಾರ ಆಗಿನಿಂದಲೇ ರೂಪುಗೊಳ್ಳುತ್ತಿದ್ದಿರಬೇಕು.

ಯೌವ್ವನದಲ್ಲಿ ಸ್ವಾತಂತ್ರ್ಯ ಚಳವಳಿ, ಗಾಂಧಿ ವಿಚಾರಗಳು ಹಾಗೂ ಕಮ್ಯೂನಿಸಂ ಮತ್ತು ಎಂ.ಎನ್. ರಾಯ್ ವಿಚಾರಧಾರೆಗಳು ಇವರ ತರುಣ ಮನಸ್ಸಿನ ಮೇಲೆ ಪ್ರಭಾವ ಬೀರಿದ್ದವು. ಕೆಲವು ತರುಣರ ಜತೆಗೆ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಕ್ರಿಯಾಶೀಲರಾಗಿದ್ದರು. ಢೋಂಗಿ ಬಾಬಾಗಳ ವಿರುದ್ಧ ಚಳವಳಿ ಮುಂತಾದ ಸಂಘಟನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡದ್ದುಂಟು. ಆದರೆ ರಾಜಮನೆತನದ ಸಂಬಂಧಕ್ಕೆ ಒಳಗಾಗಿದ್ದ ಚದುರಂಗರ ಕುಟುಂಬದಲ್ಲಿ ಅವರ ಖಾದಿಪ್ರೇಮ ಅಸಮಧಾನವನ್ನೇ ಉಂಟುಮಾಡಿತು. ಅದೇನೇಯಿದ್ದರೂ ಇವರು ಮಾತ್ರ ತಮ್ಮ ನಂಬಿಕೆಗಳಿಗೆ ಹೊರತಾಗಲಿಲ್ಲ. ವೈಯಕ್ತಿಕ ಜೀವನದಲ್ಲಿಯೂ ಕೂಡ ಇವರು ಹಲವಾರು ಕಾರಣಗಳಿಂದಾಗಿ ತಮ್ಮ ಸಮಾಜ ಮತ್ತು ಕುಟುಂಬದ ಅಸಮಾಧಾನವನ್ನು ಎದುರಿಸಬೇಕಾಯಿತು.

ತಮ್ಮ ಪ್ರೀತಿಯ ಅಣ್ಣ ಮತ್ತು ತಾಯಿ ಇವರಿಗೆ ನಿಶ್ಚಯಿಸಿದ್ದ ಹೆಣ್ಣು ಶ್ರೀಮಂತಿಕೆಯನ್ನು ತರಬಹುದಾಗಿದ್ದರೂ ಕೂಡ ಇವರ ಮನಸ್ಸನ್ನು ಗೆಲ್ಲುವುದು ಸಾಧ್ಯವಿರಲಿಲ್ಲ. ಮುಂದೆ ಸಾಂಪ್ರಾದಾಯಿಕ ದೃಷ್ಟಿ ಮತ್ತು ಸಾಮಾಜಿಕ ಕಟ್ಟುಪಾಡುಗಳಿಗೆ ವಿರುದ್ಧವಾಗಿ ತಮ್ಮ ಜೀವನ ಸಂಗಾತಿಯನ್ನು ಅವರು ಆರಿಸಿಕೊಂಡಾಗ ಸಾಕಷ್ಟು ಕೋಲಾಹಲವೇ ಉಂಟಾಯಿತು. ಆದರೆ ಎಲ್ಲ ಘಟನೆಗಳು ಇವರ ವ್ಯಕ್ತಿತ್ವವನ್ನು ಗಟ್ಟಿಗೊಳಿಸಿದುವೇ ಹೊರತು ದುರ್ಬಲಗೊಳಿಸಲಿಲ್ಲ. ತಾನು ಮೆಚ್ಚಿದ ಪತ್ನಿಯೊಂದಿಗೆ ಮೈಸೂರನ್ನು ಬಿಟ್ಟು ತನ್ನ ಹುಟ್ಟೂರಾದ, ಹುಣಸೂರು ತಾಲ್ಲೂಕಿನ ಕುಗ್ರಾಮ ಕಲ್ಲಹಳ್ಳಿಯಲ್ಲಿ ಸೇರಿ ಅಲ್ಲಿ ಪಿತ್ರಾರ್ಜಿತ ಬೇಸಾಯ ಕಾರ್ಯವನ್ನು ಆರಂಭಿಸಿದ್ದು ಅವರ ಲೌಕಿಕ ಬದುಕಿಗೆ ಶ್ರೀಮಂತಿಕೆಯನ್ನು ತಂದುಕೊಟ್ಟಿತು.

ಚದುರಂಗರು, ಆರಂಭದ ದಿನಗಳಲ್ಲಿ ಕವಿತೆಯನ್ನು ಬರೆಯುತ್ತಿದ್ದ ವರು. ವಿ.ಸೀ.ಯವರ ಸಂಪಾದಕತ್ವದಲ್ಲಿ ಪ್ರಕಟವಾದ ಇಂಟರ್ ಮೀಡಿಯಟ್ ಕಾಲೇಜಿನ ಪತ್ರಿಕೆ, ತದನಂತರದಲ್ಲಿ ಮಹಾರಾಜ ಕಾಲೇಜಿನ ಮ್ಯಾಗಜೈನ್ ಗಳಲ್ಲಿ ಅವರ ಕವನಗಳು ಪ್ರಕಟವಾಗಿದ್ದವು. ಆದರೆ ಹಿರಿಯರಾದ ಬಿ.ಎಂ.ಶ್ರೀ., ಕೃಷ್ಣಶಾಸ್ತ್ರಿ, ಡಿ.ಎಲ್.ಎನ್., ಮುಂತಾದವರು ಚದುರಂಗರ ಗದ್ಯದ ಬರವಣಿಗೆಯನ್ನೇ ಹೆಚ್ಚು ಮೆಚ್ಚಿಕೊಂಡದ್ದು, ಮುಂದೆ ಚದುರಂಗರು ಗದ್ಯಕ್ಕೆ ಹೆಚ್ಚು ಒಲಿಯಲು ಕಾರಣವಾಯಿತು.

ಇವರ ಸಾಹಿತ್ಯ ಜೀವನದ ಮೇಲೆ ಪರಿಣಾಮ ಬೀರಿದವರಲ್ಲಿ ಮಾಸ್ತಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಪ್ರಮುಖರು. ಹಳ್ಳಿಯ ಬದುಕಿಗೆ ದೃಷ್ಟಿ ತಿರುಗಿಸಲು ಗೊರೂರು ಗುರುವಾದರೆಂದು ಲೇಖಕರೇ ಹೇಳಿ ಕೊಳ್ಳುತ್ತಾರೆ. ಮುಂದೆ ಅ.ನ.ಕೃ., ತ.ರಾ.ಸು., ಮುಂತಾದವರ ಒಡನಾಟ ಪ್ರಾಪ್ತವಾಯಿತು. ಟಾಲ್‌ಸ್ಟಾಯ್, ಗೋರ್ಕಿ, ದಾಸ್ತೋವೆಸ್ಕಿ ಇವರ ಮೆಚ್ಚಿನ ಬರಹಗಾರರಾಗಿರುವಂತೆಯೇ ಬಾಲ್ಜಾಕ್ ಹಾಗೂ ಆಲ್ಬರ್ಟಕಮೂ ಕೂಡ ಇವರ ಮೇಲೆ ಪ್ರಭಾವ ಬೀರಿದ್ದಾರೆ. ತನ್ನಿಂದ ಬರವಣಿಗೆ ಸಾಧ್ಯವೇ ಇಲ್ಲ ಅನಿಸಿದಾಗ ಬೇರೆಯವರ ಪುಸ್ತಕಗಳ ಓದು, ಪ್ರವಾಸ, ಮಿತ್ರರೊಂದಿಗಿನ ಜಿಜ್ಞಾಸೆಗಳ ಮೂಲಕ ತಾವು ತಮ್ಮ "ಸೃಜನಶೀಲತೆಯ ಬ್ಯಾಟರಿಯನ್ನು ಛಾರ್ಜ್ ಮಾಡಿಸಿಕೊಳ್ಳುತ್ತೇನೆ" ಎಂದು ಇವರೊಮ್ಮೆ ಹೇಳಿದ್ದುಂಟು. ಬದುಕು ಮತ್ತು ಬರಹಗಳೆರಡರಲ್ಲೂ ಸಮತೂಕ ಮತ್ತು ಸಮಚಿತ್ತವನ್ನ ಕಾಯ್ದುಕೊಳ್ಳಬೇಕೆಂದು ನಂಬಿರುವ ಚದುರಂಗರ ಬರವಣಿಗೆ ಬಹಳ ಹಿಂಸೆಯ ವಿಷಯ ಎಂದು ಭಾವಿಸುತ್ತಾರೆ. ಆದರೆ ಶ್ರಮದೊಂದಿಗೆ ಸಂತೋಷವನ್ನು ಬರವಣಿಗೆ ಕೊಡುವುದೆಂದೂ ಅವರಿಗೆ ಗೊತ್ತು. ಅವರ ಪ್ರಕಾರ ಸಾಹಿತ್ಯ ಸೃಷ್ಟಿ ಒಂದು ಹಿತವಾದ ನೋವು, ಒಮ್ಮೆ ಈ ಸಾಹಿತ್ಯದ ಸೃಷ್ಟಿಯಲ್ಲಿ ತೊಡಗಿಸಿಕೊಂಡದ್ದೇ ಆದರೆ ಅದು ಸ್ವಾಭಾವಿಕವಾಗಿ ಬಿಡುತ್ತದೆ. ಅದನ್ನು ಬಿಡುವುದು ಸಾಧ್ಯವಿಲ್ಲವೆಂದು ಅವರು ಭಾವಿಸುತ್ತಾರೆ. ಇದ್ದ ಎಲ್ಲ ಅನುಕೂಲಗಳನ್ನ ತ್ಯಜಿಸಿದ ಟಾಲ್‌ಸ್ಟಾಯ್‌ಗೆ ಮಹತ್ತರವಾದದ್ದನ್ನ ಬರೆಯಲು ಸಾಧ್ಯವಾಯಿತೆಂದು ನಂಬುವ ಲೇಖಕರ "ಜೀವನದಲ್ಲಿ ನಾವು ನರಳದೆ ಇದ್ದರೆ ದೊಡ್ಡ ದೊಡ್ಡದು ಬರುವುದು ಸಾಧ್ಯವಿಲ್ಲ" ಎನ್ನುತ್ತಾರೆ. ಅನುಭವ ಶ್ರೀಮಂತಿಕೆ ಇಲ್ಲದೆ ಒಬ್ಬ ಲೇಖಕ ಮೂಡಲಾರನೆಂಬುದು ಅವರ ಖಚಿತ ನಂಬಿಕೆ.

ಕನ್ನಡ ಸಾಹಿತ್ಯಕ್ಕೆ ಚದುರಂಗರ ಪರಿಚಯ ಕವಿತೆಗಳ ಮೂಲಕವಾಗಿ ವಿದ್ಯಾರ್ಥಿ ದೆಸೆಯಿಂದಲೇ ಆರಂಭವಾಗಿದ್ದರೂ ಕಥೆಗಾರರಾಗಿ ಅವರು ಕನ್ನಡಿಗರ ಗಮನ ಸೆಳೆದಿದ್ದು ಬೆಂಗಳೂರಿನ ಛಾಯಾ ಪತ್ರಿಕೆಯಲ್ಲಿ ಕೆಲವು ಸಣ್ಣಕಥೆಗಳು ಪ್ರಕಟವಾದಾಗ. ಅವರ ಮೊತ್ತಮೊದಲ ಕಥಾ ಸಂಕಲನ 'ಸ್ವಪ್ನ ಸುಂದರಿ' ಪ್ರಕಟಗೊಂಡದ್ದು 1984ರಲ್ಲಿ. ಅನಂತರದಲ್ಲಿ ಅವರು 'ಶವದ ಮನೆ', 'ಇಣುಕು ನೋಟ', 'ಬಂಗಾರದ ಗೆಜ್ಜೆ', 'ಮೀನಿನ ಹೆಜ್ಜೆ', 'ಬಣ್ಣದ ಬೊಂಬೆ' ಮುಂತಾದ ಕಥಾಸಂಕಲನಗಳನ್ನ ಪ್ರಕಟಿಸಿದ್ದಾರೆ. "ಶವದ ಮನೆ" ಕಥೆಯಲ್ಲಿ ಆಸ್ಪತ್ರೆಗಳು ಬಡವರ ಪಾಲಿಗೆ ಒಂದು ದೊಡ್ಡ "ಶವದಮನೆ" ಯಾಗಿ ಇಂದಿನ ಸಾಮಾಜಿಕ ಅನ್ಯಾಯಗಳ ನಡುವೆ ಬದುಕು ವುದಕ್ಕಿಂತ ಸಾಯುವುದೇ ವಾಸಿ ಎನ್ನುವಂಥ ಸ್ಥಿತಿಯನ್ನ ತಂದೊಡ್ಡುವಂತಹ ಚಿತ್ರ ಮೂಡಿಬರುತ್ತದೆ. ಹಾಗೆಯೇ ಇಂದಿಗೂ ಕನ್ನಡದ ಉತ್ತಮ ಕಥೆಗಳ ಪೈಕಿ ಒಂದಾಗಿರುವ 'ನಾಲ್ಕು ಮೊಳ ಭೂಮಿ' ಕಥೆಯೊಳಗೊಂದು ಕಥೆಯ ತಂತ್ರ ವನ್ನು ಬಳಸಿಕೊಂಡು ಒಮ್ಮೆಗೆ ನಗರ ಮತ್ತು ಗ್ರಾಮ್ಯ ಬದುಕುಗಳಲ್ಲಿನ ಲೋಭ ಮತ್ತು ಅನ್ಯಾಯಗಳನ್ನು ಸಾಂಕೇತಿಕವಾಗಿ ಸೂಚಿಸುತ್ತದೆ. ಬಲಾಢ್ಯ ನಾದ ಕಾಳಿಂಗಯ್ಯ ತನ್ನ ಹೊಲದ ಬದಿಯ ದೇವಪ್ಪನ ಭೂಮಿಯಿಂದ ನಾಲ್ಕು ಮೊಳ ಭೂಮಿಯನ್ನ ಒತ್ತುವರಿ ಮಾಡಿಕೊಂಡು ದೇವಯ್ಯನ ಬಾಯಿ ಮುಚ್ಚಿಸಿದ್ದಾನೆ. ಎಲ್ಲ ವ್ಯವಸ್ಥೆಯೂ ಭೀಮಕಾಯ ಕಾಳಿಂಗನ ಕಡೆಗೆ ವಾಲಿ ದೇವಯ್ಯ ಸೋಲುತ್ತಾನೆ. ವ್ಯಾಜ್ಯವನ್ನು ನ್ಯಾಯ ಬಾಹಿರವಾಗಿ ಗೆದ್ದು ಕೊಳ್ಳುವ ಕಾಳಿಂಗಯ್ಯ ತನ್ನಲ್ಲೇ ಉಂಟಾಗುವ ಅಪರಾಧಿಪ್ರಜ್ಞೆಯನ್ನು ಮಾತ್ರ ಗೆಲ್ಲಲಾಗುವುದಿಲ್ಲ. ಕೊನೆಯಲ್ಲಿ ವೃದ್ಧನಾದ ಕಾಳಿಂಗಯ್ಯ ತಾನು ಉಳುತ್ತಿದ್ದ ಹೊಲದಲ್ಲೇ ಕುಸಿದು ಬಿದ್ದಾಗ ಅವನ ಸಹಾಯಕ್ಕೆ ದೇವಯ್ಯನ ಮಗ ಓಡಿ ಬರುತ್ತಾನೆ. ಆಗ ಕಾಳಿಂಗಯ್ಯ ನಾಲ್ಕು ಮೊಳ ಭೂಮಿ ಬಗ್ಗೆ ಮಾತಾ ನಾಡುತ್ತಾನಾದರೂ ಅವನ ಪಶ್ಚಾತ್ತಾಪದ ಅರ್ಥ ದೇವಯ್ಯನ ಮಗನಿಗೆ ಆಗುವುದಿಲ್ಲ. ಈ ಕಥೆಯಲ್ಲಿ ಲೇಖಕರು ಗ್ರಾಮೀಣ ವ್ಯವಸ್ಥೆಯ ಭೂ ವಿವಾದಕ್ಕೆ ಪರಿಹಾರವನ್ನು ನೈತಿಕಪ್ರಜ್ಞೆಯ ನೆಲೆಯಲ್ಲಿ ಸೂಚಿಸಲು ಪ್ರಯತ್ನಿಸುತ್ತಾರೆ. 'ಅಂಕ', 'ಕ್ಯಾಟೆ' ಮುಂತಾದ ಕಥೆಗಳು ಮನೋವೈಜ್ಞಾನಿಕ ವಿಷಯಗಳ ನ್ನೊಳಗೊಂಡ ಕಥೆಗಳಾಗಿವೆ. ಚದುರಂಗರು ನವೋದಯ, ಪ್ರಗತಿಶೀಲ, ನವ್ಯ, ಮೊದಲಾದ ಎಲ್ಲ ಚಳವಳಿಗಳನ್ನು ಕಂಡವರು. ಸ್ವತಃ ಸಮತಾವಾದದಲ್ಲಿ ಮತ್ತು ಎಂ.ಎನ್. ರಾಯ್ ಅವರ ವಿಚಾರಗಳಲ್ಲಿ ನಂಬಿಕೆ ಇಟ್ಟವರಾಗಿದ್ದು ಸಹಜವಾಗಿಯೇ ಪ್ರಗತಿಶೀಲ ದೃಷ್ಟಿಕೋನವನ್ನು ತಮ್ಮ ಕೃತಿಗಳಲ್ಲಿ ಕಂಡರಿಸಿದವರೂ ಕೂಡ. ಆದರೆ ವಾಸ್ತವವಾಗಿ ಅವರು ನವೋದಯ, ಪ್ರಗತಿಶೀಲ, ನವ್ಯ ಚಳವಳಿಗಳ ಎಲ್ಲ ಒಳ್ಳೆಯ ಅಂಶಗಳನ್ನು ಸ್ವೀಕರಿಸಿಯೂ ತಮ್ಮತನವನ್ನು ಉಳಿಸಿಕೊಂಡು ಬೆಳೆದವರು.

ಚದುರಂಗರು ಬರೆದಿರುವುದು ಮೂರೇ ಕಾದಂಬರಿಗಳಾದರೂ ಒಂದೊಂದೂ ತಮ್ಮದೇ ಕಾರಣಗಳಿಂದ ವಿಶಿಷ್ಟವಾಗಿ ನಿಲ್ಲುವಂತಹವಾಗಿವೆ. ಅವರ ಮೊದಲ ಕಾದಂಬರಿ 'ಸರ್ವಮಂಗಳ' 1950ರ ಸುಮಾರಿಗೆ ಪ್ರಕಟ ವಾದಾಗ ಹೊಸದೊಂದು ಅಲೆಯನ್ನೇ ಎಬ್ಬಿಸಿತು. ಈ ಕಾದಂಬರಿ ಪ್ರಾದೇಶಿಕ ಹಿನ್ನೆಲೆಯನ್ನು ಪಡೆದಿದ್ದರೂ ಕೂಡ ಸಾರ್ವತ್ರಿಕ ಮಾನವೀಯ ಸಂಬಂಧ ಗಳನ್ನು ತನ್ನ ವಸ್ತುವನ್ನಾಗಿ ಉಳ್ಳದ್ದು. ಪರಂಪರೆಯ ಉತ್ತಮ ಮಾತೃತ್ವದ ಪ್ರತಿನಿಧಿಯಾಗಿ ಕಾದಂಬರಿಯಲ್ಲಿ ಚಿತ್ರಿತವಾಗಿರುವ ನಾಗಜ್ಜಿ ಬಾಲ್ಯದಲ್ಲಿ ನಟರಾಜನ ತಬ್ಬಲಿತನವನ್ನು ಮರೆಸುತ್ತಾಳೆ. ನಾಯಕಿ ಸರ್ವಮಂಗಳ ತನ್ನ ಇಷ್ಟಕ್ಕೆ ವಿರುದ್ಧವಾಗಿ ಮದುವೆಯಾದ ಮುಗ್ಧ ಹಾಗೂ ಅಮಾಯಕ ಗಂಡನ ಶ್ರೇಯಸ್ಸನ್ನು ಬಯಸುವಷ್ಟೇ ತೀವ್ರವಾಗಿ ತಾನು ಪ್ರೀತಿಸಿದ ನಟರಾಜನನ್ನು ಮದುವೆಯಾದ ದುರ್ಗಿಯ ಶ್ರೇಯಸ್ಸನ್ನು ಬಯಸುತ್ತಾಳೆ. ಅವಳ ಉದಾತ್ತ ವ್ಯಕ್ತಿತ್ವ ಕಾದಂಬರಿಯ ಪಾತ್ರಗಳೆಲ್ಲದರ ಮೇಲೂ ಬೆಳಕು ಚೆಲ್ಲುತ್ತದೆ. ಕಾದಂಬರಿಯಲ್ಲಿ ಸ್ವಾತಂತ್ರ್ಯ ಸಂಗ್ರಾಮ ಮತ್ತಿತರ ಹೋರಾಟಗಳ ಬಗ್ಗೆ ಸಾಂದರ್ಭಿಕ ಉಲ್ಲೇಖಗಳಿದ್ದರೂ ಕೂಡ ಮುಖ್ಯವಾಗಿ ಕಾದಂಬರಿಯ ಆಶಯ ಸರ್ವಮಂಗಳೆ ಮತ್ತು ನಟರಾಜರ ಬದುಕಿನ ದುರಂತವನ್ನು ಚಿತ್ರಿಸುವುದೇ ಆಗಿದೆ. ಒಲಿದವರನ್ನು ವಿವಾಹ ಬಂಧನದಲ್ಲಿ ಒಂದಾಗಿಸದ ಕಾರಣದಿಂದಾಗಿ ಉಂಟಾಗಬಹುದಾದ ದುರಂತಗಳ ಬಗ್ಗೆ ಕಾದಂಬರಿ ಹೆಚ್ಚು ಒತ್ತನ್ನು ಕೊಡುತ್ತದೆ. ಪರಸ್ಪರ ಒಲಿದ ಗಂಡು-ಹೆಣ್ಣುಗಳನ್ನ ವೈವಾಹಿಕವಾಗಿಯೂ ಒಂದಾಗಿಸಬೇಕೆಂಬ ಸೂಚನೆಯೂ ಕಾಣುತ್ತದೆ.

ಅವರ ಎರಡನೆಯ ಕಾದಂಬರಿ 'ಉಯ್ಯಾಲೆ'ಯಲ್ಲಿ ಗಂಡು ಹೆಣ್ಣಿನ ಸಂಬಂಧಗಳ ಸೂಕ್ಷ್ಮತೆ ಚಿತ್ರಿತವಾಗಿದೆ. ಮೆಚ್ಚಿದವನನ್ನು ಮದುವೆಯಾಗಲು ಸಾಧ್ಯವಾದ ರಾಧೆ ಶೇಷಗಿರಿರಾಯನ ಎರಡನೆಯ ಹೆಂಡತಿಯಾಗಿ ಬಂದ ಮೇಲೆ ಗಂಡನ ಶೀತಲ ನಡತೆಯಿಂದಾಗಿ ಪ್ರೇಮದಿಂದ ವಂಚಿತವಾದ ಮನೋ ಭಾವವನ್ನು ಬೆಳೆಸಿಕೊಳ್ಳುತ್ತಾಳೆ, ಇದೇ ಕಾರಣದಿಂದಾಗಿ ಗಂಡನ ಸ್ನೇಹಿತ ಕೃಷ್ಣೇಗೌಡನ ಬಗ್ಗೆ ಅವಳಿಗೆ ಆಕರ್ಷಣೆ ಉಂಟಾಗುತ್ತದೆ. ಮಾನಸಿಕವಾಗಿ ಕೃಷ್ಣನ ಸಾನ್ನಿಧ್ಯವನ್ನ ಅಪೇಕ್ಷಿಸುವ ರಾಧೆ ಕೊನೆ ಕೊನೆಗೆ ದೈಹಿಕವಾಗಿಯೂ ಅವನನ್ನು ತನ್ನವನನ್ನಾಗಿ ಬಯಸುವ ತೀವ್ರತೆಗೊಳಗಾಗುತ್ತಾಳೆ. ತಮ್ಮ ವಿವಾಹ, ಗಂಡ ಶೇಷಗಿರಿ-ಇವೆಲ್ಲದರ ಬಗ್ಗೆ ತಿರಸ್ಕಾರ ಪಡುವ ಅವಳಿಗೆ ಪ್ರಾಮಾಣಿಕತೆ, ಪ್ರೇಮ ಇಲ್ಲದ ಮದುವೆಗೆ ಅರ್ಥವಿಲ್ಲ ಎಂಬ ಭಾವನೆ ಸಹಜವಾಗಿ ಬರುತ್ತದೆ. 'ಪ್ರೀತಿಯೊಂದೇ ದೊಡ್ಡದು' ಎಂದು ನಿರ್ಧರಿಸುವ ಸಂದರ್ಭದಲ್ಲೂ ತನ್ನ ಮುಂದಲ ನಿರ್ಧಾರದ ಬಗ್ಗೆ ಮನದಲ್ಲಿ ದ್ವಂದ್ವ ಉಂಟಾಗುತ್ತದೆ. ಕಾದಂಬರಿಯ ಉದ್ದಕ್ಕೂ 'ಉಯ್ಯಾಲೆ' ಮುಖ್ಯ ಪಾತ್ರಗಳ ಮಾನಸಿಕ ಸ್ಥಿತಿಗೆ ಒಡ್ಡಿದ ಸಮರ್ಥ ಸಂಕೇತವಾಗಿದೆ. ಠಾಗೂರರ 'ಚಾರುಲತಾ' ಕಾದಂಬರಿಯನ್ನು ಹೋಲುವ ಈ ಕೃತಿ ಕನ್ನಡದ ಉತ್ತಮ ಕಾದಂಬರಿ ಗಳಲ್ಲೊಂದು.

'ವೈಶಾಖ' ಕಾದಂಬರಿ ಕನ್ನಡದಲ್ಲಿ ಬಹಳಷ್ಟು ವಿಚಾರ ವಿಮರ್ಶೆಗೆ ಒಳಗಾಗಿರುವ ಒಂದು ಮಹತ್ವದ ಕೃತಿ. ದಟ್ಟವಾದ ಅನುಭವ ಸಾಮಗ್ರಿ ಮತ್ತು ವಿಶಿಷ್ಟ ತಂತ್ರಗಳಿಂದ ಕೂಡಿರುವ ಇದು ಲೇಖಕರ ಮಹತ್ವಾ ಕಾಂಕ್ಷೆಯ ಕೃತಿಯೂ ಕೂಡ. ಕಥೆಯನ್ನು ನಿರೂಪಕನು ಹೇಳುವುದಿಲ್ಲ. ಕಾದಂಬರಿಯ ಎರಡು ಮುಖ್ಯ ಪಾತ್ರಗಳಾದ ಹೊಲೆಯರ ಲಕ್ಕ ಮತ್ತು ಬ್ರಾಹ್ಮಣ ಜಾರಿಯ ಸಕೇಶಿ ವಿಧವೆ ರುಕ್ಮಿಣಿಯರ ಮೂಲಕ ಕಾದಂಬರಿಯ ಕಥೆ ಸಾಗುತ್ತದೆ. ಈ ಎರಡು ಪಾತ್ರಗಳ ಅನುಭವ ಮತ್ತು ನೆನಪುಗಳ ಮೂಲಕ ನಾವು ಘಟನೆಗಳನ್ನು ಕಂಡುಕೊಳ್ಳುತ್ತೇವೆ. ಅಷ್ಟೇ ಅಲ್ಲದೇ ಭಾಷಾ ದೃಷ್ಟಿಯಿಂದಲೂ ಈ ಕಾದಂಬರಿ ಒಂದು ವಿಶಿಷ್ಟ ಪ್ರಯೋಗವಾಗಿದೆ. ಘಟಿಸುತ್ತಿರುವ ಕ್ರಿಯೆಗಳಿಗೆ ಸ್ಪಂದಿಸುವ ಪಾತ್ರದ ಸಹಜ ಭಾಷಾ ರೂಪ ಗಳನ್ನೇ ಆ ಸಂದರ್ಭಗಳಲ್ಲಿ ಬಳಸಲಾಗಿದೆ. ಲಕ್ಕ ಘಟನೆಗಳನ್ನು ಗ್ರಹಿಸುವಾಗ ಅವನ ಗ್ರಾಮ್ಯ ಭಾಷೆಯಲ್ಲಿ ಅನುಭವ ದಾಖಲಾದ ಹಾಗೆಯೇ ರುಕ್ಮಿಣಿ ಗ್ರಹಿಸುವ ಕಡೆಗಳಲ್ಲಿ ಶಿಷ್ಟಭಾಷೆಯ ಮೂಲಕ ಅನುಭವಗಳು ದಾಖಲಾಗು ತ್ತವೆ. ವ್ಯಕ್ತಿ ಭಾಷೆಗಳಿಗಿರುವ ಸಾಂಸ್ಕೃತಿಕ ಮತ್ತು ಸಾಮಾಜಿಕ ಆಯಾಮ ಗಳನ್ನು ಎಚ್ಚರಿಕೆಯಿಂದ ದುಡಿಸಿಕೊಳ್ಳಲಾಗಿದೆ. ಬಹಳಷ್ಟು ವೇಳೆ

ಚದುರಂಗರು ಬೌದ್ಧಿಕವಾಗಿ ಹೆಚ್ಚು ಆಳವಾದುದನ್ನು ಬರೆಯುವುದಕ್ಕೆ ವಿಶೇಷವಾಗಿ ಪ್ರಯತ್ನಿಸುವವರಲ್ಲ. ಮಾನವೀಯ ಅನುಕಂಪ ಮತ್ತು ಹೃದಯವಂತಿಕೆಗೆ ಹೆಚ್ಚು ಒತ್ತನ್ನು ಕೊಡುವಂತಹವರು. ಆರ್ದ್ರತೆ ಮತ್ತು ಆಪ್ತತೆ ಅವರ ಸಾಮಾನ್ಯ ಗುಣ. 'ವೈಶಾಖ' ಕೃತಿ ಬೌದ್ಧಿಕ ಮಟ್ಟದಲ್ಲಿ ಕೆಲವು ಸಾಧ್ಯತೆಗಳನ್ನು ಆಂತರಂಗಿಕವಾಗಿ ಹೊಮ್ಮಿಸುತ್ತದಾದರೂ ಹಿಂದೆ ಸೂಚಿಸಿದ ಅವರ ಮೂಲ ಸ್ವರೂಪಕ್ಕೆ ಎರವಾಗುವುದಿಲ್ಲ. ಕೆಳಜಾತಿಯ ಅಸ್ಪೃಶ್ಯ ಲಕ್ಕ ಮತ್ತು ಬ್ರಾಹ್ಮಣ ಹೆಂಗಸು ರುಕ್ಮಿಣಿಯಂತಹ ಮುಖ್ಯ ಪಾತ್ರಗಳ ಜತೆಗೆ ದರುಮನಳ್ಳಿಯ ಹಲವಾರು ಪಾತ್ರಗಳ ಆ ಸಮಾಜದ ಶಿಥಿಲಗೊಂಡ ನೈತಿಕತೆಯನ್ನು ಬಿಚ್ಚಿಕೊಳ್ಳುತ್ತವೆ. ಸಾಮಾಜಿಕ ಹಾಗೂ ಧಾರ್ಮಿಕ ಕಟ್ಟುಪಾಡುಗಳಿಂದಾಗಿ ಜೀವಶಕ್ತಿಗೆ ಎರವಾಗಿರುವ ರುಕ್ಮಿಣಿ ಹಾಗೂ ಇದೇ ಕಾರಣಗಳಿಂದಾಗಿ ಬೇರೊಂದು ರೀತಿಯಲ್ಲಿ ಜೀವಶಕ್ತಿಗೆ ಎರವಾಗುವ ಲಕ್ಕ ಇಲ್ಲಿನ ಪ್ರಾತಿನಿಧಿಕ ಪಾತ್ರಗಳಾಗಿವೆ. ಗಂಡಿನ ಸಂಪರ್ಕದಿಂದ ಬಹಳಷ್ಟು ದಿನಗಳು ವಂಚಿತಳಾಗಿದ್ದ ರುಕ್ಮಿಣಿ ಮಾವ ಕೃಷ್ಣಶಾಸ್ತ್ರಿಗಳ ದುಡುಕಿನಿಂದಾಗಿ ಪ್ರಚೋದಿತಳಾಗಿದ್ದೇ ಕಾರಣವಾಗಿ ಗಾಡಿ ಹೊಡೆಯುತ್ತಿದ್ದ ಲಕ್ಕನ ಮೇಲೆ ಎರಗಿ ತನ್ನ ಬಯಕೆ ತೀರಿಸಿಕೊಳ್ಳುತ್ತಾಳೆ. ಒಂದು ನಿರ್ದಿಷ್ಟ ಅವಧಿಯಲ್ಲಿ ಇಬ್ಬರು ಪುರುಷರೊಂದಿಗೆ ಕೂಡಿದ ಹೆಣ್ಣು ಗರ್ಭವತಿಯಾದಾಗ ಕಾಡುವ ವಿಸ್ಮಯ, ಶಂಕೆಗಳು ಕಾದಂಬರಿಯಲ್ಲಿ ಮೂರ್ತಗೊಳ್ಳುತ್ತವೆ. ಇದಕ್ಕೆ ಪೂರಕವಾಗಿ ಹಲವಾರು ಘಟನೆಗಳು, ಶೋಷಣೆಯ ಚಿತ್ರಗಳು ಅನಾವರಣಗೊಳ್ಳುತ್ತ ಗಾಢ ಅನುಭವವನ್ನು ತಂದುಕೊಡುತ್ತವೆ. ಇಲ್ಲಿ ಕಾದಂಬರಿಕಾರರಿಗೆ ಯಾವುದೇ ಪರಿಹಾರಗಳನ್ನ ನೀಡುವುದಾಗಲೀ ಅಥವಾ ಕೇವಲ ತಾತ್ವಿಕ ಅಂಶಗಳನ್ನು ಹೇಳುವುದಾಗಲೀ ಮುಖ್ಯವಾಗಿಲ್ಲ. ಬದುಕಿನ ಸಮಗ್ರತೆಯನ್ನು ಸಂಕೀರ್ಣ ಸ್ವರೂಪದಲ್ಲಿ ಸೆರೆಹಿಡಿದು ಓದುಗನ ಮುಂದೆ ಇಡುವದಷ್ಟೇ ಅವರ ಉದ್ದಿಶ್ಯವಾಗಿರುವಂತೆ ತೋರುತ್ತದೆ. ವಿಚಾರಗಳು ಕೃತಿಯ ಒಳಮೈಯಲ್ಲಿ ತಂತಾನೆ ರೂಪುಗೊಳ್ಳಲು ಬಿಡುತ್ತಾರೆ. ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ವಸ್ತುನಿರ್ವಹಣೆ ಮತ್ತು ನಿರೂಪಣಾ ವಿಧಾನದಲ್ಲಿ ಹೊಸತನ ಸಾಧಿಸಿರುವ ವಿಶಿಷ್ಟತೆ ಈ ಕೃತಿಗಿದೆ.

ಇತ್ತೀಚಿನ ದಶಕಗಳಲ್ಲಿ ಕನ್ನಡ ಸಾಹಿತ್ಯಕ್ಕೆ ಲಭ್ಯವಾಗಿರುವ ಅತ್ಯಂತ ಮಹತ್ವದ ಕೃತಿಗಳಲ್ಲಿ 'ವೈಶಾಖ' ಕೃತಿ ವಿಶಿಷ್ಟವಾಗಿದೆ. ಕಾದಂಬರಿಯ ಅಂತ್ಯದಲ್ಲಿ ಚಿತ್ರಮೂಲನ ಕೋಟೆಯಲ್ಲಿ ರುಕ್ಮಿಣಿ ಬಂಧಿತಳಾಗಿದ್ದಿರಬಹುದಾದ ಸೂಚನೆಯಷ್ಟೇ ಲಕ್ಕನ ಬದುಕಿನ ಸ್ಥಿತ್ಯಂತರದ ಸೂಚನೆಯೂ ಧ್ವನಿಪೂರ್ಣವಾಗುತ್ತದೆ. ಪ್ಲೇಗಿನ ಪೀಡನೆಗೆ ಒಳಗಾಗುವದರುಮನ ಹಳ್ಳಿಯನ್ನು ಬಿಟ್ಟು ಹೊರಡುವ ಲಕ್ಕನ ಅನುಭವಗಳು ಹೊಸ ಬದುಕಿನ ಸೂಚನೆಗಳನ್ನು ಮತ್ತು ಸಾಧ್ಯತೆಗಳನ್ನು ಧ್ವನಿಸುತ್ತವೆ. ಕಾದಂಬರಿಯಲ್ಲಿ ಮೇಲುನೋಟಕ್ಕೆ ವ್ಯಕ್ತವಾಗುವ ಜಗತ್ತು ವೈದೃಶ್ಯಗಳ ಮೂಲಕವಾಗಿ ಭಗ್ನಗೊಂಡಂತೆ ತೋರುವುದಾದರೂ ಆಂತರ್ಯದಲ್ಲಿ ಹೊಸ ಬದುಕಿನ ಸಾಧ್ಯತೆಗಳನ್ನು ಕನಸುತ್ತದೆ. 'ವೈಶಾಖ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡಿದೆ.

ಚದುರಂಗರು ಬರೆದಿರುವ ನಾಟಕಗಳು ಎರಡು 'ಇಲಿಬೋನು' ಮತ್ತು 'ಕುಮಾರರಾಮ'. 'ಕುಮಾರರಾಮ' ಇತಿಹಾಸದಲ್ಲಿ ಉಲ್ಲೇಖಿತನಾಗದಿದ್ದರೂ ಜಾನಪದ ಕಥೆಗಳಲ್ಲಿ ನಿರಂತರವಾಗಿ ಜನಮನವನ್ನು ಸೂರೆಗೊಳ್ಳುತ್ತಿರುವ ಪಾತ್ರ. ನಂಜುಂಡ ಕವಿ ಇದೇ ಕಥೆಯನ್ನಾಧರಿಸಿ 'ರಾಮನಾಥ ಚರಿತ' ಕಾವ್ಯವನ್ನು ರಚಿಸಿದ್ದಾನೆ. ಅವನ ಶೌರ್ಯ, ಪ್ರತಾಪಗಳು, ಪರನಾರೀ ಸೋದರತ್ವ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿರುವಂಥದ್ದು. ಪ್ರಚಲಿತ ವಿಷಯಗಳನ್ನಷ್ಟೇ ಅಲ್ಲದೆ ಚದುರಂಗರು ಹುಲ್ಲೂರು ಶ್ರೀನಿವಾಸ ಜೋಯಿಸರ ಉಲ್ಲೇಖಗಳನ್ನು ಆಧರಿಸಿ ಕುಮಾರರಾಮ ನಾಟಕವನ್ನು ರಚಿಸಿದ್ದಾರೆ. ಸುಮಾರು ಹತ್ತೊಂಬತ್ತು ದೃಶ್ಯಗಳ ಈ ನಾಟಕದಲ್ಲಿ ಲೇಖಕರು ಸಾಂಪ್ರದಾಯಿಕ ಕಥೆಯಿಂದ ಭಿನ್ನವಾದ ಕೆಲವು ಪ್ರಸಂಗಗಳನ್ನು ರೂಪಿಸಿಕೊಂಡಿದ್ದಾರೆ. ನಾಟಕದಲ್ಲಿನ ಸಂಭಾಷಣಾ ತೀವ್ರತೆ ಕಲಾತ್ಮಕವಾಗಿದೆ.

'ಇಲಿಬೋನು' ಚದುರಂಗರ ಮತ್ತೊಂದು ನಾಟಕ. ಈ ನಾಟಕ ಅಸಂಗತ ನಾಟಕ ಪರಂಪರೆಯಲ್ಲಿ ಸೃಷ್ಟಿಯಾಗಿದೆ. ಇಲ್ಲದ ಏಣಿಯನ್ನ ಏರುವವನು, ಇಲ್ಲದ ಗುದ್ದಲಿಯಿಂದ ಅಗೆಯುವವನು ಇಲ್ಲಿನ ಪಾತ್ರಗಳಾಗಿ ಕಾಣಿಸಿಕೊಳ್ಳುತ್ತಾರೆ. ಏರುವವನು ಉನ್ನತ ಆದರ್ಶಗಳಿಗೆ, ಅಲೌಕಿಕತೆಯ ಆಶಯಗಳಿಗೆ ಸಂಕೇತವಾಗುವಂತಾದರೆ; ಅಗೆಯುವವನು ಬದುಕಿನ ರಹಸ್ಯಗಳನ್ನು ಬಗೆದುನೋಡುವ ವಿಜ್ಞಾನಿ, ಕವಿ ಅಥವಾ ತತ್ವಜ್ಞಾನಿಯ ಮಾನೋಭಾವವನ್ನು ಸಂಕೇತಿಸುತ್ತದೆ. ಮೌನ, ಏಕಾಕಿತನ ಮತ್ತು ಭಯಗಳು ಕಾಡುವ ಅವರಿಬ್ಬರಿಗೂ ಮಾತುಬೇಕಾಗಿದ್ದರೂ ಪರಸ್ಪರ ಅರ್ಥಪೂರ್ಣ ಸಂವಾದ ಸಾಧ್ಯವಾಗುವುದಿಲ್ಲ. ಅವರಿಬ್ಬರ ಅಸಂಗತ ಕ್ರಿಯೆ ಮತ್ತು ಅಸಂಬದ್ಧ ಮಾತುಗಳು ಅವರಿಬ್ಬರ ಸೋಲುಗಳನ್ನು ಸೂಚಿಸುತ್ತಾ ಹೋಗುತ್ತವೆ. ಮನುಷ್ಯನಿಗೆ ಉಸಿರು ಕಟ್ಟಿಸುವ ಈ ಬದುಕಿನ ದ್ವಂದ್ವಗಳಿಂದ ಪಾರಾಗುವ ಪ್ರಯತ್ನದಲ್ಲಿ ಕಟ್ಟಿಕೊಳ್ಳುವ ಅವನ ಕನಸುಗಳು ಮತ್ತು ಹಂಬಲಗಳು ಧ್ವನಿತವಾಗುತ್ತವೆ. ಪ್ರಕೃತಿಯ ಸಂಕೇತವಾಗಿ ಬರುವ ಹೆಣ್ಣಿನ ಪ್ರವೇಶ ಏರುವ ಮತ್ತು ಅಗೆಯುವವರ ಜೀವನ ಧೋರಣೆಗಳಲ್ಲೂ ಬದಲಾವಣೆಯನ್ನು ತರುತ್ತದೆ. ಜೀವನದ ಇಲಿಬೋನಿನಲ್ಲಿ ಸಿಕ್ಕಿಹಾಕಿಕೊಂಡು ತೊಳಲಾಡುವ ಸಂಕಟ ವಿಷಾದಗಳ ಜತೆಗೆ ಅರ್ಥವನ್ನು ಕಂಡುಕೊಳ್ಳುವ ಪ್ರಯತ್ನ ಇಲ್ಲಿ ನಡೆದಿದೆ.

ಇತ್ತೀಚೆಗೆ ಚದುರಂಗರ ಹನಿಗವನಗಳ ಸಂಕಲನ 'ಅಲೆಗಳು' ಪ್ರಕಟಗೊಂಡಿದೆ. ಆರಂಭದಲ್ಲಿ ಕವನಗಳನ್ನು ಬರೆದಿದ್ದರ ಬಗ್ಗೆ ಸೂಚನೆಯಿದ್ದರೂ ಚದುರಂಗರು ತದನಂತರದಲ್ಲಿ ಅದರ ಬಗ್ಗೆ ಹೆಚ್ಚು ಆಸ್ಥೆವಹಿಸಿದ್ದಂತೆ ತೋರಿರಲಿಲ್ಲ. ಅಲ್ಲಲ್ಲಿ ಅವರ ಹನಿಗವನಗಳು ಹಿಂದೆ ಕೆಲವು ಸಾರಿ ಪ್ರಕಟವಾಗಿದ್ದರೂ ಒಟ್ಟಾರೆ ಸಂಕಲನವಾಗಿ ಪ್ರಕಟವಾಗಿರುವುದು ಇದೇ ಮೊದಲು. ಸದಾ ಮರುಹುಟ್ಟು ಪಡೆಯುತ್ತಿರುವ 'ಕನ್ನಡದ ಫೀನಿಕ್ಸ್' ಎಂದು ಪ್ರೀತಿಯಿಂದ ಚದುರಂಗರನ್ನು ಕರೆದಿರುವುದೂ ಉಂಟು.

ಕೇವಲ ಕೆಲವೇ ಕೆಲವು ಕಿರಿಯ ಸಾಲುಗಳಲ್ಲಿ ರಸವ್ಯಂಜಕತೆಯನ್ನು ತರುವ ಪ್ರಯತ್ನವನ್ನು ಚದುರಂಗರು ಮಾಡಿದ್ದಾರೆ. ಹಾಸ್ಯ, ವ್ಯಂಗ್ಯ, ಜೀವನೋಲ್ಲಾಸ ಇಲ್ಲಿ ವ್ಯಕ್ತವಾಗಿದೆ. ಆರೋಗ್ಯಕರ ವಿಡಂಬನೆಗೆ ಪ್ರೇಮ, ಕಾಮ, ದಾಂಪತ್ಯ, ರಾಜಕೀಯಗಳು ಗುರಿಯಾಗಿರುವಂತೆಯೇ ಗಂಭೀರ ವಿಚಾರಗಳು ಕೂಡ ಮಾರ್ಮಿಕವಾಗಿ ಧ್ವನಿತವಾಗುತ್ತವೆ. ಸಾಹಿತ್ಯದ ಹೊರತಾಗಿ ಚದುರಂಗ ಆಡುವುದರಲ್ಲಿ ಚದುರಂಗರಿಗೆ ವಿಶೇಷ ಆಸಕ್ತಿ. ಅದು ಅವರಿಗೆ ಮನೆತನದ ಕೊಡುಗೆ ಕೂಡ. ಬಹುಶಃ ಅವರ ಈ ಪ್ರೀತಿಯೇ ಅವರ ಕಾವ್ಯನಾಮಕ್ಕೂ ಕಾರಣವಾಗಿದೆ.

ಚದುರಂಗರು ಸಾಹಿತಿಗಳಷ್ಟೇ ಅಲ್ಲದೆ ಚಿತ್ರನಿರ್ದೇಶಕರಾಗಿಯೂ ಕನ್ನಡಿಗರಿಗೆ ಪರಿಚಿತರಾದವರು. ಸಿನಿಮಾ ಕಲೆಯ ಬಗ್ಗೆ ಆಕರ್ಷಿತರಾಗಿದ್ದ ಚದುರಂಗರು ಪುಣೆಯಲ್ಲಿ ಅದರ ತಂತ್ರದ ಬಗ್ಗೆ ಸ್ವಯಂ ಅಧ್ಯಯನ

ನಡೆಸಿದ್ದರು. ಪತ್ರಿಕೆಗಳಲ್ಲಿ ಚಲನಚಿತ್ರ ವಿಮರ್ಶೆಗಳನ್ನು ಬರೆದರು. ಸುಮಾರು 1948ರಲ್ಲಿ ಮೈಸೂರಿನಲ್ಲಿ ತಯಾರಾದ 'ಭಕ್ತ ರಾಮದಾಸ' ಚಿತ್ರಕ್ಕೆ ಕಥಾಲೇಖಕರಾಗಿದ್ದವರು. ಅಷ್ಟೇ ಅಲ್ಲದೆ ಮುಂದೆ ವಿದೇಶಿ ಚಿತ್ರಸಂಸ್ಥೆ ಎಂ.ಜಿ.ಎಂ. ತಯಾರಿಸಿದ ಇಂಗ್ಲೀಷಿನ 'ಮಾಯಾ' ಚಿತ್ರದ ಸಹನಿರ್ದೇಶಕ ರಾಗಿಯೂ ಕೆಲಸ ಮಾಡಿದ್ದರು. ಅವರ ಈ ಅನುಭವ ಮತ್ತು ಆಸಕ್ತಿಗಳ ಪರಿಣಾಮವಾಗಿ ಗೆಳೆಯರೊಂದಿಗೆ ಶ್ರೀ ನಾಗೇಂದ್ರ ಚಿತ್ರಕಲಾ ಸಂಸ್ಥೆಯನ್ನು ಸ್ಥಾಪಿಸಿ ತಮ್ಮದೇ ಕಾದಂಬರಿ 'ಸರ್ವಮಂಗಳಾ' ಚಿತ್ರವನ್ನು ನಿರ್ಮಿಸಿದರು. 1967-68ರ ರಾಜ್ಯ ಚಲನಚಿತ್ರದ ಪ್ರಶಸ್ತಿಗಳನ್ನು ಕೂಡ ಅದು ಗಳಿಸಿಕೊಂಡಿತು. ಅವರ ಮತ್ತೊಂದು ಕಾದಂಬರಿ 'ಉಯ್ಯಾಲೆ'ಯನ್ನು ಕೂಡ ತಾವೇ ಸ್ವತಃ ನಿರ್ಮಿಸದಿದ್ದರೂ ಅದರ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಉತ್ತಮ ಚಿತ್ರಕಥಾ ಲೇಖಕರಾಗಿ 'ಉಯ್ಯಾಲೆ' ಅವರಿಗೆ ಪ್ರಶಸ್ತಿಯನ್ನು ತಂದುಕೊಟ್ಟಿತು.

'ಅಲೆಗಳು' ಸಂಕಲನದ ಒಂದು ಮುಕ್ತಕದಲ್ಲಿ ಚದುರಂಗರು 'ಬೆನ್ನ ಹಿಂದಿನ ಗೆಳೆಯ ವೇಳೆಯಾಗಿದೆ ಹೊರಡು' ಎಂದಾಗ 'ಕೆಲಸ ಮುಗಿದಿಲ್ಲ ಯಾಕಿಷ್ಟು ತಡೆ ಎಂದೆ' ಎಂದು ಬರೆಯುತ್ತಾರೆ. ಸದಾ ಹೊಸ ಹೊಸತನ್ನ ಅನ್ವೇಷಿಸುತ್ತಲೇ ಹೊರಡುವ ಚದುರಂಗರ ಸಹಜ ಸ್ವಭಾವ ಇದು ಎಂದು ತೋರುತ್ತದೆ. ಎಪ್ಪತ್ತೈದರ ಇಳಿವಯಸ್ಸಿನಲ್ಲೂ ಅವರ ಸೃಜನಶಕ್ತಿ ಕುಂದಿಲ್ಲ. ಹೊಸದೊಂದು ಕಾದಂಬರಿಯ ಹೊಳಹು ಹಾಕುತ್ತಿದ್ದಾರೆ. ಬದುಕಿನ ಸಾರ್ಥಕತೆಯ ಬಗ್ಗೆ ಅವರ ನಂಬಿಕೆಯೆಂದರೆ ಯಾರೋ ಒಬ್ಬರ ಮುಖದಲ್ಲಿ ಒಂದು ಮುಗುಳು ನಗೆ ತರುವ ಒಂದು ಸಣ್ಣ ಕೆಲಸ ತನ್ನಿಂದ ಸಾಧ್ಯವಾದರೆ ಅಷ್ಟಕ್ಕೇ ತಮ್ಮ ಜೀವನದಲ್ಲಿ ಧನ್ಯತೆ ಸಿಗುತ್ತದೆ ಎಂಬುದು. ಇಂತಹ ಧನ್ಯತೆಯನ್ನು ಅವರು ಬದುಕಿನಲ್ಲಿ ಬಹಳಷ್ಟು ಪಡೆಯುತ್ತಿದ್ದಾರೆ. ಕನ್ನಡ ಜನತೆ ಈ ಹಿರಿಯನಿಗೆ ಅಪಾರ ಪ್ರೀತಿಯ ಮೂಲಕ ತನ್ನ ಕೃತಜ್ಞತೆಯನ್ನು ಸಲ್ಲಿಸುತ್ತದೆ.

❑

## ಬಿ.ಜಿ.ಎಲ್.ಸ್ವಾಮಿ

ಅ.ರಾ.ಮಿತ್ರ

A Botanist with a big 'B' ಎಂದು ಕೇಂಬ್ರಿಜ್ ವಿಶ್ವವಿದ್ಯಾಲಯದ ಪ್ರಾಧ್ಯಾಪಕ ಕಾರ್ನರ್ ಅವರಿಂದ ಪ್ರಶಂಸಿತರಾದ ಬಿ.ಜಿ.ಎಲ್. ಸ್ವಾಮಿ (ಬೆಂಗಳೂರು ಲಕ್ಷ್ಮೀನಾರಾಯಣ ಸ್ವಾಮಿ) ಕನ್ನಡದ ಒಬ್ಬ ವಿಶಿಷ್ಟ ಬರಹಗಾರ, ಚಿಂತಕ ಹಾಗೂ ಸಂಶೋಧಕ. ಅವರ ವ್ಯಂಗ್ಯಬರಹ ಗಳಲ್ಲಾಗಲಿ, ಪ್ರವಾಸ ಕಥನಗಳಲ್ಲಾಗಲಿ, ಸಂಶೋಧನ ಗ್ರಂಥಗಳಲ್ಲಾಗಲಿ ಅವರ 'ಸ್ವಾಮಿತನ' ಎನ್ನಬಹುದಾದ ವಿಶಿಷ್ಟತೆ ಎದ್ದುಕಾಣುವಂಥದು. ಸಾಹಿತ್ಯದಲ್ಲಿ ಈ ಬಗೆಯ ಸಾವಯವ ಶಿಲ್ಪ ಅಪೂರ್ವವಾದದ್ದು. ಯಾವ ವಿಷಯವನ್ನೇ ಆರಿಸಿಕೊಂಡರೂ ಅದರ ಮೂಲ ಬೇರುಗಳನ್ನೇ ಅಲು ಗಾಡಿಸುವ ಸ್ವಭಾವ ಅವರದು. ಅವರು ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕಾವನ್ನು ರೇಖಿಸುತ್ತಾ ನಮ್ಮ ದೇಶಕ್ಕೆ ದಕ್ಷಿಣ ಅಮೆರಿಕಾದಿಂದ ಬಂದ ತರಕಾರಿಗಳನ್ನೆಲ್ಲ ಗುರುತಿಸುತ್ತಾರೆ. ಅವರು ದಕ್ಷಿಣ ಭಾರತದ ಶಾಸನಗಳ ಕೂಲಂಕಷ ಅಧ್ಯಯನ ಮಾಡುವುದು ಅವುಗಳಲ್ಲಿ ಉಕ್ತವಾದ ಗಿಡಮರಗಳ ಹಿನ್ನೆಲೆಯಲ್ಲಿ. ಕರ್ನಾಟಕ ಸಂಗೀತದ ಬಗೆಗೆ ಚಿಂತಿಸುವುದರ ಜತೆಗೇ ವಿಜಯನಗರದ ಪತನದ ವಾಸ್ತವಗಳ ಶೋಧನೆಗೆ ಹೊರಡುತ್ತಾರೆ. ತಂಬಾಕಿ ನಂಥ ಮಾದಕ ವಸ್ತುವಿನ ಕಥನವನ್ನು ಅಷ್ಟೇ ಮಾದಕವಾದ ಮೋಹಕ ಶೈಲಿಯಲ್ಲಿ ಮೂಡಿಸುತ್ತಾರೆ. ಅವರು ಕೊಡುವ ವ್ಯಕ್ತಿಚಿತ್ರಗಳೂ, ತಮಿಳು ಅನುವಾದಗಳೂ ಸ್ವಾಮಿಯವರದೇ ಎಂದು ಹೇಳಬಹುದಾದ ಒಂದು ಗಡಸುತನದಿಂದ ಕೂಡಿರುತ್ತವೆ. 'ಪಂಚಕಲಶಗೋಪುರ'ದಲ್ಲಿ ಅವರು ಬಿ.ಎಂ.ಶ್ರೀ.ಯವರ ಭಾಷಣ ಶ್ರದ್ಧೆ-ಗೀಳು ಎರಡನ್ನೂ ಹಾಸ್ಯ-ಮೆಚ್ಚಿಕೆಗಳ ವಿಚಿತ್ರ ಮಿಶ್ರಣದಿಂದ ಪರಿಚಯ ಮಾಡಿಕೊಟ್ಟಿರುವ ಬಗೆಯನ್ನು ನೋಡಬೇಕು. ಬಿ.ಜಿ.ಎಲ್. ಸ್ವಾಮಿಯವರು ಸ್ವಯಂ ರೇಖಾಚಿತ್ರಕಾರರೂ ಆಗಿರುವುದರಿಂದ ತಮ್ಮ ವಿವರಣೆಯ ಕಲಾತ್ಮಕ ದೃಶ್ಯಚಿತ್ರಗಳನ್ನು ತಮ್ಮದೇ ಆದ ದೃಷ್ಟಿಕೋನದಿಂದ ಬಿಡಿಸುವ ಹವ್ಯಾಸವನ್ನು ಪ್ರದರ್ಶಿಸಿ ತಮ್ಮ ಬರಹಗಳಿಗೆ ಒಂದು ಹೊಸ ಆಯಾಮವನ್ನು ಒದಗಿಸುತ್ತಾರೆ. ವಿವಾದಾತ್ಮಕ ವಿಷಯಗಳ ಸುಳಿಯಲ್ಲಿ ಸಿಲುಕಬಯಸುವುದೂ ಅವರಿಗೆ ಒಂದು ಪ್ರಿಯವಾದ ಹವ್ಯಾಸ. ತಮಿಳು ಭಾಷೆಯ ಪ್ರಾಚೀನತೆಯನ್ನು ತೋರಿಸುವ ವಿಷಯದಲ್ಲಿ ತಮಿಳು ವಿದ್ವಾಂಸರು ಮಾಡಿರುವ ಆತುರದ ತೀರ್ಮಾನಗಳನ್ನು ಪ್ರಬಲ ಸಾಕ್ಷ್ಯಾಧಾರಗಳಿಂದ ಖಂಡಿಸಿ ತಮಿಳರ ಅಸಹನೆಗೆ ಪಾತ್ರರಾದ ದ್ದನ್ನಾಗಲಿ, ಪುರಂದರದಾಸ ಕೀರ್ತನೆಗಳ ಕೆಲವು ಮಿತಿಗಳನ್ನು ಶುದ್ಧ ಸಂಗೀತದ ದೃಷ್ಟಿಯಿಂದ ಚರ್ಚಿಸಿ ಕನ್ನಡದಲ್ಲಿ ದೊಡ್ಡ ವಿವಾದದ ಸುಳಿಯನ್ನು ಎಬ್ಬಿಸಿದು ದನನ್ನಾಗಲಿ, ಚಿದಂಬರದ ನಟರಾಜನ ಆನಂದ ತಾಂಡವದ ಮೂಲವು ಕಾಶ್ಮೀರ ಶೈವದ ಪ್ರತ್ಯಭಿಜ್ಞಾದರ್ಶನದ ಪ್ರಭಾವದಿಂದ ಬಂದು ದೆಂದು ಸಾಕ್ಷ್ಯಾಧಾರಗಳಿಂದ ಗುರುತಿಸಿದುದನ್ನಾಗಲಿ ಇಲ್ಲಿ ನೆನಪಿಸಿಕೊಳ್ಳಬಹುದು. ಬೇರೆ ಬೇರೆ ಪ್ರಸಂಗಗಳ ವ್ಯಂಗ್ಯ ವಿಮರ್ಶೆ ಮಾಡುವ ಸಂದರ್ಭದಲ್ಲಿ ಆನುಷಂಗಿಕವಾಗಿ ತಮ್ಮ ಮನೋಧರ್ಮ ಯಾವ ಧಾತುವಿನದು ಎಂಬುದನ್ನು ಧ್ವನಿಸುತ್ತ ಹೋಗುವ ಜಾಯಮಾನ ಅವರದು. ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಂತಹ ಪ್ರತಿಷ್ಠಿತ ಕಾಲೇಜಿನ ಪ್ರಾಧ್ಯಾಪಕ, ಪ್ರಾಚಾರ್ಯ ಸ್ಥಾನಗಳಲ್ಲಿದ್ದೂ ದೊಗಲೆ ಜುಬ್ಬ, ಪೈಜಾಮಾ ಅಥವಾ ನಿಕ್ಕರ್‌ಗಳಲ್ಲಿ ಓಡಾಡಿ ಕೆಲವು ಸಂಪ್ರದಾಯಸ್ಥ ಶಿಕ್ಷಕರಿಗೆ, ಶಿಕ್ಷಣಾಧಿ ಕಾರಿಗಳಿಗೆ ಅವರು ನುಂಗಲಾರದ, ಉಗುಳಲಾಗದ ತುತ್ತಾಗಿದ್ದುದೂ ಉಂಟು. 'ಆನೆ ನಡೆದುದೆ

ಮಾರ್ಗಂ' ಎಂದು ಕೇಶಿರಾಜ ಹೇಳಿರುವುದು ಇಂಥವರನ್ನೇ ಕುರಿತು ಎಂದು ಕಾಣುತ್ತದೆ.

ಭಾಷೆಯ ನೆಲದಲ್ಲಿ ವ್ಯಂಗ್ಯದ ಮಳೆಯನ್ನು ಹರಿಸಿದ್ದು, ಸಸ್ಯ ಜಗತ್ತಿನ ನರುಗಂಪನ್ನು ತುಂಬಿದ್ದು ಮತ್ತು ಶೋಧನೆಯ ತಂಗಾಳಿಯಿಂದ ಲವಲವಿಸುವಂತೆ ಮಾಡಿದ್ದು ಬಿ.ಜಿ.ಎಲ್.ಸ್ವಾಮಿಯವರ ಸಾಧನೆ ಎನ್ನಬಹುದು. ಸಸ್ಯವಿಜ್ಞಾನ ಕ್ಷೇತ್ರದಲ್ಲಿ ಅದ್ಭುತ ಸಂಶೋಧನೆಗಳನ್ನು ಮಾಡಿ ಲೇಖನಗಳನ್ನು ಪ್ರಕಟಿಸಿ ಅಂತರರಾಷ್ಟ್ರೀಯ ಖ್ಯಾತಿಗಳಿಸಿರುವ ಸ್ವಾಮಿಯವರು 'ಹಸಿರು ಹೊನ್ನು' ಗ್ರಂಥದಲ್ಲಿ ಓದುಗರನ್ನು ತಮ್ಮ ಪಾಂಡಿತ್ಯದ ಸಾಗರದಲ್ಲಿ ಮುಳುಗಿಸದೆ, ತಬ್ಬಿಬ್ಬು ಮಾಡುವ ಪರಿಭಾಷೆಯನ್ನು ಬಳಸದೆ, ಜತೆಯಲ್ಲಿ ಬಂದಿದ್ದ ವಿದ್ಯಾರ್ಥಿ ವಿದ್ಯಾರ್ಥಿನಿಯರ ಪ್ರಚಂಡ ಅಜ್ಞಾನವನ್ನು ಹೀಯಾಳಿಸದೆ ಸಲೀಲವಾಗಿ ನಮ್ಮೆದುರಿಗೆ ಒಂದು ಸುಂದರ ಸಸ್ಯಲೋಕವನ್ನು ಸೃಷ್ಟಿಸಿ, ಅದರ ಎಲ್ಲ ಜಟಿಲತೆಗಳೊಂದಿಗೆ ಪರಿಚಯಿಸಿಕೊಡುವತ್ತ ತಮ್ಮ ಗಮನವನ್ನು ಕೇಂದ್ರೀಕರಿಸುತ್ತಾರೆ. ಪ್ರಕೃತಿಯ ಸಸ್ಯವಿಸ್ಮಯಗಳನ್ನು ನೋಡುತ್ತ ನೋಡುತ್ತ ಅದರ ವಿಶ್ವರೂಪದರ್ಶನದಿಂದ ನಾವು ಬೆರಗಾಗುವಂತೆ ಮಾಡಬಲ್ಲ ಒಂದು ಕಲಾಮೋಡಿ ಅವರ ಬರಹದಲ್ಲಿದೆ. ಸಸ್ಯಜಗತ್ತಿನ ವಿಷಯಗಳ ಗಹನತೆಯನ್ನಾಗಲಿ, ಜಟಿಲತೆಯನ್ನಾಗಲಿ ಹಗುರಗೊಳಿಸದೆ ಎಷ್ಟು ತಿಳಿಯಾಗಿ ಹೇಳ ಬಹುದೆಂಬುದಕ್ಕೆ 'ಹಸಿರು ಹೊನ್ನು' ಗ್ರಂಥದ ಪ್ರವಾಸಕಥನ ವ್ಯಾಖ್ಯಾನಗಳು ಸಾಕ್ಷಿಯಾಗಿ ನಿಲ್ಲುತ್ತವೆ. "ಸ್ವಾಮಿ ನನಗೆ ಬಹು ದೊಡ್ಡವರಾಗಿ ಕಾಣಿಸಿದುದು ಸಂಶೋಧನೆಗಳ ಲವಲವಿಕೆಯಿಂದ ಮತ್ತು ಶಾಸ್ತ್ರಪ್ರೇಮವನ್ನು ಇನ್ನೊಬ್ಬರಿಗೆ ಅಂಟಿಸಬಲ್ಲ ಆಕರ್ಷಣೆಯಿಂದ" ಎಂಬ ಶಿವರಾಮ ಕಾರಂತರ ಮಾತು ಎಷ್ಟು ಸತ್ಯವೆಂಬುದು ಹಸಿರು ಹೊನ್ನಿನ ಪುಟಪುಟದಲ್ಲೂ ಕಂಡುಕೊಳ್ಳಬಹುದಾಗಿದೆ.

ಹೊಸಗನ್ನಡದ ಆಚಾರ್ಯರಲ್ಲೊಬ್ಬರಾದ ಡಿ.ವಿ.ಗುಂಡಪ್ಪನವರ ಮಗ ಬಿ.ಜಿ.ಎಲ್.ಸ್ವಾಮಿ ಜನಿಸಿದ್ದು 1916ನೇ ಇಸವಿಯ ಫೆಬ್ರವರಿ ಐದರಂದು. ಅವರ ಐದನೆಯ ವಯಸ್ಸಿನಲ್ಲಿ ತಾಯಿ ಬೆಂಕಿಯ ಅಪಘಾತದಲ್ಲಿ ತೀರಿಕೊಂಡರು. ಡಿ.ವಿ.ಜಿ.ಯವರಂಥ ಹಿರಿಯ ಚೇತನದ ಮೊದಲನೆಯ ಮಗನಾಗಿ ಬೆಳೆದ ಸ್ವಾಮಿ ತಂದೆಯವರಿಗಿಂತ ಹೆಚ್ಚಾಗಿ ತಂದೆಯವರ ಪುಸ್ತಕ ಭಂಡಾರದಿಂದ ಪ್ರಭಾವಿತರಾದ ವ್ಯಕ್ತಿ. ನೂರಾರು ಸಾರ್ವಜನಿಕ ಸೇವೆಯಲ್ಲಿ ತೊಡಗಿದ್ದ ಡಿ.ವಿ.ಜಿ. ಮಗನನ್ನು ಸ್ವತಂತ್ರವಾಗಿ ಬೆಳೆಯಲು ಬಿಡಬೇಕಾದ್ದು ಅನಿವಾರ್ಯವಾಯಿತು. ಹೈಸ್ಕೂಲಿನಲ್ಲಿ 'ಜಗಳಗಂಟ' ಎಂದೇ ಪ್ರಸಿದ್ಧನಾಗಿದ್ದ ಸ್ವಾಮಿ, ಚರ್ಚೆ ಮಾಡದೆ ಯಾವುದನ್ನೂ ಒಪ್ಪಿಕೊಳ್ಳುತ್ತಿರಲಿಲ್ಲವೆಂದು ಅವರ ಜೀವನ ಚರಿತ್ರಕಾರ ಡಾ. ಬಿ.ಪಿ.ರಾಧಾಕೃಷ್ಣ ಹೇಳಿದ್ದಾರೆ. ಅಲ್ಲದೆ ಆ ವಯಸ್ಸಿನಲ್ಲೇ ಅವರಿಗೆ ನಾಟಕದ ಗೀಳೂ ಹಿಡಿದಿತ್ತಂತೆ. ಮರಣದ ಮಣೆಯ ಮೇಲೆ ಶಯನ. ಉಡುಪಿನಲ್ಲಿ ಅಂಥ ನಯ ನಾಜೂಕು ಇರುತ್ತಿರಲಿಲ್ಲವೆಂದು ರಾಧಾಕೃಷ್ಣ ಅವರು ಹೇಳುತ್ತಾರೆ. ಉದ್ದಕ್ಕೂ ಅಷ್ಟೇ. ದೊಗಲೆ ಜುಬ್ಬದ, ಗಡಸು ನಡಿಗೆಯ ಧಡೂತಿ ಮನುಷ್ಯ ಸ್ವಾಮಿ. ತಿವಿಯುವ ಕಣ್ಣು; ಕೈಕಾಲುಗಳನ್ನು ವಿಲಕ್ಷಣವಾಗಿ ತಿರುಚುತ್ತ, ಚುರೋಟಿನ ಒಳಗೊಳವೆಯನ್ನು ಕೆಲದ ಒಸಡಿಗೆ ಸರಿಸುತ್ತ, ಗಟ್ಟಿಯಾಗಿ ಅರಚುತ್ತ, ಕೇಕೆ ಹಾಕುತ್ತ ಮಾತಾಡುವುದು ಅವರ ಸ್ವಭಾವ. ತುಂಟ ಗಂಭೀರ ಮುಖಮುದ್ರೆ. ಅವರ ಮುಖ ಒಬ್ಬ ಕೊಲೆಗಾರನ ಮುಖವನ್ನು ಅಭಿವ್ಯಕ್ತಿಸುವಂತಿದೆ ಎಂದು ಡಿ.ವಿ.ಜಿ. ಆಗಾಗ ಹಾಸ್ಯಮಾಡುತ್ತಿದ್ದರಂತೆ. "ಇದು ನನ್ನ ತಪ್ಪಲ್ಲ. ಈ ಮಡಿಕೆ ಮಾಡಿದ ಕುಂಬಾರನ ತಪ್ಪು" ಎಂದು ಸ್ವಾಮಿಯವರು ಆ ವಿಧಾತನನ್ನೂ ಲೇವಡಿ ಮಾಡಿರುವುದುಂಟು. ಸೆಂಟ್ರಲ್ ಕಾಲೇಜಿನಲ್ಲಿ 1936ರಲ್ಲಿ ಪ್ರಾಣಿಶಾಸ್ತ್ರದ ಆನರ್ಸ್‌ಗೆ ಸೇರಬೇಕಾಗಿದ್ದ ಸ್ವಾಮಿ ಎ.ಆರ್. ಕೃಷ್ಣಶಾಸ್ತ್ರಿಗಳ ಬಲವಂತಕ್ಕೆ ಸಸ್ಯಶಾಸ್ತ್ರದ ಕಡೆ ತಿರುಗಿದರು. ಇತ್ತ ಕನ್ನಡದ ಬಗೆಗೂ ಆಸಕ್ತಿ ಬಲಿತು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಕಾರ್ಯದರ್ಶಿಯಾದರು. ಅವರನ್ನು ಕನ್ನಡದ ವೈಜ್ಞಾನಿಕ ಬರವಣಿಗೆಯ ಕಡೆಗೆ ತಿರುಗಿಸಿದ ಶ್ರೇಯಸ್ಸೂ ಎ.ಆರ್.ಕೃ. ಅವರಿಗೇ ಸಲ್ಲುತ್ತದೆ. ಅವರ ಒತ್ತಾಸೆಯಿಂದ "ಆರ್ಜಿತ ಗುಣಗಳೂ ಅನುವಂಶೀಯತೆಯೂ" ಎಂಬ ಪ್ರಥಮ ಲೇಖನವನ್ನು ಸ್ವಾಮಿಯವರು ಬರೆದದ್ದು 1939ರಲ್ಲಿ. ಅನಂತರ 1944ರಲ್ಲಿ 'ವಿಜ್ಞಾನ ವಿಹಾರ' ಎಂಬ ತಲೆಬರಹದ ನಾಲ್ಕು ಲೇಖನಗಳು (ಜೇಡಗಳ ಪ್ರಣಯ ಪ್ರಸಂಗ, ಆಸ್ಟ್ರೇಲಿಯಾದ ಪ್ಲಾಟಿಪಸ್ ಎಂಬ ಪ್ರಾಣಿಯ ಬಗೆಗೆ ಒಗಟಿನ ರೂಪದ ಪದ್ಯಗುಚ್ಛ, ಹಸಿವಿನ ಬಳ್ಳಿ ಇತ್ಯಾದಿ) ಕನ್ನಡ ನುಡಿಯಲ್ಲಿ ಬೆಳಕು ಕಂಡವು. ಮುಂದೆ ಬೆಂಗಳೂರಿನ ಭಾರತೀಯ ವಿಜ್ಞಾನ ಮಂದಿರದಲ್ಲಿ ಸಂಶೋಧಕ ಸಹಾಯಕ ವೃತ್ತಿ, ಅನಂತರ ಅರಣ್ಯ ಸಂಶೋಧನ ಇಲಾಖೆಯಲ್ಲಿ ಪ್ರಯೋಗಾಲಯದ ಸಹಾಯಕ ವೃತ್ತಿ. ಈ ಅವಧಿಯಲ್ಲಿ ಇಂಗ್ಲೀಷಿನಲ್ಲಿ ಬರೆದ ವೈಜ್ಞಾನಿಕ ಬರಹಗಳಿಂದಾಗಿ ಸ್ವಾಮಿ ಸಸ್ಯಶಾಸ್ತ್ರದ ವಿಖ್ಯಾತ ವಿಜ್ಞಾನಿಗಳ ಗಮನವನ್ನು ಸೆಳೆದರು. ತಂದೆಯ ನೆರವಿನಿಂದ ಮನೆಯಲ್ಲೇ ಪ್ರಯೋಗಾಲಯ ಸ್ಥಾಪಿಸಿ ವಿಶ್ವದ ಪ್ರಸಿದ್ಧ ಪತ್ರಿಕೆಗಳಲ್ಲಿ ತಮ್ಮ ಸಂಶೋಧನ ಲೇಖನಗಳನ್ನು ಪ್ರಕಟಿಸಿ 1947ರಲ್ಲಿ ಡಾಕ್ಟರೇಟ್ ಪದವಿ ಗಳಿಸಿದರು. ಮುಂದೆ ಸರಕಾರದ ಶಿಷ್ಯವೇತನವನ್ನು ಪಡೆದು ಸುಪ್ರಸಿದ್ಧ ಸಸ್ಯವಿಜ್ಞಾನಿಯಾದ ಇರ್ವಿಂಗ್ ಬೈಲಿಯ ಶಿಷ್ಯರಾಗಿ ಹಾರ್ವರ್ಡ್ ವಿಶ್ವವಿದ್ಯಾಲಯವನ್ನು ಸೇರಿದರು. ಅಮೆರಿಕಾ ಸಂಶೋಧನೆಗೆ ಹೆಸರಾದ ದೇಶ. ಸಂಶೋಧನೆಯಲ್ಲಿ ತೊಡಗಿದವರು ಹಗಲು ರಾತ್ರಿಗಳ ಲಕ್ಷ್ಯವಿಲ್ಲದೆ ಬೇರೆ ಎಲ್ಲವನ್ನೂ ಮರೆತು ವಿಷಯದಲ್ಲಿ ತನ್ಮಯರಾಗುವುದು ಅಮೆರಿಕನ್ನರಿಗೆ ಆಶ್ಚರ್ಯದ ಸಂಗತಿಯೇನೂ ಆಗಿರಲಿಲ್ಲ. ಅಂಥ ಅಪೂರ್ವ ಸಂಶೋಧಕ ಇರ್ವಿಂಗ್ ಬೈಲಿಯವರೇ ಬಿ.ಜಿ.ಎಲ್. ಸ್ವಾಮಿ ಬಗೆಗೆ ಬರೆಯುತ್ತಾ "I consider Dr. Swamy to be the ablest oriental student with whom I have come in contact during a period of 40 years....Furhter more, I rate him as the top few of any race or nationality" ಎಂದು ಹೇಳಿರುವುದು ಗುರುವಿನಿಂದ ಶಿಷ್ಯನೊಬ್ಬನಿಗೆ ಸಿಕ್ಕಬಹುದಾದ ಅಪೂರ್ವ ನುಡಿಕಾಣಿಕೆಯಾಗಿದೆ. ವಿದ್ವಾಂಸರಲ್ಲಿರಬೇಕಾದ ಶ್ರಮ, ಶಕ್ತಿ, ವಿವರಾಸಕ್ತಿಗಳ ಜತೆಗೇ ಸ್ವಾಮಿಯವರಲ್ಲಿ ಅಂತಃಸೃಜನ ಶೀಲವಾದ ಚಿಂತನಶಕ್ತಿಯೂ ಬೆರೆತಿದೆ ಎಂದು ಕೇಂಬ್ರಿಜ್ ವಿಶ್ವವಿದ್ಯಾಲಯದ ಅನ ಆರ್ಬಲ್ ಹೇಳಿದ್ದಾರೆ. ಮದರಾಸಿನಲ್ಲಿ ಉದ್ಯೋಗಕ್ಕೆ ಸೇರಿದ ನಂತರ ಸ್ವಾಮಿಯವರು ವೈಜ್ಞಾನಿಕ ಶೋಧನೆ, ಸಾಹಿತ್ಯ ರಚನೆ ಎರಡರಲ್ಲೂ ಸಮಾನವಾದ ಆಸಕ್ತಿಯನ್ನು ಪ್ರಕಟಿಸಿದ್ದಾರೆ. ಬಿ.ಜಿ.ಎಲ್. ಸ್ವಾಮಿಯವರ ಮನೆಯೇ ಒಂದು ಸಂಕ್ಷಿಪ್ತ ವಸ್ತುಸಂಗ್ರಹಾಲಯವಾಗಿತ್ತು. ನಾನಾ ಬಗೆಯ ಶಿಲೆ, ಶಿಲೀಂದ್ರ, ಸಸ್ಯಗೈರಿಕಾದಿ ಧಾತುಗಳಿಗೆ ಅಲ್ಲಿ ಜಾಗವಿತ್ತು. ನಾನಾ ಶಿಸ್ತುಗಳಿಗೆ ಸಂಬಂಧಿಸಿದ ಗ್ರಂಥಗಳೂ ಅಲ್ಲಿದ್ದುವು. ಸ್ವಯಂ ಚಿತ್ರಕಾರರಾಗಿದ್ದ ಸ್ವಾಮಿ ಮರದ ಶಿಲ್ಪಗಳ ಕೆತ್ತನೆಯನ್ನು ಮಾಡುವುದರಲ್ಲಿಯೂ ಆಸಕ್ತರಾಗಿದ್ದರು. ಈ ಕಾರಣಗಳಿಂದ ಅವರ ಬರವಣಿಗೆ ವೈವಿಧ್ಯಮಯ ವಾಗಿದೆ.

2

ಮುಂದೆ ಮದರಾಸಿನ ಪ್ರಸಿಡೆನ್ಸಿ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇರಿದ ಸ್ವಾಮಿಯವರು ಆ ಕಾಲೇಜಿನ ಪ್ರಿನ್ಸಿಪಾಲರಾಗಿ, ಅನಂತರ ಆಡಳಿತಕ್ಕೆ ಶರಣುಹೊಡೆದು ಪ್ರಿನ್ಸಿಪಾಲ್‌ಗಿರಿಯನ್ನು ತ್ಯಜಿಸಿ ಪ್ರಾಧ್ಯಾಪಕರಾಗಿ ಸಂಶೋಧನೆ ಮುಂದುವರಿಸಿದರು. ನಿವೃತ್ತಿ ಹೊಂದಿದ ನಂತರ ಕೆಲವು ವರ್ಷ ಬೆಂಗಳೂರಿನಲ್ಲಿದ್ದು ಅನಂತರ ಮೈಸೂರು ವಿಶ್ವವಿದ್ಯಾಲಯದಲ್ಲಿ ಗೌರವ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತ ಹೃದಯಾಘಾತದಿಂದ ತೀರಿಕೊಂಡರು.

ಬಿ.ಜಿ.ಎಲ್. ಸ್ವಾಮಿಯವರ ಬರವಣಿಗೆ ಕನ್ನಡ, ಇಂಗ್ಲೀಷ್, ತಮಿಳು ಈ ಮೂರು ಭಾಷೆಗಳಲ್ಲೂ ಹರಡಿಕೊಂಡಿದೆ. ವಿಜ್ಞಾನ ವಿಷಯಗಳನ್ನು ಕುರಿತು ತಮಿಳಿನಲ್ಲಿ ಸಾಕಷ್ಟು ಬರೆದಿದ್ದಾರೆ. ಶಿವಶರಣರ ಕೆಲವು ವಚನ ಗಳನ್ನು ತಮಿಳಿಗೆ ಅನುವಾದಿಸಿದ್ದಾರೆ. ಪುರಂದರದಾಸರ ಕೆಲವು ಕೀರ್ತನೆಗಳನ್ನು ತಮಿಳಿಗೆ ಅನುವಾದಿಸಿದ್ದಾರೆ. ಅಲ್ಲದೆ ಈ ಕೀರ್ತನೆಗಳನ್ನು ಪ್ರಸಿದ್ಧ ಸಂಗೀತ ವಿದ್ವಾಂಸರಾದ ಎಂ.ಡಿ.ರಾಮನಾಥನ್ ಅವರು ಹಲವಾರು ಕಛೇರಿಗಳಲ್ಲಿ ಹಾಡಿದ್ದಾರೆ.

ಕನ್ನಡದಲ್ಲಿ ಅವರ ಬರವಣಿಗೆ 'ಅಮೇರಿಕದಲ್ಲಿ ನಾನು' ಎಂಬ ಪ್ರವಾಸಕಥನ ಗ್ರಂಥದಿಂದ ಆರಂಭವಾಗುತ್ತದೆ. ಹಡಗಿನಲ್ಲಿ ಅಮೇರಿಕಾಗೆ ಪ್ರಯಾಣ ಮಾಡಿದ ಸ್ವಾಮಿ, ಹಡಗಿನ ಯಾನದ ಸ್ವಾರಸ್ಯಕರ ಪ್ರಸಂಗಗಳನ್ನು ಚಿತ್ರಸಹಿತವಾಗಿ ವಿವರಿಸಿದ್ದಾರೆ. ಅಮೇರಿಕನ್ ಕುಟುಂಬಗಳ, ಉತ್ಸವಗಳ, ಮತಪ್ರಚಾರಕರ ಸಜೀವ ವರ್ಣನೆ ಮಾಡುತ್ತಾರೆ. ಉಳಿದ ಪ್ರವಾಸಿಗಳಂತೆ ಬರಿಯ ಬೆರಗಿನ ಕಣ್ಣಿನಲ್ಲಿ ನೋಡಿ ಅದ್ಭುತಗಳ ಪಟ್ಟಿ ಮಾಡುವ ತಂಟೆಗೆ ಹೋಗದೆ ಅಮೇರಿಕನ್ನರೂ ನಮ್ಮಂತೆ ಮನುಷ್ಯರು ಎಂಬುದನ್ನು ಹಲವಾರು ಆತ್ಮೀಯ ಪ್ರಸಂಗಗಳ ವಿವರಣೆಯಿಂದ ಸ್ಪಷ್ಟಪಡಿಸುತ್ತಾರೆ. ಸ್ವಾಮಿಯವರ ಪಂಚಕಳಶಗೋಪುರ ಸೆಂಟ್ರಲ್ ಕಾಲೇಜಿನ ವಿದ್ಯಾಭ್ಯಾಸದ ಹಿನ್ನೆಲೆಯಲ್ಲಿ ಬೆಳ್ಳಾವೆ ವೆಂಕಟನಾರಾಣಪ್ಪ, ಟಿ.ಎಸ್. ವೆಂಕಣ್ಣಯ್ಯ, ಬಿ.ಎಂ.ಶ್ರೀ., ಎ.ಆರ್.ಕೃ. ಹಾಗೂ ವಿ.ಸೀ. ಅವರ ಪರಿಚಯ ಮಾಡಿಕೊಡುತ್ತದೆ. ಈ ಮಹನೀಯರ ಸಾಹಿತ್ಯಸಾಧನೆ, ಜೀವನಸಾಧನೆಗಳ ವಿವರಗಳನ್ನು ಕೈಬಿಟ್ಟು ಅವರ ಸಾಮಾನ್ಯ ಬದುಕಿನ ಕೆಲವು ವಿಶಿಷ್ಟ ಅಂಶಗಳನ್ನು ಪ್ರಸ್ತಾಪಿಸುವುದು ಸ್ವಾಮಿಯವರ ಸ್ವಭಾವ. ತಮ್ಮ ಲೇಖನವನ್ನು ತಮ್ಮದೇ ಆದ ರೇಖಾಚಿತ್ರದಿಂದ ಅಲಂಕರಿಸಿ ಶೋಭೆ ತಂದಿದ್ದಾರೆ. ಟಿ.ಎಸ್. ವೆಂಕಣ್ಣಯ್ಯನವರ ರೇಖಾಚಿತ್ರ ಹಾಗೂ ಅದರ ವಿವರವನ್ನು ಅವರ ಬಾಯಿಂದಲೇ ಕೇಳಬೇಕು. ಬಿ.ವೆಂಕೋಬರಾಯರ ಮನೆಯಲ್ಲಿ ರಾಳ್ಳಪಲ್ಲಿ ಅನಂತಕೃಷ್ಣಶರ್ಮರ ಹಾಡುಗಾರಿಕೆಯ ಸಂದರ್ಭದ ವರ್ಣನೆ ಇದು. "ಎಲ್ಲರೂ ದಿವ್ಯಸುಧೆಯನ್ನು ಈಂಟಿದರು. ಕೆಲವರು ನಡುನಡುವೆಯೇ 'ಭಲೆ', 'ಭೇಷ್' ಎಂದು ರಸಾಭಾಸಕ್ಕೆಡೆಗೊಟ್ಟು ತಮ್ಮ ಪ್ರತಿಭೆಯನ್ನು ವ್ಯಕ್ತ ಪಡಿಸುತ್ತಿದ್ದರು. ವೆಂಕಣ್ಣಯ್ಯನವರು ಅನುಭವಿಸಿದ ಮಾದರಿಯೇ ಬೇರೆ. ಪದ್ಮಾಸನ; ಮುಚ್ಚಿದ ಕಣ್ಣುಗಳು; ಎದುರಿನಲ್ಲಿ ಕೈಗೆಟುಕುವಂತೆ ನಶ್ಯದ ಡಬ್ಬಿ, ಕರವಸ್ತ್ರ; ಬಲಗೈ ಹಸ್ತದಲ್ಲಿ ಯೋಗಮುದ್ರೆ, ಚಿಟಿಕೆಯಲ್ಲಿ ಜ್ಞಾನ ಚೂರ್ಣ; ಎಡಗೈ ಬೆರಳುಗಳಿಂದ ಆಗಾಗ ಅಪರೂಪವಾಗಿ ಕೃತಿ ಲಯ ವಿನ್ಯಾಸದ ಅನುಕರಣ, ತುಟಿಯ ಮೇಲೆ ಆತ್ಮೀಯವಾದ, ರಸಭಾವ ಆನಂದಗರ್ಭಿತವಾದ ಸುಳಿನಗು, ಬಾಯಿಂದ ಒಂದು ಮಾತಿಲ್ಲ. ಶ್ರೋತೃಗಳಿಗೆ ಸಂಗೀತಸುಧೆಯ ಆನಂದ ಒಂದು ಕಡೆ. ಸಂಗೀತ ಸುಧೆಯನ್ನು ರಸಿಕತೆಯಿಂದ ಅನುಭವಿಸುತ್ತಿರುವವರನ್ನು ಕಾಣುವ ಆನಂದ ಒಂದು ಕಡೆ, ಹೀಗಿದ್ದಿತು."

ಬಿ.ಜಿ.ಎಲ್. ಸ್ವಾಮಿಯವರ 'ಫಲಶ್ರುತಿ', 'ಶಾಸನಗಳಲ್ಲಿ ಗಿಡಮರಗಳು', 'ಹಸಿರು ಹೊನ್ನು', 'ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾ' ಮೊದಲಾದ ಗ್ರಂಥಗಳಲ್ಲಿ ಶಬ್ದದ ಬೆನ್ನು ಹಿಡಿದ ವಿಚಾರದ ಸಂಚಾರವಿದೆ. ಸಂಶೋಧನೆ, ಶಬ್ದಜಿಜ್ಞಾಸೆ, ಇತಿಹಾಸ, ಭೂಗೋಳಗಳನ್ನೆಲ್ಲಾ ಬೆರಸಿದ ಸಮೃದ್ಧ ಸಾಮಗ್ರಿಯಿದೆ. ನೆಲಗಡಲೆ, ಈರುಳ್ಳಿಗಳಂಥ ಹಲವಾರು ವಸ್ತುಗಳು ನಮ್ಮ ದೇಶದ್ದಲ್ಲ, ಜನ ಆರಾಧಿಸುವ ತುಳಸಿಯೂ ಮೂಲತಃ ನಮ್ಮದಲ್ಲ ಎಂಬ ವಿಸ್ಮಯಕಾರೀ ಅಂಶಗಳನ್ನು ಪ್ರಸ್ತಾಪಿಸುವ ಸ್ವಾಮಿ ಆ ಶಬ್ದಗಳ ಮೂಲ, ಭೌಗೋಳಿಕ ಸ್ಥಾನವನ್ನೂ, ಅವು ನಮಗೆ ಬಂದ ಐತಿಹಾಸಿಕ ರಾಜಕೀಯ ಸಂದರ್ಭಗಳನ್ನೂ ಕೂಲಂಕಷವಾಗಿ ಚರ್ಚಿಸುತ್ತಾರೆ. ಗಿಡ, ಹಣ್ಣು, ತರಕಾರಿ, ಧಾನ್ಯ, ತಂಬಾಕು ಮೊದಲಾದ ಯಾವ ವಸ್ತುವೇ ಆಗಲಿ ಅವುಗಳ ಮೂಲ ಹೆಸರು, ಲ್ಯಾಟಿನ್ ಹೆಸರು, ಭಾರತೀಯ ಭಾಷೆಗಳಲ್ಲಿ ಆ ಹೆಸರುಗಳ ಪ್ರಭೇದ ಗಳು ಇವನ್ನೆಲ್ಲ ಚರ್ಚಿಸುತ್ತಾರೆ. ಈ ಕಾರಣಗಳಿಂದ ಅವರ ಬರಹಗಳಲ್ಲಿ ವಸ್ತುವಿಜ್ಞಾನ, ಭಾಷಾವಿಜ್ಞಾನ, ಐತಿಹಾಸಿಕ ಹಿನ್ನೆಲೆ, ರಾಜಕೀಯ ಸಂದರ್ಭ ಗಳು ಇವೆಲ್ಲ ಬೆರೆತುಕೊಂಡಿರುತ್ತವೆ. ತೆಂಗು, ಅಂಜೂರ, ಚಕ್ಕೋತ, ಲಾಂಟಾನಾ ಮೊದಲಾದವುಗಳ ಬಗೆಗೆ ಅವರು ಕೊಡುವ ವಿವರಣೆಗಳನ್ನು ನೋಡಿದರೆ ಈ ಅಂಶ ಸ್ಪಷ್ಟವಾಗುತ್ತದೆ.

ತಮಿಳು ತಲೆಗಳ ನಡುವೆ, ಕಾಲೇಜುರಂಗ, ಪ್ರಾಧ್ಯಾಪಕನ ಪೀಠದಲ್ಲಿ ಮೊದಲಾದ ಗ್ರಂಥಗಳು ಅಪ್ಪಟ ವ್ಯಂಗ್ಯ ಸಾಹಿತ್ಯಕ್ಕೆ ಸ್ವಾಮಿಯವರ ಉದಾರ ಕೊಡಿಗೆ ಎಂದು ಹೇಳಬಹುದು. ಇವುಗಳಲ್ಲಿ (ಮತ್ತು 'ಹಸಿರು ಹೊನ್ನು' ಗ್ರಂಥದಲ್ಲಿ ಸ್ವಲ್ಪಮಟ್ಟಿಗೆ) ಸ್ವಾಮಿಯವರು ನೇರವಾಗಿ ಮತ್ತು ಪ್ರಾಸಂಗಿಕ ವಾಗಿ ಇಂದಿನ ಶಿಕ್ಷಣಕ್ಷೇತ್ರದಲ್ಲಾಗಿರುವ ಮೌಲ್ಯಚ್ಛೇದಗಳ ವ್ಯಂಗ್ಯ ವಿವರಣೆ ನೀಡಿದ್ದಾರೆ. ಶಿಕ್ಷಣಕ್ಕೆ ತಮ್ಮನ್ನು ಸಮರ್ಪಿಸಿಕೊಳ್ಳದ ಅಧ್ಯಾಪಕ ವರ್ಗ, ಮೌಲ್ಯಮಾಪನ ಕಾರ್ಯದಲ್ಲಿ ಬೇಜವಾಬ್ದಾರಿಯಿಂದ ನಡೆದುಕೊಳ್ಳುವ ಶಿಕ್ಷಕ ವರ್ಗ, 'ಸಂಶೋಧನೆ' ಗಳನ್ನು ಮಾಡಿ ಇತಿಮಿತಿಯಿಲ್ಲದಂತೆ ಪುಸ್ತಕ ಗಳನ್ನು ಪ್ರಕಟಿಸುವ ಸಂಶೋಧಕ ವರ್ಗ, ರಾಜಕಾರಣಿಗಳ ಪ್ರಭಾವದಿಂದ ಉನ್ನತ ಹುದ್ದೆಗಳನ್ನು ಗಿಟ್ಟಿಸಿಕೊಳ್ಳುವ ಯಾಚಕ ಶಿಕ್ಷಕ ವರ್ಗ, ವಿದೇಶಯಾತ್ರೆ ಯೊಂದೇ ತಮ್ಮ ಏಕೈಕ ಜೀವಿತೋದ್ದೇಶವೆಂದು ಭಾವಿಸುವ ಪ್ರಭಾವೀ ಪ್ರಾಧ್ಯಾಪಕ ವರ್ಗ, ಪ್ರಾಮಾಣಿಕರಾದ ಕೆಲವರು ಶಿಕ್ಷಕರು ಸಾಧಿಸುವ ಪ್ರಗತಿಯನ್ನು ತುಂಬ ಅಸೂಯೆಯಿಂದ ಕಂಡು ಅಪಪ್ರಚಾರದಲ್ಲಿ ತೊಡಗುವ ಮತ್ಸರಗ್ರಸ್ತ ಬೋಧಕ ವರ್ಗ, ಹೃದಯ ಹೀನ ನಡವಳಿಕೆಯ ಕಾಲೇಜು ಶಿಕ್ಷಣ ಇಲಾಖೆಯ ಅಧಿಕಾರಿ ವರ್ಗ- ಇವರೆಲ್ಲ ಸೇರಿ ಇಂದಿನ ಶಿಕ್ಷಣ ಭವನದ ಅಡಿಗಲ್ಲನ್ನೇ ಜಗ್ಗುವುದರಲ್ಲಿ ತೊಡಗಿರುವುದನ್ನು ಸ್ವಾಮಿಯವರು ವಿಪುಲ ಪ್ರಸಂಗೋದ್ಧರಣಗಳಿಂದ ಸ್ಪಷ್ಟಪಡಿಸುತ್ತ ಹೋಗುತ್ತಾರೆ. ನುರಿತ ಶಿಕ್ಷಕರ ಪ್ರಾಮಾಣಿಕವಾದ ವರದಿಗಳಿಗೆ ಬೆಲೆಕೊಡದ ಅಧಿಕಾರಶಾಹಿಯ ದುರ್ವರ್ತನೆಗಳನ್ನು ಉಗ್ರ ವ್ಯಂಗ್ಯಶೈಲಿಯಲ್ಲಿ ನಿರೂಪಿಸಿದ್ದಾರೆ. ಪೂರ್ವ ಸಿದ್ಧತೆಗಳಿಲ್ಲದೆ ಕಾಲೇಜುಗಳನ್ನು ತೆರೆಯುವ ಆಡಳಿತ ಮಂಡಲಿಗಳು ಎಷ್ಟೆಲ್ಲ ದೊಂಬರಾಟಗಳನ್ನಾಡುತ್ತವೆಂಬುದನ್ನು ಪ್ರತ್ಯಕ್ಷವಾಗಿ ಕಂಡು ವೀಕ್ಷಕ ವಿವರಣೆ ನೀಡಿದ್ದಾರೆ. ಇಂಥ ಭ್ರಷ್ಟ ಆಡಳಿತ ಮಂಡಲಿ, ಶಿಕ್ಷಕ ವರ್ಗ, ಅಧಿಕಾರ ವರ್ಗಗಳ ಕ್ರೂರ ದವಡೆಗೆ ಸಿಕ್ಕಿ ನರಳುತ್ತಿರುವ ವಿದ್ಯಾರ್ಥಿ ವೃಂದದ ಬಗೆಗೆ ಸ್ವಾಮಿಯವರು ತೋರುವ ಕನಿಕರವೂ ಅರ್ಥಪೂರ್ಣವಾಗಿದೆ. ವಿದ್ಯಾರ್ಥಿ-ವಿದ್ಯಾರ್ಥಿನಿಯರ ದೌರ್ಬಲ್ಯದ ಬಗೆಗೆ ಸ್ವಾಮಿಯವರು ಗಮನ ಹರಿಸಿಲ್ಲ ವೆಂದಲ್ಲ. ಆದರೆ ಶಿಕ್ಷಕರ ಪ್ರಾಮಾಣಿಕ ಪ್ರಯತ್ನಗಳಿಗೆ ವಿದ್ಯಾರ್ಥಿವೃಂದ

ಹೇಗೆ ಸೃಜನಶೀಲವಾಗಿ ಸ್ಪಂದಿಸಬಲ್ಲುದೆಂಬುದನ್ನೂ ಅವರ ಪ್ರವಾಸ, ಪ್ರದರ್ಶನ, ವಿಚಾರಕೂಟಗಳ ಉದಾಹರಣೆಗಳಿಂದ ಸ್ಪಷ್ಟಪಡಿಸಿದ್ದಾರೆ. ಶಿಕ್ಷಣ ಜಗತ್ತನ್ನೇ ಅಖಂಡವಾಗಿ ಚರ್ಚೆಗೆ ಒಳಪಡಿಸಿದ್ದಾರೆ. ಮೇಲುನೋಟಕ್ಕೆ ಕಹಿಯೆಂದೋ, ಸಿನಿಕನೊಬ್ಬನ ಅಪಸ್ವರವೆಂದೋ ಕಾಣಬಹುದಾದ ಉದ್ಗಾರಗಳ ಹಿಂದೆ ಈ ಶಿಕ್ಷಣ ಪರಿಸರದ ಮಾಲಿನ್ಯವನ್ನು ತಡೆಗಟ್ಟಬೇಕೆಂಬ ಕಳಕಳಿ ಧ್ವನಿತವಾಗುತ್ತದೆ. ಈ ಚಿಕಿತ್ಸಕ ದೃಷ್ಟಿಯೇ ಸ್ವಾಮಿಯವರ ಬರವಣಿಗೆಗಳ ಮೂಲ ಆಶಯವಾಗಿದೆ. ಅಲ್ಲದೆ ಈ ಬರವಣಿಗೆಯ ಹಾಸ್ಯಮುಖದ ಹಿಂದೆ ಅಪಾರ ನೋವಿರುವುದನ್ನು ನಾವು ಕಂಡುಕೊಳ್ಳಬೇಕು. ಸ್ವಾಮಿಯವರಂಥ ಶಿಕ್ಷಣತಜ್ಞನಿಗೆ ಶಿಕ್ಷಣ ಲೋಕವೇ ಎಂಥ ಯಮಯಾತನೆಯದಾಗಿತ್ತೆಂಬುದನ್ನೂ, ಆ ಮನಸ್ಸಿನ ಒಳನೋವು ಯಾವ ಬಗೆಯದೆಂಬುದನ್ನೂ ನಾವು ಊಹಿಸಿಕೊಳ್ಳಬೇಕು. ಹಾಸ್ಯೋಕ್ತಿಗಳ ಮುಖವಾಡದ ಹಿಂದೆ ನಿರಂತರ ತುಳಿತಗಳಿಗೆ ಒಳಗಾಗಿ ಕುದಿಯುವ ಜೀವವೊಂದನ್ನೂ ನಾವು ಗುರುತಿಸಿಕೊಳ್ಳಬೇಕು.

ಸ್ವಾಮಿಯವರ ಬಹುತೇಕ ಬರಹಗಳ ಭಾಷೆ ವ್ಯಂಗ್ಯದ ನೆಲಗಟ್ಟಿನಿಂದ ಕೂಡಿದೆ. ಹಾಸ್ಯಗಾರನಿಗೆ ಸಹಜವಾದ ವ್ಯಂಗ್ಯ ಧೋರಣೆಯಿಂದಲೇ ಅವರು ವಿಷಯಗಳ ಸುತ್ತ ಗಸ್ತು ತಿರುಗುತ್ತಾರೆ. ಆಧುನಿಕ ಕರಟಕ ದಮನಕರನ್ನು ಇವರು ಸೃಷ್ಟಿಸಿಕೊಂಡದ್ದೂ ಈ ಹಾಸ್ಯಪ್ರಜ್ಞೆಯಿಂದಾಗಿಯೇ. ಒಂದು ಪ್ರಸಂಗವನ್ನು ಗಮನಿಸಬಹುದು: ಹಿಂದಿ ಭಾಷೆಯ ವಿರುದ್ಧ ತಮಿಳುನಾಡಿನಲ್ಲಿ ನಡೆದ ವ್ಯಾಪಕ ಘರ್ಷಣೆಯ ಬಿಸಿ ಸ್ವಾಮಿಯವರಿದ್ದ ಪ್ರೆಸಿಡೆನ್ಸಿ ಕಾಲೇಜಿಗೂ ತಟ್ಟಿತು. ಹುಡುಗರು ಮುಷ್ಕರ ಹೂಡಿದ ಸಂದರ್ಭದಲ್ಲಿ ಹುಡುಗರ ಕಾಟದಿಂದ ಸಿಟ್ಟಿಗೆದ್ದ ಒಬ್ಬ ತಮಿಳು ಪ್ರಾಧ್ಯಾಪಕ ಅವರನ್ನು 'ಕೊಳೆತ ತಲೆಯ ಕತ್ತೆಗಳಾ' ಎಂದು ಬೈದದ್ದು ವಿಪರೀತಕ್ಕಿಟ್ಟುಕೊಂಡಿತು. ಹುಡುಗರು ಅಟ್ಟಿಸಿಕೊಂಡು ಬಂದಾಗ ಆ ಪ್ರಾಧ್ಯಾಪಕರನ್ನು ಸ್ವಾಮಿಯವರು ತಮ್ಮ ಡಿಪಾರ್ಟ್‌ಮೆಂಟಿನ ಒಂದು ದೊಡ್ಡ ಬೀರುವಿನಲ್ಲಿ ಬಚ್ಚಿಟ್ಟರಂತೆ. ಆ ನಿಮಿಷಕ್ಕೆ ಪ್ರಾಧ್ಯಾಪಕನು ಬೀಸುವ ದೊಣ್ಣೆಯಿಂದ ತಪ್ಪಿಸಿಕೊಂಡರೂ ಅನಂತರ ಸ್ವಾಮಿಯವರ ವಿರುದ್ಧ ಪ್ರಿನ್ಸಿಪಾಲರಿಗೆ ದೂರು ಕೊಡಬೇಕೆ "(ಸ್ವಾಮಿಯವರು) ಗುಂಪಿನ ಪುಂಡುಗಾರಿಕೆಯಿಂದ ನನ್ನನ್ನೇನ್ನೋ ಕಾಪಿಾಡಿದರು. ಆದರೆ ನನ್ನನ್ನು ಮರದ ಬೀರುವಿನಲ್ಲಿ ಬಚ್ಚಿಟ್ಟದ್ದರಿಂದ ನನ್ನ ಸ್ಥಾನಮಾನ ಪ್ರತಿಷ್ಠೆಗೆ ಧಕ್ಕೆ ತಗಲಿದೆ". ಇದು ಅವನ ದೂರಿನ ಒಕ್ಕಣೆ. ಇದರ ಬಗೆಗೆ ಪ್ರಿನ್ಸಿಪಾಲರಿಂದ ಸಮಜಾಯಿಸಿ ನೀಡುವಂತೆ ಸ್ವಾಮಿಯವರಿಗೆ ಮೆಮೋ. ರೇಗಿದ ಸ್ವಾಮಿ ಪ್ರಿನ್ಸಿಪಾಲರಿಗೆ ಬರೆದ ವಿವರಣೆ ಹೀಗಿದೆ:

"ಆಗ ಇದ್ದ ತುರ್ತುಪರಿಸ್ಥಿತಿಯಲ್ಲಿ ಇನ್ನೇನನ್ನೂ ಮಾಡುವ ಹಾಗಿರಲಿಲ್ಲ. ಕಬ್ಬಿಣದ ಬೀರುಗಳೇನೋ ಇವೆ. ಆದರೆ ಅವೊಂದೂ ಖಾಲಿಯಿಲ್ಲ. ಒಂದು ವೇಳೆ ಖಾಲಿ ಮಾಡಿ ಅದರಲ್ಲಿಟ್ಟಿದ್ದರೆ ಪ್ರಾಧ್ಯಾಪಕರಿಗೆ ಉಸಿರು ಕಟ್ಟುವ ಸಂದರ್ಭ ಒದಗುತ್ತಿತ್ತು. ಮುಂದೆ ಇಂಥ ಸ್ಥಿತಿ ಏರ್ಪಡುವುದು ಬೇಡ ಎಂದೇ ನನ್ನ ಹಾರೈಕೆ. ಆದರೆ ಇಂಥ ಸಂದರ್ಭ ಒದಗಿದಾಗ ತಮಿಳು ಪ್ರಾಧ್ಯಾಪಕರನ್ನು ಸಂರಕ್ಷಿಸುವುದಕ್ಕಾಗಿ ವಜ್ರ ವೈಢೂರ್ಯ ಖಚಿತವಾದ ಚಿನ್ನದ ಬೀರುವೊಂದನ್ನು ನನ್ನ ಡಿಪಾರ್ಟ್‌ಮೆಂಟಿಗೆ ಸರಬರಾಜು ಮಾಡಬೇಕೆಂದು ಕೋರುತ್ತೇನೆ. ಇಂಥ ಪ್ರಾಧ್ಯಾಪಕ ರತ್ನವನ್ನು ಅದರಲ್ಲಿಟ್ಟರೆ ಬೀರುವಿನ ಸ್ಥಾನಮಾನ, ಗೌರವ ಪ್ರತಿಷ್ಠೆಗಳು ಮತ್ತೂ ಹೆಚ್ಚುತ್ತವೆ."

ಸ್ವತಃ ರೇಖಾಚಿತ್ರಕಾರರೂ ವ್ಯಂಗ್ಯ ಚಿತ್ರಕಾರರೂ ಆದ ಸ್ವಾಮಿ ಒರಟಾದ, ಸಭ್ಯರಿಗೆ ಸ್ವಲ್ಪ 'ಅಸಹನೀಯ' ಎನ್ನಿಸಬಹುದಾದ ವಕ್ರ ರೇಖೆಗಳಲ್ಲೇ ಭಾಷೆಯನ್ನೂ ನಡೆಸಿಕೊಂಡು ಹೋಗುತ್ತಾರೆ. ಆಕಸ್ಮಿಕವಾಗಿ ತಾವು ಎಂ.ಜಿ. ರಾಮಚಂದ್ರನ್ ಅವರಿಗೆ ಕೈ ಕುಲುಕಿದ ಸಂದರ್ಭದ ಹಗರಣವನ್ನಾಗಲಿ, ಕಾಮರಾಜರ ಭಾವಚಿತ್ರವನ್ನು ಕಂಡ ಕೂಡಲೇ ಎಗರಿ ಅದನ್ನು ಹರಿಯಲು ಧಾವಿಸುತ್ತಿದ್ದ ತಮ್ಮ ನಾಯಿಯಿಂದಾಗಿ ಎದ್ದ ಹಗರಣವನ್ನಾಗಲಿ, ಬೆಳ್ಳಾವೆ ವೆಂಕಟನಾರಣಪ್ಪನವರ ಸೀಮೆ ವೈದ್ಯರ ಸಲಹೆಯಂತೆ ಧೂಮಪಾನದ ಯೋಗದಲ್ಲಿದ್ದ ತಮ್ಮ ತಾತನವರ ಕಫದ ಪ್ರಕರಣವನ್ನಾಗಲಿ ಸ್ವಾಮಿಯವರು ತಮಗೆ ವಿಶಿಷ್ಟವಾದ ವ್ಯಂಗ್ಯ ಶಬ್ದರೇಖೆಗಳಿಂದ ನಡೆಸಿರುವುದನ್ನು ನೋಡಬಹುದು. ತಮ್ಮ ಮುಖವನ್ನು ಸೃಷ್ಟಿ ಮಾಡಿದ ಬ್ರಹ್ಮನ ಕುಂಬಾರಿಕೆಯ ಬಗೆಗೆ ಲೇವಡಿ ಮಾಡಬಲ್ಲ ಸ್ವಾಮಿ ಬೇರೆ ಬೇರೆ ಸಂದರ್ಭಗಳ ವಿವರಣ ಪ್ರಸಂಗಗಳಲ್ಲಿ ತಮ್ಮ ಮನೋಧರ್ಮದ ಒಳಗುಗಳನ್ನು ಪರಿಚಯಿಸುತ್ತಾರೆ. ವಿ.ಸೀ.ಯವರ ಕಾವ್ಯವಾಚನ ವ್ಯಾಖ್ಯಾನಗಳ ಲಯ ಲಾಸ್ಯಗಳನ್ನು ಕೊಂಡಾಡುವ ಸ್ವಾಮಿ "ಪದ್ಯಕ್ಕೂ ನನಗೂ ಸಹೃದಯತೆಯ ನಂಟು ಅಷ್ಟಾಗಿ ಬೆಳೆದು ಬಂದಿಲ್ಲ. ಮೊದಮೊದಲಂತೂ ಪದ್ಯ ವಧ್ಯವಾಗಿಯೇ ಇತ್ತು. ನನ್ನ ಈ 'ಅಸಂಸ್ಕೃತ' ಅಭಿಪ್ರಾಯವನ್ನು ಕೆಲವು ಕಡೆ ಬಾಯಿ ಬಿಟ್ಟು ಹೇಳಿ ಕವಿಗಳ ಕೈಲಿ ಛೀಮಾರಿ ಹಾಕಿಸಿ ಕೊಂಡಿದ್ದೇನೆ" ಎಂದು ತಮ್ಮ ಒಲವು ಎತ್ತ ಕಡೆಗೆಂಬುದನ್ನು ಹೇಳಿಬಿಡು ತ್ತಾರೆ. ವಿ.ಸೀ.ಅವರ ಅಭಿರುಚಿ ಶುದ್ಧಿಯನ್ನು ಅವರು ತೆಳು ಟೀ ಸೇವನೆಯ ಪ್ರಸಂಗದಲ್ಲಿ ವಿವರಿಸುತ್ತಾ ವಿ.ಸೀ. ಅವರ ಚಹಾ ಸೇವನೆ ನಡೆಯುತ್ತಿದ್ದ ಶೈಲಿಯಲ್ಲಿ ಸ್ವಾಮಿ "ಅದಾವುದೋ ಒಂದು ಬಗೆಯ ಅಪರಿಚಿತವಾದ, ಪ್ರತ್ಯೇಕವಾದ, ಅವರ್ಣನೀಯವಾದ ಅಂಶವೊಂದು ಮಿಶ್ರಿತವಾಗಿರುತ್ತಿತ್ತು" ಎಂದು ಮೆಚ್ಚುತ್ತಾರೆ. ಪಾತ್ರೆ ಪರಿಕರಗಳನ್ನು ವಿ.ಸೀ.ಜೋಡಿಸಿ ಇಟ್ಟುಕೊಳ್ಳುವ ಕ್ರಮವನ್ನೂ ಮೆಚ್ಚುತ್ತಾರೆ. ಓದುಗರಿಗೆ ಈ ವಿಚಾರದ ವಿರುದ್ಧ ದಿಕ್ಕಿನ ನಡವಳಿಕೆ ಗೊತ್ತಾಗಲೆಂದು ತಟಕ್ಕನೆ ತಮ್ಮ ಟೀ ಸೇವನಾ ವೈಖರಿಯನ್ನು ಅದರೊಂದಿಗೆ ಹೋಲಿಸಿ ನೋಡುತ್ತಾರೆ. "ನನ್ನದು ಒರಟು ದೇಹ, ಅದಕ್ಕಿಂತಲೂ ಒರಟು ರುಚಿ. ತಿಳಿಯಾದ ನವುರಾದ ಮೃದುವಾದ ಸೂಕ್ಷ್ಮವಾದ ಹಗುರವಾದ ರುಚಿಗಳಿಗೆ ನನ್ನ ದೇಹ ಮನಸ್ಸುಗಳು ಒಗ್ಗವು-ಚೆನ್ನಾಗಿ ಊರಿದ ಕಪ್ಪುಬಣ್ಣದ ಕಷಾಯ ಒಂದು ಬಟ್ಟಲು, ಮೂರು ನಾಲ್ಕು ಚಮಚ ಸಕ್ಕರೆ, ಹಾಲು ಬೆರಸದ ಟೀಯನ್ನು ಸಲಕ್ಕೆ ಆರು ಬಟ್ಟಲು ಗಟಗಟನೆ ಕುಡಿದು ಕುಡಿದು ಜಡ್ಡು ಬಿದ್ದಿರುವ ನನಗೆ ವಿ.ಸೀ.ಯವರ ತಿಳಿ ಟೀ ಹೇಗೆ ತಾನೆ ಒಗ್ಗೀತು! ಆದರೂ ವಿ.ಸೀ. ಅವರು ಟೀ ಬೆರೆಸಿಕೊಳ್ಳುತ್ತಿದ್ದ ವಿಧಾನ, ಕುಡಿಯುತ್ತಿದ್ದ ವಿಧಾನ, ಕುಡಿಯುತ್ತಿದ್ದ ಸಾವಧಾನ, ಪಡೆಯುತ್ತಿದ್ದ ಸಮಾಧಾನ, ಇವುಗಳನ್ನು ಕಂಡ ನನಗೆ, 'ಅಯ್ಯೋ ದೇವರೆ ! ಮೃದು ರುಚಿಗಳನ್ನು ಅನುಭವಿಸಿ ಸವಿಯುವಂಥ ಯೋಗವನ್ನು ನನಗೇಕೆ ಕೊಟ್ಟಿಲ್ಲ? ಏನು ಪಕ್ಷಪಾತ' ಎಂದು ಮೊರೆಯಿಡೋಣ ಎನ್ನಿಸುತ್ತದೆ."

ಇದು ಸ್ವಾಮಿಯವರ ಬರಹದ ಕ್ರಮ. ವಿ.ಸೀ.ಯವರ ವಿಧಾನವನ್ನು ಮೆಚ್ಚುಗೆಯ ದೃಷ್ಟಿಯಿಂದಲೇ ನೋಡುವ ಸ್ವಾಮಿ ಅದರ ಜತೆಗೇ ತಮ್ಮ 'ಪಾನ ವಿಧಾನ' ಕಡಿಮೆ ದರ್ಜೆಯದೇನೂ ಅಲ್ಲವೆಂಬುದನ್ನೂ ತಾವು ಅನುಕರಣಪ್ರಿಯರಲ್ಲವೆಂಬುದನ್ನೂ ಗುಪ್ತವಾಗಿ ಧ್ವನಿಸಿಬಿಡುತ್ತಾರೆ. ಉತ್ಪ್ರೇಕ್ಷೆ ಸ್ವಾಮಿಯವರ ಬರಹದ ಮೂಲ ಬಂಡವಾಳ. ಶಬ್ದಗಳ ಆನಂದ ನೃತ್ಯ ಅವರಿಗೆ ಇಷ್ಟ. ನಾಟಕದ ಸಂವಾದಗಳ ರೂಪದ ಕವಚ ಹೊತ್ತ ಭಾಷೆ

ಅವರದು. ನಿಜವಾಗಿ ಸ್ವಾಮಿ ಶಹಭಾಸ್‌ಗಿರಿ ಕೊಡುತ್ತಿದ್ದಾರೋ ಅಥವಾ ಅವರದು ವಾಮಹಸ್ತದ ಶುಭಾಶಯವೋ ಎಂಬುದು ತಟಕ್ಕನೆ ಗೊತ್ತಾಗದ ರೀತಿಯಲ್ಲಿ ಅವರು ವಿಷಯಗಳನ್ನು ನಿರ್ವಹಿಸುತ್ತಾರೆ. ಇದರಿಂದಾಗೆ ಎಷ್ಟೋಸಲ ಓದುಗರಿಗೆ ಲೇಖಕರ ಅಂತರಂಗದ ನೋವನ್ನು ಅರ್ಥಮಾಡಿಕೊಳ್ಳಲಾಗದ ಸ್ಥಿತಿ ಬಂದಿರುವುದೂ ಉಂಟು. ಸೂಕ್ಷ್ಮಜ್ಞರು ಮಾತ್ರ ಅವರ 'ದ್ವಂದ್ವ'ಗಳನ್ನು ಭೇದಿಸಬಲ್ಲರು.

❑

## ಟಿ. ಸುನಂದಮ್ಮ

ಭುವನೇಶ್ವರಿ ಹೆಗಡೆ

ಸುಮಾರು 1927ರ ಕಾಲ. ಮೈಸೂರು ಬೆಂಗಳೂರು ಬಿಟ್ಟರೆ ಕರ್ನಾಟಕದ ಬೇರೆಡೆ ವಿದ್ಯುತ್ ಸೌಲಭ್ಯ ಕಾಣದ ಕಾಲ. ಅಜ್ಞಾನ, ಮೂಢ ನಂಬಿಕೆಗಳು ಸಾಕಷ್ಟು ಪ್ರಭಲವಾಗಿದ್ದವು. ಹುಡುಗಿಯರ ವಿದ್ಯಾಭ್ಯಾಸವೆಂದರೆ ಕನಸಿನ ಮಾತು, ಸಾಹಸದ ಸಂಗತಿ. ಆಗ ತರೀಕೆರೆಯಲ್ಲಿ ಬಾಲಕಿಯಯರಿಗೆ ಶಾಲೆಯೇ ಇಲ್ಲ. ಇರುವುದೊಂದು ಹುಡುಗರ ಶಾಲೆ. ಆ ಶಾಲೆಗೆ ಡೆಪ್ಯೂಟಿ ಕಮೀಷನರ ಮಗಳೋರ್ವಳನ್ನು ತಂದು ಸೇರಿಸಲಾಯ್ತು. ಆಕೆ ತರಗತಿಯಲ್ಲಿ ಮೊದಲಿಗಳು, ಉತ್ತಮ ಪ್ರಬಂಧಗಳನ್ನು ಬರೆಯುವ ಮೂಲಕ ಉಪಾಧ್ಯಾಯರ ಪ್ರಶಂಸೆ, ಸಹಪಾಠಿ ಹುಡುಗರ ಈರ್ಷ್ಯೆಗೂ ಪಾತ್ರಳಾಗುತ್ತಾಳೆ. ಈ 'ಹುಡುಗಿ' ಶಾಲೆಯಲ್ಲಿದ್ದರೆ ತಮ್ಮ 'ಹುಡುಗರಿಗೆ 'ಅವಮಾನ ತಪ್ಪೆಂದು ಅನೇಕ ಹುಡುಗರ ತಂದೆ ತಾಯಿಯರು ಆ ಹುಡುಗಿಯನ್ನು ಶಾಲೆಯಿಂದ ಹೊರ ಕಳಿಸುವಂತೆ ಒತ್ತಡ ತರುತ್ತಾರೆ. ಮುಖ್ಯೋಪಾಧ್ಯಾಯರು ಅಸಹಾಯಕರಾಗಿ ಆ ಹುಡುಗಿಯನ್ನು ಮನೆಗೆ ಕಳಿಸುತ್ತಾರೆ.

ಅಂದು ಹೀಗೆ ಮನೆಗೆ ಕಳಿಸಲ್ಪಟ್ಟ ಹುಡುಗಿಯೇ ಮುಂದೊಂದು ದಿನ ಕನ್ನಡದ ಖ್ಯಾತ ಹಾಸ್ಯಸಾಹಿತಿಯಾಗಿ ಮನೆಮನೆಗಳಲ್ಲೂ ಮನ್ನಣೆ ಗಳಿಸುತ್ತಾಳೆ ಎಂದು ಆ ಮುಖ್ಯೋಪಾಧ್ಯಾರಾಗಲೀ, ಆ ಪಾಲಕರಿಗಾಗಲೀ ಸ್ವತಃ ಆ ಹುಡುಗಿಗೇ ಆಗಲಿ ತಿಳಿದಿರಲಿಲ್ಲ. ಟಿ.ಸುನಂದಮ್ಮನವರ ಜೀವನದಲ್ಲಿ ರೋಚಕತೆ ಹೀಗೆ ಶಾಲಾ ಜೀವನದಿಂದಲೇ ಒದಗಿ ಬರತೊಡಗಿತು.

8-8-1917ರಂದು ರಾಮಯ್ಯ, ನಾಗಮ್ಮ ದಂಪತಿಗಳ ಮೊದಲ ಮಗಳಾಗಿ ಮೈಸೂರಿನಲ್ಲಿ ಜನಿಸಿದ ಸುನಂದಮ್ಮ ಲೌಕಿಕವಾಗಿ ಕೆಲವು 'ಭಾಗ್ಯ'ಗಳನ್ನು ಪಡದೇ ಹುಟ್ಟಿದವರು. ಮೈಸೂರು ಮಹಾರಾಜರ ಸರ್ಕಾರದಲ್ಲಿ ಡೆಪ್ಯುಟಿ ಕಮೀಷನರ್ ಹುದ್ದೆಯಲ್ಲಿರುವ ತಂದೆ ರಾಮಯ್ಯ, ಊರೂರಿಗೆ ವರ್ಗಾವಣೆಗೊಳ್ಳುತ್ತ ಎಳೆಯ ಸುನಂದಮ್ಮನವರಿಗೆ 'ಲೋಕ ಸುತ್ತಿದ' ಅನುಭವ ಒದಗಿಸಿದರು. ಇನ್ನು 'ಕೋಶ ಓದಿಸಿದವರು' ಆ ಕಾಲಕ್ಕೆ ಅಪ್ರತಿಮ ಅನುಭವ ವಿದ್ಯಾಕಾಂಕ್ಷಿ ತಾಯಿ ನಾಗಮ್ಮ. ಹುಡುಗರ ಶಾಲೆಯಿಂದ ಮಗಳನ್ನು ಮನೆಗೆ ಕಳುಹಿಸಿದಾಗ ಸಾಮಾನ್ಯ ಹೆಂಗಸಾಗಿದ್ದರೆ ಹತಾಶರಾಗುತ್ತಿದ್ದರು. ಆದರೆ ನಾಗಮ್ಮ ಛಾತಿಯ ಮಹಿಳೆ. ಶಾಲೆ ಮಗಳನ್ನು ಮನೆಗೆ ಕಳಿಸಿದರೆ ಮಗಳಿಗೆಂದು ಶಾಲೆಯನ್ನೇ ಮನೆಗೆ ತರಿಸಿ (ಪಾಠ ಹೇಳಿಸಿ) ಲೋಯರ್ ಸೆಕೆಂಡರಿ ಪಾಸು ಮಾಡಿಸಿ ಮಗಳ ಅಕ್ಷರ ಲೋಕದ ಪ್ರವೇಶ ಸುಗಮವಾಗುವಂತೆ ಮಾಡಿದವರು. ತಾಯಿಯ ಒತ್ತಾಸೆಯಿಂದ ಮುಂದೆ ಇಂಟರ್‌ಮೀಡಿಯಟ್‌ವರೆಗೂ ಪ್ರಥಮ ಶ್ರೇಣಿಯಲ್ಲಿ ಪಾಸಾಗುತ್ತ ವಾಣಿ ವಿಲಾಸ್ ಕಾಲೇಜಿನಲ್ಲಿ ಕಾಲೇಜಿಗೆ ಮೊದಲಿಗರಾಗಿ ಪಾಸಾದರು.

ತನ್ನ ಬದುಕಿನಲ್ಲಿ ಬಹಳಷ್ಟು ಪ್ರಭಾವ ಬೀರಿದ ಹಿರಿಯರೆಂದರೆ ತನ್ನ ತಾಯಿಯ ತಂದೆ ತಾತ, ಹಾಗೂ ತಂದೆಯ ತಾಯಿ ಅಜ್ಜಿ, ಎನ್ನುವ ಸುನಂದಮ್ಮನವರಿಗೆ ತಂದೆ ತಾಯಿಯುರ ಎರಡೂ ಕಡೆಯಿಂದ ಪ್ರಭಾವ ಸಾಕಷ್ಟಾಯ್ತು. ತಾತ ಡಿ.ವೆಂಕಟರಾಮಯ್ಯನವರು ಆಗಿನ ಸರ್ಕಲ್ ಇನ್ಸ್‌ಪೆಕ್ಟರ್ ಆಫ್ ಎಜ್ಯುಕೇಷನ್ ಆಗಿದ್ದವರು. ಸಂಸ್ಕೃತ ಮತ್ತು ಇಂಗ್ಲೀಷ್ ಎರಡೂ ಭಾಷೆಗಳಲ್ಲಿ ವಿದ್ವತ್ ಪಡೆದಿದ್ದವರು. ರಾಜಸೇವಾಸಕ್ತ ಬಿರುದು-ಪಡೆದ, ಕಠೋಪನಿಷತ್, ಪಂಚಪಾದುಕಾ ಗ್ರಂಥಗಳನ್ನು ಇಂಗ್ಲೀಷಿಗೆ ಭಾಷಾಂತರಿಸಿದ್ದ ಈ ತಾತನಿಂದ ಸಾಹಿತ್ಯ ಪ್ರಿಯತೆಯ ಬಳವಳಿ ಪಡೆದುಕೊಂಡ ಸುನಂದಮ್ಮ ಒಂಭತ್ತನೆಯ ವಯಸ್ಸಿನಲ್ಲಿಯೇ 'ಹೂವು' ಎಂಬೊಂದು ಕವನ ಬರೆದರು.

> ಹೂವೇ ಹೂವೇ ನೀನೆಲ್ಲಿರುವೆ?
> ನಾರಿಯ ತುರುಬೊಳೂ ಇರುವೆ
> ಮಾರಪಿತನ ಕೊರಳೊಳೂ ಇರುವೆ
> ಯಾರು ನೀನೆಂಬುದನು ನಾನರಿತಿರುವೆ

ಬಾಲಸಹಜ ಮುಗ್ಧತೆಯಿಂದ ಮೂಡಿಬಂದ ಈ ಕವನ ಸುನಂದಮ್ಮನವರನ್ನು ಕನ್ನಡ ಸಾಹಿತ್ಯದಲ್ಲಿ ಬರಹಗಾರ್ತಿಯಾಗಿ ದಾಖಲಿಸಿದ ಕೀರ್ತಿಗೆ ಪಾತ್ರವಾಗಿದೆ. ಅಶ್ವತ್ಥನಾರಾಯಣರು ಸಂಪಾದಿಸಿದ 'ಮಕ್ಕಳ ಪುಸ್ತಕ' ದಲ್ಲಿ ಇದು ಅಚ್ಚಾದಾಗ ಈ ಬಾಲೆಗೆ ಹಿರಿ ಹಿರಿ ಹಿಗ್ಗು.

ಸುನಂದಮ್ಮನವರ ಮನೆಯಲ್ಲಿ ಸಾಹಿತ್ಯ ಎಂದರೆ ಆಂಗ್ಲ ಸಾಹಿತ್ಯ ಎಂಬಷ್ಟರ ಮಟ್ಟಿಗಿನ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವಿತ್ತು. ಲೋಯರ್

ಸೆಕೆಂಡರಿ ವರೆಗೆ ಮಾತ್ರ ಕನ್ನಡ ಲಭ್ಯ. ಅನಂತರ ಹೈಸ್ಕೂಲಿನಿಂದ ಇಂಗ್ಲೀಷ್ ಮತ್ತು ಸಂಸ್ಕೃತ ಭಾಷೆಗಳು ಪಠ್ಯ ವಸ್ತು. ಇಂತಹ ವ್ಯತಿರಿಕ್ತ ಹಿನ್ನೆಲೆಯಲ್ಲಿ ಸುನಂದಮ್ಮನೊಳಗೊಬ್ಬ ಕನ್ನಡ ಬರಹಗಾರ್ತಿಯಾಗಿ ಅವಿರ್ಭವಿಸಿದ್ದು ಕನ್ನಡ ಹಾಸ್ಯಸಾಹಿತ್ಯದ ಅದೃಷ್ಟವೆನ್ನಬಹುದು.

ತಾತನ ವಿದ್ವತ್ ಪ್ರೀತಿ, ತಂದೆತಾಯಿಯರ ಓದುವ ಹವ್ಯಾಸ, ವಿವಿಧ ಲೈಬ್ರರಿಗಳಿಗೆ ಮೆಂಬರಾಗಿ ಪುಸ್ತಕ ತಂದು ಓದಲು ಪ್ರೋತ್ಸಾಹಿಸುತ್ತಿದ್ದ ತಂದೆಯ ಒತ್ತಾಸೆ.... ಬಾಲಕಿಯ ಆಸಕ್ತಿ.... ಎಲ್ಲದರ ಪರಿಣಾಮವಾಗಿ ಹದಿನಾಲ್ಕನೇ ವಯಸ್ಸಿನ ವೇಳೆಗೇ ಸ್ಕಾಟ್, ಡಿಕನ್ಸ್, ವೇಲ್ಸ್, ರೈಡರ್ ಹ್ಯಾಗರ್ಡ್, ಜೇನ್ ಆಸ್ಟಿನ್, ಎಡ್ಗರ್ ವಾಲೇಸ್....ರ ಕೃತಿಗಳನ್ನು ಕನ್ನಡದ ಗಳಗನಾಥ, ಬಿ.ಪಿ. ಕಾಳೆ, ಬಿ. ವೆಂಕಟಾಚಾರ್.... ಮುಂತಾದವರ ಕೃತಿಗಳನ್ನು ಓದಿ ಮುಗಿಸಿದ್ದರು. ಹನ್ನೆರಡರ ಹರೆಯದಲ್ಲೇ ಕಥೆ ಬರೆಯತೊಡಗಿದರು.

ಪರಿಣಾಮ ದಾವಣಗೆರೆಯಲ್ಲಿ ಓದುತ್ತಿದ್ದಾಗಲೇ ದಿನಪತ್ರಿಕೆಗಳಾದ ತಾಯಿನಾಡು, ವಿಶ್ವಕರ್ನಾಟಕ, ನವಜೀವನಗಳ ವಾರದ ಪುರವಣಿಯಲ್ಲಿ ಸುನಂದಮ್ಮ ಕಥೆ ಬರೆಯತೊಡಗಿದರು. (ಆಗ ವಾರಪತ್ರಿಕೆ, ಮಾಸ ಪತ್ರಿಕೆಗಳೇ ಇರಲಿಲ್ಲವಂತೆ). ಕಥೆಯ ಶೀರ್ಷಿಕೆಯಡಿ ಸುನಂದಮ್ಮನವರ ಹೆಸರಿನ ಕೆಳಗೆ ಬ್ರಾಕೆಟ್ಟಿನಲ್ಲಿ 'ಹನ್ನೆರಡು ವರ್ಷ' ಎಂದು ನಮೂದಿಸುತ್ತಿದ್ದರಂತೆ.

ಅಂದಿನ ದಿನಗಳಲ್ಲಿ ಅಪ್ರಾಪ್ತ ವಯಸ್ಕರ ಮದುವೆಗಳು ಅಪರೂಪವೇನಾಗಿರಲಿಲ್ಲ. ಸುನಂದಮ್ಮನ ತಾತನಿಗೆ ಮೊಮ್ಮಗಳ ಮದುವೆ ನೋಡಿಯೇ ಸಾಯುವ ಆಸೆ. ಸರಿ ವರ ನೋಡಿಯಾಯ್ತು. ಆಗಲೇ ಬಂಧುವಾಗಿದ್ದ ಅಜ್ಜಿಯ ತಮ್ಮನ ಮಗ ಟಿ.ವೆಂಕಟನಾರಣಪ್ಪನೊಂದಿಗೆ ಹೆಣ್ಣು ತೋರಿಸುವ ಮಾಡರ್ನ್ ಶಾಸ್ತ್ರ ಸೇರಿಸಿ ಮದುವೆ ಮಾಡಿದರು! 1929ರಲ್ಲಿ ಬಾಲಕಿ ಸುನಂದ ಹನ್ನೊಂದು ವರ್ಷದ ಪೋರಿ. ಇಂಟರ್ ಮೀಡಿಯಟ್ ಓದುತ್ತಿದ್ದ ವರನ ಜತೆ ಹಸೆಮಣೆ ಏರಿದಳು. ಆಗಿನ ಕಾಲದ ಕಲೆಕ್ಟರ್ ಮಗಳ ಭರ್ಜರಿ ವೈಭವದ ಮದುವೆ. ಹತ್ತು ದಿನಗಳ ಪರ್ಯಂತ ನಡೆಯಿತು. ಹದಿನೆಂಟು ಮೊಳದ ಸೀರೆ, ತೊಲಗಟ್ಟಲೆ ಚಿನ್ನದ ಒಡವೆಗಳು, ಉರುಟಣೆ, ಆರತಿ, ಹರಿಭೂಮಗಳ ನಡುವೆ 'ವಧುವಿಗೆ ತೂಕಡಿಸಿದ್ದಷ್ಟೇ ನೆನೆಪು' ಎನ್ನುತ್ತಾರೆ ಸುನಂದಮ್ಮ.

ಅಂದು ಪ್ರಗತಿಪರ ಧೋರಣೆಯುಳ್ಳ ಕುಟುಂಬಗಳು ಸಂಪ್ರದಾಯ ಆಧುನಿಕತೆಗಳೆರಡನ್ನೂ ಪಾಲಿಸುತ್ತಿದ್ದರು. ಮದುವೆಯಾದ ಐದು ವರ್ಷಗಳೂ ಹೆಣ್ಣುಮಕ್ಕಳು ಅನೇಕ ವ್ರತಗಳನ್ನು ಆಚರಿಸುವ ಪದ್ಧತಿ ಇತ್ತು. ಸುನಂದಾಗೆ ಅದೆಲ್ಲವನ್ನೂ ಮಾಡಿಸಲಾಯ್ತು. ಅದರಲ್ಲಿ ತಾನು ಮರೆಯಲಾಗದ ಒಂದು ವ್ರತ 'ಮೌನಗೌರಿವ್ರತ' ಎಂದಿದ್ದಾರೆ. ಸಂಜೆ ಸೂರ್ಯ ಮುಳುಗುವ ಮುನ್ನ ನಡೆಯುವ ಈ ಪೂಜೆ ಮುಗಿಯುವ ತನಕ ಮಾತನಾಡಬಾರದು. ದೀಪಾವಳಿಗೆ ಅಳಿಯ ಬೀಗರು ಆಗಮಿಸಿ ಅದ್ದೂರಿಯ ಆರತಕ್ಷತೆ.... ಇವೆಲ್ಲ ಎಳೆಯ ಕುತೂಹಲದ ಮನಸ್ಸಿನಲ್ಲಿ ಅಚ್ಚಳಿಯದೇ ನಿಂತು ಮುಂದೆ ಅವರು ಬರೆದ ಅನೇಕ ವಿಡಂಬನಾ ಲೇಖನಗಳಿಗೆ ನೆಲೆಗಟ್ಟೊದಗಿಸಿದವು.

ಮದುವೆಯ ನಂತರವೂ ವಿದ್ಯಾಭ್ಯಾಸ ಮುಂದುವರಿಸುವ ಯೋಗ ಬಾಲಕಿ ಸುನಂದಾಗೆ ದಕ್ಕಿತು. ತಂದೆ ಮ್ಯಾಜಿಸ್ಟ್ರೇಟ್ ಆಗಿ ದಾವಣಗೆರೆಗೆ ಹೋದಾಗ ಅಲ್ಲೂ ಬಾಲಕರ ಪ್ರೌಢಶಾಲೆಗೇ ಪ್ರವೇಶ. ಬೆಲ್ ಆಗುವ ತನಕ ಹೆಡ್‌ಮಾಸ್ಟ್ರ ಕೊಠಡಿಯ ತೆರೆಯ ಮರೆಯಲ್ಲಿ ಕುಳಿತಿರಬೇಕು. ಬೆಲ್ ಆದ ಮೇಲೆ ಕ್ಲಾಸಿನಲ್ಲಿ ಈ ಹುಡುಗಿಗೆಂದೇ ಹಾಕಿದ ಟೇಬಲ್ ಖುರ್ಚಿಗೆ ಹೋಗಿ ಆಸೀನರಾಗಬೇಕಿತ್ತು. ಶಾಲೆಗೆ ಹೋಗುವಾಗ ಸರ್ಕಾರಿ ಅಧಿಕಾರಿಗಳಿಗೆಂದು ಇರುತ್ತಿದ್ದ ಸೇವಕರ ಬೆಂಗಾವಲು. ತರಗತಿಯಲ್ಲಿ ಪರೀಕ್ಷೆಗಳಲ್ಲಿ ಈಕೆಗೆ ಪ್ರಥಮ ಸ್ಥಾನ ಮೀಸಲು. ಹೈಸ್ಕೂಲು ಮೂರನೇ ವರ್ಷದಲ್ಲಿ ತಂದೆಗೆ ಬೆಂಗಳೂರಿಗೆ ವರ್ಗ ಆದ್ದರಿಂದ ಸುನಂದಮ್ಮ ಬೆಂಗಳೂರು ಮಹಾನಗರಕ್ಕೆ ಪದಾರ್ಪಣಾಗೈದರು. ವಾಣಿವಿಲಾಸ್ ಇನ್‌ಸ್ಟಿಟ್ಯೂಟ್‌ನಲ್ಲಿ ವಿದ್ಯಾಭ್ಯಾಸ ಮುಂದುವರಿಸಿದರು. ಈಗ ಹೆಣ್ಣುಮಕ್ಕಳೇ ಸಹಪಾಠಿಗಳು. ಇಲ್ಲಿಯೂ ಹೆಚ್ಚಿನ ಅಂಕಗಳ ಮೂಲಕವೇ ಎಲ್ಲರ ಪ್ರೀತಿ ಗೌರವ ಗಳಿಸಿದ ಶ್ರೇಯಸ್ಸು ಸುನಂದಾರದ್ದು.

ಎಸ್.ಎಸ್.ಎಲ್.ಸಿ.ಯಲ್ಲಿ ಪ್ರಥಮ ಶ್ರೇಣಿ ಪಡೆದ ವಿದ್ಯಾರ್ಥಿಗಳ ಹೆಸರನ್ನು 'ಆನರ್ಸ್ ಬೋರ್ಡ್'ನಲ್ಲಿ ಬರೆಸಿಡುವ ಪದ್ಧತಿ ಆ ಸಂಸ್ಥೆಯಲ್ಲಿತ್ತು. 1932ರಲ್ಲಿನ ನಾಲ್ಕು ಹೆಸರುಗಳಲ್ಲಿ ಸುನಂದಮ್ಮ ನವರದೂ ಒಂದು. ವಾಣಿವಿಲಾಸ್ ಇನ್‌ಸ್ಟಿಟ್ಯೂಟ್‌ನ ಕಟ್ಟಡದ ಒಂದು ಭಾಗ ವಿಮೆನ್ಸ್ ಇಂಟರ್ ಮೀಡಿಯಟ್ ಕಾಲೇಜ್ ಆಗಿತ್ತು. ಸುನಂದಮ್ಮ ಅಲ್ಲಿ ದಾಖಲಾದರು. ಕಾಲೇಜಿಗೇ ಮೊದಲನೆಯವರಾಗಿ ಉತ್ತೀರ್ಣರಾದರು. ಆಗಿನ್ನೂ ಬೆಂಗಳೂರಿಗೆ ಮಹಾರಾಣೀಸ್ ಕಾಲೇಜು ಬಂದಿರಲಿಲ್ಲ. ಡಿಗ್ರಿ ಕ್ಲಾಸು ಸೆಂಟ್ರಲ್ ಕಾಲೇಜಿನಲ್ಲಿ ಮಾತ್ರ ಲಭ್ಯ. ಆದರೆ ಹುಡುಗರ ಕಾಲೇಜು ಸೇರಲು ಈಗ ಅತ್ತೆ ಮಾವ ಒಪ್ಪಲಿಲ್ಲ. ಸುನಂದಮ್ಮನವರ ವಿದ್ಯಾಭ್ಯಾಸ ಹೀಗೆ ನಿಲುಗಡೆಗೊಳಿಸಲ್ಪಟ್ಟಿತು. ಆದರೆ ಅವರೊಳಗಿನ ಚೇತನವನ್ನು ನಿಲುಗಡೆಗೊಳಿಸಲಾದೀತೆ? ಅದು ದಾರಿಗಳನ್ನು, ಹುಡುಕುತ್ತಲೇ ಇತ್ತು.

ಪತಿ ವೆಂಕಟನಾರಾಣಪ್ಪನವರು ಈ ವೇಳೆಗೆ ಬಿ.ಎ. ಮುಗಿಸಿ ಪೂನಾದಲ್ಲಿ ಎಲ್.ಎಲ್.ಬಿ. ಓದಲು ಹೋದರು. ಈ ಅವಧಿಯಲ್ಲಿ ಸುನಂದಮ್ಮ ಹಿಂದಿ ಕಲಿತು ಮೂರು ಪರೀಕ್ಷೆಗಳನ್ನು ಫಸ್ಟ್‌ಕ್ಲಾಸಿನಲ್ಲಿ (ನೇಮ ತಪ್ಪದಂತೆ!) ಪಾಸು ಮಾಡಿದರು. ಅಷ್ಟೇ ಅಲ್ಲ ಟೆನಿಸ್ ಆಡಿದರು, ಬ್ಯಾಡ್‌ಮಿಂಟನ್ ಆಡಿದರು.

ಅದಮ್ಯ ಉತ್ಸಾಹ, ಮೇಲೇರುವ ಮಹತ್ವಾಕಾಂಕ್ಷೆ ಇರುವ ವಿದ್ಯಾರ್ಥಿನಿಯ ಸಾಧನೆಗಳಿಗೆ ಸದಾ ಸ್ಫೂರ್ತಿಯನ್ನಿತ್ತ ಇಬ್ಬರು ಉಪಾಧ್ಯಾಯರನ್ನು ಈಗಲೂ ಸುನಂದಮ್ಮ ನೆನೆಪಿಸಿಕೊಳ್ಳುತ್ತಾರೆ. ದಾವಣಗೆರೆಯ ಹೈಸ್ಕೂಲಿನಲ್ಲಿ ಇಂಗ್ಲೀಷ್ ಕಲಿಸುತ್ತಿದ್ದ ಎಸ್.ವಿ. ಶ್ರೀನಿವಾಸರಾಯರು ಶಾಲೆ ಬಿಡುವ ದಿನ "ನಿಮ್ಮ ಭಾಷೆ ಶೈಲಿ ಚೆನ್ನಾಗಿದೆ. ಏನಾದರೂ ಬರೆಯುವುದನ್ನು ಅಭ್ಯಾಸ ಮಾಡಿಕೊಳ್ಳಿ" ಎಂದು ಹೇಳಿದರು. ಇಂಥ ಮಾತುಗಳು ತಾನೆ ಎಳೆಯ ಮನಸ್ಸಿನಲ್ಲಿ ಸಾಧನೆಯ ಆಸಕ್ತಿಯ ಬೀಜ ಬಿತ್ತುವದು?

ಮತ್ತೊಬ್ಬರು ವಿಮೆನ್ಸ್ ಕಾಲೇಜಿನ ಪ್ರಿನ್ಸಿಪಾಲ್ ಮಿಸೆಸ್ ಹೆನ್ಸ್‌ಮನ್. ಒಮ್ಮೆ ಸುನಂದಮ್ಮನಿಗೆ ಟೈಫಾಯಿಡ್ ಜ್ವರವಾಗಿ ಸೊಂಟ ಬಿದ್ದು ಹೋಗಿತ್ತು. ನಾಲ್ಕು ತಿಂಗಳ ನಂತರ ವೈಸ್ ಚಾನ್ಸಲರ್ ಪರವಾನಗಿ ಪಡೆದು ಅವರನ್ನು ಮತ್ತೆ ಕಾಲೇಜಿಗೆ ಕಳಿಸಿದರು. ಸಹಾಯಕರ ನೆರವಿನಿಂದ ಕ್ಲಾಸಲ್ಲಿ ಕೂರಿಸಿಕೊಳ್ಳಬೇಕಾದ ಈಕೆ ಮರುತಿಂಗಳು ನಡೆದ ಮೊದಲ ವರ್ಷದ ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಬಂದಾಗ ಪ್ರಾರ್ಥನಾ ಸಭೆಯಲ್ಲಿ ಪ್ರಿನ್ಸಿಪಾಲರು ಸುನಂದಮ್ಮನ ಬೆನ್ನುತಟ್ಟಿ "You are a brave soldier keep it up" ಎಂದರಂತೆ. ಇಂದಿಗೂ ಆ ವಾಕ್ಯ ತನಗೆ ಧೈರ್ಯ ನೀಡುತ್ತಿದೆಯೆಂದಿದ್ದಾರೆ ಸುನಂದಮ್ಮ.

1929ರಲ್ಲಿ ಮದುವೆಯಾದ ಸುನಂದಮ್ಮ ಗೃಹಿಣಿಯಾಗಿ ಅತ್ತೆಮನೆ ಸೇರಿದ್ದು 1936ರಲ್ಲಿ. ಅಲ್ಲಿ ತವರು ಮನೆಗೆ ವಿರುದ್ಧವಾದ ಸಾಂಪ್ರದಾಯಿಕ ವಾತಾವರಣ. ಪೂಜೆ ವ್ರತ ಕಟ್ಟುಪಾಡು. ಮುಕ್ತ ಆಧುನಿಕ ಜೀವನ ಶೈಲಿ ರೂಢಿಸಿಕೊಂಡಿದ್ದ ಸುನಂದಮ್ಮನಿಗೆ ಸಹಜವಾಗಿಯೇ ಕಸಿವಿಸಿ. ದೊಡ್ಡ ಅಧಿಕಾರಿಯ ಮುದ್ದಿನ ಮಗಳು. ಸೈಕಲ್ ಸವಾರಿ, ಕುದುರೆ ಸವಾರಿಗಳನ್ನು ಕಲಿತಾಕೆ. ಈಗ ಚಪ್ಪಲಿ ಧರಿಸುವುದು, ಟೂತ್ ಪೇಸ್ಟ್ ಬಳಸುವುದು, ಗಂಡಸರೊಡನೆ ಮಾತಾನಾಡುವುದು ಕೂಡ ನಿಷಿದ್ಧ.... ಎಂಬ ವಾತಾವರಣ ದಲ್ಲಿ ಏಗಲಾರದೇ ಹೋದರು. ತವರು ಮನೆಗೆ ತೆರಳಿ ಮಗಳು ಪ್ರಫುಲ್ಲಳಿಗೆ ಜನ್ಮ ನೀಡಿದರು. ಆ ಬಳಿಕ ಮಗ ಶ್ರೀನಾಥ ಹಾಸನದಲ್ಲಿ ಜನಿಸಿದ.

ಪತಿ ವೆಂಕಟನಾರಾಯಣಪ್ಪ ಪದವಿ ಮುಗಿಸಿ ಮೈಸೂರು ಸಂಸ್ಥಾನದ ಸೆಕ್ರೆಟರಿಯೇಟ್ ನ್ಯಾಯಾಂಗ ವಿಭಾಗದಲ್ಲಿ 1941ರಲ್ಲಿ ನೇಮಕಗೊಂಡಾಗ ಬೆಂಗಳೂರಿನಲ್ಲಿ ಸಂಸಾರ ಹೂಡಿದರು. ಈಗ 1965ರಿಂದ ಗಾಯತ್ರಿದೇವಿ ಬಡಾವಣೆಯಲ್ಲಿ ಸ್ವಂತ ಮನೆಯಲ್ಲಿ ವಾಸ. ಅತ್ತೆ ಮನೆ ವಾಸ ಮಕ್ಕಳ ಪಾಲನೆಯ ಜವಾಬ್ದಾರಿಯಲ್ಲಿ ಕೆಲವರ್ಷ ಸುನಂದಮ್ಮನವರ ಸಾಹಿತ್ಯ ಕೃಷಿ ಸ್ಥಗಿತವಾಗಿತ್ತು. ಬೆಂಗಳೂರಿನಲ್ಲಿ ಸಂಸಾರ ಹೂಡಿದ ಮೇಲೆ ಮತ್ತೆ ಪ್ರಾರಂಭವಾದ ಬರವಣಿಗೆ ವಿವಿಧ ಪತ್ರಿಕೆಗಳಲ್ಲಿ ಹೊಮ್ಮುತ್ತಲೇ ಹೋಯಿತು. ಆಗ ಪ್ರಚಲಿತವಿದ್ದ ಕಥಾವಳಿ, ಕಥೆಗಾರ ಮೊದಲಾದ ಮಾಸ ಪತ್ರಿಕೆಗಳಲ್ಲಿ ಅವರ ಕಥೆಗಳ ಅನುವಾದಗಳು ಪ್ರಕಟವಾದವು.

### ವಿನೋದ ವಿಶ್ವವಿದ್ಯಾಲಯದ ಪಾಠ

1942ರಲ್ಲಿ ಕನ್ನಡ ವಿನೋದ ಸಾಹಿತ್ಯಕ್ಕೆ ಒಂದು ವಿಶೇಷ ನೆಲೆಗಟ್ಟನ್ನೊದಗಿಸಿದ ಪತ್ರಿಕೆಯೊಂದು ಪ್ರಾರಂಭವಾಯ್ತು. ಆ ಕಾಲಕ್ಕೆ ವಿನೋದ ಪ್ರಜ್ಞೆಯುಳ್ಳ ಲೇಖಕರೆಲ್ಲರ ಬರವಣಿಗೆಗೆ ಒಂದು ವೇದಿಕೆ ಯೊದಗಿಸಿ ಒಂದು ವಿನೋದ ವಿಶ್ವವಿದ್ಯಾಲಯವೋ ಎಂಬಂತೆ ಅನೇಕ ಹಾಸ್ಯ ಲೇಖಕರನ್ನು ಸೃಷ್ಟಿಸಿದ ಪತ್ರಿಕೆ ಡಾ. ಶಿವರಾಂರ ಕೊರವಂಜಿ. ರಾಶಿಯವರು ಇಂಗ್ಲೀಷಿನ ಪಂಚ್ ಮಾದರಿಯ ಕೊರವಂಜಿಯನ್ನು ಕನ್ನಡದಲ್ಲಿ ಪ್ರಕಟಿಸ ತೊಡಗಿದಾಗ ಹಾಸ್ಯಲೇಖಕರ ಒಂದು ದಂಡೇ ನಿರ್ಮಾಣವಾಯ್ತು. ಅವರಲ್ಲಿದ್ದ ಏಕೈಕ ಮಹಿಳಾ ಹಾಸ್ಯಸಾಹಿತಿ ಟಿ.ಸುನಂದಮ್ಮ. 'ನಾನ್ಯಾರಿಟ್ಟಿದ್ದು' ಎಂಬ ಪ್ರಥಮ ನಗೆಲೇಖನ ಕೊರವಂಜಿಯಲ್ಲಿ ಪ್ರಕಟವಾದಾಗ ನಾ.ಕಸ್ತೂರಿ, ಜಿ.ಪಿ.ರಾಜರತ್ನಂ ಮತ್ತು ರಾಶಿ ಅವರಿಂದ ಸಿಕ್ಕ ಪ್ರಶಂಸೆ ಪ್ರೋತ್ಸಾಹಗಳು ಸುನಂದಮ್ಮನವರು ಮೊದಲ ಮಣೆಯನ್ನು ಹಾಸ್ಯಸಾಹಿತ್ಯಕ್ಕೇ ಹಾಕುವಂತೆ ಮಾಡಿದವು. ಓರ್ವ ಹಿರಿಯ ಹಾಸ್ಯ ನಗೆ ಸಾಹಿತಿ ಕನ್ನಡಕ್ಕೆ ಪ್ರಾಪ್ತವಾಗುವಂತೆ ಮಾಡಿದವು.

1942ರಲ್ಲಿ ಮೊದಲುಗೊಂಡು ಕೊರವಂಜಿ ಜೀವಂತವಾಗಿರುವ 25 ವರ್ಷಗಳ ಕಾಲ ಸುನಂದಮ್ಮ ಅವ್ಯಾಹತವಾಗಿ ನಗೆಬರಹಗಳನ್ನು ಬರೆದರು. ಅವರ ಕಲ್ಪನೆಯ ದಂಪತಿಗಳು-ಮೈಲಾರಯ್ಯ ಸರಸು-ಕನ್ನಡದ ಹಾಸ್ಯಪ್ರಿಯ ರನ್ನು ತಲುಪಿ ಕಚಗುಳಿ ಇಟ್ಟು ನಗಿಸಿದರು, ಚುಚ್ಚಿದರು, ತಿದ್ದಿದರು. ತಮ್ಮ ಈ ಪಾತ್ರಗಳಿಂದಾಗಿ ಸುನಂದಮ್ಮನಿಗೆ ಅಪಾರ ಜನಪ್ರಿಯತೆಯೂ ಪ್ರಾಪ್ತ ವಾಯಿತು. ಆಯಾ ಕಾಲದ ಪ್ರಚಲಿತ ವಿದ್ಯಾಮಾನಗಳೇ ಅವರ ಹಾಸ್ಯ ಬರಹಗಳ ವಸ್ತುವಾಗಿರುತ್ತಿದ್ದು ಜನ ಥಕ್ಕನೆ ಅವರನ್ನು ಗುರುತಿಸಿ ನಗುತ್ತಿದ್ದರು.

### ಮೈಲಾರಯ್ಯ-ಸರಸು

ತಾವು ವಾಸಿಸುತ್ತಿದ್ದ ಬಡಾವಣೆಯ ಮಧ್ಯಮ ಮತ್ತು ಮೇಲ್ಮಧ್ಯಮ ವರ್ಗದ ಬದುಕಿನ ಭಂಗ ಬದಲಾಣೆಗಳನ್ನೇ ವಿನೋದದ ಎಳೆಗಳಲ್ಲಿ ನೇಯ್ದ ಸುನಂದಮ್ಮ ತಮ್ಮ ಬರಹಗಳಲ್ಲಿ ಒಂದು ಸ್ಥಾಯೀ ಕುಟುಂಬವನ್ನು, ಸರಸು-ಮೈಲಾರಯ್ಯ ಎಂಬ ಕಾಮಿಕ್ ದಂಪತಿಗಳನ್ನು ಸೃಷ್ಟಿಸಿದರು. ಮೈಲಾರಯ್ಯ ತಾಮಸ ಪ್ರಕೃತಿಯ ವ್ಯಕ್ತಿ. ಸಮತೋಲನಕ್ಕೆ ಬೇಕು ಸರಸ. ಅದರಿಂದಾಗಿ ಅವನ ಅರ್ಧಾಂಗಿ ಸರಸು ಅಥವಾ ಸರಸಮ್ಮ! ಬರ್ತ್ ಕಂಟ್ರೋಲ್ ಕಾಲವಲ್ಲವಾದ್ದರಿಂದ ಅವರಿಬ್ಬರಿಗೆ ಆರು ಮಕ್ಕಳನ್ನು ಕರುಣಿಸಿದರು! ಈ ದಂಪತಿಗಳು ಮನೆಮಾತಾದರು. ನಿಧಾನ ನಡವಳಿಕೆಯ ಯಜಮಾನನ್ನು "ಯಾಕೋ ಮೈಲಾರಯ್ಯ ಆಗಿಬಿಟ್ಟಿರಿ !" ಎನ್ನುವುದು, ಅತಿ ಉತ್ಸಾಹದಿಂದ ಎಲ್ಲಕ್ಕೂ ಮುನ್ನುಗ್ಗಿ ಫಾಸಿಯಾಗಿ ನಷ್ಟವೋ ಗೆಲುವೋ ಪಡೆದ ಹೆಣ್ಣು ಮಗಳನ್ನು "ನೀನೇನು ಸರ್ಸೂ ಅಂದ್ಕೊಂಡೆಯಾ?" ಎಂದು ನಗೆಯಾಡುವುದು ಸಾಮಾನ್ಯವಾಗಿತ್ತು.

ಸರಸು ಭಾಷಣ ಮಾಡಿದಳು, ಸಾಹಿತ್ಯ ಪ್ರಚಾರ ನಡೆಸಿದಳು, ಪುಸ್ತಕ ಮಾರಾಟ ಮಾಡಿದಳು, ಬರ ಪರಿಹಾರ ನಿಧಿ ಶೇಖರಣೆಗೂ ಹೊರಟಳು. ವಿದೇಶಿ ಅಳಿಯನ ದೀಪಾವಳಿ, ಬೇಟಿ ಸ್ಕ್ಯಾಮ್, ನೂರಾರು ಕೇಂದ್ರ ಬಿಂದುಗಳು ನೂರಾರು ವಿನೋದ ಮಹಲುಗಳು ಸುನಂದಮ್ಮನಿಂದ ನಿರ್ಮಾಣಗೊಂಡಿತು.

1967ರಲ್ಲಿ ಕೊರವಂಜಿ ಕಾಡಿಗೆ ಹೋದಾಗ ಕೊರವಂಜಿಯ ಕೂಸಾದ ಸುನಂದಮ್ಮನಿಗೆ ಪದಕುಸಿದ ಅನುಭವ. ಬರವಣಿಗೆಯ ದಿಕ್ಕನ್ನೇ ಬದಲಿಸ ಬೇಕೇನೋ ಅಂದುಕೊಂಡರು. ಆದರೆ ಅದೇ ಸಮಯಕ್ಕೆ ಪ್ರಾರಂಭವಾಗಿದ್ದ ಸುಧಾ, ಮಲ್ಲಿಗೆ, ಪ್ರಜಾಮತ....... ಮುಂತಾದ ಪತ್ರಿಕೆಗಳು ಸುನಂದಮ್ಮ ನವರ ಲೇಖನಗಳನ್ನು ಪ್ರಕಟಿಸತೊಡಗಿದವು.

ಕನ್ನಡದ ಎಲ್ಲ ಪತ್ರಿಕೆಗಳು ತಮಗೆ ಅವಕಾಶ ನೀಡಿವೆಯೆನ್ನುವ ಸುನಂದಮ್ಮನವರಿಗೆ ಆಕಾಶವಾಣಿಯ ಜತೆಗೂ ಗಾಢವಾದ ನಂಟು. ಮೈಸೂರು, ಬೆಂಗಳೂರು ಆಕಾಶವಾಣಿಗಳು ಸುನಂದಮ್ಮನವರಿಂದ ಅನೇಕ ನಾಟಕ, ಭಾಷಣ, ಪ್ರಹಸನ, ಮಹಿಳಾ ಕಾರ್ಯಕ್ರಮಗಳನ್ನು ಬರೆಸಿವೆ. ನೃತ್ಯ ರೂಪಕಗಳು ಮಾಸ್ತಿ ಅವರ ಕತೆಗಳ ರೇಡಿಯೋ ರೂಪಾಂತರ... ಇವೆಲ್ಲವನ್ನು ಬೆಂಗಳೂರು ಆಕಾಶವಾಣಿಗಾಗಿ ಸುನಂದಮ್ಮ ಬರೆದಿದ್ದಾರೆ.

ಹಾಸ್ಯಸಾಹಿತಿ ಎಂದೇ ಗುರುತಿಸಲ್ಪಡುವ ಸುನಂದಮ್ಮನವರು ಗಂಭೀರ ಸಾಹಿತ್ಯದಲ್ಲೂ ಕೈಯಾಡಿಸಿದ್ದಾರೆ. ದ್ರೌಪದಿ, ಸೀತಾ, ಮಹಿಷಾಸುರ ಮರ್ದಿನಿ ಮುಂತಾದ ರೇಡಿಯೋ ರೂಪಕಗಳು 'ಕಣ್ಣೀರು' ನಂತಹ ನಾಟಕಗಳು. ಪುಸ್ತಕ ರೂಪದಲ್ಲಿ ಪ್ರಕಟವಾಗಿರುವ 'ಆಧುನಿಕ ನಗೆ ಸಾಹಿತ್ಯ', 'ಡಾ. ಎಂ.ಶಿವರಾಂ' ಹೀಗೆ ಒಟ್ಟೂ ಹದಿಮೂರು ಕೃತಿಗಳೂ ಎಂಟು ನಾಟಕಗಳೂ ರಚಿತವಾಗಿವೆ.

ಐವತ್ತು ವರ್ಷಗಳಿಗೂ ಮಿಕ್ಕು ಕನ್ನಡ ಸಾಹಿತ್ಯಸೇವೆ ಗೈದಿರುವ ಸುನಂದಮ್ಮನವರ ಸಮಗ್ರ ಹಾಸ್ಯ ಸಾಹಿತ್ಯ 1993ರಲ್ಲಿ ಹೊರ ಬಂದಿದೆ. "ನನ್ನ ಕನ್ನಡಬಾಂಧವರನ್ನು ನಡೆಸಿದ್ದೇನೆ. ಅವರ ಮಾನಸಿಕ ದೈಹಿಕ ಬಿಗುವನ್ನು ಹಗುರಾಗಿಸಿದ್ದೇನೆ. ಪರಿಣಾಮವಾಗಿ ಬೆಲೆ ಕಟ್ಟಲಾಗದ ಅವರ ಪ್ರೀತಿ ವಿಶ್ವಾಸ ಸಂಪಾದಿಸಿಕೊಂಡಿದ್ದೇನೆ" ಎನ್ನುವ ಸುನಂದಮ್ಮ ತಮ್ಮ ವೈಯಕ್ತಿಕ ಬದುಕಿನಲ್ಲಿ ಬಂದೆರಗಿದ ಆಘಾತ ಅಗಲಿಕೆಗಳ ನೋವನ್ನು ಸಹಿಸಿಯೂ

ಲೇಖನಿ ಕೆಳಗಿಡದುದು, ಈಗಲೂ ಬರೆಯುತ್ತಿರುವುದು ಹಾಸ್ಯಕ್ಕಿರುವ ಸ್ವಾಸ್ಥ್ಯಸಂರಕ್ಷಕ ಗುಣದಿಂದಾಗಿ ಎನ್ನಬಹುದೇನೋ.

ಸಾಹಿತಿಯಾಗಿ ಸಿಹಿಯೇ ಹೆಚ್ಚಾಗಿ ಸಿಕ್ಕಿರುವುದು ನನ್ನ ಸೌಭಾಗ್ಯ. ಹವ್ಯಾಸವಾಗಿ ಆರಂಭಿಸಿದ ಕಾಯಕ ನಿರೀಕ್ಷೆಗೂ ಮೀರಿದ ಫಲ ಕೊಟ್ಟಿದೆ ಎನ್ನುವ ಸುನಂದಮ್ಮ ಅವರಿಗೆ ಸಾಹಿತಿಯೊಬ್ಬರಿಗೆ ಸಲ್ಲಬಹುದಾದ ಪ್ರಶಸ್ತಿಗಳೆಲ್ಲ ಸಂದ ತೃಪ್ತಿಯಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ ಹೀಗೆ ಪ್ರತಿಷ್ಠಿತ ಪ್ರಶಸ್ತಿಗಳೆಲ್ಲ ಸುನಂದಮ್ಮನವರನ್ನು ಅರಸಿಕೊಂಡು ಬಂದಿವೆ.

ಬಾಲ್ಯದಲ್ಲಿಯೇ ತಾಯಿಯ ಜೊತೆ ಸ್ವಾತಂತ್ರ್ಯ ಚಳವಳಿಗಾರರ ಭಾಷಣಗಳನ್ನು ಕೇಳಿದ್ದ ಸುನಂದಮ್ಮನಿಗೆ ಸಾಹಿತ್ಯದಷ್ಟೇ ಆಸಕ್ತಿ ಸಂಘಟನೆಯಲ್ಲೂ ಸಹಜವಾಗಿವೆ. ಅನೇಕ ಸ್ತ್ರೀ ಸಂಘ ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕರ್ನಾಟಕ ಲೇಖಕಿಯರ ಸಂಘದ ಸ್ಥಾಪಕ ಅಧ್ಯಕ್ಷೆಯಾದ ಸುನಂದಮ್ಮ (1979) ಕರ್ನಾಟಕ ಸಾಹಿತ್ಯ ಅಕಾಡೆಮಿಗೆ ಎರಡು ಅವಧಿಯಲ್ಲಿ ಸದಸ್ಯೆಯಾಗಿದ್ದರು.

ಜೀವನದ ಇಳಿವಯಸ್ಸಿನಲ್ಲೂ ಸುನಂದಮ್ಮ ತಮ್ಮ ಲೇಖನಿಯನ್ನು ಕೆಳಗಿಳಿಸಿಲ್ಲ. ಭಾಷಣಕ್ಕೆ ನಿಂತರೆ ಸ್ವರದಲ್ಲಿ ಸತ್ವದಲ್ಲಿ ಚೂರು ಲೋಪ ವಾಗಿಲ್ಲ. ಓದುಗರ ಅಭಿಮಾನಿಗಳ ಕನ್ನಡಿಗರ ಪ್ರೀತಿಯೇ ತನ್ನ ಈ ಬಲದ ಬಲ ಎಂಬ ಧನ್ಯತೆಯ ಮನಸ್ಥಿತಿ ಸುನಂದಮ್ಮನವರದ್ದು.

ಆರೇಳು ದಶಕಗಳಿಗೂ ಮಿಕ್ಕಿ ತಮ್ಮ ಲೇಖನಿಯನ್ನು ಕನ್ನಡ ಹಾಸ್ಯ ಸಾಹಿತ್ಯಕ್ಕೆ ಮಾತ್ರ ಮೀಸಲಾಗಿಟ್ಟ ಅಪರೂಪದ ಮಹಿಳಾ ಹಾಸ್ಯಸಾಹಿತಿ ಸುನಂದಮ್ಮನವರ ಹಾಸ್ಯಲೇಖನಗಳಿಂದ ಕನ್ನಡ ಹಾಸ್ಯಸಾಹಿತ್ಯ ಪುಷ್ಟಿಗೊಂಡಿ ರುವದು ಸಂತಸದ ಸಂಗತಿಯಾಗಿದೆ.

❑

## ಎಂ.ಗೋಪಾಲಕೃಷ್ಣ ಅಡಿಗ

ನರಹಳ್ಳಿ ಬಾಲಸುಬ್ರಹ್ಮಣ್ಯ

ಗೋಪಾಲಕೃಷ್ಣ ಅಡಿಗರು ಹುಟ್ಟಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಉತ್ತರದ ಕೊನೆಯಲ್ಲಿರುವ ಮೊಗೇರಿ ಎಂಬ ಹಳ್ಳಿಯಲ್ಲಿ 18 ಫೆಬ್ರವರಿ 1918ರಲ್ಲಿ. ಮನೆಯ ಮುಂಜಗಲಿಯ ಮೇಲೆ ಕುಳಿತರೆ ದೂರದಲ್ಲಿ ಮೋಡಗಳಾಚೆ ಕಾಣುವ ಪಶ್ಚಿಮ ಘಟ್ಟಗಳ ಸಾಲು; ಹಿಂಬಾಗಿಲಿನ ಹಿತ್ತಲಿಗೆ ಬಂದರೆ ಅಡಿಕೆ, ಬಾಳೆ, ಸೀಬೆ, ನಿಂಬೆ, ಮಾವು, ಹಲಸು-ಈ ಸಸ್ಯಲೋಕ; ಅಕ್ಕಪಕ್ಕ ತೋಟ ಗದ್ದೆಗಳಲ್ಲಿ ಬೆಳೆದುನಿಂತ ಮರ ಗಿಡ ಪೈರು; ಅಂಗಳದಲ್ಲಿ ನಿಂತು ಕಣ್ಣು ಹಾಯಿಸಿದರೆ ಮೇಲೆ ಕಾಣುವ ಆ ನೀಲ ಲೋಕ; ಅನತಿ ದೂರದಲ್ಲೇ ಪ್ರಕೃತಿ ಚೇಷ್ಟೆಗಳಿಗೆಲ್ಲ ಶೃತಿ ಹಿಡಿದಂತೆ ಸದಾ ಭೋರ್ಗರೆ ಯುತ್ತ, ಸದಾ ತುಡಿಯುತ್ತ ಸ್ಥಾಯಿಯಾಗಿ ಇರುವ ಸಮುದ್ರ - ಈ ಎಲ್ಲ ವಿಸ್ಮಯ, ವಿಚಿತ್ರ ವೈಭವಗಳ ನಡುವೆ ಅಡಿಗರ ಬಾಲ್ಯ ಕಳೆಯಿತು. ಚಿಕ್ಕಂದಿನ ಎಳೆಯ ಮನಸ್ಸಿನಲ್ಲಿ ಈ ಎಲ್ಲವೂ ಒತ್ತಿದ ಮುದ್ರೆ, ಬೀರಿದ ಪ್ರಭಾವ ಮುಂದೆ ಅವರ ಕಾವ್ಯಪ್ರಪಂಚಕ್ಕೆ ಸೂಕ್ತ ಹಿನ್ನೆಲೆಯನ್ನೂ ಅಗತ್ಯ ಪರಿಸರ ವನ್ನೂ ಒದಗಿಸಿವೆ.

ಪುರೋಹಿತ ಮನೆತನಕ್ಕೆ ಸೇರಿದ ಅಡಿಗರ ತಂದೆ ಸಂಸ್ಕೃತದಲ್ಲಿ ಶ್ಲೋಕಗಳನ್ನೂ ಕನ್ನಡದಲ್ಲಿ ದೇಶಭಕ್ತಿಯ ಗೀತೆಗಳನ್ನೂ ರಚಿಸುತ್ತಿದ್ದರಂತೆ. ಅವರ ಹತ್ತಿರದ ಬಂಧುಗಳೊಬ್ಬರು ಅವರ ಮನೆಯಲ್ಲೇ ಇದ್ದು ಯಕ್ಷಗಾನ ಪ್ರಸಂಗಗಳನ್ನು ಬರೆಯುತ್ತಿದ್ದರಂತೆ. ಮನೆಯಲ್ಲಿ ಪದ್ಯ ರಚನೆ, ವಾಚನಗಳ ವಾತಾವರಣವಿತ್ತು. ಪ್ರತಿರಾತ್ರಿಯೂ ಅವರ ಸೋದರತ್ತೆ ನಾರಣಪ್ಪನ ಭಾರತ, ತೊರವೆ ರಾಮಾಯಣ, ಜೈಮಿನಿ ಭಾರತ ಇವುಗಳನ್ನು ರಾಗವಾಗಿ ಓದಿ ಹೇಳುತ್ತಿದ್ದರೆಂದು ಅಡಿಗರು ನೆನಪಿಸಿಕೊಳ್ಳುತ್ತಾರೆ.[1]

ದಕ್ಷಿಣ ಕನ್ನಡ ಜಿಲ್ಲೆ ಯಕ್ಷಗಾನದ ತವರೂರು, ಚಿಕ್ಕಂದಿನಲ್ಲಿ ಅಡಿಗರು ಯಕ್ಷಗಾನ ಪ್ರಸಂಗಗಳು ಸುತ್ತಮುತ್ತ ಎಲ್ಲಿ ನಡೆದರೂ ತಪ್ಪಿಸಿ ಕೊಳ್ಳದೆ ನೋಡುತ್ತಿದ್ದರಂತೆ. ಆ ಹಾಡುಗಳ, ಮಟ್ಟುಗಳ ಕುಣಿತದ ಭಂಗಿಗಳು ಅವರ ಮನಸ್ಸಿನಲ್ಲಿ ಸದಾ ಅನುರಣನಗೊಳ್ಳುತ್ತಿತ್ತಂತೆ.

"ಈ ವಾತಾವರಣದಲ್ಲಿ ನಾನು ನನ್ನ ಹದಿಮೂರನೇ ವಯಸ್ಸಿನಲ್ಲಿ ಪದ್ಯರಚನೆಗೆ ಕೈಹಾಕಿದೆನೆಂದು ತೋರುತ್ತದೆ. ಭಾಮಿನಿಷಟ್ಪದಿ, ವಾರ್ಧಕ ಷಟ್ಪದಿ ಕಂದ ಪದ್ಯಗಳನ್ನು ರಚಿಸುತ್ತಿದ್ದೆ" ಎಂದು ಅವರೇ ಹೇಳಿದ್ದಾರೆ[2]. ಅಂದರೆ ಸುಮಾರು 1931-32ರ ವೇಳೆಗೆ ಅಡಿಗರು ಕಾವ್ಯರಚನೆ ಆರಂಭಿಸಿ ದಂತೆ ತೋರುತ್ತದೆ.

ಅಡಿಗರು ತಮ್ಮ ಪ್ರಾರಂಭದ ವಿದ್ಯಾಭ್ಯಾಸವನ್ನು ದಕ್ಷಿಣ ಕನ್ನಡದಲ್ಲಿ ಮುಗಿಸಿ, ನಂತರ ಮೈಸೂರಿಗೆ ಬಂದರು. ಬಿ.ಎ. (ಆನರ್ಸ್), ಎಂ.ಎ.(ಇಂಗ್ಲಿಷ್) ಪದವಿಗಳನ್ನು ಮೈಸೂರು ವಿಶ್ವವಿದ್ಯಾಲಯದಿಂದ ಪಡೆದ ಅವರು ಮೈಸೂರಿನ ಶಾರದಾ ವಿಲಾಸ ಕಾಲೇಜು, ಸೆಂಟ್‌ಫಿಲೋಮಿನಾ ಕಾಲೇಜು ಹಾಗೂ ಕುಮುಟಾದ ಕಾಲೇಜುಗಳಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದರು. ನಂತರ ಉಡುಪಿಯ ಪೂರ್ಣಪ್ರಜ್ಞ ಕಾಲೇಜು, ಸಾಗರದ ಲಾಲ್‌ಬಹದ್ದೂರ್ ಶಾಸ್ತ್ರಿ ಕಾಲೇಜುಗಳಲ್ಲಿ ಪ್ರಾಂಶುಪಾಲರಾಗಿ ಕೆಲಸ ಮಾಡಿದ ಅಡಿಗರು ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್‌ನ ರಿಸರ್ಚ್ ಫೆಲೋ ಆಗಿ ಕೆಲಸ ಮಾಡಿ ಈಗ ಬೆಂಗಳೂರಿನಲ್ಲಿ ವಿಶ್ರಾಂತಿ ಜೀವನ ನಡೆಸುತ್ತಿದ್ದಾರೆ.

ಐವತ್ತೊಂದನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗೌರವಿಸಲ್ಪಟ್ಟ ಅಡಿಗರು ರಾಜ್ಯ ಸಾಹಿತ್ಯ ಅಕಾಡೆಮಿ, ಕೇಂದ್ರ ಸಾಹಿತ್ಯ ಅಕಾಡೆಮಿ, ಕೇರಳದ ಕುಮಾರ್ ಆಸಾನ್ ಪ್ರಶಸ್ತಿ ಹಾಗೂ ಕಬೀರ್ ಸಂಮಾನ್ ಪ್ರಶಸ್ತಿಗಳನ್ನು ಪಡೆದಿದ್ದಾರೆ. 'ಸಾಕ್ಷಿ' ಪತ್ರಿಕೆಯ ಸಂಪಾದಕರಾಗಿ ಹೊಸ ಸಂವೇದನೆ ಹಾಗೂ ಹೊಸ ಅಭಿವ್ಯಕ್ತಿ ವಿಧಾನಗಳಿಗೆ ಮಾರ್ಗದರ್ಶಕರಾದ ಅಡಿಗರು "ತಮ್ಮ ಕಿರಿಯ ತಲೆಮಾರಿನವರ ಮೇಲೆ ಬೀರಿದ ಪ್ರಭಾವ, ಅವರ ಓರಗೆಯ ಮತ್ತು ಹಿರಿಯ ತಲೆಮಾರಿನವರಿಗೆ ಒಡ್ಡಿದ ಸವಾಲು ಕನ್ನಡ ಆಧುನಿಕ ಸಾಹಿತ್ಯ ಚರಿತ್ರೆಯಲ್ಲಿ ಮಹತ್ವದ ಸಂಗತಿಯಾಗಿದೆ".[3]

ಅಡಿಗರ ಮೊದಲ ಕವನ ಸಂಕಲನ 'ಭಾವತರಂಗ' ಪ್ರಕಟವಾದದ್ದು 1946ರಲ್ಲಿ. ಅಲ್ಲಿಂದೀಚೆಗೆ ಅವರ ಹತ್ತು ಕವನಸಂಕಲನಗಳು ಪ್ರಕಟವಾಗಿವೆ. ಕಟ್ಟುವೆವು ನಾವು (1948), ನಡೆದು ಬಂದ ದಾರಿ (1952), ಚಂಡೆಮದ್ದಳೆ (1954), ಭೂಮಿಗೀತ (1959), ವರ್ಧಮಾನ (1972), ಇದನ್ನು ಬಯಸಿರಲಿಲ್ಲ (1975), ಮೂಲಕ ಮಹಾಶಯರು (1981), ಬತ್ತಲಾರದ ಗಂಗೆ (1983), ಚಿಂತಾಮಣಿಯಲ್ಲಿ ಕಂಡ ಮುಖ (1987), ಹಾಗೂ ಸುವರ್ಣ ಪುತ್ಥಳಿ (1990) ಪ್ರಕಟವಾಗಿವೆ. 1937ರಿಂದ 1976ರವರೆಗಿನ ಎಲ್ಲ ಸಂಕಲನಗಳನ್ನೂ ಒಳಗೊಂಡ ಅವರ ಸಮಗ್ರ ಕಾವ್ಯ (ಐ.ಬಿ.ಎಚ್. ಪ್ರಕಾಶನ 1987) ಪ್ರಕಟವಾಗಿದೆ. ಅಡಿಗರು ಅನಾಥೆ, ಆಕಾಶದೀಪ-ಎಂಬ ಎರಡು ಕಾದಂಬರಿಗಳನ್ನೂ ಬರೆದಿದ್ದಾರೆ. ಅನೇಕ ಅನುವಾದ ಕೃತಿಗಳೂ ಪ್ರಕಟವಾಗಿವೆ.

ಸಾಹಿತ್ಯ, ಸಂಸ್ಕೃತಿ, ಶಿಕ್ಷಣ, ರಾಜಕೀಯ-ಹೀಗೆ ವಿವಿಧ ವಿಷಯಗಳ ಬಗ್ಗೆ ಅಡಿಗರು ಅನೇಕ ಲೇಖನಗಳನ್ನು ಬರೆದಿದ್ದಾರೆ. ಅವರ ಈ ಎಲ್ಲ ವೈಚಾರಿಕ ಲೇಖನಗಳೂ 'ಸಮಗ್ರಗದ್ಯ' (ಸಾಕ್ಷಿಪ್ರಕಾಶನ, 1977) ಎಂಬ ಸಂಪುಟವೊಂದರಲ್ಲಿ ಪ್ರಕಟವಾಗಿದೆ. ಅವರ ಗದ್ಯಬರಹಗಳನ್ನು ಕುರಿತು ಅವರೇ ಹೀಗೆ ಹೇಳುತ್ತಾರೆ: 'ವಿಚಾರ ಪ್ರಧಾನವಾದ ಈ ಪ್ರಬಂಧಗಳಲ್ಲಿ ನಾನು ನನ್ನ ಕಾವ್ಯಗಳಲ್ಲಿ ಹೇಳದೆ ಇರುವುದು ಯಾವುದೂ ವ್ಯಕ್ತಗೊಂಡಿಲ್ಲ. ಅಲ್ಲಿ ಅನುಭವ ಚಿತ್ರಗಳಾಗಿ ವ್ಯಕ್ತಗೊಂಡ ವಿಚಾರಗಳು, ಕಲ್ಪನೆಗಳು ಇಲ್ಲಿ ಪ್ರಜ್ಞೆಯ ಸ್ತರದಲ್ಲಿ ಶುದ್ಧ ಗದ್ಯದಲ್ಲಿ ಸ್ಪಷ್ಟತೆ, ಸ್ಫುಟತೆ, ಅಸಂದಿಗ್ಧತೆಗಳನ್ನೇ ಗುರಿಯಾಗಿಟ್ಟುಕೊಂಡು ಪ್ರಕಟವಾಗಿವೆ.[4] ಅಡಿಗರು ಕೆಲವು ಸಣ್ಣಕಥೆಗಳನ್ನೂ ಬರೆದಿದ್ದಾರೆ. ಒಮ್ಮೆ ಬೆಂಗಳೂರು ಕ್ಷೇತ್ರದಿಂದ ಲೋಕಸಭಾ ಚುನಾವಣೆಗೂ ಸ್ಪರ್ಧಿಸಿದ್ದರು.

2

ಅಡಿಗರ ಸಮಗ್ರ ಕಾವ್ಯವನ್ನು ಓದಿದಾಗ 'ಆಧುನಿಕ ಮಹಾಕಾವ್ಯ'ವೊಂದನ್ನು ಓದಿದ ಅನುಭವವಾಗುತ್ತದೆ. ಇವರ ಕಾವ್ಯದ ನಾಯಕ ಇಪ್ಪತ್ತನೇ ಶತಮಾನದ ಸ್ವಾತಂತ್ರ್ಯೋತ್ತರ ಭಾರತದ ಆಧುನಿಕ ಸಂವೇದನೆಯ ವ್ಯಕ್ತಿ. ಸ್ವತಂತ್ರ ಭಾರತದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ವಾಸ್ತವ ಇವರ ಕಾವ್ಯದಲ್ಲಿ ಆಕಾರ ಪಡೆದಂತೆ ಬಹುಶಃ ಕನ್ನಡದಲ್ಲಿ ಮತ್ತೆ ಯಾರ ಕಾವ್ಯದಲ್ಲೂ ಕಾಣಿಸಿಕೊಂಡಿಲ್ಲವೆನ್ನಬಹುದು. ಅಡಿಗರ ಕಾವ್ಯನಾಯಕನ ಕೆಲವು ಲಕ್ಷಣಗಳನ್ನು ಹೀಗೆ ಗುರ್ತಿಸಬಹುದು: ಸಾಂಪ್ರದಾಯಿಕವಾದ ಒಪ್ಪಿತ ಮೌಲ್ಯಗಳ ಬಗ್ಗೆ ಈತನಿಗೆ ಆರಾಧಕ ಮನೋಭಾವವಿಲ್ಲ. ಹಾಗೆಂದು ಅವುಗಳನ್ನು ಈತ ಸಾರಾಸಗಟಾಗಿ ತಿರಸ್ಕರಿಸುವಂಥವನೂ ಅಲ್ಲ. ಚಿಕಿತ್ಸಕ ಮನೋಭಾವದ ಈತನಿಗೆ ಸಮಕಾಲೀನ ಅಗತ್ಯಕ್ಕೆ ತಕ್ಕಂತೆ ಪರಂಪರೆಯನ್ನು ಸೂಕ್ತವಾಗಿ ಬಗ್ಗಿಸಿ ಕೊಳ್ಳುವುದರ ಬಗ್ಗೆ ಆಸಕ್ತಿ. ಅನೇಕ ನವ್ಯಕೃತಿಗಳಲ್ಲಿ ಕಾಣಿಸುವಂತೆ ಅಡಿಗರ ನಾಯಕ ಸೂಕ್ಷ್ಮಮನಸ್ಸಿನ ದುರ್ಬಲ ವ್ಯಕ್ತಿಯಲ್ಲ. ಈತನೊಬ್ಬ ಹೋರಾಟಗಾರ, ಎಲ್ಲದರ ಬಗ್ಗೆ ಬಂಡೇಳುವಂಥ ಬಂಡಾಯಗಾರ. ಎಲ್ಲ ಬಗೆಯ ಸರ್ವಾಧಿಕಾರೀ ಶಕ್ತಿಗಳ ವಿರುದ್ಧವೂ ಈತ ಪ್ರತಿಭಟಿಸುತ್ತಾನೆ. ಈ ಪ್ರತಿಭಟನೆ ಆತ್ಮವಿಶ್ಲೇಷಣೆಯ ಪ್ರಕ್ರಿಯೆಯೂ ಆಗುತ್ತದೆ. ಎಲ್ಲ ರೀತಿಯ ಆಕ್ರಮಣಗಳನ್ನು ಎದುರಿಸಿ ವ್ಯಕ್ತಿವಿಶಿಷ್ಟತೆಯನ್ನು ಕಾಪಾಡಿಕೊಳ್ಳುವ ಬಗ್ಗೆ ಈತನ ತುಡಿತ.

ಅಡಿಗರ ಮೊದಲ ಕವನ ಸಂಕಲನ 'ಭಾವತರಂಗ'ದ ಮುನ್ನುಡಿಯಲ್ಲಿ ಬೇಂದ್ರೆಯವರು ಹೀಗೆ ಹೇಳಿದ್ದಾರೆ: "ನಾನು ಕವಿತೆಗಳನ್ನು ಬರೆಯಲು ಆರಂಭಿಸಿದಾಗ ಇದ್ದ ಶೈಲಿಯ ಪ್ರಾಯೋಗಿಕತೆ ಇಂದಿನ ಕನ್ನಡದಲ್ಲಿ ಅಷ್ಟುಮಟ್ಟಿಗೆ ಇಲ್ಲ. ಒಂದು ಬಗೆಯ ಸಿದ್ಧಶೈಲಿಯಿಂದ ನವಕವಿಗಳು ಹೊರಡುತ್ತಾರೆ. ಗೆಳೆಯ ಗೋಪಾಲಕೃಷ್ಣರಿಗೆ ಅವರ ವಯಸ್ಸಿಗಿದ್ದ ಶೈಲಿಯ ಪಾಕ ನನಗೆ ಆ ವಯಸ್ಸಿಗೆ ಇರಲಿಲ್ಲ. ಆದರೆ ನಮಗೆ ಆ ಕಾಲಕ್ಕೆ ಇದ್ದ ನಾವೀನ್ಯದ ಅನುಕೂಲ ಈಗಿನವರಿಗಿಲ್ಲ". ಬೇಂದ್ರೆಯವರು ಹೇಳುವಂತೆ ಆ ಕಾಲಕ್ಕಾಗಲೇ ಕನ್ನಡ ಕಾವ್ಯ ಸಂದರ್ಭದಲ್ಲಿ ಸಿದ್ಧಶೈಲಿಯೊಂದು ರೂಪುಗೊಂಡಿತ್ತು. ನವೋದಯ ಕಾವ್ಯ ಸಂಪ್ರದಾಯದ ಅತ್ಯುತ್ತಮ ಕಾವ್ಯ ಸೃಷ್ಟಿಯಾಗಿತ್ತು. 1926ರ ವೇಳೆಗೆ ಬಿ.ಎಂ.ಶ್ರೀ. ಅವರು ತೋರಿಸಿಕೊಟ್ಟ ಮಾರ್ಗದಲ್ಲಿ ಮುನ್ನಡೆದ ಕನ್ನಡ ಕಾವ್ಯ ಒಂದು ಸ್ಪಷ್ಟರೂಪ ಪಡೆದು ಮಹತ್ವದ ಸಂಕಲನಗಳು ಆ ವೇಳೆಗಾಗಲೇ ಪ್ರಕಟವಾಗಿದ್ದವು. ಹೊಸದಾಗಿ ಬರೆಯಲು ಆರಂಭಿಸುವ ತರುಣರಿಗೆ ಒಂದು ಕಾವ್ಯ ಮಾದರಿ ಕಣ್ಣೆದುರಿಗಿತ್ತು. ಈ ಮಾದರಿಯನ್ನು ಬಿಟ್ಟು ಹೊಸದಾರಿ ಕಂಡುಕೊಳ್ಳುವುದು, ತನ್ನತನವನ್ನು ರೂಪಿಸಿಕೊಳ್ಳುವುದು ಅಡಿಗರು ಕಾವ್ಯರಚನೆಯ ಆರಂಭದಲ್ಲಿ ಎದುರಿಸಿದ ಬಹುಮುಖ್ಯ ಸಮಸ್ಯೆಯಾಗಿದ್ದಂತೆ ತೋರುತ್ತದೆ.

> ಅನ್ಯರೊರೆದುದನೆ ಬರೆದುದುನೆ ನಾ ಬರೆಬರೆದು
> ಬಿನ್ನಗಾಗಿದೆ ಮನವು, ಬಗೆಯೊಳಗನೇ ತೆರೆದು
> ನನ್ನ ನುಡಿಯೊಳೆ ಬಣ್ಣ ಬಣ್ಣದಲಿ ಬಣ್ಣಿಸುವ
> ಪನ್ನತಿಕೆ ಬರುವನಕ ನನ್ನ ಬಾಳಿದು ನರಕ
>
> (ನನ್ನ ನುಡಿ)

'ಭಾವತರಂಗ'ದ ಮೊದಲ ಕವಿತೆಯಲ್ಲಿಯೇ ತನ್ನತನವನ್ನು ಕಂಡುಕೊಳ್ಳುವ ಮನೋಭಾವವನ್ನು ಅಡಿಗರು ಸ್ಪಷ್ಟವಾಗಿ ಸೂಚಿಸಿದ್ದಾರೆ. ಇಲ್ಲಿ ಎರಡು ಮುಖ್ಯ ಅಂಶಗಳನ್ನು ನಾವು ಗಮನಿಸಬೇಕು: (1) ಬಗೆಯೊಳಗನೇ ತೆರೆದು, (2) ನನ್ನ ನುಡಿಯೊಳೆ. ಅಡಿಗರು ಹೇಳುವ ಈ ಎರಡು ಸಂಗತಿಗಳು ಅವರ ಇಡೀ ಕಾವ್ಯದ ಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ನೆರವಾಗುವ ಬೀಜರೂಪದ ಮಾತುಗಳಾಗಿವೆ. ವಸ್ತು ಹಾಗೂ ಅಭಿವ್ಯಕ್ತಿ ಎರಡರಲ್ಲೂ ಹೊಸದನ್ನು ಸಾಧಿಸಬೇಕೆಂಬ ಹಂಬಲವನ್ನು ನಾವಿಲ್ಲಿ ಕಾಣಬಹುದಾಗಿದೆ.

ಅಡಿಗರ ಆರಂಭದ ಕವಿತೆಗಳ ಮುಖ್ಯಗುಣ-ಭಾವತೀವ್ರತೆ. "ಮಹಾರಾಜ ಕಾಲೇಜು ಆ ಕಾಲದ ಸಂಸ್ಕೃತಿಯ ಒಂದು ಮುಖ್ಯ ಕೇಂದ್ರವಾಗಿ ಎಲ್ಲ ಸೃಜನಾತ್ಮಕ ಚಟುವಟಿಕೆಗಳಿಗೂ ಮಾತೃಸ್ಥಾನವಾಗಿತ್ತು. ಅಲ್ಲಿದ್ದಾಗಲೇ ನಾನು ನಿಜವಾದ ಭಾವಪ್ರಧಾನ ಕವನಗಳನ್ನು ರಚಿಸತೊಡಗಿದ್ದು."[5] ಭಾವತರಂಗದ ಹೆಸರೇ ಸೂಚಿಸುವಂತೆ ಅಡಿಗರ ಕಾವ್ಯ ಇಲ್ಲಿ ಭಾವದ ಅಲೆಯ ಮೇಲೆ ನಿರಾಯಾಸ ತೇಲಿದೆ.

ವಿಧಿಯೇ ನಿನ್ನಿದಿರು ಮಾರಾಂತು ಹೋರಾಡಿ ಕೆ
ಚ್ಚೆದೆತನದ ಬಲ್ಮೆಯನ್ನು ಬಿತ್ತರಿಪೆನು
ಪದವನಿಡುತೆನ್ನೆದೆಯ ಮೇಲೆ ತಾಂಡವವೆಸಗು
ಬೆದರುವೆನೆ ಬೆಚ್ಚುವೆನೆ ನಿನಗೆ ನಾನು

(ವಿಧಿಗೆ)

ಈ ಕೆಚ್ಚು, ಹೋರಾಟದ ಆಹ್ವಾನ ಅಡಿಗರ ಮನೋಭಾವಕ್ಕೆ ಸಹಜವಾದುದೆನ್ನಿಸಿದರೂ ಅದು ಪ್ರಕಟಗೊಂಡಿರುವ ಬಗೆ ಸಂಪೂರ್ಣವಾಗಿ ಭಾವವೇಶದಿಂದ ಬಂದದ್ದು. ಮುಂದೆ ಅಡಿಗರು ಗೆಲ್ಲಲು ಬಯಸಿದ್ದು ವಿರೋಧಿಸಿದ್ದು ಇಂಥ ರೀತಿಯನ್ನೇ. ದ್ವಿತೀಯ ಪ್ರಾಸ, ಮಾರಾಂತು, ಬಿತ್ತರಿಪೆನು, ಎಸಗು ಮೊದಲಾದ ಪದಪ್ರಯೋಗಗಳ ಬಳಕೆಯನ್ನು ನಾವಿಲ್ಲಿ ಗಮನಿಸಬೇಕು.

ಹೊಸಹಾದಿಯನು ಹಿಡಿದು ನಡೆಯಣ್ಣ ಮುಂದೆ
ಹೊಸ ಜೀವ ಹೊಸ ಭಾವ ಹೊಸ ವೇಗದಿಂದೆ
ಅಂಜದಿರು ಗೆಳೆಯ ಹೊಸಹಾದಿಯನು ಹಿಡಿಯೆ
ಮಂಜುತರ ಸೃಷ್ಟಿಗಾನದಲಿ ಮೈಮರೆಯೆ
ಎಂಜಲಾಗದ ಮಧುರ ಮಧುರಸವ ಸವಿಯೆ
ರಂಜಿಸುವ ಕಾಡುಮೇಡುಗಳನಂಡಲೆಯೆ

(ಹೊಸ ಹಾದಿ)

ಹೊಸ ಹಾದಿಯನ್ನು ಹಿಡಿಯಬೇಕೆಂಬ ಹಂಬಲವನ್ನು ವ್ಯಕ್ತಪಡಿಸುವ ಈ ಮಾತುಗಳೂ ಸಹ ಭಾವಾವೇಶದ ಮನೋಭಾವದ ನೆಲೆಯಿಂದಲೇ ಮೂಡಿಬಂದಿವೆ. ಅಡಿಗರ ಈ ಆವೇಶ ಉತ್ಸಾಹ ಕ್ರಮೇಣ ವ್ಯಾವಹಾರಿಕ ಜಗತ್ತಿನ ಆಕ್ರಮಣದಿಂದಾಗಿ ಆಘಾತಕ್ಕೊಳಗಾಗದಂತೆ ಕಂಡುಬರುತ್ತದೆ. ಬಾಲ್ಯದ ಮುಗ್ಧಲೋಕ, ಹದಿಹರಯದ ಹೊಂಗನಸಿನ ಜಗತ್ತು ಒಡೆದು ಛಿದ್ರವಾಗಿ ಕವಿಮನಸ್ಸು ವ್ಯಗ್ರವಾಗುತ್ತದೆ, ದಿಕ್ಕೆಡುತ್ತದೆ.

ಇಂಥ ಬಾಲ್ಯ ಕಳೆದ ಬಳಿಕ ಬಂದಾ ಹರೆಯ
ದುಲ್ಕೆಯಿದು ಥಟ್ಟನೆ ಪಳಂಚಲೆದೆಗೆ
ಅಲೆಅಲೆಗಳೆದ್ದು ಬಗೆ ಕದಡಿ ಹೋದುದು ಶಾಂತ
ಸರದೊಳಾವುದೋ ಕಲ್ಲು ಬಿದ್ದ ಹಾಗೆ

ಹಲವು ತಾನಗಳ ಸಂತಾನವಾದುದು ಮಧುರ
ನೊಳಬಾಳು; ಹರಯದೊಡ್ಡೋಲಗದಲಿ
ತನಗೆಲ್ಲಿ ನೆಲೆ? ಬಾಳಹಾಡಿಗೆಲ್ಲಿಹುದು ಬೆಲೆ?
ಎಂದು ಮುರುಟಿದನು ತನುಮನಗಳಲ್ಲಿ

(ಒಳತೋಟಿ)

ಅತ್ಯುತ್ಸಾಹ ಇಲ್ಲಿ ತಲ್ಲಣದ ದನಿಯಾಗುತ್ತದೆ. ಆವೇಶ ಹದಗೊಂಡು ನೋವು ಮನಸ್ಸನ್ನು ಆಕ್ರಮಿಸುತ್ತದೆ. 'ತನ್ನನೆಲೆ'ಯನ್ನು ಹುಡುಕಿಕೊಳ್ಳುವ ತವಕದಲ್ಲಿ ಕವಿಮನಸ್ಸು ಅಸ್ಪಷ್ಟಗೊಳ್ಳುತ್ತದೆ. ಇಂತಹ ಸ್ಥಿತಿಯಲ್ಲಿ ಸಹಜವಾಗಿ ತಂಪೆರೆದು ಸಮಾಧಾನ ನೀಡಬಹುದಾದ ಪ್ರೀತಿ ಸ್ನೇಹಗಳಿಂದಲೂ ಕವಿ ವಂಚಿತರಾದಂತೆ ತೋರುತ್ತದೆ.

ಕಂಡು ಮಾತನಾಡಿ ಮೈ
ದಡವಿ ನಗಿಸಿ ನಲಿವರಿಲ್ಲ
ಬೆಂದ ಬಗೆಗೆ ಸೊದೆಯನೆರೆದು
ಕಂಬನಿಯ ತೊಡೆವರಿಲ್ಲ

(ಗಾಳಿಯೊಡನೆ)

ಮಾನವ ಸಹಜ ಸಂಬಂಧಗಳಿಂದ ದೊರಕಬಹುದಾಗಿದ್ದ ಪ್ರೀತಿಯಿಂದ ವಂಚಿತರಾದ ಕವಿ ಹೇಳುತ್ತಾರೆ:

ಕಲ್ಲಾಗು ಕಲ್ಲಾಗು ಬಾಳ ಬಿರಿಗಾಳಿಯಲ್ಲಿ
ಅಲ್ಲಾಡದೆಯೆ ನಿಲ್ಲು ಜೀವ

(ಕಲ್ಲಾಗು ಕಲ್ಲಾಗು)

ಹತಾಶೆಯ ಸ್ಥಿತಿಯಲ್ಲಿ ಕವಿ ಮನಸ್ಸು ನಿಷ್ಠುರವಾಗಲು ಪ್ರಯತ್ನಿಸುತ್ತದೆ. ಇಂಥ ಸ್ಥಿತಿಯಲ್ಲಿ ಹರಯದ ಮನಸ್ಸನ್ನು ಸಹಜವಾಗಿ ಸೆಳೆಯಬಹುದಾಗಿದ್ದ ಹೆಣ್ಣಿನ ಸ್ನೇಹ ಕವಿಗೆ ಕಪಟವೆನ್ನಿಸುತ್ತದೆ. ಕವಿ ಅನುಭವಿಸುವ ಈ ಹತಾಶ ಸ್ಥಿತಿ ಸ್ವಾನುಕಂಪೆಯಾಗಿ ಕರುಣಾಜನಕ ಸ್ಥಿತಿ ತಲುಪದೆ, ತನ್ನನ್ನು ತಾನು ಅರ್ಥಮಾಡಿಕೊಳ್ಳುವ ಸಾಧನವಾಗಿ, ಏಕಾಗ್ರತೆಗೆ ಧ್ಯಾನಕ್ಕೆ ಹಿನ್ನೆಲೆಯಾಗಿ ನಿಲ್ಲುವಲ್ಲಿ ಅಡಿಗರ ಕಾವ್ಯದ ಸತ್ವವಿದೆ. ಈ ಹಂತದಲ್ಲಿ ಅಡಿಗರ ಕಾವ್ಯ 'ಬಗೆಯೊಳಗನೇ ತೆರೆದು ನೋಡುವ' ರೀತಿಯದಾಗುತ್ತದೆ.

## 3

ಒಲವೆಯೆಂದು ನಲವೆಯೆಂದು ನಾವು ಹುಸಿಯ ಮುಸುಕನು
ತೊಡಿಸಿ ನಿಜಕೆ ಮರೆವೆವು
ಒಲವು ಸುಳ್ಳು ನಲವು ಜಳ್ಳು ನಮ್ಮ ನಾವೆ ವಂಚಿಸುವೆವು
ಇಲ್ಲದುದನೆ ಹೊರೆವೆವು
ನಾನೆ ನನ್ನ ನಲ್ಲ ನಲ್ಲೆ ನಲುಮೆ ಒಲುಮೆ ಸಂಭ್ರಮ
ಉಳಿದುದೆಲ್ಲ ವಿಭ್ರಮ

(ಬಿಡುಗಡೆಯ ಹಾಡು)

ಎಂದು ಹೇಳುವಲ್ಲಿ ಕವಿ ಪ್ರೀತಿ-ಸ್ನೇಹಗಳ ಬದುಕನ್ನು ಭ್ರಮೆಯೆಂದು ಕರೆದು ಅದನ್ನು ನಿರಾಕರಿಸುತ್ತಾರೆ. ಅಷ್ಟೇ ಅಲ್ಲ ಇವುಗಳಿಂದೆಲ್ಲ ದೂರ ಹೋಗಲು ಬಯಸುತ್ತಾರೆ:

ಒಡಲೆಳಸುತಿಹುದು ಜೀವ ದೂರ ದೂರ ಜನವಿದೂರ
ವಿಪಿನದೆಡೆಗೆ

(ಒಡಲೆಳಸುತಿಹುದು)

ಸ್ನೇಹ-ಪ್ರೀತಿ, ಕೋಪ-ತಾಪ, ಅಳು-ನಗು ಎಲ್ಲವನ್ನೂ ನಿರಾಕರಿಸಿ ಜನವಿದೂರ ಹೋಗಬಯಸುವ ಈ ಕಾವ್ಯ ಬದುಕನ್ನೇ ನಿರಾಕರಿಸುವಂಥದಾಗಿ ತೋರುವುದು ಮೇಲ್ನೋಟಕ್ಕೆ ಸಹಜ. ಆದರೆ ಮೇಲ್ಪದರದ ಈ ಆಕ್ರೋಶದ ಹಿಂದಿನ ಆಳವಾದ ವಿಷಾದ ವಾಸ್ತವ ಬದುಕಿನ ಸ್ವೀಕರಣೆಯ ಕಡೆ ಮುಖಮಾಡಿದೆ. ಬದುಕಿನಲ್ಲಿ ಹಿರಿಯಾಸೆ ಹೊತ್ತ ಮಹತ್ವಾಕಾಂಕ್ಷೆಯ ಕವಿ ಮೋಹದ ಸುಳಿಯೊಳಗೆ ಸಿಲುಕಬಾರದೆಂಬ ಎಚ್ಚರದಿಂದ ಇವೆಲ್ಲವನ್ನೂ ಮೀರಲು ಬಯಸುತ್ತಾರೆ. ಕವಿಯ ಈ ಮಹತ್ವಾಕಾಂಕ್ಷೆ, ಉನ್ನತವಾದುದನ್ನು ತನ್ನದಾಗಿಸಿಕೊಳ್ಳಬೇಕೆಂಬ ಬಯಕೆ-ಇದರಿಂದಾಗಿ ಅಡಿಗರ ಕಾವ್ಯ ದೈನಿಕ

ಸಹಜ ವಿವರಗಳಿಂದ, ಬದುಕಿನ ವೈವಿಧ್ಯದಿಂದ, ಕೌಟುಂಬಿಕ ಜಗತ್ತಿನಿಂದ ವಂಚಿತವಾಗುತ್ತದೆ. ದಿನನಿತ್ಯದ ನೋವು, ನಲಿವು, ಉತ್ಸಾಹ, ಚೆಲುವು ಇವೆಲ್ಲವೂ ಅವರ ಕಾವ್ಯದಲ್ಲಿ ಇಲ್ಲವೆನ್ನುವಷ್ಟು ಕಡಿಮೆ. ಕವಿ ಬದುಕಿನ ಸ್ನೇಹ, ಪ್ರೀತಿ, ಚೆಲುವು, ಒಲವುಗಳಿಗೆ ಜಡರೇನೂ ಅಲ್ಲ. ಅವರ ಮನಸ್ಸು ಅದರಿಂದ ಮುದಗೊಳ್ಳುತ್ತದೆ. ಆದರೆ ಒಟ್ಟು ಕಾವ್ಯದ ಸಂದರ್ಭದಲ್ಲಿ ಅಂಥ ಕವಿತೆಗಳು ಅಮುಖ್ಯವಾಗುತ್ತವೆ. ಅಡಿಗರದು ಮುಖ್ಯವಾಗಿ ಧ್ಯಾನರೂಪೀ ಮನಸ್ಸು. ಅವರದೇ ಮಾತಿನಲ್ಲಿ ಹೇಳುವುದಾದರೆ- 'ಹುತ್ತಗಟ್ಟದ ಚಿತ್ತ.'

ಬದುಕಿನಲ್ಲಿ ತಾನು ಅನುಭವಿಸಿದ ನೋವು, ಅಪಮಾನ, ಪ್ರೀತಿಯ ಕೊರತೆ-ಸ್ವಭಾತಃ ಅಂತರ್ಮುಖಿಯಾದ ಕವಿಯನ್ನು ಮತ್ತಷ್ಟು ಅಂತರ್ಮುಖಿ ಯಾಗುವಂತೆ ಮಾಡುತ್ತವೆ. ಆದರೆ ಈ ಅಂತರ್ಮುಖತೆ ಹೊರಜಗತ್ತಿನ ಜೊತೆ ಸಂಪರ್ಕ ಕಡಿದುಕೊಳ್ಳದೆ, ಅದನ್ನು ಅರ್ಥಮಾಡಿಕೊಳ್ಳುವ ಸಮರ್ಥ ರೀತಿಯಲ್ಲಿ ಅಡಿಗರ ಕಾವ್ಯ ರೂಪುಗೊಳ್ಳುತ್ತದೆ. ಆದ್ದರಿಂದಲೇ ಅಡಿಗರ ನಂತರದ ಕಾವ್ಯ ಏಕಕಾಲಕ್ಕೆ ವೈಯಕ್ತಿಕವೂ, ಸಾಮಾಜಿಕವೂ ಆಗಿಬಿಡುತ್ತದೆ.

ಅನ್ಯರೊಳು ಲೋಪದೋಷಗಳ ಬೆದಕಲು ಬೆದರಿ
ತನ್ನೆದೆಯನೇ ಗುಡಿಸಲನುವಾದನು

(ಒಳತೋಟಿ)

ಈ ಸ್ವವಿಮರ್ಶೆ ಅಡಿಗರ ಕಾವ್ಯದ ಪ್ರಧಾನವಾದ ಅಂಶ. ತನ್ನನ್ನು ಅರ್ಥ ಮಾಡಿಕೊಳ್ಳುತ್ತಲೇ ಸಮಾಜವನ್ನೂ, ಬದುಕನ್ನೂ ಅರ್ಥಮಾಡಿ ಕೊಳ್ಳುವ ಕ್ರಮ-ಅಡಿಗರ ಕಾವ್ಯರೀತಿ. ಅವರ ಆರಂಭದ ಕವಿತೆಗಳನ್ನು ವೈಯಕ್ತಿಕ-ಸಾಮಾಜಿಕ ಕವಿತೆಗಳೆಂದು ಸರಳವಾಗಿ ವಿಭಾಗಿಸುವುದು ಸಾಧ್ಯ. ಆದರೆ ನಂತರದ ಕವಿತೆಗಳು ಈ ರೀತಿಯ ಸರಳ ವಿಂಗಡಣೆಗೆ ಸಿಕ್ಕಿದಂಥವು.

ಮರೆತುಬಿಡಲೊ ಮಗುವೆ ನಿನ್ನ ಒಲವಿನಂಗಭಂಗವ
ತೆರೆಯೋ ಅಂತರಂಗವ

ಅಲ್ಲಿ ಹುಡುಕು ಕಳಚಿಬಿದ್ದ ನಿನ್ನ ಜೀವರತ್ನವ
ತನ್ನತನದ ಸತ್ವವ

ಸಿಕ್ಕಬಹುದು; ಸಿಕ್ಕದಿದ್ದರೇನು? ಹುಡುಕಾಟವೇ
ಅದರ ದಿವ್ಯಪಾರವೇ

ಎದೆಗೆ ಬಲವ ಮತಿಗೆ ಧೃತಿಯ ಬಾಳಿಗೊಂದು ಶಾಂತಿಯ
ನೀಡಬಹುದು ಕಾಂತಿಯ

(ಬಿಡುಗಡೆಯ ಹಾಡು)

ಬಗೆ ತೆರೆದು ನೋಡುವ, ತನ್ನತನದ ಸತ್ವವನ್ನು ಕಂಡುಕೊಳ್ಳುವ ಮನೋಭಾವ ಮೊದಲ ಕವಿತೆ 'ನನ್ನ ನುಡಿ'ಯಲ್ಲಿಯೇ ಪ್ರಕಟವಾಗಿದ್ದರೂ, ಇಲ್ಲಿ ಅದು ಹರಳುಗಟ್ಟುತ್ತದೆ. ಕವಿಗೆ ಇಲ್ಲಿ ಗುರಿಯ ಜೊತೆಗೆ ಪ್ರಕ್ರಿಯೆಯೂ ಮುಖ್ಯ. ಗುರಿಯತ್ತ ಸಾಗುವುದೇ, ಆ ಹುಡುಕಾಟವೇ ಅರ್ಥಪೂರ್ಣವಾದುದೆಂದು ಕವಿ ನಂಬುತ್ತಾರೆ. ಅಡಿಗರ ಮುಂದಿನ ಕಾವ್ಯವೆಲ್ಲ ಈ 'ಹುಡುಕಾಟವೇ' ಆಗಿದೆ. ಹೀಗಾಗಿ ಅವರ ಕಾವ್ಯದಲ್ಲಿ ವೈವಿಧ್ಯ ವಿಸ್ತಾರ ಇಲ್ಲದಂತಾಯಿತು. ಆದರೆ ಆಳ ಲಭ್ಯವಾಯಿತು. ಈ ಹಂತದಲ್ಲಿ ಅವರ ಅಂತರಂಗದಲ್ಲಿ ಒಂದು ಬಗೆಯ ಕ್ರಾಂತಿ ನಡೆದು ಅವರ ಕಾವ್ಯ ಸಂಪೂರ್ಣವಾಗಿ ಹೊಸ ರೂಪ ತಾಳಿತು. ಈ ಹಂತದ ಅವರ ಕಾವ್ಯಕಲ್ಪನೆಯನ್ನು ಅಡಿಗರೇ ಹೀಗೆ ವಿವರಿಸಿದ್ದಾರೆ:[6]

1. ಮನಸ್ಸಿನ ಮೇಲ್ಪದರುಗಳನ್ನಷ್ಟೇ ಒಳಗೊಳ್ಳುವ ಹಾಗೆ ಕಾವ್ಯರಚನೆ ಯಾದರೆ ಉತ್ತಮ ಕಾವ್ಯ ಸಿದ್ಧಿಸುವುದಿಲ್ಲ. ಪ್ರಜ್ಞೆಯ ಜೊತೆಗೆ ಪ್ರಜ್ಞೆಯ ತಳದಲ್ಲಿ ಅಥವಾ ಅದರ ಮೇಲಕ್ಕೆ ಇರುವ ಎಲ್ಲ ಒಳ ಅಂಶಗಳೂ ಹಠಾತ್ತಾಗಿ ಸೇರಿದರೆ ಉತ್ತಮ ಕಾವ್ಯ ಆಗುತ್ತದೆ. ಇದಕ್ಕೆ ನಿರಂತರ ಶ್ರಮ ಹೇಗೋ ಹಾಗೇ ಅಸಾಧಾರಣವಾದ ತಾಳ್ಮೆಯೂ, ತಕ್ಕ ಮುಹೂರ್ತಕ್ಕಾಗಿ ಕಾಯುವುದೂ ಅಗತ್ಯ.

2. ಸಾಧಿಸಬೇಕಾದದ್ದು ಇತರರಿಗೆ ಮನೋರಂಜಕವಾಗುವ ಅಭಿವ್ಯಕ್ತಿ ಯನ್ನಲ್ಲ, ತನಗೆ ಅತ್ಯಂತ ಸಹಜವಾದುದನ್ನು, ಆಡುವ ಮಾತು ಅಂತರನುಭವದ ತದ್ರೂಪು ಆಗುವ ಹಾಗೆ, ಕವಿಯ ವ್ಯಕ್ತಿ ವಿಶೇಷವನ್ನು ತೆರೆಯುವ ಹಾಗೆ.

ಈ ಹಿನ್ನೆಲೆಯಲ್ಲಿ ಕವಿ ವ್ಯಕ್ತಿತ್ವದ ಒಳಹೊರಗುಗಳನ್ನು ಒಂದೇ ಬಿಂದುವಿನಲ್ಲಿ ಹಿಡಿಯುವ ಪ್ರಯತ್ನಕ್ಕೆ ತೊಡಗುತ್ತಾರೆ.

## 4

ಅಡಿಗರ ಕಾವ್ಯದುದ್ದಕ್ಕೂ ಕಂಡುಬರುವ ಪ್ರಧಾನ ಅಂಶಗಳಲ್ಲೊಂದು ಭೂಮಿ ಆಕಾಶಗಳ ಸೆಳೆತಕ್ಕೆ ಸಿಕ್ಕ ಮಾನವನ ಸ್ಥಿತಿ. ಇದು ದೇಹ-ಮನಸ್ಸುಗಳ ಸಂಘರ್ಷವೂ ಹೌದು; ಆದರ್ಶ ವಾಸ್ತವಗಳ ನಡುವಿನ ತಿಕ್ಕಾಟವೂ ಹೌದು. "ಇಲ್ಲಿ ಭೂಮಿಯೆಂದರೆ ಪೃಥ್ವಿ ಎಂದಷ್ಟೇ ತಿಳಿಯಬಾರದು. ಇಹ, ಇಲ್ಲಿಯದು, ಈ ನಾಗರೀಕತೆ, ಈ ನಾಗರೀಕತೆಯ ಎಲ್ಲ ವಿಪರ್ಯಾಸ ಗಳನ್ನೂ ಒಳಗೊಂಡದ್ದು ಎಂದು ತಿಳಿಯಬೇಕು."[7]

ಎತ್ತರೆತ್ತರಕ್ಕೆ ಏರುವ ಮನಕೂ
ಕೆಸರ ಲೇಪ ಲೇಪ
ಕೊಳೆಯ ಕೊಳಚೆಯಲಿ ಮುಳುಗಿ ಕಂಡನೋ
ಬಾನಿಗೊಂದು ಪೆಂಪ

(ಇದು ಬಾಳು)

ಆದರ್ಶ ಸಾಧನೆಯ ಧ್ರುವತಾರೆಯೊಂದು ಬಾ
ನಂಗಳದಿ ನಿಂತು ಕೈಮಾಡಿ ಕರೆಯುತಿಹುದು
ವಿಷಯ ಸುಖದಾಸೆ ಕಾರ್ಮುಗಿಲಾಗಿ ಹಗೆಯಾಗಿ
ದೃಷ್ಟಿಯನು ನೆಲದೆಡೆಗೆ ದೂಡುತಿಹುದು

(ಒಳತೋಟಿ)

ಅನೇಕ ಕವಿತೆಗಳಲ್ಲಿ ಮತ್ತೆ ಮತ್ತೆ ವ್ಯಕ್ತವಾಗುವ ಈ ಸಂಘರ್ಷ, ನೆಲಮುಗಿಲಿನ ಸೆಳೆತ ಸೇಂದ್ರಿಯವಾಗಿ ಅಭಿವ್ಯಕ್ತಿ ಪಡೆಯುವುದು 'ಮೋಹನ ಮುರಲಿ' ಕವಿತೆಯಲ್ಲಿ. ಅಡಿಗರ ಕಾವ್ಯ ಬೆಳವಣಿಗೆಯಲ್ಲಿ ಇದು ಮುಖ್ಯ ಕವಿತೆ. ಲೌಕಿಕ ಸುಖದಲ್ಲಿ ತೃಪ್ತಿ ಪಡೆದಿದ್ದ ಮನಸ್ಸು ಅಲೌಕಿಕದ ಸೆಳೆತಕ್ಕೆ ಒಳಗಾಗಿರುವ ಚಿತ್ರವನ್ನು ಈ ಕವಿತೆ ಸೊಗಸಾಗಿ ಚಿತ್ರಿಸುತ್ತದೆ. ಇದಿಷ್ಟೇ ಕವಿತೆಯ ಆಶಯವಾಗಿದ್ದರೆ 'ಮೋಹನ ಮುರಲಿ' ಮಹತ್ವದ್ದಾಗುತ್ತಿರಲಿಲ್ಲ.

ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ ?

(ಮೋಹನ ಮುರಲಿ)

ಅಲೌಕಿಕ ಹಂಬಲದ ಉತ್ಕಟ ಕ್ಷಣದಲ್ಲಿಯೇ ಕವಿಗೆ ಈ ಪ್ರಶ್ನೆಯೂ ಮೂಡುತ್ತದೆ. ಇಹದ ಬಿಡುಗಡೆಯ ಸುಖದ ಹಂಬಲವನ್ನು ತೀವ್ರವಾಗಿ ಚಿತ್ರಿಸುವಂತೆಯೇ ಇಲ್ಲಿಯ 'ಬಂಧನ'ದ ಪ್ರಿಯ ಅನುಭವವನ್ನೂ ಕವಿತೆ ದಟ್ಟವಾಗಿ ಚಿತ್ರಿಸುತ್ತದೆ. ಇವೆರಡರ ಸಂಘರ್ಷದಲ್ಲಿ ಕವಿತೆ ಪ್ರಾಮಾಣಿಕವೂ, ಶೋಧಕವೂ ಆಗುತ್ತದೆ.

ಮುಗಿಲಿನ ಹಂಬಲ ಸಹಜ ನಿಜ. ಈ ಹಂಬಲ ಬದುಕಿನಾಚೆ ಫಲಿಸುವಂಥದಲ್ಲ; ಈ ಬದುಕಿನಲ್ಲೇ ಆವಿಷ್ಕಾರವಾಗಬೇಕಾದುದು-ಇದು ಅಡಿಗರ ನಿಲುವು.

ಮರ್ತ್ಯಜೀವದ ತರುವೊಳಮರತೆಯ ಫಲ ತನಗೆ
ಸಿಕ್ಕಬೇಕೆಂದವನು ಭಾವಿಸಿದನು.

(ಒಳತೋಟಿ)

ಮರ್ತ್ಯದಲ್ಲಿಯೇ ಅಮರತೆಯು ಫಲಿಸಬೇಕೆಂಬುದು ಅಡಿಗರ ಕಾವ್ಯದರ್ಶನ. ಆದ್ದರಿಂದಲೇ ಕವಿ ಬಾನಿನೂರಿನಲ್ಲಿ ನೆಲಸಿರುವ ಒಕ್ಕಲನ್ನು ಈ ನೆಲಕ್ಕೆ ಆಹ್ವಾನಿಸುತ್ತಾರೆ (ಅತಿಥಿಗಳು). ಕ್ಷಣ ಬಂದು ಮಿಂಚಿ ಮರೆಯಾಗುವ ಅನೂಹ್ಯ ಅತಿಥಿಗಳನ್ನು ಇಲ್ಲೇ ನೆಲೆನಿಲ್ಲುವಂತೆ ಕೇಳಿಕೊಳ್ಳುತ್ತಾರೆ. ಈ ಮಣ್ಣಿನ ಮನದಲ್ಲಿ ಹೊನ್ನನ್ನು ಬೆಳೆಯಬಲ್ಲಂಥ ಅಪೂರ್ವ ತೇಜದ ಮಾಂತ್ರಿಕರನ್ನು ಕವಿ ಆಹ್ವಾನಿಸುತ್ತಾರೆ.

ಅಡಿಗರ ಈ ಶೋಧನೆ-ಮರ್ತ್ಯದಲ್ಲಿಯೇ ಅಮರತೆಯ ಫಲ ಸಾಧಿಸುವ ಶೋಧನೆ-ಉದ್ದಕ್ಕೂ ಆತ್ಮಶೋಧನೆಯಾಗಿಯೇ ಬೆಳೆಯುತ್ತ ಹೋಗುತ್ತದೆ. ಈ ನೆಲದಲ್ಲಿಯೇ ಹುಟ್ಟಿದ ರಾಮಕೃಷ್ಣ, ಬುದ್ಧ, ಗಾಂಧಿ ದೊಡ್ಡವರಾದರು, ಮಹಾತ್ಮರಾದರು. ನಾನು ಮಾತ್ರ ಹಾಗೆಯೇ ಉಳಿದೆನೇಕೆ?

ನಾನು ಅವನು ಒಂದೆ ಲೋಹ
ಕಬ್ಬಿಣ-ಕರಿ ಕಬ್ಬಿಣ
ಯಾವ ರಸವು ಸೋಂಕಿತವನ ?
ಯಾವ ಬೆಂಕಿ ತಾಕಿತವನ ?
ಸಾಯುವಾಗ ಎಂಥ ಗಟ್ಟಿ ಚಿನ್ನವಾಗಿ ಸಾಗಿದ ;
ನಾನು ಮಾತ್ರ ಆಗ ಹೇಗೋ ಹಾಗೆಯೇ ಈಗಲೂ

(ನನ್ನ ಅವತಾರ)

ಕಬ್ಬಿಣ ಚಿನ್ನವಾಗಿ ರೂಪುಗೊಂಡ ಬಗೆ ವ್ಯಕ್ತಿತ್ವ ಮಾಗಬೇಕಾದ ರೀತಿಯನ್ನು ಹೇಳುತ್ತದೆ. ಇದು ಹೇಗೆ ಸಾಧ್ಯ? ಯಾವ ಸಿದ್ಧ ಮಾರ್ಗದರ್ಶನವೂ ಈತನ ಸಮಸ್ಯೆಗೆ ಪರಿಹಾರ ಒದಗಿಸುವುದಿಲ್ಲ. ಈತನನ್ನು ಕರೆದುಕೊಂಡು ಹೋಗಬೇಕಾಗಿದ್ದ ರೈಲು ಈತ ಕಾಯುತ್ತಿದ್ದ ನಿಲ್ದಾಣಕ್ಕೆ ಬರುವುದೇ ಇಲ್ಲ. (ಹಿಮಗಿರಿಯ ಕಂದರ) ನಿಲ್ದಾಣಕ್ಕೂ, ರೈಲಿಗೂ ನಡುವೆ ಬಿರುಕು ಬಿಟ್ಟಿದೆ. ಇಂದ್ರಿಯ ಜೀವನಕ್ಕೂ, ಅಲೌಕಿಕದ ಆಕರ್ಷಣೆಗೂ ನಡುವೆ ಬಿರುಕು ಉಂಟಾದ ಸ್ಥಿತಿಯಲ್ಲಿ ಅವನಿಗನ್ನಿಸುತ್ತದೆ-

ಇವಳೆದೆಗೆ ಬೇರಿಳಿದ ಕಾಲು ನನ್ನದು
ಬರಿದೆ ನಕ್ಷತ್ರ ಲೋಕಕ್ಕೂ ರೈಲುಬಿಟ್ಟೆ

(ಭೂಮಿಗೀತ)

ಹಿಡಿದ ಗುರಿ ಸಾಧಿಸಬೇಕೆಂಬ ಹಟದಲ್ಲಿ ಕವಿ ಮನಸ್ಸು ಮತ್ತೆ ಮತ್ತೆ ಜಿಜ್ಞಾಸೆಗೊಳಗಾಗುತ್ತದೆ. ತನ್ನ ಇಡೀ ವ್ಯಕ್ತಿತ್ವವನ್ನು ಪಣಕ್ಕೊಡ್ಡಿ ಕವಿ ಶೋಧನೆಗೆ ತೊಡಗುತ್ತಾರೆ. ಗುರಿ ಸಾಧಿಸಬೇಕಾದರೆ ತನ್ನ ಒಟ್ಟು ವ್ಯಕ್ತಿತ್ವದಲ್ಲೇ, ಒಟ್ಟು ಜೀವನದಲ್ಲೇ ಸಾರ್ಥಕ ಮಾರ್ಪಾಟಾಗಬೇಕು ಎಂಬ ಅರಿವು ಮೂಡುತ್ತದೆ. ಅದಕ್ಕಾಗಿ ಕವಿ ಪ್ರಾರ್ಥಿಸುತ್ತಾರೆ:

ಕಲಿಸು ಬಾಗದೆ ಸೆಟೆವುದನ್ನು, ಬಾಗುವುದನ್ನು
ಹೊತ್ತಿನ ಮುಖಕ್ಕೆ ಶಿಖೆ ಹಿಡಿವುದನ್ನು, ಹಾಗೇ
ಗಾಳಿಗಲ್ಲಾಡಿ ಬಳುಕಾಡಿ ತಾಳುವುದನ್ನೂ
ಈ ಅರಿವು ಅರೆಹೊರೆದ ಮೊಟ್ಟೆ, ದೊರೆ; ಚಿಪ್ಪೊಡೆದು
ಬರಲಿ ಪರಿಪೂರ್ಣಾವತಾರಿ ವಿನತಾ ಪುತ್ರ

(ಪ್ರಾರ್ಥನೆ)

ವಿನತೆಯ ಅವಸರದಲ್ಲಿ ತೊಡೆ ಹೊರೆಯದೆ ಹುಟ್ಟಿದ ಅರ್ಧಾವತಾರಿ ಅರುಣನಂತಾಗದೆ ಪರಿಪೂರ್ಣಾವತಾರಿ ಗರುಡನಂತಾಗಬೇಕೆಂಬುದು ಕವಿಯ ಪ್ರಾರ್ಥನೆ. ಈ ವಿವೇಕದ ಪ್ರಾರ್ಥನೆ ಜೀವನತತ್ವವೂ ಹೌದು; ಕಾವ್ಯದರ್ಶನವೂ ಹೌದು. ಅನಂತಮೂರ್ತಿಯವರು ಹೇಳುವ ಹಾಗೆ 'ಪ್ರಾರ್ಥನೆ' ಅಡಿಗರ ಒಟ್ಟು ಕಾವ್ಯದ ಮ್ಯಾನಿಫೆಸ್ಟೋ ಎನ್ನಬಹುದು.

ಈ ಪ್ರಾರ್ಥನೆ ಸಾಕಾರವಾಗಲು, ಬದುಕನ್ನು ನಿಜವಾಗಲು-ಪರಂಪರೆಯ ಸತ್ವವನ್ನೂ, ಅಂತಃಶಕ್ತಿಯನ್ನೂ, ಕನಸು-ವಾಸ್ತವಗಳ ಹಠಾತ್ ಸಂಯೋಗವನ್ನೂ ವರ್ತಮಾನದಲ್ಲಿ ಸಾರ್ಥಕಪಡಿಸಿಕೊಳ್ಳಬೇಕಾದ ಆಗತ್ಯವನ್ನು ಕವಿ ಮನಗಾಣುತ್ತಾರೆ.

ಅಗೆವಾಗ್ಗೆ ಮೊದಲ ಕೋಶಾವಸ್ಥೆ ಮಣ್ಣು
ಕೆಳಕ್ಕೆ ತಳಕ್ಕೆ ಗುದ್ದಲಿಯೊತ್ತಿ ಕುಕ್ಕಿದರೆ
ಕಂಡೀತು ಗೆರೆಮಿರಿವ ಚಿನ್ನದದಿರು
ಹೊರತೆಗೆದು ಸುಟ್ಟು, ಸೋಸುವಪರಂಜಿ ವಿದ್ಯೆಗಳ
ಇನ್ನಾದರೂ ಕೊಂಚ ಕಲಿಯಬೇಕು
ಹೊನ್ನ ಕಾಯಿಸಿ ಹಿಡಿದು ಬಡಿದಿಷ್ಟದೇವತಾ
ವಿಗ್ರಹಕ್ಕೊಗ್ಗಿಸುವ ಅಸಲು ಕಸಬು.

(ಭೂತ)

"ರೂಢಿಯಾದದ್ದರ ಒಳಹೊಕ್ಕು ಸಿಡಿಮದ್ದಿನ ಹಾಗೆ ಸ್ಫೋಟಿಸಿ ಅದನ್ನು ಅಸ್ತವ್ಯಸ್ತಗೊಳಿಸದೆ ಹೊಸ ಕಾಲದ, ಹೊಸ ಬದುಕಿಗೆ ಅಗತ್ಯವಾದ ಮೌಲ್ಯಗಳನ್ನು ಬೆಳೆಯುವುದು ಸಾಧ್ಯವಾಗುವುದಿಲ್ಲ. ಆದಕಾರಣ ಯಾಂತ್ರಿಕ ವ್ಯವಸ್ಥೆಯಲ್ಲಿ ಸೇರಿದ ನಮ್ಮ ಸಂಸ್ಕೃತಿಯ ಮೌಲ್ಯಗಳ ತಿರುಳನ್ನು ಭೇದಿಸಿ ಮೂಲಬೀಜಗಳನ್ನು ಹೊರತೆಗೆದು ಅದಕ್ಕೆ ಇಂದಿನ ತಕ್ಕ ರೂಪಗಳನ್ನು ಸಿದ್ಧಪಡಿಸುವುದೇ ಬುದ್ಧಿಯ ಮೂಲಕ ಕೆಲಸ ಮಾಡುವವನ ಕರ್ತವ್ಯ."[7]

ಹೀಗೆ ತನ್ನ ಇಷ್ಟದೇವತಾ ವಿಗ್ರಹವನ್ನು ರೂಪಿಸಿಕೊಳ್ಳಲು ಸಹಜವಾಗಿಯೇ ವಿಶೇಷ ಸಾಮರ್ಥ್ಯಬೇಕು, ಶ್ರದ್ಧೆಬೇಕು, ಸಂಕಲ್ಪಬಲ ಬೇಕು. ಸಂಕಲ್ಪಬಲದಿಂದ ಮಾತ್ರ ವ್ಯಕ್ತಿ ಔನ್ನತ್ಯವನ್ನು ಸಾಧಿಸುವುದು ಸಾಧ್ಯ. ಸಾಮಾನ್ಯವಾಗಿ ಹುಟ್ಟಿದ ರಾಮ ಈ ನೆಲದ ಪ್ರಜ್ಞೆಯನ್ನು ಹೀರಿ ನಿಂತು ಸಂಕಲ್ಪಬಲದಿಂದ ಉನ್ನತ ಚೇತನವಾಗಿ ಬೆಳೆದುನಿಂತ; ಅಂತರಂಗ ಪರಿವೀ

ಕ್ಷಣೆಯ ಅಗ್ನಿದಿವ್ಯದಲ್ಲಿ ತನ್ನನ್ನು ತಾನು ಕಂಡುಕೊಂಡು ಪುರುಷೋತ್ತಮನಾದ.

ಹುತ್ತಗಟ್ಟದೆ ಚಿತ್ತ ಮತ್ತೆ ಕೆತ್ತೀತೇನು
ಪುರುಷೋತ್ತಮನ ಆ ಅಂಥ ರೂಪರೇಷೆ

(ಶ್ರೀರಾಮನವಮಿಯ ದಿವಸ)

ಸಾಮಾನ್ಯ ಮನುಷ್ಯನಾಗಿ ಹುಟ್ಟಿ ಪುರುಷೋತ್ತಮನಾಗಿ ಬೆಳೆದ ರಾಮನ ಬದುಕಿನಲ್ಲಿ, ಆತನ ವ್ಯಕ್ತಿತ್ವ ವಿಕಾಸ ಕ್ರಮದಲ್ಲಿ ಅಡಿಗರಿಗೆ ಆಸಕ್ತಿ; ಕಪಿಚೇಷ್ಟೆಯ ವ್ಯಕ್ತಿ ತನ್ನಲ್ಲೇ ಹತ್ತಿ ಉರಿದು ಹನುಮನ ಚೇತನವನ್ನು ಒಳಗೊಳ್ಳುವುದು ಸಾಧ್ಯವೆಂದು ಅವರ ನಂಬುಗೆ (ವರ್ಧಮಾನ). ಪ್ರತಿಯೊಬ್ಬ ವ್ಯಕ್ತಿಯೂ ತನಗೆ ತಾನೇ ವಿಕಾಸವಾಗಬೇಕು. ಈ ನೆಲದಲ್ಲಿಯೇ, ನೆಲದ ಪ್ರಜ್ಞೆ ಹೀರಿಯೇ ಬೆಳೆದು ದೊಡ್ಡವನಾಗಬೇಕು, ಉನ್ನತ ಚೇತನವಾಗಿ ರೂಪುಗೊಳ್ಳಬೇಕು-ಇದೇ ಅಡಿಗರ ದರ್ಶನ.

"ಅಡಿಗರ ದೃಷ್ಟಿಯಲ್ಲಿ ಸಮಾಜದ ಮೂಲ ಘಟಕ ವ್ಯಕ್ತಿ. ಯಾವ ಬಂಡಾಯವಾಗುವುದಿದ್ದರೂ ಅದು ವ್ಯಕ್ತಿಯಲ್ಲಿ. ಈ ಬಂಡಾಯದ ಕಲ್ಪನೆ ಕೂಡ ವಿಶಿಷ್ಟವಾದದ್ದು. ಸೃಷ್ಟಿಯಲ್ಲಿನ ಪ್ರತಿಯೊಂದು ಚೇತನವೂ ಬೆಲೆಯುಳ್ಳದ್ದು, ಮುಂದೆ ವಿಕಾಸಗೊಂಡು ಪರಿಪೂರ್ಣಾವಸ್ಥೆಗೆ ಸಲ್ಲಬಹುದಾದ ಸ್ವವಿಶಿಷ್ಟವಾದ ಶೀಲದ್ರವ್ಯವೇನನ್ನೋ ಪಡೆದು ಬಂದಿರುವಂಥದು. ಅದನ್ನು ಕಂಡುಕೊಳ್ಳುವುದೇ, ಬೆಳೆಸಿಕೊಳ್ಳುವುದೇ, ಫಲಾವಸ್ಥೆಗೆ ಮುಟ್ಟಿಸುವುದೇ ಬದುಕಿನ ಗುರಿ. ಅದೇ ನಿಜವಾದ ಸ್ವಸ್ವರೂಪ ದರ್ಶನ, ಆತ್ಮಸಾಕ್ಷಾತ್ಕಾರ."[8]

"ಮಾನವನ ಹೆಚ್ಚಳ ಅವನ ವ್ಯಕ್ತಿತ್ವದ ವಿಕಾಸದಲ್ಲಿದೆ. ಪ್ರತಿಯೊಬ್ಬರ ವ್ಯಕ್ತಿತ್ವ ಬದುಕಲ್ಲಿ ಪ್ರತ್ಯಕ್ಷವಾದರೆ, ಬದುಕಿಗೆ ವಿವಿಧತೆ ಬರುತ್ತದೆ. ಸಮಾಜ ಈ ವ್ಯಕ್ತಿತ್ವದ ಪ್ರತ್ಯಕ್ಷತೆಗೆ ವಿರೋಧವಾಗಿ ಅಡಚಣೆಗಳನ್ನು ಒಡ್ಡುತ್ತಲೇ ಇರುತ್ತದೆ. ಅದಕ್ಕಾಗಿ ಸತತ ಬಂಡಾಯ ಮಾಡಬೇಕು. ಅಲ್ಲದೆ, ಅಡಿಗರ ಮಾಗಿದ ದೃಷ್ಟಿಯಲ್ಲಿ ಕ್ರಾಂತಿ ವೈಯಕ್ತಿಕವಾಗಿಯೇ ಆಗಬೇಕು. ಮುಂದೆ ಜೊತೆ ಕ್ರಾಂತಿ ಮಾಡುವುದು ನಿರರ್ಥಕವಷ್ಟೇ ಅಲ್ಲ, ಅದು ಬೇಕು-ಬೇಡಗಳನ್ನು ದಾಟಿ, ದಬ್ಬಾಳಿಕೆಯಲ್ಲಿ, ಪೀಡಕ ರಾಜ್ಯದಲ್ಲಿ ಕೊನೆಯಾಗುತ್ತದೆ. ಈ ಸತ್ಯ ನಮಗೆ ಕಾಣುವ ಹಾಗೆ, ಸ್ಪರ್ಶದ ಅನುಭವಕ್ಕೆ ಬರುವ ರೀತಿಯಲ್ಲಿ ಅಡಿಗರ ರೂಪಕಗಳಲ್ಲಿ ಅವತರಿಸುತ್ತದೆ. ನಿಜವಾದ ಪ್ರಜಾರಾಜ್ಯದಲ್ಲಿ ಪ್ರತಿಯೊಬ್ಬನಿಗೂ ತನಗೆ ತಕ್ಕ ಸಿಂಹಾಸನವಿದೆ. ಅದನ್ನು ದೊರಕಿಸಿಕೊಳ್ಳಬೇಕು, ದಂಗೆ ಮಾಡಿ, ಚಿನ್ನ, ಮಣ್ಣು, ಮರದ್ದಾಗಬಹುದು ಸಿಂಹಾಸನ-ಡೆಮಾಕ್ರಸಿಯಲ್ಲಿ ಪ್ರತಿ ಪ್ರಜೆಯೂ ರಾಜ. ಈ ಅರ್ಥವನ್ನು ಅಡಿಗರು ಎಷ್ಟು ಸೊಗಸಾಗಿ ಚಿತ್ರಿಸುತ್ತಾರೆ."[9]

ದಂಗೆಯೇಳಬೇಕಾಗುತ್ತಲೇ ಇರುತ್ತದೆ
ತನ್ನೊಳಗೆ ತನ್ನ ನಿಜದ ಸೆಲೆ ಪುಟಿವನಕ

(ಬಂಡಾಯ)

ವ್ಯಕ್ತಿತ್ವದ ಸಿದ್ಧಿ ಸಿದ್ಧಿಸುವವರೆಗೆ ಈ ಬಂಡಾಯ ನಿರಂತರ, ಹೋರಾಟ ಅನಿವಾರ್ಯ.

ಅಂತರಂಗದ ಶೋಧನೆಯಂತೆಯೇ ಬಹಿರಂಗದ ತಿಳುವಳಿಕೆಯೂ ವ್ಯಕ್ತಿತ್ವ ವಿಕಾಸದ ಮುಖ್ಯ ಆಯಾಮ. 'ಪರಿಪೂರ್ಣತೆ' ಒಳಹೊರಗುಗಳ ಸಂಯೋಗದಲ್ಲಿ. ಈ ವೈಯಕ್ತಿಕ-ಸಾಮಾಜಿಕ ಏಕತ್ರ ಬಿಂದುವಿನ ಮತ್ತೊಂದು ಮಜಲು-'ಚಿಂತಾಮಣಿಯಲ್ಲಿ ಕಂಡ ಮುಖ'. 'ಕೂಪ ಮಂಡೂಕ'ದಲ್ಲಿ ತನ್ನೊಳಗಿನ ಚೇತನವನ್ನು ಗೆಳೆಯನೆಂದು ಕರೆದ ಜಿ.ಎಸ್. ಸಿದ್ಧಲಿಂಗಯ್ಯ ಅಡಿಗರು ಅದೇ ಚೇತನವನ್ನು ಇಲ್ಲಿ ಸಭೆಯ ಮಧ್ಯೆ ಸಾಮಾಜಿಕವಾಗಿ ಗುರ್ತಿಸುತ್ತಾರೆ. ವ್ಯಕ್ತಿತ್ವ ವಿಕಾಸದ ಹಾದಿಯಲ್ಲಿ ಸಾಮಾಜಿಕವಾದ ತನ್ನ ಮುಖವನ್ನೂ ಹುಡುಕಿಕೊಳ್ಳಬೇಕಾಗುತ್ತದೆ ಎಂಬ ದರ್ಶನ ಅವರ ಕಾವ್ಯ ಬೆಳವಣಿಗೆಯ ಮತ್ತೊಂದು ಮುಖ್ಯ ಹಂತವೆನ್ನಬಹುದು.

ಇಡೀ ಮಾನವ ಜನಾಂಗದ ಇತಿಹಾಸವನ್ನೂ ಸಮಕಾಲೀನ ಸ್ಥಿತಿಯನ್ನೂ ಭಿತ್ತಿಯಾಗುಳ್ಳ ಅಡಿಗರ ಕಾವ್ಯ 'ವ್ಯಕ್ತಿತ್ವ ವಿಕಾಸದ ಹೋರಾಟ'ವನ್ನು ಚಿತ್ರಿಸುವ ಮಹಾಕಾವ್ಯವಾಗಿದೆ.

❑

1. ಮೊದಲ ಮಾತು: ಸಮಗ್ರ ಕಾವ್ಯ, ಗೋಪಾಲಕೃಷ್ಣ ಅಡಿಗ: ಪುಟ.ii
2. ಅದೇ.
3. ಜಿ.ಎಚ್. ನಾಯಕ, ನಿರಪೇಕ್ಷ; ಪುಟ 35
4. ಮೊದಲಮಾತು; ಸಮಗ್ರ ಗದ್ಯ, ಗೋಪಾಲಕೃಷ್ಣ ಅಡಿಗ.
5. ಅದೇ
6. ಅದೇ
7. ಅಕ್ಷರ ಹೊಸಕಾವ್ಯ, ಸಂ.ಪಿ. ಲಂಕೇಶ್, ಪುಟ xxiii
8. ಮೊದಲ ಮಾತು ಸಮಗ್ರ ಕಾವ್ಯ, ಗೋಪಾಲಕೃಷ್ಣ ಅಡಿಗ, ಪುಟ iii
9. ಚಿಂತಾಮಣಿಯಲ್ಲಿ ಕಂಡ ಮುಖ, ಮುನ್ನುಡಿ -1, ಪುಟ 11. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ.
10. ಅಡಿಗರ ಸಮಸ್ತ ಸಾಹಿತ್ಯ, ಮುನ್ನುಡಿ, ಪುಟ ಪಿ. ಶ್ರೀನಿವಾಸರಾವ್.

# ಸಿದ್ಧಯ್ಯ ಪುರಾಣಿಕ

ಜಿ.ಎಸ್. ಸಿದ್ಧಲಿಂಗಯ್ಯ

ತರಗತಿಯಲ್ಲಿ ವಿದ್ಯಾರ್ಥಿಗಳನ್ನೆಲ್ಲ ಉದ್ದೇಶಿಸಿ ಉಪಾಧ್ಯಾಯರು ಒಂದು ಪ್ರಶ್ನೆ ಹಾಕಿದರು. "ನಿಮಗೇನು ಬೇಕು, ಅದನ್ನು ಬರೆದು ತೋರಿಸಿ." ಈ ಪ್ರಶ್ನೆಗೆ ನಾನಾ ರೀತಿಯ ಉತ್ತರಗಳು ಬಂದಿದ್ದವು. ಒಬ್ಬರು ನನಗೆ ಬಳಪಬೇಕು ಎಂದರೆ ಮತ್ತೊಬ್ಬರು ಸ್ಲೇಟು ; ಇನ್ನೊಬ್ಬರು ಮತ್ತೊಂದು; ಹೀಗೆಯೇ ಅದು ಇದು ಎಂದು ನೂರಾರು ಬೇಕುಗಳನ್ನು ಗುರುಗಳೆದುರು ಇಟ್ಟರು. ಇವನ್ನೆಲ್ಲ ನೋಡುತ್ತಿದ್ದ ಗುರುಗಳಿಗೆ ಬೇಸರವೂ ಆಗಿರಬೇಕು, ಎಂಥ ವಿದ್ಯಾರ್ಥಿಗಳನ್ನು ಪಡೆದಿದ್ದೇನಲ್ಲ ಎಂದು. ಆದರೆ ಮಧ್ಯದಲ್ಲೇ ಅವರ ಹುಬ್ಬು ಮೇಲೇರಿದವು; ಕಣ್ಣು ಅರಳಿದವು, ವಿಸ್ಮಯ ಹಾಗೂ ಮೆಚ್ಚುಗೆಗಳಿಂದ. ಒಬ್ಬ ವಿದ್ಯಾರ್ಥಿ ಬರೆದಿದ್ದ : "ನನಗೆ ವಿದ್ಯೆ ಬೇಕು" ಎಂದು. ಅಭಿಮಾನದಿಂದ ಗುರುಗಳು ಆ ವಿದ್ಯಾರ್ಥಿಯನ್ನೆ ದಿಟ್ಟಿಸಿ ನೋಡಿದರು. ಆ ವಿದ್ಯಾರ್ಥಿಯೇ ಮುಂದೆ ಡಾ. ಸಿದ್ಧಯ್ಯ ಪುರಾಣಿಕ ಐ.ಎ.ಎಸ್. ಎಂದು ಖ್ಯಾತನಾಮರಾದ ವ್ಯಕ್ತಿ.

ಕನ್ನಡದ ಕೆಲಸ ಮಾಡಿರುವವರನ್ನು ಹಲವು ರೀತಿಗಳಲ್ಲಿ ವರ್ಗೀಕರಿಸುವುದುಂಟು. ಅಧ್ಯಾಪಕರಾಗಿದ್ದು ಕನ್ನಡದ ಕೆಲಸ ಮಾಡಿದವರು; ಆಡಳಿತಾಧಿಕಾರಿ ಗಳಾಗಿದ್ದು ಕನ್ನಡದ ಕೆಲಸ ಮಾಡಿದವರು ಎಂದು. ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ನವರತ್ನರಾಮರಾವ್ ಇಂಥವರು ಆಡಳಿತಾಧಿಕಾರಿಗಳಾಗಿದ್ದು ಕನ್ನಡದ ಕೆಲಸ ಮಾಡಿದವರು. ಡಾ. ಸಿದ್ಧಯ್ಯ ಪುರಾಣಿಕರೂ ಇದೇ ವರ್ಗಕ್ಕೆ ಸೇರಿದವರು. ವಾಸ್ತವವಾಗಿ ಸಿದ್ಧಯ್ಯ ಪುರಾಣಿಕರು ನೌಕರಿಗೆ ಸೇರುವ ಸಂಕಲ್ಪ ಮಾಡಿದವರೇನಲ್ಲ. ಅವರ ತಂದೆಯವರ ಆಸೆಯಾದರೂ ತಮ್ಮ ಸುಪುತ್ರ ಒಬ್ಬ ವಕೀಲನಾಗಲಿ ಎಂದಿತ್ತು. ಮತ್ತೊಬ್ಬರಿಗೆ ಇವರು ಉಪಾಧ್ಯಾಯ ವೃತ್ತಿಯನ್ನು ಸ್ವೀಕರಿಸಲಿ ಎಂಬ ಭಾವನೆಯಿತ್ತು. ವಾಸ್ತವವಾಗಿ ಆದದ್ದೇ ಬೇರೆ.

ಸಿದ್ಧಯ್ಯ ಪುರಾಣಿಕರು ಜನಿಸಿದ್ದು 18-6-1918ರಲ್ಲಿ. ರಾಯಚೂರು ಜಿಲ್ಲೆಯ ಯಲಬುರಗಿ ತಾಲ್ಲೂಕಿನ ದ್ಯಾಂಪುರ ಇವರು ಹುಟ್ಟಿದ ಊರು. ಶ್ರೀ ಪಂಡಿತ ಕಲ್ಲಿನಾಥ ಶಾಸ್ತ್ರೀ ಪುರಾಣಿಕ ಹಾಗೂ ಶ್ರೀಮತಿ ದಾನಮ್ಮ ಪುರಾಣಿಕರಿಗೆ ಸಂಜನಿಸಿದ ಐದು ಮಕ್ಕಳಲ್ಲಿ ಹಿರಿಯವರು ಡಾ. ಸಿದ್ಧಯ್ಯ ಪುರಾಣಿಕರು.

ಡಾ. ಸಿದ್ಧಯ್ಯ ಪುರಾಣಿಕರು ಬಾಲ್ಯದಿಂದಲೆ ಉತ್ತಮವಾದ ಸಾಂಸ್ಕೃತಿಕ ವಾತಾವರಣ ಪಡೆದಿದ್ದರು. ಅವರ ತಂದೆಯವರಾದ ಪಂಡಿತ ಕಲ್ಲಿನಾಥ ಶಾಸ್ತ್ರಿಗಳು ನಾಲ್ಕನೆಯ ಇಯತ್ತೆಯವರೆಗೆ ಮಾತ್ರ ಕಲಿತಿದ್ದರೂ ಪ್ರತಿಭಾನ್ವಿತ ರಾದವರು. ಕಾವ್ಯ ನಾಟಕ ರಚನೆಗಳಲ್ಲಿ ಕೈಯಾಡಿಸಿದವರು. ಒಂದರ್ಥದಲ್ಲಿ ತಂದೆಯೇ ಸಿದ್ಧಯ್ಯ ಪುರಾಣಿಕರ ವಿದ್ಯಾಗುರುಗಳೆನ್ನಬೇಕು. ಮನೆಯಲ್ಲೆ ಜೈಮಿನಿ ಭಾರತ, ಶಬರಶಂಕರ ವಿಳಾಸ, ಪ್ರಭುಲಿಂಗ ಲೀಲೆ ಮೊದಲಾದ ಕಾವ್ಯಗಳನ್ನೂ ವ್ಯಾಕರಣ ಛಂದಸ್ಸು ಶಾಸ್ತ್ರಗಳನ್ನೂ ವಚನ, ಸುಭಾಷಿತಗಳು, ಹಾಡುಗಳು, ಶತಕ ಮೊದಲಾದವುಗಳನ್ನು ಕಲಿಸಿದರು. ಒಳ್ಳೆಯ ಪ್ರವಚನ ಕಾರರೂ ಆಗಿದ್ದುದರಿಂದ ಮನೆಯಲ್ಲಿ ಆಗಾಗ ಪ್ರವಚನ ಹಾಗೂ ಕಾವ್ಯಾಧ್ಯಯನಗಳೂ ನಡೆಯುತ್ತಿದ್ದು ಪುರಾಣಿಕರ ಮನಸ್ಸಿನ ಮೇಲೆ ಅಪೂರ್ವವಾದ ಪ್ರಭಾವವನ್ನು ಬೀರಿದ್ದವು. ತಮ್ಮ ತಂದೆಯವರು ಬರೆದು ಆಡಿಸುತ್ತಿದ್ದ ನಾಟಕ, ಆಗಾಗ ರಚಿಸಿ ಹಾಡುತ್ತಿದ್ದ ಕವಿತೆ ಇವುಗಳನ್ನು ಕೇಳಿದಾಗಲೆಲ್ಲ ಪುರಾಣಿಕರ ಮನಸ್ಸಿನಲ್ಲಿ ತಾನೂ ಹಾಗಾಗಬೇಕೆನ್ನುವ ಹಂಬಲ.

ಇವರ ಅಜ್ಜಂದಿರಾದ ಕವಿರತ್ನ ಚೆನ್ನಕವಿಗಳಂತೂ ಕವಿಗಳೆಂದೇ ಖ್ಯಾತ ರಾದವರು. ಸೋದರಮಾವನಾದ ಕಾಲ ಕಾಲೇಶ್ವರ ಶಾಸ್ತ್ರಿಗಳಂತು ದೊಡ್ಡ ವೇದಾಂತಿಗಳು. ವಿದ್ವತ್ತು ; ಕಾವ್ಯ ರಚನೆ ; ಪುರಾಣ ಪ್ರವಚನ ಹಾಗೂ ತಾತ್ವಿಕ ಜಿಜ್ಞಾಸೆಗಳ ಅಪರೂಪವಾದ ವಾತಾವರಣ ಮನೆಯಲ್ಲೆ ದೊರೆತದ್ದು ಪುರಾಣಿಕರ ಪುಣ್ಯ. ಬಾಲ್ಯದಿಂದ ಅವರಿಗರಿವಿಲ್ಲದಂತೆಯೇ ಸಾಹಿತ್ಯವೆನ್ನುವುದು ಬದುಕಿನ ಒಂದು ಅವಿಭಾಜ್ಯ ಅಂಗವಾಗಿಬಿಟ್ಟಿತು. ಮುಂದೆ ಶರಣ ಸಾಹಿತ್ಯದಲ್ಲಿ ಅವರು ಮಾಡಿರುವ ಕಾರ್ಯಗಳ ಸಾಧನೆಯನ್ನು ಮೆಚ್ಚುವವರು ಅದಕ್ಕೆ ಅಗತ್ಯವಾದ ವಾತಾವರಣ ಹಾಗೂ ಸ್ಫೂರ್ತಿಗಳು ಬಾಲ್ಯದಿಂದಲೆ ಒದಗಿದ್ದವೆಂಬುದನ್ನು ಮರೆಯಲಾಗುವುದಿಲ್ಲ.

ಸಿದ್ಧಯ್ಯ ಪುರಾಣಿಕರದು ತುಂಬ ಶಿಸ್ತಿನಿಂದ ಕೂಡಿದ ಅಧ್ಯಯನಶೀಲ ಪ್ರವೃತ್ತಿ. ವ್ಯಾಯಾಮದಿಂದ ಶರೀರವನ್ನು ದೃಢಗೊಳಿಸಿಕೊಳ್ಳುವ ಹಾಗೆಯೇ ಸಾಹಿತ್ಯಾಧ್ಯಯನದಿಂದ ಮನಸ್ಸನ್ನು ಶಕ್ತಗೊಳಿಸಿಕೊಂಡವರು. ಏಕಾಗ್ರತೆಯೆನ್ನುವುದು ಅವರಿಗೆ ವರವಾಗಿತ್ತು. ಹೀಗಾಗಿಯೇ ಅವರು ವಿದ್ಯಾರ್ಥಿ ಜೀವನದ ಉದ್ದಕ್ಕೂ ತಮ್ಮ ಉತ್ತಮವಾದ ಮಟ್ಟವನ್ನು ಉಳಿಸಿಕೊಂಡು ಬಂದದ್ದೇ ಅಲ್ಲದೆ ಪರೀಕ್ಷೆಗಳಲ್ಲೂ ಅವರು ಗೌರವದ ಸ್ಥಾನವನ್ನು ಉಳಿಸಿಕೊಳ್ಳುತ್ತಲೆ ಬಂದವರು. ಮಾಧ್ಯಮಿಕ ಪರೀಕ್ಷೆಯಿಂದ ಕೊನೆಯ ಬಿ.ಎ. ಪರೀಕ್ಷೆವರೆಗೂ ಶ್ರೇಷ್ಠತೆಯನ್ನು ಉಳಿಸಿಕೊಂಡೇ ಬಂದ ಅವರ ಕುಶಾಗ್ರಮತಿಗೆ ಮಿಡಲ್ ಪರೀಕ್ಷೆಯಲ್ಲೆ ಅಪೂರ್ವವಾದ ಸ್ಥಾನ ದೊರಕಿದ್ದು ಉಲ್ಲೇಖನಾರ್ಹ. ವಾಸ್ತವವಾಗಿ ಮಿಡಲ್ ತರಗತಿಯಲ್ಲಿ ಶ್ರೇಷ್ಠತೆಯನ್ನು ಮೆರೆದ ಸಿದ್ಧಯ್ಯ ಪುರಾಣಿಕರು ವರ್ಷ ಮಧ್ಯೆ ನಡೆದ ಟೆಸ್ಟ್‌ನಲ್ಲಿ ಪ್ರಥಮಸ್ಥಾನ ಪಡೆದರು. ಮುಂದೆ ಪರೀಕ್ಷೆಗೂ ಕುಳಿತುಕೊಳ್ಳಲಾಗದಂಥ ಅನಾರೋಗ್ಯವಾದಾಗ ವರ್ಷವೆಲ್ಲ ನಷ್ಟವಾಯಿತೇನೊ ಎಂದು ಇವರು ಕಂಗೆಟ್ಟಿದ್ದಾಗ ಶಾಲೆಯ ಗುರುಗಳು ಇವರ ಬುದ್ಧಿಮತ್ತೆಯನ್ನೂ ಅನಂತರ ಟೆಸ್ಟ್‌ನಲ್ಲಿ ತೋರಿದ್ದ ಪ್ರತಿಭೆಯನ್ನೂ ಲಕ್ಷ್ಯವಾಗಿಟ್ಟುಕೊಂಡು ಇವರ ಫಲಿತಾಂಶವನ್ನು ಪ್ರಕಟಿಸುವಾಗ ಪ್ರಥಮರೆಂದೇ ಪ್ರಕಟಿಸಿದ್ದು, ಇವರ ಗುರುಗಳ ಔದಾರ್ಯ ಹಾಗೂ ಅರ್ಹತೆಯನ್ನು ಗುರುತಿಸುವ ಮುಕ್ತ ಮನಸ್ಸನ್ನು ಸೂಚಿಸುವುದು. ಅಲ್ಲದೆ ಈ ಘಟನೆ ಇವರು ಅಧ್ಯಾಪಕರಿಂದ ಗಳಿಸಿಕೊಂಡಿದ್ದ ಮೆಚ್ಚುಗೆ ಅಭಿಮಾನಗಳಿಗೆ ದ್ಯೋತಕ ವಾಗಿತ್ತು. ಮುಂದಂತೂ ಒಂದಾದ ಮೇಲೊಂದರಂತೆ ಪರೀಕ್ಷೆಗಳಲ್ಲಿ ಉತ್ತಮತೆಯನ್ನೆ ತೋರುತ್ತ ನಡೆದವರು ಇವರು. ಎಲ್.ಎಲ್.ಬಿ. ಪರೀಕ್ಷೆಯೊಂದನ್ನು ಉಳಿದರೆ ಮಿಕ್ಕಲ್ಲೆಲ್ಲ ಪರೀಕ್ಷೆಗಳನ್ನು ನಿರಾಯಾಸವಾಗಿ ಎದುರಿಸಿ ಯಶಸ್ಸು ಗಳಿಸಿದವರು. ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಇಂಗ್ಲಿಷ್ ಕನ್ನಡಗಳಲ್ಲಿ ಪ್ರಥಮ ಸ್ಥಾನವನ್ನೂ ಒಟ್ಟು ಅಂಕಗಳಲ್ಲಿ ತೃತೀಯ ಸ್ಥಾನವನ್ನೂ ಗಳಿಸಿದರು. ಇಂಟರ್ ಪರೀಕ್ಷೆಯಲ್ಲೂ ಇದೇ ರೀತಿಯ ಯಶಸ್ಸು ಕನ್ನಡ ಸಂಸ್ಕೃತಗಳಲ್ಲಿ. ಬಿ.ಎ. ಪರೀಕ್ಷೆಯಲ್ಲಿ ಎಲ್ಲ ವಿಷಯಗಳಲ್ಲಿ ಹಾಗೂ ಒಟ್ಟಿನಲ್ಲಿ ಪ್ರಥಮ ಸ್ಥಾನ. ಎಲ್ಲ ಪರೀಕ್ಷೆಗಳಲ್ಲೂ ಉತ್ತಮಿಕೆಯನ್ನೆ ಮೆರೆದ ಸಿದ್ಧಯ್ಯ ಪುರಾಣಿಕರು ಕನ್ನಡದತ್ತ ಬಂದದ್ದು ಒಂದು ಯೋಗಾ ಯೋಗ.

ಪ್ರೌಢಶಾಲೆಯಲ್ಲಿದ್ದಾಗ ಇವರು ಬಯಸಿದ್ದು ಯಂತ್ರಜ್ಞನಾಗಬೇಕೆಂದು. ಅದಕ್ಕಾಗಿ ಉನ್ನತ ಗಣಿತಶಾಸ್ತ್ರವನ್ನು ಐಚ್ಛಿಕ ವಿಷಯವನ್ನಾಗಿ ಇವರು ಆಯ್ಕೆ ಮಾಡಿಕೊಂಡಿದ್ದರು. ಇವರ ಮೆಚ್ಚಿನ ಗುರುಗಳಾದ ಮೌಲಾನಾ ರಹಮತುಲ್ಲಾ ಖಾನ್ ಸಾಹೇಬರು ಹೋಮ್‌ವರ್ಕ್ ಬಗ್ಗೆ ತುಂಬ ಕಟ್ಟು ನಿಟ್ಟಿನವರಾಗಿದ್ದು ಒಂದು ದಿನ ಸಿದ್ಧಯ್ಯ ಪುರಾಣಿಕರು ಮನೆಗೆಲಸ ಮಾಡಿರದ್ದರಿಂದ ಗುರುಗಳು ಸಿಟ್ಟಾದದ್ದೇ ಅಲ್ಲದೆ ಈ ವಿಷಯ ಬಿಟ್ಟು ಬೇರೆಯದನ್ನು ಆರಿಸಿಕೋ ಹೋಗು ಎಂದು ಗದರಿಬಿಟ್ಟರು. ಸಿದ್ಧಯ್ಯ ಪುರಾಣಿಕರು ಸ್ವಲ್ಪ ವಿಚಲಿತ ರಾದದ್ದು ನಿಜ. ಆದರೆ ಸ್ವಾಭಿಮಾನಿಯಾಗಿದ್ದ ಇವರು ತಟ್ಟನೆ ಒಂದು ನಿರ್ಧಾರಕ್ಕೆ ಬಂದೇ ಬಿಟ್ಟರು. ಕನ್ನಡಕ್ಕೆ ಹೆಸರಾಗಿದ್ದ ತವಗ ಭೀಮಸೇನ ರಾಯರ ಬಳಿಗೆ ಹೋಗಿ ಕನ್ನಡವನ್ನು ಐಚ್ಛಿಕವಾಗಿ ಓದುವ ಇಚ್ಛೆಯನ್ನು ವ್ಯಕ್ತಗೊಳಿಸಿದರು. ಅವರೂ ಅತ್ಯಂತ ಪ್ರೀತಿಯಿಂದ ಕನ್ನಡವನ್ನು ಐಚ್ಛಿಕವಾಗಿ ಆರಿಸಿಕೊಳ್ಳಲು ಅನುಮತಿಸಿದರು. ಇಷ್ಟೆಲ್ಲ ಆದರೂ ಗಣಿತಶಾಸ್ತ್ರದ ಅಧ್ಯಾಪಕರು ಇವರ ಮೇಲೆ ಯಾವುದೇ ರೀತಿಯ ಆಕ್ರೋಶ ಸೇಡುಗಳನ್ನು ತೋರದಿದ್ದುದು ಅಂದಿನ ಅಧ್ಯಾಪಕ ವೃತ್ತಿಯವರ ಸದ್ಗುಣಗಳಿಗೆ ಸಾಕ್ಷಿ ಯಾಗಿತ್ತು. ಅಂತು ಸಿದ್ಧಯ್ಯನವರು ಯಂತ್ರಜ್ಞನಾಗುವುದನ್ನು ಬಿಟ್ಟು ಕನ್ನಡದ ಕಡೆಗೆ ಹೊರಳಿದ್ದು ಹೀಗೆ.

ಸಿದ್ಧಯ್ಯ ಪುರಾಣಿಕರು ಅಧ್ಯಯನ ಮಾಡುತ್ತಿದ್ದಾಗ ಅವರಿಗೆ ನೆರ ವಾದವರು ಒಬ್ಬಿಬ್ಬರಲ್ಲ, ಅಂಥ ಉದಾರಚರಿತರೂ ಶಿಷ್ಯವತ್ಸಲರೂ ಆದ ಗುರುಗಳ ಪಟ್ಟಿಯೇ ಇದೆ. ಅವರಲ್ಲಿ ಮುಖ್ಯರಾದವರು ಅಲಿಬನ್ ಗಾಲಿಬ್ ಸಾಹೇಬರು, ಮೀನಾಯಿ ಸಾಹೇಬರು, ಇಮಾಮ್ ಸಾಹೇಬರು, ಅಜೀಜ್ ಖಾನ್ ಸಾಹೇಬರು, ಹಕ್ಕನಿ ಸಾಹೇಬರು ಮತ್ತು ಹುಸೇನ ಆಲೀಖಾನ ಸಾಹೇಬರ ದೊಡ್ಡ ಗುಣಗಳನ್ನು ಸಿದ್ಧಯ್ಯನವರು ಮತ್ತೆ ಮತ್ತೆ ನೆನೆ ಯುತ್ತಾರೆ. ಅಷ್ಟೇ ಅಲ್ಲ ಅವರ ಬದುಕಿನಲ್ಲಿ ಅದರಲ್ಲೂ ಅವರು ತಹಶೀಲ್ದಾರರಾಗಿ ಆಯ್ಕೆಯಾಗುವ ಸಂದರ್ಭದಲ್ಲಿ ಹುಸೇನ ಆಲೀಖಾನರು ಸ್ವಂತ ಮಗನನ್ನು ಬಿಟ್ಟು ಇವರ ಬಗ್ಗೆ ಮಾಡಿದ ಶಿಫಾರಸನ್ನು ಅಷ್ಟೆ ಕೃತಜ್ಞತೆ ಯಿಂದ ಸ್ಮರಿಸುತ್ತಾರೆ.

ಅಧ್ಯಯನದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದಂತೆಯೇ ಸಿದ್ಧಯ್ಯನವರು ಕನ್ನಡದ ಕೆಲಸಗಳಲ್ಲೂ ವಿದ್ಯಾರ್ಥಿ ದೆಸೆಯಿಂದಲೇ ಅತ್ಯಂತ ಕ್ರಿಯಾತ್ಮಕವಾಗಿ ಪಾಲ್ಗೊಂಡವರು. ಕಲಬುರಗಿ ಕಾಲೇಜು ಯೂನಿಯನ್ನಿನ ಕಾರ್ಯದರ್ಶಿ, ಕನ್ನಡ ಸಂಘದ ಕಾರ್ಯದರ್ಶಿ, ವಿಶ್ವವಿದ್ಯಾಲಯ ಕರ್ನಾಟಕ ಸಂಘದ ಉಪಾಧ್ಯಕ್ಷ ಹೀಗೆ ಹಲವಾರು ಹಂತಗಳಲ್ಲಿ ವಿದ್ಯಾರ್ಥಿ ಸಂಘಟನೆಗಳು ಹಾಗೂ ಕನ್ನಡದ ಸಂಘಗಳಲ್ಲಿ ಕ್ರಿಯಾತ್ಮಕವಾಗಿ ಪಾಲ್ಗೊಂಡವರು ಇವರು. ಕನ್ನಡದ ಚಳವಳಿಗಳಲ್ಲಿ ವಿದ್ಯಾರ್ಥಿ ದೆಸೆಯಿಂದಲೆ ಪಾಲ್ಗೊಂಡ ಸಿದ್ಧಯ್ಯ ನವರು ಸಹಜವಾಗಿಯೇ ಅವರು ಉದ್ಯೋಗಕ್ಕೆ ಸೇರಿದ ಮೇಲೂ ಕನ್ನಡದ ಕೆಲಸವನ್ನು ಕೈಗೆತ್ತಿಕೊಂಡವರು, ಹಾಗಾಗಿಯೇ ಅವರು ಮುಂದೆ ಏಕೆ ಇಂದೂ ಕನ್ನಡದ ಕೆಲಸಗಳಿಗೆ ಹಾಗೂ ಹೋರಾಟಗಳಿಗೆ ಮುಂದಾದವರೇ ಆಗಿದ್ದಾರೆ.

ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೆ ಕಲಬುರ್ಗಿಯಲ್ಲಿ ನಡೆದ ಕವನ ಸ್ಪರ್ಧೆಯಲ್ಲಿ ಪ್ರಥಮಸ್ಥಾನ ಗಳಿಸಿದ ಸಿದ್ಧಯ್ಯನವರು ಕವಿಯೆಂಬ ಹೆಮ್ಮೆಗೂ ಪಾತ್ರರಾದರು. ಜಯಕರ್ನಾಟಕದಲ್ಲಿ ಇವರ ಪದ್ಯವೊಂದು ಅಚ್ಚೂ ಆಯಿತು. ಹೀಗೆಯೇ ಇವರ ಕವಿತೆಯೊಂದು ಇವರು ಆಲಮಟ್ಟಿಯಲ್ಲಿದ್ದಾಗ 'ಶರಣ ಸಂದೇಶ' ಪತ್ರಿಕೆಯಲ್ಲಿ ಪ್ರಕಟವಾಯಿತು. ಕಾವ್ಯದೇವಿ ಎಂಬ ನೀಳ್ಗವಿತೆ ಯಲ್ಲಿರುವ ಸಾಲುಗಳು 'ನಿನ್ನಾತ್ಮವಾನಂದ ನನ್ನಾತ್ಮ ಕಾವ್ಯ! ಇಂತು 'ಕಾವ್ಯಾ ನಂದ' ನಾಮ ಸುಶ್ರಾವ್ಯ". ಕವಿ ಸಿದ್ಧಯ್ಯ ಪುರಾಣಿಕರು ಕಾವ್ಯಾನಂದರಾದ ರೀತಿ ಇದು.

ಅಧ್ಯಯನ, ಕಾವ್ಯ ರಚನೆ, ಸಾಹಿತ್ಯ ಪ್ರೇಮಗಳಿಂದ ಬದುಕಿಗೆ ಒಂದು ಆದರ್ಶವನ್ನು ಕಟ್ಟಿಕೊಳ್ಳುತ್ತಿದ್ದ ಕಾಲದಲ್ಲೆ ಮದುವೆಯ ಒತ್ತಡ ಬಂದಾಗ ತಂದೆಗೆ ಸುದ್ದಿಕೊಡದೆ ಹರ್ಡೇಕರ ಮಂಜಪ್ಪನವರ ಆಶ್ರಯದಲ್ಲಿ ಆಶ್ರಯ ಪಡೆದಿದ್ದು ಉಂಟು. ಯೋಗ, ಅಧ್ಯಯನ ಹಾಗೂ ಮಂಜಪ್ಪನವರ ಪ್ರಭಾವಗಳಿಂದ ಮನಸ್ಸು ಸ್ವಲ್ಪಮಟ್ಟಿಗೆ ವೇದಾಂತದ ಕಡೆಗೆ ಎಳೆಯುತ್ತ ಇದ್ದುದೂ ಉಂಟು. ಆದರೆ ಸಂಗ್ರಾಮಪ್ಪನವರಿಂದ ಬಂದ ಸುದೀರ್ಘ ಪತ್ರ ಇವರ ಬದುಕಿನ ದಿಕ್ಕನ್ನು ಬದಲಿಸಲು ಕಾರಣವಾದದ್ದು ಮಾತ್ರ ನಿಜ. ಉದಗಿರಿಯ ಹಾವಗಿಸ್ವಾಮಿ ಮಠ ಆ ಭಾಗದ ಪ್ರಸಿದ್ಧ ಮಠವಾಗಿದ್ದು ಅದಕ್ಕೆ ಪೀಠಾಧ್ಯಕ್ಷರಾಗಲು ನಿಮ್ಮ ಮಗನನ್ನು ದಾನವಾಗಿ ನೀಡಬೇಕೆಂದು ಸಿದ್ಧಯ್ಯ ಪುರಾಣಿಕರ ತಂದೆಯವರಿಗೆ ಬಂದ ಪತ್ರ ಅದು. ಅವರು ಆ ಪತ್ರವನ್ನೋದಿ ಮಂಕಾದುದೇನೊ ನಿಜ, ಆದರೆ ಅದನ್ನು ಮಗನ ಕೈಯಲ್ಲಿಟ್ಟು "ಈ ಬಗ್ಗೆ ನಿನ್ನ ತೀರ್ಮಾನವೇ ನಮ್ಮೆಲ್ಲರ ತೀರ್ಮಾನ" ಎಂದು ಹೇಳಿದಂತೆಯೇ ನಡೆದುಕೊಂಡರು. ಸಿದ್ಧಯ್ಯನವರು ಬಹಳಷ್ಟು ಯೋಚಿಸಿದರು. ತಂದೆಯವರ ಬಡತನ, ತಮ್ಮಂದಿರ ಕಾರ್ಪಣ್ಯದ ಸ್ಥಿತಿ ಇವುಗಳೆಲ್ಲ ಕಣ್ಣೆದುರು ನಿಂತವು. ಸಂಯಮಿಯೆಂದು ಖ್ಯಾತರಾಗಿದ್ದ ಸಿದ್ಧಯ್ಯನವರು ತಾವು ಮೆಚ್ಚಿದ್ದ ಗವಿಯೊಂದರಲ್ಲಿದ್ದ ಯೋಗಿಯನ್ನೆ ಈ ಬಗ್ಗೆ ಸಲಹೆ ಕೇಳಲು ಹೊರಟರು. ಗುಹೆಯ ಸಮೀಪ ಬರುತ್ತಿದ್ದಾಗ ಕಂಡ ಭೋಗದ ದೃಶ್ಯ ಅವರ ಮನಸ್ಸನ್ನು ಕ್ಷಣಕಾಲ ಗೊಂದಲದಲ್ಲಿ ಬೀಳಿಸಿದರೂ ಬದುಕಿನ ಹಾದಿ ಅವರಿಗೀಗ ನಿಚ್ಚಳವಾಗಿತ್ತು. ಸನ್ಯಾಸಿಯಾಗುವ ಹಂಬಲವನ್ನು ದೂರ ಮಾಡಿಬಿಟ್ಟರು.

ಬಿ.ಎ. ತೇರ್ಗಡೆಯಾಗಿ ವಿಶ್ವವಿದ್ಯಾಲಯಕ್ಕೆ ಪ್ರಥಮರಾದಾಗ ವಕೀಲರಾಗುವ ಸಲಹೆ ಮೇಲೆ ಎಲ್.ಎಲ್.ಬಿ. ಪರೀಕ್ಷೆಗೂ ಕುಳಿತರು. ದುರ್ದೈವಕ್ಕೆ ಮೊದಲ ಬಾರಿಗೆ ಇದೊಂದು ಪರೀಕ್ಷೆಯಲ್ಲಿ ಮೊದಲಿಗೆ ಅವರು ಅಪಯಶಸ್ಸು ಪಡೆಯಬೇಕಾಯಿತಾದರೂ ಮುಂದೆ ನೌಕರಿ ಸೇರಿದ ಮೇಲೆ ಅದರಲ್ಲೂ ತೇರ್ಗಡೆಯಾದರು. ಬಿ.ಎ. ಪರೀಕ್ಷೆಯಲ್ಲಿ ವಿಶ್ವವಿದ್ಯಾಲಯಕ್ಕೆ ಮೊದಲಿಗರಾದ ಸಿದ್ಧಯ್ಯ ಪುರಾಣಿಕರು ತಹಶೀಲ್ದಾರರಾಗಿ ಆಯ್ಕೆಯಾದರು. ಈ ಆಯ್ಕೆಯ ಹಿನ್ನೆಲೆಯಲ್ಲಿ ಹುಸೇನ ಅಲಿಖಾನರ ಪಾತ್ರವಂತೂ ಅನನ್ಯ ವಾದದ್ದು. 1943ರಲ್ಲಿ ತಹಶೀಲ್ದಾರರಾಗಿ ಆಯ್ಕೆಗೊಂಡ ಇವರು ವೃತ್ತಿ ತರಬೇತಿ ನಡೆಸಿದ್ದು ಮತ್ತೊಂದು ಸಾಹಸದ ಕಥೆ. ಮುಂದೆ ಅವರು ನಾಂದೇಡ, ಕಲಬುರಗಿ, ತಾಂಡೂರು, ಯಾದಗಿರಿ, ಬೆಂಗಳೂರು, ಮಡಿಕೇರಿ, ಬೆಳಗಾವಿಗಳಲ್ಲಿ ಸೇವೆ ಸಲ್ಲಿಸಿ ಬೆಂಗಳೂರಿನಲ್ಲಿ ನಿವೃತ್ತರಾದರು. ತಹಶೀಲ್ದಾರ ರಾಗಿ ನೌಕರಿಗೆ ಸೇರಿದ ಅವರು ಹೈದರಾಬಾದು ಸಂಸ್ಥಾನದಲ್ಲಿದ್ದು ಪಡೆದ ಅನುಭವ ಅಪಾರವಾದದ್ದು. ಅವರಿಗೊದಗಿದ ವಿಪತ್ತುಗಳೂ ಕೆಲವಲ್ಲ. ಆದರೆ ಒಪ್ಪಿಕೊಂಡ ಕೆಲಸವನ್ನು ಅತ್ಯಂತ ಪ್ರೀತಿ, ದಕ್ಷತೆಗಳಿಂದ ನಿರ್ವಹಿಸಿ ಕರ್ತವ್ಯ ಎನ್ನುವುದು ಸೇವೆಯ ಅವಕಾಶ ಎಂದು ಭಾವಿಸಿದ ಸಿದ್ಧಯ್ಯ ಪುರಾಣಿಕರು ಡೆಪ್ಯೂಟಿ ಕಲೆಕ್ಟರ್, ಅಧೀನ ಕಾರ್ಯದರ್ಶಿ, ಉಪಕಾರ್ಯದರ್ಶಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಮುಖ್ಯಾಧಿಕಾರಿ, ಜಿಲ್ಲಾಧಿಕಾರಿ, ಸಾರಿಗೆ ಕಮಿಷನರ್, ಕಾರ್ಮಿಕ ಕಮಿಷನರ್ ಹೀಗೆ ವಿವಿಧ ಹಂತಗಳಲ್ಲಿ ಹಾಗೂ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸಿದ ಇವರು ಬಹು ಮುಖವಾಗಿ ಜನಪರವಾದ ಕಾರ್ಯಗಳನ್ನು ಮಾಡಿದವರು.

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿದ್ದಾಗಲೆ ಕನ್ನಡದ ಕೆಲಸಕ್ಕಾಗಿ ಬಿ.ಎಂ.ಶ್ರೀ., ಎ.ಎನ್. ಮೂರ್ತಿರಾವ್, ಡಾ. ಮಾಸ್ತಿವೆಂಕಟೇಶ ಅಯ್ಯಂಗಾರ್, ವಿ. ಸೀತಾರಾಮಯ್ಯ ಮೊದಲಾದ ಸಾಹಿತ್ಯ ಕ್ಷೇತ್ರದ ದಿಗ್ಗಜಗಳನ್ನು ಕರೆಯಿಸಿ ಕನ್ನಡದ ಕಹಳೆಯನ್ನು ಮೊಳಗಿಸಿದ್ದೇ ಅಲ್ಲದೆ ಕನ್ನಡದ ವಾತಾವರಣ ನಿರ್ಮಾಣಕಾರ್ಯದಲ್ಲಿ ಸಿದ್ಧಯ್ಯ ಪುರಾಣಿಕರು ವಹಿಸಿದ ಪಾತ್ರ ಮಹತ್ವದ್ದು. ಈಗಿನ ಬೀದರ್, ರಾಯಚೂರು, ಗುಲ್ಬರ್ಗಾ ಹಾಗೂ ಬಿಜಾಪುರ ಜಿಲ್ಲೆಗಳಲ್ಲಿ ಕನ್ನಡದ ಕೆಲಸ ಆಗುವುದಕ್ಕೆ ಕಾರಣರಾದ ಪ್ರಾತಃ ಸ್ಮರಣೀಯರೆಂದರೆ ಜಯದೇವಿ ತಾಯಿ ಲಿಗಾಡೆ, ಹರ್ಡೇಕರ್ ಮಂಜಪ್ಪ, ಡೆಪ್ಯೂಟಿ ಚನ್ನಪ್ಪ ಮೊದಲಾದವರು. ಈ ಮಹಾ ಕಾರ್ಯದಲ್ಲಿ ಸಿದ್ಧಯ್ಯ ಪುರಾಣಿಕರ ಪಾತ್ರ ಸಾಮಾನ್ಯವಾದುದಲ್ಲ.

30-6-1976ರಲ್ಲಿ ನಿವೃತ್ತರಾದ ಸಿದ್ಧಯ್ಯ ಪುರಾಣಿಕರಿಗೆ ತಮ್ಮ ಸೇವಾವಧಿಯ ಬಗ್ಗೆ ತೃಪ್ತಿ ಹಾಗೂ ಹೆಮ್ಮೆಗಳಿವೆ. ಜನಪರ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಬಗ್ಗೆ ಮಡಿಕೇರಿ, ಬೆಳಗಾವಿ ಜಿಲ್ಲೆಗಳ ಜನರು ಇಂದಿಗೂ ಇವರ ಕಾಲದ ಸಾಧನೆಗಳ ಬಗ್ಗೆ ಮಾತಾಡಿಕೊಳ್ಳುವುದನ್ನು ಅಭಿಮಾನದಿಂದ ನೆನೆದುಕೊಳ್ಳುತ್ತಾರೆ. ಅಷ್ಟೇ ಅಲ್ಲ ಕನ್ನಡದ ವಿಶ್ವಕೋಶ ಯೋಜನೆ, ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಯೋಜನೆ, ಸರ್ಕಾರದಿಂದ ಪ್ರಕಟವಾದ ಸುಲಭಾವೃತ್ತಿಯ ಲೀಲಾವತಿ ಪ್ರಬಂಧ, ಹರಿಶ್ಚಂದ್ರ ಕಾವ್ಯ, ಜೈಮಿನಿ ಭಾರತ, ವಚನ ಸಾಹಿತ್ಯ ಸಂಗ್ರಹ, ಸರ್ವಜ್ಞನ ವಚನಗಳಂಥ ಕೃತಿಗಳ ಪ್ರಕಟನೆಯ ಯೋಜನೆಗಳಲ್ಲಿ ತಾವು ವಹಿಸಿದ ಪಾತ್ರವನ್ನು ಅಭಿಮಾನದಿಂದ ಉಲ್ಲೇಖಿಸುತ್ತಾರೆ.

ಅಮಲ್ದಾರರಾಗಿ ನೇಮಕಗೊಂಡ ಸ್ವಲ್ಪ ಕಾಲದಲ್ಲಿಯೇ ಸಿದ್ಧಯ್ಯ ಪುರಾಣಿಕರು ಮದುವೆಯಾಗಬೇಕಾಯಿತು. ತಾವು ನೋಡಿ ಮೆಚ್ಚಿದ ಗಿರಿಜಾದೇವಿಯವರ ಕೈಹಿಡಿದ ಇವರ ಕುಟುಂಬ ವಿಜಯಾ, ಶಿವಗೀತಾ ಮತ್ತು ಭಾರತಿ ಎಂಬ ಮೂವರು ಹೆಣ್ಣು ಮಕ್ಕಳು ಹಾಗೂ ಪ್ರಸನ್ನಕುಮಾರ ಎಂಬ ಪುತ್ರರನ್ನು ಪಡೆದು ಸುಖಸಮೃದ್ಧಿಗಳ ಆಗರವಾಗಿದೆ.

ಸಿದ್ಧಯ್ಯ ಪುರಾಣಿಕರು ವೃತ್ತಿಯಲ್ಲಿ ಅಧಿಕಾರಿಗಳಾಗಿದ್ದರೂ ಪ್ರವೃತ್ತಿಯಲ್ಲಿ ಸಾಹಿತಿಗಳು. ಅವರ ಸಾಹಿತ್ಯರಾಶಿ ವಿಪುಲವಾಗಿದೆ ಹಾಗೂ ವೈವಿಧ್ಯಮಯವೂ ಆಗಿದೆ. ಆತ್ಮಾರ್ಪಣೆ, ಭಾರತವೀರ, ರಜತ ರೇಖೆ, ಭಿನ್ನನೂಪುರು ಅಲ್ಲದೆ ಕೆಲವು ಗೇಹ ನಾಟಕಗಳು ಎಂಬ ನಾಟಕಗಳನ್ನವರು ರಚಿಸಿದ್ದಾರೆ. ಭಾರತವೀರ ನಾಟಕ ಚೀನಿಯರ ದಾಳಿಯ ಸಂದರ್ಭದಲ್ಲಿ ಹುಟ್ಟಿದ್ದು. ತ್ರಿಭುವನ ಮಲ್ಲ ಎಂಬ ಕಾದಂಬರಿಯೂ ಇವರದೆ. ವಿಕಾಸವಾಣಿ ಎಂಬುದು ವಯಸ್ಕರಿಗಾಗಿ ಬರೆದ ಕೃತಿ. ಮಕ್ಕಳಿಗಾಗಿ ತುಪ್ಪಾರೊಟ್ಟಿ ಗೇಗೇಗೇ, ಗಿಲ್ ಗಿಲ್ ಗಿಲಗಚ್ಚಿ, ತಿರುಗೆಲೆ ತಿರುಗೆಲೆ ತಿರುಗುಯ್ಯಾಲೆ, ನ್ಯಾಯ ನಿರ್ಣಯ, ಮಕ್ಕಳ ಲೋಕ ಸಂಚಾರ, ಬಣ್ಣ ಬಣ್ಣದ ಓಕುಳಿ ಎಂಬ ಆರು ಕೃತಿಗಳನ್ನು ರಚಿಸಿದ್ದಾರೆ. ಬಸವಣ್ಣನವರ ಜೀವನ ಹಾಗೂ ಸಂದೇಶ, ಮಹಾದೇವಿ, ಹರ್ಡೇಕರ್ ಮಂಜಪ್ಪನವರು, ಸಿದ್ಧರಾಮ, ಮಿರ್ಜಾಗಾಲಿಬ್ ಎಂಬ ಜೀವನ ಚರಿತ್ರೆಗಳನ್ನು ರಚಿಸಿದ್ದಾರೆ. ಕಥಾ ಮಂಜರಿ ಹಾಗೂ ತುಷಾರ ಹಾರ ಎಂಬ ಎರಡು ಕಥಾ ಸಂಕಲನಗಳನ್ನು ಬರೆದಿದ್ದಾರೆ. ಹದಿಮೂರಕ್ಕೂ ಹೆಚ್ಚು ಕೃತಿಗಳ ಸಂಪಾದನೆ ಕಾರ್ಯವನ್ನು ಮಾಡಿದ್ದಾರೆ. ಇವುಗಳಲ್ಲಿ ಕೆಲವು ಅನ್ಯರೊಡನೆ ಸಂಪಾದಿಸಿದುವಾಗಿವೆ.

ಜಲಪಾತ, ಕರುಣಾ ಶ್ರಾವಣ, ಮಾನಸ ಸರೋವರ, ಮೊದಲು ಮಾನವನಾಗು, ಕಲ್ಲೋಲ ಮಾಲೆ, ಚರಗ ಎಂಬ ಏಳು ಕವನ ಸಂಕಲನಗಳು ಪ್ರಕಟವಾಗಿವೆ. ಕುವೆಂಪು, ಅಂಬಿಕಾತನಯದತ್ತ, ಡಿ.ಎಸ್. ಕರ್ಕಿ ಮೊದಲಾದವರ ಮೆಚ್ಚುಗೆಗೆ ಪಾತ್ರವಾದ ಇವರ ಕಾವ್ಯ ನವೋದಯ ಮಾರ್ಗಕ್ಕೆ ಸೇರಿದ್ದುದಾಗಿದೆ. ಸಿರಿಗನ್ನಡದ ಜ್ಯೋತಿ, ಮೊದಲು ಮಾನವನಾಗು, ತಾಜಮಹಲು ಕವಿತೆಗಳಂತೂ ತುಂಬ ಮೆಚ್ಚುಗೆಗೆ ಪಾತ್ರವಾಗಿಬಿಟ್ಟಿವೆ. ಅವರ ಕಾವ್ಯದ ಶೃತಿಯೆನ್ನುವಂತಿವೆ ಈ ಕೆಲವು ಪಂಕ್ತಿಗಳು:

ಮಾನವರು ಕೆಟ್ಟಾರು
ಮಾನವತೆ ಉಳಿದೀತು !
ಕವಿ ದೇಹ ಬಿಟ್ಟಾನು
ಕವಿತೆಯುಳಿದೀತು !
ಕೃತಿಗಿಳಿಯದಿದ್ದರೂ
ಕನಸೊಂದು ಉಳಿದೀತು !
ಅದನುಂಡೆ ಬರಲಿರವ
ಮನಸು ಬೆಳೆದೀತು !

ದಟ್ಟ ಆಶಾವಾದದ ನಡುವೆ ಬೆಳೆಯುವ ಈ ಕವಿಯ ವಿಶಿಷ್ಟ ಸಾಧನೆ ಗಮನಿಸಬೇಕೆಂದರೆ ಇವರ ವಚನೋದ್ಯಾನಕ್ಕೇ ಹೋಗಬೇಕು. ಈವರೆಗೆ ಸಿದ್ಧಯ್ಯ ಪುರಾಣಿಕರು ವಚನೋದ್ಯಾನ ಮತ್ತು ವಚನ ನಂದನ ಎಂಬ ಎರಡು ವಚನ ಸಂಕಲನಗಳನ್ನು ಹೊರತಂದಿದ್ದಾರೆ. ವಚನ ನಂದನಕ್ಕೆ ಹುಬ್ಬಳ್ಳಿಯ ಮೂರು ಸಾವಿರ ಮಠದ ಪುರಸ್ಕಾರ ದೊರೆತಿದ್ದರೆ, ವಚನೋದ್ಯಾನ ಕಲಕತ್ತೆಯ ಭಾರತೀಯ ಭಾಷಾ ಪರಿಷತ್ತು ಆರಂಭಿಸಿದ ಭಿಲ್ವಾರಾ ಪ್ರಶಸ್ತಿ ಯನ್ನು ಪ್ರಪ್ರಥಮವಾಗಿ ಕನ್ನಡಕ್ಕೆ ತಂದುಕೊಟ್ಟ ಐತಿಹಾಸಿಕವಾದ ಕೃತಿಯಾಗಿದೆ. ವಚನೋದ್ಯಾನದಲ್ಲಿ ಆಧುನಿಕ ವಚನಕಾರರಲ್ಲಿ ಅತ್ಯಂತ ಪ್ರಮುಖರೆನಿಸುವ ವಚನಕಾರರನ್ನು ಎದುರುಗೊಳ್ಳುತ್ತೇವೆ. ಪುರಾಣಿಕರಿಗೆ ವಚನ ಪ್ರಕಾರ ಮಿಕ್ಕೆಲ್ಲ ಪ್ರಕಾರಗಳಿಗಿಂತ ಹೆಚ್ಚು ಸಮರ್ಥವೂ, ಉಚಿತವೂ ಆದ ಅಭಿವ್ಯಕ್ತಿಯಾಗಿರುವಂತಿದೆ. ಈ ಎರಡು ವಚನಗಳನ್ನು ಗಮನಿಸಿ :

1) ಫಲವಿತ್ತ ರೆಂಬೆ ಬಾಗುತ್ತದೆ,
ಗೊನೆ ಹೊತ್ತ ಬಾಳೆ ಬಾಗುತ್ತದೆ,
ತೆನೆ ಹೊತ್ತ ದಂಟು ಬಾಗುತ್ತದೆ,
ಏನೇನೋ ಇಲ್ಲದುದು ಬೀಗುತ್ತದೆ ನೋಡಾ-
ಸ್ವತಂತ್ರ ಧೀರ ಸಿದ್ಧೇಶ್ವರಾ !

2) ಹೂವು ತನ್ನೆದೆಯ ತೆರೆದರೆ ಅಂದ,
ಸುಗಂಧ, ಮಕರಂದಗಳ ಸುಗ್ಗಿ!
ಸಿಂಪುಗಳು ತಮ್ಮೆದೆಯ ತೆರೆದರೆ ಮುತ್ತುಗಳು ಬರುವುವು ನುಗ್ಗಿ.
ಹನುಮ ತನ್ನೆದೆಯ ತೆರೆದರೆ ಸೀತಾರಾಮರ ಚಿತ್ರ
ಇರುಳು ತನ್ನೆದೆಯ ತೆರೆದರೆ ಕೋಟಿ ಕೋಟಿ ನಕ್ಷತ್ರ-
ಎಲ್ಲರೆದೆಗಳಲ್ಲಿ ಒಂದಿಲ್ಲೊಂದು ನಿಧಿ, ನಿಧಾನ ನಿನ್ನ ವರ ಪ್ರದಾನ!
ನನ್ನೆದೆಯಲ್ಲಿ ನೀನಾದರೂ ಇರಯ್ಯ ಸ್ವತಂತ್ರ ಧೀರ ಸಿದ್ಧೇಶ್ವರಾ !

ಸಿದ್ಧಯ್ಯ ಪುರಾಣಿಕರ ಪ್ರತಿಭೆ ವಚನೋದ್ಯಾನದಲ್ಲಿ ತನ್ನ ಸಿದ್ಧಿ ಪಡೆದಿರುವುದನ್ನು ಕಾಣಬಹುದು. ತುಷಾರ ಹಾರ ಎಂಬುದು ಕಥಾ ಸಂಗ್ರಹ

ವೆಂದಿದ್ದರೂ ಅದು ಹನಿಗತೆಗಳ ಸಂಕಲನ. ಅದರ ವೈಶಿಷ್ಟ್ಯ ಎಂದರೆ ಅಲ್ಲಿನ ಕೆಲವು ಹನಿಗತೆಗಳು ಹೊಸ ಪುರಾಣ ಸೃಷ್ಟಿಯನ್ನೆ ನಡೆಸಿಬಿಟ್ಟಿವೆ.

ಸಿದ್ಧಯ್ಯ ಪುರಾಣಿಕರ ಮತ್ತೊಂದು ಮಹತ್ವದ ಕೃತಿ ಶರಣ ಚರಿತಾಮೃತ. ಈ ಗ್ರಂಥವನ್ನವರು ವಯಸ್ಕರ ಶಿಕ್ಷಣ ಸಂಸ್ಥೆಗಾಗಿ ಬರೆದರೂ ಇದರ ರಚನೆಯ ಹಿನ್ನೆಲೆಯಲ್ಲಿ ಅಪಾರವಾದ ಅಧ್ಯಯನ ಹಾಗೂ ವಿದ್ವತ್ತು ಗಳಿವೆ. ಆಕರಗ್ರಂಥವೆನ್ನಿಸಿಕೊಂಡಿರುವ ಈ ಕೃತಿ ಎಪ್ಪತ್ತೆಂಟು ಶಿವಶರಣರ ಸುಂದರ ಜೀವನ ಚಿತ್ರಗಳನ್ನೊಳಗೊಂಡಿದೆ. ಹೃದ್ಯವಾದ ಘಟನೆಗಳಿಂದ ಅತ್ಯಂತ ಸ್ವಾರಸ್ಯಕರವಾಗಿ ಶರಣ ಚರಿತೆಯನ್ನು ನಿರೂಪಿಸುವ ಈ ಗ್ರಂಥದ ನಿರೂಪಣಾ ಕ್ರಮಕ್ಕೆ ಮಾದರ ಚೆನ್ನಯ್ಯನನ್ನು ಕುರಿತ ಈ ಮಾತು ನಿದರ್ಶನ ವಾಗಿದೆ: "ಕಂಚಿಯಲ್ಲಿ ಕೂಡ ಕನ್ನಡದ ಕಹಳೆ ಮೊಳಗುವಂತೆ ಮಾಡಿದ ಮಹಾತ್ಮನೀತ."

ಶ್ರೀ ಪುರಾಣಿಕ ಅವರ ಕಾರ್ಯಕ್ಷೇತ್ರ ವಿಸ್ತಾರವಾದದ್ದು. ಕನ್ನಡ ನಿಘಂಟು ಸಮಿತಿಯ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಕೇಂದ್ರ-ರಾಜ್ಯ ಸಾಹಿತ್ಯ ಅಕಾಡೆಮಿಗಳ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಬಸವ ಸಮಿತಿಯ ಉಪಾಧ್ಯಕ್ಷರು. ಬಸವ ಪಥ ಹಾಗೂ ಬಸವ ಜರ್ನಲ್‌ಗಳ ಪ್ರಧಾನ ಸಂಪಾದಕರು. ಕರ್ನಾಟಕ ಜಾನಪದ ಟ್ರಸ್ಟಿನ ಟ್ರಸ್ಟಿಗಳು, ಕನ್ನಡ ಸಾಹಿತ್ಯ ಸಂವರ್ಧಕ ಟ್ರಸ್ಟಿನ ಅಧ್ಯಕ್ಷರು, ಬಿ.ಎಂ.ಶ್ರೀ. ಪ್ರತಿಷ್ಠಾನದ ಕಾರ್ಯ ಸಮಿತಿ, ಡಾ. ಸರೋಜಿನಿ ಮಹಿಷಿ ಸಮಿತಿ ಸದಸ್ಯರು. ಇಷ್ಟೇ ಅಲ್ಲದೆ ಗೋಕಾಕ ಚಳವಳಿಯಲ್ಲಿ ಮುಂಚೂಣಿಯಲ್ಲಿದ್ದು ಕನ್ನಡದ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದವರು. ಲೋಕಸೇವಾ ಆಯೋಗದ ಎದುರು ಕನ್ನಡಕ್ಕಾಗಿ ಉಪವಾಸ ಸತ್ಯಾಗ್ರಹವೇ ಅಲ್ಲದೆ ಕನ್ನಡ ಪರ ಹೋರಾಟಗಳಲ್ಲಿ ಸಕ್ರಿಯ ವಾಗಿ ಪಾಲ್ಗೊಂಡಿದ್ದಾರೆ. ಸಾಹಿತ್ಯ ರಚನೆ, ಕನ್ನಡದ ಕೆಲಸ ನಿರಂತರವಾದ ಅಧ್ಯಯನ ಇವರ ಜೀವನದ ಉಸಿರಾಗಿವೆ.

ಸೇವಾವಧಿಯಲ್ಲಿ ಹಲವೊಮ್ಮೆ ಕಿರುಕುಳಕ್ಕೊಳಗಾಗಬೇಕಾಯಿತು. ಸೇವಾಜ್ಯೇಷ್ಠತೆಗೆ ಒಮ್ಮೆ ಭಂಗವುಂಟಾಯಿತು. ಇಷ್ಟಾದರೂ ಬದುಕಿನ ಬಗ್ಗೆ ಅವರು ಹೇಳುತ್ತಾರೆ: "ಒಟ್ಟಿನಲ್ಲಿ ಸಂತೃಪ್ತ ನಾನು".

ಸಿದ್ಧಯ್ಯ ಪುರಾಣಿಕರು ಸಾಹಿತ್ಯಕ್ಷೇತ್ರದಲ್ಲಿ ಪಡೆದ ಮನ್ನಣೆಗಳು ಸಾಕಷ್ಟಿವೆ. ಹರಪನಹಳ್ಳಿಯ ಕನ್ನಡ ಸಾಹಿತ್ಯ ಸಮ್ಮೇಳನದ ಸಾಹಿತ್ಯ ಗೋಷ್ಠಿಯ ಅಧ್ಯಕ್ಷತೆ, ಮೈಸೂರಿನ ಸಾಹಿತ್ಯ ಸಮ್ಮೇಳನದ ಲೇಖಕರ ಗೋಷ್ಠಿಯ ಅಧ್ಯಕ್ಷತೆ, ಬೀದರ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿ ಅಧ್ಯಕ್ಷತೆ, ದೆಹಲಿ ಸಮ್ಮೇಳನದ ಕನ್ನಡ ಭವಿತವ್ಯ ಗೋಷ್ಠಿಯ ಅಧ್ಯಕ್ಷತೆ, ರಾಯಚೂರು, ಕೊಡಗುಗಳ ಜಿಲ್ಲಾ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷತೆ, ಹೊಂಬುಜ ಹಾಗೂ ಧರ್ಮಸ್ಥಳಗಳ ಸರ್ವಧರ್ಮ ಸಮ್ಮೇಳನಗಳ ಅಧ್ಯಕ್ಷತೆ, ಹೈದರಾಬಾದಿನಲ್ಲಿ ನಡೆದ ಪಂಚಭಾಷಾ ಕವಿ ಸಮ್ಮೇಳನದ ಅಧ್ಯಕ್ಷತೆ, ಮೈಸೂರಿನಲ್ಲಿ ನಡೆದ ದಸರಾ ಕವಿ ಸಮ್ಮೇಳನದ ಅಧ್ಯಕ್ಷತೆ, ನವಿಲು ಗುಂದದಲ್ಲಿ ನಡೆದ ವಚನ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ – ಹೀಗೆ ಅನೇಕ ಸಮ್ಮೇಳನಗಳಲ್ಲಿ ಅಧ್ಯಕ್ಷತೆ ವಹಿಸಿದ ಹಿರಿಮೆ ಇವರದು. ಅಷ್ಟೇ ಅಲ್ಲ ಗುಲಬರ್ಗದಲ್ಲಿ ನಡೆದ 58ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನೂ ಅಲಂಕರಿಸಿದವರಾಗಿದ್ದಾರೆ. ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿಯನ್ನೂ ಪಡೆದಿರುವ ಕವಿ, ವಿಮರ್ಶಕ, ವಾಗ್ಮಿ ಹಾಗೂ ವಿದ್ವಾಂಸರಾದ ಸಿದ್ಧಯ್ಯ ಪುರಾಣಿಕರನ್ನು ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿಯನ್ನಿತ್ತು ಸನ್ಮಾನಿಸಿದೆ.

ಸಿದ್ಧಯ್ಯ ಪುರಾಣಿಕರು ಉರ್ದು, ಇಂಗ್ಲಿಷ್‌ಗಳಲ್ಲೂ ನಿರರ್ಗಳವಾಗಿ ಮಾತಾಡಬಲ್ಲವರು. ಕನ್ನಡದಲ್ಲಂತೂ ಉದ್ದಾಮ ವಾಗ್ಮಿಯೆನಿಸಿದ್ದಾರೆ. 'ನನ್ನ ನಿನ್ನೆಗಳೊಡನೆ ಕಣ್ಣು ಮುಚ್ಚಾಲೆ' ಎಂಬ ಅವರ ಆತ್ಮವೃತ್ತ ಅನೇಕ ಕಾರಣಗಳಿಗಾಗಿ ಪ್ರಮುಖವಾದ ಸಾಹಿತ್ಯಕ ದಾಖಲೆಯಾಗಿದೆ. ಕುವೆಂಪು ಇವರನ್ನು ಕುರಿತು ಹೇಳಿದ ಮಾತುಗಳನ್ನು ಗಮನಿಸಿ : "ಜ್ಞಾನ, ಅಧಿಕಾರ, ವಿನಯ, ಸೌಜನ್ಯ, ಸೃಜನಶೀಲತೆಗಳು ಏಕತ್ರ ಸಮಾವೇಶಗೊಳ್ಳುವುದು ತುಂಬ ಅಪರೂಪ ಎಂಬುದು ನಮ್ಮೆಲ್ಲರ ಅನುಭವಕ್ಕೆ ಬಂದ ವಿಷಯ ವಾಗಿದೆ. ಇದಕ್ಕೆ ಅಪರೂಪವಾಗಿ ನಿಂತ ಪ್ರತಿಭಾಶೀಲ ಸತ್ಪುರುಷರ ವಿರಳ ಪಂಕ್ತಿಯಲ್ಲಿ ನಿಂತಿದ್ದಾರೆ ಶ್ರೀ ಪುರಾಣಿಕರು."

❑

# ದೇ.ಜವರೇಗೌಡ

ಡಾ. ಪ್ರಧಾನ್ ಗುರುದತ್ತ

ಚೆನ್ನಪಟ್ಟಣ ತಾಲೂಕಿನ ಚಕ್ಕೆರೆಯಂಥ ಕುಗ್ರಾಮದಲ್ಲಿ, ವಿದ್ಯೆಯ ಗಂಧವೇ ಇಲ್ಲದಿದ್ದಂಥ ಬಡಕುಟುಂಬದಲ್ಲಿ ಹುಟ್ಟಿದ ಬಾಲಕನೊಬ್ಬ ಮುಂದೊಂದು ದಿನ ನಮ್ಮ ನಾಡಿನ ಹೆಮ್ಮೆಯ ವಿಶ್ವವಿದ್ಯಾನಿಲಯಗಳಲ್ಲಿ ಒಂದಾದ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಯಾಗಿ ಕನ್ನಡದ ಅಪ್ರತಿಮ ಹೋರಾಟಗಾರನಾಗಿ, ಖ್ಯಾತ ವಿದ್ವಾಂಸನೂ ಶಿಕ್ಷಣವೇತ್ತನೂ ಆಗಿ, ನೂರಾರು ಮೌಲಿಕ ಗ್ರಂಥಗಳ ಕರ್ತೃವಾಗಿ ಬೆಳೆದು ನಿಲ್ಲುತ್ತಾನೆ ಎಂಬುದಾಗಿ ಯಾರೂ ಊಹಿಸಿರಲಿಲ್ಲ. ಇಂಥ ಬೆರಗುಗೊಳಿಸುವ ಹಾಗೂ ಬಹುಮುಖ ಸಾಧನೆಗಳ ಕೇಂದ್ರ ಬಿಂದುವಾದ ಮಹಾವ್ಯಕ್ತಿಯೇ ದೇವೇಗೌಡ ಜವರೇಗೌಡ(ಜ.09-07-1918). ಕನ್ನಡದ ಪರವಾದ ಸಮಸ್ತ ಕಾಳಜಿಗಳ ಪ್ರತೀಕವಾಗಿ ನಿಂತಿರುವ ಈ ವ್ಯಕ್ತಿ 'ದೇಜಗೌ' ಎಂಬತ್ಯಕ್ಷರಿಯಿಂದಲೇ ನಾಡಿನಾದ್ಯಂತ ಖ್ಯಾತನಾಮರಾಗಿದ್ದಾರೆ.

ದೇಜಗೌ ಅವರು ತಮ್ಮ ಆತ್ಮಕಥೆಯನ್ನು 'ಹೋರಾಟದ ಬದುಕು' ಎಂದೇ ಕರೆದಿದ್ದಾರೆ. ಬಾಲ್ಯ ವಿದ್ಯಾಭ್ಯಾಸ ಮತ್ತು ವ್ಯಕ್ತಿಯಲ್ಲಿನ ನೆಲೆಗಾಣುವಿಕೆಯವರೆಗಿನ ಅವರ ಬದುಕಿನ ಹೋರಾಟವನ್ನು 'ವೈಯಕ್ತಿಕ ಹೋರಾಟ'ವೆಂದು ಪರಿಗಣಿಸಿದರೆ, ಅಲ್ಲಿಂದ ಮುಂದಿನ ಅವರ ಹೋರಾಟವನ್ನು 'ಕನ್ನಡದ ಬಗೆಗಿನ ಹೋರಾಟ'ವೆಂದೇ ಬಣ್ಣಿಸಬೇಕಾಗುತ್ತದೆ. ಕೇವಲ ಎರಡು ಘಂಟೆಗಳ ಬೋಧನಾವಧಿಗೆ ಸೀಮಿತವಾಗಿದ್ದ ಕನ್ನಡ ಬೋಧನೆಯನ್ನು ಇಂಗ್ಲೀಷ್ ಬೋಧನೆಗೆ ಸರಿಸಮವಾಗಿ ನಾಲ್ಕು ಘಂಟೆಗಳ ಬೋಧನಾವಧಿಗೆ ಏರಿಸಿದ ಹಾಗೂ ವಿಶ್ವವಿದ್ಯಾನಿಲಯದ ಹಂತದಲ್ಲಿ ಕನ್ನಡ ಮಾಧ್ಯಮದ ವಿರೋಧಿಗಳಾಗಿದ್ದವರನ್ನು ಕನ್ನಡ ಮಾಧ್ಯಮದ ಪರವಾಗಿ ಮಣಿಸಿದ ದೇಜಗೌ ಕನ್ನಡ ವಿರೋಧಿಗಳಿಗೆ ಸಿಂಹಸ್ವಪ್ನವೇ ಆಗಿದ್ದರು, ಈಗಲೂ ಆಗಿದ್ದಾರೆ ಎಂದರೆ ಅದರಲ್ಲಿ ಅತಿಶಯೋಕ್ತಿಯೇನೂ ಇಲ್ಲ. ಕರ್ನಾಟಕ ಲೋಕಸೇವಾ ಆಯೋಗದ ಪರೀಕ್ಷೆಗಳಲ್ಲಿ ಕನ್ನಡಕ್ಕೆ ಸೂಕ್ತವಾದ ಸ್ಥಾನಮಾನವನ್ನು ದೊರಕಿಸಿಕೊಡುವ ಸಲುವಾಗಿಯೂ ಅವರು ಮುಂಚೂಣಿಯಲ್ಲಿ ನಿಂತು ಕನ್ನಡ ಹೋರಾಟಗಾರರೊಂದಿಗೆ ಸತ್ಯಾಗ್ರಹವನ್ನು ನಡೆಸಿದ್ದುಂಟು. ವಿಶ್ವವಿದ್ಯಾನಿಲಯದ ಗೆಜೆಟ್ಟಿನ ಕನ್ನಡ ವೃತ್ತಿ ಪ್ರಕಟವಾಗತೊಡಗಿದ್ದು, ವಿಶ್ವವಿದ್ಯಾನಿಲಯದ ಆಡಳಿತದಲ್ಲಿ ಕನ್ನಡ ವ್ಯಾಪಕವಾಗಿ ಬಳಕೆಗೆ ಬಂದದ್ದೂ ಅವರ ವೈಯಕ್ತಿಕ ಶ್ರದ್ಧೆ ಮತ್ತು ಪರಿಶ್ರಮಗಳ ಫಲವೇ ಆಗಿದೆ. ಸರ್ಕಾರದ ಅಲಮಾರಿಗಳಲ್ಲಿ ಕೊಳೆಯುತ್ತ ಬಿದ್ದಿದ್ದಂಥ "ವಿಶ್ವಕೋಶ"ದಂಥ ಯೋಜನೆಗಳನ್ನು ವಿಶ್ವವಿದ್ಯಾನಿಲಯಕ್ಕೆ ಎಳೆದು ತಂದು ಸಪ್ರಾಣವಾಗಿಸಿ, ಅದನ್ನು ವಿಶ್ವವಿದ್ಯಾನಿಲಯದ ಕೀರ್ತಿ ಪತಾಕೆಯಾಗಿಸಿದ ಹಿರಿಮೆಯೂ ಅವರಿಗಿದೆ.

'ಕನ್ನಡ ಅಧ್ಯಯನ ಸಂಸ್ಥೆ'ಯಂತೂ ದೇಜಗೌ ಅವರ ದೂರದೃಷ್ಟಿಯ ಅಪೂರ್ವ ನಿದರ್ಶನವೇ ಆಗಿಬಿಟ್ಟಿದೆ. ಕನ್ನಡಕ್ಕೆ ಸಂಬಂಧಿಸಿದ ಅಧ್ಯಯನ ಕ್ಷೇತ್ರಗಳೆಲ್ಲವೂ-ಉದಾಹರಣೆಗೆ ಜಾನಪದ, ಭಾಷಾಂತರ, ಭಾಷಾವಿಜ್ಞಾನ, ಹರಿದಾಸ ಸಾಹಿತ್ಯ, ಶಾಸನ, ಸಂಪಾದನ, ವಿಶ್ವಕೋಶ, ಇವೇ ಮೊದಲಾದ ಎಲ್ಲ ಅಧ್ಯಯನ ಕ್ಷೇತ್ರಗಳೂ ಒಂದೇ ಛಾವಣಿಯ ಅಡಿಯಲ್ಲಿ ಬರುವಂತೆ, ಮಿನಿ-ವಿಶ್ವವಿದ್ಯಾನಿಲಯವೇ ಆಗುವಂತೆ ಮಾಡಿದವರಲ್ಲಿ ಅವರೇ ಮೊದಲಿಗರು. ಈ ಮಾದರಿಯಲ್ಲೇ ಇತರ ವಿಶ್ವವಿದ್ಯಾನಿಲಯಗಳಲ್ಲಿಯೂ ಕನ್ನಡ ಅಧ್ಯಯನ ಕೇಂದ್ರಗಳು (ಪೀಠಗಳು, ಸಂಸ್ಥೆಗಳು) ತಲೆಯೆತ್ತಿದುವು ಎಂಬುದನ್ನೂ ಇಲ್ಲಿ ಸ್ಮರಿಸಬಹುದು. ಯೋಜನೆಗಳನ್ನು ರೂಪಿಸಿದ್ದು ಮಾತ್ರವಲ್ಲದೆ, ಅವು ಕಾರ್ಯರೂಪಕ್ಕೆ ಬರುವಂತೆ ಮಾಡಲು ಆಯಾ ಕ್ಷೇತ್ರದಲ್ಲಿನ ತಜ್ಞರನ್ನೂ ರಾಜ್ಯದ ಮೂಲೆಮೂಲೆಗಳಿಂದ ಅರಸಿ ತಂದು ತೊಡಗಿಸಿದ ಹಿರಿಮೆಯೂ ಅವರದು. ಅವರುಗಳಿಂದ ನಯಭಯಗಳಿಂದ ಕೆಲಸ ತೆಗೆದ ಜಾಣ್ಮೆಯೂ ಅವರದು. ಅತ್ಯಲ್ಪ ಅವಧಿಯಲ್ಲಿ 'ವಿಶ್ವಕೋಶ'ದ ಯೋಜನೆ ಆದರ್ಶಪ್ರಾಯವಾಗಿ ಅನುಷ್ಠಾನಕ್ಕೆ ಬಂದಿದ್ದು ಅವರ ಈ ಮುನ್ನೋಟದ ಫಲ. ಕನ್ನಡ ಮಾಧ್ಯಮದ ಪಠ್ಯ-ಸಂದರ್ಭ -ಗ್ರಂಥಗಳು ಲಭ್ಯವಾಗಲು ಅಗತ್ಯವಾಗಿದ್ದ ಭೂಮಿಕೆಯನ್ನು ಸಿದ್ಧಪಡಿಸಿದ್ದು ಹಾಗೂ ಮುಂದೆ ಕೇಂದ್ರ ಸರ್ಕಾರದ ಸಂಬಂಧವಾದ ಯೋಜನೆ ಅರ್ಥಪೂರ್ಣ ರೀತಿಯಲ್ಲಿ ಕಾರ್ಯಾನ್ವಯಗೊಂಡು ನೂರಾರು ಗ್ರಂಥಗಳು ಲಭ್ಯವಾಗಲು ಸಾಧ್ಯಾವಾದದ್ದೂ, ಅವರ ಈ ಮುನ್ನೋಟದ ಫಲವೇ. ಜಾನಪದ ವಸ್ತುಸಂಗ್ರಹಾಲಯದ ರೂಪದಳೆದದ್ದು ಹಾಗೂ ಜಾನಪದ ಸಾಹಿತ್ಯ ಸಂಗ್ರಹಣ ಮತ್ತು ಪ್ರಕಟಣೆ ಮೊದಲಿಟ್ಟದ್ದು ಕೂಡ ಇವರ ಇನ್ನೊಂದು ನಿದರ್ಶನ. ಅಧ್ಯಯನ, ಅಧ್ಯಾಪನ ಮತ್ತು ಸಂಶೋಧನೆಗಳಿಗೆ ಅವರು ತಮ್ಮನ್ನು ತೊಡಗಿಸಿಕೊಂಡ ಬಗೆಯೂ ಆದರ್ಶಪ್ರಾಯವೇ ಆಗಿತ್ತು. ಕನ್ನಡ ಭಾಷೆ-ಸಾಹಿತ್ಯಗಳಿಗೆ ಸಂಬಂಧಿಸಿದಂತೆ ಮಾತ್ರವಲ್ಲದೆ, ಸ್ಥಳನಾಮಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಅವರು ಮಾಡಿರುವ ಕೆಲಸ ವಿಶಿಷ್ಟವಾದುದು.

ಕುಲಪತಿಗಳಾದ ಮೇಲಂತೂ ದೇಜಗೌ ಅವರು ಹಲವಾರು ವಿಕ್ರಮಗಳನ್ನೇ ಮೆರೆದರು. ವಿಶ್ವವಿದ್ಯಾನಿಲಯದ ಆಡಳಿತದಲ್ಲಿ ಶಿಕ್ಷಣದಲ್ಲಿ ಕನ್ನಡಕ್ಕೆ ಅರ್ಥಪೂರ್ಣ ಸ್ಥಾನಮಾನಗಳು ಲಭಿಸಿದುವು. ರಾಜ್ಯದಲ್ಲಿ ಆಡಳಿತ ಭಾಷೆಯನ್ನಾಗಿ ಕನ್ನಡದ ಅನುಷ್ಠಾನಕ್ಕೆ ಇಂಬು ನೀಡುವಂಥ 'ಆಡಳಿತ ಸಾಹಿತ್ಯ'ದ ನಿರ್ಮಾಣವೂ ಆಗತೊಡಗಿತು. ಮಂಗಳೂರು ಮತ್ತು ಬಿ.ಆರ್.ಪ್ರಾಜೆಕ್ಟ್‌ಗಳಲ್ಲಿ ಸ್ನಾತಕೋತ್ತರ ಕೇಂದ್ರಗಳ (ಮುಂದೆ ಅವು ಪ್ರತ್ಯೇಕ ವಿಶ್ವವಿದ್ಯಾನಿಲಯಗಳೇ ಆದುವು) ಸ್ಥಾಪನೆ ಅವರ ಆಡಳಿತ ಮತ್ತು ಶೈಕ್ಷಣಿಕ ವಿಕ್ರಮದ ಪ್ರತೀಕವೇ ಆಗಿತ್ತು. ಇವೆಲ್ಲದರ ನಡುವೆಯೂ ಅವರ ಸಾಹಿತ್ಯ ಸೃಷ್ಟಿ ಹೊಸ ಆಯಾಮಗಳನ್ನು ಕಂಡುಕೊಳ್ಳುತ್ತಲೇ ಸಾಗಿತ್ತು. ಅವರ ಶೈಕ್ಷಣಿಕ, ಸಾಹಿತ್ಯಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಚಿಂತನೆಗಳು 'ಕುಲಪತಿಯ ಭಾಷಣಗಳು' ಎಂಬ ಹೆಸರಿನಲ್ಲಿ ಆರು ಸಂಪುಟಗಳಲ್ಲಿ ಹೊರಬಂದಿವೆ. ಜೊತೆಗೆ, ಅವುಗಳ ವೈದುಷ್ಯ ಪೂರ್ಣತೆ ಅವುಗಳ ಸಿದ್ಧತೆಗೆ ಅವರು ಎಷ್ಟು ಗಂಭೀರವಾಗಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರೆಂಬುದಕ್ಕೂ ಸಾಕ್ಷಿ ನುಡಿಯುತ್ತದೆ. ಪತ್ರಿಕೋದ್ಯಮ ವಿಭಾಗದ ಪ್ರಾಯೋಗಿಕ ಪತ್ರಿಕೆ 'ಮಾನಸ ಗಂಗೋತ್ರಿ'ಯಲ್ಲಿ ಅವರು ಬರೆದ 'ಕುಲಪತಿ'ಯ ಪತ್ರಗಳು ಕೆ.ಎಂ. ಮುನ್ಷಿಯವರು 'Bhavan's Journal'ನಲ್ಲಿ ಬರೆಯುತ್ತಿದ್ದ 'Kulapathi's letter'ಅನ್ನು ನೆನಪಿಗೆ ತಂದರೂ ಸ್ವರೂಪ ಮತ್ತು ವಿಷಯ ವ್ಯಾಪ್ತಿಗಳಲ್ಲಿ ಅದನ್ನು ಮೀರಿ ಕನ್ನಡಕ್ಕೆ ಹೊಸ ಕೊಡುಗೆಯೇ ಆಯಿತು. ನಮ್ಮಲ್ಲಿ ತೀರ ವಿರಳವಾಗಿರುವ ದಿನಚರಿ ಸಾಹಿತ್ಯಕ್ಕೂ ದೇಜಗೌ ಕೊಡುಗೆ ನೀಡಿದ್ದು, ಅವರ 'ಕುಲಪತಿಯ ದಿನಚರಿ' ಈ ದಿಕ್ಕಿನಲ್ಲಿ ಗಮನಾರ್ಹವಾದ ಹೊಸ ಕೊಡುಗೆಯೇ ಆಗಿದೆ. ದೇಜಗೌ ಅವರ ಇಂಗ್ಲೀಷ್ ಭಾಷಣಗಳ ಸಂಕಲನ Culture, Education and

Society ಎಂಬ ಹೆಸರಿನಲ್ಲಿ ಹೊರಬಂದಿದೆ. ಇವೆಲ್ಲ ಕುಲಪತಿಗಳಾಗಿ ಅವರ ಸಾಧನೆಯ ಸಾಹಿತ್ಯಕ ಸಾಕ್ಷಿಗಳೇ ಆಗಿವೆ.

ವೃತ್ತಿಯಿಂದ ನಿವೃತ್ತರಾದ ಮೇಲೆಯೂ ದೇಜಗೌ ಅವರು ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಹಾಗೂ ಸಂಘಸಂಸ್ಥೆಗಳನ್ನು ಕಟ್ಟಿ ಬೆಳೆಸುವ ಕಾರ್ಯಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ಮತ್ತು ಶ್ರೀ ಕುವೆಂಪು ವಿದ್ಯಾಪರಿಷತ್ತಿನ ಆಶ್ರಯದಲ್ಲಿ ಅವರು ಸ್ಥಾಪಿಸಿ ನಡೆಸಿಕೊಂಡು ಬರುತ್ತಿರುವ ಶಾಲಾ-ಕಾಲೇಜುಗಳು ಮತ್ತು ಪ್ರಕಾಶನ ಕಾರ್ಯಗಳು ಅವರ ಕರ್ತೃತ್ವ ಶಕ್ತಿಗೆ ಸಾಕ್ಷಿಯಾಗಿವೆ. 'ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ'ದ ಅಧ್ಯಕ್ಷರಾಗಿ, ಅದನ್ನು ಸ್ನಾತಕೋತ್ತರ ಅಧ್ಯಯನ ಮತ್ತು ಸಂಶೋಧನ ಕೇಂದ್ರವಾಗಿ ಬೆಳೆಸಿದ ಹಿರಿಮೆಯೂ ಅವರದೇ. 'ಭಾರತೀಯ ಸ್ಥಳನಾಮಗಳ ಸಂಸ್ಥೆ' ಗಟ್ಟಿಯಾಗಿ ಬೇರುಬಿಟ್ಟು, ಗೌರವ-ಪ್ರತಿಷ್ಠೆಗಳನ್ನು ಗಳಿಸಿಕೊಂಡಿದ್ದಾರೆ. ಅದಕ್ಕೆ ಸಂಬಂಧವಾಗಿ ದೇಜಗೌ ಅವರು ಮಾಡಿದ ಮೌಲ್ಯಿಕವಾದ ಅಧ್ಯಯನ, ಸಂಶೋಧನೆ ಮತ್ತು ಮಾರ್ಗದರ್ಶನ ಕಾರ್ಯಗಳೇ ಕಾರಣವಾಗಿವೆ. ಈಗಷ್ಟೇ ಅಸ್ತಿತ್ವಕ್ಕೆ ಬರುತ್ತಿರುವ 'ದ್ರಾವಿಡ ವಿಶ್ವವಿದ್ಯಾನಿಲಯ'ವೂ ಅವರ ಸಲಹೆ-ಮಾರ್ಗದರ್ಶನಗಳನ್ನು ಪಡೆದುಕೊಳ್ಳುತ್ತಿದೆ.

ಕುವೆಂಪು ಸಾಹಿತ್ಯ, ಜಾನಪದ, ಸಂಶೋಧನೆ, ವಿಮರ್ಶೆ, ಅನುವಾದ, ಪ್ರವಾಸ ಸಾಹಿತ್ಯ ಮತ್ತು ಜೀವನ ಚರಿತ್ರೆ- ಇವು ದೇಜಗೌ ಅವರ ಸಾಹಿತ್ಯಕ ಆಸಕ್ತಿಯ ಪ್ರಮುಖ ಕ್ಷೇತ್ರಗಳು. ಈ ಎಲ್ಲ ಕ್ಷೇತ್ರಗಳಲ್ಲಿಯೂ ಎದ್ದುಕಾಣುವಂಥ ಕೆಲಸಗಳನ್ನು ಅವರು ಮಾಡಿಸಿದ್ದಾರೆ. ಒಟ್ಟಾರೆ ಸುಮಾರು ೧೩೫ಕ್ಕೂ ಹೆಚ್ಚು ಕೃತಿಗಳನ್ನು ಅವರು ಪ್ರಕಟಿಸಿದ್ದಾರೆಂಬ ಸಂಗತಿ ಅವರ ಅಧ್ಯಯನದ ವ್ಯಾಪ್ತಿ ಮತ್ತು ವೈವಿಧ್ಯವನ್ನು ಸಾರಿಹೇಳುತ್ತದೆ.

ಕುವೆಂಪು ಸಾಹಿತ್ಯದ ಅಧ್ಯಯನಕ್ಕೆ ಸಂಬಂಧಿಸಿದಂತೆ ದೇಜಗೌ ಅವರು ಮಾಡಿರುವ ಕಾರ್ಯ ಬೃಹತ್ತು ಮತ್ತು ಮಹತ್ವಗಳ ದೃಷ್ಟಿಯಿಂದಲೂ ಗಮನಾರ್ಹವಾಗಿದೆ. 'ಶ್ರೀ ರಾಮಾಯಣ ದರ್ಶನಂ ವಚನ ಚಂದ್ರಿಕೆ' ಕುವೆಂಪು ಅವರ ಆ ಮಹಾಕಾವ್ಯದ ಅರಿವಿಗೆ ಪಂಡಿತ-ಪಾಮರರಿಗೆಲ್ಲ ನೆರವಾಗುವಂಥ ಉದ್ಬೋಧಕ ಕೃತಿಯಾಗಿದೆ. ಅದಕ್ಕೆ ಅವರು ಬರೆದಿರುವ ಸುದೀರ್ಘವಾದ ಪ್ರಸ್ತಾವನೆ ಅವರ ಗಹನವಾದ ಮತ್ತು ವ್ಯಾಪಕವಾದ ಅಧ್ಯಯನಕ್ಕೆ ಸಾಕ್ಷಿಯಾಗಿದೆ. 'ರಾಷ್ಟ್ರಕವಿ ಕುವೆಂಪು' (ಮೊದಲಿಗೆ 'ಗಂಗೋತ್ರಿ'ಯಲ್ಲಿ ಅನಂತರದಲ್ಲಿ ಪ್ರತ್ಯೇಕವಾದ ಗ್ರಂಥದ ರೂಪದಲ್ಲಿ) ಅಪೂರ್ವ ಜೀವನಚರಿತ್ರೆಯಾಗಿದ್ದರೆ, ನಾಲ್ಕು ಭಾಗಗಳಲ್ಲಿ ಹೊರತರಲಾಗಿರುವ 'ಕುವೆಂಪು- ಸಾಹಿತ್ಯ: ಕೆಲವು ಅಧ್ಯಯನಗಳು' ಅವರ ಪ್ರಖರವಾದ ಚಿಂತನೆಯ ಮತ್ತು ಆಳವಾದ ಅಧ್ಯಯನದ ಫಲವಾಗಿ ರೂಪುಗೊಂಡಿರುವ ಶ್ರೇಷ್ಠ ವಿಮರ್ಶಾತ್ಮಕ ಸಂಕಲನಗಳಾಗಿವೆ. 'ಶ್ರೀ ಕುವೆಂಪು ಅವರ ದಾಂಪತ್ಯದರ್ಶನದ ನಾಲ್ಕು ಕವನಗಳು' ದೇಜಗೌ ಅವರ ವ್ಯಾಖ್ಯಾನ ಪ್ರತಿಭೆಯ ನಿದರ್ಶನವೇ ಆಗಿದೆ. 'ಕುವೆಂಪು ಅವರ ದರ್ಶನ ಮತ್ತು ಸಂದೇಶ' ಮತ್ತು 'ಕುವೆಂಪು ಶೈಲಿ'- ಆ ಮಹಾಕವಿಯ ವ್ಯಕ್ತಿತ್ವದ ವಿವಿಧ ಆಯಾಮಗಳನ್ನು ತೋರಿಸಿಕೊಡುವಂಥ ಉದ್ಬೋಧಕ ಕೃತಿಗಳೇ ಆಗಿವೆ. 'ಕುವೆಂಪು ಅವರ ಕೊನೆಯ ದಿನಗಳು'- ಹೆಸರೇ ಸೂಚಿಸುವಂತೆ, ಕುವೆಂಪು ಅವರ ಬದುಕಿನ ಅಂತಿಮ ಅಧ್ಯಾಯದ ಅನಾವರಣವೇ ಆಗಿದೆ. ಕುವೆಂಪು ಸಾಹಿತ್ಯವನ್ನು ಕುರಿತ ಯಾವುದೇ ಅಧ್ಯಯನಕ್ಕೆ ದೇಜಗೌ ಅವರ ಈ ಕೃತಿಗಳು ಮಹತ್ವದ ಅಧ್ಯಯನ ಸಾಮಗ್ರಿಯನ್ನು ಒದಗಿಸುತ್ತವೆ. ಇವುಗಳನ್ನು ಪರಿಶೀಲಿಸದೆ ಅಂಥ ಯಾವುದೇ ಅಧ್ಯಯನವೂ ಪರಿಪೂರ್ಣವಾಗುವುದಿಲ್ಲ. ಇಲ್ಲಿಯೇ ಹೆಸರಿಸಬಹುದಾದ ಇನ್ನೊಂದು ಕೃತಿಯೆಂದರೆ Selected Poems of Kuvempu ಇದು ಕುವೆಂಪು ಅವರ ಆಯ್ದ 109 ಕವನ ಇಂಗ್ಲೀಷ್ ಅನುವಾದವನ್ನು ಪರಿಷ್ಕರಿಸಿ ಸಂಪಾದಿಸಿರುವ ಕೃತಿ (ಸಹ ಸಂಪಾದಕರು: ಪ್ರಧಾನ್ ಗುರುದತ್ತ).

ಕರ್ನಾಟಕದಲ್ಲಿ ಜಾನಪದೀಯ ಅಧ್ಯಯನಕ್ಕೆ ಸರಿಯಾದ ದಿಕ್ಕು-ದೆಸೆಗಳನ್ನು ತೋರಿದ ವ್ಯಕ್ತಿಗಳಲ್ಲಿ ಪ್ರಮುಖರಾಗಿರುವ ದೇಜಗೌ ಅವರು 'ಜನಪದ ಗೀತಾಂಜಲಿ', 'ಜಾನಪದ ಅಧ್ಯಯನ', 'ಜಾನಪದವಾಹಿನಿ' ಮತ್ತು 'ಜಾನಪದ ಸೌಂದರ್ಯ'ದಂಥ ಮೂಲಭೂತ ಗ್ರಂಥಗಳನ್ನು ರಚಿಸಿ, ಈ ಅಧ್ಯಯನ ಕ್ಷೇತ್ರದ ಹಿರಿಮೆಗಳನ್ನು ಸಾರಿ ಹೇಳಿದ್ದಾರೆ. ಅದು ಸಾಗಬೇಕಾಗಿರುವ ಮಾರ್ಗವನ್ನು ತೆರೆದುತೋರಿದ್ದಾರೆ. ದಕ್ಷಿಣ ಏಷ್ಯಾದಲ್ಲಿಯೇ ಇಂದು ವಿಶಿಷ್ಟವಾದುದೆನಿಸಿಕೊಂಡಿರುವ ಮೈಸೂರು ವಿಶ್ವವಿದ್ಯಾನಿಲಯದ ಜಾನಪದ ವಸ್ತುಸಂಗ್ರಹಾಲಯ'ದ ಪ್ರಮುಖ ರೂವಾರಿಯೂ ಅವರೇ ಎಂಬುದನ್ನೂ ಇಲ್ಲಿ ಉಲ್ಲೇಖಿಸಬಹುದಾಗಿದೆ. 1995-96ರಲ್ಲಿ ಅವರು 'Folklore Society of South Indian Languages'ನ ಅಧ್ಯಕ್ಷರಾಗಿಯೂ ಸೇವೆಸಲ್ಲಿದ್ದಾರೆ.

ಸಂಶೋಧನೆ ಮತ್ತು ವಿಮರ್ಶೆಯ ಕ್ಷೇತ್ರಗಳಿಗೆ ದೇಜಗೌ ಅವರು ನೀಡಿರುವ ಕೊಡುಗೆಯೂ ಅಪಾರವಾದುದು, ಮೌಲಿಕವಾಗಿರುವಂಥದು, ಮಹತ್ವಪೂರ್ಣವಾಗಿರುವಂಥದು ಹಾಗೂ ವೈವಿಧ್ಯಮಯವಾಗಿರುವಂಥದು. ವಿಶೇಷವಾಗಿ, ಕುಮಾರವ್ಯಾಸ ಭಾರತದ ಬಗೆಗಿನ ಅವರ ಸಾಂಸ್ಕೃತಿಕ ಅಧ್ಯಯನ, ಈ ದಿಕ್ಕಿನಲ್ಲಿ ನಡೆಯಬಹುದಾಗಿರುವ ಮುಂದಿನ ಎಲ್ಲ ಅಧ್ಯಯನಗಳಿಗೂ ಮಾರ್ಗದರ್ಶಕವೂ, ಮಾದರಿಯೂ ಆಗಿ ನಿಲ್ಲಬಲ್ಲಂಥ ಕೃತಿಯೇ ಆಗಿದೆ. ಅವರ 'ಗದ್ಯ ಶೈಲಿ'ಯಂತೂ ಕನ್ನಡ ಗದ್ಯ ಪಡೆದುಕೊಂಡಿರುವ ವಿವಿಧ ಆಯಾಮಗಳನ್ನು ಅನಾವರಣಗೊಳಿಸಿರುವಂಥ ಕೃತಿ 'ಸ್ಥಳನಾಮ ವ್ಯಾಸಂಗ'ವೂ ಈ ಹೊಸ ಅಧ್ಯಯನ ಕ್ಷೇತ್ರದ ಬಗೆಗಿನ ಸಮರ್ಥ ಮಾರ್ಗದರ್ಶಕ ಕೃತಿಯೇ ಆಗಿದೆ. 'ಪುಣ್ಯಾಸ್ರವ', 'ಲೀಲಾವತಿ ಪ್ರಬಂಧಂ', 'ನಳಚರಿತ್ರೆ' ಮೊದಲಾದ ಸಂಪಾದಿತ ಕೃತಿಗಳಿಗೆ ಅವರು ಬರೆದಿರುವ ಪೀಠಿಕೆ-ಪ್ರಸ್ತಾವನೆಗಳು ಅವರ ಕೂಲಂಕಷ ಅಧ್ಯಯನದ ಪ್ರತೀಕವೇ ಆಗಿವೆ.

ಅನುವಾದ ದೇಜಗೌ ಅವರ ಪ್ರೀತಿಯ ಕ್ಷೇತ್ರವೂ ಹೌದು. ಯಾರೂ ಮುಟ್ಟಲು ಹೆದರುವಂಥ ಬೃಹತ್ತಾದ, ಮಹತ್ತರವಾದ ಗ್ರಂಥಗಳು ದೇಜಗೌ ಅವರ ಈ ಸಾಹಸಗಳಿಂದ ಕನ್ನಡಕ್ಕೆ ಲಭ್ಯವಾಗಿವೆ. ಟಾಲ್‌ಸ್ಟಾಯ್ ಅವರ 'ಪುನರುತ್ಥಾನ' ಮತ್ತು 'ಯುದ್ಧ ಮತ್ತು ಶಾಂತಿ' ಹಾಗೂ 'ಅನ್ನಾ ಕರಿನೀನಾ' ದಂಥ ಕೃತಿಗಳು ಜೇನ್ ಆಸ್ಟಿನ್ ಅವರ 'ಹಮ್ಮು-ಬಿಮ್ಮು', ಬಿನ್ಯನ್ ಲಾರೆನ್ಸ್ ಅವರ 'ಅಕ್ಬರ್'ನಂಥ ಮಹತ್ವದ ಕೃತಿಗಳೆನ್ನೆಲ್ಲ ಅವರು ಕನ್ನಡಕ್ಕೆ ತಂದು ಕೊಟ್ಟಿದ್ದಾರೆ. ರಷ್ಯನ್ ಭಾಷೆಯ ಮಹಾಕೃತಿಗಳನ್ನು ಇಂಗ್ಲೀಷ್ ಮೂಲದಿಂದ ಅವರು ಅನುವಾದಿಸಿದ್ದರೂ, ಅವರು ಅತ್ಯಂತ ಸಹಜವಾದ ರೀತಿಯಲ್ಲಿ ಕನ್ನಡಕ್ಕೆ ಅಳವಡಿಸಿದ್ದಾರೆ. ಈ ಕೃತಿಗಳ ಅನುವಾದದ ಸಂದರ್ಭದಲ್ಲಿ ದೇಜಗೌ ಅವರು ನೂರಾರು ಹೊಸ ಶಬ್ದಗಳನ್ನು ಸೃಷ್ಟಿಸಿದ್ದಾರೆಂಬುದೂ ಗಮನಾರ್ಹವಾದ ಸಂಗತಿ. ಅನುವಾದಗಳು ಭಾಷೆಗೆ ಹೊಸ ಆಯಾಮಗಳನ್ನು ಹೇಗೆ ಮೂಡಿಸುತ್ತವೆ ಎಂಬುದಕ್ಕೂ ಅವರ ಈ ಅನುವಾದಗಳು ಸಾಕ್ಷಿಯಾಗಿವೆ.

ಕಾದಂಬರಿ ಜೀವನಚರಿತ್ರೆ, ನಾಟಕ, ಜಾನಪದ- ಇವೇ ಮೊದಲಾದ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಅವರು ಮಾಡಿರುವ ಅನುವಾದದ ಮೊತ್ತ ಸುಮಾರು ೫,೦೦೦ ಪುಟಗಳನ್ನು ಮೀರುತ್ತದೆ. ಭಾಷಾಂತರ ಅಧ್ಯಯನ ಕ್ಷೇತ್ರ ಕರ್ನಾಟಕದ ವಿಶ್ವವಿದ್ಯಾಲಯದ ಮಟ್ಟದಲ್ಲಿ ಅಧ್ಯಯನ ವಿಷಯ ವಾಗಲು ಮೂಲತಃ ಕಾರಣರಾಗಿರುವ ದೇಜಗೌ ಅವರು ಅದಕ್ಕೆ ಅಗತ್ಯವಾದ ನಿದರ್ಶನ-ಸಾಮಗ್ರಿಯನ್ನೂ ಒದಗಿಸಿದ್ದಾರೆ ಎಂಬುದು ವಿಶೇಷವಾಗಿ ಗಮನಿಸಬೇಕಾದ ಸಂಗತಿಯೇ ಆಗಿದೆ.

ದೇಜಗೌ ಅವರು ಕುಲಪತಿಯಾಗಿದ್ದ ಅವಧಿಯಲ್ಲಿ ಹಾಗೂ ನಿವೃತ್ತರಾದ ಮೇಲೆ ಅನೇಕ ಬಾರಿ ವಿದೇಶಗಳಲ್ಲಿ ಸಂಚರಿಸಿದ್ದಾರೆ. ಇಂಥ ಎಲ್ಲ ಸಂಚಾರಗಳ ಸಂದರ್ಭದಲ್ಲಿಯೂ ಅವರ ಕಣ್ಣು ಇರುವುದು ಸಾಹಿತ್ಯಕ, ಸಾಂಸ್ಕೃತಿಕ, ಸಾಮಾಜಿಕ ಮತ್ತು ಜಾನಪದೀಯ ಮಹತ್ವದ ಸಂಗತಿಗಳತ್ತ. ಅಧ್ಯಯನ ಮತ್ತು ಅನುಭವಗಳ ಗಟ್ಟಿ ನೆಲದ ಮೇಲೆ ನಿಂತಿರುವುದರಿಂದ, ವಿದೇಶಗಳಲ್ಲಿನ ಕಣ್ಣುಕೋರೈಸುವ ಸಂಗತಿಗಳಾವುವೂ ಅವರನ್ನು ಹಾರಿಸಿ ಕೊಂಡು ಹೋಗಲಾರವು. ನಮ್ಮ ನಾಡಿನ ಹಿತದೃಷ್ಟಿಯಿಂದ ಗಮನಾರ್ಹವಾದ ಸಂಗತಿಗಳತ್ತ ಒತ್ತುಕೊಟ್ಟೇ ಅವರು ವಿವಿಧ ದೇಶಗಳ ಹಿರಿಮೆ-ಗರಿಮೆ ಮತ್ತು ಸಾಧನೆ-ವೈಶಿಷ್ಟ್ಯಗಳನ್ನು ಗುರುತಿಸುತ್ತಾರೆ. ಹೀಗಾಗಿ ಅವರ ಪ್ರವಾಸ ಕೃತಿಗಳು ಕೇವಲ ವರದಿಗಳಾಗದೆ, 'ಪ್ರವಾಸಿ ಮಾಹಿತಿ'ಗಳ ಸಂಕಟಗಳಾಗದೆ, ರಂಜಕವೂ ಉದ್ಬೋಧಕವೂ ಆದ ಕೃತಿಗಳಾಗುತ್ತವೆ. ಮೂಲತಃ ಸಾಹಿತ್ಯಕ ಪ್ರವೃತ್ತಿ ಯವರಾದ ದೇಜಗೌ ಅವರು ಇದರಲ್ಲಿ ಹೊಸ ಪ್ರಯೋಗಗಳನ್ನು ಮಾಡಿದ್ದಾರೆ. 'ವಿಸ್ಮಯಗಳ ನಾಡಿನಲ್ಲಿ' ಎಂಬ ಅಮೇರಿಕಾ ಪ್ರವಾಸ ಕಥನವನ್ನು ಅವರು ಕಾದಂಬರಿಯ ಸ್ವಾರಸ್ಯ ಮತ್ತು ವೈಶಿಷ್ಟ್ಯಗಳು ಮೈಗೂಡಿಸಿಕೊಳ್ಳುವಂಥ ರೀತಿಯಲ್ಲಿಯೇ ರಚಿಸಿದ್ದಾರೆ ಹಾಗೂ ಅದನ್ನು 'ಪ್ರವಾಸಿ ಕಾದಂಬರಿ' ಎಂದೇ ಕರೆದಿದ್ದಾರೆ. 'ಪ್ರವಾಸಿಯ ದಿನಚರಿ'ಯೂ ಇನ್ನೊಂದು ಪ್ರಯೋಗ. ಅವರ 'ವಿದೇಶದಲ್ಲಿ ನಾಲ್ಕು ವಾರ', 'ಆಫ್ರಿಕಾ ಯಾತ್ರೆ' ಮತ್ತು 'ಯೇಸು ವಿಭೀಷಣರ ನಾಡಿನಲ್ಲಿ'- ಕನ್ನಡ ಪ್ರವಾಸ ಸಾಹಿತ್ಯಕ್ಕೆ ಅರ್ಥಪೂರ್ಣ ಕೊಡುಗೆಗಳೇ ಆಗಿವೆ. ಅವರ ಸ್ವಿಜರ್ಲೆಂಡಿನ ಪ್ರವಾಸಕಥನ 'ನಿಚ್ಚ ಹಸಿರಿನ ನಾಡಿನಲ್ಲಿ' ಎಂಬ ಹೆಸರಿನಲ್ಲಿ ಹೊರಬರುತ್ತಿದೆ.

ಜೀವನ ಚರಿತ್ರೆಗಳ ಕ್ಷೇತ್ರಕ್ಕೆ ದೇಜಗೌ ಅವರ ಕೊಡುಗೆ ವೈವಿಧ್ಯ ಮಯವಾದುದು. ತಮ್ಮ ಪ್ರೀತಿಯ ಗುರುಗಳಾಗಿದ್ದ 'ತೀನಂಶ್ರೀ' ಹಾಗೂ ಆತ್ಮೀಯರಾಗಿದ್ದ ಶ್ರೀ ಕೆ.ವಿ.ಶಂಕರಗೌಡ ಅವರನ್ನೇ ಕುರಿತ (ನಿತ್ಯಸಚಿವ) ಜೀವನಚರಿತ್ರೆಗಳಿಂದ ಹಿಡಿದು, ತಮ್ಮ ಆರಾಧ್ಯಕವಿಗಳೂ ಗುರುಗಳೂ ಆಗಿದ್ದ ಶ್ರೀ ಕುವೆಂಪು, ಕರ್ನಾಟಕದ ಹೆಮ್ಮೆಯ ಪುತ್ರರಲ್ಲಿ ಒಬ್ಬರಾದ ಶ್ರೀ ಎಸ್ ನಿಜಲಿಂಗಪ್ಪ, ಆದರ್ಶ ಮಠಾಧಿಪತಿಗಳಲ್ಲಿ ಒಬ್ಬರಾದ ಸಿದ್ದಗಂಗೆಯ ಶ್ರೀ ಶಿವಕುಮಾರ ಸ್ವಾಮಿಗಳಂಥವರನ್ನೇ ಕುರಿತ (ಕ್ರಮಶಃ ರಾಷ್ಟ್ರಕವಿ ಕುವೆಂಪು', 'ಕರ್ನಾಟಕದ ರೂವಾರಿ' ಹಾಗೂ 'ಸಿದ್ಧಗಂಗೆಯ ಶಿವನಿಧಿ') ಜೀವನ ಚರಿತ್ರೆಗಳವರೆಗೆ, ರಾಜಕಾರಣದಲ್ಲಿನ ಅಪರೂಪದ ವ್ಯಕ್ತಿಯಾದ ಜಯಪ್ರಕಾಶ ನಾರಾಯಣ (ಲೋಕನಾಯಕ) ಹಾಗೂ ದಲಿತರ ಉದ್ಧಾರ ಶಕ್ತಿಯಾದ ಡಾ. ಅಂಬೇಡ್ಕರ್ (ಕ್ರಾಂತಿಕಾರಿ ಡಾ. ಅಂಬೇಡ್ಕರ), ಅಧ್ಯಾತ್ಮದ ಕ್ಷೇತ್ರದಲ್ಲಿನ ಅಪೂರ್ವ ಚೇತನಗಳಾದ ನಾರಾಯಣ ಗುರು ಮತ್ತು ಶ್ರೀರಾಮಕೃಷ್ಣ ಪರಮಹಂಸರ (ಕ್ರಮಶಃ 'ನಾರಾಯಣ ಗುರು' ಮತ್ತು 'ದಕ್ಷಿಣೇಶ್ವರಕ್ಕೆ ನಮನ') ವರೆಗೆ ಈ ಶತಮಾನದ ಮಹಾನ್ ವಿಚಾರವಾದಿಗಳಲ್ಲೊಬ್ಬರಾದ ಪೆರಿಯಾರ್ ಅವರವರೆಗೆ (ವಿಚಾರವಾದಿ ಪೆರಿಯಾರ್), ಅಷ್ಟಾಗಿ ಯಾರೂ ಕೇಳಿ ಅರಿಯದ 'ವ್ಯಾಕರಣದ ಮಲ್ಲಪ್ಪ'ನವರೆಗೆ ಅವರ ಆಸಕ್ತಿ ವಿಸ್ತರಿಸಿಕೊಳ್ಳುತ್ತದೆ. ದೂರದ ನಾಡಿನ 'ಅಮೆರಿಕಾ ಗಾಂಧಿ' ಮತ್ತು 'ಬೂಕರ್ ಟಿ.ವಾಷಿಂಗ್ಟನ್' ಕೂಡ ಇವರ ಆಸಕ್ತಿಗೆ ಹೊರತಾಗುವುದಿಲ್ಲ. ಯಾವುದೇ ಪೂರ್ವಾಗ್ರಹಗಳಿಲ್ಲದೆ ಈ ಎಲ್ಲ ಮಹಾವ್ಯಕ್ತಿಗಳ ಸಾಧನೆಗಳನ್ನೇ ವಸ್ತುನಿಷ್ಠವಾಗಿ ಒರೆಹಚ್ಚಿ, ಆತ್ಮೀಯ ಶೈಲಿಯಲ್ಲಿ ನಿರೂಪಿಸುವುದು ಈ ಎಲ್ಲ ಕೃತಿಗಳಲ್ಲಿ ನಾವು ಕಾಣುವ ವೈಶಿಷ್ಟ್ಯ. ಇದಕ್ಕಾಗಿ ದೇಜಗೌ ಅವರು ವಹಿಸುವ ಆಸಕ್ತಿ, ಕಲೆಹಾಕಿದ ಅಗಾಧ ಸಾಮಗ್ರಿ, ಅದನ್ನು ಬಳಸಿಕೊಳ್ಳುವಲ್ಲಿ ಅವರು ತೋರುವ ಜಾಣ್ಮೆ ಹಾಗೂ ಔಚಿತ್ಯಪ್ರಜ್ಞೆ ನಮ್ಮನ್ನು ಬೆರಗುಗೊಳಿಸುತ್ತದೆ.

'ಆತ್ಮಕಥೆ'ಯ ವೈವಿಧ್ಯಮಯ ಪ್ರಕಾರಕ್ಕೂ ದೇಜಗೌ ಅವರು ತಮ್ಮ ಕಾಣಿಕೆಯನ್ನು ಇತ್ತಿದ್ದಾರೆ. 'ಹೋರಾಟದ ಬದುಕು' (ಎರಡು ಭಾಗಗಳಲ್ಲಿ), 'ನೆನಪಿನ ಬುತ್ತಿ', 'ನನ್ನ ಉಪವಾಸದ ಕಥೆ'- ಈ ವಿಭಾಗದಲ್ಲಿ ಬರುವ ಕೃತಿಗಳು. ಸಾಮಾನ್ಯವಾಗಿ ಆತ್ಮಕಥೆಗಳಲ್ಲಿ ಲೇಖಕರು ತಮಗೆ ಕಿರಿಕಿರಿ ಯನ್ನುಂಟುಮಾಡುವಂಥ ಕೆಲವಾದರೂ ಪ್ರಸಂಗಗಳನ್ನು ಬಿಟ್ಟುಬಿಡುವು ದುಂಟು, ದೇಜಗೌ ಅವರು ಇದಕ್ಕೊಂದು ಅಪವಾದ. ತಮ್ಮ ವ್ಯಕ್ತಿತ್ವದ ಗುಣ-ದೋಷ, ಲೋಪ-ದೌರ್ಬಲ್ಯ, ಸವಾಲು-ಸಾಧನೆಗಳನ್ನು ದೇಜಗೌ ಅವರು ವಿಶ್ಲೇಷಣಾತ್ಮಕವಾಗಿ ವಿವರಿಸಿದ್ದಾರೆ.

ಈ ಪ್ರಕಾರಗಳಲ್ಲಿಯೇ ಅಲ್ಲದೆ, ಪ್ರಬಂಧ-ಹರಟೆ ('ಕೆನೆ' 'ತೆನೆ' ಮತ್ತು 'ಬೆರಕೆ ಸೊಪ್ಪು), ಕಾದಂಬರಿ ('ಕಡುಗಲಿ ಕುಮಾರರಾಮ', 'ಬೆಂಗಳೂರು ಕೆಂಪೇಗೌಡ'), ಮಕ್ಕಳ ಸಾಹಿತ್ಯ (ಸುಮಾರು 170ಕೃತಿಗಳು) ಮತ್ತು ಶೈಕ್ಷಣಿಕ ಸಾಹಿತ್ಯ ('ಕೆಲವು ಶೈಕ್ಷಣಿಕ ವಿಚಾರಗಳು', 'ವಿದ್ಯಾಪೀಠಗಳು', ಇತ್ಯಾದಿ) - ಈ ಕ್ಷೇತ್ರಗಳನ್ನೂ ದೇಜಗೌ ಅವರು ಸಮೃದ್ಧಗೊಳಿಸಿದ್ದಾರೆ.

ಇಂಥ ಮಹಾಸಾಧನೆಗಳ ಕೇಂದ್ರಬಿಂದುವಾಗಿರುವ ದೇಜಗೌ ಅವರಿಗೆ ಹಲವಾರು ಅಭಿನಂದನ ಗ್ರಂಥಗಳು ('ಅಂತಃಕರಣ, ದೇಜಗೌ: ವ್ಯಕ್ತಿ ಮತ್ತು ಸಾಹಿತ್ಯ', 'ರಸಷಷ್ಠಿ', 'ಎಪ್ಪತ್ತರ ಹೊಸ್ತಿಲಲ್ಲಿ', 'ಅಮೃತವರ್ಷ ಮತ್ತು 'ಅಪೂರ್ವ') ಸಮರ್ಪಿತವಾಗಿವೆ. ಅಷ್ಟೇ ಅಲ್ಲ, ಅವರನ್ನು ಕುರಿತಂತೆ ಹಲ ವಾರು ಇತಿವೃತ್ತಾತ್ಮಕ ಗ್ರಂಥಗಳೂ ('ಕನ್ನಡದ ಕಣ್ಮಣಿ', 'ಕನ್ನಡ ಸೇನಾನಿ', 'ಕರ್ಮಯೋಗಿ', 'ಕುಲಪತಿಯ ಸಾಧನೆಗಳು', 'ಗುಡಿಸಿಲಿನಿಂದ ಗಂಗೋತ್ರಿಗೆ' ಮತ್ತು 'ದೇಜಗೌ: 75-ಸಂದರ್ಶನ) ರಚಿತವಾಗಿರುವುದು ಅವರ ಸಾಧನೆಯ ಪ್ರತೀಕವಾಗಿಯೇ ಇದೆ. ದೇಜಗೌ ಅವರದು ಬೆಂಗಳೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ವಿಶ್ವವಿದ್ಯಾಲಯಗಳು ಅವರಿಗೆ ಗೌರವ ಡಾಕ್ಟರೇಟ್ ನೀಡಿ ಪುರಸ್ಕರಿಸಿವೆ. ಕರ್ನಾಟಕ ಸರ್ಕಾರದ ಪಂಪ ಪ್ರಶಸ್ತಿ, ಹಂಪಿಯ ಕನ್ನಡ ವಿಶ್ವವಿದ್ಯಾಲಯದ 'ನಾಡೋಜ' ಗೌರವ ಪದವಿಗಳಿಗೆ ಪಾತ್ರರಾಗಿದ್ದಾರೆ.

ದೇಜಗೌ ಅವರದು ಎತ್ತರದ ವ್ಯಕ್ತಿತ್ವ, ಬೆರಗುಗೊಳಿಸುವ ಸಾಧನೆ. ಏಕೆಂದರೆ, ಅವರ ವ್ಯಕ್ತಿತ್ವದಲ್ಲಿ ಹುಟ್ಟು ಹೋರಾಟಗಾರ, ದಣಿವರಿಯದ ನಿರ್ಮಾಪಕ, ಸಾಹಿತ್ಯ-ಸಂಸ್ಕೃತಿಗಳ ಸಂವರ್ಧಕ, ಶ್ರೇಷ್ಠ ಸಂಶೋಧಕ-ಅಧ್ಯಾಪಕ, ದೂರದೃಷ್ಟಿಯ ಉತ್ತಮ ಆಡಳಿತಗಾರ, ಮಹಾಕನಸುಗಾರ-ಇವರೆಲ್ಲರ ಗುಣವೈಶಿಷ್ಟ್ಯಗಳೂ ಮೇಳೈಸಿವೆ.

❑

# ಮಿರ್ಜಿ ಅಣ್ಣಾರಾಯ

ಕಮಲಾ ಹಂಪನಾ

ಮಿರ್ಜಿ ಅಣ್ಣಾರಾಯ ಎಂಬುದು ಹೊಸಗನ್ನಡ ಸಾಹಿತ್ಯದಲ್ಲಿ ಚಿರಪರಿಚಿತ ಹೆಸರು. ಅನುಭವಿ ಶಿಕ್ಷಕ, ಮಿತಭಾಷಿ, ಆದರ್ಶಜೀವಿ, ಸತತಾಭ್ಯಾಸಿ, ಬಹುಮುಖಿ ಸಾಹಿತ್ಯಕಾರ-ಈ ಪಂಚ ಸೂತ್ರಗಳಲ್ಲಿ ಹಿರಿಯ ಸಾಹಿತಿ ಮಿರ್ಜಿ ಅಣ್ಣಾರಾಯರ ಒಟ್ಟು ವ್ಯಕ್ತಿತ್ವ ಹರಳುಗೊಳ್ಳುತ್ತದೆ.

ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಬೆಳಗಾವಿಯೂ ಒಂದು. ಬೆಳಗಾವಿಯಿಂದ ಉತ್ತರಕ್ಕೆ ಸುಮಾರು 125 ಕಿ.ಮೀ. ದೂರದ ಹಳ್ಳಿ ಸೇಡಬಾಳ. ಅದು ಅಣ್ಣಾರಾಯರ ಕಾರ್ಯಕ್ಷೇತ್ರ. ಅಣ್ಣಾರಾಯರ ಹೆಸರಿನ ಆದಿಯಲ್ಲಿರುವ ಮಿರ್ಜಿ (ಮಿರಜಿ) ಎಂಬುದು ಅವರ ಮನೆತನದ ಪೂರ್ವಜರಿದ್ದ ಊರು. ಇಂದಿಗೂ ಮಹಾರಾಷ್ಟ್ರ-ಕರ್ನಾಟಕದ ಗಡಿರೇಖೆಯಲ್ಲಿರುವ ಮಿರಜಿಯಲ್ಲಿ ಅಣ್ಣಾರಾಯರ ಚಿಕ್ಕದೊಂದು ಮನೆಯಿದೆ. ಈಗ್ಗೆ 120 ವರ್ಷಗಳ ಕೆಳಗೆ ಅಣ್ಣಾರಾಯರ ತಾತಂದಿರಾದ ಅಣ್ಣಪ್ಪ ಮಿರಜಿ ಎಂಬುವವರು ಮಿರಜಿಯನ್ನು ತೊರೆದು, ಅಲ್ಲಿಗೆ ಕೇವಲ 16 ಕಿ.ಮೀ. ಅಂತರದಲ್ಲಿದ್ದ ಸೇಡಬಾಳಕ್ಕೆ ಬಂದು ನೆಲಸಿದರು.

ಸೇಡಬಾಳ ಕರ್ನಾಟಕದ ಜನಮನದ ನೆನಪಿನಲ್ಲಿ ನಿಂತಿರುವುದು ಮಿರ್ಜಿ ಅಣ್ಣಾರಾಯರಿಂದ. ಬೆಳಗಾವಿಯಂತೇ, ಆ ಜಿಲ್ಲೆಗೆ ಸೇರಿದ ಸೇಡಬಾಳವೂ ಕರ್ನಾಟಕದ ಗಡಿಯಲ್ಲಿದೆ. ಈ ಗಡಿಯನ್ನು ಕರ್ನಾಟಕದ ಸೆರಗಿನೊಳಗೇ ನಿಲ್ಲುವಂತೆ ಸುಮಾರು ಮೂರುವರೆ ದಶಕಗಳ ಕಾಲ ದುಡಿದವರು, ಪ್ರತಿಫಲಾಪೇಕ್ಷೆಯಿಲ್ಲದೇ ಶ್ರಮಿಸಿದವರು ಅಣ್ಣಾರಾಯರು. ಅವರು ಹುಟ್ಟಿ ಬೆಳೆದದ್ದು, ಕೆಲಸಕ್ಕೆ ಸೇರಿ, ಪಾಠ ಹೇಳಿ, ನಿವೃತ್ತರಾದದ್ದು., ಸಿದ್ಧಿಸಾಧನೆಗಳನ್ನೆಸಗಿದ್ದು, ಸಾಹಿತ್ಯ ಕಾಯಕದಲ್ಲಿ ನೆಲೆಯೂರಿದ್ದು ಕಡೆಗೆ 23-12-1975ರಂದು ಮಂಗಳವಾರ ಮುಂಜಾನೆ ಕೊನೆಯುಸಿರೆಳದದ್ದು ಎಲ್ಲ ಅಲ್ಲೆ, ಸೇಡಬಾಳದಲ್ಲೆ.

ಅಣ್ಣಪ್ಪ ಅಪ್ಪಣ್ಣ ಮಿರ್ಜಿ ಎಂಬುದು ಸರಕಾರದ ಕಡತಗಳಲ್ಲಿ ನಮೂದಾಗಿರುವ ಅವರ ಪೂರ್ತಿ ಹೆಸರು. ಅವರು ಇದ್ದುಳ್ಳ ಮನೆತನದಲ್ಲಿ ಹುಟ್ಟಿದವರಲ್ಲ. ಆಗರ್ಭ ಶ್ರೀಮಂತರ ಏಕೈಕ ಪುತ್ರಿಯ ಕೈಹಿಡಿದವರೂ ಅಲ್ಲ. ಇನ್ನೊಬ್ಬರ ಹಂಗು ಹಸಾದಗಳಿಲ್ಲದೆ ಸ್ವಪ್ರಯತ್ನದಿಂದ ತೆಂಗಿನ ಮರದಂತೆ ಎತ್ತರವಾಗಿ ಬೆಳೆದು ನಿಂತವರು. ಹಡೆದವರನ್ನು ಕುರಿತು "ನನ್ನ ತಂದೆ ತಾಯಂದಿರು ಅಕ್ಷರಗಳನ್ನು ಕಲಿತವರಲ್ಲ, ಆದರೆ ತುಂಬ ಸುಸಂಸ್ಕೃತರು"- ಎಂದು ಅಣ್ಣಾರಾಯರೇ ಹೇಳಿಕೊಂಡಿದ್ದಾರೆ. ಹೀಗೆ ಶ್ರೀಸಾಮಾನ್ಯರ ಮನೆತನದಲ್ಲಿ ಆಗಸ್ಟ್ 25, 1918ರಲ್ಲಿ ಜನಿಸಿದ ಅಣ್ಣಾರಾಯರು ತಮ್ಮ ಒಟ್ಟು 57 ವರ್ಷಗಳ ಜೀವಿತ ಕಾಲದಲ್ಲಿ ಮಾಡಿಮಟ್ಟಿದ್ದು ಮಾತ್ರ ಅಸಾಮಾನ್ಯವಾದದ್ದು, ಒಬ್ಬ ವ್ಯಕ್ತಿಯ ಅಳವಿಗೆ ದೊಡ್ಡದೆನಿಸುವಂತಹುದು, ಗೌರವ ತರುವಂತಹುದು. ಸಾಮಾನ್ಯವಾಗಿ ಪದವಿ ಪ್ರಶಸ್ತಿ ಪಡೆದು ಉನ್ನತಸ್ಥಾನಕ್ಕೆ ಬಂದೊಡನೆ ಅಂಥ ವ್ಯಕ್ತಿಯನ್ನು ಕುರಿತು 'ಇವರು ವ್ಯಕ್ತಿಯಲ್ಲ ಸಂಸ್ಥೆ' ಎಂಬಂಥ ವಿಶೇಷಣೋಕ್ತಿಗಳನ್ನು ಅನ್ವಯಿಸಿ ಹೇಳುವುದರಿಂದ ಆ ಮಾತುಗಳಿಂದು, ಸವೆದ ನಾಣ್ಯಗಳಾಗಿವೆ. ಆದರೆ ಆ ಮಾತುಗಳನ್ನು ಮಿರ್ಜಿ ಅಣ್ಣಾರಾಯರಿಗೆ, ಅಂಥವರಿಗೆ ಅನ್ವಯಿಸಿವುದರಿಂದ ಅವು ಮತ್ತೆ ಸತ್ವಶಾಲಿಯಾಗಿ ಚಲಾವಣೆಗೆ ಸಲ್ಲುತ್ತವೆ.

ಅಣ್ಣಾರಾಯರು ವಿದ್ಯಾರ್ಥಿಯಾಗಿ ಕಾಲೇಜು ಮೆಟ್ಟಲು ಹತ್ತಿದವರಲ್ಲ; ಅವರು ಬರೆದ ಪುಸ್ತಕಗಳು ಮಾತ್ರ ಸ್ನಾತಕೋತ್ತರ ತರಗತಿಗಳಿಗೂ ಪಠ್ಯಗಳಾಗಿವೆ; ಸಾಹಿತ್ಯ ಕೃತಿಗಳಾಗಿ ಮನ್ನಣೆ ಹೊಂದಿವೆ. ಮಠಕ್ಕೆ ಹಾಜರಾಗಿ ಶಾಸ್ತ್ರೋಕ್ತವಾಗಿ ಅವರು ಕಲಿತದ್ದು ಪ್ರಾಥಮಿಕ ಶಾಲೆಯವರೆಗೆ. ಅಲ್ಲಿಂದ ಆಚೆಗೆ ಮನೆಯಲ್ಲಿ ಕುಳಿತೇ ಸ್ವಾಧ್ಯಾಯ ಕಲಿಕೆ. ಖಾಸಗಿಯಾಗಿ ಕಲಿಯುತ್ತಾ ಕನ್ನಡ ಸಾಹಿತ್ಯ ಪರಿಷತ್ತಿನ 'ಜಾಣ' ಪರೀಕ್ಷೆಗೆ ಅಭ್ಯರ್ಥಿಯಾಗಿ ನೊಂದಾಯಿಸಿಕೊಂಡು, 1938ರಲ್ಲಿ ಜಾಣರಾದರು. ಮರುವರ್ಷ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ನೇಮಕವಾದರು. ಕನ್ನಡ, ಮರಾಠಿ, ಹಿಂದಿ ಭಾಷೆಗಳಲ್ಲಿ ಪರಿಣತರಾದರು. ವ್ಯವಹಾರಕ್ಕೆಂದು ತಕ್ಕಮಟ್ಟಿನ ಇಂಗ್ಲಿಷ್ ಮತ್ತು ಗುಜರಾತಿ ಕಲಿತರು. ಸಂಸ್ಕೃತ, ಪ್ರಾಕೃತಗಳ-ಪರಿಶ್ರಮವಿತ್ತು. ವಿಶ್ವವಿಖ್ಯಾತ ವಿದ್ವಾಂಸ ಡಾ|| ಆ.ನೇ. ಉಪಾಧ್ಯೆಯವರ ಮಾರ್ಗದರ್ಶನದಲ್ಲಿ ಪ್ರೌಢ ಕೃತಿಗಳನ್ನೂ ಅಭ್ಯಸಿಸಿದರು.

ಇಪ್ಪತ್ತರ ಹರಯದಲ್ಲಿ ಅಣ್ಣಾರಾಯರ ರಾಗಲಾಲಸೆಗಳು ಸಾಹಿತ್ಯ ಸೀಮೆಗೆ ಧಾವಿಸಿದವು. ಜೈನಾಗಮ, ಹಳೆಗನ್ನಡ ಸಾಹಿತ್ಯ ಕರತಲಾಮಲಕವಾಯಿತು. ಸಿಕ್ಕಿದ್ದನ್ನು ಥಕ್ಕನೆ ಹಿಡಿಯುವ ತಾರುಣ್ಯ ಪ್ರಜ್ಞೆಗೆ ಗ್ರಾಮ ಜೀವನದ ಸೂಕ್ಷ್ಮ ಪದರಗಳು ಪಾರದರ್ಶಕವಾದವು. ಸೃಜನ ಶಕ್ತಿ ಬದುಕಿಗೆ ಕಣ್ಣಾಗಿ, ಕೊರಳಾಗಿ ಹೊರಳಿದ್ದರಿಂದ ಅದರೆಲ್ಲ ಸಂಕೀರ್ಣ ವಿಸ್ಮಯಗಳ ನಿಕಟತೆ ದೊರೆತಂತೆ ಒಂದು ಹೊಸಕೃತಿ 1914ರ ವೇಳೆಗೆ ಬರವಣಿಗೆಗೆ ಇಳಿಯಿತು. 1945ರಲ್ಲಿ ಅದು ಪ್ರಕಟವಾಗಿ ಕನ್ನಡದಲ್ಲಿ ನವವಿಕ್ರಮವನ್ನು ಸಾಧಿಸಿತು. ಅದೇ ಅವರ ಚಿರಂಜೀವಿ ಕೃತಿಯಾದ 'ನಿಸರ್ಗ'.

ಆಗಿನ್ನೂ ಕನ್ನಡದಲ್ಲಿ ಕಾದಂಬರಿ ಜನಪ್ರಿಯವಾಗತೊಡಗಿತ್ತು. ಅಣ್ಣಾರಾಯರು 27ರ ಯುವಕ, ಪ್ರತಿಷ್ಠಾಪಿತ ಹಿರಿಯ ಸಾಹಿತಿಗಳಿಗೆ ದೊರಕಲು ತಡವಾಗಿದ್ದ ಕೀರ್ತಿಯೆಲ್ಲಾ ಈ ಹೊಸ ಜವ್ವನಿಗ ಲೇಖಕನ ಚೊಚ್ಚಲು ಕೃತಿಗೆ ದಕ್ಕಿತು. ನಿಸರ್ಗ ಕಾದಂಬರಿ ಅಚ್ಚಿನ ಮನೆಯಿಂದ ಹೊರ ಬರುತ್ತಿದ್ದಂತೆ ತನ್ನ ತಾಜಾತನದಿಂದ ವಿಮರ್ಶಕರ ಮೌನವಿರೇಳಿಸಿತು; ಅದರಲ್ಲಿನ ಮಣ್ಣಿನ ವಾಸನೆಗೆ ಅವರು ನಿಬ್ಬೆರಗಾದರು. ವಸ್ತುವಿನ ಸಹಜತೆ, ಭಾಷೆಯ ವೀರ್ಯವಂತಿಕೆ, ದೇಸಿಗುಣ, ಸರಳ ಕಲಾತ್ಮಕ ನಿರೂಪಣೆ, ಬದುಕಿನ ಜೀವಂತ ಚಿತ್ರಣ-ಇವುಗಳಿಂದ 'ನಿಸರ್ಗ' ಹೊಸ ದಾಖಲೆ ಸ್ಥಾಪಿಸಿತು; ಸಾಹಿತ್ಯ ಪರಿಷತ್ತು, ಮುಂಬೈ ಸರಕಾರ, ದೇವರಾಜ ಬಹದ್ದೂರ್ ಪಾರಿತೋಷಕ ಮನ್ನಣೆ ಪಡೆಯಿತು. ನಿರಂಜನರು ಹೇಳುವಂತೆ- "ನಿಸರ್ಗ ಜೀವನದ ಒಂದು ಕೈಪಿಡಿ. ಸಮಾಜ ಸ್ಥಿತಿಯಲ್ಲಿ ಕ್ರಾಂತಿಕಾರಕ ಬದಲಾವಣೆಯಾಗಬೇಕೆಂದು ಇಚ್ಛಿಸುವವರು, ಹೊಸ ನಾಡನ್ನು ನಿರ್ಮಿಸಬೇಕೆಂದು ಹಂಬಲಿಸುವವರು ಅವಶ್ಯ ಓದಬೇಕಾದ ಕಾದಂಬರಿ ನಿಸರ್ಗ. ಆ ನಾನ್ನೂರು ಪುಟ, ಓದುಗನ ಹೃದಯ ಕೆದಕುವ ಕರುಳು ಕೊಯ್ಯುವ ಸುಖದ ದುಃಖದ ನಾಲ್ಕು ಹನಿ ಕಣ್ಣೀರು ಸುರಿಸುವ, ತಲೆಬಾಗುವಂತೆ, ಮನ ಭಾರವಾಗುವಂತೆ ಮಾಡುವ ಒಂದು ಸುಂದರ ಕಾವ್ಯ."

ಅಣ್ಣಾರಾಯರು-ಅಹಂಭಾವ ಎರಡು ಧ್ರುವಗಳು. ಸರಳತೆ, ಸೌಜನ್ಯ, ಸ್ನೇಹಪರತೆ, ಅವ್ಯಾಜ ಅಂತಃಕರಣ-ಇವು ಅವರ ಹೆಸರುಗಳು. ತಮ್ಮ

ಮೊದಲ ಕೃತಿಗೆ ದೊರೆತ ಮರ್ಯಾದೆಯಿಂದ ಅವರ 'ತಲೆ ತಿರುಗಲಿಲ್ಲ'. ಬದಲು ದೇಶದಲ್ಲಿ ಸ್ವಾತಂತ್ರ್ಯ ಆಂದೋಲನ ಕಾವಿನಿಂದ ಬಿರುಸಾಗಿ ನಡೆಯುತ್ತಿದ್ದುದಕ್ಕೆ ಸ್ಪಂದಿಸಿದರು. ಗಾಂಧಿತಾತನ ಕರೆಗೆ ಓಗೊಟ್ಟರು. ಖಾದಿ ಅವರ ದೇಹಕ್ಕೆ ಕವಚವಾಯಿತು. ಗಾಂಧಿ ಟೋಪಿ ಜುಬ್ಬಾ, ಕಚ್ಚೆ ಪಂಚೆ-ಅವರ ನಿತ್ಯದ ವೇಷಭೂಷಣವಾಯಿತು. ಹುಟ್ಟಿನಿಂದ, ಆಚರಣೆಯಿಂದ, ಧೋರಣೆಯಿಂದ, ಅಣ್ಣಾರಾಯರು ಅಹಿಂಸಾವಾದಿ. ರಾಷ್ಟ್ರಜೀವನದಲ್ಲಿಯ ಪರ್ವಕಾಲದಲ್ಲಿ ಸ್ಥಿತ್ಯಂತರಗಳನ್ನು ಪ್ರತ್ಯಕ್ಷ ಸಾಕ್ಷಿಗಳಾಗಿ ಕಂಡುಂಡ ಈ ಲೇಖಕರು, ಸ್ವಾತಂತ್ರ್ಯೋದಯ ವರ್ಷದಲ್ಲಿ ರಾಷ್ಟ್ರಪುರುಷ (1947) ಕಾದಂಬರಿಯನ್ನು ಹೊರತಂದರು. ಬಿಡುಗಡೆಯ ಹೋರಾಟದಲ್ಲಿ ಹಿಂದೂ-ಮುಸ್ಲಿಂ ಭ್ರಾತೃತ್ವವೂ ಬೆಸೆದುಕೊಂಡಿತ್ತೆಂಬುದನ್ನು ಪ್ರತಿಪಾದಿಸುವ 'ರಾಷ್ಟ್ರಪುರುಷ'ದಲ್ಲಿ ಅಜಿತನ ಪಾತ್ರ ಉದಾತ್ತವಾಗಿ ರೂಪಿತವಾಗಿದೆ. ಮುಂಬಯಿ ಷಹರಿನ ಹಾಗೂ ಗ್ರಾಮ ಜೀವನದ ಸೊಗಡು ಮೂಗಿಗೆ ಬಡಿಯುವಷ್ಟು ಸಹಜವಾಗಿದೆ. ಇದೇ ವರ್ಷ ಬರೆದ ಇನ್ನೊಂದು ಕಾದಂಬರಿ 'ಪ್ರತಿ ಸರಕಾರ'. ಅಣ್ಣಾರಾಯರ ಮುಂದಿನ ಕೃತಿ 'ರಾಮಣ್ಣ ಮಾಸ್ತರ' ಕಾದಂಬರಿ (1948); ಹಳ್ಳಿಯ ಸಾಲೆಯ ಮಾಸ್ತರನು ಕಾದಂಬರಿಯ ನಾಯಕ ಪಟ್ಟವನ್ನು ಎರಡನೆಯ ಸಲ ಏರಿದುದಕ್ಕೆ ಶಿಕ್ಷಕರು, ವಿಶೇಷತಃ ಉತ್ತರ ಕರ್ನಾಟಕದವರು ಹೆಮ್ಮೆ ಪಟ್ಟುಕೊಳ್ಳಬಹುದು. ತಮ್ಮ ಜೀವನದ, ಅನುಭವದ ತಿರುಳಿನಂತಿರುವ ಈ ಕಾದಂಬರಿಯನ್ನು ಅವರು ಮೆಚ್ಚಿಕೊಳ್ಳಬಲ್ಲರು, ಇತರರಿಗೂ ಈ ಅನುಭವವು ಮೆಚ್ಚುಗೆಯಾದೀತು. 'ರಾಮಣ್ಣ ಮಾಸ್ತರು' ಕಾದಂಬರಿ ಹಳ್ಳಿಯ ಸಾಲೆಯ ಮಾಸ್ತರ ಒಂದು ಚಿಕ್ಕ ಕಾವ್ಯ"- (ಪ್ರೊ.ಸ.ಸ. ಮಾಳವಾಡ). ಇದರ ಬೆನ್ನ ಹಿಂದೆಯೇ ಬಂದ ಕಾದಂಬರಿ 'ಅಶೋಕ ಚಕ್ರ' (1948) ಇದರಲ್ಲಿ ಆರ್ಥಿಕ ವ್ಯವಸ್ಥೆಯ ಅಸಮಾನತೆಯ ವಿವಿಧ ಮುಖಗಳು ಮತ್ತು ಪರಿಣಾಮವನ್ನೂ, ಹಳ್ಳಿಗರ ಅಸಹಾಯಕ ಸ್ಥಿತಿಯನ್ನೂ, ಅದರಿಂದ ನಡೆಯುವ ಶೋಷಣೆಯ ಕರಾಳತೆಯನ್ನೂ ಕಾದಂಬರಿಕಾರರು ಹೃದಯ ವಿದ್ರಾವಕವಾಗುವಂತೆ ಚಿತ್ರಿಸಿದ್ದಾರೆ. ವ್ಯಾಸರಾಯ ಬಲ್ಲಾಳರು 'ಅಶೋಕ ಚಕ್ರ'ವನ್ನು ಮೊದಲನೆಯ ವರ್ಗದ ಕನ್ನಡ ಕಾದಂಬರಿಯೆಂದಿದ್ದಾರೆ.

'ಶ್ರೇಯಾಂಸ' ಕಾದಂಬರಿಯಲ್ಲಿ ಎರಡು ಭಾಗಗಳಿವೆ; ಭಾಗ-1 (1954), ಭಾಗ-2 (1955), ಎರಡು ಹೆಜ್ಜೆ (1954), ಹದಗೆಟ್ಟಹಳ್ಳಿ (1965), ಭಸ್ಮಾಸುರ (1949) ಮುಂತಾದವು ಅಣ್ಣಾರಾಯರ ಇತರ ಸಾಮಾಜಿಕ ಕಾದಂಬರಿಗಳು. ಸಾಮ್ರಾಟ್ ಶ್ರೇಣಿಕ (1954), ಚಾವುಂಡರಾಯ (1974), ಸಿದ್ಧಚಕ್ರ (1974)-ಚಾರಿತ್ರಿಕ ಕಾದಂಬರಿಗಳು, ಋಷಭದೇವ (1974) ಪೌರಾಣಿಕ ಕಾದಂಬರಿ. ಕಥಾಸಾಹಿತ್ಯಕ್ಕೂ ಅವರ ಕಾಣಿಕೆ ಕಡಿಮೆಯದೇನಲ್ಲ. ಪ್ರಣಯ ಸಮಾಧಿ (1948), ಅಮರ ಕಥೆಗಳು (1950), ವಿಜಯಶ್ರೀ (1950) ಎಂಬ ಕಥಾ ಸಂಕಲನಗಳು ಪ್ರಕಟವಾಗಿವೆ.

ವಿಸ್ತಾರದಂತೆ ವೈವಿಧ್ಯ ಅಣ್ಣಾರಾಯರ ಸಾಹಿತ್ಯ ರಚನೆಯಲ್ಲಿದೆ. ಬಹುಮುಖ ಸಾಹಿತ್ಯ ರಚನೆಯ ಕೃಷಿ ಕಂಡಾಗ ಒಬ್ಬ ಪ್ರಾಥಾಮಿಕ ಶಾಲಾ ಅಧ್ಯಾಪಕರು ಎಷ್ಟೊಂದು ಕೆಲಸ ಮಾಡಿದ್ದಾರೆಂದು ಮನವರಿಕೆಯಾಗುತ್ತದೆ. ಸನ್ಮತಿ, ವಿವೇಕಾಭ್ಯುದಯ, ಗುರುದೇವ, ಜೀವನ, ಪ್ರಬುದ್ಧ ಕರ್ನಾಟಕ ಮುಂತಾದ ಹತ್ತಾರು ನಿಯತಕಾಲಿಕಗಳಲ್ಲಿ ನಾನಾ ವಿಷಯ ಕುರಿತು ನೂರಾರು ಲೇಖನ ಬರೆದಿದ್ದಾರೆ. ಮೂಲ ಶಿಕ್ಷಣ ಮೌಲ್ಯಮಾಪನ (1954), ಭಾಷಾ ಶಿಕ್ಷಣ (1957), ಲೇಖನ ಕಲೆ (1947) ಮುಂತಾದ ಶೈಕ್ಷಣಿಕ ಗ್ರಂಥಗಳಿವೆ. ದತ್ತವಾಣಿ (1946), ವಿಮರ್ಶೆಯ ಸ್ವರೂಪ (1950), ಭರತೇಶನ ನಾಲ್ಕು ಚಿತ್ರಗಳು (1954), ಕನ್ನಡ ಸಾಹಿತ್ಯದ ಒಲವುಗಳು (1964)-ಇವು ವಿಮರ್ಶೆಯ ಕೃತಿಗಳು. ಕಲ್ಯಾಣ ಕೀರ್ತಿ ಕವಿಯ ಚಿನ್ಮಯಿ ಚಿಂತಾಮಣಿ (1946), ಭರತೇಶ ವೈಭವದ ಶೋಭನ ಸಂಧಿಗಳು (1954)-ಅವರು ಸಂಪಾದಿಸಿದ ಗ್ರಂಥಗಳು.

ವ್ಯಕ್ತಿಚಿತ್ರಗಳಲ್ಲೂ ಅಣ್ಣಾರಾಯರು ಎತ್ತಿದ ಕೈ. ಇಸ್ಲಾಂ, ಜೈನ, ಬೌದ್ಧ ಧರ್ಮಗಳ ಮಹಾಪುರುಷರ ಜೀವನ ಚರಿತ್ರೆಗಳನ್ನು ಹೊರತಂದಿದ್ದಾರೆ. ಮಹಾಪುರುಷ (1956), ಪ್ರಿಯದರ್ಶಿನಿ (1960), ಭಾರತದ ಬೆಳಕು (1955), ಖಾರವೇಲ (1955), ಭಗವಾನ್ ಮಹಾವೀರ (1955), ಬುದ್ಧನ ಕಥೆ (1956), ಮಹಮ್ಮದ್ ಪೈಗಂಬರ (1956), ಶಾಂತಿಸಾಗರರು (1954), ತೀರ್ಥಂಕರ ಮಹಾವೀರ (1963)-ಮೊದಲಾದುವನ್ನು ಉಲ್ಲೇಖಿಸಬಹುದು. ಇವುಗಳಲ್ಲಿ ಮಕ್ಕಳಸಾಹಿತ್ಯವೂ ಸೇರಿದೆ.

ಅಣ್ಣಾರಾಯರ ಪ್ರೌಢಗ್ರಂಥಗಳನ್ನು ಪ್ರತ್ಯೇಕವಾಗಿ ಹೆಸರಿಸಬೇಕು; ಅವುಗಳಲ್ಲಿ ಶಿಖರಪ್ರಾಯವಾದುದು, ಡೆಮ್ಮಿ ಆಕಾರದಲ್ಲಿ 900 ಪುಟಗಳ ಜೈನಧರ್ಮ (1952, 1974) ಎಂಬ ಮೇರುಕೃತಿ. ಕರ್ನಾಟಕಕ್ಕೂ ಕನ್ನಡಕ್ಕೂ, ಜೈನರಿಗೂ ಗಳಸ್ಯ ಕಂಠಸ್ಯ. ಕನ್ನಡ ಸಾಹಿತ್ಯವನ್ನು ಪ್ರಾರಂಭದಲ್ಲಿ ವ್ಯವಸಾಯ ಮಾಡಿ ಮೊದಲ ಬೆಳೆ ತೆಗೆದವರು ಜೈನರು. ಜೈನ ಪುರಾಣಗಳು ಕನ್ನಡದ ಹೆಮ್ಮೆಯ ಕೃತಿಗಳು. ಅವನ್ನು ಅರ್ಥೈಸಲು ಉತ್ತಮ ಪ್ರವೇಶಿಕೆಯ ಅಗತ್ಯವನ್ನು ಈ ಬೃಹತ್ ಗ್ರಂಥ ಸಮರ್ಥವಾಗಿ ಪೂರೈಸಿದೆ. ಜೈನಧರ್ಮದ ದಿಗಂಬರ, ಶ್ವೇತಾಂಬರ, ಯಾಪನೀಯ, ತೇರಹ ಪಂಥ, ವೀಸ ಪಂಥ, ಸ್ಥಾನಕವಾಸಿ-ಮೊದಲಾದ ಶಾಖೆಗಳನ್ನು ಪರಿಚಯಿಸಲಾಗಿದೆ. ಭಾರತದ ಪ್ರಾಂತ್ಯಗಳಲ್ಲಿನ ಜೈನ ಧರ್ಮದ ವ್ಯಾಪ್ತಿಯ ಇತಿಹಾಸ, ಆಗಮಗಳು, ಸ್ಯಾದ್ವಾದ ದೃಷ್ಟಿ, ಆತ್ಮ ಮೀಮಾಂಸೆ, ಕರ್ಮ ವಿಜ್ಞಾನ, ಅಸಾಧಕನ ಗುಣಸ್ಥಾನ, ಸಂಸ್ಕೃತಿ, ಸಾಹಿತ್ಯ ಇತರ ಧರ್ಮಗಳೊಂದಿಗೆ ತೌಲನಿಕ ಅಧ್ಯಯನ-ಇವೆಲ್ಲವನ್ನೂ ಈ ಉದ್ಗ್ರಂಥದಲ್ಲಿ ಅಳವಡಿಸಲಾಗಿದೆ.

ಅಂತರಾಷ್ಟ್ರೀಯ ಖ್ಯಾತಿಯ ವಿದ್ವಾಂಸವರೇಣ್ಯರಾದ ಡಾ. ಆ.ನೇ. ಉಪಾಧ್ಯೆಯವರ ಅಭಿಪ್ರಾಯ: "ಈ ಗ್ರಂಥದ ವಿಷಯವ್ಯಾಪ್ತಿಯನ್ನು ನೋಡಿದರೆ, ಶ್ರೀಯುತ ಅಣ್ಣಾರಾಯ ಮಿರ್ಜಿಯವರ ವಿವಿಧ ವಾಚನ, ದೀರ್ಘ ಪ್ರಯತ್ನ ಮತ್ತು ವ್ಯಾಪಕ ದೃಷ್ಟಿ-ಇವುಗಳನ್ನು ಯಾರೂ ಮೆಚ್ಚಬಹುದು. ಆಯಾ ವಿಷಯಗಳ ಮೇಲೆ ದೊರೆಯುವ ಬೇರೆಬೇರೆ ಭಾಷೆಯಲ್ಲಿಯ ಗ್ರಂಥಗಳನ್ನು ಯಥಾಸಾಂಗವಾಗಿ ಅಭ್ಯಸಿಸಿ ಶ್ರೀಯುತರಾದ ಮಿರ್ಜಿಯವರು ಬೇರೆ ಬೇರೆ ಪ್ರಕರಣಗಳಲ್ಲಿಯ ವಿಷಯ ನಿರೂಪಣೆಯನ್ನು ಮಾಡಿದ್ದಾರೆ. ಪುರಾತನ ವಿಚಾರಕ್ಕೇನೇ ಅಂಟಿಕೊಳ್ಳುವ ಪಂಡಿತರ ದುರಾಗ್ರಹವಾಗಲಿ ಅಥವಾ ಧರ್ಮವನ್ನು ಅರಿಯದೆ ಹಳಿಯುವ ಕೆಲವು ಆಧುನಿಕ ವಿಚಾರ ಪ್ರವರ್ತಕರ ಉಚ್ಛೃಂಖಲ ವೃತ್ತಿಯಾಗಲಿ ಕಂಡುಬರುವುದಿಲ್ಲ. ಎಲ್ಲಿ ನೋಡಿದರೂ ಪರಿಪಕ್ವವಾದ ತುಲನಾತ್ಮಕ ದೃಷ್ಟಿ, ವ್ಯಾಪಕ ವಿಚಾರ ಮತ್ತು ಸಮನ್ವಯ ಬುದ್ಧಿ ಇವೇ ಕಣ್ಣಿಗೆ ಬೀಳುತ್ತವೆ. ಇಷ್ಟು ವ್ಯಾಪಕ ವಿಷಯಗಳನ್ನೆಲ್ಲ ಒಳಗೊಂಡು ಇಂಥ ದೊಡ್ಡ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಬರೆದು ಜೈನ ಧರ್ಮದ ಮತ್ತು ಕನ್ನಡ ಭಾಷೆಯ ಸೇವೆಯನ್ನು ಉತ್ತಮ ರೀತಿಯಿಂದ ಮಾಡಿರುತ್ತಾರೆಂದು ನಿಸ್ಸಂಶಯವಾಗಿ ಹೇಳಬಹುದು."

ಅಣ್ಣಾರಾಯರು ಸೃಜನಶೀಲ ಹಾಗೂ ಸೃಜನೇತರ ಮಾನವಿಕ ಪ್ರಕಾರಗಳಲ್ಲೂ ಮೌಲಿಕ ಬರವಣಿಗೆ ಮಾಡಿದ್ದಾರೆ. ಸಂಸ್ಕೃತದಲ್ಲಿ ಪೂರ್ವ ಪುರಾಣ-ಉತ್ತರ ಪುರಾಣ ಎಂಬ ಎರಡೂ ಭಾಗಗಳು ಸೇರಿ ಆದ ಮಹಾ ಪುರಾಣವು ದೊಡ್ಡ ಮಹಾಕಾವ್ಯ. ಅದು ಜಿನಸೇನ ಮತ್ತು ಗುಣಭದ್ರ ಆಚಾರ್ಯರಿಂದ ಪ್ರಣೀತವಾದ ಮಹಾಕೃತಿ. ಅದನ್ನು ಚಾಮರಾಜನಗರದ ಬ್ರಹ್ಮಸೂರಿ ಪಂಡಿತರ ಪುತ್ರ ಪದ್ಮರಾಜ ಪಂಡಿತರು ಕನ್ನಡಕ್ಕೆ ಅನುವಾದಿಸುವ ಕಾರ್ಯಕೈಗೊಂಡಿದ್ದರು (1893). ಅನಂತರ ಆ.ವಿ. ನ್ಯಾಯತೀರ್ಥ ಎರ್ತೂರು ಶಾಂತಿರಾಜ ಶಾಸ್ತ್ರಿಗಳು ಪೂರ್ಣವಾಗಿ ನೆರವೇರಿಸಿದರು (1925-1981). ಪ್ರೊ.ಜಿ. ಬ್ರಹ್ಮಪ್ಪನವರೂ ಸಮಗ್ರವಾದ ಗದ್ಯಾನುವಾದ ಮಾಡಿದ್ದಾರೆ (1985). ಆದರೆ ಸಾಮಾನ್ಯರಿಗೂ ಎಟಕುವಂತೆ ತಿಳಿಯಾದ ಗದ್ಯದಲ್ಲಿ ಅಣ್ಣಾರಾಯರು ಅಥಣಿಯ ಡಿ.ಎ. ಬೋಗಾರರ ನೆರವಿನಿಂದ 'ಮಹಾಪುರಾಣಸಾರ' (1962) ಪ್ರಕಟಿಸಿದ್ದಾರೆ. ಇದೇ ಮಾದರಿಯನ್ನು ಮುಂದುವರಿಸಿ ಅಣ್ಣಾರಾಯರು ಏಕಾಂಗಿಯಾಗಿ ರವಿಷೇಣನ ರಾಮಾಯಣ ಕೃತಿಯ ಸಾರವನ್ನು 'ಜನತಾ ರಾಮಾಯಣ' (1968) ಎಂಬ ಹೆಸರಿನಿಂದ ಮುದ್ರಿಸಿದ್ದಾರೆ. ಆದರೆ, ಅದಕ್ಕೆ ಬರೆದಿರುವ ವಿಸ್ತಾರವಾದ 100 ಪುಟಗಳ ಪ್ರೌಢ ಪ್ರಸ್ತಾವನೆ ಮಾತ್ರ ಪಿಎಚ್.ಡಿ. ನಿಬಂಧದಂತೆ ತಲಸ್ಪರ್ಶಿಯಾದ ತೌಲನಿಕ ಸಂಶೋಧನೆಯಿಂದ ಭಾರತೀಯ ಭಾಷೆಗಳಲ್ಲಿರುವ ರಾಮಾಯಣಗಳ ಪರಂಪರೆಯನ್ನು ವಿವೇಚಿಸಿದೆ; ಇದರಲ್ಲಿ ಲೇಖಕರ ದೀರ್ಘಕಾಲದ ಮನನ ಮತ್ತು ಸ್ವಾಧ್ಯಾಯದ ಫಲ ಎದ್ದು ಕಾಣುತ್ತದೆ.

ಈ ವಿದ್ವತ್ ಕೃತಿಗಳ ಶ್ರೇಣಿಗೆ ಸೇರಿದ ಮತ್ತೊಂದು ಗ್ರಂಥ 'ರತ್ನ ಕರಂಡಕ ಶ್ರಾವಕಾಚಾರ' (1960). ಪ್ರಕಾಂಡ ಪಂಡಿತ ತಾರ್ಕಿಕ ಸಮಂತ ಭದ್ರಾಚಾರ್ಯರೇ ಬರೆದುದೆಂದು ಪ್ರಚುರವಾಗಿರುವ ಈ ಉತ್ಕೃಷ್ಟ ಕೃತಿಯನ್ನು ಅದರ ವ್ಯಾಖ್ಯಾನದೊಡನೆ, ಡಾ. ಆ.ನೇ. ಉಪಾಧ್ಯೆಯವರ ಸೂಚನೆಗಳೊಡನೆ ಅಣ್ಣಾರಾಯರು ಕನ್ನಡದಲ್ಲಿ ಸಾದರಪಡಿಸಿದ್ದಾರೆ. ಉನ್ನತ ತರಗತಿಗಳಿಗೆ ಕನ್ನಡವನ್ನು ಬೋಧಿಸುವ ಕಾಲೇಜು ಅಧ್ಯಾಪಕರಿಗೆ ಇದರ ನೆರವು ಅಪಾರ. ರತ್ನ ಕರಂಡಕ ಶ್ರಾವಕಾಚಾರವು ಪ್ರತಿಯೊಬ್ಬ ಜೈನಗೃಹಸ್ಥನ ನಿತ್ಯಪಾಠದ ಅಮೂಲ್ಯ ಪುಸ್ತಕ. ಇದಕ್ಕೆ ಪಂಡಿತ ಸದಾಸುಖಜಿಯವರ ಹಿಂದಿ ವಚನಿಕೆಯ ಕನ್ನಡ ಅನುವಾದನ್ನೂ ಅಪ್ರಕಟಿತವಾದ ಆಯತವರ್ಮನ ಹಳಗನ್ನಡ ಟೀಕೆಯನ್ನೂ, ಅನೇಕ ಕಾವ್ಯಗಳಿಂದ ಸೂಕ್ತವಾದೆಡೆಗಳಲ್ಲಿ ಪೋಣಿಸಲು ಪದ್ಯಗಳನ್ನೂ ಆಯ್ದು ಅಣಿಗೊಳಿಸಿರುವ ಕನ್ನಡ ಆವೃತ್ತಿಯಲ್ಲಿ ಅಣ್ಣಾರಾಯರ ವಿಶಾಲವಾದ ಅಧ್ಯಯನ ಮತ್ತು ಶ್ರಮ ಪ್ರಕಟಗೊಂಡಿದೆ. 670 ಪುಟಗಳ ಈ ಹೊತ್ತಿಗೆ ಉಪಯುಕ್ತ ಅನುಬಂಧಗಳಿಂದ ಆಕರಗ್ರಂಥದ ಮೌಲ್ಯ ಪಡೆದಿದೆ.

ಪ್ರಾಚೀನ ಭಾರತೀಯ ಇತಿಹಾಸ, ಸಂಸ್ಕೃತ-ಪ್ರಾಕೃತ ಸಾಹಿತ್ಯ, ಸಮಸ್ತ ಜೈನ ವಾಙ್ಮಯ ಕುರಿತ ಸಾಕಲ್ಯ ವಿದ್ವತ್ತು ಪಡೆದ ಘನ ವಿದ್ವಾಂಸರು ಡಾ. ಹೀರಾಲಾಲ ಜೈನ್. ವಿದರ್ಭ, ನಾಗಪುರ, ವೈಶಾಲೀ, ಜಬಲಪುರ ಮೊದಲಾದ ಮಹಾವಿದ್ಯಾಲಯಗಳಲ್ಲಿ ಆದರ್ಶ ಮತ್ತು ನಿಷ್ಣಾತ ಶಿಕ್ಷಕರೆಂದು ಮಾನ್ಯರಾದ ಡಾ. ಹೀರಾಲಾಲರು ಭಾರತೀಯ ಜ್ಞಾನಪೀಠ ಪ್ರಕಾಶನಕ್ಕೆ ಆಧಾರಸ್ತಂಭವಾಗಿದ್ದರು. ಅವರು 1960ರಲ್ಲಿ ಮಧ್ಯಪ್ರದೇಶದ 'ಶಾಸನ ಸಾಹಿತ್ಯ ಪರಿಷತ್ತಿ'ನ ಆಮಂತ್ರಣವನ್ನು ಸ್ವೀಕರಿಸಿ ನಾಲ್ಕು ಉಪನ್ಯಾಸಗಳನ್ನು ನೀಡಿದರು. ಅದೇ "ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ". ಈ ಆರುನೂರು ಪುಟಗಳ ಕೃತಿಯನ್ನು ಮಿರ್ಜಿ ಅಣ್ಣಾರಾಯರು ಕನ್ನಡಿಸಿದ್ದಾರೆ (1971). "ಹಿಂದೀ ಭಾಷೆಯಲ್ಲಿ ವ್ಯಾಖ್ಯಾನ ರೂಪದಿಂದ ವ್ಯಕ್ತಗೊಂಡ ಈ ಗ್ರಂಥವು ಒಂದು ಕೃತಿ ಮಾತ್ರವಲ್ಲ; ಸಂಸ್ಕೃತಿಯ ಅಭ್ಯಾಸಿಗಳು ವಿವಿಧ ಕೃತಿಗಳನ್ನು ರಚಿಸಲು, ಮೂಲ ವಸ್ತುಗಳನ್ನು ಒದಗಿಸುವ ಒಂದು ಸುಪುಷ್ಟ ಬೀಜಕೋಶವಿದಾಗಿದೆ. ಇದರಿಂದ ವಿಷಯವನ್ನು ಎತ್ತಿಕೊಂಡು, ಆ ವಿಷಯದಲ್ಲಿ ಅಭ್ಯಾಸ ಮುಂದುವರೆಸಿ, ಇನ್ನೂ ವಿಸ್ತಾರವಾದ ಕ್ಷೇತ್ರಗಳನ್ನು ಪ್ರವೇಶಿಸಲು ಆಹ್ವಾನವನ್ನೀಯುವ ವಿಚಾರ ವೇದಿಕೆಗಳಿಲ್ಲಿವೆ; ಸುಂದರವಾದ ಹೆಬ್ಬಾಗಿಲುಗಳೂ ಇಲ್ಲಿವೆ. ಇಂಥ ಒಂದು ಅಪೂರ್ವ ಗ್ರಂಥವು ಅಭ್ಯಾಸಿಗಳಾದ ಕನ್ನಡಿಗರ ಕೈಯಲ್ಲಿರಲಿ ಎಂಬ ಮನೋಭಾವದಿಂದ ಇದನ್ನು ಕನ್ನಡಿಸಿದ್ದಾಗಿದೆ. ಕನ್ನಡ ವಿಚಾರ ಸಾಹಿತ್ಯದಲ್ಲಿ ಈ ಗ್ರಂಥಕ್ಕೊಂದು ವಿಶಿಷ್ಟ ಸ್ಥಾನವೂ ಇದೆ" ಎಂಬುದಾಗಿ ಮೊದಲ ಮಾತಿನಲ್ಲಿ ಅಣ್ಣಾರಾಯು ಅರಿಕೆ ಮಾಡಿಕೊಂಡಿರುವುದು ಸಮಂಜಸವಾಗಿದೆ.

ಕುಂದಕುಂದ ಆಚಾರ್ಯ ಪ್ರಣೀತರಾದ ಪ್ರಾಕೃತ ಸಮಯಸಾರಕ್ಕೆ ಮೂಲದೊಡನೆ ಕನ್ನಡ ಅನುವಾದ ತಾತ್ಪರ್ಯವಿರುವ ಕೃತಿಯನ್ನೂ (1956), ಶಾಸನಗಳ ಆಧಾರದೊಂದಿಗೆ ಚಾರಿತ್ರಿಕ ಮಹಾಪುರುಷನಾದ ಖಾರವೇಲನ ಪರಿಚಯ ಗ್ರಂಥವನ್ನೂ (1955) ಪ್ರಕಟಿಸಿದ್ದಾರೆ. ಅಲ್ಲದೆ ವರಕವಿ ಬೇಂದ್ರಯವರ ವ್ಯಕ್ತಿ-ಕೃತಿ ಪರಿಚಯ ಮಾಡಿಕೊಡುವ ಕೃತಿಯೊಂದನ್ನು ದತ್ತವಾಣಿ (1946) ಎಂಬ ಹೆಸರಿನಿಂದ ಅಚ್ಚುಹಾಕಿಸಿದ್ದಾರೆ.ಡಾ. ಸಿದ್ದಯ್ಯ ಪುರಾಣಿಕರನ್ನು ಪರಿಚಯಿಸುವ 'ಕಾವ್ಯಾನಂದ' (1973), ಡಾ. ರಂ.ಶ್ರೀ. ಮುಗಳಿಯವರನ್ನು ಪರಿಚಯಿಸುವ 'ರಸಿಕರಂಗ' (1963) ಮೊದಲಾದ ಅಭಿನಂದನ ಗ್ರಂಥಗಳಿಗೆ ಸಂಪಾದಕರಾಗಿದ್ದಾರೆ; ಇವು ಅಣ್ಣಾರಾಯರ ಅಮತ್ಸರ ಗುಣಕ್ಕೆ ಕನ್ನಡಿ ಹಿಡಿಯುವ ಕೃತಿಗಳು.

ಒಬ್ಬ ಮೇಲು ಮಟ್ಟದ ಲೇಖಕರಾಗಿ ಮಿರ್ಜಿಯವರು ಮಾಡಿದ ಅದ್ಭುತ ಸಾಧನೆಗಳು ಒಂದು ಮುಖವಾದರೆ, ಇನ್ನು ವ್ಯಕ್ತಿಯಾಗಿ ಸಾರ್ವಜನಿಕ ರಂಗದಲ್ಲಿಯೂ ಅವರು ಮಾಡಿದ ಪ್ರಗತಿಪರ ಹಾಗೂ ಸಂಘಟನ ಕಾರ್ಯಗಳು ಇನ್ನೊಂದು ಮುಖವಾಗಿದೆ. ಅವರು ಹೇಳಿ ಕೇಳಿ ಒಬ್ಬ ಶಾಲಾಶಿಕ್ಷಕರು. ಹಳ್ಳಿಯ ಮಕ್ಕಳ ಓಜರಾಗಿ 35 ವರ್ಷಗಳ ದೀರ್ಘ ಕಾಲ ಪಾಠ ಹೇಳಿ, ಸಾವಿರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿದ್ದಾರೆ. ಈ 'ಮಿರ್ಜಿ ಮಾಸ್ತರ'ರು ಸೇಡಬಾಳದ ಸುತ್ತಮುತ್ತಲ ಹತ್ತಾರು ಹಳ್ಳಿಯ ಜನರಿಗೆ ಆತ್ಮೀಯ ಸಂಗಾತಿ; ಜನಾನುರಾಗಿ ಗುರುಗಳು. ಮಕ್ಕಳೊಂದಿಗೆ ಮಗುವಾಗಿ ಬೆರೆಯುವ ಸ್ವಭಾವದಿಂದಾಗಿ ಅವರು ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚು, ಅದರಿಂದಾಗಿ ಅವರು ಅಧ್ಯಾಪಕತನದಲ್ಲಿ ಜನಪ್ರಿಯತೆ ಗಳಿಸಿದ್ದರಲ್ಲಿ ಅತಿಶಯವೇನಿಲ್ಲ. ಕಾಯಾ ವಾಚಾ ಮನಸಾ ಅವರು ಜನತಾ ಶಾರದೆಯ ಸೇವಕರು, ನಿಷ್ಠೆಯ ಆಚಾರ್ಯರು ಎಂದು ರಾಜ್ಯದ ವಿದ್ಯಾ ಇಲಾಖೆಯಲ್ಲಿ ಗೌರವ, ಮನ್ನಣೆ ಗಳಿಸಿದರು. ರಾಜ್ಯ ಸರಕಾರದಿಂದ 'ಆದರ್ಶ ಶಿಕ್ಷಕ'ರೆಂಬ ಪ್ರಶಸ್ತಿ ಪಡೆದರು. ಅದರೊಂದಿಗೆ ಭಾರತದ ಸರ್ಕಾರದಿಂದಲೂ ಪುರಸ್ಕೃತರಾಗಿ ರಾಷ್ಟ್ರಾಧ್ಯಕ್ಷರಿಂದ (1967) ಪ್ರಶಸ್ತಿಗೆ ಪಾತ್ರರಾದರು. ಅಣ್ಣಾರಾಯರ ಸಾಹಿತ್ಯ ಸೇವೆಯನ್ನು ಪರಿಗಣಿಸಿ ಸಾಹಿತ್ಯ ಅಕಾಡೆಮಿಯು 1970ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿತು. ಸರಕಾರದ ಹಲವು ಪಠ್ಯಪುಸ್ತಕಗಳ ಸಮಿತಿಗಳಲ್ಲಿ ಅಣ್ಣಾರಾಯರು ಮುಖ್ಯ ಸದಸ್ಯರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿಗೂ ಅಣ್ಣಾರಾಯರಿಗೂ ಮಧುರವಾದ ಬಾಂಧವ್ಯ. 1935ರಿಂದ 1975ರ ವರೆಗೆ

ಸುಮಾರು 40 ವರ್ಷಗಳ ಅವಿಚ್ಛಿನ್ನ ಸಂಬಂಧ. ಈ ಅವಧಿಯಲ್ಲಿ ನಡೆದ ಹಲವು ಸಾಹಿತ್ಯ ಸಮ್ಮೇಳನಗಳಲ್ಲಿ ಭಾಷಣ ಮಾಡಿದ್ದಾರೆ. 1970ರಿಂದ 1974ರ ವರೆಗೆ ಕಸಾಪ ಕಾರ್ಯಸಮಿತಿಯ ಸದಸ್ಯರಾಗಿದ್ದರು ಮತ್ತು ಬೆಳಗಾವಿ ಜಿಲ್ಲಾಸಮಿತಿಯ ಅಧ್ಯಕ್ಷರಾಗಿದ್ದರು. 1973ರಲ್ಲಿ ಬೆಳಗಾವಿ ಜಿಲ್ಲಾ ಸಾಹಿತ್ಯ ಸಮ್ಮೇಳನವನ್ನು ಯಶಸ್ವಿಯಾಗಿ ಏರ್ಪಡಿಸಿದ್ದರು.

ಅಜಾತಶತ್ರುವೆನಿಸಿದ ಮಿರ್ಜಿ ಅಣ್ಣಾರಾಯರು ಎಲ್ಲರಿಗೂ ಬೇಕಾದವರಾಗಿದ್ದರು. ವಿರೋಧವನ್ನು ಕಟ್ಟಿಕೊಂಡವರಲ್ಲ. ಸಾಹಿತಿಯಾಗಿ ಸಾವಿನ ದಿನದವರೆಗೂ ನಗುತ್ತಾ ಇದ್ದು ಜೀವನ್ಮುಕ್ತರಾದರು. ಸಾಹಿತ್ಯ ವ್ಯವಸಾಯದ ಜೊತೆಗೆ ಒಕ್ಕಲುತನವನ್ನೂ ಮಾಡುತ್ತಿದ್ದುದು ವಿಶೇಷವಾಗಿ ಹೆಸರಿಸಬೇಕಾದುದು.

ಮಿರ್ಜಿ ಅಣ್ಣಾರಾಯರು ಸೇಡಬಾಳದಲ್ಲಿ 'ಶಾಂತಿ ಸೇವಾ ಸದನ'ವನ್ನು ತೆರೆದು, ಅನೇಕ ಹೊಸ ಬರಹಗಾರರಿಗೆ ತರಬೇತಿ ಕೊಟ್ಟು, ಅವರು ಇರುವವರೆಗೆ 45 ಪುಸ್ತಕಗಳನ್ನು ಪ್ರಕಾಶಪಡಿಸಿದ್ದರು. ಶಾಂತಿ ಸೇವಾ ಸದನದ ಆಶ್ರಯದಲ್ಲಿ ಉಪನ್ಯಾಸ ನಡೆಯುತ್ತಿದ್ದವು. ಸಭೆ ಸಮಾರಂಭಗಳಲ್ಲದೆ ವಾಚನಾಲಯ ಅನುಕೂಲವೂ ಊರಿನವರೆಗೆ ಸಿಗುತ್ತಿತ್ತು. ಪುಸ್ತಕ ಪ್ರಕಾಶನ, ಸಾಂಸ್ಕೃತಿಕ ಚಟುವಟಿಕೆಗಳಲ್ಲದೆ ಶಿಕ್ಷಣ ಶಿಬಿರಗಳನ್ನೂ ಏರ್ಪಡಿಸಿದ್ದರು. 1970ರಿಂದ 'ಚಂದ್ರಗಂಗಾ ಜ್ಞಾನಪೀಠ'ವೆಂಬ ಹೊಸ ವಿಶ್ವಸ್ಥ ಮಂಡಳಿಯೊಂದಿಗೆ ವಿನೂತನ ಪೀಠ ತೆರೆದರು. ಅದರ ಉದ್ದೇಶಗಳು ಉದಾತ್ತವಾಗಿದ್ದವು. ಸಾರ್ವಜನಿಕರ ಸೌಕರ್ಯಕ್ಕಾಗಿ ಗ್ರಂಥಾಲಯ, ಸಾಹಿತಿಗಳು, ವಿದ್ವಾಂಸರು ಬಂದಿಳಿದುಕೊಳ್ಳಲು ತಂಗುಮನೆ, ಸ್ಥಳದಲ್ಲಿಯೇ ವಾಸವಾಗಿದ್ದು ಬರವಣಿಗೆ, ಅನ್ವೇಷಣೆ, ಆಲೋಚನೆಗಳಿಗೆ ಅವಕಾಶ ಕಲ್ಪನೆ, ಮುದ್ರಣಾಲಯ, ಸಾಹಿತ್ಯ ಪ್ರಸಾರ, ವ್ಯಾಖ್ಯಾನ ಮಾಲೆ, ಗಾಯನ ಸ್ಪರ್ಧೆ-ಮೊದಲಾದ ಪ್ರಶಂಸನೀಯ ಯೋಜನೆಗಳನ್ನೊಳಗೊಂಡ ಚಂದ್ರಗಂಗಾ ಜ್ಞಾನಪೀಠವು ಮಿರ್ಜಿ ಅಣ್ಣಾರಾಯರ ದೂರದೃಷ್ಟಿ ಹಾಗೂ ತ್ಯಾಗಬುದ್ಧಿಯ ಉದಾತ್ತ ಸಂಸ್ಥೆ. ಒಂದರ್ಥದಲ್ಲಿ ಅದು ಅವರ ಜೀವಿತ ಗೆಯ್ಮೆಯ ಭವ್ಯ ಸ್ಮಾರಕ. ತಾವು ಸಾಯುವುದಕ್ಕೆ ಎರಡು ವರ್ಷ ಮೊದಲು ಒಂದು ಮುದ್ರಣಾಲಯವನ್ನೂ ತೆರೆದಿದ್ದರು. ಚಂದ್ರಗಂಗಾ ಜ್ಞಾನಪೀಠದ ವತಿಯಿಂದ ಸಾಹಿತ್ಯ ಸಂಸ್ಕೃತಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿದ್ದರಲ್ಲದೆ ಆರು ಪುಸ್ತಕಗಳನ್ನೂ ಪ್ರಕಟಿಸಿದ್ದರು.

ಯಾರ ಮರ್ಜಿಯನ್ನೂ ಅನುಸರಿಸದೆ ಸ್ವತಂತ್ರ ಧೀಶಕ್ತಿಯಿಂದ ಬಾಳಿದ, ಸಾಹಿತಿಗಳಿಂದ ಸಾಮಾನ್ಯರವರೆಗೆ ಸಮಾಜದಲ್ಲಿ ಎಲ್ಲರ ಒಲವನ್ನೂ ಸೂರೆಗೊಂಡು ಎಲ್ಲರ ಪಾಲಿಗೂ ಅಣ್ಣನಾಗಿದ್ದರು. ಎಲ್ಲರ ಗೌರವಕ್ಕೆ ಅರ್ಹರಾದ ರಾಯರಾಗಿದ್ದು ಪಾರ್ಥಿವ ಶರೀರವನ್ನು ಬಿಟ್ಟು ನಡೆದ ಅಣ್ಣಾರಾಯರು ಹಲವು ಕೃತಿಗಳ ಮೂಲಕ ಹೊಸ ಪೀಳಿಗೆಗೆ ಸ್ಫೂರ್ತಿಯ ಸೆಲೆಯಾಗಿದ್ದಾರೆ.

❑

# ಬಸವರಾಜ ಕಟ್ಟೀಮನಿ

**ಎನ್.ಬಿ. ಚಂದ್ರಮೋಹನ್**

ಬೆಳಗಾವಿಯ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಒಂದು ಹಳ್ಳಿ ಮಲಾಮರಡಿ. ಅಲ್ಲಿ ಅಪ್ಪಯ್ಯಣ್ಣ ಮತ್ತು ಬಾಳವ್ವ ದಂಪತಿಗಳ ಎರಡನೆಯ ಮಗ ಬಸವ. ಹತ್ತಿರದವರ ಬಾಯಲ್ಲಿ ಬಸ್ಯಾ, ಬಸಣ್ಣ ಎಂದೆಲ್ಲಾ ಆಗಿದ್ದವನು ಹತ್ತಾರು ವರ್ಷಗಳ ನಂತರ ತನ್ನ ಮೊದಲ ಕಥೆಯೊಂದು ಪತ್ರಿಕೆಯಲ್ಲಿ ಪ್ರಕಟವಾಗುವಾಗ ಸಂಪಾದಕರ ಆಶಯದಂತೆ "ಬಸವರಾಜ" ಎಂದು ಆದ. ಮುಂದೆ ಅದೇ ಹುಡುಗ ಕನ್ನಡ ನಾಡಿನಲ್ಲಿ ಚಿರಪರಿಚಿತನಾಗಿ ಬೆಳೆದದ್ದು 'ಕಟ್ಟೀಮನಿ' ಎಂಬ ಹೆಸರಿನಿಂದ.

ಉತ್ತರ ಕರ್ನಾಟಕದ ರೈತ ಕುಟುಂಬವೊಂದರಲ್ಲಿ ಹುಟ್ಟಿದ ಕಟ್ಟೀಮನಿಯವರಿಗೆ ಹಠ, ಛಲಗಾರಿಕೆ, ಒರಟುತನ ಮತ್ತು ಕಾರುಣ್ಯಗಳೆಲ್ಲಾ ಹುಟ್ಟಿನಿಂದಲೇ ಬಂದುವು. ತಂದೆಗೆ ಪೊಲೀಸ್ ಇಲಾಖೆಯಲ್ಲಿ ನೌಕರಿ. ಸಿಟ್ಟು ಬಂದಾಗ ಮಕ್ಕಳಿಗೂ ಲಾಠಿ ಏಟಿನ ರುಚಿ ಧಾರಾಳವಾಗಿ ಸಿಗುತ್ತಿತ್ತು. ತಾಯಿ ಛಲಗಾರ್ತಿ, ಧೈರ್ಯವಂತೆ. ಬಾಣಂತಿಯಾಗಿದ್ದಾಗೊಮ್ಮೆ ಮನೆ ಯೊಳಕ್ಕೆ ನುಗ್ಗಿದ್ದ ಹಾವನ್ನು ಒಬ್ಬಳೇ ಚಚ್ಚಿಹಾಕಿ, ಬುಟ್ಟಿ ಕವುಚಿ ಕಲ್ಲು ಹೇರಿಟ್ಟು ನಿರಾಳವಾಗಿ ನಿದ್ದೆ ಮಾಡಿದ್ದವಳು. ಕುಡಿದು ಬಂದು ಗಲಾಟೆ ಮಾಡುತ್ತಿದ್ದ ನೆರೆಮನೆಯ ಒಬ್ಬನಿಗೆ ಕಪಾಳಮೋಕ್ಷ ಮಾಡಿ ಬುದ್ಧಿ ಕಲಿಸಿದ್ದವಳು. "ನಾವಾಗಿಯೇ ಯಾರ ಮೇಲೂ ಬೀಳಬಾರದು, ಅವರಾಗಿಯೇ ಸೊಕ್ಕಿ ಬಂದರೆ ಒಂದು ಕೈ ನೋಡಲೇಬೇಕು" ಎಂಬುದು ತಾಯಿಯ ಧೋರಣೆ. ಜಾನಪದ ಕಥೆಗಳು ಮತ್ತು ಹಾಡುಗಳನ್ನು ತಾಯಿ ಮಕ್ಕಳಿಗೆ ಹೇಳುತ್ತಿದ್ದಳು. ಕಿತ್ತೂರು ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಬೆಳವಡಿ ಮಲ್ಲಮ್ಮ ಹಾಗೂ ಸಿಂಧೂರ ಲಕ್ಷ್ಮಣರಂತಹ ವೀರರ ಕಥೆಗಳನ್ನು ಅಮ್ಮನ ಬಾಯಿಂದ ಕೇಳುತ್ತಿದ್ದ ಮಗನ ಕಲ್ಪನಾಶಕ್ತಿ ಗರಿಗೆದರುತ್ತಿತ್ತು. ಕಿತ್ತೂರಿನ ಹಾಳುಬಿದ್ದ ಕೋಟೆಗಳ ನಡುವೆ ಕೋಲಿನ ಕುದುರೆಯೇರಿ, ಕೋಲಿನ ಕತ್ತಿ ಹಿಡಿದು ಚೆನ್ನವ್ವನ ವೀರ ಯೋಧರ ವೇಷ ಧರಿಸಿ ಹುಡುಗ ಕುಣಿಯುತ್ತಿದ್ದ.

ತಾವು ವಿದ್ಯಾವಂತರಾಗದಿದ್ದರೂ ತಮ್ಮ ಮಕ್ಕಳು ಕಲಿತು ದೊಡ್ಡವರಾಗಬೇಕೆಂಬ ಹಂಬಲ ತಾಯಿ ತಂದೆಯರದು. ನಿಯಮಿತವಾಗಿ ಶಾಲೆಗೆ ಹೋಗುವುದು ಮತ್ತು ಕಡ್ಡಾಯವಾಗಿ ರಾತ್ರಿ ಚಿಮಣಿ ದೀಪದ ಬೆಳಕಿನಲ್ಲಿ

ಕುಳಿತು ಓದುವುದು, ತಾಯಿ ಹಾಕಿಕೊಟ್ಟಿದ್ದ ಶಿಸ್ತು. ಬೆಳಗಿನ ಐದು ಗಂಟೆಗೆ ಎದ್ದು ಪೆರೇಡಿಗೆ ಹೋಗುತ್ತಿದ್ದ ಅಪ್ಪ, ಮಕ್ಕಳನ್ನು ನಿಷ್ಠುರವಾಗಿ ಲಾಠಿಯ ಪೆಟ್ಟು ಕೊಟ್ಟಾದರೂ ಎಬ್ಬಿಸಿ ಅಭ್ಯಾಸಕ್ಕೆ ಕೂರಿಸಿಯೇ ಹೋಗುತ್ತಿದ್ದ.

ತಂದೆಯ ನೌಕರಿಯ ದೆಸೆಯಿಂದಾಗಿ ಊರೂರು ಅಲೆಯಬೇಕಾಗಿತ್ತು. ಇದರಿಂದಾಗಿಯೇ ಗೋಕಾಕ, ಬೈಲಹೊಂಗಲ, ಬೆಳಗಾವಿ, ಕಿತ್ತೂರು ಶಾಲೆಗಳಲ್ಲಿ ಹುಡುಗನ ವಿದ್ಯಾಭ್ಯಾಸ ನಡೆಯಿತು. ಈ ಅಲೆದಾಟದಿಂದಾಗಿ ಹುಡುಗನಿಗೆ ವಿದ್ಯಾಭ್ಯಾಸದ ಕಡೆಗೆ ಲಕ್ಷ್ಯ ತಪ್ಪಬಾರದೆಂಬ ಆತಂಕ ತಂದೆ, ತಾಯಿಗಳಿಗೆ ಇತ್ತು.

ಏಳನೆಯ ತರಗತಿಗೆ ಬರುವ ವೇಳೆಗೆ ಕನ್ನಡ ಸಾಹಿತ್ಯದ ಪರಿಚಯ ಸಾಕಷ್ಟು ಸಾಧಿತವಾಗಿತ್ತು. ಅಲ್ಲದೆ ಅವನು ಬರೆದಿದ್ದ ಕೆಲವು ಪ್ರಬಂಧಗಳನ್ನು ಗುರುಗಳು ಮೆಚ್ಚಿಕೊಂಡು ಹೊಗಳಿದ್ದು ಬಸವನಿಗೆ ಉತ್ಸಾಹ ತಂದಿತು. ಗಳಗನಾಥ, ವಾಸುದೇವಚಾರ್ಯ, ಮಾಸ್ತಿ, ಆನಂದ ಮತ್ತು ಕುವೆಂಪು ಅವರ ಕಥೆಗಳು ಹಾಗೂ ಕಾದಂಬರಿಗಳನ್ನು ಓದುವ ಹವ್ಯಾಸ ಹೆಚ್ಚಾಯಿತು. ಇದಕ್ಕೆಲ್ಲಾ ತಾಯಿಯ ನಿರಂತರವಾದ ಪ್ರೋತ್ಸಾಹ ಇದ್ದೇ ಇತ್ತು. ಮಗ ಪಠ್ಯಪುಸ್ತಕಗಳನ್ನು ನಿರ್ಲಕ್ಷಿಸುತ್ತಿದ್ದಾನೆಂದು ತಂದೆಗೆ ಅಸಮಾಧಾನ. ಕಥೆ, ಕಾದಂಬರಿಗಳನ್ನು ಓದಿ ಹಾಳಾಗುತ್ತಿದ್ದಾನೆಂದು ಆಕ್ಷೇಪಿಸುತ್ತಿದ್ದರು. ಆದರೆ ತಾಯಿಗೆ ಮಾತ್ರ ಕಥೆ, ಕಾದಂಬರಿಗಳನ್ನು ಓದಿ ಮಗ ಹಾಳಾಗುವುದಿಲ್ಲವೆಂಬ ನಂಬಿಕೆಯ ಜತೆಗೆ "ಒಂದಲ್ಲ ಒಂದು ದಿನ ನನ್ನ ಮಗನೂ ಕೂಡ ಕಥಿ ಪುಸ್ತಕ ಬರೆದು ದೊಡ್ಡವನಾಗ್ತಾನೆ" ಎಂಬ ಮಹತ್ತರ ನಿರೀಕ್ಷೆ.

ಬಂಕಿಮಚಂದ್ರ, ಶರತ್‌ಚಂದ್ರರ ಕಾದಂಬರಿಗಳನ್ನು ಮತ್ತು ಕನ್ನಡದ ಹಲವಾರು ಕಾದಂಬರಿಗಳನ್ನು ತಾಯಿ ಮಧ್ಯರಾತ್ರಿಯವರೆಗೂ ಮಗನಿಂದ ಓದಿಸಿ ಕೇಳುತ್ತಿದ್ದುದೂ ಉಂಟು. ವಾಚನಾಲಯಕ್ಕೆ ವಂತಿಗೆ ನೀಡಲು ಅಪ್ಪನಿಗೆ ತಿಳಿಯದಂತೆ ತಾಯಿ ನಾಲ್ಕಾಣೆ ಕೊಡುತ್ತಿದ್ದರು. ಪುಸ್ತಕ ಭಂಡಾರಕ್ಕೆ ಧಾಳಿಯಿಟ್ಟ ಹುಡುಗನಿಗೆ ಅದ್ಭುತ ಪ್ರಪಂಚವೊಂದರ ಪ್ರವೇಶ ಸಿಕ್ಕಿದಂತಾಯಿತು. ತನ್ನ ಓದು ಮತ್ತು ಕೇಳಿದ ಜಾನಪದ ಕಥೆ, ಹಾಡುಗಳು ಬಾಲಕನ ಕಲ್ಪಕ ಶಕ್ತಿಗೆ ಪ್ರಚೋದನೆ ನೀಡಿದವು. ಸಣ್ಣ ವಯಸ್ಸಿನಲ್ಲೇ ಕಥೆ, ಕವನಗಳ ಬರವಣಿಗೆ ಆರಂಭವಾಯಿತು. ಅದೇ ಕಾಲದಲ್ಲಿ ಕಿತ್ತೂರು ಚೆನ್ನಮ್ಮನ ಬಗ್ಗೆ ಒಂದು ನಾಟಕವನ್ನು ಬರೆದಿದ್ದರಂತೆ. ಆದರೆ ಇನ್ನೂ ಬಹಳಷ್ಟು ಕೃತಿಗಳಿಗಾದಂತೆಯೇ ಅದೂ ಕೂಡ ಗೆದ್ದಲಿಗೆ ಆಹಾರವಾಯಿತು.

ಬೆಳಗಾವಿಯಲ್ಲಿ ಇವರ ಕುಟುಂಬ ಇದ್ದ ಕೆಲವು ದಿನಗಳಂತೂ ಬಡತನದ ತೀರ ದುರ್ಭರ ಸ್ಥಿತಿಯನ್ನು ಅವರು ಅನುಭೋಗಿಸಬೇಕಾಯಿತು. ಮರಾಠಿ ಪ್ರದೇಶದ ಒಂದು ಊರಿನಲ್ಲಿ ಕೆಲಸ ಮಾಡುತ್ತಿದ್ದ ತಂದೆ ತನ್ನ ಕುಟುಂಬವನ್ನು ಬೆಳಗಾವಿಯಲ್ಲಿ ನೆಲೆಗೊಳಿಸಿದ್ದರು. ಕೇವಲ ಅಪ್ಪನ ಸಂಬಳದಿಂದ ಸಂಸಾರ ಸಾಗುವುದು ಕಷ್ಟವಾದಾಗ ನೆರೆಯವರ ಮನೆಗಳಲ್ಲಿ ಹಿಟ್ಟು ಬೀಸಿಟ್ಟು ಅವ್ವ ಒಂದೆರಡು ಆಣೆ ಗಳಿಸುತ್ತಿದ್ದಳು. ಹಾಗೂ, ಹೀಗೂ ಉಳಿದಿದ್ದ ಹಣದಲ್ಲಿ ಒಂದು ಎಮ್ಮೆಯನ್ನೂ ತಂದು ಕಟ್ಟಿಕೊಂಡಿದ್ದರು. ಶಾಲೆ ಮುಗಿದ ಮೇಲೆ ಎಮ್ಮೆಯನ್ನ ನೋಡಿಕೊಳ್ಳುವ ಜವಾಬ್ದಾರಿ ಬಸವನದಾಗಿತ್ತು.

ಬಹುತೇಕ ಇದೇ ಅವಧಿಯಲ್ಲಿ ಹುಡುಗನ ಮನಸ್ಸಿಗೆ ಸಮಾಜದಲ್ಲಿನ ಬಡವ, ಶ್ರೀಮಂತ ವರ್ಗಗಳ ಅಂತರ ಸ್ಪಷ್ಟವಾಗುತ್ತಿತ್ತು. ಅವರೇ ಹೇಳಿಕೊಳ್ಳುವಂತೆ 'ಹೊಟ್ಟೆ ಹೊರೆದುಕೊಳ್ಳಲಾಗದ ದಟ್ಟ ದಾರಿದ್ರ್ಯದ ತಮ್ಮಂತಹ ಜನರು ಒಂದೆಡೆಗಿದ್ದರೆ, ಉಪಭೋಗಿಸಲಾರದಷ್ಟು ಶ್ರೀಮಂತಿಕೆಯ ಜಮೀನ್ ದಾರರು ಮತ್ತೊಂದೆಡೆಗೆ' ಇದ್ದುದನ್ನ ಕಂಡುಕೊಂಡರು. ಆ ಕಾಲದಲ್ಲಿ ಅವರಿಗೆ ಬಹಳ ಪ್ರಿಯವಾಗಿದ್ದ ಪದ್ಯ ಕುವೆಂಪು ಅವರ 'ಕಲ್ಕಿ' ಎನ್ನುವುದು ಸಹಜ ಮತ್ತು ಧ್ವನಿಪೂರ್ಣ ಸಂಗತಿ.

ಬೆಳಗಾವಿಯಲ್ಲಿ ಹೈಸ್ಕೂಲಿನ ವಿದ್ಯಾರ್ಥಿಯಾಗಿದ್ದಾಗ, ಆಗ ಅಲ್ಲಿಂದಲೇ ಪ್ರಕಟವಾಗುತ್ತಿದ್ದ 'ಸಂಯುಕ್ತ ಕರ್ನಾಟಕ' ಮುದ್ರಣಾಲಯಕ್ಕೆ ಆಗೀಗ ಹೋಗಿಬರುವುದು, ಅಲ್ಲಿ ಸಣ್ಣಪುಟ್ಟ ಬರವಣಿಗೆ ಮಾಡುವುದು ನಡೆಯುತ್ತಿತ್ತು. ಅದು ಹೇಗೋ, ಏನೋ ಅಪ್ಪನಿಗೆ ಈ ವಿಷಯ ಗೊತ್ತಾಗಿ ಕಿಡಿಕಿಡಿಯಾದರು. ಹುಡುಗನಿಗೆ ಬಡಿಗೆಯಿಂದ ಮೈ ಹುಣ್ಣಾಗುವಂತೆ ಹೊಡೆತಗಳು ಬಿದ್ದವು. ಆಗ ಸಿಟ್ಟುಗೊಂಡು ಮನೆ ಬಿಟ್ಟು ಧಾರವಾಡಕ್ಕೆ ಹೋದ ಹುಡುಗ ಬೇರೆ ಬೇರೆ ಪತ್ರಿಕಾಲಯಗಳಲ್ಲಿ ಕೆಲಸ ಹುಡುಕಿ ಅಲೆದಿದ್ದರು.

ಮೊದಲಿನಿಂದಲೂ ಕಟ್ಟೀಮನಿಯವರಲ್ಲಿ ಒಂದು ತೆರನ 'ಪ್ರತಿಭಟನಾ ಮನೋಭಾವ' ಮನೆ ಮಾಡಿತ್ತು. ಅದು ಅವರ ಸಾಮಾನ್ಯ ಬದುಕಿನಲ್ಲಿ ಹೇಗೋ ಹಾಗೆ ಸಾಹಿತ್ಯದಲ್ಲೂ ವ್ಯಕ್ತವಾಗುತ್ತಲೇ ಬಂದಿದೆ.

ಬಡತನದಲ್ಲಿದ್ದ ಕುಟುಂಬದ ಪೋಷಣೆಗಾಗಿ ಅವರು ಸಣ್ಣಪುಟ್ಟ ಕಾರ್ಯಗಳನ್ನು ಮಾಡಿ ಸಂಪಾದಿಸಬೇಕಾದ ಪರಿಸ್ಥಿತಿಯೂ ಇತ್ತು. 1935ರಲ್ಲಿ ಮೆಟ್ರಿಕ್ ದಾಟಿದರೂ ತಂದೆ ಪುಣೆಯಲ್ಲಿದ್ದು ದೂರದ ಬೆಳಗಾವಿಯಲ್ಲಿ ಹುಡುಗನೊಬ್ಬನೇ ಉಳಿದುಕೊಂಡು ಪ್ರೌಢ ವ್ಯಾಸಂಗವನ್ನು ಮುಂದುವರಿಸುವುದು ಸಾಧ್ಯವಾಗಲಿಲ್ಲ. ಅಲ್ಲದೆ ಅನಿರೀಕ್ಷಿತವಾಗಿ ಉಂಟಾದ ಕಿವಿಯ ತೊಂದರೆಯೂ ಅದಕ್ಕೆ ಕಾರಣವಾಯ್ತು.

ಇಲ್ಲಿಂದ ಮುಂದೆ ಕಟ್ಟೀಮನಿಯವರ ಬದುಕು ಪತ್ರಿಕೋದ್ಯಮದಲ್ಲಿನ ನೇರ ಸೆಣಸಾಟದ ಬದುಕಾಯ್ತು. ಅವರು ಹಲವಾರು ಪತ್ರಿಕೆಗಳಲ್ಲಿ ದುಡಿದರು. 'ಸಂಯುಕ್ತ ಕರ್ನಾಟಕ', ನಂತರದಲ್ಲಿ 'ತರುಣ ಕರ್ನಾಟಕ', ಮುಂದೆ ಗದುಗಿನ 'ಕರ್ನಾಟಕ ಬಂಧು' ಪತ್ರಿಕಾಲಯಗಳಲ್ಲಿ ಉದ್ಯೋಗಸ್ಥರಾಗಿದ್ದರು. ಈ ಸಮಯದಲ್ಲಿ ಅವರಿಗೆ ಬದುಕಿನ ಹಲವಾರು ಮುಖಗಳ ನೇರ ಪರಿಚಯ ಧಾರಾಳವಾಗಿ ಆಗುತ್ತಿತ್ತು. ಬೆಂಗಳೂರಿನ 'ಸ್ವತಂತ್ರ ಕರ್ನಾಟಕ'ದಲ್ಲಿದ್ದಾಗ ಒಂದು ಬಾರಿ ಇವರು ಸಂಪಾದಕರ ಗಮನಕ್ಕೆ ಮೊದಲೇ ಒಂದು ಲೇಖನವನ್ನು ಬರೆದು ಪ್ರಕಟಿಸಿದರು. ಮುಂದೆ, ಅಂದಿನ ದಿವಾನರೊಬ್ಬರ ಟೀಕೆ ಆ ಲೇಖನದಲ್ಲಿದ್ದುದನ್ನು ಕಂಡು 'ದಿವಾನರ ಕೃಪಾ ಕಟಾಕ್ಷದಲ್ಲಿದ್ದ' ಸಂಪಾದಕರು ಕಿಡಿ ಕಿಡಿಯಾದರು. ಈ ಘಟನೆಯಿಂದಾಗಿ ಕಟ್ಟೀಮನಿಯವರು ಅನಿವಾರ್ಯವಾಗಿ ಅಲ್ಲಿಂದ ಹೊರಬಿದ್ದು ಉದ್ಯೋಗಕ್ಕಾಗಿ ಅನ್ವೇಷಣೆ ನಡೆಸಬೇಕಾಯ್ತು.

ಪತ್ರಿಕಾ ವ್ಯವಸಾಯದಲ್ಲಿ ಎಷ್ಟೆಲ್ಲಾ ಕಟು ಅನುಭವವನ್ನು ಕಟ್ಟೀಮನಿಯವರು ಪಡೆದಿದ್ದರೂ ಅದರ ಬಗೆಗಿನ ಅವರ ಶ್ರದ್ಧೆ ಮತ್ತು ಆಸಕ್ತಿಗಳು ಕುಂದಲಿಲ್ಲ. ಆ ಕ್ಷೇತ್ರದ ಜೀವಂತಿಕೆ ಮತ್ತು ಶಕ್ತಿಪೂರ್ಣವಾದ ಸಾಮಾಜಿಕ ಪರಿಣಾಮಗಳನ್ನು ಕಟ್ಟೀಮನಿ ಗೌರವದಿಂದ ಕಂಡರು. ಇವರ ಪರಿಶ್ರಮದಿಂದ ಪ್ರಕಟವಾಗುತ್ತಿದ್ದ 'ಉಷಾ'ದಂತಹ ಪತ್ರಿಕೆಗಳು ಕರ್ನಾಟಕದಲ್ಲಿ ಪ್ರಗತಿಶೀಲ ಚಳವಳಿಯನ್ನು ಆರಂಭದ ದಿನಗಳಲ್ಲಿ ಪೋಷಿಸಿದವು.

1942ರ ಆಗಸ್ಟ್ ಚಳವಳಿಯಲ್ಲಿ ಸಕ್ರಿಯ ಪಾತ್ರ ವಹಿಸಿದ್ದಕ್ಕಾಗಿ ಸೆರೆಮನೆಗೂ ಹೋಗಬೇಕಾಯ್ತು. ಸೆರೆಮನೆಯಲ್ಲಾದರೂ ಸುಮ್ಮನೆ ಇರುವುದು ಹೇಗೆ ಸಾಧ್ಯ? ಅಲ್ಲಿಂದಲೇ ಹಲವಾರು ಕಥೆಗಳ ಬರವಣಿಗೆ ಮತ್ತು ಪ್ರಕಟಣೆ ನಿರಂತರವಾಗಿ ನಡೆಯಿತು.

ಈ ವೇಳೆಗಾಗಲೇ ಸಾಹಿತ್ಯ ಕ್ಷೇತ್ರದಲ್ಲಿ ಸೂಕ್ಷ್ಮವಾಗಿ ಆರಂಭವಾಗಿದ್ದ ಪ್ರಗತಿಶೀಲ ಚಳವಳಿಗೆ ಒಂದು ಖಚಿತ ರೂಪವನ್ನು ನೀಡುವುದರಲ್ಲಿ ಕಟ್ಟೀಮನಿ ಪ್ರಮುಖ ಪಾತ್ರವಹಿಸಿದ್ದರು. ಆದರೆ ಅವರೆಂದೂ ಯಾವುದೇ ಚಳವಳಿ ಅಥವಾ ವಿಚಾರಗಳನ್ನು ಕುರುಡು ಶ್ರದ್ಧೆಯಿಂದ ಕಂಡವರಲ್ಲ. ತಾವೆಲ್ಲ ಕೂಡಿ ಆರಂಭಿಸಿದ್ದ ಪ್ರಗತಿಶೀಲ ಚಳವಳಿ ಒಂದು ಘಟ್ಟದಲ್ಲಿ ಕೇವಲ ಡಾಂಭಿಕ ಆಗುತ್ತಿದೆ ಅನಿಸಿದಾಗ ನಿರ್ದಾಕ್ಷಿಣ್ಯವಾಗಿ ಅದರಿಂದಲೂ ಸಿಡಿದೆದ್ದು ತಮ್ಮದೇ ವಿಚಾರಗಳನ್ನ ರೂಪಿಸಿಕೊಂಡರು. ಅವರಿಗೆ ಪ್ರಗತಿಶೀಲತೆಯೆನ್ನುವುದು ಕೇವಲ ಘೋಷಣೆಯಾಗಿರಲಿಲ್ಲ. ಬದಲಿಗೆ ಬದುಕನ್ನು ಪ್ರಾಮಾಣಿಕವಾಗಿ ನೋಡುವ, ಸಮಾಜವನ್ನು ಸೈದ್ಧಾಂತಿಕ ನಿಲುವುಗಳಲ್ಲಿ ವಿಶ್ಲೇಷಿಸುವ ಬದ್ಧತೆ ಆಗಿತ್ತು.

1944ರ ಸುಮಾರಿಗೆ ಪ್ರಥಮ ಕಥಾಸಂಗ್ರಹ 'ಕಾರವಾನ್' ಪ್ರಕಟವಾಗಿದ್ದಲ್ಲದೆ ಕಟ್ಟೀಮನಿಯವರು ಗೃಹಸ್ಥರೂ ಆದರು. ಮುಂದೆ 'ಸ್ವತಂತ್ರ ಲಿಮಿಟೆಡ್' ಮುಂತಾದ ಸಂಸ್ಥೆಗಳನ್ನು ಕಟ್ಟಿಕೊಂಡರೂ ಕೂಡ ತಮ್ಮ ಕಾದಂಬರಿಗಳ ಬರಹ ಹಾಗೂ ಮಕ್ಕಳ ವಿದ್ಯಾಭ್ಯಾಸಗಳ ದೃಷ್ಟಿಯಿಂದ ದಾವಣಗೆರೆಯನ್ನು ತ್ಯಜಿಸಿ ಧಾರವಾಡದಲ್ಲೇ ನೆಲೆಸಿದರು. ಪ್ರತ್ಯಕ್ಷ ರಾಜಕೀಯದಿಂದ ದೂರವಿದ್ದಂತೆ ಮೇಲುನೋಟಕ್ಕೆ ಕಂಡರೂ ರಾಷ್ಟ್ರದ ಬಗೆಗಿನ ಅವರ ಚಿಂತನೆಗಳು ಎಂದೂ ಕಡಿಮೆಯಾಗಿರಲಿಲ್ಲ. 1968ರಲ್ಲಿ ಕರ್ನಾಟಕ ವಿಧಾನಪರಿಷತ್ತಿಗೆ ನಾಮಕರಣಗೊಂಡ ಮೇಲೆ ಅವರ ರಾಜಕೀಯ ಧೋರಣೆ ಮತ್ತು ಚಟುವಟಿಕೆಗಳು ಮತ್ತಷ್ಟು ವ್ಯಾಪಕಗೊಂಡವು

ಮುವತ್ತೈದಕ್ಕೂ ಮೇಲ್ಪಟ್ಟು ಕಾದಂಬರಿಗಳು, ಹತ್ತಾರು ಕಥಾ ಸಂಕಲನಗಳು ಹಾಗೂ ಇತರೆ ಸಾಹಿತ್ಯಕೃತಿಗಳನ್ನು ಪ್ರಕಟಿಸಿರುವ ಕಟ್ಟೀಮನಿಯವರದು ಸಾಹಿತ್ಯಕ್ಷೇತ್ರದಲ್ಲಿ ಅಳಿಯದ ಹೆಸರು. ಅವರ 'ಜ್ವಾಲಾಮುಖಿಯ ಮೇಲೆ' ಕೃತಿಗೆ 'ಸೋವಿಯತ್ ಲ್ಯಾಂಡ್' ನೆಹರೂ ಪ್ರಶಸ್ತಿಯ ಗೌರವ ದೊರಕಿದೆ. ಕನ್ನಡದ ಜನ ಅವರ ಕಾದಂಬರಿಗಳಲ್ಲಿ ಕಂಡುಬರುವ ಸಾಮಾಜಿಕ ಕಳಕಳಿಗೆ ಸ್ಪಂದಿಸುವುದರ ಮೂಲಕ ಸದಾಕಾಲ ಗೌರವಿಸುತ್ತಾರೆ.

**ಸಣ್ಣ ಕಥೆಗಳು** : ಹತ್ತಕ್ಕೂ ಮೀರಿ ಕಥಾಸಂಕಲನಗಳನ್ನು ಪ್ರಕಟಿಸಿರುವ ಕಟ್ಟೀಮನಿಯವರ ಕಥೆಗಳಲ್ಲಿನ ವಸ್ತು-ವೈವಿಧ್ಯ ಮತ್ತು ಪಾತ್ರ-ಚಿತ್ರಣಗಳು ವಿಶಾಲವಾದ ಹರಹನ್ನು ಪಡೆದಿವೆ. ಆದರೆ ಅವರ ಯಾವುದೇ ಕಥೆಯಾದರೂ ಕೂಡ ಕಟ್ಟೀಮನಿಯವರ ಒಂದು ವಿಶಿಷ್ಟಮುದ್ರೆಯನ್ನು ನಾವು ಗುರುತಿಸಬಹುದು. ಹಳ್ಳಿಯ ಜನರ ಮುಗ್ಧತೆ, ಪ್ರೇಮ ಹಾಗೆಯೇ ಛಲಗಾರಿಕೆ ಅವರ ಮೆಚ್ಚುಗೆಯ ವಸ್ತುಗಳಾಗುತ್ತವೆ. ಮುಗ್ಧತೆಯನ್ನು ಶೋಷಿಸುವ ವರ್ಗದವರ ಕ್ರೌರ್ಯ ಅವರ ತೀಕ್ಷ್ಣ ಮತ್ತು ವ್ಯಗ್ರದೃಷ್ಟಿಗೆ ಸಾಮಾನ್ಯ ಗ್ರಾಸ.

ಲೇಖಕರಿಗೆ ಇರುವ ಮಾನವೀಯವಾದ ಕೆಲವು ಆಶೋತ್ತರಗಳನ್ನು ಅವರ ಕೆಲವು ಕಥೆಗಳಲ್ಲಿ ಕಾಣಬಹುದು. 'ಜಟ್ಟಿಯ ಪ್ರೇಮ'ದಂತಹ ಕಥೆಗಳು, ಕೊಲೆಪಾತಕಿ ಸುಲೇಮಾನ್ ಖಾನ್‌ನಂತಹ ಪಾತ್ರಗಳ ಚಿತ್ರಣಗಳಲ್ಲಿ ಈ ಮಾನವೀಯ ದೃಷ್ಟಿ ಕಂಡುಬರುತ್ತದೆ. ಅವರ ಮಾನವೀಯತೆ ಸದಾ ಅನುಕಂಪಶೀಲವಾದದ್ದು. ಈ ಅನುಕಂಪಶೀಲ ದೃಷ್ಟಿ, ವಸ್ತುನಿರೂಪಣೆ ಮತ್ತು ಪಾತ್ರನಿರೂಪಣೆಗಳಲ್ಲಿ ಪ್ರಧಾನವಾಗಿ ಇರುತ್ತವೆ.

**ಕಾದಂಬರಿಗಳು** : ಕಟ್ಟೀಮನಿಯವರು ಕಾದಂಬರಿ ಪ್ರಕಾರವನ್ನು, ತಾವು ಕಂಡ ಸಮಾಜವನ್ನು ಕಂಡರಿಸುವುದಕ್ಕಾಗಿಯೇ ಬಳಸಿಕೊಳ್ಳುವ ಹಠ ತೊಟ್ಟವರು. ಅವರಿಗೆ ಅದು ಕೇವಲ ಕಲಾಕೃತಿಯಾಗಿ ವಿಜೃಂಭಿಸುವುದು ಬೇಕಿಲ್ಲ. ಸಮಾಜದ ದಿನನಿತ್ಯದ ವ್ಯವಹಾರಗಳನ್ನು ಚಿತ್ರಿಸುವುದರ ಮೂಲಕ ಪ್ರತ್ಯಕ್ಷೀಕರಿಸುವುದು ಅವರ ಗುರಿ. ಆದರಿಂದಲೇ ಅವರು, ಕಾದಂಬರಿಗಳಲ್ಲಿ ಬಹಳಷ್ಟು ವೇಳೆ, ಜಾಣತನದ ಕುಸುರಿ ಕೆಲಸಗಳಿಗೆ ಮನಸ್ಸು ಕೊಡುವುದಿಲ್ಲ. ಬದಲಿಗೆ ನೇರ ನಿರೂಪಣಾತಂತ್ರವನ್ನು ಬಳಸುತ್ತಾರೆ. ಇದು ಒಂದು ಕೃತಿಯ ಆಳಕ್ಕಿಂತ ಹರಹಿಗೆ ಹೆಚ್ಚು ಮಹತ್ವವನ್ನು ನೀಡುವ ಸಂಭಾವ್ಯತೆ ಕಂಡು ಬರುತ್ತದೆ.

'ಸ್ವಾತಂತ್ರ್ಯದೆಡೆಗೆ' ಮತ್ತು 'ಮಾಡಿ ಮಡಿದವರು' ಅಂತಹ ಕಾದಂಬರಿಗಳಲ್ಲಿ ರಾಷ್ಟ್ರೀಯಪ್ರಜ್ಞೆಯ ಬಗೆಗೆ ಇರುವಷ್ಟೇ ಆವೇಶವನ್ನು, 'ಮೋಹದ ಬಲೆಯಲ್ಲಿ' ಮತ್ತು 'ಜರತಾರಿ ಜಗದ್ಗುರು' ಕಾದಂಬರಿಗಳಲ್ಲಿ ಸಮಾಜದ ಹುಳುಕುಗಳನ್ನು ಬಯಲಿಗೆಳೆಯುವಲ್ಲಿ ಅವರು ತೋರುತ್ತಾರೆ. ಧಾರ್ಮಿಕ ಡಾಂಭಿಕತೆ ಮತ್ತು ಸಾಮಾಜಿಕ ಅಸಮಾನತೆಗಳನ್ನು ಕಂಡಾಗ ಕಟ್ಟೀಮನಿ ಕುಪಿತರಾಗುತ್ತಾರೆ. ಅಂತಹ ಜನರ ಬಗೆಗೆ ಆಕ್ರೋಶ ತಾಳುತ್ತಾರೆ.

ಮುವತ್ತೈದರಷ್ಟು ಕಾದಂಬರಿಗಳನ್ನು ಬರೆದಿರುವ ಕಟ್ಟೀಮನಿ ಕನ್ನಡ ಪ್ರಗತಿಶೀಲ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದ್ದವರು. ಆದರೆ ಅವರ ದೃಷ್ಟಿಯಲ್ಲಿ ಪ್ರಗತಿಶೀಲತೆಯ ಬಗೆಗೆ ಅವರದೇ ಆದ ವಿಚಾರಗಳಿವೆ. ಪ್ರಗತಿಶೀಲತೆಯ ಹೆಸರಿನಲ್ಲಿ ವೈಯಕ್ತಿಕ ಕಾಮನೆಗಳ ವರ್ಣರಂಜಿತ ಚಿತ್ರಣ ಮಾಡಿದ ಹಲವು ಸಮಕಾಲೀನ ಜನಪ್ರಿಯ ಕಾದಂಬರಿಗಳನ್ನು ಅವರು ಸ್ಪಷ್ಟವಾಗಿ ವಿರೋಧಿಸುತ್ತಾರೆ.

'ಘಂಟಿಮಾರ' ಕಾದಂಬರಿಯ ಕರ್ತೃ ಇಟಲಿಯ 'ಸಿಯೋನೆ' ಮತ್ತು ಜರ್ಮನ್ ಕಾದಂಬರಿಕಾರ 'ಸ್ಟೆಂಡಾಲ್' ಮುಂತಾದ ಲೇಖಕರು ಅವರ ಮೆಚ್ಚುಗೆಯ ಕಾದಂಬರಿಕಾರರು. ಸಮತಾವಾದವನ್ನು ಆಸಕ್ತಿಯಿಂದ ಅಭ್ಯಸಿಸಿದ್ದೇ ಅಲ್ಲದೆ ಭಾರತದ ಹಲವಾರು ಸಾಮಾಜಿಕ ಅನಿಷ್ಟಗಳಿಗೆ ಸಮತಾವಾದವೇ ಸರಿಯಾದ ಪರಿಹಾರವೆಂದು ಶ್ರದ್ಧಾಪೂರ್ವಕವಾಗಿ ನಂಬಿದ್ದವರು ಮತ್ತು ಅದೇ ನಂಬಿಕೆಯಿಂದ ಕೃತಿರಚನೆಗೆ ತೊಡಗಿದ್ದವರು. ಸಮಾಜದ ಹುಳುಕುಗಳನ್ನು ಬಯಲಿಗೆಳೆಯುವಲ್ಲಿ ಅವರಿಗಿರುವ ಆವೇಶ, ಆಕ್ರೋಶಗಳು ಅನೇಕ ವೇಳೆ ವಸ್ತುನಿರ್ವಹಣೆಯಲ್ಲಿ ಸಂಯಮವನ್ನು ಕಡಿಮೆಮಾಡುತ್ತವೆ ಎಂಬ ಆರೋಪವೂ ಉಂಟು. ಬಹುಶಃ ಅದರ ಮೂಲ ಕಾರಣ ಲೇಖಕರ ವ್ಯಕ್ತಿತ್ವದಲ್ಲಿಯೇ ಇದೆ. ತಾವು ಕಂಡದ್ದನ್ನು ನೇರಾಗಿ ಸ್ಪಷ್ಟ ಭಾಷೆಯಲ್ಲಿ ಹೇಳಿಬಿಡುವ ಉತ್ಸುಕತೆ ಅವರದು. ದೀರ್ಘಕಾಲದ ಪತ್ರಿಕೋದ್ಯಮದ ಬರವಣಿಗೆಯೂ ಕೂಡ ಅವರ ಕಾದಂಬರಿಯ ಬರವಣಿಗೆಯನ್ನು ರೂಪಿಸಿಕೊಳ್ಳುವಲ್ಲಿ ಪ್ರಭಾವ ಬೀರಿರಬಹುದು. ವಾಸ್ತವಿಕತೆಗೆ, ಸಹಜ ನಡವಳಿಕೆಗೆ ಹೆಚ್ಚು ಮಹತ್ವ ನೀಡುವುದು ಅವರ ರೀತಿಗಳಲ್ಲಿ ಒಂದು. 'ಗಿರಿಯ ನವಿಲು' ಕಾದಂಬರಿಯಲ್ಲಿನ ಅಕ್ಕಮಹಾ ದೇವಿಯ ಪಾತ್ರವನ್ನು ಸೃಷ್ಟಿಸುವಾಗ ಅವರು ಈ ಗುಣಗಳಿಗೆ ನೀಡಿರುವ ಮಹತ್ವ ಮನದಟ್ಟಾಗುತ್ತದೆ.

'ಜ್ವಾಲಾಮುಖಿಯ ಮೇಲೆ' ಕಾದಂಬರಿಗೆ 'ಸೋವಿಯತ್ ಲ್ಯಾಂಡ್'ನ ನೆಹರೂ ಪ್ರಶಸ್ತಿ ದೊರಕಿದೆ. ಅದು ಅವರ ಮಹತ್ವದ ಕೃತಿಗಳಲ್ಲಿ ಒಂದು. ಬಂಡವಾಳಶಾಹಿ ವ್ಯವಸ್ಥೆ ಮತ್ತು ಕಾರ್ಮಿಕ ಸಂಘಟನೆಗಳು ನಮ್ಮ ದೇಶದ 'ವಿಶಿಷ್ಟ ಸಾಮಾಜಿಕ ಪರಿಸ್ಥಿತಿ'ಯಲ್ಲಿ ಮುಖಾಮುಖಿಯಾಗುವ ಚಿತ್ರ ಇದರಲ್ಲಿ ಮೂಡಿಬರುತ್ತದೆ. ಇದೇ ಕಾರಣದಿಂದಾಗಿಯೇ ಈ ಕೃತಿ ಕನ್ನಡ ಸಾಹಿತ್ಯದಲ್ಲಿ ಒಂದು ಅಪೂರ್ವ ನಿರ್ಮಿತಿಯೂ ಆಗಿ ಉಳಿದಿದೆ.

ತಮ್ಮ ಕಾದಂಬರಿಗಳಲ್ಲಿ ಸಾಮಾಜಿಕ ಅನಿಷ್ಟಗಳನ್ನು ರೊಚ್ಚಿ ನಿಂದೆಂಬಂತೆ ತೆರೆದು ತೋರುತ್ತಿದ್ದ ಕಟ್ಟೀಮನಿಯವರ ದಿಟ್ಟತನ ಹಲವಾರು ಬಾರಿ ಅನೇಕ ಪ್ರತಿರೋಧಗಳಿಗೂ ಗುರಿಯಾಗಬೇಕಾಯಿತು. ಜಡ ವ್ಯವಸ್ಥೆಯ ಸಾಮಾಜಿಕ ಸಂಸ್ಥೆಗಳು ಮತ್ತು ವ್ಯಕ್ತಿಗಳ ವಿರೋಧವನ್ನು ತೀವ್ರವಾಗಿ ಎದುರಿಸಬೇಕಾಯಿತು. ಆದರೆ ಇದಾವುದರಿಂದಲೂ ವಿಚಲಿತ ವಾಗದ ದೃಢನಿಶ್ಚಯ ಕಟ್ಟೀಮನಿಯವರಿಗೆ ಇತ್ತು. 'ಜರತಾರಿ ಜಗದ್ಗುರು' ಪ್ರಕಟವಾದ ದಿನಗಳಲ್ಲಿ ಅಪರಿಚಿತನೊಬ್ಬ ಅವರ ಮೇಲೆ ಗುಂಡು ಹಾರಿಸುವ ಪ್ರಯತ್ನ ಮಾಡಿದ್ದ. ಹಾಗೆಯೇ ಮತ್ತೊಬ್ಬ ಅಪರಿಚಿತ ಅವರಿಗೆ ಬೆಂಗಾವಲಾಗಿ ರಕ್ಷಣೆಗೆ ನಿಂತದ್ದೂ ಉಂಟು. ಈ ಎರಡೂ ಪ್ರಸಂಗಗಳು ಪರಸ್ಪರ ವಿರುದ್ಧವಾಗಿ ಕಂಡರೂ ಕಟ್ಟೀಮನಿಯವರ ಕಾದಂಬರಿಗಳಿಗೆ ನಮ್ಮ ಸಮಾಜ ಜೀವಂತವಾಗಿ ಪ್ರತಿಕ್ರಿಯಿಸಿದ ರೀತಿಗೂ ಸಂಕೇತಗಳಾಗುತ್ತವೆ.

ಕಟ್ಟೀಮನಿ ತಮ್ಮ ಕಾದಂಬರಿಗಳನ್ನು, ತಾವು ಕಂಡ ಮತ್ತು ನಂಬಿದ ರೀತಿಯಲ್ಲಿ ಸಮಾಜವನ್ನು ಅರ್ಥೈಸಲಿಕ್ಕೆ ಹಠ ತೊಟ್ಟಂತೆ ಬಳಸಿದರು. ಪ್ರಗತಿ ಶೀಲತೆಯ ಗುಣ ದೋಷಗಳೆಲ್ಲವನ್ನೂ ಅವರ ಕೃತಿಗಳು ಮೈಗೂಡಿಸಿ ಕೊಳ್ಳುವುದು ಅನಿವಾರ್ಯವಾಯ್ತು.

ಕಟ್ಟೀಮನಿ ಒಂದೆರಡು ನಾಟಕಗಳನ್ನು ಮತ್ತು ಜೀವನ ಚರಿತ್ರೆಗಳನ್ನೂ ಬರೆದಿದ್ದಾರೆ. ಅವರ ಆತ್ಮಕಥೆ 'ಕಾದಂಬರಿಕಾರನ ಬದುಕು' ಕೂಡ ಪ್ರಕಟ ವಾಗಿದೆ. 1989ರಲ್ಲಿ ನಿಧನರಾಗುವವರೆಗೂ ಅವರ ಸೃಜನಶಕ್ತಿಗೆ ಇಳಿತನ ಬಂದ ಹಾಗೆ ಕಾಣುವುದಿಲ್ಲ. ಸಾಹಿತ್ಯದ ಹಲವಾರು ಕ್ಷೇತ್ರಗಳಲ್ಲಿ ಕೃಷಿ ಮಾಡಿರುವ ಕಟ್ಟೀಮನಿ ಕನ್ನಡಿಗರಿಗೆ ನೆನಪಾಗುವುದು-ಬಹು ಮುಖ್ಯವಾಗಿ-ಕಾದಂಬರಿಕಾರರಾಗಿ. ಬಹುಶಃ ಅದು ಕಟ್ಟೀಮನಿಯವರಿಗೆ ಕೂಡ ಅಪ್ರಿಯವಾದದ್ದಲ್ಲ.

❑

## ಎಲ್. ಬಸವರಾಜು

ಡಾ. ಎನ್.ಎಸ್.ತಾರಾನಾಥ್

"ನಾನು ಲಿಂಗಾಯಿತನಾಗಿ ಹುಟ್ಟಿದೆ. ಆದರೆ ಅದನ್ನು ಆರಾಧಿಸಲಿಲ್ಲ. ನನ್ನಷ್ಟು ಲಿಂಗಾಯಿತ ಧರ್ಮದ ಬಗ್ಗೆ ಕೆಲಸ ಮಾಡಿದವರಿಲ್ಲ. ಆದರೆ ಆ ಜನ ನನ್ನ ಎದೆಯ ಮೇಲೆ ಲಿಂಗ ಇದೆಯೆ ಎಂದು ನೋಡುತ್ತಾರೆಯೇ ಹೊರತು ನನ್ನ ಎದೆಯೊಳಗೆ ಏನಿದೆ ಎಂದು ನೋಡುವುದಿಲ್ಲ. ಇದು ವಿಪರ್ಯಾಸ".

"ನನಗೆ ಈಗಲೂ ಗಾಂಧೀಜಿ ಪ್ರಸ್ತುತರಾಗುತ್ತಾರೆ. ಆ ಕಾಲದಲ್ಲಿ ಭಾರತವನ್ನು ಕಟ್ಟಲು ವಿದ್ಯಾವಂತರಿಗೆ ಹಳ್ಳಿಗಳಿಗೆ ಹೋಗಿ ಎಂದು ಕರೆಕೊಟ್ಟರು. ಸೇವಾದಳವನ್ನು ಕಟ್ಟಿ, ಯುವಜನರನ್ನು ಅಲ್ಲಿ ಸಂಘಟಿಸಿದರು. ಇವತ್ತು ನಿರುದ್ಯೋಗಿಗಳಾಗಿ ಕುಳಿತಿರುವ ಯುವಕರು ಇಂಥ ಸೇವೆಗೆ ಮುಂದಾಗಬೇಕು. ಜಾಗತೀಕರಣದಿಂದ ಬರುತ್ತಿರುವ ಅನಿಷ್ಟಗಳನ್ನು ಮೀರಿಸಬೇಕು".

"ಜನಪದ ಕವಿ ತನ್ನ ಹಾಡುಗಳನ್ನು ಹಾಡುವುದನ್ನು ನಿಲ್ಲಿಸಿದಾಗಿನಿಂದ ಮಾನವಜನಾಂಗಕ್ಕೆ. ಅದರಲ್ಲೂ ಗ್ರಾಮೀಣರಿಗೆ ಮುಗ್ಧಕಾವ್ಯ ಸಂಪರ್ಕ ತಪ್ಪಿ ಹೋಯಿತು."

–ಇಂಥ ಚಿಂತನಶೀಲ ಮಾತುಗಳನ್ನು ಆಡಿರುವವರು ವಿಚಾರಶೀಲ ವಿದ್ವಾಂಸರೆಂದೇ ಖ್ಯಾತರಾಗಿರುವ ಎಲ್. ಬಸವರಾಜು. ಸಾಮಾನ್ಯವಾಗಿ ವಿದ್ವತ್ತು ಇರುವೆಡೆ, ಸೃಜನಾತ್ಮಕತೆ ಕಡಿಮೆಯಿರುತ್ತವೆ ; ಸೃಜನನಾತ್ಮಕತೆ ಇರುವೆಡೆ ವೈಚಾರಿಕತೆ ಕಡಿಮೆಯಿರುತ್ತದೆ. ವಿದ್ವತ್ತು, ಸೃಜನಾತ್ಮಕತೆ ಮತ್ತು ವೈಚಾರಿಕತೆಗಳು ಹೊಯ್‌ಕಯ್ಯಾಗಿ ಸ್ಪರ್ಧಿಸಿ ಸಂಗಮಿಸಿವೆ ಎಲ್.ಬಸವ ರಾಜು ಅವರಲ್ಲಿ. ಆದ್ದರಿಂದಲೇ ಅವರು ಕನ್ನಡ ಸಾಹಿತ್ಯಲೋಕದ ವಿಶಿಷ್ಟ ವಿದ್ವಾಂಸ; ಅಚ್ಚರಿಯ ಕವಿ ; ದಿಟ್ಟ ವಿಚಾರಶೀಲ.

ಕರ್ನಾಟಕದ ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಇಡಗನೂರು ಎಂಬ ಸಣ್ಣಹಳ್ಳಿಯಲ್ಲಿ 1919ರ ಅಕ್ಟೋಬರ್ 7ರಂದು ಬಸವರಾಜು ಜನಿಸಿದರು. ತಂದೆ ಲಿಂಗಪ್ಪ. ತಾಯಿ ಈರಮ್ಮ. ಅವರದು ತುಂಬ ಬಡ ಕುಟುಂಬ. ಜೀವನ ನಿರ್ವಹಣೆಗೆ ತಂದೆ ಅವಲಂಬಿಸಿದ್ದುದು ಅರ್ಚಕ ವೃತ್ತಿ. ಸೋಮವಾರದ ಪೂಜೆಗೆ ಭಕ್ತರು ಅಕ್ಕಿ ತಂದುಕೊಟ್ಟರೆ ಅನ್ನ ದೊರೆಯುತ್ತಿತ್ತು, ಇಲ್ಲವಾದರೆ ಇಲ್ಲ. ಸಾಮಾನ್ಯರಲ್ಲಿ ಸಾಮಾನ್ಯ ಉಂಡುಬದುಕುವ ಆಹಾರದಿಂದ ಅವರು ಬದುಕುವ, ಬೆಳೆಯುವ ಸ್ಥಿತಿಯಿತ್ತು. ಅಂಥ ದುರ್ಭರ ಪರಿಸ್ಥಿತಿಯಲ್ಲೂ ಅವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಇಡಗೂರಿನಲ್ಲಿ ಮುಗಿಸಿದರು. ಅನಂತರ ಅತ್ಯಂತ ಪ್ರತಿಕೂಲ ಪರಿಸ್ಥಿತಿಯಲ್ಲಿ ಸಿದ್ಧಗಂಗೆಯಲ್ಲಿ ಪ್ರೌಢಶಾಲಾ ಶಿಕ್ಷಣವನ್ನು ಪೂರೈಸಿದರು. ಅಂದು ತಮ್ಮ ವಿದ್ಯಾಭ್ಯಾಸಕ್ಕೆ ನೆರವಾದ ಆ ಮಠವನ್ನು ಅವರು ಕೃತಜ್ಞತೆಯಿಂದ ಇಂದೂ ಸ್ಮರಿಸುತ್ತಾರೆ. ಆ ನಂತರದ ಕಾಲೇಜು ಶಿಕ್ಷಣವನ್ನು

ಅವರು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಮುಂದುವರಿಸಿ ಅಲ್ಲಿಂದಲೇ ಬಿ.ಎ. (ಆನರ್ಸ್) ಮತ್ತು ಕನ್ನಡ ಎಂ.ಎ. ಪದವಿಗಳನ್ನು ಪಡೆದರು. ಆ ಅವಧಿಯಲ್ಲಿ ಅವರಿಗೆ ಕನ್ನಡದ ಮಹಾಕವಿ ಕುವೆಂಪು, ಘನವಿದ್ವಾಂಸ ಡಿ.ಎಲ್. ನರಸಿಂಹಾಚಾರ್ಯ ಮುಂತಾದವರು ಗುರುವರ್ಗದಲ್ಲಿದ್ದರು. ಅವರಿಂದ ಬಸವರಾಜು ಅಪಾರವಾದ ಸ್ಫೂರ್ತಿ, ಪ್ರೇರಣೆಗಳನ್ನು ಪಡೆದರು.

ಎಂ.ಎ. ಪದವಿ ಪಡೆದ ಅನಂತರ ಬಸವರಾಜು ದಾವಣಗೆರೆಯ ಡಿ.ಆರ್.ಎಂ. ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ತಮ್ಮ ವೃತ್ತಿಯನ್ನು ಆರಂಭಿಸಿದರು. ತಮ್ಮ ಪರಿಣಾಮಕಾರಿಯಾದ ಬೋಧನಾವಿಧಾನ, ಅವಿರತ ವಾದ ವ್ಯಾಸಂಗ, ಮೌಲಿಕ ಚಿಂತನೆಗಳಿಂದ ವಿದ್ಯಾರ್ಥಿಗಳ ಮನಸ್ಸನ್ನು ಗೆದ್ದಿದ್ದರು. ಹಾಸ್ಟಲಿನಲ್ಲೇ ಇದ್ದುಕೊಂಡು ವಿದ್ಯಾರ್ಥಿಗಳೊಂದಿಗೆ ಆತ್ಮೀಯ ಭಾವ ತೋರುತ್ತ ಅವರ ಮೇಲೆ ಬಸವರಾಜು ಅಸದೃಶ ಪ್ರಭಾವ ಬೀರಿದ್ದರು. ಅವರ ಅಸಂಖ್ಯಾತ ವಿದ್ಯಾರ್ಥಿಗಳಲ್ಲಿ ಇಂದಿನ ಗಣ್ಯ ವಿದ್ವಾಂಸ ಎಂ. ಚಿದಾನಂದಮೂರ್ತಿ ಕೂಡ ಒಬ್ಬರು. "ನನಗೆ ಗುರುಗಳಾದ ಡಾ. ಎಲ್. ಬಸವರಾಜು ಹೆಚ್ಚು ಕಡಿಮೆ ಕಳೆದ ನಲವತ್ತನಾಲ್ಕು ವರ್ಷಗಳಿಂದ ನನ್ನ ಮೇಲೆ ನಿರಂತರವಾದ ಪ್ರೀತಿಯ ಧಾರೆಯನ್ನೇ ಎರೆದಿದ್ದಾರೆ. ಅವರಿಂದ ನಾನು ಕಲಿತಿರುವುದು ಎಷ್ಟೋ"- ಎಂಬುದು ಮೂರ್ತಿಗಳ ಬಿಚ್ಚುಮನಸ್ಸಿನ ಮಾತು. ವ್ಯಕ್ತಗೊಳ್ಳದ ಇಂಥದೇ ಭಾವ ಇನ್ನೆಷ್ಟು ಮಂದಿ ವಿದ್ಯಾರ್ಥಿಗಳದೋ. ಬಹಳ ಬೇಗ ಬಸವರಾಜು ಮೈಸೂರಿನ ಯುವರಾಜ ಕಾಲೇಜಿಗೆ ವರ್ಗವಾದರು. ಅನಂತರ ಸ್ನಾತಕೋತ್ತರ ಕನ್ನಡ ವಿಭಾಗದಲ್ಲಿ ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ ಮೂರುದಶಕಗಳ ವಿದ್ಯಾರ್ಥಿಪ್ರಿಯ ಅಧ್ಯಾಪನದೊಂದಿಗೆ ನಿವೃತ್ತರಾದರು. 1968ರ ಹೊತ್ತಿಗೇ ತಮ್ಮ 'ಅಲ್ಲಮನ ವಚನಚಂದ್ರಿಕೆ' ಮತ್ತು 'ಶಿವದಾಸ ಗೀತಾಂಜಲಿ'ಗಳಿಗೆ ಮೈಸೂರು ವಿಶ್ವವಿದ್ಯಾಲಯದಿಂದ ಡಿ.ಲಿಟ್. ಪದವಿ ಪಡೆದಿದ್ದರು. ಎಂಬತ್ತರ ಇಳಿವಯಸ್ಸಿನಲ್ಲೂ ಇಪ್ಪತ್ತರ ಕಾರ್ಯೋತ್ಸಾಹದಿಂದ ಈಗಲೂ ಅವರು ನಿರಂತರವಾಗಿ ಪಾಂಡಿತ್ಯದ ಕೆಲಸಗಳನ್ನು ಮಾಡುತ್ತ ಮೈಸೂರಿನಲ್ಲಿಯೇ ನೆಲೆಸಿದ್ದಾರೆ.

ಬಸವರಾಜು ಅವರದು ತಳಮಳದ, ಚಡಪಡಿಕೆಯ ವ್ಯಕ್ತಿತ್ವ. ಅವರ ಮನಸ್ಸು ಕುದಿಯುತ್ತದೆ. ಹೃದಯ ತಣ್ಣಗಿರುತ್ತದೆ. ಮಾತು ಚಾಟಿಯೇಟಿ ನಂತಿರುತ್ತದೆ, ಸ್ಪರ್ಶ ಆಪ್ತವಾಗಿರುತ್ತದೆ ; ಬರೆಹ ಬಿರುಸಾಗಿರುತ್ತದೆ, ಭಾವ ಮೃದುವಾಗಿರುತ್ತದೆ. ಅಲಗುಮಾತಿನ, ರೇಗುಚಹರೆಯ ವ್ಯಕ್ತಿ ಎಂದು ಹೊರ ನೋಟಕ್ಕೆ ಎನಿಸಿದರೂ ಪರಿಣಾಮದಲ್ಲಿ ವಿಚಾರವಂತಿಕೆಯ, ನಿರ್ದಾಕ್ಷಿಣ್ಯದ ನಿರ್ಭೀತ ಸ್ವಭಾವದ ವ್ಯಕ್ತಿತ್ವ ಅವರದು. ಅವರು ಸರಿ ಎನಿಸಿದ್ದನ್ನು ಯಾವ ಗಳಿಗೆಯಲ್ಲಾದರೂ ಎಂಥ ಸಂದರ್ಭದಲ್ಲಾದರೂ ಆಡಬಲ್ಲರು, ಮಾಡಬಲ್ಲರು. ಅಖಿಲಭಾರತ ಶರಣ ಸಾಹಿತ್ಯಸಮ್ಮೇಳನ ಅಧ್ಯಕ್ಷರಾಗಿಯೂ, ಅದರ ಅಧ್ಯಕ್ಷ ಪಟ್ಟದ ಮೆರವಣಿಗೆ ನಿರಾಕರಿಸಬಲ್ಲರು, ನಂಜನಗೂಡಿನ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪಟ್ಟ ತಿರಸ್ಕರಿಸಬಲ್ಲರು ; ಚಿದಾನಂದ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಒಲ್ಲದೆ ನಿಲ್ಲಬಲ್ಲರು. ಅವರದು ಇತರರನ್ನು ಆಶ್ರಯಿಸದ, ಹಿಂಬಾಲಕರ ಗುಂಪು ಕಟ್ಟದ ಒಂಟಿಸಲಗದ ಸಾಹಿತ್ಯವಿಹಾರ. ಇದರಿಂದಲೇ ಅವರು ಸಂಸ್ಥೆ ಕಟ್ಟಲಿಲ್ಲ, ಸಂಸ್ಥೆಯ ನೇತಾರರಾಗಲಿಲ್ಲ. ಆದರೆ ಒಂದು ಸಂಸ್ಥೆ ಮಾಡಬಹುದಾದ ಕೆಲಸಗಳನ್ನು ಮಾಡಿದರು.

ಬಸವರಾಜು ಕನ್ನಡ ಎಂ.ಎ. ಮಾಡುವ ಹೊತ್ತಿಗೆ, ಕನ್ನಡ ಸಾಹಿತ್ಯದೆಡೆ ಹೊರಳುವ ಹೊತ್ತಿಗೆ ಕರ್ನಾಟಕದಾದ್ಯಂತ ಪುನರುಜ್ಜೀವನದ ಅಲೆ ಹರಡಿತ್ತು. ಸೃಜನ, ಸಂಶೋಧನ ಹಾಗೂ ಕನ್ನಡದ ಸ್ಥಾನಮಾನಗಳ ದೃಷ್ಟಿಗಳಿಂದ ಕನ್ನಡವನ್ನು ಕಟ್ಟುವ ಕಾರ್ಯಗಳನ್ನು – ಬಿ.ಎಂ. ಶ್ರೀಕಂಠಯ್ಯನವರ ನೇತೃತ್ವದಲ್ಲಿ ಒಂದು ದೊಡ್ಡ ತಂಡ ಕೈಗೊಂಡಿತ್ತು. ಅಲ್ಲಿ ಸಂಶೋಧನೆ, ವಿದ್ವತ್ತುಗಳ ಪ್ರತಿಮೂರ್ತಿಗಳಂತಿದ್ದ ಡಿ.ಎಲ್. ನರಸಿಂಹಾಚಾರ್, ತೀ.ನಂ. ಶ್ರೀಕಂಠಯ್ಯ, ಬಸವರಾಜು ಅವರ ಮೇಲೆ ಅಚ್ಚಳಿಯದ ಪ್ರಭಾವ ಬೀರಿದರು. ಸಹಜವಾಗಿಯೇ ಬಸವರಾಜು ವಿದ್ವತ್ತಿನೆಡೆ ತಮ್ಮ ದೃಷ್ಟಿ, ಆಸಕ್ತಿಗಳನ್ನು ಹೊರಳಿಸಿದರು. ಹಸ್ತಪ್ರತಿಗಳ ಅಭ್ಯಾಸ, ಗ್ರಂಥ ಸಂಪಾದನೆ ಆ ಕಾಲದಲ್ಲಿ ವಿದ್ವತ್ತಿಗೆ, ಸಂಶೋಧನೆಗೆ ಸವಾಲಾಗಿದ್ದ ಕ್ಷೇತ್ರ. ಬಸವರಾಜು ಅದನ್ನು ಆರಿಸಿಕೊಂಡರು, ಅದಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಿಟ್ಟರು.

ಈವರೆಗೆ ಬಸವರಾಜು 40ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ. ಅವರ ಸಾಹಿತ್ಯಕೃಷಿಯನ್ನು ಹೀಗೆ ವಿಭಾಗಿಸಬಹುದು: (1) ಗ್ರಂಥ ಸಂಪಾದನೆ (2) ಕಾವ್ಯಅನುವಾದ (3) ಸಂಶೋಧನ ಬರಹ, ಸರಳ ಗದ್ಯಾನುವಾದ. ಪ್ರಾಚೀನ ಕನ್ನಡ ಸಾಹಿತ್ಯದ ಪಂಪ, ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ಸರ್ವಜ್ಞ, ನಿಜಗಣಶಿವಯೋಗಿ, ನಾಗವರ್ಮ, ಕೇಶಿರಾಜ ಮುಂತಾದ ಮುಖ್ಯಲೇಖಕರ ಬಗ್ಗೆ ಅವರು ಕೆಲಸ ಮಾಡಿದ್ದಾರೆ. ಈ ಹಿಂದೆ ಪರಿಷ್ಕರಣಗೊಂಡ ಕೃತಿಗಳನ್ನೇ ಅವರು ಪುನರ್ ಪರಿಷ್ಕರಿಸಿದ್ದಾರೆ, ಪುನಃ ಸಂಪಾದಿಸಿದ್ದಾರೆ. ಇಂಥ ಕೆಲಸದ ಬಗ್ಗೆ ಅವರ ಅಭಿಪ್ರಾಯ ಹೀಗೆ "ವಚನ ಸಾಹಿತ್ಯ ಮೊದಲುಗೊಂಡು ಇಥವಾ ಅದೇ ಇಡಿಯಾಗಿ ಪ್ರಮುಖವಾಗಿ ಇಲ್ಲಿಯವರೆಗೆ ಏನೆಲ್ಲ ಗ್ರಂಥಗಳ ಸಂಪಾದನೆಯಾಗಿದೆಯೋ ಅವೆಲ್ಲ ಪುನರ್ ಪರಿಷ್ಕರಣಗೊಳ್ಳಬೇಕು. ಹೊಸ ಶತಮಾನದ ಆಗುಹೋಗುಗಳ ಹಿನ್ನೆಲೆಯಲ್ಲಿ ಪುನರ್ವಿಮರ್ಶೆ ಪುನರ್‌ಮೌಲ್ಯೀಕರಣ ನಡೆಯಬೇಕು. ಇಲ್ಲಿ ಕೆಲಸ ಮಾಡುವ ವ್ಯಕ್ತಿಗಳು ಹಳಗನ್ನಡ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದವರಾಗಿರಬೇಕು. ಈ ಕ್ಷೇತ್ರದಲ್ಲಿ ಕೆಲಸ ಮಾಡುವವರು ಕೂಲಿ ಆಳಾಗಿ ಬರಬಾರದು. ತಮ್ಮನ್ನು ತೆತ್ತುಕೊಂಡು, ತಮ್ಮನ್ನು ಅರ್ಪಿಸಿಕೊಂಡು ಕೆಲಸ ಮಾಡುವವರು ಬರಬೇಕು. ಪಾಂಡಿತ್ಯ ಸಂಸ್ಕೃತಿಯ ಬಗ್ಗೆ ಅಭಿಮಾನ, ಕಠಿಣ ವಿಮರ್ಶೆಗೆ ಹಿಂಜರಿಯದಂಥ ವ್ಯಕ್ತಿಗಳು ಸಂಶೋಧನೆ ಮುಂದುವರಿಸಿ ಹಳೆಯ ಗ್ರಂಥಗಳನ್ನು ಜನರಿಗೆ ಅರ್ಪಿಸಬೇಕು. ಅದೆ ನಾವು ಅವರಿಗೆ ಮಾಡುವ ಸೇವೆ". ಅವರ ಸಂಶೋಧನೆಯ ಕೆಲಸದಲ್ಲಿ ಈ ಧ್ಯೇಯ ಎದ್ದು ಕಾಣುತ್ತದೆ.

ಗ್ರಂಥ ಸಂಪಾದನೆ : ಗ್ರಂಥ ಸಂಪಾದನೆಯ ಕ್ಷೇತ್ರದಲ್ಲಿ ಬಸವರಾಜು ಮೂರುಮುಖಗಳಲ್ಲಿ ಕೆಲಸ ಮಾಡಿದ್ದಾರೆ. ಜೈನಕಾವ್ಯ ಸಂಪಾದನೆ, ವೀರಶೈವ ಸಾಹಿತ್ಯ ಸಂಪಾದನೆ ಮತ್ತು ಶಾಸ್ತ್ರಗ್ರಂಥಗಳ ಸಂಪಾದನೆ. ಜೈನಕವಿಯಾದ ಪಂಪ ಕನ್ನಡದ ಅಗ್ರಗಣ್ಯಕವಿ. ಆತನ ಕಾವ್ಯಗಳಲ್ಲಿ ಮೊದಲನೆಯದಾದ 'ಆದಿಪುರಾಣ'ವನ್ನು ಬಸವರಾಜು 1976ರಲ್ಲಿ ಪುನಸ್ಸಂಪಾದಿಸಿ ಪ್ರಕಟಿಸಿದರು. ಇವರಿಗಿಂತ ಹಿಂದೆ ಇದನ್ನು ಪರಿಷ್ಕರಿಸಿದ್ದ ಎಸ್.ಜಿ. ನರಸಿಂಹಾಚಾರ್ ಮತ್ತು ಕೆ.ಜಿ. ಕುಂದಣಗಾರರು ಎರಡೆರಡು ಓಲೆಪ್ರತಿಗಳನ್ನು ಮಾತ್ರ ಬಳಸಿದ್ದಾರೆ. ಬಸವರಾಜು ಐದು ಸೂಕ್ಷ್ಮಚ್ಛಾಯಾ ಪ್ರತಿಗಳನ್ನೂ ಒಳಗೊಂಡಂತೆ ಹತ್ತು ಓಲೆ ಪ್ರತಿ ಬಳಸಿದ್ದಾರೆ. ಜತೆಗೆ ಕಾವ್ಯಾವಲೋಕನ, ಶಬ್ದಮಣಿದರ್ಪಣ ಮುಂತಾದ ಆಕರಗಳಲ್ಲಿರುವ ಆದಿಪುರಾಣದ ಪದ್ಯಪಾಠಗಳ ನೆರವನ್ನು

ಪಡೆದಿದ್ದಾರೆ. ವಿವಿಧ ಪ್ರತಿಗಳ ಕಾಲ, ವಿಶ್ವಾಸಾರ್ಹತೆ, ಸಂಬಂಧ, ವಂಶಾವಳಿ, ಪ್ರಾಚೀನತೆಗಳನ್ನು ಗುರುತಿಸಿದ್ದಾರೆ. ಅವರಿಗೆ ಕಾಲದೃಷ್ಟಿಯಿಂದ ಪ್ರಾತಿನಿಧಿಕ ಪ್ರತಿಗಳು ದೊರೆತಿರುವುದರಿಂದ ಶಾಸ್ತ್ರೀಯ ಕಾರ್ಯ ನಿರ್ವಹಣೆಗೆ ಅನುಕೂಲ ವಾಗಿದೆ. ಈ ಕೃತಿ ಸಂಪಾದನೆಯಲ್ಲಿ ಕೆಲವು ಹೊಸ ಉಪಕ್ರಮವನ್ನು ಅವರು ಆರಂಭಿಸಿದ್ದಾರೆ. ಮೂಲ ಪಠ್ಯಭಾಗದ ನಡುವೆ ಪಠ್ಯವಸ್ತುವನ್ನು ಉದ್ದಕ್ಕೂ ನಿರ್ದೇಶಿಸುವ ಉಪಶೀರ್ಷಿಕೆಗಳನ್ನು ನೀಡುವುದು, ಅರ್ಥಾನುಸಾರವಾಗಿ ಪದಚ್ಛೇದ ಮಾಡಿ ಪದ್ಯಗಳನ್ನು ಕೊಡುವುದು, ಅಡಿಯಲ್ಲಿ ವಿವಿಧ ಪಾಠಗಳನ್ನು ಉಲ್ಲೇಖಿಸುವುದು ಕೆಲವು ಪಾಠಗಳ ಅರ್ಥ, ಸ್ವರೂಪ, ವಿಷ್ಪತ್ತಿ, ಔಚಿತ್ಯಗಳನ್ನು ಚರ್ಚಿಸುವುದು, ಅಗತ್ಯವಿದ್ದೆಡೆ ಪೂರ್ವಪುರಾಣದ ತತ್ಸಂಬಂಧಿತ ಶ್ಲೋಕಗಳನ್ನು ಉದ್ಧರಿಸುವುದು, ವಿಶೇಷವಿಷಯಗಳನ್ನು ಹೇಳುವುದು - ಇಲ್ಲಿ, ಉಲ್ಲೇಖಿಸಬಹುದಾದ ಕೆಲವು ಇಂಥ ಸೇರ್ಪಡೆಗಳಿಂದ ಓದುಗರಿಗೆ, ಅಭ್ಯಾಸಿಗಳಿಗೆ ಈ ಪರಿಷ್ಕರಣ ಹೆಚ್ಚು ಉಪಯುಕ್ತವಾಗಿದೆ. ಅಲ್ಲಲ್ಲಿ ಸೇರಿಸಿರುವ ವಿಮರ್ಶಾತ್ಮಕ ಚಿಂತನೆಗಳು ಹೊಸಬಗೆಯವಾಗಿವೆ. ಇವು ಇತರ ಪರಿಷ್ಕರಣಗಳನ್ನೋ, ಕಥಾಭಾಗವನ್ನೋ, ಪೂರ್ವಪುರಾಣದ ನಿರೂಪಣೆಯನ್ನೋ ಕುರಿತಿವೆ. ಇಂಥ ವಿವರಗಳಿಂದ ಇದು ಇತರ ಪರಿಷ್ಕರಣ ಗಳಿಗಿಂತ ಭಿನ್ನವಾಗಿದೆ.

ಬಸವರಾಜು ಸಂಪಾದಿಸಿರುವ ಪಂಪನ ಮತ್ತೊಂದು ಕೃತಿ 'ಸರಳ ಪಂಪಭಾರತ'. ಬಿ.ಎಲ್. ರೈಸ್ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ವಿದ್ವನ್ಮಂಡಲಿಯ ಪರಷ್ಕರಣದ ನಂತರದ ಕೃತಿ ಇದು. ಇಡೀ ಕೃತಿಯನ್ನು ಈ ಹಿಂದಿನ 'ಆದಿಪುರಾಣ'ದ ಹಾದಿಯಲ್ಲೇ ಮುಂದುವರಿದು ಸಂಪಾದಿಸಿದೆ. ಇಡೀ ಕಾವ್ಯವನ್ನು ಅನಿಬದ್ಧವಾಗಿ ಕೊಟ್ಟಿದೆ. ಆದರೆ ಅರ್ಥಬದ್ಧವಾಗಿ ಪದಚ್ಛೇದ ಮಾಡಿದೆ. ಪೂರ್ವದ ಸಾರವನ್ನೋ ಘಟನೆಗಳ ಪ್ರಾಮುಖ್ಯವನ್ನೋ ತಿಳಿಸುವ ಅಂತರ್ ಶೀರ್ಷಿಕೆಗಳನ್ನು ಕೊಟ್ಟಿದೆ. ಇಡೀ ಕೃತಿಯನ್ನು ಸಾಮಾನ್ಯ ಓದುಗ ಅರ್ಥೈಸಿಕೊಳ್ಳಲು ಅನುಕೂಲ ಮಾಡಿಕೊಟ್ಟಿದೆ. ಮಗ್ಗುಲಲ್ಲಿ ಛಂದೋಬಂಧ ಗಳನ್ನು ಸೂಚಿಸಿದೆ ; ಯಾಸೆ ಗೀಟಿನಿಂದ ಇದನ್ನು ಬಿಡಿಸಿದೆ. ಇದರೊಂದಿಗೆ ಪಾಠಾಂತರ ತಿದ್ದುಪಡಿ, ಸೇರ್ಪಡೆಗಳಿರುವ ಆರಾ ಪ್ರತಿಯನ್ನು ಹೆಚ್ಚು ಪ್ರಯೋಜನಕರವಾಗಿ ಪರಿಷ್ಕರಣದಲ್ಲಿ ಇದರೊಂದಿಗೆ ಸುಕ್ತಂಕರರ ಸಂಸ್ಕೃತ ಭಾರತವನ್ನೂ, ಪಾಠ ಪರಿಶೋಧನೆಗೆ ಬಳಸಿಕೊಳ್ಳಲಾಗಿದೆ. ಹೀಗಾಗಿ ಇದೊಂದು ಪ್ರತ್ಯೇಕ ಪರಿಷ್ಕರಣವೇ ಆಗಿದೆ. ಪಾಠಾಂತರ ವೈವಿಧ್ಯ, ಮೂಲಾಧಾರದೊಂದಿಗಿನ ಹೋಲಿಕೆ ವ್ಯತ್ಯಾಸ, ವ್ಯಾಕರಣಾಂಶ, ಅರ್ಥ ನಿರ್ಣಯ ಚರ್ಚೆಗಳ ಅತ್ಯಮೂಲ್ಯ ಅಡಿಟಿಪ್ಪಣಿ ಭಾಗವನ್ನು ಬಸವರಾಜು ಅವರಿಗೆ ಸೇರಿಸಲು ಇಲ್ಲಿ ಸಾಧ್ಯವಾಗದೆ ಹೋಗಿದೆ. ಇಡೀ ಕೃತಿಯನ್ನು ಪಂಡಿತ ಪಾಮರರು ಓದಿ ರಸಾಸ್ವಾದನ ಮಾಡಲು ಅನುಕೂಲಕರವಾಗುವಂತೆ ಪರಿಷ್ಕರಿಸಿ ಪ್ರಕಟಿಸಿದೆ.

ಬಸವರಾಜು ಅವರು ಪ್ರಧಾನವಾದ ಕೃಷಿ ವೀರಶೈವ ಸಾಹಿತ್ಯ ಸಂಪಾದನೆಯಲ್ಲಿ, ಈ ಕ್ಷೇತ್ರದ ಅವರ ಎರಡು ಮುಖ್ಯ ಕೃತಿಗಳು 'ಅಲ್ಲಮನ ವಚನ ಚಂದ್ರಿಕೆ'(1962) ಮತ್ತು 'ಶಿವದಾಸ ಗೀತಾಂಜಲಿ'(1963). ಹಳಕಟ್ಟಿ ಯವರ ಪರಿಷ್ಕರಣದ ಬಳಿಕ ಮೂವತ್ತು ವರ್ಷಗಳ ಅನಂತರ ಬಸವರಾಜು ಅಲ್ಲಮನ ಷಟ್ಥಲದ ವಚನಗಳನ್ನು ಪರಿಷ್ಕರಿಸಿದರು. ಅವನ ಷಟ್ಥಲದ ವಚನಗಳು, ಅಧಿಕ ವಚನಗಳು, ಗೀತೆಗಳು ಸೇರಿದಂತೆ ಇಲ್ಲಿ 1321 ರಚನೆಗಳಿವೆ. ಅಲ್ಲಮನ ವಚನಗಳು ಸಿಕ್ಕುವ ಆಕರಗಳ ವರ್ಗೀಕರಣ ಹೊಸಹಸ್ತಪ್ರತಿಗಳ ಪ್ರತಿಗಳ ಬಳಕೆ, ಮಾತೃಕೆಗಳ ನಡುವಣ ಸಂಬಂಧ ಸೂಚಿಸುವ ರೇಖಾಕೃತಿ, ಪಾಠಾಂತರಗಳ ಸೂಚನೆಯೊಂದಿಗೆ ಶುದ್ಧಪಾಠದ ನಿರ್ಣಯ ಈ ಪರಿಷ್ಕರಣವನ್ನು ಮೌಲ್ಯಯುತವಾಗಿಸಿದೆ. ವಚನ ಸಾಹಿತ್ಯದ ಉಗಮ - ಅರಂಭ. ಅಲ್ಲಮನ ಜೀವನ ವೃತ್ತಾಂತ, ಪರಂಪರೆ, ಅಂಕಿತ ಕುರಿತ ವಿದ್ವತ್‌ಪೂರ್ಣ ಪೀಠಿಕೆ ತುಂಬ ಉಪಾದೇಯವಾಗಿದೆ. ಅಲ್ಲಮನ ಹಾಡುಗಳ ಸೇರ್ಪಡೆಯೊಂದಿಗೆ ಪಾರಿಭಾಷಿಕ ಪದಸೂಚಿ, ಪಾರಿಭಾಷಿಕ ಪದಗಳ ವಿವರಣೆ, ಬೆಡಗಿನ ಪದಕೋಶ, ಬೆಡಗಿನ ವಚನಗಳ ಭಾವಾನುವಾದ ಕಠಿಣ ಪದಕೋಶಗಳನ್ನು ಜೋಡಿಸಿ ವಚನ ಸಂಪಾದನೆಗೆ ಇನ್ನೊಂದು ಮಾದರಿ ಪರಿಷ್ಕರಣವಾಗಿಸಿದೆ. ಅತ್ಯಂತ ಶ್ರಮದಾಯಕವಾದ ಈ ಕೆಲಸ ಇಂದಿಗೂ ಇದನ್ನು ಒಂದು ಅಧಿಕೃತ ಪರಿಷ್ಕರಣವಾಗಿಸಿದೆ. "ಇದು ಕೇವಲ ಶ್ರದ್ಧೆಯ ಕೆಲಸವಲ್ಲ, ಇಲ್ಲಿ ತಪಸ್ಸಿನ ತೊಯ್ಲಾಟವಿದೆ, ಬುದ್ಧಿಯ ಗುದ್ದಾಟವೂ ಇದೆ ಎಂಬುದು ಇವರ ಬಗ್ಗೆ ಬೇಂದ್ರೆಯವರ ಪ್ರಶಂಸೆ."

"ಹಲವು ಮಾತೃಕೆಗಳಲ್ಲಿ ಚೆದರಿಹೋಗಿದ್ದ ಪ್ರಭುದೇವರ ವಚನಗಳನ್ನು ಸಂಗ್ರಹಿಸಿ, ಶೋಧಿಸಿ, ಟಿಪ್ಪಣಿ ಕೋಶ ಪೀಠಿಕೆ ಮೊದಲಾದ ಅನೇಕ ಉಪ ಯುಕ್ತವಾದ ಪರಿಕರಗಳೊಡನೆ 'ಅಲ್ಲಮನ ವಚನ ಚಂದ್ರಿಕೆ' ಎಂಬ ಹೆಸರಿನಲ್ಲಿ ಪ್ರಕಟಿಸಿ, ಕನ್ನಡಿಗರಿಗೆ ಮಹೋಪಕಾರ ಮಾಡಿದ್ದಾರೆ" ಎಂಬುದು ತೀ.ನಂ. ಶ್ರೀಕಂಠಯ್ಯನವರ ಅಭಿಪ್ರಾಯ.

ಬಸವಾದಿ ಪ್ರಮಥರ 158 ಹಾಡುಗಳ 'ಶಿವದಾಸ ಗೀತಾಂಜಲಿ' ಬಸವರಾಜು ಅವರ ಗ್ರಂಥಸಂಪಾದನ ವೈದುಷ್ಯಕ್ಕೆ ನಿದರ್ಶನವಾಗಿರುವ ಕೃತಿ. 11ಹಸ್ತಪ್ರತಿಗಳನ್ನು ಅವಲಂಬಿಸಿ ತಂದಿರುವ ಈ ಪರಿಷ್ಕರಣವನ್ನು ಬೇಂದ್ರೆ "ಹೊಸ ವಿಕ್ರಮ", "ಸಂಶೋಧನೆಯ ಗಣಿ", "ಏಕಾಂಗವೀರನ ಪರಿಶ್ರಮ" ಎಂದು ಮನಸಾರೆ ಮೆಚ್ಚಿದ್ದಾರೆ. ಹರಿದಾಸರು ಮಾತ್ರ ಹಾಡುಗಳನ್ನು ಬರೆದಿದ್ದರು ಎಂಬ ಆವರೆಗಿನ ಭಾವನೆಯನ್ನು ಕೃತಿ ಮೊದಲಬಾರಿಗೆ ಬದಲಿಸಿತು. ಪಾಠಾಂತರ, ಶೀರ್ಷಿಕೆ, ರಾಗ-ತಾಳ-ಪಲ್ಲವಿ ಪದಗಳಿಂದ ಕೂಡಿದ ಪೀಠಿಕಾಭಾಗದಲ್ಲಿ ಬಸವರಾಜು ಅವರ ವೀರಶೈವ ಸಾಹಿತ್ಯದ ವಿದ್ವತ್ತಿನ ಆಳ-ಅಗಲಗಳು ಪ್ರಕಟಗೊಂಡಿವೆ. ಶೈವ-ವೀರಶೈವ, ವಚನಗೀತೆಗಳ ಸಂಕಲನ ಮತ್ತು ವ್ಯಾಖ್ಯಾನ, ಶರಣರ ಕೃತಿ ಪ್ರಕಾರಗಳು ಹಾಡುಗಳ ಸಾಹಿತ್ಯ ಚರಿತ್ರೆ - ಛಂದಸ್ಸಿನ ವಿಷಯ ಒಳಗೊಂಡಿರುವ ಇಲ್ಲಿನ ವಿವರಗಳು ಅನಂತರದ ಶರಣ ಸಾಹಿತ್ಯ ಸಂಶೋಧನೆಗೆ ಅಡಿಗಲ್ಲಾಗಿದೆ. "The introduction running to 142 pages is a learned contribution of the editor". "This book opens out a fresh field of enqury in the history of Kannada literature, his work affords fresh material for musicologists also" ಎಂಬ ಡಿ.ಎಲ್. ನರಸಿಂಹಾಚಾರ್ಯರ ಮಾತುಗಳು ಇದರ ಮಹತ್ವವನ್ನು ಚೆನ್ನಾಗಿ ಹೇಳಿವೆ. 220 ಪುಟಗಳ ಬಗೆಬಗೆಯ ವಿಷಯ ಕುರಿತ 14 ಅನುಬಂಧ ಭಾಗಗಳು ಈ ಕೃತಿಯ ಇನ್ನೊಂದು ಬೆಲೆಬಾಳುವ ಕೊಡುಗೆ. ಅದರಲ್ಲೂ ಎಲ್ಲ ವಚನಾಂಕಿತಗಳು ಮತ್ತು ವಚನಕಾರರು ಎಂಬುದನ್ನು ಪ್ರತ್ಯೇಕವಾಗಿ ಉಲ್ಲೇಖಿಸಬೇಕು. ಶರಣಸಾಹಿತ್ಯಕ್ಕೆ ಸಂಬಂಧಿಸಿದ ಬಸವರಾಜು ಅವರ ಧಾರ್ಮಿಕ - ಸಾಹಿತ್ಯಕ-ಸಾಂಸ್ಕೃತಿಕ-ಸಂಗೀತಾತ್ಮಕ ವಿದ್ವತ್ತು ಇಲ್ಲಿ ಸುಪ್ರಕಟಗೊಂಡಿದೆ. ಸ್ವರವಚನ ಸಾಹಿತ್ಯ ಸಂಶೋಧನೆಯಲ್ಲಿ ಇದು ಏಕಮೇವಾದ್ವಿತೀಯ ಕೃತಿ.

ಇವುಗಳೊಂದಿಗೆ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ದೇವರದಾಸಿಮಯ್ಯ, ಸರ್ವಜ್ಞರ ವಚನಗಳನ್ನು ಕ್ರಮವಾಗಿ 1952, 1966,

1969, 1970, 1972ನೆಯ ಇಸವಿಗಳಲ್ಲಿ ಬಸವರಾಜು ಸಂಪಾದಿಸಿದ್ದಾರೆ. ಎಲ್ಲ ಕೃತಿಗಳಲ್ಲಿ ಪಾಠಾಂತರ ಸಹಿತ ಶುದ್ಧಪಾಠವಿರುವುದು ಇವುಗಳ ಅಕಾರಾದಿ, ಅರ್ಥಕೋಶಗಳೊಂದಿಗೆ ವಿಚಾರ ಪರಿಪ್ಲುತವಾದ ದೀರ್ಘ ಪೀಠಿಕೆಗಳನ್ನು ಇವು ಹೊಂದಿವೆ. ಆಯಾ ವಚನಕಾರನಿಗೆ ಸಂಬಂಧಿಸಿದ ಸಂಗತಿಗಳನ್ನಲ್ಲದೆ ವೀರಶೈವ ಸಾಹಿತ್ಯದ ಒಂದು ಮುಖ್ಯ ವಿಷಯದ ಚರ್ಚೆ, ಪ್ರಸ್ತಾಪಗಳು ಇದರಲ್ಲಿರುತ್ತವೆ. ನಿದರ್ಶನಕ್ಕೆ ಅಕ್ಕನ ವಚನಗಳು ಕೃತಿಯಲ್ಲಿ ವಚನ ಸಾಹಿತ್ಯಾಧ್ಯಾಯನ ಚರಿತ್ರೆಯಿದೆ. ವಚನ ಸಾಹಿತ್ಯದ ಉಗಮ ಆರಂಭಗಳ ವಿವೇಚನೆ 'ಅಲ್ಲಮನ ವಚನಗಳು' ಪೀಠಿಕೆಯ ಭಾಗವಾಗಿದೆ. ವಿವಿಧ ಕೃತಿಗಳಲ್ಲಿ ಕಂಡು ಬರುವ ಬಸವ-ಅಲ್ಲಮ-ಅಕ್ಕ-ದಾಸಿಮಯ್ಯರ ತೌಲನಿಕ ಹಾಗೂ ವಾಸ್ತವಿಕ ಚಿತ್ರಗಳನ್ನು ತುಂಬ ಪರಿಶ್ರಮ ಪೂರ್ವಕವಾಗಿ ಇವುಗಳಲ್ಲಿ ಕೊಡಲಾಗಿದೆ. ಸರ್ವಜ್ಞನ ವಚನಗಳ ಅಂಕಿತವನ್ನು ಪರಮಾರ್ಥ ಎಂದು ಸಾಧಿಸುವ ಪ್ರಯತ್ನ ಮಾಡಲಾಗಿದೆ. ಹೊಸವಸ್ತು, ಹೊಸ ವಿಚಾರ, ಹೊಸದೃಷ್ಟಿಗಳಿಂದ ಇವು ಕಂಗೊಳಿಸಿವೆ.

ಇಲ್ಲಿಯೇ ಉಲ್ಲೇಖಿಸಬಹುದಾದ ಮತ್ತೊಂದು ಕೃತಿ 'ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ' ಐದು ಪ್ರತಿಗಳ ನೆರವಿನಿಂದ ಗ್ರಂಥವನ್ನು ಪರಿಷ್ಕರಿಸಿದೆ. ಶೂನ್ಯ ಸಂಪಾದನೆಯ ಮೂಲ, ಸ್ವರೂಪ, ಕಾಲ ವಿಚಾರ, ಅನಂತರ ಬಂದ ಶೂನ್ಯ ಸಂಪಾದನೆಗಳ ಮಹತ್ವ ಹೇಳಿದೆ. ನಾಲ್ಕೂ ಶೂನ್ಯ ಸಂಪಾದನೆಗಳ ನಡುವಣ ವಚನಗಳ ಕ್ರಮಾಂಕಪಟ್ಟಿ ಕೊಟ್ಟಿದೆ. ಶಿವಗಣ ಪ್ರಸಾದಿಯಲ್ಲಿಲ್ಲದ ಇತರರಲ್ಲಿರುವ ಅನೇಕ ಸಂಪಾದನೆಗಳನ್ನು ಸೇರಿಸಿದೆ. ಶಿವಗಣಪ್ರಸಾದಿ ಮಹಾದೇವಯ್ಯನ ಸಂಪಾದನೆಯ ಪ್ರಾಮುಖ್ಯ ವನ್ನು ವಿವರಿಸಿದೆ. ಅಕ್ಕಮಹಾದೇವಿಯ ಪ್ರಸಂಗದ ತೌಲನಿಕ ಚಿತ್ರವನ್ನೂ ಇಲ್ಲಿ ಸೇರಿಸಿದೆ. ಶೂನ್ಯಸಂಪಾದನೆಗಳ ಸಂಬಂಧ, ಸ್ವಂತಿಕೆ, ಬೆಳವಣಿಗೆ, ಪರಿಷ್ಕರಣ ಕಾರಣಗಳನ್ನು ಚರ್ಚಿಸಿ ಉಪಾದೇಯವಾದ ವಿಚಾರಗಳನ್ನು ಹೊರಪಡಿಸಿದೆ. ಕಥಾಸಾರ, ಅರ್ಥಕೋಶಗಳು ಇವೆ. ಇದರ ಮೇಲೆ ಒಂದು ಬಾರಿ ಕಣ್ಣು ಹಾಯಿಸಿದರೆ ನಾಲ್ಕೂ ಶೂನ್ಯಸಂಪಾದನೆಗಳನ್ನು ಒಮ್ಮೆಲೇ ಗ್ರಹಿಸಿದಂತೆ ಆಗುತ್ತದೆ. ಇದರೊಂದಿಗೆ, 'ತೊರವೆ ರಾಮಾಯಣ ಸಂಗ್ರಹ'. ಶೃಂಗಾರ ನಿದರ್ಶನ (ಚಿಕದೇವರಾಯ ಸಪ್ತಪದಿ)ಗಳನ್ನೂ ಬಸವರಾಜು ಸಂಪಾದಿಸಿದ್ದಾರೆ.

ಶಾಸ್ತ್ರಸಾಹಿತ್ಯಕ್ಷೇತ್ರದಲ್ಲೂ ಬಸವರಾಜು ಗ್ರಂಥಗಳನ್ನು ಸಂಪಾದಿಸಿ ದ್ದಾರೆ. ಅವುಗಳಲ್ಲಿ ಉಲ್ಲೇಖಾರ್ಹವಾದವು. 'ಕನ್ನಡ ಛಂದಸ್ಸಂಪುಟ' ಮತ್ತು 'ಶಬ್ದಮಣಿ ದರ್ಪಣ'. ಎಚ್.ಡಿ. ವೇಲಣಕರ್ ಅವರ 'ಜಯದಾಮನ್' ಕೃತಿಯ ಮಾದರಿಯಲ್ಲಿ ನಾಗವರ್ಮನ ಛಂದೋಂಬುಧಿ, ಈಶ್ವರಕವಿಯ ಕವಿಜಿಹ್ವಾಬಂಧನ, ಗುಣಚಂದ್ರನ ಛಂದಸ್ಸಾರ ಮತ್ತು ವೀರಭದ್ರನ ನಂದಿ ಛಂದೋರ್ಣವಗಳನ್ನು ಪರಿಷ್ಕರಿಸಿ ಪೂರ್ಣಪಾಠ ಸಹಿತ ಇಲ್ಲಿ ಕೊಟ್ಟಿದ್ದಾರೆ. ತಮಗೆ ಲಭ್ಯವಿದ್ದ ಎಲ್ಲ ಪ್ರತಿಗಳನ್ನು ಪರಿಶೀಲಿಸಿ ಅಸಂಖ್ಯಾತ ಪಾಠಾಂತರ ಗಳೊಂದಿಗೆ ಗ್ರಂಥವನ್ನು ಪರಿಷ್ಕರಿಸಿದ್ದಾರೆ. ಛಂದೋಂಬುಧಿಯ ಕರ್ಣಾಟ ವಿಷಯಾಧಿಕಾರ ಪ್ರಕರಣದಲ್ಲಿ ಕನ್ನಡ ಮಟ್ಟುಗಳಿಗೆ ಜಯಕೀರ್ತಿಯ ತತ್‌ಸಂಬಂಧಿತ ಲಕ್ಷಣವನ್ನೂ, ಮದನತಿಲಕ, ಸುಕುಮಾರ ಚರಿತ ಮುಂತಾದ ಉದಾಹರಣಗಳನ್ನೂ ಪರಿಶೀಲಿಸಿ ವಿಶೇಷ ವಿಷಯ, ವಿಚಾರಗಳನ್ನು ಸೇರ್ಪಡೆಗೊಳಿಸಿದ್ದಾರೆ. ಆರಂಭದಲ್ಲಿ ಕನ್ನಡ ಛಂದಸ್ಸಿನ ಅಧ್ಯಯನದ ಒಂದು ಸಂಕ್ಷಿಪ್ತ ಸಮೀಕ್ಷೆ ಕೊಟ್ಟಿದ್ದಾರೆ. ಜತೆಗೆ ವರ್ಣವೃತ್ತ, ಮಾತ್ರಾವೃತ್ತ, ಖ್ಯಾತಕರ್ಣಾಟಕ, ಯತಿಗಳ ಬಗ್ಗೆ ಪ್ರತ್ಯೇಕ ಚರ್ಚೆಯಿದೆ. ಪ್ರತಿಯೊಂದು ಛಂದೋಗ್ರಂಥವನ್ನು ಬಿಡಿಬಿಡಿಯಾಗಿ ವಸ್ತು, ಆಕರ, ವೈಶಿಷ್ಟ್ಯಗಳ ಹಿನ್ನೆಲೆಯಲ್ಲಿ ಪರಿಶೀಲಿಸಿದೆ. 17 ಅನುಬಂಧಗಳಿವೆ. ವರ್ಣ, ಮಾತ್ರಾ ಮತ್ತು ಅಂಶವೃತ್ತಗಳ ಒಂದು ವ್ಯಾಪಕ ಪಟ್ಟಿಯಿದೆ. ಕನ್ನಡ ಸಾಹಿತ್ಯದಲ್ಲಿ ಬಳಕೆಯಾಗಿರುವ ರಗಳೆ ಹಾಗೂ ವಿವಿಧ ವೃತ್ತಗಳ ಸುದೀರ್ಘ ಪಟ್ಟಿ ಮತ್ತು ವೃತ್ತ-ಪದ ಸೂಚಿ ತುಂಬ ಉಪಯುಕ್ತವಾಗಿದೆ. ಈ ಕೃತಿಯ ವಿಶೇಷತೆಗೆ ಇದೂ ಒಂದು ಕಾರಣ.

37 ಹಸ್ತಪ್ರತಿಗಳನ್ನು ಪರಿಶೀಲಿಸಿ ಸರ್ವಪ್ರತಿ ಸವಿಮರ್ಶೆ ಪರಿಷ್ಕರಣ ವಾಗಿ ಸಿದ್ಧಪಡಿಸಿದ್ದು 'ಶಬ್ದಮಣಿದರ್ಪಣ' ಎಂಟು ಗುಂಪುಗಳಾಗಿ ಹಸ್ತಪ್ರತಿ ಗಳನ್ನು ವಿಂಗಡಿಸಿಕೊಂಡು ಸಂಪಾದನೆ ಕಾರ್ಯ ಜರುಗಿಸಿದೆ. ಸೂತ್ರ, ವೃತ್ತಿ, ವಿಚಾರ, ವಿಶೇಷಸೂಚನೆ ಎಂಬ ಹಂತಗಳಲ್ಲಿ ಪಠ್ಯ ಸಂಪಾದಿತವಾಗಿದೆ. ಪ್ರಾಚೀನ ಪಾಠ ಸಂಪ್ರದಾಯವನ್ನು ಪತ್ತೆಹಚ್ಚಿರುವುದೂ ಇಲ್ಲಿಯ ಒಂದು ವೈಶಿಷ್ಟ್ಯ. ಪದಚ್ಛೇದನ ಸೂತ್ರ ನಿರೂಪಣೆ, ಮಗ್ಗುಲಲ್ಲಿ ಸೂತ್ರಸಾರ ಸೂಚನೆ ವಿದ್ಯಾರ್ಥಿಗಳಿಗೆ ಉಪಯುಕ್ತ. 5 ಅನುಬಂಧಗಳಲ್ಲಿ ಪರಿಭಾಷೆ ಪ್ರಕ್ರಿಯೆಗಳ ಅಕಾರಾದಿ ಹಾಗೂ ಸಮುಚ್ಚಯ ವಾಕ್ಯ ವಿವರ ತುಂಬ ವಿಶಿಷ್ಟವಾಗಿದೆ. ಇತರ ಪರಿಷ್ಕರಣಗಳಿಗಿಂತ ಇದು ಭಿನ್ನ ಹಾಗೂ ವಿಶಿಷ್ಟ.

**ಕಾವ್ಯ, ಅನುವಾದ :** "ನನಗೆ ತೀರ ಚಿಕ್ಕಂದಿನಲ್ಲಿಯೇ ಸೃಜನಾತ್ಮಕ ಶಕ್ತಿ ಇತ್ತು. ಸಿದ್ಧಗಂಗೆಯಲ್ಲಿ ಓದುವಾಗಿನ ಘಟನೆ. ಒಂದು ಮಲ್ಲಿಗೆಯ ಗಿಡದ ತುಂಬ ಹೂವುಗಳು ; ಇಷ್ಟು ಚೆಲುವಾದ ಹೂವುಗಳು ಸ್ವಲ್ಪ ಹೊತ್ತಿಗೆ ಬಾಡಿಹೋಗುವುದನ್ನೂ ನೆನೆದಾಗ ನನ್ನಲ್ಲಿ ಕವಿತೆ ಹುಟ್ಟಿಕೊಂಡಿತು..... ಗುಪ್ತಗಾಮಿನಿಯಾಗಿದ್ದ ಕವಿತಾಶಕ್ತಿ ವೃತ್ತಿಯಿಂದ ನಿವೃತ್ತನಾದ ಬಳಿಕ ಹೊರಹೊಮ್ಮಿತು" ಎಂದು ತಮ್ಮ ಕಾವ್ಯರಚನೆಯ ಬಗ್ಗೆ ಬಸವರಾಜು ಹೇಳಿಕೊಂಡಿದ್ದಾರೆ. ಅವರು 1991ರಿಂದ ಹೆಚ್ಚು ಕಡಿಮೆ ತಮ್ಮ ಎಪ್ಪತ್ತರ ಇಳಿವಯಸ್ಸಿನಲ್ಲಿ ಕವಿತೆ ಬರೆಯಲಾರಂಭಿಸಿದರು. 338 ಕವಿತೆಗಳ 'ಠಾಣಾಂತರ' ಸಂಕಲನವನ್ನು ಪ್ರಕಟಿಸಿದರು. ತಾವು ಅಭ್ಯಾಸ ಮಾಡಿರುವ ವಚನ ಸಾಹಿತ್ಯದ ಹಿನ್ನೆಲೆಯಲ್ಲಿ ಸರಳವೂ ಸುಲಭವೂ ಆದ ಅಭಿವ್ಯಕ್ತಿಯ ಕವಿತೆ ರಚಿಸಿದರು. ಪಾರದರ್ಶಕ ಶೈಲಿಯ, ಮುಕ್ತ ಛಂದದ, ಅನಿಯತಲಯದ ಇವು ಮುಕ್ತ ಕವಿತೆಗಳು. ಕನ್ನಡದ ಯಾವುದೇ ಸಾಹಿತ್ಯದ ಚಳವಳಿಗೆ ತಮ್ಮನ್ನು ಒಗ್ಗಿಸಿ ಕೊಳ್ಳದ ಬಸವರಾಜು ಜೀವನ ಪ್ರೀತಿಯ, ಪ್ರಗತಿಪರ ಕವಿತೆ ಬರೆದಿದ್ದಾರೆ. ಕವಿ, ಕುಕವಿ, ಕಾನು, ಪ್ರೇಮ, ಸಂಸಾರ, ದಾರಿದ್ರ್ಯ, ಅಸಮಾನತೆ, ಪ್ರಕೃತಿ, ಸಮಾಜ ಮುಂತಾದ ನೂರಾರು ವಿಷಯಗಳಿಗೆ ಸಂಗತಿಗಳಿಗೆ ಪ್ರತಿಕ್ರಿಯೆಯಾಗಿ ಚಿಮ್ಮಿರುವ ಕವಿತೆಗಳು ಇವು ಎಷ್ಟೋ ಬಾರಿ ಪರಿಣಾಮಕಾರಿಯಾದ ವ್ಯಂಗ್ಯದಿಂದ ಕವಿತೆ ಚುರುಕೆನಿಸುತ್ತದೆ. "ಗಂಡ-ಹೆಂಡಿರ ವಿರಸವನ್ನು ವಿಶ್ವಸಂಸ್ಥೆಯೂ ಬಗೆಹರಿಸಲಾರದು"(ಪ.133) "ವಾದಕ್ಕೆ ಪ್ರತಿವಾದವಿದೆಯೇ ಹೊರತು ತರ್ಕವೆಂಬುವೆಲ್ಲಿಯೂ ಇಲ್ಲ" (ಪ.138) "ಬದುಕುವುದೇ ಒಂದು ಪವಾಡವಾಗಿರುವಾಗ ಉಂಡು ತೇಗಿದವನೇ ಪವಾಡಪುರುಷ" (ಪ.171) ಪರಿಣಾಮಕಾರಿಯಾಗಿವೆ.

ಈ ಸಂಕಲನದಿಂದ ಒಂದು ಪದ್ಯ:

ಮರ ಮರದಡಿಯಲ್ಲೂ
ಸುರಿದ ಹೂವಿನ ಹಾಸಿಗೆಯ ಮೇಲೆ
ಹೊರಳುತ್ತಿದ್ದಾನೆ

ಸೆಖೆಗೆ ಸೊರಗಿದ
ಹಕ್ಕಿಗಳ ಕ್ಷೀಣಸ್ವರದಿಂದ
ನರಳುತ್ತಿದ್ದಾನೆ
ಹಚ್ಚ ಹಸಿರುಟ್ಟು
ನೀನು
ಬರುವುದಿನ್ನೆಂದು ವಾಸಂತಿ?

1999ರಲ್ಲಿ ಬಸವರಾಜು ಪ್ರಕಟಿಸಿದ 1278 ಕವಿತೆಗಳ ಇನ್ನೊಂದು ಸಂಕಲನ 'ಜಾಲರಿ'. "ಕವಿತೆ ಒಂದು ಅವಾರ್ಯ ಆತ್ಮವೇದನೆ"ಯ ಪರಾರ್ಥ ನಿವೇದನೆ. ಅದು ಹೆಣ್ಣಿಗೆ ಗಂಡಿನಷ್ಟೇ, ಗಂಡಿಗೆ ಹೆಣ್ಣಿನಷ್ಟೆ ಹಿತಕರವಾಗಿ ವ್ಯಾಮೋಹಕವಾದ ವಸ್ತು. ಅಂಥದೊಂದು ಭಾವವಿದ್ದಾಗ ಮಾತ್ರ ಅದು ಉದ್ಭವಿಸಬಲ್ಲದೇ ಹೊರತು ಗಣಿತ ಕಾಗುಣಿತದಿಂದಲ್ಲವೆಂಬುದು ನನ್ನ ಸ್ವಂತ ಅನುಭವ" ಎನ್ನುವುದು ಬಸವರಾಜು ಅವರ ಮಾತು. ಮತ್ತೆ ಇಲ್ಲಿಯೂ ನೇರತೆ, ಸರಳತೆ, ಪಾರದರ್ಶಕತೆಗಳಿಂದ ಕವನ ಕಟ್ಟಿ ಅಚ್ಚರಿಗೊಳಿಸುತ್ತಾರೆ. ಸಾಮಾನ್ಯರ ನೋವು, ಜಗದ ದುಃಖ, ಸಮಾಜದ ಕೆಡುಕುಗಳಿಗೆ ಬಸವರಾಜು ಸ್ಪಂದಿಸುತ್ತಾರೆ. ಮಾನವತಾವಾದವನ್ನು ಎತ್ತಿ ಹಿಡಿಯುತ್ತಾರೆ. ಈ ಕವನಗಳಲ್ಲಿ ಸಾತ್ವಿಕ ಕ್ರೋಧವಿದೆ, ಕುದಿತವಿದೆ ; ಆದರೆ ಪದದ ಮತ್ತು ಪದ್ಯದ ಹದ ಮಾತ್ರ ತಪ್ಪುವುದಿಲ್ಲ. "ಗೆದ್ದವನ ಮೇಲೆ ಗೆಲ್ಲುವುದು ಸಾಹಸ, ಸೋತವನ ಮೇಲೆಯೆ ಮರಳಿ ಮರಳಿ ಗೆಲ್ಲುವುದು ಅಪಹಾಸ" (ಪ. 19) "ಕಸ ಕಸ ! ಒಬ್ಬರ ಕಸ ಇನ್ನೊಬ್ಬರ ಮನೆಯ ಮುಂದೆ, ಎಲ್ಲೆಲ್ಲೂ ಕಸ! ತಮ್ಮ ಕಸವನ್ನು ತಮ್ಮ ಹಿತ್ತಿಲಲ್ಲೇ ಗೊಬ್ಬರ ಮಾಡದವರಿಂದ ಎಲ್ಲಲ್ಲೂ ಕಸ! (ಪ. 104) "ಭೂಮಿಯನ್ನೇ ಭೂರ್ಜಪತ್ರ ಮಾಡಿ ಹಿಮಾಲಯವನ್ನೇ ಲೆಕ್ಕಣಿ ಮಾಡಿ ಕಡಲೇಳನ್ನೂ ಮಸಿಮಾಡಿ ಬರೆದರೂ ಮುಗಿಸಲಾಗುವುದಿಲ್ಲ - ಬೆಣೆ ಕಿತ್ತು ಸಿಕ್ಕಿಕೊಂಡ ಮನುಷ್ಯನೆಂಬ ಮಂಗನ ಕಥೆಯ" (ಪ. 115)– ಇವು ಈ ಸಂಕಲನದ ಕೆಲವು ನಿದರ್ಶನಗಳು.

ತಮ್ಮ ವೃತ್ತಿಜೀವನದ ಆರಂಭದಿಂದಲೂ ಬಸವರಾಜು ಸಂಸ್ಕೃತದ ಕೆಲವು ಉತ್ಕೃಷ್ಟ ಕೃತಿಗಳನ್ನು ಕನ್ನಡಿಗರಿಗೆ ಪರಿಚಯಿಸಿಕೊಡುತ್ತ ಬಂದಿದ್ದಾರೆ. ಉತ್ತಮ ಸಂಸ್ಕೃತ ನಾಟಕಗಳ ಅತ್ಯುತ್ತಮ ಅಂಕಗಳ ಕನ್ನಡ ಅನುವಾದ ಅವರ 'ನಾಟಕಾಮೃತ ಬಿಂದು'ಗಳು. ಈ ಬಗೆಯ ಅವರ ಚರಮಸಿದ್ಧಿಯ ಎರಡು ಕೃತಿಗಳು ಅಶ್ವಘೋಷನ 'ಬುದ್ಧಚರಿತೆ' ಮತ್ತು 'ಸೌಂದರನಂದ'ದ ಅನುವಾದಗಳು. 14 ಸರ್ಗಗಳ 'ಬುದ್ಧಚರಿತೆ'ಯನ್ನು ಅಲ್ಲಿಗೇ ನಿಲ್ಲಿಸದೆ ಇ.ಎಚ್. ಜಾನ್‌ಸ್ಟನ್ನರ ಇಂಗ್ಲಿಷ್ ಮೂಲ ಅನುಸರಿಸಿ ಉಳಿದ ಹದಿನಾಲ್ಕು ಸರ್ಗಗಳನ್ನು ಕನ್ನಡಿಸಿರುವುದು, ಆ ಮೂಲಕ ಸಮಗ್ರಾನುವಾದ ಕನ್ನಡಿಗರಿಗೆ ನೀಡಿರುವುದು ಈ ಪ್ರಯತ್ನದ ವಿಕ್ರಮ. ಮೊದಲ ಹದಿನಾಲ್ಕು ಸರ್ಗಗಳನ್ನು ವಚನಲಯ ಶೈಲಿಯಲ್ಲಿಯೂ, ಕೊನೆಯ ಹದಿನಾಲ್ಕನ್ನೂ ನೇರ ಗದ್ಯದಲ್ಲೂ ಭಾಷಾಂತರಿಸಿದೆ. ಹೀಗೆಯೇ ಸುಂದರಿ ಮತ್ತು ನಂದರ ಹೆಸರು ಸೇರಿ ಬಂದಿರುವ 18ಸರ್ಗಗಳ 'ಸೌಂದರನಂದ'ವನ್ನೂ ವಚನ ಗದ್ಯಶೈಲಿಯಲ್ಲಿಯೇ ಕನ್ನಡಿಸಿದೆ. ಈ ಎರಡೂ ಕೃತಿಗಳ ಬಗ್ಗೆ ಕೆ.ಜಿ. ನಾಗರಾಜಪ್ಪ ಅವರ ಈ ಕೆಳಗಿನ ಮಾತುಗಳು ಸಮರ್ಥನೀಯವಾಗಿವೆ: ಬುದ್ಧಚರಿತೆ ಮತ್ತು ಸೌಂದರ ನಂದ - ಅಶ್ವಘೋಷನ ಎರಡೂ ಕೃತಿಗಳನ್ನು ಗದ್ಯಾತ್ಮಕ ವಚನ ಕಾವ್ಯ ಸ್ವರೂಪದಲ್ಲಿ ಡಾ. ಎಲ್. ಬಸವರಾಜು ಅವರು ಭಾಷಾಂತರಿಸಿದ್ದಾರೆ. ಅವರ ಭಾಷಾಂತರದಲ್ಲಿ ವಚನಗಳ ಪ್ರಭಾವವನ್ನು ಗುರುತಿಸಬಹುದು..... ಬುದ್ಧ ಚರಿತೆ ಮತ್ತು ಸೌಂದರನಂದ ಗದ್ಯಾನುವಾದದಲ್ಲಿ ಬಸವರಾಜು ಅವರು ನಡೆಸಿರುವ ಪ್ರಯೋಗಗಳು ಗಮನಾರ್ಹವಾದವು ಮತ್ತು ಅಧ್ಯಯನ ಯೋಗ್ಯವಾದವು. ಅಂಥ ಪ್ರಯೋಗಗಳು ಕನ್ನಡ ಸಾಹಿತ್ಯದಲ್ಲಿಯೇ ಹೊಸ ದಾಖಲೆಯಾಗುವುದರಲ್ಲಿ ಸಂಶಯವಿಲ್ಲ. ಈ ಎರಡೂ ಕಾವ್ಯಗಳ ಭಾಷಾಂತರದಲ್ಲಿ ಮೊದಲಿಗೆ ಗುರುತಿಸಬಹುದಾದದ್ದು ಗದ್ಯದ ಲಯಗಳು, ಅದರಲ್ಲಿಯೂ ವಚನ ಗದ್ಯಲಯಗಳು. ಗದ್ಯದ ವಾಕ್ಯಗಳನ್ನೇ ಮುರಿದು, ವಚನ ಛಾಯೆಯ ಹಿನ್ನೆಲೆಯಲ್ಲಿ ಮತ್ತೆ ಆಧುನಿಕ ಗದ್ಯದಲ್ಲಿ ವಚನ ಸ್ವರೂಪದ ಗದ್ಯಕಟ್ಟಿ, ಆ ಗದ್ಯಕ್ಕೊಂದು ಕಾವ್ಯಸ್ವರೂಪ ದೊರಕಿಸಿರು ವುದರಿಂದಲೇ, ಭಾಷಾಂತರವನ್ನು ಗದ್ಯಾತ್ಮಕ ವಚನಕಾವ್ಯಸ್ವರೂಪ ಎಂದು ಕರೆದಿರುವುದು. ಮೂಲಕೃತಿಗೆ ಭಂಗ ಬರದಿರಲೆಂದೂ, ಶ್ರೀ ಸಾಮಾನ್ಯರಿಗೂ ಸುಲಭವಾಗಿ ಗ್ರಹಿಕೆಯಾಗಲೆಂದೂ ನಾಟಕೀಯತೆ ತರುವ ಸಮಪಾದಗಳು, ಹೆಚ್ಚು ವಾಚ್ಯವಾಗಿಸುವ ತಲೆಬರಹಗಳು ಮುಂತಾದ ಪ್ರಯೋಗಗಳು ಚರ್ಚೆಗೆ ಚಾಲನೆ ಕೊಡುತ್ತವೆ". ಇದರೊಂದಿಗೆ ಎರಡರಲ್ಲೂ ಅಧ್ಯಯನಕ್ಕೆ ನೆರವಾಗುವ ಪೂರಕ ಸಾಮಗ್ರಿ, ಅಡಿಟಿಪ್ಪಣಿ, ಗಮನಾರ್ಹ ಪದಸೂಚಿ ಬೌದ್ಧ ಪರಿಭಾಷಾ ವಿವರ ಸೇರಿಸಿದ್ದಾರೆ. ಎರಡರಲ್ಲೂ ಅಲ್ಲಲ್ಲಿ ಸಂವಾದಿಯಾದ ಬಸವಣ್ಣನವರ ವಚನಗಳನ್ನು ಕೊಟ್ಟಿದೆ. ಬುದ್ಧ-ಬಸವರ ಚಿಂತನಪ್ರಣಾಲಿಯ ಸಾಮ್ಯತೆ ಅರಿಯಲು ಇದು ನೆರವಾಗುತ್ತದೆ. 'ಬುದ್ಧಚರಿತೆ'ಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಅನುವಾದ ಪ್ರಶಸ್ತಿ ಸಂದಿದೆ.

**ಸಂಶೋಧನ ಬರಹ, ಸರಳ ಗದ್ಯಾನುವಾದ :** ಬಸವರಾಜು ವಿವಿಧ ಪತ್ರಿಕೆಗಳಲ್ಲಿ ತಮ್ಮ ಸಂಶೋಧನ ಬರೆಹಗಳನ್ನು ನಿರಂತರವಾಗಿ ಪ್ರಕಟಿಸುವ ಪ್ರಯತ್ನಮಾಡಿಲ್ಲ. ತಮ್ಮ ಕೃತಿಗಳ ಉಪೋದ್ಘಾತಗಳಲ್ಲೇ ಹೇಳಬೇಕಾದ ವಿಚಾರಗಳನ್ನೂ, ಪ್ರಕಟಿಸಬೇಕಾದ ಶೋಧನೆಗಳನ್ನು ವ್ಯಕ್ತಪಡಿಸಿದ್ದಾರೆ. ವಿರಳವಾಗಿ ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿ ತಮ್ಮ ಅಭಿಪ್ರಾಯ ಮಂಡಿಸಿದ್ದಾರೆ. ತೋಂಟದ ಸಿದ್ಧಲಿಂಗನ ಕಾಲವಿಚಾರದ ಬಗ್ಗೆ ಮರುಪರಿ ಶೀಲನೆಯ ದೃಷ್ಟಿ ಕೊಟ್ಟವರೇ ಅವರು. ಪಂಪನು ತನ್ನನ್ನು ಆದಿಪುರಾಣ ಹಾಗೂ ವಿಕ್ರಮಾರ್ಜುನ ವಿಜಯಗಳಲ್ಲಿ ಬೇರೆಬೇರೆ ಕಡೆ ಸಮೀಕರಿಸಿ ಕೊಂಡಿರುವ ಬಗ್ಗೆ, ವ್ಯಕ್ತಗೊಳಿಸಿಕೊಂಡಿರುವುದರ ಬಗ್ಗೆ ಪ್ರಥಮವಾಗಿ ಪ್ರಸ್ತಾಪಿಸಿದವರು ಅವರೇ. ತಿರುಮಲಾರ್ಯ ಮತ್ತು ಚಿಕ್ಕದೇವರಾಜ ಒಡೆಯರು ಎಂಬ ಮೂರು ಉಪನ್ಯಾಸಗಳ ಹೊತ್ತಗೆಯಲ್ಲಿ ಮೊತ್ತಮೊದಲ ಬಾರಿಗೆ ಹಲವಾರು ಹೊಸ ವಿಷಯಗಳನ್ನು ಹೇಳಿದ್ದಾರೆ. ಇಂಥ ಬರೆಹಗಳು ಸಂಖ್ಯೆಯಲ್ಲಿ ಕಡಿಮೆಯಾದರೂ ಬೆಲೆಬಾಳುವಂಥವು.

ಮೊದಲಿನಿಂದಲೂ ಸಾಮಾನ್ಯರನ್ನು ಗಮನದಲ್ಲಿಟ್ಟುಕೊಂಡು ಬಸವರಾಜು ಸಾಹಿತ್ಯದ ಕೆಲಸ ಮಾಡಿದ್ದಾರೆ. ಭಾಸನ ರಾಮಾಯಣ ನಾಟಕ ಗಳ ಹಾಗೂ ಭಾರತ ರೂಪಕಗಳ ಸರಳ ಗದ್ಯಾನುವಾದವನ್ನು ಬಹಳ ಹಿಂದೆಯೇ ಪ್ರಕಟಿಸಿದರು. ಆರ್ಷೇಯ ಕೃತಿಗಳನ್ನು ಶ್ರೀಸಾಮಾನ್ಯನಿಗೆ, ಅಭ್ಯಾಸಿಗೆ, ವಿದ್ಯಾರ್ಥಿಗೆ ಮುಟ್ಟಿಸುವ ನಿರಂತರ ಪ್ರಯತ್ನ ಮಾಡಿದ್ದಾರೆ. ಗೂಳೂರು ಸಿದ್ಧವೀರಣ್ಣಾರ್ಯನ ಶೂನ್ಯಸಂಪಾದನೆಯನ್ನು ಸರಳ ಹಾಗೂ ನೇರ ಗದ್ಯಾನುವಾದ ಮಾಡಿದ್ದಾರೆ. ನಿಜಗುಣ ಶಿವಯೋಗಿಗಳ ಸಮಗ್ರಕೃತಿಗಳನ್ನು, ರಾಘವಾಂಕನ ಸಿದ್ಧರಾಮ ಚಾರಿತ್ರವನ್ನು, ಹರಿಶ್ಚಂದ್ರ ಕಾವ್ಯವನ್ನು ಹೀಗೆಯೇ ತಂದಿದ್ದಾರೆ. ದೇವರ ದಾಸಿಮಯ್ಯನ ಹಾಗೂ ಬಸವಣ್ಣನವರ ವಚನಗಳಿಗೆ ತುಂಬ ಮೌಲಿಕವಾದ ಚಿಂತನರೂಪದ ವ್ಯಾಖ್ಯಾನ ನೀಡಿದ್ದಾರೆ. ಮಾಯಿ ದೇವನ ಶಿವಾನುಭವ ಸೂತ್ರವನ್ನು ಹೀಗೆಯೇ ತಂದಿದ್ದಾರೆ.

ಈ ಕೃತಿಗಳದು ಓದಿದೊಡನೆಯೇ ಅರ್ಥವಾಗುವ ಸರಳ ಧಾಟಿ. ಈ ಎಲ್ಲಾ ಪ್ರಯತ್ನಗಳೂ ಪಾಂಡಿತ್ಯವನ್ನು ಪಾಮರನಿಗೆ ಸೋಕಿಸುವ ಪ್ರಯತ್ನ ಗಳು. ಒಟ್ಟಿನಲ್ಲಿ ತಮ್ಮ ಪಾಂಡಿತ್ಯ ಪರಿಶ್ರಮಗಳಿಂದ, ತಲಸ್ಪರ್ಶಿ ಅಧ್ಯಯನ ಮತ್ತು ವಿಶ್ಲೇಷಣೆಗಳಿಂದ ಕನ್ನಡ ವಿದ್ವತ್‌ಲೋಕದಲ್ಲಿ ಬಸವರಾಜು ಅಸದೃಶ ಸ್ಥಾನ ಗಳಿಸಿಕೊಂಡಿದ್ದಾರೆ.

"ನನ್ನ ಇದುವರೆಗಿನ ಪ್ರಶಸ್ತಿಗಳೆಲ್ಲ ಪ್ರಯತ್ನಿಸದೇ ಬಂದಿರುವಂಥವು. ಒಬ್ಬ ಮನುಷ್ಯನ ಘನತೆಯನ್ನು ಪ್ರಶಸ್ತಿಯಿಂದಲೇ ಅಳೆಯಲು ಹೋಗ ಬಾರದು" ಎನ್ನುವ ಎಲ್. ಬಸವರಾಜು ಅವರಿಗೆ ಹಲವಾರು ಗೌರವಗಳು ಸಂದಾಯವಾಗಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಹಬ್ಬದ ಪುರಸ್ಕಾರ, 'ಅಲ್ಲಮನ ವಚನ ಚಂದ್ರಿಕೆ' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ (1977). ಕರ್ನಾಟಕ ಸರ್ಕಾರದ ಕನ್ನಡ ರಾಜ್ಯೋತ್ಸವ ಪ್ರಶಸ್ತಿ (1994), ಚಿದಾನಂದ ಪ್ರಶಸ್ತಿ (1996). ಸಂ. ಶಿ. ಭೂಸನೂರಮಠ ಪ್ರತಿಷ್ಠಾನ ಪ್ರಶಸ್ತಿ ಉಲ್ಲೇಖಿಸ ಬಹುದಾದ ಕೆಲವು. ಈ ಎಲ್ಲಕ್ಕೂ ಕಿರೀಟ ತೊಡಿಸಿದಂತೆ ಕರ್ನಾಟಕ ಸರ್ಕಾರದ ಪಂಪಪ್ರಶಸ್ತಿ (2000) ಹಾಗೂ 'ಬುದ್ಧ ಚರಿತ' ಅನುವಾದಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಅನುವಾದ ಪ್ರಶಸ್ತಿ (2001) ಲಭಿಸಿವೆ. ಇವುಗಳಲ್ಲಿ ಅವರಿಗೆ ಕೆಲವು ದೊರೆತದ್ದು ತೀರತಡವಾಗಿ. ಹೀಗೆ ಹೇಳುವು ದನ್ನು ಬಸವರಾಜು ಒಪ್ಪುವುದಿಲ್ಲ. "ಕೆಲವೊಮ್ಮೆ ಪ್ರಶಸ್ತಿ ಪ್ರಕಟವಾದ ಸಮಯದಲ್ಲಿ ತಡವಾಗಿ ಸಿಕ್ಕಿತು ಎಂಬ ಮಾತು ಹುಟ್ಟಿಕೊಳ್ಳುವುದುಂಟು. "ನನಗೆ ಇಂಥ ಮಾತು ಹಿಡಿಸದು. ತಡವಾಯಿತು ಎನ್ನುವುದಕ್ಕೆ ನಾನೇನು ಕಾದು ಕುಳಿತಿದ್ದನೆ?" ಎಂದು ನಗೆ ಚೆಲ್ಲುತ್ತಲೆ ಚುಚ್ಚುತ್ತಾರೆ. ಇದು ನಿರಪೇಕ್ಷ ವಿದ್ವತ್‌ಪ್ರೇಮಿ. ನಿಷ್ಕಾಮಕರ್ಮಿ ಮಾತ್ರ ಹೇಳಬಹುದಾದ ಮಾತು; ನಮ್ಮ ಸಾಹಿತಿಗಳು ಅರ್ಥೈಸಿಕೊಳ್ಳಬೇಕಾದ ಮಾತು.

❑

## ಡಾ. ಆರ್.ಸಿ.ಹಿರೇಮಠ

**ಪ್ರೊ. ಆರ್. ರಾಚಪ್ಪ**

ಡಾ.ಆರ್.ಸಿ. ಹಿರೇಮಠ ಅವರ ಪೂರ್ಣ ಹೆಸರು ರುದ್ರಯ್ಯ ಚಂದ್ರಯ್ಯ ಹಿರೇಮಠ ಎಂದು. ಅವರ ಜನ್ಮದಿನ ಜನವರಿ 15, 1920. ತಂದೆ ಚಂದ್ರಯ್ಯನವರು, ತಾಯಿ ವೀರಮ್ಮನವರು, ರಾಚಯ್ಯ ಅಣ್ಣ, ವೀರಯ್ಯ, ಪಂಚಾಕ್ಷರಿ ತಮ್ಮಂದಿರು. ಏಕೈಕ ಸೋದರಿ ವೀರಮ್ಮ. ಸಾಮಾನ್ಯ ಕುಟುಂಬದಲ್ಲಿ ಜನಿಸಿದ ಶ್ರೀಯುತರು ಸ್ವಪ್ರತಿಭೆಯಿಂದ ಹಂತಹಂತವಾಗಿ ಮೇಲೇರಿದರು. ಬಡತನದ ಬೇಗೆಯಲ್ಲಿ ಬೆಂದು ಬಸವಳಿದು ಹೋಗಿದ್ದ ತಾಯಿ ವೀರಮ್ಮನವರು ಮಕ್ಕಳೊಂದಿಗೆ ಜೀವನ ಮುಗಿಸಲು ಹವಣಿಸಿದ್ದಾಗ ಆಲೂರಿನ ಸಂಗಮ್ಮ ಎಂಬ ಮುದುಕಿ "ಹುಚ್ಚೀ, ಕೆರೆಬಾವಿಯ ಪಾಲಾಗಲು ಹೊರಟೆಯಾ? ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೇ? ಈ ವಿಚಾರ ತಲೆಯಿಂದ ತೆಗೆದು ಹಾಕು, ತೆಗೆದುಕೊ ಈ ಹರಿವೆಯನ್ನು. ಎರಡು ಜೋಳಿಗೆ ಕಟ್ಟು. ಎರಡೂ ಮಕ್ಕಳ ಕೈಗೆ ಜೋಳಿಗೆ ಕೊಟ್ಟು ಕಳುಹಿಸು... ಸಾಯುವ ವಿಚಾರ ಬಿಟ್ಟು ಬದುಕುವ ದಾರಿ ಹಿಡಿ. ನೀವು ಹೇಗೂ ಜಂಗಮರು. ಭಿಕ್ಷಾವೃತ್ತಿ ನಿಮ್ಮ ಹಕ್ಕು" ಎಂದು ಹೇಳಿ ಬದುಕುವ ದಾರಿ ತೋರಿದಾಗ ಸಂಗವ್ವನ ಮಾತುಗಳಂತೆ ಅಣ್ಣ ತಮ್ಮಂದಿರಿಬ್ಬರೂ ಭಿಕ್ಷಾಟನೆ ಲೀಲೆ ಆರಂಭಿಸಿದರು. ಅಣ್ಣ ರಾಚಯ್ಯ, ತಮ್ಮ ರುದ್ರಯ್ಯ- ಹೀಗೆ ಭಿಕ್ಷಾಟನೆ ಯಿಂದಲೆ ಅಧ್ಯಯನದಲ್ಲಿಯೂ ಆಸಕ್ತಿಯನ್ನು ತಳೆದಿದ್ದ ಆರ್.ಸಿ.ಹಿರೇ ಮಠರು ಗಣಿತದಲ್ಲಿ ಬಹಳ ಚುರುಕು ಇದ್ದರು. ಇವರ ಚಾಲಾಕಿತನವನ್ನು ಕಂಡು ತಿಳಿದ ಕೆಲವು ಉಪಾಧ್ಯಾಯರು ಪ್ರೋತ್ಸಾಹಿಸಿ ಓದಲು ಅನುಕೂಲ ಮಾಡಿಕೊಟ್ಟರು.

ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ ಕುರುಡಗಿಯಲ್ಲಿ ಮುಂದಿನ ಓದಿಗೆ ಅನುಕೂಲವಿಲ್ಲದಾಗಲು ದೂರದ ಗದಗಿಗೆ ಬಂದರು. ಗದಗಿನ ಬಂಗಾರ ಶೆಟ್ಟರ ಪೆಟ್ರೋಲ್ ಬಂಕಿನಲ್ಲಿ ತಾತ್ಕಾಲಿಕ ಕೆಲಸ ಸಿಕ್ಕಿತು. ಒಂದು ದಿವಸ ಪೆಟ್ರೋಲ್ ಬಂಕ್ ಬಳಿಯಿದ್ದ ಪ್ರಾಥಮಿಕ ಶಾಲೆಯ ಬಳಿ ಹೋಗಿದ್ದ ರುದ್ರಯ್ಯನಿಗೆ ಅಲ್ಲಿ ನಡೆದ ಒಂದು ಘಟನೆ ಅನುಕೂಲಕಾರಿಯಾಯಿತು. ಆ ಶಾಲೆಯಲ್ಲಿ ಶಾಲಾಧಿಕಾರಿಗಳು ಆರನೇ ವರ್ಗದ ತಪಾಸಣೆ ನಡೆಸಿದ್ದರು. ಪ್ರಶ್ನೆಮಾಡುತ್ತಾ 'ವೇಣಿಸಂಹಾರ' ಎಂದರೇನು ಎಂದು ವಿದ್ಯಾರ್ಥಿಗಳನ್ನು ಪ್ರಶ್ನಿಸಿದರು. ಆದರೆ ವಿದ್ಯಾರ್ಥಿಗಳಲ್ಲಿ ಯಾರೊಬ್ಬರೂ ಈ ಪ್ರಶ್ನೆಗೆ ಉತ್ತರ ಹೇಳಲಾಗಲಿಲ್ಲ. ಆಗ ಅಲ್ಲಿದ್ದ ರುದ್ರಯ್ಯನವರು ತಮಗೆ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರು ಕಲಿಸಿಕೊಟ್ಟದ್ದಂತೆ ವೇಣಿ+ಸಂಹಾರ ಎಂದು ಬಿಡಿಸಿ ಅರ್ಥವನ್ನು ವಿವರಿಸಿದರು. ಅಲ್ಲಿನ ಶಿಕ್ಷಕರು ಹಾಗೂ ಅಧಿಕಾರಿಗಳು ಈ ಘಟನೆಯಿಂದ ಚಕಿತರಾದರು. ಈ ಘಟನೆ ಶಿಕ್ಷಕರ ಹಾಗೂ ಅಧಿಕಾರಿಗಳ ಗಮನ ಸೆಳೆವ ಘಟನೆಯಾಯಿತು. ಪ್ರಸಿದ್ಧ ಶಿಕ್ಷಕರಾಗಿದ್ದ ಶ್ರೀ ಕ.ಬ. ಅಂಗಡಿ ಯವರು ಹುಡುಗನ ಬಗೆಗೆ ಹೆಚ್ಚಿನ ಆಸಕ್ತಿ ತಳೆದರು. ತಮ್ಮ ಶಾಲೆಯಲ್ಲಿ ಓದಲು ಅವಕಾಶ ಮಾಡಿಕೊಡಲು ಮುಂದಾದರು. ಹುಡುಗನ ಚಾತುರ್ಯವನ್ನು ಕೇಳಿ ತಿಳಿದ ಪೆಟ್ರೋಲ್ ಬಂಕ್ ಮೇಲ್ವಿಚಾರಕರಾಗಿದ್ದ ಬ್ಯಾಡಗಿ ಶಿವಪ್ಪ ನವರು ರುದ್ರಯ್ಯನವರಿಗೆ ಶಾಲೆ ಕಲಿಯಲು ಅನುಕೂಲ ಮಾಡಿಕೊಟ್ಟರು. ಈ ಅಭ್ಯಾಸದ ವ್ಯವಸ್ಥೆ ಅವರ ಮುಂದಿನ ಶಿಕ್ಷಣಕ್ಕೆ ಭದ್ರಬುನಾದಿಯನ್ನು ಹಾಕಿತು. ಮನೆಯಲ್ಲಿ ಕಣ್ಣಿಲ್ಲದ ತಾಯಿ, ಒಬ್ಬ ತಂಗಿ ಮತ್ತು ತಮ್ಮನನ್ನು ಸಾಕುವ ಹೊಣೆಗಾರಿಕೆ ರುದ್ರಯ್ಯನವರ ಮೇಲೆ ಬಿದ್ದಿತು. ಧರ್ಮಕೋರಾನ್ನ

ಹಾಗೂ ಪೆಟ್ರೋಲ್ ಬಂಕ್ ಕೆಲಸ ನಿರ್ವಹಿಸುತ್ತಾ ತಮ್ಮ ಓದನ್ನು ಮುಂದುವರಿಸಿದರು. ಹೀಗೆ ಹೋರಾಡುತ್ತಾ ಶ್ರೀ ಅಂಗಡಿಯವರು ಹಾಗೂ ಸಿದ್ಧರಾಮಶೆಟ್ಟರ ಬೆಂಬಲ, ಶಿಸ್ತಿನ ಶಿಕ್ಷಣದ ನೆರವಿನಿಂದ 1934ರ ಮುಲ್ಕಿ ಪರೀಕ್ಷೆಯಲ್ಲಿ ಧಾರವಾಡ ಜಿಲ್ಲೆಗೆ ಪ್ರಥಮಸ್ಥಾನ ಪಡೆದು ಉತ್ತೀರ್ಣರಾದರು.

ಮುಲ್ಕಿ ಪರೀಕ್ಷೆಯಾದ ಮೇಲೆ ನೌಕರಿ ಹಿಡಿಯುವ ಬಯಕೆ ಕಾಡಿತು. ಆದರೆ ಬ್ಯಾಡಗಿ ಶಿವಪ್ಪನವರು ಇಂಗ್ಲೀಷ್ ಕಲಿಯಲು ಪ್ರೋತ್ಸಾಹಿಸಿ ತಾವೇ ಮುಂದಾಗಿ ಪಾಠ ಹೇಳಲು ಆರಂಭಿಸಿದರು. ಡಾ. ತುಮ್ಮಿನ ಕಟ್ಟಿಯವರು ಈ ಹುಡುಗನ ಬಗೆಗೆ ಆಸಕ್ತಿಯನ್ನು ತಳೆದು "ಈ ಹುಡುಗ ಹೈಸ್ಕೂಲಿಗೆ ಸೇರಲಿ, ಅವನ ಫೀ ವ್ಯವಸ್ಥೆ ನಾನು ಮಾಡುತ್ತೇನೆಂದು" ಹೇಳಿ ತಮ್ಮ ಕೆಮಿಕಲ್ ವರ್ಕ್ಸ್‌ನಲ್ಲಿ ದಿವಸವೂ ಮುಂಜಾನೆ ಎರಡು ಗಂಟೆಗಳ ಕಾಲ ಕೆಲಸ ಮಾಡಲು ಸೂಚಿಸಿದರು. ಈ ಕೆಲಸ ಮತ್ತು ಪ್ರೋತ್ಸಾಹದಿಂದ ರುದ್ರಯ್ಯ ಮುಂದಿನ ವಿದ್ಯಾಭ್ಯಾಸಕ್ಕೆ ಸಜ್ಜಾದರು.

ಹೈಸ್ಕೂಲ್ ಶಿಕ್ಷಣದ ಕೊನೆಯ ಹಂತಕ್ಕೆ ಬರುವ ವೇಳೆಗೆ ಗದಗಿನ ತೋಂಟದಾರ್ಯ ಮಠದ ಫ್ರೀ ಬೋರ್ಡಿಂಗ್‌ನಲ್ಲಿ ಪ್ರವೇಶ ದೊರಕಿ ಊಟದ ಸಮಸ್ಯೆ ಬಗೆಹರಿಯಿತು. ಆದರೂ ಕುರುಡಿ ತಾಯಿ, ತಂಗಿ, ತಮ್ಮಂದಿರ ಬಗೆಗೆ ಕಾಳಜಿ ಇದ್ದ ರುದ್ರಯ್ಯ ತನಗೆ ಸ್ಕಾಲರ್‌ಷಿಪ್ ರೂಪದಲ್ಲಿ ದೊರಕಿದ ೫ ರೂಗಳನ್ನು ಕುಟುಂಬ ನಿರ್ವಹಣೆಗೆ ಬಳಸಿದರು. 1939ರಲ್ಲಿ ಮ್ಯಾಟ್ರಿಕ್ ಪರೀಕ್ಷೆ ಕಟ್ಟಿ ಗಣಿತ ವಿಷಯದಲ್ಲಿ 100ಕ್ಕೆ 90 ಅಂಕಗಳನ್ನು ಗಳಿಸಿ ಕೇಂದ್ರದಲ್ಲಿ ಮೇಲು ಸ್ಥಾನಗಳಿಸಿ ತೇರ್ಗಡೆ ಹೊಂದಿದರು.

ಕರ್ನಾಟಕ ಕಾಲೇಜಿನಲ್ಲಿ ವಿಜ್ಞಾನ ವಿಭಾಗಕ್ಕೆ ಪ್ರವೇಶ ದೊರೆಯದೆ ಪ್ರೊ.ಆರ್.ವಿ. ಜಹಗೀರದಾರರು (ಶ್ರೀರಂಗ) ಆಸಕ್ತಿವಹಿಸಿ ಆರ್ಟ್ಸ್ ವಿಭಾಗಕ್ಕೆ ಸೇರಲು ಸೂಚಿಸಿ ಅಗತ್ಯ ನೆರವೂ ನೀಡಿದರು. ಆರ್ಟ್ಸ್ ಪರೀಕ್ಷೆಯಲ್ಲಿ ಪ್ರಪ್ರಥಮ ಸ್ಥಾನ ಪಡೆದು ಉತ್ತೀರ್ಣರಾದರು. ಅವರ ಪ್ರತಿಭೆಯನ್ನು ಗಮನಿಸಿದ ಡಾ.ಶಿ.ಚೆ.ನಂದೀಮಠ ಅವರು ತಮ್ಮಲ್ಲಿಗೆ ಕಳುಹಿಸಲು ಕರ್ನಾಟಕ ಕಾಲೇಜಿನ ಅಧ್ಯಾಪಕರಿಗೆ ಸೂಚಿಸಿದರು.

ಹೀಗೆ ಬಾಲ್ಯದಲ್ಲಿ ಜೀವನ ಹೋರಾಟದೊಂದಿಗೆ ವಿದ್ಯಾಭ್ಯಾಸದಲ್ಲಿ ಮುಂದುವರೆದು ಎಲ್ಲರ ಅಭಿಮಾನವನ್ನು ಗಳಿಸಿದ ಬಾಲಕ ರುದ್ರಯ್ಯನೇ ಮುಂದೆ ವಿದ್ವತ್ ಪ್ರಪಂಚದಲ್ಲಿ ಶಾಶ್ವತ ಹೆಸರನ್ನು, ಅಪಾರ ಕೀರ್ತಿಯನ್ನು ಗಳಿಸಿದ ಡಾ.ಆರ್.ಸಿ.ಹಿರೇಮಠ ಅವರು.

ಡಾ.ಎಸ್.ಸಿ. ನಂದೀಮಠ ಅವರ ಅಪೇಕ್ಷೆ ಹಿರೇಮಠ ಅವರನ್ನು ಬೆಳಗಾವಿ ಲಿಂಗರಾಜ ಕಾಲೇಜಿಗೆ ತಂದಿತು. ಅಲ್ಲಿ ಡಾ.ನಂದೀಮಠ ಅವರಲ್ಲದೆ ಡಾ.ಕೆ.ಆರ್. ಶ್ರೀನಿವಾಸ ಅಯ್ಯಂಗಾರ್, ಪ್ರೊ.ಶಿ.ಶಿ.ಬಸವನಾಳರು, ಪ್ರೊ.ಎಸ್.ಎಸ್. ಭೂಸನೂರುಮಠ, ಪ್ರೊ.ವಿ.ಜಿ.ಕುಲಕರ್ಣಿ ಮೊದಲಾದ ಗುರುವೃಂದದ ಮಾರ್ಗದರ್ಶನದಲ್ಲಿ ತಮ್ಮ ಜ್ಞಾನಕ್ಷಿತಿಜವನ್ನು ವಿಸ್ತರಿಸಿಕೊಂಡು ಕನ್ನಡ, ಸಂಸ್ಕೃತ, ಇಂಗ್ಲೀಷ್ ಸಾಹಿತ್ಯದಲ್ಲಿ ಸಾಕಷ್ಟು ಪರಿಣತಿ ಪಡೆದರು. ಮೂರು ವರ್ಷಗಳ ಅಧ್ಯಯನದಲ್ಲಿ ಪ್ರಥಮ ಸ್ಥಾನದಲ್ಲಿಯೇ ಇದ್ದು ಬಿ.ಎ. ಪರೀಕ್ಷೆಯನ್ನು ಪ್ರಶಸ್ತಿ ಸಹಿತ ಪ್ರಥಮಸ್ಥಾನ ಗಳಿಸಿ ಮುಗಿಸಿದರು. ಕನ್ನಡವನ್ನು ಪ್ರಧಾನ ವಿಷಯವಾಗಿ ಅಭ್ಯಾಸ ಮಾಡಿ ಮುಂಬಯಿ ವಿಶ್ವವಿದ್ಯಾಲಯದಲ್ಲಿ ಇಂಥ ಯಶಸ್ಸನ್ನು ಸಾಧಿಸಿದವರಲ್ಲಿ ಹಿರೇಮಠ ಅವರೇ ಮೊದಲಿಗರು.

ಬಿ.ಎ. ಮುಗಿಸಿದ ಹಿರೇಮಠ ಅವರಿಗೆ ನೌಕರಿ ಹಿಡಿಯಬೇಕಾದ ಪ್ರಾಪಂಚಿಕ ಒತ್ತಡವಿದ್ದರೂ ಅವರ ಜ್ಞಾನದಾಹ ಅವರನ್ನು ಎಂ.ಎ. ಅಧ್ಯಯನ ಮಾಡಲು ಪ್ರೇರೇಪಿಸಿತು. ಲಿಂಗರಾಜ ಕಾಲೇಜಿನ ಫೆಲೋ ಆಗಿ ಅಧ್ಯಯನ ಮುಂದುವರೆಸಿದರು. ಬಿ.ಎ.. ಪರೀಕ್ಷೆಯಲ್ಲಿ ತೋರಿಸಿದ ಪ್ರತಿಭೆಯನ್ನೇ ಎಂ.ಎ. ಪರೀಕ್ಷೆಯಲ್ಲಿಯೂ ತೋರಿ ಪದವಿ ಪಡೆದರು. 1945 ಇಸವಿಯ ಮೇ 16ನೇ ದಿನಾಂಕದಂದು ಬಾಗಲಕೋಟೆಯ ಬಸವೇಶ್ವರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ವೃತ್ತಿಜೀವನ ಆರಂಭಿಸಿದರು. ಆ ಕಾಲೇಜಿನ ಪ್ರಥಮ ಕನ್ನಡ ಪ್ರಾಧ್ಯಾಪಕರೂ ಮುಖ್ಯಸ್ಥರೂ ಆಗಿ ಸಂಸ್ಥೆಯ ಸರ್ವತೋಮುಖ ಬೆಳವಣಿಗೆಯಲ್ಲಿ ಪಾಲ್ಗೊಂಡರು. ಆರ್.ಸಿ. ಹಿರೇಮಠರ ಸಾಹಿತ್ಯ ಜೀವನಕ್ಕೆ ಒಂದು ವ್ಯವಸ್ಥಿತ ರೂಪ ಬಂದದ್ದು ಬಾಗಲಕೋಟೆಯಲ್ಲಿಯೇ. ಮುಂದೆ 1951ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲೂ ರೀಡರ್ ಆಗಿ ನೇಮಕಗೊಂಡರು. 1957ರಲ್ಲಿ ಆರ್.ಸಿ.ಹಿರೇಮಠ ಅವರು ಕನ್ನಡ ವಿಭಾಗದ ಪ್ರಾಧ್ಯಾಪಕ ಮತ್ತು ಮುಖ್ಯಸ್ಥರಾದ ಮೇಲೆ ಅದಕ್ಕೆ ಆನೆಯ ಶಕ್ತಿ ಬಂದಿತು. ಮುಂದೆ ವರ್ಷದಿಂದ ವರ್ಷಕ್ಕೆ, ತನ್ನ ಕಾರ್ಯಕ್ಷೇತ್ರವನ್ನು ಹಿಗ್ಗಿಸಿಕೊಳ್ಳುತ್ತಾ ತ್ರಿವಿಕ್ರಮನಂತೆ ಬೆಳೆಯಿತು. ಒಂದು ವಿಭಾಗವಾಗಿ ಉಳಿಯದೆ ಅಧ್ಯಯನ ಪೀಠವಾಗಿ ರೂಪ ತಳೆಯಿತು. ಪಠ್ಯಪುಸ್ತಕ ನಿರ್ದೇಶನಾಲಯ, ಬಸವಪೀಠಗಳು ಈ ವಿಭಾಗದ ಎರಡು ಬಾಹುಗಳಾಗಿ ಮೂಡಿ ಬಂದವು. ವಚನಸಾಹಿತ್ಯ, ದಾಸಸಾಹಿತ್ಯ, ಜೈನ ಸಾಹಿತ್ಯಗಳ ಅಧ್ಯಯನ ಪ್ರತ್ಯೇಕವಾಗಿ, ಸಂಶೋಧನಾತ್ಮಕವಾಗಿ ಇಲ್ಲಿ ನಡೆಯುವಂತಾಯಿತು. ಇದೆಲ್ಲದರ ಹಿಂದೆ ಆರ್.ಸಿ. ಹಿರೇಮಠರ ಪರಿಶ್ರಮ, ಶ್ರದ್ಧೆ, ಆಸಕ್ತಿಗಳು ಇದ್ದುವೆಂಬುದನ್ನು ಅಲ್ಲಗಳೆಯುವಂತಿಲ್ಲ. ಹೀಗೆ ಭಿಕ್ಷಾ ವೃತ್ತಿಯಲ್ಲಿ ತೊಡಗಿಸಿಕೊಂಡು ಓದನ್ನು ಮುಂದುವರಿಸಿ ಪ್ರಾಧ್ಯಾಪಕರಾಗಿ ಅದೇ ವಿಶ್ವವಿದ್ಯಾಲಯದ ಕುಲಪತಿಯಾಗಿ ನೇಮಕಗೊಂಡ ಡಾ.ಆರ್.ಸಿ. ಅವರ ಜೀವನ ಹೋರಾಟದ್ದು, ಫಲಪ್ರದವಾದದ್ದು.

ಈ ಮಧ್ಯೆ ಡಾ.ನಂದೀಮಠ ಅವರ ಮಾರ್ಗದರ್ಶನದಲ್ಲಿ ಅಧ್ಯಯನ ಆರಂಬಿಸಿ, "Linguistic investigation of some problems on the relationship of Indo-aryan and Dravidian Languages" ಎಂಬ ವಿಷಯವನ್ನು ಆರಿಸಿಕೊಂಡು 1955ರಲ್ಲಿ ಪಿಎಚ್.ಡಿ. ಪದವಿ ಗಳಿಸಿದರು.

ಒಬ್ಬ ಪ್ರಾಧ್ಯಾಪಕ ಸಾಹಿತಿ ಆಗುವುದು ಕೇವಲ ಸೃಜನಾತ್ಮಕ ಸಾಹಿತ್ಯ ರಚನೆಯಿಂದಲೇ? ಅಥವಾ ಸೃಜನಾತ್ಮಕ-ಸೃಜನೇತರ ಸಾಹಿತ್ಯ ರಚನೆಯಿಂದಲೆ? ಎಂಬ ಪ್ರಶ್ನೆ ಬಹುಗಹನವಾದುದು. ಈ ಪ್ರಶ್ನೆ ಹೇಗೇ ಇರಲಿ ಒಬ್ಬ ವ್ಯಕ್ತಿ ತಾನು ರಚಿಸುವ ಸೃಜನ-ಸೃಜನೇತರ ಕೃತಿಗಳ ಆಂತರಿಕ ಸತ್ವದಿಂದ ಸಾಹಿತಿಯ ಮಟ್ಟಕ್ಕೆ ಏರುವನು ಎಂಬುದು ಬಹು ಮುಖ್ಯವಾದುದು. ಹಾಗೆಯೇ ಒಬ್ಬ ಪ್ರಾಧ್ಯಾಪಕನೂ ತನ್ನ ಕೃತಿಗಳ ಸತ್ವದಿಂದ ಸಾಹಿತಿ ಎಂದು ಗೌರವಿಸಲ್ಪಡುತ್ತಾನೆ.

ಈ ಹಿನ್ನೆಲೆಯಲ್ಲಿ ನೋಡಿದಾಗ ಡಾ.ಆರ್.ಸಿ. ಹಿರೇಮಠ ಅವರು ಸೃಜನ ಹಾಗೂ ಸೃಜನೇತರ ಪ್ರಕಾರಗಳಲ್ಲಿ ಸತ್ವಪೂರ್ಣ ಕಾರ್ಯ ಮಾಡಿ ಶ್ರೇಷ್ಠ ಸಾಹಿತಿ ಎಂದು ಗುರುತಿಸಬಹುದಾದ ವ್ಯಕ್ತಿಗಳಾಗಿದ್ದಾರೆ. ಇದಲ್ಲದೆ ಡಾ.ಆರ್.ಸಿ.ಅವರು ಅಧ್ಯಾಪನ ಮಾಡುತ್ತಾ ಕ.ವೆಂ.ರಾಜಗೋಪಾಲ, ಜಿ.ಎಸ್.ಕುಳ್ಳಿ, ಎಸ್.ಜಿ. ಹುಬ್ಬಳ್ಳಿ, ಪ್ರೊ.ಆರ್. ರಾಚಪ್ಪ, ಡಾ.ವಿದ್ಯಾಶಂಕರ ಹಾಗೂ ಶ್ರೇಷ್ಠ ಸಂಶೋಧಕರೆಂದು ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿರುವ

ಡಾ.ಎಂ.ಎಂ.ಕಲಬುರ್ಗಿಯವರಂತಹ ಪ್ರತಿಭಾನ್ವಿತರನ್ನು ನೀಡಿ ಸಾಹಿತ್ಯ ಪ್ರಪಂಚವನ್ನು ಶ್ರೀಮಂತಗೊಳಿಸಿದ್ದಾರೆ.

ಡಾ.ಆರ್.ಸಿ. ಅವರ ಸಾಹಿತ್ಯವನ್ನು ಸೃಜನ ಹಾಗೂ ಸೃಜನೇತರ ಎಂದು ಎರಡು ಭಾಗವಾಗಿ ವಿಂಗಡಿಸಿ ಅಧ್ಯಯನ ಮಾಡಬಹುದು. ಶ್ರೀಯುತರು ಕವಿಗಳಾಗಿ 'ಸುಮಾಂಜಲಿ' ಮತ್ತು 'ಮೌನಸ್ಪಂದನ' ಎಂಬೆರಡು ಕವನ ಸಂಕಲನಗಳನ್ನು ನೀಡಿದ್ದಾರೆ. ನಾಟಕಕಾರರಾಗಿ, 'ಹರಿಶ್ಚಂದ್ರ' ನಾಟಕವನ್ನು ರಚಿಸಿದ್ದಾರೆ. ವಿಮರ್ಶಕರಾಗಿ 'ರಾಘವಾಂಕ', 'ಸಾಹಿತ್ಯ ಸಂಸ್ಕೃತಿ', 'ಕವಿ ಪದ್ಮಣ್ಣಾಂಕ' ಇತ್ಯಾದಿಗಳನ್ನು ರಚಿಸಿದ್ದಾರೆ. ಹಾಗೆಯೇ ಸಂಪಾದನೆ, ಸಂಶೋಧನೆ ಕಾರ್ಯಗಳಲ್ಲಿಯೂ ಮಹತ್ತರ ಸೇವೆ ಸಲ್ಲಿಸಿದ್ದಾರೆ.

ಸೃಜನಾತ್ಮಕ ಸಾಹಿತ್ಯದೆಡೆಗೆ ಡಾ. ಆರ್.ಸಿ. ಅವರ ಗಮನ ತೀರ ಎಳವೆಯಲ್ಲಿಯೆ ಹರಿಯಿತು. ಅನುಕರಣ ಪ್ರವೃತ್ತಿಯಿಂದಾಗಿ ಪ್ರಾಥಮಿಕ ಶಾಲಾ ವಿದ್ಯಾರ್ಥಿಯಾಗಿದ್ದಾಗಲೇ ಕುರುಡಗಿ ಚೌಡಿ ಚೆನ್ನಪ್ಪನವರಲ್ಲಿ ನಡೆದ ಮದುವೆಯ ಪ್ರಸಂಗವನ್ನು ಹಾಡಿನಲ್ಲೂ ವರ್ಣಿಸಲು ತೊಡಗಿ

"ಚೌಡಿ ಚೆನ್ನಪ್ಪನ್ ಲಗ್ನದ ಸುದ್ದಿ
ಹೆಳತೇನಿ ಕೇಳ್ರಿ ಬುದ್ಧಿ"

ಎಂದು ಹಾಡು ಕಟ್ಟಿ ಜಾನಪದ ಲಯದಲ್ಲಿ ಹಾಡಿ ಊರ ಜನತೆಯನ್ನು ರಂಜಿಸಿದ್ದರು. ತಮ್ಮ ಊರಿನ ದೇವರನ್ನು ಕುರಿತು-

"ರಾಮಶೆಟ್ಟಿಕೆರೆಯೊಳಗಿನ ಹುಟ್ಟಿ
ನಡೆಸಿದೆಯೊ ಸೃಷ್ಟಿ
ಬೇಡಿದ ವರಗಳ ನೀ ಕೊಟ್ಟಿ"

ಎಂದು ಹಾಡಿದ್ದಾರೆ. ಮಂಗಲ ಕಾರ್ಯಗಳಿಗೆ ಉಪಯುಕ್ತವೆನಿಸುವ ಕೆಲವು ಗೀತಗಳನ್ನೂ ರಚಿಸಿದ್ದಾರೆ. ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ 'ಉದಯರವಿ' ಎಂಬ ಕೈಬರಹದ ಪತ್ರಿಕೆಗೆ ಅಕ್ಷರವೃತ್ತದಲ್ಲಿ-

"ಸುಲಲಿತ ಶೀಲ ಲೋಲ ಜಯಪಾಲ ವಿಶಾಲ ವಿಲೋಲ ಮಾಲಾ ಮೇಣ್
ಕುಲಗಿರಿವಾಸ ಈಶ ಸರ್ವೇಶ ಮಹೇಶ ಸುಭಾಶಯಾಬ್ಧಿಕಣ್
ದಲಪದ ಪಾದಪೂಜಿತ ವಿರಾಜಿತ ಶಶಿಯುತ ಭಾಳನೇತ್ರಬಾನ್
ಕುಲಪತಿ ಶಕ್ತಿ-ಮುಕ್ತಿಪತಿ ವಿಶ್ವದಿ ಸಮ ನಿನಗಾರ ಕಾಣೆ ಕಾಣ್"

ಎಂದು ಹಾಡಿ ಸ್ವಂತಿಕೆಯನ್ನು ಮೆರೆದಿದ್ದಾರೆ. ಪ್ರಾಚೀನಕಾವ್ಯಗಳಲ್ಲಿ ಬರುವ ದೇವತಾ ಸ್ತುತಿಯ ಪ್ರಭಾವ ಇಲ್ಲಿ ಕಂಡು ಬರುವುದಾದರೂ ಹಿರೇಮಠರ ಸ್ವಂತಿಕೆ (originality) ಇಲ್ಲಿ ಎದ್ದು ಕಾಣತ್ತದೆ. ಅವರ ಶಿಕ್ಷಕರೆಲ್ಲಾ ಇವರ ಪ್ರತಿಭೆಗೆ ಮೆಚ್ಚುಗೆ ವ್ಯಕ್ತಪಡಿಸಿ ಬೆನ್ನುತಟ್ಟಿದ್ದು ನಿಜಕ್ಕೂ ಅವರ ಕಾವ್ಯಶಕ್ತಿಗೆ ದೊರೆತ ಪುರಸ್ಕಾರವೇ ಸರಿ.

ಡಾ.ಆರ್.ಸಿ. ಅವರ ಮೊದಲ ಕವನ ಸಂಕಲನ ಪ್ರಕಟವಾದದ್ದು 1948ರಲ್ಲಿ. ಮುಂದೆ ಹತ್ತು ವರ್ಷಗಳ ಕಾಲ ಇವರ ಕಾವ್ಯಾವಾಹಿನಿ ಹರಿದು ಬರಲಿಲ್ಲ. 1958ರಲ್ಲಿ ವಿದೇಶಕ್ಕೆ ಹೋದಾಗ ಅಲ್ಲಿನ ನಿಸರ್ಗರ ಮಣೀಯತೆಯನ್ನು ಗಮನಿಸಿದ ಇವರು ಮತ್ತೆ ಕಾವ್ಯರಚನೆಗೆ ಆರಂಭಿಸಿದರು.

ಕನಸಿನಲಿ ಕನವರಿಸಿ ಕನ್ನಡ
ಕೇಳುವವರೇ ಇಲ್ಲಲಾ !
ಹೆತ್ತತಾಯನುಡಿಯ ಬೆಡಗನು
ಎತ್ತೊ ಮರೆಯುವಂತಾಯ್ತಲಾ!

ಎಂದು ಕೊರಗಿರುವುದುಂಟು.

ಡಾ.ಆರ್.ಸಿ. ಅವರ ಕಾವ್ಯಸೃಷ್ಟಿ ಅವರೊಬ್ಬ ಒಳ್ಳೆಯ ಕವಿಯೆಂದು ಸ್ಥಿರೀಕರಿಸಲು ಸಾಕಾಗುವುದಿಲ್ಲ. ಆದರೂ ಡಾ.ಆರ್.ಸಿ. ಅವರಲ್ಲಿ ಕವಿ ಹೃದಯವಿದೆ ಎಂಬುದು ಅವರ ವಿಮರ್ಶೆಯಲ್ಲಿ ಮನವರಿಕೆಯಾಗುತ್ತದೆ.

Every man is a poet and every poet must be a critic" ಎಂಬ ಹೇಳಿಕೆ ಇದೆ. ಈ ಹಿನ್ನೆಲೆಯಲ್ಲಿ ಡಾ.ಆರ್.ಸಿ. ಅವರನ್ನು ಪರಿಶೀಲಿಸಿದಾಗ ಅವರು ಪಂಡಿತರೂ ಹೌದು, ಕವಿಹೃದಯಿಗಳೂ ಹೌದು ಎಂದು ತಿಳಿಯುತ್ತದೆ. ಡಾ.ಆರ್.ಸಿ. ಅವರಲ್ಲಿ ಜೀವನಾನುಭವವನ್ನು ವಿಚಕ್ಷಣತೆಯಿಂದ ವಿಮರ್ಶಿಸುವ ಜಾಣತನವಿದೆ. ಹೀಗಾಗಿ ಅವರು ಕವಿಹೃದಯದ ವಿಮರ್ಶಕರು.

ಡಾ.ಆರ್.ಸಿ.ಅವರು ತಮ್ಮ ಯಾವುದೇ ವಿಚಾರವನ್ನಾಗಲೀ ಅನುಭವವನ್ನಾಗಲೀ ವಿಮರ್ಶೆಯ ಒರೆಗಲ್ಲಿಗೆ ತೀಡಿದಲ್ಲದೆ ಒಪ್ಪುವವರಲ್ಲ. ಅವರ ವಿಮರ್ಶೆಯಲ್ಲಿ ಮಾತಿನ ಮರ್ಮಜ್ಞತೆ, ನಿರ್ದಿಷ್ಟ ಅಭಿಪ್ರಾಯ, 'ವೈಚಾರಿಕ ಗದ್ಯದ ಪ್ರಸನ್ನ ಶೈಲಿ', ತಮ್ಮ ಅಭಿಪ್ರಾಯ ನಿರೂಪಣೆಗೆ ಉದ್ಧರಿಸುವ ಸೂಕ್ತ ಉದಾಹರಣೆಗಳ ಆಯ್ಕೆ; ಅದನ್ನು ಮಂಡಿಸುವ ವಾದಸರಣಿ ಮೊದಲಾದ ಗುಣಗಳು ಓದುಗರಲ್ಲೂ ಆಸಕ್ತಿಯನ್ನು ಕೆರಳಿಸಿ, ಚಿಂತನೆಗೆ ತೊಡಗಿಸುತ್ತವೆ.

ಡಾ.ಆರ್.ಸಿ. ಅವರ ವಿಮರ್ಶೆಯ ಸೊಬಗು ತೌಲನಿಕ ವಿಮರ್ಶೆಯಲ್ಲಿ ಚೆನ್ನಾಗಿ ಮೂಡಿಬಂದಿದೆ. ಸೋಮನಾಥ ಚಾರಿತ್ರದಲ್ಲಿ ಬರುವ 'ನಾರದ ಪ್ರಸಂಗ' ಮತ್ತು ಮಾಘ ಕವಿಯ 'ಶಿಶುಪಾಲವಧ'ದಲ್ಲಿ ಬರುವ ನಾರದ ಪ್ರಸಂಗ; ಹಾಗೂ ಪಂಪನಲ್ಲಿ ಬರುವ ನಾರದ ಪ್ರಸಂಗಗಳನ್ನು ವಿಮರ್ಶಿಸಿ, ಮಾಘ-ಪಂಪನಿಗಿಂತ ರಾಘವಾಂಕನೇ ಮಿಗಿಲು ಎಂದು ಸಾಧಿಸಿ ತೋರಿದ್ದಾರೆ. ಹೀಗೆ ವಿಮರ್ಶಾ ಸಾಹಿತ್ಯ ರಚನೆಯಲ್ಲಿ ತಮ್ಮ ಪ್ರತಿಭೆಯನ್ನು ಮೆರೆದು ಮೆಚ್ಚುಗೆಗೆ ಪಾತ್ರರಾಗಿರುವರು. ಡಾ.ಆರ್.ಸಿ. ಅವರು ಮಾತಿನಮರ್ಮ ಬಲ್ಲವರು. ಇದು ಅವರ ತಲಸ್ಪರ್ಶಿಯಾದ ಸಮಾಲೋಚನೆಯ, ತರ್ಕಬದ್ಧ ವಾದ, ಶಾಸ್ತ್ರಸಿದ್ಧ ದೃಷ್ಟಿಗೆ ರಸದ ಲೇಪ ಕೊಡುವ ಕವಿಹೃದಯದ ಔಚಿತ್ಯ ಪ್ರಜ್ಞೆಯ ಪರಿಣಾಮ ಎಂಬುದು ತಿಳಿಯುತ್ತದೆ. ಯಾವುದೇ ಕವಿ ಯಾವುದೇ ಕಾವ್ಯ ಕುರಿತು ಅಥವಾ ಸಂದರ್ಭ ಕುರಿತು ಚರ್ಚಿಸುತ್ತಿರಲಿ, ಆ ಚರ್ಚೆ ಚರ್ವಿತ ಚರ್ವಣವಾಗುವುದಿಲ್ಲ ವೃಥಾ ಮಾತಿನ ಕಸರತ್ತು ಆಗುವುದಿಲ್ಲ. ಆ ಬಗೆಗೆ ಹೇಳತಕ್ಕದ್ದೆಲ್ಲವನ್ನೂ ಸಾಂಗವಾಗಿ ನಿರ್ದಿಷ್ಟವಾಗಿ ಹೇಳಿಬಿಡುವ ಅವರ ಶೈಲಿ ನಿಜಕ್ಕೂ ಅನುಕರಣೀಯ.

ಭಾಷಾಶಾಸ್ತ್ರ, ಸಂಶೋಧನೆ, ಗ್ರಂಥಸಂಪಾದನೆಗಳಿಗೆ ಹೆಚ್ಚು ಮನವೊಲಿದ ಡಾ.ಆರ್.ಸಿ. ಅವರು ಸೃಜನಾತ್ಮಕ ಸಾಹಿತ್ಯಸೃಷ್ಟಿಯಲ್ಲಿ ಹಿಂದೆ ಬಿದ್ದದ್ದು ನಿರಾಶೆಯ ಸಂಗತಿ.

ಡಾ.ಆರ್.ಸಿ.ಅವರ ಸೃಜನೇತರ ಸಾಹಿತ್ಯವನ್ನು ಗ್ರಂಥ ಸಂಪಾದನೆ ಮತ್ತು ಸಂಶೋಧನೆ ಎಂದು ಎರಡು ವರ್ಗಗಳಾಗಿ ಗುರುತಿಸುವುದು ಸೂಕ್ತ.

ಗ್ರಂಥ ಸಂಪಾದನೆಯಲ್ಲಿ ವಿಶಿಷ್ಟ ಕಾರ್ಯ ಮಾಡಿರುವ ಶ್ರೀಯುತರು ವೀರಶೈವ ಗ್ರಂಥಗಳನ್ನು ಸಮರ್ಥವಾಗಿ ಸಂಪಾದಿಸಿಕೊಟ್ಟಿದ್ದಾರೆ. ಭೀಮ

ಕವಿಯ 'ಬಸವ ಪುರಾಣ', ಬಸವಕವಿಯ 'ಮಹಾಲಿಂಗಲೀಲೆ', ಪದ್ಮಣಾಂಕನ 'ಪದ್ಮರಾಜಪುರಾಣ', ಷಡಕ್ಷರ ಮಹಾಕವಿಯ ರಾಜಶೇಖರ ವಿಳಾಸ (ಸಮಗ್ರ ಮತ್ತು ಸಂಗ್ರಹ), ಬಸವ ಲಿಂಗಕವಿಯ 'ಕೊಟ್ಟೂರ ಬಸವೇಶ್ವರ ಚಾರಿತ್ರ್ಯ' ಶಾಂತ ಲಿಂಗ ದೇಶಿಕನ 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ' ಭಾಗ ೧-೨-೩ ರಾಘವಾಂಕನ ಸೋಮನಾಥ ಚರಿತ್ರ (ಸಮಗ್ರ ಹಾಗೂ ಸಂಗ್ರಹ); ಸುರಂಗನ "ತ್ರಿಷಷ್ಠಿ ಪುರಾತನ ಚಾರಿತ್ರ', ಷಡಕ್ಷರಿಯ 'ಬಸವರಾಜ ವಿಜಯ'; 'ಹರಿಹರನ ಪುರಾತನರ ರಗಳೆಗಳು', 'ಆರು ರಗಳೆಗಳು' ; ಚಾಮರಸನ 'ಪ್ರಭುಲಿಂಗಲೀಲೆ' ಮೊದಲಾದ ವೀರಶೈವ ಕೃತಿಗಳೇ ಅಲ್ಲದೆ, ಕನಕದಾಸರ 'ಮೋಹನತರಂಗಿಣಿ'; ನಾಗಚಂದ್ರನ 'ರಾಮಚಂದ್ರ ಚರಿತ ಪುರಾಣಂ" ಕಾವ್ಯಗಳನ್ನು ಸಮರ್ಥವಾಗಿ ಸಂಪಾದಿಸಿಕೊಟ್ಟಿದ್ದಾರೆ. ಗ್ರಂಥ ಸಂಪಾದನಾ ನಿಯಮಗಳಿಗನುಗುಣವಾಗಿ ಸಂಪಾದಿತವಾಗಿರುವ ಈ ಕಾವ್ಯಗಳನ್ನು ವಿಸ್ತಾರವಾದ ಪ್ರಸ್ತಾವನೆ, ಅರ್ಥಕೋಶ, ವಿಶಿಷ್ಟ ಅಂಶಗಳ ಬಗೆಗೆ ಟಿಪ್ಪಣಿ, ತೌಲನಿಕ ಕಾವ್ಯ ವಿಮರ್ಶೆ, ಸೂಕ್ತ ಪಾಠಾಂತರಗಳೊಂದಿಗೆ ಪ್ರಕಟಗೊಂಡಿವೆ. ಪ್ರಾಚೀನ ಕಾವ್ಯಗಳ ಸಂಪಾದಕನಿಗೆ ಇರಬೇಕಾದ ಆಳವಾದ ಅಧ್ಯಯನ, ಶ್ರದ್ಧೆ, ನಿಷ್ಠೆ, ತಾಳ್ಮೆಯನ್ನು ಸಹಜವಾಗಿ ಹೊಂದಿರುವ ಡಾ.ಆರ್.ಸಿ. ಅವರು ಕಾವ್ಯ ಸಂಪಾದನಾಕ್ಷೇತ್ರದಲ್ಲಿ ಅಜರಾಮರರಾಗಿ ಉಳಿಯುವರು.

ಡಾ.ಆರ್.ಸಿ. ಅವರ ಗ್ರಂಥ ಸಂಪಾದನೆಗೆ ಕಳಶಪ್ರಾಯವಾದದ್ದು. ವಚನಗಳ ಸಂಪಾದನಾಕಾರ್ಯ. ನಮ್ಮ ನಾಡಿನ ಶರಣರ ವಚನ ಸಾಹಿತ್ಯದತ್ತ ತಮ್ಮ ಗಮನ ಹರಿಸಿದ ಅವರು, ಆಧುನಿಕ ಸಂಪಾದನಾ ಶಾಸ್ತ್ರಕ್ಕೆ ಒಪ್ಪುವ ಹಾಗೆ, ವೈಜ್ಞಾನಿಕ ಪದ್ಧತಿಗನುಗುಣವಾಗಿ ಸಂಸ್ಕರಿಸಿ, ಸಂಪಾದಿಸಿಕೊಟ್ಟಿದ್ದಾರೆ. ಅವುಗಳಿಗೆ ವಿಸ್ತಾರವಾದ ಪೀಠಿಕೆ, ಪ್ರಸ್ತಾವನೆಗಳನ್ನಿತ್ತು ಹೊರತಂದಿರುವುದು ವಿಜಕ್ಕೂ ಗಣನೀಯ ಕಾರ್ಯ. ತಮ್ಮ ಜೀವಮಾನಾವಧಿಯ ಚಿಂತನಪರ ವೇಳೆಯನ್ನು ವಚನ ಸಾಹಿತ್ಯ ಸಂಶೋಧನೆಗೆ ಮೀಸಲಿಟ್ಟದ್ದು ಒಬ್ಬ ವ್ಯಕ್ತಿ ತನ್ನ ನಾಡಿಗೆ, ನಾಡಿನ ಸಾಹಿತ್ಯ ಭಂಡಾರಕ್ಕೆ ಅದರಲ್ಲಿಯೂ ಜನಪರ ಸಾಹಿತ್ಯ ಭಂಡಾರಕ್ಕೆ, ತನ್ನನ್ನು ತಾನು ಹೇಗೆ ಸಮರ್ಪಿಸಿಕೊಳ್ಳಬಹುದೆಂಬುದಕ್ಕೆ ವಚನ ಸಂಪಾದನಾ ಕಾರ್ಯ ಜ್ವಲಂತ ನಿದರ್ಶನ.

ಕಾಲನ ದವಡೆಯಲ್ಲಿ ಜೀರ್ಣಗೊಳ್ಳುತ್ತಾ, ಹುಳುಗಳಿಗೆ ಆಹಾರ ವಾಗುತ್ತಾ ನಿರ್ನಾಮದ ಹಾದಿಯಲ್ಲಿದ್ದ ಈ ಅಕ್ಷಯನಿಧಿ- ವಚನ ಸಾಹಿತ್ಯವನ್ನು ನಮ್ಮ ಪೂರ್ವಜರ ಆಸ್ತಿ, ಸಂಪತ್ತು ಎಂದು ರಕ್ಷಿಸಿದ ಲಿಂಗೈಕ್ಯ ಡಾ|| ಫ.ಗು.ಹಳಕಟ್ಟಿಯವರು ವಚನ ಸಾಹಿತ್ಯ ಸಂಪಾದನೆಗೆ 'ಓಂ' ನಾಮ ಹಾಕಿ "ವಚನ ಪಿತಾಮಹ"ರಾದರು. ಪ್ರೊ.ಶಿ.ಶಿ. ಬಸವನಾಳರು, ವಚನ ಸಂಪಾದನೆಯನ್ನು ವೈಜ್ಞಾನಿಕವಾಗಿ ಹದಗೊಳಿಸಿ ಸಂಪಾದನೆಗೆ ಮಾದರಿ ಯಾದರು. ಈ ವಚನ ಸಂಪಾದನೆಯ ಕಾರ್ಯ ಹೆದ್ದೊರೆಯಾಗಿ ಹರಿದು ಬಂದದ್ದು, ಡಾ.ಆರ್.ಸಿ. ಹಿರೇಮಠ ಅವರ ಕಾಲದಲ್ಲಿ. ಡಾ.ಆರ್.ಸಿ. ಅವರು ಪ್ರತ್ಯೇಕ ಆಧುನಿಕ ವಚನ ಸಂಪಾದನಾ ಸಮಯ (school of Texual criticism of Vachana literature)ದ ಸಂಸ್ಥಾಪಕರಾದರು. ತಾಳೆಗರಿ, ಕಾಗದದ ಪ್ರತಿಗಳಲ್ಲಿ ಹುದುಗಿದ್ದ ಅಸಂಖ್ಯ ವಚನಗಳನ್ನು ಪರಿಷ್ಕರಿಸಿ ಸಂಪಾದಿಸುದುದಷ್ಟೇ ಅಲ್ಲದೆ ಅದಕ್ಕೆ ಸಂಬಂಧಪಟ್ಟ ಎಲ್ಲಾ ಮಾಹಿತಿಗಳನ್ನು ಆಮೂಲಾಗ್ರವಾಗಿ ಸಂಶೋಧಿಸಿ ಜನಮನದ ಅಭಿರುಚಿ ವಚನವಾಙ್ಮಯದಲ್ಲಿ ವರ್ಧಿಸುವಂತೆ ಮಾಡಿದ ಕೀರ್ತಿ ಡಾ.ಆರ್.ಸಿ. ಅವರದ್ದು. ವಚನಸಾಹಿತ್ಯ ಸಂಗ್ರಹಣೆ, ಸಂಪಾದನೆ, ಪ್ರಕಟಣೆಗೆ ಅನುವಾಗುವಂತೆ ಹಸ್ತಪ್ರತಿ ಭಂಡಾರ (Manuscripts Bank)ವನ್ನು ಸ್ಥಾಪಿಸಿ ನಾಡಿನ ಮೂಲೆಮೂಲೆಗಳಿಂದ 10,000 ಪ್ರತಿಗಳನ್ನು ಸಂಗ್ರಹಮಾಡಿದುದು ಶ್ಲಾಘನೀಯ ಕಾರ್ಯವೇ ಸರಿ.

ಡಾ|| ಆರ್.ಸಿ. ಅವರ ಸಂಪಾದನೆಯಲ್ಲಿ 'ಚೆನ್ನಬಸವಣ್ಣನವರ ವಚನಗಳು', 'ಬಸವಣ್ಣನವರ ವಚನಗಳು ಕಾಂಡ-1 ಮತ್ತು 'ಸಿದ್ಧರಾಮೇಶ್ವರ ವಚನಗಳು', 'ಅಲ್ಲಮ ಪ್ರಭುದೇವರ ವಚನಗಳು', 'ಸಕಲ ಪುರಾತನರ ವಚನ ಗಳು', 'ಅಕ್ಕಮಹಾದೇವಿ ವಚನಗಳು', 'ಶಿವಗಣಪ್ರಸಾದಿ ಮಹಾದೇವಯ್ಯ ಮತ್ತು ಗುಮ್ಮಳಾಪುರದ ಸಿದ್ಧಲಿಂಗಯತಿಗಳ 'ಶೂನ್ಯ ಸಂಪಾದನೆಗಳು', 'ವಿಶೇಷಾನುಭವ ಷಟ್‌ಸ್ಥಲ', 'ಮುಕ್ತಿಕಂಠಾಭರಣ', 'ವೀರಶೈವ ಚಿಂತಾಮಣಿ', ಸಿದ್ಧಲಿಂಗಯತಿಯ 'ಷಟ್‌ಸ್ಥಲಜ್ಞಾನಾಮೃತ', 'ಬ್ರಹ್ಮಾದ್ವೈತ ಸಿದ್ಧಾಂತ ಷಟ್‌ಸ್ಥಲಾಭರಣ', 'ಇಪ್ಪತ್ತೇಳು ಶಿವಶರಣೆಯರ ವಚನಗಳು', 'ಅಮುಗೆ ರಾಯಮ್ಮ ಮತ್ತು 'ಅಕ್ಕಮ್ಮನ ವಚನಗಳು', 'ನೀಲಮ್ಮನ ವಚನಗಳು' ಮತ್ತು 'ಲಿಂಗಮ್ಮನ ವಚನಗಳು" ಸಮರ್ಥ ಪ್ರಸ್ತಾವನೆ, ಶಬ್ದಕೋಶ, ವಿಶೇಷ ಪದಕೋಶ, ಪಾರಿಭಾಷಿಕ ಪದಕೋಶಗಳೊಂದಿಗೆ ಸಮರ್ಥವಾಗಿ ಪ್ರಕಟ ಗೊಂಡಿವೆ.

ಮೂಲತಃ ಸಂಶೋಧಕ ಮನೋಧರ್ಮದಿಂದ ಕೂಡಿದ ಡಾ.ಆರ್.ಸಿ. ಅವರು ಸಂಶೋಧನ ರಂಗದಲ್ಲಿಯೂ ಸಾಕಷ್ಟು ಕೆಲಸ ಮಾಡಿದ್ದಾರೆ. ತಾವು ಸ್ವಂತಕ್ಕೆ ಹಲವಾರು ನಿಟ್ಟಿನ ಸಂಶೋಧನೆ ಮಾಡಿರುವುದಲ್ಲದೆ ಈವರೆಗೆ ಸುಮಾರು ನಲವತ್ತರಷ್ಟು ಪಿಎಚ್.ಡಿ. ಮಹಾಪ್ರಬಂಧಗಳಿಗೆ ಮಾರ್ಗದರ್ಶಕ ರಾಗಿದ್ದಾರೆ. ಇವರ ಮಾರ್ಗದರ್ಶನದಲ್ಲಿ ಸಿದ್ಧವಾಗಿ ಪ್ರಕಟಗೊಂಡ ಮಹಾ ಪ್ರಬಂಧಗಳು ಮತ್ತು ಲೇಖನಗಳು ಕನ್ನಡ ವಿದ್ವತ್ ಪ್ರಪಂಚದಲ್ಲಿ ಪ್ರಶಂಸೆ ಗಳಿಸಿವೆ.

ಡಾ.ಆರ್.ಸಿ.ಅವರ ಸಂಶೋಧನಪರವಾದ ಕಾಣಿಕೆಗಳನ್ನು ತಿಳಿಯಲು ಅವರು ಬರೆದಿರುವ 'ಮಹಾಕವಿ ರಾಘವಾಂಕ', 'Linguistic investigations of some problems on the relationship of Indo-Aryan and Dravidian Languages", (ಪಿಎಚ್.ಡಿ. ಮಹಾಪ್ರಬಂಧ'). The structure of Kanndda, ಈ ಗ್ರಂಥಗಳು ಹಾಗೂ ಕನ್ನಡ-ಇಂಗ್ಲೀಷ್ ಭಾಷೆಗಳಲ್ಲಿ ಬರೆದ ಲೇಖನಗಳು ಮತ್ತು ಅವರು ಸಂಪಾದಿಸಿ ಪ್ರಕಟಿಸಿದ ಸುಮಾರು ಮೂವತ್ತರಷ್ಟು ಗ್ರಂಥಗಳಿಗೆ ಬರೆದ ಪೀಠಿಕೆಗಳನ್ನು ನೋಡಿದಾಗ ಅವರ ಸಂಶೋಧನ ವ್ಯಾಪ್ತಿಯ ಪರಿಚಯವಾಗುವುತ್ತದೆ.

ಭಾಷಾವಿಜ್ಞಾನ ಕುರಿತ ಸಂಶೋಧನಾ ಕಾರ್ಯ ಅವರ ಪಿಎಚ್.ಡಿ. ಮಹಾಪ್ರಬಂಧದಿಂದಲೇ ಆರಂಭವಾಗುತ್ತದೆ. ದ್ರಾವಿಡ ಮತ್ತು ಆರ್ಯ ಭಾಷೆಗಳನ್ನು ಭಾಷಾ ರಚನೆಯ ಎಲ್ಲ ಅಂಶಗಳಲ್ಲಿಯೂ ಹೋಲಿಸಿ ನೋಡುವ ವೈಶಿಷ್ಟ್ಯ ಈ ಕೃತಿಯಲ್ಲಿದೆ. ಹಾಗೆಯೇ 'The structure of Kannada" ಗ್ರಂಥದಲ್ಲಿ ಡಾ.ಆರ್.ಸಿ. ಅವರು ಧಾರವಾಡದ ಕನ್ನಡವನ್ನು ವಿಶ್ಲೇಷಿಸಿದ್ದಾರೆ. ಇದರಲ್ಲಿ ಧ್ವನಿಮಾ, ಸಂಧಿಪ್ರಕ್ರಿಯೆ, ಆಕೃತಿಮಾ ಮತ್ತು ವಾಕ್ಯರಚನಾ ವಿಧಾನಗಳ ಚರ್ಚೆಯಿಂದ ಉತ್ತರ ಕರ್ನಾಟಕದ ಹಲವಾರು ಪ್ರಭೇದಗಳ ವೈಶಿಷ್ಟ್ಯವನ್ನು ಪ್ರಥಮ ಬಾರಿಗೆ ಬೆಳಕಿಗೆ ತಂದಿದ್ದಾರೆ.

ಧ್ವನಿಮಾ ವಿಷಯಕವಾದ ಚರ್ಚೆಯಲ್ಲಿ ಇನ್ನೊಂದು ರೂಪ "An Adumbration of some problems in kannada Graphemics"

ಎಂಬ ಲೇಖನದಲ್ಲಿ ಮೂಡಿ ಬಂದಿದೆ. ಇದನ್ನು ಆರ್.ಸಿ.ಯವರು ಪ್ರೊ. ಎ.ಸಿ. ಹೆನ್ರಿಕ್ ಅವರ ಜೊತೆಗೂಡಿ ಸಿದ್ಧಪಡಿಸಿದ್ದಾರೆ. ಹಾಗೆಯೇ 'Place names in Karnataka', 'Compound verbs in Kannada', ಈ ಎರಡು ಲೇಖನಗಳಲ್ಲಿ ಕರ್ನಾಟಕ ಶಾಸನಗಳಲ್ಲಿ ದೊರೆಯುವ ನೂರಾರು ಸ್ಥಳವಾಚಕಗಳನ್ನು ಸಾಂಸ್ಕೃತಿಕ ಹಾಗೂ ಭಾಷಾವೈಜ್ಞಾನಿಕ ದೃಷ್ಟಿಯಿಂದ ವಿಶ್ಲೇಷಿಸಿದ್ದಾರೆ.

ಇದಾದ ನಂತರ ವೀರಶೈವ ಮತ ಮತ್ತು ಅದರ ತತ್ವಜ್ಞಾನಕ್ಕೆ ಸಂಬಂಧಿಸಿದ ಬರಹಗಳಲ್ಲಿ ಅವರ ಸಂಶೋಧನಾ ದೃಷ್ಟಿಯನ್ನು ಕಾಣ ಬಹುದು. ಇದರಲ್ಲಿ ಶಿಖರಪ್ರಾಯವಾದುದು 'ಷಟ್‌ಸ್ಥಲ ಪ್ರಭೆ'. ಇದರಲ್ಲಿ ವೀರಶೈವ ಸಿದ್ಧಾಂತದ ಬಹುಮುಖ್ಯ ಅಂಶವಾಗಿರುವ ಷಟ್‌ಸ್ಥಲ, ಅವುಗಳ ಅವಾಂತರ ಸ್ಥಲಗಳಲ್ಲಿ ಲಕ್ಷಣದ ಚರ್ಚೆ ಇದೆ. ಇದಾದ ಮೇಲೆ ವೀರಶೈವದ ಆಚಾರ, ಯೋಗಗಳನ್ನು ಕುರಿತು ಪ್ರತ್ಯೇಕವಾಗಿ ಪರಾಮರ್ಶಿಸಿದ್ದಾರೆ. ಈ ಕೃತಿಯ ಅಧ್ಯಯನದಿಂದ ವೀರಶೈವ ಸಿದ್ಧಾಂತವನ್ನು ಅಧಿಕಾರವಾಣಿಯಲ್ಲಿ ವಿವರಿಸಬಲ್ಲ ಬೆರಳೆಣಿಕೆಯ ಜನರಲ್ಲಿ ಅಗ್ರಪಂಕ್ತಿ ಡಾ.ಆರ್.ಸಿ. ಅವರಿಗೆ ಸಲ್ಲುತ್ತದೆ.

ಬಸವಣ್ಣನವರ ಜೀವನದಲ್ಲಿ ಜರುಗಿದ ಮುಖ್ಯ ಸಂಗತಿಗಳ ನಿರ್ಧಾರಕ್ಕೆ 'ಬಸವಚರಿತಾವತಾರ' (Basaveshwara biography)ದಲ್ಲಿ ಸಾಕಷ್ಟು ಚರ್ಚೆ ಮಾಡಿ ಆಧಾರಸಹಿತ ಬಸವಣ್ಣನವರ ಜೀವನವನ್ನು ಚಿತ್ರಿಸಿದ್ದಾರೆ. ಹೀಗೆ ಸಂಶೋಧನಾ ಪ್ರಪಂಚದಲ್ಲಿಯೂ ತಮ್ಮದೇ ಆದ ಛಾಪು ಮೂಡಿಸಿದ ವ್ಯಕ್ತಿತ್ವ ಡಾ.ಆರ್.ಸಿ.ಹಿರೇಮಠ ಅವರದ್ದು.

ಕನ್ನಡ ಪ್ರಾಧ್ಯಾಪಕರಾಗಿ ವಿದ್ಯಾರ್ಥಿಗಳ ಮನೋಗತಿಯನ್ನು ತಿಳಿದಿದ್ದ ಇವರು ವಿಶ್ವವಿದ್ಯಾಲಯದ ಅಕಾಡಮಿಕ್ ಕೌನ್ಸಿಲ್, ಸೆನೆಟ್, ಸಿಂಡಿಕೇಟ್ ಸದಸ್ಯರಾಗಿ ಆಡಳಿತ ಯಂತ್ರದ ರೂಪರೇಷೆಯನ್ನು ತಿಳಿದವರಾಗಿದ್ದರು. ವಿಶ್ವವಿದ್ಯಾಲಯದ ಎಲ್ಲಾ ಕ್ಷೇತ್ರಗಳ ಪರಿಚಯವಿದ್ದ ಇವರು ವಿಶ್ವವಿದ್ಯಾ ಲಯದ ಕುಲಪತಿಗಳಾಗಿ ಬಂದದ್ದು ವಿಹಿತವೇ ಸರಿ. ವಿಶ್ವವಿದ್ಯಾಲಯದ ಯಾವ ವಿಭಾಗವಿರಲಿ, ಅಲ್ಲಿ ಹೇಗೆ ಕಾರ್ಯ ನಡೆಯುತ್ತಿದೆಯೆಂದು ಸೂಕ್ಷ್ಮವಾಗಿ ಅರಿತವರಾಗಿದ್ದ ಇವರು ಎಲ್ಲರಿಗೂ ಸಮರ್ಪಕವಾಗಿ ಕಾರ್ಯ ವನ್ನು ವಹಿಸಿಕೊಡಬಲ್ಲವರಾಗಿದ್ದರು. ಸ್ವಭಾವತಃ ಸಂಶೋಧಕ ಮನೋ ಧರ್ಮ ಹೊಂದಿದ್ದ ಇವರು ಯಾವುದೇ ವಿಷಯವನ್ನು ವಿವರವಾಗಿ ಪರಿಶೀಲಿಸಿ ಸಮಸ್ಯೆ ಬಿಡಿಸುವ ಸಾಮರ್ಥ್ಯ ಹೊಂದಿದ್ದರು. ವ್ಯಕ್ತಿವ್ಯಕ್ತಿಗಳಲ್ಲಿ ತಾರತಮ್ಯಭಾವವಿಲ್ಲದೆ ಎಲ್ಲರೊಳಗೊಂದಾಗಿ ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಯಾವ ಕೆಲಸವಾದರೂ, ಎಂತಹ ಸಹಾಯವನ್ನಾದರೂ ನಿರ್ಬಿಢೆ ಯಿಂದ ನಡೆಸಿಕೊಡುತ್ತಿದ್ದರು. ತಮ್ಮಲ್ಲಿನ ಕ್ಷಮಾಗುಣದಿಂದಾಗಿ, ಕ್ಷಮೆಯ ಮೂಲಕ ಎಲ್ಲರನ್ನೂ ಗೆದ್ದು ಯಶಸ್ವಿಯಾಗುತ್ತಿದ್ದರು.

ಇವರು ಕುಲಪತಿಗಳಾಗಿದ್ದ ಸಮಯದಲ್ಲಿ ವಿಶ್ವವಿದ್ಯಾಲಯದಲ್ಲಿ ಸಂಗೀತವಿಭಾಗ, ಯೋಗಾಧ್ಯಯನ ವಿಭಾಗ, ಬಿಸಿನೆಸ್ ಮ್ಯಾನೇಜ್‌ಮೆಂಟ್ ವಿಭಾಗ, ಗಾಂಧಿ ಅಧ್ಯಯನ ವಿಭಾಗ, ಕಂಪ್ಯೂಟರ್ ಸೆಂಟರ್, ಸೆಂಟ್ರಲ್ ಇನ್ಸ್‌ಟ್ರುಮೆಂಟೇಶನ್ ಪ್ರಯೋಗ ಶಾಲೆಗಳು ಆರಂಭಗೊಂಡು ಯಶಸ್ವಿ ಯಾಗಿ ಕಾರ್ಯನಿರ್ವಹಿಸಿದವು.

ಪ್ರಾಧ್ಯಾಪಕ ಹಾಗೂ ವಿದ್ಯಾರ್ಥಿಗಳ ಗಮನ ಯಾವಾಗಲೂ ಶೈಕ್ಷಣಿಕ ಚಟುವಟಿಕೆಗಳಲ್ಲಿ ತೊಡಗಿರಬೇಕೆಂಬ ಧ್ಯೇಯ ಹೊಂದಿದ್ದ ಹಿರೇಮಠರು ತಮ್ಮ ಅಧಿಕಾರಾವಧಿಯಲ್ಲಿ, ಅಖಿಲ ಭಾರತ ವಿಶೇಷ ಗ್ರಂಥಾಲಯ ಸಮ್ಮೇಳನ; ಅಖಿಲ ಭಾರತ ಮಾನಸ ಶಾಸ್ತ್ರ ಸಮ್ಮೇಳನ; ಅಖಿಲಭಾರತ ಎಪಿಗ್ರಫಿ ಸಮ್ಮೇಳನ; ಅಖಿಲ ಭಾರತ ಸ್ಮಾರಕ ಶಿಲೆಗಳ ಸಮ್ಮೇಳನ, ಅಖಿಲ ಭಾರತ ಪ್ರಾಣಿಶಾಸ್ತ್ರ ಸಮ್ಮೇಳನ, ಅಖಿಲ ಭಾರತ ಮಾನವಿಕ ಶಾಸ್ತ್ರ ಸಮ್ಮೇಳನ; ಜೈನಪೀಠಸ್ಥಾಪನೆ, ಮೃತ್ಯುಂಜಯ ಸ್ಮಾರಕ ವ್ಯಾಖ್ಯಾನ ಮಾಲೆ, ಮಹಾದೇವಪ್ಪ ರಾಂಪುರೆ ಸ್ಮಾರಕ ವಿಶೇಷೋಪನ್ಯಾಸ ಮಾಲೆಗಳನ್ನು ಆರಂಭಿಸಿದರು. ಇದರೊಂದಿಗೆ ಕಲಬುರ್ಗಿ, ಸಂಡೂರು ಹಾಗೂ ಕಾರವಾರ ಗಳಲ್ಲಿ ಸ್ನಾತಕೋತ್ತರ ಕೇಂದ್ರಗಳನ್ನು ಆರಂಭಿಸಿ ಬೆಳೆಸುವಲ್ಲಿ ಹಿರೇಮಠ ಅವರು ಪಾತ್ರ ಹಿರಿದು. ಇವರ ಅಧಿಕಾರಾವಧಿಯಲ್ಲಿ ಬಹಳ ವರ್ಷಗಳ ಕನಸಾಗದ ಗ್ರಂಥಾಲಯ ಕಟ್ಟಡ ತಲೆ ಎತ್ತಿತು. ಭೌತಶಾಸ್ತ್ರ ವಿಭಾಗದ ಕಟ್ಟಡ, ಕನ್ನಡ ಅಧ್ಯಯನ ಪೀಠದ ಕಟ್ಟಡ, ಭೂಗರ್ಭ ಶಾಸ್ತ್ರ ವಿಭಾಗದ ಕಟ್ಟಡ ಹಾಗೂ ನಾಲ್ಕನೇ ದರ್ಜೆಯ ನೌಕರರ ವಸತಿ ಕಟ್ಟಡಗಳು ಇವರ ಅಧಿಕಾರವಧಿಯಲ್ಲಿ ಪೂರ್ಣಗೊಂಡವು. ಇದೂ ಅಲ್ಲದೆ ಅಪೂರ್ಣವಾಗಿದ್ದ ಕಾಯ್ದೆ ಕಾಲೇಜು ಕಟ್ಟಡ, ಕರ್ನಾಟಕ ಕಾಲೇಜು ಆವರಣದ ಗ್ರಂಥಾಲಯ ಕಟ್ಟಡಗಳು ಈ ಅವಧಿಯಲ್ಲಿ ಪೂರ್ಣಗೊಂಡವು.

ಕಲಬುರ್ಗಿಯಲ್ಲಿ ಸಮಾಜ ಶಾಸ್ತ್ರ ಮತ್ತು ಕಲಾವಿಭಾಗಗಳು, ಗ್ರಂಥಾಲಯ, ವಿದ್ಯಾರ್ಥಿ ವಸತಿ ಗೃಹ, ಪ್ರಾಧ್ಯಾಪಕ ಸಿಬ್ಬಂದಿ ವರ್ಗಗಳ ವಸತಿಗೃಹಗಳು, ಅತಿಥಿಗೃಹ, ಯೋಗ್ಯ ರಸ್ತೆಗಳು, ಮೈಕ್ರೊ ಬಯಾಲಜಿ, ಎಲೆಕ್ಟ್ರಾನಿಕ್ಸ್ ವಿಭಾಗದ ಕಟ್ಟಡಗಳು ಇವರ ಕಾಲದಲ್ಲಿ ರೂಪುಗೊಂಡವು. ಹಾಗೆಯೆ ಸಂಡೂರು ಕೇಂದ್ರದಲ್ಲಿ ಮೆಟಲರ್ಜಿ ಮತ್ತು ಕೆಮಿಕಲ್ ಇಂಜನಿಯರಿಂಗ್ ಕಟ್ಟಡಗಳ ನಿರ್ಮಾಣದ ರೂಪುರೇಷೆ ಸಿದ್ಧವಾಯಿತು, ಪ್ರಾಧ್ಯಾಪಕ ಹಾಗೂ ಸಿಬ್ಬಂದಿಗಳ ವಸತಿಗೃಹಗಳು ಈ ಅವಧಿಯಲ್ಲಿ ಆದುವು. ಕಾರವಾರ ಕೇಂದ್ರದಲ್ಲಿ ಪ್ರಾಧ್ಯಾಪಕರಾಗಿ ವಸತಿಗೃಹಗಳನ್ನು ಗೃಹನಿರ್ಮಾಣ ಮಂಡಳಿಯಿಂದ ಕೊಂಡುಕೊಳ್ಳಲಾಯಿತು ಹಾಗೂ ಸಾಗರ ಜೀವ ವಿಜ್ಞಾನ ವಿಭಾಗದ ಕಟ್ಟಡದ ವಿಸ್ತರಣೆಯೂ ಆಯಿತು.

ಒಟ್ಟಾರೆ ಹಲವು ಬಗೆಯ ಪ್ರಗತಿಯನ್ನು ಏಕಮುಖವಾಗಿ ಶೀಘ್ರವಾಗಿ ಸಾಧಿಸಿ ಶೈಕ್ಷಣಿಕ ಪ್ರಗತಿಯನ್ನು ಸಾಧಿಸಿದ ಕೀರ್ತಿ ಡಾ.ಆರ್.ಸಿ. ಹಿರೇಮಠ ಅವರದ್ದು.

ಹೀಗೆ ಸಾಮಾನ್ಯ ಕುಟುಂಬದಲ್ಲಿ ಹುಟ್ಟಿ, ಭಿಕ್ಷಾಟನೆಯಲ್ಲಿ ತೊಡಗಿಸಿ ಕೊಂಡು, ಜೊತೆಯಲ್ಲಿಯೇ ಅಧ್ಯಯನವನ್ನು ನಡೆಸಿ, ಸಂಸಾರದ ಹೊಣೆ ಹೊತ್ತು, ಕುರುಡಿ ತಾಯಿ, ತಂಗಿ, ತಮ್ಮಂದಿರನ್ನು ಬಡತನದಿಂದ ಸಾಕಿ, ಶೈಕ್ಷಣಿಕವಾಗಿಯೂ ಪ್ರಗತಿ ಸಾಧಿಸಿದ ಧೀಮಂತ ವ್ಯಕ್ತಿತ್ವ ಡಾ.ಆರ್.ಸಿ.ಹಿರೇ ಮಠ ಅವರದ್ದು.

❑

# ತ.ರಾ.ಸು.

ಎಲ್. ಎಸ್. ಶೇಷಗಿರಿರಾವ್

ತ.ರಾ.ಸು. ಅವರ ಬಾಲ್ಯ ಯೌವನಗಳ ಹಲವು ಪ್ರಭಾವಗಳು ಅವರ ಸಾಹಿತ್ಯದ ಸ್ವರೂಪವನ್ನು ರೂಪಿಸಿದವು. ಇವುಗಳಲ್ಲಿ ಬಾಲ್ಯದಲ್ಲಿ ಮುಖ್ಯವಾದದ್ದು ಚಿತ್ರದುರ್ಗದಲ್ಲಿ ಅವರು ಹುಟ್ಟಿದ್ದು, ತಳುಕಿನ ವೆಂಕಣ್ಣಯ್ಯನವರ ಮನೆತನದಲ್ಲಿ ಹುಟ್ಟಿದ್ದು. ಪ್ರತಿ ಕಲ್ಲೂ ಇತಿಹಾಸದ ವೀರರ ಕಥೆಯನ್ನೂ ಇತಿಹಾಸದ ದುರಂತ ಕಥೆಯನ್ನೂ ಸಾರಿ ಹೇಳುವ ಚಿತ್ರದುರ್ಗದಲ್ಲಿ ಹುಟ್ಟಿದ ಸುಬ್ಬರಾಯರು ಆ ಸ್ಥಳದೊಂದಿಗೆ ಅತ್ಯಂತ ಆತ್ಮೀಯವಾದ ಸಂಬಂಧವನ್ನು ಬೆಳೆಸಿಕೊಂಡರು. ತಮ್ಮ ಕೊನೆಯ ಕಾದಂಬರಿ 'ದುರ್ಗಾಸ್ತಮಾನ'ದ ಮುನ್ನುಡಿಯಲ್ಲಿ ಅವರು ಹೀಗೆ ಬರೆದರು: "ಚಿತ್ರದುರ್ಗದ ಜನರಿಗೆ ಚಿತ್ರದುರ್ಗ ಎಂದರೆ ಒಂದು ಊರಲ್ಲ, ಕೋಟೆಯಲ್ಲ, ಬೆಟ್ಟವಲ್ಲ, ತಮ್ಮ ಕರುಳಿಗೆ ಹೊಂದಿಕೊಂಡು ಬೆಳೆದ ಜೀವಂತ ವಸ್ತು." ಚಿತ್ರದುರ್ಗದ ಉತ್ಸಾಹೀ ಇತಿಹಾಸಕಾರರು ಹುಲ್ಲೂರು ಶ್ರೀನಿವಾಸ ಜೋಯಿಸರು ಹುಡುಗನ ಚಿತ್ರದುರ್ಗದ ಅಭಿಮಾನಕ್ಕೆ ನೀರೆರೆದರು, ದುರ್ಗದ ಇತಿಹಾಸವನ್ನು ಜೀವಂತ ಮಾಡಿದರು. ಮುಂದೆ ತ.ರಾ.ಸು. ಐತಿಹಾಸಿಕ ಕಾದಂಬರಿಗಳನ್ನು ಒಂದು ವಿಶಿಷ್ಟ ಮಾಧ್ಯಮ ಮಾಡಿಕೊಳ್ಳಲು ಇದು ಕಾರಣವಾದದ್ದಷ್ಟೆ ಅಲ್ಲ ಸಾಮಾನ್ಯ ಜನರನ್ನು ಮೀರಿ ನಿಂತ, ಸಿಡಿಲಿನ ಚೈತನ್ಯವನ್ನು ತುಂಬಿಕೊಂಡ, ಅಸಾಧಾರಣ ಭಾವಗಳ-ರಾಗಗಳ ದೈತ್ಯವ್ಯಕ್ತಿಗಳು ಇದರಿಂದ ತ.ರಾ.ಸು.ಗೆ ವಾಸ್ತವಿಕ ಸ್ತ್ರೀ ಪುರುಷರಾದರು. ಅವರ ಕಾದಂಬರಿಗಳ ಪಾತ್ರಗಳ ಸೃಷ್ಟಿಯ ಮೇಲೆ ಇದು ಪ್ರಭಾವವನ್ನು ಬೀರಿತು.

ತಳುಕಿನ ವೆಂಕಣ್ಣಯ್ಯನವರ ಮನೆತನಕ್ಕೆ ಸಾಹಿತ್ಯ ಸಂಸ್ಕೃತಿಗಳಲ್ಲಿ ವಿಶೇಷ ಅಭಿಮಾನ. ಇವರ ಹಿರಿಯರು ಯಕ್ಷಗಾನದಲ್ಲಿ ತೀವ್ರ ಆಸಕ್ತಿ ಇದ್ದವರು. ದೊಡ್ಡಪ್ಪ ವೆಂಕಣ್ಣಯ್ಯನವರು ವಿದ್ವಾಂಸರು, ಸದಭಿರುಚಿಯ ತೂಕದ ಮಾತಿನ ವಿಮರ್ಶಕರು. ತಂದೆ ರಾಮಸ್ವಾಮಯ್ಯನವರಿಗೆ ಸಾಹಿತ್ಯದಲ್ಲಿ ಆಸಕ್ತಿ. ಚಿಕ್ಕಪ್ಪ ಶಾಮರಾಯರು ವಿದ್ವಾಂಸರು, ಒಳ್ಳೆಯ ವಿಮರ್ಶಕರು.

ಸ್ವಾತಂತ್ರ್ಯ ಸಂಗ್ರಾಮವನ್ನು ಹತ್ತಿರದಿಂದ ಕಂಡವರು, ಅನಂತರ ಅದರಲ್ಲಿ ಭಾಗವಹಿಸಿ ಸೆರೆಮನೆವಾಸವನ್ನು ಅನುಭವಿಸಿದವರು ತ.ರಾ.ಸು. ಬೆಂಗಳೂರಿಗೆ ಬಂದು ಪತ್ರಿಕಾವೃತ್ತಿಯನ್ನು ಆರಿಸಿಕೊಂಡರು. ಸೇರಿದ್ದು 'ವಿಶ್ವ ಕರ್ನಾಟಕ' ಪತ್ರಿಕೆಯ ಕಚೇರಿಯನ್ನು. ಅದು ಸ್ವಾತಂತ್ರ್ಯದ ಹೋರಾಟದಲ್ಲಿ ತಮ್ಮ ಆಸ್ತಿಯನ್ನೆಲ್ಲ ಕಳೆದು ಆದರ್ಶತ್ವದ ಬೆನ್ನು ಹತ್ತಿ ಧೀರಜೀವನ ನಡೆಸುತ್ತಿದ್ದ ತಿರುಮಲೆ ತಾತಾಚಾರ್ಯ ಶರ್ಮರ ಪತ್ರಿಕೆ. ಅವರ ಜೊತೆಗೆ ಮತ್ತೊಂದು ಧೀರ ಜೀವ ಸಿದ್ದವನಹಳ್ಳಿ ಕೃಷ್ಣಶರ್ಮ. ಇಬ್ಬರದೂ ಶಕ್ತಿಯುತವಾದ ತೇಜಸ್ವಿ ಶೈಲಿ. ತ.ರಾ.ಸು. ಕೃಷ್ಣಶರ್ಮರಿಗೆ ಹತ್ತಿರವಾದರೂ, ಅವರ ಧ್ಯೇಯಗಳನ್ನೂ ಜೀವನ ರೀತಿಯನ್ನೂ ಬರಹವನ್ನೂ ಮೆಚ್ಚಿಕೊಂಡರು. ಅವರಂತೆಯೇ, ಬರಹವನ್ನೇ ವೃತ್ತಿಯನ್ನಾಗಿ ಮಾಡಿಕೊಂಡರು. ಪತ್ರಿಕೋದ್ಯಮಿಯಾಗಿ ಅರೆಹೊಟ್ಟೆ ಊಟಮಾಡಿ, ಆದರ್ಶತ್ವ ಕೇಳುವ ಬೆಲೆಯನ್ನು ತೆತ್ತರು.

ಸಿದ್ದವನಹಳ್ಳಿ ಕೃಷ್ಣಶರ್ಮರದು ವಿಶಿಷ್ಟವಾದ ಗದ್ಯ ಶೈಲಿ, ಪುಟ್ಟ ಪುಟ್ಟ ವಾಕ್ಯಗಳು. ಅನಗತ್ಯವಾದ ಕ್ರಿಯಾಪದಗಳಿಲ್ಲ, ಮೂರ್ತ ವಿವರಗಳು ಮತ್ತು ಮೂರ್ತ ಭಾಷೆ ಅಮೂರ್ತ ಚಿಂತನೆಗೆ ಹಾದಿ. ಮಾತಿನಲ್ಲಿ ಮನುಷ್ಯನನ್ನು ಕಡೆದು ನಿಲ್ಲಿಸಬಲ್ಲರು, ಮಾತಿನಲ್ಲಿ ದೃಶ್ಯವೊಂದನ್ನು ಕಣ್ಣಮುಂದೆ ನಿಲ್ಲಿಸಬಲ್ಲರು. ಈ ಚಿತ್ರಮಯ, ಮೂರ್ತ ಶೈಲಿ ತ.ರಾ.ಸು ಮನಸ್ಸನ್ನು ಸೆಳೆಯಿತು.

ತ.ರಾ.ಸು. ಬೆಂಗಳೂರಿಗೆ ಬಂದು 'ವಿಶ್ವ ಕರ್ನಾಟಕ' ಸೇರಿದ ದಿನಗಳಲ್ಲಿ ಅ.ನ.ಕೃ. ಪ್ರಗತಿಶೀಲ ಪಂಥವನ್ನು ನಿರ್ಮಿಸುತ್ತಿದ್ದರು. 1936ರ ಏಪ್ರಿಲ್ 10ರಂದು ಲಕ್ನೋದಲ್ಲಿ ಅಖಿಲ ಭಾರತ ಪ್ರಗತಿಶೀಲ ಲೇಖಕರ ಪ್ರಥಮ ಸಮ್ಮೇಳನ ಪ್ರೇಮಚಂದರ ಅಧ್ಯಕ್ಷತೆಯಲ್ಲಿ ನಡೆಯಿತು. ಕರ್ನಾಟಕದಲ್ಲಿ ಪ್ರಗತಿಶೀಲ ಚಳವಳಿಯ ನೇತಾರರಾದವರು ಅ.ನ.ಕೃ. (ತಮ್ಮ ಚಳವಳಿಗೆ ನೇರವಾಗಿ ಸೇರದಿದ್ದ ಬೇಂದ್ರೆ, ಶಿವರಾಮ ಕಾರಂತ, ಕೆ.ವಿ. ಪುಟ್ಟಪ್ಪ ಮೊದಲಾದವರನ್ನು ಪ್ರಗತಿಶೀಲರು ಎಂದು ಅ.ನ.ಕೃ. ಗುರುತಿಸಿದರು.) ಅ.ನ.ಕೃ. ಅವರ ಮಾತುಗಳಲ್ಲೆ ಪ್ರಗತಿಶೀಲ ಪಂಥದ ದೃಷ್ಟಿಯನ್ನು ಹೇಳುವುದಾದರೆ, "ಸಾಹಿತ್ಯವೆಂಬ ಮಡಿಕೋಟೆಯನ್ನು ಕಟ್ಟಿಕೊಂಡು ಸುತ್ತಮುತ್ತಲಿನ ಜಗತ್ತಿನ ಹಾಹಾಕಾರದ ಮೇಲೆ ಅವಕುಂಠನ ಹಾಕಿ ತನ್ನ ಭಾವಪ್ರಪಂಚದಲ್ಲಿ ಮೈಮರೆಯುವ ಸಾಹಿತಿ ತನ್ನ ಅಥವಾ ದೇಶದ ಹಿತವನ್ನು ಸಾಧಿಸಲಾರ .... ನವೋದಯ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಪದದೊಂದಿಗೆ ಪೂರ್ಣ ಬೆರೆಯುವ ಮನೋಭಾವನೆ ಇರಲಿಲ್ಲ. ಆದ್ದರಿಂದಲೇ ಅತೃಪ್ತಿ ಹುಟ್ಟಿತು. (ಸಾಹಿತಿಯ) ಕ್ರಾಂತಿಖಡ್ಗಕ್ಕೆ ಲೋಕದ ತಾಮಸಕಳೆಗಳು ನಡುಗಬೇಕು, ಅದು ದುರ್ಬಲರ, ದಲಿತರ, ಬಡವರ ರಕ್ಷಾಕವಚವಾಗಬೇಕು." (ಧಾರವಾಡ ಜಿಲ್ಲೆಯ ಆರನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ, 1946).

ಅ.ನ.ಕೃ. ಅವರು ತ.ರಾ.ಸು ಮೇಲೆ ಗಾಢವಾದ ಪ್ರಭಾವ ಬೀರಿದರು. ತರುಣ ಸಾಹಿತಿಗಳಿಗೆ ಪ್ರೋತ್ಸಾಹ ಕೊಡುವುದರಲ್ಲಿ ಸಂತೋಷವನ್ನು ಕಾಣುತ್ತಿದ್ದ ಅ.ನ.ಕೃ. ಈ ತರುಣ ಪ್ರತಿಭೆಯನ್ನು ಮೆಚ್ಚಿಕೊಂಡರು. ತ.ರಾ.ಸು. ಅ.ನ.ಕೃ. ಅವರಲ್ಲಿ ಗಾಢವಾದ ಗೌರವವನ್ನು ಬೆಳೆಸಿಕೊಂಡರು. ಪ್ರಗತಿಶೀಲ ಪಂಥದ ದೃಷ್ಟಿ, ಆದರ್ಶಗಳು ಅವರಿಗೆ ಮೆಚ್ಚಿಗೆಯಾದವು. ಆ ಚಳವಳಿಯ ಅತಿರಥಮಹಾರಥರಲ್ಲಿ ಒಬ್ಬರಾದರು.

1946ರಲ್ಲಿ ತ.ರಾ.ಸು. ಅವರ ಮೊದಲನೆಯ ಕಥಾಸಂಕಲನ 'ರೂಪಸಿ' ಪ್ರಕಟವಾಯಿತು. ಇದೇ ಸರಿಸುಮಾರಿಗೆ ಅವರ ಮೊದಲನೆಯ ಕಾದಂಬರಿ 'ಮನೆಗೆ ಬಂದ ಮಹಾಲಕ್ಷ್ಮಿ' ಪ್ರಕಟವಾಯಿತು. ಕಾದಂಬರಿ ತೀವ್ರ ವಾದವಿವಾದಕ್ಕೆ ಒಳಗಾದದ್ದು ವಿಷಾದದ ಸಂಗತಿ. ಎರಡರಲ್ಲಿಯೂ ಚಿತ್ರಮಯವಾದ, ಭಾವಪೂರ್ಣವಾದ, ಶಕ್ತವಾದ ಗದ್ಯದ ಪ್ರಭುವೊಬ್ಬರ ಪ್ರತಿಭೆ ಸ್ಪಷ್ಟವಾಗಿ ಕಾಣುತ್ತಿತ್ತು. 'ರೂಪಸಿ' ಸಂಗ್ರಹದಲ್ಲಿ ಪ್ರಗತಿಶೀಲ ಪಂಥಕ್ಕೆ ವಿಶಿಷ್ಟವಾದ ಅಂಶ ಯಾವುದೂ ಇಲ್ಲ. ಅದರ ಮೂರನೆಯ ಒಂದರಷ್ಟು ಭಾಗವನ್ನು ಆಕ್ರಮಿಸಿದ 'ಸಾಕ್ಷಾತ್ಕಾರ' ನಾಯಕನ ಕಾಮ ಅವನು ಬಯಸಿದವಳನ್ನು ಸುಟ್ಟ ನಂತರ ಅವನಿಗೆ ಪ್ರೇಮತ್ಯಾಗಗಳ ಬೆಲೆಯು ಅರಿವಾಗುತ್ತದೆ. ನವೋದಯ ಯುಗದ ಎರಡನೆ ಅಥವಾ ಮೂರನೆ ಪೀಳಿಗೆಯ ತರುಣ ಕಥೆಗಾರನೊಬ್ಬ ಬರೆಯಬಹುದಾಗಿದ್ದ ಕಥೆ ಇದು. ಆದರೆ ಇಡೀ ಸಂಗ್ರಹ ಅತ್ಯಂತ ಭಾವಮಯವಾದ, ಹಲವೊಮ್ಮೆ ಮಾದಕವಾದ, ಚಿತ್ರಮಯವಾದ ಶೈಲಿಯಿಂದ ಗಮನವನ್ನು ಸೆಳೆಯುತ್ತದೆ. ಜೊತೆಗೆ, ಈ ಕಥೆಗಳನ್ನು ಹೇಳುವಾತ ಹುಟ್ಟುಕಥೆಗಾರನೂ ಹೌದು, ಉದ್ದೇಶಪೂರ್ಣ ಕಲೆಗಾರನೂ ಹೌದು.

ಇಲ್ಲಿಂದ ಮುಂದೆ ಮುವತ್ತಾರು ವರ್ಷಗಳ ಕಾಲ ತ.ರಾ.ಸು. ಸಾಹಿತ್ಯ ರಚನೆ ಮಾಡಿದರು. ಅತ್ಯಂತ ಜನಪ್ರಿಯ ಬರಹಗಾರರಲ್ಲಿ ಒಬ್ಬರಾದರು. ಒಟ್ಟು ಅವರ ಹೆಸರನ್ನು ಹೊತ್ತ ಕೃತಿಗಳು ತೊಂಬತ್ತಾರು. ಈ ಸಂಖ್ಯೆಯಲ್ಲಿ ಅವರು ಸಂಪಾದಕರಾಗಿ ಸಿದ್ಧಮಾಡಿದ ಕೃತಿಗಳೂ ಇವೆ. ನಾಲ್ಕು ಕಥೆಗಳ ಸಂಗ್ರಹಗಳು ಎಪ್ಪತ್ತು ಕಾದಂಬರಿಗಳು. ಅ.ನ.ಕೃ. ಅವರನ್ನು ಮುಕ್ತವಾಗಿ ಪ್ರಶಂಸಿಸುವ 'ಅ.ನ.ಕೃ.'. 'ಮದಾಂಬಾವರಿ' ಭಾಷಾಂತರ; ಮೂರು ರೇಡಿಯೊ ರೂಪಕಗಳ ಸಂಗ್ರಹ; 'ಮಹಾಶ್ವೇತೆ', 'ಮೃತ್ಯು ಸಿಂಹಾಸನ' ಎನ್ನುವ ಐತಿಹಾಸಿಕ ನಾಟಕಗಳು ಇಂತಹ ಹಲವಾರು ಕೃತಿಗಳೂ ಅವರ ಲೇಖನಿಯಿಂದ ಮೂಡಿಬಂದವು. ಅವರ ಅನೇಕ ಕಾದಂಬರಿಗಳು ಚಲನಚಿತ್ರಗಳಾಗಿ ಲಕ್ಷಾಂತರ ಮಂದಿ ಪ್ರೇಕ್ಷಕರ ಮೆಚ್ಚಿಗೆಯನ್ನು ಗಳಿಸಿದವು. 'ಹಂಸಗೀತೆ'ಯು ಹಿಂದಿಯಲ್ಲಿ 'ಬಸಂತ ಬಹಾರ್' ಆಗಿ ಅಖಿಲ ಭಾರತ ಮಟ್ಟದಲ್ಲಿ ಮೆಚ್ಚಿಗೆಯನ್ನು ಗಳಿಸಿತು. ತ.ರಾ.ಸು. ಕರ್ನಾಟಕ ಸಾಹಿತ್ಯ ಅಕಾಡಮಿ ಸದಸ್ಯರಾಗಿದ್ದರು. ವಿಶ್ವವಿದ್ಯಾನಿಲಯದ ಸೆನೆಟಿನ ಸದಸ್ಯರಾಗಿದ್ದರು. ಕರ್ನಾಟಕ ಸಾಹಿತ್ಯ ಅಕಾಡೆಮಿ ಅವರನ್ನು ಸನ್ಮಾನಿಸಿತು. ಅವರ 'ದುರ್ಗಾಸ್ತಮಾನ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಸಂದಿತು. (ಈ ಮನ್ನಣೆಯಿಂದ ಸಂತೋಷಪಡಲು ಅವರು ಬದುಕಿರಲಿಲ್ಲ ಎನ್ನುವುದೇ ವಿಷಾದದ ಸಂಗತಿ.)

ಸುಮಾರು ಹದಿನೆಂಟು ವರ್ಷಗಳಲ್ಲಿ ತ.ರಾ.ಸು. ಇಪ್ಪತ್ತೊಂದು ಕಥೆಗಳನ್ನು ಬರೆದರು. ಇದು ಅವರ ಮುಖ್ಯ ಮಾಧ್ಯಮವಾಗಲಿಲ್ಲ. ಅವರ ಮೊದಲನೆಯ ಸಂಕಲನ 'ರೂಪಸಿ'ಯಲ್ಲಿ ಕಾಣುವುದು ಚಿತ್ರಮಯವಾದ, ಭಾವರಂಜಿತವಾದ ಗದ್ಯ ಶೈಲಿ. ಚಿಂತನೆಯ ಅಂಶ ಬಹು ಕಡಿಮೆ. ಪ್ರಗತಿಶೀಲ ಪಂಥದ ಧೋರಣೆ ಪ್ರತಿಬಿಂಬಿತವಾಗುವುದು 'ತೊಟ್ಟಿಲು ತೂಗಿತು' ಸಂಗ್ರಹದ ಅದೇ ಹೆಸರಿನ ಕಥೆಯಲ್ಲಿ. ಕಥೆಗಾರರಾಗಿ ತ.ರಾ.ಸು. ಪ್ರತಿಭೆ ಮಿಂಚುವುದು 'ಗಿರಿಮಲ್ಲಿಗೆಯ ನಂದನದಲ್ಲಿ' ಸಂಗ್ರಹದಲ್ಲಿ. ಮೊದಲಿನ ಕಥೆಗಳಲ್ಲಿ ಸನ್ನಿವೇಶವೇ ಕಥೆಗಾರನ ಎಲ್ಲ ಲಕ್ಷ್ಯವನ್ನು ಸೆಳೆದುಕೊಂಡಿದೆ. ಈ ಸಂಗ್ರಹದ ಕಥೆಗಳಲ್ಲಿ ಸನ್ನಿವೇಶವು ಬಾಳಿನ ಸಂಕೀರ್ಣತೆಯನ್ನು ಕಾಣುವ ಸಾಧನವಾಗುತ್ತದೆ. 'ಒಂದು ತುಂಡು ಸುದ್ದಿ' ಇಂತಹ ಕಥೆ. ಕೆಲಸ ಸಿಕ್ಕದೆ ಆತ್ಮಹತ್ಯೆ ಮಾಡಿಕೊಂಡ ಯುವಕನ ಸುದ್ದಿ ಹೊಸಜಗತ್ತನ್ನೆ ಬಿಚ್ಚಿಡುತ್ತದೆ. ನಮ್ಮ ಕಣ್ಣಿಗೆ ಕಾಣಿಸದ, ಆಗಲೇ ಭೂತಕಾಲದ ಗರ್ಭದಲ್ಲಿ ಸೇರಿಹೋದ ಪುಟ್ಟಣ್ಣನ ಏಕಾಕಿತನ, ಅವನ ಹೋರಾಟ ಮೂಡಿಬರುತ್ತವೆ. '0-0=0'ದಲ್ಲಿ ಸನ್ನಿವೇಶದಲ್ಲಿನ ಆಸಕ್ತಿ ಮಾಯವಾಗಿದೆ, ವಾಚಾಳಿತನವೂ ಮಾಯವಾಗಿದೆ. ಸಾಮಾನ್ಯ ಅರ್ಥದಲ್ಲಿ ಪ್ಲಾಟ್ ಅಥವಾ ಕಥಾವಸ್ತು ಇಲ್ಲ. ಕಥೆಯ ಶೀರ್ಷಿಕೆಯು ಈಶಾವಾಸ್ಯದ 'ಪೂರ್ಣಸ್ಯ ಪೂರ್ಣಮಾದಾಯ| ಪೂರ್ಣಮೇವಾವಶಿಷ್ಯತೇ' ಎನ್ನುವ ಶಾಂತಿಮಂತ್ರದ ಅಣಕ. (ಸ್ವಾತಂತ್ರ್ಯದ ನಂತರ ದೇಶ ಹಿಡಿದ ಭ್ರಷ್ಟಾಚಾರದ ದಾರಿಯಿಂದ ನಿರಾಸೆಯಾದ ಕಹಿಯಲ್ಲಿ ಈ ಕಥೆಯನ್ನು ಬರೆದರೆಂದು ತ.ರಾ.ಸು. ಒಂದು ಕಾಗದದಲ್ಲಿ ನನಗೆ ತಿಳಿಸಿದ್ದರು.) ಬದುಕುವ ತೀವ್ರ ಹಂಬಲದಿಂದ ಪ್ರಾರಂಭವಾಗುವ ಕಥೆಯ ಮುಕ್ತಾಯ ಸಾವಿನ ಆಶ್ರಯದ ಬಯಕೆಯಲ್ಲಿ. ಇಲ್ಲಿ ಪ್ರತಿಮೆ, ಸಂಕೇತ, ಭಾಷೆಗಳ ಪಾತ್ರ ವಿಶಿಷ್ಟವಾದದ್ದು. ಪ್ರಾರಂಭದಲ್ಲಿ ಆಕರ್ಷಿಸುವ ಭಾವಿಯು ಮುಂದುವರಿದಂತೆ ಬೇರೆ ಬೇರೆ ಅರ್ಥಗಳನ್ನು ಪಡೆದುಕೊಳ್ಳುತ್ತದೆ. ಈ ಕಥೆಯನ್ನು ವಿಮರ್ಶಕರು ನವ್ಯ ಕಥೆಯ ಮುನ್ಸೂಚನೆ ಎಂದು ವಿಶ್ಲೇಷಿಸಿರುವುದುಂಟು.

ಈ ಸಂಗ್ರಹ ಪ್ರಕಟವಾದ ಹತ್ತು ವರ್ಷಗಳ ನಂತರ ತ.ರಾ.ಸು. ಅವರ ಕಡೆಯ ಕಥಾಸಂಗ್ರಹ 'ಇದೇ ನಿಜವಾದ ಸಂಪತ್ತು' ಹೊರಬಿದ್ದಿತು. ಅನಂತರ ಅವರು ಹದಿನೇಳು ವರ್ಷ ಬದುಕಿದ್ದರು. ಆದರೆ ಸಣ್ಣಕಥೆಗಳನ್ನು ಬರೆಯಲಿಲ್ಲ. (ಅವರ ಸಮಗ್ರ ಸಣ್ಣಕಥೆಗಳಲ್ಲಿ ಇನ್ನೆರಡು ಕಥೆಗಳು, 'ಕುಂಟು ಕಾಲಿನ ಕತ್ತೆ' ಮತ್ತು 'ಎಲ್ಲಿದ್ದ ಇವನು ?' ಸೇರಿವೆ.) ತ.ರಾ.ಸು. ಅವರೇ ತಮ್ಮ ಕಥೆಗಳ ಬೆಳೆ ಕಡಿಮೆಯಾದುದಕ್ಕೆ ಕಾರಣ ಹೇಳಿದ್ದಾರೆ: "ಕಾದಂಬರಿಯನ್ನು ಬರೆಯುವುದಕ್ಕಿಂತಲೂ ಸಣ್ಣಕಥೆಯನ್ನು ಬರೆಯುವುದು ಕಠಿಣವಾದ ಕಲಾಮಾರ್ಗ ಎಂಬ ಸತ್ಯ ನನಗೆ ಗೋಚರಿಸಿದೆ." ('ಇದೇ ನಿಜವಾದ ಸಂಪತ್ತು' ಮುನ್ನುಡಿ.)

'0-0=0', 'ಒಂದು ತುಂಡು ಸುದ್ದಿ', 'ಇನ್ನೊಂದು ಮುಖ' ಇವು ತ.ರಾ.ಸು. ಸಣ್ಣಕಥೆಯ ಮಾಧ್ಯಮದ ಮೇಲೆ ಗಳಿಸಿದ ಪ್ರಭುತ್ವಕ್ಕೆ ಸಾಕ್ಷಿ. ಆದರೆ ಈ ಪ್ರಭುತ್ವ ಸಾಧಿಸಿದ ನಂತರ ಅವರು ಬಳಸಿದ್ದು ಹೆಚ್ಚಿಲ್ಲ, ಮುಖ್ಯವಾಗಿ ಅವರ ಮಾಧ್ಯಮ ಕಾದಂಬರಿ.

ಈ ಮಾತನ್ನು ಹೇಳುವಾಗ, ಪ್ರಾಯಶಃ ಬಹು ಶ್ರೇಷ್ಠ ನಾಟಕಕಾರರಾಗಬಹುದಾಗಿದ್ದ ತ.ರಾ.ಸು. ತಮ್ಮ ಕಾಲದ ಸಂದರ್ಭದಲ್ಲಿ ಕಾದಂಬರಿ ಮಾಧ್ಯಮವನ್ನು ಬಳಸಿಕೊಂಡರು ಎನ್ನುವ ಮಾತನ್ನು ಹೇಳಬೇಕು. ಅವರ ಕಾದಂಬರಿಗಳಲ್ಲಿ ಕಥಾವಸ್ತು ಸಾಗುವುದು ಶಕ್ತಿಯುತವಾದ ದೃಶ್ಯಗಳ ಮೂಲಕ. ಪಾತ್ರ-ಪಾತ್ರಗಳ ಪರಸ್ಪರ ಪ್ರತಿಕ್ರಿಯೆ, ಪ್ರಭಾವ ಅಥವಾ ಘರ್ಷಣೆ ಈ ದೃಶ್ಯಗಳಲ್ಲಿ ಸ್ಪಷ್ಟವಾಗುತ್ತದೆ. ತ.ರಾ.ಸು. ಸಾಹಿತ್ಯ ರಚನೆಯನ್ನು ಪ್ರಾರಂಭಿಸಿದಾಗ ಜೀವಂತವಾದ, ಶಕ್ತವಾದ ಕನ್ನಡ 'ಥಿಯೇಟರ್' ಇದ್ದಿದ್ದರೆ ಪ್ರಾಯಶಃ ಅವರು ನಾಟಕ ಮಾಧ್ಯಮವನ್ನು ಆರಿಸಿಕೊಳ್ಳುತ್ತಿದ್ದರು, ಯಶಸ್ವಿಯಾಗುತ್ತಿದ್ದರು.

ತ.ರಾ.ಸು. ಅವರ ಕಾದಂಬರಿಗಳನ್ನು ಮೂರು ವರ್ಗಗಳಾಗಿ ವಿಂಗಡಿಸಬಹುದು. ಮೊದಲನೆಯದು, ಪ್ರಗತಿಶೀಲ ಪಂಥದ ಉತ್ಸಾಹೀ ಅತಿರಥರಾಗಿ ಬರೆದ ಕಾದಂಬರಿಗಳು, 'ಕೇದಿಗೆ ವನ', 'ಜೀತದ ಜೀವ', 'ಪುರುಷಾವತಾರ', 'ಬೆಂಕಿಯ ಬಲೆ', 'ಬಿಡುಗಡೆಯ ಬೇಡಿ', 'ಮುಂಜಾವಿನಿಂದ ಮುಂಜಾವು', 'ರಕ್ತತರ್ಪಣ'- ಇವೆಲ್ಲ ಈ ವರ್ಗದ ಕೃತಿಗಳು. ಎರಡನೆಯದು ಐತಿಹಾಸಿಕ ಕಾದಂಬರಿಗಳು. ಹಲವು ಅವರ ಪ್ರೀತಿಯ ಚಿತ್ರದುರ್ಗದ ಇತಿಹಾಸಕ್ಕೆ ಪುನರ್ಜೀವ ಕೊಡುತ್ತವೆ. 'ಕಂಬನಿಯ ಕುಯಿಲು', 'ರಕ್ತರಾತ್ರಿ', 'ತಿರುಗುಬಾಣ', 'ಮೃತ್ಯುಸಿಂಹಾಸನ', 'ದುರ್ಗಾಸ್ತಮಾನ' ಎಲ್ಲ ಚಿತ್ರದುರ್ಗದ ಉಜ್ವಲ ಚರಿತ್ರೆಗೆ ಮುಡಿಪು. ಇವಲ್ಲದೆ 'ನೃಪತುಂಗ', 'ವಿಜಯೋತ್ಸವ', 'ಶಿಲ್ಪಶ್ರೀ', 'ಸಿಡಿಲಮೊಗ್ಗು', 'ಕೀರ್ತಿನಾರಾಯಣ' ಇಂತಹ ಚಾರಿತ್ರಿಕ ಕಾದಂಬರಿಗಳನ್ನು ಬರೆದರು. ಮೂರನೆಯದು, ಇತರ ಕಾದಂಬರಿಗಳು. ಇವನ್ನೆಲ್ಲ ಸಾಮಾಜಿಕ ಕಾದಂಬರಿಗಳು ಎಂದು ಕರೆಯುವುದು ಅಷ್ಟು ಸಮರ್ಪಕವಾಗಿ ಕಾಣುವುದಿಲ್ಲ. ಐತಿಹಾಸಿಕ, ಪೌರಾಣಿಕ ಅಲ್ಲದುವೆಲ್ಲ ಸಾಮಾಜಿಕ ಕಾದಂಬರಿಗಳಾಗುವುದಿಲ್ಲ. ಸಮಾಜದ ಆವರಣ ಮೂರ್ತವಾಗಬೇಕು, ಒಂದು ಪ್ರಬಲ ಪಾತ್ರವೇ ಆಗಬೇಕು, ಮನುಷ್ಯರ ಜೀವನದ ಗತಿಯ ಮೇಲೆ ಪ್ರಭಾವ ಬೀರಬೇಕು, ವಿರೋಧವನ್ನು ಹುಟ್ಟಿಸಬೇಕು, ವ್ಯಕ್ತಿ ಸಮಾಜಗಳ ಸಂಬಂಧ ಮುಖ್ಯವಸ್ತುವಾಗಬೇಕು. ಇದಿಲ್ಲದ ಕಾದಂಬರಿ ಸಾಮಾಜಿಕ ಕಾದಂಬರಿ ಆಗಲಾರದು. ಈ ಸ್ವರೂಪದ ತ.ರಾ.ಸು. ಕಾದಂಬರಿಗಳು ಬಹುಮಟ್ಟಿಗೆ ಪ್ರಗತಿಶೀಲ ಪಂಥದ ಕಕ್ಷೆಯಲ್ಲಿ ಬರುತ್ತವೆ. ಅವರ ಬಹು ಜನಪ್ರಿಯ ಕೃತಿಗಳಲ್ಲಿ ಹಲವು - 'ನಾಗರಹಾವು', ಚಂದನದ ಗೊಂಬೆ', 'ಚಂದವಳ್ಳಿಯ ತೋಟ', 'ಚಕ್ರತೀರ್ಥ' ಇಂತಹವು ನಿಜವಾಗಿ ಸಾಮಾಜಿಕ ಕಾದಂಬರಿಗಳಲ್ಲ. 'ಹಂಸಗೀತೆ'ಯನ್ನು

ಐತಿಹಾಸಿಕ ಕಾದಂಬರಿ ಎಂದು ಹಲವೊಮ್ಮೆ ವರ್ಣಿಸಿರುವುದು ನಿಜ, ಆದರೆ ಕಡೆಯಲ್ಲೆಲ್ಲೋ ಟಿಪ್ಪುಸುಲ್ತಾನ ಸುಳಿದ ಮಾತ್ರಕ್ಕೆ ಇದು ಐತಿಹಾಸಿಕವಾಗುವುದಿಲ್ಲ. ಈ ಮೂರನೆಯ ವರ್ಗದ ಕಾದಂಬರಿಗಳಲ್ಲಿ ವ್ಯಕ್ತಿ-ವ್ಯಕ್ತಿಗಳ ಸಂಬಂಧ, ವ್ಯಕ್ತಿತ್ವ ರೂಪುಗೊಳ್ಳುವುದು-ಇದರಲ್ಲಿ ಈ ಕಾದಂಬರಿಗಳ ಮುಖ್ಯ ಆಸಕ್ತಿ.

ಸಾಮಾಜಿಕ ಕಳಕಳಿಯಿಂದ ಪ್ರೇರಣೆ ಪಡೆದ ಕಾದಂಬರಿಗಳಲ್ಲಿ ಪ್ರಾರಂಭದಲ್ಲಿ ಕಾಣುವುದು ರೊಚ್ಚು. ಕೃತಿಯಾಚೆ ಜೀವನದಲ್ಲಿ ಬಂದ ರೊಚ್ಚು ಕೃತಿಯಲ್ಲಿ. ಸಂದರ್ಭ-ಪಾತ್ರಗಳಿಗೆ ಹೊಂದಿಕೊಳ್ಳದಿದ್ದರೂ ಹೊರ ಹೊಮ್ಮುವಂತೆ ಭಾಸವಾಗುತ್ತದೆ. ಆದರೆ ಕ್ರಮೇಣ ತ.ರಾ.ಸು. ಕಾದಂಬರಿಕಾರರಾಗಿ ಬೆಳೆದರು, ಸಂಯಮ ಬೆಳೆಸಿಕೊಂಡರು. ಕಾದಂಬರಿಕಾರರಾಗಿ ಅವರ ಮುನ್ನಡೆ ನೇರವಾದ ಸರಳರೇಖೆಯಲ್ಲಿ ಸಾಗಿತು ಎಂದೇನೂ ಹೇಳುವಂತಿಲ್ಲ. 1950ರಲ್ಲಿ ಪ್ರಕಟವಾದ 'ಮುಂಜಾವಿನಿಂದ ಮುಂಜಾವು', ಮರುವರ್ಷ ಪ್ರಕಟವಾದ 'ಪುರುಷಾವತಾರ'ಕ್ಕಿಂತ ಪ್ರಬುದ್ಧವಾಗಿದೆ. 'ಮುಂಜಾವಿನಿಂದ ಮುಂಜಾವು' ಪತ್ರಿಕೋದ್ಯಮಕ್ಕೆ ಕಾಲಿಟ್ಟವರ ಬವಣೆಯ ಕಥೆ. ಈ ವರ್ಗದ ಪ್ರತಿನಿಧಿಯಾಗಿ, ಉತ್ತಮ ಸೃಷ್ಟಿಯಾಗಿ 'ಬಿಡುಗಡೆಯ ಬೇಡಿ' (1953)ಯನ್ನು ಪರಿಗಣಿಸಬಹುದು. ಶತಮಾನಗಳಿಂದ ಶೋಷಣೆಗೊಳಗಾದ ಹೆಣ್ಣು ಈ ಕೃತಿಯ ಕೇಂದ್ರ. ವಿದ್ಯಾವತಿಯಾದ, ಮಧ್ಯಮವರ್ಗಕ್ಕೆ ಸೇರಿದ ಪ್ರಭಾವತಿ ಹೆಣ್ಣು ಗಂಡಿಗೆ ಕಡಮೆಯಲ್ಲ ಎಂದು ಭಾವಿಸುತ್ತಾಳೆ. ಮದುವೆಯೇ ತನ್ನ ಜೀವನದ ಪರಮಗುರಿ, ಗಂಡನನ್ನು ಸಂತೃಪ್ತಿ ಗೊಳಿಸುವುದೇ ಪರಮಸಾಧನೆ ಎಂದು ಬಾಳಬೇಕಾದ ಹೆಂಗಸಿನ ಬಗೆಗೆ ಅವಳಿಗೆ ಅನುಕಂಪ. ಅವಳ ಬಾಳಿನಲ್ಲೂ ಗಂಡಿನ ಪ್ರವೇಶವಾಗಿ, ತಂದೆಯ ವಿರೋಧವನ್ನೂ ಲಕ್ಷಿಸದೆ ಮದುವೆಯಾಗಿ ಸಂಸಾರ ಪ್ರಾರಂಭಿಸುತ್ತಾಳೆ ಅವಳು. ತಾನೂ ಸಮಾನತೆಗಾಗಿ, ತಾನೊಂದು ವ್ಯಕ್ತಿ ಎಂದು ಸಾಧಿಸಲು ಹೆಣಗಬೇಕಾದ ಅಗತ್ಯ ಒದಗುತ್ತದೆ. ಪ್ರಭಾವತಿಯ ಪಕ್ಕದಲ್ಲಿ ಕಾದಂಬರಿ ಇನ್ನು ಮೂವರು ಯುವತಿಯರನ್ನು ನಿಲ್ಲಿಸುತ್ತದೆ. ಲೀಲಾವತಿ ಸುಖಿಯಾದ ಗೃಹಿಣಿ, ಭಾರತದ ಗೃಹಿಣಿಯ ಆದರ್ಶವನ್ನು ಒಪ್ಪಿರುವವಳು. ಫ್ಲೋರಾ ಗಂಡಸನ್ನು ತಿರಸ್ಕಾರದಿಂದ ಕಾಣುವವಳು. ಗಂಡಸು ತನ್ನ ಕಾಮದ ತೃಪ್ತಿಗಾಗಿ ಇರುವ ಪ್ರಾಣಿ ಎಂದು ನಡೆದುಕೊಳ್ಳುವವಳು. ಸಮತಾವಾದದಲ್ಲಿ ನಂಬಿಕೆ ಇಟ್ಟ ಶಾಲಿನಿ ಮತ್ತೊಂದು ಪಾತ್ರ. ಪ್ರಭಾವತಿಗೆ ಕ್ರಮೇಣ ಹೆಣ್ಣಿನ ಸ್ವಾತಂತ್ರ್ಯದ ಪ್ರಶ್ನೆ ಎಷ್ಟೊಂದು ತೊಡಕಿನದು ಎಂಬುದು ಅರ್ಥವಾಗುತ್ತದೆ. ಬಿಡುಗಡೆಯೂ ಬೇಡಿಯಾಗುವ ಅಪಾಯದ ಅರಿವಾಗುತ್ತದೆ. ಕಾದಂಬರಿ ತಾನೆತ್ತಿಕೊಂಡ ವಸ್ತುವನ್ನು ಸರಳೀಕರಣಗೊಳಿಸದೆ ಅದನ್ನು ಬಿಡಿಸುತ್ತ, ಅದರ ಹಲವು ಆಯಾಮಗಳನ್ನೂ, ಮುಖಗಳನ್ನೂ ಗುರುತಿಸುತ್ತ ಸಾಗುತ್ತದೆ.

ಈ ಕಾದಂಬರಿಯಲ್ಲೆ ತ.ರಾ.ಸು. ಪ್ರಜ್ಞಾಪ್ರವಾಹ ತಂತ್ರವನ್ನು ಬಳಸಿದರು. ಪ್ರಾಯಶಃ ಈ ತಂತ್ರ ಕನ್ನಡ ಕಾದಂಬರಿ ಜಗತ್ತಿಗೆ ಪ್ರವೇಶಿಸಿದ್ದೂ ಈ ಕಾದಂಬರಿಯಿಂದಲೆ.

ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳತ್ತ ತಿರುಗುವ ಮುನ್ನ ಅವರ 'ರಕ್ತತರ್ಪಣ'ವನ್ನು ಗಮನಿಸಬೇಕು. ಒಂದು ಅರ್ಥದಲ್ಲಿ ಇದೂ ಚಾರಿತ್ರಿಕ ಕಾದಂಬರಿಯೇ. 1942ರ ಆಗಸ್ಟ್ ಹೋರಾಟ ಇದರ ವಸ್ತು. ಸ್ವಾತಂತ್ರ್ಯದ ಹಂಬಲವನ್ನು ಹೊತ್ತ ತರುಣನೊಬ್ಬ ಹಳ್ಳಿಯೊಂದಕ್ಕೆ ಕಾಲಿಟ್ಟುದರಿಂದ ಅದರ ಬದುಕಿನ ಸ್ವರೂಪವೇ ಬದಲಾಗಿ ಹೋಗುತ್ತದೆ. ಇಲ್ಲಿಯೂ ಭಾವಾತಿರೇಕ ಕಾಣುತ್ತದೆ. ಪಾತ್ರಗಳೆಲ್ಲ ತೀರ ಸರಳವಾದವು. ಕಪ್ಪು-ಬಿಳುಪುಗಳಲ್ಲಿ ಒಂದನ್ನೇ ಪಡೆದವರು. ಆದರೆ 1946ರಲ್ಲಿ ಪ್ರಕಟವಾದ ಈ ಕೃತಿ ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಸ್ವಾತಂತ್ರ್ಯದ ಹೋರಾಟದ ವಸ್ತುವನ್ನು ಮೊದಲು ತಂದ ಕೃತಿಗಳಲ್ಲೊಂದು.

'ದುರ್ಗಾಸ್ತಮಾನ'ದಲ್ಲಿ ತ.ರಾ.ಸು. ತಮ್ಮ ಐತಿಹಾಸಿಕ ಕಾದಂಬರಿಗಳ ಉದ್ದೇಶವನ್ನು ಹೀಗೆ ವಿವರಿಸಿದರು : "ನನ್ನ ಕೆಲವು ಐತಿಹಾಸಿಕ ಕಾದಂಬರಿಗಳು ಪ್ರಕಟವಾದಾಗ 'ಇಂದಿನ ದೃಷ್ಟಿಯಿಂದ ನೋಡಿಲ್ಲ' ಎಂದು ಕೆಲವರು ವಿಮರ್ಶೆ ಮಾಡಿದ್ದೂ ಉಂಟು. ಆದರೆ ಕಾದಂಬರಿಕಾರ ಇತಿಹಾಸದ ನ್ಯಾಯಾಧೀಶನಲ್ಲ. 'ಇಂದಿನ ನಂಬಿಕೆ ಅಂದಿನ ಜೀವನಕ್ಕೆ ಒರೆಗಲ್ಲು' ಎನ್ನುವುದು ನಾನು ಒಪ್ಪದ ಮಾತು. ಆ ಕಾಲವನ್ನು ಅಂದಿನ ನಂಬಿಕೆ, ನಡವಳಿಕೆ, ನೀತಿ, ನಿಯಮಗಳು ಹೇಗಿದ್ದಿತೋ ಹಾಗೆ ಚಿತ್ರಿಸುವುದು ಮಾತ್ರ ನನ್ನ ಕರ್ತವ್ಯ." ಈ ಮಾತನ್ನು ಸಂಪೂರ್ಣವಾಗಿ ಒಪ್ಪಿದರೆ ಒಂದು ಐತಿಹಾಸಿಕ ಕಾದಂಬರಿ ಕಳೆದುಹೋದ ಒಂದು ಯುಗದ ಪುನರ್‌ಸೃಷ್ಟಿ ಅಷ್ಟೆ ಎಂದು ಒಪ್ಪಬೇಕಾಗುತ್ತದೆ. ಹೀಗಾದರೆ, ಇಂತಹ ಕಾದಂಬರಿಯನ್ನು ನಮ್ಮ ಕುತೂಹಲ ತಣಿಸಲು ಮಾತ್ರ ಓದಬೇಕು ಎಂದಾಗುತ್ತದೆ. ಇಂತಹ ಕೃತಿಯ ಪ್ರಸ್ತುತತೆ ಏನು ಎಂಬ ಪ್ರಶ್ನೆ ಏಳುತ್ತದೆ. ಕಳೆದುಹೋದ ಯುಗದ ಪಾತ್ರಗಳನ್ನು ಇಂದಿನ ಮಾನದಂಡಗಳಿಂದ ಅಳೆಯದಿದ್ದರೂ ಇತಿಹಾಸದ ಒಂದು ವ್ಯಾಖ್ಯಾನ, ಒಂದು ಜನಸಮುದಾಯದ ಏಳಿಗೆ-ಅವನತಿಗಳನ್ನು ಕುರಿತ ಒಂದು ಸಾರ್ವಕಾಲಿಕ ವ್ಯಾಖ್ಯಾನ ಐತಿಹಾಸಿಕ ಕಾದಂಬರಿಯಿಂದ ಲಭ್ಯವಾಗಬೇಕಾಗುತ್ತದೆ.

ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ಪ್ರಾತಿನಿಧಿಕವಾಗಿ 'ದುರ್ಗಾಸ್ತಮಾನ'ವನ್ನೇ ಪರಿಗಣಿಸಬಹುದು. ಅವರ ಎಲ್ಲ ಐತಿಹಾಸಿಕ ಕಾದಂಬರಿಗಳಂತೆ ಇದೂ ಘಟನೆಗಳಿಂದ ತುಂಬಿಹೋಗಿದೆ. ಇಡೀ ಕೃತಿ ಪೌರುಷದ ಜಯಘೋಷವಾಗಿ, ಅಗ್ನಿಪರ್ವತವೊಂದು ಪುರುಷರೂಪ ತಾಳಿ ನಾಯಕನಾಗಿ ಬಂದಂತೆ ಭಾಸವಾಗುತ್ತದೆ. ಅಂತಹ ಚೈತನ್ಯಮಯ ಮನುಷ್ಯ ಮದಕರಿನಾಯಕ. ದುರ್ಗ-ನಾಯಕರ ಅವಿನಾಭವ ಕೃತಿಯಲ್ಲಿ ರೂಪ ತಾಳುತ್ತದೆ. ದುರ್ಗವೇ ನಾಯಕ, ನಾಯಕನೇ ದುರ್ಗ. ಇಡೀ ರಾಜ್ಯದ ಹಂಬಲ ಅವನನ್ನು ಬೆಳಸುತ್ತದೆ. ಅವನು ರಾಜ್ಯದ ಅಂತರ್‌ಶಕ್ತಿಯ ಮೂರ್ತಿಯಾಗುತ್ತಾನೆ. ಅವನ ಅವನತಿ ಪ್ರಾರಂಭವಾಗುವುದು ರಾಜ್ಯದ ಮತ್ತು ರಾಜಮನೆತನದ ಕಲ್ಯಾಣವನ್ನೇ ಬಯಸುವ ಧಾರ್ಮಿಕ ಗುರುಗಳಿಬ್ಬರಿಂದಲೂ ದೂರವಾದಾಗ. ಇದರ ನಂತರ ಅವನ ಇಂದ್ರಿಯ ಸಂಯಮವೂ ಸಡಿಲುತ್ತದೆ, 'ಕೀಚಕತನ' ಪ್ರಕಟವಾಗುತ್ತದೆ. ಅತ್ಯಂತ ಬುದ್ಧಿವಂತನಾದ ಪ್ರಧಾನಿಯೂ ದೂರವಾಗುತ್ತಾನೆ. ಒಂದು ಧರ್ಮ ಸೂಕ್ಷ್ಮಕ್ಕೆ ಸಿಲುಕಿದಾಗ (ಹೈದರಾಲಿ ದುರ್ಗವನ್ನು ಮುತ್ತಿದಾಗ 'ಪಂಜಾ' ತೊಳೆಯಲು ತಾವು ಊರ ಹೊರಕ್ಕೆ ಹೋಗಬೇಕೆಂಬ ಕೆಲವರು ಮುಸ್ಲಿಮರ ಪ್ರಾರ್ಥನೆಯನ್ನು ಸಲ್ಲಿಸಬೇಕೆ?) ಸರಿಯಾದ ಮಾರ್ಗದರ್ಶನ ಮಾಡುವವರಿಲ್ಲದೆ ತಪ್ಪು ಹೆಜ್ಜೆ ಇಡುತ್ತಾನೆ. ಅಪಾತ್ರಕ್ಕೆ ತೋರಿದ ಉದಾತ್ತತೆಯ ದುರಂತವಾಗುತ್ತದೆ ಅವನ ಬಾಳು. ಪೌರುಷಕ್ಕೆ ನೀತಿ, ವ್ಯವಹಾರ ಜ್ಞಾನ ಎರಡೂ ಜೊತೆಗಾರರಾಗಬೇಕು. ಈ ಜೊತೆ ತಪ್ಪಿದಾಗ ದುರಂತ ಅನಿವಾರ್ಯ.

ಶಿವರಾಮ ಕಾರಂತರು ದುಡಿಮೆಯನ್ನು ಮೌಲ್ಯ ಮಾಡಿದಂತೆ, ತ.ರಾ.ಸು. ಪೌರುಷವನ್ನು ಒಂದು ಮೌಲ್ಯವನ್ನಾಗಿ ಮಾಡಿದರು.

ತ.ರಾ.ಸು. ಅವರ ಇತರ ಕಾದಂಬರಿಗಳಲ್ಲಿ ಮಾನವೀಯ ಸಂಬಂಧಗಳೇ ಮುಖ್ಯ. 'ಚಂದವಳ್ಳಿಯ ತೋಟ', 'ಚಂದನದ ಗೊಂಬೆ', 'ಚಕ್ರತೀರ್ಥ'

ಮೊದಲಾದ ಕಾದಂಬರಿಗಳಲ್ಲೆಲ್ಲ ಕಾಣುವುದು ಅಂತಃಕರಣದ ಮಹತ್ವ, ಪಾವಿತ್ರ್ಯ. ಈ ವರ್ಗದ ಬಹುಮಟ್ಟಿನ ಕಾದಂಬರಿಗಳಲ್ಲಿ ಅತಿ ಅಹಂಭಾವ, ಛಲ ಇವು ಸುಂದರವಾದ ಬಾಳನ್ನು ಕೆಡಿಸುತ್ತವೆ. ಈ ವರ್ಗದಲ್ಲಿ 'ಹಂಸಗೀತೆ' ಒಂದು ವಿಶಿಷ್ಟ ಕೃತಿ. ಪರಿಪಕ್ವತೆಗೆ ಗಟ್ಟಿತನದ ಯಾತ್ರೆ ಇದು. ಈ ಯಾತ್ರೆಯ ಹಾದಿ ಸಂಗೀತ. ಬಂಡೆಯಂತಹ ವ್ಯಕ್ತಿತ್ವದ ವೆಂಕಟಸುಬ್ಬಯ್ಯ ಕ್ರಮೇಣ ಮನುಷ್ಯನಾಗಿ, ಕಡೆಗೆ ದೇವರಿಗೇ ಮೀಸಲಾದ ಚೇತನವಾಗಿ ಬೆಳೆಯುವ ಪ್ರಕ್ರಿಯೆ ಕಾದಂಬರಿಯ ವಸ್ತು. ಕಥೆಯನ್ನು ಬೇರೆ ಬೇರೆ ಸ್ಥಳಗಳ ಮತ್ತು ಸ್ತರಗಳ ಪಾತ್ರಗಳಿಂದ ಹೇಳಿಸುವ ತಂತ್ರದಿಂದಾಗಿ ಕಥೆ ಭೂತ-ವರ್ತಮಾನಗಳ ನಡುವೆ ತೂಗುವಂತಾಗುತ್ತದೆ, ವಸ್ತುವನ್ನು ಸಾಕಷ್ಟು ದೂರದಿಂದ ಹಲವು ಕೋನಗಳಿಂದ ನೋಡುವುದು ಸಾಧ್ಯವಾಗುತ್ತದೆ.

ತ.ರಾ.ಸು. ಅವರ ಒಟ್ಟು ಕಾದಂಬರೀ ಸೃಷ್ಟಿಯನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದು. ಉತ್ಕಟತೆ, ಭಾವತೀವ್ರತೆ ಅವರ ಸಾಹಿತ್ಯದಲ್ಲಿ ಎದ್ದು ಕಾಣುವ ಲಕ್ಷಣ. ಇದು ಅವರ ಜನಪ್ರಿಯತೆಯ ಹಲವು ಕಾರಣ ಗಳಲ್ಲಿ ಒಂದು. ಹಲವೊಮ್ಮೆ ಇದು ದೋಷವಾಗುತ್ತದೆ, ಸನ್ನಿವೇಶಕ್ಕೆ ಸಲ್ಲದ ವರ್ಣಮಯವಾದ ಅಥವಾ ಉದ್ವೇಗದ ಭಾಷೆಗೆ ಎಡೆಕೊಡುತ್ತದೆ. ಆದರೆ ಈ ಗುಣವೇ ಅವರು ಸ್ನೇಹ, ಪ್ರೇಮ, ವಿಶ್ವಾಸ, ಅಭಿಮಾನಗಳ ತಂಪನ್ನೂ, ಸತ್ವವನ್ನೂ ಒಂದು ಸನ್ನಿವೇಶದಲ್ಲಿ ಹಿಡಿದಿರುವುದನ್ನು ಸಾಧ್ಯಮಾಡಿತು. ಎಲ್ಲಕ್ಕಿಂತ ಮೊದಲಾಗಿ ತ.ರಾ.ಸು. ಹೃದಯವಂತಿಕೆಯ ಕಾದಂಬರಿಕಾರ. ಅವರ ಕಾದಂಬರಿಗಳಲ್ಲಿ ಅಲ್ಲಲ್ಲಿ ಕ್ರೌರ್ಯದ ಎಳೆ ಕಾಣಿಸಿಕೊಳ್ಳುವುದುಂಟು. ಅಲ್ಲದೆ ಅವರು ನಿರೂಪಿಸುವ ಅನುಭೂತಿಗಳು, ಹಲವೊಮ್ಮೆ ಸ್ವಲ್ಪ ಒರಟು ಎನ್ನಿಸುತ್ತದೆ. ಇಷ್ಟಾದರೂ ಹೃದಯವಂತಿಕೆಯನ್ನು ಅವರು ಕೆಲವು ದೃಶ್ಯ ಗಳಲ್ಲಿ ಹರಳುಗಟ್ಟಿಸುತ್ತಾರೆ. ತ.ರಾ.ಸು. ಕಾದಂಬರಿಯನ್ನು ಓದಿದ ನಂತರ ಬಹುಮಟ್ಟಿಗೆ ಮನಸ್ಸಿನಲ್ಲಿ ಉಳಿಯುವುದು ಮನುಷ್ಯನ ರಾಗಗಳ ಪ್ರಚಂಡ ಶಕ್ತಿ-ಒಳಿತಿಗಾಗಲಿ, ಕೆಡಕಿಗಾಗಲಿ ಕೆಲಸ ಮಾಡುವ ರಾಗಗಳ ಪ್ರಚಂಡ ಶಕ್ತಿ. ಇದು ಸಂವಹನವಾಗುವುದು ತ.ರಾ.ಸು. ಅವರ ಉತ್ಕಟತೆಯಿಂದ, ಅವರ ಭಾಷೆಯ ಚೈತನ್ಯದಿಂದ. ಪ್ರಗತಿಶೀಲ ಪಂಥ ವಾಸ್ತವಿಕತೆಯ ಪತಾಕೆಯನ್ನು ಎತ್ತಿತು. ಆದರೆ ವಾಸ್ತವಿಕತೆ ಎರಡು ಬಗೆಯದು-ಒಳವಿಷಯದ ವಾಸ್ತವಿಕತೆ (realism of content) ಮತ್ತು ಹೊರಸ್ವರೂಪದ ಅಥವಾ ನಿರೂಪಣೆಯ ವಾಸ್ತವಿಕತೆ (realism of expression). ತ.ರಾ.ಸು. ಪ್ರಗತಿಶೀಲದ ಅತಿರಥ ರಾಗಿ ವಾಸ್ತವಿಕತೆಯನ್ನು ಪ್ರತಿಪಾದಿಸಿದರೂ, ಸ್ವಭಾವದಿಂದ ಅವರು 'ರೊಮ್ಯಾಂಟಿಕ್'. ಅವರ ಕಣ್ಣು ಆದರ್ಶವಾದುದರತ್ತ, ಅಸಾಧಾರಣ ವಾದುದರತ್ತ, ಅಸಾಮಾನ್ಯವಾದುದರತ್ತ ಹೊರಳುತ್ತದೆ. ಅವರ ಐತಿಹಾಸಿಕ ಕಾದಂಬರಿಗಳಲ್ಲಂತೂ ಮುಖ್ಯ ಪಾತ್ರಗಳು ಜೀವನದಲ್ಲಿ ನಾವು ಕಾಣುವ ಮನುಷ್ಯರನ್ನು ಮೀರಿದವು (larger than life). ಇತರ ಕಾದಂಬರಿಗಳಲ್ಲೂ ಒಬ್ಬ ವೆಂಕಟಸುಬ್ಬಯ್ಯನಾಗಲಿ, ಒಬ್ಬ ರಾಮಾಚಾರಿಯಾಗಲಿ ಇಂತಹ ಪಾತ್ರವೇ. ಪೌರುಷ, ಅಂತಃಕರಣ ಇವಿದ್ದರೆ ಮನುಷ್ಯ ಎಂತಹ ಎತ್ತರಕ್ಕೆ ಬೆಳೆಯಬಲ್ಲ ಎಂಬ ಕನಸು ಅವರ ಅನೇಕ ಕಾದಂಬರಿಗಳ ಕೇಂದ್ರದಲ್ಲಿದೆ.

ಮನುಷ್ಯನ ಸ್ವಭಾವದ ಬೆಳವಣಿಗೆ ಮತ್ತು ಅವನ ಮೌಲ್ಯ ಶ್ರೇಣಿಗಳನ್ನು ಅವನ ಸಾಮಾಜಿಕ ಮತ್ತು ಆರ್ಥಿಕ ಆವರಣ ಎಷ್ಟರ ಮಟ್ಟಿಗೆ ನಿರ್ಧರಿಸುತ್ತದೆ ಎನ್ನುವುದನ್ನು ಗುರುತಿಸಿದ ಕಾದಂಬರಿಕಾರರಲ್ಲಿ ತ.ರಾ.ಸು. ಒಬ್ಬರು. ಇದರಿಂದಾಗಿ, ವ್ಯಕ್ತಿಪ್ರಧಾನವಾಗಿದ್ದ ಕಾದಂಬರಿ ಸಮಾಜ ಪ್ರಧಾನವಾಯಿತು. ಆದರೆ ವ್ಯಕ್ತಿತ್ವದಲ್ಲಿ - ಅದರಲ್ಲೂ ರಾಗಗಳ ಮತ್ತು ಅಂತಃಕರಣದ ಪ್ರಭಾವದಲ್ಲಿ - ಅವರಿಗೆ ಗಾಢ ಆಸಕ್ತಿಯಿದ್ದುದರಿಂದ ಈ ಮೂರ್ತ ಆವರಣದಲ್ಲಿ ಜೀವಂತ ಪಾತ್ರಗಳ ಸೃಷ್ಟಿಯಾಯಿತು. ಅವರ ಭಾಷೆ ವರ್ಣಮಯ, ಬಲಶಾಲಿ, ಚೈತನ್ಯಮಯ. ಹಲವೊಮ್ಮೆ ತ.ರಾ.ಸು. ಅವರ ಭಾಷೆಯಲ್ಲಿ ದುಂದುಗಾರಿಕೆ ಇದೆ ಎನ್ನಿಸಿದರೂ ಅವರು ಅಡಕವಾದ ಮಾತಿನ ಪ್ರಭು ಎನ್ನುವುದೂ ನಿಜ. ಗಾದೆಯ ಮಾತಿನಂತೆ ಕೆಲವೇ ಮಾತುಗಳಲ್ಲಿ ಗಾಢ ಭಾವನೆಯನ್ನೋ, ಜೀವನವನ್ನು ಕುರಿತ ಪ್ರತಿಕ್ರಿಯೆಯನ್ನೋ ಅವರು ಅಡಗಿಸಬಲ್ಲರು. ಅದೃಶ್ಯವಾದ ಆದರೆ ನಾಡಿನ ಜೀವನದಲ್ಲಿ ಪ್ರಭಾವ ಶಾಲಿಯಾದ ಜನತೆಯ ಸಂಸ್ಕೃತಿಗೆ ಹತ್ತಿರವಾಗಿದ್ದವರು ಅವರು. ಉದಾತ್ತತೆಯನ್ನು, ತ್ಯಾಗವನ್ನು, ಹೃದಯವಂತಿಕೆಯನ್ನು ಮೆಚ್ಚುವ ಸಂಸ್ಕೃತಿ ಇದು. ಇದರಿಂದಲೇ ಸಾಮಾನ್ಯ ಓದುಗ ತ.ರಾ.ಸು. ಬರಹಕ್ಕೆ ರೋಮಾಂಚನಗೊಂಡ. ವಾಸ್ತವಿಕತೆ, ರೊಮ್ಯಾಂಟಿಸಿಸಂ, ಆದರ್ಶತ್ವ ಮೂರರ ಸಂಗಮ ತ.ರಾ.ಸು.ವಿನ ಶ್ರೇಷ್ಠ ಸಾಹಿತ್ಯಕೃತಿಗಳು.

❑

# ಮಲ್ಲಿಕಾ

ಡಾ. ಡಿ. ಮಂಗಳಾ ಪ್ರಿಯದರ್ಶಿನಿ

ಮಹಿಳೆಯರು ಸಾಂಸ್ಕೃತಿಕ, ಸಾಹಿತ್ಯರಂಗದಲ್ಲಿ ಹೆಚ್ಚು ಪ್ರವೇಶ ಪಡೆಯದಿದ್ದ ದಿನಗಳಲ್ಲಿ ತಿರುಮಲಾಂಬಾ, ಕಲ್ಯಾಣಮ್ಮ, ಕೊಡಗಿನ ಗೌರಮ್ಮ - ಮೊದಲಾದ ಸ್ತ್ರೀಯರು ಕನ್ನಡ ಸಾಹಿತ್ಯ, ಸಂಸ್ಕೃತಿಗಳ ಕಡೆಗೆ ಆಸಕ್ತಿ ತೋರಿದರು. 'ಹೆಣ್ಣಾನ' ನಿರ್ಲಕ್ಷ್ಯಕ್ಕೆ ಒಳಗಾಗಬೇಕಾದ ಪರಿಕಲ್ಪನೆಯ, ಬದಲಿಗೆ ಅದು ಸಮಾಜದ, ಬದುಕಿನ ಮತ್ತೊಂದು ಪ್ರಜ್ಞೆಯನ್ನು ದಾಖಲಿಸುವ ವಿಚಾರ, ಎಂದು ಈ ಮಹಿಳೆಯರು ಭಾವಿಸಿದರು. ಬಹುಶಃ ನಮ್ಮ ಆಧುನಿಕ ಕನ್ನಡದ ಮೊದಲ ತಲೆಮಾರಿನ ಮಹಿಳೆಯರು ಇವರು ಎಂದು ಗುರುತಿಸಿಕೊಳ್ಳಬಹುದು. ಅದಾದ ನಂತರ ಸ್ವಾತಂತ್ರ್ಯೋತ್ತರದಲ್ಲಿ ದಿಟ್ಟವಾಗಿ ಬರವಣಿಗೆಯನ್ನು ಪ್ರಾರಂಭಿಸಿದ ಎಂ.ಕೆ. ಇಂದಿರಾ, ತ್ರಿವೇಣಿ, ವಾಣಿ, ಶ್ರೀಮತಿ ರಾಜವಾಡೆ - ಮೊದಲಾದ ಲೇಖಕಿಯರು ಸಾಹಿತ್ಯದ ಜನಪ್ರಿಯತೆಗೆ ಕಾರಣರಾದರು. ಈ ಹಂತ ಹೆಣ್ಣಿನ ಮನಸ್ಸಿನ ಅನಾವರಣದ ಎರಡನೆಯ ಘಟ್ಟ ಎಂದು ಕರೆಯಬಹುದೇನೊ? ಇಂತಹ ಒಂದು ಘಟ್ಟದಲ್ಲಿ ಕಾಣಿಸಿಕೊಳ್ಳುವ ಲೇಖಕಿ, ಶ್ರೀಮತಿ ಮಲ್ಲಿಕಾ ಅವರು.

ಮಲ್ಲಿಕಾ ಅವರು 1920ರ ಜೂನ್ 15ರಂದು ಚಿಕ್ಕಮಗಳೂರಿನ ನಿತ್ಯಹರಿದ್ವರ್ಣದ ಸೊಬಗಿನ ಕುದುರೆಮುಖದ ತಪ್ಪಲಿನ ಸುಂಕಶಾಲೆಯ ಅತ್ತಿಗೊಂಡ ಕಾಫಿತೋಟದಲ್ಲಿ ಜನಿಸಿದರು. ಬಾಗಮನೆ ಚಿಕ್ಕಮಗಳೂರಿನ ಅತ್ಯಂತ ಪ್ರತಿಷ್ಠಿತ ಶ್ರೀಮಂತ ಕುಟುಂಬಗಳಲ್ಲೊಂದು. ತಂದೆ ಬಾಗಮನೆ ಚೆನ್ನೇಗೌಡ, ತಾಯಿ ಪಾರ್ವತಮ್ಮನವರ ಹನ್ನೊಂದು ಮಕ್ಕಳಲ್ಲಿ ನಾಲ್ಕನೆಯವರಾಗಿ ಜನಿಸಿದ ಲಕ್ಷ್ಮೀದೇವಿ, ಖ್ಯಾತ ವಕೀಲರು, ಸ್ವತಃ ಲೇಖಕರು, ರಾಜಕಾರಣಿಗಳು ಆದ ಕಡಿದಾಳ್ ಮಂಜಪ್ಪನವರನ್ನು ಕೈಹಿಡಿದು 'ಮಲ್ಲಿಕಾ' ಎಂಬ ಕಾವ್ಯನಾಮದಿಂದ ಬರವಣಿಗೆಯ ಬದುಕನ್ನು ಪ್ರಾರಂಭಿಸಿದರು.

ಬಾಗಮನೆ ಕುಟುಂಬದಲ್ಲಿ ಸುಸಂಸ್ಕೃತ ವಾತಾವರಣವಿದ್ದರೂ, ಮಲ್ಲಿಕಾ ಅವರಿಗೆ ಶಾಲೆಗಳು ಕಾಫೀತೋಟದಿಂದ ತುಂಬ ದೂರದಲ್ಲಿದ್ದುದರಿಂದ ಶಾಲಾಶಿಕ್ಷಣ ದೊರಕಲಿಲ್ಲ, ಶಾಲೆಗೆ ಹೋಗುವ ಸಾಧ್ಯತೆಗಳಿಲ್ಲದಿದ್ದರೂ, ಮನೆಯಲ್ಲಿಯೇ ಓದು, ಬರಹ, ಒಂಬತ್ತರ ಬಾಲೆ ಲಕ್ಷ್ಮಿಗೆ ಸಿಕ್ಕಿದ ಯಾವುದೋ ಒಂದು ಕಾದಂಬರಿ, ಮುಂದೆ ಆಕೆ ಬರಹದ ಬದುಕಿನತ್ತ ಹೊರಳಲು ಪ್ರೇರಣೆ ನೀಡಿತು. ಇಪ್ಪತ್ತರ ಹರೆಯದಲ್ಲಿ ಮದುವೆ, ಸಂಸಾರದ ಜವಾಬ್ದಾರಿ, ಮಕ್ಕಳು-ಇವೆಲ್ಲದರ ನಡುವೆ ಕೇವಲ ಅಧ್ಯಯನ, ಓದು. ಪತಿಯದು ರಾಜಕೀಯದ ಬದುಕು, ಈಕೆಯದು ಸಾಹಿತ್ಯಿಕ ಬದುಕಾಯಿತು. ಈ ಅವಧಿಯಲ್ಲಿಯೇ ಮಲ್ಲಿಕಾ ಅವರು ಕನ್ನಡದ ಎಲ್ಲ ಹಿರಿಯಕವಿಗಳು, ಬಂಗಾಳೀ ಕಾದಂಬರಿಕಾರರಾದ ಶರಶ್ಚಂದ್ರ, ಬಂಕಿಮಚಂದ್ರರ ಕಾದಂಬರಿಗಳನ್ನು ಚೆನ್ನಾಗಿ ಓದಿಕೊಂಡರು. ಜೊತೆ ಜೊತೆಗೇ ಕನ್ನಡದ ಕವಿ ಕುವೆಂಪುರವರ ದಟ್ಟ ಪ್ರಭಾವ. ಹಾಗೆಯೇ ತಾಯಿ ಪಾರ್ವತಮ್ಮನವರು ಹೇಳುತ್ತಿದ್ದ ಜನಪದ ಕತೆಗಳೂ ಅತೀವ ಪರಿಣಾಮ ಬೀರಿದವು. ಜೊತೆಜೊತೆಗೇ ಹಳಗನ್ನಡ ಸಾಹಿತ್ಯದ ಮೇಲೆ ಅಪಾರ ಒಲವು.

1966ರಿಂದ ಬರವಣಿಗೆ ಪ್ರಾರಂಭಿಸಿದ ಮಲ್ಲಿಕಾ ಅವರು ಕಾದಂಬರಿ, ಸಣ್ಣಕತೆ, ಕವಿತೆ ಪೌರಾಣಿಕ ನಾಟಕ, ಗದ್ಯಕಥೆ, ಉಪನಿಷತ್‌ಕಾವ್ಯ, ಶಿಶುಸಾಹಿತ್ಯ, ಕೊನೆಗೆ ಮಹಾಕಾವ್ಯ - ಹೀಗೆ ಕನ್ನಡ ಸಾಹಿತ್ಯದ ಎಲ್ಲ ಸಾಹಿತ್ಯ ಪ್ರಕಾರಗಳಲ್ಲೂ ಪ್ರವೇಶಿಸಿ ಕೃತಿರಚನೆ ಮಾಡಿದ ಲೇಖಕಿಯಾಗಿದ್ದಾರೆ. ಒಟ್ಟು 55 ವಿವಿಧ ರೀತಿಯ ಕೃತಿಗಳನ್ನು ರಚಿಸಿರುವ ಮಲ್ಲಿಕಾ ಅವರು ತಡವಾಗಿಯೇ ಸಾಹಿತ್ಯಕ್ಷೇತ್ರ ಪ್ರವೇಶಿಸಿದವರು. ಇವರ ಮೊದಲನೆಯ ಕೃತಿ 'ಜೀವನ ಗಂಗಾ' ದೇಶಕ್ಕೆ ಸ್ವಾತಂತ್ರ್ಯ ಬಂದು ಅನೇಕ ವರ್ಷಗಳೇ ಉರುಳಿದರೂ, ನಮ್ಮ ದೇಶದ ಹೆಣ್ಣಿಗೆ ತನ್ನ ಬದುಕಿನಲ್ಲಿ ಇನ್ನೂ ಬರಬೇಕಾಗಿರುವ ಸ್ವಾತಂತ್ರ್ಯ, ಅವಳ ದಾಸ್ಯದ ಸ್ಥಿತಿಯನ್ನು ಕುರಿತು ಹೇಳುತ್ತದೆ. ಹೆಣ್ಣಿನ ಮೇಲೆ ನಡೆಯುತ್ತಿರುವ ದೌರ್ಜನ್ಯ, ಅವಳಿಗೆ ಬಂದೊದಗಿರುವ ಸ್ವಾತಂತ್ರ್ಯ ದಾರಿದ್ರ್ಯ, ಆರ್ಥಿಕ ದಾರಿದ್ರ್ಯ, ಅದಕ್ಕೆ ಕಾರಣವಾಗಿರುವ ಪುರುಷನ ದೌರ್ಜನ್ಯ, ಅಮಾನವೀಯ ನೀತಿಗಳನ್ನು ಪ್ರಶ್ನಿಸುತ್ತಾರೆ. 'ವಂದೇ ಮಾತರಂ' ಕೃತಿಯಲ್ಲಿ ಮಲ್ಲಿಕಾ ಅವರು ರಾಜಕೀಯದ ಚಿತ್ರಣಗಳನ್ನು ನೀಡುತ್ತಾರೆ. ರಾಜಕಾರಣ, ರಾಜಕೀಯ ಬದುಕನ್ನು ಒಬ್ಬ ರಾಜಕೀಯ ನಾಯಕರ ಪತ್ನಿಯಾಗಿ ಬಹು ಹತ್ತಿರದಿಂದ ಕಂಡಿರುವ ಮಲ್ಲಿಕಾ ಅವರು ಇದರ ಬಗೆಗೆ 'ವಂದೇ ಮಾತರಂ'ನಲ್ಲಿ ತುಂಬ ಖಚಿತವಾಗಿ ಬರೆಯುತ್ತಾರೆ.

'ಕನ್ನಡದಲ್ಲಿ ವೈದ್ಯಕೀಯ ಬದುಕನ್ನು ಅತ್ಯಂತ ಸಮಗ್ರವಾಗಿ ಮೊಟ್ಟ ಮೊದಲ ಬಾರಿಗೆ ಚಿತ್ರಿಸಿದ್ದೇನೆ', ಎಂದು ಸ್ವತಃ ಲೇಖಕಿಯರೇ ಹೇಳಿಕೊಳ್ಳುವ 'ಡಾ. ಅಘೋರ' ಎಂಬ ಕಾದಂಬರಿಯಲ್ಲಿ ವೈದ್ಯಕೀಯ ಕಾಲೇಜುಗಳು, ಅಲ್ಲಿನ ವಿದ್ಯಾರ್ಥಿಜೀವನ, ದಾದಿಗಳು ಹಾಗೂ ವೈದ್ಯರ ನಡುವಿನ ಸಂಬಂಧ - ಇವುಗಳನ್ನು ಹೇಳಿದರೂ, ಡಾ. ಅಘೋರನ ಬದುಕನ್ನು ಹೇಳುವುದೇ ಮುಖ್ಯವಾಗಿ ಉಳಿದ ವಿದ್ಯಮಾನಗಳು ಕೇವಲ ಪ್ರಾಸಂಗಿಕವಾಗುತ್ತವೆ. ವೈದ್ಯನೊಬ್ಬ ಕೇವಲ ವ್ಯಕ್ತಿಯೊಬ್ಬನ ಆರೋಗ್ಯಕ್ಕಷ್ಟೇ ಜವಾಬ್ದಾರನಲ್ಲ, ಅವನು ಸಮಾಜದ ಸ್ವಾಸ್ಥ್ಯಕ್ಕೂ ಕಾರಣನಾಗುತ್ತಾನೆ ಎಂಬ ವಸ್ತುವನ್ನಾಧರಿಸಿದ ಈ ಕಾದಂಬರಿಯಲ್ಲಿ ಪ್ರಮುಖವಾಗಿ ಮಲ್ಲಿಕಾ ಅವರು ಯಾವುದೇ ವೃತ್ತಿಯಲ್ಲೂ ಮಾನವೀಯತೆ ಮುಖ್ಯ, ಎಂದು ಹೇಳುತ್ತಾರೆ. ಇದರ ಮುಂದುವರಿಕೆ ಅವರ ಡಾ. ಕಮಲೇಶ್ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತದೆ.

ಅವರ 'ಮನೋನ್ಮಣಿ' ಕಾದಂಬರಿಯಲ್ಲಿ ಮುಖ್ಯವಾಗಿ ದಯೆ, ಸೇವಾ ಮನೋಭಾವಗಳು ಮಾನವಧರ್ಮದ ಸತ್ವವಾಗಬೇಕೆಂಬ ಬಯಕೆಯನ್ನು ವ್ಯಕ್ತಪಡಿಸುತ್ತಾರೆ. ಇದರ ನಾಯಕಿ ಮನೋನ್ಮಣಿಯು ದ್ವೇಷಾಸೂಯೆಗಳಿಗೆ ಒಳಗಾದ ಹಗೆಗಳಿಂದ ಮನೆಗೆ ಬೆಂಕಿಬಿದ್ದು ಹತ್ತಿ ಉರಿದರೂ, ಆಕಸ್ಮಿಕವಾಗಿ ಪಾರಾಗುತ್ತಾಳೆ. ಕ್ರೈಸ್ತರ ಆಶ್ರಯದಲ್ಲಿ ಬೆಳೆದು ಸಮಾಜಸೇವಕಿಯಾಗಿ ಸಮಾಜಋಣವನ್ನು ತೀರಿಸಲು ಮುಂದಾಗುವುದು ಕಾದಂಬರಿಯ ಮುಖ್ಯ ವಸ್ತು. ಈ ಕಾದಂಬರಿಯ ಮುಖ್ಯ ಕಥಾಕೇಂದ್ರದಲ್ಲಿ ಸ್ವಾತಂತ್ರ್ಯಪೂರ್ವ ಭಾರತದ ಕೋಮುವಾರು ಗಲಭೆಯ ವಿಚಾರಗಳು ಪ್ರಸ್ತಾಪಿತವಾದರೂ, ಈ ವಿವರಗಳು ಕಾದಂಬರಿಯಲ್ಲಿ ಎಲ್ಲಿಯೂ ಮನೋನ್ಮಣಿಯ ಬದುಕಿನೊಂದಿಗೆ ಪೂರಕವಾಗುವುದಿಲ್ಲ.

ಕುಟುಂಬದ ಹಿರಿಯ ಕುಡುಕನಾಗಿ, ದುಶ್ಚಟಗಳ ದಾಸನಾದಾಗ, ಹೆಣ್ಣಿಗೆ ಒದಗುವ ದುರಂತ ಕುಟುಂಬದ ಅನಾಥತೆಯ ಬಗೆಗೆ 'ಸಂತ್ರಾಸಿನಿ'

ಕಾದಂಬರಿ ಹೇಳುತ್ತದೆ. ಈ ಕಾದಂಬರಿಯ ಹೆಣ್ಣುಗಳಾದ ಗೌರಮ್ಮಾ ಆಗಲಿ, ಶ್ಯಾಮಲಾ ಆಗಲಿ ಅಥವಾ ಶಕೀಲಾರಾಗಲಿ ಪುರುಷ ದೌರ್ಜನ್ಯಕ್ಕೆ, ಅವನ ಶೋಷಣೆಗೆ, ದಬ್ಬಾಳಿಕೆಗೆ, ಒಳಗಾದವರೆ. ಶಕೀಲಾ ಮಾರ್ಕ್ಸ್‌ಸಿದ್ಧಾಂತದ ಬಗೆಗೆ ಆಸಕ್ತಿ ತೋರಿದರೂ, ಸಂಪ್ರದಾಯ ಹಾಗೂ ಹೊಸ ಬದುಕು - ಇವೆರಡನ್ನೂ ಸಂಪೂರ್ಣವಾಗಿ ಒಪ್ಪಿಕೊಳ್ಳಲಾರಳು. ಇಂಥ ದ್ವಂದ್ವಗಳಲ್ಲಿಯೇ 'ಮಲ್ಲಿಕಾ' ಅವರ ಅನೇಕ ಸ್ತ್ರೀ ಪಾತ್ರಗಳು ಮುಳುಗಿ ಬಿಡುತ್ತವೆ. ಅದರಿಂದಾಚೆ ಬರುವ ಪ್ರಯತ್ನವನ್ನು ಅವು ಮಾಡುವುದಿಲ್ಲ.

ಮಲ್ಲಿಕಾ ಅವರು ಕಾದಂಬರಿಗಳ ಮೇಲೆ ಬಂಗಾಳೀ ಕಾದಂಬರಿಗಳ ದಟ್ಟವಾದ ಪ್ರಭಾವವಿದೆ.

ಮಲ್ಲಿಕಾ ಅವರು ಸಾಕಷ್ಟು ಸಣ್ಣಕಥೆಗಳನ್ನು ರಚಿಸಿದ್ದಾರೆ. 'ಕಮಲಾನಿ ಕಥಾ', 'ಶ್ರೀ ಹರ್ಷಲಾ', 'ಮಣಿಕರ್ಣಿಕಾ', 'ಫಾಲ್ಗುಣೀ ಪರ್ವ', 'ವೈಶಾಖೀ ಪರ್ವ'- ಮುಂತಾದವು ಅವರ ಸಣ್ಣ ಕಥಾಸಂಕಲನಗಳು. ಅವರು ತಮ್ಮ ಕಥೆಗಳಲ್ಲಿ ಸಣ್ಣಕಥಾ ಸಾಹಿತ್ಯದ ಸಾಧ್ಯತೆಗಳ ಕಡೆಗೆ ಹೆಚ್ಚಿನ ಗಮನ ಹರಿಸುವುದಿಲ್ಲ. ಅವರಿಗೆ ಕಥೆಯನ್ನು ಹೇಳುವುದೇ ಪ್ರಧಾನವಾಗುತ್ತದೆ. 'ಶ್ರೀಮುಖೀ' ಕಥಾಸಂಕಲನದ ಅನೇಕ ಕಥೆಗಳು ಪ್ರಭಾವಿತ ಕಥೆಗಳಾಗಿವೆ. ಉದಾಹರಣೆಗೆ 'ಗೌರಮ್ಮ' ಎನ್ನುವ ಆಸ್ಪತ್ರೆ ದಾದಿಯ ಕಥೆ, ಕುವೆಂಪುರವರ 'ಔದಾರ್ಯ'ವನ್ನು ನೆನಪು ಮಾಡಿಕೊಡುತ್ತದೆ. ವೈಜ್ಞಾನಿಕ ಜಗತ್ತಿನಲ್ಲಿ ವಿಜ್ಞಾನಿಗಳ ನಡುವಿನ ಸ್ಪರ್ಧೆ, ದ್ವೇಷಾಸೂಯೆಗಳು, ದುಷ್ಟ ಆಲೋಚನೆಗಳನ್ನು 'ಮಾರಕ ಸುರ' ಕಥೆಯಲ್ಲಿ ಹೇಳುತ್ತಾರೆ. ಆಂಗ್ಲ ಪತ್ತೇದಾರಿ ಕಥೆಗಳ ಛಾಯೆಯಿದ್ದರೂ, ಅಷ್ಟೊಂದು ಪರಿಣಾಮಕಾರಿಯಾಗಿ ಮೂಡಿಬಂದಿಲ್ಲ. 'ಶ್ರೀಮುಖಿ' ಕಥೆ, ಹಡಗು ದುರಂತದಲ್ಲಿ ಆಕಸ್ಮಿಕವಾಗಿ ಏಕಾಕಿಯಾಗಿ ಪ್ರಾಣಸಹಿತ ಉಳಿದು, ಎಂದೋ ಕಳೆದುಕೊಂಡಿದ್ದ ಸಹೋದರಿಯನ್ನು ವಿದೇಶೀ ನೆಲದಲ್ಲಿ ಸಂಧಿಸುವ ಕಥೆಯಾಗಿದೆ. ದೃಢವಾಸ್ತವದ ಬದುಕಿನ ಅನುಭವಗಳಿಂದ ತೀರ ದೂರ ಸಾಗುವ ಕಥೆಯು ಹೆಚ್ಚು ಸಿನಿಮೀಯವಾಗಿದೆ.

ಮಲ್ಲಿಕಾ ಅವರು ಕಾದಂಬರಿ, ಕಥೆಗಳನ್ನು ಬಿಟ್ಟು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕವನಗಳನ್ನು, ಕಾವ್ಯಗಳನ್ನು ರಚಿಸಿದ್ದಾರೆ. ಅದರಲ್ಲಿ ಮುಖ್ಯವಾದವು, 'ಗಗನ ಕುಸುಮ', 'ಜೀವನ ಕುಸುಮ', 'ಕಸ್ತೂರಿ ಮಾಲಿಕೆ', 'ಬಕುಳರಾಜಿ', 'ನಾದಬಿಂದು', 'ಮಂದಾರ ಮಾಲಾ', 'ಚಂಪಕರಾಜಿ......'ಹೀಗೆ ಸುಮಾರು ಹದಿನೈದು ಕವನ ಸಂಕಲನಗಳನ್ನು ಹೊರತಂದಿದ್ದಾರೆ.

ಇದಲ್ಲದೆ 'ಸಂಜೀವನ ಕಾವ್ಯ' ಎಂಬ ಶೀರ್ಷಿಕೆಯಡಿಯಲ್ಲಿ 'ಮಂಗಳಭಾರತಿ', 'ಕಲ್ಯಾಣ ಭಾರತಿ', 'ಉತ್ತರೋತ್ತರಣೆ', 'ರಾಗಾನುರಾಗಿಣಿ', 'ಪ್ರಫುಲ್ಲಭಾರತ'- ಎಂಬ ಐದು ಸಂಜೀವನ ಕಾವ್ಯಗಳನ್ನು ರಚಿಸಿದ್ದಾರೆ.

ಅವರ 'ನಾದ ಬಿಂದು', 'ಗಾನತೀರ್ಥ'ದಲ್ಲಿ ಸುಮಾರು 118 ಪದ್ಯಗಳಿವೆ. ಹೂ, ಹಕ್ಕಿ, ಪ್ರಕೃತಿಯ ಗುಣಗಾನವೇ ಪ್ರಮುಖ ಗುರಿ. ಸಂಸ್ಕೃತ ಭೂಯಿಷ್ಠ ಪದಪುಂಜಗಳಿಂದ ಕೂಡಿದ ಮಲ್ಲಿಕಾ ಅವರ ಕವಿತೆಗಳು ಸಾಮಾನ್ಯರಿಗೆ ತಲುಪಲು ಸೋಲುತ್ತವೆ. ಮಲ್ಲಿಕಾ ಅವರ ಕಾವ್ಯವೇ ಆಗಲಿ, ಗದ್ಯವೇ ಆಗಲಿ ಕಬ್ಬಿಣದ ಕಡಲೆಯಾಗಿದ್ದು, ಅವರು ಆಯ್ಕೆ ಮಾಡಿಕೊಳ್ಳುವ ವಸ್ತು ಸಾಮಾಗ್ರಿಗಳಿಗೆ ಭಾಷೆ ಹೊರೆಯಾಗುತ್ತದೆ. ಈ ರೀತಿಯ ಭಾಷಾ ಬಳಕೆ ಅಗತ್ಯವೆ? ಎಂಬುದು ಓದುಗರನ್ನು ಕಾಡುವ ಪ್ರಶ್ನೆ.

ಅವರ 'ಗಗನ ಕುಸುಮ' ಕವನ ಸಂಕಲನವು ಎಂಭತ್ನಾಲ್ಕರಲ್ಲಿ ಪ್ರಕಟಗೊಂಡ, ಸುಮಾರು 80 ಕವನಗಳನ್ನುಳ್ಳ ಕವನ ಸಂಕಲನ. ಅನೇಕ ಕವನಗಳು ಇಂಗ್ಲಿಷ್ ಶೀರ್ಷಿಕೆಯನ್ನೊಳಗೊಂಡಿವೆ. ಓ ಹೆನ್ರಿ, ಕ್ರಾಕಟೋವ, ಗ್ರಾಂಡ್‌ಮಾ ನೋಸೆಸ್, ಜೀನ್‌ಪಾಲ್ ಸಾರ್ತ್ರೆ, ವರ್ಲ್ಡ್‌ವಾರ್- ಈ ಕವನಗಳ ಶೀರ್ಷಿಕೆ ಇಂಗ್ಲೀಷಾದರೂ, ಶೈಲಿ ಮಾತ್ರ ಹಳಗನ್ನಡದ್ದು. ಉದಾಹರಣೆಗೆ, 'Grand ma Moses'ನಲ್ಲಿ,

ಅಂದು ತನ್ನ ಆಯುರ್ಮಾನದಾ
ಶತಾಬ್ಧಿಯಲಿ ಮಿಂದು ದಣಿದೊಡಂ
ರೇಖಿಸುತಿರ್ದಳ್ಳೆ ಚಿತ್ರಗಳಂ
ಗ್ರಾಂಡ್‌ಮಾ ಮೋಸೆಸ್ ನಿಜದಿ.

ಹೀಗೆ ಕಾವ್ಯದ ಯಾವ ಪರಿಕರಗಳನ್ನೂ ಪಡೆದ, ಕೇವಲ ಶಬ್ದಜಾಲಗಳಾಗಿ ಸಾಲುಗಳು ನಿಲ್ಲುತ್ತವೆ. 'OHenry'ಯಲ್ಲೂ ಇಂಥದೇ ನಿರೂಪಣೆ.

'ಅಮೇರಿಕೆಯ ಸಾಹಿತ್ಯ ಜಗದಿ
ಅಂದು ಪ್ರಖ್ಯಾತ ನಾಮನಿರ್ದಾ
ಓ ಹೆನ್ರಿ ದನಗಾಹಿತನದಿಂ
ತನ್ನಯ ಜೀವನನಾರೈದಂ'

ಇದರ ಜೊತೆಗೆ ಕೇವಲ ಸಂಸ್ಕೃತ ಶೀರ್ಷಿಕೆಯನ್ನೊಳಗೊಂಡ ಅನೇಕ ಕವನಗಳಿವೆ. ಉದಾ. 'ಉತ್ತಿಷ್ಠತ ಜಾಗ್ರತ', 'ಕೋಶವಾನ್ ಆಚಾರ್ಯಃ', 'ತವಕೃಪಾ ಸಂಪತ್ತಿ' ....ಹೀಗೆ ಕಾವ್ಯಹುಟ್ಟಿಸುವ ಯಾವ ಕುತೂಹಲಗಳನ್ನು ಇಲ್ಲಿ ಕಾಣಲು ಸಾಧ್ಯವಾಗುವುದಿಲ್ಲ.

'ಜೀವನಕುಸುಮ'ದಲ್ಲಿರುವ ಅರವತ್ತೊಂದು ಕವನಗಳಲ್ಲಿ ನೆಹರು, ಲೆನಿನ್-ಮುಂತಾದ ಮಹಾಪುರುಷರನ್ನು ಕುರಿತ ಜೀವನಚಿತ್ರಣಗಳಿವೆ. ಇದರೊಂದಿಗೆ ಪ್ರಾರ್ಥನಾರೂಪದ ಕವಿತೆಗಳೇ ಹೆಚ್ಚಿವೆ.

ಮಲ್ಲಿಕಾ ಅವರು 'ಐಂದ್ರಕೀರ್ತಿ ಕೇತನಂ' ಎಂಬ ಗದ್ಯ ಕಾವ್ಯಗಳನ್ನು ಬರೆದಿದಾರೆ. ಸಂಪೂರ್ಣ ಹಳಗನ್ನಡವೂ ಅಲ್ಲದ, ನಡುಗನ್ನಡವೂ ಅಲ್ಲದ, ಹೊಸಗನ್ನಡವೂ ಅಲ್ಲದ, ಆದರೆ ಇವೆಲ್ಲವನ್ನು ಒಳಗೊಂಡ ಭಾಷಾಬಳಕೆ ಇಲ್ಲಿ ನಡೆಯುತ್ತದೆ. ಮಹಾಭಾರತದಲ್ಲಿ ಬರುವ ಅರ್ಜುನ ಪುತ್ರ ಅಭಿಮನ್ಯುವಿನ ಬಿಲ್ವಿದ್ಯೆಯ ಸಾಹಸಪ್ರೌಢಿಮೆಯ ಕತೆ 'ಐಂದ್ರಕೀರ್ತಿ ಕೇತನಂ'ದಲ್ಲಿದೆ. ಸಂಪೂರ್ಣವಾಗಿ ಕೆಂಪುನಾರಾಯಣ, ಮುದ್ದಣ್ಣ, ಪಂಪರ ಪ್ರಭಾವಕ್ಕೆ ಒಳಗಾದ ಭಾಷಾಶೈಲಿಯಿದೆ. ಪದ್ಮವ್ಯೂಹವನ್ನು ಭೇದಿಸಲು ಹೋದ ಬಾಲಕ ಅಭಿಮನ್ಯುವಿನ ಶೌರ್ಯ, ಪರಾಕ್ರಮದ ವರ್ಣನೆ ಕೇವಲ ಪಾರಂಪಾರಿಕವಾಗಿದ್ದು, ಅದರಲ್ಲಿ ಯಾವ ಹೊಸತನವೂ ಇಲ್ಲ. ವೈರಿಗಳು ರಚಿಸಿದ ಪದ್ಮವ್ಯೂಹವನ್ನು ಭೇದಿಸಿ, ಅವರನ್ನು ಸದೆ ಬಡಿದು, ಮಡಿದು ವೀರಮರಣವನ್ನಪ್ಪಿದ ಅಭಿಮನ್ಯುವನ್ನು 'ಐಂದ್ರಕೀರ್ತಿಕೇತನ' ಎಂದು ವರ್ಣಿಸಿದ್ದಾರೆ. ಇನ್ನೂರ ಐವತ್ತಾರು ಪುಟಗಳನ್ನೊಳಗೊಂಡ ಕೃತಿ, ಓದಿಸಿಕೊಳ್ಳಲು ಬಹಳ ಕಷ್ಟ ಪಡುತ್ತದೆ, ಈ ಯುಗದಲ್ಲಿ ಇಂತಹ ರಚನೆಗಳು ಅಗತ್ಯವೆ? ಎಂಬ ಮೂಲಭೂತ ಪ್ರಶ್ನೆ ಹುಟ್ಟಿಸುತ್ತದೆ.

ಮಲ್ಲಿಕಾ ಅವರ ಸಾಹಿತ್ಯ ಕೃತಿಗಳಲ್ಲಿ ಗಮನಿಸಲೇಬೇಕಾದ ಪ್ರಮುಖ ಕೃತಿ, 'ವಿವೇಕಾನಂದ ವಿಜಯಂ' ಮಹಾಕಾವ್ಯ. ಸಾಹಿತ್ಯ ಶುದ್ಧವಾಗಿರಬೇಕು, ಗಂಭೀರವಾಗಿರಬೇಕು, ಎತ್ತರಕ್ಕೇರಬೇಕು, 'ಮಹಾಕಾವ್ಯ ಬರೆದರೇನೇ ಸಾಹಿತ್ಯಕ್ಕೆ ಪೂರ್ಣತ್ವ' ಉಂಟಾಗುವುದು ಎಂಬ ಪ್ರಬಲನಂಬಿಕೆ ಹಾಗೂ ಚಿಂತನೆಗಳು ಈ ಕೃತಿಯ ರಚನೆಯ ಹಿನ್ನೆಲೆಯಲ್ಲಿವೆ. ಮಹಾಭಾರತ,

ರಾಮಾಯಣಗಳ ರಾಮ, ಕೃಷ್ಣರೇ ಮಹಾಕಾವ್ಯದ ನಾಯಕರು. ಆದರೆ ತಾವು ಈ ಸಿದ್ಧವಸ್ತುವನ್ನು ಆಧರಿಸಿ ಬಿಟ್ಟು ಐದು ವರ್ಷಗಳ ಕಾಲ ತಪಸ್ಸಿನಂತೆ ಈ ಮಹಾಕಾವ್ಯವನ್ನು ರಚಿಸಿದುದಾಗಿ ಹೇಳಿಕೊಳ್ಳುತ್ತಾರೆ. ಒಂದು ಸಾವಿರದ ಇನ್ನೂರ ಎಪ್ಪತ್ನಾಲ್ಕು ಪುಟಗಳ, ಆರುನೂರು ರೂಗಳ ಮುಖಬೆಲೆ ಹೊತ್ತ ಮಲ್ಲಿಕಾ ಅವರ ಈ ಬೃಹದ್ಗ್ರಂಥ ಪ್ರಕಟಣೆಯಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಒಂದು ಲಕ್ಷರೂಪಾಯಿಗಳ ಧನಸಹಾಯ ಪಡೆದುಕೊಂಡಿರುವುದೇ ಅಲ್ಲದೆ, ಕರ್ನಾಟಕ ಸರ್ಕಾರದ ಪ್ರತಿಷ್ಠಿತ ಮಹಿಳಾಪ್ರಶಸ್ತಿ, 'ಅತ್ತಿಮಬ್ಬೆ' ಪ್ರಶಸ್ತಿಗೂ ಪಾತ್ರವಾಗಿದೆ.

ಮಹಾಕಾವ್ಯಗಳ ಯುಗ ಮುಗಿಯಿತು ಎಂಬ ಅಭಿಪ್ರಾಯವಿರುವಾಗಲೇ, 'ರಾಮಾಯಣ ದರ್ಶನಂ', 'ಭಾರತ ಸಿಂಧುರಶ್ಮಿ', 'ಶ್ರೀಹರಿಚರಿತೆ', 'ಭವ್ಯಮಾನವ', 'ಯುಗಸಂಧ್ಯ' ದಂತಹ ಮಹಾಕಾವ್ಯಗಳು ಕಾಣಿಸಿಕೊಂಡಿವೆ. ಈ ಮಹಾಕಾವ್ಯಗಳು ಪೌರಾಣಿಕ ಕಥೆಯನ್ನಿಟ್ಟುಕೊಂಡು ಸಮಕಾಲೀನ ಬದುಕಿನ ವ್ಯಾಖ್ಯಾನವನ್ನು ಮಾಡುತ್ತವೆ. ಮಹಾಕವಿಗೆ ಕಥೆ ನೆಪ. ಜೀವನ ದರ್ಶನ ಪ್ರಮುಖ ಗುರಿ. ಹೀಗಾಗಿ ಮಹಾಕಾವ್ಯಕ್ಕೊಂದು ಉದ್ದೇಶವಿರುತ್ತದೆ. ಆದ್ದರಿಂದಲೇ ಎಷ್ಟೋ ಸಂದರ್ಭಗಳಲ್ಲಿ ಮಹಾಕಾವ್ಯಗಳನ್ನು ದೃಢವಾಸ್ತವದ ನೆಲೆಯಿಂದಲೇ ನೋಡಲು ಕಷ್ಟವಾಗಬಹುದು. ಮಲ್ಲಿಕಾ ಅವರು ಆಯ್ಕೆ ಮಾಡಿಕೊಂಡಿರುವ ವಸ್ತು, ನಮ್ಮ ಸಮಕಾಲೀನ ಸಂದರ್ಭದ ಚಾರಿತ್ರಿಕ ಪುರುಷನ ಬದುಕು. ವಿವೇಕಾನಂದರು ಭಾರತೀಯ ಬದುಕಿನ ಪುನರುತ್ಥಾನದ ಸಂದರ್ಭದಲ್ಲಿ ಬಹಳ ಮುಖ್ಯಪಾತ್ರ ವಹಿಸಿದವರು. ಸಾಮಾಜಿಕ ಬದುಕಿನ ಆತ್ಮಜಾಗೃತಿಗೆ ಪ್ರಯತ್ನಿಸಿದವರು. ಇಷ್ಟೆಲ್ಲ ಅಂಶಗಳು ಹಿನ್ನೆಲೆಯಲ್ಲಿದ್ದರೂ, 'ಜೀವನ ಚರಿತ್ರೆ'ಗಳು ಮಹಾಕಾವ್ಯದ ವಸ್ತು ನಿರ್ವಹಣೆಗೆ ಎಷ್ಟರ ಮಟ್ಟಿಗೆ ಸಹಾಯಕಾರಿ ಎಂಬ ಪ್ರಶ್ನೆ ಇದ್ದೇ ಇರುವಂತಹದು. ಅನೇಕ ಸಂದರ್ಭಗಳಲ್ಲಿ ಇಂತಹ ಜೀವನ ಚರಿತ್ರೆಗಳು ವಾಸ್ತವದ ಗಡಿ, ಗೆರೆಗಳನ್ನು ದಾಟಲಾರದೆ ಮಿತಿಗೊಳಪಡಬಹುದು. ವಸ್ತುವಿಗೊಂದು ಮಿತಿಯನ್ನು ಹಾಕಿಕೊಂಡೇ ಹೊರಡುವ ಕೃತಿಕಾರ ತನ್ನ ಕೃತಿಗೆ ಎಷ್ಟರ ಮಟ್ಟಗಿನ ಸಮಗ್ರತೆಯನ್ನು ತಂದುಕೊಡಲು ಸಾಧ್ಯ? ಇಂತಹ ಅನೇಕ ಪ್ರಶ್ನೆಗಳನ್ನು ತನ್ನ ಗರ್ಭದಲ್ಲಿಟ್ಟುಕೊಂಡೇ 'ವಿವೇಕಾನಂದ ವಿಜಯಂ' ಕೃತಿ ಮೈದಾಳಿದೆ. ಕನ್ನಡದಲ್ಲಿ ಸ್ವಾಮಿ ವಿವೇಕಾನಂದರನ್ನು ಕುರಿತು ರಚಿತಗೊಂಡಿರುವ ಕೆಲವು ಕೃತಿಗಳನ್ನಷ್ಟೇ ಆಧಾರವಾಗಿಟ್ಟುಕೊಂಡು ಸರಳವಾಗಿ ಕಥೆ ಹೇಳಿಕೊಂಡು ಹೋಗಿದ್ದಾರೆ. ಮಹಾಕಾವ್ಯದ ಎಷ್ಟೋ ತಾಂತ್ರಿಕ, ಕಲಾತ್ಮಕ, ರಾಚನಿಕ ಅಂಶಗಳು ಕಥೆ ಹೇಳುವ ಭರದಲ್ಲಿ ಗೌಣವಾಗಿವೆ.

'ಗಗನಾಕಾರಮಲ್ತೇ ತವ ದೈವದತ್ತ ವೃತ್ತಾಂತಂ' ಎಂಬ ಬೆರಗಿನಿಂದಲೇ 'ಅದನೆಂತಾಂ ಉಲ್ಲೇಖಿಸಲಿ ಪೇಳೇ ಘನವಂತ'? ಎಂಬ ಅಸಹಾಯಕತೆ ವ್ಯಕ್ತಪಡಿಸುತ್ತ ಪ್ರಾರಂಭಿಸುತ್ತಾರೆ. ಇಲ್ಲೆಲ್ಲ ಅವರು ತಮ್ಮದು 'ಕಿರುಲೆಕ್ಕಣಿಕೆ', 'ಪೆಣ್ಣ ಲೆಕ್ಕಣಿಕೆ' ಎಂಬ ಸಂಕೋಚವನ್ನು ಪ್ರಕಟಿಸುತ್ತಾರೆ. ಲೆಕ್ಕಣಿಕೆ, ಲೆಕ್ಕಣಿಕೆ ಅಷ್ಟೇ. ಅದಕ್ಕೆ ಕಿರು, ಪೆಣ್ಣು ಇತ್ಯಾದಿ ವಿಂಗಡಣೆ ಅಗತ್ಯವೆ ಎಂಬ ಉದ್ಗಾರ ಓದುಗರ ಮನದಲ್ಲಿ ಮೂಡದಿರುವುದಿಲ್ಲ.

ನರೇಂದ್ರನಲ್ಲಿ ಬಾಲ್ಯದಿಂದಲೇ ಧೈರ್ಯ, ಸ್ಥೈರ್ಯ, ವಿವೇಚನೆ, ವಿಚಾರವಂತಿಕೆಗಳಿದ್ದವೆಂಬುದನ್ನು ಮೊದಲಿನಿಂದಲೇ ಬೆಳೆಸುತ್ತಾರೆ. ನರೇಂದ್ರ ಮತ್ತು ಸ್ನೇಹಿತರು ಸಂಪಿಗೆಯ ಮರದಲ್ಲಿ ಮರಕೋತಿಯಾಡುವ ಪ್ರಸಂಗ. ಮರ ಹಾಳಾಗುತ್ತದೆಂಬ ಕಾರಣಕ್ಕೆ ವೃದ್ಧನೊಬ್ಬ ಅದರಲ್ಲಿ ಭೂತವಿದೆ, ಎಂದಾಗ ಉಳಿದ ಮಕ್ಕಳು ಹೆದರಿದರೂ ನರೇನ್ ಹೆದರದೆ ವೃದ್ಧನಿಗೆ ಭೂತ ತೋರಿಸಲು ಕೇಳುತ್ತಾನೆ. ಅವನ ವಿಚಾರವಂತಿಕೆಗೆ ಅವನ ಬಾಲ್ಯದಲ್ಲಿಯೇ ಒಂದು ಉತ್ತಮ ಪೀಠಿಕೆ ಕಲ್ಪಿಸುತ್ತಾರೆ. ಹಾಗೆಯೇ ತಾಯಿಯ ಮಾತಿನಂತೆ ರಾಮಚಂದ್ರನ ವಿಗ್ರಹ ತಂದು ಬಾಲಪೂಜೆ ಮಾಡುವ ನರೇಂದ್ರನ ಧ್ಯಾನ, ಸಂಗೀತ, ಪೂಜೆಗಳ ಆಸಕ್ತಿಗೊಂದು ಪೂರ ಕತೆಯನ್ನು ತಂದು ಕೊಡುತ್ತಾರೆ. ಆದರೆ ಅವನಿಗೆ ಮುಂದೆ ರಾಮ ವಿವಾಹಿತನೆಂದು ಗೊತ್ತಾದಾಗ, 'ರಾಮಚಂದ್ರಂ ವಿವಾಹಿತನಲ್ತೆ? ವಿವಾಹಿತ ರಾಮನಂ ಆಂ ಪೂಜಿಸಲಾರೆನ್' ಎಂದು ರಾಮನನ್ನು ತ್ಯಜಿಸಿ, ಶಿವನ ಆರಾಧನೆಗೆ ತೊಡಗುವುದು ಅಷ್ಟೊಂದು ತಾರ್ಕಿಕವಾಗುವುದಿಲ್ಲ. ನರೇಂದ್ರನಿಗೆ ಶಿವಾನುಗ್ರಹವಾಗುವ ಸಂದರ್ಭ ನಾಟಕೀಯವಾಗಿ ಮೂಡಿಬಂದಿದೆ. ಶಿವನ ಆರಾಧನೆಗೆ ತೊಡಗಿದ ನರೇಂದ್ರನಿಗೆ ಶಿವನ ತೆರೆದ ಕಣ್ಗಳಿಂದ ಚೆಂಬೆಳಕಿನ ಕಿರಣಧಾರೆಯು ಮಿಂಚಿ ನರೇಂದ್ರನಲ್ಲಿ ಲೀನವಾಗುತ್ತದೆ. ಅಲ್ಲಿಂದ ಆತ ತಾನು ಶಿವ, ಎಂದು ಪುಲಕಿತನಾಗುತ್ತಾನೆ.

ವಿವೇಕಾನಂದರಿಗೆ ಬಾಲ್ಯದಲ್ಲಿಯೇ ಕಾಣಿಸಿಕೊಂಡಿದ್ದ ಉದರ ಶೂಲೆಯ ಪ್ರಸ್ತಾಪ ಮತ್ತೆ ಮತ್ತೆ ಕಾಣಿಸಿಕೊಂಡು ಅವರ ಅಂತ್ಯಕ್ಕೊಂದು ಹಿನ್ನೆಲೆ ಒದಗಿಸಿಕೊಡುತ್ತದೆ. ವಿವೇಕಾನಂದರಲ್ಲಿ ಕಾಣಿಸಿಕೊಳ್ಳುವ ಅಪ್ರತಿಮ ರಾಷ್ಟ್ರಪ್ರೇಮದ ಕಾರಣಗಳನ್ನು 'ಅಗ್ನಿಪರೀಕ್ಷೆ' ಭಾಗದಲ್ಲಿ ತಾರ್ಕಿಕವಾಗಿ ನಿರೂಪಿಸುವ ಪ್ರಯತ್ನವಿದೆ. ಈಸ್ಟ್ ಇಂಡಿಯಾ ಕಂಪನಿಯ ಆಗಮನ, ದೇಶೀಯ ರಾಜ, ಮಹಾರಾಜರ ಒಳಜಗಳಗಳು, ಅದರ ಲಾಭ ಪಡೆದ ಬ್ರಿಟಿಷ್ ಅಧಿಕಾರಿಗಳು-ಇಲ್ಲೆಲ್ಲಾ ಭಾರತ ದೇಶದ ಚರಿತ್ರೆಯಿದೆ.

'ಜ್ಞಾನ ದೇವತು ಕೈವಲ್ಯಂ' ಭಾಗದಲ್ಲಿ ಭಜನಗೀತ ಗಾಯನ ಸಂದರ್ಭದಲ್ಲಿ ನರೇಂದ್ರನ ಗೀತೆ ಕೇಳಿದ ಪರಮಹಂಸರು ನರೇಂದ್ರನನ್ನು ಆಶೀರ್ವದಿಸಿ, ದಕ್ಷಿಣೇಶ್ವರದ ಕಾಳಿ ಮಂದಿರಕೆ ಆಹ್ವಾನಿಸುವ ಸಂದರ್ಭ. ಈ ಅಪೂರ್ವಭೇಟಿಯನ್ನು ಅತ್ಯಂತ ಅದ್ಭುತವಾಗಿ ಚಿತ್ರಿಸುವ ಅವಕಾಶವಿತ್ತು. ಇದು ವಿವೇಕಾನಂದ ಹಾಗೂ ಶ್ರೀರಾಮಕೃಷ್ಣ ಪರಮ ಹಂಸರ ಅತ್ಯಂತ ಅಭೂತಪೂರ್ವ ಮಿಲನ. ಈ ಸನ್ನಿವೇಶದ ನಿರೂಪಣೆ ಅತ್ಯಂತ ಪೇಲವವಾಗಿ. ಕಾವ್ಯದಲ್ಲಿ ಯಾವುದೇ ಮಹತ್ವವನ್ನು ಪಡೆದುಕೊಳ್ಳುವುದಿಲ್ಲ.

'ಚಿಂತನಶೀಲ' ಭಾಗದಲ್ಲಿ ನರೇಂದ್ರನ ಜ್ಞಾನ ಪರಿಧಿ ವಿಸ್ತರಿಸಿದುದರ ಚಿತ್ರಣವಿದೆ. ಸರ್ವಧರ್ಮಗಳಲ್ಲೂ ಸಮಪ್ರೀತಿ, ನಿಷ್ಠೆಗಳು ವ್ಯಕ್ತಗೊಂಡಿವೆ. ಒಟ್ಟಿನಲ್ಲಿ ತೀರ ಸರಳವಾಗಿ ಕಥೆ ಹೇಳಿಕೊಂಡು ಹೋಗುವುದರಲ್ಲಿಯೇ ಲೇಖಕಿಗೆ ಹೆಚ್ಚು ಆಸಕ್ತಿ ಇದ್ದಂತಿದೆ.

ವಿವೇಕಾನಂದರ ಬದುಕಿನ ಕೆಲವು ಮುಖ್ಯಘಟ್ಟಗಳನ್ನು ಪ್ರಸ್ತಾಪಿಸುವ ಅನೇಕ ಸಂದರ್ಭಗಳಲ್ಲಿದ್ದಿರಬಹುದಾದ ಕಾವ್ಯಮಯ ನಿರೂಪಣೆ ಮಾಡುವ ಅವಕಾಶಗಳನ್ನು ಬಳಸಿಕೊಂಡಿಲ್ಲ. ಮಹಾಕಾವ್ಯಗಳು ತಮ್ಮೊಡಲಿನಲ್ಲಿ ಹೇರಳವಾಗಿ ಪ್ರತಿಮೆ, ರೂಪಕ, ಉಪಮೆ, ಮಹೋಪಮೆಗಳನ್ನು ಬಳಸಿಕೊಳ್ಳುತ್ತಲೇ ಅತ್ಯಂತ ನಾಟಕೀಯ ಸಂದರ್ಭಗಳನ್ನು ನಿರ್ಮಾಣ ಮಾಡಬಲ್ಲವು. ಧ್ವನಿಪೂರ್ಣವಾಗ ಬಹುದಾಗಿದ್ದ ವಿವೇಕಾನಂದರ ಕೋಚ್‌ಗಾಡಿಯಾಗಲಿ, ಬಾಲ್ಯದಲ್ಲಿ ನರೇನ್ ಕಾಣುವ ಸರ್ಪವಾಗಲಿ, ಶಿವನ ಹಣೆಯಿಂದ ಬರುವ ಜ್ಯೋತಿ ಕಿರಣವಾಗಲಿ, ಕಾವ್ಯದಲ್ಲಿ ಧ್ವನಿಯಾಗಿಯೇ ಆಗಲಿ, ಸಾಂಕೇತಿಕ ನೆಲೆಯಲ್ಲಿಯೇ ಆಗಲಿ, ಬಳಕೆಯಾಗುವುದಿಲ್ಲ. ಪ್ರೊ. ಎಂ. ಎಚ್. ರಾಮ ಕೃಷ್ಣಯ್ಯನವರು ಗುರುತಿಸುವಂತೆ ಕೋಚ್ ಗಾಡಿಯಲ್ಲಿರುವ ವಿವೇಕಾನಂದರು ವಾಸ್ತವವಾಗಿ 'ರಾಮಕೃಷ್ಣ ಪರಮಹಂಸರ

ತತ್ತ್ವದರ್ಶನಗಳ ಸಾರಥಿಯೇ'. ಇದನ್ನು ಅತ್ಯಂತ ಸಾಂಕೇತಿಕ ನೆಲೆಯಲ್ಲಿ, ಧ್ವನಿಪೂರ್ಣವಾಗಿ ನಿರೂಪಿಸುವ ಅವಕಾಶಗಳಿತ್ತು.

ಹಾಗೆಯೇ ರಾಮಕೃಷ್ಣ ಪರಮಹಂಸರು ಹಾಗೂ ವಿವೇಕಾನಂದರ ಪ್ರಥಮ ಸಮಾಗಮ. ಇದು ಎರಡು ನಿಗೂಢ ಶಕ್ತಿಗಳ ಪರಸ್ಪರ ಸೆಳೆತಗಳ ರೋಮಾಂಚಕ ಸಂದರ್ಭವಾಗಿದ್ದು, ಅದನ್ನು ಅತ್ಯಂತ ನೀರಸವಾಗಿ, ಸಪ್ಪೆಯಾಗಿ, ಯಾವುದೇ ಭಾವುಕತೆಗಳಿಲ್ಲದೆ ಗದ್ಯಮಯವಾಗಿ ಚಿತ್ರಿಸಲಾಗಿದೆ. ಕೃಷ್ಣಯ್ಯನವರು, 'ಅವರಿಬ್ಬರ ಭೇಟಿ ಆಕಸ್ಮಿಕ, ಸಾಧಾರಣ ಘಟನೆಯಲ್ಲ. ಮಾನವ ಗ್ರಹಿಕೆಯನ್ನು ಮೀರಿದ ಅತೀಂದ್ರಿಯ ಲೋಕದ ಘಟನಾ ವಿಲಾಸ ಲೇಖಕಿ ಘಟನೆಯನ್ನು ದಾಖಲಿಸುವುದಕ್ಕೆ ಬದಲು ಆ ಸಂದರ್ಭದ ಹಿಂದಿನ ಕಾಣ್ಕೆಯನ್ನು ದರ್ಶನವನ್ನು, ಧ್ವನಿಯನ್ನು ವರ್ಣಿಸಬೇಕಾಗಿತ್ತು' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಇಂತಹ ಘಟನೆಗಳ ನೀರಸ ನಿರೂಪಣೆಗಿಂತ 'ಮಹೋಪಮೆ'ಗಳು, 'ದೃಶ್ಯಚಿತ್ರಗಳು' ಔಚಿತ್ಯಪೂರ್ಣವಾಗಿರುತ್ತವೆ. ಈ ಸಂದರ್ಭಗಳಲ್ಲಿ ಮಹಾಕಾವ್ಯಗಳಲ್ಲಿ ಇಂತಹ ಕಲಾತ್ಮಕ, ಕುಸುರಿತನ ಅಪೇಕ್ಷಣೀಯ. ಈ ನೆಲೆಯಲ್ಲಿ ಸೂಕ್ಷ್ಮತೆಗಳು ಈ ಕೃತಿಯಲ್ಲಿ ಅಷ್ಟಾಗಿ ಕಂಡು ಬರುವುದಿಲ್ಲ.

ಮಲ್ಲಿಕಾ ಅವರ ಒಟ್ಟು ಸಾಹಿತ್ಯವನ್ನು ಗಮನಿಸುವಾಗ ಯಾವ ಕಲಾತತ್ತ್ವವೂ ಇವರನ್ನು ಬಾಧಿಸಿದಂತೆ ಕಾಣುವುದಿಲ್ಲ. ಗಟ್ಟಿಯಾದ ಲೋಕಾನುಭವ, ಅದನ್ನು ಅರಿವಾಗಿ, ಜ್ಞಾನವಾಗಿ ಪರಿವರ್ತಿಸಿಕೊಡಬಲ್ಲ ಚಿಂತನೆ, ತಾರ್ಕಿತಕೆ, ಬೌದ್ಧಿಕತೆಗಳನ್ನು ಬಳಸಿಕೊಳ್ಳುತ್ತಲೇ ಅವುಗಳ ಲೆಕ್ಕಾಚಾರದಾಚೆಗಿನ ಸೋಜಿಗದ ಜಗತ್ತನ್ನು ಮೀರಬಲ್ಲ ಪ್ರತಿಭಾಶಕ್ತಿ-ಇವು ಎಷ್ಟೋ ಸಂದರ್ಭಗಳಲ್ಲಿ ಪ್ರಾಥಮಿಕ ನೆಲೆಯಲ್ಲೂ ಕಾಣಿಸಿಕೊಳ್ಳದಿರುವುದು ವಿಷಾದನೀಯ.

ಮಲ್ಲಿಕಾ ಅವರು ಪಾಂಡಿತ್ಯವನ್ನು ಮೆರೆಸುವ ಚಪಲವನ್ನು ಗದ್ಯವಾಗಲಿ, ಪದ್ಯವಾಗಲಿ, ನಾಟಕವಾಗಲಿ, ಮಹಾಕಾವ್ಯವಾಗಲಿ, ಕೊನೆಗೆ ಶಿಶುಸಾಹಿತ್ಯದಲ್ಲೂ ಉದ್ದಕ್ಕು ತೋರಿಸಿಕೊಳ್ಳುತ್ತಾರೆ. ಇಂಗ್ಲೀಷ್ ಅಥವಾ ಸಂಸ್ಕೃತ ಭಾಷೆ ತಿಳಿಯದಿದ್ದರೆ ಪ್ರಮಾದವೂ ಅಲ್ಲ, ಅವಮಾನವೂ ಅಲ್ಲ, ಮಲ್ಲಿಕಾ ಅವರು ಹೇರಳವಾಗಿ ಹೆಜ್ಜೆ ಹೆಜ್ಜೆಗೂ ಬಳಸಿಕೊಳ್ಳುವ ಸಂಸ್ಕೃತ ಶ್ಲೋಕಗಳು, ವಾಕ್ಯಗಳು, ಉದ್ಧರಣೆಗಳು ಕಥಾನಿರೂಪಣೆಗೆ, ಕಥನಕ್ಕೆ ಖಂಡಿತ ಅಡ್ಡಿಉಂಟು ಮಾಡಿವೆ. ಇಂಥ ಭಾಷಾ ಪ್ರಯೋಗಗಳನ್ನು ಓದುಗ ಅರಗಿಸಿಕೊಳ್ಳಬಲ್ಲನೆ ಎಂಬ ದೊಡ್ಡ ಅನುಮಾನ ಉಂಟಾಗುತ್ತದೆ. ಅವರ 'ಐಂದ್ರಕೀರ್ತಿ ಕೇತನ' ಹಾಗೂ ಕೆಲವು ಕವನ ಸಂಕಲನಗಳು ಕೂಡ ಓದಿಸಿಕೊಳ್ಳಲು ತುಂಬ ಕಷ್ಟಪಡುತ್ತವೆ. ಸಂವಹನ ಮೂಲವಾದ ಭಾಷೆ, ಅತಿ ಕ್ಲಿಷ್ಟಕರವಾಗಿ ಸಾಮಾನ್ಯ ಓದುಗರನ್ನು ತನ್ನ ಕಕ್ಷೆಗೆ ಸೆಳೆದುಕೊಳ್ಳುವುದೇ ಇಲ್ಲ. ಇದು ಅಪೇಕ್ಷಣೀಯವಲ್ಲ.

ಲೇಖಕಿಗೆ ಅತಿಯಾದ ಸಂಸ್ಕೃತ ವ್ಯಾಮೋಹ. ಅದೂ ಭಾಷಾ ಪ್ರಯೋಗದ ದೃಷ್ಟಿಯಿಂದ 'ವಿವೇಕಾನಂದ ವಿಜಯಂ'ನನ್ನೂ ಒಳಗೊಂಡಂತೆ ಅವರ ಅನೇಕ ಕೃತಿಗಳಲ್ಲಿ ಹೇರಳವಾದ ದೋಷಗಳಿರುವುದನ್ನು ಗಮನಿಸದಿರಲು ಸಾಧ್ಯವೇ ಇಲ್ಲ. 'ಮಂಡುಕೋಪನಿಷತ್' -ಉಪನಿಷತ್ತಿನ ಒಂದು ಧಾರೆಯಾಗಿದ್ದರೆ, ಇವರಲ್ಲಿ 'ಕೂಪ-ಮಂಡೂಕ'ದ ಅರ್ಥದಲ್ಲಿಯೇ ಬಳಕೆಯಾಗುತ್ತದೆ. 'ಪೊಸ ಪೊಚ್ಚ', 'ಪೆತ್ತೆಮ್ಮೆ', 'ಆನೆವಾಗಿಲ್', 'ಆಕಂಪುದು', 'ಪಾದಗಳಿಂಗೆ', ಬೆನ್ನೀರ್, ಸ್ವಾಂತನಂ, ಜಿವ್ಹೆ, ಜಾನ್ಹವಿ - ಹೀಗೆ ಅನೇಕ ಪದ ಪ್ರಯೋಗಗಳ, ವಾಕ್ಯಪ್ರಯೋಗಗಳ ದೋಷಗಳಿವೆ.

'ಜ್ಞಾನ ಸುಜ್ಞಾನ, ವಿಜ್ಞಾನ, ಪ್ರಜ್ಞಾನಗಳ ಮಹಾಮಾತೃಮಯಿ ಭಾರತ'- ಹೀಗೆ ಶಬ್ದಾಡಂಬರ, ಪದವ್ಯಾಮೋಹ ಹೇರಳ. ಅಶರೀರವಾಣಿ, 'ಮಗುವೆ ನೀಂ ಮೆಟ್ರೊಪೊಲಿಟನ್ ಇನ್‌ಸ್ಟಿಟ್ಯೂಟಿಗೆ ಪೋಗಲೇ' ಎಂದು ನುಡಿಯಿತು ಎಂಬ ವಿಚಾರ ಹಾಸ್ಯಾಸ್ಪದ. ಹಾಗೆಯೇ, 'ಕೇಳ್ ವತ್ಸಾ! ಸ್ಕಾಟಿಷ್ ಜನರಲ್ ಮಿಷನರಿ ಬೋರ್ಡ್ ನಡೆಸುತಿಹ ಸ್ಕಾಟಿಷ್ ಚರ್ಚ್ ಕಾಲೇಜ್ ಸೇರ್ದೊಡೆ ಸುಗಮ ಕಣಾ!' ಎಂಬ ವಿಚಿತ್ರ ವಾಕ್ಯರಚನೆಗಳಿಗೆ ಯಾವ ತಾರ್ಕಿಕ ವಿವರಣೆಯೂ ದೊರೆಯುವುದಿಲ್ಲ. ಜೊತೆಗೆ ಹೇಳುವ ವಿಚಾರಕ್ಕೆ ಭಾಷೆ ತುಂಬ ಹೊರತಾಗಿದೆ.

ಮಲ್ಲಿಕಾ ಅವರ ಈ ಮಹತ್ವದ ಕೃತಿಯಲ್ಲಿ ಪ್ರಬುದ್ಧ ದೃಷ್ಟಿಕೋನ, ಶೋಧನಾತ್ಮಕ ತುಡಿತಗಳಿಲ್ಲದೆ ನೀರಸವಾಗಿ, ಕಾಲಾನುಕ್ರಮಣಿಯಲ್ಲಿ ಘಟನೆಗಳನ್ನು ತುರುಕಿ 1274 ಪುಟಗಳನ್ನು ಬೆಳೆಸುವ ವ್ರತನಿಷ್ಠೆಯಿದೆ. ವಿವೇಕಾನಂದರೇ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ವ್ಯಕ್ತಿಗಳಿಗೆ ಬರೆದ ಪತ್ರಗಳು, ಅವರ ಲೇಖನಗಳು, ಉಪನ್ಯಾಸಗಳು - ಇವುಗಳಾವುದರ ಲಾಭವನ್ನೂ ಲೇಖಕಿ ತಮ್ಮ ಬರವಣಿಗೆಯಲ್ಲಿ ಬಳಸಿಕೊಡಂತೆ ತೋರುವುದಿಲ್ಲ.

ಸುಮಾರು 55 ವಿವಿಧ, ವೈವಿಧ್ಯಮಯ ಕೃತಿಗಳನ್ನು ಬರೆದಿರುವ ಮಲ್ಲಿಕಾ ಅವರು 'ಧರ್ಮನಿಷ್ಠರು, ದಯಾವಂತರು, ಗುಣಗ್ರಾಹಿಗಳನ್ನು ಪ್ರತಿಬಿಂಬಿಸುವುದು ಹಾಗೂ ಉತ್ತಮ ಮೌಲ್ಯಗಳ ಪ್ರತಿಪಾದನೆಯೇ ತಮ್ಮ ಸಾಹಿತ್ಯದ ಗುರಿ' ಎಂದು ಭಾವಿಸುತ್ತಾರೆ. ಈ ಭಾವಪ್ರಕಟಣೆಗೆ 'ಸಾಹಿತ್ಯ'ವೇ ಮಾಧ್ಯಮವಾಗಬೇಕಿರಲಿಲ್ಲ.

ಸಾಹಿತ್ಯ ಅಕಾಡಮಿ. ಲಿಪಿಪ್ರಾಜ್ಞೆ ಪ್ರಶಸ್ತಿ, ಜೊತೆಗೆ ಕರ್ನಾಟಕ ಸರ್ಕಾರದ ಅತ್ಯುತ್ತಮ ಸಾಹಿತ್ಯಿಕ ಮಹಿಳಾ ಪ್ರಶಸ್ತಿ, 'ಅತ್ತಿಮಬ್ಬೆ ಪ್ರಶಸ್ತಿ' ಪಡೆದುಕೊಂಡಿರುವ ಮಲ್ಲಿಕಾ ಅವರು ಕನ್ನಡಿಗರು ಗಮನಿಸಬೇಕಾದ ಲೇಖಕಿ.

❑

# ಪಾಟೀಲ ಪುಟ್ಟಪ್ಪ

ಮೋಹನ ನಾಗಮ್ಮನವರ

“ನೀವು ಸ್ಪೀಕರ್ ಎಂದು ನಿಮ್ಮ ಸ್ಥಾನ ದೊಡ್ಡದು, ಅದು ನಿಸ್ಸಂದೇಹ. ಸದನದ ಸಭೆಯಲ್ಲಿ ನಿಮಗಿಂತ ಹೆಚ್ಚಿನವರು ಯಾರೂ ಇಲ್ಲ. ಆದರೆ ಸಭೆಯ ಒಳಗೆ ಮತ್ತು ಹೊರಗೆ ನೀವು ಕೂಡ ಒಬ್ಬ ಕನ್ನಡಿಗರು. ಕನ್ನಡಕ್ಕಿಂತ ನೀವು ದೊಡ್ಡವರೇನೂ ಅಲ್ಲ. ರಾಜ್ಯದ ಗವರ್ನರ್ ಇರಲಿ. ಮುಖ್ಯಮಂತ್ರಿ ಇರಲಿ, ಸ್ಪೀಕರ್ ಇರಲಿ, ಯಾರೇ ಇದ್ದರೂ ಅವರು ಕನ್ನಡಕ್ಕೆ ಅಧೀನರೇ ಹೊರತು, ಕನ್ನಡಕ್ಕೆ ಮೇಲಿನವರು ಅಲ್ಲ.........”

“ಕನ್ನಡವನ್ನು ಉಪಯೋಗಿಸಬೇಕು ಎಂದು ಹೇಳುವುದನ್ನೇ ಒಂದು ಅಪರಾಧವೆಂದು ನಮ್ಮ ಶಾಸನಸಭೆ ಖಂಡಿತವಾಗಿಯೂ ತೀರ್ಮಾನಿಸಲಾರದು. ನೀವು ಪದೇ ಪದೇ ಹಕ್ಕುಬಾಧ್ಯತೆ ಉಲ್ಲಂಘನೆಯಾಯಿತು ಎಂದು ನನಗೆ ಹೆದರಿಕೆ ಹಾಕಬೇಕಾದ ಆವಶ್ಯಕತೆಯಿಲ್ಲ- ಸಾರ್ವಜನಿಕ ಪ್ರಶ್ನೆಗಳ ಪ್ರತಿಪಾದನೆ ಮಾಡುವಾಗ ನಾನು ಯಾರ ಹೆದರಿಕೆ, ಬೆದರಿಕೆಗಳಿಗೆ ಮಣಿಯುವುದಿಲ್ಲ. ಹೆದರಿಕೆ ಎನ್ನುವ ಮಾತು ನನ್ನ ಶಬ್ದಕೋಶದಲ್ಲಿಯೇ ಇಲ್ಲ.”

ಡಾ|| ಪಾಟೀಲ ಪುಟ್ಟಪ್ಪ ಕರ್ನಾಟಕ ಸರ್ಕಾರದ ಕನ್ನಡ ಕಾವಲು ಸಮಿತಿಯ ಅಧ್ಯಕ್ಷರಾಗಿದ್ದರು. ಕನ್ನಡ ಅನುಷ್ಠಾನದ ವಿಷಯದಲ್ಲಿ ಯಾರು ಎಷ್ಟೇ ಉನ್ನತ ಅಧಿಕಾರದಲ್ಲಿದ್ದರೂ ಅವರನ್ನು ತಡವಿಕೊಳ್ಳುತ್ತಿದ್ದರು. ಇದನ್ನು ಸಹಿಸದ ಕೆಲವರು ಡಾ|| ಪಾಟೀಲ ಪುಟ್ಟಪ್ಪನವರಿಂದ ಹಕ್ಕುಚ್ಯುತಿಯಾಗಿದೆ ಎಂದು ಆರೋಪಿಸಿದಾಗ ವಿಧಾನಸಭಾಧ್ಯಕ್ಷರಿಗೆ ಡಾ|| ಪಾಟೀಲ ಪುಟ್ಟಪ್ಪ ಬರೆದ ಪತ್ರದ ಸಾಲುಗಳಿವು.

1989ರ ಆಗಸ್ಟ್ ತಿಂಗಳು 6ನೇ ತಾರೀಖು ಸಂಚಿಕೆಯಲ್ಲಿ ಮಹಾರಾಷ್ಟ್ರದ ಅಗ್ರಪಂಕ್ತಿಯ ಮರಾಠಿ ದೈನಿಕ ‘ಲೋಕಸತ್ತಾ’ ತನ್ನ ಸಂಪಾದಕೀಯದಲ್ಲಿ ಹೀಗೆ ಬರೆಯಿತು..........“ ಮರಾಠಿ ಮಾತೆಯೂ ಸಹ ಇಂದು ಇಂತಹ ಮರಾಠೀ ಪುಟ್ಟಪ್ಪನ ಅವತಾರದ ಮಾರ್ಗ ನಿರೀಕ್ಷಿಸುತ್ತಿದ್ದಾಳೆ”. ಪಕ್ಕದ ಮಹಾರಾಷ್ಟ್ರದ ಮರಾಠೀ ಜನ ಸಹ ತಮ್ಮೊಳಗೊಬ್ಬ ಕನ್ನಡ, ಕನ್ನಡಿಗ ಕರ್ನಾಟಕ ತತ್ವಕ್ಕಾಗಿ ಹೋರಾಡುವ ಡಾ|| ಪಾಟೀಲ ಪುಟ್ಟಪ್ಪನವರಂತಹ ನಾಯಕ ಮಹಾರಾಷ್ಟ್ರದಲ್ಲಿ ಮರಾಠಿಗಾಗಿ ಜನ್ಮವೆತ್ತಬಾರದೇ ಎಂದು ಹಂಬಲಿಸುವಷ್ಟರ ಮಟ್ಟಿಗೆ ಡಾ|| ಪಾಟೀಲ ಪುಟ್ಟಪ್ಪ ಹೆಸರುವಾಸಿ.

1962ರಿಂದ 1974ರವರೆಗೆ 12 ವರ್ಷ ರಾಜ್ಯಸಭೆಯ ಸದಸ್ಯರಾಗಿದ್ದಾಗ ಪಾರ್ಲಿಮೆಂಟಿನಲ್ಲಿ ಡಾ|| ಪಾಟೀಲ ಪುಟ್ಟಪ್ಪ ಚರ್ಚೆ ಆರಂಭಿಸಿದರೆ ಪ್ರಧಾನಿ ಕಂಡಿತ ಜವಾಹರಲಾಲ್ ನೆಹರೂ ಕೂಡ ಏಕಾಗ್ರತೆಯಿಂದ ಆಲಿಸುತ್ತಿದ್ದರು. ಪಾರ್ಲಿಮೆಂಟಿನ ಸೆಂಟ್ರಲ್ ಹಾಲ್‌ನಲ್ಲಿ ಚರ್ಚೆ ಮಾಡಲಿಕ್ಕಿರುವ ಡಾ|| ಪುಟ್ಟಪ್ಪನವರ ಸುತ್ತ ಇನ್ನುಳಿದ ಪಾರ್ಲಿಮೆಂಟ್ ಸದಸ್ಯರು ಪಾಠ ಹೇಳಿಸಿಕೊಳ್ಳುವ ವಿದ್ಯಾರ್ಥಿಗಳಂತೆ ನೆರೆಯುತ್ತಿದ್ದರೆಂಬುದು ಡಾ|| ಪಾಟೀಲ ಪುಟ್ಟಪ್ಪನವರ ಸಮಕಾಲೀನರ ಮಾತು. ಚಲಿಸುವ ಜ್ಞಾನಕೋಶವೆಂದೇ ಹೆಸರಾದ ಡಾ||ಪಾಟೀಲ ಪುಟ್ಟಪ್ಪನವರು ಹೊಸ ಪೀಳಿಗೆಯವರಿಗಂತೂ ವಿಸ್ಮಯ !

ಕನ್ನಡದ ಕೆಚ್ಚೆದೆಯ ಹೋರಾಟಗಾರ, ಪತ್ರಿಕೋದ್ಯಮಿ, ಕಥೆಗಾರ, ಸಾಹಿತಿ, ಚಿಂತಕ, ಪ್ರಬುದ್ಧ ರಾಜಕಾರಣಿ, ಆಡಳಿತಗಾರ ಎಂಬ ಹಲವಾರು ವಿಶೇಷಣಗಳನ್ನು ಅಭಿಮಾನದಿಂದ ಸೇರಿಸಬಹುದಾದ ಧೀಮಂತಿಕೆಯ ವ್ಯಕ್ತಿ ಶ್ರೀ ಪುಟ್ಟಪ್ಪ ಸಿದ್ಧಲಿಂಗಪ್ಪಗೌಡ ಪಾಟೀಲರು 1921 ಜನೇವರಿ 14ರಂದು ಸಂಕ್ರಮಣದ ದಿನ ಸ್ವಾತಂತ್ರ್ಯ ಹೋರಾಟಗಾರರ ನೆಲೆವೀಡು ಹಾವೇರಿ ತಾಲೂಕಿನ ಕುರುಬಗೊಂಡದ, ಸಾಮಾಜಿಕ ಅಂತಃಕರಣವೇ ಪ್ರಮುಖವಾಗಿದ್ದ ಕುಟುಂಬದಲ್ಲಿ ಹುಟ್ಟಿದ ಡಾ|| ಪಾಟೀಲ ಪುಟ್ಟಪ್ಪನವರನ್ನು ಹಿರಿಯ ಮುತ್ಸದ್ದಿ ಮಾಜಿ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪ ‘ಪಾಪು’ ಎಂದೇ ಕರೆದರು.

“ಚಿಕ್ಕವಯಸ್ಸಿನಿಂದಲೂ ನಾಡಿಗಾಗಿ, ನುಡಿಗಾಗಿ ಹೋರಾಡುತ್ತಿರುವ ಪಾಟೀಲ ಪುಟ್ಟಪ್ಪನವರು ಕನ್ನಡನೆಲದ ಹೆಮ್ಮೆಯ ಪುತ್ರ. ಕರ್ನಾಟಕದ ಏಕೀಕರಣಕ್ಕಾಗಿ ದುಡಿದ ಮಹನೀಯರ ಪೈಕಿ ಪ್ರಮುಖರು. ಕನ್ನಡದ ಉಳಿವಿಗಾಗಿ ಅದರ ಸರ್ವತೋಮುಖ ಬೆಳವಣಿಗೆಗಾಗಿ ಅವರು ಸಲ್ಲಿಸಿದ ಸೇವೆ ನಾಡಿನ ಇತಿಹಾಸದಲ್ಲಿ ಸ್ಮರಣೀಯವಾಗಿ ಉಳಿಯುತ್ತದೆ. ನಮ್ಮ ನುಡಿ ಸೇವೆ ಮಾಡಿದವರಲ್ಲಿ ಪಾಪೂಗೆ ಅಗ್ರಸ್ಥಾನ ಸಲ್ಲುತ್ತದೆ ಎಂದು ಎಸ್. ನಿಜಲಿಂಗಪ್ಪ ಮನತುಂಬಿ ಹೇಳಿದ್ದಾರೆ.

ಕುರುಬಗೊಂಡ, ಬ್ಯಾಡಗಿ, ಹಾವೇರಿಯಲ್ಲಿ ಓದಿದ ಪಾಟೀಲ ಪುಟ್ಟಪ್ಪನವರು ಪ್ರೌಢಶಾಲಾ ವಿದ್ಯಾಭ್ಯಾಸಕ್ಕೆಂದೂ ಧಾರವಾಡದ ಮುರುಘಾ, ಮಠದಲ್ಲಿ ಉಳಿದು ರಾಜಾಲಖಮನಗೌಡ ಹೈಸ್ಕೂಲಿನಲ್ಲಿ ಓದು ಮುಂದುವರೆಸಿ ಕರ್ನಾಟಕ ಕಾಲೇಜಿನಲ್ಲಿ ಪದವಿ ಪೂರೈಸಿ ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಎಂ. ಎಂ. ಬಿ. ವ್ಯಾಸಂಗ ಮಾಡಿದರು. ಅನಂತರ ಮುಂಬೈನಲ್ಲಿ ಪುನಃ ಹುಬ್ಬಳ್ಳಿಯಲ್ಲಿ ಪತ್ರಿಕೆಗಳಲ್ಲಿ ಕೆಲಸ ಮಾಡಿದ ಡಾ|| ಪುಟ್ಟಪ್ಪ 1949ರಲ್ಲಿ ಅಮೇರಿಕೆಯ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದಿಂದ ಪತ್ರಿಕೋದ್ಯಮದಲ್ಲಿ ಎಂ. ಎಫ್. ಪಿ. ಪದವಿ ಪಡೆದರು. ಅಮೇರಿಕೆಯಲ್ಲಿನ ವ್ಯಾಸಂಗದ ಸಂದರ್ಭದಲ್ಲಿ ಡಾ|| ಜೋಸೆಫ್ ಭಂಟ್‌ರ ಸಲಹೆಯಂತೆ ಡಾ|| ಪಿನ್‌ಸ್ಟೀನ್. ಜಸ್ಟೀತ್ ಫ್ರಾಂಕ್‌ಫರ್ಟ್‌ರಂತಹ ಹಿಂದೂ ಒಕ್ಕೂಟದಲ್ಲಿದ್ದರು.

ಈಗ ಪ್ರಪಂಚದ ವಾರಪತ್ರಿಕೆ ಹಾಗೂ ವಿಶ್ವವಾಣಿ ದಿನಪತ್ರಿಕೆಯ ಸಂಪಾದಕರಾಗಿ ಎಂಬತ್ತರ ಹರೆಯದಲ್ಲಿಯೂ ಅವಿಶ್ರಾಂತವಾಗಿ ಚಟುವಟಿಕೆಯಲ್ಲಿರುವ ಡಾ|| ಪಾಟೀಲ ಪಾಟೀಲ ಪುಟ್ಟಪ್ಪ ಕರ್ನಾಟಕದ ಸಾಕ್ಷಿಪ್ರಜ್ಞೆಯಾಗಿ ಉಳಿದವರು. ಸಾಹಿತ್ಯ ಹೋರಾಟ, ಕರ್ನಾಟಕ ಏಕೀಕರಣ, ಗೋಕಾಕ್ ಚಳುವಳಿಗಳ ನೇತೃತ್ವವಹಿಸಿದರು. ಮೂರು ದಶಕಗಳ ಕಾಲ ಕರ್ನಾಟಕ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾಗಿ, ಕರ್ನಾಟಕ ಸರ್ಕಾರದ ಕನ್ನಡ ಕಾವಲು ಸಮಿತಿಯ ಅಧ್ಯಕ್ಷರಾಗಿ, ಎರಡು ಅವಧಿಗೆ ರಾಜ್ಯಸಭಾ ಸದಸ್ಯರಾಗಿ ಬದುಕಿನ ವಿವಿಧ ಕ್ಷೇತ್ರಗಳಲ್ಲಿ ಸಮರ್ಥ ರೀತಿಯಿಂದ ಕಾರ್ಯ ನಿರ್ವಹಿಸಿದ ಡಾ. ಪಾಟೀಲ ಪುಟ್ಟಪ್ಪ ಜಗತ್ತಿನ ಬೇರೆ ಬೇರೆ ದೇಶಗಳಲ್ಲಿ ಪ್ರವಾಸ ಮಾಡಿ ಲೋಕಾನುಭವ ಪಡೆದವರು. ಪತ್ರಿಕೋದ್ಯಮದ ಸೇವೆಗೆ ಸಂದ ಪ್ರತಿಷ್ಠಿತ ಟಿ. ಎಫ್. ಆರ್. ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳಲ್ಲದೇ ಕನ್ನಡ ವಿಶ್ವವಿದ್ಯಾಲಯ ‘ನಾಡೋಜ’ ಪದವಿ ನೀಡಿ ತನ್ನನ್ನೇ ತಾನು ಗೌರವಿಸಿಕೊಂಡಿದೆ.

ಅವರ ಬರವಣಿಗೆ ಮತ್ತು ವ್ಯಕ್ತಿತ್ವ ಚಲಿಸುವ ಜ್ಞಾನಕೋಶವನ್ನೇ ನೆನಪಿಸುತ್ತವೆ. ಅಗಾಧ ಜ್ಞಾಪಕಶಕ್ತಿ, ತಮ್ಮ ಏರುಸ್ವರದಿಂದ ಸಂತೆಯಲ್ಲೂ

ಏಕಾಗ್ರತೆ ಮೂಡಿಸಿ ತಮ್ಮೆಡೆ ಸೆಳೆದುಕೊಳ್ಳಲಿಲ್ಲ ಅವರ ಭಾಷಣದ ಪರಿ ಎಂಥಹವರನ್ನು ಬಡಿದೆಬ್ಬಿಸಬಲ್ಲದು. ಅವರ ತಾರುಣ್ಯದ ದಿನಗಳಿಂದ ಹಿಡಿದು ಇಂದಿನವರೆಗೂ ಡಾ|| ಪಾಟೀಲ ಪುಟ್ಟಪ್ಪ ವಿಮುಖರಾಗುವುದಿಲ್ಲ. ಆಯಾ ಕಾಲದ ಸನ್ನಿವೇಶಕ್ಕೆ, ಘಟಿತಕ್ಕೆ. ನಾಡು ನುಡಿಯ ಅಪಮಾನಕ್ಕೆ ಕೂಡಲೇ ಕೆರಳಿ ನಿಲ್ಲುವ ಡಾ|| ಪುಟ್ಟಪ್ಪನವರ ಚರ್ಚೆಯ ನಿಲಿಕಿಗೆ ನಿಲುಕದೇ ಹೋದ ವಿಷಯಗಳಿಲ್ಲ. ಕನ್ನಡದ ವಿಷಯದಲ್ಲವರಿಗೆ ತೆರೆಯದ ಬಾಗಿಲುಗಳಿಲ್ಲ, ಪ್ರಧಾನ ಮಂತ್ರಿಯೇ ಇರಲಿ. ಮುಖ್ಯಮಂತ್ರಿಯೇ ಇರಲಿ ಅವರಿಗೆ ಯಾರದೂ ಮುಲಾಜಿಲ್ಲ. ಕೂಡಲೇ ಪತ್ರ ಬರೆಯುವ ನೇರವಾಗಿಯೇ ಭೇಟಿಯಾಗಿ ಅಬ್ಬರಿಸಿ ಅಧಿಕಾರಸ್ಥ ವ್ಯಕ್ತಿಯಲ್ಲಿ ಕುಬ್ಜತೆ ಮೂಡಿಸುವ ಪುಟ್ಟಪ್ಪನವರ ಮೆದುಳಿನಲ್ಲಿ ಕಾಲಕೋಶ ಯಾವತ್ತು ಬಿಚ್ಚಿಕೊಂಡೇ ಕುಳಿತಿರುತ್ತದೆ. ವಿಷಯ ವೊಂದನ್ನು ಮಂಡಿಸ ಹೊರಡುವ ಪುಟ್ಟಪ್ಪ ಎಂದೂ ರೆಫರನ್ಸ್‌ಗೆ ಶರಣಾಗ ಬೇಕಾದ್ದಿಲ್ಲ. ಬರೆಯುವಾಗಲು ಹಾಗೆಯೇ ಇದ್ದ ಪೆನ್ನು ಹಾಳೆಯ ಮಿತಿ ಈ ನಿಯಮದವರೆಗೆ ಮುಂದುವರೆಯುತ್ತದೆ ಕರಡು. ತಿದ್ದುಪಡಿಯೆಂಬ ಭೇದವೇ ಇಲ್ಲ.

ಅಮೇರಿಕೆಯಲ್ಲಿ ಓದುವಾಗ ಅಲ್ಲಿನ ಹಿರಿಯ ಪ್ರಾಧ್ಯಾಪಕ ಅಂತರ್ ರಾಷ್ಟ್ರೀಯ ಮನ್ನಣೆಯ ಚಿಂತಕ ವಿಲ್ ಡ್ಯೂರಾಂಡ್‌ರ ಶಿಷ್ಯತ್ವದಿಂದ ಹಿಡಿದು ಮಾಜಿಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪ. ಪ್ರಧಾನಿ ಪಂಡಿತ ಜವಾಹರಲಾಲ್ ನೆಹರೂ, ಮೊರಾರ್ಜಿ ದೇಸಾಯಿ, ಕೆಂಗಲ್ ಹನುಮಂತ ಯ್ಯನವರು, ರಾಮಕೃಷ್ಣ ಹೆಗಡೆಯವರಂತಹ ರಾಷ್ಟ್ರೀಯ ಮುತ್ಸದ್ಧಿಗಳ ಒಡನಾಟವೊಂದೆಡೆಯಾದರೆ ಕನ್ನಡದ ಹಿರಿಯರಾದ ಡಾ|| ವ್ಹಿ. ಕೆ. ಗೋಕಾಕ, ಡಾ. ಸಿದ್ಧಯ್ಯ ಪುರಾಣಿಕ, ಡಾ|| ಆರ್. ಸಿ. ಹಿರೇಮಠ, ಡಾ.ಹಿರೇಮಲ್ಲೂರ ಈಶ್ವರನ್, ಗೌರೀಶ್‌ಕಾಯ್ಕಿಣಿ, ಡಿ.ವ್ಹಿ.ಜಿ. ಖಾದ್ರಿಶಾಮಣ್ಣ, ಬೆಟಗೇರಿ ಕೃಷ್ಣಶರ್ಮ, ಡಾ|| ಗಂಗೂಬಾಯಿ ಹಾನಗಲ್, ಎಚ್ಚೆಸ್ಕೆ, ಡಾ. ದೇ. ಜವರೇ ಗೌಡ, ಕಯ್ಯಾರ ಕಿಞ್ಞಣ್ಣರೈ ಮೊದಲಾದವರೊಂದಿಗಿನ ಸಹವರ್ತಿ ಧೋರಣೆ ಕೇವಲ ಸ್ನೇಹವಾಗುಳಿಯದೇ ನಾಡು ನುಡಿ ಕಟ್ಟುವ ಈ ಶತಮಾನದ ಮಹತ್ವದ ಕಾಯಕವೊಂದರಲ್ಲಿ ಮೆರೆಯುವ ಹಿರಿಯ ಹೆಸರು.

ಕನ್ನಡ ನಾಡಿನಲ್ಲಿ ಇವರ ಉಪನ್ಯಾಸಗಳನ್ನು ಕೇಳದ ನಗರಗಳಿ ಲ್ಲವೆಂದೇ ಹೇಳಬಹುದು. ಕನ್ನಡದ ಬಗ್ಗೆ ಮಾತನಾಡುವಾಗ ಅವರ ಪಾಲಿಗೆ ಸಿಡಿಲ ಕಡಲಾಗುತ್ತದೆ. ಶಿವನ ಡಿಂಡಿಮವಾಗುತ್ತದೆ, ವಿರೋಧಿ ಭೂತಗಳಿಗೆ ಚಂಡೆಯೂ ಆಗುತ್ತದೆ. ಈ ನಾಲ್ಕು ಮಾರ್ಗಗಳ ಮೂಲಕ ಅವರು ಕನ್ನಡದ ಕೋಟೆಯನ್ನು ಭದ್ರಗೊಳಿಸಲು ಪ್ರಯತ್ನಿಸಿದ್ದಾರೆ. ಇಂತಹ ಶಕ್ತಿ ಅವರ ಪಾಲಿಗೆ ಅಕ್ಷಯವಾಗಲೆಂದು ಕರ್ನಾಟಕ ಹೃದಯ ಶಿವನನ್ನು ಪ್ರಾರ್ಥಿಸು ತ್ತೇನೆಂದು ಹೇಳಿದ ಡಾ. ದೇ. ಜವರೇಗೌರರ ಮಾತು ಉತ್ಪ್ರೇಕ್ಷೆಯಲ್ಲ.

1945ರ ಸುಮಾರಿಗೆ ಮುಂಬೈಗೆ ವಕೀಲಿವೃತ್ತಿ ಮಾಡಲೆಂದು ಹೋಗಿದ್ದ ಡಾ|| ಪುಟ್ಟಪ್ಪ ಅಲ್ಲಿ ಕೋರ್ಟಿಗಿಂತ ಹೆಚ್ಚು ಪತ್ರಿಕಾ ಕಛೇರಿಗಳಿಗೇ ಭೇಟಿ ನೀಡಿದರು. ಆಗಿನ್ನು 25ರ ಹರೆಯದ ಡಾ|| ಪುಟ್ಟಪ್ಪ 'ಬಾಂಬೇ ಕ್ರಾನಿಕಲ್' ಮತ್ತು 'ಫ್ರೀ ಪ್ರೆಸ್ ಜರ್ನಲ್'ಗಳಿಗೆ ಆಹ್ವಾನಿತರಾಗಿ ಬರೆಯುವಷ್ಟು ಆಂಗ್ಲ ಪತ್ರಿಕೋದ್ಯಮದಲ್ಲಿ ಮನ್ನಣೆ ಗಳಿಸಿಕೊಂಡಿದ್ದರು. ಫ್ರೀ ಪ್ರೆಸ್ ಪತ್ರಿಕೆಯ ಸಂಪಾದಕ ಎಫ್. ಸರ್ದಾರರು ಅವರ ಪತ್ರಿಕೆಯಲ್ಲಿಯೇ ಮುಂದುವರೆಯಲು ಒತ್ತಾಯಿಸುತ್ತಿದ್ದರು. ಬಾಂಬೇ ಕ್ರಾನಿಕಲ್‌ನ ಸೈಯದ್ ಅಬ್ದುಲ್ಲಾ, ಎ. ಜಿ. ತೆಂಡೂಲ್ಕರ್ ಹಾಗೂ ಸರ್ದಾರ್ ವಲ್ಲಭಬಾಯಿ ಪಟೇಲರು ಪುಟ್ಟಪ್ಪ ನವರು ಮುಂಬೈಯಲ್ಲಿಯೇ ಉಳಿದು ಆಂಗ್ಲ ಪತ್ರಿಕೋದ್ಯಮ ದಲ್ಲಿಯೇ ಮುಂದುವರಿಯಲು ಪ್ರೋತ್ಸಾಹಿಸಿದ್ದರು.

ಆಗಿನ ಮುಂಬೈ ಕರ್ನಾಟಕದ ಪ್ರಮುಖ ರಾಜಕಾರಣಿ ಕೆ.ಎಫ್. ಪಾಟೀಲರಿಗೆ ಈ ಭಾಗದಲ್ಲಿ ಮಹತ್ವದ ಪತ್ರಿಕೆಯೊಂದನ್ನು ಮಾಡ ಬೇಕೆಂಬ ಧ್ಯೇಯವಿತ್ತು. ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಜೈಲಿನಲ್ಲಿದ್ದ ಶ್ರೀ ಕೆ. ಎಫ್. ಪಾಟೀಲ ಹಾಗೂ ಮತ್ತವರ ಸಂಗಡಿಗರಿಗೆ ಡಾ. ಪುಟ್ಟಪ್ಪ ಸತತವಾಗಿ ಪತ್ರ ಬರೆಯುತ್ತಿದ್ದರು. ಪುಟ್ಟಪ್ಪನವರ ಪತ್ರ ಬರವಣಿಗೆಯಿಂದಲೇ ಪ್ರಭಾವಿತರಾಗಿದ್ದ ಕೆ. ಎಫ್. ಪಾಟೀಲ ಆಗಿನ ತಮ್ಮ ಒಡನಾಡಿ ಆರ್. ಬಿ. ಮಾಮಲೇ ದೇಸಾಯರ ಮೂಲಕ ಹುಬ್ಬಳ್ಳಿಗೆ ಕರೆಸಿ ಹೊಸದಾಗಿ ಪ್ರಾರಂಭಗೊಂಡ 'ವಿಶಾಲ ಕರ್ನಾಟಕ' ಪತ್ರಿಕೆಯ ಸಂಪಾದಕತ್ವ ನೀಡಿದರು. ಆ ಕಾಲದ ವಿಶಾಲಕರ್ನಾಟಕ ಜನಪ್ರಿಯತೆ ಪಡೆದದ್ದಲ್ಲದೇ ರಾಷ್ಟ್ರೀಯ ಚಳುವಳಿಗೆ ಮತ್ತು ಕರ್ನಾಟಕದ ಏಕೀಕರಣಕ್ಕೆ ಐತಿಹಾಸಿಕ ವೇದಿಕೆಯಾಗಿತ್ತು.

1949ರಲ್ಲಿ ಕ್ಯಾಲಿಫೋರ್ನಿಯಾದ ಲಾಸ್ ಏಂಜಲೀಸ್ ವಿಶ್ವವಿದ್ಯಾ ಲಯದ ಪತ್ರಿಕೋದ್ಯಮ ವಿದ್ಯಾರ್ಥಿಯಾಗಿ ದಾಖಲಾದ ಪುಟ್ಟಪ್ಪನವರ ಪರಿಣತಿ ಕಂಡು ಅಲ್ಲಿಯ 'ಡೀನ್'ರಾಗಿದ್ದ ಡಾ. ಜೋಸೆಫ್ ಬ್ರಾಂಟ್‌ರವರು 'ವಿಶಾಲಕರ್ನಾಟಕ' ಪತ್ರಿಕೆಯ ಸಂಪಾದಕತ್ವದ ಹಿನ್ನೆಲೆಯಲ್ಲಿಯೇ ಪಿಎಚ್.ಡಿ. ಪ್ರಬಂಧ ಬರೆದು ಮಂಡಿಸಲು ಹೇಳಿದರು. ಆರ್ಥಿಕ ಅನಾನುಕೂಲತೆಯಿಂದ ಹೆಚ್ಚುಕಾಲ ಅಮೇರಿಕೆಯಲ್ಲಿ ನಿಲ್ಲಲಾಗದ ಪುಟ್ಟಪ್ಪ ಭಾರತಕ್ಕೆ ಮರಳಿದರು. ನಂತರ ನವಯುಗ ಮಾಸಪತ್ರಿಕೆಯ ಸಂಪಾದಕರಾಗಿ ಕಾರ್ಯನಿರ್ವಹಿಸಿದ ಪುಟ್ಟಪ್ಪ 1954ರಲ್ಲಿ ಸಂಯುಕ್ತ ಕರ್ನಾಟಕದ ಡಿ. ಮೋಹರೆ ಹನುಮಂತ ರಾಯರ ಪ್ರೋತ್ಸಾಹದೊಂದಿಗೆ ಪ್ರಪಂಚ ಪತ್ರಿಕೆ ಹುಟ್ಟು ಹಾಕಿದರು.

ಹಾಗೆ ಹುಟ್ಟಿಕೊಂಡ 'ಪ್ರಪಂಚ' ಆ ಕಾಲದ ಪತ್ರಿಕೋದ್ಯಮದ ವಿಸ್ಮಯ ಗಳಲ್ಲೊಂದಾಗಿತ್ತು. ಅಂದು ಕೇವಲ ಮೃತ ಮಾದರಿಯಲ್ಲಿ ವರದಿಯೊಪ್ಪಿಸು ತ್ತಿದ್ದ ಪತ್ರಿಕೆಗಳು, ವರ್ತಮಾನದ ವಿದ್ಯಮಾನಗಳಲ್ಲಿ ಪಕ್ಷಪಾತದ ದೃಷ್ಟಿ ಯಿಂದ ವ್ಯವಹರಿಸುತ್ತಿದ್ದ ಪತ್ರಿಕೋದ್ಯಮಗಳ ನಡುವೆ ಚಾಟಿ ಏಟಿನಂತಹ ಒಕ್ಕಣೆಗೆ, ಸುತ್ತು ಬಳಸಿಲ್ಲದೇ ನೇರ ವಿಷಯಕ್ಕೆ ಬಂದು ಮರ್ಮಾಘಾತ ನೀಡುತ್ತಿದ್ದ ಬರವಣಿಗೆ ಸಾರ್ವಜನಿಕ ಬದುಕಿನ ಶಿಷ್ಟಾಚಾರ ಉಲ್ಲಂಘನೆ ಮಾಡುವ ಯಾರನ್ನೇ ಆದರೂ ಎದುರಿಸಿ ನಿಲ್ಲುವ ದಿಟ್ಟತನದಿಂದಾಗಿ ಪ್ರಪಂಚದ ಪಾಟೀಲ ಪುಟ್ಟಪ್ಪ ತಮ್ಮ 33ರ ಹರೆಯದಲ್ಲೇ ಕರ್ನಾಟಕದ ಮನೆಮಾತಾಗತೊಡಗಿದರು.

ವಿದ್ಯಾರ್ಥಿಯಾಗಿದ್ದಾಗಲೇ 1942ರ ಕ್ವಿಟ್ ಇಂಡಿಯಾ ಚಳುವಳಿಯ ಕರ್ನಾಟಕ ಕಾಲೇಜಿನ ವಿದ್ಯಾರ್ಥಿ ಮುಖಂಡರಾಗಿದ್ದ, 1942ರ ಆಗಸ್ಟ್ 9ರಂದು ಕಾಲೇಜಿನ ಬ್ರಿಟಿಷ್ ಅಧ್ಯಾಪಕರಿಗೆ ಬಲವಂತವಾಗಿ ಗಾಂಧೀ ಟೊಪಿಗೆ ಹಾಕಿ ಧಾರವಾಡದ ಗಮನ ಸೆಳೆದ ಪುಟ್ಟಪ್ಪ ಆ ಕಾರಣಕ್ಕೆಂದೇ ಕಾಲೇಜಿನಿಂದ ಹೊರ ಹಾಕಲ್ಪಟ್ಟು ಆರ್ಟ್ಸ್ ಪದವಿ ತಪ್ಪಿಹೋಯಿತು. 'ನೀವೂ ಪ್ರಿನ್ಸಿಪಾಲರೂ ಕೂಡಿ ನನ್ನನ್ನು ಕಾಲೇಜಿನಿಂದ ಹೊರಹಾಕಿದಿರಿ. ನನಗೆ ಆರ್ಟ್ಸ್ ಪದವಿ ತಪ್ಪಿ ಹೋದಂತಾಯಿತು. ಆರ್ಟ್ಸ್ ಪದವಿಯಿಲ್ಲದಿದ್ದರೆ ಹೋಗಲಿ, ಅದರಿಂದ ನನಗೇನೂ ನಷ್ಟವಿಲ್ಲ. ನಾನು ನನ್ನ ಯೋಗ್ಯತೆಯಿಂದ ಮುಂದೆ ಬರಬಲ್ಲೆ' ಎಂದು ವಿದ್ಯಾರ್ಥಿ ಪುಟ್ಟಪ್ಪ ಹೇಳಿದ್ದನ್ನು 1974ರಲ್ಲಿ ಪ್ರೊ. ಸ. ಸ. ಮಾಳವಾಡ ನೆನಪಿಸಿಕೊಂಡಿದ್ದಾರೆ. ಹಾವೇರಿಯಲ್ಲಿ ಹೈಸ್ಕೂಲು ಓದುವಾಗಲೇ ಕೈಬರಹದ ಪತ್ರಿಕೆ ಹೊರಡಿಸುತ್ತಿದ್ದ ಪುಟ್ಟಪ್ಪ ಆಗ ತಾವೇ

ಬರೆದು ಪತ್ರಿಕೆ ತುಂಬಿಸಿ ಬೇರೆ ಬೇರೆಯವರ ಹೆಸರು ಹಾಕುತ್ತಿದ್ದರು. ಅದೇ ಹಂತದಲ್ಲಿ 1938-39ರ ಸಾಲಿನಲ್ಲಿ ಉಡುಪಿಯಿಂದ ಪ್ರಕಟಿಸಲಾಗುತ್ತಿದ್ದ 'ಅಂತರಂಗ' ಪತ್ರಿಕೆಗೆ ಸಾಲಾಗಿ ಲೇಖನ ಬರೆಯುತ್ತಿದ್ದರು.

ಕತೆಯಾಗುವ ವಸ್ತು ನಮ್ಮ ಜೀವನದ ಸುತ್ತಲೂ ಬೇಕಾದಷ್ಟು ಬಿದ್ದುಕೊಂಡಿದೆ. ಬಾಳಿನ ಘಟನೆಗಳನ್ನು ನಾವು ಕೇಳುತ್ತೇವೆ. ಅವು ಬದುಕಿಗೆ ತಂದುಕೊಡುವ ತಿರುವನ್ನು ನಾವು ನೋಡುತ್ತೇವೆ. ಮೇಲೆ ಆಕಾಶ ಕೆಳಗೆ ಭೂಮಿ ಇರುವಲ್ಲಿ ಯಾರು ಇರುವರೋ ಅವರೆಲ್ಲ ಕವಿಗಳು, ಕತೆಗಾರರು, ಕಾದಂಬರಿಕಾರರು. ಆದರೆ ಬೇಕಾಗಿರುವುದು ಏನೆಂದರೆ ನೋಡುವ ಕಣ್ಣು, ಕೇಳುವ ಕಿವಿ, ಅನಿಸುವ ಹೃದಯ. ಮನಸ್ಸಿನಲ್ಲಿ ಸ್ವಾತಿಯಾದ ಹನಿಯನ್ನು ಮುತ್ತು ಮಾಡಿ ತೋರಿಸುವ, ಮಾತಿನ ಅಭಿವ್ಯಕ್ತಿ ಮತ್ತು ಅದನ್ನೇ ಕಾಗದದಲ್ಲಿ ಮೂಡಿಸುವ ಬರವಣಿಗೆಯ ಕೌಶಲ್ಯ, ಪ್ರತಿಯೊಬ್ಬ ಕವಿ, ಕತೆಗಾರ, ಕಾದಂಬರಿಕಾರನ ಯಶಸ್ಸು. ಅವನು ಪಡೆದಿರುವ ಈ ಅಭಿವ್ಯಕ್ತಿ ಕೌಶಲ್ಯವನ್ನೇ ಅವಲಂಬಿಸಿದೆ ಎಂದು ತಮ್ಮ ಕತೆಗಳ ಕುರಿತಾಗಿ ಹೇಳಿಕೊಂಡ ಪುಟ್ಟಪ್ಪನವರದ್ದು ಪತ್ರಿಕೋದ್ಯಮದ ಬಗ್ಗೆಯೂ ಮಾದರಿಯ ನಿಲುವು,

ಪತ್ರಿಕೆ ಹಾಗೂ ಸರಕಾರ ಎರಡೂ ಜನರನ್ನು ಕೇಂದ್ರವನ್ನಾಗಿ ಮಾಡಿಕೊಂಡಿವೆ ಜನರಿಗೆ ಪತ್ರಿಕೆ ಹಾಗೂ ಸರಕಾರ ಎರಡೂ ಬೇಕು, ಅನಿಷ್ಟವೇ ಆಗಿದ್ದರೂ ಅವೆರಡೂ ಅನಿವಾರಣೀಯ. ಅವುಗಳಿಂತಲೂ ಉತ್ತಮದ ಸಂಸ್ಥೆಗಳನ್ನು ಮಾನವ ಇನ್ನು ಸೃಷ್ಟಿಸಿಲ್ಲ. ಪತ್ರಿಕೆ ಮುಖ್ಯವೋ, ಸರಕಾರ ಮುಖ್ಯವೋ ಎಂದು ಯಾರಾದರೂ ಕೇಳಿದರೆ ಪತ್ರಿಕೆಯಿಲ್ಲದ ಸರಕಾರವನ್ನು ಆರಿಸಿಕೊಳ್ಳುವುದಕ್ಕಿಂತಲೂ ತಾನು ಸರಕಾರವಿಲ್ಲದ ಪತ್ರಿಕೆಯನ್ನು ಆರಿಸಿಕೊಳ್ಳುವುದಾಗಿ ಜೆಫರ್‌ಸನ್ ಹೇಳಿದ್ದನು. ಅವನು ಹೇಳುವಂತೆ ಪತ್ರಿಕೆ ಮುಖ್ಯವಾಗಿರಬಹುದು. ಆದರೆ ಸರಕಾರವೂ ಅಮೂಲ್ಯ, ಅಮುಖ್ಯವಾದುದೇನಲ್ಲ. ತನ್ನ ಧ್ವನಿ, ಜನರ ಧ್ವನಿ; ತನಗಿರುವ ಸ್ವಾತಂತ್ರ್ಯ. ಜನರಿಗಿರುವ ಸ್ವಾತಂತ್ರ್ಯ ಎಂದು ಪತ್ರಿಕೆ ಮೊದಲಿನಿಂದಲೂ ಆ ನಿಲುವು ತಾಳಿ ಪ್ರತಿಪಾದಿಸಿಕೊಂಡು ಬಂದಿದೆ. ಆದರೆ ಪತ್ರಿಕಾ ಸ್ವಾತಂತ್ರ್ಯವು ಈಗ ಪ್ರಶ್ನಿಸುವಂತಹ ಸ್ವಾತಂತ್ರ್ಯವಾಗಿ ಪರಿಣಮಿಸಿದೆ.

ಸರಕಾರವು ಜನಸಾಮಾನ್ಯರಿಗೆ ತಿಳಿಯದಷ್ಟು ದೊಡ್ಡದಾಗಿ ಸಂಕೀರ್ಣವಾಗಿ ಬೆಳೆದು ಅದರ ಮೇಲೆ ಅವನ ನಿಯಂತ್ರಣ ಹೇರುವುದು ಹೇಗೆ ಸಾಧ್ಯವಿಲ್ಲವೋ ಹಾಗೆ ಪತ್ರಿಕೆ ಕೂಡ ಉದ್ದಿಮೆ ಎನಿಸಿ ದೊಡ್ಡದಾಗಿ ಬೃಹತ್ತಾಗಿ ಬೆಳೆದಿರುವುದರಿಂದ ಅದರ ಬಳಿಗೆ ಹೋಗುವುದೂ ಜನಸಾಮಾನ್ಯರಿಗೆ ಸಾಧ್ಯವಿಲ್ಲವಾಗಿದೆ ಎಂದು ಪತ್ರಿಕೋದ್ಯಮದ ಬಗ್ಗೆ 1976ರಲ್ಲಿಯೇ ಹೇಳಿದ ಪುಟ್ಟಪ್ಪನವರ ಮಾತು ವರ್ತಮಾನದ ಪತ್ರಿಕೋದ್ಯಮಕ್ಕೆ ಹಿಡಿದ ಕೈಗನ್ನಡಿ !

ಪತ್ರಿಕಾಧರ್ಮನಿಷ್ಠೆ, ದೀಕ್ಷಾಬದ್ಧತೆಯ ಮಾದರಿಯಲ್ಲಿ ಕೆಲಸದಲ್ಲಿ ತೊಡಗಿಕೊಳ್ಳುವುದು, ಆಳವಾದ ಜ್ಞಾನ. ನಿರಂತರ ಅಧ್ಯಯನ, ಛಲ ಬಿಡದ ಹೋರಾಟಗಳೆಲ್ಲ ಮೇಳವಿಸಿ ಬರೆಯ ಹೊರಟಲ್ಲಿ ಪ್ರತಿಪದವೂ ನಿಶ್ಚಲವಾಗದಂತೆ ಕಾಯ್ದುಕೊಂಡ ತೂಕಬದ್ಧತೆ, ಆಕ್ರೋಶ ವ್ಯಕ್ತಪಡಿಸಿದರೂ ಅಪದ್ಧ ಪದ ತುಳುಕದೇ ಎಂದಿನಿಂದ ಕಾಯ್ದುಕೊಂಡ ಬರವಣಿಗೆಯ ಘನತೆ ಡಾ|| ಪಾಟೀಲ ಪುಟ್ಟಪ್ಪನವರನ್ನು ಸಾಹಿತಿ, ಪತ್ರಿಕೋದ್ಯಮಿ ಎಂಬ ಸೀಮಿತ ಚೌಕಟ್ಟನ್ನು ಮೀರಿ ನಿಲ್ಲುವಂತೆ ಮಾಡಿವೆ.

ಡಾ|| ಪಾಟೀಲ ಪುಟ್ಟಪ್ಪನವರ ಬರವಣಿಗೆ ಹಲವು ಮಾದರಿಗಳಲ್ಲಿ ಹರಿದು ಬಂದಿದೆ.

ವಿಶೇಷವಾಗಿ ಪ್ರಬಂಧಗಳಲ್ಲಿ ಅಪ್ರತಿಮ ಪಾಂಡಿತ್ಯ ಪ್ರದರ್ಶಿಸುವ ಡಾ|| ಪುಟ್ಟಪ್ಪನವರು ಬರೆದ ಬರಹಗಳೆಲ್ಲ ಹೆಚ್ಚೂ ಕಡಿಮೆ ಪ್ರಬಂಧಗಳೇ. ಹುಬ್ಬಳ್ಳಿಯ ಕಾರ್ಪೊರೇಷನ್‌ನಿಂದ ವರ್ಗಾವಣೆಯಾದ ಕಾರ್ಪೊರೇಷನ್ ಕಮೀಷನರ್ ಆರು ತಿಂಗಳಾದರೂ ಸರಕಾರದ ವಸತಿಗೃಹ ಖಾಲಿ ಮಾಡದೇ ಹೋದರೆ ಅದಕ್ಕೆ ಪ್ರತಿಕ್ರಿಯಿಸುವ ಪುಟ್ಟಪ್ಪ ಅದನ್ನು ಕೇವಲ ಸುದ್ದಿ ಮಾಡಿಸುವುದಿಲ್ಲ. ಹುಬ್ಬಳ್ಳಿಯಿಂದ ಹಿಡಿದು ರಾಜ್ಯದ ದೇಶದ ಅಂತರ್‌ರಾಷ್ಟ್ರೀಯ ಮಟ್ಟದ ವಿವರಗಳನ್ನೆಲ್ಲ ಓದುಗರೆದುರು ಮಂಡಿಸುತ್ತಾರೆ. ಇರುವ ಪದ್ಧತಿಯಲ್ಲಾಗಬೇಕಾದ ತಿದ್ದುಪಡಿಯನ್ನು ಹೇಳುತ್ತಾರೆ. ಅವರು ಬರೆದದ್ದರಲ್ಲಿ ಯಾವುದು ಪ್ರಬಂಧ ಯಾವುದು ಅಲ್ಲವೆಂದು ಹೇಳುವುದೇ ಕಷ್ಟ. ಅವರ ಪ್ರಬಂಧ ಮಾದರಿಯ ಬಿಡಿಬರಹಗಳನ್ನು ಸಂಕಲಿಸಿದರೆ ಅದರಲ್ಲಿಯೇ ಬೃಹತ್ ಹೊತ್ತಿಗೆ ಸೃಷ್ಟಿಯಾದೀತು. ಕೇವಲ ಪತ್ರಿಕಾ ಬರಹಗಳಿಗೇ ಈ ಮಾತು ಅನ್ವಯವಾಗುವುದಿಲ್ಲ. ಅವರು ಜೀವಿತ ಕಾಲದಲ್ಲಿ ರಾಜ್ಯದ, ರಾಷ್ಟ್ರದ ಸಮಸ್ಯೆಗಳ ಕುರಿತಂತೆ ಪ್ರಧಾನಮಂತ್ರಿ, ಮುಖ್ಯಮಂತ್ರಿ ಸಹಿತ ಇನ್ನುಳಿದ ಅಧಿಕಾರಸ್ಥರಿಗೆ ಬರೆದ ಪತ್ರಗಳೂ ಕೂಡ ಮಾಹಿತಿಯ ದೃಷ್ಟಿಯಿಂದ ಪ್ರಬಂಧವೆನ್ನಿಸುವ ಲಕ್ಷಣವನ್ನೇ ಪಡೆದಿವೆ. ಅವರ ಯಾವ ಬರಹವೂ ಕೇವಲ ಸಾಂದರ್ಭಿಕ ತುರ್ತಿಗೆ ಬಂದದ್ದೆನ್ನಿಸುವುದಿಲ್ಲ.

ಪ್ರಜಾವಾಣಿಯಲ್ಲಿ ಪ್ರತಿ ವಾರ ಪ್ರಕಟಗೊಂಡು ನಂತರ ಪುಸ್ತಕ ರೂಪ ಪಡೆದ ಅವರ 'ನಮ್ಮದು ಈ ಭರತಭೂಮಿ'ಯಲ್ಲಿ ಅವರು ಕಂಡ ಭಾರತದ ಪ್ರಮುಖ ಪಟ್ಟಣಗಳ ಪ್ರದೇಶಗಳ ಪರಿಚಯವಿದೆ. ಯಾತ್ರೆ ಹೊರಟಾತ ಕೇವಲ ಆ ಕ್ಷಣಕ್ಕೆ ಕಂಡ ಬೆರಗಾಗಲೀ ಅಥವಾ ಸಿನಿಕ ಹೇಳಿಕೆಯ ಯಾಂತ್ರೀಕೃತ ಪ್ರವಾಸಕಥನದ ಮಾದರಿಯನ್ನಿಸುವುದಿಲ್ಲ. ಸಂಶೋಧಕನೊಬ್ಬನ ಗ್ರಹಿಕೆ, ಐತಿಹಾಸಿಕ ಮತ್ತು ರಾಜಕೀಯರ ಸಮಗ್ರ ಪರಿಚಯವುಳ್ಳ ಸಮರ್ಥ ಇತಿಹಾಸಕಾರನ ನೋಟ ಹಾಗೂ ಆಯಾ ಪ್ರದೇಶದ ಚೆಲುವು ಆಸ್ವಾದಿಸುವ ಸೌಂದರ್ಯಪ್ರಜ್ಞೆ ಮೇಳವಿಸಿ ಬರೆದ ಬರಹಗಳು ಭಾರತದ ಬಹುಮುಖ್ಯ ಭಾಗಗಳನ್ನು ನಮ್ಮ ಕಣ್ಣೆದುರಿಗಿಡುತ್ತವೆ. ಪುಟದಿಂದ ಪುಟಕ್ಕೆ ನಡೆದಂತೆ ಓದುಗನೆದೆಯೊಳಗೆ ಅಕ್ಷರಗಳು ದೃಷ್ಟಿರೂಪ ಪಡೆದು ಜೀವಂತ ಭಾರತ ದರ್ಶನವಾಗುತ್ತದೆ.

'ಶತಮಾನಗಳ ಚೆಲುವೆ, ಚಿರಯುವತಿ' ಎಂದು ದೆಹಲಿಗೆ ನಾಮಕರಣ ಮಾಡುವ ಪುಟ್ಟಪ್ಪ ಸಂಸ್ಕೃತಿಯಿಂದ ಸಂಸ್ಕೃತಿಗೆ ಪಲ್ಲಟಗೊಳ್ಳುತ್ತಲೇ ಅನಾದಿಕಾಲದಿಂದಲೂ ಉಳಿದುಕೊಂಡು ಬಂದ ದೆಹಲಿ, ಇಟಲಿಯ ರೋಮ್ ರಾಜಧಾನಿಗಿಂತಲೂ ಪ್ರಾಚೀನನೆಂದು ಸಾಧಿಸುವಲ್ಲಿ ಯಾವುದೂ ಉತ್ಪ್ರೇಕ್ಷೆಯೆನಿಸುವುದಿಲ್ಲ. ದೆಹಲಿಯ ರೂಪ, ವಿರೂಪ ಹೇಳಿದಂತೆಯೇ ಗೋವೆಯ ಪುರಾಣಕಾಲದ ಪರಶುರಾಮ, ಅಶೋಕ, ಕದಂಬರು, ಅರಬ್ಬರು, ಪೋರ್ಚುಗೀಸರ ಕಾಲದಿಂದ ಇಂದಿನವರೆಗೆ ಐತಿಹ್ಯಗಳ ಪಾತ್ರಗಳನ್ನು ಮನದಟ್ಟು ಮಾಡುತ್ತಲೆ ಸ್ಥಳದರ್ಶನ ಮಾಡಿಸುತ್ತಾರೆ. ಪಾಂಡಿಚೇರಿ, ಅಂಡಮಾನ್, ಮಿಜೋರಾಂ, ಮೇಘಾಲಯ, ನಾಗಾಲ್ಯಾಂಡ್‌ನಿಂದ ಹಿಡಿದು ದೇಶದ ಬಹುತೇಕ ಭಾಗಗಳು ಪುಟದಿಂದ ಎದ್ದು ನಿಲ್ಲುತ್ತವೆ.

'ನಮ್ಮ ದೇಶ ನಮ್ಮ ಜನ' ಸಂಕಲನದ ಮೂವತ್ತು ಪ್ರಬಂಧಗಳಲ್ಲಿ ಕೇವಲ ರಾಷ್ಟ್ರೀಯ ಅಭಿಮಾನದ ಸುಗುಸಿನಿಂದ ಕಾಣಿಸಿಕೊಳ್ಳದೇ, ದೇಶದ

ಅಂತರ್ಯುಗದಲ್ಲಿ ಹಣಿಕಿಕ್ಕಿ, ಕುಸಿದು ಬೀಳುತ್ತಿರುವ ರಾಷ್ಟ್ರೀಯತೆಯ ಭಾವನೆಗಳು, ಭಿನ್ನಗೊಂಡ ರಾಷ್ಟ್ರೀಯ ಏಕತೆಯ ಸೂತ್ರಗಳನ್ನು ಕಂಡು ದುಗುಡಗೊಂಡ ಮನದಿಂದ ದೇಶದ ಐಕ್ಯದ ಬಗ್ಗೆ ಚಿಂತಿಸುತ್ತಾರೆ. 'ಕರ್ನಾಟಕದ ಕಥೆ' ಕರ್ನಾಟಕ ಭಾಷೆ, ಚರಿತ್ರೆ ಹಾಗೂ ಕನ್ನಡದ ಜನತೆಗೆ ಸಂಬಂಧಿಸಿದ್ದು. ಕರ್ನಾಟಕದ ಐತಿಹಾಸಿಕ ಪರಂಪರೆ ಇತಿಹಾಸವನ್ನು ವಿಶ್ಲೇಷಿ ಸುತ್ತಾರೆ. 'ಕರ್ನಾಟಕ ಕತ್ತಲೆಯಿಂದ ಬೆಳಕಿಗೆ' ಎಂಬ ಅಧ್ಯಯನದಲ್ಲಿ ಕಳೆದೆರಡು ಶತಮಾನಗಳ ಕನ್ನಡದ ಇತಿಹಾಸವೇ ಅಡಗಿದೆ. ಕನ್ನಡ - ನೆಲ - ಜಲ ಭಾಗದಲ್ಲಿ ಕನ್ನಡದ ಮಹನೀಯರೂ ಸ್ಮರಣೆಗೊಳಗಾಗುತ್ತಾರೆ. ಹಾಗೆಯೇ ಕರ್ನಾಟಕದ ಪ್ರಾಕೃತಿಕ ಚೆಲುವನ್ನು ಅಕ್ಷರದಲ್ಲಿ ಹಿಡಿದಿಡುತ್ತಾರೆ.

'ಈಗ ಹೊಸದನ್ನು ಕಟ್ಟೋಣ ನಾವು' ಸಂಕಲನದ ನಲವತ್ತು ಲೇಖನಗಳಲ್ಲಿ ದೇಶದ ಜನತೆಯ ಇತಿಹಾಸ, ವರ್ತಮಾನಗಳೆರಡನ್ನೂ ನಿಖರ ಪ್ರಜ್ಞೆಯಿಂದ ಬರೆಯುವ ಡಾ॥ ಪುಟ್ಟಪ್ಪ ಬರುವ ನೆಮ್ಮದಿಯ ನಾಳೆಗಾಗಿ ಈ ವೇಳೆಗೆ ಮಾಡಬೇಕಾದ್ದೇನು ಎಂದು ವಿಚಾರಪೂರ್ಣವಾಗಿ ವಿಶ್ಲೇಷಣೆ ಗಿಳಿಯುತ್ತಾರೆ. ಚಿಕ್ಕ ಚಿಕ್ಕ ವಾಕ್ಯಗಳ ಅವರ ಬರವಣಿಗೆಯ ಅವರ ಶೈಲಿ ಅನಗತ್ಯ ಬೌದ್ಧಿಕ ಗೊಂದಲವಾಗದೇ ಓದುಗರ ಎದೆಯಾಳಕ್ಕಿಳಿಯ ತೊಡಗುತ್ತದೆ. ಅನನ್ಯತೆಯ ಚಿಂತನೆಯಿಂದಾಗಿ ಅವರ ಪ್ರಬುದ್ಧ ಪಾಂಡಿತ್ಯ ಮೌನವಾಗುತ್ತದೆ. ದೇಶದ ವರ್ತಮಾನ ಮತ್ತು ಅದರ ಪುನರ್ ನಿರ್ಮಾಣ ದಲ್ಲಿ ಯುವಕರ ಕರ್ತವ್ಯದ ಬಗ್ಗೆ ಚಿಂತಿಸುವ ಅವರು ಆತ್ಮಾವಲೋಕನದ ಯುವಕರೇ ದೇಶಕಟ್ಟುವ ಅವಶ್ಯಕತೆಯನ್ನು ಮನಗಾಣಿಸುತ್ತಾರೆ. 'ವ್ಯಕ್ತಿ ಜೀವನ ದಲ್ಲಿ ಕಾಣಿಸಿಕೊಳ್ಳುವ ಶಿಸ್ತು, ಶ್ರದ್ಧೆ, ಸಂಯಮ, ಸಮಯಗೌರವ, ಸತತೋದ್ಯೋಗ ಪ್ರವೃತ್ತಿ ಇವುಗಳ ಮೇಲೆಯೇ ದೇಶದ ಇತಿಹಾಸ ನಿರ್ಮಾಣಗೊಳ್ಳುತ್ತದೆ. ಹೊಸತನ ಎನ್ನುವುದು ದೇಶದಲ್ಲಿ ಬರುವುದಕ್ಕೆ ಮುಂಚೆ ವ್ಯಕ್ತಿಯಲ್ಲಿ ಬರಬೇಕು' ಎಂಬುದು ಅವರ ಪ್ರಥಮ ಆಶಯ !

'ಕನ್ನಡ ಪ್ರಭ' ಪತ್ರಿಕೆಯಲ್ಲಿ ಪ್ರತಿವಾರ ಪ್ರಕಟಗೊಂಡ ಲೇಖನಗಳ ಮೂಲಕ 'ನನ್ನದು ಈ ಕನ್ನಡ ನಾಡು' ಪುಸ್ತಕದಲ್ಲಿ ಕರ್ನಾಟಕದ ಬೇರೆ, ಬೇರೆ ಭಾಗಗಳ ಪರಿಚಯವಿದ್ದರೂ ಧಾರವಾಡ ಜಿಲ್ಲೆಯ ಪರಿಚಯಕ್ಕೆ ಅಗ್ರತಾಂಬೂಲ, ಕರ್ನಾಟಕವನ್ನು ಕಟ್ಟಿದ ಕೈ ಎಂದು ಧಾರವಾಡ ಜಿಲ್ಲೆಯನ್ನು ಹೆಸರಿಸುತ್ತಾರೆ ಡಾ. ಪುಟ್ಟಪ್ಪ. ಅವರ ಮಾತು ಉತ್ಪ್ರೇಕ್ಷೆಯದಲ್ಲ, ಕರ್ನಾಟಕ ಏಕೀಕರಣದ ಪ್ರಮುಖ ಚೇತನರೆಲ್ಲ ಧಾರವಾಡ ಜಿಲ್ಲೆಯವರು, ಕೇವಲ ಗತ ಸಾಂಸ್ಕೃತಿಕ ಹಿರಿಮೆಗೇ ನಿಲ್ಲದ ಅವರು ಪಂಪ ಕುಮಾರವ್ಯಾಸನಿಂದ ಹಿಡಿದು ಆಧುನಿಕ ಬೇಂದ್ರೆ, ಕಣವಿಯವರ ಸಾಹಿತ್ಯಕ ಹಿರಿಮೆಯನ್ನು ಪರಿಚಯಿಸುತ್ತಾರೆ.

ವಸ್ತುನಿಷ್ಠತೆಯ ದೃಷ್ಟಿಕೋನದಿಂದಲೇ ಪ್ರತಿಜ್ಞೆಗಳನ್ನು ನೀಡುವ ಡಾ. ಪುಟ್ಟಪ್ಪ ಕೇವಲ ಜೀವಹೀನ ವಿವರಣೆ ಕೊಡುವ ಗೈಡ್ ಮಾದರಿಯ ವಿವರಣೆಗಳಿಯದೇ ಆಯಾ ಜಿಲ್ಲೆಗಳ ಭೂತ ವರ್ತಮಾನಗಳ ಬಗ್ಗೆ ನಿಷ್ಠುರ ಚರ್ಚೆಗಿಳಿಯುತ್ತಾರೆ. ಆ ಮೂಲಕ ಆಯಾ ಜಿಲ್ಲೆಗಳು ತಮ್ಮ ಐತಿಹಾಸಿಕತೆ ಹಾಗೂ ಪ್ರಚಲಿತ ವಿದ್ಯಮಾನಗಳ ಸ್ವರೂಪಗಳನ್ನು ಪರಿಚಯಿಸಿಕೊಳ್ಳುತ್ತವೆ. ದಕ್ಷಿಣ ಕನ್ನಡ, ಚಿಕ್ಕಮಗಳೂರು ಜಿಲ್ಲೆಗಳ ಸೃಷ್ಟಿ ಸೌಂದರ್ಯಗಳ ಸೊಬಗು ಮನನವಾದರೆ, ಚಿತ್ರದುರ್ಗ ಸಾಹಸಿಗರ ನಾಡಾಗಿ ಕಾಣುತ್ತದೆ. ಬಳ್ಳಾರಿ ಕಳೆದುಕೊಂಡದ್ದನ್ನೆಲ್ಲ ಪಟ್ಟಿಮಾಡಿ ಕಳವಳ ಪಡುವ ಪುಟ್ಟಪ್ಪ ಮೈಸೂರನ್ನು ಇತಿಹಾಸದ ಕನಸೆಂದು ಬಣ್ಣಿಸುತ್ತಾರೆ. ಜಿಲ್ಲೆಗಳ ಪರಿಚಯದೊಂದಿಗೆ ಸಮಗ್ರ ಕನ್ನಡನಾಡಿನ ಸಾಂಸ್ಕೃತಿಕ ಸಾಮಾಜಿಕ ಇತಿಹಾಸದ ಸುಂದರ ಹಂದರವೊಂದು ಓದುಗರ ಕಣ್ಣೆದುರು ಬಿಡಿಸಿಕೊಳ್ಳತೊಡಗುತ್ತದೆ.

ಪ್ರಕಾಶಕರ ವಿನಂತಿಗಾಗಿ ಬರೆದುಕೊಟ್ಟ 'ಕರ್ನಾಟಕದ ಕಥೆ'ಯಲ್ಲಿ ಹದಿಮೂರು ಪ್ರಬಂಧಗಳಿವೆ. ಕರ್ನಾಟಕದ ಭವ್ಯ ಪ್ರಾಚೀನ, ಯುಗ ಪ್ರವರ್ತಕ ಬಸವೇಶ್ವರ ಕರ್ನಾಟಕದಲ್ಲಿ ಧರ್ಮಿಗಳು ಸಂಸ್ಮರಣೀಯ ಲೇಖನಗಳು ಕನ್ನಡ ನೆಲ ಜಲ ಮೊದಲಾದ ಲೇಖನಗಳಲ್ಲಿ ಕಾಣುವ ಡಾ॥ ಪುಟ್ಟಪ್ಪನವರ ಜ್ಞಾನಕೋಶ ಮಾದರಿಯ ವಿದ್ವತ್ತು ಪರಿಚಯವಾಗದೇ ಇರದು. ಯುಗ ಪ್ರವರ್ತಕ ಬಸವೇಶ್ವರ ಲೇಖನದಲ್ಲಿ ಅದುವರೆಗೆ ಅವರ ಸಮಕಾಲೀನ ಬರಹಗಾರರು ಬಸವಣ್ಣನವರನ್ನು ಅರ್ಥೈಸಿದ್ದಕ್ಕಿಂತ ಭಿನ್ನವಾಗಿ ಆರೋಪಿಸುವ ಡಾ॥ ಪುಟ್ಟಪ್ಪ ಬಸವಣ್ಣ ಓರ್ವ ಸಾಮಾಜಿಕ ಕಾರ್ಯಕರ್ತ ನೆಂಬ ನೆಲೆಯಲ್ಲಿ ನೋಡ ಹೊರಡುತ್ತಾರೆ. 'ಬಸವೇಶ್ವರ' ಎಂಬ ಸಾಮಾಜಿಕ ಪ್ರತಿಮೆ ಪವಾಡ ಮಾದರಿಯ ಉತ್ಪ್ರೇಕ್ಷಿತ ಕಥೆಯಾಗಿ ಕಾಣದೇ ಬಸವಣ್ಣ ನವರ ವ್ಯಕ್ತಿತ್ವಕ್ಕೆ ಸರಿಯಾದ ನ್ಯಾಯ ಒದಗಿಸಿದ್ದಾರೆ.

ಕನ್ನಡ ನೆಲ ಜಲ ಭಾಗದಲ್ಲಿ ಕರ್ನಾಟಕದ ಪ್ರಾಕೃತಿಕ ಸಂಪತ್ತು, ಸೌಂದರ್ಯಗಳು ಪರಿಚಯವಾದರೆ ಸಾಹಿತ್ಯ, ಧಾರ್ಮಿಕ ಸಹಿಷ್ಣುತೆಗಳ ವಿಷಯದಲ್ಲಿ ಅತ್ತಿಮಬ್ಬೆ, ಚಂದಲಾದೇವಿ, ಅಬ್ಬಕ್ಕ, ಓಬವ್ವ, ಅಕ್ಕ ಮಹಾದೇವಿ, ಶಾಂತಲೆ, ಕೆಳದಿ ಚೆನ್ನಮ್ಮನವರ ಜೀವನ ವೃತ್ತಾಂತಗಳಿವೆ. 'ಕರ್ನಾಟಕದ ಭವ್ಯ ಪ್ರಾಚೀನ ಲೇಖನದಲ್ಲಿ ರಾಜ್ಯದ ಪ್ರಾಚೀನತೆಯಿಂದ ಹಿಡಿದು ಇಲ್ಲಿಯವರೆಗಿನ ಎಲ್ಲ ಸಂಶೋಧಿತ ಅಂಶಗಳನ್ನು ಕಾಲಕ್ರಮದಲ್ಲಿ ಮನನೀಯವಾಗಿ ಹೇಳಿದ್ದಾರೆ, ಸಮಗ್ರ ಕರ್ನಾಟಕದ ಇತಿಹಾಸ ಪರಿಚಯ ಈ ಬರವಣಿಗೆಯ ಪ್ರಮುಖ ಅಂಶ !

ತಮ್ಮ ಚಿಕ್ಕವಾಕ್ಯ ಸರಣಿಯಿಂದಾಗಿಯೇ ಸಮರ್ಥ ಚಿತ್ರಕಶಕ್ತಿ ಪಡೆದಿರುವ ಡಾ॥ ಪುಟ್ಟಪ್ಪನವರಿಗೆ ಅದೇ ಕಥೆ ಕಟ್ಟುವ ಪ್ರಮುಖ ಪೂರಕ ಸಂಗತಿಯಾಗಿದೆ. 'ಶಿಲಾ ಬಾಲಿಕೆ ನುಡಿದಳು' ಕಥೆಯೇ ಆ ಪರಿಣಿತಿಗೆ ಸಾಕ್ಷಿ. ಈ ಕತೆಯ ಕುರಿತು ಡಾ. ದೇ. ಜವರೆಗೌಡರು ಹೇಳಿದ ಮಾತು ಉಲ್ಲೇಖನೀಯ "ಎಂಟು ನೂರು ವರ್ಷಗಳ ಹಿಂದಿನ ಘಟನೆಯೊಂದು ದೇವಪ್ಪನ ಕಣ್ಣೆದುರಿಗೆ ಹಾಯ್ದು ಹೋದಂತೆ ಈ ಕಥೆಯಲ್ಲಿ ಅನುಸರಿಸಿರುವ ತಂತ್ರ ಅಪೂರ್ವವಾದುದು. ಹೂವಯ್ಯ– ಮಧುಮತಿಯರ ಆದರ್ಶಪ್ರೇಮ, ಹೂವಯ್ಯನ ಕಲಾನಿಷ್ಠೆಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಲೇಖಕರು ಈ ಕಥೆಯಲ್ಲಿ ತಂದಿದ್ದಾರೆ. ದೇವಯ್ಯ ಕಲಾರಾಧಕ, ಶಿಲೆ ಶಿಲೆಯಲ್ಲೂ ಜೀವ ಭಾವಗಳನ್ನು ಕಾಣುವ ಅವನು ಇಂಥ ಸುಂದರ ಕಥೆಯನ್ನು ತಾನು ಕಂಡೆನೆಂಬಂತೆ ಚಿತ್ರಿಸಿರುವ ರೀತಿ ಮೋಹಕವಾದುದು.

ಬೇಲೂರಿನ ಶಿಲಾಬಾಲಿಕೆಯರನ್ನು ಕಂಡು ಬೆರಗಾಗುವ ನಮ್ಮೆದುರು ಆ ಕಾಲದಲ್ಲಿ ಅಂತಹ ಶಿಲ್ಪಗಳು ರಚನೆಯಾಗುವಲ್ಲಿ ಶಿಲ್ಪಿಯ ಪರಿಶ್ರಮ. ಆ ಕಾರ್ಯಕ್ಕೆ ಮಾಡೋ ಆಗಿರಬಹುದಾದವಳ ಅನುರಾಗ. ಅಲ್ಲಿ ಏರ್ಪಡುವ ಕ್ಷೇಮದ ಕಥೆ ಹಾಗೂ ಆ ಕಾಲದ ಜನಜೀವನ ವೃತ್ತಿನಿಷ್ಠೆಯ ಅಂಶಗಳನ್ನುಪಯೋಗಿಸಿ ಸುಂದರಕಥೆಯಾಗಿಸುವ ಡಾ॥ ಪುಟ್ಟಪ್ಪನವರು ಬಳಸಿದ ತಂತ್ರಗಾರಿಕೆ ಕುಸುರಿ ಕೆಲಸ ಗಮನಿಸಿದರೆ, ಡಾ. ದೇ. ಜ. ಗೌ. ಮಾತು ಬರೀ ಬಣ್ಣನೆಯಲ್ಲ ಎಂಬುದು ಗೊತ್ತಾಗುತ್ತದೆ. 'ಇರಲಿಲ್ಲದ ಮನುಷ್ಯ'ದಲ್ಲಿ ಮನುಷ್ಯನ ಘನತೆ ಕ್ರೌರ್ಯ, 'ಲಕ್ಷ್ಮಿ ಕೈ ತೋರಿಸಿದಳು' ಕಥೆಯಲ್ಲಿ ವ್ಯಕ್ತಿಯೊಬ್ಬ ದುರ್ಜನರ ಸಹವಾಸ ಮಾಡಿ ಹಣದಾಶೆಯಿಂದ

ಹಾಳಾಗುವ ನೈತಿಕ ಅಧಃಪತನ ಮಹತ್ವದ ಪರಿಣಾಮ, 'ಪೂರ್ವ ಪಶ್ಚಿಮ' ಕಥೆಯಲ್ಲಿ ಆಧುನಿಕ ಭಾರತದ ಯುವಜನಾಂಗ ಭಾರತೀಯ ಸಂಸ್ಕಾರಗಳಿಂದ ವಿಮುಖಿಗೊಂಡು ಪಾಶ್ಚಿಮಾತ್ಯ ಸಂಸ್ಕೃತಿಯಡೆಗೆ ಆಕರ್ಷಿತರಾಗುತ್ತಿದ್ದಾರೆ. ಸ್ವತಃ ಪಾಶ್ಚಿಮಾತ್ಯರೇ ಭಾರತೀಯತೆಯಡೆಗೆ ಆಕರ್ಷರಾಗುವ ಬಣ್ಣನೆ ಇದೆ. ಜೀವನ ಜೋಕಾಲಿ, ಮಗಳ ಮದುವೆ, ಮಮತೆಯ ಮಗಳು, ಕೋಡಿಹಳ್ಳಿ ಜಮೀನುದಾರರು, ತಬ್ಬಲಿ, ಕಾಡುಹೇಳಿದ ಕಥೆ ಸಂಕಲನದ ಪ್ರಮುಖ ಕಥೆಗಳು.

ಹದಿನಾರು ಕಥೆಗಳಿರುವ 'ಗವಾಕ್ಷ ತೆರೆಯಿತು' ಕಥಾಸಂಕಲನದಲ್ಲಿನ ಮೊದಲ ಕಥೆ 'ಗವಾಕ್ಷ ತೆರೆಯಿತು' ಜೀವನ್ಮುಖಿಯಾಗಿಸುವ ಪ್ರೇಮದ ಕಥೆಯನ್ನು ಸಾರುತ್ತದೆ. 'ಅಮೃತಧಾರಾಮಠದ ಶ್ರೀಪಾದಂಗಳು' ಹಾಗೂ 'ಅಲ್ಪ ವಿರಾಮ'ದಂತಹ ಕಥೆಗಳು ಢಾಂಬಿಕ ಧಾರ್ಮಿಕತೆಯನ್ನು ಗೇಲಿ ಮಾಡುತ್ತಲೇ ಡಾ॥ ಪುಟ್ಟಪ್ಪನವರೊಳಗಿನ ಸಮರ್ಥ ಬಂಡಾಯಗಾರನನ್ನು ಪರಿಚಯಿಸುತ್ತವೆ. ಎರಡು ಗ್ರಾಮಗಳ ನಡುವಿನ ಪರಮದ್ವೇಷವನ್ನು ಹೋಗಲಾಡಿಸುವ ಒಂದು ಮದುವೆಯ ಕಥೆ 'ಕೇತಕಿ ಅರಳಿತು' ಸುಳ್ಳು ಜಾತಕದ ಪಿತೂರಿಯನ್ನು ಹೇಳುವ ವಿಪಕನ್ಯೆ ಅಸ್ಪೃಶ್ಯತೆಯಂತಹ ಗಂಭೀರ ಸಾಮಾಜಿಕ ಸಮಸ್ಯೆಯಡೆಗೆ ಬೆಳಕು ಚೆಲ್ಲುವ 'ಚಂದ್ರನ ಇನ್ನೊಂದು ಭಾಗ', 'ಕೆಲಸ ಮುಗಿಯಿತು', 'ಗಂಡ ಹೆಂಡಿರು' ಈ ಸಂಕಲನದ ಪ್ರಮುಖ ಕಥೆಗಳು.

ವಿದ್ಯಾರ್ಥಿ ಹಂತದ ಆದರ್ಶ ಬದುಕಿನ ಕಲ್ಪನೆಯಲ್ಲಿ ಪುಟ್ಟಪ್ಪನವರು ಇದ್ದಿರಬಹುದಾದ ಘಟ್ಟದಲ್ಲಿ ಬರೆದ 'ಸಾವಿನ ಮೇಜವಾನಿ'ಯಲ್ಲಿ 6 ಕಥೆಗಳಿವೆ. ಆದರ್ಶಮಹಿಳೆಯೊಬ್ಬಳು ಪರಿಸ್ಥಿತಿಯ ಒಡತಕ್ಕೆ ಸಿಲುಕಿ ವೇಶ್ಯೆಯಾಗುವ ಹೆಣ್ಣಿನ ಶೋಷಣೆಯ ಬಗೆಗಿನ ಕಾಳಜಿಯೇ ಈ ಕಥೆಯ ಪ್ರಮುಖ ಅಂಶ. 'ಅನ್ನದೇವರು' ಕಥೆ ಗ್ರಾಮೀಣ ಪರಿಸರದ ಅಸಹಾಯಕ ಬಡ ಕುಟುಂಬದ ಬಡತನದ ದಾರುಣತೆಯನ್ನು ಹೇಳುತ್ತದೆ. ರೆಪ್ಪೆಯ ಭಾರ, ನೆಲದ ಮಗ, ದೋಣಿಸಾಗಲಿ ಕಥೆಗಳು ಈ ಸಂಕಲನದಲ್ಲಿವೆ.

ತಮ್ಮ ಪ್ರಬಂಧಗಳಲ್ಲಿ ಪಾಂಡಿತ್ಯ ಆಳದ ಅಧ್ಯಯನ, ವರ್ತಮಾನದ ಕುರಿತ ತೀವ್ರ ವಿಮರ್ಶೆ ಪ್ರಕಟಪಡಿಸುವ ಡಾ॥ ಪಾಟೀಲ ಪುಟ್ಟಪ್ಪ ತಮ್ಮ ಕಥೆಗಳಲ್ಲಿ ಮಾತ್ರ ಸುಕೋಮಲರಾಗಿ ಕಾಣುತ್ತಾರೆ. ಬಹುಶಃ ಕಥೆ ಬರೆದ ದಿನಗಳ ಅವರ ತಾರುಣ್ಯ. ಭಾವುಕತೆಯೇ ಪ್ರಮುಖ ಆಶಯವಾಗಿದ್ದ ಆ ಕಾಲದ ಸಾಮಾಜಿಕ ಚಿಂತನೆಗಳು ಅವರನ್ನು ಪ್ರಭಾವಿಸಿರಬೇಕು.

ಗಮನಿಸಬೇಕಾದ ಅಂಶವೆಂದರೆ ರಮ್ಯತೆಯೇ ಪ್ರಾಶಸ್ತ್ಯದ ಅಂಗಳವಾಗಿದ್ದ ಆ ದಿನಮಾನಗಳಲ್ಲಿ ನಲವತ್ತು ಕಥೆಗಳು ತೀವ್ರ ಸಾಮಾಜಿಕ ಕಳವಳಿಯನ್ನು ಪ್ರಕಟಿಸುತ್ತವೆ. ಯಾವುದನ್ನು ನಾವು ಈಚೆಗೆ ಬಂಡಾಯವೆಂದು ಕರೆಯುತ್ತೇವೆಯೋ ಅದರ ಮೂಲ ಲಕ್ಷಣಗಳು ಈ ಕಥೆಗಳಲ್ಲಿವೆ. ಯಾವುದೋ ರಾಜ ದರ್ಬಾರಿನಲ್ಲಿ ಅಥವಾ ವೈಭವದ ಥಳುಕಿನಲ್ಲಿ ತೇಲಿ ಹೋಗದ ಡಾ. ಪುಟ್ಟಪ್ಪ ಗ್ರಾಮೀಣ ಪರಿಸರ ಭಾರತೀಯತೆಯ ಸಾಂಸ್ಕೃತಿಕ ಕಾಳಜಿ, ಅದು ಸನಾತನವೆನ್ನಿಸದ ಪ್ರಜ್ಞೆ ಹಾಗೂ ಸಮಾನತೆಯ ಅಂಶಗಳೆಡೆಗೇ ಮತ್ತೆ ಮತ್ತೆ ಹೊರಳುತ್ತಾರೆ. ಅವರ ನಿರರ್ಗಳ ಭಾಷಣ, ನಿಷ್ಠುರತೆ, ಪಾಂಡಿತ್ಯದ ಅಬ್ಬರದಲ್ಲಿ ಸರ್ವಕಾಲಕ್ಕೂ ಆದರ್ಶವಾಗುಳಿಯುವ, ಸದಾಕಾಲ ಪ್ರಗತಿಶೀಲತೆಯ ಆಶಯಗಳಾಗೇ ಉಳಿಯುವ ಅವರ ಕಥೆಗಳು ಅಡಗಿ ಹೋಗಿದ್ದು ಕನ್ನಡ ಕಥಾಲೋಕಕ್ಕೆ ಆದ ನಷ್ಟವೆಂದೇ ಹೇಳಬಹುದು.

'ಅನುಭವ ಇರುವಲ್ಲಿ ಅಮೃತತ್ವ ಇದೆ'. 'ಬದುಕುವುದಕ್ಕೆ ಬೇಕು ಬದುಕುವ ಈ ಮಾತು' ಎರಡೂ ಅವರ ಸಂಪಾದಕತ್ವದ ಪ್ರಪಂಚ ಪತ್ರಿಕೆಯ ಶಾಶ್ವತ ಅಂಕಣಗಳು. ತಮ್ಮ ಯೌವ್ವನದ ಕಾಲದಿಂದ 'ಪ್ರಪಂಚ' ಓದುತ್ತಾ ಬಂದವರು ಇಂದಿಗೂ ಈ ಅಂಕಣಗಳಿಗೆಂದೇ 'ಪ್ರಪಂಚ' ಖರೀದಿಸುವವರಿದ್ದಾರೆ. ಬದುಕಿನ ಅನನ್ಯತೆಗಳು, ಬದುಕು ಬೆಳಗಿಕೊಳ್ಳಲು, ಭವಗಳು ತಿಳಿಗೊಳ್ಳಲು ಈ ಎರಡೂ ಅಂಕಣದ ಬರಹಗಳು ಎಷ್ಟೋ ಜನರ ಬದುಕಿಗೆ ಗತಿಯನ್ನೇ ಬದಲಿಸಿದ ದೃಷ್ಟಾಂತಗಳಿವೆ. ಎಲ್ಲ ಕಾಲಕ್ಕೂ ಪ್ರಪಂಚ ಪತ್ರಿಕೆಯ ಬಹಳಷ್ಟು ಪುಟಗಳು ಸಂಗ್ರಾಹ್ಯವಾಗಿಯೇ ಉಳಿದಿವೆ. ಅವೇ ಪುಸ್ತಕ ರೂಪು ಪಡೆದು ಮನುಷ್ಯರ ಬದುಕಿನ ನಡೆಯಲ್ಲಿ ಕಥೆ ನಿರ್ದೇಶಿಸುವ ಫಲಕಗಳಂತೆ, ಮಾರ್ಗಸೂಚಿಗಳಂತೆ ಪಾತ್ರ ನಿರ್ವಹಿಸುತ್ತಿವೆ.

ದಿ. ಹಿಂದೂ ಪತ್ರಿಕೆಯ ಸುಪ್ರಸಿದ್ಧ ಅಂಕಣಕಾರ ಸಿ. ಎಚ್. ಪ್ರಹ್ಲಾದ ರಾವ್ ಸಮಗ್ರ ಪಾಪು ಪ್ರಪಂಚದ ಮುನ್ನುಡಿಯ ಕೊನೆಯಲ್ಲಿ ಹೇಳುತ್ತಾರೆ: "ಈ ಬದುಕು ಸಾರ್ಥಕವಾಗಲು ಕಾಶಿಗೆ ಹೋಗುತ್ತಾರೆ, ರಾಮೇಶ್ವರಕ್ಕೆ ಹೋಗುತ್ತಾರೆ, ಗುಡಿಗಳನ್ನು ಕಟ್ಟಿಸುತ್ತಾರೆ, ಭಗವದ್ಗೀತೆ ಓದುತ್ತಾರೆ. ನನ್ನ ಮಟ್ಟಿಗೆ 'ಪಾಪು ಪ್ರಪಂಚ'ದಂತಹ ಒಂದು ಪುಸ್ತಕ ಮೇಜಿನ ಮೇಲಿದ್ದರೆ ಸಾಕು ಅದನ್ನು ಅಲ್ಲಿ, ಇಲ್ಲಿ ಇಣುಕಿ ನೋಡಿದರೆ ಬದುಕು ಸಾರ್ಥಕವಾಗುವ ದಾರಿ ತೆರೆದುಕೊಳ್ಳುತ್ತದೆ. 1214 ಪುಟಗಳ ಹೊತ್ತಿಗೆಯಲ್ಲಿ ದಾಖಲಾದ ಲೇಖನ ಗಳೆಲ್ಲ ಅವರು 'ತರಂಗ' ವಾರಪತ್ರಿಕೆಯ ಪಾಪು ಪ್ರಪಂಚ ಅಂಕಣಕ್ಕೆ ಬರೆದವು".

ಪ್ರತಿಪುಟವೂ ಅಮೂಲ್ಯ ಮಾಹಿತಿ. ಈ ಶತಮಾನದ ರಾಜಕಾರಣ, ಮಹತ್ವದ ವ್ಯಕ್ತಿಗಳ ಅಂತರಂಗದ ಶ್ರೇಷ್ಠತೆ. ದೊಡ್ಡವರ ಸಣ್ಣತನಗಳು. ಸಾರ್ವಜನಿಕ ಬದುಕು ಬಯಸುವ ಜವಾಬ್ದಾರಿ, ಭ್ರಷ್ಟತೆಯಿಂದಾಗುವ ಅನಾಹುತಗಳು ಸೇರಿದಂತೆ ಇಲ್ಲಿ ದಾಖಲಾಗದೇ ಉಳಿದ ವಿಷಯವಿಲ್ಲವೆಂದು ಹೇಳಬಹುದು. ಡಾ॥ ಪಾಟೀಲ ಪುಟ್ಟಪ್ಪನವರ ಆಲೋಚನೆಯ ಹರವು ದೇಶ, ಕೋಶ, ಗಡಿಗಳ ಮಿತಿಯನ್ನು ದಾಟಿ ಪ್ರಪಂಚದೆಲ್ಲೆಡೆ ವಿಹರಿಸುತ್ತದೆ. ಈ ಪುಸ್ತಕಗಳ ಒಳನೋಟ ಅದೊಂದು ಪ್ರತ್ಯೇಕ ಪಾಪು ಲೋಕ !

❑

# ಶಾಂತಾದೇವಿ ಮಾಳವಾಡ

ಹೇಮಾ ಪಟ್ಟಣಶೆಟ್ಟಿ

ಕನ್ನಡದ ನವೋದಯ ಸಾಹಿತ್ಯ ಸಂದರ್ಭದಲ್ಲಿ ಶಾಂತಾದೇವಿ ಮಾಳವಾಡ ಒಂದು ಮಹತ್ವದ ಹೆಸರು. ಉತ್ತರ ಕರ್ನಾಟಕದಲ್ಲಿ ಸಾಹಿತ್ಯ ಪರಂಪರೆಯನ್ನು ಆರಂಭಿಸಿದ ಶ್ಯಾಮಲಾದೇವಿ ಬೆಳಗಾಂವಕರ, ಸರಸ್ವತಿದೇವಿ ಗೌಡರ, ಗೀತಾ ಕುಲಕರ್ಣಿ ಮೊದಲಾದ ಬೆರಳೆಣಿಕೆಯ ಮಹಿಳೆಯರಲ್ಲಿ ಶಾಂತಾದೇವಿ ಮಾಳವಾಡ ಅಗ್ರಮಾನ್ಯರು. ಅವರು ಸಾಹಿತಿಯಾಗಿ, ಸಾಮಾಜಿಕ ಕಾರ್ಯಕರ್ತೆಯಾಗಿ ನಮ್ಮ ಸಾಂಸ್ಕೃತಿಕ ವಲಯದಲ್ಲಿ ವಿಶಿಷ್ಟ ಸ್ಥಾನ ಗಳಿಸಿದ್ದಾರೆ. ಸಾಹಿತ್ಯ ಮತ್ತು ಬದುಕು ಎರಡರಲ್ಲಿಯೂ ಯಶಸ್ಸಿನೊಂದಿಗೆ ಶಾಲೀನತೆಯನ್ನೂ ಉಳಿಸಿಕೊಂಡು ಬಂದ ಶಾಂತಾದೇವಿಯವರು ಸರಳತೆ - ಸಜ್ಜನಿಕೆಗೆ, ನೇರ ಮೃದು ಮಾತಿಗೆ ಹೆಸರಾಗಿದ್ದಾರೆ. ಮಹಿಳಾ ಸಂಘಟನೆಗಳ ರೂವಾರಿಯಾಗಿಯೂ ಗಮನಾರ್ಹ ಸಾಧನೆ ಮಾಡಿದ್ದಾರೆ. ತಮ್ಮ ಸ್ನಿಗ್ಧ ಆಪ್ತವೆನಿಸುವ ವ್ಯಕ್ತಿತ್ವದಿಂದಾಗಿ ಎಲ್ಲರಿಗೂ 'ಶಾಂತಕ್ಕ'ನೇ ಆಗಿದ್ದಾರೆ.

ಶಾಂತಾದೇವಿಯವರು ಹುಟ್ಟಿದ್ದು 1922ರ ಡಿಸೆಂಬರ್ 10ರಂದು, ಬೆಳಗಾಂವಿಯಲ್ಲಿ ತಂದೆ ಕರ್ಜಗಿ ಮುರಿಗೆಪ್ಪಶೆಟ್ಟರು ಬಿ.ಜಿ.ಎ.ಆಗಿ ಸಹಕಾರಿ ಖಾತೆಯಲ್ಲಿ ಕೆಲಸದಲ್ಲಿ ಇದ್ದರು. ತಾಯಿ ಜಯವಂತಿದೇವಿ ಧಾರ್ಮಿಕ ಮನೋಭಾವದ ಸದ್ಗೃಹಸ್ಥೆ. ಇವರ ಮನೆದೇವರು ಗುಡ್ಡಾಪುರದ ದಾನಮ್ಮ ನಾದ್ದರಿಂದ ಇವರು ತಮ್ಮ ಮಗುವಿಗೆ ದಾನಮ್ಮ ಎಂದು ಹೆಸರಿಟ್ಟರು. ಎರಡು ವರ್ಷದ ಹಸುಳೆಯಾಗಿದ್ದಾಗಲೇ ತಂದೆಯನ್ನು ಕಳೆದುಕೊಂಡು ದಾನಮ್ಮ ಹತ್ತನೆಯ ವಯಸ್ಸಿನಲ್ಲಿ ತಾಯಿ ವಾತ್ಸಲ್ಯದಿಂದಲೂ ವಂಚಿತ ಳಾದಳು. "ಬಾಲ್ಯದಲ್ಲಿ ನಾನು ಎಲ್ಲ ಮಕ್ಕಳಂತೆ ತಾಯಿಯ ಮೊಲೆ ಹಾಲು ಕುಡಿಯಲಿಲ್ಲ, ತಂದೆಯ ತೊಡೆಯನ್ನೇರಿ ಮುದ್ದು ಮಾತನ್ನಾಡಲಿಲ್ಲ" ಎಂಬ ನೋವು ಅವರಲ್ಲಿ ಬಾಲ್ಯದ ನೆನಪಿನೊಂದಿಗೆ ಅಂಟಿಕೊಂಡಿದೆ.

ಅಜ್ಜಿಯ ಅಂತಃಕರಣದಲ್ಲಿ ಅವಳ ಕರುಳಿನ ಕರುಳಾಗಿದ್ದು ದಾನಮ್ಮ ರಾಮಾಯಣ, ಶಿವಪುರಾಣ, ರಾಜರಾಣಿಯರ ಅದ್ಭುತ ಕತೆಗಳನ್ನು ಕೇಳುತ್ತ ಬೆಳೆದಳು. ಬೆಳಗಾವಿಯ ವನಿತಾ ವಿದ್ಯಾಲಯದ ಹೆಣ್ಣುಮಕ್ಕಳ ಒಂದನೆಯ ನಂಬರ್ ಶಾಲೆಯಲ್ಲಿ ತನ್ನ ವಿದ್ಯಾಭ್ಯಾಸ ಆರಂಭಿಸಿದಳು. ಹೆಣ್ಣುಮಕ್ಕಳಿಗೆ ಕನ್ನಡ ನಾಲ್ಕನೆಯ ಇಯತ್ತೆಯವರೆಗೆ ಮಾತ್ರ ಕಲಿಸಿ ಮದುವೆ ಮಾಡಿ ಬಿಡುತ್ತಿದ್ದ ಕಾಲವದು. ದಾನಮ್ಮನ ದೊಡ್ಡಪ್ಪ ಕಟ್ಟಾ ಸಂಪ್ರದಾಯಸ್ಥರಾ ಗಿದ್ದು ಅವರ ಆದೇಶದಂತೆ ಹೈಸ್ಕೂಲಿನ ಎರಡನೆಯ ತರಗತಿಗೆ ಶಾಲೆಯನ್ನು ಬಿಡಬೇಕಾಯಿತು. ಶಾಲೆಗೆ ಹೋಗುವ ಹಟದಿಂದ ದಾನಮ್ಮ ಎರಡು ದಿನ ಉಪವಾಸ ಸತ್ಯಾಗ್ರಹ ಮಾಡಿದ್ದು ಫಲಕಾರಿಯಾಗಲಿಲ್ಲ. ಮನೆಯಲ್ಲೇ ಉಳಿದು ಕಥೆ ಕಾದಂಬರಿಗಳ ಓದಿನೊಂದಿಗೆ ಹೊಲಿಗೆ-ಹೆಣಿಕೆಯಂಥ ಕಲಾಭಿ ರುಚಿಯನ್ನು ಬೆಳೆಸಿಕೊಂಡಳು. ಪಾಕಶಾಸ್ತ್ರ ಪ್ರವೀಣೆಯಾದ ಅಜ್ಜಿಯಿಂದಾ ವಿದ್ಯೆಯೂ ಬಳುವಳಿಯಾಗಿ ಬಂದಿತು. ಹೀಗೆ ದಾನಮ್ಮ ಆ ದಿನಗಳಲ್ಲಿ ಗೃಹಿಣೀತ್ವದ ಪಾಠಗಳನ್ನೆಲ್ಲ ಕರಗತ ಮಾಡಿಕೊಂಡಳು. ಜೀವನ ಶಿಕ್ಷಣಕ್ಕೆ ತೆರೆದುಕೊಂಡಳು.

ಹದಿನಾಲ್ಕನೆಯ ವಯಸ್ಸಿಗೆ ದಾನಮ್ಮನ ಮದುವೆ ನಿಶ್ಚಯವಾಯಿತು. ವರ ಸ.ಸ ಮಾಳವಾಡರು. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದರು. ಆಗ ಕನ್ಯೆಗೆ 15 ವರ್ಷ ತುಂಬುವ ಮೊದಲು ಮದುವೆ ಮಾಡುವಂತಿರಲಿಲ್ಲ. ಹೀಗಾಗಿ ನಿಶ್ಚಯದಿಂದ ಮದುವೆಯವರೆಗೆ ಇವರಿಬ್ಬರ ಮಧ್ಯೆ ಪತ್ರಗಳ ಓಡಾಟ ನಡೆದು ಒಬ್ಬರನ್ನೊಬ್ಬರು ಅರಿತು ಕೊಳ್ಳುವ ಸದವಕಾಶ ಲಭ್ಯವಾಯಿತು. ಇದರಿಂದ ದಾನಮ್ಮ ಬಾಹ್ಯ ಜಗತ್ತಿನ ಬಗ್ಗೆ ತಿಳುವಳಿಕೆ ಹೆಚ್ಚಿಸಿಕೊಂಡಳು. 'ತಮ್ಮ ಪತ್ನಿ ಘನೆಗೆಲಸದ ದಾಸಿ ಯಾಗದೇ ಬಾಳ ಸಂಗಾತಿ ಯಾಗಿರಬೇಕು' ಎಂದು ಮಾಳವಾಡರು ತಮ್ಮ ಒಂದು ಪತ್ರದಲ್ಲಿ ಬರೆದಿದ್ದರು. ಬಾಳ ಸಂಗಾತಿತ್ವದ ಈ ಪರಿಕಲ್ಪನೆ ಆ ಕಾಲದಲ್ಲಿ ತುಂಬ ಪ್ರಗತಿಪರವೂ, ಅಪರೂಪದ್ದೂ ಆಗಿತ್ತು. ಇದೇ ಮುಂದೆ ಇವರಿಬ್ಬರ ಸಾಮರಸ್ಯದ ದಾಂಪತ್ಯಕ್ಕೆ ಅಡಿಪಾಯವಾಯಿತು. ದಾನಮ್ಮನ ಜ್ಞಾನವೃದ್ಧಿಯಾಗಿ ಮಾಳ ವಾಡರು 'ಸೂತ್ರದ ಬೊಂಬೆ', 'ಬಂಧನದಾಚೆ' ಮುಂತಾದ ಪುಸ್ತಕಗಳನ್ನು ಓದಲು ಕಳಿಸುತ್ತಿದ್ದರು. ವಿವಾಹಪೂರ್ವದ ಈ ಕಾಲದಲ್ಲಿ ದಾನಮ್ಮ ಮಾನಸಿಕವಾಗಿ ಗಟ್ಟಿಗೊಂಡಳು. ಪಕ್ವಗೊಂಡಳು, ಆತ್ಮವಿಶ್ವಾಸ ಬೆಳೆಸಿಕೊಂಡಳು. ಪ್ರಬುದ್ಧಳಾದಳು. ಇದು ಅವಳ ಮುಂದಿನ ಬಾಳಿಗೆ ಸಮರ್ಥ ದಿಕ್ಸೂಚಿಯಾಯಿತು, ಹೊಸ ತಿರುವಾಗಿ ಪರಿಣಮಿಸಿತು.

1937ರ ಡಿಸೆಂಬರ್ 12ರಂದು ದಾನಮ್ಮನ ಮದುವೆಯಾಯಿತು. ಪತಿ ಮಾಳವಾಡರ ಇಚ್ಛೆಯ ಮೇರೆಗೆ ದಾನಮ್ಮನ ಹೆಸರು ಶಾಂತಾದೇವಿಯಾಗಿ ಬದಲಾಯಿತು. ಕಟ್ಟಾ ವೀರಶೈವ ಸಂಪ್ರದಾಯಸ್ಥ ಕುಟುಂಬದ ಮಗಳಾಗಿ, ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದ ಅಪ್ಪಟ ಸಾಹೇಬರ ಶಿಸ್ತನ್ನು ರೂಢಿಸಿ ಕೊಂಡವರ ಹೆಂಡತಿಯಾಗಿ ಶಾಂತಾದೇವಿ ಸಂಪ್ರದಾಯ ಮತ್ತು ಆಧುನಿಕತೆ ಗಳಿಗೆ ಕೊಂಡಿಯಾದರು. ಒಮ್ಮೊಮ್ಮೆ ಹೊಸ ಹಳೆಯ ವಿಚಾರಗಳ ವೈರುಧ್ಯದ ಸೆಳವಿಗೆ ಸಿಕ್ಕು ನಲುಗಿದರು. ಆದರೂ ಬದುಕಿನಲ್ಲಿ ದಾಂಪತ್ಯ ದಲ್ಲಿ ಹೊಂದಾಣಿಕೆಯ ಅಗತ್ಯವನ್ನು, ಅದರ ಅನಿವಾರ್ಯತೆಯನ್ನು ಅರಿತು ಕೊಂಡರು. "ಹೆಣ್ಣು ಶಬ್ದದ ಅರ್ಥವೇ ಹೊಂದಾಣಿಕೆ" ಎನ್ನುವ ನಿಲುವಿಗೆ ಬಂದು ಮುಟ್ಟಿದರು. ಅವರ ಸಮಗ್ರ ಬರವಣಿಗೆಯ ಮೂಲ ಆಶಯವೇ ಇದಾಗಿರುವುದನ್ನು ಗುರುತಿಸಬಹುದು.

ಬಾಲ್ಯದಿಂದಲೂ ಓದುವ ಹವ್ಯಾಸ ರೂಢಿಸಿಕೊಂಡಿದ್ದ ಶಾಂತಾದೇವಿ ಗೃಹಿಣೀತ್ವದ ಜವಾಬ್ದಾರಿಯ ನಡುವೆಯೂ ಅದನ್ನು ಕಾಪಾಡಿಕೊಂಡು ಬಂದರು. ಆರಂಭದಲ್ಲಿ ಲಲಿತ ಸಾಹಿತ್ಯಕ್ಕೆ ಸೀಮಿತವಾದ ಅವರ ಓದು ನಂತರ ವಿಚಾರಸಾಹಿತ್ಯ, ಪ್ರಾಚೀನ ಕಾವ್ಯಗಳಿಗೂ ವಿಸ್ತರಿಸಿತು. ಕನ್ನಡ ಸಾಹಿತ್ಯ ಪರಿಷತ್ತಿನ ಕಾವ್ಯ. ಜಾಣ ಪರೀಕ್ಷೆಗಳಿಗಾಗಿ ಅಭ್ಯಾಸ ಮಾಡಿ ಅವುಗಳಲ್ಲಿ ಉತ್ತೀರ್ಣರಾದದ್ದು ಅವರ ಸಾಹಿತ್ಯಾಸಕ್ತಿಗೆ ಬಲ ನೀಡಿತು. ಸಾಹಿತಿ ಪತಿಯೊಡನೆ ವಿಚಾರ ವಿನಿಮಯದ ಜೊತೆಗೆ ತಮ್ಮ ಮನೆಗೆ ಬಂದು ಹೋಗುವವರಿಂದಲೂ ಸಾಹಿತ್ಯದ ಮಾತನ್ನೇ ಕೇಳುವುದು ಅವರ ದಿನಚರಿ ಆಯಿತು. ಇದರಿಂದ ಅವರ ಮನೋಭಾವ ಹಾಗೂ ತಿಳುವಳಿಕೆಯ ಕ್ಷಿತಿಜಗಳು ವಿಸ್ತಾರಗೊಂಡವು. ಹುಟ್ಟಿನಿಂದ ಆಧ್ಯಾತ್ಮಿಕ ಪರಿಸರದಲ್ಲಿ ಬೆಳೆದ ಶಾಂತಕ್ಕ ಸಹಜವಾಗಿಯೇ ವಚನ ಸಾಹಿತ್ಯದತ್ತ ಆಕರ್ಷಿತರಾದರು. ಹಳೆಗನ್ನಡದ ಅಭ್ಯಾಸದಿಂದ ಅವರ ಸಾಹಿತ್ಯಾಭಿರುಚಿ ದೃಢಗೊಂಡಿತು. ವಚನಗಳ ಅಧ್ಯಯನದಿಂದ ಅವರ ವ್ಯಕ್ತಿತ್ವಕ್ಕೆ ಕಾಂತಿ ಮೂಡಿತು. ಕನ್ನಡ ಸಾಹಿತ್ಯದ ಓದಿಗಷ್ಟೇ ಸೀಮಿತಗೊಳ್ಳದ ಅವರ ಆಸಕ್ತಿ ಹಿಂದೀ ಹಾಗೂ

ಇಂಗ್ಲೀಷ್ ಭಾಷಾಜ್ಞಾನದ ಕಡೆಗೆ ತುಡಿಯಿತು. ಮನೆಯಲ್ಲಿಯೇ ಅಕ್ಕಾ ಕುಲಕರ್ಣಿ ಎಂಬ ಇಂಗ್ಲೀಷ್ ಅಧ್ಯಾಪಕಿಯಿಂದ ಇಂಗ್ಲೀಷನ್ನೂ ಗುರುನಾಥ ಜೋಶಿಯವರಿಂದ ಹಿಂದಿಯನ್ನೂ ಕಲಿತರು. ಔಪಚಾರಿಕ ಶಿಕ್ಷಣದಿಂದ ವಂಚಿತರಾದ ಶಾಂತಾದೇವಿ ತಮ್ಮ ಸ್ವಸಾಮರ್ಥ್ಯದಿಂದ ಸತತ ಪರಿಶ್ರಮದಿಂದ ಜ್ಞಾನಾರ್ಜನೆ ಮಾಡಿದ್ದು ವಿರಳಮಾದರಿ ಎಂದೇ ಹೇಳಬೇಕು. ತಮ್ಮ ಈ ಸಾಧನೆಯ ಹಿಂದೆ ಪ್ರೊ. ಮಾಳವಾಡ ಅವರ ಪ್ರೋತ್ಸಾಹವಿದ್ದದ್ದನ್ನು ಶಾಂತಾದೇವಿ ಮನತುಂಬಿ ನೆನೆಯುತ್ತಾರೆ.

ಶಾಂತಾದೇವಿ ರೂಪವತಿಯೂ ಹೌದು. "ಶರಶ್ಚಂದ್ರರ, ರವೀಂದ್ರರ ಕಾದಂಬರಿಗಳ ನಾಯಕಿಯಂತಿದ್ದ ಆ ಕೋಮಲ ಬಾಲೆ...........ವಿಶುದ್ಧ ಹೃದಯದ ಸದುವಿನಯದ ಸ್ನೇಹಮಯ ಹುಡುಗಿ" ಎಂದು ಬಸವರಾಜ ಕಟ್ಟೀಮನಿಯವರು ಬೆಳಗಾವಿಯ ತಮ್ಮ ಓಣಿಯಲ್ಲಿಯೇ ವಾಸವಾಗಿದ್ದ ಆಗಿನ 13-14ರ ಶಾಂತಾದೇವಿಯ ರೂಪ-ಗುಣಗಳನ್ನು ವರ್ಣಿಸಿದ್ದು ಉಲ್ಲೇಖ ನೀಯ, ಗೌರವರ್ಣ, ತೇಜಃಪುಂಜ ಕಣ್ಣುಗಳು, ಸರಳ ಉಡುಪು, ಬಿಗುಮಾನ ವಿಲ್ಲದ ಹಸನ್ಮುಖ, ನಿಷ್ಕಪಟ ಸ್ವಭಾವದ ಶಾಂತಕ್ಕನ ವ್ಯಕಿತ್ವ ಯಾರನ್ನಾ ದರೂ ಸೂಜಿಗಲ್ಲಿನಂತೆ ಸೆಳೆಯುತ್ತದೆ. ಹಿರಿಯರು - ಕಿರಿಯರು ಎನ್ನದೇ ಎಲ್ಲರ ಬಗೆಗೂ ಅವರು ತೋರುವ ಪ್ರೀತಿ - ವಿಶ್ವಾಸ ಅನುಪಮ ವಾದುದು. ಪರರ ವಿಚಾರಗಳನ್ನು ಆಸಕ್ತಿಯಿಂದ ಆಲಿಸುತ್ತಾರೆ. ಒಳ್ಳೆಯ. ಸ್ವಸ್ಥ ಆಲೋಚನೆಗಳು ಎಲ್ಲಿಂದ ಬಂದರೂ ಅವುಗಳನ್ನು ಸ್ವಾಗತಿಸುತ್ತಾರೆ. ಸದ್ವಿಚಾರ, ಸದಾಚಾರಗಳ ಬಗ್ಗೆ ಯಾವಾಗಲೂ ಮುಕ್ತ ಮನಸ್ಸು, ಇಷ್ಟಲಿಂಗ ಪೂಜೆಯಲ್ಲಿ ನಿಷ್ಠರು, ಪರಧರ್ಮ, ಮತಾಚಾರಗಳ ಬಗೆಗೂ ಸದ್ಭಾವ ತೋರುತ್ತಾರೆ. ಅರವಿಂದ ತತ್ವಗಳ ಬಗ್ಗೆ ತಾಯಿಯವರ ಬಗ್ಗೆ ಅಪಾರ ಶ್ರದ್ಧೆ ಇವರದು.

ಶಾಂತಾದೇವಿ ಮೊದಲ ಸಲ ಗರ್ಭಿಣಿಯಾದಾಗ ಏಳನೆಯ ತಿಂಗಳಿ ನಲ್ಲಿಯೇ ಪ್ರಿಮೆಚ್ಯೂರ್ ಹೆರಿಗೆಯಾಯಿತು. ಹುಟ್ಟಿದ ಹೆಣ್ಣುಮಗು ಒಂದು ದಿನ ಮಾತ್ರ ಬದುಕಿತ್ತು. ನಂತರದ ವರ್ಷಗಳಲ್ಲಿ ಹಲವಾರು ಸಲ ಅವರು ಗರ್ಭಪಾತದ ದಾರುಣ ನೋವಿಗೆ ಈಡಾಗಿದ್ದಾರೆ. ಇವರಿಗೆ ಮಕ್ಕಳಾಗ ದಿರುವುದರಿಂದ ತುಂಬ ವ್ಯಥೆಪಡುತ್ತಿದ್ದ ತಮ್ಮ ಅತ್ತೆಯನ್ನು ಸಮಾಧಾನ ಪಡಿಸಲು ಇವರು ಮಾಳವಾಡರಿಗೆ ಮತ್ತೊಂದು ಮದುವೆಯಾಗಲು ಒತ್ತಾಯಿಸಿದ್ದೂ ಇದೆ. ಇದೇ ವ್ಯಥೆಯಲ್ಲಿ ಒಮ್ಮೆ ಶಾಂತಾದೇವಿ ಆತ್ಮ ಹತ್ಯೆಗೂ ಯೋಚಿಸಿದರು. ಈ ಬಗ್ಗೆ ಪಾಂಡಿಚೇರಿಯ ತಾಯಿಯವರಿಗೆ ಪತ್ರ ಬರೆದು ನಂತರ ಸ್ವತಃ ಅಲ್ಲಿಗೆ ಹೋಗಿಯೂ ಬಂದರು. ತಾಯಿಯವರ ದರ್ಶನದಿಂದ ಆತ್ಮಸ್ಥೈರ್ಯ ಮೂಡಿ ಮನಸ್ಸು ಶಾಂತಿ ಪಡೆಯಿತು.

ಶಾಂತಾದೇವಿ ಮತ್ತು ಪ್ರೊ. ಮಾಳವಾಡರದು ಅನ್ಯೋನ್ಯ ದಾಂಪತ್ಯ. ಇವರಲ್ಲಿ ಯಾರು ಯಾರನ್ನು ಶಿಲ್ಪಿಸಿದರೋ ಹೇಳಲಿಕ್ಕಾಗದು. ಮಾಳವಾಡರು ಶಾಂತಕ್ಕನಲ್ಲಿಯ ಸಾಹಿತ್ಯದ ಒಲವಿಗೆ ನೀರೆರೆದು ಉತ್ತರ ಕರ್ನಾಟಕದ ಸಾಹಿತ್ಯಕ, ಸಾಂಸ್ಕೃತಿಕ ಬದುಕಿನಲ್ಲಿ ಅವರನ್ನು ಮುಂಚೂಣಿಯಲ್ಲಿ ನಿಲ್ಲಿಸಿದರೆ, ಶಾಂತಕ್ಕ ಮಾಳವಾಡರ ವ್ಯಕ್ತಿತ್ವಕ್ಕೆ ಸಾಣೆ ಹಿಡಿದು ಸಹನೆ, ತಾಳ್ಮೆ, ಆಧ್ಯಾತ್ಮಗಳತ್ತ ಅವರನ್ನು ಸೆಳೆದೊಯ್ದರು ವಾಸ್ತವಾಂಶ ಇತ್ತೀಚೆಗೆ ವಿರಳ ವಾದ ಅಪರೂಪದ ದಾಂಪತ್ಯ ಅವರದು.

ತಮ್ಮ ಹವ್ಯಾಸ ಹಾಗೂ ಸಾಹಿತ್ಯಾಧ್ಯಯನಗಳ ಜೊತೆಗೆ ಶಾಂತಾದೇವಿ ಸಾರ್ವಜನಿಕ ಚಟುವಟಿಕೆಗಳಲ್ಲೂ ಕ್ರಿಯಾತ್ಮಕವಾಗಿ ತೊಡಗಿಕೊಂಡರು. ಇವರ 'ಲೋಕಾಂತಪ್ರಿಯತೆ' ಹಾಗೂ ಕನ್ನಡಾಭಿಮಾನಗಳೇ ಅದಕ್ಕೆ ಕಾರಣ ವಾಗಿದ್ದವು. ಹೆಣ್ಣುಮಕ್ಕಳು ಮನೆಯಿಂದ ಹೊರಬರುವುದೇ ಅಸಾಧ್ಯವಾದ ಅಂದಿನ ಪರಿಸ್ಥಿತಿಯಲ್ಲಿ ಶಾಂತಕ್ಕ ಮಹಿಳೆಯರ ಜಾಗೃತಿಗಾಗಿ ಕೈಕೊಂಡ ಕಾರ್ಯ ಗಮನಾರ್ಹವಾದುದು. ತಮ್ಮ ಮನೆಯ ಮಹಿಳೆಯರನ್ನು ಇವರೊಂದಿಗೆ ಸಂಘಟನಾ ಕಾರ್ಯದಲ್ಲಿ ಕಳಿಸಲು ಒಪ್ಪದ ಹಿರಿಯರು ಇವರನ್ನು ಕಂಡೊಡನೆ ಮನೆಯ ಬಾಗಿಲನ್ನು ಮುಚ್ಚಿಕೊಳ್ಳುತಿದ್ದ ಕಹಿ ಪ್ರಸಂಗವನ್ನು ಅವರು ಈಗ ನಗುತ್ತ ನೆನಪಿಸಿಕೊಳ್ಳುತ್ತಾರೆ.

ಆಗ ಕರ್ನಾಟಕ ಕಾಲೇಜಿನಲ್ಲಿ ಬಹುಸಂಖ್ಯಾತ ಪ್ರಾಧ್ಯಾಪಕರು ಅನ್ಯ ಭಾಷಿಕರಾಗಿದ್ದು ಕನ್ನಡ ಅವಜ್ಞೆಗೊಳಗಾಗಿತ್ತು. ಕೊರಿಯಾ ಅಫಾನ್ಸೊ ಪ್ರಿನ್ಸಿಪಾಲರಾಗಿ ಬಂದ ಮೇಲೆ ಕನ್ನಡ ಪ್ರಾಧ್ಯಾಪಕರಿಗೆ ಮಹತ್ವದ ಸ್ಥಾನ ಪ್ರಾಪ್ತವಾಯಿತಲ್ಲದೆ ಪ್ರಾಧ್ಯಾಪಕರ ಪತ್ನಿಯರ ಸಂಘವು ಸ್ಥಾಪನೆಗೊಂಡಿತು. ಅಲ್ಲಿಂದಲೇ ಶಾಂತಾದೇವಿಯವರ ಸಂಘ ಸಂಸ್ಥೆಗಳ ಸಂಪರ್ಕ ಆರಂಭ ಗೊಂಡಿತು.

ಪ್ರೊ. ಬಸವನಾಳರಾದಿಯಾಗಿ ವೀರಶೈವ ಸಂಸ್ಕೃತಿಯ ಏಳಿಗೆಗಾಗಿ 1938ರಲ್ಲಿ ಅಕ್ಕನಬಳಗ ಪ್ರಾರಂಭಿಸಿದ್ದರಲ್ಲಿ ಶಾಂತಾದೇವಿಯವರ ಪಾಲೂ ಇದೆ. ಮುಂದೆ ಈ ಸಂಸ್ಥೆ ಅಕ್ಕನ ಬಳಗಗಳ ಕೇಂದ್ರ ಸಂಸ್ಥೆಯ ಸ್ಥಾಪನೆಗೆ ಕಾರಣವಾಗಿದ್ದು ಮಹತ್ವದ ಸಂಗತಿಯಾಗಿದೆ.

1940ರಲ್ಲಿ ಶ್ಯಾಮಲಾದೇವಿ ಬೆಳಗಾಂವಕರ ಅವರು ಶಾಂತಾದೇವಿ ಯವರನ್ನು ಅಖಿಲ ಭಾರತ ಮಹಿಳಾ ಪರಿಷತ್ತಿನ ಧಾರವಾಡ ಜಿಲ್ಲಾ ಶಾಖೆಗೆ ಸದಸ್ಯಳನ್ನಾಗಿ ಮಾಡಿದರು. ಆಗ ಅಲ್ಲಿಯ ವಾತಾವರಣ ಸಂಪೂರ್ಣ ಮರಾಠಿಮಯವಾಗಿತ್ತು. ಅದನ್ನು ಹೋಗಲಾಡಿಸಿ ಅಲ್ಲಿ ಕನ್ನಡ ಸ್ಥಾಪಿಸಲು ಶಾಂತಾದೇವಿ ಮಳಿಮಠರ ನೇತೃತ್ವದಲ್ಲಿ ನಡೆದ ಹೋರಾಟದಲ್ಲಿ ಮಾಳವಾಡ ಶಾಂತಕ್ಕನೂ ಭಾಗಿಯಾದರು. ಅಲ್ಲಿ ಕನ್ನಡತಿಯರ ಸಂಖ್ಯೆ ಹೆಚ್ಚಿ ಧಾರವಾಡ ಜಿಲ್ಲಾ ಮಹಿಳಾ ಮಂಡಳವಾಗಿ ಹೊಸರೂಪ ಪಡೆಯಿತು. ಶಾಂತಕ್ಕ ಕಾರ್ಯ ದರ್ಶಿಯಾದರು. 1947ರಲ್ಲಿ ಅಧ್ಯಕ್ಷೆಯಾಗಿಯೂ ನೇಮಕಗೊಂಡರು. ಆಗ ಹೂಮಾಲೆಯೊಂದಿಗೆ ರೂ. 200.00 ಸಾಲದ ಹೊರೆಯನ್ನೂ ಒಪ್ಪಿಕೊಂಡ ಶಾಂತಕ್ಕ ಮುಂದೆ ಹತ್ತೇ ವರ್ಷಗಳಲ್ಲಿ ಮಂಡಳಕ್ಕೆ ಸ್ವಂತ ಕಟ್ಟಡವಾಗುವಂತೆ ಅಹರ್ನಿಶಿ ದುಡಿದರು. ಕಟ್ಟಡನಿಧಿ ಸಂಗ್ರಹದ ಸಂದರ್ಭದಲ್ಲಿ ಸಿಹಿ ಅನುಭವ ಗಳೊಂದಿಗೆ ಕಹಿತುತ್ತನ್ನೂ ಉಂಡರು. ಈ ಮಂಡಳಕ್ಕಾಗಿ 20 ವರ್ಷ ಸತತ ವಾಗಿ ಕೆಲಸ ಮಾಡಿದ ಶಾಂತಕ್ಕನ ಸಾಧನೆ ಉಳಿದವರಿಗೆ ಮಾದರಿಯಾಗಿತ್ತು. ಅವರ ಕರ್ತವ್ಯನಿಷ್ಠೆ, ಕಾರ್ಯತತ್ಪರತೆ, ಅಚ್ಚುಕಟ್ಟುತನ, ಜವಾಬ್ದಾರಿಯ ನಿರ್ವಹಣೆ, ಮುಂದಾಳತ್ವ ಪ್ರಶಂಸನೀಯವಾಗಿದ್ದವು.

ಶಾಂತಾದೇವಿಯವರು 1958ರಿಂದ ಧಾರವಾಡ ಜಿಲ್ಲಾ ರಿಮಾಂಡ್ ಹೋಮ್ ಕಾರ್ಯಕಾರಿ ಮಂಡಳದ ಸದಸ್ಯೆಯಾಗಿಯೂ, 1959ರಿಂದ 1964ರ ವರೆಗೆ ಆನರರಿ ಲೇಡಿ ಮ್ಯಾಜಿಸ್ಟ್ರೇಟ್ ಆಗಿಯೂ ಸೇವೆ ಸಲ್ಲಿಸಿದ್ದಾರೆ. ಸರಸ್ವತಿ ದೇವಿ ಗೌಡರ ಅವರ ಜೊತೆಗೂಡಿ ಈ ಸಂಸ್ಥೆಯಾಗಿ ಸಾಕಷ್ಟು ದುಡಿದಿದ್ದಾರೆ. ಒಂದು ವರ್ಷ ಅವಧಿಗೆ ಇಲ್ಲಿ ಚೇರ್‌ಮನ್‌ರೂ ಆಗಿದ್ದರು. ರಾಜ್ಯ ಮಟ್ಟದ 'ಸಾಮಾಜಿಕ ನೈತಿಕ ಸ್ವಾಸ್ಥ್ಯ ಸಮಿತಿ'ಯ ಸದಸ್ಯರಾಗಿಯೂ ಕೆಲವು ವರ್ಷ ಕೆಲಸ ಮಾಡಿದ್ದಾರೆ. ಶೋಷಣೆಗೀಡಾದ ಮಹಿಳೆಯರಿಗೆ ರಕ್ಷಣಾ ಗೃಹಗಳಲ್ಲಿ ವೃತ್ತಿಮಾರ್ಗದರ್ಶನ ನೀಡುವ ಯೋಜನೆಯೊಂದಿಗೆ ವೇಶ್ಯಾವೃತ್ತಿ ನಿರ್ಮೂ ಲನೆಗಾಗಿ ಕಾರ್ಯಕ್ರಮಗಳನ್ನೂ ಆಯೋಜಿಸಿದ್ದರು.

ಸಮಾಜ ಕಲ್ಯಾಣ ಕೇಂದ್ರವು 1954ರಲ್ಲಿ ಧಾರವಾಡ ಜಿಲ್ಲೆಯಲ್ಲಿ ತನ್ನ ಕಾರ್ಯ ಆರಂಭಿಸಿದಾಗ ಶಾಂತದೇವಿಯವರು ಅದರ ಕೋಶಾಧ್ಯಕ್ಷೆಯಾಗಿ ಮರೇವಾಡದಲ್ಲಿ ಶಿಶುವಿಹಾರ, ಮಹಿಳಾ ಮಂಡಲಗಳ ಕೆಲಸ ಆರಂಭಿಸಿದರು. ರಾಜ್ಯದ 'ಮಹಿಳೆಯರ ಸಾಮಾಜಿಕ ಶಿಕ್ಷಣ ಸಮಿತಿ'ಯ ಸದಸ್ಯರಾಗಿ ಸ್ತ್ರೀಯರ ಶೈಕ್ಷಣಿಕ ಪ್ರಗತಿಗಾಗಿ ಪ್ರಯತ್ನಿಸಿದರು. ಧಾರವಾಡ ತಾಲ್ಲೂಕು ಅಭಿವೃದ್ಧಿ ಮಂಡಳಿ, ಜಿಲ್ಲಾ ಅಭಿವೃದ್ಧಿ ಮಂಡಳ, ತೋಟಗಾರಿಕಾ ಸಂಸ್ಥೆಯ ಸದಸ್ಯೆಯಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಧಾರವಾಡದ ಗಾಂಧೀ ಶಾಂತಿ ಪ್ರತಿಷ್ಠಾನ ಕೇಂದ್ರದಲ್ಲಿ ಶಕುಂತಲಾ ಕುರ್ತಕೋಟಿಯವರು ಆರಂಭಿಸಿದ ಮಹಿಳಾ ವಿಭಾಗಕ್ಕೆ 1967ರಲ್ಲಿ ಶಾಂತಾದೇವಿಯವರು ಕಾರ್ಯಾಧ್ಯಕ್ಷರಾಗಿದ್ದು ಧಾರವಾಡದ ಮಹಿಳಾ ಸಂಸ್ಥೆಗಳೊಂದಿಗೆ ಕೂಡಿಕೊಂಡು ಹಲವಾರು ಪ್ರಗತಿಪರ ಕಾರ್ಯ ಕೈಗೊಂಡರು. ಹೀಗೆ ಜನಸಂಪರ್ಕ ಹೆಚ್ಚುತ್ತಾ ಅವರ ಅನುಭವದ ವ್ಯಾಪ್ತಿಯೂ ಹಿಗ್ಗುತ್ತಾ ಹೋಯಿತು.

ಧಾರವಾಡದ ತುಂಬ ಪ್ರತಿಷ್ಠಿತ ಸಾಂಸ್ಕೃತಿಕ ಸಂಸ್ಥೆಯಾದ ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯಕಾರಿ ಸಮಿತಿಯ ಸದಸ್ಯೆಯಾಗಿಯೂ, ಸಾಹಿತ್ಯ ಮಂಟಪದ ಸಹ ನಿಯೋಜಕಿಯಾಗಿಯೂ ಸಂಘದ ಉಪಾಧ್ಯಕ್ಷೆಯಾಗಿಯೂ ಶಾಂತಾದೇವಿಯವರು ಸೇವೆ ಸಲ್ಲಿಸಿದ್ದಾರೆ.

ಗೃಹಾಲಂಕಾರ, ಹೂಗುಚ್ಛ ಜೋಡಣೆ, ಹೊಲಿಗೆ, ಹೆಣಿಕೆ, ಮುಂತಾದವು ಶಾಂತಕ್ಕನ ಹವ್ಯಾಸಗಳಾಗಿ ಅವರ ವ್ಯಕ್ತಿತ್ವಕ್ಕೆ ವಿಶೇಷ ಮೆರಗು ನೀಡಿವೆ. ಅವರ ಪಾಕಪರಿಣತಿಗೆ ಅವರ ಮನೆಯೇ ಪ್ರಯೋಗಶಾಲೆಯಾಗಿದೆ. ಮನೆಯಲ್ಲಿ ಸ್ವಚ್ಛತೆ, ಒಪ್ಪ, ಓರಣ, ಕಲಾತ್ಮಕತೆ ಎದ್ದು ಕಾಣುತ್ತವೆ. ಅತಿಥಿ ಸತ್ಕಾರದಲ್ಲೂ ಅವರು ತುಂಬ ಉದಾರರು.

ಶಾಂತಕ್ಕ ಸದಾ ಪ್ರಶಾಂತಳು. ಅವರು ಅದನ್ನೇ ತಮ್ಮೊಂದಿಗಿನ ಇತರರಿಗೂ ಉಣಬಡಿಸುತ್ತಾರೆ. ನೋಡಲು ಸದ್ದಾಮುದ್ದಾ ಹೆಣ್ಣುಮಗಳು, ಮಾತು ಬಲು ಮೆತ್ತಗೆ. ನಿಲುವು ಮಾತ್ರ ಅಷ್ಟೇ ದೃಢ. ಯಾರನ್ನೂ ಅವರು ಟೀಕಿಸುವುದಿಲ್ಲ. ಎಲ್ಲರ ಬಗೆಗೂ ಒಳ್ಳೆಯ ಮಾತುಗಳನ್ನೇ ಆಡುತ್ತಾರೆ. ತಮ್ಮದಲ್ಲದ ಸ್ವಭಾವದ ಭಿನ್ನ ಮನೋಭಾವದ ವ್ಯಕ್ತಿಗಳೊಂದಿಗೂ ಅನುನಯದಿಂದ ಸಾಗುಕೊಳ್ಳುತ್ತಾರೆ. ಬಹುಶಃ ಈ ಎಲ್ಲ ಗುಣಗಳೂ ಅವರ ಕೃತಿಗಳನ್ನು ಸಹೃದಯರು ಆದರದಿಂದ ಕಾಣಲು ಕಾರಣವಾಗಿರಲೂಬೇಕು.

ಶಾಂತಾದೇವಿಯವರ ಸಾಹಿತ್ಯ ರಚನೆ ವಿಪುಲವಾಗಿರುವಂತೆ ವೈವಿಧ್ಯಪೂರ್ಣವೂ ಆಗಿದೆ. ಕಥೆ, ಕಾದಂಬರಿ, ನಾಟಕ, ಲಲಿತ ಪ್ರಬಂಧ ಮುಂತಾದ ಪ್ರಕಾರಗಳಲ್ಲಿ ಅವರು ಕೃಷಿ ಮಾಡಿದ್ದಾರೆ. ಇದುವರೆಗೆ ಅವರ ಒಟ್ಟು 38 ಕೃತಿಗಳು ಪ್ರಕಟಗೊಂಡಿವೆ.

ತಮ್ಮ ಹದಿನೈದರ ಹೊಸ್ತಿಲಲ್ಲೇ ಶಾಂತದೇವಿ ಒಂದೆರಡು ಕತೆಗಳನ್ನು ಬರೆದಿದ್ದರು. ಸುತ್ತಲಿನ ಜೀವನದಲ್ಲಿ ಅವರು ಕಂಡಂಥ ಸತ್ಯ ಸಂಗತಿಗಳಿಗೆ ಕಲ್ಪನೆಯನ್ನು ಸೇರಿಸಿ ಬರೆದ ಆ ಕತೆಗಳು 1941ರಲ್ಲಿ 'ಮೊಗ್ಗೆಯ ಮಾಲೆ' ಸಂಗ್ರಹದಲ್ಲಿ ಪ್ರಕಟವಾದವು. ಅದಕ್ಕೆ ಪ್ರೊ. ಮುಗಳಿಯವರ ಮುನ್ನುಡಿ, ಮಾಸ್ತಿಯವರ ಹರಕೆ ಲಭ್ಯವಾಗಿದೆ. ಈ ಸಂಕಲನದಲ್ಲಿ ವೈವಾಹಿಕ ಜೀವನದ ಸಮಸ್ಯೆಗಳು, ತಪ್ಪು ತಿಳುವಳಿಕೆ, ಹೆಣ್ಣಿನ ನೈತಿಕತೆಯ ಪ್ರಶ್ನೆಗಳನ್ನು ಎತ್ತಲಾಗಿದೆ. ಅವರ ಸರಳ - ಸುಂದರ ಭಾಷೆ, ಶೈಲಿಗಳು ಅಲ್ಲದೆ ಅದರ ಹಿಂದಿನ ಮುಗ್ಧ ಮನಸ್ಸು ಹಾಗೂ ಸ್ತ್ರೀ ಸಹಜ ಪ್ರತಿಕ್ರಿಯೆ ಎಲ್ಲವೂ ಅವರ ಸ್ಪಷ್ಟ ನಿರೂಪಣೆಯಿಂದಾಗಿ ಓದುಗರ ಮನಸ್ಸನ್ನು ತಟ್ಟುತ್ತವೆ. 1954ರಲ್ಲಿ ಪ್ರಕಟಗೊಂಡ ಎರಡನೆಯ ಕಥಾ ಸಂಕಲನ 'ಕುಂಕುಮ ಬಲ'. ಈ ಸಂಕಲನದ ಶೀರ್ಷಿಕೆಯೇ ಕತೆಗಾತಿಯ ಆಶಯವನ್ನು ಸಮರ್ಥವಾಗಿ ಬಿಚ್ಚಿಡಬಲ್ಲುದು. ಈ ಕತೆಗಳಲ್ಲೂ ಸ್ತ್ರೀಯೇ ಕೇಂದ್ರ. "ಹೆಣ್ಣಿನ ಕಣ್ಣಿನಿಂದ ಕಂಡ ಹೆಣ್ಣಿನ ಬದುಕನ್ನು" ಚಿತ್ರಿಸಿದ್ದಾಗಿ ಶಾಂತಾದೇವಿಯವರು ಈ ಸಂಕಲನದ ಅರಿಕೆಯಲ್ಲಿ ನಿವೇದಿಸಿದ್ದಾರೆ. ಅವರ ಎಲ್ಲ ಕತೆಗಳಲ್ಲೂ ಭಾರತೀಯ ನಾರಿಯ ಆದರ್ಶಮಯ ವ್ಯಕ್ತಿತ್ವದ ತಳಹದಿಯ ಮೇಲೆ ರೂಪಗೊಳ್ಳುವ ಸುಖೀ ಕುಟುಂಬದ ಹಂಬಲವೇ ಜೀವಸೆಲೆಯಾಗಿ ಮಿಡಿದಿದೆ. ಇಂಥ ಸುಖೀ ಕುಟುಂಬ ನಮ್ಮ ಸಮಾಜದ ಸ್ವಾಸ್ಥ್ಯ ಕಾಪಾಡಬಲ್ಲುದು ಎಂಬುದು ಅವರ ನಂಬಿಕೆ. ಹಾಗಾಗಬೇಕು ಎಂಬುದು ಅವರ ಪ್ರಬಲೇಚ್ಛೆ. ಹೀಗೆ ಸಮಾಜದ ಬಗೆಗಿನ ಕಾಳಜಿ, ಶೋಷಿತ ಮಹಿಳೆಗೆ ನ್ಯಾಯ ದೊರಕಬೇಕೆನ್ನುವ ತುಡಿತ ಅವರ ಕತೆಗಳಲ್ಲಿ ಅಂತರ್‌ಸೆಲೆಯಾಗಿ ಹರಿದಿವೆ.

ಶಾಂತಾದೇವಿಯವರಿಗೆ ಕನ್ನಡದ ಬಗ್ಗೆ ಅಪಾರ ಪ್ರೀತಿ. ಹೆಚ್ಚಿನ ಕಳಕಳಿ. ಅಂದು ಬೆಳಗಾವಿ ಮರಾಠಿಮಯವಾಗಿತ್ತು. ಅಂದಿನ ದಿನದಲ್ಲಿ ಅಲ್ಲಿಯ ಅಂಗಡಿಗಳಲ್ಲಿ ಮರಾಠಿಯಲ್ಲಿಯೇ ರಸೀದಿ ಕೊಡುವ ಪರಿಪಾಠವಿತ್ತು. 12-14ರ ಶಾಂತಾದೇವಿ ಅಂದಿನ ದಾನಮ್ಮ ಅದನ್ನು ತಿರಸ್ಕರಿಸಿ ಖಂಡಿಸಿ ಕನ್ನಡದಲ್ಲಿ ರಸೀದಿ ಪಡೆಯಲು ನಡೆಸಿದ ಪ್ರಯತ್ನ ಶ್ಲಾಘನೀಯವಾದುದು. ಅವರ 'ಕನ್ನಡ ತಾಯಿ' ಕೃತಿಯಲ್ಲಿ ಕನ್ನಡ ನಾಡು, ನುಡಿಗೆ ಸಂಬಂಧಿಸದಂತೆ ಮತ್ತು ಕನ್ನಡದ ತಾಯಂದಿರ ಜೀವನ ಚಿತ್ರ ನೀಡುವ ಲೇಖನಗಳಿವೆ. ಆ ಮಹಿಳೆಯರ ಬಾಳಿನ ಹಿರಿಮೆಯಿಂದ 'ನಿರ್ಬಲರಾದ ನಾವು ಸಬಲರಾಗಬಹುದು' ಎಂಬ ಆಶಯದಿಂದ ಕಟ್ಟಿಕೊಟ್ಟ ಈ ಹಿರಿಯ ಚೇತನಗಳ ಗರಿಮೆ ಕನ್ನಡಿಗರಿಗೆ ಅದರಲ್ಲೂ ಮಹಿಳೆಯರಿಗೆ ಮಾದರಿಯಾಗಿವೆ. ಇಲ್ಲಿ ವ್ಯಕ್ತಿ ಜೀವನ ಕೇಂದ್ರವಾಗಿದ್ದರೂ ಬದುಕಿನ ಶ್ರೇಷ್ಠ ಮೌಲ್ಯಗಳಾದ ರಾಷ್ಟ್ರಪ್ರೇಮ, ರಾಷ್ಟ್ರಸೇವೆ, ತ್ಯಾಗಗಳನ್ನು ಎತ್ತಿ ಹಿಡಿಯಲಾಗಿದೆ. ಕನ್ನಡನಾಡಿನ ಪ್ರಾಚೀನತೆ, ಅದರ ಮೇಲ್ಮೆ, ಸಾಧನೆ, ಏರಿಳಿತಗಳ ಪರಿಚಯ ಇಲ್ಲಿರುವುದು ಪುಸ್ತಕದ ಮಹತ್ವವನ್ನು ಹೆಚ್ಚಿಸಿದೆ. ಅವರ 'ಜನನೀ ಜನ್ಮ ಭೂಮಿಶ್ಚ' ಸಂಕಲನದಲ್ಲೂ ಇದೇ ಬಗೆಯ ಲೇಖನಗಳಿವೆ. ಶಾಂತಾದೇವಿಯವರು ನಾಡುನುಡಿಗೆ ಸಂಬಂಧಿಸಿದಂತೆ ಬರೆದ ಲೇಖನಗಳನ್ನಾಯ್ದು ಕನ್ನಡ ಸಾಹಿತ್ಯ ಪರಿಷತ್ತು 1998ರಲ್ಲಿ 'ಹಚ್ಚೇವು ಕನ್ನಡದ ದೀಪ' ಹೆಸರಿನಲ್ಲಿ ಪ್ರಕಟಿಸಿದೆ.

ಚಿಕ್ಕಂದಿನಿಂದಲೂ ಶಾಂತಾದೇವಿಯವರಿಗೆ ಅಡಿಗೆ, ಹೊಲಿಗೆ, ಹೆಣಿಕೆ, ಗೃಹಾಲಂಕಾರಗಳಲ್ಲಿ ಆಸಕ್ತಿ ಬಹಳ. ಅಜ್ಜಿ, ಚಿಕ್ಕಮ್ಮರಿಂದ ಕಲಿತದ್ದಷ್ಟೇ ಅಲ್ಲ, ಹಿಂದೀ, ಇಂಗ್ಲೀಷ್ ಪತ್ರಿಕೆಗಳಲ್ಲಿ ಈ ಬಗ್ಗೆ ಬಂದ ಹೊಸ ವಿಷಯಗಳನ್ನು ಓದಿ ತಿಳಿದು ಸ್ವತಃ ಪ್ರಯೋಗಿಸುವುದು ಅವರ ಹವ್ಯಾಸವಾಗಿತ್ತು. ಆಗ ಕನ್ನಡದಲ್ಲಿ ಮಹಿಳೆಯರಿಗಾಗಿ ಪತ್ರಿಕೆಗಳೂ ಇರಲಿಲ್ಲ. ಈ ಕೊರತೆಯನ್ನು ಲಕ್ಷಿಸಿದ ಶಾಂತಾದೇವಿಯವರು ಮಹಿಳೆಯರಿಗೆ ಗೃಹಕೃತ್ಯಗಳಲ್ಲಿ ಉಪಯುಕ್ತವೆನಿಸುವ ವಿಷಯಗಳನ್ನು ಆಧರಿಸಿ 'ಸೊಬಗಿನ ಮನೆ', 'ವಧುವಿಗೆ ಉಡುಗೊರೆ', 'ರಸಪಾಕ'ದಂತಹ ಕೃತಿಗಳನ್ನು ರಚಿಸಿದರು. ಅವು ತುಂಬ ಜನಪ್ರಿಯವಾಗಿದ್ದು ಈಗಲೂ ಮರು ಮುದ್ರಣಗೊಳ್ಳುತ್ತಲಿವೆ.

ಮಹಿಳೆಯರ ಅಲಂಕಾರವೂ ಶಾಂತಾದೇವಿಯವರ ಆಸ್ಥೆಯ ವಿಷಯ. ಶಿಲ್ಪಕಲಾ ವೈಭವದಲ್ಲಿ ಎದ್ದುಕಾಣುವ ಅಲಂಕಾರಗಳು ಇವರ ಮನ ಸೆಳೆದವು. ಅಲ್ಲದೆ ಪ್ರಾಚೀನ ಸಾಹಿತ್ಯದಲ್ಲಿಯ ಷೋಡಶಾಲಂಕಾರಗಳ ಬಗ್ಗೆ, ಇವರು

ವಿಷಯ ಸಂಗ್ರಹಿಸುತ್ತಲೇ ಇದ್ದರು. ಇದರಿಂದ 'ಮಹಿಳೆಯರ ಅಲಂಕಾರ' ಪುಸ್ತಕ ಹೊರಬಂದಿತು. ಇದರಲ್ಲಿ ಕೇಶಾಲಂಕಾರ, ಆಭರಣಗಳ ಅಂದ, ಸೀರೆಯ ಸೊಬಗು ಎಂದು ಮಹಿಳಾಲಂಕಾರವನ್ನು ವಿಂಗಡಿಸಿ ವಿವೇಚಿಸ ಲಾಗಿದೆ. ನಿರೂಪಣೆಯಿಂದಾಗಿ ಇದು ಲಲಿತ ಸಾಹಿತ್ಯವೆನ್ನಿಸಿದರೂ ವಸ್ತು ವಿಷಯ ಪ್ರತಿಪಾದನೆಯ ದೃಷ್ಟಿಯಿಂದ ಸಂಶೋಧನೆಯ ಹೆಚ್ಚಳವನ್ನು ಹೊಂದಿದೆ.

ಶಾಂತಾದೇವಿಯವರ ಅಧ್ಯಯನದ ಹರಹು ವಚನ ಸಾಹಿತ್ಯವನ್ನು ವ್ಯಾಪಿಸಿದಾಗ ಅದು ಅವರ ಮನಸ್ಸಿನ ಮೇಲೆ ಬಹಳ ಪ್ರಭಾವ ಬೀರಿತು. ಅದರ ಫಲವಾಗಿ 'ಬಸವ ಪ್ರಕಾಶ' ಕಾದಂಬರಿಯ ರಚನೆಯಾಯಿತು. ಪುರಾಣದ ಪವಾಡಗಳನ್ನು ಒಪ್ಪದ ಶಾಂತಾದೇವಿಯವರು ಬಸವಣ್ಣನವರ ಆತ್ಮಶಕ್ತಿಯ ಪ್ರಭಾವದಿಂದ ಸಾವಿರಾರು ಜನರ ಹೃದಯ ಪರಿವರ್ತನೆ ಹೊಂದಿರುವುದೇ ಪವಾಡ ಎಂಬಂತೆ ವಿರಳ ಚಾರಿತ್ರಿಕ ವ್ಯಕ್ತಿಯಾದ ಬಸವಣ್ಣನ ಬದುಕನ್ನು ಚಿತ್ರಿಸಿದ್ದಾರೆ. ಅವನ ಆಂತರಿಕ ತುಡಿತ, ಕಳವಳ, ಮಾನವೀಯ ಸಂಬಂಧಗಳ ಸೂಕ್ಷ್ಮತೆ, ಸಾಮಾಜಿಕ ಕಾಳಜಿ ಹಾಗೂ ಬಸವಣ್ಣ - ಧರ್ಮ ಸಮಾಜಗಳ ನಡುವಣ ಸಂಬಂಧಗಳನ್ನು ಗುರುತಿಸುವ ಮಹತ್ವದ ಪ್ರಯತ್ನ ಈ ಕಾದಂಬರಿಯಲ್ಲಿದೆ.

ಪ್ರವಾಸ ಸಾಹಿತ್ಯಕ್ಕೂ ಶಾಂತಾದೇವಿಯವರ ಕೊಡುಗೆ ಸಂದಿದೆ. ಮಾಳವಾಡರೊಂದಿಗೆ ಅಖಿಲ ಭಾರತ ಪ್ರವಾಸ ಮಾಡುವ ಅವಕಾಶ ದೊರೆತದ್ದನ್ನೂ ಬಳಸಿಕೊಂಡು ಕನ್ಯಾಕುಮಾರಿಯಿಂದ ಕಾಶ್ಮೀರದ ವರೆಗಿನ ಪ್ರವಾಸದ ಅನುಭವವನ್ನು 'ಶ್ರೀಗಿರಿಯಿಂದ ಹಿಮಗಿರಿಗೆ' ಪುಸ್ತಕದಲ್ಲಿ ದಾಖಲಿಸಿದ್ದಾರೆ.

ಮಹಿಳೆಯರಿಗಾಗಿ ಶಾಂತಾದೇವಿಯವರು ಬರೆದ ಪುಸ್ತಕಗಳಲ್ಲಿ ಮಹತ್ವದ ಕೃತಿಗಳೆಂದರೆ 'ದಾಂಪತ್ಯ ಯೋಗ', 'ಮಹಿಳೆಯರ ಆತ್ಮಶ್ರೀ, ಮತ್ತು ಮಹಿಳಾ ಚೇತನ' ಇವು ವಿಭಿನ್ನಸ್ತರದ ಮಹಿಳೆಯರಿಗೆ ರುಚಿಸು ವಂತಿವೆ. ಸ್ವತಃ ಮಹಿಳೆಯಾಗಿರುವುದರಿಂದಲೂ ದಾಂಪತ್ಯದ ಹಿರಿಯ ಅನುಭವಿ ಯಾಗಿದ್ದರಿಂದಲೂ ಅವೆಲ್ಲ ಈ ಪುಸ್ತಕದಲ್ಲಿ ಹರಳುಗಟ್ಟಿವೆ. ನಮ್ಮ ಸಂಸ್ಕೃತಿಯ ಹಿನ್ನಲೆಯಲ್ಲಿ ಮಹಿಳೆ ತನ್ನ ದಾಂಪತ್ಯದಲ್ಲಿ ಹೇಗೆ ಅನುಸರಿಸಿ ಕೊಂಡು ಹೋಗಬೇಕು ಎನ್ನುವುದು ಹರ -ಗಿರಿಜೆ, ದಾಸ - ದುಗ್ಗಳೆ, ಬಸವಣ್ಣ - ನೀಲಾಂಬಿಕೆ, ಮಾದಯ್ಯ - ಮಹಾದೇವಿ ಮತ್ತು ಬಾ - ಬಾಪೂ ಅವರ ದಾಂಪತ್ಯ ಜೀವನದ ಮಾದರಿಗಳೊಂದಿಗೆ ಮನಂಬುಗುವಂತೆ ಇಲ್ಲಿ ವಿಷದೀ ಕರಿಸಿದ್ದಾರೆ. ದಂಪತಿಗಳು ಒಬ್ಬರಿಗೊಬ್ಬರು ಪ್ರತಿಸ್ಪರ್ಧಿಗಳಾಗದೇ ಪರಸ್ಪರ ಅರ್ಥ ಮಾಡಿಕೊಂಡು, ಸಂಗಾತಿಗಳಾಗಿ ಬಾಳುವುದೇ 'ದಾಂಪತ್ಯ ಯೋಗ' ಎಂದು ಶಾಂತಾದೇವಿ ವ್ಯಾಖ್ಯಾನಿಸಿದ್ದಾರೆ. ಅವರ ಬದುಕೂ ಅದಕ್ಕೆ ಸಾಕ್ಷಿ ಯಾಗಿರುವುದನ್ನು ನೋಡಬಹುದು. 'ಮಹಿಳೆಯರ ಆತ್ಮಶ್ರೀ' ಯಲ್ಲಿ ವೇದಕಾಲದ ಮಹಿಳೆಯರ ಆತ್ಮೋನ್ನತಿಯ ಹಿರಿಮೆ, ಪುರಾಣ ಕಾಲದಲ್ಲಿ ಮಹಿಳೆಯರ ಔನ್ನತ್ಯ, ಮುಂದಿನ ಯುಗಗಳಲ್ಲಿ ಅವರಿಗೆ ದೊರೆತ ಶೂದ್ರತ್ವ, ಬಸವಯುಗದಲ್ಲಿ ಶಿವಶರಣೆಯರಿಗೆ ಸಾಧ್ಯವಾದ ಉಜ್ವಲ ಬದುಕು, ಅದೇ ನಮ್ಮೆಲ್ಲ ಮಹಿಳೆಯರಿಗೆ ಆದರ್ಶದ ನೆಲೆಯಾಗಬೇಕಿರುವುದನ್ನು ಶಾಂತಾದೇವಿ ಇಲ್ಲಿ ಸ್ಪಷ್ಟಪಡಿಸುತ್ತಾರೆ.

ಇವರ 'ಮಹಿಳಾ ಚೇತನ' ಒಂದು ವಿಶಿಷ್ಟ ಕೊಡುಗೆ ಜಗತ್ತಿನಾದ್ಯಂತ ಮಹಿಳಾ ವರ್ಷವನ್ನು ಆಚರಿಸಿದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಇದನ್ನು ಪ್ರಕಟಿಸಿದೆ. ಮಹಿಳೆಯ ಆತ್ಮಶ್ರೀಯ ಓಜಸ್ಸನ್ನು ಎತ್ತಿ ಹೇಳುವುದೇ ಈ ಕೃತಿಯ ಆಶಯವಾಗಿದೆ. ಮಹಿಳಾ ವರ್ಷದ ಉದ್ದೇಶವು ಮಹಿಳಾ ಸಮಾನತೆ, ಸಮಗ್ರತೆ ಹಾಗೂ ಜಾಗತಿಕ ಶಾಂತಿಯನ್ನು ಸಾಧಿಸುವುದಾಗಿದೆ. ಭಾರತೀಯ ಸಂವಿಧಾನದಲ್ಲಿ ದೊರೆತ ಮಹಿಳಾ ಸಮಾನಾಧಿಕಾರ ವಾಸ್ತವ ದಲ್ಲಿ ಸಾಧ್ಯವಾಗದಿರುವುದಕ್ಕೆ ಕೇವಲ ಪುರುಷ ಮಾತ್ರ ಕಾರಣವಾಗಿರದೇ ಮಹಿಳೆಯರಲ್ಲಿ ಶತಮಾನಗಳಿಂದ ಬೆಳೆದುಬಂದ ಕೀಳರಿಮೆ, ಭ್ರಾಂತಿಗಳೂ ಕಾರಣವಾಗಿವೆ. ಅಂಥ ಭ್ರಾಂತಿಗೆ ಮೂಲವಾದ ಅಜ್ಞಾನ, ಮೂಢನಂಬಿಕೆ, ನಿರಕ್ಷರತೆಗಳನ್ನು ತೊಡೆದು ಹಾಕಿ ಮಹಿಳಾ ಚೇತನ ಜಾಗೃತಗೊಳ್ಳುವ ಅಗತ್ಯವಿದೆ ಎಂದು ಶಾಂತಾದೇವಿ ಪ್ರತಿಪಾದಿಸುತ್ತಾರೆ. ಭಾರತೀಯ ಮಹಿಳೆಯಲ್ಲಿರುವ ಅಂತಃಶಕ್ತಿ ಚೈತನ್ಯಭರಿತವಾಗಿದ್ದು ರಾಷ್ಟ್ರೀಯ ಶೀಲ ಸಂವರ್ಧನೆ ಮನೆಯಿಂದಲೇ ಆರಂಭಗೊಳ್ಳುವ ಅಗತ್ಯವಿದೆ. ಸ್ತ್ರೀ ಪುರುಷ ರಿಬ್ಬರೂ ಪರಸ್ಪರರಿಗೆ ಪೋಷಕ ಶಕ್ತಿಗಳಾಗಬೇಕು ಎಂಬ ಆಶಾದಾಯಕ ಸಂದೇಶವನ್ನು ಶಾಂತಾದೇವಿ ಈ ಕೃತಿಯ ಮೂಲಕ ನೀಡಿದ್ದಾರೆ.

ಮಹಿಳೆಯರ ಸಾಧನೆಗಳೊಂದಿಗೆ ಅವರ ಸಮಸ್ಯೆ - ಪರಿಹಾರ ಹಾಗೂ ಸಾಮಾಜಿಕ ಬದುಕಿನಲ್ಲಿ ಮಹಿಳೆಯ ಸ್ಥಿತಿಗತಿಗಳನ್ನು ಕುರಿತು ರಚಿಸಿದ ಚಿಂತನಶೀಲ ಲೇಖನಗಳ ಸಂಗ್ರಹ 'ಸಮುಚ್ಚಯ'ದಲ್ಲಿ ಶಾಂತಾದೇವಿಯವರ ಸಮತೋಲನ ದೃಷ್ಟಿ, ಸ್ವಸ್ಥ ಮನೋಭಾವ ಸ್ಪಷ್ಟಗೋಚರವಾಗಿವೆ. 'ಸಾರ್ವಜನಿಕ ರಂಗದಲ್ಲಿ ಮಹಿಳೆ' ಪುಸ್ತಕದಲ್ಲಿ ಅವರು ಪ್ರಾಚೀನ ಕಾಲ ದಿಂದಲೂ ಇವತ್ತಿನವರೆಗಿನ ಮಹಿಳಾ ಆಂದೋಲನದ ಇತಿಹಾಸವನ್ನು ಜೊತೆಗೆ ಇಂದಿನ ಮಹಿಳೆಯ ತುಡಿತ ಮಿಡಿತಗಳನ್ನು ವಿವೇಚಿಸಿದ್ದಾರೆ.

ವಿದೇಶಗಳಲ್ಲಿ ಹುಟ್ಟಿದರೂ ಭಾರತೀಯ ಸಾಂಸ್ಕೃತಿಕ ಪರಂಪರೆ ಹಾಗೂ ಆಧ್ಯಾತ್ಮಿಕ ಶ್ರೀಮಂತಿಕೆಗೆ ಮಾರುಹೋದ ಐವರು ಮಹಿಳೆಯರು ಭಾರತ ವನ್ನು ತಮ್ಮ ಕರ್ಮಭೂಮಿಯಾಗಿಸಿಕೊಂಡು ಬಾಳು ಬೆಳಗಿದ ಜೀವನ - ಸಾಧನೆಗಳ ಚರಿತ್ರೆಗಳನ್ನು ಒಳಗೊಂಡ ಕೃತಿ 'ಭಾರತದ ಮಾನಸ ಪುತ್ರಿಯರು' ಶಾಂತಾದೇವಿಯವರ ಮಹತ್ವದ ಕೊಡುಗೆ ಎಂದರೆ - ತಮ್ಮ ಪತಿ ಬರೆಯ ಲಾರಂಭಿಸಿದ್ದ ಆತ್ಮಚರಿತ್ರೆ 'ದಾರಿಸಾಗಿದೆ' ಅವರ ಆಕಸ್ಮಿಕ ಮರಣದಿಂದ ಅರ್ಧದಲ್ಲೇ ಉಳಿದಾಗ ಅದನ್ನು ಪೂರ್ಣಗೊಳಿಸಿದ್ದು.

ಮಹಿಳೆಯರ ಬಗೆಗೆ ಚಿಂತಿಸುವವರು ಮಕ್ಕಳ ಏಳಿಗೆಯ ಬಗೆಗೂ ಆಲೋಚಿಸುವುದು ಸ್ವಾಭಾವಿಕ. ಅಂತೆಯೇ ನಾಳಿನ ಭಾರತದ ಸಮರ್ಥ ನಾಗರಿಕರಾಗುವಂತೆ ಎಳೆಯರ ಮನಸ್ಸನ್ನು ರೂಪಿಸಲು ಅವರಿಗಾಗಿ ನಾಗಲಾಂಬಿಕೆ, ಕೆಳದಿ ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ನೀಲಾಂಬಿಕೆ, ಕುಟುಂಬ - ಈ ಐದು ಪುಸ್ತಿಕೆಗಳನ್ನು ಶಾಂತಾದೇವಿ ರಚಿಸಿದ್ದಾರೆ. ನಮ್ಮ ಪ್ರಾಚೀನ ಸಂಸ್ಕೃತಿಯ ಉದಾತ್ತ ಮೌಲ್ಯಗಳನ್ನು ಎತ್ತಿ ಹಿಡಿಯುವ ಈ ಕೃತಿಗಳು ಮಕ್ಕಳ ಚೇತನವನ್ನು ಜಾಗೃತಗೊಳಿಸಿ ಅವರಲ್ಲಿ ಸರಳತೆ, ರಾಷ್ಟ್ರಾಭಿ ಮಾನ, ತ್ಯಾಗ, ಕರ್ತವ್ಯಪಾಲನೆಯಂಥ ಉತ್ಕೃಷ್ಟ ತತ್ವಗಳನ್ನು ಬಿಂಬಿಸಲು ಯತ್ನಿಸುತ್ತವೆ.

1998ರಲ್ಲಿ ಪ್ರಕಟಗೊಂಡ 'ಶೂರರಾಣಿ ಕೆಳದಿಯ ಚೆನ್ನಮ್ಮಾಜಿ' ಶಾಂತಾದೇವಿಯವರ ಮಹತ್ವಾಕಾಂಕ್ಷೆಯ ಕೃತಿಯಾಗಿದೆ. ಕಾದಂಬರಿ ರೂಪದ ಈ ಕೃತಿಯಲ್ಲಿ ಅವರ ಅಧ್ಯಯನಶೀಲತೆ, ಬದುಕಿನ ಅನುಭವ ಮತ್ತು ಅನುಭವಗಳು ಸುಂದರವಾಗಿ ಮಿಳಿತಗೊಂಡಿವೆ. ವ್ಯಕ್ತಿಯ ಸಂಸ್ಕಾರ ಹಾಗೂ ವ್ಯಕ್ತಿತ್ವ ನಿರ್ಮಾಣಗಳಿಗೆ ಪ್ರಾಶಸ್ತ್ಯ ನೀಡಬಲ್ಲ ಉತ್ತಮ ಕೃತಿಗಳ ಕೊರತೆ

ಎದ್ದುಕಾಣುತ್ತಿರುವ ಇಂದಿನ ದಿನಗಳಲ್ಲಿ ಈ ಕೃತಿಗೆ ವಿಶಿಷ್ಟ ಸ್ಥಾನವಿದೆ. ನಮ್ಮ ಕನ್ನಡ ನಾಡು, ಸಂಸ್ಕೃತಿ, ಸಂಪ್ರದಾಯಗಳ ಅರಿವಿಗೆ ಹಾಗೂ ಉಳಿವಿಗೆ ಇಂಥ ಕೃತಿಗಳ ಅಗತ್ಯವಿದೆ. ಸುಮಾರು ಇಪ್ಪತ್ತೈದು ವರ್ಷಗಳಿಂದ ಕೆಳದಿ ಚೆನ್ನಮ್ಮನ ಬಗ್ಗೆ ಧೇನಿಸುತ್ತ ಅವಳನ್ನು ಕುರಿತು ಒಂದು ಉದ್ಗ್ರಂಥವನ್ನೇ ಬರೆಯಬೇಕೆಂಬ ಅಭೀಪ್ಸೆ ಹೊಂದಿದ್ದ ಶಾಂತಾದೇವಿಯವರು ಕೆಳದಿಯ ಇತಿಹಾಸಕ್ಕೆ ಸಂಬಂಧಿಸಿದ ಸಾಹಿತ್ಯ, ಶಾಸನ, ವಿದೇಶಿ ಬರೆಹ, ಕೈಫಿಯತ್ತು ಇತ್ಯಾದಿಗಳನ್ನೆಲ್ಲ ಸಂಶೋಧನೆಯ ನಿಷ್ಠೆಯಿಂದ ಪರಿಶೀಲಿಸಿದ್ದಾರೆ. ಸ್ವತಃ ಕ್ಷೇತ್ರ ಕಾರ್ಯ ಕೈಕೊಂಡು ಹಲವಾರು ಐತಿಹಾಸಿಕ ಸ್ಥಳಗಳಿಗೆ ಭೇಟಿ ಇತ್ತು ವಿದ್ವಾಂಸರೊಂದಿಗೆ ಚರ್ಚಿಸಿ ತಮ್ಮ ಕಲ್ಪಕತೆಯನ್ನು ಇತಿಹಾಸದೊಂದಿಗೆ ಮೇಳವಿಸಿ ಈ ಕೃತಿಯನ್ನು ರಚಿಸಿದ್ದಾರೆ. ಚೆನ್ನಮ್ಮನ ಬಾಲ್ಯ, ಯೌವನ, ವೈವಾಹಿಕ ಬದುಕು, ತವರು ಹಾಗೂ ಗಂಡನ ಮನೆಯ ಪರಿಸರ, ಸಂಪ್ರದಾಯ, ಸಂಸ್ಕಾರಗಳು ಮುಂತಾದ ವರ್ಣನೆಗಳೊಂದಿಗೆ ಅವಳ ಶೌರ್ಯ, ಪರಾಕ್ರಮ, ಆಡಳಿತ ರೀತಿ, ತಂತ್ರಗಾರಿಕೆ, ರಾಜ್ಯವ್ಯವಸ್ಥೆ, ಮುಂತಾದ ವಿವರಗಳು ಲಭ್ಯವಿದೆ. ಚೆನ್ನಮ್ಮನ ಪ್ರಜಾವಾತ್ಸಲ್ಯ, ರಾಜ್ಯ ರಕ್ಷಣೆ, ಯುದ್ಧನೀತಿ, ವಿದೇಶಿ ವ್ಯಾಪಾರ-ವಹಿವಾಟು ಪರಿಸರ ಸಂರಕ್ಷಣೆ, ಆರ್ಥಿಕ ವ್ಯವಸ್ಥೆ, ನ್ಯಾಯ ಪದ್ಧತಿಗಳಂಥ ಸಂಕೀರ್ಣ ವಿಷಯಗಳನ್ನೂ ಶಾಂತಾದೇವಿಯವರು ಸುಲಲಿತ ಶೈಲಿಯಲ್ಲಿ ವಿಶದೀಕರಿಸಿದ್ದಾರೆ. ಸಾಂಪ್ರದಾಯಿಕವಾದ ಭಕ್ಷ್ಯಭೋಜನ, ಶೃಂಗಾರ ಪ್ರಸಾಧನ, ಆಭರಣ, ವೇಶಭೂಷಣ ಮದುವೆಯಂಥ ಪ್ರಸಂಗಗಳ ವಿಧಿವತ್ತಾದ ವರ್ಣನೆಯಲ್ಲಂತೂ ಅವರು ಸಿದ್ಧಹಸ್ತರೆಂಬುದನ್ನು ಬೇರೆ ಹೇಳಬೇಕಿಲ್ಲ. ಈ ಕೃತಿಯಲ್ಲೂ ಹಿಂದಿನ ಎಲ್ಲ ಕೃತಿ ರಚನೆಯಲ್ಲಿಯ ಅನುಭವ, ಜ್ಞಾನಗಳು ಹರಳುಗಟ್ಟಿದ್ದು ಸ್ಪಷ್ಟವಿದೆ. ಇದು ಅವರ ಹಲವು ವರ್ಷಗಳ ತಪಸ್ಸಿನ ಫಲವೆಂದು ಹೇಳಿದರೆ ಅತಿಶಯೋಕ್ತಿಯಾಗದು.

ಶಾಂತಾದೇವಿ ಮಾಳವಾಡರು ತಮ್ಮ ಸಾಹಿತ್ಯ ಕೃಷಿ ಆರಂಭಿಸಿದಾಗ ಹೆಚ್ಚಿನ ಮಹಿಳೆಯರು ಬರವಣಿಗೆಯಲ್ಲಿ ತೊಡಗಿರಲಿಲ್ಲ. ಉತ್ತರ ಕರ್ನಾಟಕದಲ್ಲಿಯಂತೂ ಬೆರಳಣಿಕೆಯಲ್ಲಿ ಮಾತ್ರವಿದ್ದರು. ಅವರನ್ನು 'ಲೇಖಕಿ' ಎಂದೂ ಗುರುತಿಸಲಾಗಿರಲಿಲ್ಲ. ಸಾಮಾನ್ಯವಾಗಿ ಪ್ರಾರಂಭಿಕ ಕಾರ್ಯದಲ್ಲಿ ತೊಡಗಿದಾಗ ಎದುರಾಗುವ ತೊಡಕುಗಳನ್ನು ಈ ದಿಸೆಯಲ್ಲಿ ಶಾಂತಾದೇವಿಯವರು ಅನುಭವಿಸಬೇಕಾಯಿತು. 'ಮಾಳವಾಡರೇ ಬರೆದು ಇವರ ಹೆಸರು ಹಾಕುತ್ತಾರೆ' ಎನ್ನುವಂಥ ಅಪವಾದಕ್ಕೂ ಗುರಿಯಾಗಬೇಕಾಯಿತು. ದೊಡ್ಡ ಮರದ ಕೆಳಗೆ ಬೇರೆ ಗಿಡಗಳು ಬೆಳೆಯುವುದಿಲ್ಲ ಎನ್ನುವ ಮಾತನ್ನು ಇವರು ಸುಳ್ಳಾಗಿಸಿ ತಾವೇ ತಮ್ಮ ಎತ್ತರವನ್ನು ಸಾಧಿಸಿದರಲ್ಲದೇ ಬೆಳೆಯುವ ಇಚ್ಛೆ ಪ್ರಬಲವಾಗಿದ್ದರೆ ಏನೆಲ್ಲ ಸಾಧ್ಯ ಎಂಬುದಕ್ಕೆ ಸಾಕ್ಷಿಯಾದರು.

ಶಾಂತಾದೇವಿಯವರ ಆಳವಾದ ಓದು, ವಿಪುಲವಾದ ಲೋಕಾನುಭವ, ವ್ಯಾಪಕವಾದ ಸಂಚಾರ ಬಾಗೂ ಪಕ್ವವಾದ ಮನುಸ್ಸು ಅವರ ಬರಹಕ್ಕೆ ಲಾಲಿತ್ಯವನ್ನೂ ಪ್ರೌಢಿಮೆಯನ್ನೂ ತಂದುಕೊಟ್ಟಿವೆ. ಅಚ್ಚಗನ್ನಡದ ಅವರ ಶೈಲಿ ಅಪ್ಯಾಯಮಾನವಾದುದು. ಸರಳ ಭಾಷೆ, ನೇರ ಅಭಿವ್ಯಕ್ತಿ. ಸ್ಪಷ್ಟತೆಗಳು, ಅವರ ಬರವಣಿಗೆಯ ಗುಣಾತ್ಮಕ ಅಂಶಗಳು, ಕ್ಲಿಷ್ಟ ವಿಷಯಗಳನ್ನು ಸಹ ಸರಳೀಕರಿಸಿ ಹೇಳುವುದೇ ಅವರ ವೈಶಿಷ್ಟ್ಯ. ಅವರು ತಮ್ಮ ಲಲಿತವಹ ಕನ್ನಡದ ಸೊಬಗು, ಸುಭಗತೆಯಿಂದಲೇ ಸಹೃದಯರಿಗೆ ಆಪ್ತರಾಗಿದ್ದಾರೆ.

ಅವರ ಕೆಲವು ಪುಸ್ತಕಗಳು ಪಠ್ಯಪುಸ್ತಕಗಳಾಗಿಯೂ ಮಾನ್ಯತೆ ಪಡೆದಿವೆ. 'ಕನ್ನಡದ ತಾಯಿ' ಮೂರನೆಯ ಆವೃತ್ತಿ ಕಂಡ ಪಠ್ಯ. ಕಳೆದ ಹತ್ತಾರು ವರ್ಷಗಳಿಂದ ಮಹಾರಾಷ್ಟ್ರದ ಪಠ್ಯಪುಸ್ತಕಗಳಲ್ಲಿ ಈ ಪುಸ್ತಕದ ಒಂದಿಲ್ಲೊಂದು ಲೇಖನ ಸೇರ್ಪಡೆಗೊಳ್ಳುತ್ತಲೇ ಇದೆ. ಕೇರಳದ ಪಠ್ಯಪುಸ್ತಕದಲ್ಲೂ ಇಲ್ಲಿಯ ಲೇಖನ ಆಯ್ಕೆಗೊಂಡಿತ್ತು. 'ಶ್ರೀಗಿರಿಯಿಂದ ಹಿಮಗಿರಿಗೆ' ಪ್ರವಾಸ ಕಥನವೂ ಪಠ್ಯವಾಗಿ ಮೂರನೆಯ ಆವೃತ್ತಿ ಕಂಡಿದೆ.

ತಾವು ಬರವಣಿಗೆಗೆ ಆಯ್ದುಕೊಳ್ಳುವ ವಿಷಯ ಸಮಾಜಕ್ಕೆ ಉಪಯುಕ್ತವಾಗಿರಬೇಕು ಎನ್ನುವ ಧೋರಣೆ ಅವರದು. ಸ್ತ್ರೀಯರ ಉನ್ನತಿಯ ಬಗ್ಗೆ ಅವರಿಗೆ ಅಪಾರ ಕಳಕಳಿ ಇದೆ. ಹಿಂದಿನ ಕಾಲದಲ್ಲಿ ಮಹಿಳೆಗೆ ಸಲ್ಲುತ್ತಿದ್ದ ಮರ್ಯಾದೆ, ಗೌರವ ಮತ್ತು ಇಂದಿನ ಅವಳ ಪರಿಸ್ಥಿತಿಗಳ ತುಲನಾತ್ಮಕ ದೃಷ್ಟಿಯಿಂದಾಗಿ ಅವರು ಸ್ತ್ರೀಯರ ಬಗ್ಗೆ ಪ್ರಗತಿಪರ ವಿಚಾರ ರೂಢಿಸಿಕೊಂಡರು. ಮಹಿಳೆಯರಿಗಾಗಿಯೇ ಕೆಲವು ಉಪಯುಕ್ತ ಕೃತಿಗಳನ್ನು ರಚಿಸಿದರು. ಮಹಿಳಾ ಜಾಗೃತಿಯ ಸಂದರ್ಭದಲ್ಲಿ ಇವರ ಸಾಹಿತ್ಯಿಕ ಕೊಡುಗೆ, ಸಾಮಾಜಿಕ ಸೇವೆಗಳು ಮಹತ್ವದ್ದಾಗುತ್ತವೆ.

ಸೃಜನಶೀಲ ಪ್ರಯತ್ನದೊಂದಿಗೆ ಆರಂಭಗೊಂಡ ಅವರ ಬರವಣಿಗೆ ಗಂಭೀರ ವೈಚಾರಿಕ ಚಿಂತನೆಗಳನ್ನು ಒಳಗೊಂಡ ಪ್ರೌಢತೆಗೆ ಚಾಚಿಕೊಂಡಿದೆ. ಅಲ್ಲದೆ ಸಾಮಾನ್ಯ ಓದುಗರಿಗೂ, ಮಕ್ಕಳಿಗೂ ಉಪಯುಕ್ತವಾಗಬಲ್ಲ ವಿವಿಧ ವಿಷಯಗಳನ್ನು ಕುರಿತು ಪರಿಚಯಾತ್ಮಕ ಪುಸ್ತಿಕೆಗಳನ್ನೂ ಇವರು ಹೊರ ತಂದಿದ್ದಾರೆ.

ಶಾಂತಾದೇವಿಯವರ ವಿಷಯ ಸಂಗ್ರಹಣೆ, ಅವುಗಳನ್ನು ಸೂತ್ರಬದ್ಧವಾಗಿ ಹೆಣೆಯುವ ಕೌಶಲ, ಸಾಂದರ್ಭಿಕ ಉದಾಹರಣೆಗಳನ್ನು ನೀಡಿ ಕೆಲವೊಮ್ಮೆ ಅವುಗಳಿಗೆ ಉಚಿತ ಹಿನ್ನೆಲೆಗಳನ್ನೂ ಒದಗಿಸುವಲ್ಲಿ ಅವರು ತೋರುವ ಜಾಣ್ಮೆ ಪ್ರಶಂಸನೀಯವಾಗಿದೆ.

ಇವರ ಸಾಹಿತ್ಯ ಸೇವೆಯನ್ನು ಗುರುತಿಸಿ ಕನ್ನಡ ನಾಡು, ವಿವಿಧ ಸಂಘಟನೆಗಳು ಇವರಿಗೆ ಹಲವು ಪ್ರಶಸ್ತಿ, ಗೌರವ, ಸನ್ಮಾನ ನೀಡಿ ಅಭಿನಂದಿಸಿವೆ. 1967ರಲ್ಲಿ ನಿಡುಮಾಮಿಡಿ ಜಗದ್ಗುರುಗಳು 'ಸಾಹಿತ್ಯಸುಮ' ಪ್ರಶಸ್ತಿಯೊಂದಿಗೆ ಚಿನ್ನದ ಪದಕವನ್ನಿತ್ತು ಗೌರವಿಸಿದರು. 1975 ಮಹಿಳಾ ವರ್ಷದಲ್ಲಿ ಹುಬ್ಬಳ್ಳಿ ಲಯನ್ಸ ರೋಟರಿ ಕ್ಲಬ್ ಹಾಗೂ ಧಾರವಾಡ ಜಿಲ್ಲಾ ಸಾಹಿತ್ಯ ಪರಿಷತ್ತಿನಿಂದ ಇವರಿಗೆ ಸನ್ಮಾನ ಸಂದಿವೆ.

1977ರಲ್ಲಿ ಇವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆಯಿತು. ಇವರು 1973ರಿಂದ 1978ರವರೆಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಕನ್ನಡ ಸಲಹಾ ಸಮಿತಿಯ ಸದಸ್ಯೆಯಾಗಿಯೂ, 1979ರಲ್ಲಿ ಸಾಹಿತ್ಯ ಅಕಾಡೆಮಿಯ ಸದಸ್ಯೆಯಾಗಿಯೂ ಗೌರವಕ್ಕೆ ಪಾತ್ರರಾಗಿದ್ದಾರೆ. 1980ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನದಲ್ಲಿ ಇವರನ್ನು ಸತ್ಕರಿಸಿದೆ.

1982ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ಪಡೆದ ಶಾಂತಾದೇವಿಯವರಿಗೆ ಅದೇ ವರ್ಷ ಷಷ್ಟ್ಯಬ್ದಿ ವರ್ಷ, ಆಗ ಇವರನ್ನು ಸಾರ್ವಜನಿಕವಾಗಿ ಸನ್ಮಾನಿಸಿ 'ಪ್ರಶಾಂತ' ಅಭಿನಂದನ ಗ್ರಂಥವನ್ನು ಅರ್ಪಿಸಲಾಗಿದೆ.

ಅನೇಕ ಸಮ್ಮೇಳನಗಳಲ್ಲಿ ಭಾಗವಹಿಸಿದ ಶಾಂತಾದೇವಿಯವರು 1984ರಲ್ಲಿ ಧಾರವಾಡ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷೆ ಸ್ಥಾನದ ಗೌರವವನ್ನು ಪಡೆದಿದ್ದಾರೆ. 1993ರಲ್ಲಿ ಇವರು ಅಖಿಲ ಕರ್ನಾಟಕ

ಲೇಖಕಿಯರ ಮೂರನೇ ಸಮ್ಮೇಳನದ ಅಧ್ಯಕ್ಷರೂ ಆಗಿದ್ದರು. 1991ರಲ್ಲಿ ಇವರಿಗೆ ಸಾವಿತ್ರಮ್ಮ ದೇ.ಜ.ಗೌ. ಪ್ರಶಸ್ತಿ ಲಭಿಸಿದೆ.

1994ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ತನ್ನ ಅತ್ಯುನ್ನತ ಪ್ರಶಸ್ತಿಯಾದ ಗೌರವ ಸದಸ್ಯತ್ವವನ್ನು ಇವರಿಗೆ ನೀಡಿ ಗೌರವಿಸಿದೆ. ಈ ಗೌರವ ಸದಸ್ಯತ್ವವನ್ನು ಪಡೆದ ಮೊದಲ ಮಹಿಳೆ ಇವರಾಗಿದ್ದಾರೆ. ಇದೇ ಸಂದರ್ಭ ದಲ್ಲಿ ಇವರ ವಾಚಿಕೆಯನ್ನು ಪ್ರಕಟಿಸಿ ಇವರನ್ನು ಸನ್ಮಾನಿಸಿದೆ.

1996ರಲ್ಲಿ ಚಿತ್ರದುರ್ಗ ಬೃಹನ್ಮಠದ ಜಗದ್ಗುರುಗಳಿಂದ 'ಸಾಹಿತ್ಯ ರತ್ನ' ಪ್ರಶಸ್ತಿಯನ್ನು, 1997ರಲ್ಲಿ ಸ್ವರಲಿಪಿ ಪ್ರತಿಷ್ಠಾನದಿಂದ 'ಲಿಪಿಪ್ರಾಜ್ಞೆ' ಪ್ರಶಸ್ತಿಯನ್ನು ಇವರು ಪಡೆದಿದ್ದಾರೆ. ಉತ್ತರ ಕರ್ನಾಟಕ ಲೇಖಕಿಯರ ಸಂಘದ ಆಜೀವ ಗೌರವಾಧ್ಯಕ್ಷೆಯಾಗಿರುವ ಇವರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವವನ್ನು ಹೊಂದಿದ್ದಾರೆ.

ಕರ್ನಾಟಕ ಸರಕಾರದ ಅತ್ಯುಚ್ಚ ಪ್ರಶಸ್ತಿಯಾದ 'ಅತ್ತಿಮಬ್ಬೆ ಪ್ರಶಸ್ತಿ' 1997ರಲ್ಲಿ ಶಾಂತಾದೇವಿಯವರಿಗೆ ಸಂದಿದೆ. ಕರ್ನಾಟಕದ ಅನೇಕ ಸಾಹಿತ್ಯದ, ಸಾಂಸ್ಕೃತಿಕ ಸಂಸ್ಥೆಗಳಿಂದ ಇವರು ಸನ್ಮಾನ ಸ್ವೀಕರಿಸಿದ್ದಾರೆ.

ಇಂದಿನ ಸಾಹಿತ್ಯದೊಂದಿಗೆ ತುಲನೆಮಾಡಿದಾಗ ಅವರ ಎಲ್ಲ ಕೃತಿಗಳೂ ಅಷ್ಟು ಮಹತ್ವವೆನಿಸದಿರಬಹುದು. ಇಂದಿನ ವಿಮರ್ಶಾ ಮಾನದಂಡ ಬಯಸುವ ಎಲ್ಲ ಲಕ್ಷಣಗಳನ್ನು ಅಲ್ಲಿ ಕಾಣದಿರಬಹುದು. ಆದರೆ ಅಂದಿನ ಕಾಲದಲ್ಲಿ 40ರ ದಶಕದ ಆರಂಭದಲ್ಲಿ ಮಹಿಳೆ ಬರವಣಿಗೆಗೆ ತೊಡಗಿದ್ದೇ ಕೌತುಕದ ಸಂಗತಿಯಾಗಿದ್ದಾಗ ಅವರು ಬರೆಯತೊಡಗಿದ್ದು ಮಹತ್ವದ್ದು. ಅಲ್ಲದೆ ಆಯಾ ಕಾಲಗಳ ಮಹಿಳಾ ಚಳುವಳಿಗಳಿಗೆ ಸ್ಪಂದಿಸಿದ್ದು ಗಮನಾರ್ಹ ಅಂಶ. ಇತ್ತೀಚಿನ ಅವರ ಕಾದಂಬರಿ 'ಶೂರರಾಣಿ ಕೆಳದಿ ಚೆನ್ನಮ್ಮಾಜಿ'ಯಲ್ಲಿ ಅವರ ಆಳವಾದ ಹಾಗೂ ವಿಸ್ತಾರವಾದ ಜೀವನ ದೃಷ್ಟಿ ಶ್ಲಾಘನೀಯ ವಾಗಿದೆ.

ಸಾಹಿತ್ಯ ಪ್ರೀತಿ, ಸಾಮಾಜಿಕ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಆಸಕ್ತಿ, ಸಜ್ಜನರ ಸ್ನೇಹ ಜ್ಞಾನಾರ್ಜನೆಯ ಹಸಿವು, ಶಿವಶರಣರ ಮಾರ್ಗಾನುಸರಣೆ, ಅರವಿಂದಾಶ್ರಮದ ಸಂಪರ್ಕಗಳು ಶಾಂತಾದೇವಿ ಮಾಳವಾಡ ಅವರ ಬದುಕನ್ನು, ಸಾಹಿತ್ಯವನ್ನು ಹಸನುಗೊಳಿಸಿವೆ.

❑

## ಸು.ರಂ.ಎಕ್ಕುಂಡಿ

ಜಿ.ಎನ್.ಮೋಹನ್

ಸಹಜ ಕವಿ-ಕನ್ನಡ ಕಾವ್ಯಕ್ಕೆ ತನ್ನದೇ ಆದ ವಿಶಿಷ್ಟ ಸ್ಪರ್ಶವನ್ನು ನೀಡಿದ ಸುಬ್ಬಣ್ಣ ರಂಗನಾಥ ಎಕ್ಕುಂಡಿ ಅವರನ್ನು ಖ್ಯಾತ ಕವಿ ಪುತಿನ. ಅವರು ಬಣ್ಣಿಸಿದ್ದು ಹೀಗೆ.

ಎಕ್ಕುಂಡಿಯವರ ಬದುಕು, ಕಾವ್ಯ ಎಲ್ಲವೂ ಸಹಜ. ತಾಯಿ ಅಕಸ್ಮಾತ್ ಹಾಡಿದ ಒಂದು ಹಾಡಿನಿಂದ ಇಡೀ ಜಗತ್ತನ್ನು ನೋಡುವ ಒಂದು ಕಿಟಕಿಯನ್ನು ರೂಪಿಸಿಕೊಂಡ ಎಕ್ಕುಂಡಿ ಕಡಲತೀರದ ದಂಡೆಗಳಲ್ಲಿ ಬೆಂಕಿಹಾಕಿ ಗುಮಟೆ ಹಿಡಿದು ಗಂಟೆಗಟ್ಟಲೆ ಕುಣಿಯುತ್ತಾ ಎದೆಯಿಂದ ಹಾಡುಗಳ ಹೊಳೆಹರಿಸುತ್ತಿದ್ದ ಹಾಲಕ್ಕಿ ಒಕ್ಕಲಿಗರ ಬದುಕಿನಿಂದಲೂ ರೆಕ್ಕೆಗಳನ್ನು ಪಡೆದರು. ಬದುಕಿನ ಬಹುಭಾಗ ಕೆಂಡದ ಮೇಲೆ ಕಾಲಿಟ್ಟು ನಡೆದ ಸುಬ್ಬಣ್ಣ ರಂಗನಾಥ ಎಕ್ಕುಂಡಿ ತಾವು ನಡೆದು ಬಂದ ಹಾದಿಗೆ ಕಾವ್ಯದ ಗರಿ ತೊಡಿ ಸಿದರು.

ಸುಬ್ಬಣ್ಣ ರಂಗನಾಥ ಎಕ್ಕುಂಡಿಯವರ ಮನೆತನದ ಮೂಲ ಕಲ್ಬುರ್ಗಿಯ ಮಣ್ಣೂರು. ದೊಡ್ಡ ಸಂಸಾರದ ಸಂಕಷ್ಟಗಳ ಮಧ್ಯೆ ನಲುಗಲು ಇಷ್ಟಪಡದೆ ಹೊಸ ಬದುಕು ಹುಡುಕುತ್ತಾ ಬಂದ ರಂಗಾಚಾರ್ಯ ಎಕ್ಕುಂಡಿ ರಾಣೆಬೆನ್ನೂರಿ ನಲ್ಲಿ ಶಿಕ್ಷಕರಾಗಿ ನೆಲೆನಿಂತರು. ಸುಬ್ಬಣ್ಣ ರಂಗನಾಥ ಎಕ್ಕುಂಡಿ ಅವರು ರಾಣೆಬೆನ್ನೂರಿನಲ್ಲಿ 1923 ಜನವರಿ 20ರಂದು ಜನಿಸಿದರು. ಎಕ್ಕುಂಡಿಯವರಿಗೆ ಐದು ತುಂಬುವ ವೇಳೆಗೆ ತಂದೆ ನಿಧನ ಹೊಂದಿದರು. ನಂತರದ್ದೆಲ್ಲಾ ನೋವಿನ ಬದುಕು. 'ಕೆಂಡದ ಮೇಲೆ ನಡೆದವರಿಗೆ ಮಾತ್ರವೇ ಕೆಂಡದ ಅನುಭವವನ್ನು ಬಣ್ಣಿಸಲು ಸಾಧ್ಯ' ಎಂಬುದು ಎಕ್ಕುಂಡಿಯವರ ನಿಲುವು. ಎಕ್ಕುಂಡಿಯವರು ತಾವು ಶಿಕ್ಷಕರಾಗುವವರೆಗೆ ನಡೆದು ಬಂದ ಕೆಂಡದ ಮೇಲಿನ ನಡಿಗೆಯೇ ಇವರ ಕಾವ್ಯವನ್ನು ನಿರ್ದೇಶಿಸಿದೆ.

ಮನೆ ಸಾಗಿಸಲು ಪುಟ್ಟ ಎಕ್ಕುಂಡಿ ಬದುಕಿನ ಭಾರವನ್ನು ಹೊರಬೇಕಾ ಯಿತು. ಈ ಭಾರವಾದ ಬದುಕಿನ ಮಧ್ಯೆಯೂ ಎಕ್ಕುಂಡಿ ಓದಿನತ್ತ ಆಕರ್ಷಿತ ರಾದರು. ಸವಣೂರಿನಲ್ಲಿ ಶ್ರೀ ಸತ್ಯಬೋಧ ಸೇವಾಸಂಘ ನಡೆಸುತ್ತಿದ್ದ ವಾಚಾನಾಲಯದ ಪುಸ್ತಕವನ್ನು ಸದಸ್ಯರ ಮನೆ ಮನೆಗೆ ಮುಟ್ಟಿಸುವ ಕೆಲಸ ಹೊತ್ತರು. ಪ್ರತಿಫಲವಾಗಿ ವಾಚನಾಲಯದ ಪುಸ್ತಕಗಳನ್ನು ಪುಕ್ಕಟೆ ಓದುವ ಅವಕಾಶ ಸಿಕ್ಕಿತು. ಎಕ್ಕುಂಡಿ ಸಾಹಿತ್ಯಲೋಕಕ್ಕೆ ಮೊದಲು ಕಾಲಿರುಸಿದ್ದು ಹೀಗೆ.

'ಗಾಳಿ ಬೇಕು ಯಾವುದೂ ಸುಳಿಯದಿದ್ದ ಗುಹೆಯಂಥ ಮನೆಯಲ್ಲಿ, ಊಟ, ಉಡುಗೆ, ಬಟ್ಟೆಬರೆ ಎಲ್ಲವೂ ಅಷ್ಟಕ್ಕಷ್ಟೇ ಇದ್ದ, ಹಬ್ಬದ ದಿನ ಗಳಿಗೂ ಉಳಿದ ದಿನಗಳಿಗೂ ವ್ಯತ್ಯಾಸವಿರದಿದ್ದ, ಶಾಲೆಯ ಫೀ ಕೊಡಲು ಅಸಾಧ್ಯವಾಗಿದ್ದ, ಯಾವ ವರ್ಷವೂ ಕಣ್ಣೀರು ಹಾಕದೆ ಪರೀಕ್ಷೆ ಕೂಡುವ ಅವಕಾಶ ಸಿಗದಿದ್ದ' ರೀತಿಯಲ್ಲಿ ಬೆಳೆದರು ಎಕ್ಕುಂಡಿ.

ಹೈಸ್ಕೂಲಿನಲ್ಲಿ ಸಾಹಿತ್ಯದ ಗೀಳಿಗೆ ತಕ್ಕ ವಾತಾವರಣ ದೊರಕಿತು. 'ಉನ್ನತಿ' ಕೈಬರಹ ಪತ್ರಿಕೆ ಸಂಪಾದಿಸಿದ್ದೇ ಅಲ್ಲದೆ ಸಾಹಿತ್ಯಕ ಹರಟೆಗೆ

ಜೊತೆಗಾರರು ಸಿಕ್ಕರು. ಪಾಠ ಮಾಡುತ್ತಿದ್ದ ಮಾಸ್ತರುಗಳು ಬಿಎಂಶ್ರೀ, ಟೆನಿಸನ್, ವರ್ಡ್ಸ್‌ವರ್ತ್‌ರನ್ನೂ ಪರಿಚಯಿಸಿದರು.

ಎಕ್ಕುಂಡಿ ತಮ್ಮ ಹದಿನೈದನೆಯ ವಯಸ್ಸಿನಲ್ಲಿ ತಮ್ಮ ಶಾಲಾ ದಿನಗಳಲ್ಲಿಯೇ ಬರಹ ಆರಂಭಿಸಿದರು. ಜಗದೀಶಚಂದ್ರ ಬೋಸರ ಸಾವು ಎಕ್ಕುಂಡಿಯವರಲ್ಲಿ ಕವಿತೆಯಾಗಿ ಅರಳಿತ್ತು. 'ಒಬ್ಬ ವಿಜ್ಞಾನಿಯ ಸಾವು ಒಬ್ಬ ಕವಿಯ ಹುಟ್ಟಿಗೆ ಕಾರಣವಾದದ್ದು ವಿಚಿತ್ರ ಸಂಗತಿ' ಎನ್ನುತ್ತಾರೆ ಎಕ್ಕುಂಡಿ.

'ನಾಡಹಬ್ಬ' ಎಕ್ಕುಂಡಿಯವರೊಳಗಿದ್ದ ಕವಿಯನ್ನು ಹೊರಗೆ ತರಲು ಮತ್ತಷ್ಟು ನೆರವಾಯಿತು. ನಾಡಹಬ್ಬಕ್ಕಾಗಿ ಹುಬ್ಬಳ್ಳಿಗೆ ಬಂದ ವಿ.ಕೃ. ಗೋಕಾಕ, ಬೇಂದ್ರೆ, ಬೆಟಗೇರಿಕೃಷ್ಣಶರ್ಮ, ಶಂ.ಬಾ.ಜೋಶಿ, ಶ್ರೀರಂಗರು ಸಾಹಿತ್ಯದ ಆಸಕ್ತಿ ಬೆಳೆಸಲು ಕಾರಣರಾದರು.

ಸಾಂಗ್ಲಿಯ ವಿಲಿಂಗ್ಡನ್ ಕಾಲೇಜಿನಲ್ಲಿ ಅಭ್ಯಾಸ ಮಾಡಲು ಹೋದಾಗ ಚಾಸರ್, ಶೇಕ್ಸ್‌ಪಿಯರ್, ಕಾರ್ನಾಡ್, ಜೇಮ್ಸ್ ಬ್ಯಾರಿ ಪಠ್ಯದ ಮೂಲಕ ಪರಿಚಿತರಾದರು. ಈ ಸಂದರ್ಭದಲ್ಲಿಯೇ ಕವಿ ಪೇಜಾವರ ಸದಾಶಿವರಾಯರು ನಿಧನರಾದರು. ಅವರ 'ವರುಣನಿಗೆ ಆಹ್ವಾನ'ದಿಂದ ಪ್ರಭಾವಿತಗೊಂಡಿದ್ದ ಎಕ್ಕುಂಡಿ, ಗಂಗಾಧರ ಚಿತ್ತಾಲ, ವರದರಾಜ ಹುಯಿಲಗೋಳ, ರಾಯ ಧಾರವಾಡಕರ, ವಿ.ಜಿ.ಭಟ್ ಇವರೊಂದಿಗೆ 'ವರುಣ ಕುಂಜ' ಬರಹಗಾರರ ಬಳಗವನ್ನು ಆರಂಭಿಸಿದರು. ಕಾಲೇಜಿನ ಈ ಬಳಗ ಪ್ರತಿವಾರ ಕಾವ್ಯ, ಕಥೆ, ಪ್ರಬಂಧ, ವಿಮರ್ಶೆ ಬರೆದು ಚರ್ಚೆ ನಡೆಸುತ್ತಿತ್ತು. ವಿ.ಕೃ.ಗೋಕಾಕ್, ರಂ.ಶ್ರೀ. ಮುಗುಳಿಯವರ ಮಾರ್ಗದರ್ಶನ ಈ ಕುಂಜಕ್ಕೆ 'ಮಾತು ಮಾತು ಮಥಿಸಿ' ಎಕ್ಕುಂಡಿಯವರ ಕವನ ಸಂಗ್ರಹಕ್ಕೆ ದಾರಿಮಾಡಿತು. ವಿಲಿಂಗ್ಡನ್‌ನಲ್ಲಿ ಓದುವಾಗಲೇ ಎಕ್ಕುಂಡಿಯವರ ಮೊದಲ ಕವನ ಸಂಕಲನ 'ಸಂತಾನ'ವನ್ನು ರಂ.ಶ್ರೀ. ಮುಗುಳಿ ಪ್ರಕಟಿಸಿದರು.

ಎಕ್ಕುಂಡಿಯವರ ನಂತರದ ಪಯಣ ಬಂಕಿಕೊಡ್ಲಕ್ಕೆ. ಪದವೀಧರರಾದ ನಂತರ ಗೆಳೆಯರೊಂದಿಗೆ ಉತ್ತರ ಕನ್ನಡದ ಕಡಲನ್ನು ನೋಡಲು ಹೋದ ಎಕ್ಕುಂಡಿ ಅಲ್ಲಿನ ಪ್ರಕೃತಿಗೆ ಮನಸೋತು ಹೋದರು. ಅದೇ ಸಮಯದಲ್ಲಿ ಒಂದು ಹೈಸ್ಕೂಲ್ ಅಲ್ಲಿ ತಲೆ ಎತ್ತುತ್ತಿತ್ತು. ಎಕ್ಕುಂಡಿ ಅಲ್ಲಿ ಶಿಕ್ಷಕರಾದರು. ಬಂಕಿಕೊಡ್ಲ ಎಕ್ಕುಂಡಿಯವರ ಎದೆಯೊಳಕ್ಕಿಳಿಯಿತು. ಸಮುದ್ರ ತೀರದ ಈ ಊರಿನಲ್ಲಿ ಮೂರು ದಶಕಕ್ಕೂ ಹೆಚ್ಚು ಕಾಲ ಇದ್ದ ಎಕ್ಕುಂಡಿಯವರ ಕವನಗಳಲ್ಲಿ ಅಲ್ಲಿನ ನಿಸರ್ಗ ಹೆಣೆದುಕೊಂಡಿದೆ. ಹಾದಿಯ ಮಧ್ಯದಲ್ಲಿ ಕೇಳಿ ಬರುವ ಕೋಗಿಲೆಯ ಧ್ವನಿ, ಗದ್ದೆಗಳ ಮಧ್ಯದಿಂದ ಧುತ್ತೆಂದು ಹಾರುವ ಬೆಳ್ಳಕ್ಕಿಗಳು, ಭೋರ್ಗರೆವ ಉಪ್ಪುಕಡಲು, ಚಾಮರ ಬೀಸಿ ಹಾಡುವ ತೆಂಗಿನ ಮರಗಳ ಸಾಲು ಸಾಲು, ಕೋಪಿಸಿ ಮೈಮೇಲೆ ದಿನಗಟ್ಟಲೆ ಸುರಿದು ಹಾವಳಿ ಎಬ್ಬಿಸುವಷ್ಟು ಮಳೆರಾಯ ಎಕ್ಕುಂಡಿಯವರ ಕವನಗಳಲ್ಲಿ ಕುಸುರಿಗೆಲಸ ನಡೆಸಿವೆ. ಆದರೆ ನಿಸರ್ಗದಲ್ಲಿ ತೊಯ್ದ ಎಕ್ಕುಂಡಿಯವರಿಗೆ ಅಷ್ಟೇ ವರ್ಷ ಆ ಕಡಲತಡಿಯ ತೆಂಗಿನ ಗರಿಕೆಯ ಗುಡಿಸಲುಗಳಿಂದ ನಿಟ್ಟುಸಿರುಗಳು ಸಹಾ ಕೇಳಿಸಿವೆ. ಕಡಲ ತೀರದಲ್ಲಿ ಬೆಂಕಿ ಹಚ್ಚಿ ಗುಮಟೆ ನುಡಿಸುತ್ತಾ ಹಾಡು ಹೇಳುತ್ತಾ ಇದ್ದವರ ಹಿಂದೆ ಎಷ್ಟು ನಿಟ್ಟುಸಿರು ಇದೆಯೆಂಬುದು ಎಕ್ಕುಂಡಿಯವರಿಗೆ ಗೊತ್ತಿರುವುದರಿಂದಲೇ ನಿಸರ್ಗವನ್ನು ಹಿಂದೆ ತಳ್ಳಿ ಅವರ ಕಾವ್ಯದಲ್ಲಿ ಜನಸಾಮಾನ್ಯರು ಇಣುಕುತ್ತಾರೆ.

'ಎಕ್ಕುಂಡಿ ಅವರ ಕಾವ್ಯದ ಕೇಂದ್ರ ಮನುಷ್ಯನೇ ಆಗಿರುವುದಕ್ಕೂ, ಅವರ ಪ್ರಧಾನ ಕಾವ್ಯಪ್ರಕಾರ ಕಥನಕವನವೇ ಆಗಿರುವುದಕ್ಕೂ ಕಾರಣಗಳು ಸ್ಪಷ್ಟವಾಗಿಯೇ ಇವೆ. 'ಬೆಳ್ಳಕ್ಕಿಗಳು' ಸಂಕಲನದ ಕೆಲವು ರಚನೆಗಳು ಕೊಂಚ ಭಿನ್ನವಾದರೂ ಒಟ್ಟಾರೆ ಎಕ್ಕುಂಡಿ ಕಾವ್ಯಪ್ರಪಂಚ ಕಥನಕವನಗಳಿಂದಲೇ ಸಮೃದ್ಧವಾಗಿದೆ. 'ಕೊರಗು' ಎಂಬ ಕವನದಲ್ಲಿ ಏನಿಲ್ಲ ಎಂದು ಹೇಳುವಾಗ, 'ಬುತ್ತಿ' ಕವನದಲ್ಲಿ ಏನಾಗಬೇಕು ಎಂದು ಒತ್ತಿ ಹೇಳುವಾಗ, 'ಬೆಳ್ಳಕ್ಕಿಗಳು' ಕವನದಲ್ಲಿ ಭರವಸೆಯ ಹಾಡನ್ನು ಹಾಡುವಾಗ, 'ಶರಣು' ಕವನದಲ್ಲಿ ತನ್ಮಯತೆಯಿಂದ ಪ್ರಾರ್ಥಿಸುವಾಗ ಕೂಡಾ ಮನುಷ್ಯಾವಸ್ಥೆಯ ನೆಲೆಗಳಿಂದ ಎಕ್ಕುಂಡಿ ಕವನಗಳು ಬಿಡುಗಡೆ ಹೊಂದಿವೆ ಅನ್ನಿಸುವುದಿಲ್ಲ. ಪ್ರಕೃತಿಯನ್ನು ಕುರಿತು ಹಾಡುವಾಗಲೂ ಕವಿ ಮನುಷ್ಯ ಸಮಾಜವು ಪ್ರಕೃತಿಯಿಂದ ಪಡೆಯಬಹುದಾದ ಜೀವನೋತ್ಸಾಹದ ಕಡೆಗೇ ಒಂದು ಕಣ್ಣಿಟ್ಟಿರುವುದು ಕಾಣುತ್ತದೆ'. (-ಟಿ.ಪಿ.ಅಶೋಕ)

ಕವಿ ನಿಸರ್ಗ ಹೊದ್ದವ ಮಾತ್ರನಾಡಬಾರದು ಎನ್ನುವ ಎಕ್ಕುಂಡಿ ಯವರ ಬಳಿ ಕಾವ್ಯ ಹೇಗಿರಬೇಕು ಎಂಬ ಪ್ರಶ್ನೆಗೆ ಸ್ಪಷ್ಟ ಉತ್ತರವಿತ್ತು- ಕವಿಯ ಹಾಗೆ, ಕಲಿಯ ಹಾಗೆ. ಈ ಕಾರಣಕ್ಕಾಗಿಯೇ ಕವಿ ರಾಮಚಂದ್ರ ಶರ್ಮರ ಕವನ ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ಎಕ್ಕುಂಡಿ ಅವರು-

"ಕಾವ್ಯವಾಗಲೀ, ಸಾಹಿತ್ಯವಾಗಲೀ ಸಜೀವವಾಗಿರಬೇಕಾದರೆ ಅದರ ಬೇರುಗಳು ಜನತೆಯ ಬಾಳಿನಲ್ಲಿರಬೇಕೆಂದು ಕಾಲ್‌ಡ್ವೆಲ್ ತನ್ನ 'Illusion and Reality'ಯಲ್ಲಿ ಹೇಳಿದ್ದಾರೆ. ಈ ಮಾತಿಗೆ ಇತಿಹಾಸ ಸಾಕ್ಷಿಯಾಗಿ ನಿಂತಿದೆ. ಎಂಥ ಅದ್ಭುತವಾದ ಶಬ್ದಸಂಪತ್ತಾದ್ದರೂ, ಅಲಂಕಾರಗಳಿದ್ದರೂ ನಮ್ಮ 'ಮಹಾಕವಿ'ಗಳನ್ನು ನಾವು ನಮ್ಮ ಜನತೆಯ 'ಗುಡಿಸಲು'ಗಳಲ್ಲಿ ಕೇಳುತ್ತಿಲ್ಲ. ಒಪ್ಪಿದರೂ ಸರಿ, ಒಪ್ಪದಿದ್ದರೂ ಸರಿ ಇಂದಿನದು ಜನಯುಗ. ಕವಿ ಜನವಾಣಿಯಾಗದಿದ್ದರೆ ಅವನು ಏನು ಬರೆದರೂ, ಎಷ್ಟು ಬರೆದರೂ ಅಷ್ಟೇ. ಹೊಸಗನ್ನಡದಲ್ಲಿ ಇಂಥ ಕಾವ್ಯ ಈಚೆ ಬರುತ್ತಿರುವುದು ನಮ್ಮ ಉಜ್ವಲ ಭವಿಷ್ಯದ ಚಿಹ್ನೆಯಾಗಿದೆ. ಹೊಸಗನ್ನಡ ಕಾವ್ಯದ ಮೂರು ತಲೆಮಾರುಗಳಲ್ಲಿ ಕಾಣದ ಹೊಸದೃಷ್ಟಿಯೊಂದು ಈಗ ಒಡಮೂಡುತ್ತಿದೆ. ಕಲೆಗಾಗಿ ಕಲೆ, ಕಾವ್ಯಕ್ಕಾಗಿ ಕಾವ್ಯ ಎಂದು ನಂಬಿದವರು ತಮ್ಮ ಮನಸ್ಸನ್ನು, ನಿರ್ಧಾರವನ್ನು ಬದಲಿಸುತ್ತಿದ್ದಾರೆ. ಜನ ಓದಬೇಕೆಂದಲ್ಲವೇ ಬರೆಯುವುದು? ತಮ್ಮ ನಿರಾಸೆ, ಆಸೆ, ಸುಖದುಃಖಗಳು ಇಲ್ಲದ ಕಾವ್ಯ ಓದಿ ಜನ, ಅಂಥದ್ದನ್ನು ಓದಬೇಕೆಂದು ಮತ್ತೊಮ್ಮೆ ಆಸೆಪಟ್ಟಾರೆ?" ಎನ್ನುತ್ತಾರೆ.

ಎಕ್ಕುಂಡಿಯವರ ಕಾವ್ಯದ ಬೇರುಗಳು ಜನತೆಯ ಬಾಳಿನಲ್ಲಿದೆ. ಪುತಿನ. ಅವರು ಬಣ್ಣಿಸಿದಂತೆ ಎಕ್ಕುಂಡಿ 'ಸಹಜ ಕವಿ'ಯಾದ ಕಾರಣದಿಂದಲೇ ಇವರ ಕಾವ್ಯದಲ್ಲಿ ಜನಸಾಮಾನ್ಯರು ಮೂಡಿ ಬಂದರು. - ನಂ.4, ಆಂತರ್ಸನ್ ಬೀದಿಯಲ್ಲಿ, ಮನೆಯ ತೊಟ್ಟಿಲು, ಹಾಸಿಗೆ, ದುಪ್ಪಟಿ, ಲಾಲಿಯ ಹಾಡುಗಳು ಹರಾಜಾಗುತ್ತಿರುವುದನ್ನು ನೋಡುತ್ತಾ ನಿಂತ ಕಾರ್ಲ್‌ಮಾರ್ಕ್ಸ್, ಬಿಕ್ಕುತ್ತಿರುವ ಹೆಂಡತಿ ಹೆಲೆನ್, ಬಂಡವಾಳ ಬರೆಯುವುದರಲ್ಲಿ ನಿರತನಾಗಿರುವ ಶ್ರಮಜೀವಿ, ಬಂಧುವಿನ ಮನೆಗೆ ಬೆಳಕಾದ ಎಂಗೆಲ್ಸ್, ಹೆರಿಗೆ ಆಸ್ಪತ್ರೆಯ ಪೌಡರ್-ಪಿಯರ್ಸ್ ಪರಿಮಳದ ಹೊದಿಕೆಯಿಂದ ದೂರವಾಗಿ ಎರಡು ಲಾರಿಗಳ ಕೆಳಗೆ ಕಟ್ಟಿರುವ ಸೀರೆ ತುಂಡನ್ನು ಅಪ್ಪಿ ಮಲಗಿರುವ ಚಿನ್ನಮ್ಮನ ಕಂದ, ಎಸೆದ ಬ್ರೆಡ್ಡಿನ ತುಂಡು ಆಯಲು ತೊಟ್ಟಿಯೊಳಗೆ ಇಳಿಯುವ ದುಡಿವ ಕಸುವಿರುವ ಹಸಿದ ಕೈಗಳು, ಉಳ್ಳವರ ಎದೆಯಿಂದ ಬಂದಂಥ ಬೆಣಚು ಕಲ್ಲುಗಳ ಮೇಲೆ ಕಾಲಿಟ್ಟು ಗಾಯಗೊಂಡ ಕೂಲಿಕಾರರು, ಕೆಲಸವೇ ಶಿವಧ್ಯಾನವಾದ ದಾಸಿಮಯ್ಯ, ಹಾಲೆಂದೇ ಹಿಟ್ಟು ನೀರು ಕುಡಿದ ಅಶ್ವತ್ಥಾಮ, ಶ್ರೀಧರನಾಮದ

ಖಜಾನೆ ತೆರೆಯುವ ಬೀಗದಕ್ಕೆ ಹಿಡಿದು ಹಣದ ಖಜಾನೆಯಿಂದ ಹೊರಬಿದ್ದ ಪುರಂದರದಾಸ, ವಿಷದ ಬಟ್ಟಲಿಗೆ ಬಲಿಯಾದ ಸಾಕ್ರೆಟಿಸ್, ಎರಡು ದಂತಗಳ ಬೆಸೆದು ದೂರವಿದ್ದವರನ್ನು ಹತ್ತಿರ ತಂದ ಮಧ್ವಮುನಿ, ಏಸುಕ್ರಿಸ್ತ, ಜಬಾಲ, ರಂತಿದೇವ, ಪ್ರವಾದಿ, ಕಳ್ಳ ಡಕಾಯಿತ, ಅಂತೆಯೇ ಬಕುಲದ ಹೂಗಳನ್ನು ನೋಡಿ ಒಂದರೆಕ್ಷಣ ನೋವೆಲ್ಲವನ್ನೂ ಮರೆತ ಜೋಡಿ-ಎಕ್ಕುಂಡಿಯವರ ಕವನಗಳ ಕ್ಯಾನ್‌ವಾಸ್‌ನಲ್ಲಿ ಜನರೊಂದಿಗೆ ಸಂಪಾದಿಸುವವರು ಅದೆಷ್ಟು ಜನ!

ಎಕ್ಕುಂಡಿಯವರೇ ಬಣ್ಣಿಸುವ ಹಾಗೆ - ಅವರ ಕಾವ್ಯ - 'ಶಬರಿ, ಸುಧಾಮ, ಗಜೇಂದ್ರ, ಕುಬ್ಜೆ ಮತ್ತು ಪುರಂದರದಾಸರ ಭಕ್ತಿ ಮತ್ತು ಪ್ರೇಮಗಳನ್ನು ಕುರಿತು ಬಣ್ಣಿಸುತ್ತದೆ. ಮನುಷ್ಯನ ಜೀವನದಲ್ಲಿ ದಿವ್ಯದ ಪಯರನ್ನು ಬಿತ್ತಿ ಬೆಳೆದ ಸಾಕ್ರೆಟಿಸ್, ಏಸು, ಪ್ರವಾದಿ ಹಾಗೂ ದೇವರ ದಾಸಿಮಯ್ಯರಂಥ ಆತ್ಮದ ಒಕ್ಕಲಿಗರನ್ನು ಬಣ್ಣಿಸುತ್ತದೆ'.

'ಇಷ್ಟಕ್ಕೆ ನಿಲ್ಲದೆ ಹಸಿದವರನ್ನೂ, ಬಡತನವನ್ನೂ ಕುರಿತು ಹೇಳಿದ ಕಾರ್ಲ್‌ಮಾರ್ಕ್ಸ್ ಮತ್ತು ಶ್ರಮಜೀವಿಗಳ ಮನ ಕರಗಿಸುವ ಕಥೆಗಳಲ್ಲಿ ಶೋಷಿತರ ಹಾಗೂ ನಿರ್ಗತಿಕರ ಪರವಾಗಿ ಅದು ಕ್ಷೋಭೆಗೊಂಡು ಧ್ವನಿ ಯೆತ್ತಿದೆ. ನನ್ನ ಕಾವ್ಯವು ಉಳುವ ಕೈಗಳನ್ನೂ, ಪ್ರಾರ್ಥಿಸುವ ಕೈಗಳನ್ನು ಕುರಿತು ಹಾಡುತ್ತದೆ. ಅದು ಕೊರಗುವ ಹೃದಯಗಳನ್ನೂ, ಕಂಬನಿ ತುಂಬಿದ ಕಣ್ಣುಗಳನ್ನೂ ಕುರಿತು ಹೇಳುತ್ತದೆ. ಅದು ನಿರಾಶ್ರಿತರಿಗೂ ನಾಲಿಗೆ ನೀಡಿದೆ. ಮತ್ತು ಧೀರ ಚೇತನಗಳಿಗೆ ಸ್ಮಾರಕಗಳನ್ನು ನಿಲ್ಲಿಸಿದೆ. ಅದು ಚರಿತ್ರೆಯ ಗಾಲಿಗಳನ್ನು ತಿರುಗಿಸಿದವರ ಧೈರ್ಯ ಮತ್ತು ಕರುಣೆಗಳ ಕಥೆಗಳನ್ನು ಹೇಳುತ್ತದೆ'.

ಎಕ್ಕುಂಡಿಯವರು ಕನಸುಗಾರರು. ಈ ಕನಸುಗಳು ಮಾತ್ರ ಮುನ್ನುಗ್ಗದ ಕಸುವನ್ನು ನೀಡುತ್ತದೆ ಎಂದು ನಂಬಿದ್ದರು. ಅಪಾರದಿಂದ ಅನಂತಕ್ಕೆ, ಅನಂತದಿಂದ ಅಪಾರಕ್ಕೆ ಹಾರುವ ಬೆಳ್ಳಕ್ಕಿಗಳ ಹಾಗೆ ತಮ್ಮ ಕಾವ್ಯವೂ ಅಪಾರ ಅನಂತಗಳ ನಡುವಿನ ಕೊಂಡಿಯಾಗಿರಬೇಕು ಎಂದು ಕನಸು ಕಂಡಿದ್ದವರು ಈ ಅಪಾರದ ಹುಡುಗಾಟದಲ್ಲಿಯೇ ಮಾರ್ಕ್ಸ್, ಮಧ್ವ ಇಬ್ಬರೂ ಎಕ್ಕುಂಡಿಯವರ ಕಾವ್ಯಕ್ಕೆ ದಕ್ಕಿದರು; ಶಬರಿ, ಸುಧಾಮ, ಪುರಂದರದಾಸರೂ. ಈ ಎಲ್ಲರಿಂದಲೂ ಜನಪರ ವಿಚಾರಗಳನ್ನು ಮಾತ್ರ ಆಯ್ದು ಎಕ್ಕುಂಡಿ ಎರಡು ದಂಡೆಯ ಬೆಸೆದು ದೂರ ಇದ್ದವರನ್ನು ಹತ್ತಿರಕ್ಕೆ ತರಲು ಪ್ರಯತ್ನಿಸಿದರು.

ಎಕ್ಕುಂಡಿಯವರ ಕಾವ್ಯದ ಬಹುಮುಖ್ಯ ಎಳೆ ಈ ಮಾರ್ಕ್ಸ್ ಮತ್ತು ಮಧ್ವ. ಎಕ್ಕುಂಡಿಯವರ ಕಾವ್ಯದ ಬಗ್ಗೆ ಬಹುಚರ್ಚಿತವಾಗಿರುವ ಅಂಶಗಳ ಪೈಕಿ ಇದೂ ಒಂದು. ಮಾರ್ಕ್ಸ್ ಮತ್ತು ಮಧ್ವ ಬದುಕಿನಿಂದ ಆಯ್ದು ಕಟ್ಟಿದ ಕವಿತೆಗಳು ಎಕ್ಕುಂಡಿಯವರ ಕಾವ್ಯದ ಎರಡು ದಡಗಳಂತೆ ಹಾಗೂ ಅವರೇ ಕವಿತೆಯಲ್ಲಿ ಹೇಳುವಂತೆ-

> ದೂರವಿದ್ದವರನ್ನು ಹತ್ತಿರಕ್ಕೆ ತರಬೇ
> ಕು, ಹರಿವ ಹೊಳೆಗೂ ಉಂಟು ಎರಡು
> ತೋಳು, ನೆಲವನಪ್ಪಿದ ಎರಡು ದಂಡೆ
> ಗಳ ಬಾಂಧವ್ಯ ಬೆಸೆಯ ಬೇಕಲ್ಲವೇ?
> ನಮ್ಮ ಬಾಳು-

ಎಂಬಂತೆ ಎಕ್ಕುಂಡಿಯವರ ಕಾವ್ಯ ಈ ಎರಡು ದಂಡೆಗಳನ್ನು ಬೆಸೆದಿದೆ.

ಈ ಮಧ್ವ, ಮಾರ್ಕ್ಸ್ ಆಶಯಗಳು ತಮ್ಮ ಕಾವ್ಯದಲ್ಲಿ ಹಾಸುಹೊಕ್ಕಾಗಿರುವ ಬಗ್ಗೆ ಎಕ್ಕುಂಡಿ- 'ನಮಗೆ ಇಂದು ವಿಚಾರಗಳು ಬೇಕಾಗಿವೆ. ನಾವು ಮಾರ್ಕ್ಸ್ ನನ್ನು ಪ್ರೀತಿಸುತ್ತೇವೆ ಎಂದರೆ ನಮ್ಮ ನೆಲದ ವಿಚಾರಗಳನ್ನು ನಿರಾಕರಿಸುತ್ತೇವೆ ಎಂದಲ್ಲ. ನಮ್ಮ ದೇಶಕ್ಕೆ ಚಿಂತಕರು, ವಿಚಾರಿಗಳುಬೇಕು. ಅವರಲ್ಲಿನ ಉತ್ತಮ ವಿಚಾರಗಳನ್ನು ಮಾತ್ರ ಸ್ವೀಕರಿಸಬೇಕು. ಮಧ್ವಾಚಾರ್ಯರಾಗಲೀ, ಬಸವಣ್ಣನವರಾಗಲೀ, ಶಂಕರಚಾರ್ಯರಾಗಲೀ ಒಂದು ಕಾಲಘಟ್ಟಕ್ಕೆ ಸೇರಿದ ವರು. ಗೀತಪಾಠ ದೇವರಿಗೆ ನಾವು ಸಲ್ಲಿಸಬಹುದಾದ ಅತ್ಯುತ್ತಮ ಸೇವೆ ಎಂದರೆ ನಾನಾ ಜನರ ಸೇವೆ ಎನ್ನುತ್ತದೆ. ನಮ್ಮ ಗೀತೆಯಲ್ಲಾಗಲಿ, ಮಧ್ವಾ ಚಾರ್ಯ, ಬಸವಣ್ಣನವರಲ್ಲಾಗಲಿ ಅವರ ಪ್ರಗತಿಪರ ಆಲೋಚನೆಯನ್ನು ಮಾತ್ರ ಸ್ವೀಕರಿಸಬೇಕು. ನಾವು ನಿರಂತರವಾಗಿ ಮುಂದೆ ಹೋಗುವವರು. ನಮ್ಮ ಜೀವನ ಆ ಕಾಲಘಟ್ಟ ಅವರ ವಿಚಾರಗಳ ಸ್ಥಗಿತತೆಯಲ್ಲ. ನಾವು ಆ ವಿಚಾರಗಳನ್ನು ಮೀರಿ ಮುಂದುವರೆಯುತ್ತೇವೆ. ಅನುಯಾಯಿಗಳನ್ನು ನೋಡಿ ನಾವು ಮತದ ಬಗ್ಗೆ ನಿರ್ಣಯ ನೀಡಬಾರದು. ಮತವನ್ನು ನೋಡಿ ಅನುಯಾಯಿಗಳನ್ನು ನಿರ್ಧರಿಸಬೇಕು. ಮನಸ್ಸನ್ನು ವಿಶಾಲಗೊಳಿಸುವ ಎಲ್ಲ ವನ್ನು ಸ್ವೀಕರಿಸಬೇಕು, ಸಂಕುಚಿತಗೊಳಿಸುವುನ್ನು ಬಿಟ್ಟುಬಿಡಬೇಕು.

ಎಕ್ಕುಂಡಿ ಕಥನಕವನ ಪ್ರಕಾರಕ್ಕೆ ತಮ್ಮದೇ ಸ್ಪರ್ಶನ ನೀಡಿದರು. ತಾವು ಕಂಡಂತಹ ಅನುಭವಗಳನ್ನೆಲ್ಲಾ ಕಥನಕವನಗಳಲ್ಲಿ ಬಿಡಿಸಿಟ್ಟ ಎಕ್ಕುಂಡಿ ಅವರು ಕೀಟ್ಸ್‌ನಿಂದ ಪ್ರೇರಿತರಾದವರು. ಕೀಟ್ಸ್‌ನ ಕಥನಕವನಗಳಿಂದ ಪ್ರಭಾವಿತರಾಗಿ ತಮ್ಮ ಒಂದೊಂದು ಅನುಭವವನ್ನು ಈ ಮಾರ್ಗದಲ್ಲಿ ಮಂಡಿಸುತ್ತಾ ಹೋದರು.

'ಯಾವುದೇ ಕವನದ ಹಿಂದೆ ಒಂದು ಅನುಭವ ಅಡಗಿರುತ್ತದೆ. ಅದು ಸುಖವಾಗಿರಲಿ, ದುಃಖವಾಗಿರಲಿ ತನಗೆ ತಾನೇ ಬೆಳೆಯುತ್ತಾ ಹೋಗುತ್ತದೆ. ಆ ಒಂದೊಂದು ಅನುಭವಕ್ಕೂ ಕಥೆ ಇರುತ್ತದೆ. ಅದು ವ್ಯಕ್ತಿಯ ಬಗ್ಗೆ ಇರಬಹುದು, ಆಲೋಚನೆಯ ಬಗ್ಗೆ ಇರಬಹುದು'.

'ಕಥನ ಕವನ ಈ ರೀತಿಯ ಅನುಭವಗಳನ್ನು ಹೆಚ್ಚು ಅಸಮರ್ಥವಾಗಿ ಬಿಂಬಿಸುತ್ತದೆ. ನಾನು ನಡೆದು ಬಂದ ದಾರಿ, ಅಡ್ಡಾಡಿದ ಮಾರ್ಗ, ಅನುಭವಿಸಿದ ನೋವುಗಳಿಗೆ ಒಂದೊಂದು ಕಥೆ ಲೇಪಿಸುತ್ತಾ ಹೋದಂತೆ ಆ ಅನುಭವ ಸಾರ್ವತ್ರಿಕವಾಗುತ್ತದೆ. ಓದುಗರು ತಮ್ಮ ಅದೇ ಅನುಭವ ಗಳನ್ನು ಆ ಕಥನಕವನಗಳಲ್ಲಿ ಹುಡುಕಿಕೊಳ್ಳುತ್ತಾ ಹೋಗುತ್ತಾರೆ. ಕಥನಕವನ ಕಥೆಯ ಮೂಲಕ ಬರೆಯುವವನ ಅನುಭವಕ್ಕೂ, ಓದುಗನ ಅನುಭವಕ್ಕೂ ಸೇತುವೆ ಕಟ್ಟುತ್ತದೆ'.

'ನನ್ನ ಮೇಲೆ ಅತ್ಯಂತ ಪ್ರಭಾವ ಬೀರಿರುವ ಕೀಟ್ಸ್ ಇದನ್ನೇ De Personalisatin ಎನ್ನುತ್ತಾನೆ. ಒಬ್ಬ ವ್ಯಕ್ತಿ ತನ್ನನ್ನು ತಾನೇ ಒಂದು ಘಟನೆಯಲ್ಲಿ, ಅನುಭವದಲ್ಲಿ ಕರಗಿಸಿಕೊಳ್ಳುವುದೇ ಆತನ ಕ್ರಿಯಾಶೀಲತೆಗೆ ಸಾಕ್ಷಿ. ಇದರಿಂದ ಕಾವ್ಯ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಕೀಟ್ಸ್ ತನ್ನನ್ನು ತಾನೇ ಕಥನಕವನಗಳಲ್ಲಿ ಹರಡಿಕೊಳ್ಳುತ್ತಾ ಹೋದಂತೆ ಅವು ಹೆಚ್ಚು ಪರಿಣಾಮಕಾರಿಯಾಗಿದ್ದವು. ಆದ್ದರಿಂದಲೇ ನನಗೂ ಕಥನಕವನಗಳೇ ಹೆಚ್ಚು ಹತ್ತಿರವಾದುವು' ಎನ್ನುತ್ತಾರೆ ಎಕ್ಕುಂಡಿ.

ಕಥನಕವನಗಳಲ್ಲಿ ಸು.ರಂ.ಎಕ್ಕುಂಡಿ ಅವರು ನಡೆಸಿದ ಪ್ರಯೋಗಗಳು ಈ ಕ್ಷೇತ್ರಕ್ಕೊಂದು ನಾವಿನ್ಯವನ್ನು ತಂದುಕೊಟ್ಟಿದೆ. ಕಥನ ಕವನವೇ ಹೊಸ ಅರ್ಥ ಪಡೆಯುವಂತಹ ಪ್ರಯೋಗಗಳನ್ನು ಎಕ್ಕುಂಡಿ ನಡೆಸಿದ್ದಾರೆ.

"ಕಥನಕವನ'ದ ಪಾರಂಪರಿಕ ವ್ಯಾಖ್ಯೆ ಶ್ರೀ ಎಕ್ಕುಂಡಿಯವರಲ್ಲಿ ಬದಲಾಗಿದೆ. 'ಕಥೆಯುಳ್ಳ ಕವನ'ವೆಂಬುದಕ್ಕೆ ಸೀಮಿತಗೊಳ್ಳದೆ 'ಕಥನಕವನ' ಎಂಬ ಅರ್ಥಕ್ಕೆ ಹೊರಳಿದೆ. 'ಕಥೆ' ಮತ್ತು 'ಕಥನ'ಗಳ ಅರ್ಥವ್ಯಾಪ್ತಿ ಬೇರೆಬೇರೆ ತಾನೆ? ಇದು ನಮ್ಮ ಪ್ರಾಚೀನ ಕವಿಗಳು ಬಳಸಿದ 'ವಸ್ತುಕ' ಮತ್ತು 'ವರ್ಣಕ'ವೆಂಬ ಮಾತುಗಳಿಗೆ ಹೊಂದುತ್ತವೆಯೋ ಎಂದೂ ಯೋಚಿಸಲು ಸಾಧ್ಯ. ಅದಿರಲಿ, ಶ್ರೀ ಎಕ್ಕುಂಡಿಯವರ ಕವಿತೆಗಳಲ್ಲಿ ಕಥೆಗಿಂತ ಕಥನ ಮೇಲುಗೈ ಪಡೆಯುತ್ತದೆ. ಹೀಗಾಗಿ ಇಲ್ಲಿನ ಕೆಲವು ಕವಿತೆಗಳಲ್ಲಿ ಕಥೆ ಎಂಬುದು ಇಲ್ಲದಿದ್ದರೂ (ಉದಾ: ದೂರದ ದಾರಿಗಳು, ಬಕುಲದ ಹೂವುಗಳು, ರಂಗವಲ್ಲಿ) ಬಲವಾದ ಕಥನ ಮಾತ್ರ ಎಲ್ಲ ಕವಿತೆಗಳಲ್ಲೂ ಇದ್ದೇ ಇದೆ'. (-ಡಾ. ಕೆ.ವಿ.ನಾರಾಯಣ, ಬಕುಲದ ಹೂವುಗಳು ಮುನ್ನುಡಿಯಲ್ಲಿ)

'ಕಥೆಗಳನ್ನು ಆಕರ್ಷಕವಾಗಿ ನಿರೂಪಿಸುವುದಷ್ಟೇ ಕವಿಯ ಮುಖ್ಯ ಉದ್ದೇಶವಲ್ಲ. ಈ ಎಲ್ಲ ಕಥೆಗಳನ್ನು ಅವುಗಳ ಅಂತರ್‌ಸಂಬಂಧದಲ್ಲಿ ನೋಡಿದಾಗ ಕೇವಲ ಆವರಣಗಳನ್ನು ಬದಲಿಸುತ್ತ, ಕೆಲವೊಮ್ಮೆ ಛಂದೋ ವಿನ್ಯಾಸದಲ್ಲೂ ವೈದೃಶ್ಯ ತಂದು ಎಕ್ಕುಂಡಿ ಈ ಕಥೆಗಳ ಒಡಲಿನಿಂದಲೇ ತಮ್ಮ ತಾತ್ವಿಕತೆಯನ್ನು ನಿರ್ಮಿಸುತ್ತಾ ಸಾಗುತ್ತಾರೆ. ಪುರಾಣದಿಂದ ಅವರು ತೆಗೆದುಕೊಳ್ಳುವ ಕಥಾ ಪ್ರಸಂಗಗಳು ಸದ್ಯದ ತುರ್ತನ್ನು ಒಂದು ಸಲ ಮೂಲ ಮಾದರಿಯಲ್ಲಿ ತೋಡಿಕೊಳ್ಳುವ ಉಪಾಯವಷ್ಟೇ ಆಗಿದೆ. ಮನುಷ್ಯನ ಪ್ರಜ್ಞೆಯ, ಅನುಭವದ ವಿವಿಧ ಸ್ತರಗಳನ್ನು ಏಕಕಾಲದಲ್ಲಿ ಕಂಡುಕೊಳ್ಳುವ ಪ್ರಯತ್ನಗಳು ಆಗುತ್ತವೆ. ಕಥೆಯು ಕಥೆಯಾಗಿ ಉಳಿಯದೆ ಕವಿಯ ಕನಸೇ ಆಗಿಬಿಡುತ್ತದೆ. ಈ ಕನಸಿನಲ್ಲಿ ಅವನು ತನ್ನ ನೋಟವನ್ನು ಕಾಣಿಸುತ್ತಾನೆ. ಎಕ್ಕುಂಡಿ ಹೇಳುವ ಕಥೆಗಳು ಈ ರೀತಿಯಲ್ಲಿ ಕಾವ್ಯೋದ್ದೇಶವೊಂದಕ್ಕೆ ಬದ್ಧವಾಗುವಂತೆ ಕವಿಯ ದರ್ಶನಕ್ಕೂ ಅರ್ಥಪೂರ್ಣವಾಗಿ ದುಡಿಯುತ್ತದೆ. ಎಕ್ಕುಂಡಿ ಮೂಲತಃ ಕವಿ; ಕತೆಗಾರರಲ್ಲ. ಆದ್ದರಿಂದಲೇ ಇವು ಪದ್ಯರೂಪದಲ್ಲಿ ಹೇಳಿರುವ ಕತೆಗಳಲ್ಲ; ಕಥನಕವನಗಳು. ಇದೊಂದು ನಿರಂತರ ಕಥನ. ಹಾಗೆ ನೋಡಿದರೆ ಕವಿ ನಿರೂಪಿಸುವುದು ಕಥೆಗಳನ್ನಲ್ಲ, ಪ್ರಸಂಗಗಳನ್ನು. ಎಕ್ಕುಂಡಿ ಯವರ ಯಾವತ್ತೂ ಕಥನಕ್ಕೆ ಪುರಾಣದ, ವಾಸ್ತವಿಕ ಜೀವನದ, ಪ್ರಕೃತಿಯ ವಿವರಗಳು ಒದಗಿಬರುತ್ತವೆ. ಎಕ್ಕುಂಡಿ ಕಾವ್ಯವನ್ನು ಬಿಡಿಬಿಡಿಯಾಗಿ ಏಕೆ ನೋಡಬಹುದು ಎಂಬುದಕ್ಕೆ ಮುಖ್ಯ ಕಾರಣ ಇದು. ಇನ್ನೂ ಮುಕ್ತಾಯಗೊಳ್ಳದ ಸುದೀರ್ಘ ಕಥನವೆಂದೇ ಅವರ ರಚನೆಗಳನ್ನು ಓದಿಕೊಳ್ಳಬೇಕಾಗುತ್ತದೆ. ಮಾಸ್ತಿ ಮತ್ತು ಕುವೆಂಪು ಕಥನ ಕವನಗಳಿಗೂ ಇರುವ ವ್ಯತ್ಯಾಸಗಳೇನೆಂಬುದು ಈಗ ಹೊಳೆಯತೊಡಗುತ್ತದೆ, (-ಟಿ.ಪಿ.ಅಶೋಕ, 'ಸು.ರಂ.ಎಕ್ಕುಂಡಿ ಅವರ ಕಥನ ಕವನದ ನೆಲೆಗಳು' ಲೇಖನ.)

❑

## ವ್ಯಾಸರಾಯ ಬಲ್ಲಾಳ

ಶ್ರೀನಿವಾಸ ಹಾವನೂರ

1

ಶ್ರೀ ಬಲ್ಲಾಳರು ಮುಂಬಯಿಗೆ ಬಂದದ್ದು 1944ರಲ್ಲಿ. ಲೇಖನ ಕಾರ್ಯದಲ್ಲಿ ನಿಯಮಿತವಾಗಿ ತೊಡಗಿದ್ದುದು 1947ರಿಂದ. ಅದರ ಮರು ವರ್ಷವೆ ನನ್ನ ಅವರ ಪರಿಚಯವಾಯಿತು. ಆಗಿನಿಂದ ಅವರ ಬದುಕಿನ, ಬರವಣಿಗೆಯ ಸಂಪರ್ಕ ನನಗಿದೆ. ಇಷ್ಟು ದೀರ್ಘಕಾಲ ಅವರ ಸಾಹಿತ್ಯಕ ಕಾರ್ಯದ ಸಹವಾಸಿಯಾಗಿರುವ ಸದ್ಯದ ಮುಂಬಯಿಗ ನಾನೊಬ್ಬನೇ ಎಂದು ಕಾಣುತ್ತದೆ.

ಈ ಅಂಶವನ್ನು ಮೊದಲಿಗೇ ಪ್ರಸ್ತಾಪಿಸುವ ಕಾರಣವೆಂದರೆ, ಅವರನ್ನು ನಾನು ತೀರ ಹತ್ತಿರದಿಂದ ಬಲ್ಲವನಾದ್ದರಿಂದ ಅವರ ಬಗ್ಗೆ ಇದುವರೆಗೆ ಬೆಳಕಿಗೆ ಬಂದಿರದ ಕೆಲವು ಅಂಶಗಳನ್ನು ಹೇಳಬಲ್ಲೆ. ಹಾಗೆಯೇ, ಅವರ ಬರಹದ ಬಗ್ಗೆ ವಸ್ತು'ನಿಷ್ಠುರ'ವಾಗಿ ನನ್ನಿಂದ ಅಭಿಪ್ರಾಯ ಹೊರ ಬರಲಿಕ್ಕಿಲ್ಲ. ಹೇಗೂ ಕೃತಿ ವಿಮರ್ಶೆಯು ಈ ಗ್ರಂಥದ ಪ್ರಮುಖ ಆಶಯವೇನಲ್ಲ.

ಮೊದಲಿಗೆ ಅವರ ಜೀವನ ವಿಚಾರ. ಅದನ್ನು ಒಂದು ಪ್ಯಾರಾದಲ್ಲಿ ಹೇಳಿ ಮುಗಿಸಬಹುದು. ನಿಡಂಬೂರು ವ್ಯಾಸರಾಯ ಬಲ್ಲಾಳರು ಉಡುಪಿಯ ಸಾಹಿತ್ಯ, ಸಂಗೀತಾಸಕ್ತ ಕುಟುಂಬವೊಂದರಲ್ಲಿ ಜನಿಸಿದರು (1 ಡಿಸೆಂಬರ್ 1923). ಕಲಿತದ್ದು ಹಳೇ ಮೆಟ್ರಿಕ್‌ವರೆಗೆ ಮಾತ್ರ. ಹೊಟ್ಟೆಯ ಹೋರೆ ಅವರನ್ನು ಮುಂಬಯಿಗೆ ಎಳೆಯಿತು. ಕಾಲ್ಟೆಕ್ಸ್ ಎಂಬ ವಿದೇಶೀ ಕಂಪನಿಯಲ್ಲಿ ಸ್ಟೆನೊ - ಆ ಮುಂದೆ - ಒಬ್ಬ ಹಿರಿಯ ಅಧಿಕಾರಿಯಾಗಿ ಕಾರ್ಯ. ಅಲ್ಲಿಂದಲೇ ನಿವೃತ್ತಿ. ಮುಂಬಯಿಯಲ್ಲಿಯೇ (ಬಾಂದ್ರಾ) ನಿವೃತ್ತ ಕಾಲದ ವಾಸ್ತವ್ಯ. ಮುಂಚಿನಿಂದಲೂ ಬಿಡುವಿನ ವೇಳೆಯಲ್ಲಿ ಬಲ್ಲಾಳರದು ಅವ್ಯಾಹತ ವಾಚನ ಮತ್ತು ಅಧ್ಯಯನ. ಆಗೀಗ ಮುಂಬಯಿಯ ಹಲವು ಸಂಸ್ಥೆಗಳಲ್ಲಿ ಸೇವೆ. ಈಚೆಗೆ ಅವರು ಹೆಚ್ಚಾಗಿ ಅಂಟಿಕೊಂಡದ್ದು 'ಕರ್ನಾಟಕ ಸಂಘ, ಮುಂಬಯಿ' ಈ ಸಂಸ್ಥೆಗೆ. ಅದರ ಮುಖ್ಯ ಕಾರಣ. ಆ ಸಂಘದ ವಿಶೇಷ ಪ್ರವರ್ತಕರಾಗಿದ್ದ ದಿವಂಗತ ವರದರಾಜ ಆದ್ಯರೊಡನೆಯ ಆತ್ಮೀಯ ಸ್ನೇಹ. ಈಗ ಆ ಸಂಸ್ಥೆಯ ಧರ್ಮದರ್ಶಿಗಳಲ್ಲೊಬ್ಬರಾಗಿದ್ದಾರೆ, ಬಲ್ಲಾಳರು- ಎಂಬಲ್ಲಿಗೆ ಅವರ ಜೀವನದ ಬಗೆಗಿನ ವಿವರಗಳು ಮುಗಿದುಬಿಡುತ್ತವೆ !

ತೆಳ್ಳಗೆ, ಬೆಳ್ಳಗೆ ಇರುವ ಬಲ್ಲಾಳರು ನೋಡುವುದಕ್ಕೆ ಅತ್ಯಂತ ಸೌಮ್ಯರು, ಸಂಕೋಚ ಪ್ರವೃತ್ತಿಯವರು, ಮಿತಭಾಷಿಗಳು. ಆತ್ಮೀಯರೆದುರು ಮಾತ್ರ ಮನಬಿಚ್ಚಿ ಮಾತಿಗೆ ತೊಡಗುವರು. ಅವರಿಗೆ ತುಸು ಮುಂಗೋಪ!

ವ್ಯಕ್ತಿಗಳ ಮೇಲೆ ಅಲ್ಲ; ಅಪ್ರಾಮಾಣಿಕತೆ, ವಂಚನೆ, ಕನ್ನಡಕ್ಕೆ ಆಗುವ ಅನ್ಯಾಯಗಳ ಕುರಿತು. ಆ ಸಿಟ್ಟು ಅನೇಕ ವೇಳೆ ಅವರನ್ನು ಅಂತರ್ಮುಖಿ ಯನ್ನಾಗಿ ಮಾಡುತ್ತದೆ. ಆಗ ತೀವ್ರವಾಗಿ ಸ್ಪಂದಿಸುತ್ತ, ಅದರ ಮಥನ-ಮಂಥನಕ್ಕೆ ತೊಡಗುತ್ತಾರೆ; ಲೇಖನಿಯನ್ನು ಕೈಗೆತ್ತಿಕೊಳ್ಳುತ್ತಾರೆ.

ಬಲ್ಲಾಳರು ಉತ್ತಮ ವಕ್ತಾರರು. ತಮ್ಮ ಮಾಗಿದ ವಿಚಾರ ಸರಣಿ ಯಿಂದಾಗಿ ತಿಳಿಹೇಳುವ ರೀತಿಯ ಆತ್ಮೀಯವೆನಿಸುವ ಶೈಲಿಯಿಂದಾಗಿ ಅವರು ಮುಂಬಯಿಯ ಕನ್ನಡ ವಾಗ್ಮಿಗಳಲ್ಲಿಯೆ ಅತಿ ಹಿರಿಯರೆನಿಸಿದ್ದಾರೆ. ಇಲ್ಲಿಯ ಸಂಘ - ಸಂಸ್ಥೆಗಳಲ್ಲಿ ಅವರಷ್ಟು ಭಾಷಣ ಮಾಡಿದ, ಮಾಡುತ್ತಿರುವ ಕನ್ನಡ ಲೇಖಕರು ಇನ್ನಾರೂ ಇಲ್ಲ.

ಬಲ್ಲಾಳರ ಮುಖ್ಯ ಕರ್ತವ್ಯವಾದ ಬರವಣಿಗೆಗೆ ಬರೋಣ. ಅವರು ಕಾದಂಬರಿಕಾರರು, ಕಥೆಗಾರರು ಮಾತ್ರವೆ ಅಲ್ಲ, ರಾಜಕೀಯ ವಿಡಂಬನೆ, ಮುಂಬಯಿ ಕನ್ನಡಿಗರ ಸಮಸ್ಯೆಗಳ ವಿವೇಚನೆ, ತಾತ್ವಿಕ ಚಿಂತನೆ, ಗ್ರಂಥ ವಿಮರ್ಶೆ, ರೇಡಿಯೋ ಭಾಷಣ, ನಾಟಕ, ಪ್ರವಾಸ ಕಥನ - ಮುಂತಾದ ವಿವಿಧ ಬಗೆಯ ಬರಹಗಳು ಅವರ ಲೇಖನಿಯಿಂದ ಮೂಡಿಬಂದಿವೆ. ಬಲ್ಲಾಳರು ಇಂಗ್ಲಿಷ್‌ನಲ್ಲಿಯೂ ಚೆನ್ನಾಗಿ ಬರೆಯಬಲ್ಲರು ; ಬಿಡಿ ಲೇಖನ ಗಳನ್ನು, ಕಥೆಗಳನ್ನು ಪ್ರಕಟಿಸಿದ್ದಾರೆ.

ಆದರೆ ನಾಲ್ಕು ದಶಕಗಳಿಗೆ ಮಿಕ್ಕಿದ ಕಾಲಾವಧಿಯಲ್ಲಿ, ಅದೂ ಬರಹವೇ ಮುಖ್ಯ ಪ್ರವೃತ್ತಿ-ಇದ್ದಾಗ, ಇದಿಷ್ಟು ಬರವಣಿಗೆ ಮೊತ್ತದಲ್ಲಿ ಒಂದು ಲೆಕ್ಕವೇ ಅಲ್ಲ. ಅದನ್ನು ಅವರು ಒಂದು ಪ್ರವೃತ್ತಿಯನ್ನಾಗಿ ಪರಿವರ್ತಿಸಬಹುದಿತ್ತು. ಆದರೆ ಯಾವಾಗಲೂ ಉತ್ತಮ ದರ್ಜೆಯದನ್ನೇ ಬರೆಯುವ ಹಟ ಅವರದು. ಎಂತಲೇ ಅವರ ಬರಹಗಳಿಗೆ ಮನ್ನಣೆ ಸಿಕ್ಕುತ್ತಲೇ ಬಂದಿದೆ. ಅವರ ಹೆಚ್ಚಿನ ಕೃತಿಗಳಿಗೆ ಸಾಹಿತ್ಯ ಅಕಾಡೆಮಿಗಳ ಪುರಸ್ಕಾರ ದೊರೆತಿದೆ. ನಮ್ಮ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ವಿಶೇಷ ಗೌರವ ಸಂದಿದೆ (1983). ಅವರನ್ನು ಮೆಚ್ಚಿರುವ ವಾಚಕ ಸಮುದಾಯ ಅತಿ ದೊಡ್ಡದು. ವಿಮರ್ಶಕರು ಅವರ ಯಾವುದೇ ಕೃತಿ ಇರಲಿ, ಎತ್ತರದ ಮಟ್ಟದಲ್ಲಿಯೇ ಅವಲೋಕಿಸುತ್ತಾರೆ. 'ಬಂಡಾಯ' ಕಾದಂಬರಿಗೆ ಬಹುಮಾನ ಸಿಗುವುದಕ್ಕೆ ಮುಂಚೆಯೇ 1986ರಲ್ಲಿ, ಅವರ ವ್ಯಕ್ತಿತ್ವ ಹಾಗೂ ವಾಙ್ಮಯದ ಕುರಿತು ವಿಚಾರ ಸಂಕಿರಣವು ಬೆಂಗಳೂರಿನಲ್ಲಿ ಏರ್ಪಟ್ಟಿದ್ದಿತು. ಉಡುಪಿ ಯಲ್ಲಿಯೂ 1987ರಲ್ಲಿ ಇಂಥ ಸೆಮಿನಾರ್ ಜರುಗಿ, ಆ ಪ್ರಬಂಧಗಳ ಸಂಕಲನವೂ ಪ್ರಕಟವಾಗಿದೆ. ಈಚೆಗೆ ಜನವರಿ 1988ರಲ್ಲಿ ನೆರವೇರಿದ ಮದ್ರಾಸ ಕನ್ನಡಿಗರ ಸಮ್ಮೇಳನಕ್ಕೆ ಬಲ್ಲಾಳರು ಅಧ್ಯಕ್ಷರಾಗಿದ್ದರು. ಬಲ್ಲಾಳ ರನ್ನು ಪ್ರೀತಿ, ಆದರಗಳಿಂದ ಕಾಣುವ ಸಾಹಿತ್ಯಕ ಮಿತ್ರರ ಸಂಖ್ಯೆಯೂ ಸಾಕಷ್ಟು ದೊಡ್ಡದು. ಅಂಥವರು ಮುಂಬಯಿ ಮಾತ್ರವಲ್ಲ, ಕರ್ನಾಟಕದ ದೂರದ ಊರುಗಳಲ್ಲಿಯೂ ಇದ್ದಾರೆ; ದೇಶದಲ್ಲಿ ಮಾತ್ರವಲ್ಲ, ವಿದೇಶ ಗಳಲ್ಲಿಯೂ ಇದ್ದಾರೆ. ಆ ಬಾಂಧವ್ಯವನ್ನು ಮೆಲುಕು ಹಾಕುವುದೆಂದರೆ ಬಲ್ಲಾಳರಿಗೆ ಖುಷಿ ಕೊಡುವ ವಿಷಯ.

ಅವರ ಕೃತಿಗಳಿಗೆ ಎಲ್ಲ ರೀತಿಯಿಂದ ಪ್ರೇರಣೆಯೊದಗಿಸಿದ್ದುದು ಮುಂಬಯಿ. ಈ ನಗರದಲ್ಲಿ ವಾಸಿಸದೇ ಅವರು ಬೇರೆ ಎಲ್ಲಿ ಇದ್ದರೂ ಇಷ್ಟು ದೊಡ್ಡ ಲೇಖಕರಾಗುತ್ತಿದ್ದಿಲ್ಲ. ಹಾಗೆ ನೋಡಿದರೆ, ಈ ಮಹಾಶ ಹರಿನಲ್ಲಿ ಅನೇಕ ಕನ್ನಡಿಗರು, ಬುದ್ಧಿಜೀವಿಗಳೂ ಸೇರಿದಂತೆ-ಬಾಳಿದ್ದಾರೆ. ಆದರೆ ಇಲ್ಲಿಯ ಬದುಕಿಗೆ ಸ್ಪಂದಿಸದೇ ನಡುಗಡ್ಡೆಯಲ್ಲಿರುವಂತೆ ಅವರ ಬದುಕು. ಬಲ್ಲಾಳರೋ ತಮ್ಮ ಉದ್ಯೋಗದ ಚರ್ಯೆಯ ಮೂಲಕ, ನೆರೆಯವರು - ಒಡನಾಡಿಗಳು - ಮಿತ್ರರ ಮೂಲಕ, ಅದರಂತೆ ಪತ್ರಿಕಾ ವಾಚನದ ಮೂಲಕ, ಈ ನಗರದ ಸಂಕೀರ್ಣತೆಯನ್ನು, ವೈಲಕ್ಷಣ್ಯಗಳನ್ನು ಇತರರಿಗಿಂತ ಹೆಚ್ಚು ಆಳವಾಗಿ ಅರಿತಿದ್ದಾರೆ.

ಇಲ್ಲಿಯ ಮಧ್ಯಮ ವರ್ಗದ್ದೇ ಒಂದು ವಿಶಿಷ್ಟ ರೀತಿಯ ಬದುಕು. ಬೇರಾವ ಜಿಲ್ಲೆ, ತಾಲ್ಲೂಕಿನ ಸ್ಥಳಗಳಲ್ಲಿ ಅದು ಕಾಣ ಸಿಗದು. ಈ ವರ್ಗದ ಕುಟುಂಬ ವ್ಯವಸ್ಥೆ, ಆರ್ಥಿಕ ವ್ಯವಹಾರ, ಸಾಮಾಜಿಕ ರೀತಿ-ನೀತಿಗಳು ಯಾವುದೇ ಲೇಖಕನಿಗೆ ಚಾಲೆಂಜ್ ಸ್ವರೂಪದವಾಗಿವೆ. ಇಲ್ಲಿಯವರು ಜನನಿ ಬಿಡತೆಯಲ್ಲಿಯೂ ಅನುಭವಿಸುವ ಏಕಾಕಿತನ, ಕೂಡಿ ಬಾಳುವೆ ಸಾಗಿ ಸುತ್ತಿದ್ದರೂ ಬೇರೆಯಾದ ಮನಸ್ಸು; ಗಂಡಹೆಂಡಿರಾಗಿದ್ದರೂ ಅವರ ವಿಶಿಷ್ಟವಾದ ಯೌವನ (Sex); ನಲಿವಿನಲ್ಲಿಯೂ ಅನುಭವಿಸುವ ನೋವು- ಇವೆಲ್ಲ ಬಲ್ಲಾಳರ ಕಥನಾತ್ಮಕ ವಿಶ್ಲೇಷಣೆಗೆ ಆಹಾರವಾಗಿ ಒದಗಿಬಂದಿದೆ. ಇತ್ತ ಶ್ರಮಜೀವಿಗಳ ಬದುಕಿನ ಬಗೆಯನ್ನೂ ಬಲ್ಲಾಳರು ಅರಿತಿದ್ದಾರೆ. ಅಂತೂ ಅವರ ಜೀವನದೃಷ್ಟಿಯನ್ನು ಮತ್ತು ಲೇಖನಿಯ ದಿಸೆಯನ್ನು ಮುಂಬಯಿಯೇ ರೂಪಿಸಿದೆ. ಅದಕ್ಕೆ ಪ್ರತಿಯಾಗಿ ಬಲ್ಲಾಳರು ಮುಂಬಯಿ ಯನ್ನೇ ತಮ್ಮ ಕೃತಿಗಳಲ್ಲಿ ಹೆಚ್ಚಾಗಿ ಚಿತ್ರಿಸಿ, ಋಣ ತೀರಿಸಿದ್ದಾರೆ.

ಇದೇ ಪ್ರಮೇಯವು 'ನುಡಿ' ಪತ್ರಿಕೆಯೊಡನೆಯ ಅವರ ಸಂಬಂಧಕ್ಕೂ ಅನ್ವಯಿಸುವುದು. 'ನುಡಿ'ಯನ್ನು ದೇಶಸೇವಾ ಬುದ್ಧಿಯ ಕೆಲವರು ಆರಂಭಿಸಿದ್ದರು. ಸ್ವಾತಂತ್ರ್ಯ ಚಳವಳಿಯ ಮುಗಿತಾಯದ ಹಂತಕ್ಕೆ ಬಂದು, ಪರಾಡಳಿತವೂ ಕೊನೆಗೊಳ್ಳಲಿದ್ದ ಕಾಲವದು (1946). 'ನುಡಿ' ಬಳಗದವರು ರಾಜಕೀಯ ಪ್ರಜ್ಞೆಯುಳ್ಳ ಕೆಚ್ಚೆದೆಯವರು. ಜನಜಾಗೃತಿಯೊಂದನ್ನೇ ಗುರಿಯಾಗಿಟ್ಟುಕೊಂಡು ಯಾವ ಆರ್ಥಿಕ ಬಂಡವಾಳ ಇಲ್ಲದೆ ಈ ಪತ್ರಿಕೆ ಯನ್ನು ಆರಂಭಿಸಿದರು. ತಾನೊಬ್ಬ ಪತ್ರಿಕೋದ್ಯಮಿಯಾಗಬೇಕೆಂದು ಬಲ್ಲಾಳರು ಉಡುಪಿಯಲ್ಲಿದ್ದಾಗಲೇ ಕನಸು ಕಾಣುತ್ತಿದ್ದರು. ಅಧ್ಯಯನ, ಚಿಂತನ ಹಾಗೂ ಲೇಖನ - ಇವು ಮೂರನ್ನೂ ಏಕಕಾಲಕ್ಕೆ ಚಲಾಯಿಸ ಬೇಕಾದ ಉದ್ಯಮವದು. ಮೇಲಾಗಿ ನಿರ್ಭೀತ ಪತ್ರಿಕೆಯೆಂದು 'ನುಡಿ' ಒಳನಾಡಿನಲ್ಲಿ ವಿಚಾರಶೀಲರನೇಕರ ಗಮನವನ್ನು ಸೆಳೆದಿತ್ತು. ಬಲ್ಲಾಳರು, ರಾಜಕೀಯ ವಿಷಯಗಳಲ್ಲಿ ತಮಗನಿಸಿದ್ದನ್ನು ನಿರ್ಭಿಡೆಯಿಂದ ಬರೆಯುವುದಕ್ಕೆ ಧಾರಾಳವಾದ ಅವಕಾಶ ದೊರೆಯಿತು. ಸಂಪಾದಕೀಯದ, ಅದರಂತೆ ತತ್ಕಾಲೀನ ಘಟನೆಗಳ ವಿಶ್ಲೇಷಣೆಯ ಬಹುಪಾಲು ಬರಹ ಅವರದೇ ಆಗಿತ್ತು. ಅಲ್ಲದೆ, ಹಲವು ಸ್ಥಿರಶೀರ್ಷಿಕೆಗಳನ್ನು ಅವರು ಆರಂಭಿಸಿದರು. 'ಪತ್ರಿಕೋದ್ಯಮಿಯ ಪತ್ರಗಳು', 'ಮಾನವತೆ ಸತ್ತಿಲ್ಲ', 'ಪಯಣದ ಹಾದಿಯಲ್ಲಿ' ಇತ್ಯಾದಿ. ನಿರಂಜನರು ಕನ್ನಡದ ಮೊದಲ ಅಂಕಣಕಾರರಾದರೆ (1945), ಬಲ್ಲಾಳರು ಈ ವಿಷಯದಲ್ಲಿ ನಿಶ್ಚಿತವಾಗಿ ಎರಡನೆಯವರು. ನಿರಂಜನರಷ್ಟೇ ವ್ಯಾಪಕವಾಗಿ ಅಂಕಣ ಲೇಖನಗಳನ್ನು ಬರೆದಿದ್ದಾರೆ.

'ನುಡಿ' ಪತ್ರಿಕೆಯಲ್ಲಿ ಮುಂಬಯಿಯ ಕಾರ್ಮಿಕ-ಶ್ರಮಿಕ ವರ್ಗದವರ ಸುದ್ದಿಗಾಗಿ, ಅವರ ಸಮಸ್ಯೆಗಳಿಗಾಗಿ ಒಂದು ಪುಟ ಮೀಸಲಿದ್ದಿತು. ಇತರರ ಜೊತೆಗೆ ಬಲ್ಲಾಳರು ಆ ಪುಟದಲ್ಲಿ ಬರೆಯುತ್ತಿದ್ದರು. ಇಷ್ಟೇ ಅಲ್ಲ, ಅದರಲ್ಲಿಯ 'ಕಿರು ಸಂಪಾದಕೀಯ'ವನ್ನು ಅವರೇ ಹೆಚ್ಚಾಗಿ ಬರೆಯು ತ್ತಿದ್ದರು. ಕಾರ್ಮಿಕ ರಂಗದಲ್ಲಿ ಬಲ್ಲಾಳರಿಗೆ ಮೊದಲಿನಿಂದಲೂ ಆಸಕ್ತಿ ಇದ್ದಿತೆನ್ನುವುದಕ್ಕೆ ಇದು ನಿದರ್ಶನ. ಅವರಂತಹ ಬಿಳಿಕಾಲರಿನವರು

'ಬಂಡಾಯ' ಕಾದಂಬರಿಯಲ್ಲಿ ಕಾರ್ಮಿಕ ಸಂಘರ್ಷವನ್ನೇಕೆ ಎತ್ತಿಕೊಂಡರೆಂದು ಕೇಳುವವರಿಗೆ ಉತ್ತರ ಇಲ್ಲಿದೆ.

ಹೀಗೆ ಆ ಪತ್ರಿಕೆಯನ್ನು ರೂಪಿಸುವಲ್ಲಿ, ಬೆಳೆಸುವಲ್ಲಿ ಬಲ್ಲಾಳರ ಪಾತ್ರ ಹಿರಿದು. ಅದಕ್ಕೆ ಪ್ರತಿಯಾಗಿ ಅವರ ವೈಚಾರಿಕ ಪ್ರಜ್ಞೆಯನ್ನು ಪ್ರಬುದ್ಧವಾಗಿಸಿದ ಶ್ರೇಯಸ್ಸು ಅದಕ್ಕೆ ಸಲ್ಲಬೇಕು. ಈ ಪತ್ರಿಕೆ ಕೇವಲ ನಾಲ್ಕೂವರೆ ವರ್ಷ ಮಾತ್ರ ಬಾಳಿದರೂ, ಸಿಂಹಗರ್ಜನೆಯನ್ನು ನೆನಪಿಗೆ ತರುವಂತೆ ರಾರಾಜಿಸಿತು. ಪತ್ರಿಕೆ ನಿಂತುಹೋದ ಮೇಲೆ, ನುಡಿಯ ಕಾರ್ಯಕರ್ತರೆಲ್ಲ ಚದುರಿದರು - ಮುಂಬಯಿಯಲ್ಲೇ ಇದ್ದರು. ಆದರೇನು ಬಲ್ಲಾಳರ ಮನದಾಳದಲ್ಲಿ 'ನುಡಿ' ತಳಮಳಗೊಳ್ಳುತ್ತಲೇ ಇತ್ತು. ಅದುವೆ ಘನೀಭೂತವಾಗಿ 'ಹೇಮಂತಗಾನ'ದಲ್ಲಿ ಹೊರಹೊಮ್ಮಿದೆ; ಈಚೆಗೆ ಬಲ್ಲಾಳರು, ಪತ್ರಿಕೋದ್ಯಮಕ್ಕೆ ನೇರವಾಗಿ ಸಂಬಂಧಿಸಿದ ಕಾದಂಬರಿಯೊಂದನ್ನು ಬರೆಯುತ್ತಿದ್ದು 'ನುಡಿ' ನಿಂತ ನಲ್ವತ್ತು ವರ್ಷಗಳಾದ ಮೇಲೆಯೂ, ಮತ್ತೆ ಅದು ಇಲ್ಲಿ ಮಾರ್ದನಿಗೊಂಡರೆ ಆಶ್ಚರ್ಯ ಪಡಬೇಕಾದ್ದಿಲ್ಲ.

## 2

ಬಲ್ಲಾಳರ ಕಥೆ-ಕಾದಂಬರಿಗಳನ್ನು ಓದಿದವರ ಸಂಖ್ಯೆ ಅಪಾರವಾದುದು. ಆದ್ದರಿಂದ ಅವುಗಳ ಪರಿಚಯ, ವಿಮರ್ಶೆಗಳ ಗೊಡವೆಗೆ ಹೋಗದೇ ಕೆಲವು ವೈಶಿಷ್ಟ್ಯಗಳನ್ನು ಮಾತ್ರ ಇಲ್ಲಿ ದಾಖಲಿಸುವೆ. ಅವರ ಸೃಜನಶೀಲ ಬರವಣಿಗೆಯ ಮೂಲಪ್ರವೃತ್ತಿ ಸಣ್ಣಕಥೆಯದ್ದು. ಯಾವುದೊಂದು ವಿಚಾರ, ಸಮಸ್ಯೆಗೆ ಕಥನಸ್ವರೂಪವನ್ನು ಕೊಡಬೇಕೆಂದು ಬಯಸಿದಾಗ ಅದನ್ನು ಕಥೆಯೊಂದರಲ್ಲಿ ಹೇಗೆ ತರಬೇಕೆಂದೇ ಅವರು ಯೋಚಿಸುತ್ತಾರೆ. ಸಣ್ಣಕಥೆಯ ಸೀಮಿತ-ಹರಹಿನಲ್ಲಿ ಅದನ್ನು ಹಿಡಿದಿಡಲು ಅಸಾಧ್ಯವೆಂದಾಗ ಅವರು ಕಾದಂಬರಿ ಪ್ರಕಾರವನ್ನು ಯೋಚಿಸಿಯಾರು. ನೆನಪಿಡಿ, ಅವರು ಬರೆದ ಕಾದಂಬರಿಗಳು ಐದು ಮಾತ್ರ. ಅದೇ ಸಣ್ಣಕಥೆಗಳ ಸಂಖ್ಯೆ ನೂರನ್ನು ದಾಟಿದೆ. ಇಂದು ಕೂಡಾ ಬಲ್ಲಾಳರನ್ನು ಭೆಟ್ಟಿಯಾದಾಗ "ಏನು ಬರೀತಾ ಇದ್ದೀರಿ?" ಎಂದು ಕೇಳಿದಲ್ಲಿ, "ಕಥೆ ಬರೀತಾ ಇದ್ದೇನೆ.... ಪತ್ರಿಕೆಯವರಿಗಾಗಿ" ಎಂದು ಹೇಳಿಯಾರು. ಹೌದು, ಅವರ 'ಸಂಪಗೆಯ ಹೂ' ಪ್ರಕಟವಾದಾಗಿನಿಂದ, ವಿಶೇಷ ಸಂಚಿಕೆಗಳಿಗಾಗಿ ಆ ಸಂಪಾದಕರು, ತಾವು ಆಮಂತ್ರಿಸಬೇಕಾದ ಲೇಖಕರ ಪಟ್ಟಿಯಲ್ಲಿ ಬಲ್ಲಾಳರ ಹೆಸರನ್ನು ಸೇರಿಸುವುದು ವಾಡಿಕೆಯಾಗಿಬಿಟ್ಟಿದೆ. ವಿಶೇಷವೆಂದರೆ ಬಲ್ಲಾಳರು ಕಳೆದ 45 ವರ್ಷಗಳಿಂದ ಕಥೆ ಬರೆಯುತ್ತಾ ಇದ್ದಾರೆ. ಹೀಗೆ ಏಕಪ್ರಕಾರವಾಗಿ ಇಷ್ಟು ದೀರ್ಘಕಾಲ ಕಥೆಯನ್ನು ಬರೀತಾ ಇದ್ದವರು ಅದೆಷ್ಟು ಜನ ಕನ್ನಡ ಕಥೆಗಾರರಿರಬಹುದು? ನನಗಂತೂ ಬೇರೆ ಹೆಸರು ಹೊಳೆಯುತ್ತಿಲ್ಲ. ಇವೆಲ್ಲ ಕಥೆಗಳಲ್ಲಿ, ಮುಂಬಯಿ ನಗರದ ಮಧ್ಯಮ ವರ್ಗೀಯರ ನೋವು ಮತ್ತು ನಲಿವು-ಇವೆರಡನ್ನೂ ಸಮಾನವಾಗಿಯೇ ಕಾಣುತ್ತೇವೆ. ಇನ್ನೊಂದೆಂದರೆ ಇಲ್ಲಿಯ ಪ್ರಮುಖ ಭಾಷಿಕರಾದ ಮರಾಠಿಗರ ಜೀವನವನ್ನು, ಅವರ ಕಾದಂಬರಿಗಳಿಗಿಂತ ಕಥೆಗಳಲ್ಲೇ ಹೆಚ್ಚಾಗಿ ಕಾಣುತ್ತೇವೆ.

ಬಲ್ಲಾಳರ ಕಾದಂಬರಿ-ಕಥೆಗಳಿಗೆ ಸಿಕ್ಕ ಮನ್ನಣೆ, ಇತರ ಕೃತಿಗಳಿಗೆ ಇದುವರೆಗೆ ದಕ್ಕಿಲ್ಲ. ಅವರ 'ಮಿಳ್ಳಿರಾಮಾಯಣ' - ಅದರ ಹೆಸರೇ ಸೂಚಿಸುವಂತೆ ಒಂದು ವಿಡಂಬನೆಯಾಗಿದೆ. ಹಿಂದೆ ಬಲ್ಲಾಳರು ರಾಜಕೀಯ ಕುರಿತು ಖಂಡತುಂಡವಾಗಿ 'ನುಡಿ'ಯಲ್ಲಿ ಬರೆಯುತ್ತಿದ್ದರಷ್ಟೆ. ಹಾಗೆ ಬರೆಯುವುದಕ್ಕೆ ಅವಕಾಶ ಇಲ್ಲದಿದ್ದಾಗ, ಬಲ್ಲಾಳರು ವಿಡಂಬನಾ ತಂತ್ರವನ್ನು ಬಳಸಿದರು. ಆದರೆ ಅದು ಅಷ್ಟು ಹರಿತವಾಗಿ, ಪರಿಣಾಮಕಾರಿಯಾಗುವಂತೆ ಮೂಡಿಬಂದಿಲ್ಲ. ಅಂಥ ಬರವಣಿಗೆಯನ್ನು ಅವರು ಮೊದಲಿನಿಂದಲೇ ರೂಢಿಸಿಕೊಂಡು ಬಂದಿದ್ದರೆ ಚೆನ್ನಾಗಿತ್ತೇನೊ. ಬಲ್ಲಾಳರ ಇನ್ನೊಂದು ಕಥನೇತರ ಕೃತಿ-'ನಾನೊಬ್ಬ ಭಾರತೀಯ ಪ್ರವಾಸಿ'. ಈಚೆಗೆ ಹೊರಬಂದ ಈ ಕೃತಿಯನ್ನು ನಾವು ಗಂಭೀರವಾಗಿ ಪರಿಗಣಿಸಬೇಕು. ವಿದೇಶಗಳಲ್ಲಿರುವ ಭಾರತೀಯರ ಬದುಕಿನ ಬಗೆ, ಅವರಲ್ಲಿಯ ಭಾರತೀಯತ್ವದ, ಅನನ್ಯತೆಯ ಹುಡುಕಾಟ-ಇವನ್ನು ಬಲ್ಲಾಳರು ಆಳವಾಗಿ ವಿಶ್ಲೇಷಿಸಿದ್ದಾರೆ - ಹಾಗೆ ನೋಡಿದರೆ, ಭಾರತದಲ್ಲೇ ಹೊರನಾಡುಗಳಲ್ಲಿ ನೆಲಸಿರುವ ಕನ್ನಡಿಗರೂ ತಮ್ಮ ಅನನ್ಯತೆ ಎಲ್ಲಿದೆ ಎಂದು ಕೇಳಿಕೊಳ್ಳ ಹಚ್ಚುತ್ತದೆ - ಈ 'ಪ್ರವಾಸ' ಕೃತಿ.

ಬಲ್ಲಾಳರು ಸಾಹಿತ್ಯ ಕುರಿತು ತಾತ್ವಿಕವಾಗಿ ವಿವೇಚಿಸಿದ್ದಾರೆ. ಅವು ಬಿಡಿಬಿಡಿಯಾಗಿ ಪ್ರಕಟವಾಗಿರುವುದರಿಂದ, ಆ ಬಗೆಗಿನ ಒಟ್ಟಂದದ ಸ್ವರೂಪ ಒಡೆದು ಕಾಣದು. ಸಾಹಿತ್ಯ ಮತ್ತು ಸೌಂದರ್ಯ ಮೀಮಾಂಸೆ; ಸಾಹಿತ್ಯದಲ್ಲಿ ಬದ್ಧತೆ, 'ವರ್ತಮಾನ' - ಇವೇ ಮುಂತಾದ ಅಂಶಗಳ ಚಿಂತನೆ ಅವುಗಳಲ್ಲಿ ವ್ಯಕ್ತವಾಗಿವೆ. ಇಲ್ಲಿ ಗಮನಿಸಬೇಕಾದ ಮಾತೆಂದರೆ, ಅವುಗಳ ಹಿಂದಿರುವ ಅಪ್ಪಟ ನಿಶ್ಚಿತತೆ, ಸ್ವೋಪಜ್ಞತೆಯೂ ಅದರ ಒತ್ತಿಗಿರುವುದರಿಂದ, ಅವರ ವಿಚಾರಗಳು ಗ್ರಾಹ್ಯವಾಗುತ್ತವೆ. ಇದೇ ನಿಮಿತ್ತದಿಂದ, ನಾವು ಅವರ ಸಾಹಿತ್ಯಸೃಷ್ಟಿಗೆ ಪ್ರೇರಣೆ ಇತ್ತ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಬಹುದು. ಅತಿ ಮುಖ್ಯ ಪ್ರೇರಣೆ ಎಂದರೆ ನಮ್ಮ ಬದುಕಿನ ವಿವಿಧ ಸ್ತರಗಳಲ್ಲಿಯ ಅಪ್ರಾಮಾಣಿಕತೆ. ಅದು ನಮ್ಮ ಜೀವನದ ಅವಿಭಾಜ್ಯ ಅಂಗವೆಂಬಂತೆ ಅಥವಾ ಅದರ ಅರಿವೇ ನಮಗಿಲ್ಲದಂತೆ ಈ ಅಪ್ರಾಮಾಣಿಕತೆಯು ಬೆಸೆದುಕೊಂಡುಬಿಟ್ಟಿದೆ. ಸರ್ವವ್ಯಾಪಿಯಾಗಿರುವ ಈ ವಿಷಯವು ಅವರನ್ನು ಹದಿಹರಯದಿಂದಲೇ ಕಾಡಿದೆ. ಇನ್ನೊಂದು ಪ್ರೇರಣೆ ಅವರಲ್ಲಿ ಅಷ್ಟೇ ಸಹಜಸ್ಫೂರ್ತವಾಗಿರುವ ಜೀವನೋಲ್ಲಾಸ ಹಾಗೂ ಅದರ ಹಿಂದಿರುವ ಸೌಂದರ್ಯಪ್ರಜ್ಞೆ.

ಅಪ್ರಾಮಾಣಿಕತೆ ಕಾಣಿಸಿಕೊಳ್ಳುವುದು ಹೇಗೆ? ಮನುಷ್ಯನ ಅಂತರಂಗಕ್ಕೂ ಬಹಿರಂಗಕ್ಕೂ ಸಾಂಗತ್ಯವಿಲ್ಲದಾಗ ತಾನೇ. ನಮ್ಮ ಆಸೆ-ಆಕಾಂಕ್ಷೆಗಳಿಗೆ ಬಾಹ್ಯಸ್ಥಿತಿ ಅನುಕೂಲಿಸದೇ ಹೋದಾಗಲೂ ಅಪ್ರಾಮಾಣಿಕತೆ ತಲೆದೋರುತ್ತದೆ. ಇಲ್ಲವೆ, ಯಾರೊಬ್ಬರ ಜನ್ಮಜಾತ ದುಷ್ಪ್ರವೃತ್ತಿಯೂ ಅದಕ್ಕೆ ಕಾರಣವಾಗಬಹುದು. ಅಂಥ ಸ್ಥಿತಿಯಲ್ಲಿ ಸುಳ್ಳು, ವಂಚನೆ, ಶೋಷಣೆ ನಿರಾತಂಕವಾಗಿ ನಡೆಯಬಹುದು. ಮುಂಬಯಿಯಂತಹ ನಗರದಲ್ಲಿ ಅದು ಇನ್ನೂ ಹೆಚ್ಚಾದ ಆಳ ಹರಹುಗಳನ್ನು ಪಡೆಯಬಲ್ಲದು. ಬಲ್ಲಾಳರಿಗೆ ಈ ಕುರಿತು ತಳಮಳವು ಉಕ್ಕಿ ಹರಿಯುತ್ತದೆ.

ಇಂಥದೇ ಇನ್ನೊಂದು ವೇದನಾಮಯ ಅಂಶವೆಂದರೆ ಸ್ತ್ರೀಯ ಅಸಹಾಯಕತೆ. ಅದೊಂದು ಬಗೆಯ ಸೂಕ್ಷ್ಮ ಶೋಷಣೆ. ಮಧ್ಯಮ ವರ್ಗದ ಮಹಿಳೆಗೆ ವೈಚಾರಿಕ ಸ್ವಾತಂತ್ರ್ಯ ಇಲ್ಲದಿರುವ ಅಸಹಾಯಕತೆ ಅದು. ಬಲ್ಲಾಳರ ಕೆಲವು ಸ್ತ್ರೀ ಪಾತ್ರಗಳು ಇಂಥ ಸ್ಥಿತಿಯನ್ನು ಎದುರಿಸಹೊರಟಿವೆ ('ಅನುರಕ್ತೆ'ಯ ಸುಮಿತ್ರ, 'ಹೇಮಂತಗಾನ'ದ ಭಾರತಿ, 'ಬಂಡಾಯ'ದ ನಯನಾ). ಆದರೆ ಇಂದಿನ ಸಮಾಜ ವ್ಯವಸ್ಥೆಯಲ್ಲಿ ಭದ್ರವಾಗಿ ನೆಲೆಗೊಂಡ ಅಪ್ರಮಾಣಿಕತೆಯನ್ನು ಎದುರಿಸುವ ಪ್ರಯತ್ನಗಳೆಲ್ಲ ವ್ಯರ್ಥವಾಗಬಹುದು. ಬಲ್ಲಾಳರ ಹೆಚ್ಚಿನ ಕಥನಗಳು 'ಟ್ರ್ಯಾಜೆಡಿ' ಆಗಿರುವ ಹಿನ್ನೆಲೆಯೇ ಇದು.

ಕೆಲವು ಕಥಾನಕಗಳಲ್ಲಿ ತೀವ್ರ ಪರಿಣಾಮವನ್ನುಂಟುಮಾಡುವ ದೃಷ್ಟಿಯಿಂದಲೂ ದುಃಖ, ಸಾವುಗಳು ಕಾಣಿಸಿಕೊಂಡಿವೆ ಎಂಬುದನ್ನು ಒಪ್ಪಬೇಕು.

3

ಅವರ ಬೌದ್ಧಿಕ ಹಾಗೂ ಸೃಜನಶೀಲತೆಯ ಸತ್ವವನ್ನೆಲ್ಲ ಹೀರಿ ಹೊರಹೊಮ್ಮಿದ ಕಾದಂಬರಿಗಳ ಬಗ್ಗೆ ಹೇಳಲು ಬೇಕಾದಷ್ಟು ವಿಷಯಗಳಿವೆ. ಇಲ್ಲಿ ಇನ್ಸಾಟ್-ಬಿ ರೀತಿಯ ವೇಗಾವಲೋಕನ ಮಾತ್ರಸಾಧ್ಯ. ಮೊದಲ ಕಾದಂಬರಿ 'ಅನುರಕ್ತೆ' ಶುದ್ಧಾಂಗವಾಗಿ ಸಾಂಸಾರಿಕ ಕಾದಂಬರಿ. ಪಾತ್ರಗಳು, ಸನ್ನಿವೇಶಗಳು ಉಡುಪಿ-ಮುಂಬಯಿಗಳ ಪರಿಸರದಲ್ಲಿ ಸುತ್ತಾಡುತ್ತವೆ. ಅಕ್ಕನಿಗಿಂತ (ಸುಮಿತ್ರೆ) ತಂಗಿಯ (ಪದ್ಮಾವತಿ) ಮದುವೆ ಮೊದಲು ನಡೆಯಬೇಕಾದ ಆವಿದ್ದ ಸನ್ನಿವೇಶದಲ್ಲಿ ಕಥೆ ಸುರುಳಿಯಾಗಿ ಬಿಚ್ಚಿಕೊಳ್ಳುತ್ತದೆ. ಶರಶ್ಚಂದ್ರರ ಸ್ತ್ರೀ ಪಾತ್ರಗಳನ್ನು ನೆನಪಿಗೆ ತರುವಂತಿದೆ.

ಆಮೇಲಿನ ಕಾದಂಬರಿ 'ಹೇಮಂತಗಾನ'ವು ಸ್ವಾತಂತ್ರ್ಯ ಸಾಧನೆಯ ಹಿನ್ನೆಲೆಯಲ್ಲಿ ರಚಿತವಾದದ್ದು. ಇಲ್ಲಿಯೂ ಉಡುಪಿಯಿಂದ ಮುಂಬಯಿಗೆ ಬಂದು ನೆಲೆಸಿದ ಹಿನ್ನೆಲೆಯಲ್ಲಿ ಪಾತ್ರ-ಸನ್ನಿವೇಶಗಳು ಮೈದಾಳಿವೆ. ಆದರೆ ಕೌಟುಂಬಿಕ ನೆಲೆಗಿಂತ ಇಲ್ಲಿ ಭಾವನಾಮಯವಾದ ಆದರ್ಶವು ವಾಸ್ತವ ಜಗತ್ತಿನ ಕಟುಸತ್ಯದೊಂದಿಗೆ ಹೋರಾಡಿ ಸೋತದ್ದರ ಚಿತ್ರಣವಿದೆ. ಜೊತೆಗೆ ವಾತ್ಸಲ್ಯ ಭಾವಕ್ಕೂ ಸಾಕಷ್ಟು ಇಂಬು ದೊರಕಿತು. ಕಾದಂಬರಿಯ ಓದುಗರ ಮನವನ್ನು ಆಳವಾಗಿ ಕಲಕುತ್ತದೆ.

ಮುಂದಿನ ಕಾದಂಬರಿ 'ವಾತ್ಸಲ್ಯಪಥ'ದಲ್ಲಿ ಬಲ್ಲಾಳರು ಮತ್ತೆ ಕೌಟುಂಬಿಕ ಪರಿಸರಕ್ಕೆ ಮಾರುಹೋಗಿದ್ದಾರೆ. ತನ್ನ ಅಂತಿಮ ಪರಿಣಾಮದಲ್ಲಿ ಅದು 'ಹೇಮಂತಗಾನ'ದಷ್ಟೇ ಗಾಢವಾದುದು. ಅಲ್ಲದೆ ಪಾತ್ರಚಿತ್ರಣದಲ್ಲಿ ಬಲ್ಲಾಳರು ಹಿಂದಿನ ಎರಡು ಕಾದಂಬರಿಗಳನ್ನು ಮೀರಿಸಿದ್ದಾರೆನಿಸುವುದು.

ಈ ಮತ್ತು ಮುಂದಿನ ಕಾದಂಬರಿ 'ಉತ್ತರಾಯಣ'ದ ಮಧ್ಯೆ ಹನ್ನೆರಡು ವರ್ಷಗಳ ಅಂತರವಿದೆ. ನನಗೆ ತಿಳಿದುಬಂದ ಮಟ್ಟಿಗೆ ಅದಕ್ಕೆ ನಿರ್ದಿಷ್ಟ ಕಾರಣವೇನೂ ಇಲ್ಲ. ಅವರ ಮನಸ್ಸಿಗೆ ತೃಪ್ತಿಯನ್ನೀಯುವ ರೀತಿಯಲ್ಲಿ ವಸ್ತುವೊಂದು ದೊರಕಿ, ಅದು ಸೂಕ್ತ ರೀತಿಯಲ್ಲಿ ಮೈದಾಳಿಕೊಂಡಿರಲಿಲ್ಲವೆಂದಷ್ಟೇ ಅದರ ಅರ್ಥ. ಅಂದ ಹಾಗೆ 'ಉತ್ತರಾಯಣ' ಶೀರ್ಷಿಕೆಯ ಸಾಂಕೇತಿಕತೆ ಅನೇಕರಿಗೆ ಸರಿಯಾಗಿ ತಿಳಿದಂತಿಲ್ಲ, ಉತ್ತರಾಯಣ ಕಾಲದಲ್ಲಿ ಸ್ವರ್ಗದ ಬಾಗಿಲು ತೆರೆದಿರುತ್ತದೆ. ಸ್ವರ್ಗಕ್ಕೆ ಹೋಗುವ ಸೋಪಾನವೇ ಸಾವು! ಮನುಷ್ಯನಿಗೆ ನಿಶ್ಚಿತವಾದ ಜೀವನ-ಧ್ಯೇಯ ಇಲ್ಲದಾಗ, ಬದುಕಿನ ಉತ್ತರಾರ್ಧದಲ್ಲಿ ಸೋಲು ಅನಿವಾರ್ಯವಾಗುತ್ತದೆ. ಕಥಾನಾಯಕಿಯರಲ್ಲಿ ಒಬ್ಬಳಾದ ರುಕ್ಮಿಣಿಯು ಆತ್ಮಹತ್ಯೆ ಮಾಡಿಕೊಳ್ಳುವುದರ ಸಮರ್ಥನೆ ಇದೇ ಆಗಿದೆ. ಅವಳ ಆತ್ಮಹತ್ಯೆ ಅಘಟಿತ ಘಟನೆ ಎನಿಸದಂತೆ-ಬಲ್ಲಾಳರು ಕಥೆಯನ್ನು ಬೆಳೆಸಿಕೊಂಡು ಹೋಗಿದ್ದಾರೆ. ಇಲ್ಲಿಯೂ ಅಕ್ಕ ತಂಗಿಯರೇ ಪ್ರಮುಖ ಪಾತ್ರಗಳು. ಆದರೆ 'ಅನುರಕ್ತೆ'ಯವರು ಎಳವಯದ, ಎಳೆಯ ಮನದ ಸೋದರಿಯರು. ಇಲ್ಲಿಯ ರುಕ್ಮಿಣಿ ಮತ್ತು ಹೇಮಾ ಬದುಕಿನ ಮೂಸೆಯಲ್ಲಿ ಹದಗೊಂಡವರು. ತಮ್ಮ ಅಪೇಕ್ಷೆಯಂತೆಯೇ ಬದುಕನ್ನು ರೂಪಿಸಿಕೊಳ್ಳಬೇಕೆಂಬ ಹಂಬಲವುಳ್ಳವರು. ಆದರೆ ಒಂದಿಲ್ಲೊಂದು ರೀತಿಯಲ್ಲಿ ಸೋಲುತ್ತಾರೆ. ಅಂದ ಹಾಗೆ ಈ ಕಾದಂಬರಿಯ ಪುರುಷ ಪಾತ್ರಗಳನ್ನು ಕುರಿತು ಬಂದ ಒಂದು ಅಭಿಪ್ರಾಯ ರಂಜನೀಯವಾಗಿದೆ: "ಇಲ್ಲಿ ಬರುವ ಐದೂ ಪುರುಷ ಪಾತ್ರಗಳು ತಮ್ಮತನವನ್ನು ಉಳಿಸಿಕೊಳ್ಳದೇ ಹೆಣ್ಣು ಪಾತ್ರದ್ವಯದ ಸುತ್ತ ಗಿರಿಗಿಟ್ಟಿಯಂತೆ ಸುತ್ತುತ್ತಿವೆ." ಇದರ ಸತ್ಯಾಸತ್ಯತೆ ಏನೇ ಇರಲಿ, ಬಲ್ಲಾಳರು ಈ ರೀತಿಯ ಹಸಿಬಿಸಿ ಪಾತ್ರಗಳನ್ನು ಚಿತ್ರಿಸುವವರೇ ಅಲ್ಲ ಎಂದು ಹೇಳತಕ್ಕುದು. ಅಷ್ಟೇ ಅಲ್ಲ, ಒಂದೇ ಪರಿಸರದಲ್ಲಿರುವ ಸಮಾನ ಪಾತಳಿಯ-ಎಂದರೆ ಅಕ್ಕ-ತಂಗಿ, ಅಣ್ಣ-ತಮ್ಮ, ಇಬ್ಬರು ಸಹೋದ್ಯೋಗಿಗಳು-ಇಂಥಲ್ಲಿ ಕೂಡ ಅವರು ಸ್ವಭಾವದ ಸೂಕ್ಷ್ಮಭೇದಗಳನ್ನು ಮರೆಯದೇ ಒಡಮೂಡಿಸುತ್ತಾರೆ.

ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಬಹುಮಾನಿತ 'ಬಂಡಾಯ'ವನ್ನು ಹಿಂದಿನ ನಾಲ್ಕೂ ಕಾದಂಬರಿಗಳಿಗೆ ಹೋಲಿಸಿ ಹೇಳುವುದಾದರೆ, ಅವರ ತಾತ್ವಿಕ ಚಿಂತನೆ, ವಸ್ತುವಿನ ಹರಹು ಮತ್ತು ಪಾತ್ರಸೃಷ್ಟಿ-ಇವು ಮೂರಲ್ಲಿಯೂ ನಮ್ಮ ಅಂದಾಜನ್ನು ಮೀರಿಸುವಂಥ ಪ್ರಗತಿಯನ್ನು ಅದರಲ್ಲಿ ಕಾಣುತ್ತೇವೆ. ಬಲ್ಲಾಳರು ಇಷ್ಟೊಂದು ಬೇರೆಯೇ ಆಗಿ ಬರೆಯ ಬಲ್ಲರೆ ಎಂದು ಒಂದು ಕ್ಷಣಕ್ಕೆ ಅನಿಸೀತು.

ಇಲ್ಲಿ ಚಿತ್ರತವಾದ ಮುಂಬಯಿ ಜೀವನ, ಅವರ ಹಿಂದಿನ ಕಾದಂಬರಿಗಳಲ್ಲಿ ಕಾಣಿಸಿಕೊಂಡದ್ದಿಲ್ಲ. ಕಾರ್ಮಿಕ ಸಂಘರ್ಷ ಎಂದೊಡನೆ ಕೆಂಪು ಬಾವುಟ, ಮುಷ್ಕರ, ಲಾಕ್‌ಔಟ್, ಸರಕಾರದ ಮಧ್ಯಸ್ಥಿಕೆ-ಮುಂತಾದ ಉಪಕ್ರಮಗಳಿರುತ್ತವೆಂಬ ಸಾಮಾನ್ಯ ಗ್ರಹಿಕೆ ನಮ್ಮದು. ಆದರೀಗ ಮುಂಬಯಿಯಲ್ಲಿ ಅದು ಹಿಂಸೆಯತ್ತ ಭರದಿಂದವಾಲುತ್ತಿದೆ. ಹಿಂಸೆಗೆ ಪ್ರತಿ-ಹಿಂಸೆ, ಅದರ ಹಿಂದೆ ಶೀತಲವಾಗಿ ಕೊರೆಯುವ ಕ್ರೌರ್ಯ. ಅದರ ಹಿಂದಿನ ಆರ್ಥಿಕ ಶೋಷಣೆಯ ನಾನಾ ಸ್ತರಗಳು, ಇದೆಲ್ಲದರ ಅನ್ವೇಷಣೆಯೇ ಈ ಕಾದಂಬರಿಗೆ ಪ್ರಚೋದನೆ. ತಮ್ಮ ಅಭಿವ್ಯಕ್ತಿಯ ಅತ್ಯಂತ ಪರಿಣಾಮಕಾರಿಯಾಗುವ ದೃಷ್ಟಿಯಿಂದ ಬಲ್ಲಾಳರು ಇಲ್ಲಿ ಪ್ರಜ್ಞಾಪ್ರವಾಹ ತಂತ್ರವನ್ನು ಬಳಸಿದ್ದಾರೆ. ಕಥಾನಾಯಕ ರಾಜೀವನ ಮನಸಾಕ್ಷಿ ಎಂಬಂತೆ ಬಂದ ಯಾಮಿನಿಯ ಚಿತ್ರಣ; ಬಂಡುಗಾರ್ತಿ ನಯನಾ; ಉರಿಹತ್ತಿಕೊಂಡು ಸತ್ತ ಆ ಕಲ್ಯಾಣಿ; ನೇರವಾಗಿ ಬಾರದಿದ್ದರೂ ಭಯ ಹುಟ್ಟಿಸುವ ದೇಶಪಾಂಡೆ! ಈ ಪಾತ್ರ ವೈವಿಧ್ಯವಲ್ಲದೆ, ಭರದಿಂದ ಸಾಗುವ ಘಟನೆಗಳಿವೆ. ನಾವು ಎಷ್ಟೇ ನಿರ್ಲಿಪ್ತತೆಯಿಂದ, ಇಲ್ಲವೆ ಬರೀ ಮನೋರಂಜನೆಯ ದೃಷ್ಟಿಯಿಂದ ಕಾದಂಬರಿಯನ್ನು ವಾಚಿಸಿದರೂ, ತನ್ನ ತಿರುಗಣಿ ಮಡುವಿನಲ್ಲಿ ಅದು ನಮ್ಮನ್ನು ಸಿಕ್ಕಿಸಿ ಹಾಕುತ್ತದೆ.

'ಬಂಡಾಯ'ವು ಅಪ್ಪಟ ರಾಜಕೀಯ ಕಾದಂಬರಿ; ಮುಂಬಯಿಯ ಕಾರ್ಮಿಕ ಸಂಘರ್ಷವನ್ನು ಇದರಷ್ಟು ಸಾಂದ್ರವಾಗಿ ಚಿತ್ರಿಸಿದ ಕಾದಂಬರಿ, ಅಲ್ಲಿಯ ಇತರ ಸೋದರ ಭಾಷೆಯಲ್ಲಿ (ಮರಾಠಿ, ಗುಜರಾತಿ, ಹಿಂದಿ) ಇದುವರೆಗಂತೂ ಬಂದಿಲ್ಲ– ಎಂಬುದಾಗಿ ಬೇರೆಡೆ ಹೇಳಿದ್ದನ್ನು ಪುನರುಚ್ಚರಿಸುವೆ. ಈ ಕೃತಿಯ ಬಗ್ಗೆ ಇದಕ್ಕೂ ಹೆಚ್ಚು ಹೇಳಹೋಗದೆ, ಒಂದು ಅಂಶವನ್ನು ಮಾತ್ರ ಪ್ರಸ್ತಾಪಿಸುವೆ: ಅದೆಂದರೆ ಇಲ್ಲಿ ಬರುವ ಕಮ್ಯುನಿಸ್ಟ್ ಪ್ರಣಾಲಿ, ನಕ್ಸಲೈಟ್ ವಿಧಾನ - ಮುಂತಾದ ರಾಜಕೀಯ ಅಂಶಗಳನ್ನು ಪೂರ್ವಭಾವಿಯಾಗಿ ಅರಿತಿದ್ದರೆ ಒಳ್ಳೆಯದು. ಇವನ್ನು ಅರೆಬೆಂದ ರೀತಿಯಲ್ಲಿ ತಿಳಿದಿದ್ದರೆ, ಕಾದಂಬರಿ ಅರ್ಥವಾಗುವುದರ ಬದಲು ಅಪಾರ್ಥವಾಗುವ ಸಂಭವವೂ ಇದೆ. ಉದಾಹರಣೆಗೆ, ರಾಜೀವನು ಮತ್ತೆ ಹಿಂಸೆಗೆ ಎಳಸಿದನೆಂಬ ಅಥವಾ ಸೋತು ತನ್ನ hide outಗೆ ಹಿಂತಿರುಗಿದನೆಂಬ ವಿಮರ್ಶಕೀಯ ಅಭಿಪ್ರಾಯ. ಅದು ಸರಿಯಾದ ನಿಲುಮೆಯಲ್ಲ.

ರಾಜೀವನ ಪಾತ್ರವನ್ನು ಬಲ್ಲಾಳರು ಅತ್ಯಂತ ನಿಚ್ಚಳವಾದ ತಾತ್ವಿಕ ಪ್ರಣಾಲಿಯಲ್ಲಿ, ಆದರೆ ಜೀವಂತವಾಗಿ ರೂಪಿಸಿದ್ದಾರೆ ಎನ್ನುವುದನ್ನು, ನಾನು ಅವರೊಡನೆಯೆ ಚರ್ಚೆಯಲ್ಲಿ ಮನಗಂಡಿದ್ದೇನೆ. ಏನಿದ್ದರೂ, ಅವನ ಬಗ್ಗೆ ಚರ್ಚೆ ನಡೆಯುತ್ತಲೇ ಇರುವುದು, ಕಾದಂಬರಿಕಾರನ ಸಾಮರ್ಥ್ಯವನ್ನು ಪರ್ಯಾಯವಾಗಿ ತೋರಿಸುತ್ತದೆ ಎನ್ನೋಣವೆ? 'ಬಂಡಾಯ'ವು, ಈಗ ದೊರೆತ ಅಖಿಲ ಭಾರತ ಮನ್ನಣೆಯನ್ನು ಮುಂದಿನ ಶತಮಾನದಲ್ಲಿ ಉಳಿಸಿ ಕೊಳ್ಳುವುದರಲ್ಲಿ ಸಂದೇಹವಿಲ್ಲ.

❑

## ಶಾಂತರಸ

ಪ್ರಭು ಖಾನಾಪುರೆ

ಹೈದ್ರಾಬಾದ ಕರ್ನಾಟಕದ ಹಿರಿಯ ತಲೆಮಾರಿನ ಲೇಖಕರಲ್ಲಿ ಶಾಂತರಸರು ಒಬ್ಬರು. ಕವಿಯಾಗಿ, ಕಥೆಗಾರರಾಗಿ, ಸಂಶೋಧಕರಾಗಿ, ಪತ್ರಕರ್ತರಾಗಿ, ಪ್ರಯೋಗಶೀಲ ಚಿಂತಕರಾಗಿ ಗಮನಾರ್ಹ ಕೆಲಸ ಮಾಡಿದ್ದಾರೆ. ಬಯಲುಸೀಮೆಯ ಎಡೆದೊರೆ ನಾಡಿನಲ್ಲಿ ಹುಟ್ಟಿ, ಹುಟ್ಟಿದ ನೆಲದಲ್ಲಿಯೇ ಗಟ್ಟಿಯಾಗಿ ನಿಂತು, ನಿಂತ ನೆಲದ ಸಂಸ್ಕೃತಿಯನ್ನು ಅಪಾರವಾಗಿ ಪ್ರೀತಿಸಿದ ಅಪರೂಪದ ಸಾಹಿತಿ. ಸಾಹಿತ್ಯದ ಹತ್ತು ಹಲವಾರು ಪ್ರಕಾರಗಳಲ್ಲಿ ಕೃಷಿಗೈದು, ವಿಶಿಷ್ಟ ಅನುಭವಗಳನ್ನು ಕಟ್ಟಿಕೊಟ್ಟು, ಈ ಪ್ರದೇಶದ ಸಮೃದ್ಧ ಸಾಹಿತ್ಯ ಪರಂಪರೆಗೆ ಹೊಸ ತಿರುವು ನೀಡಿದ್ದಾರೆ. ತಾವು ಬೆಳೆಯುವುದರ ಜೊತೆಗೆ ಇತರರನ್ನು ಬೆಳೆಸಿದ ಕೀರ್ತಿ ಇವರದು. ತನ್ನ ಪ್ರದೇಶಕ್ಕೆ ಅನ್ಯಾಯವಾದಾಗ ಪ್ರತಿಭಟಿಸಿ ತನ್ನತನವನ್ನು ಮೆರೆದು, ನಿಂತ-ನೆಲದೊಂದಿಗೆ ಗುರುತಿಸಿಕೊಂಡಿದ್ದಾರೆ. ಸಾಮಾಜಿಕ ಹೋರಾಟ, ಸಾಂಸ್ಕೃತಿಕ ಸಂಘ, ಸಾಹಿತ್ಯ ರಚನೆ, ಸಂಘಟನೆ ಮುಂತಾದವುಗಳಿಂದ ರೂಪಗೊಂಡ ಶಾಂತರಸರ ಬದುಕು ಮುಂದಿನ ಸಾಹಿತಿಗಳಿಗೊಂದು ಮಾದರಿ. ಬದುಕಿನುದ್ದಕ್ಕೂ ಬರೆದಿದ್ದಾರೆ, ಬರೆದಂತೆ ಬದುಕಿದ್ದಾರೆ.

ಹೆಂಬೇರಾಳ ರಾಯಚೂರು ಜಿಲ್ಲೆಯ ಒಂದು ಚಿಕ್ಕಹಳ್ಳಿಯ ಬಡ ಜಂಗಮ ಕುಟುಂಬದಲ್ಲಿ ಶಾಂತರಸರ ಜನನ. ತನ್ನ ಮನೆಯಲ್ಲಿ ಮತ್ತು ಸಮೀಪದ ಸಂಬಂಧಿಗಳ ಮನೆಯಲ್ಲಿ ಸಂಭವಿಸಿದ ಸರಣಿ ಸಾವು, ಬಡತನದ ಬರ್ಬರ ನೋವು ಇವುಗಳಿಗೆ ಬೇಸತ್ತು ಆತ್ಮಹತ್ಯೆಗೂ ಮನಸ್ಸು ಮಾಡಿ, ಕೊನೆಗೆ ಅದೆಲ್ಲವನ್ನು ಮೀರಿ ನಾಡಿನ ಶ್ರೇಷ್ಠ ಲೇಖಕರಲ್ಲೊಬ್ಬರಾಗಿ ಬೆಳೆದರು. 1924 ಎಪ್ರಿಲ್ 4ರಂದು ಚೆನ್ನಬಸವಯ್ಯ ಹಿರೇಮಠ ಮತ್ತು ಸಿದ್ಧಲಿಂಗಮ್ಮನವರ ಪ್ರೀತಿಯ ಮಗನಾಗಿ ಜನಿಸಿದ ಶಾಂತರಸ ಚಿಕ್ಕಂದಿನಲ್ಲಿ ಅತ್ಯಂತ ಚೂಟಿಯಾಗಿದ್ದ. ತಂದೆ ಚೆನ್ನಬಸವಯ್ಯ ಸಂಸ್ಕೃತ ಪಂಡಿತ, ವೈದಿಕ ವಿಧಿವಿಧಾನಗಳನ್ನು ಆಚರಿಸುವ ಕರ್ಮಠ. ಪಂಚಾಂಗ ಹೇಳುವುದು, ಯಂತ್ರ ಕಟ್ಟುವುದು, ದೆವ್ವ ಬಿಡಿಸುವುದನ್ನು ಮಾಡುತ್ತಿದ್ದ ತಂದೆಯನ್ನು ಶಾಂತರಸ ಪ್ರಶ್ನಿಸುತ್ತಿದ್ದ. ಕುಟುಂಬದ ನಿರ್ವಹಣೆಗೆ ಚೆನ್ನಬಸವಯ್ಯನವರು ಅನಿವಾರ್ಯವಾಗಿ ಈ ಕೆಲಸ ಮಾಡುತ್ತಿದ್ದರು. ಸಣ್ಣಪುಟ್ಟ ರೋಗಗಳಿಗೂ ದೇಶೀ ಔಷಧಿಯನ್ನು ಕೊಡುತ್ತಿದ್ದರು.

ಶಾಂತರಸರ ಬೆಳವಣಿಗೆಗೆ ಅವರ ಕುಟುಂಬದ ವಾತಾವರಣವು ಬಹುಮಟ್ಟಿಗೆ ಕಾರಣವಾಗಿದೆ. ತಂದೆ ಚೆನ್ನಬಸವಯ್ಯನವರು ಮನೆಯಲ್ಲಿ ವೇದಾಂತದ ಚರ್ಚೆ, ಅನುಭಾವ ಗೋಷ್ಠಿಗಳನ್ನು ನಡೆಸುತ್ತಿದ್ದರು. ಎಲ್ಲ ಜಾತಿಯ ಸುಮಾರು 20-25 ಜನ ಸೇರಿ, ಗೊಬ್ಬೂರ ಹಂಪಣ್ಣ, ಕೂಡಲೂರು ಬಸವಲಿಂಗ ಶರಣ, ನಿಜಗುಣ ಶಿವಯೋಗಿ, ಸರ್ಪಭೂಷಣ ಶಿವಯೋಗಿ, ಕಡಕೋಳ ಮಡಿವಾಳಪ್ಪ, ರಾಂಪುರದ ಬಕ್ಕಪ್ಪ, ನೀರಲಕೇರಿಯ ಬಸವಲಿಂಗ ಶರಣ ಮುಂತಾದ ಅನುಭಾವಿಗಳ ಪದಗಳನ್ನು ಹಾಡಿ, ಅವುಗಳನ್ನು ಚರ್ಚಿಸುತ್ತಿದ್ದರು. ಜೊತೆಗೆ ಜೈಮಿನಿಭಾರತ, ರಾಜಶೇಖರ ವಿಳಾಸ, ಶಬರ ಶಂಕರ ವಿಳಾಸ, ಅಮರ ಕೋಶಗಳನ್ನು ಓದಿ ಅರ್ಥೈಸುತ್ತಿದ್ದರು. ಹತ್ತು ಹದಿನೈದು ವರ್ಷಗಳವರೆಗೆ ನಡೆದ ಈ ಚರ್ಚೆಯನ್ನು ಬಾಲಕ ಶಾಂತರಸ ಕೇಳುತ್ತಿದ್ದ. ಅಂದು ಅವು ಅರ್ಥವಾಗದಿದ್ದರೂ ಮುಂದೆ ಅನುಭಾವ ಸಾಹಿತ್ಯದ ಬಗೆಗೆ ಅವರಲ್ಲಿ ಆಸಕ್ತಿಯನ್ನು ಕೆರಳಿಸಿತು.

'ಶಾಂತರಸ' ಎಂಬುದು ಕಾವ್ಯನಾಮ. ನಿಜವಾದ ಹೆಸರು ಶಾಂತಯ್ಯ. ಹಿರಿಯರು ಚೇಗರಕಲ್ ಬಿಟ್ಟು ಹೆಂಬೇರಾಳಕ್ಕೆ ಬಂದು ನೆಲಸಿದ ಕಾರಣಕ್ಕೆ ಅವರ ಮನೆತನವನ್ನು ಚೇಗರಕಲ್ ಎಂದೂ ಕರೆಯುತ್ತಾರೆ. ಮೂರು ವರ್ಷದ ಮಗುವಿರುವಾಗಲೇ ಶಾಂತಯ್ಯ ತಾಯಿಯನ್ನು ಕಳೆದುಕೊಂಡು ಅಕ್ಕ ಬೂದೆಮ್ಮ ಹಾಗೂ ಅಜ್ಜಿಯ ಪ್ರೀತಿ, ವಾತ್ಸಲ್ಯದಲ್ಲಿ ಬೆಳೆದ.

ಕಟ್ಟಾ ಸಂಪ್ರದಾಯಸ್ಥನಾಗಿದ್ದ ತಂದೆಯ ಧಾರ್ಮಿಕ ಆಚರಣೆಗಳನ್ನು ಶಾಂತರಸರು ಬಾಲ್ಯದಲ್ಲಿಯೇ ಪ್ರಶ್ನಿಸುತ್ತಿದ್ದರು. ಜಂಗಮರೆನ್ನುವ ಕಾರಣಕ್ಕೆ ತನಗಿಂತ ಹಿರಿಯರು ತನ್ನ ಕಾಲಿಗೆ ನಮಸ್ಕರಿಸುವುದನ್ನು ವಿರೋಧಿಸಿದರು. ಕಲಬುರ್ಗಿಯ ಆಸಫ್ ಗಂಜ ಶಾಲೆಯಲ್ಲಿ ಆರನೆಯ ತರಗತಿಯ ವಿದ್ಯಾರ್ಥಿಯಾಗಿದ್ದಾಗ 'ನಿಜಾಮನು ಸರ್ವಶ್ರೇಷ್ಠ, ಅವನೇ ಅನ್ನದಾತ, ಸೂರ್ಯಚಂದ್ರರಿರುವವರೆಗೂ ರಾಜ್ಯ ಮುಂದುವರೆಯಲಿ' ಎಂದು ದೇವರಲ್ಲಿ ಪ್ರಾರ್ಥಿಸುವ ಪ್ರಾರ್ಥನಾಗೀತೆಯನ್ನು ಹಾಡದೆ ಮೌನವಾಗಿ ನಿಂತು ಪ್ರತಿಭಟಿಸಿ ಡ್ರಿಲ್ ಮಾಸ್ತರನಿಂದ ಛಡಿಯೇಟು ತಿಂದರು. ಮುಸ್ಲಿಂ ಶಿಕ್ಷಕರು, ಹಿಂದು ವಿದ್ಯಾರ್ಥಿಗಳಿಗೆ ತೋರುತ್ತಿದ್ದ ತಾರತಮ್ಯವನ್ನು ಪ್ರಶ್ನಿಸಿ ಪ್ರತಿಭಟಿಸಿದ ಕಾರಣಕ್ಕೆ ಒಂಬತ್ತನೆಯ ತರಗತಿಯಲ್ಲಿ ಫೇಲಾಗಬೇಕಾಯಿತು. ಹೀಗೆ ಪ್ರತಿಭಟನಾ ಮನೋಭಾವನೆಯನ್ನು ಬಾಲ್ಯದಲ್ಲಿ ರೂಪಿಸಿಕೊಂಡರು.

ಶಾಂತರಸರು ಶಿಕ್ಷಣ ಪಡೆದದ್ದು ಒಂದು ಸಾಹಸದ ಕೆಲಸವೇ ಸರಿ. ಕಷ್ಟಕಾರ್ಪಣ್ಯಗಳನ್ನು ಕಟ್ಟಿಕೊಂಡು ದಾರಿ ಕ್ರಮಿಸಬೇಕಾಯಿತು. ಶಿಕ್ಷಣಕ್ಕಾಗಿ ತಿಮ್ಮಾಪುರ, ಹೆಂಬೇರಾಳ, ಶಿರವಾಳ, ಮುಷ್ಟೂರು, ಕಲಬುರ್ಗಿ, ರಾಯಚೂರು ಮತ್ತು ಲಾತೂರು ಮುಂತಾದ ಕಡೆಗಳಲ್ಲಿ ಅಲೆದಾಡಿದರು. ಅನುಕೂಲಸ್ಥರಲ್ಲದ ಶಾಂತರಸರು ಹೆಂಬೇರಾಳದಿಂದ ಎರಡು ಮೈಲು ದೂರದಲ್ಲಿರುವ ತಿಮ್ಮಾಪುರಕ್ಕೆ ಹೋಗಿ ಹಿಟ್ಟು ಬೇಡಿ, ಅಲ್ಲಿ ಆಪ್ತರ ಮನೆಯಲ್ಲಿ ನಡೆಯುವ ಶಾಲೆಯಲ್ಲಿ ಶಿಕ್ಷಣ ಪಡೆದರು. ಸರಕಾರಿ ಶಾಲೆಯಲ್ಲಿ ಕಲಿತವರಿಗೆ ಮಾತ್ರ ಸರಕಾರಿ ನೌಕರಿ ದೊರೆಯುತ್ತಿತ್ತು. ಆದ್ದರಿಂದ ಅನೇಕ ತೊಂದರೆಗಳ ಮಧ್ಯೆಯೂ ಕಲಬುರ್ಗಿ ಆಸಫ್‌ಗಂಜ್ ಶಾಲೆಯಲ್ಲಿ ಪ್ರವೇಶ ಪಡೆದರು. ವಾರದ ಮನೆಯಲ್ಲಿ ಊಟ ಮಾಡಿ ಶಿಕ್ಷಣ ಮುಂದುವರೆಸಿದರು.

1939ರ ಸುಮಾರಿಗೆ ಕಲಬುರ್ಗಿಯಲ್ಲಿ 'ವಂದೇಮಾತರಂ' ಚಳುವಳಿ ಪ್ರಾರಂಭವಾಯಿತು. ಶಾಂತರಸರು ಇದರಲ್ಲಿ ಭಾಗವಹಿಸಿದ ಕಾರಣಕ್ಕೆ ಶಾಲೆಯಿಂದ ಹೊರಬೀಳಬೇಕಾಯಿತು. ಅನಂತರ ರಾಯಚೂರಿನ ಹಮ್‌ದರ್ದ್ ಶಾಲೆಯಲ್ಲಿ ಪ್ರವೇಶ ಪಡೆದರು. ಇಲ್ಲಿ ಪಂಡಿತ್ ಸೂಗವೀರ ಶರ್ಮರಿಂದ ಒಳ್ಳೆಯ ಮಾರ್ಗದರ್ಶನ ದೊರೆಯಿತು. ಆದರೂ, ಅಲ್ಲಿನ ಮುಸ್ಲಿಂ ಶಿಕ್ಷಕರ ವರ್ತನೆಯನ್ನು ಪ್ರತಿಭಟಿಸಿದ ಕಾರಣಕ್ಕೆ ಒಂಬತ್ತನೆಯ ತರಗತಿಯಲ್ಲಿ ಫೇಲಾಗಬೇಕಾಯಿತು. ಮುಂದೆ ಲಾತೂರಿಗೆ ಹೋಗಿ ಅಲ್ಲಿ ಸುಡುಗಾಡು ಮಠದಲ್ಲಿದ್ದು, ಪ್ರಸಾದ ನಿಲಯದಲ್ಲಿ ಊಟ ಮಾಡಿ, ರಾಜಸ್ತಾನಿ ಮಾರವಾಡಿ ಹೈಸ್ಕೂಲ ಶಿಕ್ಷಣ ಮುಂದುವರಿಸಿದರು. 1944ರಲ್ಲಿ ಮೆಟ್ರಿಕ್ಯೂಲೇಶನ ಪಾಸಾದರು. 1945ರಲ್ಲಿ ರಾಯಚೂರಿನ ತಾರಾನಾಥ ಶಿಕ್ಷಣ ಸಂಸ್ಥೆಯ ಹಮ್‌ದರ್ದ್ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿ ವೃತ್ತಿ ಜೀವನ ಪ್ರಾರಂಭಿಸಿದರು. ಎಕ್ಸ್‌ಟರ್ನಲಾಗಿ 1950ರಲ್ಲಿ ಇಂಟರ್ ಮಿಡಿಯಟ್, 1953ರಲ್ಲಿ ಬಿ.ಎ., 1961ರಲ್ಲಿ ಬಿ.ಎಡ್., 1969ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ಪದವಿಯನ್ನು ಪಡೆದುಕೊಂಡರು. ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ, ಹೈಸ್ಕೂಲ ಶಿಕ್ಷಕರಾಗಿ, ಜ್ಯೂನಿಯರ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಕೊನೆಗೆ ಕಾಲೇಜಿನ ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿ 1981 ಎಪ್ರಿಲ್ 30ರಂದು ನಿವೃತ್ತಿಯನ್ನು ಹೊಂದಿದರು.

ಶಾಂತರಸರು ತಮ್ಮ ವೃತ್ತಿಜೀವನದಲ್ಲಿ ಉತ್ತಮ ಶಿಕ್ಷಕರಾಗಿ, ದಕ್ಷ ಆಡಳಿತಗಾರರಾಗಿ, ಶಿಕ್ಷಣ ಸಂಸ್ಥೆಯ ಅಭಿವೃದ್ಧಿಗಾಗಿ ಸಾಕಷ್ಟು ದುಡಿದಿದ್ದಾರೆ. ಪ್ರತಿಭಾನ್ವಿತ ವಿದ್ಯಾರ್ಥಿಗಳನ್ನು ಗುರುತಿಸಿ ಅವರ ಏಳ್ಗೆಗಾಗಿ ಶ್ರಮಿಸಿದ್ದಾರೆ. ಕಾಲೇಜಿನ ಆವರಣದಲ್ಲಿ ಎಲ್ಲ ವಿದ್ಯಾರ್ಥಿಗಳನ್ನು ಒಂದೆಡೆ ಕೂಡಿಸಿ, ಹಾಡುವ, ಕುಣಿಯುವ, ಮಿಮಿಕ್ರಿ ಮಾಡುವ, ಭಾಷಣ ಮಾಡುವ ವಿದ್ಯಾರ್ಥಿಗಳನ್ನು ಗುರುತಿಸಿ ಪ್ರೋತ್ಸಾಹಿಸುತ್ತಿದ್ದರು. ಅವರ ಬೆಳವಣಿಗೆಗೆ ಸಂಸ್ಥೆಯಿಂದಲೂ, ಅನೇಕ ವೇಳೆ ತಮ್ಮ ಕೈಯಿಂದಲೂ ಹಣ ಖರ್ಚು ಮಾಡಿದ್ದಾರೆ. ಶಾಂತರಸರ ಕೈಯಲ್ಲಿ ಕಲಿತ ಎಷ್ಟೋ ವಿದ್ಯಾರ್ಥಿಗಳು ಸಾಹಿತಿಗಳಾಗಿ, ಸಂಗೀತಗಾರರಾಗಿ, ನಾಡಿನಲ್ಲಿ ಅಷ್ಟೇ ಅಲ್ಲ ರಾಷ್ಟ್ರೀಯ ಅಂತರ್ ರಾಷ್ಟ್ರೀಯ ಖ್ಯಾತಿಯನ್ನು ಪಡೆದಿದ್ದಾರೆ.

ಶಾಂತರಸರ ಜೀವನವನ್ನು ಮೂರು ಸ್ತರಗಳಲ್ಲಿ ವಿಭಾಗಿಸಿ ನೋಡಬಹುದು. ಇವರು ತಮ್ಮ ಬದುಕಿನ ತುಂಬ ಸಾಹಿತ್ಯ, ಸಂಘಟನೆ ಹಾಗೂ ಸಂಸ್ಕೃತಿಯ ಪುರೋಭಿವೃದ್ಧಿಗೆ ದುಡಿದು ಬದುಕಿನ ಪ್ರತಿಕ್ಷಣವನ್ನು ಅರ್ಥಪೂರ್ಣವಾಗಿ ಬಳಸಿಕೊಂಡಿದ್ದಾರೆ. ಬರೆದದ್ದು ಕಡಿಮೆ, ಬರೆಸಿದ್ದೇ ಹೆಚ್ಚು. ತಾನು ಮಾಡುವ ಸಾಹಿತ್ಯಕ ಚಟುವಟಿಕೆಗಳಲ್ಲಿ ಸಂಗಡಿಗರನ್ನು, ಯುವಕರನ್ನು ಸೇರಿಸಿಕೊಂಡು ಆ ಕ್ಷೇತ್ರದಲ್ಲಿ ಅವರ ಹೆಸರು ನಿಲ್ಲುವಂತೆ ಮಾಡಿದ್ದಾರೆ. ಸ್ವಾಭಿಮಾನಿ ಶಾಂತರಸ ಅನ್ಯಾಯವನೆಂದೂ ಸಹಿಸಲಿಲ್ಲ. ತನ್ನ ನೆಲಕ್ಕಾಗುವ ಯಾವುದೇ ಅನ್ಯಾಯವನ್ನು ಮತ್ತು ತಾರತಮ್ಯವನ್ನು ಕಂಡು ಸುಮ್ಮನೆ ಕುಳಿತಿಲ್ಲ. ಅದರ ವಿರುದ್ಧ ಧ್ವನಿ ಎತ್ತಿದ್ದಾರೆ; ಬೀದಿಗಿಳಿದು ಹೋರಾಡಿದ್ದಾರೆ. ಯಾವಾಗಲೂ ಚಿಂತನ ಮಂಥನಗಳಲ್ಲಿ ತನ್ನನ್ನು ತೊಡಗಿಸಿಕೊಂಡು ನಾಡಿನ ಸಾಹಿತ್ಯದ ಏಳ್ಗೆಗೆ ಚಿಂತಿಸುತ್ತ, ಬಂದವರೊಡನೆ ಬೆರೆಯುತ್ತ ಇರುವ ಶಾಂತರಸರು ಮೇಲುನೋಟಕ್ಕೆ ಹೆಸರಿಗೆ ತಕ್ಕಂತೆ ಶಾಂತವಾಗಿದ್ದಾರೆಂದು ಅನಿಸಿದರೂ, ಅವರೆಂದೂ ಶಾಂತವಾಗಿಲ್ಲ. ಸಾಹಿತ್ಯ ಕ್ಷೇತ್ರದಲ್ಲಿ ನಡೆಯುವ ಅನ್ಯಾಯ, ಪಕ್ಷಪಾತ, ಅನಾರೋಗ್ಯಕರ ಬೆಳವಣಿಗೆ, ಭಾಷೆ, ನೆಲ, ಜಲಗಳ ಮೇಲಾಗುವ ಅನ್ಯಾಯ ಮತ್ತು ಸರಕಾರ ತಳೆದ ಮಲತಾಯಿ ಧೋರಣೆಯನ್ನು ಸಹಿಸಿಕೊಂಡು ಮೌನವಾಗಿ ಕುಳಿತವರಲ್ಲ. ಜನರನ್ನು ಸಂಘಟಿಸಿ ನ್ಯಾಯಕ್ಕಾಗಿ ಹೋರಾಟವನ್ನು ಮಾಡಿದ್ದಾರೆ.

ಶಾಂತರಸರು ಸಂಘಟನಾ ಚತುರರು. ಎಂಥ ಜವಾಬ್ದಾರಿಯು ತಮ್ಮ ಪಾಲಿಗೆ ಬರಲಿ ಅದನ್ನು ಸವಾಲಾಗಿ ಸ್ವೀಕರಿಸುತ್ತಾರೆ. ಆತ್ಮೀಯ ಗೆಳೆಯರಾಗಿದ್ದ ವೀರಣ್ಣಗೌಡ ನೀರಮಾನ್ವಿ ಮತ್ತು ಚೆನ್ನಬಸವಪ್ಪ ಬೆಟ್ಟದೂರರನ್ನು ಕೂಡಿಕೊಂಡು ರಾಯಚೂರಿನ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರವನ್ನು ಜೀವಂತವಾಗಿಟ್ಟರು. ಮದುವೆ, ಪುರಾಣ, ಪುಣ್ಯತಿಥಿ, ಜಯಂತಿ, ಹಬ್ಬದಂಥ ಸಂದರ್ಭಗಳನ್ನು ಬಳಸಿಕೊಂಡು ಸಾಂಪ್ರದಾಯಿಕ ಆಚರಣೆಗಳನ್ನು ಸಾಹಿತ್ಯ ಮತ್ತು ಸಾಂಸ್ಕೃತಿಕ ಉತ್ಸವಗಳನ್ನಾಗಿ ಆಚರಿಸಿದರು. ಮದುವೆಯಲ್ಲಿ ದುಂದು ವೆಚ್ಚ ಮಾಡುವ ಶ್ರೀಮಂತರ ಮನವೊಲಿಸಿ ಮದುವೆಯ ನೆನಪಿಗೆ ಗ್ರಂಥಗಳನ್ನು ಪ್ರಕಟಿಸಿ ಅದೇ ಸಮಾರಂಭದಲ್ಲಿ ಬಿಡುಗಡೆ ಮಾಡಿಸಿದರು. ಪುಣ್ಯತಿಥಿ ಆಚರಣೆಯಲ್ಲಿ ಕವಿಗೋಷ್ಠಿ, ವಿಚಾರಸಂಕಿರಣ, ಸಂಗೀತ ಮೇಳಗಳನ್ನು ಏರ್ಪಡಿಸಿದರು. ಸ್ಥಳೀಯ ಕಲಾವಿದರಿಂದಲೂ, ಸಮುದಾಯ ಸಂಘಟನೆಗಳಿಂದ ನಾಟಕಗಳನ್ನು ಆಚರಿಸಿದರು. ಹೆಸರಾಂತ ಸಾಹಿತಿಗಳನ್ನು ಕರೆಸಿ ಭಾಷಣಗಳನ್ನು ಮಾಡಿಸಿದರು. ಇಂಥ ಕಾರ್ಯಕ್ರಮಗಳ ಮೂಲಕ ಸಾಕಷ್ಟು ಸಾಹಿತಿಗಳನ್ನು, ಸಂಗೀತಗಾರರನ್ನು ಹುಟ್ಟುಹಾಕಿದರು.

ರಾಯಚೂರಿನ ಕಿಲ್ಲೆದ ಮಠದಲ್ಲಿ, ಸ್ವಾಮಾರಪೇಟೆ ಮಠದಲ್ಲಿ, ಮರದ ಮಠದಲ್ಲಿ, ನಾರದಗಡ್ಡೆ ಮಠದಲ್ಲಿ ಪುರಾಣ ಪ್ರವಚನಗಳನ್ನು ಸಂಯೋಜಿಸಿ ಶರಣರ ವಿಚಾರಗಳನ್ನು ಜನಮಾನಸದಲ್ಲಿ ಬಿತ್ತಿದರು. ಸಾಂಪ್ರದಾಯಿಕ ವಿಚಾರಗಳನ್ನು ಪ್ರತಿಪಾದಿಸುವ ಮಠಗಳನ್ನು 'ಬಸವ ಜಯಂತಿ'ಯನ್ನು ಆಚರಿಸಿ ಅಸಮಾನತೆ, ಜಾತೀಯತೆ, ಅಸ್ಪೃಶ್ಯತೆಯ ವಿರುದ್ಧ ಸಾಂಸ್ಕೃತಿಕ ಸಂಘರ್ಷ ಹೂಡಿದರು. ಪ್ರಗತಿಪರ ವಿಚಾರಗಳನ್ನು ಸಹಿಸದ ಮಠಗಳ ಭಕ್ತರು ಶಾಂತರಸರಿಗೆ ಕೊಲೆ ಮಾಡುವ ಬೆದರಿಕೆ ಹಾಕಿದ್ದುಂಟು. ಮಠದ ಸ್ವಾಮಿಗಳ ಮೇಲೆ ಒತ್ತಾಯ ತಂದು ಸಮಾಜದಿಂದ ಹೊರಗಿಡಲು ಬಹಿಷ್ಕರಿಸುವ ಯತ್ನ ಮಾಡಿದ್ದುಂಟು. ಶಾಂತರಸರು ಇದಾವುದಕ್ಕೂ ಬಗ್ಗಲಿಲ್ಲ. ಧೈರ್ಯದಿಂದ ಎಲ್ಲವನ್ನು ಎದುರಿಸಿದರು. ಈ ಎಲ್ಲ ಚಟುವಟಿಕೆಗಳಲ್ಲಿ ವೀರಣ್ಣಗೌಡ ನೀರಮಾನ್ವಿ, ಚೆನ್ನಬಸವಪ್ಪ ಬೆಟ್ಟದೂರು, ಸಿದ್ರಾಮ ಜಂಬಲದಿನ್ನಿಯವರು ಶಾಂತರಸರೊಂದಿಗೆ ಹೆಗಲಿಗೆ ಹೆಗಲಕೊಟ್ಟು ದುಡಿದರು.

ಸಂಗಡಿಗರ ಸಮಿತಿ, ಅನುಭವ ಮಂಟಪ, ಸತ್ಯ-ಸ್ನೇಹ-ಪ್ರಕಾಶನ, ನಾಗರಿಕ ವೇದಿಕೆ ಮುಂತಾದ ಸಂಘಟನೆಗಳನ್ನು ಹುಟ್ಟುಹಾಕಿ ಯುವಕರು,

ಕಲಾವಿದರು, ಸಂಗೀತಗಾರರು, ಸಾಹಿತಿಗಳು ಹಾಗೂ ಚಿಂತಕರನ್ನು ಕಟ್ಟಿಕೊಂಡು ಬಸವಜಯಂತಿ ಮಾಡುತ್ತ, ವಿಚಾರ ಸಂಕಿರಣಗಳನ್ನು ಏರ್ಪಡಿಸುತ್ತ, ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಂಡು ಹೋರಾಟ ಮಾಡುತ್ತ ನ್ಯಾಯವನ್ನು ಎತ್ತಿ ಹಾಡಿದರು. ಶರಣರ ಆದರ್ಶಗಳನ್ನು ಜನರಲ್ಲಿ ಬಿತ್ತಿ ಮೂಢನಂಬಿಕೆ, ಅಂಧಶ್ರದ್ಧೆ, ಕಂದಾಚಾರಗಳನ್ನು ನಿರಾಕರಿ ಸಿದರು. ರಾಯಚೂರಿಗೆ ಯಾರೇ ಸಾಹಿತಿಗಳು ಬರಲಿ, ಸಂಗೀತಗಾರರು, ಕಲಾವಿದರು ಬರಲಿ ಅವರನ್ನು ತಮ್ಮ ಮನೆಗೆ ಕರೆದುತಂದು ಊಟೋಪಚಾರ ಮಾಡಿಸಿ ಅವರ ಕಾರ್ಯಗಳನ್ನು ಪ್ರೋತ್ಸಾಹಿಸುತ್ತಿದ್ದರು. 1968ರಲ್ಲಿ ಶಿಕ್ಷಕರಾಗಿದ್ದಾಗ ತಮ್ಮ ಶಾಲೆಯ ದಲಿತ ವಿದ್ಯಾರ್ಥಿಯೋರ್ವಳಿಂದ ತಾವು ಪ್ರಾರಂಭಿಸಿದ 'ಪ್ರತೀಕ' ತ್ರೈಮಾಸಿಕ ಪತ್ರಿಕೆಯನ್ನು ಬಿಡುಗಡೆ ಮಾಡಿಸಿದರು. ಹೈದ್ರಾಬಾದ ಕರ್ನಾಟಕದ ಕವಿಗಳನ್ನು ನಿರ್ಲಕ್ಷಿಸಿದ 'ಅಕ್ಷರ ಹೊಸಕಾವ್ಯ', 'ಹೊಸಜನಾಂಗದ ಕವಿತೆ' ಗ್ರಂಥಗಳನ್ನು ಪ್ರತಿಭಟಿಸಿ ಇಲ್ಲಿಯೂ ಕವಿಗಳಿದ್ದಾರೆ ಕಣ್ತೆರೆದು ನೋಡಿರೆಂದು 'ಬೆನ್ನ ಹಿಂದಿನ ಬೆಳಕು' ಸಂಕಲನ ಗ್ರಂಥವನ್ನು ಪ್ರಕಟಿಸಿದರು. ಹೀಗೆ ಒಂದೇ ಎರಡೇ ನೂರಾರು ಕೆಲಸಗಳನ್ನು ಮಾಡಿ ತನ್ನ ನೆಲದ ಋಣವನ್ನು ತೀರಿಸಿದರು.

'ನಾಗರೀಕ ವೇದಿಕೆ'ಯನ್ನು ಕಟ್ಟಿ, ರಾಯಚೂರು ನಗರದ ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಂಡು ಬೀದಿಗಿಳಿದರು. ಕನ್ನಡ ಶಕ್ತಿಕೇಂದ್ರ ರಾಜ್ಯ ಘಟಕದ ಉಪಾಧ್ಯಕ್ಷರಾಗಿ ಸರಕಾರದ ವಿರುದ್ಧ ಚಳುವಳಿಯನ್ನು ಹೂಡಿ ಜೈಲಿಗೆ ಹೋದರು. ಕುಷ್ಟಗಿ ಶರಣಮ್ಮಳ ಕೊಲೆ ಪ್ರಕರಣದ ಸಂದರ್ಭದಲ್ಲಿ ರಾಯಚೂರಿನ ಜಿಲ್ಲಾಧಿಕಾರಿಗಳ ಕಚೇರಿಯ ಎದುರು ಬೊಬ್ಬೆ ಹಾಕುವುದರ ಮೂಲಕ ತನಿಖೆಗೆ ಒತ್ತಾಯಿಸಿದರು. ಇಂಥ ಹಲವಾರು ಕ್ರಿಯಾತ್ಮಕ ಹೋರಾಟಗಳನ್ನು ಮಾಡಿದ ಶಾಂತರಸರನ್ನು ಹಾ.ಮಾ.ನಾಯಕರು 'ಆತ್ಮ ಗೌರವದ ಧ್ವನಿ', ಈ ಪ್ರದೇಶದ 'ಮನಸ್ಸಾಕ್ಷಿ ಪೋಷಕ' ಎಂದು ಕರೆದದ್ದು ಉಚಿತವೇ ಆಗಿದೆ.

ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಮಹತ್ವದ ಯೋಜನೆಗಳನ್ನು ಹಮ್ಮಿಕೊಂಡರು. ತತ್ವಪದಗಳ ಸಂಕಲನ, ಶರಣರ ವಚನಗಳ ಹಿಂದಿ ಅನುವಾದ, ಹೈದ್ರಾಬಾದ ಕರ್ನಾಟಕದಲ್ಲಿ ಕನ್ನಡ ಕಟ್ಟಿದವರು, ಕೋಮು ಸೌಹಾರ್ದತಾ ಜಾಗ್ರತ-ಸ್ಥಳಗಳು ಮುಂತಾದ ಯೋಜನೆಗಳನ್ನು ಹಾಕಿಕೊಂಡು ಮಹತ್ವದ ಕೆಲಸ ಮಾಡಿದರು.

ಶಾಂತರಸರು ಸ್ವಾಭಿಮಾನಿ, ಅಷ್ಟೇ ನಿಷ್ಠುರ ವ್ಯಕ್ತಿ. ಗುಲಬರ್ಗ ಆಕಾಶವಾಣಿಯಲ್ಲಿ ಅವರು ಓದಿದ 'ಶ್ರಮಯೇವ ಜಯತೆ' ಕವನಕ್ಕೆ ಪುರೋಹಿತ ವರ್ಗದಿಂದ ಉಗ್ರ ಪ್ರತಿಭಟನೆ ನಡೆಯಿತು. ಆರ್.ಎಸ್.ಎಸ್.ದವರು ಖಂಡನಾ ಸಭೆ ನಡೆಸಿ ತಪ್ಪೊಪ್ಪಿಕೊಳ್ಳಬೇಕೆಂದು ತೀವ್ರ ಒತ್ತಡ ತಂದರು. ಕೊಲೆ ಬೆದರಿಕೆ ಹಾಕಿದರು ಇದಾವುದಕ್ಕೂ ಅಂಜಿ ತಮ್ಮ ಧೋರಣೆಯಿಂದ ಹಿಂದೆ ಸರಿಯದೆ ತಾವೊಬ್ಬ ಸ್ವಾಭಿಮಾನಿಯೆಂಬುದನ್ನು ಸಾಬೀತುಪಡಿಸಿದರು.

ಶಾಂತರಸರದು ಒಂದು ವಿಶಿಷ್ಟ ವ್ಯಕ್ತಿತ್ವ. ಈ ವಿಶಿಷ್ಟತೆಯಿಂದಾಗಿ ತಮ್ಮ ತಲೆಮಾರಿನ ಬರಹಗಾರರಿಗೂ ಮತ್ತು ಯುವ ಬರಹಗಾರರಿಗೂ ಆತ್ಮೀಯರಾಗಿದ್ದಾರೆ. ಹಿರಿಯ ಮತ್ತು ಕಿರಿಯ ತಲೆಮಾರಿನವರಿಗೂ ಸಂಬಂಧದ ಕೊಂಡಿಯಾಗಿದ್ದಾರೆ.

ಅವರ ನಡೆ-ನುಡಿ, ಕೃತಿ, ನಗು, ಸಿಟ್ಟು, ಸೆಡವು, ನಿಷ್ಠುರತೆಗಳು ಎಂದೂ ವ್ಯರ್ಥವಾಗಿಲ್ಲ. ಅವು ಗುಣಾತ್ಮಕ ಪರಿಣಾಮವನ್ನು ಬೀರಿ ಬದುಕನ್ನು ಸೃಜನಶೀಲಗೊಳಿಸಿವೆ. ಇವರು ಸತ್ಯ-ಸ್ನೇಹಿಗಳು ಒಮ್ಮೆ ಪರಿಚಯವಾದರೆ ಮುಗಿಯಿತು. ಅವರ ಸ್ನೇಹದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅವರ ಮಾತುಕಥೆ, ವರ್ತನೆ, ಆತ್ಮೀಯತೆಗಳು ನಮ್ಮ ಹೃದಯವನ್ನು ಗೆಲ್ಲುತ್ತವೆ. ಮನಸ್ಸು ಸೋತು ಶರಣಾಗುತ್ತದೆ. ಸ್ವಲ್ಪ ಮುಂಗೋಪಿಗಳು. ಈ ಮುಂಗೋಪಿತನ ಅವರ ಸ್ವಭಾವದಿಂದ ಬಂದುದಲ್ಲ ಬದುಕಿನ ರೀತಿಯಿಂದ ಬಂದದ್ದು. ಆತ್ಮಗೌರವಕ್ಕೆ ಧಕ್ಕೆ ಬಂದಾಗ ಸಹನೆಯ ಕಟ್ಟೆಯೊಡೆಯುತ್ತದೆ.

ಒಟ್ಟಾರೆ ಶಾಂತರಸರು ಬದುಕನ್ನು ಅಕ್ಷಯ ಪಾತ್ರೆ ಎಂದು ತಿಳಿದು ಅದನ್ನು ಅರ್ಥ ಮಾಡಿಕೊಂಡು ಬೆಳೆದು ದೊಡ್ಡವರಾಗಿದ್ದಾರೆ.

### ಸಾಹಿತ್ಯ

ಶಾಂತರಸರ ಸಾಹಿತ್ಯ ಅವರ ಬದುಕಿನಷ್ಟೇ ಸಮೃದ್ಧವಾದದ್ದು. ವಿಶಿಷ್ಟವಾದ ದೃಷ್ಟಿಕೋನದಿಂದ ಸಮಾಜವನ್ನು ಅರ್ಥೈಸುತ್ತಾರೆ. ಹೊಸದನ್ನು ಕಟ್ಟಿಕೊಡುವ ಚಿಂತನಪರ ಚಳುವಳಿಯನ್ನು ಹುಟ್ಟುಹಾಕುವ ನಿಟ್ಟಿನಲ್ಲಿ ಆಲೋಚಿಸುತ್ತಾರೆ. ಭೂತಕಾಲ ಇವರಿಗೆ ಕಾಡಿಲ್ಲ. ವರ್ತಮಾನ ಒಳ್ಳೆಯದಾಗಿರಬೇಕು. ಆರೋಗ್ಯಪೂರ್ಣ ಭವಿಷ್ಯತ್ತು ಹೊಂದಬೇಕೆಂಬುದೇ ಇವರ ಮುಖ್ಯ ಕಾಳಜಿ. ಸಾಹಿತ್ಯವನ್ನು ಮನೋರಂಜನೆಗಾಗಿ ಭಾವಿಸಿದವರಲ್ಲ. 'ಕಲೆಗಾಗಿ ಕಲೆ', 'ಸಾಹಿತ್ಯಕ್ಕಾಗಿ ಸಾಹಿತ್ಯ'ವೆಂಬ ವಾದವನ್ನು ನಿರಾಕರಿಸಿ 'ಬದುಕಿಗಾಗಿ ಕಲೆ', 'ಸಮಾಜಕ್ಕಾಗಿ ಸಾಹಿತ್ಯ'ವೆಂದು ನಂಬಿಕೊಂಡವರು. ಅದರಂತೆ ಬದ್ಧರಾಗಿ ಬದುಕಿದವರು.

ಶಾಂತರಸರನ್ನು ನಾವು ಕೇವಲ ಸಾಹಿತಿಯಾಗಿ ಮಾತ್ರ ನೋಡದೆ ಸಾಂಸ್ಕೃತಿಕ ವಕ್ತಾರನೆಂದು, ಪ್ರತಿಭಟನಾ ಮನೋಭಾವದ ಧೀಮಂತ ವ್ಯಕ್ತಿಯೆಂದು ಗುರುತಿಸುತ್ತೇವೆ. ಕವಿಯಾಗಿ, ಕಥೆಗಾರನಾಗಿ, ಸಂಶೋಧಕನಾಗಿ, ಗಜಲ್ ರಚನಾಕಾರನಾಗಿ, ನೆಲದ ಸಂಸ್ಕೃತಿಯ ಪ್ರತಿಪಾದಕನಾಗಿ ಶಕ್ತಿ ಮೀರಿ ದುಡಿದಿದ್ದಾರೆ. ರಾಯಚೂರಿನಲ್ಲಿ ಸಾಹಿತ್ಯಿಕ ವಾತಾವರಣವನ್ನು ನಿರ್ಮಾಣ ಮಾಡಿ ಸಂಗಡಿಗರನ್ನು, ಸಾಹಿತಿಗಳನ್ನು ಬೆಳೆಸಿದ್ದಾರೆ. 'ಭುವನೈಕ ನಾಯಕೀ ಶತಕ', 'ಬಂಡಾಯ ವಚನಗಳು', 'ರಸಿಕ ಚಕ್ರಿ ಹರಿಹರದೇವ', 'ನಮನ', 'ಕಾಯಕ ಪರಿಣಾಮ', ಮುಂತಾದ ಗ್ರಂಥಗಳನ್ನು ಸಂಪಾದಿಸಿ ಸಂಕಲನಿಸುವಾಗ ಸಂಗಡಿಗರ ಜೊತೆಗೂಡಿ ಕೆಲಸ ಮಾಡಿದ್ದಾರೆ. ಸಂಕಲನಗಳನ್ನಷ್ಟೇ ಅಲ್ಲ. 'ಸಿದ್ಧರಾಮ' ಎನ್ನುವ ಸೃಜನಶೀಲ ಕೃತಿಯನ್ನು ಕೂಡ ಚೆನ್ನಬಸವಪ್ಪ ಬೆಟ್ಟದೂರ ಜೊತೆಗೂಡಿಯೇ ರಚಿಸಿದ್ದಾರೆ. ಇದು ಕನ್ನಡ ಸಾಹಿತ್ಯದಲ್ಲಿಯೇ ಅಪರೂಪದ ಪ್ರಯೋಗ.

ಶಾಂತರಸರು 1942ರಲ್ಲಿಯೇ ಬರವಣಿಗೆ ಪ್ರಾರಂಭಿಸಿದರೂ 1961ರ ವರೆಗೆ ಸ್ವಂತದ ಸೃಜನಶೀಲ ಕೃತಿಯನ್ನು ಪ್ರಕಟಿಸಲಿಲ್ಲ. ಸುಮಾರು ಇಪ್ಪತ್ತು ವರ್ಷಗಳು ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮಾಡುವುದರಲ್ಲಿಯೇ ಕಾಲ ಕಳೆದರು. ಹಾಗೆಂದು ಅದು ವ್ಯರ್ಥ ಹೋಗಿಲ್ಲ. ಈ ಸಮಯದಲ್ಲಿ ಅನೇಕ ಜನ ಸಂಗೀತಗಾರರನ್ನು, ಚಿತ್ರಕಲಾವಿದರನ್ನು, ಸಾಹಿತಿಗಳನ್ನು, ಚಿಂತಕರನ್ನು ಹುಟ್ಟು ಹಾಕಿದರು ಮತ್ತು ಜನರಲ್ಲಿ ಸಾಹಿತ್ಯದ ಆಸಕ್ತಿಯನ್ನು ಮೂಡಿಸಿದರು. ಈ ಕಾರಣಕ್ಕಾಗಿ ಇರಬೇಕು ಈ ಭಾಗ ಶಾಂತರಸರ ಹೆಸರಿನಿಂದ ಗುರುತಿಸಲ್ಪಡುತ್ತದೆ.

1961ರಲ್ಲಿ 'ಸತ್ಯ-ಸ್ನೇಹ' ಗೀತನಾಟಕ ಶಾಂತರಸರ ಪ್ರಥಮ ಸೃಜನಶೀಲ ಕೃತಿ ಹೊರಬಂದಿತು. ಸಿದ್ಧಯ್ಯ ಪುರಾಣಿಕರು ಹೇಳಿದಂತೆ 'ಇವರ ಪ್ರಥಮ

ಕೃತಿಯೇ ಪ್ರಥಮ ದರ್ಜೆಯದು'. ಇದಕ್ಕೆ 1962ರಲ್ಲಿ ಮೈಸೂರು ಸರಕಾರ ದಿಂದ ಬಹುಮಾನ ಬಂದಿತು.

ರಾಯಚೂರು ಜಿಲ್ಲೆಯ ಹಳೆಗನ್ನಡ ಗ್ರಂಥಗಳನ್ನು, ಅಜ್ಞಾತಕವಿಗಳನ್ನು ಸಂಶೋಧಿಸಿ ಸಂಪಾದನೆ ಮತ್ತು ಸಂಕಲನಗಳನ್ನು ಹೊರತಂದರು. 1947ರಲ್ಲಿ ತನ್ನ ಸಂಗಡಿಗರ ಕಥೆ, ಕವನ, ಪ್ರಬಂಧಗಳನ್ನು 'ಮುಸುಕು ತೆರೆ' ಸಂಗ್ರಹದಲ್ಲಿ ಪ್ರಕಟಿಸಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಲೋಕದ ಮೇಲೆ ಆವರಿಸಿದ ಮುಸುಕನ್ನು ತೆರೆದರು. ಕಲೆಯ ಅಭಿವೃದ್ಧಿಯಾಗಬೇಕಾದರೆ ಸಂಶೋಧನೆ ನಡೆದು ನಮ್ಮ ನಾಡಿನ ಚರಿತ್ರೆಯನ್ನು ವಿಶ್ಲೇಷಿಸುವ ಕಾರ್ಯ ನಡೆಯಬೇಕೆಂಬ ಉದ್ದೇಶದಿಂದ ಪ್ರಕಾಶನ ಸಂಸ್ಥೆಯನ್ನು ಆರಂಭಿಸಿ ಸಾಹಿತ್ಯಾಸಕ್ತ ಶ್ರೀಮಂತ ರಿಂದ ಹಣ ಸಂಗ್ರಹಿಸಿ ಅವರ ಮಕ್ಕಳ ಮದುವೆಯಲ್ಲಿ ಗ್ರಂಥ ಬಿಡುಗಡೆ ಮಾಡಿದರು. ಯಾವ ಮೂಲದಿಂದಲಾದರೂ ನಾಡಿನ ಸಾಹಿತ್ಯ ಸಂಸ್ಕೃತಿಯು ಆರೋಗ್ಯಪೂರ್ಣ ಬೆಳವಣಿಗೆ ಕಾಣಬೇಕೆಂಬುದೆ ಅವರ ಅಂತರಂಗದ ಕಾಳಜಿಯಾಗಿದೆ. ಈ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತರಾಗಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ದಾಖಲಾಗದ ಈ ಮೂವರನ್ನು ಸಂಶೋಧಿಸಿ ಸಂಗವಿಭುವಿನ 'ಮೂರು ಶತಕ', ವೀರಭದ್ರ ಕವಿಯ 'ಅರವತ್ತು ಮೂವರು ಪುರಾತನರ ಪುರಾಣ', ಲಿಂಗಣ್ಣೊಡೆಯನ 'ಬಾರಮಾಸ' ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದರು. ಕೂಡಲೂರು ಬಸವಲಿಂಗ ಶರಣರ 'ಸ್ವರವಚನ' ಗಳನ್ನೇ ಅಲ್ಲದೆ, ಎಡೆದೊರೆ ನಾಡಿನ ಹದಿಮೂರು ಜನ ಅನುಭಾವಿ ಕವಿಗಳನ್ನು ಸಂಶೋಧಿಸಿ ಅನುಭಾವ ಸಾಹಿತ್ಯದ ಅಧ್ಯಯನಕ್ಕೆ ನಾಂದಿ ಹಾಡಿದ್ದಾರೆ. ಅಷ್ಟೇ ಅಲ್ಲ. ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಅನುಭಾವಿಗಳ ತತ್ವಪದಗಳನ್ನು ಪ್ರಕಟಿಸಿದ್ದಾರೆ.

1970ರಲ್ಲಿ ಲಂಕೇಶ್ 'ಅಕ್ಷರ ಹೊಸ ಕಾವ್ಯ' ಮತ್ತು 1971ರಲ್ಲಿ ಬುದ್ಧಣ್ಣ ಹಿಂಗಮಿರೆ 'ಹೊಸ ಜನಾಂಗದ ಕವಿತೆ' ಎಂಬ ಆ್ಯಂಥಾಲಜಿಗಳನ್ನು ಪ್ರಕಟಿಸಿದರು. ಇವುಗಳಲ್ಲಿ ಹೈದ್ರಾಬಾದ್ ಕರ್ನಾಟಕದ ಕವಿಗಳನ್ನು ಸೇರಿಸದೆ ಎಸಗಿದ ಅನ್ಯಾಯವನ್ನು ಪ್ರತಿಭಟಿಸಿ, ಪತ್ನಿ ಲಕ್ಷ್ಮೀದೇವಿಯವರು ಮನೆಕಟ್ಟ ಬೇಕೆಂದು ಜಾಗ ಖರೀದಿಸಲು ಕೂಡಿಟ್ಟ ಹಣವನ್ನು ಹಾಕಿ ಹೈದ್ರಾಬಾದ ಕರ್ನಾಟಕದ 27 ಜನ ಕವಿಗಳ ಕವನಗಳನ್ನು ಸಂಕಲಿನಿಸಿ 'ಬೆನ್ನ ಹಿಂದಿನ ಬೆಳಕು' ಎಂಬ ಆಂಥಲಾಜಿಯನ್ನು ಹೊರತಂದು ನಾಡಿನ ತುಂಬ ಹೊಸ ಚರ್ಚೆಯನ್ನೇ ಪ್ರಾರಂಭಿಸಿದರು. ಇದಕ್ಕೆ ದೀರ್ಘ ಪ್ರಸ್ತಾವನೆಯೊಂದನ್ನು ಬರೆದು ಲಂಕೇಶ ಮತ್ತು ಹಿಂಗಮಿರೆಯವರ ತಾರತಮ್ಯ ಮನೋಭಾವವನ್ನು ಉಗ್ರವಾಗಿ ಖಂಡಿಸಿದರು.

ಈ ಭಾಗದ ಲೇಖಕರ ಕವನ ಕಥೆಗಳನ್ನು ರಾಜಧಾನಿ ಪತ್ರಿಕೆಗಳು ಪ್ರಕಟಿಸುತ್ತಿರಲಿಲ್ಲ. ಅವುಗಳನ್ನು ಮರಳಿ ಕಳಿಸುವಷ್ಟು ಸೌಜನ್ಯ ತೋರದ ಪತ್ರಿಕೆ ಸಂಪಾದಕರ ವರ್ತನೆಯನ್ನು ಪ್ರತಿಭಟಿಸುವ ತೆರದಲ್ಲಿ 'ಮುಸುಕು ತೆರೆ' 'ಕಲ್ಯಾಣದೀಪ', 'ಮಲ್ಲಿಗೆ ಮಾಲೆ', 'ಬೆನ್ನ ಹಿಂದಿನ ಬೆಳಕು' ಮುಂತಾದ ಗ್ರಂಥವನ್ನು ಹೊರತಂದರಲ್ಲದೆ 1968ರಲ್ಲಿ 'ಪ್ರತೀಕ'ವೆಂಬ ಸಾಹಿತ್ಯಕ ತ್ರೈಮಾಸಿಕ ಪತ್ರಿಕೆಯನ್ನೆ ಪ್ರಾರಂಭಿಸಿದರು.

ಶಾಂತರಸರು ಉತ್ತಮ ಕವಿಗಳು ಮತ್ತು ಕಥೆಗಾರರು. ಎಲ್ಲರಂತೆ ಇವರೂ ಪ್ರೇಮ ಕವನಗಳ ಮೂಲಕ ಸಾಹಿತ್ಯ ಪ್ರಪಂಚಕ್ಕೆ ಕಾಲಿಟ್ಟಿದ್ದಾರೆ. ಮುಂದೆ ಕೆಲವೆ ದಿನಗಳಲ್ಲಿ ತಮ್ಮ ಬರವಣಿಗೆ ಧಾಟಿಯನ್ನು ಬದಲಾಯಿಸಿಕೊಂಡರು. ಶರಣ ಸಾಹಿತ್ಯದ ಅಧ್ಯಯನದ ಪರಿಣಾಮವಾಗಿ ಸಾಂಪ್ರದಾಯಿಕ ನೆಲೆಯಿಂದ ಪ್ರಗತಿಪರತೆಗೆ ಒಲಿದರು. ಸಾಮಾಜಿಕ ಕಾಳಜಿಯುಳ್ಳ ಕವನಗಳನ್ನು ಬರೆದರು. 1967ರಲ್ಲಿ 'ಮಾನಸಗಳ್ಳಿ' ಕವನ ಸಂಕಲನ ಹೊರ ತಂದು ಸಾಹಿತಿಗಳ ಗಮನ ಸೆಳೆದರು. 1985ರಲ್ಲಿ 'ಬಯಲುಸೀಮೆಯ ಬಿಸಿಲು' ಪ್ರಕಟಿಸಿದರು. ಇವುಗಳಲ್ಲದೆ ಸುಮಾರು ಐಂಕ್ಯೂ ಹೆಚ್ಚು ಕವನಗಳು ಪತ್ರಿಕೆಗಳಲ್ಲಿ ಇತರ ಸಂಕಲನ ಗ್ರಂಥಗಳಲ್ಲಿ ಪ್ರಕಟವಾಗಿವೆ.

ಉರ್ದು ಭಾಷೆಯ ವಿಶಿಷ್ಟ ಕಾವ್ಯ ಪ್ರಕಾರ 'ಗಜಲ್'ನ ಕನ್ನಡ ಭಾಷೆಗೆ ಅನುವಾದಿಸಿದ್ದಾರಲ್ಲದೆ ಅದರ ಮೂಲ ಲಕ್ಷಣಗಳನ್ನು ಉಳಿಸಿಕೊಂಡು ಸ್ವಂತ ಗಜಲ್‌ಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ. ಇದು ಕನ್ನಡ ಸಾಹಿತ್ಯಕ್ಕೆ ಶಾಂತರಸರ ಕೊಡುಗೆ. ಈ ಮೊದಲು ಉರ್ದುವಿನ ಕೆಲವು ಗಜಲ್‌ಗಳನ್ನು ಅನುವಾದಿಸಿ ಅನಂತರ ಗಜಲ್‌ನ ಮುಖ್ಯ ಅಂಶಗಳಾದ ಮತ್ಲಾ, ಕಾಫಿಯಾ, ರಧೀಫ್, ಮಕ್ತಾಗಳನ್ನು ಸಮರ್ಥವಾಗಿ ಬಳಸಿ ಉತ್ಕೃಷ್ಟ ಗಜಲ್‌ಗಳನ್ನು ರಚಿಸಿದ್ದಾರೆ. ಅಲ್ಲದೆ ಉರ್ದು ಭಾಷೆಯ ಕಾವ್ಯ ಪ್ರಕಾರಗಳಾದ ಫರ್ದ್, ಮತ್ಲಾ ಮತ್ತು ರುಬಾಯಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಈ ಕಾರಣಕ್ಕಾಗಿ ಅವರನ್ನು ಪ್ರಯೋಗಶೀಲ ಲೇಖಕರೆಂದು ಕರೆಯಲಾಗುವುದು.

ಶಾಂತರಸರು ಕನ್ನಡದ ಶ್ರೇಷ್ಠ ಕತೆಗಾರರು. ಸಾಹಿತ್ಯದ ಮೂಲಕ ಸಮಾಜದ ಚರಿತ್ರೆಯನ್ನು ಕಟ್ಟಿಕೊಳ್ಳಬಹುದಾದ ಕತೆಗಳನ್ನು ಬರೆದ ಕೆಲವೇ ಜನ ಲೇಖಕರಲ್ಲಿ ಇವರೂ ಒಬ್ಬರು. ವಾಸ್ತವವನ್ನು ಕಲಾತ್ಮಕವಾಗಿ ಚಿತ್ರಿಸಿದ್ದಾರೆ. ರಾಯಚೂರು ಜಿಲ್ಲೆಯ ಆಡುಭಾಷೆಯಲ್ಲಿ, ಗ್ರಾಮೀಣ ಬದುಕಿನಿಂದ ವಸ್ತುಗಳನ್ನು ಪಡೆದುಕೊಂಡು, ನಿರ್ಲಿಪ್ತ ನಿಲುವಿನಿಂದ ವಾಸ್ತವವನ್ನು ಕಟ್ಟಿಕೊಟ್ಟಿದ್ದಾರೆ. ಕತೆಯಲ್ಲಿ ಪ್ರವೇಶಿಸಿ ಕಥೆಗಾರ ಏನನ್ನು ಹೇಳದೆ ಮೌನವಾಗಿ ವ್ಯವಸ್ಥೆಯನ್ನು ಕ್ಯಾಮರಾ ಕಣ್ಣಿನಿಂದ ತೋರಿಸುತ್ತಾ ಹೋಗುತ್ತಾರೆ. ಇವರ ಈ ಅರ್ಥಪೂರ್ಣ ಮೌನವೂ ಹೆಚ್ಚು ಸ್ಫೋಟಕ ಗುಣವನ್ನು ಹೊಂದಿದೆ.

ಶಾಂತರಸರ ಕತೆಗಳನ್ನು ಐದು ನೆಲೆಗಳಲ್ಲಿ ಚರ್ಚೆಗೆ ಒಳಪಡಿಸಬಹುದು. 1) ಆವರ್ತನಶೀಲತೆ 2) ಕಾಮ ಮತ್ತು ಲೈಂಗಿಕ ಸಂಬಂಧಗಳು. 3) ಫ್ಯೂಡಲ್ ವ್ಯವಸ್ಥೆ 4) ಚರಿತ್ರೆಯ ನೆಲೆಗಳು 5) ಸಾಂಸ್ಕೃತಿಕ ಪತನ. ಈ ಐದು ನೆಲೆಗಳಲ್ಲಿ ವ್ಯವಸ್ಥೆಯನ್ನು ವಿಶ್ಲೇಷಿ ಸುವುದಷ್ಟೇ ಆಗಿರದೆ, ಅದರ ಪರ್ಯಾಯ ನಿರ್ಮಿತಿಗೆ ಚಿಂತಿಸುತ್ತಾರೆ. ಆವರ್ತನ ಶೀಲತೆಯು ಶಾಂತರಸರ ಬರವಣಿಗೆಯ ಒಂದು ವಿಶಿಷ್ಟ ರೀತಿಯಾಗಿದೆ. ಹಲ್ಲಿಗೆ ನೋವಾದಾಗ ನಾಲಿಗೆ ಮತ್ತೆ ಮತ್ತೆ ಹೋಗಿ ಅದೇ ಜಾಗಕ್ಕೆ ತಾಗುವಂತೆ ಮನಸ್ಸಿಗೆ ಕಾಡಿದ ಸಂಗತಿಗಳಿಗೆ ಇವರ ಪ್ರಜ್ಞೆ ಮತ್ತೆ ಮತ್ತೆ ಅವುಗಳ ಕಡೆಗೆ ಹರಿಯುತ್ತದೆ. ಆತ್ಮಹತ್ಯೆ, ಹಾದರ, ವೇದಾಂತ ಚರ್ಚೆ ಮುಂತಾದ ವಿಷಯಗಳು ಕತೆಗಳಲ್ಲಿ ಆವರ್ತನಗೊಳ್ಳುತ್ತವೆ.

2) ಇವರ ಕತೆಗಳಲ್ಲಿ ಕಾಮವು ಹೆಚ್ಚಿನ ಜಾಗವನ್ನು ಪಡೆದಿದೆ. ಕಾಮ ಆದರ್ಶಗೊಂಡರೆ ಪ್ರೇಮ. ಅದು ವ್ಯಸನವಾದರೆ ಹಾದರ. ಶಾಂತರಸರ ಕತೆಗಳನ್ನು ಹಾದರದ ಕತೆಗಳೆಂದು ಕರೆದು ಕೈತೊಳೆದುಕೊಳ್ಳುವುದು ಸರಿಯಾದ ಕ್ರಮವಲ್ಲ. ಜಮೀನ್ದಾರಿ ಪದ್ಧತಿಯಲ್ಲಿ ಕಾಮ ಹೇಗೆ ಬಳಕೆಯಾಗುತ್ತದೆಂಬು ದನ್ನು ಮನಶಾಸ್ತ್ರೀಯ ನೆಲೆಯಲ್ಲಿ ಶಾಂತರಸರು ಚಿಂತಿಸುತ್ತಾರೆ.

3) ಫ್ಯೂಡಲ್ ವ್ಯವಸ್ಥೆ: ಹೈದ್ರಾಬಾದ ಕರ್ನಾಟಕ ಪ್ರದೇಶವು ಬ್ರಿಟಿಶ್ ವಸಾಹತಿಕರಣದಿಂದ ತಪ್ಪಿ, ನಿಜಾಮನ ಆಡಳಿತದ ಫಲವಾಗಿ ಇಲ್ಲಿ

ಊಳಿಗಮಾನ್ಯ ವ್ಯವಸ್ಥೆ ಮುಂದುವರೆದು ಇದರ ಬಹು ಆಯಾಮಗಳು ಇವರ ಕತೆಗಳಲ್ಲಿ ಚಿತ್ರಣಗೊಂಡಿವೆ.

4) ಚಾರಿತ್ರಿಕ ನೆಲೆಗಳು: ಶಾಂತರಸರ ಕತೆಗಳನ್ನು ದಿನಾಂಕಗಳಿಲ್ಲದ ಇತಿಹಾಸವೆಂದು ಕರೆಯಬಹುದಾಗಿದೆ. ಸೃಜನಶೀಲ ಸಾಹಿತ್ಯ ಮೂಲಕ ನಾಡಿನ ಚರಿತ್ರೆಯನ್ನು ಕಟ್ಟಿಕೊಡುವ ಕೆಲಸ ಮಾಡಿದ್ದಾರೆ. ಇಲ್ಲಿ ಶಾಂತರಸರು ಸಮಾಜ ವಿಜ್ಞಾನಿಯಾಗಿ, ಸಮಾಜದ ಸೂಕ್ಷ್ಮ ನೆಲೆಗಳನ್ನು ಕತೆಗಳ ಮೂಲಕ ಗುರುತಿಸಿದ್ದಾರೆ. ಶಾಂತರಸರು ಒಂದು ವೇಳೆ ಕಥೆಗಳನ್ನು ಬರೆಯದೆ ಹೋಗಿದ್ದರೆ, ಈ ನಾಡಿನ ಇತಿಹಾಸದ ಕೆಲವು ಪುಟಗಳು ಖಾಲಿ ಉಳಿಯುತ್ತಿದ್ದವು ಎಂದ ಓ.ಎಲ್. ನಾಗಭೂಷಣಸ್ವಾಮಿಗಳ ಮಾತುಗಳು ಸಮರ್ಥನಿಯವಾಗಿದೆ.

5) ಸಾಂಸ್ಕೃತಿಕ ಪತನ: ಸಮಾಜದಲ್ಲಿ ನಡೆಯುವ ಸಾಂಸ್ಕೃತಿಕ ಅಧಃಪತನ, ಕ್ರಿಯೆ ಕತೆಗಳಲ್ಲಿ ಸಮರ್ಥವಾಗಿ ಚಿತ್ರಣಗೊಂಡಿದೆ. ಸಾಂಸ್ಕೃತಿಕ ಲೋಕದಲ್ಲಿ ನಡೆಯುವ ಹಿನ್ನಡೆಯನ್ನು ತೋರಿಸಿ ಓದುಗರ ಮನಸ್ಸು ಅದರ ವಿರುದ್ಧ ಚಿಂತಿಸುವಂತೆ ಮಾಡುವುದು ಇದರ ಉದ್ದೇಶ.

ಶಾಂತರಸರು ಐದು ನಾಟಕಗಳನ್ನು ರಚಿಸಿದ್ದಾರೆ. ಒಂದು ಸ್ವತಂತ್ರ ಸೃಷ್ಟಿಯಾದರೆ ಉಳಿದವು ಪುನರ್ ಸೃಷ್ಟಿಗಳು. ಈಗಾಗಲೇ ಪುರಾಣ ಪ್ರಸಿದ್ಧವಾದ ವಸ್ತುಗಳನ್ನು ತೆಗೆದುಕೊಂಡು ಹೊಸ ದೃಷ್ಟಿಕೋನದಿಂದ ನಿರೂಪಿಸುವ ಪ್ರಯತ್ನ ಮಾಡುತ್ತಾರೆ. 'ಸತ್ಯ-ಸ್ನೇಹಿ', 'ನಂಜು-ನೊರೆವಾಲು', 'ಮರೆಯಾದ ಮಾರಮ್ಮ', 'ಶರಣ ಬಸವ' ಇವು ಒಂದೊಂದು ಪುನರ್ ಸೃಷ್ಟಿಗಳು. ಶ್ರೇಷ್ಠ ಸ್ವತಂತ್ರ ನಾಟಕಗಳನ್ನು ಬರೆಯಬಹುದಾದ ಪ್ರತಿಭಾನ್ವಿತ ಲೇಖಕರಾಗಿದ್ದು ಬರೆಯದೆ ಇದ್ದುದ್ದು ಒಂದು ದೊಡ್ಡ ಕೊರತೆ.

ಸಿದ್ಧರಾಮ ಒಂದು ಜೀವನ ಚರಿತ್ರೆ. ತಮ್ಮ ವಿಶಿಷ್ಟತೆಯನ್ನು ಈ ಸೃಜನಶೀಲ ಕೃತಿಯನ್ನು ಇಬ್ಬರು ಕೂಡಿ ಬರೆದಿದ್ದಾರೆ. ಇಲ್ಲಿ ಪವಾಡಗಳನ್ನು ಸರಳ ಘಟನೆಗಳೆಂಬಂತೆ ನಿರೂಪಿಸಿ ನೈತಿಕ ಉನ್ನತಿಗೆ ಹೆಚ್ಚು ಒತ್ತು ಕೊಡಲಾಗಿದೆ.

ಉರ್ದು ಕಾದಂಬರಿಕಾರ ಮಿರ್ಜಿ ರುಸ್ವಾ ಅವರ 'ಉಮ್ ರಾವ್ ಜಾನ್ ಅದಾ' ಕಾದಂಬರಿಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಇದು ಸೃಜನಶೀಲ ಅನುವಾದಕ್ಕೆ ಉತ್ತಮ ಉದಾಹರಣೆ. ಇದು ಗದ್ಯ ಪದ್ಯ ಮಿಶ್ರಿತ ಸಂಕೀರ್ಣ ಕೃತಿ. ಈ ಅನುವಾದ ಉರ್ದು ಮತ್ತು ಕನ್ನಡ ಭಾಷೆಯ ಮೇಲೆ ಶಾಂತರಸರಿಗೆ ಇರುವ ಪ್ರಭುತ್ವವನ್ನು ಎತ್ತಿ ತೋರಿಸುತ್ತದೆ. ಪಂಜಾಬಿಯ ಅಮೃತಾ ಪ್ರೀತಂ ಹಾಗೂ ಅವರ ಕೆಲವು ಕೃತಿಗಳನ್ನು ಹಿಂದಿಯ ಕೃಷ್ಣಚಂದ್ರರ ಕತೆಗಳನ್ನು ಮತ್ತು ಉರ್ದುವಿನ ಅನೇಕ 'ತಜ್ ಮೀನ್'ಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ಹೀಗೆ ಶಾಂತರಸರು ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿಗೈದು, ಕನ್ನಡದ ಶ್ರೇಷ್ಠ ಲೇಖಕರ ಸಾಲಿನಲ್ಲಿ ಎದ್ದು ಕಾಣುವ ವ್ಯಕ್ತಿತ್ವವನ್ನು ಪಡೆದುಕೊಂಡಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಗೌರವ ಪ್ರಶಸ್ತಿ', ಕರ್ನಾಟಕ ನಾಟಕ ಅಕಾಡೆಮಿಯ 'ಫೆಲೋಷಿಪ್; ಕನ್ನಡ ಸಾಹಿತ್ಯ ಪರಿಷತ್ತಿನ 'ಗೌರವ ಸದಸ್ಯತ್ವ', ಇವು ಇವರು ಪಡೆದ ಕೆಲವು ಗೌರವ ಪ್ರಶಸ್ತಿಗಳು. ಕರ್ನಾಟಕ ಸರಕಾರವು 1992ರಲ್ಲಿ ನೀಡಿದ ರಾಜ್ಯೋತ್ಸವ ಪ್ರಶಸ್ತಿಯನ್ನು ಕನ್ನಡ ಭಾಷೆಯ ಬಗೆಗೆ ಕಾಳಜಿ ತೋರದ ಸರಕಾರದಿಂದ ಪಡೆದುಕೊಳ್ಳುವದು ಒಳ್ಳೆಯದಲ್ಲವೆಂದು ಅದನ್ನು ತಿರಸ್ಕರಿಸಿದರು.

ಹೀಗೆ ಶಾಂತರಸರ ಬದುಕು ಮತ್ತು ಬರಹ ಎರಡೂ ಮುಖ್ಯವಾದವು. ಇಂಥ ಒಬ್ಬ ಮಹತ್ವದ ಲೇಖಕನನ್ನು ಪಡೆದ ಹೈದ್ರಾಬಾದ-ಕರ್ನಾಟಕ ನಾಡಿನ ಗಮನವನ್ನು ಸೆಳೆದಿದೆ.

❑

# ನಿರಂಜನ

ಕೆ.ಎಲ್. ಗೋಪಾಲಕೃಷ್ಣಯ್ಯ

1

'ಮೃತ್ಯುಂಜಯ'-ಎಂಬುದು ನಿರಂಜನರು ಇತ್ತೀಚೆಗೆ ಬರೆದ ದೊಡ್ಡ ಕಾದಂಬರಿಯ ಹೆಸರು. ಸುಮಾರು ನಾಲ್ಕೈದು ಸಾವಿರ ವರ್ಷಗಳ ಹಿಂದೆ ಐಗುಪ್ತ ಸಾಮ್ರಾಜ್ಯಕ್ಕೆ ಸೇರಿದ ಚಿಕ್ಕ ಪ್ರಾಂತ್ಯವೊಂದರ ಜನರು ಪ್ರಭುತ್ವದ ಬಂಡಾಯ ಹೂಡಿದಾಗ ಅವರಿಗೆ ತಾತ್ಕಾಲಿಕ ಜಯ ದೊರಕಿ ಸ್ವಯ ಮಾಡಳಿತವನ್ನು ಸ್ಥಾಪಿಸಿಕೊಂಡರು. ಆದರೆ ರಾಜಕೀಯ ಮತ್ತು ಮತ ಧಾರ್ಮಿಕ ಶಕ್ತಿಗಳು ಶಾಮೀಲಾಗಿ ಬಂಡಾಯಗಾರರ ನಾಯಕನನ್ನು ಕುತಂತ್ರದಿಂದ ರಾಜಧಾನಿಗೆ ಕರೆಸಿಕೊಂಡು, ರಾಜದ್ರೋಹದ ಆಪಾದನೆ ಹೊರಿಸಿ ಅವನನ್ನು ಕೊಲ್ಲಿಸಿದರು. ನಾಯಕನನ್ನು ಕಳೆದುಕೊಂಡ ಶ್ರಮಜೀವಿಗಳು, ಸೈನ್ಯಶಕ್ತಿಯ ಉಪಟಳವನ್ನು ಎದುರಿಸಲಾರದೆ ಶರಣಾಗತರಾದರು. ದುರ್ಭರ ಸರ್ವಾಧಿಕಾರವು ಹಿಂದಿಗಿಂತ ಪ್ರಬಲವಾಗಿ ಬೇರೂರಿತು - ಇದು ಕಾದಂಬರಿಯ ವಸ್ತು. ಆದರೂ, ಈಜಿಪ್ಟಿನ ಪುರಾಣ ಪುರುಷ ಒಸೈರಿಸ್‌ನ ಹಾಗೆ ಜನನಾಯಕನ ಪುನರುತ್ಥಾನವಾಗುವುದು; ಕತ್ತಲೆ ಕಳೆದು ಬೆಳಕು ಮೂಡುವುದು ; ಕ್ರಾಂತಿಗೆ ಸಾವಿಲ್ಲ, ಅದು ಅಜೇಯ-ಎಂಬ ಆಶಾವಾದ ಕಾದಂಬರಿಯ ಸಂದೇಶ.

ಇಂಥ ಸಂದೇಶವನ್ನು ಸಾರುವ ನಿರಂಜನರೂ 'ಮೃತ್ಯುಂಜಯ'ರೇ ಸರಿ.

1971ರಲ್ಲಿ ತೀವ್ರತರ ಪಾರ್ಶ್ವವಾಯುವಿನ ಆಘಾತಕ್ಕೆ ತುತ್ತಾಗಿ, ಮೂರು ದಿನಗಳ ಕಾಲ ಸಾವು ಬದುಕಿನ ಹೋರಾಟ ನಡೆಸಿ, ಅಂಗವಿಕಲ ರಾದರೂ ಗೆದ್ದು ಬಂದ, ತಮ್ಮ ಸಂಕಲ್ಪಶಕ್ತಿಯನ್ನೂ, ಸೃಜನಶೀಲತೆಯನ್ನೂ ಸದೃಢವಾಗಿಟ್ಟುಕೊಂಡಿರುವ ನಿರಂಜನರಿಗೆ ಈಗ ಅರವತ್ತ ಆರು ವರ್ಷ (ಜನನ ಕ್ರಿ.ಶ. 1924).

ಇವರು ಹುಟ್ಟಿದ್ದು ದಕ್ಷಿಣಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ಕುಳಕುಂದ ಎಂಬ ಚಿಕ್ಕ ಹಳ್ಳಿಯಲ್ಲಿ. ತಂದೆ ತಾಯಿ ಇಟ್ಟ ಹೆಸರು ಶಿವರಾಯ. ಎಂಟು ವರ್ಷ ತುಂಬುವ ಮೊದಲೇ ತಂದೆಯನ್ನು ಕಳೆದು ಕೊಂಡು ಪರರ ಮನೆಯ ಕೆಲಸ ಮಾಡಿ ಹೊಟ್ಟೆ ಹೊರೆಯುತ್ತಿದ್ದ ತಾಯಿಯ ಪೋಷಣೆ ಯಲ್ಲೇ ಬೆಳೆಯಬೇಕಾಗಿ ಬಂದ ದಾರುಣ ಪರಿಸ್ಥಿತಿ. ಚಿಕ್ಕ ಹುಡುಗನು ಕೂಡ ಹೆದ್ದಾರಿಯಲ್ಲಿ ಇಳಿಯುವ ಪ್ರಯಾಣಿಕರಿಗೆ ಕಾಫಿ ಕಾಸಿಕೊಟ್ಟು ನಾಲ್ಕು ಕಾಸು ಸಂಪಾದಿಸಬೇಕಾಗಿದ್ದಿತಂತೆ! ಎಳೆತನದ ಸ್ವಾತಂತ್ರ್ಯ, ಸುಖಸಂತೋಷ ಗಳೊಂದನ್ನೂ ಸವಿಯಲಾರದ ಕಾರ್ಪಣ್ಯ. ಜಾಕ್‌ಲಂಡನ್‌ನ ತರಹ 'ಬಾಲತ್ವ ವಿಲ್ಲದ ಬಾಲ್ಯ'.

ಕಾಪು ಎಂಬ ಊರಿನಲ್ಲಿ ಮರಳಿನ ಮೇಲೆ ಶ್ರೀ ಓನಾಮ ತಿದ್ದುವ ಮೂಲಕ ಶಿವರಾಯನ ಅಕ್ಷರಾಭ್ಯಾಸದ ಆರಂಭ. ಚಿಕ್ಕವನಾಗಿದ್ದಾಗಿಂದಲೂ ಓದು ಬರಹಗಳಲ್ಲಿ ಮಾತ್ರವಲ್ಲದೆ ಸಾಮಾಜಿಕ ಚಟುವಟಿಕೆಗಳಲ್ಲಿ ಈತನಿಗೆ ತುಂಬ ಆಸಕ್ತಿ. 1935ರಲ್ಲಿ ಶಿವರಾಮ ಕಾರಂತರು ಪುತ್ತೂರಿನಲ್ಲಿ ಮಕ್ಕಳ ಸಮ್ಮೇಳನ ನಡೆಸಿದಾಗ ಶಿವರಾಯ ಶಾಲೆಯ ಸ್ವಯಂ ಸೇವಕ. ಗಾಂಧೀಜಿ ಸುಳ್ಯದ ಮೂಲಕ ಹಾದು ಹೋದುದು, ಪುತ್ತೂರಿನಲ್ಲಿ ಜವಹರಲಾಲ್ ನೆಹರೂ ಅವರ ಭಾಷಣ ಕೇಳಿದುದು, ಸ್ವಾತಂತ್ರ್ಯ ಸಂಗ್ರಾಮದ ಆ ಭರಾಟೆಯ ದಿನಗಳು-ಅವರಿಗೆ ಇಂದಿಗೂ ನೆನಪುಂಟು. ಹದಿನಾಲ್ಕು ವರ್ಷದ ಬಾಲಕನ ಮೊದಲ ಕಥೆ ಪ್ರಕಟವಾದದ್ದು 1938ರಲ್ಲಿ. ಹೈಸ್ಕೂಲು ವಿದ್ಯಾಭ್ಯಾಸವನ್ನು ಮುಗಿಸುವ ವೇಳೆಗೆ 'ಕಿಶೋರ' ಕಾವ್ಯನಾಮದಲ್ಲಿ ಸುಮಾರು ಹದಿನೈದು ಕಥೆಗಳನ್ನು ಬರೆದು ಪ್ರಕಟಿಸಿಯಾಗಿತ್ತು.

ನೀಲೇಶ್ವರದ ಹೈಸ್ಕೂಲಿನಲ್ಲಿ ಓದುತ್ತಿದ್ದಾಗಿನಿಂದಲೂ ಎಡಪಂಥೀಯ ರಾಜಕೀಯ ಚಟುವಟಿಕೆಗಳು ಯುವ ವಿದ್ಯಾರ್ಥಿಯ ಮನಸ್ಸನ್ನಾಕರ್ಷಿ ಸಿದ್ದವು. ಸ್ವಾತಂತ್ರ್ಯ ಚಳವಳಿಯ ಕಾಲದಿಂದಲೂ ಮಲಯಾಳ ಪ್ರಾಂತ್ಯದ ರಾಜಕಾರಣವು ಭಾರತದ ಇನ್ನಿತರ ಪ್ರಾಂತ್ಯಗಳದ್ದಕ್ಕಿಂತ ವಿಶಿಷ್ಟವಾಗಿಯೇ ಇದೆಯಷ್ಟೆ. ಬ್ರಿಟಿಷ್ ಸಾಮ್ರಾಜ್ಯಶಾಹಿಯಿಂದ ಮುಕ್ತರಾಗುವುದರ ಜೊತೆಗೇ ದೇಶೀಯ ಭೂಮಾಲಿಕರು ಮತ್ತು ಬಂಡವಾಳಶಾಹಿಗಳ ವಿರುದ್ಧವೂ ಹೋರಾಟ ನಡೆದಾಗ ಮಾತ್ರ ಜನಸಾಮಾನ್ಯರ ಪಾಲಿಗೆ ದೇಶದ ಸ್ವಾತಂತ್ರ್ಯವು ಅರ್ಥಪೂರ್ಣವಾಗುತ್ತದೆಂದು ನಂಬಿದವರು ಅಂದಿಗೂ ಕೆಲವರಿದ್ದರು. ಗಾಂಧಿ, ನೆಹರೂ, ಪಟೇಲ್ ಮೊದಲಾದವರ ನಾಯಕತ್ವದಲ್ಲಿ ಅಧಿಕೃತ ಚಳವಳಿ ನಡೆಯುತ್ತಿರುವ ಕಾಲದಲ್ಲೇ ದೇಶದ ಈ ಭಾಗದಲ್ಲಿ ಭೂಗತರಾಗಿದ್ದು ಕೊಂಡು ಗುಪ್ತ ಚಟುವಟಿಕೆ ನಡೆಸುತ್ತಿದ್ದ ಎಡಪಂಥೀಯರಿದ್ದರು. ನಿರಂಜನರೇ ಒಂದು ಕಡೆ ಹೇಳುವ ಹಾಗೆ 'ಆಳುತ್ತಿದ್ದ ಬ್ರಿಟಿಷ್ ಸರ್ಕಾರಕ್ಕೆ ಕಮ್ಯೂನಿಸ್ಟ್ ಕ್ರಾಂತಿಕಾರಿ ಆಗ ಸಿಂಹಸ್ವಪ್ನ'. ಪರಿಸರದಲ್ಲಿ ದಟ್ಟವಾಗಿ ಹರಡಿದ್ದ ಕ್ರಾಂತಿಯ ಗಂಧ ಹೀರಿದ ನಿರಂಜನರ ಚಿರಸ್ಮರಣೆ ಕಾದಂಬರಿಗೆ ಕೈಯ್ಯೂರ ರೈತ ಸಂಘಟನೆಯೇ ವಸ್ತುವಾಗಿದೆ.

ವಿದ್ಯಾರ್ಥಿ ದೆಸೆಯಿಂದಲೇ ಪತ್ರಿಕೋದ್ಯಮಿಯಾಗುವ ಆಸೆ ಹೊತ್ತಿದ್ದ ಯುವಕ ಶಿವರಾಯರು ಕೆಲಸ ಹುಡುಕುತ್ತ ಮಂಗಳೂರಿಗೆ ಬಂದರು. ಆದರೆ ಆಸೆ ಕೈಗೂಡುವುದು ಅಷ್ಟೊಂದು ಸುಲಭವಾಗಿರಲಿಲ್ಲ. ನಿರುದ್ಯೋಗ ಸಮಸ್ಯೆ ಬಹುಕಾಲ ಕಾಡಿತು. ಕಡೆಗೂ ಬಹಿರಂಗ ಸಭೆಯೊಂದರಲ್ಲಿ ಈ ಯುವಕನ ಉಜ್ವಲ ಭಾಷಣ ಕೇಳಿ ಪ್ರಭಾವಿತರಾದ 'ರಾಷ್ಟ್ರಬಂಧು' ಪತ್ರಿಕೆಯ ಮಾಲೀಕರು ತಿಂಗಳಿಗೆ ಹನ್ನೆರಡು ರೂಪಾಯಿ ಸಂಬಳದ ಕೆಲಸ ಕೊಟ್ಟರು. ಈ ವೇಳೆಗಾಗಲೆ ಕಂಠೀರವ ಪತ್ರಿಕೆಗೆ ಸುಮಾರು ಅರವತ್ತರಷ್ಟು ಲೇಖನಗಳನ್ನು ಬರೆದಿದ್ದ ಶಿವರಾಯರಿಗೆ ಮೂರು ರೂಪಾಯಿ ಸಂಭಾವನೆಯೂ ದೊರೆತಿತ್ತು.

ಕನ್ನಡನಾಡಿನ ಪ್ರಮುಖ ಪತ್ರಿಕೆಗಳಾದ 'ರಾಷ್ಟ್ರಬಂಧು', 'ತಾಯಿ ನಾಡು', 'ಜನವಾಣಿ', 'ಸಂಯುಕ್ತ ಕರ್ನಾಟಕ'- ಇವೆಲ್ಲದರಲ್ಲಿಯೂ ಶಿವರಾಯರು ಬೇರೆ ಬೇರೆ ಹುದ್ದೆಗಳಲ್ಲಿ ದುಡಿದಿದ್ದಾರೆ. ವಿಶಾಲ ಅವಕಾಶಗಳನ್ನು ನಿರೀಕ್ಷಿಸುತ್ತ ಮಂಗಳೂರು ಬಿಟ್ಟು ಬೆಂಗಳೂರಿಗೆ ಬಂದ ಇವರ ಸೇವೆಯನ್ನು ಮೊದಲು ಸ್ವೀಕರಿಸಿದ್ದು 'ವಾಹಿನಿ ಪತ್ರಿಕೆ', ತಿಂಗಳಿಗೆ ನಲವತ್ತು ರೂಪಾಯಿ ಸಂಬಳದ ಮೇಲೆ. ಅವರು ದೀರ್ಘಕಾಲ, ವ್ಯಾಪಕವಾಗಿ ಪತ್ರಕರ್ತನ ಕಾರ್ಯನಿರ್ವಹಿಸಿದ್ದು 'ಪ್ರಜಾಮತ'ದಲ್ಲಿ.

ಭಾರತೀಯ ಕಮ್ಯೂನಿಸ್ಟ್ ಪಕ್ಷವು (ಅವಿಭಜಿತ) 1946ರಲ್ಲಿ ಹುಬ್ಬಳ್ಳಿ ಯಿಂದ 'ಜನಶಕ್ತಿ' ಪ್ರಕಟಣೆಯನ್ನು ಯೋಚಿಸಿದಾಗ ಸಹಜವಾಗಿಯೇ ಕುಳಕುಂದ ಶಿವರಾಯರಿಗೆ ಆಹ್ವಾನ ಹೋಯಿತು. ಅವರು 'ಪ್ರಜಾಮತ' ಬಿಟ್ಟು

ಹುಬ್ಬಳ್ಳಿಗೆ ಬಂದರು. ಮಾರನೆ ವರ್ಷ ಪ್ರಕಟಣೆಯನ್ನು ಆರಂಭಿಸಿದ 'ಜನಶಕ್ತಿ' ಒಂದೇ ವರ್ಷದಲ್ಲಿ, 1948ರಲ್ಲಿ ನಿಷೇಧಿಸಲ್ಪಟ್ಟಿತು. ತೆಲಂಗಾಣ ಚಳವಳಿಯ ಬಗ್ಗೆ ಲೇಖನಗಳನ್ನು ಬರೆಯುತ್ತ, ಭಾಷಣಗಳನ್ನು ಮಾಡುತ್ತ, ಶಿವರಾಯರು ಸುಮಾರು ಮೂರು ವರ್ಷಕಾಲ ಕಮ್ಯೂನಿಸ್ಟ್ ಪಕ್ಷದ ಸಕ್ರಿಯ ಸದಸ್ಯರಾಗಿದ್ದು (Partycard-holder), ಭೂಗತ ಚಟುವಟಿಕೆಗಳನ್ನು ನಡೆಸಿದರು. ಕುಳಕುಂದ ಶಿವರಾಯರು 'ನಿರಂಜನ' ಎಂಬ ಗುಪ್ತನಾಮವನ್ನು ಧರಿಸಿದ್ದು ಆಗ. ಮುಂದೆ ಇದೇ ಸಾಹಿತ್ಯ ಪ್ರಪಂಚದಲ್ಲಿ ಪ್ರಸಿದ್ಧ ಹೆಸರಾಯಿತು. 1951ರಲ್ಲಿ ಬಂಧಿತರಾಗಿ, ಸಾಕಷ್ಟು ದೀರ್ಘ ವಿಚಾರಣೆಯ ಅನಂತರ ಬಿಡುಗಡೆ ಹೊಂದಿದರು. 1953ರಲ್ಲಿ ಅವರು ಕಮ್ಯೂನಿಸ್ಟ್ ಪಕ್ಷದಿಂದ ಹೊರಬಂದರೆಂದು ತಿಳಿದು ಬರುತ್ತದೆ.

ನಿರಂಜನರು ಅನುಪಮಾ ಅವರನ್ನು ಮೊದಲು ಭೇಟಿಯಾದದ್ದು 1950ರಲ್ಲಿ. ಸಾಹಿತ್ಯದಲ್ಲಿ ಆಸಕ್ತಿ ಹೊಂದಿ, ಆ ವೇಳೆಗಾಗಲೆ ಕೆಲವು ಕಥೆಗಳನ್ನು ಬರೆದಿಟ್ಟುಕೊಂಡು ಪ್ರಕಾಶನಕ್ಕಾಗಿ ಕಾಯುತ್ತಿದ್ದ ವಿದ್ಯಾರ್ಥಿನಿ ಅನುಪಮಾ ಅವರಿಗೂ ನಿರಂಜನರಿಗೂ ನಿಕಟ ಪರಿಚಯ ಬೆಳೆದು, ಅಭಿರುಚಿಗಳೂ-ಜೀವಿತ ಧ್ಯೇಯಧೋರಣೆಗಳೂ ಪರಸ್ಪರ ಹೊಂದಿಕೊಂಡು, ಸುಮಾರು ಐದು ವರ್ಷಗಳ ಅನಂತರ, 1956ರಲ್ಲಿ ಸಾಹಿತಿ ನಿರಂಜನ-ವೈದ್ಯೆ ಅನುಪಮಾ ದಂಪತಿಗಳಾದರು. ತಂದೆತಾಯಿಯರ, ಬಂಧುಬಳಗದ ಕಣ್ಣು ತಪ್ಪಿಸಿ ಸ್ನೇಹಿತರ ನೆರವಿನಿಂದ ನಡೆದ ಅಂತರ್ಜಾತೀಯ ವಿವಾಹ ಇವರದು. ನೆಂಟರಿಗಿಂತಲೂ ಹೆಚ್ಚಾಗಿ ಮಿತ್ರರು ಕೂಡಿ ನೆರವೇರಿಸಿದ ಮದುವೆಯನ್ನು ದಂಪತಿಗಳು ಸಂತೋಷ, ಕೃತಜ್ಞತೆಗಳಿಂದ ಸ್ಮರಿಸುತ್ತಾರೆ.

1964ರಲ್ಲಿ 'ಇಂಡಿಯಾ ನ್ಯೂಸ್ ಅಂಡ್ ಫೀಚರ್ ಅಲಯನ್ಸ್, (ಇನ್ಫಾ) ಸಂಸ್ಥೆಗೆ ಬೆಂಗಳೂರಿನ ಬಾತ್ಮೀದಾರರಾಗಿ ನೇಮಕಗೊಂಡ ನಿರಂಜನರು 1967ರವರೆಗೂ ತುಂಬ ದಕ್ಷತೆಯಿಂದ ಆ ಕೆಲಸ ನಿರ್ವಹಿಸಿದರು. ಈ ಅವಧಿಯಲ್ಲಿ ಅವರು ಪತ್ರಿಕೆಗಳಿಗೆ ಬರೆದ ಲೇಖನಗಳು 'ರಾಜಧಾನಿಯಿಂದ' ಎಂಬ ಶೀರ್ಷಿಕೆಯಲ್ಲೂ, ಪ್ರಜಾಮತ ವಾರಪತ್ರಿಕೆಯಲ್ಲಿದ್ದಾಗ ಬರೆದ ಲೇಖನಗಳು 'ಅಂಕಣ', 'ದಿನಚರಿಯಿಂದ' ಎಂಬ ಹೆಸರುಗಳಿಂದಲೂ ಪ್ರಕಟವಾಗಿವೆ. ಕರ್ನಾಟಕದ ಅಂಕಣ ಬರಹಗಾರರಲ್ಲಿ ನಿರಂಜನರಿಗೆ ಉನ್ನತ ಸ್ಥಾನವೊಂದು ಮೀಸಲಾಗಿದೆ.

'ಕರ್ನಾಟಕ ಸಹಕಾರೀ ಪ್ರಕಾಶನ' ಎಂಬ ಸಂಸ್ಥೆಯು ಕಿರಿಯರಿಗಾಗಿ ವಿಶ್ವಕೋಶವೊಂದನ್ನು ತಯಾರಿಸುವ ಯೋಜನೆ ಹಾಕಿಕೊಂಡಾಗ ಅದರ ಸಂಪೂರ್ಣ ಜವಾಬ್ದಾರಿ ಹೊರಲು ಮುಂದಾದವರು ನಿರಂಜನ. 1969ರ ಆಗಸ್ಟ್ ತಿಂಗಳಲ್ಲಿ ಆರಂಭವಾಗಿ 1974ನೇ ಮಾರ್ಚ್ ತಿಂಗಳಲ್ಲಿ ಈ ದೊಡ್ಡ ಸಾಹಸ ಪೂರ್ಣಗೊಂಡಿತು. ಕೇವಲ ನಾಲ್ಕು ವರ್ಷ ಒಂಬತ್ತು ತಿಂಗಳಲ್ಲಿ 'ಜ್ಞಾನಗಂಗೋತ್ರಿ'ಯ ಎಲ್ಲ ಸಂಪುಟಗಳನ್ನು ಸಿದ್ಧಪಡಿಸಿ, ಇಪ್ಪತ್ತು ಸಾವಿರ ಪ್ರತಿಗಳನ್ನು ಅಚ್ಚುಮಾಡಿಸಿ, ವಿತರಣೆಯನ್ನೂ ವ್ಯವಸ್ಥೆಗೊಳಿಸಿದ್ದು ನಿರಂಜನರ ಕಾರ್ಯದಕ್ಷತೆ, ಶಿಸ್ತು, ಸಾಧನೆಗಳಿಗೆ ಉಜ್ವಲ ನಿದರ್ಶನ.

1980-83ರ ಅವಧಿಯಲ್ಲಿ, ಬೆಂಗಳೂರಿನ ನವಕರ್ನಾಟಕ ಪ್ರಕಾಶನ ಸಂಸ್ಥೆಯವರಿಗಾಗಿ, ನಾನಾದೇಶಗಳಿಂದ, ನಾನಾಭಾಷೆಗಳಿಂದ ಆಯ್ದ ಸುಮಾರು ನಾಲ್ಕುನೂರು ಸಣ್ಣಕಥೆಗಳನ್ನು ನಿರಂಜನರು ಇಪ್ಪತ್ತೈದು ಸಂಪುಟಗಳಲ್ಲಿ ಸಂಪಾದಿಸಿಕೊಟ್ಟರು. ಭಾರತೀಯ ಭಾಷೆಗಳಲ್ಲೇ ಪ್ರಪ್ರಥಮ ಎನ್ನಬಹುದಾದದ್ದು ಈ ಯೋಜನೆ. ವಿಶ್ವಕಥಾಕೋಶದ ಪ್ರಥಮ ಸಂಪುಟ ಕನ್ನಡ ಕಥೆಗಳಿಗೆ ಮೀಸಲಾಗಿದೆ. ಅನಂತರದ ಸಂಪುಟಗಳಲ್ಲಿ ಆಫ್ರಿಕಾಖಂಡದಿಂದ, ವಿಯಟ್ನಾಂನಿಂದ ಹಿಡಿದು ದಕ್ಷಿಣ ಅಮೆರಿಕಾ ಖಂಡದವರೆಗಿನ ಎಲ್ಲ ದೇಶಗಳ-ವಿಶೇಷವಾಗಿ ಸಮಾಜವಾದೀ ದೇಶಗಳ ಮತ್ತು ಆ ಮನೋಭಾವದ-ಕಥೆಗಳೂ ಸೇರಿವೆ. ಕಥೆಗಳ ಆಯ್ಕೆಯಲ್ಲಿ ನಿರಂಜನರ ತಾತ್ವಿಕ ದೃಷ್ಟಿಕೋನ, ಸಹೃದಯತೆ, ಸೂಕ್ಷ್ಮಸಂವೇದನೆಗಳನ್ನು ನಿಚ್ಚಳವಾಗಿ ಗುರುತಿಸಬಹುದು.

ಬಾಲ್ಯದ ಬಡತನ, ಯೌವ್ವನದ ಸಂಘರ್ಷಗಳನ್ನೆಲ್ಲ ಮೀರಿಸುವಂತಹ ದಾರುಣತರ ಆಘಾತವೊದಗಿದ್ದು ನಿರಂಜನರ ನಡುಪ್ರಾಯದಲ್ಲಿ. 1971ರಲ್ಲಿ ಅವರ ಜೀವಕ್ಕೇ ಸಂಚಕಾರ ಬಂದಿತ್ತು. ಮೈಸೂರು ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿದ್ದ ನಿರಂಜನರು ಅಂದಿನ ಸಭೆಯಲ್ಲಿ ಕೆಲಹೊತ್ತು ಮಾತಾಡಿ ಕುಳಿತೊಡನೆಯೇ ಅವರ ಎಡಗೈ, ಎಡಗಾಲುಗಳ ರಕ್ತಪರಿಚಲನೆ ಕುಂಠಿತವಾಗಿ, ಮರಗಟ್ಟಿ ಕುಸಿದು ಬಿದ್ದರು. ಮೆಡಿಕಲ್ ಕಾಲೇಜು ಆಸ್ಪತ್ರೆಗೆ ಸೇರಿಸಿದಾಗ ಅದು ಪಾರ್ಶ್ವವಾಯು ಪೀಡೆಯೆಂಬ ಕಠೋರಸತ್ಯವನ್ನು ತಿಳಿದು ಎಲ್ಲರಿಗೂ ದಿಗ್ಭ್ರಮೆಯಾಯಿತು. ಮೃತ್ಯುಮುಖದಲ್ಲಿ ಅಂದು ಅನುಭವಿಸಿದ ಆತಂಕವನ್ನು ಅವರ ಪತ್ನಿ, ಪ್ರಸಿದ್ಧ ಕನ್ನಡ ಸಾಹಿತಿ ಡಾ. ಅನುಪಮಾ ನೆನೆಸಿಕೊಳ್ಳುತ್ತಾರೆ -

"ಮೂರುದಿನ ನಿರಂಜನ ಸಾವು-ಬದುಕುಗಳ ನಡುವೆ ಹೋರಾಡಿದರು. ಕ್ಷಣಕ್ಷಣವೂ ಆತಂಕ.... ಆ ದಿನಗಳಲ್ಲಿ ನಾನು ನಿದ್ದೆ ಮಾಡಿದ್ದೆನೆ? ಎಚ್ಚರವಿದ್ದೆನೆ? ಒಂದೂ ನೆನಪಾಗುವುದಿಲ್ಲ."

"ಸಾವಿತ್ರಿ ಸತ್ಯವಾನನನ್ನು ಉಳಿಸಿಕೊಂಡ ಹಾಗೆ ಅನುಪಮಾ ನನ್ನನ್ನು ಉಳಿಸಿಕೊಂಡರು"– ಎನ್ನುತ್ತಾರೆ, ನಿರಂಜನ.

ವೈದ್ಯೆ ಪತ್ನಿಯ ಶುಶ್ರೂಷೆ, ಚಿಕಿತ್ಸೆ, ಪಥ್ಯಗಳಿಂದಾಗಿ ಅಂಗಾಂಗಗಳು ಕ್ರಮವಾಗಿ ಸ್ವಾಧೀನಕ್ಕೆ ಬರುತ್ತಿದ್ದವು. ಅಷ್ಟರಲ್ಲಿ ನಾಟಿವೈದ್ಯನೊಬ್ಬನ ಸಲಹೆಯಂತೆ ವಾಯುಪೀಡಿತ ಭಾಗಗಳಿಗೆ ಯಾವುದೋ ತೈಲ ಲೇಪಿಸಿ, ಬಲವಾಗಿ ನೀವಿಸಿಕೊಳ್ಳತೊಡಗಿದರಂತೆ. ಇದ್ದಕ್ಕಿದ್ದಂತೆ ಮತ್ತೆ ರೋಗವು ಉಲ್ಬಣಗೊಂಡು ಎಡಪಾರ್ಶ್ವದ ಅಂಗಗಳಿಗೆ ಶಾಶ್ವತ ಆಘಾತವಾಯಿತೆಂದು ಒಮ್ಮೆ ನಿರಂಜನರೇ ಹೇಳಿದ ನೆನಪುಂಟು. ಅಂದಿನಿಂದ ಅಲ್ಪಸ್ವಲ್ಪ ಓಡಾಡುವುದಕ್ಕೂ ಊರುಗೋಲನ್ನೊ, ಪರರ ತೋಳನ್ನೋ ಅವಲಂಬಿಸಬೇಕಾದ ಅಸಹಾಯಕ ಪರಿಸ್ಥಿತಿ. ಆದರೆ, ಬಲಪಾರ್ಶ್ವದ ಅಂಗಗಳಿಗೆ ಹೆಚ್ಚು ಆಘಾತವಾಗಿಲ್ಲವಾಗಿ ಮಾತನಾಡುವುದಕ್ಕೂ, ಒಂದೆಡೆ ಕುಳಿತು ಲೇಖನ ವ್ಯವಸಾಯದಲ್ಲಿ ತೊಡಗುವುದಕ್ಕೂ ಅಡ್ಡಿಯಿಲ್ಲ. ಅದೃಷ್ಟವಶಾತ್ ನಿರಂಜನರ ಬೌದ್ಧಿಕ ಸಾಮರ್ಥ್ಯವಾಗಲಿ, ಸೃಜನಶೀಲತೆಯಾಗಲಿ ಕುಂಠಿತಗೊಳ್ಳದಿರುವುದು ಇದ್ದುದರಲ್ಲೇ ಸಮಾಧಾನ ತಂದುಕೊಳ್ಳಬೇಕಾದ, ಸಂತೋಷಿಸಬೇಕಾದ ಸಂಗತಿ. ಪಾರ್ಶ್ವವಾಯು ಆಘಾತವನ್ನು ಅನುಭವಿಸಿದ ಮೇಲೂ 'ಜ್ಞಾನಗಂಗೋತ್ರಿ'ಯ ಕೆಲಸವನ್ನು ಪರಿಪೂರ್ಣಗೊಳಿಸುವುದು, 'ವಿಶ್ವಕಥಾಕೋಶ'ವನ್ನು ಸಿದ್ಧಪಡಿಸುವುದು, 'ಮೃತ್ಯುಂಜಯ'ದಂಥ ಮಹತ್ವಾಕಾಂಕ್ಷೆಯ ಕಾದಂಬರಿ ರಚಿಸುವುದು - ಇವೆಲ್ಲ ನಿರಂಜನರ ಅದಮ್ಯ ಚೇತನಕ್ಕೆ ಮಾತ್ರ ಸಾಧ್ಯವಾಗಬಹುದಾದ ಕೆಲಸಗಳು.

## 2

ವಿವಿಧ ಕ್ಷೇತ್ರಗಳಲ್ಲಿ ಕೆಲಸ ಮಾಡಿರುವ ನಿರಂಜನರು ಇದುವರೆಗೆ ಸುಮಾರು ಎಂಬತ್ತೆಂಟು ಕೃತಿಗಳನ್ನು ಪ್ರಕಟಿಸಿದ್ದಾರೆ:– ಕಥಾ ಸಂಗ್ರಹಗಳು- 9, ಕಾದಂಬರಿಗಳು- 25, ನಾಟಕಗಳು- 3, ಜೀವನ ಚರಿತ್ರೆ- 1, ಅಂಕಣ

ಬರಹ ಸಂಕಲನಗಳು- 7, ರಾಜಕೀಯ ಚರ್ಚೆ- 1, ಭಾಷಾಂತರ ಕೃತಿಗಳು- 10, ಜ್ಞಾನಗಂಗೋತ್ರಿ ಸಂಪುಟಗಳು- 7, ವಿಶ್ವಕಥಾಕೋಶ ಸಂಪುಟಗಳು- 25 ಹೀಗೆ. ಇಷ್ಟೇ ಅಲ್ಲದೆ, ಸುಮಾರು 3000 ಪುಟಗಳಷ್ಟು ಅಪ್ರಕಟಿತ ಬಿಡಿಬರಹಗಳು, ಉಪನ್ಯಾಸಗಳು, ರೇಡಿಯೋ ರೂಪಕಗಳು ಅವರ ಬಳಿ ಯಲ್ಲಿ ಇವೆಯಂತೆ.'

ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಕೈಯಾಡಿಸಿರುವರಾದರೂ ಇವರು ವಿಶೇಷ ಪ್ರಸಿದ್ಧರಾಗಿರುವುದು ಅಂಕಣ ಬರಹಗಾರರಾಗಿ ಮತ್ತು ಕಾದಂಬರಿಕಾರರಾಗಿ. ಈ ಎರಡು ಪ್ರಕಾರಗಳನ್ನು ಸ್ವಲ್ಪ ವಿಶದವಾಗಿ ಸಮೀಕ್ಷಿ ಸುವ ಉದ್ದೇಶವಿರುವುದರಿಂದ ಕಥಾಸಾಹಿತ್ಯವನ್ನು ಕುರಿತ ನಾಲ್ಕು ಮಾತು ಗಳನ್ನು ಇಲ್ಲಿಯೇ ಹೇಳಿಬಿಡಬಹುದು.

ನಿರಂಜನರು ಇನ್ನೂ ಶಿವರಾಯರಾಗಿದ್ದ ಕಾಲದಲ್ಲೇ ಬರೆದ 'ಎಣ್ಣೆ! ಚಿಮಣಿ ಎಣ್ಣೆ!' ಎಂಬ ಕಥೆ 'ರಾಷ್ಟ್ರಬಂಧು'ವಿನಲ್ಲಿ ಪ್ರಕಟವಾದಾಗ ಅದರ ಸಂಪಾದಕ ಕಡೆಂಗೋಡ್ಲು ಶಂಕರಭಟ್ಟರು ಬ್ರಿಟಿಷ್ ಸರ್ಕಾರದಿಂದ ವಿಚಾರಣೆ ಯನ್ನೆದುರಿಸಬೇಕಾಯಿತಂತೆ! ಅಂದಿನ ಐ.ಸಿ.ಎಸ್. ಕಲೆಕ್ಟರ್ ಸಾಹೇಬರು, ಇನ್ನು ಮುಂದೆ ಅಂಥ ಕಥೆಗಳನ್ನು ಪ್ರಕಟಿಸದಂತೆ ಸಂಪಾದಕರಿಗೆ ಎಚ್ಚರಿಕೆ ನೀಡಿದರು. ಅಷ್ಟೇ ಅಲ್ಲ; ಸ್ವತಂತ್ರ ಭಾರತದ 1975-76ರ ತುರ್ತು ಪರಿಸ್ಥಿತಿಯ ಕಾಲದಲ್ಲಿ 'ಅರುಣ' ಪತ್ರಿಕೆಯ ಸಂಪಾದಕರು ಈ ಕಥೆಯನ್ನು ಪುನರ್ಮುದ್ರಿಸಲು ಬಯಸಿದಾಗಲೂ ಸರ್ಕಾರದಿಂದ ಅನುಮತಿ ದೊರೆಯ ಲಿಲ್ಲವಂತೆ !

'ನಾಸ್ತಿಕ ಕೊಟ್ಟ ದೇವರು' ಎಂಬುದು ಹನ್ನೆರಡು ಚಿಕ್ಕ ಕಥೆಗಳ ಸಂಕಲನ. ಅದೇ ಹೆಸರಿನ ಮೊದಲ ಕಥೆಯನಾಯಕ ಸೀತಾಪತಿ ಒಬ್ಬ ಕಲಾವಿದ.

ದೇವರು, ಧರ್ಮ, ಮೊದಲಾದವು ಹೇಗೆ ಶೋಷಕ ವರ್ಗದವರ ಕೈಲಿ ಸಿಕ್ಕಿ ಬಡವರ ಶೋಷಣೆಯ ಸಾಧನಗಳಾಗಿವೆ ಎಂದು ಪ್ರತಿಪಾದಿಸುವುದು ಕಥೆಯ ಆಶಯ. ನಿರುಪದ್ರವಿಯಾದ ಕಲೆಗಾರನು ಕೂಡ, ತನಗರಿವಿಲ್ಲದಂ ತೆಯೇ ಶೋಷಕರ ಕೈ ಬಲಪಡಿಸುತ್ತಾನೆ !

ಈ ಸಂಕಲನಕ್ಕೆ 'ಮೆಲ್ನುಡಿ' ಬರೆದಿರುವ ಪ್ರೊ. ಜಿ. ವೆಂಕಟಸುಬ್ಬಯ್ಯ ನವರು ಹೇಳುವಂತೆ "ಕಥೆಯ ಹೆಸರು ಕುತೂಹಲಕಾರಿಯಾಗಿದೆ." ಆದರೆ, ಸೀತಾಪತಿ ನಿಜವಾಗಿಯೂ ನಾಸ್ತಿಕನೆ? ಅಥವಾ ಅದು ಧರ್ಮಗುರುವಿನ ಅಭಿಪ್ರಾಯ ಮಾತ್ರವೋ? ಈ ವಿಚಾರದಲ್ಲಿ ಕಥೆಗಾರರ ನಿಲುವೇನು? - ಎಂಬ ಸಂದೇಹಗಳು ಓದುಗರಲ್ಲಿ ಸುಳಿಯುತ್ತವೆ.

ಕೂಲಿಯ ಹೆಣ್ಣು ಮತ್ತು ದೇವತಾಮೂರ್ತಿ- ಹೀಗೆ ಎರಡು ವಿಗ್ರಹ ಗಳನ್ನು ಅಕ್ಕಪಕ್ಕದಲ್ಲಿಟ್ಟು ನೋಡುವ ತಂತ್ರದಲ್ಲಿ ಕಥೆಯ ಸೊಗಸಿದೆ.

ಈ ಕಥೆಯಲ್ಲಿ ಮಾತ್ರವಲ್ಲದೆ ಸಂಕಲನದ ಇನ್ನಿತರ ಕಥೆಗಳಲ್ಲಿಯೂ ಸಹ ದೀನದಲಿತರ ವಿಚಾರದಲ್ಲಿ ಲೇಖಕರ ಸಹಾನುಭೂತಿ, ಸೂಕ್ಷ್ಮ ಸಂವೇದನೆ, ವೈಚಾರಿಕತೆ, ನವಿರಾದ ವಿಡಂಬನೆ-ಮೊದಲಾದ ಗುಣಗಳು ಮೆಚ್ಚುವಂತಿವೆ.

ಐವತ್ತನೆಯ ದಶಕದಲ್ಲಿ 'ಸಾಧನ ಸಂಚಯ'ದ ಮೂಲಕ ಆರಂಭವಾದ ನಿರಂಜನರ 'ಅಂಕಣ ಬರಹ'ಗಳ ವ್ಯವಸಾಯವು ಅರವತ್ತನೆಯ ದಶಕದಲ್ಲಿ ಹೊಸ ಹೊಸ ಆಯಾಮಗಳನ್ನು ಪಡೆದುಕೊಂಡು ಸಮೃದ್ಧವಾಯಿತು. ಖ್ಯಾತ ದಿನಪತ್ರಿಕೆ ಪ್ರಜಾವಾಣಿ ಸಾಪ್ತಾಹಿಕ ಪುರವಣಿಗೆ 1962-66ರ ಅವಧಿಯಲ್ಲಿ 'ಬೇವು-ಬೆಲ್ಲ' ಎಂಬ ಶೀರ್ಷಿಕೆಯಿಂದ ಬರೆದ 205 ಲೇಖನಗಳ ಸಂಕಲನವೇ 'ಅಂಕಣ'. 'ಇನ್ಫಾ' ಸಂಸ್ಥೆಗೆ ಮೈಸೂರು ರಾಜ್ಯದ ಪ್ರತಿನಿಧಿಯಾಗಿದ್ದ ನಾಲ್ಕು ವರ್ಷವೂ, ಪ್ರತಿವಾರ ದಿಲ್ಲಿಗೆ ವರದಿ ಕಳಿಸುತ್ತಿದ್ದರು. ಅಲ್ಲದೆ, ಈ ಅವಧಿ ಯಲ್ಲಿ ಇಲ್ಲಿಯ ಕನ್ನಡ ಪತ್ರಿಕೆಗಳಿಗೂ ಬರೆಯುತ್ತಿದ್ದರು. ಹೀಗೆ ಬರೆದ ಲೇಖನಗಳ ಸಂಗ್ರಹ 'ರಾಜಧಾನಿಯಿಂದ', 'ಅಂಕಣ'ದ ಸೋದರ ಕೃತಿ.

'ಕರ್ನಾಟಕದಲ್ಲಿ ಸ್ವಾತಂತ್ರ್ಯಸಂಗ್ರಾಮದ ಇತಿಹಾಸ' (ಇಂಗ್ಲಿಷ್ ಗ್ರಂಥ)ದ ಮೊದಲ ಸಂಪುಟವು ಬಿಡುಗಡೆಯಾದ ಸಂದರ್ಭವನ್ನು ಬಳಸಿಕೊಂಡು 'ಸಾಮಾಜಿಕ ಪ್ರಜ್ಞೆ' ಇಲ್ಲದೆ ಬಾಡಿಗೆಯ ಭಟರಾಗಿ ದುಡಿಯುವವರು- ಚರಿತ್ರಕಾರರೇ ಇರಲಿ, ಸಾಹಿತಿಗಳೆ ಇರಲಿ-ಕಾಲದ ಪರೀಕ್ಷೆಯಲ್ಲಿ ತೇರ್ಗಡೆ ಯಾದ ಕೃತಿಗಳನ್ನಷ್ಟೇ ರಚಿಸಬಲ್ಲರು ಎಂದು ಟೀಕಿಸುತ್ತಾರೆ. ಬ್ರಿಟಿಷರ ಕಾಲದ ಚರಿತ್ರೆಯನ್ನು 'ಸಾಮಾಜಿಕ ಪ್ರಜ್ಞೆ'ಯ ದೃಷ್ಟಿಯಿಂದ ಉಲ್ಲೇಖಿಸುವ ಪ್ರಯತ್ನ ವನ್ನು ಸ್ವತಃ ನಿರಂಜನರು ಬರೆದ 'ಕಲ್ಯಾಣಸ್ವಾಮಿ', 'ಸ್ವಾಮಿ ಅಪರಂಪಾರ'- ಕಾದಂಬರಿಗಳಲ್ಲಿ ಕಾಣಬಹುದು.

ಕೈರೋ ನಗರದಲ್ಲಿ ನಡೆದ ಲೇಖಕರ ಸಮ್ಮೇಳನವೊಂದರಲ್ಲಿ 'ನಿಶ್ಶಸ್ತ್ರೀಕರಣ'ಕ್ಕೆ ಸಂಬಂಧಿಸಿದ ನಿರ್ಣಯ ಕೈಗೊಂಡುದರ ಔಚಿತ್ಯವನ್ನು ಪ್ರಶ್ನಿಸುತ್ತ, ಮುಖ್ಯವಾಗಿ ಮುಲ್ಕರಾಜ್ ಆನಂದ್ ಅವರನ್ನು ದೃಷ್ಟಿಯ ಲ್ಲಿಟ್ಟುಕೊಂಡು, 'ಈ ಪ್ರತಿನಿಧಿಗಳು ಜವಾಬ್ದಾರರಾಗಿರುವುದು ತಮ್ಮ ಪೋಷಕಬಾಂಧವರಿಗೆ ಮಾತ್ರ; ಯಾವುದೇ ವಿಶಿಷ್ಟ ಆವರಣದಲ್ಲಿ ತಮ್ಮ ವ್ಯಕ್ತಿತ್ವವನ್ನು ಬಲಿಗೊಟ್ಟು ಇತರರ ತಾಳಕ್ಕೆ ತಕ್ಕಂತೆ ಕುಣಿಯುವುದರಲ್ಲಿ ನಮ್ಮವರು ನಿಷ್ಣಾತರು'- ಎನ್ನುವಾಗ ಸಹಲೇಖಕರನ್ನ ಕುರಿತು ಟೀಕೆ ಅತಿ ಕಟುವಾಯ್ತು ಎನ್ನಿಸದಿರದು. ಅಲ್ಲದೆ, ಈ ರೀತಿ ಟೀಕೆ ಮಾಡಿದವರೇ ಸ್ವತಃ ಸರ್ಕಾರಿ ವೆಚ್ಚದಲ್ಲಿ ನಡೆಯಲಿದ್ದ ಪಿ.ಇ.ಎನ್. ಕೂಟವನ್ನು ಸಂಭ್ರಮದಿಂದ ಸ್ವಾಗತಿಸುವುದನ್ನು, ಇಂಥ ಕೂಟದ ದುಂದುವೆಚ್ಚದ ಅಗತ್ಯವಿಲ್ಲ, ಎಂದು 'ಸ್ಟೇಟ್ಸ್‌ಮನ್' ಪತ್ರಿಕೆಗೆ ಬರೆದ ಗುಪ್ತರದ್ದು ಸಂಕುಚಿತದೃಷ್ಟಿ, ಅಪಸ್ವರ ಎಂದೆಲ್ಲ ಹೇಳುವುದನ್ನು ನೋಡಿದರೆ ವಿಚಿತ್ರವೆನ್ನಿಸಬಹುದು. ಅಲ್ಲದೆ, 'ಪೋಷಕರ ಬಾಂಧವರನ್ನು ತೃಪ್ತಿಪಡಿಸುವ ಮಾತಾಡುವುದರಲ್ಲಿ ನಿರಂಜನ ರೇನು ಕಮ್ಮಿಯಿಲ್ಲ' ಎಂಬುದಕ್ಕೂ ಇಲ್ಲಿನ ಹಲವು ಲೇಖನಗಳು ಪುರಾವೆ ಯೊದಗಿಸುತ್ತವೆ.

ನಿರಂಜನರ ಕಥೆ ಕಾದಂಬರಿಗಳಲ್ಲಿ ಕಂಡುಬರುವ, ಶ್ರಮಜೀವಿಗಳ ಪರವಾದ ಸಾಮಾಜಿಕ ಕಳಕಳಿ ಅವರ ಅಂಕಣ ಬರಹಗಳಲ್ಲೇನೂ ವ್ಯಕ್ತ ವಾಗುವುದಿಲ್ಲ. ತಾವು ವಹಿಸಿಕೊಂಡಿದ್ದ ತತ್ಕಾಲೀನ ವೃತ್ತಿಗೌರವದಿಂದಲೋ ಅಥವಾ ಭೌತ ಪರಿಸರದಲ್ಲಿ ಆದ ಬಡತಿಯು ಮನೋಭಾವವನ್ನೂ ರೂಪಿಸಿತೋ-ಅಂತೂ ಅವಕಾಶ ಸಿಕ್ಕಾಗ ಮೇಲುವರ್ಗದ ವಕಾಲತ್ತು ವಹಿಸುವುದೇ ಹೆಚ್ಚು. 'ರೋಟರಿ'ಯಂಥ ಶ್ರೀಮಂತವರ್ಗದವರ 'ಕ್ಲಬ್'ಗಳ ಉದ್ದೇಶ ಬದಲಾಗಿರುವುದನ್ನು ಅವರು ಗುರುತಿಸುವುದು ಹೀಗೆ:

"ರೋಟರಿ-ಮೇಲಣವರ್ಗದವರ ಕಾಲಯಾಪನೆಗೊಂದು ಏರ್ಪಾಟು ಎಂದು ಭಾವಿಸಿದವರಿದ್ದರು. (ನಿರಂಜನರೂ ಒಂದು ಕಾಲದಲ್ಲಿ ಹಾಗೆ ಭಾವಿಸಿದ್ದಿರಬಹುದಲ್ಲ!) ಈಗ ರೋಟರಿ ನಾನಾ ವಿಧವಾಗಿ ಪ್ರಜಾಸೇವೆಗೆ ಅಣಿಯಾಗಿರುವ ಸಂಸ್ಥೆಯಾಗಿದೆ. ಲಯನ್ಸ್, ಜೂನಿಯರ್ ಛೇಂಬರ್‌ಗಳೂ ಅಷ್ಟೆ" (ರಾಜಧಾನಿಯಿಂದ- ಪುಟ 127).

ಪತ್ರಕರ್ತರೆಂದ ಮೇಲೆ ಉನ್ನತಾಧಿಕಾರಿಗಳ ನಿಕಟಸಂಪರ್ಕ. ಒಮ್ಮೊಮ್ಮೆ ಅವರ ಸಾಮಾನ್ಯಚರ್ಯೆಗಳೂ ಅಸಾಮಾನ್ಯವಾಗಿ, ಅತಿಮಹತ್ವದ್ದಾಗಿ ತೋರಬಹುದೇನೋ! ನಿರಂಜನರಿಗಂತೂ, ರಾಜ್ಯದ ಅಂದಿನ ಪ್ರಥಮ ಪ್ರಜೆ ವಿ.ವಿ. ಗಿರಿಯವರು ಒಬ್ಬ ಸಂತ, ಪ್ರವಾದಿ, ಸಮಾಜಸುಧಾರಕ, ಮಹಾಪುರುಷ, "ಗಿರಿಯವರು ರಾಜಧಾನಿಯಲ್ಲಿ ಇಲ್ಲವೆಂದರೆ ಬಿಕೋ ಎನ್ನುವ ಭಾವನೆ. ಅಷ್ಟು ಚಟುವಟಿಕೆಯ ಜೀವ ಅವರದು."

ಕೆಲವು ಕಾಲದ ಹಿಂದೆಯಷ್ಟೇ ತಾವು ಸಂಬಂಧ ಕಳೆದುಕೊಂಡ ಕಮ್ಯುನಿಸ್ಟ್ ಪಕ್ಷದ ಬಗ್ಗೆ ನಿರಂಜನರಿಗೆ ವಿಪರೀತ ಕೋಪ, ದ್ವೇಷಗಳುಂಟಾಗಿವೆ; ಮತಾಂತರ ಮಾಡಿದವರಿಗೆ ಹಳೆಯ ಮತದ ಮೇಲೆ ಸಿಟ್ಟಿರುವ ಹಾಗೆ. ಹಾಗೆಂದು ಇವರು ಕಮ್ಯೂನಿಸ್ಟ್ ಚೀನಾದ ಸಾಧನೆಗಳನ್ನು, ಮಾವುತ್ಸೆತುಂಗರ 'ದಾರ್ಶನಿಕತೆ'ಯನ್ನು ಮೆಚ್ಚದೆ ಇಲ್ಲ. ಆದ್ದರಿಂದ ಕೆಲವು ಮಾದರಿಯ ಕಮ್ಯೂನಿಸಂ ಬಗ್ಗೆಯಷ್ಟೇ ಇವರ ಸಿಟ್ಟು ಎಂದು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಯುಗೊಸ್ಲೋವಿಯಾದ ಮಿಲಾನ್ ಜಿಲಾಸ್ ಎಂಬ ಬಂಡಾಯಗಾರ ಲೇಖಕನ ಬಗ್ಗೆ (ದಿ ನ್ಯೂಕ್ಲಾಸ್) ಬರೆಯುತ್ತ-

"ಮನುಷ್ಯನಿಗೆ ಕಮ್ಯೂನಿಸಮಿನ ದೀಕ್ಷೆ, ಕುದುರೆಗೆ ಕಣ್‌ಪಟ್ಟಿ ಕಟ್ಟಿದ ಹಾಗೆ. ರೈಲುಹಳಿಗಳ ಮೇಲೆ ಉಗಿಯಂತ್ರವನ್ನಿಟ್ಟು ಚಾಲನೆ ಕೊಟ್ಟಹಾಗೆ. ಕಲ್ಪಿಸಿಕೊಂಡಿರುವ ಗುರಿಯ ಕಡೆಗೆ ಅದರ ಓಟ ನೇರ, ಅಬಾಧಿತ."

ಸಾಮಾನ್ಯ ಸಂದರ್ಭದಲ್ಲಿ ಇದು ಪ್ರಶಂಸೆಯೇ ಆಗಬಹುದೇನೋ! ಕಲ್ಪಿಸಿಕೊಂಡ ಗುರಿಯ ಕಡೆಗೆ ಅಬಾಧಿತವಾಗಿ, ನೇರವಾಗಿ ಸಾಗುವುದು ತಪ್ಪೇನಲ್ಲವಲ್ಲ ! ಎರಡು ದಶಕಗಳ ಹಿಂದಿನ ಕನ್ನಡ ನಾಡಿನ ಸ್ಥಿತಿಗತಿಗಳು, ಸಮಸ್ಯೆಗಳ ಬಗೆಗೆ ಅಂಕಣಗಳಲ್ಲಿ ದಾಖಲಾಗಿರುವ ಕೆಲವು ಮಾಹಿತಿಗಳು ಸ್ವಾರಸ್ಯಪೂರ್ಣವಾಗಿವೆ. ಕರ್ನಾಟಕದ ಮೆಡಿಕಲ್ ಕಾಲೇಜಿನಲ್ಲಿ ಹದಿನೈದು ಸಾವಿರ ಸೀಟು ಶುಲ್ಕ ವಸೂಲು ಮಾಡಿದ್ದಕ್ಕಾಗಿ ಕೇಂದ್ರದ ವಿದ್ಯಾಮಂತ್ರಿ ಎಂ.ಸಿ. ಛಾಗಲಾ ಅವರು ಕೋಪದಿಂದ ಗರ್ಜಿಸುವುದು; ಸೀಟುಶುಲ್ಕದ ಭ್ರಷ್ಟಾಚಾರವನ್ನು ತಡೆಯಲು ಮುಖ್ಯಮಂತ್ರಿ ನಿಜಲಿಂಗಪ್ಪನವರ 'ದೃಢ ಸಂಕಲ್ಪ'; ವಿಜಯನಗರ ಉಕ್ಕು ಕಾರ್ಖಾನೆಯ ಬಗ್ಗೆ ಕೇಂದ್ರದ ಭರವಸೆ; ಇಂಗ್ಲಿಷನ್ನು ಆಡಳಿತ ಮತ್ತು ಶಿಕ್ಷಣದ ಏಕೈಕ ಮಾಧ್ಯಮವಾಗಿ ಉಳಿಸಿ, ಬೆಳೆಸಬೇಕೆಂದು ಪ್ರಧಾನಮಂತ್ರಿಗೂ, ಕೇಂದ್ರದ ಶಿಕ್ಷಣ ಸಚಿವರಿಗೂ, ಉಪಕುಲಪತಿಗಳ ಸಮ್ಮೇಳನಾಧ್ಯಕ್ಷರಿಗೂ ಕರ್ನಾಟಕದ ಮೂವತ್ತು ಜನ 'ಬುದ್ಧಿಜೀವಿಗಳು' ಸಲ್ಲಿಸಿದ ಮನವಿ; ನ್ಯಾಯಾಸ್ಥಾನಗಳಲ್ಲಿ ಹಿಂದಿಯನ್ನಾಗಲಿ, ಪ್ರಾದೇಶಿಕ ಭಾಷೆಗಳನ್ನಾಗಲಿ ಬಳಸಿದರೆ ರಾಷ್ಟ್ರದ ನ್ಯಾಯಶಾಸ್ತ್ರದ ಮೇಲುಪ್ಪರಿಗೆಯೇ ಕುಸಿದು ಬೀಳುವುದೆಂದು ಕೋಕಾ ಸುಬ್ಬರಾಯರ (ರಾಷ್ಟ್ರಾಧ್ಯಕ್ಷ ಪದವಿಯ ಅಭ್ಯರ್ಥಿ) ಗರ್ಜನೆ, ಇತ್ಯಾದಿ ಉಲ್ಲೇಖಗಳಲ್ಲಿ ಇಂಗಿತವಾಗಿರುವ ನಾಟಕೀಯ ವ್ಯಂಗ್ಯ ಅದೆಷ್ಟು ಉಜ್ವಲ!

ಅಂಕಣ ಲೇಖನಗಳಲ್ಲಿನ ಶೈಲಿ, ನಿರಂಜನರ ಕಥೆ ಕಾದಂಬರಿಗಳ ಶೈಲಿಗಿಂತ ಭಿನ್ನವಾಗಿದೆ; ಇದು ಸಹಜವೇ. ಕನ್ನಡ ಪತ್ರಿಕಾ ಬರಹಗಳಲ್ಲಿ ಕಂಡುಬರುವ ತುಂಡು ತುಂಡು ವಾಕ್ಯಗಳ ಜೋಡಣೆಗೆ ಇಲ್ಲಿ ಮೇಲ್ಪಂಕ್ತಿ ಹಾಕಿಕೊಟ್ಟ ಹಾಗಿದೆ. ಒಮ್ಮೊಮ್ಮೆ ಈ ತುಂಡುವಾಕ್ಯಗಳು ತೊಡರುಗಾಲು ಕೊಡುವುದೂ ಉಂಟು. 'ಇನ್ನೂ ಮೆಟ್ಟಲುಗಳಿವೆ ಎಂದುಕೊಂಡು ಮಹಡಿಯಿಂದ ಇಳಿಯುತ್ತಿರುವಾಗ ಇದ್ದಕ್ಕಿದ್ದಂತೆ ನೆಲಕ್ಕೆ ಕಾಲು ತಾಕಿ ಮುಗ್ಗರಿಸಿದಂತೆ' ಆಗುವುದೂ ಉಂಟು.

## 3

'ವಿಮೋಚನೆ'ಯಿಂದ ಆರಂಭವಾದ ಕಾದಂಬರಿಗಳ ರಚನೆ ಬಿಟ್ಟೂ ಬಿಡದಂತೆ ಸಾಗಿ ನಿರಂಜನರ ಲೇಖನಿಯಿಂದ ಈವರೆಗೆ ಇಪ್ಪತ್ತೈದು ಕಾದಂಬರಿಗಳು ಹೊರಬಿದ್ದಿವೆ. ಇವರ ಸಮಕಾಲೀನರೇ ಆದ ಇತರ ಕೆಲವು ಕಾದಂಬರಿಕಾರರೊಡನೆ ಹೋಲಿಸಿದರೆ, ಸಂಖ್ಯೆಯ ದೃಷ್ಟಿಯಿಂದ ಇವರ ಉತ್ಪಾದನೆಯೇನೂ ಹೆಚ್ಚಲ್ಲ. ಆದರೆ, ಸಾಹಿತ್ಯ ರಚನೆಯ ಸಂದರ್ಭದಲ್ಲೇ ಇತರ ಜ್ಞಾನಕ್ಷೇತ್ರಗಳ ಕಡೆಗೂ ನಿರಂಜನರು ಗಮನ ಹರಿಸಿದ್ದರಿಂದ ಪರಿಣಾಮದಲ್ಲಿ ಒಳ್ಳೆಯದೇ ಆಯಿತೆಂಬುದನ್ನೂ, ಅವರ ಕೃತಿಗಳ 'ತೂಕ' ಹೆಚ್ಚಿತೆಂಬುದನ್ನೂ ಕಡೆಗಣಿಸುವಂತಿಲ್ಲ.

ಸಾಮಾಜಿಕಪ್ರಜ್ಞೆ, ಪ್ರಗತಿಶೀಲತೆ, ವಾಸ್ತವತಾವಾದ, ಮಾನವತಾವಾದ- ಮೊದಲಾದ ಚರ್ಚೆಗಳು ಬಿರುಸಿನಿಂದ ನಡೆಯುತ್ತಿರುವ ಕಾಲದಲ್ಲಿ ರಚನೆಯಾದ ಕೃತಿಗಳಲ್ಲಿ ಒಂದಿಲ್ಲೊಂದು ಧ್ವನಿಯನ್ನು ಗುರುತಿಸುವುದು ಅವುಗಳ ಲೇಖಕರನ್ನು ಯಾವುದಾದರೊಂದು ಪಂಥಕ್ಕೆ ಬಂಧಿಸಲೆತ್ನಿಸುವುದು ವಿಮರ್ಶಕರಿಗೆ ಸಹಜ.

"ಒಂದು ಅರ್ಥದಲ್ಲಿ ಕನ್ನಡ ಸಾಹಿತ್ಯಕ್ಕೆ ಮೊಟ್ಟಮೊದಲು ಸಾಮಾಜಿಕ ಪ್ರಜ್ಞೆಯ, ಬಂಡಾಯ ಪ್ರವೃತ್ತಿಯ ಆಯಾಮಗಳನ್ನು ತಂದುಕೊಟ್ಟ ಕೀರ್ತಿ ನಿರಂಜನರಿಗೇ ಸಲ್ಲಬೇಕು. ಪ್ರಗತಿಶೀಲ ಸಾಹಿತ್ಯ ಚಳವಳಿ ನಡೆದಾಗ ಅ.ನ.ಕೃ. ಮತ್ತು ನಿರಂಜನರ ನಡುವೆ ಇದ್ದ ಭಿನ್ನಾಭಿಪ್ರಾಯಗಳು ಈಗೀಗ ಮರೆತು ಹೋಗುತ್ತಿವೆ. ಜನರಂಜನೆಗೆ ಮರುಳಾಗದೆ, ನಂಬಿದ ಧೋರಣೆಗಳನ್ನು ಬಿಡದೆ ಬದ್ಧರಾಗಿ ಬರೆದ ನಿರಂಜನ 'ಕಾಮ್ರೇಡ್ ವಿಮರ್ಶಕ' ಎಂಬ ಗೇಲಿಯ ಪದ್ಯಕ್ಕೆ ಕಾರಣರಾದದ್ದೂ ಪರಿಸ್ಥಿತಿಯ ವ್ಯಂಗ್ಯವೇ ಸರಿ" ಎಂದು ಒಂದು ಕಡೆ ಬರೆಯಲಾಗಿದೆ (ಎಸ್. ದಿವಾಕರ, ಸುಧಾ, 28 ನವೆಂಬರ್ 1982). ಈ ಉಲ್ಲೇಖದಲ್ಲಿ ಬಂದಿರುವ ಮಾತುಗಳನ್ನು ಮುಂದೆ ಚರ್ಚೆಗೆತ್ತಿಕೊಳ್ಳಬಹುದು. ಸದ್ಯಕ್ಕೆ, ನಿರಂಜನರ ಈ ವರೆಗಿನ ಕಾದಂಬರಿಗಳನ್ನು ಸಾಮಾಜಿಕ ಪ್ರಜ್ಞೆಯ ಕೃತಿಗಳು, ಇತಿಹಾಸಪ್ರಜ್ಞೆಯ ಕೃತಿಗಳು ಹಾಗೂ ಬಂಡಾಯಪ್ರಜ್ಞೆಯ ಕೃತಿಗಳು ಎಂದು ವಿಂಗಡಿಸಿಕೊಳ್ಳುವುದು ಸೂಕ್ತವೆನಿಸುತ್ತದೆ.

'ವಿಮೋಚನೆ', 'ಬನಶಂಕರಿ', 'ರಂಗಮ್ಮನ ವಠಾರ', 'ಅಭಯ', 'ನಂದಗೋಕುಲ'- ಇವೆಲ್ಲ 'ಸಾಮಾಜಿಕ ಕಾದಂಬರಿ'ಗಳೆನಿಸಿದರೆ, 'ಕಲ್ಯಾಣಸ್ವಾಮಿ' ಹಾಗೂ 'ಸ್ವಾಮಿ ಅಪರಂಪಾರ' ಇತಿಹಾಸಪ್ರಜ್ಞೆಯ ಕೃತಿಗಳು, 'ಚಿರಸ್ಮರಣೆ' ಮತ್ತು 'ಮೃತ್ಯುಂಜಯ'ಗಳಲ್ಲಿ ಬಂಡಾಯ ಅಥವಾ ಕ್ರಾಂತಿತತ್ವ ಬೆನ್ನೆಲುಬಾಗಿದೆ.

ಬಡವರ ಮಗನಾಗಿ ಹಳ್ಳಿಯಲ್ಲಿ ಹುಟ್ಟಿದ ಚಂದ್ರಶೇಖರ, ನಗರಕ್ಕೆ ಪ್ರಯಾಣ ಮಾಡುವಾಗಲೇ ತಾಯಿಯನ್ನು ಕಳೆದುಕೊಂಡು, ನಗರಕ್ಕೆ ಬಂದ ಕೆಲವೇ ದಿನಗಳಲ್ಲಿ ತಂದೆಯನ್ನು ಕಳೆದುಕೊಂಡು, ಓದನ್ನು ಅರ್ಧಕ್ಕೆ ಬಿಟ್ಟು, ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿ ಜೇಬುಗಳ್ಳನೂ, ಖದೀಮನೂ, ಸಮಾಜಕಂಟಕನೂ ಆಗಿ ಕೆಲವು ದಿನ ಮೆರೆದು ಕಡೆಗೆ ಜೈಲು ಸೇರುತ್ತಾನೆ. ಕಾಯಿಲೆ ನರಳುತ್ತ, ಒಂದು ವಾರದ ದಿನಚರಿ ರೂಪದಲ್ಲಿ ಬರೆದ ಅವನ ಆತ್ಮಚರಿತ್ರೆ 'ವಿಮೋಚನೆ'. ಅಂದಿನ ಕಾಲಕ್ಕೆ ಹೊಸ ತಂತ್ರ.

ಚಂದ್ರಶೇಖರ ವಿದ್ಯಾವಂತ ಕಳ್ಳ; ಸಾಹಿತ್ಯಾಸಕ್ತ, ಸುಸಂಸ್ಕೃತ, ಸಂವೇದನಾಶಾಲಿ. ಪ್ರೇಮ, ದಯೆ, ಸಹಾನುಭೂತಿ, ಸೌಂದರ್ಯಗಳನ್ನು

ಅರಿತು ಅನುಭವಿಸಬಲ್ಲವನು. ಸಹಚೋರರ ಗೌರವಕ್ಕೂ, ಓದುಗರ ಸಹಾನುಭೂತಿಗೂ ಪಾತ್ರನಾಗುತ್ತಾನೆ.

ಪರಿಸರ ಅವನ ಬೆಳವಣಿಗೆಗೆ ವಿರುದ್ಧವಾಗಿತ್ತೆಂಬುದೇನೋ ನಿಜ. ಆದರೂ ಗೌರವಯುತವಾಗಿ ಬದುಕಲು ಒಂದೆರಡು ಬಾರಿ ಒದಗಿದ ಅವಕಾಶ ಗಳನ್ನು ತಾನಾಗಿಯೇ ದೂರ ತಳ್ಳುವುದೇಕೋ ಅರ್ಥವಾಗುವುದಿಲ್ಲ.

ನಿರಂಜನರ ಈ ಪ್ರಥಮ ಪ್ರಯತ್ನವೇ ದೊಡ್ಡಸಂಖ್ಯೆಯ ಓದುಗರನ್ನು ಗಳಿಸಿ, ರಷ್ಯನ್, ಪೋಲಿಷ್ ಭಾಷೆಗಳಿಗೂ ಅನುವಾದಗೊಂಡುದು ಹೆಮ್ಮೆಯ ವಿಷಯ.

'ರಂಗಮ್ಮನ ವಠಾರ' ಇನ್ನೊಂದು ಒಳ್ಳೆಯ ಕಾದಂಬರಿ. ವಠಾರದಲ್ಲಿ ವಾಸಿಸುವ ಐದಾರು ಕೆಳಮಧ್ಯಮ ವರ್ಗದ ಕುಟುಂಬಗಳ ದಿನದಿನದ ಸುಖ ದುಃಖಗಳ (ಸುಖಕ್ಕಿಂತ ಹೆಚ್ಚು ದುಃಖ), ಸರಸ-ವಿರಸಗಳ ಕಥೆ. ವಿಭಿನ್ನ ಬಗೆಯ ಕುಟುಂಬಗಳ ವ್ಯವಹಾರವನ್ನು ಒಂದಾಗಿ ಪೋಣಿಸಿರುವ ಸೂತ್ರ ವೆಂದರೆ, ದಿನ ಬೆಳದಾಗ ನಡೆಗೋಲನ್ನು ಟಿಕ್, ಟಿಕ್, ಟಿಕ್ ಎಂದು ಕುಟ್ಟುತ್ತ, ಕೆಮ್ಮುತ್ತ ಬರುವ ರಂಗಮ್ಮ. ಆಕೆ, ಯಾರ ದಾಕ್ಷಿಣ್ಯವೂ ಇಲ್ಲದೆ ಬಾಡಿಗೆ ವಸೂಲು ಮಾಡುತ್ತಾಳೆ, ಅವಕಾಶ ಸಿಕ್ಕಿದಾಗೆಲ್ಲ ಬಾಡಿಗೆ ಏರಿಸುತ್ತಾಳೆ; ಆದರೂ ಅವಳು ಕೆಟ್ಟವಳಲ್ಲ. ಆಕೆಯಲ್ಲಿ ಮಾನವೀಯತೆ, ಕರುಣೆಯ ಸೆಲೆ ಇದ್ದೇ ಇದೆ. ಬದುಕಿನ ಅನಿವಾರ್ಯತೆಗಳು, ಅಪಾರ ದುಃಖದ ನಡುವಿನ ಅಲ್ಪ ಸುಖ, ಅಳು ನುಂಗಿ ನಗುವ ಸರಸ-ಇವು ಮನಂಬುಗುವಂತೆ ಚಿತ್ರಿತವಾಗಿವೆ, ಕಾದಂಬರಿಯಲ್ಲಿ.

ಅನಾಥ ಹೆಣ್ಣಿನ ಅಪಾರ ದುಃಖ, ಜೀವಿತದ ಸವಾಲುಗಳು, ಸಾಹಸ ಪ್ರವೃತ್ತಿಯ ಚಿತ್ರಣ 'ಬನಶಂಕರಿ'ಯಲ್ಲಿದೆ. ಕಾದಂಬರಿಯ ಅಂತ್ಯದಲ್ಲಿ ಬರುವ 'ಅಂತೂ ಒಂದು ಕಥೆ ಮುಗಿಯಿತು, ಎಂಥ ರುದ್ರ ಕಥೆ !.... ದೇವಿ ಅಂತಾರೆ .... ಯಾವುದೇ ಭವ್ಯದೇವಿಯ ಕಲ್ಪನೆ ಈ ವಾಸ್ತವತೆಗಿಂತ ಯಾವತ್ತೂ ಹೆಚ್ಚಿನದಾಗದು.... ಹೌದು ಆಕೆ ದೇವಿ'-ಎಂಬ ಸಂಭಾಷಣೆಯ ತುಣುಕು ಗಳನ್ನು ನೋಡಿದರೇನೇ ಇದು ಎಂತಹ ಭಾವುಕ ಬರವಣಿಗೆ (Sentimental) ಎಂಬುದನ್ನು ತಿಳಿಯಬಹುದು.

ಬನಶಂಕರಿ ಉರುಫ್ ಅಮ್ಮಿಯ ಅಸಹಾಯಕ ಸ್ಥಿತಿ, ಕಾವೇರಿ ಎಂಬುವಳ ಸಹಾನುಭೂತಿ, ಗ್ರಾಮೀಣ ಪರಿಸರ-ಮೊದಲಾದವು ಕೆಲವಂಶ ಗಳಲ್ಲಿ ಕಾರಂತರ ಕಾದಂಬರಿ ಪರಿಸರದ, ಪಾತ್ರಗಳ ನೆನಪು ತರುತ್ತವೆ ಯಾದರೂ ಆ ಬಗೆಯ ಜೀವನಶ್ರದ್ಧೆ ಇಲ್ಲಿ ಕಾಣಿಸುವುದಿಲ್ಲ. ಸಾಮಾನ್ಯ ಆಲೋಚನಾಮಟ್ಟದಲ್ಲೇ ಇಲ್ಲಿನ ಪಾತ್ರಗಳು ಸೋಲುತ್ತವೆ.

ಅನಾಥಸೇವಾಶ್ರಮವೊಂದರ ಸಾಮಾಜಿಕ ಮಹತ್ವದ ಸುತ್ತ ಬೆಳೆದಿರುವ ಕಥೆ 'ಅಭಯ'. ಸ್ಕೂಲ್ ಮಾಸ್ತರರ ಮಗಳು ತುಂಗ, ಧೂರ್ತನೊಬ್ಬನ ವಂಚನೆಗೆ ಒಳಗಾಗಿ, ಮದುವೆಯ ಮುಂಚೆಯೇ ಗರ್ಭಿಣಿಯಾಗುವುದು; ಬೆಂಗಳೂರಿನ ಅಭಯಾಶ್ರಮ ಸೇರಿ 'ಮೇಟ್ರನ್' (ದೊಡ್ಡಮ್ಮ)ಗೆ ಅಚ್ಚು ಮೆಚ್ಚಾಗುವುದು; ಕಡೆಯಲ್ಲಿ ಆಶ್ರಮದ ಗೌರವ ಕಾರ್ಯದರ್ಶಿನಿಯ ತಮ್ಮ ಆದರ್ಶವಾದೀ ಯುವಕ ವಕೀಲನನ್ನು ಮದುವೆಯಾಗುವುದು ಕಥೆ. ಅಭಯಾಶ್ರಮವನ್ನು ಅರಸಿ ಬರುವ ವಿವಿಧ ಬಗೆಯ ಜನರು, ಅವರ ರೀತಿ ನೀತಿಗಳ ಚಿತ್ರಣ ಸಹಜವಾಗಿದೆ. ಮುಖ್ಯಪಾತ್ರಗಳು ಮಾತ್ರ ಅತಿಭಾವುಕ ವಾಗಿ ವರ್ತಿಸುತ್ತವೆ; ಅಸಹಜವಾಗುತ್ತವೆ.

ಒಟ್ಟಿನ ಮೇಲೆ ಹೇಳುವುದಾದರೆ, ಈ ಎಲ್ಲ ಕಾದಂಬರಿಗಳೂ ಅ.ನ.ಕೃ. ಅವರ ಕಾದಂಬರಿಗಳ ಮೂಲಕ ಓದಿನ ದಾಹವನ್ನು ಆಗ ತಾನೇ ಬೆಳೆಸಿ ಕೊಂಡಿದ್ದ ಸಾಮಾಜಿಕರನ್ನು ತೃಪ್ತಿಪಡಿಸುವ ಉದ್ದೇಶವನ್ನು ಸಾಧಿಸಿದವು ಎನ್ನಲಡ್ಡಿಯಿಲ್ಲ.

ಬ್ರಿಟಿಷರ ಕಾಲದ ಚರಿತ್ರೆಯನ್ನು ಅಂದಿನ ಸಾಮಾಜಿಕ ಪ್ರಜ್ಞೆಯ ದೃಷ್ಟಿಯಿಂದ ಹೊಸದಾಗಿ ಬರೆಯಬೇಕೆಂದು ನಿರಂಜನರು ತಮ್ಮ ಒಂದು ಅಂಕಣಬರಹದಲ್ಲಿ ಸೂಚಿಸಿದ್ದಾರಷ್ಟೆ. 'ಕಲ್ಯಾಣಸ್ವಾಮಿ' ಮತ್ತು 'ಸ್ವಾಮಿ ಅಪರಂಪಾರ' ಎರಡೂ ಅಂಥ ಸಾಮಾಜಿಕ ದೃಷ್ಟಿಗೆ ಪ್ರಾಧಾನ್ಯವಿತ್ತಿರುವ ಚಾರಿತ್ರಿಕ ಕಾದಂಬರಿಗಳು.

ಭಾರತದ ಮೇಲೆ ಇಂಗ್ಲಿಷರ ಕರಾಳ ಹಿಡಿತವು ಕ್ರಮಕ್ರಮವಾಗಿ ವಿಸ್ತರಿಸುತ್ತಿದ್ದ ದಿನಗಳಲ್ಲಿ ಕೊಡಗು ಮತ್ತು ದಕ್ಷಿಣ ಕನ್ನಡ ಪ್ರಾಂತ್ಯದಲ್ಲಿ ನಡೆದ ಜನತಾ ಆಂದೋಳನವೊಂದರ ಚಿತ್ರ 'ಕಲ್ಯಾಣಸ್ವಾಮಿ'ಯಲ್ಲಿದೆ. ಕಲ್ಯಾಣಪ್ಪನ ಕಾಟಕಾಯಿ ಎಂಬ ಯಕ್ಷಗಾನ ಹಾಗೂ ಹಲವು ಚಾರಿತ್ರಿಕ ದಾಖಲೆಗಳನ್ನು ಆಧರಿಸಿದ ನಿರಂಜನರು ಈ ಕಾದಂಬರಿಯನ್ನು ರಚಿಸಿದ್ದಾರೆ.

ಅರಸು ವೀರರಾಜೇಂದ್ರನಿಗೆ ದ್ರೋಹ ಬಗೆದು ಬ್ರಿಟಿಷರು ಅವನನ್ನು ಗುಪ್ತವಾಗಿ ದೇಶದಿಂದ ಓಡಿಸಿದರಷ್ಟೆ; ಇದರಿಂದ ಕುಪಿತರಾದ ಹಳ್ಳಿಗಾಡಿನ ಜನರು, ಜಾತಿಮತ ಭೇದಗಳನ್ನು ಬದಿಗಿರಿಸಿ, ಸರದಾರ ಬಸವರಾಜಪ್ಪನ ಮಗ ಪುಟ್ಟಬಸವನನ್ನು ತಮ್ಮ ನಾಯಕನನ್ನಾಗಿ ಮಾಡಿಕೊಂಡು ಬ್ರಿಟಿಷರ ವಿರುದ್ಧ ದಂಗೆಯೆದ್ದರು. ದಂಗೆಯ ಕಾಲದಲ್ಲಿ ಪುಟ್ಟಬಸವ ಸರದಾರನು ಧರಿಸಿದ ಗುಪ್ತನಾಮ ಕಲ್ಯಾಣಸ್ವಾಮಿ. 'ಹಾರುವ ಹಕ್ಕಿಯ ಕಣ್ಣಿಗೆ ಗುರಿಹೊಡೆ ಯುವ ಸಾಮರ್ಥ್ಯವಿದ್ದ ಚೆಟ್ಟಿಕುಡಿಯ, ಅವನ ತಮ್ಮ ಕುರ್ತಕುಡಿಯ, ಹುಲಿಕುಂದ ನಂಜಯ್ಯನೆಂಬ ಸರದಾರ ಮೊದಲಾದವರೆಲ್ಲ ಸೇರಿ ನಡೆಸಿದ ದಾಳಿಯಲ್ಲಿ ಮೊದಮೊದಲು ಅವರಿಗೇ ಜಯ ಲಭಿಸಿತು. ಮಂಗಳೂರಿಗೂ ದಾಳಿಯಿಟ್ಟು ಕೈವಶಪಡಿಸಿಕೊಂಡರು. ಆದರೆ, ಮದರಾಸಿನಿಂದ ಬಂದಿಳಿದ, ಅಪಾರ ಮದ್ದು ಗುಂಡುಗಳಿಂದ ಸನ್ನದ್ಧವಾಗಿದ್ದ ಇಂಗ್ಲಿಷ್ ಸೈನ್ಯದ ಎದುರಿಗೆ ಈ ಜನತಾ ಸೈನ್ಯ ತತ್ತರಿಸಿ, ಧೂಳೀಪಟವಾಯಿತು.... ಸಾಹಸದಿಂದ ಹೋರಾಡಿದ ಕಲ್ಯಾಣಸ್ವಾಮಿ ಮೊದಲಾದವರ ಹೆಸರು ಜನಪದ ಸಾಹಿತ್ಯದಲ್ಲಿ ಅಮರವಾಯಿತು.'

'ಸ್ವಾಮಿ ಅಪರಂಪಾರ' ಎನ್ನುವುದು ಕಲ್ಯಾಣಸ್ವಾಮಿಗೆ ಸೋದರ ಕೃತಿ. ಈ ಎರಡು ಕಾದಂಬರಿಗಳಲ್ಲೂ ಚಿತ್ರಿತವಾಗಿರುವ ಜನಸಾಮಾನ್ಯರ ಸ್ವಾಮಿ ಭಕ್ತಿ, ದೇಶಭಕ್ತಿ ಮತ್ತು ಸಾಹಸಗಳು ರೋಮಾಂಚಕಾರಿಯಾಗಿವೆ.

ಕಲ್ಯಾಣಸ್ವಾಮಿ ಕಾದಂಬರಿಗೆ 'ಇತಿಹಾಸ ಮತ್ತು ಸೃಷ್ಟಿಸಾಹಿತ್ಯ' ಎಂಬ ಹಿನ್ನುಡಿ ಪ್ರಬಂಧವನ್ನೂ ಬರೆದು ಸೇರಿಸಲಾಗಿದೆ.

"ಇತಿಹಾಸವೆನ್ನುವುದು ರಾಜರಾಣಿಯರ ಕಥೆಯಲ್ಲ; 'ವಿಶಿಷ್ಟ'ರೆನಿಸಿದ ಕೆಲವು ವ್ಯಕ್ತಿಗಳ ಸುಖದುಃಖಗಳ ಚಿತ್ರವಲ್ಲ. ಕಾಲಕಾಲಕ್ಕೂ ಬದಲಾಗುತ್ತಾ ಬಂದ ಬದುಕು, ಆಗಿನ ಕಾಲಧರ್ಮ, ಅದರಿಂದ ಪ್ರಭಾವಿತರಾದ ಜನರ ರೀತಿನೀತಿಗಳು, ಆ ಸಾಮಾಜಿಕ ವ್ಯವಸ್ಥೆಯ ಪ್ರಮುಖ ಶಕ್ತಿಗಳು-ಇವು ಇತಿಹಾಸವನ್ನು ರೂಪಿಸುವ ಮುಖ್ಯಾಂಶಗಳು" ಎಂಬ ಮಾತು ಮನನೀಯ ವಾಗಿದೆ.

'ಚಿರಸ್ಮರಣೆ' ತಮ್ಮ ಇನ್ನಿತರ ಕೃತಿಗಳಿಗಿಂತ ವಿಶಿಷ್ಟವಾದುದೆಂದೂ ಕಲ್ಪನಾಲೋಕದ ಅರೆಬೆಂದ ಅಡುಗೆ. ತಾನೇ ಗಟ್ಟಿ ಆಹಾರವೆಂದು ಮೆರೆಯುತ್ತಿದ್ದ ಖೋಟಾನಾಣ್ಯಗಳ ಕಾಲದಲ್ಲಿ ಜನಪ್ರಿಯತೆಗಳಿಸದಿದ್ದರೂ ಅಲ್ಪಸಂಖ್ಯಾತ ಓದುಗರಿಗೆ ಇಷ್ಟವಾಯಿತೆಂದೂ - ಲೇಖಕರೂ ಸಂತೋಷದಿಂದ ಹೇಳಿಕೊಂಡಿದ್ದಾರೆ.

ಭಾರತದ ಶ್ರಮಜೀವಿಗಳು ನಡೆಸುತ್ತ ಬಂದಿರುವ ವರ್ಗಸಮರದ ಸುದೀರ್ಘ ಇತಿಹಾಸದ ಒಂದು ರೋಮಾಂಚಕಾರೀ ಅಧ್ಯಾಯದಂತಿರುವ ಕೈಯ್ಯೂರು ರೈತರ ಸಂಘಟನೆ 'ಚಿರಸ್ಮರಣೆ'ಗೆ ಪ್ರೇರಣೆ.

ಮಲೆಯಾಳ ಪ್ರಾಂತ್ಯದ ಕೈಯ್ಯೂರು ಪ್ರಾಥಮಿಕ ಶಾಲೆಯ ಮಾಸ್ತರು, ಪಾಠ ಹೇಳುವಾಗ ಸ್ಥಳೀಯ ಉದಾಹರಣೆಗಳನ್ನೇ ಆರಿಸಿಕೊಂಡು ಬಡವ ಶ್ರೀಮಂತರೆಂಬ ವರ್ಗಭೇದ, ಶ್ರಮಜೀವಿಗಳ ಶೋಷಣೆ, ಕ್ರಾಂತಿ ಮೊದಲಾದವುಗಳ ಅರ್ಥವನ್ನು ವಿವರಿಸಿ ಶಿಷ್ಯರಲ್ಲಿ ಕ್ರಾಂತಿಪ್ರಜ್ಞೆ ಬಿತ್ತಿದರು. ಅಪ್ಪು ಮತ್ತು ಚಿರುಕಂಡ ಎಂಬಿಬ್ಬರು ಕೂಲಿಕಾರ ರೈತಮಕ್ಕಳು ಕ್ರಾಂತಿ ಪಕ್ಷದ ಗುಪ್ತದಳ ಸೇರಿದರು. ಮಾಸ್ತರಿಗಿಂತಲೂ ಹೆಚ್ಚು ತಿಳಿದವರಾದ ಪಂಡಿತರನ್ನು ಒಮ್ಮೆ ಭೇಟಿಯಾದಾಗ ಅವರು ಮಾನವ ಸಮಾಜದ ವಿಕಾಸ, ಸಾಮ್ರಾಜ್ಯಶಾಹಿಯ ಉಪಟಳ, ಭಾರತದಲ್ಲಿ ದೇಶೀಯ ಹಾಗೂ ವಿದೇಶೀಯ ಬಂಡವಾಳಶಾಹಿಗಳು ಶಾಮೀಲಾದುದು-ಇದನ್ನೆಲ್ಲ ವ್ಯಾಖ್ಯಾನಿಸಿದರು. 'ದುಡಿಯುವ ಜನರೆಲ್ಲ ಒಂದಾದರೆ, ಸುಲಿಯುವ ಜನರೆಲ್ಲ ಸೋತು ಹೋಗುತ್ತಾರೆ; . . . . ನಮ್ಮನ್ನು ಬಿಗಿದಿರುವ ಬೇಡಿಗಳು ಪುಡಿಪುಡಿಯಾಗುತ್ತವೆ' ಎಂದು ಹೇಳಿ ಸ್ವಾತಂತ್ರ್ಯ ಸಮರಕ್ಕೂ ಶ್ರಮಜೀವಿಗಳ ಸಂಘಟನೆಗೂ ಇರುವ ಸಂಬಂಧವನ್ನು ತೋರಿಸಿಕೊಟ್ಟರು. ಇದೆಲ್ಲದರ ಪರಿಣಾಮವಾಗಿ, ತಳಿಪರುಂಬ ಜಾತ್ರೆಯಲ್ಲಿ ದೇಶದ ಹಲವು ಕಡೆಗಳಿಂದ ಬಂದ ಕ್ರಾಂತಿಕಾರಿಗಳ ಪರಸ್ಪರ ಭೇಟಿ ನಡೆದು, ಚಿರುಕಂಡನ ಕಾರ್ಯದರ್ಶಿತ್ವದಲ್ಲಿ ಕೈಯ್ಯೂರ ರೈತಸಂಘ ಸ್ಥಾಪನೆಯಾಗಿ ಕೆಂಪು ಬಾವುಟ ಹಾರಿತು.

ಊರಿನ ಇಬ್ಬರು ಪ್ರಮುಖ ಜಮೀನ್ದಾರರ ಪೈಕಿ ಒಬ್ಬರು, ನಂಬೂದರಿ ಮಕ್ಕಳ ವಿದ್ಯಾಭ್ಯಾಸದ ನೆಪ ಮಾಡಿಕೊಂಡು ನೀಲೇಶ್ವರ ಪೇಟೆ ಸೇರಿದರು, ಮತ್ತೊಬ್ಬರು ನಂಬಿಯಾರರು ಸ್ವಹಿತ ಸ್ವಾಮಿಹಿತಗಳ ರಕ್ಷಣೆಗಾಗಿ, ಬ್ರಿಟಿಷ್ ಸರ್ಕಾರಕ್ಕೆ ರೈತಸಂಘಟನೆಯ ಬಗ್ಗೆ ಮೇಲಿಂದ ಮೇಲೆ 'ರಿಪೋರ್ಟ್' ಮಾಡಿದರು.

"ಇಲ್ಲಿ ಕ್ರಾಂತಿಕಾರಿಗಳು ಜಮೆಯಾಗಿದ್ದಾರೆ. ಸರ್ಕಾರದ ಭೂಮಿ ವಶಪಡಿಸಿಕೊಂಡಿದ್ದಾರೆ. ಪ್ರತಿಸರ್ಕಾರ ಸ್ಥಾಪಿಸಿದ್ದಾರೆ. ಬ್ರಿಟಿಷ್ ಸರ್ಕಾರಕ್ಕೆ ಗಂಡಾಂತರ ಖಂಡಿತ ...."

ತಾಲ್ಲೂಕಿನ ರೈತ ಸಮ್ಮೇಳನ ಕೈಯ್ಯೂರಿನಲ್ಲಿ ನಡೆಯಲು ಸಿದ್ಧತೆಯಾಗಿತ್ತು. ರೈತಸಂಘದ ಚಟುವಟಿಕೆಗಳ ಮೇಲೆ ನಿಗಾ ಇಡಲು ಬಂದ ಪೋಲೀಸ್ ಕಾನ್ಸ್ಟೇಬಲ್ ಸುಬ್ಬಯ್ಯ, ಒಂದು ದಿನ ಕೆಲವು ರೈತ ಹುಡುಗರ ಮೇಲೆ ಜಬರ್ದಸ್ತು ಮಾಡಲು ಹೋಗಿ, ಅವರು ಅಟ್ಟಿಸಿಕೊಂಡು ಬಂದಾಗ ಹೆದರಿ ಓಡುತ್ತ ನದಿಗೆ ಹಾರಿ ಈಜಲಾರದೆ ನೀರು ಕುಡಿದು ಪ್ರಾಣಬಿಟ್ಟ.

ನಂಬೂದರಿಯವರ ತಂತಿ ಸಂದೇಶ ತಲುಪಿದೊಡನೆಯೇ ಮದರಾಸು, ಮಂಗಳೂರುಗಳಿಂದ ಬಂದ ಪೋಲೀಸು ದಳ ಹಳ್ಳಿಯ ರೈತರ ಮನೆಮನೆಗೆ ನುಗ್ಗಿ, ಪಿಶಾಚನೃತ್ಯ ನಡೆಸಿತು. ಅಪ್ಪು, ಚಿರುಕಂಡ, ಅಬುಬಕರ್, ಕುಞಂಬು, ಧಾಂಡಿಗ, ಕುಟ್ಟಿಕೃಷ್ಣ-ಮೊದಲಾದ ಮೂವತ್ತು ಜನರನ್ನು ಹಿಡಿದು ಹೊಸದುರ್ಗಕ್ಕೆ ಎಳೆದುಕೊಂಡು ಹೋಗಿ ಜೈಲಿಗೆ ತಳ್ಳಿದರು. ಯಾವುದೋ ಬೇರೆ ಊರಿನಲ್ಲಿದ್ದ ಮಾಸ್ತರನ್ನೂ ದಸ್ತಗಿರಿ ಮಾಡಲಾಯ್ತು.

'ಡ್ಯೂಟಿ ಮೇಲಿದ್ದ ಕಾನ್ಸ್ಟೇಬಲ್‌ನನ್ನು ಕೊಂದ ಅಪರಾಧಕ್ಕಾಗಿ' ಮೊದಲು ಹೊಸದುರ್ಗದಲ್ಲಿ, ಅನಂತರ ಮಂಗಳೂರಿನಲ್ಲಿ ವಿಚಾರಣೆಯ ನಾಟಕ ನಡೆಯಿತು. 'ಪ್ರಾಣಾಂತಿಕ ಪೆಟ್ಟನ್ನು ಪೋಲೀಸನಿಗೆ ಯಾರು ಕೊಟ್ಟರೋ ಹೇಳುವುದು ಕಷ್ಟ' ಎಂಬ ಸಂದೇಹ ಬಂದದ್ದರಿಂದ ನ್ಯಾಯಧೀಶರು ನಾಲ್ವೈದು ಜನರಿಗೆ ಸಾರಾಸಗಟು ಮರಣದಂಡನೆ ವಿಧಿಸಿದರು. ಇತರರಿಗೆ ಹಲವಾರು ವರ್ಷಗಳ ಕಠಿಣ ಶಿಕ್ಷೆ.

ಮಾರ್ಚ್ 29ರ ಪ್ರಾತಃಕಾಲ ಅಪ್ಪು, ಚಿರುಕಂಡ, ಅಬುಬಕರ್, ಕುಞಂಬು-ಇವರ ಕೊರಳನ್ನು ನೇಣುಹಗ್ಗ ಬಿಗಿಯಿತು - ನಾಲ್ಕು ದೇಹಗಳು ತೂಗಾಡಿದವು. ಬದುಕನ್ನು ಪ್ರೀತಿಸಿದ ಈ ಬಾಂಧವರು, ಒಳ್ಳೆಯ ಬದುಕಿಗೋಸ್ಕರ ದುಡಿದರು, ಮಡಿದರು.

ಕೈಯ್ಯೂರ ಕ್ರಾಂತಿಯ ವೀರಗಾಥಾ ಚಿರಸ್ಮರಣೆ.

ಈ ಕೃತಿಯು ಮಲಯಾಳಂ, ತಮಿಳು, ತೆಲುಗು, ಮರಾಠಿ, ಹಿಂದಿ, ಬಂಗಾಳಿ ಮತ್ತು ಇಂಗ್ಲಿಷ್ ಇವಿಷ್ಟು ಭಾಷೆಗಳಿಗೆ ಈಗಾಗಲೇ ಭಾಷಾಂತರವಾಗಿದೆ.

### 4

'ಜ್ಞಾನಗಂಗೋತ್ರಿ'ಗಾಗಿ ದೇಶ ವಿದೇಶಗಳ ಪ್ರಾಚೀನ ಚರಿತ್ರೆಯನ್ನು ಅವಲೋಕಿಸುತ್ತಿದ್ದಾಗ ಸುಮಾರು ಐದು ಸಾವಿರ ವರ್ಷಗಳ ಹಿಂದಿನ ಈಜಿಪ್ಟ್ ಚರಿತ್ರೆಯ ಉಲ್ಲೇಖವೊಂದು ನಿರಂಜನರ ಗಮನ ಸೆಳೆದಿತ್ತು. ಈ ಭೂಭಾಗದ ಒಂದು ಚಿಕ್ಕ ಪ್ರಾಂತ್ಯದ ಗುಲಾಮರು ಸರ್ವಶಕ್ತ ಪ್ರಭುವಿನ ವಿರುದ್ಧ ದಂಗೆಯೆದ್ದ ವೃತ್ತಾಂತ ಅದು. ಈ ಅಪರೂಪದ ಘಟನೆಯನ್ನು ಕುರಿತು ಅವರು ಬಹುಕಾಲ ಧೇನಿಸಿದ್ದಿರಬೇಕು. ಅಂದಿನ ರಾಜಕೀಯ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಬಗೆಗೆ ಸಾಧ್ಯವಿದ್ದಷ್ಟೂ ಖಚಿತ ಮಾಹಿತಿಗಳನ್ನು ಸಂಗ್ರಹಿಸುವುದಕ್ಕಾಗಿ ಅವರು ಸುಮಾರು ಒಂದು ವರ್ಷಕಾಲ ನಿರಂತರವಾಗಿ ಹಲವು ಚರಿತ್ರೆಯ ಗ್ರಂಥಗಳನ್ನೂ, ಇನ್ನಿತರ ಆಧಾರ ಸಾಮಗ್ರಿಗಳನ್ನೂ ಆಳವಾಗಿಯೂ, ಸೂಕ್ಷ್ಮವಾಗಿಯೂ ಪರಿಶೀಲಿಸಿದರೆಂದು ತಿಳಿದು ಬರುತ್ತದೆ. ಕೂಲಂಕಷ ಅಧ್ಯಯನ, ದಣಿವರಿಯದ ದುಡಿಮೆಗಳ ಫಲವಾಗಿ ಹುಟ್ಟಿಬಂದಿರುವ ಸುಮಾರು ಏಳುನೂರು ಪುಟಗಳ, ಮಹತ್ವಾಕಾಂಕ್ಷೆಯ ಕಾದಂಬರಿ 'ಮೃತ್ಯುಂಜಯ'.

ಒಸೈರಿಸ್ ದೇವನ ಸಮಾಧಿಯಿರುವ ಅಬ್ಬು ಪುಣ್ಯಕ್ಷೇತ್ರದಲ್ಲಿ, ನೈಲ್ ನದಿ ತೀರದ ಒಂದು ಬುಡಕಟ್ಟಿನ ಜನ ವಾಸಿಸುವ ಪ್ರದೇಶದ ಹೆಸರು ನೀರಾನೆ ಪ್ರಾಂತ್ಯ. ನುಟ್‌ಮೋಸ್, ಸಿನ್ಮುಹೆ, ಸೆನ್‌ಉಸರ್ಟ್ ಮೊದಲಾದವರು ಇಲ್ಲಿನ ಬಲಾಢ್ಯ ಭೂಮಾಲೀಕರು. ಬುಡಕಟ್ಟಿನ ಬಹುಪಾಲು ಜನಕ್ಕೆ ಸ್ವಂತ ಭೂಮಿಕಾಣೆಗಳಿಲ್ಲ; ವರ್ಷದುದ್ದಕ್ಕೂ ಮಾಲೀಕರ ಜಮೀನಿನಲ್ಲಿ ದುಡಿಯುವ ಗುಲಾಮರು ಅವರು. ಸುಗ್ಗಿಯ ಕಾಲದಲ್ಲಿ ದಣಿಗಳು ಬಿಡುವ ಅಲ್ಪಸ್ವಲ್ಪ ಕಾಳುಕಡ್ಡಿಗಳು ತೀರಿದ ಮೇಲೆ ಕಾಡು ಕೋಳಿಗಳನ್ನು ಬೇಟೆಯಾಡಿ, ನೈಲ್ ನದಿಯಲ್ಲಿ ಮೀನು ಹಿಡಿದು, ಚರ್ಮದ ಮತ್ತು ಚಾಪೆ ಹೆಣಿಗೆ ವಸ್ತುಗಳನ್ನು ತಯಾರಿಸಿ ಮಾರಿ ಇವರ ಅಹನ್ಯಹನಿ ಕಾಲಕ್ಷೇಪ. ಮೆನೆಪ್ಟಾ ಎಂಬ

ವಿವೇಕಶಾಲಿ ವ್ಯಕ್ತಿ ಬುಡಕಟ್ಟಿನ ನಾಯಕ. ಬುಡಕಟ್ಟಿನ ರಕ್ಷಣೆಗಾಗಿ ಐವತ್ತು ಜನ ಭಟರಿದ್ದಾರೆ. ಔಟ ಎಂಬುವವನು ಇವರ ಮುಖಂಡ.

ಈಜಿಪ್ಟ್ ದೇಶದ ಪರಮಪ್ರಭು ಪೆರೋಪೇಪಿಯಿಂದ ನೇಮಕಗೊಂಡ ಗೇಬು ಎಂಬಾತ ಪ್ರಾಂತ್ಯಪಾಲ. ದರ್ಪಿಷ್ಟನೂ, ಮಹತ್ವಾಕಾಂಕ್ಷಿಯೂ ಆದ ಟೆಹುಟಿ ಎಂಬಾತ ಕಂದಾಯಾಧಿಕಾರಿ. ನೈಲ್‌ನದಿಯ ವರಪ್ರಸಾದದಿಂದ ಗುಲಾಮರು ಬೆಳೆದ ಬೆಳೆಯ ಸಿಂಹಪಾಲು ಭೂ ಮಾಲೀಕರಿಗೆ; ಉಳಿದದ್ದರಲ್ಲಿ ಒಂದು ಭಾಗವನ್ನು ಪ್ರಾಂತ್ಯಪಾಲನಿಗೆ ಒಪ್ಪಿಸಬೇಕು. ಎಲ್ಲ ಪ್ರಾಂತ್ಯಪಾಲರುಗಳು ಸಂಗ್ರಹಿಸಿದ್ದರಲ್ಲಿ ಒಂದೊಂದು ಪಾಲು ಮೇಲು ಮೇಲಕ್ಕೆ ಸಾಗಿ ಅಂತಿಮವಾಗಿ ಮಹಾ ಪ್ರಭುವಿನ ಅರಮನೆಯನ್ನು ತಲುಪುತ್ತದೆ. ಇದರಿಂದ ಮಹಾಪ್ರಭುವಿನ, ರಾಜಪರಿವಾರದವರ ವೈಭವ, ವಿಲಾಸ, ಲೋಲುಪ್ತಿಗಳಿಗೆ ಅವಕಾಶ. ಗುಲಾಮಿ-ಊಳಿಗಮಾನ್ಯದ ಸಂಕೀರ್ಣ ವ್ಯವಸ್ಥೆ.

ನೀರಾನೆ ಪ್ರಾಂತ್ಯದ ದೇವಮಂದಿರಕ್ಕೆ ಅಪೆಬ್ ಎಂಬ ಅರ್ಚಕ; ರಾಜಧಾನಿ ಮೆಂಫಿಸ್‌ನ 'ಅನ್' ಮಂದಿರದ ಅರ್ಚಕ ಇನೇನಿ-ಇವರೆಲ್ಲರೂ ಐಗುಪ್ತ ಸಾಮ್ರಾಜ್ಯದ ಮಹಾಪುರೋಹಿತ, ಧರ್ಮಾಧಿಕಾರಿ ಹೆಪಾಟ್‌ನ ಆಜ್ಞಾಪಾಲಕರು. ರಾಜಕೀಯವಾಗಿ ಪೆರೋವಿನದು, ಮತಧಾರ್ಮಿಕವಾಗಿ ಹೆಪಾಟ್‌ನದೂ ಪ್ರಶ್ನಾತೀತ ಸರ್ವಾಧಿಕಾರ. ಇವರಲ್ಲಿ ಆಗಾಗ ಮೇಲಾಟಕ್ಕಾಗಿ ಪರಸ್ಪರ ಕಚ್ಚಾಟಗಳು ನಡೆಯುತ್ತವೆಯಾದರೂ ಜನಸಾಮಾನ್ಯರನ್ನು ಸುಲಿಯುವ, ಶೋಷಿಸುವ, ತುಳಿಯುವ ವಿಚಾರದಲ್ಲೂ ಇಬ್ಬರಿಗೂ ಏಕಮತ; ಏಕಕಂಠ.

ಆ ವರ್ಷ ಅಬ್ಬುಬೆಟ್ಟದ ಯಾತ್ರೆಯನ್ನು ಮುಗಿಸಿಕೊಂಡು ಬುಡಕಟ್ಟಿನ ಜನರು ಗುಡಿಸಲುಗಳಿಗೆ ಹಿಂತಿರುಗುವ ವೇಳೆಗಾಗಲೇ ಕಂದಾಯಾಧಿಕಾರಿಗಳು, ಅವರ ಪರಿವಾರ ಊರಿಗೆ ಬಂದು ಬೀಡುಬಿಟ್ಟಾಗಿತ್ತು. ತಮ್ಮ ಕಷ್ಟಗಳನ್ನು ಹೇಳಿಕೊಳ್ಳಲು, ಕಂದಾಯ ಕಡಮೆ ಮಾಡುವಂತೆ ಮನವಿ ಅರ್ಪಿಸಲು ಬಂದ ಜನರನ್ನು ಅಧಿಕಾರಿಗಳು ಅವಮಾನಗೊಳಿಸಿ, ಅವರ ನಾಯಕನನ್ನು ಬಂಧಿಸಿದರು. ಕಂಬಕ್ಕೆ ಕಟ್ಟಿಹಾಕಿ, ಚಾವಟಿಯಿಂದ ಹೊಡೆದು ಬಗೆಬಗೆಯಾಗಿ ಹಿಂಸಿಸಿದರು. ರೊಚ್ಚಿಗೆದ್ದ ಜನರು ನಡುರಾತ್ರಿ ರಾಜಭವನಕ್ಕೆ ಮುತ್ತಿಗೆ ಹಾಕಿ, ತಮ್ಮ ನಾಯಕನನ್ನು ಬಿಡಿಸಿಕೊಂಡರು. ಹೋರಾಟದಲ್ಲಿ ಬಕಿಲ ಎಂಬ ದಂಡನಾಯಕನ ಕಣ್ಣು ಕುರುಡಾಯಿತು. ಪ್ರಾಂತ್ಯಪಾಲ ಗೇಬು, ಟಿಹುಟಿ, ಬಕಿಲ ಮೊದಲಾದವರೆಲ್ಲ ಹೆದರಿ ಕಂಬಿಕಿತ್ತರು. ಒಂದೆರಡು ದಿನಗಳಲ್ಲಿ ಭೂಮಾಲೀಕರುಗಳು ಸಹ, ನಗನಾಣ್ಯಗಳನ್ನೆತ್ತಿಕೊಂಡು ಓಡಿಹೋಗಿ ನಗರಗಳನ್ನು ಸೇರಿಕೊಂಡರು. ಜನರ ಬಂಡಾಯಕ್ಕೆ ಜಯ ಲಭಿಸಿತು.

ನಾಯಕ ಮೆನೆಪ್ಟಾ, ಸಾಮಾನ್ಯ ಪ್ರಜೆಯಾಗಿಯೇ ಉಳಿದು ಜನರ ಮಾರ್ಗದರ್ಶಿಯೂ, ಅವರ ವಕ್ತಾರನೂ ಆದ. ನೀರಾನೆ ಪ್ರಾಂತ್ಯದ ಮಹಾಜನರ ಸಮಿತಿಯ ನೇತೃತ್ವದಲ್ಲಿ ಸ್ವಯಮಾಧಿಕಾರ ಸ್ಥಾಪಿತವಾಯಿತು. ಬಂದರುಕಟ್ಟೆ, ಮತ್ಸ್ಯೋದ್ಯಮ, ವ್ಯವಸಾಯ ಭೂಮಿ, ದೇವಸ್ಥಾನಗಳು ಅಭಿವೃದ್ಧಿಗೊಂಡವು. ಶಾಲೆಯನ್ನು ಸ್ಥಾಪಿಸಿದರು. ಸುತ್ತಮುತ್ತಲಿನ ಪ್ರಾಂತ್ಯಗಳವರು ನೀರಾನೆ ಪ್ರಾಂತ್ಯದ ಪ್ರಗತಿಯನ್ನು ಮೆಚ್ಚುಗೆ, ಕುತೂಹಲಗಳಿಂದ, ಬೆರಗುಗಣ್ಣಿನಿಂದ ನೋಡಿದರು.

ಬಂಡಾಯದ ಸುದ್ದಿ ಮಹಾಪ್ರಭು ಪೆರೋವನ್ನು ತಲುಪಿತು, ನಿಧಾನವಾಗಿ. ಮಂತ್ರಾಲೋಚನೆ ನಡೆದು, ಕೆಪ್ಪು ಎಂಬ ಹಡಗು ವ್ಯಾಪಾರಿಯ ಮಧ್ಯಸ್ಥಿಕೆಯನ್ನು ಬಳಸಿಕೊಂಡು ನೀರಾನೆ ಪ್ರಾಂತ್ಯದ ಜನನಾಯಕ ಮೆನೆಪ್ಟಾನನ್ನು ರಾಜಧಾನಿಗೆ ಆಮಂತ್ರಿಸಿದರು. ಆ ಉದ್ದೇಶಕ್ಕಾಗಿ ತಮ್ಮ ಅರವತ್ತನೆಯ ವಯಸ್ಸಿಗೆ ಬೀಳುವ ಎರಡನೆಯ 'ಸೆಡ್ ಮಹೋತ್ಸವ'ವನ್ನು ಹತ್ತು ವರ್ಷ ಮುಂಚೆ, ಅಂದರೆ ಐವತ್ತನೆಯ ವಯಸ್ಸಿನಲ್ಲೇ ವಿಜೃಂಭಣೆಯಿಂದ ಆಚರಿಸಲು ಮಹಾಪ್ರಭುಗಳು ನಿಶ್ಚಯಿಸಿದರು. ಮಹೋತ್ಸವಕ್ಕೆ ತಿಂಗಳು ಮುಂಚೆಯೇ ರಾಜಧಾನಿ ಮೆಂಫಿಸ್‌ಗೆ ಆಗಮಿಸಿದ ಮೆನೆಪ್ಟಾಗೆ, ಪ್ರಭುಗಳ ಅತಿಥಿಗೃಹದಲ್ಲೇ ಬಿಡಾರ; ರಾಜೋಪಚಾರ, ಹಿರಿಯ ಪ್ರಾಂತ್ಯಪಾಲರುಗಳ ಕುಟುಂಬ ಪರಿವಾರದ ಜೊತೆ ಭೋಜನಕೂಟ, ಮೇಜವಾನಿ, ಉಡುಗೊರೆ, ಆದರ, ಉಪಚಾರ, ಇವೆಲ್ಲ ಕೆಲವು ದಿನಗಳು ಮಾತ್ರ. ಸೆಡ್ ಉತ್ಸವದ ಹಿಂದಿನ ರಾತ್ರಿಯೇ ಅವನನ್ನು ಗುಪ್ತವಾಗಿ ಬಂಧಿಸಿ, ಸರ್ಪಗಾವಲಿನಲ್ಲಿಡಲಾಯಿತು.

ಉತ್ಸವದ ಮಾರನೆಯ ದಿನ ರಾಜದ್ರೋಹ, ಧರ್ಮದ್ರೋಹ, ಬಂಡಾಯಗಳ ಆರೋಪದ ಮೇಲೆ ಮೆನೆಪ್ಟಾನ ವಿಚಾರಣೆಯ ನಾಟಕ, ಸಾಮ್ರಾಟರ ಮತ್ತು ಧರ್ಮಾಧಿಕಾರಿಗಳ ಸಮ್ಮುಖದಲ್ಲಿ. ಮಹಾಮಂತ್ರಿ ಅಮೆರೆಬ್ ನ್ಯಾಯಾಧೀಶ! ಆಪಾದನೆ ಸ್ಥಿರಪಟ್ಟು, ಬಂಡುಕೋರನಿಗೆ ಶಿರಚ್ಛೇದನದ ಶಿಕ್ಷೆ ವಿಧಿಸಲಾಯ್ತು. ಸ್ವಲ್ಪವೂ ತಡಮಾಡದೆ ಅಂದು ಸಂಜೆಯೇ, ಧರ್ಮದೇವತೆ 'ರಾ' (ಸೂರ್ಯ) ಮುಳುಗುವ ಹೊತ್ತಿನಲ್ಲಿ ಹಂತಕರು ಮೆನೆಪ್ಟಾನ ತಲೆ ಕತ್ತರಿಸಿದರು. ಸರ್ವಾಧಿಕಾರಿ-ಧರ್ಮಾಧಿಕಾರಿಗಳ ಚದುರಂಗ ದಾಟಕ್ಕೆ ಜನನಾಯಕ ಬಲಿಪಶುವಾದ.

ನೀರಾನೆ ಪ್ರಾಂತ್ಯದಿಂದ ಬಂದಿದ್ದ ನಿಷ್ಠಸೇವಕರು ಗುಪ್ತವಾಗಿ ತಮ್ಮ ನಾಯಕನ ರುಂಡ ಮುಂಡಗಳನ್ನು ಊರಿಗೆ ಸಾಗಿಸಿ, ಶವಲೇಪನ ಮಾಡಿ ಸಮಾಧಿ ಕಟ್ಟಿದರು. ಶೋಕತಪ್ತ ಜನರು ಸಮಾಧಿ ನಿರ್ಮಾಣದ ಕೆಲಸದಲ್ಲಿ ತೊಡಗಿರುವಾಗಲೇ ಧರ್ಮಾಧಿಕಾರಿ ಹೆಪಾಟ್‌ನ ನೇತೃತ್ವದಲ್ಲಿ 'ರಾ' ದೇವನ ವಿಗ್ರಹವನ್ನು ದೋಣಿಯ ಮೇಲಿಟ್ಟುಕೊಂಡು ಬಂದ ಕ್ರೂರಸೈನಿಕರು ಇಡೀ ಗ್ರಾಮಕ್ಕೆ ಮುತ್ತಿಗೆ ಹಾಕಿ ಧೂಳೀಪಟ ಮಾಡಿದರು. ಕೈಗೆ ಸಿಕ್ಕಿದ ಬಂಡುಕೋರರನ್ನು ಕೊಂದರು, ಬಲೆ ಬೀಸಿ ಸೆರೆಹಿಡಿದರು. ಮತ್ತೊಮ್ಮೆ ನೀರಾನೆ ಪ್ರಾಂತ್ಯದಲ್ಲಿ ಮಹಾಪ್ರಭುವಿನ ಸರ್ವಾಧಿಕಾರವು ಹಿಂದಿಗಿಂತಲೂ ಅಚಲವಾಗಿ, ಆಳವಾಗಿ ಬೇರೂರಿತು.

ಮೆನೆಪ್ಟಾನ ಗರ್ಭಿಣಿ ಪತ್ನಿ ನೆಫಿಸ್, ಎರಡು ಕಣ್ಣು ಕುರುಡಾಗಿದ್ದ ಸೇನಾಪತಿ ಖೆಮ್‌ಹೊಟೆಪ್, ಪುರೋಹಿತ ಮೆನ್ನಯ್ಯ-ಮೊದಲಾದ ಹತ್ತು ಜನರು ಹೇಗೋ ತಪ್ಪಿಸಿಕೊಂಡು ಐಗುಪ್ತದಾಚೆಯ ನುಬಿಯಯನ್ನು ಸೇರಿ ರೈತರಾಗಿ ನೆಲೆಸಿದರು. ಹೊಸಬಾಳನ್ನು ಹೂಡುವ ಕನಸುಕಂಡರು.

ತರುಣ ಪುರೋಹಿತ ಮೆನ್ನಯ್ಯ ನುಡಿಯುತ್ತಾನೆ :

"ಶರೀರ ನಷ್ಟವಾದರೂ ಮತ್ತೆ ರೆಕ್ಕೆ ಬಡಿಯುವ ಬೆನ್ನು ಪಕ್ಷಿಗಳು ಇವರು."

"ಕತ್ತಲಾದ ಮೇಲೆ ಬೆಳಕು ಹರೀತದೆ. ಇದು ಸಾಮಾನ್ಯ ಅಂತ ತೋರುವ ಅಸಾಮಾನ್ಯ ವಿಷಯ."

ಬಂಡಾಯದ ಆರೋಪವನ್ನೆದುರಿಸಿ ನ್ಯಾಯಾಸ್ಥಾನದ ಕಟಕಟೆಯಲ್ಲಿ ನಿಂತಿದ್ದ ಮೆನೆಪ್ಟಾನ ಕೊನೆಯ ಮಾತು :

"ನಮಗೆ - ಜನರಿಗೆ ಸಿಟ್ಟು ಬಂದಾಗ ಅದು ಮಹಾಪ್ರವಾಹವಾಗುತ್ತದೆ. ಅದರಲ್ಲಿ ನೀವೆಲ್ಲ ಕೊಚ್ಚಿಹೋಗ್ತೀರಿ! ಮಹಾಪೂರ ಇಳಿದಾಗ ಕಂಡುಬರೋ ಜಗತ್ತು ಹೊಸದು-ಹೊಚ್ಚಹೊಸದು. ಆ ನೂತನಸೃಷ್ಟಿ ನಿರಾತಂಕವಾಗಿ ಸಾಗಲಿ ಅಂತ-ಇಗೋರಾನನ್ನು, ಪ್ಟಾನನ್ನು, ಅಮನ್‌ನನ್ನು (ಈ ಮೂವರೂ ಐಗುಪ್ತದ ಪರಮಶ್ರೇಷ್ಠ ದೇವರುಗಳು) ಅನನ್ಯಭಾವದಿಂದ ಪ್ರಾರ್ಥಿಸುತ್ತೇನೆ."

ಕಾದಂಬರಿಯಲ್ಲಿ ವ್ಯಕ್ತವಾಗಿರುವ ಕ್ರಾಂತಿಸಂದೇಶ ಸ್ವಯಂವೇದ್ಯ.

ನಿರಂಜನರ ಬದುಕು-ಬರಹಗಳು ಹಾಗೂ ಅವರ ಸೈದ್ಧಾಂತಿಕ ನೆಲೆಯನ್ನು ಪರಿಚಯ ಮಾಡಿಕೊಳ್ಳುವ ಸಂದರ್ಭದ ಭಿನ್ನಾಭಿಪ್ರಾಯಗಳಿಗೆ ಆಸ್ಪದವಿರಬಹುದಾದ ಒಂದೆರಡು ಅಂಶಗಳನ್ನೂ ಪ್ರಸ್ತಾಪಿಸುವುದಗತ್ಯವೆಂದು ತೋರುತ್ತದೆ.

ಮೊದಲನೆಯದಾಗಿ, ಪ್ರಗತಿಶೀಲ ಸಾಹಿತ್ಯ ಚಳವಳಿಯ ವಿಚಾರದಲ್ಲಿ ಅ.ನ.ಕೃ. ಅವರಿಗೂ ನಿರಂಜನರಿಗೂ ಉಂಟಾದ ವಿವಾದ; ಈ ಚಳವಳಿಯ ಆರಂಭದಲ್ಲಿ ಅ.ನ.ಕೃ. ಅವರಿಗೂ ನಿರಂಜನರಿಗೂ ಸಹಮತವಿದ್ದಂತೆ ತಿಳಿದುಬರುತ್ತದೆ. ಇದು ಸಹಜವೇ. ಆ ಕಾಲದಲ್ಲಿ ಕಮ್ಯೂನಿಸ್ಟ್ ಸಿದ್ಧಾಂತ ದಲ್ಲಿ ನಂಬಿಕೆಯಿಟ್ಟಿದ್ದ ನಿರಂಜನರು. ಪ್ರಗತಿಶೀಲತೆ, ಪುರೋಗಾಮಿ ಈ ಹೆಸರುಗಳಿಂದಲಾದರೂ ಆಕರ್ಷಿತರಾಗಿರುವುದು ಸಾಧ್ಯ. ಆದರೆ ಅ.ನ.ಕೃ. ಅವರು ಮಾತ್ರ ವಾಸ್ತವತೆಯ ಹೆಸರಿನಲ್ಲಿ ಸಮಾಜದ ವಿಕಾರಗಳನ್ನು-ಅದರಲ್ಲಿಯೂ ವ್ಯಕ್ತಿಗಳ ಕಾಮವಿಕಾರಗಳನ್ನೂ ವಿಶೇಷವಾಗಿ-ಅತಿರಂಜಿತ ರೋಚಕ ಶೈಲಿಯಲ್ಲಿ ಚಿತ್ರಿಸುವುದು; ಕೆಲವು ವೇಳೆ ಸಮಸ್ಯೆಗಳಿಗೆ ಆದರ್ಶೀಕೃತ, ಭಾವುಕ ಪರಿಹಾರಗಳನ್ನು ಸೂಚಿಸುವುದು; ಇಂಥ ಸಾಹಿತ್ಯದ ಸಾಮಾಜಿಕ ಪರಿಣಾಮವನ್ನು ಕುರಿತು ಪ್ರಶ್ನಿಸಿದರೆ ಸಾಹಿತ್ಯಕ್ಕೂ ಕಾಮ ಪ್ರಚೋದನೆಗೂ ಸಂಬಂಧವಿಲ್ಲ, 'ಕಲೆಗಾಗಿ ಕಲೆ' ಎಂದು ತಮ್ಮ ದಾರಿಯನ್ನು ಸಮರ್ಥಿಸಿಕೊಳ್ಳುವುದು; ಇಲ್ಲವೆ ಬೇರೆ ಬೇರೆ ದೇಶದ ಲೇಖಕರು ಹೀಗೆ ಮಾಡಿರುವುದರಿಂದ ತಾವೇಕೆ ಮಾಡಬಾರದು-ಎಂದು ದಬಾಯಿಸುವುದು-ಇದೇ ಪ್ರಗತಿಶೀಲತೆ ಎಂದು ಭಾವಿಸಿದ ಹಾಗೆ ತೋರುತ್ತದೆ. ಪ್ರಗತಿಶೀಲತೆಯ ಈ ಸಿದ್ಧಾಂತ ನಿರಂಜನರಿಗೆ ಒಪ್ಪಿಗೆಯಾಗದಿದ್ದುದೂ ಅಷ್ಟೇ ಸಹಜ. 'ಅ.ನ.ಕೃ. ಸೃಷ್ಟಿಸಿದ್ದು 'ಶನಿ ಸಂತಾನ' ಕಾದಂಬರಿಗಳನ್ನು' ಎಂದೂ 'ತಾವು ಮಾತ್ರ ಪ್ರಗತಿಶೀಲರೆಂದು ಪುಕ್ಕ ಕಟ್ಟಿಕೊಂಡ ಕೆಲವರು ಸೂಳೆಗೇರಿಯ ರಮ್ಯ ಕಥನದಿಂದಲೇ ತೃಪ್ತರಾಗಿದ್ದರು'-ಎಂದೂ ನಿರಂಜನರು ಹಂಗಿಸಿರುವುದುಂಟು. ಮೂರು ದಶಕಗಳ ಈಚೆಗೆ ನಿಂತು ನೋಡಿದಾಗ ಈ ಬಗೆಯ ಪ್ರಗತಿಶೀಲ ಚಳವಳಿಯಿಂದ ದೂರ ನಿಂತಿದ್ದಕ್ಕಾಗಿ ಸ್ವತಃ ನಿರಂಜನರಾಗಲಿ, ಕನ್ನಡ ಓದುಗರಾಗಲಿ ಪಶ್ಚಾತ್ತಾಪ ಪಡುವ ಅಗತ್ಯವೇನೂ ತೋರುವುದಿಲ್ಲ. ಹಾಗೆಂದ ಮಾತ್ರಕ್ಕೆ ಅ.ನ.ಕೃ. ಪಂಥದಿಂದ ಪ್ರತ್ಯೇಕವಾಗಿದ್ದು; ನಿರಂಜನರು ಈ ಕಾಲದಲ್ಲಿ ರಚಿಸಿದ ಬನಶಂಕರಿ, ಅಭಯ, ನಂದಗೋಕುಲ ಮೊದಲಾದ ಕಾದಂಬರಿಗಳು ಮಹತ್ತ್ವದವುಗಳೆಂದೇನೂ ಭಾವಿಸುವಂತಿಲ್ಲ. ಅ.ನ.ಕೃ. ಅವರ ಪ್ರಧಾನ ಗುಣವಾದ, ಓದುಗರ ಮನಸ್ಸನ್ನು ಸೆರೆಹಿಡಿಯುವ ಲವಲವಿಕೆ, ಪ್ರಸಾದಗುಣ, ಉತ್ಸಾಹಗಳು ಇವುಗಳಲ್ಲಿಲ್ಲ.

ಮತ್ತೊಮ್ಮೆ, ಅ.ನ.ಕೃ. ಅವರ ಪ್ರಗತಿಶೀಲ ಚಳವಳಿಯ ಭರಾಟೆ ಇಳಿದ ಎರಡು ದಶಕಗಳ ಬಳಿಕ, ಪ್ರಗತಿಪಂಥದ ಸಂಸ್ಥಾಪನೆಯಲ್ಲಿ ಪ್ರಮುಖ ಪಾತ್ರವಹಿಸಿದ ಸಂದರ್ಭವನ್ನು ವಿವರಿಸುತ್ತ- "ಈ ಕೆಲಸಕ್ಕಾಗಿ ನನ್ನನ್ನು ಕೈಹಿಡಿದು ಕರೆದವರ ಒಳ ಉದ್ದೇಶ ವಿಶಿಷ್ಟವಾಗಿತ್ತು. ಅದು ಇಂದಿರಾ ಜಯಕಾರ!" ಎಂದು ನಿರಂಜನರು ಹೇಳಿದುದಾಗಿ ತಿಳಿದು ಬರುತ್ತದೆ. ನಿಜ; 1975-76ರ 'ಎಮರ್ಜನ್ಸಿ' ಆರಂಭದ ದಿನಗಳಲ್ಲಿ ಸರ್ಕಾರವು ಕೈಗೊಂಡ ಕೆಲವು ಪ್ರಗತಿಪರ ಕಾರ್ಯಕ್ರಮಗಳನ್ನು (ಕಳ್ಳ ಸಾಗಣೆದಾರರ ಬಂಧನ, ಕಪ್ಪುಹಣದ ಶೋಧ, ಬೆಲೆಗಳ ನಿಯಂತ್ರಣ, ಬಂಡವಾಳಶಾಹಿ ಹಾಗೂ ಸಾಮ್ರಾಜ್ಯಶಾಹಿಗಳ ವಿರೋಧ, 'ಬ್ಯೂರಕ್ರಸಿ'ಯ ಚುರುಕು, ಬಲಪಂಥೀಯ ಮತ್ತು ಕೋಮು ಶಕ್ತಿಗಳ ಮುಖಭಂಗ ಇತ್ಯಾದಿ) ಕಂಡು, ಸಮಾಜವಾದದಲ್ಲಿ ನೈಜ ಆಸಕ್ತಿಯಿದ್ದ ಕೆಲವರು ಕೂಡ ಇಂದಿರಾಗಾಂಧಿಯವರನ್ನು ಬೆಂಬಲಿಸಿದ್ದುಂಟು. ಹಾಗೆ ನೋಡಿದರೆ ನಿರಂಜನರೂ ಒಂದು ಕಾಲದಲ್ಲಿ 'ಇಂದಿರಾ ಜಯಕಾರ' ಮಾಡಿದವರೇ ತಾನೆ? ಪ್ರಗತಿ ಪಂಥದಿಂದ ನಿರಂಜನರು ಹೊರ ಬರಲು ಸೈದ್ಧಾಂತಿಕ ಕಾರಣಗಳಿಗಿಂತ ವೈಯಕ್ತಿಕ ಭಿನ್ನಾಭಿಪ್ರಾಯಗಳು ಮುಖ್ಯವಾದವು ಎಂದು ತೋರುತ್ತವೆ.

ದಲಿತ ಬಂಡಾಯ ಸಾಹಿತ್ಯ ಸಂಘಟನೆ ಸ್ಥಾಪಿತವಾದಾಗ 'ಕೆನೆಯಲು' ಪುನಃ ಮನಸ್ಸಾಗಿ ನಿರಂಜನರು ಉತ್ಸಾಹದಿಂದ ಭಾಗವಹಿಸಿದ್ದು ಒಂದು ದಿನದ ಮಟ್ಟಿಗೆ. ಮತ್ತೆ ದೂರವಾಗಲು ಕಾರಣ "ಹೆಸರು ಏನೇ ಇಡಿ. ಮಾರ್ಕ್ಸ್‌ವಾದೀ ಚಿಂತನೆ ಈ ಚಳವಳಿಗೆ ಪ್ರೇರಣೆ," ಎಂಬುದು. ಹೀಗೆ ಮಾರ್ಕ್ಸ್‌ವಾದೀ ಚಿಂತನೆಯಿಂದ ದೂರವಿರಬೇಕೆನ್ನುವ ನಿರಂಜನರ ಇಚ್ಛೆ ಇನ್ನೂ ಕೆಲವು ಸಂದರ್ಭಗಳಲ್ಲಿ ವ್ಯಕ್ತವಾಗಿದೆ.

ನಿರಂಜನರು ಈ ಹಿಂದೆ ಪ್ರಸ್ತಾಪಿಸಿದ ಪತ್ರಿಕಾ ಸಂದರ್ಶನದಲ್ಲಿ (ಸುಧಾ 28-11-82) ತಾವು ಕಮ್ಯೂನಿಸ್ಟ್ ಪಾರ್ಟಿಯಿಂದ ಹೊರ ಬಂದ ಸಂದರ್ಭವನ್ನು ವಿವರಿಸುತ್ತ. "ಕಮ್ಯೂನಿಸ್ಟ್ ಪಾರ್ಟಿಯನ್ನು ಬಿಡದಿದ್ದರೆ ನಾನು ಮಾಯಕೊಯೆವ್‌ಸ್ಕಿಯ ಹಾಗೆ ಸಾಯುತ್ತೇನೆ, ಇಲ್ಲವೆ ಆರ್.ಎಸ್.ನಾಯ್ಡು ರವರ ಹಾಗೆ ಬದುಕುತ್ತೇನೆ ಎಂದು ನನಗೆ ನಾನೇ ಹೇಳಿಕೊಂಡೆ" ಎಂದುದಾಗಿ ವರದಿಯಾಗಿದೆ.

ಇಲ್ಲಿ ಹೆಸರಿಸಿರುವ ಇಬ್ಬರು ವ್ಯಕ್ತಿಗಳ ಪೈಕಿ, ನಮಗೆ ತಿಳಿದಿರುವಂತೆ ಆರ್.ಎಸ್. ನಾಯ್ಡುರವರು ನಿಷ್ಠಾವಂತ ಕಮ್ಯೂನಿಸ್ಟ್ ಕಾರ್ಯಕರ್ತರು. ಆದರೆ ಅವರೇನೂ ಸಾಹಿತ್ಯ ರಚನೆ ಮಾಡಿದಂತೆಯಾಗಲಿ, ಸಾಹಿತಿಯಾಗುವ ನಿರೀಕ್ಷೆ ಇಟ್ಟುಕೊಂಡಿದ್ದಂತೆಯಾಗಲಿ ಭಾಸವಾಗುವುದಿಲ್ಲ. ಇತ್ತ, ನಿರಂಜನರು ಪಾರ್ಟಿಯನ್ನು ಬಿಡುವ ನಿರ್ಧಾರ ಕೈಗೊಳ್ಳುವ ವೇಳೆಗಾಗಲೇ ತಮ್ಮ ಕೆಲವು ಕೃತಿಗಳ ಮೂಲಕ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ತಮ್ಮದೊಂದು ಸ್ಥಾನಗಳಿಸಿಕೊಂಡಿದ್ದರು. ಆದ್ದರಿಂದ ಅವರು ಸಾಹಿತ್ಯಕೃಷಿಯನ್ನು ತ್ಯಜಿಸಿ, ಕೇವಲ 'ಪಾರ್ಟಿ ಸೇವಕ'ನಾಗುವ ಸಂಭವವೇನೂ ಇದ್ದಿರಲಿಕ್ಕಿಲ್ಲ.

ಪ್ರತಿಭಾವಂತನಾದ ಮಾಯಕೊಯೆವ್‌ಸ್ಕಿಯು ಪಕ್ಷದ ಕಾರ್ಯಕರ್ತನಾಗಿದ್ದು ಶ್ರೇಷ್ಠಸಾಹಿತ್ಯವನ್ನು ರಚಿಸಬಲ್ಲವನಾಗಿದ್ದರೆ ನಿರಂಜನರಿಗೂ ಅದು ಸಾಧ್ಯವಾಗುತ್ತಿತ್ತೇನೋ ಎಂದು ನಮ್ಮ ಊಹೆ. ಹೋಲಿಕೆಯನ್ನು ಆತನ ಮರಣದಲ್ಲಿ ಮಾತ್ರ ನಾವು ಕಾಣಬೇಕಾಗಿಲ್ಲ.

ಇಷ್ಟಾಗಿ ಪಕ್ಷದ ಸದಸ್ಯರಾಗಿ ಮುಂದುವರಿಯುವುದು ಬಿಡುವುದು ಸಂಪೂರ್ಣವಾಗಿ ಅವರದೇ ನಿರ್ಧಾರ. ಆದರೆ ಅವರು ಕೊಡುವ ವಿವರಣೆಗಳಾಗಲಿ, ಉಲ್ಲೇಖಿಸುವ ನಿದರ್ಶನಗಳಾಗಲಿ ಅಷ್ಟೇನೂ ಸಮಂಜಸವಲ್ಲ.

ನಿರಂಜನರು ಕಮ್ಯೂನಿಸ್ಟ್ ಪಕ್ಷದ ಸಂಬಂಧವು ತಮ್ಮನ್ನು 'ಬದ್ಧ'ವಾಗಿಸುತ್ತದೆ; ತಮ್ಮ ಮುಕ್ತಚಿಂತನೆಗೆ ಅಡ್ಡಿಯಾಗುತ್ತದೆಯೆಂದು ಭಾವಿಸಿದರು.

ಸಾಮ್ಯವಾದೀ ನಂಬಿಕೆಯು ಲೇಖಕನಿಗೆ ಕಣ್ಣಪಟ್ಟಿ ಕಟ್ಟುತ್ತದೆಯೆಂದರು; ದಲಿತ ಬಂಡಾಯ ಸಾಹಿತ್ಯ ಸಂಘಟನೆಗಳಲ್ಲಿ ಮಾರ್ಕ್ಸ್‌ವಾದೀ ಚಿಂತನೆಯಿದೆ ಯೆಂದು ಗುಮಾನಿಪಟ್ಟು ಒಳಹೋಗಲು ಹಿಂಜರಿದರು. ಆಗಾಗ ಅಸಹನೆ ಯನ್ನೂ ವ್ಯಕ್ತಪಡಿಸಿದರು. ಇಷ್ಟಾದರೂ ಅವರ ಎರಡು-ಮೂರು ಪ್ರಮುಖ ಕೃತಿಗಳಿಗೆ, ಪರೋಕ್ಷವಾಗಿಯಾದರೂ ವರ್ಗಪ್ರಜ್ಞೆ, ಬಂಡಾಯ ಪ್ರಜ್ಞೆಗಳೇ ಪ್ರೇರಣೆಯಾಗಿರುವುದು ಗಮನಾರ್ಹ ಸಂಗತಿ.

'ವಿಮೋಚನೆ' ಕಾದಂಬರಿಗೆ ಯಾವ ಸೈದ್ಧಾಂತಿಕ ಚಿಂತನೆಯೂ ಇಲ್ಲ. ಆದರೆ ಅದರ ನಾಯಕನ ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ಸಾಮಾಜಿಕ, ಆರ್ಥಿಕ ಅಸಮಾನತೆಯೇ ಮೂಲ ಕಾರಣವಾಗಿದೆಯೆಂಬುದು ಸ್ಪಷ್ಟ. ಶ್ರೀಮಂತರ ಅಟ್ಟಹಾಸ, ಬಡವರ ಗೋಳು, ಮಾಲೀಕರ ದಬ್ಬಾಳಿಕೆ, ಕೆಂಪುಬಾವುಟದಡಿಯಲ್ಲಿ ಕಾರ್ಮಿಕರ ಸಂಘಟನೆ-ಈ ಎಲ್ಲ ಪ್ರಸ್ತಾಪಗಳು ಗ್ರಂಥದಲ್ಲಿ ಬರುತ್ತವೆ. ಇದು 1953ರಲ್ಲಿ ಪ್ರಕಟವಾದ ನಿರಂಜನರ ಪ್ರಥಮ ಕಾದಂಬರಿ.

'ಚಿರಸ್ಮರಣೆ' ನಿರಂಜನರು ಪಕ್ಷದೊಂದಿಗೆ ನೇರ ಸಂಬಂಧ ಹೊಂದಿದ್ದ ಕಾಲದಲ್ಲಿ ಕಣ್ಣಾರ ಕಂಡ ಸಂಗತಿಗಳು, ಪರಿಚಯ ಪಡೆದ ಸಂಗಾತಿಗಳ ನೆನಪುಗಳು, ಸಾಮಾಜಿಕ ಸಮಸ್ಯೆಗಳಿಗೆ ತೋರಿದ ಜೀವಂತ ಸ್ಪಂದನ-ಇವುಗಳಿಂದ ರೂಪುಗೊಂಡಿದೆ. ಇಲ್ಲಿ ಬರುವಂತೆ, ಸಮಾಜ ವಿಕಾಸ, ವರ್ಗಸಂಘರ್ಷ, ಶ್ರಮಜೀವಿಗಳ ಸಂಘಟನೆ, ದೇಶೀಯ-ವಿದೇಶಿಯ ಸಾಮ್ರಾಜ್ಯಶಾಹಿ-ಬಂಡವಾಳ ಶಾಹಿಗಳ ಶಾಮೀಲು, ಸಮಾಜವಾದೀ ಕ್ರಾಂತಿಯ ಮೂಲಕ ಸಮಸ್ಯೆಯ ಪರಿಹಾರದ ಸೂಚನೆ-ಇವುಗಳಲ್ಲಿ ಮಾರ್ಕ್ಸ್‌ವಾದೀ ಚಿಂತನೆಯ ಪ್ರಭಾವವನ್ನು ಸ್ಪಷ್ಟವಾಗಿಯೇ ಕಾಣಬಹುದು. ಇದು 1956ರಲ್ಲಿ, 'ಬನಶಂಕರಿ', 'ರಂಗಮ್ಮನ ವಠಾರ'- ಮೊದಲಾದ ಕಾದಂಬರಿಗಳು ಪ್ರಕಟವಾದ ಅನಂತರ ಹೊರಬಿದ್ದದ್ದು. ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿಯನ್ನು ಪಡೆದ ಗ್ರಂಥ.

'ಮೃತ್ಯುಂಜಯ'ದಲ್ಲಿ ಪ್ರಪ್ರಾಚೀನ ಯುಗಗಳಿಂದ 'ಮಹಾಪ್ರಭು'ಗಳು ಜನಸಾಮಾನ್ಯರ ಮೇಲೆ, ಗುಲಾಮರ ಮೇಲೆ ನಡೆಸಿರುವ ದಬ್ಬಾಳಿಕೆ, ಮುಗ್ಧ, ಅಸಹಾಯಕರನ್ನು ಶೋಷಿಸುವುದರಲ್ಲಿ ಮತಧರ್ಮ-ಪ್ರಭುತ್ವಗಳು ನಡೆಸುವ ಸಂಚು, ಉತ್ಕಟ ಸ್ಥಿತಿಯಲ್ಲಿ ಸ್ಫೋಟಿಸುವ ಬಂಡಾಯ, ಪ್ರತಿಷ್ಠಿತ ಶಕ್ತಿಗಳ ಪ್ರಾಬಲ್ಯ, ಜನತೆಯ ಅದಮ್ಯ ಆಶಾವಾದ-ಮೊದಲಾದವುಗಳ ಚಿತ್ರಣದಲ್ಲಿ ಮಾರ್ಕ್ಸ್‌ವಾದೀ ಚಿಂತನೆಯ ಮೂಲಾಂಶವಾದ ಭೌತಗತಿ ತರ್ಕ (dialectical materialism) ವನ್ನೇ ಕಾಣಬಹುದು. ಇದು ನಿರಂಜನರ ಇತ್ತೀಚಿನ ಕಾದಂಬರಿ. ಏನಿದ್ದರೂ ನಾವು ನಿರಂಜನರನ್ನು ಕನ್ನಡದ ಒಬ್ಬ ಮಹತ್ವದ ಲೇಖಕರಾಗಿ ಪರಿಗಣಿಸುವುದು ವಿಮೋಚನೆ, ಚಿರಸ್ಮರಣೆ, ಮೃತ್ಯುಂಜಯ-ಈ ಕಾದಂಬರಿಗಳಿಂದಾಗಿ.

❑

1. ನಿರಂಜನರ ಜೀವನಕ್ಕೆ ಸಂಬಂಧಿಸಿದ ಕೆಲವು ವಿವರಗಳನ್ನು ಶ್ರೀ ಎಸ್. ದಿವಾಕರ ಅವರು 1982ನೇ ನವೆಂಬರ್ 28ರ ಸುಧಾ ವಾರಪತ್ರಿಕೆಗೆ ಬರೆದ ಸಂದರ್ಶನ ಲೇಖನದಿಂದ ತೆಗೆದುಕೊಳ್ಳಲಾಗಿದೆ.

## ಡಾ. ಜಿ.ಎಸ್.ಆಮೂರ

ಡಾ. ಬಸವರಾಜ ನಾಯ್ಕರ

ಡಾ. ಗುರುರಾಜ ಶ್ಯಾಮಚಾರ್ಯ ಆಮೂರ್ ಅವರು ಆಧುನಿಕ ಕನ್ನಡ ಸಾಹಿತ್ಯದ ಶ್ರೇಷ್ಠ ವಿಮರ್ಶಕರಲ್ಲಿ ಒಬ್ಬರಾಗಿದ್ದಾರೆ. 1925ನೇ ಇಸ್ವಿ ಮೇ ಎಂಟನೆಯ ತಾರೀಖಿನಂದು ಧಾರವಾಡ ಜಿಲ್ಲೆಯ ಬೊಮ್ಮನಹಳ್ಳಿ ಯಲ್ಲಿ ಜನ್ಮತಾಳಿದ ಅವರು ಮೊದಲಿನಿಂದಲೂ ವಿದ್ಯಾರ್ಜನೆಯಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿದ್ದರು. ಮುಂಬಯಿ ವಿಶ್ವವಿದ್ಯಾಲಯದಿಂದ ಮ್ಯಾಟ್ರಿಕ್ (1943), ಬಿ.ಎ.(1947), ಎಂ.ಎ. (1949) ಪದವಿಗಳನ್ನು ಗಳಿಸಿದ ಅವರು The Concept of Comedy ಎಂಬ ವಿಷಯವನ್ನು ಕುರಿತು ಪ್ರಬಂಧ ಬರೆದು ಕರ್ನಾಟಕ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. (1961) ಪದವಿಯನ್ನು ಪಡೆದರು. 1972ರಲ್ಲಿ ಅವರು ಸೀನಿಯರ್ ಫುಲ್‌ಬ್ರೈಟ್ ಸ್ಕಾಲರ್‌ಶಿಪ್ ಪಡೆದು ಅಮೇರಿಕೆಯ ಮೇಲ್ ಮತ್ತು ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯ ಗಳಲ್ಲಿ ಟಿ.ಎಸ್. ಎಲಿಯಟ್‌ನ ಮೇಲೆ ಪೋಸ್ಟ್ ಡಾಕ್ಟೊರಲ್ ಸಂಶೋಧನೆ ಯನ್ನು ನಡೆಸಿದರು. 1973ರಲ್ಲಿ ಅವರು ಬ್ರಿಟಿಶ್ ಕೌನ್ಸಿಲ್ಲಿನ ಆಮಂತ್ರಣದ ಮೇರೆಗೆ ಇಂಗ್ಲೆಂಡಿಗೆ ಭೇಟಿಯಿತ್ತರು. ಮೊದಲು ಗದುಗಿನ ಜಗದ್ಗುರು ತೋಂಟದಾರ್ಯ ಕಾಲೇಜಿನಲ್ಲಿ ಇಂಗ್ಲಿಷ್ ಉಪನ್ಯಾಸಕರೆಂದು ವೃತ್ತಿಯನ್ನು ಪ್ರಾರಂಭಿಸಿದ ಅವರು ನಂತರ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ರೀಡರ್ ಇನ್ ಇಂಗ್ಲಿಷ್ ಆಗಿ ಸೇವೆಸಲ್ಲಿಸಿದರು. ಅನಂತರ ಔರಂಗಾಬಾದಿನ ಮರಾಠವಾಡ ವಿಶ್ವವಿದ್ಯಾಲಯದ ಇಂಗ್ಲಿಷ್ ವಿಭಾಗದಲ್ಲಿ ಪ್ರೊಫೆಸರ್ ಮತ್ತು ಮುಖ್ಯಸ್ಥರೆಂದು ಸೇವೆಸಲ್ಲಿಸಿ 1988ರಲ್ಲಿ ಸೇವಾ ನಿವೃತ್ತಿ ಹೊಂದಿದರು.

ಡಾ. ಜಿ.ಎಸ್. ಆಮೂರ ಅವರು ಇಂಗ್ಲಿಷ್ ಸಾಹಿತ್ಯದ ಅತ್ಯುತ್ತಮ ಶಿಕ್ಷಕರಾಗಿದ್ದಂತೆ ಉನ್ನತ ಮಟ್ಟದ ಸಂಶೋಧಕರೂ, ವಿಮರ್ಶಕರೂ ಆಗಿದ್ದಾರೆ. ಆದರೆ ಅವರ ಸಾಹಿತ್ಯಾಸಕ್ತಿ ಇಂಗ್ಲೀಷಿಗಷ್ಟೇ ಸೀಮಿತವಾಗಿರದೆ ಕನ್ನಡ ಮತ್ತು ಸಂಸ್ಕೃತಕ್ಕೂ ವ್ಯಾಪಿಸಿದೆ. ಅವರು ಇಂಗ್ಲಿಷ್ ಮತ್ತು ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಗಮನಾರ್ಹ ಸಾಧನೆಗೈದಿದ್ದಾರೆ. ಅವರು ಇಂಗ್ಲಿಷಿ ನಲ್ಲಿ ಅನೇಕ ವಿಮರ್ಶಾ ಗ್ರಂಥಗಳನ್ನು ರಚಿಸಿದ್ದಾರೆ. The Concept of comedy (1963), Critical Essays in Idian Writing in English (1968), Manohar Malgaoukar (1972), Adya Rangacharya (1975), A Critical spectrum (1975), Images and Impressions (1979), A.N.Krishnarao (1983), Colonial Consciousness in Common

wealth Literature (1984), Essays on Comparative Literature and Linguistics (1984), Indian Readings in Common Wealth Literature (1985), For Gidden Fruit (1992), Creations and Transcreations (1992), Selected Kannada Short Stories (1993), D.R.Bendre (1994), Perceptions of Modern Indian Literature (1996) ಮತ್ತು Critic on the Run (1999)ಎಂಬ ಅವರ ಇಂಗ್ಲಿಷ್ ಗ್ರಂಥಗಳು ಅವರ ವಿಶಾಲವಾದ ಸಾಹಿತ್ಯಾಸಕ್ತಿಯನ್ನು ತೋರಿಸುತ್ತವೆ. ಈ ಗ್ರಂಥಗಳು ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಮನ್ನಣೆಯನ್ನು ಪಡೆದದ್ದು ಸಾಮಾನ್ಯ ಸಾಧನೆಯೇನಲ್ಲ. ಅಮೇರಿಕೆಯ ಸುಪ್ರಸಿದ್ಧ ಪಂಡಿತ ಪೀಟರ್ ನಝುರೆತ್ ಅವರು ಡಾ. ಆಮೂರ್ ಅವರನ್ನು ಭಾರತದ ಪ್ರಥಮ ದರ್ಜೆಯ ವಿಮರ್ಶಕರೆಂದು ವರ್ಣಿಸಿದ್ದಾರೆ. ಅವರು ಕಾಮೆಡಿಯ ಮೇಲೆ ಬರೆದ ಇಂಗ್ಲಿಷ್ ಮಹಾಪ್ರಬಂಧದ ಕೆಲವು ಭಾಗಗಳು ಜರ್ಮನ್ ಭಾಷೆಗೆ ಅನುವಾದಗೊಂಡು ಯುರೋಪಿಯನ್ ವಿಮರ್ಶಕರ ಮೆಚ್ಚುಗೆಯನ್ನು ಗಳಿಸಿವೆ.

ವೃತ್ತಿಯಿಂದ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದರೂ, ಡಾ. ಆಮೂರ ಅವರು ತಮ್ಮ ಕನ್ನಡತನವನ್ನು ಬಿಟ್ಟುಕೊಡಲಿಲ್ಲ. ಕನ್ನಡ ಸಾಹಿತ್ಯದ ಬಗೆಗೆ ಅದರಲ್ಲಿಯೂ ಆಧುನಿಕ ಕನ್ನಡ ಸಾಹಿತ್ಯದ ಬಗೆಗೆ ಅವರಿಗಿದ್ದ ಜ್ಞಾನ ವಿಶಾಲವಾಗಿದೆ. ಆದ್ದರಿಂದಲೆ ಅವರು ಕನ್ನಡದಲ್ಲಿ ಅನೇಕ ವಿಮರ್ಶಾ ಗ್ರಂಥಗಳನ್ನು ರಚಿಸಿದ್ದಾರೆ. "ಮಹಾಕವಿ ಮಿಲ್ಟನ್" (1959), "ಕೃತಿ ಪರೀಕ್ಷೆ" (1970), "ಸಮಕಾಲೀನ ಕಥೆ-ಕಾದಂಬರಿ" (1980) "ಕನ್ನಡ ಕಾದಂಬರಿಯ ಬೆಳವಣಿಗೆ" (1984), "ಅ.ನ. ಕೃಷ್ಣರಾಯರು" (1987), "ಅರ್ಥಲೋಕ" (1988), "ಭುವನದ ಭಾಗ್ಯ" (1989), "ವ್ಯವಸಾಯ" (1992), "ಕಾಮೆಡಿ" (1994), "ಕನ್ನಡ ಕಥನ ಸಾಹಿತ್ಯ: ಕಾದಂಬರಿ" (1994), "ಸಾತ್ವಿಕ ಪಥ" (1995), "ವಿರಾಟಪುರುಷ: ಶ್ರೀರಂಗ ಸಾಹಿತ್ಯ ಸಮೀಕ್ಷೆ" (1998), "ಕಾದಂಬರಿಯ ಸ್ವರೂಪ: ಹೊಸ ಚಿಂತನೆ" (1999) ಮುಂತಾದುವುಗಳು ಅವರ ಪ್ರಮುಖ ವಿಮರ್ಶಾ ಗ್ರಂಥಗಳಾಗಿವೆ. ಡಾ. ಆಮೂರ ಅವರು ತಮ್ಮ ತಾರುಣ್ಯದಲ್ಲಿ "ಉನ್ಮೀಲಿತ" ಎಂಬ ಕನ್ನಡ ಕಾದಂಬರಿಯನ್ನು ಬರೆದು ಪ್ರಕಾಶಕರೊಬ್ಬರಿಗೆ ಪ್ರಕಟಿಸಲು ಕೊಟ್ಟಿದ್ದರಂತೆ. ಆದರೆ ಪ್ರಕಾಶಕರ ನಿರ್ಲಕ್ಷ್ಯತನದಿಂದ ಹಸ್ತಪ್ರತಿ ಕಳೆದುಹೋಯಿತಂತೆ. ಹೀಗಾಗಿ ಆ ಕಾದಂಬರಿ ಬೆಳಕು ಕಾಣಲೇ ಇಲ್ಲ. ಈ ಘಟನೆಯಿಂದ ಆಮೂರ ಅವರ ಸೃಜನಶೀಲತೆಗೆ ಕೊಡಲಿಪೆಟ್ಟು ಬಿದ್ದು ವೈಯಕ್ತಿಕವಾಗಿ ಅವರಿಗೆ ಬಹಳ ಹಾನಿಯೇ ಆಯಿತೆಂದು ಹೇಳಬಹುದು. ಆದರೆ ಅದರಿಂದ ಕನ್ನಡ ವಿಮರ್ಶಾಲೋಕಕ್ಕೆ ಬಹಳ ಲಾಭವಾಯಿತೆಂದು ಹೇಳಬಹುದು. ಏಕೆಂದರೆ ಆಮೂರ ಅವರು ಸೃಜನ ಸಾಹಿತ್ಯವನ್ನು ಬಿಟ್ಟು ವಿಮರ್ಶಾ ಕ್ಷೇತ್ರಕ್ಕೆ ತಮ್ಮ ಜೀವನವನ್ನು ಮುಡಿಪಾಗಿಟ್ಟರು.

ಕನ್ನಡ ಸಾಹಿತ್ಯದಲ್ಲಿ ಮೂರು ತೆರನಾದ ಲೇಖಕರನ್ನು ನಾವು ಕಾಣುತ್ತೇವೆ. ಒಂದು: ಕವಿಗಳು (ಅಂದರೆ ಸಾಹಿತಿಗಳು); ಎರಡು: ಕವಿ-ವಿಮರ್ಶಕರು ಮತ್ತು ವಿಮರ್ಶೆಯನ್ನು ಗಂಭೀರವಾಗಿರಿಸಿಕೊಂಡ ವಿಮರ್ಶಕರು. ಡಾ|| ಆಮೂರ ಅವರು ಮೂರನೆಯ ವರ್ಗಕ್ಕೆ ಸೇರಿದವರು. ವಿರಳ ವಿಮರ್ಶಕರಲ್ಲಿ ಒಬ್ಬರು. ಅವರು ಎ.ಆರ್.ಕೃಷ್ಣಶಾಸ್ತ್ರಿ, ತೀ.ನಂ.ಶ್ರೀ, ಎಸ್.ವಿ.ರಂಗಣ್ಣ, ಕೀರ್ತಿನಾಥ ಕುರ್ತಕೋಟಿ ಮತ್ತು ಎಲ್.ಎಸ್. ಶೇಷಗಿರಿ ರಾವ್ ಅವರಂಥ ಗಂಭೀರ ವಿಮರ್ಶಕರ ಸಾಲಿಗೆ ಸೇರಿದ್ದಾರೆ.

ಡಾ. ಆಮೂರ ಅವರು ಈವರೆಗೆ ಹದಿನಾಲ್ಕು ಸ್ವತಂತ್ರ ವಿಮರ್ಶಾ ಕೃತಿಗಳನ್ನು ರಚಿಸಿದ್ದಾರೆ. ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಅವರು ಇಂಗ್ಲಿಷಿನಲ್ಲಿಯೂ ವಿಮರ್ಶಾಕೃತಿಗಳನ್ನು ರಚಿಸಿ ಕನ್ನಡ ವಿಮರ್ಶಾ ಕ್ಷೇತ್ರಕ್ಕೆ ಪ್ರವೇಶಿಸಿರುವುದರಿಂದ ಅವರು ಬರೆದ ವಿಮರ್ಶೆ ತುಂಬ ಸೂಕ್ಷ್ಮವಾಗಿದ್ದು, ಓದುಗರ ಗಮನವನ್ನು ಬೇಗನೆ ಸೆಳೆಯುತ್ತದೆ. ಸ್ಥಳಾಭಾವದಿಂದಾಗಿ ಅವರ ಎಲ್ಲ ಕೃತಿಗಳನ್ನು ಚರ್ಚಿಸದೆ, ಕೆಲವು ಪ್ರಮುಖವಾದವುಗಳನ್ನು ಮಾತ್ರ ಇಲ್ಲಿ ಪರಿಚಯಿಸಲಾಗಿದೆ.

ಅವರ ಪ್ರಥಮ ಪುಸ್ತಿಕೆ "ಮಹಾಕವಿ ಮಿಲ್ಟನ್" ಎಂಬುದು 1969ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾಯಿತು. ಅದರಲ್ಲಿ ಅವರು ಮಿಲ್ಟನ್ ಕವಿತೆಗಳನ್ನು, ವಿಶೇಷವಾಗಿ "ಪ್ಯಾರಡೈಜ್ ಲಾಸ್ಟ್" ಮಹಾಕಾವ್ಯವನ್ನು ಸಂಕ್ಷಿಪ್ತವಾಗಿಯಾದರೂ ಸಮಗ್ರವಾದ ರೀತಿಯಲ್ಲಿ ಸ್ಪಷ್ಟವಾಗಿ ವಿವೇಚಿಸಿದ್ದಾರೆ. ಅದೇ ರೀತಿ 1994ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಪ್ರಕಟವಾದ "ಕಾಮಿಡಿ" ಎಂಬ ಪುಸ್ತಕದಲ್ಲಿ ತಮ್ಮ ಮೊದಲಿನ ಇಂಗ್ಲಿಷ್ ಮಹಾಪ್ರಬಂಧದ ಸಾರವನ್ನು ಉಪಯೋಗಿಸಿ, ಅದೇ ಚಿಂತನೆಯನ್ನು ಮುಂದುವರಿಸಿ, ಅದರ ಬೆಳಕಿನಲ್ಲಿ ಕನ್ನಡ ವೈನೋದಿಕಗಳನ್ನು ವಿಶ್ಲೇಷಿಸಿದ್ದಾರೆ. ಈ ಗ್ರಂಥದಲ್ಲಿ ಆಮೂರ್ ಅವರು ಪಾಶ್ಚಾತ್ಯ ಸಾಹಿತ್ಯದ ಸುಪ್ರಸಿದ್ಧ ನಾಟಕ ಪ್ರಕಾರವಾದ ಕಾಮೆಡಿಯ ಸ್ಥೂಲ ಪರಿಚಯವನ್ನು ಮಾಡಿಕೊಡುವುದರ ಜೊತೆಗೆ ಅದಕ್ಕೆ ಸಂವಾದಿಯಾದ ಭರತನ ನಾಟ್ಯಶಾಸ್ತ್ರದಲ್ಲಿ ಉಕ್ತವಾದ ಹಾಸ್ಯರಸವನ್ನು ವಿವೇಚಿಸಿದ್ದಾರೆ. ಭಾರತೀಯ ಸಾಹಿತ್ಯ ಮೀಮಾಂಸೆಯಲ್ಲಿ ಮತ್ತು ತತ್ವಶಾಸ್ತ್ರದಲ್ಲಿ ಟ್ರಾಜೆಡಿ ಅಥವಾ ಶೋಕಾಂತಿಕ ನಾಟಕಗಳ ಕಲ್ಪನೆ ಇಲ್ಲವೆಂಬುದನ್ನು ಸ್ಪಷ್ಟಪಡಿಸಿ "ಕಾಮಿಡಿಯ ವಿಶಾಲ ಅರ್ಥವನ್ನು ಗಮನಿಸುವುದಾದರೆ ಸಂಸ್ಕೃತ ನಾಟ್ಯ ಪರಂಪರೆಯನ್ನು ಕಾಮಿಡಿಯ ಪರಂಪರೆಯೆಂದು ಕರೆಯಬಹುದು. ಶೂದ್ರಕ, ಭಾಸ, ಕಾಳಿದಾಸ, ವಿಶಾಖದತ್ತ, ಭವಭೂತಿ ಮೊದಲಾದ ಎಲ್ಲ ಪ್ರಮುಖ ನಾಟಕಕಾರರು ಈ ಪರಂಪರೆಗೆ ಸೇರಿದವರು" ಎಂದು ಹೇಳಿ ಅದನ್ನು ಮನಂಬುಗುವಂತೆ ವಿವೇಚಿಸುತ್ತಾರೆ. ಅನಂತರ ಈ ಕಾಮಿಡಿಗೆ ತತ್ವವನ್ನು ಕನ್ನಡದ ಪ್ರಮುಖ ನಾಟಕಗಳಾದ ಲಿಂಗೇಶ ಶರ್ಮರ "ಇಗ್ಗಪ್ಪ ಹೆಗ್ಗಡೆ ವಿವಾಹ ಪ್ರಹಸನ", ಕೈಲಾಸಂ ಅವರ "ಹೋಂ ರೂಲು", ಬೇಂದ್ರೆಯವರ "ದೆವ್ವದ ಮನೆ", "ಸಾಯೋ ಆಟ", ಮಾಸ್ತಿಯವರ "ಕಾಕನಕೋಟೆ", ಶ್ರೀರಂಗರ "ಹರಿಜನ್ವಾರ", ಕಂಬಾರರ 'ಜೋಕುಮಾರಸ್ವಾಮಿ", ಪಾಟೀಲರ "ಗೋಕರ್ಣದ ಗೌಡಶಾನಿ" ಮುಂತಾದ ಕೃತಿಗಳಿಗೆ ಅನ್ವಯಿಸಿ ವಿಶ್ಲೇಷಿಸಿದ್ದಾರೆ. ಈ ಕೃತಿಯಲ್ಲಿ ಆಮೂರ ಅವರು ಸಂಶೋಧಕ- ವಿಮರ್ಶಕರಾಗಿ ಕಂಡುಬರುತ್ತಾರೆ. ಮೀಮಾಂಸೆಯ ತತ್ವಗಳನ್ನು ಸ್ಪಷ್ಟವಾಗಿ ಗ್ರಹಿಸಿ, ಅವುಗಳನ್ನು ಪೂರ್ವ ಮತ್ತು ಪಶ್ಚಿಮ ದೇಶಗಳ ದೃಷ್ಟಿಯಿಂದ ತುಲನಾತ್ಮಕವಾಗಿ ಚರ್ಚಿಸಿ, ಅವುಗಳನ್ನು ಕನ್ನಡ ನಾಟಕಗಳಿಗೆ ಅನ್ವಯಿಸಿ, ವಸ್ತುನಿಷ್ಠವಾಗಿ ವಿಶ್ಲೇಷಿಸುವುದು. ಆಮೂರ ಅವರ ವಿಮರ್ಶೆಯಲ್ಲಿ ಎದ್ದು ಕಾಣುವ ಗುಣವೆಂದರೆ ಅವರು ಯಾವುದೇ ವಿಷಯವನ್ನು ಚರ್ಚೆಗೆ ತೆಗೆದುಕೊಂಡರೂ ಅದನ್ನು ಸೈದ್ಧಾಂತಿಕ ಅಥವಾ ಐತಿಹಾಸಿಕ ಹಿನ್ನೆಲೆಯಲ್ಲಿ ಪರೀಕ್ಷಿಸಿ, ತದನಂತರ ಅದನ್ನು ವಸ್ತುನಿಷ್ಠವಾಗಿ ಮತ್ತು ಸೋದಾಹರಣೆಗಳ ಮೂಲಕ ವಿವೇಚಿಸುತ್ತಾರೆ.

"ಸಮಕಾಲೀನ ಕಥೆ-ಕಾದಂಬರಿ: ಹೊಸ ಪ್ರಯೋಗಗಳು" (1981) ಎಂಬ ಕೃತಿಯಲ್ಲಿ ಆಮೂರ ಅವರು ಕನ್ನಡದ ಸುಪ್ರಸಿದ್ಧ ಕಾದಂಬರಿಗಳಾದ "ಬೆಟ್ಟದ ಜೀವ", "ಮರಳಿ ಮಣ್ಣಿಗೆ", "ಸಂಸ್ಕಾರ" "ಗ್ರಾಮಾಯಣ", "ಹಳದಿ ಮೀನು", "ಮುಕ್ತಿ", "ವಂಶವೃಕ್ಷ", "ಅಳಿದ ಮೇಲೆ"ಗಳಂಥ ಕಾದಂಬರಿಗಳ ಮರುಮೌಲ್ಯಮಾಪನ ಮಾಡಿದ್ದಾರೆ. ಅದರಂತೆ ಶಾಂತಿನಾಥ ದೇಸಾಯಿ, ಅನಂತಮೂರ್ತಿ

ಮತ್ತು ಚಿತ್ತಾಲರ ಕಥೆಗಳ ಬಗೆಗೆ ಚರ್ಚಿಸಿದ್ದಾರೆ. ಈ ಲೇಖನಗಳಲ್ಲಿ ಆಮೂರ ಅವರು ನಿರ್ದಿಷ್ಟ ದೃಷ್ಟಿಕೋನದಿಂದ ಕೃತಿಗಳನ್ನು ವಸ್ತುನಿಷ್ಠವಾಗಿ ಚರ್ಚಿಸಿದ್ದಾರೆ. ಸಂಶೋಧಕ ವಿಮರ್ಶಕರಾದ ಅವರು ಒಂದು ಕೃತಿಯನ್ನು ವಿಮರ್ಶಿಸುವಾಗ ತಮ್ಮ ವಿಚಾರಗಳನ್ನು ಸ್ಪಷ್ಟವಾಗಿ ಮಂಡಿಸುವುದರ ಜೊತೆಗೆ ಆ ಕೃತಿಯ ಬಗೆಗೆ ಇತರ ವಿಮರ್ಶಕರು ಮಾಡಿದ ಪಕ್ಷಪಾತದ ಅಭಿಪ್ರಾಯ ಗಳನ್ನು ಸಕಾರಣವಾಗಿ ನಿರಾಕರಿಸುತ್ತಾರೆ. ಉದಾಹರಣೆಗೆ ಭೈರಪ್ಪನವರ ಸುಪ್ರಸಿದ್ಧ ತಾತ್ವಿಕ ಕಾದಂಬರಿಯಾದ "ವಂಶವೃಕ್ಷ"ವನ್ನು ಚರ್ಚಿಸುವಾಗ ಅದರ ಬಗೆಗೆ ತಿರಸ್ಕಾರದಿಂದ ಬರೆದ ಇತರ ವಿಮರ್ಶಕರನ್ನು ಆಮೂರರು ತರಾಟೆಗೆ ತೆಗೆದುಕೊಳ್ಳುತ್ತಾರೆ: 'ವಂಶವೃಕ್ಷ'ದ ಮೌಲ್ಯ ವಿವೇಚನೆ ಗೊಂದಲ ದಲ್ಲಿ ಮುಕ್ತಾಯವಾಗಿದೆ ಎಂದು ಹೇಳುವ ಗಿರಡ್ಡಿ ಗೋವಿಂದರಾಜರಾಗಲಿ, ಓದುಗನಿಗೆ ಬೇರೆಬೇರೆ ರೀತಿಯಲ್ಲಿ ಆಪ್ಯಾಯಮಾನವೆನ್ನಿಸುವಂತೆ ಹುಸಿ ನಾಟಕಗಳನ್ನು ರಚಿಸುವುದು ಭೈರಪ್ಪನವರ ಉದ್ದೇಶವಾಗಿದೆ ಎನ್ನುವ ಅನಂತಮೂರ್ತಿಯವರಾಗಲಿ ಈ ಕಾದಂಬರಿಯನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ ಎಂದೆನಿಸುತ್ತದೆ" (ಪು.59). ಹೀಗೆ ಕೃತಿ ವಿಮರ್ಶೆ ಮಾಡು ವುದರ ಜೊತೆಗೆ ವಿಮರ್ಶೆಯ ವಿಮರ್ಶೆಯನ್ನು ಮಾಡುವುದು, ಅದರ ಮೂಲಕ ಓದುಗರ ಸಾಹಿತ್ಯಕ ಅಭಿರುಚಿಯನ್ನು ಮತ್ತು ತಿಳುವಳಿಕೆಯನ್ನು ತಿದ್ದುವುದು ವಿಮರ್ಶಕನ ಜವಾಬ್ದಾರಿಗಳಲ್ಲಿ ಒಂದಾಗಿದೆ ಎಂಬುದನ್ನು ಆಮೂರ ಅವರು ತೋರಿಸಿಕೊಟ್ಟಿದ್ದಾರೆ.

1982ರ ಸುಮಾರಿಗೆ ಅನಂತಮೂರ್ತಿಯವರು "ಮೌನಿ" ಕಥೆಯ ಸಾಮಗ್ರಿಯನ್ನು ಅಮೇರಿಕನ್ ಕಥೆಗಾರನಾದ ಬರ್ನಾರ್ಡ್ ಮಾಲಾಮೂಡ್‌ನ "ದ ಮೌರ್ನರ್" ಎಂಬ ಕಥೆಯಿಂದ ಕದ್ದಿದ್ದಾರೆಂದು ಸುಮತೀಂದ್ರ ನಾಡಿಗ ಅವರು ದೊಡ್ಡ ರಾದ್ಧಾಂತ ಮಾಡಿ ಅನಂತಮೂರ್ತಿ ಮತ್ತು ಅವರ ಶಿಷ್ಯರಿಗೆ ಬಹಳ ಮುಜುಗರ ಮಾಡಿದ್ದರು. ಆದರೆ ಅದಕ್ಕಿಂತ ಬಹಳ ಮೊದಲೇ, ಅಂದರೆ 1974ರಷ್ಟು ಹಿಂದೆಯೆ "ಮೌನಿ" ಮತ್ತು "ಮೌರ್ನರ್" ಕಥೆಗಳ ನಡುವಿದ್ದ ಅನೇಕ ಸಾಮ್ಯಗಳನ್ನು ಡಾ. ಆಮೂರ ಅವರು ಯಾವ ಸದ್ದು ಗದ್ದಲವಿಲ್ಲದೆ, ಭಾವಾವೇಶಕ್ಕೆ ಎಡೆಗೊಡದೆ ಶಾಂತವಾಗಿ ತೋರಿಸಿದ್ದರು. ಇಂಥ ತುಲನಾತ್ಮಕ ಅಥವಾ ಮೂಲಾನ್ವೇಷಣೆಯ ದೃಷ್ಟಿಯ ಹಿಂದೆ ಬಹು ಭಾಷಾ ಸಾಹಿತ್ಯಾಧ್ಯಯನವಿದೆಯೆಂಬುದನ್ನು ಮರೆಯಲಾಗದು.

1995ರಲ್ಲಿ ಪ್ರಕಟವಾದ "ಸಾತ್ವಿಕ ಪಥ"ದಲ್ಲಿ ಕನ್ನಡ ನಾಟಕ, ಕಾವ್ಯ, ಕಥೆ ಮತ್ತು ಮಹಾಕಾವ್ಯಗಳನ್ನು ಕುರಿತ ಹದಿನಾಲ್ಕು ಲೇಖನಗಳಿವೆ. ಉತ್ತರ ಕರ್ನಾಟಕದಲ್ಲಿ ಮರಾಠಿ ರಂಗಭೂಮಿಯ ಪ್ರಭಾವದಿಂದ ಕನ್ನಡ ವೃತ್ತಿ ರಂಗಭೂಮಿ, ಆಧುನಿಕ ರಂಗಭೂಮಿ ಬೆಳೆದು ಬಂದ ಬಗೆಯನ್ನು. ಅನಂತರ ವಿಲಾಸೀ ರಂಗಭೂಮಿ ಇಂಗ್ಲಿಷ್ ಮತ್ತು ಸಂಸ್ಕೃತ ನಾಟಕಗಳ ಅನುವಾದ ಇಲ್ಲವೆ ರೂಪಾಂತರದಿಂದ ಬೆಳೆದು ಬಂದ ರೀತಿಯಲ್ಲಿ ಪ್ರಮುಖ ವೃತ್ತಿರಂಗ ಸಂಸ್ಥೆಗಳು ಪ್ರಮುಖ ನಾಟಕಕಾರರು ಎದುರಿಸಿದ ಸಮಸ್ಯೆಗಳನ್ನು ಡಾ. ಆಮೂರ ಅವರು ಸಂಕ್ಷಿಪ್ತವಾಗಿಯಾದರೂ ನಿಖರವಾಗಿ ಚರ್ಚಿಸಿದ್ದಾರೆ. ಈ ಚಿಕ್ಕ ಲೇಖನದಲ್ಲಿ ಅವರು ಗರಿಷ್ಠ ಮಾಹಿತಿಯನ್ನು ಒದಗಿಸಿದ್ದಾರೆ. ಹೀಗಾಗಿ ಅದು ಕನ್ನಡ ನಾಟಕಗಳನ್ನು ಅಭ್ಯಸಿಸುವ ಉತ್ಸಾಹಿಗಳಿಗೆ ದಿಕ್ಕು ತೋರಿ ಸುತ್ತದೆ. ಹಾಗೆಯೆ ಕನ್ನಡದ ಹತ್ತು ಉತ್ತಮ ನಾಟಕಗಳು, ಶ್ರೀರಂಗರ ನಾಟ್ಯ ಪ್ರಪಂಚ, ಕಾರ್ನಾಡ ಮತ್ತು ಕಂಬಾರರ ಪ್ರಮುಖ ನಾಟಕಗಳ ಬಗೆಗೆ ಅತ್ಯಂತ ವಿಶ್ಲೇಷಣಾತ್ಮಕ ಮತ್ತು ಮಾಹಿತಿಪೂರ್ಣ ಲೇಖನಗಳಿವೆ. ಈ ಸಂಗ್ರಹದಲ್ಲಿ "ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮಹಾಕಾವ್ಯ"ವೆಂಬ ಲೇಖನ ದಲ್ಲಿ ಡಾ. ಆಮೂರ ಅವರು ಕುವೆಂಪು ಅವರ "ರಾಮಾಯಣ ದರ್ಶನಂ", ವಿನಾಯಕರ "ಭಾರತಸಿಂಧು ರಶ್ಮಿ" ಮತ್ತು ಭೂಸನೂರಮಠ ಅವರ "ಭವ್ಯ ಮಾನವ" - ಈ ಮೂರು ಮಹಾಕಾವ್ಯಗಳ ಬಗೆಗೆ ಇಲ್ಲಿ ಅವರ ತುಲನಾತ್ಮಕ, ಸಂಶೋಧಕ ಮತ್ತು ಸಮತೋಲನ ದೃಷ್ಟಿ ಎದ್ದು ಕಾಣಿಸುತ್ತದೆ.

ಡಾ. ಆಮೂರ ಅವರ "ಅರ್ಥಲೋಕ" (1988) ವಿಮರ್ಶಾ ಲೇಖನಗಳ ಸಂಗ್ರಹದಲ್ಲಿ ಬೇಂದ್ರೆ, ಅಡಿಗ, ಕುವೆಂಪು ಅವರ ಕಾವ್ಯ, ನಿರಂಜನ, ಚದುರಂಗ, ಕಾರಂತ, ಮುಲ್ಕರಾಜ್ ಆನಂದ್ ಅವರ ಕಾದಂಬರಿಗಳು ಮತ್ತು ಕನ್ನಡದ ಹತ್ತು ಶ್ರೇಷ್ಠ ಕಾದಂಬರಿಗಳು, ಡಿ.ವಿ.ಜಿ.ಯವರ "ಕನ್ನಡ ಮ್ಯಾಕ್‌ಬೆತ್" ಮತ್ತು ಮರಾಠೀ ಸಾಹಿತ್ಯದಲ್ಲಿ ಹೊಸ ಒಲವುಗಳು ಮುಂತಾದ ವಿಷಯಗಳನ್ನು ಕುರಿತ ಮೌಲಿಕ ಲೇಖನಗಳಿವೆ. ಕನ್ನಡದ ಹತ್ತು ಶ್ರೇಷ್ಠ ಕಾದಂಬರಿಗಳಾದ "ಸುಬ್ಬಣ್ಣ", "ಕಾನೂರು ಹೆಗ್ಗಡತಿ", "ಬೆಟ್ಟದ ಜೀವ", "ಗಂಗವ್ವ ಗಂಗಾಮಾಯಿ", "ನಿಸರ್ಗ", "ಕಾಡು", "ಶಿಕಾರಿ", "ಒಡಲಾಳ" ಮತ್ತು "ಕರ್ವಾಲೊ" ಕಾದಂಬರಿಗಳನ್ನು ಸಂಕ್ಷಿಪ್ತವಾಗಿ ಆದರೆ ವಸ್ತುನಿಷ್ಠವಾಗಿ ಚರ್ಚಿಸಿ, ಅವುಗಳ ಸಾಧನೆಗಳನ್ನು ಎತ್ತಿ ತೋರಿಸಿದ್ದಾರೆ. ಈ ಸಂಕಲನದಲ್ಲಿ "ವಿಮರ್ಶೆಗೆ ಬಂದ ವಿಪತ್ತು" ಎಂಬ ಲೇಖನದಲ್ಲಿ ಆಮೂರ ಅವರು ಕನ್ನಡ ವಿಮರ್ಶೆಯ ಮಿತಿಗಳನ್ನು ಎತ್ತಿ ತೋರಿಸಿದ್ದಾರೆ. ಕನ್ನಡ ವಿಮರ್ಶೆಯ ಬಗೆಗೆ ಒಟ್ಟಾರೆ ಹೇಳಬೇಕೆಂದರೆ ಅದು ಪಾಶ್ಚಾತ್ಯ ವಿಮರ್ಶೆಯ ಮೇಲೆ ಅವಲಂ ಬಿಸಿದ್ದು, ಕವಿ-ವಿಮರ್ಶಕರ ಏಕಪಕ್ಷೀಯ ದೃಷ್ಟಿ, ಜಾತೀಯತೆ, ಗುಂಪುಗಾರಿಕೆ, ಸಮಿತಿ ನಿಷ್ಠತೆ (elitism), ಖಂಡದೃಷ್ಟಿ (Fragmentaly vision), ಸಾಂಸ್ಕೃತಿಕ ಮತ್ತು ಅಂತರ್ಶಿಸ್ತೀಯ ಜ್ಞಾನದ ಕೊರತೆಯಿಂದಾಗಿ ಕನ್ನಡ ವಿಮರ್ಶೆಯಲ್ಲಿ ಸಮಗ್ರದೃಷ್ಟಿಯ ಕೃತಿಗಳು ಬರಬೇಕಾದ ಪ್ರಮಾಣದಲ್ಲಿ ಬಂದಿಲ್ಲವೆಂಬುದನ್ನು ವಿಷಾದದಿಂದ ಎತ್ತಿ ತೋರಿಸಿದ್ದಾರೆ.

"ಕನ್ನಡ ಕಥನ ಸಾಹಿತ್ಯ: ಕಾದಂಬರಿ" (1994) ಎಂಬ ವಿಮರ್ಶಾಕೃತಿ ಡಾ. ಆಮೂರ ಅವರ ಅತ್ಯಂತ ಮಹತ್ವಾಕಾಂಕ್ಷೆಯ ಬೃಹದ್ಗ್ರಂಥವಾಗಿದೆ. ಅದರಲ್ಲಿ ಅವರು ಕನ್ನಡ ಕಾದಂಬರಿಯ ಬೆಳವಣಿಗೆಯ ವಿವಿಧ ಘಟ್ಟಗಳನ್ನು ಗುರುತಿಸಿದ್ದಾರೆ. ಭಾರತೀಯ ಕಾದಂಬರಿ ವಸಾಹತುಶಾಹಿ ಸಂದರ್ಭದಲ್ಲಿ ಜನ್ಮತಾಳಿ, ವಾಸ್ತವ ಮತ್ತು ರಮ್ಯವೆಂಬ ಎರಡು ಪ್ರಮುಖ ಮಾರ್ಗಗಳನ್ನು ಅನುಸರಿಸಿ, ಪಾಶ್ಚಾತ್ಯ ಪ್ರಭಾವದಿಂದ ತಮ್ಮ ಕೃತಿಗಳನ್ನು ಬರೆದರೂ, ಗಳಗನಾಥ ಮತ್ತು ಎಂ.ಎಸ್. ಪುಟ್ಟಣ್ಣನಂಥವರು ಭಾರತೀಯ ಸಂಸ್ಕೃತಿ ಯನ್ನು, ಅದರಲ್ಲಿಯೂ ವಿಶೇಷವಾಗಿ ಐತಿಹಾಸಿಕ ಮತ್ತು ಸಾಮಾಜಿಕ ಸಮಸ್ಯೆ ಗಳನ್ನು ಚಿತ್ರಿಸಿದರು. ಆದರೆ ಗುಳವಾಡಿ ವೆಂಕಟರಾಯರು ಮತ್ತು ಬೋಳಾರ ಬಾಬೂರಾಯರು ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾಗಿದ್ದುದರಿಂದ ಅವರು ಭಾರತೀಯ ಸಂಸ್ಕೃತಿಯನ್ನು ಹೊರಗಿನಿಂದ ನೋಡಿ ಚಿತ್ರಿಸಲಿಕ್ಕೆ ಸಾಧ್ಯ ವಾಯಿತು. ಹೀಗೆ ಕೆಲವರು ಕಲ್ಪನೆಯನ್ನು ಅವಲಂಬಿಸಿದರೆ, ಇನ್ನು ಕೆಲವರು ವಾಸ್ತವ ಮಾರ್ಗವನ್ನು ಅವಲಂಬಿಸಿದರು. ಇದರಿಂದ ಸಂಧಿಕಾಲದ ಈ ಲೇಖಕರಿಗೆ ಶ್ರೇಷ್ಠದರ್ಜೆಯ ಸೃಜನಶೀಲತೆಯನ್ನು ಮೆರೆಯಲು ಸಾಧ್ಯ ವಾಗಲಿಲ್ಲ. ಮಾಸ್ತಿಯವರ "ಸುಬ್ಬಣ್ಣ"ದೊಂದಿಗೆ ಕನ್ನಡ ಕಾದಂಬರಿ ತನ್ನ ಪ್ರಬುದ್ಧಾವಸ್ಥೆಯನ್ನು ಮುಟ್ಟಿತೆಂದು ಡಾ. ಆಮೂರ ಅವರು ಹೇಳುತ್ತಾರೆ. ಹೆಜ್ಜೆಗಳಿಂದ ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ ಮತ್ತು ಮಹಿಳಾ ಕಾದಂಬರಿಗಳವರೆಗೆ ಪ್ರಾತಿನಿಧಿಕ ಕೃತಿಗಳನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ವಿಶ್ಲೇಷಿಸಿದ್ದಾರೆ. ಇದು ಕನ್ನಡದಲ್ಲಿ ಕಾದಂಬರಿ ಸಾಹಿತ್ಯವನ್ನು ಕುರಿತು ಬಂದ ಅತ್ಯುತ್ತಮ ವಿಮರ್ಶಾಕೃತಿಯೆಂದು ಹೇಳಬಹುದು.

ಡಾ. ಆಮೂರ ಅವರ "ಕಾದಂಬರಿಯ ಸ್ವರೂಪ: ಹೊಸಚಿಂತನೆ" (1999) ಗಾತ್ರದಲ್ಲಿ ಚಿಕ್ಕದಾಗಿದ್ದರೂ, ಸತ್ವದಲ್ಲಿ ಹಿರಿದಾದ ಕೃತಿಯಾಗಿದೆ. ಕನ್ನಡದಲ್ಲಿ ಸೈದ್ಧಾಂತಿಕ ವಿಮರ್ಶೆ ಅತ್ಯಂತ ಕಡಿಮೆ ಪ್ರಮಾಣದಲ್ಲಿರುವುದ ರಿಂದ ಆಮೂರ ಅವರ ಪುಸ್ತಕ ಬಹಳ ಮೌಲಿಕವಾಗಿದ್ದು ಈ ಕೊರತೆಯನ್ನು ತುಂಬಿಕೊಡಲು ಸಹಾಯಕವಾಗಿದೆ. ನಾಟ್ಯ ವೃತ್ತಿ, ಆದಿಕಥನ, ಸಂಜ್ಞೆಗಳು ಇವೇ ಮುಂತಾದ ಹೊಸ ಪದಪುಂಜಗಳನ್ನು ಬಳಕೆಗೆ ತಂದಿದ್ದಾರೆ. ಐಸರ್, ವೈಹಿಂಜರ್, ರಿಫಾತೆರ್, ಜಾಕ್ ಲಕನ್, ರೋಲಾ ಭಾರ್ತೆ, ಡಿರಿಡಾ, ಲುಕ್ಯಾಚ್, ತದರೊವ್, ಬಾಖ್ತಿನ್, ಜೆರಾರ್ದ ಜೆನೆ ಮುಂತಾದ ವಿಮರ್ಶಕರು ಪ್ರಚಾರಕ್ಕೆ ತಂದ ಪ್ರಮುಖ ಸೈದ್ಧಾಂತಿಕ ವಿಚಾರಗಳನ್ನು ಅತ್ಯಂತ ಸ್ಪಷ್ಟವಾಗಿ ಚರ್ಚಿಸಿದ್ದಾರೆ.

ಡಾ. ಆಮೂರ ಅವರ "ಭುವನದ ಭಾಗ್ಯ" (1991,1996) ಬೇಂದ್ರೆ ಯವರ ಸಮಗ್ರ ಸಾಹಿತ್ಯವನ್ನು ಸಮಗ್ರವಾಗಿ ಸಮೀಕ್ಷಿಸುವ ಉದ್ಗ್ರಂಥ ವಾಗಿದೆ. ಈ ಗ್ರಂಥಕ್ಕೆ 1997ನೆ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ಬಂದದ್ದು ಅತ್ಯಂತ ಔಚಿತ್ಯಪೂರ್ಣವಾಗಿದೆ. ಬೇಂದ್ರೆಯವರ ಸಾಹಿತ್ಯ ವಜ್ರದ ಹರಳಿನಂತೆ ಹೊಳೆಯುವಂಥದಾಗಿದ್ದು ಕೆಲವರಿಗೆ ಕೆಲವು ಭಾಗದ ಹೊಳಪು ಮಾತ್ರ ಕಾಣಸುತ್ತಿತ್ತು. ಬೇಂದ್ರೆಯವರು ಸುದೀರ್ಘ ಕಾಲದವರೆಗೆ ಸಾಹಿತ್ಯ ಕೃಷಿ ಮಾಡಿದ ಅವರ ಕಾವ್ಯದಲ್ಲಿ ವಿಕಾಸದ ಅನೇಕ ಘಟ್ಟಗಳು ಮತ್ತು ತಿರುವುಗಳು ಕಂಡುಬರುತ್ತವೆ. ಡಾ. ಆಮೂರ ಅವರು ಬೇಂದ್ರೆಯವರ ಸಾಹಿತ್ಯದ ಸಮಗ್ರ ಸಮೀಕ್ಷೆಯನ್ನು ಇಲ್ಲಿ ಕೈಕೊಂಡು ಯಶಸ್ವಿಯಾಗಿದ್ದಾರೆ.

ಈ ವಿಮರ್ಶಾಗ್ರಂಥದಲ್ಲಿ ಆಮೂರ ಅವರು ಬೇಂದ್ರೆಯವರ ಸಾಹಿತ್ಯ ಬೆಳೆಯುತ್ತ ಬಂದ ರೀತಿಯನ್ನು ಗುರುತಿಸಿದ್ದಾರೆ. ಅವರ ಕವಿತೆಗಳಲ್ಲಿ ಕಂಡುಬರುವ ಆಂತರಿಕ ಸಂಬಂಧಗಳನ್ನು ತೋರಿಸುವುದರ ಜೊತೆಗೆ ಅವರ ಜೀವನದಲ್ಲಾದ ಬದಲಾವಣೆಗಳನ್ನು ತೋರಿಸಿ ಅಸಂಖ್ಯಾತ ಆಕರಗಳನ್ನು ದಾಖಲಿಸುತ್ತ, ವಸ್ತುನಿಷ್ಠ ವಿಶ್ಲೇಷಣೆಯನ್ನು ಸಮರ್ಥವಾಗಿ ನೀಡಿದ್ದಾರೆ. ಮೂಲತಃ ಮರಾಠಿ ಭಾಷಿಕರಾದ ಬೇಂದ್ರೆಯವರು ಕನ್ನಡದೊಂದಿಗೆ ಸೃಜನಾತ್ಮಕ ಸಂಬಂಧವನ್ನು ಬೆಳೆಸಿಕೊಂಡು ಏ. ಈ. ಖಲೀಲ್ ಜಿಬ್ರಾನ್, ರವೀಂದ್ರನಾಥ ಠಾಕೂರ ಮತ್ತು ಶ್ರೀ ಅರವಿಂದರ ಗಾಢ ಪ್ರಭಾವಕ್ಕೆ ಒಳಗಾದುದನ್ನೂ ಕನ್ನಡವ ಅರಗಿಸಿಕೊಂಡು, ಜಾನಪದ ಸತ್ವವನ್ನು ಮೈಗೂಡಿಸಿಕೊಂಡುದನ್ನು ವಿಶದಪಡಿಸಿದ್ದಾರೆ. ಎಲ್ಲಿಯೂ ಅತಿರೇಕಗಳಿಗೆ ಎಡೆಗೊಡದೆ ವಸ್ತುನಿಷ್ಠತೆಯನ್ನು ಬರೆದಿದ್ದಾರೆ. ಅದರಂತೆ ಬೇಂದ್ರೆ ವಿಮರ್ಶಕರ ಅಭಿಪ್ರಾಯಗಳ ಇತಿಮಿತಿಗಳನ್ನು ಎತ್ತಿತೋರಿಸಿ ವಿಮರ್ಶಕರ ವಿಮರ್ಶಕರಾಗಿ ಜವಾಬ್ದಾರಿಯನ್ನು ನಿರ್ವಹಿಸಿದ್ದಾರೆ.

ಆಮೂರ ಅವರ "ವಿರಾಟ್ ಪುರುಷ" (1998) ಎಂಬ ಕೃತಿ ಶ್ರೀರಂಗ ಸಾರಸ್ವತ ಸಮೀಕ್ಷೆಯಾಗಿದ್ದು, ಅದು ಅವರ ಮೇರುಕೃತಿಗಳಲ್ಲಿ ಒಂದಾಗಿದೆ. ಕನ್ನಡ ಸಾಹಿತ್ಯದ "ವಿರಾಟಪುರುಷ"ನೆಂಬ ಈ ಕೃತಿ "ಭುವನದ ಭಾಗ್ಯ"ದ ಮಾದರಿಯನ್ನೆ ಅನುಸರಿಸುತ್ತದೆ. ಕರ್ನಾಟಕದ ಬರ್ನಾರ್ಡ್ ಶಾ ಎಂದೇ ಸುಪ್ರಸಿದ್ಧರಾಗಿದ್ದ ಶ್ರೀರಂಗರು ಎಪ್ಪತ್ತಕ್ಕಿಂತ ಹೆಚ್ಚು ಏಕಾಂತ ನಾಟಕಗಳನ್ನು, ನಲವತ್ತೇಳು ಪೂರ್ಣಪ್ರಮಾಣದ ನಾಟಕಗಳನ್ನು ಬರೆದಿದ್ದಾರೆ. ಅಲ್ಲದೆ ಕಾದಂಬರಿ, ಹರಟೆ, ಚರಿತ್ರೆ, ಆತ್ಮಚರಿತ್ರೆ ಮುಂತಾದ ಪ್ರಕರಣಗಳಲ್ಲಿಯೂ ಗಣನೀಯ ಸಾಧನೆಯನ್ನು ಮಾಡಿದ್ದಾರೆ. ಇಂಥ ಅಪ್ಪಟ ವೈಚಾರಿಕತೆಯ ದೈತ್ಯಪ್ರತಿಭೆಯನ್ನು ಕುರಿತು ಡಾ. ಆಮೂರ ಅವರು, ಅವರ ಸಮಗ್ರ ಸಾಹಿತ್ಯ ಸಮೀಕ್ಷೆಯನ್ನು ಕೈಕೊಂಡಿದ್ದಾರೆ. ಈ ಬೃಹದ್ಗ್ರಂಥದಲ್ಲಿ ಆಮೂರ ಅವರು ಶ್ರೀರಂಗರ ಅಸಂಖ್ಯಾತ ನಾಟಕಗಳನ್ನು, ಅವುಗಳ ಮೇಲೆ ಈವರೆಗೆ ಲಭ್ಯವಿದ್ದ ವಿಮರ್ಶೆಯನ್ನು, ಶ್ರೀರಂಗರ ಅಭಿಪ್ರಾಯ, ಅನಿಸಿಕೆಗಳನ್ನು ಕೂಲಂಕಷವಾಗಿ ಪರೀಕ್ಷಿಸಿ, ಅವರ ಸಾಹಿತ್ಯದ ವಿಕಾಸದ ಹಂತಗಳನ್ನು ಗುರುತಿಸುತ್ತ ಹೋಗುತ್ತಾರೆ. ಅವರ ನಾಟಕಗಳನ್ನು ಸ್ಥೂಲವಾಗಿ ನಾಲ್ಕು ವಿಭಾಗಗಳಲ್ಲಿ ವಿಂಗಡಿಸಿ ಒಂದೊಂದೇ ನಾಟಕಗಳನ್ನು ವಿಸ್ತೃತವಾಗಿ ಚರ್ಚಿಸಿದ್ದಾರೆ. ಈ ಪುಸ್ತಕ ಬಹಳ ಮೌಲಿಕವಾಗಿರುವುದಕ್ಕೆ ಕಾರಣವೆಂದರೆ ಇದರಲ್ಲಿ ಆಮೂರ ಅವರು ಈವರೆಗೆ ಲಭ್ಯವಿದ್ದ ಮಾಹಿತಿಯನ್ನು ಮತ್ತು ದಾಖಲೆಗಳನ್ನು ಬಹು ಪರಿಶ್ರಮದಿಂದ ಸಂಗ್ರಹಿಸಿ, ಸಂಯೋಜಿಸಿ, ವಿಮರ್ಶೆಯ ಚೌಕಟ್ಟಿನಲ್ಲಿ ಅಳವಡಿಸಿ ಮಹದುಪಕಾರವೆಸಗಿದ್ದಾರೆ. ಆಮೂರ ಅವರು ಶ್ರೀರಂಗರ ವಿಮರ್ಶಕರ ಅಭಿಪ್ರಾಯಗಳನ್ನು ಪುನರ್ವಿಮರ್ಶಿಸಿ, ಅವುಗಳ ಲೋಪದೋಷ ಗಳನ್ನು ತಿದ್ದಲು ಪ್ರಯತ್ನಿಸಿದಂತೆ, ಶ್ರೀರಂಗರೇ (ಮರವಿನಿಂದ) ಹೇಳಿದ ತಪ್ಪುಹೇಳಿಕೆಗಳನ್ನು ಪಿರಾಂಡೆಲೊನಂಥ ಆಧುನಿಕ ನಾಟಕಕಾರರ ಬಗೆಗಿದ್ದ ಅವರ ಅಜ್ಞಾನ ಅಥವಾ ನಿರ್ಲಕ್ಷ್ಯವನ್ನು ನಿರ್ದಾಕ್ಷಿಣ್ಯವಾಗಿ ಎತ್ತಿತೋರಿಸಿ ದ್ದಾರೆ.

ಡಾ|| ಆಮೂರ ಅವರು ಸಂಪಾದಕರಾಗಿಯೂ ಸಾಹಿತ್ಯಸೇವೆ ಸಲ್ಲಿಸಿ ದ್ದಾರೆ. "ಚಿತ್ತಾಲರ ಆಯ್ದ ಕಥೆಗಳು" (1978) ಎಂಬ ಕೃತಿಯಲ್ಲಿ ಅವರು ಚಿತ್ತಾಲರ ಅನೇಕ ಕಥೆಗಳಲ್ಲಿ ಕೆಲವು ಪ್ರಮುಖ ಕಥೆಗಳನ್ನು ಮಾತ್ರ ಆಯ್ದು ಅವುಗಳಲ್ಲಿ ಕಂಡುಬರುವ ಸಾಂಕೇತಿಕತೆಯನ್ನು ಮನಂಬುಗುವಂತೆ ವಿಶ್ಲೇಷಿಸಿ ದ್ದಾರೆ. ಹಾಗೆಯೆ ಕೆ.ಸದಾಶಿವ ಅವರ "ಸಮಗ್ರ ಕೃತಿಗಳು" (1998) ಎಂಬ ಕೃತಿಯಲ್ಲಿ ಅವರ ಕಥೆಗಳನ್ನು ಕುರಿತು ಮೌಲಿಕವಾದ ಪ್ರಸ್ತಾವನೆ ಯನ್ನು ಬರೆದಿದ್ದಾರೆ. ಅದೇ ರೀತಿ Selected Kannada Short Stories (1993) ಎಂಬ ಗ್ರಂಥದಲ್ಲಿ ಕನ್ನಡ ಕಥೆಗಾರರ ಪ್ರಾತಿನಿಧಿಕ ಕಥೆಗಳ ಇಂಗ್ಲಿಷ್ ಅನುವಾದಗಳನ್ನು ಸಂಕಲಿಸಿ, ಕನ್ನಡ ಸಣ್ಣಕಥಾ ಪ್ರಕಾರದ ವಿವಿಧ ಮಜಲು ಗಳನ್ನು ಗುರುತಿಸಿದ್ದಾರೆ. ಹಾಗೆಯೆ ಶ್ರೀಕೃಷ್ಣ ಆಲನಹಳ್ಳಿಯವರ "ಪರಸಂಗದ ಗೆಂಡೆತಿಮ್ಮ" ಕಾದಂಬರಿಯ ಇಂಗ್ಲಿಷ್ ಅನುವಾದ (1998)ಕ್ಕೆ ಬರೆದ ಪರಿಚಯವೂ ಮೌಲಿಕವಾಗಿದೆ. ಇತ್ತೀಚೆಗೆ ಪ್ರಕಟವಾದ "ಅವಳ ಕಥೆಗಳು" (1999) ಎಂಬ ಸಂಕಲನದಲ್ಲಿ ಕನ್ನಡದ ಮಹಿಳಾ ಲೇಖಕರ ಕೆಲವು ಪ್ರಾತಿನಿಧಿಕ ಕಥೆಗಳನ್ನು ಸಂಪಾದಿಸಿ, ಅವುಗಳನ್ನು ಸ್ತ್ರೀವಾದಿ ವಿಮರ್ಶೆಯ ಚೌಕಟ್ಟಿನಲ್ಲಿ ಪರಿಚಯಿಸಿದ್ದಾರೆ. ಹೀಗೆ ಅವರು ಸಂಕಲಿಸಿದ ಮತ್ತು ಸಂಪಾದಿಸಿದ ಪುಸ್ತಕಗಳಿಗೆ ಬರೆದ ಪರಿಚಯಗಳಾಗಲಿ, ಪ್ರಸ್ತಾವನೆಗಳಾಗಲಿ ಅತ್ಯಂತ ಪಾಂಡಿತ್ಯಪೂರ್ಣವಾಗಿದ್ದು ಆ ಪ್ರಕಾರದ ಸಂಪ್ರದಾಯದ ಸ್ಥೂಲ ಚಿತ್ರವನ್ನು ಕೊಡುವುದರ ಜೊತೆಗೆ ವೈಯಕ್ತಿಕ ಲೇಖಕರ ಸಾಧನೆಗಳನ್ನೂ ಎತ್ತಿತೋರಿಸುತ್ತವೆ.

ಡಾ. ಆಮೂರ ಅವರು ಅನುವಾದಕರಾಗಿಯೂ ಸಾಕಷ್ಟು ಕೆಲಸ ಮಾಡಿದ್ದಾರೆ. ಅವರು ಕುವೆಂಪು, ಬೇಂದ್ರೆ, ಚೆನ್ನವೀರ ಕಣವಿ, ಜಿ.ಎಸ್. ಶಿವರುದ್ರಪ್ಪನವರ ಕೆಲವು ಕವಿತೆಗಳನ್ನು ಮತ್ತು ಇತ್ತೀಚೆಗೆ ಸರ್ವಜ್ಞ ಮತ್ತು ಬಸವಣ್ಣನವರ ಕೆಲವು ವಚನಗಳನ್ನು ಇಂಗ್ಲೀಷಿಗೆ ಅನುವಾದಿಸಿದ್ದಾರೆ. ಅವರು ಬರೆದ ಐವತ್ತರಷ್ಟು ಕವಿತೆಗಳು ಇನ್ನೂ ಪ್ರಕಟವಾಗಿಲ್ಲ.

ಒಟ್ಟಿನಲ್ಲಿ ಹೇಳಬೇಕೆಂದರೆ ಡಾ. ಆಮೂರ ಅವರು ಅವ್ಯಾಹತವಾಗಿ ಕನ್ನಡ ಸಾಹಿತ್ಯ ಸೇವೆ ಮಾಡುತ್ತಲೇ ಬಂದಿದ್ದಾರೆ. ಎಪ್ಪತ್ತೈದರ ಇಳಿವಯಸ್ಸಿ ನಲ್ಲಿಯೂ ಅವರು ಉತ್ಸಾಹದಿಂದ ದುಡಿಯುತ್ತಿದ್ದು ತರುಣ ಲೇಖಕರಿಗೆ ಆದರ್ಶಪ್ರಾಯರಾಗಿದ್ದಾರೆ.

❑

# ಬಿ.ಸಿ. ರಾಮಚಂದ್ರ ಶರ್ಮ

ನರಹರಿ ಬಾಲಸುಬ್ರಹ್ಮಣ್ಯ

## 1

ಆಧುನಿಕ ಕನ್ನಡ ಕಾವ್ಯಚರಿತ್ರೆಯಲ್ಲಿ ಬಿ. ಸಿ. ರಾಮಚಂದ್ರಶರ್ಮ ಅವರದು ಮುಖ್ಯ ಹೆಸರುಗಳಲ್ಲೊಂದು. ಗೋಪಾಲಕೃಷ್ಣ ಅಡಿಗರು ಹೊಸ ಬಗೆಯಲ್ಲಿ ಬರೆಯಲು ಆರಂಭಿಸಿದ ಸರಿಸುಮಾರಿನಲ್ಲೇ ಅವರ ಸಮಕಾಲೀನ ರಾಗಿ ಬರೆಯಲು ತೊಡಗಿದ ಶರ್ಮ ಅಡಿಗರಿಗಿಂತ ಭಿನ್ನವಾಗಿ ನವ್ಯಕಾವ್ಯ ಮಾರ್ಗವನ್ನು ರೂಪಿಸಲು ಪ್ರಯತ್ನಿಸಿದ ಮಹತ್ವದ ಕವಿ. ಸುಮಾರು ಐದು ದಶಕಗಳಿಂದ ಕಾವ್ಯರಚನೆಯಲ್ಲಿ ತಮ್ಮನ್ನು ಇಡಿಯಾಗಿ ತೊಡಗಿಸಿಕೊಂಡಿರುವ ಶರ್ಮರದು ಕಾವ್ಯದ ಬಗೆಗೆ ಶಬರಿಶ್ರದ್ಧೆಯ ಅತೀವ ನಿಷ್ಠೆ; ಅನೇಕ ಆಕರ್ಷಣೆ, ಆಮಿಷಗಳ ನಡುವೆಯೂ ಅವರು ಕಾವ್ಯದ ಶುದ್ಧರೂಪಕ್ಕೆ ಒಲಿದಂಥವರು.

ಮುಖಾಮುಖಿ ಕೂತರೂ ನೇರ
ಹಾಯದ ದೃಷ್ಟಿಗಳ ಪದಕದ ತಳಕ್ಕೆ ನಾಚಿ
ಕಪ್ಪು ಪುಕ್ಕಲೆದೆ ಹೊರಕ್ಕೆಳೆದು ತರುವಾತುರ,
ನಿಲ್ಲದೇ ನಡೆದ ಯುದ್ಧ ರಾಜಿಗೆ
ನಿಲ್ಲದೇ ನಡೆದ ಮಾತುಕತೆ, ಪ್ರತಿರಾತ್ರಿ ಕನಸಿಗೆ ಬಂದು
ಚಂದದಾಸೆ, ಮೋಹಿನಿಯಾಗಿ, ಗೆಲ್ಲದೇ ಹೋದ
ಕೇಸಾಗಿ, ಮಾತಿಗೆಟುಕದೆ ನಿಂತೊಂದು
ಕಲ್ಪನೆಯಾಗಿ, ಕಾಡುವಾಗಲೂ ಅನುಮಾನ:
ಸಮರಸದ ಸ್ಥಿತಿ ಮರಣ; ಸಮರಸವೇ ಜೀವನ.

ಈ 'ಸಮರ', 'ಈ ಮುಖಾಮುಖಿ' - ಶರ್ಮರ ಕಾವ್ಯಶಕ್ತಿ. ಸಮರಸ, ಸಮನ್ವಯ ಶರ್ಮರ ಕಾವ್ಯರೀತಿಯಲ್ಲ.

ಶರ್ಮರು ತಮ್ಮ ಮೊದಲ ಸಂಕಲನ 'ಹೃದಯಗೀತೆ' ಪ್ರಕಟಿಸಿದ್ದು 1952 ರಲ್ಲಿ, ತಮ್ಮ ಇಪ್ಪತ್ತೇಳನೇ ವಯಸ್ಸಿನಲ್ಲಿ. (ಜನನ: 28 ನವೆಂಬರ್ 1925) ಅವರ ಹುಟ್ಟೂರು ಮಂಡ್ಯಜಿಲ್ಲೆ ನಾಗಮಂಗಲದ ಬಳಿಯ ಬೋಗಾದಿ. ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡ ಶರ್ಮ ಕಡುಬಡತನ ದಲ್ಲಿ ಬಾಲ್ಯ ಕಳೆದರು. ಬಡತನ ತಾಳಲಾರದೆ ಒಮ್ಮೆ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ತೀವ್ರವಾಗಿ ಯೋಚಿಸಿದ್ದನ್ನೂ ಶರ್ಮ ಈಗ ನೆನಪಿಸಿಕೊಳ್ಳುತ್ತಾರೆ. ಆದರೆ ಶರ್ಮರದು ಹೋರಾಟದ ಮನಸ್ಸು ; ಯಾವುದನ್ನೂ ಸುಲಭವಾಗಿ ಸ್ವೀಕರಿಸದ, ತಾನು ನಂಬಿದ್ದನ್ನು ಸಾಧಿಸಿ ತೋರಿಸುವ ಛಲದ ಹಾದಿ ಅವರದು. ಎಪ್ಪತ್ತೈದರ ಶರ್ಮರು ಈಗಲೂ ಯಾವುದರೊಂದಿಗೂ ಸುಲಭವಾಗಿ ರಾಜಿ ಮಾಡಿಕೊಳ್ಳುವವರಲ್ಲ.

ಮೈಸೂರು ವಿಶ್ವವಿದ್ಯಾನಿಲಯದಿಂದ ಬಿ.ಎಸ್ಸಿ, ಬಿ.ಎಡ್. ಪದವಿಗಳನ್ನು ಪಡೆದ ಶರ್ಮ ಕೆಲಕಾಲ ಬೆಂಗಳೂರಿನ ಹೈಸ್ಕೂಲೊಂದರಲ್ಲಿ ಅಧ್ಯಾಪಕರಾಗಿದ್ದರು. ನಂತರ ಶರ್ಮರ ವಿದೇಶ ಯಾತ್ರೆ ಆರಂಭವಾಯಿತು. ಕೆಲಕಾಲ ಇಥಿಯೋಪಿಯಾದಲ್ಲಿ ಅಧ್ಯಾಪಕ ವೃತ್ತಿಯಲ್ಲಿದ್ದು ನಂತರ ಇಂಗ್ಲೆಂಡಿಗೆ ಬಂದರು. ಅಲ್ಲಿ ಅಧ್ಯಾಪಕ ವೃತ್ತಿಯಲ್ಲಿದ್ದುಕೊಂಡೇ ಮನಃಶಾಸ್ತ್ರ ಅಧ್ಯಯನ ಮಾಡಿದರು. ವಲಸೆ ಹೋದ ಭಾರತದ ಮಕ್ಕಳ ಬುದ್ಧಿಶಕ್ತಿಯ ಬಗ್ಗೆ ಅಧ್ಯಯನ ನಡೆಸಿ ಬರೆದ ಮಹಾಪ್ರಬಂಧಕ್ಕೆ ಪಿಎಚ್.ಡಿ. ಪದವಿ ಪಡೆದರು. ಅಧ್ಯಾಪಕರಾಗಿದ್ದ ಶರ್ಮ ಈಗ ಮನಃಶಾಸ್ತ್ರದ ಸಲಹೆಗಾರರಾಗಿ ನೇಮಕರಾದರು. ಇಂಗ್ಲೆಂಡ್, ಜಾಂಬಿಯಾ ಹಾಗೂ ಯುನೆಸ್ಕೋ ಪರವಾಗಿ ಮಲಾವಿಗಳಲ್ಲಿ ಮನಃಶಾಸ್ತ್ರಜ್ಞರಾಗಿ ಕೆಲಸ ಮಾಡಿ 1982ರಲ್ಲಿ ತಾಯ್ನಾಡಿಗೆ ಹಿಂತಿರುಗಿದರು. ಈಗ ಪತ್ನಿ ಪದ್ಮಾ ಅವರೊಂದಿಗೆ ಶರ್ಮ ಬೆಂಗಳೂರಿನಲ್ಲಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ. ಪ್ರೀತಿಸಿ ಮದುವೆಯಾದ ಪದ್ಮ ಸಹ ಲೇಖಕಿ ; ಶರ್ಮರಿಗೆ ಉತ್ತಮ ಸಂಗಾತಿ. ಪದ್ಮ-ಶರ್ಮ ಜತೆಗೂಡಿ ಪೆಂಗ್ವಿನ್‌ಗಾಗಿ ಮಾಸ್ತಿಯವರ ಚಿಕವೀರರಾಜೇಂದ್ರ ಕಾದಂಬರಿಯನ್ನು, ಯಶವಂತ ಚಿತ್ತಾಲರ ಕತೆಗಳನ್ನು ಇಂಗ್ಲಿಷಿಗೆ ಭಾಷಾಂ ತರಿಸಿರುವುದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು. ಇತ್ತೀಚೆಗೆ ಕುವೆಂಪು ಅವರ 'ಕಾನೂರು ಹೆಗ್ಗಡಿತಿ'ಯ ಅನುವಾದವೂ 'ಹೌಸ್ ಆಫ್ ಕಾನೂರು' ಪೆಂಗ್ವಿನ್‌ನಿಂದಲೇ ಪ್ರಕಟವಾಗಿದೆ.

ರಾಮಚಂದ್ರಶರ್ಮ ಒಟ್ಟಾರೆ ಎಂಟು ಕವನಸಂಕಲನಗಳನ್ನು - ಹೃದಯಗೀತ (1952) ಏಳುಸುತ್ತಿನ ಕೋಟೆ (1953) ಬುವಿ ನೀಡಿದ ಸ್ಫೂರ್ತಿ (1956) ಹೇಸರಗತ್ತೆ (1969) ಬ್ರಾಹ್ಮಣಹುಡುಗ (1978) ಮಾತು-ಮಾಟ (1984) ದೆಹಲಿಗೆ ಬಂದ ಹೊಸ ವರ್ಷ (1988) ಸಪ್ತಪದಿ (1996)- ಪ್ರಕಟಿಸಿದ್ದಾರೆ. ಇಂಗ್ಲಿಷಿನಲ್ಲಿ ಅವರ GESTURES (1978) ಎಂಬ ಕವನಸಂಕಲನ ಪ್ರಕಟವಾಗಿದೆ. ಕನ್ನಡ ಕಾವ್ಯಕ್ಷೇತ್ರಕ್ಕೆ ಶರ್ಮರ ಮತ್ತೊಂದು ಮಹತ್ವದ ಕೊಡುಗೆಯೆಂದರೆ 'ಈ ಶತಮಾನದ ನೂರು ಇಂಗ್ಲಿಷ್ ಕವನಗಳು' (1982). ಮೂವತ್ತೊಂಬತ್ತು ಕವಿಗಳ ನೂರು ಕವನಗಳನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಅನುಸೃಷ್ಟಿ ಮಾಡಿಕೊಡುವುದರ ಮೂಲಕ ಶರ್ಮರು ಕನ್ನಡ ಮನಸ್ಸಿಗೆ ಹೊಸ ಸಂವೇದನೆಯ ಪರಿಚಯ ಮಾಡಿಕೊಟ್ಟಿದ್ದಾರೆ.

ಅನ್ಯಭಾಷೆಯ ಸಾಹಿತ್ಯವನ್ನು ಕನ್ನಡಕ್ಕೆ ತರುವುದು ಇಪ್ಪತ್ತನೇ ಶತಮಾನದುದ್ದಕ್ಕೂ ನಡೆದುಬಂದ ವಿದ್ಯಮಾನ. ಆದರೆ ಅದೇ ಮಟ್ಟದಲ್ಲಿ ಕನ್ನಡ ಸಾಹಿತ್ಯ ಅನ್ಯಭಾಷೆಗಳಿಗೆ ಅನುವಾದಗೊಳ್ಳಲಿಲ್ಲ. ಅಂಥ ಪ್ರಯತ್ನ ಮಾಡಿದವರಲ್ಲಿ ಶರ್ಮರೂ ಒಬ್ಬರು. ಮಾಸ್ತಿ, ಕುವೆಂಪು, ಚಿತ್ತಾಲ ಮೊದಲಾದ ಕನ್ನಡದ ಮಹತ್ವದ ಲೇಖಕರನ್ನು ಅವರು ಇಂಗ್ಲಿಷ್‌ಗೆ ಭಾಷಾಂತರ ಮಾಡುವುದರ ಮೂಲಕ ಜಗತ್ತಿಗೆ ಪರಿಚಯ ಮಾಡಿಕೊಟ್ಟಿದ್ದಾರೆ.

ಕನ್ನಡ ಕಥಾ ಸಾಹಿತ್ಯದಲ್ಲಿ ನವ್ಯಸಂವೇದನೆ ತಂದ ಮೊದಲಿಗರಲ್ಲಿ ಶರ್ಮರು ಒಬ್ಬರು. ಅವರು ನಾಲ್ಕು ಕಥಾಸಂಕಲನಗಳನ್ನು-ಮಂದಾರ ಕುಸುಮ (1953), ಏಳನೆಯ ಜೀವ (1956), ಬೆಳಗಾಯಿತು (1969) ಹಾಗೂ ಕತೆಗಾರನ ಕತೆ (1985)-ಪ್ರಕಟಿಸಿದ್ದಾರೆ.

ಶರ್ಮ ನಾಟಕಗಳನ್ನು ಬರೆದಿದ್ದಾರೆ. ಅವರ 'ಸೆರಗಿನ ಕೆಂಡ' (1954) ರೇಡಿಯೋ ನಾಟಕ ರಾಷ್ಟ್ರಮಟ್ಟದ ಪ್ರಶಸ್ತಿಯನ್ನು ಪಡೆದುಕೊಂಡಿದೆ. 'ನೆರಳು' (1965) ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿದೆ. ಈ ಎರಡು ನಾಟಕಗಳಲ್ಲದೆ ಬಾಳಸಂಜೆ (1952) ನೀಲಿಕಾಗದ (1953) ಹಾಗೂ ವೈತರಣಿ (1960) ಎಂಬ ನಾಟಕಗಳನ್ನು ಶರ್ಮ ಬರೆದಿದ್ದಾರೆ.

ಮಕ್ಕಳ ಬುದ್ಧಿಶಕ್ತಿ ಮತ್ತು ಪರಿಸರ (1981) ಕಾರಂಜಿ (1985) ಪ್ರತಿಭಾ ಸಂದರ್ಶನ (1957) ಅವರ ಇನ್ನಿತರ ಪ್ರಕಟಿತ ಕೃತಿಗಳು.

ಪೆಂಗ್ವಿನ್‌ಗಾಗಿ 'From Cauvery to Godavari' ಎಂಬ ಆಧುನಿಕ ಸಣ್ಣಕತೆಗಳ ಸಂಕಲನವನ್ನೂ, ದೆಹಲಿಯ 'ಕಥಾ' ಸಂಸ್ಥೆಗಾಗಿ 'ಮಾಸ್ತಿ' ಕೃತಿಯನ್ನು ಶರ್ಮ ಸಂಪಾದಿಸಿಕೊಟ್ಟಿದ್ದಾರೆ. BMS: The Man and Works (1984) ಅವರ ಮತ್ತೊಂದು ಸಂಪಾದಿತ ಕೃತಿ.

ಅನುವಾದಕ್ಕಾಗಿ 'ಕಥಾಪ್ರಶಸ್ತಿ' (1992) ಪಡೆದಿರುವ ಶರ್ಮರು ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ (1985) ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1997) ಹಾಗೂ ಶಿವರಾಮ ಕಾರಂತ ಪ್ರಶಸ್ತಿ (1996)- ಮೊದಲಾದ ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ. 1998 ರಲ್ಲಿ ಅವರ 'ಸಪ್ತಪದಿ' ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ನೀಡಿ ಗೌರವಿಸಿದೆ.

ರಾಷ್ಟ್ರ ಹಾಗೂ ಅಂತರ ರಾಷ್ಟ್ರೀಯ ಮಟ್ಟದ ಅನೇಕ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿರುವ ಶರ್ಮರು ಅತ್ಯುತ್ತಮ ವಾಗ್ಮಿ. ಅವರು ಕವಿತೆ ಓದುವುದನ್ನು ಕೇಳುವುದೇ ಒಂದು ಅನುಭವ. ಲವಲವಿಕೆಯಿಂದ ಸಾಹಿತ್ಯ ಚರ್ಚೆಗಳಲ್ಲಿ ಪಾಲ್ಗೊಳ್ಳುವ ಶರ್ಮರು ಸಾಹಿತ್ಯ ಪರಿಸರ ಜಡವಾಗ ದಂತೆ, ಜೀವಂತವಾಗಿ ಚಲನಶೀಲವಾಗಿರಬೇಕೆಂಬ ತೀವ್ರ ಕಾಳಜಿಯುಳ್ಳವರು. ಗಾಢ ಕಾವ್ಯಶ್ರದ್ಧೆಯ ಶರ್ಮರು ಅನ್ಯದೇಶೀಯ ಅನುಭವಗಳನ್ನು ಕನ್ನಡದಲ್ಲಿ ಸಫಲ ಕಲೆಯಾಗಿಸಲು ಪ್ರಯತ್ನಿಸಿದ ವಿಶಿಷ್ಟ ಕವಿ.

## 2

ಚಿಕ್ಕಂದಿನಲ್ಲಿ ರಾಮಚಂದ್ರಶರ್ಮರಿಗೆ ಆಸರೆಯಾಗಿ ನಿಂತವರಲ್ಲಿ ಎಂ.ವಿ.ಸೇತುರಾಮಯ್ಯನವರು ಒಬ್ಬರು. ಎಂ.ವಿ.ಸೇ ಅವರ ಒಡನಾಟ ದಿಂದಾಗಿ ಶರ್ಮರಿಗೆ ತಾರುಣ್ಯದಲ್ಲೇ ಕನ್ನಡದ ಪ್ರತಿಭಾವಂತ ಮನಸ್ಸುಗಳ ಸಹವಾಸ ಸಿಕ್ಕಿತು. ಬಿ.ಎಂ.ಶ್ರೀ ಆ ಕಾಲಕ್ಕೆ ಮಾಡುತ್ತಿದ್ದ ಪರಿಣಾಮಕಾರೀ ಭಾಷಣ, ಪರಿಷತ್ತಿನಲ್ಲಿ ನಿಘಂಟು ಕಛೇರಿಯಲ್ಲಿ ಸಹಾಯಕನಾಗಿ ಕೆಲಸ ಮಾಡುತ್ತಿದ್ದಾಗ ಒದಗಿ ಬಂದ ವಿ.ಸೀ, ಎಂ.ಆರ್.ಶ್ರೀ, ಕ.ವೆಂ.ರಾಘವಾ ಚಾರ್, ಎಲ್. ಗುಂಡಪ್ಪ ಮೊದಲಾದವರ ಸಂಪರ್ಕ ಶರ್ಮರಲ್ಲಿ ಸಾಹಿತ್ಯ ಪ್ರೀತಿ ಮೂಡಲು ಪ್ರೇರಣೆ ಒದಗಿಸಿದಂಥ ಸಂಗತಿಗಳು.

ಶರ್ಮರು ತಾವು ಮೊದಲು ಕವಿತೆ ಬರೆದ ಸನ್ನಿವೇಶವನ್ನು ಹೇಗೆ ನೆನಪಿಸಿಕೊಳ್ಳುತ್ತಾರೆ: 1946ರ ವೇಳೆಗೆ ಬೇಂದ್ರೆ ಕನ್ನಡ ಸಾಹಿತ್ಯ ಪರಿಷತ್ತಿಗೆ ಬಂದಿದ್ದ ಸಂದರ್ಭ. ಉಪನ್ಯಾಸದ ನಡುವೆ ಅವರು ಅಲ್ಲಿದ್ದ ತರುಣರಿಗೆ ಆಶುಕವಿತೆಯೊಂದನ್ನು ಬರೆಯಲು ಸೂಚಿಸಿ 'ಹೂವಿನ ಬಗ್ಗೆ ಬರೆಯಿರಿ' ಎಂದರು. ಸಭಿಕರಲ್ಲಿ ಶರ್ಮರೂ ಒಬ್ಬರು. ಕೆ.ನರಸಿಂಹಮೂರ್ತಿಯವರೂ ಜತೆಗಿದ್ದರಂತೆ. ಶರ್ಮ 'ರೋಜ-ಸರೋಜ' ಎಂಬ ಕವಿತೆ ಬರೆದರು. ಆ ಕವಿತೆಗೆ ಬಹುಮಾನ ಸಿಕ್ಕಿತು. ಬೇಂದ್ರೆಯವರ ಬಳಿ ಪುಟ್ಟ ಹೊಸ ಡೈರಿ ಯಿತ್ತು. ಅದನ್ನವರು ಈ ತರುಣ ಕವಿಗೆ ಕೊಡುಗೆಯಾಗಿ ನೀಡುತ್ತಾ 'ಭವಿಷ್ಯದ ಕವಿಗೆ ಆರ್ಶೀವಾದ ಪೂರಕ' ಎಂದು ಬರೆದು ಕೊಟ್ಟರಂತೆ. ಅಂದು ಶರ್ಮರಿಗೆ ತಾನು 'ಕವಿ' ಅನ್ನಿಸಿತಂತೆ. ಹೀಗೆ ಶರ್ಮರೊಳಗಿದ್ದ 'ಕವಿ' ಅಂದು ಬೇಂದ್ರೆಯವರ ಎದುರಿಗೆ ಪ್ರಕಟಗೊಂಡ. ಆದರೆ ಶರ್ಮರ, ಕಾವ್ಯರಚನೆಗೆ ಒಂದು ಸ್ಪಷ್ಟರೂಪ ದೊರಕಿದ್ದು ವೈಎನ್‌ಕೆ ಮೂಲಕ. ವೈಎನ್‌ಕೆ ಆಗ 'ದೇಶಬಂಧು' ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದರು. ಪ್ರತಿನಿತ್ಯ ಗಾಂಧೀ ಬಜಾರಿನಲ್ಲಿ ಭೇಟಿ. ಶರ್ಮರು ಶ್ರೇಷ್ಠಕಾವ್ಯದ ಪರಿಚಯ ಪಡೆದದ್ದು ಆಗಲೇ. ಕಾವ್ಯಜಗತ್ತಿನ ಭಿನ್ನಮಾದರಿಗಳನ್ನು ಅಧ್ಯಯನ ಮಾಡಿದ್ದು, ಎಡಪಂಥೀಯ ಒಲವು ಬೆಳೆಸಿಕೊಂಡಿದ್ದು, ಕಾವ್ಯಾಕೃತಿಯ ಬಗ್ಗೆ ಹುಡುಕಾಟ ನಡೆಸಿದ್ದು - ಆಗಲೇ.

ಶರ್ಮರ ಆರಂಭದ ಕವಿತೆಗಳಲ್ಲಿ ನಾವು ಕಾಣುವುದು ತೀವ್ರ ಸಾಮಾಜಿಕ ಕಾಳಜಿ ; ದೌರ್ಜನ್ಯಕ್ಕೆ ಒಳಗಾದವರ ಬಗ್ಗೆ ಸಹಾನುಭೂತಿ ; ಅವರಲ್ಲಿ ಆ ಬಗ್ಗೆ ಅರಿವು ಮೂಡಿಸಬೇಕೆಂಬ ತಹತಹ:

ದಲಿತರೆದೆ ದಳ್ಳುರಿಯ, ಪುಣ್ಯವಂತರ ಸಿರಿಯ
ಬಣ್ಣಿಸುವ ಹಾಡೊಂದ ಹಾಡಲೇನು ?
ಅಲ್ಪದೊಳೆ ಸಂತೃಪ್ತ ಸ್ವಪ್ನ ಸುಖ ನಿರ್ಲಿಪ್ತ
ಮನುಜರನು ಕ್ರಾಂತಿಪಥ ಕಳೆಯಲೇನು ?

ಈ ಜಗದ ಸಾವಿಗೂ ಜನರೆದೆಯ ನೋವಿಗೂ
ಕಾರಣನು ವಿಶ್ವಾತ್ಮ ದೇವನಲ್ಲ
ಜಗದಾರ್ಥಿಕ್ಯಾಸಮತೆ ಈ ದೆಸೆಗೆ ಈ ವೆತೆಗೆ
ಮೂಲವೆಂದೆಂಬ ನುಡಿ ನುಡಿಯಲೇನು

ದೇವ, ನಿಧಿ, ಕವಿಸೃಷ್ಟಿ ಅದುವೆ ವಾಸ್ತವ ದೃಷ್ಟಿ
ಎಂದೆನಲು ನಾ ನಿಜಕು ಧರ್ಮದುಷ್ಟ
ಸಂಪ್ರದಾಯವನೊಗೆದು ಸ್ವಾರ್ಥಿಜನರೆದೆ ಬಗೆದು
ಸುಖಪಡುವುದೆನೆ ನಾನು ಕಮ್ಯುನಿಷ್ಟ

(ಯಾವ ಹಾಡ ಹಾಡಲಿ)

ಆರ್ಥಿಕ ಅಸಮಾನತೆಯ ಬಗ್ಗೆ, ಅದಕ್ಕೆ ಕಾರಣವಾದ ಸಂಗತಿಗಳ ಬಗ್ಗೆ ಪ್ರಸ್ತಾಪಿಸುವ ಶರ್ಮ ತಮ್ಮ ಕಾವ್ಯಜೀವನದ ಆರಂಭದಲ್ಲಿ 'ಪ್ರಗತಿ ಶೀಲ' ಆಶಯಗಳನ್ನು ದಟ್ಟವಾಗಿ ಪ್ರಕಟಿಸಿದ ಕವಿ. ಅವರೇ ಹೇಳುವಂತೆ -'ಗೆ' ಎಂಬ ಕವಿತೆ ಬಿಟ್ಟರೆ ಆಗ ಅವರು ರೊಮ್ಯಾಂಟಿಕ್ ಎನ್ನಬಹುದಾದ ಕವಿತೆ ಬರೆದದ್ದು ತೀರ ಕಡಿಮೆ; ಇಲ್ಲವೆಂದರೂ ನಡೆದೀತು. ಅವರದು ಒಂದು ರೀತಿ Anti Romantic ಧೋರಣೆ ಆಗ. ಹೊಸ ವೈಚಾರಿಕ ಆಕೃತಿಯ ಮೂಲಕ ಕನ್ನಡ ಕಾವ್ಯಕ್ಕೆ, ಹೊಸ ನುಡಿಗಟ್ಟನ್ನು ತಂದುಕೊಡಲು ಪ್ರಯತ್ನಿಸಿ ದವರಲ್ಲಿ ಶರ್ಮರೂ ಒಬ್ಬರು. ಹಾಗೆ ನೋಡಿದರೆ ಕನ್ನಡದಲ್ಲಿ 'ಪ್ರಗತಿಶೀಲ ಕಾವ್ಯ' ಎಂಬ ಒಂದು ಘಟ್ಟವನ್ನು ಕಾವ್ಯಚರಿತ್ರೆಯಲ್ಲಿ ನಾವು ಗುರ್ತಿಸುತ್ತಿಲ್ಲ. ಹಾಗೆ ಗುರ್ತಿಸುವುದಾದರೆ ಶರ್ಮರ ಕಾವ್ಯದಲ್ಲಿ ಪ್ರಗತಿಶೀಲ ದನಿ ಗಟ್ಟಿ ಯಾಗಿಯೇ ಕೇಳಿಸುತ್ತದೆ. ಆದ್ದರಿಂದಲೇ ಶರ್ಮರ ಮೊದಲ ಸಂಕಲನ 'ಹೃದಯಗೀತ'ಕ್ಕೆ ಹಿನ್ನುಡಿ ಬರೆದಿರುವ ಸು.ರಂ. ಎಕ್ಕುಂಡಿಯವರಿಗೆ ಶರ್ಮ 'ಎಡಕವಿ'ಯಾಗಿ 'ಕೆಂಪು ಕವಿ'ಯಾಗಿ ಕಂಡಿದ್ದಾರೆ.

ಇದೇ ಹಂತದಲ್ಲಿ ಶರ್ಮರ ಮೇಲೆ ಫ್ರಾಯ್ಡ್‌ನ ಪ್ರಭಾವವಾಗಿರು ವುದನ್ನು ಕನ್ನಡ ವಿಮರ್ಶೆ ಗುರ್ತಿಸಿದೆ. ಹಾಗೆ ನೋಡಿದರೆ ಶರ್ಮರ ಕಾವ್ಯದ ಆರಂಭದ ದಿನಗಳಲ್ಲಿ ಮಾರ್ಕ್ಸ್-ಫ್ರಾಯ್ಡ್ ಇವರಿಬ್ಬರೂ ಅವರನ್ನು ಆಕ್ರಮಿಸಿದಂತೆ ತೋರುತ್ತದೆ. ಕುರ್ತಕೋಟಿಯವರು ಶರ್ಮರ ಕಾವ್ಯದ ಮೂಲಪ್ರೇರಣೆಗಳನ್ನು ಕುರಿತು ಹೇಳುತ್ತ- 'ಕನ್ನಡದಲ್ಲಿ ಕಾವ್ಯದ ಅಂತರಂಗ ಬಹಿರಂಗಗಳೆರಡರಲ್ಲಿಯೂ ಫ್ರಾಯ್ಡ್‌ನ ಸಿದ್ಧಾಂತಗಳನ್ನು ಉಪಯೋಗಿಸಿ ಕೊಂಡವರೆಂದರೆ ಬಿ.ಸಿ.ರಾಮಚಂದ್ರಶರ್ಮ. ಈ ದೃಷ್ಟಿಯಿಂದ ಶರ್ಮರ

ಕಾವ್ಯ ಸಂಪೂರ್ಣವಾಗಿ ನವ್ಯವಾಗಿದೆ. 'ಗೌರಿಶಂಕರ', 'ಏಳುಸುತ್ತಿನ ಕೋಟೆ', 'ಕ್ಲೋಭೆ', 'ಕೆಂಡ ಕಡಲು'- ಈ ಕವಿತೆಗಳಲ್ಲಿಯ ಶೃಂಗಾರಕ್ಕೆ ಶಾಸ್ತ್ರಾಧಾರ ವಾತ್ಸ್ಯಾಯನದಲ್ಲ, ಫ್ರಾಯ್ಡ್‌ನದು. ಶರ್ಮರ ಈ ಹಂತದ ಕಾವ್ಯವನ್ನು ಕುರ್ತಕೋಟಿ 'ಲಿಬಿಡೋ' ಕಾವ್ಯ ಎಂದು ಗುರ್ತಿಸಿದ್ದಾರೆ.

'ಕಾಮ' ಶರ್ಮರಲ್ಲಿ ಮನುಷ್ಯರ ಮೂಲಪ್ರವೃತ್ತಿಯ ವಾಸನಾಮಯ ನೆಲೆಯಲ್ಲಿ ಮಾತ್ರ ಚಿತ್ರಿತವಾಗದೆ ಚರಿತ್ರೆ ಹಾಗೂ ಸೃಷ್ಟಿಯ ರಹಸ್ಯವನ್ನು ಒಳಗೊಳ್ಳುತ್ತದೆ. ಈ ದೃಷ್ಟಿಯಿಂದ ಗೌರಿಶಂಕರ, ಏಳುಸುತ್ತಿನ ಕೋಟೆಯಂಥ ಕವಿತೆಗಳು ಬಹಳ ಮುಖ್ಯವಾದಂಥವು. ಮನುಷ್ಯನ ಪ್ರಕೃತಿಯನ್ನ, ಚರಿತ್ರೆಯನ್ನು ಗೆಲ್ಲುವ ಹಂಬಲ 'ಗೌರಿಶಂಕರ' ಕವಿತೆಯಲ್ಲಿ ಪ್ರಕಟವಾದರೆ 'ಏಳುಸುತ್ತಿನ ಕೋಟೆ'ಯಲ್ಲಿ ವ್ಯಕ್ತಿಯ ಬದುಕಿನ ಬೆಳವಣಿಗೆಯೊಂದಿಗೆ ಕಾಮ ಪಡೆದುಕೊಳ್ಳಬಹುದಾದ ಸ್ವರೂಪ ಹಾಗೂ ಮಾನವ ಚರಿತ್ರೆಯಲ್ಲಿನ ಕಾಮದ ನಿರಂತರತೆ ಅದ್ಭುತವಾದ ರೀತಿಯಲ್ಲಿ ಮೈದಾಳಿದೆ. ಶರ್ಮರ ಅತ್ಯಂತ ಸಫಲ ಕವಿತೆಗಳಲ್ಲಿ 'ಏಳುಸುತ್ತಿನ ಕೋಟೆ' ಸಹ ಒಂದು. ಅನಂತಮೂರ್ತಿ ಹೇಳುವಂತೆ ಕಾಮೋದಯ, ರತಿಪೂರ್ವದ ಸಂಭ್ರಮ, ಫ್ಯಾಂಟಸಿ, ಅಂತೆಯೇ ರತ್ಯುತ್ತರ ವ್ಯಾಕುವ- ಈ ವಿಷಯಗಳನ್ನು ಉದ್ದೀಪನಾದೃಷ್ಟಿಯಿಂದ ಬರೆಯುವುದು ಸುಲಭ. ಆದರೆ ಚಿಂತನಾಪರವಾಗಿ ಬರೆಯುವುದು ಕಷ್ಟ. ಶರ್ಮರು ಕಾಮದ ಬಗ್ಗೆ ನರಸಿಂಹಸ್ವಾಮಿಗಳಂತೆ ಸಂಸಾರಿಯಾಗಿ ಬರೆಯುವುದಿಲ್ಲ; ಅಥವಾ ಬೇಂದ್ರೆಯಂತೆ ಅದನ್ನು ಸೃಷ್ಟಿಯ ಅದ್ಭುತವೆಂಬಂತೆ ಕಂಡು ತತ್ತರಿಸುವುದಿಲ್ಲ. ಸ್ಪಷ್ಟ ಸೂಕ್ಷ್ಮ ವೈಚಾರಿಕತೆಯಲ್ಲಿ ಅದರ ರಹಸ್ಯವನ್ನು ನಾಟಕೀಯವಾಗಿ ವಿವರಿಸುತ್ತಾರೆ."

ನವ್ಯದ ಸಂದರ್ಭದಲ್ಲಿ ಗಂಡು-ಹೆಣ್ಣಿನ ಸಂಬಂಧ ಮೌಲ್ಯಶೋಧನೆಯ ಒರೆಗಲ್ಲಾಗಿಯೇ ಅಥವಾ ಮೋಹದ ಸೆಳೆತವಾಗಿ ಮಹತ್ಸಾಧನೆಗೆ ಆತಂಕವೆಂದು ಭಾವಿಸಿದ್ದುಂಟು. ಶರ್ಮರ ಸಮಕಾಲೀನರಾದ ಗೋಪಾಲಕೃಷ್ಣ ಅಡಿಗರನ್ನೇ ಗಮನಿಸಿ, ಆರಂಭದಲ್ಲಿ ಹೆಣ್ಣಿನ ಸಂಬಂಧದ ಮೋಹ ಅವರ ಮಹತ್ಸಾಧನೆಗೆ ಅಡ್ಡಿ:

"ನೇಹ ಮೋಹ ನಗುವು ಅಳುವು ಇಲ್ಲದೊಂದು ಬೀಡಿಗೆ ತನ್ನತನದ ಕೋಟೆಗಿನಿತು ಲಗ್ಗೆ ಬಾರದಿರುವೆಡೆ"

ಅಡಿಗರ ವ್ಯಕ್ತಿತ್ವ ಹೋಗಬಯಸುತ್ತದೆ. "ಸಣ್ಣನೇಹ, ಸಣ್ಣ ಒಲವುಗಳಿಂದ ದೂರವಾಗಿ ನೀಲ ಮುಗಿಲ ಗಹನ ವಿಪಿನ ಹಿಂಗಡಲಿನ ವಿಸ್ತಾರಕ್ಕೆ" ಅವರ ಜೀವ ಓಡಬಯಸುತ್ತದೆ. ಇದಕ್ಕೆ ವಿರುದ್ಧವೆಂಬಂತೆ ಶರ್ಮರ ನಿಲುವು.

ತಳಕ್ಕದುಮಿದರೆ ಪುಳಕ್ಕನೆ ಜಿಗಿದ ಬೆಂಡು ಪ್ರಶ್ನೆ:

> ಅವ್ಯಕ್ತದಲ್ಲಿ ವ್ಯಕ್ತಿತ್ವ ಲಯವಾದರೇ
> ಬದುಕು ಸಾರ್ಥಕವೇನು? ಅನ್ವೇಷಕನ ಕೊನೆ
> ಬಟ್ಟಬಯಲೇ?. . . . .ಗೊತ್ತು.
> ಬೇಡ ಕಾದಿದೆ ಬಲೆಯೊಳಗೆ, ಗೊತ್ತು.
> ಆದರೂ ನೂಲ ಜಗ್ಗಬೇಕು

(ಪಾಂಡು ಮಾದ್ರಿ)

ನವ್ಯಕಾವ್ಯ ಸಂದರ್ಭದಲ್ಲಿ ಅಡಿಗರಿಗಿಂತ ಬೇರೆಯಾದ ಕಾವ್ಯಪ್ರಪಂಚವನ್ನು ಶರ್ಮರು ನಿರ್ಮಿಸಿದರೆಂದು ಗಮನಿಸಬೇಕಾದ ಸಂಗತಿ. 'ಪಾಂಡು-ಮಾದ್ರಿ' ಕವಿತೆ ಬರೆಯುವ ವೇಳೆಗೆ ಶರ್ಮರು ಗಂಡುಹೆಣ್ಣಿನ ಸಂಬಂಧದ ಅದಮ್ಯ ಶಕ್ತಿಯನ್ನು ಗ್ರಹಿಸುವ ಬಗ್ಗೆ ಹೆಚ್ಚು ಪ್ರಬುದ್ಧ ನೆಲೆ ತಲುಪಿದ್ದರು. ಬ್ರಾಹ್ಮಣ ಹುಡುಗ ಸಂಕಲನದ ವೇಳೆಗೆ ಈ ಭಾವ ಮತ್ತಷ್ಟು ಹದಗೊಂಡು ಮೊದಲಿಗೆ ವಿಜೃಂಭಿಸಿದ ಕಾಮ, ಉರಿದ ಭಾವ ಇಲ್ಲಿ ಬೆಳಕು ಚೆಲ್ಲುವ ದೀಪವಾಗಿದೆ. 'ಸಪ್ತಪದಿ' ಸಂಕಲನದಲ್ಲಂತೂ ಶರ್ಮರು ಗಂಡು ಹೆಣ್ಣಿನ ಸಂಬಂಧದಲ್ಲಿ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಪ್ರಸಿದ್ಧವಾದ 'ಅಕ್ಕ'ನ ಪ್ರತಿಮೆಗೆ ಪರ್ಯಾಯವಾಗಿ 'ತಂಗಿ'ಯ ಪ್ರತಿಮೆಯನ್ನು ಸೃಷ್ಟಿಸಿದ್ದಾರೆ. ಅಡಿಗರು 'ಅಕ್ಕ'ನ ಪ್ರಪಂಚವಾದರೆ ಶರ್ಮರು 'ತಂಗಿ'ಯ ಪ್ರಪಂಚ.

> ಅವಳೇ ಬೇರೆ, ನೀನೇ ಬೇರೆ, ತಾಯಿ ಬೇರು
> ನಿಮಗೆ ಊಡಿದಂತಸ್ಸಾರ ಒಂದಾದರೂ,
> ಬಿಟ್ಟನೆಂದರೆ ಬಿಡದೆ ಕನಸು ಬೆಂಬತ್ತಿರಲು
> ಬಟ್ಟೆಕಳಚಿ ಮನೆ ಬಿಟ್ಟು ಅಡವಿ ಹೊಕ್ಕವಳು
> ಅವಳು ಒಡಲ ಅಷ್ಟು ಅಷ್ಟೂ ಕಳವಳ ಹೊತ್ತು,
> ನನ್ನ ಈ ಗುಡಿಸಲಿನಲ್ಲಿ ಅನುಮಾನವುಟ್ಟು
> ಇವೊತ್ತಿಗೂ ಉಳಿದವಳು ನೀನು

(ಅಕ್ಕ-ತಂಗಿ)

'ಅಕ್ಕ'ನಂತೆಯೇ ಇವಳದೂ ಈ 'ಚೆನ್ನ'ನೊಡನೆ ಸಾರ್ಥಕ ಸಂಬಂಧದ ಹುಡುಕಾಟ. ಶರ್ಮರು ಗಂಡು ಹೆಣ್ಣಿನ ಸಂಬಂಧವನ್ನು ಗಂಡಿನ ನೆಲೆಯಿಂದಲ್ಲದೆ ಹೆಣ್ಣಿನ ನೆಲೆಯಿಂದಲೂ ನೋಡಲು ಪ್ರಯತ್ನಿಸಿದ್ದಾರೆ.

> ನನ್ನ ಅನುಭವ
> ಹೇಳು, ಇಷ್ಟೊಂದು ವರ್ಷ ನನ್ನ ಜೊತೆಯಾಗಿ
> ಮೂರೂ ಆಗಿ ಸೋತು ಗೆಲ್ಲುತ್ತಲೇ ಮಾಗಿ
> ಉಳಿದವಳೇ

ಎಂದು ಆಪ್ತವಾಗಿ ಕೇಳಿದ್ದಾರೆ. ಆತ್ಮವಾಗಿ ಅವನೆದೆಯ ಶೋಧಿಸುವ ಅವಳ ಆಪ್ತರೂ ಅಭಿವ್ಯಕ್ತಿ ನೀಡಿದ್ದಾರೆ. ಹೆಣ್ಣು ಶರ್ಮರನ್ನು ವಿಸ್ಮಯವಾಗಿ, ಕಾಣುವ ಕೇಂದ್ರವಾಗಿ ಕಾಡುವ ಪ್ರಬಲಶಕ್ತವಾಗಿ, ಅರಿವಿನ ಸಂಗಾತಿಯಾಗಿ ಆವರಿಸಿದ್ದಾಳೆ. ಆರಂಭದಲ್ಲಿ ಗಂಡುಹೆಣ್ಣಿನ ಸಂಬಂಧ ಅವರಿಗೆ ಏಳುಸುತ್ತಿನ ಕೋಟೆ; ವೈಚಾರಿಕ ನೆಲೆಯಿಂದ ಅದನ್ನು ಬೇಧಿಸಲು ಅವರು ಹೊರಡುತ್ತಾರೆ. ಮಗುವಾಗಿ ಬಂದವನು ಮುಗಿಲುದ್ದ ನಿಂತು ನೂರು ರೂಪವ ತಾಳಿ ಎಡೆಬಿಡದೆ ಕಾಡುವ ಪರಿಯನ್ನು ಅವರು ಬೌದ್ಧಿಕವಾಗಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. ಮಾನವನನ್ನು ನಿರಂತರ ಕಾಡುವ ಒಂದು 'ಶಕ್ತಿ'ಯಾಗಿ ಶರ್ಮ ಈ 'ಸಂಬಂಧ'ವನ್ನು ಗುರ್ತಿಸುತ್ತಾರೆ. ಈ ಬೌದ್ಧಿಕ ಹುಡುಕಾಟ ಕಡೆಗೆ ಮಾಗಿದ ಪರಿಪಕ್ವ ನೆಲೆ ತಲುಪಿ ಕೃತಜ್ಞತೆಯ ರೂಪ ಪಡೆಯುತ್ತದೆ. ಬೌದ್ಧಿಕತೆಯ ಜೊತೆಗೆ ಹೃದಯವಂತಿಕೆಯೂ ಸೇರಿಕೊಳ್ಳುತ್ತದೆ.

> ಮಂಚದ ಬುಡದ ಕನ್ನಡಿಯ ನೆನಪಿಗೇ ನಡುಗಿ
> ಕಣ್ಣು ಮುಚ್ಚಿ ಮಲಗಿದ ಹೆಣ್ಣು ವಂದಿಸಿದ
> ಸ್ವಿಚ್ಚೊತ್ತಿ ಅವಳ ಮುಂಗೈಗಾಗಿ ತಡಕಿದ
> (ಅವಳ ಹುಟ್ಟುಹಬ್ಬದ ರಾತ್ರಿ -ಅವನು)
> ದಿಕ್ಕು ತಪ್ಪಿಸುವಂಥ ಕರಿ ನೀರ ಕತ್ತಲು
> . . . . . . . .

ಮೊಂಬತ್ತಿ ಹಿಡಿದು ಬಂದೆ, ನನ್ನೆದುರು ನಿಂತೆ
ಒಡೆದ ಹಡಗಿಗೆ ನೀನೆ ದಡದ ದೀಪದ ಮನೆ
ನಿನಗೇನು ತಾನೇ ಕೊಡಲಿ, ಹೇಳಿಬಿಡು ಹೆಣ್ಣೆ

(ನೀನೆ ದೀಪದ ಮನೆ)

ಹೆಣ್ಣು ಬದುಕಿಗೆ ಅರ್ಥಪೂರ್ಣತೆ ತಂದುಕೊಟ್ಟ ಸಂಗಾತಿ ಎಂಬ ಅರಿವಿನ ನೆಲೆ ಶರ್ಮರ ಕಾವ್ಯದ ಬೆಳವಣಿಗೆಯನ್ನು ಸೂಚಿಸುತ್ತದೆ.

'ಸೃಷ್ಟಿ'ಯ ರಹಸ್ಯದ ಒಂದು ನೆಲೆ ಗಂಡುಹೆಣ್ಣಿನ ಸಂಬಂಧದ ಮೂಲಕ ಅಭಿವ್ಯಕ್ತವಾದರೆ ಇದರ ಮತ್ತೊಂದು ಎಳೆ ಕಾವ್ಯಸೃಷ್ಟಿಗೂ ಸಂಬಂಧಿಸಿದಂತೆ ಶರ್ಮರ ಕಾವ್ಯದಲ್ಲಿ ಬೆಳೆದುಬಂದಿದೆ. ಆ ನೆಲೆಯ ಅಧ್ಯಯನ ಕುತೂಹಲ ಕಾರಿಯಾದುದು.

'ಹೇಸರಗತ್ತೆ' ಕವನಸಂಕಲನ ಶರ್ಮರ ಕಾವ್ಯಜೀವನದಲ್ಲಿ ಅತ್ಯಂತ ಮಹತ್ವದ ಕೃತಿ ಮಾತ್ರವಲ್ಲ, ಕನ್ನಡ ಸಂಸ್ಕೃತಿಗೆ ಸಂಬಂಧಿಸಿದಂತೆಯೇ ಗಮನಿಸಬೇಕಾದ ಮುಖ್ಯ ಕೃತಿ. ಡಿ.ಆರ್. ನಾಗರಾಜ್ ಗುರ್ತಿಸುವಂತೆ- 'ನೈಪಾಲ್ ತನ್ನ ಲೇಖನ, ಕಾದಂಬರಿಗಳಲ್ಲಿ ಪರದೇಶಿತ್ವ, ವಸಾಹತೀಕರಣ, ಸೃಜನಶೀಲತೆಗಳ ನಡುವಣ ಸಂಬಂಧದ ಒಂದು ಮುಖವನ್ನು ಶೋಧಿಸಿದ್ದರೆ, ಈ ರೀತಿಯ ಅನುಭವದ ಇನ್ನೊಂದು ಮುಖ ಇಲ್ಲಿ ಶೋಧಿತವಾಗಿದೆ. ನೆನಪುಗಳ ಸ್ವರೂಪ, ಸ್ಮೃತಿಯ ಸೃಜನ ಬಂದಿರುವ ರೂಪಕಗಳ ಸ್ಮೃತಿ ಬೇರಿನಲ್ಲಿ ಕ್ರೈಸ್ತ ಪರಿಭಾಷೆಯೇ ಹೆಚ್ಚು. ಕತ್ತೆ-ಕುದುರೆಗಳ ವಿಷಮಗತಿಯಲ್ಲಿ ಹುಟ್ಟುವ ವಿಲಕ್ಷಣ ಪ್ರಾಣಿಯ ಸ್ಥಿತಿಯನ್ನು ಶರ್ಮ ಈ ಕವಿತೆಯ 40-50ರ ಸಾಲುಗಳಲ್ಲಿ ಮನೋಜ್ಞವಾಗಿ ಹಿಡಿದಿಡುತ್ತಾರೆ. ಬೇರೆ ಕವಿಗಳಲ್ಲಿ ವಸಾಹತೀಕರಣ-ಪರದೇಶಿತ್ವದ ಕವಿತೆ ಅನುಭವದ ಬಗ್ಗೆ ರೋಷದ ಅಥವಾ ಹೃದಯವಿದ್ರಾವಕವಾದ ರಾಜಕೀಯ ಕವಿತೆ ಆಗಬಹುದಾಗಿದ್ದ ಅನುಭವ ಶರ್ಮರ ಕೃತಿಯಲ್ಲಿ ಆತ್ಮಚರಿತ್ರೆಯ ವಿಷಾದಾತ್ಮಕ ಅವಲೋಕನವಾಗಿದೆ. ಚರಿತ್ರೆಯ ವಸ್ತು ಆತ್ಮಚರಿತ್ರೆಯೊಳಗೆ ಇಳಿದು ಕವನವಾಗಿದೆ'[1].

ಅನಂತಮೂರ್ತಿ ಈ ಸಂಕಲನದ ಮಹತ್ವದಲ್ಲಿ ಕನ್ನಡ ಭಾಷೆಯ ಜೀರ್ಣಶಕ್ತಿಯು ಹಿನ್ನಲೆಯಲ್ಲಿ ಗುರ್ತಿಸುತ್ತಾರೆ. ಕಾದಂಬರಿ ಪ್ರಕಾರ ಬೊಹಿಮಿಯನ್ ಅಲೆದಾಟವನ್ನು ಅರಗಿಸಿಕೊಂಡಷ್ಟು ಸುಲಭವಾಗಿ ಕಾವ್ಯ ಅರಗಿಸಿಕೊಳ್ಳಲಾರದು. ಕಾವ್ಯ ಸ್ಥಳೀಯ; ಹುತ್ತಗಟ್ಟುವವರಿಗೆ ಮಾತ್ರ ಒಲಿಯುವ ಸಾಹಿತ್ಯಪ್ರಕಾರ. ಇಂಗ್ಲಿಷ್ ಭಾಷೆ ತನ್ನ ನಾಡಿನ ಗಡಿಯನ್ನು ಬಿಟ್ಟು ಅಂತರರಾಷ್ಟ್ರೀಯವಾದದ್ದು ಭಾಷೆಯ ಶಕ್ತಿಯಿಂದ ಮಾತ್ರವಲ್ಲ, ಸಾಮ್ರಾಜ್ಯಶಾಹೀ ರಾಜಕೀಯದಿಂದ. ಈಗ ಅದು ಎಲ್ಲ ಅನುಭವಗಳಿಗೂ ಉದಾರವಾಗಿ ಎಡೆಮಾಡಿಕೊಡುವಂತೆ ಕಂಡರೂ, ಗರತಿಯಂತೆ ಅದು ಒಲಿಯುವುದು ಇನ್ನೂ ಸ್ಥಳದವರಿಗೆ-ಅಮೆರಿಕನ್ನರಿಗೆ, ಬ್ರಿಟಿಷರಿಗೆ. ಹಾಗಾದರೆ ಕನ್ನಡ ಪ್ರಾಂತೀಯವಾಗಿಯೇ ಉಳಿಯಬೇಕೆ? ಪರಸ್ಥಳದ ಅನುಭವಗಳನ್ನು ಅದು ಜೀರ್ಣಿಸಿಕೊಳ್ಳಲಾರದೇ? ಈ ಸವಾಲನ್ನು ಕನ್ನಡ ಕಾವ್ಯದಲ್ಲಿ ಎದುರಿಸಿದ ಇಬ್ಬರು ಮುಖ್ಯರೆಂದರೆ ರಾಮಾನುಜನ್ ಮತ್ತು ರಾಮಚಂದ್ರ ಶರ್ಮ. ಕವಿಗಿಂತ ಕಣ್ಣಿನ ಪಟುತ್ವವನ್ನೇ ಹೆಚ್ಚಾಗಿ ಬಳಸುವ ಮುಖೇನ ಕನ್ನಡ ಭಾಷೆಯ ಜಾಯಮಾನದ ಮಿತಿಗಳನ್ನು ಮೀರುವ ಕೆಲಸ ಈ ಕವಿಗಳಲ್ಲಿ ನಡೆದಿದೆ ಎಂಬುದು ಗಮನಿಸಬೇಕಾದ ಅಂಶ.

'ಹೇಸರಗತ್ತೆ'-ಪರದೇಶಿತನದ ಪ್ರಶ್ನೆಗೆ, ಸೃಜನಶೀಲವಾಗಲು ಸಾಧ್ಯವಾಗದ ಸ್ಥಿತಿಗೆ ಅತ್ಯುತ್ತಮ ಪ್ರತಿಮೆ. ಶರ್ಮರ ಕಾವ್ಯದಲ್ಲಿ ಇಂಥ ಅನೇಕ ಸಮರ್ಥ ಪ್ರತಿಮೆಗಳನ್ನು ನಾವು ಕಾಣುತ್ತೇವೆ. ಶರ್ಮ ಪ್ರತಿಮೆಗಳ ಮೂಲಕ ಮಾತನಾಡುವ ಕವಿ. ಅವರದು ಪ್ರತಿಯಾನಿಷ್ಠ ಅಭಿವ್ಯಕ್ತಿಯ ರೀತಿ ಆರಂಭದಲ್ಲಿ ವಾಚಾಳಿತನ ಎದ್ದು ಕಂಡರೂ ಕ್ರಮೇಣ ಶರ್ಮರ ಕಾವ್ಯದಲ್ಲಿ ಮಾತುಗಳ ದುಂದುವ್ಯಯ ಕಾಣಿಸುವುದಿಲ್ಲ; ಪ್ರತಿಮೆಗಳ ಹೆಣಿಗೆಗಳ ಮೂಲಕವೇ ಸಂಕೀರ್ಣ ಅನುಭವವನ್ನು ಅವರು ತಂದುಕೊಡುತ್ತಾರೆ. ಶರ್ಮರ ಕಾವ್ಯರೀತಿಗೆ ಅತ್ಯುತ್ತಮ ಮಾದರಿ - '1969ರ ಕ್ರಿಸ್‌ಮಸ್‌ಗೆ ಮೂರು ಪ್ರತಿಮೆಗಳು' ಕವಿತೆ. ಕಾಮ, ಕ್ರೌರ್ಯ, ಹಿಂಸೆ, ಅಮಾನವೀಯತೆ, ದಬ್ಬಾಳಿಕೆ- ಹೀಗೆ ಅನೇಕ ಸಂಗತಿಗಳು ಇಲ್ಲಿ ಪರಿಣಾಮಕಾರಿಯಾಗಿ ಮೂರು ಪ್ರತಿಮೆಗಳ ಮೂಲಕ ಅಭಿವ್ಯಕ್ತವಾಗಿರುವ ರೀತಿ ಶರ್ಮರಿಗೇ ವಿಶಿಷ್ಟವೆನ್ನ ಬಹುದಾದ ಅನನ್ಯ ರೀತಿಯದು.

ಕಾವ್ಯದ ಅಸಲುಕಸುಬಿನ ಬಗ್ಗೆ ಶರ್ಮರಿಗೆ ಸದಾ ಕಾಳಜಿ. ಅವರು ಇತ್ತೀಚೆಗೆ ರಚಿಸಿರುವ ಸಾನೆಟ್ಟುಗಳಂತೂ ಅವರ ಕಲೆಗಾರಿಕೆಯ ಶಕ್ತಿಯನ್ನು ಸಮರ್ಥವಾಗಿ ಪ್ರತಿನಿಧಿಸುತ್ತದೆ. ಶರ್ಮರ ಕಾವ್ಯಾಧ್ಯಯನ ಕನ್ನಡ ಕಾವ್ಯ ಪರಂಪರೆಯಲ್ಲಿ ಭಿನ್ನ ಮಾದರಿಯ, ಪ್ರಧಾನಧಾರೆಗೆ ಹೊರತಾದ ವಿಶಿಷ್ಟ ರೀತಿಯ ಕಾವ್ಯದ ಸ್ವರೂಪವನ್ನು ನಮಗೆ ಪರಿಚಯ ಮಾಡಿ ಕೊಡುತ್ತದೆ.

### 3

ಕನ್ನಡ ಕಥಾಸಾಹಿತ್ಯದಲ್ಲಿ ನವ್ಯಸಂವೇದನೆಯನ್ನು ತಂದ ಮೊದಲಿಗರಲ್ಲಿ ಶರ್ಮರೂ ಒಬ್ಬರೆಂದು ಗುರುತಿಸಲಾಗಿದೆ. ಶರ್ಮರು ಮೊದಲ ಕತೆ ಬರೆದದ್ದು 1950ರಲ್ಲಿ, ಕಡೆಯ ಕತೆ 1984ರಲ್ಲಿ. ನಾಲ್ಕು ಸಂಕಲನಗಳನ್ನು ಅವರು ಪ್ರಕಟಿಸಿದ್ದಾರೆ. ಅವರ ಸಮಗ್ರಕತೆಗಳ ಸಂಕಲನ ಸಹ ಪ್ರಕಟವಾಗಿದೆ. ಸಮಗ್ರತೆಗಳ ಸಂಕಲನದಲ್ಲಿ 38 ಕತೆಗಳು ಸಂಕಲನಗಳಾಗಿವೆ. ಅವರ ಕಥಾ ಸಂಕಲನಗಳಲ್ಲಿ ಒಟ್ಟು 41 ಕತೆಗಳಿವೆ. ಸಮಗ್ರದಲ್ಲಿ 50 ಕಥೆಗಳು ಬಿಟ್ಟುಹೋಗಿವೆ. ಸುಮಾರು ಮೂರು ದಶಕಗಳ ಕಾಲ ಕಥಾರಚನೆ ಮಾಡಿದ ಶರ್ಮರು ಎಂಬತ್ತರ ದಶಕದ ನಂತರ ಈ ಪ್ರಕಾರವನ್ನು ಗಂಭೀರವಾಗಿ ಸ್ವೀಕರಿಸಿದಂತೆ ಕಾಣಿಸುವುದಿಲ್ಲ. ಕಾವ್ಯ ಪ್ರೇಮ ಶರ್ಮರ ಗಾಢನಿಷ್ಠೆ-ಕಾವ್ಯ ಪ್ರಕಾರ ನಂತರ ಮೀಸಲಾದಂತೆ ತೋರುತ್ತದೆ. ಹಾಗೆ ನೋಡಿದರೆ ಅವರು ತಮ್ಮ ಕತೆಗಳಲ್ಲಿ ಬರೆದದ್ದು ಕವಿತೆಗಳನ್ನೇ. ಕಾವ್ಯದ ರಚನಾ ವಿಧಾನಗಳನ್ನು ಸಣ್ಣಕತೆಯ ಪ್ರಕಾರದಲ್ಲಿ ಸಮರ್ಥವಾಗಿ ಶರ್ಮರು ಬಳಸಿಕೊಂಡಿರುವುದನ್ನು ಕನ್ನಡ ವಿಮರ್ಶೆ ಗುರ್ತಿಸಿದೆ.

ಶರ್ಮರು ಕತೆಗಳನ್ನು ಬರೆಯಲಾರಂಭಿಸಿದ್ದು ಪ್ರಗತಿಶೀಲ ಚಳುವಳಿ ಪ್ರಬಲವಾಗಿದ್ದ ಕಾಲದಲ್ಲಿ; ನವ್ಯ ಸಂವೇದನೆ ಕನ್ನಡ ಸಾಹಿತ್ಯವನ್ನು ಪ್ರವೇಶಿಸುತ್ತಿದ್ದ ಸಂದರ್ಭದಲ್ಲಿ ಕಾವ್ಯರಚನೆಯಲ್ಲಿ ಹೇಗೂ ಹಾಗೇ ಇಲ್ಲಿಯೂ ಶರ್ಮರು ಪ್ರಗತಿಶೀಲ-ನವ್ಯದ ದ್ವಂದ್ವದ ಸ್ಥಿತಿಯಲ್ಲಿ ಕತೆಗಳನ್ನು ಬರೆದಿದ್ದಾರೆ. ಹೀಗಾಗಿ ಪ್ರಯೋಗಶೀಲ ಮನಸ್ಸೊಂದು ಕತೆಯ ದೃಷ್ಟಿಯಲ್ಲಿ ಗಾಢವಾಗಿ ತೊಡಗಿಕೊಂಡಿದೆ. ಗಿರಡ್ಡಿ ಗೋವಿಂದರಾಜ ಅವರು ಹೇಳುವಂತೆ ಅವರ ಆರಂಭದ ಕತೆಗಳು- 'ಉತ್ಸಾಹಶೀಲ ತರುಣನೊಬ್ಬನ ಹಲವು ಬಗೆಯ ಪ್ರಯೋಗಗಳಂತೆ ತೋರುತ್ತವೆಯೇ ಹೊರತು, ಪರಿಣಿತ ಕಲಾವಿದನ ಕಾಣ್ಕೆ ಯಿಲ್ಲ. ಅದಮ್ಯವಾದ ಉತ್ಸಾಹವೊಂದು ಮಾತ್ರ ಕಥೆಗಳ ತುಂಬ ಹರಿದಾಡಿ ಮುಟ್ಟಿದಲ್ಲೆಲ್ಲ ಅದರ ಅನುಭವವಾಗುತ್ತದೆ'.

'ಸೆರಗಿನ ಕೆಂಡ' ಶರ್ಮರ ಪ್ರಾತಿನಿಧಿಕ ಕತೆಗಳಲ್ಲೊಂದು. ಅದರ ಕಥನ ಕಲೆಯ ಸ್ವರೂಪವನ್ನು ಈ ಕತೆ ನಮಗೆ ಪರಿಚಯಿಸುತ್ತದೆ. ಕತೆಯ ನಾಯಕಿ

ಮೀನಾಕ್ಷಿ ಮದುವೆಯಾದವಳಾದರೂ ಪ್ರೀತಿಸಿದವನನ್ನು ಬಿಟ್ಟಿರಲಾರದೆ ಆತನೊಂದಿಗೆ ಓಡಿಹೋಗಿ ದೂರದೂರಿನಲ್ಲಿ ನವದಂಪತಿಗಳಂತೆ ಸಂಸಾರ ಮಾಡಿಕೊಂಡು ಸುಖವಾಗಿರುತ್ತಾರೆ. ಹಿಂದಿನ ಘಟನೆಯನ್ನು ಆಕೆ ಸಂಪೂರ್ಣ ಮರೆತು ಹೊಸವ್ಯಕ್ತಿಯಂತೆ ಬದುಕುತ್ತಿರುತ್ತಾಳೆ. ಆದರೆ ಭೂತ ವರ್ತಮಾನ ದಲ್ಲಿ ಮಾತ್ರ ಅವತರಿಸುತ್ತದೆ. ಪಾಪಭೀತಿ ಆವರಿಸುತ್ತದೆ. ಸುಪ್ತಚಿತ್ರದಲ್ಲಿ ಬಚ್ಚಿಟ್ಟುಕೊಂಡಿದ್ದ ಪರಂಪರೆಯ ನೈತಿಕ ಕಲ್ಪನೆ ಈಗ ಪಾಪಪ್ರಜ್ಞೆಯಾಗಿ ಕಾಡಲಾರಂಭಿಸುತ್ತದೆ. ಮಗಳ ಭವಿಷ್ಯದ ಬಗ್ಗೆ ಆತಂಕವುಂಟಾಗುತ್ತದೆ. ಮನಸ್ಸು ಈ ಭೂತ-ವರ್ತಮಾನ ಭವಿಷ್ಯಗಳ ತುಯ್ತದಲ್ಲಿ ಸ್ಥಿಮಿತ ಕಳೆದು ಗೊಳ್ಳುತ್ತದೆ. ಬದುಕು ಸೆರಗಿನ ಕೆಂಡವಾಗುತ್ತದೆ. ಶರ್ಮರು ಈ ಕತೆಯನ್ನು ನಿರೂಪಿಸುವ ಕ್ರಮ ಅವರ ಕಥನ ಕಲೆಯ ಸ್ವರೂಪವನ್ನು ಅತ್ಯಂತ ಸಮರ್ಥ ವಾಗಿ ಪ್ರತಿನಿಧಿಸುತ್ತದೆ. 'ಯಾರು ಹಿತವರು ನಿನಗೆ', 'ಬೆಳಗಾಯಿತು', 'ಕೊಡತಿಹುಳ', 'ಐದನೆಯವನು'-ಮೊದಲಾದವು ಉತ್ತಮ ಕತೆಗಳ ಸಾಲಿಗೆ ಸೇರುವಂಥವು. ಕನ್ನಡ ವಿಮರ್ಶೆ ನಾಲ್ಕು ಕಥಾಸಂಕಲನಗಳನ್ನು ಪ್ರಕಟಿಸಿರುವ ಶರ್ಮರ ಕಥಾ ಸಾಹಿತ್ಯದ ಬಗ್ಗೆ ಹೆಚ್ಚು ಚರ್ಚಿಸಿದಂತಿಲ್ಲ.

### 4

ಶರ್ಮ ತಮ್ಮ ಸಾಹಿತ್ಯಜೀವನದ ಆರಂಭದಲ್ಲಿ ಕತೆಗಳಂತೆಯೇ ನಾಟಕಗಳನ್ನು ಬರೆದರು. ಐದು ನಾಟಕಗಳನ್ನು -ಬಾಳಸಂಜೆ, ನೀಲಕಾಗದ, ಸೆರಗಿನ ಕೆಂಡ, ವೈತರಣಿ, ನೆರಳು-ಬರೆದಿದ್ದಾರೆ. ಈ ಎಲ್ಲಾ ನಾಟಕಗಳೂ 1960ರ ವೇಳೆಗೇ ರಚಿತವಾಗಿರುವಂಥವು. ಅಂದರೆ ಅವರ ಮೊದಲ ನಾಟಕ ಬಾಳಸಂಜೆ ಪ್ರಕಟವಾದದ್ದು 1950ರಲ್ಲಿ ; ಕಡೆಯ ನಾಟಕ ನೆರಳು ಪ್ರಕಟ ವಾದದ್ದು 1957ರಲ್ಲಿ. ಈ ಅವಧಿಯಲ್ಲಿ ಅವರು ಐದು ನಾಟಕಗಳನ್ನು ರಚಿಸಿದ್ದಾರೆ. ನಂತರ ಶರ್ಮ ನಾಟಕ ರಚನೆಗೆ ಕೈಹಾಕಲಿಲ್ಲ.

'ಬಾಳಸಂಜೆ' ಭಾರತದ ಮೊದಲ ಸ್ವಾತಂತ್ರ್ಯ ಸಂಗ್ರಾಮವೆಂದು ಹೆಸರಾಗಿ ರುವ ಸಿಪಾಯಿದಂಗೆಯ ಕೇಂದ್ರವ್ಯಕ್ತಿ ಪೇಶ್ವೆ ನಾನಾಸಾಹೇಬನ ಅಂತ್ಯವನ್ನು ಕುರಿತ ಚಿಕ್ಕನಾಟಕ. 'ವೈತರಣಿ' ಗೀತನಾಟಕ, 'ಸೆರಗಿನ ಕೆಂಡ' ರೇಡಿಯೋ ನಾಟಕ.

ಶರ್ಮರ ನಾಟಕಗಳನ್ನು ಕುರಿತು ಕೆ.ವಿ.ನಾರಾಯಣ ಹೇಳಿರುವ ಮಾತುಗಳು ಅಧ್ಯಯನ ಯೋಗ್ಯವಾಗಿದೆ: "ಈಗಿನ ರಂಗಭೂಮಿಯ ಮುಖ್ಯ ಆಸಕ್ತಿ, ಅವಧಾರಣೆಗಳು ಸಾಮಾಜಿಕ ಮನುಷ್ಯನನ್ನು ಹುಡುಕುವುದು. ಸಮಾಜದ ಒಂದು ಮುಖ್ಯ ಘಟಕವಾದ ಕುಟುಂಬ ಹಾಗೂ ವ್ಯಕ್ತಿಯ ಸಂಬಂಧಗಳು ಬಹುಮಟ್ಟಿಗೆ ಗೌಣವಾಗಿದೆ. ಈ ಬದಲಾವಣೆ ಯುಕ್ತವೋ ಅಲ್ಲವೋ ಎಂಬ ಪ್ರಶ್ನೆ ನಮಗಲ್ಲಿ ಮುಖ್ಯವಲ್ಲ. ಆದರೆ ಶರ್ಮರ ಈ ನಾಟಕಗಳು ವ್ಯಕ್ತಿಯನ್ನು ಕುಟುಂಬದ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುತ್ತವೆ ಎಂಬುದು ನನಗೆ ಗಮನಾರ್ಹವಾಗಿ ಕಂಡಿದೆ. ಸಾಮಾಜಿಕ ಎನ್ನಬಹುದಾದ ಸಮಸ್ಯೆಗಳ ಹಿನ್ನಲೆಯಲ್ಲಿ ಕುಟುಂಬದ ಸದಸ್ಯನಾಗಿ ವ್ಯಕ್ತಿಯನ್ನು ಚಿತ್ರಿಸು ತ್ತಿದ್ದ ಕೈಲಾಸಂ ಅವರ ನಾಟಕಗಳಿಗೂ, ವ್ಯಕ್ತಿಯ ಏಕಾಕಿತನವನ್ನು, ಅಸ್ತಿತ್ವದ ಅಧಿಕೃತತೆಯನ್ನು ಕುಟುಂಬ ವಿಘಟನೆಯ ಮೂಲಕ ಚಿತ್ರಿಸಿದ ಲಂಕೇಶರ 'ಟಿ ಪ್ರಸನ್ನನ, ಗೃಹಸ್ಥಾಶ್ರಮ', 'ನನ್ನ ತಂಗಿಗೊಂದು ಗಂಡು ಕೊಡಿ' ಮುಂತಾದ ನಾಟಕಗಳಿಗೂ ನಡುವಣ ಪರಿವರ್ತನೆಯ ಹಂತವನ್ನು ರಾಮಚಂದ್ರಶರ್ಮರ ಈ ನಾಟಕಗಳು ಪ್ರನಿಧಿಸುತ್ತದೆ'. ಕನ್ನಡ ನಾಟಕ ಚರಿತ್ರೆಯ ಒಂದು ಸಂಕ್ರಮಣ ಕಾಲದ ಪ್ರಯೋಗಗಳನ್ನಾಗಿ ಶರ್ಮರ ನಾಟಕಗಳನ್ನು ನಾರಾಯಣ ವಿಶ್ಲೇಷಿಸುತ್ತಾರೆ. ಜೊತೆಗೆ ನಾರಾಯಣ ಮತ್ತೊಂದು ಮಹತ್ವದ ಅಂಶವನ್ನು ಗುರ್ತಿಸುತ್ತಾರೆ. ನಮ್ಮ ಸ್ತ್ರೀಕೇಂದ್ರಿತ ಕುಟುಂಬದಲ್ಲಿ ಆಕೆ ನಿಧಾನವಾಗಿ ಹೆಜ್ಜೆ ಇಡುತ್ತಿದ್ದ ಹೊಸ ಪರಿಸ್ಥಿತಿಯ, ಸ್ವಾತಂತ್ರ್ಯದ ಬಯಕೆಯ ಅನುಭವದಲ್ಲಿ ಎದುರಿಸುತ್ತಿದ್ದ ಇಕ್ಕಟ್ಟುಗಳನ್ನು ನಾಟಕಕಾರರು ಮಂಡಿಸಿದ್ದಾರೆ. 'ಸೆರಗಿನ ಕೆಂಡ' ಮತ್ತು 'ನೆರಳು' ನಾಟಕಗಳಲ್ಲಿ ಪಾತ್ರಗಳ ಮನೋವೈಕಲ್ಯಕ್ಕೆ ವ್ಯಕ್ತಿಗತ ಕಾರಣಗಳಷ್ಟೇ ಬಲವಾದ ಸಾಮಾಜಿಕ ಕಾರಣಗಳೂ ಇವೆ. ಜಾಗತಿಕ ನೆಲೆಯಲ್ಲಿ ಹೆನ್ರಿಕ್ ಇಬ್ಸೆನ್, ಆರ್ಥರ್ ಮಿಲ್ಲರ್, ಟೆನಿಸಿ ವಿಲಿಯಂಸ್ ಮುಂತಾದವರೂ, ರಾಷ್ಟ್ರೀಯ ನಾಟಕ ಸಾಹಿತ್ಯದಲ್ಲಿ ಮೋಹನ್ ರಾಕೇಶ್ ಮತ್ತು ಸುರೇಂದ್ರಶರ್ಮ ಅವರು ತಮ್ಮ ನಾಟಕಗಳ ಮೂಲಕ ರೂಪಿಸಿದ ಹೆಂಗಸಿನ ವ್ಯಾಖ್ಯಾನಗಳೂ ಇದೇ ಮಾದರಿಯನ್ನಲ್ಲವೆ ಎಂಬುದನ್ನು ಗಮನಿಸ ಬೇಕಾಗಿದೆ. ಈ ಬಗೆಯ ಚಿತ್ರಣಕ್ಕೆ ರಾಮಚಂದ್ರಶರ್ಮರ ನಾಟಕಗಳನ್ನು ಬಿಟ್ಟರೆ ಕನ್ನಡದಲ್ಲಿ ತಕ್ಕ ಮಾದರಿಗಳಿಲ್ಲ ಎಂಬ ನಾರಾಯಣರ ಅಭಿಪ್ರಾಯ ಗಮನಿಸ ಬೇಕಾದಂಥದು.

ಶರ್ಮರ ನಾಟಕಗಳ ಬಗ್ಗೆ ಅವರ ಕತೆಗಳಂತೆಯೇ ಹೆಚ್ಚು ಚರ್ಚೆ ನಡೆದಿಲ್ಲ. ಆದರೆ ಕನ್ನಡ ನಾಟಕ ಚರಿತ್ರೆಯಲ್ಲಿ ಶರ್ಮರ ಪ್ರಯೋಗಗಳು ಗಮನಿಸಬೇಕಾದಂಥವು ಎಂಬುದನ್ನು ನಾವು ಮರೆಯುವಂತಿಲ್ಲ.

### 5

ಮೂವತ್ತೊಂಬತ್ತು ಕವಿಗಳ ನೂರು ಕವಿತೆಗಳನ್ನು 'ಈ ಶತಮಾನದ ನೂರು ಇಂಗ್ಲಿಷ್ ಕವನಗಳು' ಎಂಬ ಹೆಸರಿನಲ್ಲಿ ಶರ್ಮರು ಅನುವಾದಿಸಿ ಕೊಟ್ಟಿದ್ದಾರೆ. ಯೇಟ್ಸ್, ಎಲಿಯಟ್, ಪೌಂಡ್, ಆಡೆನ್, ನುಕಿನೀಸ್, ಸ್ಪಂಡರ್, ಡಿಲಸ್ ಥಾಮಸ್, ಲವೇನ್, ಲಾರ್ಕೀನ್, ಪ್ಲ್ಯಾತ್, ಮಿಚೆರ್- ಹೀಗೆ ಈ ಶತಮಾನದ ಭಿನ್ನಮಾದರಿಯ ಕವಿಗಳ ಕವಿತೆಗಳನ್ನು ಶರ್ಮ ಕನ್ನಡಕ್ಕೆ ಅತ್ಯಂತ ಸೊಗಸಾಗಿ ಅನುವಾದಿಸಿ ಕೊಟ್ಟಿದ್ದಾರೆ. ಅನುವಾದದ ಕಷ್ಟ ಶರ್ಮರಿಗೆ ಗೊತ್ತು, ಆದ್ದರಿಂದಲೇ ಅವರು ಹೇಳುತ್ತಾರೆ. 'ಒಂದು ಭಾಷೆಯಿಂದ ಕವನಗಳನ್ನು ಬೇರೊಂದು ಭಾಷೆಗೆ-ಅದರಲ್ಲೂ ಸಂಸ್ಕೃತಿಯ ದೃಷ್ಟಿಯಿಂದ ವ್ಯತ್ಯಾಸವಾಗಿರುವ ಭಾಷೆಗೆ-ತರುವವನಿಗೆ ಇರಬೇಕಾದ ಉದ್ದೇಶ ಮನೋಧರ್ಮಗಳ ಬಗೆಗೆ, ಅವನು ಹಿಡಿಯಬೇಕಾದ ದಾರಿಯ ಬಗೆಗೆ ಭಿನ್ನಾಭಿಪ್ರಾಯಗಳು ಸಾಧ್ಯ. ಈ ಪ್ರಯತ್ನದ ಬಗೆಗೆ ನಾನು ಹೇಳಬಯಸು ವುದು ಇಷ್ಟು: ಇವು ನೇರ ಅನುವಾದಗಳಲ್ಲ, ರೂಪಾಂತರಗಳು. ಒಂದು ದೃಷ್ಟಿಯಲ್ಲಿ ಪುನರ್‌ಸೃಷ್ಟಿಗಳೆಂದರೂ ತಪ್ಪಾಗದೇನೋ. ನನಗೆ ಹೊಳೆದು ಇವನ್ನು ನಾನು ಕನ್ನಡದಲ್ಲಿ ಬರೆದಿದ್ದರೆ ಹೇಗೆ ಬರೆಯುತ್ತಿದ್ದೆ ಎಂದು ಅನೇಕ ಸಲ ಕೇಳಿಕೊಂಡ ಪ್ರಶ್ನೆಗೆ ಇವು ಉತ್ತರರೂಪವಾಗಿ ಬಂದಿವೆಯನ್ನಬಹುದು. ಇಲ್ಲಿರುವ ರೂಪಾಂತರಗಳು ಕನ್ನಡದ ಪದ್ಯಗಳಾಗಿ ನಿಲ್ಲಬಲ್ಲವೇ ಅನ್ನುವ ಪ್ರಶ್ನೆಯದೇ ಸಮಂಜಸವಾದದ್ದು'

ಈ ಅನುವಾದಗಳ ಜೊತೆಗೆ 'ಕಾವ್ಯದ ಅನುವಾದ-ಒಂದು ಚಿಂತನೆ' ಎಂಬ ಸೊಗಸಾದ ಲೇಖನವೊಂದನ್ನು ಶರ್ಮ ನೀಡುವುದರ ಮೂಲಕ ಭಾಷಾಂತರದ ಸಮಸ್ಯೆಗಳನ್ನು ಸಮರ್ಥವಾಗಿ ವಿವರಿಸಿದ್ದಾರೆ; ತಮ್ಮ ಪುನಃ ಸೃಷ್ಟಿಯ ಕೆಲಸದಲ್ಲಿ ಅದನ್ನು ಎದುರಿಸಿದ್ದಾರೆ. ಕಾವ್ಯವನ್ನು ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ತರುವಾಗ ಯಾವುದು ಕೈಗೆ ದಕ್ಕದೆ ನುಣುಚಿಕೊಳ್ಳುತ್ತದೋ ಅದೇ ಕಾವ್ಯ ಎನ್ನುವ ಮಾತಿದೆ. ಇಂಥದೇ ಇನ್ನೊಂದು ಮಾತು: ಮೂರ್ತಿರಾಯರು ಹೇಳುವಂಥದು-ಭಾಷಾಂತರ ಮಾಡು

ವಾಗ ಯಾವುದು ಬಂದು ಸೇರಿಕೊಳ್ಳುತ್ತದೋ ಅದೇ ಕಾವ್ಯಗುಣ. ಈ ಎರಡೂ ಮಾತುಗಳು ಕೇವಲ ಚತುರೋಕ್ತಿಗಳಲ್ಲ. ಭಾಷಾಂತರದ ಸಮಸ್ಯೆಯನ್ನು ಸೂಚಿಸುವಂಥವು. ಪೀಯರಿ ಲೇರೀಸ್ ಹೇಳುವಂತೆ-ಕಾವ್ಯವನ್ನು ಭಾಷಾಂತರ ಮಾಡುವುದು ಅಸಾಧ್ಯ; ಹಾಗೇ ಭಾಷಾಂತರ ಮಾಡದೇ ಇರುವುದೂ ಅಸಾಧ್ಯ. ಒಂದು ಭಾಷೆಯ ಆಚಾರ್ಯಕೃತಿಗಳ ಇನ್ನೊಂದು ಭಾಷೆಯ ಜನರ ಸ್ವತ್ತಾಗುವುದು ಹೇಗೆ? ಭಾಷೆಯ ಬೆಳವಣಿಗೆಯ ದೃಷ್ಟಿಯಿಂದಲೂ ಅನುವಾದಗಳು ಅನಿವಾರ್ಯ - ಪರಕೀಯವಾದದ್ದನ್ನು ಜೀರ್ಣಿಸಿಕೊಂಡು ಬೆಳೆಯುವ ದೃಷ್ಟಿಯಿಂದ.

ಶರ್ಮರು ಅನ್ಯಭಾಷೆಯ ಅತ್ಯುತ್ತಮ ಮನಸ್ಸುಗಳನ್ನು ಕನ್ನಡಕ್ಕೆ ತರುವುದರ ಮೂಲಕ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಅನುವಾದಕ್ಕೆ ಸಂಬಂಧಿಸಿದಂತೆ ಶರ್ಮರು ಮಾಡಿರುವ ಮತ್ತೊಂದು ಮುಖ್ಯ ಕೆಲಸ-ಕನ್ನಡದಿಂದ ಇಂಗ್ಲೀಷ್‌ಗೆ ಭಾಷಾಂತರ ಮಾಡಿರುವುದು. ಕನ್ನಡದ ಸಂದರ್ಭವನ್ನು ಇದು ಅಗತ್ಯ ಆಗಬೇಕಾಗಿರುವ ಕೆಲಸ. ಅನ್ಯಭಾಷೆಯ ಕೃತಿಗಳನ್ನು ಕನ್ನಡಕ್ಕೆ ತರುವುದು ಎಷ್ಟು ಮುಖ್ಯವೋ, ಅಷ್ಟೇ ಅಥವಾ ಅದಕ್ಕಿಂತಲೂ ಮುಖ್ಯವಾದದ್ದು ಕನ್ನಡದ ಪ್ರತಿಭಾವಂತ ಮನಸ್ಸುಗಳನ್ನು ಹೊರಜಗತ್ತಿಗೆ ಪರಿಚಯಿಸುವಂಥದು. ಶರ್ಮ ಈ ಜವಾಬ್ದಾರಿಯನ್ನು ಒಪ್ಪಿಕೊಂಡು ಅತ್ಯುತ್ತಮ ಕೆಲಸ ಮಾಡಿದ್ದಾರೆ. ಮಾಸ್ತಿ, ಚಿತ್ತಾಲರ ಕಥೆಗಳನ್ನು, ಕುವೆಂಪು ಹಾಗೂ ಮಾಸ್ತಿಯವರ ಕಾದಂಬರಿಗಳನ್ನು ಪತ್ನಿ ಪದ್ಮರ ಸಹಕಾರದೊಂದಿಗೆ ಸೊಗಸಾಗಿ, ಹದಗೆಡದಂತೆ ಇಂಗ್ಲಿಷಿಗೆ ಅನುವಾದಿಸಿದ್ದಾರೆ. ಈಗ ಕೆ.ಎಸ್. ನರಸಿಂಹಸ್ವಾಮಿಯವರ ಕವಿತೆಗಳನ್ನು ಅನುವಾದಿಸುತ್ತಿದ್ದಾರೆ.

6

ಶರ್ಮ ಕಾವ್ಯ, ಕತೆ, ನಾಟಕ, ಚಿಂತನೆ - ಹೀಗೆ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ಕೆಲಸ ಮಾಡಿದ್ದರೂ ಅವರ ಕಾವ್ಯಶ್ರದ್ಧೆ ಅನನ್ಯ. ಕಾವ್ಯ ರಚನೆಯಲ್ಲಿ ತಮ್ಮನ್ನು ಅತ್ಯಂತ ತೀವ್ರವಾಗಿ ತೊಡಗಿಸಿಕೊಂಡು, ಕಾವ್ಯದ ಅಸಲು ಕಸುಬಿನ ಬಗ್ಗೆ ಸದಾ ಚಿಂತಿಸುವ ಶರ್ಮರು ಕನ್ನಡ ಕಾವ್ಯಚರಿತ್ರೆಗೆ ಭಿನ್ನಮಾದರಿಯನ್ನು, ಕನ್ನಡ ಭಾಷೆಗೆ ಜೀರ್ಣಾಗ್ನಿ ಶಕ್ತಿಯನ್ನು ತಂದುಕೊಟ್ಟ ವಿಶಿಷ್ಟ ಪ್ರತಿಭೆಗಳಲ್ಲಿ ಒಬ್ಬರು.

❑

1. ನವ್ಯಕಾವ್ಯ ಪ್ರಯೋಗ, ಕೀರ್ತಿ ಕುರ್ತಕೋಟಿ ಪುಟ 26 ಮನೋಹರ ಗ್ರಂಥಮಾಲೆ, ಧಾರವಾಡ 1975
2. 'ಅರವತ್ತು ಕವನಗಳು' ರಾಮಚಂದ್ರಶರ್ಮ ಪುಟiii ಮುನ್ನುಡಿ ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು-1983.*
3. ಮುನ್ನುಡಿ ಸಪ್ತಪದಿ, ರಾಮಚಂದ್ರಶರ್ಮ, ಕನ್ನಡಸಂಘ, ಕ್ರೈಸ್ಟ್ ಕಾಲೇಜು, 1996.
4. ಮುನ್ನುಡಿ, ಅರವತ್ತು ಕವನಗಳು, ರಾಮಚಂದ್ರಶರ್ಮ, ಪ್ರಿಂಟರ್ಸ್ ಪ್ರಕಾಶನ, 1983.

## ಜಿ.ಎಸ್. ಶಿವರುದ್ರಪ್ಪ

ಕೆ.ವಿ. ನಾರಾಯಣ

ಫೆಬ್ರುವರಿ 7, 1926ರಂದು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದಲ್ಲಿ ಹುಟ್ಟಿದ ಜಿ.ಎಸ್. ಶಿವರುದ್ರಪ್ಪ (ಜೀಯೆಸ್ಸೆಸ್)ನಾಡನ್ನು ಸುತ್ತುತ್ತಲೇ ಇದ್ದಾರೆ. ಪ್ರವಾಸ ಪ್ರೀತಿಯ ಜಿಯೆಸ್ಸೆಸ್ ಈ ಸುತ್ತುವಿಕೆಯಿಂದ ಬಹುಶ್ರುತತೆಯನ್ನು, ಸಮಚಿತ್ತವನ್ನು, ಜನಸಂಪರ್ಕವನ್ನು ಪಡೆದಿದ್ದಾರೆ. ಸೃಜನ, ವಿಮರ್ಶೆ, ಮೀಮಾಂಸೆ, ಅಧ್ಯಯನ, ಅಧ್ಯಾಪನ, ಆಡಳಿತ, ಸಂಘಟನೆ-ಈ ಮುಂತಾದ ಸಾಂಸ್ಕೃತಿಕ ನೆಲೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು, ಕನ್ನಡ ಸಂಸ್ಕೃತಿಯ ಚಲನಶೀಲತೆಗೆ ತಮ್ಮ ಕೊಡುಗೆ ನೀಡುತ್ತ ಬಂದ ಮುಖ್ಯರಲ್ಲಿ ಒಬ್ಬರಾಗಿದ್ದಾರೆ.

ಮೈಸೂರು ವಿಶ್ವವಿದ್ಯಾಲಯ ಸ್ಥಾಪನೆಗಾಗಿ (1916), ಅಲ್ಲಿ ಕನ್ನಡ ಅಧ್ಯಯನ ಶಾಖೆ ಮೈತಳೆದು ದಕ್ಷಿಣ ಕರ್ನಾಟಕದ ಸಾಂಸ್ಕೃತಿಕ ಚಟುವಟಿಕೆಗಳಿಗೆ ಒತ್ತಾಸೆಯಾಗಿನಿಂತ ಚಾರಿತ್ರಿಕ ಸಂದರ್ಭದ ಹಿನ್ನೆಲೆಯಲ್ಲಿ ಜಿಯೆಸ್ಸೆಸ್ ಅವರ ಬಹುಮುಖೀ ವ್ಯಕ್ತಿತ್ವ ಆಕಾರ ಪಡೆಯಿತು. ದೂರ ದೂರದ ಹಳ್ಳಿಗಾಡುಗಳಲ್ಲಿ ಓದಿನ ಸೌಲಭ್ಯಗಳಿಗೆ ನಿಧಾನವಾಗಿ ತೆರೆದುಕೊಳ್ಳುತ್ತಿದ್ದ ಜನಸಮುದಾಯದಿಂದ ಬಂದು ಶ್ರಮ, ನಿಷ್ಠೆ ಹಾಗೂ ಪ್ರತಿಭೆಗಳಿಂದ ರಂಗದಲ್ಲಿ ಮುಖ್ಯರಾಗತೊಡಗುತ್ತಿದ್ದ, ಹಾಗೆ ತೊಡಗಿ ಯಶಸ್ಸು ಪಡೆದ ಮೊದಲ ತಲೆಮಾರಿಗೆ ಜಿಯೆಸ್ಸೆಸ್ ಸೇರುತ್ತಾರೆ. ಕನ್ನಡ ನವೋದಯದ ಮುಂಗೋಳಿಗಳು, ಮುಂದಾಳುಗಳು ರೂಪಿಸಿದ ಹಾದಿಯಲ್ಲಿ ನಡೆದು ಸಮರ್ಥ ಉತ್ತರಾಧಿಕಾರಿಗಳು ಎಂದು ಸಾಬೀತು ಮಾಡುವ ಜೊತೆಗೆ ಆ ಹಾದಿಯಲ್ಲಿ ತಮ್ಮ ವೈಯಕ್ತಿಕ ಛಾಪನ್ನೂ ಮೂಡಿಸುವ ಹೊಣೆ ಜಿಯೆಸ್ಸೆಸ್ ಅವರ ತಲೆಮಾರಿಗೆ ಇದ್ದಿತೆಂಬ ಸಂಗತಿಯನ್ನು ಗಮನದಲ್ಲಿಡಬೇಕು.

ಶಿಕ್ಷಕ ತಂದೆಯೊಡನೆ ಸುತ್ತುತ್ತ ಊರೂರುಗಳಲ್ಲಿ ಶಿಕ್ಷಣ ಪಡೆದು ಮೈಸೂರು ಸೇರಿ ವೆಂಕಣ್ಣಯ್ಯ, ಕುವೆಂಪು ಅವರ ಒತ್ತಾಸೆಯಲ್ಲಿ

ಬಿ.ಎ.(ಆನರ್ಸ್). ಎಂ.ಎ. ಹಾಗೂ ಪಿಎಚ್.ಡಿ.ಗಳನ್ನು ಪಡೆದರು. ಮಹಾರಾಜ ಕಾಲೇಜು ಆಗ ಟಂಕಸಾಲೆ. ಅಲ್ಲಿ ಪ್ರಮಾಣೀಕರಣಗೊಂಡರೆ ಮಾತ್ರ ಸಾಹಿತ್ಯಕ ವ್ಯಕ್ತಿತ್ವಕ್ಕೆ ಚಲಾವಣೆ ಸಿಗುವಂತೆ ಇದ್ದ ಕಾಲ. ವಿಶ್ವವಿದ್ಯಾಲಯದ ಹೊರಗಿದ್ದವರೂ ಒಂದಲ್ಲ ಒಂದು ಬಗೆಯಲ್ಲಿ ಈ ಟಂಕಸಾಲೆಯ ವ್ಯಾಪ್ತಿಗೆ ಒಳಗಾಗಿಯೇ ಇದ್ದರೆಂಬುದಕ್ಕೆ ಪ್ರಬುದ್ಧ ಕರ್ನಾಟಕ ಹಾಗೂ ಮಹಾರಾಜ ಕಾಲೇಜು ಕರ್ನಾಟಕ ಸಂಘ ಪ್ರಕಟಿಸಿದ ಗ್ರಂಥಗಳ ಪುಟಗಳು ಸಾಕ್ಷಿಯಾಗಿವೆ. ಜಿಯೆಸ್ಸೆಸ್ ಅಲ್ಲಿ ಕವಿಯಾಗುವ ಹಂಬಲಕ್ಕೆ ಪುಷ್ಟಿ ಪಡೆದರು. ಮಾಸ್ತಿಯವರು 'ಜೀವನ'ದಲ್ಲಿ ಈ ಕವಿಯನ್ನು ಮೊದಲು ಅನಾವರಣಗೊಳಿಸಿದರಾದರೂ, ಜಿಯೆಸ್ಸೆಸ್ ಹಸಿರು ಬಾವುಟ ಕಂಡದ್ದು ಕುವೆಂಪು ಅವರಲ್ಲಿ. ಈ ಮಹಾರಾಜ ಕಾಲೇಜು ಇವರೊಳಗಿನ ವಿಮರ್ಶಕ ಮೀಮಾಂಸಕರನ್ನೂ ಬೆಳೆಸಿತು.

ಜಿಯೆಸ್ಸೆಸ್ ಮೈಸೂರು ವಿಶ್ವವಿದ್ಯಾಲಯದ ವಿವಿಧ ಕಾಲೇಜುಗಳಲ್ಲಿ (ದಾವಣಗೆರೆ, ಶಿವಮೊಗ್ಗೆ, ಮೈಸೂರು) ಅಧ್ಯಾಪಕರಾಗಿ ವೃತ್ತಿಜೀವನವನ್ನು ಆರಂಭಿಸಿದರು. ಹೈದರಾಬಾದ್‌ನ ಉಸ್ಮಾನಿಯ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯರಾಗಿ ಕೆಲಸಮಾಡಿ, ಮರಳಿ ಮಹಾರಾಜಾ ಕಾಲೇಜಿಗೆ ಬಂದು, ಅನಂತರ (1966) ಬೆಂಗಳೂರು ವಿಶ್ವವಿದ್ಯಾಲಯ ಸೇರಿ, 1970ರಿಂದ ಕನ್ನಡ ಅಧ್ಯಯನ ಕೇಂದ್ರದ ಮುಖ್ಯರಾದರು. ಇಲ್ಲಿ ಎರಡು ದಶಕಗಳ ಕಾಲ ಕಾವ್ಯ, ಕಾವ್ಯಮೀಮಾಂಸೆಗಳ ಪಾಠ ಹೇಳಿದ್ದಾರೆ. ಕನ್ನಡದ ಅತಿ ಪ್ರಭಾವಶಾಲಿ ಅಧ್ಯಾಪಕರ ಪರಂಪರೆಗೆ ಜಿಯೆಸ್ಸೆಸ್ ಸೇರುತ್ತಾರೆ. ಪ್ರಾಚೀನ ಹಾಗೂ ಆಧುನಿಕ ಕನ್ನಡ ಕಾವ್ಯ, ಇಂಗ್ಲಿಷ್ ರೊಮ್ಯಾಂಟಿಕ್ ಕಾವ್ಯ, ಐರೋಪ್ಯ ನವ್ಯಕಾವ್ಯ, ಪಾಶ್ಚಾತ್ಯ ಮಹಾಕಾವ್ಯ ಹಾಗೂ ತೌಲನಿಕ ಕಾವ್ಯ ಮೀಮಾಂಸೆ-ಇವು ಅವರು ಪಾಠ ಹೇಳಿದ ಮುಖ್ಯ ವಲಯಗಳು. ಎಲ್ಲ ಕಾಲದ, ಎಲ್ಲ ದೇಶದ ಕವಿಗಳನ್ನು ಕನ್ನಡದ ಸಂವೇದನೆಯ ಮೂಲಕವೇ ಗ್ರಹಿಸಬಯಸುವ, ಪರೋಕ್ಷವಾಗಿ ಒಂದು ಬಗೆಯ ಶುದ್ಧ (absolute) ಕಾವ್ಯವನ್ನು ಹುಡುಕುವ ವಿಧಾನವನ್ನು ಬಳಸಿದರು. ಅವರ ಪಾಠಗಳು ಪೂರ್ವಸಿದ್ಧತೆ, ವಿವರಗಳ ಮಂಡನೆ, ಚಿಂತನಶೀಲತೆ, ಸಾಮಯಿಕ ಒಳನೋಟಗಳನ್ನು ಒಳಗೊಂಡಿರುವುದರ ಜೊತೆಗೆ ಹೊಸದನ್ನು ಅಳವಡಿಸಿಕೊಳ್ಳುವ, ಹೊಸದಾದುದಕ್ಕೆ ಪ್ರತಿಕ್ರಿಯಿಸುವ ಆಸಕ್ತಿಯಿಂದ ಕೂಡಿರುತ್ತಿದ್ದವು. ಅವರ ಪಾಠಗಳ ತರಗತಿಗಳಲ್ಲಿ ಚರ್ಚಾರ್ಹ ವಿಷಯಗಳಿರುತ್ತಿದ್ದರೂ ಚರ್ಚೆಗಳು ಇಲ್ಲವೆನ್ನುವಷ್ಟು ಕಡಿಮೆ. ಒಪ್ಪಿ ಅಹುದು ಅಹುದೆನ್ನುವ ಬಗೆಯ, ಧಾಟಿಯ ಅವರ ಪಾಠಗಳು ವಿದ್ಯಾರ್ಥಿಗಳಲ್ಲಿ ಉಳಿಸಿದ ಪ್ರಶ್ನೆಬೀಜಗಳು ಅನಂತರದಲ್ಲಿ ಆ ವಿದ್ಯಾರ್ಥಿಗಳನ್ನು ಚಿಂತನೆಗೆ ಹಚ್ಚಿ ಮೊಳೆತು ಬೆಳೆದಿವೆಯಾಗಿ, ಜಿಯೆಸ್ಸೆಸ್ ಪರೋಕ್ಷವಾಗಿ ತರಗತಿಯ ಹೊರಗೂ ಮೇಸ್ಟರಾಗಿದ್ದಾರೆ.

ಅಧ್ಯಾಪಕರಾಗಿ ಜಿಯೆಸ್ಸೆಸ್ ಅವರ ಬಗ್ಗೆ ಗಮನಿಸಬೇಕಾದ ಇನ್ನೊಂದು ಸಂಗತಿಯಿದೆ. ಅವರ ಹಲವು ವಿಮರ್ಶಾ ಲೇಖನಗಳ ಚೌಕಟ್ಟುಗಳು ಈ ತರಗತಿಗಳ ಪಾಠಗಳ ಮೂಲಕ ಆಕಾರ ಪಡೆದವು. ಇದಲ್ಲದೆ ಅವರ ಪಾಠಗಳ ಮೂಲಕ ಮೀಮಾಂಸೆ ಮತ್ತು ವಿಮರ್ಶೆಗಳ ಕ್ಷೇತ್ರಕ್ಕೆ ಪ್ರವೇಶ ಪಡೆದ, ಒಂದು ಚಿಂತನಾಕ್ರಮದ ಚೌಕಟ್ಟನ್ನು ಅನುಸರಿಸಲು, ವಿಸ್ತರಿಸಲು, ಮೀರಲು ಪಡೆದುಕೊಂಡ ವಿದ್ಯಾರ್ಥಿಗಳಲ್ಲಿ ಹಲವರು ತಮ್ಮ ತರಗತಿಗಳಲ್ಲಿ, ಬರವಣಿಗೆಗಳಲ್ಲಿ ಕನ್ನಡ ವಿಮರ್ಶೆ ಮತ್ತು ಸಾಹಿತ್ಯಾಧ್ಯಯನದ ಕ್ಷೇತ್ರದ ಕೃಷಿಯಲ್ಲಿ ತೊಡಗಿದ್ದಾರೆ.

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ನಿರ್ದೇಶಕರಾಗಿ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಸಾಹಿತ್ಯ ಸಂಬಂಧದ ಚಟುವಟಿಕೆಗಳನ್ನು ಸಂಯೋಜಿಸಿ, ಸಂಘಟಿಸಿ, ನಿರ್ವಹಿಸಿ ಜಿಯೆಸ್ಸೆಸ್ ಹೆಸರಾಗಿದ್ದಾರೆ. ಕನ್ನಡ ವಿಮರ್ಶೆಯ ಬೆಳವಣಿಗೆಗೆ ಅವರು ಹಾಕಿಕೊಂಡ ಹಲವು ಯೋಜನೆಗಳನ್ನು ಕಾರ್ಯಗತ ಮಾಡಿದ್ದಾರೆ. 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ'ಯ ಸಂಪುಟಗಳು ಮತ್ತು 'ಸಾಹಿತ್ಯ ವಾರ್ಷಿಕ'ದ ಯೋಜನೆಗಳು ಅನನ್ಯವಾದವು. ಸಾಂಸ್ಥಿಕ ಪ್ರಯತ್ನದ ಸಾಹಿತ್ಯ ಚರಿತ್ರೆಯ ಯೋಜನೆಯಲ್ಲಿ ವಿವಿಧ ಚಿಂತನಾಕ್ರಮಗಳ ಮೇಳನವನ್ನು 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ'ಯು ಸಾಧಿಸಿದರೆ, 'ಸಾಹಿತ್ಯ ವಾರ್ಷಿಕ' ದಾಖಲೆಯ ಜೊತೆಗೆ ವಿಮರ್ಶೆಯ ಬೆಳವಣಿಗೆಯ ದಿಕ್ಕನ್ನು ಕೂಡ ಸಾಧಿಸಲು ಸಮರ್ಥವಾಗಿದೆ. ಇವುಗಳ ಜೊತೆಗೆ ಅಧ್ಯಯನ ಕೇಂದ್ರದ ಹಲವು ವಿಚಾರಸಂಕಿರಣಗಳು, ಅಲ್ಲಿ ಮಂಡಿತವಾದ ಪ್ರಬಂಧ ಸಂಕಲನಗಳು ಈಗಾಗಲೇ ಕನ್ನಡ ವಿಮರ್ಶೆಯ ಚರಿತ್ರೆಯ ಅವಿನಾಭಾಗಗಳಾಗಿವೆ. ಈ ವಿಚಾರಸಂಕಿರಣಗಳು ಹಲವು ಮುಖ್ಯ ವಿಮರ್ಶಾ ಚೌಕಟ್ಟುಗಳ ಮಂಡನೆಗೆ ಅನುವು ಮಾಡಿಕೊಡುವ ಸಮಯದಲ್ಲೇ ಸಮಕಾಲೀನ ಸಾಹಿತ್ಯಕ ವಾಗ್ವಾದಗಳನ್ನು ಬೆಳೆಸಿವೆ. ಭಿನ್ನ ವಿಶ್ಲೇಷಣಾ ವಿಧಾನಗಳ ಆರೋಗ್ಯಕರ ಮುಖಾಮುಖಿಗೆ ಕಾರಣವಾಗಿವೆ. ಇಂಥ ಪ್ರಯತ್ನಗಳನ್ನು ಈಗ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿಯೂ ಜಿಯೆಸ್ಸೆಸ್ ಮುಂದುವರಿಸಿಕೊಂಡು ಬರುತ್ತಿರುವುದನ್ನು ಗಮನಿಸಬಹುದು.

**ಕವಿ**

ಜಿಯೆಸ್ಸೆಸ್ ಈವರೆಗೆ ಹನ್ನೆರಡು ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ಕನ್ನಡದ ಮುಖ್ಯಕವಿಗಳಾಗಿ ನಲವತ್ತು ವರ್ಷಗಳಿಂದ ಕಾವ್ಯರಚನೆ ಮಾಡುತ್ತಿರುವ ಇವರ ಕಾವ್ಯಕೃಷಿಯನ್ನು 'ನಂಬುಗೆಯ ಹಾದಿ' ಯೆಂದು ನಾನು ಹಿಂದೆ ಗುರುತಿಸಿದ್ದುಂಟು. ಕುವೆಂಪು ಮತ್ತು ಪು.ತಿ.ನ. ಅವರ ಕಾವ್ಯರಚನೆಗಳಿಂದ ಬೇರೆ ಬೇರೆ ಬಗೆಯಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಪ್ರಭಾವಿತರಾಗಿ ಕವಿತೆಗಳನ್ನು ಬರೆಯತೊಡಗಿದ ಜಿಯೆಸ್ಸೆಸ್ ಮುಂದಿನ ಕನ್ನಡ ಕಾವ್ಯದ ಬೆಳವಣಿಗೆಯಲ್ಲಿ ಬೆರೆಯುತ್ತ ಬೆಳೆದರು. ನವೋದಯ, ನವ್ಯ, ಬಂಡಾಯಗಳೆಂಬ ಮಾರ್ಗಗಳು ಅವರ ಕಾವ್ಯರಚನೆಯನ್ನು ಪ್ರಭಾವಿಸಿವೆ. ಏನೇ ಇದ್ದರೂ ಜಿಯೆಸ್ಸೆಸ್ ಅವರ ಮುಖ್ಯಕವಿತೆಗಳಲ್ಲಿ ತುಂಬಿರುವುದು ಪ್ರಸಾದ ಗುಣ. ಇವರ ಕವನ ಸಮುದಾಯದ ಅಧಿಕತಮ ಕವಿತೆಗಳ ಸಾಧಾರಣ ಧರ್ಮವನ್ನು ಗಮನಿಸಿದರೆ ಕವಿ, ಕಾವ್ಯಶರೀರವನ್ನು, ಪದಸಂಯೋಜನೆಯನ್ನು, ಅರ್ಥವು ಓದುಗನಿಗೆ ಸಂವಹನಗೊಳಿಸುವ ಪಾರದರ್ಶಕ ಮಾಧ್ಯಮವನ್ನಾಗಿ ಬಳಸುತ್ತಿರುವುದು ಸ್ಪಷ್ಟಗೊಳ್ಳುತ್ತದೆ. ಕಾವ್ಯಶರೀರ 'ಅರ್ಥ'ವನ್ನು ಮುಚ್ಚಿಡಲು ರೂಪುಗೊಂಡುದಲ್ಲ. ಹಾಗೆಯೇ 'ಅರ್ಥ'ವನ್ನು ಗ್ರಹಿಸಿಕೊಳ್ಳಲೆಂದೇ ಕಾವ್ಯ ಶರೀರವನ್ನು ರೂಪಿಸುವ ಕೆಲವು ನವ್ಯಕವಿಗಳ ಮಾದರಿಯೂ ಇವರದ್ದಲ್ಲ. ಕವಿ ತನ್ನ ಅನುಭವಕ್ಕೆ ದಕ್ಕಿದ ಭಾವಾರ್ಥಗಳನ್ನು ಭಾಷಿಕವಾಗಿ ಮಂಡಿಸುತ್ತಾರೆ; ಹೀಗಾಗಿ ಇದೊಂದು ಬಗೆಯ ಧ್ಯಾನಿತ ಕಾವ್ಯ (Meditated). ಹಾಗಾಗಿ ಕವಿ ಅನುಭವದ ಗ್ರಹಿಕೆಗೆ ಕಾವ್ಯ ಬಿಡುಗಡೆಯ ಮಾಧ್ಯಮವಾಗುತ್ತದೆ. ಶಬ್ದಗಳ ಕಟ್ಟಡಗಳ ಮೂಲಕವೇ ಅಂದರೆ ಕವಿತೆಯು ಶಾಬ್ದಿಕವಾಗುವ ಮೂಲಕವೇ ಅನುಭವದ ಸ್ವರೂಪ ಹಾಗೂ ಸಾರವನ್ನು ಗ್ರಹಿಸುವ ಮಾರ್ಗವನ್ನು ಜಿಯೆಸ್ಸೆಸ್ ಪರೀಕ್ಷಿಸಿದ್ದುಂಟು; ಪ್ರಯೋಗಿಸಿದ್ದುಂಟು. 'ದೀಪದ ಹೆಜ್ಜೆ' ಕವನ ಸಂಕಲನದಲ್ಲಿ ಅಂಥ ಪ್ರಯತ್ನಗಳು ಕಾಣಸಿಗುತ್ತವೆ. ಇದು ಇವರ ಕಾವ್ಯಕೃಷಿಯ ಹಾದಿಯ ಒಂದು ತಾತ್ಕಾಲಿಕ ಬಾಗು ಮಾತ್ರ. ಆ

ಸಂದರ್ಭದ ಕವಿತೆಗಳಲ್ಲಿ ಬಂಧ ಹಾಗೂ ಆಕೃತಿಗಳಲ್ಲಿ ಬದಲಾವಣೆ ಉಂಟಾಗಿ ಗೇಯತೆ ವಾಗ್ಮಿತೆಗೆ ತಿರುಗಿ, ಬಂಧ ಹೆಚ್ಚು ಅಮೂರ್ತ ಹಾಗೂ ವಿವೃತವಾಗುತ್ತ ನಡೆಯುತ್ತದೆ. ಕವಿತೆ ಇಂಥಲ್ಲೇ ನಿಲ್ಲಬೇಕೆಂಬ ಅನಿವಾರ್ಯತೆ ಕಾಣದು. ಆದರೆ ಮೊದಲೆ ಹೇಳಿದಂತೆ ಕವಿಗೆ ಪ್ರಿಯವಾದ ಮೊದಲ ಹಾದಿಗೆ ಮರಳಿ ಬರುವುದನ್ನು ಅನಂತರದ ಸಂಕಲನಗಳಲ್ಲಿ ಕಾಣಬಹುದು.

ತಾವು ಪಡೆದ ಅನುಭವಗಳನ್ನು ಸಂವಹನಕ್ಕೆ ಸಿದ್ಧಗೊಳಿಸುವಾಗ, ಕಾವ್ಯಶರೀರ ನಿರ್ಮಾಣದಲ್ಲಿ ತೊಡಗಿದಾಗ ಪರಿಚಿತ ಲೋಕವನ್ನು, ಇಂದ್ರಿಯ ಗಮ್ಯ ಲೋಕವನ್ನು ಸಮೃದ್ಧವಾಗಿ ಬಳಸುತ್ತಾರೆ. ಲೋಕದ ಇಂದ್ರಿಯಗಮ್ಯ ಘಟಕಗಳು, ಅದರಲ್ಲೂ ಕವಿ 'ಕಂಡ' ಘಟಕಗಳು, ಭಾವಾರ್ಥಗಳಿಗೆ ಪ್ರತಿಯಾಗಿ ಪ್ರತೀಕವಾಗಿ, ಸಂಕೇತಗಳಾಗಿ ಕವನದ ಮೈಯಾಗುತ್ತವೆ. ಈ ರೀತಿ ಮಂಡಿತವಾದ 'ಭಾವ' ಲೋಕಾನುಭವಕ್ಕೆ ಕವಿಯ ಪ್ರತಿಕ್ರಿಯೆಯೂ ಆಗಿರುವಂತೆ ಕವಿಯ ದೃಷ್ಟಿಕೋನವೂ ಆಗಿರುತ್ತದೆ. ಅಂದರೆ ಕವಿತೆಗಳು ಕವಿಯ ಮೂಲಕ ಲೋಕವನ್ನು ಒದಗಿಸುವಾಗ ಕವಿಯ ದೃಷ್ಟಿಯನ್ನು ಬೆರೆಸಿಕೊಂಡೇ ಮೈದಳೆದಿರುತ್ತವೆ.

'ಸಾಮಗಾನ'ದಿಂದ 'ದೀಪದ ಹೆಜ್ಜೆ' ಕವಿತೆಗಳವರೆಗೆ ಬರುವ ಹೊತ್ತಿಗೆ ಕವಿ ಎರಡು ಜಗತ್ತುಗಳಿಗೆ ಸ್ಪಂದಿಸುವ ಹೊಣೆ ಹೊರಲು ಸಿದ್ಧರಾಗುವುದು ಕಂಡುಬರುತ್ತದೆ. ಒಂದು ಜೀವಸಮೃದ್ಧ ಪ್ರಕೃತಿ; ಇನ್ನೊಂದು ಮಾನವ ಕೇಂದ್ರಿತ ಸಮಾಜ. ಇವುಗಳಲ್ಲಿ ಮೊದಲನೆಯದು ಜಿಯೆಸ್ಸೆಸ್ ಕವಿತೆಗಳಲ್ಲಿ ಮೊದಲಿನಿಂದ ಈವರೆಗೆ ಜೀವನದ ಇತ್ಯಾತ್ಮಕತೆಯನ್ನು ಮಂಡಿಸಲು ಕಾಣಿಸಲು ನೆರವಿಗೆ ಬಂದಿದೆ. ವಿಸ್ಮಯ, ಉತ್ಸುಕತೆಗಳು ಈ ನೆಲೆಯ ಕವಿತೆಗಳ ಪ್ರಧಾನ ಭಾವಗಳಾಗುತ್ತವೆ. ಪ್ರಕೃತಿಯ ನಿಯತ ಲಯಗಳು ಕವಿಗೆ ಸದಾ ಆಕರ್ಷಣೆಯನ್ನು ಉಂಟುಮಾಡಿವೆ. ಮತ್ತೆ ಮತ್ತೆ ಅಂಥ ಸಂದರ್ಭಗಳನ್ನು ಕವಿ ಹಾಡಿದ್ದಾರೆ. ಇದಕ್ಕೆ ಪ್ರತಿಯಾಗಿ ಮಾನವಕೇಂದ್ರಿತ ಸಮಾಜದಲ್ಲಿ ಕವಿತೆಗಳ ನಿರೂಪಕ ಕಾಣುವುದು ಸಮರಸವಿಲ್ಲದ ಜೀವನವನ್ನು, ಮೇಳನವಿಲ್ಲದ ಗಾಯನವನ್ನು, ನೇತ್ಯಾತ್ಮಕ ಶಕ್ತಿಗಳನ್ನು. ಪ್ರಕೃತಿಕೇಂದ್ರಿತ ಕವಿತೆಗಳಲ್ಲಿರುವ ವಿಸ್ಮಯ, ಉತ್ಸುಕತೆಗಳ ಬದಲಾಗಿ ಖಿನ್ನತೆ, ಸಾತ್ವಿಕ ಕ್ರೋಧ, ಹತಾಶೆಯ ಅಂಚಿನಲ್ಲಿ ಸುಳಿಯುವ ಅಸಹಾಯಕತೆ ಇವು ಈ ಕವಿತೆಗಳ ಪ್ರಧಾನ ಭಾವಗಳಾಗುತ್ತವೆ. ಈ ಎರಡೂ ಲೋಕಗಳೂ ಅವುಗಳಿಗೆ ಬದ್ಧವಾದ ಭಾವ ಸಮುದಾಯಗಳು ಆಗಾಗ ಸಂಕರಗೊಳ್ಳುವುದುಂಟು. ಆದರೆ ಅಂಥ ಸಂದರ್ಭಗಳು ಕಡಿಮೆ. ಅವರ ಎಲ್ಲ ಕವಿತೆಗಳ ನಿರೂಪಕನಿಗೆ ಎರಡು ಪಾತ್ರಗಳಿವೆ. ಒಂದು ಕಡೆ ಲೋಕಪ್ರಧಾನ ಶ್ರುತಿಯನ್ನು, ಲಯವನ್ನು ಗ್ರಹಿಸಿ ಅದರೊಡನೆ ತನ್ನ ಕವಿತೆಯನ್ನು ಮೇಳನಗೊಳಿಸುವುದು. ಈ ಬಗೆಯ ಕವಿತೆಗಳ ಬಂಧ ನಿಯತ ಹಾಗೂ ಆವೃತ. ಅಂಥ ಕವಿತೆಗಳಲ್ಲಿ ಅರ್ಥನಿಯತಿ ಹಾಗೂ ಭಾವಸಂವಹನ ಕವಿತೆಗಳ ಮುಖ್ಯ ನೆಲೆ. ಇನ್ನೊಂದು ನೆಲೆಯಲ್ಲಿ ನಿರೂಪಕ ಸಾಮಾಜಿಕ ಹೊಣೆಗಾರಿಕೆಯನ್ನು ಪಡೆದುಕೊಳ್ಳುತ್ತಾನೆ. ಆವರಣದ ಮಾನವ ಜಗತ್ತಿನ ವೈಸಾದೃಶ್ಯಗಳನ್ನು, ಲಯರಾಹಿತ್ಯವನ್ನು, ಅಪಶ್ರುತಿಗಳನ್ನು ಗ್ರಹಿಸಿ ಅವುಗಳನ್ನು ತನ್ನ ಕವಿತೆಗಳಲ್ಲಿ ಮಂಡಿಸುವುದು ಈ ನಿರೂಪಕನ ಹೊಣೆ. ಕವಿಯ ಈ ಸಾಮಾಜಿಕ ವ್ಯಾಖ್ಯೆಗಳು ಕೆಲವೊಮ್ಮೆ ವ್ಯಕ್ತಿ ವ್ಯಕ್ತಿ ಸಂಬಂಧದಿಂದ ಪ್ರೇರಣೆ ಪಡದಿದ್ದರೆ ಮತ್ತೆ ಕೆಲವು ಸಂದರ್ಭದಲ್ಲಿ ಸಾಮುದಾಯಿಕ ವೈಷಮ್ಯಗಳಿಂದ ಪ್ರಚೋದಿತವಾಗಿರುತ್ತವೆ. ವಿರಸ ಸ್ಥಾಯಿಯಾದ ಮಾನವ ಕೇಂದ್ರಿತ ಜಗತ್ತಿನ ಬಗ್ಗೆ ಕವಿತೆಗಳು ಹತಾಶವಾಗಿಲ್ಲ. ಆದರೆ ಪ್ರಕೃತಿಕೇಂದ್ರಿತ ಕವಿತೆಗಳಲ್ಲಿನ ಉತ್ಸುಕತೆಯ ಒಳಗೇಯತೆ ಮಾತ್ರ ಇಲ್ಲಿ ಕಾಣಸಿಗದು.

ಸಮಕಾಲೀನ ಕನ್ನಡ ಕಾವ್ಯವನ್ನು ಚರ್ಚಿಸುವಾಗ ಬಹುಮಟ್ಟಿಗೆ ಜಿಯೆಸ್ಸೆಸ್ ಅವರನ್ನು 'ಸಮನ್ವಯ ಕವಿ' ಎಂದು ಗುರುತಿಸುವುದುಂಟು. ಈ ಮಾತು ಈಗಾಗಲೇ ಸವಕಲು ಎನ್ನುವಷ್ಟು ಬಳಕೆಯಾಗಿ ಬಿಟ್ಟಿದೆ. ನವೋದಯ ಹಾಗೂ ನವ್ಯ ಕಾವ್ಯಮಾರ್ಗಗಳ ಲಕ್ಷಣಗಳನ್ನು ಒಗ್ಗೂಡಿಸಲು ಯತ್ನಿಸಿದರು ಎಂಬ ಸರಳ ಅರ್ಥದಲ್ಲಿ 'ಸಮನ್ವಯ' ಕವಿ ಎನ್ನಲಾಗುತ್ತಿದೆಯಷ್ಟೆ. ನವ್ಯ ಮಾರ್ಗವನ್ನು ವ್ಯಾಖ್ಯಾನಿಸಿದವರ ಚೌಕಟ್ಟಿಗೆ ಸಿಲುಕದ ಇತರ ಕವಿಗಳಲ್ಲಿ ಕೆಲವರನ್ನು 'ಸಮನ್ವಯ'ವೆಂಬ ಗುಂಪಿಗೆ ಸೇರಿಸಿದಂತೆ ತೋರುತ್ತದೆ. ಇದು ವಿಮರ್ಶೆಯ ವೈಪರೀತ್ಯ ಎಂದಷ್ಟೇ ಹೇಳಬಹುದಾಗಿದೆ.

ಜಿಯೆಸ್ಸೆಸ್ ಕಾವ್ಯವನ್ನು ತಮ್ಮ ವ್ಯಕ್ತಿತ್ವದ ಮುಂದುವರಿಕೆ, ಹೊರಚಾಚು ಎಂದು ತಿಳಿದ ಕವಿಗಳ ಬಗೆಗೆ ಸೇರಿದವರು. ಇಂಥ ಕವಿಗಳ ಕಾವ್ಯದಲ್ಲಿ ಸಹಜವಾಗಿಯೇ ಲೋಕ ಮತ್ತು ಕವಿಯ ಸಂಬಂಧದಲ್ಲಿ ಕಾವ್ಯ ಮಧ್ಯವರ್ತಿಯಂತೆ ಕೆಲಸ ಮಾಡುತ್ತಿರುತ್ತದೆ. ಇದು ಕವಿಯ ಕಡೆಯಿಂದ ನೋಡಿದಾಗ ತಿಳಿಯುವ ನೆಲೆ. ಓದುಗನ ಕಡೆಯಿಂದ ನೋಡಿದಾಗ ಈ ಕಾವ್ಯ ಲೋಕಸಂವೇದನೆಯ ಒಂದು ಮಾದರಿಯನ್ನು ಒದಗಿಸಬಲ್ಲದು. ಅಲ್ಲದೆ ವಾಸ್ತವವನ್ನು ಮರಳಿ ಸೂಕ್ಷ್ಮವಾಗಿ ನೋಡುವ ಕಣ್ಣುಗಳನ್ನು ಕೂಡ ಒದಗಿಸಬಲ್ಲುದು.

'ಕಾಲ' ಮತ್ತು 'ಮನುಷ್ಯ' ತಮ್ಮ ಕಾವ್ಯದ ಕೇಂದ್ರಗಳು ಎಂದು ಜಿಯೆಸ್ಸೆಸ್ ಒಂದೆಡೆ ಹೇಳಿರುವುದುಂಟು. ನಿರಂತರವಾದದ್ದು ಹಾಗೂ ಅದರ ಒಂದು ಘಟಕದಲ್ಲಿ ನಿಜವಾಗುವಂಥದ್ದು ಇವೆರಡೂ, ಹೀಗಾಗಿ ಇವರ ಕಾವ್ಯದಲ್ಲಿ ಈವರೆಗೆ ಪ್ರಧಾನವಾಗಿವೆ. ಅತೀತವಾದದ್ದು ಅನ್ಯವಲ್ಲ, ಅದು ಲೋಕವೇ ಎಂಬ ನೆಲೆಯಲ್ಲಿರುವ ಇವರ ಕಾವ್ಯ ಲೋಕಪ್ರೀತಿಯದು.

**ಮೀಮಾಂಸಕ-ವಿಮರ್ಶಕ**

ಜಿಯೆಸ್ಸೆಸ್ ವಿಮರ್ಶೆಯ ಕೃಷಿಗೆ ತೊಡಗಿದ ಸಂದರ್ಭವನ್ನು ಗಮನಿಸುವುದು ಅವಶ್ಯ. ಆ ವೇಳೆಗೆ ಕನ್ನಡ ಸಾಹಿತ್ಯ ಕೃತಿಗಳನ್ನು ಆಧುನಿಕ ಸಂವೇದನೆಗಳಿಂದ ಹಾಗೂ ಶುದ್ಧಕಾವ್ಯದ ನೆಲೆಯಿಂದ ಪರಿಶೀಲಿಸಬೇಕೆಂಬ ಚಿಂತನೆಗಳು ಪ್ರಧಾನವಾಗಿದ್ದವು. ಜೊತೆಗೆ ಜಾಗತಿಕ ಸಾಹಿತ್ಯ ಪರಂಪರೆ ಯೊಡನೆ ಕನ್ನಡದ ಕಾವ್ಯಗಳನ್ನು ಇಟ್ಟು ನೋಡುವ ತೌಲನಿಕ ಅಧ್ಯಯನಗಳು ಬಿಡಿಬಿಡಿಯಾಗಿ ಕಾಣತೊಡಗಿದ್ದವು. ನವೋದಯ ಕಾವ್ಯದ ಸಂದರ್ಭದಲ್ಲಿ ಅನ್ಯ ಭಾಷಾ ಸಾಹಿತ್ಯದ ಪ್ರಭಾವಗಳ ಬಗ್ಗೆ ಹಿಂಜರಿತವಿಲ್ಲದಿದ್ದರೂ, ಸುಮಾರು ಅರ್ಧ ಶತಮಾನ ಕಳೆದ ಮೇಲೆ ಮತ್ತೆ ಕನ್ನಡ ಕಾವ್ಯಪರಂಪರೆಯ ಲಕ್ಷಣಗಳನ್ನು ಮರಳಿ ನಿರ್ವಚಿಸುವ ಅವಶ್ಯಕತೆ ಇದ್ದಿತು.

ಮೀಮಾಂಸೆಯ ಚೌಕಟ್ಟು ಸಂಸ್ಕೃತ ಸಾಹಿತ್ಯ ಮೀಮಾಂಸೆ ಮತ್ತು ಐರೋಪ್ಯ ಸಾಹಿತ್ಯ ಮೀಮಾಂಸೆಗಳ ಮೂಲಕ ರೂಪಗೊಳ್ಳತೊಡಗಿದ್ದು, ಹೀಗೆ ಎರಡು ಮೀಮಾಂಸೆಗಳನ್ನು ಹೋಲಿಸಿ ನಮ್ಮ ಸಂವೇದನೆಗಳಿಗೆ ಒಗ್ಗುವಂತೆ ವ್ಯಾಖ್ಯಾನಿಸುವ ಅವಶ್ಯಕತೆ ಕೂಡ ಆ ವೇಳೆಗೆ ಎದ್ದು ಕಾಣುವಂತಿತ್ತು. ತೌಲನಿಕ ಕಾವ್ಯಮೀಮಾಂಸೆಯ ಹೊಳಹುಗಳನ್ನು ಕುವೆಂಪು ನೀಡುತ್ತ ಬಂದರಾದರೂ ಅವರದ್ದು ಶಾಸ್ತ್ರೀಯವಾದ ನಿರ್ವಚನಗಳಿಂದ ಬದ್ಧವಾದುದಾಗಿರಲಿಲ್ಲ; ಇದು ಸಹಜವೇ ಸರಿ. ತೀ.ನಂ.ಶ್ರೀ.ಯವರು

ಸಂಸ್ಕೃತ ಕಾವ್ಯಮೀಮಾಂಸೆಯ ಪರಿಕಲ್ಪನೆಗಳನ್ನು ಪ್ರಸ್ತುತ ನೆಲೆಗೆ ಅನ್ವಯಿಸಿ ಮಂಡಿಸಿದ್ದರು. ಅದನ್ನು ಕಾವ್ಯ ಪರಂಪರೆಗೆ, ಅದರ ಅಧ್ಯಯನಕ್ಕೆ ಬಳಸುವ ಅವಕಾಶಗಳಿದ್ದವು.

ಈ ಹಿನ್ನೆಲೆಯಲ್ಲಿ ಜಿಯೆಸ್ಸೆಸ್ ವಿಮರ್ಶನ ಕ್ಷೇತ್ರದಲ್ಲಿ ಪ್ರವೇಶಿಸಿದಂತೆ ತೋರುತ್ತದೆ. 'ಪರಿಶೀಲನ'ದಿಂದ ಮೊದಲಾಗಿ 'ಗತಿಬಿಂಬ', 'ನವೋದಯ', 'ಅನುರಣನ', 'ಪ್ರತಿಕ್ರಿಯೆ' ಮತ್ತು 'ಬೆಡಗು'ವರೆಗಿನ ಅವರ ವಿಮರ್ಶೆಯ ಸಂಕಲನಗಳು ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ಸಾಹಿತ್ಯ ಕೃತಿಗಳ ಬಗೆಗೆ ಸಮರ್ಥ ಒಳನೋಟಗಳನ್ನು ನೀಡುತ್ತವೆ. ಕೃತಿಗಳ ವರ್ಣನೆ, ವಿವರಣೆ ರಸಗ್ರಹಣಗಳಿಗೆ ವಿಮರ್ಶೆಯನ್ನು ಮೀಸಲಿಡದೆ, ಆ ಕೃತಿಗಳ ಸಾಹಿತ್ಯಕ, ಕೆಲವೊಮ್ಮೆ ಸಾಂಸ್ಕೃತಿಕ ಮಹತ್ವವನ್ನು ಎತ್ತಿ ಹೇಳುವ ಕಡೆಗೆ ಜಿಯೆಸ್ಸೆಸ್ ಅವರ ವಿಮರ್ಶೆ ಒಲಿಯುತ್ತದೆ. ಕಾವ್ಯದಲ್ಲಿ ಶ್ರೇಷ್ಠವಾದ ಅಂಶಗಳನ್ನು, ಪರಂಪರೆಯಲ್ಲಿ ಮಹತ್ವವಾದುದನ್ನು ಗುರುತಿಸುವಲ್ಲಿ ಜಿಯೆಸ್ಸೆಸ್ ಯಶಸ್ವಿಯಾಗುತ್ತಾರೆ. ಹರಿಹರ, ರಾಘವಾಂಕ, ಪಂಪ, ರತ್ನಾಕರರ ಕೃತಿಗಳನ್ನು ಕುರಿತು ಬರೆದಿರುವ ಲೇಖನಗಳನ್ನು ಮೇಲಿನ ಮಾತಿಗೆ ನಿದರ್ಶನಗಳನ್ನಾಗಿ ನೋಡಬಹುದು. ಹಾಗೆಯೇ ಕನ್ನಡ ಸಾಹಿತ್ಯ ಪರಂಪರೆಯ ಅನನ್ಯ ಅಂಶಗಳನ್ನು, ಅವ್ಯಾಹತವಾಗಿ ಹರಿದು ಬಂದಿರುವ ತಿರುಳಿನ ಅಂಶಗಳನ್ನು ಹೆಕ್ಕಿ ತೆಗೆಯುವ ಕಡೆಗೆ ಕೂಡ ಜಿಯೆಸ್ಸೆಸ್ ವಿಮರ್ಶೆ ಒಲಿಯುತ್ತದೆ. ಹಾಗೆ ನೋಡಿದರೆ ನಮ್ಮ ವಿಮರ್ಶಕರಲ್ಲಿ ಇಡಿಯಾಗಿ ಕನ್ನಡ ಸಾಹಿತ್ಯ ಪರಂಪರೆಯನ್ನು ಅದರ ಚಲನಶೀಲ ನೆಲೆಗಟ್ಟನ್ನು ಗ್ರಹಿಸಿ ಮಂಡಿಸಿದವರಲ್ಲಿ ಜಿಯೆಸ್ಸೆಸ್ ಮೊದಲಿಗರೆಂದು ನನಗೆ ತೋರುತ್ತದೆ. ಭಿನ್ನರೀತಿಯಲ್ಲಿ ಅಂಥದೇ ಯತ್ನವನ್ನು ಮಾಡಬಹುದೇ ಹೊರತು ಅವರ ಗ್ರಹಿಕೆಗಳನ್ನು ಪೂರ್ಣ ಪ್ರಮಾಣದಲ್ಲಿ ಅಲ್ಲಗಳೆಯಲು ಸಾಧ್ಯವಿಲ್ಲ ವೆನ್ನುವಷ್ಟು ಆ ಗ್ರಹಿಕೆಗಳು ಅಧಿಕೃತವಾಗಿವೆ; ಸಮರ್ಥವಾಗಿ ಮಂಡಿತ ವಾಗಿವೆ. ನವ್ಯ ಚಳವಳಿಯ ಸಂದರ್ಭದಲ್ಲಿ ಬಳಕೆಗೆ ಬಂದ ಟಿ.ಎಸ್. ಎಲಿಯಟ್‌ನ 'ಪರಂಪರೆ' ಮತ್ತು 'ವ್ಯಕ್ತಿ ಪ್ರತಿಭೆ' ಎಂಬ ಪರಿಕಲ್ಪನೆಗಳನ್ನು ತಾತ್ತ್ವಿಕವಾಗಿ ಮಾತ್ರವಲ್ಲದೆ ಆನ್ವಯಿಕವಾಗಿಯೂ ಕನ್ನಡದ ಸಂದರ್ಭದಲ್ಲಿ ಬಳಸುವಲ್ಲಿ ಜಿಯೆಸ್ಸೆಸ್ ವಿಮರ್ಶೆ ಪ್ರವೃತ್ತವಾಗಿದೆ. 'ಪರಿಶೀಲನ', 'ಅನುರಣನ' ಹಾಗೂ 'ಪ್ರತಿಕ್ರಿಯೆ' ಸಂಕಲನಗಳ ಹಲವು ಲೇಖನಗಳನ್ನು ಗಮನಿಸಿದಾಗ ಮೇಲೆ ಹೇಳಿದ ಅಂಶ ಸ್ಪಷ್ಟವಾಗುತ್ತದೆ.

ಆಧುನಿಕ ಸಾಹಿತ್ಯದ ಅಧ್ಯಯನಗಳಲ್ಲಿ ಜಿಯೆಸ್ಸೆಸ್ ಕೃತಿ, ಕೃತಿಕಾರ ಹಾಗೂ ಸಂದರ್ಭಗಳನ್ನು ಸಮಗ್ರವಾಗಿ ಗ್ರಹಿಸುವ ಮಾದರಿಯನ್ನು ಅನುಸರಿಸುತ್ತಾರೆ. ಇಲ್ಲಿ ಕೂಡ ಒಳನೋಟಗಳನ್ನು ನೀಡುವುದಕ್ಕೆ ಹೆಚ್ಚು ಒತ್ತು ಬಿದ್ದಿದೆ. ಸಮಕಾಲೀನ ಸಾಹಿತ್ಯದ ಅಧ್ಯಯನದ ಮಾದರಿಗಳನ್ನು ಕನ್ನಡ ವಿಮರ್ಶೆ ಹುಡುಕಿಕೊಳ್ಳುವ ಹಂತದಲ್ಲಿದ್ದಾಗ ಜಿಯೆಸ್ಸೆಸ್ ಮೊದಲು ಮಾಡಿದ ಈ ಮಾದರಿಯ ಬಳಕೆ ವಿಮರ್ಶೆಗೆ ಅಧಿಕೃತತೆಯನ್ನು ಒದಗಿಸಿತು. ಮುಂದಿನ ವಿಮರ್ಶೆಗೆ ಬೇಕಾದ ಜಗಿತದ ಹಲಗೆಯನ್ನು ನೀಡಿತು. ಕುವೆಂಪು, ಪು.ತಿ.ನ., ಬೇಂದ್ರೆ, ಕೆ.ಎಸ್.ನ. ಅವರ ಸಾಹಿತ್ಯವನ್ನು ವಿಮರ್ಶಿಸುವ ಅವರ ಲೇಖನಗಳು ಈಗ ಪರಾಮರ್ಶನ ಸಾಹಿತ್ಯದ ಭಾಗವಾಗಿದೆ. ಆಧುನಿಕ ಕನ್ನಡ ಕಾವ್ಯದ ಅಧ್ಯಯನಕ್ಕೆ ಜಿಯೆಸ್ಸೆಸ್ ಗಮನ ಕೇಂದ್ರೀಕೃತವಾಗಿದೆ; ಇತರ ಸಾಹಿತ್ಯ ಪ್ರಕಾರಗಳ ಕಡೆಗೆ ಗಮನ ಆನುಷಂಗಿಕವಾಗಿದೆ. ಹೀಗಾಗಿ ಅವರ ವಿಮರ್ಶೆ ಪಡೆದುಕೊಳ್ಳಲು ಸಾಧ್ಯವಿದ್ದ ಆಯಾಮವೊಂದಕ್ಕೆ ಮಿತಿ ಒದಗಿದೆ ಎನ್ನಿಸುವುದು ಸಹಜ. ಆದರೆ ಅದು ಅವರು ಕಾವ್ಯದ ಬಗೆಗೆ ಒದಗಿಸಿರುವ ಒಳನೋಟಗಳಿಗೆ, ಪ್ರಚಲಿತಗೊಳಿಸಿರುವ ವಿಮರ್ಶಾ ನಿಲುವುಗಳಿಗೆ ಮಿತಿಯನ್ನೇನೂ ಒದಗಿಸಿಲ್ಲ.

ಕನ್ನಡ ನವೋದಯ ವಿಮರ್ಶೆಯ ವಿಚಾರಮೂಲವಾದಿ (Idealist) ಆಕೃತಿಗಳನ್ನು ಇಡಿಯಾಗಿ ಕನ್ನಡ ಸಾಹಿತ್ಯ ಪರಂಪರೆ ಮತ್ತು ಸಮಕಾಲೀನ ಕಾವ್ಯಕ್ಕೆ ಸಮರ್ಥವಾಗಿ ಅನ್ವಯಿಸುವ, ಜಿಯೆಸ್ಸಸ್ ಅವರ 'ಸೌಂದರ್ಯ ಸಮೀಕ್ಷೆ' ಮಹಾಪ್ರಬಂಧ ಅವರ ವಿಮರ್ಶಾ ಪ್ರಯತ್ನದ ಪ್ರಮುಖ ಹಂತ. ಅಲ್ಲಿಂದೀಚೆಗೆ ಅವರ ವಿಮರ್ಶಾ ನಿಲುವುಗಳಲ್ಲಿ ಬೆಳವಣಿಗೆ, ಬದಲಾವಣೆಗಳು ಕಂಡುಬಂದಿವೆ. ಆದರೆ 'ಸೌಂದರ್ಯ ಸಮೀಕ್ಷೆ'ಯಲ್ಲಿ ಕಾವ್ಯಗಳಲ್ಲಿ, ಕೃತಿಭಾಗಗಳಲ್ಲಿ ಕಂಡು ಬರುವ 'ಲೋಕಾನುಭವ ಪರಿವರ್ತನೆ'ಯನ್ನು ವ್ಯಾಖ್ಯಾನಿಸುವ ಬಗೆ ಸಾಹಿತ್ಯಾಭ್ಯಾಸಿಗಳಿಗೆ ಈಗಲೂ ಸಾಹಿತ್ಯಾಧ್ಯಯನಕ್ಕೆ ಪ್ರವೇಶವನ್ನು; ಸಾಹಿತ್ಯಾಭಿರುಚಿಗೆ ಮಾದರಿಯನ್ನು ಒದಗಿಸಬಲ್ಲದು. ತಾತ್ತ್ವಿಕವಾಗಿ ಕನ್ನಡ ಕಾವ್ಯಪರಂಪರೆಯನ್ನು ವ್ಯಾಖ್ಯಾನಿಸುವ ಅವರ ಇನ್ನೆರಡು ಪ್ರಯತ್ನಗಳೆಂದರೆ 'ಕನ್ನಡ ಸಾಹಿತ್ಯ ಸಮೀಕ್ಷೆ' ಮತ್ತು 'ಕನ್ನಡ ಕವಿಗಳ ಕಾವ್ಯ ಕಲ್ಪನೆ'. ಕನ್ನಡ ಸಾಹಿತ್ಯ ಮೀಮಾಂಸೆಯ ಚೌಕಟ್ಟನ್ನು ರಚಿಸಲು ಬೇಕಾದ ಮೂಲಭೂತ ಅಂಶಗಳು ಈ ಕೃತಿಗಳಲ್ಲಿ ಚರ್ಚಿತವಾಗಿವೆ. ಅವರ ವಿಮರ್ಶಾ ಲೇಖನಗಳಲ್ಲಿ ಕಂಡುಬಂದ ಆನ್ವಯಿಕ ನೆಲೆಗಟ್ಟು ಇಲ್ಲಿ ಪರಿಕಲ್ಪನೆಗಳ ನೆಲೆಗೆ ರವಾನೆಗೊಳ್ಳುತ್ತದೆ.

ಸಾಹಿತ್ಯ ಮೀಮಾಂಸೆಯ ಕ್ಷೇತ್ರದಲ್ಲಿ ಜಿಯೆಸ್ಸೆಸ್ ತೌಲನಿಕ ಅಧ್ಯಯನದ ಮಾದರಿಗಳನ್ನು ಬಳಸುವ ಆಸಕ್ತಿಯನ್ನು ಪ್ರಕಟಿಸಿದ್ದಾರೆ. 'ಮಹಾಕಾವ್ಯ ಸಮೀಕ್ಷೆ' ಗ್ರಂಥದಲ್ಲಿ ಭಾರತೀಯ ಮತ್ತು ಪಾಶ್ಚಾತ್ಯ ಮಹಾಕಾವ್ಯ ಸಂಬಂಧ ತತ್ತ್ವಗಳನ್ನು ತೌಲನಿಕವಾಗಿ ವಿವೇಚಿಸಲಾಗಿದೆ. ಇಂಥ ಹೋಲಿಕೆಯ ಅಧ್ಯಯನವನ್ನು ಸಾಹಿತ್ಯ ತತ್ತ್ವಗಳ, ತಾತ್ತ್ವಿಕ ಪರಿಕಲ್ಪನೆಗಳ ನೆಲೆಯಲ್ಲಿ ಬಳಸಿ ಬರೆದ ಲೇಖನಗಳ ಸಂಕಲನ, 'ಕಾವ್ಯಾರ್ಥ ಚಿಂತನ'. ಜಿಯೆಸ್ಸೆಸ್ ಅವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರವನ್ನು ತಂದು ಕೊಟ್ಟ ಕೃತಿ ಇದು. ಕವಿಯ ಸೃಜನಶೀಲತೆ, ಕಾವ್ಯಕ್ರಿಯೆ, ಓದುಗನ ಅನುಭವ, ಕವಿತೆಯ ಭಾಷೆ, ಕಾವ್ಯ ಪರಿಕರಗಳು ಇವೇ ಮುಂತಾದ ಕ್ಷೇತ್ರಗಳಲ್ಲಿ ಭಾರತೀಯ ಹಾಗೂ ಪಾಶ್ಚಾತ್ಯ ಸಾಹಿತ್ಯ ಮೀಮಾಂಸೆಗಳು ಬಳಸುವ ಹಲವು ಪರಿಕಲ್ಪನೆಗಳನ್ನು ಜತೆಗಿರಿಸಿ ವ್ಯವಸ್ಥಿತವಾದ ಅಧ್ಯಯನವನ್ನು ಜಿಯೆಸ್ಸೆಸ್ ಮಾಡಿದ್ದಾರೆ. ಇಲ್ಲಿನ ಅಧ್ಯಯನಗಳಲ್ಲಿ ಸಾಮಗ್ರಿಯ ಕ್ರೋಢೀಕರಣವಿದ್ದರೂ ಅದು ಶುಷ್ಕಪಾಂಡಿತ್ಯದ ನೆಲೆಗೆ ಜಾರುವುದಿಲ್ಲ. ಈ ಎಲ್ಲ ಪರಿಕಲ್ಪನೆಗಳನ್ನು ಕುರಿತಂತೆ ನಡೆಯುವ ಚರ್ಚೆಗಳನ್ನು ಗಮನಿಸುತ್ತಲೇ ತಮ್ಮ ದೃಷ್ಟಿಕೋನದಿಂದ ಅವುಗಳನ್ನು ವಿವರಿಸುವ ನೆಲೆಗೆ ಜಿಯೆಸ್ಸೆಸ್ ಮುಂದುವರಿಯುತ್ತಾರೆ.

ತೌಲನಿಕ ಅಧ್ಯಯನದಲ್ಲಿ ವಿವರಗಳ ಹೋಲಿಕೆ ಮಾತ್ರ ಸಾಲದಷ್ಟೆ, ವಿವರಗಳ ಹಿಂದಿರುವ ತಾತ್ತ್ವಿಕ ಚಿಂತನೆಗಳ ಒತ್ತಾಸೆಯನ್ನು ಗಮನಿಸಬೇಕಾಗುತ್ತದೆ. ಜಿಯೆಸ್ಸೆಸ್ ಈ ಪರಿಕಲ್ಪನೆಗಳ ತೌಲನಿಕ ಅಧ್ಯಯನದಲ್ಲಿ ಆಯ್ದಿರುವ ಮಾದರಿಯೂ ಇಂಥದೇ. ವ್ಯಾಖ್ಯಾನದ ಜೊತೆಗೆ, ವಿವರ ಸಂಯೋಜನೆಯ ಜೊತೆಗೆ ಕವಿಯ ದೃಷ್ಟಿಯಿಂದಾಗಿ ಒದಗುವ ಸೂಕ್ಷ್ಮವಾದ ಕೆಲವು ಒಳನೋಟಗಳನ್ನು ಆ ಲೇಖನಗಳಲ್ಲಿ ಮಂಡಿಸುತ್ತಾರೆ. ಈ ಲೇಖನಗಳ ಮಹತ್ವ ಹೆಚ್ಚುವುದು ಈ ಒಳನೋಟಗಳಿಂದ. ಏಕೆಂದರೆ ಅವುಗಳನ್ನು ಕುರಿತು ಇನ್ನೂ ನಡೆಯಬೇಕಾದ ಚರ್ಚೆಯೇ ಈ ಅಧ್ಯಯನ ಕ್ಷೇತ್ರದ ಮುಂದಿನ

ಹಂತವಾಗಿದೆ. ಹೀಗಾಗಿ 'ಕಾವ್ಯಾರ್ಥ ಚಿಂತನ' ಒಂದು ಮಹತ್ತ್ವದ ಕೃತಿಯಾಗಿದೆ.

ಇಷ್ಟೆಲ್ಲ ಬರಹಗಳ ನಡುವೆ ಜಿಯಸ್ಸೆಸ್ ಮೂರು ಪ್ರವಾಸ ಕಥನಗಳನ್ನು (ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ, ಗಂಗೆಯ ಶಿಖರಗಳಲ್ಲಿ ಮತ್ತು ಅಮೆರಿಕದಲ್ಲಿ ಕನ್ನಡಿಗ), ಒಂದು ಜೀವನಚಿತ್ರವನ್ನು (ಕರ್ಮಯೋಗಿ) ಹಾಗೂ ಒಂದು ಆತ್ಮಕಥನ ಭಾಗವನ್ನು (ಚತುರಂಗ) ಬರೆದಿದ್ದಾರೆ. ಪ್ರವಾಸಕಥನಗಳು ಸಮೃದ್ಧ ವಿವರಗಳ ಜೊತೆಗೆ ಸಂವೇದನಾಶೀಲವಾದ ಮನಸ್ಸಿನ ತುಡಿತಗಳನ್ನು ಒಳಗೊಂಡು ಮುಖ್ಯವಾಗುತ್ತವೆ.

'ಕರ್ಮಯೋಗಿ' ಸಿದ್ಧರಾಮನನ್ನು ಕುರಿತು ಬರೆದ ಜೀವನಚಿತ್ರ. ಕನ್ನಡ ಕಾವ್ಯಗಳನ್ನು, ಅವುಗಳ ಕಥನವನ್ನು ಆಧುನಿಕ ನುಡಿಕಟ್ಟಿನಲ್ಲಿ ಹೇಳುವ ಪ್ರಯತ್ನಗಳಲ್ಲಿ ಇದು ಒಂದು. ರಾಘವಾಂಕನ ಸಿದ್ಧರಾಮ ಚಾರಿತ್ರವನ್ನು ಆಧರಿಸಿದ ಕಥಾನಕ. ಚಂದವಾದ ನಿರೂಪಣೆ ಇರುವ ಗದ್ಯವಿಲ್ಲಿದೆ. ಆದರೆ ಈ ಬಗೆಯ ಇಲ್ಲವೇ ಇನ್ನಿತರ ಕಥಾನಕಗಳ ರಚನೆಗೆ ಜಿಯೆಸ್ಸೆಸ್ ಮನ ಹರಿಸಿದಂತೆ ತೋರದು.

'ಚತುರಂಗ'ದಲ್ಲಿ ತಮ್ಮ ಜೀವನದ ಬೇರೆಬೇರೆ ಹಂತಗಳನ್ನು, ನೆಲೆಗಳನ್ನು ಗಮನಿಸಿ ಮುಖ್ಯವಾದ ವಿವರಗಳನ್ನು ಬಳಸಿ ಒಂದು ಆತ್ಮ ಕಥನವನ್ನು ಬರೆದಿದ್ದಾರೆ. ಪೂರ್ಣ ಪ್ರಮಾಣದ ಆತ್ಮಕಥನದ ಹರವು ಇದಕ್ಕಿಲ್ಲ. ಹೀಗಾಗಿ ಇದರ ಆಸಕ್ತಿಯೇ ಸೀಮಿತ.

ಜಿಯೆಸ್ಸೆಸ್ ಅವರ ಕೃತಿ ಸಮುದಾಯದ ಈ ಸ್ಥೂಲಸಮೀಕ್ಷೆಗೆ, ಹೊಸಗನ್ನಡದ ಒಬ್ಬ ಮುಖ್ಯ ಸಾಹಿತ್ಯಜ್ಞರಾಗಿ ಅವರ ಮಹತ್ತ್ವವೇನೆಂಬ ಸಂಗತಿ ಸ್ಪಷ್ಟಗೊಳ್ಳಬೇಕೆಂಬ ಉದ್ದೇಶವಿದೆ. ಈ ಶತಮಾನದ ಸಾಹಿತ್ಯ ಚರಿತ್ರೆ ಬರೆಯುವವರು ಗಮನಿಸಲೇಬೇಕಾದ ಮುಖ್ಯಕೃತಿಗಳಲ್ಲಿ ಕೆಲವನ್ನು ಜಿಯೆಸ್ಸೆಸ್ ಬರೆದಿದ್ದಾರೆ. ಮಾತ್ರವಲ್ಲ ಸಾಹಿತ್ಯದ ಬೆಳವಣಿಗೆಯ ಹಲವು ನೆಲೆಗಳಲ್ಲಿ ಪರೋಕ್ಷವಾಗಿ ತಮ್ಮ ಸಾಹಿತ್ಯಕ ವ್ಯಕ್ತಿತ್ವದಿಂದ ಪ್ರೇರಣೆಯನ್ನು ಒದಗಿಸಿದ್ದಾರೆ ಎಂಬುದನ್ನು ನಾವು ಇಲ್ಲಿ ಮತ್ತೆ ಗಮನಿಸಬೇಕು.

❑

## ಹೆಚ್. ತಿಪ್ಪೇರುದ್ರಸ್ವಾಮಿ

**ಟಿ.ಆರ್. ಮಹಾದೇವಯ್ಯ**

**ಡಾ.** ಹೆಚ್. ತಿಪ್ಪೇರುದ್ರಸ್ವಾಮಿ ಅವರು ಆಧುನಿಕ ಕನ್ನಡದ ಮಹತ್ವದ ಲೇಖಕರಲ್ಲೊಬ್ಬರು. ಕನ್ನಡದ ಘನತೆಯನ್ನು ರಾಷ್ಟ್ರಮಟ್ಟಕ್ಕೇರಿಸಿದ ಘನವಿದ್ವಾಂಸರು. ಸುಮಾರು ನಲವತ್ತಕ್ಕೂ ಹೆಚ್ಚಿನ ಸತ್ತ್ವಪೂರ್ಣವೂ, ವೈಚಾರಿಕವೂ, ಸಂಶೋಧನಾತ್ಮಕವೂ ಆದ ಕೃತಿಗಳಿಂದ ಸರ್ವಭಾಷಾಮಯಿ ಸರಸ್ವತಿಯ ಮಡಿಲ ತುಂಬಿದವರು. ಕಾವ್ಯ, ನಾಟಕ, ಕಾದಂಬರಿ, ಕಥೆ, ವಿಮರ್ಶೆ, ಕಾವ್ಯ ಮೀಮಾಂಸೆ, ಸಂಶೋಧನೆ - ಈ ಎಲ್ಲಾ ಪ್ರಕಾರಗಳಲ್ಲೂ ಕೃಷಿಗೈದಿರುವ ಇವರು ಪ್ರತಿಯೊಂದರಲ್ಲೂ ತಮ್ಮತನದ ಮುದ್ರೆಯನ್ನೊತ್ತಿದ್ದಾರೆ.

ಡಾ. ಸ್ವಾಮಿ ಅವರ ಬದುಕು 'ಸರಳ ಜೀವನ, ಉದಾತ್ತ ಚಿಂತನ' ತತ್ತ್ವಕ್ಕೆ ದೃಷ್ಟಾಂತವಾಗಿದೆ. ಗಾಂಧೀವಾದಿಗಳಾದ ಅವರು ಅಪ್ಪಟ ಖಾದೀಧಾರಿಗಳು. ನಿರಾಡಂಬರಕ್ಕೆ ಮತ್ತೊಂದು ಹೆಸರು ತಿಪ್ಪೇರುದ್ರಸ್ವಾಮಿ. ಅವರ ವ್ಯಕ್ತಿಜೀವನ ಎಷ್ಟು ಪರಿಶುದ್ಧವೋ ಅವರ ಬರವಣಿಗೆಯೂ ಅಷ್ಟೇ ಶುದ್ಧ, ಪರಿಣಾಮಕಾರಿ. ಡಾ. ಸ್ವಾಮಿ ಬದುಕಿನುದ್ದಕ್ಕೂ ಕೇವಲ ಸ್ವಸಾಮರ್ಥ್ಯದಿಂದ ಮೇಲೇರಿ ಬಂದವರು.

ರಾಜ್ಯ ಸಾಹಿತ್ಯ ಅಕಾಡೆಮಿ 1962ರಲ್ಲಿ ಅವರ 'ಪರಿಪೂರ್ಣದೆಡೆಗೆ' ಕಾದಂಬರಿಗೆ ಪುರಸ್ಕಾರ ನೀಡಿತು. 1968ರಲ್ಲಿ ಅವರ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಗ್ರಂಥಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರೆತು, ಅವರು ಚಿಕ್ಕವಯಸ್ಸಿನಲ್ಲಿಯೇ ಅಂಥ ದೊಡ್ಡ ಗೌರವ ಪಡೆದ ಗಣ್ಯ ಸಾಹಿತಿಯೆನಿಸಿದರು.

ಡಾ. ತಿಪ್ಪೇರುದ್ರಸ್ವಾಮಿಯವರು ವೃತ್ತಿಯಲ್ಲಿ ಕನ್ನಡ ಅಧ್ಯಾಪಕರು. ಕನ್ನಡ ಭಾಷಾ ಸಾಹಿತ್ಯವನ್ನು ಬೋಧಿಸಲು ಹೇಳಿಮಾಡಿಸಿದಂತಿರುವ ಅವರು ಅತ್ಯಂತ ಜನಪ್ರಿಯ ಅಧ್ಯಾಪಕರೆನಿಸಿದ್ದರು. ಪ್ರಗತಿಪಥದಲ್ಲಿ ಸಾಗಿಬಂದ ಅವರು ವಿವಿಧ ಸಂದರ್ಭಗಳಲ್ಲಿ ಅಧಿಕಾರಿಯಾಗಿ ಆಡಳಿತ ನಿರ್ವಹಿಸಬೇಕಾಯಿತು. ಅದರಲ್ಲಿಯೂ ಸಹ ಅವರು ಯಶಸ್ವಿಯಾದರು.

ಡಾ. ಸ್ವಾಮಿ ಅಸಾಧಾರಣ ವಾಕ್ಪಟುತ್ವವುಳ್ಳವರು. ಪಂಡಿತ ಪಾಮರರಿಬ್ಬರಿಗೂ ಹಿಡಿಸುವಂತೆ ಸಂದರ್ಭೋಚಿತವಾಗಿ ಮಾತನಾಡುವ ಕಲೆ ಅವರಿಗೆ ದೈವದತ್ತವಾಗಿ ಬಂದಿದೆ. ನಿವೃತ್ತರಾದ ಮೇಲೂ ಅವರಿಗೆ ಕೈತುಂಬ ಕೆಲಸ, ಬರವಣಿಗೆಯಂತೂ ಸರಿಯೇ ಸರಿ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಅವರು ರಚನಾತ್ಮಕ ಚಟುವಟಿಕೆಗಳ ಸ್ಫೂರ್ತಿ ಕೇಂದ್ರವಾಗಿದ್ದಾರೆ. 'ಶರಣರ ಇರವ ನೆನೆನೆನೆದು ಶರಣನಾದೆನಯ್ಯ' ಎಂಬ ಸಿದ್ಧರಾಮನ ಮಾತಿನಂತೆ, ಶಿವಶರಣರನ್ನು ಕುರಿತ ಅಧ್ಯಯನದಿಂದ ಡಾ. ತಿಪ್ಪೇರುದ್ರಸ್ವಾಮಿ ಅವರು ಮಾಗಿದ್ದಾರೆ. ಜೊತೆಗೆ ಗಾಂಧೀಜಿಯವರ ವಿಚಾರಧಾರೆಯನ್ನು ಮೈಗೂಡಿಸಿಕೊಂಡಿದ್ದಾರೆ.

ಡಾ. ತಿಪ್ಪೇರುದ್ರಸ್ವಾಮಿಯವರು ಕನ್ನಡದ ಹೋರಾಟಗಾರರು. ಕನ್ನಡಕ್ಕೆ ಧಕ್ಕೆ ಒದಗಿದಾಗ ಪ್ರತಿಭಟಿಸಿ ನಿಂತ ವೀರ ಕನ್ನಡಿಗ ಅವರು. ಕನ್ನಡದ ಪರ ಹೋರಾಡುವ ಪ್ರಸಂಗ ಬಂದಾಗಲೆಲ್ಲಾ ಅವರು ಮುಂಚೂಣಿಯಲ್ಲಿ ನಿಂತಿದ್ದಾರೆ. ಅಷ್ಟೇ ಅಲ್ಲ, ರಚನಾತ್ಮಕವಾಗಿ ಕನ್ನಡ ಕಟ್ಟುವ ಮಣಿಹದಲ್ಲಿ

ತ್ರಿಕರಣಪೂರ್ವಕವಾಗಿ ದುಡಿದಿದ್ದಾರೆ. ಡಾ. ಸ್ವಾಮಿಯವರ ವ್ಯಕ್ತಿತ್ವದ ಎರಡು ಪ್ರಧಾನ ಗುಣಗಳೆಂದರೆ ನಿಸ್ವಾರ್ಥ ಮನೋಧರ್ಮ ಹಾಗೂ ನಿಷ್ಪಕ್ಷಪಾತ ನಿಲವು. ಈ ಮಹದ್ಗುಣ ಅವರನ್ನು ದೊಡ್ಡವರನ್ನಾಗಿ ಮಾಡಿವೆ.

**ಜೀವನ:** ಡಾ. ಹೆಚ್. ತಿಪ್ಪೇರುದ್ರಸ್ವಾಮಿ ಅವರು ಕನ್ನಡನಾಡಿನ ಪ್ರಕೃತಿ ಸೊಬಗಿನ ಬೀಡಾದ ಮಲೆನಾಡಿನವರು. ಶಿವಮೊಗ್ಗ ಜಿಲ್ಲೆಯ ತಾಲ್ಲೂಕು ಕೇಂದ್ರ ಹೊನ್ನಾಳಿ-ತುಂಗಭದ್ರೆಯ ದಡದಲ್ಲಿರುವ ಊರು. ಅಲ್ಲಿನ ಒಂದು ಬಡ ಜಂಗಮ ಮನೆತನದ ಚನ್ನಮಲ್ಲಯ್ಯ ಮತ್ತು ಬಸಮ್ಮನವರ ಮಗನಾಗಿ ಸ್ವಾಮಿ 1928ನೆಯ ಫೆಬ್ರವರಿ 3ನೇ ತಾರೀಖು ಸೋಮವಾರ ಹುಟ್ಟಿದರು. ಮೂರನೇ ತಿಂಗಳಲ್ಲೇ ತಾಯಿಯನ್ನು ಕಳೆದುಕೊಂಡು ಅಜ್ಜಿ ಚನ್ನಮ್ಮನ ಆರೈಕೆಯಲ್ಲಿ ಬೆಳೆದರು. ಅಜ್ಜ ಶಾಲಾ ಮಾಸ್ತರು, ಹತ್ತಿರದ ಹಳ್ಳಿಗಳಲ್ಲಿ ಶಾಲೆಗಳನ್ನು ನಡೆಸುತ್ತಿದ್ದರು. ಸದಾಚಾರ ಸಂಪನ್ನರು. ಅಜ್ಜಿಯೂ ಸಹ ಸಂಸ್ಕೃತಿಸಂಪನ್ನೆ; ಗುಪ್ತಸಾಧಕಿ. ಇವರ ಧಾರ್ಮಿಕ ಶ್ರದ್ಧೆ, ಆಚಾರನಿಷ್ಠೆ, ಸರ್ವಭೂತ ರಹಿತ, ಸರಳ ಸಂತೃಪ್ತ ಜೀವನಗಳು ಬಾಲಕ ಸ್ವಾಮಿಯವರ ಮೇಲೆ ಪ್ರಭಾವ ಬೀರಿದವು. ಅಜ್ಜಿ ಬಸವಾದಿ ಪ್ರಮಥರ ವಚನಗಳನ್ನು, ನಿಜಗುಣರು, ಸರ್ಪಭೂಷಣರು, ಶಂಕರಾನಂದರು ಮೊದಲಾದವರ ಹಾಡುಗಳನ್ನು, ತತ್ವಪದಗಳನ್ನು ಹಾಡುತ್ತಿದ್ದರು. ಇಂಥ ಪರಿಸರದಲ್ಲಿ ಸ್ವಾಮಿ ಬೆಳೆದರು. ತಂದೆಯದು ವೈದ್ಯವೃತ್ತಿ. ಊರಿಂದ ಊರಿಗೆ ವರ್ಗಾವಣೆಯಾಗುತ್ತಿತ್ತು. ಸ್ವಾಮಿಯವರ ಪ್ರಾಥಮಿಕ ವಿದ್ಯಾಭ್ಯಾಸ ಹೊನ್ನಾಳಿ, ಶಿರಾಳಕೊಪ್ಪಗಳಲ್ಲಿ ನಡೆಯಿತು. ಆನವಟ್ಟಿಯ ಉಚಿತ ವಿದ್ಯಾರ್ಥಿ ನಿಲಯದಲ್ಲಿದ್ದುಕೊಂಡು ಓದು ಮುಂದುವರಿಸಿದರು. ಒಳ್ಳೆಯ ಉಪಾಧ್ಯಾಯರು ದೊರೆತರು. ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಓದಿಗೆ ಆಗ ಶಿವಮೊಗ್ಗಕ್ಕೆ ಅಥವಾ ದಾವಣಗೆರೆಗೆ ಹೋಗಬೇಕಿತ್ತು. ಶಿವಮೊಗ್ಗದ ಎನ್.ಡಿ.ವಿ. ಹಾಸ್ಟಲಿನಲ್ಲಿದ್ದುಕೊಂಡು ಹೈಸ್ಕೂಲಿಗೆ ಸೇರಿದರು.

ಆಗ ಭರತಖಂಡದಲ್ಲಿ ಸ್ವಾತಂತ್ರ್ಯಹೋರಾಟ ನಡೆದಿತ್ತು. 1942ರ ಕ್ವಿಟ್ ಇಂಡಿಯಾ ಚಳವಳಿಯ ಕಾವು ಎಲ್ಲ ಕಡೆ ಹಬ್ಬಿತು. ಶಾಲಾ ಕಾಲೇಜುಗಳನ್ನು ಬಹಿಷ್ಕರಿಸಲು ವಿದ್ಯಾರ್ಥಿಗಳಿಗೆ ಕರೆ ನೀಡಲಾಯಿತು. ಆ ಚಳವಳಿಯಲ್ಲಿ ಮುಗ್ಧಬಾಲಕ ಸ್ವಾಮಿ ಕೂಡ ಉತ್ಸಾಹದಿಂದ ಭಾಗವಹಿಸಿದರು.. ಆಗಲೇ ಅವರು ಖಾದಿವ್ರತ ಕೈಗೊಂಡಿದ್ದು. ಬಾಳಿನುದ್ದಕ್ಕೂ ಅವರು ಅದನ್ನು ಏಕನಿಷ್ಠೆಯಲ್ಲಿ ನಡೆಸಿಕೊಂಡು ಬಂದರು. ಸ್ವಾತಂತ್ರ್ಯ ಹೋರಾಟದ ಬಿಸಿ ಆರುವ ಹೊತ್ತಿಗೆ ಹಿಂದೂ-ಮುಸ್ಲಿಂ ಗಲಾಟೆ ಆರಂಭವಾಯಿತು. ಅದೇ ವೇಳೆಗೆ ಅವರ ಚಿಕ್ಕಪ್ಪ ತೀರ್ಥಹಳ್ಳಿಗೆ ವರ್ಗವಾಗಿ ಬಂದರು. ಡಾ. ಸ್ವಾಮಿ ತೀರ್ಥಹಳ್ಳಿಯ ಪ್ರೌಢಶಾಲೆಗೆ ಸೇರಿ ಓದು ಮುಂದುವರಿಸಿದರು. ಅಲ್ಲಿದ್ದ ಕನ್ನಡ ಪಂಡಿತರು ಕನ್ನಡದ ಬಗ್ಗೆ ಆಸಕ್ತಿ ಬೆಳೆಸಿದರು. ಅವರ ಪುಸ್ತಕಭಂಡಾರ ಸ್ವಾಮಿ ಅವರಿಗೆ ತೆರೆಯಿತು. ಆ ಗ್ರಂಥರಾಶಿ ನೋಡಿ ತಾನೂ ಸಹ ಪುಸ್ತಕ ಸಂಗ್ರಹಿಸಬೇಕೆಂಬ ಸಂಕಲ್ಪ ಮಾಡಿದರು. ಶಾಲೆಯಲ್ಲಿ ಕೈಬರಹದ ಭಿತ್ತಿಪತ್ರಿಕೆ ಹೊರಡುತ್ತಿದ್ದು ವಿದ್ಯಾರ್ಥಿಗಳಿಂದ ಕವನ, ಲೇಖನಗಳನ್ನು ಬರೆಸಿ, ಪ್ರಕಟಿಸಿ ಪ್ರೋತ್ಸಾಹಿಸುತ್ತಿದ್ದರು. ಡಾ. ಸ್ವಾಮಿಯವರಿಗೆ ಕನ್ನಡದ ಮೇಲಿನ ಒಲವು ಇಲ್ಲಿ ಅಂಕುರಾರ್ಪಣವಾಯಿತೆನ್ನಬಹುದು.

ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿದ ಸ್ವಾಮಿ ಮುಂದೆ ಶಿವಮೊಗ್ಗದ ಇಂಟರ್‌ಮೀಡಿಯಟ್ ಕಾಲೇಜನ್ನು ಸೇರಿದರು. ಹಾಸ್ಟಲಿನಲ್ಲಿ ವಾಸ್ತವ್ಯ. ವಿಜ್ಞಾನ ವಿಷಯವನ್ನು ಐಚ್ಛಿಕವಾಗಿ ಆರಿಸಿಕೊಂಡರು. ಅವರು ಡಾಕ್ಟರಾಗಬೇಕೆಂದು ಮನೆಯವರೆಲ್ಲರ ಆಸೆ. ಎಲ್.ಎಂ.ಪಿ.ಗೆ ಅರ್ಜಿ ಹಾಕಿಸಿದ್ದರು, ಸೀಟೂ ಸಿಕ್ಕಿತು. ಆದರೆ ಎಂ.ಬಿ.ಬಿ.ಎಸ್. ಮಾಡುತ್ತೇನೆಂದು ಅದನ್ನು ಬಿಟ್ಟು ಕಾಲೇಜು ಸೇರಿದ್ದರು. ಇಂಟರ್‌ಮೀಡಿಯಟ್ ಮೊದಲ ವರ್ಷ ಮುಗಿಯುವುದರೊಳಗಾಗಿ ಅವರ ಆಸಕ್ತಿ ಬದಲಾಗಹತ್ತಿತ್ತು. ಕುವೆಂಪು ಅವರ ಕೃತಿಗಳನ್ನು ಆಸಕ್ತಿಯಿಂದ ಓದುತ್ತಾ ಓದುತ್ತಾ ಹಿಂದೆ ಅಂಕುರಾರ್ಪಣವಾಗಿದ್ದ ಕನ್ನಡದ ಒಲವು ಈಗ ಎಲೆಯಿಟ್ಟಿತ್ತು. ಊರಿಗೆ ಬಂದಾಗ ತಮ್ಮ ಅಜ್ಜ ಸಂಗ್ರಹಿಸಿ ಅಟ್ಟದ ಮೇಲೆ ಇಟ್ಟಿದ್ದ ಹಳೆಯ ಓಲೆಗರಿ ಗ್ರಂಥಗಳನ್ನು, ಕಾಗದ ಹಸ್ತಪ್ರತಿಗಳನ್ನು ಕೆಳಗಿಳಿಸಿ ಓದಲು ಪ್ರಯತ್ನಿಸತೊಡಗಿದರು. ತಮ್ಮ ಅಧ್ಯಯನಕ್ಕೆ ಸಂಬಂಧಿಸಿದ ವಿಷಯಗಳೇ ಅಲ್ಲದೆ ಸಾಹಿತ್ಯಕ ಹಾಗೂ ಧಾರ್ಮಿಕ ಗ್ರಂಥಗಳನ್ನು ಅಧ್ಯಯನ ಮಾಡತೊಡಗಿದರು. ಅದೇ ಸಮಯಕ್ಕೆ ಕುವೆಂಪು ಅವರ ಪ್ರಭಾವವೂ ಮತ್ತಷ್ಟು ಗಾಢವಾಯ್ತು. ಹೀಗಾಗಿ ಇಂಟರ್‌ಮೀಡಿಯಟ್ ಮುಗಿಸುವುದರೊಳಗಾಗಿ ಡಾಕ್ಟರ್ ಆಗಬೇಕೆಂಬ ಆಸೆ ಹೋಗಿ ಕುವೆಂಪುರವರ ವಿದ್ಯಾರ್ಥಿಯಾಗಬೇಕೆಂಬ ನಿರ್ಧಾರ ಖಚಿತವಾಗತೊಡಗಿತ್ತು.

ಅವರು ಮೈಸೂರಿಗೆ ಮೊದಲ ಸಲ ಬಂದು ಸುತ್ತೂರು ಸ್ವಾಮಿಗಳಲ್ಲಿ ಆಶ್ರಯ ಬೇಡಿದ್ದು, ವಿಜ್ಞಾನದ ವಿದ್ಯಾರ್ಥಿಗಳಿಗೆ ಕನ್ನಡ ಆನರ್ಸ್‌ಗೆ ಸೀಟು ಕೊಡದೆ ಇರುವ ಪ್ರಸಂಗವಿದ್ದಾಗಲೂ ಸ್ವತಃ ಕುವೆಂಪು ಅವರನ್ನೇ ಮನೆಯಲ್ಲಿ ಭೇಟಿಮಾಡಿ ಸೀಟು ದೊರಕಿಸಿಕೊಂಡದ್ದು-ಇವೆಲ್ಲಾ ರೋಮಾಂಚಕಾರಿ ಕಥೆಯಂತಿವೆ. ಹಳ್ಳಿಯ ಒಬ್ಬ ಮುಗ್ಧ ಹುಡುಗ ಕಾಣದ ಜಾಗಕ್ಕೆ ಬಂದು ಯಾರ ಒತ್ತಾಸೆಯಿಲ್ಲದೆ ತನಗೆ ಪ್ರಿಯವೆನಿಸುವ ಅಧ್ಯಯನವನ್ನು ಮಾಡಲು ಅನುಕೂಲ ಕಲ್ಪಿಸಿಕೊಂಡದ್ದು, ಅಶನ ವಸತಿಗೆ ಏರ್ಪಾಡು ಮಾಡಿಕೊಂಡದ್ದು ಆ ಕಾಲಕ್ಕೆ ಸಾಹಸವೇ ಎನ್ನಬೇಕು!

ಏನೇ ತೊಂದರೆಗಳು ಬಂದಿರಲಿ, ಸ್ವಾಮಿಯವರ ಅದೃಷ್ಟ ದೊಡ್ಡದು. ಏಕೆಂದರೆ ಕನ್ನಡದ ದಿಗ್ಗಜರೆನಿಸಿದ ಪ್ರಾಧ್ಯಾಪಕರ ಪದತಲದಲ್ಲಿ ಕಲಿಯುವ ಅವಕಾಶ ಸಿಕ್ಕಿತು. ಶ್ರೀ ಕುವೆಂಪು, ಎನ್. ಅನಂತರಂಗಾಚಾರ್, ಡಿ.ಎಲ್.ನರಸಿಂಹಾಚಾರ್, ಕ.ವೆಂ. ರಾಘವಾಚಾರ್, ಎಸ್.ವಿ. ಪರಮೇಶ್ವರ ಭಟ್ಟ, ದೇ. ಜವರೇಗೌಡ, ಯು.ಕೆ. ಸುಬ್ಬರಾಯಾಚಾರ್, ರಾಳ್ಳಪಳ್ಳಿ ಅನಂತಕೃಷ್ಣ ಶರ್ಮ, ಡಾ. ಎಸ್. ಶ್ರೀಕಂಠಶಾಸ್ತ್ರೀ ಮೊದಲಾದವರು ಅಧ್ಯಾಪಕರಾಗಿದ್ದರು. 1951ರಲ್ಲಿ ಆನರ್ಸ್ ಮುಗಿಯಿತು. ಪ್ರಥಮ ದರ್ಜೆ ಮತ್ತು ಪ್ರಥಮ ರ್‍ಯಾಂಕ್ ಪಡೆದು ಉತ್ತೀರ್ಣರಾದರು. ಅನಂತರ ಒಂದು ವರ್ಷದ ಎಂ.ಎ. ಅಭ್ಯಾಸ ಮುಂದುವರಿಸಿದರು. 1952ರಲ್ಲಿ ಎಂ.ಎ. ಪರೀಕ್ಷೆಯಲ್ಲೂ ಪ್ರಥಮ ರ್‍ಯಾಂಕ್‌ನಲ್ಲಿ ಪಾಸಾದರು. ಫಲಿತಾಂಶ ಬರುವ ಮುಂಚೆಯೇ ಅವರನ್ನು ಹಾಸನದ ಕಾಲೇಜಿಗೆ ಕನ್ನಡ ಅಧ್ಯಾಪಕರನ್ನಾಗಿ ನೇಮಿಸಿದ್ದರು.

ಕನ್ನಡದ ಪ್ರಾಚೀನ ಕಾವ್ಯ ಮತ್ತು ಶಾಸ್ತ್ರಗಳ ಅಧ್ಯಯನದ ಜೊತೆಗೆ ಪಾಶ್ಚಾತ್ಯ ಸಾಹಿತ್ಯದ ಹಿನ್ನೆಲೆಯಲ್ಲಿ ತೌಲನಿಕವಾಗಿ ಅಧ್ಯಯನ ಮಾಡಿದ್ದರು. ಆಲೂರು ವೆಂಕಟರಾಯರ 'ಕರ್ನಾಟಕ ಗತವೈಭವ' ಮೊದಲಾದ ಕೃತಿಗಳನ್ನು ಓದಿ ಕನ್ನಡನಾಡಿನ ಸಾಂಸ್ಕೃತಿಕ ಇತಿಹಾಸದ ಅಧ್ಯಯನ ಮಾಡಬೇಕೆಂದುಕೊಂಡರು. ಅವರ ವಿದ್ಯಾರ್ಥಿಜೀವನದ ಕೊನೆಯ ಭಾಗ ಅವರಿಗೆ ನಿಜವಾದ ಅರ್ಥದಲ್ಲಿ 'ತಪೋರಂಗ'ವಾಗಿತ್ತು. ರಾಮಕೃಷ್ಣ ಪರಮಹಂಸ, ಅರವಿಂದ ಘೋಷರ ವಿಚಾರಗಳನ್ನು ತಿಳಿದರು. ಉಪನಿಷತ್ತು, ಭಗವದ್ಗೀತೆಗಳ

ಪರಿಚಯವೂ ಆಯಿತು. ಶ್ರೀ ಕುವೆಂಪು ಬೋಧನೆಯಂತೆ ನಿರಂಕುಶಮತಿಯಾಗಿ ವೈಚಾರಿಕದೃಷ್ಟಿಯಿಂದ ನೋಡುವ ಕಲೆ ಅವರಿಗೆ ಸಿದ್ಧಿಸಿತ್ತು. ಅದರ ಫಲ ಅವರ ಯಶಸ್ವಿಯಾದ ಅಧ್ಯಾಪನ ಹಾಗೂ ಅನರ್ಘ್ಯ ಕೃತಿರಚನೆ. ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಅವರ ಒಂದೆರಡು ಕಥೆಗಳು, ಕವನಗಳು, ಪ್ರಬಂಧಗಳು 'ಪ್ರಬುದ್ಧ ಕರ್ನಾಟಕ'ದಲ್ಲಿ ಪ್ರಕಟವಾಗಿದ್ದವು.

1952ರಿಂದ 1959ರ ವರೆಗೆ ಡಾ. ಸ್ವಾಮಿ ಹಾಸನದ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ಅಧ್ಯಾಪಕ ವೃತ್ತಿಯನ್ನು ಅವರು ಪ್ರೀತಿಸಿದರು. ಅದು ಅವರಿಗೆ ಹೊರೆಯಾಗದೆ ಅವರ ಅಧ್ಯಯನಶೀಲತೆಗೆ ಅನುಗುಣವಾಗಿತ್ತು. ಅವರು ಬರೀ ಕಾಲೇಜಿನ ಪಾಠಕ್ಕಷ್ಟೇ ಅಂಟಿಕೊಳ್ಳದೆ ಪಾಠೇತರ ಚಟುವಟಿಕೆಗಳ ಕಡೆಗೆ ಹೆಚ್ಚು ಆಸಕ್ತಿ ತೋರಿದರು. ಕಾಲೇಜಿನಲ್ಲಿ ಕನ್ನಡ ಸಂಘ ಆರಂಭಿಸಿದರು. 1954ರಲ್ಲಿ ಭಾವಗೀತೆ (ಪರಿಚಯ) ಎಂಬ ಚಿಕ್ಕ ಪುಸ್ತಕ ಪ್ರಕಟವಾಯಿತು. ಷಡಕ್ಷರಿ ಕವಿಯ 'ವೃಶಭೇಂದ್ರ ವಿಜಯ'ದಲ್ಲಿ ಬರುವ ಕಥೆಗಳನ್ನು ಸಂಗ್ರಹಿಸಿ 'ಶರಣ ಚರಿತ ಮಾನಸ'ವೆಂಬ ಹೆಸರಿನಿಂದ ಪ್ರಕಟಿಸಿದರು.

ಅವರಿಗೆ ಅನಂತರ ಸಂಶೋಧನೆ ಮಾಡುವ ಹಿರಿಯಾಸೆಯುಂಟಾಯಿತು. ಪಿಎಚ್.ಡಿ.ಗಾಗಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನೋಂದಾಯಿಸಿ ಕನ್ನಡ ಪ್ರಾಧ್ಯಾಪಕ ಸ.ಸ. ಮಾಳವಾಡ ಅವರ ಮಾರ್ಗದರ್ಶನದಲ್ಲಿ 'ಶರಣರ ಅನುಭಾವ ಸಾಹಿತ್ಯ' ಎಂಬ ಮಹಾ ಪ್ರಬಂಧವನ್ನು ಸಿದ್ಧಪಡಿಸತೊಡಗಿದರು. ಈ ನಡುವೆ 'ರಾಮಾಯಣ ದರ್ಶನ' ಮಹಾಕಾವ್ಯದ ಮೇಲೆ ಬರೆದ ಲೇಖನಮಾಲೆ (12)ಯನ್ನು 'ಜನಪ್ರಗತಿ'ಯಲ್ಲಿ ಪ್ರಕಟಿಸಿದರು. 'ತಪೋರಂಗ' ಎಂಬ ಕವನಸಂಕಲನ, 'ಸಾಹಿತ್ಯ ಚಿತ್ರಗಳು' ಎಂಬ ಕಥಾಸಂಕಲನ, 'ವಿಧಿ ಪಂಜರ' ಎಂಬ ರುದ್ರನಾಟಕ ಹಾಗೂ ಒಂದು ಚಾರಿತ್ರಿಕ ಕಾದಂಬರಿ ಪ್ರಕಟವಾದವು.

ಪಿಎಚ್. ಡಿ. ಸಂಶೋಧನೆಯ ಕೆಲಸ ನಡೆದಿತ್ತು. ಆಳವಾದ ಅಧ್ಯಯನ, ಮಾಹಿತಿ ಸಂಗ್ರಹ ಸಾಗಿತ್ತು. ಆಗ ಶರಣರ ಬದುಕನ್ನು ಕುರಿತು ಜನಪ್ರಿಯವಾದ ಕಾದಂಬರಿ ಮಾಧ್ಯಮದಲ್ಲಿ ಕೃತಿ ರಚಿಸಬೇಕೆಂದು ನಿರ್ಧಾರ ಮಾಡಿದರು. ಈ ಬಗ್ಗೆ ಮತ್ತಷ್ಟು ಕೃಷಿ ಮಾಡಿದರು. ಅದರ ಫಲವೇ 'ಪರಿಪೂರ್ಣದೆಡೆಗೆ'-ಅಲ್ಲಮಪ್ರಭುವನ್ನು ಕುರಿತ ಕಾದಂಬರಿ. ಆ ಕಾದಂಬರಿ ವಿಶೇಷವಾದ ಜನಾದರಣೆಯನ್ನು ಪಡೆಯಿತು. ರಾಜ್ಯ ಸಾಹಿತ್ಯ ಅಕಾಡೆಮಿಯ ಪುರಸ್ಕಾರವನ್ನು ದೊರಕಿಸಿಕೊಟ್ಟಿತು. ಇನ್ನೂ ಕೆಲವು ಶರಣರ ಜೀವನವನ್ನು ಚಿತ್ರಿಸಲು ಒಳ್ಳೆಯ ಪ್ರೇರಣೆಯನ್ನು ನೀಡಿತು. 1959ರ ವೇಳೆಗೆ ಮಹಾ ಪ್ರಬಂಧದ ಬರವಣಿಗೆ ಕೊನೆಗೊಂಡು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದರು. 1962ಕ್ಕೆ ಅವರ ಸಂಶೋಧನ ಪ್ರಬಂಧ 'ಶರಣರ ಅನುಭಾವ ಸಾಹಿತ್ಯ' ಒಪ್ಪಿಗೆಯಾಗಿ ಅವರಿಗೆ ಪಿಎಚ್‌ಡಿ. ಪದವಿ ದೊರಕಿತು.

ತರಳಬಾಳು ಜಗದ್ಗುರುಗಳೊಡನೆ ಶ್ರೀಶೈಲದ ಕದಳಿಯ ಪ್ರವಾಸ ಮಾಡಿ ಬಂದನಂತರ 'ಕದಳಿಯ ಕರ್ಪೂರ'- ಅಕ್ಕಮಹಾದೇವಿಯ ಬದುಕನ್ನು ಕುರಿತ ಕಾದಂಬರಿಯನ್ನು ಬರೆದರು. ಅವರ 'ಅನುಭಾವ ಸಾಹಿತ್ಯ'ವೂ ಸಹ ಪ್ರಕಟವಾಯಿತು. ಅನಂತರ ಸಾಲುಸಾಲಾಗಿ ಅವರ ನಾಲ್ಕಾರು ಕಾದಂಬರಿಗಳು, ವಿಮರ್ಶಾಗ್ರಂಥಗಳು, ಶೂನ್ಯಸಂಪಾದನೆಯನ್ನು ಕುರಿತ ಗ್ರಂಥಗಳು ಹೊರಬಂದವು. ಪುಲಿಕೇಶಿಯನ್ನು ಕುರಿತ 'ಸತ್ಯಾಶ್ರಯ ಸಾಮ್ರಾಜ್ಯ' ಪ್ರೌಢದೇವರಾಯನನ್ನು ಕುರಿತ 'ವಿಜಯ ಕಲ್ಯಾಣ', ಹರಿಹರ-ರಾಘವಾಂಕರನ್ನು ಕುರಿತ 'ವಚನ ವಿರೂಪಾಕ್ಷ'- ಐತಿಹಾಸಿಕ ಕಾದಂಬರಿಗಳು ಬಂದವು. ಇದೇ ವೇಳೆಗೆ ಬಸವಣ್ಣನವರನ್ನು ಕುರಿತಾದ ಕಾದಂಬರಿಯನ್ನು ಬರೆಯಬೇಕೆಂದು ಸಂಕಲ್ಪಿಸಿ ವಿಶೇಷ ಅಧ್ಯಯನದಲ್ಲಿ ತೊಡಗಿದರು.

1964ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ನವಶಖೆ ಆರಂಭವಾಯಿತು. 'ಮಾನಸಗಂಗೋತ್ರಿ' ರೂಪುಗೊಂಡಿತು. ಅಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಆರಂಭವಾಯಿತು. ಅಲ್ಲಿನ ಅಧ್ಯಾಪಕ ಹುದ್ದೆಗೆ ಡಾ. ಸ್ವಾಮಿ ಅರ್ಜಿ ಸಲ್ಲಿಸಿದರು. ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಅಧ್ಯಾಪಕರಾಗಿ ಆಯ್ಕೆಯಾದುದು ಡಾ. ಸ್ವಾಮಿ ಅವರ ಜೀವನದಲ್ಲಿ ಒಂದು ಮಹತ್ವ ಘಟ್ಟ. 1964ರಿಂದ 1974ರ ವರೆಗೆ ಅವರು ಅಲ್ಲಿದ್ದರು. ಆಗ ಅವರ ದೃಷ್ಟಿ ಕರ್ನಾಟಕ ಸಂಸ್ಕೃತಿಯ ಕಡೆಗೆ ಹೊರಳಿತು. ಶೈಕ್ಷಣಿಕ ಪ್ರವಾಸ ಹೋದಾಗ ಅದಕ್ಕೆ ಉತ್ತಮ ಪ್ರೇರಣೆಯೂ ಸಿಕ್ಕಿತು. ಹೀಗೆ ಅವರ ನಿರಂತರ ಅಧ್ಯಯನ-ಸಂಶೋಧನೆಯ ಫಲ 800 ಪುಟಗಳಿಗೂ ಮಿಕ್ಕಿದ ಬೃಹತ್ ಕೃತಿ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ'ಯು 1968ರಲ್ಲಿ ಹೊರಬಂತು. ಇದು ಅವರಿಗೆ ರಾಷ್ಟ್ರೀಯ ಮಟ್ಟದ ಪ್ರಶಸ್ತಿಯನ್ನು ತಂದಿತು.

ಮಾನಸಗಂಗೋತ್ರಿಯ ಗಾಂಧೀಭವನದ ನಿರ್ದೇಶಕರಾಗಿ ನೇಮಕಗೊಂಡಾಗ ಗಾಂಧೀವಾದಿಗಳಾಗಿದ್ದ ಡಾ. ಸ್ವಾಮಿ ಅವರು ಈ ಸಂದರ್ಭವನ್ನು ಉಪಯೋಗಿಸಿಕೊಂಡು ಅನೇಕ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ನೆರವೇರಿಸತೊಡಗಿದರು. ಅವುಗಳಲ್ಲಿ ಹಿಂದುಳಿದ ಗ್ರಾಮಗಳನ್ನು ದತ್ತು ಸ್ವೀಕರಿಸಿ ಅವುಗಳ ಅಭಿವೃದ್ಧಿಗೆ ಶ್ರಮಿಸಿದ್ದು, ತಂಡೂಲ್ಕರರ 'ಮಹಾತ್ಮ' ಗ್ರಂಥದ ಎಂಟು ಸಂಪುಟಗಳನ್ನು ಕನ್ನಡಕ್ಕೆ ತರುವ ಕಾರ್ಯ ಕೈಗೊಂಡದ್ದು-ಇವನ್ನು ಹೆಸರಿಸಬಹುದು.

ಈ ಹೊತ್ತಿಗೆ ಅವರ ಗಮನ ಕಾವ್ಯಮೀಮಾಂಸೆಯನ್ನು ಕುರಿತು ಭಾರತೀಯ ಮತ್ತು ಪಾಶ್ಚಿಮಾತ್ಯರು ತಳೆದ ದೃಷ್ಟಿಯ ಕಡೆ ಹೊರಳಿತು. ಆ ನಿಟ್ಟಿನಲ್ಲಿ ಅಧ್ಯಯನ ನಡೆಸಿದರು.

1974ರಲ್ಲಿ ಶಿವಮೊಗ್ಗ ಜಿಲ್ಲೆಯ ಭದ್ರಾ ಜಲಾಶಯದಲ್ಲಿ ಮೈಸೂರು ವಿಶ್ವವಿದ್ಯಾಲಯ ಒಂದು ಸ್ನಾತಕೋತ್ತರ ವಿಭಾಗವನ್ನು ತೆರೆಯಿತು. ಡಾ. ಹೆಚ್. ತಿಪ್ಪೇರುದ್ರಸ್ವಾಮಿ ಅವರನ್ನು ಅದರ ನಿರ್ದೇಶಕರನ್ನಾಗಿ ನೇಮಕ ಮಾಡಿತು. ಅವರು ಹೊಸದಾಗಿ ಆರಂಭವಾದ ಆ ಸಂಸ್ಥೆಯನ್ನು ಕಟ್ಟಲು ಹಲವಾರು ವರ್ಷ ಶ್ರಮಿಸಿದರು. ಸಾರ್ವಜನಿಕರ, ಅಧ್ಯಾಪಕರ ಹಾಗೂ ವಿದ್ಯಾರ್ಥಿಗಳ ಸಹಕಾರದಿಂದ ಅಲ್ಲಿ ಶೈಕ್ಷಣಿಕ ವಾತಾವರಣವನ್ನು ಮೂಡಿಸಲು ಶ್ರಮಿಸಿದರು. ಅವರು ಅಲ್ಲಿ ಹತ್ತು ವರ್ಷ ಕಾಲ ನಡೆಸಿದ ಚಟುವಟಿಕೆಗಳು ದಾಖಲೆಯನ್ನೇ ನಿರ್ಮಿಸಿವೆ.

ಕ್ಲೇಶಗಳ ನಡುವೆಯೂ ಅವರ ಅಧ್ಯಯನ ನಡೆದೇ ಇತ್ತು. ಬರವಣಿಗೆಯೂ ನಿರಂತರವಾಗಿ ಸಾಗಿತ್ತು. ನಿಜಗುಣ ಶಿವಯೋಗಿಗಳನ್ನು ಕುರಿತ 'ಜ್ಯೋತಿ ಬೆಳಗಿತು', ಸಿದ್ಧರಾಮನ ಜೀವನವನ್ನು ಕುರಿತ 'ನೆರಳಾಚೆಯ ಬದುಕು', ಷಣ್ಮುಖ ಶಿವಯೋಗಿಗಳನ್ನು ಕುರಿತ 'ಜಡದಲ್ಲಿ ಜಂಗಮ'- ಐತಿಹಾಸಿಕ ಕಾದಂಬರಿಗಳು ಪ್ರಕಟವಾದವು. ಭದ್ರಾ ಜಲಾಶಯದಿಂದ ಮೈಸೂರಿಗೆ ಮರಳುವ ಎರಡು ವರ್ಷಗಳು ಅವರು ಸತತವಾಗಿ ರಚನೆ ಮಾಡಿದ್ದು ಭಾರತೀಯ ಮತ್ತು ಪಾಶ್ಚಾತ್ಯರ ಕಾವ್ಯಮೀಮಾಂಸೆಯ ತೌಲನಿಕ ಕೃತಿ. ಪ್ರಕಟಣ ಇತಿಹಾಸದಲ್ಲೇ ಅತ್ಯಂತ ಸಾಹಸದ, ಬೆಲೆಯುಳ್ಳ ಕೃತಿ: 'ತೌಲನಿಕ ಕಾವ್ಯ ಮೀಮಾಂಸೆ'.

1984ರಲ್ಲಿ ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರು ಮೈಸೂರಿಗೆ ಹಿಂತಿರುಗಿ ಬಂದು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದರು. ಇನ್ನೊಂದು ಜೀವನ ಚಿತ್ರ 'ಅವಿರಳಜ್ಞಾನಿ ಚೆನ್ನಬಸವಣ್ಣ' ರೂಪುಗೊಂಡಿತು. 1985ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ ನೀಡಿ ಸನ್ಮಾನಿಸಿತು. ಅದೇ ವರ್ಷವೇ ಸುತ್ತೂರು ಜಗದ್ಗುರುಗಳವರು ಶರಣ ಸಾಹಿತ್ಯ ಪರಿಷತ್ತನ್ನು ಸ್ಥಾಪಿಸಿದರು. ಡಾ. ಸ್ವಾಮಿ ಅವರು ಅದರ ಪ್ರಥಮ ಅಧ್ಯಕ್ಷ ರಾದರು. ಇದೇ ವೇಳೆಗೆ ಅನಾರೋಗ್ಯದಿಂದ ರಜ ಹಾಕಿ ಆಸ್ಪತ್ರೆ ಸೇರಿದರು. ಆಡಳಿತದಲ್ಲಿ ಬದಲಾವಣೆಗಳಾದವು. ಮಾನಸಿಕ ಕ್ಲೇಶಕ್ಕೆ ಒಳಗಾಗುವ ಪ್ರಸಂಗ ಒದಗಿತು. 1988ರ ಫೆಬ್ರವರಿಯಲ್ಲಿ ನಿವೃತ್ತರಾಗಬೇಕಾದ ಅವರು 1987 ನವೆಂಬರ್ 1ನೇ ತಾರೀಖಿನಂದು ಸ್ವಇಚ್ಛೆಯಿಂದ ನಿವೃತ್ತಿ ಪಡೆದರು.

ಈ ನಡುವೆ ಅವರ ಅನೇಕ ಕೃತಿಗಳು ಪುನರ್ಮುದ್ರಣಗೊಂಡು ಬಂದವು. ಅಷ್ಟೇ ಅಲ್ಲ ಕೆಲವು ಇಂಗ್ಲಿಷಿಗೂ ಅನುವಾದವಾಗಿ ಪ್ರಕಟವಾದವು. ಅವರ ಮಹಾಪ್ರಬಂಧವು 'Veerashaiva Saints-A study' ಎಂದೂ, ಪರಿಪೂರ್ಣದೆಡೆಗೆ-The soul unto Sublime ಎಂದೂ, ಜ್ಯೋತಿ ಬೆಳಗುತಿದೆ -The light that never was ಎಂದೂ, ಕರ್ತಾರನ ಕಮ್ಮಟ 'The Maker's mint' ಎಂದೂ ಹೊರ ಬಂದಿವೆ.

ಡಾ. ಹೆಚ್. ತಿಪ್ಪೇರುದ್ರಸ್ವಾಮಿ ಅವರಿಗೆ ಅರವತ್ತು ವರ್ಷ ತುಂಬಿದ ಸಂದರ್ಭದಲ್ಲಿ ಅವರ ಶಿಷ್ಯರು ಮತ್ತು ಮಿತ್ರರು ಕೂಡಿ ಷಷ್ಟ್ಯಬ್ದಿ ಮಹೋ ತ್ಸವವೊಂದನ್ನು ಏರ್ಪಡಿಸಿ ನಾಡ ಜನತೆಯ ಪರವಾಗಿ ಶುಭ ಹಾರೈಸಿದರು. ಅದೇ ಸಂದರ್ಭದಲ್ಲಿ 'ಶಿವಚಿಂತನ' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಿದರು.

ಡಾ. ಹೆಚ್. ತಿಪ್ಪೇರುದ್ರಸ್ವಾಮಿಯವರ ಬದುಕಿಗೆ ನೆಲೆ-ಬೆಲೆಯನ್ನು ತಂದುಕೊಟ್ಟ ಅವರ ಸಾಹಿತ್ಯ ಸಂಪದದಲ್ಲಿ ಕೆಲವನ್ನಾದರೂ ಇಲ್ಲಿ ಪರಿ ಚಯಿಸಬೇಕು:

**ತಪೋರಂಗ** : 1961ರಲ್ಲಿ ಪ್ರಕಟವಾದ ಅವರ ಏಕೈಕ ಕವನ ಸಂಕಲನ. ಇದರಲ್ಲಿ ಪ್ರಕಟವಾಗಿರುವ ಕವನಗಳ ಧೋರಣೆ ನವೋದಯದ್ದು. ಇದು ಪ್ರಕಟವಾದ ನಂತರ ಏಕೋ ಢಾ. ಸ್ವಾಮಿಯವರ ಸಾಹಿತ್ಯಸೃಷ್ಟಿ ಬೇರೆ ಮಾಧ್ಯಮವನ್ನು ಕಂಡುಕೊಂಡಿತು. ಆದ್ದರಿಂದಲೇ ಈ ಕೃತಿಗೆ ಚಾರಿತ್ರಿಕ ಮಹತ್ವವಿದೆ. ಹೇಳುವುದನ್ನು ಸರಳವಾಗಿ, ನೇರವಾಗಿ ವ್ಯಕ್ತಪಡಿಸಿರುವುದು ಇಲ್ಲಿನ ಕವನಗಳ ವೈಶಿಷ್ಟ್ಯ. ಇವೆಲ್ಲಾ ಛಂದೋ ನಿಯಮಕ್ಕೊಳಪಟ್ಟೇ ರಚಿತವಾಗಿವೆ. ಕವಿಯ ಒಲವು ಹೆಚ್ಚಾಗಿ ಆಧ್ಯಾತ್ಮದ ಕಡೆಗೆ. ಅದರೊಂದಿಗೆ ನಿಸರ್ಗ ಪ್ರೇಮ, ಆದರ್ಶಗಳ ತುಡಿತ, ತಾತ್ವಿಕ ಚಿಂತನೆಗಳು ಕವಿತೆಗಳಲ್ಲಿ ಮೂಡಿವೆ.

**ಕಾದಂಬರಿಗಳು** : ಶಿವಶರಣ-ಶರಣೆ ಹಾಗೂ ಶಿವಯೋಗಿಗಳನ್ನು ಕುರಿತು ಮತ್ತು ಚಾರಿತ್ರಿಕ ಪುರುಷರನ್ನು ಕುರಿತು ಡಾ. ತಿಪ್ಪೇರುದ್ರಸ್ವಾಮಿಯವರು ಕಾದಂಬರಿಗಳನ್ನು ಬರೆದಿದ್ದಾರೆ. ಪರಿಪೂರ್ಣದೆಡೆಗೆ, ಕದಳಿಯ ಕರ್ಪುರ, ಜ್ಯೋತಿ ಬೆಳಗುತಿದೆ, ಜಡದಲ್ಲಿ ಜಂಗಮ, ನೆರಳಾಚೆಯ ಬದುಕು, ಕರ್ತಾರನ ಕಮ್ಮಟ, ಅವಿರಳಜ್ಞಾನಿ ಚನ್ನಬಸವಣ್ಣ ಮೊದಲ ಗುಂಪಿಗೂ, ಸತ್ಯಾಶ್ರಯ ಸಾಮ್ರಾಜ್ಯ, ವಿಜಯ ಕಲ್ಯಾಣ, ವಚನ ವಿರೂಪಾಕ್ಷ ಎರಡನೆಯ ಗುಂಪಿಗೂ ಸೇರುತ್ತವೆ.

ಶರಣರನ್ನು, ಶಿವಯೋಗಿಗಳನ್ನು ಕುರಿತ ಅವರ ಕಾದಂಬರಿಗಳ ಹೆಚ್ಚುಗಾರಿಕೆ ಇರುವುದು ಅವುಗಳ ವಸ್ತು ನಿರ್ವಹಣೆಯಲ್ಲಿ. ಅಲ್ಲಿ ಬಂದಿರುವ ಪಾತ್ರಗಳು, ಐತಿಹಾಸಿಕ ವ್ಯಕ್ತಿಗಳು. ಜನರು ಅವರನ್ನು ದೇವಾಂಶ ಸಂಭೂತ ರೆಂದೇ ನಂಬಿದರು. ಆ ನಂಬಿಗೆಯನಿಂಬುಗೊಂಡು ಬರೆದ ಕವಿಗಳೂ ಆ ಮಹಾನುಭಾವರ ಮೇಲಣ ಗೌರವ ಹಾಗೂ ಪೂಜ್ಯಭಾವದಿಂದ ಅವರನ್ನು ಕಾರಣಿಕರೆಂದೂ, ಪವಾಡಪುರುಷರೆಂದೂ ಭಾವಿಸಿದರು; ಅಂತೆಯೇ ಬಿತ್ತರಿಸಿ ದರು. ಆದರೆ ಕಾದಂಬರಿಕಾರರದು ವೈಚಾರಿಕ ದೃಷ್ಟಿ. ಅವರನ್ನು ಪುರಾಣ ವ್ಯಕ್ತಿಗಳಾಗಿ ಕಾಣುವುದಕ್ಕಿಂತ ಚಾರಿತ್ರಿಕವಾಗಿ ಚಿತ್ರಿಸುವುದರಲ್ಲೇ ಅವರಿಗೆ ಹೆಚ್ಚು ಆಸಕ್ತಿ. ಆ ಉದಾತ್ತ ಪಾತ್ರಗಳನ್ನು ಅವತರಣ ಪಾತ್ರಗಳು ಎನ್ನುವುದ ಕ್ಕಿಂತ ಉತ್ತರಣಗೊಂಡವರೆಂದು ಸರಿಯಾಗಿಯೇ ಅವರು ಚಿತ್ರಿಸಿದ್ದಾರೆ. ಕಲ್ಯಾಣದಲ್ಲಿ ಬೆಳಗಿದ ಶರಣರ ಹಾಗೂ ಕರ್ನಾಟಕದ ಇತರೆಡೆ ತಮ್ಮ ದಿವ್ಯವಾಣಿ ಮೊಳಗಿಸಿದ ಶಿವಯೋಗಿಗಳ ಬದುಕು ಅಸದೃಶವಾದುದು. ಆ ಕುರಿತು ಇನ್ನೂ ಸಂಶೋಧನೆಯಾಗಬೇಕಿದೆ. ಈ ದಿಸೆಯಲ್ಲಿ ಡಾ. ಸ್ವಾಮಿ ಯವರ ಸಾಹಸ ಮೆಚ್ಚಬೇಕು. ಶರಣ ಸಂದೇಶವನ್ನು ತಮ್ಮ ಜೀವನದ ಉಸಿರಾಗಿಸಿಕೊಂಡ ಅವರು ಈ ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ, ಪ್ರಾಮಾಣಿಕವಾಗಿ ನಿರ್ವಹಿಸಿದ್ದಾರೆ. ದೊರಕುವ ಎಲ್ಲಾ ಮಾಹಿತಿಗಳನ್ನೂ, ದಂತಕಥೆಗಳನ್ನೂ, ಸ್ಥಳಪುರಾಣಗಳನ್ನೂ, ಕಾವ್ಯ-ಕಥಾನಕಗಳನ್ನು ಹೆಕ್ಕಿನೋಡಿ, ವಾಸ್ತವ ಸಂಗತಿಗಳನ್ನು ಸಂಗ್ರಹಿಸಿ, ತಮ್ಮ ಪ್ರತಿಭೆಯ ಮೂಸೆಯಲ್ಲಿ ಕಾಯಿಸಿ ಕಾದಂಬರಿಯ ಪಡಿಯಚ್ಚಿನಲ್ಲಿ ಎರಕಹೊಯ್ದಿದ್ದಾರೆ. ಹೀಗಾಗಿ ಆ ಪಾತ್ರ ಗಳೆಲ್ಲಾ ಮಾನವತೆಯ ಮೇಲೆ ಅರಳಿದ ಮಂದಾರಗಳೆಂಬ ಆತ್ಮೀಯತೆ ಯನ್ನು ಗಳಿಸಿಕೊಳ್ಳುತ್ತವೆ.

'ಇಂಥ' ವಸ್ತುವಿನ ನಿರ್ವಹಣೆಗೆ ಐತಿಹಾಸಿಕ ಪ್ರಜ್ಞೆ, ಸಮಾಜ ಶಾಸ್ತ್ರಕಾರನ ವಿಚಿಕಿತ್ಸಕ ದೃಷ್ಟಿ, ಸಾಹಿತಿಯ ಪ್ರತಿಭಾಸಂಪನ್ನತೆ, ಕವಿಯ ಕಲ್ಪಕತೆಗಳು ಅವಶ್ಯ. ಡಾ. ಸ್ವಾಮಿ ಅವರಿಗೆ ಸುದೈವದಿಂದ ಈ ಅತ್ಯಪೂರ್ವ ವಾದ ಅಂಶಗಳು ಮೈಗೂಡಿದ್ದರಿಂದ ಒಂದಾದ ಮೇಲೊಂದರಂತೆ ಜನಪ್ರಿಯ ವಾದ ಕಾದಂಬರಿಗಳನ್ನು ಯಶಸ್ವಿಯಾಗಿ ಹೊರತರಲು ಸಾಧ್ಯವಾಯಿತು. ಅಂತೆಯೇ ಅತ್ಯಧಿಕ ಓದುಗರನ್ನು ಗಳಿಸಿಕೊಳ್ಳಲು ಸಾಧ್ಯವಾಯಿತು.

ಅವರ ಐತಿಹಾಸಿಕ ಕಾದಂಬರಿಗಳ ಮಾತೂ ಅಷ್ಟೆ. ಚರಿತ್ರೆಯ ವಸ್ತುವನ್ನು ಕಾದಂಬರಿಯಾಗಿಸ ಹೊರಟ ಲೇಖಕನದು ಜೋಕೆ-ತೂಕದ ನಡೆಯಾಗಬೇಕು. ಏಕೆಂದರೆ ಆತ ಚಾರಿತ್ರಿಕ ಘಟನೆಗಳಿಗೇ ಒತ್ತುಕೊಟ್ಟು ಬರೆದರೆ ಅದು ಕಾದಂಬರಿ ಎನಿಸದೆ ಇತಿಹಾಸವಾಗುವ ಅಪಾಯವಿದ್ದಂತೆ; ಕಥೆಯ ರೋಚಕತೆಗೆ ಮುಗಿಬಿದ್ದು ಐತಿಹ್ಯಗಳನ್ನು ತೇಲಿಸಿದರೆ ಐತಿಹಾಸಿಕ ಕಾದಂಬರಿ ಎಂಬ ಹೆಸರಿಗೆ ಭಂಗವುಂಟಾಗುತ್ತದೆ. ಎರಡನ್ನೂ ಸುಮಧುರ ಸಮರಸಗೊಳಿಸುವಲ್ಲಿ ಡಾ. ಸ್ವಾಮಿ ಸ್ವೋಪಜ್ಞತೆಯನ್ನು ಮೆರೆದಿದ್ದಾರೆ.

**ಪರಿಪೂರ್ಣದೆಡೆಗೆ:** ಅಲ್ಲಮಪ್ರಭುವನ್ನು ಕುರಿತ ಕಾದಂಬರಿ. ಅಲ್ಲಮಪ್ರಭು ವಿನದು ಅಸಾಧಾರಣ ವ್ಯಕ್ತಿತ್ವ; ಒಂದು ರೀತಿಯಲ್ಲಿ ಮಾತಿಗೆ ಅಳವಡದ ಮಿಂಚಿನ ಬದುಕು ಆತನದು. ಹರಿಹರನಿಂದ ಹಿಡಿದು ಚಾಮರಸನವರೆಗೆ ಅನೇಕರು ಅವನ ಜೀವನ ಸಾಧನೆ ಸಿದ್ಧಿಗಳನ್ನು ಕುರಿತು ವಿವರಿಸಲು ಯತ್ನಿಸಿದ್ದಾರೆ. ಆದರೆ ಎಲ್ಲೂ ಒಂದು ಸಮಗ್ರ ಚಿತ್ರ ಸಿಕ್ಕುವುದಿಲ್ಲ. ಸಹಸ್ರ ಸಂಖ್ಯೆಯ ಅವನ ವಚನಗಳೂ ಸಹ ಅವನ ಬದುಕಿನ ಒಳಗನ್ನು ತಿಳಿಯಲು ಸಹಾಯಕವಾಗುವುದಿಲ್ಲ. ಏಕೆಂದರೆ ಅವುಗಳಲ್ಲಿ ಪರಿಪೂರ್ಣ ಸಿದ್ಧನೊಬ್ಬನ

ಉದಾತ್ತ ವಿಚಾರಗಳು ಬಿಂಬಿಸಿವೆಯೇ ಹೊರತು ಒಳತೋಟೆಯನ್ನು ವ್ಯಕ್ತ ಪಡಿಸುವ ಹೃದಯದ ನುಡಿಗಳಾಗಿಲ್ಲ. ಒಟ್ಟಾರೆ ಅಲ್ಲಮಪ್ರಭು ಕೈಲಾಸದಿಂದ ಅವತರಿಸಿದ ಕಾರಣಿಕನೆಂದೇ ಪರಿಗಣಿಸಲ್ಪಟ್ಟಿದ್ದಾನೆ. ಡಾ. ಸ್ವಾಮಿ ಇಂಥ ವಸ್ತುವನ್ನು ಕೈಗೆತ್ತಿಕೊಂಡು ಬಹಳ ಎಚ್ಚರಿಕೆಯಿಂದ ಪ್ರಭುವಿನ ಮಾನವೀಯ ಚಿತ್ರವೊಂದನ್ನು ನಮ್ಮ ಕಣ್ಣೆದುರು ನಿಲ್ಲಿಸುವಲ್ಲಿ ಯಶಸ್ವಿಯಾಗಿದ್ದಾರೆ. ಕಾದಂಬರಿಗೆ ಕೊಟ್ಟ ಹೆಸರೂ ಅರ್ಥಪೂರ್ಣವಾಗಿದೆ. ಹುಟ್ಟಿನಿಂದಲೇ ಯಾರೂ ಮಹಾಪುರುಷರಿರುವುದಿಲ್ಲ, ಸಾಧನೆಯಿಂದ, ಪರಿಶ್ರಮದಿಂದ ಜ್ಞಾನಾನುಭವಗಳನ್ನು ಪಡೆದು, ಗುರು ಹಿರಿಯರಿಂದ ಕಲಿತು, ದೇಶಾಟನೆ ಮಾಡಿ ಅನುಭವ ಹೊಂದಿ ಹಂತ ಹಂತವಾಗಿ ಮಹತ್ತಿಗೆ ಏರಿ ದೇವಮಾನವ ನಾಗುತ್ತಾನೆ ಎಂಬುದನ್ನು ಪ್ರಭುವಿನ ಜೀವನಚಿತ್ರದಲ್ಲಿ ಡಾ. ಸ್ವಾಮಿ ತೋರಿಸಿ ದ್ದಾರೆ. ಮಹತ್ವದ ಮಾತೆಂದರೆ ಈ ಕಾದಂಬರಿ, ಅವರ ಲೇಖನಿಯಿಂದ ಮೂಡಿದ ಇಂಥ ಹಲವು ಕೃತಿಗಳಿಗೆ ನಾಂದಿ ಹಾಡಿತು.

**ಕದಳಿಯ ಕರ್ಪೂರ** : ಮಹಾಶರಣೆ ಅಕ್ಕಮಹಾದೇವಿಯ ಜೀವನವನ್ನು ಕುರಿತ ಕಾದಂಬರಿ ಇದು. ಜಾಗತಿಕ ಇತಿಹಾಸದಲ್ಲಿಯೇ ವಿಶಿಷ್ಟವಾಗಿ ನಿಲ್ಲುವ ಪಾತ್ರ ಅಕ್ಕನದು. ಪ್ರಭುವಿನಂಥ ವೈರಾಗ್ಯ ಸಂಪನ್ನ, ಬಸವಣ್ಣನಂಥ ಭಕ್ತಿಭಂಡಾರಿ, ಚೆನ್ನಬಸವಣ್ಣನಂಥ ಅವಿರಳಜ್ಞಾನಿ ಹಾಡಿ ಹೊಗಳಿದ ಮಹಾಚೇತನ. ಅವಳ ನಡೆ ಎಲ್ಲ ಹೆಣ್ಣುಗಳಂತಲ್ಲ. ಲೋಕದ ರೀತಿ-ನೀತಿಗೆ ವಿನೂತನ. ಇಂಥ ವಿಶಿಷ್ಟ ಭಕ್ತಿಸಂಪನ್ನಳಾದ ಹೆಣ್ಣಿನ ಬಗ್ಗೆ ಪೌರಾಣಿಕ ದೃಷ್ಟಿ ಬೆಳೆಯುವುದು ಸಹಜವೇ. ತನ್ನ ಉಜ್ವಲ ವ್ಯಕ್ತಿತ್ವದಿಂದ ಅಕ್ಕನು ಜನಪದರಲ್ಲಿ, ಕಾವ್ಯಗಳಲ್ಲಿ ಕಾರಣಿಕ ಕನ್ಯೆಯೆಂದು, ಪಾರ್ವತಿಯ ಅವತಾರವೆಂದು ಭಾವನಾತ್ಮಕವಾಗಿ ಜನ ಮನವನ್ನೇ ಗೆದ್ದಿದ್ದಾಳೆ. ಇಂಥ ವಸ್ತುವನ್ನು ಆರಿಸಿಕೊಂಡ ಕಾದಂಬರಿ ಕಾರರು ಅನೇಕ ಇಕ್ಕಟ್ಟು-ಬಿಕ್ಕಟ್ಟುಗಳನ್ನು ಎದುರಿಸಬೇಕಾಗುವುದು ಸಹಜ. ಜನಮನದಲ್ಲಿ ಈಗಾಗಲೇ ಮೂಡಿನಿಂತಿರುವ ಅಕ್ಕನ ಚಿತ್ರಕ್ಕೆ ಭಂಗಬರ ಬಾರದು. ಆಕೆಯ ನಿಜವಾದ ವ್ಯಕ್ತಿತ್ವ ಮೂಡಿಬರಬೇಕು. ಅಂಥ ಸುವರ್ಣ ಮಾಧ್ಯಮವೊಂದನ್ನು ಕಂಡುಕೊಂಡು ಡಾ. ಸ್ವಾಮಿ ಕೃತಿರಚನೆ ಮಾಡಿದ್ದಾರೆ.

**ಜ್ಯೋತಿ ಬೆಳಗುತಿದೆ:** ನಿಜಗುಣ ಶಿವಯೋಗಿಗಳನ್ನು ಕುರಿತ ಕಾದಂಬರಿ. ನಿಜಗುಣರು ಕರ್ನಾಟಕದ ಮಹಾನ್ ಶಿವಯೋಗಿ, ಶ್ರೇಷ್ಠ ಹಾಡುಗಬ್ಬಕಾರ; ವೇದಾಂತಜ್ಞಾನವನ್ನು ಕನ್ನಡಕ್ಕೆ ತಂದ ಮಹಾನುಭಾವಿ; ಕನ್ನಡದ ಪ್ರಥಮ ವಿಶ್ವಕೋಶಕಾರ. ಅವರ ಷಟ್‌ಶಾಸ್ತ್ರಗಳು ಇಂದಿಗೂ ಮುಮುಕ್ಷುಗಳಿಗೆ ಕೈಪಿಡಿಗಳಾಗಿವೆ. ಇಂಥ ಒಬ್ಬ ಶ್ರೇಷ್ಠ ದಾರ್ಶನಿಕನ ಲೌಕಿಕ-ಪಾರಮಾರ್ಥಿಕ ಜೀವನವನ್ನು ಇದು ಪರಿಚಯಿಸುತ್ತದೆ. 1500ರಲ್ಲಿದ್ದ ಈ ಐತಿಹಾಸಿಕ ವ್ಯಕ್ತಿಯ ವೈಯಕ್ತಿಕ ಜೀವನ ಹಾಗೂ ಸಾಧನೆಗಳ ಬಗ್ಗೆ ಸಿಕ್ಕುವ ಗಟ್ಟಿಯಾದ ಸಂಗತಿಗಳು ತೀರಾ ಕಡಿಮೆ. ಅವರ ಬಗ್ಗೆ ಅನೇಕ ಜಾನಪದ ಆಖ್ಯಾನಗಳು, ದಂತಕಥೆಗಳು ಹುಟ್ಟಿಕೊಂಡಿವೆ. ಅವು ಎಷ್ಟು ಪ್ರಭಾವ ಪೂರ್ಣವಾಗಿವೆ ಯೆಂದರೆ ಮೂಲ ಸಂಗತಿಗಳನ್ನು ಮರೆಮಾಚಿ ಜನಮನವನ್ನಾಳುವಂತಾಗಿವೆ. ಎಲ್ಲಾ ಮಹಾಪುರುಷರ ಜೀವನದ ಬಗ್ಗೆಯೂ ಜನರ ಪೌರಾಣಿಕ ದೃಷ್ಟಿ ಹೆಣೆಯುವ ಕಥಾಜಾಲ ಆಶ್ಚರ್ಯ ಹುಟ್ಟಿಸುವಂಥದ್ದು. ನಿಜಗುಣರ ದಿವ್ಯ, ಭವ್ಯ ಚರಿತ್ರೆಯೂ ಇದಕ್ಕೆ ಹೊರತಾಗಿಲ್ಲ. ಸುದೈವದಿಂದ ಅವರ ಅನರ್ಘ್ಯವಾದ ಸಾರಸ್ವತ ಸಂಪತ್ತು ನಮಗೆ ದೊರೆತಿವೆ. ಅವುಗಳ ಮೂಲಕ ಅವರನ್ನು ಕಂಡುಕೊಳ್ಳಲು ಸಾಧ್ಯವಿದೆ.

ನಿಜಗುಣರ ಜೀವನದ ಉತ್ತರಾರ್ಧವನ್ನು ಚಿತ್ರಿಸಲು ಅವರ ಕೃತಿಗಳನ್ನು ಆಶ್ರಯಿಸಿದ್ದು ಸರಿಯೇ. ಅವರ ಜೀವನವನ್ನು ರಾಜಭೋಗದಲ್ಲಿ ಯೋಗಬೀಜ, ಮಹಾಪರಿವರ್ತನೆ, ಜ್ಯೋತಿ ಬೆಳಗುತಿದೆ ಎಂಬ ಮೂರು ಘಟ್ಟಗಳಲ್ಲಿ ಚಿತ್ರಿಸಿದ್ದಾರೆ. ನಿಜಗುಣರ ಪೂರ್ವಾಶ್ರಮವನ್ನು Flash back ತಂತ್ರದಲ್ಲಿ ನಿರೂಪಿಸಿದ್ದಾರೆ. ಒಟ್ಟಾರೆ ಯೋಗಿವರ್ಯನೊಬ್ಬನ ಚಿತ್ರವನ್ನು ಯಥಾವತ್ತಾಗಿ ಚಿತ್ರಿಸುವಲ್ಲಿ ಕಾದಂಬರಿ ಯಶಸ್ವಿಯಾಗಿದೆ.

**ಜಡದಲ್ಲಿ ಜಂಗಮ :** ಈ ಕಾದಂಬರಿಯ ವಸ್ತು 17ನೆಯ ಶತಮಾನದಲ್ಲಿ ಜೇವರ್ಗಿಯಲ್ಲಿ ಆಗಿಹೋದ ಷಣ್ಮುಖ ಶಿವಯೋಗಿಗಳ ಚರಿತ್ರೆ. ವೀರಶೈವ ಧರ್ಮ 12ನೆಯ ಶತಮಾನದಲ್ಲಿ ಬಸವಾದಿ ಪ್ರಮಥರಿಂದ ಉಚ್ಛ್ರಾಯ ಸ್ಥಿತಿಯನ್ನು ಪಡೆದದ್ದು ನಂತರ ಮಂಕು ಆವರಿಸಿತ್ತು. ವಿಜಯನಗರ ಸಾಮ್ರಾಜ್ಯದ ಕಾಲಕ್ಕೆ ಮತ್ತೆ ನೂರೊಂದು ವಿರಕ್ತರ ಪರಿಶ್ರಮದಿಂದ ಪ್ರಜ್ವಲಿ ಸಿತು, ಆದರೆ ಮತ್ತೆ ಇಳಿಮುಖವಾಯಿತು. ಆಗ ಷಣ್ಮುಖ ಶಿವಯೋಗಿಗಳು ಅದನ್ನು ಪುನರುತ್ಥಾನಗೊಳಿಸಿದರು. 'ಅಖಂಡೇಶ್ವರ ವಚನಗಳು' ಎಂಬ ಅವರ ವಚನ ಸಂಕಲನದ ಮೂಲಕ ವಚನ ಸಾಹಿತ್ಯ ಪರಂಪರೆಯನ್ನು ಅವರು ಮುಂದುವರಿಸಿದರು. ಶಿವಯೋಗಿಗಳ ಆಧ್ಯಾತ್ಮಿಕ ಬದುಕು ಅತ್ಯದ್ಭುತ. ಅಂಥ ಅನುಪಮವಾದ, ಅಪೂರ್ವವಾದ ಬದುಕನ್ನು ಡಾ. ಸ್ವಾಮಿ ಈ ಕಾದಂಬರಿ ಯಲ್ಲಿ ಅಡಕಗೊಳಿಸಿದ್ದಾರೆ. ಕಥೆಯನ್ನು ವಿವಿಧ ಪಾತ್ರಗಳ ಮೂಲಕ ಹೇಳಿಸಿ, ಹಿಂದೆ ನಡೆದುದನ್ನು ನೆನಪಿಸಿಕೊಳ್ಳುವ ತಂತ್ರ ವನ್ನು ಬಳಸಿ ಕಥೆಯ ಸುರುಳಿ ಬಿಚ್ಚಿಕೊಳ್ಳುತ್ತಾ ಹೋಗುವಂತೆ ಮಾಡಿದ್ದಾರೆ.

ಅಲ್ಲಿ ಮೂಡಿಬಂದಿರುವ ಹಿಂದೂ-ಮುಸ್ಲಿಂ ಮೈತ್ರಿಯ ಸೌಹಾರ್ದ ಚಿತ್ರಣವೂ ಅಪೂರ್ವವಾಗಿದೆ. ಸುಧಾರಣೆಗಳನ್ನೊಲ್ಲದ ಸ್ವಾರ್ಥಿಗಳು ಅಂಥ ಮಹಾನುಭಾವರಿಗೂ ವಿಷವಿಕ್ಕಿ ಕೊಲ್ಲಲು ಹವಣಿಸಿದ್ದು ನಮ್ಮ ಮನಸ್ಸನ್ನು ಕಲಕುತ್ತದೆ. ತಮ್ಮ ಯೋಗಬಲದಿಂದ ಆ ನಂಜನ್ನು ತಡೆದುಕೊಂಡರೂ ಬಹಳ ಕಾಲವಿರದೆ ಶಿವೈಕ್ಯರಾದುದನ್ನು ಕಾದಂಬರಿಕಾರರು ಸಹಜವಾಗಿ ನಿರೂಪಿಸಿದ್ದಾರೆ.

**ಕರ್ತಾರನ ಕಮ್ಮಟ:** ಇದು ಬಸವಣ್ಣನವರ ಜೀವನವನ್ನು ಕುರಿತಾದ ಬೃಹತ್ ಕಾದಂಬರಿ. ಇಲ್ಲೂ ಕೂಡ ಐತಿಹಾಸಿಕ ಪ್ರಜ್ಞೆಗೂ ಪುರಾಣಪ್ರಿಯತೆಗೂ ಘರ್ಷಣೆ ಸಹಜ. ಮಹಾತ್ಮರ ಜೀವನದೊಡನೆ ಬೆರೆತು ಬರುತ್ತವೆ ಪವಾಡಗಳು, ಅಸಹಜ ಸಂಗತಿಗಳು, ಅಸಂಬದ್ಧ ಅಂಶಗಳು. ಭಾವುಕತೆಯ ಅಕಾಲಿಕ ಕೃತಿಯಾಗ ಕೊಡದೆ ವೈಚಾರಿಕ ನೆಲಗಟ್ಟಿನ ಮೇಲೆ ಸಹಜ ಸುಂದರ ಚಿತ್ರವನ್ನು ನೀಡಿರುವುದು ಈ ಕಾದಂಬರಿಯ ವೈಶಿಷ್ಟ್ಯ. ಒಂದೆರಡು ಕಡೆ ಬಂದಿರುವ ಪವಾಡ ಪ್ರಸಂಗಗಳನ್ನು ಬಿಟ್ಟರೆ ಇನ್ನೆಲ್ಲಿಯೂ ಕಥಾನಾಯಕನ ಅಸಹಜ ವೈಭವೀಕರಣ ಕಾಣಿಸುವುದಿಲ್ಲ.

ಮತವನ್ನೇ ಧರ್ಮವೆಂದು ತಿಳಿದು ಕಂದಾಚಾರದ ಖಡ್ಗವನ್ನು ಮನಬಂದಂತೆ ಬೀಸುತ್ತಿದ್ದ ಕಾಲವದು. ಇರುವ ನೂರೆಂಟು ಜಾತಿಗಳ ಜೊತೆಗೆ ಇನ್ನೊಂದು ಜಾತಿಯನ್ನು ಸೃಷ್ಟಿಸುವುದು ಬಸವಣ್ಣನ ಉದ್ದೇಶವಾಗಿರಲಿಲ್ಲ. ಜಾತಿಗಳ ಹಿಡಿತದಿಂದ ಜನಗಳನ್ನು ಪಾರುಮಾಡಿ ಮಾನವ ಜಾತಿಯನ್ನು ರೂಢಿಸುವ ಪ್ರಯತ್ನ ಅವರು ಮಾಡಿದರು. ಭರತಖಂಡವನ್ನು ಪರಕೀಯರ ಆಳ್ವಿಕೆಗೆ ದೂಡಿದ ಅಂಶಗಳಲ್ಲಿ ಜಾತಿಭೇದ ಪ್ರಧಾನವಾದದ್ದು. ಇದನ್ನು ಹೋಗಲಾಡಿಸಿ ಮಾನವರೆಲ್ಲರೂ ಒಂದೆಂಬ ಭಾವನೆಯನ್ನು ಬಿತ್ತಿದವರು ಬಸವಣ್ಣ. ಶೋಷಣೆಯ ಕೇಂದ್ರಗಳಾಗಿದ್ದ ದೇಗುಲಗಳನ್ನು ಬಿಡಿಸಿ, ದೇಹವೇ ದೇವಾಲಯವೆಂದರು. ಇಷ್ಟಲಿಂಗ ಕಲ್ಪನೆ ಮೂಡಿಸಿದರು. ಜಾತಿ ಕಲ್ಪನೆ ದೂರ ಮಾಡಿ ಸ್ವತಂತ್ರ ವಿಚಾರದ ಹಾದಿ ಹಿಡಿಯಲು ಇದನ್ನು ಮುಂದಿಟ್ಟರು. ಇಂಥ

ಮಹಾಮಾನವನ ಸಾಧನೆ ಸಿದ್ಧಿಗಳನ್ನೂ, ಅಂದಿನ ಕಾಲಮಾನ ಚಾರಿತ್ರಿಕ ಹಿನ್ನೆಲೆಯಲ್ಲಿ ನಿರೂಪಿಸಿದ್ದಾರೆ ಡಾ. ತಿಪ್ಪೇರುದ್ರಸ್ವಾಮಿ.

**ನೆರಳಾಚೆಯ ಬದುಕು:** ಕರ್ಮಯೋಗಿ ಸಿದ್ಧರಾಮನ ಜೀವನವನ್ನು ಕುರಿತದ್ದು. ಸಿದ್ಧರಾಮ ಮಹಾಶರಣ. ಆತನ ಚರಿತ್ರೆ ಸಂಕೀರ್ಣವಾದುದು. ಆತನ ಕಾರ್ಯಕ್ಷೇತ್ರ ತುಂಬಾ ವಿಸ್ತಾರವಾದುದು. ಕರ್ಮಯೋಗಿಯಾಗಿದ್ದ ಆತನು ಶಿವಯೋಗಿಯಾದದ್ದು ಒಂದು ಪವಾಡ ಸದೃಶವಾದ ಪ್ರಕರಣ. ಆತ ಜನರನ್ನು ಸಂಘಟಿಸಿ ಲೋಕೋಪಯೋಗಿ ಕೆಲಸದಲ್ಲಿ ತೊಡಗಿಸಿದ ರೀತಿ ಅದ್ಭುತವಾದುದು. ಆ ಮಹಾಪುರುಷ ಕೈಗೊಂಡ ಕೆಲಸ, ಎತ್ತಿ ಹಿಡಿದ ಮೌಲ್ಯ ಎಲ್ಲವೂ ಭವ್ಯ. ಆತನ ಹೊರಗಿನ ಜೀವನ ಅದ್ಭುತವಿದ್ದಂತೆ ಆತನ ಒಳ ಲೋಕವೂ ಅಷ್ಟೇ ದಿವ್ಯ. ಇವನ್ನೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸಿ, ವಿಚಾರದ ನಿಕಷಕ್ಕಿಟ್ಟು ನೋಡಿ ಆತನ ವ್ಯಕ್ತಿತ್ವದ ಎಲ್ಲಾ ಮುಖಗಳನ್ನು ಪರಿಚಯಿಸುವ ಕೆಲಸ ಸುಲಭದ ಮಾತಲ್ಲ. ಸಿದ್ಧರಾಮನ ಬದುಕನ್ನು ಸಾಂಪ್ರದಾಯಕವಾದ ಪೌರಾಣಿಕ ಚೌಕಟ್ಟಿನಿಂದ ಬಿಡಿಸಿ ಸಹಜವಾಗಿ ಆತನ ವ್ಯಕ್ತಿತ್ವ ಮೂಡಿಬರುವಂತೆ ಡಾ. ಸ್ವಾಮಿ ನೋಡಿಕೊಂಡಿದ್ದಾರೆ.

**ಸತ್ಯಾಶ್ರಯ ಸಾಮ್ರಾಜ್ಯ :** ಕರ್ನಾಟಕ ಇತಿಹಾಸದಲ್ಲಿ ಪ್ರಖ್ಯಾತ ಅರಸನಾಗಿ ಚಾಲುಕ್ಯ ಪ್ರಭೆಯನ್ನು ನರ್ಮದೆಯಾಚೆವರೆಗೆ ಪಸರಿಸಿ ವಿಜೃಂಭಿಸಿದ ಇಮ್ಮಡಿ ಪುಲಿಕೇಶಿಯನ್ನು ಕುರಿತದ್ದು ಈ ಕಾದಂಬರಿ. ರವಿಕೀರ್ತಿಯ ಐಹೊಳೆ ಶಾಸನ, ಹ್ಯೂಯನ್ ತ್ಸಾಂಗನ ಬರವಣಿಗೆ ಮೊದಲಾದವು ಆಕರಗಳಾಗಿದ್ದರೂ ಪುಲಿಕೇಶಿಯ ಕಥೆಯಲ್ಲಿ ಅನೇಕ ಕಾಲ್ಪನಿಕ ಅಂಶಗಳೂ ಸೇರಿಕೊಂಡಿವೆ. ಲೇಖಕರೂ ಸಹ ಸ್ವಾತಂತ್ರ್ಯವಹಿಸಿ ಐತಿಹ್ಯಕ್ಕೆ ಭಂಗ ಬರದಂತೆ ಹೊಸ ಪಾತ್ರ ಹಾಗೂ ಸನ್ನಿವೇಶಗಳನ್ನು ಪವಣಿಸಿ ಕಾದಂಬರಿ ರಚಿಸಿದ್ದಾರೆ. ಇದೊಂದು ಚಿಕ್ಕ ಕಾದಂಬರಿಯಾದರೂ ಕರ್ನಾಟಕದ ಉಜ್ವಲ ಚರಿತ್ರೆಯ ಸುವರ್ಣ ಅಧ್ಯಾಯವೊಂದನ್ನು ಸಜೀವವಾಗಿಸಿದೆ. ಎರಡನೆಯ ಪುಲಿಕೇಶಿ ಮಾಡಿದ ಎರಡು ಮಹತ್ಸಾಧನೆಗಳೆಂದರೆ ಪಲ್ಲವರ ಮೇಲೆ ನಡೆಸಿದ ದಾಳಿ ಮತ್ತು ಹರ್ಷವರ್ಧನನ ಮೇಲೆ ನಡೆಸಿದ ಯುದ್ಧ. ಉತ್ತರದವರಿಗೆ ದಕ್ಷಿಣದ ರಾಜರೆಂದರೆ ಉದಾಸೀನ ಭಾವನೆಯಿತ್ತು. ಮೊಟ್ಟಮೊದಲ ಬಾರಿಗೆ ಪುಲಿಕೇಶಿ ತನ್ನ ಮುತ್ಸದ್ದಿತನ, ವಿವೇಕದಿಂದ ಅದನ್ನು ಹೋಗಲಾಡಿಸಿದ. ಈ ಅಂಶವು ಕಾದಂಬರಿಯಲ್ಲಿ ಪರಿಣಾಮಕಾರಿಯಾಗಿ ಮೂಡಿಬಂದಿದೆ.

**ವಿಜಯ ಕಲ್ಯಾಣ :** ಇದು ವಿಜಯನಗರದ ರಾಜಕೀಯ, ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಬದುಕನ್ನು ಬಿಂಬಿಸುವ ಕಾದಂಬರಿ. ಹಿಂದೂಧರ್ಮ ಮತ್ತು ಸಂಸ್ಕೃತಿಗಳ ಉಳಿವಿಗಾಗಿ ಏರ್ಪಟ್ಟ ಆ ಮಹಾಸಾಮ್ರಾಜ್ಯದ ಒಂದು ಮಜಲು ಇಲ್ಲಿದೆ. ಲೇಖಕರು ವಿವಿಧ ಮೂಲಗಳಿಂದ ವಿಷಯ ಸಂಗ್ರಹಿಸಿದ್ದಾರೆ. ಇದರ ನಾಯಕ ಪ್ರೌಢದೇವರಾಯ. ಅವನ ದಿಗ್ವಿಜಯಗಳಿಗಿಂತ, ಆತನ ಸಾಂಸ್ಕೃತಿಕ ಚಟುವಟಿಕೆಗಳ ಕಡೆ ಹೆಚ್ಚು ಒತ್ತು ಕೊಟ್ಟಿದೆ. ಈತನೊಡನೆ ಎದ್ದು ಕಾಣುವ ಪಾತ್ರಗಳೆಂದರೆ ಜಕ್ಕಣಾರ್ಯ ಮತ್ತು ಲಕ್ಕಣದಂಡೇಶರು. ಲಕ್ಕಣದಂಡೇಶನು ಮುಸ್ಲಿಮರೊಡನೆ ದೊರೆಯ ಪರವಾಗಿ ಹೋರಾಡಿ ಗೆಲವು ಸಾಧಿಸಿ ಬಂದಾಗ ನಡೆಯುವ ವಿಜಯೋತ್ಸವದ ವರ್ಣನೆ ಕಣ್ಣಿಗೆ ಕಟ್ಟುವಂತೆ ರಮಣೀಯವಾಗಿ ಮೂಡಿದೆ.

**ವಚನ ವಿರೂಪಾಕ್ಷ:** ಇದು ಡಾ. ಸ್ವಾಮಿಯವರು ನಮ್ಮ ಕವಿಗಳ ಜೀವನವನ್ನು ಕುರಿತು ರಚಿಸಿರುವ ಕಾದಂಬರಿ. ಕನ್ನಡ ಸಾಹಿತ್ಯದ ಸೀಮಾ ಪುರುಷರೆನಿಸಿದ ಹರಿಹರ-ರಾಘವಾಂಕರ ಕಥೆ ಅತ್ಯಂತ ರೋಚಕವಾದದ್ದು, ರಮಣೀಯವಾದದ್ದು ಅಷ್ಟೇ ಅಲ್ಲ, ಅದು ಮಾನವ ಹಿತಸಾಧನೆಯ ಉತ್ಕೃಷ್ಟ ಉದಾಹರಣೆಯಾಗಿದೆ. ಈ ಋಷಿಕವಿಗಳನ್ನು ಕುರಿತು ಬರೆದ ಈ ಕಾದಂಬರಿ ಬರೀ ಕಾಲ್ಪನಿಕವಲ್ಲ. ಅವರ ಕೃತಿಗಳನ್ನು ವಿಶ್ಲೇಷಿಸಿದಾಗ ಕಂಡ ಅವರ ಜೀವನದ ಎಳೆಗಳನ್ನು ಹಿಡಿದು ಹೋಗಿ ಕಂಡ ವಾಸ್ತವಗಳನ್ನು ಹೊಂದಿಸಿ ಅವರ ಜೀವನಚಿತ್ರವನ್ನು ನೀಡುವ ಕಲಾಕೌಶಲ್ಯ ಇಲ್ಲಿದೆ. ಪಂಪಾಕ್ಷೇತ್ರ : ಅಲ್ಲಿ ಹರಿಹರ, ಅವನ ಸೋದರಳಿಯ ಹಾಗೂ ಶಿಷ್ಯ ರಾಘವಾಂಕ. ಅರಸ : ಸೋಮೇಶ್ವರ ಮತ್ತು ದೇವರಾಜ. ಬೇಲೂರು : ಅಲ್ಲಿ ಕೆರೆಯ ಪದ್ಮರಸ, ಅವನ ಮಗ ಕುಮಾರ ಪದ್ಮರಸ, ಬೊಮ್ಮರಸ. ಅರಸ : ನರಸಿಂಹಬಲ್ಲಾಳ. ಓರಂಗಲ್ಲು : ಪಂಡಿತವರ್ಯರಾದ ಏಕದಂಡಿ, ದ್ವಿದಂಡಿ, ತ್ರಿದಂಡಿ. ಅರಸ: ಪ್ರತಾಪ ರುದ್ರದೇವ. ಇವರನ್ನು ಕೇಂದ್ರವಾಗಿಟ್ಟುಕೊಂಡು ಕಾದಂಬರಿಯ ಕಥೆ ಹರಿದಿದೆ. 9 ಅಧ್ಯಾಯಗಳಲ್ಲಿ ರಾಘವಾಂಕನ ವ್ಯಕ್ತಿಚಿತ್ರ ಸ್ಫುಟವಾಗಿ ಕಾಣುವಂತೆ ಮಾಡಲಾಗಿದೆ, ಆತ ಹೇಗೆ ಬರೀ ದೊಡ್ಡಕವಿ ಮಾತ್ರವಲ್ಲ ; ದೊಡ್ಡವ್ಯಕ್ತಿಯೂ ಆಗಿದ್ದನೆಂಬುದನ್ನು ಮನಗಾಣಿಸಿದ್ದಾರೆ. ರಾಘವಾಂಕ-ಹರಿಹರರ ಸಂಬಂಧವೂ ಹೃದ್ಯವಾಗಿ ಮೂಡಿದೆ. ಹಿರಿಮೆಯನ್ನು ಬಿತ್ತರಿಸಿರುವಂತೆಯೇ ಕವಿಯ ದೌರ್ಬಲ್ಯಗಳನ್ನು ಸೋದಾಹರಣವಾಗಿ ಪ್ರಸ್ತಾಪಿಸಿರುವುದು ಡಾ. ಸ್ವಾಮಿ ಅವರ ವಸ್ತುನಿಷ್ಠ ಬರವಣಿಗೆಗೆ ಸಾಕ್ಷಿಯಾಗಿದೆ.

**ಶಿಸ್ತುಗಾರ ಶಿವಪ್ಪನಾಯಕ :** ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ತಲೆಯೆತ್ತಿದ ಚಿಕ್ಕ ಪಾಳೆಯಪಟ್ಟು ಕೆಳದಿ ಸಂಸ್ಥಾನ. ಅದರ ನಾಯಕರು ಕನ್ನಡ ಸಂಸ್ಕೃತಿಗೆ ಮಹತ್ವದ ಕೊಡುಗೆ ನೀಡಿದ ಮಹಾನುಭಾವರು. ಆ ವೀರ ಪರಂಪರೆಯ ಮೇರುವ್ಯಕ್ತಿ ಶಿವಪ್ಪನಾಯಕ ; ಪ್ರಜೆಗಳೇ ರಾಜ್ಯದ ಸಂಪತ್ತು ಎಂದು ಭಾವಿಸಿದ್ದ ಪ್ರಜಾಪಾಲಕ. ಈ ಕಿರುಕಾದಂಬರಿ ಅಂಥ ದೊಡ್ಡವ್ಯಕ್ತಿಯ ಜೀವನವನ್ನು ಕುರಿತದ್ದು, ದಾಖಲೆಗಳನ್ನು ಆಧಾರವಾಗಿಟ್ಟುಕೊಂಡು ನಿಜವಾದ ಚಾರಿತ್ರಿಕ ಕಾದಂಬರಿಯನ್ನು ಬರೆದಿದ್ದಾರೆ. ಕಾದಂಬರಿಯಲ್ಲಿ 9 ಅಧ್ಯಾಯಗಳಿದ್ದು ಶಿವಪ್ಪನಾಯಕನ ವ್ಯಕ್ತಿತ್ವವು ವಿಕಾಸವಾದ ಬಗೆಯನ್ನು ಸವಿವರವಾಗಿ ಚಿತ್ರಿಸಿದ್ದಾರೆ. ಕನ್ನಡಿಗರನ್ನೆಲ್ಲಾ ಏಕಚ್ಛತ್ರದಡಿಯಲ್ಲಿ ತರಬೇಕೆಂಬ ಆತನ ಮಹತ್ವಾಕಾಂಕ್ಷೆ, ಆತನ ಧಾರ್ಮಿಕ ನಿಷ್ಠೆ, ಆಡಳಿತದಲ್ಲಿ ಆತ ತಂದ ಸುಧಾರಣೆಗಳು, ಅದರಲ್ಲೂ ಕಂದಾಯ ಪದ್ಧತಿಯಲ್ಲಿ ಆತ ಜಾರಿಗೆ ತಂದ ವಿಧಾನ ವಿನೂತನ, ಅಭೂತಪೂರ್ವ. ಆಧುನಿಕ ಅರ್ಥಶಾಸ್ತ್ರಜ್ಞರೂ ಕೂಡ ಶ್ಲಾಘಿಸುವ ಆ ಪದ್ಧತಿ 'ಶಿವಪ್ಪನಾಯಕನ ಶಿಸ್ತು' ಎಂದೇ ಪ್ರಸಿದ್ಧವಾದದ್ದು - ಇವೆಲ್ಲವೂ ಕಾದಂಬರಿಯಲ್ಲಿ ಸೊಗಸಾಗಿ ನಿರೂಪಿತವಾಗಿವೆ.

**ನಾಟಕಗಳು :** ಡಾ. ತಿಪ್ಪೇರುದ್ರಸ್ವಾಮಿಯವರು ಒಟ್ಟು ಐದು ನಾಟಕಗಳನ್ನು ಬರೆದಿದ್ದಾರೆ. ಅವುಗಳಲ್ಲಿ ನಾಲ್ಕು ಶಿವಶರಣ-ಶಿವಯೋಗಿಗಳನ್ನು ಕುರಿತದ್ದು. ಇನ್ನೊಂದು ಐತಿಹಾಸಿಕ ನಾಟಕ. 1. ವಿಧಿ ಪಂಜರ 2. ನಿಜಗುಣ ಶಿವಯೋಗಿ 3. ಮೂರು ನಾಟಕಗಳು (ಘಟ್ಟಿವಾಳಯ್ಯ, ಮೋಳಿಗೆ ಮಾರಯ್ಯ ಹಾಗೂ ಸಕಲೇಶ ಮಾದರಸ).

**ವಿಧಿ ಪಂಜರ :** ಇದರಲ್ಲಿ 5 ಅಂಕ, 27 ದೃಶ್ಯಗಳಿದ್ದು ಸುಮಾರು 3 ಗಂಟೆ ಆಡಬಹುದಾದ ದೊಡ್ಡನಾಟಕ. ಈ ನಾಟಕದ ವಸ್ತು ಬಾಲಸರಸ್ವತಿಯವರ 'ಮಹಾರಾಜಸಿಂಹ' ಗ್ರಂಥದಿಂದ ಪ್ರೇರಿತವಾದದ್ದು. ಮಾರವಾಡ ರಾಜ್ಯದಲ್ಲಿ ಸಿಂಹಾಸನಕ್ಕಾಗಿ ನಡೆದ ವಿಷಮಸ್ಪರ್ಧೆ, ಅದರಿಂದ ಒದಗಿದ ದುರಂತ-ಇವೇ ನಾಟಕದ ಕೇಂದ್ರವಸ್ತು. ಷೇಕ್ಸ್‌ಪಿಯರ್‌ನ 'ಮ್ಯಾಕ್‌ಬೆತ್' ನಾಟಕದ ಅನೇಕ

ಸನ್ನಿವೇಶಗಳ, ಸಂಭಾಷಣೆಯ ಸಾಮ್ಯವನ್ನು ವಿಮರ್ಶಕರು ಗುರುತಿಸಿದ್ದಾರೆ. ಆದರೆ ಇದು ಮ್ಯಾಕ್‌ಬೆತ್ ನಾಟಕದ ರೂಪಾಂತರವಲ್ಲ.

**ನಿಜಗುಣಶಿವಯೋಗಿ:** 5 ಅಂಕ, 28 ದೃಶ್ಯಗಳುಳ್ಳ ಈ ದೊಡ್ಡ ನಾಟಕದಲ್ಲಿ ಸುಮಾರು 30 ಪಾತ್ರಗಳು ಬರುತ್ತವೆ. ಒಂದು ಸಣ್ಣ ಪಾಳೆಯಪಟ್ಟಿನ ಅಧಿಪತಿಯಾಗಿದ್ದ ನಿಜಗುಣರು ಹೇಗೆ ಯೋಗಿಗಳಾದರು ಎನ್ನುವುದನ್ನು ವಿಕಾಸಗತಿಯಲ್ಲಿ ತೋರಿಸಲು ದೃಶ್ಯ ಸಂಯೋಜನೆ ಮಾಡಿದ್ದಾರೆ. ಆಧ್ಯಾತ್ಮ ರಂಗದಲ್ಲಿನ ಅವರ ಸಾಧನೆಗಳು ಮತ್ತು ಆನಂತರ ಅವರು ಕೃತಿ ರಚಿಸಿದ ಸನ್ನಿವೇಶಗಳು ಅಷ್ಟೇ ಪರಿಣಾಮಕಾರಿಯಾಗಿ ಮೂಡಿಬರುವಂತೆ ನಾಟಕ ಹೆಣೆದಿದ್ದಾರೆ.

**ಮೂರು ನಾಟಕಗಳು :** 1. ಘಟ್ಟಿವಾಳಯ್ಯ ಮದ್ದಳೆ ಬಾರಿಸುವ, ನರ್ತನ ಮಾಡುವ ಕಲೆಯೇ ಕಾಯಕವಾಗುಳ್ಳವನು. ಅವನೊಬ್ಬ ನ್ಯಾಯನಿಷ್ಠುರಿ. ಅವನು ಭಕ್ತರ ಜೊಳ್ಳುತನವನ್ನು ಬಯಲಿಗೆಳೆದದ್ದು, ತನ್ನ ಸತಿ ದಾರಿತಪ್ಪಿದಾಗ ಮಾನವೀಯ ಅಂತಃಕರಣ ತೋರಿದ್ದು-ಇಂಥ ಹಲವು ಘಟನೆಗಳು ನಾಟಕೀಯವಾಗಿದ್ದು ಆ ಮಹಾಶರಣನ ವ್ಯಕ್ತಿತ್ವವನ್ನು ಕಣ್ಣಿಗೆ ಕಟ್ಟುತ್ತವೆ.

2. ಕಾಶ್ಮೀರದ ಅರಸು ಮಹದೇವ ಭೂಪಾಲ ಕನ್ನಡನಾಡಿನಲ್ಲಿ ಬಸವಾದಿ ಪ್ರಮಥರು ನಡೆಸಿದ್ದ ಮಾನವಹಿತ ಸಾಧನೆಯ ಕಾರ್ಯಗಳಿಂದ ಆಕರ್ಷಿತನಾಗಿ ಬಂದು ಮೋಳಿಗೆ ಕಾಯಕವನ್ನು ಕೈಕೊಂಡು ಶಿವಶರಣನಾದ. ಅವನ ಬದುಕಿನಲ್ಲಿ ದ್ವಂದ್ವಗಳು, ಮಾನಸಿಕ ತೊಳಲಾಟಗಳು ಉಂಟಾಗಿರಲು ಸಾಕು. ಹೀಗಾಗಿ ಆತನ ಬದುಕಿನಲ್ಲಿ ಅನೇಕ ನಾಟಕೀಯ ಸನ್ನಿವೇಶಗಳಿವೆ. ಅವನ್ನು ನಾಟಕಕಾರರು ದೃಶ್ಯ ಮಾಧ್ಯಮದ ಮೂಲಕ ರಂಗದ ಮೇಲೆ ತರುವ ಸಾರ್ಥಕ ಪ್ರಯತ್ನ ಮಾಡಿದ್ದಾರೆ.

3. ಸಕಲೇಶ ಮಾದರಸನೂ ಮೋಳಿಗೆ ಮಾರಯ್ಯನಂತೆ ಅರಸನಾಗಿದ್ದು ವಿರಾಗಿಯಾದವನೇ. ಆದರೆ ಆತನು ತಾನು ಗುರು, ಜಗದ್ಗುರುವಾಗಿ ಮೆರೆಯಬೇಕು; ತನ್ನ ಪೂಜೆ ಅತ್ಯಂತ ವೈಭವದಿಂದ ನಡೆಯಬೇಕು ಎಂಬ ಬಿಂಕದಲ್ಲಿ ಸಿಲುಕುತ್ತಾನೆ. ಅವನ ಈ ಅಹಂಕಾರ ನಿರಸನವಾದುದು ಹೇಗೆ ಎಂಬುದು ನಾಟಕದ ಮುಖ್ಯವಸ್ತು. ಮೋಳಿಗೆ ಮಾರಯ್ಯನ ನುಡಿಚಾಟಿ ಹೇಗೆ ಮಾದರಸನನ್ನು ಎಚ್ಚರಿಸಿತು; ಒಳಗಣ್ಣು ತೆರೆಸಿತು? ಮುಂದೆ ಅವರು ಮಲ್ಲರಸರಲ್ಲಿ ತೀವ್ರ ಪರೀಕ್ಷೆಗೆ ಒಳಗಾದುದು, ಸಾವಕಾಶವಾಗಿ ಆತ್ಮವಿಕಾಸ ಮಾಡಿಕೊಂಡುದು, ಕಲ್ಯಾಣಕ್ಕೆ ಬಂದು ಸತ್ಸಂಗದಲ್ಲಿ ಮತ್ತಷ್ಟು ಉದಾತ್ತರಾದುದು, ಶಿವಾರ್ಪಿತಗೊಳಿಸಿ ದುಡಿಯುವುದೇ ಶಿವಯೋಗವೆಂಬ ತಿಳಿವ ಮೂಡಿಸಿಕೊಂಡದ್ದು - ಇವು ನಾಟಕದಲ್ಲಿ ಸ್ವಾರಸ್ಯಕರವಾಗಿ ಬಂದಿವೆ.

**ಶರಣರ ಅನುಭಾವ ಸಾಹಿತ್ಯ :** 1963ರಲ್ಲಿ ಪ್ರಕಟವಾದ ಈ ಗ್ರಂಥವು ಡಾ. ಸ್ವಾಮಿ ಅವರು ಪ್ರೊ. ಸ.ಸ. ಮಾಳವಾಡ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ಮಾಡಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿ ಪಿಎಚ್.ಡಿ. ಪಡೆದ ಮಹಾಪ್ರಬಂಧ. ಇದರಲ್ಲಿ ಶರಣರ ಅನುಭಾವ ಸಾಹಿತ್ಯದ ಸಮಗ್ರ ಸ್ವರೂಪವನ್ನು ಅವರ ವಚನಗಳನ್ನೇ ಮುಂದಿಟ್ಟುಕೊಂಡು ಪರಿಶೀಲಿಸಿದೆ. ಅವರು ಶರಣರ ಅರಿವು, ಆಚರಣೆ, ಅನುಭಾವಗಳನ್ನು ವೈಚಾರಿಕ ದೃಷ್ಟಿಯಿಂದ ವ್ಯಾಸಂಗ ಮಾಡಿದುದರ ಫಲವಾಗಿ ಮತ್ತು ಅದನ್ನು ಅರ್ಥಮಾಡಿಕೊಂಡುದರ ಪರಿಣಾಮವಾಗಿ ಇಂಥ ಮಹತ್ವದ ಕೃತಿಯೊಂದು ಮೂಡಿಬರಲು ಸಾಧ್ಯವಾಯಿತು.

ಪೀಠಿಕೆಯಲ್ಲಿ ತಮ್ಮ ಶರಣಸಾಹಿತ್ಯದ ಅಧ್ಯಯನದ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ: "ವಚನ ಸಾಹಿತ್ಯದಲ್ಲಿ ಪ್ರಕಟವಾಗಿರುವ ನಡೆ-ನುಡಿಗಳಿಗೆ ಅಂತರವಿಲ್ಲದ ಶರಣರ ಅರ್ಥಪೂರ್ಣ ಬದುಕನ್ನು, ಅವರ ಸಾಧನೆಗಳು ಹಾಗೂ ಅವರ ಅನುಭಾವದ ಸ್ವರೂಪವನ್ನು ಪರಿಚಯ ಮಾಡಿಕೊಡುವುದಲ್ಲದೆ, ಶರಣ ಸಾಹಿತ್ಯದ ಕ್ರಾಂತಿಕಾರಕವಾದ ವಿಚಾರಧಾರೆ ವ್ಯಕ್ತಿ ಹಾಗೂ ಸಮಾಜದ ಮೇಲೆ ಏನು ಪರಿಣಾಮ ಬೀರಿದೆ, ಬೀರುತ್ತಿದೆ ಎಂಬುದನ್ನು ನಿರೂಪಿಸುವುದು ಈ ಮಹಾ ಪ್ರಬಂಧದ ಉದ್ದೇಶ." ಐದು ಪ್ರಮುಖ ಅಧ್ಯಾಯಗಳಲ್ಲಿ ಈ ಕೃತಿ ರೂಪುಗೊಂಡಿದೆ.

**ಕರ್ನಾಟಕ ಸಂಸ್ಕೃತಿ ಸಮೀಕ್ಷೆ :** ಈ ಮಹತ್ವದ ಕೃತಿ ಡಾ. ತಿಪ್ಪೇರುದ್ರಸ್ವಾಮಿಯವರ ಸತತಾಭ್ಯಾಸದ, ವ್ಯಾಪಕ ಜ್ಞಾನಾನುಭವದ ಫಲ. ಇದು ಅವರಿಗೆ, ಕನ್ನಡ ಸಾಹಿತ್ಯಕ್ಕೆ ರಾಷ್ಟ್ರಮಟ್ಟದ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ತಂದುಕೊಟ್ಟ ಮೌಲ್ಯದ ಕೃತಿ. ಕೃತಿಯ ಆರಂಭದಲ್ಲಿ ಭಾರತೀಯ ಸಂಸ್ಕೃತಿಯನ್ನು ಕುರಿತು ವಿವೇಚಿಸಿದ್ದಾರೆ, ಸಿಂಧೂ ಸಂಸ್ಕೃತಿಯಿಂದ ಅದು ಬೆಳೆದುಬಂದ ವಿವಿಧ ಮಜಲುಗಳನ್ನು ಗುರುತಿಸಿದ್ದಾರೆ. ಉಪನಿಷತ್ತುಗಳ ದರ್ಶನ ಭರತಖಂಡದ ಸಾಂಸ್ಕೃತಿಕ ಜೀವನವನ್ನು ಒಂದಾಗಿ ಬೆಸೆದುದನ್ನು ತೋರಿದ್ದಾರೆ. ಉಪನಿಷತ್ತುಗಳ ಸತ್ಯದರ್ಶನವೇ ಭರತಖಂಡದ ಅನೇಕ ಭಾಗಗಳಲ್ಲಿ, ಅನೇಕ ಭಾಷೆಗಳ ಮೂಲಕ, ಅನೇಕ ರೂಪಗಳಲ್ಲಿ ಮೈದೋರಿರುವುದನ್ನು ತೋರಿಸಿ ಕನ್ನಡ ಸಂಸ್ಕೃತಿ ಹೇಗೆ ಅದರಿಂದ ಪ್ರಭಾವಿತವಾಗಿ ಬೆಳೆಯಿತೆಂಬುದನ್ನು ವಿವರಿಸಿದ್ದಾರೆ.

ಕರ್ನಾಟಕದ ರಾಜಕೀಯ ಚರಿತ್ರೆಯನ್ನು ಪ್ರಸ್ತಾಪಿಸಿ ರಾಜಕೀಯ ಜೀವನದ ಹಿನ್ನೆಲೆಯಲ್ಲಿ ಬೆಳೆದ ಸಾಮಾಜಿಕ ಜೀವನ ಹಾಗೂ ಸಂಸ್ಕೃತಿಯ ನಿರೂಪಣೆ ಮಾಡಿದ್ದಾರೆ. ಅನಂತರ ಜನಜೀವನ ಸಂಸ್ಕೃತಿ ಶಾಸನಗಳಲ್ಲಿ ಹೇಗೆ ವ್ಯಕ್ತವಾಗಿವೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ಇಂಥ ವಿವರಗಳನ್ನು ಸಮಗ್ರವಾಗಿ ನಿರೂಪಿಸಲು ಸಾಧ್ಯವಾಗದೆ ಸ್ಥೂಲದರ್ಶನದ ದೃಷ್ಟಿಯಿಂದ ಎಲ್ಲವನ್ನೂ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಆದರೂ ವಿವೇಚನೆಯಲ್ಲಿ ಪೂರ್ಣತೆ ತಂದಿದ್ದಾರೆ. ಮುಂದಿನ ಅಧ್ಯಾಯಗಳಲ್ಲಿ ಜಾನಪದ ಸಾಹಿತ್ಯ-ಸಂಸ್ಕೃತಿ, ವಾಸ್ತುಶಿಲ್ಪ, ಶಿಲ್ಪ, ಸಂಗೀತ, ನೃತ್ಯ, ಚಿತ್ರಕಲೆ ಮೊದಲಾದವುಗಳ ಬಗ್ಗೆಯೂ ಅಷ್ಟೇ. ಆಯಾ ಶಾಸ್ತ್ರಗಳ ಅಧ್ಯಯನ ಮಾಡಿ, ತಜ್ಞರ ನೆರವು ಪಡೆದು ಸಾರವತ್ತಾಗಿ ತಿಳಿಸಿದ್ದಾರೆ, ದೂರದಲ್ಲಿ ನಿಂತು ನೋಡುವವರಿಗೆ ಸಂಸ್ಕೃತಿಯ ಎಲ್ಲ ಮುಖಗಳನ್ನು ಕಾಣಬೇಕೆಂಬವರಿಗೆ ಅವು ಒಂದೇ ಕಡೆ ಒಟ್ಟಾಗಿ ಕಾಣುವಂತೆ ಮಾಡಿದ್ದಾರೆ, ಇದು ಈ ಕೃತಿಯ ವೈಶಿಷ್ಟ್ಯ. ಇಲ್ಲಿ ಭರತಖಂಡದ ಸಂಸ್ಕೃತಿಜ್ಯೋತಿಗೆ ಕರ್ನಾಟಕ ಎಂಥ ಉಜ್ವಲವಾದ ಕಾಣಿಕೆ ನೀಡಿದೆ, ಜೀವಧಾರೆಯನ್ನೆರೆದಿದೆ ಎಂಬುದು ಮನವರಿಕೆಯಾಗುತ್ತದೆ.

**ತೌಲನಿಕ ಕಾವ್ಯ ಮೀಮಾಂಸೆ - ಒಂದು ಅಧ್ಯಯನ :** ಇದು ಭಾರತೀಯ ಮತ್ತು ಪಾಶ್ಚಾತ್ಯ ಕಾವ್ಯಮೀಮಾಂಸೆಗಳ ಎತ್ತರ - ಬಿತ್ತರ, ಸ್ವರೂಪ-ಸಾಧನೆಗಳನ್ನು ಹಾಗೆಯೇ ಸಾದೃಶ್ಯ-ವೈದೃಶ್ಯಗಳನ್ನು ನಿರೂಪಿಸುವ ಹೇರಳ ಸಾಮಗ್ರಿಗಳನ್ನೊಳಗೊಂಡ ಪ್ರಗಲ್ಭ ಕೃತಿ. ಭಾರತೀಯ ಕಾವ್ಯಮೀಮಾಂಸೆ ಯೆಂದರೆ ಭರತನಿಂದ ಹಿಡಿದು ಜಗನ್ನಾಥನವರೆಗೂ ಸಂಸ್ಕೃತದ ಆಲಂಕಾರಿಕರಿಂದ ಬೆಳೆದುಬಂದ ವಿವಿಧ ಘಟ್ಟಗಳು. ಮುಂದಿನದೆಲ್ಲಾ ಈ ಮೂಲ ಸ್ರೋತದಿಂದ ಪ್ರೇರಿತವಾದದ್ದು. ಹಾಗೆಯೇ ಪಾಶ್ಚಾತ್ಯ ಕಾವ್ಯಮೀಮಾಂಸೆಯೆಂದರೆ ಗ್ರೀಕ್ ದೇಶದಲ್ಲಿ ಉದಯವಾಗಿ, ರೋಮ್ ದೇಶದಲ್ಲಿ ಬೆಳೆದು, ಆನಂತರ

ಐರೋಪ್ಯ ದೇಶಗಳಲ್ಲಿ, ಮುಖ್ಯವಾಗಿ ಇಂಗ್ಲೆಂಡಿನಲ್ಲಿ ಸಮೃದ್ಧಿ ಹೊಂದಿದ್ದು. ಪಾಶ್ಚಾತ್ಯರ ಧೋರಣೆಯನ್ನು ಅರಿಯಲು ಇದು ಸಾಕು. ಇಂಥದೊಂದು ಪರಿಮಿತಿಯನ್ನು ಹಾಕಿಕೊಂಡಿದ್ದರೂ, ಲೇಖಕರು ನಿರೂಪಣೆಯನ್ನು ಸಮಗ್ರವಾಗಿಯೇ ಮಾಡಿದ್ದಾರೆನ್ನಬಹುದು.

ಇದರಲ್ಲಿ ಒಟ್ಟು ಎಂಟು ಪರಿಚ್ಛೇದಗಳಿವೆ. 1) ಕಾವ್ಯ ಮೀಮಾಂಸೆಯ ಹೆಜ್ಜೆಗಳು: ಭಾರತೀಯ ಹಾಗೂ ಪಾಶ್ಚಿಮಾತ್ಯ ಕಾವ್ಯ ಮೀಮಾಂಸೆ ನಡೆದು ಬಂದ ದಾರಿಯತ್ತ ಗಮನ ಸೆಳೆದಿದ್ದಾರೆ. ಭರತನ 'ಅನುಕೃತಿ' ಅರಿಸ್ಟಾಟಲನ 'ಅನುಕರಣ' ವಿಚಾರಗಳನ್ನು ಪರಿಶೀಲಿಸಿ ಹೋಲಿಕೆ ಮತ್ತು ವ್ಯತ್ಯಾಸ ತೋರಿಸಿದ್ದಾರೆ. ಅಂಥ ವ್ಯತ್ಯಾಸಕ್ಕೆ ಅವರವರ ಮನೋಧರ್ಮಗಳೇ ಕಾರಣವೆಂಬುದನ್ನು ಪ್ರತಿಪಾದಿಸಿದ್ದಾರೆ. 2) ಕಾವ್ಯ ವರ್ತುಲ : ಇದು ಕವಿ - ಸಹೃದಯರ ಸಂಬಂಧವನ್ನು ಕುರಿತದ್ದು. ಕಾವ್ಯಶಕ್ತಿ, ಪ್ರತಿಭೆ, ಪ್ರತಿಭಾನ ಮೊದಲಾದವುಗಳ ಪೃಥಕ್ಕರಣ ಇಲ್ಲಿದೆ. 3) ಅಲಂಕಾರ - ಅಲಂಕಾರ್ಯ : ಅಲಂಕಾರ ಮತ್ತು ಪ್ರತಿಮೆಗಳಿಗೆ ಇರುವ ಸಾಮ್ಯ - ವೈಷಮ್ಯದ ಚರ್ಚೆ ಇಲ್ಲಿದೆ. ವಕ್ರೋಕ್ತಿ ತತ್ತ್ವ, ಸ್ವಭಾವೋಕ್ತಿ, ಕವಿಸಮಯ, ಮೊದಲಾದವುಗಳ ವಿವೇಚನೆಯೂ ಸೇರಿದೆ. 4) ರೀತಿ-ಮಾರ್ಗ-ಶೈಲಿ ಇವುಗಳ ಐತಿಹಾಸಿಕ ನಿರೂಪಣೆ ಇದೆ. ಪಾಶ್ಚಾತ್ಯ ಮೀಮಾಂಸಕಾರ ಕ್ರೋಚೆಯ ಸಿದ್ಧಾಂತವನ್ನು ಇಲ್ಲಿ ಚರ್ಚಿಸಿದ್ದಾರೆ. 5) ಧ್ವನಿ ಪ್ರಪಂಚ : ಧ್ವನಿಗಳ ಸ್ವರೂಪ ಪ್ರಭೇದಗಳ ವಿವರಣೆಯಿಂದ ತೊಡಗಿ ಪಾಶ್ಚಾತ್ಯರ ಅಭಿಪ್ರಾಯಗಳನ್ನು ಪರಿಶೀಲಿಸಿದ್ದಾರೆ. ದರ್ಶನ ಧ್ವನಿಯ ವಿಚಾರವೂ ಇಲ್ಲಿ ವಿಶೇಷವಾಗಿ ಸೇರಿದೆ. 6) ರಸ ಪ್ರಕಾಶ: ಭರತನ ರಸಸೂತ್ರದ ವ್ಯಾಖ್ಯಾನ ಇಲ್ಲಿದೆ. ಜೊತೆಗೆ ಪಾಶ್ಚಾತ್ಯರ ಪ್ರತಿಪಾದನೆಯನ್ನೂ ಪ್ರಸ್ತಾಪಿಸಿದ್ದಾರೆ. 7) ಔಚಿತ್ಯ ವಿವೇಕ: ಈ ಬಗೆಗಿನ ಭಾರತೀಯ ಹಾಗೂ ಪಾಶ್ಚಾತ್ಯರ ನಿಲವನ್ನು ಪರಿಶೀಲಿಸಿದ್ದಾರೆ. 8) ಕಾವ್ಯ ಮತ್ತು ಜೀವನ ಮೌಲ್ಯ: ಕಾವ್ಯ ಪ್ರಯೋಜನ ಕುರಿತು ಭಾರತೀಯರ ಹಾಗೂ ಪಾಶ್ಚಾತ್ಯರ ಧೋರಣೆಗಳ ಪ್ರಸ್ತಾಪವಿದೆ. ಅನೇಕ ಮೀಮಾಂಸಕರ ವಿಚಾರಧಾರೆಗಳನ್ನು ವಿವೇಚಿಸಿದ್ದಾರೆ.

ನಿರೂಪಣೆ ಶಾಸ್ತ್ರೀಯವಾದರೂ ಶುಷ್ಕವಾಗಿಲ್ಲ. ಡಾ. ಸ್ವಾಮಿಯವರ ಭಾಷೆಯಲ್ಲಿ ವಿಶೇಷ ಸೆಳೆತವಿರುವುದರಿಂದ ಶಾಸ್ತ್ರಗ್ರಂಥವೂ ಕೂಡ ರಮಣೀಯವೆನಿಸುತ್ತದೆ. ಕೃತಿಗೆ ವಿಚಾರಪೂರ್ಣವಾದ ಮುಕ್ತಾಯವೂ ಇದೆ. ಮತ್ತಷ್ಟು ಆಳವಾದ ಅಧ್ಯಯನಕ್ಕೆ ಆಹ್ವಾನ ನೀಡಿರುವ ರೀತಿ ಮನೋಜ್ಞ: "ಧರ್ಮದಲ್ಲಿ ಏರುಪೇರಾಗಬಹುದು. ಭಿನ್ನ ಅಭಿಪ್ರಾಯಗಳು, ದೌರ್ಬಲ್ಯಗಳು ತಲೆದೋರಬಹುದು. ಧರ್ಮವನ್ನು ಸಂಪೂರ್ಣ ನಿರಾಕರಿಸಬಹುದು. ಆದರೆ ಮಾನವಧರ್ಮ ಸಮಾನವಾದುದು, ಶಾಶ್ವತವಾದುದು. ಅದರ ಮೇಲೆ ಆಧಾರಿತವಾದ ಸಾಹಿತ್ಯ ಮತ್ತು ಕಲೆಗಳು ಮೂಲಭೂತವಾದ ಮೌಲ್ಯಗಳನ್ನು ಎತ್ತಿ ಹಿಡಿದು ಮಾನವೀಯತೆಯನ್ನು ಪೋಷಿಸುತ್ತಾ ಬಂದಿವೆ. ಭಾರತೀಯ ಹಾಗೂ ಪಾಶ್ಚಾತ್ಯ ಕಾವ್ಯ ಮೀಮಾಂಸೆಯ ಅಧ್ಯಯನದಿಂದ ಇದು ಸ್ಪಷ್ಟವಾಗುತ್ತದೆ". ಈ ದೃಷ್ಟಿಯಿಂದ ಇನ್ನೂ ವ್ಯಾಪಕ ಹಾಗೂ ಆಳವಾದ ತೌಲನಿಕ ಅಧ್ಯಯನದ ಅಗತ್ಯವಿದೆ.

❑

## ಶಂಕರ ಮೊಕಾಶಿ ಪುಣೇಕರ

ವೇಣುಗೋಪಾಲ ಸೊರಬ

### 1

ಹೊಸಗನ್ನಡ ಸಾಹಿತ್ಯದ, ಅದರಲ್ಲೂ 20ನೇ ಶತಮಾನದ ಉತ್ತರಾರ್ಧದ, ಸೀಮಾಪುರುಷರಲ್ಲಿ ಡಾ. ಶಂಕರ ಮೊಕಾಶಿ ಪುಣೇಕರ ಅವರೂ ಒಬ್ಬರು. ಇವರನ್ನು ಹೀಗೆ ಸೀಮಾಪುರುಷರು ಎಂದು ಕರೆಯುವುದಕ್ಕೆ ಕಾರಣ-ಅವರ ಸಾಹಿತ್ಯಕೃಷಿ ಮತ್ತು ಅದಕ್ಕಿಂತಲೂ ಮಿಗಿಲಾಗಿ ಅವರ ವ್ಯಕ್ತಿತ್ವದಲ್ಲಿಯೇ ಒಂದು ಎಳೆಯಾಗಿ ಮಿಳಿತವಾಗಿ ಹೋಗಿರುವ ಒಂದು ಬಗೆಯ ವೈಲಕ್ಷಣ. ಈ ವಿಲಕ್ಷಣತೆ ಇರುವುದು ಕೂಡ, ಅವರು ತಮ್ಮ ಪ್ರತ್ಯೇಕತೆಯನ್ನು ಕಾಪಾಡಿಕೊಳ್ಳುವಲ್ಲಿ ; ಸಂಪ್ರದಾಯ ಶರಣತೆಯನ್ನು ಒಪ್ಪಿ ಕೊಳ್ಳುವಲ್ಲಿ. ಜತೆ ಜತೆಗೇ ತಮ್ಮದೇ ಆದ ಕ್ರಾಂತಿಕಾರೀ ಗುಣ ಪ್ರಕಟಿಸುವಲ್ಲಿ ಮತ್ತು ಸಂಶೋಧನೆಯಲ್ಲಿಯೂ ಕೂಡ ತಮ್ಮದೇ ಆದ ನೆಲೆಯನ್ನು ಸ್ಥಾಪಿಸುವಲ್ಲಿ.

ಡಾ. ಶಂಕರ ಮೊಕಾಶಿ ಪುಣೇಕರ ಅವರು ಬೇಂದ್ರೆಯವರಂತೆ "ಧಾರವಾಡದ ಕೂಸು". ಅವರು ಹುಟ್ಟಿ ಬೆಳೆದದ್ದು, ಸಮಗ್ರ ವಿದ್ಯಾಭ್ಯಾಸ ಮಾಡಿದ್ದು, ಉದ್ಯೋಗದ ಸಾಕಷ್ಟು ಸಮಯವನ್ನು ಕಳೆದದ್ದು ಧಾರವಾಡದಲ್ಲಿಯೇ. ಈಗ ನಿವೃತ್ತಜೀವನವನ್ನು ನಡೆಸುತ್ತಿರುವುದೂ ಧಾರವಾಡದಲ್ಲಿಯೇ.

ಡಾ. ಶಂಕರ ಮೊಕಾಶಿ ಪುಣೇಕರ ಅವರು ಹುಟ್ಟಿದ್ದು ಮೇ 8 1928ರಂದು. ಅಣ್ಣಿಗೇರಿಗೆ ಸೇರಿದ ಇವರ ತಂದೆ, ಪುಣೇಕರ ಅವರು ಐದು ವರ್ಷದವರಿದ್ದಾಗಲೇ ತೀರಿಕೊಂಡರು. ಇವರ ಬಾಲ್ಯ ತಾಯಿಯ ತಂದೆಯ ಮನೆಯಲ್ಲಿ, ಧಾರವಾಡದಲ್ಲಿ ಕಳೆಯಿತು. ಬಿ.ಎ., ಎಂ.ಎ., ಪಿಎಚ್.ಡಿ, ಪದವಿಗಳೆಲ್ಲವನ್ನೂ ಪುಣೇಕರರು ಧಾರವಾಡದಲ್ಲಿಯೇ ಅಧ್ಯಯನ ಮಾಡಿದರು.

ಬಿ.ಎ. ಪದವಿ ಪಡೆದ ನಂತರ ನಾಲ್ಕು ವರ್ಷಗಳ ಕಾಲ, ಪುಣೇಕರ ಅವರು ಬಿಜಾಪುರ, ಕಾರವಾರ ಮತ್ತು ಧಾರವಾಡದಲ್ಲಿ ಶಾಲಾಶಿಕ್ಷಕರಾಗಿ ದುಡಿದರು. ಎಂ.ಎ. ಪದವಿ ಗಳಿಸಿದ ನಂತರ ಆರ್.ಪಿ.ಡಿ. ಕಾಲೇಜು, ಬೆಳಗಾಂವಿಯ ಲಿಂಗರಾಜ ಕಾಲೇಜು ಮತ್ತು ಮುಂಬಯಿಯ ಕೆ.ಸಿ. ಕಾಲೇಜುಗಳಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು, ಹತ್ತು ವರ್ಷ ಐ.ಐ.ಟಿ.ಯಲ್ಲಿ

ದುಡಿದರು. ಅಲ್ಲಿಂದ ಮುಂದೆ ಹತ್ತು ವರ್ಷಗಳ ಕಾಲ ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಪ್ರವಾಚಕರಾಗಿ ಕೆಲಸ ಮಾಡಿದರು. ಇವರ ಸೇವಾವಧಿಯ ಕೊನೆಯ ಘಟ್ಟದಲ್ಲಿ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಇಂಗ್ಲಿಷ್ ಪ್ರಾಧ್ಯಾಪಕ ರಾಗಿದ್ದರು. ಆ ಹುದ್ದೆಯಿಂದ 1988ರಲ್ಲಿ ನಿವೃತ್ತಿ ಹೊಂದಿದರು.

ಪುಣೇಕರ ಅವರು, ಪ್ರೌಢಶಾಲಾ ದಿನಗಳಲ್ಲಿ ಸರ್ವಶ್ರೀ ಎಸ್.ಜಿ. ನಾಡಗೀರ್, ಎನ್.ಕೆ. ಕುಲಕರ್ಣಿ ಇವರ ಪ್ರಭಾವಕ್ಕೆ ಒಳಗಾಗಿದ್ದರು. ಕಾಲೇಜು ದಿನಗಳಲ್ಲಿ ಪ್ರೊ. ಬಿ.ಎಂ.ಶ್ರೀ., ಪ್ರೊ.ಆರ್ಮಾಂಡೊ ಮೆನಜೀಸ್ ಮತ್ತು ಪ್ರೊ.ವಿ.ಕೆ. ಗೋಕಾಕ್‌ರಂತಹ ಉದ್ದಾಮ ಪಂಡಿತರು, ಪ್ರಥಮ ಸಾಲಿನ ಪ್ರಾಧ್ಯಾಪಕರುಗಳಿಂದ ಸ್ಫೂರ್ತಿ ಪಡೆದರು. 1965ರಲ್ಲಿ ಪುಣೇಕರ ಅವರು ತಮ್ಮ "The Later Phase in the Development of W.B. Yeats" ಎಂಬ ಸಂಶೋಧನ ಕಾರ್ಯಕ್ಕೆ ಪಿಎಚ್.ಡಿ. ಪದವಿಯನ್ನು ಪಡೆದುಕೊಂಡರು.

ಇವರು ಕನ್ನಡದಲ್ಲಿ ಹದಿಮೂರು ಕೃತಿಗಳನ್ನೂ, ಇಂಗ್ಲಿಷ್‌ನಲ್ಲಿ ಹದಿನೇಳು ಕೃತಿಗಳನ್ನೂ ರಚಿಸಿದ್ದಾರೆ. ಇವಗಳಲ್ಲಿ ಕಾವ್ಯ, ಕಾದಂಬರಿ, ನಾಟಕ ಮತ್ತು ವಿಮರ್ಶಾ ಗ್ರಂಥಗಳು ಸೇರಿವೆ. ಇವರ ಕೃತಿಗಳು ಸಂಖ್ಯೆಯ ದೃಷ್ಟಿಯಿಂದ ಕಡಮೆಯಾದರೂ, ಚಿಂತನ-ಮಂಥನಗಳು ಅವುಗಳಲ್ಲಿ ಸಂಮಿ ಳಿತವಾಗಿದ್ದು, ಅಭಿವ್ಯಕ್ತಿ, ಶೈಲಿ, ಭಾಷೆ-ಹೀಗೆ ಪ್ರತಿಯೊಂದು ದೃಷ್ಟಿಯಿಂದಲೂ ಇವರ ಪ್ರತಿಯೊಂದು ಕೃತಿಯೂ ಅಧ್ಯಯನ ಯೋಗ್ಯವಾಗಿವೆ.

ಕವಿಯಾಗಿ ಇಂಗ್ಲಿಷ್‌ನಲ್ಲಿಯೂ ಕಾವ್ಯ ರಚನೆ ಮಾಡಿರುವ ಪುಣೇಕರ ಅವರು 1984ರಲ್ಲಿ ಯುಗೋಸ್ಲಾವಿಯದಲ್ಲಿ ನಡೆದ ವಿಶ್ವ ಕಾವ್ಯ ಸಮ್ಮೇಳನ ದಲ್ಲಿ ಭಾರತವನ್ನು ಪ್ರತಿನಿಧಿಸಿ ಭಾಗವಹಿಸಿದ್ದರು. ಇಂಗ್ಲೆಂಡ್, ಬಲ್ಗೇರಿಯಾ ಮತ್ತು ಹಂಗೇರಿ ದೇಶಗಳಲ್ಲಿಯೂ ಪುಣೇಕರ ಅವರು ಪ್ರವಾಸ ಮಾಡಿ, ಸಂಶೋಧನ ಕಾರ್ಯ ಕೈಗೊಂಡಿದ್ದಾರೆ. ಈ ಸಂಶೋಧನೆಯಲ್ಲಿ ಅವರ ಮುಖ್ಯ ಉದ್ದೇಶ ಭಾರತದ ವೈದಿಕ ಮತ್ತು ಮಹಾಕಾವ್ಯ ಕಾಲದಲ್ಲಿನ ಸಂಸ್ಕೃತಿಗೂ, ಪಾಶ್ಚಾತ್ಯ ದೇಶಗಳಿಗೂ ಇದ್ದ ಸಂಬಂಧವನ್ನು ಹುಡುಕಿ ತೆಗೆಯುವುದು.

ಇಂಗ್ಲಿಷ್‌ನಲ್ಲಿ ಡಬ್ಲ್ಯು.ಬಿ. ಯೇಟ್ಸ್‌ನ ಕೊನೆಗಾಲದ ಕಾವ್ಯವನ್ನು ಕುರಿತು ಎರಡು ಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಒಂದು ಅವರು ಪಿಎಚ್.ಡಿ. ಪದವಿಗಾಗಿ ಬರೆದ ಮಹಾಪ್ರಬಂಧ. "ಇಂಗ್ಲಿಷ್‌ನಲ್ಲಿ ರಚಿತವಾದ ಭಾರತೀಯ ನಾಟಕಗಳ ಒಳನೋಟ", "ಪಿ.ಲಾಲ್ : ರಸ ವಿಮರ್ಶೆ", "ಭಾರತಾಂಗ್ಲ ತತ್ತ್ವ", "ಭಾರತಾಂಗ್ಲ ಸಾಹಿತ್ಯ : ಕೆಲವು ಅಧ್ಯಯನಗಳು"- ಇವು ಪುಣೇಕರ ಅವರು ಇಂಗ್ಲಿಷಿನಲ್ಲಿ ಬರೆದ ಪ್ರಕಟಿತ ಗ್ರಂಥಗಳು.

"ದಿ ಕ್ಯಾಪ್ಟೀವ್", "ದಿ ಪ್ರಿಟೆಂಡರ್", "ಎಪಿಸಲ್ ಟು ಡೇವಿಡ್ ಮಕ್ ಕುಚಿಯೊನ್", "ದಿ ಟೆಂಟ್ ಪೋಲ್" ಮತ್ತು "ಪ್ಯಾರಡಿಮ್ಸ್"- ಇವು ಪುಣೇಕರ ಅವರು ಇಂಗ್ಲಿಷ್‌ನಲ್ಲಿ ಬರೆದಿರುವ ಕಾವ್ಯ ಕೃತಿಗಳು. ಇವುಗಳ ಜತೆಯಲ್ಲಿ ಕಾಳಿದಾಸನ 'ಋತುಸಂಹಾರ'ದ ಇಂಗ್ಲಿಷ್ ಭಾಷಾಂತರ ಹಾಗೂ 'ಅವಧೂತ ಗೀತೆ'ಯನ್ನು ಇಂಗ್ಲಿಷ್‌ನಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ. ವಿ.ಕೃ. ಗೋಕಾಕರನ್ನು ಕುರಿತು ಇಂಗ್ಲಿಷ್‌ನಲ್ಲಿ ವಿಮರ್ಶಾ ಗ್ರಂಥವನ್ನು ಬರೆದಿರುವ ಪುಣೇಕರ ಅವರು, ಕುವೆಂಪುರವರನ್ನು ಕುರಿತು 'ಹೋಮಿಂಗ್ ಬರ್ಡ್' ಎನ್ನುವ ವಿಮರ್ಶನ ಕೃತಿಯನ್ನು ಬರೆದಿದ್ದಾರೆ.

ಪುಣೇಕರ ಅವರ ಅಧ್ಯಯನ ಕೇವಲ ಸಾಹಿತ್ಯಕ್ಕಷ್ಟೇ ಸೀಮಿತವಾಗಿಲ್ಲ. ಅವರು ಹಲವು ಕ್ಷೇತ್ರಗಳಲ್ಲಿ ಸಂಶೋಧನೆಯನ್ನು ಕೈಗೊಂಡಿದ್ದಾರೆ. 'ಕಂಪಲ್ಸರಿ ಕ್ಯಾಪಿಟೇಷನ್ ಸ್ಕೀಂ', 'ಮೊಹಂಜೊದಾರೊ ಮುದ್ರಿಕೆಗಳು', 'ಭಾರತೀಯ ಚಿಂತನಧಾರೆಗೆ ಹರಿಜನರ ಕೊಡುಗೆ' ಈ ಕೃತಿಗಳು ಅವರ ಅಧ್ಯಯನದ ವ್ಯಾಪ್ತಿಯನ್ನು ತೋರಿಸುತ್ತವೆ.

ಪುಣೇಕರ ಅವರಿಗೆ ಗೌರವಗಳೂ ಪ್ರಶಸ್ತಿಗಳೂ ಬಂದಿವೆ. ಇವರ 'ಗಂಗವ್ವ ಗಂಗಾಮಾಯಿ' ಯನ್ನು ಭಾರತದ ಎಲ್ಲ ಅಧಿಕೃತ ಭಾಷೆಗಳಿಗೆ ನ್ಯಾಷನಲ್ ಬುಕ್ ಟ್ರಸ್ಟ್ ಅನುವಾದಿಸಿದೆ. ಇವರ 'ನಟನಾರಾಯಣಿ' ಕಾದಂ ಬರಿಗೆ 'ಸುಧಾ' ಪತ್ರಿಕೆ ನಡೆಸಿದ ಕಾದಂಬರಿಸ್ಪರ್ಧೆಯಲ್ಲಿ ರೂ. 10,000ದ ಬಹುಮಾನ ಲಭಿಸಿದೆ. 'ಅವಧೇಶ್ವರಿ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿದೆ.

ಇವರ ಇಂಗ್ಲಿಷ್ ಕಾವ್ಯಕೃತಿಗಳು ಹರ್ಬರ್ಟ್ ರೀಡ್‌ನಂತಹ ವಿಮರ್ಶಕ ರಿಂದ ಪ್ರಶಂಸಿಸಲ್ಪಟ್ಟಿವೆ. ಇವರ 'ಹೋಮಿಂಗ್ ಬರ್ಡ್' ಕೃತಿಗೆ 1978ರಲ್ಲಿ ಕುವೆಂಪು ವಿದ್ಯಾವರ್ಧಕ ಟ್ರಸ್ಟ್‌ನ ಪ್ರಶಸ್ತಿ ದೊರೆತಿದೆ. ಇವರ 'ಪಾಶ್ಚಾತ್ಯ ವಿಮರ್ಶೆಯ ಇತಿಹಾಸ'ಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ದೊರೆತಿದೆ. 1986ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪುಣೇಕರ ಅವರಿಗೆ ಗೌರವ ಪ್ರಶಸ್ತಿ ನೀಡಿ ಸನ್ಮಾನಿಸಿದೆ. 'ದಿ ಪ್ರಿಟೆಂಡರ್ಸ್' ಎಂಬ ಇಂಗ್ಲಿಷ್ ಕವನ ಸಂಕಲನಕ್ಕೆ ಪುಣೇಕರ ಅವರು ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವ ಪ್ರಶಸ್ತಿ ಪಡೆದಿದ್ದಾರೆ.

ಶಿಕ್ಷಣ ಕ್ಷೇತ್ರದಲ್ಲಿ ಪುಣೇಕರ ಅವರು ಉನ್ನತ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದ ಹಾಗೆ, ಚೋಮ್‌ಸ್ಕಿ-ಸ್ಕಿನ್ನರ್ ಪದ್ಧತಿಯನ್ನು ಕಂಡು ಹಿಡಿ ದಿದ್ದಾರೆ. ಮುಂಬಯಿಯ 'ಟೈಮ್ಸ್ ಆಫ್ ಇಂಡಿಯಾ' ಪತ್ರಿಕೆಗೆ ಸಂಗೀತ ವಿಮರ್ಶೆಯನ್ನು ಹಲವಾರು ವರ್ಷ ಮಾಡಿದ ಪುಣೇಕರ ಕೆಲವು ಹೊಸ ರಾಗಗಳನ್ನು ಕಂಡುಹಿಡಿದಿದ್ದಾರೆ.

ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯರು (1983-87) ; ರಾಜ್ಯ ಸಾಹಿತ್ಯ ಅಕಾಡೆಮಿ ಸದಸ್ಯರು (1988) ಮತ್ತು 1984ರಲ್ಲಿ ಜ್ಞಾನಪೀಠದ ಕನ್ನಡ ಸಲಹಾ ಸಮಿತಿಯ ಸದಸ್ಯರೂ ಆಗಿದ್ದರು.

2

ಕನ್ನಡ ಕಾವ್ಯಕ್ಷೇತ್ರಕ್ಕೆ ಪುಣೇಕರ ಅವರು ನೀಡಿರುವ ಏಕೈಕ ಕವನ ಸಂಗ್ರಹ-'ಮಾಯಿಯ ಮೂರು ಮುಖಗಳು'. ಇವರ ಕವನಗಳು ಪುಸ್ತಕ ರೂಪದಲ್ಲಿ ಮೊದಲಿಗೆ ಪ್ರಕಟವಾದದ್ದು 'ಗಾನಕೇಳಿ' (1947)ಯಲ್ಲಿ. ಆದರೆ; ಇದು ಅವರ ಸ್ವತಂತ್ರ ಸಂಗ್ರಹವಲ್ಲ. ಈ ಕೃತಿಯಲ್ಲಿ ಇನ್ನೂ ಇಬ್ಬರ ಕವನ ಗಳು ಸೇರ್ಪಡೆಯಾಗಿವೆ.

'ಮಾಯಿಯ ಮೂರು ಮುಖಗಳು' ಪುಣೇಕರ ಅವರ ವಿಕ್ಷಿಪ್ತತೆಯನ್ನು ಸಾಕಷ್ಟು ಬಯಲು ಮಾಡುತ್ತದೆ. ಮೊದಲಿಗೆ, ನವ್ಯಕಾವ್ಯ ಅತ್ಯಂತ ಹೆಚ್ಚಿನ ಪ್ರಚಾರಕ್ಕೆ ಒಳಗಾಗಿದ್ದ ಸಂದರ್ಭದಲ್ಲಿ, ಪುಣೇಕರ ಅವರು ವಿಭಿನ್ನ ರೀತಿ ಯಲ್ಲಿ ಬರೆದರು. ಅವರು ನವ್ಯಕಾವ್ಯವನ್ನು ಗೇಲಿಮಾಡಬೇಕೆಂಬ ಏಕೈಕ ಉದ್ದೇಶದಿಂದ ಬರೆದರು, ಎಂದು ಹೇಳಲು ಬರುವುದಿಲ್ಲ. ಆದರೆ, ಕೆಲವು ನವ್ಯಮಾರ್ಗಿಗಳು ತಮ್ಮ ಸುತ್ತ ಕಟ್ಟಿಕೊಂಡ ಭ್ರಮಾಲೋಕವನ್ನು ಭೇದಿಸಲು ಪುಣೇಕರ ಅವರು ಈ ರೀತಿ ಮಾಡಿದರೆಂದು ಹೇಳಬಹುದು. 'ಮಾಯಿಯ

ಮೂರು ಮುಖಗಳು' ಸಂಗ್ರಹದಲ್ಲಿ 'ಪರಿಕ್ಷಿತ', 'ಶಿಖಂಡಿಗೆ', 'ತರುಣ ಲೇಖಕನಿಗೆ', 'ಶಾಪ-ಪರಿಹಾರ'- ಈ ಕವನಗಳು ಪುಣೇಕರ ಅವರಿಗೆ ಕಾವ್ಯ ರಚನೆ ಮತ್ತು ಬರಹಗಾರರ ಬಳಗದ ಬಗ್ಗೆ ಇರುವ ಕಾಳಜಿಯನ್ನು ತೋರಿಸುತ್ತವೆ. ಸ್ವತಃ ವಿಮರ್ಶಕರೂ ಆಗಿರುವ ಪುಣೇಕರ ಅವರಿಗೆ, ಕಾವ್ಯರಚನೆಯ ಬಗ್ಗೆ ತರುಣ ಬರಹಗಾರರನ್ನು ಕುರಿತು ಆಡಬೇಕೆಂದಿರುವುದು ಸಹಜವೇ.

ಆದರೆ, ಪುಣೇಕರ ಅವರು ನವ್ಯವನ್ನು ಅಭ್ಯಾಸ ಮಾಡಿದವರಾದ್ದರಿಂದ, ಅವರು ನವ್ಯದ ಹೆಸರಿನಲ್ಲಿ ನಡೆಯುತ್ತಿದ್ದ ಕೆಲವು ವೈಪರೀತ್ಯಗಳನ್ನು ದಿಟ್ಟತನದಿಂದಲೇ ವಿರೋಧಿಸಿದರು.

ಪುಣೇಕರ ಅವರಿಗೆ, ಬೇಂದ್ರೆಯವರ 'ಸೌಭಾಗ್ಯ ದರ್ಶನ'ದಲ್ಲಿ ವ್ಯಕ್ತವಾದ ನವ್ಯತೆ ಅತ್ಯಂತ ಆಪ್ಯಾಯಮಾನ. ಅಂದರೆ, ಸೃಷ್ಟಿಯಲ್ಲಿ ಸಮಸ್ತವೂ ಸೌಭಾಗ್ಯವನ್ನೇ ನೀಡುವಂತಹದ್ದು ಎನ್ನುವ ಭಾವ ಅವರಿಗೆ ಸಂಪೂರ್ಣ ಒಪ್ಪಿತ. ಆದರೂ, 'ಸತ್ಯ', 'ಕಿರು-ಕುಳ', 'ಮರೆವು', 'ಕತ್ತಲಲ್ಲಿ', 'ನಾವು-ಮುಂಬೈ ಬಿಳಿಕಾಲರುಗಳು', 'ಹುಣಸೆ-ತೊಕ್ಕು' ಇಂಥ ಕವಿತೆಗಳು ಆ ದಿನಗಳಲ್ಲಿ ಪ್ರಚಲಿತವಿದ್ದ ಧಾಟಿಯನ್ನೇ ಹೆಚ್ಚಾಗಿ ಹೋಲುತ್ತವೆ.

'ಮೌನ ರಾಜ್ಯ' ಒಂದು ಪ್ರಗಾಥವನ್ನು ಹೋಲುತ್ತದೆ; ವಸ್ತು ನಿರೂಪಣೆಯಲ್ಲಿ ಬೇಂದ್ರೆಯವರ ಕವನಗಳನ್ನು ದಟ್ಟವಾಗಿ ಹೋಲುತ್ತದೆ.

'ಬೇಸರ'-ರೊಮ್ಯಾಂಟಿಕ್ ಶೈಲಿಯ ಇನ್ನೊಂದು ಯಶಸ್ವೀ ಕವನ. ಒಂದೊಂದು 'ನುಡಿ'ಯಲ್ಲಿಯೂ ಕವಿತೆ ಬೆಳೆಯುತ್ತಾ ಹೋಗಿ, ಕೊನೆಯಲ್ಲಿ 'ಬಂದುದನು ಸಹಿಪೆನೆಲ್ಲ!' ಎಂಬ ತೀರ್ಮಾನಕ್ಕೆ ಬರುವ ರೀತಿ ಆಕರ್ಷಕವಾಗಿದೆ. ಆದರೆ ಪುಣೇಕರತನವನ್ನು ಬಿಚ್ಚಿ ತೋರಿಸುವ 'ಗಟ್ಟಿ' ಕವನಗಳೆಂದರೆ 'ಮಾಯಿಯ ಮೂರು ಮುಖಗಳು', 'ನಿಸರ್ಗ', 'ಸಿದ್ಧಾ!', 'ಅಂತಃಕರಣ', 'ಗುರುರಾಯ', 'ಗಂಧಕೊರಡು', 'ನೆರಳು' ಮತ್ತು 'ಸಂಸ್ಕೃತಿ' ಎನ್ನಬಹುದು.

ಈ ಕವನಗಳಲ್ಲಿ ಪುಣೇಕರ ಅವರು ತಮ್ಮ ಚಿಂತನಾ ಪ್ರಧಾನವಾದ ಧಾಟಿಯಲ್ಲಿಯೇ ಕವನ ಕಟ್ಟುತ್ತಾ ಹೋಗುತ್ತಾರೆ. ಭಾಷಿಕವಾಗಿ ಇಲ್ಲಿನ ಕವನಗಳು ನವೋದಯ ಕಾವ್ಯಕ್ಕೆ ಹತ್ತಿರವಾಗಿದೆ. ಅಷ್ಟೇ ಏಕೆ 'ನಿಸರ್ಗ', 'ನೆರಳು', 'ಗುರುರಾಯ'ದಂತಹ ಕವನಗಳಲ್ಲಿ ಕವನ ರಚನೆ ಕೂಡ, ನವೋದಯಕ್ಕೆ ಹತ್ತಿರವಾಗಿದೆ.

'ಮಾಯಿಯ ಮೂರು ಮುಖಗಳು' ಮಾತೃತ್ವವನ್ನು ಅರಸುವ ರೀತಿ ವಿನೂತನವಾಗಿದೆ. ಇಲ್ಲಿನ ಮೂರು ಮುಖಗಳನ್ನು ಬಹಳ ಸಲಿಗೆಯಿಂದ ಕಟ್ಟಿಕೊಡುವ ಕ್ರಮ ಓದುಗರಿಗೆ ಪ್ರಿಯವಾಗುತ್ತದೆ. ಆದರೆ 'ನಿಸರ್ಗ' ವಿವಿಧ ಘಟ್ಟಗಳಲ್ಲಿ ನಿಸರ್ಗವನ್ನು ಅರಸುವ ಪ್ರಯತ್ನವಾಗಿದೆ. ಕವನದ ಐದು ಭಾಗಗಳೂ ಬೇರೆ ಬೇರೆ ಶೈಲಿಯಲ್ಲಿದ್ದು, ಸಂರಚನೆಯ ದೃಷ್ಟಿಯಿಂದ ನವ್ಯಕ್ಕೆ ಹತ್ತಿರವಾಗಿದೆ.

ಈ ಸಂಗ್ರಹದಲ್ಲಿನ ಇನ್ನುಳಿದ ಕೆಲವು ಕವನಗಳು, ವಿವಿಧ ಆಸಕ್ತಿಗಳನ್ನು ತೋರಿಸುತ್ತವೆ. 'ಸೀಮಂತಿನೀಕೋಪಾಖ್ಯಾನ' ಒಂದು ಉತ್ತಮ ವಿಡಂಬನೆ. 'ಡೆಮೊಕ್ರಸಿಯ ಜನನ' ಮತ್ತು 'ರೌಪ್ಯಯುಗಕ್ಕೆ ರೌಪ್ಯ ಪ್ರತಿಮೆ'- ಇವೆರಡೂ ರಾಜಕೀಯ ಪ್ರಜ್ಞೆಯ ಕವನಗಳು. ಇವುಗಳಲ್ಲಿ 'ರೌಪ್ಯಪ್ರತಿಮೆ' ಹರಿತವಾಗಿದೆ. ಸ್ವಾತಂತ್ರ್ಯಾನಂತರದ ಮೌಲ್ಯಚ್ಛೇದವನ್ನು ಈ ಕವನ ಸಮರ್ಥವಾಗಿ ಪ್ರತಿಮಿಸುತ್ತದೆ.

ಪುಣೇಕರ ಅವರು ತಮ್ಮ ಕಾವ್ಯಪ್ರತಿಭೆಯನ್ನು ಉದ್ದಿಷ್ಟ ಪರಿಣಾಮಕ್ಕಾಗಿ ಬಳಸುವಂತೆ, ಅಭಿಜಾತ ರೀತಿಯಲ್ಲಿ ಅರಳುವುದಕ್ಕೆ ಹೆಚ್ಚಾಗಿ ಅವಕಾಶ ಮಾಡಿಲ್ಲ. ಹಾಗೆ ಮಾಡಿದ್ದರೆ, ಅವರಿಂದ ಇನ್ನಷ್ಟು ಒಳ್ಳೆಯ ಕವನಗಳು ಹೊರಬೀಳುತ್ತಿದ್ದವು ಎಂದಷ್ಟೇ ಹೇಳಬಹುದು, ಹೀಗಾಗುವುದಕ್ಕೆ ಮುಖ್ಯವಾಗಿ ಬಹುಶಃ ಅವರು ಕಾದಂಬರಿಗಳ ಕಡೆಗೆ ತಮ್ಮ ಸೃಜನಶೀಲತೆಯನ್ನು ಒಡ್ಡಿಕೊಂಡಿದ್ದು ಕಾರಣವಾಗಿರಬಹುದು.

## 3

ಕಾದಂಬರಿ ಕ್ಷೇತ್ರಕ್ಕೆ ಪುಣೇಕರ ಅವರ ಕೊಡುಗೆ ಮೂರು ಮಾತ್ರ. 'ಗಂಗವ್ವ-ಗಂಗಾಮಯಿ'ಯಲ್ಲಿ ಹೊಸ ಲೇಖಕನೊಬ್ಬನ ಯಾವುದೇ ಆದರ್ಶೀಕೃತ ಗುಣಗಳಿಲ್ಲ. ಪ್ರಬುದ್ಧ ಲೇಖಕನೊಬ್ಬ ತನ್ನ ಪರಿಚಿತ ಮಾಡುವ ಕಸರತ್ತುಗಳನ್ನು ಹೋಲುತ್ತದೆ ಇಲ್ಲಿಯ ಬರವಣಿಗೆ.

ಕಾವ್ಯದಂತೆ ಇಲ್ಲಿಯೂ ನವ್ಯವನ್ನು ಧಿಕ್ಕರಿಸುವ ಮತ್ತು ಸಂಪ್ರದಾಯವನ್ನು ಬೇಕೆಂದೇ ಅಪ್ಪಿಕೊಳ್ಳುವ ಕ್ರಮವನ್ನು ಕಾಣುತ್ತೇವೆ. ಮೊಟ್ಟಮೊದಲನೆಯ ಅಧ್ಯಾಯ ತಂತಾನೆ ಸ್ವತಂತ್ರವಾಗಿದ್ದು, ಇಡೀ ಕಾದಂಬರಿಯ ಧೋರಣೆಯನ್ನು ಚುಟುಕಿನಲ್ಲಿ ಹೇಳುತ್ತದೆ. ಕಾಶಿಯಿಂದ ತಂದ ಗಂಗಾಥಾಲಿಯನ್ನು ಮನೆಗೆ ತೆಗೆದುಕೊಂಡು ಹೋದರೆ, ಎಲ್ಲಿ ಅದು ತನಗೆ ಜೀವನದಿಂದ ನಿವೃತ್ತಿಯನ್ನು ಬೇಡುತ್ತದೋ ಎಂಬ ಕಾರಣಕ್ಕೆ ಅದರಲ್ಲಿನ ಗಂಗಾಜಲವನ್ನು ದಾರಿಯಲ್ಲಿಯೇ ಸುರಿದು ಬಿಡುವ ಒಂದು ಘಟನೆಯೇ, ಆಕೆ ಜೀವನವನ್ನು ಅಪ್ಪಿಕೊಳ್ಳುವುದಕ್ಕೆ ಒಳ್ಳೆಯ ಉದಾಹರಣೆ.

ಇಲ್ಲಿನ ಕಥೆ ಗಂಗವ್ವನ ಮಗ ಕಿಟ್ಟಿಯ ಸುತ್ತ ಹೆಣೆದ ಹಾಗೆ ಮೇಲುನೋಟಕ್ಕೆ ಕಂಡರೂ, ಇದರ ಇನ್ನೊಂದು ಕೇಂದ್ರ ಪ್ರಜ್ಞೆ ಬಿಂದಗೋಳ ರಾಘಪ್ಪ. ಆದರೆ ಆಳದಲ್ಲಿ ಗಂಗವ್ವನ ಯಜಮಾನ ಸ್ವಾಮಿರಾವ ಕೃಷ್ಣಾಜಿ ಕುಲಕರ್ಣಿ, ಮುತ್ತುರತ್ನ ವ್ಯಾಪಾರ ಮಾಡಿದ್ದ ಶ್ರೀಮಂತ,ಅವನು ಗಂಗವ್ವನ ತಮ್ಮ ವೆಂಕಟರಾಯನನ್ನು ಉಳಿಸಿಕೊಳ್ಳಲು ಮಾಡಿದ ಉದಾರ ನಡವಳಿಕೆ, ಇಡೀ ಕಥೆಗೆ ಐಕ್ಯತೆ ತರುವುದಷ್ಟೇ ಅಲ್ಲ, ಸತ್ವವನ್ನೂ ನೀಡುತ್ತದೆ.

ಇಡೀ ಕಾದಂಬರಿಯಲ್ಲಿ ಖಳನಾಯಕನಾಗಿ ಮೆರೆಯುವ ಗಂಗವ್ವನ ಇನ್ನೊಬ್ಬ ತಮ್ಮ ರಾಘಪ್ಪ ಅಂದಿನ ಕಾಲದ ಜೀವನ ಮೌಲ್ಯಗಳನ್ನೇ ಏರುಪೇರಾಗಿ ಮಾಡುವಂತಹ ಧೂರ್ತ. ಪುಣೆಯಲ್ಲಿದ್ದ ತನ್ನ ಸೋದರ ವೆಂಕಟರಾಯನನ್ನು ಉಳಿಸಿಕೊಳ್ಳಲು ಸ್ವಾಮಿರಾವನನ್ನು ಪ್ರೇರಿಸುವ ವ್ಯಕ್ತಿ ಇವನೇ ಆದರೂ. ವೆಂಕಟರಾಯನಿಂದ ಎರಡು ಸಾವಿರ ರೂಪಾಯಿ ಹಾರಿಸಿಕೊಂಡು ಬರುವವನೂ ಇವನೇ. ಕಿಟ್ಟಿ ತನ್ನ ಮಗಳನ್ನೇ ಮದುವೆಯಾಗುವಂತೆ ಪ್ರೇರಣೆ ನೀಡುವವನೂ ಅವನೇ. ಕಿಟ್ಟಿಯನ್ನು ದತ್ತಕ ಮಾಡಿಕೊಳ್ಳುವ ಪ್ರಲೋಭನೆ ಉಂಟು ಮಾಡಿ, ಕೊನೆಗೆ ತನ್ನ ಆಸ್ತಿ ಅವನಿಗೆ ಹೋಗದಿರುವಂತೆ ತಪ್ಪಿಸಲು, ತನ್ನ ನಿಸ್ಸತ್ವ ನಿಸ್ಸಹಾಯಕ ಹೆಂಡತಿಯಿಂದ ಗಂಡು ಮಗುವನ್ನು ಪಡೆಯಲು ಹವಣಿಕೆ ಹಾಕಿ, ಅದರಲ್ಲಿ ಸೋತು, ಕೊನೆಗೆ ತಾನೂ ಆತ್ಮಹತ್ಯೆ ಮಾಡಿಕೊಳ್ಳುವ ಇಂತಹ ವ್ಯಕ್ತಿ ಚಾರ್ಲ್ಸ್ ಡಿಕನ್ಸ್‌ನಂತಹ ವಿಕ್ಟೋರಿಯನ್ ಕಾದಂಬರಿಕಾರರ ಖಳನಾಯಕರನ್ನು ನೆನಪಿಗೆ ತರುತ್ತಾನೆ. ಖಳನಾಯಕ ಪಾತ್ರದ ಬೆಳವಣಿಗೆಯ ದೃಷ್ಟಿಯಿಂದ ಇಡೀ ಕಾದಂಬರಿ ವಿಕ್ಟೋರಿಯನ್ ಕಾದಂಬರಿಗಳ ಸಂರಚನೆಯನ್ನು ಹೇಳುತ್ತದೆ.

ಕಾದಂಬರಿಯನ್ನು ಸಂಪ್ರದಾಯಶರಣವನ್ನಾಗಿ ಮಾಡಲು ಲೇಖಕರು ಸಾಕಷ್ಟು ಶ್ರಮವಹಿಸಿದ್ದಾರೆ. ಜಾರ್ಜ್ ವಾಷಿಂಗ್‌ಟನ್ ಕಂಬಾರ ಗಣೆವಿ,

ಅಚ್ಯುತರಾಯನ ಮುಂಬಯಿ ವಾಸ, ತಹಸೀಲ್ದಾರ್ ಆಫೀಸಿನ ವ್ಯವಹಾರ ಗಳು-ಇಂತಹ ಹಲವು ವಿವರಗಳು ಕಾದಂಬರಿಯ ಸಂವೇದನೆಯ ವ್ಯಾಪ್ತಿ ಯನ್ನು ಹಿಗ್ಗಿಸಲು ಸಹಕಾರಿಯಾಗಿವೆ. ಇಡೀ ಒಂದು ಕಾಲಮಾನದ ಸಮಸ್ತ ಜನಜೀವನ ತನ್ನ ಸೀಮಿತ ಹಿಡಿತದಲ್ಲಿ ಕಾದಂಬರಿ ಒಳಗೊಳ್ಳಲಿಕ್ಕೆ ಪ್ರಯತ್ನಿಸುತ್ತದೆ.

ಪುಣೇಕರ ಅವರು ಕಾದಂಬರಿಯ ನಿರೂಪಣಾ ತಂತ್ರದ ಬಗ್ಗೆ ಕಾನ್ರಾಡನ 'Language of facts' ಎಂಬ ಮಾತನ್ನು ಉದ್ಧರಿಸಿದ್ದಾರೆ. ಭಾರತೀಯರಿಗೆ ಮೊದಲಿನಿಂದ ಒಗ್ಗಿ ಬಂದಿರುವ 'ಕಥೆ ಹೇಳುವ ಕಲೆ'ಗೆ ಇಲ್ಲಿನ ನಿರೂಪಣಾ ತಂತ್ರ ಹತ್ತಿರವಾಗಿದೆ.

'ನಟ ನಾರಾಯಣಿ'ಯನ್ನು ಒಂದು ಪಿಕರೆಸ್ಕ್ ಕಾದಂಬರಿ ಎಂದು ಕರೆಯುವುದರಲ್ಲಿ ಯಾವ ಬಾಧಕವೂ ಇಲ್ಲ. ಇದೂ ಸಹ ವ್ಯಕ್ತಿಕೇಂದ್ರಿತ ಕಾದಂಬರಿಯಲ್ಲದಿದ್ದರೂ, ಕಾದಂಬರಿಯಲ್ಲಿ ಕೇಂದ್ರ ಸ್ಥಾನವನ್ನು ಆಕ್ರಮಿಸುವ ಅಡಿಗೆ ನಾಣಿ, ಉದಾತ್ತ ನಾಯಕನೂ ಅಲ್ಲ; ಖಳನಾಯಕನೂ ಅಲ್ಲ. ಸಂಗೀತ ಕಲಿಯಲು ಹೋಗಬೇಕೆಂದಿದ್ದವನು, ನಾಟಕ ಕಂಪನಿಯವರ ಕೈಯಲ್ಲಿ ಸಿಕ್ಕು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುವ ದಾರುಣ ಪ್ರಸಂಗವನ್ನು ನಾವಿಲ್ಲಿ ನೋಡುತ್ತೇವೆ. ಆದರೂ ಸಾಮಾನ್ಯ ಓದುಗ, ಆತನ ಬಗ್ಗೆ ಕನಿಕರ ಪಡುವುದರ ಬದಲು, ಜಿಗುಪ್ಸೆ ಪಟ್ಟರೆ ಹೆಚ್ಚಲ್ಲ.

ಅಡಿಗೆ ನಾಣಿ ಹೆಣ್ಣುಪಾತ್ರದ ನಟನಾಗಿ, ನರ್ತಕನಾಗಿ ಕೊನೆಗೆ ಚಮೇಲಿ ಯಾಗಿ ಅಫೀಮು ವ್ಯವಹಾರದಲ್ಲಿ ಸಿಕ್ಕಿಹಾಕಿಕೊಂಡು, ಕೊನೆಗೆ ಇದೆಲ್ಲದರಿಂದ ನಿವೃತ್ತನಾಗಿ, ಕೀರ್ತನಕಾರನಾಗಿ, ಮಡದಿ ಮಕ್ಕಳೊಡನೆ ಸುಖವಾಗಿ ಬಾಳುವೆ ನಡೆಸುವುದೇ ಈ ಕಾದಂಬರಿಯಲ್ಲಿನ ಮುಖ್ಯ ಎಳೆ. ಆದರೆ, ನಾಟಕ ಕಂಪನಿಯ ವೀರಭದ್ರಶೆಟ್ಟಿ, ರುಖಬೇದಾಬಾಯಿ, ಚೌಧರಿ ಸಾಹೇಬ, ಕಂದಸ್ವಾಮಿ-ಹೀಗೆ ಹಲವು ಪಾತ್ರಗಳು ಬಂದು ಹೋಗುತ್ತವೆ. ನಾಟಕ ಕಂಪನಿಯ ಮೇಲೆ ಸಿನಿಮಾ ಪ್ರಭಾವ, ಕಂಪನಿಯ ಒಳವ್ಯವಹಾರಗಳು, ಆಫೀಮು ಕಳ್ಳಸಾಗಣೆ, ಸೈನಿಕ ಜೀವನ-ಹೀಗೆ ಹಲವಾರು ವಿಷಯಗಳು ಕಾದಂಬರಿಗೆ ರೋಚಕತೆಯನ್ನು ತಂದು ನೀಡುತ್ತವೆ.

ಆದರೆ ಇದೊಂದು ಬದ್ಧ ಬರವಣಿಗೆ. ಇಲ್ಲಿಯ ಬದ್ಧತೆಗೆ ಪೂರಕವಾಗಿ, ಕಾದಂಬರಿಕಾರರು ಮಧ್ಯೆ ಪ್ರವೇಶಿಸುವುದು ಮತ್ತು ಕಾದಂಬರಿ ತಂತ್ರದ ಬಗ್ಗೆ, ಎಕ್ಸಿಸ್ಟೆಂಶಿಯಲಿಸಂ ಬಗ್ಗೆ ಮಾತಾಡುವುದು-ಇವುಗಳಿಂದ ಕಾದಂಬರಿಯ ಹರವು ಹೆಚ್ಚಾಗುತ್ತದೆ ಎಂದು ಹೇಳಲಿಕ್ಕೆ ಬರುವುದಿಲ್ಲ. ಇದು ಸಾಮಾನ್ಯ ಓದು ಗರನ್ನು ಉದ್ದೇಶಿಸಿ ಬರೆದ ಕಾದಂಬರಿ ಎನ್ನುವುದಕ್ಕಿಂತ ಹೆಚ್ಚಾಗಿ, ಕಾದಂಬರಿ ಕಾರರು, ವಿಮರ್ಶಕರು ಇಂತಹವರನ್ನು ಮಾತ್ರವೇ ಉದ್ದೇಶಿಸಿ ಬರೆದಂತಿದೆ.

ತಾನು ಅಡಿಗೆ ಮಾಡುತ್ತಿದ್ದ ದೇಸಾಯರ ಮನೆಯಲ್ಲಿ, ದೇಸಾಯರು ಎಲ್ಲಿ ತನ್ನ ಮೇಲೆ ರೇಗುತ್ತಾರೆಯೋ, ಎಂಬ ವಿಷಯಕ್ಕೆ ಹೆದರಿ, ಬಾವಿಗೆ ಹಾರಲು ಹೋಗಿದ್ದ ನಾಣಿಗೆ, ಮೊದಲ ಬಾರಿಗೆ ಎಕ್ಸಿಸ್ಟೆಂಶಿಯಲ್ ಅಬಿಸ್ (ಅಸ್ತಿತ್ವವಾದೀ ಪ್ರಪಾತ)ದ ಪರಿಯಚಯವಾಗುತ್ತದೆ ಎಂದು ಹೇಳುವ ಕಾದಂಬರಿಕಾರರು, ಕೊನೆಯ ಘಟ್ಟದಲ್ಲಿ ಆತ ಕೀರ್ತನಕಾರನಾಗಿದ್ದನ್ನು ತಿಳಿಸು ತ್ತಾರೆ. ಅಂದರೆ, ಇದರಿಂದ ಅಸ್ತಿತ್ವವಾದೀ ಅವಸ್ಥೆಗೆ ಭಕ್ತಿ ಜನ್ಯ ಶರಣಾಗತಿ ಎಂಬ ತೀರ್ಮಾನ-ಇದು ಕೃತಿ ರಚನೆಗೆ ಮೊದಲೇ ಕೈಗೊಂಡ ತೀರ್ಮಾನ ವಲ್ಲವೆ? ಎಂಬ ಪ್ರಶ್ನೆ ಏಳುತ್ತದೆ. ಇದಕ್ಕೆ ಸಮಜಾಯಿಸಿ ಕೊಡಬಹುದಾ ದರೂ ತಕ್ಕ ಉತ್ತರ ಕೊಡುವುದು ಕಷ್ಟವಾಗುತ್ತದೆ, ಒಟ್ಟಿನಲ್ಲಿ ಥೀಸೀಸ್ ಕಾದಂಬರಿಯೊಂದರಿಂದ ಸಮರ್ಪಕವಾದ ನಿಲವನ್ನು, ಸಮರ್ಥನೆಯನ್ನು ನಿರೀಕ್ಷಿಸುವುದು ಕಷ್ಟ.

### 4

'ಅವಧೇಶ್ವರಿ' ಸ್ವಸಂಪೂರ್ಣತೆಯನ್ನುಳ್ಳ ಕಾದಂಬರಿ. 'ವೇದಕಾಲೀನ ರಾಜಕೀಯ ಕಾದಂಬರಿ' ಎಂದು ಈ ಕೃತಿಯನ್ನು ಕರೆಯಲಾಗಿದ್ದರೂ, ಇಲ್ಲಿನ ರಾಜಕೀಯವನ್ನು ಸಮೀಕ್ಷಿಸಿದರೆ, ಇಲ್ಲಿನ ರಾಜಕೀಯ ಯಾವುದೇ ಕಾಲಕ್ಕೂ ಸಲ್ಲಬಹುದಾದದ್ದು ಎಂದು ಮನವರಿಕೆ ಆಗುತ್ತದೆ. ಇಲ್ಲಿನ ಕಥೆಯ ಕೇಂದ್ರ ಸ್ಥಳ ಅಯೋಧ್ಯೆ. ಅಯೋಧ್ಯೆ ಮತ್ತು ಸುತ್ತುಮುತ್ತಲಿನ ಬಿಲ್ಲವ ಇತ್ಯಾದಿ ಕಾಡುಜನಗಳೊಂದಿಗಿನ ರಾಜಕೀಯ ಸಂಬಂಧವಾಗಲೀ ಅಯೋಧ್ಯೆ ಮತ್ತು ದಶಾರ್ಣ ಅಥವಾ ಕಾಶೀ ಅಥವಾ ನೇಪಾಲ-ಇಂತಹ ನಾಗರಿಕ ಜನ ಸಮು ದಾಯದೊಂದಿಗಿನ ರಾಜಕೀಯ ಸಂಬಂಧವಾಗಲೀ ಎಲ್ಲ ಕಾಲಕ್ಕೂ ನಡೆಯ ಬಹುದಾದದ್ದೆ. ಇಲ್ಲಿ ಗಮನಿಸಬಹುದಾದ ಇನ್ನೊಂದಂಶವೆಂದರೆ, ಇಡೀ ರಾಜಕೀಯದಲ್ಲಿ ಬ್ರಾಹ್ಮಣರ ಪಾತ್ರ. ವೃಶಜಾನ ಇಂತಹ ಬ್ರಾಹ್ಮಣರಲ್ಲಿ ತನ್ನದೇ ಆದ ವಿಶಿಷ್ಟ ಪಾತ್ರವಹಿಸುತ್ತಾನೆ. ಭೀಮಭಟ್ಟ ಶಾಮಭಟ್ಟರಂತಹವರ ಪಾತ್ರಗಳೂ ಕೂಡ ರಾಜಕೀಯ ಮಾಡಲು ಪ್ರಯತ್ನಿಸಿದರೂ ಅವರುಗಳು ವೃಶಜಾನನಷ್ಟು ಯಶಸ್ವಿಯಾಗುವುದಿಲ್ಲ.

ದಶಾರ್ಣದ ರಾಜ ಭದ್ರಾಯು ವಿಕಲಾಂಗನಾದರೂ ಅವನೊಬ್ಬ ದಿಟ್ಟ ಹೋರಾಟಗಾರ. ತಂದೆ ಕ್ಷತ್ರಿಯ, ತಾಯಿ ಪತ್ತಾರ ಜಾತಿಯವಳು. ರಾಜ್ಯ ವಿಸ್ತರಣೆಯೇ ರಾಜಕೀಯದ ಒಂದು ಮುಖ್ಯ ಧ್ಯೇಯೋದ್ದೇಶವಾದರೆ, ಭದ್ರಾಯು ಅದನ್ನು ಯಥೇಚ್ಛವಾಗಿ ಸಾಧಿಸಿದನು. (ಕುರುಪಾಂಚಾಲ ಸಾಮ್ರಾಜ್ಯ ಕಟ್ಟಿ, ಮಾಹೀಷ್ಮತೀ ಹಾಗೂ ಗಂಗಾ ನದಿಯ ದಂಡೆಯ ಅನೇಕ ಸಣ್ಣಪುಟ್ಟ ರಾಜ್ಯಗಳನ್ನು ಆಕ್ರಮಿಸಿದನು.) ಅಯೋಧ್ಯೆಯ ಮೇಲೆ ದಾಳಿ ಮಾಡಿ, ಪುರುಕುತ್ಸನನ್ನೂ ಮೃಗನಯನೆಯನ್ನೂ ಸೆರೆ ಹಿಡಿದನು.

ಹುಟ್ಟಿನಿಂದ ಶಬರರ ನಡುವೆ ಬೆಳೆದು, ತಂದೆಯ ಮರಣಾನಂತರ ತಾನೇ ದಶಾರ್ಣದ ರಾಜನಾದ ಭದ್ರಾಯು, ಪುರುಕುತ್ಸಾನಿಯನ್ನು ಮದುವೆ ಯಾಗಲು ಇಚ್ಛಿಸಿ, ಅವಳಿಗೆ ಸಂದೇಶ ಕಳಿಸಿದ- "ಪುರುಕುತ್ಸ-ಪುರುಕುತ್ಸಾನಿಯರ ವಿವಾಹ ಭಾರತೀಯ ಪದ್ಧತಿಯಿಂದ ನ್ಯಾಯಸಮ್ಮತವಲ್ಲ. ಆದ್ದರಿಂದ ಪುರುಕುತ್ಸಾನಿ ತನ್ನನ್ನು ಮದುವೆಯಾದರೆ, ಕಾಶೀ, ವಂಗ, ಅಂಗ, ಕಳಿಂಗ ರಾಜ್ಯಗಳು ಒಂದಾಗಿ ವಿಶಾಲ ಆರ್ಯಾವರ್ತ ಸಾಮ್ರಾಜ್ಯ ಕಟ್ಟಬಹುದು".

ಈ ಸಂದರ್ಭದಲ್ಲಿಯೂ ನಾವು ಆಕ್ರಮಣಕಾರೀ ಹಾಗೂ ರಾಜ್ಯ ವಿಸ್ತರಣಾಕಾಂಕ್ಷೆಯನ್ನು ಒಟ್ಟಾಗಿ ನೋಡುತ್ತೇವೆ. ಅಯೋಧ್ಯೆಯನ್ನು ಕೈವಶ ಮಾಡಿಕೊಂಡರೆ, ಇಡೀ ಒಂದು ದೊಡ್ಡ ಸಾಮ್ರಾಜ್ಯವನ್ನು ಕಟ್ಟಬಹು ದೆಂಬುದು ಒಂದು ಮಹತ್ವಾಕಾಂಕ್ಷೆ. ಇನ್ನೊಂದು ದೃಷ್ಟಿಯಿಂದ ನೋಡಿದಾಗ, ಕೆಳವರ್ಗದಿಂದ (ರಾಜರಕ್ತ ಅವನಲ್ಲಿ ಹರಿಯುತ್ತಿದ್ದರೂ) ಬಂದ ಭದ್ರಾಯು ಕ್ಷತ್ರಿಯ ವಂಶಸ್ಥಳಾದ ಪುರುಕುತ್ಸಾನಿಯ ಜತೆಗೆ ಸಮಾನತೆಯನ್ನು ಸಾಧಿಸಲು ಹಾತೊರೆಯುವುದು; ಅದಕ್ಕಾಗಿ ಸವಾಲು ಹಾಕುವುದು.

ಅಂದಿನ ರಾಜಕಾರಣದ ವಿದ್ಯಮಾನಕ್ಕೆ ಇದೊಂದು ಸಣ್ಣ ಉದಾಹರಣೆ. ನಾವಿಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಪುರುಕುತ್ಸಾನಿ ಮತ್ತು ತಾರ್ಕ್ಷ್ಯ- ಇವರನ್ನು. ಇವರಿಬ್ಬರನ್ನು ಅಂದಿನ ರಾಜಕೀಯ ಚಟುವಟಿಕೆಯ ಎರಡು

ಧ್ರುವಗಳಾಗಿ ನೋಡಬಹುದು. ಮೊಟ್ಟಮೊದಲಿಗೆ, ಪುರುಕುತ್ಸನಿಗೆ ವೇಶ್ಯಾಂಗನೆಯನ್ನು ಒದಗಿಸುವ ವ್ಯಕ್ತಿಯಾಗಿ ನಮಗೆ ತಾರ್ಕ್ಷ್ಯ ಕಂಡು ಬರುತ್ತಾನೆ. ಪುರುಕುತ್ಸಾನಿ ಉದ್ದೇಶ, ಪುರುಕುತ್ಸನನ್ನು ವೇಶ್ಯೆಯರಿಂದ ತಪ್ಪಿಸಬೇಕು ಎನ್ನುವುದು. ಆದರೂ ಪಕ್ಷ್ಮಾದೇವಿಯ ಪ್ರಕರಣದಿಂದ, ತಾರ್ಕ್ಷ್ಯ ಹೇಗೆ ಪುರುಕುತ್ಸಾನಿಯನ್ನು ಅನುಸರಿಸಿ ನಡೆಯಬೇಕಾಗುತ್ತದೆ ಎನ್ನುವುದು ತಿಳಿಯುತ್ತದೆ.

ತಾರ್ಕ್ಷ್ಯ, ಪುರುಕುತ್ಸ, ಪುರುಕುತ್ಸಾನಿ-ಎಲ್ಲರೂ ನಾಗಕುಲಕ್ಕೇ ಸೇರಿದವರಾದರೂ, ಅವರುಗಳು ಬೇರೆ ಬೇರೆ ವರ್ಗಕ್ಕೆ ಸೇರಿದವರು. ನಾಗಿಯಾಳ ಪ್ರಕರಣದಿಂದ, ತಾರ್ಕ್ಷ್ಯ ಎದುರಿಸಬೇಕಾದ ಸಂದಿಗ್ಧ ಮತ್ತು ವಿರೋಧವನ್ನು ನಾವು ನೋಡುತ್ತೇವೆ.

ಇದೇ ತಾರ್ಕ್ಷ್ಯನಿಗೆ, ಅಹಿಚ್ಛತ್ರದಿಂದ ಪುರುಕುತ್ಸ ಮಹಾರಾಜನನ್ನು ಬಿಡಿಸಿಕೊಂಡು ಬರುವ ಜವಾಬ್ದಾರಿಯನ್ನು ವಹಿಸುತ್ತಾಳೆ. ಆದರೂ, ಬಿಡುಗಡೆ ನಿಷ್ಕರ್ಷೆಯಾದ ಹೊತ್ತಿನಲ್ಲಿ ತಾರ್ಕ್ಷ್ಯ ಗುಟ್ಟಾಗಿ ಪುರುಕುತ್ಸನನ್ನು ಕೊಲೆ ಮಾಡಿದುದೇಕೆ ? ಕೊನೆಗೊಮ್ಮೆ ಪುರುಕುತ್ಸಾನಿಯ ಮೈಯ ಹಂಬಲವನ್ನು ತೀರಿಸುವ ಕೈಂಕರ್ಯಗೊಳ್ಳುವ ತಾರ್ಕ್ಷ್ಯ ಹೀಗೆ ನಡೆದುಕೊಳ್ಳುವುದಕ್ಕೆ ಹೊರಗಿನ ಕಾರಣಗಳೇನಾದರೂ ಇದ್ದಿರಬಹುದೆ? ಅಂದರೆ, ರಾಜಕೀಯ ಚಟುವಟಿಕೆಯ ಎರಡು ಧ್ರುವಗಳಾಗಿದ್ದ ಪುರುಕುತ್ಸಾನಿ ಮತ್ತು ತಾರ್ಕ್ಷ್ಯ ಒಬ್ಬರನ್ನೊಬ್ಬರು ಒಳಗಾಗಿಸುವಲ್ಲಿ, ನಮಗೆ ತಾರ್ಕ್ಷ್ಯನದೇ ಮೇಲುಗೈ ಎನಿಸದೆ ಇರದು. ವರ್ಗಸಂಘರ್ಷದ ಸೂಚಕವಾದ ಒಂದು ಹೋರಾಟ ಹೀಗೆ ಹಲ್ಲು ಕಳೆದುಕೊಳ್ಳುವುದು ಸುದೀರ್ಘ ಚರ್ಚೆಗೆ ಆಹ್ವಾನ ನೀಡಬಲ್ಲದು.

ರಾಜಕೀಯ ಪುರುಕುತ್ಸಾನಿಯ ಹೆಗ್ಗಳಿಕೆ ಅಂದರೆ, ಹಲವು ರಾಜ್ಯಗಳನ್ನು ತನ್ನ-ಅಂದರೆ ತನ್ನ ಮಗ ತ್ರಸದಸ್ಯುವಿನ ಹಿಡಿತದಲ್ಲಿ ತಂದಿದ್ದು. ಬಿಲ್ಲವ, ನಾಗ ಮತ್ತಿತರ ಕಾಡುಜನಗಳನ್ನು ಒಂದು ಆಡಳಿತದ ಹಿಡಿತದಲ್ಲಿ ಈ ಸಂಘಟನೆಗಳು ಅವರ ರಾಜಕೀಯ ವ್ಯಕ್ತಿತ್ವಕ್ಕೆ ಮಹತ್ವವನ್ನು ತಂದುಕೊಡಬಹುದಾದರೂ, ಅದಕ್ಕೆ ವ್ಯಂಜಕತೆ ಬರುವುದು ಅವಳು ಮಗನನ್ನು ಪಡೆದ ರೀತಿಯಿಂದ. ಆಕೆಯ ಮಗ ತ್ರಸದಸ್ಯು ಅರ್ಥದೇವ, ಮಿತ್ರಾ ವರುಣನ ಕೃಪೆಯಿಂದ ಹುಟ್ಟಿದವನು. ನಿಯೋಗದ ಮೂಲಕ ಆಕೆ ಮಗನನ್ನು ಪಡೆದ ರೀತಿ, ಅಂದಿನ ಕಾಲದಲ್ಲಿಯೂ ಕುತೂಹಲಕ್ಕೂ ಆಕ್ಷೇಪಣೆಗೂ ದಾರಿ ಮಾಡಿಕೊಟ್ಟಿತೆನ್ನುವುದೂ, ಸಿಂಹಭಟ್ಟನ ಮೇಲೆ ಈ 'ನಿಯೋಗ ಹೋಗುವಿಕೆ' ಅತ್ಯಂತ ದುಷ್ಪರಿಣಾಮ ಮಾಡಿತೆನ್ನುವುದೂ ತೀವ್ರ ಗಮನಹರಿಸಬೇಕಾದ ವಿಷಯ. ಇದರ ಜತೆಜತೆಯಲ್ಲೇ ಅಂದಿನ ವೇದಗಳಿಗೆ ಸಂಬಂಧಪಟ್ಟ ಹಾಗೆ, ಬ್ರಾಹ್ಮಣರ ಅಭಿಪ್ರಾಯಗಳು ಒಡಕು ಇತ್ಯಾದಿ, ಅಂದಿನ ಜನಜೀವನ ಚಿತ್ರಿಸುವಲ್ಲಿ ಸಾಕಷ್ಟು ಪರಿಣಾಮಕಾರಿಯಾಗಿದೆ. ಇವುಗಳಷ್ಟೇ ಪರಿಣಾಮಕಾರಿಯಾದದ್ದು, ಈಜಿಪ್ಟ್ ಮತ್ತು ಅರ್ಮೇನಿಯಾ ಅಥವಾ ಲಕುಲೀಶ ಎಂದು ಗುರುತಿಸಲ್ಪಟ್ಟಿರುವ ಸಂಸ್ಕೃತಿಯ ಚಿತ್ರಣ.

ಹೀಗೆ ಒಂದು ಇಡೀ ಸಂಸ್ಕೃತಿಯ ಜನಜೀವನವನ್ನು ಯಥಾವತ್ತಾಗಿ ಚಿತ್ರಿಸಲು ಕಾದಂಬರಿಕಾರರು, ತಮ್ಮ ನಿರೂಪಣೆಗೆ ಹಲವು ಮಗ್ಗಲುಗಳನ್ನು ಹೆಣೆದಿದ್ದಾರೆ. ಘನಪಾಟಿಗಳು ಎನಿಸಿಕೊಂಡವರಲ್ಲಿದ್ದ ಸಣ್ಣತನ, ಧೂರ್ತತನ-ಇಂತಹವುಗಳಿಂದ ಹಿಡಿದು, ಕಾಸು ಆಣೆ ರೂಪಾಯಿಗಳ ಲೆಕ್ಕದವರೆಗೆ ಹಲವಾರು ವಿವರಗಳನ್ನು ಈ ಕೃತಿಯಲ್ಲಿ ದಾಖಲಿಸುವ ರೀತಿ ವಿಶಿಷ್ಟವಾಗಿದೆ. ಹಲವು ಋಕ್ಕುಗಳಲ್ಲಿ ಕಂಡುಬರುವ ಚಾರಿತ್ರಿಕ ಅಂಶಗಳನ್ನು ಕೆಲವು ಸಾಕ್ಷಿ ಪುರಾವೆಗಳೊಂದಿಗೆ ಇಲ್ಲಿ ಚಿತ್ರಿಸಲಾಗಿದೆ. ಇಷ್ಟಾದರೂ, ಇದನ್ನೊಂದು 'ಕಾದಂಬರಿಯಾಗೇ ಓದಬೇಕು, ಸಂಶೋಧನೆಯೆಂದಲ್ಲ' ಎಂದು ಲೇಖಕರು ಬೇಡಿಕೊಂಡಿರುವುದು, ಇಲ್ಲಿನ ಚಾರಿತ್ರಿಕ ಅಂಶಗಳಿಗಿರುವ ಅಥವಾ ಆ ಅಂಶಗಳು ನೀಡಬಹುದಾದ ಸಮರ್ಥನೆಯ ಮಿತಿಯನ್ನು ಎತ್ತಿ ತೋರಿಸುತ್ತದೆ, ಎನ್ನಬಹುದು.

'ಅವಧೇಶ್ವರಿ' ಒಂದು ಜನಜೀವನದ ಯಶಸ್ವೀ ಚಿತ್ರಣವಾಗಿದೆ ಎಂದು ಧಾರಾಳವಾಗಿ ಹೇಳಬಹುದು. ಈ ಕಾದಂಬರಿಯನ್ನು ಓದುವುದರ ಮೂಲಕ ನಾವು ವೇದಕಾಲೀನ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುತ್ತೇವೆ ಎಂದು ಹೇಳಲಾಗುವುದಿಲ್ಲ. ಆದರೆ ಆ ಕಾಲದಲ್ಲಿಯೂ ಜನಜೀವನ, ನಮ್ಮ ಕಾಲದ ಜನಜೀವನಕ್ಕಿಂತ ಭಿನ್ನವಾಗಿರಲಿಲ್ಲ ಎಂಬ ಅಂಶವನ್ನು ಮಾತ್ರ ನಾವು ಲೆಕ್ಕಕ್ಕೆ ತೆಗೆದುಕೊಳ್ಳಬಹುದು. ಅಲ್ಲದೆ, ವೇದಕಾಲದಲ್ಲಿಯೂ ಭಾರತದ ಜನಜೀವನ ಒಂಟಿತನ (Isolation)ದಿಂದ ನರಳುತ್ತಿತ್ತು ಎಂದು ಹೇಳುವಂತಿಲ್ಲ.

### 5

ಕೊನೆಯದಾಗಿ ಪುಣೇಕರ ಅವರ ವಿಮರ್ಶೆಯತ್ತ ಗಮನಹರಿಸಬಹುದು. ಅವರು ಇದುವರೆಗೆ ಮೂರು ವಿಮರ್ಶಾ ಕೃತಿಗಳನ್ನು ಪ್ರಕಟಿಸಿದ್ದಾರೆ. ಇವುಗಳಲ್ಲಿ 'ಪಾಶ್ಚಾತ್ಯ ವಿಮರ್ಶೆಯ ಇತಿಹಾಸ', ವಿಮರ್ಶಾ ಸೂತ್ರಗಳು ಮತ್ತು ಚರಿತ್ರೆಯನ್ನು ಕುರಿತದ್ದು. ಪ್ರಾಜ್ಞಯುಗೀನ ಯುಗ, ಮಧ್ಯಯುಗೀನ ವಿಮರ್ಶೆ, ಪುನರುಜ್ಜೀವನ ಯುಗ, ನವಪ್ರಾಜ್ಞತೆ, ರೊಮ್ಯಾಂಟಿಕ್ ಯುಗ, ರೊಮ್ಯಾಂಟಿಕೋತ್ತರ ಯುಗ, ಇಪ್ಪತ್ತನೆಯ ಶತಮಾನ-ಎಂಬ ಏಳು ಪರಿಚ್ಛೇದಗಳಲ್ಲಿ ಇಲ್ಲಿನ ಚರಿತ್ರೆ ಹರಿದು ಬರುತ್ತದೆ. ಶುದ್ಧ ಪಾಶ್ಚಾತ್ಯ ವಿಮರ್ಶಾ ವಿಚಾರಗಳನ್ನು ಮಂಡಿಸುತ್ತಲೇ ಜತೆ ಜತೆಗೆ, ಭಾರತೀಯ ಸಾಂದರ್ಭಿಕ ವಿಚಾರಗಳನ್ನು ತಾಳೆನೋಡುತ್ತ ಹೋಗುವ ಇಲ್ಲಿನ ಕ್ರಮ ಆಕರ್ಷಕವಾಗಿದೆ.

ಇಂಗ್ಲಿಷ್ ಸಾಹಿತ್ಯಾಭ್ಯಾಸದ ಮೂಲಕವೇ ನಮಗೆ ಪಾಶ್ಚಾತ್ಯ ಕಾವ್ಯಮೀಮಾಂಸೆಗೆ ಪ್ರವೇಶ ದೊರೆತದ್ದರಿಂದ, ಸಹಜವಾಗಿಯೇ ಇಂಗ್ಲಿಷ್ ವಿಮರ್ಶಕರ ಪ್ರಸ್ತಾಪ ಹೆಚ್ಚು ವಿವರವಾಗಿ ಬಂದಿದೆ. ಆದರೆ ಜರ್ಮನ್ ರೊಮ್ಯಾಂಟಿಕ್ ಪೂರ್ವಜರು, ಫ್ರಾನ್ಸ್‌ನ ವಿದ್ವಾಂಸ-ಚಿಂತಕರಾದ ಸಂತಾಬೊವ್, ಬಾದಲೇರ್, ಝೋಲಾ, ವ್ಹರ್ಲೇನ್, ಮಲಾರ್ಮೆ ಇಂತಹ ಹಲವರ ಪ್ರಸ್ತಾಪ ಮಾಡಲಾಗಿರುವುದರಿಂದ, ಕೃತಿಗೆ ಸಂಪೂರ್ಣತೆ ಪ್ರಾಪ್ತವಾಗಿದೆ. ರಷ್ಯನ್ ವಿಮರ್ಶೆ, ಮಾರ್ಕ್ಸಿಸ್ಟ್ ವಿಮರ್ಶೆ, ಇಟಾಲಿಯನ್ ವಿಮರ್ಶಕ ಕ್ರೋಚೆ– ಹೀಗೆ ಪಾಶ್ಚಾತ್ಯ ವಿಮರ್ಶೆ ಬೆಳೆದು ಬಂದ ಸಮಗ್ರ ಇತಿಹಾಸವನ್ನು ಈ ಕೃತಿ ಗುರುತಿಸುತ್ತದೆ.

ರೊಮ್ಯಾಂಟಿಸಿಝುಮ್ ಗುಣಲಕ್ಷಣಗಳನ್ನು ಹೀಗೆ ಪಟ್ಟಿ ಮಾಡುತ್ತಾರೆ: 1) ಆದಿಮಾನವ ಪ್ರಜ್ಞೆ, 2) ನಿಸರ್ಗ ಪ್ರೇಮ, ನೈಸರ್ಗಿಕ ಜೀವನದ ಅಭಿಲಾಷೆ, 3) ಸಾಹಿತ್ಯದ ಸ್ವಯಂಪೂರ್ಣತೆ, ಸ್ವಾಯತ್ತತೆ, 4) ಸ್ಫೂರ್ತಿ-ಪ್ರತಿಭಾ-ಪ್ರಾಧಾನ್ಯ, 5) ಬಾಹ್ಯ ನಿಯಮಗಳ ಖಂಡನೆ, ಜೈವಿಕ ರೂಪಗಳ ಪ್ರತಿಪಾದನೆ, 6) ಏತದ್ದೇಶೀಯತೆ, 7) ದೇಸಿಶೈಲಿಯ ಬಳಕೆ, 8) ಸಾಂಕೇತಿಕತೆ, 9) ಮಧ್ಯಯುಗೀನತೆ.

ಹೆಚ್ಚು ಪ್ರಚಾರ ಪಡೆದಿರುವ ಇಂಗ್ಲಿಷ್ ರೊಮ್ಯಾಂಟಿಸಿಝುಮ್‌ದ ಹಿಂದೆ ಫ್ರೆಂಚ್‌ಚಿಂತಕ ರೂಸೋನ ಪ್ರಭಾವವಿರುವುದನ್ನು ಪುಣೇಕರ ಚಿತ್ರಿಸಿದ್ದಾರೆ. ಹೀಗೆ ಇದೊಂದು ಪ್ರಯೋಜನಕಾರೀ ಕೃತಿಯಾಗಿದೆ.

'ಶ್ರೀ ಬೇಂದ್ರೆಯವರ ಕಾವ್ಯಮೀಮಾಂಸೆ' ಪುಣೇಕರ ಅವರ ಪ್ರಥಮ ವಿಮರ್ಶಾ ಕೃತಿ. ಬೇಂದ್ರೆ ಕಾವ್ಯ ಅಧ್ಯಯನಕ್ಕೆ ಮೀಸಲಾದ ಸ್ವತಂತ್ರ ಕೃತಿಗಳಲ್ಲಿ ಬಹುಶಃ ಮೊದಲ ಸಾಲಿಗೆ ಸೇರಿದ್ದು. ಇದರಲ್ಲಿ ಎರಡು ಪ್ರಬಂಧಗಳಿವೆ- 1. ಕಾವ್ಯಮೀಮಾಂಸೆಯ ಕವನಗಳು ಮತ್ತು 2. ಶ್ರೀ ಬೇಂದ್ರೆಯವರ ಕಾವ್ಯಾಭ್ಯಾಸ. ಮುನ್ನುಡಿಯಲ್ಲಿನ ಈ ಮಾತುಗಳು ಗಮನಾರ್ಹ- "ಬೇಂದ್ರೆ ಕಾವ್ಯಮೀಮಾಂಸೆಯ ಕಟ್ಟಡದೊಳಗಿನ ಕಂಬಗಳು ಪರಸ್ಪರ ಸಮಾನೋದ್ದೇಶಗಳನ್ನು ಹೇಗೆ ಎತ್ತಿಹಿಡಿಯುತ್ತವೆಂಬ ವಿಶಾಲಪರವಾದ ತಿಳುವಳಿಕೆಗೆ ಇದು ಕೇವಲ ಪ್ರಾರಂಭ."

'ಸಾಹಿತ್ಯ ಮತ್ತು ಅಭಿರುಚಿ', ಪುಣೇಕರ ಅವರ ವಿಮರ್ಶಾ ಲೇಖನಗಳ ಸಂಗ್ರಹ. ಇಲ್ಲಿನ ಲೇಖನಗಳು ಪುಣೇಕರ ಅವರ ನಿಜವಾದ ವಿಮರ್ಶೆಯ ಒಲವುಗಳನ್ನು ಬಿಂಬಿಸುತ್ತವೆ. ಇಲ್ಲಿನ ಬರಹಗಳು ವಿಭಿನ್ನ ವಿಷಯಗಳ ಮೇಲಿನವಾಗಿದ್ದರೂ, ಪ್ರತಿ ಬರಹದಲ್ಲಿಯೂ ಪುಣೇಕರ ಅವರ ವಿಮರ್ಶಾತ್ಮಕ ದೃಷ್ಟಿ ಹರಿತವಾಗಿದೆ. 'ಶಾಶ್ವತ ಸಾಹಿತ್ಯ', 'ಸ್ವಾತಂತ್ರ್ಯಪೂರ್ವ ಹೊಸಗನ್ನಡ ಸಾಹಿತ್ಯ', 'ಕವಿಯ ವ್ಯಕ್ತಿತ್ವ: ನವೋದಯ ಕಾವ್ಯದಲ್ಲಿ', 'ಕನ್ನಡ ಕಾವ್ಯದಲ್ಲಿ ನವ್ಯತೆ', 'ಪ್ರೇಕ್ಷಕ ಮತ್ತು ಕಲಾಭಿರುಚಿ'- ಇವುಗಳು ಸಮೀಕ್ಷಾ ಮಾದರಿಯ ಲೇಖನಗಳಾಗಿದ್ದರೂ, ಅನೇಕ ಬಗೆಯ 'ಒಳನೋಟ'ಗಳಿಂದ ಅಧ್ಯಯನ ಯೋಗ್ಯವಾಗಿವೆ.

ಇಲ್ಲಿನ ಉಳಿದ ಪ್ರಬಂಧಗಳಲ್ಲಿ ಎರಡು ಬೇಂದ್ರೆಯವರ ಕಾವ್ಯಾಭ್ಯಾಸಕ್ಕೆ ಸಂಬಂಧಪಟ್ಟದ್ದು, ಒಂದು ಕಾರಂತರ ಕಾದಂಬರಿಗಳಲ್ಲಿ ಕನಸುಗಾರಿಕೆ ಮತ್ತು ಇನ್ನೊಂದು ಜಡಭರತರ 'ಮೂಕಬಲಿ'ಯ ಅಭ್ಯಾಸಕ್ಕೆ ಸಂಬಂಧಪಟ್ಟದ್ದು. ಈ ಲೇಖನಗಳನ್ನು ಓದಿದಾಗ, ಪುಣೇಕರ ಅವರು ಇಂತಹ ಇನ್ನಷ್ಟು ಲೇಖನಗಳನ್ನು ಬರೆದಿದ್ದರೆ, ಕನ್ನಡ ವಿಮರ್ಶಾಕ್ಷೇತ್ರ ಇನ್ನಷ್ಟು ಶ್ರೀಮಂತವಾಗುತ್ತಿತ್ತು ಎನಿಸುತ್ತದೆ.

ಈ ಮೇಲಿನ ಅಭ್ಯಾಸದಿಂದ, ಪುಣೇಕರ ಅವರ ಬರವಣಿಗೆಯ ಆಳ ಹರಹುಗಳ ಸ್ಥೂಲ ಪರಿಚಯ ಸಾಧ್ಯವಾಗಿದೆ ಎಂದು ಭಾವಿಸಬಹುದು. ಕಾದಂಬರಿಕಾರರಾಗಿ, ವಿಮರ್ಶಕರಾಗಿ, ಕವಿಯಾಗಿ ಅವರು ಕನ್ನಡ ಸಾರಸ್ವತ ಲೋಕಕ್ಕೆ ಅನುಪಮ ಕಾಣಿಕೆಗಳನ್ನು ನೀಡಿದ್ದಾರೆ. ನವೋದಯ-ನವ್ಯಗಳ ಮಧ್ಯದ ಗೋಜಲಿನಲ್ಲಿ ಅವರು ದಿಟ್ಟತನದಿಂದ, ನವೋದಯದ ಸಾಧನೆಯನ್ನು ಎತ್ತಿ ಹಿಡಿದಿದ್ದಾರೆ; ನವ್ಯದ ಹಲವಾರು ದೋಷಗಳನ್ನು ಖಂಡಿಸಿದ್ದಾರೆ. ಒಟ್ಟಿನಲ್ಲಿ, ಕನ್ನಡ ಸಾಹಿತ್ಯದ ಹಾಗೂ ವಿಮರ್ಶೆಯ ಆರೋಗ್ಯಕರ ಬೆಳವಣಿಗೆಗೆ ಪುಣೇಕರ ಅವರು ತಮ್ಮದೇ ಆದ ಕಾಣಿಕೆಯನ್ನು ನೀಡಿದ್ದಾರೆ.

ಪುಣೇಕರ ಅವರು ಕನ್ನಡ ನಾಟಕ ಕ್ಷೇತ್ರದಲ್ಲೂ ಒಂದು ವಿಶಿಷ್ಟ ಪ್ರಯೋಗ ಮಾಡಿದ್ದಾರೆ. ಅದು ವೈನೋದಿಕ ನಾಟಕದ ಕಟ್ಟಿಗೆ ಬರುತ್ತದೆ. ಮೇಲಾಗಿ ಅದೊಂದು ವಿಪರ್ಯಾಸ ಹಾಸ್ಯನಾಟಕ. ಇದನ್ನು ಅವರು ವಿಪರ್ಯಾಸವಿನೋದ ಎಂದು ಪಟ್ಟಿಮಾಡಿದ್ದಾರೆ. "ಶ್ರೀ ಸಂಗೀತ ನಾಟ್ಯ ನಾಂದೀ ಪರಿಪೂರ್ಣ ಹಾಸ್ಯ. ಪ್ರಧಾನ ಸಾಂಸಾರಿಕ ಕಂಪನಿ ಏಕಾಂಕ ನಾಟಕ" ಎಂಬ ತಲೆಬರಹದೊಂದಿಗೆ ಇದು ಪ್ರಕಾಶಿಸಲ್ಪಟ್ಟಿರುವುದರಿಂದ ಇದರ ಸ್ವರೂಪದ ಬಗ್ಗೆ ಹೆಚ್ಚಾಗಿ ತಲೆಕೆಡಿಸಿಕೊಳ್ಳಬೇಕಾಗಿಲ್ಲ. ಇಂಗ್ಲಿಷಿನ ಕಾಮೆಡಿ ಆಫ್ ಎರರ್ಸ್ ಜಾತಿಯ ನಾಟಕವನ್ನು ಪುಣೇಕರ ಅವರು ಮಾದರಿಯಾಗಿಟ್ಟುಕೊಂಡಿದ್ದಾರೆ. ಸಂಸ್ಕೃತ ಕವಿಗಳು, ಯಕ್ಷಿಣಿ ಮೋಹಿನಿ, ಇಂಗ್ಲಿಷ್ ಕವಿಗಳು 'ಹೋಲಿಕೆ', 'ಅವಳಿ-ಜವಳಿ'ಗಳನ್ನು ಅವಲಂಬಿಸಿ ಇಂತಹ ವೈನೋದಿಕಗಳನ್ನು ರಚಿಸುತ್ತಾರೆಂದೂ, ತಾವು ವಾಸ್ತವವನ್ನು ಅವಲಂಬಿಸಿರುವುದಾಗಿಯೂ, ನಾಟಕಕಾರರೇ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಎರಡು ಬಾರಿ ಪ್ರದರ್ಶಿತವಾದ ಈ ನಾಟಕ, ಉತ್ತರ ಕರ್ನಾಟಕದ ಪರಿಸರದಲ್ಲಿ ವಿಪರ್ಯಾಸ ನಾಟಕಗಳ ಸಾಲಿಗೆ ನಾಂದಿಯಂತೆ ಇರುವುದೇ ಈ ನಾಟಕದ ಹೆಚ್ಚಳವಾಗಿದೆ.

❑

## ಚೆನ್ನವೀರ ಕಣವಿ

ಎಚ್.ಎಸ್. ವೆಂಕಟೇಶ ಮೂರ್ತಿ

### 1

ಹೊಸಗನ್ನಡ ಕಾವ್ಯದ ಪ್ರಮುಖ ಕವಿಗಳಲ್ಲಿ ಒಬ್ಬರಾದ ಚೆನ್ನವೀರ ಕಣವಿ, ಧಾರವಾಡ ಜಿಲ್ಲೆಯ ಹೊಂಬಳ ಗ್ರಾಮದಲ್ಲಿ 1928ರ ಜೂನ್ ತಿಂಗಳಲ್ಲಿ, ಸುಸಂಸ್ಕೃತ ಮಧ್ಯಮ ವರ್ಗದ ಕುಟುಂಬ ಒಂದರಲ್ಲಿ ಜನಿಸಿದರು. ತಾಯಿ ಪಾರ್ವತೆವ್ವ, ತಂದೆ ಸಕ್ಕರೆಪ್ಪ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರು. ಬಡತನದಲ್ಲೇ ಚೆನ್ನವೀರರ ಬಾಲ್ಯ ಕಳೆಯಿತು. ಧಾರವಾಡದಲ್ಲಿ ಹೈಸ್ಕೂಲಿನಿಂದ ಹಿಡಿದು ಸ್ನಾತಕೋತ್ತರ ಶಿಕ್ಷಣದವರೆಗೆ ಅವರ ಅಭ್ಯಾಸ ನಡೆಯಿತು. 1952ರಲ್ಲಿ ಅವರು ಕರ್ನಾಟಕ ವಿಶ್ವವಿದ್ಯಾಲಯದ ಎಂ.ಎ. ಪದವಿ ಪಡೆದರು. ಅದೇ ವರ್ಷ ಶಾಂತಾದೇವಿ ಅವರೊಂದಿಗೆ ಅವರ ವಿವಾಹವೂ ಆಯಿತು. ಶಾಂತಾದೇವಿ ಕೂಡ ಸಾಹಿತ್ಯ ಸಂಸ್ಕೃತಿಯ ಒಲವುಳ್ಳ ದೊಡ್ಡ ಮನೆತನದಿಂದ ಬಂದವರು. ಅವರ ತಂದೆ ಗಿಡ್ನವರರು ಬೇಂದ್ರೆಯವರ ಗೆಳೆಯರ ಬಳಗದ ಸಂಪರ್ಕವುಳ್ಳವರಾಗಿದ್ದರು. ವಿವಾಹವಾದ ಮೇಲೆ ಕಣವಿಯವರು ಧಾರವಾಡದಲ್ಲೇ ನೆಲೆಸಿದರು. ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಅವರ ವೃತ್ತಿಜೀವನವೂ ಪ್ರಾರಂಭವಾಯಿತು.

ಕಣವಿ ದಂಪತಿಗಳಿಗೆ ಐವರು ಮಕ್ಕಳು, ನಾಲ್ಕು ಜನ ಗಂಡು ಮಕ್ಕಳು; ಓರ್ವ ಹೆಣ್ಣು ಮಗಳು. ತಮ್ಮ ವಿನಯ, ಸೌಜನ್ಯಪರ ವ್ಯಕ್ತಿತ್ವದಿಂದ

ಕಣವಿಯವರು ಮನೆಯೊಳಗೆ, ತಾವು ಕೆಲಸ ಮಾಡುವ ಸ್ಥಳದಲ್ಲಿ, ಸಾಹಿತ್ಯ ವಲಯದಲ್ಲಿ ತಮ್ಮ ಸುಸಂಸ್ಕೃತ ವ್ಯಕ್ತಿತ್ವದ ಗಾಢ ಪ್ರಭಾವ ಬೀರಿದ್ದಾರೆ ಎನ್ನಬಹುದು. ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಮತ್ತು ಪ್ರಕಟಣ ವಿಭಾಗದ ನಿರ್ದೇಶಕರಾಗಿ ನಿವೃತ್ತರಾದ ಕಣವಿಯವರು ಈಗ ಧಾರವಾಡದಲ್ಲಿ ನೆಲೆಸಿದ್ದಾರೆ.

ಐವತ್ತು ವರ್ಷಗಳಷ್ಟು ದೀರ್ಘಕಾಲ ಚೆನ್ನವೀರ ಕಣವಿಯವರು ನಿಷ್ಠೆಯಿಂದ ಸಾಹಿತ್ಯ ಸಾಧನೆ ಮಾಡಿಕೊಂಡು ಬಂದಿದ್ದಾರೆ. ವಿಮರ್ಶೆಯನ್ನು ಅವರು ಬರೆದಿದ್ದಾರಾದರೂ ಪ್ರಧಾನವಾಗಿ ಅವರು ಕವಿ. ಕನ್ನಡ ನಾಡು ಅವರ ಸಾಹಿತ್ಯಕ ಸಾಧನೆಗಳನ್ನು ಗುರುತಿಸಿ ಅನೇಕ ಗೌರವ ಪ್ರಶಸ್ತಿ ನೀಡಿ ಅವರನ್ನು ಸನ್ಮಾನಿಸಿದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಕೂಡ ಅವರ ಕಾವ್ಯವನ್ನು ಪ್ರಶಂಸಿಸಿ ತನ್ನ ಗೌರವ ಪ್ರಶಸ್ತಿ ನೀಡಿದೆ. 1980ರಲ್ಲಿ 'ಚೆಂಬೆಳಕು' ಎಂಬ ಅಭಿನಂದನ ಗ್ರಂಥ ಅವರಿಗೆ ಅರ್ಪಿತವಾಗಿದೆ. ತಮಗಿಂತ ಹಿರಿಯರ ಬಗ್ಗೆ ಗೌರವ, ಸರೀಕರಲ್ಲಿ ನಿರ್ಮತ್ಸರವಾದ ಸ್ನೇಹ, ಕಿರಿಯರಲ್ಲಿ ವಾತ್ಸಲ್ಯ ಪೂರ್ಣ ಪ್ರೇಮ ಇವುಗಳಿಂದ ಸಾಹಿತ್ಯವಲಯದಲ್ಲಿ ಕಣವಿ ಆದರ್ಶವ್ಯಕ್ತಿ ಎನ್ನಿಸಿದ್ದಾರೆ. ಸರಳತೆ, ಶುಚಿ-ರುಚಿ, ಸಜ್ಜನಿಕೆ-ಸೌಜನ್ಯ, ಅಚ್ಚುಕಟ್ಟು ಇವೆಲ್ಲಾ ಕಣವಿ ಅವರ ವ್ಯಕ್ತಿತ್ವದ ಬಹು ಮುಖ್ಯ ಅಂಶಗಳು. ಪ್ರೀತಿಪರತೆ, ಮಾನವೀಯತೆ, ನಿಸರ್ಗಪ್ರೇಮ ಇವು ಅವರು ಆರಾಧಿಸುತ್ತಾ ಬಂದ ಜೀವನಮೌಲ್ಯಗಳು. ನಿಚ್ಚಳವಾಗಿ ಇವೇ ಅವರ ಕಾವ್ಯಮೌಲ್ಯಗಳೂ ಆಗಿವೆ.

## 2

ಚೆನ್ನವೀರ ಕಣವಿ ಕವಿಯಾಗಿ ಪ್ರಕಟವಾಗಿದ್ದು ನವೋದಯದ 'ನಡುಹಗಲ' ಕಾಲದಲ್ಲಿ. ಬೇಂದ್ರೆ, ಕುವೆಂಪು, ಪು.ತಿ.ನ, ಮಧುರಚೆನ್ನ ಮೊದಲಾದವರ ಕಾವ್ಯ ಹೊಸದಾಗಿ ಕಾವ್ಯರಚನೆಗೆ ತೊಡಗುವವರನ್ನು ಗಾಢವಾಗಿ ಪ್ರಭಾವಿಸುತ್ತಿದ್ದ ಕಾಲ ಅದು. ಕಣವಿ ತಮ್ಮ ಪ್ರಾರಂಭದ ರಚನೆಗಳಲ್ಲಿ ಇಂಥ ಪ್ರಭಾವಗಳ ನೆಲೆಯಲ್ಲೇ ಬರೆದರು ಎನ್ನಬೇಕು. ಉದಾಹರಣೆಗೆ ಕಣವಿ ಅವರ 'ಭಾವಜೀವಿ' ಎಂಬ ಆತ್ಮಕಥನಾತ್ಮಕವಾದ ದೀರ್ಘಕವಿತೆಯ ಮೇಲೆ ಮಧುರಚೆನ್ನರ 'ನನ್ನ ನಲ್ಲ' ಕವಿತೆಯ ಪ್ರಭಾವವನ್ನು ಗುರುತಿಸಲಿಕ್ಕೆ ಬರುತ್ತದೆ. ಪ್ರಕೃತಿಗೀತೆಗಳಲ್ಲಿ ವಿಶೇಷವಾಗಿ ಬೇಂದ್ರೆಯವರ, ತಕ್ಕಮಟ್ಟಿಗೆ ಕುವೆಂಪು ಅವರ ಪ್ರಭಾವವನ್ನು ಗುರುತಿಸಬಹುದು. ಬೆಳೆಯುವ ಕವಿಯೊಬ್ಬರ ಕಾವ್ಯಜೀವನದ ಆರಂಭದ ಹಂತದಲ್ಲಿ ಇದು ಸಹಜವಾದುದೂ ಹೌದು. ಒಟ್ಟಾರೆ ಕಣವಿಯವರ ಆರಂಭದ ಕಾವ್ಯದಲ್ಲಿ ರಮ್ಯಮನೋಧರ್ಮ, ಆದರ್ಶ ಪ್ರಿಯತೆ, ವ್ಯಕ್ತಿತ್ವ ನಿರ್ಮಾಣದ ಹಂಬಲ ವಿಶೇಷವಾಗಿ ಕಂಡುಬರುತ್ತವೆ. 1949ರಲ್ಲಿ ಪ್ರಕಟವಾದ 'ಕಾವ್ಯಾಕ್ಷಿ', 1950ರಲ್ಲಿ ಪ್ರಕಟವಾದ 'ಭಾವಜೀವಿ' ಸಂಗ್ರಹಗಳಲ್ಲಿ ಈ ಎಲ್ಲ ಅಂಶಗಳನ್ನು ಗುರುತಿಸಬಹುದು.

1953ರಲ್ಲಿ ಕಣವಿಯವರ ಮೂರನೆಯ ಸಂಗ್ರಹ 'ಆಕಾಶಬುಟ್ಟಿ' ಪ್ರಕಟವಾಯಿತು. ಈ ಸಂಗ್ರಹದಲ್ಲಿ ಕಣವಿ ಅವರ ಆಸಕ್ತಿಗಳು ವಿಸ್ತಾರ ಗೊಳ್ಳುತ್ತಿರುವ ಸೂಚನೆಗಳಿವೆ. ಸಾಮಾಜಿಕತೆ ಈ ಸಂಗ್ರಹದಲ್ಲಿ ನಾವು ಗುರುತಿಸಲೇಬೇಕಾದ ಬಹುಮುಖ್ಯ ಅಂಶವಾಗಿದೆ. ಸಮಾಜದ ದೋಷಗಳನ್ನು ಕವಿ ಇಲ್ಲಿ ವ್ಯಗ್ರರಾಗಿ ಟೀಕೆಗೆ ಗುರಿ ಮಾಡುತ್ತಾರೆ. ವ್ಯಂಗ್ಯದ ಧಾಟಿ ಇಂಥ ಸಂದರ್ಭಗಳಲ್ಲಿ ಮುಖ್ಯವಾಗುತ್ತದೆ. ಬಸವರಾಜ ಕಟ್ಟೀಮನಿ, ನಿರಂಜನ, ಎಕ್ಕುಂಡಿ ಮೊದಲಾದವರ ಸ್ನೇಹ ಸಂಪರ್ಕ ಮತ್ತು ಆಗ ಪ್ರಚಲಿತವಿದ್ದ ಪ್ರಗತಿಶೀಲ ಸಾಹಿತ್ಯ ಚಳವಳಿ ಅವರನ್ನು ಪ್ರಭಾವಿಸಿರಬಹುದು. ಕುವೆಂಪು, ಬೇಂದ್ರೆ, ಮಧುರಚೆನ್ನರ ಕಾವ್ಯ ಪ್ರಭಾವದಿಂದ ತಪ್ಪಿಸಿಕೊಳ್ಳಲು ಒಂದು ಸಾಹಿತ್ಯಕ ಉಪಾಯವಾಗಿಯೂ, ಕಣವಿ ಅವರಿಗೆ ಈ ಪ್ರಭಾವ ಒದಗಿ ತೆಂಬುದನ್ನು ನಾವಿಲ್ಲಿ ಗ್ರಹಿಸಬೇಕು. ಆಕಾಶಬುಟ್ಟಿ ಸಂಗ್ರಹದಲ್ಲಿರುವ ಪ್ರಜಾಪ್ರಭುತ್ವ ಎಂಬ ಕವಿತೆಯನ್ನು ನಾವಿಲ್ಲಿ ವಿಶೇಷವಾಗಿ ನೆನೆಯಬೇಕು. ಪ್ರತಿಮಾನಿಷ್ಠವಾದ ಈ ಕವಿತೆ ಕಣವಿ ಅವರ ಮುಂದಿನ ಕಾವ್ಯದ ಮುನ್ಸೂಚನೆಯಂತಿದೆ.

1954ರಲ್ಲಿ ಗೋಪಾಲಕೃಷ್ಣ ಅಡಿಗರ 'ಚಂಡೆ ಮದ್ದಳೆ' ಪ್ರಕಟವಾಗಿ ನವ್ಯಮಾರ್ಗ ಅಧಿಕೃತವಾಗಿ ಉದ್ಘಾಟಿತವಾಯಿತು. ವಿಶೇಷವಾಗಿ ರೊಮ್ಯಾಂಟಿಕ್ ಮನೋಧರ್ಮದ ಚೆನ್ನವೀರ ಕಣವಿ ಅವರು ಈ ಹೊಸ ಕಾವ್ಯ ಸಂದರ್ಭದೊಂದಿಗೆ ಬೇರೊಂದು ರೀತಿಯಲ್ಲಿ ಸಂಘರ್ಷಕ್ಕೆ ತೊಡಗಿದ್ದೇ ಅವರ ಕಾವ್ಯಜೀವನದ ಮುಂದಿನ ಅಧ್ಯಾಯ. ಪ್ರಾರಂಭದಲ್ಲಿ ಬೇಂದ್ರೆ, ಕುವೆಂಪು ಅವರ ಕಾವ್ಯದೊಂದಿಗೆ ಕಣವಿ ಅವರದ್ದು ಒಂದು ಅನ್ಯೋನ್ಯ ಸಂಬಂಧವಾಗಿತ್ತು. ಕಾರಣವೆಂದರೆ, ವಿವರಗಳಲ್ಲಿ ಅಲ್ಲವಾದರೂ ಮೂಲ ಭೂತ ಧೋರಣೆಯಲ್ಲಿ ಕಣವಿ ನವೋದಯ ಕವಿಗಳನ್ನು ಒಪ್ಪಿಕೊಂಡವರಾಗಿದ್ದರು. ಈಗ ಗೋಪಾಲಕೃಷ್ಣ ಅಡಿಗರು ತಮ್ಮ ರುದ್ರ ಗಂಭೀರವಾದ ವಿರುಧ್ಧನಿಯ ಕಾವ್ಯದ ಮೂಲಕ ಆಗಾಗಲೇ ಹೆಸರಾಗಿದ್ದ ಕಣವಿ, ಶಿವರುದ್ರಪ್ಪ, ಕೆ.ಎಸ್. ನರಸಿಂಹಸ್ವಾಮಿ ಅವರಂಥ ಕವಿಗಳಿಗೂ ಒಂದು ಸವಾಲಾಗಿ ಪರಿಣಮಿಸಿದರು. ಈ ಕವಿಗಳು ಅಡಿಗ ಮತ್ತು ಅವರ ಮಾರ್ಗದ ಇತರ ಕವಿಗಳೊಂದಿಗೆ ಕಾವ್ಯದ ಮೂಲಕವೇ ನಡೆಸಿದ ಸಾಂಸ್ಕೃತಿಕ ಸಂವಾದ (ಕೆಲವೊಮ್ಮೆ ವಾಚ್ಯನೆಲೆಯ ತಿಕ್ಕಾಟ) ಕನ್ನಡ ಕಾವ್ಯದ ಸುದೀರ್ಘ ಇತಿಹಾಸದಲ್ಲಿ ಬಹುಮುಖ್ಯ ಅಧ್ಯಾಯವೆನಿಸುತ್ತದೆ. ಅಡಿಗರ ನವ್ಯ ಮಾರ್ಗದೊಂದಿಗೆ ಕಣವಿ ಅವರ ಸಂಬಂಧ ಅನ್ಯೋನ್ಯವಾದುದಾಗಿರಲಿಲ್ಲ; ಘರ್ಷಣೆಯ ಸ್ವರೂಪದ್ದಾಗಿತ್ತು. ಅಡಿಗರ ಕಾವ್ಯ ಪ್ರವಾಹದಲ್ಲಿ ಪೂರ್ತಿಯಾಗಿ ಕೊಚ್ಚಿ ಹೋಗದಷ್ಟು ಗಟ್ಟಿಯಾದ ಕಾವ್ಯವ್ಯಕ್ತಿತ್ವವನ್ನು ಆಗಾಗಲೇ ಕಣವಿ, ಜಿ.ಎಸ್.ಎಸ್. ಮತ್ತು ಕೆ.ಎಸ್.ನ. ಅವರು ಸಾಧಿಸಿಕೊಂಡಿದ್ದರು. ಹೀಗಾಗಿಯೇ ಅಡಿಗರ ಅನುಯಾಯಿಗಳಿಗಿಂತ ಭಿನ್ನವಾಗಿ ಇವರು ಕಾವ್ಯ ಸೃಷ್ಟಿಸುವುದು ಸಾಧ್ಯವಾಯಿತು. ಭಾಷೆಯ ದೃಷ್ಟಿಯಿಂದ, ಲಯದ ದೃಷ್ಟಿಯಿಂದ, ಅನುಭವವನ್ನು ನಿಷ್ಠುರವಾಗಿ ಶೋಧಿಸಬೇಕೆಂಬ ಧೋರಣೆಯ ದೃಷ್ಟಿಯಿಂದ ಇವರು ನವ್ಯವನ್ನು ಒಪ್ಪಿಕೊಂಡರು. ಆದರೆ ಆಗ ನವ್ಯದಲ್ಲಿ ವಿಶೇಷವಾಗಿ ಕಾಣುತ್ತಿದ್ದ ನಿರಾಶಾಭಾವ, ಏಕಾಕಿತನದ ನೋವು, ಕಾಮದ ವಿಜೃಂಭಣೆ, ವ್ಯಂಗ್ಯದ ಆಟಾಟೋಪಗಳನ್ನು ಇವರು ಅನುಮಾನಿಸಿದರು. ಬದುಕನ್ನು ಸ್ನೇಹ, ಪ್ರೀತಿ, ವಾತ್ಸಲ್ಯ, ಸಹನಶೀಲತೆ ಮೊದಲಾದ ಮೌಲ್ಯಗಳನ್ನು ಆಶ್ರಯಿಸಿ ಸಹ್ಯವಾಗಿಸುವುದು ಸಾಧ್ಯವಿದೆ ಎಂಬುದು ಈ ಕವಿಗಳ ನಿಲುವಾಗಿತ್ತು. ಇವರು ತಮ್ಮ ಕಹಿಯನ್ನು ಸಾಮಾಜಿಕ ನೆಲೆಯಲ್ಲಿ ವ್ಯಕ್ತಪಡಿಸುತ್ತಾರೆ. ಆದರೆ ವೈಯಕ್ತಿಕ ನೆಲೆಯಲ್ಲಿ ಮನಸ್ಸು ಕಹಿಮಾಡಿಕೊಳ್ಳದೆ ಆರ್ದ್ರರಾಗಿ ಪ್ರವರ್ತಿಸುತ್ತಾರೆ. ನನಗೆ ನೀನೇ ಗೆಳೆಯ ನಿನಗೆ ನೀನೇ ಎಂದು ಅಡಿಗರಂತೆ ಕಣವಿ ಅವರು ಬರೆಯುವುದನ್ನು ನಾವು ಕಲ್ಪಿಸುವುದೇ ಸಾಧ್ಯವಿಲ್ಲ. ದಾಂಪತ್ಯವನ್ನು ಕುರಿತು, ಮಕ್ಕಳನ್ನು ಕುರಿತು, ನಿಸರ್ಗವನ್ನು ಕುರಿತು, ಅಷ್ಟೇಕೆ ಪ್ರಾಣಿಪಕ್ಷಿಗಳನ್ನು ಕುರಿತು ಕಣವಿ ಅವರು ಬರೆದಿರುವ ಕವಿತೆಗಳನ್ನು ನೋಡಿದರೆ, ಅವರು ಹೇಗೆ ಅಡಿಗರಿಂದ ಭಿನ್ನವಾಗಿ ಬರೆಯುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. "ನವ್ಯಕಾವ್ಯದಿಂದಾಗಿ ರೂಪುಗೊಂಡ ಮುಕ್ತ ಛಂದಸ್ಸು, ವಾಸ್ತವ ಮುಖತೆ, ಸಾಮಾಜಿಕ ಎಚ್ಚರ, ವ್ಯಂಗ್ಯ-ವಿಡಂಬನೆಗಳನ್ನು

ಕಣವಿ ಅವರ ಕವಿತೆ ಹಿಡಿದುಕೊಂಡಿತಾದರೂ, ಕಣವಿಯವರು ತಮ್ಮ ವ್ಯಕ್ತಿತ್ವದ ಮೂಲದ್ರವ್ಯಗಳಾದ ನಿಸರ್ಗಪ್ರಿಯತೆ, ಮಾರ್ದವತೆ, ಅನುಭಾವಿಕ ದೃಷ್ಟಿ, ಮಾನವೀಯತೆ, ಮೌಲ್ಯಪ್ರಜ್ಞೆ ಇತ್ಯಾದಿಗಳನ್ನು ಬಿಟ್ಟುಕೊಡಲಿಲ್ಲ"- ಎಂಬ ಮಾತುಗಳಲ್ಲಿ ಜಿ.ಎಸ್. ಶಿವರುದ್ರಪ್ಪನವರು ಈ ಅಂಶವನ್ನು ತುಂಬ ಚೆನ್ನಾಗಿ ಗುರುತಿಸಿದ್ದಾರೆ.

'ಮಣ್ಣಿನ ಮೆರವಣಿಗೆ' ಪ್ರಕಟವಾಗುವ ವೇಳೆಗೆ (1960) ಕಣವಿಯವರ ಕಾವ್ಯವ್ಯಕ್ತಿತ್ವ ಸಾಕಷ್ಟು ಮಾಗಿತ್ತು. ನಿಸರ್ಗಪ್ರಿಯತೆ ಈ ಸಂಗ್ರಹದಲ್ಲಿ ಕೊಂಚ ಕಡಿಮೆಯಾಗಿ, ವಿಡಂಬನೆಯ ಜೋರು ಹೆಚ್ಚಾಗಿದೆ. ಆದರೆ ಬಹು ಮುಖ್ಯವಾದ ಅಂಶವೆಂದರೆ ಕೆಲವು ಮೂಲಭೂತವಾದ ಮತ್ತು ಸಾರ್ವಕಾಲಿಕ ಎನ್ನಬಹುದಾದ ವಸ್ತುಗಳನ್ನು ತಮ್ಮ ವೈಯಕ್ತಿಕ ಅನುಭವದ ನೆಲೆಯಲ್ಲಿ ಕಣವಿ ಅವರು ಆಳವಾಗಿ ಶೋಧಿಸತೊಡಗುತ್ತಾರೆ. ಈ ಶೋಧನೆ 'ನೆಲ ಮುಗಿಲು' (1965) ಸಂಗ್ರಹದಲ್ಲೂ ಮುಂದುವರಿಯುತ್ತದೆ. 'ಮಣ್ಣಿನ ಮೆರವಣಿಗೆ', 'ಶಿಶು ಕಂಡ ಕನಸು', 'ಕಾಲ ನಿಲ್ಲುವುದಿಲ್ಲ' ಮೊದಲಾದವು ಈ ನೆಲೆಯಲ್ಲಿ ಬಂದ ಕಣವಿ ಅವರ ಮಹತ್ವದ ಕಾವ್ಯಪ್ರಯೋಗಗಳಾಗಿವೆ. 'ಕಾಲ ನಿಲ್ಲುವುದಿಲ್ಲ' ಕವಿತೆಯಲ್ಲಿ ನಾಗರಿಕತೆಯ ಇತಿಹಾಸವನ್ನೆ ಕಣವಿ ಅವರು ಪ್ರತಿಮೀಕರಿಸಿದ್ದಾರೆ. ಇಡೀ ಕವಿತೆ ಕಾಲದೊಂದಿಗೆ ಸಾಗಿ ಬಂದ ಮನುಷ್ಯನ ಗತಿಶೀಲವಾದ ಬದುಕಿನ ಹೋರಾಟದ ಅಭಿವ್ಯಕ್ತಿ ಆಗಿದೆ. ಜೊತೆಗೆ ಸಾಹಿತ್ಯ ಪರವಾದ ಅರ್ಥವೂ ಕವಿತೆಗಿದೆ. ತಮ್ಮ ವೈಯಕ್ತಿಕ ಕಾವ್ಯದ ಮತ್ತು ಬದುಕಿನ ನಿಲುವುಗಳನ್ನು ಇಲ್ಲಿ ಕವಿ ವ್ಯಕ್ತಪಡಿಸಿದ್ದಾರೆ.

ಮಾಡಿ ಉಂಡಿದ್ದೇವೆ ನಮನಮಗೆ ಸೇರಿದ ಅಡಿಗೆ
ಇರಬಹುದು ಇದರಲ್ಲಿ ಕೆಲಭಾಗ ಜೀವನ ಸತ್ವ ಕಡಿಮೆ
ಇದ್ದ ಶಕ್ತಿಯಲ್ಲಿ ತುಸುದೂರ ನಡೆದಿದ್ದೇವೆ
ರೂಢಿಯಾಗಿದೆ ಒಬ್ಬೊಬ್ಬರಿಗೂ ಒಂದೊಂದು ಬಗೆಯ ನಡಿಗೆ
ಮುಖ್ಯ ಬೇಕಾದದ್ದು ಜೀವಂತ ಗತಿ, ಹೊಸ ನೆತ್ತರಿನ ಕೊಡುಗೆ

(ಕಾಲ ನಿಲ್ಲುವುದಿಲ್ಲ)

ಈ ಕಾಲದಲ್ಲಿ ಕಣವಿ ಅವರು ಬರೆದ ಕವಿತೆಗಳಲ್ಲಿ ರಾಜಕೀಯ ಭ್ರಷ್ಟಾಚಾರದ ಬಗ್ಗೆ ಕಠೋರವಾದ ವ್ಯಂಗ್ಯ ಕಂಡುಬರುತ್ತದೆ, ನಿಜ. (ಅಪರಾವತಾರದಂಥ ಪದ್ಯ ನೋಡಿ). ಆದರೆ ರಾಷ್ಟ್ರಜೀವನದಲ್ಲಿ ಯೋಗ್ಯವಾದ ರಾಜಕೀಯ ನಡೆಗಳನ್ನು ಒಪ್ಪಿ, ಮುಜುಗರವಿಲ್ಲದೆ ಆ ಬಗ್ಗೆ ಹೃದಯ ಬಿಚ್ಚಿ ಅವರು ಬರೆದದ್ದು ವಿಶೇಷವಾಗಿದೆ. 'ನೆಹರೂ ನಿವೃತ್ತರಾಗುವುದಿಲ್ಲ' ಎಂಬ ಅಡಿಗರ ಕವಿತೆಯೊಂದಿಗೆ ಕಣವಿ ಅವರ 'ರಾಷ್ಟ್ರದ ಕರೆ', 'ಇಂದೇ ಸೀಮೋಲ್ಲಂಘನ', 'ನೆಹರೂ ಶ್ರದ್ಧಾಂಜಲಿ', 'ಭಾರತ ಸುಪುತ್ರನ ಕೊನೆಯ ಬಯಕೆ' ಮೊದಲಾದ ಪದ್ಯಗಳನ್ನು ಹೋಲಿಸಿ ನೋಡಿದಾಗ ಈ ಇಬ್ಬರು ಕವಿಗಳ ಮನೋಧರ್ಮದ ಅಂತರ ಸ್ಪಷ್ಟವಾಗುತ್ತದೆ.

### 3

ಸಾನೆಟ್ಟಿನ ಕಾವ್ಯಬಂಧ ಕಣವಿ ಅವರಿಗೆ ಪ್ರಿಯಾವಾದುದು. 'ಕಾವ್ಯ ರಚನೆಯ ಪ್ರಾರಂಭದಿಂದಲೂ ನನ್ನ ಮನಸ್ಸನ್ನಾಕರ್ಷಿಸಿದ ಕಾವ್ಯಪ್ರಕಾರ ಸಾನೆಟ್' ಎಂದು ಎರಡು ದಡದ ಮುನ್ನುಡಿಯಲ್ಲಿ ಸ್ವತಃ ಕಣವಿ ಅವರೇ ಹೇಳಿಕೊಂಡಿದ್ದಾರೆ. ಇವರ 'ನೆಲಮುಗಿಲು' ಎಂಬ ಸಾನೆಟ್ ಬಗ್ಗೆ ಶಾಂತಿನಾಥ ದೇಸಾಯಿ ಬರೆದಿರುವುದನ್ನು ಪ್ರಾಸಂಗಿಕವಾಗಿ ಗಮನಿಸಬಹುದು: "ಕಣವಿಯವರು ತಮ್ಮ ತತ್ವಜ್ಞಾನವನ್ನೆಲ್ಲಾ, ಜೀವನದ ಮೇಲಿದ್ದ ತಮ್ಮ ಭರವಸೆಯನ್ನೆಲ್ಲಾ ಈ ಸುನೀತದಲ್ಲಿ ಅತ್ಯಂತ ಪ್ರಭಾವಿಯಾಗಿ ಮಿಡಿಸಿದ್ದಾರೆ. ಪ್ರತಿಮೆಗಳನ್ನೆಲ್ಲಾ ಪ್ರಕೃತಿಯಿಂದಲೇ ಆಯ್ದು ಪ್ರಕೃತಿಯ ಸಂತಾನವಾದ ಮನುಷ್ಯನ ಜೀವನದ ಸೀಮೆಗಳನ್ನು ಗುರುತಿಸುವ ಪ್ರಯತ್ನದಲ್ಲಿದೆ. ಜೀವನದ ಸೀಮಿತತೆಯನ್ನು ಗುರುತಿಸಿಯೂ ಜೀವನ ಶಕ್ತಿಯ ಊರ್ಧ್ವ ಮುಖತ್ವದಲ್ಲಿ ವಿಶ್ವಾಸ ತೋರಿಸುವ ಈ ಸಾನೆಟ್ಟಿನಲ್ಲಿ ರೊಮ್ಯಾಂಟಿಕ್ ದರ್ಶನದ ಪರಿಪಾಕವಿದೆ." ದೇಸಾಯಿ ಅವರು ಪಕ್ಕಾ ನವ್ಯ ಮನೋಧರ್ಮದ ಲೇಖಕರು ಎಂಬುದನ್ನು ಲಕ್ಷಿಸಿದಾಗ ಈ ಮಾತುಗಳು ಇನ್ನೂ ಮುಖ್ಯವಾಗುತ್ತವೆ. ಇದು ಈಚಿನ ವರ್ಷಗಳಲ್ಲಿ ನವ್ಯ ವಿಮರ್ಶೆ ಹೆಚ್ಚು ಮುಕ್ತವಾಗಿ ಸಾಹಿತ್ಯದ ಒಟ್ಟು ಸಂದರ್ಭಕ್ಕೆ ಪ್ರತಿಕ್ರಿಯಿಸತೊಡಗಿದ್ದರ ಆರೋಗ್ಯಕರ ಬೆಳವಣಿಗೆಯ ಗುರುತಾಗಿರುವಂತೆಯೇ, ಕಣವಿ ಅವರು ಸಾನೆಟ್‌ನ ಕಾವ್ಯಶಿಲ್ಪದಲ್ಲಿ ಸಾಧಿಸಿದ ಪರಿಣತಿಯ ಗುರುತೂ ಆಗುತ್ತದೆ. ತಮ್ಮ ಕಾವ್ಯದಲ್ಲೇ, ಮುಕ್ತಛಂದದಲ್ಲಿ ಬರೆಯುವಾಗ ವಿಶೇಷವಾಗಿ ಕಾಣುವ ಮಾತಾಳಿತನಕ್ಕೆ ಕಣವಿ ಅವರ ಕಾವ್ಯ ಪ್ರತಿಭೆ ಕಂಡುಕೊಂಡ ಒಂದು ಚಿಕಿತ್ಸಕ ಕ್ರಮವೆಂದೂ ನಾವು ಅವರ ಸಾನೆಟ್ಟುಗಳನ್ನು ಗಮನಿಸಬಹುದು. ದೇಸಾಯಿ ಅವರೇ ಹೇಳಿರುವಂತೆ "ಸ್ವಾತಂತ್ರ್ಯ ಸಂಗ್ರಾಮದಂಥ ಸಾರ್ವಜನಿಕ ವಿಷಯದ ಮೇಲೆ ಬರೆಯುವ ಪ್ರಸಂಗ ಬಂದಾಗಾಗಲಿ, ಗಾಂಧಿ, ಶಾಸ್ತ್ರಿ, ಶ್ರೀ ಅರವಿಂದರಂಥ ಮಹಾತ್ಮರ ಬಗ್ಗೆ ಬರೆಯಬೇಕಾದಾಗಾಗಲಿ, ಇನ್ನೂ ಹತ್ತಿರದ ಹಿರಿಯರಾದ ಬೇಂದ್ರೆ, ಮುಗಳಿ, ತೀ.ನಂ.ಶ್ರೀ. ಮುಂತಾದ ಆತ್ಮೀಯರ ಬಗ್ಗೆ ಬರೆಯುವ ಪ್ರಸಂಗ ಬಂದಾಗಾಗಲಿ ಕಣವಿಯವರಿಗೆ ಸಾನೆಟ್ಟು ಒಂದು ಅತ್ಯಂತ ಪ್ರಭಾವಿಯಾದ ಅಭಿವ್ಯಕ್ತಿ ಮಾಧ್ಯಮವಾಯಿತು". ಕಷ್ಟ ಸಾಧ್ಯವಾದ ಈ ಕಾವ್ಯಬಂಧವನ್ನು ವಶಪಡಿಸಿಕೊಂಡು ಕಣವಿ ಚೆಲುವಾದ ಅನೇಕ ಸುನೀತಗಳನ್ನು ರಚಿಸಿದ್ದಾರೆ. ಈ ದೃಷ್ಟಿಯಿಂದ ತಮ್ಮ ಸುನೀತಗಳ ಮೂಲಕ ಕಣವಿ, ಕನ್ನಡಕ್ಕೆ ಮಹತ್ವದ ಕಾವ್ಯಕಾಣಿಕೆಯನ್ನು ನೀಡಿದ್ದಾರೆಂದು ನಿಸ್ಸಂಶಯವಾಗಿ ಹೇಳಬಹುದು.

ಕವಿತೆ ಜನತೆಗೆ ತಲುಪುವುದು ಅಗತ್ಯ ಎಂದು ಬಯಸುತ್ತಾ ಬಂದ ಕವಿಗಳಲ್ಲಿ ಕಣವಿ ಅವರೂ ಒಬ್ಬರು. ಅವರು ರಚಿಸಿರುವ, ರಚಿಸುತ್ತಿರುವ ಗೀತೆಗಳನ್ನು ಈ ದೃಷ್ಟಿಯಿಂದ ನೋಡಬೇಕು. ಇಲ್ಲಿ ಅವರ ಗಂಭೀರ ಕಾವ್ಯದ ಆಸಕ್ತಿಗಳೇ ಸರಳರೂಪದಲ್ಲಿ ಅಭಿವ್ಯಕ್ತಿ ಪಡೆಯುತ್ತವೆ. ಕಾವ್ಯಬಂಧದಲ್ಲಿ ಅರ್ಥಪುಷ್ಟಿಗಿಂತ, ನಾದ ಮಾಧುರ್ಯಕ್ಕೆ ಹೆಚ್ಚು ಒತ್ತು ಬೀಳುತ್ತದೆ. ಗೀತೆಗಳ ಸ್ವರೂಪವೇ ಅದು. ಭಾವ ಮತ್ತು ನಾದಗಳಲ್ಲಿ ರಮಿಸಲಾಗದ ಮನಸ್ಸು ಪ್ರಾಯಶಃ ಗೀತೆಗಳ ರಚನೆಗೆ ಸಮರ್ಥವಾಗುವುದಿಲ್ಲ. ಕಣವಿ ಅವರ ಗೀತೆಗಳಲ್ಲಿ, ಸಹಜ ಕವಿಯೊಬ್ಬ ಬರೆದಾಗ ಮಾತ್ರ ಕಾಣಿಸಿಕೊಳ್ಳಬಲ್ಲ ಅನೇಕ ಕಾವ್ಯಾತ್ಮಕ ಹೊಳಹುಗಳು ವಿಶೇಷವಾಗಿ ಕಂಡುಬರುತ್ತವೆ. 'ವಿಶ್ವಭಾರತಿಗೆ ಕನ್ನಡದಾರತಿ, ಮುಂಜಾವದಲಿ ಹಸಿರು ಹುಲ್ಲು ಮಕಮಲ್ಲಿನಲಿ, ಹೂವು ಹೊರಳುವುವು' ಮೊದಲಾದ ಅವರ ಜನಪ್ರಿಯ ಗೀತೆಗಳನ್ನು ಈ ದೃಷ್ಟಿಯಿಂದಲೇ ಲಕ್ಷಿಸಬೇಕಾಗುತ್ತದೆ. ಇಂಥ ರಚನೆಗಳನ್ನು ಸಾಪೇಕ್ಷ ಕಾವ್ಯ ಎಂದು ಪು.ತಿ.ನ. ಕರೆಯುತ್ತಾರೆ. ಪು.ತಿ.ನ., ಕೆ.ಎಸ್.ನ., ಜಿ.ಎಸ್.ಎಸ್. ಮೊದಲಾದವರು ಬೆಳೆಸಿಕೊಂಡು ಬಂದಿರುವ ಈ ಗೀತರಚನಾ ಪರಂಪರೆಗೆ ಕಣವಿ ಅವರದ್ದೂ ಬೆಲೆಯುಳ್ಳ ಕಾಣಿಕೆಯಾಗಿದೆ.

ಐವತ್ತು ವರ್ಷಗಳ ಕಾಲ ನಿರಂತರವಾಗಿ ಹರಿಯುತ್ತಾ ಬಂದಿರುವ ಕಣವಿಯವರ ಕಾವ್ಯದ ಸೆಲೆ ಇನ್ನೂ ಜೀವಂತವಾಗಿಯೇ ಇದೆ. 'ಶಿಶಿರದಲ್ಲಿ ಬಂದ ಸ್ನೇಹಿತ' ಅವರ ಇತ್ತೀಚಿನ ಕವನ ಸಂಕಲನ. ಯಾವುದೇ

ಅಬ್ಬರವಿಲ್ಲದ ಮೆಲುದನಿಯ ಕವಿತೆಗಳು ಇಲ್ಲಿವೆ. ಕವಿಯ ಕಾವ್ಯಜೀವನದ ಮಾಗುವಿಕೆ ಈ ಕವಿತೆಗಳಲ್ಲಿ ತನಗೆ ತಾನೇ ಸ್ಪಷ್ಟವಾಗುವ ಅಂಶ. ನಿರುದ್ವಿಗ್ನತೆಯ ಈ ಧಾಟಿ ಕವಿಗೆ ಜೀವನ ವಿದಗ್ಧತೆಯ ಸೌಮ್ಯ ಅರಿವನ್ನು ಪ್ರಧಾನ ಮಾಡುವುದು ಒಂದು ನೆಲೆ; ಈ ಸೌಮ್ಯತೆ ಕಾವ್ಯದ ಪ್ರಖರತೆಯನ್ನು ತಗ್ಗಿಸುವುದು ಇನ್ನೊಂದು ನೆಲೆ. ಈ ಎರಡೂ ನೆಲೆಯ ಕವಿತೆಗಳು ಈ ಸಂಗ್ರಹದಲ್ಲಿವೆ. ಮಳಲು ಹಾಡುತ್ತದೆ, ಹಲ್ಲಿಗಳ ಸಹವಾಸ, ಕನಸಿನ ಗೊಮ್ಮಟ, ಈಗಿನ ಮಕ್ಕಳು ಮೊದಲ ರೀತಿಯ ಕವಿತೆಗಳು. ಈ ಕವಿತೆಗಳು ಕೊಡುವ ಚಿತ್ರಗಳು ಹೊಸವು. ಇಲ್ಲಿ ಕಾವ್ಯಕ್ಕೆ ಒದಗುವ ನುಡಿಗಟ್ಟು ಹೊಸದು. ಅಂತರಂಗದ ಗತಿಗೆ ಹೊರ ಜಗತ್ತಿನ ಸಂಗತಿಗಳು ಅಪ್ರಯತ್ನಕವೆಂಬಷ್ಟು ಸಹಜವಾಗಿ, ಪ್ರತೀಕವಾಗಿ ನಿಲ್ಲುವ ಬಗೆಯಿಂದ ಇವು ಸಹಜ ಕಾವ್ಯದ ಮಾದರಿಗಳಾಗಿವೆ. 'ಮಳಲು ಹಾಡುತ್ತದೆ' ಎಂಬ ಕವಿತೆಯನ್ನು ಉದಾಹರಣೆಯಾಗಿ ನೋಡ ಬಹುದು:

> ರಶಿಯದ ಕಾರಾಕುಮ್ ಮರುಭೂಮಿಯಲ್ಲಿ
> ಮಳಲು ಹಾಡುತ್ತದೆ-
> ಹಾಗೆಂದು ಮೊನ್ನೆ ಪತ್ರಿಕೆಯಲ್ಲಿ ಸುದ್ದಿ,
> ಬಿರುಗಾಳಿ ಬೀಸಿದೊಡನೆ
> ಉಸುಕಿನ ತರಂಗಗಳ ತಂತಿ ಮೀಟುತ್ತಾ
> ಹಾಡಿದಂತೆ, ಗರ್ಜಿಸಿದಂತೆ
> ಕೆಲವೊಮ್ಮೆ ರೋದಿಸಿದಂತೆ-ಕೇಳುತ್ತದಂತೆ.

ಹೀಗೆ ಕವಿತೆ ಪ್ರಾರಂಭವಾಗುತ್ತದೆ ರಶಿಯಾದ ಮರುಭೂಮಿಯಲ್ಲಿ ಮಳಲು ಹಾಡುತ್ತದೆ ಎಂಬ ಮೊದಲ ಸಾಲೇ ತನ್ನ ಹೊಸತನದಿಂದ ನಮ್ಮನ್ನು ಆಕರ್ಷಿಸುತ್ತದೆ. ಆ ಹಾಡು ಒಮ್ಮೆ ಗರ್ಜನೆ ಆಗುವುದು, ಒಮ್ಮೆ ರೋದನವಾಗುವುದು-ಮರುಭೂಮಿಗೆ ಜೀವಾರೋಪ ಮಾಡುತ್ತಾ ಅದನ್ನು ಪ್ರತೀಕಾತ್ಮತೆಗೆ ಸಿದ್ಧಗೊಳಿಸುತ್ತದೆ. ಶತಮಾನಗಳ ಕಾಲಾವಧಿ, ಹಿಂದಕ್ಕೂ ಮುಂದಕ್ಕೂ ತೂಗುತ್ತಾ ಸಾಗುವ ಒಂಟೆಯ ಪ್ರಯಾಣ, ನೀರಿಗಾಗಿ ಅದರ ಕೊಲೆ-ಇತ್ಯಾದಿ ಮರುಭೂಮಿಯ ಸಹಜ ವಿವರಗಳು ವಾಸ್ತವಿಕ ನೆಲೆಯಲ್ಲಿ ಸಲ್ಲುತ್ತಲೇ ಸಾಂಕೇತಿಕತೆಯನ್ನು ರೂಢಿಸುತ್ತಾ ಹೋಗುತ್ತವೆ. ಮಳಲಿನ ಹಾಡಿನಲ್ಲಿ ಆ ನಾಡಿನ ಹುಗಿದ ಭಾವಗಳು ಹೊರಹೊಮ್ಮುತ್ತವೆ ಎಂದು ಕವಿ ಬರೆದಾಗ, ವಾಚ್ಯತೆ ಕವಿತೆಯನ್ನು ಜಾಳಾಗಿಸುತ್ತಿರುವ ಬಗ್ಗೆ ಕಳವಳ ಉಂಟಾಗುತ್ತದೆಯಾದರೂ ಕವಿತೆಯ ಕೊನೆಯ ಸಾಲುಗಳು ಮತ್ತೆ ಗಹನವೂ ಗುಂಭವೂ ಆಗುತ್ತಾ, ಕವನವು ಮನಸ್ಸು ಹಿಡಿಯುವ ಅನುಭವವಾಗುತ್ತದೆ.

> .... ಮಳಲಿನ ಈ ವರ್ತನೆ
> ಭೂಕಂಪಕ್ಕೆ ಮುನ್ಸೂಚನೆ ಎಂದು ವಿಜ್ಞಾನಿಗಳ ಶಂಕೆ
> ಆದರೂ ಏರುತ್ತಲೇ ಇದೆ
> ಅಣ್ವಸ್ತ್ರಗಳ ಸಂಖ್ಯೆ.

ಈ ಸಾಲುಗಳನ್ನು ಓದುತ್ತಿರುವಂತೆಯೇ ಇಡೀ ಮರಳುಗಾಡು ಶತಮಾನಗಳಿಂದ ತುಳಿತಕ್ಕೆ ಒಳಗಾಗಿರುವ ಶೋಷಿತರಿಗೆ ಒಡ್ಡಿದ ಪ್ರತಿಮೆಯಾಗಿ ನಿಲ್ಲುವ ರೀತಿ ಆಶ್ಚರ್ಯ ಹುಟ್ಟಿಸುತ್ತದೆ. ಭೂಕಂಪವು ಅನಿವಾರ್ಯವಾದ ಕ್ರಾಂತಿಯ ಸೂಚಿಯಾಗುತ್ತದೆ. ಮಳಲ ಒಂದೊಂದು ಕಣವೂ ಇಲ್ಲಿ ಅಣ್ವಸ್ತ್ರವಾಗುವ ಪರಿಯಂತೂ ಓದುಗರನ್ನು ರೋಮಾಂಚನಗೊಳಿಸುತ್ತದೆ. ಈ ಬಗೆಯ ಕವಿತೆಗಳು ಈ ಕವಿಯು ಈಗಲೂ ಹೇಗೆ ತಮ್ಮ ಕಾವ್ಯಶಕ್ತಿಯನ್ನು ಜತನವಾಗಿ ಕಾಪಾಡಿಕೊಂಡಿದ್ದಾರೆ ಎಂಬುದನ್ನು ಸೂಚಿಸುತ್ತದೆ.

ಎರಡನೆಯ ಬಗೆಯ ಕವಿತೆಗಳು ಸುತ್ತಲ ಸಂದರ್ಭಕ್ಕೆ ಕವಿಯ ಕಾವ್ಯಾತ್ಮಕ ಪ್ರತಿಕ್ರಿಯೆಗಳು ಮಾತ್ರ ಆಗಿವೆ. ಸತ್ಯಾಗ್ರಹ, ರಾಜ್ಯೋದಯದ ಬೆಳ್ಳಿಹಬ್ಬ, ನೀಲುವಿಗೊಂದು ಶಾಲು, ಅರುವತ್ತರೊಸಗೆಯಲ್ಲಿ ಮೊದಲಾದವು ಕೇವಲ ಸಾಂದರ್ಭಿಕ ರಚನೆಗಳಾಗುತ್ತವೆ. ಅಗತ್ಯಕ್ಕಿಂತ ಹೆಚ್ಚು ಮಾತಾಡುತ್ತವೆ. ಸಾರ್ವಜನಿಕ ಸಂಗತಿಗಳನ್ನು 'ವಸ್ತು ಪ್ರತಿರೂಪ'ಗಳಾಗಿ ಬಳಸುವಾಗ, ಆ ಸಂಗತಿಗಳು ತಮ್ಮ ಅತಿಪರಿಚಯದಿಂದ ಮತ್ತು ಸಾಮಾನ್ಯೀಕರಣದಿಂದ ಹೊಸತನಕ್ಕೂ, ಕಾವ್ಯಕ್ಕೆ ಅನಿವಾರ್ಯವಾದ ಗುಂಭತೆಗೂ ಎರವಾಗಿ, ಸಹಜವಾದ ಕಾವ್ಯದ ಹದವನ್ನು ಪಡೆಯಲಾರದೆ ಹೋಗುತ್ತವೆ.

ಒಟ್ಟಾರೆ, ಐವತ್ತು ವರ್ಷಗಳ ತಮ್ಮ ಕಾವ್ಯೋದ್ಯೋಗದಲ್ಲಿ ಕಣವಿಯವರು ಶ್ರೇಷ್ಠವಾದ ಅನೇಕ ಕವಿತೆಗಳನ್ನು ಬರೆದು ಆಧುನಿಕ ಕನ್ನಡ ಕಾವ್ಯ ಸಂದರ್ಭದ ಬಹು ಮುಖ್ಯಕವಿಗಳಲ್ಲಿ ಒಬ್ಬರಾಗಿದ್ದಾರೆ. ಲೋಕೋತ್ತರ ಸ್ಫುರಿತಗಳು ಅವರ ಕಾವ್ಯದಲ್ಲಿ ಆಗಾಗ ಕಾಣುವುವಾದರೂ, ಅವರು ವಿಶೇಷವಾಗಿ, ಕೆ.ಎಸ್.ನ. ಮತ್ತು ಜಿ.ಎಸ್. ಶಿವರುದ್ರಪ್ಪನವರಂತೆ 'ಸಾಮಾನ್ಯ'ದ ಆರಾಧಕರಾದ ಕವಿ. ಅವರ ಕಾವ್ಯದಲ್ಲಿ ನಾವು ಕೇಳುವುದು ಅವಧೂತನ ವಾಣಿಯನ್ನಲ್ಲ; ಸದ್ಗೃಹಸ್ಥನೊಬ್ಬನ ಸಮಾಧಾನದ ಧ್ವನಿಯನ್ನು. ಇದ್ದುದರಲ್ಲೇ ಬದುಕನ್ನು ಹಿತವಾಗಿಸಿಕೊಂಡು ನೆಮ್ಮದಿಯಿಂದ ಬದುಕುವ ಅಗತ್ಯವನ್ನು ಅವರ ಕಾವ್ಯ ಒತ್ತಿ ಹೇಳುತ್ತಿದೆ. 'ಮೂರುಗಳಿಗೆಯ ಬಾಳು ಮಗಮಗಿಸುತಿರಲಿ' ಎಂಬುದು ಅವರ ಹಾರೈಕೆ. ಅದಮ್ಯ ಜೀವನಪ್ರೀತಿಯ ಕಣವಿ ಅವರ ಕಾವ್ಯ, ನೋವು ನಲಿವುಗಳನ್ನು ಸಮತೂಕದಲ್ಲಿ ಧಾರಣ ಮಾಡಿದೆ. ಸಮಾಧಾನವೇ ಅದರ ಸ್ಥಾಯೀ ಅಂತಃಸತ್ವವಾಗಿದೆ.

❑

# ಯಶವಂತ ಚಿತ್ತಾಲ

ಎಚ್.ಎಸ್. ರಾಘವೇಂದ್ರರಾವ್

1

ಕೆಲವು ಲೇಖಕರು ತಮ್ಮನ್ನು ರೂಪಿಸಿದ ಹಾಗೂ ತಾವೇ ರೂಪಿಸಿದ ಸಾಹಿತ್ಯಕ ಚಳವಳಿಯ ಗುಣ ಮತ್ತು ಪರಿಮಿತಿಗಳಿಂದ ಬದ್ಧರಾಗಿ ಅದರ ಚೌಕಟ್ಟಿನಲ್ಲಿ ಅನನ್ಯ ಸಾಧನೆ ಮಾಡುತ್ತಾರೆ. ಇನ್ನು ಕೆಲವರು ಚಳವಳಿಗಳಿಂದ ಪೋಷಣೆ ಪಡೆದೂ ಅದರ ಸೀಮಿತಗಳನ್ನು ಮೀರಿ ಬೆಳೆಯುತ್ತಾರೆ. ತಮ್ಮ ಭಾಷೆಯ ಒಟ್ಟು ಸಾಹಿತ್ಯಪರಂಪರೆಯ ಭಾಗವಾಗಿ ಬಿಡುತ್ತಾರೆ. ನಮ್ಮ ಕಾಲದ ಜೀವನವನ್ನು ಕುರಿತಾದ ಪ್ರಬುದ್ಧ ಕಾಳಜಿಗಳು ಮತ್ತು ತಾವು ಆರಿಸಿಕೊಂಡ ಮಾಧ್ಯಮದ ಸಾಧ್ಯತೆಗಳನ್ನು ವಿಸ್ತರಿಸಬಲ್ಲ ಪ್ರತಿಭೆಯ ಫಲವಾಗಿ ಕನ್ನಡ ಕಥಾ ಸಾಹಿತ್ಯದ ಪ್ರಮುಖರಲ್ಲಿ ಒಬ್ಬರಾಗಿರುವ ಯಶವಂತ ಚಿತ್ತಾಲರು ಎರಡನೆಯ ಗುಂಪಿಗೆ ಸೇರಿದವರು.

ಸಾಹಿತಿಯೊಬ್ಬನ ಜೀವನವನ್ನು ಕುರಿತಾದ ಸ್ಥೂಲ ವಿವರಗಳನ್ನು ತಿಳಿದುಕೊಳ್ಳುವ ಕಾರ್ಯವು ಚಿತ್ತಾಲರಂಥ ಲೇಖಕರಲ್ಲಿ ಅವರ ಕೃತಿಗಳ ವ್ಯಾಖ್ಯಾನದ ಹೊಸ ಸಾಧ್ಯತೆಗಳಿಗೆ ದಾರಿಮಾಡಿಕೊಡುತ್ತದೆ. ಏಕೆಂದರೆ ಹನೇಹಳ್ಳಿ, ಮುಂಬಯಿಗಳಂಥ ಪ್ರದೇಶಗಳ ಭೌಗೋಳಿಕ ವಿವರಗಳಿಂದ ಹಿಡಿದು ಕಥೆ-ಕಾದಂಬರಿಗಳ ಮೂಲದ್ರವ್ಯಗಳವರೆಗೆ ಅವರ ಬದುಕು-ಬರಹಗಳ ನಡುವೆ ಅನ್ಯೋನ್ಯ ಸಂಬಂಧ ಏರ್ಪಟ್ಟಿದೆ. ಹೀಗೆ ಗಮನೀಯವಾಗುವ ಕೆಲವು ಸಂಗತಿಗಳನ್ನು ಹೆಸರಿಸುವ ಮೊದಲು, ಸಂಕ್ಷಿಪ್ತವಾಗಿ ಅವರ ಜೀವನಪಥವನ್ನು ಪರಿಚಯಿಸಲಾಗಿದೆ.

ಯಶವಂತ ಚಿತ್ತಾಲರು 1928ರ ಆಗಸ್ಟ್ ಮೂರರಂದು, ಉತ್ತರ ಕನ್ನಡ ಜಿಲ್ಲೆಯ ಗೋಕರ್ಣ ತಾಲ್ಲೂಕಿನ ಹನೇಹಳ್ಳಿಯಲ್ಲಿ ಹುಟ್ಟಿದರು. ಆಗ ಅದು ಮಹಾರಾಷ್ಟ್ರದ ದಕ್ಷಿಣ ತುದಿಯ ಜಿಲ್ಲೆ. ಅವರದು ಕೊಂಕಣಿಯನ್ನು ತಾಯಿನುಡಿಯಾಗಿ ಹೊಂದಿದ ಕುಟುಂಬ. ತಂದೆ ವಿಠೋಬಾ, ತಾಯಿ ರುಕ್ಮಿಣಿ. ಹನೇಹಳ್ಳಿ, ಕುಮಟಾ, ಧಾರವಾಡ, ಮುಂಬಯಿ ಮುಂತಾದ ಶಿಕ್ಷಣ ಪಡೆದ ಸ್ಥಳಗಳಾಗಲೀ, ವಿಜ್ಞಾನ, ತಂತ್ರಜ್ಞಾನ ಇತ್ಯಾದಿ ಶಿಕ್ಷಣ ವಿಷಯಗಳಾಗಲೀ ಕನ್ನಡ ಸಾಹಿತ್ಯದಲ್ಲಿ ವಿಶೇಷ ಆಸಕ್ತಿ ಹುಟ್ಟಿಸುವಂಥವಾಗಿರಲಿಲ್ಲ. ಆದರೆ ಅಣ್ಣಂದಿರಾದ ಕವಿ ಗಂಗಾಧರ ಚಿತ್ತಾಲರು, ಉತ್ತರ ಕನ್ನಡದ ಬುದ್ಧಿಜೀವಿ ಗೌರೀಶ ಕಾಯ್ಕಿಣಿಯವರು, ಗೆಳೆಯ ಶಾಂತಿನಾಥ ದೇಸಾಯಿಯವರು ಚಿತ್ತಾಲರ ಮೇಲೆ ದಟ್ಟ ಪ್ರಭಾವ ಬೀರಿದರು. ಧಾರವಾಡದ ಅಂದಿನ ವಾತಾವರಣದಲ್ಲೇ ಸಾಹಿತ್ಯಾಸಕ್ತಿಯು ತಾನೇ ತಾನಾಗಿತ್ತು. ತಮ್ಮ ಮೊದಲ ಪ್ರೇಮವಾದ ಚಿತ್ರಕಲೆಯಲ್ಲಿ ವಿಶೇಷ ಪರಿಣತಿ ಪಡೆಯಬೇಕೆಂಬ ಒಳ ಉದ್ದೇಶದಿಂದ ಮುಂಬಯಿಗೆ ಬಂದು 'ಕಲಾನಿಕೇತನ'ದ ಸಂಜೆ ತರಗತಿಗಳಿಗೆ ಸೇರಿದ ಯಶವಂತರು ಕ್ರಮೇಣ ಎಂ.ಎನ್. ರಾಯ್ ಅವರ ವಿಚಾರಗಳ ಕಡೆಗೆ ಆಕರ್ಷಿತರಾದರು. 'ರ್ಯಾಡಿಕಲ್ ಡೆಮೊಕ್ರಾಟಿಕ್ ಪಾರ್ಟಿ'ಯ ಸದಸ್ಯಸತ್ವವನ್ನೂ ಪಡೆದರು. ನವಮಾನವತಾವಾದದ ಮಾರ್ಗವಾಗಿ ಮಾರ್ಕ್ಸ್, ಎರಿಕ್ ಫ್ರಾಂ, ಹಕ್ಸ್ಲಿ, ಎಡಿಂಗ್‌ಟನ್, ಫ್ರಾಯ್ಡ್, ಎಡ್ಲರ್ ಮುಂತಾದ ಹಲವು ಧೀಮಂತರ ವಿಚಾರಗಳಿಗೆ ತಮ್ಮ ಮನಸ್ಸನ್ನು ಅನಾವರಣ ಮಾಡಿಕೊಂಡರು. ಇವುಗಳ ಜೊತೆಗೆ ತಮ್ಮ ಆಯ್ಕೆಯ ವಿಷಯವಾದ ಪ್ಲಾಸ್ಟಿಕ್ ತಂತ್ರವಿಜ್ಞಾನದಲ್ಲಿ ಪಡೆದ ಪದವಿಯು ಬೇಕಲೈಟ್ ಹೈಲಂ ಸಂಸ್ಥೆಯಲ್ಲಿ ಕೆಲಸ ದೊರಕಿಸಿಕೊಟ್ಟಿತು. ಅದೇ ಸಂಸ್ಥೆಯಲ್ಲಿ ಮೂವತ್ತು ವರ್ಷಗಳಿಗೂ ಮೀರಿದ ಸುದೀರ್ಘ ದುಡಿಮೆಯು, ಆಧುನಿಕ ಜಗತ್ತಿನ ಸ್ವರೂಪವನ್ನೇ ನಿಯಂತ್ರಿಸುತ್ತಿರುವ ಬಂಡವಾಳ ಶಾಹೀ, ಕೈಗಾರಿಕಾ ಜಗತ್ತಿನ ನಿಕಟ ಪರಿಚಯವನ್ನು ತಂದುಕೊಟ್ಟಿತು. ಹನೇಹಳ್ಳಿಯ ಹಸಿರು ತುಂಬಿದ ಪರಿಸರದಿಂದ ಸೃಜನಶೀಲ ಚೈತನ್ಯದ ಬುತ್ತಿಹೊತ್ತು ತಂದ ತರುಣನಿಗೆ ಮುಂಬಯಿಯೆಂಬ ನಗರ ರಾಕ್ಷಸನೊಂದಿಗೆ ಆದ ಮುಖಾಮುಖಿ ಹುಟ್ಟಿಸಿದ ತಲ್ಲಣಗಳು ಅವರ ಬರವಣಿಗೆಯ ಹಲವು ಕಾಳಜಿಗಳಿಗೆ ಕಾರಣವಾದವು. ವೈಯಕ್ತಿಕ ಜೀವನದಲ್ಲಿ ಹಾಗೂ ಉದ್ಯೋಗದಲ್ಲಿ ಅನುಭವಿಸಿದ ಹಲವು ದುರಂತಗಳು ಹಾಗೂ ಬಿಕ್ಕಟ್ಟುಗಳು ಅವರ ಬರವಣಿಗೆಯ ಸ್ವರೂಪವನ್ನು ನಿರ್ಧಾರಮಾಡಿದ ಸಂಗತಿಗಳಾದಂತೆಯೇ ಅವೆಲ್ಲದರ ನಡುವಿನಿಂದ, ಜೀವನ ಶ್ರದ್ಧೆಯೇ ಅಡಿಗಲ್ಲಾದ ಆತ್ಮವಿಶ್ವಾಸವನ್ನೂ ತಂದುಕೊಟ್ಟವು. ಕನ್ನಡ ಪರಿಸರದಿಂದ ಬಹುದೂರದ ಮುಂಬಯಿಯ ಏಕಾಂತ ಅವರ ಕಾವ್ಯ ರಚನೆಗೆ ನೆರವಾದಂತೆಯೇ ಒಂದು ಬಗೆಯ ಒಂಟಿತನದ ಬೀಜಗಳನ್ನು ಬಿತ್ತಿದಂತೆ ತೋರುತ್ತದೆ. ಮೇಧಾವಿಯೊಬ್ಬನ ಅಂತರ್ಮುಖತೆ ಚಿತ್ತಾಲರ ಸ್ವಭಾವದ ಪ್ರಮುಖ ನೆಲೆ. ಇದು ಕೇವಲ ಸಾಹಿತ್ಯರಚನೆಗೆ ಅನಿವಾರ್ಯವಾದ ಅಂತರ್ಮುಖತೆಯಲ್ಲ. ಬದಲಾಗಿ ಬಾಹ್ಯಜಗತ್ತನ್ನು ಅರಿತಾಗಲೂ, ಅದರೊಂದಿಗೆ ಬಹುಮುಖೀ ಸಂಬಂಧಗಳನ್ನು ಬೆಳೆಸಿಕೊಳ್ಳಲು ಹಿಂಜರಿಯುವ ನಾಚುಕುಳಿ ಅಂತರ್ಮುಖತೆ. ಇದರ ಅಂತರಂಗದಲ್ಲಿ ಇಡೀ ಮನುಕುಲದ ಬಗ್ಗೆ ಪ್ರೀತಿ ತುಂಬಿದ, ಯಾತನೆಯಲ್ಲಿ ನರಳುತ್ತಿರುವ ಜೊತೆಗಾರ ಜೀವವನ್ನು ಎದೆಗೊತ್ತಿ ಹಿಡಿಯುವ ಹೃದಯವಂತಿಕೆ ಇರಬಹುದು. ಅದರೆ ಅದು ಸಮೃದ್ಧವಾದ ಸಾಹಿತ್ಯಕ ಅನುಭವಕ್ಕೆ (Fictional Experience) ಸರಿಯಾದ ಜೀವನಾನುಭವದ ಹರಹನ್ನು ಒದಗಿಸಿ ಕೊಡಲಾರದ ಅಂತರ್ಮುಖತೆ. ಆದ್ದರಿಂದಲೇ ಅವರ ಸಾಹಿತ್ಯಸೃಷ್ಟಿಯ ಯಶಸ್ಸಿನ ಹಿಂದೆ ಇರುವುದು ಸೀಮಿತ ಅನುಭವದ ಸಾರ್ಥಕ ಬಳಕೆಯೇ ವಿನಾ, ಸಮೃದ್ಧ ಅನುಭವದ ದುಂದುಗಾರಿಕೆಯಲ್ಲ. ತನ್ನ ತೆಕ್ಕೆಗೆ ಬಂದ ಅನುಭವಗಳನ್ನು ಪ್ರತಿಮಾನಿರ್ಮಿತಿ, ಸಾಮಾನ್ಯೀಕರಣ, ಅಂತರಂಗ ಪರಿವೀಕ್ಷಣೆ ಮುಂತಾದ ಹತ್ತು ಹಲವು ಸಾಹಿತ್ಯಕ ಸಾಧನಗಳ ಮೂಲಕ ಅನನ್ಯವಾಗಿಸುವ ಕಲೆಯಲ್ಲಿ ಚಿತ್ತಾಲರು ನಿಷ್ಣಾತರು. ಅವರಿಗಿರುವ ವೈಚಾರಿಕ ಪರಿಣತಿ ಮತ್ತು ಮಾಧ್ಯಮ ನಿಷ್ಠೆಗಳ ನಡುವಿನ ಕರ್ಷಣವೇ ಅವರ ಬರವಣಿಗೆಯ ಜೀವಂತಿಕೆಗೆ ಕಾರಣವಾಗಿದೆ. ಸಾಹಿತ್ಯವನ್ನು ಒಂದು ಕಲಾಮಾಧ್ಯಮವಾಗಿ ಪರಿಗಣಿಸಿದಾಗ, ಅದರಿಂದ ಅನ್ಯ ಅಪೇಕ್ಷೆಗಳನ್ನು ಮಾಡದಾಗ ಮಾತ್ರ, ಅದು ಮಾನವನ ಅನುಭವಲೋಕಕ್ಕೆ ತನ್ನದೇ ಆದ ಕಾಣಿಕೆ ನೀಡಬಲ್ಲುದೆಂಬ ಅಚಲವಾದ ನಂಬಿಕೆ ಅವರದು. ಸಾಹಿತ್ಯ ರಚನೆಯೆಂದರೆ ಈಗಾಗಲೇ ತಿಳಿದಿರುವುದನ್ನು ಹೇಳುವುದಲ್ಲ, ಬರೆಯುವುದರ ಮೂಲಕವೇ ಅನುಭವವನ್ನು ಅರ್ಥೈಸಿಕೊಳ್ಳುವ ಕ್ರಿಯೆಯೆಂದು ಅವರು ಹಲವು ಬಾರಿ ಹೇಳಿದ್ದಾರೆ.

ತಮ್ಮ ಸಾಹಿತ್ಯ ರಚನೆಯ ಪ್ರಕ್ರಿಯೆ ಮತ್ತು ಆಂತರಂಗಿಕ ಬದುಕಿನ ಬೆಳವಣಿಗೆಯ ಬಗ್ಗೆ ಚಿತ್ತಾಲರಷ್ಟು ಸಮೃದ್ಧ ವಿವರಗಳನ್ನು ಒದಗಿಸಿರುವ ಕನ್ನಡ ಸಾಹಿತಿ ಮತ್ತೊಬ್ಬರಿಲ್ಲ. ಈ ವಿವರಗಳಲ್ಲಿ ಗಣನೀಯವಾದ ಅಂಶ

ಸೃಜನಶೀಲ ಕಥೆ-ಕಾದಂಬರಿಗಳಿಗಿಂತ ಭಿನ್ನವಾದ ಬರವಣಿಗೆಯಲ್ಲಿ ಹರಡಿಕೊಂಡಿದೆ. ಅವರ 'ಸಾಹಿತ್ಯ, ಸೃಜನಶೀಲತೆ ಮತ್ತು ನಾನು' ಎಂಬ ಕೃತಿಯಂತೂ ಸೃಜನಪ್ರಕ್ರಿಯೆಯ ನಿಗೂಢ ಅಂತರಂಗಕ್ಕೆ ಬೆಳಕಿಂಡಿಗಳನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡುವ ಅನನ್ಯ ಬರವಣಿಗೆ. ಇಂಥ ಬರಹಗಳು ಚಿತ್ತಾಲರ ಕೃತಿಗಳ ವಿಶ್ಲೇಷಣೆ, ಮೌಲ್ಯಮಾಪನಗಳಿಗೆ ಎಷ್ಟರ ಮಟ್ಟಿಗೆ ಅನಿವಾರ್ಯ ಅಥವಾ ನಂಬಿಕೆಗೆ ಅರ್ಹ ಎಂಬ ವಿವಾದಾಸ್ಪದ ಪ್ರಶ್ನೆಗಳನ್ನು ಬದಿಗಿರಿಸಿ ನೋಡಿದಾಗ ಕೂಡ ಅದರ ಸಾಂಸ್ಕೃತಿಕ ಮಹತ್ವವನ್ನು ಅಲ್ಲಗಳೆಯಲಾಗುವುದಿಲ್ಲ. ಉದಾಹರಣೆಗೆ ಸಾಹಿತ್ಯಕ ವಾತಾವರಣದಲ್ಲಿ ಸಹಜವಾಗಿಯೇ ಆಗುವ ಬದಲಾವಣೆಗಳು, ಸಂವೇದನಾಶೀಲ ಸಾಹಿತಿಯೊಬ್ಬನ ಅಂತರಂಗದ ಸ್ವಾಸ್ಥ್ಯವನ್ನೇ ಕಲಕಿ ಅರ್ಥಪೂರ್ಣವಾದ ಹೊಸ ಹುಟ್ಟಿಗೆ ಕಾರಣವಾದುದರ ದಾಖಲೆಗಳು ಇಂಥ ಬರವಣಿಗೆಯಲ್ಲಿ ಸಿಗುತ್ತವೆ. ಮೈಯ ಬದುಕು ಮತ್ತು ಮನಸ್ಸಿನ ಬದುಕಿನಲ್ಲಿ ಆದ ಪರಿವರ್ತನೆಗಳು ಬರವಣಿಗೆಯ ವಿಕಾಸದಲ್ಲಿ ಒಡಮೂಡಿರುವ ಬಗೆಯನ್ನು ಇಲ್ಲಿ ಖಚಿತವಾಗಿ ಗುರುತಿಸಬಹುದು.

1957ರಲ್ಲಿ ಪ್ರಕಟವಾದ 'ಸಂದರ್ಶನ' ಎಂಬ ಕಥಾಸಂಕಲನದಿಂದ ಹಿಡಿದು, 1990ರ 'ಪುರುಷೋತ್ತಮ' ಕಾದಂಬರಿಯವರೆಗಿನ ಚಿತ್ತಾಲರ ವಿವಿಧ ಕೃತಿಗಳನ್ನು ಪರಿಶೀಲಿಸುವುದಕ್ಕಿಂತ ಮೊದಲು, ಅವರ ಬರವಣಿಗೆಯ ಹಿಂದಿನ ಕೆಲವು ಪ್ರಮುಖ ಸಂಗತಿಗಳನ್ನು ಇಲ್ಲಿ ಹೆಸರಿಸಬಹುದು.

1. ಅವರ ಬರವಣಿಗೆಯಲ್ಲಿ ಹನೇಹಳ್ಳಿಗೆ ವಿಶೇಷ ಮಹತ್ವವಿದೆ. ಅವರ ನೆನ್ನೆ-ಇಂದುಗಳ ಭೌತಿಕ ವಿವರಗಳು, ಅಲ್ಲಿ ಇದ್ದ ವ್ಯಕ್ತಿಗಳು, ಅಲ್ಲಿನ ಹಲವು ಕುಟುಂಬಗಳು ಮುಂಬಯಿಯೊಂದಿಗೆ ಪಡೆದುಕೊಂಡ ಸಂಬಂಧಗಳು ಹೀಗೆ ಹಲವು ರೀತಿಯಲ್ಲಿ ಲೇಖಕರು ಅದನ್ನು ಕಟ್ಟಿಕೊಡುತ್ತಾರೆ. ಆದರೆ ಹನೇಹಳ್ಳಿ ಕೇವಲ ಅವರ ಕೃತಿಗಳಿಗೆ ಪ್ರಾದೇಶಿಕತೆಯ ಸ್ಪರ್ಶ ಕೊಡಲೆಂದು ಒಡಮೂಡುವುದಿಲ್ಲ. ಚಿತ್ತಾಲರೇ ಹೇಳುವಂತೆ:— "ಉತ್ತರ ಕನ್ನಡ ಜಿಲ್ಲೆ, ಅದರಲ್ಲೂ ನನ್ನ ಹುಟ್ಟೂರಾದ ಹನೇಹಳ್ಳಿ ಇವು ನನ್ನ ಮಟ್ಟಿಗೆ ಬರೇ ನೆಲದ ಹೆಸರುಗಳಲ್ಲ. ಬದಲಾಗಿ ನನ್ನ ಸಾಹಿತ್ಯದ ಹುಟ್ಟಿಗೆ ಕಾರಣವಾಗಿ, ಅದರ ಚೈತನ್ಯಕ್ಕೆ ನಿರಂತರವಾದ ಜೀವಸೆಲೆಯಾಗಿ ನಿಂತ ಮೂಲಭೂತವಾದ ಪ್ರೇರಕಶಕ್ತಿಗಳೂ ಆಗಿವೆಯೆಂದು ನಾನು ನಂಬುತ್ತೇನೆ.... ಇವುಗಳೆಲ್ಲ ನನ್ನ ಸಾಹಿತ್ಯ ಕೃತಿಗಳಲ್ಲಿ ಪಾತ್ರಗಳ ಜೀವಂತ ಉಸಿರಾಟಕ್ಕೆ ಆವಶ್ಯಕವಾಗಿ ಬಂದ ಭೌತಿಕ ಪರಿಸರದ ಅಂಶಗಳು ಮಾತ್ರವಲ್ಲ, ಅದೇ ತಾನೇ ಕಣ್ಣು ಬಿಡುತ್ತಿದ್ದ, ಹೆಜ್ಜೆ ಇಡುತ್ತಿದ್ದ, ತಲೆಯೆತ್ತಿ ನಿಲ್ಲುವ ಹವಣಿಕೆಯಲ್ಲಿದ್ದ ಎಳೆಯ ಜೀವಕ್ಕೆ 'ಬೆಳೆ, ಗಟ್ಟಿಯಾಗು, ಅರಳು' ಎಂದು ಪ್ರೋತ್ಸಾಹವಿತ್ತ ಜೀವಂತ ಸಂಗತಿಗಳೂ ಆಗಿವೆಯೆಂದು ನಾನು ಭಾವಿಸಿದ್ದೇನೆ."[1]

ಆದರೆ ಚಿತ್ತಾಲರು ಹನೇಹಳ್ಳಿಯ ಭೂತವನ್ನು ವರ್ತಮಾನದೊಂದಿಗೆ ಹೋಲಿಸುವುದರ ಮೂಲಕ, ಅದನ್ನು ಇಡೀ ಮನುಕುಲದಲ್ಲಿ ಸಂಭವಿಸಿರುವ ಅಸ್ತಿತ್ವದ ಬಿಕ್ಕಟ್ಟಿಗೆ ಪ್ರತಿಮೆಯಾಗಿ ಪರಿವರ್ತಿಸುತ್ತಾರೆ. ಆದ್ದರಿಂದಲೇ 'ಪುರುಷೋತ್ತಮ' ಕಾದಂಬರಿಯಲ್ಲಿ ನಾಯಕನ ಸಿದ್ಧಿಯ ಚರಮಕ್ಷಣವೆಂದರೆ ಅವನ ಹನೇಹಳ್ಳಿಗೆ ಮತ್ತೆ ಜೀವ ತುಂಬಿ ತುಳುಕಾಡುವುದೇ ಆಗಿದೆ.

ಹೀಗೆ ವಾಸ್ತವ ಮತ್ತು ಕಲ್ಪನೆಗಳ ನಡುವಿನ ಗಡಿಗೆರೆಗಳನ್ನು ಅಳಿಸಿಬಿಡುವಂತೆ ಹನೇಹಳ್ಳಿಯನ್ನು ಕಂಡರಿಸುವುದರ ಮೂಲಕ ಚಿತ್ತಾಲರು ಆಧುನಿಕವಾದ ಪುರಾಣವೊಂದರ ನಿರ್ಮಿತಿಯಲ್ಲಿ ತೊಡಗಿದ್ದಾರೆ. (Myth Making)

2. ತಾನು ವಿಜ್ಞಾನದ ವಿದ್ಯಾರ್ಥಿಯೇ ವಿನಾ ಸಾಹಿತ್ಯವನ್ನು ಅಭ್ಯಾಸ ಮಾಡಿದವರಲ್ಲವೆಂಬ ಮಾತಿಗೆ ಚಿತ್ತಾಲರು ವಿಶೇಷವಾದ ಒತ್ತುಕೊಡುತ್ತಾರೆ. ಹೀಗೆಂದಾಗ, ವಿಜ್ಞಾನವೊಂದೇ ಸತ್ಯವೆಂಬ ಭ್ರಮೆಯ ಬದಲು, ಸಾಹಿತ್ಯವನ್ನು ಕುರಿತಾದ ಇದುವರೆಗಿನ ನಿಲುವುಗಳಿಗೆ ಹೊಸದೊಂದು ಆಯಾಮಗಳನ್ನು ಸೇರಿಸಬಹುದೆಂದು ಅವರು ತಿಳಿಯುತ್ತಾರೆ. ಅವರ ಸೃಜನಶೀಲ ಕೃತಿಗಳ ಮೇಲೆ ಇಂಥದೊಂದು ಅಧ್ಯಯನದ ನೇರ ಪರಿಣಾಮ ಏನಾಗಿದೆಯೆಂದು ಹೇಳುವುದು ಕಷ್ಟ. ಅಂಥ ಪ್ರಭಾವವನ್ನು ಅವರು ನಿರಾಕರಿಸುತ್ತಾರೆ ಕೂಡ. ಆದರೂ ಡಾ. ಜಿ.ಎಸ್. ಆಮೂರ ಅವರು ಹೇಳುವಂತೆ :

"ಚಿತ್ತಾಲರ ಕಥೆಗಳನ್ನು ಓದುವಾಗ, ವಿಮರ್ಶಿಸುವಾಗ, ಈ ಹಿನ್ನೆಲೆಯ ಅರಿವಿಟ್ಟುಕೊಳ್ಳುವುದು ಉಪಯುಕ್ತವಾಗಿದೆ. ಅವರಿಗೆ ಸ್ವಂತದ ಭಾವಪ್ರಪಂಚವಿದ್ದಂತೆ ವೈಚಾರಿಕ ಪ್ರಪಂಚವೂ ಇದೆ. ಆದರೆ ಅವರ ಬೌದ್ಧಿಕ ಅಥವಾ ತಾತ್ತ್ವಿಕ ಕಾಳಜಿಗಳು ಕಥೆಯ ಚೌಕಟ್ಟನ್ನು ಬಿಟ್ಟು ಎಂದೂ ಹೊರಚೆಲ್ಲುವುದಿಲ್ಲ. ಇದು ಅವರ ಸಾಹಿತ್ಯದ ಮುಖ್ಯ ವೈಶಿಷ್ಟ್ಯಗಳಲ್ಲೊಂದು."[2]

3. ತಮ್ಮ ಬದುಕಿನ ಮಹತ್ವದ ಭಾಗವನ್ನು ಮುಂಬಯಿ ಮಹಾನಗರದ ಮುಖಹೀನ ನಾಗರಿಕತೆಯ ವಿಷಮತೆಗಳ ನಡುವೆ ಕಳೆದಿರುವುದು ಚಿತ್ತಾಲರ ಬರವಣಿಗೆಯ ಕೆಲವು ಚಹರೆಪಟ್ಟಿಗಳನ್ನು ತೀರ್ಮಾನಿಸಿದೆ. 'ಶಿಕಾರಿ'ಯಂಥ ಕಾದಂಬರಿಯು ಕನ್ನಡದ ಬೇರಾವ ಲೇಖಕನಿಗೂ ಸಾಧ್ಯವಿಲ್ಲವೆನ್ನುವಷ್ಟರ ಮಟ್ಟಿಗೆ ಮುಂಬಯಿಗೆ ಸೇರಿದ, ಸಕಲ ಸಂಬಂಧಗಳ ಕೇಂದ್ರವೂ ಹಣವೇ ಆಗಿರುವಂಥ ಜೀವನಕ್ರಮವನ್ನು ತೀರ ಹತ್ತಿರದಿಂದ ಕಂಡುಂಡು, ಅದರ ಬಗ್ಗೆ ತಳೆದ ತೀವ್ರ ವಿಷಾದ ಹಾಗೂ ದ್ವೇಷದ ಫಲವಾಗಿ ಅವರ ಈ ದಶಕದ ಬರವಣಿಗೆ ಮೂಡಿಬಂದಿದೆ. ಆದರೆ ಆ ಮರಳುಗಾಡಿನ ನಡುವೆಯೂ ವ್ಯಕ್ತಿಯ ಹಂತದಲ್ಲಿ ಪ್ರೀತಿಯ, ಸಾರ್ಥಕತೆಯ ಹೂಗಳು ಅರಳಬಹುದೆಂಬ ಅದಮ್ಯ ಆಶಾವಾದ ಪ್ರಕಟವಾಗಿದೆ.

4. ದ್ರಾವಿಡ ಭಾಷೆಯಲ್ಲದ ಕೊಂಕಣಿ ಚಿತ್ತಾಲರ ಮಾತೃಭಾಷೆಯಾಗಿರುವುದರಿಂದ ಪದಕೋಶ ಹಾಗೂ ವಾಕ್ಯರಚನೆಯ ಹಂತದಲ್ಲಿ ಅನೇಕ ಹೊಸ ಅಂಶಗಳನ್ನು ಕನ್ನಡದ ತೆಕ್ಕೆಗೆ ತರುವ ಕೆಲಸದಲ್ಲಿ ಚಿತ್ತಾಲರು ಯಶಸ್ವಿಯಾಗುತ್ತಾರೆ. ಇವರ ಗದ್ಯಶೈಲಿಯನ್ನು ಎಚ್ಚರಿಕೆಯಿಂದ ಅಭ್ಯಾಸ ಮಾಡಿದಾಗ ಇಂಥ ಹಲವು ಸಂಗತಿಗಳು ಸ್ಪಷ್ಟವಾಗುವ ಸಾಧ್ಯತೆಯಿದೆ.

ತಮ್ಮ ಸಾಹಿತ್ಯಜೀವನದ ಮೊದಲ ಹಂತದಲ್ಲಿ ನವ್ಯಪಂಥಕ್ಕೆ ಸೇರಿದ ಕಥೆಗಾರರೆಂದೇ ಹೆಸರು ಮಾಡಿದ ಚಿತ್ತಾಲರು 'ಶಿಕಾರಿ' ಕಾದಂಬರಿಯ ಪ್ರಕಟಣೆಯ ನಂತರ ತಮ್ಮ ಜನಪ್ರಿಯತೆಯ ಪರಿಧಿಯನ್ನು ಹಬ್ಬಿಸಿಕೊಂಡರು. 1983ರಲ್ಲಿ ಬಂದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು 1981ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ ಇವರ ಪಾಲಿಗೆ ಬಂದಿರುವ ಗೌರವಗಳಲ್ಲಿ ಮುಖ್ಯವಾದವು. ಇವರ ಕಾದಂಬರಿ 'ಮೂರು ದಾರಿಗಳು' ಚಲನಚಿತ್ರವಾಗಿ ಮೂಡಿಬಂದಿದೆ. ಬೇರೆ ಕೆಲವು ಕಥೆಗಳು ಚಲನಚಿತ್ರಗಳಾಗಿವೆ. ಇವರ ಬರವಣಿಗೆಯನ್ನು ಕುರಿತ ಹಲವು ಮುಖ್ಯ ಲೇಖನಗಳು 'ಯಶವಂತ ಚಿತ್ತಾಲ-ಕೆಲವು ಅಧ್ಯಯನಗಳು' (1981) ಎಂಬ ಕೃತಿಯಲ್ಲಿ ಸಮಾವೇಶವಾಗಿವೆ. ಅರವತ್ತು ಮೀರಿದ ಈ ವಯಸ್ಸಿನಲ್ಲೂ ಕವಿತೆಯಂಥ ಹೊಸ ಮಾಧ್ಯಮದಲ್ಲಿ ಕುತೂಹಲ ತಳೆದಿರುವ ಚಿತ್ತಾಲರು ಕೆಲವೆ 'ಲಬಸಾ' (ಲಯಬದ್ಧ ಸಾಲುಗಳು)ಗಳನ್ನು ರಚಿಸಿದ್ದಾರೆ. ಅವರ ಅತ್ಯಂತ ಮಹತ್ವಾಕಾಂಕ್ಷೆಯ ಕಾದಂಬರಿಯಾದ 'ಪುರುಷೋತ್ತಮ'ದ

(1990) ನಂತರ ಮತ್ತೊಂದು ಕಾದಂಬರಿ 'ಕೇಂದ್ರ ವೃತ್ತಾಂತ' ಹಾಗೂ 'ಮನುಷ್ಯನನ್ನು ಅರಿಯುವುದಕ್ಕೆ' ಎಂಬ ಸುದೀರ್ಘ ಪ್ರಬಂಧವೊಂದರ ರಚನೆಯಲ್ಲಿ ನಿರತರಾಗಿದ್ದಾರೆ.

**2**

ಈ ಭಾಗದಲ್ಲಿ ಚಿತ್ತಾಲ ಸಾಹಿತ್ಯದ ವಿಕಸನ ಪಥವನ್ನು ವಿಮರ್ಶಾತ್ಮಕ ವಾಗಿ ಪರಿಚಯ ಮಾಡಿಕೊಡಲಾಗಿದೆ. ಕನ್ನಡ ಕಥಾಸಾಹಿತ್ಯದ ಪ್ರಮುಖ ನೆಲೆಗಳಿಗೆ ಅವರು ಪ್ರತಿಸ್ಪಂದಿಸಿದ ರೀತಿಯನ್ನು ಗಮನಿಸಿದಾಗ ಸಣ್ಣಕಥೆಯ ಪರಂಪರೆಯಲ್ಲಿ ಅವರ ಮಹತ್ವ ಗೋಚರಿಸುವುದೆಂಬುದು ಇದರ ಹಿಂದಿನ ಗ್ರಹಿಕೆ.

1949ರಲ್ಲಿ 'ಬೊಮ್ಮಿಯ ಹುಲ್ಲುಹೊರೆ' ಎಂಬ ಚಿತ್ತಾಲರ ಮೊದಲ ಕಥೆ ಪ್ರಕಟವಾಯಿತು. ಕುತೂಹಲದ ಸಂಗತಿಯೆಂದರೆ ಅದರ ವಸ್ತು ಕೆಳವರ್ಗದವರ ಶೋಷಣೆಯಾಗಿತ್ತು. 'ಸಂದರ್ಶನ' ಸಂಕಲನದ ಬಹುಪಾಲು ಕಥೆಗಳು, ದಿನಕರ ದೇಸಾಯಿಯವರು ಹೊರತರುತ್ತಿದ್ದ 'ಜನಸೇವಕ' ಎಂಬ ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾದವು. ಆ ಮಾಲಿಕೆಯ ಹೆಸರು 'ನನ್ನ ಜಿಲ್ಲೆಯ ಜೀವನಚಿತ್ರಗಳು' ಎಂದು. ಹಾಸ್ಯಪ್ರಜ್ಞೆ ಮತ್ತು ಭಾವನೆ ಗಳಿಂದ ಆರ್ದ್ರವಾದ ಮನಸ್ಸುಗಳು ಇಲ್ಲಿನ ಕಥೆಗಳಲ್ಲಿ ಪೈಪೋಟಿ ನಡೆಸು ತ್ತವೆ. ಇಂದಿನ ಚಿತ್ತಾಲರು ಇವನ್ನು ಬರೆದರೇ ಎಂದು ಸೋಜಿಗಪಡುವಷ್ಟು ವಿನೋದದ ಕಡೆ ಒಲಿಯುವ 'ಒಂದು ತತ್ವದ ಸಲುವಾಗಿ', 'ಗುಂಡಾಭಟ್ಟರ ಮಡಿ', 'ಗಾನಪ್ರಿಯ ಶಂಭುಶಾಸ್ತ್ರಿ', 'ಮುಕುಂದನ ದಾಕ್ಷಿಣ್ಯ'ದಂಥ ಕಥೆಗಳು ಮಾಸ್ತಿಯವರಿಗಿಂತ ಹೆಚ್ಚಾಗಿ ಗೊರೂರರ ಬರಹದ ಮಾದರಿಯವು. ಚಿತ್ತಾಲರ ಮನಸ್ಸನ್ನು ಆತಂಕ, ವಿಷಾದಗಳು ಆಕ್ರಮಿಸಿದ ಮೇಲೆ ಅವರ ಬರವಣಿಗೆ ಇಂಥ ವಿನೋದಕ್ಕೆ ಬಾಹಿರವಾಯಿತು.

ಆದರೆ ಸರಿಸುಮಾರು ಇದೇ ಅವಧಿಯಲ್ಲಿ ರಚಿತವಾದ 'ಕಳ್ಳಗಿರಿಯಣ್ಣ', 'ಆಬೋಲೀನ', 'ಮುದಿಹುಚ್ಚು' ಮುಂತಾದ ಕಥೆಗಳಲ್ಲಿ ಕಂಡು ಬರುವ ಕಲಾವಿದ ಬೇರೆ ಬಗೆಯವನು. 'ಸರಳನಂತೆ ಕಂಡರೂ, ಕೋಡಂಗಿತನವನ್ನು ಬಿಟ್ಟುಕೊಟ್ಟು, ಜಂಗುಳಿಯಿಂದ ಬೇರೆಯಾಗಿಯೂ ಜನರಲ್ಲಿ ಬೆರೆಯ ಬೇಕೆನ್ನುವ, ಅವರ ಸ್ನೇಹ ಗಳಿಸಬೇಕೆನ್ನುವ ಹುಚ್ಚು ಕನಸುಗಾರ'[3]ನ ಆದರ್ಶ ವಾದ ಮತ್ತು ಸಹಾನುಭೂತಿಗಳು ಈ ಕಥೆಗಳ ಹಿಂದಿವೆ. ಆದರೂ ಈತ ಇತರರ ನೋವುಗಳ ಕಡೆ ಮುಖಮಾಡಿದ ಸಂವೇದನಾಶೀಲನೇ ವಿನಾ ತನ್ನದೇ ನೋವುಗಳ ತೀವ್ರತೆಯಿಂದ ಚಕಿತನಾದವನಲ್ಲ. ಮಾಸ್ತಿಯವರು ತಮ್ಮ ಪತ್ರ ವೊಂದರಲ್ಲಿ ಚಿತ್ತಾಲರಿಗೆ ತಿಳಿಸಿದಂತೆ "ಈ ಕಥೆಗಳ ಬರವಣಿಗೆಗೆ ಜೊತೆಯ ಜೀವದ ಜೀವನದಲ್ಲಿ ಸಹಾನುಭೂತಿಯಿಂದ ಬೆರೆತು ಅದರ ಸಂಗತಿಯನ್ನು ಬೇರೆ ಜೀವಕ್ಕೆ ತಿಳಿಸುವ ಆಸೆ" ಮುಖ್ಯವಾಗಿದೆ. ಇಲ್ಲಿ ತನ್ನ ಸುತ್ತಲಿನ ಮೌಲ್ಯವ್ಯವಸ್ಥೆಯ ಏರುಪೇರುಗಳನ್ನು ಗುರುತಿಸುವ, ಅವುಗಳನ್ನು ಮನ ಮುಟ್ಟುವಂತೆ ಹೇಳುವ ತಹತಹ ಸ್ಪಷ್ಟವಾಗಿದೆ. ಆದರೆ ಈ ಕಥೆಗಳಲ್ಲಿ ಶೋಧಿತವಾಗಿರುವುದು ಕಥೆಗಾರನ ಆ ಕ್ಷಣದ ಬದುಕಿನೊಂದಿಗೆ ನೇರ ಸಂಪರ್ಕ ಪಡೆಯದ ಬಾಲ್ಯಾನುಭವಗಳ ಜಗತ್ತು; ಆಧುನಿಕತೆಯಿಂದ ಕಲುಷಿತ ವಾದ ಜಗತ್ತು.

'ಪೀಜೀ', 'ಸಂದರ್ಶನ', 'ಅಡ್ಡಬಿದ್ದಮರ', 'ಖಾಲೀಕೋಣೆ' ಮುಂತಾದ ಕಥೆಗಳಲ್ಲಿ ಕಥನದ ಕೇಂದ್ರ ನಗರಕ್ಕೆ ಚಲಿಸುತ್ತದೆ. ಅನುಭವದ ಸ್ವರೂಪದಲ್ಲಿ ಆದ ಬದಲಾವಣೆಯು ಕಥೆಯ ಶಿಲ್ಪ ಹಾಗೂ ನಿರೂಪಣಾವಿಧಾನಗಳ ಮೇಲೆಯೂ ತನ್ನದೇ ಆದ ಪ್ರಭಾವ ಬೀರುತ್ತದೆ. ಇಲ್ಲಿನದು ನಾಗರಿಕ ಜೀವನದ ಒತ್ತಡಗಳಿಂದ ವಿಧ್ವಸ್ತವಾದ ವ್ಯಕ್ತಿಗಳ ಜಗತ್ತು. ಆದರೆ ಇಲ್ಲಿ ಕೂಡ ಕಥೆಗಾರನು 'ಕಂಡ' ವಿಷಾದ ಮಡುಗಟ್ಟಿದೆಯೇ ಹೊರತು 'ಉಂಡ' ವಿಷಾದವಲ್ಲ. ಆ ವೇಳೆಗಾಗಲೇ ಪ್ರವೇಶಿಸಿದ್ದ ನವ್ಯಸಾಹಿತ್ಯದ ಕೇಂದ್ರಬಿಂದು ವಾದ ವ್ಯಕ್ತಿನಿಷ್ಠ ಅನುಭವದ ಕೊರತೆಯು ಈ ಕಥೆಗಳನ್ನು ನವ್ಯಕ್ಕೆ ಸಮಾನಾಂತರವಾಗಿಯೇ ನಡೆಯುವಂತೆ ಮಾಡುತ್ತದೆ.

1959ರಷ್ಟು ಹಿಂದೆಯೇ ಬರೆದ 'ಅಪರಿಚಿತರು' ಕಥೆ ಚಿತ್ತಾಲರ ಬೆಳವಣಿಗೆಯ ದಿಕ್ಕನ್ನು ಸ್ಪಷ್ಟವಾಗಿಸುತ್ತದೆ. ಹಲವು ವಿಮರ್ಶಕರು ಈಗಾಗಲೇ ಗುರುತಿಸಿರುವಂತೆ, ಇಲ್ಲಿ ಚಿತ್ತಾಲರು ವಾಸ್ತವಿಕತೆಯಿಂದ ಸಾಂಕೇತಿಕತೆಯ ಕಡೆಗೆ ಮಹತ್ವದ ಹೆಜ್ಜೆ ಹಾಕುತ್ತಾರೆ. ರಾಮಕೃಷ್ಣ-ಜಾನಕಿಯರ ಜೀವನಕ್ರಮವನ್ನು ಅಸ್ತವ್ಯಸ್ತವಾಗಿಸಿಬಿಡುವ ಅಪರಿಚಿತ ದಂಪತಿಗಳು ಅನೇಕ ಅರ್ಥಗಳನ್ನು ತಮ್ಮಲ್ಲಿ ತುಂಬಿಕೊಳ್ಳುತ್ತಾರೆ. ವಾತಾವರಣ ನಿರ್ಮಿತಿ, ಭಾಷೆಯ ಬಳಕೆ, ಕಥೆಯನ್ನು ಘಟನೆಗಳ ಹಂತದಲ್ಲಿ ಮೇಲೆತ್ತಿಬಿಡುವ ಗಂಭೀರ ಕಾಳಜಿಗಳ ಆವಿಷ್ಕಾರ ಮುಂತಾದ ಹಲವು ಅಂಶಗಳಲ್ಲಿ ಈ ಕಥೆ ಒಂದು ಮೈಲಿಗಲ್ಲು.

ಚಿತ್ತಾಲರನ್ನು ಕನ್ನಡ ಕಥಾಪ್ರಪಂಚದಲ್ಲಿ ಮುಖ್ಯರಾಗಿಸಿದ ಸಂಕಲನ 'ಆಟ' (1969). ಅದು ನವ್ಯಸಾಹಿತ್ಯದ ಉತ್ಕರ್ಷದ ಕಾಲ. ಅನಂತಮೂರ್ತಿ, ಲಂಕೇಶ್, ತೇಜಸ್ವಿಯವರಂಥ ಸಮರ್ಥರು ಕಥಾಮಾಧ್ಯಮದ ಸಾಧ್ಯತೆಗಳನ್ನು ಹಿಗ್ಗಿಸುತ್ತಿದ್ದ ಕಾಲ. ಇಂಥ ವಾತಾವರಣದಿಂದ ಸ್ವಲ್ಪ ದೂರದಲ್ಲಿಯೇ ಸೃಜನನಿರತರಾಗಿದ್ದರೂ ಚಿತ್ತಾಲರು ನವ್ಯಕಥೆಗೆ ಹೊಸ ಆಯಾಮಗಳನ್ನು ಸೇರಿಸಿದರು. ಮುಖ್ಯಕಾರಣವೆಂದರೆ ಅವರು ತಮ್ಮ ಅಂತರಂಗ ಜೀವನ ದೊಂದಿಗಿನ ನಿಜವಾದ ಮುಖಾಮುಖಿಯಲ್ಲಿ ತೊಡಗಿದ್ದು ಇಲ್ಲಿನ ಕಥೆಗಳಲ್ಲಿ. ವೈಯಕ್ತಿಕ ಬದುಕಿನ ನೋವುಗಳ ಅರ್ಥವನ್ನು ವಿಸ್ತಾರವಾದ ಓದು ಹಾಗೂ ವೈಚಾರಿಕತೆಗಳ ಬೆಳಕಿನಲ್ಲಿ ಹುಡುಕಹೊರಟಾಗ ಮೂಡಿದ ಅಸಮಾಧಾನ ಹಾಗೂ ಅಸಹಾಯಕತೆಗಳು ಕಲಾತ್ಮಕವಾದ ಹೊರದಾರಿಗಳ ಅನ್ವೇಷಣೆಯಲ್ಲಿ ಮುಕ್ತಾಯವಾದವು. ಸಾಹಿತ್ಯಕ ಸೃಜನಶೀಲತೆಯೆಂದರೆ ಬಾಹ್ಯ ವೈಚಾರಿಕತೆಯ ಕಥನಾತ್ಮಕ ಮಂಡನೆಯಲ್ಲ, ಬದಲಾಗಿ, ಅದು ಹೊಸದೊಂದು ಮಾಧ್ಯಮದ ಮೂಲಕ ವ್ಯಗ್ರ ಮನಸ್ಸಿನ ಆರೋಗ್ಯವನ್ನು ಮರಳಿಪಡೆಯುವ ಪ್ರಯತ್ನ ಎಂಬ ಗ್ರಹಿಕೆಯು ಅವರ ಕಥೆಗಳ ವ್ಯಾಪ್ತಿ ಯನ್ನು ಹೆಚ್ಚಿಸಿತು. ನಿರಪರಾಧಿಯ ಯಾತನೆ, ಸಾವಿನ ನಿಗೂಢತೆಯಂಥ ಅಮೂರ್ತಗಳು ಸ್ವಂತ ಅನುಭವದ ಕುಲುಮೆಯಲ್ಲಿ ಕಲಾಕೃತಿಗಳಾಗಿದ್ದವು. ಚಿತ್ತಾಲರೇ ಹೇಳುವಂತೆ :

"ಸೃಜನಶೀಲ ಸಾಹಿತ್ಯದ ವೈಚಾರಿಕತೆ ಕೃತಿಯಲ್ಲಿ ಅನಾವರಣಗೊಂಡ ಅನುಭವದ ಅರ್ಥವಿಸ್ತಾರಕ್ಕೆ, ಅನುಭವಿಸುವ ರೀತಿ ಪ್ರಜ್ಞೆಯ ಸ್ಥಿತಿಯನ್ನು ಮುಟ್ಟುವುದಕ್ಕೆ ನೆರವಾಗಿ ಬರಬೇಕೇ ಹೊರತು ಅದಕ್ಕೆ ತನ್ನದೇ ಆದ ಸ್ಥಾನವಿಲ್ಲ ಎಂಬ ನಂಬಿಕೆ ಈ ಕಥೆಗಳ ರಚನಾವಿನ್ಯಾಸದಲ್ಲಿ ವ್ಯಕ್ತಗೊಂಡಿದೆ ಯೆಂದು ನನಗೆ ಅನ್ನಿಸಿದೆ .... ಜೀವಂತ ಅನುಭವದ ಸಂದರ್ಭದಲ್ಲಿ ಅರ್ಥ ಪಡೆದಿರದ ವಿಚಾರ, ಅನುಭವಕ್ಕೆ ಹೊಸ ಅರ್ಥ ನೀಡಲಾರದ ವಿಚಾರ ನನ್ನ ಸಾಹಿತ್ಯದ ಗ್ರಹಿಕೆಯ ವಿನ್ಯಾಸದಲ್ಲಿ ಸೇರಿಕೊಳ್ಳಲು ಒಪ್ಪುವುದಿಲ್ಲ."[4]

ತತ್ಕಾಲೀನ ಸಮಾಜಬದ್ಧವಾದ ಸಾಮಾಜಿಕ, ಆರ್ಥಿಕ ಪ್ರಶ್ನೆಗಳನ್ನು ಕೇಳಿಕೊಳ್ಳುವುದಕ್ಕಿಂತ ಹೆಚ್ಚಾಗಿ, ಮಾನವನ ಒಟ್ಟು ಅಸ್ತಿತ್ವದ ಬಗೆಗಿನ

ಮೂಲಭೂತ ಪ್ರಶ್ನೆಗಳನ್ನು ಕೇಳುವ ಹಂಬಲವನ್ನು ಚಿತ್ತಾಲರು ತೋರಿಸಿದರು. ಸಾಮಾಜಿಕ ಪ್ರಸ್ತುತತೆಯ ಬಗೆಗಿನ ಕಾಳಜಿಯು ಸಾಹಿತ್ಯದ ವಸ್ತುವನ್ನು ಸಂಕುಚಿತಗೊಳಿಸಬಾರದೆಂಬುದು ಅವರ ಖಚಿತವಾದ ನಿಲುವು.

ಆಟ ಸಂಕಲನದ ಹಲವು ಕಥೆಗಳಲ್ಲಿ ಇರುವ ಕಲಾತ್ಮಕ ಪರಿಪೂರ್ಣತೆಯನ್ನು ಎಲ್ಲ ವಿಮರ್ಶಕರೂ ಗುರುತಿಸಿದ್ದಾರೆ. ಆದರೆ ಕಲಾತ್ಮಕತೆಯನ್ನು ಕುರಿತಾದ ಈ ಮಾತುಗಳೇ ಚಿತ್ತಾಲರ ಒಟ್ಟು ಸಾಹಿತ್ಯವನ್ನು ಕುರಿತ ಒಂದು ಮಹತ್ವದ ವಾಗ್ವಾದವನ್ನು ಹುಟ್ಟುಹಾಕಿದ್ದು ಕುತೂಹಲಕಾರಿಯಾದ ಸಂಗತಿ. ಚಿತ್ತಾಲರಿಗೆ ಕಥೆಗಳ ವಸ್ತುವನ್ನು ಕುರಿತ ಗಂಭೀರ ಕಾಳಜಿಗಿಂತ ಕಲಾತ್ಮಕ ಆವಿಷ್ಕರಣದ ಮೋಹವೇ ಹೆಚ್ಚಾಗಿದೆಯೆಂಬ ಅನಿಸಿಕೆಯನ್ನು ಅನಂತಮೂರ್ತಿ, ಜಿ.ಎಚ್. ನಾಯಕ್ ಮುಂತಾದ ವಿಮರ್ಶಕರು ವ್ಯಕ್ತಪಡಿಸಿದರು. "ಚಿತ್ತಾಲರ ವಸ್ತು ಮನುಷ್ಯನ ಮೂಲಭೂತ ಅಸ್ತಿತ್ವಕ್ಕೆ ಸಂಬಂಧಪಟ್ಟಿದ್ದಾದರೂ ಈ ವಸ್ತುವನ್ನು ಕಲಾಕೃತಿಯಾಗಿಸಲು ಇವರು ತೋರಿಸುವ ಕಾಳಜಿ, ಇವರ ಬರವಣಿಗೆಯಲ್ಲಿ ವ್ಯಕ್ತವಾದಷ್ಟು ಸ್ಪಷ್ಟವಾಗಿ ವಸ್ತುವಿನ ಬಗ್ಗೆಯೇ ಇವರಿಗೆಷ್ಟು ಕಾಳಜಿಯಿದೆ ಎಂಬುದು ವ್ಯಕ್ತವಾಗುವುದಿಲ್ಲ. ಕಲಾಕೃತಿಯ ನಿರ್ಮಾಣಕ್ಕೆ ಪೂರ್ವದಲ್ಲಿ ಮನುಷ್ಯನ ಅಸ್ತಿತ್ವಕ್ಕೆ ಸಂಬಂಧಪಟ್ಟ ಪ್ರಶ್ನೆಗಳು ಇವರನ್ನು ಕಾಡಿರಬಹುದು; ಆದರೆ ಕಲಾಕೃತಿಯ ನಿರ್ಮಾಣದ ಹೊತ್ತಿನಲ್ಲಿ ಇವರು ಪ್ರಯತ್ನಿಸುವ ಹದ ಕೃತಿಯ ಶಿಲ್ಪಕ್ಕೆ ಮಾತ್ರ ಸಂಬಂದಿಸಿದ್ದು ಎನ್ನಿಸುತ್ತದೆ."[5] ಸುಮಾರು ಇಪ್ಪತ್ತು ವರ್ಷಗಳ ನಂತರ ನೋಡಿದಾಗ, ಈ ಅಭಿಪ್ರಾಯಗಳು ಚಿತ್ತಾಲರ ಬರವಣಿಗೆಯನ್ನು ಕುರಿತಾದ ಒಂದು ದೃಷ್ಟಿಕೋನವನ್ನೇ ರೂಪಿಸಿದ್ದು ಸೋಜಿಗವೆನ್ನಿಸುತ್ತದೆ. ಕಲಾವಿದನಾದವನು ಕಲಾಕೃತಿಯ ರೂಪದ ಬಗ್ಗೆ ಕಾಳಜಿ ತೋರಿಸುವುದೇ ಒಂದು ಅಪರಾಧವೆನ್ನುವ ಧ್ವನಿಯಿರುವ ಇಂಥ ವಿಮರ್ಶೆಗೆ ಚಿತ್ತಾಲರು ಸ್ಪಂದಿಸಿದ್ದು ತಮ್ಮ ತದನಂತರದ ಬರವಣಿಗೆಯಲ್ಲಿ. ಕಥೆಗಾರನ ಸ್ವಂತ ಜೀವನದ ಆಸಕ್ತಿಗಳಿಂದ ಹೊರತಾದ ಬದುಕಿನ ಬಗ್ಗೆಯೂ ಬರೆಯಬೇಕೆಂಬ ಚಿತ್ತಾಲರ ಕಾಳಜಿ ನವ್ಯಸಾಹಿತ್ಯದ ಸ್ವನಿಷ್ಠೆಯ ದಿನಗಳಲ್ಲಿ 'un involved' ಆಗಿ ಕಂಡಿತು. ಈ ಕಥೆಗಳು ತಕ್ಷಣದ ತುರ್ತಿನ ತೀವ್ರತೆಯನ್ನು ಬಿಟ್ಟುಕೊಟ್ಟು ಎಲ್ಲ ಕಾಲದ ಮಹತ್ವವನ್ನು ಅರಸುತ್ತಿದ್ದವು. ಆದ್ದರಿಂದಲೇ 'ಆಟ', 'ಛಲ', 'ಪಯಣ' ದಂಥ ಕಥೆಗಳು ಕನ್ನಡದ ಅತ್ಯುತ್ತಮ ಕಥೆಗಳ ಸಾಲಿನಲ್ಲಿ ನಿಲ್ಲುತ್ತವೆ.

1969ರಿಂದ 1980ರ ವರೆಗಿನ ಸುದೀರ್ಘ ಅವಧಿಯಲ್ಲಿ ಚಿತ್ತಾಲರ ಯಾವುದೇ ಸಂಕಲನ ಪ್ರಕಟವಾಗಲಿಲ್ಲ. 1980ರಲ್ಲಿ ಹೊರಬಂದ 'ಕತೆಯಾದಳು ಹುಡುಗಿ' ಆ ಕೊರತೆಯನ್ನು ಸಂಪೂರ್ಣವಾಗಿ ತುಂಬಿ ಕೊಟ್ಟಿತು. ಇದು ನಿಸ್ಸಂದೇಹವಾಗಿ ಕನ್ನಡದ ಅತ್ಯುತ್ತಮ ಕಥಾ ಸಂಕಲನಗಳಲ್ಲಿ ಒಂದು. ಎಪ್ಪತ್ತರ ದಶಕದಲ್ಲಿ ಕನ್ನಡ ಸಾಹಿತ್ಯ ಸನ್ನಿವೇಶದಲ್ಲಿ ಮೂಡಿಬಂದ ಹಲವಾರು ಸಾಹಿತ್ಯಕ, ಸಾಮಾಜಿಕ ಆಂದೋಲನಗಳನ್ನು ಆಸಕ್ತಿಯಿಂದ ಗಮನಿಸುತ್ತ ಬಂದ ಚಿತ್ತಾಲರು, ತಮ್ಮ ಸೃಜನಶೀಲ ಚೈತನ್ಯವನ್ನೇ ಪಣವಾಗಿ ಒಡ್ಡಿ ನಿರ್ಮಿಸಿದ ಕಥೆಗಳು ಇಲ್ಲಿವೆ. ಸಮಕಾಲೀನ ಸಮಾಜದ ಸಮಸ್ಯೆಗಳನ್ನು, ಸಾಹಿತಿಯಾದವನು ತನ್ನ ಮಾಧ್ಯಮದ ಅನನ್ಯತೆಯನ್ನು ಒಂದಿಷ್ಟೂ ಬಿಟ್ಟುಕೊಡದೆ, ಅದರ ಎಲ್ಲ ಸಂಕೀರ್ಣತೆಯೊಂದಿಗೆ ಗ್ರಹಿಸಿರುವುದಕ್ಕೆ ಇಲ್ಲಿ ನಿದರ್ಶನಗಳು ದೊರೆಯುತ್ತವೆ. ಅಲ್ಲದೆ ತಾನು ಕಂಡ ಲೋಕವನ್ನು ತನ್ನ ಓದುಗರೊಂದಿಗೆ ಹಂಚಿಕೊಳ್ಳಬೇಕೆಂಬ ತೀವ್ರ ಹಂಬಲದ ಫಲವಾಗಿ ಕಥೆಗಾರರು ಸಂವಹನದ ಸಮಸ್ಯೆಗಳನ್ನು ಬಿಡಿಸಿಕೊಳ್ಳುತ್ತಾರೆ. ಸಾಮಾನ್ಯ ಓದುಗನ ಗ್ರಹಿಕೆಗೆ ಅಗಮ್ಯವಾದುದೇನೂ ಈ ಕಥೆಗಳಲ್ಲಿ ಇರುವುದಿಲ್ಲ. ಆದರೆ 'ಸಮಷ್ಟಿಯ ನೋವಿನಲ್ಲಿ ಓದುಗರನ್ನೂ ಪಾಲುದಾರರನ್ನಾಗಿ ಮಾಡಿ ನೋವಿನ ಮೂಲಕವೇ ಕಾಣದ ಸತ್ಯಗಳ ದರ್ಶನ ಮಾಡಿಸುತ್ತದೆ .... ಬರೆಯುವ ಮೂಲಕವೇ ಕಥೆಗಾರ ತನ್ನ ವಿಮೋಚನೆಯನ್ನು ಕಂಡುಕೊಳ್ಳಬೇಕಾದಂತೆ ಈ ಕಥೆಗಳನ್ನು ಓದುವುದರ ಮೂಲಕ ಓದುಗರು ತಮ್ಮ ತಮ್ಮ ವಿಮೋಚನೆಯನ್ನು ಕಂಡುಕೊಳ್ಳುತ್ತಾ ಹೋಗುತ್ತಾರೆ.[5] ಹೀಗೆ ಓದುಗರ ಭಾವನಾತ್ಮಕ ತೊಡಗುವಿಕೆಯನ್ನು ಬಯಸುವ ಈ ಕಥೆಗಳು ಅವರ ಕುತೂಹಲದ ಅನುಭವದ ಸೀಮೆಗಳನ್ನು ವಿಸ್ತರಿಸುತ್ತವೆ. 'ಕತೆಯಾದಳು ಹುಡುಗಿ', 'ತ್ರಯೋದಶ ಪುರಾಣ', 'ಕಥೆಯಲ್ಲಿ ಬಂದಾತ ಮನೆಗೂ ಬಂದು ಕದ ತಟ್ಟಿದ' ಮುಂತಾದವು ಈ ಸಂಕಲನದ ಶ್ರೇಷ್ಠಕಥೆಗಳು. ಸಮುದ್ರದಲ್ಲಿ ತೇಲುವ ಕೊರಡಿನ ಚಲನವಲನಗಳ ಮೂಲಕವೇ ಇಡೀ ಸಮುದ್ರದ ಅಲ್ಲೋಲಕಲ್ಲೋಲಗಳನ್ನು ಪ್ರತಿಬಿಂಬಿಸುವಂತೆ. ವ್ಯಕ್ತಿಯೊಬ್ಬನ ಬದುಕಿನ ಆಗುಹೋಗುಗಳ ಮಾಧ್ಯಮದಿಂದ ಇಡೀ ಸಮಾಜದ ಆಗುಹೋಗುಗಳ ಬಗ್ಗೆ ಪ್ರತಿಕ್ರಿಯಿಸುವ ಇಲ್ಲಿನ ಕಥೆಗಳ ಮಹತ್ವವನ್ನು ಶಾಂತಿನಾಥ ದೇಸಾಯಿಯವರು ಹೀಗೆ ಹೇಳುತ್ತಾರೆ:

"ದಟ್ಟ ಅನುಭವಗಳ ಸೂಕ್ಷ್ಮಾತಿಸೂಕ್ಷ್ಮಗಳನ್ನು ಹಿಡಿಯಲು ತವಕಿಸುವ ಸಂಕೀರ್ಣತೆ ಹಾಗೂ ಜೀವಂತ ಭಾವನೆಗಳಲ್ಲಿ ಹುಟ್ಟಿಬರುವ ಸಾಂಕೇತಿಕತೆ, ಇವುಗಳ ಜೊತೆಗೆ ಚಿತ್ತಾಲರ ಆಸ್ಥೆಗಳ ಕ್ಷಿತಿಜವೂ ಅತ್ಯಂತ ವಿಸ್ತಾರಗೊಂಡದ್ದನ್ನು ಕಾಣಿಸುವ ಈ ಕಥೆಗಳು ವೈವಿಧ್ಯಪೂರ್ಣವಾದ, ಕೆಲವು ವಿಷಯಗಳಲ್ಲಿ ಕನ್ನಡಕ್ಕೇ ಹೊಸತೆನ್ನಿಸುವ ಪ್ರಯೋಗಗಳಾಗಿವೆ.

ಸಮಕಾಲೀನ ಬದುಕಿಗೆ-ಅದರ ಸಾಮಾಜಿಕ, ಸಾಂಸ್ಕೃತಿಕ ಸಮಸ್ಯೆಗಳ ಆಘಾತಗಳಿಗೆ-ತೀವ್ರವಾಗಿ ಪ್ರತಿಸ್ಪಂದಿಸುವ ಗತಿಶೀಲ ಸಂವೇದನೆ, ವೈಜ್ಞಾನಿಕ ಮಾನವತಾವಾದದಲ್ಲಿ ಆಳವಾಗಿ ಬೇರುಬಿಟ್ಟ ಜೀವನದೃಷ್ಟಿ ಮತ್ತು ಕಲಾಪ್ರಜ್ಞೆ-ಇವೆಲ್ಲಾ ಒಂದಾಗಿ ಕಟ್ಟಿದ ಈ ಕಾಲಕೋಶಗಳಲ್ಲಿ ತುಡಿಯುತ್ತಿದ್ದದ್ದು ಮಾನವೀ ಸ್ವಾತಂತ್ರ್ಯದ ಬಗೆಗಿನ, ಮಾನವೀ ಸಂಬಂಧ ಹಾಗೂ ಸೃಷ್ಟಿಶೀಲತೆಗಳ ಬಗೆಗಿನ ಜೀವಂತ ಪ್ರಜ್ಞೆ.

ಸೃಜನಶೀಲ ಕಲ್ಪಕತೆ ಹಾಗೂ ಚಿಂತನೆಗಳಲ್ಲಿ ದೃಷ್ಟಿಗೋಚರವಾದ ಮನುಷ್ಯ ಸಾಧ್ಯತೆಗಳಿಂದ ಪುಲಕಿತಗೊಂಡು ಜೊತೆಗೇ ಬದುಕಿನ ಅನಂತ ರಹಸ್ಯಗಳ ಬಗ್ಗೆ ಬೆರಗುತುಂಬಿದ ಪ್ರೀತಿಯುಳ್ಳ ಮನಸ್ಸೊಂದು ಇಲ್ಲಿ ಕಾರ್ಯಪ್ರವೃತ್ತವಾಗಿದೆ."[6]

ಕನ್ನಡ ಓದುಗರಿಂದ ಏಕಪ್ರಕಾರವಾದ ಪ್ರಶಂಸೆಯನ್ನು ಪಡೆದ ಈ ಸಂಕಲನದ ನಂತರ ಬಂದ 'ಬೇನ್ಯಾ' (1983) ಮತ್ತು 'ಸಿದ್ಧಾರ್ಥ'ಗಳು ಅದೇ ಹಾದಿಯಲ್ಲಿ ಮುನ್ನಡೆದವು; ಉಗುರು ಬೆಚ್ಚಗಿನ ಸ್ವಾಗತ ಪಡೆದವು. ಏಕೆಂದು ಹೇಳುವುದು ಬಹಳ ಕಷ್ಟ. ಕಥೆಗಾರನ ಕಾಣ್ಕೆಗೆ ಅನುಗುಣವಾಗಿ ದುಡಿಯುವ ಪಾತ್ರಗಳು ಪೂರ್ವನಿಶ್ಚಿತವಾದ ರೀತಿಯಲ್ಲೇ ವರ್ತಿಸಬೇಕಾಗುವುದರಿಂದ, ಸಹಜ ವಿಕಸನದ ಸ್ವಾತಂತ್ರ್ಯವನ್ನು ಕಳೆದುಕೊಂಡವೋ, ಚಿತ್ತಾಲರ ಮುಖ್ಯ ಥೀಮುಗಳ ಪುನರಾವರ್ತನೆಯಾಗುತ್ತಿದೆಯೆಂಬ ಭಾವನೆ ಓದುಗರಲ್ಲಿ ಮೂಡಿತೋ ಹೇಳುವುದು ಕಷ್ಟ. ಈ ಸಂಕಲನದ ಬಹುಪಾಲು ಕಥೆಗಳು ಬಹಳ ದೀರ್ಘವಾಗಿವೆಯೆಂಬ ಅಂಶವನ್ನು ಇಲ್ಲಿ ಗಮನಿಸಬಹುದು. ಸಂಕಲನಕ್ಕೆ ಹೆಸರು ಕೊಟ್ಟಿರುವ ಎರಡೂ ಕಥೆಗಳು ಕನ್ನಡದ ಅತ್ಯುತ್ತಮ ಕಥೆಗಳ ಗುಂಪಿಗೆ ಸೇರುತ್ತವೆ. ಚಿತ್ತಾಲರ ಕಥನ ಪ್ರತಿಭೆಯ ಎಲ್ಲ ಪರಿಕರಗಳೂ ಅಲ್ಲಿ ಕೆಲಸ ಮಾಡುತ್ತಿವೆ. ಮನುಕುಲದ ನೋವುಗಳಿಗೆ ಮದ್ದು

ಹುಡುಕುವ ಅವರ ಪ್ರಯತ್ನವು ಇನ್ನೊಂದು ಹೆಜ್ಜೆ ಮುಂದೆ ನಡೆದಿದೆಯೆಂದು ತೋರುತ್ತದೆ. ನಿಸರ್ಗದ ಬಗೆಗಿನ ಪ್ರೀತಿಯು, ದ್ವೇಷದ ಪ್ರವಾಹಕ್ಕೆ ಕಡಿವಾಣ ಹಾಕಬಲ್ಲುದೆಂಬ ಆಶಾವಾದ ಈ ಕಥೆಗಳ ತುಂಬ ಇದೆ. ಇವುಗಳ ಧೋರಣೆ ಕತ್ತಲಿನ ಬಗ್ಗೆ ಗೊಣಗುವುದಕ್ಕಿಂತ, ಒಂದು ಚಿಕ್ಕ ದೀಪ ಹಚ್ಚುವ ಕ್ರಿಯೆಯಲ್ಲಿ ನಂಬಿಕೆ ಇಟ್ಟವನದು. ಆದರೆ ಕಥೆಯ ಆಶಯಗಳ ಬಗೆಗೆ ಮತ್ತು ಅದರ ಶಿಲ್ಪದಲ್ಲಿ ಒಡಮೂಡಿರುವ ಕಲಾಪ್ರಜ್ಞೆಯ ಬಗ್ಗೆ ಅಪಾರ ಗೌರವ ತಳೆದಾಗಲೂ, ಅವು ತಮ್ಮ ವಾಚನೀಯತೆಯನ್ನು ಕಳೆದುಕೊಳ್ಳುತ್ತಿವೆ ಯೇನೋ ಎಂಬ ಅನುಮಾನ ಮೂಡುತ್ತದೆ. ಈ ಕಥೆಗಳ ಓದಿನ ಹಂತದಲ್ಲಿ ಒದಗುವ 'ಅತಿಬಿಗಿತ'ದ (over tense) ಸ್ಥಿತಿಗೆ ತಮ್ಮನ್ನು ಒಡ್ಡಿಕೊಳ್ಳುವ ಉತ್ಸುಕತೆಯನ್ನು ಅನೇಕ ಓದುಗರು ತೋರಿಸುತ್ತಿಲ್ಲ. ಆದರೆ ಅವರ ಕಥೆಗಳ ಜೀವನದರ್ಶನವು ಯಾವುದೇ ಓದುಗನು ಕಳೆದುಕೊಳ್ಳಬಾರದಷ್ಟು ಮಹತ್ವಪೂರ್ಣವಾಗಿರುವುದರಿಂದ ಅವುಗಳು ಇಂದಲ್ಲ ನಾಳೆ ಓದುಗರನ್ನು ಗೆಲ್ಲುತ್ತವೆಂಬ ಆಶಾಚಿಂತನೆಯೊಂದಿಗೆ ಈ ಪರಿಶೀಲನೆಯನ್ನು ಮುಗಿಸ ಬಹುದು. ಅದು ಏನೇ ಆದರೂ ಈಗಾಗಲೇ ಯಾವುದೇ ಕಥೆಗಾರನು ಹೆಮ್ಮೆ ಪಡಬಹುದಾದಷ್ಟು ಶ್ರೇಷ್ಠ ಕಥೆಗಳನ್ನು ಚಿತ್ತಾಲರು ರಚಿಸಿದ್ದಾರೆ.

### 3

ಚಿತ್ತಾಲರು ಇದುವರೆಗೆ ನಾಲ್ಕು ಕಾದಂಬರಿಗಳನ್ನು ಬರೆದಿದ್ದಾರೆ. ಅವು ಕ್ರಮವಾಗಿ 'ಮೂರು ದಾರಿಗಳು' (1968) 'ಶಿಕಾರಿ' (1979), 'ಛೇದ' (1985) ಮತ್ತು 'ಪುರುಷೋತ್ತಮ' (1990). ಅವರ ಕಥೆಗಳ ಜಗತ್ತಿಗೂ ಕಾದಂಬರಿಗಳ ಜಗತ್ತಿಗೂ ಅವಿನಾಸಂಬಂಧವಿದೆ. 'ಛೇದ'ವನ್ನುಳಿದ ಮೂರು ಕಾದಂಬರಿ ಗಳೂ ಹನೇಹಳ್ಳಿಯ ಒಡಲಿನಿಂದ ಮೂಡಿಬಂದ ಪಾತ್ರಗಳನ್ನು ತಮ್ಮ ಕೇಂದ್ರದಲ್ಲಿ ಹೊಂದಿವೆ. ಕೆಲವು ವಿಮರ್ಶಕರು ಗಮನಿಸಿರುವಂತೆ ಅವರು ಕಾದಂಬರಿಯೊಂದರ ರಚನೆಗೆ ಸಮಕಾಲಿಕವಾಗಿ ಬರೆದಿರುವ ಕಥೆಗಳಲ್ಲೂ ಅದೇ ಪಾತ್ರಗಳು ಹಾಗೂ ಪರಿಸರಗಳು ಕಾಣಿಸಿಕೊಳ್ಳುತ್ತವೆ. ಕಥೆಗಳು ಕಾದಂಬರಿಯ ರಚನೆಗೆ ಅಗತ್ಯವಾದ 'ರಂಗತಾಲೀಮು'ಗಳೇನೋ ಎಂಬ ಭಾವನೆಯನ್ನು ಈ ಸಾಮ್ಯ ಮೂಡಿಸುತ್ತದೆ. ಆದರೆ ಪ್ರತಿಯೊಂದು ಕಾದಂಬರಿಯೂ ಚಿತ್ತಾಲರ ಸಾಹಿತ್ಯ ವಿಕಸನದ ಹಾದಿಯಲ್ಲಿ ಮಾತ್ರವಲ್ಲ ಕನ್ನಡ ಕಾದಂಬರಿಗಳ ಇತಿಹಾಸದ ಸಂದರ್ಭದಲ್ಲಿಯೂ ತೀರ ಮಹತ್ವದ ಕೃತಿಗಳಾಗಿವೆ.

'ಮೂರು ದಾರಿಗಳು' ಓದುಗರ ಮನಸ್ಸಿನಲ್ಲಿ ಬಹುಕಾಲ ಉಳಿಯುವ ಕಾದಂಬರಿ. ಕೃತಿಯ ನಾಯಕಿಯಾದ ಹದಿಹರೆಯದ ನಿರ್ಮಲೆ, ತನ್ನೊಳಗಿ ನಿಂದ ಚಿಮ್ಮುವ ಜೀವಚೈತನ್ಯಕ್ಕೆ ಸರಿಯಾದ ಹೊರದಾರಿಗಳನ್ನು ಪಡೆಯ ಲಾರದೆ, ಸುತ್ತಲಿನ 'ಚಾಡಿಯ ಜಗತ್ತಿ'ಗೆ ತೋರಿಸಿದ ಪ್ರತಿಭಟನೆಯೋ ಎನ್ನುವಂತೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಜೀವನದಲ್ಲಿ ಮೂಡಿದ ಸಮಸ್ಯೆಯೊಂದಕ್ಕೆ ಮೂರು ಪಾತ್ರಗಳು ಕಂಡುಕೊಳ್ಳುವ ಭೀತಿ, ಪ್ರೀತಿ ಮತ್ತು ಬಂಡಾಯ (ಆತ್ಮನಾಶ)ಗಳೆಂಬ ಮೂರುದಾರಿಗಳನ್ನು ಕಟ್ಟಿಕೊಡುವ ಕಾದಂಬರಿಯು ಪಾತ್ರಗಳ ಹೊರ-ಒಳರಚನೆ, ವಾತಾವರಣ ಸೃಷ್ಟಿ ಹಾಗೂ ಭಾಷಾ ಪ್ರಯೋಗಗಳೆಂಬ ಮೂರು ಹಂತಗಳ ಜೀವಂತಿಕೆ ಮತ್ತು ವಾಸ್ತವಿಕತೆಗಳ ಮೂಲಕ ಯಶಸ್ಸು ಪಡೆಯುತ್ತದೆ. ಸ್ಫೋಟಕವಾದುದನ್ನು ಚಿತ್ರಿಸುವಾಗಲೂ ಅತ್ಯಂತ ಸಂಯಮದಿಂದ ವರ್ತಿಸುವ ಚಿತ್ತಾಲರ ಕಥನಪ್ರತಿಭೆಯು ಈ ಕಾದಂಬರಿಯ ಯಶಸ್ಸಿಗೆ ಕಾರಣವಾಗಿದೆ.

ಈಚಿನ ಹಲವು ವರ್ಷಗಳಲ್ಲಿ ಸಮಪ್ರಮಾಣದ ಜನಪ್ರಿಯತೆ ಮತ್ತು ವಿಮರ್ಶಕ ಮನ್ನಣೆಗಳನ್ನು ಸಂಪಾದಿಸಿದ ಕೃತಿಗಳಲ್ಲಿ 'ಶಿಕಾರಿ' ಮುಖ್ಯ ವಾದುದು. ಡಾ. ಜಿ.ಎಸ್. ಆಮೂರ್ ಅವರು ಕನ್ನಡದ ಹತ್ತು ಅತ್ಯುತ್ತಮ ಕಾದಂಬರಿಗಳ ಪಟ್ಟಿಯಲ್ಲಿ ಇದನ್ನು ಸೇರಿಸುತ್ತಾ ಅದರ ಹಲವು ಮಹತ್ವದ ಗುಣಗಳ ಕಡೆಗೆ ನಮ್ಮ ಗಮನ ಸೆಳೆಯುತ್ತಾರೆ. 1980ರ ಸುಮಾರಿನಲ್ಲಿ ಬಂದ ಅವರ ಕೆಲವು ಕಥೆಗಳ ಹಾಗೆ ಈ ಕಾದಂಬರಿ ಕೂಡ, ಕನ್ನಡದ ಅಂದಿನ ಸಂದರ್ಭದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಸನ್ನಿವೇಶಕ್ಕೆ ಸೃಜನಶೀಲ ಪ್ರತಿಕ್ರಿಯೆಯೆನ್ನುವಂತೆ ಮೂಡಿಬಂದಿದೆ. ಅಷ್ಟೇ ಅಲ್ಲ ಆಧುನಿಕ ಮಾನವನ ಎಚ್ಚರದ ಕ್ಷಣಗಳೆಲ್ಲವನ್ನು ಆತಂಕಮಯವಾಗಿ, ಭಯಗ್ರಸ್ತವಾಗಿ ಮಾಡಿಬಿಟ್ಟಿರುವ ಕ್ರೂರಶಕ್ತಿಗಳ ಅನ್ವೇಷಣೆ ಹಾಗೂ ಅವುಗಳೊಂದಿಗಿನ ಧೀರ ಮುಖಾಮುಖಿಯಲ್ಲಿ ಕೂಡ ಈ ಕೃತಿ ನಿರತವಾಗಿದೆ. ನಗರಜೀವಿಯೊಬ್ಬನ-ಅವನಿಗೂ ನಿಗೂಢವಾಗಿರುವ-ತಳಮಳಗಳಿಗೆ ಕನ್ನಡಿ ಹಿಡಿಯುವ ಕೆಲಸ ಇಲ್ಲಿ ನಡೆದಿದೆ. ಕಾದಂಬರಿಯ ನಾಯಕನಾದ ನಾಗಪ್ಪನಲ್ಲಿ ಆಗುವ ಬೆಳವಣಿಗೆಯು ಪ್ರತಿಯೊಬ್ಬ ಮನುಷ್ಯನಲ್ಲೂ ಸಾಧ್ಯವಾದ ಮಾಗುವಿಕೆಗೆ ಒಡ್ಡಿದ ಸಂಕೇತ ವಾಗುತ್ತದೆ. ಚಿತ್ತಾಲರೇ ಹೇಳುವಂತೆ :

"ನಾವು 'ಅಸಮಗ್ರತೆ'ಯಿಂದ 'ಸಮಗ್ರತೆ'ಯ ಕಡೆಗೆ, ಅಪ್ರಬುದ್ಧತೆ ಯಿಂದ ಪ್ರಬುದ್ಧತೆಯ ಕಡೆಗೆ ಸಾಗುವ, ಸ್ವಲ್ಪದರಲ್ಲಿ ಮನುಷ್ಯರಾಗಿ 'ಮಾಗುವ' ಪ್ರಕ್ರಿಯೆಗೆ 'ಶಿಕಾರಿ' ರೂಪಕವಾಗಿದೆ. ಇದು ನೇರವಾಗಿ ಒಂದು ನಿರ್ದಿಷ್ಟ ಸಮಾಜದ ಒಳಗೇ ನಡೆಯುವ ಕ್ರಿಯೆಯಾದ್ದರಿಂದ ಅದಕ್ಕೆ ನೆರವಾಗುವ ಇಲ್ಲವೇ ಅಡ್ಡಬರುವ ಶಕ್ತಿಯಾಗಿ, ಅದರ ಅಂತಿಮ ರೂಪವನ್ನು ನಿಶ್ಚಯಿಸುವ ಕಾರಣವಾಗಿ ಈ ಸಮಾಜದ ಸ್ವರೂಪವೂ ನಮಗೆ ಗೊತ್ತಿರುತ್ತದೆ".[7]

ತನ್ನ ಅಂತರ್ವ್ಯಕ್ತಿ ಸಂಬಂಧಗಳ ಹುಸಿತವನ್ನು ಒಂದೊಂದಾಗಿ ಕಂಡು ಕೊಳ್ಳುತ್ತಾ, ಪಲಾಯನದ ದಾರಿಗಳೆಲ್ಲ ಬಂದಾದ ಸನ್ನಿವೇಶದಲ್ಲಿ ಅನಿ ವಾರ್ಯವಾಗಿ ತೊಡಗಿಸಿಕೊಳ್ಳುವ ಸಾಹಸ ಕ್ರಿಯೆಗಳಲ್ಲೇ ಹೊಸ ಚೈತನ್ಯವನ್ನು ಸಂಪಾದಿಸುತ್ತ ಬೆಳೆಯುವ ನಾಗಪ್ಪ ನಮಗೆಲ್ಲರಿಗೂ ನಮ್ಮದೇ ಬದುಕಿನಲ್ಲಿ ಸಂಭಾವ್ಯ ಮಾದರಿಯಾಗಿ ಮೈದಳೆಯುತ್ತಾನೆ.

ಚಿತ್ತಾಲರ ಒಟ್ಟು ಕಥಾ ಸಾಹಿತ್ಯದ ಬೆಳವಣಿಗೆಯ ನೆಲೆಯಿಂದ ನೋಡಿ ದಾಗ ಹನೇಹಳ್ಳಿ ಮತ್ತು ಮುಂಬಯಿಗಳ ಮುಖಾಮುಖಿ ನಡೆಯುವ ಮೊದಲ ಕಾದಂಬರಿಯಾಗಿ ಶಿಕಾರಿ ನಿಲ್ಲುತ್ತದೆ. ಈ ಎರಡು ಸ್ಥಳಗಳಿಗೆ ಸಾಂಕೇತಿಕ ಮಹತ್ವವಿದೆಯೆಂಬ ಮಾತನ್ನು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ.

'ಛೇದ'ದ ಹರಹು ಶಿಕಾರಿಯಷ್ಟು ದೊಡ್ಡದಲ್ಲವಾದರೂ ಅದರಲ್ಲಿ ಚಿತ್ತಾಲರ ಜೀವನಗ್ರಹಿಕೆಗಳ ಮುಂದಿನ ಹಂತವಿದೆ. ಈ ನಿರಂತರವಾದ ಬೆಳವಣಿಗೆ ಚಿತ್ತಾಲರ ಕಥಾಸಾಹಿತ್ಯದ ಪ್ರಮುಖ ಲಕ್ಷಣ. ಕೆಲವೊಮ್ಮೆ ನಿರೂಪಣಾ ವಿಧಾನದ ಏಕತಾನತೆಯಿಂದ ಮಸುಕಾಗಿ ಬಿಡುವ ಈ ಬೆಳವಣಿಗೆ ಯನ್ನು ಗುರುತಿಸಲು ಅವಧಾನ ಅಗತ್ಯ. ತನ್ನನ್ನು ಬಿಟ್ಟು ಉಳಿದೆಲ್ಲರನ್ನೂ ಸಂಶಯದ ಕಣ್ಣುಗಳಿಂದಲೇ ನೋಡಬೇಕಾಗಿ ಬರುವ ಶಿಕಾರಿಯ ಸ್ಪರ್ಧಾತ್ಮಕ ಜಗತ್ತಿನಿಂದ, ಉಳಿದವರೂ ತನ್ನಂತೆಯೇ 'ಬಲಿ' ಯಾದವರಿರಬಹುದೆಂದು ಗ್ರಹಿಸುವ ಪರಿಪಕ್ವತೆ ಛೇದದ ಹಲವು ಪಾತ್ರಗಳಲ್ಲಿ ಕಂಡುಬರುತ್ತದೆ. ಈ ತಿಳಿವಳಿಕೆಯ ಫಲವಾದ ಪರಸ್ಪರ ಪ್ರೀತಿಯ ಅನಿವಾರ್ಯತೆ ಸಿದ್ಧಾರ್ಥ, ಪುರುಷೋತ್ತಮಗಳಲ್ಲಿ ಸುವ್ಯಕ್ತವಾಗಿದೆ. ಈ ಅರ್ಥದಲ್ಲಿ 'ಛೇದ'ವು ಉಳಿದೆರಡು ಕಾದಂಬರಿಗಳ ನಡುವಿನ ಮಹತ್ವದ ಕೊಂಡಿಯಾಗಿದೆ. ಈ

ಕಾದಂಬರಿಯನ್ನು ಕುರಿತ ಮಹತ್ವದ ಲೇಖನ ವೊಂದರಲ್ಲಿ ಟಿ.ಪಿ. ಅಶೋಕ್ ಅವರು ಹೇಳುವಂತೆ:

'ಭೇದ' ಚಿತ್ತಾಲರ ಕಾದಂಬರಿಗಳ ಸಂದರ್ಭದಲ್ಲಿ ಮಾತ್ರವಲ್ಲ, ಒಟ್ಟು ಅವರ ಸೃಜನಶೀಲ ಬದುಕಿನ ಸಂದರ್ಭದಲ್ಲಿ ಒಂದು ಅರ್ಥಪೂರ್ಣ ಮುಂದುವರೆದ ಘಟ್ಟವನ್ನು ಸಾಂಕೇತಿಸುತ್ತದೆ. ಇಲ್ಲಿ ಬರುವ ಪಾತ್ರಗಳು ಕಥೆ ಬರೆಯುವ ಇಲ್ಲವೆ ಕಥೆ ಹೇಳುವ ಅಭಿವ್ಯಕ್ತಿಯ ಒಂದು ವಿಶಿಷ್ಟ ಕ್ರಮದ ಸೌಂದರ್ಯಾತ್ಮಕ ಪ್ರಶ್ನೆಗಳನ್ನೇನೂ ಎದುರಿಸುವುದಿಲ್ಲ. ಯಾವುದೋ ಸಂದರ್ಭದಲ್ಲಿ ಮುಖಾಮುಖಿಯಾಗುವ ಇವರು ತಾವು ಯಾವುದೋ ರಹಸ್ಯದ ಬೆನ್ನಟ್ಟಿ ಹೋಗುತ್ತಿದ್ದೇವೆಂದು ಅಂದುಕೊಳ್ಳುತ್ತಿರುವ ಪರಿಕ್ರಮದಲ್ಲೇ ಇತರರನ್ನು ಅರ್ಥಮಾಡಿಕೊಳ್ಳುವ, ಇತರರಿಗೆ ಅರ್ಥ ಮಾಡಿಸುವ ಪ್ರಾಥಮಿಕ ಹಂತದಲ್ಲೇ ಎಡವಿ ಬೀಳುತ್ತಿರುವುದನ್ನೂ ಗ್ರಹಿಸುತ್ತ ಹೋಗುತ್ತಾರೆ."[8] ಎಂದರೆ ಭೇದವಿರುವುದು ಸಂವಹನವೇ ಸಾಧ್ಯವಾಗದಂಥ ಪರಿಸ್ಥಿತಿಯ ಫಲವಾದ ಮಾನವೀ ಸಂಬಂಧಗಳಲ್ಲಿ. ನಾವು ಬದುಕಿರುವ ಸಮಾಜದಲ್ಲಿರುವ, ನಮ್ಮ ಉಸಿರು ಕಟ್ಟಿಸುತ್ತಿದ್ದರೂ ನಮಗೇ ನಿಗೂಢವಾಗಿ ಉಳಿದಿರುವ ಹಲವು ಸತ್ಯಗಳನ್ನು ಈ ಕಾದಂಬರಿ ಇನ್ನಿಲ್ಲವೆನ್ನುವಷ್ಟು ಚೆನ್ನಾಗಿ ಮೂಡಿಸುತ್ತದೆ. ತಾನು ಯಾವ ತಲ್ಲಣ ತುಂಬಿದ ಜೀವನಸ್ಥಿತಿಗಳ ಬಗ್ಗೆ ಹೇಳುತ್ತಿದೆಯೋ ಅಂಥದೇ ತಲ್ಲಣತುಂಬಿದ ಮನಃಸ್ಥಿತಿಯನ್ನು ಓದುಗನಲ್ಲಿ ಉಂಟು ಮಾಡಲು ಸಮರ್ಥವಾದ ಶಿಲ್ಪವನ್ನು ಚಿತ್ತಾಲರು ಇಲ್ಲಿ ಕಂಡುಕೊಂಡಿದ್ದಾರೆ. ಇಂಥ ಕೃತಿಗಳನ್ನು relaxed ಆಗಿ, ರೋಚಕವಾದ ಅನುಭವಗಳಿಗೆ ಒಡ್ಡಿಕೊಂಡು ಓದಲು ಸಾಧ್ಯವಿಲ್ಲ. ಇಂಥ ಕೃತಿಗಳು ತಾವು ಹುಟ್ಟಿಸಿದ ವ್ಯಗ್ರತೆಯನ್ನು ಕ್ರಮೇಣ ತಾವೇ ನಿರಾಳವಾಗಿಸುವ ಕೆಲಸ ಮಾಡುತ್ತವೆ. (ಪುರುಷೋತ್ತಮ, ಸಿದ್ಧಾರ್ಥಗಳಂತೆ) ಅಂಥ ನಿರಾಳ ಅನಗತ್ಯವೆನಿಸಿದರೆ ಬಿಗಿ ಸಡಿಲದ ಸ್ಥಿತಿಯಲ್ಲೇ ಕೃತಿ ಮುಕ್ತಾಯವಾಗುತ್ತದೆ. ('ಭೇದ', 'ಶಿಕಾರಿ'ಗಳಂತೆ)

'ಪುರುಷೋತ್ತಮ' ಚಿತ್ತಾಲರ ಇತ್ತೀಚಿನ ಬೃಹತ್ ಕಾದಂಬರಿ. ಅವರ ಪ್ರಮುಖ ಕಾಳಜಿಗಳೆಲ್ಲ ಏಕತ್ರ ಸಂಘಟಿಸಿರುವ, ಅವರ ಸೃಜನಶೀಲ ಚೈತನ್ಯವು ಮಡುಗಟ್ಟಿರುವ, ಮಹತ್ವಾಕಾಂಕ್ಷೆಯ ಕೃತಿಯಿದು. ಓದುಗರ ಮತ್ತು ವಿಮರ್ಶಕರ ಪ್ರತಿಕ್ರಿಯೆಯನ್ನು ಇನ್ನೂ ಪಡೆಯಬೇಕಾಗಿರುವ ಈ ಕಾದಂಬರಿ ಹಲವು ನೆಲೆಗಳನ್ನು ಒಳಗೊಂಡಿದೆ. ಮೊದಲನೆಯದಾಗಿ ತನ್ನ ಮನೆಯನ್ನು ಪ್ರೀತಿಸುವ ಮನುಷ್ಯನೊಬ್ಬ ಆ ಪ್ರೀತಿಯು ಕೊಟ್ಟ ಶಕ್ತಿಯಿಂದಲೇ, ಆಧುನಿಕ ಜಗತ್ತಿನ ವಿಕೃತಿಯ ಅಂತಿಮ ಪ್ರತಿಮೆಯಾದ ಹಣವನ್ನು ನಿರಾಕರಿಸುವ ಧೈರ್ಯ ತೋರಿಸುತ್ತಾನೆ. ಮನುಷ್ಯನ ಬದುಕಿನ ಸಾರ್ಥಕತೆಯಿರುವುದು ಯಾವ ಯಾವುದೋ ಕಾರಣಗಳಿಂದ ಪ್ರೀತಿಗೆ ಎರವಾದ ಜೀವಿಗಳಿಗೆ ಪ್ರೀತಿಯನ್ನು ನೀಡಿ ಅವುಗಳ ಬಾಳನ್ನು ತುಂಬುವುದರಲ್ಲಿಯೇ ಎನ್ನುವುದು ಅವನು ಕಂಡುಕೊಂಡ ಸತ್ಯದ ಇನ್ನೊಂದು ಅಂಗ. ಇಂಥದೊಂದು ಬದುಕಿನ ಕಡೆಗೆ ಮುಖಮಾಡಿ ಹೊರಟವನಿಗೆ, ಅಹಂ ಅನ್ನು ಪೋಷಿಸುವಂಥ ಐಡೆಂಟಿಟಿಯ ಪ್ರಶ್ನೆಗಳೆಲ್ಲ ಗೌಣವಾಗಿ ಬಿಡುತ್ತವೆ. ನಾನು ಯಾರು ಎನ್ನುವುದಕ್ಕಿಂಥ ನಾನು ಏನು ಮಾಡಬೇಕು ಎನ್ನುವುದು ಹೆಚ್ಚು ಮುಖ್ಯವಾದಾಗ ಬದುಕನ್ನು ನೋಡುವ ರೀತಿಯೇ ಬೇರೆಯಾಗಿ ಬಿಡುತ್ತದೆ. ಈ ಕಾದಂಬರಿಯ ನಾಯಕ ಪುರುಷೋತ್ತಮ, ಶಿಕಾರಿಯ ನಾಗಪ್ಪನ ಮುಂದುವರಿಕೆಯಂತೆ ಭಾಸವಾಗುತ್ತಾನೆ. ಕೃತಿಯ ಮೊದಲಿನಿಂದಲೂ ಧೀರನೂ ಉದಾತ್ತನೂ ಆದ ಇವನು ತನ್ನ ನೋವುಗಳಲ್ಲಿ ಮಗ್ನನಾಗದೆ ಇತರರ ವಿಷಾದಗಳನ್ನು ಕಡಿಮೆ ಮಾಡುವುದರಲ್ಲಿ ಆಸಕ್ತನಾಗಿರುತ್ತಾನೆ. ತನ್ನದೇ ಬದುಕಿನ ಸಿಕ್ಕುಗಳನ್ನು, ತನ್ನ ಹಾಗೆಯೇ ಉದಾತ್ತರಾದ ಸದಾಶಿವ, ಸಾವಿತ್ರಿಯರ ನೆರವಿನಿಂದ ಬಿಡಿಸಿಕೊಳ್ಳುತ್ತಾನೆ. ಮನುಷ್ಯ ಜೀವನದಲ್ಲಿ ಕ್ರೌರ್ಯಕ್ಕೆ ಒಂದು ಸಾತತ್ಯ ಇರುವಂತೆ ಒಳ್ಳೆಯತನಕ್ಕೂ ಒಂದು ಸಾತತ್ಯ ಇದೆಯೆನ್ನುವ ಸಂಗತಿ ಮುತ್ತಜ್ಜನಿಂದ ಸರಸ್ವತಿಯವರೆಗೆ ಹರಡಿಕೊಂಡಿರುವ ಉದಾತ್ತತೆಯಿಂದ ಸ್ಪಷ್ಟವಾಗುತ್ತದೆ.

ಈ ಕಾದಂಬರಿಯ ಶಿಲ್ಪ ಹಿಂದಿನ ಕಾದಂಬರಿಗಳಿಗಿಂತ ಭಿನ್ನವಾದುದು. ಇದು ಮಹಾಕಾವ್ಯದ ಹಾಗೆ, ಮುಖ್ಯ ಕಥೆಗೆ ಅಂಟಿಯೂ ಅಂಟದಂಥ ಹಲವಾರು ಉಪಾಖ್ಯಾನಗಳನ್ನು ತನ್ನೊಳಗೆ ಅಡಕಮಾಡಿಕೊಂಡಿದೆ. ಮೇಲುನೋಟಕ್ಕೆ ಅನಿವಾರ್ಯವೆನ್ನಿಸದ ಈ ಹಲವು ಕಥೆಗಳು ಒಂದನ್ನು ಇನ್ನೊಂದು ಬೆಳಗಿಸುತ್ತಾ ಎಲ್ಲದರ ಅರ್ಥಪೂರ್ಣತೆಯನ್ನು ಹೆಚ್ಚಿಸುತ್ತವೆ. ಉದಾಹರಣೆಗೆ ಹೇಮಾ, ಸೀತೆ, ನೀಲಾ, ಕಲ್ಯಾಣಿ, ಎನೆಟ, ಕಮಲಾವತಿ ಹೀಗೆಯೇ ಬರುವ ಹತ್ತು ಹಲವು ಸ್ತ್ರೀ ಪಾತ್ರಗಳು ಸ್ವತಃ ತಾವೇ ಒಂದು ಕಾದಂಬರಿಯ ಕೇಂದ್ರವಾಗುವ ಸಾಧ್ಯತೆಗಳನ್ನು ಪಡೆದಿದ್ದರೂ ಮೂಲವಸ್ತುವಿಗೆ ಪೋಷಕರಾಗುತ್ತಾರೆ. ಮೇಲುನೋಟಕ್ಕೆ ಪುರುಷೋತ್ತಮನೇ ಕಾದಂಬರಿಯ ಪ್ರಧಾನ ಪಾತ್ರವೆಂದು ಭಾಸವಾದರೂ ಮತ್ತೊಂದು ನೆಲೆಯಲ್ಲಿ ಇದು ಹಲವು ನಾಯಕ ನಾಯಕಿಯರನ್ನು ಹೊಂದಿದೆ. ಎಲ್ಲರೂ ವಿಕಸನದ, ಪತನದ ಬೇರೆ ಬೇರೆ ಹಂತಗಳಲ್ಲಿ ಇರುವವರು. ಹೀಗಾಗಿ 'ಪುರುಷೋತ್ತಮ' ಒಂದು ಸಮುದಾಯದ ಕಥೆ. ವ್ಯಕ್ತಿ ಕೇಂದ್ರದಿಂದ ಹೊರಟು ಸಮಾಜದ ಗತಿ-ಸ್ಥಿತಿಗಳನ್ನು ತನ್ನ ತೆಕ್ಕೆಗೆ ತಂದುಕೊಳ್ಳುವ ಕಥೆ.

ಚಿತ್ತಾಲರ ಕಾದಂಬರಿಗಳ ಪರಿಶೀಲನೆಯ ನಂತರ ಅವರ ಇನ್ನೊಂದು ವಿಶಿಷ್ಟ ರೀತಿಯ ಬಗ್ಗೆ ಗಮನ ಹರಿಸಬೇಕು. ಅದು 1981ರಲ್ಲಿ ಹೊರಬಂದ 'ಸಾಹಿತ್ಯ, ಸೃಜನಶೀಲತೆ ಮತ್ತು ನಾನು' ಎನ್ನುವ 'ಕತೆಯಿಂದ ಪ್ರಬಂಧ' ಸಂಕಲನ. ಸೃಜನಶೀಲನೊಬ್ಬ ಒಂದು ಕಡೆ ತನ್ನ ಅಂತರಂಗದಲ್ಲಿನ ನಿಗೂಢ ಸೃಷ್ಟಿ ಪ್ರಕ್ರಿಯೆಯ ಕಡೆಗೆ ಮುಖ ಮಾಡಿ, ಇನ್ನೊಂದು ಕಡೆ ತನ್ನ ಸಮಕಾಲೀನ ಸಾಹಿತ್ಯ ಸನ್ನಿವೇಶದ ನಾಡಿಬಡಿತಗಳನ್ನು ನಿರ್ಮಮವಾಗಿ ಪರಿಶೀಲಿಸುತ್ತಾ ಪಡೆದಿರುವ ಹಲವು ಒಳನೋಟಗಳನ್ನು ಇಲ್ಲಿ ನೋಡಬಹುದು. ಬೌದ್ಧಿಕವಾದ ಬರವಣಿಗೆಯಲ್ಲಿ ಹುಟ್ಟಬಹುದಾದ ವಾಚಾಳಿತನ ಅಥವಾ ಅತಿ ಆತ್ಮವಿಶ್ವಾಸಗಳನ್ನು ಕಡಿಮೆ ಮಾಡಲೆಂದು ಬಳಸಿರುವ ಅನುಭವನಿಷ್ಠ ನಿರೂಪಣಾ ವಿಧಾನ ಬರವಣಿಗೆಗೆ ಹೊಳಪನ್ನು ನೀಡಿದೆ. ಪುಸ್ತಕದ ಎರಡನೆಯ ಭಾಗದಲ್ಲಿ ಹೆಚ್ಚು ವಿಮರ್ಶಾತ್ಮಕವಾದ ಲೇಖನಗಳಿವೆ. ಇಲ್ಲಿಯೂ ಸಾಂಪ್ರದಾಯಿಕ ಅರ್ಥದ ವಿಮರ್ಶೆಯ ಬದಲಾಗಿ, ಇಡೀ ಪರಿಸರಕ್ಕೆ ಹೊಸ ಆಯಾಮಗಳನ್ನು ಕೊಡಬಲ್ಲ ಬೀಜರೂಪದ ವಿಚಾರಗಳನ್ನು ನೀಡಿದ್ದಾರೆ. ಈ ಪುಸ್ತಕದ ರಚನೆ ಮತ್ತು ವಸ್ತುವನ್ನು ಕುರಿತ ಕೆ.ವಿ. ನಾರಾಯಣ ಅವರ ಅನಿಸಿಕೆಗಳನ್ನು ಇಲ್ಲಿ ಉಲ್ಲೇಖಿಸಬಹುದು:

"ಈ ಟಿಪ್ಪಣಿಗಳಲ್ಲಿ ಲೇಖಕರು ಮುಖ್ಯವಾಗಿ ಸಾಹಿತ್ಯದ ಜೀವನ ಸಂಯೋಜನಾ ಸಾಮರ್ಥ್ಯವನ್ನೂ, ಅದರ ಸಾವಯವ ಸಂಘಟನಾ ನೆಲೆಗಳನ್ನು, ಅನೂಹ್ಯ ಸಂಬಂಧ ರಚನಾ ಕೌಶಲವನ್ನು, ಸಂಬಂಧರಹಿತ ಘಟನೆಗಳ ಮುಖಾಮುಖಿಯಲ್ಲಿ ಹೊಸ ಸತ್ಯಗಳ ಹೊಳಹುಗಳನ್ನು ನೀಡುವ ಶಕ್ತಿಯನ್ನು ವಿವರಿಸಿದ್ದಾರೆ. ಈ ವಿವರಣೆಯೂ ರೋಚಕವೂ ಹೃದ್ಯವೂ ಆಗುವಂತೆ ನೋಡಿಕೊಂಡಿದ್ದಾರೆ, ಸಾಹಿತ್ಯ ರಚನೆ ಕೇವಲ ಬುದ್ಧಿಪ್ರಧಾನ ಚಟುವಟಿಕೆ ಎಂಬುದು ಹೊರಕವಚ ಮಾತ್ರವಾಗಿದ್ದು, ಒಳಗೆ ಅಡಗಿರುವ ತರ್ಕವಿದೂರ ಸಂಗತಿಗಳ ಪರಿಚಯ ಇಲ್ಲಿ ಸಾಧ್ಯ.... ಸಾಮಾನ್ಯವಾಗಿ

ಸಾಹಿತ್ಯದ ಅಧ್ಯಯನ ಅನುಸರಿಸುವ ನೆಲೆಗಳಿಗಿಂತ ಭಿನ್ನವಾದ ಆದರೆ ಅಧ್ಯಯನಕ್ಕೆ ಪೂರಕವಾಗಿದ್ದು ಅದರ ವ್ಯಾಪ್ತಿಯನ್ನು ಹೆಚ್ಚಿಸಬಲ್ಲ ದೃಷ್ಟಿಕೋನಗಳು ಇಲ್ಲಿ ಲಭಿಸುತ್ತವೆ. ಇದರಿಂದ ಸಾಹಿತ್ಯ ರಚನೆ ಮತ್ತು ಅದರ ಸಂವಹನವೆಂಬ ಚಟುವಟಿಕೆಯನ್ನು ಒಟ್ಟಾರೆ ಮಾನವನ ಕ್ರಿಯಾವರ್ತಗಳ ಚೌಕಟ್ಟಿನಲ್ಲಿ ಇರಿಸಿ ವಿವೇಚಿಸುವುದು ಸಾಧ್ಯವಾಗುತ್ತದೆ."[9]

**4**

ಈ ಭಾಗದಲ್ಲಿ ಚಿತ್ತಾಲರ ಒಟ್ಟು ಸಾಹಿತ್ಯ ರಚನೆಯ ಹಿನ್ನೆಲೆಯಲ್ಲಿ, ಅವರದೇ ಎನ್ನಬಹುದಾದ ಕೆಲವು ಸಾಧನೆಗಳನ್ನು, ಕೊಡುಗೆಗಳನ್ನು ಗುರುತಿಸಲಾಗಿದೆ. ಇವುಗಳ ವಿವರವಾದ ಪ್ರಸ್ತಾಪವನ್ನು ಆಯಾ ಕೃತಿಗಳ ಸಂದರ್ಭದಲ್ಲಿ ಮಾಡದಿರಲು ಕಾರಣವೆಂದರೆ ಅವು ಚಿತ್ತಾಲರ ಸಮಗ್ರ ಬರವಣಿಗೆಗೆ ಅನ್ವಯಿಸುವುದು.

1. ಮೊದಲಿನಿಂದಲೂ ತಮ್ಮದೇ ಆದ ಆಸಕ್ತಿಗಳು ಮತ್ತು ಜೀವನ ದೃಷ್ಟಿಯನ್ನು ಹೊಂದಿರುವ ಚಿತ್ತಾಲರು, ಸಮಕಾಲೀನ ಸಾಹಿತ್ಯಕ ಸನ್ನಿವೇಶದ ತುಡಿತಗಳಿಗೆ ಸ್ಪಂದಿಸುತ್ತಾ ಬಂದಿದ್ದಾರೆ. ಆದರೆ ಅವುಗಳ ಒತ್ತಡಕ್ಕೆ ಬಾಗದೆ ತಮ್ಮದೇ ಆದ ರೀತಿಯಲ್ಲಿ ಹೊಸ ಆಯಾಮಗಳನ್ನು ಸೇರಿಸಿದ್ದಾರೆ. ಎಂದರೆ ಪ್ರಭಾವಕ್ಕೆ ಅವರು ತೋರಿಸುವ ಪ್ರತಿಕ್ರಿಯೆ ಅನುಕರಣೆಯಾಗದೆ ಬೇರೊಂದು ಬಗೆಯದೇ ಸೃಷ್ಟಿಯಾಗುತ್ತದೆ. 'ಆಟ'ವಾಗಲೀ 'ಶಿಕಾರಿ'ಯಾಗಲೀ ಇಂಥ ಸೃಜನಶೀಲ ಕೊಳುಕೊಡೆಯ ಫಲಿತಗಳು.

2. ಚಿತ್ತಾಲರ ಬರವಣಿಗೆಯ ಮತ್ತೊಂದು ಲಕ್ಷಣವೆಂದರೆ ಸಾಹಿತ್ಯ ಮಾಧ್ಯಮದ ಸಾಧ್ಯತೆ ಹಾಗೂ ಪರಿಮಿತಿಗಳ ಖಚಿತವಾದ ತಿಳಿವಳಿಕೆ. ಸಾಹಿತ್ಯವು ಕ್ರಾಂತಿಯನ್ನು ಮಾಡಲಾರದೆಂದು ಅರಿತಾಗಲೇ, ಸಾಹಿತ್ಯ ಮಾತ್ರ ಮಾಡಬಹುದಾದ್ದನ್ನು ಮಾಡಲು ಸಾಧ್ಯವೆಂದು ಅವರ ನಿಲುವು. ಈ ತಿಳಿವಳಿಕೆಯಿಂದ, ಕನ್ನಡದಲ್ಲಿ 'ಸಣ್ಣಕಥೆಗೆ ಇಷ್ಟೆಲ್ಲ ಸಾಧ್ಯವೇ' ಎಂಬ ಬೆರಗು ಮೂಡಿಸುವಂತೆ ಬರೆಯಲು ಅವರಿಗೆ ಸಾಧ್ಯವಾಗಿದೆ.

3. ಕಥೆಯೊಂದರ ಶರೀರದ ನಿರ್ಮಾಣದಲ್ಲಿ ಚಿತ್ತಾಲರು ತೋರಿಸುವ ಗಾಢವಾದ ತಾಳ್ಮೆ ತುಂಬಿದ ಏಕಾಗ್ರತೆಯು, ವಾಸ್ತವದ ಮರು ಕಟ್ಟೋಣ, ಅದಕ್ಕೆ ಕಲ್ಪಕತೆಯ ಮೂಲಕ ಮಗ್ಗುಲುಗಳನ್ನು ಜೋಡಿಸುವುದು, ಐಂದ್ರಿಯಕ ಅನುಭವಗಳನ್ನು ಪುನರುದ್ದೀಪಿಸಬಲ್ಲ ವರ್ಣನ ಸಾಮರ್ಥ್ಯ, ಕಥೆಯಲ್ಲಿ ಎಲ್ಲಿಯೂ ಮೂಗು ಚಾಚದಿದ್ದರೂ ಅದರ ಹಿಂದೆಯೇ ಕೆಲಸ ಮಾಡುವ ವೈಚಾರಿಕತೆ ಮುಂತಾದ ಹಲವು ಗುಣಗಳಿಗೆ ಕಾರಣವಾಗಿದೆ. ಕಲಾಕೃತಿಗೆ ಬಾಹಿರವಾದುದನ್ನು ಹೊರಗಿಟ್ಟರೂ, ಅದಕ್ಕೆ ಚಿಂತನೆ, ಕಾಣ್ಕೆಗಳ ಶ್ರೀಮಂತಿಕೆಯನ್ನು ನೀಡುವುದು ಅವರಿಗೆ ಸಾಧ್ಯವಾಗಿದೆ.

4. ಕನ್ನಡ ಸಾಂಸ್ಕೃತಿಕ ಸಂದರ್ಭದಲ್ಲಿ, ಸಾಹಿತ್ಯ ಕೃತಿಗಳ ಒಳಗೆ, ಹೊರಗೆ ಹಲವು ಜ್ಞಾನಕ್ಷೇತ್ರಗಳ ಅಧ್ಯಯನದ ಫಲವನ್ನು ಲಭ್ಯವಾಗಿಸಿರುವುದು ಚಿತ್ತಾಲರ ಕೊಡುಗೆ. ಕನ್ನಡ ಓದುಗನ ಚಿಂತನೆ, ಭಾವನೆ ಮತ್ತು ಸಂವೇದನೆಗಳ ಮಟ್ಟವನ್ನು ಎತ್ತರಿಸಬಲ್ಲ ಬರವಣಿಗೆಯನ್ನು ಅವರು ನೀಡಿದ್ದಾರೆ. ಅದರ ಸರಿಯಾದ ವಿಶ್ಲೇಷಣೆಗೆ ಅಗತ್ಯವಾದ ಪರಿಸರವನ್ನು, ವ್ಯವಧಾನವನ್ನು ನಾವಿನ್ನೂ ಕಾಣಬೇಕಾಗಿದೆ.

5. ಬೇರೆ ಬೇರೆ ಕಥೆ-ಕಾದಂಬರಿಗಳ ಸ್ವಯಂಪೂರ್ಣತೆಯನ್ನು ಉಳಿಸಿಕೊಂಡೂ, ಅವುಗಳ ನಡುವೆ ಸಮಾನ ಹಿನ್ನಲೆಯ ಹಾಗೂ ಪಾತ್ರಗಳ ಸೇತುವೆಗಳನ್ನು ಕಟ್ಟುವುದರ ಮೂಲಕ, ಚಿತ್ತಾಲರು ತಮ್ಮ ಸಮಗ್ರ ಬರವಣಿಗೆಗೆ ಒಂದು ಬಗೆಯ ಅಖಂಡತೆಯನ್ನು ತಂದುಕೊಟ್ಟಿದ್ದಾರೆ. ಕನ್ನಡದ ಬೇರಾವ ಲೇಖಕನಲ್ಲೂ ಕಂಡುಬರದ ಈ ಲಕ್ಷಣದ ವಿವರವಾದ ಅಧ್ಯಯನ ಅಗತ್ಯವಾಗಿದೆ.

'ನಾನು ಏಕೆ ಬರೆಯುತ್ತೇನೆ ?' ಎಂಬ ಪ್ರಶ್ನೆಗೆ ಉತ್ತರವಾಗಿ ಚಿತ್ತಾಲರು ಕೊಟ್ಟುಕೊಂಡಿರುವ ಉತ್ತರದ ಕೆಲವು ಭಾಗಗಳನ್ನು ಉಲ್ಲೇಖಿಸುವುದರೊಂದಿಗೆ ಈ ಪರಿಶೀಲನೆಯನ್ನು ಮುಗಿಸಬಹುದು.

"ಒಟ್ಟಿನಲ್ಲಿ, ನಾನು ಬರೆಯುತ್ತಿದ್ದದ್ದು ನಾನು ನಾನೇ ಆಗಲು. ನಾನು ನಾನಾಗಿಯೇ ಉಳಿದು ಉಳಿದವರೊಂದಿಗೆ ಬರೆಯಲು, ಪ್ರೀತಿಸಲು, ಪ್ರೀತಿಸುವುದನ್ನು ಕಲಿಯಲು. ಪ್ರೀತಿಸುವುದರ ಮೂಲಕ ಜೀವಂತ ಸಂಬಂಧಗಳನ್ನು ಹುಟ್ಟಿಸಿಕೊಳ್ಳಲು, ಉಳಿದವರನ್ನು ತಿದ್ದುವುದಕ್ಕಲ್ಲ-ಆ ಯೋಗ್ಯತೆಯಾಗಲೀ ಅಧಿಕಾರವಾಗಲೀ ನನಗಿಲ್ಲ."[10]

"ಇಂದಿನ ಸಮಾಜದಲ್ಲಿ ನಾವು ಮನುಷ್ಯರಾಗಿ ಬಿಚ್ಚಿಕೊಳ್ಳಲು ಆರಿಸಿಕೊಳ್ಳಬಹುದಾದ ಜೀವಂತ ಮಾಧ್ಯಮಗಳಲ್ಲಿ ಸಾಹಿತ್ಯವೂ ಒಂದಾಗಿದೆ ಮಾತ್ರವಲ್ಲ, ಮನುಷ್ಯ ತನ್ನ ಬದುಕಿನ ನಕಾಶೆಯಲ್ಲಿ ಮೂಡಿಸಿಕೊಳ್ಳಲೇ ಬೇಕಾದ ಅತ್ಯಂತ ಮೌಲಿಕ ಸಂಗತಿಗಳಲ್ಲಿ ಕೆಲವು ಸಂಗತಿಗಳು ಸಾಹಿತ್ಯದಿಂದ ಮಾತ್ರ ಒದಗಬಲ್ಲಂಥವುಗಳಾಗಿವೆ."[11]

❑

1. ಚಿತ್ತಾಲರ ಕಥೆಗಳು, ಪ್ರಜಾ ಪ್ರಿಂಟರ್ಸ್ ಪ್ರೈವೇಟ್ ಲಿಮಿಟೆಡ್, 1983, ಪುಟ xiv-xv.
2. ಯಶವಂತ ಚಿತ್ತಾಲರ ಆಯ್ದ ಕಥೆಗಳು, ಬಾಪ್ಕೋ ಪ್ರಕಾಶನ, 1976, ಪುಟ iii.
3. ಚಿತ್ತಾಲರ ಕಥೆಗಳು ; 1983 ; ಪುಟ xvii.
4. ಚಿತ್ತಾಲರ ಕಥೆಗಳು ; 1983 ; ಪುಟ xxiii.
5. ಯು.ಆರ್. ಅನಂತಮೂರ್ತಿ ; ಯಶವಂತ ಚಿತ್ತಾಲ : ಕೆಲವು ಅಧ್ಯಯನಗಳು ; 1981, ಪುಟ 151 ;
6. ಸಾಹಿತ್ಯ ಸಂಪರ್ಕ, ಟಿ.ಪಿ. ಅಶೋಕ ; ಅಕ್ಷರ ಪ್ರಕಾಶನ ; 1986 ; ಪುಟ 50.
7. ಕತೆಯಾದಳು ಹುಡುಗಿ, 1985, (3ನೇ ಮು.) ; ಬೆನ್ನುಡಿ.
8. ಚಿತ್ತಾಲರ ಕತೆಗಳು ; 1983 ; ಪುಟ xxx.
9. ಸಾಹಿತ್ಯ ಸಂಪರ್ಕ, 1986, ಪುಟ 107.
10. ಸಾಹಿತ್ಯ ವಾರ್ಷಿಕ 1981, ಬೆಂಗಳೂರು ; 1986; ಪುಟ 130-131.1.
ಯಶವಂತ ಚಿತ್ತಾಲ ; ಕೆಲವು ಅಧ್ಯಯನಗಳು, ಮಿತ್ರ ಪ್ರಕಾಶನ, ೧೯೮೧, ಪುಟ 3.
11. ಕತೆಯಾದಳು ಹುಡುಗಿ, ಗೀತಾ ಬುಕ್ ಹೌಸ್, (3ನೇ ಮು.) 1985, ಪುಟ 9.

# ತ್ರಿವೇಣಿ

ಎನ್.ವಿ. ವಿಮಲ

1

ಕನ್ನಡದ ನವೋದಯ ಮಾರ್ಗದಲ್ಲಿ ಬರೆಯಲು ಪ್ರಾರಂಭಿಸಿದ ತ್ರಿವೇಣಿಯವರು ತಮ್ಮ ಕೆಲವು ಕಾದಂಬರಿಗಳ ಮೂಲಕ ಪ್ರಗತಿಪರ ಧೋರಣೆಯನ್ನು ಪ್ರತಿಪಾದಿಸಿದ ಬರಹಗಾರ್ತಿಯರಲ್ಲಿ ಪ್ರಮುಖರು. ಸುಮಾರು ಒಂದು ದಶಕದ ಅವಧಿಯಲ್ಲಿ ರಚಿತವಾದ ಅವರ ಕಥೆ-ಕಾದಂಬರಿಗಳು ಕನ್ನಡದಲ್ಲಿ ಓದುಗರ ಒಂದು ವರ್ಗವನ್ನೇ ಸೃಷ್ಟಿಸಿತು. ಹೆಂಗೆಳೆಯರು ಅದರಲ್ಲೂ ಯೌವನದಲ್ಲಿ ಕಾಲಿಡುತ್ತಿರುವ ಯುವಕ-ಯುವತಿಯರ ಮನಸ್ಸನ್ನು ಆಕರ್ಷಿಸಿದ ಅವರ ಕೃತಿಗಳು ಬಹು ಬೇಗ ಯಶಸ್ಸನ್ನು ಗಳಿಸಿದುವು.

ಬಿ.ಎಂ.ಶ್ರೀ. ಅವರ ತಮ್ಮ ಬಿ.ಎಂ. ಕೃಷ್ಣಸ್ವಾಮಿಯವರ ಎರಡನೆಯ ಮಗಳಾದ ತ್ರಿವೇಣಿ ಜನಿಸಿದ್ದು 1-9-1928ರಲ್ಲಿ. ಅವರ ಹುಟ್ಟು ಹೆಸರು ಭಾಗೀರಥಿ. ಅವರ ವಿದ್ಯಾಭ್ಯಾಸ ಮಂಡ್ಯ ಮತ್ತು ಮೈಸೂರುಗಳಲ್ಲಿ ನಡೆಯಿತು. ಹುಟ್ಟಿದಾಗ ಇಟ್ಟ 'ಭಾಗೀರಥಿ' ಎಂಬ ಹೆಸರು ಅವರು ಶಾಲೆಗೆ ಸೇರಿದಾಗ 'ಅನಸೂಯ' ಎಂದಾಯಿತು. ಅವರು ಇಂಗ್ಲಿಷ್ ಪ್ರಾಧ್ಯಾಪಕ ಶ್ರೀ ಶಂಕರ್ ಅವರನ್ನು 1951ರಲ್ಲಿ ಮದುವೆಯಾದರು. ಮದುವೆಯ ನಂತರ 'ಅನಸೂಯ ಶಂಕರ್' ಆದರು. ಮನೆಯೊಳಗಿನ ಅನಸೂಯ ಶಂಕರ್ ಸಣ್ಣಕಥೆಗಳ ಮೂಲಕ ಕನ್ನಡ ಸಾಹಿತ್ಯ ರಂಗವನ್ನು ಪ್ರವೇಶಿಸಿ ಕಾದಂಬರಿಗಾರ್ತಿಯಾಗಿ 'ತ್ರಿವೇಣಿ' ಎಂಬ ಕಾವ್ಯನಾಮದಿಂದ ಪ್ರಖ್ಯಾತರಾದರು.

ಪದವೀಧರೆಯಾದ ತ್ರಿವೇಣಿ ಹೆಚ್ಚಾಗಿ ಕಲಿತಿದ್ದು ಪ್ರಪಂಚದ ವಿದ್ಯಾರ್ಥಿನಿಯಾಗಿ. ಮನೋವಿಜ್ಞಾನದ ವಿದ್ಯಾರ್ಥಿನಿಯಾಗಿದ್ದ ತ್ರಿವೇಣಿ ತಮ್ಮ ಪತಿಯ ಸೂಚನೆಯಂತೆ ಮನೋವೈಜ್ಞಾನಿಕ ಸಮಸ್ಯೆಗಳನ್ನು ಕುರಿತು ಕೆಲವು ಸಣ್ಣಕಥೆ- ಕಾದಂಬರಿಗಳನ್ನು ಬರೆದರು. ಕಾದಂಬರಿಯ ಸೃಷ್ಟಿಯಲ್ಲಿ ಮನ ಶ್ಶಾಸ್ತ್ರದ ತಿಳಿವಳಿಕೆಯನ್ನು ಉದ್ದೇಶಪೂರ್ವಕವಾಗಿ ಬಳಸಲು ಪ್ರಯತ್ನಿಸಿದರು. ಅಂದಿನ ದಿನಗಳಲ್ಲಿ ಸೃಷ್ಟಿಯಾದ ಹೊಸ ಬಗೆಯ ಈ ಕಾದಂಬರಿಗಳು ಕನ್ನಡಕ್ಕೆ ಹೊಸ ವಸ್ತುವನ್ನು ನೀಡಿದ್ದರಿಂದ ಕನ್ನಡಿಗರು ಉತ್ಸಾಹದಿಂದ ಹಾಗೂ ಆಸಕ್ತಿಯಿಂದ ಅವನ್ನು ಸ್ವಾಗತಿಸಿದರು.

ತ್ರಿವೇಣಿ ತಾವು ಕಂಡದ್ದು, ಕೇಳಿದ್ದು, ಅನುಭವಿಸಿದ್ದನ್ನು ತಮ್ಮ ಕೃತಿಗಳಲ್ಲಿ ಕಾಣಿಸುತ್ತಿದ್ದರು. ಅವರ ಸೂಕ್ಷ್ಮ ಅವಲೋಕನಾಶಕ್ತಿ, ಸಂವೇದನಾ ಶೀಲತೆ, ಮಾನವೀಯತೆ-ಇವು ಅವರ ಕೃತಿಗಳಲ್ಲಿ ಸೂಕ್ಷ್ಮವಾಗಿ ಗೋಚರ ವಾಗಿದೆ. "ಹೆಣ್ಣಿನ ಅನುಭವ ಸೀಮಿತ. ಅವರು ನಾಲ್ಕು ಗೋಡೆಗಳ ಮಧ್ಯೆ ಇರಬೇಕು" ಎಂದು ಅವರು ಹೇಳುತ್ತಿದ್ದರೂ ಅವರು ಹಾಗೆ ಕೂಡದೆ ಜನರೊಂದಿಗೆ ಬೆರೆತು ಅವರನ್ನು ಸೂಕ್ಷ್ಮವಾಗಿ ಅಭ್ಯಸಿಸಿದರು. ತಮ್ಮ ದಿಟ್ಟ ಅನಿಸಿಕೆಗಳನ್ನು ಪ್ರಗತಿಪರ ವಿಚಾರಗಳನ್ನು ನಿರ್ಭಯವಾಗಿ ನಿಸ್ಸಂಕೋಚವಾಗಿ ತಮ್ಮ ಕೃತಿಗಳಲ್ಲಿ ತೋಡಿಕೊಂಡರು. ಇದರಿಂದ ಅವರ ಸಾಹಿತ್ಯವೂ ಅವರು ಸೃಷ್ಟಿಸಿದ ಪಾತ್ರಗಳೂ ಜೀವಂತವಾದುವು.

ತ್ರಿವೇಣಿಯವರ ಬಾಳಿನ ಹಗೆಯಾಗಿ ನಿಂತಿದ್ದು ಅವರ ಉಬ್ಬಸ ರೋಗ. ಬಾಲ್ಯದಿಂದಲೂ ಅಂಟಿಬಂದ ಈ ವ್ಯಾಧಿ ಅವರನ್ನು ಬಹುಬೇಗ ಆಹುತಿ ತೆಗೆದುಕೊಂಡಿತು. ತಾವು ಅನುಭವಿಸಿದ ಈ ರೋಗದ ಯಾತನೆ, ನೋವು, ಸಂಕಟಗಳನ್ನು ತಮ್ಮ ಪಾತ್ರವೊಂದರ ಮೂಲಕ ಹೇಳಿಸಿದ್ದಾರೆ. "ರಾತ್ರಿ ತಲೆದಿಂಬಿಗೆ ತಲೆಯಿಟ್ಟು ಸುಖವಾಗಿ ನಿದ್ರಿಸುವವರು ಎಷ್ಟು ಸುಖಿಗಳು" ಎಂದು ತಾವು ಉಬ್ಬಸದ ಯಾತನೆಯಿಂದ ಅನುಭವಿಸಿದ ನಿದ್ದೆಗಾಣದ ರಾತ್ರಿಗಳ ದುಃಸ್ಥಿತಿಯನ್ನು ಪರ್ಯಾಯವಾಗಿ ಹೇಳಿಕೊಂಡಿದ್ದಾರೆ. ಸದಾ ಕಾಲ ನೆಗಡಿ ಅವರನ್ನು ಕಾಡುತ್ತಿತ್ತು. "ನನಗೆ ಮೂಗು ಒಣಗಿದ ದಿನವೇ ಜ್ಞಾಪಕವಿಲ್ಲ". ಎಂದು ಅವರ ಮತ್ತೊಂದು ಪಾತ್ರ ಹೇಳುತ್ತದೆ. ಹೀಗೆ ಅವರು ಜೀವನದಲ್ಲಿ ಅನುಭವಿಸಿದ ನೋವು-ನಲಿವು; ಅವರ ಅಭಿರುಚಿ; ಅವರ ಜೀವನದ ಒಲವು ನಿಲುವುಗಳು ಒಂದಲ್ಲ ಒಂದು ರೀತಿಯಲ್ಲಿ ಅವರ ಕೃತಿಗಳಲ್ಲಿ ವ್ಯಕ್ತವಾಗಿರು ವುದನ್ನು ಸ್ಪಷ್ಟವಾಗಿ ಗುರುತಿಸಬಹುದು.

ಜೀವನದಲ್ಲಿ ಹೆಣ್ಣಿಗೆ ಇರಬೇಕಾದ ಸುಖ, ಸಂಪತ್ತು, ಭೋಗ, ಭಾಗ್ಯಗಳು ತ್ರಿವೇಣಿಯವರಿಗೆ ಹೇರಳವಾಗಿದ್ದುವು. ಅವರಿಗೆ ಜೀವನದಲ್ಲಿ ಅತಿಯಾದ ಆಸಕ್ತಿ, ಮೋಹವಿತ್ತು. ಇದು ಅವರ ಕೃತಿಗಳಲ್ಲಿ ಉದ್ದಕ್ಕೂ ಕಾಣುತ್ತದೆ. ಒಲವಿನ ಪತಿ, ತಮ್ಮದೇ ಆದ ಮನೆ, ಪ್ರೀತಿಸುವ ಬಂಧು ಬಾಂಧವರು, ಆತ್ಮೀಯ ಸ್ನೇಹಿತರ ಬಳಗ, ಜನಪ್ರಿಯತೆ, ಅಚ್ಚುಮಚ್ಚಿನ ವಾಚಕ ವರ್ಗ-ಇಷ್ಟೆಲ್ಲಾ ಇದ್ದರೂ "ತಾನು ತಾಯಿಯಾಗಲಿಲ್ಲ. ತಾವು ಸೇರಿದ ಮನೆಗೆ ಬೆಳಕಾಗಿ ಒಂದು ಮಗುವನ್ನು ಕೊಡಲಿಲ್ಲ" ಎಂಬ ಕೊರಗು ಅವರನ್ನು ಬಾಧಿಸುತ್ತಿತ್ತು. ದೈಹಿಕವಾಗಿ ದುರ್ಬಲರಾಗಿದ್ದ ತ್ರಿವೇಣಿ ಮೂರು ಸಲ ಗರ್ಭಿಣಿಯಾದಾಗಲೂ ನಿರೀಕ್ಷಿಸಿದ ಅತಿಥಿ ಬರದೆ ತಪ್ಪಿಸಿಕೊಂಡು ಹೋದ ಕಾರಣ ಅವರ ನಿರಾಶೆ ಇಮ್ಮಡಿಸುತ್ತಿತ್ತು. ಈ ಸಮಯದಲ್ಲಿ ಅವರು ಅನುಭವಿಸಿದ ನಿರಾಶೆ, ಕಾತರ, ದುಃಖ, ಹೆರಿಗೆಯ ನೋವು, ಮೂಕ ಸಂಕಟ-ಇವೆಲ್ಲವನ್ನೂ ಅವರ 'ಅತಿಥಿ ಬರಲಿಲ್ಲ' ಎಂಬ ಸಣ್ಣಕಥೆಯಲ್ಲಿ ಹೃದಯ ಸ್ಪರ್ಶಿಯಾಗಿ ಬಣ್ಣಿಸಿದ್ದಾರೆ. ಸ್ವಾನುಭವದ ಮೂಸೆಯಿಂದ ಮೂಡಿಬಂದಿರುವ ಈ ಕಥೆ ಓದುಗರ ಮನಸ್ಸನ್ನು ಕಲಕುತ್ತದೆ.

ತಾಯಿಯಾಗಲೇಬೇಕೆಂಬ ಹಟದಿಂದ 'ಮಗು ಕೊಡು' ಎಂದು ವಿಧಿಗೆ ಸವಾಲಾಗಿ ನಿಂತ ಅವರು ನಾಲ್ಕನೆಯ ಬಾರಿಗೆ ಗರ್ಭಿಣಿಯಾದಾಗ, ಅವರು ಬಹುದಿನದಿಂದ ಕಾತರಿಸುತ್ತಿದ್ದ ಅತಿಥಿಯೇನೋ ಕಡೆಗೂ ಬಂದಳು. ಆದರೆ ಅವಳನ್ನು ಸ್ವಾಗತಿಸಿದ ಕೆಲವೇ ದಿನಗಳಲ್ಲಿ ಆತಿಥೇಯಳು ಕಣ್ಮರೆಯಾದುದು ದುರಂತ. ತಮ್ಮ ಬೆಲೆಯುಳ್ಳ ಬರಹದ ಬಾಳಿನ ಅಂತಿಮ ಅಧ್ಯಾಯವನ್ನೇ ಕಡೆಯ ಕಾದಂಬರಿಯ ವಸ್ತುವಾಗುವಂತೆ ಬಿಟ್ಟು ಹೋದರು. ತಾರುಣ್ಯದ ಹೆಬ್ಬಯಕೆಗಳು ಇನ್ನೂ ಚಿಗುರೊಡೆಯುತ್ತಿರುವಾಗಲೇ ತಮ್ಮ ಮೂವತ್ತೈದ ನೆಯ ವಯಸ್ಸಿನಲ್ಲಿ 29-7-1963ರಲ್ಲಿ ನಿಧನರಾದರು. ಹೀಗೆ ಕನ್ನಡ ಕಾದಂಬರಿಯ ಸಾಹಿತ್ಯದಲ್ಲಿ ಬಹುಬೇಗ ವಿಶಿಷ್ಟ ಸ್ಥಾನ ಗಳಿಸಿಕೊಂಡ ತ್ರಿವೇಣಿ ಜನಪ್ರಿಯ ಸಾಹಿತಿ ಆಗಿಹೋದರು.

2

ತ್ರಿವೇಣಿಯವರು ಸುಮಾರು ಒಂದು ದಶಕದ ಅವಧಿಯಲ್ಲಿ (1950-1963) ಮೂರು ಕಥಾ ಸಂಕಲನಗಳನ್ನು, ಇಪ್ಪತ್ತು ಕಾದಂಬರಿಗಳನ್ನು ಮತ್ತು ಒಂದು ಅಪೂರ್ಣ ಕಾದಂಬರಿಯನ್ನು ರಚಿಸಿದ್ದಾರೆ. ಸಣ್ಣಕಥೆ-ಕಾದಂಬರಿಗಳನ್ನು

ಬಿಟ್ಟರೆ ಉಳಿದ ಸಾಹಿತ್ಯ ಪ್ರಕಾರಗಳಲ್ಲಿ ಅವರು ಕೈ ಆಡಿಸಿದಂತೆ ಕಾಣುವುದಿಲ್ಲ. ಅವರ ಸಣ್ಣಕಥೆಗಳ ಸಂಕಲನಗಳಾದ 'ಹೆಂಡತಿಯ ಹೆಸರು', 'ಎರಡು ಮನಸ್ಸು' ಮತ್ತು 'ಸಮಸ್ಯೆಯ ಮಗು'- ಇವುಗಳಲ್ಲಿ ಒಟ್ಟು ನಲವತ್ತೊಂದು ಕಥೆಗಳಿವೆ. ಮಾನಸಿಕ, ಕೌಟುಂಬಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ಕುರಿತು ಚಿತ್ರಿಸುವ ಅವರ 'ಹೆಂಡತಿಯ ಹೆಸರು', 'ಚಂಪಿ', 'ಅತಿಥಿ ಬರಲಿಲ್ಲ', 'ಸಮಸ್ಯೆಯ ಮಗು', 'ಸಲಹೆ' ಮತ್ತು 'ಎರಡು ಮನಸ್ಸು'- ಮೊದಲಾದ ಕಥೆಗಳು ಗಮನ ಸೆಳೆಯುತ್ತವೆ.

ಮನೋವೈಜ್ಞಾನಿಕ ಸೂತ್ರ ಅಥವಾ ಸಮಸ್ಯೆಯೊಂದನ್ನು ತೆಗೆದುಕೊಂಡು ಅದರ ಸುತ್ತ ಕಥೆ ಹೆಣೆಯುವುದು ತ್ರಿವೇಣಿಯವರ ವೈಶಿಷ್ಟ್ಯ. ಅವರು ತಮ್ಮ ಕಥೆಗಳಿಗೆ ಮಾನಸಿಕ ಸಮಸ್ಯೆಗಳನ್ನು ಅಳವಡಿಸಿಕೊಂಡಿರುವ ವಿಧಾನದಲ್ಲಿ ಅವರ ಕಥೆಗಳು ಕೇವಲ ಮನಶ್ಶಾಸ್ತ್ರದ ಸಿದ್ಧಾಂತಗಳಿಗೆ ಉದಾಹರಣೆಯಾಗಿರುವಂತೆ ಕಾಣುತ್ತವೆ. ಈ ಗುಂಪಿಗೆ ಸೇರುವ ಬಹುಪಾಲು ಕಥೆಗಳಲ್ಲಿ ಈ ಕೊರತೆ ಕಂಡು ಬರುತ್ತದೆ. ಕಥೆ ಮಾನಸಿಕ ಸಮಸ್ಯೆಗಳಲ್ಲಿ ಕೇಂದ್ರೀಕೃತ ವಾಗದೆ ಸಮಸ್ಯೆಗಾಗಿಯೇ ಕಥೆಯನ್ನು ಹೆಣೆದಿರುವುದರಿಂದ ಕೆಲವು ಕಥೆಗಳು ಸೂತ್ರಬದ್ಧ ಕಥೆಗಳಾಗಿ ರೂಪುಗೊಂಡು ಒಂದು ಚೌಕಟ್ಟಿನ ಪರಿಮಿತಿಯಲ್ಲಿ ತಾತ್ಕಾಲಿಕ ಹಾಗೂ ಸೀಮಿತ ಪರಿಮಿತಿಯಲ್ಲಿ ತೃಪ್ತಿಯನ್ನು ನೀಡುತ್ತವೆ. ಈ ಕೆಲವು ಅಂಶಗಳು ಅವರ ಕಥೆಗಳ ಸಾಮಾನ್ಯ ಲಕ್ಷಣಗಳೆಂದು ಹೇಳಬಹುದು.

"ಮನಶ್ಶಾಸ್ತ್ರ ಮನುಷ್ಯನ ಅಧ್ಯಯನದ ವಿಶಿಷ್ಟ ಕ್ಷೇತ್ರವಾಗುವ ಮುನ್ನವೇ ಸಾಹಿತ್ಯ ರಚನೆ ಮಾಡಿದ ಕವಿಗಳು ಮನುಷ್ಯನ ಮನಸ್ಸನ್ನು ಅರ್ಥಮಾಡಿಕೊಂಡಿದ್ದರು. ಸಾಹಿತ್ಯ ಕೃತಿಯಲ್ಲಿ ಪಾತ್ರಗಳ ಸ್ವಭಾವ, ನಡೆನುಡಿಯಲ್ಲಿ ಜೀವನವನ್ನು ಎದುರಿಸುವ ಅಥವಾ ಎದುರಿಸಲು ಹಿಂಜರಿಯುವ ರೀತಿಯಲ್ಲಿ ಪ್ರಕಟವಾಗಬೇಕು ಎಂಬುದು ನೆನಪಿಡಬೇಕಾದ ಅಂಶ. ತ್ರಿವೇಣಿಯವರು ಮನಶ್ಶಾಸ್ತ್ರವನ್ನು ಕ್ರಿಯೆಯಲ್ಲಿ ಅರಗಿಸಿಕೊಳ್ಳಲು ಶಕ್ತರಾದಾಗ ಯಶಸ್ವಿಯಾಗುತ್ತಾರೆ- 'ಬೆಕ್ಕಿನ ಕಣ್ಣು', 'ಶರಪಂಜರ' ಇಂತಹ ಕಾದಂಬರಿಗಳಲ್ಲಿ." - ಈ ಅಭಿಪ್ರಾಯ ಸಮಂಜಸವೆನಿಸುತ್ತದೆ. (ಎಲ್.ಎಸ್. ಶೇಷಗಿರಿರಾವ್- ಹೊಸಗನ್ನಡ ಸಾಹಿತ್ಯ ರೂಪಗಳು: ಪು : 189).

'ಬೆಡ್ ನಂ ಏಳು', 'ಆಕರ್ಷಣ', 'ಹಸಿರು ಪೀತಾಂಬರ', 'ಚಿನ್ಮಯಿ', 'ಕೊನೆಯ ನಿರ್ಧಾರ', 'ತಾಯಿ', 'ಅವಳ ತಾಯಿ'- ಮೊದಲಾದ ಕಥೆಗಳ ಗಂಡು-ಹೆಣ್ಣಿನ ಸಹಜೀವನ, ಅಂತಃಕರಣ, ಹೊಂದಾಣಿಕೆಯ ಜೀವನದ ಶ್ರೀಮಂತಿಕೆಯನ್ನು ಚಿತ್ರಿಸುತ್ತವೆ. 'ಬೆಡ್ ನಂ ಏಳು' ಕಥೆಯು, ತನ್ನ ಸಂಭಾಷಣಾ ಶೈಲಿ, ನಾಟಕೀಯ ತಂತ್ರ ಹಾಗೂ ಗಂಭೀರ ವಸ್ತು ಪ್ರತಿಪಾದನೆಯಿಂದಾಗಿ ವಿಶೇಷವಾಗಿ ಆಕರ್ಷಿಸುತ್ತದೆ.

'ಆಲಿ ಅನಿಲ್', 'ಇಂದು ನಾಳೆ', 'ಪ್ರೇಮದ ಬೆಳಕು', 'ಸಾಕಿದ ಹಾವು', 'ಬದುಕಿನ ಮಾರ್ಗದಲ್ಲಿ, - ಈ ಕಥೆಗಳು ಸಾಮಾಜಿಕ ಸಮಸ್ಯೆಗಳತ್ತ ಬೆಳಕು ಚೆಲ್ಲುತ್ತವೆ. ಇವುಗಳ ಪೈಕಿ 'ಆಲಿ ಅನಿಲ್' ವಸ್ತು ನಿರ್ವಹಣೆ ಹಾಗೂ ಪರಿಣಾಮದ ದೃಷ್ಟಿಯಿಂದ ತೀರಾ ಗಮನಾರ್ಹವಾದ ಕಥೆಯಾಗಿದೆ. ಹಿಂದೂ-ಮುಸ್ಲಿಂ ಮತೀಯ ಗಲಭೆಯ ಕಾಲದಲ್ಲಿ ನಡೆದ ಘೋರ ಘಟನೆಯ ಹಿನ್ನೆಲೆ ಈ ಕಥೆಗಿದೆ. ಎಂತಹ ದುಃಖದ ಸನ್ನಿವೇಶದಲ್ಲಿಯೂ ಹಿಂದೂಗಳು ಅತಿಥಿಗಳಿಗೆ ತೋರುವ ಸೌಜನ್ಯ, ಸೌಹಾರ್ದತೆಗಳನ್ನು ಈ ಕಥೆ ಎತ್ತಿ ಹಿಡಿದಿದೆ.

3

ತ್ರಿವೇಣಿಯವರು ಸಣ್ಣಕಥೆಗಳ ಮೂಲಕ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರೂ ಅವರ ಜಾಯಮಾನಕ್ಕೆ ಹೆಚ್ಚಾಗಿ ಒಗ್ಗಿಕೊಂಡ ಸಾಹಿತ್ಯ ಪ್ರಕಾರವೆಂದರೆ ಕಾದಂಬರಿ. ಅವರ ಕಾದಂಬರಿಗಳಲ್ಲಿ ಸಾಮಾಜಿಕ ಸಮಸ್ಯೆಗಳಿಗೆ, ಮನೋವಿಶ್ಲೇಷಣಾತ್ಮಕ ಸಮಸ್ಯೆಗಳಿಗೆ ಹೆಚ್ಚು ಒತ್ತು ನೀಡಿದರು. ಅವರು ಮೊದಲು ಬರೆದ ಕಾದಂಬರಿ 'ಅಪಸ್ವರ'ವಾದರೂ ಅವರ ಎರಡನೆಯ ಕಾದಂಬರಿ 'ಹೂವು ಹಣ್ಣು' ಮೊದಲು ಪ್ರಕಟವಾಯಿತು. ವಿಧವೆಯಾಗಿ ಬಡತನಕ್ಕೆ ಸಿಕ್ಕಿದ ಅನಾಥೆಯೊಬ್ಬಳು ತನ್ನ ವಂಶದ ಕುಡಿಯನ್ನು ಸಾಕಲು ನಡೆಸುವ ಹೋರಾಟದಲ್ಲಿ ಕಾಮುಕರ ಕಣ್ಣಿನಿಂದ ಪಾರಾಗಲಾರದೆ ಅನಿವಾರ್ಯವಾಗಿ ವೇಶ್ಯಾ ಜೀವನವನ್ನು ನಡೆಸಬೇಕಾಗುವ ದಾರುಣ ಪರಿಸ್ಥಿತಿಯನ್ನು ಚಿತ್ರಿಸುವ ಕಾದಂಬರಿ 'ಹೂವು ಹಣ್ಣು'.

ತಾಯಿ-ಮಗಳ ಸಂಬಂಧವನ್ನು ಕಡಿದು ಹಾಕುವ ವಸ್ತುವಾದ ಸೂಳೆಗಾರಿಕೆಯನ್ನು ಇದರಲ್ಲಿ ಪರಿಶೀಲಿಸಿದ್ದಾರೆ. ವೇಶ್ಯೆಯಾದರೂ ತಾಯಿ ತಾಯಿಯೇ ಎಂಬ ಸತ್ಯ ಇಲ್ಲಿ ಎದ್ದು ಕಾಣುತ್ತದೆ. ತ್ರಿವೇಣಿಯವರ ವಸ್ತು ತಾಯಿ-ಮಗು ಎಂಬುದನ್ನು ಈ ಕಾದಂಬರಿ ಸೂಚಿಸುತ್ತದೆ. ಅವರ 'ಅಪಸ್ವರ' ಕಾದಂಬರಿಯಲ್ಲಿಯೂ ಇದೇ ವಸ್ತು ಮತ್ತಷ್ಟು ವಿಶದವಾಗಿ ರೂಪತಾಳಿದೆ. ತಾಯಿಯ ಹಂಬಲ ಬದುಕಿನ ಮೂಲ ಶಕ್ತಿಯೆಂದು ನಂಬಿಕೊಂಡೇ ತ್ರಿವೇಣಿಯವರು ಕಾದಂಬರಿಗಳನ್ನು ಬರೆಯತೊಡಗಿದರೆಂದು ಹೇಳಬಹುದು.

ಸ್ವಾವಲಂಬಿಯಾಗಿ, ಸ್ವತಂತ್ರಳಾಗಿ ಬಾಳಬೇಕೆಂಬ ಹಿರಿಯಾಸೆ ಹೊತ್ತು ಬಂದ ಹೆಣ್ಣು ಪರಾವಲಂಬಿಯಾದರೆ ಅವಳ ಬಾಳು ಎಷ್ಟು ಅಸಹನೀಯವಾಗುತ್ತದೆ ಎಂಬುದನ್ನು 'ಅಪಸ್ವರ', 'ಅಪಜಯ'-ಕಾದಂಬರಿಗಳು ಚಿತ್ರಿಸುತ್ತವೆ. ತಾಯ್ತನ ಹೆಣ್ಣಿನ ಹಿರಿಮೆ, ಅದು ಬತ್ತಿ ಬೆಂಡಾದಾಗ ಹೆಣ್ಣಿಗೆ 'ತನ್ನದು' ಎಂಬ ಮಮಕಾರಕ್ಕೆ ಪೆಟ್ಟು ಬೀಳುತ್ತದೆ. ಇಂತಹ ವಿಷಮ ಚಕ್ರಕ್ಕೆ ಸಿಲುಕಿ ನರಳುತ್ತಾಳೆ ಇಲ್ಲಿನ ನಾಯಕಿ. ಈ ಕಾದಂಬರಿಯ ನಾಯಕಿ ಮೀರ ಗೃಹಿಣಿಯಾಗಿ ಯಶಸ್ವಿಯಾಗದಿದ್ದರೂ, ಡಾಕ್ಟರ್ ಆಗಿ ತನ್ನ ಗುರಿ ಸಾಧಿಸಿಕೊಳ್ಳುತ್ತಾಳೆ. ಆದರೆ ಸಂಸಾರಸುಖದಿಂದ ವಂಚಿತಳಾಗಿ ಓದುಗರ ಸಹಾನುಭೂತಿ ಪಡೆಯುತ್ತಾಳೆ. ಮದುವೆಯೊಂದೇ ಜೀವನದ ಸರ್ವಸ್ವವಲ್ಲ; ಅದರಿಂದಾಚೆಗೂ ಬದುಕಿನಲ್ಲಿ ಏನೋ ಅತೃಪ್ತಿಯಿದೆ, ಅಪಸ್ವರವಿದೆ ಎಂಬುದನ್ನು ತ್ರಿವೇಣಿಯವರು ತಮ್ಮ ಕೆಲವು ನಾಯಕಿಯರಲ್ಲಿ ಕಾಣಿಸಿದ್ದಾರೆ. 'ಅಪಸ್ವರ'ದ ಮೀರಾ, 'ತಾವರೆ ಕೊಳ'ದ ರತ್ನ, 'ಸೋತು ಗೆದ್ದವಳು'ವಿನ ಭಾರತಿ-ಇವು ಇಂತಹ ಪಾತ್ರಗಳು. ತ್ರಿವೇಣಿಯವರು ಸಂಸಾರ ಒಡೆಯುವ ಶಕ್ತಿಯನ್ನು ಅಪಸ್ವರವೆಂದು ಕರೆದಿದ್ದಾರೆ. ಈ ಶಕ್ತಿಯು ಎಲ್ಲಾ ಸಂಸಾರ ಗಳಿಗೂ ಅನ್ವಯಿಸುತ್ತದೆ. ಅಪಸ್ವರವು ಸುಸ್ವರಕ್ಕೆ ವಿರುದ್ಧವಾದ ಅಷ್ಟೇ ಪ್ರಬಲವಾದ ಶಕ್ತಿಯೆಂದು ಹೇಳಬಹುದು.

'ಗೃಹಿಣಿಯ ಬದುಕೇ ಹೆಣ್ಣಿನ ಆದರ್ಶ' ಎಂಬುದನ್ನು ಅವರ ಕೆಲವು ಕಾದಂಬರಿಗಳು ತೀರ ಸರಳವಾಗಿ ಚಿತ್ರಿಸುತ್ತವೆ. ಒಲವಿನ ಪತಿ, ತಾಯ್ತನದ ಹಿಗ್ಗು, ತನ್ನದೇ ಆದ ಪುಟ್ಟ ಮನೆ-ಇವನ್ನು ಹೆಣ್ಣು ಎಷ್ಟರಮಟ್ಟಿಗೆ ಬಯಸುತ್ತಾಳೆ ಎಂಬುದನ್ನು ಹೆಣ್ಣಿನ ದೃಷ್ಟಿಯಿಂದ ನಿರೂಪಿಸುವ ಅವರ ಕೆಲವು ಕಾದಂಬರಿಗಳು ಕೇವಲ ಮನೋರಂಜನೆಯನ್ನು ಮಾತ್ರ ನೀಡುತ್ತವೆ. ಉದಾ: 'ವಸಂತ ಗಾನ', 'ಬಾನು ಬೆಳಗಿತು', 'ಅವಳ ಮನೆ', 'ಹೃದಯಗೀತೆ'- ಇವು ಈ ಬಗೆಯ ಕಾದಂಬರಿಗಳು.

ಆಸ್ತಿಗಾಗಿ ಮದುವೆಯಾಗುವುದಾಗಿ ಮಾತು ಕೊಟ್ಟು ಆಸ್ತಿಗೆ ಹಕ್ಕುದಾರ ಬಂದಾಗ ಕೊಟ್ಟ ಮಾತಿನಿಂದ ಹಿಂಜರಿದ ಸ್ವಾರ್ಥಿ ಯುವಕನಿಂದ ಭಗ್ನ ಪ್ರೇಮಿಯಾದ ಸರಳ ಸ್ವಭಾವದ ಮುಗ್ಧಯುವತಿಯ ಮನಸ್ಥಿತಿಯನ್ನು ಪರಿಣಾಮಕಾರಿಯಾಗಿ ಚಿತ್ರಿಸುವ ಕಾದಂಬರಿ 'ಬೆಳ್ಳಿ ಮೋಡ'. ಗಂಡು-ಹೆಣ್ಣಿನ ಒಲಿದ ಹೃದಯಗಳೇ ಸಾರ್ಥಕವಾದ ಪ್ರೇಮ ವಿವಾಹಕ್ಕೆ ಆಧಾರ. ಕೇವಲ ವ್ಯಾವಹಾರಿಕ ಪ್ರೇಮ, ತೋರಿಕೆಯ ಪ್ರೇಮ ಯಾವುದಾದರೊಂದು ವ್ಯಕ್ತಿಯನ್ನು ಭಗ್ನಹೃದಯಿಯನ್ನಾಗಿ ಮಾಡಬಲ್ಲದೆಂಬುದಕ್ಕೆ ಈ ಕಾದಂಬರಿಯ ನಾಯಕಿ ಇಂದಿರಾ ಒಂದು ನಿದರ್ಶನ. ತನಗಾದ ಅತೀವ ನಿರಾಶೆಯನ್ನು ಮೆಟ್ಟಿ ನಿಂತ ಇಂದಿರಾ ಆತ್ಮಗೌರವ ಹಾಗೂ ಸ್ವಾಭಿಮಾನದ ಪ್ರತೀಕದಂತಿದ್ದಾಳೆ. ಸುಂದರವಾದ ಬದುಕನ್ನು ಒಮ್ಮೊಮ್ಮೆ ಯಾವುದೋ ಕರಾಳ ಶಕ್ತಿ ಹೊಸಗಿಹಾಕುತ್ತದೆ ಎಂಬ ಸತ್ಯವನ್ನು ಈ ಕಾದಂಬರಿ ಪರಿಣಾಮಕಾರಿಯಾಗಿ ಚಿತ್ರಿಸಿದೆ. ವಸ್ತು ನಿರ್ವಹಣೆ, ಪಾತ್ರ ಚಿತ್ರಣ, ಪರಿಣಾಮಕಾರಿ ಅಂತ್ಯ- ಈ ಎಲ್ಲ ದೃಷ್ಟಿಯಿಂದ ಇದೊಂದು ಯಶಸ್ವೀ ಕೃತಿ ಎನ್ನಬಹುದು.

ಅವಿವಾಹಿತ ಯುವತಿಯವರು ತಮ್ಮ ಭವಿಷ್ಯದ ಬಗ್ಗೆ ಕನಸು ಕಟ್ಟುವುದು, ಅವರ ಸಂಸಾರದ ಸಮಸ್ಯೆಗಳು, ಅವರ ಮಾನಸಿಕ ತೊಳಲಾಟ, ಪ್ರೇಮ, ಪ್ರೀತಿ, ಮದುವೆಯ ಬಗ್ಗೆ ಅವರ ಒಲವು-ನಿಲುವುಗಳು-ಇವುಗಳನ್ನು 'ಕಂಕಣ', 'ಮುಕ್ತಿ' ಕಾದಂಬರಿಗಳು ಚಿತ್ರಿಸುತ್ತವೆ. ಆರು ಜನ ಅವಿವಾಹಿತ ಪದವೀಧರ ತರುಣಿಯರು ತಮ್ಮ ತಮ್ಮ ಪರಿಸರಕ್ಕೆ ತಕ್ಕಂತೆ ಹೊಂದಿಕೊಂಡು ಜೀವನದ ಸಮಸ್ಯೆಗಳನ್ನು ಯಾವ ರೀತಿಯಲ್ಲಿ ಎದುರಿಸುತ್ತಾರೆಂಬುದನ್ನು ಈ ಕಾದಂಬರಿಗಳು ನಿರೂಪಿಸುತ್ತವೆ. ಇಲ್ಲಿಯ ಪಾತ್ರಗಳು ಮತ್ತು ವಸ್ತುವೂ ಗಮನಾರ್ಹವಾಗಿದೆ.

ಕಾಮದ ಅರಗಿಣಿಯಾಗಿ ಬಾಳೆಲ್ಲ ಕಣ್ಣೀರಿನಿಂದ ತೊಳೆಯುವ ಹೆಣ್ಣಿನ ಅಸಹಾಯಕ ಚಿತ್ರಣ 'ಕೀಲುಗೊಂಬೆ' ಕಾದಂಬರಿಯಲ್ಲಿದ್ದರೆ, 'ಮೊದಲ ಹೆಜ್ಜೆ' ಯಲ್ಲಿ ಪುರುಷ ಪ್ರಧಾನ ಸಮಾಜದ ಕಪಿಮುಷ್ಟಿಗೆ ಸಿಲುಕಿ ಬಾಳಿನಲ್ಲಿ ಕಹಿಯನ್ನೇ ಉಂಡ ದುರ್ದೈವಿ ಹೆಣ್ಣಿನ ಚಿತ್ರಣವಿದೆ.

'ತಾವರೆ ಕೊಳ' ಗಂಭೀರವಾದ ವಸ್ತುವನ್ನುಳ್ಳ ಕಾದಂಬರಿ. ಮನುಷ್ಯ ಕೇವಲ ಅನ್ನ, ನೀರು ಗಾಳಿಯಿಂದ ಮಾತ್ರವೇ ಜೀವಿಸಲಾರ, ಅವನ ಜೀವನ ಹಸನಾಗಬೇಕಾದರೆ ಅವನಿಗೆ ಪ್ರೀತಿ, ವಿಶ್ವಾಸ ಅತ್ಯವಶ್ಯಕವಾಗಿ ಬೇಕು ಎಂಬುದನ್ನು ಈ ಕಾದಂಬರಿ ಧ್ವನಿಸುತ್ತದೆ. "ಪ್ರೇಮ ತಾವರೆಯ ಬೇರಿನಂತೆ. ತಾವರೆಯ ಬೇರಿಗೆ ಸಿಕ್ಕಿದ ಮನುಷ್ಯ ಅದರ ಗೋಜಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದಷ್ಟೂ ಬೇರು ಅವನನ್ನು ಮತ್ತಷ್ಟು ಬಂಧಿಸಿ ಕೆಸರಿನಾಳದೊಳಕ್ಕೆ ಸೆಳೆದುಕೊಳ್ಳುತ್ತಿತ್ತು" ಎಂಬ ಅಂಶ ಇಲ್ಲಿ ಕೇಂದ್ರ ಬಿಂದುವಾಗಿದೆ. ಒಟ್ಟಿನಲ್ಲಿ 'ತಾವರೆ ಕೊಳ' ತ್ರಿವೇಣಿಯವರ ವಿಚಾರಪೂರ್ಣವೂ, ಪರಿಣಾಮಕಾರಿಯೂ ಆದ ಕಾದಂಬರಿಯಾಗಿ ಯಶಸ್ವಿಯಾಗಿದೆ.

ನಿವೃತ್ತ ರಾಯರ ಸಂಸಾರದ ಸುತ್ತ ರಚಿತವಾದ ಒಂದು ಸುಂದರ ಕಾದಂಬರಿ 'ಹಣ್ಣೆಲೆ ಚಿಗುರಿದಾಗ'. ವಯಸ್ಸಾದರೂ ಮಕ್ಕಳಂತಾಡುವ, ನಾಲಿಗೆ ಚಪಲ ಬಿಡದ, ಮರೆವಿನ ಸ್ವಭಾವದ ರಾಯರ ಪಾತ್ರ ಪುಟದಿಂದ ಪುಟಕ್ಕೆ ಹಾಸ್ಯದ ಹೊನಲನ್ನು ಹರಿಸುತ್ತಾ ಬೆಳೆದು ಬಂದಿದೆ. ತ್ರಿವೇಣಿಯವರಿಗೆ ಪಾತ್ರ ಚಿತ್ರಣದ ಕಲೆ ಸಿದ್ಧಿಸುತ್ತಿತ್ತು ಎಂಬುದರ ಕುರುಹು ಈ ಕಾದಂಬರಿಯ ರಾಯರ ಪಾತ್ರ ಚಿತ್ರಣದಿಂದ ಗೋಚರವಾಗುತ್ತದೆ. ಹುಡುಗರಂತಾಗುತ್ತಿದ್ದ ರಾಯರು ಗಂಭೀರ ಸನ್ನಿವೇಶದಲ್ಲಿ ಒಮ್ಮೊಮ್ಮೆ ಕಠಿಣಚಿತ್ತರೂ ಆಗುತ್ತಿದ್ದರು. ಸಂಪ್ರದಾಯಕ್ಕೆ ಕಟ್ಟುಬಿದ್ದ ರಾಯರು ಮಕ್ಕಳ ಭವಿಷ್ಯದ ದೃಷ್ಟಿಯಿಂದ ಹೊಸ ವಿಚಾರಗಳಿಗೆ ತಲೆಬಾಗುವ ಸನ್ನಿವೇಶ ಸಹಜವಾಗಿದೆ. ಎರಡು ಮೂರು ತಲೆಮಾರಿನವರಲ್ಲಿ ಉಂಟಾಗುವ ಭಿನ್ನಾಭಿಪ್ರಾಯಗಳನ್ನು (Generation Gap) ಚಿತ್ರಿಸುವುದು ಈ ಕಾದಂಬರಿಯ ಉದ್ದೇಶ. ವಿಧವಾ ವಿವಾಹ, ಪ್ರೇಮ ವಿವಾಹ, ಅಂತರ್ಜಾತೀಯ ವಿವಾಹ-ಮೊದಲಾದ ಸಮಸ್ಯೆಗಳು ಜಟಿಲವಾಗದೆ, ಸಂಕೀರ್ಣಗೊಳ್ಳದೆ ಬಹುಬೇಗ ಇಲ್ಲಿ ಪರಿಹಾರವನ್ನು ಕಂಡುಕೊಳ್ಳುತ್ತವೆ.

## 4

ಮನೋವೈಜ್ಞಾನಿಕ ಸಮಸ್ಯೆಗಳನ್ನು ತಮ್ಮ ಕಾದಂಬರಿಯ ವಸ್ತುವನ್ನಾಗಿ ಆಯ್ದುಕೊಂಡ ತ್ರಿವೇಣಿಯವರು ಕನ್ನಡ ಕಥೆ-ಕಾದಂಬರಿಗಳಿಗೆ ಹೊಸ ತಿರುವನ್ನು ತಂದುಕೊಟ್ಟರು. ದೈಹಿಕ ಸ್ವಾಸ್ಥ್ಯದೊಂದಿಗೆ ಮಾನಸಿಕ ಸ್ವಾಸ್ಥ್ಯವೂ ಸೇರಿದಾಗ ವ್ಯಕ್ತಿಯ ಬಾಳು ಸಹನೀಯ ಎಂದು ತಮ್ಮ ಮನೋವೈಜ್ಞಾನಿಕ ಕಾದಂಬರಿಗಳ ಮೂಲಕ ತೋರಿಸಿ ಕೊಟ್ಟರು. 'ಬೆಕ್ಕಿನ ಕಣ್ಣು', 'ದೂರದ ಬೆಟ್ಟ', 'ಮುಚ್ಚಿದ ಬಾಗಿಲು' ಮತ್ತು 'ಶರಪಂಜರ'- ಮೊದಲಾದ ಕಾದಂಬರಿಗಳಲ್ಲಿ ಕೆಲವು ರೀತಿಯ ಮನೋವೈಪರೀತ್ಯಗಳನ್ನು ಚಿಕಿತ್ಸಕ ದೃಷ್ಟಿಯಿಂದ ಕಂಡಿದ್ದಾರೆ.

ಈ ಬಗೆಯ ವಸ್ತುವನ್ನು ಆರಿಸಿಕೊಂಡಾಗ ಕಾದಂಬರಿಕಾರ ಸ್ವಲ್ಪ ಎಚ್ಚರ ತಪ್ಪಿದರೂ ಕಾದಂಬರಿಯ ಕಲಾತ್ಮಕತೆಗೆ ಭಂಗ ಉಂಟಾಗುವ ಸಂಭವವಿರುತ್ತದೆ. ಕಾದಂಬರಿ ಬದುಕಿನ ಅನುಭವದ ಪ್ರತಿಬಿಂಬವಾಗುವುದರ ಬದಲು ವೈಜ್ಞಾನಿಕ ಸರಳ ನಿರೂಪಣೆಗೆ ಸಾಧನವಾಗಿ ಬಿಡುತ್ತದೆ. ಬದುಕಿನ ಸಮಸ್ಯೆಯ ವಿಶ್ಲೇಷಣೆ ಹಾಗೂ ಮೌಲ್ಯ ಪ್ರತಿಪಾದನೆ-ಇವು ಯಾವ ಕಾದಂಬರಿಯ ಉದ್ದೇಶವಾಗಿರುತ್ತದೆಯೋ ಅದು ಉತ್ತಮ ಕಲಾಕೃತಿಯಾಗುವ ಸಾಧ್ಯತೆ ಇದೆ. ಈ ಹಿನ್ನೆಲೆಯಲ್ಲಿ ತ್ರಿವೇಣಿಯವರ ಮನೋವೈಜ್ಞಾನಿಕ ಕಾದಂಬರಿಗಳನ್ನು ಸಮೀಕ್ಷಿಸುವುದು ಸೂಕ್ತವೆಂದು ಕಾಣುತ್ತದೆ. ಮನೋರೋಗಿಗಳ ಬಗೆಗಿನ ವಿವರಣೆ, ಅವುಗಳಿಗೆ ಕಾರಣ, ಅವುಗಳ ಸ್ವರೂಪ, ಮನೋರೋಗಿಗಳ ಬಗೆಗಿನ ವರ್ತನೆ, ಸಮಾಜವು ನಡೆಸಿಕೊಳ್ಳುವ ಬಗೆ, ಅವರ ಮೇಲೆ ಅದರ ಪರಿಣಾಮ, ಸಮಾಜದಲ್ಲಿ ಅವರ ಸ್ಥಾನಮಾನ ಮತ್ತು ಮನೋರೋಗಿಗಳಿಗೆ ನೀಡಬೇಕಾದ ಚಿಕಿತ್ಸೆ, ಜಾಣ ಆರೈಕೆ ಇವುಗಳ ಬಗೆಗೆ ಜನಸಾಮಾನ್ಯರ ಕಣ್ಣು ತೆರೆಯಿಸುವುದು, ಅವರಿಗೆ ತಿಳುವಳಿಕೆ ನೀಡುವುದು ಈ ಕೃತಿಗಳ ರಚನೆಯ ಉದ್ದೇಶವೆಂದು ಕಾಣುತ್ತದೆ. ಮನೋ ವಿಕೃತಿಗೊಳಗಾದ ದುರ್ದೈವಿಗಳನ್ನು ಮಾನವೀಯ ದೃಷ್ಟಿಯಿಂದ ಸಹಾನುಭೂತಿಯಿಂದ ಕಾಣಬೇಕೆಂದು ಈ ಕೃತಿಗಳು ಸೂಚಿಸುತ್ತವೆ.

ತಂದೆ-ತಾಯಿಯರ ಪ್ರೀತಿಯಿಂದ ವಂಚಿತಳಾಗಿ, ಬಲತಾಯಿಯ ಕ್ರೂರ ದೃಷ್ಟಿಗೆ ಬಿದ್ದು ಭಯಗೊಂಡು ಕ್ರಮೇಣ ದ್ವೇಷಕ್ಕೆ ತಿರುಗಿ ಮನಶ್ಶಾಂತಿಯನ್ನು ಕಳೆದುಕೊಂಡು ವಿಚಿತ್ರವಾಗಿ ವರ್ತಿಸುವ ಮನೋವ್ಯಾಧಿಯಿಂದ ತೊಳಲುವ ಕುಸುಮಾ ಎಂಬ ಕಿಶೋರಿಯೊಬ್ಬಳ ದಾರುಣ ಚಿತ್ರ 'ಬೆಕ್ಕಿನ ಕಣ್ಣು' ಕಾದಂಬರಿಯಲ್ಲಿದೆ. ತ್ರಿವೇಣಿಯವರಿಗೆ ಯಶಸ್ಸನ್ನೂ, ಜನಪ್ರಿಯತೆಯನ್ನೂ ತಂದುಕೊಟ್ಟ ಈ ಕೃತಿ ಕಾದಂಬರಿ ಕ್ಷೇತ್ರಕ್ಕೊಂದು ವಿನೂತನ ಕೊಡುಗೆ.

ಮಗು ಮತ್ತು ತಾಯಿಯ ಸಂಬಂಧ ಕಡಿದುಹೋದಾಗ ಮಗುವಿನ ಮನಸ್ಸು ವಿಕೃತಿ ಹೊಂದಿ ಅದರ ಬದುಕು ಅಸಹನೀಯ ಹಾಗೂ ಅಸಹಜವಾಗುತ್ತದೆ. ಬದುಕಿನ ಸಹನೀಯತೆಗೆ ಮತ್ತು ಸಹಜತೆಗೆ ತಾಯಿ ಮಗುವಿನ ನಿಕಟ ಸಂಬಂಧ, ಪ್ರೀತಿ, ಪ್ರೇಮ, ವಿಶ್ವಾಸ-ಇವು ಬಹು ಮುಖ್ಯವಾದುವು ಎಂದು ಈ ಕಾದಂಬರಿ ಸೂಚಿಸುತ್ತದೆ. ಈ ಅಂಶವನ್ನು ನಾವು ಈಗಾಗಲೇ

ಗುರುತಿಸಿದ್ದೇವೆ. ಈ ಕಾದಂಬರಿ ಮನೋವೈಜ್ಞಾನಿಕ ಹಾಗೂ ಸಾಮಾಜಿಕ ಉದ್ದೇಶಗಳೆರಡನ್ನೂ ಸಾಧಿಸಿಕೊಂಡಿದೆ.

ಜಾಗೃತ ಪ್ರಜ್ಞೆ ಮತ್ತು ಸುಪ್ತಚೇತನಗಳ ನಡುವಿನ ಘರ್ಷಣೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸುವ ಕಾದಂಬರಿ 'ದೂರದ ಬೆಟ್ಟ'. ಹೊರನೋಟಕ್ಕೆ ಎಲ್ಲಾ ಸರಿಯಾಗಿ ಕಂಡರೂ ಮನಸ್ಸಿನ ತೊಳಲಾಟ ಯಾರಿಗೂ ಗೋಚರ ವಾಗುವುದಿಲ್ಲ. ಅದು ದೂರದ ಬೆಟ್ಟದಂತೆ, ಹತ್ತಿರ ಹೋದಾಗ ಮಾತ್ರವೇ ಕಲ್ಲು ಮುಳ್ಳುಗಳು ಕಾಣುತ್ತವೆ. ಇದು ಈ ಕಾದಂಬರಿಯ ವಸ್ತು. ಸುಪ್ತ ಚೇತನದಲ್ಲಿ ಅಡಗಿರುವ ಆಸೆ ಆಕಾಂಕ್ಷೆಗಳನ್ನು ಬಿಚ್ಚಿತೋರಿಸುವ ಕೃತಿ 'ಮುಚ್ಚಿದ ಬಾಗಿಲು'. ಈ ಕೃತಿ ಮುಚ್ಚಿದ ಬಾಗಿಲಿನ ಹಿಂದಿರುವ ವಿಷಮ ಕಥೆಗಳ ಕೂಗನ್ನು ಕೇಳಿಸುತ್ತದೆ. ಇದು ಕಲಾತ್ಮಕವಾದ ಕಾದಂಬರಿಯಾಗುವುದ ಕ್ಕಿಂತ ಹೆಚ್ಚಾಗಿ ಮನೋರೋಗಿಗಳ 'ಕೇಸ್ ಹಿಸ್ಟರಿ'ಯಂತಿದೆ.

ದೈಹಿಕವಾಗಿ ಅಶಕ್ತಳಾದಾಗ, ಸುಪ್ತವಾಗಿದ್ದು ಅಪರಾಧದ ಅಂಜಿಕೆ ಯೊಂದು ಜಾಗೃತಗೊಂಡಾಗ, ಮಾನಸಿಕ ರೋಗಿಯಾಗಿ, ವೈದ್ಯ ಚಿಕಿತ್ಸೆ ಪಡೆದು ಮನೆಗೆ ಬಂದ ಮೇಲೆ ಸನ್ನಿವೇಶಗಳ ಒತ್ತಡದಿಂದ ಮತ್ತೆ ಹುಚ್ಚಳಾಗಿ ಪುನಃ ಆಸ್ಪತ್ರೆಯನ್ನು ಸೇರುವ ಕಾವೇರಿ ಎಂಬ ಯುವತಿಯೊಬ್ಬಳ ಹೃದಯ ವಿದ್ರಾವಕ ಸ್ಥಿತಿಯನ್ನು ನಿರೂಪಿಸುವ ಕೃತಿ 'ಶರಪಂಜರ'. ಹುಚ್ಚು ಬಿಟ್ಟರೂ ಮತ್ತೆ ಹುಚ್ಚು ಹಿಡಿಸುವ ಸಮಾಜದ ಕಟು ನಿಂದೆ, ಪಿಸುಮಾತು, ಅಪಮಾನ, ತಿರಸ್ಕಾರಗಳ ಬಾಣಗಳ ಪಂಜರದಲ್ಲಿ ಬಂಧಿತಳಾದ ಕಾವೇರಿ ಓದುಗರ ಸಹಾನುಭೂತಿಗೆ ಪಾತ್ರಳಾಗುತ್ತಾಳೆ. ಮೊದಲು ಮುರುಟಿದ್ದ ಕುಸುಮಳ ಜೀವನ ಅವಳು ಆಸ್ಪತ್ರೆಯಿಂದ ಬಂದ ಮೇಲೆ ಅರಳಿ ಸೊಂಪಾದರೆ, ಮೊದಲು ಅರಳಿದ್ದ ಕಾವೇರಿಯ ಜೀವನ ಅವಳು ಆಸ್ಪತ್ರೆಯಿಂದ ಬಂದ ಮೇಲೆ ಸಮಾಜದ ತಾತ್ಸಾರದಿಂದ ಮುರುಟಿತು.

ಮಾನಸಿಕ ರೋಗಿಗಳನ್ನು ಮಾನವೀಯ ದೃಷ್ಟಿಯಿಂದ ಕಾಣುವುದು, ಅವರಿಗೂ ಸಮಾಜದಲ್ಲಿ ಬದುಕುವ ಅವಕಾಶವನ್ನು ಒದಗಿಸಿಕೊಡುವುದು 'ಶರಪಂಜರ'ದ ಹಾಗೂ 'ಮುಚ್ಚಿದ ಬಾಗಿಲಿನ' ಹೊರಗಿರುವವರ ಕರ್ತವ್ಯ ವೆಂಬುದನ್ನು ಈ ಕಾದಂಬರಿಗಳು ತಿಳಿಸುತ್ತವೆ. ಬದುಕಿನ ಸಮಸ್ಯೆಯ ವಿಶ್ಲೇಷಣೆ ಹಾಗೂ ಮೌಲ್ಯ ಪ್ರತಿಪಾದನೆಯ ದೃಷ್ಟಿಯಿಂದ 'ಬೆಕ್ಕಿನ ಕಣ್ಣು' ಮತ್ತು 'ಶರಪಂಜರ' ಕಾದಂಬರಿಗಳು ಗಮನ ಸೆಳೆಯುತ್ತವೆ.

**5**

ಇದುವರೆಗೆ ಸಮೀಕ್ಷಿಸಿದ ತ್ರಿವೇಣಿಯವರ ಕಥೆ-ಕಾದಂಬರಿಗಳಲ್ಲಿ ಮುಖ್ಯವಾಗಿ ಎದ್ದು ಕಾಣುವ ಅಂಶಗಳನ್ನು ಕೆಳಕಂಡಂತೆ ಗುರುತಿಸಬಹುದು:

ತ್ರಿವೇಣಿಯವರು ತಮ್ಮ ಕೃತಿಗಳಲ್ಲಿ ಸಮಾಜದ ವಿವಿಧ ಮುಖಗಳನ್ನು ಚಿತ್ರಿಸಿದ್ದಾರೆ. ಅವರು ಬಹುಪಾಲು ಮಧ್ಯಮ ವರ್ಗದ ಮತ್ತು ಮಧ್ಯಮೋತ್ತರ ವರ್ಗಗಳ ಸಂಸಾರದ ಚಿತ್ರಣವನ್ನು ನೀಡಿದ್ದಾರೆ. ನಗರದ ವಿದ್ಯಾವಂತ ಕುಟುಂಬಗಳ ಸಮಸ್ಯೆಗಳಿಗೆ ಅವರ ಕೃತಿಗಳಲ್ಲಿ ಹೆಚ್ಚಿನ ಪ್ರಾಶಸ್ತ್ಯ ದೊರೆತಿದೆ. ಸಮಾಜದ ಸುಧಾರಣೆ, ಸ್ತ್ರೀ ವಿದ್ಯಾಭ್ಯಾಸ, ಸ್ತ್ರೀ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯ, ವಿಧವಾ ವಿವಾಹ-ಮೊದಲಾದುವನ್ನು ಎತ್ತಿ ಹಿಡಿದಿದ್ದಾರೆ. ಸಮಾಜದ ಅನೀತಿ, ಅನ್ಯಾಯ, ಕ್ರೂರ ವ್ಯವಸ್ಥೆ, ಬಡತನ, ಅಜ್ಞಾನ, ಹೆಣ್ಣಿನ ಶೋಷಣೆ, ಸಮಾಜದಲ್ಲಿ ಹೆಣ್ಣಿಗೊಂದು ನೀತಿ, ಗಂಡಿಗೊಂದು ನೀತಿ-ಇವುಗಳ ಬಗ್ಗೆ ಸಿಡಿದೆದ್ದಿದ್ದಾರೆ; ಪ್ರತಿಭಟಿಸಿದ್ದಾರೆ. ಅವರ ಕೃತಿಗಳಲ್ಲಿ ತ.ರಾ.ಸು., ಕಾರಂತ, ಅನಕೃ, ಚದುರಂಗ, ಪ್ರೇಮಚಂದ್-ಮೊದಲಾದ ಹಿರಿಯ ಲೇಖಕರ ಪ್ರಭಾವವನ್ನು ಗುರುತಿಸಬಹುದು. ಅವರು ಬಂಗಾಳಿ, ಹಿಂದಿ, ಇಂಗ್ಲಿಷ್-ಸಾಹಿತ್ಯಗಳಿಂದಲೂ ಪ್ರೇರಣೆ ಪಡೆದಿರುವುದನ್ನು ಸ್ಪಷ್ಟವಾಗಿ ಗುರುತಿಸ ಬಹುದು.

ಸಿದ್ಧವಾದ ಚೌಕಟ್ಟಿನಲ್ಲಿ ನೇರವಾಗಿ ಸಾಗುವ ಕಥನ ಮಾರ್ಗ ತ್ರಿವೇಣಿ ಯವರದು. ಚುರುಕಿನ, ಲವಲವಿಕೆಯ ಸಂಭಾಷಣೆ ಅವರ ಕೃತಿಗಳ ಜೀವಾಳ. ಮಧ್ಯಮ ವರ್ಗದ ನಗರದ ಸುಶಿಕ್ಷಿತ ಭಾಷೆಯನ್ನು ಅವರು ಬಳಸಿದ್ದಾರೆ. ಕೌಟುಂಬಿಕವಾದ ವ್ಯವಹಾರಿಕ ಭಾಷೆಗೆ ಹತ್ತಿರದ ಭಾಷೆಯಿಂದಾಗಿ ಅವರ ಕೃತಿಗಳು ಓದುಗರಿಗೆ ಆತ್ಮೀಯವಾಗುತ್ತವೆ. ಅವರೆಂದೂ ತಂತ್ರಕ್ಕೆ ಮನಸೋತ ವರಲ್ಲ. ಒಮ್ಮೊಮ್ಮೆ ಪಾತ್ರಗಳ ಮುಖಾಂತರ ಮತ್ತೊಮ್ಮೆ ತಾವೇ ಕಥೆಯನ್ನು ಹೇಳುವ ರೀತಿಯಲ್ಲಿ, ಮಗದೊಮ್ಮೆ ಸಂಭಾಷಣೆಗಳ ಮೂಲಕ ಅವರ ಕಥನ ಶೈಲಿ ಸಾಗುತ್ತದೆ.

ಅವರು ತಮ್ಮ ಸುತ್ತಮುತ್ತಲು ಕಂಡ ಬದುಕನ್ನು, ತಮ್ಮ ನೆರೆಹೊರೆಯ ವ್ಯಕ್ತಿಗಳ ನಡತೆ, ಸ್ವಭಾವ, ರೀತಿ ನೀತಿಗಳನ್ನು ಚೆನ್ನಾಗಿ ಅಭ್ಯಸಿಸಿ ತಮ್ಮ ಕೃತಿಗಳಲ್ಲಿ ಕಾಣಿಸಿದ್ದಾರೆ. ತಾವು ನೋಡಿದ, ತಮಗೆ ಚೆನ್ನಾಗಿ ಪರಿಚಯವಿದ್ದ ಸ್ಥಳಗಳನ್ನು ಅವರು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಅವರ ಬಹುತೇಕ ಕಾದಂಬರಿಗಳ ಪರಿಸರ ಅವರ ಅಚ್ಚುಮೆಚ್ಚಿನ ತವರೂರಾದ ಮೈಸೂರು, ಅದರಲ್ಲೂ ಕೃಷ್ಣಮೂರ್ತಿಪುರ ಬಡಾವಣೆ, ಮೈಸೂರು ಬಿಟ್ಟರೆ ಬೆಂಗಳೂರು, ಬೊಂಬಾಯಿ, ಚಿಕ್ಕಮಗಳೂರು-ಈ ಸ್ಥಳಗಳಲ್ಲಿ ಅವರ ಕಾದಂಬರಿಗಳ ಪಾತ್ರಗಳು ನಡೆದಾಡಿವೆ. ದಟ್ಟವಾದ ಗ್ರಾಮೀಣ ಪರಿಸರ, ಗ್ರಾಮೀಣ ಸಮಸ್ಯೆ ಗಳು ಅವರ ಕೃತಿಗಳಲ್ಲಿ ಇಲ್ಲವೆಂದೇ ಹೇಳಬೇಕು.

ತ್ರಿವೇಣಿಯವರು 'ಸ್ತ್ರೀ ಪಕ್ಷಪಾತಿ', 'ಪುರುಷ ದ್ವೇಷಿ'; ಅವರಲ್ಲಿ ಸ್ತ್ರೀ ಪಾತ್ರಗಳಿಗೆ ಹೆಚ್ಚಿನ ಪ್ರಾಮುಖ್ಯವಿದೆ; ಸ್ತ್ರೀಯರ ಬಹುಮುಖ ಸಮಸ್ಯೆಗಳನ್ನು ಸ್ತ್ರೀಯರ ದೃಷ್ಟಿಯಿಂದಲೇ ಕಾಣುತ್ತಾರೆ; ಅವರ ನಾಯಕಿಯರ ಮುಂದೆ ಪುರುಷ ಪಾತ್ರಗಳು ಗೌಣವಾಗಿ ನಿರ್ಜೀವವಾಗಿ ಬಿಡುತ್ತವೆ ಎನ್ನುವ ಆರೋಪ ಅವರ ಮೇಲುಂಟು. ಇದು ಸ್ವಲ್ಪ ಮಟ್ಟಿಗೆ ನಿಜ. ಆದರೆ ಅನ್ಯಾಯ, ಅನೀತಿ ಕಂಡಲ್ಲಿ ಸ್ತ್ರೀ-ಪುರುಷ ಭೇದವಿಲ್ಲದೆ ಅವರು ಖಂಡಿಸಿದ್ದಾರೆ. ಬದುಕಿನ ರಥದ ಎರಡು ಗಾಲಿಗಳೂ ಸರಿಸಮವಾದಾಗ ಬದುಕು ಸುಂದರ. ಗಂಡು-ಹೆಣ್ಣು ಆ ರಥದ ಎರಡು ಗಾಲಿಗಳು. ಅವರಿಬ್ಬರೂ ಪರಸ್ಪರ ಅರಿತು ಸಮರ್ಪಣ ಮನೋಭಾವ ದಿಂದ ನಡೆದರೆ ಸುಖಸಂಸಾರ ನಿರ್ಮಿಸಲು ಸಾಧ್ಯವೆನ್ನುವುದನ್ನು ಅವರು ಮರೆತಿಲ್ಲ. ಮೇಲಿನ ಹೇಳಿಕೆಗೆ ಅಪವಾದವಾಗಿ 'ಅಪಸ್ವರ', 'ಅಪಜಯ' ಕಾದಂಬರಿಗಳ ಶಾಮು; 'ಅಪಜಯ'ದ ಗೋಪಿನಾಥ; 'ಬೆಕ್ಕಿನ ಕಣ್ಣು'ವಿನ ರಾಜಶೇಖರ; 'ಮುಚ್ಚಿದ ಬಾಗಿಲಿ'ನ ಮನೋವೈದ್ಯರು; 'ಹಣ್ಣೆಲೆ ಚಿಗುರಿದಾಗ' ಕಾದಂಬರಿಯ ರಾಯರು-ಮೊದಲಾದ ಪಾತ್ರಗಳು ಗಮನ ಸೆಳೆಯುತ್ತವೆ.

ಕನ್ನಡ ಕಾದಂಬರಿ ಪ್ರಪಂಚದಲ್ಲಿ ತ್ರಿವೇಣಿಯವರು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆಂಬುದನ್ನು ಇದುವರೆಗೆ ಸಮೀಕ್ಷಿಸಿದ ಅವರ ಕೃತಿಗಳಿಂದ ಮನವರಿಕೆಯಾಗುತ್ತದೆ. 'ಹೆಣ್ಣು ಏನು ಬರೀತಾಳೆ' ಎಂಬ ತಾತ್ಸಾರದ ಭಾವನೆ ಇದ್ದ ಪರಿಸರದಿಂದ ಹೊರಬಂದು ತಮ್ಮ ಬರವಣಿಗೆಯ ಮೂಲಕ ಜನಪ್ರಿಯರಾದ ತ್ರಿವೇಣಿ ಮಹಿಳೆಯರಿಗೆ ಗೌರವಯುತ ಸ್ಥಾನವನ್ನು ತಂದುಕೊಟ್ಟರು. ತಾವು ಗಳಿಸಿದ ಸೀಮಿತ ಅನುಭವಗಳನ್ನು ಪ್ರಾಮಾಣಿಕವಾಗಿ ಹಾಗೂ ಚೊಕ್ಕವಾಗಿ ತಮ್ಮ ಕೃತಿಯಲ್ಲಿ ತೆರೆದಿಟ್ಟರು. ಅವರ ಕೃತಿಗಳನ್ನು

ಓದಿದವರ ಮನಸ್ಸನ್ನು ವೈಚಾರಿಕತೆಯಲ್ಲಿ ನಿಲ್ಲಿಸಿಕೊಳ್ಳುವ, ಜೀವನಾನುಭವದಿಂದ ತುಂಬುವ, ಸಾಹಿತ್ಯಕ ಮೌಲ್ಯಗಳಿಂದ ಕೂಡಿದ ದಟ್ಟವಾದ ಅನುಭವ ತೀವ್ರತೆಗಳಿಂದ ತೃಪ್ತಿ ನೀಡುವ ಕೃತಿಗಳು ಅವರಿಂದ ಬರಲಿಲ್ಲವೆಂದು ಹೇಳಬೇಕಾದುದು ಅನಿವಾರ್ಯ. "ತ್ರಿವೇಣಿಯವರ ಸೃಜನ ಶಕ್ತಿ ಹೊಸ ಎತ್ತರಕ್ಕೇರುತ್ತಿದ್ದಾಗ ಅವರು ತೀರಿಕೊಂಡರೆಂದು" ಹೇಳಬಹುದು. ಅವರ ಕೃತಿಗಳು ಸರಳವಾಗಿ, ಸೀಮಿತ ಪರಿಸರದಲ್ಲಿ ಬಂದು, ಮಧ್ಯಮ ವರ್ಗದ ಆದರ್ಶಗಳನ್ನು ಹೊಂದಿದ್ದರೆ ಅವಕ್ಕೆ ಕಾರಣಗಳಿಲ್ಲದಿಲ್ಲ. ಇವು ಅವರ ಕೃತಿಗಳಲ್ಲಿ ಕಂಡುಬರುವ ಕೆಲವು ಲೋಪದೋಷಗಳು.

ಆದರೆ, ಅವರಿಂದ ಪ್ರಭಾವಿತರಾಗಿ ಅವರನ್ನು ಅನುಕರಿಸಿದ ಅನೇಕ ಮಂದಿ ಬರಹಗಾರ್ತಿಯರು ಈಗ ಇದ್ದಾರೆ. ಹೀಗೆ ತಮ್ಮ ಮುಂದಿನ ಪೀಳಿಗೆಯ ಬರಹಗಾರ್ತಿಯರಿಗೆ ಮಾರ್ಗದರ್ಶಕರಾದ ತ್ರಿವೇಣಿ, 'ಕಾದಂಬರಿ ನಿರ್ಮಾಣದಲ್ಲಿ ಒಂದು ಸಂಪ್ರದಾಯ'ವನ್ನು ತಂದರು ಎನ್ನುವುದನ್ನು ನಾವು ಮರೆಯುವ ಹಾಗಿಲ್ಲ. ತ್ರಿವೇಣಿಯವರ ಕೃತಿಗಳು ಕನ್ನಡಿಗರ ಮನೆಮಾತಾಗಿವೆ. ಅವರ ಕೆಲವಾರು ಕೃತಿಗಳು, ಪಾತ್ರಗಳು ಓದುಗರ ಮನದಲ್ಲಿ ಅಚ್ಚೊತ್ತಿ ಪ್ರಭಾವ ಬೀರಿವೆ. ಕೆಲವು ಕಾದಂಬರಿಗಳು ಚಲನಚಿತ್ರಗಳಾಗಿ ಯಶಸ್ವಿಯಾಗಿ ಕನ್ನಡಿಗರಲ್ಲದೆ ಇತರ ಭಾಷೆಯ ಜನರನ್ನೂ ಆಕರ್ಷಿಸಿವೆ. ನಾಟಕಗಳ ರೂಪದಲ್ಲಿ ಬಿತ್ತರಗೊಂಡ ಅವರ ಕೆಲವು ಕೃತಿಗಳು ತಮ್ಮ ನಾಟಕೀಯ ಗುಣಗಳಿಂದ ಮೆಚ್ಚುಗೆ ಗಳಿಸಿವೆ. ತೆಲುಗು, ಹಿಂದಿ, ಇಂಗ್ಲಿಷ್ ಭಾಷೆಗಳಿಗೆ ಅವರ ಕೆಲವು ಕೃತಿ ಅನುವಾದಗೊಂಡಿವೆ. ಅವರ ಹಲವಾರು ಕೃತಿಗಳು ಏಳೆಂಟು ಪುನರ್ ಮುದ್ರಣಗಳನ್ನು ಕಂಡು ಓದುಗರ ಹೆಚ್ಚಿನ ಬೇಡಿಕೆಯನ್ನು ಪೂರೈಸಿವೆ.

ಕೊಡಗಿನ ಗೌರಮ್ಮನವರಂತೆ ತ್ರಿವೇಣಿಯವರೂ ಅಕಾಲ ಮರಣಕ್ಕೆ ತುತ್ತಾದರು. ಗೌರಮ್ಮನವರ ಕಥೆಗಳು ಬಹುಶಃ ಕನ್ನಡದಲ್ಲಿ ಮೊದಲು ಬಂದ ಮಹಿಳೆಯ ಕಥೆಗಳು. ಇವು ತೀರಾ ಸರಳ, ಶೈಲಿಯೂ ಸರಳ. ಭಾವೋದ್ವೇಗವಿಲ್ಲದೆ, ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಅವರ ಕಥೆಗಳು ಸಾಗುತ್ತವೆ. ಅವರ ನಂತರ ಬಂದ ರಾಜಲಕ್ಷ್ಮಿ ಎನ್. ರಾವ್ ಅವರದು ತೀರಾ ಬೌದ್ಧಿಕ ಬರವಣಿಗೆ. ಕನ್ನಡದ ಮೊದಲ ನವ್ಯಕಥೆಗಾರ್ತಿ ಎಂದು ಅವರನ್ನು ವಿಮರ್ಶಕರು ಗುರುತಿಸುತ್ತಾರೆ. ಒಳಮನಸ್ಸಿನ ಹೋರಾಟ, ತುಮುಲಾಟದ ಚಿತ್ರಣವನ್ನು ಕಲಾತ್ಮಕವಾಗಿ, ದಿಟ್ಟವಾಗಿ ಮೊದಲಿಗೆ ಚಿತ್ರಿಸಿದವರೆಂದರೆ ರಾಜಲಕ್ಷ್ಮಿ. ರಾಜಲಕ್ಷ್ಮಿ ಅವರಷ್ಟು ದಿಟ್ಟವಾಗಿ ಅಲ್ಲದಿದ್ದರೂ ಭಾಷೆಯನ್ನು ರಂಜನೀಯವಾಗಿ, ಆಕರ್ಷಕವಾಗಿ ಬಳಸಿ ಹೆಣ್ಣಿನ ಮನಸ್ಸಿನ ವಿವಿಧ ಪದರುಗಳನ್ನು ವಿಶ್ಲೇಷಿಸಿ, ಪ್ರಾಮಾಣಿಕವಾದ ಅನುಭವವನ್ನು ತಮ್ಮ ಕೃತಿಗಳಲ್ಲಿ ತೆರೆದಿಟ್ಟ ತ್ರಿವೇಣಿಯವರು ಇವರಿಬ್ಬರ ನಡುವೆ ನಿಲ್ಲುತ್ತಾರೆ. ಹೀಗೆ ಒಂದು ಸಂಪ್ರದಾಯವನ್ನು ಸ್ಥಾಪಿಸಿದ ತ್ರಿವೇಣಿಯವರು ಗಹನವಾದ ವಿಚಾರ, ಅನುಭವ ಪಕ್ವವಾಗುವ ಮುನ್ನ ಅವರು ಕಣ್ಮರೆಯಾದರು. ಅವರಿಂದ ಮಹತ್‌ಕೃತಿಯೊಂದನ್ನು ನಿರೀಕ್ಷಿಸಿದ ಓದುಗರಿಗೆ ನಿರಾಶೆಯಾಯಿತು. ಅಂತಹ ಶಿಲ್ಪಕ್ಕೆ ಬೇಕಾದ ಉಪಕರಣ ಅವರಲ್ಲಿತ್ತು. ಆಧುನಿಕ ಕನ್ನಡ ಸಾಹಿತ್ಯದ ಇತಿಹಾಸಕಾರರು ತ್ರಿವೇಣಿಯವರನ್ನು 'ಪ್ರತಿಭಾವಂತ ಲೇಖಕಿ', 'ಜನಪ್ರಿಯ ಲೇಖಕಿ' ಎಂದು ಗುರುತಿಸಿ ಅವರಿಗೆ ಸಲ್ಲಬೇಕಾದ ಗೌರವಯುತ ಸ್ಥಾನವನ್ನು ನೀಡಿದ್ದಾರೆ. ಬದುಕನ್ನು ಒಳ್ಳೆಯ ನಿಲುವಿನಿಂದ ನೋಡುವ ಆರೋಗ್ಯಕರ ಧೋರಣೆಯನ್ನು ಪ್ರತಿಪಾದಿಸುವ ಅವರ ಕೃತಿಗಳು ಇನ್ನಷ್ಟು ಕಾಲ ಕನ್ನಡಿಗರ ಮನೆಮನೆಗಳಲ್ಲಿ ರಂಜಿಸುತ್ತವೆ ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ.

❑

## ಕೀರ್ತಿನಾಥ ಕುರ್ತಕೋಟಿ

ಡಾ.ಎಂ.ಜಿ.ಹೆಗಡೆ

ಧಾರವಾಡದ ಗೆಳೆಯರ ಗುಂಪಿನ ಹಿರಿಯ ಸದಸ್ಯರಾಗಿದ್ದ ಶಂ.ಬಾ. ಜೋಶಿ ಹಾಗೂ ದ.ರಾ. ಬೇಂದ್ರೆಯವರ ಜಗಳದ ಕುರಿತು ಹಲವು ಕತೆಗಳು ಪ್ರಚಲಿತದಲ್ಲಿವೆ. ಆದರೆ 'ನಿಷ್ಠುರ ಸೂರ್ಯೋಪಾಸನೆ' ಹಾಗೂ 'ಬೆಳದಿಂಗಳ ಮಾಯೆ'ಗಳೆರಡರಲ್ಲೂ ಸಮಾನ ಕುತೂಹಲವುಳ್ಳ ಕೀರ್ತಿನಾಥ ಕುರ್ತಕೋಟಿಯವರ ಕಾವ್ಯಶಾಸ್ತ್ರದಲ್ಲಿ ಮಾತ್ರ ಶಂಬಾ ಹಾಗೂ ಬೇಂದ್ರೆ ಯಾವ ತಕರಾರೂ ಇಲ್ಲದೇ ಜೊತೆಯಾಗುತ್ತಾರೆ. ಪುರಾಣಗಳ ಅರ್ಥಘಟನೆ ಹಾಗೂ ಸಂಕೇತಗಳ ಸ್ಥಿತ್ಯಂತರದ ಅಭ್ಯಾಸದ ಮೂಲಕ ಮರೆಯಾಗುತ್ತಿರುವ ನಮ್ಮ ಸಾಂಸ್ಕೃತಿಕ ಭಾಷೆಯನ್ನು ನೆನಪಿಸುವ ಮತ್ತು ಕನ್ನಡ ಕಾವ್ಯಪ್ರಜ್ಞೆಯ ಮೂಲಸೆಲೆಯನ್ನೂ ಅದರ ಆಳ ಹರಹುಗಳನ್ನೂ ಶೋಧಿಸುವ ಮೂಲಕ ಕನ್ನಡದ ನೈಜ ಕಾವ್ಯ ಸಂಪ್ರದಾಯವನ್ನು ಗುರುತಿಸುವ ಕುರ್ತಕೋಟಿಯವರು 'ಪುಟಬಂಗಾರ' (ಮನೋಹರ ಗ್ರಂಥಮಾಲೆಯ ಸುವರ್ಣ ಮಹೋತ್ಸವದ ಸಂಪುಟಗಳು)ದ ಮುನ್ನುಡಿಗಳಲ್ಲಿ ತಾವು ಚರ್ಚಿಸಿರುವ ಕಾವ್ಯಶಾಸ್ತ್ರ 'ಒಂದು ದೃಷ್ಟಿಯಿಂದ ಧಾರವಾಡದ ಗೆಳೆಯರ ಗುಂಪಿನ ಕಾವ್ಯಶಾಸ್ತ್ರ' ಎಂದೇ ಕರೆದಿದ್ದಾರೆ.

ಕೀರ್ತಿನಾಥರು ಜನಿಸಿದ್ದು ಗೆಳೆಯರ ಗುಂಪು ಮುರಿಯುವುದಕ್ಕೆ ಐದು ವರ್ಷಮೊದಲು- 1928ರಲ್ಲಿ. ಧಾರವಾಡ ಜಿಲ್ಲೆಯ ಗದಗ ಸಮೀಪದ ಕುರ್ತಕೋಟಿಯ ವಿದ್ವತ್ಪರಂಪರೆಯ ಗೌಡರ ಮನೆತನದಲ್ಲಿ. ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಗದಗಿನಲ್ಲಾಯಿತು. ಪದವಿ ಪಡೆದದ್ದು ಧಾರವಾಡದ ಕರ್ನಾಟಕ ಕಾಲೇಜಿನಿಂದ. 1958ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಆಂಗ್ಲಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ. ಈ ಮಧ್ಯೆ ಗದುಗಿನಲ್ಲಿ ಪ್ರೌಢಶಾಲಾ ಶಿಕ್ಷಕರಾಗಿಯೂ ಬೆಳಗಾವಿಯ ಕಾಲೇಜಿನಲ್ಲಿ ಟ್ಯೂಟರ್ ಆಗಿಯೂ ಕೆಲಸಮಾಡಿ 'ಕೀರ್ತಿ ಮಾಸ್ತರ'ರೆಂದು ಪ್ರಸಿದ್ಧರಾಗಿದ್ದರು. 'ನಮ್ಮ ಊರಾದ ಕುರ್ತಕೋಟಿಯಲ್ಲಿಯ ನಮ್ಮ ಕಕ್ಕನ ಮನೆಯಲ್ಲಿ ಹತ್ತುಸಾವಿರಕ್ಕೂ

ಮೀರಿದ ಪುಸ್ತಕಗಳ ಸಂಗ್ರಹವಿತ್ತು. ಅಲ್ಲಿ ಯಾವುದೇ ಕ್ರಮವಿಲ್ಲದೆ - ಡಿಕೆನ್ಸ್‌ನ ಕಾದಂಬರಿಗಳೊಡನೆ ಬಾಣ ಕಾದಂಬರಿ, ಕಾಳಿದಾಸನ 'ರಘುವಂಶ' ಹೀಗೆ - ನಾನು ಓದುತ್ತಿದ್ದೆ. ಗದುಗಿನಲ್ಲಿ ಶ್ರೀ ಜಿ.ವಿ.ಜೋಶಿಯವರ 'ಜೀವನ ಪುಸ್ತಕಾಲಯ'ದಲ್ಲಿಯ ಪುಸ್ತಕಗಳನ್ನು ಅವು ಮಾರಾಟವಾಗುವ ಮೊದಲೇ ಓದಿ ಮುಗಿಸಿರುತ್ತಿದ್ದೆ. ಯಾರದೋ ಭಾಷಣ, ಯಾವುದೋ ಜನಪದ ಗೀತ, ದಿವಾಳಿಗೆದ್ದಾಗ ಹಂದಿಗನೂರು ಸಿದ್ಧರಾಮಪ್ಪನವರು ಆಡಿದ ನಾಟಕ, ಪ್ರತಿವರ್ಷ ನಡೆಯುತ್ತಿದ್ದ ನಾಡಹಬ್ಬದ ಕಾರ್ಯಕ್ರಮಗಳು, ಭಾರತ ವಾಚನ- ಹೀಗೆ ಈ ಸಂಸ್ಕಾರದಿಂದ ಬಿಡುಗಡೆ ಇರಲಿಲ್ಲ - ಎಂದು ಕುರ್ತಕೋಟಿ ಯವರು ಒಂದೆಡೆ ಬರೆದಿದ್ದಾರೆ. (ಸಂಸ್ಕೃತಿ ಸ್ಪಂದನ, ಪುಟ 1)

ಉತ್ತರ ಕರ್ನಾಟಕದ ಸಾಂಸ್ಕೃತಿಕ ಕೇಂದ್ರವಾಗಿ ರೂಪುಗೊಂಡಿದ್ದ ಧಾರವಾಡದ ವಾತಾವರಣವು ಉದ್ದೀಪಕವಾಗಿತ್ತು. ಗೆಳೆಯರ ಗುಂಪು ವಿಸರ್ಜನೆಯಾದರೂ ಗುಂಪಿನ ಅಂತಃಸತ್ವ ತೀರಿರಲಿಲ್ಲ. ಬೇಂದ್ರೆ, ಬೆಟಗೇರಿ ಕೃಷ್ಣಶರ್ಮ, ಮುಗಳಿ, ಗೋಕಾಕ ಮೊದಲಾದವರು ಕಾವ್ಯ, ವಿಮರ್ಶೆ, ಶಂಬಾರ ಸಂಶೋಧನೆಗಳು, 'ಜಯಂತಿ', 'ಜಯಕರ್ನಾಟಕ'ದಂತಹ ಪತ್ರಿಕೆಗಳು, ಜಡಭರತರ ಮನೋಹರ ಗ್ರಂಥಮಾಲೆ, ದ.ಬಾ.ಕುಲಕರ್ಣಿಯವರ ಲಲಿತ ಸಾಹಿತ್ಯಮಾಲೆ ಇತ್ಯಾದಿಗಳಲ್ಲಿ ಗೆಳೆಯರ ಗುಂಪಿನ ಕನಸುಗಳ ಮುಂದುವರಿಕೆ ಇತ್ತು. ಸಹಜವಾಗಿಯೇ ಕುರ್ತಕೋಟಿಯವರಿಗೆ ಈ ಗೆಳೆಯರ ಗುಂಪಿನ ನಿಕಟ ಸಂಪರ್ಕ ದೊರಕಿತು, ಕನಸುಗಳೂ ಅವರದಾದವು. ಅವರು ಕೇಂದ್ರ ಸಾಹಿತ್ಯ ಅಕಾಡಮಿಯ ಪ್ರಶಸ್ತಿ ಪಡೆದದ್ದು (1993) ಗುಂಪಿನ ಹಿರಿಯ ಸದಸ್ಯರಾಗಿದ್ದ ಶಂಬಾ ಜೋಷಿಯವರ 'ಮರಾಠೀ ಸಂಸ್ಕೃತಿ-ಕೆಲವು ಸಮಸ್ಯೆಗಳು' ಮರಾಠೀ ಕೃತಿಯ ಕನ್ನಡಾನುವಾದಕ್ಕೆ. ಜಿ.ಬಿ.ಜೋಶಿಯವರಿ ಗಂತೂ ಕುರ್ತಕೋಟಿಯವರು ಕುಟುಂಬವರ್ಗದವರಿದ್ದಂತೆ. 1956ರಷ್ಟು ಹಿಂದೆಯೇ ಮನೋಹರ ಗ್ರಂಥಮಾಲೆಯ ಸಾಹಿತ್ಯ ಸಲಹೆಗಾರರಾಗಿ ಸೇರ್ಪಡೆ ಗೊಂಡ ಕುರ್ತಕೋಟಿಯವರು ಇಂದಿಗೂ ಆ ಕಾರ್ಯವನ್ನು ನಿಷ್ಠೆಯಿಂದ ಮುಂದುವರಿಸಿಕೊಂಡು ಬಂದಿದ್ದಾರೆ. ಇಂದಿಗೂ ಮನೋಹರ ಗ್ರಂಥ ಮಾಲೆಯೇ ಅವರ ಬಹುತೇಕ ಕೃತಿಗಳನ್ನು ಪ್ರಕಟಿಸುತ್ತಿದೆ. ಅವರಿಗೆ ಪ್ರಸಿದ್ಧಿಯನ್ನೂ ಮುಂಬಯಿ ಸರಕಾರದ ಪ್ರಥಮ ಬಹುಮಾನವನ್ನೂ ತಂದುಕೊಟ್ಟ 'ಆ ಮನಿ' (1956) ನಾಟಕಕ್ಕೆ ಪ್ರೇರಣೆ ಒದಗಿಸಿದ್ದು ಜಿ.ವಿ.ಜೋಶಿಯವರು ಹೇಳಿದ ಒಂದು ಕತೆ. ನಾಟಕ ಬರೆದದ್ದೂ ಜೋಶಿ ಯವರ ಮನೆಯಲ್ಲೇ. ಅವರ ಇನ್ನೊಂದು ನಾಟಕ 'ಸ್ವಪ್ನದರ್ಶಿ'ಯ ವಸ್ತು ಜೋಶಿಯವರ 'ಜಡಭರತನ ಕನಸುಗಳು' ಕೃತಿಯ 'ಅಶರೀರವಾಣಿ' ಎಂಬ ಕನಸಿನಿಂದ ಆಯ್ದುಕೊಂಡಿದ್ದು. ಕವಿ, ನಾಟಕಕಾರರಾಗಿದ್ದ ಕುರ್ತಕೋಟಿ ಯವರು ಸಾಹಿತ್ಯ ವಿಮರ್ಶೆಗೆ ಧುಮುಕಿದ್ದೂ ಮನೋಹರ ಗ್ರಂಥಮಾಲೆಯ ನಿಮಿತ್ತವಾಗಿಯೇ. 1958ರಲ್ಲಿ ಗ್ರಂಥಮಾಲೆ ತನ್ನ ಬೆಳ್ಳಿಹಬ್ಬದ ನೆನಪಿಗಾಗಿ 'ನಡೆದು ಬಂದ ದಾರಿ' ಸಂಪುಟಗಳನ್ನು ಪ್ರಕಟಿಸಬೇಕೆಂದು ನಿರ್ಣಯಿಸಿದಾಗ ಹೊಸಗನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ಪ್ರತಿನಿಧಿಸುವ ಈ ಸಂಪುಟ ಗಳಿಗಾಗಿ ವಿವಿಧ ಸಾಹಿತ್ಯ ಪ್ರಕಾರಗಳು ಬೆಳೆದು ಬಂದ ಇತಿಹಾಸವನ್ನು ನಿರೂಪಿಸುವ ಪ್ರಬಂಧಗಳನ್ನು ಅವರು ಬರೆಯಬೇಕಾಯಿತು. ಆಧುನಿಕ ಕನ್ನಡ ಸಾಹಿತ್ಯವನ್ನು 'ಇಡಿಯಾಗಿ ಗ್ರಹಿಸುವ ಹಾಗೂ ವ್ಯಾಖ್ಯಾನಿಸುವ ಕನ್ನಡ ವಿಮರ್ಶೆಯ ಮೊದಲ ಪ್ರಯತ್ನ' ಹಾಗೂ 'ದಶಕಗಳಿಂದ ಕನ್ನಡದ ಸಂವೇದನೆ ಯನ್ನು ರೂಪಿಸಿರುವ ಕೃತಿ ಎಂಬ ಮನ್ನಣೆ ಪಡೆದಿರುವ 'ಸಾಹಿತ್ಯ ಹಾಗೂ ಯುಗಧರ್ಮ' ರೂಪುಗೊಂಡಿದ್ದು ಹೀಗೆ.

ಮನೋಹರ ಗ್ರಂಥಮಾಲೆಯ ಅಟ್ಟದ ಮೇಲೆ ಡಾ|| ಜಾನ್ಸನ್ ಆಗಿರುವ ಕುರ್ತಕೋಟಿಯವರು ಬೇಂದ್ರೆಯವರ ಬಾಸ್ವೆಲ್ ಆಗಿದ್ದರೆಂದ ಅವರನ್ನು ಹತ್ತಿರದಿಂದ ಬಲ್ಲವರು ತಮಾಷೆಯಿಂದ ಹೇಳುತ್ತಾರೆ. 'ನನ್ನ ವಿಮರ್ಶೆಯ ಪ್ರಜ್ಞೆ ಮೂಡಿಬಂದಿದ್ದು ಬೇಂದ್ರೆ ಕಾವ್ಯದಿಂದ' ಎಂದು ಕುರ್ತಕೋಟಿಯವರೇ ಬರೆದುಕೊಂಡಿದ್ದಾರೆ (ಬಾರೋ ಸಾಧನಕೇರಿಗೆ ಮುನ್ನುಡಿ). ಒಮ್ಮೆ ಬೇಂದ್ರೆಯವರ 'ಹೊಸ ಸಂಸಾರ' ನಾಟಕದ ಪ್ರದರ್ಶನ ನಡೆದಿತ್ತಂತೆ. ಅದಕ್ಕಾಗಿ ಒಂದು ಹಾಡನ್ನು ಬೇಂದ್ರೆಯವರು ಸೊಲ್ಲಾಪುರ ದಿಂದ ಕಳಿಸಿಕೊಟ್ಟಿದ್ದರು. ಅದರಲ್ಲಿ ಎರಡು ಸಾಲು ಕಡಿಮೆ ಬಿದ್ದು ತಡವಾಗ ಬಾರದೆಂದು ಕುರ್ತಕೋಟಿಯವರೇ ಎರಡು ಸಾಲು ಬರೆದುಕೊಟ್ಟರು. ನಾಟಕ ಪ್ರದರ್ಶನಕ್ಕೆ ಬೇಂದ್ರೆಯವರು ಬಂದಾಗ 'ಈ ಎರಡು ಸಾಲು ನಿಮ್ಮವಲ್ಲ' ಎಂದು ಜಿ.ಬಿ.ಜೋಶಿ ಹೇಳಿದರು. ಆ ಹಾಡಿನ ಒಂದು ಪ್ರತಿ ಬೇಂದ್ರೆಯವರ ಹತ್ತಿರವೂ ಇತ್ತು. ಅದನ್ನು ತೆರೆದು ನೋಡಿದಾಗ ಅವೇ ಎರಡು ಸಾಲುಗಳು ಬೇಂದ್ರೆಯವರ ಹತ್ತಿರವಿದ್ದ ಮೂಲಪ್ರತಿಯಲ್ಲಿದ್ದವು. ಪ್ರತಿ ಮಾಡಿ ಕಳಿಸುವಾಗ ಕೊನೆಯ ಎರಡು ಸಾಲು ಬಿಟ್ಟುಬಿಟ್ಟಿದ್ದರಿಂದ ಈ ಚಮತ್ಕಾರ ಜರುಗಿತ್ತು. ಕುರ್ತಕೋಟಿಯವರೇ ದಾಖಲಿಸಿರುವ ('ಪ್ರಜಾವಾಣಿ'ಯ 'ಸಮ್ಮುಖಿ' ಅಂಕಣದಲ್ಲಿ) ಈ ಪ್ರಕರಣ ಅವರ 'ಸ-ಹೃದಯತೆ'ಯನ್ನೂ ಬೇಂದ್ರೆ ಕಾವ್ಯ ವಿಮರ್ಶೆಗೆ ಅವರಿಗಿರುವ 'ಅಧಿಕಾರ'ವನ್ನೂ ಸೂಚಿಸುವಂತಿದೆ. ಬೇಂದ್ರೆ ಕಾವ್ಯದ ಯಾವ ಗಂಭೀರ ಅಭ್ಯಾಸಿಯೂ ಕುರ್ತಕೋಟಿಯವರ 'ಮುಖಸ್ಪರ್ಶ'ದಿಂದ ಬೇಂದ್ರೆ ಕಾವ್ಯ 'ಹೊಸಸೃಷ್ಟಿ'ಯಾಗುವುದನ್ನು ಗಮನಿಸ ದಿರಲು ಸಾಧ್ಯವಿಲ್ಲ.

1958ರಿಂದ 1967ರವರೆಗೆ ಪುಣೆಯ ಸರ್ ಪರಶುರಾಮ ಭಾವು ಕಾಲೇಜಿನಲ್ಲಿ, 1967ರಿಂದ 1989ರವರೆಗೆ ಆನಂದದ (ಗುಜರಾತ್) ಸರ್ದಾರ್ ಪಟೇಲ್ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಸಾಹಿತ್ಯವನ್ನು ಬೋಧಿಸಿದ ಕುರ್ತಕೋಟಿಯವರನ್ನು ಬಹುಶಃ ಧಾರವಾಡದೊಂದಿಗಿನ ಅವರ ಈ ಘನಿಷ್ಠ ಸಂಬಂಧವೇ 'ಕನ್ನಡದ ಕೀರ್ತಿ'ಯಾಗಿ ಬೆಳೆಯಿಸಿತು. 'ಕನ್ನಡದ ಕೀರ್ತಿ' (1989) ಅವರಿಗೆ ಅಭಿಮಾನಿಗಳು ಅರ್ಪಿಸಿದ ಅಭಿನಂದನ ಗ್ರಂಥ. ನಿವೃತ್ತಿಯ ನಂತರ ಕುರ್ತಕೋಟಿಯವರು ಮಡದಿ, ಮಕ್ಕಳೊಂದಿಗೆ ಧಾರವಾಡದಲ್ಲೇ ನೆಲೆಸಿದ್ದಾರೆ.

ಕಾವ್ಯವನ್ನು ರಚಿಸದಿರುವುದೇ ಅಸಾಧ್ಯವೆಂಬಷ್ಟು ಉದ್ದೀಪಕವಾದ ಧಾರವಾಡದ ವಾತಾವರಣದಲ್ಲಿ ಕುರ್ತಕೋಟಿಯವರು ಶಂಕರ ಮೊಕಾಶಿ ಪುಣೇಕರ ಹಾಗೂ ಗೋವಿಂದ ಕಣೇಕಲ್ಲರ ಜೊತೆ ಸೇರಿ 'ಗಾನಕೇಳಿ' (1948) ಕವನ ಸಂಗ್ರಹ ಪ್ರಕಟಿಸಿದಾಗ ಅವರಿಗೆ ಇಪ್ಪತ್ತರ ಹರಯ. ಗದುಗಿನಲ್ಲಿ ಶಿಕ್ಷಕರಾಗಿದ್ದಾಗ ಶಾಲೆಯ ರಂಗಭೂಮಿಯ ಮೇಲೆ ಗೀತನಾಟಕಗಳಂತಹ ಹೊಸ ಪ್ರಯೋಗಗಳನ್ನೇಕೆ ಮಾಡಬಾರದೆಂಬ ಉತ್ಸಾಹದಲ್ಲಿ ಗೀತನಾಟಕ ಗಳನ್ನು ಬರೆದು ಆಡಿಸಿದ ಅವರು ರಂಗದ ಮೇಲೆ ಯಶಸ್ವಿಯಾದ ಹಾಗೂ ಆಕಾಶವಾಣಿಯಲ್ಲಿ ಬಿತ್ತರಗೊಂಡ ಐದು ಗೀತನಾಟಕಗಳನ್ನು 'ಸ್ವಪ್ನದರ್ಶಿ' (1956)ರಲ್ಲಿ ಸಂಕಲಿಸಿದ್ದಾರೆ. ಮಹಾಪುರುಷರ ಅವಸಾನ ಕಾಲವನ್ನು ಚಿತ್ರಿಸುವ ಈ ಪೌರಾಣಿಕ ನಾಟಕಗಳು ಸಂವಾದಕ್ಕಾಗಿ ಸರಳರಗಳೆಯನ್ನೂ ಮೇಳಗೀತೆಗಳಿಗೆ ಹಾಡನ್ನೂ ಬಳಸಿಕೊಳ್ಳುತ್ತವೆ. ಇವುಗಳಲ್ಲಿ ಪಾಂಡವರ ಕೊನೆಗಾಲವನ್ನು ಚಿತ್ರಿಸುವ 'ಮಹಾ ಪ್ರಸ್ಥಾನ' ತನ್ನ ಕಾವ್ಯಗುಣ, ಪಾತ್ರ ವೈವಿಧ್ಯತೆ ಹಾಗೂ ತಾತ್ವಿಕತೆಯನ್ನು ರೂಪಕವಾಗಿ ಭಾಷಾಂತರಿಸುವ ಕೌಶಲದಿಂದಾಗಿ ಯಶಸ್ವಿ ರಂಗಕೃತಿಯಾಗಬಲ್ಲದ್ದಾಗಿದೆ. ಕಾವ್ಯದೊಂದಿಗಿನ

ಈ ಕಿರು ಪ್ರಣಯದ ನಂತರ 'ಆ ಮನಿ' (1956) ನಾಟಕ ಬಂತು. ಉತ್ತರ ಕರ್ನಾಟಕದ ಆಡುಮಾತನ್ನು ಉಪಯೋಗಿಸಿಕೊಂಡ ಸಾಂಕೇತಿಕ ನಾಟಕ ಇದು. ಪೂರ್ವಾರ್ಧದಲ್ಲಿ ಮುದುಕರು, ಉತ್ತರಾರ್ಧದಲ್ಲಿ ಮಕ್ಕಳು ಹೀಗೆ ಪರಸ್ಪರ ವಿರುದ್ಧವಾದ ಪಾತ್ರ ಯೋಜನೆಯೊಂದಿಗೆ ಭೂತ-ವರ್ತಮಾನ, ವಾಸ್ತವ-ಭ್ರಮೆ, ಸಾವು-ಬದುಕಿನ ನೆರಳು ಬೆಳಕಿನಾಟದಲ್ಲಿ ದುರ್ದಮ್ಯವಾದ ಜೀವಶಕ್ತಿಯ ಕುರಿತು ಧ್ಯಾನಿಸುವ ನಾಟಕ ಕನ್ನಡದ ಹೊಸಅಲೆ ನಾಟಕಕ್ಕೆ ನಾಂದಿಯಾಯಿತು. ಪಠ್ಯಪುಸ್ತಕವಾಗಿ 3-4 ಮುದ್ರಣ ಕಂಡಿರುವ 'ಆ ಮನಿ' 1986ರಲ್ಲಿ ಗಿರೀಶ್ ಕಾರ್ನಾಡರ ನಿರ್ದೇಶನದಲ್ಲಿ ದೆಹಲಿ ದೂರದರ್ಶನ ದಿಂದ ಪ್ರಸಾರಗೊಂಡಿದೆ. ವಿಶಾಖದತ್ತನ ಮುದ್ರಾರಾಕ್ಷಸಕ್ಕೆ ಋಣಿಯಾಗಿ ರುವ ಚಂದ್ರಗುಪ್ತ (1983) ಕುರ್ತಕೋಟಿಯವರ ಐತಿಹಾಸಿಕ ನಾಟಕ. ಚಂದ್ರಗುಪ್ತನ ವ್ಯಕ್ತಿತ್ವ ವಿಕಾಸ ಹಾಗೂ ಚಾಣಕ್ಯನ ರಾಜನೀತಿ ಈ ನಾಟಕದ ಜೀವಾಳವಾಗಿದೆ. ಕುರ್ತಕೋಟಿಯವರು 'ಸ್ವಪ್ನನಾಟಕ' ಹೆಸರಿನಲ್ಲಿ ಅನುವಾದಿ ಸಿರುವ ಭಾಸನ ಸ್ವಪ್ನವಾಸವದತ್ತ ನೀನಾಸಂ ತಂಡದಿಂದ ಪ್ರದರ್ಶನ ಕಂಡಿದೆ.

ಮನೋಹರ ಗ್ರಂಥಮಾಲೆಯ ಮಹತ್ವಾಕಾಂಕ್ಷಿ ಯೋಜನೆಗಳಾದ 'ನಡೆದು ಬಂದ ದಾರಿ' ಹಾಗೂ 'ಪುಟ ಬಂಗಾರ' ಸಂಪುಟಗಳು, 'ಮನ್ವಂತರ' ಅನಿಯತಕಾಲಿಕೆ ಹಾಗೂ 'ವಾಸುದೇವ ಪ್ರಶಸ್ತಿಗಳ' ಸಹ ಸಂಪಾದಕರಾಗಿರುವ ಕುರ್ತಕೋಟಿಯವರು ನಡೆದು ಬಂದ ದಾರಿಗಾಗಿ ಬರೆದ ಪ್ರಸ್ತಾವನೆ 'ಯುಗ ಧರ್ಮ ಹಾಗೂ ಸಾಹಿತ್ಯ ದರ್ಶನ'ದಲ್ಲಿ ಕನ್ನಡ ವಿಮರ್ಶೆಯ ದಾರಿಯನ್ನು ವಿಸ್ತರಿಸಿದರು. ಹಾಗೆ ವಿಸ್ತರಿಸಲು ಬೇಕಾದ ಸೂಕ್ಷ್ಮ ತಾರತಮ್ಯ ಜ್ಞಾನ, ಅಸಾಧಾರಣ ವ್ಯುತ್ಪತ್ತಿ, ಬಹು ಶ್ರುತತ್ವ, ಕಾವ್ಯಮೀಮಾಂಸೆಯ ಹಾಗೂ ಆಳವಾದ ಸಾಹಿತ್ಯಾನುಭವದ ತಳಹದಿ, ವಿಲಕ್ಷಣ ಸ್ಮರಣಶಕ್ತಿ, ವಿವರಗಳನ್ನು ಸಮಗ್ರಗೊಳಿಸುವ ಸಂಯೋಜಕ ಪ್ರತಿಭೆ ಅವರಲ್ಲಿ ಧಾರಾಳವಾಗಿದೆ. ಇವುಗಳ ಜೊತೆಗೆ ಯುಗದ ಸಾಹಿತ್ಯದ ಅಗತ್ಯವೇನೆಂಬುದನ್ನು ಯೋಜಿಸುವ ಸಾಂಸ್ಕೃತಿಕ ಹೊಣೆಗಾರಿಕೆಯೂ ಸೇರಿ ವಿಮರ್ಶೆಯ ದಾರಿಯೀಗ ಸಂಸ್ಕೃತಿ ವಿಮರ್ಶೆಯ ವಿಶಾಲ ಅಂಗಳವನ್ನು ತಲುಪಿದೆ.

'ಯುಗಧರ್ಮ ಹಾಗೂ ಸಾಹಿತ್ಯದರ್ಶನ' (1962) ಹಾಗೂ ಅದರ ಬೆನ್ನಿಗೇ ಬಂದ 'ನವ್ಯಕಾವ್ಯ ಪ್ರಯೋಗ' (1963) ಆಧುನಿಕ ಕನ್ನಡ ಸಾಹಿತ್ಯದ ವಿಕಾಸವನ್ನು ಯುಗಧರ್ಮದ ಹಿನ್ನೆಲೆಯಲ್ಲಿ ಸಮೀಕ್ಷಿಸುವ, ವ್ಯಾಖ್ಯಾನಿಸುವ ಹಾಗೂ ಮೌಲ್ಯಮಾಪನ ಮಾಡುವ ಮಹಾತ್ವಾಕಾಂಕ್ಷೆಯ ಕೃತಿಗಳು. 'ಯುಗಧರ್ಮ' ಹಳೆಯ ಸಾಹಿತ್ಯದ ಹಿನ್ನೆಲೆ, ಹೊಸಕಾಲದ ಸವಾಲುಗಳು, ಹೊಸ ಪ್ರಭಾವಗಳು, ಹೊಸ ಸಾಹಿತ್ಯ ಪ್ರಕಾರಗಳ ಸ್ವರೂಪ- ಇವುಗಳ ಚರ್ಚೆಯನ್ನೊಳಗೊಂಡ ವಿಸ್ತಾರವಾದ ಭೂಮಿಕೆಯಲ್ಲಿ ಹೊಸಗನ್ನಡ ಸಾಹಿತ್ಯ ಸಂಪ್ರದಾಯವೊಂದು ರೂಪುಗೊಂಡಿರುವ ಕ್ರಮವನ್ನು ಗುರುತಿಸಿ ಬಿ.ಎಂ.ಶ್ರೀ. ಯವರಿಂದ ಹಿಡಿದು ಅಡಿಗರವರೆಗಿನ ಮುನ್ನೂರಕ್ಕೂ ಹೆಚ್ಚು ಕೃತಿಕಾರರ ಮೌಲ್ಯಮಾಪನವನ್ನು ಪೂರೈಸಿದರೆ 'ನವ್ಯಕಾವ್ಯ ಪ್ರಯೊಗ' ನವ್ಯಕಾವ್ಯದ ಪ್ರೇರಣೆಗಳ ಹಾಗೂ ಉಗಮದ ವಿವೇಚನೆ, ಏಳುಜನ ಪ್ರಾತಿನಿಧಿಕ ಕವಿಗಳ ಚರ್ಚೆ ಹಾಗೂ ಹೊಸ ಕಾವ್ಯದ ಮುನ್ನೋಟವನ್ನೊಳಗೊಂಡಿದೆ. ಈ ಬರಹ ಗಳ ಹಿಂದೆ ಕೆಲಸ ಮಾಡಿರುವ ತಾತ್ವಿಕ ಗ್ರಹಿಕೆಗಳು ಬಹುಮಟ್ಟಿಗೆ ಬ್ರಿಟಿಷ್ ರೂಪನಿಷ್ಠ ವಿಮರ್ಶೆಯ, ಅದರಲ್ಲೂ ಎಲಿಯಟ್ ಹಾಗೂ ಲೀವಿಸ್‌ರ ಸಿದ್ಧಾಂತಗಳಿಂದ ಪ್ರಭಾವಿತವಾಗಿವೆ. ಎಲಿಯಟ್‌ನ 'ಯುರೊಪಿಯನ್ ಪರಂಪರೆ' ಕಲ್ಪನೆಯನ್ನು ಆಧರಿಸಿ ಲೀವಿಸ್ ಹೆಚ್ಚು ನಿರ್ದಿಷ್ಟವೂ ಸ್ಥಾನಿಕವೂ ಆದ 'ಇಂಗ್ಲಿಷ್ ಪರಂಪರೆ'ಯ ಕಲ್ಪನೆಯನ್ನು ಸೃಷ್ಟಿಸಿಕೊಂಡಂತೆ ಕುರ್ತಕೋಟಿ ಯವರು 'ಕನ್ನಡ ಪರಂಪರೆ/ಸಂಪ್ರದಾಯ'ದ ಕಲ್ಪನೆಯನ್ನು ಕಟ್ಟಿಕೊಳ್ಳುತ್ತಾರೆ. ಈ 'ಕನ್ನಡ ಪರಂಪರೆ'ಯಲ್ಲಿ ನಿಹಿತವಾಗಿರುವ ಕನ್ನಡದ ಅಂತಃಸತ್ವವನ್ನು ಕೃತಿಯಲ್ಲಿ ಒಡಮೂಡಿಸುವುದು ಕೃತಿಕಾರನ ನೈತಿಕ ಹೊಣೆಗಾರಿಕೆ ಎಂದು ಅವರು ಪ್ರತಿಪಾದಿಸುತ್ತಾರೆ. 'ಜನಋಣ', 'ಸಮಕಾಲೀನತೆಯ ಋಣ', 'ಕವಿ ತನ್ನ ವಾತಾವರಣಕ್ಕೆ ಸಲ್ಲಿಸಬೇಕಾದ ಋಣ' ಮೊದಲಾದ ಮಾತುಗಳಲ್ಲಿ ಈ ಕಾಳಜಿಯ ನೈತಿಕ ಸ್ವರೂಪದ ಮೇಲೆ ಒತ್ತು ಇದೆ. ಹೀಗಾಗಿ ಯುಗ ಧರ್ಮದುದ್ದಕ್ಕೂ ಹೊಸ ಪ್ರಭಾವಗಳ ಕುರಿತಾದ ಹಿಂಜರಿಕೆ, ವ್ಯಕ್ತಿನಿಷ್ಠತೆಯ ಕುರಿತಾದ ಅನುಮಾನ, ಪಾಶ್ಚಾತ್ಯ ಅಭಿವ್ಯಕ್ತಿ ವಿಧಾನಗಳ ಅನುಸರಣೆಯ ಕುರಿತು ಅಸಮಾಧಾನ ಮತ್ತೆ ಮತ್ತೆ ವ್ಯಕ್ತವಾಗಿದೆ. ಅವರ 'ಯುಗಧರ್ಮ'ದ ಪರಿಕಲ್ಪನೆ ಸಮಕಾಲೀನ ಪ್ರಜ್ಞೆಗೆ ಪರ್ಯಾಯ ಪದವೆಂಬಷ್ಟು ಸೀಮಿತ ವಾದದ್ದಾದರೂ ರೋಮ್ಯಾಂಟಿಕ್ ವಿಮರ್ಶಾ ಸಂಪ್ರಾದಾಯದೊಂದಿಗೆ ಬಂದ ವ್ಯಕ್ತಿವಿಷ್ಠತೆಯ ಮೇಲಿನ ಒತ್ತನ್ನು ಕಡಿಮೆಮಾಡುವಂತಹುದಾಗಿದೆ. ಯುಗಧರ್ಮ ಎಷ್ಟರಮಟ್ಟಿಗೆ ಸೂಕ್ತ ರೂಪವಿನ್ಯಾಸ ಪಡೆದು ಸಾಹಿತ್ಯ ದರ್ಶನದಲ್ಲಿ ಸಮವಾಯಗೊಂಡಿದೆ ಎಂಬುದನ್ನು ಕುರ್ತಕೋಟಿಯವರು ಸಾಹಿತ್ಯಕೃತಿಯ ಯಶಸ್ಸಿನ ನಿಕೃಷ್ಟವಾಗಿ ಬಳಸುತ್ತಾರೆ. ಉದಾಹರಣೆಗೆ ಗಿರಿಜಾ ಕಲ್ಯಾಣ, ರಾಜಶೇಖರ ವಿಳಾಸ, ಜಗನ್ನಾಥ ವಿಜಯದಂತಹ ಕೃತಿಗಳು ತಮ್ಮ ಕಾಲದ ಅರ್ಥಪೂರ್ಣತೆಯನ್ನು ತರಲು ಪ್ರಯತ್ನ ಮಾಡಿದರೂ ಅದಕ್ಕೆ ರೂಪವಿನ್ಯಾಸ ಹೊಂದಿಕೆಯಾಗಿಲ್ಲ, 'ರಾಮಾಯಣ ದರ್ಶನಂ' ಆಧುನಿಕ ಯುಗದ ಕೆಲವು ವಿವರಗಳನ್ನು ಪ್ರತಿಪಾದಿಸಿದ್ದರೂ ಈ ವಿವರಗಳು ಮೂಲ ವಸ್ತುವಿನ ಜೊತೆಗೆ ಸಮರಸವಾಗದೆ ಬೇರೆಯಾಗಿ ನಿಲ್ಲುತ್ತವೆ ಎಂದು ಕುರ್ತಕೋಟಿಯವರು ತೀರ್ಮಾನಿಸುತ್ತಾರೆ. ಅವರ ಪ್ರಕಾರ 'ಸಮಕಾಲೀನ ಜೀವನಕ್ಕೆ ಕಾವ್ಯದ ಸ್ವರೂಪ ಕೊಡುವ ಕೆಲಸ' ಆಗದಿದ್ದುದು ಶ್ರೀಯವರ ಮಿತಿಯಾದರೆ 'ಕನ್ನಡದ ಸರ್ವತೋಮುಖ ಜೀವನವನ್ನು ಒಳಗೊಳ್ಳ ದಿದ್ದುದು' ಕೆ.ಎಸ್.ನ. ಕಾವ್ಯದ ಮಿತಿಯಾಗಿದೆ. ನಾಡಿನ ಸಂಸ್ಕೃತಿಯನ್ನು ಚಿತ್ರಿಸುತ್ತ ಅದನ್ನು ವ್ಯಕ್ತಿತ್ವದ ಬಂಧನದಿಂದ ಬಿಡಿಸಿದುದು ಮಾಸ್ತಿ ಕಾವ್ಯ ಸಾಧಿಸಿದ ಮಹತ್ವದ ಉದ್ದೇಶ ಎಂದು ಕುರ್ತಕೋಟಿಯವರು ಶ್ಲಾಘಿ ಸುತ್ತಾರೆ. ನವ್ಯಕಾವ್ಯದ ಪ್ರಾದುರ್ಭಾವ ಐತಿಹಾಸಿಕ ಅವಶ್ಯಕತೆಯಾಗಿ ಬಂದಿಲ್ಲ; ನವ್ಯಕಾವ್ಯ ಬಿಂಬಿಸುವ ಅಂಶಗಳಿಗೂ ಯುಗಧರ್ಮಕ್ಕೂ ಪರಸ್ಪರ ಸಂಬಂಧವೇ ಇಲ್ಲ-ಮೊದಲಾದ ತುಂಬ ವಾದ ವಿವಾದಗಳಿಗೆ ಕಾರಣವಾದ ಮಾತುಗಳೂ ಇದೇ ವಿಮರ್ಶಾ ನೆಲೆಯಿಂದ ಹೊರಟವಾಗಿವೆ. 'ನವ್ಯಕಾವ್ಯ ಪ್ರಯೋಗ'ದಲ್ಲಿ ಸಮಕಾಲೀನ ಸಂವೇದನೆ ಬದಲಾಗಿದೆ ಎಂಬುದನು ಅವರು ಒಪ್ಪಿಕೊಂಡರೂ ನವ್ಯಕಾವ್ಯ ಈ ಬದಲಾದ ಸಂವೇದನೆಯನ್ನು ಎಷ್ಟರ ಮಟ್ಟಿಗೆ ಪ್ರತಿಬಿಂಬಿಸಿದೆ ಎಂಬ ಸಂದೇಹವನ್ನು ವ್ಯಕ್ತಪಡಿಸುತ್ತಾರೆ. 'ನವ್ಯ ಕಾವ್ಯ ಪ್ರಯೋಗ'ದಂತೆ 60ರ ಹಾಗೂ 70ರ ದಶಕದಲ್ಲಿ ಬಂದ ಸಾಂದರ್ಭಿಕ ಲೇಖನಗಳ ಸಂಗ್ರಹ 'ವಿಮರ್ಶೆಯ ವಿನಯ; ಕಾದಂಬರಿ' (1982), ವಿಮರ್ಶೆಯ ವಿನಯ; ನಾಟಕ (1985)ಗಳಲ್ಲೂ ಯುಗಧರ್ಮದ ಪ್ರತ್ಯೇಕ ವಿಮರ್ಶಾ ತೀರ್ಮಾನಗಳನ್ನು ವಿಸ್ತಾರವಾಗಿ ಚರ್ಚಿಸುವ ಬರಹಗಳಿವೆ.

ಕರ್ನಾಟಕ ಏಕೀಕರಣ ಚಳವಳಿ ಹಾಗೂ ರಾಷ್ಟ್ರೀಯವಾದಿ ಚಿಂತನೆಯ ಪರಿಸರದಲ್ಲಿ ರೂಪುಗೊಂಡ ಹಾಗೂ ಗೆಳೆಯರ ಗುಂಪಿನ ಕಾವ್ಯೋದ್ದೇಶ ಗಳಿಂದ ಪ್ರೇರಣೆ ಪಡೆದ ಕುರ್ತಕೋಟಿಯವರ ವಿಮರ್ಶಾಪ್ರಜ್ಞೆ ಕಾವ್ಯಗುಣಕ್ಕೆ ಕೊಡುವಷ್ಟೇ ಮಹತ್ವವನ್ನು ಕವಿಯಿಂದ ಎಷ್ಟರಮಟ್ಟಿಗೆ 'ಋಣ' ಸಂದಾಯ

ವಾಗಿದೆ ಎಂಬುದಕ್ಕೂ ಕೊಡುವುದರಿಂದ ಅವರ ದನಿ ಉಳಿದ ನವ್ಯ ವಿಮರ್ಶಕರಿಗಿಂತ ಭಿನ್ನವಾದದ್ದಾಯಿತು. ವಸಾಹತುಶಾಹಿಯ ಪರಿಣಾಮವಾಗಿ ನಮ್ಮ ಪರಂಪರೆಗೆ ಬಲವಾದ ಆಘಾತ ಒದಗಿರುವ ಕಾರಣದಿಂದ ಸಂಪ್ರದಾಯದ ಅವನತಿ ಎಂದಿಗಿಂತ ಹೆಚ್ಚಾಗಿದೆ ಎಂಬ ಹಿನ್ನೆಲೆಯಲ್ಲಿ ಸಾಹಿತ್ಯದ ಬೆಳವಣಿಗೆಗೆ ಸಹಜ ಹಿನ್ನೆಲೆಯಾಗಬಲ್ಲ ಸಂಪ್ರದಾಯದ ಪುನರಾರ್ಜನೆಗೆ ಅವರು ವಿಶೇಷ ಮಹತ್ವ ನೀಡಿದರು. ನವ್ಯ ವಿಮರ್ಶೆ ಸಾಹಿತ್ಯ ವಿಮರ್ಶೆಗೆ ಶಾಸ್ತ್ರದ ಶಿಸ್ತು ಹಾಗೂ ಪ್ರಬುದ್ಧತೆ ತಂದುಕೊಟ್ಟಿತೆಂದು ಕುರ್ತಕೋಟಿಯವರೂ ಒಪ್ಪುತ್ತಾರೆ. ಆದರೆ 'ಪ್ರಾಯೋಗಿಕ ವಿಮರ್ಶೆ', ('ಜೀವಂತ ಪ್ರಾಣಿಯನ್ನು ಎಚ್ಚರ ತಪ್ಪಿಸಿ ಅದರ ಅಂಗಾಂಗಗಳನ್ನು ಪರೀಕ್ಷೆಗೊಳಪಡಿಸುವ ಶಾಸ್ತ್ರ ವಿಧಾನ') ಅವರಿಗೆ ಒಪ್ಪಿತವಾದುದಲ್ಲ. ಹೀಗಾಗಿ ಕೃತಿಯ ಅಂತಃಸತ್ವ ಎಷ್ಟರಮಟ್ಟಿಗೆ ಅಭಿವ್ಯಕ್ತವಾಗಿದೆ ಹಾಗೂ ಒಟ್ಟು ಕಾವ್ಯ ಪರಂಪರೆಯೊಂದಿಗೆ ಯಾವ ಬಗೆಯ ಸಂಬಂಧವನ್ನು ಹೊಂದಿದೆ ಎಂಬುದನ್ನು ಗಮನಿಸುವ ವ್ಯಾಖ್ಯಾನಪರವಾದ ಒಂದು ಬಗೆಯ 'ಅಶಾಸ್ತ್ರೀಯ' ವಿಮರ್ಶಾ ವಿಧಾನವನ್ನು ಅವರು ಪ್ರತಿಪಾದಿಸಿದರು ಹಾಗೂ ಅನುಸರಿಸಿದರು. ಕಾವ್ಯ ಪರಂಪರೆಯಲ್ಲಿದ್ದ ಇಂತಹ ಗಾಢ ವಿಶ್ವಾಸದಿಂದಾಗಿ ಕಾವ್ಯ ಸಂಪ್ರದಾಯದ ಅವಿಚ್ಛಿನ್ನತೆಯನ್ನು ಕಾಪಾಡಿದ ಕವಿಗಳನ್ನು ಅವರು ವಿಶೇಷವಾಗಿ ಮೆಚ್ಚಿಕೊಂಡರು. ಹೊರಳು ದಾರಿಯಲ್ಲಿ ನಿಂತ ಹೊಸಗನ್ನಡ ಸಾಹಿತ್ಯದ ಸಂಪ್ರದಾಯ ವಿಮುಖತೆ ಹಾಗೂ ವ್ಯಕ್ತಿ ನಿಷ್ಠತೆಯಿಂದ ಹುಟ್ಟಿಕೊಂಡ ಆತಂಕ ಅವರ ಆರಂಭಿಕ ವಿಮರ್ಶಾ ಬರಹಗಳ ಏರುದನಿಗೂ ಅಸಹನೆಗೂ ವಿವಾದ ಸ್ವರೂಪಕ್ಕೂ ಕಾರಣವಾಗಿದೆ. ಇದೇ ರೀತಿ ಕಾಳಿದಾಸ-ಕುಮಾರವ್ಯಾಸ-ಬೇಂದ್ರೆ-ಕುರ್ತಕೋಟಿಯವರ ವಿಮರ್ಶಾಪ್ರಜ್ಞೆಯನ್ನು ಇಡಿಯಾಗಿ ಆವರಿಸಿಕೊಳ್ಳುವುದಕ್ಕೂ ಆ ಪ್ರಜ್ಞೆ ಬೆಳೆದು ಬಂದಿರುವ ಸಾಂಸ್ಕೃತಿಕ ಪರಿಸರವೂ ಕಾರಣವಾಗಿರಬಹುದಾಗಿದೆ. 'ಪ್ರತ್ಯಭಿಜ್ಞಾನ' (1998)ದಲ್ಲಿ ಸೇರಿರುವ ಸಂಸ್ಕೃತ ನಾಟಕಗಳ ಕುರಿತಾದ ಇದೇ ಅವಧಿಯ ಲೇಖನದಲ್ಲಿ, 'ಕುಮಾರವ್ಯಾಸ' (1989) ಕಿರುಹೊತ್ತಿಗೆ ಹಾಗೂ 'ಕುಮಾರವ್ಯಾಸ: ಜೀವನ ದೃಷ್ಟಿ ಹಾಗೂ ಸಾಹಿತ್ಯ ಸ್ವರೂಪ' ದೀರ್ಘ ಲೇಖನದಲ್ಲಿ ಹಾಗೂ 'ಬಾರೋ ಸಾಧನಕೇರಿಗೆ' (1993)ಯಲ್ಲಿ ಸಂಕಲನಗೊಂಡಿರುವ ಬೇಂದ್ರೆ ಕುರಿತ ಬಹುತೇಕ ಬರಹಗಳಲ್ಲಿ ನವ್ಯವಿಮರ್ಶೆಯ ಪರಿಕರಗಳ ಜೊತೆಗೆ ನವ್ಯ ವಿಮರ್ಶೆಗಿಂತ ನವ್ಯ ಭಿನ್ನವಾದ ಕಾಳಜಿಗಳು, ತೀರ್ಮಾನಗಳು ಹಾಗೂ ಒತ್ತನ್ನು ಗಮನಿಸಬಹುದು.

ಬೇಂದ್ರೆ ಕಾವ್ಯದ ವಿಭಿನ್ನ ನೆಲೆಗಳ ವಿವೇಚನೆ, ಬೇಂದ್ರೆ ಕಾವ್ಯ ಅವಲಂಬಿಸಿರುವ ಬೌದ್ಧಿಕ ವ್ಯವಸ್ಥೆಗಳ ಚರ್ಚೆ ಹಾಗೂ ಬೇಂದ್ರೆಯವರ ಪ್ರಮುಖ ಕವನಗಳ ವ್ಯಾಖ್ಯಾನವನ್ನೊಳಗೊಂಡ ಬರಹಗಳಿರುವ 'ಬಾರೋ ಸಾಧನ ಕೇರಿಗೆ' ಕೃತಿಗೆ ಬೇಂದ್ರೆ ಕಾವ್ಯದ ಕುರಿತು ಬಂದಿರುವ ವಿಮರ್ಶಾ ಗ್ರಂಥಗಳಲ್ಲಿ ವಿಶಿಷ್ಟ ಸ್ಥಾನವಿದೆ. ಇವು ಕುರ್ತಕೋಟಿಯವರು ಬೇರೆ ಬೇರೆ ಕಾಲಘಟ್ಟಗಳಲ್ಲಿ ಹಾಗೂ ಸಂದರ್ಭಗಳಿಗಾಗಿ ಬರೆದ ಬರಹಗಳಾಗಿರುವುದರಿಂದ ಕುರ್ತಕೋಟಿಯವರ ವಿಮರ್ಶಾ ನೆಲೆಗಳಲ್ಲಾದ ಬದಲಾವಣೆ ಯನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಉದಾಹರಣೆಗೆ 1960ರ ಲೇಖನ ಕವಿಯ ವೈಯಕ್ತಿಕ ಅಭಿವ್ಯಕ್ತಿಗಿಂತ ಒಂದು ಕಾವ್ಯಪರಂಪರೆಯ ದನಿ ಹೆಚ್ಚು ಆಳವೂ ಪ್ರಭಾವಶಾಲಿಯೂ ಆಗಿರುತ್ತದೆ ಎಂಬ ನೆಲೆಯಿಂದ ಬಂದದ್ದು. ಇಡೀ 'ಯುಗಧರ್ಮ'ದ ಹಿಂದಿನ ತಿಳಿವಳಿಕೆ ಇದಾಗಿದೆ. ಇಲ್ಲಿ ಬೇಂದ್ರೆಯವರು ವರ್ತಮಾನ ಕಾಲದ ಸಂಸ್ಕೃತಿ ಹಾಗೂ ಭಾಷೆಯ ವ್ಯಂಜನಾ ಸಾಮರ್ಥ್ಯ ಇವೆರಡನ್ನೂ ಅನುಲಕ್ಷಿಸಿ ಸಮೃದ್ಧವಾದ ಕಾವ್ಯವನ್ನು ರಚಿಸಿ ಸಂಪ್ರದಾಯ ನಿರ್ಮಾಪಕರಾಗಿರುವುದು ಕುರ್ತಕೋಟಿಯವರಿಗೆ ಮಹತ್ವದ್ದಾಗಿ ಕಂಡಿದೆ. ಆದರೆ ಯುಗಧರ್ಮದಲ್ಲಿಯಂತೆ ಅವರ ಪರಂಪರೆಯ ಪರಿಕಲ್ಪನೆಯೇ ಸೀಮಿತವಾದದ್ದಾಗಿರುವುದರಿಂದ 'ಮೂರ್ತಿ', 'ಜೋಗಿ', 'ಕಲ್ಪವೃಕ್ಷ....', 'ಹಕ್ಕಿ ಹಾರುತಿದೆ'ಯಂತಹ ಅಮೂರ್ತದ ಬೆನ್ನುಹತ್ತಿದ ತಾತ್ವಿಕ ಕವಿತೆಗಳನ್ನು ಚರ್ಚಿಸಲು ಸಾಧ್ಯವಾದಂತೆ 'ಹುಬ್ಬಳ್ಳಿಯಾಂವಾ', 'ರಾಗರತಿ'ಯಂತಹ ಜಾನಪದ ಸೊಗಡಿನ ಕವನಗಳ ಮಹತ್ವವನ್ನು ಈ ಚೌಕಟ್ಟಿನಲ್ಲಿ ವಿವರಿಸಲು ಸಾಧ್ಯವಾಗಲಿಲ್ಲ. ಈ ಕವನಗಳಲ್ಲಿ ಭಾವಾವೇಗದಿಂದ ರಸಸಿದ್ಧಿ ಆಗಿಲ್ಲವೆಂದು ಅವರು ತೀರ್ಮಾನಿಸುತ್ತಾರೆ. ಆದರೆ 1980ರ ಈಚಿನ ಬರಹಗಳಲ್ಲಿ ಬೇಂದ್ರೆಯವರು ಪರಂಪರೆಯೊಂದಿಗೆ ಹೊಂದಿದ್ದ ದ್ವಂದ್ವಾತ್ಮಕ ಸಂಬಂಧವನ್ನು ಗುರುತಿಸುವುದು ಅವರಿಗೆ ಸಾಧ್ಯವಾಗಿದೆ. ಪರಂಪರೆಯ ಒಳಗಿದ್ದೂ ಬೇಂದ್ರೆಯವರು ತಮ್ಮ ವಿಶಿಷ್ಟತೆಯನ್ನು ಬಿಟ್ಟುಕೊಡದಿರುವುದು ಹೇಗೆ ಎಂಬ ಪ್ರಶ್ನೆಯನ್ನು ಕುರ್ತಕೋಟಿಯವರು ಎತ್ತುತ್ತಾರೆ. ಇದಕ್ಕೆ ಉತ್ತರವಾಗಿ 'ಶ್ರಾವಣ ಪ್ರತಿಭೆ' ಎಂಬ ಪರಿಕಲ್ಪನೆಯನ್ನು ಬೆಳೆಸಿ ಬೇಂದ್ರೆ ಕಾವ್ಯವನ್ನು ವಿಶಿಷ್ಟವಾಗಿಸುವ ಅವರ ಪ್ರತಿಭೆಯ ಸ್ವರೂಪವನ್ನು ಗುರುತಿಸುತ್ತಾರೆ. ಜಾನಪದ ಕಾವ್ಯವನ್ನು ಒಪ್ಪಿಕೊಳ್ಳುವುದರ ಮೂಲಕ ಹಳೆಯ ಕಾವ್ಯ ಪರಂಪರೆಯಿಂದ ಸ್ವಂತ ಕಾವ್ಯವನ್ನು ಬಿಡುಗಡೆಗೊಳಿಸಲು ಬೇಂದ್ರೆಯವರಿಗೆ ಸಾಧ್ಯವಾಯಿತು ಎಂದು ತೀರ್ಮಾನಿಸುತ್ತಾರೆ. ಈ ಹಿನ್ನೆಲೆಯಲ್ಲಿ 'ಹುಬ್ಬಳ್ಳಿಯಾಂವ', 'ಪಾತರಗಿತ್ತಿ ಪಕ್ಕ' ದಂತಹ ಕವನಗಳು ಭಾಷೆ ಹಾಗೂ ಲಯಗಳ ಅಪೂರ್ವ ಹೊಂದಾಣಿಕೆಯಿಂದ ಹಾಗೂ ಆಡುಭಾಷೆಯ ಮೂಲಕ್ಕಿರುವ ಕಾವ್ಯಪ್ರಜ್ಞೆಯನ್ನು ಉಪಯೋಗಿಸಿಕೊಳ್ಳುವುದರಿಂದ ಶ್ರೀಮಂತವಾಗಿರುವುದು, ಕನ್ನಡ ಭಾಷೆಗೆ ಸಜೀವತೆಗಳಿಸಿಕೊಟ್ಟಿರುವುದು ಅಪೂರ್ವವಾಗಿ ಕಾಣುತ್ತದೆ. ಕಾವ್ಯ ಭಾಷಿಕ ಸಂಜ್ಞೆಗಳ ಒಂದು ರಚನೆ. ಬೇಂದ್ರೆಯವರು ಇಂಥ ಭಾಷಿಕ ಸಂಜ್ಞೆಗಳನ್ನು ಜೀವಂತವಾಗುವಂತೆ ಕಾವ್ಯದ ಮೂಲಕ ನಿರ್ವಹಿಸಿದರು. ಐತಿಹಾಸಿಕ ಕಾರಣಗಳಿಂದಾಗಿ ಕುಸಿದುಬಿದ್ದ ಭಾಷೆಯ ಅರ್ಥನಿರ್ಮಾಣ ವ್ಯವಸ್ಥೆಯನ್ನು ಪುನರ್ನಿರ್ಮಿಸಿದರು ಎಂದು ಕುರ್ತಕೋಟಿಯವರು ವಾದಿಸುತ್ತಾರೆ.

ಭಾಷಿಕ ಸಂಜ್ಞೆಯಷ್ಟೇ ಅಲ್ಲ, ಇತರ ಮನುಷ್ಯ ಚಟುವಟಿಕೆಗಳು ಹಾಗೂ ಉತ್ಪಾದನೆಗಳೂ ಸಹಿತ ಸಂಸ್ಕೃತಿ ವಿಶಿಷ್ಟಮಾನ ಹಾಗೂ ಸಂಸ್ಕೃತಿಯ ಒಳಗಿನವರಿಗಷ್ಟೇ ಸಾಮಾನ್ಯ 'ಅರ್ಥ' ಕಟ್ಟಿಕೊಡುವ 'ಸಂಜ್ಞೆ'ಗಳಾಗಿವೆ ಎಂಬ ಗ್ರಹಿಕೆ ಕುರ್ತಕೋಟಿಯವರ ಇತ್ತೀಚಿನ ಬರಹಗಳ ನೆಲೆಯಾಗಿದೆ. ಅಂದರೆ, ಪ್ರತಿಯೊಂದು ಸಂಸ್ಕೃತಿಯೂ ಪ್ರತ್ಯೇಕ ಸಂಜ್ಞಾ ವ್ಯವಸ್ಥೆಗಳನ್ನು ಒಳಗೊಂಡಿರುತ್ತದೆ. ಸಾಹಿತ್ಯವೂ ಸೇರಿದಂತೆ ನಿರ್ದಿಷ್ಟ ಸಾಮಾಜಿಕ ಉತ್ಪಾದನೆ ಅಥವಾ ಘಟನೆಗಳ ಸೂಕ್ಷ್ಮ ಪರಿಶೀಲನೆ (thick description)ಯಿಂದ ಆ ಸಂಸ್ಕೃತಿಯ ಒಳಗಿನವರಿಗೆ ಅವು ಕಟ್ಟಿಕೊಡುವ ಅರ್ಥವನ್ನು ಪುನರ್ ನಿರ್ಮಿಸಲು ಸಾಧ್ಯವಿದೆಯಲ್ಲದೆ ಹಾಗೆ ಕಟ್ಟಿಕೊಡಲು ಕಾರಣವಾದ ಸಂಪ್ರದಾಯಗಳ ವಿನ್ಯಾಸಗಳು, ಸಂಕೇತಗಳು ಹಾಗೂ ವಿಚಾರಕ್ರಮಗಳನ್ನು ಕಂಡುಹಿಡಿಯುವುದೂ ಸಾಧ್ಯವಿದೆ. ಈ ಮೂಲಕ ಪ್ರತಿಯೊಂದು ಸಂಸ್ಕೃತಿಗೂ ವಿಶಿಷ್ಟವಾಗಿರುವ ಅದರದೇ ಆದ ಅಂತರಾರ್ಥವನ್ನು ಅರಿಯಲು ಸಾಧ್ಯವಿದೆ. ಹೀಗಾಗಿ ಆತ್ಯಂತಿಕವಾಗಿ 'ಸಂಸ್ಕೃತಿಯ ಸಂರಚನೆಯ ಅಧ್ಯಯನ ವಿಮರ್ಶೆಯ ಆಸಕ್ತಿಯಾಗಬೇಕಾಗಿದೆ' (ಸಂಸ್ಕೃತಿ ಸ್ಪಂದನ, 4) ಎಂದು ಕುರ್ತಕೋಟಿಯವರು ಪ್ರತಿಪಾದಿಸುತ್ತಾರೆ. ಸಾಹಿತ್ಯ ಹಾಗೂ ಕಲೆಗಳು ಇನ್ನಿತರ ಸಾಮಾಜಿಕ, ರಾಜಕೀಯ, ಧಾರ್ಮಿಕ ಮುಂತಾದ ಸಂಸ್ಥೆಗಳೊಂದಿಗೆ ಸಂಕೀರ್ಣ ಸಂವಾದಾ

ತ್ಮಕ ಸಂಬಂಧವನ್ನು ಹೊಂದಿರುವುದೆಂಬ ಹಾಗೂ ಈ ಎಲ್ಲ ಚಟುವಟಿಕೆಗಳು ಒಟ್ಟಾಗಿ ಒಂದು ದೇಶ ಹಾಗೂ ಕಾಲದ ಸಂಸ್ಕೃತಿಯನ್ನು ಕಟ್ಟಿಕೊಡುತ್ತದೆಂಬ ಚಿಂತನೆಯನ್ನು 'ಸಾಂಸ್ಕೃತಿಕ ಕಾವ್ಯಶಾಸ್ತ್ರ' (Poetics of Culture) ಎಂದು ಗುರುತಿಸಬಹುದು. 'ಸಂಸ್ಕೃತಿ ಸ್ಪಂದನ' (1986), 'ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ' (1990), ಪುಸ್ತಕಗಳಲ್ಲಿ ಹಾಗೂ 'ಸಾಹಿತ್ಯ ಸಂಗಾತಿ' (1995), 'ನೂರು ಮರ ನೂರು ಸ್ವರ' (1998), 'ಪ್ರತ್ಯಭಿಜ್ಞಾನ' (1999)ಗಳ ಸುದೀರ್ಘ ಪ್ರಸ್ತಾವನೆಗಳಲ್ಲಿ ಈ ಕಾವ್ಯಶಾಸ್ತ್ರದ ತಾತ್ತ್ವಿಕ ಚರ್ಚೆ ಹಾಗೂ ಸಮರ್ಥನೆ ಇದೆ. ಇವುಗಳಲ್ಲಿಯ ಮುಖ್ಯವಾದ ಹೀಗಿದೆ:

1. ಸಾಹಿತ್ಯವೆಂದರೆ ಕೆಲವು ಅಗೋಚರ ಶಕ್ತಿಗಳ ಫಲ. ಸಾಹಿತ್ಯದ ಸ್ವರೂಪವನ್ನು ಕವಿಯ ಉದ್ದೇಶಕ್ಕಿಂತ ಈ ಅಗೋಚರ ಶಕ್ತಿಗಳೇ ರೂಪಿಸುತ್ತವೆ. ಈ ಶಕ್ತಿಗಳು ಧಾರ್ಮಿಕ, ರಾಜಕೀಯ, ಸಾಮಾಜಿಕ ಅಥವಾ ಮಾತ್ಸಾವುದೋ ಆಗಿರಬಹುದು.

2. ಯಾವುದೇ ದೇಶದ ಕಾವ್ಯಶಾಸ್ತ್ರವಾಗಿರಲಿ ಅದು ಆಯಾ ದೇಶದ ವೈಚಾರಿಕ ಪದ್ಧತಿಯನ್ನು ಅವಲಂಬಿಸಿ ಬೆಳೆದು ಬಂದಿರುತ್ತದೆ. ಉದಾಹರಣೆಗೆ ನಮ್ಮದೇಶದ ಅಲಂಕಾರಿಕತೆಯಲ್ಲಿ ಉಪಮೆಗೆ ಸಾದೃಶ್ಯಕ್ಕೆ ಮಹತ್ವ ಹೆಚ್ಚಾಗಿದ್ದರೆ ಇದಕ್ಕಿಂತ ಹೆಚ್ಚಿನ ಮಹತ್ವ ಯುರೋಪಿನ ಅಲಂಕಾರಿಕತೆಯಲ್ಲಿ ವಿರೋಧಕ್ಕಿದೆ. ತತ್ವಜ್ಞಾನದ ಇತಿಹಾಸದಿಂದ ಕಡ ತೆಗೆದುಕೊಂಡ ವಿರೋಧ ತತ್ವ ವಿಮರ್ಶೆಯ ತಾತ್ವಿಕತೆಯಲ್ಲೂ ಬಂದಿದೆ.

3. ಸಂಜ್ಞೆಗಳೆಲ್ಲ ಸಂಸ್ಕೃತಿ ವಿಶಿಷ್ಟವಾಗಿರುವುದರಿಂದ ಅವುಗಳ ಅಭ್ಯಾಸ ಸಂಸ್ಕೃತಿ ವಿಶಿಷ್ಟ ಪರಿಕರಗಳಿಂದ ಸಾಧ್ಯ. ಪಾಶ್ಚಾತ್ಯ ಕಾವ್ಯ ಮೀಮಾಂಸೆಯನ್ನು ಅದರ ವೈಚಾರಿಕ ಸಂದರ್ಭದಿಂದ ಬೇರ್ಪಡಿಸಿ ನಾವು ಉಪಯೋಗಿಸುತ್ತಿರುವುದರಿಂದ ಗೊಂದಲಗಳಾಗಿವೆ. ಉತ್ಕಟ ವಾಗಿರುವುದೆಲ್ಲ ನಾಟಕೀಯ ಎಂಬ ತಿಳುವಳಿಕೆ, ಪೂರ್ಣ ಪಾತ್ರಗಳಿಗಿಂತ ಅಪೂರ್ಣ ಪಾತ್ರಗಳು ನಾಟಕೀಯವಾಗಿ ತೋರಿರು ವುದು ಇದಕ್ಕೆ ಉದಾಹರಣೆ. ಇದೇ ರೀತಿ ವಾಸ್ತವ ಮಾರ್ಗದ ಮಹತ್ವ ಹೆಚ್ಚಾಗಿ ವಾಸ್ತವತೆಯೇ ನಮ್ಮ ವೈಚಾರಿಕತೆಯನ್ನೆಲ್ಲ ಆವರಿಸಿಬಿಟ್ಟಿರುವುದು, ಎಲ್ಲ ಕಡೆಗಳ ಮಾಧ್ಯಮದ ಪರಿಭಾಷೆ ವಾಸ್ತವತೆ ಒಂದೇ ಆಗಿಬಿಟ್ಟಿರುವುದು. ಇದರಿಂದ ಕಲೆಯ ಅರ್ಥ ದಲ್ಲಿ ಸಂಕೋಚವಾಗಿದೆ. ವಿಪರ್ಯಾಸವಾದ ನೈಜತೆ ಸಾಂಕೇತಿಕ ಪ್ರಜ್ಞೆ ಯನ್ನು ಹಾಳು ಮಾಡಿದೆ.

4. ನಮ್ಮ ಮಾರ್ಗ-ದೇಸೀ ಇವೆರಡಕ್ಕೂ ತಳಹದಿಯಾಗಿದ್ದುದು ನಮ್ಮ ಪುರಾಣಪ್ರಜ್ಞೆ. ಬ್ರಿಟಿಷ್ ಸಂಪರ್ಕದಿಂದ ಇತಿಹಾಸಪ್ರಜ್ಞೆ ನಮಗೆ ಪ್ರಾಪ್ತವಾಯಿತು. ಇತಿಹಾಸದ ಮೌಲ್ಯವ್ಯವಸ್ಥೆ ಪುರಾಣದ ಮೌಲ್ಯವ್ಯವಸ್ಥೆಗಿಂತ ಸಂಪೂರ್ಣವಾಗಿ ಭಿನ್ನವಾಗಿದೆ. ಇತಿಹಾಸದ ದೃಷ್ಟಿಯಿಂದ ಪುರಾಣವನ್ನೂ, ಪ್ರಾಚೀನ ಕಾವ್ಯವನ್ನೂ ನೋಡಿದಾಗ ಈ ರಚನೆಗಳ ಅರ್ಥವೇನೆಂಬುದೇ ತಿಳಿಯುವುದಿಲ್ಲ.

5. ಹೀಗಾಗಿ ಹಳೆಯ ಕಥನ ಸೂತ್ರಗಳನ್ನು ಹೊಸದಾಗಿ ವಿಶ್ಲೇಷಿಸಿ ಅವುಗಳಿಂದ ಗಂಭೀರ ಕಾವ್ಯತತ್ವವನ್ನು ಹುಡುಕಿ ತೆಗೆಯುವುದೂ ಹಳೆಯ ಕಾವ್ಯಶಾಸ್ತ್ರದ ವಿಚಾರಗಳನ್ನು ಹೊಸದಾಗಿ ಅಳವಡಿಸಿ ಕೊಳ್ಳುವುದೂ ನಡೆಯಬೇಕು. ಕಾವ್ಯಶಾಸ್ತ್ರವೊಂದೇ ಅಲ್ಲ, ನಮ್ಮ ಎಲ್ಲ ಹಳೆಯ ಸಾಂಸ್ಕೃತಿಕ ಶಿಲ್ಪಗಳನ್ನೂ ಸಹ ಅವು ಒಡೆದು ಭಗ್ನಾವಶೇಷವಾಗುವ ಮೊದಲು ಅವುಗಳ ಪುನರ್ ನಿರ್ಮಾಣದ ಅಗತ್ಯವಿದೆ.

'ಸಾಹಿತ್ಯ ಸಂಗಾತಿ' (1995), 'ಬಯಲು-ಆಲಯ' (1992) ಹಾಗೂ 'ನೂರು ಮರ ನೂರು ಸ್ವರ' (1998)ಗಳನ್ನು ಸಾಂಸ್ಕೃತಿಕ ಕಾವ್ಯಶಾಸ್ತ್ರದ ಆನ್ವಯಿಕ ಅಧ್ಯಯನಗಳಾಗಿಯೂ ಕನ್ನಡ ಸಾಹಿತ್ಯದ ಚರಿತ್ರೆಯಾಗಿಯೂ ನೋಡಬಹುದು. ಆದರೆ ಇವು ಕಟ್ಟಿಕೊಡುವ ಸಾಹಿತ್ಯ ಚರಿತ್ರೆ ಸಾಂಪ್ರದಾಯಿಕ ಸಾಹಿತ್ಯಚರಿತ್ರೆಗಳಿಗಿಂತ ಭಿನ್ನವಾದುದು. ಸಾಂಪ್ರದಾಯಿಕ ಚರಿತ್ರೆಗಳು ಸಮಗ್ರತೆಗಾಗಿ ಹಾತೊರೆದರೆ ಈ ಕೃತಿಗಳು ಸಮಗ್ರವನ್ನು ಬೆಸೆಯುವ ಆಂತರಿಕ ತರ್ಕವನ್ನು, ಲಯಗಾರಿಕೆಯನ್ನು ಗುರುತಿಸಲು ಉತ್ಸುಕವಾಗಿವೆ. ಕನ್ನಡ ನಾಡಿನ ಸಾಂಸ್ಕೃತಿಕ ಜೀವನ ಹಾಗೂ ಕನ್ನಡ ಭಾಷೆಯ ಸೂಕ್ಷ್ಮ ಸಂವೇದಿತ್ವದಲ್ಲಿ ಇಂತಹ ತರ್ಕವನ್ನು ಅವು ಗುರುತಿಸುತ್ತವೆ. ಸಾಹಿತ್ಯ ಕೃತಿಯು ತನ್ನ ಚಾರಿತ್ರಿಕ ಸಂದರ್ಭ, ತನ್ನ ಸುತ್ತಲಿನ ಹಾಗೂ ತನಗಿಂತ ಹಿಂದಿನ ಕೃತಿಗಳು ತನ್ನಲ್ಲೇ ಅಂತರ್ಗತವಾಗಿರುವ ವಿಭಿನ್ನ ಸಂಕಥನಗಳು ಹಾಗೂ ಭಾಷೆಯ ಅಂತರಂಗದ ಆಸೆ ಇವುಗಳೊಂದಿಗೆ ನಿರಂತರ ಹಾಗೂ ಪರಸ್ಪರ ವಿನಿಮಯ, ಸಂವಾದ, ಸಂಘರ್ಷದಲ್ಲಿ ನಿರತವಾಗಿರುವುದನ್ನು ಚರ್ಚೆಯ ಕೇಂದ್ರಕ್ಕೆ ತರುತ್ತವೆ. ಅಂದರೆ ಕುರ್ತಕೋಟಿಯವರ ಸಾಹಿತ್ಯ ಚರಿತ್ರೆಯಲ್ಲಿ ಚರಿತ್ರೆ ಎಂಬುದು ಕೃತಿಯನ್ನು ವಿವರಿಸಲು ಹಿನ್ನೆಲೆಯಾಗಿಯಷ್ಟೇ ಒದಗಿ ಬರುವ ಗತಕಾಲಕ್ಕೆ ಸೇರಿದ ರೇಖಾತ್ಮಕ ಸಂಬಂಧ ಹೊಂದಿರುವ ಸ್ಥಗಿತ ಮಾಹಿತಿಗಳಾಗಿರದೆ ಕೃತಿಯ ಸುಪ್ತಪ್ರಜ್ಞೆಯಲ್ಲಿ ತುಡಿಯುತ್ತಿರುವ ಸಂಕಥನವಾಗಿದೆ. ಹೀಗಾಗಿ ಕನ್ನಡ ಸಾಹಿತ್ಯದ ಐತಿಹಾಸಿಕ ಬೆಳವಣಿಗೆಗಿಂತ ಕನ್ನಡ ಸಾಹಿತ್ಯದಲ್ಲಿ ಕೆಲವು ಮುಖ್ಯ ವಸ್ತುಗಳು ಬೆಳೆದು ಬಂದಿರುವ ಕ್ರಮವನ್ನು ಅಂತರ್ ಪಠ್ಯೀಯವಾಗಿ ಅಭ್ಯಾಸಮಾಡುವ ಮೂಲಕ ಇತಿಹಾಸ ಕಥನದ ಐಕ್ಯವನ್ನು ಭಂಗಿಸಿ ಭಿನ್ನ ಸಂಸ್ಕೃತಿ ಹಾಗೂ ಬಹು ಭಾಷೆಯ ಪರಿಸರದಲ್ಲಿ ಸಾಹಿತ್ಯ ಸಂಪ್ರದಾಯಗಳು, ಪ್ರಕಾರಗಳು, ಛಂದೋರೂಪಗಳು ಹೇಗೆ ರೂಪುಗೊಂಡವೆಂಬುದನ್ನು ವಿವರಿಸಲು ಕುರ್ತಕೋಟಿಯವರಿಗೆ ಇಲ್ಲಿ ಸಾಧ್ಯವಾಗಿದೆ. ಪ್ರಾಚೀನ ಸಾಹಿತ್ಯದ ಅರ್ಥವಂತಿಕೆ ಏನೆಂಬುದನ್ನು, ಆಧುನಿಕ ಸಾಹಿತ್ಯದ ಹೊಸತನದ ಸ್ವರೂಪ ಎಂತಹುದೆಂಬುದನ್ನು ಗುರುತಿಸುವುದು ಸಾಧ್ಯವಾಗಿದೆ.

ಬ್ರಿಟಿಷರ ಆಗಮನದೊಂದಿಗೆ ಇತಿಹಾಸವು ಪುರಾಣವನ್ನು ಆಕ್ರಮಿಸಿ ನಮ್ಮ ಪುರಾಣ ಪ್ರಜ್ಞೆ ತಿರುಗಿಬಾರದಂತೆ ಕಳೆದು ಹೋದುದು ಆಧುನಿಕ ಕನ್ನಡ ಸಾಹಿತ್ಯವನ್ನು ಪ್ರಾಚೀನ ಸಾಹಿತ್ಯದಿಂದ ಪ್ರತ್ಯೇಕಿಸುವ ಮುಖ್ಯ ಅಂಶಗಳಲ್ಲೊಂದೆಂದು ಕುರ್ತಕೋಟಿಯವರು ವಾದಿಸುತ್ತಾರೆ. ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ ಭಾಷಾಂತರಗಳಿಂದ ಆರಂಭವಾಗುವುದನ್ನೂ (ರೂಪಕಾರ್ಥ ದಲ್ಲಿ ಬ್ರಿಟಿಷ್ ಸಂಪರ್ಕ ಬಂದ ಮೇಲೆ ನಮ್ಮ ದೇಶದಲ್ಲಿ ನಡೆದ ಎಲ್ಲ ಬದಲಾವಣೆಗಳೂ ಭಾಷಾಂತರಗಳೇ) ಭಾಷಾಂತರ ತಿಳುವಳಿಕೆಯ ಹೊಸ ವಿಧಾನವಾಗುವುದನ್ನೂ ಗುರುತಿಸುತ್ತ ಪ್ರಾಚೀನ ಕಾಲದಲ್ಲಿ ನಿಸ್ಸಂಕೋಚವಾಗಿ ನಡೆಯುತ್ತಿದ್ದ ಪುನರ್ಲೇಖನ ಪ್ರಕ್ರಿಯೆಗಿಂತ ಮೂಲಕ್ಕೆ ನಿಷ್ಠವಾಗಿರಬೇಕೆಂದು ಬಯಸುವ, ಆದರೆ ಎಂದಿಗೂ ಮೂಲಕೃತಿಯ ಗೌರವ ದೊರಕಿಸಿಕೊಳ್ಳ ಲಾರದ ಭಾಷಾಂತರ ಭಿನ್ನವಾದುದೆಂಬುದನ್ನು ಅವರು ಗಮನಿಸುತ್ತಾರೆ.

ಕನ್ನಡವು ಸಂಸ್ಕೃತ ಹಾಗೂ ಇಂಗ್ಲಿಷ್‌ನಿಂದ ತನಗೆ ಬೇಕಾದದ್ದನ್ನಷ್ಟೇ ಸ್ವೀಕರಿಸಿ ಕನ್ನಡವಾಗಿಯೇ ಬೆಳೆದು ಬಂದಿದೆಯಾದರೂ ಕನ್ನಡ-ಇಂಗ್ಲಿಷ್ ಬಾಂಧವ್ಯ ಕನ್ನಡ-ಸಂಸ್ಕೃತ ಬಾಂಧವ್ಯದಷ್ಟು ಸಹಜವಾಗಿದೆಯೆ ಎಂಬ ಪ್ರಶ್ನೆಯನ್ನು ಅವರು ಎತ್ತುತ್ತಾರೆ. ಭಾಷಾಂತರಗಳು ಹಾಗೂ ಅವು ಮೂಡಿಸಿದ ಇತಿಹಾಸ ಪ್ರಜ್ಞೆ ಕೂಡಿಕೊಂಡು ನಮ್ಮ ಆಧುನಿಕತೆಯನ್ನು ರೂಪಿಸಿದೆ ಎಂದು ವಾದಿಸುವ ಕುರ್ತಕೋಟಿಯವರು 'ಬಯಲು ಆಲಯ'ದಲ್ಲಿ ಹಳೆಯದು-ಹೊಸದು ದ್ವಂದ್ವದಲ್ಲಿ ಸಿಲುಕಿದ ನವೋದಯ ಸಾಹಿತಿಗಳ ಸಂಕೀರ್ಣ ಭಾವಸ್ಥಿತಿಯನ್ನು ವಿವರವಾಗಿ ಚರ್ಚಿಸಿದ್ದಾರೆ. ಬಹುಶಃ ಆಧುನಿಕ ಸಾಹಿತ್ಯದ ಇತಿಹಾಸ ಪ್ರಜ್ಞೆ ಹಾಗೂ ವ್ಯಕ್ತಿ ವಿಶಿಷ್ಟತೆಗಳನ್ನು ಲಕ್ಷಿಸಿಯೇ 'ನೂರು ಮರ ನೂರು ಸ್ವರ'ದಲ್ಲಿ ಲೇಖಕರ ವೈಯಿಕ್ತಿಕ ಮನೋಧರ್ಮ ಹಾಗೂ ಅನನ್ಯತೆಗಳನ್ನೇ ಅವರು ಮುಖ್ಯವಾಗಿ ಪರಿಗಣಿಸಿದ್ದಾರೆ.

'ಉರಿಯ ನಾಲಗೆ' (1993), 'ರಾಜ ಸ್ಪರ್ಶ'(1996) ಹಾಗೂ 'ಸಮ್ಮುಖ' ಅಂಕಣದ ಇನ್ನಿತರ ಬರಹಗಳು ಭಾಷಿಕ ಸಂಜ್ಞೆಗಳೊಡನೆ ನಂಬಿಕೆಗಳು ಹಾಗೂ ಆಚರಣೆಗಳು, ವೇಷ-ಭೂಷಣ, ಊಟ-ಉಪಚಾರ, ಆಟ-ಆಟಿಕೆ, ವಾಸ್ತು-ಶಿಲ್ಪ ಮೊದಲಾದ ಇನ್ನಿತರ 'ಸಂಜ್ಞೆ' ಅಥವಾ 'ಸಾಂಸ್ಕೃತಿಕ ಭಾಷೆ'ಯ ರಚನೆಯನ್ನು ವಿಶ್ಲೇಷಿಸುತ್ತ, ಅರ್ಥೈಸುತ್ತ ಹೋಗುತ್ತದೆ. ಈ ಬಿಡಿ ಬರಹಗಳೆಲ್ಲ ಒಟ್ಟಾಗಿ ನಮ್ಮ ನಾಡಿನ ಅಲಿಖಿತ ಇತಿಹಾಸದ ಎಳೆಗಳನ್ನು ಜೋಡಿಸಿ ಹೆಣೆಯುತ್ತವೆ.

ಸಾಹಿತ್ಯ ಕೃತಿಗಳಂತೆಯೇ ವಿಮರ್ಶಾಕೃತಿಗಳೂ ಸಹ ಸಮಕಾಲೀನ ಒತ್ತಡಗಳ ಫಲವಾಗಿಯೇ ಮೂಡಿ ಬಂದಿರುತ್ತವೆ. ದೇಸೀ ಸಂಸ್ಕೃತಿಗಳು ಹಾಗೂ ಸಾಹಿತ್ಯ ಪರಂಪರೆಗಳು ವಸಾಹತು ಪರಿಸ್ಥಿತಿಯಿಂದ ಬಿಡಿಸಿಕೊಂಡು ತಮ್ಮದೇ ಆದ ತಾತ್ವಿಕ, ವೈಚಾರಿಕ ಆಕೃತಿಗಳನ್ನು ಪುನರ್ ಸಂಘಟಿಸಿಕೊಳ್ಳುವ ಕ್ರಿಯಾಶೀಲ ಪ್ರಕ್ರಿಯೆ ಆರಂಭವಾಗಬೇಕೆಂಬ ತುಡಿತ ಕುರ್ತಕೋಟಿಯವರ ವಿಮರ್ಶಾ ಬರಹಗಳ ಹಿಂದಿನ ಒತ್ತಡವಾಗಿದೆ. ಹೀಗಾಗಿ ಎರಡು ಸಂಸ್ಕೃತಿಗಳ ನಡುವಿನ ಸಾಮ್ಯ-ವೈಷಮ್ಯ, ಸಂಘರ್ಷ-ವಿನಿಮಯ, ಅವರ ಬರಹಗಳಲ್ಲಿ ಮತ್ತೆ ಮತ್ತೆ ಚರ್ಚೆಗೆ ಬರುತ್ತವೆ. ಸೃಜನಶೀಲತೆ, ಮೌಲಿಕತೆಯಂತಹ ಪರಿಕಲ್ಪನೆಗಳ, ಕಾಲಗಣನೆಯ ವಿಧಾನಗಳು, ಸೂರ್ಯಗ್ರಹಣದಂತಹ ನಂಬಿಕೆಗೆ ಸಂಬಂಧಿಸಿದ ಪ್ರಶ್ನೆಗಳ, ಪ್ರಾಚೀನ ಸಾಹಿತ್ಯದಲ್ಲಿ ಶೃಂಗಾರದಂತಹ ಶುದ್ಧ ಸಾಹಿತ್ಯಕ ವಿಷಯಗಳ ಚರ್ಚೆಯಲ್ಲೂ ಕೇವಲ ಸೌಂದರ್ಯಾತ್ಮಕ ನೆಲೆಗಳ ಸೀಮಿತ ಚೌಕಟ್ಟಿನಲ್ಲಿ ವಿಹರಿಸಲು ನಿರಾಕರಿಸಿ ಅವುಗಳನ್ನು ರಾಜಕೀಯಗೊಳಿಸಿಯೇ ಪರಿಭಾವಿಸುವುದೂ ಇದೇ ಕಾರಣಕ್ಕಾಗಿ. ಕನ್ನಡ ಸಂವೇದನೆಯ ವಿಶಿಷ್ಟತೆಯನ್ನು ಗುರುತಿಸಲು, ಕನ್ನಡ ಸಂಸ್ಕೃತಿಯ ಅನನ್ಯತೆಯನ್ನು ಎತ್ತಿಹಿಡಿಯಲು ಬದ್ಧವಾದ ಬರವಣಿಗೆ ಕುರ್ತಕೋಟಿ ಯವರದು. ಅದು ನಮ್ಮ ಕಾಲದ ರಾಜಕೀಯ ಅಗತ್ಯವೂ ಹೌದು. 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂದು ಹಾರೈಸಿದ ಬೇಂದ್ರೆಯವರಲ್ಲೂ ಈ ಬದ್ಧತೆ ಇತ್ತು. ಕಣ್ಮರೆಯಾದ ಕನ್ನಡವನ್ನು ಹುಡುಕಿ ತೆಗೆಯಲು ಹೊರಟು ತಮ್ಮದೇ ಆದ ಸಂಜ್ಞಾಶಾಸ್ತ್ರವನ್ನು ಕಟ್ಟಿಕೊಂಡ ಶಂ.ಭಾ.ಜೋಶಿಯವರಲ್ಲೂ ಅದು ಇತ್ತು. ಹೀಗಾಗಿಯೇ ಕುರ್ತಕೋಟಿಯವರ ಸಾಂಸ್ಕೃತಿಕ ಕಾವ್ಯ ಶಾಸ್ತ್ರದಲ್ಲಿ ಅವರಿಬ್ಬರೂ ಯಾವ ತಕರಾರೂ ಇಲ್ಲದೆ ಸಹಬಾಳ್ವೆ ನಡೆಸುತ್ತಾರೆ.

❑

# ಶಾಂತಿನಾಥ ದೇಸಾಯಿ

**ಮಾರುತಿ ಶಾನಭಾಗ್**

ಕನ್ನಡದ ಮೊಟ್ಟಮೊದಲಿನ ನವ್ಯಕಾದಂಬರಿ 'ಮುಕ್ತಿ'(1961) ಬರೆದು ನವ್ಯಮಾರ್ಗವನ್ನು ಕಾದಂಬರಿ ಪ್ರಾಂತಕ್ಕೆ ತಂದವರು ಶಾಂತಿನಾಥದೇಸಾಯಿ. ಇಂತಹ ಪ್ರಯೋಗಶೀಲತೆಯನ್ನು ಕನ್ನಡದ ಸಣ್ಣಕತೆ, ಪ್ರಬಂಧಗಳು, ವಿಮರ್ಶೆ ಮುಂತಾದ ಕ್ಷೇತ್ರಗಳಲ್ಲಿಯೂ ತೋರಿಸಿ ಸುಮಾರು ನಾಲ್ಕು ದಶಕಗಳಷ್ಟು ಕಾಲ ಕನ್ನಡದ ಮೇಲ್ಪಂಕ್ತಿಯ ಬರಹಗಾರರೆಂದು ಮಾನ್ಯತೆಯನ್ನು ಪಡೆದರು. ಅವರ ಧೀಮಂತ ವ್ಯಕ್ತಿತ್ವದಿಂದ ಕನ್ನಡವನ್ನು ಪರಪ್ರಾಂತಗಳಿಗೆ ತಲುಪಿಸುವಲ್ಲಿ, ರಾಷ್ಟ್ರೀಯ ಪುರಸ್ಕಾರಗಳ ಪಾತ್ರತೆಯನ್ನು ಗಳಿಸುವಂತೆ ಪರಿಚಯಿಸುವಲ್ಲಿ, ಅಂತರಾಷ್ಟ್ರೀಯ ಪಾತಳಿಯಲ್ಲಿ ಹರಡುವಂತೆ ಇಂಗ್ಲಿಷಲ್ಲಿ ಅನುವಾದಿಸುವದರಲ್ಲಿ ಖ್ಯಾತಿಗಳಿಸಿದರು. ಹೀಗೆ ಹಬ್ಬಿಕೊಂಡ ಅವರ ಲೇಖನ ವ್ಯವಹಾರ ಬಹುಮುಖವಾಗಿ ದುಡಿಯುತ್ತಲೇ ಇರುವಾಗ, ಅವರು ತಮ್ಮ ವ್ಯವಸಾಯವಾದ ಪ್ರಾಧ್ಯಾಪಕ-ವೃತ್ತಿಯಲ್ಲಿ ವಿಶೇಷ ಮಾನ್ಯತೆಗಳನ್ನೂ, ಪದೋನ್ನತಿಯನ್ನೂ, ಶಿವಮೊಗ್ಗದ ಕುವೆಂಪು ವಿಶ್ವವಿದ್ಯಾಲಯದ ಪ್ರಥಮ ಕುಲಪತಿ ಪದವನ್ನೂ ಕರ್ತವ್ಯದಕ್ಷತೆಯಿಂದ ನಿರ್ವಹಿಸಿದರು. ಭಾಷಾ ವಿಕಾಸದ ಸಾಂಸ್ಕೃತಿಕ ಪರಿಕರಗಳಾದ, ಸಾಹಿತ್ಯ ಅಕಾಡಮಿ, ಜ್ಞಾನಪೀಠ ಮುಂತಾದ ವ್ಯವಸ್ಥೆಗಳಲ್ಲಿ ಯೋಗ್ಯ ಸಲಹೆಗಳಿಂದ ಅವುಗಳನ್ನು ಸಂಸ್ಕೃತಿ ರಕ್ಷಕರಾಗಿ ವ್ಯವಹರಿಸಿದರು. ಕರ್ನಾಟಕ ಸಾಹಿತ್ಯ ಅಕಾಡಮಿ ಮತ್ತು ಕೇಂದ್ರ ಅಕಾಡಮಿಗಳ ಸಲಹೆಗಾರರೆಂದು ಹಲವು ವರ್ಷಗಳ ಕಾಲ ಕೆಲಸ ಮಾಡಿದರು.

ಶಾಂತಿನಾಥ ಕುಬೇರಪ್ಪ ದೇಸಾಯಿ ಅವರ ಜನ್ಮ, ಹಳಿಯಾಳದಲ್ಲಿ 22 ಜುಲೈ 1929ರಂದು. ಹಳಿಯಾಳ ಉತ್ತರ ಕನ್ನಡ ಜಿಲ್ಲೆಯಲ್ಲಿಯ ಕಾಡು ಪ್ರದೇಶ. ಅವರ ಪ್ರಾಥಮಿಕ ಶಿಕ್ಷಣ ಅಲ್ಲಿಯೇ ಆದರೂ ಉತ್ತಮ

ವಿದ್ಯಾರ್ಥಿಯೆಂದು ಗಮನ ಸೆಳೆದ ಶಾಂತಿನಾಥರನ್ನು ಮೆಟ್ರಿಕ್ ಪರೀಕ್ಷೆಯಲ್ಲಿ ವಿಶೇಷಸ್ಥಾನಗಳಿಸುವ ಉದ್ದೇಶದಿಂದ ಒಳ್ಳೆಯ ಶಾಲೆಯೊಂದರಲ್ಲಿ ಸೇರಿಸುವದಕ್ಕೆ ಧಾರವಾಡಕ್ಕೆ ತರಲಾಯಿತು. ಹಳಿಯಾಳದಿಂದ ಹೊರಬಂದ ಶಾಂತಿನಾಥರ ಮೇಲೆ ಆಗ ಅಪ್ರತಿಮ ವಿದ್ಯಾರ್ಥಿಯೆಂದು ಗಮನ ಸೆಳೆದ ಗಂಗಾಧರ ಚಿತ್ತಾಲರ ಪ್ರಭಾವದ ಕಾರಣ ಚಿತ್ತಾಲ ಮನೆತನದಲ್ಲಿಯ ಚಿಂತನಶೀಲತೆಯ ಜತೆ ವಿದ್ಯಾರ್ಜನೆಯ ತೀವ್ರ ಆಸ್ಥೆ ಹುಟ್ಟಿಕೊಂಡಿತು. ಆಗ ಧಾರವಾಡದಲ್ಲಿ ಬಂದಿಳಿದ ಚಿಂತನಕಾರ ಮಾನವೇಂದ್ರರಾಯ ಅವರ ಮಾನವತಾವಾದದ ಆಕರ್ಷಣೆಯೂ ತಪ್ಪಲಿಲ್ಲ. ಉತ್ತಮ ವಿದ್ಯಾರ್ಥಿಯಾದ್ದರಿಂದ ಇಂಗ್ಲಿಷ್ ಪ್ರಾಧ್ಯಾಪಕರ ಮನ ಸೆಳೆದುಕೊಂಡು ಇಂಗ್ಲಿಷ್‌ನಲ್ಲಿ ವಿಶೇಷ ಅಧ್ಯಯನಕ್ಕೆಂದು ಮುಂಬಯಿಯ ಖ್ಯಾತ ವಿಲ್ಸನ್ ಕಾಲೇಜಿಗೆ ಸೇರಿದರು.

ಧಾರವಾಡದಿಂದ ಮುಂಬಯಿಯ ಪ್ರವಾಸ ಒಂದು ಮಹತ್ವದ ಘಟ್ಟ. ಒಂದು ವೈಚಾರಿಕ ವಿಶ್ವವೇ ತೆರೆದು ನಿಂತಂತಿತ್ತು. ಇಂಗ್ಲಿಷ್ ಭಾಷೆಯಲ್ಲಿಯ ವಿಶೇಷ ವ್ಯಾಸಂಗದಿಂದ ಹೊಸ ಚರ್ಚಾವಿಷಯಗಳಿಗೆ ಅನುಕೂಲವಾಗಿತ್ತು. ವಿಲ್ಸನ್ ಕಾಲೇಜಿನ ವಾಸ್ತವ್ಯದಲ್ಲಿ ಬುದ್ಧಿವಾದಿಗಳ ಸಂಪರ್ಕದಿಂದ ಅನೇಕ ಅಡ್ಡಗೋಡೆಗಳೆಲ್ಲ ಕುಸಿದು ಬೀಳತೊಡಗಿದ್ದವು. ಪಿಎಚ್.ಡಿ. ಯ ವಿಷಯಕ್ಕೆ ಮಾನ್ಯತೆ ಮತ್ತು ಬಹುಮಾನ ದೊರೆತು, ಬ್ರಿಟಿಷ್ ಕೌನ್ಸಿಲ್ ಪ್ರಣೀತ ಶಿಷ್ಯವೃತ್ತಿಯ ಮೇಲೆ ಇಂಗ್ಲೆಂಡಿಗೆ ತೆರಳುವ ಸುಯೋಗ ಲಭಿಸಿತು. ಹಡಗಿನಲ್ಲಿಯ ಪ್ರವಾಸ ಅನೇಕ ಲೇಖಕರನ್ನು ಸ್ಫುರಿಸಿದಂತೆ, ಶಾಂತಿನಾಥರಿಗೂ ಒಂದು ಉತ್ತಮ ಕತೆಯನ್ನು ಬರೆಯುವದಕ್ಕೆ ಉಪಯುಕ್ತವಾಯಿತು. ಅವರನ್ನು ಸಣ್ಣಕತೆಯಲ್ಲಿ ಜನಪ್ರಿಯರನ್ನಾಗಿ ಮಾಡಿದ 'ಕ್ಷಿತಿಜ' ಹಡಗಿನಿಂದ ಇಂಗ್ಲೆಂಡಿಗೆ ಹೋಗುವ ಒಬ್ಬ ಮಹಿಳೆಯನ್ನು ಕೇಂದ್ರದಲ್ಲಿರಿಸಿದ ಕತೆ.

ವಿದೇಶದಲ್ಲಿ ಎರಡು ವರ್ಷಗಳಷ್ಟು ವಾಸ್ತವ್ಯಮಾಡಿ ಬಂದ ಶಾಂತಿನಾಥರಿಗೆ ಕೊಲ್ಹಾಪುರದ ರಾಜಾರಾಮ ಕಾಲೇಜಿನಲ್ಲಿ ಪ್ರಾಧ್ಯಾಪಕ ವೃತ್ತಿ ದೊರಕಿತು. ಮರಾಠಿ ಭಾಷೆಯ ಪ್ರಗತಿಗೆ ಕೊಲ್ಹಾಪುರ ಪುಣೆಗಳಷ್ಟು ಬೇರೆ ಶಹರುಗಳ ಕೊಡುಗೆ ಕಡಿಮೆ. ಮರಾಠಿಯಲ್ಲಿಯ ಕಾದಂಬರಿಗಳಿಂದ ಅನೇಕ ಉತ್ತರ ಕರ್ನಾಟಕದ ಓದುಗರು ಪ್ರಭಾವಿತರಾಗಿದ್ದಾರೆ. ಮರಾಠಿಯಲ್ಲಿ ಏನೇನೆಲ್ಲ ನಡೆದಿದೆ ಎನ್ನುವದನ್ನು ತಿಳಿದುಕೊಳ್ಳಲು ಬಂದದ್ದು ಈ ಕಾಲದಲ್ಲಿ.

ಕೆಲವು ವರ್ಷಗಳಿಗಾಗಿ ದೇಸಾಯಿಯವರಿಗೆ ಮರಾಠವಾಡಾದಲ್ಲಿಯ ಔರಂಗಾಬಾದದಲ್ಲಿ ಪ್ರಾಧ್ಯಾಪಕನಾಗಿ ಇರಬೇಕಾಯಿತು. ಮರಾಠಿಯಲ್ಲಿಯ ಉತ್ತಮ ಅಸ್ತಿತ್ವವಾದೀ ಕಾದಂಬರಿ 'ಕೋಸಲಾ'- ಭಾಲಚಂದ್ರ ನೇಮಾಡೆ, ಮತ್ತು ಅವರ ಗೆಳೆಯರ ಗುಂಪಿನ ಪರಿಚಯವಾಯಿತು. ಹೀಗೆ ಕನ್ನಡ-ಮರಾಠೀ ಸಾಹಿತ್ಯಗಳಲ್ಲಿಯ ಆಗುಹೋಗುಗಳ ಬಗ್ಗೆ ಆಸ್ಥೆ ಹಿಗ್ಗಿತು.

ನಂತರ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಲವಾರು ವರ್ಷ ರೀಡರ್ ಮತ್ತು ಇನ್ನೊಮ್ಮೆ ಕೊಲ್ಹಾಪುರದ ಶಿವಾಜಿ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ವಿಭಾಗದ ಪ್ರಮುಖರೆಂದು ಸೇವೆ ಸಲ್ಲಿಸಿ, 1988ರಲ್ಲಿ ಕುವೆಂಪು ವಿಶ್ವವಿದ್ಯಾಲಯದ ಕುಲಗುರುಗಳ ಸ್ಥಾನವನ್ನು ಏರಿದರು. ಶಿವಮೊಗ್ಗದ ಮಲೆನಾಡಿನ ಲೇಖಕರ ನಿಕಟ ಸಂಬಂಧ ಬಂದದ್ದು ಇಲ್ಲಿ. ಈ ರೀತಿ ಅವರ ಸಾಹಿತ್ಯಕ ವ್ಯಕ್ತಿವಿಕಾಸಕ್ಕೆ ಅವರ ಸಂವೇದನಾಶೀಲ ಅಂತರ್ಯಾವಷ್ಟೇ ಅಲ್ಲದೆ, ಪರಿಸ್ಥಿತಿ, ವಾತಾವರಣ, ವೇಗವಾಗಿ ಬದಲಾಗುತ್ತಿದ್ದ ರಾಜಕಾರಣ, ಸಂಸ್ಕೃತಿಯಲ್ಲಿಯ ಏರು ತಗ್ಗುಗಳೂ ಕಾರಣವಾದವು.

## 2

ಶಾಂತಿನಾಥ ದೇಸಾಯಿಯವರ ತಾರುಣ್ಯದ ವರ್ಷಗಳು ನವ್ಯಮಾರ್ಗ ಬಲಿತುಕೊಳ್ಳುತ್ತಿರುವ ಕಾಲ. ಗೋಪಾಲಕೃಷ್ಣ ಅಡಿಗರ 'ನಡೆದು ಬಂದ ದಾರಿ ಕಡೆಗೆ ತಿರುಗಿಸಬೇಡ ಕಣ್ಣ, ಹೊರಳಿಸಬೇಡ' ಎಂದು ಆವೇಶದಿಂದ ಆಹ್ವಾನ ಮಾಡಿದ ಕಾಲ. ಅನಂತಮೂರ್ತಿ, ಲಂಕೇಶ, ಕೃಷ್ಣಮೂರ್ತಿ ಮತ್ತು ಇನ್ನೂ ಇತರರು ಅಡಿಗರ ವಿಚಾರಗಳಿಂದ ಪ್ರಭಾವಿತರಾಗಿ ಬರೆಯ ತೊಡಗಿದ್ದರು. ಧಾರವಾಡದಲ್ಲಿ ಗೋಕಾಕರು ನವ್ಯಕಾವ್ಯದ ಸಮನ್ವಯದ ಮಾರ್ಗವನ್ನು ಕ್ಷೀಣವಾಗಿ ಸೂಚಿಸುತ್ತಿದ್ದರು. ಉತ್ತರ ಕನ್ನಡ ಜಿಲ್ಲೆಯ ಕುಮಟೆಯಲ್ಲಿಯ ಸಾಹಿತ್ಯ ಸಮ್ಮೇಳನದ ವೇದಿಕೆಯಿಂದ ಆಗ ಮಾತ್ರ ಪ್ರಕಟಿತವಾದ, ಅಡಿಗರ "ಚಂಡೆಮದ್ದಳೆ" ಕಾವ್ಯಸಂಗ್ರಹದ ಮೇಲೆ ಬೇಂದ್ರೆ ಭಾರಿ ಪ್ರಹಾರ ಮಾಡಿ ಕನ್ನಡ ಸಾಹಿತ್ಯದಲ್ಲಿಯ ಎರಡು ತಟಗಳನ್ನು ವಾದಯುದ್ಧಕ್ಕೆ ತೊಡಗಿಸಿದರು. ಧಾರವಾಡದ ಮನೋಹರ ಗ್ರಂಥಮಾಲೆ ಕೀರ್ತಿನಾಥ ಕುರ್ತಕೋಟಿಯವರ ಸಮರ್ಥ ಮೇಲು ನೋಟದಿಂದ ಸಾಹಿತ್ಯದಲ್ಲಿಯ ಆವರೆಗಿನ ಎಲ್ಲ ಪ್ರಕಾರಗಳಲ್ಲಿಯ ವಿಶೇಷ ಕೊಡುಗೆಗಳ ಮೌಲ್ಯಮಾಪನ ಮಾಡಿ ಎರಡು ಬೃಹದ್ ವಿಮರ್ಶಾ ಗ್ರಂಥಗಳನ್ನು ಪ್ರಕಟಿಸಿತು- 'ನಡೆದು ಬಂದ ದಾರಿ'. ಅಂದರೆ ಕನ್ನಡದಲ್ಲಿ ಇದೊಂದು ಪರ್ವಕಾಲ.

1959ರಲ್ಲಿ ದೇಸಾಯಿಯವರ ಮೊದಲಿನ ಸಾಹಿತ್ಯ ಕೃತಿ ಸಣ್ಣಕತೆಗಳ ಸಂಗ್ರಹ ಪ್ರಕಟವಾದಾಗ, ಮನುಷ್ಯನಲ್ಲಿಯ ಪಶುವೃತ್ತಿಗಳನ್ನು ಹಿಂಬಾಲಿಸಿ ಬರೆದ ಕತೆಗಳಿವು ಎಂದು ಹಿರಿಯ ವಿಮರ್ಶಕರು ತಮ್ಮ ಮಡಿವಂತಿಕೆಯನ್ನು ಬಿಟ್ಟಿಲ್ಲವೆಂದು ತೋರಿಸಿದರು. ಆದರೆ ಶಾಂತಿನಾಥ ತುಳಿಯ ತೊಡಗಿದ ದಾರಿ 'ನಡೆದು ಬಂದ ದಾರಿ'ಯಾಗಿರಲಿಲ್ಲ. ಇಂಗ್ಲಿಷ್ ವ್ಯಾಸಂಗದಿಂದ, ಮನೋವಿಶ್ಲೇಷಣ ಸಿದ್ಧಾಂತದ ಒಂದು ಹೊಸ ನೋಟ ನೋಡಸಿಕ್ಕಿತ್ತು. ಪರಿವರ್ತನೆ ಅವರಿಗೆ ಪ್ರಿಯವಾದ ವಿಷಯವೆಂದು ತೋರುತ್ತದೆ. ಮನುಷ್ಯನನ್ನು ನೋಡುವ ದೃಷ್ಟಿಕೋನದಲ್ಲಾದ ಪಾಶ್ಚಾತ್ಯರಲ್ಲಿಯ ಬದಲನ್ನು ಕನ್ನಡದಲ್ಲಿಯೂ ಇಳಿಸುವ ಪ್ರಯತ್ನವನ್ನು ಶಾಂತಿನಾಥರು ಗಂಭೀರವಾಗಿ ಎತ್ತಿಕೊಂಡರು. ಮನುಷ್ಯನನ್ನು ಧೀರೋದಾತ್ತನೆಂದೇ ತೋರಿಸುವ ಪರಂಪರೆಯಿಂದ ಹೊರಬಂದು, ಮನುಷ್ಯ ಇನ್ನಿತರ ಪ್ರಾಣಿಗಳಂತೆ ತನ್ನ ಇರುವಿಗಾಗಿ ನಿಕರವಾಗಿ ಪರಿಶ್ರಮಿಸುವ ಜೀವಿ. ತನ್ನ ಸುಖಕ್ಕಾಗಿ, ಲಾಲಸೆಗಳಿಗಾಗಿ, ಅಭಿಲಾಷೆಗಳಿಗಾಗಿ ಒಳಗೊಳಗೇ ಚಡಪಡಿಸುವ ಪ್ರಾಣಿ; ಸಾಮಾನ್ಯ, ಅಲ್ಪ ಮೌಲ್ಯಗಳನ್ನು ಕಿತ್ತೊಗೆದ ರಾಕ್ಷಸ, ನೀಚ, ಭೀರು, ಪಾಪಿ, ಸಂಧಿಸಾಧು ಇಂತಹದೇ ಆದ ಹಲವು ಮುಖಗಳಿರುವ ಬದಿಗೊಗೆದುಬಿಟ್ಟು ದುರ್ಲಕ್ಷಿಸಲ್ಪಟ್ಟ ಸಾಮಾನ್ಯ ವ್ಯಕ್ತಿ. ಈ ಕಲ್ಪನೆಯ ಮೂಸೆಯಲ್ಲಿ ಶಾಂತಿನಾಥ ತಮ್ಮ ಪಾತ್ರಗಳನ್ನು ರಚಿಸಿದರು, ಕತೆಗಳನ್ನು ಹೆಣೆದರು. ಕಾದಂಬರಿಯ ವಿಸ್ತಾರದಲ್ಲಿ, ವ್ಯಕ್ತಿ ಸಂಬಂಧಗಳಲ್ಲಿ ತೋರಿಕೊಳ್ಳುವ ಕುಹಕಗಳನ್ನು, ಕೊಳಚೆಯನ್ನು, ಹಿಂಸೆಯನ್ನು ನಿರ್ಮಮವಾಗಿ ಪ್ರಕಟಗೊಳಿಸಿದರು. ಇಷ್ಟರವರೆಗೆ ಲೈಂಗಿಕತೆಯನ್ನು ಮಡಿವಂತಿಕೆಯ ಸೀಮೆಯಲ್ಲಿಯೇ ಹಿಡಿದಿಟ್ಟ ಬರಹದ ರೀತಿ ಬಿಟ್ಟು, ಲೈಂಗಿಕತೆಯ ನೈಸರ್ಗಿಕತೆಯನ್ನು ಕಲಾತ್ಮಕವಾಗಿ ಸಾಹಿತ್ಯಕ್ಕಿಳಿಸಿದರು. ಉಸಿರುಗಟ್ಟಿಬಿದ್ದ ಮಾನವೀ ಪ್ರಜ್ಞೆಯಲ್ಲಿಯ ವಿವಿಧತೆಗಳನ್ನು ಬಿಟ್ಟೂಬಿಡದೆ ಶೋಧಿಸಿದರು. ಅವರ ಕಾದಂಬರಿಗಳು ಒಂದೊಂದೂ ಬೇರೆ ಬೇರೆ ಸಮಸ್ಯೆಗಳಿಗೆ ಉತ್ತರ ಕಾಣುವ ಪ್ರಯತ್ನಗಳಂತೆ ತೋರುವ ಗಂಭೀರ ಬರಹಗಳು. ಆದರೂ ಒಂದು ನಿರ್ವಿಕಾರವಾದ ತಟಸ್ಥತೆಯಿಂದ, ಜೀವನವನ್ನು

ಸಮಗ್ರವಾಗಿ ಕಂಡು ಹಿಡಿಯಬೇಕೆನ್ನುವ ಹವ್ಯಾಸ ಅಲ್ಲಿ ಕಾಣಸಿಗುತ್ತದೆ. ಅವರು ಹುಟ್ಟಿನಿಂದ ಜೈನರು. ಜೈನ ದಾರ್ಶನಿಕತೆಯಲ್ಲಿ ಅನೇಕಾಂತವಾದ ವೆನ್ನುವ ಸಂಕಲ್ಪನೆಯಿದೆ. ಇರುವಿನ ಬಗ್ಗೆ ಯಾವದೇ ಒಂದು ಅಂತಿಮ ನಿರ್ಣಾಯಕ ತೀರ್ಪನ್ನು ತಳೆಯದೇ ಇರುವದೇ ಅನೇಕಾಂತವಾದ. ಕುರುಡರು ಆನೆಯನ್ನು ತಮ್ಮ ತಮ್ಮ ಸ್ಥಾನಗಳಿಂದ 'ನೋಡಿ'ದಾಗ, ಅವರಿಗೆ ಆ ಪ್ರಾಣಿ ಬೇರೆ ಬೇರೆ ಪ್ರಕಾರದ್ದಿರಬೇಕೆಂದು ತೋರಿರಬೇಕು. ಆದರೆ ನಿಜವನ್ನು ಅರಿಯುವದು ದುಃಸಾಧ್ಯ, ಜೀವನದ ಅಸ್ಪಷ್ಟತೆಯ ಬಗ್ಗೆ ಶಾಂತಿನಾಥರ ನಿಲುವು ಈ ಜೈನರ ನಿಲುವಿನಂತಹದೇ-ಯಾವದೊಂದೂ ನಿರ್ಣಾಯಕವಲ್ಲ.

ವ್ಯಕ್ತಿಯ ಬಗ್ಗೆ, ಸಮಾಜ ವ್ಯವಹಾರಗಳ ಬಗ್ಗೆ ಹೀಗೆ ಬೇರೊಂದೇ ನಿಲುವು ತಳೆದು ಮತ್ತೆ ಮತ್ತೆ ಹೊರಬರುವ, ಒಳಹೋಗುವ ರೀತಿಯಲ್ಲಿ ಬರೆದರು. ರಾಜಕಾರಣ, ವಿಕಾಸಕಾರಣ, ವಿದ್ಯಾಪ್ರಸಾರ, ಗ್ರಾಮ ಸುಧಾರಣೆ, ಸಮಾಜಬಂಧ, ಕುಟುಂಬ ಸಂಸ್ಥೆ, ಅಂತರ್ಸಂಬಂಧ ಇವುಗಳೆಲ್ಲದರ ಮೇಲೆ ತಮ್ಮ ಕ್ಷ-ಕಿರಣವನ್ನು ಹಾಯಿಸಿದರು. ಮಂಜುಗಟ್ಟಿದ ಧರ್ಮವಿಚಾರ, ಅಂಧ ಶ್ರದ್ಧೆಯ ಮತಾಚರಣೆ, ಕಣ್ಣುಪಟ್ಟಿ ಕಟ್ಟಿದ ಪ್ರಾಚೀನ ಮತ ಸಂಶೋಧನೆ, ನೆಲದ ಮೇಲೆ ಕಾಲಿಡದೆ ರೋಮಾಂಚಕತೆಯಲ್ಲಿ ಕುರುಡಾದ ಬಂಡಾಯದ ವೃತ್ತಿ, ಇವೆಲ್ಲವುಗಳ ಮೇಲೆ ನಿರ್ದಾಕ್ಷಿಣ್ಯವಾಗಿ ಬರೆದರು. ಅವರ ಕೊನೆಯ ಕಾದಂಬರಿ 'ಓಂ ನಮೊ' ಜೈನಮತದ ಅನೇಕ ಅಂಗಗಳ ಅವರು ಮೈಚಳಿ ಬಿಟ್ಟು ತಮ್ಮದೇ ಆದ ದೃಷ್ಟಿಯನ್ನು ತೋರಿಸಿದ್ದಾರೆ.

ಹಾಗೆ ನೋಡಿದರೆ 'ಸೃಷ್ಟಿ' ಒಂದು ಕಿರುಕಾದಂಬರಿ. ಕಾದಂಬರಿಯೂ ಪ್ರಬಂಧವೂ ಒಂದನ್ನೊಂದು ಹೊಕ್ಕು ಒಂದು ಹೊಸ ಸಂಬಂಧವನ್ನು ತೋರಿಸುವ ಕೃತಿ. ಸೃಜನಕ್ರಿಯೆಯನ್ನೇ ಚಿಕಿತ್ಸೆಗೆ ಒಳಗಾಗಿಸುವ ಅಪ್ರತಿಮ ಪ್ರಯತ್ನ.

ಜೀವನದ ನಿಬಿಡತೆಯನ್ನು ಎತ್ತಿತೋರಿಸುವದು ಬರಹಗಾರರ ಕರ್ತವ್ಯವೆಂದು ಕಾಣುವದರಿಂದ ರೋಮಾಂಚಕತೆಗೆ ಮಾರುಹೋಗದೆ, ಬದುಕನ್ನು ಕ್ರೀಡಾರೂಪದಲ್ಲಿ ಮಂಡಿಸುತ್ತಾರೆ. ಆಟಗಳಲ್ಲಿಯ ವೈವಿಧ್ಯವನ್ನು ಗಮನಿಸಲು ಓದುಗರನ್ನು ತೊಡಗಿಸುತ್ತಾರೆ. ಆಟಗಳಲ್ಲಿಯ ಅನೇಕ ಪ್ರಕಾರಗಳು, ಆಡುವ ಅಸಂಖ್ಯ ಪರಿ, ಆಟಗಾರನು ಒಪ್ಪಿಕೊಂಡ ಹಲವು ನಿಯಮಗಳು, ಉದ್ವೇಗವಿಲ್ಲದಿರುವ ಸೌಮ್ಯ ಆಟ, ಹಿಂಡಿಬಿಡುವ ಆಟದ ಓಟ, ಅಮೊಹ್ಯವಾಗುತ್ತ ಹೋಗುವ ಕೊನೆ, ಗೆಲ್ಲುವದು ಸೋಲುವದು ಮಹತ್ವದ್ದಾಗದೆ ಆಟವಾಡುತ್ತಲೇ ಇರುವ ರಮಣೀಯತೆ, ವಿನೋದ ಪೂರ್ಣತೆ ಶಾಂತಿನಾಥರ ಲಲಿತ ಲೇಖನಗಳ ಹೆಗ್ಗುರುತು. ತೆಳುವಾಗಿ, ಹಗುರವಾಗಿ ಹೇಳುವದನ್ನೂ ಕೇಳುವದನ್ನೂ ಮಾಡುತ್ತ ಕಥಾವಸ್ತುವನ್ನು ಹೆಣೆಯುವ ಅವರ ಕಸುಬು ಕನ್ನಡಕ್ಕೆ ಹೊಸದು. ಎಲ್ಲಿಯೂ ಒಂದು ಮತಪ್ರಸ್ಥಾಪನೆಯ ತೋರಿಕೆಯಿಲ್ಲ. ಓದುಗನೂ ಲೇಖಕನೂ ಒಟ್ಟಿಗೆಯೇ ಬಂದೊದಗಿದ ಸಮಸ್ಯೆಯನ್ನು ಬಗೆಹರಿಸುವದರಲ್ಲಿ ಸಮಾನವಾಗಿ ಪಾಲುಗೊಳ್ಳುವಂತಹ ಪರಿ ಅವರದು. ಅವರ 'ಸಂಬಂಧ' ಕಾದಂಬರಿ ಇಂತಹ ವಸ್ತುವನ್ನು ಎತ್ತಿಕೊಳ್ಳುತ್ತದೆ. ಅವರ ಕತೆ, ಕಾದಂಬರಿಗಳಲ್ಲಿ ಸಂವಾದ ವಿಪುಲವಾಗಿ ಕಂಡುಬರುತ್ತದೆ. ಹಾಗೆ ನೋಡಿದರೆ ನಾಟಕಗಳಲ್ಲಿ ರೂಪಾಂತರ ಮಾಡುವಷ್ಟು ಸುಲಭವಾಗುವ ಸಂರಚನೆಯಿರುತ್ತದೆ. ಅವರು ಕೆಲವು ರೇಡಿಯೋ ನಾಟಕಗಳನ್ನೂ ಬರೆದರು. ಸಂವಾದಗಳ ರೋಚಕತೆ, ಚುರುಕು, ಚೊಕ್ಕಟತನ, ಬೇಕಾದಷ್ಟೇ ಮಾತುಗಳು, ಹೇಳಿಕೆಯಲ್ಲಿಯ ಒತ್ತು, ತುಂಡು, ಅವರ ಸಂವಾದಗಳು ಎಂದೂ ಘೋಷಣೆಗಳಾಗದಂತೆ ಕಾಪಾಡುತ್ತವೆ. ಅಮೋಘವಾಗಿ, ನಿರರ್ಗಳವಾಗಿ ಹೇಳುವುದನ್ನು ಅವರು ಎಂದೂ ಮೆಚ್ಚುವುದಿಲ್ಲ. ವ್ಯಂಗ್ಯದಲ್ಲಿ, ವ್ಯಂಜಕತೆಯಿಂದ, ಕಾವ್ಯದಲ್ಲಿ ಹೇಳುವಂತೆ ಇಷ್ಟಾಗಿಯೂ ಮನೆಮಾತಿನ ಪಾತಳಿಯಲ್ಲಿಯೇ ಎಲ್ಲವನ್ನೂ ನಿರ್ವಹಿಸುವ ಕಾಳಜಿ ತೆಗೆದುಕೊಳ್ಳುತ್ತಾರೆ. ಹಾಗೆಂದೇ ಅವರ ಭಾಷೆಯ ಬಗ್ಗೆ ಮೂದಲಿಸಿದ್ದುಂಟು. ಆದರೆ ದೇಸಾಯಿ ಭಾಷೆಯನ್ನು ಬಳಸುವುದು ತನ್ನ ಕಥಾಪಾತ್ರಗಳಿಗೆ ಅನುರೂಪವಾಗುವಂತೆ, ಭಾಷೆ ಆನುಷಂಗಿಕ. ಇಲ್ಲಿ ಅವರು ತಮ್ಮ ಮರಾಠಿ, ಇಂಗ್ಲಿಷ್ ಮಿಶ್ರಿತ ಶಹರಿನ ಭಾಷೆಯನ್ನು ಆಧಾರ ತೋಡಿ ಕೊಂಡಿದ್ದಾರೆ, ಅದು ಅವರ ವಸ್ತು-ಸಮಸ್ಯೆಗಳ ಸುಯೋಗ್ಯ ನಿರ್ವಹಣೆಗೆ ಪ್ರಬಂಧಗಳನ್ನು ಬರೆಯುವಾಗ ಅವರು ಕನ್ನಡದ ಯೋಜನೆಯನ್ನು ಮಾಡುವ ರೀತಿ ಬೇರೆಯಾಗುವುದಕ್ಕೆ ಇದೇ ಕಾರಣ.

ಕಲೆಗಾಗಿ ಕಲೆಯ ಪಂಥದವರಲ್ಲಿ ಶಾಂತಿನಾಥ, ಮಾನವೀ ವಿಕಾಸದ ಪರಿ ಪರಿಯ ಶೋಧನೆಯಲ್ಲಿ ತೊಡಗಿದ ಅವರಿಗೆ ಸಾಹಿತ್ಯ ಒಂದು ಸಾಧನ. ಇಲ್ಲಿ ಅವರ ಮಾನವತಾವಾದ ಎದ್ದುಕಾಣುತ್ತದೆ.

3

ಕಾದಂಬರಿ ಶಾಂತಿನಾಥರಿಗೆ ಮೇಲ್ಪಂಕ್ತಿಯ ಬರಹಗಾರನೆನ್ನುವ ಮಾನ್ಯತೆಯನ್ನು ಒದಗಿಸಿತು. ಸಣ್ಣಕತೆಯಲ್ಲಿಯ ಅವರ ಸಾಧನೆ ಅಷ್ಟೇ ಗಮನಾರ್ಹ. ಮೊದಮೊದಲು ಮನೋವಿಶ್ಲೇಷಣಾ ತಂತ್ರದಿಂದ ಒಳಮನದ ಹಾವಳಿಯ ಬಗ್ಗೆ ಅವರ ಲಕ್ಷ್ಯ ಕೇಂದ್ರಿತವಾದಂತೆ ತೋರಿದರೂ ಕ್ರಮೇಣ ಅವರ ವಿಷಯಗಳ ಅನನ್ಯತೆ ಮನಸ್ಸನ್ನು ಸೆಳೆದುಕೊಳ್ಳುತ್ತದೆ. 'ಮಂಜುಗಡ್ಡೆ', 'ಕ್ಷಿತಿಜ' ಅವರ ಬಹುಚರ್ಚಿತ ಕತೆಗಳು. ಆದರೆ ಅವರ ಲಕ್ಷ್ಯ ಒಂದು ಸಾಮನ್ಯ ಹಗುರಾದ ವಿಷಯದ ಮೇಲೆ. ಆ ಸಮಸ್ಯೆಯ ಸಮಾಪ್ತಿಗಿಂತ ವ್ಯಕ್ತಿಯಲ್ಲಾಗುವ ಹಲವು ಪ್ರಕ್ರಿಯೆಗಳು ಒಂದೊಂದಾಗಿ ತೆರೆದುಕೊಳ್ಳುತ್ತವೆ. 'ಕೂರ್ಮಾವತಾರ', 'ವಾಸನೆ' '....ನಿಖಿಲವಾದದ್ದು' ಈ ಕತೆಗಳಲ್ಲಿ ಬದಿಗೊಗೆಯಲ್ಪಟ್ಟವರು, (marginalised), ಅವರ ಮನೋವಿ ಪ್ರಕ್ರಿಯೆ ನಾವು ಸಾಮಾನ್ಯವಾಗಿ ದುರ್ಲಕ್ಷಿಸುವ ವಿಷಯಗಳು. ಆದರೆ ನಮ್ಮ ಸುತ್ತೆಲ್ಲ ಇಂತಹ ಹಲವು ವೈಯಕ್ತಿಕ, ಸಾಮಾಜಿಕ ದುರ್ಲಕ್ಷಿತ ಘಟನೆಗಳೇ ಹರಡಿ ಕೊಂಡಿರುವಾಗ ಅವು ಸಾಹಿತ್ಯಕ ವಿಷಯಗಳೇಕಾಗಬಾರದು ಎನ್ನುವದು ದೇಸಾಯಿಯವರ ಆಗ್ರಹ. 'ನಾನಾನ ತೀರ್ಥಯಾತ್ರೆ' ಒಬ್ಬ ಕುಡುಕನ ಕತೆ. ಆದರೆ ವಿಲಕ್ಷಣ ಪರಿಣಾಮಕಾರಿ. ನಾನಾ ಕುಡುಕನೆಂದಲ್ಲ, ಅವನದೂ ವಿಶ್ವವಿದೆ. ಅಲ್ಲಿಯ ಅಂತರ್ಯುದ್ಧದಲ್ಲಿ ರಾಮನನ್ನು ಗೆಲ್ಲುವ ರಾವಣನೇ ಹೀರೋ. ಜೀವನದ ಬಗೆಗಿನ ಕಹಿ, ಹತಾಶೆಯ ಕಿಂಚಿತ್ ಬಣ್ಣ ಬಳಸಿ ನಾನಾನ ಚಿತ್ರ ಎದ್ದು ನಿಲ್ಲುತ್ತದೆ. ಅವನ ತೀರ್ಥಯಾತ್ರೆಯ ಉದಾರಕತೆ ಉಳಿದ ಮಹತ್ವದ ದುರಂತಗಳಷ್ಟೇ ಮಹತ್ವದ್ದು. '....ನಿಖಿಲವಾದದ್ದು' ಕತೆಯಲ್ಲಿಯ ಮನೆಯಾಳು ತನ್ನ ಮಾಲಿಕರ ಸರ್ಟಿಫಿಕೇಟುಗಳನ್ನು ಕದ್ದು ಶಹರಿಗೆ ಹೋಗಿ ನಿಖಿಲವಾಗುವ ಪ್ರಕರಣ ವ್ಯಂಗ್ಯದಿಂದ ತುಂಬಿದರೂ, ಸಿಟ್ಟು, ಬೆಲೆಯಿಲ್ಲದ ಮೌಲ್ಯಗಳನ್ನು ತುಳಿದು ಹೊರದಾಟುವ ಹೊಂಚು ರಹಸ್ಯಮಯತೆಯನ್ನು ತರುತ್ತದೆ. ಸಾಮಾಜಿಕ-ಸ್ಥಿತ್ಯಂತರಗಳ ಬಗ್ಗೆ ಅತ್ಯಂತ ಸೂಚಕವಾಗಿ ಮೆಲುದನಿಯಲ್ಲಿಯೇ ಎಷ್ಟೆಲ್ಲ ಹೇಳಿಹೋಗುತ್ತದೆ. ಹೀಗೆ ಒಂದೊಂದು ಕತೆಗೂ ಒಳದನಿಯದೆ. 'ನದಿಯ ನೀರು' ಕತೆಯಲ್ಲಿಯ ವ್ಯಕ್ತಿ ಸುಳ್ಳನ್ನು ಸಮರ್ಥವಾಗಿ ಹೇಳಿದ್ದಾನೆ. ತನ್ನ ಗೆಳೆಯನನ್ನು ನದಿಯಲ್ಲಿ ಮುಳುಗಿ ಸಾಯುವುದಕ್ಕೆ ತಾನೇ ಕಾರಣನಾಗಿರುವಾಗಲೂ ಅದಕ್ಕೂ ತನಗೂ ಏನೇನೂ ಸಂಬಂಧವಿಲ್ಲವೆಂದು

ಚಿಕ್ಕಂದಿನಿಂದ ಬದುಕುತ್ತಾನೆ. ಆದರೆ ಹೀಗೆ ಬಾಹ್ಯರೂಪದಲ್ಲಿ ಅರಗಿಸಿಕೊಂಡ ಒಂದು ಅನುಭವ ಅವನನ್ನು ಹಿಂಸೆ ಮಾಡದೆ ಉಳಿಯುವಷ್ಟು ನಿಷ್ಠುರನಾಗಿ ಬಾಳಲು ಬಿಟ್ಟಿದೆಯೆ ಎನ್ನುವದನ್ನು ಅಸ್ಪಷ್ಟವಾಗಿಯೇ ಇಟ್ಟಿದ್ದಾರೆ- ನಮ್ಮ ಸುತ್ತಲಿನ ಮುತ್ಸಾಳಿಗರೆಲ್ಲ ಹೃದಯ ಹೀನರೆ ಎಂದು ಶಂಕೆ ಪಡುವಂತೆ.

ಸುಮಾರು ಐವತ್ತಕ್ಕೂ ಹೆಚ್ಚು ಕತೆಗಳನ್ನು ಬರೆದ ದೇಸಾಯಿ ಕಥಾ ಪ್ರಕಾರಗಳಲ್ಲಿ ಪ್ರಯೋಗಶೀಲತೆಯನ್ನು ಬಿಟ್ಟು ಬಿಡುವುದಿಲ್ಲ. ಕತೆಯ ವಿಷಯದಲ್ಲಿ ಅವರು ತಂದ ಮಹತ್ವ-ಪರಾಙ್ಮುಖತೆಯಂತೇ ಕತೆಯ ಉದ್ದವನ್ನೂ ಅವರು ಕಡಿದು ಚಿಕ್ಕಕತೆಗಳನ್ನು ಬರೆದರು. ಅತ್ಯಂತ ಮಿತವಾದ ರೇಖೆಗಳನ್ನು ಉಪಯೋಗಿಸಿ ವ್ಯಕ್ತಿ, ಮನೋವ್ಯಾಪಾರ ಮತ್ತು ಒಂದು ಸಾಮಾಜಿಕ ಸಂಬಂಧವನ್ನು ನಿರ್ಮಿಸುವಲ್ಲಿ ಅವರು ಯಶಸ್ಸು ಗಳಿಸಿದರು. ಕಾರ್ಟೂನ್ ಚಿತ್ರಗಳಂತೆ ತುಂಬ ಅರ್ಥಗರ್ಭಿತವಾದ ಈ ಕತೆಗಳು ಮೋಹಕ ವಾಗಿವೆ. ಆದರೆ ಇಂತಹ ಕತೆಗಳು ವಿಪುಲವಾಗಿಲ್ಲ. ಇನ್ನೂ ಒಂದು ಮೊತ್ತ ದಲ್ಲಿ ಪ್ರಕಟವಾಗಿಲ್ಲ. ಅಲ್ಲಿ, ಇಲ್ಲಿ, ಹಂಚಿಕೊಂಡಿರುವ ಇಂತಹ ಕತೆಗಳನ್ನು ಪ್ರಕಾಶನದ ಸ್ತರಕ್ಕೆ ತರಬೇಕಾಗಿದೆ.

4

ಸೃಜನಶೀಲ ಸಾಹಿತ್ಯಕ ಚಟುವಟಿಕೆಗಳಷ್ಟೇ ವಿಚಾರಶೀಲ ಲೇಖನದ ಕಡೆಗೂ ಗಮನಕೊಟ್ಟಿರುವ ಶಾಂತಿನಾಥ ದೇಸಾಯಿ ಕನ್ನಡದ ಅತ್ಯುತ್ತಮ ವಿಮರ್ಶಕರು. 'ಸಾಹಿತ್ಯ ಮತ್ತು ಭಾಷೆ', 'ಗಂಗಾಧರ ಚಿತ್ತಾಲರ ಕಾವ್ಯಸೃಷ್ಟಿ', 'ಕನ್ನಡ ಕಾದಂಬರಿ ನಡೆದು ಬಂದ ದಾರಿ', 'ನವ್ಯಸಾಹಿತ್ಯದರ್ಶನ'- ಅವರು ವಿಚಾರ ಸಾಹಿತ್ಯಕ್ಕೆ ಕೊಟ್ಟ ಕೊಡುಗೆ. ಉತ್ತಮ ಪ್ರಾಧ್ಯಾಪಕರಾಗಿದ್ದರಿಂದ ಅನೇಕ ವಿದ್ಯಾರ್ಥಿಗಳನ್ನು ಸಾಹಿತ್ಯಕ ಚರ್ಚೆಯಲ್ಲಿ ತೊಡಗಿಸುವ ಕೆಲಸವನ್ನೂ, ಒಳ್ಳೆಯ ಲೇಖಕರನ್ನಾಗಿ ವಿಕಾಸಗೊಳ್ಳುವಂತೆ ನೋಡುವ ಕಾಳಜಿಯನ್ನೂ ವಹಿಸಿದ್ದಾರೆ. ಯಾವದೇ ರೀತಿಯ ಅಬ್ಬರವಿಲ್ಲದೆ, ತಮ್ಮ ಶ್ರೇಷ್ಠತ್ವವನ್ನು ಕಿಂಚಿತ್ತೂ ಬಾಧೆಯಾಗದಂತೆ ಸಂಯಮದಲ್ಲಿಟ್ಟು, ವಿಚಾರಗಳ ಆದಾನ ಪ್ರದಾನವಾಗಿಸುವಂತೆ ಮಾಡುವದು ಅವರ ವ್ಯಕ್ತಿತ್ವದ ನಿರ್ಮಲತೆಯ ಗುರುತು. ಅವರ ಕತೆ-ಕಾದಂಬರಿಗಳಲ್ಲಿ ಬರುವ ಸಂಭಾಷಣೆಯಂತೆ ನಿಜಜೀವನದಲ್ಲಿಯೂ ಸಂವಾದಗಳಿಂದಲೇ ಅವರು ಗಂಭೀರ ವಿಷಯಗಳನ್ನು ಚರ್ಚಿಸಿದರು. ಅಷ್ಟೇ ಪ್ರಭಾವಿಯಾಗಿ ಸಮಗ್ರವಾದ ವಿಚಾರಗಳನ್ನು ಮಂಡಿಸು ವಲ್ಲಿ ಸಭೆಯಲ್ಲಿಯ ಪ್ರೇಕ್ಷಕರನ್ನೂ ಮೆಚ್ಚಿಸಿದರು. ಅವರು 'ಬೇಂದ್ರೆ' ಅವರ ಮೇಲೆ ತಯಾರಿಸಿದ ನಿರ್ಬಂಧ ಸಭಿಕರನ್ನು ಮುಗ್ಧಗೊಳಿಸಿತ್ತು. ಶಿವರಾಮ ಕಾರಂತರ 'ಮೂಕಜ್ಜಿಯ ಕನಸುಗಳು' ಕಾದಂಬರಿಯನ್ನು ಅದರ ಅಂತಃ ಸತ್ವವನ್ನು ದಾರ್ಶನಿಕ ಹಿನ್ನೋಟವನ್ನು, ಆಳದಲ್ಲಿ ಹುದುಗಿದ ಮಾನವೀ ಸಭ್ಯತೆಯನ್ನು ಜ್ಞಾನಪೀಠದ ಸಮಿತಿಗೆ ಮಾನ್ಯವಾಗುವಂತೆ ದಿಗ್ಭ್ರಮೆಯಾಗು ವಂತಹ ಪ್ರಭಾವದಿಂದ ಮಂಡಿಸಿದ್ದರು. ಗೋಕಾಕರ ಒಂದು 'ಜೀವನ ಚಿತ್ರಣ'ದ ಚಿತ್ರೀಕರಣಕ್ಕೆ ಅವರ ವಿವಿಧ ಅಂಗಗಳ ವಿಶಿಷ್ಟತೆ ಹೊರಬರುವಂತೆ ಇಂಟರ್‌ವ್ಯೂ ಮಾಡಿದ್ದರು.

'ಕನ್ನಡ ಕಾದಂಬರಿ ನಡೆದು ಬಂದ ರೀತಿ' ಒಂದು ವ್ಯಾಸಂಗಪೂರ್ಣ ಗ್ರಂಥ. ಮಹತ್ವದ್ದೆಂದರೆ, ಕೃತಿಪರೀಕ್ಷೆಯ ಸಮಯ ಅವರ ಮೌಲ್ಯಮಾಪನ ವಸ್ತುನಿಷ್ಠವಾಗುವಂತೆ ಕಾಳಜಿ ವಹಿಸಿದ್ದರು. ಎಲ್ಲೂ ಕಹಿ ಮತನಿಷ್ಠೆ ಇಟ್ಟು ಕೊಳ್ಳದೆ ಸಾಹಿತ್ಯಕ ಮಾನದಂಡಗಳನ್ನು ಯೋಜಿಸಿ ಸೋದಾಹರಣ ಚಿಕಿತ್ಸೆ ಮಾಡಿದ ರೀತಿ ವಿಮರ್ಶಾ ಪದ್ಧತಿಗೇ ಮಾರ್ಗದರ್ಶಕವಾಗಿದೆ. ತಮ್ಮ 'ಮುಕ್ತಿ' ಕಾದಂಬರಿಯ ಗುಣ ದೋಷಗಳನ್ನೂ ಬಿಡದೆ ನಮೂದಿಸಿದ್ದು ಅವರ ನಿರ್ದಾಕ್ಷಿಣ್ಯಕ್ಕೆ, ಆತ್ಮಪರಾಙ್ಮುಖತೆಗೆ ಕನ್ನಡಿ ಹಿಡಿಯುತ್ತದೆ.

'ನವ್ಯ ಸಾಹಿತ್ಯ ದರ್ಶನ' ಒಂದು ಸಂದರ್ಭಗ್ರಂಥವೆನ್ನುವಷ್ಟು ಮಹತ್ವದ್ದು. ನವ್ಯ ಸಾಹಿತ್ಯದ ಬಗ್ಗೆ ವಿವಿಧ ಚಿಂತನೆಗಳನ್ನು, ಪಾಶ್ಚಾತ್ಯ ಪ್ರಕಾರಗಳಲ್ಲಿಯ ಉದಾಹರಣೆಗಳನ್ನು ಕೊಟ್ಟಿರುವ ಇಂತಹ ಗ್ರಂಥಗಳು ವಿರಳ. ಶಾಂತಿನಾಥರು ಗಂಭೀರವಾಗಿ ಮಾಡಿದ ಚಿಂತನಗಳ ಫಲವಿದು.

5

ಗಂಭೀರ ಲೇಖನಗಳಂತೆ ಅವರು ಕನ್ನಡದ ತಮ್ಮ ಪ್ರೇಮವನ್ನು ಗಂಭೀರವಾಗಿಯೇ ಕಂಡರು. ಕನ್ನಡದ ಉತ್ತಮ ಕೃತಿಗಳು ಸಾಧ್ಯವಾದಷ್ಟು ಹೊರಭಾಷೆಯ ಓದುಗರಿಗೂ ತಲುಪಬೇಕು ಎನ್ನುವ ಕಳಕಳಿಯನ್ನು ಅವರು ಬಿಟ್ಟುಕೊಡಲಿಲ್ಲ. 'Here comes Revolution' ಪಿ.ಲಂಕೇಶರ 'ಕ್ರಾಂತಿ ಬಂತು ಕ್ರಾಂತಿ' ಎಂಬ ನಾಟಕದ ಇಂಗ್ಲಿಷ್ ಅನುವಾದ. ಹಾಗೆಯೇ 'Awasthe' ಯು. ಆರ್. ಅನಂತಮೂರ್ತಿ ಅವರ ಕನ್ನಡ ಕಾದಂಬರಿ 'ಅವಸ್ಥೆ'ಯ ಇಂಗ್ಲಿಷ್ ಅನುವಾದ. ನ್ಯಾಷನಲ್ ಬುಕ್‌ಟ್ರಸ್ಟ್‌ನವರ ಆಗ್ರಹಕ್ಕೆ 'ಮಿ. ಹರಿನಾರಾಯಣ ಆಪ್ಟೆ' ಎನ್ನುವ ಮರಾಠಿ ಗ್ರಂಥವನ್ನು ಕನ್ನಡಕ್ಕೆ ಅನುವಾದಿಸಿದರು. ಹರಿನಾರಾಯನ ಆಪ್ಟೆ ಮರಾಠಿಯ ಆದ್ಯ ಕಾದಂಬರಿ ಕಾರರು. ನಮ್ಮಲ್ಲಿಯ ಗಳಗನಾಥರ ಕಾದಂಬರಿಗಳು ಅವರ ಕಾದಂಬರಿಗಳಿಂದ ಪ್ರೇರಿತ ವಾದವುಗಳು ಎನ್ನುವ ಅಭಿಪ್ರಾಯವಿದೆ. ಅಂತಹ ಆದ್ಯ ಹಿಂದಿ ಕಾದಂಬರಿಕಾರರನ್ನು ಕನ್ನಡದ ಓದುಗರಿಗೆ ಪರಿಚಯಿಸುವ ಕಾರ್ಯವನ್ನು ಮಾಡಿದ ಶಾಂತಿನಾಥರ ವಿನಯಶೀಲತೆ ಗಮನಿಸುವಂತಹದು. 'ಆಪ್ಟೆ' ಮತ್ತು 'ಪ್ರೇಮಚಂದ' ಈ ಮರಾಠೀ-ಹಿಂದಿ ಕಾದಂಬರಿ ಪ್ರಕಾರಗಳಿಗಿಂತ ಭಿನ್ನವಾದ ರೀತಿಯಲ್ಲಿ ಬರೆಯುತ್ತಿರುವ ಶಾಂತಿನಾಥರು ಎಲ್ಲ ಮಹಾನ್ ಲೇಖಕರಿಂದ ಸ್ಫೂರ್ತಿಪಡೆಯುವ ನಮ್ರತೆಯಿರಲಿ ಎನ್ನುವದನ್ನೇ ಗರ್ಭಿತವಾಗಿ ತೋರಿಸಿ ಕೊಟ್ಟಿದ್ದಾರೆ, ಅನುವಾದಗಳಿಂದ.

6

ಕನ್ನಡದಲ್ಲಿಯ ನವ್ಯೋತ್ತರ ಕೃತಿಗಳ ಪರಿಚಯವೇನು ಎಂದು ಕೇಳಿದರೆ ಉತ್ತರ ಥಟ್ಟನೆ ಹೊಳೆಯುವುದಿಲ್ಲ. ನವ್ಯದ ಆತ್ಮ ಪರಾಯಣತೆಗೆ ವಿರುದ್ಧ ವಾಗಿ ಬಂಡಾಯ ಸಾಹಿತ್ಯ ಹುಟ್ಟಿಕೊಂಡಿತು. ದಲಿತರ ಸಾಮಾಜಿಕ ಸಮಸ್ಯೆಗಳ ಬಗ್ಗೆ, ಸಮಕಾಲೀನ ಸಮಸ್ಯೆಗಳ ಬಗ್ಗೆ ಅನೇಕ ಬರಹಗಳು ಬರಹತ್ತಿದವು.

ಈ ದಿಶೆಯಲ್ಲಿ ಶಾಂತಿನಾಥರಂತಹ ದಲಿತೇತರು ತಳೆದ ನಿಲುವು ಗಮನಾರ್ಹವಾಗಿದೆ. 'ಸೃಷ್ಟಿ' ಕಾದಂಬರಿಯಿಂದ ಹಿಡಿದು ಅವರ ಮುಂದಿನ ಎಲ್ಲ ಕಾದಂಬರಿಗಳಲ್ಲಿ ಸಾಮಾಜಿಕ ಧೋರಣೆಗಳ ಬಗ್ಗೆ ಚಿಂತನೆಯಿದೆ. ಸಮಾಜ ಪರಿವರ್ತನೆಯೆಂದರೇನು? ಎನ್ನುವುದರ ವಿಶ್ಲೇಷಣೆಯಿದೆ. ನವ್ಯದ ಪಶ್ಚಿಮಾಭಿಮುಖತೆಯಿಂದ ಹೊರ ಬರುವ ಪ್ರಯತ್ನವಿದೆ. ಏನೆಲ್ಲ ಹೇಗೆ ಹೊಂದಿಸಿಕೊಳ್ಳುವುದು ಎನ್ನುವುದರ ಬಗ್ಗೆ ಪರಿಶ್ರಮವಿದೆ. ನಮ್ಮ ಮೌಖಿಕ ಪರಂಪರೆಯಿಂದ ಬಂದ ಕಲಾ ಪ್ರಕಾರಗಳನ್ನು ಆಳವಾಗಿ ಅಭ್ಯಾಸಮಾಡಿ ಅವುಗಳ ಅಳಿಯಲಾರದ ಸತ್ತ್ವವನ್ನು ಅಳವಡಿಸಿಕೊಳ್ಳುವ ಪ್ರಯತ್ನಗಳನ್ನು ನಾವು ಕಾಣುತ್ತೇವೆ. 'ಸೃಷ್ಟಿ' ಕಾದಂಬರಿ ಆ ರೀತಿಯಲ್ಲಿ ಯಕ್ಷಗಾನ ಪರಂಪರೆಯ ಸೂತ್ರಧಾರನ ಅಂಶಗಳನ್ನು ಅಳವಡಿಸಿಕೊಂಡು, ಪಾತ್ರಗಳನ್ನು ರಂಗಕ್ಕೆ ಇಳಿಸುವ ಗೊಂಬೆಯಾಟದ ಕುಶಲ ಕಸಬುಗಾರನ ಅನುಕರಣೆ

ಮಾಡುವುದನ್ನು ನೋಡಬಹುದು. ಸಮಕಾಲೀನ ಲೇಖಕರಾದ ಬಾದಲ್ ಸರಕಾರ, ಶ್ರೀರಂಗರಂತಹ ಸಿದ್ಧಹಸ್ತ ಲೇಖಕರಿಂದಲೂ ಪ್ರೇರಣೆಗಳನ್ನು ಪಡೆಯುವುದರಲ್ಲಿ ಯಾವ ಆತಂಕವನ್ನೂ ತೋರಿಸದಿರುವುದು ಶಾಂತಿನಾಥರ ಸಂಪನ್ನ ಪರಿವರ್ತನ ಪ್ರಿಯತೆಯ ದ್ಯೋತಕ.

ಸಮಾಜ, ರಾಜಕಾರಣ, ಸಂಸ್ಕೃತಿ ಇವೆಲ್ಲವುಗಳ ಸ್ಖಲನವನ್ನು ಎಚ್ಚರ ದಿಂದ ನೋಡುವ 'ಸೃಷ್ಟಿ' ನವ್ಯೋತ್ತರ ಕಾಲದ ಮಹತ್ವದ ಕೃತಿ. 'ಬೀಜ' ಕಾದಂಬರಿ ಕೂಡ ಗ್ರಾಮಾಂತರದಲ್ಲಿ ಭರಭರನೆ ನಡೆಯುತ್ತಿರುವ ಜಾರುಗುಂಡಿಯ ಕಡೆಯ ಉರುಳು ಚಿತ್ರಿಸುತ್ತದೆ. ಕುಹಕ, ಆರೋಗ್ಯ ವ್ಯವಸ್ಥೆಯ ಅನವಸ್ಥೆ, ಕಳ್ಳಸಾಗಾಟ, ದುಂದುಗಾರಿಕೆ, ಶ್ರೀಮಂತರ ಬಗ್ಗೆ ಅಸೂಯೆ, ಅನ್ಯಮತೀಯರ ಬಗ್ಗೆ ಅಸಹಿಷ್ಣುತೆ ಇಂತಹವೇ ಹಾವಳಿಗಳಿಂದ ಕೆಟ್ಟ ಕಡು ಪರಿಸ್ಥಿತಿಗಳನ್ನು ಮಂಡಿಸುತ್ತದೆ. ಪಟ್ಟಣದ ಚೊಕ್ಕ, ಉದಾರ ಮತವಾದಿ, ಆರೋಗ್ಯಕಾರಿ ವ್ಯವಸ್ಥಾಪನವನ್ನು ಗ್ರಾಮದ ಅಂತಃ ಸತ್ವವನ್ನು ಕಾಪಾಡಿಕೊಂಡು ಗ್ರಾಮದ ಮೇಲೆ ಆರೋಪಿಸುವ ಸರ್ವೋದಯ ದೃಷ್ಟಿ ಯನ್ನು ಪ್ರಸ್ತುತ ಬೀಜ ಕಾದಂಬರಿಯಾಗಿ ಕಾಣುತ್ತೇವೆ. ಗ್ರಾಮೀಣ ವ್ಯವಸ್ಥೆಯ ಪುನರ್‌ರಚನೆಯ ಕಲ್ಪನೆಯನ್ನು ವೈಯಕ್ತಿಕ ಸಂಬಂಧಗಳ ಪುನಃ ಸ್ಥಾಪನೆಯ ಕನಸಿಗೆ ಜೋಡಿಸುವ ತಡಕಾಡುವಿಕೆ ಇಲ್ಲಿದೆ. ಕೃತಕೃತ್ಯತೆ ಎರಡೂ ಸ್ತರದಲ್ಲಿ ಎಷ್ಟು ದುಃಸಾಧ್ಯವೆನ್ನುವ ಅಸ್ತಿತ್ವವಾದಿ ಕೃತಿ, 'ಬೀಜ'.

'ಅಂತರಾಳ' ಇನ್ನೊಂದು ಮಹತ್ವಾಕಾಂಕ್ಷೆಯ ಕಾದಂಬರಿ. ಶಾಂತಿನಾಥರ ಜೀವನ ದೃಷ್ಟಿಯಲ್ಲಿಯ ಮಾನವೀ ವಿಕಾಸದ ಸಂಕಲ್ಪನೆಯನ್ನು ಕುರಿತು ಇಲ್ಲಿ ಚಿಂತನವಾಗಿದೆ. ವಿಕಾಸವೆಂದ ಕೂಡಲೆ ಆರ್ಥಿಕ ಪ್ರಗತಿಯಷ್ಟೆ ನಮ್ಮ ಗಮನಕ್ಕೆ ಬರುವದುಂಟು. ಆರ್ಥಿಕ-ಸಾಂಸ್ಕೃತಿಕ ಬದಲಾವಣೆಗಳಿಂದ ಬಂದದ್ದೇನು, ಯಾರಿಗೆ ದೊರೆತದ್ದು, ಅದರ ಪರಿಣಾಮವಾಗಿ ಎಲ್ಲಿ ಎಷ್ಟು ಅನವಸ್ಥೆ, ದುರವಸ್ಥೆಗಳು ಹುಟ್ಟಿಕೊಂಡಿವೆ ಎನ್ನುವ ಚಿತ್ರ 'ಅಂತರಾಳ'ದಲ್ಲಿ ಬಂದಿದೆ. ನಗರ ವಿಕಾಸದಂತೆ ವಸತಿಯ ಸೌಕರ್ಯ, ದೊಡ್ಡ ದೊಡ್ಡ ಯೋಜನೆಗಳು, ಒಂದು ಕಡೆಯಾದರೆ ರೋಮ್ಯಾಂಟಿಕ್ ಕಲ್ಪನೆಯ ಪ್ರೀತಿ ವಿವಾಹ ಜಾತಿ ವ್ಯವಸ್ಥೆಯನ್ನು ದಾಟಿದ್ದು, ಕುಟುಂಬದ ನಿಯೋಜನದ ಉತ್ಸಾಹದಲ್ಲಿ ಗರ್ಭ ಪಾತದ ಕಡೆಗೆ ಒಲವು ಕಂಡಿದ್ದು ಶಹರೀ ಸಂಸ್ಕೃತಿಯಿಂದ ಬಂದ ವಿವಾಹ ಬಾಹ್ಯ ವ್ಯವಹಾರ, ಸಹಜೀವನದ ನವ್ಯ ಸಂಕಲ್ಪನೆ ಕುಟುಂಬ ವ್ಯವಸ್ಥೆಯನ್ನು ಛೇದಿಸಿದ್ದು, ಹೆಣ್ಣು ಗಂಡುಗಳ ಸಂಬಂಧ ಮನುಷ್ಯ ಕುಲವನ್ನು ಮುಂದೆ ನಡೆಸಿಕೊಂಡು ಹೋಗಬೇಕೆನ್ನುವ ಕೇಂದ್ರ ವಿಚಾರವನ್ನು ಬಿಟ್ಟು ಎರಡು ಜೀವಿಗಳ ಆತ್ಮೀಯತೆ ತಾಳುವಷ್ಟು ಕಾಲಕ್ಕೇ ಸೀಮಿತಗೊಳಿಸುವ ಹೊಸ ವಿಚಾರ ಹಾದಿ ಹಿಡಿದದ್ದು - ಇನ್ನೊಂದು ಕಡೆ, ಆದರೆ ಇಂತಹ ಕ್ರಾಂತಿಕಾರಿ ಘಟನಾವಳಿಯ ವೇಗದಿಂದ ವ್ಯಕ್ತಿ ದಿಙ್ಮೂಢನಾಗುವ ಪರಿಸ್ಥಿತಿ ಬರುತ್ತದೆ. ಹೊಸ ಹಾದಿ ಹಿಡಿಯುವದೂ ಒಂದು ತರದ ರಮ್ಯವಾದವೇ. 'ಅಂತರಾಳ' ದಲ್ಲಿ ರಮ್ಯವಾದಗಳ ಅನೇಕ ನಮೂನೆಗಳನ್ನು ಮಂಡಿಸಿದ್ದು ಗಮನಾರ್ಹ ವಾಗಿದೆ. ಅಜ್ಜನ ಕಾಲದ ರಮ್ಯ ಮಾರ್ಗ-ತನ್ನ ಹೆಂಡತಿಯ ಪ್ರಿಯಕರನನ್ನು ಬರಿಯ ಶಂಕೆಯ ಕಾರಣವೇ ಕೊಂದು ಬಿಡುವ-ರೀತಿಯದಾದರೆ ಕೆಲಸದವಳ ಜತೆಯ ಸಂಬಂಧದಿಂದ ಹುಟ್ಟಿಕೊಂಡ ಮಗುವಿನ ಬಗ್ಗೆ ಸಹಾನುಭೂತಿ ಆಸ್ಥೆ ಪ್ರೀತಿ ತೋರುವ ಪರಿ ಇನ್ನೊಂದು. ವ್ಯಕ್ತಿ ವ್ಯಕ್ತಿಯನ್ನು ಬಯಸುವ ವಿವಿಧ ಆಕರ್ಷಣೆಗಳ ಪ್ರಕಾರದಷ್ಟೇ, ಧ್ಯೇಯಕ್ಕಾಗಿ ಬದುಕಿನುದ್ದಕ್ಕೂ ಅಂಟಿಕೊಂಡಿರುವ ಪೂಜಾರ ಮಾಸ್ತರ, ಕಮ್ಯುನಿಸಂ ಪ್ರಸಾರಕ್ಕೆ ಕಟಿಬದ್ಧನಾದ ಯುವಕನ ಆದರ್ಶ ಪ್ರಕಾರಗಳೂ ಮಹತ್ವದವು. ಮಾನವೀ ಜೀವನವನ್ನು ಮುಂದೂಡುವದು ಇಂತಹ ಕನಸುಗಾರಿಕೆ; ಬೇರೊಂದನ್ನೇ ನಿರ್ಮಿಸುವ ಹವಣಿಕೆ, ರಾಜಕೀಯ ಘೋಷಣೆಗಳೂ ವಾಸ್ತವವನ್ನು ಬಿಟ್ಟು ರಮ್ಯತೆಯ ಸಮಾಜದ ಪುನರ್ನಿರ್ಮಾಣದ ಸಂಕಲ್ಪಗಳು. ನಾವು ಎಷ್ಟೇ ವಾಸ್ತವಕ್ಕೆಂದು ದುಡಿದರೂ ನಮ್ಮನ್ನು ದೂಡುವ ಪ್ರೇರಣೆ ಒಂದು ಸ್ವಪ್ನ. ಈ ನವ ರೋಮಾಂಟಿಸಂನ ಪ್ರಸ್ತಾಪ ಅಂತರಾಳದಲ್ಲಿದೆ. ಸಾಮಾಜಿಕತೆಯಿಂದ ಇನ್ನೊಮ್ಮೆ ಅಂತರ್ಯಕ್ಕೆ ಪ್ರವೇಶಿಸುವ ಅವಶ್ಯಕತೆಯನ್ನು ಈ ಕೃತಿ ಪ್ರತಿ ಪಾದಿಸುತ್ತದೆ. ಬಾಹ್ಯರಂಗದಲ್ಲಿಯ ವಿಕಾಸ, ಸಮೃದ್ಧತೆ, ವೈಭವಗಳಿಗಿಂತ, ಅಂತರಂಗದ ತೃಪ್ತಿ, ಸಮಾಧಾನ, ಶಾಂತಿಯತ್ತ ನಿರ್ದೇಶಿಸುತ್ತದೆ.

7

ಶಾಂತಿನಾಥ ದೇಸಾಯಿ ಅವರು ತಮ್ಮ ಸಾಹಿತ್ಯ ಕೃತಿಗಳಲ್ಲಿ ತೊಡಗಿಸಿದ ತಂತ್ರದ ಕುರಿತು ಬರೆಯುತ್ತ ಡಾ. ಡಿ.ಆರ್. ನಾಗರಾಜ್ ಹೇಳುವದು: "ಶಾಂತಿನಾಥ ದೇಸಾಯರು ತಮ್ಮ ಕಾದಂಬರಿಗಳಲ್ಲಿ ತಂತ್ರವನ್ನು ಅರ್ಥವಾಗಿಸ ಬಲ್ಲರು. ಹಾಗೆಯೇ ಅರ್ಥವನ್ನು ತಂತ್ರವಾಗಿಸಬಲ್ಲರು. ಈ ದೃಷ್ಟಿಯಿಂದ ಶಾಂತಿನಾಥ ದೇಸಾಯರ ಕಾದಂಬರಿಗಳು ಕನ್ನಡ ಸಂವೇದನೆಯ ಒಂದು ವಿಶಿಷ್ಟ ಭಾಗದ ನಾಟಕೀಯ ಇತಿಹಾಸ. ಅವರ ಮೊದಲ ಕಾದಂಬರಿಗಳನ್ನು ಓದಿ ಮುಗ್ಧರಾಗಿ ಬಿಟ್ಟ ಅನೇಕ ತರುಣರು ದೇಸಾಯರ ನಾಯಕರಂತೆ ನರ್ತಿಸಲು ಪ್ರಯತ್ನಿಸಿದ್ದನ್ನು ಕಣ್ಣಾರೆ ಕಂಡಿದ್ದೇನೆ. ಆದರೆ ಅದು ಹಾಗೆ ಬಹಿರಂಗ ವರ್ತನೆಗೆ ಮಾತ್ರ ದೊರಕುವ ವ್ಯಕ್ತಿತ್ವವಲ್ಲ. 'ಮುಕ್ತಿ', 'ವಿಕ್ಷೇಪ'ಗಳ ಸಾಧನೆ ತುಂಬಾ ಗಮನಾರ್ಹ ಎಂದೇ ಹೇಳಬೇಕು. 'ನವ್ಯ'ದ ಸಿದ್ಧಿಯ ಘಟ್ಟ ಅದು.

ನವ್ಯೋತ್ತರ ಸಾಹಿತ್ಯದ ಮುಖ್ಯಲಕ್ಷಣ ಕಥನದ ಪ್ರತಿಫಲನ ಎನ್ನುವ ದಾದರೆ ಅದು ಕೂಡಾ ದೇಸಾಯರ ಸೃಷ್ಟಿ ಕಾದಂಬರಿಯಲ್ಲಿ ಮೊದಲಬಾರಿ ಬಂತು. ದೇಸಾಯರಿಗೆ ಮುಗ್ಧ ಕಥನ ಅಸಾಧ್ಯ, ಗದ್ಗದ ನಿರೂಪಣೆ ಅಸಾಧ್ಯ. ರಮ್ಯಕಥನ ಅಸಾಧ್ಯ. ಆದರೆ, ಅವರು ಮನುಷ್ಯರ ಬದುಕಿನಲ್ಲಿ ಇವೆಲ್ಲ ಕೂಡಿಯೇ ಬರುತ್ತವೆ ಎಂಬುದನ್ನು ಅರಿಯದ ಸಿನಿಕ-ಧೀಮಂತರಲ್ಲ.

ದೇಸಾಯರ ಕಾದಂಬರಿಗಳಲ್ಲಿ ತಂತ್ರ ಎನ್ನುವದು ಭಾವನೆಯ ಅಬ್ಬರ ವನ್ನು ದಾಟುವ ಕ್ರಮ. ಆದರೆ, ಅಲ್ಲಿ ದೊಡ್ಡ ದೊಡ್ಡ ಘಟನೆಗಳು ನಡೆಯುವ ಕ್ರಮ ನಮಗೆ, ಮಧ್ಯಯುಗೀನ ರಸಾಯನ ಶಾಸ್ತ್ರಜ್ಞನ ಪ್ರಯೋಗದ ಮೇಜನ್ನು ನೆನಪಿಸುತ್ತವೆ. ಇಡೀ ಲೋಕ ಅಲ್ಲಿ ಪುಟ್ಟದಾಗಿ ಬಂದು ವಿಧೇಯಕವಾಗಿ ಕೂತಿರುತ್ತದೆ. ದೇಸಾಯರು ದೊಡ್ಡದನ್ನು ಹಿಡಿತ ದಲ್ಲಿ ಸಿಗುವ ವಸ್ತುವನ್ನಾಗಿ ಪರಿವರ್ತಿಸುವ ಕ್ರಮ ಆಳವಾದ ಅಧ್ಯಯನಕ್ಕೆ ಅರ್ಹ".

'ಸೃಷ್ಟಿ' ಕಾದಂಬರಿಯಲ್ಲಿ ಬಳಸಿದ ಒಂದು ಸಂವಾದದ ಮೂಲಕ ಶಾಂತಿನಾಥರ ಸಾಹಿತ್ಯದ ಬಗೆಗಿನ ಅಪೇಕ್ಷೆಯ ಬಗ್ಗೆ ಒಂದು ಸೂಚನೆಯಿದೆ.

"ಮುಖ್ಯ ಆಕ್ಷನ್ ಬೇಕು. ಕೃತಿ ಬೇಕು, ಕ್ರಾಂತಿಬೇಕು, ಕತ್ತಿಗಿಂತ ಲೇಖಣಿಕೆಗೆ ಸಾಮರ್ಥ್ಯವಿದೆ ಎನ್ನುವ ಮಾತು ಸುಳ್ಳು. ಈ ಮಸಿಯಲ್ಲಿ ಅರ್ಥ ಉಳಿದಿಲ್ಲ. ಅದನ್ನು ಎಷ್ಟು ಹರಿಸಿದರೂ ಅದು ನಿರುಪಯೋಗಿ. ಈಗ ಹರಿಸಬೇಕಾದದ್ದು ರಕ್ತ".

ಅದನ್ನೇ ಮುಂದರಿಸುತ್ತ-

"ಕತ್ತಿ ಇಲ್ಲದಿದ್ದರೇನಾಯ್ತು ಕತ್ತು ಇದೆ. ಬಾಂಬ್ ಇಲ್ಲದಿದ್ದರೇನಾಯಿತು ಬಾಯಿ ಇದೆ. ಕತ್ತೆತ್ತಿ ಬಾಯಿ ತೆರೆದು ಕೂಗಬೇಕು-ಆಕಾಶ ಹರಿಯುವಂತೆ ಕೂಗಬೇಕು. ಒಬ್ಬರು-ಇಬ್ಬರು-ಸಾವಿರಾರು-ಲಕ್ಷಾವಧಿ ಜನ ಒಕ್ಕೊರಲಿನಿಂದ ಕೂಗಬೇಕು. ಆಗ...... ಇಳಿದು ಬಾ ತಾಯಿ ಇಳಿದು ಬಾ ಎಂದು ಒಕೊರಲಿನಿಂದ ಹಾಡಬೇಕು. .... (ಎಲ್ಲ ಪಾತ್ರಗಳು) ನಾನು, ನೀನು, ಎಲ್ಲರೂ ಆ ಗಂಗಾನದಿಯಲ್ಲಿ ಮಿಂದು, ಮುಳುಗಿ ಸತ್ತು, ಪುರ್ನಜನ್ಮ ಪಡೆಯಬೇಕು. ಅಂದಾಗಲೇ -ಹೊಸ ಸೃಷ್ಟಿ-ಹೊಸ ಕಾದಂಬರಿ-ಹೊಸ ಕನಸು!"

ಇಂತಹದೇ ವಿಚಾರಗಳನ್ನು 'ಬೀಜ'ದಲ್ಲಿಯೂ ದೇಸಾಯಿ ಹೇಳುತ್ತಾರೆ. "ನೀ ಅನ್ನೋದು ಖರೆ-ಬರೇ ಸಾಂಸ್ಕೃತಿಕ-ಸಾಮಾಜಿಕ ಕೃತಿ. ಈ ದೇಶದಲ್ಲಿ ಶಕ್ಯವೇ ಇಲ್ಲ-ರಾಜಕೀಯ ಕೃತಿಯೇ ನಿಜವಾಗಿ ಜೀವನವನ್ನು ಪರಿವರ್ತಿಸುವ ಕೃತಿ. ಆದರೆ ಅದರರ್ಥ ರಾಜಕೀಯ ಕೃತಿಯೇ ಗುರಿಯಲ್ಲ-ಅದು ಸಾಧನ. ಗುರಿ-ಸ್ವಾತಂತ್ರ್ಯ. ಸ್ವಾತಂತ್ರ್ಯದ ಅರ್ಥವೆಂದರೆ ಸಂಸ್ಕೃತಿಯ ಸಹಾನು ಭೂತಿಯ -ಪ್ರೀತಿಯ ಸಂತತ ವಿಕಸನಪ್ರಕ್ರಿಯೆ-ಮಾರ್ಕ್ಸನಿಗೂ ಅದೇ ಗುರಿಯಿತ್ತಲ್ಲ ಮೂಲಭೂತವಾಗಿ?...."

"ಅಂತರಾಳ"ದಲ್ಲಿಯೂ ಇದೇ ಧ್ವನಿ ಮತ್ತೊಮ್ಮೆ ಕೇಳಬರುತ್ತದೆ. "ಜೀವನದಲ್ಲಿ ರೋಮ್ಯಾನ್ಸ ಬೇಕಂತನಿಸ್ತದೆ. ಈ ಇಪ್ಪತ್ತನೆ ಶತಮಾನದಲ್ಲಿ `ರೋಮ್ಯಾಂಟಿಸಿಜಮ್' ಒಂದು ಮನಸ್ಸಿನ ರೋಗವಿದ್ದಂತೆ. ನಾವೆಲ್ಲ ಅದಕ್ಕೆ ಹೆಸರಿಟ್ಟೆವು. ವಾಸ್ತವಿಕತೆಗೆ ಹೆಚ್ಚು ಕಿಮ್ಮತ್ತು ಕೊಟ್ಟೆವು. 'ಸಾಮಾಜಿಕತೆಗೆ' ಈಗ ಹೆಚ್ಚಿನ ಬೆಲೆ ಕೊಡ್ತಾ ಇದ್ದೀವಿ. ಆದರೆ, ರಮ್ಯವಾದ, ಕಲ್ಪನಾತ್ಮಕ ಅಭಿವ್ಯಕ್ತಿ ವಾದಗಳಲ್ಲಿಯೇ ಜೀವನದ ಎಷ್ಟೋ ಸತ್ಯಗಳಡಗಿವೆ...."

ಹೀಗೆ ಸ್ವಾತಂತ್ರ್ಯಕ್ಕೆ, ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಬೆಲೆ ಕೊಡುತ್ತಾರೆ ದೇಸಾಯಿ. ಅವರ ಲೇಖನ ಮಾನವನ ವಿಕಾಸಗಳಿಗೆ ಯಾವ ಸೀಮೆಯನ್ನೂ ಮನ್ನಿಸುವದಿಲ್ಲ. ತಾನು ಹುಟ್ಟಿಬಂದ ಧರ್ಮದ ಬಗ್ಗೆ ನಿರ್ದುಷ್ಟವಾಗಿ ಬರೆಯಬೇಕೆನ್ನುವ ಅಥೆಂಟಿಸಿಟಿಯ ಹಂಬಲದಿಂದ 'ಓಂಣಮೋ' ಕಾದಂಬರಿಯನ್ನು ಬರೆದರು. ಹುಟ್ಟಿನಿಂದ ಬಂದ ಅರಿವು, ಇರುವಿನ ಕೊನೆಯ ಅವಧಿ-ಈ ಅಂತರಾಳದಲ್ಲಿ ಬರೆದ ಕೃತಿಯಿದು. ಆದರೂ ಧಿಟ್ಟತನದಿಂದ ತನ್ನ ಸ್ವಾತಂತ್ರ್ಯದ ಅಭೀಪ್ಸೆಯನ್ನು ಪೂರೈಸಲು ಹಾತೊರೆದರು. 'ಓಂಣಮೋ'ದ ಪ್ರಪಂಚದ ಎರಡು ಧ್ರುವಗಳು ಭಾರತ ಮತ್ತು ಪಶ್ಚಿಮ, ಜೈನ ಮತ್ತು ಕ್ರಿಶ್ಚಿಯನ್ ಧರ್ಮಗಳು, ಧರ್ಮವಾದ ಮತ್ತು ಮಾರ್ಕ್ಸವಾದಗಳ ವಿಚಾರ ಪ್ರಣಾಲಿಗಳು. ತಂತ್ರದಲ್ಲಿ ಕೂಡ 'ಸೃಷ್ಟಿ'ಯಂತೆ ಇಲ್ಲಿಯೂ ಓದುಗರೊಡನೆ ಸಂವಾದ ಸಾಧಿಸುವ, ಡಾಯಲೆಕ್ಟಿಕ್ ತಂತ್ರವನ್ನು ಹೂಡಿದ್ದಾರೆ. 'ಓದುಗರೇ, ವಿಮರ್ಶಕರೇ' ಎಂದು ಕೃತಿಯ ಸೀಮೆಯ ಹೊರಬರುವ ಬೇರೆ ಬೇರೆ ದೃಷ್ಟಿಗಳ ತುಲನೆ ಮಾಡುವ, ಹೊಂದಿಸಿಕೊಳ್ಳುವ ಪರಿ ನೂತನವಾದದ್ದು. ಕಾದಂಬರಿಯಲ್ಲಿಯ 'ಸದ್ಯ'ಕ್ಕೂ ಅದರ ಹಿಂದಿರುವ ಇತಿಹಾಸಕ್ಕೂ ಜೋಡಿಸುವ ರೀತಿ ಕೃತಿಯನ್ನು ಕಾಲಮಾನದಲ್ಲಿ ವಿಸ್ತಾರದಲ್ಲಿ ಕಾಣುವ ಪ್ರಯತ್ನವಾಗಿದೆ. ಹೀಗೆ ಹಿಗ್ಗಿಸಿ ತಮ್ಮ ಬೀಸನ್ನು ವಿಶಾಲಗೊಳಿಸುವ ಹೇತು ಧರ್ಮ ವಿಚಾರಗಳಂತಹ ಸಂವೇದನಾಯುತ ಸಂಕಲ್ಪನೆಗಳಿಗೆ ಅಪಕಾರ ವಾಗದಿರಲಿ ಎನ್ನುವ ಜಾಗರೂಕತೆಯೂ ಇರಬಹುದು. ಈ ತಂತ್ರದಲ್ಲಿ ಬರುವ 'ಕಥನದ ಪ್ರತಿಫಲನ' ರೀತಿ ಕನ್ನಡ ಕೃತಿಗಳಲ್ಲಿಯ ಅತ್ಯಂತ ಗಮನಾರ್ಹವಾದ ವಿಷಯವಾಗಿದೆ.

ಲೇಖಕ, ವಾಚಕ, ವಿಮರ್ಶಕರನ್ನು ಒಟ್ಟುಗೂಡಿಸಿ ಒಂದು ಹೊಸ ಕ್ಷಿತಿಜವನ್ನು ತೋರಿಸುತ್ತಾ, ಆ ದಿಶೆಯಲ್ಲಿ ದಿಟ್ಟ ಹೆಜ್ಜೆಯಿಟ್ಟ ಕೃತಿ ಅವರ ಅಂತಿಮ ಕೃತಿ. ಸ್ವಾತಂತ್ರ್ಯಕ್ಕಾಗಿ, ಮುಕ್ತಿಗಾಗಿ ಕೊನೆ ಅಕ್ಷರಶಃ ಉಸಿರಿನ ವರೆಗೂ ಚಡಪಡಿಸಿದರು. 'ಓಂಣಮೋ' ಬರೆದು ಮುಗಿಸುವ ಕಾಲದಲ್ಲಿ ಅವರಿಗೆ ಉಸಿರುಗಟ್ಟಿದ ವ್ಯಾಧಿ. ಆ ನಿರ್ಬಂಧದ ಸಮಯದಲ್ಲಿಯೂ ಅನಿರ್ಬಂಧತೆಯ ಅತ್ಯುಚ್ಚ ಧರ್ಮಕ್ಕೆ ಹಾತೊರೆದು ಕೊನೆಯುಸಿರೆಳೆದರು-ಕಾದಂಬರಿ ಮುಗಿಸಿದ್ದು ವಾರವೊಂದರಷ್ಟೇ ಮುಂಚೆ; ಸಾಹಿತ್ಯಕ್ಕೂ ಅವರ ಜೀವನಕ್ಕೂ ಅಂಟಿದ ನಂಟಿನ ಅವರ ಕತೆ ಹೇಳುತ್ತ.

ಶಾಂತಿನಾಥ ದೇಸಾಯಿ ಒಂದು ವಿಶಾಲ ಪರಿಪ್ರೇಕ್ಷ್ಯವನ್ನು ತೆರೆದಿಟ್ಟು ತೆರಳಿಬಿಟ್ಟಿದ್ದಾರೆ.

❑

# ಹಾ.ಮಾ. ನಾಯಕ

ಕಮಲಾಹಂಪನಾ

1

ಡಾ. ಹಾ.ಮಾ. ನಾಯಕರ ಪೂರ್ತಿ ಹೆಸರು ಹಾರೋಗದ್ದೆ ಮಾನಪ್ಪ ನಾಯಕ. ಹಾಮಾನಾ ಎಂಬುದು ಅವರ ಕಾವ್ಯನಾಮ. ಅವರ ಒಟ್ಟು ಬದುಕಿನ ಕಾಯಕದಲ್ಲಿ ಸಿಂಹಪಾಲು ಕನ್ನಡದ ಕೈಂಕರ್ಯಕ್ಕೆ, ಮಣಿಹಕ್ಕೆ, ಪರಿಚಾರಿಕೆಗೆ ಮೀಸಲು. 'ಕನ್ನಡ ನನ್ನ ಮೊದಲ ಪ್ರೀತಿ ; ಎರಡನೆಯ ಪ್ರೀತಿಯೂ ಅದೇ.' ವ್ಯಕ್ತಿ, ವ್ಯಕ್ತಿತ್ವ ಮತ್ತು ಕೃತಿಗಳು-ಎಂಬ ಮೂರು ನೆಲೆಗಳಲ್ಲಿ ಅವರ ಬದುಕು-ಬರಹಗಳನ್ನು ಸಂಚಯಿಸಿ ಸಮೀಕ್ಷಿಸಬಹುದು.

ವಿಶಾಲ ಕರ್ನಾಟಕದ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿಗೆ ಸೇರಿದ ಹಾರೋಗದ್ದೆ ನಾಯಕರ ಒಂದೇ ಮನೆಯ ಹಳ್ಳಿ ; ಹುಟ್ಟಿದ್ದು 1931ರ ಫೆಬ್ರವರಿ 5. ತಾಯಿ-ತಂದೆ ಇಟ್ಟ ಹೆಸರು ಮಾನಪ್ಪ. ತಾಯಿ ರುಕ್ಮಿಣಿಯಮ್ಮ, ತಂದೆ ಶ್ರೀನಿವಾಸ ನಾಯಕ. ಅವರದು ರೈತಾಪಿ ಕುಟುಂಬ; ಪೂರ್ವದಿಂದಲೂ ವ್ಯವಸಾಯಗಾರರ ಮನೆತನ. ಪ್ರಾಥಮಿಕ ಓದು ಆಗುಂಬೆಯ ಹತ್ತಿರದ ನಾಲೂರಿನಲ್ಲಿ, ಮಾಧ್ಯಮಿಕ ವಿದ್ಯಾಭ್ಯಾಸ ಮೇಗರವಳ್ಳಿ, ಪ್ರೌಢಶಾಲೆ ಮುಗಿಸಿದ್ದು ತೀರ್ಥಹಳ್ಳಿ; ಇಂಟರ್‌ಮೀಡಿಯೆಟ್ ಶಿವಮೊಗ್ಗ, ಬಿ.ಎ. (ಆನರ್ಸ್) ಮೈಸೂರು ಮಹಾರಾಜ ಕಾಲೇಜು. ಕನ್ನಡ ಅಧ್ಯಾಪಕರಾಗಿ ತುಮಕೂರು ಪ್ರಥಮ ದರ್ಜೆ ಕಾಲೇಜು (1955-1957), ಶಿವಮೊಗ್ಗ ಸಹ್ಯಾದ್ರಿ ಕಾಲೇಜು (1958-1960) ಗಳಲ್ಲಿದ್ದು 1961ರಲ್ಲಿ ಮೈಸೂರು ವಿಶ್ವವಿದ್ಯಾಲಯ ಸೇರಿದರು. ಮೈಸೂರು ವಿಶ್ವವಿದ್ಯಾಲಯದ ವ್ಯಾಸಂಗ ವೇತನ ಪಡೆದು ಕಲ್ಕತ್ತ ವಿಶ್ವವಿದ್ಯಾಲಯದ ಭಾಷಾವಿಜ್ಞಾನ ಎಂ.ಎ. ಸ್ನಾತಕೋತ್ತರ ಪದವಿಯನ್ನು ಚಿನ್ನದ ಪದಕದೊಂದಿಗೆ ಗಳಿಸಿದರು. ಅಲ್ಲಿಂದ ಮುಂದೆ ಫುಲ್‌ಬ್ರೈಟ್ ವಿದ್ಯಾರ್ಥಿವೇತನ ದೊರೆತು ಅಮೆರಿಕೆಯ ಇಂಡಿಯಾನಾ ವಿಶ್ವವಿದ್ಯಾಲಯದ 'ಕನ್ನಡ : ಸಾಹಿತ್ಯಕ ಮತ್ತು ಆಡುಭಾಷೆ' ಎಂಬ ನಿಬಂಧ ಸಾದರಪಡಿಸಿ ಡಾಕ್ಟರೇಟ್ ಪಡೆದರು (1962). ಅಮೆರಿಕದಿಂದ ಹಿಂತಿರುಗಿದ ಮೇಲೆ ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಅಧ್ಯಾಪಕರಾಗಿ, ಉಪ ಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾದರು. ಅಧ್ಯಾಪಕರಾಗಿ, ವಿದ್ಯಾರ್ಥಿಗಳ ಗೌರವ ಗಳಿಸಿದ್ದು ಚಾರಿತ್ರ್ಯಶುದ್ಧಿ, ಪಾಠ ತಪ್ಪದ ಶಿಸ್ತು ಮತ್ತು ಅನುಕಂಪಶೀಲವಾದ ಆರ್ದ್ರ ಅಂತಃಕರಣದಿಂದ. ಅನಾಯಾಸವಾದ ಅಭಿವ್ಯಕ್ತಿ ಕೌಶಲ ಮತ್ತು ವಾಗ್ಮಿತೆ ಅವರಿಗಿದ್ದ ದೊಡ್ಡ ಶಕ್ತಿ. ಜತೆಗೆ ಸ್ಮರಣಶಕ್ತಿಯ ವರ. ಇದರಿಂದ ಅಧ್ಯಯನ-ಅಧ್ಯಾಪನ ಎರಡೂ ಯಶಸ್ವಿಯಾದವು.

ಕನ್ನಡ ಅಧ್ಯಯನ ಸಂಸ್ಥೆಯ ಶಿಲ್ಪಿ ಡಾ. ದೇಜಗೌ ಅವರು ಮೈಸೂರು ವಿಶ್ವವಿದ್ಯಾಲಯದಲ್ಲಿ ಕುಲಪತಿಯಾಗಿ ನೇಮಕವಾದದ್ದರಿಂದ ತೆರನಾದ ಸ್ಥಾನ ತುಂಬಿ ನಾಯಕರು ನಿರ್ದೇಶಕರಾದರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಮಾನಸಗಂಗೋತ್ರಿಗೆ ಮುಡಿಯ ಮಾಣಿಕ್ಯ ಕನ್ನಡ ಅಧ್ಯಯನ ಸಂಸ್ಥೆ. ಅದರ ನಿರ್ದೇಶಕರಾಗಿ ನಾಯಕರು ಇದ್ದ ಹದಿನಾರು ವರ್ಷ ಸುವರ್ಣಯುಗ. ಸಂಸ್ಥೆ ನಾಡಿನಲ್ಲೊಂದು ಪ್ರತಿಷ್ಠಿತ ಕಾರ್ಯಸೌಧವಾಗಿ ರೂಪಿತವಾಯಿತು. ನಾಯಕರ ನೇತೃತ್ವವಿದ್ದ ಸುದೀರ್ಘ ಅವಧಿಯಲ್ಲಿ ಅಧ್ಯಯನ ಸಂಸ್ಥೆ ಹಲವು ಮೊಗವಾಗಿ ಮೈಚಾಚಿತು. ದೇಜಗೌರವರು ಭದ್ರವಾದ ತಳಪಾಯ ಹಾಕಿ ಗೋಡೆ ಎಬ್ಬಿಸಿದ್ದರು; ಹಾಮಾನಾ ಅದನ್ನು ಸರ್ವಾಂಗಸುಂದರವಾಗಿ ಪೂರೈಸಿ ಹೊಸತನದ ಚಿನ್ನದ ಕಳಶವಿಟ್ಟರು. ನೂರಾರು ಪ್ರಕಟಣೆಗಳು, ವಿಚಾರ ಸಂಕಿರಣಗಳು, ಸಮ್ಮೇಳನ ಗೋಷ್ಠಿಗಳು, ಹತ್ತಾರು ಉಪವಿಭಾಗಗಳು, ರಾಜ್ಯ, ರಾಷ್ಟ್ರೀಯ, ಅಂತರರಾಷ್ಟ್ರೀಯ ಮಟ್ಟದ ಅಚ್ಚುಕಟ್ಟಾದ ಕಾರ್ಯಕ್ರಮಗಳು-ಹೀಗೆ ನಿತ್ಯೋತ್ಸವ. ಕನ್ನಡದ ಪ್ರತಿಭೆಗಳು ಪುಟಿಯಲು ಹೊಸ ಹೆದ್ದಾರಿಗಳು ತೆರೆದುವು. ಕನ್ನಡ ಸಾಹಿತ್ಯಪ್ರಿಯರಿಗೆ ಹುಲುಸು ಬೆಳೆಯ ಸುಗ್ಗಿ; ಮಾರುಕಟ್ಟೆಯಲ್ಲಿ ದುರ್ಲಭವಾದ ಅಪರೂಪದ ಆಕರ ಗ್ರಂಥಗಳ ಪರಿಷ್ಕೃತ ಪುನರ್‌ಮುದ್ರಣಗಳು; ಎಪಿಗ್ರಾಫಿಯ ಕರ್ನಾಟಿಕ, ಕನ್ನಡ ವಿಶ್ವಕೋಶ, ಕನ್ನಡ ಸಾಹಿತ್ಯ ಚರಿತ್ರೆ ಮುಂತಾದ ಮೌಲಿಕ ಸಂಪುಟಗಳು. ನಾಯಕರು ಸ್ವಯಂ ಜಾನಪದ ವಿದ್ವಾಂಸರು, ಅದು ಅವರ ಅಂತರಂಗಕ್ಕೆ ಹತ್ತಿರವಾದ ಪ್ರಕಾರ. ಫಲವಾಗಿ ಜಾನಪದ ವಸ್ತುಸಂಗ್ರಹಾಲಯ ಮೈಪಡೆಯಿತು.

ನಾಯಕರ ಮೂವತ್ತು ವರ್ಷಗಳ ನಿರಂತರ ಶ್ರದ್ಧೆಯ ಸೇವೆಗೆ ಸಂದ ಪುರಸ್ಕಾರವೆಂಬಂತೆ ಗುಲಬರ್ಗಾ ವಿಶ್ವವಿದ್ಯಾಲಯದ ಕುಲಪತಿಯಾಗಿ ನೇಮಕವಾದರು (1984) ಮತ್ತು ತಮ್ಮ ಸೇವಾ ಅವಧಿ ಇನ್ನೂ ಎಂಟು ತಿಂಗಳು ಇರುವಂತೆಯೇ, ತಾತ್ವಿಕ ಕಾರಣಗಳಿಗಾಗಿ, ಕುಲಪತಿ ಸ್ಥಾನಕ್ಕೆ ರಾಜೀನಾಮೆ ಕೊಟ್ಟು (1987) ಮತ್ತೆ ಕನ್ನಡ ಅಧ್ಯಯನ ಸಂಸ್ಥೆಗೆ ಪ್ರಾಧ್ಯಾಪಕರಾಗಿ ಮರಳಿ ಎಂದಿನ ಬೋಧನೆಗೆ, ಓದಿಗೆ ಹಾಜರಾದರು; ಇದು ಅವರ ಅಂಜದ ಅಳುಕದ ನೇರ ನಿರ್ಭೀತ ಚೈತನ್ಯಶಾಲಿ ವ್ಯಕ್ತಿತ್ವದ, ಉನ್ನತಾದರ್ಶಧ್ಯೇಯದ ಸ್ವಭಾವ. ಅವರ ಸಾಧನೆಗಳು ಹಲವಾರು. ಅವುಗಳಲ್ಲಿ ಮುಖ್ಯವಾದುವನ್ನು ಉಲ್ಲೇಖಿಸುವುದಾದರೆ, ಅವರು ಅಖಿಲ ಭಾರತ 57ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. (ಬೀದರ್, 1985). ಅಲ್ಲದೆ ಹತ್ತಾರು ಉನ್ನತ ಸಮಿತಿಗಳಲ್ಲಿ ಸದಸ್ಯರಾಗಿ ಇಲ್ಲವೇ ಸಂಚಾಲಕರಾಗಿ ಕೆಲಸಮಾಡಿದ್ದಾರೆ. ಅಮೆರಿಕಾ ದೇಶದ ಪೆನ್ಸಿಲ್‌ವೇನಿಯಾ ವಿಶ್ವವಿದ್ಯಾಲಯದಲ್ಲಿ ಗೌರವಾನ್ವಿತ ಸಂದರ್ಶಕ ವಿದ್ವಾಂಸರಾಗಿದ್ದರು. ರುಮಾನಿಯಾ ದೇಶದ ಬುಖಾರೆಸ್ಟ್‌ನಲ್ಲಿ ನಡೆದ ಹತ್ತನೆಯ ಅಂತರ ರಾಷ್ಟ್ರೀಯ ಭಾಷಾ ವಿಜ್ಞಾನಿಗಳ ಸಮ್ಮೇಳನದಲ್ಲಿ ಭಾರತವನ್ನು ಪ್ರತಿನಿಧಿಸಿದ್ದರು. ಕರ್ನಾಟಕ ರಾಜ್ಯ ಸರ್ಕಾರದ ಪ್ರಶಸ್ತಿ (1982), ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1986), ಐಬಿಎಚ್ ಶಿಕ್ಷಣದತ್ತಿ ಪ್ರಶಸ್ತಿ (1989), ವರ್ಧಮಾನ ಪ್ರಶಸ್ತಿ (1989), ಮೈಸೂರು ವಿಶ್ವವಿದ್ಯಾಲಯ ಸುವರ್ಣ ಮಹೋತ್ಸವ ಬಹುಮಾನ ('ಸಲ್ಲಾಪ' ಕೃತಿಗೆ), ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ('ಸಂಪ್ರತಿ' ಪುಸ್ತಕಕ್ಕೆ)- ಹೀಗೆ ಹಲವು ಗೌರವ, ಪ್ರಶಸ್ತಿಗಳಿಗೆ ಪಾತ್ರರಾಗಿದ್ದಾರೆ.

ನಾಯಕರು ಬರವಣಿಗೆಗೆ ಹಳಬರು, ಪಳಗಿದವರು. ಚಿಕ್ಕ ವಯಸ್ಸಿನಲ್ಲಿ ಇರುವಾಗಲೇ ಲೇಖಣಿ ಹಿಡಿದರು. ಮೇಗರವಳ್ಳಿ ಮಾಧ್ಯಮಿಕ ಶಾಲೆಯಲ್ಲಿ 'ಮಕ್ಕಳ ಪುಸ್ತಕ'ವೆಂಬ ಪತ್ರಿಕೆಗೆ ಬರೆದಿದ್ದರು. ಪ್ರೌಢಶಾಲೆಯಲ್ಲಿ ಅದು ಮತ್ತಷ್ಟು ಹುರಿಗೊಂಡು ಮೊನಚಾಯಿತು, ಕೈಬರಹ ಪತ್ರಿಕೆಯ ಖಾಯಂ ಲೇಖಕರಾದರು. ಎಸ್.ಎಸ್.ಎಲ್.ಸಿ. ತರಗತಿಯಲ್ಲಿರುವಾಗಲೇ ಅವರ ಚೊಚ್ಚಲು ಕೃತಿ ಅಣಿಯಾಯಿತು. ಅವರ ಪ್ರಥಮ ಪ್ರಯತ್ನದ ಆ ಪುಸ್ತಕವೇ ಬಾಳ್ನೋಟಗಳು (1950). ಅದಕ್ಕೆ ಬಂದ ಮೆಚ್ಚುಗೆ ದಾಖಲೆ ಸ್ಥಾಪಿಸಿತು.

ಬಾಳ್ನೋಟಗಳು ಬರೆದ ಮೇಲೆ ನಾಯಕರು ಅಂದಿನಿಂದ ಸುಮಾರು ನಾಲ್ಕು ದಶಕಗಳವರೆಗೆ ಒಂದೇ ಸಮನೆ ಬರೆಯುತ್ತ ಬಂದಿದ್ದಾರೆ.

2

ಬುದ್ಧಿ ಅರುಳುತ್ತಿದ್ದ ಬಾಲ್ಯದ ದಿನಗಳಲ್ಲಿಯೇ ಅವರಿಗೆ ಕುವೆಂಪು ಮೊದಲಾದ ಸಾಹಿತ್ಯದೈತ್ಯರ ಗಾಢ ಪ್ರಭಾವವಾಗಿತ್ತು. ಅಂಥವರ ಸತ್ಸಂಗವನ್ನು ಜೀರ್ಣಿಸಿಕೊಳ್ಳುತ್ತ ಓದಾಳಿ ವಾಚಾಳಿ ಪುಸ್ತಕಜೀವಿಯಾಗಿ ಬೆಳೆದರು. ಅವರ ಶೋಧನೆಯೆಂದರೆ ಅದು ಪುಸ್ತಕ ಶೋಧನೆ, ಪುಸ್ತಕ ನೆಲೆಗಳು ಇರುವಲ್ಲಿಗೆ ತೀರ್ಥಯಾತ್ರೆ. ಅವರ ಮನೆಯೂ ಅಷ್ಟೇ, ಅದೊಂದು ಪುಸ್ತಕ ಕಾಶಿ, ಅವರ ಮುಂದೆ ಪುಸ್ತಕದ್ದೇ ರಾಶಿ. ಅವರದೇ ನಿವೇದನೆ : "ಪುಸ್ತಕಗಳು ನನಗೆ ತುಂಬ ಪ್ರಿಯ. ನನಗೆ ಬೇಕಾದ ಪುಸ್ತಕಗಳಿಗಾಗಿ ಬಹುಸಂದರ್ಭದಲ್ಲಿ ಕಷ್ಟಪಟ್ಟಿದ್ದೇನೆ, ಸಂಕಟ ಪಟ್ಟಿದ್ದೇನೆ, ನಿರಾಶೆಗೊಂಡಿದ್ದೇನೆ. ಲೌಕಿಕವಾದ ಸಣ್ಣತನಗಳಿಂದ ದೂರಾಗಲು ಪುಸ್ತಕಗಳು ಒಂದೇ ದಾರಿ. ದುಃಖ ನೋವುಗಳನ್ನು ಮಾಯಿಸಲು ಅವು ದಿವ್ಯೌಷಧ. ದಿಗಂತದ ಆಚೆಯ ಬೆಳಕಿಗೆ ಕೈಮರಗಳು ಪುಸ್ತಕಗಳು. ಇಂಥ ಪುಸ್ತಕಗಳು ನಮ್ಮವೇ ಆಗಿ ನಮ್ಮ ಪಕ್ಕದಲ್ಲೇ ಇದ್ದರೆ ನಮಗಾಗುವ ನೆಮ್ಮದಿ, ತೃಪ್ತಿ, ಸಮಾಧಾನ ಹೆಚ್ಚಿನದೆಂಬುದು ನನ್ನ ಅನುಭವಕ್ಕೆ ಬಂದಿದೆ. ಸುತ್ತಲೂ ಬಗೆಬಗೆಯ ಪುಸ್ತಕಗಳ ರಾಶಿ, ನಡುವೆ ಪುಸ್ತಕ ಹಿಡಿದ ನಾನು-ಇದು ನಾನು ಸತತವಾಗಿ ಇಷ್ಟಪಡುವ ಸನ್ನಿವೇಶ. ಇಂಥ ಸನ್ನಿವೇಶದಲ್ಲಿ ನನ್ನಂಥ ಸುಖಿ ಲೋಕದಲ್ಲಿ ಇನ್ನೊಬ್ಬರಿಲ್ಲವೇನೋ ಎನಿಸುತ್ತದೆ. ಪುಸ್ತಕ ಪ್ರಪಂಚದ ಸುಖವೇ ಸುಖ" (ಸೃಜನ, ಪುಟ 35-36).

ಈ ಕಾರಣದಿಂದಾಗಿ ಅವರ ಅಂಕಣ ಬರಹಗಳಲ್ಲಿ ಪುಸ್ತಕ ಪರಿಚಯ ಇಲ್ಲವೆ ಮೌಲ್ಯಮಾಪನದ ಮಾತುಗಳು ತೂರಿ ಬರುತ್ತವೆ, ದೇಶ ವಿದೇಶಗಳ ಪ್ರವಾಸ ಜೀವನಾನುಭವದ ಸಾರಾಂಶ ಹರಳುಗೊಂಡು ನಿಲ್ಲುತ್ತದೆ. ಆಲೋಚನಶೀಲವಾದ ವ್ಯಾಸಂಗನಿಷ್ಠ ಮನಸ್ಸೊಂದರ ಸಂಸ್ಕಾರಯುತ ಲೋಕ ವಿಹಾರ ಇಲ್ಲಿರುತ್ತದೆ. ಈ ಬರಹಗಳಲ್ಲಿ ನಾವೀನ್ಯ ವೈಶಿಷ್ಟ್ಯಗಳೊಂದಿಗೆ ಸಹೃದಯತೆ, ಅಮತ್ಸರತ್ವ, ನಿರ್ದಾಕ್ಷಿಣ್ಯ ವಸ್ತುನಿಷ್ಠ ವಿವೇಚನೆ ಹಾಳತವಾಗಿ ಬೆರೆತಿರುತ್ತದೆ.

ನಾಯಕರು ಕನ್ನಡ-ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಬರೆದಿದ್ದಾರೆ. ಅವರ ಕೆಲವು ಬರಹಗಳು ಉರ್ದು, ತೆಲುಗು, ಬಂಗಾಳಿ, ಮರಾಠಿ, ಹಿಂದಿ ಮೊದಲಾದ ಭಾಷೆಗಳಿಗೂ ತರ್ಜುಮೆಯಾಗಿವೆ. ಸಾಹಿತ್ಯದ ಕೆಲವು ಪ್ರಕಾರಗಳಲ್ಲಷ್ಟೇ ಅವರ ಕೃಷಿ ನಡೆದಿದೆ. ಶಾಲಾವಿದ್ಯಾರ್ಥಿಯಾಗಿದ್ದಾಗ ಕವನಗಳನ್ನು ಬರೆದದ್ದುಂಟು, ಅನಂತರವೂ ಕಾವ್ಯಾನುವಾದ ಕೂಡ ಮಾಡಿದ್ದಾರೆ. ಅಂಕಣ, ಅನುವಾದ, ಜೀವನ ಚರಿತ್ರೆ, ಪ್ರಬಂಧ, ವಿಮರ್ಶೆ, ಸಂಪಾದನೆ-ಅವರ ಮುಖ್ಯ ಕ್ಷೇತ್ರಗಳು. ತಮ್ಮ ವಿಚಾರಗಳನ್ನು ಹೊರಚೆಲ್ಲಲು ಅವರು ಆರಿಸಿಕೊಂಡ ಪ್ರಿಯವಾದ ಸಾಹಿತ್ಯಮಾಧ್ಯಮ ಅಂಕಣ ಬರಹ. ಪುಷ್ಕಳ ಸಾಹಿತ್ಯಾಭ್ಯಾಸದತ್ತವಾದ, ವಿಸ್ತಾರ ಜೀವನಾನುಭವ ಜನ್ಯವಾದ, ಶುಚಿರುಚಿ ಪಕ್ವವಾದ ಪಾರದರ್ಶಕ ಮನಸ್ಸೊಂದರ ದರ್ಶನವಾಗುತ್ತದೆ ಅಂಕಣ ಬರಹಗಳ ವಿವಿಧ ಸಂಪುಟಗಳಲ್ಲಿ. ಪ್ರಕಟವಾದ ಕಾಲಾನುಕ್ರಮದಲ್ಲಿ ಅವರ ಕೆಲವು ಗ್ರಂಥಗಳನ್ನು ಸಂಕ್ಷೇಪವಾಗಿ ಪರಿಚಯಿಸಲಾಗುವುದು.

ಬಾಳ್ನೋಟಗಳು (1950) ಮೊದಲ ಕೃತಿ ಪ್ರಸವ. ನಾಲ್ವತ್ತೈದು ಪುಟಗಳ ಪುಟ್ಟ ಪ್ರಮಾಣದ ಹದಿನಾರು ಕಿರುಬರಹಗಳು ಇದರಲ್ಲಿವೆ. ಮಲೆನಾಡಿನ ಗ್ರಾಮವೊಂದರ ಬದುಕಿನೆಡೆಗೆ ಹಾಯಿಸಿದ ವಿಚಿಕಿತ್ಸಕ ನೋಟವಿರುವ ಈ ಚಿಕ್ಕಪುಸ್ತಕ ಲೇಖಕರಿಗೆ ಕೀರ್ತಿ ಪ್ರತಿಷ್ಠೆಗಳನ್ನು ಕೊಟ್ಟಿತು.

ಮೊಹಮ್ಮದ್ ಪೈಗಂಬರ್ (1952) ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯವರು ಪ್ರಕಟಿಸಿರುವ ಜೀವನ ಚರಿತ್ರೆ. ಏಳನೆಯ ಶತಮಾನದಲ್ಲಿ ಆಗಿಹೋದ ಪ್ರವಾದಿ ಮಹಮ್ಮದನ ಬದುಕಿನ ಮಹೋನ್ನತಿಯನ್ನು ಶ್ರೀಸಾಮಾನ್ಯರಿಗೂ ಎಟುಕುವಂತೆ ಸರಳಗೊಳಿಸಿ ಚೊಕ್ಕವಾಗಿ ನಿರೂಪಿಸಿರುವುದು ಈ ಪುಸ್ತಕದ ಹೆಚ್ಚಳ. ನಾಯಕರು ಬರೆದ ಆರಂಭದ ಕೃತಿಗಳಲ್ಲಿ ಇನ್ನೊಂದು ನಮ್ಮ ಮನೆಯ ದೀಪ (1956). ಲಲಿತ ಸಾಹಿತ್ಯದ ಮಾದರಿಗೆ ಸೇರಿದ ಇದರಲ್ಲಿರುವ ಏಳೂ ಪ್ರಬಂಧಗಳೂ ಬಿಡಿಬಿಡಿಯಾಗಿ ನಿಂತು ಮುದ ಕೊಡುವಂತೆ ಒಟ್ಟಿಗೆ ಹೊಂದಿಕೊಂಡಂತೆಯೂ ಹೆಣೆದುಕೊಂಡು ಸಮುದಾಯ ಶೋಭೆಯಿಂದ ಪ್ರಿಯವಾಗುತ್ತದೆ. ರಮಾ ಎಂಬ ಮಗುವಿನ ಸುತ್ತ ಹಮ್ಮಿಕೊಂಡ ಸುಂದರ ಹಂದರವಾಗಿ ಇಲ್ಲಿನ ಬರವಣಿಗೆ ಅನಾವರಣಗೊಳ್ಳುತ್ತದೆ, ಓದುಗರಿಗೆ ಪ್ರಿಯವಾಗುತ್ತದೆ; ಓದುತ್ತ ಓದುತ್ತ ಇಲ್ಲಿನ ರಮಾ ಓದುಗರ ಮನೆಯ ದೀಪವೇ ಆಗಿ ವಿಜೃಂಭಿಸುತ್ತಾಳೆ. ಇದು ಅಚ್ಚಾದಾಗ ಲೇಖಕರು ಇನ್ನೂ 25ರ ಜವ್ವನಿಗ : "ಅವರು ಈ ವಯಸ್ಸಿನಲ್ಲಿಯೇ ಉತ್ತಮ ವಾದ ಬರವಣಿಗೆಯನ್ನು ಬರೆದು ಹೆಸರಾಗಿದ್ದಾರೆ. ಅವರ ಬರವಣಿಗೆ ಉಷಾಕಾಲದಲ್ಲಿಯೇ ಬೆಳದಿಂಗಳಂತಿದೆ" ಎಂದು ಡಾ. ಎ.ಆರ್. ಕೃ. ಮೆಚ್ಚುಗೆ ಸೂಚಿಸಿದ್ದಾರೆ.

ರವೀಂದ್ರನಾಥ ಠಾಕೂರ್ (1960) ಕವೀಂದ್ರ ರವೀಂದ್ರರ ಜೀವನವನ್ನು ಹೃದ್ಯವಾಗಿ ಪರಿಚಯಿಸುವ ಪುಸ್ತಕ; ಇದು ಐದು ಮುದ್ರಣ ಕಂಡಿರುವುದು ಇದರ ಜನಪ್ರಿಯತೆಗೆ ಸಾಕ್ಷಿ. ಸಂಕೀರ್ಣ (1966) ಪತ್ರಿಕೆ, ಅಭಿನಂದನ ಗ್ರಂಥಗಳು ಹಾಗೂ ಆಕಾಶವಾಣಿಗಾಗಿ ಸಿದ್ಧಪಡಿಸಿದ ಬರಹಗಳ ಗುತ್ತಿ: ಕುವೆಂಪು, ಬೇಂದ್ರೆ, ಮಾಸ್ತಿ, ಮುಗಳಿ, ವಿ.ಸೀ., ಎಂ.ಆರ್.ಶ್ರೀ., ಎ.ಆರ್.ಕೃ., ಡಿ.ಎಲ್.ಎನ್., ಮುಂತಾದ ಕನ್ನಡ ಸಾಹಿತ್ಯದ ದಿಗ್ಗಜಗಳ ವ್ಯಕ್ತಿಚಿತ್ರವನ್ನು ಬಿಡಿಸಲಾಗಿದೆ. ಚದುರಂಗರ ಜನಪ್ರಿಯ ಕಾದಂಬರಿ ಸರ್ವಮಂಗಳವನ್ನು ಕುರಿತ ವಿಮರ್ಶೆ ಆ ಕೃತಿಯ ಒಳನೋಟಗಳನ್ನು ಕೊಡುತ್ತದೆ. ಸಂಚಯ (1969)ದಲ್ಲಿ ಹದಿಮೂರು ಲೇಖನಗಳಿವೆ. ಇವೆಲ್ಲ ವಿವಿಧ ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ಬರಹಗಳಾಗಿದ್ದು ಎರಡು ಅನುಬಂಧಗಳನ್ನಷ್ಟೇ ಹೊಸದಾಗಿ ಸೇರಿಸಿವೆ; ಒಂದು ವರ್ಷದಲ್ಲಿ (1965-1966ರಲ್ಲಿ) ಪ್ರಕಟವಾದ ಕಾದಂಬರಿ ಮತ್ತು ಕಥಾ ಸಂಗ್ರಹಗಳ ಪಟ್ಟಿ ಇಲ್ಲಿ ಸೇರ್ಪಡೆಯಾಗಿರುವ ಹೊಸ ಮಾಹಿತಿ. ಶಾಸ್ತ್ರೀಯ-ವೈಜ್ಞಾನಿಕ ಗ್ರಂಥಗಳ ಗದ್ಯ, ಕನ್ನಡ ಸಾಹಿತ್ಯದ ಇತ್ತೀಚಿನ ಪ್ರವೃತ್ತಿಗಳು, ದೇಜಗೌ, ಇಬ್ಬರು ಐರೋಪ್ಯ ಕಲಾವಿದರು, ಸಿಖ್ ಜನಾಂಗದ ದೇವರು, ಧರ್ಮ-ಎಂಬ ಬರಹಗಳು ಇದರಲ್ಲಿವೆ. ಸಂಗತಿಗಳನ್ನು ನಿಚ್ಚಳವಾಗಿ ನಿರೂಪಿಸಿರುವುದಕ್ಕೆ ಒಂದು ಉದಾಹರಣೆ : "ದುರ್ದೈವದ ಮಾತೆಂದರೆ ಸಮಕಾಲೀನ ರಾಜಕೀಯ ಜೀವನದಲ್ಲಿ ಕಂಡುಬರುವ ದುಷ್ಟ ಪ್ರವೃತ್ತಿಗಳು ನಮ್ಮ ಸಾಹಿತ್ಯ ವಿಮರ್ಶೆಯಲ್ಲೂ ತಲೆದೋರಿವೆ. ಲೇಖಕನ ಮಹತ್ವ ಅವನ ಕೃತಿಗಳಿಂದಲ್ಲದೆ ವಿಮರ್ಶಕರ ವೈಯಕ್ತಿಕ ಅಭಿರುಚಿಗಳಿಂದ ನಿರ್ಣಯವಾಗುತ್ತದೆ. ವ್ಯಕ್ತಿಪೂಜೆ ಜೊತೆಗೆ ಜಾತೀಯತೆ, ಪ್ರಾದೇಶಿಕ ಭಾವನೆಗಳು ಅತ್ಯಂತ ನವುರಾದ ರೀತಿಯಲ್ಲಿ ಕಾರ್ಯೋನ್ಮುಖವಾಗಿವೆ. ಈ ಅನಿಷ್ಟಗಳ ನಡುವಿನಲ್ಲಿಯೂ ಈಚಿನ ಪ್ರವೃತ್ತಿಗಳಲ್ಲಿ ವಿಮರ್ಶಕ ಸಮಕಾಲೀನ ಪ್ರಜ್ಞೆಯನ್ನು ಹೆಚ್ಚಿಸಿಕೊಂಡಿರುವುದು. ತನಗೆ

ತೋರಿದ್ದನ್ನು ಧೈರ್ಯವಾಗಿ ಹೇಳುವ ಮನೋಭಾವವನ್ನು ಬೆಳಸಿಕೊಂಡಿರುವುದು, ವಿಮರ್ಶೆಗಾಗಿಯೇ ನಿಯತಕಾಲಿಕೆಗಳು ಹುಟ್ಟಿಕೊಂಡಿರುವುದು, ಹೆಚ್ಚು ಸಂಖ್ಯೆಯಲ್ಲಿ ಗ್ರಂಥಗಳು ಪ್ರಕಟವಾಗುತ್ತಿರುವುದು-ಉಲ್ಲೇಖನೀಯ ವಿಚಾರಗಳಾಗಿವೆ" (ಸಂಚಯ, ಪು. 79).

3

ನಾಯಕರ ಹೆಚ್ಚಿನ ಕೃತಿಗಳು ಅಂಕಣ ಬರಹಗಳ ಸಂಕಲನಗಳು. ಅಂಕಣಕಾರರ ಸಾಲಿನಲ್ಲಿ ನಿರಂಜನರದು ಪ್ರತಿಷ್ಠಿತ ಹೆಸರು. ಬಸವರಾಜ ಕಟ್ಟೀಮನಿ, ಹಿರೇಮಲ್ಲೂರು ಈಶ್ವರನ್, ಕು.ಶಿ. ಹರಿದಾಸಭಟ್ಟ, ಎಚ್ಚೆಸ್ಕೆ, ಸಿದ್ಧವನಹಳ್ಳಿ ಕೃಷ್ಣಶರ್ಮ, ಎಲ್.ಎಸ್. ಶೇಷಗಿರಿರಾವ್, ಪಿ.ಬಿ.ಶ್ರೀನಿವಾಸನ್ ಮೊದಲಾದವರು ಕನ್ನಡದಲ್ಲಿ ಅಂಕಣಬರಹ ಮಾಡಿದ್ದಾರೆ. ಆದರೆ ಅಂಕಣ ಬರವಣಿಗೆಯೂ ಒಂದು ಮರ್ಯಾದಿತ ಸಾಹಿತ್ಯ ಪ್ರಕಾರವೆಂಬ ಗೌರವದ ಸ್ಥಾನವನ್ನು ತಂದುಕೊಟ್ಟ ಕೀರ್ತಿ ಹಾ.ಮಾ.ನಾ. ಅವರದ್ದು. ಎಲ್ಲ ಕಾಲದ ಮಹತ್ವದ ಲೇಖಕರೂ ತಮ್ಮ ಪ್ರತಿಭೆಯ ಅಭಿವ್ಯಕ್ತಿಗೊಂದು ಸಮರ್ಥ ಮಾಧ್ಯಮವನ್ನು ಕಂಡುಕೊಳ್ಳುತ್ತಾರೆ. ಅಂಥದೊಂದು ಸೂಕ್ತ ಮಾಧ್ಯಮದ ಹುಡುಕಾಟ ಗಟ್ಟಿ ಲೇಖಕರನ್ನು ವಿಶೇಷವಾಗಿ ಕಾಡುತ್ತದೆ; ಹಾಗೆ ಆರಿಸಿದ ಸಾಹಿತ್ಯರೂಪದಲ್ಲಿ ಆಯಾ ಬರಹಗಾರ ತನ್ನೆಲ್ಲ ಚಿಂತನಗಳನ್ನು ಹರಳುಗೊಳಿಸಿ ತೂರಿಬಿಡುತ್ತಾನೆ. ಹಾ.ಮಾ.ನಾ. ಅಂಕಣ ಮಾಧ್ಯಮವನ್ನೇ ಏಕೆ ಆರಿಸಿಕೊಂಡು ಅದಕ್ಕೆ ಬದ್ಧರಾದರು ಎಂಬುದು ಆಲೋಚನಾರ್ಹ. ಇದು ಆಕಸ್ಮಿಕ ಅಯ್ಕೆಯಲ್ಲ; ತನ್ನ ಆಲೋಚನೆಗಳಿಗೆ ತಕ್ಕ ಶಬ್ದಶರೀರವೆಂದರೆ ಅದು ಅಂಕಣದ ಚೌಕಟ್ಟು ಎಂಬ ಖಚಿತ ತಿಳುವಳಿಕೆ ಅವರದು. ಅವರ ಈ ಇಪ್ಪತ್ತು ವರ್ಷಗಳ, 1970ರಿಂದ 1990ರ ವರೆಗೆ, ಸಂತತವಾದ ಅಂಕಣ ಬರಹಗಳಿಂದ ಆ ಪ್ರಕಾರಕ್ಕೆ ಒಂದು ಹೊಸ ಆಯಾಮ, ಆಕರ್ಷಣೆ, ಜನಮನ್ನಣೆ ಬಂದಿದೆ; ಅವರು ಕೂಡ ತಾವು ಎಚ್ಚರದಿಂದ ಆರಿಸಿಕೊಂಡಿರುವ ಈ ಅಂಕಣ ರೂಪದ ಸಾಧ್ಯತೆಗಳನ್ನು ಸೂರೆ ಮಾಡಿದ್ದಾರೆ.

ಸಾಹಿತ್ಯ ಸಲ್ಲಾಪ (1970) ಅವರ ಅಂಕಣ ಬರಹಗಳ ಪುಸ್ತಕ ಮಾಲೆಯನ್ನು ಉದ್ಘಾಟಿಸಿದ ಪ್ರಥಮ ಕೃತಿ. ಕನ್ನಡಪ್ರಭ ದಿನ ಪತ್ರಿಕೆಯ ವಾರದ ಅಂಕಣಕ್ಕೆ ಕೊಟ್ಟ ಸ್ಥಿರ ಶೀರ್ಷಿಕೆಯಾದ 'ಸಾಹಿತ್ಯ ಸಲ್ಲಾಪ'ದಲ್ಲಿ ಪ್ರಕಟವಾದ ನೂರಾರು ಲೇಖನಗಳಲ್ಲಿ ಮೊದಲನೆಯ ಒಂದು ನೂರು ಬರಹಗಳು ಇದರಲ್ಲಿ ಸೇರಿವೆ. ಬಹುವಾಗಿ ಇಡೀ ಸಂಗ್ರಹದ ಕೇಂದ್ರಬಿಂದುವೆಂದರೆ ಕನ್ನಡದ ಸಮಸ್ಯೆಗಳ ವಿವಿಧ ಮುಖಗಳ ವಿಶ್ಲೇಷಣೆ. ಕರ್ನಾಟಕದ ಎಲ್ಲ ಕ್ಷೇತ್ರಗಳ ಆಡಳಿತ ವ್ಯವಹಾರಗಳಲ್ಲಿ ಕನ್ನಡಕ್ಕೆ ನ್ಯಾಯವಾಗಿ ದೊರೆಯಬೇಕಾದ ಸ್ಥಾನಮಾನಗಳ, ಭಾಷಾಸಮಸ್ಯೆಯ ಪ್ರಸ್ತಾಪ ಮತ್ತು ಆ ಕುರಿತ ಒಂದು ನಿರ್ದಿಷ್ಟ ಧೋರಣೆಯೇ ಇಲ್ಲಿನ ಚಿಂತನೆಗಳಿಗೆ ಪ್ರಧಾನ ಪ್ರೇರಣೆ. "ಆಯಾ ವಾರದ ಗಮನಾರ್ಹ ಸಾಹಿತ್ಯಕ, ಸಾಂಸ್ಕೃತಿಕ ಸಂಗತಿಗಳನ್ನು ಚರ್ಚಿಸಲು ಉದ್ದೇಶಿಸಿದ ಈ ನಿಯತಕಾಲಿಕ ಬರಹಗಳು ಒಂದು ಅರ್ಥದಲ್ಲಿ ಸಮಯ ಸಾಹಿತ್ಯ ; ಮತ್ತೊಂದು ಅರ್ಥದಲ್ಲಿ ಸಮಯಾ ತೀತ ಸಾಹಿತ್ಯ- ವಾರದ ಸಂಗತಿಗಳ ನೆಪದಲ್ಲಿ ಚಿರಂತನವಾದ, ಮೂಲಭೂತ ಹಲವು ವಿಷಯಗಳನ್ನು ವಿವೇಚಿಸುವುದರಿಂದ. ಇಲ್ಲಿ ಸಮಾವೇಶಗೊಂಡಿರುವ ಸಾಹಿತ್ಯ, ಸಂಸ್ಕೃತಿ ಸಂಬಂಧವಾದ ಸಂಗತಿಗಳಿಗೆ ಕಾಲದೇಶಗಳ ಎಲ್ಲೆಯಿಲ್ಲ; ರಾಮಾಯಣದಿಂದ ರಂಗಯ್ಯನವರೆಗೆ, ಬಂಕಿಮ ಚಂದ್ರನಿಂದ ಸಿಂಕ್ಲೇರನ ವರೆಗೆ ಇವುಗಳ ಹರವು"- ಎಂಬ, ಈ ಪುಸ್ತಕದ ಬೆನ್ನುಡಿಯ ಮಾತುಗಳು ಇಲ್ಲಿನ ಒಟ್ಟು ತಾತ್ಪರ್ಯವನ್ನು ಬಿಂಬಿಸುತ್ತವೆ.

'ಸಾಹಿತ್ಯ ಸಲ್ಲಾಪ' ದ ಮುಂದಿನ ಕಂತಾದ 'ಸಲ್ಲಾಪ' ದಲ್ಲಿ (1972) 123 ಲೇಖನಗಳಿವೆ. ಇಲ್ಲಿನ ವಿಷಯ ಮತ್ತು ವಿಚಾರ ಸಂಪತ್ತು, ವಿಷಯ ವೈವಿಧ್ಯ, ಅನುಭವ ವಿಸ್ತಾರ, ಭಾವನಾವಿಲಾಸ, ಉನ್ನತ ವ್ಯಕ್ತಿಗಳ ಗೊಮ್ಮಟ ವ್ಯಕ್ತಿತ್ವವನ್ನು ಅಂಗೈಯಗಲದಲ್ಲಿ ಕಡೆದು ಮೂಡಿಸುವ ಕಲೆಗಾರಿಕೆ, ಅಪಾಕ್ಷಿಕವಾದ ಸಮತೋಲನ, ಇವಿಷ್ಟನ್ನೂ ಮೊಗೆದುಕೊಡುವ ಗದ್ಯದ ಹೃದ್ಯತೆ - ಈ ಗುಣಗಳಿಂದಾಗಿ ಸಲ್ಲಾಪ ಒಂದು ಪುಟ್ಟ ಸಾಹಿತ್ಯಕೋಶವಾಗಿ ಪರಿಣಮಿಸಿದೆ. ಇದರ ವಿಶಿಷ್ಟತೆಯಲ್ಲಿ ಒಂದಾದ ಪೂರ್ವಗ್ರಹ ಮುಕ್ತವಾದ, ತೂಕತಪ್ಪದ ವಿಮರ್ಶೆಯಿರುವುದನ್ನು ಒತ್ತಿಹೇಳಬೇಕು. ಒಂದು ನಿದರ್ಶನ: "ದಿಗಂಬರ ಕವಿಗಳ ಬಗೆಗೆ ವಿಮರ್ಶೆ ಓದಿ ನಾನು ಮೂಡಿಸಿಕೊಂಡಿದ್ದ ಅಭಿಪ್ರಾಯ, ಅವರ ಕಾವ್ಯವನ್ನು ಓದಿದ ಮೇಲೆ ಸಂಪೂರ್ಣವಾಗಿ ಬದಲಾಯಿತು. ಇಂಥ ಕಾವ್ಯ ನಮ್ಮಲ್ಲಿ ಅನೇಕ ವರ್ಷಗಳ ಕೆಳಗೆ ಪ್ರಗತಿಶೀಲ ಸಾಹಿತ್ಯ ಚಳವಳಿಯ ಘಟ್ಟದಲ್ಲಿಯೇ ಮುಗಿದುಹೋಯಿತೆಂಬುದನ್ನು ನಾವು ಗಮನಿಸಬೇಕು. ತೆಲುಗು ಕಾವ್ಯ ಇನ್ನೂ ಆ ಘಟ್ಟದಲ್ಲಿಯೇ ಇದ್ದರೆ ಅದಕ್ಕಾಗಿ ನಾವು ಕನಿಕರಪಡಬೇಕು. ಕ್ರೋಧ, ಆಕ್ರೋಶ, ಶಾಪ, ಬೈಗಳ - ಇಷ್ಟರಿಂದಲೇ ಕಾವ್ಯವಾಗುವುದಿಲ್ಲ. ಪ್ರಾಚೀನರ ಕಾವ್ಯ ಹಳಸಿ ತಣ್ಣಗಾದ ಚಪಾತಿ ಎಂಬುದು ದಿಗಂಬರ ಕವಿಗಳ ಆರೋಪ. ಕಾವಲಿಯ ಬಿಸಿಯೊಂದನ್ನೇ ತಿಂದು ಬದುಕುವುದು ಸಾಧ್ಯವಿಲ್ಲ ಎಂದು ಅವರಿಗೆ ಗೊತ್ತಿರಬೇಕು. ದಿಗಂಬರ ಕಾವ್ಯ 'ದಿಗಂಬರ'ವಾಗಿಯೇನೋ ಇದೆ ; ಆದರೆ ಅದು ಇನ್ನೂ 'ಕಾವ್ಯ' ವಾಗಬೇಕಾಗಿದೆ". (ಸಲ್ಲಾಪ, ಪು. 508).

ಸಂವಾದ (1972) ಸಾಂದರ್ಭಿಕವಾದ ಲೇಖನ, ಅನುವಾದ ಮತ್ತು ಭಾಷಣಗಳ ಗುಚ್ಛ; ಸಂಕೀರ್ಣರೂಪದ ಈ ಸಂಕಲನದಲ್ಲಿ ಒಟ್ಟು ಹನ್ನೆರಡು ಬರಹಗಳಿವೆ ; ಜಾನಪದ, ವ್ಯಕ್ತಿಚಿತ್ರ, ಕವಿವಾಕ್ಯ ಪರಿಚಯ ಸಂಬಂಧದ ವಿವೇಚನೆ ಇಲ್ಲಿದೆ.

ಜಾನಪದವನ್ನು ವಿಶ್ವವಿದ್ಯಾಲಯದಲ್ಲಿ ಒಂದು ಪ್ರಧಾನ ವಿಷಯವಾಗಿ ಬೋಧಿಸುವ - ಅಭ್ಯಸಿಸುವ ಮಟ್ಟಕ್ಕೆ ಏರಿಸಿದವರಲ್ಲಿ ದೇಜಗೌ ಮತ್ತು ಹಾಮಾನಾ ಅವಳಿ ಹೆಸರುಗಳು. ಜಾನಪದವನ್ನು ಕುರಿತು ತಾತ್ವಿಕ ವಿಮರ್ಶೆಗೆ ದಾರಿ ತೆರೆದು ಜಲಚಿಹ್ನೆ ಸ್ಥಾಪಿಸಿದ ಪ್ರಭಾವೀ ಪುಸ್ತಕ ನಾಯಕರ 'ಜಾನಪದ ಸ್ವರೂಪ' (1971). ಕೃತಿಯ ಹೆಸರೇ ಹೇಳುವ ಹಾಗೆ ಇದು ಜಾನಪದದ ಸ್ವರೂಪದೊಂದಿಗೆ ಜನಪದ ಸಾಹಿತ್ಯದ ವ್ಯಾಪ್ತಿ, ಅದನ್ನು ಸಂಪಾದಿಸುವ ವೈಜ್ಞಾನಿಕ ವಿಧಾನ, ಜನಪದ ಕಲೆಗಳನ್ನು ನೋಡುವ ದೃಷ್ಟಿ, ವಿಲಿಯಂ ಥಾಮ್ಸ್ ಮತ್ತು ಜಾನಪದ-ಎಂಬ ವಿಷಯಗಳನ್ನು ಅಧಿಕೃತವಾಗಿ ಕನ್ನಡದಲ್ಲಿ ಮೊತ್ತಮೊದಲ ಬಾರಿಗೆ ವಿವೇಚಿಸಿರುವ ಮೌಲಿಕ ಕೃತಿ. ಕರ್ನಾಟಕದ ಸಂದರ್ಭದಲ್ಲಿ ಜಾನಪದ ಅಧ್ಯಯನವನ್ನು ಆರಂಭಿಸಿ ಅದರ ನವೋದಯಕ್ಕೆ ನಾಂದಿಹಾಡಿದ ಶಾಸ್ತ್ರೀಯ ಮತ್ತು ಸಾಧಾರ ಗ್ರಂಥವಿದು. ಇಂಗ್ಲಿಷಿನ 'ಫೋಕ್ ಲೋರ್' ಎಂಬ ಶಬ್ದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಜಾನಪದ' ಎಂಬ ಪದವನ್ನು ಬಳಕೆಗೆ ತಂದವರು ನಾಯಕರು. "ಜಾನಪದ ಅಧ್ಯಯನ ಎಷ್ಟು ಪ್ರಮುಖವಾದುದು, ಯಾವ ಯಾವ ನಿಟ್ಟಿನಲ್ಲಿ ಅದರ ಅಭ್ಯಾಸ ಸಾಗಿದೆ, ಜನಪದ ಕಥೆ, ಗೀತೆ, ಲಾವಣಿ, ಗಾದೆ, ಒಗಟುಗಳ ಸ್ಥಾನಗಳೇನು ಎಂಬ ಅಂಶವನ್ನು ಸ್ಪಷ್ಟಪಡಿಸಿ, ಜನಪದ ಸಾಹಿತ್ಯದ ಬಹುಮುಖ್ಯ ಅಳತೆಗೋಲುಗಳಾದ 'ಟೈಪ್' ಮತ್ತು 'ಮೋಟಿಫ್'ಗಳನ್ನು ಕುರಿತು ಅವರು ಪ್ರಸ್ತಾಪಿಸಿದುದು ಅವರ ಅಭ್ಯಾಸಶೀಲತೆಗೆ ಸಾಕ್ಷಿ" (ಡಾ. ಜೀಶಂಪ).

ಅಕ್ಕಮಹಾದೇವಿ (1975) ಚೆನ್ನಮಲ್ಲಿಕಾರ್ಜುನನ್ನು ತನ್ನ ಗಂಡನೆಂದು ಮಹಾದೇವನಿಗೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡ ಶರಣೆ-ಭಕ್ತೆ-ವಚನಕಾರ್ತಿ ಅಕ್ಕಮಹಾದೇವಿಯ ಉಜ್ವಲವಾದ ಜೀವನವನ್ನು ತಿಳಿಗನ್ನಡದಲ್ಲಿ ಮಕ್ಕಳಿಗೆ ಪರಿಚಯಿಸಿರುವ ಪುಟ್ಟ ಪುಸ್ತಕ ಸಂಗ್ರಹ (1976) ಬೇರೆ ಬೇರೆ ಸಂದರ್ಭಗಳಿಗೆಂದು ಸಿದ್ಧಗೊಳಿಸಿದ ಬರಹಗಳ ಕಟ್ಟು; ಸಂವಾದದಂತೆ ಇದರಲ್ಲೂ 12 ಲೇಖನಗಳಿವೆ. ಜಾನಪದ, ವ್ಯಕ್ತಿಚಿತ್ರ, ಕೃತಿಪರಿಶೀಲನೆ, ಭಾಷೆ, ನೆಲಜಲ-ಇಂಥ ವಿಷಯಗಳನ್ನೇ ಇಲ್ಲಿ ಪ್ರಸ್ತಾಪಿಸಲಾಗಿದೆ.

ಸಂದರ್ಭ (1978): ವಿವಿಧ ಸಂದರ್ಭಗಳಲ್ಲಿ ಮಾಡಿದ 16 ಭಾಷಣಗಳ ಸಂಕಲನ. ಇವುಗಳಲ್ಲಿ ಕನ್ನಡ ಅಧ್ಯಯನ ಸಂಸ್ಥೆ ನಡೆಸಿದ ವಿಚಾರಗೋಷ್ಠಿ, ಸಭೆ, ಸಮ್ಮೇಳನಗಳಲ್ಲಿ ಮಾಡಿದ ಸ್ವಾಗತ ಭಾಷಣಗಳೇ ಮುಕ್ಕಾಲು ಪಾಲು; ಉಳಿದ ಆರು ಅಧ್ಯಕ್ಷರಾಗಿ, ಉದ್ಘಾಟಕರಾಗಿ ಆಶಯರೂಪದಲ್ಲಿ ಮಾಡಿದ ಭಾಷಣಗಳು; ಪುಸ್ತಕದ ಕಡೆಯಲ್ಲಿ ಆಯಾ ಭಾಷಣಕ್ಕೆ ಕಾರಣವಾದ ತಕ್ಕ ಸಂದರ್ಭಗಳನ್ನು ಸಂಕ್ಷೇಪಿಸಿ ಕೊಡಲಾಗಿದೆ. ಈ ಪುಸ್ತಕದ ಜೀವಸ್ವರವೂ ಕನ್ನಡನಾಡು, ನುಡಿ, ಸಾಹಿತ್ಯ, ಬರಹಗಾರ-ಬರಹಗಾರ್ತಿಯರನ್ನು ಕುರಿತದ್ದೇ ಆಗಿದೆ. ಎಂ.ಎಲ್. ಶ್ರೀಕಂಠೇಶ ಗೌಡರ ಕೃತಿಗಳ ಸಮಗ್ರ ಸಂಪುಟದ ಬಿಡುಗಡೆಯ ಸಮಾರಂಭದ ಸ್ವಾಗತ ಭಾಷಣ ಮನನೀಯವಾಗಿದೆ.

ಗೋಕಾಕ ಗ್ರಂಥಾವಳಿ (1980) ಮತ್ತು ಮಾಸ್ತಿಯವರ ಪುಸ್ತಕಗಳು (1983) ಕೃತಿ ಶೀರ್ಷಿಕೆಯಲ್ಲಿರುವ ಇಬ್ಬರು ಹಿರಿಯ ಸಾಹಿತಿಗಳ ಎಲ್ಲ ಪ್ರಕಟಿತ ಕೃತಿಗಳ ಸಮಗ್ರ ಪಟ್ಟಿ; ಆಧುನಿಕ ಕನ್ನಡ ಸಾಹಿತಿಗಳಿಗೆ ಸಂಬಂಧಪಟ್ಟಂತೆ ಈ ಬಗೆಯ ಗ್ರಂಥಗಳು ಆದ್ಯವೆನಿಸಿವೆ, ಮಾದರಿಯಾಗಿ ನಿಂತಿವೆ. ಸಂಪುಟ (1980) ಕನ್ನಡದ ಕೆಲವು ಹಿರಿಯ, ಕಿರಿಯ ಬರಹಗಾರರ ಪುಸ್ತಕಗಳ ವಿಮರ್ಶಾತ್ಮಕ ಬೆಳ್ಳಿ ಕರಂಡಗೆ. ಗ್ರಂಥಲೋಕದಲ್ಲಿ ಪ್ರತಿ ತಿಂಗಳು ಬರೆದ, ಕನ್ನಡ ಪ್ರಕಟಣ ಪ್ರಪಂಚದ ವೈವಿಧ್ಯ ಪರಿಚಯಿಸುವ ಮೊದಲ 25 ಲೇಖನಗಳು ಈ ತೆನೆಯಲ್ಲಿವೆ. ಇದನ್ನು ಓದಿದವರಿಗೆ ಮೂಲಕೃತಿ ಯನ್ನೂ ಓದಬೇಕೆಂಬ ಪ್ರೇರಣೆಯಾಗುತ್ತದೆ. ಇದರ ಎರಡನೆಯ 25 ಬರಹಗಳ ಕಂತು ಸಂಪದ (1981) ; ಇದರಲ್ಲಿ 1979 ಮತ್ತು 1980ರಲ್ಲಿ ಅಚ್ಚಾದ ಕನ್ನಡದ ಪ್ರಸಿದ್ಧವೂ, ವಿಶಿಷ್ಟವೂ ಆದ ಪುಸ್ತಕಗಳ ಅನುಶೀಲನವಿದೆ; ಕಾವ್ಯ, ಪ್ರವಾಸಕಥನ, ಆತ್ಮಕಥನ, ವ್ಯಕ್ತಿಚಿತ್ರಗಳು ಇರುವ ಗ್ರಂಥಗಳ ಅಂತರಂಗದ ಚೆಲುವನ್ನು ಇಲ್ಲಿನ ಬರಹ ಸೆರೆಹಿಡಿದಿದೆ. ಸ್ಮರಣದಲ್ಲಿ (1981) ದೇಶ ವಿದೇಶಗಳಲ್ಲಿ ಹೆಸರಾಗಿರುವ ಲೇಖಕ, ತತ್ವಜ್ಞಾನಿ, ವಿಜ್ಞಾನಿ, ವಿದ್ವಾಂಸ ಮತ್ತು ಕಲಾವಿದರಲ್ಲಿ ಕೆಲವರ ವ್ಯಕ್ತಿಚಿತ್ರಗಳನ್ನು ರೇಖಿಸಿದ್ದಾರೆ. ಈ ವ್ಯಕ್ತಿ ಪರಿಚಯ ಆಪ್ಯಾಯಮಾನವಾದ ಶಬ್ದಚಿತ್ರಗಳಲ್ಲಿ ಮೂಡಿದ್ದು ಓದುಗರ ಮನಸ್ಸನ್ನು ದಟ್ಟವಾಗಿ ಆವರಿಸಿಕೊಳ್ಳುತ್ತದೆ; ಪುಸ್ತಕದ ಶೀರ್ಷಿಕೆ ಸಾರ್ಥಕವೆನಿಸುತ್ತದೆ.

ಸಮೂಹ (1982), ಸಂಪರ್ಕ (1982), ಸಾಂಪ್ರತ (1983) ಮತ್ತು ಸಂವಹನ (1983) ಎಂಬ ನಾಲ್ಕು ಸಂಪುಟಗಳು ಪ್ರಜಾಮತ ವಾರಪತ್ರಿಕೆಯಲ್ಲಿ ಪ್ರಕಟವಾದ ಕಲೆ, ಸಾಹಿತ್ಯ, ಸಂಸ್ಕೃತಿ, ಶಿಕ್ಷಣ ಕುರಿತ ಸ್ಥಿರ ಶೀರ್ಷಿಕೆ ಹೊತ್ತ ಅಂಕಣದಲ್ಲಿ ಹೊರಬಂದ ಬರಹಗಳ ಬಳಗಕ್ಕೆ ಸೇರಿದವು. ಇಲ್ಲಿ ಒಟ್ಟು 1140 ಪುಟಗಳಲ್ಲಿ ನಿರಭ್ರ ಶೈಲಿಯಲ್ಲಿ ಕೆನೆಗಟ್ಟಿರುವ ವಿಚಾರ ಸಂಪತ್ತು, ವಿಪುಲ ಸಾಮಗ್ರಿಯ ಶ್ರೀಮಂತ ಭಂಡಾರ ಲೇಖಕರ ಆಳವೂ, ವಿಸ್ತಾರವೂ ಆದ ಅಧ್ಯಯನಕ್ಕೆ ಹಿಡಿದ ರನ್ನಗನ್ನಡಿ. ಈ ಸಂಪುಟಗಳ ಮೇಲ್ಮೆ ಮತ್ತು ಉಪಯುಕ್ತತೆ ಕುರಿತು ವಿಮರ್ಶಕರು ಮುಕ್ತಕಂಠರಾಗಿ ಪ್ರಶಂಸಿಸಿದ್ದಾರೆ. ಈ ಎಲ್ಲ ಘಟನೆಗಳನ್ನೂ ಹರಳುಗೊಳಿಸಿದಂಥ ಅಭಿಪ್ರಾಯ ಎಚ್ಚೆಸ್ಕೆಯವರದು: "(ಹಾಮಾನಾ) ಅವರ ಗದ್ಯದಲ್ಲಿ ಅರ್ಥ ಮಡುಗಟ್ಟಿ ನಿಲ್ಲುತ್ತದೆ. ಕಣ್ಣಿಗೆ ಕಟ್ಟುವಂಥ ಚಿತ್ರದ ಸೃಷ್ಟಿಯಾಗುತ್ತದೆ. ಇದೇನೂ ಸಾಮಾನ್ಯವಾದ ಸಾಧನೆಯಲ್ಲ. ಹಲವು ವರ್ಷಗಳಿಂದ ಪತ್ರಿಕೆಗಳಲ್ಲಿ ಬರೆಯುತ್ತಿರುವ ನಾನು ಓದುಗರ ಗಮನ ಸೆಳೆಯಲು ಏನೇನೋ ಚಮತ್ಕಾರ ಮಾಡುತ್ತೇನೆ, ಆದರೆ ಅಂಥ ಯಾವ ಚಮತ್ಕಾರವನ್ನೂ ಮಾಡದೆ ಓದುಗರನ್ನು ಆಕರ್ಷಿಸುವ ಅವರ ಶೈಲಿಯನ್ನು ನೋಡಿ ನಾನು ಅನೇಕ ಸಾರಿ ಅಸೂಯೆ ಪಟ್ಟಿದ್ದೇನೆ. ಒಬ್ಬ ಲೇಖಕರಿಗೆ ಇದಕ್ಕಿಂತ ಹೆಚ್ಚಿನ ಪ್ರಶಂಸೆ ಸಾಧ್ಯವಿಲ್ಲ. ನಮ್ಮ ಕನ್ನಡ ಅಧ್ಯಾಪಕರನೇಕರು ಕನ್ನಡದ ಗಡಿಯನ್ನು ಬಿಟ್ಟು ಆಚೀಚೆ ಸರಿಯುವುದಿಲ್ಲ. ಅಲ್ಲಿಂದಾಚೆಗೆ ತಮ್ಮ ವ್ಯಾಸಂಗವನ್ನು ವಿಸ್ತರಿಸುವುದಿಲ್ಲ, ದೃಷ್ಟಿಯನ್ನು ವಿಸ್ತರಿಸಿಕೊಳ್ಳುವುದಿಲ್ಲ. ಆದರೆ ಹಾಮಾನಾ ಅವರ ಮನಸ್ಸಿಗೆ ಗಡಿಗಳೆಂಬುದೇ ಇಲ್ಲ. ಅವರದು ಕನ್ನಡದ ನೆಲೆಯಲ್ಲಿ ಗಟ್ಟಿಯಾಗಿ ಊರಿನಿಂತ ವಿಶ್ವದೃಷ್ಟಿ. ಆದ್ದರಿಂದಲೇ ಅವರ ಬರವಣಿಗೆಯ ಗುಣ, ಪರಿಣಾಮ ಅನನ್ಯವಾದಂಥವು" (ಸಮನ್ವಯ, ಸೆಪ್ಟಂಬರ್ 1, 1982).

ಸ್ಪಂದನ (1983)ದಲ್ಲಿರುವುದು ಐಬಿಎಚ್ ಪ್ರಕಾಶನ ಸಂಸ್ಥೆಯು ಪ್ರಕಟಿಸುತ್ತಿದ್ದ 'ಇಂಚರ' ಮಾಸಪತ್ರಿಕೆಯಲ್ಲಿ ವರ್ತಮಾನ ಎಂಬ ಹೆಸರಿನಿಂದ ಬೆಳಕು ಕಂಡ 18 ಅಂಕಣಗಳ ಸಂಕಲನ. ಇದರಲ್ಲಿ ಶಾಲೆ, ಶಿಕ್ಷಣ, ಮಾತೃಭಾಷೆ, ಪತ್ರಿಕೆಗಳು, ಚುನಾವಣೆಗಳು, ಅಕಾಡೆಮಿಗಳ ಉದ್ದೇಶ-ಮುಂತಾದ ವಿಷಯಗಳ ವಿವೇಚನೆ-ಪ್ರತಿಕ್ರಿಯೆ ಇದೆ. ಅಪ್ಪಯ್ಯ (1984) ಎಂಬುದೊಂದು ವಿಶಿಷ್ಟವಾದ ಹೊತ್ತಗೆ. ನಾಯಕರ ತಂದೆ ಹಾರೊಗದ್ದೆ ಶ್ರೀನಿವಾಸ ನಾಯಕರ (1900-1984) ನಂದಾನೆನಪಿಗೆ ನಿಲ್ಲಿಸಿದ ಕೃತಿಸ್ತಂಭ; ದಿವಂಗತರ ಮಕ್ಕಳು ಮೊಮ್ಮಕ್ಕಳು, ಅಳಿಯ ಮತ್ತು ಪರಿಚಯದ ಕೆಲವು ಮಂದಿ ಬರೆದ ಲೇಖನಗಳ ಗೊಂಚಲು, ಕುವೆಂಪು, ಅನಕೃ, ತರಾಸು, ಚದುರಂಗ, ಡಿ.ವಿ.ಅರಸು ಮೊದಲಾದವರ ಮಾತುಗಳ ಜತೆಗೆ ಸ್ವತಃ ಶ್ರೀನಿವಾಸ ನಾಯಕರೇ ಬರೆದ 'ನಾನು ಗಾಂಧೀಜಿಯವರನ್ನು ನೋಡಿದ್ದೆ' ಎಂಬ ಆಕಾಶವಾಣಿ ಲೇಖನವೂ ಸೇರಿದೆ; ಇದನ್ನು ಓದಿದಾಗ ಸಾಹಿತ್ಯ ಪ್ರೇಮದೊಂದಿಗೆ ಜೀವನ ಶಿಸ್ತು ಮತ್ತು ಬರವಣಿಗೆಯ ಕಲೆ ಹಾಮಾನಾರವರಿಗೆ ತಂದೆಯಿಂದ ಬಂದ ಒಂದು ಬಳುವಳಿಯೆಂದೆನಿಸುತ್ತದೆ. ತಂದೆಯ ಸ್ಮೃತಿಯನ್ನು ಹೀಗೆ ಕೃತಿಗಿಳಿಸಿದ ಅಪರೂಪತೆ ಈ ಪುಸ್ತಕದ ಮೌಲಿಕತೆಯನ್ನು ದ್ವಿಗುಣಿಸಿದೆ.

ಜ್ಞಾನಪೀಠ ಪ್ರಶಸ್ತಿ ಪಡೆದ ಪಂಜಾಬಿನ ಪ್ರಸಿದ್ಧ ಕವಯತ್ರಿ, ರಾಜ್ಯಸಭೆ ಸದಸ್ಯೆ, ಪದ್ಮಶ್ರೀ ಅಮೃತಾ ಪ್ರೀತಮ್ ಅವರ ಕೆಲವು ಕಿರುಕವಿತೆ ಹಾಗೂ ಆಯ್ದ ಕವಿತಾಭಾಗಗಳ ಕನ್ನಡಾನುವಾದ ಸುನೇರಿ (1986); ಮೂಲದ ಅನುವಾದದ ಸೊಗಸು ಮತ್ತು ಸಹಜತೆಗೊಂದು ಮಾದರಿ ತುಣುಕು:

ಒಂದು ನೋವಿತ್ತು-<br>
ಮೌನವಾಗಿ<br>
ನಾನು ಅದನ್ನು ಸಿಗರೇಟಿನಂತೆ<br>
ಸೇದಿದ್ದೇನೆ<br>
ಕೆಲವು ಹಾಡುಗಳಿವೆ-<br>
ಸಿಗರೇಟಿನಿಂದ<br>
ಬೂದಿ ಕೆಡವಿದ ಹಾಗೆ<br>
ಕೊಡವಿದ್ದೇನೆ

ಸಪ್ತಕ (1989) ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಪೂರಕ ನೆಲೆಯ ಒಟ್ಟು ಏಳು ಪ್ರಕಟಿತ ಲೇಖನಗಳ ಸಂಕಲನ; ಇವು ಲೇಖಕರ ಬರವಣಿಗೆಯ ಜಾಯಮಾನಕ್ಕೆ ಅಪ್ಪಾಗಿ ಒಗ್ಗದ ಸಂಶೋಧನ ಪ್ರವೃತ್ತಿಯ ಪಾಂಡಿತ್ಯ ಪೂರ್ಣವಾದ ಲೇಖನಗಳು. ಹೀಗೆಯೇ ಬೆಳ್ಳಿ ಕರ್ನಾಟಕ, ಸೃಜನ, ಗ್ರಂಥಲೋಕದ ಸುತ್ತಮುತ್ತ-ಮುಂತಾದ ಅವರ ಕೃತಿಶ್ರೇಣಿ ದೊಡ್ಡದು. ಶಾಂತಿಸ್ವರೂಪ ಭಟ್ನಾಗರ್ ಎಂಬುದು ಅನುವಾದಿತ ಗ್ರಂಥ; ರೂಪಾರಾಧಕ, ಬಾಗಿನ, ನಿಸರ್ಗದುಡಿಯಲ್ಲಿ, ಜೀವಂಧರ ಚರಿತೆಯ ಸಂಗ್ರಹ, ದೇಜಗೌ: ವ್ಯಕ್ತಿ ಮತ್ತು ಸಾಹಿತ್ಯ, ಡಿವಿಜಿ ಕೃತಿಶ್ರೇಣಿ-ಇವು ಅವರು ಸಂಪಾದಕರಾಗಿರುವ ಕೆಲವು ಕೃತಿಗಳು. ಇಂಗ್ಲಿಷಿನಲ್ಲಿ ಪ್ರಕಟವಾಗಿರುವ ಅವರ ಎರಡು ಪುಸ್ತಕಗಳು: Kannada : Literary and Colloquial ಮತ್ತು Kannada Literature: A Decade.

ಸಿಂಗಾರ (1981) ಕೆಲವು ಪುಸ್ತಕಗಳಿಗೆ ನಾಯಕರು ಬರೆದ ಮುನ್ನುಡಿ ಗಳಲ್ಲಿ ಹನ್ನೆರಡನ್ನು ಆಯ್ದು ಹೆಣೆದ ಗ್ರಂಥ. ಸಿಂಗಾರವೆಂದರೆ ಕಳಶದ ಪೂಜೆಗೆ ಇಡುವ ಅಡಕೆಯ ಹೊಂಬಾಳೆ ಹೂ; ಕೃತಿ ಕಳಶಗಳಿಗೆ ಇಡುವ ಮುನ್ನುಡಿ ಹೂಗಳನ್ನು ಕಟ್ಟಿಕೊಟ್ಟಿರುವ ಈ ಸಿಂಗಾರದಲ್ಲಿ ಚದುರಂಗ, ಬೆಸಗರಹಳ್ಳಿ ರಾಮಣ್ಣ, ಪಿ.ಆರ್. ತಿಪ್ಪೇಸ್ವಾಮಿ, ಎಂ.ರಾಮಕೃಷ್ಣ-ಮೊದಲಾದ ವರ ಪುಸ್ತಕಗಳಿಗೆ ಬರೆದ ಮುನ್ನುಡಿಗಳು ಸೇರ್ಪಡೆಯಾಗಿದ್ದು ಸಾಹಿತ್ಯಾಸಕ್ತ ಓದುಗರಿಗೆ ಆಕರ ಮೌಲ್ಯದ್ದಾಗಿದೆ.

❑

# ಎಂ. ಚಿದಾನಂದಮೂರ್ತಿ

ಎನ್.ಎಸ್. ತಾರಾನಾಥ್

೧

1982ರ ಮೊದಲ ತಿಂಗಳುಗಳು ಬೆಂಗಳೂರಿನ ದಂಡು ಪ್ರದೇಶದ ಒಂದು ಸಿನಿಮಾ ಮಂದಿರ ಮುಂಗಡ ಟಿಕೆಟ್ಟಿಗಾಗಿ ಸರದಿಯ ಸಾಲಿನಲ್ಲಿ ನಿಂತಿದ್ದ ಗಿಡ್ಡು ಎತ್ತರದ ಒಬ್ಬ ಕನ್ನಡ ಪ್ರಾಧ್ಯಾಪಕರು. ತಮ್ಮ ಸರದಿ ಬಂದಾಗ ಕನ್ನಡದಲ್ಲಿ "ನಾಲ್ಕು ಟಿಕೆಟ್‌ಕೊಡಿ" ಎಂದು ಕೇಳಿದರು. ಕೌಂಟರಿ ನಲ್ಲಿದ್ದಾತ ಇಂಗ್ಲಿಷ್‌ನಲ್ಲಿ ಮಾತನಾಡಲು ಒತ್ತಾಯಿಸಿದ. ಕೇಳಿದವರು ಮತ್ತೆ ಕನ್ನಡದಲ್ಲೇ ಕೇಳಿದರು. ಮಾತಿಗೆ ಮಾತು ಬೆಳೆಯಿತು. ಸಿನಿಮಾ ಮಂದಿರದ ಮ್ಯಾನೇಜರ್ ಬಂದ ಕನ್ನಡದಲ್ಲಿ ಮಾತನಾಡಿದುದಕ್ಕೆ ಗಿಡ್ಡನೆಯ ವ್ಯಕ್ತಿಯನ್ನು ಆವರಣದಿಂದ ಹೊರಹಾಕಿಸುತ್ತೇನೆ ಎಂದು ಅಬ್ಬರಿಸಿದ. ಸುತ್ತಲೂ ಇದ್ದ ಕನ್ನಡಿಗರು ಮೂಕ ಪ್ರೇಕ್ಷಕರಾಗಿ ಇದನ್ನು ನೋಡುತ್ತಿದ್ದರು. ಇಡೀ ಘಟನೆ ಪ್ರಾಧ್ಯಾಪಕರಲ್ಲಿ ನೋವು. ಕುಪಿತ, ಅಪಮಾನದ ಬೇಗೆ ಉಂಟುಮಾಡಿತ್ತು. ಕನ್ನಡದ ದುಃಸ್ಥಿತಿಯ ಬಗ್ಗೆ ಸಂಕಟ ತರಿಸಿತ್ತು. ಕರ್ನಾಟಕದ ಆದ್ಯಂತ ಕನ್ನಡಪರ ಎಚ್ಚರ ಮೂಡಿಸುವ, ಕನ್ನಡ ಕ್ಕಾಗಿ ತಮ್ಮ ಉಳಿದ ಬದುಕಿನ ವೇಳೆ, ಆಯಸ್ಸುಗಳನ್ನು ಮೀಸಲಿಡುವ, ಕನ್ನಡಕ್ಕಾಗಿ ಅಹರ್ನಿಶಿ ದುಡಿಯುವ ದೃಢ ಸಂಕಲ್ಪವನ್ನು ಆ ಪ್ರಾಧ್ಯಾಪಕರು ಮಾಡಿದರು. ಇದಕ್ಕೆಂದೇ ಹಂಪಿಯ ಕನ್ನಡ ಭುವನೇಶ್ವರಿಯ ಮುಂದೆ ಪ್ರತಿಜ್ಞೆ ಕೈಗೊಂಡರು. ಪ್ರಾಣತ್ಯಾಗಕ್ಕೆ ಕೂಡ ಸಿದ್ಧರಾಗಿ ತಮ್ಮನ್ನು "ಕನ್ನಡ ಗರುಡ" ಎಂದು ಭಾವಿಸಿದರು.

ಒಂದೂವರೆ ದಶಕ ಅವರು ಕನ್ನಡಕ್ಕಾಗಿ ಶ್ರಮಿಸಿದರು. ತಮ್ಮ ಅಮೂಲ್ಯ ಬರಹ, ಸಂಶೋಧನೆ ತೊರೆದರು. ಬಳಗ ಕಟ್ಟಿದರು. ಕೇಂದ್ರ ಸ್ಥಾಪಿಸಿದರು. ಚಳುವಳಿ ಮಾಡಿದರು. ಕನ್ನಡದ ಕಾರಣಕ್ಕೆ. ಸಮಸ್ಯೆಗಳ ಪರಿಹಾರಕ್ಕೆ ನೂರಾರು ಕಾರ್ಯಕರ್ತರನ್ನು ಸಂಘಟಿಸಿದರು. ಕನ್ನಡ ಮಾಧ್ಯಮ, ಕನ್ನಡಶಾಲೆ, ಕನ್ನಡಿಗರಿಗೆ ಉದ್ಯೋಗ, ಕರ್ನಾಟಕದ ನೆಲಜಲಗಳ ಹಕ್ಕುಗಳಿಗೆ ಹೋರಾಡಿದರು. ಕನ್ನಡದ ಬಗ್ಗೆ ಕರ್ನಾಟಕದಲ್ಲಿ ಸಮಗ್ರ ಜಾಗೃತಿ ಆಗದಿದ್ದರೂ. ಸಾಮಾನ್ಯ ಎಚ್ಚರ ಮೂಡಿತು. ಆದರೆ ನಿರೀಕ್ಷಿಸಿದ ಪ್ರಮಾಣದ ಫಲ, ಪರಿಣಾಮಗಳು ಆಗಲಿಲ್ಲ. ಕನ್ನಡಿಗರು ತಮ್ಮ ಆಲಸ್ಯದಿಂದ, ನಿರುತ್ಸಾಹದಿಂದ, ನಿರಭಿಮಾನದಿಂದ, ನಿಷ್ಕ್ರಿಯತೆಯಿಂದ ಎದ್ದು ಬರಲು, ಮುಕ್ತವಾಗಿ ತಮ್ಮ ಬಗ್ಗೆ ಚಿಂತಿಸಲು ಅವರು ಆತ್ಮತ್ಯಾಗದ ನಿರ್ಧಾರ ಕೈಗೊಂಡರು. ಕರ್ನಾಟಕ "ಇತರ ನಾಡುಗಳಂತೆ ಸ್ವಾಭಿಮಾನದ ಸಂಪತ್ತಿನ ಗೂಡಾಗಿ ವಿಕಾಸ ಹೊಂದಲಿ ಉದ್ಯಮ ಶೀಲವಾಗಿ ಬೆಳೆಯಲಿ ಕರ್ನಾಟಕದಲ್ಲಿ ಉದ್ಯೋಗಗಳು ಅವರಿಗೇ ಸಿಗಲಿ, ಅವರ ಗದ್ದೆಗಳು ಅನ್ಯರ ಪಾಲಾಗದಿರಲಿ ಮಾತೃಭಾಷಾ ಮಾಧ್ಯಮ ಜಾರಿಗೆ ಬರಲಿ" ಎಂದು ಹಾರೈಸಿದರು "ನನ್ನ ಆತ್ಮತ್ಯಾಗ ಎಲ್ಲರ ಹೃದಯ ಗಹ್ವರ ಗಳಲ್ಲಿ ಥಳಕ್ಕನೆ ಮಿಂಚಿ ವಿದ್ಯುತ್ ಸಂಚಾರವುಂಟುಮಾಡಲಿ; ಹೆಚ್ಚಿನ ತ್ಯಾಗಕ್ಕೆ ಅವರನ್ನು ಸಿದ್ಧಗೊಳಿಸಲಿ" ಎಂದು ಆಶಿಸುತ್ತ ಹಂಪಿಯ ತುಂಗಭದ್ರೆಯಲ್ಲಿ ಜಲಪ್ರವೇಶ ಮಾಡಿದರು!

ಕನ್ನಡ-ಕನ್ನಡಿಗ-ಕರ್ನಾಟಕತ್ವ-ಗಳಿಗೋಸುಗ ಯಾವುದೇ ಹಿಂಜರಿಕೆ - ಭಯಗಳಿಲ್ಲದೆ, ಅಳುಕು-ಥಳುಕುಗಳಿಲ್ಲದೆ ಹೀಗೆ ಪ್ರಾಣತ್ಯಾಗದ ಧೀರ ನಿರ್ಧಾರ ಕೈಗೊಂಡ ಅಪೂರ್ವ ಕನ್ನಡಮೂರ್ತಿ ಚಿದಾನಂದಮೂರ್ತಿ.

೨

ಚಿದಾನಂದಮೂರ್ತಿಗಳು 1931ರ ಮೇ 10ನೆಯ ತಾರೀಖಿನಂದು ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಹಿರೇಕೋಗಲೂರಿನಲ್ಲಿ

ಹುಟ್ಟಿದರು. ಅವರ ತಂದೆ ಕೊಟ್ಟೂರಯ್ಯನವರಿಗೆ ಇವರು ಎರಡನೆಯ ಮಗು, ಮೊದಲನೆಯ ಮಗ. ತಾಯಿ ಪಾರ್ವತಮ್ಮ, ತಂದೆ ಚನ್ನಗಿರಿಯ ಸರ್ಕಾರಿ ಪ್ರಾಥಾಮಿಕಶಾಲೆಯಲ್ಲಿ ಉಪಾಧ್ಯಾಯರು. ತಂದೆ - ತಾಯಿಯರು ಚಲ, ಹಠ, ಕಷ್ಟಸಹಿಷ್ಣುತೆ, ಸ್ವಾಭಿಮಾನ, ನೇರತೆಯ ಗುಣಗಳನ್ನು ಮೈಗೂಡಿಸಿಕೊಂಡಿದ್ದರು. ಸಹಜವಾಗಿಯೇ ಅವು ಮೂರ್ತಿಯವರಿಗೂ ದತ್ತವಾದವು.

ಮೂರ್ತಿಗಳ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾಭ್ಯಾಸ ಕೋಗಲೂರು, ಸಂತೆಬೆನ್ನೂರುಗಳಲ್ಲಿ ನಡೆದುವು. ಜಾಣ. ಚೂಟಿ ಆಗಿದ್ದ ಅವರು ತರಗತಿಯಲ್ಲಿ ಮೊದಲ ಸ್ಥಾನ ಪಡೆಯುತ್ತಿದ್ದರು. ದಾವಣಗೆರೆಯಲ್ಲಿ ತಮ್ಮ ಪ್ರೌಢಶಾಲೆಯ ಹಾಗೂ ಇಂಟರ್ ವಿದ್ಯಾಭ್ಯಾಸ ನಡೆಸಿದರು. ನಾಡಿಗೇರ ಗೋವಿಂದರಾಯ, ವಿ. ಎ. ತ್ಯಾಗರಾಜನ್, ಎಲ್. ಬಸವ ರಾಜು. ಜಿ. ಎಸ್. ಶಿವರುದ್ರಪ್ಪ ಆ ಕಾಲದ ಅವರ ಅಧ್ಯಾಪಕ ವೃಂದದ ಪ್ರಮುಖರು. ಇಂಟರ್ ಪರೀಕ್ಷೆಯಲ್ಲಿ ಇಡೀ ರಾಜ್ಯಕ್ಕೆ ಅವರು ಹತ್ತನೆಯ ಸ್ಥಾನಗಳಿಸಿದರು. ಮುಂದೆ ಮನೆಯವರ ಇಚ್ಛೆ ನಿರೀಕ್ಷೆಗಳಂತೆ ಮೆಡಿಕಲ್ ಅಥವಾ ಇಂಜಿನಿಯರಿಂಗ್‌ಗೆ ಸೇರದೆ ಕನ್ನಡ ಆನರ್ಸ್ ಸೇರಿದರು. ಕುವೆಂಪು, ಡಿ.ಎಲ್. ನರಸಿಂಹಾಚಾರ್, ಕ. ವೆಂ. ರಾಘವಾಚಾರ್, ಎಸ್. ಶ್ರೀಕಂಠಶಾಸ್ತ್ರಿಗಳಂಥ ಮಹಾ ಅಧ್ಯಾಪಕರ ಮಾರ್ಗದರ್ಶನದಲ್ಲಿ, ಸುತ್ತೂರು ಸಂಸ್ಥಾನದ ಉಚಿತ ವಿದ್ಯಾರ್ಥಿನಿಲಯದ ಪೋಷಣೆಯಲ್ಲಿ ಪ್ರಥಮ ವರ್ಗ, ಪ್ರಥಮ ರ್‍ಯಾಂಕ್ ಅಲ್ಲದೆ, ಆಲ್ ಆನರ್ಸ್ ಚಿನ್ನದ ಪದಕ ಪಡೆದರು (1953) ಬಳಿಕ ಎರಡು ವರ್ಷಗಳ ಕಾಲ ಬೆಂಗಳೂರು, ತುಮಕೂರು, ಕೋಲಾರದ ಪದವಿ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕರಾದರು. ಮತ್ತೆ ರಜೆ ಹಾಕಿ ಮೈಸೂರಿನಲ್ಲಿ ಕನ್ನಡ ಎಂ.ಎ. ಪದವಿಯನ್ನು ಪ್ರಥಮವರ್ಗ ಪ್ರಥಮಸ್ಥಾನದೊಂದಿಗೆ ಗಳಿಸಿದರು (1957). ಚಿದಾನಂದಮೂರ್ತಿ ಅತಿ ಶ್ರೇಷ್ಠ ಹಾಗೂ ಪ್ರತಿಭಾವಂತ ವಿದ್ಯಾರ್ಥಿ ಎಂಬುದನ್ನು ಈ ವಿವರಗಳು ದೃಢಪಡಿಸುತ್ತವೆ.

ಎಂ. ಎ. ಓದುವಾಗಲೇ ಡಿ.ಎಲ್. ನರಸಿಂಹಾಚಾರ್ಯರ ಸೂಚನೆಯ ಮೇರೆಗೆ ಪಂಪನಿಗೆ ಹಿನ್ನೆಲೆಯಾಗಿದ್ದ ಸಾಮಾಜಿಕ ಬದುಕನ್ನು ಶಾಸನಗಳನ್ನು ಆಧರಿಸಿ ಪುನಾರಚಿಸುವ ಪ್ರಯತ್ನಕ್ಕೆ ಮೂರ್ತಿಗಳು ತೊಡಗಿದರು. ಅದರ ಫಲವಾಗಿ ಬಂದ ಲೇಖನ 'ಪಂಪಕವಿ ಮತ್ತು ಮೌಲ್ಯಪ್ರಸಾರ'. ಆ ಮೂಲಕ ಶಾಸನಕ್ಷೇತ್ರದೆಡೆ ಹೊರಳಿದ ಮೂರ್ತಿಗಳು 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ನಿಬಂಧ ಸಿದ್ಧಪಡಿಸಿ ತೀ. ನಂ. ಶ್ರೀಕಂಠಯ್ಯ ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ ಪದವಿ (1964) ಪಡೆದರು. ಈ ನಿಬಂಧ ಕನ್ನಡ ಸಂಶೋಧನ ಕ್ಷೇತ್ರದ ತುಂಬ ಮಹತ್ವಪೂರ್ಣ ಕೃತಿಯಾಗಿದೆ.

ಆರಂಭದ ಕೆಲವು ವರ್ಷ ಪದವಿಕಾಲೇಜುಗಳಲ್ಲಿ ಕೆಲಸ ಮಾಡುತ್ತಿದ್ದ ಚಿದಾನಂದಮೂರ್ತಿಗಳು 1957ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಯುವರಾಜ ಕಾಲೇಜಿನಲ್ಲಿ ಅಧ್ಯಾಪಕರಾದರು. 1960ರ ಹೊತ್ತಿಗೆ ಮೈಸೂರಿನ ಮಾನಸಗಂಗೋತ್ರಿಯ ಸ್ನಾತಕೋತ್ತರ ಕನ್ನಡ ವಿಭಾಗದ ಅಧ್ಯಾಪಕರಾದರು. 1968ವರೆಗೆ ಅಲ್ಲಿ ಅಧ್ಯಾಪಕರಾಗಿ, ಕನ್ನಡ ರೀಡರ್ ಆಗಿದ್ದು ಬಳಿಕ ಬೆಂಗಳೂರು ವಿಶ್ವವಿದ್ಯಾಲಯವನ್ನು ಸೇರಿದರು. ಅಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಕೆಲಸಮಾಡಿ 1990ರ ಅಕ್ಟೋಬರ್ 10ರಂದು ಸ್ವಯಂಸೇವಾ ನಿವೃತ್ತಿ ಪಡೆದರು. 1967 - 68ರಲ್ಲಿ ವಿಶ್ವವಿದ್ಯಾನಿಲಯದಲ್ಲಿ 'ಡ್ರಿಲ್ ಟೀಚರ್' ಆಗಿ, 1979ರ ಅಂತ್ಯ ಭಾಗದಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಮೂರ್ತಿಗಳು ಕೆಲಸ ಮಾಡಿದ್ದಾರೆ. ಅಮೆರಿಕೆ, ಇಂಗ್ಲೆಂಡ್, ಫ್ರಾನ್ಸ್, ಇಟಲಿ, ಗ್ರೀಸ್, ಈಜಿಪ್ಟ್, ಥೈಲೆಂಡ್, ಜಪಾನ್, ಹವಾಯ್, ಸ್ವಿಟ್ಸರ್ಲೆಂಡ್ ಮುಂತಾದ ದೇಶಗಳನ್ನು ಅವರು ಸುತ್ತಿದ್ದಾರೆ. ಸಂಶೋಧನೆಗೆ, ಕನ್ನಡದ ಕಾರಣಕ್ಕೆ ಕರ್ನಾಟಕದ ಬೇರೆ ಬೇರೆ ಪ್ರಾಂತ್ಯಗಳನ್ನು ಅವರು ವ್ಯಾಪಕವಾಗಿಸುತ್ತಿದ್ದಾರೆ. ಬರ್ಕ್ಲಿಯಲ್ಲಿ ನಡೆದ ಅಮೆರಿಕನ್ ಓರಿಯಂಟಲ್ ಸೊಸೈಟಿಯ ವಾರ್ಷಿಕಾಧಿವೇಶನ, ಫಿಲಡೆಲ್ಫಿಯದಲ್ಲಿ ನಡೆದ ಏಷಿಯನ್ ಸೆಮಿನಾರ್, ಸ್ಟಾನ್‌ಫೋರ್ಡ್ ವಿಶ್ವವಿದ್ಯಾನಿಲಯದ ಐತಿಹಾಸಿಕ ಭಾಷಾವಿಜ್ಞಾನ ಸಮ್ಮೇಳನಗಳಲ್ಲಿ ಅವರು ಪ್ರಬಂಧ ಮಂಡಿಸಿದ್ದಾರೆ. ಈ ಎಲ್ಲವೂ ಅವರ ನಿರಂತರ ಅಧ್ಯಯನಶೀಲತೆ ಮತ್ತು ವಿದ್ವತ್ತಿನ ಸೂಚಕಗಳಾಗಿವೆ.

೩

ಕನ್ನಡ ಸಂಶೋಧನ ಕ್ಷೇತ್ರದಲ್ಲಿ ಚಿದಾನಂದಮೂರ್ತಿ ಅವರದು ಚಿರಸ್ಮರಣೀಯವಾದ ದೊಡ್ಡ ಹೆಸರು. ಯುಗಪ್ರವರ್ತನೆಯ ಸಂಶೋಧಕ, ಸಂಶೋಧನೆಯ ಸಂಶೋಧಕ, ಸಂಸ್ಕೃತಿ ಸಂಶೋಧಕ, ತೀ. ನಂ. ಶ್ರೀ. ಉತ್ತರಾಧಿಕಾರಿ ಎಂಬೆಲ್ಲ ಹೊಗಳಿಕೆಗೆ ಮೂರ್ತಿಗಳು ಪಾತ್ರರಾಗಿದ್ದಾರೆ. ಹತ್ತಿರ ಹತ್ತಿರ ನಾಲ್ಕು ದಶಕಗಳಿಂದ ಅವರು ಸಂಶೋಧನ ಕ್ಷೇತ್ರದಲ್ಲಿ ಕೆಲಸ ಮಾಡುತ್ತ ಬಂದಿದ್ದಾರೆ. ಈಗ ಅವರ ಜೀವನದ ಧ್ಯೇಯ, ಉದ್ದೇಶಗಳು ಬೇರೆ ಆಗಿದ್ದರೂ ಅವರ ಅಂತರಾಳದ ಸಂಶೋಧಕ ಮರೆಯಾಗಿಲ್ಲ. ಸಂಶೋಧನೆಗೆ ಸಂಬಂಧಿಸಿದ ಲೇಖನಗಳನ್ನು ಪ್ರಕಟಿಸುತ್ತಲೇ ಇರುತ್ತಾರೆ. ಈ ಕ್ಷೇತ್ರದಲ್ಲಿ ನಲವತ್ತು ವರ್ಷ ಶ್ರಮಿಸಿ ದುಡಿದಿರುವುದೇ ಅಸಾಧಾರಣವಾದ ಸಾಧನೆ.

ಚಿದಾನಂದಮೂರ್ತಿ ಈವರೆಗೂ ಇಪ್ಪತ್ತೈದಕ್ಕೂ ಹೆಚ್ಚು ಪುಸ್ತಕಗಳನ್ನು, ಮುನ್ನೂರ ಐವತ್ತಕ್ಕೂ ಹೆಚ್ಚು ಸಂಪ್ರಬಂಧಗಳನ್ನು ಪ್ರಕಟಿಸಿದ್ದಾರೆ. ಭಾಷೆ, ವ್ಯಾಕರಣ, ಸ್ಥಳನಾಮ, ಛಂದಸ್ಸು ಗ್ರಂಥ ಸಂಪಾದನೆ ಸಾಹಿತ್ಯ ಚರಿತ್ರೆ, ಜಾನಪದ, ಶಾಸನ, ಕರ್ನಾಟಕದ ಇತಿಹಾಸ - ಸಂಸ್ಕೃತಿ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಸಂಶೋಧನೆ ಕೈಗೊಂಡಿದ್ದಾರೆ. ಅವರ ಸಂಶೋಧನೆಯಲ್ಲಿ ವ್ಯಾಪಕವಾದ ವ್ಯಾಸಂಗ, ಆಳವಾದ ಅಧ್ಯಯನ, ಅಪಾರವಾದ ಪರಿಶ್ರಮ, ಮಿಂಚಿನ ಪ್ರತಿಭೆ ಮಿಲನಗೊಂಡಿವೆ. ಇದರಿಂದ ಅವರ ಪ್ರತಿಯೊಂದು ಬರಹವೂ ಅವಲಂಬನೆ, ಹೊಸತನಗಳಿಂದ ಹೊಳೆಯುತ್ತವೆ. ಅವರ ಸಂಶೋಧನೆಯ ಸಿದ್ಧಿ, ಸಾಧನೆಗಳನ್ನು ಕೆಲವು ವಿಭಾಗಗಳ ಮುಂದೆ ನೋಡಬಹುದು.

### ಭಾಷೆ - ವ್ಯಾಕರಣ - ಸ್ಥಳನಾಮ

1960ರ ದಶಕಗಳಲ್ಲಿ ತಾವು ಪ್ರಕಟಿಸಲು ಹಲವಾರು ಲೇಖನಗಳಲ್ಲೇ ಉಂಬರಿ, ಇರ್, ಡುಂಡುಚಿ, ಅಮ್ಮ, ಅಬ್ಬೆ, ಅಲ್ಲಮ, ಬಾಮಬ್ಬೆ ಶಬ್ದಗಳನ್ನು ಕನ್ನಡ ಭಾಷೆ. ವ್ಯಾಕರಣ, ಅವಸ್ಥಾಂತರಗಳ ಹಿನ್ನೆಲೆಯಲ್ಲಿ ಮೂರ್ತಿಗಳು ಪರಿಶೀಲಿಸಿದ್ದಾರೆ. ಅನಂತರ 'ಭಾಷಾ ವಿಜ್ಞಾನದ ಮೂಲತತ್ತ್ವಗಳು' (1965). ವಾಗರ್ಥ (1981) ಎಂಬ ಎರಡು ಮುಖ್ಯವಾದ ಅವರ ಭಾಷಾಸಂಬಂಧವಾದ ಕೃತಿಗಳು ಪ್ರಕಟವಾದುವು

ಮೊದಲನೆಯ ಕೃತಿ ವರ್ಣನಾತ್ಮಕ ಮತ್ತು ಐತಿಹಾಸಿಕ ಭಾಷಾ ವಿಜ್ಞಾನದ ಪ್ರಾಥಮಿಕ ತತ್ತ್ವ. ಪರಿಕಲ್ಪನೆಗಳನ್ನು ಸಮರ್ಥವಾಗಿ ಪರಿಚಯ ಮಾಡಿಕೊಡುತ್ತದೆ. ಕನ್ನಡದಲ್ಲಿ ಭಾಷಾವಿಜ್ಞಾನ ಆರಂಭವಾಗುತ್ತಿದ್ದ ಕಾಲದಲ್ಲಿ

ಈ ಕೃತಿ ಬಂದಿತು. ಇಂಥ ಕೃತಿಯ ಅವಶ್ಯಕತೆ ಅಂದು ಬಹಳ ಇತ್ತು. ಅದನ್ನು ತುಂಬ ಸಮರ್ಥವಾಗಿ ಇದು ಪೂರೈಸಿತು. ಭಾಷೆಯ ಉಗಮ, ಭಾಷಾಸ್ವರೂಪ, ಭಾಷಾ ವರ್ಗೀಕರಣ. ಭಾಷಾ ವ್ಯತ್ಯಾಸ. ಭಾಷೆ - ಉಪಭಾಷೆಗಳ ನಡುವಣ ಸಂಬಂಧ, ಭಾಷೆ - ಬರಹ. ಭಾಷಾವಿಜ್ಞಾನದ ಇತಿಹಾಸಗಳನ್ನು ಸರಳವಾದ ಭಾಷೆಯಲ್ಲಿ ಸುಲಭವಾಗಿ ತಿಳಿಯುವಂತೆ ಈ ಕೃತಿ ನಿರೂಪಿಸುತ್ತವೆ. 24 ಲೇಖನಗಳನ್ನು ಒಳಗೊಂಡ ಅವರ 'ವಾಗರ್ಥ' ಸಂಪ್ರದಾಯಗಳ ಸಂಕಲನ. ಇದರಲ್ಲಿ ಕನ್ನಡದಲ್ಲಿ ಪ್ರತಿಧ್ವನಿ ಪದ, ವಾರ್ತಾ ಮಾಧ್ಯಮದಲ್ಲಿ ಕನ್ನಡ ಭಾಷೆಯ ಆಧುನೀಕರಣ, ಹೊಳೆನರಸೀಪುರ - ಚನ್ನರಾಯಪಟ್ಟಣ ಅರಕಲಗೂಡು, ಸಕಲೇಶಪುರ ಮುಂತಾದ ಪ್ರದೇಶಗಳಲ್ಲಿ ತಾಲವ್ಯೀಕರಣ - ಕಂಠ್ಯೀಕರಣ. ವ್ಯಾವಹಾರಿಕ ಶಿಷ್ಟಕನ್ನಡದ ವಿಭಕ್ತಿ ವ್ಯವಸ್ಥೆ ಶುದ್ಧ ಭಾಷಾವಿಜ್ಞಾನದ ದೃಷ್ಟಿಯಿಂದ ಕೂಡಿದವು ; ಉಳಿದವು ಕರ್ನಾಟಕದ ಶಾಸನ - ಇತಿಹಾಸ ಸಂಸ್ಕೃತಿಗಳ ಹಿನ್ನೆಲೆಯಲ್ಲಿ ರಚಿತವಾದುವು. ಕರ್ನಾಟಕದ ಸ್ಥಳನಾಮ, ವ್ಯಕ್ತಿನಾಮ, ದೇಕಬ್ಬೆ ಶಾಸನದ ಸ್ಥಳಗಳನ್ನು ಕುರಿತು, ಆದಯ್ಯ ಹೆಸರಿನ ನಿಷ್ಪತ್ತಿ, ಗೋದಾವರಿ ತೀರದ ಕನ್ನಡ ಮುಂತಾದವು ಎರಡನೆಯ ಬಗೆಯ ಲೇಖನಗಳು. ಎಷ್ಟೋ ಕಡೆ ಮೂರ್ತಿಗಳ ಬರೆವಣಿಗೆ ಶಬ್ದ ನಿಷ್ಪತ್ತಿಯ ಕಡೆ, ಇತಿಹಾಸ - ಸಂಸ್ಕೃತಿಗಳ ಅರ್ಥೈಸುವಿಕೆಯ ಕಡೆ ಹೆಚ್ಚು ಹರಿಯುತ್ತವೆ. 'ಗಾಲ' ಎಂದು ಕೊನೆಯಾಗುವ ಊರ ಹೆಸರು, 'ಮಂಗಲ' ಎಂಬುದರ ಸಂಕ್ಷಿಪ್ತರೂಪ, ಆದಯ್ಯ ಎಂಬುದು ಜೈನೀಯ ಹೆಸರು, ಲೋಕನಾಥ ಎಂಬುದರಲ್ಲಿ ಬೌದ್ಧ ಕುರುಹಿದೆ ಎಂಬುದನ್ನು ತಾರ್ಕಿಕವಾಗಿ ನಿರೂಪಿಸು ತ್ತಾರೆ. ಸಂಸ್ಕೃತಿ - ಇತಿಹಾಸಗಳ ಪುನಾರಚನೆಯಲ್ಲಿ ಭಾಷೆಯನ್ನು ಭಾಷಾವಿಜ್ಞಾನವನ್ನು ಯಶಸ್ವಿಯಾಗಿ ಬಳಸಿಕೊಳ್ಳಬಹುದು ಎಂಬುದನ್ನು ಮೊದಲಬಾರಿಗೆ ಮೂರ್ತಿಗಳು ತೋರಿಸಿಕೊಟ್ಟರು. ರ್ ಧ್ವನಿಯಾದ ಉಚ್ಚಾರ ಹಾಗೂ ಸ್ವೀಕರಣ ಶಿಲ್ಪಗಳ ಬಗ್ಗೆ ಕನ್ನಡ ವ್ಯಾಕರಣಕಾರರ ವಿವಿಧ ನಿಲವುಗಳನ್ನು ಮತ್ತು ವಿಚಾರಗಳನ್ನು ಕುರಿತ ಅವರ ವ್ಯಾಕರಣ ಲೇಖನಗಳು ವಿಶಿಷ್ಟವಾಗಿವೆ.

### ಛಂದಸ್ಸು - ಗ್ರಂಥಸಂಪಾದನೆ

ಕನ್ನಡ ಸಂಶೋಧನ ಕ್ಷೇತ್ರದಲ್ಲಿ ತುಂಬ ದೊಡ್ಡ ಕೊಡುಗೆ ಕೊಟ್ಟ ಡಿ. ಎಲ್. ನರಸಿಂಹಾಚಾರ್, ತೀ. ನಂ. ಶ್ರೀಕಂಠಯ್ಯ ಅವರಿಗೆ ಪ್ರಿಯವಾಗಿದ್ದ ಕ್ಷೇತ್ರಗಳು ಛಂದಸ್ಸು, ಗ್ರಂಥಸಂಪಾದನೆ ಅವರ ನೇರ ಶಿಷ್ಯರಾಗಿದ್ದ ಚಿದಾನಂದಮೂರ್ತಿ ಈ ಕ್ಷೇತ್ರಗಳಲ್ಲಿ ಕೂಡ ಕೊಡುಗೆ ನೀಡಿದ್ದಾರೆ. 'ಛಂದೋತರಂಗ' ಛಂದಸ್ಸಿಗೆ ಸಂಬಂಧಿಸಿದ ಅವರ ಇಪ್ಪತ್ತೈದು ಲೇಖನಗಳ ಸಂಕಲನ ತ್ರಿಪದಿಯ ಸ್ವರೂಪ, ಇತಿಹಾಸ ಕುರಿತ ಅವರ ಲೇಖನ ಪ್ರಸಿದ್ಧವಾದುದು. ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾದುದು. ಅವರು 'ಬೆದಂಡೆ'ಯ ಬಗೆಗೆ ಹೆಚ್ಚಿನ ಉಲ್ಲೇಖ ಗುರುತಿಸಿದ್ದಾರೆ ; ಲಯಗ್ರಾಹಿ - ಲಯೋತ್ತರಗಳ ನಡುವಣ ಸಂಬಂಧ - ಪ್ರಯೋಗಗಳನ್ನು ವಿಶ್ಲೇಷಿಸಿದ್ದಾರೆ, ಒನಕೆವಾಡಿನ ಸ್ವರೂಪ ಚರ್ಚಿಸಿದ್ದಾರೆ ; ಕಗ್ಗದ ವ್ಯುತ್ಪತ್ತಿ, ಸ್ವರೂಪ ವಿವರಿಸಿದ್ದಾರೆ ; ಈವರೆಗೆ ತಿಳಿಯದ ಎಷ್ಟೋ ಹೊಸ ವಿಷಯಗಳನ್ನು ಕೂಡ ಮೂರ್ತಿಗಳು ಛಂದಃ ಸಂಬಂಧವಾದ ಲೇಖನಗಳಲ್ಲಿ ಪ್ರಕಟಪಡಿಸಿದ್ದಾರೆ ಮೆಹಬೂಬ್‌ನಗರದ ಶಾಸನದಲ್ಲಿ ಒಂದು ಷಟ್ಪದ ವನ್ನುಲ್ಲದೆ, ಕನ್ನಡದ ಮೊತ್ತ ಮೊದಲ ಷಟ್ಪದಿ ಕಾವ್ಯವನ್ನು ಸೊಲ್ಲಾಪುರದ 'ವಿವಾಹ ಪುರಾಣ' ಶಾಸನದಲ್ಲಿ ಗುರುತಿಸಿಕೊಟ್ಟಿದ್ದಾರೆ. ಮೊತ್ತಮೊದಲ ಬಾರಿಗೆ ಹದಿನಾರು ಅಂಶಷಟ್ಪದಿಗಳನ್ನು ಇಲ್ಲಿ ಪಾಠ ಪರಿಷ್ಕರಣ ಮಾಡಿ ತೋರಿಸಿಕೊಟ್ಟಿರುವುದು ವಿಶೇಷ ತಾರಾವಳಿಗಳ ಛಂದಸ್ಸನ್ನು 'ಸರಳಾಂಶ ರಗಳೆ'ಯೆಂದು ಕರೆದು, ಅದರ ಪ್ರತ್ಯೇಕತೆ ತೋರಿಸಿಕೊಟ್ಟಿದ್ದಾರೆ. ಹೀಗೆಯೇ ಕರ್ನಾಟಕ ವಿಷಯ ಜಾತಿ ಮಟ್ಟಗಳ ಉಗಮ, ಸ್ವರೂಪ, ವೈಶಿಷ್ಟ್ಯಗಳನ್ನು ತಮಿಳಿನ ಹಿನ್ನೆಲೆಯಲ್ಲಿ ಭಿನ್ನವಾಗಿ ಪರಿಶೀಲಿಸಿದ್ದಾರೆ. ಪುಲಿಗೆರೆಯ ಶಂಖಜಿನೋದ್ಧಾರ ಕಾವ್ಯದ ಪದ್ಯಗಳಲ್ಲಿ ಎರಡು ಚರಣಗಳ ನಡುವೆ ಬರುವ ಒಂಟಿಗಣಕ್ಕೆ "ಉಯ್ಯಾಲೆಗಣ" ವೆಂಬ ಹೊಸ ಹೆಸರು ಕೊಟ್ಟು ಅದನ್ನು ಮೂರ್ತಿಗಳು ವಿವರಿಸುವುದು ನವೀನ ಪರಿಭಾಷೆ. ಕುವೆಂಪು, ಕಣವಿಯವರ ಕಾವ್ಯದ ಛಂದಸ್ಸನ್ನು ಅವರು ವಿಶ್ಲೇಷಿಸಿದ್ದಾರೆ. 'ಶ್ರೀರಾಮಾಯಣ ದರ್ಶನಂ'ನ ಛಂದಸ್ಸು ಸರಳೆರಗಳೆಗಿಂತ ತುಂಬ ಭಿನ್ನವಲ್ಲ ಎಂದು ವಾದಿಸಿದ್ದಾರೆ ಇಲ್ಲೆಲ್ಲಾ ಮೂರ್ತಿಗಳ ಒಳ ನೋಟ ಪ್ರಕಟವಾಗಿವೆ.

ಗ್ರಂಥ ಸಂಪಾದನೆಗೆ ಚಿದಾನಂದಮೂರ್ತಿಯವರ ಯಾವುದೇ ಪ್ರತ್ಯೇಕ ಪುಸ್ತಕವಿಲ್ಲ; ಅವರು ಯಾವ ಕಾವ್ಯವನ್ನು ಸಂಪಾದಿಸಿಲ್ಲ. ಕೆಲವು ಬಿಡಿ ಲೇಖನಗಳನ್ನು ಮಾತ್ರ ಬರೆದಿದ್ದಾರೆ. ಉತ್ತಂಗಿಯವರ ಸರ್ವಜ್ಞನ ವಚನಗಳ ಆವೃತ್ತಿಗಳು. ಅಂಬಿಗರ ಚೌಡಯ್ಯನ ವಚನವೊಂದರ ಪಾಠ ನಿರ್ಣಯ, 'ಪಂಪಭಾರತ', 'ಯಶೋಧರ ಚರಿತೆ', 'ಅಭಿನವ ದಶಕುಮಾರ ಚರಿತೆ'ಗಳ ಮೂಲ ಹಸ್ತಪ್ರತಿಯನ್ನು ಆಧರಿಸಿ ಆ ಕೃತಿಯ ಕೆಲವು ಪ್ರಚಲಿತ ಪಾಠಗಳ ದೋಷಗಳನ್ನು ಕುರಿತ ಅವರ ವಿವೇಚನೆ ಉಲ್ಲೇಖನೀಯ, ಗ್ರಂಥಸಂಪಾದನೆ'ಯ ಮಹತ್ವ, ಪ್ರಯೋಜನ, ಅವಶ್ಯಕತೆಗಳನ್ನು ವಿವರಿಸುವ ಅವರ ಇದೇ ಹೆಸರಿನ ಚಿಕ್ಕಲೇಖನ ಮೌಲಿಕವಾದದ್ದು. ರನ್ನನ 'ಗದಾಯುದ್ಧ'ದ 'ಪಸವಿನೊಳ್ ಅನ್ನಮಂ.....' ಎಂಬ ಚಂಪಕಮಾಲಾ ವೃತ್ತವನ್ನು ಪರಿಷ್ಕರಿಸಿ ಕೊಟ್ಟಿರುವುದಂತೂ ಅವರ ಪರಿಷ್ಕರಣ ಪ್ರತಿಭೆಗೆ ಶ್ರೇಷ್ಠ ಸಾಕ್ಷ್ಯ. ಈ ಬರಹಗಳನ್ನು ಓದಿದಾಗ ಈ ಎರಡೂ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಚಿದಾನಂದಮೂರ್ತಿ ಸ್ವತಂತ್ರವೂ ಪ್ರತ್ಯೇಕವೂ ಆದ ಗ್ರಂಥರಚನೆ ಮಾಡಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎನಿಸುತ್ತದೆ.

### ಸಾಹಿತ್ಯ ಚರಿತ್ರೆ

ತೀ. ನಂ. ಶ್ರೀಕಂಠಯ್ಯ ಅವರು ಚಿದಾನಂದಮೂರ್ತಿಗಳನ್ನು "ಕನ್ನಡ ಭಾಷಾ ಸಾಹಿತ್ಯಗಳ ನೈಷ್ಠಿಕ ವಿದ್ಯಾರ್ಥಿ" ಎಂದು ಮೆಚ್ಚಿದ್ದಾರೆ. ಅದರ ಸಮರ್ಥನೆ ಎಂಬಂತೆ ಮೂರ್ತಿಗಳು ಕನ್ನಡ ಸಾಹಿತ್ಯ ಚರಿತ್ರೆಯ ಕ್ಷೇತ್ರದಲ್ಲಿ ವಿಪುಲವಾಗಿ ಕೆಲಸ ಮಾಡಿದ್ದಾರೆ. ಕವಿರಾಜಮಾರ್ಗ ಕಾಲ ಕನ್ನಡ ಸಾಹಿತ್ಯದಿಂದ ಹಿಡಿದು ಈಚಿನ ಮುದ್ದಣ್ಣನವರೆಗೆ ಅವರ ಬರವಣಿಗೆ ವ್ಯಾಪಿಸಿದೆ. ಈ ಸಂಬಂಧವಾದ ಅವರ ಬರಹಗಳು ಏಳೆಂಟು ಪುಸ್ತಕಗಳಲ್ಲಿ ಹಂಚಿಹೋಗಿದೆ. 'ಸಂಶೋಧನ ತರಂಗ'ದ ಎರಡು ಸಂಪುಟಗಳು, 'ಲಿಂಗಾಯತ ಅಧ್ಯಯನಗಳು', 'ಹೊಸತು ಹೊಸತು' ಈ ದೃಷ್ಟಿಯಿಂದ ಮುಖ್ಯವಾದವು ವಚನ ಸಾಹಿತ್ಯಕ್ಕೆ ಸಂಬಂದಪಟ್ಟಂತೆ 'ಶೂನ್ಯ ಸಂಪಾದನೆ ಯನ್ನು ಕುರಿತು', 'ವಚನ ಸಾಹಿತ್ಯ', 'ವಚನ ಶೋಧ- ೧', 'ವಚನ ಶೋಧ -೨ ಎಂಬ ಪ್ರತ್ಯೇಕ ಪುಸ್ತಕಗಳನ್ನೇ ಪ್ರಕಟಿಸಿದ್ದಾರೆ. ಈ ಬರಹಗಳನ್ನು ಒಮ್ಮೆ ಕಣ್ಣುಹಾಯಿಸಿದರೆ ಅವರ ಪ್ರಧಾನ ಆಸಕ್ತಿ ವೀರಶೈವ ಸಾಹಿತ್ಯದ ಕತೆ ಎಂಬುದು ಸ್ಪಷ್ಟವಾಗುತ್ತದೆ.

ಚಿದಾನಂದಮೂರ್ತಿಗಳು ಎಂ.ಎ. ತರಗತಿಯಲ್ಲಿ ಓದುತ್ತಿರುವಾಗಲೇ ಪಂಪಕವಿ ಮತ್ತು ಮೌಲ್ಯಪ್ರಸಾರ ಎಂಬ ಲೇಖನ ಬರೆದು ಡಿ. ಎಲ್. ನರಸಿಂಹಾಚಾರ್ಯರ ಮೆಚ್ಚುಗೆ ಗಳಿಸಿದ್ದರು. ಆ ಬಳಿಕವೂ ಅವರು ಪಂಪನನ್ನು ಕುರಿತು ಬರೆದಿದ್ದಾರೆ. ಪಂಪಭಾರತ 943-44ರಲ್ಲಿ ರಚಿತ

ವಾಯಿತು, ಪ್ರಸಿದ್ಧವಾದ ಹಂಪೆಯೆಂಬ ಹೆಸರಿನಿಂದ ಪಂಪ ಬಂದಿದೆ, ಪಂಪನ ಯುಗಧರ್ಮ, ಪಂಪನಿಗೆ ದತ್ತಿಯಾಗಿ ಬಂದ ಧರ್ಮಪುರದ ಮೊದಲ ಹೆಸರು ಬೊಮ್ಮಲೂರು, ಧರ್ಮಪುರದಲ್ಲಿ ಎರಡು ಕೆರೆಗಳಿವೆ, ಕುರಿಕ್ಯಾಲ ಶಾಸನದ ಮೇಲೆ ಆದಿಪುರಾಣದ ಪ್ರಭಾವವಿದೆ ಮುಂತಾದ ಶೋಧಗಳನ್ನು 'ಹೊಸತು ಹೊಸತು'ನ ಐದಾರು ಲೇಖನಗಳಲ್ಲಿ ನಿರೂಪಿಸಿದ್ದಾರೆ. ಚಿಕ್ಕ ಚಿಕ್ಕ ವಿಷಯ ಗಳೂ ಸಾಹಿತ್ಯ ಚರಿತ್ರೆಯಲ್ಲಿ ಮುಖ್ಯ. ಎರಡನೆಯ ನಾಗವರ್ಮನ ವರ್ಧಮಾನ ಪುರಾಣದ ಹೆಸರು ಆಶ್ವಾಸಾಂತ ಗದ್ಯದಲ್ಲಿ ಬರುವಂತೆ ವೀರವರ್ಧಮಾನ ಪುರಾಣ, 'ಮಾಣಿಕಸ್ವಾಮಿ ಚರಿತ್ರೆ'ಯ ಕರ್ತೃವಿನ ಹೆಸರು ನಾಗವ ಅಲ್ಲ, ನಾಗನ, ಬಳ್ಳಿಗಾವೆಯಲ್ಲಿ 1065ರಲ್ಲಿ ಸ್ಥಾಪಿತವಾದ ತಾರಾಭಗವತಿಯ ಪರೋಕ್ಷ ಉಲ್ಲೇಖನ ಕಾರಣದಿಂದ 'ಸುಕುಮಾರ ಚರಿತೆ'ಯ ರಚನಾಕಾಲ 1066 -67 ಎಂದು ವಿಷಯಗಳನ್ನು ಅನೇಕ ಸಂಪ್ರಬಂಧಗಳಲ್ಲಿ ತೋರಿಸಿಕೊಟ್ಟಿದ್ದಾರೆ. ವೆಂಕಣ್ಣಯ್ಯನವರ ವಾದವನ್ನು ಪರಿಶೀಲಿಸುತ್ತ ಬೌದ್ಧರು ಕನ್ನಡದಲ್ಲಿ ಬರೆದಿರಲಿಲ್ಲ ಎಂದೇ ವಾದಿಸಿದ್ದಾರೆ. 'ಕವಿರಾಜಮಾರ್ಗಕ್ಕೆ ಹಿಂದಿನ ಕನ್ನಡ ಸಾಹಿತ್ಯ' ಎಂಬುದರಲ್ಲಿ ಬಾದಾಮಿ ಚಾಲುಕ್ಯರ ಕಾಲದಲ್ಲಿ ಉನ್ನತ ಸಾಹಿತ್ಯ ರಚನೆಯು ಆರಂಭವಾಯಿತು ಎಂದು ತರ್ಕಿಸಿದ್ದಾರೆ. ಈ ಸಂಬಂಧವಾದ ಅವರ ಬಹುಪಾಲು ಬರಹಗಳು 'ಹೊಸತು ಹೊಸತು'ನಲ್ಲಿ ಸಂಕಲನ ಗೊಂಡಿವೆ.

ವೀರಶೈವ ಸಾಹಿತ್ಯಕ್ಷೇತ್ರ ಚಿದಾನಂದಮೂರ್ತಿಯವರ ಆಡುಂಬೊಲ. ವಚನಸಾಹಿತ್ಯದ ಉಗಮದಿಂದ, ಆಧುನಿಕ ಪೂರ್ವಕಾಲದ ವೀರಶೈವ ಶಿಕ್ಷಣ ವ್ಯವಸ್ಥೆಯವರೆಗೆ ಅವರ ಬರಹ ವ್ಯಾಪಿಸಿದೆ. ಸ್ವತಂತ್ರ ಲೇಖನಗಳನ್ನು, ಪ್ರತ್ಯೇಕ ಪುಸ್ತಕಗಳನ್ನು ಈ ಸಂಬಂಧವಾಗಿ ಅವರು ಪ್ರಕಟಿಸಿದ್ದಾರೆ. ಈ ವಿಷಯವಾಗಿ ಅವರದು ಎಪ್ಪತ್ತೈದಕ್ಕೂ ಹೆಚ್ಚು ಲೇಖನಗಳಿವೆ. ವಚನಗಳನ್ನೇ ಆಧಾರವಾಗಿಟ್ಟುಕೊಂಡು ಅಲ್ಲಮನ ಸಾಧಕ ಜೀವನ, ಸಿದ್ಧರಾಮನ ಅಂತ ರಂಗದ ಚಲನವಲನಗಳು, ಬಸವಣ್ಣನವರ ಮಾನವತಾವಾದವನ್ನು ರೇಖಿಸು ತ್ತಾರೆ. ಅಲ್ಲಮನ ವಚನಗಳ ಅಂಕಿತ ಗೊಗ್ಗೇಶ್ವರ, ಬಳ್ಳಿಗಾವೆಯಲ್ಲಿ ಇರುವ ಅವಶೇಷಗಳೇ ಅವನ ಸಂಬಂಧದ ಗೊಗೋಶ್ವರಾಲಯ, ಅನಿಮಿಷನ ಗುಹೆ, ಅಕ್ಕನ ಗಂಡ ಕೌಶಿಕ ಇತಿಹಾಸದ ಕಸಪಯ್ಯನಾಯಕ ಎಂಬುದನ್ನು ಸ್ಥಾಪಿಸಿ ದ್ದಾರೆ. ಹರಿಹರನ ಕಾಲದೊಂದಿಗೆ ಹಂಪೆಯಲ್ಲಿ ಹರಿಹರನ ವಾಸಸ್ಥಾನ ಹರಿಹರನ ಹೂದೋಟ, ಚಾಮರಸನ ಆಶ್ರಯ, ಬೇಲೂರಿನಲ್ಲಿ ರಾಘವಾಂಕನ ಸಮಾಧಿ ಕಾವ್ಯದಲ್ಲಿ ಪಾಲ್ಕುರಿಕೆ ಸೋಮಾಥನ ಸಮಾಧಿಗಳನ್ನು ಕ್ಷೇತ್ರಶೋಧ ಮಾಡಿ ಗುರುತಿಸಿದ್ದಾರೆ. 'ಲಿಂಗಾಯತ ಅಧ್ಯಯನಗಳು', 'ಹೊಸತು ಹೊಸತು' ಈ ಸಂಬಂಧವಾದ ಅವರ ಬಹುಪಾಲು ಲೇಖನಗಳನ್ನು ಸಂಕಲಿಸಿಕೊಂಡಿವೆ. ತೀರ ಈಚೆಗೆ ಅವರು ಪ್ರಕಟಿಸಿದ 'ವಚನಶೋಧ ೧, ೨', ಮಹತ್ವಪೂರ್ಣ ಲೇಖನ ಸಂಕಲನಗಳು. ದಲಿತವರ್ಗದ ತುಂಬ ದೊಡ್ಡ ವಿದ್ವಾಂಸನಾದ ಉರಿಲಿಂಗ ಪೆದ್ದಿಯ ಜ್ಞಾನ ವ್ಯಾಸಂಗ ಕುರಿತು ಬಸವಣ್ಣನವರ ಮನೆಯಲ್ಲಿ ಸೇವಕಿಯಾಗಿದ್ದ ಗೌರವ್ವ, ಅಜಗಣ್ಣನ ವಚನಗಳ ಅಂಕಿತ ಮಹಾಘನ ಸೋಮೇಶ್ವರ, ಎಂಬುದನ್ನು ಮೊದಲಬಾರಿಗೆ ಶೋಧಿಸಿದ್ದಾರೆ ರೇಚದ್ದೆ, ರೇಕಮ್ಮ ಲದ್ದಿಯ ಸೋಮರಂಥ ಅಲಕ್ಷಿತ ವಚನಕಾರರ ಬಗ್ಗೆ ಪ್ರಸ್ತಾಪಿಸಿ ದ್ದಾರೆ. ಈ ಎಲ್ಲ ಲೇಖನಗಳು-ಚಿಕ್ಕವಿರಲಿ, ದೊಡ್ಡವಿರಲಿ-ಚಿದಾನಂದ ಮೂರ್ತಿಗಳ ಇತರ ಲೇಖನಗಳಂತೆ ಹೊಸತನದಿಂದ ಬೆಳಗುತ್ತವೆ.

ವೀರಶೈವ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಚಿದಾನಂದಮೂರ್ತಿಗಳು ಪ್ರಕಟಿಸಿದ ಮೊದಲನೆಯ ಪುಸ್ತಕ 'ಶೂನ್ಯಸಂಪಾದನೆಯನ್ನು ಕುರಿತು'. ಶೂನ್ಯಸಂಪಾದನೆಗಳಿಗೆ ಸಂಬಂಧಪಟ್ಟಂತೆ ಇಂದಿಗೂ ಅದೊಂದು ಮೌಲಿಕ ಗ್ರಂಥ, ಶೂನ್ಯ ಸಂಪಾದನೆಗಳು ನಾಲ್ಕು, ಅವುಗಳ ಪರಿಷ್ಕರಣಗಳಿಗೆ ಸಿದ್ಧರಾಮನ ಲಿಂಗದೀಕ್ಷೆಯ ಪ್ರಸಂಗ, ಅಲ್ಲಮನ ಜನನ ವೃತ್ತಾಂತ ಕಾರಣ - ಎಂಬುವನ್ನು ಮೂರ್ತಿಗಳು ಇಲ್ಲಿ ಸಾಧಾರಣವಾಗಿ ಸ್ಥಾಪಿಸಿದ್ದಾರೆ. ಅಕ್ಕಮಹಾದೇವಿಯ ವೃತ್ತಾಂತವನ್ನು ತುಲನಾತ್ಮಕವಾಗಿ ಪರಿಶೀಲಿಸಿದ್ದಾರೆ. ಈ ಪುಸ್ತಕದ ಬಹುಪಾಲು ಬರವಣಿಗೆಯನ್ನು ಹಸ್ತಪ್ರತಿಗಳನ್ನು ಅವಲಂಬಿಸಿ ಮಾಡಿದ್ದು ಒಂದು ವಿಶೇಷತೆ. ಈ ಪುಟ್ಟಕೃತಿ ಅನಂತರದ ಕಾಲದಲ್ಲಿ ಶೂನ್ಯ ಸಂಪಾದನೆಗಳ ಬಗ್ಗೆ ಹೆಚ್ಚಿನ ಸಂಶೋಧನೆಗೆ. ವ್ಯಾಪಕ ಅಧ್ಯಯನಕ್ಕೆ ಕಾರಣವಾಯಿತು. ಬೆಂಗಳೂರು ವಿಶ್ವವಿದ್ಯಾನಿಲಯದ ಸಾಮಾನ್ಯರಿಗೆ ಸಾಹಿತ್ಯಚರಿತ್ರೆ ಶ್ರೇಣಿಗೆ ಬರೆದ 'ವಚನ ಸಾಹಿತ್ಯ' ಈವರೆಗೆ ಕನ್ನಡದಲ್ಲಿ ಆ ಪ್ರಕರಣದ ಬಗ್ಗೆ ಬಂದಿರುವ ಮುಖ್ಯಕೃತಿಗಳಲ್ಲಿ ಒಂದು. ವಚನ ಸಾಹಿತ್ಯದ ಉಗಮ, ಹಿನ್ನೆಲೆ, ಪ್ರಮುಖ ವಚನಕಾರರು-ವಚನಕಾರ್ತಿಯರು, ಸಂಗೋಪನ ಮತ್ತು ಸಂಕಲನ ಯುಗಗಳು ಮುಂತಾದ ವಿಷಯ ಕುರಿತ ಹತ್ತು ಅಧ್ಯಾಯ ಗಳಿವೆ, ಈ ಪುಸ್ತಕದಲ್ಲಿ ಬರಿ ಹನ್ನೆರಡನೆಯ ಶತಮಾನದ ವಚನಸಾಹಿತ್ಯ ಮಾತ್ರವಲ್ಲದೆ, ವಿಜಯನಗರ ಕಾಲದ ವಚನ ಚಟುವಟಿಕೆಗಳನ್ನು ಇಲ್ಲಿ ಸಮೀಕ್ಷಿಸಿದೆ. ಬಸವಪೂರ್ವಯುಗದಲ್ಲೇ ಕೊಂಡಗುಳಿ ಕೇಶಿರಾಜ ಮುಂತಾ ದವರಿಂದ ನಡೆದ ಪ್ರಭುಸತ್ತೆಯ ವಿರೋಧ, ವರ್ಣಾಶ್ರಮ ವಿರುದ್ಧದ ಪ್ರತಿಭಟನೆಯ ದನಿಗಳನ್ನು ಇಲ್ಲಿ ವಿವರಿಸಿದೆ. ಪ್ರಮುಖ ವಚನಕಾರರಂತೆ, ಗೌಣ ವಚನಕಾರರನ್ನು ವಿಶ್ಲೇಷಿಸಿರುವುದು ಇದರ ವೈಶಿಷ್ಟ್ಯ.

ವಚನಸಾಹಿತ್ಯವನ್ನು ಸಂಸ್ಕೃತಿಯ ಒಂದು ಮಹತ್ವದ ಭಾಗವಾಗಿ ಪರಿಗಣಿಸಿ ಹಲವು ಲೇಖನಗಳನ್ನು ಮೂರ್ತಿಗಳು ಬರೆದಿದ್ದಾರೆ. ಶ್ವಪ ಚಯ್ಯನ ಕತೆಯ ಆಶಯ. ಹರಿಜನರಿಗಿದ್ದ ಹಿರಿಯಕುಲ ಹಿರಿಯಮಾಹೇಶ್ವರ ಎಂಬ ಹೆಸರುಗಳು, ಅಂತರ್‌ಜಾತೀಯ ವಿವಾಹದ ಬಗ್ಗೆ ಚನ್ನಬಸವಣ್ಣನ ವಚನ - ಈ ದೃಷ್ಟಿಯಿಂದ ಮುಖ್ಯವಾದುವು. ಅಸ್ಪೃಶ್ಯತಾ ನಿರ್ಮೂಲನತ್ವ ದಲಿತವರ್ಗದ ಏಳಿಗೆಗೆ, ಸಾಮಾಜಿಕ ಅನ್ಯಾಯಗಳ ಬಗ್ಗೆ ಮಧ್ಯಕಾಲೀನ ಕರ್ಣಾಟಕದಲ್ಲಿ ನಡೆದ ಆಂದೋಲನವನ್ನು ಕುರಿತಂತೆ 'ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ' ಎಂಬ ಮೂರು ಉಪನ್ಯಾಸಗಳ ಒಂದು ಪುಸ್ತಕವನ್ನೇ ಚಿದಾನಂದಮೂರ್ತಿ ಪ್ರಕಟಿಸಿದ್ದಾರೆ. ಸಾಹಿತ್ಯದಲ್ಲಿ ಸಾಹಿತ್ಯ ಚರಿತ್ರೆಯನ್ನು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಇಲ್ಲಿ ವಿವೇಚಿಸಿದೆ. ಮೊದಲ ಉಪನ್ಯಾಸದಲ್ಲಿ ವರ್ಣ - ಜಾತಿ, ಅಸ್ಪೃಶ್ಯ ಜಾತಿಗಳು, ಹದಿನೆಂಟು ಜಾತಿ ಗಳು, ಕರ್ಣಾಟಕದಲ್ಲಿ ಅವುಗಳ ಸ್ಥಾನಮಾನಗಳನ್ನು ಹಿನ್ನೆಲೆಯಾಗಿ ರೂಪಿಸಿದೆ, ಎರಡನೆಯ ಉಪನ್ಯಾಸದಲ್ಲಿ ಶಾಸನಗಳಲ್ಲಿ ಚಂಪೂ ಮತ್ತು ವಚನ ಸಾಹಿತ್ಯಗಳಲ್ಲಿ ಬರುವ ವರ್ಣ, ಜಾತಿ ಅಸ್ಪೃಶ್ಯತೆಗಳನ್ನು ; ಅವರ ವಸತಿ, ವೇಷಭೂಷಣ, ಆಹಾರ ಪಾನೀಯಗಳನ್ನು, ಜಾತಿ ಸಮಾನತೆ, ಮತಾಂತರ, ಅಂತರ್‌ಜಾತೀಯ ವಿವಾಹ ಪ್ರೇರಣೆಗಳನ್ನು; ಅಸ್ಪೃಶ್ಯ ವಚನಕಾರರ ದನಿ, ಧೋರಣೆ, ಆಶೋತ್ತರಗಳನ್ನು ವಿವರಿಸಿದೆ. ಮೂರನೆಯ ಉಪನ್ಯಾಸದಲ್ಲಿ ಹರಿಹರ, ರಾಘವಾಂಕ, ಭೀಮಕವಿಗಳ ರಚನೆಗಳನ್ನು, ಅವರ ಕಾವ್ಯಗಳಲ್ಲಿ ಬರುವ ಕೇಶಿರಾಜ, ಜೊಮ್ಮಣ್ಣ, ಮಾದಾರ ಚೆನ್ನಯ್ಯ ಶ್ವಪಚಯ್ಯರ ಕತೆಗಳನ್ನು 'ದಲಿತಪ್ರಜ್ಞೆ' ಯ ಹಿನ್ನೆಲೆಯಲ್ಲಿ ವಿವೇಚಿಸಿದೆ. ಲಿಂಗಾಯತ ಚಳವಳಿಯ ಪರಿಣಾಮಗಳನ್ನು ಈಚಿನ ಕೃತಿಗಳಲ್ಲಿ ಬಂದಿರುವ ಅಸ್ಪೃಶ್ಯತಾ ವಿವರಗಳ ವಿಶ್ಲೇಷಣೆಯನ್ನು ಕೊನೆಯಲ್ಲಿ ಅನುಬಂಧವಾಗಿ ಸೇರಿಸಿದೆ. ಇದೊಂದು ತುಂಬ ಬೆಲೆಬಾಳುವ ಸಾಂಸ್ಕೃತಿಕ ಅಧ್ಯಯನ. ಒಂದು

ಕಾಲದಲ್ಲಿ ತುಂಬ ಪ್ರಗತಿಪರವಾದ ಧ್ಯೇಯಗಳನ್ನಿಟ್ಟುಕೊಂಡು ನಡೆದ ಚಳವಳಿಯ ಸ್ವರೂಪವನ್ನು ಆಧಾರಗಳಿಂದ, ಒಳನೋಟಗಳಿಂದ ಇಲ್ಲಿ ಕಟ್ಟಿ ಕೊಡಲಾಗಿದೆ.

**ಜಾನಪದ**

ಚಿದಾನಂದಮೂರ್ತಿ ಜಾನಪದ ಕ್ಷೇತ್ರದಲ್ಲೂ ಕೆಲಸ ಮಾಡಿದ್ದಾರೆ. 'ಗ್ರಾಮೀಣ' ಹಾಗೂ 'ಪಗರಣ ಮತ್ತು ಇತರ ಸಂಪ್ರದಾಯಗಳು' ಎಂಬ ಎರಡು ಪುಸ್ತಕಗಳಲ್ಲಿ ಅವರ ಈ ಸಂಬಂಧವಾದ ಸಂಪ್ರಬಂಧಗಳು ಸಂಗ್ರಹಗೊಂಡಿವೆ. ಪ್ರತಿ ಸಂಕಲನದಲ್ಲಿ 19 ಸಂಪ್ರಬಂಧಗಳಿವೆ. ಪ್ರಾಚೀನ ಕರ್ನಾಟಕದ ಗಮಕ - ಗಮಕಿಗಳಿಂದ ಹಿಡಿದು, ಗುಲಾಮರ ಮಾರಾಟ ಗುಲಾಮಗಿರಿ ವಿಶೇಷಗಳವರೆಗೆ ಅದು ವ್ಯಾಪಿಸಿದೆ. ನಾಗಬೆತ್ತ, ಶೂಲದ ಹಬ್ಬ, ಒನಕೆವಾಡು, ಸೌಭಾಗ್ಯದಲಕ್ಷ್ಣಣ, ಹಾದಿದೆವ್ವದ ಆಟ, ಕುಪ್ಪಕುರಿ ಯೆಂಬ ಮಕ್ಕಳ ಆಟ, ಜಗ್ಗಲಗೆಗಳ ಬಗ್ಗೆ ಅವರು ಇಲ್ಲಿ ವಿವೇಚಿಸಿದ್ದಾರೆ. ಐನೋರು ಮತ್ತು ಕಾಲಿಲ್ಲದ ಐನೋರು ಬರಹದಲ್ಲಿ ಕುರುಬರಲ್ಲಿ ಪ್ರಚಲಿತ ವಾಗಿರುವ ಒಂದು ವಿಶಿಷ್ಟ ಪದ್ಧತಿಯನ್ನೆ ತಿಳಿಸಿಕೊಟ್ಟಿದ್ದಾರೆ. ದಂತಕತೆ, ಬೈಗುಳ, ಹಳ್ಳಿ, ಕರಪಲ್ಲಟ, ಐತಿಹ್ಯ, ಪುರಾಣಗಳ ಬಗ್ಗೆ ತುಂಬ ಹೊಸ ವಿಷಯಗಳನ್ನು ಹೇಳಿದ್ದಾರೆ. ಪಗರಣ, ಜೋಕುಮಾರ, ಮೈಲಾರ -ನೂಳವ, ಲೇಖನಗಳಲ್ಲಿ ಜಾನಪದ ಸಾಮಗ್ರಿಯನ್ನು ಪ್ರಾಚೀನ ಕನ್ನಡ ಸಾಹಿತ್ಯದ ಉಲ್ಲೇಖಗಳ ಹಿನ್ನೆಲೆಯಲ್ಲಿ ಮೂರ್ತಿಗಳು ವಿಶ್ಲೇಷಿಸಿ ನಮ್ಮ ಜಾನಪದ ಅಧ್ಯಯನಕ್ಕೆ ಹೊಸ ಆಯಾಮ, ಉಪಕ್ರಮಗಳನ್ನು ನೀಡಿದರು. ದಾಖಲೆ ಯಾಧಾರಿತ ಸಂಶೋಧನೆ ಮತ್ತು ಕ್ಷೇತ್ರ ಸಂಶೋಧನೆಗಳನ್ನು ಬೆರೆಸಿ ಇಲ್ಲಿ ಶೋಧಗಳನ್ನು ಹೊರಗೆಡವಲಾಗಿದೆ. ಜಾನಪದ ಸಂಶೋಧನೆಗೆ ಸಮಾಜ ವಿಜ್ಞಾನದ ಸಂಶೋಧನ ವಿಧಾನವನ್ನು. ಅಂತರ್‌ಶಾಸ್ತ್ರೀಯ ಅಧ್ಯಯನ ವ್ಯಾಪ್ತಿಯನ್ನು ಅಳವಡಿಸಿಕೊಟ್ಟವರು ಮೂರ್ತಿಗಳು. ಜಾನಪದ ಶಾಸ್ತ್ರದಲ್ಲಿ ಅಂತರಶಾಸ್ತ್ರೀಯ ಅಧ್ಯಯನ "ಕಬ್ಬಿಣದ ಒಂದು ನಿದರ್ಶನ" - ಎಂಬ ಅವರ ಲೇಖನ ಮೇಲಿನ ಮಾತಿಗೆ ಅತ್ಯುಚ್ಚ ನಿದರ್ಶನ ಕಬ್ಬಿಣದ ಬಗ್ಗೆ ಇರುವ ವಿವಿಧ ರಾಜ್ಯಗಳಲ್ಲಿಯ ನಂಬಿಕೆಗಳು, ಸಾಂಸ್ಕೃತಿಕ ಮಾನವ ವಿಜ್ಞಾನದಲ್ಲಿ ಅದರ ಬಗ್ಗೆ ಇರುವ ವಿವಿಧ ರಾಜ್ಯಗಳಲ್ಲಿಯ ನಂಬಿಕೆಗಳು, ಸಾಂಸ್ಕೃತಿಕ ಮಾನವವಿಜ್ಞಾನದಲ್ಲಿ ಅದರ ಬಗ್ಗೆ ನಡೆದಿರುವ ಸಂಶೋಧನೆ, ಭಾಷಾ ವಿಜ್ಞಾನದ ವಿವರಣೆಗಳು ಇವನ್ನು ಅವಲಂಬಿಸಿ ಅವರು ಸಂಶೋಧನೆ ಮಾಡಿ ದ್ದಾರೆ. ಜಾನಪದ ವಿಜ್ಞಾನದ ದೃಷ್ಟಿಯಿಂದ ಈ ಲೇಖನಗಳು ಮಹತ್ವ ಪೂರ್ಣವಾಗಿವೆ.

**ಶಾಸನ, ಕರ್ನಾಟಕ ಸಂಸ್ಕೃತಿ**

ಚಿದಾನಂದಮೂರ್ತಿಯವರು ತುಂಬ ದೊಡ್ಡ ಸಂಶೋಧಕರಾಗಿ, ವಿದ್ವಾಂಸರಾಗಿ ಹೆಸರು ಗಳಿಸಿದ್ದು ಈ ಕ್ಷೇತ್ರದಲ್ಲಿ ಕೆಲಸ ಮಾಡಿದ್ದರಿಂದಲೇ. ಆರಂಭದಲ್ಲಿ ಅವರು ಸಂಶೋಧನೆಯನ್ನು ಮಾಡತೊಡಗಿದ್ದು ಈ ಸಂಬಂಧ ವಾದ ವಿಷಯಗಳನ್ನು ಆರಿಸಿಕೊಂಡೇ ಅವರ ಸಂಶೋಧನ ತರಂಗದ ಎರಡೂ ಸಂಪುಟಗಳಲ್ಲಿ ಇಂಥ ಲೇಖನಗಳಿವೆ. ಪ್ರಾಚೀನ ಕರ್ನಾಟಕದಲ್ಲಿ ದಿವ್ಯ ಮತ್ತು ಮುಂಡಿಗೆ, ಬೇರೆ ಬೇರೆಯುಗಗಳಲ್ಲಿ ಶ್ರವಣ ಬೆಳುಗೊಳ, ಬಾದುಬ್ಬೆ, ಕೌಳರ ಪಾಳಿಧ್ವಜ - ಮಹಾಧ್ವಜ, ಯೂಪಸ್ತಂಭ, ಶಾಸನೋಕ್ತ ಮಹಾದಾನ ಗಳು. ಕೆಲವು ರಹಸ್ಯ ತಾಂತ್ರಿಕ ಪಂಥಗಳು - ಇವನ್ನು ಕುರಿತಂತೆ ಅವರ ಶೋಧಗಳು ಪ್ರಸಿದ್ಧವಾದವು ; ಹೆಚ್ಚು ಕಡಿಮೆ ಸ್ಥಾಪನೆಗೊಂಡಿರುವಂಥವು. ಇಲ್ಲೆಲ್ಲ ಅವರು ಅಪಾರವಾದ ಶಾಸನ ಮತ್ತು ಕಾವ್ಯಗಳಿಂದ ಉಲ್ಲೇಖ ಸಂಗ್ರಹಿಸಿ ವಿವೇಚಿಸಿದ್ದಾರೆ. ಅಪಾರವಾದ ಶ್ರಮ. ವಿಸ್ತಾರವಾದ ವ್ಯಾಸಂಗ. ತರ್ಕಬದ್ಧ ವಿಶ್ಲೇಷಣೆ, ಮಿಂಚಿನ ಪ್ರತಿಭೆಗಳಿಂದ ಈ ಸಂಪ್ರಬಂಧಗಳನ್ನು ಅವರು ಬರೆದಿದ್ದಾರೆ. ಸಾಹಿತ್ಯದ ಶಿಸ್ತಿಗೆ, ಇತಿಹಾಸದ ಶಿಸ್ತನ್ನು ಅಳವಡಿಸಿ ಪ್ರಾಚೀನ ಸಂಸ್ಕೃತಿಯ ಅಧ್ಯಯನ ಕೈಗೊಂಡಿರುವುದು ಈ ಪ್ರಬಂಧಗಳ ವೈಶಿಷ್ಟ್ಯ. ಕ್ರಿ. ಶ. 450ರಿಂದ ಕ್ರಿ. ಶ. 1150ರವರೆಗಿನ ಸಾವಿರಾರು ಶಾಸನಗಳನ್ನು ಅವಲಂಬಿಸಿ ರಚಿಸಿದ ಅವರ ಪಿ. ಎಚ್. ಡಿ ಪ್ರಬಂಧವಾದ' ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಸಂಸ್ಕೃತಿ ಶೋಧಕ್ಷೇತ್ರದ ಮಹಾ ಸ್ತಂಭ; ಆಕರಗ್ರಂಥ. ಶಾಸನಗಳ ಮೊತ್ತಮೊದಲ ಬಾರಿಗೆ ಇಲ್ಲಿ ನೂರಾರು ವಿಷಯಗಳ ಮೇಲೆ ಅವರು ಬೆಳಕು ಚೆಲ್ಲಿದ್ದಾರೆ. ವೇಳೆವಾಳಿ, ಲೆಂಕವಾಳಿ, ಸಹಗಮನ, ಸಮಾಧಿಮರಣ, ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನ, ತುರುಗೊಳ್, ಪೆಜ್ಜುಯ್ಯಲ್, ಊರರ್‌ವು, ಕಾಪಾಲಿಕ, ಕಾಳಾಮುಖ, ಕಾಳ, ಲಾಕುಳಶೈವ, ಗುರುವ ಮುಂತಾದ ನೂರಾರು ವಿಷಯಗಳ ಬಗ್ಗೆ ಅವರು ಚರ್ಚಿಸಿದ್ದಾರೆ. ಜೈನ, ಬೌದ್ಧ, ಶೈವ, ವೈಷ್ಣವ ಧರ್ಮಗಳ ಬಗ್ಗೆ ಕರ್ನಾಟಕ ದಲ್ಲಿ ಅವುಗಳ ಆಗಮನ, ಹಿನ್ನೆಲೆ, ಉಚ್ಛ್ರಾಯಕಾಲಗಳ ಬಗ್ಗೆ ಅವರ ಶೋಧಗಳು ಇಂದಿಗೂ ಅಮೂಲ್ಯ ಹಾಗೂ ಸ್ವೀಕಾರಾರ್ಹವೆನಿಸಿವೆ. ಕನ್ನಡ ನಾಡಿನ ಚರಿತ್ರೆ, ಧರ್ಮ, ಸಂಸ್ಕೃತಿಗಳನ್ನು ರಾಜಕೀಯ ವಿವರಹಿತವಾಗಿ ಮೊದಲು ನಿರೂಪಿಸಿದ್ದು ಪ್ರಾಯಃ ಇಲ್ಲೇ "ಮೊಟ್ಟ ಮೊದಲನೆಯ ಸಾರಿಗೆ ಕನ್ನಡ ಶಾಸನಗಳನ್ನು ಕುರಿತ ಸಾಂಸ್ಕೃತಿಕ ಅಧ್ಯಯನ ಕನ್ನಡದಲ್ಲಿ ಹೊರ ಬರುತ್ತಿದೆ. ಇಂಥ ಅಧ್ಯಯನ ಇತರ ಭಾರತೀಯ ಭಾಷೆಗಳಲ್ಲಿ ನಡೆದಿಲ್ಲ ವೆಂದೇ ಹೇಳಬಹುದು. ಇದರಿಂದ ಮತಧರ್ಮ ಆಡಳಿತ ವ್ಯವಸ್ಥೆ, ವಿದ್ಯಾಭ್ಯಾಸ, ಸಾಮಾಜಿಕ ವ್ಯವಸ್ಥೆ ಮೊದಲಾದ ಹಲವಾರು ವಿಷಯಗಳ ಮೇಲೆ ಹೊಸಬೆಳಕು ಚೆಲ್ಲಿದಂತಾಗಿದೆ. ಇದೊಂದು ಸಂಸ್ಕೃತಿಯ ವಿಶ್ವಕೋಶ..... ಈ ಕೃತಿ ಚಿದಾನಂದ ಮೂರ್ತಿಯವರ ನಿರ್ದುಷ್ಟವಾದ ಪಾಂಡಿತ್ಯಕ್ಕೂ ಸತ್ಯನಿಷ್ಠೆಗೂ ಪ್ರಖರ ಪ್ರತಿಭೆಗೂ ತಲಸ್ಪರ್ಶಿಯಾದ ವೈಚಾರಿಕ ಸಾಮರ್ಥ್ಯಕ್ಕೂ ನಿದರ್ಶನವಾಗಿದೆ" -ಎಂಬ ದೇ. ಜವರೇಗೌಡರ ಅಭಿ ಪ್ರಾಯ ಸಮುಚಿತವಾಗಿದೆ.

ಮೂರ್ತಿಗಳ ಸಾಂಸ್ಕೃತಿಕ ಸಂಶೋಧನೆ ಯಾವ ಯಾವ ಆಯಾಮ ಗಳನ್ನು ಪಡೆಯಬಹುದು ಎಂಬುದಕ್ಕೆ 'ಪೂರ್ಣಸೂರ್ಯಗ್ರಹಣ' ದ 'ಸಮಾಜೋ ಸಾಂಸ್ಕೃತಿಕ' ಅಧ್ಯಯನ ಒಂದು ನಿದರ್ಶನ. 1980ರ ಫೆಬ್ರವರಿ 16ರಂದು ಕರ್ನಾಟಕದಲ್ಲಿ ಸಂಭವಿಸಿದ ಪೂರ್ಣ ಸೂರ್ಯ ಗ್ರಹಣದ ನಿಮಿತ್ತವಾಗಿ ಈ ಕೃತಿ ರಚನೆಗೊಂಡಿತು. ಒಂದು ಘಟನೆಯ ಸುತ್ತ ಹುಟ್ಟಿ ಕೊಳ್ಳುವ ನಂಬಿಕೆ, ಸಂಪ್ರದಾಯ, ಆಚಾರ, ವಿಚಾರಗಳನ್ನು ಇಲ್ಲಿ ವಿಶದೀ ಕರಿಸಿದ್ದಾರೆ. ಗ್ರಹಣದ ಬಗ್ಗೆ ಸಾಹಿತ್ಯ, ವಿಜ್ಞಾನಗಳ ವಿವರ, ಗ್ರಹಣ ವರ್ಣನೆಗಳು - ನಂಬಿಕೆಗಳು ಇವನ್ನು ಕ್ಷೇತ್ರಕಾರ್ಯ, ಗ್ರಂಥೋಲ್ಲೇಖ, ಪ್ರಶ್ನಾವಳಿಗಳ ಮೂಲಕ ಸಂಗ್ರಹಿಸಿ ವಿಶ್ಲೇಷಿಸಿದ್ದಾರೆ. ಇಂಥ ಗ್ರಹಣದ ಬಗ್ಗೆ ವಿಜ್ಞಾನಿಗಳ ಹೇಳಿಕೆ, ಸಾಮಾನ್ಯರ ಪ್ರತಿಕ್ರಿಯೆ, ಸಮೂಹಮಾಧ್ಯಮಗಳ ಪ್ರಚಾರ - ಪಾತ್ರ ವಿವರಿಸಿದ್ದಾರೆ. ಗ್ರಹಣದ ಪ್ರತ್ಯಕ್ಷದರ್ಶನದ ಹಾಗೂ ಅವರ ಬಗ್ಗೆ ಮನುಷ್ಯ, ಪ್ರಾಣಿ, ಸಸ್ಯಗಳ ಪ್ರತಿಕ್ರಿಯೆ, ಗ್ರಹಣೋತ್ತರ ಪರಿಣಾಮ, ಸೂರ್ಯ ಸಂಬಂಧವಾದ ಸಾಹಿತ್ಯಗಳಿಂದ ಈ ಶೋಧ ವಿಶಿಷ್ಟ ವಾಗಿದೆ. ಈ ಪುಸ್ತಕ ನಿಜವಾಗಿ ಮೂರ್ತಿಗಳ ಪರಿಣತ ಅಂತರ್‌ಶಾಸ್ತ್ರೀಯ ಅಧ್ಯಯನ ಸಾಹಿತ್ಯ, ಧರ್ಮ, ಪುರಾಣ, ಇತಿಹಾಸ, ವಿಜ್ಞಾನ, ಖಗೋಳ

ವಿಜ್ಞಾನ, ಜಾನಪದ, ಸಮಾಜ ಶಾಸ್ತ್ರ - ಹೀಗೆ ನಾನಾ ಶಿಸ್ತುಗಳು ಇಲ್ಲಿ ಸಂಗಮಿಸಿವೆ. ಅಂತರ್‌ಶಾಸ್ತ್ರೀಯ ವ್ಯಾಸಂಗ. ಅಳವಡಿಕೆಗಳಿಂದ ಏನನ್ನು ಸಾಧಿಸಬಹುದು, ಶೋಧಿಸಬಹುದು ಎನ್ನಲು ಇದೊಂದು ಅತ್ಯುತ್ತಮ ಉದಾಹರಣೆ.

೪

ಕಳೆದ ದಶಕಗಳಿಂದ ಚಿದಾನಂದಮೂರ್ತಿ ಕನ್ನಡ - ಕರ್ನಾಟಕಗಳ ಉಳಿವಿಗೆ ಮಾಡುತ್ತಿರುವ ಹೋರಾಟ ಪ್ರತ್ಯೇಕ ಉಲ್ಲೇಖಕ್ಕೆ ಅರ್ಹ ವಾದದ್ದು ೧೯೮೨ರಲ್ಲಿ ಗೋಕಾಕ್ ವರದಿಯ ಜಾರಿಗೆ ಕನ್ನಡ ಸಾಹಿತಿಗಳು, ಕಲಾವಿದರು ಹೋರಾಟ ಹೂಡಿದರು. ಅದೇ ವರ್ಷದ ಏಪ್ರಿಲ್ ೧೩ರಂದು ಬೆಂಗಳೂರಿನಲ್ಲಿ 'ಸಾಹಿತಿಗಳ ಕಲಾವಿದರ ಬಳಗ' ಅಸ್ತಿತ್ವಕ್ಕೆ ಬಂದಿತು. ಚಿದಾನಂದಾ ಮೂರ್ತಿಯವರು ಕನ್ನಡ ಚಳವಳಿಯ ಹೊಸ ನಾಯಕರಾದರು. ಗೋಕಾಕ್ ಚಳವಳಿಯಲ್ಲಿ ಮೂರ್ತಿಗಳು ತೋರಿದ ಕ್ರಿಯಾಶೀಲತೆ, ಹಿರಿಯರನ್ನು ಕಿರಿಯರನ್ನು ಉತ್ತಾಹಿಸಿ ತಮ್ಮೊಂದಿಗೆ ಕೊಂಡೊಯ್ದ ರೀತಿ. ಮೌನ ಮೆರವಣಿಗೆ, ಧರಣಿ, ನಿರಶನ ಸಮಾವೇಶಗಳನ್ನು ಏರ್ಪಡಿಸಿದ ವಿಧಾನ ಕನ್ನಡ ಚಳವಳಿಗೆ ಹೊಸ ರೂಪ ವರ್ಚಸ್ಸು ಗೌರವಗಳನ್ನು ತಂದಿತ್ತವು. ಕನ್ನಡ ಚಳವಳಿಯ ಬಗ್ಗೆ ಜನಸಾಮಾನ್ಯರಲ್ಲಿದ್ದ ಕೀಳು ಮನೋಭಾವ ತೊಲಗಲೂ ಮೂರ್ತಿಗಳೇ ಕಾರಣ. ಚಳುವಳಿ ನಿಂತ ಮೇಲೂ ಸಾಹಿತಿಗಳ ಕಲಾವಿದರ ಬಳಗ ಮುಂದುವರಿಯಿತು ; ಕನ್ನಡಿಗರಲ್ಲಿ ಕನ್ನಡತನದ ಎಚ್ಚರ ಮೂಡಿಸಲು ಹರಡಲು ಕಾಪಾಡಲು ಸಂಕಲ್ಪಿಸಿತು. ಇದರ ಮುಂದಣ ಮಜಲಾಗಿ ಕನ್ನಡ ಶಕ್ತಿಕೇಂದ್ರವನ್ನು ೧೯೮೮ರಲ್ಲಿ ಚಿದಾನಂದಮೂರ್ತಿ ಅವರ ಕಾರ್ಯಾಧ್ಯಕ್ಷರಾಗಿ ಅಸ್ತಿತ್ವಕ್ಕೆ ತಂದರು. ಸಾಹಿತಿಗಳ ಕಲಾವಿದರ ಬಳಗದ ಕಾರ್ಯಕ್ಷೇತ್ರ ಬೆಂಗಳೂರಿಗೆ ಸೀಮಿತವಾಗಿತ್ತು ; ಕನ್ನಡ ಶಕ್ತಿ ಕೇಂದ್ರ ಕರ್ನಾಟಕದಾದ್ಯಂತ ವ್ಯಾಪಿಸಿದ ಸಂಘಟನೆ. ಈಗ ಜಿಲ್ಲಾ ಮಟ್ಟದಲ್ಲಿ ಇದರ ಶಾಖೆಗಳು ಆರಂಭವಾಗಿವೆ. ಕನ್ನಡದ ಕಾರಣಕ್ಕಾಗಿಯೇ ರಾಜ್ಯಾದ್ಯಂತ ವ್ಯಾಪಿಸಿದ ಏಕೈಕ ಸಂಘಟನೆ ಪ್ರಾಯಃ ಇದೊಂದೇ.

ಚಿದಾನಂದಮೂರ್ತಿಯವರ ದೊಡ್ಡ ಸಾಧನೆ ಕನ್ನಡಕ್ಕಾಗಿ ನಿಷ್ಠೆ. ಪ್ರಾಮಾಣಿಕತೆಗಳಿಂದ ದುಡಿಯುವ ಕಾರ್ಯಕರ್ತರನ್ನು ರೂಪಿಸಿದ್ದು, ಅವರ ಬಳಗ ಕಟ್ಟಿದ್ದು. ಅವರಲ್ಲಿ ಆತ್ಮವಿಶ್ವಾಸ ಮೂಡಲು, ಕನ್ನಡ - ಕರ್ನಾಟಕಗಳ ಬಗ್ಗೆ ಅರಿತು ಹೆಚ್ಚಲು 'ಮಾತುಗಾರಿಕೆ ಶಿಬಿರ'ಗಳನ್ನು ಅವರು ಏರ್ಪಡಿಸಿದರು. ಜನಸಾಮಾನ್ಯರಲ್ಲಿ ಕನ್ನಡತನ ಉಂಟಾಗಲು 'ಕನ್ನಡ ಸಂಸ್ಕೃತಿ : ನಮ್ಮ ಹೆಮ್ಮೆ' ಎಂಬ ಕಿರುಹೊತ್ತಗೆಯನ್ನು ಪ್ರಕಟಿಸಿದರು. ಈ ಪುಸ್ತಕ ಹಲವು ಮುದ್ರಣಗಳನ್ನು ಕಂಡಿತು. ಇದಾದ ನಂತರ ಶಕ್ತಿಕೇಂದ್ರದ ವತಿಯಿಂದ 'ಕನ್ನಡ - ಕನ್ನಡಿಗ -ಕರ್ನಾಟಕ' ಎಂಬ ತುಂಬ ಉಪಯುಕ್ತವಾದ ಅಂಕಿ - ಅಂಶಗಳನ್ನು, ಖಚಿತ ಮಾಹಿತಿಯನ್ನು ಒಳಗೊಂಡ ಪುಸ್ತಕವನ್ನು ಸಂಪಾದಕ ಮಂಡಳಿಯ ನೆರವಿನೊಂದಿಗೆ ಹೊರತಂದರು. "ಕನ್ನಡಿಗರ ಅನಧಿಕೃತ ಸಂವಿಧಾನ" ಎಂಬ ಪ್ರಶಂಸೆಗೆ ಅದು ಪಾತ್ರವಾಯಿತು. ಈ ದಿಕ್ಕಿನ ಅವರ ಚರಿತ್ರಾರ್ಹ ಸಾಧನೆ ಎಂದರೆ ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆ. ೧೯೮೫ರಲ್ಲಿ ಕಾಲ್ನಡಿಗೆಯ ಮೂಲಕ ಬೆಂಗಳೂರಿನಿಂದ ಹಂಪಿಗೆ ಪ್ರಯಾಣ ಮಾಡುವ ಸಂದರ್ಭದಲ್ಲಿ ಮೂರ್ತಿಗಳಿಗೆ ತಂಜಾವೂರಿನಲ್ಲಿ ತಮಿಳು ವಿಶ್ವವಿದ್ಯಾನಿಲಯ ಸ್ಥಾಪನೆಯಾಗಿರುವಂತೆ, ಕನ್ನಡಕ್ಕೆ ಏಕೆ ಒಂದು ಪ್ರತ್ಯೇಕ ವಿಶ್ವವಿದ್ಯಾನಿಲಯ ಅಸ್ತಿತ್ವಕ್ಕೆ ಬರಬಾರದು ಎನಿಸಿತು. ಸಾಹಿತಿಗಳ ಕಲಾವಿದರ ಬಳಗದ ಮೂಲಕ ಆಗಿನ ಮುಖ್ಯಮಂತ್ರಿ, ಸಚಿವಸಂಪುಟ, ಶಾಸಕರ, ಮೇಲೆ ಒತ್ತಾಯ ತಂದು ಅದರ ಸ್ಥಾಪನೆಗೆ ಓಡಾಡಿ ಮುಂದಿನ ಒಂದೆರಡು ವರ್ಷಗಳಲ್ಲಿ ಅದರ ಕಾರ್ಯಾರಂಭಕ್ಕೆ ಕಾರಣರಾದರು. ಕರ್ನಾಟಕದ ಭಾಷೆ, ಸಾಹಿತ್ಯ, ಇತಿಹಾಸ, ಭೂಶೋಧ, ಲಲಿತಕಲೆ, ಸಮಾಜ ಶಾಸ್ತ್ರ, ಜಾನಪದ, ಅರ್ಥಶಾಸ್ತ್ರ, ವಿಜ್ಞಾನ, ಸಮೂಹ ಮಾಧ್ಯಮ ಮುಂತಾದವುಗಳ ಅಧ್ಯಯನ ನಡೆಯಲು ಪೂರ್ಣಪ್ರಮಾಣದ ಉನ್ನತ ವಿಶ್ವವಿದ್ಯಾನಿಲಯವನ್ನು ಅಸ್ತಿತ್ವಕ್ಕೆ ತಂದು ಕನ್ನಡದ ಕೆಲಸಗಳಿಗೆ ಹೊಸ ಚಾಲನೆ ಕೊಟ್ಟರು.

ಕನ್ನಡ ಚಳುವಳಿಗೆ ಸಂಬಂಧಿಸಿದಂತೆ ಚಿದಾನಂದಮೂರ್ತಿಯವರ ಕೆಲಸ ಗಣ್ಯ ಹಾಗೂ ಗೌರವಪೂರ್ಣವಾಗಿವೆ. ಇದಕ್ಕೆ ಅವರ ಕರ್ನಾಟಕದ ವ್ಯಾಪಕ ಸುತ್ತಾಟ, ಕನ್ನಡ - ಕನ್ನಡಿಗರ ಕರ್ನಾಟಕದ ಸಮಸ್ಯೆಗಳ ತಲಸ್ಪರ್ಶಿಜ್ಞಾನ, ಸಾಹಿತಿ - ಸಂಶೋಧಕರ ಒಡನಾಟ, ಅದಮ್ಯ, ಉತ್ಸಾಹ, ಅಪಾರ ದುಡಿಮೆ, ಸ್ವಾರ್ಥದೂರವಾದ ಉದ್ದೇಶ, ಪ್ರಾಮಾಣಿಕತೆ, ಕಾರ್ಯಕರ್ತರ ಅಭಿಪ್ರಾಯಗಳಿಗೆ ಬೆಲೆಕೊಡುವ ಪ್ರಜಾಸತ್ತಾತ್ಮಕ ಗುಣವೇ ಕಾರಣವಾಗಿವೆ. ಕನ್ನಡ ಸಮಸ್ಯೆಗಳನ್ನು ಪರಿಶೀಲಿಸಿ ನಿವಾರಿಸಲೆಂದು ಪ್ರತಿಬುಧವಾರ ಕಾರ್ಯಕರ್ತರೊಂದಿಗೆ ಅವರು ಸಭೆ ನಡೆಸುವುದು ಕನ್ನಡ ಚಳವಳಿ ಚರಿತ್ರೆಯ ಭಾಗವಾಗಿದೆ. ಇಂಥವುಗಳಲ್ಲಿ ತಮ್ಮನ್ನು ಅವರು ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತಾರೆ. ಅವರ ನಿವೃತ್ತಿಜೀವನ ಕನ್ನಡ ಕೈಂಕರ್ಯಕ್ಕೆ ಮೀಸಲಾಗಿದೆ.

೫

ಚಿದಾನಂದಮೂರ್ತಿಯವರ ರಚನೆಗಳು ವಿವಿಧ ಪ್ರಶಸ್ತಿ, ಬಹು ಮಾನ, ಪುರಸ್ಕಾರಗಳಿಗೆ ಪಾತ್ರವಾಗಿವೆ ; ಅವರನ್ನು ಕನ್ನಡಿಗರು ವಿವಿಧ ಬಗೆಗಳಲ್ಲಿ ಗೌರವಿಸಿದ್ದಾರೆ. ಅವರ 'ಶೂನ್ಯಸಂಪಾದನೆಯನ್ನು ಕುರಿತು', 'ಸಂಶೋಧನ ತರಂಗ', 'ಪೂರ್ಣಸೂರ್ಯ ಗ್ರಹಣ' ಕೃತಿಗಳಿಗೆ ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿದೊರೆತಿದೆ 'ಭಾಷಾವಿಜ್ಞಾನದ ಮೂಲತತ್ವಗಳಿ'ಗೆ ದೇವರಾಜ ಬಹುದ್ದೂರ್ ಪ್ರಶಸ್ತಿ ಬಂದಿದೆ. 'ಗ್ರಾಮೀಣ'ಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ತೀ. ನಂ. ಶ್ರೀ ಸ್ಮಾರಕ ಬಹುಮಾನ, 'ಲಿಂಗಾಯತ ಅಧ್ಯಯನಗಳಿ'ಗೆ ಶಿವರಾತ್ರೀಶ್ವರ ದತ್ತಿ ಪ್ರಸಸ್ತಿ, ಅವರ 'ಹೊಸತು ಹೊಸತು' ಕೃತಿಗೆ ಪ್ರಶಸ್ತಿ ಬಂದಿದೆ. ಕನ್ನಡ ಸಾಹಿತ್ಯ ಪರಿಷತ್ತು ವಜ್ರಮಹೋತ್ಸವ ಗೌರವವನ್ನು (೧೯೭೮), ಕರ್ನಾಟಕ ಸಾಹಿತ್ಯ ಅಕಾಡೆಮಿ ತನ್ನ ಗೌರವವನ್ನು (೧೯೮೪), ಕರ್ನಾಟಕ ಸರ್ಕಾರ ರಾಜ್ಯೋತ್ಸವ ಪ್ರಶಸ್ತಿಯನ್ನು (೧೯೮೫), ಭೂಸನೂರ ಮಠ ಸ್ಮಾರಕ ಗೌರವವನ್ನು (೧೯೯೩), ಬಸವವೇದಿಕೆಯ 'ಸಾಹಿತ್ಯಶ್ರೀ' ಬಿರುದನ್ನು, ಅನಕೃ. ಪ್ರತಿಷ್ಠಾನ ತನ್ನ ಪ್ರಶಸ್ತಿಯನ್ನು (೧೯೯೯), ಗೋವಿಂದಪೈ ಸಂಶೋಧನ ಕೇಂದ್ರ ಸೇಡಿಯಾಪು ಪ್ರಶಸ್ತಿಯನ್ನು (೨೦೦೦) ಸಲ್ಲಿಸಿ ಮೂರ್ತಿಗಳನ್ನೂ ಅವರ ಸಾಹಿತ್ಯ ಸೇವೆಯನ್ನು ನೆನೆದಿವೆ. ಮೂರ್ತಿಗಳ ಶಿಷ್ಯರೂ. ಮಿತ್ರರ, ಅಭಿಮಾನಿಗಳೂ ೧೯೯೧ರಲ್ಲಿ 'ಸಂಶೋಧನ' ಎಂಬ ಬೃಹತ್ ಅಭಿನಂದನ ಗ್ರಂಥವನ್ನು ಅರ್ಪಿಸಿ ತಮ್ಮ ಪ್ರೀತಿ, ಗೌರವ, ಕೃತಜ್ಞತೆಗಳನ್ನು ವ್ಯಕ್ತಪಡಿಸಿದ್ದಾರೆ. ಅವರ ಹೆಸರಿನಲ್ಲಿ 'ಚಿದಾನಂದ ಪ್ರಶಸ್ತಿ' ಎಂಬುದನ್ನು ಸ್ಥಾಪಿಸಿ ಚಿದಾನಂದಮೂರ್ತಿಯವರ ಜನ್ಮದಿನವಾದ ಮೇ ಹತ್ತರಂದು ಪ್ರತಿವರ್ಷ ಕನ್ನಡ ಸಂಶೋಧನ ಕ್ಷೇತ್ರದಲ್ಲಿ ಕೆಲಸ ಮಾಡಿದ ವಿದ್ವಾಂಸರಿಗೆ ಅದನ್ನು ನೀಡುತ್ತ ಬಂದಿದ್ದಾರೆ. ಈ ಎಲ್ಲವೂ ನಾಡವರು ಅವರ ಬಗ್ಗೆ ಇಟ್ಟಿರುವ ಪ್ರೀತಿ ಅಭಿಮಾನಗಳ ಕುರುಹಾಗಿವೆ.

❑

# ಯು. ಆರ್. ಅನಂತಮೂರ್ತಿ

ಡಾ|| ನರಹಳ್ಳಿ ಬಾಲಸುಬ್ರಹ್ಮಣ್ಯ

೧

**ಭಾ**ರತಕ್ಕೊಂದು ಭವ್ಯಪರಂಪರೆಯಿದೆ. ಆ ಪರಂಪರೆಯ ಎಲ್ಲವೂ ಅತ್ಯುತ್ತಮ. ಅವೆಲ್ಲವನ್ನೂ ಈಗ ಪುನರುತ್ಥಾನ ಮಾಡಬೇಕು ಎನ್ನುವ ಭಾವುಕ ಹಿನ್ನೋಟದ ಪೌರಸ್ತ್ಯವಾದ ಒಂದು ಕಡೆ ; ಭಾರತದ ಇಡೀ ಭೂತಕಾಲವನ್ನು ಒಂದು ಘೋರೆಯೆಂಬಂತೆ ತಿರಸ್ಕರಿಸಬೇಕೆಂಬ ಸಂಕುಚಿತ ವೈಚಾರಿಕ-ವೈಜ್ಞಾನಿಕ ಯೋಚನೆಯ ಪಶ್ಚಿಮದ ಆಧುನಿಕ ಮನಸ್ಸು ಇನ್ನೊಂದು ಕಡೆ. ಸಾಂಪ್ರದಾಯಿಕ ಭಾರತೀಯ ಬದುಕಿಗೆ ಜ್ಞಾನವಿದೆ, ಆದರೆ ಅದು ಹಿಮ್ಮುಖದ ನೋಟವುಳ್ಳದ್ದು; ವೈಚಾರಿಕ-ವೈಜ್ಞಾನಿಕ ಪಶ್ಚಿಮ ಚೈತನ್ಯಶಾಲಿ, ಆದರೆ ಆತ್ಮರತ ಹಾಗೂ ಆತ್ಮ ನಿಷೇಧವೇ ಇರದ ಉಪಭೋಗದಿಂದ ಕೂಡಿದ್ದು. ಪೌರಸ್ತ್ಯ-ಪುನರುತ್ಥಾನ ವಾದೀ ಚಿಂತನೆಯಿರಲಿ, ಆಧುನಿಕ ಪಶ್ಚಿಮವಾಗಲೀ ಇವೆರಡೂ ಅಂತಿಮವಾಗಿ ನಮ್ಮನ್ನು ಸತ್ಯದ ದರ್ಶನದತ್ತ ಕೊಂಡೊಯ್ಯಲಾರವು. ಇವೆರಡೂ ಸೃಜನ ಶೀಲ ಅನ್ವೇಷಣೆಗೆ ಪ್ರತಿಕೂಲವಾದಂಥವು - ಹೀಗಾಗಿ ಸಂಪ್ರದಾಯ ವಾದಿಯ ಕರ್ಮಠತನದ ಹಠಮಾರಿತನವಾಗಲೀ, ಪರಂಪರೆಯ ಅರಿವಿಲ್ಲದ ಆಧುನಿ ಕತೆಯ ಸಿನಿಕತನವಾಗಲೀ ತಿರಸ್ಕಾರಯೋಗ್ಯ - ಎಂದು ನಂಬುವ ಯು. ಆರ್. ಅನಂತಮೂರ್ತಿ ನಮ್ಮ ಕಾಲದ ಶ್ರೇಷ್ಠ ಸೃಜನಶೀಲ ಚಿಂತಕ; ಸಾಮ್ರಾಜ್ಯಶಾಹಿ ಅನುಭವದ ಆಘಾತದಿಂದ ತತ್ತರಿಸಿದ ಭಾರತೀಯ ಮನಸನ್ನು ಸ್ವತಂತ್ರ ಚಿಂತನೆಗೆ ಒಡ್ಡಿಕೊಳ್ಳಲು ಹದಗೊಳಿಸುತ್ತಿರುವ ಪ್ರತಿಭಾವಂತ ಲೇಖಕ. ತಮ್ಮ ಕೃತಿಗಳ ಮೂಲಕ ನಮ್ಮನ್ನು ನಾವೇ ಒಳಹೊಕ್ಕು ನೋಡುವಂತೆ ಮಾಡುವ, ಸಮಕಾಲೀನ ವಾಸ್ತವ ದ್ವಂದ್ವಗಳಿಗೆ ನಮ್ಮನ್ನು ಕೈಹಿಡಿದು ಕರೆ ದೊಯ್ಯುವ ಆಪ್ತಸಂಗಾತಿ. ಏಕಕಾಲದಲ್ಲಿ ಒಳಗಿನವರಂತೆ ಆಪ್ತವಾಗಿಯೂ, ಹೊರಗಿನವರಂತೆ ವಿಶ್ಲೇಷಣಾತ್ಮಕ ವಾಗಿಯೂ ಸಮಕಾಲೀನ ಸಮಸ್ಯೆಗಳ ಬಗ್ಗೆ ಚಿಂತಿಸುವ ಅನಂತಮೂರ್ತಿ ಕನ್ನಡಸಂಸ್ಕೃತಿ ಕಂಡ ವಿಶಿಷ್ಟಪ್ರತಿಭೆ.

ಯು (ಉಡುಪಿ) ಆರ್ (ರಾಜಗೋಪಾಲಾಚಾರ್ಯ) ಅನಂತಮೂರ್ತಿ ಶಿವಮೊಗ್ಗ ಜಿಲ್ಲೆಯ ಮೇಳಿಗೆಯಲ್ಲಿ 1932 ಡಿಸೆಂಬರ್ 21ರಂದು ರಾಜ ಗೋಪಾಲಾಚಾರ್ಯ-ಸತ್ಯಮ್ಮ ದಂಪತಿಗಳ ಹಿರಿಯ ಮಗನಾಗಿ ಜನಿಸಿದರು. ಅವರ ತಾತ ಪದ್ಮನಾಭಾಚಾರ್ಯ ಅಂಗಿ ತೊಡದೆ ಧೋತ್ರ ಹೊದೆದು ಜುಟ್ಟಿನಲ್ಲಿ ತುಳಸಿ ಮುಡಿಯುತ್ತಿದ್ದ ಶುದ್ಧ ವೈದಿಕ ಬ್ರಾಹ್ಮಣ, ಸಾಹಸಪ್ರಿಯ, ಅಲೆಮಾರಿ. ತಂದೆ ರಾಜಗೋಪಾಲಚಾರ್ಯ ಆ ಕಾಲದಲ್ಲೆ ಲಂಡನ್ ಮೆಟ್ರಿಕ್ಯುಲೇಷನ್ ಹಾಗೂ ಸೀನಿಯರ್ ಕೇಂಬ್ರಿಜ್ ಪರೀಕ್ಷೆ ಕಟ್ಟಿ ಉತ್ತೀರ್ಣರಾದವರು. ಅರ್ಚಕ ರಾಗಿ, ಶ್ಯಾನುಭೋಗರಾಗಿ, ಅಕೌಂಟೆಂಟ್ ಆಗಿ, ಪೋಸ್ಟ್‌ಮಾಸ್ಟರ್, ಮಠದ ಪಾರುಪತ್ಯೇಗಾರ - ಹೀಗೆ ಹಲವು ಹುದ್ದೆಗಳಲ್ಲಿದ್ದು ವಿಶಿಷ್ಟ ವ್ಯಕ್ತಿತ್ವ ರೂಢಿಸಿ ಕೊಂಡವರು. ಗಾಂಧೀಜಿ, ಜೆ.ಪಿ.ರಾಜಾಜಿ ಇವರ ಅಭಿಮಾನಿ. ಇಂಗ್ಲಿಷ್ ಸಾಹಿತ್ಯವನ್ನು ಸಾಕಷ್ಟು ಓದಿಕೊಂಡವರು. ಗಾಂಧೀಜಿಯವರ 'ಹರಿಜನ' ಪತ್ರಿಕೆ ತರಿಸುತ್ತಿದ್ದವರು ; 'ಪುರುಷಸೂಕ್ತ'ವನ್ನು ಪಠಿಸುತ್ತಿದ್ದವರು. ಒಂದು ರೀತಿಯಲ್ಲಿ ರಾಜಗೋಪಾಲಾಚಾರ್ಯರು ಎರಡು ಪ್ರಪಂಚಗಳ ನಡುವೆ ಇದ್ದಂಥವರು. ಕೆಲವೊಮ್ಮೆ ಕ್ರಾಪು, ಮತ್ತೆ ಕೆಲವೊಮ್ಮೆ ಜುಟ್ಟು, ಇನ್ನು ಕೆಲವೊಮ್ಮೆ ಕ್ರಾಪು, ಜುಟ್ಟು ಎರಡೂ ಇರೋದು. ಮುಂದೆ ಅನಂತಮೂರ್ತಿಯವರ ಕೃತಿಗಳಲ್ಲಿ ಪ್ರಧಾನವಾಗಿ ಕಂಡುಬರುವ conflictಗಳಿಗೆಲ್ಲ ಮೂಲವನ್ನು ನಾವು ಇಲ್ಲಿಯೇ ಗುರ್ತಿಸಬಹುದಾಗಿದೆ. ತಂದೆ ರಾಜಗೋಪಾಲಾಚಾರ್ಯರಿಗೆ ಮಗ ಅನಂತ ಮೂರ್ತಿ ಗಣಿತಶಾಸ್ತ್ರಜ್ಞನಾಗಬೇಕೆಂಬ ಆಸೆಯಿತ್ತು. ಆದರೆ ಮಗನ ಮನಸ್ಸು ಸಾಹಿತ್ಯದತ್ತ ಒಲಿದಾಗ ಅದಕ್ಕೆ ಅಡ್ಡಿಯುಂಟುಮಾಡಲಿಲ್ಲ.

ಒಂದು ಕಡೆ ಮಠದ ಪರಿಸರ. ಅಲ್ಲಿ ನಡೆಯುತ್ತಿದ್ದ ಸಂಜೆಯ ದೀರ್ಘ ವಾದ ಪೂಜಾವಿಧಿಗಳು, ಕಾರ್ತೀಕಮಾಸದ ಹಬ್ಬಗಳು, ಹರಿಕಥೆಗಳು, ಪಾರಮಾರ್ಥಿಕ ಚರ್ಚೆಗಳು, ಸರಳವಾದ ಧಾರ್ಮಿಕ ಜೀವನ, ಜೊತೆಯಲ್ಲೇ ಜಾತಿ ಹೆಮ್ಮೆಯ ಉಸಿರುಕಟ್ಟಿಸುವ ವಾತಾವರಣ ; ಮತ್ತೊಂದು ಕಡೆ 'ಯುದ್ಧಭೂಮಿಯಲ್ಲಿ ಯುದ್ಧ ನಡೀತಾ ಇರೋವಾಗ್ಲೇನೆ ಶ್ರೀಕೃಷ್ಣ ಅರ್ಜುನ ನಿಗೆ ಗೀತೆ ಬೋಧಿಸೋದು ಹೇಗೆ ಸಾಧ್ಯ?' ಎಂದು ಪ್ರಶ್ನಿಸುತ್ತಿದ್ದ ರ್‍ಯಾಷನಲಿಸ್ಟ್ ಮೇಸ್ಟ್ರು ; ಬರ್ನಾರ್ಡ್‌ಷಾ ಮತ್ತು ನಿರೀಶ್ವರವಾದಿ ಇಂಗರ್‌ಸಾಲ್ ಬಗ್ಗೆ ಔಷಧಿಶಾಪಿನಲ್ಲಿ ವಿವರಿಸುತ್ತಿದ್ದ ಸಿನ್ಹಾ ಎಂದು ತನ್ನ ಹೆಸರನ್ನು ಆಧುನಿಕ ಗೊಳಿಸಿಕೊಂಡ ಶ್ರೀನಿವಾಸ ಜೋಯಿಸ್ ; ದಾಳಿಂಬೆ ಮರದಡಿ ಕುಳಿತು ತನ್ನ ಹೆಸರನ್ನು ಅವಳಿಮಕ್ಕಳಿಗೆ ಮೊಲೆಯೂಡಿಸುತ್ತ ಅದ್ಭುತ ಕತೆಗಳನ್ನು ಹೇಳುತ್ತಿದ್ದ ಅಬ್ಬಕ್ಕ ; ಸಂಸ್ಕೃತ ಹೇಳಿಕೊಡುತ್ತಿದ್ದ ಅಪರಿಗ್ರಹದ ನಿಷ್ಠಾಸಾಧಕರಾಗಿದ್ದ ಸದಾಶಿವಭಟ್ಟರು ; ಇಡೀ ಊರನ್ನು ಆಕ್ರಮಿಸಿ ಬಲಿ ತೆಗೆದುಕೊಳ್ಳುತ್ತಿದ್ದ ಪ್ಲೇಗ್ - ಈ ಎಲ್ಲವೂ ಅನಂತಮೂರ್ತಿಯವರ ವ್ಯಕ್ತಿತ್ವವನ್ನು ಬಾಲ್ಯದಲ್ಲಿ ಪ್ರಭಾವಿಸಿ ರೂಪಿಸಿರುವ ಸಂಗತಿಗಳು.

ಜಡ ಸಂಪ್ರದಾಯದ ನಡುವೆ ಅರಳುತ್ತಿದ್ದ ಮುಗ್ಧಮನಸ್ಸು, ಆ ಮುಗ್ಧಮನಸ್ಸನ್ನು ಗಾಢವಾಗಿ ಪ್ರಭಾವಿಸಿದ್ದ ರಹಸ್ಯಾತ್ಮಕ ಪಾರಮಾರ್ಥಿಕ ನಿಗೂಢ ಅನುಭವಗಳು, ಮುಗ್ಧತೆ ಕಳೆದು ಪ್ರಬುದ್ಧತೆ ಕಾಲಿಡಲು ಕಾರಣವಾದ ಆಧುನಿಕ ವಿಚಾರಗಳು - ಬಾಲಕ ಅನಂತಮೂರ್ತಿಯನ್ನು ಅನೇಕ ಗೊಂದಲಗಳ ನಡುವೆಯೂ ಕ್ರಿಯಾಶೀಲವಾಗಿಟ್ಟಿದ್ದ ಸಂಗತಿಗಳು.

ಅನಂತಮೂರ್ತಿಯವರ ಪ್ರಾಥಮಿಕ ವಿದ್ಯಾಭ್ಯಾಸ ಮೇಳಿಗೆ, ಕೋಣಂ ದೂರು, ತೀರ್ಥಹಳ್ಳಿ ಶಾಲೆಗಳಲ್ಲಿ ನಡೆಯಿತು. ನಂತರ ಇಂಟರ್ ಮೀಡಿಯಟ್ ಓದಲು ಶಿವಮೊಗ್ಗದ ಸರಕಾರಿ ಕಾಲೇಜು ಸೇರಿದರು. ಶಿವಮೊಗ್ಗದಲ್ಲಿದ್ದಾಗಲೇ ಕಾಗೋಡು ಸತ್ಯಾಗ್ರಹದಲ್ಲಿ ಅನಂತಮೂರ್ತಿ ಭಾಗಿಯಾದದ್ದು. ಇದು ಅವರ ಜೀವನದ ದಿಕ್ಕನ್ನೇ ಬದಲಿಸಿದ ಮಹತ್ವದ ಘಟನೆ. ಡಾಕ್ಟರ್ ಲೋಹಿಯಾರ ಕ್ರಾಂತಿಕಾರಕ ವೈಚಾರಿಕತೆ, ಶಾಂತವೇರಿಗೋಪಾಲಗೌಡರ ಆತ್ಮೀಯ ಒಡನಾಟ, ರಮಾನಂದ ಮಿಶ್ರ ಎಂಬ ಬಿಹಾರದ ರೈತ ನಾಯಕನ ಭಾಷಣ - ಇವೆಲ್ಲ ಅನಂತಮೂರ್ತಿಯ ಒಳಗಿಂದ ಚಿಂತಕನನ್ನು, ಬರಹಗಾರನನ್ನು ಬಡಿದೆಬ್ಬಿಸಿದ ಪ್ರೇರಣೆಗಳು.

ಮುಂದೆ ಅನಂತಮೂರ್ತಿ ಮೈಸೂರಿನಲ್ಲಿ ಬಿ.ಎ (ಆನರ್ಸ್) ಹಾಗೂ ಎಂ. ಎ (ಇಂಗ್ಲಿಷ್) ಪದವಿ ಪಡೆದು ಇಂಗ್ಲೆಂಡಿನ ಬರ್ಮಿಂಗಂ ವಿಶ್ವವಿದ್ಯಾ ಲಯದಿಂದ ಪಿಎಚ್.ಡಿ. ಪದವಿ ಪಡೆದರು. 1956ರಲ್ಲಿ ಹಾಸನದ ಸರ್ಕಾರಿ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇರಿದ ಅನಂತಮೂರ್ತಿ ನಂತರ ಮೈಸೂರಿನ ಮಹಾರಾಜ ಕಾಲೇಜು, ರೀಜನಲ್ ಕಾಲೇಜ್ ಆಫ್ ಎಜ್ಯುಕೇಷನ್‌ನಲ್ಲಿ ಕೆಲಕಾಲ ಕೆಲಸಮಾಡಿ ನಂತರ ಮೈಸೂರು ವಿಶ್ವ ವಿದ್ಯಾಲಯದ ಇಂಗ್ಲಿಷ್

ವಿಭಾಗ ಸೇರಿದರು. ರೀಡರ್ ಆಗಿ, ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿ, ಕೇರಳದ ಕೊಟ್ಟಾಯಂನ ಮಹಾತ್ಮಗಾಂಧಿ ವಿಶ್ವವಿದ್ಯಾಲಯದಲ್ಲಿ 1987ರಿಂದ 91ರವರೆಗೆ ಕುಲಪತಿಗಳಾಗಿ ಕಾರ್ಯನಿರ್ವಹಿಸಿದರು. ಯುಎಸ್ಎಯ ಅಯೋವಾ ವಿಶ್ವ ವಿದ್ಯಾಲಯ, ಟಫ್ಟ್ಸ್ ವಿಶ್ವವಿದ್ಯಾಲಯ, ಕೊಲ್ಹಾಪುರದ ಶಿವಾಜಿ ವಿಶ್ವ ವಿದ್ಯಾಲಯ, ದೆಹಲಿಯ ಜವಾಹರಲಾಲ್‌ನೆಹರೂ ವಿಶ್ವವಿದ್ಯಾಲಯ - ಮೊದಲಾದ ಕಡೆ ಸಂದರ್ಶಕ ಪ್ರಾಧ್ಯಾಪಕರಾಗಿದ್ದರು. ಅನಂತಮೂರ್ತಿ ನ್ಯಾಷನಲ್ ಬುಕ್‌ಟ್ರಸ್ಟ್ ಅಧ್ಯಕ್ಷರಾಗಿ, ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ.

ಅನಂತಮೂರ್ತಿಯವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ರವೀಂದ್ರಭಾರತಿ ವಿಶ್ವವಿದ್ಯಾಲಯದ ಗೌರವ ಡಿಲಿಟ್. ಪ್ರಶಸ್ತಿ, ಹಿಮಾಚಲ ಪ್ರದೇಶ ಸರಕಾರದ ಶಿಖರ್ ಸಮ್ಮಾನ ಪ್ರಶಸ್ತಿ, ಭಾರತ ಸರಕಾರದ ಪದ್ಮಭೂಷಣ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ - ಮೊದಲಾದ ಅನೇಕ ಪ್ರಶಸ್ತಿಗಳು ಸಂದಿವೆ.

೨

ಪ್ರಾಥಮಿಕ ಶಾಲಾ ವಿದ್ಯಾರ್ಥಿಯಾಗಿದ್ದ ಅನಂತಮೂರ್ತಿ ತನ್ನ ಗೆಳೆಯ ರೊಡನೆ 'ತರಂಗಿಣಿ' ಎಂಬ ಕೈಬರಹದ ಪತ್ರಿಕೆಯೊಂದನ್ನು ತರುತ್ತಿದ್ದರು. ಈ ಪತ್ರಿಕೆಯಲ್ಲಿ ಅನಂತಮೂರ್ತಿಯವರ ಮೊದಲ ಕತೆ ಪ್ರಕಟವಾಯಿತು. ಅದರ ವಸ್ತು : ಹರಿಜನರು ಪ್ಲೇಗಿನಿಂದ ಸಾಯತೊಡಗಿದಾಗ ಸುಂದರಿಯಾದ ಒಬ್ಬಳು 'ಅಸ್ಪೃಶ್ಯ' ಹುಡುಗಿ ಕೇರಿಯನ್ನು ತೊರೆದು ಓಡಿಹೋದದ್ದು. ಅದಕ್ಕೆ ಕಾರಣ ಸೈನ್ಯದಲ್ಲಿ ಕೆಲಸ ಮಾಡಿದ್ದ ಅಗ್ರಹಾರದ ಯುವಕನೊಬ್ಬ ಊರಿಗೆ ಮರಳಿ ಬಂದವನು ಆಕೆಯ ಜೊತೆ ಗುಪ್ತಸಂಬಂಧವನ್ನು ಇಟ್ಟುಕೊಂಡಿದ್ದ. ಮತ್ಸ್ಯ ಗಂಧಿಯಂತಿದ್ದ ಆ ಕಪ್ಪುಚೆಲುವೆ ಸ್ಪರ್ಶದಿಂದ ಜಾಗೃತಗೊಂಡು ಓಡಿ ಹೋದ ಳೆಂಬುದು ಕತೆಯ ಕೇಂದ್ರ. ಇಂಟರ್ ವಿದ್ಯಾರ್ಥಿಯಾಗಿದ್ದಾಗ ಶಿವಮೊಗ್ಗದ 'ಮಿತ್ರ' ಪತ್ರಿಕೆಯಲ್ಲಿ ಅನಂತಮೂರ್ತಿಯವರ ಕೆಲವು ಕತೆ, ಕವನಗಳು ಪ್ರಕಟವಾಗಿದ್ದವು. ನಂತರ 'ಚಿತ್ರಗುಪ್ತ', 'ಜನಪ್ರಗತಿ' ಪತ್ರಿಕೆಗಳಿಗೂ ಕೆಲವು ಕತೆಗಳನ್ನು ಅವರು ಬರೆದರು. ಅನಂತಮೂರ್ತಿಯವರಿಗೆ ಕತೆಗಾರ ಎಂಬ ಪ್ರಸಿದ್ಧಿ ತಂದುಕೊಟ್ಟಮೊದಲ ಕತೆ 'ಎಂದೆಂದೂ ಮುಗಿಯದ ಕತೆ', ಇದು ಮೈಸೂರಿನ 'ವಾರ್ಸಿಟಿ ಟೈಮ್ಸ್'ನಲ್ಲಿ ಪ್ರಕಟವಾಯಿತು. 1955ರಲ್ಲಿ ಇದೇ ಹೆಸರಿನಲ್ಲಿ ಗೋಪಾಲಕೃಷ್ಣ ಅಡಿಗರ 'ಮುನ್ನುಡಿ'ಯೊಡನೆ ಪ್ರಕಟ ವಾಯಿತು. ಆನಂತರ ನಾಲ್ಕು ಕಥಾಸಂಕಲನಗಳನ್ನು ಅವರು ಪ್ರಕಟಿಸಿದ್ದಾರೆ.

'ಎಂದೆಂದೂ ಮುಗಿಯದ ಕಥೆ' ಸಂಕಲನಕ್ಕೆ ಮುನ್ನುಡಿ ಬರೆದಿರುವ ಗೋಪಾಲಕೃಷ್ಣಅಡಿಗರು "ತಾಯಿ ಮತ್ತು ಹುಲಿಯ ಹೆಂಗರುಳು ಇಲ್ಲಿ ಇರುವ ಸಣ್ಣಕತೆಗಳಲ್ಲಿ ತಂತ್ರದ ದೃಷ್ಟಿಯಿಂದ ಅತ್ಯುತ್ತಮವಾದ ಕಥೆಗಳು ಎನ್ನ ಬಹುದು. ಇವು ಈ ಸಂಕಲನದಲ್ಲಿ ಮಾತ್ರವಲ್ಲ ನಮ್ಮ ಕಥಾಲೋಕ ದಲ್ಲೇ ಎರಡು ಉಜ್ವಲ ರತ್ನಗಳು. ಈ ಎರಡು ಕತೆಗಳನ್ನು ಬರೆದ ಸಾಹಿತಿ ಕೃತಕೃತ್ಯ, ಆತನನ್ನು ತರುಣ ಸಾಹಿತಿ ಎಂದು ಬೆನ್ನು ಚಪ್ಪರಿಸುವುದು ಅನಗತ್ಯ ಮಾತ್ರವಲ್ಲ ದಾರ್ಷ್ಟ್ಯವೂ ಆದೀತು" ಎಂದು ಹೇಳಿ ಅನಂತಮೂರ್ತಿಯವರನ್ನು ಅವರ ಮೊದಲ ಕಥಾಸಂಕಲನದಲ್ಲೇ ಪ್ರಬುದ್ಧ ಸಾಹಿತಿ ಎಂದು ಗುರ್ತಿಸಿ ಪ್ರಶಂಸಿಸಿ ದ್ದಾರೆ. ಅನಂತಮೂರ್ತಿಯವರ ಒಟ್ಟು ಕಥಾಸಾಹಿತ್ಯವನ್ನು ಇಂದು ಗಮನಿಸಿ ದಾಗ ಅಡಿಗರ ಮಾತುಗಳ ಮಹತ್ವದ ಅರಿವಾಗುತ್ತದೆ.

ಅನಂತಮೂರ್ತಿಯವರ ಮಹತ್ವದ ಕತೆಗಳನ್ನು ಕುರಿತಂತೆ ಜಿ. ಎಚ್. ನಾಯಕರು ಹೇಳುವ "ಪರಂಪರಾಗತ ಮೌಲ್ಯಗಳನ್ನು ವೈಯಕ್ತಿಕ ಅನುಭವಗಳ ಮುಖಾಮುಖಿಯಲ್ಲಿ ನಾನಾ ಛಾಯೆ, ಸ್ವರ, ಸಂದರ್ಭಗಳಲ್ಲಿಟ್ಟು ಪರೀಕ್ಷಿಸು ವುದು, ಶೋಧಿಸುವುದು ಅನಂತಮೂರ್ತಿಯವರ ಕಥೆಗಳಲ್ಲಿ ಕಾಣುವ ಮುಖ್ಯಅಂಶ. ಈ ಶೋಧನೆಯ ಪ್ರಕ್ರಿಯೆ ಮತ್ತು ಪರಿಣಾಮ ವೈಚಾರಿಕತೆಯ ಒಡಲಿನಿಂದಲೇ ಕೃತಿಗೊಳ್ಳಲು ನೋನುತ್ತಿರುವುದನ್ನು ಗುರುತಿಸಬಹುದು" ಎಂಬ ಒಳನೋಟ ಅನಂತಮೂರ್ತಿಯವರ ಕೃತಿಗಳನ್ನು ಅರ್ಥಮಾಡಿ ಕೊಳ್ಳುವಲ್ಲಿ ನೆರವು ನೀಡುತ್ತದೆ.

ಮೊದಲ ಕತೆ 'ಎಂದೆಂದೂ ಮುಗಿಯದ ಕಥೆ'ಯಲ್ಲಿಯೇ ಅನಂತ ಮೂರ್ತಿ ತಮ್ಮ ಸೃಜನಶೀಲತೆಯ ಸ್ವರೂಪದ ಹುಡುಕಾಟ ಆರಂಭಿಸಿದಂತೆ ತೋರುತ್ತದೆ. ಈ ಹುಡುಕಾಟ ಬದುಕಿನ ನಿರಂತರತೆ ಹಾಗೂ ಸಾಹಿತ್ಯದ ಅರ್ಥವಂತಿಕೆ ಎರಡನ್ನೂ ಒಳಗೊಂಡಂತೆ ರೂಪುಗೊಂಡಿರುವುದು ಅನಂತ ಮೂರ್ತಿಯವರ ಪ್ರತಿಭೆಯ ರೀತಿಯನ್ನೂ ನಮಗೆ ಪರಿಚಯ ಮಾಡಿ ಕೊಡು ತ್ತದೆ.

ಒಮ್ಮೆ ಮಕ್ಕಳು ಮೊಮ್ಮಕ್ಕಳಾಗಿದ್ದವರು ಈಗ ಅಜ್ಜ ಅಜ್ಜಿಯಾರಾಗಿ ದ್ದಾರೆ. ಅವರೀಗ ತಮ್ಮ ಮೊಮ್ಮಕ್ಕಳಿಗೆ ಕತೆ ಹೇಳುತ್ತಿದ್ದಾರೆ. ಆ ಕತೆ ಯಾದರೂ ಯಾವುದು? ತಮ್ಮ ಅಜ್ಜ ಅಜ್ಜಿಯರಿಂದ ಕೇಳಿದ ಕತೆ. ಬದುಕು ಮುಂದುವರಿದಂತೆ ಕತೆಯೂ ಮುಂದುವರಿಯುತ್ತದೆ. ಒಂದು ಕುಟುಂಬದ ಸಾಮಾನ್ಯ ಕತೆ ಇಡೀ ಬದುಕನ್ನು, ಸೃಷ್ಟಿಯನ್ನು ಒಳಗೊಂಡು ಬೆಳೆಯುವ ಕ್ರಮ ಆಶ್ಚರ್ಯಕರವಾಗಿದೆ. 'ಈ ಕಥೆ ಕೊನೆ ಮುಟ್ಟಿದರೆ - ಬೆಳಕಾಗಲ್ಲ, ಕತ್ತ ಲಾಗಲ್ಲ, ಮರದಲ್ಲಿ ಹಣ್ಣಾಗಲ್ಲ, ಗಿಡದಲ್ಲಿ ಹೂವಾಗಲ್ಲ - ಮೊಮ್ಮಕ್ಕಳಿಗೆ ಕಥೆ ಹೇಳೋ ಅಜ್ಜಿಯೋರೂ ಬದುಕಲ್ಲ'.

ಐವತ್ತರ ದಶಕ ಕನ್ನಡ ಸಾಹಿತ್ಯದಲ್ಲಿ ಹೊಸ ಸಂವೇದನೆಯ ಕಾಲ- ಮಾಸ್ತಿ ಸಂಪ್ರದಾಯ ಕನ್ನಡ ಸಣ್ಣಕತೆಗೆ ಒಂದು ಗಟ್ಟಿಯಾದ ಪರಂಪರೆಯನ್ನು ಕಲ್ಪಿಸಿತ್ತು. ಪ್ರಗತಿಶೀಲ ಚಳವಳಿ ಕಥಾಸಾಹಿತ್ಯದ ವಸ್ತುವಿನಲ್ಲಿ ಬದಲಾವಣೆ ತಂದಿತ್ತು. ಇವೆರಡು ಮಾದರಿಗಳಿಗಿಂತ ಭಿನ್ನರೀತಿಯಲ್ಲಿ ಅನಂತಮೂರ್ತಿ ಕಥಾರಚನೆಯಲ್ಲಿ ತೊಡಗಿಸಿಕೊಂಡದ್ದು ಕನ್ನಡ ಸಣ್ಣಕತೆಯ ಇತಿಹಾಸದಲ್ಲಿ ಬಹಳ ಮುಖ್ಯ ಸಂಗತಿ.

ಬದುಕಿನ ಭಾವಪೂರ್ಣ ಘಟನೆಗಳನ್ನು ವೈಚಾರಿಕತೆಯ ಒಡಲಿನಲ್ಲಿಟ್ಟು ಅದರ ಅರ್ಥವಂತಿಕೆಯನ್ನು ಅನ್ವೇಷಿಸುವ ಪ್ರಯತ್ನ ಆರಂಭದ ಕತೆಗಳಲ್ಲಿ ಕಂಡರೆ, ನಂತರದ ಕತೆಗಳಲ್ಲಿ ಅನಂತಮೂರ್ತಿಯವರ ವಸ್ತುಪ್ರಪಂಚ ವಿಸ್ತಾರವಾಗಿರುವುದನ್ನು ಕಾಣಬಹುದು. ಆಮೂರರು ಗುರ್ತಿಸಿರುವಂತೆ - ನವ್ಯಕತೆಗಾರರಲ್ಲಿ ಅನಂತಮೂರ್ತಿ ಪ್ರಮುಖಸ್ಥಾನ ಪಡೆದುಕೊಂಡಿದ್ದು ಅವರ 'ಪ್ರಶ್ನೆ' ಸಂಕಲನದಿಂದ. ಈ ಸಂಕಲನದ ಪ್ರಕೃತಿ, ಘಟಶ್ರಾದ್ಧ, ಕಾರ್ತೀಕ ಕತೆಗಳು ಕನ್ನಡದ ಶ್ರೇಷ್ಠಕತೆಗಳ ಸಾಲಿನಲ್ಲಿ ನಿಲ್ಲಬಲ್ಲಂಥವು. ಅನಂತಮೂರ್ತಿ ಯವರ ಯಶಸ್ವಿ ಕತೆಗಳು ತಮ್ಮ ಅರ್ಥವಂತಿಕೆಯನ್ನು ಪಡೆದುಕೊಳ್ಳಲು ಉಪಯೋಗಿಸುವ ಮುಖ್ಯ ತಂತ್ರವೆಂದರೆ - 'ಕಾರ್ತೀಕ'ದಲ್ಲಿರುವಂತೆ ವಾಸ್ತವ ಮತ್ತು ಸಾಂಕೇತಿಕ ಪಾತಳಿಗಳೆರಡರಲ್ಲಿಯೂ ಕ್ರಿಯೆಯನ್ನು ನಿರ್ವಹಿಸುವುದು.

ಭಿನ್ನ ಸಂಸ್ಕೃತಿಗಳ ಘರ್ಷಣೆ ; ಮನುಷ್ಯ ಮತ್ತು ಪರಿಸರದ ಸಂಬಂಧದ ಸಂಕೀರ್ಣತೆ ; ಜಡಸಂಪ್ರದಾಯ ಹಾಗೂ ಸೃಜನಶೀಲತೆಯ ಮುಖಾಮುಖಿ;

ಪರಂಪರಾಗತ ಬದುಕಿನಲ್ಲಿ ಆಧುನಿಕತೆಯ ಪ್ರವೇಶ ; ಕಟ್ಟುಪಾಡುಗಳನ್ನು ಮೀರಿ ಜಿಗಿಯುವ ಹಂಬಲ - ಈ ಎಲ್ಲ ಅಂಶಗಳೂ ಅನಂತಮೂರ್ತಿಯವರ ಕಥಾಸಾಹಿತ್ಯದಲ್ಲಿ ದಟ್ಟವಾಗಿ ಕಾಣಿಸಿಕೊಳ್ಳುತ್ತವೆ.

ನಮ್ಮ ಸಮಾಜ ಎದುರಿಸುತ್ತಿರುವ ಸಾಂಸ್ಕೃತಿಕ ಸಂಘರ್ಷದ ಸ್ವರೂಪ ವನ್ನು ಬಹುಮುಖೀ ನೆಲೆಯನ್ನು ತಮ್ಮ ಕತೆಗಳ ಮೂಲಕ ವಿಶ್ಲೇಷಿಸಲು ಪ್ರಯತ್ನಿಸುವ ಅನಂತಮೂರ್ತಿಯವರು ನಂತರದ ಹಂತದ ನವಿಲುಗಳು, ಸೂರ್ಯನ ಕುದುರೆ, ಅಕ್ಕಯ್ಯ ಮೊದಲಾದ ಕತೆಗಳಲ್ಲಿ ಮತ್ತೊಂದು ರೀತಿಯ ಬೆಳವಣಿಗೆಯನ್ನು ಸೂಚಿಸುತ್ತಾರೆ. ಪಾಶ್ಚಾತ್ಯಪ್ರಣೀತ ಆಕೃತಿಗಳೊಳಗೆ ಅಡಗಿ ಕುಳಿತಿರುವ, ದೇಸೀ ಆಕಾರಗಳನ್ನು ಏಕಾಗ್ರ ಮನಸ್ಥಿತಿಯ ನೆಲೆಯನ್ನು ಆಹ್ವಾ ನಿಸಿಕೊಳ್ಳುವ, ಮಾನವ ಜೀವನದ ಪರ್ಯಾಯ ಸಾಧ್ಯತೆಗಳನ್ನು ಅನ್ವೇಷಿಸುವ ಹೊಸ ಬಾಳಿನ ಹಂಬಲವನ್ನು ನಾವಿಲ್ಲಿ ಕಾಣುತ್ತೇವೆ.

ಜಿ. ಎಸ್. ಆಮೂರರ ಪ್ರಕಾರ ಸಣ್ಣಕತೆಯು ಅನಂತಮೂರ್ತಿಯವರಿಗೆ ವಿಶೇಷತಃ ಒಗ್ಗಿದ ಸಾಹಿತ್ಯ ಪ್ರಕಾರ. ಈ ಮಾಧ್ಯಮದಲ್ಲಿ ನಡೆಸಿದಷ್ಟು ಪ್ರಯೋಗಗಳನ್ನು ಅವರ ಕಾದಂಬರಿಗಳಲ್ಲಿ ನಾವು ಕಾಣಲಾರೆವು.

ಎಂದೆಂದೂ ಮುಗಿಯದ ಕತೆ, ಪ್ರಶ್ನೆ ಹಾಗೂ ಮೌನಿ, ಆಕಾಶ ಮತ್ತು ಬೆಳಕು ಹಾಗೂ ಸೂರ್ಯನ ಕುದುರೆ ಕಥಾಸಂಕಲನಗಳಲ್ಲಿ ಕಾಣುವ ಬೆಳವಣಿಗೆ ಅನಂತಮೂರ್ತಿಯವರ ಸೃಜನಶೀಲ ಪ್ರತಿಭೆ ಹೇಗೆ ಹೊಸ ಹುಡುಕಾಟದಲ್ಲಿ ನಿರಂತರ ತನ್ನನ್ನು ತೊಡಗಿಸಿಕೊಂಡಿದೆ ಎಂಬುದನ್ನು ಸೂಚಿಸುತ್ತದೆ. ಸಣ್ಣಕತೆಯ ಸಾಧ್ಯತೆಗಳನ್ನು ವಿಸ್ತರಿಸಿದ ಮಹತ್ವದ ಕತೆಗಾರ ಅನಂತಮೂರ್ತಿ ಎಂಬುದನ್ನು ಕನ್ನಡ ವಿಮರ್ಶೆ ನಿಸ್ಸಂದೇಹವಾಗಿ ಗುರ್ತಿಸಿದೆ.

೩

'ಸಂಸ್ಕಾರ' ಕಾದಂಬರಿ ಬರೆದ ಹಿನ್ನೆಲೆಯನ್ನು ಅನಂತಮೂರ್ತಿ ಹೀಗೆ ವಿವರಿಸಿದ್ದಾರೆ: "ನನಗೆ ಮೂವತ್ತು ವರ್ಷವಾಗಿದ್ದಾಗ ಇಂಗ್ಲೆಂಡಿನಲ್ಲಿ ಸ್ನಾತಕೋತ್ತರ ಪದವಿಗೆ ಓದುತ್ತಿದ್ದ ನಾನು ನನ್ನ ಅಧ್ಯಾಪಕರ ಜೊತೆ ಬರ್ಗ್ ಮನ್‌ನ ಒಂದು ಸಿನೆಮಾ 'ಸೆವೆಂತ್ ಸೀಲ್' (Seventh Seal) ನೋಡಲು ಹೋಗಿದ್ದೆ. ಈ ಚಿತ್ರದಲ್ಲಿ ಸಬ್‌ಟೈಟಲ್ ಇರಲಿಲ್ಲವಾದ್ದರಿಂದ ನಾನದನ್ನು ಮಸುಕು ಮಸುಕಾಗಿ ಅರ್ಥಮಾಡಿಕೊಂಡಿದ್ದೆ. ಕೆಲವೊಮ್ಮೆ ಸರಿಯಾಗಿ ಅರ್ಥ ಮಾಡಿಕೊಳ್ಳದಿರುವುದು ಸೃಜನಶೀಲತೆಗೆ ಕಾರಣವಾಗಬಹುದು. ನನ್ನ ಅಧ್ಯಾಪಕರಿಗೆ ಸಿನೆಮಾ ನೋಡಿದ ನಂತರ ಹೀಗೆ ಹೇಳಿದೆ - 'ಐರೋಪ್ಯನೊಬ್ಬ ತನ್ನ ಮಧ್ಯಯುಗವನ್ನು ಪುಸ್ತಕಗಳ ಮುಖೇನ ತಿಳಿದುಕೊಳ್ಳಬೇಕಾಗುತ್ತದೆ. ಐರೋಪ್ಯರ ಐತಿಹಾಸಿಕ ಕಾಲ ಸರಳ ರೇಖಾತ್ಮಕವಾಗಿ ಬೆಳೆದದ್ದು. ಆದರೆ ಭಾರತೀಯನಾದ ನನಗಾದರೋ ಎಲ್ಲ ಕಾಲವೂ ಒಂದೇ ಕಾಲದಲ್ಲಿ ಸಹಬಾಳ್ವೆ ಮಾಡುತ್ತವೆ. ಹೀಗೆ ನನಗೆ ಹೊಳೆದದ್ದೇ, ಹೈಸ್ಕೂಲು ದಿನಗಳಲ್ಲಿ ನಾನು ಬರೆದ ಕತೆಯನ್ನು ಮತ್ತೊಮ್ಮೆ ಬರೆಯುವಂತೆ ಮಾಡಿತು. ಅದೇ ನನ್ನ 'ಸಂಸ್ಕಾರ' ಕಾದಂಬರಿ".

ಅನಂತಮೂರ್ತಿಯವರ ಮಹತ್ವದ ಕತೆಗಳೆಲ್ಲ 'ಸಂಸ್ಕಾರ'ದಂಥ ಕೃತಿಯನ್ನು ಬರೆಯಲು ನಡೆಸಿದ ಪೂರ್ವಪ್ರಯತ್ನದ ತುಣುಕುಗಳಾಗಿವೆ (ಜಿ.ಎಚ್. ನಾಯಕ) ಅನಂತಮೂರ್ತಿ ಬರೆದದ್ದು ಒಂದೇ ಕತೆ, ಎಲ್ಲ ಮಹತ್ವದ ಲೇಖಕರಂತೆ ಅವರೂ ಬದುಕಿನ ಕೆಲವು ಮೂಲಭೂತ ಸಂಗತಿ ಗಳನ್ನು ಉದ್ದಕ್ಕೂ ಧ್ವನಿಸಿಕೊಂಡು ಬಂದಿದ್ದಾರೆ. ಅವು ಕೆಲವೊಮ್ಮೆ ಬೇರೆ ಬೇರೆ ವಿವರಗಳಲ್ಲಿ ಕಾಣಿಸಿಕೊಂಡಿವೆ. (ಟಿ. ಪಿ. ಅಶೋಕ) - ಮೊದಲಾದ ಅಭಿಪ್ರಾಯಗಳು ಒಂದು ರೀತಿ ಅನಂತಮೂರ್ತಿಯವರ ಅನುಭವದ್ರವ್ಯ ಹೆಚ್ಚು ಸಂಕೀರ್ಣ ನೆಲೆಯಲ್ಲಿ ಘನೀಕೃತವಾಗಿ 'ಸಂಸ್ಕಾರ' ಕಾದಂಬರಿಯಲ್ಲಿ ಅಭಿವ್ಯಕ್ತ ವಾಗಿರುವುದನ್ನು ಸೂಚಿಸುತ್ತದೆ.

ಭಾರತೀಯನೊಬ್ಬನ ಜೀವನ ಮಧ್ಯಯುಗಕ್ಕೆ ಸಹಜವಾದ ಧಾರ್ಮಿಕ ಆಚಾರಗಳಿಂದಲೂ, ಹತ್ತೊಂಬತ್ತನೇ ಶತಮಾನದ ಪೂರ್ವಾರ್ಧಕ್ಕೆ ಸಹಜವಾದ ಆರ್ಥಿಕ ಸಂಬಂಧಗಳಿಂದಲೂ, ಆದರೆ ಇಪ್ಪತ್ತನೇ ಶತಮಾನದ ಅತ್ಯಾಧುನಿಕ ವಿಚಾರಗಳಿಂದಲೂ ನಿತ್ಯಪ್ರೇರಿತವಾಗುತ್ತಿರುವುದರಿಂದ ಇವುಗಳಲ್ಲಿ ಯಾವು ದನ್ನು ನಿರ್ಲಕ್ಷಿಸದೆ, ಇಡಿಯಾಗಿ ಗ್ರಹಿಸಿ ಬರೆಯುವ ಕ್ರಮದ ಬಗ್ಗೆ ಅನಂತ ಮೂರ್ತಿಯವರಿಗೆ ಆಸಕ್ತಿ. ಅವರ ಕಾದಂಬರಿ 'ಸಂಸ್ಕಾರ'ದ ಹಿಂದೆಯೂ ಈ ಮನೋಭಾವವೇ ಕ್ರಿಯಾಶೀಲವಾಗಿರುವಂಥದು.

'ಸಂಸ್ಕಾರ' ಹಳೆಯ ಕಥಾವಸ್ತುವೊಂದನ್ನು, ಸನಾತನ ಪರಂಪರೆಯ ಪರಿಕಲ್ಪನೆಯನ್ನು ಸಮಕಾಲೀನಗೊಳಿಸುವ ಒಂದು ಕಾದಂಬರಿ. ಬ್ರಾಹ್ಮಣ್ಯ ವನ್ನು ಧಿಕ್ಕರಿಸಿದ ಬ್ರಾಹ್ಮಣನೊಬ್ಬನ ಸಾವು, ಆತನ ಶವಸಂಸ್ಕಾರದ ಸಮಸ್ಯೆ ಕಾದಂಬರಿಯ ಕೇಂದ್ರ. ಈ ಶವಸಂಸ್ಕಾರದ ಸಮಸ್ಯೆ ವ್ಯಕ್ತಿತ್ವದ 'ಸಂಸ್ಕಾರ' (ಪರಿವರ್ತನೆ)ವಾಗಿ ಪರಿವರ್ತನೆಗೊಳ್ಳುವ ಬಗೆ ಈ ಕಾದಂಬರಿಯ ವಸ್ತು ವಿನ್ಯಾಸ. ವೇದಾಂತಶಿರೋಮಣಿ ಪ್ರಾಣೇಶಾಚಾರ್ಯ, ಬ್ರಾಹ್ಮಣ್ಯ ಧಿಕ್ಕರಿಸಿದ ನಾರಣಪ್ಪ, ಇವು ಯಾವುದರ ಹಂಗೂ ಇಲ್ಲದೆ ಅಪ್ಪಟ ಲೌಕಿಕ ಬದುಕಿನ ಇಹದ ವ್ಯಕ್ತಿ ಮಾಲೇರ ಪುಟ್ಟ - ಈ ಮೂವರ ಬದುಕಿನ ಕ್ರಮಗಳು ಪರಸ್ಪರ ಮುಖಾಮುಖಿಯಾಗುತ್ತ ಸಂಸ್ಕಾರವೆಂಬುದು ಕೃತಿಯ ವಸ್ತುಮಾತ್ರವಲ್ಲದೆ, ಅದರ ಸ್ವರೂಪ ದರ್ಶನವೂ ಆಗಿಬಿಡುವ ಕ್ರಮ 'ಸಂಸ್ಕಾರ' ಕಾದಂಬರಿಯನ್ನು ಶ್ರೇಷ್ಠಕಲಾಕೃತಿಯಾಗಿಸಿದೆ. ಮುಂದೆ ಅನಂತಮೂರ್ತಿ ಒಂದು ವಾಗ್ವಾದವಾಗಿ ಬೆಳೆಸುವ ಬ್ರಾಹ್ಮಣ - ಶೂದ್ರ ಪರಿಕಲ್ಪನೆ ಸಂಸ್ಕಾರ ಕಾದಂಬರಿಯ ಪ್ರಾಣೇಶಾಚಾರ್ಯ, ಚಂದ್ರಿ - ಇವರ ಪಾತ್ರಗಳ ಸ್ವರೂಪದಲ್ಲೇ ಅಡಗಿರುವುದನ್ನು ನಾವು ಕಾಣಬಹುದು. ಸೃಜನಶೀಲ ನೆಲೆಯನ್ನು ಕಂಡುಕೊಂಡ 'ದರ್ಶನ' ಮುಂದೆ ವಿಚಾರದ ಆಕೃತಿ ಪಡೆದಂತೆ ತೋರುತ್ತದೆ.

1970ರಲ್ಲಿ 'ಸಂಸ್ಕಾರ' ಪಟ್ಟಾಭಿರಾಮರೆಡ್ಡಿ ಅವರ ನಿರ್ದೇಶನದಲ್ಲಿ ಚಲನಚಿತ್ರವಾಗಿ ನಾಡಿನಾದ್ಯಂತ ವಿಚಾರಕ್ರಾಂತಿಯನ್ನೆಬ್ಬಿಸಿತು. ರಾಷ್ಟ್ರಪತಿ ಯವರ ಸ್ವರ್ಣಪದಕವನ್ನು ಪಡೆದ ಈ ಕೃತಿ ಹೊಸ ಅಲೆಯ ಚಲನಚಿತ್ರ ಚಳುವಳಿಗೆ ಪ್ರೇರಣೆ ಒದಗಿಸಿತು.

'ಸಂಸ್ಕಾರ' ಕಾದಂಬರಿಯನ್ನು ಕನ್ನಡ ವಿಮರ್ಶೆ ಸಾಕಷ್ಟು ವಿವರವಾಗಿ ಚರ್ಚಿಸಿದೆ. ಮಾತ್ರವಲ್ಲ, ಅಮೆರಿಕದ ವಿಮರ್ಶಕ ಜಾನ್ ಪೆರ್ರಿ, ಖ್ಯಾತ ಮನಃ ಶಾಸ್ತ್ರಜ್ಞ ಎರಿಕ್ ಎರಿಕ್‌ಸನ್, ಸಮಾಜಶಾಸ್ತ್ರಜ್ಞ ಮದನ್, ಖ್ಯಾತ ಚಿಂತಕ ವಿ. ಎಸ್. ನೈಪಾಲ್, ಇಂಗ್ಲಿಷ್ ವಿಮರ್ಶಕಿ ಮೀನಾಕ್ಷಿ ಮುಖರ್ಜಿ, ಜರ್ಮನಿಯ ಶ್ರೀಮತಿ ಹೈಡ್ರುನ್ ಬ್ರೂಕ್ನರ್ - ಹೀಗೆ ಅನೇಕ ಪ್ರತಿಭಾವಂತ ಮನಸ್ಸುಗಳು ಸಂಸ್ಕಾರ ಕಾದಂಬರಿಗೆ ಸ್ಪಂದಿಸಿರುವುದನ್ನು ನಾವು ಕಾಣಬಹುದು.

'ಸಂಸ್ಕಾರ'ಕಾದಂಬರಿಗೆ ಬಂದ ಪ್ರತಿಕ್ರಿಯೆಗಳನ್ನು ಗಮನಿಸಿ ಅನಂತ ಮೂರ್ತಿಯವರು ವ್ಯಕ್ತಪಡಿಸಿರುವ ಪ್ರತಿಕ್ರಿಯೆನ್ನು ಇಲ್ಲಿ ದಾಖಲಿಸಬೇಕು : 'ನಮ್ಮ ಜಿಲ್ಲೆಯಲ್ಲಿ 'ಸಂಸ್ಕಾರ' ಕೃತಿಯು ಮಾಧ್ವರ ಮೇಲಿನ ಟೀಕೆಯಾಗಿ ಕಂಡರೆ, ನಮ್ಮ ದೇಶದಲ್ಲಿ ಅದು ಒಟ್ಟಾರೆ ಬ್ರಾಹ್ಮಣರ ಮೇಲಿನ ವ್ಯಂಗ್ಯವಾಗಿ ಕಂಡಿತು. ನಮ್ಮ ದೇಶದಿಂದ ದೂರವಿರುವ ನೈಪಾಲರಿಗೆ ಒಟ್ಟು ಹಿಂದೂ

ಧರ್ಮದ ವಿಶ್ಲೇಷಣೆಯಾಗಿ ನನ್ನ ಕೃತಿ ಕಂಡರೆ, ಖ್ಯಾತ ಮನೋವಿಜ್ಞಾನಿ ಎರಿಕ್ ಎರಿಕ್‌ಸನ್‌ರಿಗೆ ಶ್ರೇಷ್ಠ ನಿರ್ದೇಶಕ ಬರ್ಗ್‌ಮನ್ ನಂತೆಯೇ 'ಮಧ್ಯವಯಸ್ಸಿನ ಮನಸ್ಸಿನ ಕ್ಷೋಭೆಯನ್ನು ಕುರಿತು ನಾನೂ ಬರೆಯುತ್ತಿದ್ದೇನೆ, ಎನ್ನಿಸಿತು. ಹೀಗೆ ತನ್ನ ವಿವರಗಳ ವಿಶಿಷ್ಟತೆಯಲ್ಲಿ ನಿಜವಾಗಿಯೂ ಬದುಕಿದ್ದ, ನಮ್ಮೊಡನೆ ಇದ್ದ ವ್ಯಕ್ತಿಗಳನ್ನು ಕೇವಲ ನೆನಪು ಮಾಡಿಕೊಡುವ ಕೃತಿ ಮಾತ್ರವಾಗಿ 'ಸಂಸ್ಕಾರ' ನನ್ನೂರಿನ ಜನರ ಪಾಲಿಗೆ ಸೀಮಿತವಾಯಿತು. ಅವರು ಓದುವಾಗ ನಿಜ ವಾಗಿಯೂ ನನ್ನ ಕೃತಿಯನ್ನು ಓದಿಲ್ಲ, ಓದುತ್ತಿಲ್ಲ ಎಂದೇ ನಾನು ತಿಳಿದುಕೊಂಡಿದ್ದೇನೆ. ಆದರೆ ಕೃತಿಯ ಇನ್ನೊಂದು ತುದಿಯ ಧ್ವನಿಯನ್ನು ವಿಚಾರವಾಗಿ ಮಾತ್ರವಲ್ಲದೆ ವಿವರಗಳ ಮೂಲಕವೂ ಎರಿಕ್ ಎರಿಕ್‌ಸನ್‌ರಂತೆ ಹಿಡಿದವನು, ಕೃತಿಯ ಆಶಯಕ್ಕೆ ನಿಜವಾಗಿಯೂ ಹತ್ತಿರದವನಾಗಿದ್ದಾನೆ'.

ಅನಂತಮೂರ್ತಿಯವರದು ರೂಪಕ ಶೈಲಿ. ಅವರೇ ಹೇಳುವಂತೆ ಅನಂತಮೂರ್ತಿ ವಾಸ್ತವಮಾರ್ಗದ ಕಾದಂಬರಿಕಾರರಲ್ಲ, ಅವರ ಕೃತಿಗಳ ಶರೀರ ಸಾಂಕೇತಿಕವಾದದ್ದು. ಕಾವ್ಯಶಕ್ತಿಯಿಲ್ಲದ ಅಂದರೆ ಧ್ವನಿಶಕ್ತಿಯಿಲ್ಲದ ಗದ್ಯದ ಬಗ್ಗೆ ಅವರಿಗೆ ಮೆಚ್ಚುಗೆಯಿಲ್ಲ. ಹೀಗಾಗಿಯೇ ಅನಂತಮೂರ್ತಿ ಯವರು ತಮ್ಮ ಕಾದಂಬರಿಗಳನ್ನು ಕಟ್ಟುವ ಕ್ರಮದಲ್ಲಿ ವಾಸ್ತವ ರೂಪಕಗಳ ಒಡನಾಟ ಕೆಲವೊಮ್ಮೆ ಓದುಗನನ್ನು ಗೊಂದಲಕ್ಕೆ ತಳ್ಳುವುದೂ ಉಂಟು. ಕನ್ನಡ ವಿಮರ್ಶೆ ಈ ಅಂಶವನ್ನೂ ಚರ್ಚಿಸಿದೆ.

ಅನಂತಮೂರ್ತಿಯವರು 'ಸಂಸ್ಕಾರ'ದ ನಂತರ 'ಭಾರತೀಪುರ' 'ಅವಸ್ಥೆ' ಹಾಗೂ 'ಭವ' ಕಾದಂಬರಿಗಳನ್ನು ಬರೆದಿದ್ದಾರೆ. ಇವುಗಳಲ್ಲಿ 'ಸಂಸ್ಕಾರ' ಅತ್ಯಂತ ಯಶಸ್ವೀ ಕೃತಿಯೆಂದೂ, 'ಅವಸ್ಥೆ' ಆ ಬಗೆಯ ಯಶಸ್ಸು ಪಡೆಯಬಲ್ಲು ದೆಂದೂ, 'ಭಾರತೀಪುರ' ಅ ಯಶಸ್ವೀಕೃತಿಯೆಂದೂ, 'ಭವ' ಒಂದು ಪ್ರಯೋಗ ಶೀಲ ಕೃತಿಯೆಂದೂ ಸಾಮಾನ್ಯವಾದ ಅಭಿಪ್ರಾಯ ರೂಪುಗೊಂಡಿದೆ.

ಕೆ. ವಿ. ಸುಬ್ಬಣ್ಣನವರು ಅನಂತಮೂರ್ತಿಯವರ ಕಾದಂಬರಿಗಳನ್ನು ಒಟ್ಟಂದದಲ್ಲಿ ಗ್ರಹಿಸಿ ಮೊದಲ ಮೂರು ಕಾದಂಬರಿಗಳನ್ನು 'ಕಾದಂಬರಿ ತ್ರಿವಳಿ' ಎಂದು ಕರೆದಿದ್ದಾರೆ. ಭಾರತೀಪುರ ಕಾದಂಬರಿ - 'ಒಬ್ಬ ಭಾರತೀಯ ಸೋಶಲಿಸ್ಟ್ ಸುಧಾರಕನ ಕಥೆ ; ಆಧುನಿಕ ಪಾಶ್ಚಾತ್ಯ ವಿದ್ಯಾಭ್ಯಾಸ ಪಡೆದ ಇಂಡಿಯಾದ ತರುಣನೊಬ್ಬನ ತಲ್ಲಣಗಳ ಕಥೆ; ಸಮಾಜ ಸುಧಾರಣೆಯ ವಿಫಲ ಕತೆ'. ಅವಸ್ಥೆ - 'ಹಿಂದುಳಿದ ಜಾತಿಗಳಿಂದ ಮೇಲೆದ್ದು ಬಂದ ಉತ್ಸಾಹೀ ಪ್ರಾಮಾಣಿಕ ರಾಜಕೀಯ ನಾಯಕನೊಬ್ಬನು ಭ್ರಷ್ಟ ರಾಜಕಾರಣದ ಬಲೆಯಲ್ಲಿ ಸಿಲುಕಿ ಸೋಲುವ ಕಥೆ ; ರೈತ ಚಳುವಳಿಯ ರಾಜಕಾರಣದ ಸೋಲಿನ ಕಥೆ. 'ಭವ' ಕಾದಂಬರಿ - ಆಧುನಿಕ ಬದುಕಿನ ಸಮಸ್ಯೆಗಳನ್ನು ಅದರ ಆಯಸ್ಥಳ ಗಳಲ್ಲಿ ಮುಟ್ಟಿನೋಡಲು ಪ್ರಯತ್ನಿಸುತ್ತದೆ. ಬದುಕಿನ 'ಅನುರಕ್ತಿ - ವಿರಕ್ತಿ'ಗಳ ಸ್ವರೂಪವನ್ನು ಶೋಧಿಸಲು ಬಯಸುತ್ತದೆ. ಅನಂತಮೂರ್ತಿ ತಮ್ಮ ಸೃಜನಶೀಲತೆಯನ್ನು ಹೊಸ ಪ್ರಯೋಗಕ್ಕೆ ಒಡ್ಡಿಕೊಂಡು ಬರೆದ ಕೃತಿಯಾಗಿ 'ಭವ' ಕಾಣಿಸುತ್ತದೆ. ಹೊಸ ಮೌಲ್ಯಗಳ ಶೋಧ, ಕ್ರಾಂತಿಯ ವೈಫಲ್ಯ, ರಾಜಕೀಯ ಹಾಗೂ ನೈತಿಕತೆಯ ಪ್ರಶ್ನೆ, ಐಹಿಕ ಜೀವನದ ಆಹ್ವಾನಗಳು - ಅನಂತಮೂರ್ತಿಯವರ ಕಾದಂಬರಿಗಳಲ್ಲಿ ಪ್ರಧಾನವಾಗಿ ಚರ್ಚಿತವಾಗಿರುವ ಸಂಗತಿಗಳೆಂದು ಆಮೂರ್ ಗುರ್ತಿಸುತ್ತಾರೆ.

ಅನಂತಮೂರ್ತಿಯವರ ಕಾದಂಬರಿಗಳು ಸಮಕಾಲೀನ ವೈಯಕ್ತಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ಸೃಜನಶೀಲ ನೆಲೆಯನ್ನು ಚರ್ಚಿಸ ಬಯಸುವ ಮಹತ್ವದ ಪ್ರಯತ್ನಗಳಾಗಿ ಕಾಣಿಸುತ್ತವೆ.

೪

"ಕವಿತೆ ನನ್ನ ಪಾಲಿಗೆ ಕೆಲವು ಕಾಲ ಹಿಡಿದಿಟ್ಟು, ಬಿಟ್ಟು ಮತ್ತೆ ಬರಬಹು ದಾದ್ದು. ಐವತ್ತರ ದಶಕದಲ್ಲಿ ಕವಿತೆಯ ಗುಂಗಿನಲ್ಲಿದ್ದವ ಕಥೆಗಾರನಾದೆ. ಆದರೆ ಕಥೆಗಳಲ್ಲೂ ಕಾದಂಬರಿಯಲ್ಲೂ ಕವಿತೆಯನ್ನೇ ಬರೆದೆ. ನನ್ನ ಚಿಂತನೆಗಳೂ ಶಾಸ್ತ್ರದ ಶಿಸ್ತಿನವನದಲ್ಲ - ಕಾವ್ಯಕ್ಕೂ ಒಲಿದ ಮನಸ್ಸಿನವನದು. ಇದು ಹೆಚ್ಚುಗಾರಿಕೆಯ ಮಾತು ಅಲ್ಲ - ಅದು ನಾನಿರುವ ಅವಸ್ಥೆಯೆಂದು ನನ್ನ ಓದುಗರಿಗೆ ನಿವೇದಿಸುತ್ತಿದ್ದೇನೆ. ಹೀಗೆ ಕಾವ್ಯ ನನ್ನ ಭಾವವನ್ನು, ವಿಚಾರವನ್ನು ಸದಾ ನಿರ್ದೇಶಿಸುತ್ತಿದ್ದು ತನ್ನ ಶುದ್ಧ ಸ್ವರೂಪದಲ್ಲಿ ನನ್ನಿಂದ ಆಗಾಗ ಬರೆಸಿಕೊಳ್ಳುವುದಿದೆ". ಅನಂತಮೂರ್ತಿಯವರು ತಮ್ಮ ಕವನ ಸಂಕಲನವೊಂದರ ಪ್ರಸ್ತಾವನೆಯಲ್ಲಿ ಹೇಳಿರುವ ಮಾತುಗಳಿವು. ಆದ್ದರಿಂದಲೇ ಎಚ್. ಎಸ್. ವೆಂಕಟೇಶಮೂರ್ತಿಯವರು 'ತಮ್ಮ ಸಣ್ಣಕತೆ, ಕಾದಂಬರಿ ವಿಮರ್ಶೆಗಳಿಂದ ಹೊಸಗನ್ನಡ ಸಾಹಿತ್ಯದ ಅಗ್ರಮಾನ್ಯ ಲೇಖಕರೆನಿಸಿರುವ ಅನಂತಮೂರ್ತಿಯುರ ಅಂತರಂಗದ ಸಂಗಾತಿ ಮಾತ್ರ ಮೊದಲಿನಿಂದಲೂ ಕಾವ್ಯವೇ' ಎಂದು ಗುರ್ತಿಸಿದ್ದಾರೆ.

1963ರಲ್ಲಿ ಅನಂತಮೂರ್ತಿ 'ಬಾವಲಿ' ಕವನಸಂಕಲನ ಪ್ರಕಟಿಸಿದರು. ನಂತರ ಅದರಲ್ಲಿದ್ದ ಹತ್ತು ಕವಿತೆಗಳ ಜೊತೆಗೆ ಮತ್ತೈದು ಕವಿತೆಗಳನ್ನು ಸೇರಿಸಿ '15 ಪದ್ಯಗಳು' ಎಂಬ ಸಂಕಲನವನ್ನು 1970ರಲ್ಲಿ ಪ್ರಕಟಿಸಿದರು. 'ಅಜ್ಜನ ಹೆಗಲ ಸುಕ್ಕುಗಳು' 19 ವರ್ಷಗಳ ನಂತರ 1989ರಲ್ಲಿ ಪ್ರಕಟವಾಯಿತು. 1992ರಲ್ಲಿ 'ಮಿಥುನ' ಸಂಕಲನವನ್ನು ಅನಂತಮೂರ್ತಿ ಪ್ರಕಟಿಸಿದ್ದಾರೆ.

ಅನಂತಮೂರ್ತಿಯವರ ಕಾವ್ಯರಚನೆಗೆ ಸಂಬಂಧಿಸಿದಂತೆ ಒಂದು ಪ್ರಸಂಗವಿದೆ. 1957ರ ವೇಳೆ, ಇಪ್ಪತ್ತೈದರ ಯುವಕ ಅನಂತಮೂರ್ತಿ 'ರಾಜನ ಹೊಸ ವರ್ಷದ ಬೇಡಿಕೆಗಳು' ಎಂಬ ಕವಿತೆ ಬರೆದು ಅದನ್ನು ಅಡಿಗರಿಗೆ ತೋರಿಸಿದರಂತೆ. ಅಡಿಗರು ಅದನ್ನು ಓದಿ ಸುಮ್ಮನಾದರು. ಕೆಲವು ದಿವಸಗಳ ನಂತರ ಅಡಿಗರು 'ಪ್ರಾರ್ಥನೆ' ಎಂಬ ಕವಿತೆಯನ್ನು ಬರೆದು ಅನಂತಮೂರ್ತಿಗೆ ಓದಲುಕೊಟ್ಟರು. ಅನಂತಮೂರ್ತಿಗೆ ಆ ಕವಿತೆ ಓದಿ ಆಶ್ಚರ್ಯವಾಯಿತು. ತನ್ನ ಕವಿತೆಯದೇ ವಸ್ತು. ಅದರಿಂದಲೇ ಪ್ರೇರಣೆ ಪಡೆದಂತಿದೆ. ಆದರೆ ಅದಕ್ಕೂ ಇದಕ್ಕೂ ಹೋಲಿಕೆ ಎಲ್ಲಿ? ಅನಂತಮೂರ್ತಿ ಕವಿತೆಯ ವಸ್ತು ಅಡಿಗರಲ್ಲಿ ಅದ್ಭುತ ಆಕೃತಿ ಪಡೆದಿತ್ತು. ಆಗ ಅನಂತಮೂರ್ತಿಗೆ ಅನ್ನಿಸಿತಂತೆ - 'ಕಾವ್ಯ ನನ್ನ ಅಭಿವ್ಯಕ್ತಿ ಮಾಧ್ಯಮವಲ್ಲ' ಅಂತ. ಆ ನಂತರ ಅವರು ತಮ್ಮ ವ್ಯಕ್ತಿತ್ವವನ್ನು ಇಡಿಯಾಗಿ ಕಾವ್ಯರಚನೆಯಲ್ಲಿ ತೊಡಗಿಸಿಕೊಂಡಂತೆ ಕಾಣಿಸು ವುದಿಲ್ಲ. ಆದರೆ ಮೂಲತಃ ಕಾವ್ಯ ವ್ಯಾಮೋಹಿಯಾದ ಅನಂತಮೂರ್ತಿ ಯವರಿಂದ ಕವಿತೆ ತನ್ನನ್ನು ತಾನು ಬರೆಸಿಕೊಂಡಿದೆ. ಆ ಫಲವೇ ಅವರ ಕವಿತಾಸಂಕಲನಗಳು.

ಅನಂತಮೂರ್ತಿ ಕತೆಗಳನ್ನು ಕಾವ್ಯಶಕ್ತಿಯನ್ನು ತುಂಬಲು ಪ್ರಯತ್ನಿಸಿ ದಂತೆ ಕವಿತೆಗಳಲ್ಲಿ ಗದ್ಯದ ವಿಸ್ತಾರವನ್ನು ಹಿಡಿಯಲು ಪ್ರಯತ್ನಿಸಿದ್ದಾರೆಂದು ಅವರ ಸಮಗ್ರ ಕವಿತೆಗಳನ್ನು ಓದಿದಾಗ ಅನ್ನಿಸುತ್ತದೆ. ಅವರಿಗೆ ಲೋಕಾನು ಭವವೇ ಕಾವ್ಯವಸ್ತುವಲ್ಲ. ವಿಚಾರಗಳಿಗೂ ಆಕೃತಿ ನೀಡುವ ಹಂಬಲವನ್ನು ಅವರ ಕವಿತೆಗಳಲ್ಲಿ ನಾವು ಕಾಣುತ್ತೇವೆ.

ಅನಂತಮೂರ್ತಿ ಎರಡು ಕಾವ್ಯಮಾದರಿಗಳನ್ನು ತಮ್ಮ ಕವಿತೆಗಳಲ್ಲಿ ಮಂಡಿಸುತ್ತಾರೆ. ಒಂದು ಎಡುತಚ್ಚನ್ ಮಾದರಿ, ಮತ್ತೊಂದು ಭಟ್ಟತಿರಿಯ

ಮಾದರಿ. ಮಲಯಾಳಂನಲ್ಲಿ ಬರೆಯುವ ಎಡುತಚ್ಚನ್‌ಗೆ ಕಾವ್ಯ ಸಹಜ ಬದುಕಿನ ಉತ್ಪನ್ನ ; ಆದರೆ ಭಟ್ಟತಿರಿಗೆ ಹಾಗಲ್ಲ. ಕಾವ್ಯ ಪಾಂಡಿತ್ಯ ಮತ್ತು ಶ್ರದ್ಧೆಯ ಫಲ. ಅನಂತಮೂರ್ತಿಯವರ ಒಲವು ಇಲ್ಲಿ ಎಡುತಚ್ಚನ್ ಕಡೆಗೆ ಇದ್ದಂತಿದೆ. ಸ್ವಭಾವೋಕ್ತಿಯನ್ನೇ ಕಾವ್ಯದ ನೆಲೆಗೆ ಎತ್ತುವುದು ಅನಂತಮೂರ್ತಿಯವರ ಪ್ರಯತ್ನ. ಇಂಥ ಪ್ರಯತ್ನ ನಮ್ಮ ಜಾನಪದದಲ್ಲಿ ಅತ್ಯಂತ ಸಮರ್ಥವಾಗಿ ಮಂಡಿತವಾಗಿದೆ. ಒಪ್ಪಿತ ಕಾವ್ಯ ರೀತಿಯನ್ನು ಉದ್ದೇಶ ಪೂರ್ವಕ ವಿರೋಧಿಸುವ ರೀತಿಯಲ್ಲಿ ಕಾವ್ಯಬಂಧವನ್ನು ಕಟ್ಟುವ ಪ್ರಯತ್ನವನ್ನು ಅನಂತ ಮೂರ್ತಿ ಮಾಡುತ್ತಾರೆ.

ಋಷಿ ಮೂಲ ಹುಡುಕಕ್ಕೆ ಹೋಗಬಾರದು ಅಂತಾರೆ<br>
ಕೊನೆಗೊಬ್ಬ ಋಷಿಯಾಗಿ ಬಿಟ್ಟಿದ್ದ ರಾಯ್<br>
ತಾನೇ ಕಟ್ಟಿದ ಪಕ್ಷಾನ್ನ ಕಿತ್ತು ಬಿಸಾಕಿ<br>
ಪರಾರ್ಥದ ಸೋಗಿನ ಸ್ವಾರ್ಥಾನ್ನ, ಅದರ ಭೀಕರತೆಯನ್ನ<br>
ರ್‍ಯಾಷನಲ್ ಆಗಿ ಕಾಣೋದನ್ನ ಕಲಿಸಿ<br>
ಏಕಾಕಿಯಾಗಿ ನಿಲ್ಲೊ ಧೈರ್ಯಮಾಡಿ, ಕೆಲವರನ್ನಾದರೂ ಹಾಗೆ ನಿಲ್ಲಿಸಿ<br>
ಕೋಟು ಪ್ಯಾಂಟು ಶರ್ಟ್ ಟೈ ಅದರ ಪಿನ್ನು<br>
ಬಿಚ್ಚಿ. ಸರಳವಾಗಿ, ಸಹಜವಾಗಿ<br>
ಕಾಲವಾಗಿ ಹೋದ.

(ಗುರುರಾಯ)

ಗದ್ಯಗಂಧಿಯಾದ ಇಲ್ಲಿಯ ಲಯವನ್ನು ಅನಂತಮೂರ್ತಿ ತಾತ್ವಿಕತೆ ಹಾಗೂ ಅನುಭವ ಇವುಗಳ ಸಂಘರ್ಷವನ್ನು ಮಂಡಿಸಲು ಸಮರ್ಥವಾಗಿ ಬಳಸಿಕೊಳ್ಳುತ್ತಾರೆ.

'ಆವಾಹನೆ' ಅನಂತಮೂರ್ತಿಯವರು ಬರೆದಿರುವ ಏಕೈಕ ನಾಟಕ. 1968ರಲ್ಲಿ ಇದು ಪ್ರಕಟವಾಯಿತು. ಈ ನಾಟಕ ಮೈಸೂರಿನಲ್ಲಿ ಬಿ.ವಿ. ಸತ್ಯ ನಾರಾಯಣರಾವ್ ನಿರ್ದೇಶನದಲ್ಲಿ ಪ್ರದರ್ಶನ ಕಂಡಿದೆ (1969). ಆ ಪ್ರದರ್ಶನದಲ್ಲಿ ಅನಂತಮೂರ್ತಿ ಹಾಗೂ ಎಸ್ತರ್ ಅನಂತಮೂರ್ತಿ ಅಭಿನಯಿಸಿದ್ದರೆಂಬುದು ಇಲ್ಲಿ ದಾಖಲೆಗಾಗಿ ನಮೂದಿಸಿರುವ ಸಂಗತಿ ಕೆ. ಮರುಳಸಿದ್ದಪ್ಪ ಈ ನಾಟಕವನ್ನು ಕುರಿತು "ಭೂತಕಾಲದ ಘಟನೆಗಳಿಗೆ ಬದ್ಧನಾಗಿ ಅದರಿಂದ ಬಿಡಿಸಿಕೊಳ್ಳಲಾರದೆ, ತನ್ನ ನಿಜಸ್ವರೂಪವನ್ನು ಬಯಲಿಗಿಡಬೇಕೆಂದರೂ ಸಾಧ್ಯವಾಗದೆ, ಪಾಪಪ್ರಜ್ಞೆಯಿಂದ ಗುಪ್ತ ಅಪರಾಧಿಯಂತೆ ತೊಳಲುವ ಶ್ರೀನಿವಾಸನ ಹೋರಾಟ ಪ್ರಾತಿನಿಧಿಕವಾಗಿದೆ. ಸಂವೇದನೆಯನ್ನು ಕಳೆದುಕೊಂಡ ಪರಿಸರದೊಂದಿಗೆ ವ್ಯಕ್ತಿ ನಡೆಸುವ ಹೋರಾಟವೇ ಇಲ್ಲಿ ಮುಖ್ಯವೇ ಹೊರತು ಆತನ ಸೋಲು ಅಥವಾ ಗೆಲುವಲ್ಲ. ಅಸಹ್ಯಕರ ಪರಿಸರದೊಂದಿಗೆ ಹೊಂದಿಕೊಳ್ಳಲಾರದ, ಅದರ ನೆನಪನ್ನು ಅಳಿಸಿಹಾಕಿ ಸ್ವತಂತ್ರನೂ ಆಗಲಾರದ ಶ್ರೀನಿವಾಸನ ಹೊಯ್ದಾಟ ವನ್ನು ನಾಟಕಕಾರರು ಅತ್ಯಂತ ಯಶಸ್ವಿಯಾಗಿ ಮಂಡಿಸಿದ್ದಾರೆ". ಎಂದು ಅಭಿಪ್ರಾಯಪಟ್ಟಿದ್ದಾರೆ.

೫

ತಮ್ಮ ಹೊಸ ರೀತಿಯ ಆಲೋಚನೆಗಳಿಂದ, ವಿಚಾರಗಳಿಂದ ಕನ್ನಡ ಮನಸ್ಸನ್ನು ಜೀವಂತವಾಗಿಟ್ಟಿರುವ ಸೃಜನಶೀಲ ಚಿಂತಕ ಅನಂತಮೂರ್ತಿ. ಇದುವರೆಗೆ ಅವರು ಏಳು ವಿಮರ್ಶಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ವಾಗ್ವಾದಗಳನ್ನು ಹುಟ್ಟುಹಾಕುವುದರ ಮೂಲಕ ನಮ್ಮ ಸಂವೇದನೆಯನ್ನು ಕೆಣಕಿ ಚರ್ಚೆಗೆ ತಮ್ಮ ಸುತ್ತಮುತ್ತಲಿನ ಪರಿಸರವನ್ನು ಹದಗೊಳಿಸುವ ಕಾಯಕವನ್ನು ಅನಂತಮೂರ್ತಿ ಉದ್ದಕ್ಕೂ ಮಾಡಿಕೊಂಡು ಬಂದಿದ್ದಾರೆ. 'ಪ್ರಜ್ಞೆ - ಪರಿಸರ', 'ಸೃಜನಶೀಲತೆ- ತತ್ವಚಿಂತನೆ', 'ಶೂದ್ರ- ಬ್ರಾಹ್ಮಣ', 'ಜಗಲಿ -ಹಿತ್ತಿಲು' –ಹೀಗೆ ಅನೇಕ ಪರಿಕಲ್ಪನೆಗಳನ್ನು ಅನಂತಮೂರ್ತಿ ಕನ್ನಡ ಸಂಸ್ಕೃತಿಗೆ ನೀಡಿದ್ದಾರೆ.

ನಾಗರಿಕ, ಸುಸಂಸ್ಕೃತ, ಆರೋಗ್ಯಪೂರ್ಣ ಸಮಾಜದ ಸೃಷ್ಟಿಯಲ್ಲಿ ಸಾಹಿತ್ಯದ ಪಾತ್ರವೇನು, ಸಾಹಿತ್ಯದ ಅನನ್ಯತೆಯ ಸ್ವರೂಪವೇನು, ಸಾಂಸ್ಕೃತಿಕ ಬಿಕ್ಕಟ್ಟುಗಳ ಕಾಲದಲ್ಲಿ ಕಲಾವಿದ ತನ್ನ ಶಕ್ತಿಯನ್ನು ಹೇಗೆ ರಕ್ಷಿಸಿಕೊಳ್ಳುತ್ತಾನೆ - ಇತ್ಯಾದಿ ಪ್ರಶ್ನೆಗಳನ್ನು ಅನಂತಮೂರ್ತಿ ತಮ್ಮ ಚಿಂತನಾಕ್ರಮದಲ್ಲಿ ಮುಖಾಮುಖಿಯಾಗಿದ್ದಾರೆ. ಸಾಹಿತ್ಯಸೃಷ್ಟಿಯ ಅನನ್ಯತೆ, ಸಮುದಾಯ ಜೀವನದ ಆರೋಗ್ಯ ಇವೆರಡೂ ಅನ್ಯೋನ್ಯವೆಂದು ಅನಂತಮೂರ್ತಿ ಗಾಢವಾಗಿ ನಂಬಿ ಚಿಂತಿಸುತ್ತಾರೆ. ಅನಂತಮೂರ್ತಿಯವರ ಚಿಂತನೆಯ ವಿಸ್ತಾರ ಅಗಾಧವಾದದ್ದು. ಸಾಹಿತ್ಯ, ರಾಜಕೀಯ, ಸಂಸ್ಕೃತಿ, ಪರಂಪರೆ, ಆಧುನಿಕತೆ, ಪಾಶ್ಚಾತ್ಯಪ್ರಭಾವ, ಅನುಭಾವ, ಅರಿವಿನ ಸ್ಫೋಟ, ಸ್ವಾತಂತ್ರ್ಯದ ಪರಿಕಲ್ಪನೆ, ಹೀಗೆ ಅನೇಕ ಸಂಗತಿಗಳನ್ನು ಅವರ ವೈಚಾರಿಕ ಬರಹ ಒಳಗೊಂಡಿದೆ– ಅನಂತಮೂರ್ತಿ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೂ ಸಣ್ಣಕತೆ ಹಾಗೂ ವೈಚಾರಿಕ ಬರಹಗಳಲ್ಲಿ ಅವರ ಸಾಧನೆ ಅತ್ಯಂತ ಮಹತ್ವದ್ದು.

ಅರ್ಥಶಾಸ್ತ್ರಜ್ಞರಿಗೂ, ಸಮಾಜವಿಜ್ಞಾನಿಗಳಿಗೂ ಇರುವ ವಸ್ತುನಿಷ್ಠ ವಿಶ್ಲೇಷಣೆಯ ಸಾಮಗ್ರಿ ಸಾಹಿತಿಯದಲ್ಲ. ರಾಜಕೀಯದ ಉಪಾಯಗಾರರಿಗೆ ಗೊತ್ತಿರುವ ತಮ್ಮ ಇಚ್ಛಾಶಕ್ತಿಗೆ ಬೇಕಾದಂತೆ ಜನರನ್ನು ಉಪಯೋಗಿಸುವ ಕಲೆ ಸಾಹಿತಿಯದಲ್ಲ. ನಮ್ಮನ್ನು ಮೆಚ್ಚಿದವರು ಬಯಸುವ ಸಾರ್ವಜನಿಕ ವ್ಯಕ್ತಿಗಳಾಗಿ ನಾವು ಆಗಿ ಬಿಡಬಾರದು. ತನ್ನ ಪ್ರತಿಯೊಂದು ಹೊಸ ಕೃತಿಯಲ್ಲೂ ತನ್ನನ್ನು ಮೆಚ್ಚಿಕೊಂಡ ಮಂದಿಯಲ್ಲಿ ಕೆಲವರನ್ನಾದರೂ ಕಳೆದುಕೊಳ್ಳದ ಲೇಖಕ ಎಲ್ಲೋ ಸುಳ್ಳಾಗುತ್ತಿದ್ದಾನೆ ಎನ್ನುವ ಅನುಮಾನ ನಮಗಿರಬೇಕು. ಆಳುವ ವರ್ಗದ ರಾಷ್ಟ್ರಕವಿಯಾಗುವುದಾಗಲೀ, ರಾಜಕೀಯ ಪಕ್ಷದ ವಕ್ತಾರರಾಗುವುದಾಗಲೀ ಈ ಕಾರಣದಿಂದ ಲೇಖಕನಿಗೆ ಅಪಾಯಕಾರಿಯಾದದ್ದು - ಎನ್ನುವ ಅನಂತಮೂರ್ತಿ 'ಸಮೂಹಸನ್ನಿ'ಯಿಂದ ಯಾವಾಗಲೂ ದೂರವಿದ್ದು ಚಿಂತಿಸುವ ಲೇಖಕ. ವಾಗ್‌ವೈಭವ ಅಪಾಯಕಾರಿ, ಅದು ಸಮೂಹವನ್ನು ಉದ್ರೇಕಗೊಳ್ಳುವುದಕ್ಕಾಗಿ ರೂಪಿತವಾದದ್ದು. ಸುಳ್ಳುಗಳನ್ನು ಕೇಳಿಸಿಕೊಳ್ಳುತ್ತ, ಬದುಕುವುದು ಸಾಮಾನ್ಯವಾಗಿ ಎಲ್ಲರಿಗೂ ಹಿತವೆನ್ನಿಸುತ್ತದೆ, ಕ್ಷೇಮವೆನ್ನಿಸುತ್ತದೆ. ಆದರೂ ಜನರ ಆತ್ಮ ಸತ್ಯಕ್ಕಾಗಿ ಹಸಿದಿರುತ್ತದೆ. ಆದ್ದರಿಂದ ನಾವು ನಮ್ಮ ಅತ್ಯಂತ ಏಕಾಂಗಿತನದಲ್ಲಿ ನಾವೇ ನಂಬಿದ್ದನ್ನು ಹೇಳುವ ಧೈರ್ಯ ಮಾಡಬೇಕು - ಎಂದು ಖಚಿತವಾಗಿ ಹೇಳುವ ಅನಂತಮೂರ್ತಿ ಸದಾ ನಮ್ಮನ್ನು ಬೆಚ್ಚಿಬೀಳಿಸುವ ಕಟುಸತ್ಯಗಳತ್ತ ತಮ್ಮ ಲೇಖನಗಳಲ್ಲಿ ನಮ್ಮ ಗಮನ ಸೆಳೆಯುತ್ತಾರೆ. ಇವತ್ತಿಗೂ ಲೇಖಕನನ್ನು ಜನತೆ ತಮ್ಮ ಅಂತಃಸಾಕ್ಷಿಯ ರಕ್ಷಕನೆಂಬಂತೆ ಕಾಣುವುದರಿಂದ ಲೇಖಕನ ಸಾಮಾಜಿಕ ಜವಾಬ್ದಾರಿ ಅತ್ಯಂತ ಮಹತ್ವದ್ದೆಂದು ಅನಂತಮೂರ್ತಿ ಭಾವಿಸುತ್ತಾರೆ.

ಅನಂತಮೂರ್ತಿ ತಮ್ಮ ವಿಮರ್ಶೆ ಹಾಗೂ ವೈಚಾರಿಕ ಬರಹಗಳ ಮೂಲಕ ಕನ್ನಡ ಭಾಷೆಯನ್ನು ಇಂತಹ ಬರವಣಿಗೆಗೆ ಸಮರ್ಥವಾಗಿ ಹದಗೊಳಿಸಿದರು. ಇಂದು ವಿಮರ್ಶೆಯಲ್ಲಿ ಬಳಕೆಯಾಗುವ ಅನೇಕ ನುಡಿ

ಗಟ್ಟನ್ನು, ಪರಿಭಾಷೆಯನ್ನು ರೂಪಿಸಿದವರಲ್ಲಿ ಅನಂತಮೂರ್ತಿ ಮುಖ್ಯರು. ಕಾವ್ಯ ಪ್ರವೇಶ ಮಾಡುವ ಬಗೆಯನ್ನು, ಅದನ್ನು ವಿಶ್ಲೇಷಿಸುವ ಕ್ರಮವನ್ನು ಅವರು ತೋರಿಸಿಕೊಟ್ಟ ರೀತಿ - ಇಂದಿಗೂ ಮಾದರಿಯಾದಂಥದು. ಅಡಿಗರ ಕಾವ್ಯದ ಬಗೆಗಿನ ಅವರ ವಿಶ್ಲೇಷಣೆಯನ್ನು ನಾವಿಲ್ಲಿ ನೆನಪಿಸಿಕೊಳ್ಳಬೇಕು. ಅಂತೆಯೇ ತಾತ್ವಿಕವಾಗಿ ಚರ್ಚಿಸುವ ಮೂಲಕ ವಿಮರ್ಶೆಯ ವಿಸ್ತಾರವನ್ನು ಹಿಗ್ಗಿಸಿದರು. ಸಾಹಿತ್ಯವಿಮರ್ಶೆಯನ್ನು ಸಂಸ್ಕೃತಿ ಚಿಂತನೆಯನ್ನಾಗಿ ರೂಪಿಸಲು ಗಂಭೀರವಾಗಿ ಪ್ರಯತ್ನಿಸಿದರು.

ಅನಂತಮೂರ್ತಿ ತಮ್ಮ ವೈಚಾರಕ ಬರಹಗಳನ್ನು ಕುರಿತು - 'ಇಲ್ಲಿಯ ಕೆಲವು ಲೇಖನಗಳಲ್ಲಿ ಕಥೆಗೂ, ವೈಚಾರಿಕ ಪ್ರಬಂಧಕ್ಕೂ, ಕಾವ್ಯಕ್ಕೂ ಇರುವ ಭೇದಗಳು ಅಳಿಸಿಹೋಗಿವೆ. ಅಂಥವನ್ನು ವಿಶೇಷ ಬಗೆಯ ಆಖ್ಯಾನಗಳೆಂದು ಓದಿಕೊಳ್ಳಬೇಕೆಂದು ಬಿನ್ನವಿಸಿಕೊಳ್ಳುತ್ತೇನೆ. ಈ ದಶಕದಲ್ಲಿ ನಾನು ನನ್ನ ಶಕ್ತ್ಯಾನುಸಾರ ಬರೆಯಬಹುದಾಗಿದ್ದ ಕಥೆ, ಕವನ ಪ್ರಬಂಧಗಳನ್ನೆಲ್ಲ ಇಲ್ಲಿ ಬರೆದುಬಿಟ್ಟಿದ್ದೇನೆ' ಎಂದಿದ್ದಾರೆ.

ನಿಜ, ಅನಂತಮೂರ್ತಿಯವರ ವಿಮರ್ಶೆ, ವೈಚಾರಿಕ ಬರಹ ಕೇವಲ ಬೌದ್ಧಿಕ ನೆಲೆಯ ಚಿಂತನೆಗಳು ಮಾತ್ರವಲ್ಲ. ಭಾವನೆ ಮತ್ತು ಚಿಂತನೆ ಇವೆರಡೂ ಏಕ ಬಿಂದುವಿನಲ್ಲಿ ಕೂಡಿದ ಧ್ಯಾನಸ್ಥಿತಿಯಲ್ಲಿ ಅನಂತಮೂರ್ತಿಯವರ ವೈಚಾರಿಕ ಬರಹಗಳು ರೂಪುಗೊಂಡಿವೆ. ಆದ್ದರಿಂದಲೇ ಅವು ಪ್ರಕಟಿಸುವ ಸತ್ಯ ಕೇವಲ ಅರಿವಿನಿಂದ ಪಡೆದುಕೊಂಡದ್ದು ಮಾತ್ರವಲ್ಲದೆ, ಸೃಜನಶೀಲ ಮನಸ್ಸು ತನ್ನ ಏಕಾಗ್ರಸ್ಥಿತಿಯಲ್ಲಿ ಕಂಡುಕೊಂಡ ಕಾಣ್ಕೆಯೂ ಹೌದು. ಈ ಕಾಣ್ಕೆ ಎಲ್ಲ ಸಂದರ್ಭಗಳಲ್ಲಿಯೂ ನಮಗೆ ಒಪ್ಪಿಗೆಯಾಗ ಬೇಕೆಂದಿಲ್ಲ. ಅನಂತಮೂರ್ತಿಯವರೊಂದಿಗೆ ಅನೇಕ ನೆಲೆಗಳಲ್ಲಿ ಭಿನ್ನಾಭಿಪ್ರಾಯಗಳು ಸಾಧ್ಯ; ಅವರ ಅನೇಕ ವಿಚಾರಗಳನ್ನು ನಾವು ಪ್ರಶ್ನಿಸಬಹುದು, ಪ್ರಶ್ನಿಸಬೇಕಾಗುತ್ತದೆ. ಆದರೆ ಅವರೊಂದಿಗೆ ಅರ್ಥಪೂರ್ಣ ಸಂವಾದ ಸಾಧ್ಯವೆಂಬುದೇ ಅವರ ಬರವಣಿಗೆಯ ಮಹತ್ವ. ಈ ದೃಷ್ಟಿಯಿಂದ ಕನ್ನಡ ಸಂಸ್ಕೃತಿಯ ಬೆಳವಣಿಗೆಯಲ್ಲಿ ಅನಂತಮೂರ್ತಿಯವರ ಪಾತ್ರ ಅತ್ಯಂತ ಮಹತ್ವದ್ದು.

❑

# ಎಸ್.ಎಲ್. ಭೈರಪ್ಪ

**ಜಿ. ಅಶ್ವತ್ಥ ನಾರಾಯಣ**

1

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇಪ್ಪತ್ತನೆಯ ಶತಮಾನವನ್ನು 'ಕಾದಂಬರಿಯುಗ' ಎಂದು ಕರೆಯುವುದನ್ನು ಎಲ್ಲರೂ ಒಪ್ಪುತ್ತಾರೆ. ಏಕೆಂದರೆ ಗಳಗನಾಥ-ವೆಂಕಟಾಚಾರ್ ಅವರಿಂದ ಪ್ರಾರಂಭವಾದ ಕಾದಂಬರಿ ಸಾಹಿತ್ಯ ಪರಂಪರೆ ಭವ್ಯವಾಗಿ ಬೆಳೆದು ಗುಣ, ಗಾತ್ರ, ಸಂಖ್ಯೆಗಳಲ್ಲಿ ಹಿರಿಯ ಸ್ಥಾನಗಳಿಸಿದೆ. ಮಹಿಳೆಯರೂ ಈ ಕ್ಷೇತ್ರಕ್ಕೆ ಸಾಕಷ್ಟು ಕೊಡುಗೆ ನೀಡಿದ್ದಾರೆ. ಅನಕೃ ಅವರು ಕಾದಂಬರಿ ಸಾರ್ವಭೌಮರೆಂದೇ ಖ್ಯಾತರಾದರು. ಸ್ವಾತಂತ್ರ್ಯ ಪೂರ್ವದಲ್ಲಿ ಬಂದ ಕನ್ನಡ ಕಾದಂಬರಿಗಳು ಬೆಳವಣಿಗೆಯ ಹಂತದಲ್ಲಿ ಪ್ರಗತಿ ಸಾಧಿಸಿದರೂ ಸ್ವಾತಂತ್ರ್ಯಾನಂತರದ ದಶಕಗಳಲ್ಲಿ ಕಾದಂಬರಿಯ ವಸ್ತು, ತಂತ್ರ, ಭಾಷೆ, ನಿರೂಪಣೆ ಮೊದಲಾದವುಗಳಲ್ಲಿ ಲೇಖಕರು ವಿನೂತನ ಸಾಧನೆಗಳನ್ನು ನಡೆಸಿ ವಿಕ್ರಮಗಳಿಸಿದ್ದಾರೆ ಎಂದರೆ ತಪ್ಪಲ್ಲ. ಕಾದಂಬರಿ ಕ್ಷೇತ್ರದಲ್ಲಿ ಸ್ವಾತಂತ್ರ್ಯಾನಂತರ ಅದ್ಭುತ ಸಾಧನೆ ಮಾಡಿದ, ಕನ್ನಡಕ್ಕೆ ಶ್ರೇಷ್ಠ ಕಾದಂಬರಿಗಳನ್ನು ನೀಡಿದವರಲ್ಲಿ ಸಂತೇಶಿವರದ ಲಿಂಗಣ್ಣಯ್ಯ ಭೈರಪ್ಪನವರು ಅಗ್ರಗಣ್ಯರೆಂದರೆ ಅತಿಶಯೋಕ್ತಿ ಅಲ್ಲ. ತಮ್ಮದೇ ಆದ ಸ್ವಂತಿಕೆಯಿಂದ ಕನ್ನಡಕ್ಕೆ ಗಟ್ಟಿ ಕಾದಂಬರಿಗಳನ್ನು ನೀಡಿರುವ ಇವರು ವಿಚಾರವಂತ ಕಾದಂಬರಿ ಕಾರರಾಗಿದ್ದು ಅನ್ಯಭಾಷೆಗಳಿಗೆ, ಅಂತರ ರಾಷ್ಟ್ರೀಯ ಭಾಷೆಗಳಿಗೆ ಅನುವಾದವಾದಾಗ ಆ ಭಾಷೆಯಲ್ಲೂ ಸ್ಥಾನಗಳಿಸಬಲ್ಲಂಥ ಕೃತಿಗಳನ್ನು ರಚಿಸಿದ್ದಾರೆ.

ಹಾಸನ ಜಿಲ್ಲೆಯ ಚನ್ನರಾಯಪಟ್ಟಣದ ಸಂತೇಶಿವರ ಗ್ರಾಮದಲ್ಲಿ ಲಿಂಗಣ್ಣಯ್ಯ ಮತ್ತು ಗೌರಮ್ಮ ದಂಪತಿಗಳಿಗೆ 26-7-1934ರಲ್ಲಿ ಮಗನಾಗಿ ಜನಿಸಿದ ಇವರು ಪ್ರಾಥಮಿಕ ವಿದ್ಯಾಭ್ಯಾಸವನ್ನು ತಾವು ಹುಟ್ಟಿದ ಹಳ್ಳಿಯಲ್ಲಿ ಹಾಗೂ ಅದರ ಸುತ್ತಮುತ್ತ ಪ್ರದೇಶಗಳಲ್ಲಿ ಸಾಗಿಸಿದರು. ಬಾಲ್ಯದಲ್ಲಿಯೇ 1945ರಲ್ಲಿ ತಾಯಿಯನ್ನು ಕಳೆದುಕೊಂಡ ಇವರು ಕಷ್ಟಪಟ್ಟು ವಿದ್ಯಾಭ್ಯಾಸವನ್ನು ಮುಂದುವರೆಸಿದರು. ವಿದ್ಯಾಭ್ಯಾಸ ಕಾಲದಲ್ಲಿ ಹಾಗೂ ಆನಂತರ ನಾನಾ ರಂಗಗಳಲ್ಲಿ ದುಡಿದಿದ್ದಾರೆ. ಹತ್ತಾರು ರೀತಿಗಳಲ್ಲಿ ಕಷ್ಟಪಟ್ಟು ಜೀವನಾನುಭವಗಳಿಸಿದ್ದಾರೆ. ಶುದ್ಧಮೌಲ್ಯಗಳ ದೃಷ್ಟಿಯಿಂದ ಗಾಂಧೀಜಿ ಒಬ್ಬರನ್ನೇ ಮಹೋನ್ನತ ನಾಯಕರೆಂದು ಪರಿಗಣಿಸುವ ಭೈರಪ್ಪನವರು ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಹೆಂಡದ ಲಾರಿಗಳನ್ನು ತಡೆದು ಪೋಲೀಸ್ ಸ್ಟೇಷನ್ನಿಗೆ ಹೋದವರೂ, ಭಾಷಣಗಳನ್ನು ಮಾಡಿದವರೂ ಆಗಿದ್ದಾರೆ, ಅದೂ 13ನೇ ವಯಸ್ಸಿನಲ್ಲಿ!

ಮೈಸೂರಿನಲ್ಲಿ ಶಾರದಾ ವಿಲಾಸ ಪ್ರೌಢಶಾಲೆಯಲ್ಲಿ ಓದಿದ ಮೇಲೆ ಮಹಾರಾಜಾ ಕಾಲೇಜಿನ ವಿದ್ಯಾರ್ಥಿಯಾಗಿ 1957ರಲ್ಲಿ ಬಿ.ಎ. (ಆನರ್ಸ್) ಪದವಿ ಗಳಿಸಿದರು. 1958ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಎಂ.ಎ. ಪದವಿಯಲ್ಲಿ ಪ್ರಥಮ ರ್‍ಯಾಂಕ್‌ಗಳಿಸಿ ಎರಡು ಸುವರ್ಣಪದಕಗಳನ್ನು ಪಡೆದರು. ಬರೋಡಾದ ಮಹಾರಾಜ ಸಯ್ಯಾಜಿರಾವ್ ವಿಶ್ವ ವಿದ್ಯಾನಿಲಯದಿಂದ 'ಸತ್ಯ ಮತ್ತು ಸೌಂದರ್ಯ' ಎಂಬ ಇಂಗ್ಲಿಷಿನಲ್ಲಿ ರಚಿಸಿದ ಮಹಾಪ್ರಬಂಧಕ್ಕಾಗಿ ಡಾಕ್ಟರೇಟ್ ಪದವಿಗಳಿಸಿದರು. ಎಂ.ಎ. ವಿದ್ಯಾಭ್ಯಾಸದ ನಂತರ ಹುಬ್ಬಳ್ಳಿಯ ಕಾಡಸಿದ್ದೇಶ್ವರ ಕಾಲೇಜಿನಲ್ಲಿ ತರ್ಕಶಾಸ್ತ್ರ ಮತ್ತು ಮನಶ್ಶಾಸ್ತ್ರದ ಅಧ್ಯಾಪಕರಾಗಿ (1958-60) ಅನಂತರ 1960ರಿಂದ 1966ರವರೆಗೆ ಗುಜರಾತಿನ ಸರ್ದಾರ್ ಪಟೇಲ್ ವಿಶ್ವವಿದ್ಯಾನಿಲಯದಲ್ಲಿ

ತತ್ತ್ವಶಾಸ್ತ್ರದ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು. 1967ರಿಂದ 1971ರ ವರೆಗೆ ದೆಹಲಿಯ ರಾಷ್ಟ್ರೀಯ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯಲ್ಲಿ ಶಿಕ್ಷಣ ಮೀಮಾಂಸಾ ವಿಷಯದಲ್ಲಿ ಉಪಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿದ ನಂತರ ಮೈಸೂರಿನಲ್ಲಿರುವ ಪ್ರಾದೇಶಿಕ ಶಿಕ್ಷಣ ಕಾಲೇಜಿಗೆ ವರ್ಗವಾಗಿ ತತ್ತ್ವಶಾಸ್ತ್ರ ಮತ್ತು ಶಿಕ್ಷಣಶಾಸ್ತ್ರದ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸಿ 1991ರಲ್ಲಿ ನಿವೃತ್ತರಾದರು.

1958ರಲ್ಲಿ ವಿವಾಹವಾದ ಇವರಿಗೆ ರವಿಶಂಕರ್ (1960) ಮತ್ತು ಉದಯಶಂಕರ್ (1962) ಎಂಬ ಇಬ್ಬರು ಗಂಡುಮಕ್ಕಳು ಇದ್ದಾರೆ. ಇವರ ಪತ್ನಿಯ ಹೆಸರು ಸರಸ್ವತಿ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ, ನಾಡಿನಲ್ಲಿ ಸಾಮಾಜಿಕ ಕಾದಂಬರಿ ಕಾರರೆಂದೇ ಪ್ರಸಿದ್ಧರಾಗಿರುವ ಶ್ರೀ ಎಸ್.ಎಲ್. ಭೈರಪ್ಪನವರ ಹೆಚ್ಚಿನ ಆಸಕ್ತಿ ಕ್ಷೇತ್ರವೆಂದರೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ. ಸಂಗೀತ, ಸಾಹಿತ್ಯ ಕ್ಷೇತ್ರವನ್ನು ಬಿಟ್ಟರೆ ಅವರಿಗೆ ಆಸಕ್ತಿ ಇರುವ ವಿಷಯಗಳೆಂದರೆ ತತ್ತ್ವಶಾಸ್ತ್ರ, ಸಮಾಜಶಾಸ್ತ್ರ, ಮನಶ್ಶಾಸ್ತ್ರ, ನ್ಯಾಯಮೀಮಾಂಸೆ, ಸೌಂದರ್ಯಮೀಮಾಂಸೆ, ಇತಿಹಾಸ, ರಾಜಕೀಯ ಘಟನೆಗಳು, ಅರ್ಥಶಾಸ್ತ್ರ ತತ್ತ್ವಗಳು ಮತ್ತು ಮಾನವಜೀವನಶಾಸ್ತ್ರ ಇತ್ಯಾದಿ. ಈ ಎಲ್ಲ ಶಾಸ್ತ್ರಗಳ ಅಧ್ಯಯನದ ಪ್ರಭಾವ ಅವರ ಕಾದಂಬರಿಗಳಲ್ಲಿ ಪರೋಕ್ಷವಾಗಿ ಪ್ರತಿಬಿಂಬಿತ ವಾಗಿರುವುದನ್ನು ಗಮನಿಸಬಹುದು.

ಭೈರಪ್ಪನವರ ಸಾಹಿತ್ಯಸೃಷ್ಟಿಯ ಕಾರ್ಯ ಅವರು ಹೈಸ್ಕೂಲಿನಲ್ಲಿದ್ದಾಗ ಹಾಸ್ಟೆಲ್ ಮ್ಯಾಗಜೀನ್‌ಗೆ ಕೆಲವು ಕಥೆಗಳನ್ನು ಬರೆಯುವುದರಿಂದ ಪ್ರಾರಂಭವಾಯಿತು. ಇಂಟರ್ ಮೀಡಿಯಟ್ ಓದುತ್ತಿದ್ದಾಗಲೇ 'ಗತಜನ್ಮ' ಎಂಬ ನೀಳ್ಗತೆ, 'ಭೀಮಕಾಯ' ಮತ್ತು 'ಬೆಳಕು ಮೂಡಿತು' ಎಂಬ ಎರಡು ಕಾದಂಬರಿಗಳನ್ನು ಬರೆದಿದ್ದರು. ಈ ಕೃತಿಗಳು ಅಪಕ್ವವಾಗಿದ್ದವು. ಅಲ್ಲದೆ ಅನಕೃ ಅವರ ಪ್ರಭಾವವಿತ್ತು ಎಂದು ಆ ಬಗ್ಗೆ ಹೇಳಿಕೊಂಡಿದ್ದಾರೆ. ಆದ್ದರಿಂದಲೇ ಅವರ ಕಾದಂಬರಿಗಳೆಂದರೆ 1961ರಲ್ಲಿ ಪ್ರಕಟವಾದ 'ಧರ್ಮಶ್ರೀ'ಯಿಂದ ಪರಿಗಣನೆಗೆ ತೆಗೆದುಕೊಳ್ಳುವುದನ್ನು ಕಾಣಬಹುದು.

ಬದುಕು ಮತ್ತು ಅನುಭವಗಳ ಸಂಕೀರ್ಣತೆಯನ್ನು ಗ್ರಹಿಸಲು ಮತ್ತು ಸೃಜನಾತ್ಮಕವಾಗಿ ಅಭಿವ್ಯಕ್ತಪಡಿಸಲು ಸಾಹಿತ್ಯ ಪ್ರಕಾರಗಳಲ್ಲೆಲ್ಲಾ ಕಾದಂಬರಿ ಅತ್ಯಂತ ಉಪಯುಕ್ತ ಮಾಧ್ಯಮ ಎಂದು ತಿಳಿದಿರುವ ಭೈರಪ್ಪನವರು 'ಧರ್ಮಶ್ರೀ'ಯಿಂದ ಮೊದಲ್ಗೊಂಡು 'ಸಾರ್ಥ' ಸೇರಿ 18 ಕಾದಂಬರಿಗಳನ್ನು ಬರೆದಿದ್ದಾರೆ. ಕೆಲವು ಹಲವಾರು ಪುನರ್ಮುದ್ರಣಗಳನ್ನು ಕಂಡಿವೆ. 'ಧರ್ಮಶ್ರೀ' (1961), 'ದೂರ ಸರಿದರು' (1962), 'ಮತದಾನ' (1965), 'ವಂಶವೃಕ್ಷ' (1965), 'ಜಲಪಾತ' (1967), 'ನಾಯಿ ನೆರಳು' (1968), 'ತಬ್ಬಲಿಯು ನೀನಾದೆ ಮಗನೆ' (1968), 'ಗೃಹಭಂಗ' (1970), 'ನಿರಾಕರಣ' (1971), 'ಗ್ರಹಣ' (1972), 'ದಾಟು' (1973), 'ಅನ್ವೇಷಣ' (1976), 'ಪರ್ವ' (1979), 'ನೆಲೆ' (1983), ಸಾಕ್ಷಿ (1986) 'ಅಂಚು' (1990), 'ತಂತು' (1993), 'ಸಾರ್ಥ' (1998). ಇವು ಕ್ರಮವಾಗಿ ಪ್ರಕಟವಾದ ಕಾದಂಬರಿಗಳು.

ಅವರ ಇತರ ಕನ್ನಡ ಗ್ರಂಥಗಳು ಎಂದರೆ ಸಾಹಿತ್ಯ ಮೀಮಾಂಸೆಗೆ ಸಂಬಂಧಿಸಿದ 'ಸಾಹಿತ್ಯ ಮತ್ತು ಪ್ರತೀಕ' (1967), 'ಕಥೆ ಮತ್ತು ಕಥಾವಸ್ತು' (1969), 'ನಾನೇಕೆ ಬರೆಯುತ್ತೇನೆ' (1980) ಎಂಬ ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಲೇಖನಗಳ ಸಂಗ್ರಹ ಮತ್ತು ಪ್ರೌಢ ಪ್ರಬಂಧವಾದ ಸೌಂದರ್ಯ ಮೀಮಾಂಸೆಗೆ ಸಂಬಂಧಿಸಿದ 'ಸತ್ಯ ಮತ್ತು ಸೌಂದರ್ಯ' ಕೃತಿ ಮತ್ತು ಆತ್ಮವೃತ್ತಾಂತವಾದ ಭಿತ್ತಿ (1996).

ಇಂಗ್ಲಿಷಿನಲ್ಲಿ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ 13ಕ್ಕೂ ಹೆಚ್ಚಿನ ಸಂಶೋಧನಾ ಲೇಖನಗಳನ್ನು ಬರೆದಿರುವುದಲ್ಲದೆ 'ವಿದ್ಯಾಭ್ಯಾಸದಲ್ಲಿ ಸಮಾನಾವಕಾಶ', 'ಸತ್ಯ ಮತ್ತು ಸೌಂದರ್ಯ', 'ಭಾರತೀಯ ಶಿಕ್ಷಣದಲ್ಲಿ ಮೌಲ್ಯಗಳ ಸ್ಥಾನ ಮತ್ತು ವ್ಯಕ್ತಿತ್ವ', 'ಚಾರಿತ್ರಿಕ ವಿಕಾಸದಲ್ಲಿ ತತ್ತ್ವಶಾಸ್ತ್ರ' ಎಂಬ ಗ್ರಂಥ ಗಳನ್ನು ರಚಿಸಿದ್ದಾರೆ. ಹಿಂದೂಸ್ತಾನಿ ಸಂಗೀತದ ಬಗ್ಗೆ ವಿಶೇಷ ಆಸಕ್ತಿ ಹೊಂದಿರುವ ಅವರು 'ಗಂಗೂಬಾಯ್ ಹಾನಗಲ್' ಎಂಬ ಗ್ರಂಥದ ಸಂಪಾದಕರೂ ಆಗಿದ್ದಾರೆ.

ಭೈರಪ್ಪನವರ ಕಾದಂಬರಿಗಳು ಇಂಗ್ಲಿಷಿಗೆ ಹಾಗೂ ಹಲವಾರು ಭಾರತೀಯ ಭಾಷೆಗಳಿಗೆ ಅನುವಾದವಾಗಿವೆ. 'ಗೃಹಭಂಗ' ಎನ್.ಬಿ.ಟಿ. ಮೂಲಕ ಹಾಗೂ 'ದಾಟು' ಕೇಂದ್ರ ಸಾಹಿತ್ಯ ಅಕಾಡೆಮಿಯ ಮೂಲಕ ಎಲ್ಲ ಭಾರತೀಯ ಭಾಷೆಗಳಿಗೂ, 'ವಂಶವೃಕ್ಷ', 'ನೆಲೆ', 'ಸಾಕ್ಷಿ', 'ನಾಯಿ ನೆರಳು', 'ತಬ್ಬಲಿಯು ನೀನಾದೆ ಮಗನೆ', 'ದಾಟು' 'ಪರ್ವ', 'ತಂತು', 'ಅಂಚು' ಹಿಂದಿ ಮತ್ತು ಮರಾಠಿ ಭಾಷೆಗಳಿಗೆ ಅನುವಾದವಾಗಿವೆ. 'ವಂಶವೃಕ್ಷ'ವು ಪಂಜಾಬಿ, ಗುಜರಾತಿ, ತೆಲುಗು ಭಾಷೆಗಳಿಗೆ ಆಗಿದೆ. 'ಪರ್ವ'ವು ಬಂಗಾಳಿ ಮತ್ತು ಒರಿಯಾ ಭಾಷೆಗಳಲ್ಲಿ ಅಚ್ಚಿಗೆ ಹೋಗಿದೆ. 'ವಂಶವೃಕ್ಷ' ಮತ್ತು 'ಪರ್ವ' ಕಾದಂಬರಿಗಳು ಇಂಗ್ಲೀಷಿನಲ್ಲಿ ಪ್ರಕಟವಾಗಿ ಅಪಾರ ಮೆಚ್ಚುಗೆ ಪಡೆದಿವೆ. 'ಸಾಕ್ಷಿ'ಯ ಇಂಗ್ಲಿಷ್ ಅನುವಾದವೂ ಬಂದಿದೆ.

ಕನ್ನಡ ಓದುಗರಿಗೆ ಶ್ರೇಷ್ಠ ಕೃತಿಗಳನ್ನು ನೀಡಿರುವ ಭೈರಪ್ಪನವರಿಗೆ ದೊರೆತ ಸನ್ಮಾನ- ಕೃತಿಗಳಿಗೆ ದೊರೆತ ಪ್ರಶಸ್ತಿಗಳು ಗಮನಾರ್ಹವಾಗಿವೆ ಎಂದರೆ ತಪ್ಪಲ್ಲ. ಭೈರಪ್ಪನವರಿಗೆ 55 ವರ್ಷ ತುಂಬಿದ ಸಂದರ್ಭದಲ್ಲಿ (26-7-89) 'ಸಾಮಾನ್ಯಜ್ಞಾನ'ವೆಂಬ ಕನ್ನಡ ಶೈಕ್ಷಣಿಕ ಮಾಸಪತ್ರಿಕೆಯು ತನ್ನ 85ನೇ ಸಂಚಿಕೆಯನ್ನು 'ಎಸ್.ಎಲ್. ಭೈರಪ್ಪ ಸನ್ಮಾನ ಸಂಚಿಕೆ'ಯನ್ನಾಗಿ ಪ್ರಕಟಿಸಿ ಲೇಖಕರನ್ನು ಆಹ್ವಾನಿಸಿ ಸನ್ಮಾನಿಸಿದೆ. ಅವರ ಕಾದಂಬರಿಗಳಲ್ಲಿ 'ವಂಶವೃಕ್ಷ', 'ತಬ್ಬಲಿಯು ನೀನಾದೆ ಮಗನೆ' ಕನ್ನಡ ಚಲನಚಿತ್ರಗಳಾಗಿ ಪ್ರಶಸ್ತಿಗಳಿಸಿರುವುದು ಹೆಮ್ಮೆಯ ಸಂಗತಿ. 'ವಂಶವೃಕ್ಷ'ಕ್ಕೆ 1966ರ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1975ರಲ್ಲಿ 'ದಾಟು' ಕಾದಂಬರಿಗೆ ರಾಜ್ಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ದೊರೆತಿವೆ. 'ಸಾಕ್ಷಿ' ಕಾದಂಬರಿಗೆ 'ಗ್ರಂಥ ಲೋಕ' ಮಾಸಪತ್ರಿಕೆ ಸ್ಥಾಪಿಸಿರುವ 1986ನೇ ಇಸವಿ ವರ್ಷದ ಲೇಖಕ ಪ್ರಶಸ್ತಿ ಮತ್ತು 1987ರ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಸಿಕ್ಕಿದೆ. ಮಾಸ್ತಿ ಪ್ರಶಸ್ತಿ, ಕಲ್ಕತ್ತೆಯ ಭಾರತೀಯ ಭಾಷಾ ಪ್ರಶಸ್ತಿಗಳು ಅವರಿಗೆ ಬಂದಿವೆ. ಅವರ ಕೃತಿಗಳಲ್ಲಿ 'ಪರ್ವ', 'ದಾಟು', 'ಗೃಹಭಂಗ', 'ವಂಶವೃಕ್ಷ', 'ಸಾಕ್ಷಿ' ಕಾದಂಬರಿಗಳು ಓದುಗರ ಹಾಗೂ ವಿಮರ್ಶಕರ ದೃಷ್ಟಿಯಲ್ಲಿ ಉಳಿದ ಕೃತಿಗಳಿಗಿಂತ ಮಹತ್ವದ ಸ್ಥಾನವನ್ನು ಪಡೆದಿವೆ. ಇಲ್ಲಿ ಭೈರಪ್ಪನವರ ಕಾದಂಬರಿಗಳ ಬಗ್ಗೆ ಪರಿಚಯಾತ್ಮಕವಾಗಿ ಕೆಲವು ವಿಷಯಗಳನ್ನು ಪ್ರಸ್ತಾಪಿಸಲಾಗಿದೆ.

## 2

'ಧರ್ಮಶ್ರೀ' ಭೈರಪ್ಪನವರ ಮೊದಲ ಕಾದಂಬರಿ ಆಗಿದೆ. ಜೀವನದ ಒತ್ತಡಕ್ಕೆ ಸಿಲುಕಿ ಮತಾಂತರ ಹೊಂದಿದ ಸತ್ಯನಾರಾಯಣ ತನ್ನ ತಪ್ಪನ್ನು ಅರಿತು ಆರ್ಯ ಸಮಾಜದ ಮೂಲಕ ಮತ್ತೆ ಹಿಂದೂ ಧರ್ಮಕ್ಕೆ ಬರಲು ಯತ್ನಿಸುತ್ತಾನೆ. ಇದು ಕಾದಂಬರಿಯ ಮುಖ್ಯ ಕಥಾವಸ್ತು. ವೈಯಕ್ತಿಕ ಹಾಗೂ ಸಾಮಾಜಿಕ ಕಾರಣಗಳಿಗಾಗಿ ಧರ್ಮಾಂತರ ಹೊಂದಿದ ವ್ಯಕ್ತಿ ಎದುರಿಸುವ ಸಾಮಾಜಿಕ ಸಮಸ್ಯೆಗಳು, ವೈಯಕ್ತಿಕ ದ್ವಂದ್ವ ಭಿನ್ನ ಸಂಸ್ಕೃತಿಗಳ ಮೌಲ್ಯಗಳ ಸಂಘರ್ಷ ಈ ಕಾದಂಬರಿಯಲ್ಲಿ ಎದ್ದುಕಾಣುತ್ತವೆ. ಭಾರತೀಯ ಧರ್ಮದ ಚೌಕಟ್ಟಿನಲ್ಲಿ ಮತಾಂತರ ಹೇಗೆ ಸಮಸ್ಯೆ ಆಗುತ್ತದೆ ಎಂಬುದು ಇಲ್ಲಿ ಚರ್ಚಿತವಾಗಿದೆ. ಇದೊಂದು ಕಾಲೇಜು ವಿದ್ಯಾರ್ಥಿಗಳ ಜೀವನದ ಹಿನ್ನೆಲೆಯಲ್ಲಿ ವೈಚಾರಿಕ ಚರ್ಚೆಯನ್ನು ನಿರೂಪಿಸಿರುವ ಕಾದಂಬರಿ. ಸತ್ಯನಾರಾಯಣ-ಲಿಲ್ಲಿ ಪಾತ್ರಗಳಿಗಿಂತ ರಾಜಮ್ಮ, ಶಂಕರ, ದೇವಪ್ರಸಾದರ ಪಾತ್ರಗಳಲ್ಲಿ ಹೆಚ್ಚು ಸಂಯಮ ಕಾಣಿಸಿಕೊಂಡಿದೆ.

'ದೂರ ಸರಿದರು' ಕಾದಂಬರಿಯಲ್ಲಿ ಆನಂದ-ವಿನತೆ, ವಸಂತ-ಉಮೆ, ವಾಸನ್-ವಿಜಯಾ, ರಂಗೇಗೌಡ-ಅವನ ಮಡದಿ ಈ ಪ್ರೇಮ ಸಂಬಂಧಗಳ ನಡುವೆ ಘಟನೆಗಳು ಒಂದಕ್ಕೊಂದು ಹೆಣೆದುಕೊಂಡು ಬರುತ್ತವೆ. ಆನಂದ ಮತ್ತು ವಸಂತರ ನಡುವೆ ಚರ್ಚೆಯಲ್ಲಿ ಭಾವುಕತೆಗೂ-ವಿಚಾರಕ್ಕೂ ನಡೆಯುವ ಸಂಘರ್ಷ ಚೆನ್ನಾಗಿ ಪ್ರತಿಪಾದಿತವಾಗಿದೆ. ಕಾಲೇಜು ವಿದ್ಯಾರ್ಥಿ ಜೀವನದ ಪರಿಸರದಲ್ಲಿ ಘಟನೆಗಳು ಜರುಗುವ ಈ ಕಾದಂಬರಿಯಲ್ಲಿ ಭಾವನಾತ್ಮಕವಾಗಿ ಒಂದಾದರೂ, ಬೌದ್ಧಿಕವಾಗಿ ಭಿನ್ನನೆಲೆಗಳಲ್ಲಿ ಒಂದಾಗ ಲಾರದ ವಿವಾಹ ಪೂರ್ವ ತರುಣ ತರುಣಿಯರ ಕಥೆ ಇಲ್ಲಿದೆ. ಗಂಭೀರ ಆಲೋಚನೆಗೆ ತೊಡ ಗಿಸುವಲ್ಲಿ ಈ ಕಾದಂಬರಿ ಯಶಸ್ವಿಯಾಗಿದೆ. ವರದಮ್ಮ, ರಂಗೇಗೌಡ, ರಾಮಮೂರ್ತಿ, ರಮಾ ಇವರ ಆತ್ಮ ನಿರೂಪಣೆಗಳು ಕಥೆಯ ಕುತೂಹಲ ವನ್ನು ಹೆಚ್ಚಿಸುತ್ತವೆ.

'ವಂಶವೃಕ್ಷ' ತೀವ್ರ ಪ್ರತಿಕ್ರಿಯೆಗೆ ಒಳಗಾದ ಕಾದಂಬರಿಗಳಲ್ಲಿ ಒಂದು. ಕನ್ನಡದ ಕಾದಂಬರಿಯ ಭವ್ಯ ಸಂಪ್ರದಾಯದಲ್ಲಿ ವಂಶವೃಕ್ಷಕ್ಕೂ ಒಂದು ಸ್ಥಾನವಿದೆ. ಕನ್ನಡದ ಒಂದು ಉತ್ಕೃಷ್ಟ ಕಾದಂಬರಿ, ವಂಶವೃಕ್ಷ ಆದರ್ಶದ ಶ್ರೇಷ್ಠ ಕಾದಂಬರಿ, ಕಾದಂಬರಿ ಕ್ಷೇತ್ರದಲ್ಲೊಂದು ಮೈಲಿಗಲ್ಲು ಮೊದಲಾದ ಪ್ರಶಂಸೆಗಳಿಗೆ ಒಳಗಾಗಿ ಬೇರೆ ಭಾಷೆಗಳಿಗೆ ಅನುವಾದವಾಗಿ, ಪ್ರಶಸ್ತಿಗಳಿಸಿ, ಚಲನಚಿತ್ರವಾಗಿ ಪ್ರಸಿದ್ಧಿ ಪಡೆದ ಕಾದಂಬರಿ ಆಗಿದೆ. ಆದರೆ ಮೌಲ್ಯವಿವೇಚನೆ ಗೊಂದಲದಲ್ಲಿ ಮುಕ್ತಾಯವಾಗಿದೆ. ಕಾದಂಬರಿಯಲ್ಲಿ ಶ್ರೀನಿವಾಸ ಶ್ರೋತ್ರಿಗಳೇ ಪ್ರಮುಖರಾದರೂ ಶ್ರೀನಿವಾಸ ಶ್ರೋತ್ರಿ, ಭಾಗೀರಥಮ್ಮ, ಲಕ್ಷ್ಮೀ- ಡಾ. ರಾಯರು, ನಾಗಲಕ್ಷ್ಮಿ ಹಾಗೂ ಕರುಣಾರತ್ನೆ-ನಂಜುಂಡ, ಕಾತ್ಯಾಯಿನಿ, ರಾಜಾರಾಯ ಹೀಗೆ ಮೂರು ಗುಂಪಿನ ಜನರ ಕಥೆ ಹಾಸುಹೊಕ್ಕಾಗಿದೆ. ಈ ಮೂರು ಗುಂಪಿನಲ್ಲಿ ಶ್ರೀನಿವಾಸ ಶ್ರೋತ್ರಿ, ಡಾ. ಸದಾಶಿವರಾಯರು, ಕಾತ್ಯಾಯಿನಿ ಜ್ಞಾನ, ಬುದ್ಧಿ, ಪ್ರಕೃತಿಗಳೆಂಬ ಮೂರು ಸಾಂಪ್ರದಾಯಿಕ ಮೌಲ್ಯಗಳ ಪ್ರತಿನಿಧಿಗಳಾಗಿದ್ದಾರೆ ಎಂಬ ಮಾತು ಒಪ್ಪತಕ್ಕ ಸಂಗತಿ. ಮಹತ್ವದ ವಸ್ತು, ವೈಚಾರಿಕ ಹಿನ್ನೆಲೆ, ಪಾತ್ರವೈವಿಧ್ಯಗಳಿಂದ ವಂಶವೃಕ್ಷ ಮೇರುಕೃತಿಯಾಗಿ ಬೆಳೆದಿದೆ. ಸನಾತನ ಧರ್ಮದ ಪ್ರತಿನಿಧಿಯಂತಿರುವ ಶ್ರೀನಿವಾಸ ಶ್ರೋತ್ರಿಗಳು ವಂಶನಿಷ್ಠೆಯನ್ನು ಎತ್ತಿಹಿಡಿಯುತ್ತಾ ಬಂದು ಕೊನೆಗೆ ತಾನು ತಾಯಿ ಅಚ್ಚಮ್ಮಳಿಗೆ ತಂದೆ ನಂಜುಂಡ ಶ್ರೋತ್ರಿಯರಿಗೆ ಹುಟ್ಟಿ ದವನಲ್ಲ, ಹರಿಕಥೆ ಶ್ಯಾಮದಾಸನಿಂದ ಜನಿಸಿದವನು ಎಂದು ತಿಳಿದಾಗ ಅದುವರೆಗೆ ಅವರು ನಂಬಿಕೊಂಡಿದ್ದ ವಂಶಪ್ರಜ್ಞೆ-ಗೌರವವೇ ಕಳಚಿಬೀಳುತ್ತದೆ. ಆದರೂ ಅವರು ಕಂಗೆಡುವುದಿಲ್ಲ. ಮಗನ ಮರಣ, ಸೊಸೆಯ ಪುನರ್ವಿ ವಾಹದ ಸಮಸ್ಯೆಯನ್ನು ಎದುರಿಸುತ್ತಾರೆ. ವಾನಪ್ರಸ್ಥಾಶ್ರಮಕ್ಕೆ ಹೊರಡುವ ಮುಂಚೆ ಚೀನಿಗೆ ಗೃಹಸ್ಥಜೀವನದ ದೀಕ್ಷೆ ಕೊಡಿಸುತ್ತಾರೆ. ಭಾಗೀರಥಮ್ಮನೇ ಒಪ್ಪಿ ಕಳಿಸಿದ ಲಕ್ಷ್ಮಿಯೊಡನೆ ಸಂಯಮದಿಂದ ವರ್ತಿಸುತ್ತಾರೆ. ಹೀಗೆ ಬಾಳಿನ ಬಿರುಗಾಳಿಗಳನ್ನು ನಿರ್ವಿಕಾರತೆಯಿಂದ ಎದುರಿಸಿ ಮೌಲ್ಯಪರಿವರ್ತನೆಯನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿ ಧರ್ಮಜೀವನಕ್ಕೊಂದು ಅರ್ಥ ತಂದುಕೊಡುವ ರೀತಿಯಲ್ಲಿ ಬಾಳಿಗೆ ಹೊಸ ಆಯಾಮ ಮೂಡುವಂತೆ ವರ್ತಿಸುತ್ತಾರೆ. ವಂಶವೃಕ್ಷ ಕಾದಂಬರಿಯ ಜೀವಾಳವೇ ಶ್ರೀನಿವಾಸ ಶ್ರೋತ್ರಿಯರಾಗಿದ್ದಾರೆ ಎಂದರೆ ತಪ್ಪಲ್ಲ. ಇನ್ನು ಪುನರ್ವಿವಾಹವಾಗಿ ಪಾಪಪ್ರಜ್ಞೆಯಿಂದ ವರ್ತಿಸಿದ ಕಾತ್ಯಾಯಿನಿ, ಬೌದ್ಧಿಕವಾಗಿ ಧ್ಯೇಯಸಾಧನೆಗಾಗಿ ಧರ್ಮಪತ್ನಿ ನಾಗಲಕ್ಷ್ಮಿಯನ್ನು ತ್ಯಜಿಸಿ ತಾತ್ವಿಕವಾಗಿ ಕರುಣಾರತ್ನೆಯನ್ನು ವರಿಸುವ ರಾಯರು ಇನ್ನೊಂದು ಗಮನಾರ್ಹ ಪಾತ್ರ. ಸಾಕಷ್ಟು ದುರಂತ ಪಾತ್ರಗಳಿಂದ ಕೂಡಿರುವ ಈ ಕಾದಂಬರಿಯಲ್ಲಿ ಮೌಲ್ಯಗಳ ಸಂಘರ್ಷ ಮನಸ್ಸಿಗೆ ನಾಟುವಂತೆ ಚಿತ್ರಿತವಾಗಿದೆ. ಕನ್ನಡಕ್ಕೊಂದು ಶ್ರೇಷ್ಠ ಕೊಡುಗೆ 'ವಂಶವೃಕ್ಷ' ಕಾದಂಬರಿ ಎಂಬುದರಲ್ಲಿ ಅನುಮಾನವಿಲ್ಲ.

'ಮತದಾನ' ಕಾದಂಬರಿಯು ಚುನಾವಣೆಗಳು, ರಾಜಕೀಯ ವಿದ್ಯಮಾನಗಳು ನಮ್ಮ ಹಳ್ಳಿಯ ಜೀವನವನ್ನು ಹೇಗೆ ಕಲಕಿವೆ ಎಂಬುದರ ಚಿತ್ರಣವನ್ನು ನೀಡುತ್ತದೆ. ಬುದ್ಧಿಜೀವಿಗಳ ಧೋರಣೆಗೂ ರಾಜಕೀಯ ವ್ಯಕ್ತಿಗಳಿಗೂ ಇರುವ ವ್ಯತ್ಯಾಸ ಇಲ್ಲಿ ಎದ್ದುಕಾಣುತ್ತದೆ. ಪ್ರಮಾಣಿಕ, ನಿಸ್ವಾರ್ಥಿ ಸಮಾಜಸೇವಕ ಡಾ. ಶಿವಪ್ಪ ರಾಜಕೀಯ ರಂಗದಲ್ಲಿ ದುಡಿದು ವಿಫಲವಾಗಿ ಕೊನೆಗೆ ಹಳ್ಳಿಯ ಬಡಜನತೆ ಸೇವೆಗೆ ನಿಲ್ಲುತ್ತಾನೆ. ಶಿವಗೆರೆ ಕಂಟ್ರಾಕ್ಟರ್ ರಾಮಲಿಂಗೇಗೌಡ ಅಧಿಕಾರ ಪಕ್ಷಕ್ಕೆ ನೇತುಬಿದ್ದು ಸ್ವಾರ್ಥ ಸಾಧನೆಗಾಗಿ ಪ್ರಯತ್ನಿಸಿ ಉದ್ಧಾರವಾಗುವುದಿಲ್ಲ. ಇಬ್ಬರ ನಡುವಣ ಹೋರಾಟದ ನೋಟ ಈ ಕಾದಂಬರಿಯಲ್ಲಿ ಎದ್ದು ಕಾಣುತ್ತದೆ. ಇಲ್ಲಿನ ರಾಜಕೀಯ ಘಟನೆಗಳು ಪ್ರಾದೇಶಿಕವಾಗಿ ನಡೆದಂತೆ ಕಂಡುಬಂದರೂ ಹಿಂದೂಸ್ತಾನದ ಯಾವ ಭಾಗದಲ್ಲಾದರೂ ನಡೆಯುವಂಥದ್ದು ಎಂದಿದ್ದಾರೆ ಲೇಖಕರು. ಕಾದಂಬರಿ ಯಲ್ಲಿ ಆಡುಮಾತಿನ ಸೊಗಸು ಮನಸೆಳೆಯುತ್ತದೆ. ಸಮಕಾಲೀನ ರಾಜಕೀಯ ಚಿತ್ರಣ ನೀಡುವ ಕಾದಂಬರಿ ಇದಾಗಿದೆ.

'ನಾಯಿ ನೆರಳು' ಕಾದಂಬರಿ ಕುತೂಹಲ ಕೆರಳಿಸುವ ಕಥೆಯಿಂದ ಕೂಡಿದೆ. ಪೂರ್ವಜನ್ಮದಲ್ಲಿ ವಿಶ್ವೇಶ್ವರನಾಗಿದ್ದು ಈ ಜನ್ಮದಲ್ಲಿ ಕ್ಷೇತ್ರಪಾಲನಾಗಿ ಹುಟ್ಟಿ ಪೂರ್ವಜನ್ಮದ ನೆನಪನ್ನು ಹೊಂದಿ ಉಂಟು ಮಾಡುವ ಸನ್ನಿವೇಶ, ಘಟನೆಗಳು ಇಲ್ಲಿ ಚಿತ್ರಿತವಾಗಿವೆ. ಕರ್ಮಗಳನ್ನು ಅನುಭವಿಸಬೇಕು ಎಂಬ ಸಿದ್ಧಾಂತಕ್ಕೆ ಈ ಕಥೆಯಲ್ಲಿ ನಾಯಕನನ್ನು ಅನುಸರಿಸುವ ನಾಯಿಗಳು ಅವನ ಕರ್ಮಗಳಾಗಿದ್ದು; ಅವನ ಜೀವನದುದ್ದಕ್ಕೂ ನೆರಳಾಗಿ ಕಾಣಿಸಿಕೊಂಡಿವೆ. ಪುನರ್ಜನ್ಮ, ಪೂರ್ವಜನ್ಮ ಪುರಾಣಗಳಲ್ಲಿ ನಂಬಿಕೆ ಇಲ್ಲದ ಅಚ್ಚುತನಂಥ ಪಾತ್ರಗಳು ಕಾಣಿಸಿಕೊಂಡು ಪಾತ್ರಗಳಲ್ಲಿ ಸಮಕಾಲೀನತೆ-ಪೌರಾಣಿಕತೆ ಸೇರಿಕೊಂಡಿವೆ. ಧಾರ್ಮಿಕ ನಂಬಿಕೆ ಇರುವವರಿಗೆ ಪ್ರಿಯವಾಗುವ ಕಾದಂಬರಿ. ಇನ್ನು ಪೂರ್ಣವಾಗಿ ಆಧುನಿಕ ವಿಜ್ಞಾನ ಬೆಳಕು ಸಾಧ್ಯವಾಗದ ವಿಚಾರವೊಂದನ್ನು ಕಾದಂಬರಿಗೆ ವಸ್ತುವನ್ನಾಗಿ ಆರಿಸಿಕೊಂಡಿದ್ದಾರೆ ಎಂಬುದು ಗಮನಾರ್ಹವಾಗಿದೆ.

'ಜಲಪಾತ' ಕಾದಂಬರಿಯಲ್ಲಿ ಸಂಗೀತ, ಚಿತ್ರಕಲೆ, ಜೋಗಜಲಪಾತ, ಮುಂಬಯಿ ಕಾಮಟಿಪುರದ ಸೂಳೆಕೇರಿ, ಬಾಂದ್ರಾದ ಕಸಾಯಿಖಾನೆ ಮೊದಲಾದವು ಗಳನ್ನು ಪ್ರತೀಕಗಳಾಗಿ ಬಳಸಿಕೊಂಡಿದ್ದಾರೆ. ಗಾಯಕಿ ವಸು ಚಿತ್ರಕಲಾವಿದ ಶ್ರೀಪತಿ ಇಬ್ಬರು ಕಲಾಜೀವಿಗಳು. ವಾಸ್ತಜೀವನವನ್ನು ಎದುರಿಸುವ ರೀತಿ, ವಿವಾಹಾನಂತರದ ದಾಂಪತ್ಯ ವೈಷಮ್ಯ, ಗ್ರಾಮೀಣ, ನಾಗರಿಕ ಜೀವನದ ಸಮಸ್ಯೆಗಳು ಇಲ್ಲಿ ಚಿತ್ರಿತವಾಗಿವೆ. ಜಲಪಾತ ಕೇಂದ್ರಬಿಂದುವಾಗಿತ್ತು ಆದರ್ಶ-ವಾಸ್ತವತೆಗಳ ಘರ್ಷಣೆ ಜತೆಗೆ ಹಳೆ-ಹೊಸ ತಲೆಮಾರಿನ ಪಾತ್ರಗಳು ಕಾಣಿಸಿಕೊಳ್ಳುತ್ತವೆ. ಇಲ್ಲಿನ ಭಾಷೆ ಗದ್ಯದ ನಿರ್ದಿಷ್ಟತೆಯಲ್ಲಿ ಪ್ರಕಟವಾಗುವ ಪದ್ಯದಂತೆ ಸ್ಫುರಿಸಿದರೂ ಪಾರಿಭಾಷಿಕ ನಿರೂಪಣೆಗಳು ಓದುಗನಿಗೆ ಸಹಜತೆಗಿಂತ ಹೆಚ್ಚಾಗಿ ತಾಂತ್ರಿಕ-ತಾತ್ವಿಕ ಪರಿಭಾಷೆಯಾಗಿ ಕಾಣಿಸುತ್ತದೆ. ವಸ್ತು ವಿಶಿಷ್ಟತೆಯ ಜತೆಗೆ ನೂತನ ಪ್ರಯತ್ನ ಈ ಕಾದಂಬರಿಯಲ್ಲಿ ಕಂಡು ಬರುತ್ತದೆ.

'ತಬ್ಬಲಿಯು ನೀನಾದೆ ಮಗನೆ' ಚಲನಚಿತ್ರವಾಗಿಯೂ ಜನಪ್ರಿಯವಾದ ಕಾದಂಬರಿಯಾಗಿದೆ. ಧರ್ಮಶ್ರೀ ಕಾದಂಬರಿಯಲ್ಲಿ ವ್ಯಕ್ತಿಯೊಬ್ಬನ ಬಾಳಿನಲ್ಲಿ ಎರಡು ಧರ್ಮಗಳ ಘರ್ಷಣೆ ಕಂಡರೆ ಇಲ್ಲಿ ಎರಡು ಸಂಸ್ಕೃತಿಗಳ ಘರ್ಷಣೆ ಅಥವಾ ಒಳಮುಖದರ್ಶನ ಕಂಡುಬರುತ್ತದೆ 'ನಮಗೆ ಟ್ರ್ಯಾಕ್ಟರು ಬೇಕು ಗೋಪೂಜೆಯೂ ಬೇಕು' ಎಂಬ ಕಾದಂಬರಿಯ ಮಾತು ಎರಡು ಸಂಸ್ಕೃತಿಗಳನ್ನು ಪ್ರತಿನಿಧಿಸುತ್ತದೆ. ಎಲ್ಲರಿಗೂ ಸುಖ ಕೋರುವ ಭಾರತೀಯ ಸಂಸ್ಕೃತಿ, ಆರ್ಥಿಕದೃಷ್ಟಿಯ ಹಿನ್ನೆಲೆಯ ಯಾಂತ್ರಿಕ ನಾಗರಿಕತೆಯ ಪಾಶ್ಚಾತ್ಯ ಸಂಸ್ಕೃತಿಗಳ ಭಿನ್ನದೃಷ್ಟಿ ಇಲ್ಲಿ ಎದ್ದು ಕಾಣುತ್ತದೆ ಗೋವು ಭಾರತೀಯರಿಗೆ ಪುಣ್ಯ ಸಂಪತ್ತು, ಪಾಶ್ಚಾತ್ಯರಿಗೆ ವಾಣಿಜ್ಯಸಂಪತ್ತು.

ಪುಣ್ಯಕೋಟಿ ಇಲ್ಲಿ ಬರುವ ಹಸು, ಹಿಂಸೆಯ ಮೇಲೆ ಅಹಿಂಸೆಯ ವಿಜಯ ಸಾಧಿಸುವ ಜನಪ್ರಿಯ ಜಾನಪದ ಕಥನಕವನ ಗೋವಿನಹಾಡು ಅರ್ಥಪೂರ್ಣವಾಗಿ ಪ್ರತೀಕವಾಗಿ ಪಲ್ಲವಿಯಂತೆ ಕಾದಂಬರಿಯಲ್ಲಿ ಬಂದಿದೆ. ಲೇಖಕರೇ ಹೇಳುವಂತೆ ಪಾವಿತ್ರ್ಯಗಳ ನಂಬಿಕೆ ಮತ್ತು ಜೀವನ ಮೌಲ್ಯಗಳ ಬಗೆಗೆ ನನಗೆ ಕಾಳಜಿ ಇರುವುದ ರಿಂದ ಹಾಲುಕೊಡುವ ಹಸುವಿಗೂ ನಮಗೂ ಇರುವ ಭಾವನಾತ್ಮಕ ಸಂಬಂಧ (ತಾಯಿ-ಮಗುವಿನಂತೆ) ನೋಡಬೇಕು. ಮಾನವ ಪ್ರೀತಿ ಮಾನವ ಪ್ರಾಣಿಗಳಿಗೇ ಮೀಸಲಾಗಿರಬೇಕಿಲ್ಲ, ಇತರ ಪ್ರಾಣಿಗಳಿಗೂ ದೊರಕುವುದು ನಿಜವಾದ ಮಾನವೀಯತೆ. ಈ ತಾತ್ತ್ವಿಕ ನೆಲೆಗಟ್ಟಿನ ಮೇಲೆ ಈ ಕಾದಂಬರಿಯಲ್ಲಿ ಬರುವ ಕಾಳಿಂಗ, ವೆಂಕಟರಮಣ, ಹಿಲ್ಡಾ ಪಾತ್ರಗಳು ಪ್ರಮುಖವೆನಿಸುತ್ತವೆ.

'ನಿರಾಕರಣ' ಕಾದಂಬರಿ ವೇದಾಂತ ಸ್ವಭಾವದ ವ್ಯಕ್ತಿಯೊಬ್ಬನು ಸಾಂಸಾರಿಕ ಹಾಗೂ ಸಾಮಾಜಿಕ ಬಂಧನಗಳನ್ನು ಕಳಚಿಕೊಂಡು ವಿರಕ್ತ ಜೀವನ ನಡೆಸಲು ಒಲವು ತೋರಿಸುವುದನ್ನು ಚಿತ್ರಿಸುತ್ತದೆ. ಭಾರತೀಯ ವೈರಾಗ್ಯಧರ್ಮದ ಒಂದು ಮುಖ ಈ ಕಾದಂಬರಿಯಲ್ಲಿ ಚಿತ್ರಿತವಾಗಿದೆ. ವೇದಾಂತಿ ನರಹರಿ ತನ್ನ ಐದು ಮಕ್ಕಳನ್ನು ದತ್ತುಕೊಟ್ಟು ಹಿಮಾಲಯಕ್ಕೆ ಹೋಗುತ್ತಾನೆ. ಭೌತಿಕವಾಗಿ ಹಿಮಾಲಯ ಏರಿದಂತೆ ಮಾನಸಿಕವಾಗಿ ಬಾಳೆಂಬ ಹಿಮಾಲಯದಲ್ಲಿ ಏರದೆ, ಕಾಲವೇ ಹೆಪ್ಪುಗಟ್ಟುವಂಥ ಎತ್ತರದಲ್ಲಿ ನಿಲ್ಲಲಾರದೆ ಕೆಳಗಿಳಿದು ಪ್ರವಾಹದಗುಂಟ ತೇಲುತ್ತ ಬರುತ್ತಾನೆ. ಮುಂಬೈಗೆ ಹಿಂದಿರುಗಿ ಅನಾಥಾಲಯದ ವಾರ್ಡನ್ ಆಗುತ್ತಾನೆ. ಹಿಮಾಲಯಕ್ಕೆ ಹೋದಾಗ ಗತಜೀವನದ ಹಾಗೂ ಮುಂಬೈ ನೆನಪು. ಮುಂಬೈಗೆ ಬಂದಾಗ ಹಿಮಾಲಯದ ನೆನಪು. ಈ ದ್ವಂದ್ವ ಸಮರ್ಥವಾಗಿ ಮೂಡಿದೆ. ನರಹರಿಯ ಹಿಮಾಲಯದ ಆರೋಹಣ ಅವರೋಹಣಗಳು, ಪ್ರವಾಹದಲ್ಲಿ ಈಜಲು ಹೊರಟ್ಟಿದ್ದು, ತೇಲಿಕೊಂಡು ಕೆಳಕ್ಕೆ ಬಂದಿದ್ದು ಎಲ್ಲವೂ ಸಂಕೇತವಾಗಿ ಬಂದಿದೆ. ವಾಸ್ತವ ಬದುಕಿನಲ್ಲಿ ಆದರ್ಶಜೀವನವನ್ನು ಅಳವಡಿಸುವ ಪ್ರಯತ್ನ ಈ ಕಾದಂಬರಿಯಲ್ಲಿ ಕಂಡುಬರುತ್ತದೆ. ಲೌಕಿಕವನ್ನು ನಿರಾಕರಿಸುವ ನರಹರಿ ಅಲೌಕಿಕ ಮಟ್ಟದಲ್ಲಿ ನಿರಾಕರಣಕ್ಕೆ ಒಳಗಾಗುವ ಸ್ಥಿತಿ ಈ ಕಾದಂಬರಿಯ ಹೆಸರನ್ನು ಅರ್ಥಪೂರ್ಣವಾಗಿಸಿದೆ.

'ಗೃಹಭಂಗ' ಲೇಖಕರ, ಓದುಗರ, ವಿಮರ್ಶಕರ ದೃಷ್ಟಿಯಲ್ಲಿ ಸರ್ವತ್ರ ಮೆಚ್ಚುಗೆ ಗಳಿಸಿರುವ ಕಾದಂಬರಿ. ಭೈರಪ್ಪನವರ ಶ್ರೇಷ್ಠ ಕಾದಂಬರಿಗಳಲ್ಲಿ ಒಂದು.

'ಅನ್ವೇಷಣ' ಒಂದು ದೃಷ್ಟಿಯಲ್ಲಿ 'ಗೃಹಭಂಗ'ದ ಮುಂದಿನ ಭಾಗ ಎನ್ನಬಹುದು. ಏಕೆಂದರೆ ಅಲ್ಲಿನ ಹುಡುಗ ವಿಶ್ವನಾಥ ಇಲ್ಲಿ ಕೇಂದ್ರನಾಯಕ. ಆದರೆ ಇನ್ನೊಂದು ದೃಷ್ಟಿಯಲ್ಲಿ ಇದು ಸ್ವತಂತ್ರವಾಗಿ ಓದಬಲ್ಲ ಕಾದಂಬರಿಯೂ ಆಗಿದೆ. ಬೆನ್ನಿನಲ್ಲಿ ಕುರುವಿನಿಂದ ಬಾಧೆ ಪಡುತ್ತಿರುವ ಕಂಠೀ ಜೋಯಿಸರಿಂದ ಮೊಮ್ಮಗನ ಹುಡುಕಾಟದಿಂದ ಅನ್ವೇಷಣೆ ಪ್ರಾರಂಭವಾಗುತ್ತದೆ. ತಾತ ಜೋಯಿಸನಿಂದ ಹಿಡಿದು ಕೈಹಿಡಿದ ಹೆಂಡತಿ ಸುನಂದಳವರೆಗೆ ಅನೇಕರು ವಿಶ್ವನಾಥನ ಅನ್ವೇಷಣೆಯಲ್ಲಿ ತೊಡಗುತ್ತಾರೆ. ಅವನ ವ್ಯಕ್ತಿತ್ವ ತಿಳಿಯಲು ಯತ್ನಿಸುತ್ತಾರೆ. ಯಾರ ವಿಶ್ಲೇಷಣೆಗೂ ಸಿಗದೆ ವಿಶ್ವನಾಥ ನುಸುಳಿಹೋಗುತ್ತಾನೆ. ಈ ಕಾದಂಬರಿಯಲ್ಲಿ ತಂತ್ರ ಅರ್ಥವತ್ತಾದ ಪ್ರಯೋಗವಾಗಿದೆ. ಹೆಣ್ಣುಗಂಡಿನ ಸಂಬಂಧ ಕೇವಲ ಕಾಮಪೂರೈಕೆ ಅಲ್ಲ, ಸಾವನ್ನು ಮೆಟ್ಟಲು, ಬದುಕನ್ನು ಎದುರಿಸಲು, ಪರಸ್ಪರ ಚಿಗುರಲು ಎಂಬ ದೃಷ್ಟಿ ಇಲ್ಲಿ ಮೂಡಿದೆ. ಹತ್ತಾರು ಸ್ವಭಾವದ, ಹತ್ತಾರು ಬಗೆಯ ಜನರ ಜೀವನಾನುಭವವೇ ಅನ್ವೇಷಣವಾಗಿದೆ. ಸಂಯಮಪೂರ್ಣ ರಚನೆಯ, ವಿನೂತನ ತಂತ್ರದ ಕುತೂಹಲಕರ ಕೃತಿ ಇದಾಗಿದೆ.

ಮಹಾಭಾರತದ ಕಾಲದ ಭಾರತೀಯ ಸಮಾಜದ ರೀತಿನೀತಿಗಳನ್ನೂ ಆ ಕಾಲದ ಜೀವನಮೌಲ್ಯಗಳ ಆಳವಾದ ಅನ್ವೇಷಣೆ, ಮೃತ್ಯುವಿನ ರಹಸ್ಯಾತ್ಮಕತೆ ಬಗ್ಗೆ ಆಳ ಚಿಂತನೆ, ಜೀವನದ ಅನಿವಾರ್ಯ ಪರಿಣತಿ ಇವುಗಳನ್ನು ಚರ್ಚಿಸಲಾಗಿದೆ. ಇವುಗಳ ಪ್ರಭಾವ ಕೃತಿಯಲ್ಲಿ ಎಷ್ಟರ ಮಟ್ಟಿಗೆ ಮೂಡಿದೆಯೆಂದರೆ ಲೇಖಕರ ಜೀವನದೃಷ್ಟಿ ಮತ್ತು ಸ್ವಭಾವವನ್ನೇ ಬದಲಾಯಿಸಿಸುವಷ್ಟು ಪ್ರಭಾವಕಾರಿಯಾಗಿದೆ.

ಮಾನವೀಯ ಅಂಶಗಳ ಮೇಲೆ ಒತ್ತುಕೊಟ್ಟಿದ್ದರೂ ತನ್ನದೇ ಆದ ಹೊಸ ಪ್ರತೀಕ ಮತ್ತು ಧ್ವನಿಗಳು 'ಪರ್ವ'ದಲ್ಲಿ ಕಾಣಿಸಿಕೊಂಡಿವೆ. ಸಾಕಷ್ಟು ಸಮರ್ಪಕವಾಗಿ ಲೈಂಗಿಕತೆ ಮತ್ತು ಸಾವು ಇವುಗಳ ನೆಲೆಯಲ್ಲಿ ದ್ರೌಪದಿ, ಕುಂತಿ, ಮಾದ್ರಿ, ಗಾಂಧಾರಿ ಪಾತ್ರಗಳನ್ನು ಮೂಡಿಸಿದ್ದರೂ, ಈ ಪಾತ್ರಗಳಂತೆ ಕೃಷ್ಣನ ಪಾತ್ರವನ್ನು 'ಪರ್ವ'ದಲ್ಲಿ ಪರಿಪೂರ್ಣವಾಗಿ ವ್ಯಾಖ್ಯಾನಿಸಲು ಶಕ್ಯವಾಗಲಿಲ್ಲ, ಏಕೆಂದರೆ ಅಷ್ಟೊಂದು ಜಟಿಲ ಪಾತ್ರ ಎಂಬುದು ಲೇಖಕರ ಅಭಿಮತವಾಗಿದೆ. ಕೃಷ್ಣನನ್ನು ಭಾರತದ ಹಾಗೂ ಶ್ರೇಷ್ಠ ನಾಯಕನ ರೂಪದಲ್ಲಿ ಕಾಣಲು ಯತ್ನಿಸಿದ್ದೂ, ಅತಿಮಾನವ ಅಥವಾ ಭಗವಂತನೆಂದು ಎಣಿಸದಿರುವುದೂ ಕಾರಣವಿರಬಹುದು. ಆದರೂ ಕೃಷ್ಣನ ಹತ್ತಿರದ ಪಾತ್ರಗಳಿಂದ ಕೃಷ್ಣನ ಅನ್ವೇಷಣೆ ನಡೆಸಿದ್ದಾರೆ. ಡಿ ಮೈಥಿಫಿಕೇಷನ್ ಪ್ರಯತ್ನ ನಡೆದಿದ್ದು ಕೆಲವು ಅರ್ಥವಲಯಗಳು ಮರೆಯಾಗಿರುವುದೂ ಕೃಷ್ಣಪಾತ್ರ ಪರಿಪೂರ್ಣವಾಗಿ ಮೂಡದಿರಲು ಕಾರಣವಿರಬಹುದು. ಅದೇನೇ ಇದ್ದರೂ ಭಿನ್ನ ಭಿನ್ನ ಕಾರಣಗಳಿಗಾಗಿ ಕೃಷ್ಣ ಪಾತ್ರದ ಬಗ್ಗೆ ಹಾಗೂ 'ಪರ್ವ'ದಲ್ಲಿರುವ ಪಾತ್ರಗಳ ಚಿತ್ರಣದ ಬಗ್ಗೆ ಓದುಗರಲ್ಲಿ ಅತೃಪ್ತಿ, ಭಿನ್ನದೃಷ್ಟಿ ಇರುವುದಂತೂ ಖಚಿತವಾಗಿದೆ.

'ಗ್ರಹಣ' ಕಾದಂಬರಿ ಹತ್ತಾರು ವರ್ಷಗಳ ಕೆಳಗೆ ಜನರು ಹೇಗೆ ಧರ್ಮಶಾಸ್ತ್ರ ಮತ್ತು ವ್ಯವಹಾರಗಳ ನಿಜವಾದ ಅರ್ಥವನ್ನು ತಿಳಿಯದೆ ಇವುಗಳ ದುರ್ವಿಶ್ರಣ ಮಾಡಿ ತಪ್ಪುಅರ್ಥ ಕಲ್ಪಿಸಿ ತಲೆಕೆಡಿಸಿಕೊಳ್ಳುತ್ತಿದ್ದುದರಿಂದ ಯಥಾರ್ಥ ಜ್ಞಾನದ ಸೋಲು ಸಂಭವಿಸುವುದನ್ನು ಸೊಗಸಾಗಿ ಚಿತ್ರಿಸಿದೆ. ಕಾದಂಬರಿಯಲ್ಲಿ ಮೊದಲ ಘಟನೆಯಾಗಿ ಬರುವ ಸೂರ್ಯಗ್ರಹಣ ಒಂದು ಯಶಸ್ವಿಯಾದ ಸಂಕೇತವಾಗಿ ರೂಪುಗೊಂಡಿದೆ. 'ನಿರಾಕರಣ'ದಲ್ಲಿ ಸಂನ್ಯಾಸಿಯಾಗಲು ಹೊರಟವನ ವ್ಯಕ್ತಿತ್ವ ಚಿತ್ರಿತವಾಗಿದ್ದರೆ 'ಗ್ರಹಣ'ದಲ್ಲಿ ಸನ್ಯಾಸಿಯಾಗಿ ಲೋಕವಿರುದ್ಧ ನಡವಳಿಕೆಯಿಂದ ಸಮಾಜದ ತಿರಸ್ಕಾರಕ್ಕೆ ಒಳಗಾದ ಘಟನೆ ಮೂಡಿದೆ.

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ 'ದಾಟು' ಭೈರಪ್ಪನವರ ಶ್ರೇಷ್ಠ ಕಾದಂಬರಿಗಳಲ್ಲಿ ಒಂದಾಗಿದೆ. ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಒಂದು ಮಹತ್ವಪೂರ್ಣ ಕೊಡುಗೆ ಆಗಿದೆ. ವೃತ್ತಿ ಆಧಾರಿತ 'ವರ್ಣ' ಜಾತಿಯಾಗಿ, ಹುಟ್ಟಿಗೆ ಮಹತ್ವ ನೀಡಿದ ಜಾತಿಯು ಕೆಲವರ ಉನ್ನತಿಗೆ ಕಾರಣವಾದರೆ ಕೆಲವರ ಅವನತಿಗೆ ಕಾರಣವಾಯಿತು; ಕ್ರಾಂತಿಕಾರಕವಾಗಿ ವಿಚಾರ ಮಾಡಬಲ್ಲ ವ್ಯಕ್ತಿ ಕೂಡ ದಾಟಲಾಗದ ಇಲ್ಲವೇ ದಾಟಬಾರದ ಲಕ್ಷ್ಮಣರೇಖೆಯಾಯಿತು ಎಂಬ ವಿಚಾರವನ್ನು ಹಲವು ಸ್ತರಗಳಲ್ಲಿ ಚಿತ್ರಿಸುತ್ತಾ ದಾಟುವ ಕ್ರಿಯೆಯನ್ನು ಈ ಕಾದಂಬರಿ ವಿಶ್ಲೇಷಿಸುತ್ತದೆ. ಈ ಕಾದಂಬರಿಯ ಮೂಲ ಸಾಮಗ್ರಿ ಪಾತ್ರ ವೈವಿಧ್ಯ, ಸಮಸ್ಯೆಯ ಬಗ್ಗೆ ದೃಷ್ಟಿಕೋನ, ವೈಚಾರಿಕ ನಿಲುವು ಅಸಾಧಾರಣವಾದವು. ಭೈರಪ್ಪನವರು ತಮ್ಮ ಕೃತಿಗಳಿಂದ ವಿಮರ್ಶಕರ ಟೀಕೆ-ಮೆಚ್ಚಿಗೆಗಳಿಗೂ ಒಳಗಾದರು. ಓದುಗರಲ್ಲಿ ಜನಪ್ರಿಯತೆಗೂ, ವಿಚಾರಕ್ಕೂ ಒಳಗಾದರು.

ಅಂತರಜಾತೀಯ ವಿವಾಹಸಮಸ್ಯೆ, ಹರಿಜನರ ಸಮಸ್ಯೆಗಳನ್ನು ವೈಚಾರಿಕ ಹಿನ್ನೆಲೆಯಲ್ಲಿ ಬಿಡಿಸಲು ಲೇಖಕರು ಯತ್ನಿಸಿದ್ದಾರೆ. ಸಮಕಾಲೀನ ಸಮಾಜ ದಲ್ಲಿ ಜಾತಿಸಮಸ್ಯೆ ಒಡ್ಡಿರುವ ಸವಾಲುಗಳನ್ನು ಸಮರ್ಥವಾಗಿ 'ದಾಟು' ಮುಂದಿಟ್ಟಿದೆ. ಪಾತ್ರಗಳ ಮನೋವಿಶ್ಲೇಷಣಾತ್ಮಕ ಚಿತ್ರಣವಿದೆ. ಜಲಪ್ರಳಯ

ಪ್ರಸಂಗ ಧ್ವನಿಪೂರ್ಣ ಸಂಕೇತವಾಗಿದೆ. ವಿಮರ್ಶೆಯ ದೃಷ್ಟಿಯಲ್ಲಿ ಕೆಲವಾರು ಟೀಕೆಗಳು 'ದಾಟು' ಬಗ್ಗೆ ಕೇಳಿಬಂದರೂ ಪುರಾಣ, ಸಮಾಜಶಾಸ್ತ್ರ, ಜಾನಪದ, ಧರ್ಮ, ತತ್ವ, ಸಮಕಾಲೀನತೆ-ಇವುಗಳ ಹಿನ್ನೆಲೆಯಲ್ಲಿ ಜಾತೀಯತೆ ಅಂತರ ಜಾತಿವಿವಾಹ ಸಮಸ್ಯೆಗಳ ಸಮರ್ಥ ವಿಶ್ಲೇಷಣೆ-ಈ ಕೃತಿಯಲ್ಲಿದೆ. ಇವು ದಾಟುವಿನ ಶ್ರೇಷ್ಠತೆಗೆ ಕಾರಣವಾಗಿವೆ.

ನಿರ್ದಿಷ್ಟ ಕಾಲವೊಂದರ ಚೌಕಟ್ಟಿನಲ್ಲಿ (1920-1945) ಕೆಲವು ಗ್ರಾಮಗಳ ಪರಿಸರದಲ್ಲಿ (ತಿಪಟೂರು, ಚನ್ನರಾಯಪಟ್ಟಣ) ಹಲವಾರು ಶಕ್ತಿಗಳೆದುರು ಒಂದು ಕುಟುಂಬದ ಹೋರಾಟದ ಕಥೆ ಇಲ್ಲಿದೆ. ಚೆನ್ನಿಗರಾಯ, ಗಂಗಮ್ಮ, ಅಪ್ಪಣ್ಣಯ್ಯ, ಕಂಠೀ ಜೋಯಿಸ, ಮಾದಯ್ಯ ಪಾತ್ರಗಳ ಜತೆಗೆ ರಾಜು, ನರಸಿ, ನಂಜಮ್ಮ ಪಾತ್ರಗಳು ಎದ್ದುಕಾಣುತ್ತವೆ. ಈ ಪೈಕಿ ಪಡಬಾರದ ಕಷ್ಟಪಟ್ಟು, ತುತ್ತುತುತ್ತಿಗೂ ಒದ್ದಾಡಿ, ಮಕ್ಕಳನ್ನು ಹೆತ್ತು ಹೊತ್ತು ಕೊನೆಗೆ ಅವು ಪ್ಲೇಗಿಗೆ ಬಲಿಯಾದರೂ ಕಂಗೆಡದೆ ಮನೆ ಕಟ್ಟಲು ಯತ್ನಿಸಿದ ನಂಜಮ್ಮನ ಪಾತ್ರ ಶಿಖರಪ್ರಾಯವಾದುದು. ಅತ್ಯಂತ ಪ್ರತಿಕೂಲ ಪರಿಸ್ಥಿತಿಯಲ್ಲೂ ಒಬ್ಬ ಸಾಮಾನ್ಯ ಹೆಂಗಸು ತನ್ನ ದುಃಖ ಪರಂಪರೆಯನ್ನು ಹೇಗೆ ಎದುರಿಸಿದಳು ಎಂಬ ಧೀರೋದಾತ್ತ ಸಾಹಸದ ಕಥೆ ಇಲ್ಲಿದೆ. ಜೀವಂತಿಕೆಯ ಆಡುಮಾತಿನ ಸೊಗಡು, ಸೊಗಸು ಈ ಕಾದಂಬರಿಯಲ್ಲಿ ಸಹಜವಾಗಿ, ಪರಿಣಾಮ ಕಾರಿಯಾಗಿ ಬಂದಿದೆ. ಗ್ರಂಥಸ್ಥ ಭಾಷೆಯಷ್ಟೆ ಸಮರ್ಥವಾಗಿ, ಆಡುನುಡಿ ಬಳಸಬಲ್ಲರು. ಭೈರಪ್ಪನವರ ಭಾಷಾ ಪ್ರಭುತ್ವಕ್ಕೆ ಈ ಕೃತಿಯೊಂದು ಶ್ರೇಷ್ಠ ನಿದರ್ಶನ. ಕಾರಂತರ 'ಮರಳಿ ಮಣ್ಣಿಗೆ', ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು', ಗೋಕಾಕರ 'ಸಮರಸವೇ ಜೀವನ', ರಾವ್‌ಬಹಾದ್ದೂರರ 'ಗ್ರಾಮಾಯಣ' ಮೊದಲಾದ ಮಹಾನ್ ಕೃತಿಗಳ ಸಾಲಿಗೆ ಸೇರುವ ಕೃತಿ ಗೃಹಭಂಗ. "ಯಾವ ಸಮಸ್ಯೆಯನ್ನೂ ಕುರಿತದ್ದಲ್ಲ. ವಸ್ತುನಿಷ್ಠವಾಗಿ ಜೀವನವನ್ನು ಕಾಣಿಸುವ ಪ್ರಯತ್ನ ಇಲ್ಲಿ ಮೂಡಿದೆ" ಎಂಬ ಲೇಖಕರ ಪ್ರಯತ್ನ ಸಫಲವಾಗಿದೆ ಈ ಕೃತಿಯಲ್ಲಿ.

'ಪರ್ವ' ಭೈರಪ್ಪನವರ ಮೇರುಕೃತಿಗಳಲ್ಲಿ ಒಂದು. ಕಾದಂಬರಿಯಲ್ಲಿ ಗದ್ಯದ ಮಹಾಕಾವ್ಯವಾಗಿ 'ಪರ್ವ' ಮೂಡಿಬಂದಿದೆ. ಇದರ ರಚನೆಯ ಇತಿಹಾಸವೇ ಒಂದು ಸಾಹಸಗಾಥೆ ಆಗಿದೆ. ವ್ಯಾಸಭಾರತದ ಆಧಾರದ ಮೇಲೆ ಕಾದಂಬರಿ ರೂಪದಲ್ಲಿ ರಚಿತವಾದ ಈ ಕೃತಿಯಲ್ಲಿ ಮೂಲಕೃತಿಯ ಅಲೌಕಿಕ ಅಂಶಗಳಿಂದ ದೂರವಾಗಿ ಸಾಮಾನ್ಯರನ್ನೂ ಅಸಾಮಾನ್ಯರನ್ನೂ ಒಂದೇ ದೃಷ್ಟಿಯಿಂದ ನೋಡಿ ಆದರ್ಶ-ವಾಸ್ತವತೆಗಳನ್ನು ಮೇಳವಿಸಿದ ಮರುಸೃಷ್ಟಿ ಆಗಿದೆ. ಯಾವುದೋ ಕಾಲದ ವ್ಯಕ್ತಿ-ಸಂಗತಿಗಳು ನಮಗೆ ಹತ್ತಿರವಾಗುವಂಥ ಕಲಾಕೌಶಲ ಇದರಲ್ಲಿ ಮೂಡಿದೆ. ಮುಖ್ಯವಾಗಿ ಲೇಖಕರು ಭಾರತದ ಪಾತ್ರಗಳ ಕಥೆಯನ್ನು ಬರೆಯಲು ಹೊರಡದೆ ಮಾನವ ಅನುಭವದ ವಿವಿಧ ಮುಖ, ರೂಪ, ಸಂಬಂಧ, ಸ್ವರೂಪ ಮತ್ತು ವಿವೇಚನೆಗಳನ್ನು ನಿರೂಪಿಸುವ ಗುರಿಯನ್ನು ಹೊಂದಿದ್ದಾರೆ.

'ನೆಲೆ' ವಿನೂತನ ಕಾದಂಬರಿ. 'ಪರ್ವ'ದಲ್ಲಿ ಸಾಕಷ್ಟು ದಟ್ಟವಾಗಿ ಕಾಣಿಸಿಕೊಂಡ ಹುಟ್ಟು-ಸಾವು ಸಮಸ್ಯೆ ಇಲ್ಲಿ ಒಂದು ಘಟ್ಟವನ್ನು ಮುಟ್ಟಿದೆ. 'ಸಾಕ್ಷಿ'ಯಲ್ಲಿ ಇನ್ನೊಂದು ಹೆಜ್ಜೆಯನ್ನು ಹಾಕಿದೆ. ಲೇಖಕರನ್ನು ತೀವ್ರವಾಗಿ ಕಾಡುತ್ತಿರುವ ವಿಚಾರವಾಗಿ ಮೊದಲು ಬೀಜಪ್ರಾಯವಾಗಿ ಕೃತಿಗಳಲ್ಲಿ ಕಾಣಿಸಿಕೊಂಡು ದುರಂತ ಪಾತ್ರಗಳ ಸೃಷ್ಟಿಯಲ್ಲಿದ್ದ ಈ ವಿಚಾರ ಇತ್ತೀಚಿನ ದಿನಗಳಲ್ಲಿ ಬದುಕಿನಲ್ಲಿ, ಅಂತೆಯೇ ಇಡೀ ಕೃತಿಯಲ್ಲಿ ಮಹತ್ತಾಗಿ-ಬೃಹತ್ತಾಗಿ ರೂಪ ತಾಳುತ್ತಿದೆ ಎಂಬುದಕ್ಕೆ ನೆಲೆಯೂ ಒಂದು ಸಾಕ್ಷಿಯಾಗಿದೆ.

ಹುಟ್ಟು ಸಾವುಗಳ ನಿಜದ ನೆಲೆಯನ್ನು ಕಾಣಲು ಮಾನಸಿಕ ಜಗತ್ತು ಮತ್ತು ವಾಸ್ತವಿಕ ಬದುಕನ್ನು ಜತೆಜತೆಯಾಗಿ ಬದಿಬದಿಗಿಟ್ಟು ನೋಡುವ ತಾತ್ವಿಕ ಪ್ರಯತ್ನದ ಫಲವೇ ಈ ಕಾದಂಬರಿಯಾಗಿದೆ.

ನಿರುದ್ವೇಗದಿಂದ ಲೇಖಕರು ಹುಟ್ಟು-ಸಾವುಗಳ ಬಗ್ಗೆ ಗಾಢ ಚಿಂತನೆ ಯನ್ನು, ಕನ್ನಡಕ್ಕೆ ಅಮೂರ್ತ ವಿಚಾರಗಳ ಚಿಂತನೆಯನ್ನು ಗಾಢವಾಗಿ ಲೋಕಾನುಭವ, ಗಟ್ಟಿಭಾಷೆ, ತಾರ್ಕಿಕ ನಿರೂಪಣೆಗಳಿಂದ ಗಂಭೀರ ವಸ್ತುವನ್ನು ಕಾದಂಬರಿ ಮೂಲಕ ಕನ್ನಡ ಜನತೆಗೆ ನೀಡಿದ್ದಾರೆ. ಓದುಗರನ್ನು ಹೆಣ್ಣು-ಗಂಡು, ಪ್ರೇಮ-ಪ್ರಣಯಗಳ ಚೆಲ್ಲಾಟದ ಸ್ತರದಿಂದ ಮೇಲೆತ್ತಿ ಉನ್ನತ ಸ್ತರದ ಚಿಂತಕರನ್ನಾಗಿ ಈ ಕೃತಿ ಮಾಡುತ್ತದೆ.

1986ರಲ್ಲಿ ಪ್ರಕಟವಾಗಿ 'ಗ್ರಂಥಲೋಕ'ದ ವರ್ಷದ ಲೇಖಕ ಪ್ರಶಸ್ತಿಯನ್ನು ಲೇಖಕರಿಗೆ ದೊರಕಿಸಿದ ಕೃತಿ 'ಸಾಕ್ಷಿ'. ಇನ್ನೂ ಸಾಕಷ್ಟು ವಿಮರ್ಶಕರು ಕಣ್ಣು ಹಾಯಿಸದಿರುವ ವಿಮರ್ಶೆಯ ಗೋಷ್ಠಿಗಳಿಗೆ ಅಷ್ಟಾಗಿ ಸಿಲುಕದಿರುವ ಕೃತಿ ಆಗಿದೆ. ಗಂಭೀರ ಚಿಂತನೆಯ ಹಾಗೂ ತಾತ್ವಿಕ ಚರ್ಚೆಯ ವಿಷಯವಾಗಿ ಸಾವು-ಸುಳ್ಳು-ಸತ್ಯ ಅಂಶಗಳು ಈ ಕಾದಂಬರಿಯಲ್ಲಿ ಪ್ರಧಾನವಾಗಿ ಕಾಣಿಸಿಕೊಂಡಿವೆ. ಚಿರಂತನ ಮೌಲ್ಯಗಳನ್ನು ವ್ಯಕ್ತಿಜೀವನದ ಸೀಮಿತ ಮಾನದಂಡದ ಮೂಲಕ ಅಳೆಯುವಲ್ಲಿನ ವೈಫಲ್ಯದ ನಡುವೆಯೂ ಅಂಥ ಮೌಲ್ಯಗಳ ಅನ್ವೇಷಣೆ ಹಾಗೂ ಪೋಷಣೆ ಸಂಸ್ಕೃತಿಯ ಜೀವನದ್ರವ್ಯವಾಗಿ ಹೇಗೆ ಉಳಿಯುತ್ತದೆ ಎಂಬ ಅಂಶವನ್ನು ಕಲಾತ್ಮಕ ಚೌಕಟ್ಟಿನಲ್ಲಿ ಚಿತ್ರಿಸಲಾಗಿದೆ. 'ಸಾಕ್ಷಿ'ಯ ಪಾತ್ರ ವೈಶಿಷ್ಟ್ಯ, ರಚನಾವಿಧಾನ ಹಾಗೂ ಕಲಾತ್ಮಕ ಅನುಭವಗಳು ಅವರ ಹಿಂದಿನ ಕಾದಂಬರಿಗಳಿಗಿಂತ ಮೂರು ಮೆಟ್ಟಿಲು ಮೇಲೆ ಹೋಗಿವೆ ಎಂಬ ಮಾತಿನಲ್ಲಿ ತಕ್ಕಮಟ್ಟಿಗೆ ಸತ್ಯವಿದೆ. ಸುಳ್ಳು-ಸತ್ಯ ಮನುಷ್ಯನ ಆಂತರಿಕ ವ್ಯಕ್ತಿತ್ವವನ್ನು ಕಣ್ಣೆದುರಿಗೇ ಛಿದ್ರಛಿದ್ರಗೊಳಿಸುವುದನ್ನು ಈ ಕೃತಿಯಲ್ಲಿ ಕಾಣುತ್ತೇವೆ.

ಭೈರಪ್ಪನವರ ಪ್ರಕಟಿತ ಕಾದಂಬರಿಗಳನ್ನು ಅವಲೋಕಿಸಿದಮೇಗೆ ಅವರು ಕನ್ನಡ ಕಾದಂಬರಿ ಲೋಕಕ್ಕೆ ವಿಶಿಷ್ಟ ಕಾಣಿಕೆಗಳನ್ನು ನೀಡಿ ಕಾದಂಬರಿಯನ್ನು ಲಘು ಮನರಂಜನೆಯ ಮಟ್ಟದಿಂದ ಮಹಾಕಾವ್ಯದ ಮಟ್ಟಕ್ಕೆ ಕರೆದೊಯ್ದ ಒಂದಿಬ್ಬರು ಲೇಖಕರಲ್ಲಿ ಒಬ್ಬರಾಗಿದ್ದಾರೆ ಎನಿಸದಿರದು. ಕನ್ನಡದಲ್ಲಿ ಚದುರಂಗ, ಕುವೆಂಪು, ಗೋಕಾಕ್, ರಾವ್‌ಬಹದ್ದೂರ್, ಅನಕೃ, ಕಟ್ಟೀಮನಿ, ದೇವುಡು, ಶ್ರೀರಂಗ ಮೊದಲಾದವರು ತಮ್ಮ ಬಾಳಿನ ಒಂದೆರಡು ಉತ್ಕಟ ಕ್ಷಣಗಳ ಪರಿಣಾಮವಾಗಿ ಒಂದು ಅಥವಾ ಎರಡು ಮೇರುಕೃತಿಗಳನ್ನು ಕನ್ನಡ ಕಾದಂಬರಿ ಲೋಕಕ್ಕೆ ನೀಡಿದ್ದರೆ, ಕಾರಂತರಂತೆ ಭೈರಪ್ಪನವರು ಐದಾರು ಬೃಹತ್ತಾದ, ಮಹತ್ತಾದ, ಅತಿ ಶ್ರೇಷ್ಠ ಗದ್ಯ ಮಹಾಕಾವ್ಯಗಳನ್ನು ಅರ್ಥಾತ್ ಕಾದಂಬರಿಗಳನ್ನು ನೀಡಿದ್ದಾರೆ.

ಪ್ರಾದೇಶಿಕ ಭಾಷೆಯನ್ನು ವೈವಿಧ್ಯಮಯವನ್ನಾಗಿ, ಗ್ರಾಂಥಿಕ ಭಾಷೆಯನ್ನು ಚಿಂತನದ ಎಲ್ಲ ಹಂತಗಳನ್ನು ನಿರೂಪಿಸುವ ಹಾಗೆ ಬಳಸಿರುವುದು ಇವರ ಕೃತಿಗಳ ವೈಶಿಷ್ಟ್ಯವಾಗಿದೆ. ಶ್ರೇಷ್ಠ ತತ್ತ್ವಶಾಸ್ತ್ರ ಗ್ರಂಥಗಳು ಕಾದಂಬರಿ ರೂಪದಲ್ಲಿ ಕಾಣಿಸಿ ಕೊಂಡಿವೆಯೋ ಏನೋ ಎಂಬಷ್ಟರಮಟ್ಟಿಗೆ ವೈಚಾರಿಕತೆ ದಟ್ಟವಾಗಿ, ವಿಪುಲವಾಗಿ ಚಿತ್ರಿತವಾಗಿದೆ. ಇವರ ಕಾದಂಬರಿ ಅಷ್ಟಾಗಿ ಕಲಾತ್ಮಕ ನಿರೂಪಣೆ ಆಗಿಲ್ಲ ಎಂಬ ಟೀಕೆಗೂ ಕಾರಣವಾಗಿರುವುದುಂಟು. ಅದೇನೇ ಇದ್ದರೂ ಇಂಥ ಗಾಢ ಚಿಂತನೆಯನ್ನು ಕಾದಂಬರಿಗಳಲ್ಲಿ ಅಗಾಧ ಪ್ರಮಾಣದಲ್ಲಿ ಯಾವ ಕನ್ನಡ ಕಾದಂಬರಿಕಾರನೂ ನೀಡಿಲ್ಲ.

❑

# ಪಿ. ಲಂಕೇಶ್

ಎಂ.ಎಸ್. ರಘುನಾಥ್

ಇಂದಿನ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಲಂಕೇಶ್ ಅನನ್ಯ ಹಾಗೂ ಪ್ರಮುಖ ಲೇಖಕರಲ್ಲೊಬ್ಬರಾಗಿದ್ದಾರೆ. ಆರಂಭದಿಂದಲೂ ಭಿನ್ನ ಧಾಟಿಯಲ್ಲೇ ಬರೆಯತೊಡಗಿ ನವ್ಯಸಾಹಿತ್ಯ ಪಂಥದ ಉತ್ಕರ್ಷ ಸಮಯದಲ್ಲಿದ್ದು ವಿಶಿಷ್ಟ ಸಂವೇದನೆಗಳ ಅಭಿವ್ಯಕ್ತಿಗೆ ತಮ್ಮದೇ ಆದ ಮಾರ್ಗವನ್ನು ಕಂಡುಕೊಂಡವರು. ಕಾವ್ಯ, ಸಣ್ಣಕತೆ, ಕಾದಂಬರಿ, ನಾಟಕ, ವಿಮರ್ಶೆ, ಅನುವಾದ, ಆತ್ಮಚರಿತ್ರೆ- ಹೀಗೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೃಷಿ ಮಾಡಿ ತಮ್ಮತನದ ವಿಶಿಷ್ಟ ಛಾಪು ಮೆರೆಯುವುದರಲ್ಲಿ ಯಶಸ್ವಿಯಾದವರು. ಲಂಕೇಶರ ಪ್ರತಿಭೆ ಚಲನ ಚಿತ್ರ ನಿರ್ದೇಶನಕ್ಕೂ ಹೊರಳಿ ಅಲ್ಲಿಯೂ ರಾಷ್ಟ್ರಮಟ್ಟದ ಪ್ರಶಸ್ತಿ ಗಳಿಕೆ ಯಲ್ಲಿ ಯಶಸ್ಸು ಪಡೆಯಿತು. ತಮ್ಮದೇ ಆದ ಪತ್ರಿಕೆಯ ಸಂಪಾದಕತ್ವ ದಿಂದಾಗಿ ಜನಪ್ರಿಯತೆಯನ್ನು ಪಡೆದು ಅದರಲ್ಲಿನ ಬರಹಗಳಲ್ಲದೆ, ಸಾಹಿತ್ಯ ರಚನೆಯಲ್ಲಿಯೂ ತೊಡಗಿಸಿಕೊಂಡಿರುವುದು ಲಂಕೇಶರ ವ್ಯಕ್ತಿತ್ವದ ವೈಶಿಷ್ಟ್ಯವಾಗಿದೆ.

ಲಂಕೇಶರು ಹುಟ್ಟಿದ್ದು 1935ರಲ್ಲಿ ಶಿವಮೊಗ್ಗೆ ಬಳಿಯ ಕೊನಗವಳ್ಳಿ ಎಂಬ ಗ್ರಾಮದಲ್ಲಿ. ಅಲ್ಲಿಯೇ ಆರಂಭವಾದ ವಿದ್ಯಾಭ್ಯಾಸ ನಂತರ ಶಿವಮೊಗ್ಗದ ಇಂಟರ್ ಮೀಡಿಯಟ್ ಕಾಲೇಜಿನಲ್ಲಿ ಮುಂದುವರಿಯಿತು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ (1955-58) ಇಂಗ್ಲಿಷ್ ಆನರ್ಸ್ ಹಾಗೂ ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ (1958-59) ಎಂ.ಎ. ಪದವಿಯನ್ನು ಪಡೆದರು.

ಮಲೆನಾಡಿನ ದಟ್ಟ ಪರಿಸರದಿಂದ ಬಂದ ಲಂಕೇಶರ ಅಧ್ಯಾಪನ ಸೇವೆ ಆರಂಭಗೊಂಡಿದ್ದು ತಾವೇ ಓದಿದ ಶಿವಮೊಗ್ಗೆಯ ಸಹ್ಯಾದ್ರಿ ಕಾಲೇಜಿನಲ್ಲಿ (1959-62), ನಂತರ ಕಲಿಸಿದ್ದು ಸೆಂಟ್ರಲ್ ಕಾಲೇಜಿನಲ್ಲಿ ಮೂರುವರ್ಷ (1962-65), ಸರ್ಕಾರಿ ಫಸ್ಟ್ ಗ್ರೇಡ್ ಕಾಲೇಜಿನಲ್ಲಿ ಒಂದು ವರ್ಷ. ಇದಾದ ನಂತರ 1966ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಅಧ್ಯಾಪಕರಾಗಿ ನೇಮಕಗೊಂಡು 1978ರಲ್ಲಿ ವೃತ್ತಿಗೆ ರಾಜೀನಾಮೆ ನೀಡಿದರು. 1977ರಲ್ಲಿ ಚಿತ್ರ ನಿರ್ದೇಶನ ಆರಂಭಿಸಿದ ಲಂಕೇಶರಿಗೆ ಅವರ ಮೊದಲ ಚಿತ್ರ 'ಪಲ್ಲವಿ'ಗೆ ಉತ್ತಮ ನಿರ್ದೇಶನದ ರಾಷ್ಟ್ರ ಪ್ರಶಸ್ತಿ ದೊರೆಯಿತು.

ಲಂಕೇಶರು ಪ್ರಧಾನವಾಗಿ ಕತೆಗಾರರು. ಕಳೆದ ಮೂವತ್ತು ವರ್ಷಗಳಿಂದ ಸಣ್ಣಕತೆಗಳನ್ನು ರಚಿಸುತ್ತಲೇ ಇದ್ದಾರೆ. ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಎಂ.ಎ. ವಿದ್ಯಾರ್ಥಿಯಾಗಿದ್ದಾಗಲೇ 1958ರಲ್ಲಿ ಬರೆದ 'ವಾಮನ' ಕತೆಯಿಂದ ಆರಂಭಗೊಂಡು, 1991ರಲ್ಲಿ ಬರೆದ 'ದಾಳಿ' ಕತೆಯವರೆಗೆ 37ಕ್ಕೂ ಮಿಕ್ಕು ಕತೆಗಳನ್ನು ಬರೆದಿದ್ದಾರೆ. 'ಕೆರೆಯ ನೀರನು ಕೆರೆಗೆ ಚೆಲ್ಲಿ' (1963) ಅವರ ಮೊದಲ ಕಥಾ ಸಂಗ್ರಹ. ನಂತರ ಬಂದದ್ದು 'ನಾನಲ್ಲ' (1970). 'ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ' (1973), 'ಕಲ್ಲು ಕರಗುವ ಸಮಯ' (1990) 'ಉಲ್ಲಂಘನೆ' (1996) ನಂತರದ ಕಥಾ ಸಂಕಲನಗಳು. 'ಬಿಚ್ಚು' ಹಾಗೂ 'ತಲೆಮಾರು' ಕವನ ಸಂಕಲನಗಳು. 'ಪ್ರಸ್ತುತ' ಅವರ ವಿಮರ್ಶಾ ಲೇಖನಗಳ ಸಂಗ್ರಹ. ಒಟ್ಟು ಕಾದಂಬರಿಗಳು ಮೂರು: 'ಬಿರುಕು' (1967) 'ಮುಸ್ಸಂಜೆಯ ಕಥಾ ಪ್ರಸಂಗ' (1978) ಹಾಗೂ 'ಅಕ್ಕ' (1991) 'ತೆರೆಗಳು' ಮತ್ತು ಇತರ ಆರು ನಾಟಕಗಳು ಪ್ರಕಟವಾಗಿದ್ದು 1964ರಲ್ಲಿ. 'ಸಂಕ್ರಾಂತಿ' ಹಾಗೂ 'ಗುಣಮುಖ' ನಂತರದ ನಾಟಕಗಳು. 'ದೊರೆ ಈಡಿಪಸ್' ಹಾಗೂ 'ಅಂತಿಗೊನೆ' ಪ್ರಮುಖ ಅನುವಾದಿತ ನಾಟಕಗಳು. 'ಕಂಡದ್ದು ಕಂಡ ಹಾಗೆ' ಹಾಗೂ 'ಟೀಕೆ ಟಿಪ್ಪಣಿ' ಗದ್ಯ ಬರಹಗಳ ಸಂಕಲನಗಳು. 1997ರಲ್ಲಿ ಪ್ರಕಟವಾದ 'ಹುಳಿಮಾವಿನ ಮರ' ಅವರ ಆತ್ಮಕಥನ.

ಪ್ರಶಸ್ತಿ ಪುರಸ್ಕಾರಗಳ ಬಗ್ಗೆ ಎಂದೂ ತಲೆ ಕೆಡಿಸಿಕೊಳ್ಳದ ಲಂಕೇಶರಿಗೆ 1986ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, 1993ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿದೆ.

2

ನವೋದಯ ಸಾಹಿತ್ಯದ ಆದರ್ಶವಾದ, ಭಾವರಂಜಕತೆಗೆ ವಿರುದ್ಧವಾಗಿ ಹೊಸ ತಲೆಮಾರಿನ ಅತೃಪ್ತಿ, ಅಸಮಾಧಾನ, ಆಕ್ರೋಶಗಳಿಗೆ ದನಿಕೊಟ್ಟವರಲ್ಲಿ ಲಂಕೇಶ್ ಪ್ರಮುಖರೆನ್ನಬಹುದು. ಮೊದಲ ಈ ಆಕ್ರೋಶಕ್ಕೆ ಅಭಿವ್ಯಕ್ತಿ ಮಾಧ್ಯಮವಾಗಿದ್ದು ಕಾವ್ಯ. 'ಬಿಚ್ಚು' ಎಂಬ ಮೊದಲ ಕವನ ಸಂಕಲನದಲ್ಲೇ ಅವರು ಬಂಡಾಯ ಪ್ರವೃತ್ತಿಯನ್ನು ನೈಜ ದನಿಯಲ್ಲಿ ಮೊಳಗಿಸಿದರೆನ್ನಬಹುದು. 'ದೇಶಭಕ್ತ ಸೂಳೆ ಮಗನ ಪದ್ಯ' - ಈ ಕವಿತೆಯಲ್ಲಿ ರಾಷ್ಟ್ರವಂಚಕ ನಾಯಕರನ್ನು ಕುರಿತು ಹೀಗೆ ಅರ್ಭಟಿಸಿದ್ದಾರೆ:

'ಆಹಾ ದೇಶ ಬಾಂಧವ, ನಿನ್ನ ಅಪ್ಪಿಕೊಂಡಾಡಲೆ? ನಿನ್ನ ಕೂದಲು ಬಾಚಿ ಹೂಮಾಲೆ ಹಾಕಲೆ? ವೀರ ಮಾತೆಯ ಆರ್ಯ ಸಂಸ್ಕೃತಿಯ ಕನಸು ಅನ್ನಲೆ? ತಿಲಕವಿಟ್ಟು ಸಂತೋಷ ತರಲೆ? ಸೂಳೆಮಗನೆ ನಿನ್ನ ಕರೆದಾಗ ನನ್ನನ್ನೇ ಕರೆದಂತಾಗುತ್ತಿ, ನೀನೆಂದೊಡನೆ ನಿನ್ನ ಅಮ್ಮನ ನೆನಪಾಗುತ್ತಿ!" ಇದನ್ನು ಕುರಿತು ಗಿರಡ್ಡಿಯವರು ಹೇಳಿರುವಂತೆ, "ಒಬ್ಬ ಭ್ರಷ್ಟ ರಾಜಕಾರಣಿ ಯನ್ನು ಕಂಡಾಗ ಸಿಟ್ಟು ಬರುವುದು ಕೇವಲ ಅವರ ಬಗ್ಗೆ ಮಾತ್ರವಲ್ಲ ಸ್ವಂತದ ಬಗ್ಗೆ ಕೂಡ. ಯಾಕೆಂದರೆ ಅವನೂ ತಾನೂ ಬೇರೆಯಲ್ಲ. ನಮ್ಮ ಮನಸ್ಸಿನ ಆಳದಲ್ಲಿರುವ ದುರಾಶೆಯ ಪ್ರತಿರೂಪವೇ ಅವನು. ಬಂಡವಾಳ ಶಾಹಿ ಶೋಷಕ ವ್ಯವಸ್ಥೆಯನ್ನು ಕುರಿತು ಅವರ ನಿಲುವು ಹಾಗೇ ಇದೆ."[1]

'ಅವ್ವ' ಪದ್ಯದ ಲಯವನ್ನು ಗಮನಿಸಬಹುದು.

ನನ್ನವ್ವ ಬದುಕಿದ್ದು
ಕಾಳು ಕಡ್ಡಿಗೆ
ದುಡಿತಕ್ಕೆ ಮಕ್ಕಳಿಗೆ
ಸರೀಕರ ಎದುರು ತಲೆಯೆತ್ತಿ ನಡೆಯಲಿಕ್ಕೆ

ಆಡುವ ಮಾತಿನ ಲಯ ಮತ್ತು ನುಡಿಗಟ್ಟಿಗೆ ಹತ್ತಿರವಾಗಿದ್ದು ತಮ್ಮ ಅನುಭವಕ್ಕೆ ಸಮಾಧಾನಕರವಾದ ತಕ್ಕ ಭಾಷಾಶರೀರವನ್ನು ಇಂತಹ ಪದ್ಯಗಳಲ್ಲಿ ಕಾಣಬಹುದಾಗಿದೆ.

ಲಂಕೇಶರ ಬಂಡಾಯ ಮನೋಧರ್ಮಕ್ಕೆ ತಕ್ಕ ಮಾಧ್ಯಮ ಕಾವ್ಯವಾಗಿದ್ದರೂ ಅವರು 'ತಲೆಮಾರು' ಎಂಬ ಸಂಕಲನ ಪ್ರಕಟಿಸಿದ ನಂತರ ಕಾವ್ಯದಲ್ಲಿ ಹೆಚ್ಚು ಆಸ್ಥೆ ತೋರಿಸಲಿಲ್ಲ. ನವ್ಯಕಾವ್ಯದ, ಮೇರು ಸಮಯದಲ್ಲಿ 'ಅಕ್ಷರ ಹೊಸ ಕಾವ್ಯ' ಎಂಬ ನವ್ಯ ಕಾವ್ಯದ ಪ್ರಾತಿನಿಧಿಕ ಆ್ಯಂಥಾಲಜಿಯನ್ನು ಹೊರತಂದು ಕಾವ್ಯ ಕ್ಷೇತ್ರಕ್ಕೆ ಇಂಬುಕೊಟ್ಟರೆನ್ನಬಹುದು.

3

ನಾಟಕಕಾರರಾಗಿ ಲಂಕೇಶರು ಕನ್ನಡದಲ್ಲಿ ವಿಶಿಷ್ಟಸ್ಥಾನ ಪಡೆದಿದ್ದಾರೆ. ಅವರ ಮೊದಲ ನಾಟಕ 'ಟಿ. ಪ್ರಸನ್ನನ ಗೃಹಸ್ಥಾಶ್ರಮ'. ನಂತರ ಸಾಲಾಗಿ ಬಂದದ್ದು 'ತೆರೆಗಳು', 'ನನ್ನ ತಂಗಿಗೊಂದು ಗಂಡು ಕೊಡಿ', 'ಗಿಳಿಯು ಪಂಜರದೊಳಿಲ್ಲ',

'ಸಿದ್ಧತೆ', 'ಪೋಲೀಸರಿದ್ದಾರೆ ಎಚ್ಚರಿಕೆ' ಹಾಗೂ 'ಕ್ರಾಂತಿ ಬಂತು ಕ್ರಾಂತಿ'. ಈ ಎಲ್ಲ ನಾಟಕಗಳ ಮುಖ್ಯ ವಸ್ತು - ನಮ್ಮ ಸಮಾಜದಲ್ಲಿ ಕಂಡು ಬರುವ ಆಷಾಢಭೂತಿತನ, ಜನರ ಸಿನಿಕತೆ, ವ್ಯವಸ್ಥೆಯ ನಿಷ್ಫಲತೆ ಬಗ್ಗೆ ಜನರ ಹತಾಶೆ, ಆಕ್ರೋಶ, ಸಾಮಾಜಿಕ ಅಸಮಾನತೆಯ ವಿರುದ್ಧ ಪ್ರತಿಭಟನೆ, ಇತ್ಯಾದಿ. ಆಸ್‌ಬೋರ್ನ್‌ನ ದಟ್ಟ ಪ್ರಭಾವವಿರುವ ಇವರ ನಾಟಕಗಳು 'Angry Young Man'ನ ಪ್ರತಿ ರೂಪದಂತಿದ್ದು ಲಂಕೇಶರನ್ನು ಆಧುನಿಕ ಕನ್ನಡ ರಂಗಭೂಮಿಯ ಆಸ್‌ಬೋರ್ನ್ ಎಂದು ಕರೆಯಬಹುದು. 'ಪೋಲಿಸರಿದ್ದಾರೆ ಎಚ್ಚರಿಕೆ' ಬಗ್ಗೆ ಲಂಕೇಶರೇ ಹೇಳುವಂತೆ "ಸಂಸರಿಗೆ ಇತ್ತೆಂದು ಹೇಳುವ 'Persecution Complex'ನ ಒಂದು ರೀತಿಯ ಶೋಧನೆ ಈ ನಾಟಕದ್ದು. ಇದು ಸಂಸ ಅವರ ಮನಃಸ್ಥಿತಿ ಎಂಬುದಕ್ಕೆ ಮಾತ್ರ ನನ್ನ ಕುತೂಹಲವಲ್ಲ; ಎಲ್ಲರ ಆಳದ ನೋವು ಎಂಬ ಕಾರಣಕ್ಕೆ ನನ್ನ ಆಶ್ಚರ್ಯ".

'ಕ್ರಾಂತಿ ಬಂತು ಕ್ರಾಂತಿ' ಮತ್ತೊಂದು ರೀತಿಯ ಪ್ರತಿಭಟನೆಯ ನಾಟಕ. ನಮ್ಮ ದೇಶದ ಸಮಾಜವಾದವನ್ನೂ ಅದರ ಹೆಸರಿನಲ್ಲಿ ನಡೆಯುತ್ತಿರುವ ರಾಜಕೀಯ ಡಾಂಭಿಕತನ ಕುರಿತ ವಿಡಂಬನೆಯಿದೆ. ಅದರ ನಾಯಕ ನಕ್ಸಲೈಟ್ ಭಗವಾನನ ಮಾತುಗಳು ಮನನೀಯವಾಗಿದೆ: "ನಮಗೀಗ ಬೇಕಾದದ್ದು ಸಮಾಜವಾದವಲ್ಲ, ಪ್ರಜಾಪ್ರಭುತ್ವವಲ್ಲ, ಅಧಿಕಾರ ಶಾಹಿಯಲ್ಲ- ನಮ್ಮ ಬದುಕನ್ನು ಮೂಲಭೂತವಾಗಿ ಬದಲಿಸಬಲ್ಲಂಥ ಬಿರುಗಾಳಿ. ನಮ್ಮ ಎಲ್ಲ ಕನಸುಗಳನ್ನು ನಿಜವಾಗಿಸಬಲ್ಲಂಥ ಕ್ರಾಂತಿ.... ಜಡ ಬದುಕನ್ನು ಜೀವಂತ ಗೊಳಿಸಬಲ್ಲಂಥ ಕ್ರಾಂತಿ." ಈ ನಾಟಕ ವೈಚಾರಿಕ ಕ್ರಾಂತಿಯ ಕಡೆಗೆ ಸಮಕಾಲೀನ ಯುವಪೀಳಿಗೆಯ ಮನಃಸ್ಥಿತಿಯನ್ನು ಬಡಿದೆಬ್ಬಿಸಿತೆನ್ನಬಹುದು.

ಈ ಗುಂಪಿನ ನಾಟಕಗಳ ತರುವಾಯ ಬಂದ 'ಸಂಕ್ರಾಂತಿ' ಮತ್ತು 'ಗುಣಮುಖ' ಮತ್ತೊಂದು ಬಗೆಯವು. 'ಸಂಕ್ರಾಂತಿ' ನೆಹರೂ ಯುಗದ ಉತ್ತಮ ನಾಟಕ ಕೃತಿ ಎಂದು ಡಾ. ಯು.ಆರ್. ಅನಂತಮೂರ್ತಿಯವರಿಂದ ಪ್ರಶಂಸೆಗೆ ಒಳಗಾದ ನಾಟಕ. ಬಸವಣ್ಣನವರ ಕಾಲದಲ್ಲಿ ವ್ಯವಸ್ಥೆ ಹಾಗೂ ಕ್ರಾಂತಿಯ ನಡುವೆ ಉಂಟಾಗುವ ಸಂಘರ್ಷದ ಚಿತ್ರಣ ಬಿಜ್ಜಳ ಹಾಗೂ ಬಸವಣ್ಣ ಈ ಶಕ್ತಿಗಳ ಸಂಕೇತವಾಗುತ್ತಾರೆ. ಇನ್ನೊಂದು ಸವರ್ಣೀಯರ ಹಾಗೂ ದಲಿತರ ನಡುವೆ ಘಟಿಸುವ ಸಂಘರ್ಷ. ಈ ಸಂಘರ್ಷದ ಸ್ವರೂಪ ನಾಟಕದಲ್ಲಿ ಅತ್ಯಂತ ಸಂಕೀರ್ಣವಾಗಿ ಮೂಡಿಬಂದಿದೆ. ಈ ಸಂಘರ್ಷದಲ್ಲಿ ಬಿಜ್ಜಳ ಸಂಕ್ರಾಂತಿಯ ಬಲಿಯಾಗುತ್ತಾನೆ ಈ ಬಲಿಯಲ್ಲಿ ಬಿಜ್ಜಳನಿಗೆ ಭವಿಷ್ಯದ ಸಂಕೇತ ಕಾಣುತ್ತದೆ. ಅವನು ಹೇಳುವಂತೆ "ನಾಳೆಯ ಸಂಕ್ರಾಂತಿ ನಮಗೆ ಮತ್ತೊಮ್ಮೆ ಭೂಮಿಯ ವಾಸನೆ ತರಬೇಕು. ಮಾತಿನಲ್ಲಿ ಮುಳುಗಿದ ನಮಗೆ ನಾಳೆ ರುದ್ರನ ರಕ್ತಭೂಮಿಯ ನೆನಪು ಮಾಡಿಕೊಡಬೇಕು." ಜಿ.ಎಸ್. ಆಮೂರ್‌ರವರು ಹೇಳಿರುವಂತೆ "ನನ್ನ ವ್ಯವಸ್ಥೆ ನಿಮ್ಮ ಕ್ರಾಂತಿ ಎರಡನ್ನೂ ಮೀರಿದ್ದು ಇದ್ದೀತು ಅಲ್ಲವೆ? ಎನ್ನುವ ಶೋಧದ ಸೂಚನೆಯನ್ನು, ಪ್ರೇಮ ಇಂಥ ಪರ್ಯಾಯವಾಗಬೇಕು ಎನ್ನುವ ಪ್ರಶ್ನೆಯನ್ನು ನಾಟಕ ನಮ್ಮೆದುರಿಗಿಡುತ್ತದೆ... ಸಂಕ್ರಾಂತಿ ಇಂದಿಗೂ ಪ್ರಸ್ತುತವಿರುವ ಸಾಮಾಜಿಕ ಸಮಸ್ಯೆಗಳ ಜೊತೆಗೆ ಸಾರ್ವತ್ರಿಕವಾದ ಮಾನವೀಯ ಅವಸ್ಥೆಯ ಮೇಲೂ ಬೆಳಕು ಚೆಲ್ಲುವಂತಾಗುತ್ತದೆ."[2]

ಸಂಕ್ರಾಂತಿ ಧಾರ್ಮಿಕ ಚರಿತ್ರೆಯ ಸಂಘರ್ಷವನ್ನು ಚಿತ್ರಿಸಿದರೆ, 'ಗುಣಮುಖ' ಮೊಗಲ್ ಇತಿಹಾಸದ ನಾದಿರ್‌ಷಾ ಜೀವದಲ್ಲಿ ಎದುರಿಸಿದ ಸೋಲು, ದ್ವಂದ್ವಗಳು, ಮಾನಸಿಕ ಅಸ್ವಸ್ಥತೆಗಳನ್ನು ಚಿತ್ರಿಸುತ್ತದೆ. "ನಾದಿರ್ ಷಾನ ಸೋಲಿನಲ್ಲಿ ನನ್ನ ಮನಸ್ಸು ಸೆಳೆದದ್ದು ಆತನ ಅನುಮಾನ" ನಿಷ್ಠುರತೆ ಮತ್ತು ಕಾಯಿಲೆ. ಘಟನಾವಳಿಗಳು ಮತ್ತು ಮನುಷ್ಯರ ದ್ವಂದ್ವಗಳು ನಾದಿರ್‌ನನ್ನು ರಸಾತಳಕ್ಕೆ ತಳ್ಳಿದರೂ ಆತ ಎದ್ದು ಬರುವ ರೀತಿ ಮತ್ತು ಸತ್ಯ ಮತ್ತು ಸುಳ್ಳು ಒಬ್ಬ ಸ್ವಪ್ರತಿಷ್ಠನನ್ನು ಸ್ಪರ್ಶಿಸುವ ಬಗೆ" ಎಂದು ಲಂಕೇಶರೇ ಹೇಳಿಕೊಂಡಿದ್ದಾರೆ.

4

ಈಗಾಗಲೇ ಹೇಳಿರುವಂತೆ ಲಂಕೇಶರು ಪ್ರಧಾನವಾಗಿ ಕತೆಗಾರರು. ಬೆಚ್ಚಗಿನ ಖಾಸಗಿ ಅನುಭವಗಳನ್ನೂ ಸಹ ನಿರೂಪಿಸುವ ಕಥನ ಕಲೆ ಇವರಿಗೆ ಸಿದ್ಧಿಸಿದೆ. ಸಣ್ಣಕತೆಗಳನ್ನು ಬರೆಯುವ ಜೊತೆ ಜೊತೆಯಲ್ಲೇ ಮೂರು ಕಾದಂಬರಿಗಳನ್ನು ಬರೆದಿದ್ದಾರೆ. ಅವುಗಳೆಂದರೆ 'ಬಿರುಕು' (1967), 'ಮುಸ್ಸಂಜೆಯ ಕಥಾ ಪ್ರಸಂಗ' (1978) ಹಾಗೂ 'ಅಕ್ಕ' (1991).

ಫ್ಯಾಂಟಸಿ ನಿರೂಪಣೆಯನ್ನು ಲಂಕೇಶರು ಬಹಳ ಹಿಂದೆಯೇ ಆರಂಭಿಸಿದ್ದಕ್ಕೆ 'ಬಿರುಕು' ಕಾದಂಬರಿಯೇ ಉತ್ತಮ ನಿದರ್ಶನ. ಇದರ ನಾಯಕ ಬಸವರಾಜ ತನ್ನ ಸುತ್ತಮುತ್ತ ಕಾಣುವ ಸತ್ವಹೀನವಾದ ಭ್ರಷ್ಟ ಸಮಾಜದೊಂದಿಗೆ ರಾಜಿಮಾಡಿಕೊಳ್ಳ ಲಾರದವನು. ಅದರ ಬೂರ್ಜ್ವಾ ಮೌಲ್ಯಗಳನ್ನು ಕಂಡರೆ ಅವನಿಗೆ ದ್ವೇಷ. ಆದರೆ ಎಲ್ಲ ನವ್ಯ ನಾಯಕರಂತೆ ಅವನೂ ದುರ್ಬಲ ಮತ್ತು ಸಂವೇದನಾಶೀಲ. ಸಮಾಜದ ವಿರುದ್ಧ ಬಂಡೇಳಲೂ ಶಕ್ತಿಯಿಲ್ಲದವನು ಹಾಗಾಗಿ ಈ ದ್ವಂದ್ವದಿಂದ ಪಾರಾಗಲು ಫ್ಯಾಂಟಸಿಯ ಹಾಗೂ ಸುಳ್ಳಿನ ಪರಿಸರದಲ್ಲಿ ತಲೆ ತಪ್ಪಿಸಿಕೊಳ್ಳುತ್ತಾನೆ. ಆದರೆ ಅವನ ಬದುಕು ಕೂಡಾ ದುರಂತವಾಗಿದೆ; ಕಾರಣ ಅವನು ಕೂಡಾ ಸಮಾಜ ಪ್ರತಿನಿಧಿಸುವ ಮೌಲ್ಯಗಳ ಕೂಸೇ ಆಗಿದ್ದಾನೆ. ಗಿರಡ್ಡಿಯವರು ಹೇಳುವಂತೆ, "ಈ ಕಾದಂಬರಿಯ ನಾಯಕನ ನಿರಾಕರಣೆ ಬರಿಯ ಬಂಡುಖೋರತನದ್ದಾಗಿದೆ. ಯಾವ ತಾತ್ವಿಕ ತಳಹದಿಯೂ ಇದಕ್ಕಿಲ್ಲವಾದ್ದರಿಂದ ಈ ಸಮಾಜದೊಂದಿಗಿನ ನಾಯಕನ ಅಸಮಾಧಾನ ಆಳವಾದದ್ದೆಂದು ನಮಗನ್ನಿಸುವುದಿಲ್ಲ." ಕಾದಂಬರಿಯ ತಂತ್ರದ ಬಗ್ಗೆ ಅವರು ಹೇಳಿರುವಂತೆ, "ಬಿರುಕು ಕಾದಂಬರಿಯ ತಂತ್ರದ ನಾವೀನ್ಯತೆ ಇರುವುದು ಕಥಾವಸ್ತುವಿನ ಅನಿವಾರ್ಯ ಭಾಗವಾಗಿ ಬಂದಿರುವುದು ಒಂದು ದೃಷ್ಟಿಯಿಂದ ತಂತ್ರವೇ ಈ ಕಾದಂಬರಿಯ ವಸ್ತುವಾಗಿದೆಯೆಂದೂ ಹೇಳಬಹುದು. ಎಂದರೆ 'ಬಿರುಕು' ಕಾದಂಬರಿಯಲ್ಲಿ ಫ್ಯಾಂಟಸಿ ಕೇವಲ ತಂತ್ರದ ವೈಶಿಷ್ಟ್ಯವಾಗಿರದೆ, ನಾಯಕನ ಮನೋಧರ್ಮವಾಗಿದೆ. ಅಂತೆಯೇ ಕಾದಂಬರಿಯ ವಸ್ತುವೂ ಆಗಿದೆ."[3]

'ಮುಸ್ಸಂಜೆಯ ಕಥಾ ಪ್ರಸಂಗ' ನವ್ಯಮಾರ್ಗಕ್ಕೆ ವಿದಾಯ ಹೇಳಿತು. ಅದು ವಾಸ್ತವವಾದೀ ರಾಜಮಾರ್ಗದಲ್ಲಿದೆ. ಮೂರನೆಯ ಕಾದಂಬರಿ 'ಅಕ್ಕ' (1991)ದಲ್ಲಿ ಕೊಳೆಗೇರಿಯ ಬದುಕು ಚಿತ್ರಿತವಾಗಿದೆ. ಲಂಕೇಶರೇ ಹೇಳುವಂತೆ, 'ಈ ಕಾದಂಬರಿಯ ಕ್ಯಾತ ಕಂಡದ್ದನ್ನು ಹೇಳುವ 'ಈ ಪುಟ್ಟ ಕಾದಂಬರಿ ನಿಜಕ್ಕೂ ರಾಜಕೀಯ ಕಾದಂಬರಿ. ಕೊಳೆಗೇರಿಯೊಂದರಲ್ಲಿ ತಂದೆ ತಾಯಿಯರನ್ನು ಕಳೆದುಕೊಂಡ ಅಕ್ಕ ತಮ್ಮ ಜೀವಿಸುತ್ತಿದ್ದಾರೆ. ಇವರಿಬ್ಬರ ಸಂಬಂಧಗಳ ಮೂಲಕ ಕಾದಂಬರಿ "ಮನುಷ್ಯ ಸಂಬಂಧಗಳ ಸತ್ಯಗಳನ್ನು ಹೊಸ ಸಾಮಾಜಿಕ, ಆರ್ಥಿಕ ರಾಜಕೀಯ ಸತ್ಯಗಳನ್ನು ಬರೆಯುವ ಮಹತ್ವಾಕಾಂಕ್ಷೆಯನ್ನು ಪ್ರಕಟಪಡಿಸುತ್ತದೆ."[4] ಕೊಳೆಗೇರಿಯ ವಾಸ್ತವತೆ ಮೂಡಿ ಬಂದಿರುವುದರಿಂದಲೇ "ದಲಿತ, ಬಂಡಾಯ ಚಳುವಳಿಗಳ ಸಂದರ್ಭ ದಲ್ಲಿಯೂ 'ಅಕ್ಕ' ತುಂಬ ಪ್ರಸ್ತುತವಾದ ಗಣನೀಯ ಕೃತಿ ಎನಿಸಿಕೊಳ್ಳುತ್ತದೆ.... ಇದು ಲಂಕೇಶರ ಕಥನ ಸಾಹಿತ್ಯದಲ್ಲಿ ಒಂದು ಮಟ್ಟದ ಬೆಳವಣಿಗೆಯನ್ನು ತೋರುವಂತೆ ಸಮಕಾಲೀನ ಕನ್ನಡ ಕಥಾಸಾಹಿತ್ಯಕ್ಕೂ ತನ್ನದೇ ಆದ ಕಾಣಿಕೆಯನ್ನು ನೀಡಿದೆ."[5]

ಲಂಕೇಶರ ಸಣ್ಣಕತೆಗಳಲ್ಲಿ ಒಂದು ಲೋಕವನ್ನೇ ತೆರೆದಿಟ್ಟಂತೆ ನಮಗೆ ಭಾಸವಾಗುತ್ತದೆ. ಅವರ ಕಥೆಗಳ ಮುಖ್ಯ ವೈಶಿಷ್ಟ್ಯವೆಂದರೆ 'ಕಂಡದ್ದು ಕಂಡ ಹಾಗೇ' ಚಿತ್ರಿಸುವ ಫೋಟೋಗ್ರಾಫಿಕ್ ಮಾದರಿಯ ಕಥನ ಕಲೆ. ಇದಕ್ಕಾಗಿ ಅವರು ಭಾಷೆಯ ಎಲ್ಲ ಸಾಧ್ಯತೆಗಳನ್ನು ಪರಿಣಾಮಕಾರಿಯಾಗಿ ದುಡಿಸಿಕೊಳ್ಳುತ್ತಾರೆ. ಗಿರಡ್ಡಿಯವರು ಹೇಳಿರುವಂತೆ, "ಲಂಕೇಶರು ಕನ್ನಡ ಸಣ್ಣಕತೆಗೆ ಭಾವಗೀತೆಯ ತೀವ್ರತೆಯನ್ನೂ

ಸೂಕ್ಷ್ಮತೆಯನ್ನೂ ತಂದವರು. ನೈತಿಕ ಬಿಕ್ಕಟ್ಟಿನಲ್ಲಿ ಸಿಲುಕುವ ಪ್ರಜ್ಞೆಯ ಅನಿರ್ವಚನೀಯ ಅನಿಸಿಕೆಗಳು ಅವರ ಕತೆಗಳಲ್ಲಿ ಭಾಷೆಯ ಮೂಲಕ ತಮ್ಮ ಸ್ವರೂಪವನ್ನು ಕಂಡುಕೊಳ್ಳಲು ತುಡಿಯುತ್ತಿರುವ ಅನುಭವವಾಗುತ್ತದೆ. 'ವಾಮನ', 'ನಿವೃತ್ತರು' ಮುಂತಾದ ಅವರ ಮೊದಲಿನ ಕತೆಗಳಲ್ಲಿ ಈ ಗುಣ ಅತಿಶಯವಾಗಿ ಕಾಣುತ್ತದೆ."[6] ಆದರೆ ಅಡಿಗರು ಗುರುತಿಸಿರುವಂತೆ, ಇಂಥ ಬರವಣಿಗೆ "ಆಳಕ್ಕೆ ಇಳಿದರೂ ಅಗಲಕ್ಕೆ ಹಬ್ಬಿಕೊಳ್ಳುವುದಿಲ್ಲ. ಎಂದರೆ ಮನುಷ್ಯ ಅಂತರಂಗದ ಬದುಕನ್ನು ಕೆದಕುವ ಸೂಕ್ಷ್ಮಕ್ಕೆ ಸರಿದೊರೆಯಾಗಿ ಅದಕ್ಕೆ ಕಾರಣವಾಗುವ ಸಾಮಾಜಿಕ ಬದುಕಿನ ಲಯಗಳನ್ನು ಅಷ್ಟಾಗಿ ಗ್ರಹಿಸುವುದಿಲ್ಲ."

ಲಂಕೇಶರ ಗದ್ಯಶೈಲಿಯಲ್ಲಿ ಅಡಿಗರು ಗುರುತಿಸಿರುವಂತೆ "ಅವರ ಗದ್ಯದ ಸೊಗಸು ಇರುವುದು ಅದರ ಸಾರ್ಥಕತೆಯಲ್ಲಿ ಉದ್ದೇಶ ಸಿದ್ಧಿಗೆ ತಕ್ಕ ಸಾಧನ ವಾಗಿರುವುದರಲ್ಲಿ.... ಕಾವ್ಯಾನುಭವವನ್ನು ತಂದುಕೊಡುವ ಇವರ ಗದ್ಯಶೈಲಿ ಅದ್ಭುತವಾದರೂ ಅನನ್ಯ ಸಾಧಾರಣವಾದದ್ದು."

1970ರಲ್ಲಿ ಪ್ರಟವಾದ 'ನಾನಲ್ಲ' ಕಥಾ ಸಂಕಲನದ "ರೊಟ್ಟಿ" ಕಥೆ ಲಂಕೇಶರ ಬರವಣಿಗೆಯಲ್ಲಿ ಮಹತ್ವದ ಕಥೆಯೆಂದು ಗುರುತಿಸಲಾಗಿದೆ. ರೊಟ್ಟಿಯ ವಸ್ತು ಉಳ್ಳವರು ಮತ್ತು ಇಲ್ಲದವರ ನಡುವಿನ ಸಂಘರ್ಷ. ಈ ಕಥೆಯಲ್ಲಿ ಹೆಂಗಸೊಬ್ಬಳು ರೇಲ್ವೆ ಸ್ಟೇಷನ್ನಿನ ಬಳಿ ಕುಳಿತು ತನಗೆ ಮತ್ತು ತನ್ನ ಮಕ್ಕಳಿಗಾಗಿ ತಂದಿದ್ದ ರೊಟ್ಟಿಗಳನ್ನು ತೆಗೆಯುತ್ತಾಳೆ. ಅದನ್ನೇ ದೂರದಿಂದ ನೋಡುತ್ತಿದ್ದ ಹಸಿವಿನಿಂದ ಕಂಗಾಲಾಗಿದ್ದ ಭಿಕ್ಷುಕನಂತಿವದ್ದನೊಬ್ಬ ಅವಳ ರೊಟ್ಟಿಗಳನ್ನು ಕದಿಯಲೆತ್ನಿಸುತ್ತಾನೆ. ತಕ್ಷಣವೇ ಬೆಚ್ಚಿ ಬಿದ್ದು ಅವಳು 'ಕಳ್ಳ....ಕಳ್ಳ' ಎಂದು ಕೂಗುತ್ತಾಳೆ. ಸುತ್ತ ಜನ ಸೇರುತ್ತಾರೆ. ಅಸಹಾಯಕತೆಯಿಂದ ನಡುಗುವ ಕಂಠದಲ್ಲಿ ನನ್ನಿಂದ ಕಿತ್ತುಕೊಂಡ ಎಂದು ಹೇಳುತ್ತಾಳೆ. ಏನೋ ಆಗಿದೆಯೆಂಬಂತೆ ಜನ ಸುತ್ತುವರಿಯುತ್ತಾರೆ. ಪೋಲೀಸರ ಆಗಮನ, ಅವನನ್ನು ದೊಣ್ಣೆಯಿಂದ ಹೊಡೆದಾಗ, ಹೆಂಗಸೇ ಏರಿದ ಧ್ವನಿಯಲ್ಲಿ 'ಬೇಡಿ ಹೊಡೆಯಬೇಡಿ' ಎಂದು ಚೀರುತ್ತಾಳೆ. ಅವಳಿಗೆ ನಿಸ್ಸಹಾಯಕತೆ ಒಂದು ಕಡೆ, ರೊಟ್ಟಿ ಕದ್ದವನ ಬಗ್ಗೆ ಮರುಕ ಇನ್ನೊಂದೆಡೆ. ಹೀಗೆ ಬದುಕಿನ ಕಠೋರ ವಾಸ್ತವದ ಚಿತ್ರಣ ಇಲ್ಲಿದೆ. ಅಡಿಗರು ಅದರ ಬಗ್ಗೆ ಬರೆಯುತ್ತ, "ಪೂರ್ವ ಗೃಹೀತವಾದೊಂದು ಸಿದ್ಧಾಂತಕ್ಕೆ ಕಟ್ಟುಬೀಳದೆ ಬದುಕನ್ನು ನೋಡುವ ಕಲೆಗಾರನ ಪೂರ್ಣ ದೃಷ್ಟಿಯ ನೋಟಕ್ಕೆ ಈ ಕಥೆ ಉತ್ತಮ ಉದಾಹರಣೆ....ಈ ಕಥೆ ಲಂಕೇಶರ ಕಲೆಗಾರಿಕೆಯಲ್ಲಿ ಒಂದು ಹೊಸ ಮೈಲಿಗಲ್ಲು ಎಂದು ಹೇಳಬಹುದು"[7] ಎಂದಿದ್ದಾರೆ.

1970ರ ಸರಿಸುಮಾರರಲ್ಲೇ ಡಾ|| ಯು.ಆರ್. ಅನಂತಮೂರ್ತಿ ಯವರು "ನನ್ನ ಕತೆಗಳೊಂದಿಗೆ ಹೋಲಿಸಿ ನೋಡಿದರೆ, ಲಂಕೇಶರ ಕತೆಗಳೇ ಹೆಚ್ಚು ಪ್ರಬುದ್ಧ ವಾಗಿದೆಯೆನಿಸುತ್ತವೆ" ಎಂದು ಬರೆದರು.[8]

ಲಂಕೇಶರ ಕತೆಗಳ ಬಗ್ಗೆ ಕೆಲವೊಂದು ಆರೋಪಗಳನ್ನು ಮಾಡಲಾಗಿದೆ. ಜಿ.ಎಚ್. ನಾಯಕರು ಹೇಳುವಂತೆ, "ಗಾಢವಾದ ಮಾನವ ಸಂಬಂಧಗಳ ಸಂದರ್ಭಗಳೇ ಇವರ ಕಥೆಗಳಲ್ಲಿ ಬರುವುದಿಲ್ಲ... ಹೀಗಾಗಿ ಲಂಕೇಶರ ಕಥೆಗಳ ಮೂಲಕ ವ್ಯಕ್ತವಾಗುವ ಮನಃಸ್ಥಿತಿಗೆ ಮಾನವ ಮನಸ್ಸಿನ ಆಪ್ತವಾದ ಕ್ಷಣಗಳಿಗೆ, ಉದಾತ್ತ ಸಾಧ್ಯತೆಗಳಿಗೆ ಸ್ಪಂದಿಸಲಾರದ ರಿಕ್ತತೆ ಕಾಣಿಸುತ್ತದೆ."[9]

ಲಂಕೇಶರ ಮತ್ತೊಂದು ಕಥೆ 'ನಿವೃತ್ತರು' ಕೂಡ ಗಮನಾರ್ಹ ವಾದುದು. ಇಬ್ಬರು ನಿವೃತ್ತರ ಅನುಭವ ವಾಣಿಯನ್ನು ಕೇಳುವ ನಿರೂಪಕ ಬದುಕಿನ ಕೆಲವು ಆಯಾಮಗಳನ್ನು ಮೆಲುಕು ಹಾಕುತ್ತಾನೆ. ಅದರ ಬಗ್ಗೆ ಜಿ.ಎಚ್. ನಾಯಕರು ಹೇಳುವಂತೆ, "ನಿವೃತ್ತರು ಕಥೆ ಎರಡು ಅಂಶಗಳಲ್ಲಿ ಭಿನ್ನವಾಗಿದೆ. ಇಲ್ಲಿ ಮನುಷ್ಯನ ಸಣ್ಣತನದ ಬಗೆಗೆ ಕಾಣುವ ಕತೆಗಾರನ ನೈತಿಕ ಕಾಳಜಿ ಅವರ ಬೇರೆ ಕಥೆಗಳಂತೆ ನೇತ್ಯಾತ್ಮಕವಾಗಿರದೆ ವಿಷಾದದ ಎಳೆ ಶಕ್ತಿಯುತವಾಗಿ ಸೇರಿಕೊಂಡಿರುವುದರಿಂದ ಗುಣಾತ್ಮಕವಾಗಿದೆ. ಎರಡನೆಯದೆಂದರೆ, ತಾತ್ವಿಕ ಆಯಾಮಗಳನ್ನು ಒಳಗೊಳ್ಳುವ ಯತ್ನ ಹಾಗೂ ಅವರ ಇನ್ನಾವ ಕಥೆಯಲ್ಲಿಯೂ ಕಾಣಿಸದ ಪ್ರಮಾಣದ ಅಂತರ್ಮುಖತೆ ಮತ್ತು ಗುಣಾತ್ಮಕ ನಿರಪೇಕ್ಷತೆ ಇಲ್ಲಿ ಕಾಣಿಸುತ್ತದೆ."[10]

ಎಪ್ಪತ್ತರ ಸುಮಾರಲ್ಲಿ ಬಂದ 'ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ' ಕಥೆ ಕೂಡ ನವ್ಯೋತ್ತರ ಸಂದರ್ಭದಲ್ಲಿ ಸಣ್ಣಕತೆಯಲ್ಲಿ ನಡೆದ ಹೊಸ ಪ್ರಯೋಗಗಳ ಉತ್ತಮ ಮಾದರಿಯಾಗಿದೆ. ಆಮೂರರು ಹೇಳಿರುವಂತೆ "ಶಿಕ್ಷಣದ ಪರಿಣಾಮವಾಗಿ ಗ್ರಾಮೀಣ ಕುಟುಂಬಗಳಲ್ಲಿ ತಲೆದೋರಿದ ಬಿಕ್ಕಟ್ಟುಗಳನ್ನು ಈ ಕತೆ ಅತ್ಯಂತ ಸಮರ್ಥವಾಗಿ ನಿರೂಪಿಸುತ್ತದೆ."[11]

1990ರಲ್ಲಿ ಪ್ರಕಟವಾದ 'ಕಲ್ಲು ಕರಗುವ ಸಮಯ' ಮತ್ತು ಆ ಸಂಕಲನದ ಕತೆಗಳು ಮಹತ್ವದ್ದೆಂದು ಹೇಳಬಹುದು. ಗಿರಡ್ಡಿಯವರು ಹೇಳಿರುವಂತೆ, "ಈ ಕಥೆಗಳಲ್ಲಿ ಮತ್ತೆ ನವ್ಯದ ಸಂಕೀರ್ಣತೆ, ಮಾನವೀಯ ಸಂಬಂಧಗಳ ಜಟಿಲತೆಗಳು ಕಾಣಿಸಿಕೊಂಡಿವೆ.... ಮೊದಲ ಕತೆಗಳಲ್ಲಿ ಕಾಣುತ್ತಿದ್ದ ಸಿಟ್ಟು, ಅಸಹನೆಗಳು ಕಡಿಮೆಯಾಗಿ, ಮಾಗಿದ ತಿಳುವಳಿಕೆಯಲ್ಲಿ, ಸಮಾಧಾನದಲ್ಲಿ, ಆದರೂ ಜೀವನದ ಬಗ್ಗೆ ಗಾಢ ಪ್ರೀತಿಯಿಂದ ಅವರು ಈ ಕತೆಗಳನ್ನು ಹೇಳಿದ್ದಾರೆ..... ಬದುಕು ಮತ್ತು ಕತೆಗಳೆರಡಕ್ಕೂ ಹೀಗೆ ಮುಕ್ತವಾಗಿ ಸ್ಪಂದಿಸುವುದರಿಂದಲೇ ಈ ಕತೆಗಳಿಗೆ ವಿಶೇಷ ವಾದೊಂದು ಆಪ್ತತೆ, ತೀವ್ರತೆ, ಹೊಸತನ ಬಂದಿದೆ." ಹೀಗೆ ಲಂಕೇಶರು ಕಥೆಯಿಂದ ಕಥೆಗೆ ಬೆಳೆದಿರುವ ರೀತಿ, ಅವರಲ್ಲಿ ಆಗಿರುವ ಬದಲಾವಣೆ, ಬದುಕಿನ ದ್ವಂದ್ವ ಗಳನ್ನು ಎದುರಿಸುವ ರೀತಿಯ ನಿರೂಪಣೆ ಎಲ್ಲವೂ ತುಂಬಾ ಕುತೂಹಲಕಾರಿ ಯಾಗಿದೆಯೆಂದು ಹೇಳಬಹುದು.

ಒಬ್ಬ ಲೇಖಕ ಕೃತಿಯಿಂದ ಕೃತಿಗೆ ಹೇಗೆ ಬೆಳೆಯುತ್ತಾನೆ, ಬದಲಾವಣೆ ಹೊಂದುತ್ತಾನೆ. ಓದುಗರನ್ನೂ ಹೇಗೆ ಬೆಳೆಸುತ್ತಾನೆ ಎಂಬುದೇ ಉತ್ತಮ ಕೃತಿಗಳ ಲಕ್ಷಣವಾಗಿದೆ. ಈ ದೃಷ್ಟಿಯಿಂದ ಲಂಕೇಶರು ಇಂದಿನ ಸಂದರ್ಭದಲ್ಲಿ ತುಂಬಾ ಪ್ರಸ್ತುತ ಹಾಗೂ ಮಹತ್ವದ ಲೇಖಕರಲ್ಲೊಬ್ಬರಾಗಿದ್ದಾರೆ ಎನ್ನಬಹುದು.

❑

1. ಸಾಹಿತ್ಯ : ಗಿರಡ್ಡಿ ಗೋವಿಂದರಾಜ
2. ಸಾತ್ವಿಕ ಪಥ : ಜಿ.ಎಸ್. ಆಮೂರ್ ಹತ್ತು ಉತ್ತಮ ನಾಟಕನಲ್ಲಿ
3. ಕಾದಂಬರಿ : ವಸ್ತು ಮತ್ತು ತಂತ್ರದಲ್ಲಿ ಗಿರಡ್ಡಿ ಗೋವಿಂದರಾಜ1. ಪುಸ್ತಕ ಪ್ರೀತಿ : 'ಅಕ್ಕ' ಕುರಿತು ಟಿ.ಪಿ. ಅಶೋಕ.
4. ಪುಸ್ತಕ ಪ್ರೀತಿ : 'ಅಕ್ಕ' ಕುರಿತು ಟಿ.ಪಿ. ಅಶೋಕ.
5. ಸಾತತ್ಯ : ಗಿರಡ್ಡಿ ಗೋವಿಂದರಾಜ
6. ನಾನಲ್ಲ : ಪಿ. ಲಂಕೇಶ್ - ಮುನ್ನುಡಿಯಲ್ಲಿ ಅಡಿಗ. ಗೋ.ಕೃ.
7. ಪ್ರಜ್ಞೆ ಮತ್ತು ಪರಿಸರ : ಡಾ||ಯು.ಆರ್. ಅನಂತಮೂರ್ತಿ
8. ಅನಿವಾರ್ಯ : ಜಿ.ಎಚ್. ನಾಯಕ
9. ಸಾತ್ವಿಕ ಕಥೆ : ಜಿ.ಎಸ್. ಆಮೂರ.

# ಕಮಲಾ ಹಂಪನಾ

ಡಾ. ವಿಜಯಾ ಸುಬ್ಬರಾಜ್

ಶೈಕ್ಷಣಿಕ ವಲಯದಲ್ಲಿ ಸಿ.ಆರ್. ಕಮಲಮ್ಮ ಅಥವಾ ಕಮಲಾ ಮೇಡಂ ಎಂದೂ, ಸಾಹಿತ್ಯವಲಯದಲ್ಲಿ ಡಾ. ಕಮಲಾ ಹಂಪನಾ ಎಂದೂ ಚಿರಪರಿಚಿತರಾಗಿರುವ ಇವರು ಮಹಿಳಾ ಸಾಹಿತ್ಯ ಜಗತ್ತಿನಲ್ಲಿ ಅಚ್ಚಳಿಯದ ಹೆಜ್ಜೆ ಗುರುತುಗಳನ್ನು ಮೂಡಿಸಿದ್ದಾರೆ.

ಕಥೆ, ಕಾವ್ಯ, ನಾಟಕ, ಸಂಶೋಧನೆ, ಸಂಪಾದನೆ, ವಿಮರ್ಶೆ- ಹೀಗೆ ಹತ್ತು ಹಲವಾರು ಬೌದ್ಧಿಕ ಕ್ಷೇತ್ರಗಳಲ್ಲಿ ನಿರಂತರ ಕ್ರಿಯಾಶೀಲ ಚಟುವಟಿಕೆ ಗಳಲ್ಲಿ ತೊಡಗಿಸಿಕೊಂಡು ಹೆಸರಾಗಿರುವ ಕಮಲಾ ಹಂಪನಾ ಅವರ ಬದುಕು ಸರಳ ವಾದುದಲ್ಲ. ಹಿಂದುಳಿದ ವರ್ಗದಲ್ಲಿ ಹುಟ್ಟಿದ್ದೇ ಅಲ್ಲದೆ ಮಹಿಳೆಗೆ ಇವತ್ತು ಸಿಗುತ್ತಿರುವಂತಹ ಯಾವುದೇ ಹೆಚ್ಚಿನ ಸೌಲಭ್ಯ ಪ್ರೋತ್ಸಾಹ ಇಲ್ಲದ ದಿನಗಳಲ್ಲಿ ಮುನ್ನುಗ್ಗುವ, ಮೇಲೇರುವ ಛಲದೊಂದಿಗೆ ಪರಿಸ್ಥಿತಿ, ಪರಿಸರಗಳ ಜೊತೆಗೆ ಹೋರಾಡುತ್ತ ಇಂದು ಮಹತ್ವದ ಲೇಖಕಿಯೆಂದು ತಮ್ಮದೇ ಆದ ಒಂದು ನೆಲೆಯಲ್ಲಿ ಸ್ಥಾಪಿಸಿಕೊಂಡಿದ್ದಾರೆ. ಇಂದಿನ ಎಲ್ಲ ಲೇಖಕಿ ಯರಿಗಿಂತ ಭಿನ್ನವಾಗಿ ಎಲ್ಲರಿಗೂ ಸಾಧ್ಯವಾಗದ ಸಂಪಾದನೆ, ಸಂಶೋಧನೆ ಕ್ಷೇತ್ರಗಳಲ್ಲಿ ಮುನ್ನುಗ್ಗಿ ಹೆಸರನ್ನು ಮಾಡಿಕೊಂಡಿರುವುದು ಗಮನಾರ್ಹ ಸಂಗತಿಯಾಗಿದೆ.

ಬೆಂಗಳೂರು ಜಿಲ್ಲೆಯ ದೇವನ ಹಳ್ಳಿಯಲ್ಲಿ 28-10-35ರಲ್ಲಿ ಹುಟ್ಟಿದ ಕಮಲಾ ಹಂಪನಾ ಅವರಿಗೆ ಹುಟ್ಟಿನಿಂದಲೇ ಸುಸಂಸ್ಕೃತ, ಸಾಂಸ್ಕೃತಿಕ ಪರಿಸರ ದೊರೆಯಿತು. ಶ್ರೀಮಂತ ವರ್ಗಕ್ಕೇ ಸಂದ ಕಮಲಾ ಅವರ ತಂದೆ ಶ್ರೀ ರಂಗಧಾಮ ನಾಯಕ್ ಅವರು ಲೋಕೋಪಯೋಗಿ ಇಲಾಖೆಯಲ್ಲಿ ಓವರ್ ಸೀಯರ್ (ಸಬ್ ಇಂಜನೀಯರ್) ಆಗಿ ಕೆಲಸ ಮಾಡುತ್ತಿದ್ದವರು. ಸಂಗೀತ ಸಾಹಿತ್ಯಗಳಲ್ಲಿ ಅಭಿರುಚಿ ಇದ್ದುದರಿಂದ ದಿನನಿತ್ಯ ಸಂಗೀತ ಕಲಾವಿದರ ನಿತ್ಯ ಸಂತರ್ಪಣೆ, ಸಂಗೀತ ಸಮಾರಾಧನೆಗಳು ಮಾಮೂಲಿ ಯಾಗಿದ್ದವು. ತಾಯಿಯೂ (ರಂಗಲಕ್ಷ್ಮಮ್ಮ) ಪಿಟೀಲುವಾದನ ಬಲ್ಲವರಾಗಿದ್ದರು. 6ನೇ ತರಗತಿವರೆಗೆ ಓದಿ ಅಕ್ಷರ ಬಲ್ಲವರಾಗಿದ್ದರು ಇನ್ನು ಅಜ್ಜಿಯಂತೂ ಮೊಮ್ಮಕ್ಕಳೆಲ್ಲರಿಗೆ ಕಥಾಕೋಶವಾಗಿ, ಕಥೆಗಳನ್ನು, ಹಾಡುಗಳನ್ನೂ ಹೇಳುವುದರ ಮೂಲಕ ಅವರ ಕಲ್ಪನಾಶಕ್ತಿಗೆ ಗರಿ ಮೂಡಿಸುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ಸಂಭ್ರಮದ ವಾತಾವರಣ ದಸರಾ ಆ ಕುಟುಂಬಕ್ಕೆ ಅದ್ದೂರಿಯ ಹಬ್ಬ, ಮೈಸೂರು ಅರಮನೆಯ ಕಾರ್ಯ ಕಲಾಪಗಳಿಗೆ ಮುಕ್ತ ಪ್ರವೇಶಾವಕಾಶ. ಆಸ್ಥಾನ ಸಂಗೀತ ವಿದ್ವಾನ್ ಬಿ. ದೇವೇಂದ್ರಪ್ಪನವರಂತವರ ಸ್ನೇಹ, ಸಹವಾಸಗಳು, ತಂದೆಯ ಸ್ನೇಹಿತರಾಗಿದ್ದ ಕಾ.ಸ. ಧರಣೇಂದ್ರಯ್ಯನವ ರಂತಹವರಿಂದ ಪ್ರಾಚೀನ ಕಾವ್ಯ ಗ್ರಂಥಗಳಿಂದ ಆಯ್ದ ಭಾಗಗಳ ಗಾಯನ ವ್ಯಾಖ್ಯಾನ ಕೆಲವು ಸಂಜೆಗಳಲ್ಲಿ 'ಜಿನಕಥಾಮೃತ ಕಛೇರಿ'ಗಳು ನಿತ್ಯ ಅತಿಥಿ ಅಭ್ಯಾಸಗತ ಸೇವೆ, ಸಂತರ್ಪಣೆ ಯಾವುದಕ್ಕೂ ಕೊರತೆಯಿಲ್ಲದಂತಹ ಶ್ರೀಮಂತಿಕೆ.

ರಂಗಧಾಮನಾಯಕ್ ಮತ್ತು ರಂಗಲಕ್ಷ್ಮಮ್ಮ ಅವರದು ಅಂತರ್ಜಾತೀಯ ವಿವಾಹ. ಈ ದಂಪತಿಗಳಿಗೆ ಹುಟ್ಟಿದ 9 ಜನ ಮಕ್ಕಳಲ್ಲಿ ಡಾ. ಕಮಲಾ ಹಂಪನಾ 7ನೆಯ ಮಗು. ಬಾಲ್ಯದಿಂದಲೇ ಶ್ರೀಮಂತಿಕೆಯ ಎಲ್ಲ ಸುಖಗಳನ್ನು ಸವಿಗಳನ್ನುಂಡ ಕಮಲಾ ಅವರ ವಿದ್ಯಾಭ್ಯಾಸ ಒಂದು ಕಡೆಯಲ್ಲಲ್ಲ. ಚಳ್ಳಕೆರೆಯ ಪ್ರಾಥಮಿಕ ಶಾಲೆಯಲ್ಲಿ ಪ್ರಾರಂಭವಾದ ವಿದ್ಯಾಭ್ಯಾಸ ಬೇರೆ ಬೇರೆ ಊರುಗಳಲ್ಲಿ ಮುಂದುವರೆಯಿತು. ಸರ್ಕಾರಿ ಕೆಲಸದಲ್ಲಿದ್ದ ತಂದೆಯವರಿಗೆ ಮೇಲಿಂದ ಮೇಲೆ ವರ್ಗಾವಣೆ. ಚಳ್ಳಕೆರೆಯಿಂದ ಯಳಂದೂರಿಗೆ ವರ್ಗವಾಯಿತು. ಆದರೆ ದುರದೃಷ್ಟ ವಶಾತ್ ತಂದೆಯ ಮರಣವಾಯಿತು. ಕಮಲಾ ಅವರ ವಿದ್ಯಾಭ್ಯಾಸ ಅಜ್ಜಿಯ ಮನೆಯಿದ್ದ ಕ್ಯಾತಸಂದ್ರದಲ್ಲಿ ಮುಂದುವರೆಯಿತು. ತುಂಬಿ ಬಾಳಿದ ಶ್ರೀಮಂತಿಕೆಯ ಬದುಕಿಗೆ ತೆರೆಬಿತ್ತು. ಆರ್ಥಿಕ ಮುಗ್ಗಟ್ಟು ಬದುಕಿನ ಸಮಸ್ಯೆಗಳು ಎದುರಾ ದರೂ ಇದ್ದ ಬದ್ದ ಆಸ್ತಿ ಪಾಸ್ತಿ, ಹೊಲ ಮನೆ ಗದ್ದೆ, ಪಾತ್ರೆ, ಪಡಗಗಳು ಕರಗಿದರೂ ನೆಂಟರಿಷ್ಟರ, ಅತಿಥಿಗಳ ಸೇವೆ ಮುಂದುವರೆಯುತ್ತಲೇ ಇತ್ತಾದರೂ ಬದುಕು ತೀರಾ ಕಷ್ಟಗಳ ಪಾಲಾದಾಗ ಆತ್ಮೀಯರೂ, ಬಂಧುಗಳೂ ದೂರ ನಿಂತರು. ಬಡತನದ ಬೇಗೆಯಲ್ಲಿ ಬೇಯುವಂತಹ ದಾರುಣ ಪರಿಸ್ಥಿತಿ. ತಂದೆ ತಾಯಿ ಬದುಕಿದ್ದಾಗ ಸಹಾಯ ಸಹಕಾರ ಕೋರಿ ಬಂದವರಿಗೆ ಕೊಡುಗೈಯಿಂದ ಕೊಟ್ಟವರು, ತಮ್ಮ ಜಾತೀಯ ಮತ್ತು ಬೇರೆ ಬೇರೆ ಜಾತಿಗಳವರ ಮದುವೆ ಮುಂಜಿಗಳನ್ನು ನಡೆಸಿದ್ದು ಎಲ್ಲವೂ ಮುಂದೆ ಕನಸಾಗಿ ಮಾತ್ರವೇ ಉಳಿಯಿತು. ತಾಯಿಯ ಜವಾಬ್ದಾರಿ ಹಿರಿದಾಯಿತು. ಮಕ್ಕಳ ವಿದ್ಯಾಭ್ಯಾಸ ಚೆನ್ನಾಗಿ ನಡೆದು ಅವರ ಭವಿಷ್ಯದ ಹೊಂಗನಸನ್ನು ಕಾಣುತ್ತಿದ್ದ ರಂಗಲಕ್ಷ್ಮಮ್ಮನವರಿಗೆ ಮಗಳನ್ನು ಓದಿಸುವುದೂ ಕಷ್ಟಕರವೆನಿಸಿ ಹಿರಿಮಗಳಾದ ಸುಮಂಗಲಾದೇವಿಯ ಆಶ್ರಯದಲ್ಲಿ ಬಿಡಬೇಕಾದ ಅನಿವಾರ್ಯತೆ ಯೊದಗಿತು. ಹಿರಿಯಕ್ಕ ಭಾವನ ಪ್ರೀತಿಯ ಆಸರೆಯಲ್ಲಿ ನಿರಾತಂಕವಾಗಿ ಮುಂದುವರೆದು ಮುಂದೆ ದೊಡ್ಡಣ್ಣ ಕೇಶವಮೂರ್ತಿಯವರ ಆಶ್ರಯ ದೊರೆಯಿತು. ತುಮಕೂರು ಜಿಲ್ಲೆಯ ಅಮೃತೂರು, ಶಿವಮೊಗ್ಗ ಜಿಲ್ಲೆಯ ರಿಪ್ಪನ್ ಪೇಟೆ, ಭದ್ರಾವತಿಯ ವೆಲ್‌ಫೇರ್ ಗರ್ಲ್ಸ್ ಸ್ಕೂಲು-ಹೀಗೆ ಅವರ ಪ್ರಾಥಮಿಕ ವಿದ್ಯಾಭ್ಯಾಸ ತುಮಕೂರಿನಲ್ಲಿ ಹೈಸ್ಕೂಲು ವಿದ್ಯಾಭ್ಯಾಸ ನಡೆದು 1953ರಲ್ಲಿ ಎಸ್.ಎಸ್‌ಎಲ್.ಸಿ. ಮುಗಿಸಿದರು. ಎಳೆತನದಿಂದಲೂ ಚುರುಕಾಗಿ, ಚಟುವಟಿಕೆಯಿಂದ ಓಡಾಡುತ್ತಿದ್ದ ಕಮಲಾ ಅವರು ನಿರರ್ಗಳವಾಗಿ ಮಾತನಾಡಬಲ್ಲ, ಭಾಷಣಗಳಿಂದ ಮೋಡಿ ಹಾಕಬಲ್ಲ ಸಾಮರ್ಥ್ಯವನ್ನು ರೂಢಿಸಿಕೊಂಡಿದ್ದರು.

ಸಂಕಷ್ಟಗಳ ನಡುವೆಯೂ ಓದನ್ನು ಮುಂದುವರೆಸಬೇಕೆಂಬ ಛಲದಿಂದ ತುಮಕೂರಿನ ಸರ್ಕಾರಿ ಕಾಲೇಜಿನಲ್ಲಿ ಜೂನಿಯರ್ ಇಂಟರ್ ಮಿಡಿಯೆಟ್ ತರಗತಿಗೆ ಪ್ರವೇಶ ಪಡೆದರು. ಅದೇ ತರಗತಿಗೆ, ಅದೇ ವರ್ಷ ಸೇರಿದ ಎಚ್.ಪಿ. ನಾಗರಾಜಯ್ಯ ಎಂಬ ತಮ್ಮ ಸಹಪಾಠಿ ಮುಂದೆ ತಮ್ಮ ಬಾಳನ್ನು ಭವಿಷ್ಯವನ್ನು ರೂಪಿಸಬಲ್ಲರೆಂಬುದನ್ನು ಅರಿಯದೆಯೇ ಅವರ ಪ್ರತಿಭೆ, ಕ್ರಿಯಾಶೀಲತೆ, ಚಟುವಟಿಕೆ, ಕಾಲೇಜಿನ ಸಾಂಸ್ಕೃತಿಕ ರಂಗದಲ್ಲಿ ಅವರು ತೊಡಗಿಸಿಕೊಳ್ಳುತ್ತಿದ್ದ ರೀತಿಗಳು ಕಮಲಾ ಅವರನ್ನು ಅವರೆಡೆಗೆ ಸೆಳೆದುಕೊಳ್ಳ ತೊಡಗಿದ್ದವು. ಸಾಂಸ್ಕೃತಿಕ ಕಾರ್ಯಕ್ರಮಕ್ಕೆಂದು ಬಂದಿದ್ದ ಮಾಸ್ತಿಯವರ ಬಗ್ಗೆ ತುಂಬು ಮೆಚ್ಚುಗೆಯ ಭಾವ. ಅವರ ಮಾತು ವ್ಯಕ್ತಿತ್ವದ ಸೆಳೆತ.

ಬಿ.ಎ.ಆನರ್ಸ್ ಮಾಡಲು ಮೈಸೂರಿಗೆ ಹೋಗಲು ಮತ್ತು ಹಾಸ್ಟೆಲ್ ನಲ್ಲಿ ಉಳಿದುಕೊಳ್ಳಲು ಆರ್ಥಿಕ ತೊಂದರೆಗಳು ಆದರೂ ಉದ್ದಕ್ಕೂ ಅವರನ್ನು ಬೆಂಬಲಿಸುತ್ತಿದ್ದ ಛಲ. ಅವರೊಳಗೇ ಇದ್ದ ನೈತಿಕ ಬಲ ಅವರನ್ನು ಸೋಲುವುದಕ್ಕೆ ಬಿಡುತ್ತಿರಲಿಲ್ಲ. ಅಧ್ಯಾಪಕರೊಬ್ಬರ ಆತ್ಮೀಯ ಸಲಹೆ, ಪ್ರಚೋದನೆ, ಮತ್ತೊಬ್ಬರ ಆರ್ಥಿಕ ಸಹಾಯಗಳು ಮೈಸೂರಿನಲ್ಲಿ ಬಿ.ಎ. ಆನರ್ಸ್ ಸೇರಲು ಸಹಕರಿಸಿದವು. ಮತ್ತೆ ಹಿರಿಯಕ್ಕನ ನೆರವು 1955-58ರ ವರೆಗೆ ಮೂರು ವರ್ಷಗಳ ಕಾಲ ಬಿ.ಎ. ಆನರ್ಸ್ ಮಾಡಿದರು. ಆ ಸಮಯದಲ್ಲಿ ಅವರಿಗೆ ಗುರುಗಳಾಗಿದ್ದ ಪ್ರೊ|| ತೀ.ನಂ.ಶ್ರೀ., ಡಿ.ಎಲ್. ನರಸಿಂಹಾಚಾರ್, ತ.ಸು ಶಾಮರಾಯರು, ಕೆ.ವೆಂಕಟರಾಮಪ್ಪ,

ಎಸ್.ವಿ.ಪರಮೇಶ್ವರ ಭಟ್ಟರು, ಡಾ. ಎಸ್. ಶ್ರೀಕಂಠಶಾಸ್ತ್ರಿ ಮುಂತಾದ ಮಹಾನ್ ವಿದ್ವಾಂಸರು. ಇವರ ಮೇಲೆ ದಟ್ಟವಾದ ಪ್ರಭಾವ ಬೀರಿದರು. ಮುಂದೆ ಎಂ.ಎ. ತರಗತಿಗಳಲ್ಲೂ ಇವರ ಪಾಠ ಕೇಳುವ ಸುಯೋಗ ಲಭಿಸಿತು. ಜೊತೆಗಾರರಾಗಿ, ಸಹಪಾಠಿಗಳಾಗಿದ್ದ, ಅ.ರಾ.ಮಿತ್ರ, ಪ್ರೊ|| ಎಂ.ಎಚ್. ಕೃಷ್ಣಯ್ಯ, ಡಾ|| ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟ, ಎಚ್.ಜಿ. ಸಣ್ಣಗುಡ್ಡಯ್ಯ ಮೊದಲಾದವರು ಇಂದು ಸಾಹಿತ್ಯಲೋಕದಲ್ಲಿ ಹೆಸರಾದವರು ಎಂಬ ಹೆಮ್ಮೆಯ ಭಾವವನ್ನು ತಳೆದಿದ್ದಾರೆ.

ಕಾಲೇಜು ದಿನಗಳಿಂದಲೇ ಸಹಪಾಠಿಗಳಾಗಿ ಪರಸ್ಪರ ಪರಿಚಯ ದೊಂದಿಗೆ ಆರು ವರ್ಷಗಳು ಕಳೆದವರ ನಡುವೆ ಯಾವುದೂ ಒಂದು ಅಗೋಚರ ಆಕರ್ಷಣೆಯ ಸೆಳೆವು. ಅರಿವಿಲ್ಲದಂತೆ ಇಬ್ಬರ ನಡುವೆ ಮೊಳೆತ ಪ್ರೀತಿ ಗಟ್ಟಿಗೊಂಡು ಕಮಲಾ ಮತ್ತು ಎಚ್.ಪಿ.ನಾಗರಾಜಯ್ಯ ನವರನ್ನು ಬಾಳಸಂಗಾತಿಗಳಾಗಿ ಬೆಸೆಯಿತು. ದಾಂಪತ್ಯ ದೀಕ್ಷೆಗೆ ಇಬ್ಬರ ಮನಸ್ಸುಗಳೂ ಅಣಿಗೊಂಡವು. ಅಂತರ್ಜಾತೀಯ ವಿವಾಹ ನಾಲ್ಕು ದಶಕಗಳ ಹಿಂದೆ ಅಷ್ಟು ಸರಳವಾಗಿರಲಿಲ್ಲ. ಇಂದಿಗೂ ಕೆಲವೊಮ್ಮೆ ಸಮಸ್ಯೆಯಾಗಿ ಪರಿಣಮಿಸುತ್ತಿರು ವಾಗ, ಆಗ ಸಮಾಜದಲ್ಲಿ ಎದುರಿಸಿ ನಿಲ್ಲುವುದು ಊಹಿಸುವುದಕ್ಕೂ ಆಗದ ಮಾತು. ಎರಡೂ ಕಡೆಯಿಂದ ಹಿರಿಯರ ವಿರೋಧ. ಅಸಮ್ಮತಿ ! ಇಂತಹ ಪರಿಸ್ಥಿತಿಯಲ್ಲಿ ಪ್ರೀತಿಸಿದ ಎರಡು ಹೃದಯಗಳ ಮೇಲೆ ಆದ ಪರಿಣಾಮ?.. ಇಬ್ಬರ ಮನದಲ್ಲೂ ಗೂಡುಗಟ್ಟುತ್ತಿದ್ದ ನೋವು; ಯಾತನೆ; ಚಡಪಡಿಕೆ. ಹಂಪನಾ ಅವರ ಮಾತುಗಳಲ್ಲಿಯೇ ಆ ಪರಿಸ್ಥಿತಿಯ ಗಂಭೀರತೆ ಅರ್ಥವಾಗುತ್ತದೆ "ಪರಿಸರದ ಕೂಸಾಗಿ ನಾನು ಚಿಂತಿತನಾಗಿದ್ದೆ. ಸುತ್ತ ಒತ್ತಿ ಬರುವ ಒತ್ತಡದಿಂದ ಬಿಡಿಸಿಕೊಳ್ಳಲಾರದೆ ಚಡಪಡಿಸುತ್ತಿದ್ದೆ" ಎಂದು ತಮ್ಮ ಮನಃಸ್ಥಿತಿಯನ್ನು ತೋಡಿಕೊಂಡಿದ್ದಾರೆ. ಆದರೆ ಹಿಂಜರಿಯದ ಮನಸ್ಸುಗಳು ಪರಿಣಾಮದ ಗಂಭೀರತೆ ಯನ್ನು ಅರಿತು ಹೆಜ್ಜೆಗಳನ್ನು ಇಡುತ್ತಾರೆಂಬುದಕ್ಕೆ ವಿರೋಧದ ನಡುವೆಯೂ ಕಮಲಾ ಮತ್ತು ನಾಗರಾಜಯ್ಯ ದಂಪತಿಗಳಾದದ್ದು!

ನಾಲ್ಕು ದಶಕಗಳ ದಾಂಪತ್ಯ ಅಪೂರ್ವ ಜೋಡಿ! ಸಮಾನಾಸಕ್ತಿ, ಅಭಿರುಚಿ ಗಳು. ಒಬ್ಬರ ಶ್ರೇಯಸ್ಸಿನಲ್ಲಿ ಒಬ್ಬರು ಸಂಭ್ರಮಿಸುವಂತಹವರು. ಇಬ್ಬರೂ ಉದ್ಯೋಗಸ್ಥರು. ಸಾಹಿತ್ಯಾಸಕ್ತರು, ಸಾಹಿತ್ಯಬೋಧಕರು. ಕನ್ನಡ ಅಧ್ಯಾಪಕರು, ಇಬ್ಬರಲ್ಲಿಯೂ ಓದುವ, ಕಲಿಯುವ ಬರೆಯುವ ಛಲ. ಒಬ್ಬರನ್ನು ಮೀರಿ ಒಬ್ಬರು ಬೆಳೆದರು. ದಾಂಪತ್ಯದಲ್ಲಿ ಸ್ವಾಭಾವಿಕವಾದ ಸರಸ ವಿರಸಗಳು. ಕಷ್ಟ ಕಾರ್ಪಣ್ಯಗಳು, ಪುರುಷರಿಗಿಂತ ಹೆಣ್ಣಿಗೆ ಹೆಚ್ಚಾದ ಸಾಂಸಾರಿಕ ಜವಾಬ್ದಾರಿಗಳು. ಮನೆ, ಸಂಸಾರ, ಮಕ್ಕಳು, ನೆಂಟರಿಷ್ಟರು, ಉದ್ಯೋಗ ಹೀಗೆ ನೂರೆಂಟು ದಿಕ್ಕುಗಳಲ್ಲಿ ತನ್ನನ್ನು ಹಂಚಿಕೊಂಡು ಸಮರ್ಥವಾಗಿ ನಿರ್ವಹಿಸುತ್ತಾ ವೈಯಕ್ತಿಕವಾಗಿ ತಾನೂ ಬೆಳೆದು ತನ್ನನ್ನು ರೂಪಿಸಿಕೊಳ್ಳುವುದು ಪ್ರಯಾಸದ ಕೆಲಸ. ಇಂತಹ ಕೆಲಸವನ್ನು ಡಾ|| ಕಮಲಾ ಹಂಪನಾ ಅವರು ಮಾಡಿದರು. ಹಗಲಿರುಳೂ ದುಡಿದರು (ಮನೆಯ ಒಳಗೆ ಹೊರಗೆ, ಹೋದ-ಬಂದ ಕಡೆ ಕೆಲಸದ ಒತ್ತಡ. ಅಡಿಗೆ ಮಾಡುವ, ಅಂಗಡಿಗೆ ಹೋಗಿ ಸಂಸಾರಕ್ಕೆ ಬೇಕಾದ ಸಲಕರಣೆ ಸರಂಜಾಮುಗಳನ್ನು ಕೊಂಡುತರುವ, ಕಾಲೇಜಿನ ಪಾಠ ಪ್ರವಚನಗಳಿಗೆ ಸಿದ್ಧತೆ ಮಾಡಿಕೊಳ್ಳುವ, ಮನೆಯವರ ಅತಿಥಿಗಳ ಊಟೋಪಚಾರ ನೋಡಿಕೊಳ್ಳುವ ಇತ್ಯಾದಿ ನಿರಂತರ ಜವಾಬ್ದಾರಿಗಳ ನಡುವೆ ಬರವಣಿಗೆಗೆ ಬಿಡುವು ಮಾಡಿಕೊಳ್ಳುತ್ತಿದ್ದರು.) ಇಬ್ಬರು ಹೆಣ್ಣು ಮಕ್ಕಳು ಮತ್ತು ಒಬ್ಬ ಮಗ. ತಮ್ಮೆಲ್ಲ ಚಟುವಟಿಕೆಗಳ ನಡುವೆ ಸುಸಂಸ್ಕೃತರಂತೆ ಮಕ್ಕಳನ್ನು ಬೆಳೆಸಿ ಪೋಷಿಸುವುದನ್ನು ಮರೆಯಲಿಲ್ಲ.

ಡಾ|| ಕಮಲಾ ಅವರ ಬದುಕು ಮುಖ್ಯವಾಗಿ ನಾಲ್ಕು ಮುಖಗಳಾಗಿ ಚಾಚಿ ಕೊಂಡಿದೆ. ಶೈಕ್ಷಣಿಕ, ಕೌಟುಂಬಿಕ, ಸಾಮಾಜಿಕ ಮತ್ತು ಸಾಹಿತ್ಯಕ ಎಂದು ಯಾವುದೇ ಬದುಕಿನ ಮುಖವಾದರೂ ಕಮಲಾ ಅವರು ಒಂದು ವಿಶಿಷ್ಟ ಛಾಪನ್ನು ಮೂಡಿಸುತ್ತಾರೆ. ಎಲ್ಲವನ್ನು ಸಮರ್ಥವಾಗಿ ನಿರ್ವಹಿ ಸುತ್ತಾರೆ.

1959ರಿಂದ ಕನ್ನಡ ಅಧ್ಯಾಪಕರಾಗಿ ವೃತ್ತಿರಂಗ ಪ್ರವೇಶಿಸಿದ ಕಮಲಾ ಅವರು ಬೆಂಗಳೂರಿನ ಮಹಾರಾಣಿ ಕಾಲೇಜು, ಮೈಸೂರು ಮಹಾರಾಣಿ ಕಾಲೇಜುಗಳಲ್ಲಿ ಅಧ್ಯಾಪಕಿಯಾಗಿ, ಪ್ರಾಧ್ಯಾಪಕಿಯಾಗಿ ಸೇವೆ ಸಲ್ಲಿಸಿದ್ದಾರೆ. ಬೆಂಗಳೂರಿನ ವಿಜಯನಗರ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾಗಿ ಕಾರ್ಯ ನಿರ್ವಹಿಸಿದ್ದಾರೆ. ಯಾವುದೇ ಕೆಲಸವಾಗಲೀ ಎದ್ದು ಕಾಣುವ ವ್ಯಕ್ತಿತ್ವ. ಎತ್ತರದಲ್ಲಿ ಕೇಳಿಸುವ ಧ್ವನಿ. ಎಲ್ಲರಿಗೂ ಪ್ರೀತಿಯ ಮೇಡಂ ಆಗಿದ್ದವರು. ಕೇವಲ ಅಧ್ಯಾಪಕಿಯಾಗಿ ದುಡಿದು ನಿವೃತ್ತರಾದವರಲ್ಲ. ಅಧ್ಯಾಪನ ಅಧ್ಯಯನಗಳನ್ನು ಜೊತೆಜೊತೆಗೆ ನಡೆಸಿದವರು. ಅವರು ಅಧ್ಯಯನದ ಮೂಲಕವಾಗಿ ಗಳಿಸಿಕೊಂಡ ವಿದ್ವತ್ತಿನ ಪರಿಣಾಮವಾಗಿ ಕರ್ನಾಟಕದ ಹಲವು ವಿಶ್ವವಿದ್ಯಾಲಯಗಳಲ್ಲಿ ವಿಶೇಷವಾಗಿ ಮೈಸೂರು, ಹಂಪಿ ವಿಶ್ವವಿದ್ಯಾಲಯಗಳಲ್ಲಿ ವಿದ್ವತ್ಪೂರ್ಣವಾದ ಉಪನ್ಯಾಸಗಳನ್ನು ನೀಡುವುದರೊಂದಿಗೆ ವಿದ್ವತ್ ಜಗತ್ತಿನಲ್ಲಿಯೂ ಹೆಜ್ಜೆಯೂರಿದರು. ಹಂಪಿ ವಿಶ್ವವಿದ್ಯಾಲಯದ ಪ್ಲಾನಿಂಗ್ ವಿಭಾಗಕ್ಕೆ ಸದಸ್ಯರಾದರು. ನಿವೃತ್ತಿಯ ನಂತರ ಮೈಸೂರು ವಿಶ್ವವಿದ್ಯಾಲಯದ ಜೈನಶಾಸ್ತ್ರ ಮತ್ತು ಪ್ರಾಕೃತ ಅಧ್ಯಯನ ವಿಭಾಗದ ಅಧ್ಯಕ್ಷರಾಗಿಯೂ ಪ್ರಾಧ್ಯಾಪಕರಾಗಿಯೂ ಕೆಲಸ ನಿರ್ವಹಿಸಿದರು.

18ನೇ ಶತಮಾನದ ಪರಮದೇವ ಕವಿಯ 'ತುರಂಗ ಭಾರತ' -ಒಂದು ಅಧ್ಯಯನ' ಎಂಬ ವಿಷಯದ ಮೇಲೆ ಮಹಾ ಪ್ರಬಂಧವನ್ನು ರಚಿಸಿ ಡಾಕ್ಟರೇಟ್ ಪಡೆದ ಇವರು 5 ಜನ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿ ಪಿಎಚ್.ಡಿ. ಪದವಿ ಪಡೆಯುವಂತೆ ಮಾಡಿದರು.

ಹತ್ತಾರುಕಡೆ ದೇಶ ವಿದೇಶಗಳಲ್ಲಿ ನಡೆದ ಸಮ್ಮೇಳನ ವಿಚಾರ ಸಂಕಿರಣ ಗಳಲ್ಲಿ ಲೇಖನಗಳನ್ನು ಬರೆದು ಪ್ರಸ್ತುತ ಪಡಿಸಿದರು. ಅಂತ ರಾಷ್ಟ್ರೀಯ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿದ ಲೇಖಕಿಯರಲ್ಲಿ ಕಮಲಾ ಅವರೆ ಮೊದಲಿಗರು. ಟೊರೆಂಟೋ, ಕೆನಡಾ, ಬುಡಾಪೆಸ್ಟ್ ಮುಂತಾದ ಕಡೆಗಳಲ್ಲಿ ಶೈಕ್ಷಣಿಕ ಪ್ರವಾಸ ಮಾಡಿ ಉಪನ್ಯಾಸಗಳನ್ನು ನೀಡಿದರು. ಮುಂಬಯಿ, ಮದ್ರಾಸ್ ವಿಶ್ವವಿದ್ಯಾಲಯಗಳಲ್ಲೂ ವಿಶೇಷ ಆಹ್ವಾನಿತರಾಗಿ ಹೋಗಿ ಉಪನ್ಯಾಸ ನೀಡಿದರು. ಬೆಂಗಳೂರು ವಿಶ್ವವಿದ್ಯಾ ಲಯದ ಅಕಾಡೆ ಮಿಕ್ ಕೌನ್ಸಿಲ್ ಮತ್ತು ಸೆನೆಟ್ ಸದಸ್ಯರಾಗಿಯೂ ಕೆಲಸ ಮಾಡಿದರು.

ವಿದ್ಯಾರ್ಥಿದೆಸೆಯಲ್ಲಿಯೇ ವಿದ್ವತ್ ಬಗೆಗೆ ಮೂಡಿಸಿಕೊಂಡ ಒಲವು ಮುಂದೆ ಅವರನ್ನು ಆ ದಿಕ್ಕಿನಲ್ಲಿ ಹಚ್ಚಿತು. ಸೃಜನಶೀಲ ಸೃಜನೇತರ ಬರವಣಿಗೆಗಳೆರಡರಲ್ಲೂ ತಮ್ಮನ್ನು ತೊಡಗಿಸಿಕೊಂಡರೂ ಅವರ ಹೆಚ್ಚಿನ ಸಾಧನೆ ವಿದ್ವತ್ ಪ್ರಪಂಚಕ್ಕೆ ಸಂಬಂಧಿಸಿದ ಸಂಪಾದನೆ, ಸಂಶೋಧನೆ, ವಿಮರ್ಶೆಯಂತಹ ಶಿಸ್ತುಗಳಲ್ಲಿ ಡಿ.ಎಲ್.ಎನ್., ತೀ.ನಂ.ಶ್ರೀ., ಆ.ನೇ. ಉಪಾಧ್ಯೆ ಮುಂತಾದವರು ಅವರಿಗೆ ಆದರ್ಶವಾಗಿದ್ದುದಿಂದ ಮತ್ತು ಅವರ ಪ್ರೋತ್ಸಾಹದಿಂದ ಈ ದಿಕ್ಕಿಗೆ ಹೊರಳಿದರು. ನಿರಂತರ ಅಧ್ಯಯನ ವ್ಯುತ್ಪತ್ತಿ, ಜ್ಞಾನ, ಸಹನೆ, ಸಂಯಮ, ಕೃತಿಯ ಒಳಹೊಕ್ಕು ನೋಡುವ ಅಂತರ್ದೃಷ್ಟಿ, ಔಚಿತ್ಯಪ್ರಜ್ಞೆ, ನಿಷ್ಠುರ ಶಿಸ್ತು-ಇವೆಲ್ಲವೂ ಅನಿವಾರ್ಯ. ಅವರು ಬರೆದು ಪ್ರಕಟಿಸಿದ ಐವತ್ತಕ್ಕೂ ಮೀರಿದ ಕೃತಿಗಳಲ್ಲಿ 'ಸುಕುಮಾರ ಚರಿತ್ರೆಯ ಸಂಗ್ರಹ', 'ಭರತೇಶ ವೈಭವ', 'ಶ್ರೀ ಪಚ್ಚೆ', 'ಕೆ.ಎಸ್. ಧರಣೇಂದ್ರಯ್ಯನವರ ಸ್ಮೃತಿ ಗ್ರಂಥ', 'ಸಹಸ್ರಾಭಿಷೇಕ', 'ಚಾವುಂಡರಾಯ ಪುರಾಣ', 'ಡಾ. ಡಿ.ಎಲ್.ಎನ್. ಅವರ ಆಯ್ದಲೇಖನಗಳು 'ಹಳೆಯ ಗದ್ಯ ಸಾಹಿತ್ಯ', 'ದಾನಚಿಂತಾಮಣಿ ಸ್ಮರಣ ಸಂಚಿಕೆ'- ಇವೆಲ್ಲವೂ ಸಂಪಾದಿತ ಕೃತಿಗಳಾಗಿವೆ. ಕೆಲವು ಕೃತಿಗಳನ್ನು ಸ್ವತಃ ಸಂಪಾದಿಸಿದ್ದರೆ

ಮತ್ತೆ ಕೆಲವು ಬೇರೆಯವರ ಸಹಯೋಗದಲ್ಲಿ ಸಂಪಾದಿಸಿದ್ದಾರೆ. 1965ರಲ್ಲೇ ಪ್ರಕಟವಾದ 'ಸುಕುಮಾರ ಚರಿತ್ರೆಯ ಸಂಗ್ರಹ'ದಲ್ಲಿ ಸಂಪಾದನೆಯ ಕಾರ್ಯದಲ್ಲಿ ಎದುರಾಗುವ ಸಮಸ್ಯೆಯನ್ನು ತಾವು ಪರಿಹರಿಸಿಕೊಂಡ ರೀತಿಯನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ. ಜನಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ಕಥಾಸಾರವನ್ನು ನೀಡಿದ್ದಾರೆ. ಅನಗತ್ಯವಾದ ಪದ್ಯಗಳನ್ನು ಕೈಬಿಟ್ಟು ಸುಸಂಬದ್ಧವಾಗಿ ಪದ್ಯಗಳನ್ನು ಆಯ್ಕೆಮಾಡಿದ್ದಾರೆ. ಜಿ. ಬ್ರಹ್ಮಪ್ಪನವರೊಡನೆ ಸಂಪಾದಿಸಿದ ಭರತೇಶ ವೈಭವಕ್ಕೆ 120 ಪುಟಗಳ ಸವಿಸ್ತಾರವಾದ ಕವಿ, ಕಾವ್ಯ ಪರಿಚಯ ನೀಡಿದ್ದಾರೆ.

ಪ್ರೊ. ಎಂ.ಎಚ್. ಕೃಷ್ಣಯ್ಯನವರೊಂದಿಗೆ ಸಂಪಾದಿಸಿದ ಹಳೆಯ ಗದ್ಯ ಸಾಹಿತ್ಯ ಹಲವು ಮುದ್ರಣಗಳನ್ನು ಕಂಡು ಬೆಂಗಳೂರು ವಿಶ್ವವಿದ್ಯಾಲಯದ ತೃತೀಯ ಪದವಿ ಐಚ್ಛಿಕ ವಿದ್ಯಾರ್ಥಿಗಳಿಗೆ ಪಠ್ಯವಾಗಿದೆ.

ಕೆ.ಎಸ್.ಧರಣೇಂದ್ರಯ್ಯನವರ ಸ್ಮೃತಿ ಗ್ರಂಥದಲ್ಲಿ, ಕೆ.ಎಸ್. ಧರಣೇಂದ್ರಯ್ಯನವರ ಬಗ್ಗೆ ಅಭಿಮಾನಿಗಳು ಸ್ನೇಹಿತರು ಬರೆದ ಲೇಖನಗಳಿವೆ. ಧರಣೇಂದ್ರಯ್ಯನವರ ವ್ಯಕ್ತಿತ್ವದ ಹಲವು ಮುಖಗಳನ್ನು ಪರಿಚಯಿಸುವಂತಹ ಲೇಖನಗಳು ಅವರ ಹೃದಯ ವೈಶಾಲ್ಯ, ಸರ್ವಧರ್ಮ ಸಮನ್ವಯ ದೃಷ್ಟಿ, ಉದಾರತ್ವಗಳು ಬಿಂಬಿತವಾಗಿವೆ. ಈ ಸ್ಮರಣ ಸಂಚಿಕೆ ಯಲ್ಲಿ ಧರಣೇಂದ್ರಯ್ಯನವರೇ ಬರೆದ 'Ranna, the great Kannada Poet' ಎಂಬ ಲೇಖನವೂ ಸೇರಿರುವುದು ಇಲ್ಲಿನ ವಿಶೇಷ. 'ಸಹಸ್ರಾಭಿಷೇಕ' ಬೆಳ್ಗೊಳದ ಬಾಹುಬಲಿಯ ಸ್ಥಾಪನೆಯ ಸಾವಿರ ವರ್ಷದ ಸಂದರ್ಭಕ್ಕೆ ನಡೆದ ಮಹಾ ಮಾಸ್ತಕಾಭಿಷೇಕದ ಸಂಸ್ಮರಣೆಗಾಗಿ ಪ್ರಕಟವಾದ ಸಂಚಿಕೆಯಾಗಿದೆ.

ಸಂಪಾದಿತ ಕೃತಿಗಳದು ಒಂದು ವರ್ಗವಾದರೆ ಸಂಶೋಧಿತ ಕೃತಿಗಳ ಮತ್ತೊಂದು ವರ್ಗವಿದೆ. ಕಮಲಾ ಅವರ ಒಲವು ಹೆಚ್ಚಾಗಿ ಸಂಶೋಧನೆಯ ಕಡೆಗೇ. ವಿಚಾರ ಸಂಕಿರಣ ಪ್ರಚಾರೋಪನ್ಯಾಸಗಳನ್ನು ನೀಡಬೇಕಾದ ಸಂದರ್ಭಗಳಿಂದ ಮತ್ತು ಸ್ವಪ್ರೇರಣೆಯಿಂದ ಕನ್ನಡ ಕವಿ-ಕಾವ್ಯ ಪರಂಪರೆಯ ಬಗೆಗೆ ಆಸಕ್ತಿ ಜಿಜ್ಞಾಸೆಗಳನ್ನು ಮೂಡಿಸಿಕೊಂಡು ಆಳವಾದ ಅಧ್ಯಯನದ ಪರಿಣಾಮವಾಗಿ ಮೈತಳೆದ ಸಂಶೋಧನೆ ಗ್ರಂಥಗಳಲ್ಲಿ ಪ್ರಮುಖವಾದವುಗಳು 'ಶಾಂತಿನಾಥ' ಆದರ್ಶ ಜೈನ ಮಹಿಳೆಯರು, ಮಹಾವೀರರ ಜೀವನ ಸಂದೇಶ, ಅನೇಕಾಂತವಾದ ಜೈನ ಸಾಹಿತ್ಯ ಪರಿಸರ, ನಾಡು-ನುಡಿ-ನಾವು, ಇತ್ಯಾದಿ. ಹಿಂದಿನ ದಾಖಲೆಗಳನ್ನೆಲ್ಲ ಪರಿಶೀಲಿಸಿ, ಮೂಲಕೃತಿಗೆ ಧಕ್ಕೆಯಾಗದಂತೆ ಕಥೆಯನ್ನು ಸುಂದರವಾಗಿ, ಸರಳವಾಗಿ ಹೇಳುತ್ತಲೇ, ಕಾವ್ಯದ ಮೂಲವನ್ನು ವಡ್ಡಾರಾಧನೆಯಲ್ಲಿದೆ ಎಂದು ಗುರುತಿಸುತ್ತಾರೆ. ಸುಕುಮಾರ ಚರಿತೆ, ಪಂಪ, ಪೊನ್ನ, ರನ್ನ ಇವರಲ್ಲಿನ ಯಾವ ಕವಿಯ ಕಾವ್ಯ ಸಾಮರ್ಥ್ಯಕ್ಕೂ ಕಡಿಮೆಯಿಲ್ಲವೆಂಬ ತೀರ್ಮಾನಿಕ ನಿಲುವನ್ನು ತಲುಪುತ್ತಾರೆ.

'ಆದರ್ಶ ಜೈನ ಮಹಿಳೆಯರು' ಕೃತಿ ಯಾರ ಗಮನಕ್ಕೂ ಬರದೆ ಅಜ್ಞಾತರಾಗಿ ಉಳಿದು ತಮ್ಮ ಶೌರ್ಯ, ಸಾಹಸ ತ್ಯಾಗ, ಬಲಿದಾನ, ಪ್ರತಿಭೆ, ದಾನಗುಣ ಇತ್ಯಾದಿಗಳಿಂದ ಆದರ್ಶಪ್ರಾಯರೆನಿಸಿಕೊಂಡ ಜೈನಮಹಿಳೆಯರಾದ ಕಾಳಲದೇವಿ, ಚಂಪಾದೇವಿ, ಅತ್ತಿಮಬ್ಬೆ ಮುಂತಾದವರನ್ನು ಪ್ರಾಕೃತ, ಸಂಸ್ಕೃತ, ಹಳಗನ್ನಡ ಕಾವ್ಯ, ಶಾಸನಗಳಿಂದ ಹೆಕ್ಕಿ ತೆಗೆದು ಅವರ ಉದಾತ್ತ ಚಿತ್ರಗಳನ್ನು ಹೃದಯಸ್ಪರ್ಶಿಯಾಗಿ ಕಟ್ಟಿಕೊಡುತ್ತದೆ.

'ಮಹಾವೀರರ ಜೀವನ ಸಂದೇಶ' 24ನೇ ತೀರ್ಥಂಕರನಾದ ವರ್ಧಮಾನ ಮಹಾವೀರರ ಬದುಕು, ಚಾರಿತ್ರ್ಯ, ಉಪದೇಶ, ಸಂದೇಶಗಳನ್ನು ವಿವರಿಸುವ ಕೃತಿಯಾಗಿದೆ. ಇಲ್ಲಿ ಪುರಾಣ ಕಲ್ಪನೆಯ ಅಂಶಗಳಿಗಿಂತ ಚಾರಿತ್ರಿಕ, ವೈಜ್ಞಾನಿಕ ದೃಷ್ಟಿಯೇ ಹೆಚ್ಚಾಗಿ ಕೆಲಸಮಾಡಿದೆ.

ಅನೇಕಾಂತವಾದವು ಜೈನಧರ್ಮಕ್ಕೆ ಸಂಬಂಧಿಸಿದ ಲೇಖನಗಳ ಸಂಗ್ರಹವಾಗಿದೆ ಜೈನಧರ್ಮ, ತತ್ವ ವಿಚಾರ ಚಿಂತನೆಗಳೇ ಇಲ್ಲಿ ಪ್ರಮುಖವಾಗಿವೆ. ಜೈನಧರ್ಮ ಸಂಬಂಧಿ ವ್ಯಕ್ತಿಗಳು, ವಿಚಾರಗಳು, ನೋಂಪಿಗಳು ಮುಂತಾದವುಗಳ ಬಗ್ಗೆ ಸಂಗ್ರಹಿಸಿದ ವಿವರಗಳನ್ನು ಅತ್ತಿಮಬ್ಬೆ, ಚಾವುಂಡರಾಯನ ಗುರುಗಳು, ಜೈನಧರ್ಮದಲ್ಲಿ ಕರ್ಮ ಸಿದ್ಧಾಂತ, ಕಂತಿಯರು-ಹೀಗೆ ಹಲವಾರು ಲೇಖನಗಳ ಮೂಲಕ ನೀಡಿದ್ದಾರೆ. ಅತ್ಯಂತ ಕ್ಲಿಷ್ಟವಾದ ಶುಷ್ಕವಾದ ತಾತ್ವಿಕ ವಿಚಾರಗಳನ್ನು ಸಾಮಾನ್ಯರ ಅರಿವಿಗೂ ಸುಲಭವಾಗು ವಂತಹ ಶೈಲಿಯಲ್ಲಿ ನೀಡುವ ಪ್ರಯತ್ನಮಾಡಿದ್ದಾರೆ. ಇದೇ ಸಂಗ್ರಹದಲ್ಲಿ 'ಪಾರ್ಶ್ವನಾಥ ವಿಗ್ರಹಗಳು' ಲೇಖನ ಕರ್ನಾಟಕದಾದ್ಯಂತ ಸಂಚರಿಸಿ, ಅಧ್ಯಯನ ನಡೆಸಿ ಪಾರ್ಶ್ವನಾಥ ತೀರ್ಥಂಕರರ ವಿಗ್ರಹಗಳ ವೈಶಿಷ್ಟ್ಯ, ಕಾಲ ಮುಂತಾದವುಗಳನ್ನು ಸವಿವರವಾಗಿ ಚರ್ಚಿಸಿದ್ದಾರೆ. ಜೈನರಿಗೆ ಪವಿತ್ರವಾಗಿದ್ದಿರಬಹುದಾದ ಪುಣ್ಯಕ್ಷೇತ್ರಗಳು ಕಾಲಗರ್ಭದಲ್ಲಿ ಮರೆಯಾಗಿ ಹೋದವುಗಳನ್ನು ಮತ್ತೆ ಅವುಗಳನ್ನು ಗುರುತಿಸಿ ಅವುಗಳ ಇಂದಿನ ಅವನತಿಯ ಸ್ಥಿತಿಗೆ ಕಾರಣಗಳೇನಿರಬಹುದೆಂಬುದನ್ನು ವಿವೇಚಿಸಿದ್ದಾರೆ. ಜೈನಧರ್ಮದಲ್ಲಿ ಮಹಿಳೆಯರಿಗೆ ವಿಶೇಷ ಸ್ಥಾನವನ್ನು ಮಹತ್ವವನ್ನು ಕುರಿತು ಜೈನಪುರಾಣ, ಕಾವ್ಯ ಸಂದರ್ಭಗಳಿಂದ ವಿವರಿಸಿದ್ದಾರೆ. ಜೈನ ದಿಗಂಬರ ಸಂಪ್ರದಾಯದಲ್ಲಿ ಮಾನ್ಯವಾದ 'ಮಹಾಪುರಾಣ'ದಲ್ಲಿ ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಒತ್ತುಕೊಟ್ಟಿರುವುದನ್ನು ಉದಾಹರಿಸುತ್ತಾರೆ. ಆದಿ ತೀರ್ಥಂಕರನಾದ ವೃಷಭದೇವನು ಗೃಹಸ್ಥನಾಗಿದ್ದಾಗ, ಗಂಡು ಮಕ್ಕಳಿಗೂ ಮೊದಲ ಹೆಣ್ಣು ಮಕ್ಕಳಿಗೆ ಅಕ್ಷರಾಭ್ಯಾಸ ಮಾಡಿಸುತ್ತಾ 'ನಿಮ್ಮ ಈ ಶರೀರವೂ ಈ ವಯಸ್ಸೂ ಅಸಮಾನವಾದ ಈ ಶೀಲವು ವಿದ್ಯೆಯಿಂದ ಅಲಂಕೃತವಾದರೆ ನಿಮ್ಮ ಈ ಜನ್ಮ ಸಫಲವಾಗುತ್ತದೆ..... ವಿದ್ಯಾವತಿಯಾದ ಸ್ತ್ರೀಯೂ ಸ್ತ್ರೀ ಸೃಷ್ಟಿಯಲ್ಲಿ ಮೊದಲನೆ ಸ್ಥಾನವನ್ನು ಪಡೆಯುತ್ತಾಳೆ'-ಎಂದು ಹೇಳಿದ ಮಾತುಗಳನ್ನು ಉದ್ಧರಿಸುತ್ತಾರೆ. ತಮ್ಮ ವಿಚಾರಗಳ ಸಮರ್ಥನೆಗೆ ಕಾವ್ಯ ಸಂದರ್ಭಗಳನ್ನು ಸೋದಾಹರಣವಾಗಿ ವಿವರಿಸುತ್ತಾರೆ. 'ಜೈನ ಸಾಹಿತ್ಯ ಪರಿಸರವೂ ಮತ್ತೊಂದು ಜೈನ ಸಾಹಿತ್ಯ ಸಂಬಂಧವಾದ 16 ಲೇಖನಗಳನ್ನು ಉಳ್ಳ ಗ್ರಂಥವಾಗಿದೆ. ಜೈನ ಕವಿ, ಕಾವ್ಯಗಳ ಬಗೆಗೆ ನಡೆಸಿದ ವಿಚಾರ ಚಿಂತನೆಯ ಫಲವಾಗಿದೆ ಈ ಕೃತಿ. 'ವಡ್ಡಾರಾಧನೆ'ಯಿಂದ ಹಿಡಿದು ಪಂಪ, ರನ್ನ, ರತ್ನಾಕರವರ್ಣಿ ಮೊದಲಾದ ಕವಿಗಳ ಕಾವ್ಯಗಳಿಗೆ ಸಂಬಂಧಿಸಿದಂತೆ ವಿವಿಧ ವಿಷಯಗಳನ್ನು ಕುರಿತ ನಿರೂಪಣೆಗಳು, ಆ ಕಾವ್ಯಗಳಲ್ಲಿನ ರಸಸನ್ನಿವೇಶಗಳನ್ನು, ವಿವಿಧ ಪಾತ್ರಗಳನ್ನು, ಜೈನ ಪರಿಕಲ್ಪನೆಗಳನ್ನು ವಿವರಿಸುತ್ತವೆ, ಇಲ್ಲವೆ ಕಾವ್ಯ ಕೃತಿಗಳ ಕಥಾಸಾರವನ್ನು ಸರಳವಾಗಿ ಹೇಳುತ್ತವೆ. 'ವಡ್ಡಾರಾಧನೆ-ಒಂದು ಸ್ಥೂಲ ಪರಿಚಯ' ಲೇಖನದಲ್ಲಿ ವಡ್ಡಾರಾಧನೆ ಶಬ್ದದ ವ್ಯುತ್ಪತ್ತಿಯನ್ನು ಹೇಳುವುದರ ಜೊತೆಗೆ ಅದರ ಕಥಾ ಸಂವಿಧಾನ, ಧಾರ್ಮಿಕ ಆಶಯ, ಭಾಷಾ ಶೈಲಿಗಳನ್ನು ಕುರಿತು ಚರ್ಚಿಸಿದ್ದಾರೆ. 'ಭರತೇಶ ವೈಭವ-ಗೀತಗೋವಿಂದ' ಕೃತಿಗಳಲ್ಲಿನ ಭರತ-ಕೃಷ್ಣರ ಪಾತ್ರವನ್ನು ತುಲನಾತ್ಮಕವಾಗಿ ನೋಡುವ ದೃಷ್ಟಿ 'ರತ್ನಾಕರ ವರ್ಣಿ ಭರತೇಶ ವೈಭವ' ಲೇಖನದಲ್ಲಿದೆ. ನಾಡು-ನುಡಿ-ನಾವು-1970ರಲ್ಲಿ ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ಮಹಿಳಾ ಗೋಷ್ಠಿಯ ಅಧ್ಯಕ್ಷೆಯಾಗಿ ಮಾಡಿದ ಭಾಷಣದ ಕಿರುಹೊತ್ತಿಗೆ. ನಮ್ಮ ಪ್ರಾಚೀನ ಕನ್ನಡ ಕವಿಗಳು ನಾಡು-ನುಡಿಯ ಬಗ್ಗೆ ನುಡಿದ ಹೆಮ್ಮೆಯ ಮಾತುಗಳನ್ನು ಉದಾಹರಿಸುತ್ತಲೇ ಕನ್ನಡ-ನಾಡು-ನುಡಿಯ ಬಗ್ಗೆ ತಮಗಿರುವ ನಿಲುವುಗಳನ್ನು ದಿಟ್ಟವಾಗಿ ಪ್ರಕಟಪಡಿಸುತ್ತಾರೆ.

'ತುರಂಗ ಭಾರತ' ಅವರ ಪಿಎಚ್.ಡಿ. ಪ್ರಬಂಧವಾಗಿದೆ. 18ನೇ ಶತಮಾನದಲ್ಲಿದ್ದ ಪರಮದೇವನ ಬೃಹತ್‌ಕಾವ್ಯ ತುರಂಗ ಭಾರತ. 96 ಸಂಧಿಗಳಲ್ಲಿರುವ 4824 ಪದ್ಯಗಳ ಈ ದೊಡ್ಡಕಾವ್ಯದ ಕರ್ತೃ ವಿಶಿಷ್ಟ ಕವಿ. ಜನಪ್ರಿಯ ಕವಿ ಎನಿಸಿಕೊಂಡಿದ್ದ ಈತನ ಕಾವ್ಯವೊಂದೇ ಮಹಾಭಾರತದ 18 ಪರ್ವಗಳನ್ನು ಒಳಗೊಂಡಿರುವಂತಹುದು. ಆದರೂ ಕನ್ನಡದ ಇಲ್ಲಿವರೆಗಿನ ಸಾಹಿತ್ಯ ಚರಿತ್ರೆಗಳಲ್ಲಿ

ಎಲ್ಲಿಯೂ ಉಲ್ಲೇಖಗೊಳ್ಳದ ಕವಿಯ ಬಗ್ಗೆ ಮೂಡಿದ ಕುತೂಹಲವೇ ಈ ಪ್ರಬಂಧ ರಚನೆಗೆ ದಾರಿಯಾಯಿತು. ಐದು ಅಧ್ಯಾಯಗಳಲ್ಲಿ ಈ ಕಾವ್ಯದ ಸಮಗ್ರ ಅಧ್ಯಯನವಿದೆ. ಪಂಪಭಾರತ ಕುಮಾರವ್ಯಾಸಭಾರತ, ಸದಾನಂದ ಭಾರತ ಮೊದಲಾದ ಇನ್ನೂ ಅನೇಕ ಭಾರತ ಕಾವ್ಯಗಳ ನಡುವಿನ ಪರಸ್ಪರ ಪ್ರಭಾವ ವ್ಯತ್ಯಾಸಗಳನ್ನು ಕಾಲ್ಪನಿಕ ದೃಷ್ಟಿಯಿಂದ ಗುರುತಿಸಿದ್ದಾರೆ. ಕಾವ್ಯವಸ್ತು, ಶೈಲಿ, ಛಂದಸ್ಸು, ವರ್ಣನಾ ಸಾಮರ್ಥ್ಯ-ಕವಿಯ ಸ್ವೋಪಜ್ಞತೆ ಮುಂತಾದವುಗಳನ್ನು ವಿವರಿಸುವಾಗಲೂ ತೌಲನಿಕ ದೃಷ್ಟಿಯೊಂದಿಗೇ ಸಾಗಿದ್ದಾರೆ. 'ತುರಂಗ ಭಾರತ ಬೃಹತ್ ಕಾವ್ಯ. ಈ ಕಾವ್ಯಕ್ಕೆ ಆದುದೇ ಆದ ಮಾಸದ ಚೆಲುವಿದೆ, ದೇಸೀಯ ಆಕರ್ಷಣೆಯಿದೆ ಎಂದು ಮೆಚ್ಚುಗೆಯ ಮಾತುಗಳಾಡಿದ್ದಾರೆ.

'ಮುಡಿಮಲ್ಲಿಗೆ' ಮತ್ತು 'ಆ ಮುಖ' ಕಮಲಾ ಅವರು ಬರೆದಿರುವ ವ್ಯಕ್ತಿಚಿತ್ರಗಳಾಗಿವೆ. ಪ್ರಮುಖರೆನಿಸಿದ ವ್ಯಕ್ತಿಗಳ ಜೀವನ ವಿವರ, ಸಾಧನೆಗಳನ್ನು ಪರಿಚಯಿಸುವ ಉದ್ದೇಶದ ಹಿನ್ನಲೆಯಲ್ಲಿ ರಚಿತವಾಗಿವೆ. 1966-81ರವರೆಗಿನ ಲೇಖನಗಳು ಮುಡಿ ಮಲ್ಲಿಗೆಯಲ್ಲಿ ಸಂಕಲಿತವಾಗಿವೆ. ಇಲ್ಲಿನ ಹತ್ತು ಲೇಖನಗಳು ತಮಗೆ ತೀರಾ ಹತ್ತಿರದಿಂದ ಪರಿಚಿತರಾದ ವ್ಯಕ್ತಿಗಳ ಜೀವನ ವಿವರ ಅವರ ಸಾಧನೆಗಳನ್ನು ಮುಕ್ತವಾಗಿ ಸ್ವಲ್ಪ ವೈಭವೀಕರಣದೊಂದಿಗೆ ವಿವರಿಸುತ್ತಾರೆ. ಗುರುಗಳಾದ ಡಿ.ಎಲ್.ಎನ್. ಕನ್ನಡ ಕಟ್ಟಿದ ಗಳಗನಾಥರು, ಪ್ರ.ತಿ.ನ. ತೆಂಕನಾಡ ಕೋಗಿಲೆ ಎನಿಸಿದ ರಾಧಮ್ಮ, ಮಾತೃಶ್ರೀ ರತ್ನಮ್ಮ, ಕಸ್ತೂರಿ ಬಾ ಮುಂತಾದವರನ್ನು ಸರಳವಾದ ಶೈಲಿಯಲ್ಲಿ ಪರಿಚಯಿಸಿದ್ದಾರೆ

'ಆ ಮುಖ' ವ್ಯಕ್ತಿಚಿತ್ರಗಳ ಮಾದರಿಯಲ್ಲಿ ಹೊಸತು ಕನ್ನಡದ ಖ್ಯಾತ ಸಾಹಿತಿಗಳ ಪತ್ನಿಯರ ವ್ಯಕ್ತಿ ಚಿತ್ರಣಗಳಿವೆ. ಗಂಡಂದಿರ ಸಾಹಿತ್ಯ ಸಾಧನೆಯ ಹಾದಿಯಲ್ಲಿ ಹೆಂಡತಿಯರ ಪಾತ್ರ, ಪ್ರಭಾವಗಳನ್ನು ತಿಳಿಯುವ ಉದ್ದೇಶದ ಹಿನ್ನಲೆಯಲ್ಲಿ ರಚಿತವಾದ ಇಲ್ಲಿನ ಲೇಖನಗಳು ಸಂದರ್ಶನದ ಮೂಲಕವಾಗಿ ಸಂಗ್ರಹಿಸಿದ ಮಾಹಿತಿಗಳನ್ನು ಒದಗಿಸುತ್ತವೆ. ಸಾಹಿತಿಗಳ ಕೌಟುಂಬಿಕ ವಿವರಗಳ ಜೊತೆಗೆ ಗಂಡ ಹೆಂಡತಿಯರ ಸಂಬಂಧ ಸ್ವರೂಪವೂ ಇವುಗಳ ಮೂಲಕ ಬಿಚ್ಚಿಕೊಳ್ಳುತ್ತವೆ.

'ಆಡುಮುಟ್ಟದ ಸೊಪ್ಪಿಲ್ಲ' ಎಂಬಂತೆ ಕಮಲಾ ಅವರು ಕೈಯಾಡಿಸದ ಸಾಹಿತ್ಯವಿಲ್ಲ ಮಕ್ಕಳ ಸಾಹಿತ್ಯದ ಬಗ್ಗೆ ಕಮಲಾ ಅವರು ಮಕ್ಕಳ ಸಾಹಿತ್ಯ ರಚನೆಗೆ ಅಗತ್ಯವಾದ ರಮ್ಯ, ರೋಚಕ, ಸರಳ ಶೈಲಿಯ ಮೂಲಕವಾಗಿ ಓದುಗರಿಗೆ ಪ್ರಿಯವೆನಿಸುಮಂತೆ ಕೆಲವು ಪ್ರಮುಖರಾದ ವ್ಯಕ್ತಿಗಳನ್ನು, ಕೆಲವು ಸ್ಥಳಗಳನ್ನು ಕುರಿತು ಏಳುಕೃತಿಗಳನ್ನು ರಚಿಸಿದ್ದಾರೆ. ಅಕ್ಕಮಹಾದೇವಿ ವೀರವನಿತೆ ಓಬವ್ವ, ಹೆಳವನಕಟ್ಟೆ ಗಿರಿಯಮ್ಮ, ಡಾ|| ಅಂಬೇಡ್ಕರ್, ಜನ್ನ, ಚಿಕ್ಕವರಿಗಾಗಿ ಚಿತ್ರದುರ್ಗ, ಮುಳುಬಾಗಿಲು ಇತ್ಯಾದಿ ಮಕ್ಕಳಿಗೆ ಆಕರ್ಷಕವೆನಿಸುವ ತಂತ್ರವನ್ನು ಕೆಲವೊಮ್ಮೆ ಬಳಸಿಕೊಳ್ಳುತ್ತಾರೆ. 'ಚಿಕ್ಕವರಿಗೆ ಚಿತ್ರದುರ್ಗ' ಸಂಭಾಷಣಾ ರೂಪದಲ್ಲಿ ಪ್ರಾರಂಭವಾಗಿ ಚಿತ್ರದುರ್ಗದ ಇತಿಹಾಸ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ.

ಬೀಜಾಕ್ಷರಮಾಲೆ, ಜಾತಿ ನಿರ್ಮೂಲನೆ, ಭಾರತದಲ್ಲಿ ಜಾತಿಗಳು ಇವರ ಅನುವಾದ ಕೃತಿಗಳಾಗಿವೆ. ಸರಸ್ವತಿಬಾಯಿ ಗಿರಿ ಅವರ ತೆಲುಗು ಕೃತಿಯಾದ 'ಬೀಜಾಕ್ಷರ ಮಾಲೆ'ಯನ್ನು ಅನುವಾದಿಸುವಲ್ಲಿ ಕಮಲಾ ಅವರು ಕನ್ನಡ ಭಾಷಾಜಾಯಮಾನಕ್ಕೆ ಹೊಂದುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ. ನೇರ ಅನುವಾದವಾಗದೆ ಭಾವಾನುವಾದದ ಪ್ರಯತ್ನವೇ ಎದ್ದು ತೋರುವುದರಿಂದ, ಸ್ವತಂತ್ರ ಕೃತಿ ಎಂಬಂತೆ ಕಾಣುತ್ತದೆ.

ಇನ್ನುಳಿದೆರಡು ಕೃತಿಗಳು ಜಾತಿ ನಿರ್ಮೂಲನೆಗಾಗಿ ಹೋರಾಡಿ, ಶ್ರಮಿಸಿದ, ಭಾರತದ ಸಂವಿಧಾನ ಶಿಲ್ಪಿ ಎನಿಸಿಕೊಂಡ ದಲಿತಸೂರ್ಯನಾಗಿ ಮೆರೆದ ಡಾ.ಅಂಬೇಡ್ಕರರ ಪುಸ್ತಕಗಳ ಭಾಷಾಂತರವಾಗಿದೆ.

ಸಮೂಹ ಮಾಧ್ಯಮಗಳಲ್ಲಿ ಒಂದಾದ ಆಕಾಶವಾಣಿಗಾಗಿಯೂ ಬರಹ ಗಳನ್ನು ಸಿದ್ಧಪಡಿಸಿ ಪ್ರಸ್ತುತಪಡಿಸಿದ ಕಮಲಾ ಅವರು ಮೂರು ಪ್ರಕಾರಗಳಲ್ಲಿ ಕೆಲಸ ಮಾಡಿದ್ದಾರೆ. ಅಲ್ಲಿ ಪ್ರಸಾರಗೊಂಡ ಚಿಂತನ ಭಾಷಣಗಳು, ರೂಪಕಗಳು, ನಾಟಕಗಳು, 'ಬೆಳ್ಳಕ್ಕಿ', 'ಬಾನಾಡಿ', 'ಬಕುಳ' ಎಂಬ ಸಂಕಲನಗಳಾಗಿ ಹೊರಬಂದಿವೆ. ಆಕಾಶವಾಣಿ ಮಾಧ್ಯಮಕ್ಕೇ ಬೇರೆಯೇ ಆದ ಶಿಸ್ತುಬೇಕಾಗುತ್ತದೆ. 'ಶ್ರವಣ'ವೇ ಮುಖ್ಯಭಾಗವಾದ್ದರಿಂದ ಎಲ್ಲ ವಿಚಾರಗಳೂ ಧ್ವನಿ ಮಾಧ್ಯಮದ ಮೂಲಕವೇ ಸಂವಹನಗೊಳ್ಳಬೇಕು. ಆದ್ದರಿಂದ ಇಲ್ಲಿನ ಬರವಣಿಗೆಗೆ ವಿಶೇಷಗಮನದ ಅಗತ್ಯವಿರುತ್ತದೆ. ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ಸಂದರ್ಭಗಳಿಗಾಗಿ ಬರೆದ ನಾಟಕಗಳಾಗಿವೆ. 'ಬಕುಳ'ದಲ್ಲಿನ ನಾಲ್ಕು ನಾಟಕಗಳು ಜಗವೆಲ್ಲ ಮಲಗಿರಲು 'ಕನಸು ನನಸಾಯಿತು', 'ಕುಲದ ನೆಲೆಯ ಬಲ್ಲಿರಾ', 'ಕಂತಿ-ಹಂಪ' ನಾಟಕಗಳಾದರೆ 'ಬಾನಾಡಿ'ಯಲ್ಲಿ ಐದು ನಾಟಕಗಳಿವೆ. 'ಪ್ರಿಯದರ್ಶಿನಿ' (ಇಂದಿರಾಗಾಂಧಿಯನ್ನು ಕುರಿತದ್ದು) 'ಪಂಜೆಯವರು', 'ಜನ್ಮಾಭಿಷೇಕೋತ್ಸವ' (ಮಹಾವೀರ ಜಯಂತಿ ಸಂದರ್ಭಕ್ಕೆ) ರಜತ ರಾಜ್ಯೋತ್ಸವ', 'ಸಂಚಿ ಹೊನ್ನಮ್ಮ' ಚಿಂತನ ಭಾಷಣಗಳು. ಕೇವಲ ನಾಲ್ಕು ನಿಮಿಷಗಳ ಅವಧಿಗೆ ಅಳವಡುವಂತೆ ಸಿದ್ಧಪಡಿಸುವ ವಿಚಾರಗಳಾಗಿರುತ್ತವೆ. ವಿವಿಧ ವಿಷಯಗಳಾದ ಧರ್ಮ, ನೀತಿ, ಸ್ವಾತಂತ್ರ್ಯ, ಉಪಕಾರ, ಮಾನವತ್ವ, ಸಮಾನತೆ ಇತ್ಯಾದಿ ಹಲವಾರು ವಿಷಯಗಳನ್ನು ಕುರಿತ ಆಲೋಚನೆಗಳ ಚಿಂತನೆಗಳ ಸಂಗ್ರಹವಾಗಿದೆ. 'ಬೆಳ್ಳಕ್ಕಿ' ಮೂರು ತೆನೆಗಳಲ್ಲಿ ಹಂಚಿಕೊಂಡ ಈ ಕೃತಿ ಕ್ರಮವಾಗಿ ಚಿಂತನಗಳನ್ನು ವಿಮರ್ಶೆಗಳನ್ನು, ಭಾಷಣಗಳನ್ನು ಒಳಗೊಂಡಿದೆ.

ಕಮಲಾ ಅವರ ಸಾಹಿತ್ಯರಾಶಿಗೆ ಸೇರುವ ಪ್ರಮುಖ ಕೃತಿಗಳಾದ ಬಾಸಿಂಗ, ಬಾಂದಳ, ಬಡಬಾಗ್ನಿ, ಬಿತ್ತರಗಳು ಅವರ ಪ್ರಬುದ್ಧ ಚಿಂತನೆ, ಆಲೋಚನೆಗಳನ್ನು ಬಿಂಬಿಸುವ ವೈಚಾರಿಕ, ವಿಮರ್ಶಾತ್ಮಕ ಲೇಖನಗಳ ಸಂಗ್ರಹಗಳಾಗಿವೆ. ವಿವಿಧ ಸಂದರ್ಭಗಳಿಗಾಗಿ ಸಿದ್ಧಪಡಿಸಿದ ಲೇಖನಗಳು, ಭಾಷಣಗಳು ಕೃತಿಗಳಾಗಿ ಹೊರಬಂದಿದೆ. ಅಲ್ಲದೆ ಸಾಹಿತ್ಯ ವಿದ್ಯಾರ್ಥಿಯಾಗಿ ನಿರುತರವಾಗಿ ಕನ್ನಡ ಸಾಹಿತ್ಯಾಧ್ಯಯನದಲ್ಲಿ, ಸಾಹಿತ್ಯಾನುಸಂಧಾನದಲ್ಲಿ ತೊಡಗಿಸಿಕೊಂಡು ಕನ್ನಡ ಸಾಹಿತ್ಯದಲ್ಲಿ ಆಗುತ್ತಿರುವ ಸ್ಥಿತ್ಯಂತರಗಳನ್ನು, ಧೋರಣೆಗಳನ್ನು ಗಮನಿಸುತ್ತಾ ಆಯಾಕಾಲಕ್ಕೆ ಸಂದರ್ಭಗಳಿಗೆ ಅನುಗುಣವಾಗಿ ಸ್ಪಂದಿಸುತ್ತಾ ತಮ್ಮದೇ ಆದ ದೃಷ್ಟಿಕೋನವನ್ನು ಆಲೋಚನೆ, ಅಭಿಪ್ರಾಯಗಳನ್ನು ರೂಪಿಸಿಕೊಂಡು ಸಾಹಿತ್ಯದ ವಿವಿಧ ಮಗ್ಗಲುಗಳನ್ನು ಕುರಿತಾದ ತಮ್ಮ ನಿಲುವುಗಳನ್ನು ವಿಮರ್ಶಾ ಲೇಖನಗಳಲ್ಲಿ, ವೈಚಾರಿಕ ಲೇಖನಗಳಲ್ಲಿ ಮಂಡಿಸಿದ್ದಾರೆ. 1985ರಲ್ಲಿ ಪ್ರಕಟವಾದ 'ಬಾಸಿಂಗ' 10-15 ವರುಷಗಳಲ್ಲಿ ಬರೆದ ಲೇಖನಗಳಲ್ಲಿ ಕೆಲವನ್ನು ಆಯ್ದು ಸಂಗ್ರಹಿಸಿದ್ದಾಗಿದೆ. ಇವುಗಳಲ್ಲಿನ ಕೆಲವು ಲೇಖನಗಳು ವಿಚಾರ ಸಂಕಿರಣ ಸ್ಮರಣ ಸಂಚಿಕೆಗಳಿಗೆಂದೇ ಬರೆದವುಗಳಾಗಿವೆ. ಸಾಹಿತ್ಯಕ್ಕೆ ಮಡಿವಂತಿಕೆ ಇಲ್ಲವೆಂಬಂತೆ ಕನ್ನಡ ಸಾಹಿತ್ಯ ಮಾತ್ರವಲ್ಲದೆ ತೆಲುಗು, ಬಂಗಾಲಿ ಸಾಹಿತ್ಯಸಂಬಂಧ ಲೇಖನಗಳೂ ಇವೆ. ಜೀವನ ಚರಿತ್ರೆ, ಮಹಿಳಾ ಸಾಹಿತ್ಯ, ದಲಿತ ಸಾಹಿತ್ಯ, ನವ್ಯೋತ್ತರ ಸಾಹಿತ್ಯ ಸಂಬಂಧ ಲೇಖನಗಳೇ ಅಲ್ಲದೆ ಶರತ್‌ಚಂದ್ರರ ಪ್ರಧಾನ ಸ್ತ್ರೀ ಪಾತ್ರಗಳು, ರಾಷ್ಟ್ರಕವಿ ಗೋವಿಂದ ಪೈ ವಾಙ್ಮಯ, ಕಂಬಾರರ ಸಿಂಗಾರೆವ್ವ ಮತ್ತು ಅರಮನೆ, ಹೆಳವನ ಕಟ್ಟೆ ಗಿರಿಯಮ್ಮ ಮೊದಲಾಗಿ ಇನ್ನೂ ಅನೇಕ ಲೇಖನಗಳಿವೆ. ಕೆಲವು ಇವರ ವಿಮರ್ಶಾದೃಷ್ಟಿಗೆ, ತೀಕ್ಷ್ಣ ಒಳನೋಟಗಳಿಗೆ ಕನ್ನಡಿ ಹಿಡಿದರೆ ಮತ್ತೆ ಕೆಲವು ಭಾಷಣದ ರೂಪಾಂತರಗಳಂತಿವೆ. ಕನ್ನಡದಲ್ಲಿ ಜೀವನ ಚರಿತ್ರೆಗಳು ಲೇಖನದಲ್ಲಿ ಕನ್ನಡದ ಕೆಲವರ ಜೀವನ ವಿವರಗಳಿಗೆ ಸಂಬಂಧಿಸಿದ

ಮಾಹಿತಿಗಳನ್ನು ದಾಖಲಿಸಿದ್ದಾರೆ ಮತ್ತು ಜೀವನ ಚರಿತ್ರೆಯ ಸ್ವರೂಪವನ್ನು ಅವುಗಳ ವಿಕಾಸವನ್ನು ಗುರುತಿಸುತ್ತಾರೆ. ಮಹಿಳಾ ಸಾಹಿತ್ಯದ ನೆಲೆ ಬೆಲೆಗಳನ್ನು ಗುರುತಿಸುವಲ್ಲಿ ನಿಷ್ಠುರ ಮತ್ತು ಪ್ರಾಮಾಣಿಕ ಅಭಿಪ್ರಾಯಗಳಿಗೆ ಎಡೆಗೊಡುತ್ತಾರೆ. ಮಹಿಳೆಯರ ಬರಹಗಳಲ್ಲಿ ವ್ಯಾಪಕ ವಿಚಾರ ಸಂಪತ್ತಾಗಲಿ ಸಂವೇದನೆಯ ತೀವ್ರತೆಯಾಗಲೀ, ಸಂಕೀರ್ಣತೆ, ಬೌದ್ಧಿಕತೆಗಳಾಗಲೀ ಬದುಕಿನ ನೈಜ ಪ್ರತಿಬಿಂಬವಾಗಲಿ ಕಾಣುವುದಿಲ್ಲ ವೆಂದು ಸ್ಪಷ್ಟವಾಗಿ ಹೇಳುತ್ತಾರೆ. ದಲಿತ ಸಾಹಿತ್ಯವನ್ನು ತಮ್ಮದೇ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ಮಾತುಗಳಲ್ಲಿ ರೋಷ ತೀವ್ರ ಪ್ರತಿಭಟನೆಯ ದನಿ ಕೇಳಿ ಬರುತ್ತದೆ. ದಲಿತ ಸಾಹಿತ್ಯ ಪ್ರಾರಂಭದ ಸ್ಥಿತಿಯನ್ನು ದಾಟಿ ಮುಖ ಮೈ ಪಡೆಯುತ್ತಿದೆ...ಪ್ರತಿಷ್ಠಿತ ಜಾತಿ ಹುತ್ತವನ್ನು ನಮ್ಮ ಲೇಖಕರು ಇನ್ನಾದರೂ ಕಿತ್ತು ಹಾಕಬೇಕು ಎನ್ನುತ್ತಾರೆ.

1986ರಲ್ಲಿ ಬಂದ ಬಾಂದಳ 23 ವಿವಿಧ ವಿಷಯ ಸಂಬಂಧಿ ಲೇಖನಗಳನ್ನು ಒಳಗೊಂಡಿವೆ. 16 ವರುಷಗಳ ಅವಧಿಯಲ್ಲಿನ ಈ ಲೇಖನಗಳು ದೇಶ, ಭಾಷೆ, ವ್ಯಕ್ತಿ, ಮತ, ಧರ್ಮ, ರಾಜಕೀಯ, ಸಂಘ ಸಂಸ್ಥೆ, ದೇವರು, ಮಹಿಳೆ, ಕನ್ನಡ ಸಾಹಿತ್ಯ ಇತ್ಯಾದಿ ಹಲವಾರು ವಿಷಯಗಳನ್ನು ಒಳಗೊಂಡಿವೆ. ಭಾಷಣ ಶೈಲಿಯ ಸ್ಪರ್ಶವಿದೆ. ಇಂದಿನ ಮಕ್ಕಳ ಶಿಕ್ಷಣ ಪರಿಸರದ ಬಗ್ಗೆ ಬರೆಯುವಾಗ ಕನ್ನಡ ಮಾಧ್ಯಮದ ಬಗೆಗಿನ ನಿರ್ಲಕ್ಷ್ಯಕ್ಕೆ ಕಾರಣಗಳನ್ನು ಹೇಳುವಾಗ ತಂದೆ ತಾಯಿಗಳ ಧೋರಣೆ, ಕಾನ್ವೆಂಟ್‌ಗಳ ಹೆಚ್ಚಳ ಕನ್ನಡ ಶಾಲೆಯ ಪರಿಸರದ ಬಗೆಗಿನ ನಿರ್ಲಕ್ಷ್ಯ ಎಂಬುದನ್ನು ಗುರುತಿಸುತ್ತಾರೆ. ಅನುಭವದ ಸನ್ನಿವೇಶ, ಸಂದರ್ಭಗಳ ಬಲ್ಲ ಮಗ್ಗುಲುಗಳ ಬಗ್ಗೆ ನಡೆಸುವ ಚಿಂತನಗಳು ಲೇಖನಗಳಾಗಿ ಮೈ ಪಡೆದಿವೆ. ಸಮಕಾಲೀನ ಸಾಹಿತ್ಯ ಸಮಾಜ, ರಾಜಕೀಯ ಇತ್ಯಾದಿ ಸಮಸ್ಯೆಗಳ ಬಗೆಗಿನ ಪ್ರತಿಕ್ರಿಯೆ ಸ್ಪಂದನ ಗಳೇ ಅವರ ವೈಚಾರಿಕ, ವಿಮರ್ಶಾತ್ಮಕ ಲೇಖನಗಳಾಗಿ ಸಂಕಲಿತವಾಗಿವೆ. 'ಬಡಬಾಗ್ನಿ' ಲೇಖನ ಸಂಕಲನ ಮುಖ್ಯವಾಗಿ ದಲಿತಪರ ಕಾಳಜಿಗಳನ್ನು ಬಿಂಬಿಸುವ ಲೇಖನಗಳನ್ನು ಒಳಗೊಂಡಿವೆ. ದಲಿತ ಸಾಹಿತ್ಯ, ಸಾಹಿತ್ಯಧೋರಣೆ, ದಲಿತ ಮಕ್ಕಳ ಉದ್ಧಾರದ ಕನಸು. ಸಮಾಜವಾದಿ ಒಲವು ಮತ್ತು ದಲಿತ ಸಾಹಿತ್ಯ ಇತ್ಯಾದಿ ಶೀರ್ಷಿಕೆಗಳಡಿಯಲ್ಲಿ ದಲಿತ ಜಗತ್ತಿನ ನೋವು ಅನುಭವ, ಅಭಿವ್ಯಕ್ತಿಗಳ ಬಗ್ಗೆ ವಿಶ್ಲೇಷಣೆ ನಡೆಸಿದ್ದಾರೆ. 'ಬಿತ್ತರ' ಅವರ ಇತ್ತೀಚಿನ ವೈಚಾರಿಕ ಲೇಖನಗಳ ಸಂಗ್ರಹವಾಗಿದೆ. ಜನಪ್ರಿಯ ಪುಸ್ತಕಮಾಲೆಯಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದ ವತಿಯಿಂದ ಪ್ರಕಟವಾದ ಈ ಕೃತಿಯಲ್ಲಿ 20 ಲೇಖನಗಳಿವೆ.

ಪ್ರಾಚೀನ ಕಾಲದಿಂದ ಇಂದಿನವರೆಗಿನ ಕನ್ನಡ ಕಾವ್ಯ ಕವಿಗಳ ಒಂದು ಸ್ಥೂಲ ಪರಿಚಯವನ್ನು ನೀಡಿದ್ದಾರೆ. ಐದು ವಿಭಾಗಗಳ ಅಡಿಯಲ್ಲಿ ಕುಮಾರವ್ಯಾಸ ಭಾರತ, ಜೈನಸಾಹಿತ್ಯ, ಜೈನಪುರಾಣ, ಕನಕದಾಸರ ಕೃತಿಗಳು, ಷಡಕ್ಷರ ದೇವ, ತೀ.ನಂ.ಶ್ರೀ. ಮತ್ತು ವ್ಯಾಕರಣ, ಹಾ.ಮಾ.ನಾಯಕ, ಎ.ಆರ್.ಕೃ, ಬೆಂಗಳೂರು ಸಾಹಿತಿಗಳು ಇತ್ಯಾದಿಯಾಗಿ ಕೃತಿ. ಕೃತಿಕಾರರ ಸಮೀಕ್ಷೆ ನಡೆಸಿದ್ದಾರೆ. ದಲಿತರ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ಹೇಳುವಾಗ ಚಾರಿತ್ರಿಕವಾಗಿ, ಹಂತಹಂತವಾಗಿ ಗುರುತಿಸುತ್ತಾರೆ. ದೇಶ,ಸಮಾಜ, ಸಂವಿಧಾನ, ಕಾನೂನುಗಳ ಬಗ್ಗೆಯಾಗಿ ಅರಿವನ್ನು ಮೂಡಿಸಿಕೊಂಡಿರು ವುದರಿಂದಲೇ ವಿಷಯ ಪ್ರತಿಪಾದನೆ, ನಿರೂಪಣೆಗಳಿಗೆ ಒಂದು ಬಗೆಯ ಅಧಿಕೃತತೆ ಸಂದಿದೆ. ಕಮಲಾ ಅವರು ಲೇಖನಗಳ ಸಂಖ್ಯೆಯ ಕಡೆ ಬಲಿದಿರುವಂತೆ ಕಾಣುತ್ತದೆ. ಬರವಣಿಗೆಯನ್ನು ನಿಯಂತ್ರಿಸಿಕೊಂಡು, ಕಾವು ಕೊಟ್ಟು ಬರೆದಲ್ಲಿ ಒಳನೋಟಗಳ ಪ್ರಬುದ್ಧ ಬರವಣಿಗೆ ಸಾಧ್ಯವಾಗುವುದು. ಇಲ್ಲಿಯವರೆಗಿನ ಕೃತಿಗಳು ಅವರ ವಿದ್ವತ್, ಪಾಂಡಿತ್ಯ ವರ್ಗಕ್ಕೆ ಸೇರಿದವುಗಳಾದರೆ ಸೃಜನಾತ್ಮಕವೆನಿಸಿರುವ ಅವರ ಕಥಾ ಸಾಹಿತ್ಯ, ವಚನಗಳು ಮತ್ತೊಂದು ವರ್ಗಕ್ಕೆ ಸೇರುತ್ತವೆ. ಈಗಾಗಲೇ ಆಕಾಶವಾಣಿಗಾಗಿ ಬರೆದ ನಾಟಕ ರೂಪಕಗಳು ಸಿದ್ಧವಸ್ತುವಿನ ಸೃಜನಾತ್ಮಕ ರೂಪಾಂತರಗಳೇ ಆಗಿದ್ದರೂ ಎಪ್ಪತ್ತು ಎಂಬತ್ತರ ದಶಕದಲ್ಲಿಯೇ 'ನಕ್ಕಿತು ಹಾಲಿನ ಬಟ್ಟಲು' ರೆಕ್ಕೆ ಮುರಿದಿತ್ತು, ಚಂದನಾ ಕಥಾಸಂಕಲನಗಳಾದರೆ, ಚಂದಲಿ, ಬುಗುಡಿ ಇವರ ಆಧುನಿಕ ವಚನ ಸಂಕಲನಗಳಾಗಿವೆ. ಸುಮಾರು ಅರವತ್ತರ ದಶಕದಲ್ಲಿ ಕಥೆಗಳನ್ನು ಬರೆಯಲು ಆರಂಭಿಸಿದಾಗ ಮಾಸ್ತಿಯಂತಹವರ ಪ್ರಭಾವ ಒಂದು ಕಡೆಗಿದ್ದರೆ ಆ ಕಾಲದ ಸಾಹಿತ್ಯಕ ಪರಿಸರ, ನಿರೀಕ್ಷೆಗಳಿಗನುಗುಣವಾಗಿ ನವೋದಯದ ಲಕ್ಷಣಗಳನ್ನೇ ಒಳಗೊಂಡಿವೆ 35 ಕ್ಕೂ ಹೆಚ್ಚಿನ ಕಥೆಗಳನ್ನು ಬರೆದು ಆ ಕಾಲದ ಲೇಖಕಿಯರು ಬರೆಯುತ್ತಿ ದ್ದುದಕ್ಕಿಂತ ಸ್ವಲ್ಪ ಭಿನ್ನವಾಗಿ ಬರೆಯುವ ಪ್ರಯತ್ನಕ್ಕೆ ಹತ್ತಿರವಿರುವಂತೆ ಕಾಣುತ್ತದೆ. ಸಾಮಾನ್ಯವಾಗಿ ಇವರ ಎಲ್ಲ ಕಥೆಗಳಲ್ಲಿ ಮನುಷ್ಯ ಸಂಬಂಧ ಸ್ವಭಾವಗಳು ಸುಶಿಕ್ಷಿತ, ಮಧ್ಯಮ ವರ್ಗದ ವ್ಯಕ್ತಿಗಳು. ನಗರ ಪರಿಸರ ಮುಖ್ಯವಾಗಿ ಕಾಣುತ್ತದೆ. ವಾಸ್ತವ ಘಟನೆ, ಸನ್ನಿವೇಶ, ಕಲ್ಪನೆಗಳು ಕಥೆಗಳ ಹಿನ್ನಲೆಯಾಗಿವೆ. ತಂತ್ರ ಸಂಕೀರ್ಣತೆ ಯಾಗಲೀ, ವಸ್ತು ಸಂಕೀರ್ಣತೆಯಾಗಲೀ ಕಾಣುವುದಿಲ್ಲ. ಹಾಗೆಂದ ಮಾತ್ರಕ್ಕೆ ಕಥೆಗಳು ಕಳಪೆಯಲ್ಲ. ನಕ್ಕಿತು ಹಾಲಿನ ಬಟ್ಟಲು, 'ರೆಕ್ಕೆ ಮುರಿದಿತ್ತು' ಸಂಕಲನಗಳಲ್ಲಿ ಸಮಕಾಲೀನ, ಸಾಮಾಜಿಕ, ರಾಜಕೀಯ, ಆರ್ಥಿಕ ಸಂದರ್ಭಗಳ ಹಿನ್ನಲೆಯಲ್ಲಿ ಮಧ್ಯಮವರ್ಗದ ಕುಟುಂಬಗಳ ಬದುಕಿನ ಏಳು ಬೀಳಿನ ಚಿತ್ರಗಳಿವೆ. ಬದುಕಿನ ಸಂಘರ್ಷದ ಸರಳ ನಿರೂಪಣೆ ಕಾಣುತ್ತೇವೆ. ಇಲ್ಲಿ ಬರುವ ಹೆಣ್ಣುಗಳು ಎಷ್ಟೇ ಸುಶಿಕ್ಷಿತರಾದರೂ ಸಾಂಪ್ರದಾಯಿಕ ಮಿತಿಯ ಚೌಕಟ್ಟಿನ ಒಳಗೇ ಸ್ಪಂದಿಸುವಂತಹ ವರು. ಆದ್ದರಿಂದ ಮಹಿಳೆಯರ ಪ್ರತಿಭಟನೆ ಮೆಲುದನಿಯಲ್ಲಿ ಕೇಳಿಬರುತ್ತದೆ. ಸ್ತ್ರೀಯರ ಮನಸ್ಸಿನ ಮಾರ್ದವತೆ, ವಾತ್ಸಲ್ಯ ಹೃದಯ ವೈಶಾಲ್ಯತೆ, ಸಹನ ಶಕ್ತಿಗಳ ಚಿತ್ರಣವಿದೆ ಯಾದರೂ ಸ್ತ್ರೀಯರು ಆದರ್ಶಮೂರ್ತಿಗಳು ಪುರುಷರು ಕೆಟ್ಟವರೆಂಬ ನಿಲುವಿಲ್ಲ. ಸ್ತ್ರೀಯಾಗಲೀ ಪುರುಷನಾಗಲೀ ಮನುಷ್ಯ ಸಹಜವಾದ ಸ್ವಭಾವಗಳನ್ನು ಚಿತ್ರಿಸುವುದೇ ಮುಖ್ಯವೆಂಬ ಧೋರಣೆಯನ್ನು ಕಾಣುತ್ತೇವೆ. ಆಸೆ, ಆಕಾಂಕ್ಷೆ, ಸ್ವಾರ್ಥ, ಮೋಸ, ಸಂಕುಚಿತತೆ, ಕ್ರೌರ್ಯ ಇವು ಎಲ್ಲರಿಗೂ ಸಹಜ ಸ್ವಾಭಾವಿಕ ಸನ್ನಿವೇಶ ಸಂದರ್ಭಗಳಿಗನುಗುಣವಾಗಿ ಒಡೆದೆದ್ದು ಕಾಣುವ ಈ ಸ್ವಭಾವಗಳ ಸ್ವರೂಪವನ್ನು ಯಥಾವತ್ತಾಗಿ ವಾಸ್ತವತೆಯ ನೆಲೆಯಿಂದ ಬಿಡಿಸಿದ್ದಾರೆ. 1982ರಲ್ಲಿ ಪ್ರಕಟವಾದ 'ರೆಕ್ಕೆ ಮುರಿದಿತ್ತು' ಮೊದಲ ಸಂಕಲನಕ್ಕಿಂತ ಉತ್ತಮವಾದ ಕತೆಗಳನ್ನು ಒಳಗೊಂಡಿದೆ. ಸಂವೇದನೆಯ ಸೂಕ್ಷ್ಮತೆ, ಪರಿಣಾಮಕಾರಿ ಮುಕ್ತಾಯ ಕುತೂಹಲ ವನ್ನು ಉಳಿಸಿಕೊಳ್ಳುವ ಗುಣ ಈ ಕತೆಗಳಿಗಿವೆ. ಮೋಡ, 'ಕತೆಯಾಯಿತು ಘಟನೆ' ಕಾಮಾಲೆ, ಸುಗಂಧಿ, ಹನಿಮೂನ್ ಇತ್ಯಾದಿ. ಕಲಾತ್ಮಕತೆ ಸಹಜ ನಿರೂಪಣೆ ಮತ್ತು ತಂತ್ರ, ಸಂವಿಧಾನದ ದೃಷ್ಟಿಯಿಂದ ಹಿಂದಿನ ಸಂಕಲನಕ್ಕಿಂತ ಹೆಚ್ಚಿನ ಬೆಳವಣಿಗೆಯನ್ನು ಬಿಂಬಿಸುತ್ತವೆ. 'ಚಂದನಾ' ಮೇಲಿನ ಎರಡು ಸಂಕಲನಗಳಿಗಿಂತ ಭಿನ್ನವಾಗಿ ಸಿದ್ಧ ಸಾಹಿತ್ಯ ಮೂಲಗಳಿಂದ ಆಯ್ದ ಆದರ್ಶ ವ್ಯಕ್ತಿಗಳ ಆದರ್ಶಮಯ ಬದುಕುಗಳನ್ನು ಕತೆಯಾಗಿಸಿರುವುದಾಗಿದೆ. ಉದಾತ್ತ ಬದುಕನ್ನು ಬದುಕಿದ, ಹುಟ್ಟುಸಾವುಗಳ ಬಗ್ಗೆ ಆತ್ಮ-ಪರಮಾತ್ಮರ ಬಗ್ಗೆ ಗಾಢಚಿಂತನೆಗೆ ಒಳಗಾದ, ತ್ಯಾಗ, ಬಲಿದಾನ ಆದರ್ಶವೆಂಬ ಮೌಲ್ಯಗಳಿಗೆ ತೆತ್ತುಕೊಂಡ ಮಹಾನ್ ಸ್ತ್ರೀ ಪುರುಷರ ಚಿತ್ರಗಳಾಗಿವೆ. ಶಾಸನ, ಪುರಾಣ, ಕಾವ್ಯ, ಇತಿಹಾಸದಿಂದ ಆಯ್ದುಕೊಂಡ ವಸ್ತುವಿಗೆ ಕಲ್ಪನೆಯ ಲೇಪ ಹಚ್ಚಿ ಕತೆಗಳನ್ನಾಗಿಸಿದ್ದಾರೆ. ಇಲ್ಲಿನ ವ್ಯಕ್ತಿ, ಪರಿಸರ, ಕಾಲ ಭಿನ್ನವಾಗಿ ಅದು ನಿರೀಕ್ಷಿಸುವ ಆಲಂಕಾರಿಕ, ಮೋಹಕ ಭಾವುಕ ಶೈಲಿ, ನಿರೂಪಣೆಯಲ್ಲಿ ತನ್ಮಯತೆಗಳು ಎದ್ದು ಕಾಣುತ್ತವೆ. ಮಹಾಸತಿ ಹರ್ಯಲೆ, ಕಂಬದಮ್ಮ, ವರ್ಧಮಾನ ಮಹಾವೀರ, ಚಂದನಾ, ಇತ್ಯಾದಿ. ಕತೆಗಳು ಒಂದೊಂದು ದೃಷ್ಟಿಯಿಂದಲೂ ರೋಚಕವೆನಿಸಿವೆ. ಒಬ್ಬರ ತ್ಯಾಗ, ಒಬ್ಬರ ತಪಸ್ಸು, ಒಬ್ಬರ ಭಕ್ತಿ-ಹೀಗೆ, ಯಾವುದೇ ಉದಾತ್ತ ಗುಣವಾಗಲೀ ಕಮಲಾ ಅವರ ಕಲ್ಪನಾ ವೈಭವ, ನಿರೂಪಣಾ ಚಾತುರ್ಯ, ಕಥನಕೌಶಲ್ಯದ ಮೂಸೆಯಲ್ಲಿ ಬಿದ್ದು ಸುಂದರ ಕಲಾಕೃತಿಗಳಾಗಿ ಅರಳಿವೆ. 'ಬಿಂದಲಿ',

'ಬೂಗುಡಿ' ಇವರ ಆಧುನಿಕ ವಚನಗಳ ಸಂಕಲನಗಳಾಗಿವೆ. ಆಧುನಿಕ ವಚನಗಳು ಇತ್ತೀಚಿಗೆ ಕಾಣಿಸಿಕೊಳ್ಳುತ್ತಿರುವ ಒಂದು ಹೊಸ ಸಾಹಿತ್ಯಕ ಕಾವ್ಯ ಪ್ರಕಾರವಾಗಿದೆ. ಈಗಾಗಲೇ ಸಿದ್ದಯ್ಯ ಪುರಾಣಿಕ ಎಸ್.ವಿ. ರಂಗಣ್ಣ ಮಹಾದೇವ ಬಣಕಾರ ಜ.ಚ.ನಿ, ಮುಂತಾದವರು ಈ ಪ್ರಕಾರದಲ್ಲಿ ಉತ್ತಮ ಅನುಭವ ಸಾಹಿತ್ಯರಾಶಿಯನ್ನು ಕನ್ನಡಕ್ಕೆ ನೀಡಿದ್ದಾರೆ. ಮಹಿಳೆಯರಲ್ಲಿ ವಚನಕಾರ್ತಿಯರು ಧರ್ಮ ಆಧ್ಯಾತ್ಮಕ್ಕೆ ಸಂಬಂಧಿಸಿದಂತೆ ವಚನಗಳನ್ನು ಬರೆದಿದ್ದಾರೆ. ಈಗಲೂ ಅಲ್ಲಲ್ಲಿ ಅನೇಕರು ಬಿಡಿಬಿಡಿಯಾಗಿ ಬರೆಯುತ್ತಿರುವರಾದರೂ ಕಮಲಾ ಅವರ ಸಮಗ್ರ ಸಾಹಿತ್ಯರಾಶಿಗಿಂತ ಈ ಎರಡು ವಚನ ಸಂಕಲನಗಳು ವಿಶಿಷ್ಟವೂ ಮೌಲಿಕವೂ ಇವುಗಳದೇ ಒಂದು ತೂಕವಾಗಿದೆ. ಇವು ಮುಕ್ತಕಗಳಂತೆ ವ್ಯಂಗ್ಯ, ವಿಡಂಬನೆ, ಟೀಕೆ, ಚಿಂತನ, ಪ್ರತಿಭಟನೆ ನಿವೇದನೆಗಳ ಮೂಲಕ ಸ್ಪಂದಿಸುವ ಕಾವ್ಯಾತ್ಮಕ ಶಬ್ದಚಿತ್ರಗಳಾಗಿವೆ. ವಿಶಾಲವಾದ ಬದುಕು ಪ್ರಪಂಚ, ಸಮಾಜ ಅಸಂಖ್ಯ ಅನುಭವಗಳಿಗೆ ಮನಃಸ್ಥಿತಿಗಳಿಗೆ ದಾರಿ ಮಾಡುತ್ತವೆ. ಅಂತಹ ಸಂದರ್ಭಗಳಲ್ಲಿ ಹೃದಯಾಂತರಾಳದಿಂದ ಹೊಮ್ಮಿದ ಮಾತುಗಳು, ಉದ್ಗಾರಗಳು ವಚನಗಳಾಗಿ ಮೈ ತಳೆಯುತ್ತವೆ. ಪ್ರೀತಿ, ಪ್ರೇಮ, ನೋವು, ವಿಷಾದ, ಸಹಾನುಭೂತಿ, ಆತ್ಮನಿವೇದನೆ ಹುಟ್ಟು, ಸಾವು, ಹೆಣ್ಣು-ಗಂಡಿನ ಸಂಬಂಧ, ಗಂಡ-ಹೆಂಡತಿ ಸಂಬಂಧ, ತಾಯಿ ಮಕ್ಕಳ ಸಂಬಂಧ-ಇತ್ಯಾದಿ ನೂರೆಂಟು ಅನುಭವದ ಮುಖಗಳು ಇಲ್ಲಿ ಕಾಣಿಸಿಕೊಂಡಿವೆ. ಸಮಕಾಲೀನ ಬದುಕಿನಲ್ಲಿ ದಿನನಿತ್ಯದ ಆಗುಹೋಗುಗಳ ಬಗ್ಗೆ ಎಚ್ಚರದ ಕಣ್ಣಿದೆ. ವರದಕ್ಷಿಣೆಗಾಗಿ ಮಹಿಳೆಯರ ಮೇಲೆ ಆಗುತ್ತಿರುವ ದೌರ್ಜನ್ಯ ದಬ್ಬಾಳಿಕೆಗಳು ಎದುರಿಸ ಬೇಕಾಗಿ ಬರುತ್ತಿರುವ ದುರಂತದ ಚಿತ್ರ 'ಅಕ್ಷತೆ ಸುರಿದ ಕೈಲೇ /ಸೀಮೆ ಎಣ್ಣೆ ಸುರಿವರಯ್ಯ ಅರಿಸಿನ ಹಚ್ಚಿದ ಕೈಲೆ/ ಬೆಂಕಿ ಹಚ್ಚಿಸುಡುವರಯ್ಯ'-ಎಂಬ ಸಾಲುಗಳು ಸಾರ್ಥಕವಾಗಿ ಬಿಂಬಿಸುತ್ತವೆ.

ಆಧುನಿಕ ಕಾಲದ ಯಾಂತ್ರಿಕ ಬದುಕಿನ ಸೂಕ್ಷ್ಮ ವಿಡಂಬನೆಗೆ ಒಂದೆರಡು ಸಾಲುಗಳನ್ನು ಗಮನಿಸಬಹುದು.

ಆಕಾಶವಾಣಿಯ ಸಮಾಚಾರದ ಮೊರೆ
ದೂರವಾಣಿಯ ಟ್ರಿನ್‌ಟ್ರಿನ್ ಕರೆ
ಕರೆಗಂಟೆಯ ಕುಕಿಲ ಕರೆ
ಮಕ್ಕಳ ಮಮತೆಯ ಕರೆ
ಇನಿಯನ ಇನಿದನಿಯ ಕರೆ
ಈ ವಿವಿಧ ಕರೆಗಳ ನಡುವೆ
ಎಂತು ಕೇಳುವೆ ನಾನು
ನನ್ನಂತರಂಗದ ಕರೆಯ ಕಮಲಾ ಪ್ರಿಯ

ಎಂತಹ ಆತ್ಮೀಯ ಸಂಬಂಧಗಳೂ ಮಾರ್ದವತೆ ಕಳೆದುಕೊಂಡಾಗ ಶೂಲಗಳಾಗುವರೆಂಬುದು ಇವರ ಅನಿಸಿಕೆ. ಆದ್ದರಿಂದಲೇ

ಗಂಡನೊಂದು ಶೂಲ / ಮಗಳೊಂದು ದ್ವಿಶೂಲ
ಮಗನೊಂದು ತ್ರಿಶೂಲ / ಬಂಧುಗಳೋ ಬಹುಶೂಲಗಳಯ್ಯಾ
ಈ ಶೂಲಗಳಿಂದ ಪಾರುಗಾಣಿಸೋ
ಎನ್ನ ಕಮಲಾ ಪ್ರಿಯ
-ಎಂಬ ಆರ್ತ ಪ್ರಾರ್ಥನೆ.

ಇಲ್ಲಿನ ವಚನರಾಶಿ ನೋಡಿದರೆ, ಕಮಲಾ ಅವರು ಸ್ಪಂದಿಸದ ಸಂದರ್ಭವಿಲ್ಲವೇನೋ ಎನಿಸುತ್ತದೆ!

ಕಮಲಾ ಬದುಕಿನ ಎಲ್ಲ ರಂಗಗಳಲ್ಲಿ ಕೆಲಸಮಾಡಿದ ಇವರ ಸಾಧನೆ, ಗಳಿಸಿಕೊಂಡ ಪ್ರಶಸ್ತಿ ಪುರಸ್ಕಾರಗಳಿಗೆ ಲೆಕ್ಕವಿಲ್ಲ. ಎಲ್ಲ ಪ್ರಶಸ್ತಿಗಳ ಕಿರೀಟಪ್ರಾಯವಾಗಿ ಅವರಿಗೆ 1998ನೇ ಸಾಲಿನ ಕರ್ನಾಟಕ ಸರ್ಕಾರದ 'ಅತ್ತಿಮಬ್ಬೆ ಪ್ರಶಸ್ತಿ' ಅವರ ಸಾಧನೆಗೆ ಗರಿ ಮೂಡಿಸಿದೆ.

ಅವರಿಗೆ -ಕನ್ನಡ ಸಾಹಿತ್ಯ ಪರಿಷತ್ತಿನ ದೇವೇಂದ್ರ ಕೀರ್ತಿ ಪ್ರಶಸ್ತಿ- 1986.

ವಿದ್ಯಾವರ್ಧಕ ಸಂಘ, ಧಾರವಾಡ, ಶ್ರೀಮತಿ ರತ್ನಮ್ಮ ಹೆಗ್ಗಡೆ ಬಹುಮಾನ - 1985

ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1985

ದಾದಾ ಆಮ್ಟೆ ರಾಷ್ಟ್ರೀಯ ಪ್ರಶಸ್ತಿ 1990

ಪಿ.ಪಿ.ಟಿ. ಮದರಾಸು ಕನ್ನಡ ಸಂಘ ರಜತೋತ್ಸವ ಪುರಸ್ಕಾರ 1993

ಶ್ರವಣ ಬೆಳಗೊಳ ಮಹಾಮಸ್ತಕಾಭಿಷೇಕ ರಾಷ್ಟ್ರೀಯ ಪುರಸ್ಕಾರ 1993

'ಸಾಹಿತ್ಯ ವಿಶಾರದೆ' ಪ್ರಶಸ್ತಿ, ಪದ್ಮಂಬಾ ಮಹಿಳಾ ಸಮಾಜ -ತುಮಕೂರು 1994

ಶ್ರೀ ಗೋಮಟೇಶ್ವರ ವಿದ್ಯಾಪೀಠ ಪ್ರಶಸ್ತಿ 1995

ಸಾವಿತ್ರಮ್ಮ ದೇ.ಜ.ಗೌ. ಪ್ರಶಸ್ತಿ 1995

ರನ್ನ ಪ್ರಶಸ್ತಿ 1996

ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ 1996

ವರ್ಷದ ಲೇಖಕಿ ಪ್ರಶಸ್ತಿ - 1996

ದಾನ ಚಿಂತಾಮಣಿ ಅತ್ತಿಮಬ್ಬೆ ರಾಜ್ಯ ಪ್ರಶಸ್ತಿ - 1998

ಈ ಪ್ರಶಸ್ತಿ ಪುರಸ್ಕಾರಗಳ ಜೊತೆಗೆ ವಿದೇಶಗಳಲ್ಲಿ ಪ್ರಬಂಧಗಳ ಮಂಡನೆಯ ಅವಕಾಶವೂ ಇವರದಾಗಿದೆ. ಏಶಿಯಾ-ಉತ್ತರ ಆಫ್ರಿಕಾ ರಾಷ್ಟ್ರಗಳ 33ನೇ ಅಂತರರಾಷ್ಟ್ರೀಯ ಸಮಾವೇಶ, ಟೊರೆಂಟೋ ವಿಶ್ವವಿದ್ಯಾಲಯ ಕೆನಡ (1990 ಆಗಸ್ಟ್), ಉತ್ತರ ಅಮೆರಿಕಾ ಮಧ್ಯ-ಪೂರ್ವ ರಾಜ್ಯ ಪ್ರಾಂತಗಳ ಸಾಹಿತ್ಯಗೋಷ್ಠಿ ಸೈಂಟ್ ಲೂಯಿಸ್ಸ್ ಅಮೆರಿಕಾ (1990 ಸೆಪ್ಟಂಬರ್) ಕರ್ನಾಟಕ ಕಲ್ಚರಲ್ ಅಸೋಸಿಯೇಷನ್, ಲಾಸ್ ಏಂಜಲೀಸ್, ದಕ್ಷಿಣ ಕ್ಯಾಲಿಫೋರ್ನಿಯಾ ಅಮೆರಿಕಾ (1990ಸೆ) ಯೂರೋಪಿನ ಹಂಗೇರಿ ರಾಜಧಾನಿ ಬುಡಾ ಪೆಸ್ಟ್ ಯೂನಿವರ್ಸಿಟಿ ಆಫ್ ಏಕನಾಮಿಕ್ಸ್‌ನಲ್ಲಿ ನಡೆದ ಅಂತರರಾಷ್ಟ್ರೀಯ ಸಮಾವೇಶ (1997-ಜುಲೈ, ಆಗಸ್ಟ್) ಮುಂತಾದ ಕಡೆಗಳಲ್ಲಿ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿದ್ದಾರೆ. ಹಾಗೆಯೇ ಆಕ್ಸ್‌ಫರ್ಡ್, ಕೇಂಬ್ರಿಜ್, ಟೊರೆಂಟೋ, ಜರ್ಮನಿ, ಇಟಲಿ, ಫ್ರಾನ್ಸ್ ವಿಶ್ವವಿದ್ಯಾಲಯಗಳನ್ನು ಸಂದರ್ಶಿಸಿದ್ದಾರೆ.

ರನ್ನ ಕವಿಗೆ ಆಶ್ರಯಕೊಟ್ಟು ಪೋಷಿಸಿದ ಅತ್ತಿಮಬ್ಬೆಯ ಬಗ್ಗೆ ಬೆಳೆಸಿಕೊಂಡ ಅಗಾಧ ಪ್ರೀತಿ, ಗೌರವ, ಭಕ್ತಿ, ಶ್ರದ್ಧೆಗಳು ಅತ್ತಿಮಬ್ಬೆಯ ಹೆಸರು ಎಲ್ಲೆಲ್ಲೂ ಕೇಳಿ ಬರುವಂತೆ ಶ್ರಮಿಸಿದ್ದಾರೆ. ಮೊಟ್ಟಮೊದಲಿಗೆ ಅತ್ತಿಮಬ್ಬೆಯ ಬಗ್ಗೆ ದನಿ ಎತ್ತಿ ಆಕೆಯ ಸಾಧನೆ, ಸಾಹಿತ್ಯ ಪ್ರೇಮಗಳನ್ನು ಗುರುತಿಸಿ ಆಕೆಯ ಹೆಸರಿನಲ್ಲಿ ಮಹಿಳೆಯರಿಗೆ ಸರ್ಕಾರದವತಿಯಿಂದ ಬಹುದೊಡ್ಡ ಮೊತ್ತದ ಪ್ರಶಸ್ತಿ ಗೌರವಗಳು ಸಲ್ಲುವಂತೆ ಮಾಡಿ ಆಕೆಯ ಹೆಸರನ್ನು ಚಿರಸ್ಥಾಯಿಗೊಳಿಸಿದ್ದಾರೆ. ಆಕೆಯ ಹೆಸರಿನಲ್ಲಿ ಮಹಿಳಾ ವಿಶ್ವವಿದ್ಯಾಲಯ ಸ್ಥಾಪನೆಯಾಗಬೇಕೆಂದು ಮತ್ತೆ ಈಗ ಹೋರಾಟಕ್ಕೆ ಇಳಿದಿದ್ದಾರೆ. ದಲಿತ ಸಮಸ್ಯೆ, ಭಾಷಾ ಸಮಸ್ಯೆಗಳ ಬಗ್ಗೆ ಗಂಭೀರ ಚಿಂತನೆ ನಡೆಸಿದ್ದಾರೆ. ಚಳುವಳಿಗಳಿಗೆ ಸಕ್ರಿಯವಾಗಿ ಸ್ಪಂದಿಸಿದ್ದಾರೆ.

❑

# ಡಾ. ಚಂದ್ರಶೇಖರ ಕಂಬಾರ

ಡಾ. ಕೆ.ಸಿ. ಶಿವಾರೆಡ್ಡಿ

ಕಂಬಾರರ ಕಾವ್ಯಸೃಷ್ಟಿಯ ಸಂದರ್ಭ-ಸನ್ನಿವೇಶಗಳು ಅಸಂಖ್ಯ ದ್ವಂದ್ವಗಳಿಗೆ ಒಳಗಾಗಿವೆ. ಅಲ್ಲದೆ ಪರಂಪರೆಯ ಸಮಸ್ಯೆಗಳು ಮತ್ತಷ್ಟು ಗೊಂದಲಗಳಿಗೆ ಈಡಾಗಿವೆ. ಈ ಹೊತ್ತಿನ ಸೃಷ್ಟಿಶೀಲ ಕವಿಯೊಬ್ಬನ ಪ್ರಮುಖ ಕಾಳಜಿಗಳೆಂದರೆ ಅಂಥ ಗೊಂದಲ-ದ್ವಂದ್ವಗಳಿಗೆ ಅಭಿವ್ಯಕ್ತಿಯ ಮುಖೇನ ಪ್ರತಿಕ್ರಿಯಿಸುವುದು. ಇಂಥ ಜವಾಬ್ದಾರಿಯ ಕೆಲಸ ಕಂಬಾರರ ಕೃತಿಗಳಲ್ಲಿ ಪ್ರಮುಖವಾಗಿ ನಡೆದಿದೆ. ಆಧುನಿಕ ಬದುಕಿಗೆ ಮುಖಮಾಡಿರುವ ಮನುಷ್ಯನ ಎಲ್ಲ ರೀತಿಯ ಕನಸುಗಳು ಕದಡಿಹೋಗಿ ದುರಂತಕ್ಕೆ ಒಳಗಾದ ಸ್ಥಿತಿಯನ್ನು, ಆ ಹಿಂದಿನ ಸ್ಥಿತಿಯ ಮಧುರವಾದ ನೆನಪುಗಳನ್ನು ಕಂಬಾರರ ಕೃತಿಗಳು ಕಟ್ಟಿಕೊಡುತ್ತವೆ. ಈ ನಿಟ್ಟಿನಲ್ಲಿ ಪ್ರಸ್ತುತ ಶತಮಾನದ ದೈತ್ಯಪ್ರತಿಭೆಗಳೆನ್ನಿಸಿಕೊಂಡ ಕುವೆಂಪು, ಬೇಂದ್ರೆ, ಅಡಿಗರ ಅನಂತರ ಕಂಬಾರರ ಕಾವ್ಯ ಭಿನ್ನವಾಗುತ್ತ ಸಾಂಸ್ಕೃತಿಕ ಅನನ್ಯತೆಯನ್ನು ದಕ್ಕಿಸಿಕೊಳ್ಳುತ್ತದೆ.

ಶತಶತಮಾನಗಳಿಂದ ಸಂತರು ಅನುಭಾವಿಗಳು ಸೃಷ್ಟಿಶೀಲರು ಮನುಷ್ಯನ ರಾಜಕೀಯ ಹಾಗೂ ಮತೀಯ ಕ್ರೌರ್ಯದ ಅಮಾನವೀಯತೆಯ ಬಗೆಗೆ ಪ್ರತಿಕ್ರಿಯೆಯನ್ನು ತೋರುತ್ತಲೇ ಬಂದಿದ್ದಾರೆ. ಆ ಮೂಲಕ ಮಾನವೀಯ ಬದುಕಿನ ಶೋಧನೆಯನ್ನು ನಡೆಸಿದ್ದಾರೆ. ಈ ಎಲ್ಲಾ ಮಾನವೀಯ ಬದುಕಿನ ಶೋಧನೆಗಳು ಅಮಾನವೀಯವಾದ ಭೋಗ ಹಾಗೂ ಮತೀಯ ಚಟುವಟಿಕೆಗಳಿಗೆ ಬಲಿಯಾಗುತ್ತಿರುವುದು ನಮ್ಮ ಕಾಲದ ದುರಂತ. ಅನೈತಿಕ ಪ್ರಗತಿ, ಅಣುಶಕ್ತಿಯ ಪ್ರಯೋಗಗಳು ಒಂದು ದೇಶದ ಪ್ರಗತಿ-ಪ್ರತಿಷ್ಠೆಗಳೆಂದು ಜನಸಾಮಾನ್ಯರನ್ನು ನಂಬಿಸುತ್ತಿರುವ ರಾಜಕಾರಣಕ್ಕೆ ಈ ಮಾದರಿಯ ಕೃತಿಗಳ ಆಶಯಗಳು ಮೌನವಾಗಿ ಪ್ರತಿಭಟನೆಯನ್ನು ತೋರಿಸು ತ್ತಿವೆ. ಆದ್ದರಿಂದ ಹಿಂಸಾವಿರೋಧಿ ಆಶಯಗಳುಳ್ಳ ಕೃತಿಗಳ ಅಧ್ಯಯನ, ವಿಮರ್ಶೆಗಳು ಮುಖ್ಯವಾಗಿ ನಡೆಯಬೇಕಾದ ಜರೂರು ಈಗ ಅನಿವಾರ್ಯ ಅನ್ನಿಸಿದೆ

ಡಾ. ಚಂದ್ರಶೇಖರ ಕಂಬಾರರು ಜನಿಸಿದ್ದು 1937 ಜನವರಿ 2ರಂದು. ಬೆಳಗಾಂ ಜಿಲ್ಲೆಯ ಘೋಡಗೇರಿಯಲ್ಲಿ. ತಂದೆ ಬಸವಣ್ಣೆಪ್ಪ, ತಾಯಿ ಚೆನ್ನಮ್ಮ. ಅವರ ವಿದ್ಯಾಭ್ಯಾಸ ಗೋಕಾಕ್, ಬೆಳಗಾವಿ ಮತ್ತು ಧಾರವಾಡದಲ್ಲಿ ನಡೆಯಿತು. ಗೋಕಾಕ ಮತ್ತು ಬೆಳಗಾವಿಯ ಬ್ರಿಟಿಷರ ಭಯದ ನೆರಳು ಆವರಿಸಿದ್ದ ಪರಿಸರದಿಂದ ಲೇಖಕನಾಗಿ ಮೈಪಡೆದ ಕಂಬಾರರ ಬಾಲ್ಯದ ಆತಂಕಗಳು ಅವರ ಕೃತಿಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. ಇವರ ಬಾಲ್ಯದ ಸಾಹಸ ಸಂದರ್ಭದ ಅನುಭವಗಳನ್ನು 'ನನ್ನ ಬದುಕು-ಬರಹ' ಎಂಬ ಲೇಖನದಲ್ಲಿ ಅವರೇ ಸೂಚಿಸಿದ್ದಾರೆ. ಅಂಥ ಸಾಹಸ ಸಂದರ್ಭದ ಸಂವೇದನೆಯನ್ನುಳ್ಳ ಕಂಬಾರರು ಉನ್ನತ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಬಂದು ಎಂ.ಎ., ಪಿ.ಎಚ್.ಡಿ. ಪದವಿಗಳನ್ನು ಪಡೆದರು. ಆನಂತರ 1968ರಿಂದ 1969ರವರೆಗೆ ಅಮೇರಿಕಾದ ಚಿಕಾಗೊ ವಿಶ್ವವಿದ್ಯಾಲಯದಲ್ಲಿಯು 1971ರಿಂದ 1991ರವರೆಗೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿಯೂ ಅಧ್ಯಾಪಕರಾಗಿ, ಪ್ರವಾಚಕರಾಗಿ ಸೇವೆ ಸಲ್ಲಿಸಿದರು. ನಂತರ 1992ರಿಂದ 1998ರವರೆಗೆ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮೊಟ್ಟಮೊದಲ ಕುಲಪತಿಗಳಾಗಿ ಸೇವೆ ಸಲ್ಲಿಸಿದವರಾಗಿದ್ದಾರೆ.

1980ರಿಂದ 1983ರವರೆಗೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಸದಸ್ಯರಾಗಿಯೂ, 1983ರಿಂದ 1986ರವರೆಗೆ ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿಯೂ, 1987ರಿಂದ 1991ರವರೆಗೆ ಮೈಸೂರಿನ ಕರ್ನಾಟಕ ನಾಟಕ ರಂಗಾಯಣದ ಸದಸ್ಯರಾಗಿಯೂ, 1988ರಿಂದ 1991ರವರೆಗೆ ದೆಹಲಿಯ ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿಯೂ ಕಂಬಾರರು ಸೇವೆ ಸಲ್ಲಿಸಿದ್ದಾರೆ. ಪ್ರಸ್ತುತ, 1993ರಿಂದ ಕೇಂದ್ರ ಸಾಹಿತ್ಯ ಅಕಾಡೆಮಿ ನವದೆಹಲಿ, ಸಂಗೀತ ನಾಟಕ ಅಕಾಡೆಮಿ ನವದೆಹಲಿ-ಇಲ್ಲಿ ಕಾರ್ಯನಿರ್ವಾಹಕ ಸದಸ್ಯರಾಗಿ ಮತ್ತು ದೆಹಲಿಯ 'ನ್ಯಾಷನಲ್ ಸ್ಕೂಲ್ ಆಫ್ ಡ್ರಾಮ' ಶಾಲೆಯ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಕನ್ನಡದ ಮಹತ್ವ ಕವಿಗಳು, ನಾಟಕಕಾರರು ಜಾನಪದ ತಜ್ಞರು ಹಾಗೂ ಉತ್ತಮ ಆಡಳಿತಗಾರರಾದ ಇವರು ಸುಮಾರು ಇಪ್ಪತ್ತೊಂದು ನಾಟಕಗಳು, ಹತ್ತು ಕವನ ಸಂಕಲನಗಳು, ಮೂರು ಕಾದಂಬರಿಗಳು ಹಾಗೂ ಸುಮಾರು ಹತ್ತು ಜಾನಪದ ಕೃತಿಗಳನ್ನು ರಚಿಸಿದ್ದಾರೆ.

ಅಮೇರಿಕನ್ ಓರಿಯಂಟಲ್ ಸೆಂಟರ್ ನ್ಯೂಯಾರ್ಕ್, ಇಂಟರ್ ನ್ಯಾಷನಲ್ ಥಿಯೇಟರ್ ಇನ್ಸಿಟಿಟ್ಯೂಟ್ ಬರ್ಲಿನ್ (ಜಿ.ಡಿ.ಆರ್.), ಮಾಸ್ಕೊ (ಯು.ಎಸ್.ಎಸ್.ಆರ್.) JADE ಜಪಾನಿನ ಅಕೈಕಾ-1992 ಮತ್ತು ಭಾರತದ ಅನೇಕ ವಿಶ್ವವಿದ್ಯಾಲಯಗಳು ಮತ್ತು ಶೈಕ್ಷಣಿಕ ಸಂಸ್ಥೆಗಳಲ್ಲಿ 'ಭಾರತೀಯ ಜಾನಪದ ಮತ್ತು ರಂಗಭೂಮಿ' ಕುರಿತ ಪ್ರಬಂಧಗಳನ್ನು ಮಂಡಿಸಿದ್ದಾರೆ.

1984ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಮೂರು ಸಾವಿರ ಪುಟಗಳಿಗೂ ಅಧಿಕ 'ಕನ್ನಡ ಜಾನಪದ ವಿಶ್ವಕೋಶ'ವನ್ನು ಸಂಪಾದಿಸಿದ್ದಾರೆ. ಇವರ ಅನೇಕ ನಾಟಕಗಳು ಅನೇಕ ಭಾರತೀಯ ಭಾಷೆಗಳಿಗೆ ಹಾಗೂ ಇಂಗ್ಲಿಷಿಗೆ ಅನುವಾದಗೊಂಡಿವೆ ಹಾಗೆಯೇ ಪ್ರದರ್ಶನಗೊಂಡಿವೆ. ಕಲ್ಕತ್ತಾದ ಸೀಗಲ್ ಪ್ರಕಾಶನದವರು ಆ ನಾಟಕಗಳ ಇಂಗ್ಲಿಷ್ ಭಾಷಾಂತರಗಳನ್ನು ಪ್ರಕಟಿಸಿದ್ದಾರೆ. ಭಾರತದ ಪ್ರಸಿದ್ಧ ನಿರ್ದೇಶಕರು ಇವರ ನಾಟಕಗಳನ್ನು ನಿರ್ದೇಶಿಸಿದ್ದಾರೆ. 1993ರಲ್ಲಿ ಕನ್ನಡ ಸಾಹಿತ್ಯ ಪರಿಷತ್ ವತಿಯಿಂದ ನಡೆದ 'ರಂಗಭೂಮಿ ಮತ್ತು ಸಾಹಿತ್ಯ' ಕುರಿತ ರಾಜ್ಯಮಟ್ಟದ ಸಮ್ಮೇಳನದ ಅಧ್ಯಕ್ಷತೆಯನ್ನು ಇವರು ವಹಿಸಿದ್ದರು.

2

ಇವರ ಐದು ಕೃತಿಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ. ಇವರ ಪ್ರಸಿದ್ಧ ನಾಟಕ 'ಜೋಕುಮಾರಸ್ವಾಮಿ' 1975ರಲ್ಲಿ ಆ ವರ್ಷದ ಭಾರತದ ಅತ್ಯುತ್ತಮ ನಾಟಕವೆಂದು ನಾಟ್ಯಸಂಘದ 'ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ'ಯನ್ನು ಪಡೆಯಿತು. ಇವರ ಮತ್ತೊಂದು ನಾಟಕ 'ಜೈ ಸಿದ್ಧನಾಯಕ' 1975ರಲ್ಲಿ ಆ ವರ್ಷದ ಅತ್ಯುತ್ತಮ ನಾಟಕವೆಂದು ಪರಿಗಣಿಸಲ್ಪಟ್ಟು 'ವರ್ಧಮಾನ ಪ್ರಶಸ್ತಿ'ಯನ್ನು ಪಡೆಯಿತು. 1982ರಲ್ಲಿ ಇವರ 'ಸಾವಿರದ ನೆರಳು' ಕವನ ಸಂಕಲನಕ್ಕೆ 'ಆಶಾನ್' ಪ್ರಶಸ್ತಿಯನ್ನು (ಕೇರಳ) ನೀಡಲಾಯಿತು. ರಂಗಭೂಮಿಯ ಅಭಿವೃದ್ಧಿಗೆ ಶ್ರಮಿಸಿದ್ದಕ್ಕಾಗಿ 1990ರಲ್ಲಿ ಕೆ.ವಿ. ಶಂಕರೇಗೌಡ ಪ್ರಶಸ್ತಿಯನ್ನು ನೀಡಲಾಯಿತು. 1983ರಲ್ಲಿ ಇವರನ್ನು 'ಶ್ರೇಷ್ಠ ನಾಟಕಕಾರ' ಎಂದು ಪರಿಗಣಿಸಿ ನವದೆಹಲಿಯ ನಾಟಕ ಅಕಾಡೆಮಿಯ ಪ್ರಶಸ್ತಿಯನ್ನು ನೀಡಿ ಸನ್ಮಾನಿಸಲಾಯಿತು. ಅಲ್ಲದೆ ಆಂಧ್ರಪ್ರದೇಶದ ಸರಕಾರವು 'ಅತ್ಯುತ್ತಮ ಕವಿ' ಎಂದು ಪ್ರಶಸ್ತಿ ನೀಡಿ ಗೌರವಿಸಲಾಯಿತು.

1995 ವಜ್ರಮಹೋತ್ಸವದ ಆಚರಣೆಯ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ ಸನ್ಮಾನ, 1987 ಕಲ್ಕತ್ತಾದ ನಂದಿಕಾರ್ ಸನ್ಮಾನ, 1987 ಕರ್ನಾಟಕ

ನಾಟಕ ಅಕಾಡೆಮಿ ಪ್ರಶಸ್ತಿ, 1988 ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ, 1989 ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, 1983 ನವದೆಹಲಿಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ('ಸಿರಿಸಂಪಿಗೆ' ಕೃತಿಗೆ), 1993 ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ-ಹೀಗೆ ಇನ್ನೂ ಮುಂತಾದ ಸನ್ಮಾನ ಪ್ರಶಸ್ತಿಗಳು ದೊರೆತಿವೆ.

ಇವರು 5 ಚಲನಚಿತ್ರಗಳನ್ನು 8 ಸಾಕ್ಷ್ಯಚಿತ್ರಗಳನ್ನು ತಯಾರಿಸಿದ್ದಾರೆ. ಅನೇಕ ಚಲನಚಿತ್ರಗಳಿಗೆ ಹಾಗೂ ಸಾಕ್ಷ್ಯಚಿತ್ರಗಳಿಗೆ ಸಂಗೀತ ಸಂಯೋಜನೆ ಮಾಡಿದ್ದಾರೆ. ಇವರ 'ಕಾಡುಕುದುರೆ' 1978ರಲ್ಲಿ ಭಾರತೀಯ ಪನೋರಮವನ್ನು ಪ್ರವೇಶಿಸಿತು ಹಾಗೂ ಉತ್ತಮ ಹಿನ್ನಲೆ ಗಾಯನಕ್ಕಾಗಿ ರಾಷ್ಟ್ರಪ್ರಶಸ್ತಿಯನ್ನು ಪಡೆಯಿತು. 1981ರಲ್ಲಿ ಇವರ 'ಸಂಗೀತಾ' ಚಲನಚಿತ್ರ ತೃತೀಯ ಅತ್ಯುತ್ತಮ ಚಲನಚಿತ್ರವೆಂದು ರಾಜ್ಯಪ್ರಶಸ್ತಿಯನ್ನು ಪಡೆಯಿತು. ಅಷ್ಟೇ ಅಲ್ಲದೆ ಇವರು ತೃತೀಯ ಅತ್ಯುತ್ತಮ ಚಿತ್ರದ ನಿರ್ದೇಶಕ, ಉತ್ತಮ ಚಲನಚಿತ್ರ ಕಥೆಗಾರ, ಉತ್ತಮ ಸಂಭಾಷಣಾಕಾರ, 'ಸಂಗೀತಾ' ಚಲನಚಿತ್ರದ ಉತ್ತಮತ ಸಂಗೀತ ನಿರ್ದೇಶಕ ಪ್ರಶಸ್ತಿಗಳನ್ನೂ ಪಡೆದಿದ್ದಾರೆ.

1968-69 ರಲ್ಲಿ 'ಫುಲ್‌ಬ್ರೈಟ್' ವಿದ್ವಾಂಸರೆನಿಸಿಕೊಂಡಿದ್ದರು. 1984-86ರಲ್ಲಿ ಸಾಂಪ್ರದಾಯಿಕ ಜಾನಪದ ಪ್ರಕಾರಗಳು ಮತ್ತು ಆಧುನಿಕ ರಂಗ ಭೂಮಿ ಇವೆರಡರ ನಡುವಿನ ಪಾರಸ್ಪರಿಕ ಅಧ್ಯಯನಕ್ಕೆ ಫೋರ್ಡ್ ಫೌಂಡೇಶನ್ ಫೆಲೋಷಿಪ್ ದೊರೆಯಿತು. ಇವರು ಧರ್ಮಸ್ಥಳದಲ್ಲಿ (1979) ಜರುಗಿದ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದ್ದರು. ನವದೆಹಲಿ (1984) ಹಾಗೂ ಭೂಪಾಲ (1986)ದಲ್ಲಿ ನಡೆದ ವಿಶ್ವಕವಿ ಸಮ್ಮೇಳನ ದಲ್ಲಿ ಭಾಗವಹಿಸಿದ್ದರು. ದೆಹಲಿಯ ರಾಷ್ಟ್ರೀಯ ಕನ್ನಡ ಸಾಹಿತ್ಯ ಸಮ್ಮೇಳನ (1997)ದ ಅಧ್ಯಕ್ಷರಾಗಿದ್ದರು.

ಕಂಬಾರರ 'ಹೇಳತೇನ ಕೇಳ' ಕವಿತೆ ವಸಾಹತು ಸಂಸ್ಕೃತಿಯಿಂದ ಎದುರಾದ ಎಲ್ಲ ಮಟ್ಟದ ದ್ವಂದ್ವಗಳಿಗೆ, ಸಂಕೀರ್ಣತೆಗಳಿಗೆ ಒಡ್ಡಿದ ಒಂದು ರೂಪಕ. ಈ ರೂಪಕ ಜನಪದ ಪುರಾಣ ಕಥೆಯೊಂದರ ಮೂಲಕ ಹುಟ್ಟಿಕೊಂಡದ್ದು. 'ಹೇಳತೇನ ಕೇಳ' ರೂಪಕ ಧ್ವನಿಸುವ ಅರ್ಥವಿಶೇಷಗಳು ಅವರ ಎಲ್ಲ ಕೃತಿಗಳಲ್ಲಿ ಮೈ ಪಡೆಯುತ್ತಲೆ ವಸಾಹತುಶಾಹಿಯ ಮೂರ್ತ ಅಮೂರ್ತ ನೆಲೆಗಳಿಗೂ ಆಕಾರಗಳಿಗೂ ಅದರ ಕರಾಳ ಮುಖಗಳಿಗೂ ಅಭಿವ್ಯಕ್ತಿಯ ಮುಖೇನ ಪ್ರತಿರೋಧವನ್ನು ಪ್ರಕಟಿಸುತ್ತವೆ. ಈ ಕವನ ಅವರ ಒಟ್ಟು ಕೃತಿ ಸಮೂಹದಲ್ಲಿ ಮೈ ಪಡೆಯುವ ಕ್ರಮವು ಕುತೂಹಲ ಹಾಗೂ ಅಧ್ಯಯನಕ್ಕೆ ಒಳಗು ಮಾಡುವಂತಹುದು. ಅಂದರೆ ಕಂಬಾರರ ಬಹುಪಾಲು ಕೃತಿಗಳು 'ಹೇಳತೇನ ಕೇಳ' ಕವನದ ನವಪುರಾಣ ಕಥೆಯಿಂದಲೇ ಹುಟ್ಟಿಕೊಳ್ಳುತ್ತವೆ. ಈ ಮಾತನ್ನು ಅವರ ನಾಟಕ, ಕಾದಂಬರಿ, ಮಹಾಕಾವ್ಯಗಳ ಸಂದರ್ಭದಲ್ಲಿಯೂ ಹೇಳಬಹುದು. ಹೀಗೆ ನಿರಂತರವಾಗಿ ಬೆಳೆಯುವ ಕಂಬಾರರ ಮೂಲಭೂತ ಪುರಾಣವಾದ 'ಹೇಳತೇನ ಕೇಳ' ಕವನ ಬೇಂದ್ರೆಯವರ 'ಜೋಗಿ' ಕವನದಂತೆ ಅಪರಿಪೂರ್ಣತೆಯಿಂದ ಪೂರ್ಣತೆಯ ಕಡೆಗೆ ಚಲಿಸುತ್ತದೆ. ಅಂಥ ಅಪರಿಪೂರ್ಣತೆಯೇ ಅನಂತರ ಬೇರೆ ಬೇರೆ ನೆಲೆಗಳಲ್ಲಿ ಶೋಧಿತಗೊಂಡು ಹತ್ತು ಹಲವಾರು ಕೃತಿಗಳಲ್ಲಿ ಅಖಂಡವಾಗುವುದರ ಕಡೆಗೆ ಈ ಕವನದ ಪುರಾಣ ಮತ್ತೆ ಮತ್ತೆ ಮರುಹುಟ್ಟು ಪಡೆಯುತ್ತದೆ. ಈ ಹಿನ್ನಲೆಯಿಂದ ಕಂಬಾರರ ಸಮಗ್ರ ಕೃತಿಗಳನ್ನು ಗಮನಿಸಿದಾಗ "ಈವರೆಗಿನ ಹೇಳತೇನ ಕೇಳ" ಎಂದು ಕಂಬಾರರು ತಮ್ಮ ಸಮಗ್ರ ಕಾವ್ಯವನ್ನು ಕರೆದಿರುವುದು ಅರ್ಥಪೂರ್ಣವಾಗಿದೆ.

**ಹೇಳತೇನ ಕೇಳ : ಶಿವಾಪುರ**

ಸುಮಾರು 1963ರಲ್ಲಿ ಹುಟ್ಟಿಕೊಂಡ 'ಹೇಳತೇನ ಕೇಳ'ದ ರೂಪಕ ಟಿಸಿಲೊಡೆದು ರೆಂಬೆಕೊಂಬೆಗಳಾಗೆ ಮಹಾವೃಕ್ಷವಾಗುವುದರ ಕಡೆಗೆ ಹೊರಟಿದೆ. ಒಂದು ಪ್ರತಿಭಾವಂತ ಸಂವೇದನೆ ಏನೆಲ್ಲಾ ಬಗೆಯಬಹುದೋ ಅದೆಲ್ಲವನ್ನೂ 'ಹೇಳತೇನ ಕೇಳ' ಪ್ರತಿಮೆ ತನ್ನಲ್ಲಿರಿಸಿಕೊಂಡಿರುವುದರಿಂದಲೇ ಆಗಲೇ ಹೇಳಿದಂತೆ ಕಂಬಾರರು ಮತ್ತೆಮತ್ತೆ ಅಲ್ಲಿಂದಲೆ ಪುರಾಣಗಳನ್ನು ಹೆಕ್ಕಿ ಮರುಸೃಷ್ಟಿಗೆ ತೊಡಗುತ್ತಾರೆ. ಈ ಪುರಾಣ ಹಲವು ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡರೂ ಅದು ಆಧುನಿಕ ಜಗತ್ತಿನ ನೆಲೆಗಳನ್ನು, ಮರೆಯಾಗಿ ಹೋಗುತ್ತಿರುವ ತನ್ನ ಸ್ಥಳೀಯ ಬದುಕಿನ ದ್ವಂದ್ವಗಳನ್ನು ವಿಶ್ಲೇಷಣೆಗೆ ಒಳಪಡಿಸುತ್ತಿರುವುದು ಕಂಬಾರರ ಕೃತಿಗಳ ವೈಶಿಷ್ಟ್ಯವಾಗಿದೆ. ಇಂಥ ವೈಶಿಷ್ಟ್ಯ ಗಳಿಂದ ಕೂಡಿರುವ ಈ ಕವಿತೆಯ ಭಾಷೆ, ಲಯ, ಚಿತ್ರ ಸಂಪತ್ತು ಅಷ್ಟೇ ಸಮರ್ಥವಾಗಿ ಮೂಡಿ ಬಂದಿರುವುದು ವಿಶೇಷವೆಂದೇ ಹೇಳಬಹುದು, ಅತ್ಯಂತ ಅಮೂರ್ತವಾದ ವಸಾಹತು ಸಂಸ್ಕೃತಿ ತಂದ ಸಂಕೀರ್ಣವಾದ ಬದುಕಿನ ನೋವುಗಳನ್ನು ವ್ಯಕ್ತಪಡಿಸಲು ಕಂಬಾರರು ಗಟ್ಟಿದನಿಯಲ್ಲಿ ಹಾಡುವ ಜಾನಪದ ಲಾವಣಿಯ ಮಾಧ್ಯಮವನ್ನು ಅಭಿವ್ಯಕ್ತಿಗೆ ಶೋಧಿಸಿ ಕೊಂಡಿರುವುದು (ಆರಿಸಿಕೊಂಡಿರುವುದು) ಕವಿತೆ ಹೊರಡಿಸುವ ಒಟ್ಟು ಧ್ವನಿ ಪರಂಪರೆಗೆ ಅನನ್ಯತೆಯನ್ನು ಒದಗಿಸಿಕೊಟ್ಟಿದೆ. ಈ ಕವಿತೆ ಪ್ರಕಟಗೊಂಡಾಗಿನಿಂದ ಈವರೆಗೆ ಹಲವು ವಿಶ್ಲೇಷಣೆಗಳಿಗೊಳಪಟ್ಟಿರುವುದನ್ನು ಗಮನಿಸಿದರೆ ಅದರ ಮಹತ್ವ ವೇದ್ಯವಾಗುತ್ತದೆ.

ಮೂರು ದಶಕಗಳಿಗೂ ಹಿಂದೆ ಪ್ರಕಟವಾದ ಈ ಕವಿತೆ ಹೀಗೆ ಹಲವು ಅರ್ಥ ಪರಂಪರೆಗಳನ್ನು ಹೊರಡಿಸುವ ಶಕ್ತಿಯನ್ನು ಪಡೆದಿರುವುದರಿಂದಲೆ ಕಂಬಾರರ ಪ್ರತಿಭೆ ಮತ್ತೆ ಮತ್ತೆ ಅದೇ ಪುರಾಣಕ್ಕೆ ಕೈ ಹಾಕುತ್ತದೆ. ಮೊದಲೇ ಹೇಳಿದಂತೆ 'ಋಷ್ಯಶೃಂಗ', 'ಹುಲಿಯ ನೆರಳು' ನಾಟಕಗಳಲ್ಲೂ, 'ಕರಿಮಾಯಿ' ಕಾದಂಬರಿಯಲ್ಲಿಯೂ ಇದೇ ಪುರಾಣ ಮತ್ತೂ ಬೇರೆಯದೇ ಆದ ಆಯಾಮಗಳಲ್ಲಿ ವಿಶ್ಲೇಷಣೆಗೆ ಒಳಗಾಗಿದೆ. ವಸಾಹತು ಸಂಸ್ಕೃತಿಯ ಹುಲಿಯ ನೆರಳು ಮನೆ-ಮಾನಗಳಲ್ಲಿ ಹೊಕ್ಕು ಬೇರು ಬಿಗಿದ ಕರುಳು ಕಲಕುವ ದ್ವಂದ್ವವನ್ನೆ ಸ್ಥಿರೀಕರಿಸುವ ನೆಲೆಗಳನ್ನು ಈ ನಾಟಕಗಳಲ್ಲಿ ಕಾಣುತ್ತೇವೆ. 'ಹುಲಿಯ ನೆರಳು' ನಾಟಕ ವಸಾಹತುಶಾಹಿಯ ಕ್ರೌರ್ಯವನ್ನು ಪ್ರಧಾನವಾಗಿ ಶೋಧಿಸುತ್ತದೆ.

'ಕರಿಮಾಯಿ' ಕಾದಂಬರಿಯ ಆಶಯವನ್ನು ಪ್ರಮುಖ ವಿಮರ್ಶಕರಲ್ಲಿ ಒಬ್ಬರಾದ ಶ್ರೀ ಟಿ.ಪಿ. ಅಶೋಕ ಅವರು ಸಮರ್ಥವಾಗಿ ಗುರುತಿಸಿದ್ದಾರೆ. "ಕರಿಮಾಯಿ" ಕಾದಂಬರಿಯಲ್ಲಿ ಶಿವಾಪುರದ ಪ್ರಜೆಗಳಿಗೆ ಗೌಡ ಆಡಿಸುವ ಪಾರಿಜಾತಕ್ಕಿಂತ ಗುಡಸೀಕರ ಆಡಿಸುವ ನಾಟಕವೇ ಆಕರ್ಷಕವಾಗುವ ಒಂದು ಪ್ರಸಂಗವಿದೆ. ಹಾಗೆಯೇ ಲಗುಮವ್ವನ ಹಾಡಿಗಿಂತ ಬಸಮಾಜನ ರೇಡಿಯೋ ಹೆಚ್ಚಿನ ಕುತೂಹಲ ಹುಟ್ಟಿಸುತ್ತದೆ. ಇಲ್ಲಿ ರಾಕ್ಷಸ ಬರುವುದಿಲ್ಲ. ಬೆಳಗಾವಿ ತನ್ನ 'ಪ್ರಗತಿ'ಯಿಂದ ಶಿವಾಪುರವನ್ನು ಕಂಗೆಡಿಸುತ್ತದೆ. ಶಿವಾಪುರಕ್ಕೆ ಈಗ ತಾನೂ ಬೆಳಗಾವಿ ಆಗಬೇಕೆಂಬ ಆಸೆ, ಶಿವಾಪುರದವನೇ ಆದ ಗುಡಸ್ಯಾಗೋಳ ಬೆಳಗಾವಿಗೆ ಹೋಗಿ ಜಿ.ಎಚ್. ಗುಡಸೀಕರ ಬಿ.ಎ; ಎಲ್,ಎಲ್,ಬಿ; ಆಗಿ ಮರಳುತ್ತಾನೆ. ಗೌಡ, ದತ್ತಪ್ಪರ ಪರಂಪರಾಗತ ಆಳ್ವಿಕೆ ಮುಗಿದು ಸರಕಾರದ ಸೂಚನೆಯಂತೆ ಗ್ರಾಮಪಂಚಾಯಿತಿ ಹೊಸದಾಗಿ ಅಸ್ತಿತ್ವಕ್ಕೆ ಬರುತ್ತದೆ. ಇದರ ಪರಿಣಾಮಗಳ ಕಥನವೇ 'ಕರಿಮಾಯಿ' ಕಾದಂಬರಿಯ ಪ್ರಧಾನ ಆಶಯ.

(ಕರಿಮಾಯಿ; ಮುನ್ನುಡಿ, ಮೂರನೆಯ ಮುದ್ರಣ, 1995)

ಅಂದರೆ, ನಗರ ಸಂಸ್ಕೃತಿಯು ಗ್ರಾಮಸಂಸ್ಕೃತಿಯ ಮೇಲೆ ಎರಗುವ ಆಕ್ರಮಣದ ನೆಲೆಗಳನ್ನು ಈ ಕಾದಂಬರಿಯಲ್ಲಿ ಚಿತ್ರಿಸಲಾಗಿರುವುದನ್ನು

ನೋಡಬಹುದು. ಆಧುನಿಕ ನಾಗರೀಕ ಪ್ರಪಂಚವು ಗ್ರಾಮದ ಸಹಜತೆಗಳನ್ನು ಇಲ್ಲವಾಗಿಸುವ ಹಾಗೂ ಹಳ್ಳಿಯ ಅನನ್ಯತೆಗಳ ಮೇಲೆ ಸವಾರಿ ಮಾಡುವ ಪ್ರಕ್ರಿಯೆಗಳನ್ನು ಕಂಬಾರರು 'ಕರಿಮಾಯಿ' ಕಾದಂಬರಿಯಲ್ಲಿ ಮುಖಾಮುಖಿಯಾಗಿಸಿದ್ದಾರೆ. ನಾಗರೀಕ ಪ್ರಪಂಚದ ಬಗೆಗಿನ ಆಕರ್ಷಣೆಗಳ ಮತ್ತು ಗ್ರಾಮದ ನೈಜತೆಗಳ ಮುಖಾಮುಖಿಯಿಂದ ಎದುರಾಗುವ ದ್ವಂದ್ವಗಳ ಪುರಾಣದಂತೆ 'ಕರಿಮಾಯಿ' ಕಾದಂಬರಿ ಕಾಣುತ್ತದೆ. ಈ ಬಗೆಯ ದ್ವಂದ್ವಗಳ ಅವರ ಇನ್ನಿತರ ಕೃತಿಗಳಾದ 'ಹುಲಿಯ ನೆರಳು' (ನಾಟಕ), 'ನಾಯಿಕತೆ' (ನಾಟಕ), 'ಋಷ್ಯಶೃಂಗ' (ನಾಟಕ) ಹಾಗೂ ಅನೇಕ ಕವಿತೆಗಳಲ್ಲಿ ಬೇರೆ ಬೇರೆ ಆಯಾಮಗಳಲ್ಲಿ ಮೈದಾಳುವ ಕ್ರಮವು ವಿಶಿಷ್ಟವಾಗಿದೆ.

ಕಂಬಾರರ ಕೃತಿಗಳ ಮತ್ತೊಂದು ಮುಖ್ಯ ನೆಲೆಯೆಂದರೆ, ಜಮೀನ್ದಾರಿ ವ್ಯವಸ್ಥೆಯಲ್ಲಿ ಉಂಟಾಗುತ್ತಿರುವ ಒಡಕುಗಳನ್ನು ಕುರಿತ ಚಿಂತನೆ. ತನ್ನ ದರ್ಪ ಮತ್ತು ಅಹಂಕಾರಗಳಿಂದ ನಿರ್ಮಾಣಮಾಡುವ ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯ, ಅದರ ಪ್ರಭಾವ ಪರಿಣಾಮಗಳ ಸ್ವರೂಪವನ್ನು 'ಜೋಕುಮಾರ ಸ್ವಾಮಿ', 'ನಾಯೀಕತೆ', 'ಜೈ ಸಿದ್ಧನಾಯಕ' ಮೊದಲಾದ ಕೃತಿಗಳಲ್ಲಿ ವಿವೇಚಿಸುತ್ತಾರೆ. ದರ್ಪ ಮತ್ತು ಅಹಂಕಾರಗಳ ಜಮೀನ್ದಾರಿ ವ್ಯವಸ್ಥೆ ಏನನ್ನೂ ಸೃಷ್ಟಿಸಲಾರದ, ನಿರ್ವೀರ್ಯಗೊಳ್ಳುವ ವ್ಯಂಗ್ಯವನ್ನು ಇಂಥ ಕೃತಿಗಳಲ್ಲಿ ಮುಖ್ಯ ಆಯಾಮವಾಗಿ ತಾತ್ವಿಕ ಸಂಕೇತಗಳಿಂದ ವಿಡಂಬಿಸುತ್ತಾರೆ. ಹೀಗಾಗಿ, ಕಂಬಾರರ ಕೃತಿಗಳನ್ನು ಕಾವ್ಯ, ನಾಟಕ, ಕಾದಂಬರಿಗಳು ಎಂದು ಬೇರೆ ಬೇರೆ ವಿಭಾಗಗಳಲ್ಲಿ ಅಧ್ಯಯನ ಮಾಡುವುದಕ್ಕಿಂತ ಅವರ ಸಮಗ್ರ ಕೃತಿ ಸಮೂಹದ ಆಶಯಗಳನ್ನು ಒಪ್ಪಂದದಲ್ಲಿ ಗ್ರಹಿಸುವುದೇ ಸರಿಯೆಂದು ಕಾಣುತ್ತದೆ.

"ಸಾವಿರದ ನೆರಳು" ಸಂಕಲನದ ಅನೇಕ ಕವನಗಳಲ್ಲಿ 'ನೆರಳು' ಮತ್ತು 'ಕಾಮ' ಮೂಲಪ್ರತಿಮೆಗಳಾಗಿ ಮೈ ಪಡೆಯುತ್ತವೆ. ಈ ಸಂಕಲನದ ಶೀರ್ಷಿಕೆಯಾದ 'ಸಾವಿರದ ನೆರಳು' ಒಡ್ಡುವ ಆತಂಕಗಳು ಕಂಬಾರರನ್ನು ನಿರಂತರವಾಗಿ ಕಾಡಿದ ಸೂಚನೆಗಳು ಇಲ್ಲಿನ ಹಲವು ಕವನಗಳಲ್ಲಿ ಎದುರಾಗುತ್ತವೆ. ನೆರಳಿನ ಜೊತೆ ನಡೆಯುವ ಆತ್ಮರತಿ ಮನುಷ್ಯನನ್ನು ಬಲಿತೆಗೆದುಕೊಂಡ ದುರಂತವನ್ನು 'ನೆರಳಿನ ಜೋಡಿ ಹಾದರ ಮಾಡಿ' ಕವಿತೆ ಎದುರಾಗಿಸುತ್ತದೆ. ತನ್ನ ನೆರಳೆ ತನ್ನನ್ನು ಸಾವಿಗೀಡು ಮಾಡುವ ಸ್ಥಿತಿ ಭಯಾನಕವಾದುದು. ಈ ಭಯಾನಕತೆ ಆತ್ಮರತಿಯು ತರುವ ದುರಂತವೂ ಆಗಿದೆ. ಇಂಥ ಆತ್ಮರತಿಗೆ ಒಳಗಾಗಿ 'ಹೋರಿ' ಕವನದ ಉನ್ಮತ್ತನಾಯಕ ದುರಂತದ ಕಡೆಗೆ ಹೊರಡಿರುವುದನ್ನು ಕಾಣುತ್ತೇವೆ. ಎಲ್ಲ ಕಡೆಗೂ ರತಿಗೆ ಆಹ್ವಾನವನ್ನು ನೀಡುತ್ತಿದ್ದ ಹೋರಿಯ ನಾಯಕ ಇಲ್ಲಿ ತನ್ನ ನೆರಳನ್ನು ಕಾಮಿಸುವುದರೊಂದಿಗೆ ದುರಂತಕ್ಕೆ ಗುರಿಯಾಗುವ ಕ್ರಿಯೆ ಮಾರ್ಮಿಕವಾದುದು. ತನ್ನ ಮೈಗೆ ಎದುರಾದ ಇನ್ನೊಂದು ನೆರಳು ಜೀವವನ್ನೆ ಹತ್ಯೆಗೈಯುತ್ತದೆ. ಈ ಹತ್ಯೆ ತನಿಖೆಗೂ ಸಿಗದೆ ಹೋಗುತ್ತದೆ. ನೆರಳಿನ ಜೊತೆಗೆ ಹಾದರ ಮಾಡುವುದರೊಂದಿಗೆ ಅವನ ವ್ಯಕ್ತಿತ್ವ ಛಿದ್ರವಾಗುವ ಬಗೆ ಈ ಕವನದಲ್ಲಿ ಮೈ ಪಡೆದಿದೆ. ವಸಾಹತು ಸಂಸ್ಕೃತಿ ಒಡ್ಡುವ ಸಾವು ಇರದ ನೆರಳಿನ ಕ್ರೌರ್ಯವೂ ಹೀಗೆ ಯಾವುದೇ ಶೋಧನೆಗೂ ತನಿಖೆಗೂ ಸಿಗಲಾರದಂಥದು. ಈ ಮಾದರಿಯ ಕ್ರೌರ್ಯ ನಿಗೂಢವಾಗಿಯೆ ಉಳಿಯುವ ವಿಚಾರ ಇಂಥ ಕವನಗಳಲ್ಲಿದೆ.

'ನೆರಳು' ಮತ್ತು 'ಕಾಮ' ಮೊದಲೇ ಹೇಳಿದಂತೆ ಕಂಬಾರರ ಕಾವ್ಯದಲ್ಲಿ ಉದ್ದಕ್ಕೂ ಹರಳುಗಟ್ಟುತ್ತ, ಪ್ರತಿಮೆಗಳಾಗಿ ಬೆಳೆಯುತ್ತ ಹಲವು ಅರ್ಥಗಳನ್ನು ಧ್ವನಿಸುತ್ತವೆ. ಇಲ್ಲಿ 'ನೆರಳು' ಆಶ್ರಯದ ಹಾಗೂ ಏನನ್ನು ಬೆಳೆಯಗೊಡದ ಸೃಜನವಲ್ಲದ ಸಂಕೇತವಾಗುತ್ತದೆ. 'ಕಾಮ' ಶಕ್ತಿಯ ಹಾಗೂ ಶಕ್ತದೇಹವನ್ನು ನಿರ್ವೀರ್ಯಗೊಳಿಸುವಂಥದ್ದು. ಡಾ.ಡಿ.ಆರ್. ನಾಗರಾಜ್ ಅವರು ಹೇಳು ವಂತೆ, "ಇಂಥ ದುಃಸ್ಥಿತಿ ಕಾಮವನ್ನು ಅಪವಿತ್ರ, ಭ್ರಷ್ಟಗೊಳಿಸಿದ್ದರಿಂದ ಏರ್ಪಟ್ಟದ್ದು".

ಹೊಸ ಸಂಸ್ಕೃತಿಯೊಂದು ದೇಸೀ ಸಂಸ್ಕೃತಿಯ ಮೇಲೆ ನಡೆಸಿದ ಅನೈತಿಕ ದಾಳಿಯಿಂದ ದೇಸೀ ಪರಿಸರ ಬರಡಾಗುವ ಬಗೆಯನ್ನು ಕಂಬಾರರ ಕಾವ್ಯಚಿಂತನೆಗೆ ಗುರಿಪಡಿಸುತ್ತದೆ. ಹಾಗೆ ಚಿಂತನೆಗೆ ಗುರಿ ಪಡಿಸುವುದರೊಂದಿಗೆ ದೇಸೀ ಸಂಸ್ಕೃತಿಯ ಅಸ್ತಿತ್ವದ ಶೋಧನೆಯನ್ನು ನಡೆಸುತ್ತದೆ. ಅಂಥ ಶೋಧನೆ ಪೂರ್ವ-ಪಶ್ಚಿಮಗಳ ಮುಖಾಮುಖಿ ಹಾಗೂ ನಗರ-ಗ್ರಾಮಗಳ ಸಂಘರ್ಷದ ನೆಲೆಗಳಲ್ಲಿ ಅಭಿವ್ಯಕ್ತವಾಗುವುದು ಕುತೂಹಲಕಾರಿಯಾಗುತ್ತದೆ. ಅಂದರೆ, ಪ್ರಬಲ ಸಂಸ್ಕೃತಿಯೊಂದು ದೇಸೀ ಸಂಸ್ಕೃತಿಗೆ ಮಾರಕವಾಗುವ ಬಗೆಗೆ ಅವರ ಕೃತಿಗಳು ನೆರಳಿನ ಪ್ರತಿಮೆಗಳ ಮುಖೇನ ಎದುರಾಗುತ್ತವೆ. ಕಂಬಾರರ ಸಂವೇದನೆ ಹೊಸ ಸಂಸ್ಕೃತಿಯ ಪ್ರವೇಶವನ್ನು ಅನೈತಿಕ ಸಂಬಂಧವೆಂದೆ ಗ್ರಹಿಸಿದೆ. ಹಾಗೆಯೇ ಒಂದು ಸಂಸ್ಕೃತಿಯ ಅಖಂಡ ಆತ್ಮದಲ್ಲಿ ಬಿರುಕುಂಟು ಮಾಡುವ ನೆರಳೆಂದೂ ತಿಳಿಯುತ್ತದೆ. ಇಂಥ 'ನೆರಳು' ತರುವ ನೋವು, ಗೊಂದಲಗಳು ಅವರ ಕಾವ್ಯದಲ್ಲಿ ಮುಖ್ಯಭಿತ್ತಿಯಾಗಿ ಬೆಳೆಯುತ್ತವೆ. ಅಂಥ ಭಿತ್ತಿ ಎದುರಾಗಿಸುವ ನೋವುಗಳು 'ಏಕಕಾಲಕ್ಕೆ ಇಬ್ಬರಿಗೆ ಮಗ ಆಗುವ' ದುರಂತಗಳ ಪರಂಪರೆಯನ್ನೆ ಪ್ರಕಟಿಸುತ್ತವೆ. ಇಬ್ಬರಿಗೆ ಮಗನಾಗಿ ಬದುಕುವ ಕಷ್ಟಗಳ ಪರಂಪರೆಯು ಆಕ್ರಮಣಶೀಲ ಸಂಸ್ಕೃತಿಯ ಆಗಮನದಿಂದ ಎದುರಾಯಿತೆಂಬುದು ಕಂಬಾರರ ಕೃತಿಗಳ ಹಿಂದಿರುವ ತಾತ್ವಿಕ ಚಿಂತನೆಯಾಗಿದೆ. ಅನೈತಿಕ ಸಂತಾನಗಳಿಂದ ಎದುರಾಗುವ ಆತಂಕಗಳನ್ನು ಕಂಬಾರರ ಕಾವ್ಯ ಆತಂಕದಿಂದಲೆ ವಿಶ್ಲೇಷಿಸುತ್ತದೆ. ಇಂಥ ಆತಂಕಗಳಿಂದ, ಪಶ್ಚಿಮ ಸಂಸ್ಕೃತಿಯ ಸಹವಾಸದ ಫಲವಾಗಿ ಬದುಕಿನ ಎಲ್ಲ ಮಟ್ಟದ ಸಂದರ್ಭಗಳಲ್ಲಿ ಉಂಟಾದ ಅಧಃಪತನಗಳನ್ನು ಕಂಬಾರರ ಕಾವ್ಯ ವಿಶ್ಲೇಷಣೆಗೆ ಗುರಿಪಡಿಸುತ್ತದೆ. ಅಂಥ ವಿಶ್ಲೇಷಣೆ 'ಸಾವಿರದ ನೆರಳು', 'ಬೆಳ್ಳಿಮೀನು', 'ಅಕ್ಕಕ್ಕು ಹಾಡುಗಳ' ಕವನ ಸಂಕಲನಗಳಲ್ಲಿಯೂ ಬೆಳೆ ಯುತ್ತದೆ.

**ಗ್ರಾಮ-ನಗರಗಳ ಸಂಘರ್ಷ**

ನಗರ ಸಂಸ್ಕೃತಿಯು ಗ್ರಾಮಗಳ ಮೇಲೆ ಎಸಗುವ ಆಕ್ರಮಣ, ಬೀರುವ ಆಕರ್ಷಣೆ ಹಾಗೂ ನಗರ ಎದುರಾಗಿಸುವ ತಲ್ಲಣಗಳಿಂದ ಕಂಗೆಟ್ಟ ಗ್ರಾಮ ಬದುಕಿನ ಛಿದ್ರಾವಸ್ಥೆಗಳನ್ನು ಕಂಬಾರರ ಕಾವ್ಯ ದಾಖಲಿಸುತ್ತದೆ. ಅಂಥ ಛಿದ್ರಾವಸ್ಥೆಗಳಿಂದ ಬಿಡುಗಡೆ ಹೊಂದಲು ಇವರ ಕಾವ್ಯ ಹಲವು ತಂತ್ರಗಳನ್ನು ಹುಡುಕುತ್ತದೆ. ಹಾಗೆಯೇ ಡಾ.ಡಿ.ಆರ್. ನಾಗರಾಜ್ ಅವರು ಹೇಳುವಂತೆ "ವಸಾಹತೀಕರಣದ ಹದ್ದಿನಿಂದ ಕನ್ನಡ ಕಾವ್ಯವನ್ನು ಕಾಪಾಡಲು" ಹಲವು ಪ್ರತಿಮೆ, ರೂಪಕಗಳನ್ನು ಕಂಬಾರರ ಸಂವೇದನೆ ಶೋಧಿಸುತ್ತದೆ.

'ಗುಡು ಗುಡು ಗುಮ್ಮ' ಕವನದ ವಸ್ತು ಪಶ್ಚಿಮ ಸಂಸ್ಕೃತಿಯ ಸಂಬಂಧದಿಂದ ಎದುರಾದ ಅಧಃಪತನ. ಕಂಬಾರರೇ ಸೂಚಿಸುವಂತೆ, "ಪಶ್ಚಿಮ, ಅದರ ಸಹವಾಸದ ಫಲದ ವಾಣಿಜ್ಯ ಸಂಸ್ಕೃತಿ, ಅದಕ್ಕೆ ಮನೆ, ಮಠ ಕೆಡವಿ ಮಾಡಿದ ರಸ್ತೆ. ಅದರ ಪರಿಣಾಮ ರಾಜ್ಯ, ವೃತ್ತಿ, ಸಮಾಜ, ಸಂಸ್ಕೃತಿ, ಕುಟುಂಬಗಳ ಸಂಬಂಧಗಳ ಅಧಃಪತನ ಇದರ ವಸ್ತು." ತಂದೆ ಮಗುವಿಗೆ ಹೇಳುವ ಅಜ್ಜಿಯ ಕಥೆಯಂತೆ ಬೆಳೆಯುವ ಈ ಕವನ ಪರಕೀಯ ಸಂಸ್ಕೃತಿಯೊಂದು ಸ್ಥಳೀಯ ಸಂಸ್ಕೃತಿಯ ವೈವಿಧ್ಯತೆಗಳನ್ನು; ಅನನ್ಯತೆಗಳನ್ನು ಭಗ್ನಗೊಳಿಸುವ ಕ್ರೌರ್ಯವನ್ನು ಅನೇಕ ಚಿತ್ರಗಳ ಮೂಲಕ ವಿಶ್ಲೇಷಿಸುತ್ತದೆ. ಗುಡು ಗುಡು ಗುಮ್ಮನ ವ್ಯಕ್ತಿತ್ವ ಇಡೀ ವ್ಯವಸ್ಥೆಯನ್ನೇ ನಾಶಗೈಯ್ಯುವುದರ ಕಡೆಗೆ ಹೊರಟದ್ದು. ಪಶ್ಚಿಮ ಸಂಸ್ಕೃತಿಯ ಕೂಸಾದ 'ಗುಡು ಗುಡು ಗುಮ್ಮ' ಅಜ್ಜೀ ಕಥೆಯ ರಾಕ್ಷಸನಂತೆ ನೆಲ-ಮುಗಿಲುಗಳಿಗೆ ಏಕವಾಗಿ ಬೆಳೆದು, ಮನೆಯ ಹೊರಗೆ ಮತ್ತು ಒಳಗೂ ಪ್ರವೇಶಿಸುವುದರೊಂದಿಗೆ ಎಲ್ಲವನ್ನೂ ದಮನಗೈದು ದುರಂತಕ್ಕೆ ತಳ್ಳುವ ಕ್ರಿಯೆ ಈ ಕವನದ ಮುಖ್ಯಭಿತ್ತಿಯಾಗಿದೆ.

ಕಿಟಕಿಯ ಗಾಜು ಒಡೆಯುತ್ತಿವೆ, ಮುರಿಯುತ್ತಿವೆ
ಬಾಗಿಲು, ಗೋಡೆ ಬಿರಿಯುತ್ತಿವೆ ಬರುತ್ತಿದೆ
ಮನೆಯಲ್ಲೇ ನಮ್ಮ ಸದರಿನಲ್ಲೇ ಗುಮ್ಮ
ನುಗ್ಗುತ್ತಿದೆ ! ಮನೆಯಲ್ಲೇ ಹಾಯುತ್ತಿದೆ
ಮನೆಯನ್ನೆಲ್ಲ ರಸ್ತೆ ನಾಡುತ್ತದೆ, ಹೆಮ್ಮೆ ಪಡುತ್ತದೆ.
ನಾನು ?
ಕಸದ ಗುಂಡಿಯಲ್ಲಿ ಕಳಕೊಂಡ ವಿಳಾಸದ
ಚೀಟಿ ಹುಡುಕುತ್ತ
ಹುಡುಕುತ್ತ
ಹುಡುಕುತ್ತಾ ಅಲೆದಾಡುತ್ತೇನೆ.

ಈ ಮೇಲಿನ ಉದ್ಧರಣೆಯಲ್ಲಿ 'ಗುಡು ಗುಡು ಗುಮ್ಮ'ನ ದಮನಕಾರೀ ಶಕ್ತಿಯ ಪರಿಣಾಮದ ಚಿತ್ರಗಳನ್ನು ಕಾಣುತ್ತೇವೆ. ಮನೆಯನ್ನೆ ರಸ್ತೆ ಮಾಡುವ, ಮನೆಯವರನ್ನು ಬೀದಿಪಾಲು ಮಾಡುವ ಕ್ರಿಯೆ 'ಗುಡು ಗುಡು ಗುಮ್ಮ'ನ ವಿನಾಶಕಾರಿ ಪ್ರವೃತ್ತಿಯನ್ನು ಸೂಚಿಸುತ್ತದೆ. ತಾನು ಕಳಕೊಂಡ ವಿಳಾಸವನ್ನು ಕಸದ ಗುಂಡಿಯಲ್ಲಿ ಹುಡುಕುವ, ಹುಡುಕುತ್ತಾ ಅಲೆದಾಡುವ ದುರಂತ ಹೊರಗಿನ ಸಂಸ್ಕೃತಿಯೊಂದು ಉಂಟುಮಾಡುವ ಕ್ರೌರ್ಯವನ್ನು, ಆತಂಕಕಾರಿ ನೆಲೆಗಳನ್ನು ಪ್ರಕಟಿಸುತ್ತದೆ. ತನ್ನ ಅಸ್ತಿತ್ವವನ್ನೇ ಕಳೆದುಕೊಂಡ ಸ್ಥಿತಿ ಹಾಗೂ ನಾಗರೀಕತೆಯ ಬೆನ್ನು ಹತ್ತಿದ ಮನುಷ್ಯ ಎದುರಾಗಿಸಿಕೊಂಡ ದುರಂತವೂ ಇದಾಗಿದೆ. ನಗರ ಸಂಸ್ಕೃತಿಯ ಆಗಮನದಿಂದ ಎದುರಾಗುವ ಪಲ್ಲಟಗಳು ಪ್ರಗತಿಯ ನೆಪದಲ್ಲಿ ಗ್ರಾಮಸಂಸ್ಕೃತಿಯಲ್ಲಿ ಹರಡುವುದರ ಮೂಲಕ ಅಲ್ಲಿನ ಸಮೃದ್ಧತೆಯ ಛಿದ್ರಾವಸ್ಥೆಗಳಿಗೆ ಕಾರಣವಾಗುವುದರ ಬಗೆಗೆ ಕಂಬಾರರ ಕಾವ್ಯ ತೋರುವ ಪ್ರತಿರೋಧ ಮಾರ್ಮಿಕವಾದುದು. ಡಾ.ಡಿ.ಆರ್. ನಾಗರಾಜ್ ಅವರ ಈ ಕೆಳಗಿನ ಮಾತುಗಳು ಇಂಥ ಸನ್ನಿವೇಶವನ್ನು ಮತ್ತಷ್ಟು ಸಮರ್ಥವಾಗಿ ದಾಖಲಿಸುತ್ತವೆ.

'ಇದು ಎಲ್ಲ ಐಕ್ಯಗಳೂ ಚಿಂದಿ ಚೂರಾಗುವ ಸನ್ನಿವೇಶ. ಯಾವುದೇ ಹಂತದಲ್ಲಿ ಸಂಭ್ರಮ ಅಸಾಧ್ಯವಾಗಿರುವ ಸನ್ನಿವೇಶ. ದೊಡ್ಡಲೋಕದ ಒತ್ತಡ, ವೈಷಮ್ಯಗಳು ಚಿಕ್ಕ ಶಯ್ಯಾಗೃಹಕ್ಕೂ ಬಂದು ನುಗ್ಗುವ ಯುಗ ಇದು. ಇಂಥ ದಿಗ್ಭ್ರಮೆಯಿದ್ದೂ ಅದರಾಚೆಗೆ ಹಂಬಲಿಸುವ ಶಕ್ತಿ ಕಂಬಾರರ ಕಾವ್ಯಕ್ಕೆ ಇದೆ ಎಂದೇ ನಾನು ಅದನ್ನು ಗಮನಕೊಟ್ಟು ಓದುತ್ತೇನೆ. ನಗರದ ಗಲ್ಲಿ ಗಟಾರಗಳಲ್ಲಿ ಕೊಚ್ಚಿಹೋಗುತ್ತಿರುವ ಜೀವಚೈತನ್ಯವನ್ನು ಹಿಡಿಯಲು ಯತ್ನಿಸುವ ಕವಿ ಕಂಬಾರ". (ಬೆಳ್ಳಿಮೀನು, ಮುನ್ನುಡಿ, ಮೊದಲ ಮುದ್ರಣ, 1989)

ಸ್ವಾತಂತ್ರ್ಯಾನಂತರದ ವಸಾಹತುಶಾಹಿ ಸಂಸ್ಕೃತಿಯು ದೇಶೀಯ ನೆಲೆಗಳ ಮೇಲೆ ಎಸಗಿದ ಕ್ರೌರ್ಯಗಳನ್ನು 'ಬೆಳ್ಳಿಮೀನು', 'ಅಕ್ಕಕ್ಕು ಹಾಡುಗಳೇ' ಕವನ ಸಂಕಲನಗಳಲ್ಲಿ ಕಂಬಾರರ ಸಂವೇದನೆ ಧ್ಯಾನಿಸುತ್ತಿರುವ ಸೂಚನೆಗಳು ಗಾಢವಾಗಿ ಮೈಪಡೆದಿವೆ. ವಸಾಹತು ಸಂಸ್ಕೃತಿಯ ಪ್ರಭಾವ ಪರಿಣಾಮಗಳನ್ನು ನಿಖರವಾಗಿ ಇಂತಿಷ್ಟೇ ಎಂದು ಗುರುತಿಸುವುದು ಕಷ್ಟ. ಸ್ವಾತಂತ್ರ್ಯಾನಂತರದ ಬದುಕು ಮತ್ತೂ ಬೇರೆಯದೇ ಆದ ದ್ವಂದ್ವಗಳಿಗೆ ಗುರಿಯಾಗಿದೆ. ಹೀಗಾಗಿ, ಗ್ರಾಮೀಣ ಜೀವನದ ಸಮೃದ್ಧತೆಯನ್ನು ವಿಘಟನೆಗೊಳಿಸುವ ನವ ವಸಾಹತುಶಾಹಿ ಸಂಸ್ಕೃತಿಯು ಎದುರಾಗಿಸಿದ ಕ್ರೌರ್ಯವಸ್ಥೆಗಳಿಗೆ ಕಂಬಾರರ ಕಾವ್ಯ ಮರುರೂಪಕಗಳನ್ನು ಈ ಸಂಕಲನಗಳಲ್ಲಿ ಶೋಧಿಸಿಕೊಳ್ಳುತ್ತದೆ. ತೃತೀಯ ಜಗತ್ತಿನ ರಾಷ್ಟ್ರಗಳು ಆಧುನಿಕ ಸಂದರ್ಭದಲ್ಲಿ ಎದುರಿಸುತ್ತಿರುವ ಸಮಸ್ಯೆಗಳಿಂದ ಆತಂಕಗೊಳ್ಳುತ್ತಲೇ, ಪರ್ಯಾಯ ಅಸ್ತಿತ್ವವೊಂದನ್ನು ಹುಡುಕುವ ಕಡೆಗೆ ಕಂಬಾರರ ಸಂವೇದನೆ ಕ್ರಿಯಾಶೀಲಗೊಂಡಿರುವುದನ್ನು ಈ ಸಂಕಲನಗಳಲ್ಲಿ ಕಾಣುತ್ತೇವೆ. ನಗರ ಸಂಸ್ಕೃತಿ ಗ್ರಾಮದ ಬದುಕಿಗೆ ಎಸಗುವ ಆಕ್ರಮಣಗಳ ಬಗೆಗಿನ ವಿಷಾದವು ಇಂಥ. ಕಾವ್ಯದಲ್ಲಿ ಹರಳು ಗಟ್ಟುತ್ತದೆ. 'ದಿಲ್ಲಿಯೆಂಬ ಕ್ಯಾಬರೆ', 'ಇಟ್ಟಿಗೆಯ ಪಟ್ಟಣ', 'ನಾಡು-ಕಾಡು', 'ಸೈನಿಕರ ಕೋವಿಯ ಹಾಡು', 'ಸೈನಿಕರ ಸಿಟಿ ಬಗೆಗಿನ ಹಾಡು', 'ಶಿವಾಪುರದ ಹಾಡು', 'ಭಾರತಿ', 'ಕೇಳೆನ್ನ ದೇಶವೆ' ಮೊದಲಾದ ಕವಿತೆಗಳಲ್ಲಿ ನಗರ ಮತ್ತು ಗ್ರಾಮಸಂಸ್ಕೃತಿಗಳ ಸಂಘರ್ಷ ಮೈಪಡೆಯುತ್ತದೆ.

**ಪುರೋಹಿತ- ಸಾಮ್ರಾಜ್ಯಶಾಹಿಯ 'ಸಾವಿರದ ನೆರಳು'**

ಸ್ಥಳೀಯ ಪುರೋಹಿತ ವ್ಯವಸ್ಥೆ ಮತ್ತು ಕಮ್ಯೂನಿಸ್ಟ್ ವಿರೋಧಿ ನಿಲುವುಗಳು ಕಂಬಾರರ 'ತಕರಾರಿನವರು' ಮತ್ತು 'ಸಾವಿರದ ನೆರಳು' ಸಂಕಲನಗಳ ಹಲವು ಕವನಗಳಲ್ಲಿ ಮುಖ್ಯ ಬಿತ್ತಿಯಾಗಿ ಮೈಪಡೆಯುತ್ತವೆ. ಒಳ ಮತ್ತು ಹೊರಗಿನ ಆಕ್ರಮಣಶೀಲ ಶಕ್ತಿಗಳ ಬಗೆಗೆ ಕಂಬಾರರು ನಿರಂತರವಾಗಿ ತಕರಾರುಗಳನ್ನು ಒಡ್ಡುತ್ತಲೇ ಮುನ್ನಡೆಯುವುದನ್ನು 'ಗಂಗಾಮಾಯಿ', 'ಮಾವೊತ್ಸೆತುಂಗನಿಗೆ', 'ಹಳದಿ ಆಶೀರ್ವಾದ' ಕವಿತೆಗಳಲ್ಲಿ ಕಾಣುತ್ತೇವೆ. 'ಮಾವೊತ್ಸೆತುಂಗನಿಗೆ' ಕವಿತೆಯಲ್ಲಿ ಭಾರತಾಂಬೆಯ ಚಿತ್ರವನ್ನೆ ವ್ಯಂಗ್ಯಕ್ಕೆ ಗುರಿಪಡಿಸುತ್ತ, ಮಾವೋನ ಕಮ್ಯೂನಿಸ್ಟ್ ಧೋರಣೆಗಳ ಬಗೆಗೆ ಕಂಬಾರರ ಚಿಂತನೆ ಹೀಗೆ ಅಭಿವ್ಯಕ್ತಗೊಂಡಿದೆ.

ನಮ್ಮ ಭಾರತಾಂಬೆ, ರೂಪಾಯಗಲ ಕುಂಕುಮದಾಕಿ
ಕೈತುಂಬ ಹಸಿರುಬಳೆ ಕುಪ್ಪಸದಾಕಿ,
ಒಬ್ಬರ ಕೈಬೆರಳಿಗೆ ಗುರಿಯಾಗದೆ ಮರ್ಯಾದೆಯೊಳಗೆ ಬಾಳಿದಾಕಿ
ಮುಖದಗಲ ಪುರಾಣಗರತಿಯ ಸೆರಗು ತೂಗಿ ಕಣ್ಣು ಕಾಣಿಸದಾಕಿ

ಈ ಮೇಲಿನ ಸಾಲುಗಳಲ್ಲಿ ಭಾರತಾಂಬೆಯ ಭಾವುಕ ಚಿತ್ರವನ್ನು ಪ್ರಕಟಿಸುತ್ತಲೆ, ಅವಳ ನಂಬಿಕೆ, ಕಲ್ಪನೆಗಳನ್ನು ವಿಡಂಬನೆಗೆ ಗುರಿಪಡಿಸಲಾಗಿದೆ. ಹಾಗೆಯೇ ಹೊರಗಿನ ಅಥವಾ ನೆರೆರಾಷ್ಟ್ರಗಳ ದಾಳಿಗೆ ಪ್ರತಿರೋಧವನ್ನು ವ್ಯಕ್ತಪಡಿಸ ಲಾಗಿದೆ. ದೇಶವನ್ನು ಆಕ್ರಮಿಸ ಹೊರಟ ಮಾವೊತ್ಸೆತುಂಗನ ಭಂಡತನಕ್ಕೆ ಬೆಂಕಿಯ ಖಾಸಾಪುತ್ರಿಯಾದ ಭಾರತಾಂಬೆಯ ಮೇಲೆ ಕಣ್ಣು ಹಾಕಿದೆಯೋ ಕೀಚಕನ ಗತಿಯೇ ನಿನಗೆಂದು ಕಟ್ಟೆಚ್ಚರವನ್ನು ಪುರಾಣ ಪ್ರತಿಮೆಯ ಮೂಲಕ ಮುಖಾಮುಖಿಯಾಗಿಸುವ ನೆಲೆ ಈ ಕವನದ ಹಿಂದಿದೆ.

ನಿನ್ನ ನಾಮದ ಬಲದಿಂದಿಲೇ ತಗ್ಗುದಿನ್ನೆಗಳ ಓ.ಡಬ್ಬುಡಿ ಮಾಡಿ
ಹಾಲು ಹರಿಸಿ ಸಮನಾಗಿಸೇವೆಂಬ ನಂಬಿಕೆಯವರು
ಸಮನಾದರೆ ಬರುವ ಮಳೆ ಬಂದಾವು ಹೆಂಗ?
ಹಸಿರು ಬೆಳೆದಾವು ಹೆಂಗ?
ಸರ್ಕಾರಿ ಕೋಗಿಲೆ ಹಾಡ್ಯಾವು ಹೆಂಗ?
ಈ ಹೆಂಗದ ಹಂಗಿರಲಯ್ಯ-
ಛತ್ತೀಸಕೋಟಿ ದೇವ್ರ ತಿಣುಕಿ ಬಾರದ ಬಲ ನಿನ್ನ
ನಾಮಕ್ಕಿದೆಯೇ ?.........
. . . . . . . .ಮಿಸಳಬಾಜಿ
ಈಗಾದರು ತಿಳಿಯಿತಿಲ್ಲೊ ಏ
ಹಳಸಿದ ಮಿಸಳಿಗೆ ಮೂಗಮುರಿಯುವ ಚೆದುರಾ
ನನ್ನ ಹೆಸರಿನಲ್ಲಿರುವ ನಿನ್ನ ಹೆಸರಿನಕ್ಷರ ಗುರುತಿಸದ ನಿರಕ್ಷರಾ

ಮಾವೋನ ಕಮ್ಯೂನಿಸ್ಟ್ ಧೋರಣೆಗಳು ಮತ್ತು ಆ ಧೋರಣೆಗಳ ಅನುಕರಣೆಯ ಬಗೆಗಿನ ವಿಡಂಬನೆ ಈ ಮೇಲಿನ ಸಾಲುಗಳಲ್ಲಿ ತೀವ್ರವಾಗಿದೆ. ಛತ್ತೀಸಕೋಟಿ ದೇವರುಗಳ ಸತತ ಪ್ರಯತ್ನದಿಂದಲೂ ಸರಿಪಡಿಸಲಾಗದ ಇಲ್ಲಿನ

ಸಾಮಾಜಿಕ ಅಸಮತೋಲನ, ಕೇವಲ ತನ್ನ ನಾಮದ ಬಲದಿಂದ ನೆರವೇರುತ್ತದೆಂಬವಾದ ಹುಂಬತನದ್ದೆಂದು ಕಂಬಾರರು ಗೇಲಿ ಮಾಡುತ್ತಾರೆ. 'ಏಕಕ್ಕೆ ಅನೇಕ ಅನೇಕಕ್ಕೆ ಏಕ್ ಎಂಬಂತೆ ವೈವಿಧ್ಯತೆಯಲ್ಲೂ ಭಾವೈಕ್ಯವನ್ನು ಸಾಧಿಸಿರುವ ಈ ರಾಷ್ಟ್ರಕ್ಕೆ ಅವನ ಧೋರಣೆಗಳು ಸರಿಹೊಂದಲಾರವೆಂಬ ಪ್ರತಿರೋಧವನ್ನು ಒಡ್ಡುತ್ತಾರೆ.

ಭಾರತದ ಮೇಲಿನ ಮಾವೋನ ಅಘೋಷಿತ ಯುದ್ಧದ ಧೋರಣೆ ಗಳನ್ನು ಕವನದ ನಾಲ್ಕನೆಯ ಭಾಗದಲ್ಲಿ ಕಾಣುತ್ತೇವೆ. ಯುದ್ಧವನ್ನು ಘೋಷಿಸದೆ ದೇಶದ ಮೇಲೆ ಆಕ್ರಮಣ ಮಾಡಿದ ಮಾವೋನ ಹೇಡಿತನವನ್ನು ಇಲ್ಲಿ ಪ್ರಶ್ನಿಸಲಾಗಿದೆ. 'ಕಲಿಕಾಲ, ಅಜ್ಞಾತವಾಸದ ಅವಧಿ' ಎನ್ನುವಲ್ಲಿ, ಈ ಕವಿತೆ ಭಾರತದ ಆಗಿನ ರಾಜಕೀಯ ವ್ಯವಸ್ಥೆಯನ್ನು ಪಾಂಡವರ ಅಜ್ಞಾತವಾಸದ ಪುರಾಣಪ್ರತಿಮೆಯೊಂದಿಗೆ ಮೈತೆರೆದುಕೊಳ್ಳುತ್ತದೆ. ಲಂಕೇಶರು ಹೇಳುವಂತೆ, "ಈ ದೇಶವನ್ನು ಗೆದ್ದು ಮಾನಗೆಡಿಸಿದ್ದರ ಇತಿಹಾಸವನ್ನು ಸೂಚಿಸುತ್ತ ಈ ದೇಶದ ಬಗೆಗಿನ ಭಾವೋದ್ವೇಗಗಳ ಗ್ರಹಿಕೆಯನ್ನು ಕೂಡ ಒಟ್ಟಿಗೇ ಕೊಡುತ್ತ ಹೋಗಿ ದಟ್ಟತನವನ್ನು ಸಾಧಿಸದೆ ಈ ರಾಷ್ಟ್ರ ಕುರಿತ ಕಾವ್ಯಾತ್ಮಕ ವಿಮರ್ಶೆ ಕೊಡುವುದು ಈ ಪದ್ಯದ ಸಾಧನೆ." ಈ ಬಗೆಯ 'ಮಾರ್ಕ್ಸ್‌ವಾದಿ ಧೋರಣೆಯ ದೇಶೀಯ ಅನನ್ಯತೆಯ ವಿಮರ್ಶೆ-ವಿಶ್ಲೇಷಣೆ 'ಮರತೇನೆಂದರ ಮರೆಯಲಿ ಹೆಂಗಾ', 'ಹಳದಿ ಆಶೀರ್ವಾದ' ಕವನಗಳಲ್ಲಿಯೂ ಮುಂದುವರೆಯುತ್ತದೆ.

ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರಗಳ ಕಲುಷಿತ ಗೊಂಡ ಸ್ಥಿತಿ:

'ಗಂಗಾಮಾಯಿ' ಊರ ಕೆರೆಯ ಹೆಸರು. ಕೆರೆ, ಈ ಪ್ರತಿಮೆಯೇ ಜಡಾವಸ್ಥೆಗಳನ್ನು ಧ್ವನಿಸುವಂಥದ್ದು. ಇದು ಹರಿಯಬೇಕಾದ ನೀರು ಕೆರೆಯಾಗಿ ಸ್ಥಗಿತಗೊಂಡ ಸ್ಥಿತಿಯನ್ನು ಸಂಕೇತಿಸುತ್ತದೆ. ಕವನದ ಮೊದಲ ಭಾಗ ಗಂಗಾಮಾಯಿ ಕೆರೆಯ ಬಹುಮುಖತೆಯ ನೆಲೆಯನ್ನು ಎದುರಾಗಿಸುತ್ತದೆ. ಜೀವಂತಿಕೆಯನ್ನು ಕಳೆದುಕೊಂಡ ನಮ್ಮ ಪರಂಪರೆ ವಿಕೃತಿಗಳಿಗೆ ಆಶ್ರಯವಾದದ್ದನ್ನು ಕೆರೆ ಪ್ರತಿಮೆ ಪ್ರಕಟಿಸುತ್ತದೆ. ಪಾಪಗಳನ್ನು ತೊಳೆಯುವ ಗಂಗೆ ಹರಿಯಲಾಗದೆ ಮಡುಗೊಂಡು ಪಾಪಗಳ ಆಗರವಾದ ಸ್ಥಿತಿಯನ್ನು ಈ ಕವಿತೆ ಕಟ್ಟಿಕೊಡುತ್ತದೆ. ಗಂಗೆಯ ಒಡಲಿನಲ್ಲಿ ನಡೆಯುವ ದೈನಂದಿನ ಕ್ರಿಯೆಗಳು, ಅನ್ಯಾಯಗಳು, ಪಾಪಕರ ಘಟನೆಗಳಿಂದ ಕೃತ್ಯಗಳಿಂದ ಗಂಗೆಯೂ ಮಲಿನಗೊಂಡ ಸ್ಥಿತಿಯನ್ನು ಪ್ರಕಟಿಸುತ್ತ ಸ್ಥಳೀಯ ಸಂಸ್ಕೃತಿಯ ಮಲಿನಾವಸ್ಥೆಗಳನ್ನು ಎದುರಾಗಿಸುವುದು 'ಗಂಗಾಮಾಯಿ' ಕವಿತೆಯ ಅನನ್ಯತೆಯಾಗಿದೆ. ಎಲ್ಲ ಬಗೆಯ ಕೊಳೆ, ಪಾಪಗಳನ್ನು ತೊಳೆದು ಶುಭ್ರಗೊಳಿಸಬೇಕಾದ ಗಂಗೆ ಅಶುಚಿಯಾಗಿ ಅಶುಭ್ರಳಾಗಿ ಕೊಳೆತು ಹೀನಾವಸ್ಥೆಗೆ ಒಳಗಾದುದರ ಬಗೆಗೆ ಇಲ್ಲಿ ಒಮ್ಮೆಗೆ ವಿಷಾದ ಮತ್ತು ವ್ಯಂಗ್ಯ ಪ್ರಕಟವಾಗುತ್ತದೆ. ಮಡುಗಟ್ಟಿದ ಪರಂಪರೆಯ ಮೌಲ್ಯಗಳನ್ನು ಹಿಡಿದಿಡಲು ಕಂಬಾರರ ಸಂವೇದನೆ ಸೃಷ್ಟಿಸುವ ರೂಪಕ ಪ್ರತಿಮೆಗಳು ಓದುಗನನ್ನು ಒಮ್ಮೆಗೆ ದಂಗುಬಡಿಸುತ್ತದೆ.

ಕನ್ನಡ ಸಾಂಸ್ಕೃತಿಕ ಸಂದರ್ಭದಲ್ಲಿ ಕಂಬಾರರ ಕೃತಿಗಳಿಗೆ ವಿಶಿಷ್ಟ ಸ್ಥಾನ ವಿದೆ. ಅಂತಹ ವಿಶಿಷ್ಟತೆ ಅವರ ರಚನೆಗಳಿಗೆ ಒದಗಿ ಬಂದಿರುವುದು ದೇಸೀಯ ಮೂಲ ಸೆಲೆಗಳನ್ನು ಅಭಿವ್ಯಕ್ತಿಗೆ ಒಳಪಡಿಸಿಕೊಳ್ಳುವುದರ ಮುಖೇನ. ಅವರ ಕೃತಿಗಳ ವಸ್ತು, ತಂತ್ರ, ಸನ್ನಿವೇಶ, ಪ್ರತಿಮೆ ಹಾಗೂ ರೂಪಕ ಪ್ರಪಂಚ ಈ ನೆಲದಿಂದಲೇ ಆಯ್ಕೆಗೊಂಡದ್ದು ಎಂಬುದು ಗಮನಾರ್ಹ. ಅಂದರೆ ಈ ನೆಲದ ಬದುಕಿನ ಆಶಯಗಳನ್ನೆ ಕೇಂದ್ರ ನೆಲೆಗಳನ್ನಾಗಿಸಿಕೊಳ್ಳುವುದರ ಮೂಲಕ ತಮ್ಮ ರಚನೆಗಳಿಗೆ ಅನನ್ಯತೆಯ ಪ್ರಾಪ್ತವಾಗುವಂತೆ ಕಂಬಾರರು. ಎಚ್ಚರವಹಿಸುತ್ತಾರೆ. ಅಂಥ ಅನನ್ಯತೆಯ ಎಚ್ಚರ ಸಮಕಾಲೀನ ರಾಜಕೀಯ, ಸಾಂಸ್ಕೃತಿಕ ವಿಚಾರಧಾರೆಯನ್ನು ಅಭಿವ್ಯಕ್ತಿಗೆ ಒಳಪಡಿಸುವುದು ಅವರ ಪ್ರತಿಭೆಯ ವೈಶಿಷ್ಟ್ಯವಾಗಿದೆ. ಕಂಬಾರರ ಕೃತಿಗಳಲ್ಲಿ ಪ್ರಕಟವಾಗುವ ಚಿಂತನೆಗಳು ವಸಾಹತು ಸಂಸ್ಕೃತಿಯ ವಿಚಾರ ಧಾರೆಗಳೊಡನೆ ನಿರಂತರವಾದ ಸಂಘರ್ಷಕ್ಕೆ ಎದುರಾಗುವ ಕ್ರಿಯೆಯು ಅಧ್ಯಯನ ಯೋಗ್ಯ ವಾದುದು. ವಸಾಹತು ಸಂಸ್ಕೃತಿಯ ಆಘಾತಗಳನ್ನು ಹಾಗೂ ಅಂಥ ಸಂಸ್ಕೃತಿಯ ಪ್ರಭಾವ ಪರಿಣಾಮಗಳನ್ನು ವಿಶ್ಲೇಷಣೆಗೆ ಗುರಿಪಡಿಸಲು ವಾಸ್ತವವಾದಿ ಮಾರ್ಗವನ್ನು ಕಂಬಾರರು ಪ್ರಜ್ಞಾಪೂರ್ವಕವಾಗಿಯೆ ಕೈಬಿಟ್ಟು ಜನಪದ, ಪುರಾಣ, ಅತಿಮಾನುಷ ವಸ್ತು ತಂತ್ರಗಳನ್ನು ಶೋಧಿಸಿಕೊಳ್ಳುತ್ತಾರೆ. ಇಂಥ ಶೋಧ 'ಹೇಳತೇನ ಕೇಳ', 'ಋಷ್ಯಶೃಂಗ', 'ಹುಲಿಯ ನೆರಳು' ಕೃತಿಗಳಲ್ಲಿ ನಡೆದಿದೆ. ಈಚಿನ ಕೃತಿಗಳಾದ 'ಸಿರಿಸಂಪಿಗೆ', 'ಚಕೋರಿ' ಕೃತಿಗಳಲ್ಲಿ ಈ ಶೋಧ ಅತ್ಯಂತ ಪರಿಣಾಮಕಾರಿಯಾಗಿ ಮೈದಾಳುವ ಕ್ರಮ ವಿಶಿಷ್ಟ ಬಗೆಯದು.

ಚಕೋರಿಯನ್ನು ಓದುತ್ತ ಹೋದಂತೆ ಕೃತಿಯಲ್ಲಿ ಅಭಿವ್ಯಕ್ತ ಗೊಂಡಿ ರುವ ಜೀವನಾನುಭವ, ದೇಸೀ ಸಂಸ್ಕೃತಿಯ ನಂಬಿಕೆ-ಆಚರಣೆ, ಮಾಟ-ಮಂತ್ರ, ಕನಸು-ಕಲ್ಪನೆ, ತಂತ್ರ-ಭಾಷಿಕ ನೆಲೆಗಳು ಓದುಗನನ್ನು ಬೆಚ್ಚಿ ಬೀಳಿಸುತ್ತವೆ. ಆದಿಕಾಲದ ಕೃಷಿ, ಕುಟುಂಬ, ವಿದ್ಯೆ, ಕಲೆ, ಸಾಂಸ್ಕೃತಿಕ ರಾಜಕೀಯ ಜಿಜ್ಞಾಸೆಗಳು ಚಕೋರಿಯಲ್ಲಿ ಮುಖ್ಯವಾಗಿವೆ. ಹಾಗೆಯೇ ಚಕೋರಿಯು ಜೀವವಿಕಾಸದ ವಿಭಿನ್ನ ಘಟ್ಟಗಳನ್ನು, ಜೀವವಿಕಾಸದ ತಲೆತಲಾಂತರದ ನಂಬಿಕೆಯ ಕಥೆಗಳನ್ನು ಹೇಳುತ್ತಾ ಸೃಷ್ಟಿ ಮತ್ತು ಅವನತಿಯ ಮೂರ್ತ-ಅಮೂರ್ತ ವಿಚಾರಗಳನ್ನು ವಿಶ್ಲೇಷಿಸುತ್ತದೆ. ವಿಶ್ವಸೃಷ್ಟಿಯ ಮೂಲ, ಮನುಷ್ಯ, ದೈವ, ರಾಕ್ಷಸ, ಖೇಚರ, ದೇಹ-ಆತ್ಮ, ಹಗಲು-ರಾತ್ರಿ, ಸೂರ್ಯ-ಚಂದ್ರ, ಬಿಂಬ-ಪ್ರತಿಬಿಂಬ, ನೆಲ-ಮುಗಿಲು, ಸತ್ಯ-ಅಸತ್ಯ, ಕಲೆ-ವಿದ್ಯೆ, ಮನುಷ್ಯನ ಒಳಮನೋವ್ಯಾಪಾರದ ಅಸಂಖ್ಯ ಮೂಲಭೂತ ಸಮಸ್ಯೆಗಳನ್ನು ಅತ್ಯಂತ ಶ್ರದ್ಧೆಯಿಂದ ಅಭಿವ್ಯಕ್ತಿಗೆ ಗುರಿಪಡಿಸುತ್ತದೆ ಹಾಗೂ ಪರಿಸರದ ಮೇಲೆ ನಾಗರೀಕತೆಯು ಎಸಗಿದ ಆಕ್ರಮಣಶೀಲತೆಯಿಂದಾದ ಕ್ರೌರ್ಯ-ಆತಂಕಗಳು, ಅಂಥ ಆತಂಕಗಳಿಗೆ ಕಲೆಯು ಮುಖಾಮುಖಿಯಾಗುವುದರ ಮೂಲಕ ಏರ್ಪಡುವ ಹೊಸ ಸಂಘರ್ಷವೊಂದನ್ನು ಚಕೋರಿ ಚಿಂತಿಸುತ್ತದೆ. ಇಂಥ ಸಂಘರ್ಷ ಈ ಕೃತಿಯ ಉದ್ದಕ್ಕೂ ಸಂಕೀರ್ಣವಾಗಿ, ಗುಪ್ತಗಾಮಿನಿಯಾಗಿ ಪ್ರವಹಿಸುತ್ತದೆ. ಸಂಕೀರ್ಣ ವಿಚಾರಧಾರೆಯೊಂದನ್ನು ಅಭಿವ್ಯಕ್ತಿಗೆ ಒಳಪಡಿಸುವ ಕ್ರಮ, ಕಥನ ಕ್ರಮ, ಸಂಭಾಷಣೆ, ವಾಕ್ಯಗಳು, ಕನ್ನಡ ಕಾವ್ಯ ಪರಂಪರೆಯನ್ನು ನೆನಪಿಸುವ ಭಾಷಿಕ ರಚನೆಗಳು, ಭಾಷಿಕ ರಚನೆಗಳು ಕಟ್ಟಿಕೊಡುವ ವಿವರಗಳೊಳಗಿನ ವಿವರಗಳಿಂದ ಪ್ರಕಟಗೊಳ್ಳುವ ಧ್ವನಿ, ಅರ್ಥಪರಂಪರೆಗಳು ಅನನ್ಯವಾದುವು. ಚಕೋರಿಯು ಹಲವು ಸಾಹಿತ್ಯ ಪ್ರಕಾರಗಳನ್ನು ದುಡಿಸಿಕೊಳ್ಳುತ್ತಲೇ ವಿಶಿಷ್ಟ ಮಾದರಿಯೊಂದನ್ನು ಅನ್ವೇಷಿಸುತ್ತದೆ. ಕನ್ನಡ ಕಾವ್ಯ ಪರಂಪರೆ ಇದುವರೆಗೂ ಕಂಡು ಅರಿಯದ ಒಂದು ಪರಿಪಕ್ವ ದೇಸೀ ನೆಲೆಯೊಂದನ್ನು ಚಕೋರಿಯಲ್ಲಿ ಕಾಣಬಹುದಾಗಿದೆ. ಈ ಎಲ್ಲಾ ಗುಣಗಳನ್ನೊಳಗೊಂಡಿರುವ ಕಂಬಾರರ ಚಕೋರಿಯು ಹೊಸ ಪರಂಪರೆಯ ಪೀಠಿಕೆಯಂತಿದ್ದು, ಆ ಮೂಲಕ ಅವರ ಸಂವೇದನೆ ಹೊಸ ತೊಂದು ಕಾವ್ಯಪ್ರಕಾರವನ್ನೇ ಹುಟ್ಟುಹಾಕಿತೆನ್ನಬಹುದು.

ಸೀಳಿಕೊಳ್ಳುವುದರಿಂದ ಎದುರಾಗುವ ಬದುಕಿನ ವೈರುಧ್ಯಗಳು, ಪ್ರಶ್ನೆಗಳು ಕಂಬಾರರ ಕೃತಿಗಳಲ್ಲಿ ಮುಖ್ಯಭಿತ್ತಿಯಾಗಿವೆ. ಈ ಹಿಂದಿನ ಕೃತಿಗಳಲ್ಲಿ ನೆಲದ ನೆಲೆಯಲ್ಲಿ ವ್ಯಕ್ತವಾಗುತ್ತಿದ್ದ ಈ ಪ್ರಶ್ನೆಗಳು 'ಸಿರಿಸಂಪಿಗೆ', 'ಚಕೋರಿ' ಹಾಗೂ ಇತ್ತೀಚಿನ ಕೆಲವು ಕವನಗಳಲ್ಲಿ ಅಂಥ ನೆಲೆಯನ್ನು ಮೀರಿ ಶೋಧನೆಗೆ ತೊಡಗುತ್ತವೆ. ಹೋಳು ಮಾಡುವುದೆಂದರೆ ತನ್ನನ್ನೇ ಬಲಿತೆತ್ತುಕೊಳ್ಳುವ ಸತ್ಯವಾಗಿ ಎದುರಾಗುವ ಕ್ರಿಯೆ ಸಿರಿಸಂಪಿಗೆಯದು. 'ನಮ್ಮ ಮನ ಸೀಳಿಕೊಳ್ಳದ ಹಾಗೆ ನೋಡಿಕೊ' ಎಂಬುದು ಅವರ ಕಾವ್ಯಧೋರಣೆಗಳಲ್ಲೊಂದು. ಸಿರಿಸಂಪಿಗೆ ನಾಟಕದಲ್ಲಿ ಸೀಳಿಕೊಂಡದ್ದರಿಂದ

ಶಿವನಾಗದೇವ ಕಂಡುಕೊಂಡ ಸತ್ಯ ಇದು. ಕೊರತೆಯಿಲ್ಲದ ಹೆಣ್ಣನ್ನು ಪಡೆಯಲು ನಿರಂತರವಾಗಿ ಹಂಬಲಿಸಿದ ಶಿವನಾಗದೇವ ತನ್ನನ್ನೇ ಹೋಳು ಮಾಡಿಕೊಳ್ಳುವುದರ ಮೂಲಕ ದೇಹ-ಆತ್ಮಗಳ ಸಾಮರಸ್ಯವನ್ನು ಪಡೆಯಲು ಯತ್ನಿಸಿ, ದೇಹ-ಆತ್ಮಗಳ ದ್ವಂದ್ವದ ಸತ್ಯಗಳನ್ನು ಕಾಣುವುದರಲ್ಲಿ ಸೋಲು ತ್ತಾನೆ ಇಂತಹ ನೆಲೆ ಚಕೋರಿಯಲ್ಲಿ ವಿಭಿನ್ನ ನೆಲೆಯಲ್ಲಿ ಶೋಧನೆಗೆ ಒಳಪಡುತ್ತಿದ್ದರೂ ಈ ಮಾದರಿಯ ಪ್ರಶ್ನೆಗಳು (ದ್ವಂದ್ವಗಳು) ಕಂಬಾರರನ್ನು ಗಾಢವಾಗಿ ಕಾಡುವ ಪರಿ ಈ ಎರಡೂ ಕೃತಿಗಳ ಅಧ್ಯಯನದಿಂದ ತಿಳಿದು ಬರುತ್ತದೆ. 'ಸಿರಿಸಂಪಿಗೆ' ನಾಟಕದಲ್ಲಿ ಮನುಷ್ಯನಲ್ಲಿಯೇ ಅಂತರ್ಗತ ವಾಗಿರುವ ಮನುಷ್ಯ ಹಾಗೂ ಮೃಗೀಯ ಶಕ್ತಿಗಳನ್ನು ಶಿವನಾಗದೇವ ಮತ್ತು ಕಾಳಿಂಗ ಪಾತ್ರಗಳು ರೂಪಕವಾಗಿ ಮೈತಳೆಯುತ್ತವೆ.

ಚಕೋರಿಯಲ್ಲಿ ಚಿನ್ನಮುತ್ತ, ಚಂದಮುತ್ತನ ಪಾತ್ರಗಳ ಮುಖೇನ ಸೋದರ ಸಂಬಂಧಿ ಆದಿಮದ ಸೇಡು, ಈರ್ಷ್ಯೆ, ಅಸೂಯೆಯ ಪ್ರಶ್ನೆಗಳು ಹಾಗೂ ವ್ಯಷ್ಟಿ-ಸಮಷ್ಟಿಗಳಲ್ಲಿ ಅಂತರ್ಗತವಾಗಿರುವ ಸತ್ಯಗಳು ಇಲ್ಲಿ ವಿಸ್ಮೃತಿ ಚರಿತ್ರೆಯೊಂದರ ಪುನರ್‌ಸೃಷ್ಟಿಯ ಮೂಲಕ ರೂಪಕಗಳಾಗುತ್ತವೆ. ಅಂತೆಯೇ ಏಕವ್ಯಕ್ತಿಯಲ್ಲಿಯೇ ಅಂತರ್ಗತವಾಗಿರುವ ವೈರುಧ್ಯಗಳು ಈ ಎರಡೂ ಪಾತ್ರಗಳ ವ್ಯಕ್ತಿತ್ವಗಳಲ್ಲಿ ಕಾಣಿಸಿಕೊಂಡಿವೆ. 'ಸಿರಿಸಂಪಿಗೆ'ಯಲ್ಲಿ ಮನುಷ್ಯ-ಪ್ರಾಣಿ ಭಾಗಗಳ ಪ್ರಶ್ನೆಗಳು ಮುಖ್ಯ ವಾದರೆ, ಚಕೋರಿಯಲ್ಲಿ ಆಸ್ತಿ, ಒಡೆತನ, ಪಾಲುಗಾರಿಕೆ, ಕಾನೂನು-ನ್ಯಾಯ ವ್ಯವಸ್ಥೆ, ರಾಜಕೀಯ ಪ್ರಶ್ನೆಗಳು, ಸಾಧನೆಯ ಪ್ರಶ್ನೆಗಳು ಮುಖ್ಯವಾಗುತ್ತವೆ. ಅಖಂಡತೆಯನ್ನು ಒಡೆದರೆ ಎದುರಾಗುವ ಅನಾಹುತಗಳನ್ನು ಚಕೋರಿ ಧ್ವನಿಸುತ್ತಾ, ಅಂಥ ಅನಾಹುತ ಗಳನ್ನು ದಾಟಿ ಪ್ರತಿಬಿಂಬಗಳೆಲ್ಲವೂ ಬಿಂಬಗಳಲ್ಲಿ ಐಕ್ಯವಾಗುವ, ಬಯಲು ನಿರ್ವಯಲಾಗುವುದರ ಕಡೆಗೆ ಚಕೋರಿಯ ಶೋಧ ನಡೆಯುತ್ತದೆ.

> ಚಂದ್ರಾಮನಂಬೂವ ಕನ್ನಡಿ ಮಾಡಿ
> ನನ್ನ ಕನ್ನಡಿ ಮಾಡಿ ಅದರ ಎದುರಿಟ್ಟಿ
> ಪ್ರತಿಬಿಂಬ ನೆರೆದಾವ ಬಿಂಬದ ಜೋಡಿ ॥ಬಯಲು॥
> ಬಯಲಾಗ ಸೇರ್ಯಾವ ನಿರ್ವಯಲಾಗಿ
> ಜೋ ಜೋ ಎನ್ನ ಜ್ಯೋತಿಯ ಕಂದಾ ಜೋ ಜೋ ॥

ಬಿಂಬ-ಪ್ರತಿಬಿಂಬಗಳ ಪ್ರಶ್ನೆಗಳ ಶೋಧ ಲೌಕಿಕ ಅಲೌಕಿಕ ಸಂಬಂಧಗಳ ನೆಲೆಯಲ್ಲಿ ಕ್ರಿಯಾಶೀಲವಾಗಿ ಶೋಧಿಸಲ್ಪಡುವುದು ಚಕೋರಿಯ ವಿಶಿಷ್ಟತೆ ಗಳಲ್ಲೊಂದು. ಶಿವ ತನ್ನ ವಾಮಾಂಗವನ್ನು ಕಿತ್ತು ಆದಿಮಾಯೆಯನ್ನು ಸೃಷ್ಟಿಸುವುದು, ಕತ್ತಲೆ ಆವರಿಸಿದ ಶಿವಲೋಕವನ್ನು ಸೀಳಿ ಕೆಳಕ್ಕೆ ತಳ್ಳುವುದು, ತನ್ನ ಹಣೆಗಣ್ಣಿನಿಂದ ಹುಟ್ಟಿಕೊಂಡ ಸೂರ್ಯ, ತನ್ನ ಹಣೆಯ ಬೆವರಿನಿಂದ ಹುಟ್ಟಿಕೊಳ್ಳುವ ನರಮಾನವ, ಬೆಟ್ಟದ ಮಾಯಗಾರ್ತಿ ಹಾಗೂ ಸೈತಾನ ಸರ್ಪಗಳಿಂದ ಹೋಳಾಗುವ ನರಮಾನವ -ಹೀಗೆ ಚಕೋರಿಯ ಉದ್ದಕ್ಕೂ ಹೋಳಾಗುವ ವಿವರಗಳು ಮತ್ತೆ ಮತ್ತೆ ಕಾಣಿಸುತ್ತವೆ. ಮೊದಲೇ ಪ್ರಸ್ತಾಪಿಸಿದಂತೆ ಚಕೋರಿ ಕೃತಿಯು ಸೀಳಿಕೊಳ್ಳುವುದರ ಮೂಲಕ ಎದುರಾಗುವ ಬದುಕಿನ ದ್ವಂದ್ವಗಳನ್ನು ವಿಭಿನ್ನ ನೆಲೆಗಳಲ್ಲಿ ಶೋಧಿಸುತ್ತಲೇ ಇಡಿಯಾಗುವುದರ ಹಾಗೂ ಅಖಂಡತೆಯ ಮಹತ್ವದ ಆಶಯಗಳ ಕಡೆಗೂ ಚಲಿಸುತ್ತದೆ. ಇಂಥ ವಿಚಾರಧಾರೆಯು ಪ್ರಸ್ತಾವನೆಯ ಕಥೆಯಿಂದ ಶುರುವಾಗಿ ಚಕೋರಿ ಚಕೋರ ಪಕ್ಷಿಯಾಗಿ ಚಂದ್ರನನ್ನು ನುಂಗಿ ಚಂದ್ರಚಕೋರಿಯಾಗಿ ಬಯಲು ನಿರ್ವಯಲಾಗಿ ಬೆಳಗಾಗುವ ಕ್ರಿಯೆಯವರೆಗೂ ವಿಭಿನ್ನ ನೆಲೆಗಳಲ್ಲಿ ಮೈದಾಳುತ್ತದೆ. ಈ ನೆಲೆಗಳು ಪ್ರಸ್ತಾವನೆಯ ಕಥೆಯಲ್ಲಿಯೇ ಮೈಪಡೆಯುತ್ತ, ಆಕಾರ ತಾಳುವುದನ್ನು ಗುರುತಿಸಬಹುದಾಗಿದೆ.

ಹೋಳಾಗುವುದರಿಂದ ಎದುರಾಗುವ ದ್ವಂದ್ವಗಳನ್ನು 'ಚಕೋರಿ' ಮುಖ್ಯವಾಗಿ ಚಿಂತನೆಗೆ ಒಳಪಡಿಸುತ್ತದೆ. ಚಂದ್ರನ ಕಲಾವಂತಿಕೆ ಮತ್ತು ಸೂರ್ಯನ ವಿದ್ಯೆಗಳಿಂದ ಉಂಟಾಗುವ ಯುದ್ಧಗಳು, ಅಂಥ ಯುದ್ಧಗಳಿಂದ ನಿರ್ಮಾಣವಾಗುವ ಕ್ರೌರ್ಯಗಳು ಚಕೋರಿಯ ಮುಖ್ಯ ಜಿಜ್ಞಾಸೆಗಳಲ್ಲಿ ಒಂದಾಗಿವೆ. ಶಕ್ತಿಶಾಲಿ ವಿದ್ಯೆಗಳ ದಾಳಿಗೆ ಚಂದ್ರಲೋಕದ ಕಲೆಗಳು ಆಘಾತಕ್ಕೆ ಒಳಗಾಗುವ, ಮರುಹುಟ್ಟು ಪಡೆಯುವ ಧ್ವನಿಯಲ್ಲಿಯೂ ಹೋಳಾಗುವುದ ರಿಂದ ಉಂಟಾಗುವ ಸಂಕೀರ್ಣಾವಸ್ಥೆಗಳನ್ನು ಈ ಕೃತಿ ಕಟ್ಟಿಕೊಡುತ್ತದೆ.

ಅಸಂಖ್ಯ ಲೋಕಗಳು, ಆದಿಮಾಯಿ, ಪುಣ್ಯಕೋಟಿ ನಂದಿಯ ಅವತಾರ, ಭೌತಿಕ ಜಗತ್ತು, ಚೌರ್ಯಂಸಿ ತಿರ್ಯಕ್ ಜಂತು ಜಾಲಗಳ ಪ್ರಾಣಿ ಜಗತ್ತು, ನರಮಾನವನ ಸೃಷ್ಟಿ, ನರಮಾನವನ ಸಂಸಾರ ದಂದುಗ, ಉಡುಗೆಯ ಶೋಧ, ಹಗಲು-ರಾತ್ರಿಗಳ ಕಲ್ಪನೆ, ಕುಟುಂಬದಿಂದ ಎದುರಾಗುವ ಸೋದರ ಸಂಬಂಧಿ ಸಮಸ್ಯೆಗಳು, ಮಾತೃ-ಪಿತೃ ಪ್ರಧಾನ ಕುಟುಂಬಗಳ ಪ್ರಶ್ನೆಗಳು, ಒಡೆತನ, ಆಸ್ತಿಯ ಬಗೆಗಿನ ಮೋಹ, ಅದರ ವಿಭಜನೆ, ಕೃಷಿಯ ಆರಂಭ, ಅಸಂಖ್ಯ ವಿದ್ಯೆಗಳು, ಸಂಗೀತ ಸಾಹಿತ್ಯದಂಥ ಕಲೆಗಳ ಮಹತ್ವ, ವಿದ್ಯೆ ಹಾಗೂ ಕಲೆಗಳ ನಡುವಣ ಸಂಘರ್ಷ, ಅವುಗಳಿಂದ ದೊರೆಯುವ ಕೀರ್ತಿಗಾಗಿ ನಡೆಯುವ ನಿರಂತರ ಸ್ಪರ್ಧೆ-ಘರ್ಷಣೆಗಳು, ಹಿಂಸೆ-ಅಹಿಂಸೆ, ತ್ಯಾಗದ ಜಿಜ್ಞಾಸೆಯ ಪ್ರಶ್ನೆ ಮುಂದಿನ ಕಥೆಯಲ್ಲಿ ಮೈದಾಳುವ ಕ್ರಿಯೆ ಅನನ್ಯವಾದುದು. ಚಂದಮುತ್ತ-ಚಿನ್ನಮುತ್ತನ ಬದುಕಿನ ವಿವರಗಳಲ್ಲಿ ಪ್ರಸ್ತಾವನೆಯ ಎಲ್ಲ ಆಶಯಗಳು, ವೈರುಧ್ಯಗಳು ಆಕಾರಗೊಳ್ಳುತ್ತ, ವಿದ್ಯೆಗಳ ಕ್ರೌರ್ಯ ಹಾಗೂ ಕಲೆಗಳ ಮಹತ್ವ ಸುರುಳಿ ಸುರುಳಿಯಾಗಿ ಬಿಚ್ಚಿಕೊಳ್ಳುತ್ತವೆ.

ಒಟ್ಟಂದದಲ್ಲಿ ನವೋದಯ ಕಾವ್ಯದ ಅನಂತರದ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಕಂಬಾರರದು ವಿಶಿಷ್ಟ ಅಭಿವ್ಯಕ್ತಿಯಾಗಿದೆ. ಸ್ಥಳೀಯತೆಯ ಸತ್ತ್ವಗಳನ್ನು ಕೇಂದ್ರಪ್ರಜ್ಞೆಯನ್ನಾಗಿಸಿಕೊಂಡ ಅವರ ಕೃತಿ ಸಮೂಹ ಸ್ವಾತಂತ್ರ್ಯಾನಂತರದ ನೆಲೆಯಲ್ಲಿ ನಿಂತು ವಸಾಹತುಶಾಹಿಯ ಪ್ರಭಾವ ಪರಿಣಾಮಗಳು ನಮ್ಮ ಸಾಂಸ್ಕೃತಿಕ ಸಂದರ್ಭದಲ್ಲಿ ಬೇರೂರಿದ ನೆಲೆಗಳನ್ನು ಮುಖ್ಯಭಿತ್ತಿಯನ್ನಾಗಿಸಿಕೊಂಡು ವಿವೇಚಿಸಿತು. ಅವರ ಸಾಹಿತ್ಯ ವಸಾಹತು ಹಾಗೂ ವಸಾಹತು ಆಳ್ವಿಕೆಯ ಅನಂತರದ ಸಂಕೀರ್ಣತೆಯ ಸಂದರ್ಭಗಳನ್ನು ಗಂಭೀರವಾಗಿ ಜಿಜ್ಞಾಸೆಗೆ ಒಳಪಡಿಸುವ ಅಭಿವ್ಯಕ್ತಿಯಾಗಿದೆ.

❑

# ಕೆ.ಪಿ.ಪೂರ್ಣಚಂದ್ರ ತೇಜಸ್ವಿ

ಎಂ.ಎಚ್. ಕೃಷ್ಣಯ್ಯ

## 1

ನಾಡಿನ ಪ್ರಖ್ಯಾತ ಕವಿ, ಬರಹಗಾರ ಅಥವಾ ಚಿಂತಕರ ಮಗನಾಗಿ ಹುಟ್ಟಿದ ವ್ಯಕ್ತಿ ತಂದೆಯ ಚಿಂತನೆ, ದರ್ಶನ, ಸಾಹಿತ್ಯ-ಕಲೆಯ ಮಾರ್ಗದ ಪ್ರಭಾವಲಯದಿಂದ ಹೊರಬಂದು ತನ್ನದೇ ಭಿನ್ನ ಚಿಂತನೆ ಆದರ್ಶ, ಅನುಭವಗಳ ಅಭಿವ್ಯಕ್ತಿ ಮಾರ್ಗವನ್ನು ಕಂಡುಕೊಂಡು ಅನನ್ಯತೆಯನ್ನು ಮೆರೆಯುವುದು ಅಷ್ಟು ಸುಲಭವಲ್ಲ, ಸಾಮಾನ್ಯವಾದುದೂ ಅಲ್ಲ. ಕನ್ನಡದಲ್ಲಿ ಇಬ್ಬರು ಬರಹಗಾರರು ತಮ್ಮ ವೈಶಿಷ್ಟ್ಯ ಕಾರಣವಾಗಿ ಕಳೆದ ಮೂರು ದಶಕಗಳ ಸಾಹಿತ್ಯ ಸಂದರ್ಭದಲ್ಲಿ ಪ್ರತ್ಯೇಕವಾಗಿ ನಿಲ್ಲುತ್ತಾರೆ; ಒಬ್ಬರು ಬಿ.ಜಿ.ಎಲ್. ಸ್ವಾಮಿ, ಮತ್ತೊಬ್ಬರು ಪೂರ್ಣಚಂದ್ರ ತೇಜಸ್ವಿ. ಸ್ವಾಮಿಯವರು ಸಸ್ಯವಿಜ್ಞಾನಿಯಾಗಿ, ಪ್ರಾಧ್ಯಾಪಕರಾಗಿ ಬರಹದತ್ತ ಹೊರಳಿದರೆ, ತೇಜಸ್ವಿಯವರು ಕಥೆಗಾರರಾಗಿ ಕೃಷಿಕ್ಷೇತ್ರದಲ್ಲಿ ಕಾಲಿಟ್ಟು ಪರಿಸರ ಜ್ಞಾನದ ಬಗ್ಗೆ ಅನನ್ಯ ಕಾಳಜಿ ತಳೆದಿದ್ದಾರೆ. ಡಿ.ವಿ.ಜಿ. ಹಾಗೂ ಕುವೆಂಪು ಅವರಂತೆ ಅವರ ಮಕ್ಕಳಾದ ಸ್ವಾಮಿ ಹಾಗೂ ತೇಜಸ್ವಿಯವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಗೌರವಕ್ಕೆ ಪಾತ್ರರಾಗಿರುವುದು ಕನ್ನಡ ಸಾಹಿತ್ಯದಲ್ಲಿ ಅವಿಸ್ಮರಣೀಯವಾದ ಸಂಗತಿ. ಈ ಹೋಲಿಕೆ ಆಕಸ್ಮಿಕದಂತೆ ತೋರಿದರೂ ಇಬ್ಬರಿಗೂ ಸಮಾನವಾದ ಮನೋಧರ್ಮದ ಹಲವು ಅಂಶಗಳ ಕಾರಣವಾಗಿ ಗಂಭೀರವಾದ ಚಿಂತನೆ, ಸೂಕ್ಷ್ಮಸಂವೇದನೆಗಳಿಗೆ ತಮ್ಮದೇ ವಿಶಿಷ್ಟ ಅಭಿವ್ಯಕ್ತಿ ಕ್ರಮಗಳನ್ನು ರೂಪಿಸಿಕೊಂಡದ್ದು ಆಶ್ಚರ್ಯಕರವೂ, ಕುತೂಹಲಕಾರಿಯೂ ಆಗಿದೆ. ಇಬ್ಬರೂ ಸವೆದ ಹಾದಿಯಿಂದ ಸರಿದು ಭಿನ್ನಮಾರ್ಗದಲ್ಲಿ ಹೆಜ್ಜೆ ಇಟ್ಟವರು.

ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರು ಸಹ್ಯಾದ್ರಿಪರ್ವತ ಸಾಲಿನ ಮಲೆನಾಡಿನ ಶಿವಮೊಗ್ಗ ಜಿಲ್ಲೆಯ ನಿಸರ್ಗ ಸುಂದರ ಕುಪ್ಪಳ್ಳಿಯಲ್ಲಿ 1938ರಲ್ಲಿ ಕುವೆಂಪು ಮತ್ತು ಹೇಮಾವತಿಯವರ ಹಿರಿಯ ಮಗನಾಗಿ ಹುಟ್ಟಿದರು. ಅವರ ಉನ್ನತ ವ್ಯಾಸಂಗ ಮೈಸೂರು ವಿಶ್ವವಿದ್ಯಾಲಯದಲ್ಲಿ ನಡೆಯಿತು. ಕನ್ನಡದಲ್ಲಿ ಬಿ.ಎ. ಆನರ್ಸ್ ಮತ್ತು ಎಂ.ಎ. ಪದವಿಗಳನ್ನು ಪಡೆದ ನಂತರ, ಮೊದಲಿನಿಂದಲೂ ಸ್ವತಂತ್ರ ಪ್ರವೃತ್ತಿಯ ಅವರು ಅಧ್ಯಾಪಕರಾಗಲು ಇಚ್ಛಿಸದೆ ಚಿಕ್ಕಮಗಳೂರಿನ ಮೂಡಿಗೆರೆಯ ಪರಿಸರದಲ್ಲಿ ಕೃಷಿ ತೋಟದಲ್ಲಿ ಆಸಕ್ತಿ ತಳೆದು ನೆಲೆಸಿದರು. ಪರಂಪರೆಯಿಂದ ಬಂದ ನಂಬಿಕೆಗಳ ಬಗೆಗೆ ಪ್ರತಿಭಟನೆಯ ಸ್ವತಂತ್ರ ಮನೋಧರ್ಮ ಅವರ ಕೃತಿಗಳಲ್ಲಿ ವ್ಯಕ್ತವಾಗಿರುವುದು ಔಪಚಾರಿಕವಲ್ಲ; ಪ್ರಗತಿಯ ಪರಿಸರದಲ್ಲಿ ನೆಲೆಸಿದ ಅವರ ಬದುಕಿನಲ್ಲಿ ಹಾಸುಹೊಕ್ಕಾಗಿ ಆ ಚಿಂತನೆ ಆ ಅನುಭವಗಳ ಭಾಗವಾದುವು ಎನಿಸುತ್ತದೆ. ಬರವಣಿಗೆಯನ್ನು ಗಂಭೀರವಾಗಿ ಸ್ವೀಕರಿಸಿರುವ ಅವರು ಸಂಪ್ರದಾಯ, ಪರಂಪರೆಗಳಿಗೆ ವಿರೋಧವಾದರೂ ತಾವು ಒಲಿದ ಹೆಣ್ಣನ್ನೆ ವಿವಾಹವಾದರು. ಆರಿಸಿಕೊಂಡ ಕ್ಷೇತ್ರ, ಬದುಕೂ ಸಹ ಸಾಹಿತ್ಯದಲ್ಲಿ ಹೊಸ ಅನುಭವಗಳ ಅಭಿವ್ಯಕ್ತಿಗೆ ಕಾರಣವಾದವು. ನವ್ಯಸಾಹಿತ್ಯ ಉತ್ಕರ್ಷ ಸ್ಥಿತಿಯಲ್ಲಿದ್ದ ಆಕರ್ಷಕ ರಂಗ ಬೆಳಕಿನ ಕಾಲದಿಂದ ಬಂಡಾಯದ ಮೇಳ ಘೋಷದವರೆಗಿನ ಕಾಲಾವಧಿಯಲ್ಲಿ, ವೈಜ್ಞಾನಿಕ, ಔದ್ಯಮಿಕ ಆವಿಷ್ಕಾರ-ಪ್ರಗತಿಗಳ ಆಸ್ಫೋಟನೆಯ ಹಿನ್ನೆಲೆಯಲ್ಲಿ ಪತನಮುಖೀ ಸಮಾಜದ ನಿರ್ವೀರ್ಯ ಮೌಲ್ಯಗಳ ಪರಿಸರದಲ್ಲಿ ಅನನುಕರಣೀಯ ಚಿಂತಕರಾಗಿ, ಅನನ್ಯ ಸಾಹಿತ್ಯ ಕಲೆಗಾರರಾಗಿ ತೇಜಸ್ವಿ ಬೆಳೆದರು.

ತೇಜಸ್ವಿಯವರು ಬರೆದಿರುವುದು ಕೆಲವೇ ಕೃತಿಗಳನ್ನಾದರೂ ಅವರ ರಚನೆಗಳು ಆಳ ಮತ್ತು ಸಂಕೀರ್ಣತೆಯನ್ನು ಒಳಗೊಂಡಿವೆ. ಆದ್ದರಿಂದ ವೈವಿಧ್ಯ ಎನ್ನುವುದು ಮೇಲು ಮೇಲಿನ ಸಮಸ್ಯೆಗಳಿಗಿಂತ ಹೆಚ್ಚಾಗಿ ನಿಸರ್ಗ ಮತ್ತು ಬದುಕಿನ ಅನಂತ ಮಗುಲುಗಳ ಅನ್ವೇಷಣೆಯಲ್ಲಿ ಕಂಡುಬರುತ್ತದೆ. ವಿದ್ಯಾರ್ಥಿದೆಸೆಯಲ್ಲೆ 'ಲಿಂಗ ಬಂದ' ದಂತಹ ಮುಗ್ಧಕಣ್ಣುಗಳ ಮೂಲಕ ನಂಬಿಕೆಗಳ ಸ್ತರಗಳನ್ನು ಸುಲಿಯುತ್ತ ಮನಸ್ಸಿನ ಮೇಲಾಗುವ ಪರಿಣಾಮಗಳನ್ನು ಚಿತ್ರಿಸುವ ಕಥೆಯಿಂದ ತೊಡಗಿ, ಹಲವು ಆಯಾಮಗಳನ್ನು ಒಳಗೊಂಡು ಅತ್ಯಂತ ಕಲಾತ್ಮಕವಾಗಿ ರಚಿತವಾಗಿರುವ 'ಚಿದಂಬರ ರಹಸ್ಯ' ದವರೆಗೂ ಅವರ ಮನೋಧರ್ಮದ ಅನನ್ಯತೆಯನ್ನು, ವೈಶಿಷ್ಟ್ಯವನ್ನು ಗುರುತಿಸಬಹುದಾಗಿದೆ. ಮೂಢನಂಬಿಕೆಗಳು, ಆಷಾಢಭೂತಿತನ, ಶೋಷಣೆಗಳು, ಸಭ್ಯತೆಯ ಸೋಗಿನ ಬಗೆಗೆ ಬಂಡಾಯ-ಪ್ರತಿಭಟನೆಯ ಚಿಂತನಾ ಪ್ರವೃತ್ತಿ ಅವರು ಬರೆದ ಒಂದೇ ನಾಟಕದಲ್ಲಿ ತಿರುವನ್ನು ಪಡೆದು ನಿಸರ್ಗ-ನಾಗರಿಕತೆಯ ವಿಸ್ತಾರ ಭಿತ್ತಿಯ ಕಡೆ ಹೊರಳುತ್ತದೆ. ನವೋದಯದ ಭಾವುಕ ತನವನ್ನು ಕಳಚಿಕೊಂಡು, ನವ್ಯರ ವ್ಯಕ್ತಿಪ್ರಜ್ಞಾಕೇಂದ್ರಿತ ಕಣ್ಣಪಟ್ಟಿಯಿಂದಾಚೆಗೂ ದೃಷ್ಟಿ ಹೊರಳುತ್ತದೆ. ನಿಸರ್ಗ ಹಾಗೂ ನಾಗರಿಕತೆಗಳ ಸಹಜ ವಿಕಾಸಕ್ಕೆ ಭಂಗ ತಂದ-ಲಯಭಂಗದಿಂದಾದ-ಕಲಕಿದ ವಾತಾವರಣ ವಿಶ್ವ ಹಾಗೂ ಮಾನವ ಅಂತರಂಗಗಳ ನಿಗೂಢ ರಹಸ್ಯಗಳಿಂದ, ಸಾಂಸ್ಕೃತಿಕ-ಸಾಮಾಜಿಕ ಮೌಲ್ಯಚ್ಛೇದಗಳಿಂದ, ನಿಸರ್ಗ-ಸಮಾಜ ಸಂಬಂಧ ಸಮಾಜ-ವ್ಯಕ್ತಿಗಳ ಸಂಬಂಧ, ಜೀವ ಸ್ವಭಾವಜನ್ಯ ಅಂತರ್ಬೋಧೆಗೂ ವಿದ್ಯೆ ಜ್ಞಾನಗಳಿಗೂ ಇರುವ ಸಂಬಂಧ, ಮೌಢ್ಯ, ವಿಜ್ಞಾನ, ತತ್ತ್ವಜ್ಞಾನಗಳ ಸಂಬಂಧಗಳವರೆಗೆ ಅವರ ಚಿಂತನೆ ವ್ಯಾಪಕವಾಗಿ ಹರಿದಿದೆ.

ಹೀಗಾಗಿ ನವೋದಯ, ನವ್ಯ, ನವ್ಯೋತ್ತರ ಸಾಹಿತ್ಯಗಳ ಅವಧಿಯಲ್ಲಿ ಬರೆದರೂ ಸಂಪೂರ್ಣ ಭಿನ್ನವಾದ ಮೌಲ್ಯಗಳ ದೃಷ್ಟಿ ಮತ್ತು ಅಭಿವ್ಯಕ್ತಿಯ ಮಾರ್ಗವನ್ನು ಕಂಡುಕೊಂಡು ಪ್ರತ್ಯೇಕವಾಗಿ ನಿಲ್ಲುವ ವ್ಯಕ್ತಿಯಾಗುತ್ತಾರೆ ತೇಜಸ್ವಿ.

'ಸ್ವಗತ ಲಹರಿ ಮತ್ತು ಇತರ ಕವನಗಳು' ಕವಿತೆಗಳ ಸಂಗ್ರಹವಾದರೆ, 'ಹುಲಿಯೂರಿನ ಸರಹದ್ದು' (1962) ಮತ್ತು 'ಅಬಚೂರಿನ ಪೋಸ್ಟಾಫೀಸು' (1971) ಎರಡೂ ಕಥಾ ಸಂಗ್ರಹಗಳು. 'ಯಮಳ ಪ್ರಶ್ನೆ'(1964) ಅವರು ಬರೆದ ಏಕೈಕ (ಏಕಾಂಕ) ನಾಟಕ. ಇದೇ ಅವಧಿಯಲ್ಲಿ ಅವರು ಬರೆದ ಮೂರು ವೈಚಾರಿಕ ಪ್ರಬಂಧಗಳ ಸಂಗ್ರಹ 'ವ್ಯಕ್ತಿ ವಿಶಿಷ್ಟ ಸಿದ್ಧಾಂತ' (1964). 'ಸ್ವರೂಪ'ವನ್ನು (1966) ನೀಳ್ಗತೆಯೆಂದು ಕರೆಯಬಹುದಾದರೆ, 'ನಿಗೂಢ ಮನುಷ್ಯರು' (1976) ಕೃತಿ ಕಿರು ಕಾದಂಬರಿ ಎನ್ನಬಹುದಾದಷ್ಟು ದೀರ್ಘಕಥೆಯಾಗಿದೆ. ಅವರ ಎರಡು ಸುಪ್ರಸಿದ್ಧ ಕಾದಂಬರಿಗಳು 'ಕರ್ವಾಲೊ' (1980) ಮತ್ತು 'ಚಿದಂಬರ ರಹಸ್ಯ' (1985). ಅಪ್ರಕಟಿತ ಎಂದಿದ್ದರೂ ಒಂದೆರಡು ಸಲ ಉಲ್ಲೇಖಿತವಾಗಿರುವ ಕೃತಿ 'ಕಾಡು ಮತ್ತು ಕ್ರೌರ್ಯ' 1966ಕ್ಕೂ ಮೊದಲೇ ಬರೆದುದಾಗಿದೆ. ಅಲ್ಲದೆ ತೇಜಸ್ವಿಯವರು ಅಂಕಣಕಾರರಾಗಿಯೂ ಪ್ರಕೃತಿ ಮತ್ತು ಪರಿಸರ ಜ್ಞಾನದ ಮಹತ್ವವನ್ನೂ, ವಿಜ್ಞಾನದ ಅದ್ಭುತಗಳನ್ನೂ, ವಿಶ್ವದ ರಹಸ್ಯಾತ್ಮಕ ವೈಚಿತ್ರ್ಯಗಳನ್ನೂ, ಜನಮನಕ್ಕೆ ಮುಟ್ಟಿಸಿ ಗಂಭೀರ ವಿಚಾರವಾದಿಯೆಂದು ಜನಪ್ರಿಯರಾಗಿದ್ದಾರೆ. ಧಾರಾವಾಹಿಯಾಗಿ ಪ್ರಕಟವಾದ ಅಂಡಮಾನ್ ದ್ವೀಪಗಳ ಪ್ರವಾಸ ಕಥನವೂ ಕನ್ನಡ ಪ್ರವಾಸ ಸಾಹಿತ್ಯದಲ್ಲಿ ವಿಶಿಷ್ಟವಾದ ಬಗೆಯದೆ ಆಗಿದೆ. ಬರಹಗಳಿಗೆ ಪೂರಕವಾದ ಅವರ ಇನ್ನೊಂದು ಆಸಕ್ತಿ ಫೋಟೋಗ್ರಫಿ. ವಿಜ್ಞಾನ ಹಾಗೂ ಪರಿಸರ-ಜೀವಿ ಸಮತೋಲ ಜ್ಞಾನಗಳ ಅಧ್ಯಯನ, ವೀಕ್ಷಣೆಯ ಫಲ ಅವರ ಕೃತಿಗಳಿಗೆ ಕನ್ನಡ ಸಾಹಿತ್ಯದಲ್ಲಿ ಇದುವರೆಗೆ ಕಾಣಬರದಿದ್ದ

ಹೊಸ ಆಯಾಮವನ್ನು ನೀಡಿದೆ; ಎಲ್ಲೂ ಶುಷ್ಕ ಶಾಸ್ತ್ರವಾಗದೆ ಗ್ರಾಹ್ಯ ಅನುಭವವಾಗಿಸುವ ಅಭಿವ್ಯಕ್ತಿಕ್ರಮಕ್ಕೆ ಕಾರಣವಾಗಿದೆ. ಆ ಬಗ್ಗೆ ಮುಂದೆ ವಿವರಿಸಿದೆ.

ಅವರ ಕಥೆ 'ಅಬಚೂರಿನ ಪೋಸ್ಟಾಫೀಸು' ಚಲನಚಿತ್ರವಾಗಿ 1973ರ ಅತ್ಯುತ್ತಮ ಪ್ರಾಂತೀಯ ಚಿತ್ರ ಪ್ರಶಸ್ತಿಯನ್ನು ರಾಷ್ಟ್ರಮಟ್ಟದಲ್ಲಿ ಗಳಿಸಿತು. ಅತ್ಯುತ್ತಮ ಚಿತ್ರಕ್ಕೆ ಮೀಸಲಾದ ಸ್ವರ್ಣಕಮಲ ಪ್ರಶಸ್ತಿ ಅವರ 'ತಬರನ ಕತೆ' ಚಿತ್ರಕ್ಕೆ 1986ರಲ್ಲಿ ದೊರೆಯಿತು. 1985ರಲ್ಲಿ 'ಚಿದಂಬರ ರಹಸ್ಯ' ಕಾದಂಬರಿಗೆ ಆ ವರ್ಷದ ಶ್ರೇಷ್ಠಕೃತಿಯೆಂದು ವಿಶೇಷ ಬಹುಮಾನ ನೀಡಲಾಯಿತು. ಅಲ್ಲದೆ, 'ಚಿದಂಬರ ರಹಸ್ಯ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರವೂ 1987ರಲ್ಲಿ ಲಭಿಸಿ ತೇಜಸ್ವಿ ಅವರು ರಾಷ್ಟ್ರ ಮನ್ನಣೆಗೆ ಪಾತ್ರರಾದರು. ಕರ್ನಾಟಕ ಸಾಹಿತ್ಯ ಅಕಾಡೆಮಿ ಅವರನ್ನು 1987ರ ಗೌರವ ಪ್ರಶಸ್ತಿ ನೀಡಿ ಪುರಸ್ಕರಿಸಿತು. ಸ್ವಭಾವತಃ ಸೊಗಸಾದ ಹಾಸ್ಯಪ್ರಜ್ಞೆ, ಲವಲವಿಕೆಯುಳ್ಳವರಾದರೂ ಸನ್ಮಾನ, ಪ್ರಶಸ್ತಿಗಳ ಬಗ್ಗೆ ನಿರಾಸಕ್ತರಾದ ತೇಜಸ್ವಿಯವರಿಗೆ ಈ ಗೌರವಗಳು ಸಂದಿರುವುದು ಪ್ರತಿಭೆಗೆ ಸಂದ ಪುರಸ್ಕಾರವಾಗಿದೆ.

2

ನವೋದಯ ಸಾಹಿತ್ಯದಲ್ಲಿ ಕಾಣಬರುತ್ತಿದ್ದ ಆದರ್ಶ, ವೈಭವೀಕರಣ, ಭಾವುಕತೆ, ಸುಕುಮಾರತೆಗಳನ್ನು ನವ್ಯರು ವಿಡಂಬನೆಗೆ ಒಳಗು ಮಾಡಿ ನಗರಾನುಭವ ಕೇಂದ್ರೀಕೃತ ವ್ಯಕ್ತಿಪ್ರಜ್ಞೆ, ಅನಾಥಪ್ರಜ್ಞೆಗಳ ಅಭಿವ್ಯಕ್ತಿಗೆ ಹೊಸ ಅಭಿವ್ಯಕ್ತಿ ವಿಧಾನಗಳನ್ನು ಅನುಸರಿಸಿದರು. ಆ ಸಂದರ್ಭದಲ್ಲಿ ತೇಜಸ್ವಿಯವರು ಬರವಣಿಗೆ ಪ್ರಾರಂಭಿಸಿದ್ದು. ಸಹಜವಾಗಿ ಆ ಪ್ರಭಾವಗಳಿಗೆ ಅವರು ಒಳಗಾಗಬೇಕಿತ್ತು. ಆದರೆ ಸಂಪ್ರದಾಯಕ್ಕೆ ಸಿಡಿದೆದ್ದ ತೇಜಸ್ವಿಯವರ ಪ್ರತಿಭಟನೆ, ಆಕ್ರೋಶಗಳು ಅವರ ಪ್ರಾರಂಭದ ಕಥೆಗಳಲ್ಲಿ ಕಾಣಬರುವುದಿಲ್ಲ. ನವೋದಯದವರ ಭಾವುಕತೆ, ನವ್ಯರ ಆಕ್ರೋಶ ಅಲ್ಲಲ್ಲಿ ಇಣುಕಿದರೂ ಅವರು ಸ್ವತಂತ್ರವಾಗಿಯೇ ಚಿಂತಿಸುತ್ತಿದ್ದರೆಂಬುದು ಆಗಿನ ಕವನಗಳಲ್ಲಿಯೇ ಕಂಡುಬರುತ್ತದೆ. ಬಹುಶಃ 'ಸ್ವರೂಪ' ನೀಳ್ಗತೆಯ ತಂತ್ರವನ್ನು, ನಿರೂಪಣೆಯಲ್ಲಿನ ಗಡಸುತನವನ್ನು ಹೊರತುಪಡಿಸಿದರೆ ತೇಜಸ್ವಿಯವರದು ಭಿನ್ನದೃಷ್ಟಿಯೆಂದೇ ಹೇಳಬಹುದು. ನವ್ಯ ವಿಮರ್ಶಕರನ್ನು ವಿಡಂಬಿಸುವ 'ನವಯತ್ನ ಕಲ್ಪ' ಕವನದಲ್ಲಿ-

> "ಲೀವೀಸ್ ಎಲಿಯಟ್ ಇತ್ಯಾದಿಯಾದ
> ಹೊರದೇಶದೇಳುಕೊರಳುಗಳ
> ಅಪೂರ್ವ ಸಂಯೋಗ, ಅದೇ ನವಯತ್ನ ಕಲ್ಪ.
> ಇದನರಿತೆಯೋ ಕವಿ ಕಿಶೋರ ; ನೀನಲ್ಲ ಅಲ್ಪ.
> ಮಠ ಗುಂಪು ಪಟಾಲಂಗಳನು ಕಟ್ಟಿ
> ಆದೀಯೇ ನೀನೂ ಜಗಜ್ಜಟ್ಟಿ."

ಎಂದು ಲೇವಡಿ ಮಾಡಿರುವುದನ್ನು ಕಾಣಬಹುದು. ಸ್ವಗತಲಹರಿಯ ಬಹುಪಾಲು ಕವನಗಳಲ್ಲಿ ಈ ವ್ಯಂಗ್ಯ, ವಿಡಂಬನೆಯೇ ಕಂಡುಬರುತ್ತದೆ. ಮಾತುಗಳ ಮಾದಕ ಕರಾಮತ್ತಿನಲ್ಲಿ ರಮಿಸುವ ವ್ಯಕ್ತಿಪ್ರಜ್ಞೆಗಿಂತ ವಾಸ್ತವತೆ, ಸತ್ಯಗಳು ಬೇರೆಯೆಂಬ ಎಚ್ಚರಿಕೆ ಅವರಲ್ಲಿದ್ದುದು ಸ್ಪಷ್ಟ. ಆದ್ದರಿಂದ ಅನುಭವಗಳ ಅಭಿವ್ಯಕ್ತಿಗೆ ಹೊಸಮಾರ್ಗ ಕಾಣಬೇಕೆಂಬ ನಿಲುವಿನಲ್ಲಿ ಆ ಸಂದರ್ಭದ ಸಾಹಿತ್ಯದ ಬಗೆಗಿನ ಅತೃಪ್ತಿಯೂ ವ್ಯಕ್ತವಾಗುತ್ತದೆ. ತೇಜಸ್ವಿಯವರ ಮೂಲ ನಿಲುವಿನಲ್ಲಿ, ಚಿಂತನೆಯಲ್ಲಿ ಹೊಸನಿಟ್ಟಿನ ಸೂಚನೆ, ತಂತ್ರ ವಿಧಾನ, ಭಾಷೆ-ಶೈಲಿಗಳ ಅನ್ವೇಷಣೆಯ ಮೊದಲ ಸೂಚನೆ 'ವ್ಯಕ್ತಿವಿಶಿಷ್ಟ ಸಿದ್ಧಾಂತ'ದಲ್ಲಿ ಕಾಣಿಸಿಕೊಳ್ಳುತ್ತದೆ; "ಈ ನವೀನ ಮನ್ವಂತರದ ಪ್ರತಿನಿಧಿಗಳ ಲ್ಹೋರ್ವನಾಗಿ ನಾನು ನನ್ನ ಜೀವನದ ಅರ್ಥವನ್ನು, ತತ್ವವನ್ನು ಮತ್ತೊಮ್ಮೆ ಹೋರಾಡಿಗಳಿಸಿಕೊಳ್ಳಬೇಕಾಗಿದೆ, ಪುನರನುಭವಿಸಬೇಕಾಗಿದೆ, ಪುನರ್ನಿರ್ಮಾಣಮಾಡಬೇಕಾಗಿದೆ ಅಥವಾ ಹೊಸತೊಂದನ್ನು ಸೃಜಿಸಬೇಕಾಗಿದೆ."[1]

ಜೀವನದ ಅರ್ಥ, ತತ್ವ, ಅನುಭವಗಳು, ಅಮೂರ್ತ ಸಂವೇದನೆಗಳು ಯಾವ ರೂಪ ತಳೆಯುವುದರಿಂದ ಹೆಚ್ಚು ಅರ್ಥಪೂರ್ಣ, ಸಹಜ, ಕಲಾತ್ಮಕ ಆಗಬಹುದು ಎಂಬಲ್ಲಿ ವಸ್ತು-ರೂಪ ಸಂಬಂಧವನ್ನು ಕಂಡುಕೊಂಡಿದ್ದಾರೆ. 'ಅಬಚೂರಿನ ಪೋಸ್ಟಾಫೀಸು' ಕಥಾಸಂಕಲನದ 'ಹೊಸ ದಿಗಂತದ ಕಡೆಗೆ' ಎಂಬ ಪೀಠಿಕೆಯಲ್ಲಿ ತೇಜಸ್ವಿಯವರ ಭಿನ್ನನಿಲುವು ಸ್ಪಷ್ಟವಾಗುತ್ತದೆ: "ಲೋಹಿಯಾರವರ ತತ್ವಚಿಂತನೆ, ಕುವೆಂಪುರವರ ಕಲಾಸೃಷ್ಟಿ, ಕಾರಂತರ ಜೀವನದೃಷ್ಟಿ ಮತ್ತು ಬದುಕಿನಲ್ಲಿನ ಪ್ರಯೋಗಶೀಲತೆ- ಈ ಮೂರೇ ನನ್ನ ಈಚಿನ ಸಾಹಿತ್ಯರಚನೆಯ ಮೇಲೆ ಗಾಢ ಪರಿಣಾಮಗಳನ್ನುಂಟುಮಾಡಿರುವಂಥವು....", "ನನ್ನ ಜೀವನ ವಿಧಾನವನ್ನು, ಗ್ರಹಿಸುವ ಕ್ರಮವನ್ನು, ಆಲೋಚನೆಯನ್ನು, ಅಭಿವ್ಯಕ್ತಿ ವಿಧಾನವನ್ನು, ಒಟ್ಟಿನಲ್ಲಿ ಇಡೀ ಸಮಗ್ರ ವ್ಯಕ್ತಿತ್ವವನ್ನು ಸಂಪೂರ್ಣ ಬದಲಿಸಿ ಹಾಕಿದ್ದು ಲೋಹಿಯಾರವರ ತತ್ವ ಚಿಂತನೆ..." ಮುಂದುವರೆದು - "ಕನ್ನಡದ ನವ್ಯಸಂಪ್ರದಾಯವನ್ನು ಸಂಪೂರ್ಣವಾಗಿ ತೊರೆದು ಹೊಸದಿಕ್ಕಿನಲ್ಲಿ ನಾವೀಗ ಅನ್ವೇಷಿಸಬೇಕಾಗಿದೆ" ಎನ್ನುತ್ತಾರೆ.

ಹೊಸ ಅನ್ವೇಷಣೆಗೆ ಅವರು ಕೊಡುವ ಕಾರಣಗಳು ಕೇವಲ ರಚನಾತಂತ್ರ-ವಿಧಾನಗಳಿಗೆ ಮಾತ್ರ ಸೀಮಿತವಾಗದೆ ಆಳಕ್ಕೆ ಇಳಿಯುತ್ತವೆ ಎಂಬುದು ಸ್ಪಷ್ಟ. "ಈ ನಿಗೂಢವಾದ ಅಪರಿಚಿತ ಭಾರತದ ಬಗ್ಗೆ ಕಣ್ಣು ತೆರೆಸಿದ್ದು ಲೋಹಿಯಾ. ನಮ್ಮ ನವ್ಯಸಾಹಿತ್ಯ ಸಂಪ್ರದಾಯ ಸಾಂಕೇತಿಕ ಮಾರ್ಗ, ಠಕ್ಕಿನ ಪ್ರೌಢ ವಿಮರ್ಶೆ ಇವೆಲ್ಲಾ ಅವ್ಯಕ್ತ ಭಾರತದ ಎದುರು ಅಸಂಬದ್ಧವಾಗಿ ಹೋದುವು. ಆದರೆ ಇದರೊಡನೆ ಲೋಹಿಯಾರ ತತ್ವಚಿಂತನೆ ಮತ್ತು ಹಳ್ಳಿಯ ಜೀವನದ ಹೊಸ ಪರಿಸ್ಥಿತಿಗಳು ನನಗೆ ಇನ್ನೊಂದು ಬಗೆಯ ಶ್ರದ್ಧೆಯನ್ನುಕೊಟ್ಟುವು. ಇಟಾಲಿಯನ್, ಫ್ರೆಂಚ್ ಸಾಹಿತ್ಯಗಳಷ್ಟೇ ಒರಿಜಿನಲ್ಲಾದ ಜೀವನಾನುಭವ ತಿಳುವಳಿಕೆಗಳಿಂದ ಅಚ್ಚ ಭಾರತೀಯ ಸಾಹಿತ್ಯಸೃಷ್ಟಿ ಸಾಧ್ಯ ಎಂದು. ನನ್ನ ಜೀವನ ಮತ್ತು ಅದರ ಅಂಗವಾದ ಸಾಹಿತ್ಯಸೃಷ್ಟಿ ಇವು ಇಂದಿನ ಭಾರತೀಯ ಸಂದರ್ಭದ ನಮ್ಮ ವ್ಯಕ್ತಿತ್ವದ ಅಸಂಬದ್ಧತೆಯ ವಿರುದ್ಧ ಹೋರಾಡುವ ಮತ್ತು ಹೊಸ ಪರಿಪೂರ್ಣ ನಾಗರಿಕತೆಯೊಂದನ್ನು ನಿರ್ಮಿಸುವ ಹೋರಾಟವೆಂದರೆ ಮಾತ್ರ ನಾವು ನವ್ಯರಿಂದ ಭಿನ್ನವೆಂದು ಭಾವಿಸಬೇಕು." ತೇಜಸ್ವಿ ತಮ್ಮ ಹಿಂದಿನ ಜಾಡನ್ನು ಬಿಟ್ಟು "ಸರಳವಾಗಿ, ನೇರವಾಗಿ ನೋಡುವ ಕೇವಲ ದೃಷ್ಟಿಕೋನ ಮಾತ್ರವಾಗಿ ಸಾಹಿತಿ ಕಥೆಗಳಲ್ಲಿ ವ್ಯಕ್ತವಾಗುವ ಹೊಸದೊಂದು ಶಿಸ್ತನ್ನು ಬರವಣಿಗೆಯಲ್ಲಿ ನಾನು ಅಭ್ಯಾಸ ಮಾಡಬೇಕಾಯ್ತು" ಎನ್ನುತ್ತಾರೆ.[2] ತೇಜಸ್ವಿಯವರು ರೂಪಿಸಿಕೊಂಡ ಹೊಸವಿಧಾನ ನವ್ಯರಿಂದ ಭಿನ್ನವಾದದ್ದು. ವರ್ಣಿತ ವಸ್ತು ಅಥವಾ ಅನುಭವ ಮತ್ತು ಅದರ ಸಾಂಕೇತಿಕತೆ ಎರಡೂ ಒಂದೇ ಆಗಿಬಿಡುತ್ತವೆ - ಅವರದೇ ಹಿಂದೆ ಬರೆದ 'ಉರ್ವಶಿ' ಕಥೆಯಲ್ಲಿ ಕಾಣುವಂತೆ ನಾಯಿ ಕಡಿದದ್ದು, ಹುಚ್ಚು ನಾಯಿಯೆಂಬ ಭ್ರಮೆ, ಕವಿಯುವ ಮೋಡಗಳು, ಸುರಿಯುವ ಮಳೆ ಮುಂತಾಗಿ ಸಂಕೇತಗಳು ವಿವಿಕ್ತವಾಗಿ, ಸಮಾನಾಂತರವಾಗಿ ನಿಲ್ಲುವುದಿಲ್ಲ. ಅದಕ್ಕೆ ಬದಲು, ಜಿ. ಎಚ್. ನಾಯಕ್ ಅವರು ಸೂಚಿಸಿರುವಂತೆ "ವ್ಯಕ್ತಿ ಮತ್ತು ಸಂಗತಿಗಳು ಬದುಕಿನ ಸಹಜಲಯದಲ್ಲಿ ಅಂದರೆ ವಾಸ್ತವಿಕತೆಯ ಸ್ತರದಲ್ಲಿ ಅರ್ಥಛಾಯೆಗಳ ಅನುರಣಗಳನ್ನು ಮೆಲುದನಿಯಲ್ಲಿ ನುಡಿಸುವಂತಿವೆ."[3] ಇದನ್ನು ಚಿತ್ರಕಲೆಯಲ್ಲಿ ಖ್ಯಾತ ಅಮೂರ್ತ ಕಲಾವಿದ ಪಾಲ್ ಕ್ಲೀ ಅನುಸರಿಸುವ 'ಮೊಸಾಯಿಕ್ ರಚನಾ ವಿನ್ಯಾಸ' ಎನ್ನಬಹುದು.[4] ರೇಖೆ, ಬಣ್ಣ, ವರ್ಣಛಾಯೆಗಳಿಗೆ ಅವುಗಳದೇ ಆದ 'ಆಂತರಿಕ ಸ್ವಯಂ ಮೌಲ್ಯ' ಗಳಿರುತ್ತವೆ. ಅವುಗಳ ಒಡನಾಟ ಸಾಪೇಕ್ಷ ಸಂಬಂಧಗಳಿಂದ ಅಂತರಂಗದ ಅಗತ್ಯಕ್ಕೆ ತಕ್ಕಂತೆ ಚಿತ್ರನಿರ್ಮಾಣ, ರಚನೆಯಾಗುತ್ತದೆ. ಸಮಗ್ರತೆಯಲ್ಲಿ ಆ ಸಾಂಗತ್ಯಫಲವಾಗಿ ಹೊಸ

ಅನುಭವವೇ ತೆರೆದುಕೊಳ್ಳುತ್ತದೆ. ತೇಜಸ್ವಿಯವರ 'ನಿಗೂಢ ಮನುಷ್ಯರು', 'ಅಬಚೂರಿನ ಪೋಸ್ಟಾಫೀಸು' ಸಂಗ್ರಹದ ಕಥೆಗಳು, 'ಕರ್ವಾಲೊ', 'ಚಿದಂಬರ ರಹಸ್ಯ'ಗಳಲ್ಲಿ ಇಂತಹ ವಾಸ್ತವ ವಿವರಗಳಿಂದಲೇ ಸಾಂಕೇತಿಕ ಧ್ವನಿಶಕ್ತಿ ರೂಪುಗೊಳ್ಳುವ ವಿಧಾನವನ್ನು ಕಾಣಬಹುದಾಗಿದೆ. ಈ ಮಟ್ಟಕ್ಕೆ ವಾಸ್ತವತೆಯೇ ಸಂಕೇತವೂ ಆಗಿ ಸಾಂಗತ್ಯಹೊಂದುವ ತಂತ್ರವಿಧಾನ ಕನ್ನಡಕ್ಕೆ ಅನನ್ಯವಾದದ್ದು.

ತೇಜಸ್ವಿಯವರ 'ನಿಗೂಢ ಮನುಷ್ಯರು' ಮತ್ತು ಅನಂತರದ ಕೃತಿಗಳಲ್ಲಿ ಕಂಡುಬರುವ ಇನ್ನೊಂದು ಅಂಶವೆಂದರೆ ಪತ್ತೆದಾರಿ ಕಾದಂಬರಿಯ ತಂತ್ರ ವಿಧಾನಕ್ಕೆ ಸಂಬಂಧಿಸಿದ್ದು ಆಗಿದೆ. ಇದು ಕೇವಲ ಕುತೂಹಲ ಕೆರಳಿಸಲು ಅಳವಡಿಸಿಕೊಂಡದ್ದಲ್ಲ. ಅನ್ವೇಷಣೆ, ಸಾವು ಅಥವಾ ಕೊಲೆಯ ಒಗಟು ವಸ್ತುವಿನ ಭಾಗವಾಗಿಯೇ ಮೂಡಿಬರುತ್ತದೆ. ಕೇವಲ ತಂತ್ರವಾಗಿ ಉಳಿಯದೆ ತಾತ್ವಿಕ ಮೌಲ್ಯವನ್ನು ಪಡೆಯುತ್ತದೆ.

'ಲಿಂಗ ಬಂದ' ಮೊದಲ ಕಥೆಯಿಂದ 'ಚಿದಂಬರ ರಹಸ್ಯ' ಕಾದಂಬರಿಯವರೆಗೂ ತೇಜಸ್ವಿಯವರ ರಚನೆಗಳಲ್ಲಿ ಎದ್ದುಕಾಣುವ ಮತ್ತೊಂದು ಗುಣ ಹಾಸ್ಯಪ್ರಜ್ಞೆ. ಮುಗ್ಧ ಬಾಲಕರು, ತರುಣರಂತೆಯೇ ವಿವಿಧ ವರ್ಗಗಳ ಸ್ತರಗಳ ವಯಸ್ಕರ ಪಾತ್ರಗಳ ಸ್ವಭಾವ ವೈಚಿತ್ರ್ಯಗಳನ್ನು, ಕ್ರಿಯೆ-ಪ್ರತಿಕ್ರಿಯೆಗಳನ್ನು, ಘಟನೆಗಳನ್ನು, ನಂಬಿಕೆ-ಅನಿಸಿಕೆಗಳನ್ನು ನಿರೂಪಿಸುವಲ್ಲಿ, ನಿರೂಪಣೆಯಲ್ಲಿ ಒಂದು ಬಗೆಯ ನಿರ್ಲಿಪ್ತತೆಯನ್ನು ಸಾಧಿಸುವಲ್ಲಿ ತೇಜಸ್ವಿಯವರ ಹಾಸ್ಯಪ್ರಜ್ಞೆ ನೆರವಾಗಿದೆ. ಇದನ್ನು ಈಗಾಗಲೇ ಬಳಸಿ ಕ್ಲೀಷೆಯಾಗಿರುವ 'ಸಾಕ್ಷೀಪ್ರಜ್ಞೆ' ಯೆನ್ನಲಾಗದು. ಹಾಸ್ಯ ವಿಡಂಬನೆ ಒಂದು ಮನೋಧರ್ಮ; ಕೇವಲ ತಂತ್ರ ವಿಧಾನವಲ್ಲ, ರೂಢಿಸಿಕೊಳ್ಳುವ ದೃಷ್ಟಿಕೋನವೂ ಅಲ್ಲ. ಲಂಕೇಶ್ ಅವರು ಒಮ್ಮೆ ಹೇಳಿದಂತೆ ತೇಜಸ್ವಿಯವರಿಗೆ ಈ ಹಾಸ್ಯಪ್ರಜ್ಞೆಯಿಲ್ಲದಿದ್ದರೆ ದುರಂತವಾಗುತ್ತಿತ್ತು ಎಂಬ ಅಭಿಪ್ರಾಯ ಅವರ ಚಿಂತನೆ, ವಿಚಾರಗಳ ಗಂಭೀರತೆಗೆ ಒತ್ತು ನೀಡುವ ಅಭಿಪ್ರಾಯವೆಂದು ಮಾತ್ರ ಸ್ವೀಕರಿಸಬಹುದು.

ತೇಜಸ್ವಿಯವರ ಎಲ್ಲ ಕಥೆ, ಕಾದಂಬರಿಗಳಲ್ಲಿ ಸ್ತ್ರೀಪಾತ್ರಗಳ ಚಿತ್ರಣದಲ್ಲಿ ಕೊರತೆ ಕಂಡುಬರುತ್ತದೆ. ಅರಕೆ ಎಂಬುದು ಪಾತ್ರಸೃಷ್ಟಿ, ನಿರ್ವಹಣೆಯಲ್ಲಲ್ಲ, ಬಹುಶಃ ಅವರ ನಿಲುವಿನಲ್ಲೆ, ಸ್ತ್ರೀಯರ ಬಗೆಗಿನ ದೃಷ್ಟಿಯಲ್ಲೇ ಇರುವ ದೌರ್ಬಲ್ಯ ಎನ್ನಬಹುದು. ನಿಗೂಢ ಮನುಷ್ಯರು ಕಥೆಯ ಮೌನಿ ಶಾರಿಯನ್ನು ಹೊರತುಪಡಿಸಿದರೆ ಸ್ತ್ರೀಪಾತ್ರಗಳು ಹಗುರವಾಗಿಯೇ ತೇಲುತ್ತವೆ ಎನಿಸುತ್ತದೆ. ಉಳಿದ ಪಾತ್ರಗಳಲ್ಲಿ ಕಾಣಬರುವ ಪೂರ್ಣಶಿಲ್ಪದ ಅನುಭವ ಇವುಗಳಿಂದಾಗುವುದಿಲ್ಲ. ವ್ಯಕ್ತಿತ್ವದ ಪಾತಳಿಗಳನ್ನು ಬಿಡಿಸುವ ಸಾನುಕಂಪಪೂರಿತ ದೃಷ್ಟಿಗಿಂತ ಹಾಸ್ಯಕ್ಕೆ, ಲೇವಡಿಗೆ ಗುರಿಯಾಗುವವರೇ ಹೆಚ್ಚು. ಇದಕ್ಕೆ ಕಾರಣ ಮುಖ್ಯವಾಗಿ ಕಥೆಯ ಕಟ್ಟಣೆಯಲ್ಲಿ, ಬೆಳವಣಿಗೆಯಲ್ಲಿ, ಕ್ರಿಯೆಯಲ್ಲಿ ಸ್ತ್ರೀಪಾತ್ರಗಳು ಗೌಣವಾಗಿರುವುದು. ತುಕ್ಕೋಜಿ ಕಥೆಯ ಸರೋಜಳಾಗಲೀ, ಚಿದಂಬರ ರಹಸ್ಯದ ಜಯಂತಿಯೇ ಆಗಲೀ ಮುಖ್ಯ, ಕೇಂದ್ರ ಪಾತ್ರವಾಗಿ ಚಿತ್ರಿತವಾಗಿಲ್ಲ ಎಂಬುದೂ ಗಮನಾರ್ಹ.

ತೇಜಸ್ವಿಯವರ ಅಭಿವ್ಯಕ್ತಿಯ ಸ್ವರೂಪಕ್ಕೆ ಸಂಬಂಧಿಸಿದಂತೆ ದೀರ್ಘವಾಗಿ ವಿಶ್ಲೇಷಣೆ ನಡೆಸಿರುವ ಜಿ.ಎಚ್. ನಾಯಕರು ಹೇಳುವ ಪ್ರಮುಖವಾದ ಅಂಶದ ಕಡೆ ಗಮನ ಸೆಳೆಯಬೇಕಿದೆ. ಅವರ ಮಾತುಗಳನ್ನೇ ಇಲ್ಲಿ ಉದ್ಧರಿಸುತ್ತೇನೆ:

"ಪೂರ್ಣಚಂದ್ರ ತೇಜಸ್ವಿಯವರ 'ಯಮಳ ಪ್ರಶ್ನೆ' ನಾಟಕದಲ್ಲಿ ರಂಗದ ಮೇಲೆ ಸ್ಥಾಯಿಭಿತ್ತಿಯಾಗಿ ಬಿದ್ದಿರುವ 'ಶರೀರ'ವೊಂದು ಇದೆ. ಸ್ವರೂಪದಲ್ಲಿ ಮೌನ ಸ್ಥಾಯಿಭಿತ್ತಿಯಾಗಿದೆ. 'ನಿಗೂಢ ಮನುಷ್ಯರು' ಕೃತಿಯಲ್ಲಿ 'ನಿಗೂಢ' ಸ್ಥಾಯಿಭಿತ್ತಿಯಾಗಿದೆ. 'ಕರ್ವಾಲೊ'ದಲ್ಲಿ ಆರರ ಮುಂದೆ ಒಂಬತ್ತು ಸೊನ್ನೆ ಹಾಕಿದಾಗ ಆಗುವಷ್ಟು ವರ್ಷಗಳಿಗಿಂತ ಹಿಂದಿನದಿದ್ದಿರಬಹುದಾದ, ವಿಕಾಸಪಥದಲ್ಲಿ ಚಲನಶೀಲವಾಗದ 'ಹಾರುವ ಓತಿ' ಸ್ಥಾಯಿಭಿತ್ತಿಯಾಗಿದೆ.

ಈ ರೀತಿ ಸ್ಥಾಯಿಭಿತ್ತಿಯೊಂದು ಈ ಎಲ್ಲ ಕೃತಿಗಳಲ್ಲಿಯೂ ಬಂದಿರುವುದು ಕೇವಲ ಆಕಸ್ಮಿಕವೆಂದು ನನಗೆ ಅನಿಸುವುದಿಲ್ಲ. ಎಲ್ಲ ಕೃತಿಗಳಲ್ಲಿಯೂ ಆ ಸ್ಥಾಯಿಭಿತ್ತಿಯ ಸಮ್ಮುಖದಲ್ಲಿ ಚಲನಶೀಲವಾದ ಬದುಕಿನ ಕ್ರಿಯೆಗಳು ನಡೆಯುತ್ತವೆ ಆ ಸ್ಥಾಯಿಭಿತ್ತಿಯ ಹಿನ್ನೆಲೆಯಿಂದಾಗಿ ಚಲನಶೀಲವಾದ ಬದುಕಿನ ಕ್ರಿಯೆಗಳು ಹೊಸ ಅರ್ಥವಂತಿಕೆಯಲ್ಲಿ ಗೋಚರಿಸತೊಡಗುತ್ತವೆ. ಹಾಗೆಯೇ ಚಲನಶೀಲವಾದ ಬದುಕಿನ ಕ್ರಿಯೆಗಳ ಮುನ್ನೆಲೆಯಿಂದಾಗಿ ಆ ಸ್ಥಾಯಿಭಿತ್ತಿಗೆ ಹೊಸ ಅರ್ಥವಂತಿಕೆಯ ಆಯಾಮ ಪ್ರಾಪ್ತವಾಗುತ್ತದೆ ಅಥವಾ ದತ್ತವಾಗುತ್ತದೆ. ಈ ಎರಡೂ ಹೊಸ ಅರ್ಥವಂತಿಕೆಗಳು ಚಿರವಾಸ್ತವದ ಸಂಕೇತವಾದ ಆ ಸ್ಥಾಯಿಭಿತ್ತಿಯ ಹಾಗೂ ಚರವಾಸ್ತವದ ಸಂಕೇತವಾದ ಆ ಚಲನಶೀಲ ಬದುಕಿನ ಮೂಲದ್ರವ್ಯಕ್ಕೆ-ಅವುಗಳ ಪ್ರತ್ಯೇಕ ಪ್ರತ್ಯೇಕ ಸ್ಥಿತಿಯಲ್ಲಿ-ಇದ್ದಿರಬಹುದಾದ ಅಥವಾ ಇದ್ದಂತೆ ಕಾಣಿಸುವ ಮೂರ್ತ ಅರ್ಥದೊಂದಿಗೆ ಕರಗಿಕೊಂಡು ಅಂತಿಮವಾಗಿ ಅಮೂರ್ತ ಅಥವಾ ನಿಗೂಢ ಅರ್ಥಪರಂಪರೆಗಳನ್ನು ಅನುರಣಿಸುವಂತೆ ಮಾಡುವ ಹೊಂಚು ತೇಜಸ್ವಿಯವರ ಈ ಕೃತಿಗಳಲ್ಲಿ ಇದೆ."[5] ಈ ವಿಧಾನವನ್ನು ಚಿದಂಬರ ರಹಸ್ಯಕ್ಕೂ ಅನ್ವಯಿಸಿ ಹೇಳುವುದು ಕಷ್ಟ. ನಾಯಕರು ಆ ಹಿನ್ನುಡಿ ಬರೆದಾಗ ಅದಿನ್ನೂ ಪ್ರಕಟವಾಗಿರಲಿಲ್ಲ. ಆದರೆ ಪಾಲ್‌ಕ್ಲೀಯನ್ನು ಉದಾಹರಿಸಿ ಹಿಂದೆಯೇ ಸೂಚಿಸಿದ ಮೊಸಾಯಿಕ್ ರಚನಾ ವಿನ್ಯಾಸ ಅಥವಾ ಸಂಯೋಜನೆಯೇ ನಾಯಕ್ ಅವರು ಹೇಳುವ ಹಿನ್ನೆಲೆ-ಮುನ್ನೆಲೆ-ಜಕ್ಸ್ಟಾಪೊಸಿಷನ್ ತಂತ್ರ ವಿಧಾನವನ್ನು ಸ್ಪಷ್ಟಪಡಿಸುತ್ತದೆ. ಮೊಸಾಯಿಕ್ ಸಂಯೋಜನೆಯಿಂದ 'ಆಳ'ದ-ಅಂದರೆ, ಅಗೋಚರ ನಿಗೂಢ ಆಳದ-ಇಣುಕು ನೋಟವನ್ನು ನೀಡುವಂಥದ ಆಗುತ್ತದೆ. ಚಿದಂಬರ ರಹಸ್ಯದಲ್ಲಿ ಮನುಷ್ಯಪ್ರಜ್ಞೆಯನ್ನು ಪರಿಸರದ ವಲಯದಲ್ಲಿ ಇಟ್ಟು ಜಕ್ಸ್ಟಾಪೋಸ್ ಮಾಡಿ ನೋಡಿದಾಗ ಗೋಚರವಾಗುವ ಸತ್ಯವೇ ಬೇರೆಯಾಗುತ್ತದೆ. ವೈಜ್ಞಾನಿಕ, ರಾಜಕೀಯ, ಧಾರ್ಮಿಕ, ಸಾಮಾಜಿಕ ಅಂಶಗಳೆಲ್ಲ ಬೇರುಗಳಂತೆ ತಳದಲ್ಲೆಲ್ಲೊ ಹೆಣೆದುಕೊಂಡಿರುವ ಸಮಗ್ರ ಅನುಭವ ಈ ವಿಧಾನದಿಂದ ಆಗುತ್ತದೆ.

ಇದುವರೆಗೆ ತೇಜಸ್ವಿಯವರ ನವೋದಯ, ನವ್ಯರಿಂದ ಭಿನ್ನವಾದ ಅಭಿವ್ಯಕ್ತಿ ಕ್ರಮವನ್ನು, ಸ್ಥೂಲವಾಗಿ ಅವರ ಧೋರಣೆ, ನಿಲುವುಗಳನ್ನು ಹೇಳಿದೆ. ಮುಂದೆ ಅವರ ಕೃತಿಗಳ ವಿಮರ್ಶೆಗಿಂತ ಪರಿಚಯ ಮಾಡಿ ಕೊಡುವ ಪ್ರಯತ್ನ ಮಾಡಲಾಗಿದೆ.

3

'ಹುಲಿಯೂರಿನ ಸರಹದ್ದು' ಸಂಗ್ರಹದಲ್ಲಿ ಆರು ಕಥೆಗಳಿವೆ. ಲಿಂಗ ಬಂದ, ಪಂಜ್ರೊಳ್ಳಿ ಪಿಶಾಚಿಯ ಸವಾಲು, ಗುಡುಗು ಹೇಳಿದ್ದೇನು? ಊರ್ವಶಿ, ಹುಲಿಯೂರಿನ ಸರಹದ್ದು, ಗಾಂಧೀಜಿ ದೆಸೆಯಿಂದ-ಇವು ವ್ಯಕ್ತಿ ವಿಶಿಷ್ಟ ಸಿದ್ಧಾಂತಕ್ಕೂ ಮೊದಲು ಬರೆದ ಕಥೆಗಳು. ತೇಜಸ್ವಿಯವರಿಗೆ ಸಹಜವಾಗಿ ಸಿದ್ಧಿಸಿರುವ ಕಥನಕಲೆಯ ಗುಣ ಈ ಎಲ್ಲ ಕಥೆಗಳಲ್ಲಿ ಕಂಡುಬರುತ್ತದೆ. ಕಿಟ್ಟಿ ಎಂಬ ಬಾಲಕನ ಮುಗ್ಧಮನಸ್ಸಿಗೆ ವಾಸ್ತವ ಪ್ರಪಂಚದ ಕಟುಸತ್ಯಗಳು, ಆಳು ಲಿಂಗ ಅವನು ಹೇಳುವ ಕಥೆಗಳು ಬೀರುವ ಪರಿಣಾಮವಾಗಿ, ತಳೆಯುವ ಸ್ವರೂಪದ ನಿರೂಪಣೆಯಿದೆ. ಕಿಟ್ಟಿಯ ಭೀತ ಮುಗ್ಧಕಣ್ಣುಗಳಿಗೆ ಜೀತದ ಆಳುಮಗ 'ರಾಕ್ಷಸನನ್ನು ಕೊಲ್ಲಿಸಿದ ಮೊಮ್ಮಗನಾಗಿ' ಕಂಡು ಧೈರ್ಯದ ಪ್ರತೀಕವಾಗುತ್ತಾನೆ. ಮೌಢ್ಯದ ಇನ್ನೊಂದು ಮುಖವಾದ ಜಾತಿಪ್ರಜ್ಞೆಯ ಹಿನ್ನೆಲೆಯ ಒಂದು ಅವಾಂತರದ ಕಥೆ 'ಪಂಜ್ರೊಳ್ಳಿ'. ತಿಳಿಯಾದ ಹಾಸ್ಯ ಅಂತಿಮವಾಗಿ ಕಟಕಿಯಾಗಿ ಅಸಹನೀಯವಾಗಿ ನಾಟುವುದನ್ನು ಕಾಣಬಹುದು. ಕಾರಿಗೆ ಸಿಕ್ಕಿ ಸತ್ತ ಮಂಜಪ್ಪನ ಅಪ್ಪ; ಮಗನಿಗೆ ಇನ್ನೂರು ರೂಪಾಯಿ ಪರಿಹಾರ ಸಿಕ್ಕಿತು. ಇದೇ ಸಂಗತಿ ನೆನೆಯುತ್ತ, ಸಾಕಿ ಸಲಹಿದ ಅಜ್ಜಿಯನ್ನು ಹಣದ ಆಸೆಗೆ

ನಡುರಸ್ತೆಯಲ್ಲಿ ಕೈಬಿಟ್ಟು ಅಪಘಾತಕ್ಕೆ ಕಾರಣವಾದ ಲಕ್ಕ-ಸೋಮರಿಗೆ ನೂರು ರೂಪಾಯಿ ಕೊಡಲು ಒಪ್ಪಿದ ಗೌಡರು ಅದನ್ನು ಅಜ್ಜಿ ಮಕ್ಕಳಿಗಾಗಿ ಮಾಡಿದ್ದ ಸಾಲಕ್ಕೆ ಜಮಾ ಹಾಕಿಕೊಂಡಾಗಿನ ಸಂದರ್ಭ ಮಲೆನಾಡಿನ ಜೀತದಾಳುಗಳ ಬದುಕಿನ ಮುಖಗಳನ್ನು ವ್ಯಂಗ್ಯಪೂರ್ಣವಾಗಿ ಚಿತ್ರಿಸುತ್ತದೆ-ಗುಡುಗು ಹೇಳಿದ್ದೇನು ಕಥೆ. ಊರ್ವಶಿ ಕಥೆಯಲ್ಲಿ ಸಂಕೇತಗಳು ಬೇರೆ ಬೇರೆ ಸ್ತರಗಳಲ್ಲೇ ಚಲಿಸುತ್ತವೆ. ತರುಣ ಸೋಮುವಿಗೆ ಏರಿದ್ದ ಸುಭದ್ರೆಯ ಪ್ರಣಯದ ಹುಚ್ಚು; ಕರಿನಾಯಿ ಕಡಿತದಿಂದ ಡಾಕ್ಟರು ಅದು ಹುಚ್ಚು ನಾಯಿಯೋ ಅಲ್ಲವೋ ಎಂಬುದನ್ನು ಅದು ಸತ್ತಿತೇ ಇಲ್ಲವೇ ಎಂಬುದರಿಂದ ತಿಳಿದುಕೋ ಎಂದು ಎಚ್ಚರಿಸಿದ್ದು; ಹೊಕ್ಕಳ ಸುತ್ತು ಚುಚ್ಚಿದ ಚುಚ್ಚುಮದ್ದಿನ ಹಿಂಸೆ; ದಟ್ಟವಾದ ಮೋಡ ಮಳೆ ಸುರಿಸಿದಂತೆ ತಿಂಗಳ ನಂತರ ಕಾಣಿಸುವ ನಾಯಿ-ಇವೆಲ್ಲ ಪ್ರಣಯದ ಹುಚ್ಚಿನ ಏರಿಳಿತಗಳಿಗೆ ಸಾಂಕೇತಿಕವಾಗಿ ಬರುತ್ತವೆ. ಪರಂಪರೆಯ ನಂಬಿಕೆಗಳು, ಸಂಪ್ರದಾಯಗಳ ವಿರುದ್ಧದ ಪ್ರತಿಭಟನೆಯ ದೌರ್ಬಲ್ಯಗಳು, ಹದ್ದು ಕೋಳಿಮರಿಯ ಮೇಲೆ ಎರಗುವುದು, ಸೋಮುವಿಗೆ ನಳಿನಾಕ್ಷಿಯ ಮೇಲಿನ ಪ್ರೀತಿ ಇವು ಒಂದರೊಳಗೊಂದು ಹೆಣೆದುಕೊಂಡಿರುವ ಕಥೆ ಹುಲಿಯೂರಿನ ಸರಹದ್ದು. ನಂಬಿಕೆ- ವಾಸ್ತವಿಕತೆಗಳ ಅಂತರದ ಅನುಭವ ಮನೋಜ್ಞವಾಗಿ ಪ್ರತಿಮೆಗಳ ಮೂಲಕ ಇಲ್ಲಿ ಚಿತ್ರಿತವಾಗಿದೆ. ಮಹಾತ್ಮಗಾಂಧಿಯವರ ಜೀವನದಿಂದ ಪ್ರೇರಿತನಾದ ಬಾಲಕ ಮೋಹನದಾಸ ಕೆ.ಜಿ. ತಾನೂ ಪತ್ರಮುಖೇನ ಸತ್ಯವನ್ನು ಹೇಳಲು ಪ್ರಯತ್ನಿಸಿ ಕಟುಸತ್ಯದರ್ಶನ ಪಡೆದ ಗ್ರಾಮ ಹಿನ್ನೆಲೆಯ ಆಕರ್ಷಕ ಕಥೆಯಾಗಿದೆ ಗಾಂಧೀಜಿ ದೆಸೆಯಿಂದ.

ಈ ಮೊದಲ ಸಂಕಲನದ ಕಥೆಗಳಿಂದ ಸಂಪೂರ್ಣ ಭಿನ್ನವಾದ ಕಥೆಗಳು 'ಅಬಚೂರಿನ ಪೋಸ್ಟಾಫೀಸು' ಸಂಗ್ರಹದಲ್ಲಿವೆ. ದೀರ್ಘವಾದ ಕಥೆಗಳೂ ಸಹ ಈ ಸಂಕಲನದ 'ಅವನತಿ', 'ಕುಬಿ ಮತ್ತು ಇಯಾಲ' ಹಾಗೂ 'ತಬರನ ಕತೆ' ತುಂಬ ಪ್ರೌಢ ಸಂವೇದನೆಯನ್ನು ವ್ಯಕ್ತಪಡಿಸುತ್ತವೆ. ಸಂಸ್ಕೃತಿಯ ಅವನತಿ ಎಂತಹ ವಿಕೃತರೂಪ ತಳೆದಿದೆ ಎಂಬುದು ಶಿಲ್ಪಿ ಸೂರಾಚಾರಿ ಸುಂದರ ವಿಗ್ರಹಗಳ ರಚನೆಗೆ ಬದಲು ದಳ್ಳಾಳಿತನ, ಮದ್ದುಮಾಟ ಕೆಲಸಗಳಿಗೆ ಇಳಿದ ಪತನದ ಜೊತೆ ಗ್ರಾಮೀಣ ಪರಿಸರದ ಮೌಢ್ಯವೂ ಚಿತ್ರಿತವಾಗಿದೆ. ಸಾರ್ಥಕವಾದ ಹೆಸರಿನ ಸುಂದರಿಯಾದ ಗೌರಿ ಹೆತ್ತಮಕ್ಕಳು ಉಳಿಯದ್ದು 'ಮಲೆ ದೋಸ'ದ ಕಾರಣ ಎಂದು ಅರಿಶಿನದ ಕೊಂಬಿನ ಕೆಂಡದಿಂದ ಸುಡಿಸಿ ದೋಷ ಪರಿಹಾರ ಮಾಡುವ ಆಚಾರಿಯ ಸೌಂದರ್ಯ ಪ್ರಜ್ಞೆಯ ಪತನದ ಆಳವೂ ವ್ಯಂಗ್ಯವಾಗಿ ನಿರೂಪಿತವಾಗಿದೆ. ರೋಗ ಹಿಡಿದ ಸಮಾಜದ ವಿಕಾರವನ್ನು ಸರಳವಾಗಿ ನಿರೂಪಿಸುವ ಕಥನಕಲೆ ಇದೆ. 'ಕುಬಿ ಮತ್ತು ಇಯಾಲ' ಸಹ ಸಮಾಜದ ಮೌಢ್ಯಗಳನ್ನು, ಅವುಗಳ ಪರಿಣಾಮವನ್ನು ಚಿತ್ರಿಸುತ್ತದೆ. ರೋಗಗ್ರಸ್ತ ಸಮಾಜದ ಪ್ರತಿನಿಧಿಗಳಾಗಿ ಲೋರಿ, ಸೊಸೈಟಿಯ ಡೈರೆಕ್ಟರ್ ಶಿವಣ್ಣ, ಪೊಲೀಸ್ ಇನ್‌ಸ್ಪೆಕ್ಟರ್ ಅಸ್ಪರ್, ಕ್ರೈಸ್ತರಾದರೂ ನಂಬಿಕೆಗಳಿಗೇ ಜೋತು ಬೀಳುವ ಓಬ್ರಿನ್ ಹಾಗೂ ಅವನ ಹೆಂಡತಿ ಬಾಯಮ್ಮ, ಅರವರ ಸೇಸ, ಕಾಂಪೌಂಡರ್ ರಾಮರಾಯ ಮೊದಲಾದವರು ಇದ್ದಾರೆ. ಮುಗ್ಧೆ, ಲವಲವಿಕೆಯ ಇಯಾಲ ಇಂತಹ ಪರಿಸರದಲ್ಲಿ ಅತ್ಯಾಚಾರಕ್ಕೊಳಗಾಗಿ, ವೈಜ್ಞಾನಿಕವಾಗಿ ಆಲೋಚಿಸಿ ತಿಳಿಸುವ, ಮೂಢನಂಬಿಕೆಗಳ ಬದಲಾಗಿ ಜಾಗೃತ ಪ್ರಜ್ಞೆಯನ್ನು ಮೂಡಿಸ ಬಯಸುವ ಡಾಕ್ಟರ್ ಕುಬೇರ ಅತಿಮಾನುಷನೆಂಬ ನಂಬಿಕೆ ಹರಡಲು ಕಾರಣವಾಗುತ್ತಾನೆ. "ಕುಬಿ ತಾನು ಯಾವುದನ್ನು ನಂಬದೆ ವಿರೋಧಿಸಿ ತಿರಸ್ಕರಿಸಿದ್ದನೋ ಅದನ್ನೇ ಗೂಢವಾಗಿ ಇನ್ನೊಂದು ಕಡೆಯಿಂದ ಪ್ರತಿಪಾದಿಸುತ್ತಲೂ ಬಂದುದು ಕಾಲಪುರುಷನ ಅಪಹಾಸ್ಯ. ಇತಿಹಾಸದ ವ್ಯಂಗ್ಯ" ಎನ್ನುತ್ತಾರೆ ಕಥೆಗಾರರು.

ಸರಕಾರದ ವ್ಯವಸ್ಥೆಯ ಯಂತ್ರಕ್ಕೆ ಹೃದಯವಿಲ್ಲ. ಬ್ರಿಟಿಷ್ ಆಳ್ವಿಕೆಯಲ್ಲಿ ಸುಂಕದಕಟ್ಟೆಯ ವಸೂಲಿ ಕೆಲಸ ಮಾಡಿಕೊಂಡಿದ್ದ ತಬರ ಸ್ವಾತಂತ್ರ್ಯಾನಂತರ ಬೇರೆ ಬೇರೆ ಇಲಾಖೆಗಳಿಗೆ ಬಂದು ನಿವೃತ್ತನಾಗುತ್ತಾನೆ. ಕಾಫಿ ಬೋರ್ಡ್‌ನಲ್ಲಿ ಸುಂಕದ ರಸೀತಿ ಬರೆಯುತ್ತಿದ್ದಾಗಲೇ ಹಣ ಕೊಡದೆ ಮುಷ್ಕರ ಹೂಡಿದ ಕಾಫಿ ಬೆಳೆಗಾರರ ದೆಸೆಯಿಂದ ಬರೆದಿದ್ದ ರಶೀತಿಯ ಹಣ ತುಂಬದೆ ಪೆನ್ಷನ್ ತೀರ್ಮಾನವಾಗುವುದಿಲ್ಲ. ಅದಕ್ಕಾಗಿ ಆತನ ಅಲೆತ ಪ್ರಾರಂಭ. ಹೆಂಡತಿಗೆ ಡಯಾಬಿಟಿಸ್ ಕಾಯಿಲೆ. ಅನಂತರ ಗಾಯವಾಗಿ ಗ್ಯಾಂಗ್ರಿನ್ ಬಂದು ಸಾಯುತ್ತಾಳೆ. ಆದರೂ ಆತನ ಫೈಲು ತೀರ್ಮಾನ ವಾಗುವುದಿಲ್ಲ, ಕಚೇರಿಯಿಂದ ಕಚೇರಿಗೆ ಅಲೆತ ತಪ್ಪುವುದಿಲ್ಲ. ಆಗ 'ತಬರನಿಗೆ ಒಂದು ಗುಮಾನಿ ಮೂಡಿತು. ತಾನು ಎಂದೋ ತೀರಿಕೊಂಡು ಪ್ರೇತ ಪ್ರಪಂಚ ಒಂದರಲ್ಲಿ ವ್ಯವಹರಿಸುತ್ತಿದ್ದೇನೆ ಎಂದು." ಸ್ವಾತಂತ್ರ್ಯೋದಯದ ಬೆಳ್ಳಿ ಹಬ್ಬದ ಸಮಯದಲ್ಲಿಯೇ ತಬರನಿಗೆ ಹುಚ್ಚು ಹಿಡಿದದ್ದು ಕೇವಲ ಒಂದು ಆಕಸ್ಮಿಕ ಎನ್ನುತ್ತಾರೆ, ತೇಜಸ್ವಿ.

ಪೋಸ್ಟ್ ಆಫೀಸು ಒಂದು ಸಂಪರ್ಕ ಮಾಧ್ಯಮ, ದೂರದ ವ್ಯಕ್ತಿಗಳನ್ನು ಹತ್ತಿರಕ್ಕೆ ತರುವುದರ ಪ್ರತೀಕ. ಆದರೆ ಅಬಚೂರಿನಲ್ಲಿ ಪೋಸ್ಟಾಫೀಸು ಬೋಬಣ್ಣನ ಮನೆಯಲ್ಲೇ ಸ್ಥಾಪಿತವಾದ ನಂತರ ಅವನ ಸಂಸಾರದಲ್ಲಿ ಬಿರುಕು ಪ್ರಾರಂಭ. ಅತ್ತೆಗೆ ಅಳಿಯನ ಮೇಲೆ ಹಿಡಿತ ಪಡೆವ ಛಲ, ಹೆಂಡತಿ ಕಾವೇರಿ ತಾಯಿಯ ಕಡೆಗೆ, ಈ ಪರಿಸರದಲ್ಲಿ ಪತ್ರಿಕೆ-ಪತ್ರಗಳಿಂದ ಕಾಮ-ಪ್ರೇಮಗಳ ಅರಿವು ಜಾಗೃತಗೊಂಡ ಬೋಬಣ್ಣನ ಮನಸ್ಸಿನ ಸ್ಥಿತಿಗತಿಗಳ ಚಿತ್ರ ಸೊಗಸಾಗಿ ಅನಾವರಣಗೊಳ್ಳುತ್ತದೆ. ಅಪವಾದ ಮಾಡಿ ಎಚ್ಚರಿಕೆ ನೀಡುವ ಪತ್ರವನ್ನು ಜೀರ್ಣವಾಗಿದ್ದರಿಂದ ತನ್ನ ಕೈಬರಹದಲ್ಲೇ ನಕಲು ತೆಗೆದು ಇಟ್ಟದ್ದೆ ಕಾರಣವಾಗಿ ಬೋಬಣ್ಣನಿಗೆ ಆಗುವ ಅವಮಾನಗಳು ಕೊನೆಗೆ ಅವನು ಸಂಸಾರ ತ್ಯಜಿಸಿ ಹೋಗಲು ಕಾರಣವಾಗುತ್ತದೆ. ಅನಕ್ಷರಸ್ಥ ಗ್ರಾಮೀಣ ಜನರ ಪರಿಸರ ಹಿನ್ನೆಲೆಯಲ್ಲಿ ಕಥೆಯ ಹಂದರ ಹರಡಿಕೊಂಡಿದೆ.

ಈ ಕಥೆಗಳಲ್ಲಿ ಕಾಣಬರುವ ಸಾಮಾಜಿಕ ಕಳಕಳಿ, ಕಥೆಯ ನಿರೂಪಣೆಯಲ್ಲಿ ಕಂಡುಬರುವ ಸಂಯಮ, ಕಲೆಗಾರಿಕೆ ಕನ್ನಡದ ಶ್ರೇಷ್ಠ ಕಥೆಗಳ ಸಾಲಿನಲ್ಲಿ ಇವನ್ನು ಸೇರಿಸುತ್ತವೆ.

4

'ಯಮಳ ಪ್ರಶ್ನೆ' ನಾಟಕವಾದರೂ, 'ಸ್ವರೂಪ' ನೀಳ್ಗತೆಯಾದರೂ ಇವೆರಡರಲ್ಲೂ ಕಂಡುಬರುವ ಜೀವನದ ಮೌಲ್ಯಗಳ, ತತ್ವಗಳ ನಿಲುವು ಸಮಾನವಾದುದಾಗಿದೆ. ಪ್ರೇಮ ಮತ್ತು ಸಾವು ಇವುಗಳ ಸಂಬಂಧವೇ ಈ ಕೃತಿಗಳ ಕೇಂದ್ರವಸ್ತು. ಪ್ರೇಮ-ಕಾಮಗಳ ಸಮಸ್ಯೆಗಿಂತ ಎರಡರಲ್ಲೂ ಪ್ರಧಾನವಾಗಿ ಕಾಡುವ ಪ್ರಶ್ನೆ ಸಾವಿನದು. ಹೆಣ್ಣನ್ನು ನೋಡಲು ರಮೇಶ್ ಗೆಳೆಯನ ಮೋಟಾರ್ ಬೈಕಿನ ಮೇಲೆ ಹೊರಡುತ್ತಾನೆ. ಅದು ಕೆಟ್ಟು ನಿಂತಾಗ ನಡೆಸಲು ಮಾಡುವ ಪ್ರಯತ್ನ ವಿಫಲವಾಗುತ್ತದೆ. ಹಿನ್ನೆಲೆಯಲ್ಲಿ ಒಂದು ವ್ಯಕ್ತಿಯ 'ಶರೀರ' ಬಿದ್ದಿರುತ್ತದೆ. ದಾರಿಹೋಕರು ಮಾಡುವ ಪ್ರಯತ್ನವೂ ವಿಫಲವಾಗುತ್ತದೆ. ಅಲ್ಲಿಗೆ ಬಂದ ಪೋಲೀಸ್ ಪೇದೆ ಬಿದ್ದಿರುವ ವ್ಯಕ್ತಿಯನ್ನು ಅಪಘಾತ ಮಾಡಿ ಸಾಯಿಸಿದ್ದಾರೆ ಎಂದು ಪೊಲೀಸ್ ಸ್ಟೇಷನ್ನಿಗೆ ಎಳೆ ದೊಯ್ಯುವ ಪ್ರಯತ್ನಮಾಡುತ್ತಾನೆ. ನೀರು ತರಲು ಹೋಗಿದ್ದ ಯುವತಿಯಿಂದ ಆ 'ಶರೀರ' ಬೆಳಗಿನಿಂದ ಅಲ್ಲೇ ಬಿದ್ದಿದೆ ಎಂದು ತಿಳಿದು ಅವರನ್ನು ಬಿಡುತ್ತಾನೆ. ಅಲ್ಲಿಗೆ ಬಂದ ತೋಟಿ ಸಾಯುವಂತಿದ್ದ ವ್ಯಕ್ತಿಯನ್ನು ತೋರಿಸಿ ಹಣ ಬೇಡುತ್ತಾನೆ. ಈ ಎಲ್ಲ ಅಸಂಬದ್ಧಗಳನ್ನು ನೋಡುತ್ತ ಇದ್ದ ಹೇಮಂತ ಗೆಳೆಯನಿಗೆ ಒಂದು ಪ್ರಶ್ನೆ ಹಾಕುತ್ತಾನೆ - "ಹಾಗಲ್ಲ ರಮೇಶ್, ಇದೊಂದು ಧರ್ಮಸೂಕ್ಷ್ಮ. ವಾದಕ್ಕೆ ಸಂಬಂಧಿಸಿದುದಲ್ಲ. ಆತ್ಮಕ್ಕೆ ಸಂಬಂಧಿಸಿದ್ದು. ನಾವು ನಾಲ್ಕು ಜನ ಕೈಕಾಲು ಗಟ್ಟಿ ಇದ್ದವರು ಸುತ್ತೂ ಇದ್ದೂ ಅವನು ಸತ್ತರೆ ನಾವು ಕೊಲೆಪಾತಕಗಳು ಏಕೆ

ಅಲ್ಲ? ನನಗೆ ಗೊತ್ತಾಗುವುದಿಲ್ಲ. ಥಿಕ್ಕಿ ಹೊಡೆಸಿದರೆ ಮಾತ್ರ ಅಪರಾಧಿಗಳಾಗುತ್ತಿದ್ದೆವು, ಈಗ ಅಲ್ಲ ಎಂದು ಹೇಗೆ ಹೇಳುತ್ತೀ?" ಹೇಮಂತನ ಮಾತಿನಲ್ಲಿ ತೇಜಸ್ವಿಯವರ ವಿಚಾರದ ಧಾಟಿ ಸಂಪೂರ್ಣ ಭಿನ್ನವಾಗಿರುವುದನ್ನು ಗುರುತಿಸಬಹುದು. ಸಮಾಜದಲ್ಲಿನ ದುರಂತಗಳಿಗೆ ಯಾರೋ ಒಬ್ಬ ಕಾರಣವೇ, ಹೊಣೆಗಾರನೇ ಅಥವಾ ಇಡೀ ಸಮಾಜವೇ ಎಂಬುದು. 'In Cold Blood' ಎಂಬ ಕೃತಿಯಲ್ಲಿ ಭಾವೋದ್ರೇಕದ ಸ್ಥಿತಿಯಲ್ಲಿ ವ್ಯಕ್ತಿಯೊಬ್ಬನನ್ನು ಕಥಾನಾಯಕ ಹತ್ಯೆಮಾಡಿದ ನಂತರ, ನ್ಯಾಯಲಯದ ಕಟ್ಟೆ ಏರಿ ವರುಷಗಳ ಕಾಲ ವಾದವಿವಾದ ನಡೆದು ಮರಣ ದಂಡನೆಗೆ ಗುರಿಯಾಗುತ್ತಾನೆ. ವಿಧ್ಯುಕ್ತವಾಗಿ ಅವನನ್ನು ಗಲ್ಲುಶಿಕ್ಷೆಗೆ ಗುರಿಪಡಿಸಲಾಗುತ್ತದೆ. ನಾಗರಿಕ ವ್ಯವಸ್ಥೆಯ ಎರಡು ಮುಖಗಳಲ್ಲಿ ಯಾವುದು 'ಕೋಲ್ಡ್‌ಬ್ಲಡೆಡ್' ಹತ್ಯೆ ಎಂಬುದು ಓದುಗರಿಗೆ ಬಿಟ್ಟಿದ್ದು. ಹೇಮಂತನ ಪ್ರಶ್ನೆ ಅಂತಹುದೇ ಆಗಿದೆ. ಮನುಷ್ಯನ ಕ್ರಿಯೆಗಳಿಗೆ ಅವನು ಎಷ್ಟರಮಟ್ಟಿಗೆ ಜವಾಬುದಾರ? ಈ ನಾಟಕ ಹಲವಾರು ಬಗೆಯ ಅರ್ಥಕ್ಕೆ ಎಡೆಮಾಡಿ ಕೊಡುತ್ತದೆ. ನಾಟಕದ ಪ್ರಾರಂಭದಲ್ಲಿ ಕೃಷ್ಣಾರ್ಜುನ ರಥದ 'ಕಾಣ್ಕೆ' ರಮೇಶ್‌ನ ಬಾಯಲ್ಲಿ ಬರುತ್ತದೆ. ಯುದ್ಧ ಸಂದರ್ಭದಲ್ಲಿ ಅರ್ಜುನ ಮೊದಲು ಸಂನ್ಯಾಸ ವಹಿಸಿದನೊ, ಇಲ್ಲ ರಥವೊ. ಚಲಿಸದ ರಥ-ಕೆಟ್ಟ ಮೋಟಾರ್ ಸೈಕಲ್ಲು. ರಥ ಹೇಳುತದಂತೆ 'ನೈನಂ ಛಿಂದಂತಿ ಶಸ್ತ್ರಾಣಿ....' ರಮೇಶನ ಈ ಮಾತುಗಳು ನಾಟಕದ ಅಂತ್ಯದ ವೇಳೆಗೆ ಅಸಂಬದ್ಧ ಎನಿಸಿದರೂ ನಾಟಕ ಕೇವಲ ಸಾಮಾಜಿಕ ಸಮಸ್ಯೆಗಳ ಹಂತದಲ್ಲಿ ನಿಲ್ಲದೆ ಆಳವಾದ ತಾತ್ವಿಕ ಧ್ವನಿಯನ್ನು ಒಳಗೊಂಡಿದೆ ಎಂಬುದನ್ನು ಸೂಚಿಸುತ್ತದೆ.

'ಸ್ವರೂಪ'ದಲ್ಲಿ ಒಂದು ಅಪೂರ್ವವಾದ ಆತ್ಮನಿವೇದನೆಯನ್ನು ಕಾಣುತ್ತೇವೆ. ಕಥಾನಾಯಕ ಶ್ರೀನಿವಾಸ ಗೆಳೆಯ ಹೇಮಂತನನ್ನು ಶಿಕಾರಿಗೆ ಕರೆದುಕೊಂಡು ಹೋಗಿ, ಶಿಕಾರಿಗಾಗಿ ಕಾಯುತ್ತ ತನ್ನ ಭೂತಕಾಲದ ಘಟನೆಗಳನ್ನು ಹೇಳುತ್ತ ತನ್ನ ಸ್ವರೂಪವನ್ನು ಅನಾವರಣಗೊಳಿಸುವುದು ನಿರೂಪಿತವಾಗಿದೆ. ವ್ಯಕ್ತಿಯ ದುರಂತಕ್ಕೆ, ಪತನಕ್ಕೆ ಮನುಷ್ಯಕುಲವೇ ಹೊಣೆ ಎಂಬ ವ್ಯಂಗ್ಯ ಅವನ ಮಾತುಗಳಿಂದ ವ್ಯಕ್ತವಾಗುತ್ತದೆ. ಎಲ್ಲರ ಕರ್ಮಕ್ಕೆ ಎಲ್ಲರೂ ಹೊಣೆಗಾರರು ಎಂಬುದನ್ನು ನಿರೂಪಿಸುವುದರಲ್ಲಿ ಈ ಕಾದಂಬರಿಯ ಸತ್ವ ಲೋಕಾತಿ ಕ್ರಾಂತವೂ ಆಧ್ಯಾತ್ಮಿಕವೂ ಆಗುತ್ತದೆ ಎಂಬುದು ಮುನ್ನುಡಿಕಾರ ಬಿ.ಎನ್. ಶ್ರೀರಾಮ ಅವರ ಅಭಿಪ್ರಾಯ. ಪ್ರಾರಂಭದಲ್ಲಿ ಸರಳವೂ, ನೇರವೂ ಆದ ನಿರೂಪಣೆ ಕೊನೆಕೊನೆಗೆ ವಿಚಾರಗಳ ಹೆಣಿಗೆಯೊಂದಿಗೆ ಸಂಕೀರ್ಣವಾಗುತ್ತದೆ. ಇದೊಂದು ಕೃತಿಯಲ್ಲಿ ನವ್ಯಸಾಹಿತ್ಯದ ಬೌದ್ಧಿಕತೆಯ ದಟ್ಟತೆ ಕಾಣಬರುತ್ತದೆ. ಶ್ರೀನಿವಾಸನ ಮಾತುಗಳು ಹಲವಾರು ಸ್ತರಗಳಲ್ಲಿ ಹಾಯುತ್ತವೆ. ವಿದ್ಯಾರ್ಥಿ ಜೀವನ, ಕಾಮವಿಲಾಸ ಸಾಹಸಗಳು, ವಿಶ್ವವಿದ್ಯಾಲಯ ಪ್ರಾಧ್ಯಾಪಕರ ಸಭ್ಯತೆಯ ಸೋಗು, ಆಷಾಢಭೂತಿತನ, ಶೋಷಣೆಯ ಸ್ವರೂಪಗಳು ಇತ್ಯಾದಿ ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಹೇಮಂತನ ಮೌನ, ಶ್ರೀನಿವಾಸನ ಮಾತು ಹಿನ್ನೆಲೆ-ಮುನ್ನೆಲೆಯಾಗಿ ವಾತಾವರಣದ ದುರಂತ ಛಾಯೆಯನ್ನು ಗಾಢವಾಗಿಸುತ್ತವೆ. ಇಲ್ಲೂ ಕೂಡ ತೇಜಸ್ವಿಯವರು ಬದುಕಿನ ಅರ್ಥವನ್ನು ಅರಸುತ್ತಾ ಸಮಸ್ಯೆಗಳ ಬೇರೊಂದು ಮಗ್ಗುಲನ್ನೂ ತೆರೆಯುತ್ತಾರೆ. ಒಂದೆಡೆ ಶ್ರೀನಿವಾಸ ಹೇಳುತ್ತಾನೆ : "ಶೋಷಣೆ ಕೇವಲ ಬಂಡವಾಳಗಾರನಿಗೆ ಸೀಮಿತವಲ್ಲ ಎನ್ನುವುದು.....ನಾನು ಹಳ್ಳಿಗರ ಕೈಲಿ ದುಡಿಸಿ ಶೋಷಿಸಿ ದೊಡ್ಡವನಾದೆನೆನ್ನುವುದು ಕಾಣುವ ವಿಷಯ, ಆದರೆ ದಿನಾ ಕೆಲಸ ಮಾಡಿದ್ದರ ಮೇಲೆ ನಾಲ್ಕಾಣೆ ಹೆಚ್ಚಿಗೆ ಕಿತ್ತು, ಸಾಲಾ ಮಾಡಿ ಸಂತೆಗೆ ಹೋಗಿ ಕಜ್ಜಿ ತುರಿಸುತ್ತಾ ಕಾಲ ಕಳೆದು, ಗದ್ದೆಯನ್ನೆಲ್ಲಾ ಹಾಳುಮಾಡಿ ನಮ್ಮ ಚಿಕ್ಕಪ್ಪನನ್ನು ಶೋಷಿಸಿದ್ದು ಬೇರೆ ತರದ ಶೋಷಣೆ. ಸೋಷಿಯಲಿಸಂಗೆ ಸಿಕ್ಕುವುದು ದುಡಿಸಿ ಮಾಡಿದವನ ಶೋಷಣೆ. ಇನ್ನೊಂದು ಅನ್ಯತರದ್ದು ಅವರ ಹಿಡಿತಕ್ಕೆ ಸಿಕ್ಕುವುದಿಲ್ಲ.... ಶೋಷಣೆ ಒಂದಲ್ಲ ಒಂದು ರೀತಿಯಲ್ಲಿ ಅನಿವಾರ್ಯ. ಇಲ್ಲ ಉತ್ಪಾದಿಸಲು ಶೋಷಿಸಬೇಕು, ಇಲ್ಲ ಹಾಳುಮಾಡಲು ಶೋಷಿಸಬೇಕು." ಸಮಸ್ಯೆಯ ಬಗೆಗಿನ ಈ ಗಂಭೀರ ದೃಷ್ಟಿ ತೇಜಸ್ವಿಯವರ ಚಿಂತನೆಯ ವೈಶಿಷ್ಟ್ಯ. ಶ್ರೀನಿವಾಸನನ್ನು ಕಾಡುವ ಏಕಾಂತ ಅಥವಾ ಮೌನ ಎಷ್ಟು ಗಂಭೀರವಾದದ್ದು ಎನ್ನುವ ವರ್ಣನೆ ಕಾಫಿಕ್ಲಬ್‌ನಲ್ಲಿ ಕುಳಿತಿದ್ದಾಗ, ಒಳಗೆ ಬಂದ ಭಿಕ್ಷುಕ ನೇರವಾಗಿ ಅವನ ಬಳಿ ಬಂದು ಭಿಕ್ಷೆ ಬೇಡಿದಾಗಿನ ಚಿತ್ರ, ಆ ಭಿಕ್ಷುಕನ ವಿಕಾರರೂಪ ಕಾಡುತ್ತ ಕಾಡುತ್ತ ಅದು ತನ್ನದೇ ನಿಜವಾದ ಸ್ವರೂಪ ಎಂದು ಎನಿಸುವುದೂ ಅರ್ಥಪೂರ್ಣವಾಗಿ ಬೆಳೆಯುತ್ತದೆ. ಈ ನೀಳ್ಗತೆಯ ಕೊನೆಯಲ್ಲಿ ಶ್ರೀನಿವಾಸ ಹೇಳುವ ಮಾತುಗಳು ಕಥೆಯ ಆಶಯ ವನ್ನು ಸ್ಪಷ್ಟಪಡಿಸುತ್ತವೆ ;

"ನೀನು ಯಾರನ್ನೂ ಕೊಂದಿಲ್ಲದಿರಬಹುದು. ನೀನು ಪ್ರೀತಿಸಿ ಕೈ ಕೊಟ್ಟ ಹೇಡಿ ಅಲ್ಲದಿರಬಹುದು. ನಾವು ಆಗಿರಬಹುದು. ಆದರೆ ಅದೆರಡಕ್ಕೂ ಅಂಥ ಅಗಾಧ ವ್ಯತ್ಯಾಸ ಇಲ್ಲ. ಏಕೆಂದರೆ ಒಂದರ್ಥದಲ್ಲಿ ನಾನೂ ನಿನ್ನಷ್ಟೆ ಮುಗ್ಧ ಅಥವಾ ನೀನೂ ನನ್ನಷ್ಟೆಯೇ ನನ್ನಂತೆಯೇ ಅಪರಾಧಿ. ಇಲ್ಲದಿದ್ದರೆ ಹೇಳು ಹೇಗೆ ಹೆಣದ ಸುತ್ತ ನಿಂತಿದ್ದವರಲ್ಲಿ ಎಲ್ಲರೂ ಅಪರಾಧಿಗಳು ಅಥವಾ ನಾನೊಬ್ಬನೇ ಅಪರಾಧಿ." ಹೀಗೆ ಶ್ರೀನಿವಾಸನ ದುರಂತ ಎಲ್ಲರ ದುರಂತವಾದರೂ, ಬದುಕಿನಲ್ಲಿ ಯಾವುದೋ ಒಂದು ಶಕ್ತಿ 'ಏಲಕ್ಕಿ ಗಿಡದ ಮೇಲೆ ಕುಳಿತ ಹಕ್ಕಿ, ಗುಂಡೇಟಿಗೆ ಸತ್ತರೂ ಮರದಲ್ಲೇ ಜೋತುಬಿದ್ದಿರುತ್ತದೆ.'- ಹಾಗೆ ಜೀವನಕ್ಕೆ ಜೋತುಬೀಳುವ, ಅಂಟಿನಿಲ್ಲುವ ಚಾಲನೆಯನ್ನು ಕೊಡುತ್ತದೆ ಎಂಬ ಆಶಾವಾದ ವ್ಯಕ್ತವಾಗುತ್ತದೆ.

5

'ವ್ಯಕ್ತಿ ವಿಶಿಷ್ಟ ಸಿದ್ಧಾಂತ'ದಲ್ಲಿ ಮೂರು ಪ್ರಬಂಧಗಳಿವೆ. ಅವುಗಳನ್ನು ವೈಚಾರಿಕ ಪ್ರಬಂಧಗಳು ಎನ್ನಬಹುದು. ತೇಜಸ್ವಿಯವರ ತಾತ್ವಿಕ ನಿಲುವುಗಳು, ಸೈದ್ಧಾಂತಿಕ ದೃಷ್ಟಿಕೋನಗಳು ಇಲ್ಲಿ ಸ್ಪಷ್ಟವಾಗಿ ಹರಳುಗಟ್ಟುತ್ತವೆ. ಅವರ ಬಹುಪಾಲು ಬರವಣಿಗೆಯ ಹಿಂದಿನ ಧೋರಣೆಗಳಿಗೆ, ನಿಲುವುಗಳಿಗೆ ಚಾಲನೆಯಿತ್ತ, ತಿರುವು ನೀಡಿದ ಚಿಂತನೆ ಇಲ್ಲಿದೆ. 'ಅಲಕ್ಷ್ಯ ಮತ್ತು ಸಂಸ್ಕೃತಿ ಸ್ಥಿತಿ', 'ವ್ಯಕ್ತಿ ವಿಶಿಷ್ಟ ಸಿದ್ಧಾಂತ', 'ವ್ಯಕ್ತಿ ವಿಶಿಷ್ಟವಾದಿ; ವಿವಾಹ; ಪ್ರೇಮ' ಇವು ಪ್ರಬಂಧಗಳ ಶೀರ್ಷಿಕೆಗಳಾದರೂ ಈ ಮೂರು ಪರಸ್ಪರ ಪೂರಕವಾದವು.

"ಸಾಹಿತ್ಯದ ಮುಖ್ಯ ಪ್ರಯೋಜನ ರಸಾನುಭವವಿರಬಹುದು. ಆದರೆ ಸಮಕಾಲೀನ ಸಾಹಿತ್ಯಕ್ಕೆ ಮರೆಯಲಾಗದ ಇನ್ನೊಂದು ಜವಾಬ್ದಾರಿ ಇದೆ. ಅದು ಆಯಾ ಕಾಲದ ಜೀವನ ಕ್ರಮವನ್ನು, ಧರ್ಮಪ್ರಜ್ಞೆ ವಿವೇಕಾದಿಗಳನ್ನು ಸಂವೇದನಾಶಕ್ತಿಯನ್ನು ಜಾಗೃತವಾಗಿ, ಪ್ರಖರವಾಗಿ, ಸೂಕ್ಷ್ಮವಾಗಿ ಉಳಿಸಿ ಕೊಂಡುಬರುವುದು. ಇದೇ ಸಮಕಾಲೀನ ಸಾಹಿತ್ಯ ಸೃಷ್ಟಿಗೂ ಅವಶ್ಯಕತೆಗೂ ಬಹುಮುಖ್ಯ ಕಾರಣ." ಕನ್ನಡದ ಸಾಹಿತ್ಯ ಸ್ಥಿತಿ ಹದಗೆಟ್ಟಿರಲು ಕಾರಣಗಳನ್ನು ತಿಳಿಸುತ್ತಾರೆ. ನಿವೇದನೆಯಾದ ಸಾಹಿತ್ಯದ ಸಂವಾದಕೊಂಡಿ ಕಳಚಿರುವುದು ಮತ್ತು ಮುಖ ಹೇಡಿತನ-ಈ ಎರಡು ಮುಖ್ಯ ಕಾರಣಗಳು ಎನ್ನುತ್ತಾರೆ. ಆದ್ದರಿಂದ ಈ ಹಿಂದೆಯೇ ಹೇಳಿದಂತೆ ಹೊಸ ಮನ್ವಂತರದಲ್ಲಿ ತಾವು ಹೊಸ ಮಾರ್ಗಕಾಣಬೇಕಿದೆ ಎಂದು ಹೇಳುತ್ತಾರೆ.

ವ್ಯಕ್ತಿ ವಿಶಿಷ್ಟ ಸಿದ್ಧಾಂತ ತುಂಬ ಸಂಕೀರ್ಣವಾದ ವಿಚಾರ ಮಥನವಾಗಿದೆ. ಸಾವು ಮತ್ತು ಜೀವನದ ಅರ್ಥಪೂರ್ಣತೆಯ ವಿಶ್ಲೇಷಣೆ ಇಲ್ಲಿದೆ. ಸಾವಿನ ಅನುಭವ ಆಗಲು ಸಾಧ್ಯವಿಲ್ಲ. ಬದುಕಿ ಉಳಿದರೆ ಸಾವಿನ ಅರಿವು ಅರಿವಿನ ಸಾವಿನಲ್ಲಿ ಪರ್ಯವಸಾನವಾಗುತ್ತದೆ. ಆದರೆ ಪ್ರೇಕ್ಷಕನಾಗಿ ಅದನ್ನು ಅರಿಯುವ ಸಾಧ್ಯತೆ ಇದೆ. "ಮಾನವನ ಅಭ್ಯಾಸ, ತಿಳುವಳಿಕೆ, ಕಲಿಯುವಿಕೆ ಇವೆಲ್ಲಾ ಬಹುಪಾಲು ವ್ಯಷ್ಟಿಯನ್ನು

ಸಮಷ್ಟಿಯಲ್ಲಿ ವಿಲೀನಗೊಳಿಸಿ ಕೊಳ್ಳುವುದರ ಕಡೆಗಿರುವುದರಿಂದ ವ್ಯಕ್ತಿ ವಿಶಿಷ್ಟತೆಯ ಸಂವೇದನೆ ಅತ್ಯಂತ ಸ್ವಂತ ದರ್ಶನವಾಗೇ ಸಿದ್ಧಿಸಬೇಕಾಗುತ್ತದೆ" ಎನ್ನುತ್ತಾರೆ. ಮುಂದುವರೆದು, "ವ್ಯಕ್ತಿ, ಜೀವನದಲ್ಲಿ ಎರಡು ಅತ್ಯಂತ ವಿರುದ್ಧ ವಾದುದನ್ನು ಎದುರಿಸ ಬೇಕಾಗುತ್ತದೆ. ಒಂದು ಮೃತ್ಯು, ಇನ್ನೊಂದು ಕಾಮ. ವ್ಯಕ್ತಿ ತನ್ನನ್ನು ಕೇವಲ ಈ ಜೀವನ ಸ್ರೋತದ ಒಂದು ಅಂಗವೆಂದು ಪರಿಭಾವಿಸಿದಾಗ ಆತ ಅಮರ; ಅನಂತಕಾಲವೂ ಪರಂಪರಾಗತವಾಗಿ ಹಬ್ಬುವ, ಮುಂದುವರೆಯುವ ಜೀವನ ದೊಡನೆ ಈ ಅಮರತೆಯ ಭಾವನೆಯು ವ್ಯಕ್ತಿತ್ವವನ್ನು ಮಾನವೀಯತೆಯಂಥ ಅಮೂರ್ತ ಕಲ್ಪನೆಯಲ್ಲಿ ಕರಗಿಸಿಬಿಡಲು ಸಾಧ್ಯವಾದಾಗ ಮಾತ್ರ ಸಾಧ್ಯ." ಆದರೆ ಇದು ಕಷ್ಟಸಾಧ್ಯವಾದುದು. ಆದ್ದರಿಂದ "ಸೃಷ್ಟಿ ಮತ್ತು ವಿನಾಶ ಇವೆರಡನ್ನೂ ; ಬದುಕು ಮತ್ತು ಸಾವು ಇವೆರಡನ್ನೂ ಒಂದೇ ಎನ್ನುವ ರೀತಿಯಲ್ಲಿ ಪರಿಭಾವಿಸುವ ; ತನ್ನ ವ್ಯಷ್ಟಿತ್ವವನ್ನು ಸಮಷ್ಟಿತ್ವವನ್ನಾಗಿ ನೋಡಬಲ್ಲ ಮಹಾಸಿದ್ಧಿ ನನಗೆ ಕೇವಲ ಆಧ್ಯಾತ್ಮಿಕ ಕಲ್ಪಕತೆಯನ್ನಾಗಿಸುತ್ತದೆಯೇ ಹೊರತು ಅನುಭವದ ಒಂದು ಹಂತವಾದೀತು ಎಂದೆನಿಸುತ್ತಿಲ್ಲ." ಈ ವಿಚಾರಲಹರಿ ಕುವೆಂಪು ಅವರ ವೈಜ್ಞಾನಿಕ ಪೂರ್ಣದೃಷ್ಟಿಗೆ ಸಂವಾದಿ ಯಾದದ್ದು ಎನ್ನಬಹುದು.

ವಿವಾಹ ಮತ್ತು ಪ್ರೇಮಕ್ಕೆ ಸಂಬಂಧಿಸಿದಂತೆ ವ್ಯಕ್ತಿವಿಶಿಷ್ಟವಾದಿಯ ನಿಲುವು ವಿಜ್ಞಾನದ ಅನುಭವವನ್ನು ಆಧರಿಸಿದ್ದಾಗಿದೆ. "ದ್ವಿಲಿಂಗ ಜೀವಿಯಾದ ಜೀವ ಏಕಲಿಂಗ ಜೀವಿಯಾದ ನಂತರ ಪ್ರೇಮಕ್ಕೆ ವಿಕಾಸ ಪಥದಲ್ಲಿ ವಿಶಿಷ್ಟವಾದ ಹಾಗೂ ಮಹತ್ವದ ಸ್ಥಾನ ದೊರೆತಿದೆ. ಸೃಷ್ಟಿ ಮತ್ತು ಸಾವು ಇವೆರಡೂ ಬೇರ್ಪಡಿಸಬಲ್ಲ ಯಮಳ ಸ್ಥಿತಿಗಳಾಗಿವೆ." ಹೀಗೆ ಪ್ರೇಮವೆನ್ನುವುದನ್ನು ಒಂದು ಏಕ ಘಟಕವಾಗಿ ತೇಜಸ್ವಿ ಕಾಣುತ್ತಾರೆ. ಅದು ಸೃಷ್ಟಿಸ್ಥಿತಿ ಮೂಲವಾದ ಏಕಶಕ್ತಿ. "ಜೀವಕ್ಕೆ ವಾತಾವರಣ ವಿರುದ್ಧ ಹೋರಾಟದಲ್ಲಿ ಬಂಧನ ವಿಮುಕ್ತಿಗೆ ದೊರೆತ ಸಿದ್ಧಿ ಪ್ರೇಮ ಎಂದು ಭಾವಿಸಿದರೆ ಅದು ವ್ಯಕ್ತಿ ವಿಶಿಷ್ಟವಾದದಲ್ಲೂ; ವ್ಯಕ್ತಿ ಸ್ವಾತಂತ್ರ್ಯದಲ್ಲೂ ಪರ್ಯವಸಾನವಾಗುತ್ತದೆ." ಆದ್ದರಿಂದ ಮಾನವನ ಪ್ರೇಮಕ್ಕೂ ಅವನ ಸ್ವಾತಂತ್ರ್ಯಕ್ಕೂ ಏನೋ ಸೂಕ್ಷ್ಮ ಸಂಬಂಧ ಇದೆ ಎನ್ನುತ್ತಾರೆ.

ವಿವಾಹದ ಬಗ್ಗೆ ತೇಜಸ್ವಿಯವರದು ವೈಜ್ಞಾನಿಕವಾದ, ತರ್ಕಬದ್ಧ ವಾದ ನಿಲುವು. ಅವರ ಕಾದಂಬರಿಗಳನ್ನು ಒಂದು ರೀತಿಯಲ್ಲಿ ಈ ವಿಚಾರಗಳ 'ಲಕ್ಷ್ಯ' ಎನ್ನಬಹುದು. 'ಚಿದಂಬರ ರಹಸ್ಯ' ಕಾದಂಬರಿಯ ಅಂತಿಮ ನಿಲುವಿಗೆ ಇಲ್ಲಿನ ವಿಚಾರ ಹೇಗೆ ಸಂವಾದಿಯಾಗಿದೆ ಎಂಬುದನ್ನು ಗಮನಿಸಬಹುದು. "ವಿವಾಹದಲ್ಲಿ ಶಾಸ್ತ್ರೀಯ ಸಂಪ್ರದಾಯನಿಷ್ಠ ವಿವಾಹವೆಂದರೆ ಸಮಾಜ ಪರಿಗಣಿಸಿರುವ ಒಂದೇ ಜಾತಿಯ ಆವರಣ ದೊಳಗಿರುವವರೇ ಪರಸ್ಪರ ವಿವಾಹ ಬಾಧ್ಯರು ಎಂದು." ಇದು ಎಷ್ಟು ಅವೈಜ್ಞಾನಿಕ ಎಂಬುದಕ್ಕೆ ಟ್ರಿಸ್ಟಾನಾ ಎಂಬ ದ್ವೀಪದಲ್ಲಿನ ಸಣ್ಣ ಸಂಖ್ಯೆಯ ಜನ ತಮ್ಮ ತಮ್ಮಲ್ಲೇ ವಿವಾಹವಾಗಿ ದೃಷ್ಟಿಮಾಂದ್ಯ ಮುಂತಾದ ದೈಹಿಕ ಅನಾರೋಗ್ಯಕ್ಕೆ ತುತ್ತಾದುದನ್ನು ಉದಾಹರಿಸುತ್ತಾರೆ. ಹಕ್ಸ್ಲಿಯ ಚಿಂತನೆಗಳನ್ನು ಸಮರ್ಥನೆಗೆ ನೀಡುತ್ತಾರೆ. ಪರಿಸರ ಮತ್ತು ವ್ಯಕ್ತಿತ್ವಗಳ ಸಂಘರ್ಷದ ಜಗತ್ತಿನಲ್ಲಿ ಸಂವೇದನೆಯನ್ನು ಸ್ವಂತವಾಗಿ, ಸ್ವತಂತ್ರವಾಗಿ ಉಳಿಸಿಕೊಳ್ಳಬೇಕೆಂಬುದು ತೇಜಸ್ವಿಯವರ ನಿಲುವು.

## 6

ಈ ಸಿದ್ಧಾಂತಗಳ ಹಿನ್ನೆಲೆಯಲ್ಲಿ 'ನಿಗೂಢ ಮನುಷ್ಯರು', 'ಕರ್ವಾಲೊ' ಮತ್ತು 'ಚಿದಂಬರ ರಹಸ್ಯ' ಕೃತಿಗಳು ಅರ್ಥಪೂರ್ಣವಾಗುತ್ತವೆ. 'ಚಿದಂಬರ ರಹಸ್ಯ'ದಲ್ಲಿ ಸಾಹಿತಿ ಜಯರಾಂ "ಕ್ವೆಸ್ಟ್ ಫಾರ್ ಟ್ರೂತ್, ಸತ್ಯಾನ್ವೇಷಣೆ ನನ್ನ ಉದ್ದೇಶ, ನಿಜವಾದ ಅರ್ಥದಲ್ಲಿ ಚಿದಂಬರ ರಹಸ್ಯವನ್ನು ಭೇದಿಸುವುದು" ಎನ್ನುತ್ತಾರೆ. ತೇಜಸ್ವಿಯವರ ನಿಲುವೂ ಅದೇ ಆಗಿದೆ. ಆದರೆ ಸತ್ಯಕ್ಕೆ ಅನಂತಮುಖಗಳು ಎಂಬುದು ಅಂತಿಮವಾಗಿ ಗೋಚರವಾಗುವ ಸತ್ಯ! ನಿಗೂಢ, ರಹಸ್ಯ ಶಬ್ದಗಳು ಮೂರೂ ಕೃತಿಗಳಲ್ಲಿ ಬಳಕೆಯಾಗಿವೆ. ಹೀಗಾಗಿ ಇವು ಬೆಳವಣಿಗೆಯ ವಿವಿಧ ಹಂತಗಳನ್ನು, ವಿವಿಧ ಮಗ್ಗುಲುಗಳನ್ನು ತೆರೆಯುತ್ತ ಹೋಗುತ್ತವೆ.

ಜಗನ್ನಾಥ ಬರಹಗಾರ ಸೆಂಟ್ರೆಲ್ ಎಕ್ಸೈಸ್‌ನ ಇನ್‌ಸ್ಪೆಕ್ಟರಾಗಿದ್ದ ಗೆಳೆಯ ರಂಗಪ್ಪನೊಡಗೂಡಿ ನವಿಲುಗುಂದಕ್ಕೆ ಹೊರಟಾಗ ದಾರಿಯಲ್ಲಿ ಕಾರು ಮಳೆಯಲ್ಲಿ ನೆನೆದಿದ್ದ ಮಣ್ಣುದಾರಿಯಲ್ಲಿ ಹೂತುಹೋಗುತ್ತದೆ. ಅದನ್ನು ಮುಂದೆ ಸರಿಸಲು ಸಾಧ್ಯವಾಗುವುದಿಲ್ಲ. ಆ ಕಡೆ ಬಂದ ಆಳುಗಳ ಪ್ರಯತ್ನವೂ ಫಲಕಾರಿಯಾಗುವುದಿಲ್ಲ. ರಾತ್ರಿ ಮಳೆಯಲ್ಲಿ ಸಿಕ್ಕಿ ಬೀಳುತ್ತಾರೆ. ಬೆಳಗ್ಗೆ ಸಮೀಪದಲ್ಲಿದ್ದ ಗೋಪಾಲಯ್ಯ ಎಂಬ ವ್ಯಕ್ತಿಯ ಮನೆಗೆ ಹೋಗುತ್ತಾರೆ. ಹಿನ್ನೆಲೆಯಲ್ಲಿ ಮೋಡ ಮುಸುಕಿದ ಉಗ್ರ ಗಿರಿಯ ಶಿಖರ. ಹೀಗೆ ನಿಸರ್ಗವೂ, ಬೆಟ್ಟವೂ ಭಯಭೀತಿ ಹುಟ್ಟಿಸುತ್ತವೆ. ಅಂತೆಯೇ ಅಲ್ಲಿನ ಮನುಷ್ಯರೂ ಸಹ. ಎಲ್ಲ ನಿಗೂಢ. ವಾಸ್ತವ ವರ್ಣನೆ, ಘಟನೆ ಸಂಗತಿಗಳ ವಿವರಗಳೂ ಸಾಂಕೇತಿಕ ಅಸ್ತಿತ್ವ ಪಡೆದು ಈ ಕಿರು ಕಾದಂಬರಿ ಒಂದು ಬಗೆಯ ಸರ್ರಿಯಲಿಸ್ಟ್ ವಾತಾವರಣವನ್ನು ಸೃಷ್ಟಿಸುತ್ತದೆ. ಗೋಪಾಲಯ್ಯ ಹಲವು ನಾಮ, ವೇಷಗಳನ್ನು ತೊಟ್ಟು ಈಗ ಇಲ್ಲಿ ನೆಲೆಸಿದ್ದಾನೆ. ಒಳಮನೆಯಲ್ಲೇ ಸುಳಿದಾಡುವ 'ಶಾರಿ' ಮಾತೇ ಆಡುವುದಿಲ್ಲ. ಗೋಪಾಲಯ್ಯನ ವೇಷ ಬದಲಾವಣೆಗಳೂ ಕೊನೆಯಲ್ಲಿ ಭೂಕಂಪವಾಗಿ ಉಗ್ರಗಿರಿಯ ಒಂದು ಪಾರ್ಶ್ವ ಕುಸಿದು ಅವನ ಜಮೀನಿನಲ್ಲಿ ಸ್ಥಿತ್ಯಂತರವಾಗುವುದೂ ಅದರ ಪರಿಣಾಮವಾಗಿ ಆ ಕೆಸರನ್ನು ತೋಡುವ ಅವನ ಪ್ರಯತ್ನಗಳೂ ನಿಗೂಢ ವರ್ತನೆಯಾಗುತ್ತವೆ. ಗೋಪಾಲಯ್ಯನ ಅನಿಸಿಕೆಗೂ ರಂಗಪ್ಪನ ಯೋಜನೆಗಳಿಗೂ ದೂರ ಮನೋಸಂಪರ್ಕದಂತಹ ಟೆಲಿಪತಿ-ನಿಗೂಢ ಸಂಬಂಧಗಳು ಕಂಡುಬರುತ್ತವೆ. ಇತರ ಪಾತ್ರಗಳಾದ ಮುರಸುರ, ಕಾಂಪ್ರ ಪಾತ್ರಗಳು ಅನಾಗರಿಕ ಸ್ಥಿತಿಯ ರೂಕ್ಷ ವ್ಯಕ್ತಿಗಳಂತೆ ನಡೆದುಕೊಳ್ಳುತ್ತಾರೆ. ಮಂಗಗಳನ್ನು ತಿನ್ನುವ, ಸತ್ತ ಮಗನನ್ನು ಹೂಳದೆ ಬಿಸಾಡುವ, ಕಾಡುಹಂದಿ ಅರ್ಧ ತಿಂದ ಮಗನ ದೇಹಕ್ಕೇ ಸಿಡಿಸುವಂತೆ ಮದ್ದಿಟ್ಟು ಹಂದಿ ಬೇಟೆಯಾಡುವ ಅವರೂ ನಿಗೂಢ ಬೆರಗು ಮೂಡಿಸುತ್ತಾರೆ. ನಾಗರಿಕ ಹಾಗೂ ಕಿರಾತ ಪ್ರಪಂಚಗಳ ಹಿನ್ನೆಲೆ ಯಲ್ಲಿ ನಿಸರ್ಗವೂ ಕೂಡಿ ಸಾವು-ಬದುಕುಗಳ ವಿಚಿತ್ರ ವ್ಯಾಪಾರದ ಚಿತ್ರ ಕನಸಿನ ಭ್ರಾಮಕ ವಾತಾವರಣವನ್ನು ಸೃಷ್ಟಿಸುತ್ತದೆ. ವಿಶ್ವಪ್ರಜ್ಞೆ ಮತ್ತು ವ್ಯಕ್ತಿಪ್ರಜ್ಞೆಗಳ ಸಂಬಂಧದ ಅನ್ವೇಷಣೆಯೂ ಇಲ್ಲಿ ಕಾಣಬರುತ್ತದೆ.

'ಕರ್ವಾಲೊ' ನಿಗೂಢ ಮನುಷ್ಯರಿಗಿಂತ ಹೆಚ್ಚು ಕಲಾತ್ಮಕವಾಗಿ ಮೂಡಿ ಬಂದಿರುವ ಕಾದಂಬರಿಯಾಗಿದೆ. ಜೀವವಿಕಾಸ ಪಥದಲ್ಲಿ ಎಲ್ಲವೂ ಬದಲಾಗುತ್ತ ರೂಪಾಂತರ ಹೊಂದುತ್ತಾ ಬಂದಿರುವಾಗ ಹಾರುವ ಓತಿ ಮಾತ್ರ ಬದಲಾಗದೆ ಉಳಿದಿದೆ. ಮಿಲಿಯಾಂತರ ವರ್ಷಗಳ ಹಿಂದಿನ ಅದರ ಸ್ವರೂಪ ರಹಸ್ಯದ ಬಗೆಗೆ ಜೀವ ವಿಜ್ಞಾನಿ ಕರ್ವಾಲೊ ತಳೆಯುವ ಕುತೂಹಲವೇ ಕಾದಂಬರಿಯ ಹಂದರವಾಗಿದೆ. ತೇಜಸ್ವಿಯವರು ಕಾದಂಬರಿಗಳಲ್ಲಿ ವೈಜ್ಞಾನಿಕ ವಿಷಯಗಳನ್ನು ಬಳಸಿಕೊಂಡಿದ್ದರೂ ಕರಾರುವಾಕ್ಕಾದ ಶಾಸ್ತ್ರಜ್ಞಾನದ ಅನ್ವೇಷಣೆಗಾಗಿ ಅಲ್ಲ, ಸತ್ಯಾನುಭವದ ಅರಿವಿಕೆಗಾಗಿ ಎಂಬುದು ಗಮನಾರ್ಹ. ಕಾದಂಬರಿಯಲ್ಲಿ ಬರುವ ಜೇನ್ನೊಣದ ವರ್ಣನೆ ಯಲ್ಲಿ ವಿಕಾಸಪಥದ ಜೀವಿಗಳ ಮಜಲನ್ನು ಸೂಚಿಸುವುದೇ ಆಗುತ್ತದೆ. ಅವುಗಳ ವರ್ತನೆಗೆ ಸ್ವಭಾವಜನ್ಯ ಆಂತರಿಕವಾದ ಗುಣ ಹೇಗೆ ಕಾರಣವೋ ಹಾಗೇ ಕೆಲವು ಪಾತ್ರಗಳಲ್ಲೂ ಆ ಶಕ್ತಿಯನ್ನು ಕಾಣಬಹುದಾಗಿದೆ. ಕರ್ವಾಲೊ ವಿಜ್ಞಾನಿ, ಪ್ರತಿಭಾವಂತ ನಾದರೆ, ಆ ಯಾವ ಅಕಾಡೆಮಿಕ್ ಶಿಕ್ಷಣವೂ ಇಲ್ಲದ ಹಳ್ಳಿಯ ಮಂದಣ್ಣ ಅದ್ಭುತ ಪ್ರಕೃತಿಶಾಸ್ತ್ರಜ್ಞ, ನಿಸರ್ಗವೇ ಅವನ ಗುರು. ಎಂಗ್ಟ ಹಾವಿನ ಸೂಕ್ಷ್ಮಾತಿಸೂಕ್ಷ್ಮ ಅರಿವನ್ನು ಪಡೆದವನು, ಅವನು ಹಾವಿನಚರ್ಮ ಸುಲಿಯುವ ಕೈಚಳಕ ವಿಸ್ಮಯಕಾರಿ

ಯಾದದ್ದು. ಬಿರಿಯಾನಿ ಕರಿಯಪ್ಪ, ಪ್ಯಾರ, ನಾಯಿ 'ಕಿವಿ' - ಎಲ್ಲವೂ ಕಡೆದ ಶಿಲ್ಪಗಳಂತೆ ವಿಶಿಷ್ಟವಾದ ಪಾತ್ರಗಳಾಗಿವೆ.

ಮನುಷ್ಯನ ಎಲ್ಲ ಅನ್ವೇಷಣೆಗಳಿಗೆ ಒಂದು ಮಿತಿ ಇದೆ. ನಿಸರ್ಗದ ಭಾಗವಾದ, ಅದರ ವಿಕಾಸದ ಫಲವಾದ ಮಾನವ ಅದರ ರಹಸ್ಯವನ್ನೇ ಭೇದಿಸಲು ಹೋದಾಗಲೂ ಮೀರಿ ಸಾಗಲು ಸಾಧ್ಯವಿಲ್ಲ. ಕಾದಂಬರಿಯ ಅಂತಿಮ ದೃಶ್ಯ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಹಾರುವ ಓತಿಯನ್ನು ಹಿಡಿಯುವ ಅಂತಿಮಘಟ್ಟದಲ್ಲಿ, ಅದು ಬೆಟ್ಟದ ನೆತ್ತಿಗೆ ಹಾರುತ್ತದೆ. ಅಲ್ಲಿಂದ ಕೋಡುಗಲ್ಲಿನಾಚೆಗೆ, ಪ್ರಪಾತದ ಕಡೆಗೆ ಚಿಮ್ಮಿ, ಪಕ್ಕಗಳೇ ರೆಕ್ಕೆಗಳಾಗಿ ತೇಲಿ ತೇಲಿ ನೀಲಿಯ ಅಸ್ಪಷ್ಟ ಶೂನ್ಯದ ಕಡೆಗೆ ಕಣ್ಮರೆಯಾಗಿ ಹೋಗುತ್ತದೆ. ಆಗ ಕರ್ವಾಲೊ "ಹೋಗಲಿ ಬಿಡಿ, ಬ್ಯಾಡ್‌ಲಕ್. ಆದರೆ ಏನೂ ಬೇಸರ ವಿಲ್ಲ" ಎನ್ನುತ್ತಾರೆ. ಈ ವೈಫಲ್ಯ ನಿರಾಶಾದಾಯಕವಲ್ಲ. ತಿಳಿದಷ್ಟೆ ಅರಿವು, ಅನ್ವೇಷಣೆಯ ಅನುಭವವೇ ಸಾರ್ಥಕ್ಯ ಎಂಬ ದೃಷ್ಟಿಯೂ ಇಲ್ಲಿ ವ್ಯಕ್ತ.

'ಚಿದಂಬರ ರಹಸ್ಯ' ಕಾದಂಬರಿಯ ರಚನಾ ವಿನ್ಯಾಸವೂ ಕರ್ವಾಲೊದಂತೆ ಪತ್ತೆದಾರಿ ವಿಧಾನದ್ದಾದರೂ ಬೇರೆ ಬಗೆಯದು. ವಾಸ್ತವ ವಿವರಗಳೇ ಪರಸ್ಪರ ಸಂಬಂಧ ಪಡೆದು ಸಾಂಕೇತಿಕ ಮಹತ್ವ ಪಡೆಯುತ್ತವೆ. ಇಲ್ಲಿನ ಕೆಸರೂರು ಭಾರತವಾಗಬಹುದು, ವಿಶ್ವದ ಯಾವುದೇ ಕೇಂದ್ರವಾಗಬಹುದು. ವಿಜ್ಞಾನ, ತತ್ವಜ್ಞಾನ, ಸಮಾಜದ ಮೂಢನಂಬಿಕೆಗಳು, ರಾಜಕೀಯ ಸಿದ್ಧಾಂತ, ಚಟುವಟಿಕೆಗಳು ಇವು ತಮ್ಮ ತಮ್ಮ ಹಾದಿಯಲ್ಲಿ ರಹಸ್ಯವನ್ನು ಅರಿಯುವ, ಸತ್ಯವನ್ನು ಅನ್ವೇಷಿಸುವ ಕ್ರಿಯೆಯಲ್ಲಿ ತೊಡಗುತ್ತವೆ. ಕೆಸರೂರು ಹೈಬ್ರಿಡ್ ಏಲಕ್ಕಿ ಗಿಡವನ್ನು ಸ್ಥಾಯಿ ಭಿತ್ತಿ ಎನ್ನಬಹುದಾದರೆ ಅದರ ಸುತ್ತ ಕಾದಂಬರಿಯ ಕ್ರಿಯೆಗಳು ಸಾಗುತ್ತವೆ. ಮೇಲೆ ಹೇಳಿದ ಮೂರೂ ವಲಯಗಳಿಗೆ ತಮ್ಮದೇ ನಿಯಮ ಸೂತ್ರಗಳಿವೆ; ಪ್ರೇರಣೆ, ಚಾಲನೆ, ಗತಿಗಳಿಗೆ ತಕ್ಕಂತೆ ಸಾಗುತ್ತ ಅಂತಿಮವಾಗಿ ನಿಸರ್ಗದ ನಿಗೂಢತೆಯನ್ನೇ ಎದುರಾಗುತ್ತವೆ. ಚಿತ್ ಎಂದರೆ ಚಿತ್ತೂ ಆಗುತ್ತದೆ, ಅಂಬರವೆಂದಾಗ ಆಕಾಶವೂ ಆಗುತ್ತದೆ. ಹೀಗೆ ಮನುಷ್ಯನ ಅಂತರಂಗ, ನಿಸರ್ಗದ-ವಿಶ್ವದ ಬಹಿರಂಗ ಅನ್ವೇಷಣೆಯೂ ಇದಾಗಬಹುದು.

ಕೆಸರೂರಿನ ಏಲಕ್ಕಿಗೆ ಹಾಗೆಯೇ ಸಂಸ್ಕೃತಿಗೆ ಒಟ್ಟಿಗೇ ರೋಗ ತಗಲಿಕೊಂಡಿದೆ ಎಂಬ ಡಾ. ಪಾಟೀಲರ ಮಾತು ಅರ್ಥಪೂರ್ಣ. ವೈರಸ್ ತಗುಲದ, ಹೆಚ್ಚು ಫಲ ಸಂಪತ್ತಿನ ಏಲಕ್ಕಿಯ ತಾಯಿಗಿಡವನ್ನು ಅನ್ವೇಷಿಸಿದ ಡಾ. ಜೋಗಿ ಹಾಳರ ಮರಣ. ಅವರು ಟಿಪ್ಪಣಿಯಲ್ಲಿ ಬರೆದಿದ್ದ ಗಿಡಕ್ಕಾಗಿ ಹುಡುಕಾಟ, ಇವು ಪಾತ್ರಗಳ ನಂಬಿಕೆ, ಭ್ರಮೆಗಳಿಗೆ ತಕ್ಕಂತೆ ಪ್ರತಿಕ್ರಿಯೆ ಎಬ್ಬಿಸುತ್ತವೆ. ನಿಸರ್ಗನಾಶಕ್ಕೆ ಮನುಷ್ಯನ ಹಲವು ಬಗೆಯ ಸ್ವಾರ್ಥಗಳು ಕಾರಣವಾಗುತ್ತಿರುವ ಚಿತ್ರವೂ ಇದೆ. ಆದರೆ ಇವೆಲ್ಲ ಮೂಲದಲ್ಲಿ ಅಗೋಚರವಾಗಿ ಸಂಬಂಧ ಪಡೆದಿವೆ ಎಂಬುದನ್ನು ತೇಜಸ್ವಿ ಕಲಾತ್ಮಕವಾಗಿ ಚಿತ್ರಿಸುತ್ತಾರೆ. ನಿಸರ್ಗ ನಾಶದತ್ತ ಸಾಗುತ್ತಿದೆ ಎಂಬ ಸ್ಥಿತಿಯಲ್ಲೇ ತೇಜಸ್ವಿ ನಿಸರ್ಗದ ಇನ್ನೊಂದು ಮಹತ್ವದ ಗುಣದ ಕಡೆ ಗಮನ ಸೆಳೆಯುತ್ತಾರೆ. ಸುಟ್ಟು ನಾಶವಾಗುವ ಕಾಡಿನ ಬೂದಿಯಲ್ಲೇ ಮತ್ತೆ ಚಿಗುರುವ, ಚೈತನ್ಯ ಮೂಡುವ ಶಕ್ತಿಯೂ ಇದೆ. ಇದೊಂದು ಚಿರಂತನ ಆವರ್ತನ ಕ್ರಿಯೆ. ಡಾ. ಪಾಟೀಲರು ನಿಸರ್ಗದ ಈ ವಿಸ್ಮಯಕಾರಿ ಶಕ್ತಿಯ ಬಗ್ಗೆ ವಿವರಿಸುತ್ತಾರೆ. ಹಾಗೆಯೇ ಸಮಾಜ ಸಂಸ್ಕೃತಿಗಳೂ ಸಹ. ಜಾತಿದೊಂಬಿಗೆ ಈಡಾದ ಕೆಸರೂರು, ಲಾಂಟಾನಾ (ವಿಕೃತ ಸಮಾಜ) ಕಾಡಿಗೆ ಬಿದ್ದ ಬೆಂಕಿಯ ಹಿನ್ನೆಲೆಯಲ್ಲಿ ಬೇರೆ ಜಾತಿ ಧರ್ಮಗಳ ರಫಿ ಮತ್ತು ಜಯಂತಿ ದಟ್ಟ ಹೊಗೆಯಿಂದ ದೂರ, ಬೆಟ್ಟದ ತುದಿ ತಲುಪುತ್ತಾರೆ. ಅವರಿಗೆ ಮಾತ್ರ ಹೈಬ್ರಿಡ್ ಏಲಕ್ಕಿ ತಾಯಿಗಿಡದ ದರ್ಶನವಾಗುತ್ತದೆ ಎಂಬುದೂ ಅರ್ಥಪೂರ್ಣ. ಲಾಂಟಾನಾ ಮುಳ್ಳಿನಿಂದ ಬಟ್ಟೆ ಚಿಂದಿಯಾಗಿ ಬೆತ್ತಲೆಯಾಗಿ ಅವರು ಬೆಟ್ಟದ ನೆತ್ತಿಯೇರುತ್ತಾರೆ, ನವಸಮಾಜದ ಹೈಬ್ರಿಡ್‌ನ ಮೂಲವಾಗುತ್ತಾರೆ ಎಂಬ ಸೂಚನೆ ಸಿಗುತ್ತದೆ. ಬೈಬಲಿನ ಆದಮ್ ಮತ್ತು ಈವ್‌ರನ್ನು ರಫಿ-ಜಯಂತಿ ನೆನಪಿಗೆ ತರುತ್ತಾರೆ ಎಂಬ ರಾಜೇಂದ್ರ ಚೆನ್ನಿಯವರ ಹೇಳಿಕೆಯೂ ಸರಿಯಾದದ್ದೆ.

ಈ ಕೊನೆಯ ದೃಶ್ಯ ಭಾವುಕ ಎನಿಸಬಹುದು. ಆದರೆ ನಿಸರ್ಗದ ಹಾಗೂ ಮನುಷ್ಯನ ಇದುವರೆಗಿನ ಇತಿಹಾಸ ಇಂತಹ ಆವರ್ತನಗಳಿಂದ, ಯುಗಾಂತ-ಯುಗಾರಂಭಗಳಿಂದ ಕೂಡಿದೆ ಎಂಬುದನ್ನು ಮರೆಯುವಂತಿಲ್ಲ. ಬಹುಶಃ ತೇಜಸ್ವಿಯವರು ರೋಗಗ್ರಸ್ಥ ಸಮಾಜಕ್ಕೆ ಪರಿಹಾರ ಸೂಚಿಸಿದ್ದಾರೆ ಎನ್ನುವುದಕ್ಕಿಂತ ಈ ಎಲ್ಲ ವಿಕೃತಿಗಳ ನಡುವೆಯೂ ಮೂಲ ತಳದಲ್ಲಿನ ಒಳಪಾತಳಿಗಳ ಸಂಬಂಧಗಳ ಬಗೆಗಿನ ಅನ್ವೇಷಣೆಗಳ ಮೂಲಕ ಜೀವನದ ಬಗ್ಗೆ ಕಾಳಜಿಯನ್ನು, ಪ್ರೀತಿಯನ್ನು, ಆಶೆಯನ್ನು ಹೊಂದಿದ್ದಾರೆ ಎನ್ನಬಹುದು.

ಕಳೆದ ಮೂರು ದಶಕಗಳ ಕಥೆ ಕಾದಂಬರಿಗಳನ್ನು ಗಮನಿಸಿಯೂ ತೇಜಸ್ವಿಯವರ ರಚನೆಗಳು ಹೊಸ ವೈಚಾರಿಕ ದೃಷ್ಟಿಯಿಂದ, ಅಭಿವ್ಯಕ್ತಿಯ ನೂತನ ಕಲೆಗಾರಿಕೆಯಿಂದ ವಿಶಿಷ್ಟವಾದ, ಅನುಕರಣೀಯ ಕೊಡುಗೆಯಾಗಿವೆ ಎನ್ನುವುದರಲ್ಲಿ ಸಂಶಯವಿಲ್ಲ.*

❑

---

* ಕೆ. ಪಿ. ಪೂರ್ಣಚಂದ್ರ ತೇಜಸ್ವಿಯವರು 'ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್' ಪ್ರವಾಸ ಕಥನ ಹಾಗೂ ಒಂದು ನದಿಯ ಇತಿಹಾಸ, ಚಿತ್ರಗಳನ್ನು ನೀಡಿದ ನಂತರ ಎರಡು ಸೃಜನಶೀಲ ಕೃತಿಗಳನ್ನು ರಚಿಸಿದರು. 'ಕಿರಗೂರಿನ ಗಯ್ಯಾಳಿಗಳು' ನಾಲ್ಕು ಕಥೆಗಳ ಸಂಗ್ರಹವಾದರೆ, 'ಜುಗಾರಿ ಕ್ರಾಸ್' ಒಂದು ಕಾದಂಬರಿ 1996ರಲ್ಲಿ ಪುಸ್ತಕರೂಪದಲ್ಲಿ ಬಂದ 'ಅಣ್ಣನ ನೆನಪು' ತಂದೆ ಕುವೆಂಪು ಅವರ ಬಗೆಗಿನ ನೆನಪುಗಳನ್ನು ನಿರೂಪಿಸಿದರೂ ಹಲವು ಕ್ಷೇತ್ರಗಳ ಸೂಕ್ಷ್ಮ ವಿಮರ್ಶೆಯ ಚಿಂತನೆಗಳನ್ನು ಒಳಗೊಂಡಿದೆ. ನೆನಪುಗಳೂ ಸೃಜನಶೀಲ ಪ್ರತಿಭೆಯ ಫಲವೇ ಆಗಿವೆ. ಪರಿಸರದ ಕಥೆ ಕರ್ವಾಲೊವನ್ನು ನೆನಪಿಗೆ ತರುವ ಹದಿನಾಲ್ಕು ಚಿತ್ರಗಳನ್ನು ಒಳಗೊಂಡಿದೆ. ಅನಂತರ ತೇಜಸ್ವಿಯವರ ಆಸಕ್ತಿ ಪರಿಸರ, ಸಾಮಾನ್ಯ ಜ್ಞಾನ, ವೈಜ್ಞಾನಿಕ, ವೈಚಾರಿಕ ಕ್ಷೇತ್ರಗಳತ್ತ ಹೊರಳಿದುದರ ಫಲವಾಗಿ ಕನ್ನಡಕ್ಕೆ ಒಂದು ಅಪೂರ್ವ ಜ್ಞಾನಭಂಡಾರ ಲಭಿಸಿತು. ಅವರ ಎಂದಿನ ಹಾಸ್ಯಮಯ ಸರಳ ಶೈಲಿಯ ಕಥನ ವಿಧಾನ ತೊಂಬತ್ತರ ದಶಕದ 'ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕಥೆಗಳು', 'ಮಿಸ್ಸಿಂಗ್ ಲಿಂಕ್', ಮಿಲೇನಿಯಂ ಸರಣಿ ಕೃತಿಗಳಲ್ಲಿ ಕಂಡುಬರುತ್ತದೆ. ಹಲವು ಅನುವಾದಗಳಲ್ಲೂ ಈ ಗುಣ ವ್ಯಕ್ತ. ಕನ್ನಡಕ್ಕೆ ಹೊಸಬಗೆಯ ಕೃತಿಗಳ ರುಚಿ ಮೂಡಿಸಿದುದನ್ನು ಅವುಗಳ ಜನಪ್ರಿಯತೆಯೇ ತಿಳಿಸುತ್ತದೆ.

1. ವ್ಯಕ್ತಿವಿಶಿಷ್ಟಸಿದ್ಧಾಂತ : ಪೂರ್ಣಚಂದ್ರ ತೇಜಸ್ವಿ : ಪು.9.
2. ಪೂರ್ಣಚಂದ್ರ ತೇಜಸ್ವಿಯವರ ಎಲ್ಲ ಕಥೆಗಳು : 1983. 'ಅಬಚೂರಿನ ಪೋಸ್ಟಾಫೀಸು'ಗೆ ಬರೆದ ಪೀಠಿಕೆ 'ಹೊಸದಿಗಂತದ ಕಡೆಗೆ'. ಪು. vi-vii.
3. 'ಕರ್ವಾಲೊ' ಹಿನ್ನುಡಿ, ಜಿ.ಎಚ್. ನಾಯಕ್, ಪು. 212.
4. ಇದೇ ಲೇಖಕನ : 'ತೇಜಸ್ವಿ ಸಾಹಿತ್ಯ ಮತ್ತು ಕಲೆ' ಲೇಖನದಲ್ಲಿ ಈ ತಂತ್ರವಿಧಾನದ ವಿವರವನ್ನು ನೋಡಬಹುದು.
5. 'ಕರ್ವಾಲೊ' ಹಿನ್ನುಡಿ : ಜಿ.ಎಚ್. ನಾಯಕ್ : ಪು. 179.

# ಗಿರೀಶ ಕಾರ್ನಾಡ

ಹಾ ಸಾ ಕೃ

ಕನ್ನಡ ನಾಟಕ ಸಾಹಿತ್ಯ ಪ್ರಕಾರದಲ್ಲಿ ಈ ಶತಮಾನದ ಆರಂಭದ ದಶಕಗಳಿಂದಲೂ ಮೂರು ಪರಂಪರೆಗಳು, ಪ್ರಧಾನ ಧಾರೆಗಳಾಗಿ ಬೆಳವಣಿಗೆ ಕಂಡವು, ಕೈಲಾಸಂ ಮತ್ತು ಶ್ರೀರಂಗರ ವಿಲಾಸಿ ರಂಗಭೂಮಿ ಆಧಾರಿತ ನಾಟಕ ಪರಂಪರೆ, ವೃತ್ತಿಭೂಮಿಯ ನಾಟಕ ಪರಂಪರೆ, ಸಾಹಿತ್ಯ ಕೃಷ್ಟಿಯ ಕಾವ್ಯ ನಾಟಕ ಪರಂಪರೆ ಅರವತ್ತರ ದಶಕದ ವೇಳೆಗೆ ವೃತ್ತಿ ರಂಗಭೂಮಿ ಕಣ್ಮರೆಯಾಯಿತು. ವಿಲಾಸಿ ರಂಗಭೂಮಿ ತನ್ನ ತೀವ್ರತೆಯನ್ನು ಕಳೆದುಕೊಂಡು ಹಾಸ್ಯನಾಟಕಗಳಿಗೇ ಸೀಮಿತಗೊಂಡಿತ್ತು. ಅಂತಹ ಸಂದರ್ಭದಲ್ಲಿ ಸಾಹಿತ್ಯ ಮತ್ತು ರಂಗಭೂಮಿಗಳ ಸಾಧ್ಯತೆಗಳನ್ನು ಅರಸುವ ಗಂಭೀರ ಯಶಸ್ವಿ ಕಾರ್ಯವನ್ನು ಮಾಡಿದವರು ಗಿರೀಶ ಕಾರ್ನಾಡರು. ವಸ್ತು, ರೂಪ, ಪ್ರಯೋಗಗಳಿಂದ ನಾಟಕ ಪ್ರಕಾರದ ಹಲವು ಆಯಾಮಗಳ ಮಹತ್ವವನ್ನು ತೋರಿ, ಅದಕ್ಕೆ ಶ್ರೇಷ್ಠಸ್ಥಾನವನ್ನು ಕಲ್ಪಿಸಿದರು. ಸಮಕಾಲೀನ ಬದುಕಿನ ಸಂಕೀರ್ಣತೆಯನ್ನು ಪರಂಪರೆಯ ಮೌಲ್ಯಗಳೊಂದಿಗೆ ಇಟ್ಟು ಅನುಭವ ಮತ್ತು ಅರ್ಥಸ್ತರಗಳನ್ನು ನಾಟಕಗಳ ಮೂಲಕವೇ ವಿಸ್ತರಿಸಿದ ಕೀರ್ತಿಗೆ ಪಾತ್ರರಾದವರು ಕಾರ್ನಾಡರು.

ಇವರು 19, ಮೇ 1938ರಲ್ಲಿ ಮಹಾರಾಷ್ಟ್ರದಲ್ಲಿ ಜನಿಸಿದರು. ತಂದೆ ಡಾ. ರಘುನಾಥ ಕಾರ್ನಾಡರು, ತಾಯಿ ಕೃಷ್ಣಾಬಾಯಿ ಅವರು. ಕಾರ್ನಾಡರು ಧಾರವಾಡ, ಮುಂಬೈಗಳಲ್ಲಿ ಕಾಲೇಜು ಶಿಕ್ಷಣ ಮುಗಿಸಿ, ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಿಂದ ಎಂ. ಎ. ಪದವಿ ಪಡೆದರು. ಆಕ್ಸ್‌ಫರ್ಡ್‌ಗೆ ಹೋಗುವ ಮುಂಚೆ ಕಾರ್ನಾಡರೇ ಹೇಳಿರುವಂತೆ - ಅವರಿಗಿದ್ದ ಒತ್ತಡದಿಂದ ಹೊರ ಬರಲು (ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿಗೆ ಹೋಗುವ ಹುಡುಗನೊಬ್ಬನ ಮೇಲೆ ತಂದೆ ತಾಯಿ ಹೊರಿಸುವ ಜವಾಬ್ದಾರಿ) 'ಯಯಾತಿ' ಬರೆದರಂತೆ.

ಆರಂಭಕ್ಕೆ ಕಾರ್ನಾಡರು ಕವಿಯಾಗಲು ಹೊರಟಿದ್ದರಂತೆ. ಕೆಲವು ಕವನಗಳನ್ನು ಬರೆದಿದ್ದರು - ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ. ಆದರೆ ಅವರು ತಮ್ಮ ಮೊಟ್ಟ ಮೊದಲ ಕೃತಿ 'ಯಯಾತಿ' ಬರೆದ ಮೇಲೆ ತಮ್ಮ ಅಭಿವ್ಯಕ್ತಿಯ ಮಾಧ್ಯಮ ನಾಟಕವೆಂದು ಕಂಡುಕೊಂಡರು. ಯಯಾತಿ ಯನ್ನು ಅವರು ಬರೆದದ್ದು 1961ರಲ್ಲಿ. ಅಂದಿನಿಂದ ಇಂದಿನವರೆಗೆ ಕಾರ್ನಾಡರು 9 ನಾಟಕಗಳನ್ನು ಬರೆದಿದ್ದಾರೆ. ತುಘಲಖ್ (1964), ಹಯವದನ (1971), ಅಂಜುಮಲ್ಲಿಗೆ (1977), ಹಿಟ್ಟಿನ ಹುಂಜ (1980), ನಾಗಮಂಡಲ (1988), ತಲೆದಂಡ (1990), ಅಗ್ನಿ ಮತ್ತು ಮಳೆ (1995), ಟಿಪ್ಪುವಿನ ಕನಸುಗಳು (1999).

ಅವರ ಮನೆಯಲ್ಲಿ ತಂದೆ ತಾಯಿ ನಾಟಕದ ಅಭಿಮಾನಿಗಳಾಗಿದ್ದರು. ಕಾರ್ನಾಡರು ಧಾರವಾಡದಲ್ಲಿದ್ದಾಗ ತಂದೆ ತಾಯಿ ಜೊತೆಯಲ್ಲಿ ಕಂಪೆನಿ ನಾಟಕಗಳನ್ನು ನೋಡುತ್ತಿದ್ದರಂತೆ ಮುಂದೆ ಇಂಗ್ಲೆಂಡಿನಲ್ಲಿದ್ದಾಗಲಂತೂ ಆಕ್ಸ್‌ಫರ್ಡ್ ಮತ್ತು ಕೇಂಬ್ರಿಡ್ಜ್ ವಿದ್ಯಾಲಯಗಳಲ್ಲಿ ಪ್ರದರ್ಶಿತವಾಗುತ್ತಿದ್ದ ಅನೇಕ ನಾಟಕಗಳನ್ನು ನೋಡಲು ಅವಕಾಶ ದೊರೆಯಿತು. ಇಂಗ್ಲೆಂಡಿನಲ್ಲಿದ್ದಾಗಲೇ ಅವರು 'ತುಘಲಖ್' ಬರೆದರು. ತುಘಲಖ್ ಭಾರತೀಯ ರಂಗಭೂಮಿಯಲ್ಲಿ ಬಂದ ನಾಟಕಗಳಲ್ಲೆ ಶ್ರೇಷ್ಠ ನಾಟಕವೆನಿಸಿಕೊಂಡಿದ್ದಲ್ಲದೇ ಆಧುನಿಕ ರಂಗಭೂಮಿಯ ಪರಂಪರೆಗೆ ಭದ್ರ ಬುನಾದಿಯನ್ನು ಹಾಕಿಕೊಟ್ಟಿತು.

ಸಾಹಿತ್ಯಕ್ಷೇತ್ರದಲ್ಲಿ ನಾಟಕಗಳನ್ನು ಮಾತ್ರ ರಚಿಸಿ ಜ್ಞಾನಪೀಠ ಪ್ರಶಸ್ತಿಗೆ ಪುರಸ್ಕೃತರಾದವರಲ್ಲಿ ಕಾರ್ನಾಡರು ಮೊದಲಿಗರು. ಎಂದೇ ಪ್ರಶಸ್ತಿ ಬಂದಾಗ ಅವರಿಗೆ ಸಂದ ಗೌರವ ಕಾರ್ನಾಡರಿಗೆ ಮಾತ್ರವಾಗಿರದೆ ಅದು ಇಡೀ ಭಾರತೀಯ ರಂಗಭೂಮಿಗೆ ಸಂದ ಗೌರವವೆಂದು ಪರಿಗಣಿತವಾಯಿತು. ಕನ್ನಡ ರಂಗಭೂಮಿಯ ಪತಾಕೆ ಮತ್ತಷ್ಟು ಎತ್ತರದಲ್ಲಿ ಹಾರಲು ಪುಷ್ಟಿಯನ್ನು ಒದಗಿಸಿಕೊಟ್ಟಿತು.

ಜ್ಞಾನಪೀಠ ಪ್ರಶಸ್ತಿಗೆ ಅರ್ಹರಾದವರ ಕೃತಿಗಳು ಪ್ರಶಸ್ತಿ ಬಂದ ಮೇಲೆ ಕೃತಿಗಳ ಮೂಲಭಾಷೆಯಿಂದ ಇತರ ಭಾಷೆಗಳಿಗೆ ಅನುವಾದಿತವಾಗುವುದು ಸರ್ವೇ ಸಾಮಾನ್ಯವಾದರೆ ಕಾರ್ನಾಡರ ಕೃತಿಗಳು ಪ್ರಶಸ್ತಿ ಬರುವ ಮುಂಚೆಯೇ ಹಲವು ಭಾರತೀಯ ಭಾಷೆಗಳಿಗೆ ಅನುವಾದಿತವಾಗಿ ಆ ಭಾಷೆಗಳಲ್ಲಿ ಪ್ರಯೋಗವೂ ಆಗಿ ಯಶಸ್ವಿಯಾಗಿದ್ದವು, ಇಂಗ್ಲಿಷ್ ಭಾಷೆಯೂ ಸೇರಿದಂತೆ. ಪ್ರಯೋಗ ಭಾರತಕ್ಕೆ ಮಾತ್ರ ಸೀಮಿತವಾಗಿರದೆ ಇಬ್ರಾಹಿಂ ಅಲ್ಕಾಜಿಯವರು ನಿರ್ದೇಶಿಸಿದ 'ತುಘಲಖ್' ವಿದೇಶ ಸಂಚಾರವನ್ನೇ ಕೈಗೊಂಡಿತ್ತು. 'ಹಯವದನ' ಆಸ್ಟ್ರೇಲಿಯ, ಜರ್ಮನಿಗಳಲ್ಲಿ ಅಲ್ಲಿನವರಿಂದಲೇ ಪ್ರಯೋಗಗೊಂಡಿತ್ತು. 'ನಾಗಮಂಡಲ'ವನ್ನು ಅಮೇರಿಕದ ಗಥ್ರಿ ಥಿಯೇಟರ್‌ನವರು ಪ್ರದರ್ಶಿಸಿದರು. (ಇಂಗ್ಲೀಷಿನಲ್ಲೇ ಬರೆದದ್ದು). ಹೀಗೆ 'ಜ್ಞಾನಪೀಠ' ಬರುವ ಮುನ್ನವೆ ಕಾರ್ನಾಡರು ರಾಷ್ಟ್ರೀಯ, ಅಂತಾರಾಷ್ಟ್ರೀಯ ಖ್ಯಾತಿಯನ್ನು ಗಳಿಸಿದ್ದರು ಎನ್ನುವುದು ನಾವು ನೆನಪಿನಲ್ಲಿಡಬೇಕಾದ ಸಂಗತಿ - ಜ್ಞಾನಪೀಠವೇ ಅವರನ್ನು ಸರ್ವಮಾನ್ಯ ಮಾಡಲಿಲ್ಲ.

ಕನ್ನಡ ರಂಗಭೂಮಿಯಂತೂ ಅವರಿಗೆ ಅಪಾರವಾಗಿ ಋಣಿಯಾಗಿದೆ. 70ರ ದಶಕದ ಬಯಲು ರಂಗೋತ್ಸವದ ಯಶಸ್ಸಿಗೆ ಅವರ ನಟನೆಯೂ ಒಂದು ಕಾರಣ. ಈಡಿಪಸ್ ನಾಟಕದಲ್ಲಿ ದೊರೆ ಈಡಿಪಸ್ ಪಾತ್ರವನ್ನು ಅವರೇ ವಹಿಸಿದ್ದರು. ಮುಂದೆ ಅವರು ರಂಗಭೂಮಿಯಲ್ಲಿ ನಟಿಸದಿದ್ದರೂ ಅವರ ನಾಟಕಗಳು ದೇಶವಿದೇಶಗಳಲ್ಲಿ ಯಶಸ್ವಿಯಾಗಿರುವಂತೆ ಕನ್ನಡದಲ್ಲೂ ಯಶಸ್ಸು ಕಂಡಿವೆ. 60ರ ದಶಕದಲ್ಲಿ ಅವರ 'ತುಘಲಖ್' ಪ್ರದರ್ಶನ ತುಘಲಖ್ ಪಾತ್ರ ವಹಿಸಿದ ಸಿ.ಆರ್.ಸಿಂಹರನ್ನು ಬೆಳಕಿಗೆ ತಂದದ್ದಲ್ಲದೆ ಹವ್ಯಾಸಿರಂಗಕ್ಕೆ ಹೊಸಜೀವ ಸಂಚಾರವನ್ನೆ ತಂದಿತು. ಮೂರು ದಶಕಗಳ ನಂತರವೂ ತುಘಲಖ್ ಪ್ರಯೋಗದ ಜನಪ್ರಿಯತೆ ಕುಗ್ಗಿಲ್ಲವೆನ್ನುವುದು ಆ ನಾಟಕದ ಹೆಗ್ಗಳಿಕೆ.

ಪುರಾಣ ಬಳಸಿ ಕಾರ್ನಾಡರು ಯಯಾತಿ ಬರೆದರು. ಇತಿಹಾಸ ಬಳಸಿ ತುಘಲಖ್ ಬರೆದರು. ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಕೆಲವು ಗಣ್ಯರು ಭಾರತೀಯ ರಂಗಭೂಮಿಯನ್ನು ಪಾಶ್ಚಾತ್ಯ ಪ್ರಭಾವದಿಂದ ಬಿಡಿಸಿ ಕಟ್ಟಬೇಕೆಂದು ಮಾಡಿದ ಆಲೋಚನೆ, ತೋರಿದ ಕಾಳಜಿಗೆ ಸ್ಪಂದಿಸಿದ ಕಾರ್ನಾಡರು ಜಾನಪದ ರಂಗ ತಂತ್ರಗಳನ್ನು ಬಳಸಿ 'ಹಯವದನ' ಬರೆದರು.

ಪರಿಪೂರ್ಣತೆಯ ಆಕಾಂಕ್ಷೆಯನ್ನು ವಸ್ತುವಾಗುಳ್ಳ 'ಹಯವದನ'ದಲ್ಲಿ ಜಾನಪದ ರಂಗದ Vitalityಯನ್ನು ಬಯಲುಗೊಳಿಸುವುದರ ಜೊತೆಗೆ ಕಾರ್ನಾಡರು ರಂಗಸಾಧ್ಯತೆಗಳನ್ನು ವಿಸ್ತರಿಸಿದರು. ದೇಶಾದ್ಯಂತ ಹಲವಾರು ಶ್ರೇಷ್ಠ ನಿರ್ದೇಶಕರು 'ಹಯವದನ'ವನ್ನು ನಿರ್ದೇಶಿಸಿ ಸ್ಪರ್ಧಿಸಿದರು, ಸತ್ಯ ದೇವ ಧುಬೆ, ಬಿ. ವಿ. ಕಾರಂತರು ಇತ್ಯಾದಿ. ಹಯವದನ ಅಖಿಲಭಾರತ ವ್ಯಾಪ್ತಿಯನ್ನು ಮೀರಿ ಆಸ್ಟ್ರೇಲಿಯಾದಲ್ಲೂ

ಪ್ರಯೋಗ ಕಂಡಿತು. (ಪ್ರಯೋಗ ಇಂಗ್ಲೀಷಿನಲ್ಲಿ ನಿರ್ದೇಶನ: ಬಿ.ವಿ. ಕಾರಂತ್) ಆನಂತರ ಅವರು ಬರೆದ ನಾಟಕಗಳಲ್ಲಿ ತಲೆದಂಡ, ನಾಗಮಂಡಲ ಲೇಖಕರ ಖ್ಯಾತಿಯನ್ನು ಮತ್ತಷ್ಟು ಹೆಚ್ಚಿಸಿದೆ. ವಿವಿಧ ಭಾಷೆಗಳಿಗೆ ತುರ್ಜುಮೆಯಾಗಿ ಯಶಸ್ವೀ ಪ್ರಯೋಗ ಕಂಡಿದೆ. 'ನಾಗಮಂಡಲ' ಚಲನಚಿತ್ರ ರೂಪದಲ್ಲೂ ಜಯಗಳಿಸಿದೆ. ಕಾರ್ನಾಡರ ಮಿಕ್ಕ ನಾಲ್ಕು ನಾಟಕಗಳು ಮೇಲಿನ ನಾಟಕಗಳಷ್ಟು ಪ್ರಯೋಗಗಳನ್ನು ಕಾಣದಿರುವುದು ಪ್ರಾಯೋಗಿಕ ರಂಗಭೂಮಿಯ ಸಮಸ್ಯೆಯೆ ಹೊರತು ನಾಟಕಗಳ ದೋಷವಲ್ಲ. ಉದಾರಹಣೆಗೆ 'ಅಗ್ನಿ ಮತ್ತು ಮಳೆ' ಕಾರ್ನಾಡರ ಮಿಕ್ಕ ನಾಟಕಗಳಷ್ಟು ಯಶಸ್ಸು ಪಡೆಯಲಿಲ್ಲ. ಆದರೆ ಇಂಗ್ಲೀಷಿಗೆ ಅವರಿಂದಲೇ ಅನುವಾದಿಸಿದ 'Fire and Rain' ನಗರದ ಆಂಗ್ಲರಂಗ ವಲಯದಲ್ಲಿ ಅಪರಿಮಿತವಾದ ಯಶಸ್ಸನ್ನು ಪಡೆಯಿತು. 'ಅಂಜುಮಲ್ಲಿಗೆ' ಹಿಂದಿಯಲ್ಲಿ ಹೆಚ್ಚು ಯಶಸ್ಸನ್ನು ಗಳಿಸಿದೆ. ಹೀಗೆ ಪ್ರಾಯೋಗಿಕ ರಂಗಭೂಮಿಯಲ್ಲಿ ಕೆಲವು ನಾಟಕಗಳು ಏರುಪೇರುಗಳನ್ನು ಅನುಭವಿಸಿದ್ದರೂ, ಸಾಹಿತ್ಯವಾಗಿ, ಸಾಂಸ್ಕೃತಿಕವಾಗಿ ಅವರ ಯಾವ ನಾಟಕವನ್ನೂ ಕಡೆಗಣಿಸಲಾಗುವುದಿಲ್ಲ. ಒಂದಲ್ಲ ಒಂದು ಮಹತ್ವ ಅವಕ್ಕೆ ಇದ್ದೇ ಇದೆ.

### ವ್ಯಕ್ತಿತ್ವ

ಆರಡಿ ಎತ್ತರದ ಆರೋಗ್ಯ ದೃಢಕಾಯ ಶರೀರ ಕಾರ್ನಾಡರದ್ದು. ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ, ಕೇಂದ್ರ ಸಂಗೀತ ನಾಟಕ ಅಕಾಡೆಮಿ ಅಧ್ಯಕ್ಷರಾಗಿ ಪುಣೆಫಿಲಂ ಇನ್ಸಿಟ್ಯೂಟ್ ಪ್ರಿನ್ಸಿಪಾಲರಾಗಿ, ಪ್ರಸ್ತುತ ಲಂಡನ್ನಿನ ನೆಹರು ಸೆಂಟರ್‌ನ ಮುಖ್ಯಸ್ಥರಾಗಿ ಹಲವಾರು ಉನ್ನತ ಸ್ಥಾನಗಳಲ್ಲಿ ಅವರು ಕಾರ್ಯವಹಿಸಿದ್ದರೂ ಅವರೆಂದೂ ಅಹಂನಿಂದ ಬೀಗಿಲ್ಲ. ಸಾಮಾನ್ಯರೂ ಅವರೊಂದಿಗೆ ಹರಟಬಹುದು, ಚರ್ಚಿಸಬಹುದು, ಭಿನ್ನಾಭಿಪ್ರಾಯವನ್ನು ತಳೆದೂ ಖುಷಿಯಿಂದ ಮಾತನಾಡಬಹುದು. ಕನ್ನಡ ಸಾಹಿತ್ಯ ಕ್ಷೇತ್ರದ ಜಾತಿ ಮತ್ತು ಪಂಥದ ಗಂಡಾಂತರಗಳಿಗೆ ಎಂದೂ ಸಿಕ್ಕಿಹಾಕಿಕೊಳ್ಳದೆ ಜಾಣತನದಿಂದ ಈಜಿದವರು. ಎಡ, ಬಲ ರಾಜಕೀಯ ಸಿದ್ಧಾಂತಗಳಿಗೆ ತಮ್ಮನ್ನು ಕಟ್ಟಿಹಾಕಿಕೊಳ್ಳದಿದ್ದರೂ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದ ಸಂದರ್ಭಗಳಲ್ಲಿ ಪ್ರತಿಭಟನೆಯ ದನಿಯನ್ನು ಎತ್ತಿದವರು. ಜಾತ್ಯತೀತ ಮತ ಸಹಿಷ್ಣುತೆಯ ಮನೋಧರ್ಮವನ್ನು ಬೆಂಬಲಿಸಿದರು.

ಒಬ್ಬ ಜ್ಞಾನಪೀಠ ಪ್ರಶಸ್ತಿ ಪಡೆದ ಲೇಖಕನ ಬಗ್ಗೆ ಬರಬಹುದಾದಷ್ಟು ಲೇಖನಗಳು ಕಾರ್ನಾಡರ ಬಗ್ಗೆ ಇನ್ನೂ ಬಂದಿಲ್ಲ. ನಾಟಕಗಳಿಗೆ ಎರಡು ಆಯಾಮ. ಒಂದು ಸಾಹಿತ್ಯಿಕ, ಇನ್ನೊಂದು ಪ್ರಾಯೋಗಿಕ. ಸಾಹಿತ್ಯಿಕ ಶ್ರೇಷ್ಠತೆಯ ಬಗ್ಗೆ ಕೆಲವಷ್ಟು ಲೇಖನಗಳು ಬಂದಿವೆ, ಪ್ರಾಯೋಗಿಕವಾಗಿ ಬರಬೇಕಿದೆ. ಎರಡೂ ಆಯಾಮಗಳಲ್ಲಿರುವ ಕೊರತೆಯನ್ನು ಇನ್ನು ಮೇಲಾದರೂ ತುಂಬಬೇಕಾಗಿದೆ.

ನಾಟಕ ಕಟ್ಟುವ ಕ್ರಿಯೆಯನ್ನು ಕಟ್ಟಡ ಕಟ್ಟುವ ಕ್ರಿಯೆಗೆ ಹೋಲಿಸುವ ಕಾರ್ನಾಡರು ಆ ಕಲೆಯಲ್ಲಿ ಮಾಡಿರುವ ಸಾಧನೆ ಅದ್ಭುತವಾದದ್ದು: ಅಂಜುಮಲ್ಲಿಗೆ ಒಂದನ್ನು ಬಿಟ್ಟು ಅವರ ಎಲ್ಲ ನಾಟಕಗಳಿಗೆ ವಸ್ತುವನ್ನು ಪುರಾಣದಿಂದ, ಇತಿಹಾಸದಿಂದ ಇಲ್ಲದೆ ಜಾನಪದದಿಂದ ಆಯ್ದಿದ್ದಾರೆ. ವಸ್ತುವನ್ನು ಅವರು ಎಲ್ಲಿಂದಲೇ ಆಯಲಿ ಆ ವಸ್ತುವಂತೂ ಅವರ ಕೈಯಲ್ಲಿ ಬೇರೆಯೇ ರೂಪ ಪಡೆಯುತ್ತದೆ. ಮೂಲವಸ್ತುವನ್ನು ನಾವು ಮರೆತೇಬಿಡುವಷ್ಟು ಅದರ ರೂಪ ಬೇರೆಯದಾಗಿರುತ್ತದೆ. ಆ 'ರೂಪ' ವರ್ತಮಾನದ್ದೇ ಆಗಿರುತ್ತದೆ. ಗತಿಸಿರುವ ಕಾಲ ಅದು ಶತಮಾನದ್ದೇ ಇರಲಿ ಇಲ್ಲ ಶತಶತಮಾನದ್ದೇ ಇರಲಿ, ಅವರು ಆ ಕಾಲವನ್ನು ಒಂದೇ ಹಾರುವಿಕೆಯಲ್ಲಿ ಜಿಗಿಯುವುದರಿಂದ ಕಾಲದ ಪ್ರಶ್ನೆಯೇ ಏಳುವುದಿಲ್ಲ. ಯಾವ ತೊಡಕನ್ನೂ ಉಂಟುಮಾಡುವುದಿಲ್ಲ, ಪುರಾಣ ಇತಿಹಾಸಗಳ ಘಟನೆಗಳೇ ಅಲ್ಲಿದ್ದರೂ ಆ ಘಟನೆಗಳಿಗೆ ಅದೇ ಪಾತ್ರಗಳು ಪ್ರತಿಕ್ರಿಯಿಸುವ ರೀತಿಯಲ್ಲೇ 'ವಸ್ತು' ಬೇರೆ ರೂಪ ತಳೆಯುತ್ತದೆ. ಪುರಾಣ ಇತಿಹಾಸದ ಪಾತ್ರಗಳನ್ನು ಕ್ಷಣಗಳಲ್ಲಿ ಇಂದಿನ ಪ್ರೇಕ್ಷಕನಿಗೆ ಸಂವಾದಿಯಾಗಿಸುವ ಕಲೆಯಲ್ಲಿ ನಿಷ್ಣಾತರು ಕಾರ್ನಾಡರು. ಈ ನಿಷ್ಣಾತತೆಯನ್ನು ಅವರ ಮೊದಲ ನಾಟಕ 'ಯಯಾತಿ'ಯಲ್ಲೇ ಕಾಣಬಹುದು. 'ಯಯಾತಿ'ಯಲ್ಲಿ ಪುರು ಪಾತ್ರ ಪ್ರವೇಶಿಸುತ್ತಿದ್ದಂತೆಯೆ ನಾಟಕ ವರ್ತಮಾನಕ್ಕೆ ಬಂದು ಬಿಡುತ್ತದೆ. ಯಯಾತಿಯಲ್ಲಿ ನಡೆದ ಘಟನೆ, ಪುರು ತನ್ನ ಯೌವನವನ್ನು ಮುಪ್ಪಿನೊಡನೆ ವಿನಿಮಯ ಮಾಡಿಕೊಂಡ ಘಟನೆ ಪುರಾಣದಲ್ಲಿ ಗತಿಸಿದ ಘಟನೆ. ಆದರೆ ಅಲ್ಲಿನ ಸಂಘರ್ಷ; ಹಿರಿಯರು ಕಿರಿಯರು ಮೇಲೆ ಹೊರಿಸುವ ಜವಾಬ್ದಾರಿಯ ಸಂಘರ್ಷ, ಇನ್ನೂ ನಡದೇ ಇದೆ. ಹಾಗಾಗಿ 'ಯಯಾತಿ' ಪ್ರಸ್ತುತವಾಗಿ ಬಿಡುತ್ತದೆ ಹಾಗೂ ಆಪ್ತವಾಗಿಬಿಡುತ್ತದೆ. ಅಲ್ಲದೆ ಅಲ್ಲಿನ ಸಂಘರ್ಷ ಶತಶತಮಾನಗಳಿಂದ ನಡೆಯುತ್ತಲೇ ಇರುವುದರಿಂದ ಸಂಘರ್ಷಕ್ಕೆ ತೀವ್ರತೆ ಬಂದಿರುತ್ತದೆ. ಅಂಥಾ ತೀವ್ರತೆಯನ್ನು ಲೇಖಕರು ತರುತ್ತಾರೆ ಕೂಡ.

ಕಟ್ಟಡ ಕಟ್ಟುವವನು ಅಡಿಗೆಮನೆ, ಕೊಠಡಿಗೇನೆ ಇತ್ಯಾದಿ ಪ್ರತಿಯೊಂ ದನ್ನು ಯೋಜಿಸಬೇಕು ಎನ್ನುತ್ತಾರೆ ಕಾರ್ನಾಡ್. 'ಯಯಾತಿ'ಯಲ್ಲಿ ಪುರು ತನ್ನ ಯೌವನವನ್ನು ತನ್ನಪ್ಪ ಯಯಾತಿ ಮಹಾರಾಜನಿಗೆ ಕೊಟ್ಟು ಅವನ ಮುಪ್ಪು ಧರಿಸಿ ತಾನು ಅದೇ ತಾನೆ ವರಿಸಿರುವ ತನ್ನ ಪತ್ನಿ ಚಿತ್ರಲೇಖೆ ಇರುವ ಶಯ್ಯಾಗೃಹಕ್ಕೆ ಪ್ರವೇಶಿಸುತ್ತಾನೆ. ಶಯ್ಯಾಗೃಹಕ್ಕೆ ವಧೂವರರ ಸಮಾಗಮಕ್ಕೆ ಅಲಂಕೃತವಾಗಿದೆ. ಪುರು ಪ್ರವೇಶಿಸುತ್ತಿದ್ದಂತೆ ಶಯ್ಯಾಗೃಹದ ದೀಪದ ಬೆಳಕನ್ನು ಭರಿಸಲಾಗದೆ ಬೆಳಕನ್ನು ಆರಿಸೆಂದು ಪತ್ನಿಗೆ ನಿವೇದಿಸಿಕೊಳ್ಳುತ್ತಾನೆ. ಪುರುವಿನ ಪ್ರವೇಶದ ಮುನ್ನವೇ ಪುರುವಿನ ಪತ್ನಿ ಚಿತ್ರಲೇಖೆಯ ಪ್ರಕ್ರಿಯೆಗೆ ಲೇಖಕರು ಅಸ್ತಿಭಾರ ಹಾಕಿರುತ್ತಾರೆ. ಮುಪ್ಪನ್ನು ಯೌವನದೊಡನೆ ವಿನಿಮಯ ಮಾಡಿಕೊಂಡು ಅವನ ವಂಶದಲ್ಲೇ ಯಾರೂ ತೋರದ ಪರಾಕ್ರಮ ತನ್ನ ಗಂಡ ತೋರಿರುವನೆಂದು ಚಿತ್ರಲೇಖೆ ಹೆಮ್ಮೆ ಪಡುತ್ತಿರುವಾಗ ಪುರುವಿನ ಮುಪ್ಪಿನ ಮೂರ್ತ ಸ್ವರೂಪ ನೋಡಿ ಆಘಾತಕ್ಕೀಡಾಗುತ್ತಾಳೆ. ಅನಂತರ ಚಿತ್ರಲೇಖೆ ಅಸುನೀಗುವುದು. ಯಯಾತಿ ಸೊಸೆಯ ಹೆಣವನ್ನು ಕಂಡು ತನ್ನ ತಪ್ಪಿನ ಪರಿಣಾಮವನ್ನು ಎದುರಿಸುವುದಕ್ಕೆ ಶಯ್ಯಾಗೃಹವೇ ಕೇಂದ್ರಸ್ಥಳ. ಇದು ಕಾರ್ನಾಡರು 'ಯಯಾತಿ' ನಾಟಕದ ಬೆಡ್ ರೂಂ ಕಟ್ಟುವ ಪರಿ. ಸಂಘರ್ಷದ ತೀವ್ರತೆ, ನಾಟಕೀಯತೆ, ಮಾತುಕೊಡುವ ಧ್ವನ್ಯರ್ಥಗಳು ಎಲ್ಲದರಲ್ಲೂ ಈ ನಾಟಕದ ಶ್ಯಯ್ಯಾಗೃಹ ವಿಶಿಷ್ಟವಾದದ್ದು. ಬಹುಶಃ ವಿಶ್ವದ ಯಾವುದೇ ಶ್ರೇಷ್ಠನಾಟಕದಲ್ಲೂ ಇಂಥಾ ಒಂದು ಶ್ರೇಷ್ಠ ಶಯ್ಯಾಗೃಹ ಸಿಗಲಾರದು. ಕಾರ್ನಾಡರು ಕಟ್ಟಿರುವ ಎಲ್ಲ ಕಟ್ಟಡಗಳನ್ನು ಅವರೊಬ್ಬ ಆಧುನಿಕ ಜಕಣಾಚಾರಿ ಎನಿಸಿದರೆ ಅಶ್ಚರ್ಯವಿಲ್ಲ.

ಕಾರ್ನಾಡರು ಕಟ್ಟಡವನ್ನು ಕಲಾತ್ಮಕವಾಗಿ ಕಟ್ಟುವಂತೆಯೆ ಹಳೆಯ ಕಟ್ಟಡಗಳನ್ನು ಕೆಡವುತ್ತಾರೆ. ಕೆಡವಲು ಅವರು ಬಳಸುವ ಬುಲ್ಡೋಜರ್ ವೈಚಾರಿಕತೆ ಆಗಿದೆ. ಪುರಾಣದ 'ಯಯಾತಿ'ನಲ್ಲಿ ಪುರು, ಯಯಾತಿಯೊಡನೆ ಮಾಡಿಕೊಳ್ಳುವ ವಿನಿಮಯ ತ್ಯಾಗಮಯವಾಗಿ ಕಂಡರೆ ಕಾರ್ನಾಡರಲ್ಲಿ ಅದು ಸಾಧಾರಣ ವ್ಯವಹಾರದ ವಿನಿಮಯ. ತನ್ನ ವಂಶದ ಕೀರ್ತಿ ಪರಾಕ್ರಮದ ಭಾರದ ಅಡಿಯಲ್ಲಿ ಸಿಕ್ಕಿರುವ ಪುರುವಿಗೆ ತನ್ನ ಯೌವನವೇ ಭಾರವಾಗಿದೆ. ಈ ಯೌವನದ ಭಾರವನ್ನು ಯಯಾತಿಗೆ ಕೊಟ್ಟು ಅವನಿಂದ ತಾನು ಹೊರಲಾರದ ಹೊರೆಯ ಅರ್ಥವನ್ನು ಆದಷ್ಟು ಬೇಗ ಕೊಂಡುಕೊಳ್ಳುವ ಹಂಬಲ ಪುರುವಿನದು. 12ನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಬಸವಣ್ಣ ಮಾಡಿದವನೆಂದು ಹೇಳಲಾಗುವ 'ಪವಾಡ' (ಭಂಡಾರಕ್ಕೆ ಸಂಬಂಧಿಸಿದಂತೆ) Socio - Economic - Political Rationalisationಗೆ ಸಿಕ್ಕಿ ಪವಾಡದ ಮುಸುಕು ಕಳಚಿಬೀಳುತ್ತದೆ. ಅರ್ಥೈಸುವಿಕೆಯಲ್ಲಿ ಪವಾಡವೆನಿಸಿದ್ದು 'ತಲೆದಂಡ' ದಲ್ಲೆ ಅವರು ಆಯ್ದುಕೊಳ್ಳುವ ಇತಿಹಾಸದ ಕಟ್ಟಡಕ್ಕೆ ಜಗದೇವನ

ಪಾತ್ರದಲ್ಲಿ 20-21ನೇ ಶತಮಾನದಲ್ಲಿ ನಮ್ಮ ಮಧ್ಯೆ ನಡೆಯುತ್ತಿರುವ ಉಗ್ರಗಾಮಿ ಚಳವಳಿಗಳ ಸ್ವರೂಪದ ದರ್ಶನ ಮಾಡಿಸಿ ನಮ್ಮ ಕಾಲದ ಆತಂಕದ (ANGUISH) ದನಿಯನ್ನು ಧ್ವನಿಸುತ್ತದೆ. ಚರಿತ್ರೆಯ ಪುಟಗಳಲ್ಲಿ ಐಲು ದೊರೆ ಎನಿಸಿಕೊಂಡಿರುವ ತುಘಲಖ್ ವಕ್ರಶಿಲ್ಪವನ್ನು ತೆಗೆದುಕೊಂಡು ಅವರು ಕಡೆದಿರುವ ಶಿಲ್ಪ ಅಪೂರ್ವವಾದ್ದೆಂದು ಸಾಬೀತಾಗಿದೆ.

ಕಾರ್ನಾಡರ ರಚನಾ ಕೌಶಲ್ಯದ ಬಗ್ಗೆ ಎಷ್ಟು ಹೇಳಿದರೂ ಅದು ಪೂರೈಸುವುದಿಲ್ಲ. ಈ ಕೌಶಲ್ಯಕ್ಕೆ ಏಕಿಷ್ಟು ಒತ್ತೆಂದರೆ ನಾಟಕ ಕಟ್ಟುವ ಕ್ರಿಯೆಯನ್ನು ಅವರಿಂದ ಕಲಿಯಬೇಕಿದೆ. ಸಂಘರ್ಷವಿಲ್ಲದೆ ನಾಟಕವಿಲ್ಲ ಎಂಬುದನ್ನು ಕಾರ್ನಾಡರ ನಾಟಕಗಳು ಸ್ಪಷ್ಟಪಡಿಸುತ್ತವೆ. ಅವರ ನಾಟಕಗಳಲ್ಲಿ ಬರುವ ಘರ್ಷಣೆ ಜನಾಂಗೀಯವಿರಬಹುದು, ಪರಂಪರೆಯದಿರಬಹುದು, ವಿಭಿನ್ನ ಸಂಸ್ಕೃತಿಗಳಿರಬಹುದು. ಆ ಘರ್ಷಣೆಗಳ ಸಮುದ್ರಮಥನದಲ್ಲಿ ಹುಟ್ಟಿರುವ ಹಾಲಾಹಲ ಅಥವಾ ಅಮೃತ ನಮಗೆ ಮುಖ್ಯ. 'ವಸ್ತು' ಪುರಾಣದ್ದೇ ಇರಲಿ, ಇತಿಹಾಸ, ಜಾನಪದದ್ದೇ ಇರಲಿ, ಅವರ ಬರವಣಿಗೆಯಲ್ಲಿ ಒಂದೇ ಶತಮಾನದ ದುರಂತದ ಕೆಲವು ಮಗ್ಗುಲಗಳನ್ನಾದರೂ ಕಾಣಿಸಿದೆ. ನಮ್ಮ ವರ್ತಮಾನವನ್ನು ಅರಿಯುವುದಕ್ಕೆ, ನಮ್ಮ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಸಂದರ್ಭವನ್ನು ಅರ್ಥೈಸಿಕೊಳ್ಳಲು ಸಹಾಯಕವಾಗಿದೆ. ನಮ್ಮ ಅರಿವಿನ ಸ್ತರವನ್ನು ವಿಸ್ತರಿಸಿದೆ. ಬದುಕಿನ ಸಂಕೀರ್ಣತೆಯನ್ನು ಕಾಣಲು, ಮಾನವ ಸಂಬಂಧಗಳಲ್ಲಿರುವ ಬಿಕ್ಕಟ್ಟನ್ನು ಗ್ರಹಿಸಲು, ಮನುಷ್ಯನ ಅಸಂಖ್ಯ ಮನೋಪಾತಳಿಗಳಲ್ಲಿ ಕೆಲವನ್ನಾದರೂ ಗ್ರಹಿಸಲು, ಸಾಂಸ್ಕೃತಿಕ ತಿಳುವಳಿಕೆ ಯನ್ನು ಮೂಡಿಸಲು ಕಾರ್ನಾಡರು ಮಹತ್ವದ ಕೊಡುಗೆಯನ್ನು ನೀಡಿದ್ದಾರೆ. ಕಾರ್ನಾಡರು ಶ್ರೇಷ್ಠ ಯಶಸ್ವೀ ನಾಟಕಕಾರರಷ್ಟೇ ಅಲ್ಲ ನಮ್ಮ ಸಾಂಸ್ಕೃತಿಕ ಕ್ಷೇತ್ರದ ಶ್ರೇಷ್ಠ ಪ್ರತಿನಿಧಿಯೂ ಆಗಿದ್ದಾರೆ.

**ತಲೆದಂಡ**

ಜನಸಾಮಾನ್ಯರು, ವಿಶೇಷವಾಗಿ ಭಕ್ತರು, ತಾವು ಆರಾಧಿಸುವ ವ್ಯಕ್ತಿಯೊಬ್ಬನ ಕೆಲವು ಮಹತ್ವದ ಕೆಲಸಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾದಾಗ ಅವನ್ನು ಪವಾಡಗಳೆಂದು ಕರೆದು ಬಿಡುವುದನ್ನು 12ನೆಯ ಶತಮಾನದಲ್ಲದೆ 21ನೆಯ ಶತಮಾನದಲ್ಲೂ ಕಾಣಬಹುದಾಗಿದೆ. ಕಲ್ಯಾಣದಲ್ಲಿ ನಡೆಯುತ್ತಿದ್ದ ದಾಸೋಹಗಳಿಗೆ ಬಸವಣ್ಣ ಬೊಕ್ಕಸದಿಂದ ದುಡ್ಡು ತೆಗೆಯುತ್ತಿದ್ದಾನೆಂದು ನಂಬುವ ರಾಜಕುಮಾರ ಸೋವಿದೇವ ಬೊಕ್ಕಸದ ಪರೀಕ್ಷೆಮಾಡಿ ಅಲ್ಲಿ ಒಂದು ದಮಡೀ (ಕಾಸು) ವ್ಯತ್ಯಾಸ ಕಾಣದ ಸಂಗತಿ ಶರಣ ಭಕ್ತರಿಗೆ ಪವಾಡವೆನಿಸಿಬಿಡುತ್ತದೆ. ಭಕ್ತರು ಬಸವಣ್ಣನನ್ನು ಕೊಂಡಾಡು ತ್ತಾರೆ. ಇದರಿಂದ Shockಗೊಂಡ ಬಸವಣ್ಣ 'ನಾ ಬೊಕ್ಕಸದಾಗಿಂದ ಹೊನ್ನು ಕದೀತೀನಿ ಅಂತ ನೀವೆಲ್ಲ ನಂಬತೀರೇನು'? ಎಂದು ಕೇಳಿದ್ದಕ್ಕೆ ಒಬ್ಬ ಮುದುಕ ಹೇಳುತ್ತಾನೆ : ಸ್ವಂತ ವೆಚ್ಚಕ್ಕಲ್ಲೋ ಬಸವಣ್ಣ, ದೇವರ ಕೆಲಸಕ್ಕೆ.... ಬಸವಣ್ಣ: ಅಂದರೆ ರಾಜಕುಮಾರರಂಥಾಂಗ ನಾ ಖರೇನ್ನ ಕಳ್ಳ ಅಂತೀರ್ಾ? ಹೀಗೆ ಪವಾಡದ ವಿಷಯದಲ್ಲಿ ಭಕ್ತರು ಮತ್ತು ಬಸವಣ್ಣನ ನಡುವೆ ನಡೆಯುವ ಮುಖಾಮುಖಿಯಲ್ಲಿ ಬರುವ ಸಂಭಾಷಣೆ ಭಕ್ತರು ತಮ್ಮ ಅರಿವಿಗೆ ಮುಟ್ಟದ ಸಂಗತಿಯನ್ನು ಪವಾಡವೆಂದು ಕರೆದಾಗ ಅದು ಬಸವಣ್ಣನ ಪ್ರಾಮಾಣಿಕ ವ್ಯಕ್ತಿತ್ವಕ್ಕೆ ಕೊಡುವ ಕೊಡಲಿ ಪೆಟ್ಟಾಗುತ್ತದೆ. ಅದೇ ಪವಾಡಕ್ಕೆ ಕಾರ್ನಾಡರು ಕೊಡುವ ಸಮಾಜೋ-ಆರ್ಥಿಕ ವಿಶ್ಲೇಷಣೆ. ಶರಣರ ಕಾಯಕದ ಮೌಲ್ಯವನ್ನೇ ಹೆಚ್ಚಿಸುತ್ತದೆ. ಕಾಯಕವೆ ಕೈಲಾಸವೆಂದುಕೊಂಡು ಶರಣರು ದುಡಿದಿದ್ದರಿಂದ ಕಲ್ಯಾಣರಾಜ್ಯ ಸಮೃದ್ಧಿಹೊಂದಿ ಶ್ರೀಮಂತರು ಗಳಿಸಿದ ಲಾಭದಲ್ಲಿ ಅದರ ಒಂದಂಶವನ್ನು ದಾಸೋಹಗಳಿಗೆ ಸಂತೋಷದಿಂದಲೇ ನೀಡುತ್ತಿದ್ದರು. ಬಸವಣ್ಣ ಬೊಕ್ಕಸಕ್ಕೆ ಕೈ ಹಾಕಬೇಕಾದ ಅವಶ್ಯಕತೆಯೇ ಇರಲಿಲ್ಲವೆಂದು ಲೇಖಕರು ವಿಶ್ಲೇಶಿಸುತ್ತಾರೆ. ಕಾರ್ನಾಡರ ವಿಶ್ಲೇಷಣೆಯಲ್ಲಿ ಶ್ರೀಮಂತರು ಬೊಕ್ಕಸಕ್ಕೆ ನೀಡುತ್ತಿದ್ದ ಹಣ ಶರಣರ ದುಡಿತದಿಂದ ಬಂದ ಲಾಭದ ಹಣ, ಅದು ಅವರದ್ದೇ ಹಣ. ಇವತ್ತಿನ ಮಾರ್ಕ್ಸಿಸ್ಟ್ ಪರಿಭಾಷೆಯಲ್ಲಿ ಹೇಳುವುದಾದರೆ SURPLUS VALUE ಎನ್ನುವ ಅರ್ಥ ಸ್ಫುಟವಾಗಿ ಹೊರಹೊಮ್ಮುತ್ತದೆ.

ಕಾಯಕವೇ ಕೈಲಾಸದ ಮಹತ್ವವನ್ನು ಹೆಚ್ಚಿಸುತ್ತದೆ. ಪವಾಡದ Tag ಕಟ್ಟಿ ಬಸವಣ್ಣನ ವ್ಯಕ್ತಿತ್ವಕ್ಕೇ ಮಸಿಬಳಿಯುವುದಕ್ಕಿಂತ ಬಸವಣ್ಣನ ತತ್ವದ ಘನತೆಯನ್ನು ಹೆಚ್ಚಿಸುವಂಥ ಕಾರ್ನಾಡರ ವಿಶ್ಲೇಷಣೆ ಮಹತ್ವವಾದದ್ದು.

ನಾಟಕದ ಇನ್ನೊಂದು ಸಂದರ್ಭದಲ್ಲಿ ಲೇಖಕರು ಬಸವಣ್ಣನ ಕೆಲಸಗಳಲ್ಲಿ ಪವಾಡವೆನ್ನುವಷ್ಟು ಮಹತ್ವವಾದುದನ್ನು ಬಿಜ್ಜಳನ ಮಾತಿನಲ್ಲಿ ತರುತ್ತಾರೆ:

ಬಿಜ್ಜಳ: ಒಬ್ಬ ಹಾರುವರ ಹುಡುಗಿ ತಾನಾಗಿ ಪಂಚಮನನ ಮಾಡಿಕೋತೀನಿ ಅಂತಾಳೇನು - ಎರಡು ಲಕ್ಷಜನ ಅದಕ್ಕೆ ಬೆಂಬಲ ಕೊಡತೈತೇನು ? ಬಸವಣ್ಣನ ಖರೀ ಪವಾಡ ಇದು. ಇದು ನನ್ನ ರಾಜಧಾನಿಯೊಳಗ ಆಗತೈತಿ ಅಂದಾಗ ನಾ ಅಡ್ಡಗಾಲು ಹಾಕಿಸೇನ ?

ಧಾಮೋಧರಭಟ್ಟ : (ಕನಲಿ) ಅದು ಪವಾಡ ಅಲ್ಲ, ಮಹಾಸ್ವಾಮಿ. ನಿಸರ್ಗದ್ರೋಹ -

ಬಿಜ್ಜಳ : (ಕೈಯೆತ್ತಿ, ದನಿಯೆತ್ತದೆ) ಹೇಳಿದೆನಲ್ಲ ನಿಮಗೆ ತಿಳಿಯೋ ಮಾತಲ್ಲಿದು. ಹುಟ್ಟಾ ಪವಾಡಕ್ಕಾಗಿ ಹಂಬಲಿಸಿ ಕೂತವಗ ಮಾತ್ರ ಪವಾಡ ಕಂಡಗಳಿಗೆ ಅದರ ಗುರ್ತ ಹತ್ತತೈತಿ. ಉಳಿದವರಿಗೆ ಹೇಳಿದ್ದಲ್ಲದು !

ಬಿಜ್ಜಳನ ಮಾತುಗಳೆ ಎಲ್ಲವನ್ನು ಸ್ಪಷ್ಟಪಡಿಸುವುದರಿಂದ ಹೆಚ್ಚು ಬರೆಯುವ ಅಗತ್ಯವಿಲ್ಲ. 'ತಲೆದಂಡ'ದಲ್ಲಿ ಬಸವಣ್ಣನ ಪಾತ್ರಕ್ಕಿಂತ ಬಿಜ್ಜಳನ ಪಾತ್ರವೇ ವಿಜೃಂಭಿಸುತ್ತದೆ ಎಂದು ಟೀಕಿಸುವವರು ಈ ಭಾಗವನ್ನು ಓದಿ ಮತ್ತೊಮ್ಮೆ ತಮ್ಮ ಟೀಕೆಯನ್ನು ಪರಿಶೀಲಿಸಬೇಕಾದ ವಿಷಯವೂ ಆಗಿದೆ.

ಶೀಲ, ಕಲಾವತಿಯರ ವಿವಾಹ ಪ್ರಸ್ತಾಪದ ಇಡೀ ದೃಶ್ಯ (ದೃಶ್ಯ 5) ಅಲ್ಲಮಪ್ರಭು ಬಸವಣ್ಣನಿಗೆ ಕೊಟ್ಟ ದಿವ್ಯದರ್ಶನದಂತೆ ನಾಟಕ ಹಿಂಸೆ, ರಕ್ತಪಾತಗಳಲ್ಲಿ ಕೊನೆಯಾಗುವುದು, ಇವೇ ಮುಂತಾದವುಗಳು ನಾಟಕವನ್ನು ಶ್ರೇಷ್ಠಕೃತಿಯಾಗಿಸಿವೆ.

**ಹಯವದನ**

ಪೂರ್ಣತ್ವದ ವಸ್ತುವನ್ನಿಟ್ಟುಕೊಂಡು ರಚಿತವಾಗಿರುವ 'ಹಯವದನ', ಪೂರ್ಣತ್ವದ ಹಂಬಲ ಮನುಷ್ಯ ಸಂಬಂಧಗಳಲ್ಲಿ ತರುವ ದುರಂತ ಪರಿಣಾಮಗಳನ್ನು ಚಿತ್ರಿಸುತ್ತದೆ. ಮನುಷ್ಯ ಎಷ್ಟೇ ಯತ್ನಿಸಿದರೂ ಪೂರ್ಣತ್ವ ಲಭಿಸದಿರುವುದು ಒಂದು ದುರಂತವಾದರೆ ಆದರ ಅರಸುವಿಕೆಯಲ್ಲಿ ತಲೆ ಮತ್ತು ದೇಹದ ನಡುವೆ ನಡೆಯುವ ಸಂಘರ್ಷ ನಾಟಕಕ್ಕೆ ಇನ್ನೊಂದು ಆಯಾಮವನ್ನು ಒದಗಿಸುತ್ತದೆ ; ತಲೆ ಮತ್ತು ದೇಹದ ನಡುವೆ ನಡೆಯುವ ಸಂಘರ್ಷದಲ್ಲಿ ಯಾವಾಗಲೂ ತಲೆಯೇ ಗೆಲ್ಲುತ್ತ ಹೋಗುವುದು ನಾಟಕಕ್ಕೆ ಅನೇಕ ತಿರುವುಗಳನ್ನು ಕೊಡುತ್ತದೆ ; ಹಾಗೂ ಪೂರ್ಣತ್ವವನ್ನು ಸಾಧಿಸಲು ತೊಡಕುಗಳಾಗಿ ಪರಿಣಮಿಸುತ್ತದೆ. ಎಂದಿನಂತೆ ಕಾರ್ನಾಡರು ತಮ್ಮ ಶೋಧನೆಯಲ್ಲಿ ತೊಡಗಿ ದೇಹ ಮತ್ತು ಮನಸ್ಸಿನ ಗುಣಗಳ ಅರಿವನ್ನು ವಿಸ್ತರಿಸಿಕೊಡುತ್ತಾರೆ.

ಲೇಖಕರು ತಮ್ಮ ಶೋಧನೆಯ ಕ್ಷೇತ್ರಕ್ಕೆ ಮನುಷ್ಯನನ್ನು ಮಾತ್ರ ಸೀಮಿತಗೊಳಿಸದೆ ಪ್ರಾಣಿಯನ್ನು ತೆಗೆದುಕೊಂಡು ತಮ್ಮ ಕ್ಯಾನ್‌ವ್ಯಾಸನ್ನು ವಿಸ್ತರಿಸಿಕೊಂಡು ಮನುಷ್ಯ ಮತ್ತು ಪ್ರಾಣಿಗಳಿಗಿರುವ ವ್ಯತ್ಯಾಸದ ಸೂಕ್ಷ್ಮತೆಗಳನ್ನು ತಮ್ಮ ಶೋಧನೆಯಲ್ಲಿ ಕಾಣಿಸುತ್ತಾರೆ. ನಾಟಕ ಎಲ್ಲ ವಿಘ್ನಗಳನ್ನು ಪರಿಹರಿಸುವ ಆದರೆ ಪೂರ್ಣನಲ್ಲದ ಗಣೇಶನ ಸ್ತುತಿಯಿಂದಲೇ ಆರಂಭವಾಗುವುದು ನಾಟಕಕ್ಕೆ ಸಹಜವಾಗಿ ಒಪ್ಪುತ್ತದೆ ಮತ್ತು ಲೇಖಕರ ಕುಶಲತೆ ಯನ್ನೂ ಮೆರೆಸುತ್ತದೆ.

ರಚನೆಯಲ್ಲಿ ಕಾರ್ನಾಡರು ಜಾನಪದ ಕಥೆಗಳಿಂದ, ಜಾನಪದ ರಂಗ ಭೂಮಿಯಿಂದ ಸಿಗಬಹುದಾದ ಎಲ್ಲ ಸಾಮಾಗ್ರಿಗಳನ್ನು ತೆಗೆದುಕೊಂಡು ಬಳಸಿ ನಾಟಕವನ್ನು ಅತ್ಯಂತ ಶ್ರೀಮಂತಗೊಳಿಸಿದ್ದಾರೆ. 'ಹಯವದನ'ದಲ್ಲಿ ಕಾಳಿ ಮಾತನಾಡುತ್ತಾಳೆ ; ಅಂತೆಯೆ ಗೊಂಬೆಗಳು ಮಾತನಾಡುತ್ತವೆ. ಈ ಮಾತುಗಳು ಬರಿಯ ಮಾತುಗಳಲ್ಲ, ಮನುಷ್ಯರ ಅಂತರಾಳದಲ್ಲಿ ನಡೆಯುವ ಮನೋವ್ಯಾಪಾರದ ಗುಟ್ಟನ್ನು ಪ್ರಕಟಪಡಿಸುವ ತಂತ್ರ. ಇಂತಹ ಅನೇಕ ತಂತ್ರಗಳಿಂದ ಈ ನಾಟಕದಲ್ಲಿ ಲೇಖಕರು ರಂಗಭಾಷೆಯನ್ನು ವಿಸ್ತರಿಸಿದ್ದಾರೆ ಮತ್ತು ರಂಗ ಸಾಧ್ಯತೆಗಳನ್ನು ತೆರೆಸಿದ್ದಾರೆ. ವಸ್ತುವಿನ ದೃಷ್ಟಿಯಿಂದಲ್ಲದೆ ತಂತ್ರದ ದೃಷ್ಟಿಯಿಂದಲೂ ಬಹು ಅಧ್ಯಯನ ಶೀಲವಾದ ನಾಟಕ 'ಹಯವದನ'.

ನಾಟಕ ಕವಿತೆಗಳನ್ನು ಒಳಗೊಂಡಿದೆ. (ಕಾರ್ನಾಡರು ತರುಣರಾಗಿದ್ದಾಗ ಕವಿಯಾಗಲು ಹೊರಟಿದ್ದವರು ಎಂಬುದನ್ನು ನೆನಪಿಸಿಕೊಳ್ಳಬಹುದು) ನಾಟಕದಲ್ಲಿ ಬರುವ ಕವಿತೆಗಳು ಅರ್ಥಗರ್ಭಿತವಾಗಿದೆ. ನಾಟಕದ ಒಂದು ದೌರ್ಬಲ್ಯವೆಂದರೆ ಪೂರ್ಣತ್ವವನ್ನು ಹಂಬಲಿಸುವ, ಅರಸುವ ಪದ್ಮಿನಿ ಶರೀರಕ್ಕೆ ಕೊಡುವ ಮಹತ್ವವನ್ನು 'ಶಿರಕ್ಕೆ ಕೊಡದಿರುವುದು. ನಾಟಕದಲ್ಲಿ ಕಪಿಲನ ದೇಹದ ಗಂಧವನ್ನು ಆಘ್ರಾಣಿಸುಮತೆ, ದೇವದತ್ತನ ಬುದ್ಧಿ ಮತ್ತೆಯತ್ತ ಗಮನ ಸೆಳೆತ ಕಾಣಬರುವುದಿಲ್ಲ.

**ನಾಗಮಂಡಲ**

ಜಾನಪದ ಕಥೆಯೊಂದರ ಮೇಲೆ ಆಧಾರಿತವಾಗಿರುವ 'ನಾಗಮಂಡಲ' ಸಾಂಪ್ರದಾಯಿಕ ಸಮಾಜದಲ್ಲಿ ಗಂಡು - ಹೆಣ್ಣಿನ ಸಂಬಂಧವನ್ನು ಶೋಧಿಸುತ್ತದೆ ಹಾಗೂ ವ್ಯಾಖ್ಯಾನಿಸುತ್ತದೆ. ಪುರುಷ ಪ್ರಧಾನ ಸಮಾಜ ಹೆಣ್ಣಿನ ಮೇಲೆ ಗಂಡಿನ ಅಪರಿಮಿತವಾದ ಅಧಿಕಾರವನ್ನು ನೀಡುತ್ತದೆ. ಹಾಗೆಯೆ ಹೆಣ್ಣು ಆ ಅಧಿಕಾರವನ್ನು ಪ್ರಶ್ನಿಸದೆ ಒಪ್ಪಿಕೊಳ್ಳುವಂತೆ ಮಾಡುತ್ತದೆ. ಈ ಅಧಿಕಾರ ನಾಟಕ ನಿರ್ದರ್ಶಿಸುವಂತೆ ದರ್ಪ ದಬ್ಬಾಳಿಕೆಯೂ ಆಗಬಹುದು. ಆದರೆ ಇದು ಗಂಡು - ಹೆಣ್ಣಿನ ಸಹಜ ಸಂಬಂಧಗಳು ಅರಳುವುದಕ್ಕೆ ಅಡ್ಡಿಯಾಗುತ್ತದೆ ; ಪರಸ್ಪರ ಅನುಮಾನಿಸುವುದಕ್ಕೆ, ಅಪನಂಬಿಕೆಗಳಿಗೆ ದಾರಿಯಾಗುತ್ತದೆ. ಇದನ್ನೆಲ್ಲ ನಾಟಕದಲ್ಲಿ ಕಾರ್ನಾಡರು ಹೇಳಿರುವ ರೀತಿ, ತಂದಿರುವ ನಾಟಕೀಯತೆ ಅಸಾಧಾರಣವಾದದ್ದು.

ನಾಟಕದಲ್ಲಿ ರಾಣಿಯನ್ನು ಮದುವೆಯಾದ ಅಪ್ಪಣ್ಣ ರಾತ್ರಿ ಮನೆಗೇ ಬರುವುದಿಲ್ಲ. ಮನೆ ಬಿಡುವಾಗ ತನ್ನ ಹೆಂಡತಿಯನ್ನು ಮನೆಯಲ್ಲಿ ಕೂಡಿ ಹಾಕಿ ಹೊರಹೋಗುತ್ತಾನೆ. ರಾಣಿಯ ಭಾವನೆಗಳಿಗೆ ಸ್ಥಳವೇ ಇಲ್ಲ. ರಾಣಿ ಪ್ರೀತಿಗಾಗಿ ಹಂಬಲಿಸುತ್ತಾಳೆ. ರಾಣಿಗೆ ಆ ಪ್ರೀತಿ ಸಿಗುವುದು ತನ್ನ ಗಂಡನ ರೂಪ ಧರಿಸಿ ರಾತ್ರಿ ಬರುವ ನಾಗರಹಾವಿನಿಂದ. ರಾತ್ರಿಯಲ್ಲಿ ಪ್ರೀತಿತೋರುವ ಗಂಡ ಹಗಲಲ್ಲಿ ತನ್ನನ್ನು ಮುಟ್ಟದೆ ಹೆದರಿಸಿ, ಬೆದರಿಸಿ ಕೂಡಿಹಾಕಿ ಏಕೆ ಹೋಗುತ್ತಾನೆಂದು ರಾಣಿ ಚಡಪಡಿಸುತ್ತಾಳೆ. ರಾಣಿಗೆ ಯಾವುದು ವಾಸ್ತವ, ಯಾವುದು ಸ್ವಪ್ನ ಎಂದು ಅರ್ಥವಾಗುವುದಿಲ್ಲ. ರಾತ್ರಿ - ಹಗಲಿನ ಒಂದು ಆಟದಂತೆ ಸಾಗುವ ನಾಟಕದ ನಾಟಕೀಯತೆ ಲೇಖಕರ ರಚನಾಕೌಶಲ್ಯವನ್ನು ಮತ್ತೊಮ್ಮೆ ಸಾರುತ್ತದೆ. ನಾಗಮಂಡಲ ಸಾಂಪ್ರದಾಯಿಕ ಸಮಾಜದಲ್ಲಿ ಹೆಣ್ಣಿನ ಅವಸ್ಥೆಯನ್ನು ಚಿತ್ರಿಸುವುದಲ್ಲದೆ, ಅವಳ ಅಭಿವ್ಯಕ್ತಿಗಳಿಗೆ ಅವಕಾಶ ಮಾಡಿಕೊಡುತ್ತದೆ. ಹಾಗೆ ಆ ಅಭಿವ್ಯಕ್ತಿಗೆ ಅವಕಾಶವೇ ಇಲ್ಲದಂತೆ ಮಾಡಿರುವ ಪುರುಷ ಪ್ರಧಾನ ಸಮಾಜದ ಟೀಕೆಯೂ ಆಗಿದೆ.

**ತುಘಲಖ್**

ಯಾವುದೇ ದೇಶದ ಚರಿತ್ರೆ ತೆಗೆದುಕೊಂಡರೂ ಅಲ್ಲಿ ನಾವು ಢಾಳಾಗಿ ಕಾಣುವುದು ಅಧಿಕಾರಕ್ಕಾಗಿ ನಡೆಯುವ ಕಚ್ಚಾಟ, ಕದನ ಮತ್ತು ಯುದ್ಧಗಳನ್ನು. ಇಂಗ್ಲೆಂಡಿನ ಚರಿತ್ರೆಯನ್ನು ಬಳಸಿಕೊಂಡು ಶೇಕ್ಸ್‌ಪಿಯರ್ ಮಹಾಕವಿ ಹಲವು ಶ್ರೇಷ್ಠನಾಟಕಗಳನ್ನು ಬರೆದಿದ್ದಾನೆ. ನಮ್ಮ ಮೈಸೂರು ಸಂಸ್ಥಾನದ (ಹಿಂದಿನ) ಚರಿತ್ರೆಯನ್ನು ಬಳಸಿಕೊಂಡು ಸಂಸರು ಕೆಲವು ಉತ್ತಮ ನಾಟಕಗಳನ್ನು ಕೊಟ್ಟಿರುತ್ತಾರೆ. ಇದೇ ದಾರಿಯಲ್ಲಿ ಕಾರ್ನಾಡರು ಸಹ ಮುಂದುವರಿದು 'ತುಘಲಖ್' ನೀಡಿರುತ್ತಾರೆ.

ಚರಿತ್ರೆಯಲ್ಲಿ 'ತುಘಲಖ್' ಐಲುದೊರೆ. ಹುಚ್ಚು ಮುಹಮ್ಮದ್ ಎನಿಸಿಕೊಂಡಿದ್ದರೆ ಕಾರ್ನಾಡರಲ್ಲಿ ತುಘಲಖ್ ತೀಕ್ಷ್ಣಮತಿ, ಮಹತ್ವಾಕಾಂಕ್ಷಿ. ತನ್ನ ರಾಜ್ಯವನ್ನು ಆದರ್ಶರಾಜ್ಯವನ್ನಾಗಿ ಕಟ್ಟಬೇಕೆಂದು ಬಯಸುವವ, ಕನಸುಗಾರ. ತನ್ನ ಕಾಲದಾಚೆಗೆ ಯೋಜಿಸಬಲ್ಲ ಶಕ್ತಿಯುಳ್ಳವ. ರಕ್ತಪಾತ ಹರಿಸೇ ಗದ್ದುಗೆಗೆ ಏರಿದ್ದರೂ 'ಅಲ್ಲಾ'ನಲ್ಲಿ ನಂಬಿಕೆಯಿಟ್ಟವ. ತನ್ನ ರಾಜ್ಯ ದಲ್ಲಿ ಪ್ರತಿಯೊಂದು ಕ್ರಿಯೆಯನ್ನೂ ಪ್ರಾರ್ಥನೆಯ ಮಟ್ಟಕ್ಕೆ ಏರಿಸಬೇಕೆಂದು ಬಯಸುವವ. ತುಘಲಖ್ ಇಷ್ಟೆಲ್ಲಾ ಗುಣಾತ್ಮಕ ಗುಣಗಳನ್ನು ಹೊಂದಿ ದ್ದರೂ ತಾನು ಹಂಬಲಿಸುವ ಕನಸುವ ಹಾದಿಯಲ್ಲಿ ಸಾಧನೆಗೆ ಹೊರಟಾಗ ಅವನನ್ನು, ಅವನ ಕನಸನ್ನು ಅರ್ಥಮಾಡಿಕೊಳ್ಳಲಾರದ ಅಮೀರರು, ಆಪ್ತರು, ಜನಸಾಮಾನ್ಯರು ಅಡ್ಡ ಬರುತ್ತಾರೆ.

ತುಘಲಖ್ ಮತ್ತು ಅವರ ನಡುವೆ ಸಂಘರ್ಷವೇರ್ಪಡುತ್ತದೆ. 'ತುಘಲಖ್'ನಲ್ಲಿ ಬರುವ ಸಂಘರ್ಷ ಎಂತಹವೆಂದರೆ ಅದು ಕೊನೆಯನ್ನೇ ಕಾಣದ ಸಂಘರ್ಷ ; ತುಘಲಖ್‌ನ ಹೆಜ್ಜೆಹೆಜ್ಜೆಗೂ ಏಳುವ ಸಂಘರ್ಷ; ಒಂದು ಸಂಘರ್ಷವನ್ನು ತುಘಲಖ್ ನಿವಾರಿಸಿದರೆ ಅಲ್ಲಿ ಹತ್ತಾರು ಸಂಘರ್ಷಗಳು ಏಳುತ್ತವೆ - ರಕ್ತಬೀಜಾಸುರನಂತೆ. ಸಂಘರ್ಷ ನಾಟಕದ ಜೀವಾಳ ಎನ್ನುವ ಮಾತಿಗೆ 'ತುಘಲಖ್' ಉತ್ತಮ ಉದಾಹರಣೆ. ಆದರೆ ಈ ಸಂಘರ್ಷಗಳು 'ತುಘಲಖ್' ನಾಟಕದ ಒಂದು ಆಯಾಮ ಮಾತ್ರ.

ದೊರೆ ತುಘಲಖ್ ತನ್ನ ಸಾಧನೆಯ ಹಾದಿಯಲ್ಲಿ ಹುಟ್ಟಿಹಾಕಿ ಕೊಳ್ಳುವ ಒಂದೊಂದು ಸಂಘರ್ಷದಲ್ಲೂ ನಾಟಕ ಮನುಷ್ಯನ ಮನಸ್ಸಿನ ಮಗ್ಗುಲಗಳನ್ನು ಶೋಧಿಸುತ್ತದೆ ; ಹಿಂಸೆಯ ವಿವಿಧ ಸ್ವರೂಪಗಳನ್ನು ಕಾಣಿಸುತ್ತದೆ ; ಹಿಂಸೆ ಹೆಚ್ಚಿದಂತೆ ಮನುಷ್ಯ 'ಅನ್ಯ'ನಾಗುವ ನೆಲೆಗಳನ್ನು ಪ್ರಕಟಿಸುತ್ತದೆ ; ಅನ್ಯತೆಯ ಪರಿಣಾಮಗಳನ್ನು ಗುರುತಿಸುತ್ತದೆ. ಅನ್ಯತೆ ಕಾಡಿದಂತೆ ತುಘಲಖ್ ಹಿಂಸೆಯ ಪ್ರತಿರೂಪವಾಗುವುದು ಸಾಧನೆಗೆ ಹಿಂಸೆಯನ್ನು ಕಾರಣವಾಗಿ ಬಳಸಿದಾಗ ಅದು ಮನುಷ್ಯನನ್ನು ಮುಟ್ಟಿಸುವ ಮಜಲನ್ನು 'ತುಘಲಖ್'ನಲ್ಲಿ ಕಾಣಬಹುದು.

ದೊರೆ ಅಥವಾ ಅಧಿಕಾರಾರೂಢರು ಎಷ್ಟೇ ಬುದ್ಧಿವಂತರಾದರೂ, ಅವರು ಏನನ್ನೇ ಕನಸಿದರೂ ಅವರ ಕನಸು ಫಲಿಸುವುದಕ್ಕೆ ಜನ ಸಾಮಾನ್ಯರ ಸಹಕಾರ ಅಗತ್ಯವೆಂಬ ಸರಳಸತ್ಯ ನಾಟಕದಲ್ಲಿ ಗೋಚರಿಸುತ್ತದೆ. ಈ ಸರಳ ಸತ್ಯ ಅರಸೊತ್ತಿಗೆಗೆ ಮಾತ್ರ ಅನ್ವಯಿಸದೆ, ಪ್ರಜಾಪ್ರಭುತ್ವಕ್ಕೇನು, ಯಾವುದೇ ವ್ಯವಸ್ಥೆಗೂ ಅನ್ವಯಿಸುತ್ತದೆ.

'ತುಘಲಖ್' ತನ್ನ ಸಾಧನೆಯ ಹಾದಿಯಲ್ಲಿ ತೆಗೆದುಕೊಳ್ಳುವ ಕ್ರಮಗಳು (ಉದಾ : ರಾಜಧಾನಿಯನ್ನು ದೆಹಲಿಯಿಂದ ದೌಲತಾಬಾದಿಗೆ ಮತ್ತೆ ದೆಹಲಿಗೆ

ಬದಲಾಯಿಸುವುದು) ಈ ಕ್ರಮಗಳಿಂದ ಜನ ಸಾಮಾನ್ಯರು ಪಡುವ ಸಾವು-ನೋವುಗಳು ಕಷ್ಟಕೋಟಲೆಗಳು ದೊರೆ ಎಷ್ಟೇ ತೀಕ್ಷ್ಣಮತಿಯಾಗಿದ್ದರೂ ಅವನು ತೆಗೆದು ಕೊಳ್ಳುವ ಕ್ರಮಗಳಿಂದ ಆಗುವ ಪರಿಣಾಮದ ಅರಿವೂ ಇರಬೇಕೆಂಬುದನ್ನು ಹೇಳುತ್ತದೆ; ಬರೀ ಕನಸಿದ್ದರೆ ಸಾಲದು. ವಾಸ್ತವದ ಅರಿವು ಇರಬೇಕೆಂಬುದನ್ನು ಹೇಳುತ್ತದೆ. ಕಾರ್ನಾಡರು ತುಘಲಖ್‌ನಿಗೆ ವಿಶೇಷ ವ್ಯಕ್ತಿತ್ವವನ್ನು ಕಟ್ಟಿ ಕೊಟ್ಟರೂ ಅವನ ಆಳ್ವಿಕೆಯಲ್ಲಿ ಜನಸಾಮಾನ್ಯರು ಪಟ್ಟ ಕಷ್ಟ, ಕೋಟಲೆಗಳನ್ನು ಮರೆಮಾಡದೆ ಇರುವುದರಿಂದ ಜನಸಾಮಾನ್ಯರು ತಮ್ಮ ನೋವಿನಲ್ಲಿ ದೊರೆಗೆ ಹೇಳಿದ ಐಲು, ಹುಚ್ಚಪಟ್ಟದ ಮಾತುಗಳು ನ್ಯಾಯಬದ್ಧವಾಗಿವೆ. ಕಾರ್ನಾಡರು ತುಘಲಖ್ ಪಾತ್ರಕ್ಕೆ ಸಂಕೀರ್ಣ ವ್ಯಕ್ತಿತ್ವ ತಂದು ತುಘಲಖ್‌ನಿಗೆ ನ್ಯಾಯ ಒದಗಿಸುವಂತೆಯೆ ಚರಿತ್ರೆಯಲ್ಲಿ ಕಾಣಿಸಿ ಕೊಂಡಿರುವ ಐಲು, ಹುಚ್ಚ ಬಿರುದು ಗಳಿಗೂ ನ್ಯಾಯ ಒದಗಿಸುತ್ತಾರೆ. ಇದರಿಂದ ತುಘಲಖ್ ನಾಟಕದ ವಿಶೇಷ ಚರಿತ್ರೆ ವಿರೂಪಗೊಳ್ಳದೆ ತುಘಲಖ್‌ನ ಮಹತ್ವ ಹೆಚ್ಚುತ್ತದೆ. ಅಲ್ಲದೆ ತುಘಲಖ್‌ನ ಸಂಕೀರ್ಣ ವ್ಯಕ್ತಿತ್ವ, ಸಾಧನೆಯ ಮಾರ್ಗದಲ್ಲಿ ಸ್ಥಿತಿಗತಿಗಳು ಬದಲಾ ದಂತೆ ತುಘಲಖ್‌ನ ವ್ಯಕ್ತಿತ್ವದಲ್ಲಿ ಆಗುವ ಬದಲಾವಣೆಗಳಲ್ಲಿ ಮನಸ್ಸಿನ ಪ್ರಪಂಚದ ಹರಹು, ಆಳಗಳನ್ನು ಅರಿಯುವುದಕ್ಕೆ ಲೇಖಕರು ನಡೆಸಿರುವ ಶೋಧದ ಯತ್ನ ನಾಟಕಕ್ಕೆ ಮಹತ್ವವನ್ನು ತಂದುಕೊಟ್ಟಿದೆ.

ನಾಟಕ ಬೆಳೆದಂತೆ ನಾಟಕೀಯ ವ್ಯಂಗ್ಯಗಳು ಬೆಳೆಯುತ್ತವೆ. ತನ್ನ ರಾಜ್ಯ ದಲ್ಲಿ ಪ್ರತಿಯೊಂದು ಕ್ರಿಯೆಯೂ ಪ್ರಾರ್ಥನಾ ಮಟ್ಟಕ್ಕೆ ಏರಬೇಕೆಂದು ಬಯಸುವ ದೊರೆಯೇ ತನ್ನ ರಾಜ್ಯದಲ್ಲಿ ಪ್ರಾರ್ಥನೆಯನ್ನು ನಿಷಿದ್ಧಗೊಳಿಸುವುದು ; ದೊರೆ ಪ್ರಾರ್ಥಿಸುವ ಸ್ಥಳದಲ್ಲೇ, ಸಮಯದಲ್ಲೆ ಕೊಲೆಗಳಾಗಿ ರಕ್ತಹರಿಯುವುದು ; ತುಘಲಖ್‌ನನ್ನು ರಾಜ್ಯದಲ್ಲಿ ಯಾರೂ ಅರ್ಥಮಾಡಿಕೊಳ್ಳದಿದ್ದಾಗ ಕಳ್ಳಕೊಲೆ ಗಾರನೊಬ್ಬ ಅವನನ್ನು ಅರ್ಥಮಾಡಿಕೊಳ್ಳುವುದು; ಆ ಕೊಲೆಗಾರನೇ ಧರ್ಮಗುರು ವೇಷ ತೊಡುವುದು, ವೇಷತೊಟ್ಟು ದೊರೆಯ ಮನ್ನಣೆಗೆ ಪಾತ್ರನಾಗುವುದು...... ಇತ್ಯಾದಿ.

ನಾಟಕದಲ್ಲಿ ತುಘಲಖ್ ಚದುರಂಗದಾಟದ ಪ್ರೇಮಿ. ಈ ಆಟದಲ್ಲಿ ಸಾಮಾನ್ಯ ಸಿಪಾಯಿ ಮೇಲಕ್ಕೆ ಚಲಿಸಿ ತನ್ನ ಗುರಿ ಮುಟ್ಟಿದರೆ ಮಂತ್ರಿಯಾಗಬಲ್ಲ ; ದೊರೆಯೂ ಆಗಬಲ್ಲ. ನಾಟಕದಲ್ಲಿ ದೊರೆ ತನ್ನ ಜನರನ್ನು ಪಗಡೆಕಾಯಿ ಗಳಂತೆ ತನ್ನ ಉದ್ದೇಶಕ್ಕೆ ಬಳಸಿಕೊಳ್ಳುವುದು ನಾಟಕದ ಹಾಸಿನಲ್ಲಿ ಸಾಮಾನ್ಯ ಕೊಲೆಗಾರ, ಕಳ್ಳನೊಬ್ಬ ಮೇಲೇರಿ ಕಡೆಯಲ್ಲಿ ದೊರೆಗೆ ಸರಿಸಮನಾಗಿ ನಿಲ್ಲುವುದು 'ತುಘಲಖ್' ನಾಟಕದ, ಚದುರಂಗದ ಹಾಸಿನ ಸಂವಿಧಾನದ ಕ್ರೂರ ವ್ಯಂಗ್ಯಗಳು. ಅಂತೆಯೆ ತುಘಲಖ್ ಕನಸುವ ಗುಲಾಬಿ ಉದ್ಯಾನ ವಾಸ್ತವದಲ್ಲಿ ಶವಗಳ ಕಾರ್ಖಾಗಾರ ಗಳಾಗುವುದು. ಬರೆಯುತ್ತ ಹೋದಷ್ಟೂ ತುಘಲಖ್ ನಾಟಕದ ಶ್ರೇಷ್ಠತೆ, ಮಹತ್ವ ಹೆಚ್ಚುತ್ತದೆ.

**ಚಲನ ಚಿತ್ರ**

ಕಾರ್ನಾಡರು ತಮ್ಮ ಮನಸ್ಸನ್ನು ನಾಟಕ ರಚನೆಯಲ್ಲಿ ನೆಟ್ಟು, ತಮ್ಮ ದೇಹವನ್ನು ಚಲನಚಿತ್ರದಲ್ಲಿ ತೊಡಗಿಸಿಕೊಂಡವರು. ಕಿರು ಮತ್ತು ದೊಡ್ಡ ತೆರೆಯಲ್ಲಿ ಅಭಿನಯಿಸುತ್ತ, ಚಿತ್ರಕಥೆಗಳನ್ನು ಬರೆಯುತ್ತ, ಒಮ್ಮೊಮ್ಮೆ ಚಿತ್ರಗಳನ್ನು ನಿರ್ದೇಶಿಸುತ್ತ ತಮ್ಮ ಮನಸ್ಸಿನಲ್ಲಿ ಕಾಡುತ್ತಿರುವ ನಾಟಕಗಳ ಶಿಲ್ಪವನ್ನು ಕಡೆದವರು.

ಚಲನಚಿತ್ರ ಕ್ಷೇತ್ರಕ್ಕೂ ಅವರ ಕೊಡುಗೆ ಗಣನೀಯ. ಅರವತ್ತರ ದಶಕದಲ್ಲಿ ಅವರು ಅಭಿನಯಿಸಿದ 'ಸಂಸ್ಕಾರ' ರಾಷ್ಟ್ರಪ್ರಶಸ್ತಿಯನ್ನು ಗಳಿಸಿದ್ದಲ್ಲದೆ ಕನ್ನಡ ಚಿತ್ರರಂಗದಲ್ಲಿ ಹೊಸಅಲೆಯನ್ನೇ ಎಬ್ಬಿಸಿತು. ಪ್ರತಿ ಭಾವಂತ ಯುವ ನಿರ್ದೇಶಕರು ಸಮಾಜದ ವಾಸ್ತವತೆಗಳನ್ನು ಪ್ರತಿಬಿಂಬಿಸುವಂಥ ಚಿತ್ರಗಳನ್ನು ತೆಗೆಯಲು ಧೈರ್ಯವನ್ನು ದೊರಕಿಸಿ ಕೊಟ್ಟಿತು. ಕನ್ನಡ ಚಿತ್ರರಂಗ ರಾಷ್ಟ್ರೀಯ, ಅಂತಾರಾಷ್ಟ್ರೀಯ ರಂಗದಲ್ಲಿ ಮನ್ನಣೆ ಗಳಿಸಿತು. ಈ ನಿಟ್ಟಿನಲ್ಲಿ ಕಾರ್ನಾಡರು ನಿರ್ದೇಶಿಸಿದ ಕೆಲವು ಚಿತ್ರಗಳನ್ನು ಕಾಣಿಸುವುದು ಸೂಕ್ತ. ಬಿ. ವಿ. ಕಾರಂತರೊಡನೆ ಒಡಗೂಡಿ ನಿರ್ದೇಶಿಸಿದ ಚಿತ್ರಗಳು : ವಂಶವೃಕ್ಷ ಮತ್ತು ತಬ್ಬಲಿ ನೀನಾದೆ ಮಗನೆ. ಕಾರ್ನಾಡರು ನಿರ್ದೇಶಿಸಿದ್ದು ಒಂದಾನೊಂದು ಕಾಲದಲ್ಲಿ, ಕಾಡು. ಹಿಂದಿಯಲ್ಲಿ ಉತ್ಸವ್, ಚೆಲ್ವಿ. ಇತ್ತೀಚಿನದ್ದು: ಕಾನೂರು ಹೆಗ್ಗಡತಿ :

❑

## ಎಂ.ಎಂ.ಕಲಬುರ್ಗಿ

**ಸದಾನಂದ ಕನವಳ್ಳಿ**

ಕನ್ನಡದ ಹಿರಿಯ ಸಂಶೋಧಕರಲ್ಲೊಬ್ಬರಾದ ಡಾ|| ಎಂ.ಎಂ. ಕಲಬುರ್ಗಿ ಹತ್ತು ಹಲವು ಕ್ಷೇತ್ರಗಳಲ್ಲಿ ತಮ್ಮ ಹೆಜ್ಜೆಗುರುತುಗಳನ್ನು ಬಿಟ್ಟಿದ್ದಾರೆ. ಕನ್ನಡ ಸಂಸ್ಕೃತಿಗೆ ಅವರದು ಬಹುವಿಧ ಕೊಡುಗೆ, ಮಹತ್ತರ ಕೊಡುಗೆ.

ಮಲ್ಲಪ್ಪ ಕಲಬುರ್ಗಿ ಜನಿಸಿದ್ದು 28.11.1938ರಂದು, ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಗುಬ್ಬೇವಾಡದಲ್ಲಿ. ತಂದೆ ಮಡಿವಾಳಪ್ಪ, ತಾಯಿ ಗುರವ್ವ. ಪ್ರಾಥಮಿಕ ಶಿಕ್ಷಣ ಹಾಗೂ ಮಾಧ್ಯಮಿಕ ಯರಗಲ್ಲು ಮತ್ತು ಸಿಂದಗಿಯಲ್ಲಿ. 1960ರಲ್ಲಿ ವಿಜಾಪುರದ ವಿಜಯ ಕಾಲೇಜಿನಿಂದ ಬಿ.ಎ. ಪದವಿ ಪ್ರಥಮ ದರ್ಜೆ ಯಲ್ಲಿ. 1962ರಲ್ಲಿ ಕರ್ನಾಟಕ ವಿಶ್ವ ವಿದ್ಯಾಲಯದಿಂದ ಕನ್ನಡ ಎಂ.ಎ. ಪದವಿ; ವಿಶ್ವವಿದ್ಯಾಲಯಕ್ಕೆ ಪ್ರಥಮ; ಪ್ರತೀಶತ 72 ಗುಣಗಳ ದಾಖಲೆ. 1962ರಲ್ಲಿ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇರಿದರು. 1966ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಉಪನ್ಯಾಸಕರಾಗಿ ಸೇರಿದರು. ಪ್ರವಾಚಕ ರಾದರು; ಬಸವಪೀಠದ ಪ್ರಾಧ್ಯಾಪಕರಾದರು. ಕನ್ನಡ ಅಧ್ಯಯನ ಪೀಠದ ಮುಖ್ಯಸ್ಥರಾದರು. ಪ್ರಸ್ತುತ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಗಳಾಗಿದ್ದಾರೆ.

ಡಾ|| ಆರ್.ಸಿ.ಹಿರೇಮಠರ ಮಾರ್ಗದರ್ಶನದಲ್ಲಿ 'ಕವಿರಾಜಮಾರ್ಗ ಪರಿಸರದ ಸಾಹಿತ್ಯ' ಮಹಾಪ್ರಬಂಧ ಬರೆದು ಪಿಎಚ್.ಡಿ ಪದವಿ ಗಳಿಸಿದರು. ಅಂದಿನಿಂದ ಹಿಂತಿರುಗಿ ನೋಡಿದವರಲ್ಲ. ಸಂಶೋಧನೆಯನ್ನೆ ತಮ್ಮ ಜೀವನದ ಗುರಿಯನ್ನಾಗಿಸಿ ಕೊಂಡಿರುವರು. "ಸಂಶೋಧನೆ ಎನ್ನುವುದು ಸತ್ಯವನ್ನು ಶೋಧಿಸಲು ಮಾಡಿಕೊಂಡ ಪ್ರತಿಜ್ಞೆ" ಎಂಬ ನಂಬಿಕೆಯಿಟ್ಟು ಸತ್ಯಾನ್ವೇಷಣೆಯ ದುರ್ಗಮ ಹಾದಿಯಲ್ಲೂ ಅನನ್ಯ ಸಾಧನೆಗೈದ ಕ್ರಿಯಾಶೀಲ ಚೇತನ ಡಾ|| ಎಂ.ಎಂ.ಕಲಬುರ್ಗಿ. ರಾಷ್ಟ್ರಾದ್ಯಂತ ಅನೇಕ ಉಪನ್ಯಾಸಗಳನ್ನು ನೀಡಿದ್ದಾರೆ. ಕನ್ನಡ ಹಸ್ತಪ್ರತಿಗಳ ಶೋಧಕ್ಕಾಗಿ ಲಂಡನ್, ಆಕ್ಸ್‌ಫರ್ಡ್, ಕೇಂಬ್ರಿಜ್ ವಿಶ್ವವಿದ್ಯಾಲಯಗಳನ್ನು ಸಂದರ್ಶಿಸಿದ್ದಾರೆ. ಹಲವಾರು

ಸಂಶೋಧನ ಯೋಜನೆಗಳನ್ನು ಹಮ್ಮಿಕೊಂಡು ಪೂರ್ಣಗೊಳಿಸಿದ್ದಾರೆ. ಸಂಶೋಧನೆ, ಶಾಸನ, ಗ್ರಂಥಸಂಪಾದನೆ, ಹಸ್ತಪ್ರತಿ ಶಾಸ್ತ್ರ, ಜಾನಪದ, ವ್ಯಾಕರಣ, ಛಂದಸ್ಸು, ನಾಮವಿಜ್ಞಾನ, ಸಂಸ್ಕೃತಿ ಮೊದಲಾದ ಬಹುಮುಖಿ ಕ್ಷೇತ್ರಗಳಲ್ಲಿ 63 ಗ್ರಂಥಗಳನ್ನೂ, 300ಕ್ಕೂ ಮಿಕ್ಕಿ ಸಂಶೋಧನ ಲೇಖನ ಗಳನ್ನೂ ಬರೆದ ಶ್ರೇಯಸ್ಸು ಡಾ|| ಕಲಬುರ್ಗಿ ಅವರದು. ಕ್ಷೇತ್ರ ಯಾವುದೆ ಆಗಿರಲಿ, ಅಲ್ಲೆಲ್ಲ ಅವರು ತಮ್ಮ ವಿಶಿಷ್ಟ ಛಾಪು ಮೂಡಿಸಿದ್ದಾರೆ. ಅವರ ಸಮಗ್ರ ಕೊಡುಗೆಯನ್ನು ಪರಿಗಣಿಸಿ 1996ರ ಕರ್ನಾಟಕ ಸರಕಾರದ ಪ್ರತಿಷ್ಠಿತ ಪಂಪ ಪ್ರಶಸ್ತಿಯನ್ನು ಅವರಿಗೆ ನೀಡಿ ಗೌರವಿಸಲಾಗಿದೆ. ತಾವು ಅವಿರತವಾಗಿ ದುಡಿಯುವುದಲ್ಲದೆ, ಅನೇಕರನ್ನು ಸಂಶೋಧನ, ಬರಹಕಾರ್ಯಕ್ಕೆ ಪ್ರೇರೇಪಿಸಿದ್ದಾರೆ.

**ಜಾನಪದ ಸಂಶೋಧನೆ**

ಡಾ|| ಕಲಬುರ್ಗಿ ಅವರ ಜಾನಪದ ಕುರಿತ ಬರವಣಿಗೆಯಲ್ಲಿ ಶೋಧದ ದೃಷ್ಟಿಯ ಜೊತೆಗೆ ಜಾನಪದದ ಗಾಢ ತಿಳುವಳಿಕೆ, ಕಾಳಜಿಗಳು ಅಭಿವ್ಯಕ್ತ ಗೊಂಡಿವೆ. ಪಾಶ್ಚಾತ್ಯ ಜಾನಪದ ವಿದ್ವಾಂಸರ ಮಾನದಂಡಗಳಿಗೆ ಬಲಿಯಾಗದೆ ದೇಶೀಯ ಚಿಂತನೆಯಲ್ಲಿ ಸಂಶೋಧನೆಗೈದವರು ಡಾ|| ಕಲಬುರ್ಗಿ. 'ಉತ್ತರ ಕರ್ನಾಟಕದ ಜನಪದ ಪದ್ಯಸಾಹಿತ್ಯ' (1978) ಮತ್ತು 'ಜಾನಪದ ಮಾರ್ಗ' (1995) ಅವರ ಎರಡು ಪುಸ್ತಕಗಳು. ಮೊದಲನೆಯದರಲ್ಲಿ 83 ಪುಟ್ಟ ಪುಟ್ಟ ಲೇಖನಗಳಿದ್ದರೆ ಎರಡನೆಯದರಲ್ಲಿ 30 ಪೂರ್ಣ ಪ್ರಮಾಣದ ಲೇಖನಗಳಿವೆ. ಈ ಒಟ್ಟು 113 ಲೇಖನಗಳು ಜಾನಪದ ಕ್ಷೇತ್ರಕ್ಕೆ ಡಾ|| ಕಲಬುರ್ಗಿ ಅವರ ಗಮನಾರ್ಹ ಕೊಡುಗೆಯಾಗಿವೆ. ಜಾನಪದ ಸಾಮಗ್ರಿಯ ಮಹತ್ವದ ಅರಿವು ಅವರಲ್ಲಿ ಪ್ರಖರವಾಗಿದೆ. ಅವರ ಈ ಅಭಿಪ್ರಾಯಗಳನ್ನು ಗಮನಿಸಿರಿ:

"ನಾಗರೀಕ ಲೇಖಕರು ಹೇಳಲು ಧೈರ್ಯ ಮಾಡಿರದ, ಅಮುಖ್ಯವೆಂದು ಕೈಬಿಟ್ಟಿರಬಹುದಾದ ಅನೇಕ ಮುಖ್ಯಸಂಗತಿಗಳನ್ನು ಜಾನಪದರು ಎಷ್ಟೇ ವ್ಯತ್ಯಾಸವಾಗಿದ್ದರೂ ಧ್ವನಿರೂಪದಲ್ಲಿ, ಆಚರಣೆಯ ರೂಪದಲ್ಲಿ ರಕ್ಷಿಸುತ್ತ ಬಂದಿದ್ದಾರೆ. ಇವುಗಳನ್ನು ಇತಿಹಾಸ ಪುನರ್ರಚನಾ ಪ್ರಸಂಗದಲ್ಲಿ ಆಧಾರ ಸಾಮಗ್ರಿಯೆಂದು ಎಚ್ಚರಿಕೆಯಿಂದ ಬಳಸಿಕೊಂಡು ಇತಿಹಾಸ ಬರೆಯುವ ಮೌಖಿಕ ಇತಿಹಾಸಕಾರರ ಒಂದು ತಂಡವೇ ಇಂದು ಬೆಳೆದು ಬರಬೇಕಾಗಿದೆ".

"ಶಿಷ್ಟಪದ ಸಾಹಿತ್ಯಕ್ರಿಯೆಯಲ್ಲಿ ಪುರುಷರು, ಅದರಲ್ಲಿಯೂ ಬದ್ಧ ವ್ಯವಸ್ಥೆಯ ಪ್ರತಿಷ್ಠಿತರು ಮಾತ್ರ ಭಾಗವಹಿಸಿದರೆ ಜಾನಪದ ಸಾಹಿತ್ಯಕ್ರಿಯೆಯಲ್ಲಿ ಗಂಡಸರು-ಹೆಂಗಸರು-ಮಕ್ಕಳು ಸಹಿತ ಎಲ್ಲರೂ ಮುಕ್ತವಾಗಿ ತೊಡಗಿಸಿಕೊಳ್ಳುತ್ತಾರೆ. ಹೀಗೆ, ಹಿಂಡುಹಿಂಡಾಗಿ ತೊಡಗಿಸಿ ಕೊಳ್ಳುವ ಮೂಲಕ ಸಾಹಿತ್ಯ ಬದುಕಿನ ಒಂದು ಅವಶ್ಯಕ ಭಾಗ, ಅನಿವಾರ್ಯ ಸೃಷ್ಟಿ ಎಂಬುದನ್ನು ಇವರು ಸಾಬೀತುಗೊಳಿಸುತ್ತಾರೆ. ಸಾಹಿತ್ಯವೆನ್ನುವುದು ಕೇವಲ ಸೌಂದರ್ಯೋಪಾಸನೆಯ ಹವ್ಯಾಸವಲ್ಲ, ಬೌದ್ಧಿಕ ಚಟುವಟಿಕೆಯೂ ಅಲ್ಲ, ಸಾಮಾಜಿಕ ಕ್ರಿಯೆ ಎಂಬ ಮಾತು ಇಲ್ಲಿ ಅರ್ಥ ಪಡೆ ಯುತ್ತಿದೆ".

ಜನಪದ ಸಾಹಿತ್ಯ ಸಂಪಾದನೆಯ ವಿಷಯದಲ್ಲೂ ಡಾ|| ಕಲಬುರ್ಗಿ ಅವರ ವಿಚಾರಗಳು ಗಮನ ಸೆಳೆಯುತ್ತವೆ: "...ಜಾನಪದ ಸಾಹಿತ್ಯವನ್ನು ಸಂಪಾದಿಸುವುದೆಂದರೆ ಅರ್ಥಶುದ್ಧವಾದ ಪಾಠವನ್ನು ನಿರ್ಣಯಿಸುವುದೇ ಹೊರತು ಶಿಷ್ಟಪದ ಸಾಹಿತ್ಯ ಸಂಪಾದನೆಯಂತೆ ಮೂಲಪಾಠವನ್ನು ನಿರ್ಣಯಿಸುವುದಲ್ಲ. ಹಾಗೆ ನೋಡಿದರೆ ಜಾನಪದ ಸಾಹಿತ್ಯಕ್ಕೆ ಅಧಿಕೃತ ಪಾಠವೇ ಇರಲಾರದು, ಇರಬಾರದು".

**ಗ್ರಂಥ ಸಂಪಾದನೆ**

ಡಾ. ಕಲಬುರ್ಗಿ 36 ಗ್ರಂಥಗಳನ್ನು ಸಂಪಾದಿಸಿದ್ದಾರೆ. ಅವರ ಗ್ರಂಥ ಸಂಪಾದನೆ ನಾನಾ ದಿಕ್ಕಿಗೆ ಚಾಚಿದೆ, ನಾನಾ ಶಾಖೆಗಳಾಗಿ ಬೆಳೆದಿದೆ:

1. ಸಂಪಾದನೆಗೆ ಸಂಬಂಧಿಸಿದ ಗ್ರಂಥ ಮತ್ತು ಲೇಖನಗಳು.

2. ಸಂಪಾದಿತ ಕೃತಿಗಳು : ಗ್ರಂಥರೂಪದಲ್ಲಿ (ವಚನಸಾಹಿತ್ಯ, ಶಿಷ್ಟಸಾಹಿತ್ಯ, ದಾಖಲು ಸಾಹಿತ್ಯ, ಜನಪದ ಸಾಹಿತ್ಯ); ಲೇಖನರೂಪದಲ್ಲಿ (ಶಿಷ್ಟ, ಶಾಸನ, ಜನಪದ). ಮತ್ತೆ ಶಿಷ್ಟಸಾಹಿತ್ಯದಲ್ಲಿ ಕಾವ್ಯ ಮತ್ತು ಶಾಸ್ತ್ರ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಕಾವ್ಯ ದಲ್ಲಿ ಶುದ್ಧಕಾವ್ಯ ಮತ್ತು ಐತಿಹಾಸಿಕ ಕಾವ್ಯಗಳನ್ನು ಸಂಪಾದಿಸಿದ್ದಾರೆ. ದಾಖಲು ಸಾಹಿತ್ಯದಲ್ಲಿ ಶಾಸನಗಳನ್ನು, ಕೈಫಿಯತ್ತುಗಳನ್ನು ಸಂಪಾದಿಸಿದ್ದಾರೆ.

'ರನ್ನ ನಿಘಂಟು'ವಿನತ್ತ 1907ರಲ್ಲಿ ಮೊಟ್ಟಮೊದಲು ಗಮನ ಸೆಳೆದ ಕರ್ನಾಟಕ ಕವಿಚರಿತೆಕಾರರು ಒಂದು ಅಸಮಗ್ರ ಪ್ರತಿಯಲ್ಲಿ 12 ಕಂದಗಳಿವೆಯೆಂದು ಹೇಳಿ ಎರಡು ಪದ್ಯಗಳನ್ನು ಉದಾಹರಿಸಿದ್ದರು. 1946ರಲ್ಲಿ ತ.ಸು.ಶಾಮರಾಯರು ಹನ್ನೊಂದೂವರೆ ಪದ್ಯಗಳನ್ನು ಪ್ರಕಟಿಸಿದ್ದರು. ಕೊಲ್ಹಾಪುರದಲ್ಲಿ ದೊರೆತ ಎರಡು ತಾಳೆಗರಿ ಪ್ರತಿಗಳನ್ನು ಆಧರಿಸಿ ಡಾ.ಕಲಬುರ್ಗಿ 45 ಪದ್ಯಗಳ ಇಡೀ ಕೃತಿಯನ್ನು ಪ್ರಕಟಿಸಿದರು. "ಇಲ್ಲಿಯ ಕೆಲವು ಪದ್ಯಗಳು ಅಸ್ಪಷ್ಟವಾಗಿರುವುದರಿಂದ ಮತ್ತು ೧೦ನೆಯ ಶತಮಾನದ ಹೊತ್ತಿಗೆ ಬಳಕೆ ತಪ್ಪಿದ್ದ ಕೆಲವು ಪದಗಳು ಇಲ್ಲಿ ಇರುವುದ ರಿಂದ ಇಂದಿನ ಕಾಲದವರಿಗೆ ಈ ಕೃತಿಯ ಪರಿಷ್ಕರಣ ಅಸಾಧ್ಯ" ಎಂದು ಒಪ್ಪಿಕೊಂಡಿದ್ದಾರೆ.

'ಕರ್ನಾಟಕದ ಕೈಫಿಯತ್ತುಗಳು' ಡಾ|| ಕಲಬುರ್ಗಿ ಸಂಪಾದಿಸಿದ ಮಹತ್ವದ ಕೃತಿಗಳಲ್ಲೊಂದು. ಅದು ಸಂಶೋಧನೆಗೆ ಅಗತ್ಯವಿರುವ ಆಕರಸಾಮಗ್ರಿ. ಕೈಫಿಯತ್ತು ಒಂದು ಊರಿನ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಕ್ಷೇತ್ರಗಳ ಮಾಹಿತಿ ನೀಡುವ ಕೃತಿ. ಕರ್ನಲ್ ಮೆಕೆಂಝಿ ಅವರ 57 ಸೇರಿದಂತೆ ಒಟ್ಟು 324 ಕೈಫಿ ಯತ್ತುಗಳನ್ನು ಮೇಲ್ಕಾಣಿಸಿದ ಕೃತಿಯಲ್ಲಿ ಡಾ|| ಕಲಬುರ್ಗಿ ಪ್ರಕಟಿಸಿದ್ದಾರೆ, ವಿಸ್ತಾರವಾದ ಪ್ರಸ್ತಾವನೆ ಯೊಂದಿಗೆ.

ಡಾ|| ಕಲಬುರ್ಗಿ ಅವರ ನೇತೃತ್ವದಲ್ಲಿ ಕರ್ನಾಟಕ ಸರ್ಕಾರ ಹೊರತಂದ 'ಸಮಗ್ರ ವಚನ' ಸಂಪುಟ 15 ಸಂಪುಟಗಳಲ್ಲಿ ಹರಡಿಕೊಂಡಿದೆ. ವಚನ ಸಂಪಾದನೆಯ ಇತಿಹಾಸದಲ್ಲಿ ಇದೊಂದು ಮೈಲಿಗಲ್ಲು. 108 ಪ್ರಕಟಿತ, ಅಪ್ರಕಟಿತ ಆಕರಗಳಿಂದ ವಚನಗಳನ್ನು ಸಂಗ್ರಹಿಸಿ 110 ಕೃತಕ ವಚನಕಾರರನ್ನು ಕೈಬಿಟ್ಟು 54 ಅಜ್ಞಾತ ವಚನಕಾರರನ್ನು ಬೆಳಕಿಗೆ ತರಲಾಯಿತು. ಈ ಹದಿನೈದು ಸಂಪುಟಗಳ ಒಟ್ಟು ಪುಟ ಸಂಖ್ಯೆ 10,000; ಒಟ್ಟು ವಚನಗಳು 20,000.

ವಚನಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬಾ ಜಟಿಲ. ಕೆಲವೊಂದು ವಚನಗಳು ಎಷ್ಟೊಂದು ಕುಲಗೆಟ್ಟಿವೆಯೆಂದರೆ ಸ್ವತಃ ಶರಣರೇ ಅವತರಿಸಿ ಬಂದರೂ ಅವರವರ ವಚನಗಳ ಶುದ್ಧಪಾಠವನ್ನು ನಿರ್ಣಯಿಸುವುದು ಅವರಿಗೇ ಸಾಧ್ಯವಾಗಲಾರದೇನೋ! ಮುದ್ರಣವನ್ನರಿಯದ ಅಂದಿನ ಕಾಲದಲ್ಲಿ ಬಾಯಿಂದ ಬಾಯಿಗೆ ಹರಿದುಬಂದ ವಚನಗಳನ್ನು ಬರೆದಿಡುವ ಪ್ರಯತ್ನ ದೀರ್ಘ ಕಾಲಾಂತರ ದಲ್ಲಿ ನಡೆಯಿತು. ಅಲ್ಲದೆ, ಲಿಪಿಕಾರರು ಮಾಡಿದ ಅನೇಕ ಕಾಗುಣಿತ ದೋಷಗಳು ವಚನಗಳ ಪರಿಷ್ಕರಣವನ್ನು ಇನ್ನಷ್ಟು ಜಟಿಲ ಗೊಳಿಸಿವೆ. ಪ್ರಸ್ತುತ 'ಸಮಗ್ರ ವಚನ ಸಂಪುಟ'ದಲ್ಲಿ ಅಂಥ ಅನೇಕಾನೇಕ ದೋಷಗಳನ್ನು ಸರಿಪಡಿಸಲಾಗಿದೆ.

**ಉದಾಹರಣೆಗೆ**

'ನಿಮ್ಮ ಮೈಸಿರಿ ಹಾರಿಹೋಹುದೆ? ಎಂಬಲ್ಲಿ 'ಮೈಸಿರಿ' ಎಂದರೇನು? ಅದನ್ನು

'ನಿಮ್ಮೈಸಿರಿ' (ನಿಮ್ಮ ಐಸಿರಿ) ಎಂದು ಸರಿಪಡಿಸಲಾಗಿದೆ. ಡಾ|| ಕಲಬುರ್ಗಿ ತಮ್ಮ ಪ್ರತಿಭೆ, ಪಾಂಡಿತ್ಯಗಳಿಂದಾಗಿ ಫ.ಗು.ಹಳಕಟ್ಟಿ, ಶಿ.ಶಿ.ಬಸವನಾಳ, ಆರ್.ಸಿ. ಹಿರೇಮಠ ಎಲ್. ಬಸವರಾಜು ಮೊದಲದ ಮೇಧಾವಿ ವಚನ ಸಂಪಾದಕರ ಸಾಲಿಗೆ ಸೇರುತ್ತಾರೆ.

**ಶಾಸನ ಸಂಶೋಧನೆ**

ಶಾಸನಾಧ್ಯಯನ ಡಾ.ಕಲಬುರ್ಗಿ ಅವರ ಪ್ರೀತಿಯ ಕ್ಷೇತ್ರ. ಅವರ ಒಟ್ಟು 65 ಕೃತಿಗಳಲ್ಲಿ 14 ಶಾಸನಗಳಿಗೆ ಸಂಬಂಧಿಸಿವೆ. ಅವರದು ಮೂರು ವಿಧದ ಕೃಷಿ:

**1. ಆಕರ ಸಂಶೋಧನೆ: ಸೂಚಿಗಳು**

(ಅ) ಧಾರವಾಡ ಜಿಲ್ಲೆಯ ಶಾಸನ ಸೂಚಿ

(ಬ) ವಿಜಾಪುರ ಜಿಲ್ಲೆಯ ಶಾಸನ ಸೂಚಿಶಾಸನಗಳು

(ಅ) ಧಾರವಾಡ ತಾಲೂಕಿನ ಶಾಸನಗಳು

(ಬ) ಶಾಸನ ಸಂಪದ

(ಕ) ಶಾಸನ ಸೂಕ್ತಿ ಸುಧಾರ್ಣವ

**2. ವಿಶ್ಲೇಷಣಾತ್ಮಕ ಸಂಶೋಧನೆ**

(ಅ) ಬಸವಣ್ಣನವರನ್ನು ಕುರಿತ ಶಾಸನಗಳು

(ಬ) ಶಾಸನಗಳಲ್ಲಿ ಶಿವಶರಣರು

(ಕ) ಶಾಸನ ವ್ಯಾಸಂಗ-1

(ಡ) ಮಹಾರಾಷ್ಟ್ರದ ಕನ್ನಡ ಶಾಸನಗಳು

**3. ವ್ಯಾಖ್ಯಾನಾತ್ಮಕ ಸಂಶೋಧನೆ**

(ಅ) ಶಾಸನ ವ್ಯಾಸಂಗ-2

(ಬ) ಮಾರ್ಗ- ಸಂಪುಟದ ಶಾಸನಮಾರ್ಗ

(ಕ) ಐತಿಹಾಸಿಕ

(ಡ) ಮಾರ್ಗ-3 ಸಂಪುಟದ ಕೆಲವು ಲೇಖನಗಳು

(ಇ) ಸಮಾಧಿ-ಬಲಿದಾನ-ವೀರಮರ ಸ್ಮಾರಕಗಳು

ಅನೇಕ ಹೊಸ ಶಾಸನಗಳನ್ನು ಪತ್ತೆ ಮಾಡಿದ ಡಾ.ಕಲಬುರ್ಗಿ ಶಾಸನಗಳಿಗೆ ಸಂಬಂಧಿಸಿದ ತಮ್ಮ ಕೃತಿಗಳಲ್ಲಿ ಶಾಸನದ ಕ್ರಮಾಂಕ, ಅದರ ಕೆಳಗೆ ಗ್ರಾಮನಾಮ, ಅದರ ಕೆಳಗೆ ಕಾಲವನ್ನು ಕೊಟ್ಟಿದ್ದಾರೆ. ಶಾಸನಕಲ್ಲಿನ ಸ್ಥೂಲ ಪರಿಚಯ, ದೊರೆತ ಸ್ಥಳ ಮತ್ತು ಚಿತ್ರಗಳು, ಗಾತ್ರ, ಸಾರಾಂಶ ಕೊಡುವುದರ ಜೊತೆಗೆ ಅಮಾವಾಸ್ಯೆ ಚಿಹ್ನೆಯ ಮೂಲಕ ಮಹತ್ವದ ವಿಷಯಗಳ ಬಗೆಗೆ ಓದುಗರ ಗಮನ ಸೆಳೆಯುತ್ತಾರೆ. ಶಾಸನಗಳ ಪರಷ್ಕೃತ ಪಾಠವನ್ನು, ಅದರ ಜೊತೆಗೆ ಇಂಗ್ಲಿಷ್ ಪಾಠವನ್ನು ಕೊಡುತ್ತಾರೆ. ಪೂರ್ವದ ಹಳಗನ್ನಡ, ನಡುಗನ್ನಡ ಪ್ರತಿನಿಧಿಸುವ ಶಾಸನಗಳು, ಕನ್ನಡದ ವಿವಿಧ ಛಂದೋಪ್ರಕಾರಗಳಲ್ಲಿ ರಚಿತವಾದ ಶಾಸನಗಳು, ವಿವಿಧ ಧರ್ಮ, ರಾಜ ಮನೆತನ, ಉತ್ಕೃಷ್ಟ ಜೀವನ ಮೌಲ್ಯಗಳನ್ನು ಪ್ರತಿನಿಧಿಸುವ ಶಾಸನಗಳು ಎಂದು ಮುಂತಾಗಿ ವರ್ಗೀಕರಿಸುತ್ತಾರೆ.

'ಬಸವಣ್ಣನವರನ್ನು ಕುರಿತ ಶಾಸನಗಳು' ಬಸವಣ್ಣನವರಿಗೆ ಸಂಬಂಧಿಸಿದ ಒಟ್ಟು 18 ಶಾಸನಗಳಲ್ಲಿ ತಾವು ಸ್ವತಃ ಕಂಡುಹಿಡಿದ ಮೂರನ್ನು ಸೇರಿಸಿ ಸಮ್ಮತವಾದ 11ನ್ನು ಇಟ್ಟುಕೊಂಡ ಕೃತಿ. ಬಸವಣ್ಣನವರನ್ನು ವೈಭವೀಕರಿಸದೆ ಪದ್ಯಗಳನ್ನು ಹಿಂಜಿ ಹಿಂಜಿ ವಿಶ್ಲೇಷಿಸುವ ವಿಧಾನದಿಂದಾಗಿ ಬಸವಣ್ಣನವರ ಚಾರಿತ್ರಿಕತೆಯ ಬಗೆಗೆ ಎದ್ದಿದ್ದ ಅನುಮಾನಗಳನ್ನು ಬಗೆಹರಿಸುವ ಕೃತಿಯಿದು. ಅಂತೆಯೆ, 'ಶಾಸನಗಳಲ್ಲಿ ಶಿವಶರಣರು' ಕೂಡ.

'ಮಹಾರಾಷ್ಟ್ರದ ಕನ್ನಡ ಶಾಸನಗಳು' ಒಂದು ವಿಶಿಷ್ಟ ಕೃತಿ. ಮಹಾರಾಷ್ಟ್ರದಲ್ಲಿ ದೊರೆಯುವ 1000 ಶಾಸನಗಳಲ್ಲಿ ಮರಾಠಿ ಶಾಸನಗಳು ಕೇವಲ 100, ಅಧಿಕ ಸಂಖ್ಯೆಯವು ಕನ್ನಡ ಶಾಸನಗಳು ಎಂದು ಹೇಳುತ್ತ "ಇಂದಿನ ಕರ್ನಾಟಕಕ್ಕೆ ಭೂಗೋಲ ಸಣ್ಣದು, ಇತಿಹಾಸ ದೊಡ್ಡದು, ಇಂದಿನ ಮಹಾರಾಷ್ಟ್ರಕ್ಕೆ ಭೂಗೋಲ ದೊಡ್ಡದು; ಇತಿಹಾಸ ಸಣ್ಣದು" ಎಂದು ವ್ಯಾಖ್ಯಾನಿಸುತ್ತಾರೆ.

**ಶಾಸ್ತ್ರ ಸಂಶೋಧನೆ**

ಶಾಸ್ತ್ರಸಂಶೋಧನೆಯಡಿಯಲ್ಲಿ ಡಾ. ಕಲಬುರ್ಗಿ ಗ್ರಂಥಸಂಪಾದನಾ ಶಾಸ್ತ್ರ, ಸಾಹಿತ್ಯ, ಸಂಪಾದನಾ ಶಾಸ್ತ್ರ, ಹಸ್ತಪ್ರತಿ ಶಾಸ್ತ್ರ, ಸಂಶೋಧನಾ ಶಾಸ್ತ್ರ, ನಾಮಶಾಸ್ತ್ರ, ಭಾಷಾಶಾಸ್ತ್ರ ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಕಾರ್ಯ ಮಾಡಿದ್ದಾರೆ.

ಡಿ.ಎಲ್. ನರಸಿಂಹಾಚಾರ್ ಅವರ 'ಕನ್ನಡ ಗ್ರಂಥಸಂಪಾದನೆ'ಯ ನಂತರ ಡಾ. ಕಲಬುರ್ಗಿ ಅವರ 'ಕನ್ನಡ ಗ್ರಂಥಸಂಪಾದನಾ ಶಾಸ್ತ್ರ' ಹೊರ ಬಂದಿತು. ಅದರಲ್ಲಿ ಗ್ರಂಥ ಸಂಪಾದನೆಯ ಇತಿಹಾಸ, ಗ್ರಂಥರಕ್ಷಣೆ, ಗ್ರಂಥ ಲೇಖನ, ಪಾಠ ರಕ್ಷಣೆ, ಭಿನ್ನಪಾಠ ಸಂಗ್ರಹ, ಪಾಠನಿರ್ಣಯ ಮೊದಲಾದ ವಿಷಯಗಳ ವಿವೇಚನೆಯಿದೆ. 'ಲೇಖನ ಕಾಂಡ'ದಲ್ಲಿ ತಾಳೆಗರಿಗೆ ಲೇಪಿಸುವ ಮಸಿ ತಯಾರಿಕೆಯ ವಿಧಾನದ ಉಲ್ಲೇಖವನ್ನು ಹುಡುಕಿಕೊಟ್ಟಿದ್ದಾರೆ. 'ಸ್ಖಾಲಿತ್ಯ ಕಾಂಡ'ದಲ್ಲಿ ಸ್ಖಾಲಿತ್ಯದ ನಾನಾ ಬಗೆಗಳ ನಿರೂಪಣೆಯಿದೆ. 'ಹಸ್ತಪ್ರತಿ ಕಾಂಡ'ದಲ್ಲಿ ಮೂಲ ಮಾತೃಕೆಯ ವಂಶಾವಳಿಯ ಹಸ್ತಪ್ರತಿಯ ಪ್ರಾಮಾಣಿಕತೆಯ ಒರೆಗಲ್ಲು ಎಂದು ಒತ್ತಿ ಹೇಳಿದ್ದಾರೆ. 'ಸಂಪಾದನ ಕಾಂಡ'ದಲ್ಲಿ ಸಾಮಗ್ರಿ, ಸಂಕಲನ, ವಂಶಾವಳಿ ನಿರ್ಣಯ, ಪಾಠ ಸಂಕಲನ, ಪಾಠ ಪರಿಷ್ಕರಣ, ಉನ್ನತ ವಿಮರ್ಶೆ ಎಂಬ ಐದು ಘಟ್ಟಗಳ ಅಂಶಗಳನ್ನು ಚರ್ಚಿಸಲಾಗಿದೆ. ಪಾಠ ಪರಿಷ್ಕರಣದಲ್ಲಿ ಭಿನ್ನ ಪಾಠಗಳನ್ನು ಗುರುತಿಸುವ ಸಂಕೇತ ಮತ್ತು ಸಂಕ್ಷೇಪಗಳ ಬಳಕೆಯಲ್ಲಿ ಏಕರೂಪತೆಯಿಲ್ಲದುದಕ್ಕೆ ವಿಷಾದಿಸಿದ್ದಾರೆ. 'ಶೇಷ ಕಾಂಡ'ದಲ್ಲಿ ಸಂಪಾದಕನಲ್ಲಿರಬೇಕಾದ ಅರ್ಹತೆ, ವಿದ್ವತ್ತುಗಳನ್ನು ನಿರೂಪಿಸಲಾಗಿದೆ. ಗ್ರಂಥಸಂಪಾದನಾ ಶಾಸ್ತ್ರವು ಸಂಸ್ಕೃತಿಯ ಅಧ್ಯಯನಕ್ಕೆ ಸಾಧನವೆಂಬ ವಿಮರ ಪ್ರತಿಪಾದನೆ ಇಲ್ಲಿದೆ.

'ಕನ್ನಡ ಗ್ರಂಥಸಂಪಾದನಾ ಶಾಸ್ತ್ರ' ಹೊರಬಂದು ೨೫ ವರ್ಷಗಳಾದರೂ ಅದನ್ನು ಮೀರಿಸುವ ಇನ್ನೊಂದು ಗ್ರಂಥ ಬರಲಿಲ್ಲವೆಂಬುದು ಅದರ ಮಹತಿಯ ದ್ಯೋತಕ.

'ಸಂಶೋಧನ ಶಾಸ್ತ್ರ' ಕನ್ನಡ ಭಾಷೆ ಸಾಹಿತ್ಯ, ಸಂಸ್ಕೃತಿ, ಜಾನಪದ, ಶಾಸನ ಕ್ಷೇತ್ರಗಳ ಸಂಶೋಧನೆಯ ಸ್ವರೂಪ, ವಿಧಿವಿಧಾನಗಳ ಅಂತರ ಶಿಸ್ತೀಯ ಅಧ್ಯಯನ. ಕನ್ನಡಿಗರು ಧಾರ್ಮಿಕ ಆಕರಗಳನ್ನು ಉಳಿಸಿಕೊಳ್ಳುವಲ್ಲಿ ವಹಿಸಿದ ಆಸಕ್ತಿಯನ್ನು ಲೌಕಿಕ ಆಕರಗಳನ್ನು ಉಳಿಸಿಕೊಳ್ಳುವಲ್ಲಿ ವಹಿಸಲಿಲ್ಲ. ಆದ್ದರಿಂದ ಪ್ರಾಮಾಣಿಕ ಆಕರಗಳ ಆಯ್ಕೆಗಾಗಿ ಸಂಶೋಧಕ ತುಂಬಾ ಎಚ್ಚರವಹಿಸಬೇಕಾಗುತ್ತದೆ. ಹಾಗಾಗಿ, ಅದು ಬಹುಕ್ಷೇತ್ರೀಯ ಅಧ್ಯಯನ ಎಂಬುದನ್ನು ಡಾ. ಕಲಬುರ್ಗಿ ಬಿಂಬಿಸುತ್ತಾರೆ.

'ಸಂಶೋಧನ: ಕ್ರಿಯೆ-ಪ್ರಕಾರ' ವಿಭಾಗದಲ್ಲಿ ಸಂಶೋಧನೆಯ ವಿಷಯ, ಉದ್ದೇಶ, ವಿಧಾನ, ಸ್ವರೂಪಗಳನ್ನವಲಂಬಿಸಿದ ವರ್ಗೀಕರಣವಿದೆ. "ಸಂಶೋಧಕ

ತಪ್ಪು ಹೇಳಿರಬಹುದು, ಸುಳ್ಳು ಹೇಳಿರಲಾರ; ಸಂಶೋಧನೆ ಅಲ್ಪ ವಿರಾಮದ ಮೂಲಕ ಪೂರ್ಣ ವಿರಾಮದತ್ತ ಸಾಗುವ ಕ್ರಿಯೆ" ಎಂದು ಡಾ|| ಕಲಬುರ್ಗಿ ಹೇಳಿರುವುದು ಈ ಹಿನ್ನೆಲೆಯಲ್ಲಿಯೆ.

'ಸಂಶೋಧನ ಪ್ರಕಾರ' ವಿಭಾಗದಲ್ಲಿ ಸಂಶೋಧನೆಯ ವಿಷಯ, ಉದ್ದೇಶ, ವಿಧಾನ, ಸ್ವರೂಪಗಳನ್ನವಲಂಬಿಸಿದ ವರ್ಗೀಕರಣವಿದೆ.

'ಪ್ರಬಂಧ' ವಿಭಾಗದಲ್ಲಿ ಸಂಪ್ರಬಂಧ- ಮಹಾಪ್ರಬಂಧಗಳ ಸ್ವರೂಪ, ಪರಂಪರೆಯ ವಿವರಣೆಯಿದೆ.

'ಪೂರಕ ವಿಚಾರಗಳು' ವಿಭಾಗದಲ್ಲಿ ಸಂಶೋಧನೆಯ ಭಾಷೆ, ವೈಯಕ್ತಿಕ / ಜಂಟಿ/ಸಾಂಸ್ಥಿಕ ಸಂಶೋಧನೆ, ಸಂಶೋಧನೆ ಸಹಾಯ, ಸಂಶೋಧನೆಯ ಅವಶ್ಯಕತೆ ಕುರಿತ ವಿವೇಚನೆಯಿದೆ.

'ಕನ್ನಡ ಹಸ್ತಪ್ರತಿ ಶಾಸ್ತ್ರ' ಡಾ. ಕಲಬುರ್ಗಿ ಅವರ ಇನ್ನೊಂದು ಮಹತ್ವದ ಕೃತಿ. 'ಹಸ್ತಪ್ರತಿ ಶಾಸ್ತ್ರ' ಪದ ಡಾ. ಕಲಬುರ್ಗಿ ಅವರದೇ ಟಂಕಣೆ. ಹಸ್ತಪ್ರತಿಯ ಉತ್ಪಾದನೆ, ಪ್ರಸರಣ, ಸಂಗ್ರಹಣ, ವ್ಯವಸ್ಥಾಪನ ಮತ್ತು ಪ್ರಯೋಜನ ಕುರಿತ ಅಧ್ಯಯನ ಈ ಕೃತಿಯಲ್ಲಿದೆ. ಆಕರಣ, ತಾಂತ್ರಿಕ ಸೂಚೀಕರಣ, ವರ್ಗೀಕರಣ, ಸಂರಕ್ಷಣ, ಗ್ರಂಥಸಂಪಾದನ, ಗ್ರಂಥ ಪರಿಚಲನ, ಅಧ್ಯಯನ, ಗ್ರಂಥಾಲಯ, ಯಂತ್ರೋಪಕರಣ, ಪ್ರದರ್ಶನ, ಸಮಾಲೋಚನೆ, ಸಭಾಗೃಹ ಮತ್ತು ವಿಶ್ರಾಂತಿ ಗೃಹ ಎಂಬ 12 ವಿಭಾಗಗಳ ಪರಿಪೂರ್ಣ ವಾಸ್ತುವಿನ ನೀಲನಕ್ಷೆಯನ್ನು ನೀಡಿರುವ ಕನಸುಗಾರರು ಡಾ. ಕಲಬುರ್ಗಿ.

'ಕನ್ನಡ', 'ನಾಮ ವಿಜ್ಞಾನ' ಹೊಸ ಜ್ಞಾನಶಾಖೆಯಾಗಿರುವ ನಾಮ ವಿಜ್ಞಾನಕ್ಕೆ ಡಾ. ಕಲಬುರ್ಗಿ ಅವರ ಕೊಡುಗೆ. ನಾಮವಿಜ್ಞಾನದ ಅನೇಕ ಒಳನೋಟಗಳು ಈ ಕೃತಿಯ ತುಂಬ ಚೆಲ್ಲುವರಿದಿದೆ. ಕೆಲವು ಉದಾಹರಣೆಗಳನ್ನು ನೋಡಬಹುದು:

"ಸಮೂಹದಿಂದ ವ್ಯಕ್ತಿಯನ್ನು ಪ್ರತ್ಯೇಕಿಸಿ ಕೊಡುವ ಕುಟುಂಬನಾಮ ಆ ವ್ಯಕ್ತಿಯ ಪೂರ್ವಜರ ನೆಲೆ, ವೃತ್ತಿ ಇಲ್ಲವೆ ಚಿತ್ತವೃತ್ತಿಗಳನ್ನು ಪ್ರತಿನಿಧಿಸುವಂಥದ್ದು. ಉತ್ತರ ಕರ್ನಾಟಕದಲ್ಲಿ 'ಅಡ್ಡ ಹೆಸರು'ಗಳೆಂದು ಪ್ರಚಲಿತವಿರುವ ಈ ನಾಮಗಳು ಗ್ರಾಮ, ಕುಟುಂಬ, ವಂಶ, ವೃತ್ತಿ-ಜಾತಿಗಳ ಪ್ರತಿನಿಧಿಯಾಗಿ ಆಯಾ ಕುಟುಂಬದ ಸದಸ್ಯರನ್ನು ಮಾನಸಿಕವಾಗಿ ಬೆಸೆಯುತ್ತವೆ".

"ಉತ್ತರಕರ್ನಾಟಕದಲ್ಲಿ ಕುಟುಂಬ ಪ್ರಧಾನವಾಗಿ ವ್ಯಕ್ತಿ ಅಪ್ರಧಾನವಾಗಿದೆ. ದಕ್ಷಿಣ ಕರ್ನಾಟಕದಲ್ಲಿ ವ್ಯಕ್ತಿ ಪ್ರಧಾನವಾಗಿ ಕುಟುಂಬ ಅಪ್ರಧಾನವಾಗಿದೆ. ಉತ್ತರ ಕರ್ನಾಟಕದವರು ಪ್ರಾಚೀನತಾ ಪ್ರಿಯರೂ ಜಾನಪದೀಯರೂ ಆಗಿದ್ದರೆ, ದಕ್ಷಿಣ ಕರ್ನಾಟಕದವರು ವರ್ತಮಾನನಿಷ್ಠರೂ ಶಿಷ್ಟಪದೀಯರೂ ಆಗಿದ್ದಾರೆ".

"ವೃತ್ತಿಯನ್ನು ಅಡ್ಡಹೆಸರಿನಂತೆ ಬಳಸುವ ರೂಢಿ ಉತ್ತರ ಕರ್ನಾಟಕದಲ್ಲಿ ವ್ಯಾಪಕವಾಗಿದ್ದರೆ ದಕ್ಷಿಣ ಕರ್ನಾಟಕದಲ್ಲಿ ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆ. ಶರಣರ ಕಾಲದಿಂದಲೂ ಬಂದ ಪದ್ಧತಿಯಿದು. ಶರಣರಿಗೆ ತಮ್ಮ ಕಾಯಕದ ಬಗೆಗೆ ಅನನ್ಯ ಗೌರವವಿರುವುದರ ದ್ಯೋತಕವಿದು".

"ಉತ್ತರ ಕರ್ನಾಟಕದ ದ್ಯಾಮಮ್ಮನವರ, ಕೆಂಚವ್ವಗೋಳ, ನಾಗಮ್ಮ ನವರ ಮುಂತಾದ ಅಡ್ಡಹೆಸರುಗಳು ದ್ರಾವಿಡ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಸೂಚಿಸುತ್ತವೆ".

ಕನ್ನಡ ವ್ಯಾಕರಣದ ಆಚಾರ್ಯಕೃತಿ 'ಶಬ್ದಮಣಿದರ್ಪಣ' ಕಬ್ಬಿಣದ ಕಡಲೆ. ಡಾ. ಕಲಬುರ್ಗಿ ಸಂಶೋಧನ ಕ್ಷೇತ್ರಕ್ಕೆ ಕಾಲಿರಿಸಿದ ಹೊಸತರಲ್ಲಿ ಡಿ.ಎಲ್. ನರಸಿಂಹಾಚಾರ್ ಸಂಪಾದಿಸಿದ ಶಬ್ದಮಣಿದರ್ಪಣದ ದೋಷ ಗಳನ್ನು ಎತ್ತಿ ತೋರಿ ಪರಿಹಾರ ಸೂಚಿಸಿದುದುರ ಬಗ್ಗೆ ನರಸಿಂಹಾಚಾರರೆ ತಮ್ಮ ಮುಂದಿನ ಆವೃತ್ತಿಯಲ್ಲಿ ಹೇಳಿದ್ದು:

"ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಪ್ರೊ.ಮಲ್ಲಿನಾಥ ಕಲಬುರ್ಗಿ ಅವರು 'ದರ್ಪಣಾವಲೋಕನ' ಎಂಬ ಹೆಸರಿನಲ್ಲಿ ಎರಡು ಲೇಖನಗಳನ್ನು ಪ್ರಕಟಿಸಿದ್ದಾರೆ. ಸೂತ್ರ, ವೃತ್ತಿ, ಟೀಕೆಗಳಲ್ಲಿ ಹಂಚಿಹೋಗಿರುವ ಸ್ಖಾಲಿತ್ಯಗಳನ್ನೆಲ್ಲ ತುಂಬ ಶ್ರಮವಹಿಸಿ ಕಂಡುಹಿಡಿದಿದ್ದಾರೆ. ಇವರ ಲೇಖನಗಳ ಕಾರಣವಾಗಿ ಶಬ್ದಮಣಿ ದರ್ಪಣದ ಈ ಮುದ್ರಣ ಅದರ ಹಿಂದಣ ಮುದ್ರಣಕ್ಕಿಂತ ಹೆಚ್ಚು ಸಮರ್ಪಕ ವಾಗಿದೆಯೆಂದು ಭಾವಿಸುತ್ತೇನೆ".

ಭಾಷೆ, ಛಂದಸ್ಸಿಗೆ ಸಂಬಂಧಿಸಿದಂತೆ ಡಾ.ಕಲಬುರ್ಗಿ ಅನೇಕ ಲೇಖನಗಳನ್ನು ಬರೆದಿದ್ದಾರೆ. ಛಂದಸ್ಸು ಸಂಪೂರ್ಣವಾಗಿ ಅಲಕ್ಷಿತ ಕ್ಷೇತ್ರ. ಅದಕ್ಕೆ ಕಾರಣವೆಂದರೆ ಛಂದಸ್ಸು ಶೈಲಿಶಾಸ್ತ್ರ ಮತ್ತು ಸಂಗೀತಶಾಸ್ತ್ರದೊಂದಿಗೆ ತಳುಕು ಹಾಕಿಕೊಂಡಿರುವುದು. ಮೂಲಭೂತ ತತ್ವಗಳನ್ನು, ಸ್ವರೂಪಾದಿ ಗುಣಗಳನ್ನು, ಹೊಸ ಪಾರಿಭಾಷಿಕ ಪದಗಳ ಸೃಷ್ಟಿಯ ಅಗತ್ಯವನ್ನು ಡಾ. ಕಲಬುರ್ಗಿ ಆಗಾಗ ಒತ್ತಿ ಹೇಳಿದ್ದಾರೆ.

ಡಾ. ಕಲಬುರ್ಗಿ ಅವರ ಶಾಸ್ತ್ರಸಂಶೋಧನೆಯ ವ್ಯಾಪ್ತಿ, ವೈವಿಧ್ಯ, ಸಮಸ್ಯೆ ಗಳನ್ನು ಬಿಡಿಸುವ ನಿರೂಪಣೆ, ವಿಶ್ಲೇಷಣೆ ಬೆರಗುಗೊಳಿಸುವಂತಹುವು.

**ಸಾಹಿತ್ಯ ಸಂಶೋಧನೆ**

ಡಾ. ಕಲಬುರ್ಗಿ ಅವರ ಸಾಹಿತ್ಯಸಂಶೋಧನೆ ಅವರ ಪಿಎಚ್.ಡಿ ಪ್ರಬಂಧ 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ' ದಿಂದ ಇತ್ತೀಚಿನ 'ಮಾರ್ಗ2' ರವರೆಗೆ ಚಾಚಿಕೊಂಡಿದೆ. ಯಾವುದೇ ಕ್ಷೇತ್ರವಿರಲಿ, ಅವರು ಹೊಸದನ್ನೆ ಆಲೋಚಿಸುತ್ತಾರೆ. ಜಂಗಮ(ಚಲನಶೀಲತೆ)ವೊಂದೇ ಸಾಹಿತ್ಯ ವನ್ನು ಮೌಲಿಕವಾಗಿಡಲು, ಜನಾಭಿಮುಖಿ ಯಾಗಿಡಲು ಸಾಧ್ಯ. ನಡೆ-ನುಡಿ ಒಂದಾಗದ ಬರಹ 'ರಚನಾ' ಸಾಹಿತ್ಯ ಮಾತ್ರ. ಹಾಗಾಗಿ ವಚನಸಾಹಿತ್ಯ ಅವರಿಗೆ ದೊಡ್ಡದಾಗಿ ಕಾಣುತ್ತದೆ.

ಸಾಹಿತ್ಯ ಸಂಶೋಧನೆಗಾಗಿ ಡಾ. ಕಲಬುರ್ಗಿ ವ್ಯಾಪಕ ಕ್ಷೇತ್ರಕಾರ್ಯ ವನ್ನು ಕೈಕೊಂಡಿದ್ದಾರೆ: ಪಂಪನ ಧರ್ಮಪುರ, ಸಿದ್ಧರಾಮನ ಸೊಲ್ಲಾಪುರ, ಅಲ್ಲಮನ ಕರ‍ೂರು ಇತ್ಯಾದಿ. ಬಹುತೇಕ ಪ್ರಸಂಗಗಳಲ್ಲಿ ಹೊಸದನ್ನೇ ಹೇಳಿದ್ದಾರೆ. ಉದಾ: ಅಲ್ಲಮನ ಜನ್ಮಸ್ಥಳ ಬಳ್ಳಿಗಾವೆ ಅಲ್ಲ, ಶಿರಶಿ ತಾಲೂಕಿನ ಕರೂರು. ಅದಕ್ಕೆ ಕಾವ್ಯ, ಶಾಸನ, ಕ್ಷೇತ್ರಗಳ ಆಧಾರ ಒದಗಿಸಿದ್ದಾರೆ. ಪಂಪ ತನ್ನ 40ನೆಯ ವಯಸ್ಸಿಗೆ ತನ್ನ ಎರಡೂ ಕಾವ್ಯ ಬರೆದ ನಂತರ ಏನನ್ನೂ ಬರೆಯಲಿಲ್ಲವೇಕೆ ಎಂಬ ಪ್ರಶ್ನೆಯನ್ನೆತ್ತಿಕೊಂಡು ಅವನು ಅಕಾಲಿಕ ಮರಣಕ್ಕೆ ತುತ್ತಾಗಿರಬೇಕು ಎಂದು ತರ್ಕಿಸುತ್ತಾರೆ. ಪಂಪನೂ ಇವರ ಚಿಕಿತ್ಸಕ ದೃಷ್ಟಿಗಳಿಗೆ ಒಳಗಾಗುತ್ತಾನೆ.

ಕನ್ನಡ ಸಾಹಿತ್ಯ ಚರಿತ್ರೆ ವಿಷಯದಲ್ಲೂ ಡಾ. ಕಲಬುರ್ಗಿ ಅವರದು ಹೊಸತನ ಅವರ ಪ್ರಕಾರ ಕನ್ನಡ ಸಾಹಿತ್ಯದ ಆರಂಭಕಾಲದಿಂದ ಬಸವಣ್ಣನವರೆಗೆ ಪಂಪಯುಗ ಅಥವಾ ಜೈನಯುಗ. ಅದಕ್ಕವರು ಕೊಡುವ ಕಾರಣವೇ ನೆಂದರೆ ಪಂಪಯುಗದ ಅಜ್ಞಾತಸಾಹಿತ್ಯಕ್ಕೆ ಆ ಪೂರ್ವದ ಜ್ಞಾತ ಸಾಹಿತ್ಯ ಹಿನ್ನೆಲೆಯಾಗಿತ್ತು. ಹಾಗೆಯೆ, ಬಸವಣ್ಣನವರಿಂದ ಬಿ.ಎಂ.ಶ್ರೀ.ವರೆಗೆ ವೀರಶೈವ ಯುಗ ಎಂದು ವಿಭಜನೆ ಮಾಡಬೇಕೆನ್ನುತ್ತಾರೆ. ಏಕೆಂದರೆ, ವಸ್ತು-ಭಾಷೆ-ರೂಪದಲ್ಲಿ ವಚನಕಾರರ ಧೋರಣೆಯೇ ಏಳು ಶತಮಾನಗಳುದ್ದಕ್ಕೂ ಮುಂದುವರಿದಿದೆ. ಕವಿಗಳ ಮತ ಸ್ತ್ವ ಸಂಖ್ಯೆ ಗಮನಿಸಿ ಹೊಸಗನ್ನಡ ಯುಗವನ್ನು ಬ್ರಾಹ್ಮಣ ಯುಗ ಎಂದು ಕರೆಯುತ್ತಾರೆ.

'ನವೋದಯ ಸಾಹಿತ್ಯ ಚಳುವಳಿಗಳು' ಲೇಖನದಲ್ಲಿ ಡಾ. ಕಲಬುರ್ಗಿ ಅವರ ವಿಚಾರಸರಣಿ ಇಂತಿದೆ: "ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡ ಪ್ರಥಮ ಚಳುವಳಿಯು ಸಂಸ್ಕೃತ ಭಾಷೆಯನ್ನು ಎದುರಿಸುವ ಮೂಲಕ ಪ್ರಾರಂಭವಾದಂತಿದೆ. ಸಂಸ್ಕೃತದ ಸವಾಲನ್ನು 'ವಸ್ತು'ವಿಗಿಂತ 'ಶೈಲಿ'ಯಲ್ಲಿ ಎದುರಿಸಿತು. ಈ ಹೋರಾಟದಲ್ಲಿ ಕನ್ನಡ ಸಾಹಿತ್ಯವು ಭಾಷಾಂತರ, ರೂಪಾಂತರ, ಸ್ವತಂತ್ರ ಎಂಬ ಮೂರು ಅವಸ್ಥೆಗಳನ್ನು ಅನುಭವಿಸಿತು. 'ಸ್ವತಂತ್ರ'ಯುಗ ಅಂದರೆ 'ಕನ್ನಡ' ಯುಗವನ್ನು ತೆರೆದವರು ಶರಣರು. ಈ ಸಾಮಾಜಿಕ ಚಳುವಳಿ ಯಲ್ಲಿಯೆ ಇಂಗ್ಲೀಷರ ವಿರುದ್ಧ ಸ್ವಾತಂತ್ರ್ಯ ಚಳುವಳಿಯ ಬೇರುಗಳಿರುವುದು".

'ಸ್ವಾತಂತ್ರ್ಯ ಚಳುವಳಿ ಮತ್ತು ಆಧುನಿಕ ಕನ್ನಡ ಸಾಹಿತ್ಯ' ಲೇಖನದಲ್ಲಿ ಆಂಗ್ಲರ ವಿರುದ್ಧ ಕೈಗೊಂಡ ಸ್ವಾತಂತ್ರ್ಯ ಹೋರಾಟದಲ್ಲಿ ಸಂಸ್ಥಾನಿಕರ ಯುದ್ಧ ಮತ್ತು ದೇಶಭಕ್ತರ ಚಳುವಳಿ ಎಂಬೆರಡು ಘಟ್ಟಗಳನ್ನು ಗುರುತಿಸುತ್ತಾರೆ.

ಸಂಶೋಧನವ್ರತವಿಷ್ಠ ಡಾ.ಕಲುಬುರ್ಗಿ ಸತ್ಯ ಅಪ್ರಿಯವಾಗಿದ್ದರೂ ಹೇಳಲು ಹಿಂಜರಿಯುವವರಲ್ಲ. ಅವರ ಸಂಶೋಧನೆಯಲ್ಲಿ ವಿಚಾರಗಳ ಸ್ಫಂತಿಕೆಯಿದೆ. ಅವರದು ಶಾಸ್ತ್ರಜಡತೆ ಅಥವಾ ಪಾಂಡಿತ್ಯದಿಂದ ಮುಕ್ತವಾದ ಬರಹ, ಬಹುಶಿಸ್ತೀಯ ಅಧ್ಯಯನ, ಸಂಶೋಧನೆಗೆ ಸಾಮಾಜಿಕ ಮುಖ ಜೋಡಿಸುವ ವೈಶಿಷ್ಟ್ಯ, ದೇಶೀ ದೃಷ್ಟಿಕೋನ, ಇದೆಲ್ಲ ಕೊನೆಗೊಳ್ಳುವುದು ಸಂಸ್ಕೃತಿ ಶೋಧದಲ್ಲಿ. ಒಟ್ಟಂದದಲ್ಲಿ ಡಾ. ಎಂ.ಎಂ.ಕಲಬುರ್ಗಿ 'ಸಮಗ್ರ ಸಂಶೋಧಕ'ರಾಗಿ ರೂಪುಗೊಂಡಿದ್ದಾರೆ.

❑

## ವೈದೇಹಿ

ಡಾ. ಬಿ.ಎನ್. ಸುಮಿತ್ರಾಬಾಯಿ

ಕನ್ನಡ ನಾಡು-ನುಡಿಗೆ ಕರಾವಳಿಯು ನೀಡಿರುವ ಕಾಣಿಕೆ ಬಹು ಮುಖ್ಯವಾದದ್ದು. ಕಡಲತೀರದ ನೆಲದ ಸತ್ವ, ಸಾರವನ್ನು ಹೀರಿಕೊಂಡು ಸಂಪನ್ನವಾದ ಬರಹವನ್ನು ಕನ್ನಡಿಗರಿಗೆ ನೀಡುತ್ತ ಬಂದ ಕರಾವಳಿ ಬರಹಗಾರರ ಸಾಲಿನಲ್ಲಿ ಅರಳಿದ ಕುಂದಾಪುರದ ಕುಸುಮ ವೈದೇಹಿ. ಮೋಹನ ಮುರಳಿಯ ನಾದಕ್ಕೆ ಕಡಲ ಮೊರೆತದ ಶ್ರುತಿ ಸೇರಿಸಿದಂತೆ ಭಾವಾರ್ದ್ರತೆ, ವಿಚಾರದ ಬಿಸುಪುಗಳು ಮೇಳವಿಸಿರುವಂಥ ತಮ್ಮ ಬರಹದಿಂದ ಸಮಕಾಲೀನ ಬರಹಗಾರರಲ್ಲಿ ತಮ್ಮದೇ ವಿಶಿಷ್ಟಸ್ಥಾನವನ್ನು ರೂಪಿಸಿಕೊಂಡ ಅಪರೂಪದ ಲೇಖಕಿ.

ದಕ್ಷಿಣಕನ್ನಡ ಜಿಲ್ಲೆಯ ಕುಂದಾಪುರದ ಶ್ರೀ ಎ.ವಿ.ಎನ್. ಹೆಬ್ಬಾರ್ ಮತ್ತು ಮಹಾಲಕ್ಷ್ಮಿಯಮ್ಮ ದಂಪತಿಗಳ ಮಗಳಾಗಿ 12ನೇ ಫೆಬ್ರುವರಿ, 1945ರಂದು ಜನಿಸಿದ ವೈದೇಹಿಯವರ ನಿಜನಾಮ ಜಾನಕಿ. ಅವಿಭಕ್ತ ಕುಟುಂಬವಲ್ಲದಿದ್ದರೂ ತುಂಬ ಮಕ್ಕಳಿರುವ, ಬಂಧು ಬಳಗದಿಂದ ಸದಾ ತುಂಬಿರುತ್ತಿದ್ದ ಮನೆಯಲ್ಲಿ ಬೆಳೆಯುವಂಥ ಮಕ್ಕಳಿಗೆ ಒದಗಬಹುದಾದ ಮುಗ್ಧ, ಸುಂದರ ಬಾಲ್ಯ, ಒಟ್ಟು ಜೀವನದ ಕಷ್ಟ-ಸುಖಗಳು, ನೋವು, ಹಿಗ್ಗು, ಹಿಂಸೆ, ಅಸ್ಪಷ್ಟತೆಗಳನ್ನು ಹತ್ತಿರದಿಂದ ಕಾಣುತ್ತ ಬೆಳೆದವರು ವೈದೇಹಿ. ಹಣಕ್ಕಿಂತ ಮರ್ಯಾದೆಗೆ ಬೆಲೆಯಿದ್ದ, ಕಟ್ಟುನಿಟ್ಟಿನ ಆ ಕಾಲದಲ್ಲಿ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಶಿಕ್ಷಣಗಳನ್ನು ಪಡೆಯುವುದೂ ಮಹಿಳೆಯರಿಗೆ ಹೆಚ್ಚಿನ ಸಂಗತಿ. ಎಸ್.ಎಸ್.ಎಲ್.ಸಿ.ಯನ್ನು ಮುಗಿಸುವ ಹೊತ್ತಿಗೆ ಕುಂದಾಪುರದಲ್ಲೇ ಕಾಲೇಜು ಶಿಕ್ಷಣಕ್ಕೂ ಅವಕಾಶ ದೊರೆಯಿತು. ಅಲ್ಲಿನ ಭಂಡಾರ್‌ಕರ್ ಕಾಲೇಜಿನ ಬಿ.ಕಾಂ. ಪದವೀಧರೆಯಾದ ವೇಳೆ ಅವರು ಸುತ್ತಮುತ್ತಿನವರಿಗೆ ಪರಿಚಿತರಾಗಿದ್ದದ್ದು ಜಾನಕಿ ಹೆಬ್ಬಾರ್ ಎಂದು. ಆ ಹಂತದಲ್ಲಿ 'ನೀರೆಯರ ದಿನ' ಎಂಬ ಒಂದು ಲೇಖನ ಬರೆದದ್ದು ಸುಧಾ ಪತ್ರಿಕೆಯಲ್ಲಿ ಪ್ರಕಟಿಸುವಾಗ ಪತ್ರಿಕೆಯವರು ಈಕೆಗೆ ಕೊಟ್ಟ ಕಾವ್ಯನಾಮವಂತೆ 'ವೈದೇಹಿ' ! ಬಾಲ್ಯದಿಂದ ಮೈಮನ ತುಂಬಿದ್ದ ವಾತಾವರಣದ ಒಳಗಿನಿಂದ ಪ್ರಜ್ಞಾವಂತ ಲೇಖಕಿಯಾಗಿ ವಿಕಸನಗೊಂಡ ಬಗ್ಗೆ ವೈದೇಹಿಯವರ ಮಾತುಗಳಲ್ಲೇ ಅವರ ಅನುಭವವನ್ನು ಗ್ರಹಿಸಬೇಕು.

"ನನ್ನೊಳಗಿನ ಓದುಗಳು, ಒಂದರ್ಥದಲ್ಲಿ ನಾ ಹೇಳುವುದನ್ನು ಆಲಿಸುವವಳು ಮತ್ತು ವಿಮರ್ಶಿಸುವವಳು, ಏಳಬೇಕಾದರೆ ನಾನು ಆ ಎಲ್ಲ ಪರಿಸರವನ್ನು ಬಿಟ್ಟು, ಮದುವೆಯಾಗಿ ನೇರ ಬದುಕಿನ ಒಳಗೆ ಬಂದು ನಿಂತುಕೊಳ್ಳಬೇಕಾಯಿತು. ಮದುವೆ ಎಂಬುದು ನನ್ನ ಪಾಲಿಗೆ ನನ್ನನ್ನು ನಿದ್ದೆಯಿಂದ ಎಚ್ಚರಿಸಿದ ಘಟನೆ. ಬಸಿರು ಬಾಣಂತನಗಳ ನಡುವೆಯೆ ಇದ್ದಿದ್ದರೂ, ಆ ಕುರಿತ ಪಿಸುಮಾತುಗಳನ್ನೆಲ್ಲ ಆಲಿಸುತ್ತಿದ್ದರೂ, ನನಗೆ ಬಸಿರು ಹೇಗೆ ಆಗುತ್ತದೆ ಮತ್ತು ಮಗು ಬರುವ ದಾರಿ ಯಾವುದು ಎಂದೇ ಗೊತ್ತಿರಲಿಲ್ಲ- ಎಂಬುದನ್ನು ನಂಬಿ, ನನ್ನಾಣೆ. ಮಾತೇನೋ ಎಲ್ಲ ಗೊತ್ತಿತ್ತು. ಜ್ಞಾನವೇ ಇರಲಿಲ್ಲ. ಅವೆಲ್ಲ ತಿಳಿಯುವುದೆಂದರೆ ಅಥವಾ ಅವುಗಳ ಕುರಿತು ಓದಿಕೊಳ್ಳುವುದೆಂದರೆ ಹಾಳಾದಂತೆಯೇ ಎಂಬ ಭಾವನೆಯಲ್ಲಿದ್ದೆ. ಈ ರೀತಿ, ಮುಗ್ಧವಾಗಿದ್ದು ಎಲ್ಲ ತಿಳಿದಿರುವವಳ ಸೋಗು ಹಾಕಿಕೊಂಡು ಮದುವೆಯಾಗಿ ಬಂದೆ. ಬಂದವಳಿಗೆ ಮದುವೆಯ ನಂತರದಲ್ಲಿ ನನಗೆ ಸಿಕ್ಕಿದ ಅತ್ತೆಮನೆ ನನ್ನನ್ನು ಸಂಪೂರ್ಣ ಗಂಭೀರವಾಗಿಸಿತು. ನನ್ನ ಅಂತರ್ಮುಖತೆಯನ್ನು ಹೆಚ್ಚಿಸಿತು. ನನಗೆ ಬರವಣಿಗೆಯ ಅನಿವಾರ್ಯತೆಯನ್ನು ತಂದುಬಿಟ್ಟಿತು. ಅಷ್ಟರಲ್ಲಿ ನನಗೆ ಎರಡು ಮಕ್ಕಳೂ ಆಗಿ, ಅವು ನನ್ನ ದಿನಗಳು ಪೂರ್ತಿ ಕೆಡದಂತೆ ಕಾಪಾಡಿದವು. ಎರಡು ಬಸಿರು, ಬಾಣಂತನ ಮತ್ತು ಮಕ್ಕಳ ಸುಖವನ್ನು ನಾನು ಹನಿಬಿಡದೆ ಅನುಭವಿಸಿದೆ. ಈಗಲೂ ಹೇಳುತ್ತೇನೆ. ನನ್ನ ಜೀವನದ ಅತ್ಯಂತ ಸುಖಗಳಲ್ಲಿ ಒಂದಾಗಿ ಅವು ಉಳಿದಿವೆ"

ಮನಸ್ಸಿನ ಒಳತೋಟಿಗೆ, ದುಗುಡಕ್ಕೆ ಹೇಗಾದರೂ ಉಪಶಮನ ಪಡೆವ ಹಂಬಲದಲ್ಲಿ ಹೀಗೆ ಬರವಣಿಗೆಗೆ ತೊಡಗಿದ ವೈದೇಹಿ ಅವರಿಗೆ ತುಂಬ ಧೈರ್ಯ ಕೊಟ್ಟವರು ಅವರ ಮಾವನವರು. ಪತಿ ಶ್ರೀನಿವಾಸಮೂರ್ತಿ ಯವರು. ಆತ 'ಸಜ್ಜನರಲ್ಲಿ ಸಜ್ಜನ'. ಸಾಹಿತ್ಯ, ಸಂಗೀತ, ನಾಟಕ, ಸಭೆ- ಸಮಾರಂಭಗಳಿಗೆ ಸದಾ ಜೊತೆಯಲ್ಲಿ ಕರೆದೊಯ್ದು, ವೈದೇಹಿಯವರ ಭಾವನಾಲೋಕ, ಲೋಕಾನುಭವಗಳು ಹೆಚ್ಚಲು ನೆರವಾದರು. ಶಿವಮೊಗ್ಗ ನಗರದಲ್ಲಿ ಅವರು ನೆಲೆಸಿದ್ದಾಗ ಬರಹಕ್ಕೆ

ಅಗತ್ಯವಾದ ಸಾಂಸ್ಕೃತಿಕ ವಾತಾವರಣದ ಬೆಂಬಲವೂ ದೊರೆಯಿತು. ಹೆಸರಾಂತ ಲೇಖಕರನ್ನು ಓದಿಕೊಳ್ಳುವ ಅವಕಾಶ, ಅನಂತಮೂರ್ತಿ, ಅಡಿಗ, ಕೆ.ವಿ. ಸುಬ್ಬಣ್ಣ, ಲಂಕೇಶರಂಥವರು ತಮ್ಮ ಪ್ರಮುಖ ಕೃತಿಗಳನ್ನು ಸೃಷ್ಟಿಸುತ್ತಿದ್ದ ಕಾಲದಲ್ಲಿ ಈ ಸಾಹಿತಿಗಳ ಪರಿಚಯ, ಅದರಲ್ಲೂ ಲಂಕೇಶ್ ಮತ್ತು ಸುಬ್ಬಣ್ಣನವರ ಬೆಂಬಲ, ಪ್ರೋತ್ಸಾಹಗಳು ವೈದೇಹಿಯವರ ಬರಹದ ಬದುಕಿಗೆ ಹೆಚ್ಚಿನ ಒತ್ತಾಸೆ, ತೀವ್ರತೆಗಳನ್ನು ಇತ್ತವು. ಅನುಪಮಾ ನಿರಂಜನರಂಥ ಹಿರಿಯ ಲೇಖಕಿ, ತಮ್ಮ ಕಿರಿಯ ಪೀಳಿಗೆಯವರೆಲ್ಲರಲ್ಲೂ ಪ್ರೇರಣೆ, ಉತ್ಸಾಹಗಳನ್ನು ತುಂಬುತಿದ್ದು, ವೈದೇಹಿಯಲ್ಲೂ ಅಂಥ ಬರೆಯುವ ಉಮೇದು ಬೆಳೆಯಲು ಕಾರಣವಾಯಿತು.

ಕೌಟುಂಬಿಕ ಜಗತ್ತಿನ ನಾಲ್ಕು ಗೋಡೆಗಳ ಒಳಗೇ ಬಹುಪಾಲು ಹೆಂಗಸರೊಂದಿಗೆ ನಿಕಟವಾಗಿ ಬದುಕುವುದನ್ನು ಆಯ್ದುಕೊಂಡ ವೈದೇಹಿ, ಈ ಹೆಂಗಸರ ಬವಣೆ, ಕ್ರೌರ್ಯ, ತಮ್ಮೊಳಗೇ ಒಬ್ಬರೊಬ್ಬರಿಗೆ ತೋರುವ ಹಿಂಸೆಗಳ ಒಳ, ಹೊರಮುಖಗಳನ್ನು ಹತ್ತಿರದಿಂದ ಕಂಡವರು. ಈ ಸ್ತ್ರೀ ಲೋಕದ ಅನುಭವದ ಮೂಲಕವೆ ಬದುಕಿನ ಅರ್ಥಗಳನ್ನು ಜಾಲಿಸಲು ಹೊರಟವರು. ಹೀಗಾಗಿ ಹೆಣ್ಣುಮಕ್ಕಳ ಸಾಮಾಜಿಕ ಸ್ಥಿತಿಯಿಂದ ಅವರು ಯಾವ ರೀತಿ ಬದುಕುತ್ತಿದ್ದಾರೆಂದು ಬರವಣಿಗೆಯಲ್ಲಿ ಕಂಡು ಕಾಣಿಸಿಕೊಡುವ ಸಾಕ್ಷಿಪ್ರಜ್ಞೆಯ ರೀತಿಯಲ್ಲಿ ಅವರು ಬರಹಕ್ಕೆ ತೊಡಗುತ್ತಾರೆ. ಬದುಕನ್ನು ಇಡಿಯಾಗಿ ಹಿಡಿಯಬೇಕು, ಎಲ್ಲ ನಿಜಗಳನ್ನೂ ಕಹಿಗೊಳ್ಳದೆಯೇ ಹೇಳ ಬೇಕು, ಜಗತ್ತಿಗೆಲ್ಲ ಅವಶ್ಯಕವಾಗಿರುವ ಪ್ರೀತಿಯನ್ನು ಉಳಿಸಿಕೊಳ್ಳುವಂಥ ಬಲ, ಆತ್ಮಶಕ್ತಿಗಳನ್ನು ಬಲಗೊಳಿಸುವತ್ತ ಬರಹ ತುಡಿಯಬೇಕೆಂಬುದು ತಮ್ಮ ಮನದ ಆಶೆಯೆಂದು ವೈದೇಹಿಯವರು ಒಂದು ಕಡೆ ಹೇಳಿದ್ದಾರೆ.

ಈ ಹಿರಿಯಾಸೆಯನ್ನು ತುಂಬಾ ನಿರಾಡಂಬರವಾಗಿ, ತನಗೆ ಬರಹದ ಬಗ್ಗೆ ಭ್ರಮೆಗಳೇನೂ ಇಲ್ಲವೆಂದು ವಿನಮ್ರವಾದ ಧ್ವನಿಯಿಂದ ನುಡಿಯುವ ವೈದೇಹಿ ಕೊಂಚ ಸಂಕೋಚದಿಂದ ತಮ್ಮ ವಿಚಾರಗಳನ್ನು ಮತ್ತು ನಂಬಿಕೆಗಳನ್ನು ಹೇಳುತ್ತಾರೆ.

ಮರ್ಯಾದೆ ತೆಗೆಯುವ ಪುರುಷನಿಂದ ರಕ್ಷಣೆ ಪಡೆಯಲು ಮತ್ತೊಬ್ಬ ಪುರುಷನೇ ಹೆಣ್ಣಿಗೆ ಕಾವಲಾಗುವ ನಮ್ಮ ಸಮಾಜದಲ್ಲಿನ ವಿರೋಧಾ ಭಾಸಗಳ ಬಗ್ಗೆ ತುಂಬ ಗಂಭೀರವಾಗಿ ಹಾಗೂ ಅಷ್ಟೇ ಹಾಸ್ಯದೊಂದಿಗೆ ಹೇಳುವ ಮಾತಿದು: "ಪುರುಷನೆಂಬವ ಹಾಗೆ ನೋಡಿದರೆ ವಿರೊಧಾಭಾಸಗಳ ಮೊತ್ತ" ಹಾಯುವವನೂ ಅವನೇ ಕಾಯುವವನೂ ಅವನೇ. ಮೊನ್ನೆ ಸುರತ್ಕಲ್‌ನಲ್ಲಿ ಘಟನೆ ಆಯಿತಲ್ಲ. ಹೆಂಗಸರೇ ಎಲ್ಲ ಸೇರಿ ಒಬ್ಬ ಧೂರ್ತನನ್ನು ಚಚ್ಚಿ ಹಾಕಿದ ಘಟನೆ. ಇಂತಹ ಪುರುಷರ ವಿರುದ್ಧ ಸತ್ಯವಾಗಿ ನೋಡಿದರೆ ರಿವೋಲ್ಟ್ ಮಾಡಬೇಕಾದವರು ಗಂಡಸರು. ಗಂಡು ಸಂತತಿಗೇ ಅವಮಾನ ತರುವ ಗಂಡಸರ ವಿರುದ್ಧ. ದುರದೃಷ್ಟವಶಾತ್ ಅವರು ಕಾವಲಿಗೆ ನಿಂತಾರು ಹೊರತು ತಮ್ಮ ವಿರುದ್ಧ ತಾವೇ ಪ್ರತಿಭಟಿಸುವುದಿಲ್ಲವಲ್ಲ! ಹಾಗೆ ಪ್ರತಿಭಟಿಸಿ ಪ್ರಜ್ಞಾವಂತ ವಾತಾವರಣ ಮೂಡಿಸುವರಾದರೆ ಕಾವಲು ಯಾಕೆ ಬೇಕು? ಎಲ್ಲ ವಿಚಿತ್ರವಾಗಿ ಕಾಣುತ್ತದೆ".

ಹೆಣ್ಣು ಎಂದಿನಿಂದಲೂ ತನ್ನನ್ನು ತಾನು ಅಡಗಿಸಿಕೊಳ್ಳುತ್ತ ಬಂದಿರು ವುದು ಹಾಡು, ಹಸೆ, ಕಸೂತಿ, ಕತೆಗಳಲ್ಲಿ. ಆಕೆ ಒಂದು ಹಕ್ಕಿಯ ಚಿತ್ರವನ್ನು ಬಣ್ಣದ ನೂಲಿನಲ್ಲಿ ತುಂಬಿಸುವುದು ಎಂದರೆ, ಹಾಗೆ ಮಾಡುತ್ತ ತನ್ನೊಳಗೆ ಸಂಚರಿಸುತ್ತ, ತನ್ನದೇ ಆದ ತರ್ಕ, ವಿತರ್ಕ, ಒಳನೋವು, ನಲಿವುಗಳನ್ನೆಲ್ಲಾ ಧ್ಯಾನಿಸುವ ಪ್ರಕ್ರಿಯೆಯಾಗಿರುತ್ತದೆ. ಅಕ್ಷರದ ಲೋಕದಿಂದ ಬಹುಕಾಲ ದೂರವುಳಿದ ಹೆಣ್ಣಿಗೆ, ಈ ಅಮೂರ್ತ, ಮೂರ್ತತೆಗಳ ನೇಯ್ಗೆಯಾದ ಹೆಣ್ಣಿಗೆ ಕಸೂತಿಗಳು, ಹಾಡುಗಳೇ ತಾಣಗಳು. ಬರಹ ಹೆಚ್ಚು ತಲುಪುವ ಮತ್ತು ತಲುಪಿಸಬೇಕಾದ ಕಲೆಯಾದ್ದರಿಂದ ಬರಹದೊಳಗೆ ಅವಳ ಪ್ರವೇಶ ತಡವಾಯಿತು ಎನ್ನುವಲ್ಲಿ ವೈದೆಹಿ ಸಂಗೀತದಂಥ ಕಲೆಯಲ್ಲಿ ತನ್ನನ್ನು ತೋಡಿಕೊಳ್ಳುವುದಕ್ಕೂ ಸಾಹಿತ್ಯದ ಮೂಲಕ ತೋಡಿ ಕೊಳ್ಳುವುದಕ್ಕೂ ಇರುವ ಅಗಾಧ ವ್ಯತ್ಯಾಸವನ್ನು ಸೂಚಿಸುತ್ತಾರೆ.

ಗಂಡಸರು ತಮ್ಮನ್ನು ತಾವೇ ಪ್ರಧಾನರೆಂದು ಭ್ರಮಿಸುತ್ತ, ತಮ್ಮ ನಿಜವಾದ ಮಹತ್ವ ಯಾವುದೆಂಬುದನ್ನು ಮರೆತು ಮೆರೆಯುತ್ತಾ, ಹೆಂಗಸರೂ ತಮ್ಮನ್ನು ಹಾಗೆಯೇ ನಂಬಬೇಕೆಂದು ಒತ್ತಾಯಿಸುತ್ತಾರೆ. ಗಂಡು ಗಂಡುತನವನ್ನು ಮರೆತರೂ ಪರವಾಗಿಲ್ಲ, ಹೆಣ್ಣುತನವನ್ನು ಮರೆಯಬಾರದೆಂದು ಮರೆಯದೇ ಬುದ್ಧಿಹೇಳುವ ದಡ್ಡ ಅಹಂಕಾರ, ಕೆಟ್ಟ ಯಜಮಾನಿಕೆಗಳು ನಿಜವಾದ ಆತ್ಮಾಭಿಮಾನದ ಸತ್ವಕ್ಕಿಂತ ತುಂಬ ದೂರವಾದದ್ದು. ಆದ್ದರಿಂದ ಅಂಥ ಸತ್ವವನ್ನು ಗಳಿಸಿಕೊಳ್ಳುವ ಗತ್ತನ್ನು ನಿಜವಾಗಿ ಗಂಡಸರು ಪಡೆದದ್ದೇ ಆದರೆ, ಅವರು ಸ್ತ್ರೀಕುಲಕ್ಕೆ ನಿಜವಾದ ಮಿತ್ರರಾಗುತ್ತಾರೆ. ಹಣ ಸಂಪಾದನೆಯಿಂದ ಆರ್ಥಿಕವಾಗಿ ನಾವು ಸ್ವಾವಲಂಬಿಗಳಾಗ ಬಹುದು, ಲೌಕಿಕ ಸುಖ, ಅನುಕೂಲಗಳೂ ಹೆಚ್ಚಬಹುದು. ಆದರೆ ಅದರಿಂದ ಅಸಮಾನತೆ ತೊಲಗುವುದೆಂಬ ಭ್ರಮೆ ಬೇಕಿಲ್ಲ. ಲೌಕಿಕ ಕಾನೂನಿನ ದೃಷ್ಟಿಯಿಂದ ಸ್ತ್ರೀ ಪುರುಷರು ಸರಿಸಮಾನರೇ. ಆದರೆ ತಾತ್ವಿಕವಾಗಿ ಅಲ್ಲ. ಅದರಲ್ಲೂ ಪುರುಷರು ಸ್ತ್ರೀಯರಿಗೆ ಸಮರಲ್ಲ ಎನ್ನುವುದು ವೈದೇಹಿ ಅವರ ನಿಲುವು.

ಪತಿ ಶ್ರೀನಿವಾಸಮೂರ್ತಿ, ಮಕ್ಕಳಾದ ನಯನಾ, ಪಲ್ಲವಿಯರ ಸಹವಾಸವನ್ನು ಮೊಮ್ಮಗುವಿಗೂ ವಿಸ್ತರಿಸಿಕೊಂಡಿರುವ ವೈದೇಹಿ ಕುಟುಂಬ ಜೀವನದ ಎಲ್ಲ ಸುಂದರ ಅಂಶಗಳ ಸವಿಯೊಳಗೆ, ಎಲ್ಲ ಸಂಕಷ್ಟಗಳ ಬಿಸಿ ಝಳದೊಳಗೆ ಹದಗೊಂಡವರು. ವಿಷಾದ, ವಿನೋದ, ಗಾಂಭೀರ್ಯಗಳನ್ನು ದುಡಿಸಿಕೊಳ್ಳುತ್ತ ಸಮಕಾಲೀನ ಮಹಿಳಾ ಸಾಹಿತ್ಯದಲ್ಲಿ ಒಂದು ದೃಢವಾದ ಸುಮಧುರವಾದ ಧ್ವನಿಯನ್ನು ಮೂಡಿಸಿ ಬೆಳೆಸುತ್ತಿರುವ ಲೇಖಕಿಯಾಗಿದ್ದಾರೆ.

### ಸಾಹಿತ್ಯ ಪಥ

ವೈದೇಹಿ ಅವರ ಬರಹದ ಸ್ವರೂಪ ವೈವಿಧ್ಯದಿಂದ ಕೂಡಿದೆ. ಮರಗಿಡಬಳ್ಳಿ (1979), 'ಅಂತರಂಗದ ಪುಟಗಳು' (1984), 'ಗೋಲ' (1986) ಮತ್ತು 'ಸಮಾಜ ಶಾಸ್ತ್ರಜ್ಞೆ'ಯ ಟಿಪ್ಪಣಿಗೆ (1991)- ಇವು ಈವರೆಗೆ ಅವರು ನೀಡಿರುವ ಕಥಾಸಂಕಲನಗಳು. ಇತರ ಪ್ರಕಾರಗಳಲ್ಲೂ ವೈದೇಹಿ ಪ್ರಯೋಗಗಳನ್ನು ನಡೆಸಿದ್ದು ಅವುಗಳಲ್ಲಿ 'ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ' (1984) ಮತ್ತು 'ಬೆಳ್ಳಿಯ ಸಂಕೋಲೆಗಳು' (1985) ಎಂಬ ಎರಡು ಅನುವಾದಗಳು ಸೇರಿವೆ. 'ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು' (1985) ಎಂಬುದು ಶ್ರೀ ಕೊ.ಲ. ಕಾರಂತರ ಜೀವನದ ಅನುಭವ ಗಳ ಸ್ಮೃತಿಚಿತ್ರವಾಗಿದೆ. ಐದು ಮಕ್ಕಳ ನಾಟಕಗಳು, ಒಂದು ಮಕ್ಕಳ ಕಥಾ ಸಂಕಲನದ ಅನುವಾದಗಳಲ್ಲದೆ 'ಬಿಂದು ಬಿಂದಿಗೆ' ಎಂಬ ಕವನ ಸಂಕಲನ, 'ಅಸ್ಪೃಶ್ಯರು' ಎಂಬ ಕಾದಂಬರಿ ಮತ್ತು 'ಮಲ್ಲಿನಾಥನ ಧ್ಯಾನ'ವೆಂಬ ಲೇಖನ ಸಂಗ್ರಹವನ್ನೂ ಅವರು ಹೊರತಂದಿದ್ದಾರೆ. 'ಸೇಡಿಯಾಪು ನೆನಪುಗಳು' 1996ರಲ್ಲಿ ಬಂದಿರುವ ಮತ್ತೊಂದು ನೆನಪುಗಳ ಸಂಗ್ರಹ. 'ಜಾತ್ರೆ' 1998ರಲ್ಲಿ ಹೊರಬಂದ ಲಲಿತ ಬರಹ.

ಇವುಗಳಲ್ಲಿ ಬಹಳಷ್ಟು ರಚನೆಗಳಿಗೆ ಬಹುಮಾನ ಇಲ್ಲವೆ ಪುರಸ್ಕಾರ ಗಳು ದೊರೆತಿರುವುದು ಒಂದು ವಿಶೇಷ ಸಂಗತಿ. 'ಅಂತರಂಗದ ಪುಟಗಳು' ಸಂಕಲನ ಮತ್ತು 'ಬಿಂದು ಬಿಂದಿಗೆ' ಕರ್ನಾಟಕ ಲೇಖಕಿಯರ ಸಂಘದ ಗೀತಾದೇಸಾಯಿ ದತ್ತಿನಿಧಿ ಬಹುಮಾನ, 'ಗೋಲ' ಸಂಕಲನಕ್ಕೆ ವರ್ಧಮಾನ ಉದಯೋನ್ಮುಖ ಬರಹಗಾರ ಪ್ರಶಸ್ತಿಗಳು, ಅವರು ಬರೆದ ಮಕ್ಕಳ ನಾಟಕ ಸರಣಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನ, 'ಅಸ್ಪೃಶ್ಯರು' ಕಾದಂಬರಿಗೆ ಎಂ.ಕೆ. ಇಂದಿರಾ ಪ್ರಶಸ್ತಿಗಳು ದೊರೆತಿವೆ. ಒಟ್ಟಾರೆಯಾಗಿ ಲೇಖಕಿಯರ ಸಾಹಿತ್ಯಸಾಧನೆಯನ್ನು ಗಮನಕ್ಕೆ

ತೆಗೆದುಕೊಂಡು ಕರ್ನಾಟಕ ಲೇಖಕಿಯರ ಸಂಘವು ನೀಡುತ್ತಾ ಬಂದಿರುವ ದಿವಂಗತ ಡಾ. ಅನುಪಮಾ ನಿರಂಜನರ ಹೆಸರಿನ 'ಅನುಪಮಾ ಪ್ರಶಸ್ತಿ'ಯು ವೈದೇಹಿಯವರ 'ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ' ಕೃತಿಗೆ ದೊರೆತಿದೆ (1992). ರಾಜ್ಯ ಸರ್ಕಾರವು ಮಹಿಳೆಯರ ಸಾಹಿತ್ಯ ಸಾಧನೆಗಾಗಿಯೇ ಮೀಸಲಾಗಿಸಿರುವ ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ ವೈದೇಹಿ ಪಾತ್ರರಾಗಿದ್ದಾರೆ (1998).

ಭಾಷಾನುವಾದಗಳ ಮೂಲಕ ಕರ್ನಾಟಕದ ಆಚೆಗೂ ವೈದೇಹಿಯವರ ಬರಹಗಳು ತಲುಪುವಂತಾಗಿವೆ. The Inner courtyard, From Kaveri to Godavari, Women writing in India In their own voice Vol.2, The Southern Harvest, ಎಂಬ ಇಂಗ್ಲಿಷ್ ಗ್ರಂಥಗಳಲ್ಲಿ ವೈದೇಹಿ ಯವರ ಕಥೆಗಳ, ಕವನಗಳ ಅನುವಾದಗಳನ್ನು ಕಾಣಬಹುದು. ಮರಾಠಿ, ಮಲೆಯಾಳಿ, ತೆಲುಗು, ತಮಿಳು, ಹಿಂದಿ, ಗುಜರಾತಿ ಭಾಷೆಗಳಿಗೂ ಅವರ ಕೆಲವು ಕಥೆಗಳು ಅನುವಾದಗೊಂಡಿವೆ. ಹೀಗೆ ರಾಷ್ಟ್ರೀಯ ಮಟ್ಟದಲ್ಲಿ ಸೇರಿರುವ ಹೆಮ್ಮೆ ವೈದೇಹಿ ಯದು.

ಬದುಕಿನ ತುಂಬ ಸಂಕೀರ್ಣ ಸ್ವರೂಪದ ಕಡೆಗೆ ವೈದೇಹಿಯವರು ಆಸಕ್ತಿ, ಕುತೂಹಲಗಳಿಂದ ನೋಡುತ್ತಾರೆ. ಆದ್ದರಿಂದ ಅನುಭವಗಳನ್ನು, ಮಾನವ ಸಂಬಂಧಗಳನ್ನು, ಮಾನವರ ಒಳ, ಹೊರಗಿನ ಸ್ವಭಾವಗಳನ್ನು ಅವುಗಳ ಎಲ್ಲ ರೂಪಗಳಲ್ಲಿ ಗಮನಿಸುತ್ತ ಭಾಷೆಯಲ್ಲಿ ಹಿಡಿದಿಡಲು ಅವರು ತಮ್ಮ ಸರ್ವಶಕ್ತಿ ಯನ್ನೂ ಬಳಸಿಕೊಳ್ಳುತ್ತಾರೆ. ಈ ಸೃಜನಶೀಲ ಶಕ್ತಿ ಕೇವಲ ಕಥೆ, ಕವಿತೆ, ಕಾದಂಬರಿಗಳಿಗೆ ಸೀಮಿತವಲ್ಲ. ಅನುವಾದವಿರಲಿ, ಪ್ರಬಂಧವಾಗಿರಲಿ, ಮಕ್ಕಳ ಸಾಹಿತ್ಯವೇ ಆಗಿರಲಿ, ಎಲ್ಲದರಲ್ಲೂ ಭಾವಾರ್ದ್ರತೆಯನ್ನು ಉಳಿಸಿಕೊಂಡ ಸೃಜನ ಶೀಲತೆಯಿಂದಲೇ ವೈದೇಹಿ ತಮ್ಮನ್ನು ತೊಡಗಿಸಿಕೊಳ್ಳುವುದನ್ನು ಕಾಣಬಹುದು. ಧ್ವನಿಪೂರ್ಣತೆ ಮತ್ತು ಕಲಾವಂತಿಕೆಗಳು ವೈದೇಹಿಯವರ ಎಲ್ಲಾ ರೀತಿಯ ಬರಹಗಳಿಗೂ ಅವರದೇ ಆದ ವಿಶಿಷ್ಟ ಛಾಪು ಒಂದನ್ನು ನೀಡಿವೆ. ಹೀಗಿದ್ದೂ ಈ ವಿಶಿಷ್ಟಗುಣ ತುಂಬ ವಿಸ್ತಾರವಾಗಿ, ಆಳವಾಗಿ ಕಾಣಿಸಿಕೊಳ್ಳುವುದು ಅವರ ಸಣ್ಣ ಕಥೆಗಳಲ್ಲಿ.

ವೈದೇಹಿಯವರ ಕಥೆಗಳ ಲೋಕವನ್ನು ಪ್ರವೇಶಿಸುವ ಮೊದಲು, ಅವರು ಕಥೆ ಬರೆಯಲು ಆರಂಭಿಸಿದ ಕಾಲದಲ್ಲಿ ಕನ್ನಡದ ಸಾಹಿತ್ಯಕ ಪರಿಸರ ಹೇಗಿತ್ತೆಂಬುದನ್ನು ಕೊಂಚಗಮನಿಸುವುದು ಸೂಕ್ತ. ನವ್ಯ ಬರಹಗಾರರ ವ್ಯಕ್ತಿನಿಷ್ಠ. ಚಿಂತನೆ, ಸಂಕೀರ್ಣ ಭಾಷೆ, ತಂತ್ರಗಾರಿಕೆ ಬೌದ್ಧಿಕತೆಯ ಅತಿರೇಕಗಳನ್ನು ಸೃಷ್ಟಿಸುವತ್ತ ಬೆಳೆದಿತ್ತು. ಎಪ್ಪತ್ತರ ದಶಕದ ಕೊನೆಯಲ್ಲಿ ಈ ಅತಿರೇಕದ ವಿರುದ್ಧವಾದ ತೀವ್ರರೂಪದ ಪ್ರತಿಭಟನೆ, ಬಂಡಾಯಗಳು ಸಾಹಿತ್ಯಕ್ಷೇತ್ರದಲ್ಲಿ ಕಾಣಿಸಿಕೊಂಡಿದ್ದವು.

ತುರ್ತುಪರಿಸ್ಥಿತಿಯ ನಂತರದಲ್ಲಿ ಹೊಸ ರಾಜಕೀಯ, ಸಾಮಾಜಿಕ ಅರಿವು ಜನರನ್ನು ಎಚ್ಚರಿಸತೊಡಗಿದಾಗ ದಲಿತ-ಬಂಡಾಯ ಸಾಹಿತ್ಯ ಚಳವಳಿ ಗಳು ತಲೆದೋರಿದವು. ಸಮಾಜದ ಎಲ್ಲಾ ಸ್ತರದ ಅವಕಾಶವಂಚಿತ ಜನರು, ಹತ್ತಿಕ್ಕಲ್ಪಟ್ಟ ಗುಂಪುಗಳವರು ತಮ್ಮ ಅನುಭವಗಳಿಗೆ ಸಾಹಿತ್ಯದಲ್ಲಿ ಅಭಿವ್ಯಕ್ತಿ ಅಥವಾ ಬಿಡುಗಡೆ ಕಂಡುಕೊಳ್ಳುವ ಧೋರಣೆ ತುಂಬ ಪ್ರಭಾವ ಶಾಲಿಯಾಗಿ ಬೆಳೆಯಿತು. ಇದರ ಫಲವಾಗಿ ಅದುವರೆಗೂ ಕನ್ನಡ ಸಾಹಿತ್ಯ ಕಂಡಿರದಂಥ ಜನಜೀವನದ ಅನುಭವದ ಮಗ್ಗುಲು ಗಳು, ಆಯಾ ಜನರದೇ ಭಾಷೆಯೊಂದಿಗೆ ಕನ್ನಡದ ಮುಖ್ಯ ಸಾಹಿತ್ಯವಾಹಿನಿಗೆ ಬಂದು ಕೂಡಿಕೊಳ್ಳಲು ತೊಡಗಿದವು. ಮುಸ್ಲಿಮರು, ದಲಿತರು ಹಾಗೂ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಬರಹದ ಲೋಕಕ್ಕೆ ಬರಲು ಅನುಕೂಲಕರವಾದ ವಾತಾವರಣ ಅಂದು ನಿರ್ಮಾಣವಾಗಿತ್ತು. ಮಹಿಳಾ ಜಾಗೃತಿ, ಮಹಿಳಾ ವಿಮೋಚನಾ ಚಳವಳಿಗಳೂ ರೂಪುಗೊಳ್ಳತೊಡಗಿದ್ದು, ಮಹಿಳೆಯರ ಬರಹಗಳಲ್ಲಿ ಹೊಸ ಸಂವೇದನೆ, ಎಚ್ಚರಗಳು ತಲೆದೋರಿದುವು. ಮಹಿಳಾ ಸಾಹಿತ್ಯಕ್ಕೇ ವಿಶಿಷ್ಟವಾದ ಸ್ವಂತಿಕೆ, ಘನತೆ ಹಾಗೂ ಸ್ವತಂತ್ರ ಅಸ್ತಿತ್ವಗಳು ದೊರೆತದ್ದು ಎಪ್ಪತ್ತು-ಎಂಭತ್ತರ ದಶಕಗಳ ನಡುವೆ ಎದ್ದು ತೋರಿಬರುವ ಒಂದು ಬಹು ಮಹತ್ವದ ಸಂಗತಿಯಾಗಿದೆ.

ಈ ಪರಿಸರದಲ್ಲಿ ಬರಹಗಾರರ ಗಮನಸೆಳೆಯತೊಡಗಿದ ವೈದೇಹಿ ಮಹಿಳೆಯರ, ದಲಿತರ ಅಥವಾ ಬಂಡಾಯ ಲೇಖಕರ ಚಳವಳಿಗಳಲ್ಲಿ ಯಾವುದರ ಜೊತೆಗೂ ತಮ್ಮನ್ನು ಗುರುತಿಸಿಕೊಂಡವರಲ್ಲ. ಆದರೆ ಈ ಎಲ್ಲ ಸಾಹಿತ್ಯಲೋಕದ ಪ್ರಕ್ರಿಯೆಗಳು ವೈದೇಹಿಯವರ ಸಂವೇದನೆಗಳ ಮೇಲೆ ಒಳಪರಿಣಾಮಗಳನ್ನು ಬೀರಿರಲು ಸಾಧ್ಯ. ಏಕೆಂದರೆ 1984-85ರ ಅವಧಿಯಲ್ಲಿ ವೈದೇಹಿ ಮಾಡಿರುವ ಎರಡು ಅನುವಾದ ಗ್ರಂಥಗಳಲ್ಲಿ ಒಂದು ಮಹಿಳೆಯರು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿರುವುದರ ಚರಿತ್ರೆಯನ್ನು ಒಳಗೊಂಡಿದ್ದರೆ ಮತ್ತೊಂದು ಅನುವಾದ, ಮಹಿಳಾ ವಿಮುಕ್ತಿ ಚಳವಳಿಗೇ ನೇರವಾಗಿ ಸಂಬಂಧಿಸಿದ್ದು ಎಂಬುದನ್ನು ಗಮನಿಸ ಬೇಕು. ಮೈತ್ರೇಯಿ ಮುಖ್ಯೋಪಾಧ್ಯಾಯ ಅವರು ಭಾರತೀಯ ಮಹಿಳೆಯರ ಅಸ್ವಾತಂತ್ರ್ಯದ ಸ್ಥಿತಿಗತಿಗಳನ್ನೂ, ಅವರ ಬಿಡುಗಡೆಯ ಸಾಧ್ಯತೆಗಳನ್ನೂ ಚರ್ಚಿಸಿರುವ ಕೃತಿ 'ಬೆಳ್ಳಿಯ ಸಂಕೋಲೆಗಳು'. ಸೃಜನೇತರ ನೆಲೆಯಲ್ಲಿ ಇಂಥ ಕೃತಿಗಳನ್ನು ಅನುವಾದಕ್ಕಾಗಿ ಆಯ್ದುಕೊಳ್ಳುವಲ್ಲಿ ವೈದೇಹಿಯವರು ಭಾರತದ ಸಾಂಸ್ಕೃತಿಕ ಸಂದರ್ಭದಲ್ಲಿ ಮಹಿಳಾವಿಮುಕ್ತಿಯ ವಿಚಾರಗಳನ್ನು ಅರ್ಥೈಸಿಕೊಳ್ಳುವ ಯತ್ನ ಮಾಡಿದ್ದಾರೆಂದು ಹೇಳಬೇಕಾಗುತ್ತದೆ. ತೀವ್ರವಾದ ಎಚ್ಚರದಿಂದ ನಮ್ಮ ಪರಿಸರ ದಲ್ಲಿನ ಹೆಣ್ಣುಮಕ್ಕಳ ಬದುಕಿನ ಸಂಕೀರ್ಣ ಸ್ವರೂಪವನ್ನು ಗ್ರಹಿಸಲು, ಗುರುತಿಸಲು. ಈ ಸ್ತ್ರೀವಿಮುಕ್ತಿಯ ವಿಚಾರಧಾರೆ ಕೂಡ ಯೋಗ್ಯ ಉಪಕರಣವಾಗಿ ವೈದೇಹಿಗೆ ಒದಗುತ್ತದೆ ಎಂಬುದನ್ನು ನಿರ್ಲಕ್ಷಿಸುವಂತಿಲ್ಲ.

ಆದರೆ ಸಂಪ್ರದಾಯಸ್ಥ ಪರಿಸರದೊಳಗೆ ಬದುಕಬೇಕಾದ ಅನಿವಾರ್ಯತೆ ಯಲ್ಲಿ ಹೆಣ್ಣಿನ ಅನುಭವ, ವ್ಯಕ್ತಿತ್ವಗಳು ಅರಳಿಕೊಳ್ಳುವ ಇಲ್ಲವೆ ಮುರುಟಿ ಹೋಗುವ ಬಗೆಗಳನ್ನು ವಿಚಾರ ಅಥವಾ ಸಿದ್ಧಾಂತಗಳ ಮೂಲಕವಾಗಿ ಗ್ರಹಿಸುವ ಬದಲು, ಅವರವರ ಬದುಕಿನ, ಪರಿಸರ, ಸ್ವಭಾವಗಳ ಒಳಗಿನಿಂದಲೇ ಸಹಜವಾಗಿ ಗ್ರಹಿಸುವುದಕ್ಕೆ ವೈದೇಹಿ ಪರಿಶ್ರಮಿಸುತ್ತಾರೆ. ಈ ಕಾರಣದಿಂದಲೇ ಅವರ ರಚನೆ ಗಳು ಅವರ ಸಮಕಾಲದಲ್ಲಿ ಬರೆದಂಥ, ಬರೆಯುತ್ತಿರುವ ಅನುಪಮಾ, ವೀಣಾ ಇಲ್ಲವೆ ನೇಮಿಚಂದ್ರರಂಥ ಕಥೆಗಾರರಿಗಿಂತ ತುಂಬ ಭಿನ್ನವೂ, ವಿಶಿಷ್ಟವೂ ಆಗಿ ತೋರುತ್ತವೆ. ಈ ದೃಷ್ಟಿಯಿಂದ ವೈದೇಹಿ ಶ್ಯಾಮಲಾದೇವಿ, ಗೌರಮ್ಮ, ಸಾವಿತ್ರಮ್ಮ ನವರ ಪರಂಪರೆ, ಸಂವೇದನಾಶೀಲತೆಗಳ ಮುಂದುವರೆದ ಸ್ಥಿತಿಯೊಂದರ ಪ್ರತಿನಿಧಿ ಯಾಗಿ ಕಾಣಿಸುತ್ತಾರೆ. ಸಾರಾ ಅಬೂಬಕರ್, ಗೀತಾ ನಾಗಭೂಷಣ, ಲಲಿತಾನಾಯಕ್ ಅಥವಾ ಬಾನು ಮುಷ್ತಾಕರ ಬಂಡಾಯನಿಷ್ಠ ಬರಹದ ಮಾದರಿಗಿಂತ ವೈದೇಹಿ ಭಿನ್ನವಾಗಿ ತೋರುವುದು ಜೀವನದ ಒಳಗಿನಿಂದ ಅನುಭವದ ವಿವಿಧ ಮಗ್ಗುಲು ಗಳನ್ನು ಗ್ರಹಿಸುವ ಯತ್ನದಿಂದಲೇ ಎನ್ನಬಹುದು.

ಆರಂಭದ 'ಮರಗಿಡಬಳ್ಳಿ' ಸಂಕಲನದಿಂದ ಹಿಡಿದು 'ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ' ಸಂಕಲನದವರೆಗೆ ವೈದೇಹಿ ಬರೆದಿರುವ ಐವತ್ತಕ್ಕೂ ಹೆಚ್ಚು ಕಥೆಗಳಲ್ಲಿ ಹೆಣ್ಣನ್ನೇ ಕೇಂದ್ರವಾಗಿ ಇಟ್ಟುಕೊಳ್ಳುವ ಮತ್ತು ಹೆಣ್ಣಿನ ಅನುಭವದ ನೆಲೆ ಯಿಂದ ಬದುಕಿನತ್ತ ಪರಿಶೀಲನಾತ್ಮಕವಾಗಿ ನೋಡುವ ಕಾಳಜಿಯೊಂದು ಈ ಲೇಖಕಿಯ ಒಂದು ಪ್ರಮುಖ ಆಸಕ್ತಿಯಾಗಿ ಕಾಣಿಸಿಕೊಂಡಿದೆ. ಈ ಸ್ತ್ರೀವಿಶಿಷ್ಟ ದೃಷ್ಟಿಕೋನದಿಂದ ಒಂದು ರೀತಿಯ ಅನನ್ಯತೆಯೂ ಅವರ ಕತೆಗಳಿಗೆ ಉಂಟಾಗಿದೆ. ಆದರೆ ಮನುಷ್ಯರನ್ನು ಕಪ್ಪುಬಿಳುಪುಗಳಲ್ಲಿ ಇಲ್ಲವೆ ಢಾಳಾದ ಬಣ್ಣಗಳಲ್ಲಿ

ಸರಳವಾಗಿ ವ್ಯಾಖ್ಯಾನಿಸುವುದರ ಬದಲಾಗಿ ಎಲ್ಲ ದಿಕ್ಕಿನಿಂದಲೂ ಅವರನ್ನು ಅರ್ಥ ಮಾಡಿಕೊಳ್ಳುವ ಕಳಕಳಿ ಹಾಗೂ ಆ ನಿಟ್ಟಿನ ವಿಶಿಷ್ಟವಾದ ಎಚ್ಚರ ಈ ಕಥೆಗಳಿಗಿದೆ. ಇದರಿಂದ ಉಂಟಾಗುವ ದೃಷ್ಟಿವೈಶಾಲ್ಯದಿಂದಾಗಿ ವ್ಯಂಗ್ಯ, ಸಿಟ್ಟು, ಸಿನಿಕತೆ, ಪ್ರತಿಭಟನೆ, ಆಕ್ರೋಶಗಳು ತಾವೇ ಮೇಲುಪದರಗಳಲ್ಲಿ ವಿಜೃಂಭಿಸದೆ ಕೆಳನೆಲೆಗೆ ಸರಿದು ಒಳದನಿಗಳಾಗುತ್ತವೆ. ಮುಖ್ಯ ನಿರೂಪಣೆಯು ವಿಶೇಷವಾಗಿ ಭಾವನಾ ಶೀಲ ಆಪ್ತತೆಯನ್ನು ತಳೆಯುವುದರಿಂದ ಒಳಸರಿದ ಸಿಟ್ಟು, ವ್ಯಂಗ್ಯ, ಕೋಪಗಳಿಗೆ ಒಂದು ರೀತಿಯ ಆಸ್ಫೋಟನಕಾರಿ ಶಕ್ತಿ ದೊರೆಯುತ್ತದೆ. ಹೆಣ್ಣಿನ ಅನುಭವಕ್ಕೆ ನಿಷ್ಠವಾಗಿದ್ದಾಗಲೂ ಪಕ್ಷಪಾತ ಇಲ್ಲವೆ ಅಳುಬುರುಕತೆಗೆ ಒಲಿಯದ, ಮಾನವತೆಯ ಪರತೆಯ ಹೆಸರಿನಲ್ಲಿ ನಿರ್ಭಾವುಕವೂ ಆಗದ ಸಮತೋಲನದ ದೃಷ್ಟಿಯನ್ನು ಸಾಧಿಸಲು ವೈದೇಹಿ ಯತ್ನಿಸುತ್ತಾರೆ.

ಮೊದಲ ಸಂಕಲನದ ಕಥೆಗಳಲ್ಲೇ ವೈದೇಹಿ ಯಾರೋ ಒಬ್ಬ ಹೆಣ್ಣಿನ ಬಗ್ಗೆ ಬರೆದಿಲ್ಲ. ಬದಲಾಗಿ ಅವರು ಕಾಣಿಸಲು ಯತ್ನಿಸುವ ಹೆಣ್ಣು ಬಾಲ್ಯದ, ಎಳೆ ಹರೆಯದ, ಪ್ರೌಢತ್ವದ, ನಡುಹರೆಯದ ಅಥವಾ ವೃದ್ಧಾಪ್ಯದ ವಿವಿಧ ಬದುಕಿನ ಘಟ್ಟಗಳೊಳಗೆ ಸಾಗುತ್ತಿರುವ ಹೆಣ್ಣು. ಹಾಗೆ ಸಾಗುತ್ತಲೇ ಬದುಕಿನ ಒಂದು ನಿರ್ದಿಷ್ಟಗಳಿಗೆಯೊಳಗೆ ತನ್ನನ್ನು, ತನ್ನ ಸುತ್ತಲೂ ಕಟ್ಟಿಕೊಂಡಿರುವ ಬದುಕನ್ನು ನೋಡುವ ಹವಣಿಕೆಯಲ್ಲಿದ್ದಾಳೆ. ತನಗಿಂತ ಭಿನ್ನವಾಗಿಯೂ ತನ್ನನ್ನು ಆವರಿಸಿ ಕೊಂಡಿರುವ, ತನ್ನನ್ನು ಸೆಳೆಯುವ ಇಲ್ಲವೆ ಹಿಡಿದಿಟ್ಟುಕೊಂಡಿರುವ ಇತರ ಮಾನವರೊಂದಿಗಿನ ಸಂಬಂಧಗಳ ಗೋಜಲು ಅವಳನ್ನು ಬೆಚ್ಚಿಸಿದೆ. ಅದರಿಂದ ಅವಳು ಅನುಭವಿಸುವ ವಿಸ್ಮಯ, ದಿಗ್ಭ್ರಮೆ, ಗೊಂದಲ, ಕುತೂಹಲ, ಆಸೆ, ಕನಸು, ಸಿಟ್ಟು, ಕುದಿತಗಳು ಅಸ್ಪಷ್ಟ ದನಿಗಳು ಈ ಮೊದಲ ಕಥೆಗಳಲ್ಲಿ ಮಿಡಿದಿವೆಯೆನ್ನ ಬಹುದು.

ಭಾರತದ ಸಾಂಸ್ಕೃತಿಕ ಪರಿಸರದಲ್ಲಿ ಹೆಣ್ಣಿನ ಸಾಂಪ್ರದಾಯಿಕ ನೆಲೆಯನ್ನು ವಸ್ತುವಾಗಿಸಿಕೊಳ್ಳುವ ಯಾರೇ ಆದರೂ ಕೌಟುಂಬಿಕ ಸಂಬಂಧಗಳನ್ನು ಚರ್ಚೆ ಗೆಳೆಯದೆ ಇರುವುದು ಅಸಾಧ್ಯ. ಮಧ್ಯಮ ವರ್ಗದ ದಾಂಪತ್ಯದ ಚಿತ್ರಗಳು, ಅವುಗಳೊಳಗಿನ ಖುಷಿಗಳು, ಜಗಳಗಳು, ಸಮಸ್ಯೆಗಳು, ಪರಿಹಾರಗಳ ಸರಳ ಸುಕುಮಾರ ವಸ್ತುಗಳು ವೈದೇಹಿಗೂ ಮೊದಲು ಮೊದಲು ತುಂಬ ಆಪ್ಯಾಯ ಮಾನವಾಗಿದ್ದಂತೆ ತೋರುತ್ತದೆ. 'ವರ್ತುಲ', 'ಸಂ- ಸಾರ' 'ಚಿಪ್ಪು', 'ನಮ್ಮ ಶಾಂತಿಯ ಬಯಕೆ', 'ಮರಗಿಡಬಳ್ಳಿ', 'ಬೀಳು-ಬೇರು ಮುಂತಾದ ಕಥೆಗಳಲ್ಲಿ ಕಥೆಯನ್ನು ಆಕರ್ಷಕವಾಗಿ ಕಟ್ಟಿಹೇಳುವಲ್ಲಿ ವೈದೇಹಿ ತಮಗಿಂತ ಹಿಂದಿನ ಲೇಖಕಿಯರ ಮಾದರಿ ಗಳನ್ನು, ಅವರ ಸರಳ, ಜನಪ್ರಿಯ ಧಾಟಿಗಳನ್ನು ಅನುಸರಿಸುವ ಹೊತ್ತಿನಲ್ಲೇ, ಅವುಗಳಿಂದ ಭಿನ್ನವಾಗಿ ಬರೆಯುವತ್ತಲೂ ತವಕಿಸುತ್ತಿರುವುದನ್ನು ಕಾಣಬಹುದು. ಈ ಭಿನ್ನವಾಗುವ, ಬದಲಾಗುವ ಯತ್ನಗಳು ಸಮಸ್ಯೆಗಳ ಸೂಕ್ಷ್ಮಗ್ರಹಿಕೆಯಲ್ಲಿ ಕಾಣಬರುತ್ತವೆ. 'ಸಂ-ಸಾರ'ದ ನಾಯಕಿಗೆ ತನ್ನ ಬದಲಾದ ಪಾತ್ರಗಳಲ್ಲಿ ತನ್ನನ್ನೇ ಕಳೆದು ಕೊಂಡಿರುವುದು ಅರಿವಿಗೆ ಬರುವುದಿಲ್ಲವಾದರೆ 'ವರ್ತುಲ'ದಲ್ಲಿ ನಿಧಾನವಾಗಿ ತನ್ನ ಸ್ಥಿತಿಯನ್ನು ಆಕೆ ಅರಿಯುತ್ತಾಳೆ. ವೈದೇಹಿ ನಿರೂಪಣೆಗಾಗಿ ಬೇರೆ ಬೇರೆ ಪಾತ್ರಗಳ ಪ್ರಜ್ಞೆಯಿಂದ ಸಮಸ್ಯೆಯನ್ನು ನೋಡುವ ಪ್ರಯೋಗಗಳನ್ನು ಈ ಮೊದಲ ಹಂತದಲ್ಲೇ ನಡೆಸಿರುವುದು ಮುಖ್ಯವಾದ ಸಂಗತಿ. 'ಪದವೀಧರ' ರಲ್ಲಿ ತರುಣನೊಬ್ಬನ ದೃಷ್ಟಿ ಯಿಂದ ವಸ್ತುವಿನ ನಿರೂಪಣೆಯಿದ್ದರೆ 'ಬೀಳು-ಬೇರು' ಕಥೆಯಲ್ಲಿ ಸಮಸ್ಯೆಯ ಕೇಂದ್ರ ಅವಿವಾಹಿತೆಯಿಂದ ಆಗಿದ್ದರೂ ನಿರೂಪಕ ಪ್ರಜ್ಞೆ ಅವಳ ತಂದೆಯದು. ಎಮ್ಮೆ ವ್ಯಾಪಾರ, ಇಂದಿಗೆ ವರನನ್ನು ಹುಡುಕುವ ವ್ಯವಹಾರ ಎರಡನ್ನೂ ಒಟ್ಟಿಗೇ ತರುವ ಮೂಲಕ ಮದುವೆ-ವ್ಯಾಪಾರವಾಗುವ ಧ್ವನಿಯು ವಿವರಣೆಯೇ ಬೇಕಾಗದಷ್ಟು ಸ್ಪಷ್ಟವಾಗಿ ಕೇಳು ತ್ತದೆ. ಆದರೆ ಕತೆಯುದ್ದಕ್ಕೂ ಸಂವೇದನಾಶೀಲನಾಗಿದ್ದೂ ಮಗಳ ಮನಸ್ಸನ್ನು ಸ್ವಲ್ಪವೂ ಅರ್ಥಮಾಡಿಕೊಳ್ಳಲಾಗದಂಥ ಮೌಲ್ಯ ಪ್ರಪಂಚ ಈ ತಂದೆಯದು. 'ನಿನ್ನ ಅಮ್ಮ ನಾನು ನೋಡಿದ ಇಪ್ಪತ್ತನೆಯ ಹುಡುಗಿ ಗೊತ್ತಿದೆಯ?' ಎಂಬುದು ಆತನಿಗೆ ತೀರಾ ಸಹಜ, ಎಮ್ಮೆ ವ್ಯಾಪಾರದಷ್ಟೇ ವ್ಯಾವಹಾರಿಕ. ಆದರೆ ಈ ಮಾತಿಗೆ ಇಂದಿ ನನ್ನನ್ನು ಸುಟ್ಟುಬಿಡುವಂತೆ ದುರುಗುಟ್ಟಿ ನೋಡಿದ್ದು ಮಾತ್ರ ಅವನಿಗೆ ತಲುಪಲಾರದ ವಿಷಯ.

ವಿವಾಹದ ಸಂಸ್ಥೆಯ ಈ ವ್ಯಾವಹಾರಿಕತೆ ಯಾವುದೂ ಅದರ ಬಗೆಗಿನ ಆಕರ್ಷಣೆಯನ್ನು, ಅದು ಹೊತ್ತುತರುವ ಕನಸುಗಾರಿಕೆಯನ್ನು ನಿಲ್ಲಿಸಲಾರದು. 'ಚಿಪ್ಪು' ಕಥೆಯ ಯಶೀ ತೋರುವ ಭಾವತುಮುಲ ಮದುವೆ ತನಗೆ ಬೇಕೆ, ಬೇಡವೆ ಎಂಬ ಸಂದಿಗ್ಧ ಸ್ಥಿತಿಯನ್ನು ಬಿಂಬಿಸುವುದು ನಿಜ. 'ಒಳ್ಳೆಯ ಹುಡುಗಿ' ಎಂಬ ಸಮಾಜ, ಸಂಪ್ರದಾಯಗಳ ನಿರೀಕ್ಷೆಗಳಿಗೆ ಒಗ್ಗಿಕೊಳ್ಳತೊಡಗಿದಾಗ ದಾಂಪತ್ಯದ, ವರನ ಬಗೆಗಿನ ಕನಸುಗಳು ಕಾಡುತ್ತವೆ. ಆ ಕನಸಿನ ತಳದಲ್ಲಿ ಎಲ್ಲೋ ಒಂದು ಎಳೆಯ ಬಲಿತಿಲ್ಲದ ದನಿ ನಿರಂತರ ಪ್ರಶ್ನೆಗಳನ್ನು ಕೇಳುತ್ತಿರುವುದನ್ನೂ ಕಥೆ ಸೂಚಿಸುತ್ತದೆ.

ಹೃದಯದೊಳಗೇ ಹೆಣ್ಣು ಬೈತಿಡುತ್ತ ಬಂದ ಇಂಥ ನೂರಾರು ಮೂಕ ಮರ್ಮರಗಳಿಗೆ ವೈದೇಹಿ ಬಾಯಿಕೊಡುವಂತೆ ಬರೆಯುವಾಗಲೇ ತನ್ನ ವಿಶಿಷ್ಟ ಸ್ಥಿತಿಯನ್ನು ಹೆಣ್ಣೇ ಅರಿವಿಗೆ ತಂದುಕೊಳ್ಳುವಂತೆಯೂ ಮಾಡುತ್ತಾರೆ. ಈ ಆತ್ಮ ನಿರೀಕ್ಷಣೆಯ ಮೂಲಕವಾಗಿ ಅವರ ಹೆಣ್ಣುಗಳು 'ಒಂದು ಮಾದರಿ'ಯ ಪ್ರತಿಬಿಂಬ ವಾಗದೆ, ಅನೇಕ ಬಿಡಿ ಬಿಡಿ ಮಾನವ ವ್ಯಕ್ತಿಗಳಾಗಿ ಬೆಳೆದು ಬಿಡುತ್ತಾರೆ. ಸಮಾಜದ ಸಾಂಪ್ರದಾಯಿಕ ಭಾಷೆ ಹೆಣ್ಣನ್ನು ಗುರುತಿಸುವುದರಲ್ಲಿ ಹುಡುಗಿ, ಯುವತಿ, ಮುದುಕಿ ಮುಂತಾದ ವಯಸ್ಸನ್ನು ಮಾನದಂಡವಾಗಿ ಇಟ್ಟುಕೊಂಡಿರ ಬಹುದು. ಇಲ್ಲವೆ ತಾಯಿ, ಮಗಳು, ಅಜ್ಜಿ, ಅತ್ತೆ, ಸೊಸೆ, ಅಕ್ಕ ತಂಗಿಯೇ ಮೊದಲಾದ ಕೌಟುಂಬಿಕವಾಗಿ ಕಟ್ಟಲ್ಪಟ್ಟ ಸಾಮಾಜಿಕ ಸಂಬಂಧಗಳ ರೂಪದಲ್ಲಿರ ಬಹುದು. ಅಥವಾ ಕನ್ಯೆ, ಗೃಹಿಣಿ, ವಿಧವೆ, ವೇಶ್ಯೆಯರಂತೆ ವೈವಾಹಿಕ ನೆಲೆಗಳತ್ತ ಸೂಚಿಸುತ್ತಿರಬಹುದು. ಇದಾವುದೂ ಆಗಿರದೆ, ಕ್ರೂರಿ, ರಕ್ಕಸಿ, ಅನುಕಂಪ ವುಳ್ಳವಳು, ಉದಾರಿ, ಭ್ರಮಾಧೀನೆ, ಗಯ್ಯಾಳಿ, ಸಾಧ್ವಿ, ಹುಚ್ಚಿ ಮುಂತಾದ ಮೌಲ್ಯಭಾರವುಳ್ಳ ಹೆಸರುಗಳ ಮೂಲಕವೂ ಆಗಿರಬಹುದು. ಇಲ್ಲವೆ ಸಿರಿವಂತೆ, ಕೂಲಿಹೆಣ್ಣುಗಳಂತೆ ವರ್ಗಗಳನ್ನು, ಮೇಲು ಕೆಳ ಜಾತಿಗಳನ್ನೂ ಸೂಚಿಸುವಂತೆ ಕಲ್ಪಿತಳಾಗಿರಬಹುದು.

ಈ ಎಲ್ಲ ಸ್ವೀಕೃತ ಮಾದರಿಗಳನ್ನು ಒಪ್ಪಿಯೇ ಸಾಗಿದರೂ ವೈದೇಹಿ ಯವರ ಹೆಣ್ಣುಗಳು ನಮಗೆ ಸಮಸ್ಯಾತ್ಮಕವಾಗಿಬಿಡುವುದು ಈ ಹೊರ ಮೈಯಿನ ವಿಭಜನೆ ಗಳಿಂದ ಮಾತ್ರವಲ್ಲ. ಈ ಹೊರಗಿನ ನೆಲೆಯಿಂದ ಸಿದ್ಧವಾಗುವ ಮತ್ತು ರೂಪು ಗೊಳ್ಳುವ ಅವರೆಲ್ಲರ ಅಂತರಂಗಗಳ ನೂರು ಬಗೆಯ ಪದರಗಳು ಮಿಡಿವ ಧ್ವನಿಗಳು ನಮ್ಮನ್ನು ಕಾಡಿಸಲು ತೊಡಗುತ್ತವೆ. 'ಅಂತ ರಂಗದ ಪುಟಗಳು' ಎಂಬ ಸಂಕಲನದ ಕಥೆಗಳು ಇಂಥ ಒಳದನಿಗಳನ್ನು ಹೇಗೆ ಆಲಿಸಬೇಕೆಂಬ ಕಡೆಗೆ ಓದುಗರ ಗಮನ ಸೆಳೆಯುವ ಯತ್ನ ಮಾಡುತ್ತವೆ. ಸಂಕಲನದ ಶೀರ್ಷಿಕೆಯ ಕಥೆಯ ನಾಯಕಿ ಅಚಲ ತಮ್ಮ ಇಚ್ಛೆ, ಅನಿಚ್ಛೆಗಳನ್ನು ಹೇಳಲು ಹಂಬಲಿಸಿದರೂ ಹೇಳಲಾರದ 'ಬೀಳು-ಬೇರು', 'ಚಿಪ್ಪು' ಕಥೆಗಳ ನಾಯಕಿಯರಂತೆ ಇಲ್ಲ. ಈಕೆ ಮೌನಿಯಾಗಿ ಕಾಯುವ ತಲ್ಲಣ, ಕನಸುಗೂಡುಗಳ ಹುಡುಗಿಯಾಗಿರದೆ ತನ್ನನ್ನು ಒಪ್ಪಿದ ವರನನ್ನೂ ನಿರಾಕರಿಸ ಬಲ್ಲವಳು, ಮದುವೆಯೆಂಬುದು ಹೆಣ್ಣನ್ನು ಚಿನ್ನ, ರೇಶ್ಮೆಗಳಲ್ಲಿ ಅದ್ದಿ ಒತ್ತಿಡುವ ವ್ಯವಸ್ಥೆಯಾಗಿರುವ ಬಗ್ಗೆ ಸಿಟ್ಟು ಪ್ರಕಟಿಸಬಲ್ಲವಳು. ಅದೇ ಹೊತ್ತಿನಲ್ಲಿ ಮದುವೆ ಆಗದ ತನ್ನ ಸ್ಥಿತಿಯ ಬಗ್ಗೆ ಅಸುಖಿಯೂ ಆಗುವವಳು. ತನ್ನ

ಚಪ್ಪರ, ವಾದ್ಯ, ಉಡುಪು, ಶೃಂಗಾರ, ಆಭರಣ, ಅಂತಸ್ತು, ಆಶೀರ್ವಾದ, ಅಕ್ಷತೆ ಕಾಳುಗಳ ಲೋಕದ ಬಗ್ಗೆ ತಿರಸ್ಕಾರ, ತಾನು ಬಯಸುವವನು ತನ್ನನ್ನು ಬಯಸುವವನೂ ಆಗಿ, ಇವನ ಮಗುವನ್ನು ಧರಿಸಬೇಕೆಂಬ ಆದಮ್ಯ ಬಯಕೆಯನ್ನು ಉಕ್ಕಿಸುವವನೂ ಆಗಿರಬೇಕೆಂಬ ಉತ್ಕಟ ಹಂಬಲ ಇವು 'ಅಚಲ'ಳನ್ನು ಆ ಹೆಸರು ಸೂಚಿಸುವುದಕ್ಕಿಂತ ಭಿನ್ನವಾಗಿ ಚಿತ್ರಿಸುತ್ತವೆ. ಮಾತ್ರವಲ್ಲ, ನೋಡಲು ಬಂದ ವರನ ಮುಂದೆ ಸಿಂಗರಿಸಿಕೊಂಡು ಕೂತ ಹೆಣ್ಣಿನ ಅಂತರಂಗದಲ್ಲಿ ದೊಡ್ಡ ಜ್ವಾಲಾಮುಖಿಯೇ ಹುದುಗಿರಬಹುದಾದ ಸ್ಥಿತಿಯೊಂದಕ್ಕೆ ಕನ್ನಡಿ ಹಿಡಿದು ತೋರಿಸುವುದರಲ್ಲಿ ವೈದೇಹಿಯವರು 'ಅ-ಸಂಪ್ರದಾಯಿಕ' ಶ್ರುತಿಯೊಂದನ್ನು ಕಥಾ ಸಾಹಿತ್ಯಕ್ಕೆ ತಂದು ಜೋಡಿಸುತ್ತಾರೆ.

ಮದುವೆ, ಕುಟುಂಬ, ದಾಂಪತ್ಯಗಳಂಥ ಪರಂಪರಾಗತ ಸಂಸ್ಥೆಗಳ ಬೇರು ಬಿಳಲುಗಳನ್ನೇ ಮತ್ತೆ ಮತ್ತೆ ಹಲವಾರು ಮಗ್ಗುಲುಗಳಿಂದ ಪರೀಕ್ಷಿಸುವ ಪ್ರಯತ್ನ ಮರಗಿಡಬಳ್ಳಿಯ ಪುಟಗಳಲ್ಲಿ ಶುರುವಾಗಿದೆ. ಈ ತಲಶೋಧನೆ ತುಂಬ ಪಕ್ವವಾದ ಜೀವನದರ್ಶನಕ್ಕೆ ಯತ್ನಿಸುವುದು 'ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ' ಸಂಕಲನದಲ್ಲಿ ಎನ್ನಬಹುದಾದರೂ, ಅದರ ಪೂರ್ವ ರಂಗವು ಮೊದಲೆರಡು ಸಂಕಲನಗಳಲ್ಲೇ ಸಿದ್ಧವಾಗುತ್ತದೆಂಬುದನ್ನು ಗಮನಿಸಬೇಕು. ಮದುವೆಯ ಸಂಸ್ಥೆಯ ಒಳಗೆ ಬದುಕುವ ಹೆಣ್ಣಿನ ನಾಲ್ಕು ಮಾನಸಿಕ ಸ್ಥಿತಿಗಳನ್ನು, 'ಒಂದು ಅಪರಾಧದ ತನಿಖೆ', 'ಆತ', 'ಗೂಡಿನೊಳಗೊಂದು ಹಕ್ಕಿ' ಮತ್ತು 'ಅಪರಿಚಿತ' ಕತೆಗಳು ಕಟ್ಟಿಕೊಡುತ್ತವೆ.

ಗಂಡನನ್ನು ಬಿಟ್ಟು ತವರಿಗೆ ಬಂದ ಕುಸುಮ ತನ್ನ ಸ್ಥಿತಿಯೊಂದಿಗೆ ಬಾಬಿಯ ದಾಂಪತ್ಯದ ವೈಪರೀತ್ಯಗಳನ್ನು ಹೋಲಿಸಿಕೊಳ್ಳುವಂತಾಗುವುದನ್ನು 'ಒಂದು ಅಪರಾಧದ ತನಿಖೆ' ಚಿತ್ರಿಸುತ್ತದೆ. ಮೊದಲ ಹೆಂಡತಿಗೆ ಮಕ್ಕಳಾಗಲಿಲ್ಲವೆಂದು ಬಾಬಿಯನ್ನು ಮದುವೆಯಾದರೂ ಅವಳ ಗಂಡನಿಗೆ 'ಊರ ತುಂಬ ಮೇವು ಬೇರೆ'. ಹೀಗಿದ್ದೂ ತನ್ನ ಕಿರಿವಯಸ್ಸಿನ ಮಗಳಿಗೆ ಆದಷ್ಟು ಬೇಗ ಮದುವೆ ಮಾಡುವ ತವಕ ಬಾಬಿಯದು. ಈ ವಿಷಯದಲ್ಲಿ ಹೆಣ್ಣಿನ ಮದುವೆಯ ಬಗ್ಗೆ ಸಮಾಜ ಹೊಂದಿರುವ ಆತಂಕಗಳೆಲ್ಲ ಬಾಬಿಯಲ್ಲಿ ರುವುದನ್ನು ಗಮನಿಸಬೇಕು. 'ಹೂಂ ಈಗಲೇ ಸಮ. ಏನೂ ಗೊತ್ತಿಲ್ಲ. ಆಮೇಲೆ ಅಂಥವ ಬೇಕು ಇಂಥವ ಬೇಕು ಎಂತ ಕೂತು ಕೊಳ್ಳುವುದು. ಕಡೆಗೆ ಯಾರನ್ನಾದರೂ ಕಟ್ಟಿಕೊಂಡು ಓಡಿಹೋಗುವುದು. ಇಲ್ಲ ಗಂಡನ ಮನೆಯಲ್ಲಿ ಬೇಯಲಿಕ್ಕಾಗದೆ ಅರ್ಧ ಆಟಕ್ಕೆ ವಾಪಸ್ಸು ಬಂದವರಂತೆ ಬರುವುದು' ಎಂಬ ಬಾಬಿಯ ಸಹಜ ಬಡಬಡಿಕೆ ಕುಸುಮಳಿಗೇ ನಾಟುವಂಥದೂ ಆಗುತ್ತದೆ. ಕುಸುಮಳ ಮನಕ್ಕೆ ಅದು ಅಪರಾಧದ ತುಣುಯಾಗಿ ಕಾಣುತ್ತದೆ. ಮದುವೆಯಾದ ಈ ಇಬ್ಬರಿಗೂ ಆ ಬದುಕಿನಲ್ಲಿ ಅಸಂತೋಷವೇ ಇದೆ. ಆದರೆ ತಮ್ಮ ಅಸಹನೆಯ ಪ್ರತಿಕ್ರಿಯೆಯನ್ನು ಅವರು ತೋರುವ ರೀತಿ ಬೇರೆ ಬೇರೆ.

'ಗೂಡಿನೊಳಗೊಂದು ಹಕ್ಕಿ' ಕಥೆಯು ವಿವಾಹಿತ ಹೆಣ್ಣಿನ ಸ್ವಾತಂತ್ರ್ಯದ ಹಂಬಲಗಳ ನಿಜವನ್ನು ಶೋಧಿಸುತ್ತದೆ. 'ಹೊರಗೆ ಬೀಗ ಹಾಕಿಸಿಕೊಂಡು ಒಳಗೆ ಒಬ್ಬಳೇ ಇರಬೇಕೆಂತ ಆಸೆ' ಇರುವ ಮಾಲತಿ ಈ 'ಸ್ವಾತಂತ್ರ್ಯ'ವನ್ನು ಪ್ರಯೋಗಿಸಿಯೂ ನೋಡುತ್ತಾಳೆ. ಗಂಡನ ಬಟ್ಟೆಗಳನ್ನು ಹಾಕಿಕೊಂಡು ಕನ್ನಡಿಯಲ್ಲಿ ನೋಡಿಕೊಳ್ಳುವುದು, ಸಿಗರೇಟು ಸೇದಲು ಯತ್ನಿಸುವುದು, ಕೊನೆಗೆ ಬಟ್ಟೆಗಳನ್ನೆಲ್ಲ ಕಳಚಿ ಬಯಲಾಗುವುದೂ ಅವಳ ಪ್ರಯೋಗಗಳು. ಈ ಎಲ್ಲ ಸ್ವಾತಂತ್ರ್ಯ ಆಕೆ ದಕ್ಕಿಸಿಕೊಂಡದ್ದು ಹೊರಗಿನಿಂದ ಯಾರೂ ಬರಲಾಗದಂತೆ ಬೀಗ ಹಾಕಿಸಿಕೊಂಡ ಸ್ಥಿತಿಯಲ್ಲಿ. ಯಾರೂ ಗಮನಿಸದ ಈ ಸ್ಥಿತಿಯಲ್ಲೂ ಮಾಲತಿಗೆ ನಿಜವಾಗಿ ತಾನು ಒಬ್ಬಳೇ ಎಂಬ ಸ್ಥಿತಿಯನ್ನು ಮನದಲ್ಲಿ ತಳೆಯುವುದೇ ಸಾಧ್ಯವಾಗದೆ, ಕೊನೆಗೆ ಗಂಡ ವಾಪಸ್ಸು ಬರುವ ಹೊತ್ತಿಗೆ ತನ್ನ ಮಾಮೂಲಿ ವೇಷವನ್ನೇ ತೊಟ್ಟು ಕೊಳ್ಳುತ್ತಾಳೆ. 'ಯಾವ ಕ್ಷಣಗಳೂ ಸ್ವಂತವಲ್ಲ. ಎಲ್ಲ ಬಾಡಿಗೆಯವೇ. ಕೊಡುವ ಬಾಡಿಗೆಯಾದರೂ ಎಷ್ಟು, ತಾನೇ ದಿವಾಳಿಯಾಗುವಷ್ಟು'.

ವೇಷ ತೊಟ್ಟು ಕಳಚುವ ಕ್ರಿಯೆಯು ಎಷ್ಟು ಕಷ್ಟದ್ದೆಂಬ ಗಹನವಾದ ತಾತ್ವಿಕ ಪ್ರಶ್ನೆಯೊಂದು ಇಲ್ಲಿ ಏಳುತ್ತದೆ. ಹೆಣ್ಣಿನ ದೃಷ್ಟಿಕೋನದಿಂದ ದಾಂಪತ್ಯದ ಮಿತಿಗಳ ಬಗ್ಗೆ ಎತ್ತಿರುವ ಪ್ರಶ್ನೆ ಇದಾದರೂ ಆ ಸೀಮೆಯನ್ನೂ ಮೀರುತ್ತ ಮಾನವರೆಲ್ಲರ ಪ್ರಶ್ನೆಯಾಗಿ ಅದು ಸೂಚಿಸುವ ಆಯಾಮ ಗಮನಾರ್ಹ.

ಹೆಣ್ಣಿನ ಬಗೆಗಿನ ರೂಢಿಗತ ನಂಬಿಕೆ, ಕಲ್ಪನೆ, ಗ್ರಹಿಕೆಗಳನ್ನು ವೈದೇಹಿ ನಿರಾಯಾಸವಾದ ರೀತಿಯಿಂದ, ತೀರ ಸಹಜವಾಗಿ ಎಂಬಂತೆ ಬುಡಮೇಲು ಮಾಡಿಬಿಡಬಲ್ಲರು. ಈ ಬುಡಮೇಲು ಮಾಡುವ ಕ್ರಿಯೆ ಹೆಣ್ಣಿನ ಅಂತರಾಳ ವನ್ನು ಬಚ್ಚಿಡುವಲ್ಲಿದೆ, ಅವಳ ಮನದ ಮುಸುಕಾದ ಭಾವಲೋಕಕ್ಕೆ ಥಟ್ಟನೆ ದೊಂದಿಯೊಂದನ್ನು ಹಿಡಿವ ಹಾಗೆ ವೈದೇಹಿ ಹೆಣ್ಣುಗಳೊಳಗನ್ನು ಹಿಡಿದು ಕೊಡುತ್ತಾರೆ. ಇದರಿಂದಾಗಿ 'ಪಾತಿವ್ರತ್ಯ', 'ಗರತಿ ಗೌರಮ್ಮ', 'ಸೇವಾನಿಷ್ಠ' ಪತ್ನಿಯ ಸಾಂಪ್ರದಾಯಿಕ ಹೊರ ಚೌಕಟ್ಟನ್ನು ಒಡೆದಾಗಲೂ ಅಸಹಜತೆ, ವಿಕೃತಿಯ ಆರೋಪಕ್ಕೆ ಆಸ್ಪದವಾಗದಂತೆ ಹೆಣ್ಣನ್ನು ಅವರು ನಮ್ಮೆದುರು ನಿಲ್ಲಿಸುತ್ತಾರೆ. ಹೀಗೂ ಹೌದೆ ಎಂಬ ಒಂದು ವಿಸ್ಮಯ ಬೆರಗು ಬರೀ ಗಂಡಸರಿಗಷ್ಟೇ ಹುಟ್ಟುವುದಲ್ಲ. ಈ ಕಥೆಗಳನ್ನು ಓದಿಕೊಳ್ಳುವ ಹೆಣ್ಣಿಗೂ ಕೂಡ ತನ್ನ ಎದೆ ಮುಟ್ಟಿ ನೋಡಿಕೊಳ್ಳುವಂತೆ, ನಿರಾಳ ಉಸಿರು ಬಿಡುವಂತೆ ಆಗಬಲ್ಲದು. ಈ ರೀತಿ 'ಒಳ್ಳೆಯತನ, ಸುಸ್ಕೃತಿ, ವಿಧೇಯತೆ, ಸಹನೆ'ಗಳ ಸಾಂಪ್ರದಾಯಿಕ ಸ್ತ್ರೀ ಪ್ರತೀಕಗಳ ಒಳಗುಟ್ಟನ್ನು ಒಡೆದು ತೋರುವುದರಿಂದ ಸಹಜವಾಗಿಯೇ ಓದುಗರು ಕಸಿವಿಸಿಗೊಂಡು ಬೆಚ್ಚಿಬೀಳುವಂತಾಗುತ್ತದೆ.

ಈ ರೀತಿ ಬೆಚ್ಚಿ ಬೀಳಿಸುವುದೇ ಒಂದು ಉದ್ದೇಶವಲ್ಲ. ಅದಕ್ಕಿಂತ ಮುಖ್ಯ ಒಳಗಿನ ನಿಜದ ಪದರಗಳನ್ನು ಬಿಡಿಸಬೇಕೆಂಬ ಯತ್ನ. ಮಾಲತಿ ಯದು 'ಗೂಡಿನೊಳಗೊಂದು ಹಕ್ಕಿ'ಯ ಸ್ಥಿತಿ ಇರಬಹುದು. ಆದರೆ 'ಆತ' ಎಂಬ ಕಥೆಯ ನಾಯಕಿ, ತನ್ನ ಹಳೆಯ ಗೆಳೆಯನನ್ನು ಬಹಳ ವರ್ಷಗಳ ನಂತರ ಭೆಟ್ಟಿಯಾದಾಗ-ಒಬ್ಬರು ಮತ್ತೊಬ್ಬರ ಕಣ್ಣಿನಲ್ಲಿ ತಮ್ಮ ಬದುಕಿನದೇ ಪ್ರತಿಬಿಂಬವನ್ನು ಕಾಣಲು ಯತ್ನಿಸುವುದು ಕುತೂಹಲಕರ. ಇಬ್ಬರದೂ ಅವರವರದೇ ಆದ ಸಂಸಾರವಿದೆ. ಆದರೆ ಬಸ್ಸಿನಲ್ಲಿ ಕುಳಿತಿರು ವಾಕೆ, ಕೆಳಗೆ ತನ್ನನ್ನೇ ದಿಟ್ಟಿಸುತ್ತಿರುವ ಕಣ್ಣುಗಳನ್ನು ಗಮನಿಸಿದರೆ. ತಾನು ಹಿಂದೆ ನೋಡಿದ್ದ, ಭೇಟಿಯಾಗಿದ್ದ, ಮಾತನಾಡಿದ್ದ, ಮೆಚ್ಚಿದ್ದ ಅನೇಕ ಗಂಡಸರು ನೆನಪಿಗೆ ಬರುತ್ತಾರೆ. ಅದುವರೆಗೆ ಬಚ್ಚಿಟ್ಟುಕೊಂಡ ಭಾವನೆಗಳೂ ಮೇಲೆ ಬಂದಾಗ ಆಕೆಗೇ ರೇಜಿಗೆ, ಅಂದ ಹಾಗೆ, ತನ್ನ ಗಂಡ ಮನೀಷನನ್ನು ನೆನೆಸಿಕೊಂಡರೆ ಯಾಕೆ ರೋಮಾಂಚನವಾಗುವುದಿಲ್ಲ? ಎಂಬ ಪ್ರಶ್ನೆಯೂ ಹಾಗೆಯೇ ತಲೆಗೆ ಬರುತ್ತದೆ. ಮೆಚ್ಚಿದವನು ಕೈ ಹಿಡಿಯದೆ, ಕೈ ಹಿಡಿದವನನ್ನು ನಿಜವಾಗಿಯೂ ಮೆಚ್ಚಲೂ ಆಗದೆ ಬದುಕುತ್ತಿರುವ ತನ್ನ ಸ್ಥಿತಿಯ ಅರಿವನ್ನು ಮಾತ್ರವಲ್ಲ, ತನ್ನ ಹೆಣ್ತನ 'ಪುಲಕ'ಗೊಳ್ಳುವುದರ ಮೂಲವೇನೆಂದೂ ಆಕೆ ಪ್ರಶ್ನಿಸಿಕೊಳ್ಳುತ್ತಾಳೆ. ಈ ಕಥೆ ಕೂಡ ಮನುಷ್ಯರು ಬಯಸುವುದು, ಅವರಿಗೆ ದೊರಕುವುದು ಬೇರೆ ಬೇರೆಯೇ, ಅವುಗಳ ನಡುವಿನ ಅಂತರ ತುಂಬಲಾರದ್ದೆಂಬ ತಾತ್ವಿಕತೆಯನ್ನುಳ್ಳದ್ದು. ಹೆಣ್ಣಿನ ಅನುಭವಕ್ಕೆ ನಿಷ್ಠವಾಗಿಯೂ ಅದರಾಚೆಗೆ ಮಾನವೀಯ ನೆಲೆಯನ್ನು ಸ್ಪರ್ಶಿಸುವ ಹಂಬಲವುಳ್ಳದ್ದು. ಸ್ವಾತಂತ್ರ್ಯದ ಪ್ರಶ್ನೆಯಂತೆ, ಈ ಬಯಸಿದ್ದನ್ನು ಪಡೆಯಲಾಗದ ಸ್ಥಿತಿ ಕೂಡ ಯಾರಾದರೂ ಅನುಭವಿಸುವಂಥಾದ್ದು. ಅದಕ್ಕೆ ಹೆಣ್ಣು, ಗಂಡೆಂಬ ತಾರತಮ್ಯವಿಲ್ಲ ಎನ್ನುವುದು ವೈದೇಹಿಯವರು ಮುಟ್ಟಿಸಿರುವ ಕಲಾತ್ಮಕ ರೀತಿ ಸೊಗಸಾದದ್ದು.

'ಅಕ್ಕು' ಮತ್ತು 'ಚಂದಲೆ' ಕಥೆಗಳು 'ಅಂತರಂಗದ ಪುಟಗಳು' ಸಂಕಲನದ ತುಂಬ ಸಂಕೀರ್ಣ ಕಥೆಗಳೆನ್ನಬಹುದು. ಮದುವೆ ಆದರೂ ಸಾಂಸಾರಿಕ ಸುಖ ವಿಲ್ಲದ ನತದೃಷ್ಟೆ ಹೆಣ್ಣು 'ಅಕ್ಕು'ವಿನ ಬದುಕಿನ ವಿವರಗಳನ್ನು ಬಿಚ್ಚಿತೋರುವ ಹೊತ್ತಿನಲ್ಲಿ, ಒಂದೆಡೆ ಹೆಣ್ಣಿನ ನೋವು ಅಪಮಾನ, ದಮನಗಳ ಮೂರ್ತಿ ರೂಪವಾದರೆ, ಮತ್ತೊಂದೆಡೆ ಅವಳು ಹುಚ್ಚುಹತ್ತಿ ಆಡುವ ಮಾತು, ತೋರುವ ಪ್ರತಿಕ್ರಿಯೆಗಳೆಲ್ಲ ಸಮಾಜದ ಕ್ರೌರ್ಯಕ್ಕೆ ಬರೆವ ಭಾಷ್ಯವಾಗುತ್ತದೆ. ಹೀಗೆ ಅಕ್ಕು ಕುಂಕುಮ, ಕರಿಮಣಿಗಳಿದ್ದೂ ಗಂಡನಿಲ್ಲದ, ಕೆಣಕಿದವರಿಗೆಲ್ಲ ಮುಟ್ಟಿನೋಡಿ ಕೊಳ್ಳುವಂತೆ ಉತ್ತರ ಕೊಡುವ, ವಿಲಕ್ಷಣ ವ್ಯಕ್ತಿ. ಈ ಸಮಾಜದಲ್ಲಿನ ಮಾನವ ಸಂಬಂಧಗಳ, ಲೈಂಗಿಕ ಸಂಬಂಧಗಳ ಗೋಜಲುಗಳ ಬಗ್ಗೆ, ಮೌಲ್ಯಗಳ ಬಗ್ಗೆ, ಸಮಾಜದ 'ಸ್ವಸ್ಥತೆ'ಯ ಬಗ್ಗೆ, ಅದರ ಕ್ರೌರ್ಯ, ಅಮಾನವೀಯತೆಗಳ ಬಗ್ಗೆ ಲೇಖಕಿಯ ವಿಮರ್ಶೆಯೂ ಆಗುವಂತೆ ಅವಳ ಪಾತ್ರದ ನಿರೂಪಣೆಯಿದೆ.

'ಚಂದಲೆ'ಯಲ್ಲಿ ಸಮಾಜದ ನೈತಿಕ ನಂಬಿಕೆಗಳಿಗೂ ವೇಶ್ಯಾತನದ ಬದುಕಿನ ಮೌಲ್ಯಗಳಿಗೂ ಮುಖಾಮುಖಿಯಾಗುವಂತೆ ಮಾಡಿರುವ ಲೇಖಕಿ, ಇಲ್ಲಿಯೂ ಶೋಧಿಸಲು ಯತ್ನಿಸುವುದು. ಲೈಂಗಿಕ ಸಂಬಂಧಗಳನ್ನು, ಮೌಲ್ಯಗಳನ್ನು ಇದೇ ರೀತಿ 'ಸುಶಿಕ್ಷಿತ', 'ಶಿಷ್ಟ' ಮಧ್ಯಮವರ್ಗದ ಲೈಂಗಿಕ ಕುತೂಹಲಗಳು, ಸಂಕೋಚ ಗಳು, ಬಯಕೆಗಳನ್ನು ಯುವತಿಯ ಮಾನಸಿಕ ಹೊಯ್ದಾಟಗಳನ್ನು ಮುಂದಿನ ಸಂಕಲನದ 'ಸೌಗಂಧಿಯ ಸ್ವಗತಗಳು' ಕಥೆ ಇನ್ನಷ್ಟು ಸೂಕ್ಷ್ಮವಾಗಿ ಶೋಧಿಸಲು ಯತ್ನಿಸುತ್ತದೆ.

ತಾಂತ್ರಿಕವಾಗಿ ಪ್ರಯೋಗಶೀಲತೆಯೇ ಎದ್ದು ಕಾಣುವ ಸಂಕಲನ 'ಗೋಲ'. ಇಲ್ಲಿ ಸರಳರೇಖೆಯ ಕಥನವಿಲ್ಲ. ಘಟನೆಗಳಿಗೆ ಕಾಲಾನು ಕ್ರಮಣಿಕೆಯೂ ಇಲ್ಲ. ನಿರ್ದಿಷ್ಟವಾದ ಭಾವಗಳು ಮಾತ್ರ ಕೇಂದ್ರವಾಗುತ್ತವೆ. 'ವೈಶಾಖದ ಒಂದು ರಾತ್ರಿ', 'ತರಂಗಗಳು', 'ಪ್ರಶ್ನೋತ್ತರಗಳ ಆಚೆ', 'ಗೋಲ', 'ಪಯಣ' ಮೂಂತಾದವು ಅಮೂರ್ತ ಭಾವತೀವ್ರತೆಯನ್ನು ಹಿಡಿದುಕೊಡುವ ಯತ್ನಮಾಡಿವೆ. 'ಪುಟ್ಟ ಹಕ್ಕಿ ಮತ್ತು ಆಕಾಶರಾಯ' ಕಥೆಯಲ್ಲೂ ಸರ್ವಾಂತರ್ಯಾಮಿಯಾದ ದಮನಕಾರಿ ಶಕ್ತಿ ಯೊಂದನ್ನು ವ್ಯಾಪಕವಾಗಿ ಬೆಳೆಸುವ ಬಗೆ ತುಂಬ ಕುತೂಹಲಕರ. ಈ ಕಲಿ ಪುರುಷನ ಪೂರ್ವೋತ್ತರಗಳು ಯಾರಿಗೂ ತಿಳಿಯದಿದ್ದರೂ ಎಲ್ಲರೂ ಅವನಿಗೆ ಹೆದರಿ ನಡುಗುವ ದುಗುಡ; ಭೀತಿಗ್ರಸ್ತ ಸ್ಥಿತಿಯೊಂದು ಇಲ್ಲಿ ಅನಾವರಣಗೊಳ್ಳುತ್ತದೆ. ಈ ಸಂಕಲನದ ಬಹುತೇಕ ಕಥೆಗಳು ವ್ಯಕ್ತಿಯ ಅನುಭವದ ಲಿಂಗ ಕೇಂದ್ರಿತ ವಲಯವನ್ನು ದಾಟಲು, ಅಥವಾ ಅದನ್ನು ಮಾನವೀಯ ನೆಲೆಗೆ ವಿಸ್ತರಿಸಲು ಹವಣಿಸುತ್ತವೆ. ಈ ಯತ್ನ ತುಂಬ ಖಚಿತವಾಗಿ ಕಾಣುವುದು 'ಶಕುಂತಲೆಯೊಂದಿಗೆ ಕಳೆದ ಅಪರಾಹ್ನ' ಕಥೆಯಲ್ಲಿ. ಇಲ್ಲಿನ ಶಕುಂತಲೆ ತನ್ನನ್ನು ಬಯಸಿದಾತನಿಗೆ ಅರ್ಪಿಸಿ ಕೊಂಡದ್ದನ್ನು ನಿರೂಪಿಸುವ, ದೂರ್ವಾಸ ಶಾಪದ ಕಥೆಯನ್ನು ಒಳಗಿನಿಂದ ನೋಡ ಬಲ್ಲ ತುಂಬ ಪ್ರಬುದ್ಧ ಹೆಣ್ಣಾಗಿದ್ದಾಳೆ. ಸಿಟ್ಟು, ಆಕ್ರೋಶ, ಸಿನಿಕತೆ, ಹತಾಶೆಗಳನ್ನು ಮೆಟ್ಟಿನಿಂತ, ಭಾವ-ವಿಚಾರಗಳ ಸಂತುಲಿತ ವ್ಯಕ್ತಿತ್ವ ಆಕೆಯದು.

'ಉಂಗುರ ತೋರಿಸಿ ಪ್ರೇಮದಾನ ಪಡೆಯುವಷ್ಟು' ತನ್ನನ್ನು ಸೊನ್ನೆ ಯೆಂದುಕೊಳ್ಳಲಾರದ ಈ ಸ್ವಾಭಿಮಾನಿ ಅದನ್ನು ಮುಚ್ಚಿಟ್ಟು, ಕಳೆದುಹೋಯಿ ತೆಂದು ನಟಿಸಿ, ಮರವೆಯ ನಟನೆ ಮಾಡುವ ಗಂಡನಿಗೆ ತಕ್ಕ ಆಟವನ್ನು ಹೂಡುತ್ತಾಳೆಂದು ವೈದೇಹಿ ಶಕುಂತಲೆಯನ್ನು ಅರ್ಥೈಸಿರುವುದು ಮಾಸ್ತಿಯಂಥ ವರ ಅರ್ಥೈಸುವಿಕೆಗಿಂತ ಭಿನ್ನವಾಗಿರುವುದು ಗಮನಾರ್ಹ. ಮಹಾಕವಿಯ ಕಾಣ್ಕೆ, ಮಾಸ್ತಿಗೆ ಪ್ರಶ್ನಾರ್ಹವಾಗಿ ಕಾಣಿಸದು. ಅದರೊಳಗೇ ಮಾನವೀಯ ವಾಸ್ತವದ ಸಾಧ್ಯತೆಯೊಂದನ್ನು ಅವರ ಮೃದು ಮನಸ್ಸು ಕಾಣಿಸಲು ಯತ್ನಿಸುತ್ತದೆ. 'ಹೇಮ ಕೂಟದಿಂದ ಬಂದ ಮೇಲೆ', 'ಗೌತಮಿ ಹೇಳಿದ ಕಥೆ'ಗಳು ಪ್ರಕೃತಿ-ಸಂಸ್ಕೃತಿಗಳ ಸಂಘರ್ಷದ ಕಥೆ ಹೇಳುತ್ತವೆ. ಆದರೆ ವೈದೇಹಿಯವರು ಶಕುಂತಲೆಯ ಪ್ರತೀಕವನ್ನೂ ಪ್ರಶ್ನೆಗೀಡುಮಾಡುತ್ತಾರೆ, ಕಾವ್ಯಸತ್ಯ, ಜೀವನ ಸತ್ಯಗಳನ್ನು ಮುಖಾಮುಖಿಯಾಗಿಸಿ, ಬದುಕನ್ನು ನೋಡುವ ಕ್ರಮ ಹೇಗಿರಬೇಕೆಂಬುದನ್ನೇ ಗಂಭೀರವಾಗಿ ಪ್ರಶ್ನೆ ಗೊಡ್ಡುತ್ತಾರೆ.

'ಈಕೆ ಯಾರು? ಪ್ರೇಮಿಯೇ? ವಿರಹಿಣಿಯೆ? ತಪಸ್ವಿನಿಯೆ? ಅಥವಾ ಈ ಎಲ್ಲದರ ಪರಿಪಾಕವೆ? ಅಥವಾ ಎಲ್ಲವೂ ಆಗಿ ಎಲ್ಲವನ್ನೂ ಕಳೆದು ಚೊಕ್ಕದಾದ ತಾಜಾ ಪ್ರಕೃತಿಯೇ?' ಎಂದು ಆರಂಭದಲ್ಲಿ ಏಳುವ ಪ್ರಶ್ನೆ ಶಕುಂತಲೆಯ ಪ್ರತೀಕದ ಒಳಗನ್ನು ಕುರಿತದ್ದು. 'ಕವಿ ಶಾಪಗೀಪ ಇತ್ಯಾದಿಗಳನ್ನೆಲ್ಲ ಅಡ್ಡ ಇಟ್ಟು ಪುರುಷರ ಲಂಪಟತ್ವ ಮುಚ್ಚಿಡಲು ಹವಣಿಸಿದ. ಎಲ್ಲ ಜಾಣಮರೆವಿನ ಮಲ್ಲರನ್ನೂ ತನ್ನ ತೆಕ್ಕೆಯೊಳಗೆ ಸಂರಕ್ಷಿಸಿಡುವ, ಪುರುಷ ಕಟ್ಟಿದ ವಿಸ್ಮರಣೆಯ ಕಥೆ ರುಚಿಸಲೇಬೇಕು. ಕಾವ್ಯ ಮೀಯುವುದೇ ತನಗೆ ಬೇಕಾದ ಸುಖೋಷ್ಣ ಕಲ್ಪನೆಯಲ್ಲಿ.' ಎಂಬ ಈ ಶಕುಂತಲೆಯು ಬದುಕಿನ ಸತ್ಯದ ಕಹಿಯನ್ನು ಕುಡಿದು ಅರಗಿಸಿಕೊಂಡವಳು. ಹಾಗಾಗಿ ಕಹಿ, ಹಠ, ಛಲ, ಸಾಧನೆಗಳನ್ನು ಮೀರಿದ ನಿಷ್ಠುರ ವಿಮರ್ಶೆಗೆ ತನ್ನ ಬದುಕನ್ನೇ ಒಡ್ಡಿಕೊಂಡವಳು.

ಮದುವೆ, ಕುಟುಂಬ, ದಾಂಪತ್ಯ ಮತ್ತು ಲೈಂಗಿಕ ಸಂತೃಪ್ತಿಯ ಸಮಸ್ಯೆ ಗಳು ಮತ್ತೆ ಮತ್ತೆ ವೈದೇಹಿಗೆ ವಸ್ತುಗಳಾಗಿವೆ. ಆದರೆ ಪ್ರತಿ ಬಾರಿಯೂ, ಹಿಂದಿನ ಕಥೆಗಿಂತ ಹೆಚ್ಚಿನದಕ್ಕೆ ತೆರೆದುಕೊಳ್ಳಲು, ಹಿಂದಿನದಕ್ಕಿಂತ ಹೊಸ ಅನುಭವವೊಂದನ್ನು ಕಟ್ಟಿಕೊಳ್ಳಲು ಅವರ ಕಥೆಗಳು ಯತ್ನಿಸುತ್ತವೆ. ಈ ವಿಕಸನ ಶೀಲಗುಣ ಹೆಚ್ಚು ಪಕ್ವವಾಗಿ ತೋರುವುದು "ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ" ಸಂಕಲನದಲ್ಲಿ 'ಸೌಗಂಧಿಯ ಸ್ವಗತಗಳು', 'ಆರತಿ ತಟ್ಟೆ', 'ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ', 'ಹಕ್ಕಿಲ್ಲದವರು', 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು', 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಮುಂತಾದ ಕಥೆಗಳೂ ದಾಂಪತ್ಯದ ಸಾಫಲ್ಯ, ಸ್ವಾತಂತ್ರ್ಯ ಭದ್ರತೆ, ರಕ್ಷಣೆಗಳಂಥ ತಾತ್ವಿಕ ಪ್ರಶ್ನೆ ಗಳನ್ನೂ, ಗಂಡು ಹೆಣ್ಣಿನ ಸಂಬಂಧಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸುವ ಆಸಕ್ತಿಗಿಂತ ಹೆಚ್ಚು ವಿಶಾಲವಾದ ತಾತ್ವಿಕ ಆಯಾಮದತ್ತ ವೈದೇಹಿಯವರ ಬೆಳವಣಿಗೆಯನ್ನು ದಾಖಲಿಸುತ್ತವೆ.

ನಶಿಸಿಹೋಗುತ್ತಿರುವ ಬದುಕಿನ ಕ್ರಮವೊಂದರ ನಂಬಿಕೆಗಳು, ನಡಾವಳಿ ಗಳು, ಹೆಮ್ಮೆಗಳು, ಹಮ್ಮುಗಳು, ಒಳಗೊಳಗೇ ಹುಟ್ಟಿಕೊಂಡ ಡೊಗರುಗಳನ್ನು ದಟ್ಟವಾದ ವಿವರಗಳಲ್ಲಿ ಹಿಡಿದಿಡುತ್ತಲೇ ಹೊಸಕಾಲದ ವಿಚಾರ, ಆಸೆ, ಆಸಕ್ತಿಗಳ ನಿಟ್ಟಿನಿಂದ ಅವುಗಳನ್ನು ಪರೀಕ್ಷಿಸುವ ವಿಶಿಷ್ಟ ಯತ್ನ ಈ ಸಂಕಲನದ ಕಥೆಗಳಲ್ಲಿ ಪ್ರಮುಖವಾಗಿದೆ.

'ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ' ಕಥೆ ಮದುವೆಯೊಂದರ ಸಡಗರ, ಸಂಭ್ರಮದ ಚಿತ್ರದೊಳಗಿನಿಂದ ಹಲವು ಪೀಳಿಗೆಗಳ, ಹಲವು ಮನೋ ಧರ್ಮಗಳ ಹೆಣ್ಣುಮಕ್ಕಳ ಒಳಲೋಕವನ್ನು ಅನಾವರಣ ಮಾಡುತ್ತದೆ. ಜರಿ ಸೀರೆಗಳನ್ನು, ಆಭರಣಗಳನ್ನು ಉಡುವ ತೊಡುವ ಸಡಗರ, ದೊಡ್ಡಗಂಟಲಿನಲ್ಲಿ ಯೋಗಕ್ಷೇಮ ವಿಚಾರಿಸುವ ಅಜ್ಜಿಯರ ಸಾಂಪ್ರದಾಯಿಕ ಮಾತುಕತೆ, ಹೊಸ ಪೀಳಿಗೆಯವರ ವೇಷ ವರ್ತನೆಗಳಿಗೆ ಮೂಗುಮುರಿವ ಹಳಬರು, ಒಂದು ಮದುವೆಯ ಸಂದರ್ಭದಲ್ಲೇ ಎಷ್ಟೋ ಹೊಸ ಮದುವೆಗಳ ಒಪ್ಪಂದಗಳಾಗುವುದು, ಅಪ್ಪ-ಅಮ್ಮಂದಿರು ಹೆಣ್ಣುಮಕ್ಕಳ ಮದುವೆಗೆ ತವಕಿಸಿದರೂ, ಅವರ ಒಪ್ಪಿಗೆ ಕೇಳುವ ಪುರುಸೊತ್ತು ಮತ್ತು ಅವಶ್ಯಕತೆಗಳು ಇಲ್ಲವಾಗಿರುವುದು, ಹೇಳಿದ್ದನ್ನು ವಿಧೇಯವಾಗಿ ಒಪ್ಪುವ ಹೆಣ್ಣುಗಳನ್ನು ಮಾತ್ರ ಮೆಚ್ಚುವ ಹಿರಿಯರು, ಹೊಸ ವಿಚಾರಗಳಿದ್ದರೂ ಗಟ್ಟಿ

ಯಾಗಿ ಹೇಳಲಾರದೆ ತಳಮಳಿ ಸುವ ಯುವತಿಯರು, ಮುಂತಾಗಿ ಒಂದು ವಿಶಾಲ ಸಮಾಜವನ್ನೇ ಈ ಕಥೆ ತೆರೆದಿಡುತ್ತದೆ.

ಪೀಳಿಗೆಗಳ ಅಂತರದಿಂದ ಹುಟ್ಟುವ ಸಂಘರ್ಷದ ಇನ್ನೊಂದು ಮುಖವನ್ನು 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಕಥೆ ವ್ಯಕ್ತಿಗಳ ಬದುಕಿನ ಸಂದರ್ಭದಲ್ಲಿ ಚಿತ್ರಿಸುತ್ತದೆ. ಆದರೆ ಇಡೀ ಒಂದು ಸಮುದಾಯವೇ ನಾಗರಿಕತೆಯತ್ತ ಬದಲಾಗುವ ಪ್ರಕ್ರಿಯೆಯನ್ನು ಹಿಡಿದಿಡುವ ಮನೋಜ್ಞ ಯತ್ನ 'ಗುಲಾಬಿ ಟಾಕೀಸು....' ಕಥೆಯಾಗಿದೆ. ಗ್ರಾಮೀಣ ಸಮಾಜಗಳ ಆಧುನಿಕತೆಯ ಪ್ರಕ್ರಿಯೆ, ಹಲವಾರು ಕಥೆಗಾರರಿಗೆ ವಸ್ತುವಾಗಿದೆ. ವೈದೇಹಿ ಲಿಲ್ಲೀಬಾಯಿ ಎಂಬ ಸೂಲಗಿತ್ತಿ, ಗುಲಾಬಿ ಟಾಕೀಸಿನಲ್ಲಿ ಟಿಕೇಟು ಹರಿಯುವ ಗೇಟ್‌ಕೀಪರ್ ಆಗಿ, ಆ ಊರಿನ ಹೆಂಗಸರ ದೈನಂದಿನ ಜೀವನದಲ್ಲಿ ಮಾತ್ರವಲ್ಲ, ಇಡೀ ಸಮಾಜದ ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ನಿಮಿತ್ತವಾದ ಬಗೆಯನ್ನು ತುಂಬ ಮಾರ್ಮಿಕವಾಗಿ ಅನಾವರಣಗೊಳಿಸುವ ರೀತಿ ಅನನ್ಯ ವಾದದ್ದು.

ಲಿಂಗಭೇದದ ಸಾಮಾಜಿಕ ಅಸಮಾನತೆಯ ಅಸಂಖ್ಯ ರೂಪಗಳನ್ನು ವೈದೇಹಿಯವರು ತಮ್ಮ ಕತೆಗಳಲ್ಲಿ ಸೂಕ್ಷ್ಮವಾಗಿ, ಯಾರ ಪಕ್ಷವನ್ನೂ ವಹಿಸದೆ ಅಥವಾ ರೂಕ್ಷ ವಿರೋಧಿತನದಲ್ಲಿ ತಂಗದೆ ಪರಿಶೀಲಿಸುತ್ತಾರೆ. ಈ ರೀತಿ ಪರಿಶೀಲಿಸುವ ಹೊತ್ತಿನಲ್ಲಿ ಅವರ ಕತೆಗಳೊಳಗಿನ ಸನ್ನಿವೇಶಗಳು, ಪಾತ್ರಗಳು ಇಲ್ಲವೆ ನಿರೂಪಣೆಯ ವಿಧಾನಗಳ ಮೂಲಕವೇ, ಅನ್ಯಾಯಕರ ವ್ಯವಸ್ಥೆಯ ವಿರುದ್ಧವಾದ ಪ್ರತಿಭಟನೆ ಧ್ವನಿಯೊಂದನ್ನು ನಾವು ಆಲಿಸಲು ಸಾಧ್ಯವಾಗುತ್ತದೆ. ಉದಾಹರಣೆಗೆ ಮನೆಗೆಲಸ ಹೆಣ್ಣಿನದೇ ಹೊರೆಯಾಗಿರುವ ಬಗೆ, ಹೊಸಿಲುದಾಟದ, ಗಂಡುಬೀರಿಯಾಗದ ಹಾಗೆ ಆಕೆಯನ್ನು ನಿರ್ಬಂಧಿಸಿರುವ ಸಾಮಾಜಿಕ ರೀತಿ ನೀತಿಗಳೇ ಮತ್ತೊಂದು ದಿಕ್ಕಿನಿಂದ ಗಂಡು ಮನೆ ಗೆಲಸ ಮಾಡಿ ಹೆಣ್ಣಿಗನಾಗ ಬಾರದೆಂದೂ ವಿಧಿಸುವುದರ ವೈರುಧ್ಯವನ್ನು ವೈದೇಹಿ ಕತೆಗಳು ಪ್ರಶ್ನಿಸುತ್ತವೆ. ಬದುಕನ್ನು ಅದರ ಎಲ್ಲ ಹಿಗ್ಗು ಸಂಕಟ ಗಳೊಂದಿಗೇ ಸ್ವೀಕರಿಸಿ, ಬದುಕುವ ಕ್ರಿಯೆಯೇ ಮುಖ್ಯವೆಂದು ನಂಬುವ ಈ ಜೀವನದರ್ಶನದಲ್ಲಿ, ಇಂಥ ಬದುಕಿನೊಳಗಿನ ಅನ್ಯಾಯದ ನೆಲೆಗಳನ್ನು ಮುಟ್ಟಿ, ಚಿಕಿತ್ಸಕ ಮುಲಾಮು ಸವರಿ ಆರೋಗ್ಯ ಕಾಯುವ ಹಳ್ಳಿಹೆಣ್ಣಿನ ಮನೆಯೌಷಧಿಯ ಕಲೆಗಾರಿಕೆಯನ್ನು ವೈದೇಹಿ ಅನುಸರಿಸುತ್ತಾರೆ.

ವ್ರಣಗಳನ್ನೇ ಬೆದಕಿ, ಉಲ್ಬಣಗೊಳಿಸಿ, ಶಸ್ತ್ರಚಿಕಿತ್ಸೆಯನ್ನು ಅರಸುವ ಧಾಟಿ, ದಾರಿ ಅವರದಲ್ಲ. ಯಾವುದೇ ಮೀಸಲಾತಿ, ರಿಯಾಯತಿಗಳಿಗಾಗಿ ಹಪಹಪಿಸದೆ, ಸಮಾನ ಶ್ರದ್ಧೆ, ಗೌರವಗಳ ನೆಲೆಯೊಂದು ಏರ್ಪಡಲೆಂದೂ, ಹಾಗೆ ಏರ್ಪಟ್ಟಾಗ ಅಸಮಾನತೆ, ಅನ್ಯಾಯಗಳು ನಿಧಾನವಾಗಿ ಕೊನೆಗೊಳ್ಳ ಬಹುದೆಂದೂ ಅವರು ಆಶಿಸುವಂತೆ ತೋರುತ್ತದೆ.

ಈ ಬಗೆಯ ಸುಧಾರಿತ ಬದುಕಿನ ಹಂಬಲವೇ ಒಂದೆಡೆ 'ಅಸ್ಪೃಶ್ಯರು' ಕಾದಂಬರಿಯಾಗಿಯೂ, ಮತ್ತೊಂದೆಡೆ 'ಬಿಂದು-ಬಿಂದಿಗೆ' ಸಂಕಲನದ ಕವನ ಗಳಾಗಿಯೂ ಪ್ರಕಟವಾಗಲು ಹವಣಿಸುರುವುದು ಕುತೂಹಲಕರ. ಶ್ರೇಣೀಕೃತ ಸಮಾಜದೊಳಗಿನ ನೂರಾರು ಬಗೆಯ ಅಸ್ಪೃಶ್ಯತೆಯ ನೆಲೆಗಳನ್ನು, ಮುಖ್ಯವಾಗಿ ಲಿಂಗಭೇದದ ಫಲವಾದ ಹೆಣ್ಣು-ಗಂಡುಗಳ ಅಸ್ಪೃಶ್ಯತೆಯ ಮೂಲಕ ಶೋಧಿಸುವ ಮಹತ್ವಾಕಾಂಕ್ಷೆ ವೈದೇಹಿಯವರ ಕಾದಂಬರಿಯಲ್ಲಿದೆ. ಬಹಿರಂಗವಾಗಿ ಗಾಂಧಿವಾದದ ಅಸ್ಪೃಶ್ಯತಾ ನಿವಾರಣಾ ಚಳವಳಿಯಲ್ಲಿ ಪಾಲ್ಗೊಂಡವರು, ತಮ್ಮದೇ ಮನೆಗಳೊಳಗಿನ ಸ್ಪೃಶ್ಯ-ಅಸ್ಪೃಶ್ಯ ವಲಯಗಳನ್ನು ಸಂಪ್ರದಾಯವಾಗಿ ಕಾಪಾಡಿಕೊಂಡಿರುವುದು ಒಂದು ಮುಖ, ಬಹಿರಂಗವಾಗಿ ಜಾತಿ ವಿನಾಶದ ಸಮಾಜ ಸುಧಾರಣೆ ವಿಚಾರಕ್ಕೆ ಪ್ರಚಾರ ಕೊಡುವವರು, ತಾವೇ ಕೈ ಹಿಡಿದವರ ಕೆಳ ಸಾಂಸ್ಕೃತಿಕ ಲಕ್ಷಣಗಳಿಗೆ ಒಗ್ಗಿಕೊಳ್ಳಲಾರದೆ ತೊಳಲಾಡುವುದು ಇನ್ನೊಂದು ಮುಖ. ಮುಟ್ಟು, ಹೆರಿಗೆ, ಸಾವಿನ ಸೂತಕಗಳ ಸಾಮಾಜಿಕ ಆಚರಣೆಗಳು ಕಟ್ಟಿ ಬೆಳೆಸುವ ಅಸ್ಪೃಶ್ಯತೆಯು ಒಂದು ನೆಲೆಯ ದಾದರೆ, ಹೆಣ್ಣಿನ ಮನೆಯಂಗಳಕ್ಕೇ ಸೀಮಿತವಾದ ಲೋಕಕ್ಕೂ, ಹೊರ ಬದುಕಿಗೆ ಒಡ್ಡಿದ ಗಂಡಿನ ಪ್ರಪಂಚಕ್ಕೂ ಇರುವ ಪ್ರಬಲವಾದ ಅಸ್ಪೃಶ್ಯತೆಯ ಕೋಟೆ ಇನ್ನೊಂದು ನೆಲೆಯದು. ಈ ಅಸ್ಪೃಶ್ಯತೆಯ ಕೋಟೆಗೆ ಲಗ್ಗೆಯಿಡುವ, ಅದನ್ನು ಒಡೆಯುವ ವಿಚಾರ, ಕ್ರಿಯೆಗಳನ್ನು ಹೊಸ ಪೀಳಿಗೆಯ ತರುಣಿ, ತರುಣರಲ್ಲೂ, ಅಂತಃಕರಣ ಪರಿವರ್ತನೆಯನ್ನು ಹಳೆಯ ಪೀಳಿಗೆಯವರಿಂದಲೂ ನಿರೀಕ್ಷಿಸುತ್ತದೆ ಈ ಕಾದಂಬರಿ.

'ಬಿಂದು ಬಿಂದಿಗೆ'ಯು ಹೆಣ್ಣು ಮಕ್ಕಳ ಸಾಂಪ್ರದಾಯಿಕ ಹಾಡಿನ ಗುಣ, ಕಲಾತ್ಮಕತೆಗಳೆರಡನ್ನೂ ಬೆಸೆಯುತ್ತ ಹೊಸ ವಿಚಾರಗಳನ್ನು ಹೇಳಲು ಯತ್ನಿಸುವ ಕವಿತೆಗಳ ಸಂಕಲನವಾಗಿದೆ. ಪ್ರಚಲಿತವಿರುವ ಲಿಂಗ ಅಸಮಾನ ತೆಯ ಫಲವಾದ ಸ್ತ್ರೀ ಮೌಲ್ಯಗಳನ್ನು ಪ್ರಶ್ನಿಸುತ್ತ, ಸೂಕ್ಷ್ಮವಾಗಿ ವಿಶ್ಲೇಷಿಸಿ ತಿದ್ದುವತ್ತ ಒಲಿಯುವ ವೈದೇಹಿಯವರ ಕವಿತೆಗಳೂ ಮುಖ್ಯವಾಗಿ ಹೆಣ್ಣು-ಗಂಡಿನ ನಡುವಿನ ಮಾನವೀಯವಾದ, ಸಮಾನಗೌರವ ಪ್ರೀತಿಗಳಿರುವ ಆರೋಗ್ಯಕರ ಸಂಬಂಧವೊಂದಕ್ಕಾಗಿ ಹಾತೊರೆಯುತ್ತವೆನ್ನಬಹುದು. ಕುಟುಂಬಕ್ಕೆ ಅಂಟಿಕೊಂಡೇ, ಅಲ್ಲಿಂದ ಸಮಸ್ತ ಅನುಭವಕ್ಕೂ ತೆತ್ತುಕೊಂಡೇ, ತಾನು ಕನಸಿಸುವ, ಸದಾ ತನಗೇ ನಿಷ್ಠನಾಗಿ ಉಳಿಯಬಲ್ಲಂಥ ಸಂಗಾತಿಯೊಬ್ಬನ ಹಂಬಲ ಇಂದಿನ ಮಹಿಳಾಕಾವ್ಯ ದಲ್ಲಿ ಒಂದು ಮುಖ್ಯ ಲಕ್ಷಣ ವಾಗಿ ಕಾಣಿಸಿಕೊಳ್ಳುತ್ತದೆ. ವೈದೇಹಿ ಅವರ 'ಶಿವನ ಮೀಸುವ ಹಾಡು' ಇಂಥ ಆದರ್ಶ ಸಂಗಾತಿತನ ಅಲಭ್ಯವಾಗಿರುವ, ಬಹುಮುಖಿ ಯಾದ ಗಂಡಿನ ಪ್ರೇಮಪ್ರಸಂಗವನ್ನು ಸುಮ್ಮನೆ ಒಪ್ಪಲೇಬೇಕಾದ ಗೌರಮ್ಮನ 'ಆರ್ದ್ರ ಗರ್ವ'ದ ಭಾವ ಸಂಕಥನವಾಗುತ್ತದೆ.

ಲಂಕೇಶ್ ಪತ್ರಿಕೆಯ ಅಂಕಣಗಾರರಾಗಿಯೂ, ಬೇರೆ ಸಂದರ್ಭಗಳನ್ನೂ ವೈದೇಹಿ ಬರೆದಂಥ ಚಿಂತನೆ, ಲಲಿತ ಪ್ರಬಂಧ, ವಿಮರ್ಶೆ, ವಿಚಾರ ಲಹರಿಗಳೆಲ್ಲ ಒಗ್ಗೂಡಿ 'ಮಲ್ಲಿನಾಥನ ಧ್ಯಾನ'ವಾಗಿದೆ. ಮಲ್ಲಿನಾಥ ಜೈನ ತೀರ್ಥಂಕರರಲ್ಲಿ ಒಬ್ಬ. ಸ್ತ್ರೀಯಾಗಿದ್ದೂ ತೀರ್ಥಂಕರತ್ವಕ್ಕೆ ಏರಿದ ಮಹಾ ವ್ಯಕ್ತಿಯೆಂದು ಶ್ವೇತಾಂಬರ ಪಂಥದವರು ಪ್ರತಿಪಾದಿಸುವ ಮಹಾಪುರುಷ. ದಿಗಂಬರರು ಸ್ತ್ರೀ ಜನ್ಮಕ್ಕೆ ಮೋಕ್ಷವನ್ನು ಹೇಳುವುದಿಲ್ಲವಾಗಿ, ಈ ಬಗ್ಗೆ ಭಿನ್ನ ಕಥಾ ಸಂಪ್ರದಾಯವನ್ನು ಅವರು ಪ್ರತಿಪಾದಿಸುತ್ತಾರೆ. ಒಂದರ್ಥದಲ್ಲಿ ಹೇಳುವುದಾದರೆ ಸ್ತ್ರೀತ್ವ-ಪುರುಷತ್ವ ಗಳ ಈ ಲೋಕದ ರೂಢಿಗತ ಭಿನ್ನತೆಯ ಅತಿರೇಕಗಳನ್ನು ಮೀರಬಲ್ಲಂಥ ನೆಲೆಯೊಂದರ ಧ್ಯಾನವೇ, ವೈದೇಹಿಯವರ ಒಟ್ಟು ಬರಹಗಳನ್ನು ಆವರಿಸುತ್ತದೆ ಎಂದು ಹೇಳಿದರೆ ಉತ್ಪ್ರೇಕ್ಷೆಯಲ್ಲ.

'ಮರೆವು' ಎಂಬ ಕಥೆಯಲ್ಲಿ ದೀರ್ಘಕಾಲ ಸಾಂಸಾರಿಕ ಬದುಕನ್ನು ನಡೆಸಿ, ಬದುಕಿನ ಅನುಭವಗಳ ಮೂಲಕವೇ ಮಾಗಿ ಪಕ್ವವಾದ ಇಬ್ಬರು ವ್ಯಕ್ತಿಗಳು ತಮ್ಮ ಬದುಕಿನ ಮುಸ್ಸಂಜೆಯಲ್ಲಿ ಕುಳಿತು ಧ್ಯಾನಿಸುತ್ತಾರೆ: "ಒಟ್ಟಿಗೇ ಬದುಕಿ ಬದುಕಿ ಕಡೆಗೆ ಹೆಣ್ಣು ಗಂಡು ಎಂಬ ಮಾಯೆಯೇ ಪರಸ್ಪರರಲ್ಲಿ ಮಾಯವಾಗಿ ಕೇವಲ ಜೀವಿ ಗಳಾಗಿಬಿಡುತ್ತೇವೆಯೇ?" ಬದುಕನ್ನು ಬದುಕುತ್ತಲೇ ಸಾಗುವ ಈ ಪ್ರಕ್ರಿಯೆಯನ್ನು 'ಪಕ್ವತೆಯತ್ತಲೇ ನಡೆಯಬೇಕಾದ /ನಡೆಯಬಹುದಾದ ಒಂದು ವಿಕಾಸದ ಕ್ರಮವೆಂದು ಭಾವಿಸಿ, ನಂಬಿ ಬದುಕಿದ ನಮ್ಮ ಪುರಾತನರ ಶ್ರದ್ಧೆಯೊಂದನ್ನು ಹೊಸ ಕಾಲದಲ್ಲಿ ಕುಂದಾಪುರದ ಜನಗಳ ಆಡುಮಾತಿನಲ್ಲಿ ಮತ್ತೆ ಕಟ್ಟಿಕೊಡುತ್ತಾರೆ ನಮ್ಮ ವೈದೇಹಿ ಎಂದು ಭಾಸವಾಗುವಂತೆ ಅವರ ಬರಹಲೋಕವಿದೆ.

❑

# ದೇವನೂರ ಮಹಾದೇವ

ಕೆ. ಸತ್ಯನಾರಾಯಣ

ಕನ್ನಡ ಕಥಾಸಾಹಿತ್ಯಕ್ಕೆ ಹೊಸ ದಿಕ್ಕು-ದೆಸೆಗಳನ್ನು ತೋರಿಸಿದ ದೇವನೂರ ಮಹಾದೇವ ನವ್ಯೋತ್ತರ ಸಾಹಿತ್ಯ ಸಂದರ್ಭದ ಅಗ್ರಗಣ್ಯ ಲೇಖಕರಲ್ಲೊಬ್ಬರು. ನವ್ಯ ಸಾಹಿತ್ಯ ಚಳುವಳಿಯ ಪ್ರೇರಣೆಗಳು, ಅದರ ಅಭಿವ್ಯಕ್ತಿ ಕ್ರಮಗಳ ಬಳಕೆ ದಟ್ಟವಾಗಿದ್ದ ಸಂದರ್ಭದಲ್ಲೆ ಅವರ ಮೊದಲ ಕತೆಗಳು ಪ್ರಕಟವಾದದ್ದು ನಿಜವಾದರೂ, ಒಟ್ಟಾರೆ ಅವರ ಬರವಣಿಗೆ ನವ್ಯೋತ್ತರರ ಕಾಲಮಾನದ ಸಾಂಸ್ಕೃತಿಕ-ಸಾಹಿತ್ಯಕ ಅಭೀಪ್ಸೆಗಳನ್ನು ಸಮರ್ಥವಾಗಿ ಪ್ರತಿನಿಧಿಸುತ್ತದೆ ಎಂಬುದು ಮುಖ್ಯ. ಅವರ ಕಥಾ ಸಾಹಿತ್ಯವು ಕನ್ನಡ ಕಥಾಲೋಕದ ಸಂದರ್ಭದಲ್ಲಿ ಎರಡು ದೃಷ್ಟಿಯಿಂದ ಮುಖ್ಯವಾದುದಾಗಿದೆ. ಅವರು ಕಂಡರಸಿ ಶೋಧಿಸಿ ಮಂಡಿಸಿದ ದಲಿತ ಲೋಕದ ಅನುಭವಕ್ಕಿರುವಷ್ಟೇ ಪ್ರಾಮುಖ್ಯತೆ ಒಂದು ಕಡೆಯಾದರೆ, ಮಹಾದೇವರು ಹುಡುಕಿದ, ಹೊಸ ಅಭಿವ್ಯಕ್ತಿ ಕ್ರಮಗಳ ಪ್ರಸ್ತುತತೆಯು ಕೂಡ ಅಷ್ಟೇ ಮುಖ್ಯವಾದುದು. ಹೊಸ ಅನುಭವಗಳ ಮಂಡನೆಯಲ್ಲಷ್ಟೇ ತೃಪ್ತವಾಗುವ ಒಂದು ಗುಂಪಿನ ಲೇಖಕರು, ದಟ್ಟ ಅನುಭವದ ಹಿನ್ನೆಲೆಯಿಲ್ಲದೆ ಕೇವಲ ಕುತೂಹಲಕ್ಕಾಗಿ ಪ್ರಯೋಗಶೀಲರಾಗುವ ಇನ್ನೊಂದು ಗುಂಪಿನ ಲೇಖಕರ ನಡುವೆ, ಮಹಾದೇವರ ಬರವಣಿಗೆ ಒಂದು ಅಪರೂಪದ ಅಪವಾದ.

ದೇವನೂರ ಮಹಾದೇವರು ಇದುವರೆಗೆ ಮೂರು ಕೃತಿಗಳನ್ನು ಪ್ರಕಟಿಸಿದ್ದಾರೆ. 'ದ್ಯಾವನೂರು' ಎಂಬ ಏಳು ಕತೆಗಳ ಸಂಗ್ರಹ. 'ಒಡಲಾಳ' ಎಂಬ ದೀರ್ಘ ಕಥನ ಮತ್ತು 'ಕುಸುಮಬಾಲೆ'ಯೆಂಬ ಪ್ರಯೋಗಶೀಲ ಕಾದಂಬರಿ. ಈ ಮೂರು ಕೃತಿಗಳನ್ನು ಬರವಣಿಗೆಯ ಉದ್ದೇಶ, ಸಾರ್ಥಕತೆಯನ್ನು ಮಾನದಂಡವಾಗಿಟ್ಟುಕೊಂಡು ಪರಿಶೀಲಿಸಿದಾಗ, ನಾವು ಲೇಖಕರಲ್ಲುಂಟಾದ ಸ್ಥಿತ್ಯಂತರ ಮತ್ತು ಅದರ ಪ್ರೇರಣೆಗಳನ್ನು ಅರಿಯುವುದರ ಜೊತೆಗೆ ನಮ್ಮ ಕಥಾ ಸಂದರ್ಭದ ಬಗ್ಗೆಯು ತಿಳಿಯಬಹುದಾಗಿದೆ. ಈ ಮೂರು ಕೃತಿಗಳಲ್ಲದೆ ದೇವನೂರು ಬರವಣಿಗೆಯ ತಮ್ಮ ಮೊದಲ ದಿನಗಳಲ್ಲಿ ಬರೆದಿದ್ದ ಕವನಗಳು, ಆಗಾಗ್ಗೆ ಬರೆದ ಸಾಂಸ್ಕೃತಿಕ ಲೇಖನಗಳೂ ಇವೆ. ಆದರೆ ಇದ್ಯಾವ ಕೃತಿರೂಪದಲ್ಲಿ ಸಂಗ್ರಹಗೊಳ್ಳದೆ ಇರುವುದರಿಂದ ಓದುಗರಿಗೆ ಅಲಭ್ಯವಾಗಿವೆ. ಸದ್ಯಕ್ಕೆ ಇವರ ಸಮಗ್ರ ಕಥಾ ಸಾಹಿತ್ಯವು ಮಾತ್ರ ಸಂಕಲನ ರೂಪದಲ್ಲಿ ಓದುಗರಿಗೆ ದೊರಕುತ್ತಿದೆ. (ದೇವನೂರ ಮಹಾದೇವ ಅವರ ಕೃತಿಗಳು, ಪತ್ರಿಕೆ ಪ್ರಕಾಶನ, 1992, ಬೆಂಗಳೂರು).

10.6.1948ರಂದು ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ದೇವನೂರು ಗ್ರಾಮದಲ್ಲಿ ಜನಿಸಿದ ಮಹಾದೇವರು, ತಮ್ಮ ಶಿಕ್ಷಣ-ವಿದ್ಯಾಭ್ಯಾಸವನ್ನು ದೇವನೂರು, ನಂಜನಗೂಡು, ಮೈಸೂರುಗಳಲ್ಲಿ ಪಡೆದು, 1973ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಕನ್ನಡ ಎಂ.ಎ. ಪದವಿ ಪಡೆದರು. 1975-1989ರ ಅವಧಿಯಲ್ಲಿ ಮೈಸೂರಿನ ಸೆಂಟ್ರಲ್ ಇಂಡಿಯನ್ ಇನ್‌ಸ್ಟ್ಯೂಟ್ ಆಫ್ ಲಾಂಗ್ವೇಜ್‌ನಲ್ಲಿ ಉದ್ಯೋಗನಿರತರಾಗಿದ್ದ ಇವರು ನಂತರದ ವರ್ಷಗಳಲ್ಲಿ ಪೂರ್ಣಾವಧಿಯ ಕೃಷಿಕರಾಗಿದ್ದಾರೆ. 1967ರಲ್ಲಿ ಇವರ ಮೊದಲ ಕತೆ ಪ್ರಕಟವಾಯಿತು. ದ್ಯಾವನೂರು ಸಂಕಲನದ ಕತೆಗಳನ್ನು ಗಮನಿಸಿದರೆ ನವ್ಯಸಾಹಿತ್ಯ ಚಳುವಳಿಯ ಪರಿಚಯ-ಪ್ರೇರಣೆ ಒಂದು ಹಂತದಲ್ಲಿ ಇವರಿಗೆ ಗಾಢವಾಗಿತ್ತೆಂದು ತಿಳಿದು ಬರುತ್ತದೆ. ಇದರ ಜೊತೆಗೆ ಅರವತ್ತು-ಎಪ್ಪತ್ತರ ದಶಕಗಳಲ್ಲಿ ಕ್ರಿಯಾಶೀಲವಾಗಿದ್ದ ಲೋಹಿಯಾವಾದಿ ಸಮಾಜವಾದಿ ಪಕ್ಷ-ಸಮಾಜವಾದಿ ಯುವಜನ ಸಭಾದ ಚಿಂತನೆ ಚಟುವಟಿಕೆಗಳು, ಮೈಸೂರಿನಲ್ಲೇ ವಾಸವಾಗಿದ್ದ ಯು.ಆರ್. ಅನಂತಮೂರ್ತಿ, ಶ್ರೀಕೃಷ್ಣ ಆಲನಹಳ್ಳಿ ಇಂತಹ ಹಿರಿಯ ಲೇಖಕರೊಡನಿದ್ದ ಒಡನಾಟ, ಇವೆಲ್ಲವೂ ಮಹಾದೇವರಿಗೆ ಲೇಖಕ ವ್ಯಕ್ತಿತ್ವವನ್ನು ಹುಡುಕಿಕೊಳ್ಳಲು ನೆರವಾಗಿರ ಬಹುದು. ವಿದ್ಯಾರ್ಥಿ ದೆಸೆಯಲ್ಲಿಯೇ ಇವರು "ನರ" ಎಂಬ ಪ್ರತಿಭಟನಾ ಪತ್ರಿಕೆಯ ಸಂಪಾದಕ-ಪ್ರಕಾಶಕರಾಗಿದ್ದುದು, 1975ರಲ್ಲಿ ಲೋಕನಾಯಕ ಜಯಪ್ರಕಾಶ ನಾರಾಯಣರು ಮೈಸೂರಿಗೆ ಬಂದಿದ್ದಾಗ, ಸಾರ್ವಜನಿಕ ಸಭೆಯೊಂದರ ಅಧ್ಯಕ್ಷರಾಗಿದ್ದುದು ಆ ಕಾಲದ ಇವರ ಆಸಕ್ತಿಯ ಹರವುಗಳನ್ನು ಸೂಚಿಸುತ್ತದೆ. "ನಾನು ನಮ್ಮರಿಗೆ ಕಿರಿತಮ್ಮ, ಬಂಡಾಯದವರಿಗೆ ಹಿರಿಯಣ್ಣ" ಎಂದು ಮಹಾದೇವರೆ ತಮ್ಮನ್ನು ಗುರುತಿಸಿಕೊಂಡಿದ್ದಾರೆ. 1979ರಲ್ಲಿ ನಡೆದ ಬಂಡಾಯ ಸಾಹಿತ್ಯ ಸಂಘಟನೆಯ ಮೊದಲನೆಯ ಸಮ್ಮೇಳನದಲ್ಲಿ ಕೂಡ ಮಹಾದೇವರ ವ್ಯಕ್ತಿತ್ವ-ಚಿಂತನೆಯ ಪ್ರಭಾವವು ಇತ್ತು ಎಂಬುದನ್ನು ಕೂಡ ಇಲ್ಲಿ ದಾಖಲಿಸುವುದು ಅಗತ್ಯವಿದೆ. ನಂತರದ ವರ್ಷಗಳಲ್ಲಿ ಇವರು ಯಾವುದೇ ಸಂಘಟನೆ-ಚಳುವಳಿಯ ಜೊತೆ ಸಂಪೂರ್ಣವಾಗಿ ತಮ್ಮನ್ನು ಗುರುತಿಸಿಕೊಳ್ಳದೇ ಹೋಗಿದ್ದರು.

ದೇವನೂರರ ಸಾಹಿತ್ಯಕ ಸಾಧನೆಗಳನ್ನು ಗುರುತಿಸುವ ಸಂದರ್ಭದಲ್ಲಿ ದಲಿತ ಲೇಖಕರಾಗಿ ಅವರಿಗಿರುವ ಸಾಂಸ್ಕೃತಿಕ ಆಯಾಮವನ್ನು ನಾವು ಮರೆಯಬಾರದು. ಕರ್ನಾಟಕದಲ್ಲಿ ದಲಿತ ಸಂಘರ್ಷ ಸಮಿತಿಯ ಹುಟ್ಟು-ಬೆಳವಣಿಗೆಗೆ ಕಾರಣರಾದವರಲ್ಲಿ ಅವರೂ ಒಬ್ಬರು. ದಲಿತ ಚಳುವಳಿ-ಸಂಘಟನೆಗಳು, ದಲಿತರ ಬಗ್ಗೆ ತಮಗಿರುವ ತೀವ್ರತೆ-ಬದ್ಧತೆಯನ್ನು ಕಿಂಚಿತ್ತೂ ಕಡಿಮೆ ಮಾಡಿಕೊಳ್ಳದೆ ಒಟ್ಟು ಸಮಾಜದ ಆರೋಗ್ಯ ಪ್ರಗತಿಗಾಗಿಯು ಆಸೆಪಡಬೇಕು, ಹಾಗೆ ಆಸೆ ಪಡುವಂತಹ ಐತಿಹಾಸಿಕ ಸಂದರ್ಭ-ಸನ್ನಿವೇಶ ದಲಿತರದು ಎಂಬ ನಿಲುವಿನವರು ಮಹಾದೇವ.

ಇವರ ಸಾಹಿತ್ಯಕ ಸಾಧನೆಗಳನ್ನು ಕನ್ನಡ ಸಾಂಸ್ಕೃತಿಕ ಲೋಕ ಮನಸಾರೆ ಒಪ್ಪಿ ಗೌರವಿಸಿದೆ. 1984ರಲ್ಲಿ, ಕಲ್ಕತ್ತಾದ ಭಾರತೀಯ ಪರಿಷತ್ ಇವರ "ಒಡಲಾಳ"ವನ್ನು ಉತ್ತಮ ಸೃಜನಶೀಲ ಕೃತಿಯೆಂದು ಗೌರವಿಸಿದೆ. ಅದೇ ವರ್ಷ ಇವರಿಗೆ ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿಯೂ ಸಿಕ್ಕಿತು. 1989ರಲ್ಲಿ ಅಮೇರಿಕಾದಲ್ಲಿ ನಡೆದ "ಇಂಟರ್‌ನ್ಯಾಷನಲ್ ರೈಟಿಂಗ್ ಪ್ರೋಗ್ರಾಂ"ನಲ್ಲಿ ಮಹಾದೇವ ಭಾಗವಹಿಸಿದ್ದರು. 1991ರಲ್ಲಿ ಇವರ ಕುಸುಮ ಬಾಲೆಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿತು. ನಲವತ್ತೊಂದರ ಕಿರಿವಯಸ್ಸಿನಲ್ಲೆ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ಪಡೆದ ಭಾರತೀಯ ಲೇಖಕರಲ್ಲಿ ಮಹಾದೇವರೆ ಮೊದಲನೆಯವರಿರಬೇಕು.

ಈ ರೀತಿಯ ಸಾಂಸ್ಥಿಕ ಪ್ರಶಸ್ತಿಗಳೇ ಅಲ್ಲದೆ, ದೇವನೂರ ಮಹಾದೇವ ಅವರು ಪಡೆದಿರುವ ವಿಮರ್ಶಾ-ಪ್ರೀತಿ, ಗೌರವ ಕೂಡ ತುಂಬಾ ಅಪೂರ್ವವಾದ್ದು. ಅವರ ಕೃತಿಗಳ ಬಗ್ಗೆ ಬರೆಯದ ವಿಮರ್ಶಕರೇ ಇಲ್ಲವೆನ್ನುವುದು ಅಷ್ಟು ಮುಖ್ಯವಲ್ಲ, ಪು.ತಿ.ನ, ಜಿ.ಎಚ್. ನಾಯಕ, ಯು.ಆರ್. ಅನಂತಮೂರ್ತಿ, ಯಶವಂತ ಚಿತ್ತಾಲ, ಪಿ. ಲಂಕೇಶ್- ಇಂತಹ ಹಿರಿಯರು ಕೂಡ ಈ ವಿಮರ್ಶಾ ಚರ್ಚೆಯಲ್ಲಿ ಭಾಗವಹಿಸಿದ್ದಾರೆಂಬುದು ಮುಖ್ಯ. ಒಡಲಾಳ, ಕುಸುಮಬಾಲೆ, ಅಮಾಸ-ಈ ಕೃತಿಗಳೆಲ್ಲ ನಾಟಕಗಳಾಗಿ ರೂಪಾಂತರಗೊಂಡು ರಂಗಭೂಮಿಯಲ್ಲಿ ಯಶಸ್ವಿಯಾಗಿವೆ.

೨

ಹಿಂಸೆ, ದಬ್ಬಾಳಿಕೆ, ಕ್ರೌರ್ಯ-ಇವೆಲ್ಲವೂ ನಮ್ಮ ಸಮಾಜದಲ್ಲಿ ಎಷ್ಟರ ಮಟ್ಟಿಗೆ ಹಾಸು ಹೊಕ್ಕಾಗಿವೆಯೆಂದರೆ, ಈ ವಿದ್ಯಮಾನಗಳಲ್ಲಿ ನಮಗೆ ಸಹಜವಾಗಿ,

ಸರಿಯಾಗಿಯೇ ಕಾಣುತ್ತವೆ. ಇಂತಹ ಸಮಾಜದಲ್ಲಿ ಲೇಖಕ ನಾಗುವವನಿಗೆ ಪ್ರತಿಭಟನೆಯ, ಬಂಡಾಯದ ಅನಿವಾರ್ಯತೆ ಮತ್ತು ಸಂದಿಗ್ಧತೆ ತಿಳಿದಿರಬೇಕು. ಇಲ್ಲಿ ಮನುಷ್ಯನ ಪ್ರೀತಿಸುವ ಮತ್ತು ತಿಳಿಯುವ ಶಕ್ತಿಯು ಎಷ್ಟೊಂದು ಮುಕ್ಕಾಗಿ ಹೋಗಿದೆಯೆಂಬುದನ್ನು ಹೇಳುತ್ತಲೇ, ಈ ಜನವೇ ಪೂರ್ಣವಾಗಿ ಮನುಷ್ಯರಾಗಿ ಅನಾವರಣಗೊಂಡಾಗ, ಎಷ್ಟೊಂದು ಪ್ರೀತಿಸಬಲ್ಲರು, ಎಷ್ಟೊಂದು ಗಾಢವಾಗಿ ತಿಳುವಳಿಕೆ ಪಡೆಯಬಲ್ಲರು ಎಂಬುದನ್ನು ಸೂಚಿಸುವ, ಕನವರಿಸುವ ಶಕ್ತಿಯೂ ಇರಬೇಕು. ಮಹಾದೇವರ ಬರವಣಿಗೆ ಪ್ರಾರಂಭಿಕ ಹಂತದಿಂದಲೂ ಈ ಎಲ್ಲ ಗುಣ ಸ್ವಭಾವಗಳನ್ನು ಬೇರೆ ಬೇರೆ ಸ್ತರದಲ್ಲಿ ಪ್ರಕಟಿಸುತ್ತಾ, ವಿಕಾಸಗೊಂಡಿದೆಯೆಂಬುದೇ ಅವರ ಸಾಹಿತ್ಯದ ವೈಶಿಷ್ಟ್ಯ ಮತ್ತು ಮಹತ್ವ. ಈ ಕಾರಣಕ್ಕಾಗಿಯೇ ಮಹಾದೇವ ದಲಿತರ ಬದುಕಿನ ಬಗ್ಗೆ ಬರೆಯುತ್ತಲೇ ಒಟ್ಟು ಸಮಾಜವನ್ನು, ಒಟ್ಟು ಚರಿತ್ರೆಯನ್ನು ಗ್ರಹಿಸಲು, ಅಭಿವ್ಯಕ್ತಿಸಲು ಪ್ರಯತ್ನಿಸುತ್ತಾರೆ. ದಲಿತರು ನಮ್ಮಗಳ ಮನಸ್ಸು ಪರಿಭಾವಿಸುವಷ್ಟು ಪ್ರತ್ಯೇಕರಲ್ಲ ಎಂದು ಸೂಚಿಸುವ ಕ್ರಮ ಕೂಡ ಇದಾಗಿರಬಹುದು.

ಈ ರೀತಿಯ ಗ್ರಹಿಕೆಯ ಸೂಚನೆಗಳೆಲ್ಲ ಅವರ ಮೊದಲ ಕಥಾ ಸಂಕಲನದಲ್ಲೇ ಇದೆ. ಗ್ರಸ್ತ, ಮಾರಿಕೊಂಡವರು, ಇಂತಹ ಪುಟ್ಟ ಕತೆಗಳಲ್ಲಿನ ಕಥಾ ವಿನ್ಯಾಸವೆ ದೊಡ್ಡದಾಗಿದೆ. ಅವುಗಳು ಒಳಗೊಳ್ಳುವ ಪ್ರಪಂಚದ ವಿಸ್ತಾರ ಮತ್ತು ಸಂಕೀರ್ಣತೆ ಸಾಂಪ್ರದಾಯಕ ಸಣ್ಣಕತೆಯ ಅಳವಿಗೆ ಮೀರಿದ್ದೆ. ಗ್ರಸ್ತ ಕತೆಯಲ್ಲಿ ನಿರೂಪಕ ಆತನ ತಾಯಿ, ಆತನನ್ನು ಓದಿಸಿ ಬೆಳೆಸಿದ ಊರ ಗೌಡ-ಎಲ್ಲರೂ ಬರವಣಿಗೆಯಲ್ಲಿ ಸಿಕ್ಕಿಹಾಕಿಕೊಂಡವರೆ, ಅಪೂರ್ಣರೇ, ಅವರೊಳಗೇ ಮತ್ತು ಪರಸ್ಪರರಿಗೆ ಆದರೆ ಇವರೆಲ್ಲರಿಗೂ ಒಬ್ಬರೊಬ್ಬರನ್ನು ತಿಳಿಯುವ ಮತ್ತು ಪ್ರೀತಿಸುವ ಮತ್ತು ಅಷ್ಟೇ ಮುಖ್ಯವಾಗಿ ಸತ್ಯ ಹೇಳುವ ಶಕ್ತಿಯೂ ಇದೆ. ಹೀಗಾಗಿ ಇದು ದಲಿತನೊಬ್ಬನು ತನ್ನ ಸದ್ಯದ ಅವಸ್ಥೆ ಯನ್ನು ಮೀರಲು ಪ್ರಯತ್ನಿಸುತ್ತಲೇ, ತನ್ನ ಪ್ರತಿಭಟನೆ ಮತ್ತು ಪ್ರೀತಿಯಲ್ಲಿ ಎಲ್ಲರನ್ನು ಒಳಗೊಳ್ಳುವ ಪ್ರಯತ್ನದ ಕತೆಯೂ ಆಗಿದೆ. ಡಾಂಬರು ಬಂದುದು, ಮೂಡಲ ಸೀಮೆಯ ಕೊಲೆಗಿಲೆ ಮುಂತಾಗಿ, ಮಾರಿಕೊಂಡವರು ಕತೆಗಳ ಪಾತ್ರ ಮತ್ತು ಕಥಾವಿನ್ಯಾಸವೂ ಇದೇ ರೀತಿಯದು. ಮೂಡಲಸೀಮೆ ಕತೆಯಲ್ಲಿ ಊರೊಳಗೆ ಆಗುತ್ತಿರುವ ಬದಲಾವಣೆಯು, ದಲಿತ ಮನಸ್ಸಿನ ಹೊಸ ಆಸೆ ಆಕಾಂಕ್ಷೆಗಳು ಒಟ್ಟಿಗೆ ಪ್ರಕಟವಾಗುತ್ತದೆ. ಸ್ಕೂಲಿಗೆ ತಮ್ಮ ಜಾತಿಯವರು ಮೇಷ್ಟರಾಗಿ ಬಂದಿದ್ದಾರೆ ಎಂದು ತಾಯಿಯ ಹತ್ತಿರ ಬೀಗುತ್ತಿರುವ ರಾಜನೇ ಮುಂದೆ ಮಹಾದೇವರ ಕೃತಿಗಳಲ್ಲಿ ಶಿವು ಆಗಿ, ಗುರುಸಿದ್ದು ಆಗಿ ಪ್ರಕಟವಾಗುತ್ತಾನೆ. ಗಂಡು-ಹೆಣ್ಣಿನ ಸಂಬಂಧದ ಪ್ರಶ್ನೆಬಂದಾಗಲೆಲ್ಲ, ಅದನ್ನು ಸರಿಯಾಗಿ ಗ್ರಹಿಸಬೇಕಾದರೆ ಸಮಾಜದ ಸಾಂಪ್ರದಾಯಿಕ ನೀತಿ-ರಿವಾಜುಗಳ ಚೌಕಟ್ಟಿನಾಚೆಯೇ ಗ್ರಹಿಸಬೇಕು ಎಂಬ ಕುಸುಮ ಬಾಲೆಯ ಕೃತಿಯ ತಿಳುವಳಿಕೆಯ ಬೀಜಗಳು ಮಾರಿಕೊಂಡವರ ಕತೆಯಲ್ಲಿನ ಲಕ್ಷ್ಮಿ, ಕಿಟ್ಟಪ್ಪ, ಬೀರಪ್ಪರ ಮನೋವ್ಯಾಪಾರದಲ್ಲಿ ಕಾಣುತ್ತದೆ. ಒಡಲಾಳದ ಪುಟ್ಟಗೌರಿ ದಲಿತ ಹಟ್ಟಿಯೊಂದರಲ್ಲಿ ಗೋಡೆಯ ಮೇಲೆ ನವಿಲಿನ ಚಿತ್ರ ಬಿಡಿಸುವುದನ್ನು ಕನ್ನಡ ಓದುಗರೆಲ್ಲರು ಕಂಡು ಆನಂದಿಸಿದ್ದಾರೆ. ಆದರೆ ಮನುಷ್ಯನ ಕನಸು ಕಾಣುವ ಶಕ್ತಿಯ ಬಗ್ಗೆ ಮಹಾದೇವರು ಅಮಾಸ ಕತೆಯಲ್ಲೆ ನೀಡಿರುವ ಸೂಚನೆಗಳನ್ನು ಅಷ್ಟಾಗಿ ಗಮನಿಸಿದಂತಿಲ್ಲ. ಈ ಮಾತುಗಳನ್ನು ನೋಡಿ "ಕಂಡಪ್ಪು ಬಣ್ಣ ಬಣ್ಣದ ಬ್ರಿಂಗದ ಕಾಗದದಲ್ಲಿ ಗಂಡಭೇರುಂಡ ಕಿರೀಟ ಮುಂತಾದ ಅವಚವಿ ಕೊರೆಯುತ್ತಿದ್ದುದು. ಅಲ್ಲಿ ಮಾಡಿಟ್ಟದೆಲ್ಲ ಕಣ್ಣಿಗೆ ಅಚ್ಚುಮೆಚ್ಚಾಗಿತ್ತು"

ಈ ನೋಟವನ್ನು ಓದುಗರು ಗಮನಿಸದೇ ಹೋಗಿದ್ದರೆ, ಅದಕ್ಕೆ ಈ ಸಂಗ್ರಹದ ಬರವಣಿಗೆಯ ಗುಣವು ಕಾರಣವಿರಬೇಕು. ಮಹಾದೇವನು ಮುಂದಿನ ಬರವಣಿಗೆಯಲ್ಲಿ ತೋರಿಸಿದ ನಿರಾಳ, ಲಾಲಿತ್ಯ, ಮೆಲುದನಿ, ಹಾಸ್ಯ,- ಇಲ್ಲಿಯ ಕತೆಗಳಲ್ಲಿ ಇಲ್ಲವೆನ್ನುವಷ್ಟು ಕಡಿಮೆ. ಇಲ್ಲಿಯ ಬರವಣಿಗೆಯ ಗುಣ ಮುಖ್ಯವಾಗಿ 'ದಾಖಲೆಯ' ಸ್ವರೂಪದ್ದು. ನಿರ್ಲಿಪ್ತತೆ ಮತ್ತು ವಸ್ತುನಿಷ್ಠತೆ ಇಷ್ಟವಾದರೂ, ಎಲ್ಲ ನೋಟಗಳು ಸೂಚನೆಯಲ್ಲೇ ಮುಗಿಯುತ್ತವೇನೋ ಎಂಬ ಅನುಮಾನವೂ ಬರುತ್ತದೆ. ಉತ್ತಮ ಕಲಾಕೃತಿಯೊಂದು, ಕೃತಿಯೊಳಗೆ ತಾನು ಪೃಥಕ್ಕರಿಸುವ ಕಾಲದಿಂದ ಬಿಡುಗಡೆಗೊಳ್ಳುವುದಕ್ಕೆ ಎಲ್ಲ ಉಪಾಯಗಳನ್ನು ಕೃತಿಯ ರಚನೆಯಲ್ಲೇ ಒಳಗೊಂಡಿರುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಇಲ್ಲಿಯ ಎಲ್ಲ ಕತೆಗಳಿಗೂ ಈ ಮಾತು ಅನ್ವಯಿಸುವುದು ಕಷ್ಟವಾಗುತ್ತದೆ. 'ಡಾಂಬರು ಬಂದುದು' ವಿನಂತಹ ಕತೆಗೆ, 'ದತ್ತ'ದಂತಹ ಕತೆಗೆ, ಕತೆಗಳು ನಡೆದ ಕಾಲದಿಂದ ಬಿಡುಗಡೆಯೇ ಇಲ್ಲದಂತೆ ಕಾಣುತ್ತದೆ.

'ಒಡಲಾಳ' ಕಥಾನಕವನ್ನು ಈಗಾಗಲೇ ಕನ್ನಡ ಸಾಹಿತ್ಯ ಲೋಕ ಕ್ಲಾಸಿಕ್ ಎಂದು ಗುರುತಿಸಿಬಿಟ್ಟಿದೆ ಎಷ್ಟರ ಮಟ್ಟಿಗೆಂದರೆ ಈ ಕೃತಿಯ ಸಾರಾಂಶ ಅಥವಾ ಮಹತ್ವವನ್ನು ಮತ್ತೆ ಹೇಳುವುದು ಅನಗತ್ಯ ಎನಿಸುವಷ್ಟು. ಸಾಕವ್ವನ ಪರಿವಾರದ ಸದಸ್ಯರೆಲ್ಲ ಒಟ್ಟಿಗೇ ಕುಳಿತು ಕದ್ದ ಕಡ್ಲೆಕಾಯಿ ತಿನ್ನುವುದು. ಪುಟ್ಟಗೌರಿ ನವಿಲು ಬಿಡಿಸುವುದು. ಇಂತಹ ಪ್ರಕರಣಗಳಲ್ಲಿ ಈಗಾಗಲೇ ಕನ್ನಡ ಓದುಗರ ಸಂವೇದನೆಯಲ್ಲಿ ಶಾಶ್ವತಸ್ಥಾನ ಪಡೆದಿವೆ. ನೂರಾರು ಪ್ರತಿಭಟನಾ ಬಂಡಾಯದ ಕತೆಗಳನ್ನು ಬರೆದರೂ, ಒಡಲಾಳದಂತಹ ಶುದ್ಧಮಾನವ ಪ್ರೀತಿಯ ಕತೆಯ ಪ್ರಭಾವ ಮುಕ್ಕಾಗಲಾರದು. ಒಡಲಾಳವು ದಲಿತರ, ಬಂಡಾಯದ, ಪ್ರತಿಭಟನೆಯ ಒಡಲಾಳದ ಕತೆಯೆಂದು ತಿಳಿಯುವ ಮುನ್ನವೇ ಓದುಗ ಸಂವೇದನೆಯ ಸ್ತರದಲ್ಲೇ ದಲಿತರ ಸ್ಥಿತಿಯ ಬಗ್ಗೆ, ಅವರ ಆಸೆ-ಆಕಾಂಕ್ಷೆಗಳ ಬಗ್ಗೆ ಇತ್ಯಾತ್ಮಕ ಧೋರಣೆಯ ಮನುಷ್ಯನಾಗಿ ಪರಿವರ್ತನೆ ಹೊಂದಿರುತ್ತಾನೆ ಎಂಬುದೇ ಈ ಕೃತಿಯ ಸಾಧನೆ. ಹಿಂದಿನ ಕಥಾಸಂಕಲನಕ್ಕೆ ಹೋಲಿಸಿದರೆ ಮಹಾದೇವ ಈ ಕೃತಿಯಲ್ಲಿ ನಿರೂಪಣೆಯಲ್ಲಿ ಅಡಕವಾಗಿರುವ, ಲಾಲಿತ್ಯ, ಹಾಸ್ಯ, ಮೆಲುದನಿ, ನಮ್ಮ ಗಮನವನ್ನು ಸೆಳೆಯುತ್ತದೆ. ಇಲ್ಲಿಯ ನಿರೂಪಣೆಗೆ ಕನ್ನಡ ಕಥನ ಸಾಹಿತ್ಯದ ಇಬ್ಬರು ಶ್ರೇಷ್ಠಬರಹಗಾರರಾದ ಮಾಸ್ತಿ ಮತ್ತು ಕುವೆಂಪುರವರನ್ನು ಮತ್ತೆ ಮತ್ತೆ ನೆನಪಿಗೆ ತರುತ್ತದೆ. ಮಹಾದೇವರ ಈ ಕೃತಿಯಲ್ಲಿ ಹಾಸ್ಯ, ತಮಾಷೆ, ಮೆಲುದನಿಯಿದ್ದರೂ ಅದು ಕಥಾವಸ್ತುವಿನಲ್ಲಿ ಅಡಕವಾಗಿರುವ ವಿಷಾದ ಭಾವಕ್ಕೆ ಅಡ್ಡಿ ಬರುವುದಿಲ್ಲ. ತೇಜಸ್ವಿಯವರ ಕತೆಗಳಲ್ಲಿ ಒಮ್ಮೊಮ್ಮೆ ಆಗಿಬಿಡುವಂತೆ ಅನಗತ್ಯ ವ್ಯಂಗ್ಯದ ಕಡೆಗೆ ಹೊರಳಿಬಿಡುವುದಿಲ್ಲ.

ಪುನರುಕ್ತಿಯ ಅಪಾಯವನ್ನು ಒಪ್ಪಿಕೊಂಡೇ ಒಡಲಾಳದ ಕತೆಯನ್ನು ಸಂಗ್ರಹಿಸಬೇಕಾಗಿದೆ. ಸಾಕವ್ವ ಮತ್ತು ಅವಳ ಸಕಲ ಪರಿವಾರವು ದಾರಿದ್ರ್ಯದೊಡನೆಯೆ, ಬದುಕಿನ ಎಲ್ಲ ಚೆಲುವನ್ನು ಅನುಭವಿಸುತ್ತಾ ಸೃಷ್ಟಿಸುತ್ತಾ ಬದುಕುತ್ತಿರುವ ಕತೆಯಿದು. ಅವರ ಪ್ರತಿಭಟನೆ-ಬಂಡಾಯ ಹಾಗೆಂದು ಕಾಣದಷ್ಟು ಅವರು ಬದುಕುವ ಶೈಲಿಯಲ್ಲೆ ಬೆರೆತು ಹೋಗಿದೆ. ಮನುಷ್ಯ ಬದುಕುಳಿಯುವ ಪ್ರಶ್ನೆ ಬಂದಾಗ, ಒಡಲಾಳದ ಆಸೆ-ಆಕಾಂಕ್ಷೆಗಳನ್ನು ಪೂರೈಸಿಕೊಳ್ಳುವಾಗ ನಾವು ನಂಬಿರುವ ಸತ್ಯ, ನ್ಯಾಯ, ಧರ್ಮದ ಕಲ್ಪನೆಗಳಲ್ಲಿ ಹೇಗೆ ಅಸಂಗತವಾಗಿ ಕಾಣುತ್ತವೆಯೆಂಬುದನ್ನು ಈ ಕೃತಿ ಬಳಸುವ ಶೈಲಿಯಲ್ಲಿ ಕಳ್ಳತನ, ಪೋಲೀಸು ವಿಚಾರಣೆ ಪ್ರಕರಣಗಳ ಮೂಲಕ ಸೂಚಿಸುತ್ತದೆ. ಸಾಕವ್ವನಿಗೆ ತನ್ನ ಪರಿವಾರದ, ಕುಟುಂಬದ ಪಾಲನೆಯ ಬಗ್ಗೆ ಇರುವ ಆಸೆ ಯಾವ ಮಹಾಸಾಮ್ರಾಜ್ಞಿಯ ಆಸೆಗೂ ಕಡಿಮೆಯಾದುದಲ್ಲ. ಇಲ್ಲದ ಆಸ್ತಿಯ ಹಂಚಿಕೆ-ವಿಲೇವಾರಿ ಬಗ್ಗೆ ಅವಳು ಅದೆಷ್ಟು ಅರ್ಥಪೂರ್ಣವಾಗಿ ಗೊಣಗಾಡ ಬಲ್ಲಳು. ಸ್ವಾತ್ಯಂತರದ ಕಾಲದಲ್ಲಿ ಬದುಕುತ್ತಿರುವ

ಸಾಕವ್ವನ ಪರಿವಾರಕ್ಕೆ ಹೊಸಕಾಲದ ಗಾಳಿ ಎತ್ತ ಬೀಸುತ್ತಿದೆ ಎಂಬುದು ಗೊತ್ತಿದೆ. ಆದರೆ ಅದಕ್ಕೆಲ್ಲ ಸ್ಪಂದಿಸಲು ಮೊದಲಿಗೆ ಒಡಲಾಳದ ಅಂತಿಮ ಆಸೆ ಇಂಗ ಬೇಕಾಗಿದೆ. ಅದು ಇಂಗುವ ತನಕ ಅವರ ಬದುಕುವ ಶೈಲಿ, ಪ್ರತಿಭಟನೆ ಎಲ್ಲವೂ ಇಲ್ಲಿ ಬದುಕುಳಿಯುವುದಕ್ಕೆ ಮಾಡಲೇಬೇಕಾದ ಉಪಾಯವಾಗಿ, ಹುಡುಕಾಟ ವಾಗಿ ಮಾತ್ರ ಕಾಣುತ್ತದೆ. ಈ ಕೃತಿಯಲ್ಲಿ ಮಹಾದೇವ ಪ್ರತಿಭಟನೆ-ಬಂಡಾಯ ವೆನ್ನುವುದು ಎಷ್ಟೊಂದು ಪ್ರೀತಿಯ, ಎಷ್ಟೊಂದು ಅಂತಃಕರಣದ ಕ್ರಿಯೆಯೆಂಬು ದನ್ನು ಓದುಗರಿಗೆ ಮನದಟ್ಟು ಮಾಡಿಕೊಟ್ಟಿದ್ದಾರೆ.

ಇದೊಂದು ಕೃತಿಯ ಮೂಲಕವೇ ಮಹಾದೇವ ಪರೋಕ್ಷವಾಗಿ ಮುಂದಿನ ದಲಿತ ಲೇಖಕರು ಹೇಗೆ ಕಥಾಸಾಹಿತ್ಯ ರಚಿಸಬೇಕೆಂಬ ಪ್ರಶ್ನೆಯನ್ನು ಎತ್ತಿದರು. ಕುವೆಂಪು, ಕಾರಂತ, ಅಡಿಗ, ಮಾಸ್ತಿ - ಇಂತಹ ದೊಡ್ಡ ಲೇಖಕರ ಹಾಗೇ ಮಹಾದೇವ ಕೂಡ ಈ ಕೃತಿಯ ಮೂಲಕ ಹೊಸ ಸಂವೇದನೆಯೊಂದಕ್ಕೆ ಕಾರಣವಾದರು. ಮುಂದಿನ ದಲಿತ ಲೇಖಕರೇನಿದ್ದರೂ, ಈ ಸಂವೇದನೆಯನ್ನು ತಮ್ಮ ಬೆನ್ನಿಗೆ ಇಟ್ಟುಕೊಂಡು ಹೊಸ ಹೊಸ ವಿವರಗಳನ್ನು, ಹೊಸ ಹೊಸ ಸನ್ನಿವೇಶಗಳನ್ನು ಜೋಡಿಸಿದರಷ್ಟೆ. ಇದನ್ನು ಮಹಾದೇವರ ನಂತರದ ದಲಿತ ಲೇಖಕರ ಸಾಧನೆಯನ್ನು ಉಪೇಕ್ಷೆಯಾಗಿ ಕಾಣಲು ಆಡುವ ಮಾತೆಂದು ಭಾವಿಸಬಾರದು. ಒಳ್ಳೆಯ ಲೇಖಕರೆಲ್ಲರೂ ಹೊಸ ಸಂವೇದನೆಯ ನಿರ್ಮಾಣಕ್ಕೆ ಕಾರಣರಾಗುವುದಿಲ್ಲ. ಹೊಸ ಸಂವೇದನೆಯ ನಿರ್ಮಾಣದ ಸಂದರ್ಭದಲ್ಲಿ ಲೇಖಕನೊಬ್ಬನ ಪ್ರತಿಭೆ, ಕಾಣ್ಕೆಯಿರು ವಂತೆ ಆತ ಬರೆದ ಸಂದರ್ಭದ ಒತ್ತಾಸೆಯೂ ಇರುತ್ತದೆ. ಇವೆಲ್ಲವನ್ನೂ ಹಿನ್ನೆಲೆ ಯಾಗಿಟ್ಟುಕೊಂಡು ಗಮನಿಸಿದಾಗ, ಮಹಾದೇವ ನಮ್ಮ ಉಳಿದ ಮಹತ್ವದ ಲೇಖಕರಂತೆ ಹೊಸದೊಂದು ಸಂವೇದನೆಯ ನಿರ್ಮಾಣಕ್ಕೆ ಕಾರಣರಾದ ಲೇಖಕರು ಎನಿಸುತ್ತದೆ. ಈ ಹೊಸ ಸಂವೇದನೆ ಕನ್ನಡ ಓದುಗರ ಅರಿವನ್ನೂ, ಕಲ್ಪಕತೆಯನ್ನು ಮತ್ತಷ್ಟು ವಿಸ್ತಾರಗೊಳಿಸಿ, ಸೂಕ್ಷ್ಮಗೊಳಿಸಿದ್ದರಿಂದಲೇ, ಮಹಾದೇವರಿಗೆ ಕನ್ನಡ ಕಥನ ಪರಂಪರೆಯಲ್ಲಿ ವಿಶಿಷ್ಟಸ್ಥಾನವಿರುವುದು.

ಮಹಾದೇವರ ಮೂರನೆಯ ಕೃತಿ 'ಕುಸುಮಬಾಲೆ'ಯ ಬಗ್ಗೆ ಒಮ್ಮತದ ಅಭಿಪ್ರಾಯವಿಲ್ಲ. ಜಿ. ರಾಜಶೇಖರರಂತಹ ಗಣ್ಯ ವಿಮರ್ಶಕರು ಇದನ್ನು BAD FAITH ಕೃತಿಯೆಂದು ಗುರುತಿಸಿದ್ದರೆ, ಲಂಕೇಶರಂತಹ ಹಿರಿಯ ಲೇಖಕರು, ದೇವನೂರರ ಸಮಗ್ರ ಬರವಣಿಗೆಗೆ ಮುನ್ನುಡಿ ಬರೆಯುವ ಸಂದರ್ಭ ದಲ್ಲೇ ಕುಸುಮಬಾಲೆಯನ್ನು ಮತ್ತೆ ಓದಿದರೂ ತಮ್ಮ ಚಿಂತನೆಯ ಆಳಕ್ಕೆ ಅದು ಇಳಿಯಲಿಲ್ಲವೆಂದು ಹೇಳುತ್ತಾರೆ. ಈ ಅಭಿಪ್ರಾಯಗಳು 'ಅತಿ' ಎನ್ನುವಂತೆ ಕುಸುಮಬಾಲೆಯನ್ನು ದೇಸೀ ಕಥನಗಳನ್ನು ಓದುವಂತೆ ಓದಬೇಕೆಂದು ಹೇಳು ವವರು ಇದ್ದಾರೆ. ಕೃತಿಯಲ್ಲಿ ಅಡಕವಾಗಿರುವ ನಿರೂಪಣಾ ವೈವಿಧ್ಯ ಮತ್ತು ಭಾಷಾಪ್ರಯೋಗಗಳ ಬಗ್ಗೆ ಗಮನ ಸೆಳೆಯುವವರು ಕೂಡ ಇದೊಂದು ಮಹತ್ವದ ಕೃತಿಯೆಂದೇ ಭಾವಿಸುತ್ತಾರೆ. ಆದರೆ ಯಾವ ವಿಮರ್ಶಕನೂ, ವ್ಯಾಖ್ಯಾನುಕಾರನೂ, ಈ ಕೃತಿ ಇಷ್ಟೇ, ಇದೇ ಇದರ ರಚಿತ ಸ್ವರೂಪ ಎಂದು ಬೆರಳು ಮಾಡಿ ಹೇಳಿಲ್ಲ. ಹಾಗೆ ಹೇಳುವ ಅಗತ್ಯವೂ ಇಲ್ಲ. ಈ ಎಲ್ಲ ಅಭಿಪ್ರಾಯಗಳನ್ನು ಒಪ್ಪಿಕೊಂಡೇ, ಗಮನಿಸಿಯೇ ಕುಸುಮಬಾಲೆ ಮಹತ್ವದ ಕೃತಿಯೆಂದು ಹೇಳಬೇಕಾಗುತ್ತದೆ. ಏಕೆಂದರೆ ಮೊದಲೇ ಹೇಳಿದ ಹಾಗೆ, ಒಬ್ಬ ಮುಖ್ಯ ಲೇಖಕನ ಕೆಲಸ ಹೊಸ ಸಂವೇದನೆಯ ನಿರ್ಮಾಣ ಮತ್ತು ಹಾಲಿ ಇರುವ ಸಂವೇದನೆಯ ಸೂಕ್ಷ್ಮವಾಗಿಸುವಿಕೆ. 'ಕುಸುಮಬಾಲೆ ಯ ಬಗ್ಗೆ ಬಂದಿರುವ ಎಲ್ಲ ರೀತಿಯ ಅತಿ ಅಭಿಪ್ರಾಯಗಳು ಸೇರಿವೆ. ಈ ಕೃತಿ ಹೊಸ ಸಂವೇದನೆಯ ನಿರ್ಮಾಣದಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ ಎಂಬುದನ್ನೇ ಸೂಚಿಸುತ್ತದೆ ಎಂದು ನನ್ನ ಅನಿಸಿಕೆ.

"ಕುಸುಮ ಬಾಲೆ" ಒಂದು ದೃಷ್ಟಿಯಿಂದ ಕತೆಯ ಹಂಗನ್ನು ತೊರೆದ ಕಾದಂಬರಿ ಎಂದು ಹೇಳಬಹುದು. ಹಾಗೆಂದರೆ ಕತೆ ಇಲ್ಲವೆಂದಲ್ಲ, ಘಟನೆ ಇಲ್ಲವೆಂದಲ್ಲ. ಲೇಖಕನೇ ಕತೆಯ ಸ್ವಾರಸ್ಯವನ್ನೆಲ್ಲ ಕೇವಲ ಏಳೆಂಟು ವಾಕ್ಯಗಳಲ್ಲಿ ನಾಂದಿ ರೂಪದಲ್ಲಿ ಹೇಳಿ, ಕತೆಯನ್ನು ಮೀರಿದ್ದಕ್ಕೆ ಓದುಗ ನನ್ನು ಸಿದ್ಧಗೊಳಿಸುವಂತಿದೆ. ಅಕ್ಕಮಹಾದೇವಿ, ಆಕೆಗೆ ಜೀತದಾಳಿಂದ ಹುಟ್ಟಿದ ಮಗ ಯಾಡ, ನಂತರ ಅವನು ಬೆಳೆದು ಯಾಡೇಗೌಡನಾಗುವುದು, ಅವನ ಮಗ ಸೋಮಪ್ಪ ಊರಿಗೆ ದೊಡ್ಡವನು. ಅವನ ಮಗಳು ಕುಸುಮ, ಅವಳಿಗೆ ಹೊಲೆಯರ ಚನ್ನನ ಮೂಲಕ ಮಗು. ಚೆನ್ನನ ಕೊಲೆ, ಅದನ್ನು ಅರಿಯ ದವರು ಅವನಿಗಾಗಿ ಕಾಯುವ ಪರಿ. ಇಷ್ಟು ಕತೆಯ ಹಂದರ. ಈ ಹಂದರ ಪಡೆಯಬಹುದಾದ ಕಾಲಾಂತರದ, ದೇಶಾಂತರದ ಸ್ವರೂಪವೇ ಕೃತಿಯ ಜೀವಾಳ. ಈ ಜೀವಾಳವು ಕತೆಯನ್ನು ಪ್ರವೇಶಿಸಲು ಅನೇಕ ಕಿಟಕಿಗಳನ್ನು ತೆರೆಯುತ್ತದೆ. ಯಾವ ಕಿಟಕಿಯ ಮೂಲಕ ನೀವು ಕತೆ ಹೊಕ್ಕರೂ, ಕೊನೆಗೆ ಅನುಭವಿಸುವ ಜೀವಂತಿಕೆಯ ಮತ್ತು ವಿಷಾದದ ಭಾವ ಮಾತ್ರ ಬೇರೆ ಯಾಗುವುದಿಲ್ಲ. ತಟಕ್ಕನೆ ನೆನಪಿಗೆ ಬರುವುದು ಮಹಾಭಾರತದ ಸ್ವರೂಪ. ಧರ್ಮರಾಯ, ದ್ರೌಪದಿ, ದುರ್ಯೋಧನ, ಕರ್ಣ, ಕುಂತಿಯರ ಮೂಲಕವಾದರೂ ಸರಿಯೇ ನೀವು ಭಾರತದ ಕತೆ ಪ್ರವೇಶಿಸಬಹುದು. ಕೊನೆಗೆ ಅನುಭವಿಸುವ ಭಾವ ಮಾತ್ರ ಒಂದೇ ಆಗಿರುತ್ತದೆ. ಕುಸುಮ ಬಾಲೆಯ ಸ್ವರೂಪ ಅಂತಹುದು. ಈ ಸ್ವರೂಪವನ್ನು ಆಧುನಿಕ ಕನ್ನಡದ ಸಂದರ್ಭದಲ್ಲಿ ಕುವೆಂಪು ಅವರ ಕಾದಂಬರಿಗಳು ಉಪಯೋಗಿಸಿಕೊಂಡಿವೆ. ಇಲ್ಲಿಯ ಬದುಕನ್ನು, ಈ ಬದುಕಿನ ಸತ್ಯವನ್ನು ತಿಳಿಯಲು ಬಹುಮುಖೀ ದೃಷ್ಟಿ ಕೋನದ ಅಗತ್ಯವನ್ನು ಈ ಸ್ವರೂಪ ಸ್ಪಷ್ಟಪಡಿಸುತ್ತದೆ. ಈ ಸ್ವರೂಪ ಸೂಚಿಸುವ ಬಹುಮುಖೀ ಜೀವನ ಸಾಧ್ಯತೆಗಳ ಅರಿವಿನ ಪ್ರಕಾರ-ಈ ಕೃತಿಯಲ್ಲಿಯೂ ವ್ಯಕ್ತವಾಗಿರುವಂತೆ-ಸಂಕರವೆನ್ನುವುದು ಸಂಬಂಧ. ಹಾಗಾಗಿ ಅದು ಮನುಷ್ಯನ ಸಹಜ ಸ್ಥಿತಿ ಮತ್ತು ಸಾಧ್ಯತೆ, ಆದರೆ ಬಹುಮುಖೀ ಸಾಧ್ಯತೆ ಗಳನ್ನು ನೀವು ಒಪ್ಪದೇ ಹೋದರೆ ಸಂಕರ-ಸಂಬಂಧವೆನ್ನುವುದು ಮಹಾಸಮಸ್ಯೆ. "ನೋಡಿ ಇಲ್ಲಿಯ ಬದುಕನ್ನು ನೀವು ಹೀಗೆ ಅನೇಕ ಮಗ್ಗುಲುಗಳಿಂದ ಪ್ರವೇಶಿಸಬಹುದು, ನೋಡಬಹುದು, ನಿಮ್ಮ ಆಯ್ಕೆ ಎಂತಹುದು" ಎಂದು ಕೃತಿ ಬೇರೆ ಬೇರೆ ಸ್ತರಗಳಿಗೆ, ಬೇರೆ ಬೇರೆ ಕಾಲಕ್ಕೆ, ಸೇರಿದ ಪಾತ್ರಗಳ ಮೂಲಕ, ತನ್ನ ಭಾಷಾ ಪ್ರಯೋಗದ ಮೂಲಕ, ನಿರೂಪಣಾ ವೈವಿಧ್ಯದ ಮೂಲಕ ಓದುಗರನ್ನು ಕೆಣಕುತ್ತದೆ. ಕೆಣಕುವುದು (TEASING ಎನ್ನುವ ಅರ್ಥದಲ್ಲಿ) ಈ ಕೃತಿಯ ಒಂದು ಮುಖ್ಯಗುಣ.

ಬದುಕಿನ ಬಹುಮುಖೀ ಸಾಧ್ಯತೆಗಳನ್ನು ಒಪ್ಪುವುದೆಂದರೆ, ಭಾಷೆಯ ಬಳಕೆ ಮತ್ತು ನಿರೂಪಣೆಯಲ್ಲಿ ಕೂಡ ವೈವಿಧ್ಯವನ್ನು ನಾವು ಸ್ವಾಗತಿಸ ಬೇಕಾಗುತ್ತದೆ ಎಂದು ಈ ಕೃತಿ ಹೇಳುತ್ತದೆ. ಹಳೆ ಮೈಸೂರಿನ ಒಂದು ಭಾಗದ, ಒಂದು ಜನಾಂಗದ ನುಡಿಗಟ್ಟನ್ನು ಬಳಸುವಷ್ಟರ ಮಟ್ಟಿಗೆ ಇಲ್ಲಿಯ ಭಾಷಾ ಪ್ರಯೋಗ ಸೀಮಿತವಾಗಿಲ್ಲ, ವಾಕ್ಯರಚನೆ, ಪ್ಯಾರಾಗಳ ರಚನೆಯ ಹೊಸತನವು ಕೂಡ ಕೃತಿಯೊಳಗೆ ಅಡಕವಾಗಿದೆ. ವಿಮರ್ಶಕರು ಈಗಾಗಲೇ ಗುರುತಿಸಿರುವಂತೆ ಈ ರೀತಿಯ ವಾಕ್ಯ ರಚನೆ ಕೂಡ ವಾಸ್ತವವನ್ನು ಬೇರೊಂದು ರೀತಿಯಲ್ಲಿ ಗ್ರಹಿಸಲು ಓದುಗರನ್ನು ಪ್ರೇರೇಪಿ ಸುತ್ತದೆ. ಇದರ ಜೊತೆಗೇ ಸದ್ಯದ ಸಂದರ್ಭದಲ್ಲಿ ಚಾಲ್ತಿಯಲ್ಲಿರುವ ಶಿಷ್ಟಭಾಷೆಯ ಕೆಲವು ಸ್ತರಗಳನ್ನು ಕೂಡ ಕೃತಿ ಉಪಯೋಗಿಸಿಕೊಳ್ಳುತ್ತದೆ. ಒಂದರ ಪಕ್ಕ ಮತ್ತೊಂದಿಟ್ಟು ಶೈಲೀಕೃತ ಭಾಷೆಯ ಮಿತಿಗಳನ್ನು ಸೂಚಿ ಸುತ್ತದೆ. ಶೈಲಿಯ ದೃಷ್ಟಿಯಿಂದ ಈ ಕೃತಿ ಅಳವಡಿಸಿಕೊಂಡಿರುವ ವೈವಿಧ್ಯವನ್ನು ಎಸ್.ಎಸ್. ರಘುನಾಥರು ಪಟ್ಟಿಮಾಡಿ ತೋರಿಸಿದ್ದಾರೆ. ಹರಿಕಥೆ ಶೈಲಿ, ನಾಟಕೀಯ ಶೈಲಿ, ಅರೆಗದ್ಯದ ಶೈಲಿ, ಉರ್ದುಶೈಲಿಯ ಕನ್ನಡ-ಹೀಗೆ ಹತ್ತು ಹಲವು ಶೈಲಿಗಳ ಬಳಕೆ ಇಲ್ಲಿದೆ. ಈ ಎಲ್ಲ

ಪರಿಕರಗಳ ಮೂಲಕ ಲೇಖಕ ಕಥಾವಸ್ತುವಿಗೆ ತಾನು ಬಯಸುವ ದೇಶಾಂತರ, ಕಾಲಾಂತರದ ಆಯಾಮವನ್ನು ಒದಗಿಸಲು ಸಾಧ್ಯವಾಗಿದೆ. ಜನಪದ ಕಥನದ, ಜನಪದ ಸಾಹಿತ್ಯದ ಪಾತ್ರ ವಿನ್ಯಾಸದ ಬಳಕೆಯೂ ಈ ಕೃತಿಯಲ್ಲಿ ಅಡಕವಾಗಿದೆ. ಇದೆಲ್ಲವೂ ಸೇರಿಕೊಂಡೆ ಕೃತಿಗೆ ಪುರಾಣದ ಸಾಂದ್ರತೆ ದಕ್ಕಿದಂತಿದೆ.

ಕಾದಂಬರಿಯ ಕಥಾವಸ್ತು ತೀರಾ ಸಮಕಾಲೀನವಾದ್ದರಿಂದ ಬಹುತೇಕ ಓದುಗರು-ವಿಮರ್ಶಕರು ಕೃತಿಯ ಘಟನಾವಳಿಗಳ ವಿವರಣೆ-ವರ್ಣನೆಯಲ್ಲಿ ತೃಪ್ತಿ ಪಟ್ಟಂತೆ ಭಾಸವಾಗುತ್ತದೆ. ಇದೇನೇ ಇರಲಿ ಕುಸುಮಬಾಲೆ, ಎಷ್ಟೇ ಸ್ವೋಪಜ್ಞ ಕೃತಿಯಾದರೂ, ಒಂದೇ ಒಂದು ಕೃತಿಯ ಮೂಲಕ ಹೊಸ ಅಭಿವ್ಯಕ್ತಿ ಕ್ರಮದ ಸಾಧ್ಯಾಸಾಧ್ಯತೆಗಳ ಬಗ್ಗೆ ಓದುಗರನ್ನು ಒಪ್ಪಿಸುವುದು ಕಷ್ಟ. ನಮ್ಮಲ್ಲಿ ಹೊಸ ರೀತಿಯಲ್ಲಿ ಬರೆದವರೆಲ್ಲ-ಬೇಂದ್ರೆ, ಅಡಿಗ-ಸತತವಾಗಿ ಬರೆದು ತಮ್ಮ ಪ್ರಯೋಗ ಶೀಲತೆಗೆ ಕಾಲಾನುಕ್ರಮದಲ್ಲಿ ಸಫಲ ರೂಪವೊಂದನ್ನು ಕೊಟ್ಟು, ಅವರವರ ಕೃತಿ-ಆಕೃತಿಗಳನ್ನು ಪರಂಪರೆಯ ಭಾಗವಾಗಿಸಿದರು. ಈ ಜವಾಬ್ದಾರಿಯನ್ನು ಹೊಸ ರೀತಿಯ ಕೃತಿ ಬರೆದ ಲೇಖಕನೇ ಮಾಡಬೇಕೆಂದು ವಾದಿಸುವುದು ತಪ್ಪಾದರೂ ಮಹಾದೇವರಂತಹ ಮಹತ್ವದ ಲೇಖಕರ ಸಾಂಸ್ಕೃತಿಕ ಜವಾಬ್ದಾರಿಯ ಪ್ರಶ್ನೆಯೂ ಈ ನಿರೀಕ್ಷೆಯಲ್ಲಿ ಅಂತರ್ಗತವಾಗಿದೆ ಎಂಬುದನ್ನು ಸೂಚಿಸಲೇಬೇಕಾಗಿದೆ. ಈ ದೃಷ್ಟಿಯಿಂದ ನೋಡಿದಾಗ ಮಹಾದೇವ ನಂತರದ ಲೇಖಕರ ಮೇಲೆ, ವಸ್ತುವಿನ ಆಯ್ಕೆ ಯನ್ನು ಕುರಿತಂತೆ ಬೀರಿದಷ್ಟು ಪರಿಣಾಮವನ್ನು, ತಂತ್ರ, ಆಕೃತಿಯ ದೃಷ್ಟಿಯಿಂದ ಬೀರಿದಂತಿಲ್ಲ. ಅಲ್ಲೊಂದು ಇಲ್ಲೊಂದು ಅಪವಾದ ಬಿಟ್ಟರೆ, ದಲಿತ ಕತೆಗಾರರು ಸೇರಿದಂತೆ ಬಹುತೇಕ ಹೊಸ ತಲೆಮಾರಿನ ಕತೆಗಾರರು ನವೋದಯ, ನವ್ಯಮಾರ್ಗದವರು ಹಾಕಿಕೊಟ್ಟ ವಾಸ್ತವ ವಾದಿಗದ್ಯ ಮತ್ತು ತರ್ಕದ ರಾಜ ಮಾರ್ಗದಲ್ಲಿ ಬರೆಯುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಮೊನ್ನೆ ಮೊನ್ನೆ ತಾನೇ ಐವತ್ತು ತಲುಪಿರುವ ದೇವನೂರ ಮಹಾದೇವರ ಮುಂದಿನ ಬರವಣಿಗೆಯು ಮತ್ತು ಅವರ ಬರವಣಿಗೆಯಿಂದ ಆಳವಾದ ಪ್ರೇರಣೆ ಪಡೆದವರ, ಪಡೆಯಬಹುದಾದವರ ಬರವಣಿಗೆಯೂ ಕುತೂಹಲ ಹುಟ್ಟಿಸುತ್ತದೆ.

❑

## ಡಿ.ಆರ್. ನಾಗರಾಜ್

ಜಿ. ಎಸ್. ಸಿದ್ಧಲಿಂಗಯ್ಯ

ದೊಡ್ಡಬಳ್ಳಾಪುರ ರಾಮಯ್ಯ ನಾಗರಾಜ್ ಹುಟ್ಟಿದ್ದು 20-2-1954ರಲ್ಲಿ. ದೊಡ್ಡಬಳ್ಳಾಪುರದ ರಾಮಯ್ಯ ಮತ್ತು ಅಕ್ಕಯ್ಯಮ್ಮ ಇವರ ಮಗನಾಗಿ ಹುಟ್ಟಿದ ನಾಗರಾಜ ಪ್ರೌಢ ವ್ಯಾಸಂಗಕ್ಕಾಗಿ ಬೆಂಗಳೂರಿಗೆ ಬಂದರು. ಅಂದಿನ ಸರ್ಕಾರಿ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜಿನ ವಿದ್ಯಾರ್ಥಿಯಾದ ಅವರು ಆನರ್ಸ್ ಪದವಿ ಯನ್ನು ಅಲ್ಲಿಯೇ ಪಡೆದರು. ಮುಂದೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಎಂ.ಎ.ಪದವಿ ಪ್ರಾಪ್ತವಾಯಿತು. ಸ್ವಲ್ಪ ಕಾಲ ಸಂಶೋಧಕ ವೃತ್ತಿಯಲ್ಲಿದ್ದು ಅವರು ಅಲ್ಲಿಯೇ ಕನ್ನಡ ಅಧ್ಯಾಪಕರಾದರು; ಪ್ರವಾಚಕರಾದರು, ಕೈಲಾಸಂ ಪೀಠದ ಸಂದರ್ಶಕ ಪ್ರಾಧ್ಯಾಪಕರು ಆದರು.

ವಿದ್ಯಾರ್ಥಿ ಜೀವನದಿಂದಲೂ ಅಧ್ಯಯನಶೀಲರೂ ಚಿಂತನಪರರೂ ಆದ ನಾಗರಾಜ್ ನಿರಂತರ ಅಧ್ಯಯನಶೀಲತೆಯನ್ನು ಕೊನೆಯವರೆಗೂ ಉಳಿಸಿಕೊಂಡು ಬಂದವರು. ಮಾರ್ಕ್ಸ್‌ವಾದದಿಂದ ಪ್ರಭಾವಿತರಾದರೂ ಲೋಹಿಯಾವಾದ ಅವರ ಹೃದಯವನ್ನು ಗೆದ್ದರೂ ಗಾಂಧೀವಾದದಿಂದ ವಿಮುಖರಾಗಲಿಲ್ಲ. ಆದ್ದರಿಂದಲೇ ಅವರು ತಮ್ಮನ್ನು ಎಡಪಂಥೀಯ ಗಾಂಧಿವಾದಿ ಎಂದು ಕರೆದುಕೊಳ್ಳುತ್ತಿದ್ದುದುಂಟು.

ಅಧ್ಯಯನದ ಅವಧಿಯಲ್ಲಿ ಚರ್ಚಾಸ್ಪರ್ಧೆ; ಸಂವಾದಗಳಲ್ಲಿ ವಿಶೇಷವಾಗಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದ ನಾಗರಾಜರಿಗೆ ಅವು ತಮ್ಮ ವ್ಯಾಪಕವಾದ ಅಧ್ಯಯನವನ್ನು ಒರೆಹಚ್ಚುವ ಸಾಣೆಗಲ್ಲಾದುದ್ದು ಒಂದು ವಿಶಿಷ್ಟ ಅಂಶವಾಗಿದೆ. ಕನ್ನಡ ಸಂಸ್ಕೃತ ಹಾಗೂ ಇಂಗ್ಲಿಷ್‌ಗಳಲ್ಲಿ ಅವರು ಪಡೆದಿದ್ದ ಪ್ರಭುತ್ವ ಅವರನ್ನು ಕನ್ನಡ ಮತ್ತು ಇಂಗ್ಲಿಷ್ ಎರಡರಲ್ಲೂ ಉತ್ತಮ ವಾಗ್ಮಿಯಾಗಿಸಿತ್ತು. ಹೀಗಾಗಿ ಅವರು ಎರಡೂ ಭಾಷೆಗಳಲ್ಲಿ ವಿಮರ್ಶಿಸುವ ಸಾಮರ್ಥ್ಯವನ್ನು ಪಡೆದಿದ್ದರು.

ಅವರು ಅಮೇರಿಕೆಯ ಶಿಕಾಗೋ ವಿಶ್ವವಿದ್ಯಾಲಯದ ದಕ್ಷಿಣ ಭಾರತೀಯ ಭಾಷೆಗಳ ವಿಭಾಗದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಆಹ್ವಾನಿತರಾಗಿದ್ದರು. ಕೇಂದ್ರ ಸಾಹಿತ್ಯ ಅಕಾಡೆಮಿಯ ಅನುವಾದ ವಿಭಾಗದ ನಿರ್ದೇಶಕರಾಗಿಯೂ ಹಾಗೆಯೇ ದೆಹಲಿಯ ವಿಕಾಸಶೀಲ ಸಮಾಜಗಳ ಅಧ್ಯಯನ ಕೇಂದ್ರದ ಸೀನಿಯರ್ ಫೆಲೊ ಆಗಿಯೂ ಕಾರ್ಯ ನಿರ್ವಹಿಸಿದರು. ಅವರು ಕಾರ್ಯನಿರ್ವಹಿಸಿದ ಇತರ ಕೇಂದ್ರ ಗಳೆಂದರೆ ಸಿಮ್ಲಾದ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ಡ್ ಸ್ಟಡೀಸ್‌ನ ಫೆಲೊ ಮತ್ತು ಬೆಂಗಳೂರು ವಿಶ್ವವಿದ್ಯಾಲಯದ ತೌಲನಿಕ ಸಾಹಿತ್ಯ ಕೇಂದ್ರದ ಸಂಶೋಧಕ ಸಹಾಯಕರಾಗಿ ಇಂಗ್ಲೆಂಡ್, ಅಮೆರಿಕೆಯ ಶಿಕಾಗೊ, ಜರ್ಮನಿ, ಇಟಲಿ, ಬ್ರೆಜಿಲ್, ರಷ್ಯ, ಚೀನ ದೇಶಗಳ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಅಲ್ಲದೆ ಭಾರತದ ವಿವಿಧ ಕ್ಷೇತ್ರಗಳಲ್ಲಿ ನಡೆದ ವಿಚಾರ ಸಂಕಿರಣಗಳಲ್ಲಿ ಪಾಲ್ಗೊಂಡು ಪ್ರಬಂಧ ಮಂಡಿಸಿದ ವ್ಯಾಪಕವಾದ ಹಾಗೂ ಆಳವಾದ ವಿದ್ವತ್ತಿನ ವ್ಯಕ್ತಿಯಾಗಿದ್ದರು ಡಾ. ನಾಗರಾಜ್.

ಡಾ. ನಾಗರಾಜರದು ಪ್ರಧಾನವಾಗಿ ಸ್ವೋಪಜ್ಞತೆಯ ಹಾದಿ. ಅವರು ಪ್ರಧಾನವಾಗಿ ಆಯ್ದುಕೊಂಡ ಕ್ಷೇತ್ರ ವಿಮರ್ಶೆಯೇ ಆದರೂ ಅಲ್ಲಿಯೇ ಅವರು ತಮ್ಮ ಸೃಜನಾತ್ಮಕತೆಯನ್ನೂ ತೋರಿದ್ದಾರೆ. ಕತ್ತಲೆ ದಾರಿ ದೂರ ಎಂಬ ನಾಟಕವನ್ನು ಅವರು ಬರೆದಿದ್ದು, ರಂಗದ ಮೇಲೂ ಅದು ಯಶಸ್ವಿಯಾಗಿದೆ. ಅನುಭಾವಿಯಾದ ರೂಮಿ ಕವಿಯನ್ನು ಉಪಯುಕ್ತ ವಿಮರ್ಶೆಯೊಂದಿಗೆ ಕನ್ನಡಕ್ಕೆ ಅನುವಾದಿಸಿದ್ದಾರೆ.

ಅವರ ಪ್ರಮುಖ ಕೃತಿಗಳು ಅಮೃತ ಮತ್ತು ಗರುಡ (1983), ಶಕ್ತಿ ಶಾರದೆಯ ಮೇಳ (1987), ನಾಗಾರ್ಜುನ (1993), ಸಾಹಿತ್ಯ ಕಥನ (1995),

ಅಲ್ಲಮಪ್ರಭು ಮತ್ತು ಶೈವಪ್ರತಿಭೆ (1998), (ಇದು ಮರಣೋತ್ತರ ಪ್ರಕಟಣೆ). ಈ ಕೃತಿಗಳಲ್ಲದೆ ಅಕ್ಷರ ಚಿಂತನ ಮಾಲೆಗಾಗಿ ಅವರು ಹದಿನಾಲ್ಕು ಪುಸ್ತಕಗಳನ್ನು ಉಪಯುಕ್ತವೂ, ಅಧ್ಯಯನಶೀಲವೂ ಆದ ಮುನ್ನುಡಿಗಳೊಂದಿಗೆ ಸಂಪಾದಿಸಿ ಕೊಟ್ಟು ಸಂಪಾದನೆಯೂ ಒಂದು ಸೃಜನಕ್ರಿಯೆಯೇ ಎಂಬುದನ್ನು ಸೂಚಿಸಿದ್ದಾರೆ.

ಉರ್ದು ಸಾಹಿತ್ಯ 1991ವನ್ನು ಅವರು ಸ್ವತಂತ್ರವಾಗಿ ಸಂಪಾದಿಸಿದ್ದಾರೆ. ಪ್ರೊ. ಕೆ.ಆರ್. ನಾಗರಾಜರೊಂದಿಗೆ ಆಚಾರ್ಯ ನರೇಂದ್ರ ದೇವರ ಲೇಖನಗಳ ಸಂಕಲನವನ್ನು ಸಮಾಜವಾದಿ ಆಚಾರ್ಯ ಎಂಬ ಹೆಸರಿನಲ್ಲಿ ಸಂಪಾದಿಸಿದ್ದಾರೆ. The flaming poet, 1993, Recreating each other, Shiva's plight 1987. ಇವು ಅವರ ಇಂಗ್ಲಿಷ್ ಕೃತಿಗಳು. ಸಂಸ್ಕೃತಿ ಮತ್ತು ವಿಕಾಸವನ್ನು ಕುರಿತ ಪ್ರಬಂಧಗಳನ್ನು Images of India ಶೀರ್ಷಿಕೆಯಲ್ಲಿ ಸಂಪಾದಿಸಿದ್ದಾರೆ. Vibhava ಎಂಬುದು ಇತರರೊಡನೆ ಸಂಗ್ರಹಿಸಿದ ಲೇಖನಗಳ ಸಂಕಲನ. ಡಿ. ಆರ್. ನಾಗರಾಜ್ ಪ್ರಧಾನವಾಗಿ ಸಾಂಸ್ಕೃತಿಕ ಶೋಧ ಮಾಡುವ ವಿಮರ್ಶಕರು.

ಕಾವ್ಯವೆನ್ನುವುದು ಅಮೃತಕ್ಕೆ ಹಾರುವ ಗರುಡ ಎಂಬ ದ.ರಾ. ಬೇಂದ್ರೆಯವರ ಚಿಂತನೆಯಿಂದ ಅಮೃತ ಮತ್ತು ಗರುಡ ಗ್ರಂಥ ಮೂಡಿದ್ದರೆ ಶುದ್ಧ ಚಿಂತನೆಗೆ ವಾಸ್ತವವನ್ನು ಸಮಗ್ರವಾಗಿ ಗ್ರಹಿಸುವ ಶಕ್ತಿ ಇಲ್ಲ. ಮೂರ್ತವಾದದ್ದರ ಮೂಲಕವೇ ಇದು ಸಾಧ್ಯ. ಕಥನ ಕಲೆ (ಸಾಹಿತ್ಯ) ಮಾತ್ರವೇ ವಾಸ್ತವವನ್ನು ಅಖಂಡವಾಗಿ ಹಿಡಿಯಬಲ್ಲದು ಎಂಬ ಜಾರ್ಜ್ ಲುಕಾಚ್ಸ್ ಮಾತನ್ನು ಉಲ್ಲೇಖಿಸಿ ತಮ್ಮ ಒಲವು ತಾತ್ವಿಕವಾಗಿ ಭಾವುಕವಾಗಿ ಇರುವುದು ಲುಕಾಚ್ಸ್‌ನ ಕಡೆಗೇ ಎಂದು ಡಿ.ಆರ್. ನಾಗರಾಜ್ ಸ್ಪಷ್ಟಪಡಿಸುತ್ತಾರೆ.

ಕುವೆಂಪು ಕಾರಂತ ಮಾಸ್ತಿ ಇತ್ಯಾದಿ ; ರಂಗಭೂಮಿ, ಕಾವ್ಯ ಮತ್ತು ಪ್ರಾಯೋಗಿಕ ವಿಮರ್ಶೆ ಎಂಬ ನಾಲ್ಕು ವಿಭಾಗಗಳಲ್ಲಿ ಇಲ್ಲಿಯ ಲೇಖನಗಳು ವಿಂಗಡಣೆಗೊಂಡಿದ್ದರೂ ಅವುಗಳಲ್ಲಿ ಒಂದು ಒಳ ಸೂತ್ರವನ್ನು ಗಮನಿಸಬಹುದು. ಅದು ಬದುಕು ಮತ್ತು ಕಲೆಗಳಿಗಿರುವ ಸಂಬಂಧ ಮತ್ತು ಅದರ ಸಂಕೀರ್ಣತೆ.

ಕನ್ನಡದ ಪ್ರಧಾನ ಪ್ರತಿಭೆಗಳಾದ ಕುವೆಂಪು, ಕಾರಂತ, ಮಾಸ್ತಿಯವರ ಪ್ರತಿಭೆಗಳನ್ನು ಸಾಹಿತ್ಯ ಮತ್ತು ತತ್ವಜ್ಞಾನ, ವರ್ಣ-ವರ್ಗ-ಸಂಘರ್ಷ, ಪರಂಪರೆಗಳೊಂದಿಗೆ ವಿಶ್ಲೇಷಿಸುವ ಯತ್ನವಿಲ್ಲಿದೆ. ತಾತ್ವಿಕವಾಗಿ ಸುಧಾರಣಾವಾದಿಯಂತೆ ಕಾಣುವ ಕುವೆಂಪು ಅವರ ಪ್ರತಿಭೆ ತನ್ನ ಮಿತಿಗಳನ್ನು ಮೀರುವ ಅಂಶಗಳನ್ನು ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಅವರು ಗುರುತಿಸುತ್ತಾರೆ. ಸ್ವಾತಂತ್ರ್ಯಪೂರ್ವದ ಕಾರಂತರ ಪ್ರತಿಭೆ ಮತ್ತು ಸ್ವಾತಂತ್ರ್ಯಾನಂತರದಲ್ಲಿ ಆ ಪ್ರತಿಭೆ ಕ್ರಿಯಾಶಾಲಿಯಾದ ಜಾತಿಯನ್ನು ವಿಶ್ಲೇಷಿಸುತ್ತಾರೆ. ಪ್ರಬುದ್ಧ ಕತೆಗಾರರಾದ ಮಾಸ್ತಿಯವರ ವೈಯಕ್ತಿಕ ಶ್ರದ್ಧೆ ಹಾಗೂ ಕಲೆಗಾರಿಕೆಯ ಬಗೆಗೂ ಚಿಂತಿಸುತ್ತಾರೆ.

ರಂಗಭೂಮಿ ವಿಭಾಗದ ಮೂರು ಲೇಖನಗಳು ಸನ್ನಿವೇಶ, ದಂಗೆಯ ಮುಂಚಿನ ದಿನಗಳು ಮತ್ತು ಮಿಚಿಲ್-ಎಂಬ ಮೂರು ನಾಟಕಗಳ ವಿಮರ್ಶೆಯಾಗಿದೆ.

ಮುಂದಿನ ಭಾಗ ಕಾವ್ಯ-ಇಲ್ಲಿ ಮೊದಲ ಲೇಖನ ಸಂಕ್ರಮಣ ಸ್ಥಿತಿಯಲ್ಲಿದ್ದ ಜಿ.ಎಸ್.ಶಿವರುದ್ರಪ್ಪನವರ ಕಾವ್ಯವನ್ನು ವಿಮರ್ಶಿಸುತ್ತದೆ. ಈಚಿನ ಕಾವ್ಯ ಎಂಬ ಲೇಖನ ದಲಿತ ಕಾವ್ಯದಲ್ಲಿ ದಲಿತರ ಲೋಕವೇ ಕಾಣೆಯಾಗಿದೆ ಎಂದು ಕಟುವಾದರೂ ದಲಿತರ ವಿಶಿಷ್ಟ ಲೋಕಾನುಭವವಿಲ್ಲದೆ ಕಾವ್ಯ ತನ್ನ ಕಸುವನ್ನು ಪಡೆದುಕೊಂಡಿರುವುದನ್ನು ಸೂಚಿಸುತ್ತದೆ. 1977-80ರ ಅವಧಿಯಲ್ಲಿ ಬಂದ ಕೆಲವು ಕವಿತಾ ಸಂಕಲನಗಳ ವಿಮರ್ಶೆಯೂ ಇಲ್ಲಿದೆ. ಪ್ರಾಯೋಗಿಕ ವಿಮರ್ಶೆ ವಿಭಾಗದಲ್ಲಿ ನೃತ್ಯಯಜ್ಞ ನೆರಳಿನ ಜೋಡಿ ಮತ್ತು ಸಮಗಾರ ಭೀಮವ್ವ ಕವಿತೆಗಳ ಯಶಸ್ಸಿಗೆ ಕಾರಣವೇನೆಂಬುದನ್ನು ನಾಗರಾಜ್ ಚಿಂತಿಸಿದ್ದಾರೆ.

'ಶಕ್ತಿ ಶಾರದೆಯ ಮೇಳ' ಇದು ಪಿಎಚ್.ಡಿ.ಗಾಗಿ ಸಿದ್ಧಪಡಿಸಿದ್ದ ಸಂಪ್ರಬಂಧವಾಗಿದೆ. ಮೂಲ ಪ್ರಬಂಧದಲ್ಲಿದ್ದ ಪ್ರಾಚೀನ ಕನ್ನಡ ಕಾವ್ಯದ ಸಮಾಜ ಮತ್ತು ಮನುಷ್ಯ - ಪಾಹತುಶಾಹೀ ಅನುಭವದ ಹಿನ್ನೆಲೆಯಲ್ಲಿ ಎಂಬ ಭಾಗ ಈ ಕೃತಿಯಲ್ಲಿ ಸೇರ್ಪಡೆಯಾಗಿಲ್ಲ. ಆದರೆ ಪ್ರಕಟವಾಗುತ್ತಿರುವ ಸಂಪ್ರಬಂಧಕ್ಕೆ ಪು.ತಿ.ನ. ಅವರ ಕಾವ್ಯದಲ್ಲಿ ಕಾಮ ಎಂಬ ಹೊಸ ಲೇಖನ ಸೇರಿದೆ.

ಭೂಮಿ ಮತ್ತು ಮನುಷ್ಯ, ಕಾಲ ಮತ್ತು ಮನುಷ್ಯ, ಕಾಮ ಮತ್ತು ಮನುಷ್ಯ, ಸಮಾಜ ಮತ್ತು ಮನುಷ್ಯ - ಈ ನಾಲ್ಕು ಮುಖಗಳಲ್ಲಿ ಕನ್ನಡದ ಪ್ರಾತಿನಿಧಿಕರಾದ ಕೆಲವರು ನವೋದಯ ಹಾಗೂ ನವ್ಯ ಕವಿಗಳ ಕಾವ್ಯವನ್ನು ಕುರಿತು 1957ರಿಂದ 1981ರವರೆಗೆ ನಡೆಸಿದ ಅಧ್ಯಯನ ಇಲ್ಲಿದೆ.

ಕಾವ್ಯ ವಿಮರ್ಶೆಯ ಕೆಲಸ ಅಂತಿಮವಾಗಿ ಲೋಕ ವಿಮರ್ಶೆಯೂ ಹೌದು. ಅಥವಾ ನನ್ನ ಮಟ್ಟಿಗೆ ಲೋಕ ವಿಮರ್ಶೆಯ ಒಂದು ರೂಪವೇ ಕಾವ್ಯ ವಿಮರ್ಶೆ ಎನ್ನುವ ಡಿ.ಆರ್. ನಾಗರಾಜರ ಮಾತು ಅವರ ವಿಮರ್ಶಾ ವಿಧಾನದ ಮ್ಯಾನಿಫೆಸ್ಟೊ ಎನ್ನಬಹುದು.

ಕನ್ನಡ ನವೋದಯದ ಪ್ರಧಾನ ಕವಿಗಳಾದ ಕುವೆಂಪು, ಬೇಂದ್ರೆ, ಪು.ತಿ.ನ., ವಿನಾಯಕ ನವ್ಯ ಕವಿಗಳಾದ ಗೋಪಾಲಕೃಷ್ಣ ಅಡಿಗ, ಕೆ.ಎಸ್.ನ. ಗಂಗಾಧರ ಚಿತ್ತಾಲರ ಕಾವ್ಯಗಳಂತೆಯೇ ರಾಮಚಂದ್ರ ಶರ್ಮ, ಚಂದ್ರಶೇಖರ ಕಂಬಾರ, ಎಚ್. ಎಂ. ಚನ್ನಯ್ಯ ಇವರ ಕಾವ್ಯಗಳ ವಿಶ್ಲೇಷಣೆಯೂ ಇದೆ.

ನಾಲ್ಕು ವರ್ಷಗಳ ಸುದೀರ್ಘ ಅಧ್ಯಯನದ ಫಲವಾದ ಈ ಕೃತಿ ನವೋದಯದಿಂದ ನವ್ಯದವರೆಗಿನ ಪ್ರಧಾನ ಪ್ರತಿಭೆಗಳನ್ನು ವಿಶ್ಲೇಷಿಸಲು ನಿರ್ಮಿತಗೊಂಡ ವೇದಿಕೆ ಭೂಮಿ ಮತ್ತು ಮನುಷ್ಯ, ಕಾಲ ಮತ್ತು ಮನುಷ್ಯ, ಕಾಮ ಮತ್ತು ಮನುಷ್ಯ, ಹಾಗೆಯೇ ಸಮಾಜ ಮತ್ತು ಮನುಷ್ಯ, ಅಲ್ಲಿ ಮನುಷ್ಯ ಇತರ ಮನುಷ್ಯರೊಡನೆ, ಕಾಲದೊಡನೆ, ಕಾಮದೊಡನೆ ಹೇಗೆ ಮುಖಾಮುಖಿಯಾಗುತ್ತಾನೆಂಬುದೇ ಇಲ್ಲಿಯ ಅನ್ವೇಷಣೆಯ ವಸ್ತು. ಇದಕ್ಕಾಗಿ ಅವರು ಬಳಸಿಕೊಂಡಿರುವ ಕಾವ್ಯದ ಹರಹು ದೊಡ್ಡದು.

ಎಡಪಂಥೀಯ ಗಾಂಧೀವಾದಿಯಾದ ಡಿ.ಆರ್. ನಾಗರಾಜ್ ಆರಂಭದಲ್ಲಿ ಹೇಳಿದಂತೆ ಕಲಾ ಪ್ರೇಮಿಯಾದವ. ಆದ್ದರಿಂದ ಕನ್ನಡದ ಪ್ರತಿಭೆಗಳು ಹೇಗೆ ಕಲಾತ್ಮಕವಾಗುತ್ತವೆಂಬ ಚಿಂತನೆ ಇಲ್ಲಿದೆ.

ಪಾಶ್ಚಾತ್ಯ ಸಾಹಿತ್ಯ ಮಾರ್ಗದರ್ಶನ ಭಾಗ ಸಂಪುಟ 1 ಪ್ರಕಟವಾದದ್ದು 1981ರಲ್ಲಿ ಗ್ರೀಕ್ ಸಾಹಿತ್ಯಕ್ಕೆ ಸಂಬಂಧಪಟ್ಟ ಕವಿಕೃತಿ, ಸಾಹಿತ್ಯಿಕ ಹಿನ್ನೆಲೆ ಮತ್ತು ಕೃತಿ ವಿಮರ್ಶೆ ಮೊದಲಾದ ವಿವರಗಳನ್ನೊಳಗೊಂಡ ಕೃತಿಯಾಗಿದ್ದು ಇದರಲ್ಲಿ ಗ್ರೀಕ್ ಸಾಹಿತ್ಯದ ಒಂದು ಅರ್ಥಪೂರ್ಣ ನೋಟ ಪ್ರಾಪ್ತವಾಗ ಲೆನ್ನುವುದು ಲೇಖಕರ ಆಶಯವಾಗಿದೆ. ಈ ಕೃತಿಗಾಗಿ ಲೇಖಕರು ನಡೆಸಿರುವ ಅಧ್ಯಯನ ತುಂಬ ಉಪಯುಕ್ತ ಮಾಹಿತಿಯನ್ನು ನೀಡುವುದಾಗಿದೆ.

ಸಾಹಿತ್ಯ ಕಥನದ ನಾಲ್ಕು ಭಾಗಗಳಲ್ಲಿ ಮೂವತ್ತೇಳು ಪ್ರಬಂಧಗಳಿವೆ. ಸ್ಕೂಲ್ ಮಾಸ್ಟರ್, ಚಂದವಳ್ಳಿಯ ತೋಟ, ಬಾಬ್ಬಿ, ಗೌರಿ ಗಣೇಶ, ನಾಂದಿ ಮೊದಲಾದ ಚಲನಚಿತ್ರಗಳ ಮೂಲಕ ಏಕಮುಖೀ ಭಾವನಾತ್ಮಕ ರೂಪ, ಬಹುಮುಖೀ ಭಾವನಾತ್ಮಕ ರೂಪಗಳನ್ನು ವಿಶ್ಲೇಷಿಸಿ ಕಲೆಯ ರಹಸ್ಯವನ್ನು ಭೇದಿಸುವ ಯತ್ನ ಕುತೂಹಲಕಾರಿಯಾದುದು.

ಈ ಕೃತಿಯಲ್ಲಿ ಸಾಹಿತ್ಯಿಕ ಹಾಗೂ ಸೈದ್ಧಾಂತಿಕ ಚರ್ಚೆ ಮತ್ತು ಸಂವಾದಗಳಿವೆ. ಪ್ರವಾಸ ಕಥನವಿದೆ, ಕೆಲವು ಪ್ರಮುಖ ಕೃತಿಗಳ ಪ್ರಶಂಸೆಯಿದೆ. ಎಲ್ಲಕ್ಕೂ

ಮಿಗಿಲಾಗಿ ವಿವಿಧ ಆಕೃತಿಗಳ ಮೂಲಕ ಸಂಸ್ಕೃತಿಯ ಶೋಧವಿದೆ. ನಾಗಾರ್ಜುನ ಲೇಖನವಂತೂ ಬೌದ್ಧ ದರ್ಶನದ ಆಳವಾದ ಅಧ್ಯಯನಕ್ಕೇ ಮೀಸಲಾದುದು. ಅಕ್ಷರ ಮಾಲಿಕೆಗಾಗಿ ಸಂಪಾದಿಸಿದ 14 ಕೃತಿಗಳಿಗೆ ಬರೆದ ಮುನ್ನುಡಿಗಳು ಡಾ. ನಾಗರಾಜರ ವಿದ್ವತ್ತು, ಅಧ್ಯಯನ ಶೀಲತೆ ಹಾಗೂ ಸ್ವೋಪಜ್ಞತೆಗಳಿಂದ ಕೂಡಿವೆ

ಪ್ರವಾಸ, ಮುನ್ನುಡಿ, ಅನುವಾದ, ಸಂವಾದ ಚಲನಚಿತ್ರ, ವಿಶ್ಲೇಷಣೆ, ಉಪನ್ಯಾಸ ಯಾವುದೇ ಆಕೃತಿಯನ್ನೇ ನಾಗರಾಜ್ ಬರೆಸಿಕೊಳ್ಳಲಿ ಅಲ್ಲಿ ನಡೆಸುವುದು ಅದಮ್ಯವಾದ ಜೀವ ಚೈತನ್ಯವಾದ ಬದುಕಿನ ಬೇರುಗಳ ಅನ್ವೇಷಣೆಯನ್ನು. ಇಂಥ ಅನ್ವೇಷಣೆಯಲ್ಲಿ ಯಾವಾಗಲೂ ಈ ವಿಮರ್ಶಕ ಸಾಹಿತ್ಯ ಲೋಕದವನಾದವನು. 'ವೇದಗಳು ಈಗ ರೆಕ್ಕೆಗಳಿರುವ ಅಲೌಕಿಕ ಮುದುಕ. ಕುಡುಕರ ನಡುವೆ ತೇಲಿದ ಸ್ವಪ್ನಕನ್ಯೆ - ಪರಸ್ಪರ ನಷ್ಟ, ಪರಸ್ಪರ ಲಯ'. ವೇದ-ಆಪ್ತವಾಗದೇ ಹೋದ ಮತ್ಸ್ಯಕನ್ಯೆಯ ವಿಷಾದಗೀತೆ ಎಂಬುದನ್ನು ರೂಪಕ ಭಾಷೆಯಲ್ಲಿ ನಿರೂಪಿಸುವಾಗ, ನಮಗೆಂಥ ಸ್ತ್ರೀವಾದ ಬೇಕೆಂಬುದನ್ನು ಹೇಳುವಾಗ ಅತ್ಯುತ್ತಮ ಸಾಹಿತ್ಯಕ್ಕೆ ಗಾರ್ಗಿ ಮತ್ತು ಕಾತ್ಯಾಯನಿ ಪ್ರತಿಭೆಗಳು ಮೇಳೈಸಬೇಕು ಎಂಬ ಸತ್ಯಕ್ಕೆ ಅಲ್ಲಿ ಸಫಲ ಸಾಕ್ಷಿಗಳು ಸಿಗುತ್ತವೆ ಎಂದು ನಿರೂಪಿಸುವಾಗ ವಿಮರ್ಶಕರು ರೂಪಕ ಭಾಷೆಗೇ ಹೆಚ್ಚು ಹೆಚ್ಚು ಮೊರೆ ಹೋಗುತ್ತಿದ್ದಾರೆಂದು ಅನ್ನಿಸಬಹುದು. ಅಲ್ಲಮಪ್ರಭು ಮತ್ತು ಶೈವಪ್ರತಿಭೆ ಗ್ರಂಥವನ್ನು ಬರೆದವರು ನಾಗರಾಜನೆಂಬುದನ್ನು ಮರೆಯುವಂತಿಲ್ಲ.

ಮಾವೊ ಬದುಕಿನ ಸಂಭ್ರಮದ ಕಾಮ ಮತ್ತು ಗಾಂಧಿಜಿಯ ಬದುಕಿನ ಬ್ರಹ್ಮಚರ್ಯ ಪ್ರಯೋಗ ಇವುಗಳನ್ನು ಒಂದರ ಪಕ್ಕದಲ್ಲಿ ಒಂದನ್ನಿಟ್ಟು ನೋಡುವುದು ಸುಸಂಗತವೇ ಅನ್ನಿಸಬಹುದು. ಆದರೆ ನಾಗರಾಜರ ವಿಮರ್ಶೆ ಆತ್ಮೀಯವಾದ ಒಂದು ಮುಖ್ಯ ಸಾಂಸ್ಕೃತಿಕ ಸಂವಾದದಂತೆ. ಅಲ್ಲಿ ಯಾವುದೇ ಬಿಗುಮಾನ, ಅಳುಕು, ಸಂಕೋಚಗಳಿಲ್ಲ ಎಂಬುದನ್ನು ಮರೆಯಬಾರದು.

ಈ ಕೃತಿಯ ಬಗ್ಗೆ ನಾಗರಾಜ ಹೇಳಿಕೊಳ್ಳುವುದು ಹೀಗೆ - 'ಹನ್ನೆರಡು ವರ್ಷಗಳ ನಂತರ ಈ ಕೃತಿ ಸಾಹಿತ್ಯ ಕಥನ ಪ್ರಕಟವಾಗುತ್ತಿದೆ. ಈ ನಡುವಿನ ವರ್ಷಗಳಲ್ಲಿ ನನ್ನ ಬೌದ್ಧಿಕ, ಭಾವುಕ, ವ್ಯಕ್ತಿತ್ವಗಳಲ್ಲಿ ಅನೇಕ ಮಹತ್ವದ ಬದಲಾವಣೆಗಳಾಗಿ ಸಹಜವಾಗಿ ಅನೇಕ ಪ್ರಸ್ತುತ ಕೃತಿಯಲ್ಲಿ ಕಾಣಿಸಿಕೊಂಡಿವೆ. ಇಲ್ಲಿರುವ ಸಾಕಷ್ಟು ಲೇಖನಗಳು ಶುದ್ಧ ಸಾಹಿತ್ಯದ ವಲಯದಾಚೆಗಿರುವ ವಸ್ತುಗಳನ್ನು ಕುರಿತವು. ಆದರೆ ಆ ಅನುಭವಗಳನ್ನು ಅರ್ಥೈಸುವುದಕ್ಕೆ ನಾನು ಬಳಸಿರುವ ತಂತ್ರಗಳು ಶುದ್ಧಾಂಗವಾಗಿ ಸಾಹಿತ್ಯ ಮೀಮಾಂಸೆಯವು'.

ಡಿ.ಆರ್. ನಾಗರಾಜ್‌ರ ಮರಣೋತ್ತರ ಪ್ರಕಟಣೆಯಾಗಿ 1999ರಲ್ಲಿ ಪ್ರಕಟವಾದ ಅಲ್ಲಮಪ್ರಭು ಮತ್ತು ಶೈವಪ್ರತಿಭೆ ಅಪರೂಪದ ಗ್ರಂಥವಾಗಿದೆ.

ಒಂಭತ್ತು ಅಧ್ಯಾಯಗಳಲ್ಲಿ ವ್ಯಾಪಿಸಿರುವ ಚಿಂತನೆ ಪ್ರಧಾನವಾಗಿ ಎರಡು ಮುಖವಾಗಿದೆ.

ಮೊದಲ ಅಧ್ಯಾಯ ಶೈವದರ್ಶನಗಳ ಚಾರಿತ್ರಿಕ ಸಮೀಕ್ಷೆಯನ್ನೊಳಗೊಂಡಿದೆ; ಎರಡನೆಯ ಅಧ್ಯಾಯದಲ್ಲಿ ಬರುವ ಅಲ್ಲಮ ಲೋಕಕ್ಕೆ ಮತ್ತೆ ಅಲ್ಲಿ ಚರ್ಚಿತವಾಗುವ ಶೈವ ಸಾಹಿತ್ಯ ಮೀಮಾಂಸೆಗಳಿಗೆ ವೇದಿಕೆಯಾಗುತ್ತದೆ. ಮೂರನೆಯ ಅಧ್ಯಾಯ ಅಲ್ಲಮನದೇ ಎನ್ನುವಂಥ ಕಾವ್ಯ ಮೀಮಾಂಸೆಯನ್ನು ಕುರಿತು ಚರ್ಚಿಸುತ್ತದೆ. ನಾಲ್ಕನೆಯ ಅಧ್ಯಾಯದಲ್ಲಿ ಅಲ್ಲಮನ ಕಾಯ ಸಿದ್ಧಾಂತವಿದೆ. ಐದನೆಯ ಅಧ್ಯಾಯ ಅಲ್ಲಮನ ಜೀವನದ ಕಥಾನಕಗಳನ್ನು ಕುರಿತು ನಿರೂಪಣೆ ಮಾಡಿದರೆ, ಆರನೆಯ ಅಧ್ಯಾಯ ಅಲ್ಲಮನ ವಚನಗಳ ಪ್ರಾಯೋಗಿಕ ವಿಮರ್ಶೆಯಲ್ಲಿ ಮಗ್ನವಾಗುತ್ತದೆ. ಏಳನೆಯ ಅಧ್ಯಾಯ ಅಲ್ಲಮ ಪ್ರತಿಭೆಯ ವಿವಿಧ ಆಯಾಮಗಳನ್ನು ಆಧುನಿಕ ಪೂರ್ವಕನ್ನಡ ಸಾಹಿತ್ಯದ ಹಿನ್ನೆಲೆಯಲ್ಲಿ ಚರ್ಚಿಸುತ್ತದೆ.

ಈ ಗ್ರಂಥ ಆರಂಭವಾಗುವುದೇ A History of Indian Philosophy ಗ್ರಂಥದಲ್ಲಿ ದಾಸಗುಪ್ತರಂಥ ವಿದ್ವಾಂಸರು ಬಸವಣ್ಣನವರನ್ನು ಕುರಿತು ಮಾಡಿರುವ ವಿವೇಚನಾರಹಿತ ವ್ಯಾಖ್ಯಾನದ ಉಲ್ಲೇಖದಿಂದ ; ಕನ್ನಡದ ಸಾಂಸ್ಕೃತಿಕ ಕ್ರಾಂತಿಯ ಮಹಾನೇತಾರನಾದ ಬಸವಣ್ಣನವರು ಒಬ್ಬ ಸಾಮಾನ್ಯ ಸಂಚುಗಾರ ; ದೊಂಬಿಯ ನಾಯಕ ಎಂಬಂತೆ ಗ್ರಹಿಸಿ ಆ ಕ್ರಾಂತಿಯ ಎಲ್ಲ ಸಾಧನೆಗಳನ್ನು ಒಂದೇ ಮಾತಿನಲ್ಲಿ ಗುಡಿಸಿ ಹಾಕಿ ಬಿಡುತ್ತಾರೆ.

ಮೇಲಿನ ಹೇಳಿಕೆ ಎಷ್ಟೊಂದು ಟೊಳ್ಳಾದುದು ಎಂಬುದನ್ನು ವಿಶ್ಲೇಷಿಸುವುದಕ್ಕಾಗಿಯೇ ದಾರ್ಶನಿಕವಾದವನ್ನು ಆರಂಭಿಸುತ್ತಾರೆ, ಡಿ.ಆರ್. ನಾಗರಾಜ್, ತಮ್ಮ ವಾಗ್ವಾದಕ್ಕೆ ಪ್ರವಾದಿಯಾದ ಬಸವಣ್ಣನಿಗಿಂತ ಮಹಾದಾರ್ಶನಿಕ ಪ್ರತಿಭೆಯ ಅಲ್ಲಮನನ್ನು ಬಳಸಿಕೊಂಡಿದ್ದಾರೆ. ಏಕೆಂದರೆ ಹನ್ನೆರಡನೆ ಶತಮಾನದ ಶರಣರ ಕ್ರಾಂತಿ ಪ್ರಾದೇಶಿಕ ನೆಲೆಯದು ; ಅದಕ್ಕೆ ಸಮಾಜಮುಖೀ ಮೌಲ್ಯಗಳೂ ಇವೆ. ದಾರ್ಶನಿಕ ಮೌಲ್ಯಗಳೂ ಇವೆ. ಆ ದಾರ್ಶನಿಕ ಮೌಲ್ಯಗಳನ್ನು ಕುರಿತ ಸಂವಾದಕ್ಕೆ ವೈದಿಕ, ಬೌದ್ಧ ಹಾಗೂ ಶೈವ ಧಾರೆಗಳ ದರ್ಶನಸತ್ವ ಮತ್ತು ಮಿತಿಗಳನ್ನು ಅರ್ಥೈಸಲು ಪ್ರಭುವಿನ ಶೈವಪ್ರತಿಭೆಯ ಬೆಳಕೇ ಅವರಿಗೆ ಸಮರ್ಥವಾಗಿ ಕಾಣಿಸಿದೆ. ಹೀಗೆ ಪ್ರಭುವಿನ ಶೈವಪ್ರತಿಭೆಯ ಪ್ರಖರತೆಯನ್ನು ಅಂದು ಪ್ರಚಲಿತವಿದ್ದ ದಾರ್ಶನಿಕ ಪ್ರತಿಭೆಗಳ ಹಿನ್ನೆಲೆಯಲ್ಲಿ ಪರಿಚಯಿಸುವಾಗ ಅವರಿಗೆ ನೆರವಾದ ತಿಳುವಳಿಕೆ ಕಿರ್ಕ್‌ಗಾರ್ಡ್ ಮತ್ತು ಶೈವಧಾರೆಗಳ ಪ್ರತ್ಯಭಿಜ್ಞಾನ ಮಾಡಿಕೊಡುವ ಅಭಿನವ ಗುಪ್ತರ ಪ್ರತಿಭೆಗಳಿಂದ ಬಂದಂತಿದೆ.

ಶೈವ ಸಾಹಿತ್ಯ ಮೀಮಾಂಸೆಯ ಜೊತೆಗೆ ಶೈವರ ನೆಲೆಯಲ್ಲಿಯೆ ಕಾಯ ಸಿದ್ಧಾಂತವನ್ನು ಸಮೀಕರಿಸಿ ಪ್ರಭುನಡೆಸಲೆಳಸಿದನೆನ್ನಲಾದ ಹೊಸ ಕಾವ್ಯ ಮೀಮಾಂಸೆಯ ಕಡೆಗೆ ನಮ್ಮನ್ನು ಕರೆದೊಯ್ಯುತ್ತಾರೆ.

ತರ್ಕಮಾರ್ಗ, ಗೀತಮಾರ್ಗ ಮತ್ತು ಪುರಾಣ ಕಥನಗಳ ಮಾರ್ಗದಿಂದ ಭಕ್ತಿಕಾವ್ಯ ತನ್ನ ಅಭಿವ್ಯಕ್ತಿಯನ್ನು ಪಡೆದುಕೊಳ್ಳುವಾಗ ಎದುರಾಗುವ ಮಿತಿಗಳನ್ನು ಸೂಚಿಸುತ್ತ ಅಲ್ಲಮನ ವಚನಗಳ ಮೂಲಕವೇ ಬಹುಶಃ ನಾಲ್ಕನೆಯದೆನ್ನಬಹುದಾದ ಕಾವ್ಯ ಮೀಮಾಂಸೆಯ ಕಡೆಗೆ ತಮ್ಮ ಗಮನವನ್ನು ಸೆಳೆಯುತ್ತಾರೆ. ಭಕ್ತಿ ಕಾವ್ಯದಲ್ಲಿ ಸಾಧ್ಯವಾಗುವ ಆತ್ಮವ್ಯಾಪ್ತಿ ಹಾಗೂ ಶಿವವ್ಯಾಪ್ತಿ ನೆಲೆಗಳಲ್ಲಿ ಪ್ರಭುವಿನದು ಶಿವವ್ಯಾಪ್ತಿಯ ಪ್ರತಿಭೆಯೆಂದು ಗುರುತಿಸುತ್ತಾರೆ. ಅದಕ್ಕೇ ಭಾಷಾಭಿವ್ಯಕ್ತಿಯಲ್ಲಿ ಎದುರಾಗುವ ಸಂಕೋಚ ಮತ್ತು ವಿಕಸನ ತತ್ವಗಳನ್ನು ಸಂಯೋಜಿಸಿ ಅಲ್ಲಮ ಪ್ರತಿಭೆಯನ್ನು ಹಿಡಿಯಲು ಹೊರಟು, ಅದು ಮಾತಿನ ಸಂಭ್ರಮ, ಮದ ಸೂತಕಾದಿಗಳಿಂದ ದೂರವಾಗಿ ವಿನಯದಿಂದ ಮಂತ್ರರೂಪವಾಗಿ ಜ್ಯೋತಿರೂಪವೂ ಆಗುವ ರೀತಿಯದು ಎಂದು ಧ್ವನಿಸುತ್ತಾರೆ. ಈತನ ಪ್ರಾತಿಭರೀತಿ ತತ್ವಗಳನ್ನೇ ಪ್ರತಿಮೆ ಗಳನ್ನಾಗಿಸುವ ಪ್ರತೀಕಾತ್ಮಕ ಎಂದೂ ಹೇಳುತ್ತಾರೆ. ಇದನ್ನೇ ಅವರು ಅಮೂರ್ತದಿಂದ ಮೂರ್ತ ಪ್ರತಿಮಾ ನಿರ್ಮಾಣ ಎಂದೂ ಹೇಳುವುದುಂಟು. ಇಷ್ಟಾಗಿಯೂ 'ಉಳಿದವರ ಹಾಗೆ ಅಲ್ಲಮ, ಸ್ಪಷ್ಟ ಸೂತ್ರಗಳ ಮೂಲಕ ರಸಸಿದ್ಧಾಂತವನ್ನು ವ್ಯಾಖ್ಯಾನಿಸುವುದಿಲ್ಲ (ಪು. 52) ಎಂದು ಬಿಡುತ್ತಾರೆ.

ದೈವವನ್ನು ಹಿಡಿವ ಉದ್ದೇಶದ ಪೂರೈಕೆಗಾಗಿ ಯಾವ ಬಗೆಯ ಕಾವ್ಯ ರೂಪ ಸಮರ್ಥ ಎಂಬುದು ಅಲ್ಲಮನ ತಾತ್ವಿಕ ಸಾಹಸಕ್ಕೆ ಕಾರಣ(ಪು. 52) ಎಂಬ ಮಾತಿನಲ್ಲಿ ಅನುಭಾವವನ್ನು ಕಾವ್ಯವಾಗಿಸುವ ಅಲ್ಲಮ ಪ್ರತಿಭೆಯ ಸಾಹಸಗಳ

ಇಂಗಿತವಿದೆ. ಆದ್ದರಿಂದಲೆ ಅವರು ಅನುಭಾವ ಮತ್ತು ಕಾವ್ಯಮೀಮಾಂಸೆಯ ನಡುವಿನ ಸಂಬಂಧಗಳನ್ನು ಅಲ್ಲಮನಷ್ಟು ಸೂಕ್ಷ್ಮವಾಗಿ ಶೋಧಿಸಿದ ಕವಿಗಳು ತೀರಾ ವಿರಳ (ಪು. 47) ಎಂದು ಪ್ರಶಂಸಿಸುತ್ತಾರೆ.

ಅಲ್ಲಮನ ಶೈವಪ್ರತಿಭೆ ಪ್ರಚಲಿತವಿದ್ದ ಶೈವಧಾರೆಗಳೊಂದಿಗೆ ಹಾಗೂ ತನ್ನ ಹಿಂದಿದ್ದ ಹಿರಿಯರೊಡನೆ ನಡೆಸಿದ ದಾರ್ಶನಿಕ ಸಂವಾದಗಳು ಕನ್ನಡಕ್ಕೆ ಎಂಥ ಶಕ್ತಿ ಕಾವ್ಯವನ್ನು ನೀಡಿದೆ ಎಂಬುದನ್ನು ಅವರು ವಚನಗಳ ಮೂಲಕವೇ ನಿರೂಪಿಸುತ್ತಾರೆ.

ಅಲ್ಲಮನ ವ್ಯಕ್ತಿತ್ವವನ್ನು ಪರಿಚಯಿಸುವ ಪ್ರಭುದೇವರ ರಗಳೆ, ಮಂಟೇಸ್ವಾಮಿ ಕಾವ್ಯ, ಶೂನ್ಯ ಸಂಪಾದನೆ ಪ್ರಭುಲಿಂಗ ಲೀಲೆಗಳ ವ್ಯಾಖ್ಯಾನ ಭಾಗವೂ ಸಶಕ್ತವಾಗಿ ಮೂಡಿ ಬಂದಿದೆ.

ಕೊನೆಯಲ್ಲಿ ಅಲ್ಲಮನ ವಚನಗಳ ಪ್ರಾಯೋಗಿಕ ವಿಮರ್ಶೆ ಅಲ್ಲಮ ಪ್ರತಿಭೆಯನ್ನು ಅನಾವರಣಗೊಳಿಸುವ ರೋಮಾಂಚಕಾರಿ ಅನುಭವವಾಗಿದೆ.

ಅಲ್ಲಮ ಮತ್ತು ಶೈವ ಪ್ರತಿಭೆ ದೇಸಿಯ ಸಿದ್ಧಿಯನ್ನು ಹೇಗೊ ಹಾಗೆಯೇ ಕಾವ್ಯಾಭಿವ್ಯಕ್ತಿಯ ಸವಾಲುಗಳನ್ನು ಕನ್ನಡ ಸಂಸ್ಕೃತಿಯೊಂದಿಗೆ ಪರಿಚಯಿಸುವಲ್ಲಿ ಹೊಸ ರೀತಿಯದಾಗಿದೆ. ಪಠ್ಯದ ಬಳಕೆಯ ಬಗೆಗೆ ಭಿನ್ನಾಭಿಪ್ರಾಯಕ್ಕೆ ಕಾರಣಗಳಿವೆ. ಉದಾರಹಣೆಗೆ ಶೈವಧಾರೆಗಳಿಗೆಲ್ಲ ಅಭಿನವಗುಪ್ತನನ್ನೇ ಉತ್ತರಾಧಿಕಾರಿ ಯೆಂಬಂತೆ ಗ್ರಹಿಸುವುದು. ಲಿಂಗವನ್ನು ಸಾಂಸ್ಥೀಕರಿಸಿದವನು ಹಲಗೆಯಾರ್ಯ ಎನ್ನದೆ ಸಿದ್ಧಲಿಂಗಯತಿ ಎನ್ನುವುದು-ಇಂಥ ಕೆಲವು ಕೊರತೆಗಳನ್ನು ಅಲಕ್ಷಿಸಿದರೆ ಮರಣೋತ್ತರ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಈ ಕೃತಿಗೆ ಲಭಿಸಿರುವುದು ತುಂಬ ಅರ್ಥಪೂರ್ಣವೆಂದೇ ಹೇಳಬೇಕಾಗಿದೆ.

ಸೈದ್ಧಾಂತಿಕ ಭಿನ್ನಾಭಿಪ್ರಾಯಗಳೇನೇ ಇರಲಿ ಅಲ್ಲಮನ ಪ್ರತಿಭೆಯನ್ನು ಪ್ರತ್ಯಭಿಜ್ಞಾನ ಮೂಡಿಸುವಲ್ಲಿ ಈ ಗ್ರಂಥ ಒಂದು ಮಹತ್ವದ ಹೆಜ್ಜೆಯಾಗಿದೆ.

ವಿಮರ್ಶಾ ಕ್ಷೇತ್ರದಲ್ಲಿ ತಮ್ಮದೇ ಆದ ವಿಶಿಷ್ಟ ಛಾಪನ್ನು ಮೂಡಿಸಿದ್ದ ಡಿ. ಆರ್. ನಾಗರಾಜ ಉತ್ತಮ ವಾಗ್ಮಿಗಳಲ್ಲಿ ಒಬ್ಬರು. ಇಂಗ್ಲಿಷಿನಲ್ಲಾಗಲಿ, ಕನ್ನಡದ ಲ್ಲಾಗಲಿ, ಅತ್ಯಂತ ಸಮರ್ಥವಾಗಿ ತಮ್ಮ ವಿಚಾರಗಳನ್ನು ಮಾತಿನ ಮೂಲಕವೂ ಕೃತಿಗಳ ಮೂಲಕವೂ ಅಭಿವ್ಯಕ್ತಿಗೊಳಿಸುವ ಸಾಮರ್ಥ್ಯವಿದ್ದವರು. ಹೀಗಾಗಿಯೇ ದೇಶ ವಿದೇಶಗಳ ವಿಶ್ವವಿದ್ಯಾಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಕರ್ತವ್ಯ ನಿರ್ವಹಿಸಿದರು.

ಆರ್ಯಭಟ ಪ್ರಶಸ್ತಿ (1998) ಶಿವರಾಮ ಕಾರಂತ ಪ್ರಶಸ್ತಿ (1995) ವರ್ಧಮಾನ ಪ್ರಶಸ್ತಿ (1988)ಗಳೇ ಅಲ್ಲದೆ ಮರಣೋತ್ತರವಾಗಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1998) ಕೂಡ ಇವರಿಗೆ ಲಭ್ಯವಾಯಿತು.

ಅವರು ನಮ್ಮನ್ನಗಲಿದರು 12-8-1998 ಬೆಂಗಳೂರಿನಲ್ಲಿ. ಬದುಕಿದ್ದ 44 ವರ್ಷಗಳಲ್ಲಿ ಸಂಸ್ಕೃತಿ ಚಿಂತನೆಗೆ ಅವರು ನೀಡಿದ ಕೊಡುಗೆ ಮಹತ್ವದ್ದು.

❑

## ಫರ್ಡಿನಾಂಡ್ ಕಿಟೆಲ್



**ಜೀವನ ಪಥ**: ಜನನ : 1832 ಏಪ್ರಿಲ್ 8, ತಂದೆ : ನಾಟ್‌ಫ್ರೀಡ್ ಕ್ರಿಶ್ಚಿಯನ್ ಕಿಟೆಲ್, ತಾಯಿ : ತೆಯೊಡೊವ್ ಹೆಲೆನ್ ಹಾಬರ್ಟ್. 1853 ಬಾಸೆಲ್ ನಗರದ ಮಿಷನ್ ಸಂಸ್ಥೆಯಲ್ಲಿ ಶಿಕ್ಷಣ. 1854ರಲ್ಲಿ ಮಂಗಳೂರಿಗೆ ಬಂದದ್ದು. ನಿಧನ : 19 ಡಿಸೆಂಬರ್ 1903.

**ಸಾಹಿತ್ಯ ಪಥ** : ಸಂಸಾರ ಕ್ರಮ, ಉಭಯ ಮಾರ್ಗ, ನಂಬಿ ಜೀವಿಸಿರಿ, ದೇನಿಯಲ್ಲನೂ ಅವನ ಜೊತೆಗಾರನೂ ಪ್ರಬಂಧಗಳು. ಹಲವಾರು ಪಠ್ಯ ಪುಸ್ತಕಗಳು. 'ಕಥಾಮಾಲೆ' ಯೇಸುವಿನ ಜೀವನ ವೃತ್ತಾಂತದ ಪದ್ಯಕಥನ, ಪರಮಾತ್ಮ ಜ್ಞಾನ, ಕ್ರೈಸ್ತ ದೈವಶಾಸ್ತ್ರ. ಕನ್ನಡ ಅನುವಾದ : History of England by ಹೆನ್ರಿ ಮೊರೇಸ್ (1864). ಪಂಚತಂತ್ರ (1864). Coorg Superstitions (1865). ಯೇಸು ಕ್ರಿಸ್ತನ ಶ್ರಮೆಯ ಚರಿತ್ರೆ (1865), ಕನ್ನಡ ಸಂಗೀತಗಳು, ಸಂಕ್ಷೇಪ ವ್ಯಾಕರಣ, ಹಳೆಗನ್ನಡ ವ್ಯಾಕರಣ ಸೂತ್ರಗಳು (1866). ಕ್ರೈಸ್ತ ಸಭಾಚರಿತ್ರೆ (1868), ಹೊಸ ಒಡಂಬಡಿಕೆ (1873), ಕರ್ನಾಟಕ ಕಾವ್ಯಮಾಲೆ (1875), ಸಣ್ಣ ಕರ್ನಾಟಕ ಕಾವ್ಯಮಾಲೆ (1868), ನಾಗವರ್ಮನ ಛಂದೋಂಬುಧಿ (ಸಂ.) 1875. Lingayat Legends 1875, Jaina, Vaishnava & Shiva Literature 1875, Washerman Veerasena (ಕಥೆ, 1875) ಕರ್ನಾಟಕ ಕಾವ್ಯ ಮಂಜರಿ (1877), Canarese-English Dialogue 1878, ಸಂಸ್ಕೃತ ಸಣ್ಣ ವ್ಯಾಕರಣ 1880, ಕನ್ನಡ - ಇಂಗ್ಲಿಷ್ ಕೋಶ 1894, A Grammar of Kannada Language 1903.

## ಬಿ. ಎಲ್. ರೈಸ್



**ಜೀವನ ಪಥ** : ಜನನ : 17-7-1837 ಬೆಂಗಳೂರಿನಲ್ಲಿ. ತಂದೆ : ಬೆಂಜಮಿನ್ ಹೋಲ್ಟ್‌ರೈಸ್. ಶಿಕ್ಷಣ : ಪ್ರಾಥಮಿಕ ವ್ಯಾಸಂಗ ಬೆಂಗಳೂರಿನಲ್ಲಿ, ಉನ್ನತ ವ್ಯಾಸಂಗ ಇಂಗ್ಲೆಂಡಿನಲ್ಲಿ. ವೃತ್ತಿ : ಬೆಂಗಳೂರು ಸೆಂಟ್ರಲ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರು. 1865 ಶಾಲಾ ಇನ್‌ಸ್ಪೆಕ್ಟರ್ ಅಧಿಕ ಕಾರ್ಯಭಾರ. ಪ್ರಾಚ್ಯವಸ್ತು, ಶಾಸನಗಳ ಸಂಗ್ರಹಾಸಕ್ತಿ. 1873 ಮೈಸೂರು ಗೆಜೆಟಿಯರ್ ಸಂಯೋಜಕರು. 1874 ಶಿಕ್ಷಣ ಇಲಾಖೆ ನಿರ್ದೇಶಕರು. 1880 ಸಂಸ್ಕೃತ ಹಸ್ತಪ್ರತಿಗಳ ರಚನೆಗೆ ನೇಮಕ. 1882 ಹಂಟರ್ ಶಿಕ್ಷಣ ಸಮಿತಿ ಕಾರ್ಯದರ್ಶಿ. 1883 ಪೋಲಿಸ್ ಹಾಗೂ ವಿದ್ಯಾ ಇಲಾಖೆಗಳ ಕಾರ್ಯದರ್ಶಿ. 1884ರಲ್ಲಿ ಸಿ.ಐ.ಇ. ಬಿರುದು. 1886 ಪ್ರಾಚ್ಯವಸ್ತು ಶೋಧನಾ ಇಲಾಖೆ ನಿರ್ದೇಶಕರು. 1887 ಮದರಾಸು ವಿ.ವಿ. ಫೆಲೊ. 1892 ಮೈಸೂರು ಗೆಜೆಟಿಯರ್‌ನ ಪುನರ್‌ಮುದ್ರಣ ಜವಾಬ್ದಾರಿ. 1906ರಲ್ಲಿ ಸರ್ಕಾರಿ ಸೇವೆಯಿಂದ ನಿವೃತ್ತಿ, ಇಂಗ್ಲೆಂಡ್‌ಗೆ ಪ್ರಯಾಣ. ನಿಧನ : 10-7-1927.

**ಸಾಹಿತ್ಯ ಪಥ** : Mysore Inscriptions (1879), ಮೈಸೂರು ಮತ್ತು ಕೊಡಗು ಪ್ರಾಂತ್ಯಗಳ ಗೆಜೆಟಿಯರ್ (1877), ಮೈಸೂರು ಮತ್ತು ಕೊಡಗು ಪ್ರಾಚೀನ ಹಸ್ತಪ್ರತಿಗಳ ಸೂಚಿ (1880), ಎಪಿಗ್ರಾಫಿಯಾ ಕರ್ನಾಟಿಕ ಸಂಪುಟಗಳು, ಮೊದಲ ಸಂಪುಟ Coorg Inscriptions (1886), Mysore and Coorg from Inscriptions (1909), ಗ್ರಂಥ ಸಂಪಾದನೆ : ತಿರುನಗರಿ ರಾಮಾನುಜಯ್ಯಂಗಾರ್ಯರ ರಾಮಾಯಣ (1898), ಕರ್ನಾಟಕ ಭಾಷಾ ಭೂಷಣ (1884), ಶಬ್ದಾನುಶಾಸನಂ (1890), ಪಂಪ ರಾಮಾಯಣ (1892), ವಿಕ್ರಮಾರ್ಜುನ ವಿಜಯ (1898), ಕವಿರಾಜ ಮಾರ್ಗ (1898), ಕಾವ್ಯಾವಲೋಕನ (1903); ಇಂಡಿಯನ್ ಆಂಟಿಕ್ವೆರಿ ಮುಂತಾದ ವಿದ್ವತ್ ಪತ್ರಿಕೆಗಳಲ್ಲಿ ಲೇಖನಗಳು.

## ಬಿ. ವೆಂಕಟಾಚಾರ್ಯ



**ಜೀವನ ಪಥ** : ಜನನ : 1845, ಕೊಳ್ಳೇಗಾಲ. ವಿದ್ಯಾಭ್ಯಾಸದ ನಂತರ ಗುಮಾಸ್ತರಾಗಿ ಸರ್ಕಾರಿ ಕೆಲಸ ಸೇರಿ, ಮುನ್ಸೀಫರಾಗಿ ನಿವೃತ್ತಿ. ನಿಧನ : 1914 ಜೂನ್ 26, ಬೆಂಗಳೂರಿನಲ್ಲಿ.

**ಸಾಹಿತ್ಯ ಪಥ** : ಕಾದಂಬರಿ (ಅನುವಾದ) : ಭ್ರಾಂತಿವಿಲಾಸ (ಕಾಮೆಡಿ ಆಫ್ ಎರರ್ಸ್, ಗದ್ಯರೂಪ. 1876) : ಕಪಾಲಕುಂಡಲ, ಮೃಣಾಲಿನಿ, ವಿಷವೃಕ್ಷ (1900), ಚಂದ್ರಶೇಖರ, ರಜನಿ, ರಾಧಾರಾಣಿ, ಕೃಷ್ಣಕಾಂತನ ಉಯಿಲು, ಆನಂದಮಠ (1882), ರಾಜಸಿಂಹ, ದೇವಿ ಚೌಧುರಾಣಿ (1884), ಸೀತಾರಾಂ (1887), ಅಮೃತಪುಲಿನ ಇತ್ಯಾದಿ. ಇತರೆ ಅನುವಾದಗಳು : ಭಾರತ ಮಹಿಳೆ (1884), ಸೂರ್ಯಪೂಜೆ, ದಾಡಿಯ ಹೇಳಿಕೆ, ಆರ್ಯಶಾಸ್ತ್ರ ಪ್ರದೀಪ ಇತ್ಯಾದಿ 75ಕ್ಕೂ ಹೆಚ್ಚು ಕೃತಿಗಳು.

## ಇ.ಪಿ. ರೈಸ್



**ಜೀವನ ಪಥ** : ಜನನ : 26, ಏಪ್ರಿಲ್ 1849, ಬೆಂಗಳೂರು. 1873-1895 ಲಂಡನ್ ಮಿಷನ್ ಹೈಸ್ಕೂಲಿನ ಅಧ್ಯಕ್ಷ. 1915 ಇಂಗ್ಲೆಂಡ್, ಹ್ಯಾರೋದಲ್ಲಿ ನೆಲಸಿದರು. ನಿಧನ : 1936.

**ಸಾಹಿತ್ಯ ಪಥ** : ಹಳೆಯ ಒಡಂಬಡಿಕೆ (ಸರಳ ಕನ್ನಡ ರಚನೆ) 1890, ಮೋಸೆಯ ಧರ್ಮಶಾಸ್ತ್ರದಲ್ಲಿ ಆದಿಕಾಂಡವು 1908, ಮೋಸೆಯ ಧರ್ಮ ಶಾಸ್ತ್ರದಲ್ಲಿ ಯಾತ್ರಾ ಕಾಂಡವು 1909, A History of Kanarese Literature 1915, Benjamin Rice or Fifty Years in the Masters Service, The Mahabharata Analysis and Index 1934.

## ಎಂ. ಎಸ್. ಪುಟ್ಟಣ್ಣ



**ಜೀವನ ಪಥ** : ಜನನ : 1854, ನವೆಂಬರ್ 21, ಮೈಸೂರಿನಲ್ಲಿ. ಶಿಕ್ಷಣ : 1885ರಲ್ಲಿ ಮದರಾಸು ವಿಶ್ವವಿದ್ಯಾಲಯದ ಬಿ.ಎ., 1886ರಲ್ಲಿ ಮೈಸೂರಿನ ಚೀಫ್‌ಕೋರ್ಟಿನಲ್ಲಿ ಭಾಷಾಂತರಕಾರರಾಗಿ ನೇಮಕ. 1897ರಲ್ಲಿ ಅಮಲ್ದಾರರಾಗಿ ನೇಮಕ. 1908ರಲ್ಲಿ ಪದವಿಗೆ ರಾಜೀನಾಮೆ. ನಿಧನ: 1930, ಏಪ್ರಿಲ್ 11.

**ಸಾಹಿತ್ಯ ಪಥ** : ಕಥೆ/ಕಾದಂಬರಿ : ಜಯಸಿಂಹರಾಜ ಚರಿತ್ರೆ (ಸಿಂಬಲೈನ್ ಕಥನರೂಪ.1881), ನೀತಿ ಚಿಂತಾಮಣಿ (1884), ಸಮಿತಿ ಮದನ ಕುಮಾರರ ಚರಿತ್ರೆ (1897), ಮಾಡಿದ್ದುಣ್ಣೋ ಮಹಾರಾಯ (1915). ಪೇಟೆ ಮಾತೇನಜ್ಜಿ (1927), ಮುಸುಗು ತೆಗೆಯೇ ಮಾಯಾಂಗನೆ (1928), ಅವರಿಲ್ಲದೂಟ (1959). ಜೀವನ ಚರಿತ್ರೆ : ಕಾಂಪೂಷನ ಚರಿತ್ರೆ (1892). ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ (1910), ಸರ್ ಸಾಲಾರ್ ಜಂಗನ ಚರಿತ್ರೆ (1917), ಮಹಮೂದ್ ಗವಾನನ ಚರಿತ್ರೆ (1922). ಇತರೆ : ಹಿಂದೂಚರಿತ್ರ ದರ್ಪಣ-ಭಾಗ 1 (1882), ಹಿಂದೂ ಚರಿತ್ರ ಸಂಗ್ರಹ (1887), ಕನ್ನಡ ಒಂದನೆಯ ಪುಸ್ತಕವು (1895), ಕನ್ನಡ ಲೇಖನ ಲಕ್ಷಣ (1915), ಪಾಳೆಯಗಾರರು (1923), ಚಿತ್ರದುರ್ಗದ ಪಾಳೆಯಗಾರರು (1924), ಗುಮ್ಮನಾಯಕನ ಪಾಳೆಯದ ಪಾಳೆಯಗಾರರು (1926), ಹಾಗಲವಾಡಿ ಪಾಳೆಯಗಾರರು (1931), ಇಕ್ಕೇರಿ ಸಂಸ್ಥಾನದ ಚರಿತ್ರೆ (1931), ಹೇಮಚಂದ್ರರಾಜ ವಿಲಾಸ (ಕಿಂಗ್ ಲಿಯರ್ ನಾಟಕಾನುವಾದ, 1899). ಅಪ್ರಕಟಿತ : ಪುಟ್ಟಣ್ಣ ಹೇಳಿದ ಕಥೆಗಳು, ಹಾತಿಂತಾಯಿ, ಹೇಮಲತ (ಹ್ಯಾಮ್ಲೆಟ್ ನಾಟಕಾನುವಾದ), ಛತ್ರಪತಿ ಶಿವಾಜಿ ಮಹಾರಾಜ. ಅನೇಕ ಇಂಗ್ಲಿಷ್ ಮತ್ತು ಕನ್ನಡ ಲೇಖನಗಳು ಸಂಗ್ರಹರೂಪದಲ್ಲಿ ಬಂದಿಲ್ಲ.



## ಶಾಂತಕವಿ

**ಜೀವನ ಪಥ** : ಜನನ : 1856, ಜನವರಿ 15, ಧಾರವಾಡ ಜಿಲ್ಲೆಯ ಸಾತೇನಹಳ್ಳಿ, 14ನೇ ವಯಸ್ಸಿನಲ್ಲಿ ಅಧ್ಯಾಪಕ ವೃತ್ತಿ. 1874ರಲ್ಲಿ 'ಕರ್ನಾಟಕ ನಾಟಕ ಕಂಪನಿ' ಆರಂಭ, ನಿಧನ 1920.

**ಸಾಹಿತ್ಯ ಪಥ** : ಈ ಪಟ್ಟಿಯಲ್ಲಿ ಕಾವ್ಯ, ಲಾವಣಿ, ನಾಟಕಗಳು ಸೇರಿವೆ: ಅಡ್ಡಕಥೆಗಳ ಬುಕ್ಕು. ಅಲಂಕಾರ ಶಾಸ್ತ್ರ, ಆನಂದ ಲಹರಿ, ಆಂಜನೇಯ ವಿಜಯ, ಉಷಾಹರಣ, ಋತು ಸಂಹಾರ, ಕನ್ನಡ ದಾಸಯ್ಯನ ಪದಗಳು, ಕನ್ನಡಿಗರಿಗೆ ಸವಾಲುಗಳು, ಕವಿಕಂಠ ಕುಠಾರ, ಕಾಲ ಮಹಿಮೆ, ಕಾಳಾಸುರ, ಕೀಚಕವಧೆ, ಕೃಷ್ಣದಾನಾಮೃತ, ಕೃಷ್ಣಮೋಹಿನೀ ದುಂದುಮೆ (1893), ಕೃಷ್ಣರಾಧಿಕಾ ವಿಲಾಸ, ಗಜೇಂದ್ರ ಮೋಕ್ಷ, ಗಾಲವ ಚಿತ್ರಸೇನ, ಗಿರಿಜಾ ಕಲ್ಯಾಣ, ಚಂದ್ರಾವಳೀ ಚರಿತ್ರೆ. ಜರಾಸಂಧ ವಧ, ದುಂದುಮೆ ಪದ, ನಾಗಾನಂದ, ನಾಟಕ (ಷಟ್ಪದಿಮಾಲಿಕೆ), ನಾಟಕ ಪದ ಸಂಗ್ರಹ, ನಾರದ ಕುಚೇಷ್ಟೆ, ಪಾರ್ವತೀ ಪರಿಣಯ. ಬರಗಾಲರಸು (?) ಬಾಣಾಸುರ ನಾಟಕ, ಬೃಹಜ್ಜಂಬೂ ಚರಿತ್ರೆ, ಭುಜಂಗೋಪದೇಶ, ಮನೋರಮ ನಾಟಕ, ಮಯೂರಧ್ವಜ ಪ್ರತಾಪ, ಮುಕುಂದ ದಾನಾಮೃತ, ಮೃಚ್ಛಕಟಿಕ, ಮೇಘದೂತ (1893) ರಘುವಂಘ (2ನೇ ಸರ್ಗ), ರಸಿಕಾರಸಿಕ ವಿಚಾರ, ರಾವಣ ವಧ, ರಾವಣ ವೇದವತಿ (1919), ಲಘುಕವಿತಾ ಪದ್ಧತಿ, ವತ್ಸಲಾಹರಣ (18 ), ವ್ಯಭಿಚಾರಾನರ್ಥ ಸಿಂಧು, ವಾಸಪ್ಪನಾಯಕನ ಫಾರ್ಸು, ವಿದ್ಯಾರಣ್ಯ ಚರಿತ್ರೆ, ವಿರಹ ತರಂಗ (1885), ವಿರಾಟಪರ್ವ, ವಿಶ್ವಾಮಿತ್ರ ತಪೋಭಂಗ ಅಥವಾ ಶಕುಂತಲೆಯ ಉತ್ಪತ್ತಿ (ಭಾಗ 1,2,) ವಿಷಕಂಠ ಖಡ್ಗ, ವೇಶ್ಯಾವಾಟಿಕಾ ಸಂಚಾರ, ಶಾಕುಂತಲ, ಶೃಂಗಾರ ಪಥ ಸಂಗ್ರಹ (ಭಾಗ 1,2), ಶೃಂಗಾರ ಸಾಗರ, ಶ್ರೀಮತಿ ಸ್ವಯಂವರ, ಶ್ರೀಯಾಳ ಸತ್ಯಪರೀಕ್ಷಾ, ಸದ್ವರ್ತನ, ಸೀತಾರಣ್ಯ ಪ್ರವೇಶ, ಸೀತಾ ಸ್ವಯಂವರ, ಸುಧನ್ವ ವಧೆ, ಸೌಗಂಧಿಕಾ ಪರಿಣಯ, ಸೌಭದ್ರ, ಸುಂದೋಪಸುಂದ ವಧ, ಸ್ಯಮಂತಕಮಣಿ ಚರಿತ್ರೆ, ಹರಗರ್ವ ಪರಿಹಾರ, ಪರಿಮಿತ್ರೋಪಾಖ್ಯಾನ, ಹರಿಶ್ಚಂದ್ರ ಸತ್ಯಪರೀಕ್ಷಾ (ಭಾಗ 1,2).



## ಆರ್. ನರಸಿಂಹಚಾರ್

**ಜೀವನ ಪಥ** : ಜನನ : 1861, ಏಪ್ರಿಲ್ 9, ಶ್ರೀ ರಂಗ ಪಟ್ಟಣ ಸಮೀಪದ ಮಂಡ್ಯ ಕೊಪ್ಪಲು. ಶಿಕ್ಷಣ : ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜು, ಮೆಟ್ರಿಕ್ಯುಲೇಶನ್ 1878, ಬಿ.ಎ. ಬೆಂಗಳೂರು ಸೆಂಟ್ರಲ್ ಕಾಲೇಜು, 1882 ಎಂ.ಎ. (ಕನ್ನಡದಲ್ಲಿ ಪ್ರಥಮ ಎಂ.ಎ. ಪದವೀಧರರು) ಮದ್ರಾಸ್ ವಿಶ್ವವಿದ್ಯಾಲಯ, 1893, ಬಿ.ಎ. ನಂತರ ಹೈಸ್ಕೂಲು ಅಧ್ಯಾಪಕ ವೃತ್ತಿ, ಅನಂತರ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕರು. ಎಂ.ಎ. ನಂತರ ವಿದ್ಯಾಇಲಾಖೆಯಲ್ಲಿ ಭಾಷಾಂತರಕಾರರು 1894. 1899ರಲ್ಲಿ ಮೈಸೂರು ಪ್ರಾಚ್ಯವಸ್ತು ಸಂಶೋಧನ ಇಲಾಖೆಯಲ್ಲಿ ಸಹಾಯಕರು. 1906ರಿಂದ 1922ರವರೆಗೆ ಆ ಇಲಾಖೆಯ ನಿರ್ದೇಶಕರು. 1918ರಲ್ಲಿ 4ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು, 1907ರಲ್ಲಿ ಧಾರವಾಡದ ಗ್ರಂಥಕರ್ತರ ಸಮ್ಮೇಳನಾಧ್ಯಕ್ಷರು. ಸರ್ಕಾರದಿಂದ ಪ್ರಾಕ್ತನ ವಿಮರ್ಶನ ವಿಚಕ್ಷಣ, ಮಹಾ ಮಹೋಪಾಧ್ಯಾಯ, ರಾವ್‌ಬಹದ್ದೂರು ಮುಂತಾದ ಬಿರುದು, ಗೌರವಗಳು. ನಿಧನ : 6-12-1936.

**ಸಾಹಿತ್ಯ ಪಥ** : ನೀತಿಮಂಜರಿ ಪದ್ಯ (1896), ನೀತಿ ವಾಕ್ಯಮಂಜರಿ (ಗದ್ಯ). ಕರ್ನಾಟಕ ಕವಿ ಚರಿತೆ, ಭಾಗ I (1909), ಭಾಗ II (1919), ಭಾಗ III (1929), ಹಲವು ಸಂಪುಟಗಳಲ್ಲಿ ಸು. 5000ಕ್ಕೂ ಹೆಚ್ಚು ಶಾಸನಗಳ ಪ್ರಕಟಣೆ. ಶ್ರವಣಬೆಳ್ಗೊಳದ 500 ಶಾಸನಗಳ ಸಂಪುಟ (1923). ಸು. 1000 ವಾಸ್ತು ಕಟ್ಟಡಗಳ, ಸ್ಮಾರಕಗಳ ಬಗ್ಗೆ ವರದಿ, ಪುರಾತತ್ವ ಇಲಾಖೆ ವರದಿಗಳಲ್ಲಿ. 'ಶಾಸನ ಪದ್ಯಮಂಜರಿ (1923). ನಗೆಗಡಲು (ಭಾಷಾಂತರ, ಗಾಂಪರೊಡೆಯರ ಸಾಹಸಗಳು). History of Karnataka Language (1934). History of Kannada Literature. ಸಂಪಾದಿತ ಕೃತಿಗಳು : ಕರ್ನಾಟಕ ಭಾಷಾಭೂಷಣ ಮತ್ತು ಕಾವ್ಯಾವಲೋಕನ (1903). ಮಿಥಿಕ್‌ಸೊಸೈಟಿ ಜರ್ನಲ್ ಮುಂತಾದ ಸಂಶೋಧನ ನಿಯತಕಾಲಿಕೆಗಳಲ್ಲಿ ಅಸಂಖ್ಯ ವಿಮರ್ಶೆ, ಲೇಖನಗಳು.



## ಕೆರೂರ ವಾಸುದೇವಾಚಾರ್ಯ

**ಜೀವನ ಪಥ** : ಜನನ : 1866, ಅಕ್ಟೋಬರ್ 15, ಬಾಗಿಲಕೋಟೆ. ಶಿಕ್ಷಣ : 1899, ವಕೀಲಿ ಪರೀಕ್ಷೆ, ಅನಂತರ ವಕೀಲ ವೃತ್ತಿ, ಪತ್ರಿಕೋದ್ಯಮ, ನಿಧನ : 1921, ಜನವರಿ 21.

**ಸಾಹಿತ್ಯ ಪಥ** : ಕಾದಂಬರಿ : ಇಂದಿರೆ (1908), ಭ್ರಾತೃಘಾತಕನಾದ ಔರಂಗಜೇಬ (1913), ಯದು ಮಹಾರಾಜ (1920), ಯವನ ಸೈರಂಧ್ರಿ (ಅನುವಾದ), ವಾಲ್ಮೀಕಿ ವಿಜಯ (1915). ಕಥಾಸಂಗ್ರಹ: ಪ್ರೇಮವಿಜಯ (ಪ್ರ. ವರ್ಷ 1952), ತೊಳೆದ ಮುತ್ತು (1952), ಬೆಳಗಿದ ದೀಪಗಳು (1952), ನೀಳ್ಗತೆಗಳು (1920). ನಾಟಕ : ಪತಿವಶೀಕರಣ (1921),

ಸುರತನಗರದ ಶ್ರೇಷ್ಠಿ (1929), ವಸಂತಯಾಮಿನಿ ಸ್ವಪ್ನಚಮತ್ಕಾರ (1927), ನಲದಮಯಂತಿ (1915, 1945). ದಾಸರು (ಅಪೂರ್ಣ). ಇತರೆ : ನಿಬಂಧಮಾಲಾ (1921), ಲೋಕಮಾನ್ಯ ಟಿಳಕರವರ ಚರಿತ್ರ ಸಾರವು 1920), ಗೀತಾರಹಸ್ಯ (ಆಲೂರರ ಜೊತೆ), 'ಶುಭೋದಯ' ಪತ್ರಿಕೆ ಸಂಪಾದಕರಾಗಿ ಅನೇಕ ಲೇಖನಗಳು.

## ಗಳಗನಾಥರು



**ಜೀವನ ಪಥ** : ಪೂರ್ಣ ಹೆಸರು ವೆಂಕಟೇಶ ತಿರಕೋ ಕುಲಕರ್ಣಿ. ಜನನ : 1869, ಜನವರಿ 5, ಧಾರವಾಡ ಜಿಲ್ಲೆಯ ಹಾವೇರಿ ತಾಲ್ಲೂಕಿನ ಗಳಗನಾಥ' ಗ್ರಾಮದಲ್ಲಿ. ಶಿಕ್ಷಣ : ಮುಲ್ಕಿ ಪರೀಕ್ಷೆಯ ನಂತರ 1886-89ರಲ್ಲಿ ಪ್ರಾಥಮಿಕ ಶಿಕ್ಷಕರ ಟ್ರೈನಿಂಗ್ ಕಾಲೇಜಿನಲ್ಲಿ ವ್ಯಾಸಂಗ. ಅನಂತರ ಮುಖ್ಯೋಪಾಧ್ಯಾಯಕ ವೃತ್ತಿ. ನಿವೃತ್ತಿಯ ನಂತರ 1907ರಲ್ಲಿ 'ಸದ್ಬೋಧ ಚಂದ್ರಿಕೆ' ಆರಂಭ. ನಿಧನ : 1942, ಏಪ್ರಿಲ್ 22, ಬೆಂಗಳೂರಿನಲ್ಲಿ.

**ಸಾಹಿತ್ಯ ಪಥ** : ಕಥೆ/ಕಾದಂಬರಿ : ಕಮಲಕುಮಾರಿ (ಅನು.), ಪ್ರಬುದ್ಧ ಪದ್ಮನಯನೆ (1898), ಮರಾಠರ ಅಭ್ಯುದಯ, ಶಿವಪ್ರಭುವಿನ ಪುಣ್ಯ, ಕುರುಕ್ಷೇತ್ರ, ಈಶ್ವರೀ ಸೂತ್ರ, ಕ್ಷಾತ್ರತೇಜ, ತಿಲೋತ್ತಮೆ ಅಥವಾ ಸರಸಪ್ರೇಮ, ರಾಣಾ ರಾಜಸಿಂಹ, ಧಾರ್ಮಿಕ ತೇಜ, ಸತ್ಯಸಾರ ಸಂಸಾರಸುಖ, ಕನ್ನಡಿಗರ ಕರ್ಮ ಕಥೆ ಅಥವಾ ವಿಜಯನಗರದ ನಾಶ, ಧರ್ಮರಹಸ್ಯ, ಚಾಣಕ್ಯನ ಕಾರಸ್ಥಾನ, ಮೃಣಾಲಿನಿ, ಕುಮುದಿನಿ, ಮಾಧವ ಕರುಣಾವಿಲಾಸ, ದುರ್ಗದ ಬಿಚ್ಚುಗತ್ತಿ, ಮಹಾಭಾರತ (ಭಾಗಶಃ ಪ್ರಕಟಿತ, 1929) ಇತ್ಯಾದಿ. ವೈಚಾರಿಕ : ಗೀತೆಯ ಶ್ರವಣಾಧಿಕಾರ ಇತ್ಯಾದಿ. ಸಮಗ್ರ ಸಂಪುಟಗಳು.

## ಪಂಜೆ ಮಂಗೇಶರಾವ್



**ಜೀವನ ಪಥ** : ಜನನ : 1874, ಫೆಬ್ರವರಿ 22, ದಕ್ಷಿಣ ಕನ್ನಡ ಜಿಲ್ಲೆಯ ಬಂಟವಾಳ. ಶಿಕ್ಷಣ : ಮಂಗಳೂರಿನಲ್ಲಿ ಪ್ರೌಢಶಾಲಾ, ಎಫ್.ಎ., ಬಿ.ಎ. ವ್ಯಾಸಂಗ, ಮದರಾಸಿನಲ್ಲಿ ಎಲ್.ಟಿ. ತರಬೇತಿ. ಮಂಗಳೂರಿನ ಸರಕಾರೀ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿ, ಶಾಲಾ ಇನ್ಸ್‌ಪೆಕ್ಟರ್. 1921ರಲ್ಲಿ ಮಂಗಳೂರಿನಲ್ಲಿ 'ಬಾಲ ಸಾಹಿತ್ಯ ಮಂಡಲ' ಸ್ಥಾಪನೆ. 1928 ನಿವೃತ್ತಿ. 1934, ರಾಯಚೂರಿನಲ್ಲಿ 20ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ನಿಧನ : 1937, ಅಕ್ಟೋಬರ್ 24.

**ಸಾಹಿತ್ಯ ಪಥ** : ಕವಿಶಿಷ್ಯ, ರಾಮಪಂ, ಹರಟೆಮಲ್ಲ ಕಾವ್ಯನಾಮಗಳಿಂದ ಕತೆ, ಕವನ, ಪ್ರಬಂಧ ರಚನೆ. ಕನ್ನಡ ವ್ಯಾಕರಣ, ಶಬ್ದಮಣಿದರ್ಪಣ (ಸಂ.), ಕೋಟಿ ಚೆನ್ನಯ (ಕಾದಂಬರಿ), ಪಂಜೆಯವರು ಕೃತಿಗಳು ಸಂಪುಟ-1 : ಪದ್ಯಗಳು, ಸಂಪುಟ-2 : ಮಕ್ಕಳ ಕಥೆಗಳು, ಸಂಪುಟ-3 : ಸಣ್ಣಕಥೆಗಳು ಮತ್ತು ಕಾದಂಬರಿ, ಸಂಪುಟ-4 : ಪ್ರಬಂಧಗಳು ಮತ್ತು ಸಂಶೋಧನೆ (1973ರಲ್ಲಿ ಸಂಗ್ರಹವಾಗಿ ಪ್ರಕಟಿತ).

## ಫ.ಗು. ಹಳಕಟ್ಟಿ



**ಜೀವನ ಪಥ** : ಜನನ : 1880, ಜುಲೈ 2, ಧಾರವಾಡದಲ್ಲಿ. ತಂದೆ-ತಾಯಿ : ಗುರುಬಸಪ್ಪ ಮತ್ತು ದಾನಮ್ಮ. ಶಿಕ್ಷಣ : 1896 ಎಸ್.ಎಸ್.ಎಲ್.ಸಿ. ಧಾರವಾಡ, 1902, ಮುಂಬಯಿ ಸ್ಪೆಂಟ್ ಸೇವಿಯರ್ ಕಾಲೇಜಿನಿಂದ ಬಿ.ಎ. ಪದವಿ. ಅನಂತರ 1904 ಎಲ್‌ಎಲ್.ಬಿ., ಬೆಳಗಾವಿಯಲ್ಲಿ ವಕೀಲಿ ವೃತ್ತಿ ಆರಂಭ. 1924 ಮುಂಬಯಿ ರಾಜ್ಯದ ವಿಧಾನಪರಿಷತ್ ಸದಸ್ಯ. 1926ರಲ್ಲಿ 'ಶಿವಾನುಭವ' ಪತ್ರಿಕೆ ಆರಂಭ. 1926ರಲ್ಲಿ ಬಳ್ಳಾರಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷತೆ. 1926ರಲ್ಲಿ ಧಾರವಾಡದಲ್ಲಿ ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷತೆ. 1956ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಿ.ಲಿಟ್. ಪದವಿ. ನಿಧನ : 1964, ಜೂನ್ 29.

**ಸಾಹಿತ್ಯ ಪಥ** : 70ಕ್ಕೂ ಮೀರಿ ಸಂಪಾದಿಸಿದ ವಚನ ಹಾಗು ರಗಳೆಗಳ ಗ್ರಂಥಗಳು. 250 ವಚನಕಾರರ ವಚನ ಸಂಗ್ರಹ. ಹರಿಹರನ 42 ರಗಳೆಗಳ ಸಂಪಾದನೆ ಪ್ರಕಟನೆ - ಎಂಟು ಸಂಪುಟಗಳಲ್ಲಿ. ವಚನ ಶಾಸ್ತ್ರಸಾರ ಸಂಪುಟ ೧ (1923), ಸಂಪುಟ ೨ (1931), ಸಂಪುಟ ೩ (1939). ಶಿವಶರಣರ ಚರಿತ್ರೆಗಳು (ನಾಲ್ಕು ಸಂಪುಟಗಳಲ್ಲಿ), ಶಿವಶರಣೆಯರ ಚರಿತ್ರೆ, ಅಮರಗಣಾದೀಶ್ವರ ಚರಿತ್ರೆ, ಶಿವಾನುಭವ ಶಬ್ದಕೋಶ ಇತ್ಯಾದಿ. ಕೆಳದಿ ಸಂಸ್ಥಾನದ ರಾಯರ ವಂಶಾವಳಿ, ಕೊಡಗು ಸಂಸ್ಥಾನದ ರಾಜೇಂದ್ರ ನಾಮೆ, ಬಿಳಗಿ ಅರಸುಗಳ ವಂಶಾವಳಿ, ನಿರಂಜನ ವಂಶರತ್ನಾಕರ, ಆದಿಶೆಟ್ಟಿ ಪುರಾಣ. ದೇವರ ದಾಸಿಮಾರ್ಯರ ಕಥೆ (ಯಕ್ಷಗಾನ), ಕೈ.ವಾ. ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು, ಗುರುಬಸವ ಕೃತ ಅವಧೂತಗೀತೆ, ಶೈವಾಗಮಗಳು, ಶೂನ್ಯ ಸಂಪಾದನೆಯ ರಹಸ್ಯವು, ವೀರಶೈವ ರಾಜಮನೆತನಗಳ ಚರಿತ್ರೆಗಳು, ಬಸವೇಶ್ವರನ ಚರಿತ್ರೆ, ಆತ್ಮನಿವೇದನೆಯು. ಶಿವಾನುಭವ ಪತ್ರಿಕೆಯಲ್ಲಿ ನೂರಾರು ಲೇಖನಗಳು.

## ಆಲೂರ ವೆಂಕಟರಾಯರು



**ಜೀವನ ಪಥ** : ಜನನ : 1880, ಜುಲೈ 12, ಬಿಜಾಪುರದಲ್ಲಿ, ಶಿಕ್ಷಣ :1897ರಲ್ಲಿ ಮೆಟ್ರಿಕ್ಯುಲೇಷನ್. ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ವ್ಯಾಸಂಗ. 1903, ಬಿ.ಎ. ಪದವಿ. 1905ರಲ್ಲಿ ಮುಂಬಯಿಯಲ್ಲಿ ಕಾನೂನು ವ್ಯಾಸಂಗ ಮಾಡಿ ಕಾನೂನು ಪದವೀಧರ. ವಕೀಲಿ ವೃತ್ತಿ, ಪತ್ರಿಕಾರಂಗ- 'ವಾಗ್ಭೂಷಣ' (1907) ಪತ್ರಿಕೆಯ ಸಂಪಾದಕತ್ವ, 'ಜಯ ಕರ್ನಾಟಕ' ಸ್ಥಾಪನೆ (1922). 1930ರಲ್ಲಿ ಮೈಸೂರಿನಲ್ಲಿ 16ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ನಿಧನ : 1964, ಫೆಬ್ರವರಿ 25.

**ಸಾಹಿತ್ಯ ಪಥ** : ಶಿಕ್ಷಣ ಮೀಮಾಂಸೆ (ಹರ್ಬರ್ಟ್ ಸ್ಪೆನ್ಸರನ ಕೃತಿ ಅನುವಾದ), ಶ್ರೀ ವಿದ್ಯಾರಣ್ಯರ ಚರಿತ್ರೆ (1907), ಕರ್ನಾಟಕ ಗತವೈಭವ (1912), ಸಂಸಾರ ಸುಖ, ಕರ್ನಾಟಕದ ವೀರರತ್ನಗಳು (1930), ಕರ್ನಾಟಕತ್ವದ ಸೂತ್ರಗಳು (1950), ಕರ್ನಾಟಕತ್ವದ ವಿಕಾಸ (1957), ರಾಷ್ಟ್ರೀಯತ್ವದ ಮೀಮಾಂಸೆ (1928), ಗೀತಾ ರಹಸ್ಯ (ತಿಲಕರ ಕೃತಿಯ ಅನುವಾದ), ನಾವು ಈಗ ಬೇಡುವ

ಸ್ವರಾಜ್ಯ (1917), ಸ್ವರಾಜ್ಯ ವೆಂದರೇನು? (1917), ಸುಖವೂ ಶಾಂತಿಯೂ ಭಾಗ 1,2 (1920–21), ಸ್ವಾತಂತ್ರ್ಯ ಸಂಗ್ರಾಮ (1924), ಗೀತಾಪ್ರಕಾಶ, ಗೀತಾಪರಿಮಳ, ಗೀತಾ ಸಂದೇಶ (1936), ನನ್ನ ಜೀವನ ಸ್ಮೃತಿಗಳು - ಪೂರ್ವತರಂಗ (1940), ಉತ್ತರ ತರಂಗ (1940,41), ಮಧ್ವಸಿದ್ಧಾಂತ ಪ್ರವೇಶಿಕೆ, ಗೀತಾಭಾವ ಪ್ರದೀಪ ಪೂರ್ಣಬ್ರಹ್ಮವಾದ (1960). ಬಿಡಿ ನುಡಿಗಳು, ವಚನ ಪಿತಾಮಹ (ಸ್ಮಾರಕ ಗ್ರಂಥ ಸಂಪುಟ) 1964.



## ಚೆನ್ನಪ್ಪ ಉತ್ತಂಗಿ

**ಜೀವನ ಪಥ** : ಜನನ : 1881, ಅಕ್ಟೋಬರ್ 28, ಧಾರವಾಡದಲ್ಲಿ. ಮಂಗಳೂರಿನ ದೈವಧರ್ಮ ಶಾಲೆಯಲ್ಲಿ ಧರ್ಮ ಮತ್ತು ತತ್ವಜ್ಞಾನ ವ್ಯಾಸಂಗ. ಅನಂತರ ಕ್ರೈಸ್ತಧರ್ಮ ಬೋಧಕರಾಗಿ ಕಾರ್ಯ ನಿರ್ವಹಣೆ. 1949ರಲ್ಲಿ ಕಲಬುರ್ಗಿಯಲ್ಲಿ 32ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ನಿಧನ : 1962, ಆಗಸ್ಟ್ 28.

**ಸಾಹಿತ್ಯ ಪಥ** : ಸರ್ವಜ್ಞನ ವಚನಗಳು (1924), (ಸಂಗ್ರಹ, ಸಂಶೋಧನೆ, ಸಂಪಾದನೆ ಮಾಡಿ ವಿವಿಧ ಆವೃತ್ತಿಗಳಲ್ಲಿ ಪ್ರಕಟನೆ), ಬನಾರಸಕ್ಕೆ ಚೆನ್ನೆಹೇಮಿನ ವಿನಂತಿ (1921), ಹಿಂದೂ ಸಮಾಜದ ಹಿತಚಿಂತಕ (1921), ಮಕ್ಕಳ ಶಿಕ್ಷಣ ಪಟ. ನಾರಾಯಣ ವಾಮನ ತಿಲಕರ ಜೀವನಚರಿತ್ರೆ (ಅನುವಾದ : 1927), ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ (1933), ಬಸವೇಶ್ವರನೂ ಕರ್ನಾಟಕದ ಅಭ್ಯುದಯವೂ (1928), ಸಾಧು ಸುಂದರಸಿಂಗರ ಅನುಭವ ಸಿದ್ಧಾಂತ (ಭಾಗ ೧, 1939, ಭಾಗ ೨ 1953), ಮೋಳಿಗೆ ಮಾರಯ್ಯ ಮತ್ತು ರಾಣಿ ಮಹಾದೇವಿಯರ ವಚನಗಳು (1950), ಅನುಭವ ಮಂಟಪದ ಐತಿಹಾಸಿಕತೆ (1951), ಸಿದ್ಧರಾಮ ಸಾಹಿತ್ಯ ಸಂಗ್ರಹ (1955), ಆದಯ್ಯನ ವಚನಗಳು (1957), ಮೃತ್ಯುಂಜಯ, ಲಿಂಗಾಯತ ಧರ್ಮ ಹಾಗೂ ಕ್ರೈಸ್ತಧರ್ಮ 1969.

**ಇಂಗ್ಲಿಷ್‌ನಲ್ಲಿ** : A Faith Philosophy and Religion, Complete Concordance to Bhagavadgeetha, Yellamma - A Goddess of South India, Creation, A wonderful Child of God, From Cross to Crown through Crosswords - a Comedy.



## ಎಂ. ಗೋವಿಂದ ಪೈ

**ಜೀವನ ಪಥ** : ಜನನ : 1883, ಮಾರ್ಚ್ 23, ಮಂಜೇಶ್ವರದಲ್ಲಿ. ಶಿಕ್ಷಣ : ಮದರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ವ್ಯಾಸಂಗ. ಬೊಂಬಾಯಿಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ಮದರಾಸು ಸರ್ಕಾರದಿಂದ 'ರಾಷ್ಟ್ರಕವಿ' ಪ್ರಶಸ್ತಿ (1949). ನಿಧನ : 1963 ಸೆಪ್ಟೆಂಬರ್ 6.

**ಸಾಹಿತ್ಯ ಪಥ** : ಕಾವ್ಯ : ಭಕ್ತವಾಣಿ (ಸಂಗ್ರಹ) 1928, ಗಿಳಿವಿಂಡು (1930), ಉದ್ಘೋಷ (?). ನಂದಾದೀಪ, ಹೃದಯರಂಗ 1969, ವಿಟಂಕ, ಗೊಲ್ಗಥಾ ಮತ್ತು ವೈಶಾಖಿ 1931. ನಾಟಕ : ಹೆಬ್ಬೆರಳು, ಚಿತ್ರಭಾನು ಅಥವಾ 1942, ತಾಯಿ. ಇತರೆ : ಕನ್ನಡದ ಮೊರೆ, ಮೂರು ಉಪನ್ಯಾಸಗಳು, ಗೋವಿಂದ ಪೈ ಅವರ ಕೆಲವು ಪತ್ರಗಳು (ಸಂಕಲನ), ಶ್ರೀಕೃಷ್ಣ ಚರಿತ್ರ (ಗದ್ಯಾನುವಾದ), ನೋ ನಾಟಕಗಳು (ಅನುವಾದ). ಕಾಯಾಯ್‌ಕೊಮಾಜಿ ಮತ್ತು ಇತರ ಏಳು ನಾಟಕಗಳು, ಪಾರ್ಶ್ವನಾಥ ತೀರ್ಥಂಕರ ಚರಿತೆ, ಬಾಹುಬಲಿ ಗೊಮ್ಮಟೇಶ್ವರ ಚರಿತೆ, ಭಗವಾನ್ ಬುದ್ಧ. ಗೋವಿಂದ ಪೈ ಸಂಶೋಧನ ಸಂಪುಟ 1995.



## ಬಿ.ಎಂ.ಶ್ರೀ.

**ಜೀವನ ಪಥ** : ಜನನ : 1884, ಜನವರಿ 3, ತುಮಕೂರು ಜಿಲ್ಲೆಯ ಸಂಪಿಗೆ. ಶಿಕ್ಷಣ : 1906, ಬಿ.ಎ.1907 ಬಿ.ಎಲ್., 1909ರಲ್ಲಿ ಎಂ.ಎ. ಮತ್ತು ಮೈಸೂರಿನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ನೇಮಕ. 1914, ಇಂಗ್ಲಿಷ್ ಉಪಪ್ರಾಧ್ಯಾಪಕರು. 1919 ಇಂಗ್ಲಿಷ್ ಕಿರಿಯ ಪ್ರಾಧ್ಯಾಪಕರಾದದ್ದು. 1926-30 ಮೈಸೂರು ವಿಶ್ವವಿದ್ಯಾಲಯದ ರಿಜಿಸ್ಟ್ರಾರ್. 1927 ಗೌರವ ಕನ್ನಡ ಪ್ರಾಧ್ಯಾಪಕರು. 1928ರಲ್ಲಿ ಕಲ್ಬುರ್ಗಿಯಲ್ಲಿ 19ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. 1930 ಇಂಗ್ಲಿಷ್ ಪ್ರಾಧ್ಯಾಪಕರು. 1938 ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಆಯ್ಕೆ, 'ರಾಜಸೇವಾಸಕ್ತ' ಬಿರುದು. 1939 ಸಾಹಿತ್ಯ ಪರಿಷತ್ತಿನಲ್ಲಿ ಅಚ್ಚುಕೂಟದ ಸ್ಥಾಪನೆ. 1941 'ಸಂಭಾವನೆ' ಕನ್ನಡ ಮೊದಲ ಸನ್ಮಾನ ಗ್ರಂಥ, ಸಮರ್ಪಣೆ. 1942 ವಿಶ್ವವಿದ್ಯಾಲಯ ಸೇವೆಯಿಂದ ನಿವೃತ್ತಿ. ವಯಸ್ಕರ ಶಿಕ್ಷಣ ಸಮಿತಿ ಅಧ್ಯಕ್ಷರು. 1944 ಧಾರವಾಡದ ಕಲಾ ಕಾಲೇಜಿನಲ್ಲಿ ಪ್ರಿನ್ಸಿಪಾಲರು. ನಿಧನ : 1946, ಜನವರಿ 5, ಧಾರವಾಡದಲ್ಲಿ.

**ಸಾಹಿತ್ಯ ಪಥ** : ಕಾವ್ಯ : ಇಂಗ್ಲಿಷ್ ಗೀತೆಗಳು (1921), ಕನ್ನಡದ ಬಾವುಟ (ಸಂಪಾದಿತ 1938), ಹೊಂಗನಸುಗಳು (1943). ನಾಟಕ : ಗದಾಯುದ್ಧ ನಾಟಕಂ (1926), ಅಶ್ವತ್ಥಾಮನ್ (1929), ಪಾರಸಿಕರು (1935). ಇತರೆ: ಕನ್ನಡ ಛಂದಸ್ಸಿನ ಚರಿತ್ರೆ (ಕನ್ನಡ ಕೈಪಿಡಿ ಭಾಗ I, 1936), ಕನ್ನಡ ಸಾಹಿತ್ಯದ ಚರಿತ್ರೆ (ಕನ್ನಡ ಕೈಪಿಡಿ ಭಾಗ II, 1947), ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ (1948), ಇಸ್ಲಾಂ ಸಂಸ್ಕೃತಿ (1948), ಶ್ರೀಸಾಹಿತ್ಯ (1983), A Hand book of Rhetoric (1919).



## ಟಿ. ಪಿ. ಕೈಲಾಸಂ

**ಜೀವನ ಪಥ** : ಜನನ : 1884, ಜುಲೈ 29. (1885, 1886 ಎಂದೂ ಚರ್ಚೆ ಇದೆ) ಮೈಸೂರಿ ನಲ್ಲಿ. ಶಿಕ್ಷಣ : 1907ರಲ್ಲಿ ಬಿ.ಎ. ಮದರಾಸು ಆಧಿಪತ್ಯಕ್ಕೆ ಪ್ರಥಮ ಸ್ಥಾನ. 1908 ಇಂಗ್ಲೆಂಡ್‌ಗೆ ಹೋದದ್ದು. ರಾಯಲ್ ಕಾಲೇಜ್ ಆಫ್ ಸೈನ್ಸ್, ಲಂಡನ್. 1915 ಭಾರತಕ್ಕೆ ಮರಳಿದ್ದು. 1915 ಡಿಸೆಂಬರ್, 16. ಸಬ್-ಅಸಿಸ್ಟೆಂಟ್ ಜಿಯಾಲಜಿಸ್ಟ್ ಆಗಿ ನೇಮಕ. ಬೆಂಗಳೂರು. ಕೆ.ಜಿ.ಎಫ್., ಶಿವಮೊಗ್ಗಗಳಲ್ಲಿ ಕೆಲಸ. 1919(?) ಕೆಲಸಕ್ಕೆ ರಾಜೀನಾಮೆ. 1945ರಲ್ಲಿ ಮದರಾಸಿನಲ್ಲಿ ನಡೆದ 29ನೇ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ. ನಿಧನ : 1946, ನವೆಂಬರ್ 23.

**ಸಾಹಿತ್ಯ ಪಥ** : ಕನ್ನಡ : ಟೊಳ್ಳು-ಗಟ್ಟಿ (1922), ಪೋಲಿ ಕಿಟ್ಟಿ ಭಾಗ 1 (1923), (ಪೂರ್ಣ ನಾಟಕ 1943), ಬಹಿಷ್ಕಾರ (1929), ಹೋಂ ರೂಲು (1930), ಗಂಡಸ್ಕತ್ರಿ (1930), ವೈದ್ಯನ ವ್ಯಾಧಿ (1935), ತಾವರೆಕೆರೆ (1935), ತಾಳೀಕಟ್ಟೋಕ್ಕೂಲೀನೇ ? (1941), ಹುತ್ತದಲ್ಲಿ ಹುತ್ತ (1941), ಬಂಡ್ವಾಳ್ವಿಲ್ಲದ ಬಡಾಯಿ (1942), ಅನುಕೂಲಕ್ಕೊಬ್ಬಣ್ಣ (1944), ಅಮ್ಮಾವ್ರ ಗಂಡ (1943), ಸೀಕಣೆ ಸಾವಿತ್ರಿ (1943), ಸತ್ತವನ ಸಂತಾಪ (1943), ನಮ್ ಕಂಪನಿ (1944), ನಮ್ ಕ್ಳಬ್ಬು (1945), ನಮ್ ಬ್ರಾಹ್ಮಣ್ಕೆ (1945), ಸೂಳೆ (1945). ಕೈಲಾಸಂ ಕೃತಿಗಳು (ಸಮಗ್ರ) 1987. ಹಾಡುಗಳು : ತಿಪ್ಪಾರ್‌ಹಳ್ಳಿ, ಕೋಳಿಕೆ ರಂಗಾ, ನಂಜೀನನ್ ಅಪರಂಜೀ, ಕಾಶೀಗೆ ಹೋದ ನಂ ಭಾವ, ಬೋರನ ಭಾರ, ಅಲ್ಲಪ್ಪನ ಪದ, ಅರಿವು, ಇತ್ಯಾದಿ. ಇಂಗ್ಲಿಷ್ : Little Lays & Plays (1933), Purpose (1944), The Brahmin's Curse (Karna)(1946), The Burden, Fulfilment. ಕೈಲಾಸಂ ಕಲ್ಪನೆ: ಕೀಚಕ (ಕನ್ನಡ ರೂಪ – ಜಿ.ಪಿ. ರಾಜರತ್ನಂ 1948), Keechaka (retold by B.S. Rama Rao), ಹೆಣ್ಣಿನ ಬಾಳು ಕಣ್ಣೀರೇನೆ? (ಜ್ಞಾಪಕದಿಂದ ಬರೆದವರು ಬಿ.ಎಸ್. ರಾಮರಾವ್ 1951), ವಿವಿಧ ವಿನೋದ್ಗಾವಳಿ (1951, ಬಿ.ಎಸ್. ರಾಮರಾವ್). ಮೊಮ್ಮಗಳ ಮುಯ್ಯಿ (1960 ವೈ.ಎಸ್.ಕೆ. ಮತ್ತು ಬಿ.ಎಸ್. ರಾಮರಾವ್), ಶಬರನ ಶೃಂಗಾರ.



## ಟಿ. ಎಸ್. ವೆಂಕಣ್ಣಯ್ಯ

**ಜೀವನ ಪಥ** : ಜನನ : 1885, ಅಕ್ಟೋಬರ್ 1. ಶಿಕ್ಷಣ ಬಿ.ಎ. ನಂತರ ಖಾಸಗಿಯಾಗಿ ಕನ್ನಡ ಎಂ.ಎ. ಪದವಿ ವ್ಯಾಸಂಗ. ಪ್ರೌಢಶಾಲೆಯ ಅಧ್ಯಾಪಕರಾಗಿ ವೃತ್ತಿ ಆರಂಭ, 1919 ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು, 1927ರಲ್ಲಿ ಮಹಾರಾಜಾ ಕಾಲೇಜ್‌ನಲ್ಲಿ ಕನ್ನಡ ಪ್ರಾಧ್ಯಾಪಕರು. ನಿಧನ : 1939, ಫೆಬ್ರವರಿ 24.

**ಸಾಹಿತ್ಯ ಪಥ** : ಪ್ರಾಚೀನ ಸಾಹಿತ್ಯ (ಅನು.), ಶ್ರೀರಾಮಕೃಷ್ಣ ಪರಮಹಂಸರ ಲೀಲಾಪ್ರಸಂಗ (ಅನು.), ಶ್ರೀ ರಾಮಕೃಷ್ಣಪರಮಹಂಸರ ಚರಿತ್ರೆ (ಎ.ಆರ್.ಕೃ.ಅವರೊಡನೆ), ಕನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು (1959). ಸಂಪಾದಿತ : ಬಸವರಾಜದೇವ ರಗಳೆ, (1930), ಕರ್ನಾಟಕ ಕಾದಂಬರಿ ಸಂಗ್ರಹ (1933). ಹರಿಶ್ಚಂದ್ರ ಕಾವ್ಯ ಸಂಗ್ರಹ, ಸಿದ್ದರಾಮ ಚಾರಿತ್ರ್ಯ (ಡಿ.ಎಲ್.ಎನ್. ಅವರೊಡನೆ 1941), ಕುಮಾರವ್ಯಾಸ ಭೀಷ್ಮಪರ್ವ ಸಂಗ್ರಹ (ಡಿ.ಎಲ್.ಎನ್. ಅವರೊಡನೆ, 1930).



## ಡಿ. ವಿ. ಜಿ.

**ಜೀವನ ಪಥ** : ಜನನ : 1887, ಮಾರ್ಚಿ 17, ಕೋಲಾರ ಜಿಲ್ಲೆಯ ಮುಳಬಾಗಿಲು. ಶಿಕ್ಷಣ : ಮುಳಬಾಗಿಲು, ಕೋಲಾರ, ಮೈಸೂರು (ಪ್ರೌಢಶಾಲೆ ವರೆಗೆ). 1908ರಲ್ಲಿ 'ಭಾರತಿ' ದಿನಪತ್ರಿಕೆಗೆ ಸಹಸಂಪಾದಕ. 1912 ಬೆಂಗಳೂರು ನಗರಸಭೆಗೆ ನಾಮಕರಣ. 1914 ಸ್ವಂತ ಪಾಕ್ಷಿಕ ಪತ್ರಿಕೆ 'ದಿ ಕರ್ನಾಟಕ', 1915ರಲ್ಲಿ 'ಗೋಖಲೆ ಲೀಗ್' ಸ್ಥಾಪನೆ. 1921-26 'ಇಂಡಿಯನ್ ರಿವ್ಯೂ ಆಫ್ ರಿವ್ಯೂಸ್' ಪ್ರಕಟನೆ. 1926-40 ಮೈಸೂರು ನ್ಯಾಯವಿಧಾಯಕ ಸಭೆ ಸದಸ್ಯರು, 1928 ಕರ್ನಾಟಕ ವೃತ್ತಪತ್ರಿಕಾಕರ್ತರ ಪ್ರಥಮ ಪರಿಷತ್ತು, ಅಧ್ಯಕ್ಷತೆ. 1932ರಲ್ಲಿ ಮಡಿಕೇರಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. 1934-37 ಉಪಾಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು. 1935ರಲ್ಲಿ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಸ್ಥಾಪನೆ. 1949, 'ಪಬ್ಲಿಕ್ ಅಫೇರ್ಸ್' ಪತ್ರಿಕೆ ಪ್ರಾರಂಭ. 1961ರಲ್ಲಿ ಮೈಸೂರು ವಿಶ್ವ ವಿದ್ಯಾಲಯ ಗೌರವ ಡಿ. ಲಿಟ್. ಪದವಿ. 1967ರಲ್ಲಿ 'ಶ್ರೀ ಮದ್ಭಗವದ್ಗೀತಾ ತಾತ್ಪರ್ಯ' ಗ್ರಂಥಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1973 ಡಿ. ವಿ. ಜಿ. ಸನ್ಮಾನ ಸಮಿತಿ : ಒಂದು ಲಕ್ಷ ರೂ. ಗೌರವಧನ ಸಮರ್ಪಣೆ. ಗೋಖಲೆ ಸಂಸ್ಥೆಗೆ ದಾನ. ಭಾರತ ಸರ್ಕಾರದ 'ಪದ್ಮಭೂಷಣ' ಪ್ರಶಸ್ತಿ. ನಿಧನ : 1975 ಅಕ್ಟೋಬರ್ 7.

**ಸಾಹಿತ್ಯ ಪಥ** : ಜೀವನ ಚರಿತ್ರೆ : ದಿವಾನ್ ರಂಗಾಚಾರ್ಲು (1911), ಗೋಪಾಲಕೃಷ್ಣ ಗೋಖಲೆ (1915), ವಿದ್ಯಾರಣ್ಯ ವೃತ್ತಾಂತ, ವಿದ್ಯಾರಣ್ಯರ ಸಮಕಾಲೀನರು (1933), ದಾದಾಭಾಯಿ ನವರೋಜಿ (1950). ಮಕ್ಕಳ ಸಾಹಿತ್ಯ : ಬೆಕ್ಕೋಜಿ (1911), ಇಂದ್ರವಜ್ರ (1912), ಕಾವ್ಯ–ಸೌಂದರ್ಯ–ಮೀಮಾಂಸೆ : ಜೀವನ ಸೌಂದರ್ಯ ಮತ್ತು ಸಾಹಿತ್ಯ (1932), ಸಾಹಿತ್ಯ ಶಕ್ತಿ (1950), ಸಂಸ್ಕೃತಿ (1953), ಕಾವ್ಯ ಸ್ವಾರಸ್ಯ (1975). ನಾಟಕ : ಕನಕಾಲುಕಾ (1911), ತ್ರಿಲೋತ್ತಮೆ (1921), ಕನ್ನಡ ಮ್ಯಾಕ್‌ಬೆತ್ (1936), ವಿದ್ಯಾರಣ್ಯ ವಿಜಯ (1941), ಜಾಕ್‌ಕೇಡ್ (1909), ಪ್ರಹಸ ನತ್ರಯೀ (1974), ಪರಶುರಾಮ (1974). ಕವಿತೆ : ವಸಂತಕುಸುಮಾಂಜಲಿ (1922), ನಿವೇದನ (1924), ವಿದ್ಯಾರಣ್ಯ ಸ್ತುತಿ (1924), ಉಮರನ ಒಸಗೆ (1930), ಮಂಕುತಿಮ್ಮನ ಕಗ್ಗ (1943), ಶ್ರೀರಾಮ ಪರೀಕ್ಷಣಂ (1945), ಸ್ವತಂತ್ರ ಭಾರತ (1947), ಮಹಾತ್ಮ ಗಾಂಧಿ (1948), ಅಂತಃಪುರಗೀತೆ (1950), ಮಹಾ ಚುನಾವಣೆ (1951), ವಾಲ್ಮೀಕಿ ವ್ಯಾಸ ವಂದನಂ (1951), ಗೀತಶಾಕುಲ್ತನಮ್ (1960), ಶೃಂಗಾರ ಮಂಗಳಂ (1970), ಶ್ರೀ ಕೃಷ್ಣ ಪರೀಕ್ಷಣಂ (1973). ರಾಜಕೀಯ : ಮೈಸೂರಿನ ಕೈಗನ್ನಡಿ (1915), ವೃತ್ತಪತ್ರಿಕೆ (1928), 'ಸ್ವರಾಜ್ಯ' ಎಂದರೇನು? (1944), ರಾಜ್ಯ ಶಾಸ್ತ್ರ (1957), ರಾಜ್ಯಾಂಗ ತತ್ತ್ವಗಳು (1954), ರಾಜಕೀಯ ಪ್ರಸಂಗಗಳು (1958), ರಾಜಕೀಯ ಪ್ರಸಂಗಗಳು ಭಾಗ ೨ (1960), ಇಂಡಿಯದ ಭಾಷಾಪ್ರಶ್ನೆ, ಇಂಗ್ಲಿಷಿನ ಸ್ಥಾನ (1968), ಸಾರ್ವಜನಿಕದಲ್ಲಿ ಸಾತ್ವಿಕ, ಸಂಕೀರ್ಣಸ್ಮೃತಿ ಸಂಪುಟ (1977), ಡಿ.ವಿ.ಜಿ. ಕೃತಿಶ್ರೇಣಿ (11 ಸಂಪುಟಗಳು).



## ಮುಳಿಯ ತಿಮ್ಮಪ್ಪಯ್ಯ

**ಜೀವನ ಪಥ** : ಜನನ : 3-3-1888, ದ. ಕ. ಜಿಲ್ಲೆಯ ಮುಳಿಯ. ತಂದೆ-ತಾಯಿ : ಕೇಶವಭಟ್ಟ ಮತ್ತು ಮೂಕಾಂಬಿಕಾ. 1911, ಮಂಗಳೂರಿನ ಕೆನರಾ ಪ್ರೌಢಶಾಲೆಯಲ್ಲಿ ಕನ್ನಡ ಪಂಡಿತರು. 1918 ಸೇಂಟ್ ಎಲೋಸಿಯಸ್ ಕಾಲೇಜು, ಮಂಗಳೂರು, ಕನ್ನಡ ಅಧ್ಯಾಪಕರು. 1948 ನಿವೃತ್ತಿ. 1931ರಲ್ಲಿ ಕಾರವಾರ ದಲ್ಲಿ ಜರುಗಿದ 17ನೇ ಕ. ಸಾ. ಸಮ್ಮೇಳಾನಾಧ್ಯಕ್ಷರು. ನಿಧನ : 16-1-1950.

**ಸಾಹಿತ್ಯ ಪಥ** : ಕಾವ್ಯ : ಸೊಬಗಿನ ಬಳ್ಳಿ (ಅಚ್ಚಗನ್ನಡ ಕಾವ್ಯ 1931), ಪ್ರೇಮಪಾಶ (ಷಟ್ಪದಿ), ನವನೀತ ರಾಮಾಯಣ (1940), ತ್ರಿಪುರ ದಾಹ.

ಕಾದಂಬರಿ : ಪಶ್ಚಾತ್ತಾಪ (1934), ವೀರಬಂಕೆಯ (ಐ. ಕಾ. 1948), ನಾಟಕ : ಹಗಲಿರುಳು, ಯಕ್ಷಗಾನ: ಸೂರ್ಯಕಾಂತಿ ಕಲ್ಯಾಣ, ಗದ್ಯ : ಚಂದ್ರಾವಳಿ ವಿಲಾಸ (ಹ. ಗ. ಗದ್ಯ 1913), ನಡತೆಯ ನಾಡು (1917), ಇತರೆ : ಸಮಸ್ತ ಭಾರತ ಸಾರ (1941), ಪಾರ್ತಿಸುಬ್ಬ (1945) ನಾಡೋಜ ಪಂಪ (1938), ಕವಿರಾಜಮಾರ್ಗ ವಿವೇಕ (ಭಾಗ 1, 1949), ಕನ್ನಡ ಸಾಹಿತ್ಯ ಮತ್ತು ಇತರ ಉಪನ್ಯಾಸಗಳು, ಸಂಪಾದಿತ : ಆದಿಪುರಾಣ ಸಂಗ್ರಹ. ಸ್ಮಾರಕ ಗ್ರಂಥ : ಶ್ರದ್ಧಾಂಜಲಿ (1957).



## ಹರ್ಡೇಕರ್ ಮಂಜಪ್ಪ

**ಜೀವನ ಪಥ** : ಜನನ : 1889, ಫೆಬ್ರುವರಿ 18, ಬನವಾಸಿಯಲ್ಲಿ ಶಿಕ್ಷಣ: 1903 ಮುಲ್ಕಿ ಪರೀಕ್ಷೆ. 1903 ಶಾಲಾ ಉಪಾಧ್ಯಾಯ ವೃತ್ತಿ, ಅನಂತರ 1906ರಿಂದ ಪತ್ರಿಕಾರಂಗ : ಧನುರ್ಧಾರಿ' ಪತ್ರಿಕೆ ಸ್ಥಾಪನೆ. ನಿಧನ : 1947, ಜನವರಿ 3.

**ಸಾಹಿತ್ಯ ಪಥ** : ವ್ಯಕ್ತಿಚಿತ್ರ, ಜೀವನ ಚರಿತ್ರೆ : ಮಹಾತ್ಮಾಗಾಂಧಿಯವರ ಈವರೆಗಿನ ಚರಿತ್ರೆ. (1919) ಶ್ರೀ ಸ್ವಾಮಿ ರಾಮತೀರ್ಥರವರ ಚರಿತ್ರೆ ಮತ್ತು ಆರು ಉಪನ್ಯಾಸಗಳು (1921), ವರಾದ ಮಲ್ಲಪ್ಪನವರ ಚರಿತ್ರೆ, ಶ್ರೀ ಲಿಂಗರಾಜರ ಚರಿತ್ರೆ (1924), ಪ್ರಭುದೇವರ ಕಥೆ, ಪುಲಿಕೇಶಿಯ ಚರಿತ್ರೆ, ಸ್ವಾಮಿ ವಿವೇಕಾನಂದರ ಚರಿತ್ರೆ. ಇತರೆ : ಸ್ವಕರ್ತವ್ಯ (1915), ಬುದ್ಧಿಯ ಮಾತು (1916), ಆರೋಗ್ಯ ಜೀವನ, ಆಧುನಿಕ ಜರ್ಮನಿ, ಪತಿತೋದ್ಧಾರ, ಭಾರತೀಯ ದೇಶಭಕ್ತಿ (1921), ವಿಜಯವಾಣಿ, ಖಾದಿಶಾಸ್ತ್ರ(1933), ಬಸವಬೋಧಾಮೃತ, ಶುದ್ಧಿ ಮತ್ತು ಸಂಘಟನೆ (1938), ಪ್ರಮಾಥಾಚಾರ ದೀಪಿಕೆ, ಜಾತ್ರೆಗಳ ಸುಧಾರಣೆ, ಗೃಹಶಿಕ್ಷಣ, ಸ್ತ್ರೀ ನೀತಿ ಸಂಗ್ರಹ. ಆದಿಜನ ಸುಧಾರಣೆ. ದಾಂಪತ್ಯ ಧರ್ಮ, ದಾಂಪತ್ಯ ಜೀವನ, ವೀರಶೈವ ಮತಬೋಧೆ, ವೀರಶೈವ ಮತತತ್ತ್ವ, ಕಾಯಕವೇ ಕೈಲಾಸ, ಹಿಂದೂಗಳ ಕೈಗನ್ನಡಿ, ಏಕಲವ್ಯನ ಕಥೆ. ಜಾತೀಯವಾದ ವಿಮರ್ಶೆ, ವಚನಕಾರರ ಸಮಾಜ ರಚನೆ (ಸಂಪಾದಿತ 1938) ವೀರಶೈವ ಏಕೀಕರಣ, ಕಚದೇವನ ಕಥೆ, ಸುಗ್ಗಲಾ ದೇವಿಯ ಕಥೆ. ದೇವಯಾನಿಯ ಕಥೆ. ಅಕ್ಕನ ಉಪದೇಶ, ಅಣ್ಣನ ಅರ್ಪಣಯೋಗ, ತರುಣರ ಕೈಗನ್ನಡಿ, ಗಾಂಧಿಯವರ ಗೋಸೇವೆ, ಕೇರ್ ಹಾರ್ಡಿಯವರ ಭಾರತ ಪರ್ಯಟನ, ಸತ್ಯಾಗ್ರಹ, ಬ್ರಹ್ಮಚರ್ಯ, ಖಾದಿ, ಅಹಿಂಸೆ, ಸತ್ಯಾಗ್ರಹ ಪದ್ಯಾವಳಿ, ಸುಬೋಧಸಾರ (ಸಂಪಾದಿತ 1940), ಎಚ್ಚೆತ್ತ ಹಿಂದೂಸ್ಥಾನ (1946), ಋಗ್ವೇದ ಸಾರ, ಶ್ರೀಗುರುಸಂಗನ ಬಸವ ಸ್ತುತಿ (ಹಾಡುಗಬ್ಬ), ಜನಸೇವಕನ ವಚನಗಳು (1935). ಆತ್ಮಕಥೆ : ಕಳೆದ ಮೂವತ್ತು ವರ್ಷಗಳ ನನ್ನ ಕಾಣಿಕೆ (1936).



## ಕಪಟರಾಳ ಕೃಷ್ಣರಾವ್

**ಜೀವನ ಪಥ** : ಜನನ : 1889, ಜೇವರ್ಗಿ ತಾಲ್ಲೂಕಿನ ಹಾಲಗಡಲಿ. ಶಿಕ್ಷಣ : ಪುಣೆಯಲ್ಲಿ ಕಾನೂನು ಅಧ್ಯಯನ. ಕಲ್ಬುರ್ಗಿಯಲ್ಲಿ ವಕೀಲ ವೃತ್ತಿ. ರಾಜ್ಯಸರ್ಕಾರದಿಂದ ಗೌರವ. ನಿಧನ : 1996.

**ಸಾಹಿತ್ಯ ಪಥ** : 1 ಕರ್ನಾಟಕದ ಲಾಕುಳ ಶೈವರ ಇತಿಹಾಸ (1955), 2. ಕರ್ನಾಟಕ ಸಂಸ್ಕೃತಿ ಸಂಶೋಧನೆ (1970), 3. ಸುರಪುರ ಸಂಸ್ಥಾನದ ಇತಿಹಾಸ (1977), ಭಾಷಾಂತರ : ತಂದೆ ಮಗಳಿಗೆ ಬರೆದ ಪತ್ರಗಳು. ಜಯಂತಿ, ಕರ್ಮವೀರ, ಶರಣ ಸಾಹಿತ್ಯ ಮುಂತಾದ ಪತ್ರಿಕೆಗಳಲ್ಲಿ ಅನೇಕ ಸಂಶೋಧನ ಲೇಖನಗಳು.



## ಎ. ಆರ್. ಕೃಷ್ಣಶಾಸ್ತ್ರಿ

**ಜೀವನ ಪಥ** : ಜನನ : 1890, ಫೆಬ್ರವರಿ 12, ಚಿಕ್ಕಮಗಳೂರು ಜಿಲ್ಲೆಯ ಅಂಬಳೆಯಲ್ಲಿ. ಶಿಕ್ಷಣ : 1914ರಲ್ಲಿ ಬಿ.ಎ., ಮದರಾಸು ವಿಶ್ವ ವಿದ್ಯಾಲಯದಿಂದ ಕನ್ನಡ ಎಂ.ಎ., 1916 ಸೆಂಟ್ರಲ್ ಕಾಲೇಜಿನಲ್ಲಿ ಟ್ಯೂಟರ್ ಆಗಿ ಅಧ್ಯಾಪಕ ವೃತ್ತಿ ಪ್ರಾರಂಭ. ಸೆಂಟ್ರಲ್ ಕಾಲೇಜಿನಲ್ಲಿ 1918 ರಲ್ಲಿ ಕರ್ನಾಟಕ ಸಂಘ, 1919ರಲ್ಲಿ ಪ್ರಬುದ್ಧ ಕರ್ನಾಟಕಗಳ ಪ್ರಾರಂಭ. ಮಹಾರಾಜಾ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ನಿವೃತ್ತಿ. 1941ರಲ್ಲಿ ಹೈದರಾಬಾದ್‌ನಲ್ಲಿ ನಡೆದ 26ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. 1961, ಬಂಕಿಮಚಂದ್ರ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ನಿಧನ : 1968 ಫೆಬ್ರವರಿ 1.

**ಸಾಹಿತ್ಯ ಪಥ** : ಕಥೆ/ಕಥಾಸಾರ : ಶ್ರೀಪತಿಯ ಕಥೆಗಳು, ಕಥಾಮೃತ, ವಚನಭಾರತ, ನಿರ್ಮಲಭಾರತೀ (ಮಕ್ಕಳ ಮಹಾಭಾರತ). ಸಂಪಾದನೆ : ಹರಿಶ್ಚಂದ್ರ ಕಾವ್ಯ ಸಂಗ್ರಹ, (1931, ಟಿ.ಎಸ್. ವೆಂಕಣ್ಣಯ್ಯನವರೊಡನೆ), ಕವಿಜಿಹ್ವಾ ಬಂಧನ. ಶಾಸ್ತ್ರ/ವಿಮರ್ಶೆ : ಕನ್ನಡ ಕೈಪಿಡಿ (ಅಲಂಕಾರ ಭಾಗ), ಭಾಸಕವಿ, ಸಂಸ್ಕೃತ ನಾಟಕ 1937, ಸರ್ವಜ್ಞ ಕವಿ, ಬಂಕಿಮಚಂದ್ರ 1960, ಭಾಷಣಗಳು ಮತ್ತು ಲೇಖನಗಳು (1960). ಅನುವಾದ : ನಾಗ ಮಹಾಶಯ, ಶ್ರೀ ರಾಮಕೃಷ್ಣ ಪರಮಹಂಸರ ಚರಿತ್ರೆ, ಸ್ವಾಮಿ ಶಿಷ್ಯ ಸಂವಾದ, ನಿಬಂಧಮಾಲಾ.



## ಮಾಸ್ತಿ ವೆಂಕಟೇಶ ಅಯ್ಯಂಗಾರ್

**ಜೀವನ ಪಥ** : ಜನನ : 1891, ಜೂನ್ 6, ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕು ಮಾಸ್ತಿ ಗ್ರಾಮದಲ್ಲಿ. ಶಿಕ್ಷಣ : 1912ರಲ್ಲಿ ಬಿ.ಎ., 1914ರಲ್ಲಿ ಎಂ.ಎ. 1915 ಅಸಿಸ್ಟೆಂಟ್ ಕಮಿಷನರ್ ಆಗಿ ನೇಮಕ. 1929 ಬೆಳಗಾವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು. 1930 ಡೆಪ್ಯುಟಿ ಕಮಿಷನರ್ ಆಗಿ ಬಡ್ತಿ. 1942ರಲ್ಲಿ 'ರಾಜಸೇವಾಸಕ್ತ' ಬಿರುದು. 1943, ಸರಕಾರದ ಸೇವೆಯಿಂದ ಸ್ವಾಪೇಕ್ಷಿತ ನಿವೃತ್ತಿ. 1944-1965 'ಜೀವನ' ಪತ್ರಿಕೆ ಸಂಪಾದನೆ, ಪ್ರಕಟನೆ. 1953-54 ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆ. 1956ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪ್ರಶಸ್ತಿ. 1956ರಲ್ಲಿ ಬೊಂಬಾಯಿಯಲ್ಲಿ ನಡೆದ ಅಖಿಲ ಭಾರತ ಲೇಖಕರ ಸಮ್ಮೇಳನದ ಅಧ್ಯಕ್ಷರು. 1964 ಪಿ.ಇ.ಎನ್. ಸಂಸ್ಥೆಯ ಉಪಾಧ್ಯಕ್ಷರಾಗಿ ಆಯ್ಕೆ. 1968ರಲ್ಲಿ ಸಣ್ಣ ಕಥೆಗಳು ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ. 1974ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಫೆಲೋ ಆಗಿ ಆಯ್ಕೆ. 1976 ಪಿ.ಇ.ಎನ್. ಸಂಸ್ಥೆಯ ಅಧ್ಯಕ್ಷರಾಗಿ ಆಯ್ಕೆ. 1977ರಲ್ಲಿ ಮೈಸೂರು

ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪ್ರಶಸ್ತಿ. 1979ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1983ರಲ್ಲಿ ಚಿಕವೀರರಾಜೇಂದ್ರ ಕೃತಿಗೆ ಜ್ಞಾನಪೀಠ ಪ್ರಶಸ್ತಿ ಗೌರವ. ನಿಧನ : 1986, ಜೂನ್ 6.

**ಸಾಹಿತ್ಯ ಪಥ** : ಸಣ್ಣಕಥೆಗಳು : ರಂಗನ ಮದುವೆ (1910-11), ಇತರ ಹತ್ತು ಕತೆಗಳು (1911-20), ಕೆಲವು ಸಣ್ಣಕತೆಗಳು (1911-20), ಸಣ್ಣಕತೆಗಳು (1924), ಸುಬ್ಬಮ್ಮ (ನೀಳ್ಗತೆ 1928), ನಾಲ್ಕು ಸಣ್ಣಕತೆಗಳು (1930), ಸಣ್ಣ ಕತೆಗಳು-4 (1934), ಸಣ್ಣಕತೆಗಳು-5 (1936), ಸಣ್ಣಕತೆಗಳು-6 (1940), ಸಣ್ಣಕತೆಗಳು-7 (1947), ಸಣ್ಣಕತೆಗಳು-8 (1948), ಸಣ್ಣಕತೆಗಳು-9 (1949), ಸಣ್ಣಕತೆಗಳು-10 (1950), ಸಣ್ಣಕತೆಗಳು-11 (1957), ಸಣ್ಣ ಕತೆಗಳು (1965), ಸಣ್ಣಕತೆಗಳು-12 (1968), ಶೇಷಮ್ಮ (1976), ಸಣ್ಣಕತೆಗಳು-15 (1984), ಮಾತುಗಾರ ರಾಮಣ್ಣ (1985), ಸಮಗ್ರ ಕತೆಗಳು (ಎರಡು ಸಂಪುಟಗಳು). ಕಾವ್ಯ : ಬಿನ್ನಹ (1922), ಅರುಣ (1924), ತಾವರೆ (1930), ಚೆಲುವು (1931), ಮಲಾರ (1933), ಗೌಡರಮಲ್ಲಿ (1940), ರಾಮನವಮಿ (1941), ಮೂಕನಮಕ್ಕಳು (1943), ನವರಾತ್ರಿ-ಭಾಗ 2 (1944), ನವರಾತ್ರಿ - ಭಾಗ 5 (1945), ನವರಾತ್ರಿ-ಭಾಗ 3 (1946), ಸುನೀತ (1946), ನವರಾತ್ರಿ (1948), ಮನವಿ (1951), ನವರಾತ್ರಿ-ಭಾಗ 1 (1953), ಸಂಕ್ರಾಂತಿ (1969). ಶ್ರೀರಾಮ ಪಟ್ಟಾಭಿಷೇಕ (1972). ನಾಟಕ : ಶಾಂತಾ (1923), ಸಾವಿತ್ರಿ (1923), ಉಷಾ (1927), ತಾಳೀಕೋಟೆ (1929), ಮಂಜುಳ (1930), ಶಿವಛತ್ರಪತಿ (1932), ಯಶೋಧರಾ (1933), ತಿರುಪಾಣಿ (1937), ಕಾಕನಕೋಟೆ (1938), ಮಾಸ್ತಿ (1953), ಅನಾರ್ಕಳಿ (1955), ಪುರಂದರದಾಸ (1964), ಕನಕಣ್ಣ (1965), ಭಟ್ಟರ ಮಗಳು (1969), ಬಾನುಲಿ ದೃಶ್ಯಗಳು (1974), ಕಾಳಿದಾಸ (1978), ಅಜ್ಜನ ದಾರಿ (1983), ವಿಮಲ ಮರಿಯಾನ್ (1985), ಜೀವನಚರಿತ್ರೆ : ರವೀಂದ್ರನಾಥ ಠಾಕೂರ್ (1935), ಶ್ರೀರಾಮ ಕೃಷ್ಣ (1936). ಸಾಹಿತ್ಯವಿಮರ್ಶೆ/ಪ್ರಬಂಧ/ಉಪನ್ಯಾಸ : ಸಾಹಿತ್ಯ (1924), ವಿಮರ್ಶೆ (1924), ವಿಮರ್ಶೆ-2 (1929), ಕನ್ನಡ ಸೇವೆ (1930), ಜನತೆಯ ಸಂಸ್ಕೃತಿ (1931), ವಿಮರ್ಶೆ-3 (1933), ಜನಪದ ಸಾಹಿತ್ಯ (1937), ಆದಿಕವಿ ವಾಲ್ಮೀಕಿ (1938), ವಿಮರ್ಶೆ-4 (1939), ತಾಯ್ನುಡಿಯ ತಮಂಡಿ (1944), ಕನ್ನಡ ಲೆಂಕ (1957), ನಮ್ಮ ನುಡಿ (1960), ವಿಚಾರ (1971), ಸಾಹಿತ್ಯ ಪ್ರೇರಣೆ (1975), ನವರತ್ನ ರಾಮರಾವ್ (1976), ಆರಂಭದ ಆಂಗ್ಲಸಾಹಿತ್ಯ (1979), ನಮ್ಮ ಹೊಸ ಸಾಹಿತ್ಯದ ಆರಂಭ (1979), ಅರ್ಚನ (1979), ಉತ್ತರಕಾಂಡ ವಿಚಾರ (1981), ಐತಿಹಾಸಿಕ ಕಾದಂಬರಿ: ಚೆನ್ನಬಸವನಾಯಕ (1950), ಚಿಕವೀರ ರಾಜೇಂದ್ರ (1956), ಇತರೆ : ಪ್ರಸಂಗ (1946), ಪೂಜನ (1951), ಚಿಂತನ (1952), ಭಾರತತೀರ್ಥ (1952), ಸರ್ ಎಂ. ವಿಶ್ವೇಶ್ವರಯ್ಯ (ಸಂಪಾದಿತ) (1960), ಪ್ರಸಂಗ-2 (1963), ಪ್ರಸಂಗ-3 (1965), ಸಂಪಾದಕೀಯ ಭಾಗ 1,2,3,4,5 (1967), ಸಾಹಿತ್ಯಲಾಲನೆ (1967), ಪ್ರಸಂಗ-4 (1967), ಭಾವ ಭಾಗ 1,2,3 (1968-69), ಪತ್ರಗಳು (1977), ಪ್ರಸಂಗ-5 (1980), ಸಂಕ್ಷಿಪ್ತ ವಾಲ್ಮೀಕಿ ರಾಮಾಯಣ (1981), ಅಂತರಗಂಗೆ (1982), ಧರ್ಮಸಂರಕ್ಷಣೆ (1983), ಅನುವಾದ : ಚಿತ್ರಾಂಗದ (ಮೂಲ : ಠಾಕೂರ್) (1945), ಹ್ಯಾಮ್‌ಲೆಟ್ (1958), ಚಂಡಮಾರುತ (ಷೇಕ್ಸ್‌ಪಿಯರ್) (1959), ಲಿಯರ್ ಮಹಾರಾಜ (1959), ದ್ವಾದಶರಾತ್ರಿ (1959), ಶ್ರೀಕೃಷ್ಣ ಕರ್ಣಾಮೃತ (ಸಂಸ್ಕೃತದಿಂದ) (1959), ಷೇಕ್ಸ್‌ಪಿಯರ್ ದೃಶ್ಯಗಳು 1 (1963), ಷೇಕ್ಸ್‌ಪಿಯರ್ ದೃಶ್ಯಗಳು 2 (1964), ಷೇಕ್ಸ್‌ಪಿಯರ್ ದೃಶ್ಯಗಳು 3 (1964), ಇಂಗ್ಲಿಷ್‌ನಲ್ಲಿ: Popular Culture in Karnataka (19370, The Poetry of Valmiki (1940), Subbanna (1943), Short Stories 1,2,3,4. (1943-44), Ravindranth Tagore, Chenna Basava Nayaka (1957), Short Stories (1968), Essays, Addresses (1975), Rajaji Vol. I & II (1975). Srimad Bhagavadgita - A Study (1978). Addresses (1980) Kalidasa (1980), Thoughts on Religion (1983), Thinking of my life (1983).

## ಚಂದ್ರಶೇಖರ ಶಾಸ್ತ್ರಿಗಳು



**ಜೀವನ ಪಥ** : ಜನನ : ಜನವರಿ 3, 1892, ಬಳ್ಳಾರಿ ಜಿಲ್ಲೆ ಹೂವಿನ ಹಡಗಲಿ ತಾಲ್ಲೂಕಿನ ಹೊಳಲು. ತಂದೆ, ತಾಯಿ : ಹಿರೇಮಠದ ಪಟ್ಟದಯ್ಯ ಮತ್ತು ಬಸಮ್ಮ. ಶಿಕ್ಷಣ : ಮಾಗಳ, ಹೊಳಲುಗಳಿ ಪ್ರಾಥಮಿಕ ವ್ಯಾಸಂಗ. ಅನಂತರ ಸಂಸ್ಕೃತ ಪಾಠಶಾಲೆಗಳಲ್ಲಿ ವ್ಯಾಸಂಗ. ಕಲಕತ್ತೆಯಿಂದ 'ವ್ಯಾಕರಣ ತೀರ್ಥ' ಪದವಿ. 1924 ಯಾದಗಿರಿ ಸಂಸ್ಕೃತ ಕಾಲೇಜು ಪ್ರಾರಂಭ, ಅದರ ಪ್ರಾಚಾರ್ಯರು, ಕರ್ನಾಟಕ ಏಕೀಕರಣ ಚಳವಳಿ, ಗೋಕಾಕ್ ಚಳವಳಿಗಳಲ್ಲಿ ಪಾತ್ರ. ಧಾರವಾಡದಲ್ಲಿ ನಡೆದ 25ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. 1968 ಕ.ಸಾ.ಅಕಾಡೆಮಿ ಪುರಸ್ಕಾರ, 1983 ರಾಜ್ಯ ಪ್ರಶಸ್ತಿ, 1996 ಚಿದಾನಂದ ಪ್ರಶಸ್ತಿ ಗೌರವಗಳು ಸಂದಿವೆ. ನಿಧನ : 24 ಅಕ್ಟೋಬರ್ 1997.

**ಸಾಹಿತ್ಯ ಪಥ** : ಬಸವತತ್ತ್ವ ರತ್ನಾಕರ, ಕಾಡಸಿದ್ದೇಶ್ವರ ವಚನ, ಧಾರವಾಡದ ಮೃತ್ಯುಂಜಯ ಶಿವಯೋಗಿಗಳ ಚರಿತ್ರೆ (ಉಪಲಬ್ಧ ಕೃತಿಗಳು). ಧರ್ಮವೀರ ಶಂಕ್ರಣ್ಣನವರ ಚರಿತೆ, ಮದನ ಮೋಹನ ಮಾಲವೀಯರ ಚರಿತ್ರೆ, ಸ್ವತಂತ್ರ ಸಿದ್ಧಲಿಂಗೇಶ್ವರ ವಚನ, ಸಿದ್ದೇಶ್ವರ ವಚನ, ರಾಜಗಿರಿ, ಶಬರ ಶಂಕರ ಪಾರ್ಥಪುರುಷ, ಲಿಂಗಧಾರಣವೂ ವೇದ ಮಂತ್ರಗಳೂ, ಚಾಣಕ್ಯ ನೀತಿ ದರ್ಪಣ, ರೇಣುಕ ವಿಜಯ ಇತ್ಯಾದಿ ಅನುಪಲಬ್ಧ ಕೃತಿಗಳು.

## ಕೆ.ಜಿ. ಕುಂದಣಗಾರ



**ಜೀವನ ಪಥ** : ಜನನ : 14 ಆಗಸ್ಟ್ 1892, ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕು ಕೌಜಲಗಿಯಲ್ಲಿ. ತಂದೆ : ಗಿರಿಯಪ್ಪ (ಗುರಪ್ಪ), ಶಿಕ್ಷಣ : 1909 ಮೆಟ್ರಿಕ್ಯುಲೇಷನ್, ಧಾರವಾಡ, 1913 ಇಂಟರ್ ಮೀಡಿಯೆಟ್, ಪುಣೆ. 1916-18 ಕೊಲ್ಲಾಪುರ ರಾಜಾರಾಮ ಹೈಸ್ಕೂಲಿನಲ್ಲಿ ಉಪಾಧ್ಯಾಯರು, 1918-25 ಮುನಿಸಿಪಲ್ ಹೈಸ್ಕೂಲ್, ಗೋಕಾಕ. 1919 ಬಿ.ಎ., 1925 ಎಂ.ಎ., (ಕನ್ನಡ). 1925 ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಅಧ್ಯಾಪಕರು, 1929-48 ಕೊಲ್ಲಾಪುರ ರಾಜಾರಾಮ್ ಕಾಲೇಜು. 1946 ಅಧ್ಯಕ್ಷರು, ದ್ರಾವಿಡ-ಕನ್ನಡ ವಿಭಾಗ ಗೋಷ್ಠಿ ಅ.ಭಾ. ಪ್ರಾಚ್ಯ ಸಮ್ಮೇಳನ, ಮುಂಬಯಿ. 1948-65 ಗೌರವ ಪ್ರಾಧ್ಯಾಪಕರು, ಆರ್.ಪಿ.ಡಿ. ಕಾಲೇಜು, ಬೆಳಗಾವಿ. 1961ರಲ್ಲಿ ಗದಗದಲ್ಲಿ ನಡೆದ 43ನೇ ಅ.ಭಾ. ಕನ್ನಡ ಸಾಹಿತ್ಯ

ಸಮ್ಮೇಳನ ಅಧ್ಯಕ್ಷತೆ. 1961 'ಕುಂದಣ' ಸಂಭಾವನ ಗ್ರಂಥ ಸಮರ್ಪಣೆ. ನಿಧನ : 22 ಆಗಸ್ಟ್ 1965.

**ಸಾಹಿತ್ಯ ಪಥ** : ಸಂಪಾದಿತ : ಗದ್ಯಮಾಲೆ (ಬೆಟಗೇರಿ ಕೃಷ್ಣಶರ್ಮರೊಡನೆ), ಕುಮುದೇಂದು ರಾಮಾಯಣ (1936), ಚಿನ್ಮಯ ಚಿಂತಾಮಣಿ (1930), ಜ್ಞಾನ ಭಾಸ್ಕರ ಚರಿತೆ (1931), (ಆ.ನೆ. ಉಪಾಧ್ಯೆ ಜೊತೆ), ತೋರಣ (ಡಿ.ಎಸ್. ಕರ್ಕಿ, ಎಸ್.ಡಿ. ಇಂಚಲ ಜೊತೆ), ರಟ್ಟರ ಕಾವ್ಯ ಗುಚ್ಛವು (1927), ಪೂರ್ವಪುರಾಣ (1942), ಲೀಲಾವತಿ ಪ್ರಬಂಧಂ (1946), ಹರಿಹರದೇವ (1937), ಆದಿಪುರಾಣ (1953). ಪಠ್ಯಪುಸ್ತಕಮಾಲೆ : ಇಂದ್ರಿಯ ವಿಜ್ಞಾನವೂ ಆರೋಗ್ಯ ಶಾಸ್ತ್ರವೂ. ಕಾದಂಬರಿ : ಸರಸ್ವತಿ (1930). ಜೀವನ ಚರಿತ್ರೆ : ಮಹಾದೇವಿಯಕ್ಕ (1938). ಅನುವಾದ : ಭರತೇಶ ವೈಭವ (ಕೆಲವು ಪದ್ಯಗಳು, ಮರಾಠಿಗೆ), ರತ್ನಾವಳಿ (ಮರಾಠಿಗೆ), ನಾಗಾನಂದ (ಮರಾಠಿಗೆ), ಸೂರಿನಿಂದ (ಮರಾಠಿಯಿಂದ ಕನ್ನಡಕ್ಕೆ). ಜಿನವಿಜಯ, ವಾಗ್ಭೂಷಣ ಪತ್ರಿಕೆಗಳ ಸಂಪಾದಕತ್ವ. ಇಂಗ್ಲಿಷ್‌ನಲ್ಲಿ : Some Notes on Shri Mahalakshmi Temple, Kolhapur (1929), Inscriptions in Northern Karnataka and the Kolhapur State (1939). ನಿಂಬಸಾಂಬ ಚರಿತೆ (ಅಪ್ರಕಟಿತ).



## ಎಂ.ಆರ್. ಶ್ರೀನಿವಾಸಮೂರ್ತಿ

**ಜೀವನ ಪಥ** : ಜನನ : 1893, ಆಗಸ್ಟ್ 2, ಮೈಸೂರು. ಶಿಕ್ಷಣ : 1915ರಲ್ಲಿ ಬಿ.ಎ., ಸ್ನಾತಕೋತ್ತರ ಶಿಕ್ಷಣ ತರಬೇತಿ. ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿ ವೃತ್ತಿ ಪ್ರಾರಂಭ. 1949, ಜಿಲ್ಲಾ ವಿದ್ಯಾಧಿಕಾರಿಯಾಗಿ ನಿವೃತ್ತಿ. 1943 ಇಂಗ್ಲಿಷ್-ಕನ್ನಡ ನಿಘಂಟು ಸಂಪಾದಕರು. 1950ರಲ್ಲಿ ಸೊಲ್ಲಾಪುರದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ನಿಧನ : 1953, ಸೆಪ್ಟೆಂಬರ್ 16.

**ಸಾಹಿತ್ಯ ಪಥ** : ನಾಟಕ : ಕಂಠೀರವ ವಿಜಯ 1923, ನಾಗರಿಕ 1930. ರೋಲ್ಸ್ ಮೇಷ್ಟ್ರು 1941,ಧರ್ಮದುರಂತ 1947. ವಿಮರ್ಶೆ : ವಚನಧರ್ಮಸಾರ 1944, ಸಾಹಿತ್ಯಲೋಕ (ಸಂ. ಎನ್.ಎಸ್. ತಾರಾನಾಥ್ 1978). ಕಾದಂಬರಿ : ಸಾವಿತ್ರಿ 1917, ರಂಗಣ್ಣನ ಕನಸಿನ ದಿನಗಳು 1949, ಮಹಾತ್ಯಾಗ 1958. ಸಂಪಾದನೆ : ಪ್ರಭುಲಿಂಗಲೀಲೆಯ ಸಂಗ್ರಹ (ಇತರರೊಡನೆ 1934). ಚೆನ್ನಬಸವ ಪುರಾಣ ಸಂಗ್ರಹ 1976. ಅನುವಾದ: ಉಪಾಧ್ಯಾಯರ ಆರೋಗ್ಯಶಾಸ್ತ್ರ 1939. ಕವಿತೆ : ಕವಿಯ ಸೋಲು 1933 ಜೀವನಚಿತ್ರ : ಭಕ್ತಿಭಂಡಾರಿ ಬಸವಣ್ಣನವರು 1931. ಇತರೆ : ಅಯಸ್ಕಾಂತತೆ ಮತ್ತು ವಿದ್ಯುಚ್ಛಕ್ತಿ 1933, ಸ್ಕೌಟುಗಳ ಕನ್ನಡ ಕೈಪಿಡಿ 1925. ಕವಿಕಾವ್ಯ ವಿಮರ್ಶೆ ಸಮೇತ ಅಪ್ರಕಟಿತ ಗ್ರಂಥ ಸಂಗ್ರಹಗಳು : ರಾಘವಾಂಕನ ಕಾವ್ಯ, ಶಿವತತ್ತ್ವ ಚಿಂತಾಮಣಿ, ಗುರುರಾಜ ಚರಿತ್ರೆ, ವೀರಶೈವಾಮೃತ ಪುರಾಣ, ನಿಜಗುಣ ಶಿವಯೋಗಿ ಮತ್ತು ಆತನ ಏಳು ಕಾವ್ಯಗಳು, ಚೆನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ, ಶಬರ ಶಂಕರ ವಿಳಾಸ ಸಂಗ್ರಹ, ವಿರಕ್ತ ತೋಂಟದಾರ್ಯನ ಸಿದ್ಧೇಶ್ವರನ ಪುರಾಣ, ಷಡಕ್ಷರಿಯ ರಾಜಶೇಖರ ವಿಳಾಸ ಸಂಗ್ರಹ, ಸರ್ವಜ್ಞ, ವೀರಶೈವ ಪುರಾಣಗಳು, ಹರಿಹರ, ಚತುರ್ಮುಖ ಬೊಮ್ಮರಸ.



## ಶಿ.ಶಿ. ಬಸವನಾಳ

**ಜೀವನ ಪಥ** : ಜನನ : ನವೆಂಬರ್ 7, 1893. 1914- ಬಿ. ಎ. ಪದವಿ, 1916- ಎಂ. ಎ. ಪದವಿ, 1916- ಕರ್ನಾಟಕ ಲಿಂಗಾಯತ ಎಜುಕೇಶನ್ ಸೊಸೈಟಿಯ ಸ್ಥಾಪನೆ. ಗಿಲಗಂಜಿ ಅರಟಾಳ ಹೈಸ್ಕೂಲಿನ ಸ್ಥಾಪಕ ಮುಖ್ಯೋಪಾಧ್ಯಾಯ. 1922-33-ರಾಜಾ ಲಖಮಗೌಡ ಸರಸೇಸಾಯಿ ಪ್ರೌಢಶಾಲೆಯ ಮುಖ್ಯಸ್ಥ. 1924-38- ಮುಂಬೈ ವಿಶ್ವವಿದ್ಯಾಲಯದ ಸೆನೆಟ್ ಸದಸ್ಯ ಹಾಗೂ ಫೆಲೋ, 1933- ಲಿಂಗರಾಜ ಆರ್ಟ್ಸ್ ಕಾಲೇಜಿನ ಮುಖ್ಯ ಪ್ರಾಧ್ಯಾಪಕ, ಉಪಪ್ರಾಚಾರ್ಯ. 1939-ಅಖಿಲ ಭಾರತೀಯ ವೀರಶೈವ ಮಹಾಸಭೆಯ 13ನೇ ಅಧಿವೇಶನದ ಅಧ್ಯಕ್ಷ, 1944, 28ನೆಯ ಕನ್ನಡ ಸಾಹಿತ್ಯ ಸಮ್ಮೇಳನ (ರಬಕವಿ)ಯ ಅಧ್ಯಕ್ಷ. 1949-ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯ. ನಿಧನ : ಡಿಸೆಂಬರ್ 22, 1951

**ಸಾಹಿತ್ಯ ಪಥ** : ಸಂಪಾದಿತ ಕೃತಿಗಳು : ಚೆನ್ನಬಸವ ಪುರಾಣ-1934, ಪ್ರಭುಲಿಂಗ ಲೀಲೆ -1838, ಕಾವ್ಯಾವಲೋಕನಂ, 1939, (ಕೇಪು ಶಂಕರನಾರಾಯಣರೊಡನೆ), ಶಬರ ಶಂಕರ ವಿಳಾಸಂ, 1941-ಕರ್ನಾಟಕ ಶಬ್ದಾನುಶಾಸನ ಪ್ರಕಾಶಿಕೆ (ಇತರರೊಡನೆ), ರೇವಣಸಿದ್ಧೇಶ್ವರ ದೇವರ ರಗಳೆ. ವೀರಶೈವ ತತ್ವಪ್ರಕಾಶ, 1943- ರಕ್ಷಾಶತಕ ಮತ್ತು ಪಂಪಾಶತಕ, ಕೈವಲ್ಯ ದರ್ಪಣಂ,1945-ಮೈಲಾರದ ಬಸವಲಿಂಗ ಶರಣರ ಕೃತಿಗಳು 1948- ಕೈವಲ್ಯ ಕಲ್ಪ ವಲ್ಲರಿ 1951- ಬಸವಣ್ಣನವರ ಷಟ್‌ಸ್ಥಲದ ವಚನಗಳು, 1954-ಬಸವಣ್ಣನವರ ಹೆಚ್ಚಿಗೆ ದೊರೆತ ವಚನಗಳು. ಸ್ವತಂತ್ರ ಕೃತಿಗಳು: ಹಿಂದೂಸ್ಥಾನದ ಇತಿಹಾಸ, ಇಂಗ್ಲೆಂಡಿನ ಅರ್ವಾಚೀನ ಇತಿಹಾಸ- (ಹಂಪಯ್ಯ ಹಲಗಲಿಯವರೊಡನೆ) A case of Karnataka University-(ಸ.ಸ.ಮಾಳವಾಡರೊಡನೆ 1945) ಅನುವಾದ : Musings of Shiva-(ಕೆ. ಆರ್. ಶ್ರೀನಿವಾಸ ಅಯ್ಯಂಗಾರ್‌ರೊಡನೆ 1940).



## ತಿರುಮಲೆ ತಾತಾಚಾರ್ಯ ಶರ್ಮ

**ಜೀವನ ಪಥ** : ಜನನ : 27 ಏಪ್ರಿಲ್ 1895. 1915ರಲ್ಲಿ ಪ್ರೌಢಶಾಲಾ ಶಿಕ್ಷಣ. 1920 ಕೇಂದ್ರ ಶಾಸನ ಇಲಾಖೆಯಲ್ಲಿ ವೃತ್ತಿ. 1925 'ವಿಶ್ವಕರ್ನಾಟಕ' ವಾರಪತ್ರಿಕೆ ಪ್ರಾರಂಭ. 1945 ಮೈಸೂರು ಸಂಸ್ಥಾನದ ಪತ್ರಿಕೋದ್ಯಮಿಗಳ ಸಮ್ಮೇಳನಾಧ್ಯಕ್ಷತೆ. 1945-51 ಬೆಂಗಳೂರು ನಗರಸಭೆ ಸದಸ್ಯರು. 1947 ಕಾಸರಗೋಡಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, 1969-73 ಮಿಥಿಕ್ ಸೊಸೈಟಿ ಅಧ್ಯಕ್ಷರು. ನಿಧನ : 20 ಅಕ್ಟೋಬರ್ 1973.

**ಸಾಹಿತ್ಯ ಪಥ** : ಸಂಪಾದಿತ : ಕಾಂಗ್ರೆಸ್ ಸುವರ್ಣ ಮಹೋತ್ಸವ ಸಂಚಿಕೆ (1935), ಚಿತ್ರಕೂಟ (ಸರ್ ಎಂ. ವಿಶ್ವೇಶ್ವರಯ್ಯ ಅಭಿನಂದನ ಗ್ರಂಥ, 1960) ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರು, (1970). ನೀಳ್ಗತೆ ಕತೆ: ಪ್ರೇಮ ಫಲ, ಹೂಬುಟ್ಟಿ, ಜೀವನಚರಿತ್ರೆ: ಮೋಕ್ಷಗುಂಡಂ ವಿಶ್ವೇಶ್ವರಯ್ಯ (1971), ಬಾಲಗಂಗಾಧರ್ ತಿಲಕ್ (1975), ಸರ್ದಾರ್

ವಲ್ಲಭಭಾಯಿ ಪಟೇಲ್, ಲಾಲಾ ಲಜಪತರಾಯ್, ರಾಸ್ ಬಿಹಾರಿ ಘೋಷ್, ಸುಭಾಷ್ ಚಂದ್ರ ಬೋಸ್, ಇಂದಿರಾ ಪ್ರಿಯದರ್ಶಿನಿ, ಇತರೆ: ಜಗನ್ಮೋಹನ ಬಂಗಲೆಯಿಂದ ವಿಧುರಾಶ್ವತ್ಥದವರೆಗೆ (1939), ಮೈಸೂರಿನ ರಾಜಕೀಯ ಸುಧಾರಣೆಗಳು (1940), ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮ (1957), ವಿಕ್ರಾಂತ ಭಾರತ (1965), ಮಾಸ್ತಿಯವರ ಮನೋಧರ್ಮ (1970), ವಿಚಾರ ಕರ್ನಾಟಕ (1970), ನಮ್ಮ ಜನ ನಡೆಸಿದ ಜೀವನ (1973), ಕಂಠೀರವ ನರಸರಾಜ ವಿಜಯ (ಪ್ರ. ವ. 1974), ಚಾರಿತ್ರಿಕ ದಾಖಲೆಗಳು, ಇತಿಹಾಸದ ಸಂದರ್ಭಗಳು, ಶ್ರೀ ಕೃಷ್ಣ, ಅಶೋಕ ಚಕ್ರವರ್ತಿ, ಭಾರತದ ರಾಜ್ಯಾಂಗ, ಕೈಲಾಸಂ ನಾಟಕಗಳು, ಕೈಲಾಸಂ ಜೋಕ್ಸ್, ಪ್ರಗತಿಶೀಲ ಸಾಹಿತ್ಯ, ಕನ್ನಡ ಗದ್ಯದ ಕಥೆ, ನನ್ನ ಜೀವನ ಮತ್ತು ಧ್ಯೇಯ, ರಾಷ್ಟ್ರಕೂಟಕ್ಕೆ ಮೈಸೂರಿನ ಸಪ್ತರ್ಷಿಗಳು, ರಾಷ್ಟ್ರೀಯ ಕರ್ಮ, ಕರ್ಮಫಲ, ಜೂಲಿಯಸ್ ಸೀಸರ್, ಗಲಿವರನ ದೇಶಸಂಚಾರ, ಪೀಟರ್ ಜಂಗರು, ಮೈಸೂರು ಇತಿಹಾಸದ ಹಳೆಯ ಪುಟಗಳು (ಮರಣೋತ್ತರ 1996). ಅನುವಾದ : ಪ್ರಪಂಚ ಪರ್ಯಟನ ಪಾದಯಾತ್ರೆ, ಜಗತ್ಕಥಾವಲ್ಲರಿ.

## ಶಂ.ಬಾ. ಜೋಶಿ



**ಜೀವನ ಪಥ** : ಜನನ : 1896, ಜನವರಿ 4. ಗುರ್ಲ ಹೊಸೂರು, ಸವದತ್ತಿ ತಾಲ್ಲೂಕು, ಬೆಳಗಾಂ ಜಿಲ್ಲೆ. 1920 ಚಿಕ್ಕೋಡಿಯಲ್ಲಿ ಶಿಕ್ಷಕ ವೃತ್ತಿ. 1924 ಬೆಳಗಾವಿ ಕರ್ನಾಟಕ ಏಕೀಕರಣ ಸಮಾವೇಶ, ಕಾರ್ಯದರ್ಶಿ. 1928-46 ವಿಕ್ಟೋರಿಯಾ ಹೈಸ್ಕೂಲ್. 1967 ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ ಪ್ರಕಟನೆ. 1970 'ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ' ಗ್ರಂಥಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1971 ಮೈಸೂರು ವಿಶ್ವವಿದ್ಯಾ ನಿಲಯದಿಂದ ಡಾಕ್ಟರೇಟ್. 1981ನೇ ನವೆಂಬರ್ ಮಡಿಕೇರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ. ನಿಧನ : 28-9-1991.

**ಸಾಹಿತ್ಯ ಪಥ** : ಇತಿಹಾಸ : ಕಣ್ಮರೆಯಾದ ಕನ್ನಡ, ಮಹಾರಾಷ್ಟ್ರದ ಮೂಲ ಅಥವಾ ಮೂಲ ಮಹಾರಾಷ್ಟ್ರ, ಕನ್ನಡ ನೆಲೆ (1939). ಮರ್ಹಾಠೀ ಸಂಸ್ಕೃತಿ: ಕೆಲವು ಸಮಸ್ಯೆಗಳು (ಅವರದೇ ಮರಾಠಿ ಪುಸ್ತಕದ ಅನುವಾದ 1980). ಕನ್ನಡ ಭಾಷಾಶಾಸ್ತ್ರ : ಕನ್ನಡ ನುಡಿಯ ಹುಟ್ಟು ಅಥವಾ ನಿರುಕ, ಎಡೆಗಳು ಹೇಳುವ ಕಂನಾಡ ಕತೆ, ಕನ್ನಡ ನುಡಿಯ ಜೀವಾಳ. ಕನ್ನಡ ಸಾಹಿತ್ಯಕರ್ಣನ ಮೂರು ಚಿತ್ರಗಳು ಕರ್ಣ ಒಂದು ಅಧ್ಯಯನ. ಕನ್ನಡ ಸಾಹಿತ್ಯ ಅಭಿವೃದ್ಧಿ. ಜನಪದ ಸಾಹಿತ್ಯ ಮಕ್ಕಳ ಒಡಪುಗಳು. ತತ್ತ್ವಜ್ಞಾನ ಮಹರ್ಷಿ ಅರವಿಂದ ಘೋಷ ಇವರ ಸಂಕ್ಷಿಪ್ತ ಚರಿತ್ರವು 1921, ಟಿಳಕ ಕಥಾಮೃತಸಾರ 1932, ಅಗ್ನಿವಿದ್ಯೆ, ದಾರಿಯ ಬುತ್ತಿ, ಸೌಂದರ್ಯ ವಿಚಾರ, ಸಾತತ್ಯ ಮತ್ತು ಸತ್ಯ, ಶ್ರೀಮತ್ ಭಗವದ್ಗೀತೆಯಲ್ಲಿ ಹುದುಗಿರುವ ರಾಜಯೋಗದ ಸ್ವರೂಪ 1997, ಸಾಂಸ್ಕೃತಿಕ ಮೂಲದಲ್ಲಿನ ತಾತ್ತ್ವಿಕ ಚಿಂತನೆಗಳು 1978, ಜೀವನದ ಅರ್ಥಗ್ರಹಣ ಪದ್ಧತಿ 1986. ಸಂಸ್ಕೃತಿ : ರೂಢಿ ಹಾಗೂ ಭಾವಿಕ ಕಲ್ಪನೆಗಳು 1940, ಯಕ್ಷಪ್ರಶ್ನೆ ಅಥವಾ ಬರಲಿರುವ ಸಮಾಜ 1948, ಸಮಾಜ ದರ್ಶನ 1949, ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ 1937, ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ-ದ್ವಿತೀಯ ಭಾಗ 1966, ಭಾಷೆ ಮತ್ತು ಸಂಸ್ಕೃತಿ : ಪರಸ್ಪರ ಸಂಬಂಧ 1975, ಕಂನಾಡವರ ಸಂಸ್ಕೃತಿಯ ಗತಿಸ್ಥಿತಿ 1981. ಹಿಂದೂ ಧರ್ಮ : ಶಿವರಹಸ್ಯ ಅಥವಾ ವೇದದಲ್ಲಿ ಕಾಣುವ ವೀರಶೈವ ಮತದ ಬೇರುಗಳು 1939, ಹಾಲುಮತ ದರ್ಶನ 1960, ಋಗ್ವೇದಸಾರ : ನಾಗಪ್ರತಿಮಾವಿಚಾರ 1971, ಪ್ರವಾಹ ಪತಿತರ ಕರ್ಮ 'ಹಿಂದೂ' ಎಂಬ ಧರ್ಮ 1976, ವೈವಸ್ವತಮನು ಪ್ರಣೀತ ಮಾನವ ಧರ್ಮದ ಆಕೃತಿ 1979, ಬುದ್ಧನ ಜಾತಕ 1980, ಬಿತ್ತಿದ್ದನ್ನು ಬೆಳೆಕೊ 1984. ಇತರೆ : ಕರ್ನಾಟಕದ ವೀರಕ್ಷತ್ರಿಯರು (1936). ಅನುವಾದಗಳು: ಉಪನಿಷತ್ ರಹಸ್ಯ (ಮೂಲ : ರಾನಡೆ, ಅನು : ದಿವಾಕರ, ಬೇಂದ್ರೆಯವ ರೊಂದಿಗೆ 1928), ಶ್ರೀಮದ್ ಭಗವದ್ಗೀತಾ ಭಾಗ 1 (ಮೂಲ ಸಾತವೇಳಕರ, 1944). ಶಂಬಾ ಕೃತಿ ಸಂಪುಟ (ಆರು ಸಂಪುಟಗಳು, 1999). ಶಂಬಾ ಅವರ ಆಯ್ದ ಲೇಖನಗಳು (1997).

## ದ.ರಾ. ಬೇಂದ್ರೆ



**ಜೀವನ ಪಥ** : ಜನನ : 1896, ಜನವರಿ 31, ಧಾರವಾಡ. ಶಿಕ್ಷಣ : 1914-18 ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ಬಿ.ಎ. ವ್ಯಾಸಂಗ. 1934ರಲ್ಲಿ ಎಂ.ಎ., ಹೈಸ್ಕೂಲ್ ಅಧ್ಯಾಪಕರಾಗಿ ವೃತ್ತಿ ಆರಂಭ. 1929-30 'ಜಯಕರ್ನಾಟಕ', 1939-43 'ಜೀವನ'ದಸಂಪಾದಕರಾಗಿ ಕಾಯಕ. 1943 ಪೂನಾ ಕಾಲೇಜಿನಲ್ಲಿ ಅಧ್ಯಾಪಕರು, 1944 ಸೊಲ್ಲಾಪುರ ಡಿ.ಎ.ವಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರು. 1922 ಗೆಳೆಯರ ಗುಂಪು. 1956ರಲ್ಲಿ ಧಾರವಾಡ ಆಕಾಶವಾಣಿಯಲ್ಲಿ ಕಾರ್ಯಕ್ರಮ ನಿರ್ಮಾಪಕ, ಅನಂತರ ಸಲಹೆಗಾರರು, 1959ರಲ್ಲಿ 'ಅರಳು-ಮರಳು' ಕವನ ಸಂಗ್ರಹಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1943ರಲ್ಲಿ ಶಿವಮೊಗ್ಗದಲ್ಲಿ 27ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ಕೇಂದ್ರ ಸರ್ಕಾರದಿಂದ 1968ರಲ್ಲಿ 'ಪದ್ಮಶ್ರೀ' ಪ್ರಶಸ್ತಿ ಗೌರವ. 1969 ಕೇಂದ್ರ ಸಾಹಿತ್ಯ ಅಕಾಡೆಮಿ 'ಫೆಲೊ' ಆಗಿ ಗೌರವ. 1966ರಲ್ಲಿ ಮೈಸೂರು ವಿಶ್ವವಿದ್ಯಾಲಯ ಹಾಗೂ 1968ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, 1976 ಕಾಶೀ ವಿದ್ಯಾಪೀಠಗಳಿಂದ ಗೌರವ ಡಾಕ್ಟರೇಟ್. 1974ರಲ್ಲಿ 'ನಾಕು ತಂತಿ' ಕವನ ಸಂಗ್ರಹಕ್ಕೆ ಜ್ಞಾನಪೀಠ ಪ್ರಶಸ್ತಿ. ನಿಧನ : 1981, ಅಕ್ಟೋಬರ್ 26, ಮುಂಬೈನಲ್ಲಿ.

**ಸಾಹಿತ್ಯ ಪಥ** : ಕವಿತೆ : ಕೃಷ್ಣಾಕುಮಾರಿ 1922, ಗರಿ 1932, ಮೂರ್ತಿ-ಕಾಮಕಸ್ತೂರಿ 1934, ಸಖೀಗೀತ 1937, ಉಯ್ಯಾಲೆ 1938, ನಾದಲೀಲೆ 1938, ಮೇಘದೂತ 1943, ಹಾಡು-ಪಾಡು 1946, ಗಂಗಾವತರಣ 1951, ಅರಳು-ಮರಳು 1956, ಸೂರ್ಯಪಾನ 1956, ಹೃದಯ ಸಮುದ್ರ 1956, ಮುಕ್ತಕಂಠ 1956, ಚೈತ್ಯಾಲಯ 1957, ಜೀವಲಹರಿ 1957, ನಮನ 1958, ಸಂಚಯ 1959, ಉತ್ತರಾಯಣ 1960, ಮುಗಿಲ ಮಲ್ಲಿಗೆ 1961, ಯಕ್ಷ-ಯಕ್ಷಿ 1962, ನಾಕು ತಂತಿ 1964, ಮರ್ಯಾದೆ 1966, ಶ್ರೀಮಾತಾ 1968, ಬಾ ಹತ್ತರ 1969, ಇದು ನಭೋವಾಣಿ 1970, ವಿನಯ 1972, ಮತ್ತೆ ಶ್ರಾವಣ ಬಂತು 1973, ಒಲವೆ ನಮ್ಮ ಬದುಕು 1977, ಚತುರೋಕ್ತಿ ಮತ್ತು ಇತರ ಕವನಗಳು 1978. ಪರಾಕಿ 1982, ಕಾವ್ಯ ವೈಖರಿ 1982, ಬಾಲಬೋಧೆ 1983, ತಾ ಲೆಕ್ಕಣಿಕೆ ತಾ ದೌತಿ 1983, ಚೈತನ್ಯದ ಪೂಜೆ 1983, ಪ್ರತಿಬಿಂಬಗಳು 1987, ಶ್ರಾವಣ ಪ್ರತಿಭೆ 1987. ನಾಟಕ : ತಿರುಕರ

ಪಿಡುಗು 1930, ಉದ್ಧಾರ 1930, ನಗೆಯ ಹೊಗೆ 1931, ಹುಚ್ಚಾಟಗಳು 1936, ಹೊಸ ಸಂಸಾರ ಮತ್ತು ಇತರ ನಾಟಕಗಳು 1950. ಅಂಬಿಕಾತನಯದತ್ತ ನಾಟಕ ಸಂಪುಟ 1982. ಸಣ್ಣಕಥೆ/ಹರಟೆ : ನಿರಾಭರಣ ಸುಂದರಿ 1940, ಮಾತೆಲ್ಲ ಜ್ಯೋತಿ 1971. ವಿಮರ್ಶೆ : ಸಾಹಿತ್ಯ ಮತ್ತು ವಿಮರ್ಶೆ 1937, ಸಾಹಿತ್ಯ ಸಂಶೋಧನೆ 1940, ವಿಚಾರ ಮಂಜರಿ 1945, ಮಹಾರಾಷ್ಟ್ರ ಸಾಹಿತ್ಯ 1959, ಕಾವ್ಯೋದ್ಯೋಗ 1962, ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕ ರತ್ನಗಳು 1968, ಸಾಹಿತ್ಯದ ವಿರಾಟ್ ಸ್ವರೂಪ 1974, ಕುಮಾರವ್ಯಾಸ 1976, ಮತಧರ್ಮ ಮತ್ತು ಆಧುನಿಕ ಮಾನವ 1972. ಸಂಪಾದನೆ : ನನ್ನದು ಈ ಕನ್ನಡ ನಾಡು 1928, ಹಕ್ಕಿ ಹಾರುತಿದೆ 1930, ಚಂದ್ರಹಾಸ 1939, ಹೊಸಗನ್ನಡ ಕಾವ್ಯಶ್ರೀ 1957, ಕನಕದಾಸ ಚತುಶಿತಮಾನೋತ್ಸವ ಸಂಸ್ಮರಣ ಸಂಪುಟ 1965. ಅನುವಾದ : ಉಪನಿಷತ್ ರಹಸ್ಯ (ಮೂಲ : ರಾನಡೆ 1928), ಭಾರತೀಯ ನವಜನ್ಮ (ಮೂಲ : ಅರವಿಂದ 1936), ಗುರುಗೋವಿಂದಸಿಂಗ್ 1966, ನೂರೊಂದು ಕವನ (ಮೂಲ : ರವೀಂದ್ರನಾಥ ಠಾಕೂರ)1967. ಕಬೀರ ವಚನಾವಳಿ 1968, ಭಗ್ನಮೂರ್ತಿ (ಮೂಲ : ಮರಾಠಿ, ಅ.ರಾ.ದೇಶಪಾಂಡೆ 1972),: ಸಂವಾದ 1965, ವಿಠ್ಠಲ ಸಂಪ್ರದಾಯ 1965, ಮರಾಠಿಯಲ್ಲಿ : ಶಾಂತಲಾ (ಮೂಲ ಕನ್ನಡ) 1972, ಸಂತಮಹಾಂತಾಂಚಾ ಪೂರ್ಣ ಶಂಭೂವಿಠ್ಠಲ 1963, ಉಮಾಳಾ 1991. ಬಾನುಲಿ ರೂಪಕಗಳು : ಧನ್ಯ ಬೃಂದಾವನ, ದಾಸಾನುದಾಸ ಕನಕದಾಸ, ಸಂತಸಮಾಗಮ, ರಂಗವಿಠ್ಠಲ, ರಾಮನವಮಿ, ನಾರೀನಾರಾಯಣಿ, ದಯವೇ ಧರ್ಮದ ಮೂಲ, ಯಕ್ಷ-ಯಕ್ಷಿ, ಮೇಘಧೂತ, ಮಕ್ಕಳು ಅಡಿಗೆ ಮನೆ ಹೊಕ್ಕರೆ, ಇದು ಗೋಕುಲಾಷ್ಟಮಿ, ಇಂಗ್ಲಿಷ್‌ನಲ್ಲಿ : A Theory of Immortality 1977, Spring Fire (Tr. by K. Raghavendra Rao, Vamana Bendre, K.S. Sharma).

## ಬಿ. ಪುಟ್ಟಸ್ವಾಮಯ್ಯ

**ಜೀವನ ಪಥ** : ಜನನ : 1897, ಮೇ 24, ಬೆಂಗಳೂರು. 'ಮೈಸೂರ್ ಸ್ಟಾರ್' ವಾರಪತ್ರಿಕೆಯ ವರದಿಗಾರರಾಗಿ ಪತ್ರಿಕಾರಂಗಕ್ಕೆ ಪದಾರ್ಪಣ. 'ಒಕ್ಕಲಿಗರ ಪತ್ರಿಕೆ' ಸಂಪಾದಕ : 'ಜನವಾಣಿ' ಸಂಪಾದಕ ; 'ಪ್ರಜಾವಾಣಿ'ಯ ಪ್ರಥಮ ಸಂಪಾದಕ ರಾದರು. 1964ರಲ್ಲಿ 'ಕ್ರಾಂತಿ ಕಲ್ಯಾಣ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ನಿಧನ : 1984, ಜನವರಿ 25.

**ಸಾಹಿತ್ಯ ಪಥ** : ನಾಟಕ : ಷಾಜಹಾನ್, ಕುರುಕ್ಷೇತ್ರ, ದಶಾವತಾರ, ಸಂಪೂರ್ಣ ರಾಮಾಯಣ, ಗೌತಮಬುದ್ಧ, ಅಕ್ಕಮಹಾದೇವಿ, ಪ್ರಭುದೇವ, ಚಿರಕುಮಾರ ಸಭಾ, ಸತೀ ತುಲಸಿ, ಯಾಜ್ಞಸೇನಿ, ಬಭ್ರುವಾಹನ, ಪ್ರಚಂಡ ಚಾಣಕ್ಯ, ಬಿಡುಗಡೆಯ ಬಿಚ್ಚುಗತ್ತಿ, ತಾರಕ ವಧೆ, ಅಭಿನೇತ್ರಿ ಮತ್ತು ಮೋಹ ಮುಕ್ತಿ, ಅರೂಪರತ್ನ, ರಾಜಸಿಂಹ, ರಾಣಿ, ಶಾಂತಿದೂತ ಬಾಹುಬಲಿ, ನೆಲೆಯಾಗು ಶಿಲೆಯಾಗು ಕಲೆಯಾಗು ದೇವಿ (ಅಹಲ್ಯೆ), ತಪತಿ, ಜಯದೇವ, ಹಿಟ್ಟಿನ ಕೋಳಿ, ಇವನಲ್ಲ. ಕಾದಂಬರಿ : ರೂಪಲೇಖಾ 1953, ಅಭಿಸಾರಿಕೆ, ಸುಧಾಮಯೀ, ಮಲ್ಲಮ್ಮನ ಪವಾಡ, ರತ್ನಹಾರ, ಚಾಲುಕ್ಯ ತೈಲಪ 1979, ತೇಜಸ್ವಿನಿ, ನಾಟ್ಯ ಮೋಹಿನಿ, ಪ್ರಭುದೇವ 1964, ಉದಯರವಿ 1959, ರಾಜ್ಯಪಾಲ 1960, ಕಲ್ಯಾಣೇಶ್ವರ 1960, ನಾಗಬಂಧ 1962, ಮುಗಿಯದ ಕನಸು 1962, ಕ್ರಾಂತಿ ಕಲ್ಯಾಣ 1963, ದ್ಯಾ ಸುಪರ್ಣಾ, ಚಹ ಕಟ್ಟಿದ ಸಾಮ್ರಾಜ್ಯ, ಪ್ರಿಯದರ್ಶಿ ರಾಜ, ಅರ್ಧಾಂಗಿ, ಹೂವು –ಕಾವು. ಕಥೆಗಳು : ಧ್ರುವ ಸ್ವಾಮಿನಿ, ಇತಿಹಾಸದ ಪುಟಗಳಿಂದ. ಮಕ್ಕಳ ಸಾಹಿತ್ಯ ಶ್ರೀದುರ್ಗಾ, ಚಂಗಲಿಯ ಬಲಿದಾನ. ಇತರೆ : ಶ್ರೀ ಲಲಿತಾ ಸಹಸ್ರ ಸಾಂಗತ್ಯ, ಶ್ರೀ ದುರ್ಗಾಸಪ್ತಶತಿ, ಶಿವ ಮಹಿಮಸ್ತವ, ಸೌಂದರ್ಯಲಹರಿ, ನಾಟ್ಯರಂಗ-ಚಿತ್ರರಂಗ (ಪ್ರಬಂಧ), ಸಿದ್ದವನಹಳ್ಳಿ ನಿಜಲಿಂಗಪ್ಪ, ನಿಜಲಿಂಗ ಅಷ್ಟಕ (ಪದ್ಯ).

## ನಾ. ಕಸ್ತೂರಿ

**ಜೀವನ ಪಥ** : ಜನನ: 1897, ಡಿಸೆಂಬರ್ 25, ಕೇರಳದ ತ್ರಿಪುನಿತ್ತೂರ್ ಗ್ರಾಮದಲ್ಲಿ. ಶಿಕ್ಷಣ : ಕೇರಳದ ಎರ್ನಾಕುಲಂ ಮಹಾರಾಜಾ ಕಾಲೇಜಿನಲ್ಲಿ ಮಲೆಯಾಳಂ ಮತ್ತು ಚರಿತ್ರೆಯಲ್ಲಿ ಎಂ.ಎ. ಅನಂತರ ಬಿ.ಎಲ್.ಪದವಿ. ವಕೀಲಿ ವೃತ್ತಿಗೆ ಬದಲು ಶಿಕ್ಷಕ ವೃತ್ತಿಯಲ್ಲಿ ಆಸಕ್ತಿ. ಮೈಸೂರಿಗೆ ಪ್ರಯಾಣ. ಸರ್ಕಾರಿ ಕಾಲೇಜುಗಳಲ್ಲಿ ಸೇವೆ. 1948ರಿಂದ ಪುಟ್ಟಪರ್ತಿ ಸಾಯಿಬಾಬಾ ಬಗ್ಗೆ ಶ್ರದ್ಧೆ, ಆಶ್ರಮದಲ್ಲಿ ವಾಸ. ನಿಧನ : 14 ಆಗಸ್ಟ್ 1987.

**ಸಾಹಿತ್ಯ ಪಥ'** : ನಾಟಕ/ಪ್ರಹಸನಗಳು: ಷಾಜಹಾನ್ (1918, ಮಲೆಯಾಳಂನಲ್ಲಿ), ಕಾಡಾನೆ, ಗಗ್ಗಯ್ಯನ ಗಡಿಬಿಡಿ, ವರಪರೀಕ್ಷೆ, ಹೆಡ್‌ಮಾಸ್ತರ ಮಗಳು, ತಾಪತ್ರಯ ತಪ್ಪಿತು, ಬ್ಯಾಂಕಿನ ದಿವಾಳಿ, ರಾಮಕೃಷ್ಣಯ್ಯನದರ್ಬಾರು, **ನಗೆಬರಹ ಮಕ್ಕಳ ಸಾಹಿತ್ಯ** : ಕೆಂಪ ಮೈಸೂರಿಗೆ ಹೋದದ್ದು (1930), ಪಾತಾಳದಲ್ಲಿ ಪಾಪಚ್ಚಿ (1943), ಅನರ್ಥಕೋಶ, ಗಾಳಿಗೋಪುರ, ಶಂಖವಾದ್ಯ, ರಂಗನಾಯಕಿ, ಅಲ್ಲೋಲ ಕಲ್ಲೋಲ, ಉಪಾಯವೇದಾಂತ, ಯದ್ವಾ ತದ್ವಾ, ಚಿತ್ರವಿಚಿತ್ರ. **ಕಾದಂಬರಿ ಕಥ**: ಸಂಪತ್ತು, ಚೆಂಗೂಲಿ ಚೆಲುವ, ಚಕ್ರದೃಷ್ಟಿ, ನೊಂದ ಜೀವಿ (ಅನು: ಲೇ ಮಿಸರಬಲೆ). ಡೊಂಕುಬಾಲ. ಗೃಹದಾರಣ್ಯಕ ಇತರೆ: ಮದುವೆ, ದಿಲ್ಲೀಶ್ವರನ ದಿನಚರಿ, ಅಶೋಕ. ಚೇರ್ಮನ್ ಪೆರುಮಾಳ್, ಚೈನಾ ಜಪಾನ್ ಕಥೆಗಳು, ಕೋಹಂ ಸೋಹಂ, ಅಣುಕು ಮಿಣುಕು ಕವನಗಳು, ಸತ್ಯಂ ಶಿವಂ ಸುಂದರಂ. **ಇಂಗ್ಲಿಷಿನಲ್ಲಿ** : Loving God (Second Edition, 1985), Kerala in Karnataka, The Last Rajas of Coorg.

## ದೇವುಡು

**ಜೀವನ ಪಥ** : ಜನನ : 27 ಡಿಸೆಂಬರ್ 1897, ಶಿಕ್ಷಣ : 1917-22, ಬಿ.ಎ. ಮತ್ತು ಸಂಸ್ಕೃತ ಎಂ.ಎ. 1923-24 ಮೈಸೂರಿನ ಸದ್ವಿದ್ಯಾಶಾಲೆಯ ಮುಖ್ಯೋಪಾಧ್ಯಾಯ ವೃತ್ತಿ. 1925 : ಬೆಂಗಳೂರಿಗೆ ಕಾರ್ಯರಂಗದ ಬದಲಾವಣೆ. ಆರ್ಯ ವಿದ್ಯಾಶಾಲೆ ಸ್ಥಾಪನೆ. ನಿಧನ : 24-10-1962. ಅದೇ ವರ್ಷ 'ಮಹಾಕ್ಷತ್ರಿಯ' ಕಾದಂಬರಿಗೆ ಮರಣೋತ್ತರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

**ಸಾಹಿತ್ಯ ಪಥ** : ಕಾದಂಬರಿ : ಸಾಹಸವರ್ಮ 1912, ಕಳ್ಳರ ಕೂಟ (ಗಯಟೆ

ನಾಟಕದ ಕಾದಂಬರಿ ರೂಪ 1926), ಅಂತರಂಗ 1931, ಮಯೂರ, ಎರಡನೆಯ ಜನ್ಮ, ಮಲ್ಲಿ 1953, ಚಿನ್ನಾ 1952, ಡಾ|| ವೀಣಾ, ಮಹಾಬ್ರಾಹ್ಮಣ 1950, ಮಹಾಕ್ಷತ್ರಿಯ 1962, ಮಹಾದರ್ಶನ 1967, ಮುಂದೇನು, ಗೆದ್ದವರು ಯಾರು, ಪರಿಪೂರ್ಣ. ಕತೆಗಳು : ಹೊಸಗನ್ನಡ ಪಂಚತಂತ್ರ (ದ್ವಿತೀಯ ಭಾಗ, 1953), ಮೂರು ಕನಸು 1944, ಕಥಾ ಸರಿತ್ಸಾಗರ (ಅನು. 1958), ವೇದದ ಕಥೆಗಳು, ದೇಶಾಂತರದ ಕತೆಗಳು, ಬುದ್ಧಿಯ ಕಥೆಗಳು, ದೇವುಡು ಕತೆಗಳು 1937, ಸೋಲೋಗೆಲುವೋ, ಘಾಟಿ ಮುದುಕ ಮತ್ತು ಇತರ ಕತೆಗಳು, ಭಾರ್ಗವಿ, ರಾಜಸಂನ್ಯಾಸಿ ಮತ್ತು ಇತರ ಕತೆಗಳು. ಕ್ರಿಸ್ತನ ವಿಚಾರಣೆ (ನಾಟಕ), ಮೇಘಸಂದೇಶ (ಅನು.), ವಾಲ್ಡನ್ (ಅನು.). ನಾಟಕ : ಸಾವಿತ್ರಿ 1926, ದುರ್ಮಂತ್ರಿ1942, ವಿಚಿತ್ರಶಿಕ್ಷೆ, ಮಯೂರ 1952, ಯಾಜ್ಞವಲ್ಕ್ಯ 1961, ದೀಪಾವಳಿ (ಅಪ್ರ), ಶಾರದಾ ಪೀಠ : ಒಂಬತ್ತು ನಾಟಕಗಳು (ಅಪ್ರ). ಸಂಪಾದಿತ : ಕನ್ನಡ ಜೈಮಿನಿ ಭಾರತ 1956. ಇತಿಹಾಸ : ಭೇರುಂಡೇಶ್ವರ. ವಿಮರ್ಶೆ : ಶಂಕರ ವಿಜಯ 1951. ಪಠ್ಯಪುಸ್ತಕ : ಕನ್ನಡ ನಾಲ್ಕನೆಯ ಪುಸ್ತಕ, The Mysore Translation Series I,II,III, 1953, ಮೈಸೂರು ಅಕ್ಷರ ಪ್ರಚಾರ ಪದ್ಧತಿ (ಮೂರು ಭಾಗ) 1939, ಆತ್ಮಕಥನ : ಕಂನಾಡ ಸಾಹಿತ್ಯಜ್ಞಾನ ಆತ್ಮಕಥನ 1953. ಪತ್ರಿಕೋದ್ಯಮ : ಪರಿಷತ್ಪತ್ರಿಕೆ 1935-36(ಸಂ.), ನವಜೀವನ 1927, ನಮ್ಮ ಪುಸ್ತಕ (ಮಾಸಿಕ ಪತ್ರಿಕೆ ಸಂ.) 1936-60, ರಂಗಭೂಮಿ 1936-38, ಮಕ್ಕಳ ಪುಸ್ತಕ 1932-36. ಮಕ್ಕಳ ಸಾಹಿತ್ಯ : ಗಣೇಶನ ಕಥೆ 1937, ತಂತ್ರಗಾರ ಮತ್ತು ಇತರ ಕತೆಗಳು 1945, ಬಂಜೆಯ ಮಗ ಮತ್ತು ಇತರ ಕತೆಗಳು 1946, ಒಂದು ಕನಸು ಮತ್ತು ಇತರ ಕತೆಗಳು. ಅನು : ವಿಕ್ರಮೋರ್ವಶೀಯ, ಅಂತರ್ಮುಖಿ, ಕನ್ನಡ ಭಗವದ್ಗೀತೆ, ದಿವ್ಯವಾಣಿ 1938, ಅಮೆರಿಕಾದ ಕಥೆ, Mahabrahmana. ಇತರೆ :ಮೀಮಾಂಸಾದರ್ಪಣ 1938. ಭಾರತದ ಮಹಾಪುರುಷರು 1946, ಸಂಗ್ರಹ ರಾಮಾಯಣ 1951, ಮೂಲ ಸಂಸ್ಕೃತ 1949, ಕರ್ನಾಟಕ ಸಂಸ್ಕೃತಿ 1932, ಮಹಾಭಾರತ ಸಂಗ್ರಹ ಸಂ. I-III 1956, 1958, 1960, ಕಾಳಿದಾಸ ಕೃತಿಗಳು 1944, ರಾಮಾಯಣವೂ ಭಗವದ್ಗೀತೆಯೂ 1958, ಉಪನಿಷತ್ತು 1958, ಯೋಗ ವಾಸಿಷ್ಠ. (ಒಟ್ಟು 24 ಸಂಪುಟಗಳು- ಅನುವಾದ), ಕರ್ನಾಟಕ ವಿಶ್ವಾಮಿತ್ರ ಚರಿತ್ರೆ (ಭಾಮಿನೀ ಷಟ್ಪದಿ ಕಾವ್ಯ), ಶ್ರೀ ಶಂಕರ ವೇದಾಂತ, ಕರ್ನಾಟಕ ಶಿಕ್ಷಾ 1931, ಚಿತ್ರವ್ಯಾಕರಣ, ಕಾಳಿದಾಸ ಸಂದೇಶ 1923, ಕಾಳಿದಾಸ 1951, ಸಂಗ್ರಹ ಭಾಗವತ 1956, ಪುರುಷೋತ್ತಮ.



## ಸಂಸ

**ಜೀವನ ಪಥ** : ಜನನ: 1898, ಜನವರಿ 13. ಮೈಸೂರು ಜಿಲ್ಲೆ ಯಳಂದೂರು ತಾಲ್ಲೂಕಿನ ಅಗರ, ಪೂರ್ಣ ಹೆಸರು ಎ.ಎನ್. ಸ್ವಾಮಿ ವೆಂಕಟಾದ್ರಿ ಅಯ್ಯರ್. ಶಿಕ್ಷಣ : ಮೈಸೂರು ಮರಿಮಲ್ಲಪ್ಪ ಪ್ರೌಢಶಾಲೆಯಲ್ಲಿ ವ್ಯಾಸಂಗ. 1919-35ರವರೆಗೆ ವಿವಿಧ ವೃತ್ತಿ, ದೇಶಾಟನೆ. 1936ರಿಂದ ಮೈಸೂರು. ನಿಧನ : 1939, ಫೆಬ್ರವರಿ 14.

**ಸಾಹಿತ್ಯ ಪಥ** : ಕಾದಂಬರಿ: ಕೌಶಲ (1915). ನಾಟಕ : ಸುಗುಣ ಗಂಭೀರ (1918-19), ವಿಗಡ ವಿಗ್ರಮರಾಯ (1925), ವಿಜಯನಾರಸಿಂಹ (1926), ಬಿರುದೆಂತೆಂಬರ ಗಂಡ (1936), ಬೆಟ್ಟದ ಅರಸು (1936), ಮಂತ್ರಶಕ್ತಿ (1938). ಕಾವ್ಯ: ಶ್ರೀವಮಂತೋದ್ಯಾನ ವರ್ಣನಂ, ಸಂಸ ಪದಂ. ಇಂಗ್ಲಿಷ್‌ನಲ್ಲಿ : Sherlock Holmes in Jail.



## ಎಸ್.ವಿ. ರಂಗಣ್ಣ

**ಜೀವನ ಪಥ** : ಜನನ : 1898, ಡಿಸೆಂಬರ್ 24, ಹಾಸನ ಜಿಲ್ಲೆಯ ಸಾಲಗಾವೆ. ಶಿಕ್ಷಣ : ಬೆಂಗಳೂರಿನ ಸೆಂಟ್ರಲ್ ಕಾಲೇಜು. 1919ರಲ್ಲಿ ಬಿ.ಎ., 1921ರಲ್ಲಿ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಇಂಗ್ಲಿಷ್ ಎಂ.ಎ., ಮೈಸೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕ. ಇಂಗ್ಲಿಷ್ - ಕನ್ನಡ ನಿಘಂಟುವಿನ ಪ್ರಧಾನ ಸಂಪಾದಕರು, 1954. 1965ರಲ್ಲಿ 49ನೇ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ. 1965ರಲ್ಲಿ 'ರಂಗಬಿನ್ನಪ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ಮೈಸೂರು ವಿಶ್ವವಿದ್ಯಾಲಯದಿಂದ ಗೌರವ ಡಿ.ಲಿಟ್. ಪದವಿ. ನಿಧನ : 18 ಫೆಬ್ರವರಿ 1987.

**ಸಾಹಿತ್ಯ ಪಥ** : ವಿಮರ್ಶೆ : ಶಾಕುಂತಲ ನಾಟಕ ವಿಮರ್ಶೆ (1959), ಮಾಲವಿಕಾಗ್ನಿ ಮಿತ್ರ ನಾಟಕ ವಿಮರ್ಶೆ (1960), ವಿಕ್ರಮೋರ್ವಶೀಯ ನಾಟಕ ವಿಮರ್ಶೆ (1960), ಹೊನ್ನಶೂಲ, ಶೈಲಿ ಭಾಗ I 1944, II 1958, III 1971, ಪಾಶ್ಚಾತ್ಯ ಗಂಭೀರ ನಾಟಕಗಳು 1970. ಕುಮಾರವ್ಯಾಸ, ಕುಮಾರವ್ಯಾಸವಾಣಿ, ಹಾಸ್ಯ 1959, ವಿಡಂಬನೆ 1941, ಕನ್ನಡ ಸಾಹಿತ್ಯದಲ್ಲಿ ಹಾಸ್ಯ. ವಚನ : ರಂಗಬಿನ್ನಪ, ಮರು ಬಿನ್ನಪ. ನಾಟಕ : ಕಿರುನಾಟಕಗಳು, ಉತ್ತರಕುಮಾರ, ಹರಿಶ್ಚಂದ್ರ. ಅನುವಾದ : ಅಗಮೆಮ್ನಾನ್, ತನಿಎರೆ ಯುವವರು (Libation bearers), ಮಂಗಳ ದೇವಿಯರು (Eumenides, ಈ ಮೂರು ಈಸ್ಕಿಲಸ್) ಎಲೆಕ್ಟ್ರ (ಸಾಫೋಕ್ಲಿಸ್), ಈಡಿಪಸ್ ಪ್ರಭು. ಇತರೆ : ಹಳೆಯ ಕಥೆಗಳು, ಮಹಿಳೆ ಮತ್ತು ಉಂಗುರ, ಕನ್ನಡ ಸ್ತೋತ್ರಪಾಠ, ಕೋಲ್‌ಕೋಲ್ ಕೂಡಿಬರಲಿ. ಅಭಿವಂದನೆ (ಅಪ್ರ), ಪಾಶ್ಚಾತ್ಯ ಕಾವ್ಯ ಮೀಮಾಂಸೆ (ಅಪ್ರ). ರುಚಿ, ನಾಟುನುಡಿ, ಕವಿ ಕಥಾಮೃತ. ಇಂಗ್ಲಿಷ್‌ನಲ್ಲಿ : Knots and Knotting, the Lady and the Ring, Old Tale Re-told, B.M. Srikantia a profile.



## ವಿ. ಸೀ.

**ಜೀವನಪಥ** : ಜನನ : 1899, ಅಕ್ಟೋಬರ್ 2, ಬೂದಿಗೆರೆ, ಬೆಂಗಳೂರು ಜಿಲ್ಲೆ, ಕಾಲೇಜು ಶಿಕ್ಷಣ : ಬಿ.ಎ., ಅನಂತರ ಎಂ.ಎ. ಅರ್ಥಶಾಸ್ತ್ರ, ರಾಜ್ಯಶಾಸ್ತ್ರಗಳಲ್ಲಿ, ಮೈಸೂರು ಮಹಾರಾಜಾ ಕಾಲೇಜು. 1928ರಲ್ಲಿ ಕನ್ನಡ ಉಪನ್ಯಾಸಕರಾಗಿ ನೇಮಕ. 1955ರಲ್ಲಿ ಉಪಪ್ರಾಧ್ಯಾಪಕರಾಗಿ ನಿವೃತ್ತಿ. 1956-58 ಆಕಾಶವಾಣಿಯಲ್ಲಿ (ಬೆಂಗಳೂರು) ಕಾರ್ಯಕ್ರಮ ಯೋಜಕರು. 1964-68 ಹೊನ್ನಾವರದ ಕಲೆ ಮತ್ತು ವಿಜ್ಞಾನ ಕಾಲೇಜಿನ ಪ್ರಥಮ ಪ್ರಾಚಾರ್ಯ, 1954ರಲ್ಲಿ ಕುಮಟಾದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. 1973 'ಅರಲು-ಬರಲು' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ. 1976ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಗೌರವ

ಡಾಕ್ಟರೇಟ್ ಪದವಿ ಪ್ರದಾನ. 1978 ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ನಿಧನ : 1983, ಸೆಪ್ಟೆಂಬರ್ 4.

**ಸಾಹಿತ್ಯ ಪಥ** : ಕವನ ಸಂಗ್ರಹ : ಗೀತೆಗಳು (1931), ದೀಪಗಳು (1933), ನೆಳಲು ಬೆಳಕು (1935), ದ್ರಾಕ್ಷಿದಾಳಿಂಬೆ (1948), ಹೆಜ್ಜೆಪಾಡು (1958), ಕದಂಬ (1970), ಅರಲು ಬರಲು (1972), ಹಗಲು-ಇರುಳು (1981). ಸ್ನೇಹ-ವಿಶ್ವಾಸ (ಸಮಗ್ರ ಕಾವ್ಯ) 1990. ಗದ್ಯ ಕೃತಿಗಳು : ಪಂಪಾಯಾತ್ರೆ (1928), ಸೊಹ್ರಾಬ್ ರುಸ್ತುಂ (ನಾಟಕ 1930), ಆಗ್ರಹ (ನಾಟಕ, 1931), ಹಣಪ್ರಪಂಚ (1937), ಕರ್ನಾಟಕ ಕಾದಂಬರಿ (1940), ಅಭಿಜ್ಞಾನ ಶಾಕುಂತಲ ನಾಟಕ ವಿಮರ್ಶೆ, (1943), ಅಶ್ವತ್ಥಾಮನ್ (1946), ಭಾರತದ ರಾಜ್ಯಾಂಗ ರಚನೆ (1947), ಭಾರತದ ಐವರು ಮಾನ್ಯರು (1951), ಕವಿಕಾವ್ಯ ದೃಷ್ಟಿ (1955), ಶಿವರಾಮ ಕಾರಂತರು (1956), ಬೆಳುದಿಂಗಳು (1959), ಶ್ರೀ ಶೈಲ ಶಿಖರ (1960), ಸಾಹಿತ್ಯ ವಿಮರ್ಶೆಗಳಲ್ಲಿ ಅರ್ಥ ಮತ್ತು ಮೌಲ್ಯ (1961). ಸಾಹಿತ್ಯ : ಸಂಪ್ರದಾಯ ಮತ್ತು ಹೊಸ ಮಾರ್ಗ (1967), ಸೀಕರಣೆ (1970), ಮಹನೀಯರು (1970), ಚ್ಯವನ (1970), ಕಾಲೇಜ್ ದಿನಗಳು (1971), ಸತ್ಯ ಮತ್ತು ಮೌಲ್ಯ (1972), ಭಾರತದಲ್ಲಿ ಯೋಜನೆ (1962), ವ್ಯವಹಾರ ಧರ್ಮ (1976), ಮಹಾಕವಿ ಪಂಪ (1976), ಮಹಾಭಾರತದ ಕೃಷ್ಣಚಾರಿತ್ರ (1978), ಪಟ್ಟಬಂಧ (1979), ಸಾಹಿತ್ಯಾವಲೋಕನ (1979), ಹಿರಿಯರು- ಗೆಳೆಯರು (1980), ಅಂತರರಾಷ್ಟ್ರೀಯ ಕಾನೂನು, ಲಲಿತ ಪ್ರಬಂಧ ಸಂಪುಟ (ಸಮಗ್ರ ಗದ್ಯಭಾಗ I) 1992, ಸಮಗ್ರ ನಾಟಕ 1993, ವ್ಯಕ್ತಿಚಿತ್ರ (ಭಾಗ I, II) 1996, ಸ್ಮೃತಿಚಿತ್ರ ಸಂಪುಟ 1997, ಇತಿಹಾಸ ಕಾವ್ಯಗಳು (ವಿಮರ್ಶೆ ಭಾಗ I) 1998, ವಿಮರ್ಶೆ-ಸಂಪುಟ ೩ : ಕಾವ್ಯ ನಾಟಕ (2000). ಇಂಗ್ಲಿಷ್: ಮಹಾಕವಿ ಪಂಪ (1967), ಕೆ. ವೆಂಕಟಪ್ಪ (1968), ಪುರಂದರದಾಸ (1971), ಎಂ. ವಿಶ್ವೇಶ್ವರಯ್ಯ (1971), ವಾಲ್ಮೀಕಿ ರಾಮಾಯಣ (1972), ಡಿ. ವಿ. ಗುಂಡಪ್ಪ (1972), ಪಂಜೆ ಮಂಗೇಶರಾವ್, ಅನುವಾದ : ರಿಸರ್ವ್ ಬ್ಯಾಂಕ್ ಕಾರ್ಯ ಕಲಾಪಗಳು (1959), ಪಿಗಮೇಲಿಯನ್ (1963), ಬಂಗಾಳಿ ಸಾಹಿತ್ಯ ಚರಿತ್ರೆ (1966), ಮೇಜರ್ ಬಾರ್ಬರ (1968), ತ್ಯಾಗರಾಜ (1969), ಪುರಂದರದಾಸ (1979), ಮಾಬಿಡಿಕ್ (1982).



## ಎಸ್.ಕೆ. ಕರೀಂಖಾನ್

**ಜೀವನ ಪಥ** : ಜನನ : 1900 ಹಾಸನಜಿಲ್ಲೆ ಸಕಲೇಶಪುರ. ತಂದೆ : ಅಬ್ದುರ್ ರಹಮಾನ್ ಖಾನ್, ತಾಯಿ : ಜಯನಬ್ಬಿ. ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣ ಹಾಸನದಲ್ಲಿ. ಸ್ವಾತಂತ್ರ್ಯ ಹೋರಾಟ, ಮತ್ತು ಕರ್ನಾಟಕ ಏಕೀಕರಣ ಹೋರಾಟ. ಈಗ ಅವರಿಗೆ ಸು. 100 ವರ್ಷ.

**ಸಾಹಿತ್ಯ ಪಥ** : ಜನಪದ ಗೀತೆಗಳು, (ಎಂಟು ಭಾಗಗಳು, ಸಂಗ್ರಹ), ನೀವಾರ (ಉರ್ದುವಿನಿಂದ ಅನುವಾದಿತ ಕತೆಗಳು), ನೀಹಾರ (ಚಾರಿತ್ರಿಕ ಕಥಾಸಂಕಲನ), ಬಲಿದಾನಿ ಹುಸೇನ್ (ಚಾ. ಕಾದಂಬರಿ), ಮಾತೃಶಾಪ (ಪೌ. ಕಾದಂಬರಿ), ನಿರ್ದೋಷಿ (ನಾಟಕ), ಮಹಾಪ್ರಭು ಮಾಗಡಿ ಕೆಂಪೇಗೌಡ (ನಾ), ಶ್ರೀ ಕೃಷ್ಣಲೀಲೆ (ನಾ), ಚಲನಚಿತ್ರಗಳಿಗೆ ಗೀತೆಗಳು, ಮತ್ತು ಕಥೆಗಳು. ಹುಮಾಯೂನ್ (ಚಾ. ನಾ.), ಅಂಬರನಾಥ್ (ಚಾ. ನಾಟಕ).



## ಆನಂದಕಂದ

**ಜೀವನ ಪಥ** : ಜನನ : 1900, ಏಪ್ರಿಲ್ 16, ಗೋಕಾಕ್ ತಾಲ್ಲೂಕಿನ ಬೆಟಗೇರಿ. ಆನಂದಕಂದ ಕಾವ್ಯನಾಮ. ಹೆಸರು, ಬೆಟಗೇರಿ ಕೃಷ್ಣಶರ್ಮ. ಶಿಕ್ಷಣ : 1917ರಲ್ಲಿ ಮುಲ್ಕಿ ಪರೀಕ್ಷೆ. ಮಾತೃಭೂಮಿ, ಸ್ವಧರ್ಮ ಪತ್ರಿಕೆಗಳ ಸಂಪಾದಕತ್ವ. 1926ರಲ್ಲಿ ಬೆಂಗಳೂರಿನ ಆರ್ಯ ವಿದ್ಯಾಶಾಲೆಯಲ್ಲಿ ಶಿಕ್ಷಕ ವೃತ್ತಿ. 1938, ಜಯಂತಿ ಪತ್ರಿಕೆ ಸ್ಥಾಪನೆ. 1967 ಕರ್ನಾಟಕ ವಿ.ವಿ.ದಲ್ಲಿ ಪ್ರಧಾನ ಸಂಶೋಧಕರು. 1971 ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1973 ಅಖಿಲ ಕರ್ನಾಟಕ ವೈದ್ಯಕೀಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು. 1971 ನಾಗಮಂಗಲದಲ್ಲಿ ನಡೆದ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಅಧ್ಯಕ್ಷತೆ. 1974ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಿ.ಲಿಟ್.ಪದವಿ. ನಿಧನ : 1982 ಅಕ್ಟೋಬರ್ 30.

**ಸಾಹಿತ್ಯ ಪಥ** : ಕವಿತೆ/ಹಾಡು : ರಾಷ್ಟ್ರೀಯ ಪದ್ಯಾವಳಿ 1921, ಗಾಂಧೀ ಗೀತ ಪುಸ್ತಕ 1921. ರಾಷ್ಟ್ರೀಯ ಪದ್ಯಮಾಲೆ 1921, ಮುದ್ದನ ಮಾತು 1926, ಅರುಣೋದಯ 1926, ಭಾವಗೀತ 1926, ರಮೆ ಉಮೆಯರ ಸಂವಾದ 1924, ಕಾರಹುಣ್ಣಿಮೆ 1953, ವಿರಹಿಣಿ 1956, ಒಡನಾಡಿ 1956, ನಲ್ವಾಡುಗಳು 1958, ಉತ್ಸಾಹಗಾಥೆ 1972, ಸಾಮಾಜಿಕ ಸಂವಚನಗಳು 1981. ಸಣ್ಣಕಥೆ : ಬಡತನದ ಬಾಳು 1932, ಸಂಸಾರಚಿತ್ರ 1932, ನಮ್ಮ ಬದುಕು 1939, ಜನಪದ ಜೀವನ 1955, ಮಾತನಾಡುವ ಕಲ್ಲು 1963, ಕಳ್ಳರಗುರು ಮತ್ತು ಇತರ ಕಥೆಗಳು 1969, ದಶಮಂಜರಿ 1968. ಕಾದಂಬರಿ : ಸುದರ್ಶನ 1933, ರಾಜಯೋಗಿ 1934, ಅಶಾಂತಿ ಪರ್ವ 1935, ಮಲ್ಲಿಕಾರ್ಜುನ 1961, ಮಗಳ ಮದುವೆ 1951. ಪ್ರಬಂಧ/ವಿಮರ್ಶೆ : ಕರ್ನಾಟಕ ಜನಜೀವನ 1939, ಸಾಹಿತ್ಯವು ಸಾಗಿರುವ ದಾರಿ 1961, ನಮ್ಮ ಸಂಸ್ಕೃತಿ ಪರಂಪರೆ 1969, ಸಾಹಿತ್ಯವಿಹಾರ 1981. ಬಾನು ರೂಪಕ : ಬೆಳವಡಿ ಮಲ್ಲಮ್ಮ 1951, ಬೆಂದಹೃದಯ 1954, ಮುಂಡರಗಿ ಗಂಡುಗಲಿ 1962, ಪಂಚಗಂಗಾ 1963. ಜಾನಪದ : ಬೀಸುವ ಕಲ್ಲಿನ ಹಾಡುಗಳು 1928, ಕನ್ನಡ ಜಾನಪದ ಸಾಹಿತ್ಯ 1976, ಜಾನಪದ ಸಮ್ಮೇಳನ ಅಧ್ಯಕ್ಷೀಯ ಭಾಷಣ 1971. ಸಂಪಾದನೆ : ಅಕ್ರೂರ ಚರಿತ್ರ 1969, ಮೃಚ್ಛಕಟಿಕ 1961, ಪೂಜಾ ತತ್ವ 1963, ಆರ್ತಜಾವ 1966, ಮಹಾತ್ಮ್ಯಜ್ಞಾನ 1964, ಕೃಷ್ಣ ಲೀಲಾ 1965, ಲೋಕನೀತಿ 1966, ಸಂಕೀರ್ಣ ಸಂಗ್ರಹ (1966–ಇವು ಆರು ಸಂಪುಟಗಳು ಪುರಂದರದಾಸರ ಸಮಗ್ರ ಸಾಹಿತ್ಯ ಸಂಪಾದನೆ). ಶ್ರೀ ಕನಕದಾಸರ ಭಕ್ತಿಗೀತೆಗಳು 1965, ಪ್ರಸನ್ನ ವೆಂಕಟದಾಸರ ಭಾಗವತ 1969, ಹರಿದಾಸ ಭಕ್ತಿಸಾಧನೆ 1969. ಇತರೆ : ಬಸವಣ್ಣನವರು 1927, ಚಂದ್ರಹಾಸ 1967, ಭೀಷ್ಮ 1966, ಲವಕುಶ 1962, ಮಧ್ಯಮ ವ್ಯಾಯೋಗ (ಅನು.), ಕನ್ನಡ ರಾಜ್ಯರಮಾರಮಣ 1962. ಪತ್ರಿಕಾ ಸಂಪಾದನೆ : ಮಾತೃಭೂಮಿ 1922, ಸ್ವಧರ್ಮ 1926, ಜಯಕರ್ನಾಟಕ 1931, 1933, 1935-36, ಜಯಂತಿ 1938 1961.



## ಎ. ಎನ್. ಮೂರ್ತಿರಾವ್

**ಜೀವನ ಪಥ**: ಜನನ : 1900, ಜೂನ್ 16, ಮಂಡ್ಯ ಜಿಲ್ಲೆಯ ಅಕ್ಕಿ ಹೆಬ್ಬಾಳು. ಶಿಕ್ಷಣ : ಮೈಸೂರು ವೆಸ್ಲಿಯನ್ ಮಿಷನ್ ಶಾಲೆ, ಮಹಾರಾಜಾ ಕಾಲೇಜಿನಲ್ಲಿ ಇಂಗ್ಲಿಷ್ ಎಂ.ಎ. ಮಹಾರಾಜಾ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ವೃತ್ತಿ ಪ್ರಾರಂಭ. ಪ್ರಾಧ್ಯಾಪಕರಾಗಿ ನಿವೃತ್ತಿ. ಆಕಾಶವಾಣಿಯಲ್ಲಿ ಸೇವೆ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಕನ್ನಡ ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ ಸೇವೆ. 1984ರಲ್ಲಿ ಕೈವಾರದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. 1979ರಲ್ಲಿ 'ಚಿತ್ರಗಳು ಪತ್ರಗಳು' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ಪ್ರವಾಸಕಥನಕ್ಕೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ಪಂಪ ಪ್ರಶಸ್ತಿ 1992, ಹಂಪಿಯ ಕನ್ನಡ ವಿಶ್ವವಿದ್ಯಾಲಯದ 'ನಾಡೋಜ' ಗೌರವ ಡಿ.ಲಿಟ್.

**ಸಾಹಿತ್ಯ ಪಥ** : ಲಲಿತಪ್ರಬಂಧ : ಹಗಲುಗನಸುಗಳು, ಅಲೆಯುವ ಮನ, ಮಿನುಗು ಮಿಂಚು, ಸಮಗ್ರ ಲಲಿತಪ್ರಬಂಧಗಳು 1988 (ವಿಸ್ತೃತ ಆವೃತ್ತಿ 1999). ವ್ಯಕ್ತಿಚಿತ್ರ : ಚಿತ್ರಗಳು ಪತ್ರಗಳು 1983 (ದ್ವಿ.ಮು.). ಪ್ರವಾಸಕಥನ : ಅಪರವಯಸ್ಕನ ಅಮೆರಿಕಾ ಯಾತ್ರೆ 1979. ಆತ್ಮಕಥೆ : ಸಂಜೆಗಣ್ಣಿನ ಹಿನ್ನೋಟ 1990, ವಿಮರ್ಶೆ : ಷೇಕ್ಸ್‌ಪಿಯರ್, ಮಾಸ್ತಿಯವರ ಕಥೆಗಳು, ಬಿ. ಎಂ. ಶ್ರೀಕಂಠಯ್ಯ, ಪೂರ್ವಸೂರಿಗಳೊಡನೆ 1981, ಸಾಹಿತ್ಯ ಮತ್ತು ಸತ್ಯ 1982, ವಿಮರ್ಶಾತ್ಮಕ ಪ್ರಬಂಧಗಳು. ರೂಪಾಂತರ : ಆಷಾಢಭೂತಿ (ನಾಟಕ) ಮೋಲಿಯರನ ಎರಡು ನಾಟಕಗಳು, ಚಂಡಮಾರುತ (ನಾಟಕ), ಸಾಕ್ರೆಟೀಸನ ಕೊನೆಯ ದಿನಗಳು. ಪಾಶ್ಚಾತ್ಯ ಸಣ್ಣಕಥೆಗಳು, ಯೋಧನ ಪುನರಾಗಮನ 1947, ಹವಳದ ದ್ವೀಪ, ಅಮೆರಿಕನ್ ಸಾಹಿತ್ಯ, ವೈಚಾರಿಕ : ದೇವರು 1991, ಇಂಡಿಯಾ : ಇಂದು ಮತ್ತು ನಾಳೆ, ಜನತಾ ಜನಾರ್ಧನ 1995, ಮಹಾಭಾರತದಲ್ಲಿ ಕೇಡು ಎಂಬುದರ ಸಮಸ್ಯೆ, ದೇವರು ಕೃತಿ ಅನುವಾದ ಇಂಗ್ಲಿಷ್‌ನಲ್ಲಿ God, (ಅನು. ಎಲ್.ಎಸ್. ಶೇಷಗಿರಿ ರಾವ್) ಇಂಗ್ಲಿಷ್‌ನಲ್ಲಿ: The Return to The Soil (ಕಾರಂತರ ಮರಳಿ ಮಣ್ಣಿಗೆ), B. M. Srikantia.



## ತಿರುಮಲೆ ರಾಜಮ್ಮ

**ಜೀವನ ಪಥ** : ಜನನ : 1900. ನವೆಂಬರ್ 20, ತುಮಕೂರಿನಲ್ಲಿ. ಕಾವ್ಯನಾಮ 'ಭಾರತಿ' ಶಿಕ್ಷಣ: ಮಾಧ್ಯಮಿಕ ಶಾಲೆವರೆಗೆ ವ್ಯಾಸಂಗ. ಸಂಗೀತ ಕಲಿಕೆ. ವೀಣೆಯಲ್ಲಿ ಪರಿಣತಿ. 1968. ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ನಿಧನ : 1984, ಸೆಪ್ಟೆಂಬರ್ 24.

**ಸಾಹಿತ್ಯ ಪಥ** : ಕವಿತೆ : ರಾಷ್ಟ್ರ ಭಕ್ತಿ, ರಾಷ್ಟ್ರಶಕ್ತಿ (ದೇಶಭಕ್ತಿ ಗೀತೆಗಳು), ಜ್ವಾಲಾಮುಖಿ (ನೀಳ್ಗವಿತೆ), ವೇದನ ನಿವೇದನ (ನೀಳ್ಗವಿತೆ), ಜೀವನಚಿತ್ರ: ಆರ್ಯ ಕೈಲಾಸಂ, ವೀಣೆ ಶೇಷಣ್ಣ. ನಾಟಕ : ಸುಖಮಾರ್ಗ 1919. ದೃಢಪ್ರತಿಜ್ಞೆ (ರವೀಂದ್ರರ ನಾಟಕ, ಅನು.) ತಪಸ್ವಿನಿ 1931, ಮಹಾಸತಿ, ವಾತ್ಸಲ್ಯ, ತರಂಗಲೀಲಾ, ದುಂದುಭಿ, ಉನ್ಮತ್ತ ಭಾಮಿನಿ.



## ಸೇಡಿಯಾಪು ಕೃಷ್ಣಭಟ್ಟ

**ಜೀವನ ಪಥ** : ಜನನ : 8-6-1902, ಪುತ್ತೂರು ತಾಲ್ಲೂಕಿನ ಸೇಡಿಯಾಪು. ತಂದೆ-ತಾಯಿ : ರಾಮಭಟ್ಟ ಮತ್ತು ಮೂಕಾಂಬಿಕೆ. ಶಿಕ್ಷಣ : ವಿದ್ವಾನ್ ಪರೀಕ್ಷೆ. ವ್ಯಾಸಂಗ : ಸೇಂಟ್ ಎಲೋಷಿಯಸ್‌ನಲ್ಲಿ ಅಧ್ಯಾಪಕ ವೃತ್ತಿ ಆರಂಭ, ಅನಂತರ ಕಾಲೇಜಿನಲ್ಲಿ ಅಧ್ಯಾಪಕರು. 1971 ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, 1996 ಪಂಪ ಪ್ರಶಸ್ತಿ (ಮರಣೋತ್ತರ) ನಿಧನ : 8-6-1996.

**ಸಾಹಿತ್ಯ ಪಥ** : ಗದ್ಯ : ವಿಚಾರ ಪ್ರಪಂಚ (1992), ಕೆಲವು ದೇಶ ನಾಮಗಳು, ಕನ್ನಡ ವರ್ಣಗಳು. ಕಥಾಸಂಗ್ರಹ : ಪಳಮೆಗಳು. ಕಾವ್ಯ : ಕೆಲವು ಸಣ್ಣ ಕಾವ್ಯಗಳು (1949), ಚಂದ್ರಖಂಡ ಮತ್ತಿತರ ಕವಿತೆಗಳು (1969). ಶಾಸ್ತ್ರ ಸಾಹಿತ್ಯ : ಕನ್ನಡ ನಿಘಂಟು, ಛಂದೋಗತಿ, ಕನ್ನಡ ಛಂದಸ್ಸು. ಆತ್ಮಕಥೆ : ಈಶ್ವರ ಸಂಕಲ್ಪ ಅಥವಾ ದೈವಲೀಲೆ. ಇತರೆ : ಪತ್ರಾವಳಿ. ಇಂಗ್ಲಿಷ್ : Discovery of Facts.



## ಶಿವರಾಮ ಕಾರಂತ

**ಜೀವನ ಪಥ** : ಜನನ : 1902 ಅಕ್ಟೋಬರ್ 10, ಕುಂದಾಪುರ ತಾಲ್ಲೂಕಿನ ಕೋಟದಲ್ಲಿ. ಶಿಕ್ಷಣ : ಕುಂದಾಪುರ ಶಾಲೆ, ಮಂಗಳೂರಿನ ಸರ್ಕಾರಿ ಕಾಲೇಜಿನಲ್ಲಿ ವ್ಯಾಸಂಗ. 1959, ಯಕ್ಷಗಾನ-ಬಯಲಾಟ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1955ರಲ್ಲಿ ಮೈಸೂರಿನಲ್ಲಿ ನಡೆದ 37ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. 1960. ಜಾನಪದ ನೃತ್ಯಕಲೆಗೆ ಸ್ವೀಡಿಷ್ ಅಕಾಡೆಮಿಯ ಪ್ರಶಸ್ತಿ. 1968, ಕೇಂದ್ರ ಸರ್ಕಾರದಿಂದ ಪದ್ಮಭೂಷಣ ಪ್ರಶಸ್ತಿ. 'ಮೂಕಜ್ಜಿಯ ಕನಸುಗಳು' ಕಾದಂಬರಿಗೆ 1977ನೇ ವರ್ಷದ ಜ್ಞಾನಪೀಠ ಪ್ರಶಸ್ತಿ ಗೌರವ. ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ, ಲಲಿತಕಲಾ ಅಕಾಡೆಮಿ ಪ್ರಶಸ್ತಿಗಳು, ಕೇಂದ್ರ ಸಾಹಿತ್ಯ ಅಕಾಡೆಮಿ ಗೌರವ ಫೆಲೋಶಿಪ್, 1990ರಲ್ಲಿ ಮಧ್ಯ ಪ್ರದೇಶ ಸರ್ಕಾರದ ತುಲಸೀ ಸಮ್ಮಾನ್, 1992ರಲ್ಲಿ 'ಮೈಮನಗಳ ಸುಳಿಯಲ್ಲಿ' ಕಾದಂಬರಿಗೆ ಪಂಪಪ್ರಶಸ್ತಿ, 1989 ಇಂದಿರಾಗಾಂಧಿ ಪರ್ಯಾವರಣ ಪುರಸ್ಕಾರ, 1997ರಲ್ಲಿ ಶಾಂತಿನಿಕೇತನ ವಿಶ್ವಭಾರತಿ ವಿಶ್ವವಿದ್ಯಾಲಯದ 'ದೇಶಿಕೋತ್ತಮ' ಮತ್ತು ಹಂಪಿಯ ಕನ್ನಡ ವಿ.ವಿ.ದ 'ನಾಡೋಜ' ಗೌರವ ಡಾಕ್ಟರೇಟ್, ಮೈಸೂರು, ಕರ್ನಾಟಕ, ಮೀರತ್, ಮಂಗಳೂರು, ಜಬ್ಬಲ್‌ಪುರ, ವರ್ಲ್ಡ್ ಅಕಾಡೆಮಿ ಆಫ್ ಆರ್ಟ್ ಅಂಡ್ ಕಲ್ಚರ್ ಇತ್ಯಾದಿ ವಿಶ್ವವಿದ್ಯಾಲಯಗಳಿಂದ ಗೌರವ ಡಿ.ಲಿಟ್. ನಿಧನ : 9-12-1997.

**ಸಾಹಿತ್ಯ ಪಥ** : ಕವಿತೆ : ಸೀಳ್ಗವನಗಳು 1990, ರಾಷ್ಟ್ರಗೀತೆ ಸುಧಾಕರ 1924, ನಾಟಕ: ವಿಜಯದಶಮಿ, ಡುಮಿಂಗೊ 1928, ಬೆವರಿಗೆ ಜಯವಾಗಲಿ 1930, ಹಣೆಬರಹ 1933, ಕಟ್ಟೆ ಪುರಾಣ 1933, ಸಾವಿರ ಮಿಲಿಯ 1930, ಏಕಾಂಕ ನಾಟಕಗಳು 1933, ಬೌದ್ಧಯಾತ್ರಾ 1933, ಗೊಂಬೆಯ ಮನೆ 1936, ದೆವ್ವನ ಜಾಲ 1936, ವಿನಾಶದ ಒಸಗೆ 1936, ಅವಳಿ ನಾಟಕಗಳು

ಗೀತೆಗಳು (1997), ಕೆಲವು ಚೀನೀ ಕವನಗಳು 1997, ನವಿಲ ದನಿ 1999, ಸಂಜೆಹಾಡು 2000. ಗದ್ಯ : ಮಾರಿಯ ಕಲ್ಲು (1942), ಉಪವನ (1958), ದಮಯಂತಿ (1970), ಅನುವಾದ : ಮೋಹನಮಾಲೆ (1956), ನನ್ನ ಕನಸಿನ ಭಾರತ (1961), ಪ್ರಪಂಚದ ಬಾಲದಲ್ಲಿ (1965), ಮೀಡಿಯಾ (1966), ಹಕಲ್‌ಬರಿಫಿನ್ನನ ಸಾಹಸಗಳು (1969), ಸುಬ್ರಮಣ್ಯ ಭಾರತಿ (1971), ಮಾಯಾಶಂಖ ಮತ್ತು ಇತರ ಕತೆಗಳು (1972), ರಾಣಿಯ ಗಿಳಿ ಮತ್ತು ರಾಜನ ಮಂಗ (1972).

## ಎಚ್.ಎಲ್. ನಾಗೇಗೌಡ



**ಜೀವನ ಪಥ** : ಜನನ : 11, ಫೆಬ್ರವರಿ 1915, ಹೆರಗನಹಳ್ಳಿ, ತಂದೆ, ತಾಯಿ : ಲಿಂಗೇಗೌಡ ಮತ್ತು ಹುಚ್ಚವ್ವಮ್ಮ ದೇವಿ. ಶಿಕ್ಷಣ : ಚನ್ನಪಟ್ಟಣ, ಬೆಂಗಳೂರುಗಳಲ್ಲಿ ಶಾಲಾ ಕಾಲೇಜು ವಿದ್ಯಾಭ್ಯಾಸ ಬಿ.ಎಸ್.ಸಿ. (1937), ಪೂನಾದಿಂದ ಎಲ್.ಎಲ್.ಬಿ.; ಕೆ.ಎ.ಎಸ್. ಆಯ್ಕೆ (1941), ಸರ್ಕಾರದ ಅನೇಕ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಣೆ, 1960ರಲ್ಲಿ ಐ. ಎ. ಎಸ್. ಶ್ರೇಣಿಗೆ ಆಯ್ಕೆ, ಲೋಕಸೇವಾ ಆಯೋಗದ ಸದಸ್ಯರಾಗಿ ನಿವೃತ್ತಿ. ಕ. ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1974), ರಾಜ್ಯೋತ್ಸವ ಪ್ರಶಸ್ತಿ (1988), ಜಾನಪದ ಮತ್ತು ಯಕ್ಷಗಾನ ಅ.ಪ್ರಶಸ್ತಿ. ಕ. ನಾಟಕ ಅಕಾಡೆಮಿ ಫೆಲೋಷಿಪ್. 64ನೇ ಅ.ಭಾ.ಕ. ಸಾಹಿತ್ಯ ಸಮ್ಮೇಳನಾಧ್ಯಕ್ಷರು, ಮುಧೋಳ. ರಾಮನಗರದ ಬಳಿ 'ಜಾನಪದ ಲೋಕ'ದ ಸಂಸ್ಥಾಪನೆ (1994).

**ಸಾಹಿತ್ಯ ಪಥ** : ಕಥಾ ಸಂಗ್ರಹ : ಕಂಡು ಕೇಳಿದ ಕಥೆಗಳು, ಖೈದಿಗಳ ಕಥೆಗಳು, ಕಾದಂಬರಿ : ದೊಡ್ಡಮನೆ, ಸೊನ್ನೆಯಿಂದ ಸೊನ್ನೆಗೆ, ಭೂಮಿಗೆ ಬಂದ ಭಗವಂತ (1977), ನನ್ನೂರು (1974), ಇತರೆ : ಬೆಟ್ಟದಿಂದ ಬಟ್ಟಲಿಗೆ (1969), ಸರೋಜಿನಿದೇವಿ, ಪ್ರವಾಸಿ ಕಂಡ ಇಂಡಿಯಾ (7 ಸಂಪುಟಗಳು), ನಾ ಕಂಡ ಪ್ರಪಂಚ (1986), ನಾಗಸಿರಿ (ನಾಲ್ಕು ಸಂಪುಟ 1995), ಮಾರ್ಕೊ ಪೋಲೊ ಪ್ರವಾಸ ಕಥನ, ಅನುವಾದ : ಕೆನಿಲ್‌ವರ್ತ್, ವೆರಿಯರ್ ಎಲ್ವಿನ್ನನ ಗಿರಿಜನ ಪ್ರಪಂಚ, ಸಂಪಾದನೆ : ಸೋಬಾನೆ ಚಿಕ್ಕಮ್ಮನ ಪದಗಳು, ಪದವವೆ ನಮ್ಮ ಎದೆಯಲ್ಲಿ, ಕರ್ನಾಟಕ ಜನಪದ ಕಥೆಗಳು, ಹೆಳವರು ಮತ್ತು ಅವರ ಕಾವ್ಯಗಳು, ಕನ್ನಡ ಜಾನಪದ ಕೋಶ, ಜಾನಪದ ಜಗತ್ತು (ನಿಯತಕಾಲಿಕೆ).

## ಭಾರತೀಸುತ



**ಜೀವನ ಪಥ** : ಜನನ : 1915 ಮೇ 15, ಪೂರ್ಣ ಹೆಸರು: ಶಾನಭಾಗ್ ರಾಮಯ್ಯ ನಾರಾಯಣರಾವ್. ಶಿಕ್ಷಣ : ಮಡಿಕೇರಿಯ ಪ್ರೌಢಶಾಲೆಯಲ್ಲಿ, ಸ್ವಾತಂತ್ರ್ಯ ಚಳುವಳಿಯಲ್ಲಿ ಪಾತ್ರ, ಸೆರೆಮನೆವಾಸ, ಕೇರಳದ ವೈನಾಡಿನಲ್ಲಿ ತೋಟದ ಉಸ್ತುವಾರಿ ವೃತ್ತಿ. ಅನಂತರ ಪ್ರೌಢಶಾಲೆಯ ಕನ್ನಡ ಪಂಡಿತ ವೃತ್ತಿ. 1976ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಮರಣೋತ್ತರ ಪ್ರಶಸ್ತಿ. ನಿಧನ : 1976 ಏಪ್ರಿಲ್ 4.

**ಸಾಹಿತ್ಯ ಪಥ** : ಶಿಶುಸಾಹಿತ್ಯ : ತಲೆತಿರುಕ ಯೋಧ, ಇರಾನಿನ ವೀರರು, ದೊರೆಮಗಳು, ಕಾಲಯಾನ, ಮಲ್ಲಿಗೆ ಹಳ್ಳಿಯ ಜಾಣರು (ವಯಸ್ಕರ ಶಿಕ್ಷಣ ರಚನೆಗಳು) ಡಾ. ಜಕೀರ್ ಹುಸೇನ್, ಸೊಳ್ಳೆ ಹರಡುವ ರೋಗಗಳು (ಕೇಂದ್ರ ಸರಕಾರದಿಂದ ಬಹುಮಾನಿತ ಕೃತಿ) ಕಳ್ಳರ ಫಜೀತಿ, ಮಂತ್ರದ ಕೊಳಲು, ಹುಲಿಗಳ ದಿಬ್ಬಣ, ಹನ್ನೊಂದು ಹಂಸಗಳು, ನಳದಮಯಂತಿ ಇತ್ಯಾದಿ. ಕಥೆ : ಚಿಂಬ ಹಿಡಿದ ಮೀನು, ಬೆಂಕಿಯಲ್ಲಿ ಬೆಂದವಳು. ನೀಳ್ಗತೆ : ನನ್ನ ಅತ್ತಿಗೆ ದೂರ ಹೋದಳು, ಮನೆಗೆ ಬಂದ ಮಹಾಬಲಿ, ಗಿಳಿಯು ಪಂಜರದೊಳಿಲ್ಲ. ಪೆಟ್ರೇಷಿಯಾ ಕಂದನನ್ನು ಕದ್ದವನು, ಇಲಿ ಮತ್ತು ಹಾವು. ಕಾದಂಬರಿ : ಬಯಲುದಾರಿ, ಎಡಕಲ್ಲು ಗುಡ್ಡದ ಮೇಲೆ, ಹುಲಿಯ ಹಾಲಿನ ಮೇವು, ವಕ್ರರೇಖೆ, ಗಿರಿಕನ್ನಿಕೆ, ಕೊಳಲಿನ ಕರೆ, ಹುಲಿಬೋನು, ವಲ್ಮೀಕ. ಪೃಥ್ವೀರಾಜ, ಅವಳ ದಾರಿ, ಇಳಿದು ಬಾ ತಾಯಿ, ಬೆಂಕಿಯ ಮಳೆ, ಅಮಾತ್ಯ ನಂದಿನಿ, ಸಾಧನ ಕುಟೀರ, ಹಾವಿನ ಹುತ್ತ.

## ಚದುರಂಗ



**ಜೀವನ ಪಥ** : ಜನನ : 1916 ಜನವರಿ 1 ಕಲ್ಲಹಳ್ಳಿಯಲ್ಲಿ, 'ಚದುರಂಗ' ಕಾವ್ಯನಾಮ, ಹೆಸರು ಎಂ.ಎಸ್. ಸುಬ್ರಹ್ಮಣ್ಯರಾಜು ಅರಸು, ಶಿಕ್ಷಣ : ಮೈಸೂರಿನ ರಾಯಲ್ ಶಾಲೆ, ಬೆಂಗಳೂರಿನ ಇಂಟರ್‌ಮೀಡಿಯೇಟ್ ಕಾಲೇಜು ಮೈಸೂರು ಮಹಾರಾಜಾ ಕಾಲೇಜುಗಳಲ್ಲಿ ವ್ಯಾಸಂಗ ಬಿ.ಎ. ಪದವಿ. 1982ರಲ್ಲಿ 'ವೈಶಾಖ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 'ಸರ್ವಮಂಗಳ', 'ಉಯ್ಯಾಲೆ' ಚಲನಚಿತ್ರಗಳಿಗೆ ರಾಜ್ಯ ಪ್ರಶಸ್ತಿ. ನಿಧನ : 19 ಅಕ್ಟೋಬರ್ 1998.

**ಸಾಹಿತ್ಯ ಪಥ** : ಸ್ವಪ್ನಸುಂದರಿ (1948) ಶವದ ಮನೆ, ಇಣುಕು ನೋಟ, ಬಂಗಾರದ ಗೆಜ್ಜೆ, ಮೀನಿನ ಹೆಜ್ಜೆ, ಬಣ್ಣದ ಬೊಂಬೆ, ಕ್ಯಾಟೆ, ಸಮಗ್ರ ಕಥೆಗಳು (1998). ಕಾದಂಬರಿ : ಸರ್ವಮಂಗಳ (1950), ಉಯ್ಯಾಲೆ ವೈಶಾಖ, ಹೆಜ್ಜಾಲ (1998), ನಾಟಕ : ಇಲಿಬೋನು, ಕುಮಾರರಾಮ, ಬಿಂಬ. ಹನಿಗವನ : ಅಲೆಗಳು. ಚಲನಚಿತ್ರ ನಿರ್ದೇಶನ : ಸರ್ವಮಂಗಳ, ಕುವೆಂಪು, ವೆಂಕಟಲಕ್ಷಮ್ಮ (ಸಾಕ್ಷ್ಯ ಚಿತ್ರಗಳು).

## ಬಿ. ಜಿ. ಎಲ್. ಸ್ವಾಮಿ



**ಜೀವನ ಪಥ** : ಜನನ : 1916 ಫೆಬ್ರವರಿ 5. ಶಿಕ್ಷಣ : ಸೆಂಟ್ರಲ್ ಕಾಲೇಜಿನಲ್ಲಿ ಸಸ್ಯಶಾಸ್ತ್ರ ಆನರ್ಸ್ ವ್ಯಾಸಂಗ. 1947ರಲ್ಲಿ ಡಾಕ್ಟರೇಟ್ ಪದವಿ. ಅಮೆರಿಕಾ ಹಾರ್ವರ್ಡ್ ವಿಶ್ವವಿದ್ಯಾ ಲಯದಲ್ಲಿ ಅಧ್ಯಯನ, ಸಂಶೋಧನೆ, ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಅಧ್ಯಾಪಕರಾಗಿ ವೃತ್ತಿ ಆರಂಭ. ಪ್ರಾಧ್ಯಾಪಕ ಪ್ರಿನ್ಸಿಪಾಲರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಗೌರವ ಪ್ರಾಧ್ಯಾಪಕರು, 1978, 'ಹಸುರು ಹೊನ್ನು' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ನಿಧನ : 1980, ನವೆಂಬರ್ 2.

**ಸಾಹಿತ್ಯ ಪಥ** : ಅಮೆರಿಕದಲ್ಲಿ ನಾನು (1962), ಪಂಚಕಲಶ ಗೋಪುರ (1964), ಕಾಲೇಜುರಂಗ, ಕಾಲೇಜು ತರಂಗ (1976), ಹಸುರು ಹೊನ್ನು (1976), ತಮಿಳು ತಲೆಗಳ ನಡುವೆ (1979), ಪ್ರಾಧ್ಯಾಪಕನ ಪೀಠದಲ್ಲಿ (1979), ಶಾಸನಗಳಲ್ಲಿ ಗಿಡಮರಗಳು (1975), ಬೆಳುದಿಂಗಳಲ್ಲಿ ಅರಳಿದ ಮೊಲ್ಲೆ ಮತ್ತು ಇತರ ಪ್ರಬಂಧಗಳು (ಅನು. 1981), ಸಸ್ಯಜೀವಿ-ಪ್ರಾಣಿಜೀವಿ (1985 ದ್ವಿ. ಮು.). ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕ. ಫಲಶ್ರುತಿ. ಸಾಕ್ಷಾತ್ಕಾರದ ದಾರಿಯಲ್ಲಿ, ಮೈಸೂರು ಡೈರಿ (1994).



## ಟಿ. ಸುನಂದಮ್ಮ

**ಜೀವನ ಪಥ** : 8-8-1917 - ಮೈಸೂರಿನಲ್ಲಿ ಜನನ. ಶಿಕ್ಷಣ : 1934- ಎಸ್. ಎಸ್. ಎಲ್. ಸಿ.ಯಲ್ಲಿ ಪ್ರಥಮ ಶ್ರೇಣಿ, 1942 'ಕೊರವಂಜಿ'ಯಲ್ಲಿ ಪದಾರ್ಪಣ, 1979 ಕರ್ನಾಟಕ ಲೇಖಕಿಯರ ಸಂಘದ ಸ್ಥಾಪಕಾಧ್ಯಕ್ಷೆ, 1979 ಸುನಂದಾಭಿನಂದನ ಗ್ರಂಥ ಅರ್ಪಣೆ, 1981 ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1990 ಕನ್ನಡ ರಾಜ್ಯೋತ್ಸವ ಪ್ರಶಸ್ತಿ, 1990 ಮದರಾಸಿನಲ್ಲಿ 'ಸಾಹಿತ್ಯ ಸರಸ್ವತಿ' ಗೌರವ ಪ್ರದಾನ, 1991 ಕನ್ನಡ ಸಾಹಿತ್ಯ ಪರಿಷತ್ತಿನ ಅಮೃತ ಮಹೋತ್ಸವ ಸನ್ಮಾನ, 1994 ಲಕ್ಕುಂಡಿಯಲ್ಲಿ ಅತ್ತಿಮಬ್ಬೆ ಸಹಸ್ರಮಾನೋತ್ಸವ ಮತ್ತು ಅಖಿಲ ಕರ್ನಾಟಕ ಮಹಿಳಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. 1996 ಕರ್ನಾಟಕ ಸರ್ಕಾರದಿಂದ ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ. 1996 ಸ್ವರ ಲಿಪಿಯಿಂದ 'ಚಂದ್ರಕಲಾ' ಪ್ರಶಸ್ತಿ,

**ಸಾಹಿತ್ಯ ಪಥ** : ಹಾಸ್ಯಲೇಖನ ಸಂಗ್ರಹಗಳು : ಜಂಬದ ಚೀಲ (1971) ಬಣ್ಣದ ಚಿಟ್ಟೆ (1972), ಪೆಪ್ಪರ್‌ಮೆಂಟು (1972), ಮುತ್ತಿನ ಚೆಂಡು (1966), ರೂಢಿ ಗಾಡಿ (1977), ವೃಕ್ಷವಾಹನ (1973), ನನ್ನ ಅತ್ತೆಗಿರಿ (1980), ಸರಸ ಮಹಲ್ (1997), ಸುನಂದಮ್ಮನವರ ಸಮಗ್ರ ಹಾಸ್ಯ ಸಾಹಿತ್ಯ (1993), ಆಧುನಿಕ ನಗೆಸಾಹಿತ್ಯ (1976), ಇತರೆ : ತೆನಾಲಿ ರಾಮಕೃಷ್ಣ (ಬಾಲ ಸಾಹಿತ್ಯ) (1974), ಮೂರು ಗೀತ ರೂಪಕಗಳು (1993), ಡಾ.ಎಂ. ಶಿವರಾಂ (ಕಿರು ಜೀವನ ಚರಿತ್ರೆ) (1984). ನಾಟಕಗಳು : ಆದರ್ಶದ ಆಡಂಬರ (1952), ಗೃಹಲಕ್ಷ್ಮಿ (1964), ಚಿಕ್ಕಪ್ಪನ ಉಯಿಲು (1964), ಕೂಸು ಹುಟ್ಟುವದಕ್ಕೆ ಮುಂಚೆ (1964), ಸದಾಶಿವನ ಸ್ವಯಂ ವಧು (1972), ಚಕ್ರ ಚುಕ್ಕೆ (1973), ಬಾದರಾಯಿಣಿ (1975), ಬರೆದ ಕೈ (1975).



## ಎಂ. ಗೋಪಾಲಕೃಷ್ಣ ಅಡಿಗ

**ಜೀವನ ಪಥ** : ಜನನ : 1918. ಫೆಬ್ರವರಿ 18 ಕುಂದಾಪುರ ತಾಲ್ಲೂಕಿನ ಮೊಗೇರಿಯಲ್ಲಿ. ಶಿಕ್ಷಣ : ಮೈಸೂರಿನಲ್ಲಿ ಎಂ.ಎ. ಪ್ರೌಢಶಾಲೆ, ಅನಂತರ ಮೈಸೂರಿನ ಶಾರದ ವಿಲಾಸ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿ. ಕುಮಟಾದ ಕೆನರಾ ಕಾಲೇಜು, ಮೈಸೂರಿನ ಸೈಂಟ್ ಫಿಲೋಮಿನ ಕಾಲೇಜುಗಳಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ಸೇವೆ, 1965-68 ಸಾಗರದ ಲಾಲ್ ಬಹದ್ದೂರ್ ಕಾಲೇಜಿನ ಪ್ರಿನ್ಸಿಪಾಲರು, ಉಡುಪಿ ಪೂರ್ಣಪ್ರಜ್ಞ ಕಾಲೇಜಿನಲ್ಲಿ ಪ್ರಿನ್ಸಿಪಾಲರು. ಅನಂತರ ಎನ್.ಬಿ.ಟಿ. ಉಪನಿರ್ದೇಶಕರು (ಸಂಪಾದಕೀಯ). ವಿಸಿಟಿಂಗ್ ಫೆಲೊ, ಸಿಮ್ಲಾದ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್ (1972-75), 1979ರಲ್ಲಿ ಕುಮಾರ ಆಸಾನ್ ಪ್ರಶಸ್ತಿ, 1986ರಲ್ಲಿ ಕಬೀರ್‌ಸಮ್ಮಾನ್ ಪ್ರಶಸ್ತಿ, 1997 ಅನನ್ಯ ಗೌರವ ಗ್ರಂಥ (ಮರಣೋತ್ತರ). 'ವರ್ಧಮಾನ' ಕವನ ಸಂಗ್ರಹಕ್ಕೆ 1973ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1974ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ. 'ಸುವರ್ಣ ಪುತ್ಥಳಿ' ಕೃತಿಗೆ 1993ರಲ್ಲಿ ಮರಣೋತ್ತರ ಪಂಪ ಪ್ರಶಸ್ತಿ. 1979ರಲ್ಲಿ ಧರ್ಮಸ್ಥಳದಲ್ಲಿ ನಡೆದ 51ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ನಿಧನ : 14-11-1992.

**ಸಾಹಿತ್ಯ ಪಥ** : ಕವಿತೆ : ಭಾವತರಂಗ (1946), ಕಟ್ಟುವೆವು ನಾವು (1948), ನಡೆದುಬಂದ ದಾರಿ (1952), ಚಂಡೆಮದ್ದಳೆ (1954), ಭೂಮಿಗೀತ (1959), ವರ್ಧಮಾನ (1972), ಇದನ್ನು ಬಯಸಿರಲಿಲ್ಲ (1975), ಮೂಲಕ ಮಹಾಶಯರು (1980), ಬತ್ತಲಾರದ ಗಂಗೆ (1983), ಚಿಂತಾಮಣಿಯಲ್ಲಿ ಕಂಡ ಮುಖ (1987), ಸುವರ್ಣ ಪುತ್ಥಳಿ (1990), ಬಾ ಇತ್ತ ಇತ್ತ (1993), ಅಡಿಗರ ಆಯ್ದ ಕವನಗಳು (1968), ಸಮಗ್ರ ಕಾವ್ಯ (1967), ಆರೋಹಣ (ಆಯ್ದ ಕವನಗಳು, 1974), ಗದ್ಯ: ಸಮಗ್ರ ಗದ್ಯ (ಸಂಪುಟ 1. 1977) ಅಡಿಗರ ಲೇಖನಗಳು ಮತ್ತು ಮುನ್ನುಡಿಗಳು (1983), ಕಾದಂಬರಿ: ಅನಾಥೆ (1954), ಆಕಾಶದೀಪ. ಕಥಾಸಂಕಲನ : ಹುಲಿರಾಯ ಮತ್ತು ಇತರ ಕಥೆಗಳು. ವಿಚಾರ. ವಿಮರ್ಶೆ : ಮಣ್ಣಿನ ವಾಸನೆ (1966), ವಿಚಾರ ಪಥ (1972), ಕನ್ನಡದ ಅಭಿಮಾನ (1972), ನಮ್ಮ ಶಿಕ್ಷಣ ಕ್ಷೇತ್ರ (1972), ಅನುವಾದ : ಸುವರ್ಣಕೀಟ (1948), ರೈತರ ಹುಡುಗಿ (1948), ಜನತೆಯ ಶತ್ರು (1949), ಭೂಗರ್ಭಯಾತ್ರೆ (1950), ಹುಲ್ಲಿನ ದಳಗಳು (1966), ಮುಕ್ತಾಫಲ (1965), ಇತಿಹಾಸ ಚಕ್ರ (1972), ಬನದ ಮಕ್ಕಳು (1975), ಟೈಪೀ (1979), ಕೆಂಪು ಅಕ್ಷರ (1984), ನಾಲ್ಕು ಮಂದಿ ಗೆಳೆಯರ ಕಥೆ (1979), ಕಾವ್ಯ ಜಗತ್ತು (1986), ಆಯ್ದ ಪ್ರಬಂಧಗಳು (ಭಾಗ I - 1981), (ಭಾಗ II - 1983), ಕೆಸರಿನಿಂದ ಶಿಬಿರಕ್ಕೆ. ಆತ್ಮಕಥೆ: ನೆನಪಿನ ಗಣಿಯಿಂದ.



## ಸಿದ್ದಯ್ಯ ಪುರಾಣಿಕ

**ಜೀವನ ಪಥ** : ಜನನ : 1918 ಜೂನ್ 18, ರಾಯಚೂರು ಜಿಲ್ಲೆ ಯಲಬುರಗಿ ತಾಲ್ಲೂಕು ದ್ಯಾಂಪುರದಲ್ಲಿ. ಶಿಕ್ಷಣ : ಕಲ್ಬುರ್ಗಿ ಕಾಲೇಜು, ಹೈದರಾಬಾದು ವಿಶ್ವವಿದ್ಯಾಲಯಗಳಲ್ಲಿ ವ್ಯಾಸಂಗ. ಬಿ.ಎ. ಮತ್ತು ಎಲ್.ಎಲ್.ಬಿ. ಪದವಿ. 1943ರಲ್ಲಿ ತಹಶೀಲ್ದಾರರಾಗಿ ಸರ್ಕಾರಿ ಸೇವೆ ಪ್ರಾರಂಭ. ಡೆಪ್ಯುಟಿ ಕಲೆಕ್ಟರ್, ವಾರ್ತಾ ಮತ್ತು ಪ್ರವಾಸೋದ್ಯಮ ಮುಖ್ಯಾಧಿಕಾರಿ, ಜಿಲ್ಲಾಧಿಕಾರಿ, ಸಾರಿಗೆ ಕಮಿಷನರ್, ಕಾರ್ಮಿಕ ಕಮಿಷನರ್, ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಿ. ಲಿಟ್. ಪದವಿ. ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ. 1987ರಲ್ಲಿ ಗುಲ್ಬರ್ಗಾದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ಕರ್ನಾಟಕ ವಿ.ವಿ.ದ ಗೌರವ ಡಿ.ಲಿಟ್. ನಿಧನ : 5 ಸೆಪ್ಟೆಂಬರ್ 1994.

**ಸಾಹಿತ್ಯ ಪಥ** : ಕವಿತೆ : ಜನಪಾತ (1953), ಕರುಣಾ ಶ್ರಾವಣ (1955), ಮಾನಸ ಸರೋವರ (1959) ಮೊದಲು ಮಾನವನಾಗು (1969), ಕಲ್ಲೋಲ ಮಾಲೆ (1968), ಚರಗ (1987), ಹಾಲ್ದೆನೆ (1990), ಮರುಳ ಸಿದ್ಧನ ಕಂತೆ 1991, ವಚನೋದ್ಯಾನ 1977, ವಚನ ನಂದನ 1983, ವಚನಾರಾಮ 1992, ಆಯ್ದ ಕವನಗಳು 1982. ನಾಟಕ : ಆತ್ಮಾರ್ಪಣ (1941), ಭಾರತ ವೀರ (1963), ರಜತರೇಖೆ (1965), ಭಗ್ನ ನೂಪುರ (1984), ಗಿರಿಜಾ ಕಲ್ಯಾಣ ಮತ್ತು ಇತರ ಗೇಯ ನಾಟಕಗಳು. ಜೀವನಚರಿತ್ರೆ : ಶರಣ ಚರಿತಾಮೃತ (1964), ಬಸವಣ್ಣನವರ ಜೀವನ ಹಾಗೂ ಸಂದೇಶ (1977), ಮಹಾದೇವಿ (1982), ಹರ್ಡೇಕರ್ ಮಂಜಪ್ಪನವರು (1978). ಸಿದ್ಧರಾಮ (1974). ಮಿರ್ಜಾ ಗಾಲಿಬ್ (1979), ಅಲ್ಲಮ ಪ್ರಭು (1989), ಕಥೆ : ಕಥಾಮಂಜರಿ (1948), ತುಷಾರಹಾರ (1956), ಕಾದಂಬರಿ : ತ್ರಿಭುವನ ಮಲ್ಲ (1974), ಮಕ್ಕಳ ಸಾಹಿತ್ಯ : ತುಪ್ಪಾ ರೊಟ್ಟಿ ಗೇಗೇ ಗೇ (1964), ಗಿರ್ ಗಿಲ್ ಗಿಲಗಚ್ಚಿ (1978), ತಿರುಗಲೆ ತಿರುಗಲೆ ತಿರುಗುಯ್ಯಾಲೆ (1981) ನ್ಯಾಯ ನಿರ್ಣಯ (ನಾಟಕ, 1986), ಮಕ್ಕಳ ಲೋಕ ಸಂಚಾರ (1989), ಬಣ್ಣದ ಓಕುಳಿ (1987), ವಿಕಾಸ ವಾಣಿ (ವಯಸ್ಕರಿಗೆ 1952), ಅನುವಾದ: ನಜೀರ್ ಅಕಬರಾಬಾದಿ (1978), ಒಂದು ಊರಿನ ಕತೆ. ಇತರೆ : ಗ್ರಾಮ ಸ್ವರಾಜ್ಯ (1982), ಚಿಂತನಲಹರಿ (1989). ಸಂಪಾದನೆ : (ಸ್ವಂತ ಮತ್ತು ಇತರರೊಡನೆ) ಕನ್ನಡ ಪದ್ಯರತ್ನಾಕರ (1956), ಶ್ರೀಕಾರ (1952), ಸುಬೋಧಸಾರ (1939), ಮಹಾತ್ಮಾ ಕನಕದಾಸ ಪ್ರಶಸ್ತಿ (1965), ಸರಹದ್ ಗಾಂಧಿ (1968), ಸಿದ್ಧಗಂಗಾ ಶ್ರೀ (1981), ಮಣಿಹ (1982), ಶರಣ ಪ್ರಸಾದ (1969), ಬಸವ ಮತ್ತು ದಲಿತೋದಯ (1983), ಬಸವ ಮತ್ತು ವಿಚಾರವಾದ (1984), ಬಸವ ದರ್ಶನ (1989), ಮಳೆಯ ರಾಜಚಾರಿತ್ರ್ಯ (1989).



## ದೇಜಗೌ

**ಜೀವನ ಪಥ** : ಜನನ : 6 ಜುಲೈ 1918, ಬೆಂಗಳೂರು ಜಿಲ್ಲೆ ಚನ್ನಪಟ್ಟಣ ತಾಲ್ಲೂಕು ಚಕ್ಕರೆ. ತಂದೆ-ತಾಯಿ : ದೇವೇಗೌಡರು, ಚೆನ್ನಮ್ಮ. ಶಿಕ್ಷಣ: ಚನ್ನಪಟ್ಟಣ, ಬೆಂಗಳೂರು, ಮೈಸೂರುಗಳಲ್ಲಿ ಶಾಲಾ ಕಾಲೇಜು ವಿದ್ಯಾಭ್ಯಾಸ. 1941 ಮಹಾರಾಜಾ ಕಾಲೇಜು, ಬಿ.ಎ.ಆನರ್ಸ್, 1943 ಎಂ.ಎ. ವೃತ್ತಿ: 1946 ಮೈ.ವಿ.ವಿ.ದಲ್ಲಿ ಕನ್ನಡ ಅಧ್ಯಾಪಕರಾಗಿ ವೃತ್ತಿಪ್ರಾರಂಭ. 1954, ಮೈಸೂರು ವಿ.ವಿ. ಪ್ರಸಾರಾಂಗದ ಕಾರ್ಯದರ್ಶಿ, 1957 ವಿ.ವಿ.ದ ಪರೀಕ್ಷಾಧಿಕಾರಿ, 1960 ಶಿವಮೊಗ್ಗೆ ಸಹ್ಯಾದ್ರಿ ಕಾಲೇಜಿನ ಪ್ರಿನ್ಸಿಪಾಲ್, 1962 ಮೈ.ವಿ.ವಿ ಕನ್ನಡ ವಿಭಾಗದ ಮುಖ್ಯಸ್ಥರು, ಪ್ರಾಧ್ಯಾಪಕರು. 1966 ಕನ್ನಡ ಅಧ್ಯಯನ ಸಂಸ್ಥೆಯ ಪ್ರಥಮ ಸಂಸ್ಥಾಪಕ ನಿರ್ದೇಶಕರು. 1969-75 ಮೈಸೂರು ವಿ.ವಿ.ದ ಕುಲಪತಿ. 1970 ಅಖಿಲಭಾರತ 47ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು (ಬೆಂಗಳೂರು). 1975 ಕರ್ನಾಟಕ ವಿ.ವಿ.ದಿಂದ ಗೌರವ ಡಾಕ್ಟರೇಟ್. 1976 ಅಖಿಲ ಕರ್ನಾಟಕ ಜಾನಪದ ಸಮ್ಮೇಳನ ಅಧ್ಯಕ್ಷತೆ. 1974 ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತಿ. 1967 ಸೋವಿಯತ್ ಲ್ಯಾಂಡ್ ನೆಹರು ಪ್ರಶಸ್ತಿ. 1974 ಕುರುಕ್ಷೇತ್ರದಲ್ಲಿ ನಡೆದ ಅಖಿಲ ಭಾರತ ಪ್ರಾಚ್ಯವಿದ್ಯಾಲಯ ಸಮ್ಮೇಳನ ಅಧ್ಯಕ್ಷತೆ. 1977-90 ಪ್ರಧಾನ ಸಂಪಾದಕರು - 'ಪುಸ್ತಕ ಪ್ರಪಂಚ'. 1979 ತಿರುವಾಂಕೂರಿನ ದ್ರಾವಿಡ ಭಾಷಾ ವಿಜ್ಞಾನ ಸಂಸ್ಥೆಯ ಸೀನಿಯರ್ ಫೆಲೋ ಗೌರವ. 1984 ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1985 ರಾಜ್ಯೋತ್ಸವ ಪ್ರಶಸ್ತಿ. 1992 ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ, ಸಂಸ್ಥಾಪಕ ಅಧ್ಯಕ್ಷರು. ಕರ್ನಾಟಕ ಸರ್ಕಾರದಿಂದ 'ಪಂಪ ಪ್ರಶಸ್ತಿ' ಪಂಪೆಯ ಕನ್ನಡ ವಿ.ವಿ.ದ 'ನಾಡೋಜ' ಗೌರವ ಡಿ.ಲಿಟ್ ಪದವಿ. ಅಮೇರಿಕಾ, ಆಸ್ಟ್ರೇಲಿಯಾ, ಇಟಲಿ, ಇಸ್ರೇಲ್, ಐರ್ಲೆಂಡ್, ಬ್ರಿಟನ್, ಘಾನಾ, ಜಪಾನ್, ಜರ್ಮನಿ, ಫ್ರಾನ್ಸ್, ನೈಜಿರಿಯಾ, ಸಿಂಗಪುರ, ಶ್ರೀಲಂಕಾ, ಸೋವಿಯತ್ ದೇಶಗಳಲ್ಲಿ ಪ್ರವಾಸ. ಹಲವು ಅಭಿನಂದನ ಗ್ರಂಥಗಳ ಅರ್ಪಣೆ.

**ಸಾಹಿತ್ಯ ಪಥ** : ಜೀವನ ಚರಿತ್ರೆಗಳು : ಅಮೇರಿಕಾ ಗಾಂಧಿ 1982, ಆಲ್ ಬರ್ಟ್ ಐನ್‌ಸ್ಟೀನ್ 1962, ಋಷಿ ರವೀಂದ್ರರು 1961, ಕನ್ನಡ ನಾಡಿನ ಕಲಿ (ಕುಮಾರ ರಾಮ), ಕಲಾ ಕಂಠೀರವ ಶ್ರೀಕರಿಬಸವಯ್ಯ 1978, ಕ್ರಾಂತಿಕಾರ ಡಾ. ಅಂಬೇಡ್ಕರ 1978, ಕಾಯಕಯೋಗಿ ರಾಷ್ಟ್ರನಾಯಕ (ಎಸ್. ನಿಜಲಿಂಗಪ್ಪ) 1992, ಗೋಪಾಲ ಕೃಷ್ಣಗೋಖಲೆ 1953, ತೀನಂಶ್ರೀ 1967, ದಕ್ಷಿಣೇಶ್ವರಕ್ಕೆ ನಮನ 1987, ದಾರಿದೀಪಗಳು 1985, ನಮ್ಮ ನೆಹರು 1986, ಪಂಡಿತ ಮೋತಿಲಾಲ್ ನೆಹರು 1961, ನಿತ್ಯಸಚಿವ (ಶ್ರೀ ಕೆ.ವಿ. ಶಂಕರಗೌಡರು) 1986, ಪಂಡಿತ ಮೋತಿಲಾಲ್ ನೆಹರು 1961, ಬಸವ ಬೆಳಕು 1984, ಬೂಕರ್ ಟಿ. ವಾಷಿಂಗ್‌ಟನ್ 1981, ಮಹರ್ಷಿ ಟಾಲ್‌ಸ್ಟಾಯ್ 1976, ಮೇಡಂ ಕ್ಯೂರಿ 1960, ರಾಷ್ಟ್ರೀಯ ಉದ್ಯಾನದ ಮಹಾಶಿಲ್ಪಿ ಡಾ. ಎಂ.ಎಚ್. ಮರಿಗೌಡರು 1993, ಲೋಕನಾಯಕ (ಜೆ.ಪಿ.) 1980, ಲೋಕದ ಬೆಳಕು (ಮಹಾತ್ಮಾಗಾಂಧಿ) 1983, ವ್ಯಾಕರಣದ ಮಲ್ಲಪ್ಪನವರು 1980, ವಿಚಾರವಾದಿ ಪೆರಿಯಾರ್ 1980, ವಿವೇಕಾನಂದರು 1979, ಸಮಾಜವಾದಿಲೋಹಿಯಾ 1989, ರಾಷ್ಟ್ರಕವಿ ಕುವೆಂಪು 1970 (ಪರಿಷ್ಕೃತ, ವಿಸ್ತೃತ 1999), ಶ್ರೀ ಬಸವೇಶ್ವರರು. ಸಂಶೋಧನೆ-ವಿಮರ್ಶೆ: ಕುವೆಂಪು ಶೈಲಿ 1991, ಕುವೆಂಪು ಸಾಹಿತ್ಯ ಕೆಲವು ಅಧ್ಯಯಗಳು (ಭಾಗ 1,23), ಶ್ರೀ ರಾಮಾಯಣದರ್ಶನಂ ವಚನ ಚಂದ್ರಿಕೆ 1954, ಇಣುಕುನೋಟ 1984, ಗದ್ಯಶೈಲಿ 1978, ಗದುಗಿನ ಭಾರತ 1978, ನಂಜನಗೂಡ ಕವಿ 1964, ನೂರೆಂಟು ಪುಸ್ತಕಗಳು 1972, ಬಸವೇಶ್ವರ - ಅಂಬೇಡ್ಕರ್ 1992, ಬಸವೇಶ್ವರ ಕಾರ್ಲ್‌ಮಾರ್ಕ್ಸ್ 1989, ವಚನಗಳಲ್ಲಿ ವೈಚಾರಿಕತೆ 1992, ವಚನಗಳಲ್ಲಿ ಸಮಾಜವಾದ 1981, ಮುನ್ನುಡಿಗಳು 1970, ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ (1993), ಶರಣಪದ 1983, ಶ್ರೀ ಕುವೆಂಪು ಅವರ ದಾಂಪತ್ಯದರ್ಶನದ ನಾಲ್ಕು ಮಹಾಕವನಗಳು 1986, ಷಡಕ್ಷರದೇವ 1959, ಸರ್ವಜ್ಞ 1974, ಸ್ಥಳನಾಮ ವ್ಯಾಸಂಗ 1990, ಸಾಹಿತ್ಯ ಮಾರ್ಗ 1964, ಸಾಹಿತ್ಯಯಾತ್ರೆ 1989, ಸಾಹಿತಿಯ ಸಾಮಾಜಿಕ ಬದ್ಧತೆ 1993, Continue, include also ಕುವೆಂಪು ದರ್ಶನ ಮತ್ತು ಸಂದೇಶ 1975, ಕುವೆಂಪು ವಿಶ್ವಮಾನವ ಸಂದೇಶ 1993, ಕುವೆಂಪು ಸಾಹಿತ್ಯದಲ್ಲಿ ಮಕ್ಕಳು 1980, ಕುವೆಂಪು ಸಾಹಿತ್ಯದಲ್ಲಿ ರೈತ, ರಾಷ್ಟ್ರಕವಿ ಸಂದರ್ಶನ 1984, ಕುವೆಂಪು ಅವರ ಶಿಕ್ಷಣ ಶಿಕ್ಷಣ ತತ್ತ್ವ ವಿಚಾರಗಳು 1977. ಶಿಕ್ಷಣ : ಕೆಲವು ಶೈಕ್ಷಣಿಕ ವಿಚಾರಗಳು 1991, ವಿದ್ಯಾಪೀಠಗಳು 1952, ಸಂಪಾದನೆ: ಅಜಿತ ತೀರ್ಥಂಕರ ಪುರಾಣ ತಿಲಕಂ (ಎಚ್. ದೇವೀರಪ್ಪ ಅವರೊಡನೆ) 1959, ಕನಕ ಸಾಹಿತ್ಯದರ್ಶನ-ಸಂಪುಟ 1, ಕಬ್ಬಿಗರ ಕಾವ 1964, ಗಿರಿಜಾ ಕಲ್ಯಾಣ ಮಹಾಪ್ರಬಂಧಂ 1951 (ಎಚ್. ದೇವೀರಪ್ಪನವರೊಡನೆ), ಚಿಕುಪಾಧ್ಯಾಯನ

ರುಕ್ಮಾಂಗದ ಚರಿತ್ರೆ 1982, ಜೈಮಿನಿಭಾರತ ಸಂಗ್ರಹ 1959, ಧರ್ಮಾಮೃತ ಸಂಗ್ರಹ 1957, ನಳಚರಿತ್ರೆ 1965, ಪುಣ್ಯಾಸ್ರವ 1977, ಬಸವ ಸಂಹಿತೆ 1979, ರಾಮಧಾನ್ಯ ಚರಿತ್ರೆ 1965, ಲೀಲಾವತಿ ಪ್ರಬಂಧಂ 1966, ಶ್ರೀ ಕುವೆಂಪು ಶಿಶುಸಾಹಿತ್ಯ, ಶ್ರೀಮತಿ ಹೇಮಾವತಿ ಕುವೆಂಪು 1983, ಶ್ರೀ ರಾಮಾಯಣ ದರ್ಶನಂ ಉಪನ್ಯಾಸಮಾಲೆ 1954, ಸಾಹಿತ್ಯಾರಾಧನೆ 1970. ಜಾನಪದ : ಜಾನಪದ ಅಧ್ಯಯನ 1976, ಜಾನಪದ ವಾಹಿನಿ 1983, ಜಾನಪದ ಸೌಂದರ್ಯ 1977, ಜನಪದ ಗೀತಾಂಜಲಿ (ಸಂ) 1978. ಪ್ರವಾಸ ಸಾಹಿತ್ಯ : ಆಫ್ರಿಕಾಯಾತ್ರೆ 1975, ವಿದೇಶದಲ್ಲಿ ನಾಲ್ಕುವಾರ 1970, ಪ್ರವಾಸಿಯ ದಿನಚರಿ 1974, ಯೇಸು ವಿಭೀಷಣರ ನಾಡಿನಲ್ಲಿ 1978, ಅಮೆರಿಕಾ ಪ್ರವಾಸ. ಪ್ರಬಂಧ : ಕೆನೆ 1978, ತೆನೆ 1983, ಬೆರಕೆಸೊಪ್ಪು 1971, ವೈಚಾರಿಕ : ಕನ್ನಡಕ್ಕಾಗಿ ಕೈಯೆತ್ತು 1981, ಕನ್ನಡಕ್ಕೆ ನಮನ 1985, ಕನ್ನಡಿಗರೇ ಎಚ್ಚರಗೊಳ್ಳಿ 1951, ರಾಷ್ಟ್ರೀಯ ಮೂಲಭೂತ ಸಮಸ್ಯೆಗಳು 1991 ಐತಿಹಾಸಿಕ ಕಾದಂಬರಿ: ಕಡುಗಲಿ ಕುಮಾರರಾಮ 1961, ಬೆಂಗಳೂರು ಕೆಂಪೇಗೌಡ 1950. ಆತ್ಮಕಥೆ : ಹೋರಾಟದ ಬದುಕು (ಸಂ. 1,2 ) 1968, 1987, ನೆನಪಿನ ಬುತ್ತಿ 1994, ನನ್ನ ಉಪವಾಸದ ಕಥೆ 1994, ಕುಲಪತಿಯ ದಿನಚರಿ 1973. ಭಾಷಣ - ಪತ್ರಗಳು : ಕುಲಪತಿಯ ಪತ್ರಗಳು (ವಿಭಾಗ 1) 1975, ತುಡಿತ (ಮಗಳಿಗೆ ಬರೆದ ಪತ್ರಗಳು) 1979, ಕುಲಪತಿಯ ಭಾಷಣಗಳು ಭಾಗ (1,2,3,4,5,6) ನಿರಂತರ. ಅನುವಾದ : ನೆನಪು ಕಹಿಯಲ್ಲ 1949, ಅಕ್ಬರ್ 1963, ಗುರುನಾನಕ್ 1963, ವಿಷವೃಕ್ಷ ನಾಟಕ 1976, ಟಾಲ್‌ಸ್ಟಾಯ್‌ರ ಎರಡು ನಾಟಕಗಳು 1978, ಪುನರುತ್ಥಾನ 1965, ಯುದ್ಧ ಮತ್ತು ಶಾಂತಿ 1989, ಹಮ್ಮು-ಬಿಮ್ಮು 1961, ಅನಾಕರೆನಿನ 1991. ಇತರೆ : ಪ್ರತಿಧ್ವನಿ : ಯುಗೇ ಯುಗೇ ಸಂಭವಾಮಿ (ಸಂ) 1986, ಕುವೆಂಪು ದೃಷ್ಟಿಯಲ್ಲಿ ಬಸವೇಶ್ವರರು 1985, ಸುಲಭ ಭಾಷಾಂತರ ಪಾಠಗಳು (ಸಿ.ಡಿ. ಗೋವಿಂದರಾವ್ ಅವರೊಡನೆ) (ಭಾಗ 1,2,3). ಕುವೆಂಪು ಕವನಗಳು (ಆನ್ವಯಿಕ ವಿಮರ್ಶೆ ಸಂಪಾದಿತ) 1968. ಇಂಗ್ಲಿಷ್‌ನಲ್ಲಿ : Culture, Education and Society 1974, Oxford Picture Dictionary (ಕನ್ನಡ-ಇಂಗ್ಲಿಷ್, ಶಶಿಕಲಾ ಚಂದ್ರಶೇಖರ್ ಅವ ರೊಡನೆ) Poems of Kuvempu (with Pradhan Gurudatta) 1988.

## ಮಿರ್ಜಿ ಅಣ್ಣಾರಾಯ



**ಜೀವನ ಪಥ** : ಜನನ : 1918 ಆಗಸ್ಟ್ 25 ಸೇಡಬಾಳ. ತಂದೆ-ತಾಯಿ ಅಪ್ಪಣ್ಣ, ಚಂದ್ರಾಬಾಯಿ. 1939ರಿಂದ ಅಧ್ಯಾಪಕ ವೃತ್ತಿ. 1946 'ನಿಸರ್ಗ' ಕಾದಂಬರಿಗೆ ಮುಂಬೈ ಸರ್ಕಾರದಿಂದ ಬಹುಮಾನ. 1947 'ಶಾಂತಿಸೇವಾ ಸದನ' ಸ್ಥಾಪನೆ. 1969ರಲ್ಲಿ ರಾಷ್ಟ್ರಪತಿಯವರಿಂದ ಶಿಕ್ಷಕರ ರಾಷ್ಟ್ರೀಯ ಪ್ರಶಸ್ತಿ. 1970 ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1975 ಸೇವೆಯಿಂದ ನಿವೃತ್ತಿ. ನಿಧನ : 1975 ಡಿಸೆಂಬರ್ 23.

**ಸಾಹಿತ್ಯ ಪಥ** : ಕಾದಂಬರಿ : ನಿಸರ್ಗ (1945), ರಾಷ್ಟ್ರಪುರುಷ (1947), ಪ್ರತಿ ಸರಕಾರ (1947), ರಾಮಣ್ಣ ಮಾಸ್ತರು (1948), ಅಶೋಕಚಕ್ರ (1948), ಶ್ರೇಯಾಂಸ (ಭಾಗ 1, 2, 954, 1955), ಎರಡು ಹೆಜ್ಜೆ (1954), ಹದಗೆಟ್ಟಹಳ್ಳಿ (1965), ಭಸ್ಮಾಸುರ (1949), ಸಾಮ್ರಾಟ್ ಶ್ರೇಣಿಕ (1954), ಚಾವುಂಡರಾಯ, ಸಿದ್ಧಚಕ್ರ, ಋಷಭದೇವ (1974), ಕಥೆ : ಪ್ರಣಯ ಸಮಾಧಿ (1948), ಅಮರ ಕಥೆಗಳು (1959), ವಿಜಯಶ್ರೀ (1950), ವ್ಯಕ್ತಿಚಿತ್ರ : ಮಹಾಪುರುಷ (1956), ಪ್ರಿಯದರ್ಶಿ (1960), ಭಾರತದ ಬೆಳಕು, ಖಾರವೇಲ, ಭಗವಾನ್ ಮಹಾವೀರ (1955), ಬುದ್ಧನ ಕಥೆ, ಮಹಮ್ಮದ್ ಪೈಗಂಬರ (1956), ಶಾಂತಿ ಸಾಗರರು (1954), ತೀರ್ಥಂಕರ ಮಹಾವೀರ (1963), ಸಂಪಾದನೆ : ಕಲ್ಯಾಣ ಕೀರ್ತಿಯ ಚಿನ್ಮಯ ಚಿಂತಾಮಣಿ (1946), ದೇಶಭಕ್ತಿ 1947, ಭರತೇಶ ವೈಭವದ ಶೋಭನ ಸಂಧಿಗಳು (1954), ಅನುವಾದ : ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ (1971). ಇತರೆ : ಮೂಲಶಿಕ್ಷಣ ಮೌಲ್ಯಮಾಪನ (1954), ಭಾಷಾಶಿಕ್ಷಣ (1957), ಲೇಖನ ಕಲೆ (1947), ದತ್ತವಾಣಿ (1946), ವಿಮರ್ಶೆಯ ಸ್ವರೂಪ (1950), ಭರತೇಶನ ನಾಲ್ಕು ಚಿತ್ರಗಳು (1954), ಕನ್ನಡ ಸಾಹಿತ್ಯದ ಒಲವುಗಳು (1964), ಜೈನಧರ್ಮ (1952), ಮಹಾಪುರಾಣಸಾರ (1962), ಜನತಾ ರಾಮಾಯಣ (ರವಿಷೇಣ ಕೃತಿಸಾರ (1968), ರತ್ನಕರಂಡಕ ಶ್ರಾವಣಾಚಾರ (1960), ಶ್ರೀಕ್ಷೇತ್ರ ಧರ್ಮಸ್ಥಳ (1972), ನನ್ನ ಮಗುವಿನ ಶಾಲೆ (1967), ಸಮಯಸಾರ, ವಿಶ್ವಧರ್ಮದಲ್ಲಿ ಅನೇಕಾಂತ ಮತ್ತು ಅಹಿಂಸೆ.

## ಬಸವರಾಜ ಕಟ್ಟೀಮನಿ



**ಜೀವನ ಪಥ** : ಜನನ : 1919 ಅಕ್ಟೋಬರ್ 5, ಗೋಕಾಕದಲ್ಲಿ, ಶಿಕ್ಷಣ: ಬೆಳಗಾವಿ, ಪುಣೆಗಳಲ್ಲಿ ಪ್ರೌಢಶಾಲಾ ವ್ಯಾಸಂಗ. 1936 'ಸಂಯುಕ್ತ ಕರ್ನಾಟಕ'ದಲ್ಲಿ ಪತ್ರಿಕಾ ವೃತ್ತಿ ಪ್ರಾರಂಭ. 1968 ವಿಧಾನ ಪರಿಷತ್ತಿನ ಸದಸ್ಯತ್ವ. 1968ರಲ್ಲಿ 'ಜ್ವಾಲಾಮುಖಿಯ ಮೇಲೆ ' ಕಾದಂಬರಿಗೆ ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ. 1980ರಲ್ಲಿ ಬೆಳಗಾವಿಯಲ್ಲಿ ನಡೆದ 52ನೇ ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷತೆ. ನಿಧನ : 1989 ಅಕ್ಟೋಬರ್ 23.

**ಸಾಹಿತ್ಯ ಪಥ** : ಸಣ್ಣ ಕಥೆ : ಕಾರವಾನ್ (1944), ಸೆರೆಯಿಂದ ಹೊರಗೆ, ಆಗಸ್ಟ್ ಒಂಬತ್ತು, ಗುಲಾಬಿ ಹೂ, ಜೋಳದ ಬೆಳೆಯ ನಡುವೆ, ಜೀವನಕಲೆ, ಸುಂಟರಗಾಳಿ, ಸೈನಿಕನ ಹೆಂಡತಿ, ಹುಲಿಯಣ್ಣನ ಮಗಳು, ಗರಡಿಯಾಳು. ನಾಟಕ : ಪಟ್ಟಣದ ಹುಡುಗಿ. ಕಾದಂಬರಿ: ಸ್ವಾತಂತ್ರ್ಯದೆಡೆಗೆ (1944), ಮಾಡಿ ಮಡಿದವರು (1950), ಜ್ವಾಲಾಮುಖಿಯ ಮೇಲೆ 1951, ಮೋಹದ ಬಲೆಯಲ್ಲಿ 1951, ಬಲೆಯ ಬೀಸಿದರು, ಖಾನಾವಳಿಯ ನೀಲಾ, ಬೀದಿಯಲ್ಲಿ ಬಿದ್ದವಳು, ಜರತಾರಿ ಜಗದ್ಗುರು 1952, ಮಣ್ಣು ಮತ್ತು ಹೆಣ್ಣು, ನೀ ನನ್ನ ಮುಟ್ಟಬೇಡ, ಆಶ್ರಮವಾಸಿ, ಜನಿವಾರ ಮತ್ತು ಶಿವದಾರ, ಗಿರಿಯ ನವಿಲು, ಜಲತರಂಗ, ನಾನು ಪೊಲೀಸನಾಗಿದ್ದೆ, ಬಂಗಾರದ ಜಿಂಕೆಯ ಹಿಂದೆ, ಕತ್ತರಿ ಪ್ರಯೋಗ, ಪೌರುಷ ಪರೀಕ್ಷೆ, ಬೆಳಗಿನ ಗಾಳಿ, ನರಗುಂದ ಬಂಡಾಯ, ಸಾಕ್ಷಾತ್ಕಾರ, ಪಾತರಗಿತ್ತಿ, ಚಕ್ರವ್ಯೂಹ, ದ್ರೋಹಿ, ಗೆಳೆಯನ ಮಡದಿ, ಪ್ರಿಯಬಾಂಧವಿ, ಐದನೆಯ ದೇಸಾಯಿಣಿ, ಗ್ರಾಮಸೇವಿಕಾ, ಹೆಂಡತಿ, ಪ್ರಪಾತ, ಮಾಜೀ ಮಂತ್ರಿ, ಹರಿಜನಾಯಣ, ಸಮರಭೂಮಿ, ಕವಿತೆ : ಕಂಪೋಜಿಟರ್, ಸ್ವತಂತ್ರವ್ವ. ಪ್ರವಾಸಕಥನ : ನಾನು ಕಂಡ ರಶಿಯಾ. ಮಕ್ಕಳ ಸಾಹಿತ್ಯ : ಸಂಗೊಳ್ಳಿ ರಾಯಣ್ಣ, ಕುಮಾರ ರಾಮ. ಆತ್ಮಕಥೆ:

ಕಾದಂಬರಿಕಾರನ ಬದುಕು. ಜೀವನ ಚರಿತ್ರೆ: ಸೇನಾಪತಿ ಚೆನ್ನಪ್ಪವಾಲಿ. ಸಂಪಾದನೆ (ಇತರರೊಡನೆ) : ನವಿಲೂರ ಮನೆಯಿಂದ, ರಸಿಕರಂಗ ದರ್ಶನ.



## ಎಲ್. ಬಸವರಾಜು

**ಜೀವನ ಪಥ** : ಜನನ : 7 ಅಕ್ಟೋಬರ್ 1919, ಕೋಲಾರ ಜಿಲ್ಲೆ ಗೌರಿಬಿದನೂರು ತಾಲ್ಲೂಕು ಇಡಗನೂರು. ತಂದೆ-ತಾಯಿ : ಲಿಂಗಪ್ಪ, ಈರಮ್ಮ. ಶಿಕ್ಷಣ : ಇಡಗನೂರು, ಸಿದ್ಧಗಂಗೆಗಳಲ್ಲಿ ಶಾಲಾ ವಿದ್ಯಾಭ್ಯಾಸ. ಮೈಸೂರು ಮಹಾರಾಜಾ ಕಾಲೇಜಿನಿಂದ ಬಿ.ಎ. ಆನರ್ಸ್ ಮತ್ತು ಎಂ.ಎ. ವೃತ್ತಿ : ದಾವಣಗೆರೆ ಡಿ.ಆರ್.ಎಂ. ಕಾಲೇಜಿನಲ್ಲಿ ಉಪನ್ಯಾಸಕರಾಗಿ ಅಧ್ಯಾಪನ ವೃತ್ತಿ ಆರಂಭ. ಮೈಸೂರು ವಿ.ವಿ. ಸ್ನಾತಕೋತ್ತರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ನಿವೃತ್ತಿ. ಮೈಸೂರು ವಿ.ವಿ.ದಿಂದ 1968ರಲ್ಲಿ 'ಅಲ್ಲಮನ ವಚನ ಚಂದ್ರಿಕೆ' ಮತ್ತು 'ಶಿವದಾಸ ಗೀತಾಂಜಲಿ' ಕೃತಿಗಳಿಗಾಗಿ ಡಿ.ಲಿಟ್ ಪದವಿ. ವಚನಚಂದ್ರಿಕೆ ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ, ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಹಬ್ಬದ ಪುರಸ್ಕಾರ, ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ (1996), ಸಂ.ಶಿ. ಭೂಸನೂರ ಮಠ ಪ್ರತಿಷ್ಠಾನ ಪ್ರಶಸ್ತಿ. ಕರ್ನಾಟಕ ಸರ್ಕಾರದ ಪಂಪ ಪ್ರಶಸ್ತಿ (2000), ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ 'ಬುದ್ಧ ಚರಿತ'ಕ್ಕೆ ಅನುವಾದ ಪ್ರಶಸ್ತಿ (2001) ಮೊದಲಾದ ಗೌರವ ಪ್ರಶಸ್ತಿಗಳು ಸಂದಿವೆ.

**ಸಾಹಿತ್ಯ ಪಥ** : ಗ್ರಂಥ ಸಂಪಾದನೆ : ಪಂಪಕವಿಯ 'ಆದಿಪುರಾಣ' (1976), ಸರಳ ಪಂಪ ಭಾರತ, ಅಲ್ಲಮನ ವಚನಚಂದ್ರಿಕೆ (1962), ಶಿವದಾಸ ಗೀತಾಂಜಲಿ (1963), ಬಸವಣ್ಣನವರ ವಚನಗಳು (1952), ಅಕ್ಕನ ವಚನಗಳು (1966), ದೇವರ ದಾಸಿಮಯ್ಯ ವಚನಗಳು (1970), ಅಲ್ಲಮ ಪ್ರಭು ವಚನಗಳು, ಸರ್ವಜ್ಞನ ವಚನಗಳು (1972), ಶಿವಗಣ ಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ, ತೊರವೆ ರಾಮಾಯಣ ಸಂಗ್ರಹ, ಶೃಂಗಾರ ನಿದರ್ಶನ (ಚಿಕದೇವರಾಜಸಪ್ತಪದಿ), ಕನ್ನಡ ಛಂದಸ್ಸಂಪುಟ, ಶಬ್ದಮಣಿದರ್ಪಣಂ. ಕಾವ್ಯ : ರಾಣಾಂತರ, ಜಾಲಾರಿ (1999). ಅನುವಾದ: ಬುದ್ಧಚರಿತ (1998), ಸೌಂದರನಂದ (2000), ಭಾಸನ ನಾಟಕಗಳ ಗದ್ಯಾನುವಾದ, ಗೂಳೂರು ಸಿದ್ಧವೀರಣಾರ್ಯನ ಶೂನ್ಯ ಸಂಪಾದನೆ (ಸರಳ ಗದ್ಯಾನುವಾದ), ನಿಜಗುಣಶಿವಯೋಗಿಗಳ, ರಾಘವಾಂಕನ ಸಿದ್ಧರಾಮ ಚಾರಿತ್ರ್ಯ, ಹರಿಶ್ಚಂದ್ರ ಕಾವ್ಯಗಳ ಸರಳ ಗದ್ಯಾನುವಾದಗಳು.



## ಆರ್. ಸಿ. ಹಿರೇಮಠ

**ಜೀವನ ಪಥ** : ಜನನ : ಜನವರಿ 15, 1920, ಜನ್ಮಸ್ಥಳ : ರೋಣ ತಾಲ್ಲೂಕಿನ ಕುರುಡಗಿ. ಶಿಕ್ಷಣ : ಎಂ.ಎ. 1945, ಬಾಗಲಕೋಟೆಯಲ್ಲಿ ಅಧ್ಯಾಪಕ 1945 ಸೆಪ್ಟೆಂಬರ್ 16, ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ಪ್ರವೇಶ, 21-9-1951, ಪಿಎಚ್.ಡಿ. ಪದವಿ 1955, ಅಮೆರಿಕಾಗೆ ಪ್ರಯಾಣ 1958, ರಾಜ್ಯ ಸಾಹಿತ್ಯ ಅಕಾಡೆಮಿ ಸನ್ಮಾನ 1970, ಹಂಗಾಮಿ ಕುಲಪತಿ ಆಗಸ್ಟ್ 29, 1974, ಕುಲಪತಿಯಾಗಿ ಅಧಿಕಾರ ಸ್ವೀಕಾರ ಮೇ 1 1975, ಅಖಿಲಭಾರತ ದ್ರಾವಿಡ ಭಾಷಾ ಸಮ್ಮೇಳನ ಅಧ್ಯಕ್ಷತೆ (ವಾಲ್ಟೇರ್) 1976, ಅಂತರರಾಷ್ಟ್ರೀಯ ದ್ರಾವಿಡ ಭಾಷಾಸಂಸ್ಥೆ ನಿರ್ದೇಶಕ (ತ್ರಿವೆಂಡ್ರಮ್) 1979, ಮಾರ್ಚಿ 10.

**ಸಾಹಿತ್ಯಪಥ** : ಸುಮಾಂಜಲಿ (ಕವನ) 1948, ಮೌನ ಸ್ಪಂದನ (ಕವನ) 1961, ಸಾಹಿತ್ಯ ಸಂಸ್ಕೃಷ್ಟಿ (ವಿಮರ್ಶೆ) 1951, ಕವಿ ಪದ್ಮಣಾಂಕ (ವಿಮರ್ಶೆ) 1958, ಸಂಪಾದಿತ : ಬಸವಪುರಾಣ - 1 (ಸಂ.) 1953, ಮಹಲಿಂಗ ಲೀಲೆ (ಸಂ.) 1954, ಬಸವಪುರಾಣ - 2 (ಸಂ.) 1955, ಅಖಂಡೇಶ್ವರ ವಚನ (ಸಂ.) 1956, ಕೈವಲ್ಯ ದರ್ಪಣ (ಸಂ.) 1957, ಪದ್ಮರಾಜಪುರಾಣ (ಸಂ.) 1958, ಸೋಮನಾಥ ಚಾರಿತ್ರ (ಸಂ.) 1961, ಕುಂದಣ (ಸಂ.) 1961, ಕೊಟ್ಟೂರ ಬಸವೇಶ್ವರ ಚಾರಿತ್ರ (ಸಂ.) 1961, The Structure of Kannada (Grammar) 1961, ಸಮರ ದುಂದುಭಿ (ಸಂ.) 1963, ಬಾಲ ಲೀಲಾಮಹಾಂತೇಶ್ವರ ಪುರಾಣ (ಸಂ.) 1964, ಸೋಮನಾಥ ಚಾರಿತ್ರ ಸಂಗ್ರಹ (ಸಂ.) 1964, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ - 1 (ಸಂ.) 1964, ಷಟ್‌ಸ್ಥಲಜ್ಞಾನ ಸಾರಾಮೃತ (ಸಂ.) 1964, ಚೆನ್ನಬಸವಣ್ಣನವರ ವಚನಗಳು (ಸಂ) 1965, ಷಟ್‌ಸ್ಥಲ ಪ್ರಭೆ (ಸಂಶೋಧನೆ) 1965, Sunya Sampadane - I (Translation) 1965, ತ್ರಿಷಷ್ಟಿ ಪುರಾತನ ಚಾರಿತ್ರ್ಯ (ಸಂ.) 1966, ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ - 2 (ಸಂ.) 1968, ಇಪ್ಪತ್ತೇಳು ಶಿವಶರಣೆಯರ ವಚನಗಳು (ಸಂ.) 1968, ಅನುಗೆ ರಾಯಮ್ಮ ಮತ್ತು ಅಕ್ಕಮ್ಮನ ವಚನಗಳು (ಸಂ.) 1968, ಬಸವಣ್ಣನವರ ವಚನಗಳು (ಸಂ.) 1968, ಮಹಾಕವಿ ರಾಘವಾಂಕ (ಸಂಶೋಧನೆ) 1968, ಬಸವರಾಜವಿಜಯಂ (ಸಂ.) 1968, (ಸಿದ್ಧರಾಮೇಶ್ವರ ವಚನಗಳು (ಸಂ.) 1968, ಜ್ಯೋತಿ ಬೆಳಗುತಿದೆ (ಸಂ.), ಪದ್ಮಶ್ರೀ (ಸಂ.) 1970, ವಿಭೂತಿಪುರುಷರು (ಸಂ.) 1970, ರಾಜಶೇಖರ ವಿಳಾಸ ಸಂಗ್ರಹ (ಸಂ.) 1970, ವೀರಶೈವ ಚಿಂತಾಮಣಿ (ಸಂ.) 1970, ಮುಕ್ತಿ ಕಂಠಾಭರಣ (ಸಂ.) 1971, ಬಸವಪುರಾಣ ಸಮಗ್ರ (ಸಂ.) 1971, ನೀಲಮ್ಮನ ವಚನಗಳು ಮತ್ತು ಲಿಂಗಮ್ಮನ ವಚನಗಳು (ಸಂ.) 1971, ಶೂನ್ಯಸಂಪಾದನೆ ಮಹಾದೇವಯ್ಯ (ಸಂ.) 1971, ವಿಶೇಷಾನುಭವ ಷಟ್‌ಸ್ಥಲ (ಸಂ) 1971, ಹರಿಹರನ ನೂತನ ರಗಳೆಗಳು (ಸಂ) 1972, ಶೂನ್ಯ ಸಂಪಾದನೆ ಸಿದ್ಧಲಿಂಗದೇವ (ಸಂ) 1972, ಸಕಲಪುರಾತನರ ವಚನಗಳು (ಸಂ.) 1973, ಪುರಾತನರ ರಗಳೆಗಳು (ಸಂ.) 1973, ಪ್ರಭುಲಿಂಗಲೀಲೆ (ಸಂ.) 1973, ಬ್ರಹ್ಮಾದ್ವೈತ ಸಿದ್ಧಾಂತಷಟ್‌ಸ್ಥಲಾಭರಣ (ಸಂ.) 1973, ಮಹಾದೇವಿಯಕ್ಕನ ವಚನಗಳು (ಸಂ.) 1973, ಮೋಹನ ತರಂಗಿಣಿ (ಸಂ.) 1973, ಪುರಾತನರ ಆರು ರಗಳೆಗಳು (ಸಂ.) 1974, ಜಾನಪದ ಸಾಹಿತ್ಯ ದರ್ಶನ - 1 (ಸಂ.) 1974, ಕನ್ನಡ ಶಾಸನ ಸಂಪದ (ಸಂ.) 1974, ರಾಮಚಂದ್ರಚರಿತಪುರಾಣ (ಸಂ.) 1975, ಅಲ್ಲಮ ಪ್ರಭುದೇವರ ವಚನಗಳು (ಸಂ.) 1976, ಅಮೃತಬಿಂದುಗಳು (ಸಂ.) 1978, ರಾಜಶೇಖರ ವಿಳಾಸಂ (ಸಂ.) 1978, Sri Chennabasaveswara (Translation) 1978, ಅಸ್ಸಾಮಿ ಸಾಹಿತ್ಯ ಚರಿತ್ರೆ (ಅನುವಾದ) 1973, ಉರಿ ಬರಲಿ ಸಿರಿ ಬರಲಿ (ಆತ್ಮಕಥೆ) 1975, ಮಹಾಯಾತ್ರೆ, 1997.



## ತ.ರಾ.ಸು

**ಜೀವನ ಪಥ** : ಜನನ : 1920, ಏಪ್ರಿಲ್ 21, ಚಿತ್ರದುರ್ಗ ಜಿಲ್ಲೆಯ ಮಲೆಬೆನ್ನೂರು, ಶಿಕ್ಷಣ : ಚಿತ್ರದುರ್ಗ, ಶಿವಮೊಗ್ಗ, ತುಮಕೂರು ಶಾಲೆ, ಕಾಲೇಜುಗಳಲ್ಲಿ 1942, ವಿಶ್ವ ಕರ್ನಾಟಕದಲ್ಲಿ ಪತ್ರಿಕಾರಂಗಕ್ಕೆ ಪದಾರ್ಪಣೆ, ಹಲವು ಪತ್ರಿಕೆಗಳಲ್ಲಿ ಪತ್ರಿಕಾವೃತ್ತಿ. 'ದುರ್ಗಾಸ್ತಮಾನ' ಕಾದಂಬರಿಗೆ 1983 ರಾಜ್ಯ ಸಾಹಿತ್ಯ ಅಕಾಡೆಮಿ ವಿಶೇಷ ಪುರಸ್ಕಾರ, 1985ರಲ್ಲಿ ಮರಣೋತ್ತರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1970 ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದಲ್ಲಿ ಶ್ರೇಷ್ಠ ಕಾದಂಬರಿಕಾರ ಪ್ರಶಸ್ತಿ. 1974 ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ನಿಧನ : 1984 ಏಪ್ರಿಲ್ 10.

**ಸಾಹಿತ್ಯ ಪಥ** : ರೂಪಸಿ (1946), ತೊಟ್ಟಿಲು ತೂಗಿತು (1947) ಗಿರಿ ಮಲ್ಲಿಗೆಯ ನಂದನದಲ್ಲಿ (1955), ಇದೇ ನಿಜವಾದ ಸಂಪತ್ತು (1965) ಮೂರು ಮತ್ತೊಂದು (ಸಮಗ್ರ ಕಥೆಗಳು) 1982. ನಾಟಕ : ಮೃತ್ಯು ಸಿಂಹಾಸನ, ಜ್ವಾಲಾ (1955) ಅಸ್ನಾವತಾರ (ರೇಡಿಯೋ ನಾಟಕಗಳು 1954) ಮಹಾಶ್ವೇತೆ, ಬಾಳು ಬೆಳಗಿತು, ರುದ್ರಾಧ್ಯಾಯ. ಸಾಮಾಜಿಕ ಕಾದಂಬರಿ : ಮನೆಗೆ ಬಂದ ಮಹಾಲಕ್ಷ್ಮಿ (1944), ರಕ್ತತರ್ಪಣ, ಕಾಮಾಕ್ಷಿ ಜೀವದ ಜೀವ, ಪುರುಷಾವತಾರ (1951), ಮುಂಜಾವಿನಿಂದ ಮುಂಜಾವು (1950), ಬೇಡದ ಮಗು, ಮಸಣದ ಹೂವು, ಬಿಡುಗಡೆಯ ಬೇಡಿ (1953), ಚಂದನದ ಗೊಂಬೆ, ಚಕ್ರತೀರ್ಥ, ಸಾಕುಮಗಳು, ಬೆಂಕಿಯ ಬಲೆ, ನಾಗರಹಾವು, ಎರಡು ಹೆಣ್ಣು ಒಂದು ಗಂಡು, ಸರ್ಪಮತ್ಸರ, ಕೇದಿಗೆ ವನ, ಕಣ್ಣು ತೆರೆಯಿತು, ವಿಷಪ್ರಾಸನ, ಮೊದಲನೋಟ, ಗೃಹಪ್ರವೇಶ, ರಾಜೇಶ್ವರಿ, ಚಂದವಳ್ಳಿಯ ತೋಟ, ಮರಳು ಸೇತುವೆ, ಮಾರ್ಗದರ್ಶಿ, ಭಾಗ್ಯಶಿಲ್ಪಿ, ಬೆಳಕಿನ ಬೀದಿ, ಗಾಳಿ ಮಾತು, ಬೇಲಿ ಮೇಯ್ದ ಹೊಲ, ಬಂಗಾರಿ, ಆಕಸ್ಮಿಕ, ಅಪರಾಧಿ, ಪರಿಣಾಮ, ನಾಯಕಿ, ಹಾವು ಹಿಡಿದವರು, ಗ್ರಹಣ ಬಿಟ್ಟಿತು, ಎಲ್ಲಾ ಅವನ ಹೆಸರಿನಲ್ಲೇ, ಪಂಜರದ ಪಕ್ಷಿ, ಒಮ್ಮೆ ನಕ್ಕ ನಗು, ಶಿಶುದೈತ್ಯ, ಹೆಣ್ಣು ಕಟ್ಟಿದಮನೆ, ಶ್ರೀಚಕ್ರೇಶ್ವರಿ, ಕಾರ್ಕೋಟಕ, ಯಕ್ಷಪ್ರಶ್ನೆ, ಬಯಕೆಯ ಬಂದಿ, ಪರಿಮಳದ ಉರುಳು, ಖೋಟಾನೋಟು, ಲಾವಣ್ಯವತಿ, ಚದುರಂಗದ ಮನೆ, ಅಕ್ಕಮ್ಮನ ಭಾಗ್ಯ, ಶುಕ್ರವಾರದ ಲಕ್ಷ್ಮಿ, ವನಾಂತರಾಳ. ಐತಿಹಾಸಿಕ ಕಾದಂಬರಿ : ನೃಪತುಂಗ, ಸಿಡಿಲ ಮೊಗ್ಗು, ಕೀರ್ತಿನಾರಾಯಣ, ಹಂಸಗೀತೆ, ಶಿಲ್ಪಶ್ರೀ, ಅಗ್ನಿರಥ-ಮುಕ್ತಿಪಥ, ಕಸ್ತೂರಿ ಕಂಕಣ, ಕಂಬನಿಯ ಕುಯಿಲು, ರಾಜ್ಯದಾಹ, ರಕ್ತರಾತ್ರಿ, ತಿರುಗುಬಾಣ, ಹೊಸಹಗಲು, ವಿಜಯೋತ್ಸವ, ದುರ್ಗಾಸ್ತಮಾನ (1983). ಪೌರಾಣಿಕ : ಬೆಳಕು ತಂದ ಬಾಲಕ, ನಾಲ್ಕು x ನಾಲ್ಕು ಒಂದು. ಜೀವನ ಚರಿತ್ರೆ : ರೇಖಾ ಚಿತ್ರಗಳು, ಅ.ನ.ಕೃ. ಅನುವಾದ : ಗಾಂಧೀಜಿ, ದಳಪತಿ ಜವಹರ್, ನಿಮ್ಮ ಆಹಾರ, ಡಾ॥ ಕೊಟ್ನಿಸ್, ಬಾರ್ಬೋಸಾ ಕಂಡ ವಿಜಯನಗರ, ನಂದನವನ, ಮಾದಾಂ ಬಾವರಿ, ಮರೆಯಲಾಗದ ಪರಿಮಳ, ಪ್ರಥಮ ಪ್ರಣಯ. ಆತ್ಮಕಥೆ : ಹಿಂತಿರುಗಿ ನೋಡಿದಾಗ. ಸಂಪಾದನೆ : ಶ್ರೀ ಜಗದ್ಗುರು, ಶ್ರೀ ಶಿವಾರ್ಪಣಂ. ಇತರೆ : ಕ್ರಿಯಾ ಶಕ್ತಿ ವಿದ್ಯಾರಣ್ಯ, ನಾಗರಮರಿ, ಸ್ನೇಹ ಸಮನ್ವಯ (ವ್ಯಕ್ತಿ ಚಿತ್ರಗಳು).



## ಮಲ್ಲಿಕಾ

**ಜೀವನ ಪಥ**: ಜನನ : 15-6-1920, ಚಿಕ್ಕಮಗಳೂರು ಜಿಲ್ಲೆಯ ಸುಂಕಸಾಲೆ, ತಂದೆ ತಾಯಿ : ಬಾಗಮನೆ ಚನ್ನೇಗೌಡ ಮತ್ತು ಪಾರ್ವತಮ್ಮ. ನಿಜನಾಮ ಲಕ್ಷ್ಮಿದೇವಿ. 1966ರಿಂದ ಬರವಣಿಗೆ ಪ್ರಾರಂಭ. ಕರ್ನಾಟಕ ಸಾಹಿತ್ಯಅಕಾಡೆಮಿ, ಲಿಪಿ ಪ್ರಾಜ್ಞೆ ಮತ್ತು ಕರ್ನಾಟಕ ಸರ್ಕಾರದ ಅತ್ಯುನ್ನತ ಸಾಹಿತ್ಯಿಕ ಮಹಿಳಾ ಪ್ರಶಸ್ತಿಯಾದ ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ (1999) ಗೌರವಗಳು ಸಂದಿವೆ.

**ಸಾಹಿತ್ಯ ಪಥ** : ಜೀವನಗಂಗಾ (1966.ಕಾ.), ಡಾ. ಅಘೋರ (1967), ಬಹುರತ್ನಾ ವಸುಂದರಾ (1968), ಮನೋನ್ಮಣಿ (1998 ಕಾ), ಡಾ. ಕಮಲೇಶ್ (1998 ಕಾ), ಶ್ರೀ ಹರ್ಷಲಾ (1999 ಪು. ಮು, ಸ. ಕ), ಮಣಿಕರ್ಣಿಕಾ (1990 ಸ. ಕ.), ಫಾಲ್ಗುಣೀ ಪರ್ವ (1997 ಸ. ಕ.), ವೈಶಾಖೀ ಪರ್ವ (1973 ಸ. ಕ.) ಶ್ರೀಮುಖೀ (1998 ಸ.ಕ.), ಗಗನ ಕುಸುಮ (ಕವನ ಸಂ. 1984), ಜೀವನ ಕುಸುಮ (ಕ. ಸಂ. 1984), ಕಸ್ತೂರಿ ಮಾಲಿಕಾ (ಕ. ಸಂ. 1986) ಬಕುಳ ರಾಜಿ (ಕ. ಸಂ.) ನಾದ ಬಿಂದು (ಕ. ಸಂ.1971), ಮಂದಾರ ಮಾಲಿಕಾ (ಕ. ಸಂ.1986), ಚಂಪಕರಾಜಿ (ಕ. ಸಂ. 1989), ಮಂಗಳ ಭಾರತಿ (1987), ಕಲ್ಯಾಣಭಾರತಿ (1990), ಉತ್ತರೋತ್ತರಣಿ (1984), ರಾಗಾನುರಾಗಿಣಿ (1999), ಪ್ರಫುಲ್ಲಭಾರತ (1990), ಗಾನತೀರ್ಥ (1971), ಐಂದ್ರಕೀರ್ತಿಕೇತನಂ (ಗದ್ಯಕಾವ್ಯ, 1984), ಪೂಜಾವಸಾನಸಮಯೇ (1970), ಧ್ಯಾನಾವಸಾನ ಸಮಯೇ (1970), ವಿಜಯಗಾಥಾ (1971), ವಂದೇ ಮಾತರಂ (ಕಾ. 1972), ಅನಂತಾನಂತದೆಡೆಗೆ (1972), ಪುಣ್ಯಾಭಿಸಾರ (1974), ಪುಣ್ಯ ಪಯೋನಿಧಿ (1974), ಕೃತಂ ಸ್ಮರ ಕ್ರತುಂಸ್ಮರ (1977), ರಂಗನ ಸಾಹಸ (1985), ಬೆಳದಿಂಗಳ ರಾತ್ರಿ (1985), ಲಿಯೋನಾ (ಕಾ. 1986), ಸುಧಾಮಣಿ (1987 ಕಾ), ಕೌಶಿಕನ ಗೊಂಬೆ (1987), ಕಾವ್ಯಾನಂದ ನಂದಿನಿ (1988), ಮಣಿಮೇಖಲಾ (1990), ಆತ್ಮ ಗೀತಾಂಜಲಿ (1991), ಸಂಗೀತ ಪುಷ್ಪಾಂಜಲಿ (ಕ. ಸಂ. 1991), ಪದ್ಮಾಲಯ (1991), ಶ್ರದ್ಧಾಲಯ (1993), ಕಮಲಾನಿ ಕಥಾ (ಸ. ಕ. 1996), ತರಂಗಿಣಿ (1998), ಸಂತ್ರಾಸಿನಿ (1998), ಆಸೆಯ ಸುಳಿಯಲ್ಲಿ (1998), ರಮಣೀ ಮಣಿ (1998), ಕಲ್ಯಾಣಿ ರಾಗಿಣಿ (1999), ವಿಶೇಷ ಸುದ್ದಿ (1999), ದೂರ ದೇಶದಲ್ಲಿ (1999), ಓಹಿಯೋಜ ಸರೋವರ (1999), ಶ್ರೀ ವಿವೇಕಾನಂದ ವಿಜಯಂ (ಮ.ಕಾ. 1998).



## ಪಾಟೀಲ ಪುಟ್ಟಪ್ಪ

**ಜೀವನ ಪಥ** : ಜನನ 14 ಜನವರಿ 1921, ಹಾವೇರಿ ತಾಲ್ಲೂಕಿನ ಕುರುಬಗೊಂಡ. ವಿದ್ಯಾಭ್ಯಾಸ : ಹಾವೇರಿ, ಧಾರವಾಡಗಳಲ್ಲಿ ಅನಂತರ ಕರ್ನಾಟಕ ಕಾಲೇಜಿನಲ್ಲಿ ಪದವಿ, ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಎಲ್.ಎಲ್.ಬಿ. ಅಮೇರಿಕೆಯ ಕ್ಯಾಲಿಫೋರ್ನಿಯಾ ವಿ.ವಿ.ದ, ಎಂ.ಎಸ್.ಸಿ. ಪದವಿ. ಬಾಂಬೆ ಕ್ರಾನಿಕಲ್, ಫ್ರೀಪ್ರೆಸ್ ಜರ್ನಲ್‌ಗಳಿಂದ ಪತ್ರಿಕೋದ್ಯಮ ದತ್ತ

ಒಲವು. ವಿಶಾಲ ಕರ್ನಾಟಕ ಸಂಪಾದಕರು. ಅನಂತರ 'ಪ್ರಪಂಚ'ದ ಪ್ರಕಟಣೆ. 1942 ಕ್ವಿಟ್ ಇಂಡಿಯಾ ಚಳುವಳಿ, ಕರ್ನಾಟಕ ಏಕೀಕರಣ, ಗೋಕಾಕ್ ಚಟುವಳಿಗಳಲ್ಲಿ ಸಕ್ರಿಯ ಪಾತ್ರ. ಹಂಪಿಯ ಕನ್ನಡ ವಿ.ವಿ. ನಾಡೋಜ ಗೌರವ ಡಿ.ಲಿಟ್. ಪದವಿ, ರಾಜ್ಯೋತ್ಸವ ಪ್ರಶಸ್ತಿ.

**ಸಾಹಿತ್ಯ ಪಥ** : ಪ್ರಬಂಧ : ನಮ್ಮ ದೇಶ ನಮ್ಮ ಜನ (1973), ಈಗ ಹೊಸದನ್ನು ಕಟ್ಟೋಣ ನಾವು (1975), ನನ್ನದು ಈ ಕನ್ನಡ ನಾಡು (1975), ನಮ್ಮದು ಈ ಭಾರತ ಭೂಮಿ (1977), ಕರ್ನಾಟಕದ ಕಥೆ (1991). ಉಸಿರಾಗಲಿ ಕನ್ನಡ, ಸಮಗ್ರ ಪಾಪು ಪ್ರಪಂಚ (2000), ಕಥಾಸಂಕಲನ : ಸಾವಿನ ಮೇಜವಾನಿ (1944) ಶಿಲಾಬಾಲಿಕೆ ನುಡಿಗಳು (1974), ಗವಾಕ್ಷ ತೆರೆಯಿತು (1974), ವ್ಯಕ್ತಿಚಿತ್ರ : ಪ್ರಪಂಚದ ಪಟುಗಳು, ಸರ್ ಸಾಹೇಬರು, ಪ್ರವಾಸ ಕಥನ : ನಾನು ರಷ್ಯಾ ಕಂಡ ಕಥೆ. ಇತರೆ : ಅನುಭವ ಇರುವಲ್ಲಿ ಅಮೃತತ್ವ ಇದೆ, ಬದುಕುವುದಕ್ಕೇ ಬೇಕು ಬದುಕಿನ ಈ ಮಾತು.



## ಶಾಂತಾದೇವಿ ಮಾಳವಾಡ

**ಜೀವನ ಪಥ** : ಜನನ : 10-12-1922, ಬೆಳಗಾವಿ. ತಂದೆ-ತಾಯಿ : ಮುರುಗೆಪ್ಪಶೆಟ್ಟರು ಮತ್ತು ಜಯವಂತಿದೇವಿ. ಶಿಕ್ಷಣ : ಹೈಸ್ಕೂಲ್‌ವರೆಗೆ. 1959-64 ಗೌರವ ಲೇಡಿ ಮೆಜಿಸ್ಟ್ರೇಟ್, ಅನೇಕ ಸಾಮಾಜಿಕ ಸಂಸ್ಥೆಗಳಲ್ಲಿ ಸೇವೆ. 1977 ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1982 ರಾಜ್ಯೋತ್ಸವ ಪ್ರಶಸ್ತಿ, 1994 ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವ, 1999 ಅ.ಭಾ. ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷತೆ. 1997 ಕರ್ನಾಟಕ ಸರ್ಕಾರದ ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ.

**ಸಾಹಿತ್ಯ ಪಥ** : ಗದ್ಯ : ಕನ್ನಡದ ತಾಯಿ, ಜನನೀ ಜನ್ಮಭೂಮಿಶ್ಚ, ಹಚ್ಚೇವು ಕನ್ನಡದ ದೀಪ, ಮಹಿಳಾ ಚೇತನ, ಸಮುಚ್ಚಯ, ಸೊಬಗಿನ ಮನೆ, ವಧುವಿಗೆ ಉಡುಗೊರೆ, ರಸಪಾಕ, ಮಹಿಳೆಯರ ಅಲಂಕಾರ, ದಾಂಪತ್ಯಯೋಗ, ಮಹಿಳೆಯರ ಆತ್ಮಶ್ರೀ, ಸಾರ್ವಜನಿಕ ರಂಗದಲ್ಲಿ ಮಹಿಳೆ. ಕಥಾಸಂಕಲನ : ಮೊಗ್ಗೆಯ ಮಾಲೆ, ಕುಂಕುಮ ಬಲ. ಕಾದಂಬರಿ : ಬಸವ ಪ್ರಕಾಶ. ಜೀವನ ಚರಿತ್ರೆ : ಶೂರರಾಣಿ ಕೆಳದಿಯ ಚೆನ್ನಮ್ಮಾಜಿ. ಮಕ್ಕಳ ಸಾಹಿತ್ಯ : ಬೆಳವಡಿ ಮಲ್ಲಮ್ಮ, ಕೆಳದಿ ಚೆನ್ನಮ್ಮ, ನೀಲಾಂಬಿಕೆ, ನಾಗಲಾಂಬಿಕೆ, ಕುಟುಂಬ. ಪ್ರವಾಸ ಸಾಹಿತ್ಯ : ಶ್ರೀಗಿರಿಯಿಂದ ಹಿಮಗಿರಿಗೆ (1974).



## ಸು. ರಂ. ಎಕ್ಕುಂಡಿ

**ಜೀವನ ಪಥ** : ಜನನ : 20 ಜನವರಿ 1923, ಧಾರವಾಡ ಜಿಲ್ಲೆಯ ರಾಣೆಬೆನ್ನೂರು. ತಂದೆ-ತಾಯಿ : ರಂಗಾಚಾರಿ ಎಕ್ಕುಂಡಿ ಮತ್ತು ರಾಜಕ್ಕ. ಶಿಕ್ಷಣ : ಸಾಂಗ್ಲಿಯ ವಿಲಿಂಗ್ಡನ್ ಕಾಲೇಜಿನಲ್ಲಿ ಪದವಿ. ವೃತ್ತಿ : ಉ.ಕ. ಜಿಲ್ಲೆ ಬಂಕಿಕೊಡ್ಲದ ಪ್ರೌಢಶಾಲೆಯಲ್ಲಿ ಅಧ್ಯಾಪಕರು, 35 ವರ್ಷ ಆನಂದಾಶ್ರಮ ಪ್ರೌಢಶಾಲೆಯಲ್ಲಿ ಅಧ್ಯಾಪಕರು, ಮುಖ್ಯೋಪಾಧ್ಯಾಯರು. 1970ರಲ್ಲಿ ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ. 1982 ಕರ್ನಾಟಕ ಸಾ.ಅ. ಗೌರವ ಪ್ರಶಸ್ತಿ. 1992ರಲ್ಲಿ 'ಬಕುಲದ ಹೂಗಳು' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1984 ರೋಮ್ ವಿ.ವಿ.ದ ಸಂದರ್ಶಕ ಪ್ರಾಧ್ಯಾಪಕರು. ನಿಧನ : 20 ಆಗಸ್ಟ್ 1995.

**ಸಾಹಿತ್ಯ ಪಥ** : ಕವಿತೆ : ಸಂತಾನ 1953, ಆನಂದತೀರ್ಥರು (ಖಂಡಕಾವ್ಯ) 1953, ಹಾವಾಡಿಗರ ಹುಡುಗ 1967, ಮತ್ಸ್ಯಗಂಧಿ 1975, ಬೆಳ್ಳಕ್ಕಿಗಳು 1982, ಕಥನ ಕವನಗಳು, ಕಥನ ಕವನ 1985, ಬಕುಲದ ಹೂಗಳು 1991, ಗೋದಿಯ ತೆನೆಗಳು 1996, ಕಥಾಸಂಕಲನ : ನೆರಳು 1960. ವಿಮರ್ಶೆ : ಪು.ತಿ. ನರಸಿಂಹಾಚಾರ್ಯರು 1957, ಜೀವನಚರಿತ್ರೆ : ಮಧ್ವ ಮುನಿಗಳು. ಲೇಖನ ಸಂಕಲನ : ಪಂಜುಗಳು 1998. ಅನುವಾದ : ಎರಡು ರಶಿಯನ್ ಕಾದಂಬರಿಗಳು, ಪ್ರತಿಬಿಂಬ.



## ವ್ಯಾಸರಾಯ ಬಲ್ಲಾಳ

**ಜೀವನ ಪಥ** : ಜನನ : 1923, ಡಿಸೆಂಬರ್ 1 ಉಡುಪಿ. ಶಿಕ್ಷಣ : ಮೆಟ್ರಿಕ್‌ವರೆಗೆ, ಮುಂಬಯಿಯಲ್ಲಿ ಕಾಲ್ಟೆಕ್ಸ್ ವಿದೇಶಿ ಕಂಪನಿಯಲ್ಲಿ ವೃತ್ತಿ ಆರಂಭ. ಅಧಿಕಾರಿಯಾಗಿ ನಿವೃತ್ತಿ. ಮುಂಬಯಿಯ 'ನುಡಿ' ಪತ್ರಿಕೆಯ ಅಂಕಣಕಾರ. 1983 ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1984ರಲ್ಲಿ 'ಬಂಡಾಯ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1996 ಡಿಸೆಂಬರ್‌ನಲ್ಲಿ ಕಾರ್ಕಳದಲ್ಲಿ ಜರುಗಿದ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.

**ಸಾಹಿತ್ಯ ಪಥ** : ಕಾದಂಬರಿ : ಅನುರಕ್ತೆ (1953). ಹೇಮಂತಗಾನ (1954), ವಾತ್ಸಲ್ಯ ಪಥ (1957). ಉತ್ತರಾಯಣ (1969). ಬಂಡಾಯ 1985. ಆಕಾಶಕ್ಕೊಂದು ಕಂದೀಲು 1995, ಹೆಜ್ಜೆ (2000). ವಿಚಾರ ಸಾಹಿತ್ಯ : ಕಟ್ಟುವೆವು ನಾವು, ಸ್ವಾತಂತ್ರ್ಯಕ್ಕೆ ಐವತ್ತು ವರ್ಷ. ಇತರೆ : ರೇಖಾ ಲಾವಣ್ಯ 1999. ಪ್ರವಾಸ ಕಥನ : ನಾನೊಬ್ಬ ಭಾರತೀಯ ಪ್ರವಾಸಿ. ಕಥೆ : ತ್ರಿಕಾಲ, ಬದುಕಿನ ಆದರ್ಶ, ಕಾಡುಮಲ್ಲಿಗೆ, ಸಂಪಿಗೆ ಹೂ, ಮಂಜರಿ, ಮಿಳ್ಳಿ ರಾಮಾಯಣ. ಇತ್ಯಾದಿ : ವಿಡಂಬನ ಬರಹಗಳು, ರೇಡಿಯೊ ನಾಟಕ. ಇಂಗ್ಲಿಷ್‌ನಲ್ಲಿ ಬಿಡಿ ಬರಹಗಳು. ನಾಟಕ : 'ಮುಳ್ಳಿಲ್ಲದೆ ಮಂದಾರ' (ರೂಪಾಂತರ), ಗಿಳಿಯು ಪಂಜರದೊಳಿಲ್ಲ (ರೂಪಾಂತರ).



## ಶಾಂತರಸ

**ಜೀವನಪಥ** : ಜನನ : 7-4-1924. ನಿಜನಾಮ : ಶಾಂತಯ್ಯ. ತಂದೆ-ತಾಯಿ : ಚೆನ್ನಬಸವಯ್ಯ ಮತ್ತು ಸಿದ್ಧಲಿಂಗಮ್ಮ. ಉರ್ದು ಮಾಧ್ಯಮದಲ್ಲಿ ಶಿಕ್ಷಣ. 1953 ಹೈದ್ರಾಬಾದ್‌ನ ಉಸ್ಮಾನಿಯಾ ವಿಶ್ವವಿದ್ಯಾಲಯದ ಬಿ.ಎ. ಮತ್ತು 1961ರಲ್ಲಿ ಕರ್ನಾಟಕ ವಿ.ವಿ.ಧಾರವಾಡದಿಂದ ಬಿ.ಎಡ್., 1969 ಎಂ.ಎ. ವೃತ್ತಿ : ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಪ್ರಾರಂಭ, 1975ರಲ್ಲಿ ಕಾಲೇಜು ಪ್ರಿನ್ಸಿಪಾಲರು. 1981 ಸೇವೆಯಿಂದ ನಿವೃತ್ತಿ. 1995-98 ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರು. 1985 ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ. 1992 ರಾಯಚೂರು ಜಿಲ್ಲಾ ಕ.ಸಾ. ಸಮ್ಮೇಳನ ಅಧ್ಯಕ್ಷತೆ. 1993-

94 ಕರ್ನಾಟಕ ನಾಟಕ ಅಕಾಡೆಮಿ ಫೆಲೋಷಿಪ್. 1998 ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವ.

**ಸಾಹಿತ್ಯ ಪಥ** : ಕಾವ್ಯ : ಮಾನಸಗಳ್ಳಿ 1967, ಬಯಲು ಸೀಮೆಯ ಬಿಸಿಲು 1985. ಕಥೆ-ಕಾದಂಬರಿ : ತೋರಣ ಹರಿಯಲಿಲ್ಲ 1978, ಬಡೇಸಾಬ ಪುರಾಣ 1981, ನಾಯಿ ಮತ್ತು ಪಿಂಚಣಿ 1985, ಸ್ವಾತಂತ್ರ್ಯವೀರ ಮತ್ತು ಇತರ ಕಥೆಗಳು 1987, ಉರಿದ ಬದುಕು 1996, ಶಾಂತರಸರ ಸಮಗ್ರ ಕಥೆಗಳು 1997, ಸಣ್ಣಗೌಡಸಾನಿ (ಕಾದಂಬರಿ) 1998. ನಾಟಕ : ನಿರ್ಜೀವ ನಾಡು (ಗೀತ-ರೂಪಕ) 1948, ಸತ್ಯ ಸ್ನೇಹಿ (ಗೀತ-ನಾಟಕ) 1961, ನಂಜು-ನೂರೆವಾಲು 1967, ಮರೆಯಾದ ಮಾರಮ್ಮ (ರೂಪಾಂತರ) (ಅಪ್ರಕಟಿತ), ಶರಣ ಬಸವ (ರೇಡಿಯೋ ನಾಟಕ) (ಅಪ್ರಕಟಿತ). ಜೀವನಚರಿತ್ರೆ : ಸಿದ್ಧರಾಮ (ಅಮರಾನಂದರೊಂದಿಗೆ) 1959, ಆಯ್ದಕ್ಕಿ ಮಾರಯ್ಯ ದಂಪತಿಗಳು 1976, ವೈರಾಗ್ಯನಿಧಿ ಶಿವಾನುಭವ ಚರಚಕ್ರವರ್ತಿ ನಾರದಗಡ್ಡೆ ಚೆನ್ನಬಸವ ಸ್ವಾಮಿಗಳು 1979, ಬಸರೀಗಿಡದ ವೀರಪ್ಪನವರು 1980, ದೊಡ್ಡಪ್ಪ ಅಪ್ಪಾ ಅವರು 1988. ಗ್ರಂಥ ಸಂಪಾದನೆ : ಬಸವ ಶತಕ 1968, ಭುವನೈಕ ನಾಯಕೀ ಶತಕ 1970 (ಚೆನ್ನಬಸವ ಶಾಸ್ತ್ರೀಗಳೊಂದಿಗೆ), ಪಂಪಾ ಶತಕ 1971, ಸಂಗವಿಭು ವಿರಚಿತ ಮೂರು ಶತಕ 1973, ವೀರಭದ್ರ ಕವಿ ವಿರಚಿತ ಅರವತ್ತು ಮೂರು ಪುರಾತನರ ಪುರಾಣ 1977, ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳು 1983, ಬಾರಮಾಸ 1993. ಸಂಪಾದಿತ : ಮುಸುಕು ತೆರೆ 1947, ಕಲ್ಯಾಣದೀಪ 1964 (ಅಮರಾನಂದರೊಂದಿಗೆ), ಮಲ್ಲಿಗೆ ಮಾಲೆ 1964, ಬೆನ್ನ ಹಿಂದಿನ ಬೆಳಕು 1972, ರಸಿಕಚಕ್ರೀ ಹರಿಹರದೇವ 1979, ಬಂಡಾಯ ವಚನಗಳು 1980 (ಇತರರೊಂದಿಗೆ), ಹಳಕಟ್ಟಿ ನುಡಿ ಪುರುಷ 1982. ಸಂಶೋಧನ : ಬಹುರೂಪ ಪ್ರಬಂಧ ಸಂಕಲನ 1970, ಬಸವ ಪೂರ್ವಯುಗದ ಶರಣರು 1972, ಎಡೆದೊರೆ ನಾಡಿನ ಅನುಭಾವಿ ಕವಿಗಳು 1973, ಬಳ್ಳಾರಿ ಜಿಲ್ಲೆಯ ಶಿವಶರಣರು 1975, ಮೊದಲ ವಚನಕಾರ ಮಾದಾರ ಚೆನ್ನಯ್ಯ 1977, ನಮನ (ಬಳೂರಗಿಯವರೊಂದಿಗೆ) 1978, ಕಾಯಕ ಪರಿಣಾಮಿ (ಇತರರೊಂದಿಗೆ) 1991. ಅನುವಾದ : ಉಮ್‌ರಾವ್ ಜಾನ್ ಅದಾ (ಕಾದಂಬರಿ) (ಮೂಲ : ಮಿರ್ಜಾರುಸ್ವಾ) 1975, ಅಮೃತಾ ಪ್ರೀತಂರ ಕಥೆಗಳು.



## ನಿರಂಜನ

**ಜೀವನ ಪಥ** : ಜನನ : 1924, ಜೂನ್ 15. ದಕ್ಷಿಣ ಕನ್ನಡ ಜಿಲ್ಲೆಯ ಕುಳಕುಂದದಲ್ಲಿ. ಹೆಸರು : ಕುಳಕುಂದ ಶಿವರಾಯ. 'ನಿರಂಜನ' ಕಾವ್ಯನಾಮ. ಶಿಕ್ಷಣ : ಕಾವು, ಸುಳ್ಯಗಳಲ್ಲಿ ವಿದ್ಯಾಭ್ಯಾಸ. 1938 'ರಾಷ್ಟ್ರ ಬಂಧು' ಪತ್ರಿಕೆಯಲ್ಲಿ ಉಪಸಂಪಾದಕರಾಗಿ ಪತ್ರಿಕಾರಂಗ ಪ್ರವೇಶ. 1945ರಲ್ಲಿ ಬೆಂಗಳೂರಿಗೆ ವಲಸೆ. 'ಪ್ರಜಾಮತ'ದಲ್ಲಿ ಸಹ ಸಂಪಾದಕತ್ವ 1969-74, 'ಜ್ಞಾನ ಗಂಗೋತ್ರಿ'ಯ ಪ್ರಧಾನ ಸಂಪಾದಕತ್ವ. 1979-82, 'ವಿಶ್ವಕಥಾಕೋಶದ' ಪ್ರಧಾನ ಸಂಪಾದಕತ್ವ. 1974 'ಚಿರಸ್ಮರಣೆ' ಕೃತಿಗೆ ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ. 1975 ರಾಜ್ಯೋತ್ಸವ ಪ್ರಶಸ್ತಿ. 1978 ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1985 ಕನ್ನಡ ಸಾಹಿತ್ಯ ಪರಿಷತ್ತಿನಿಂದ ಗೌರವ ಸದಸ್ಯತ್ವ ಮಾನ್ಯತೆ. ನಿಧನ : 13 ಮಾರ್ಚ್ 1991.

**ಸಾಹಿತ್ಯ ಪಥ** : ಕಾದಂಬರಿ : ವಿಮೋಚನೆ (1953), ಬನಶಂಕರಿ (1954), ಸೌಭಾಗ್ಯ (1954), ಅಭಯ (1954), ರಂಗಮ್ಮನ ವಠಾರ (1954), ದೂರದ ನಕ್ಷತ್ರ (1954), ನವೋದಯ (1956), ಪಾಲಿಗೆ ಬಂದ ಪಂಚಾಮೃತ (1955), ಏಕಾಂಗಿನಿ (1955), ಚಿರಸ್ಮರಣೆ (1955), ಕೊನೇ ನಮಸ್ಕಾರ (1955), ದೀಕ್ಷೆ (1956), ಕಲ್ಯಾಣಸ್ವಾಮಿ (1956), ಮಿಣುಕು ಹುಳ (1956), ವಿಲಾಸಿನಿ (1956), ಅಂಜನ (1957), ವಿಶಾಲಾಕ್ಷಿ (1958), ತೊಟ್ಟಿಲು ತೂಗದ ಕೈ (1961), ಹೆಣ್ಣಾಗಿ ಕಾಡಿತ್ತು ಮಾಯೆ (1962), ಬಂಗಾರದ ಜಿಂಕೆ (1963), ನಂದಗೋಕುಲ (1964), ಸ್ವಾಮಿ ಅಪರಂಪಾರ (1967), ನೋವು (ನೂರು ಜುಟ್ಟು ಮೂರು ಜಡೆ, 1965), ಸ್ಮರಣೆಯೊಂದೇ ಸಾಲದೇ? (1971), ಮೃತ್ಯುಂಜಯ (1976). ಕಥೆ : ಅಯ್ಯನೈ (1945), 'ಸಂಧಿಕಾಲ' ಹೆಸರಿನಲ್ಲಿ (1946), ರಕ್ತ ಸರೋವರ (1947), ಅನ್ನಪೂರ್ಣ (1952), ಕೊನೆಯ ಗಿರಾಕಿ (1953), ವಾರದ ಹುಡುಗ (1957), ಕಾತ್ಯಾಯಿನಿ (1957), ಒಂಟಿ ನಕ್ಷತ್ರ ಸಿಕ್ಕಿತು (1960), ಯಾವ ಜನ್ಮದ ಶಾಪ (1964), ನಾಸ್ತಿಕ ಕೊಟ್ಟ ದೇವರು (1965), ಕೆಲವು ಸಣ್ಣ ಕಥೆಗಳು (1986). ಧ್ವನಿ - ಸಮಗ್ರ ಕಥಾ ಸಂಪುಟ. ನಾಟಕ : ಸಂಗಮಸ್ನಾನ (1961), ಆಹ್ವಾನ (1963), ಸಾಮ್ರಾಜ್ಞಿ (1967), ನಾವೂ ಮನುಷ್ಯರು (1985), ಪಾಪಾಸುಕಳ್ಳಿ, ಕಣಿದ್ದವರಿಗೂ ನೀನೇ ಶಿವಾ. ವ್ಯಕ್ತಿಚಿತ್ರ : ನಡೆ ಚೆನ್ನ ನುಡಿಚೆನ್ನ (1986), ಅಂಕಣ : ಐದು ನಿಮಿಷ (1953), ಕಾಲಕ್ಷೇಪ (1957), ಸಾಧನಾ (1953), ಪುಷ್ಪಹಾರ (1957), ದಿನಚರಿಯಿಂದ (1972), ಅಂಕಣ (1972), ರಾಜಧಾನಿಯಿಂದ 1972. ರಾಜಕೀಯ : ಹಿಮಾಲಯದ ದಳ್ಳುರಿ (1962), ಗಾಂಧೀ - ಇಂದು ನಾಳೆ (1973), ಚಿರಸ್ಮರಣೆಯ ಕಯ್ಯೂರು (1981). ಅನುವಾದ : ಮಾನವನ ಪಾಡು 1967, ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ, ಸಮತಾವಾದ (1945), ತಾಯಿ (1954), ಅಧಃಪತನ (1958), ನನ್ನ ಬಾಲ್ಯ (1956), ಜನತೆಯ ನಡುವೆ (1961), ನನ್ನ ವಿಶ್ವವಿದ್ಯಾಲಯ (1961), ಚೀಣಾ ದೇಶದ ನೀತಿಕಥೆಗಳು (1956), ಮದುವಣಗಿತ್ತಿ (1957). ಸಂಪಾದನೆ : ಜನತಾ ಸಾಹಿತ್ಯ ಮಾಲೆ 25 ಪುಸ್ತಕ (1946-47), ಪುರೋಗಾಮಿ ಪ್ರಕಾಶನದ 8 ಪುಸ್ತಕ (1951-50), ಜ್ಞಾನ ಗಂಗೋತ್ರಿಯ 7 ಸಂಪುಟಗಳು (1970-1974), ವಿಶ್ವಕಥಾಕೋಶ 25 ಸಂಪುಟ (1979-1982). ಇತರೆ : ಋತುರಾಜ (1961), ಬುದ್ಧಿ ಭಾವ ಬದುಕು (1984), ಮುಖತಃ (ಸಂದರ್ಶನ 1985), ಮಾಡೋಣ ಚಿಂತೆ, ಮುನ್ನುಡಿ ಪ್ರಸ್ತಾವನೆ, ನಡೆಚೆನ್ನ ನುಡಿ ಚೆನ್ನ 1986, ಹೆಜ್ಜೇನು ಸವಿದಂತೆ, ಪ್ರಗತಿಶೀಲರ ಅಂತಃಕಲಹ, ಸೌಗಂಧಿಕಾ ಪರಿಣಯ ಮತ್ತು.... (ಸಾರ ಸಂಗ್ರಹ), ಈ ಪುಸ್ತಕ ಓದಿದ್ದೀರಾ, ಮನ್ಮಥ ಮುಟ್ಟಿದ ಲೇಖನಿ, ಪ್ರತಿಧ್ವನಿ (ವಾಚಿಕೆ) 1987.



## ಜಿ. ಎಸ್. ಆಮೂರ

**ಜೀವನ ಪಥ** : ಜನನ : 8-5-1925, ಧಾರವಾಡ ಜಿಲ್ಲೆ ಬೊಮ್ಮನಹಳ್ಳಿ. ವಿದ್ಯಾಭ್ಯಾಸ : ಬಿ.ಎ. (1947), ಎಂ.ಎ. (1949) ಮುಂಬೈನಲ್ಲಿ. 1961-ಕ.ವಿ.ವಿ. ಪಿಎಚ್.ಡಿ. ಔರಂಗಾಬಾದಿನ ಮರಾಠವಾಡಾ ವಿ.ವಿ.ದಲ್ಲಿ ಪ್ರಾಧ್ಯಾಪಕರು ಮತ್ತು ಇಂಗ್ಲಿಷ್ ವಿಭಾಗದ ಮುಖ್ಯಸ್ಥರಾಗಿ ಸೇವೆ. 1988ರಲ್ಲಿ ನಿವೃತ್ತಿ. ಕೇಂದ್ರ ಸಾ.ಅ. ಪ್ರಶಸ್ತಿ 1997. ರಾಜ್ಯೋತ್ಸವ ಪ್ರಶಸ್ತಿ 2000, ಕರ್ನಾಟಕ ಸಾ.ಅ. ಪ್ರಶಸ್ತಿ 1991.

ಸಾಹಿತ್ಯ ಪಥ : ಮಹಾಕವಿ ಮಿಲ್ಟನ್ (1959), ಕೃತಿ ಪರೀಕ್ಷೆ (1970), ಸಮಕಾಲೀನ ಕಥೆ ಕಾದಂಬರಿ (1980), ಕನ್ನಡ ಕಾದಂಬರಿಯ ಬೆಳವಣಿಗೆಗೆ (1984), ಅ. ನ. ಕೃಷ್ಣರಾಯರು (1987), ಅರ್ಥಲೋಕ (1988), ಭುವನದ ಭಾಗ್ಯ (1989), ವ್ಯವಸಾಯ (1992), ಕಾಮಿಡಿ (1994), ಸಾತ್ವಿಕ ಪಥ (1995), ವಿರಾಟಪುರುಷ, ಶ್ರೀರಂಗ ಸಾಹಿತ್ಯ ಸಮೀಕ್ಷೆ (1998), ಕಾದಂಬರಿಯ ಸ್ವರೂಪ, ಹೊಸ ಚಿಂತನೆ (1999), ಅಮೃತವಾಹಿನಿ (2000), ಕನ್ನಡ ಕಥನ ಸಾಹಿತ್ಯ, ಕಾದಂಬರಿ (1994). ಇಂಗ್ಲಿಷ್ : The Concept of Comedy (1963), Manohar Malgaonkar (1972), Adya Rangacharya (1975), A Critical Spectrum (1975), Images and Impressions (1979), A. N. Krishna Rao (1983), Forbidden Fruit (1992), Creations and Transcreations (1992), D. R. Bendre (1994), Perceptions of Modern Indian Literature (1996), Critic on the Run (1999), Critical Essays on Indian Writing, Colonial Consciousness in Common wealth Literature (Ed.).



## ಬಿ. ಸಿ. ರಾಮಚಂದ್ರ ಶರ್ಮ

ಜೀವನ ಪಥ : ಜನನ : 28-11-1925, ಮಂಡ್ಯ ಜಿಲ್ಲೆ ನಾಗಮಂಗಲದ ಬೋಗಾದಿ. ತಂದೆ ತಾಯಿ : ಬಿ. ಚಂದ್ರಶೇಖರ ಶರ್ಮ ಮತ್ತು ಲಕ್ಷ್ಮೀದೇವಮ್ಮ. ಶಿಕ್ಷಣ : ಮೈಸೂರು ವಿ.ವಿ.ದಿಂದ ಬಿ.ಎಸ್.ಸಿ., ಬಿ.ಎಡ್., ಬೆಂಗಳೂರು ಹೈಸ್ಕೂಲ್‌ನಲ್ಲಿ ಅಧ್ಯಾಪಕರಾಗಿ ವೃತ್ತಿ ಆರಂಭ. ಅನಂತರ ಇಥಿಯೋಪಿಯಾ, ಇಂಗ್ಲೆಂಡ್‌ಗಳಲ್ಲಿ ಅಧ್ಯಾಪಕ ವೃತ್ತಿ. ಮನಃಶಾಸ್ತ್ರ ಅಧ್ಯಯನ, ಅದರಲ್ಲಿ ಪಿಎಚ್.ಡಿ. ಪದವಿ. ವಿಶ್ವಸಂಸ್ಥೆ ಪರವಾಗಿ ಇಂಗ್ಲೆಂಡ್, ಜಾಂಬಿಯಾಗಳಲ್ಲಿ ಕಾರ್ಯ ನಿರ್ವಹಣೆ. 1982 ಮರಳಿ ಭಾರತಕ್ಕೆ. ಕ.ಸಾ.ಅ. ಗೌರವ ಪ್ರಶಸ್ತಿ (1985), ರಾಜ್ಯೋತ್ಸವ ಪ್ರಶಸ್ತಿ (1997), ಕೇಂದ್ರ ಸಾ.ಅ. ಪ್ರಶಸ್ತಿ 'ಸಪ್ತಪದಿ' ಕೃತಿಗೆ (1998). ಅನುವಾದಕ್ಕಾಗಿ ಕಥಾಪ್ರಶಸ್ತಿ (1992).

ಸಾಹಿತ್ಯ ಪಥ : ಕವನ ಸಂಕಲನ : ಹೃದಯಗೀತ (1952), ಏಳುಸುತ್ತಿನ ಕೋಟೆ (1953), ಬುವಿನೀಡಿದ ಸ್ಫೂರ್ತಿ (1956), ಹೇಸರಗತ್ತೆ (1969), ಬ್ರಾಹ್ಮಣ ಹುಡುಗ (1978), ಮಾತು ಮಾಟ (1984), ದೆಹಲಿಗೆ ಬಂದ ಹೊಸವರ್ಷ (1988), ಸಪ್ತಪದಿ (1996), ಸಮಗ್ರಕಾವ್ಯ (1987, 2000). ಕಥಾಸಂಕಲನ : ಮಂದಾರ ಕುಸುಮ (1953), ಏಳನೆಯ ಜೀವ (1956), ಬೆಳಗಾಯಿತು (1969), ಕತೆಗಾರನ ಕತೆ (1985), ನಲವತ್ತು ಕತೆಗಳು (2000). ನಾಟಕಗಳು : ಸೆರಗಿನ ಕೆಂಡ (1954), ನೆರಳು (1965), ಬಾಳ ಸಂಜೆ (1952), ನೀಲಿ ಕಾಗದ (1953), ವೈತರಣಿ (1960). ಇತರೆ : ಮಕ್ಕಳ ಬುದ್ಧಿಶಕ್ತಿ ಮತ್ತು ಪರಿಸರ (1981), ಕಾರಂಜಿ (1985), ಪ್ರತಿಭಾ ಸಂದರ್ಶನ (1957). ಅನುವಾದ : ಈ ಶತಮಾನದ ನೂರು ಇಂಗ್ಲಿಷ್ ಕವನಗಳು (1982). ಇಂಗ್ಲಿಷ್‌ನಲ್ಲಿ : Gestures (1978), B. M. S. : The Man and His Works (1974), From Cauveri to Godavari, Masti, The House of Kanooru.



## ಜಿ. ಎಸ್. ಶಿವರುದ್ರಪ್ಪ

ಜೀವನ ಪಥ : ಜನನ : 1926, ಫೆಬ್ರುವರಿ 7 ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದಲ್ಲಿ, ಶಿಕ್ಷಣ : ಮೈಸೂರು ವಿಶ್ವವಿದ್ಯಾಲಯದಲ್ಲಿ 1949ರಲ್ಲಿ ಬಿ.ಎ. ಆನರ್ಸ್ ಮತ್ತು 1953ರಲ್ಲಿ ಕನ್ನಡ ಎಂ.ಎ. 'ಸೌಂದರ್ಯ ಸಮೀಕ್ಷೆ' ಪ್ರೌಢ ಪ್ರಬಂಧಕ್ಕೆ 1960ರಲ್ಲಿ ಪಿಎಚ್.ಡಿ. 1949ರಲ್ಲಿ, ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕ ವೃತ್ತಿ ಪ್ರಾರಂಭ. 1963ರಿಂದ 1966 ಹೈದರಾಬಾದ್ ಉಸ್ಮಾನಿಯಾ ವಿಶ್ವವಿದ್ಯಾಲಯದ ಆಹ್ವಾನದ ಮೇರೆಗೆ ರೀಡರ್ ಮತ್ತು ಕನ್ನಡ ವಿಭಾಗದ ಮುಖ್ಯಸ್ಥರು. 1970ರಿಂದ 1986ರವರೆಗೆ ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಕೇಂದ್ರದಲ್ಲಿ ಪ್ರಾಧ್ಯಾಪಕರು ಮತ್ತು ನಿರ್ದೇಶಕರು. 1974, 'ಮಾಸ್ಕೋದಲ್ಲಿ 22 ದಿನ' ಕೃತಿಗೆ ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ. 1982ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಪುರಸ್ಕಾರ. 1984ರಲ್ಲಿ 'ಕಾವ್ಯಾರ್ಥ ಚಿಂತನ' ಕೃತಿಗೆ ವರ್ಷದ ಅತ್ಯುತ್ತಮ ಕೃತಿ ಪ್ರಶಸ್ತಿ. ಅದೇ ವರ್ಷ ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ. 1983-84ರಲ್ಲಿ ಯು.ಜಿ.ಸಿ.ಯಿಂದ ರಾಷ್ಟ್ರೀಯ ಉಪನ್ಯಾಸಕರಾಗಿ ನೇಮಕ. 1984ರಲ್ಲಿ 'ಕಾವ್ಯಾರ್ಥ ಚಿಂತನ' ಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 1987ರಿಂದ ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಪದವಿ ಮಾನ್ಯತೆ. 61ನೇ ಅ.ಭಾ. ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ. 1994-95 ಮೈಸೂರು ವಿಶ್ವವಿದ್ಯಾಲಯದ ಕುವೆಂಪು ಪೀಠದ ಸಂದರ್ಶಕ ಪ್ರಾಧ್ಯಾಪಕರು. 1998 ಪಂಪ ಪ್ರಶಸ್ತಿ ಗೌರವ.

ಸಾಹಿತ್ಯ ಪಥ : ಕವಿತೆ : ಸಾಮಗಾನ, ಚೆಲುವು-ಒಲವು (1953), ದೇವಶಿಲ್ಪ, ತೀರ್ಥವಾಣಿ, ಕಾರ್ತೀಕ, ದೀಪದ ಹೆಜ್ಜೆ (1959), ಅನಾವರಣ (1963), ತೆರೆದ ದಾರಿ, ಗೋಡೆ, ಕಾಡಿನ ಕತ್ತಲಲ್ಲಿ (1981), ಪ್ರೀತಿ ಇಲ್ಲದ ಮೇಲೆ, ಚಕ್ರಗತಿ 1992, ವ್ಯಕ್ತ ಮಧ್ಯ 1999, ಸಮಗ್ರ ಕಾವ್ಯ 1987 (ವಿಸ್ತೃತ 1997). ವ್ಯಕ್ತಿ ಚಿತ್ರ : ಕರ್ಮಯೋಗಿ. ಪ್ರವಾಸ ಕಥನ : ಮಾಸ್ಕೋದಲ್ಲಿ 22 ದಿನ, ಗಂಗೆಯ ಶಿಖರಗಳಲ್ಲಿ, ಅಮೆರಿಕದಲ್ಲಿ ಕನ್ನಡಿಗ, ಇಂಗ್ಲೆಂಡಿನಲ್ಲಿ ಚತುರ್ಮಾಸ. ಸಾಹಿತ್ಯ ವಿಮರ್ಶೆ/ಕಾವ್ಯ ಮೀಮಾಂಸೆ : ವಿಮರ್ಶೆಯ ಪೂರ್ವ ಪಶ್ಚಿಮ (1961), ಪರಿಶೀಲನ (1967), ಗತಿಬಿಂಬ, ಪ್ರತಿಕ್ರಿಯೆ, ನವೋದಯ, ಕನ್ನಡ ಸಾಹಿತ್ಯ ಸಮೀಕ್ಷೆ, ಅನುರಣನ, ಹಿನ್ನೆಲೆ 1982, ಬೆಡಗು 1989, ವಿಸ್ತರಣ 1995, ಸೌಂದರ್ಯ ಸಮೀಕ್ಷೆ 1965, ಮಹಾಕಾವ್ಯದ ಸ್ವರೂಪ 1976, ಕಾವ್ಯಾರ್ಥ ಚಿಂತನ (1983), ಕನ್ನಡ ಕವಿಗಳ ಕಾವ್ಯ ಕಲ್ಪನೆ 1989, ಹೊಸಗನ್ನಡದ ಕವಿತೆಗಳಲ್ಲಿ ಕಾವ್ಯಚಿಂತನೆ : ಕೆಲವು ಪ್ರತಿಕ್ರಿಯೆಗಳು 1991. ಸಮಗ್ರ ಗದ್ಯ ೧, ೨, ೩. ಸಂ ; ವಿವಿಧ 1982 ಇತ್ಯಾದಿ. ಇತರೆ : ಕಾವ್ಯಾರ್ಥ ಪದಕೋಶ (ಕೆ.ವಿ. ನಾರಾಯಣ ಅವರೊಡನೆ) 1980. ಚತುರಂಗ, ಫಕೀರ ಮೋಹನ ಸೇನಾಪತಿ (ಅನು).

## ಎಚ್. ತಿಪ್ಪೇರುದ್ರಸ್ವಾಮಿ



**ಜೀವನ ಪಥ** : ಜನನ : 1928, ಫೆಬ್ರವರಿ 3, ಶಿವಮೊಗ್ಗ ಜಿಲ್ಲೆಯ ಹೊನ್ನಾಳಿಯಲ್ಲಿ. ಶಿಕ್ಷಣ : ಶಿವಮೊಗ್ಗ, ತೀರ್ಥಹಳ್ಳಿಯಲ್ಲಿ ಪ್ರೌಢಶಾಲಾ ವ್ಯಾಸಂಗ. ಶಿವಮೊಗ್ಗ, ಮೈಸೂರುಗಳಲ್ಲಿ ಕಾಲೇಜು ವ್ಯಾಸಂಗ, ಕನ್ನಡದಲ್ಲಿ ಬಿ.ಎ. (ಆನರ್ಸ್) ಮತ್ತು 1952ರಲ್ಲಿ ಎಂ.ಎ. ಪದವಿ. 1952ರಲ್ಲಿ ಕನ್ನಡ ಅಧ್ಯಾಪಕರಾಗಿ ವೃತ್ತಿ ಪ್ರಾರಂಭ. 1962ರಲ್ಲಿ 'ಶರಣರ ಅನುಭಾವ ಸಾಹಿತ್ಯ' ಪ್ರೌಢ ಪ್ರಬಂಧಕ್ಕೆ ಪಿಎಚ್.ಡಿ. ಪದವಿ. 1964ರಲ್ಲಿ ಮೈಸೂರು ವಿಶ್ವ ವಿದ್ಯಾಲಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಅಧ್ಯಾಪಕರಾಗಿ ಆಯ್ಕೆ. 1974ರಲ್ಲಿ ಭದ್ರಾ ಜಲಾಶಯ ಸ್ನಾತಕೋತ್ತರ ವಿಭಾಗದಲ್ಲಿ ನಿರ್ದೇಶಕರು. 1984 ಮೈಸೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರು. 1987ರಲ್ಲಿ ಸ್ವ ಇಚ್ಛೆಯಿಂದ ನಿವೃತ್ತಿ. 1969ರಲ್ಲಿ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1985ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ. ನಿಧನ : 1994.

**ಸಾಹಿತ್ಯ ಪಥ** : ಕವಿತೆ : ತಪೋರಂಗ (1961). ಕಾದಂಬರಿ : ಪರಿಪೂರ್ಣ ದೆಡೆಗೆ, ಕದಳಿಯ ಕರ್ಪೂರ, ಜ್ಯೋತಿ ಬೆಳಗುತಿದೆ, ಜಡದಲ್ಲಿ ಜಂಗಮ, ಕರ್ತಾರನ ಕಮ್ಮಟ, ನೆರಳಾಚೆಯ ಬೆಳಗು (1980), ಸತ್ಯಾಶ್ರಯ ಸಾಮ್ರಾಜ್ಯ, ವಿಜಯ ಕಲ್ಯಾಣ, ವಚನ ವಿರೂಪಾಕ್ಷ, ಶಿಸ್ತುಗಾರ ಶಿವಪ್ಪನಾಯಕ. ನಾಟಕಗಳು : ಶರಣರ ಮೂರು ನಾಟಕಗಳು, ನಿಜಗುಣ ಶಿವಯೋಗಿ, ವಿಧಿಪಂಜರ. ವಿಮರ್ಶೆ/ಮಹಾಪ್ರಬಂಧ : ಶರಣರ ಅನುಭಾವ ಸಾಹಿತ್ಯ (1963), ವಚನಗಳಲ್ಲಿ ವೀರಶೈವ ಧರ್ಮ, ಶೂನ್ಯ ಸಂಪಾದನೆಯ ವಿವರಣಾತ್ಮಕ ಪರಿಚಯ (1973), ಕನ್ನಡದಲ್ಲಿ ಅನುಭಾವ ಸಾಹಿತ್ಯ, ಭೀಮಕವಿ, ಅವಿರಳಜ್ಞಾನಿ ಚೆನ್ನಬಸವಣ್ಣ, ಚಾಮರಸ, ಅನುಭವ ಮಂಟಪ, ಋಷಿಕವಿ ರಾಘವಾಂಕ, ಕುವೆಂಪು ಅವರ ನಾಟಕಗಳು, ತೌಲನಿಕ ಕಾವ್ಯಮೀಮಾಂಸೆ, ಸಾಹಿತ್ಯ ಮತ್ತು ಸಮಕಾಲೀನ ವಾಸ್ತವಿಕತೆ (1979). ಸಂಸ್ಕೃತಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ (1968). ಸಂಪಾದನೆ : ಪ್ರಸಾದ, ಆಮುಗಿ ದೇವಯ್ಯಗಳ ಸಾಂಗತ್ಯ, ಸಿದ್ಧರಾಮನ ವಚನಗಳು, ಸರ್ವಜ್ಞನ ವಚನಗಳು, ಮಾಧವಾಲಂಕಾರ, ಶಿವಕವಿ ಷಡಕ್ಷರಿ, ಗಾಂಧೀ ವಿಚಾರಮಾರ್ಗ, ಶಿಕ್ಷಣಕ್ರಾಂತಿ, ಅಂಜಲಿ, ಗಾಂಧೀ ನೂರು ವರ್ಷಗಳು, ಮಹಾತ್ಮಾ, ಬಸವೇಶ್ವರ ವಚನ ದೀಪಿಕೆ. ಕಥಾಸಂಕಲನ: ಶರಣ ಚರಿತ ಮಾನಸ, ಕರ್ನಾಟಕ ಶರಣ ಕಥಾಮೃತ, ಸಾಹಿತ್ಯ ಚಿತ್ರಗಳು. ಮಕ್ಕಳ ಸಾಹಿತ್ಯ : ಅಂಡಯ್ಯ, ಬಸವ ಕಲ್ಯಾಣ, ಚನ್ನಬಸವಣ್ಣ.

## ಶಂಕರ ಮೊಕಾಶಿ ಪುಣೇಕರ



**ಜೀವನ ಪಥ** : ಜನನ : 1928. ಮೇ 8 ಧಾರವಾಡದಲ್ಲಿ. ಶಿಕ್ಷಣ : ಎಂ.ಎ., ಮತ್ತು ಪಿಎಚ್.ಡಿ. ಪದವಿ. ಪ್ರಾರಂಭದಲ್ಲಿ ಶಾಲಾ ಅಧ್ಯಾಪಕರು, ಅನಂತರ ಬೆಳಗಾವಿಯ ಲಿಂಗರಾಜ ಕಾಲೇಜು, ಮುಂಬಯಿಯ ಕೆ.ಸಿ. ಕಾಲೇಜುಗಳಲ್ಲಿ ಉಪನ್ಯಾಸಕರಾಗಿ ಸೇವೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರವಾಚಕರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಸೇವೆ. 1988ರಲ್ಲಿ ನಿವೃತ್ತಿ. 1988ರಲ್ಲಿ 'ಅವಧೇಶ್ವರಿ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. 'ಪಾಶ್ಚಾತ್ಯ ವಿಮರ್ಶೆಯ ಇತಿಹಾಸ' ಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ. 1986ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಗೌರವ ಪ್ರಶಸ್ತಿ. ಮೈಸೂರು ವಿಶ್ವವಿದ್ಯಾಲಯದಿಂದ ಮೂರು ಬಾರಿ ಗೋಲ್ಡನ್ ಜ್ಯುಬಿಲಿ ಪುರಸ್ಕಾರಗಳು.

**ಸಾಹಿತ್ಯ ಪಥ** : ಕವಿತೆ : ಮಾಯಿಯ ಮೂರು ಮುಖಗಳು. ಕಾದಂಬರಿ : ಗಂಗವ್ವ-ಗಂಗಾಮಾಯಿ, ನಟನಾರಾಯಣಿ, ಅವಧೇಶ್ವರಿ. ವಿಮರ್ಶೆ : ಪಾಶ್ಚಾತ್ಯ ವಿಮರ್ಶೆಯ ಇತಿಹಾಸ, ಶ್ರೀ ಬೇಂದ್ರೆಯವರ ಕಾವ್ಯಮೀಮಾಂಸೆ, ಸಾಹಿತ್ಯ ಮತ್ತು ಅಭಿರುಚಿ. ಅನುವಾದ : ಸತ್ಯಸಾಯಿ ಭಾಷಣಗಳು, ಶ್ರೀ ರಾಮಾಯಣ ದರ್ಶನಂ (ಇಂಗ್ಲಿಷ್ ಅನುವಾದ). ನಾಟಕ : ಶ್ರೀ ಸಂಗೀತ ನಾಟ್ಯ ನಾಂದೀ ಪರಿಪೂರ್ಣ ಹಾಸ್ಯಪ್ರಧಾನ ಸಾಂಸಾರಿಕ ಕಂಪನಿ ಏಕಾಂಕ ನಾಟಕ. ಇಂಗ್ಲಿಷ್‌ನಲ್ಲಿ : The Later Phase in the Development of W. B. Yeats (1966). The Captive (1965), The Cycle of Seasons, The Pretender (1968), The Tent Pole, Paradims, Homing Bird. Mohenjadaro Seals (1984), Indo-Anglian Creed (1972), Avadhoota Gita (Ed. 1980), Theoretical and Practical Studies in Indo-English Literature (1978). V.K. Gokak, Perspectives on Indian Drama in English (Edited with M.K. Naik, 1977), Compulsory Capitation Scheme, Harijan Contribution to Medieval Indian Thought.

## ಚೆನ್ನವೀರ ಕಣವಿ



**ಜೀವನ ಪಥ** : ಜನನ : 1928. ಜೂನ್ 28, ಧಾರವಾಡ ಜಿಲ್ಲೆಯ ಹೊಂಬಳದಲ್ಲಿ. ಶಿಕ್ಷಣ : ಕರ್ನಾಟಕ ಕಾಲೇಜು. ಧಾರವಾಡದಿಂದ 1950ರಲ್ಲಿ ಬಿ.ಎ., 1952ರಲ್ಲಿ ಎಂ.ಎ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಸಾರಾಂಗದ ಕಾರ್ಯದರ್ಶಿಯಾಗಿ ವೃತ್ತಿ ಪ್ರಾರಂಭ. 1956ರಲ್ಲಿ ಪ್ರಸಾರಾಂಗದ ನಿರ್ದೇಶಕರಾಗಿ ನೇಮಕ. ಈಗ ವಿಶ್ರಾಂತರಾಗಿದ್ದಾರೆ. 1981ರಲ್ಲಿ 'ಜೀವಧ್ವನಿ' ಕವನ ಸಂಗ್ರಹಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 1985, ಕರ್ನಾಟಕ ರಾಜ್ಯ ಪ್ರಶಸ್ತಿ 1989, 'ಮಲ್ಲಿಗೆ ದಂಡೆ' ಭಾವಗೀತಗಳ ಧ್ವನಿಸುರುಳಿ ಬಿಡುಗಡೆ 1992, ಭಾರತ ಸರ್ಕಾರದ ಮಾನವ ಸಂಪನ್ಮೂಲ ವಿಕಾಸ ಇಲಾಖೆ, ಸಂಸ್ಕೃತಿ ವಿಭಾಗದ ಎಮೆರಿಟಸ್ ಫೆಲೋಶಿಪ್ 1996-1998, ಎಸ್. ಆರ್. ಪಾಟೀಲ ಪ್ರತಿಷ್ಠಾನ (ಗುಲ್ಬರ್ಗಾ) ಪ್ರಶಸ್ತಿ 1996. 1996ರಲ್ಲಿ ಹಾಸನದಲ್ಲಿ ನಡೆದ 65ನೇ ಅ.ಭಾ. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಪಂಪ ಪ್ರಶಸ್ತಿ 1999.

**ಸಾಹಿತ್ಯ ಪಥ** : ಕವಿತೆ : ಕಾವ್ಯಾಕ್ಷಿ (1949), ಭಾವಜೀವಿ (1950), ಆಕಾಶಬುಟ್ಟಿ (1953), ಮಧುಚಂದ್ರ (1954), ದೀಪದಾರಿ (1956), ಮಣ್ಣಿನ ಮೆರವಣಿಗೆ (1960), ನೆಲ-ಮುಗಿಲು (1965), ನಗರದಲ್ಲಿ ನೆರಳು

(1974), ಚಿರಂತನ ದಾಹ (1975), ಜೀವಧ್ವನಿ (1980), ಕಾರ್ತೀಕ ಮೋಡ (1986), ಜೀನಿಯಾ 1989, ಶಿಶಿರದಲ್ಲಿ ಬಂದ ಸ್ನೇಹಿತ 1994, ಕಣವಿ ಸಮಗ್ರ ಕಾವ್ಯ 1996, ಹಕ್ಕೀ ಪುಚ್ಚ (ಮಕ್ಕಳ ಕವಿತೆಗಳು, 1985), ಹೂವು ಹೊರಳುವವು ಸೂರ್ಯನ ಕಡೆಗೆ (1987). ಗದ್ಯ : ಸಾಹಿತ್ಯ ಚಿಂತನ (1966), ಕಾವ್ಯಾನುಸಂಧಾನ (1971), ಸಮಾಹಿತ (1977), ಮಧುರಚೆನ್ನ (1984), ಸಮತೋಲನ (1989), ಶುಭ ನುಡಿಯೆ ಹಕ್ಕಿ (ಮುನ್ನುಡಿ ಸಂಕಲನ). ಅನುವಾದ : ಬಾಬಾ ಫರೀದ್ (1993). ಸಂಪಾದನೆ (ಇತರರೊಡನೆ) : ನವಿಲೂರ ಮನೆಯಿಂದ (1952), ನವ್ಯಧ್ವನಿ (1956), ನೈವೇದ್ಯ (1960), ನಮ್ಮೆಲ್ಲರ ನೆಹರು (1964), ಜೀವನ ಸಿದ್ಧಿ (1971), ಸಿದ್ಧಿವಿನಾಯಕ ಮೋದಕ (1970), ಆಧುನಿಕ ಕನ್ನಡ ಕಾವ್ಯ Modern Kannada Poetry. (1976). ಕವಿತೆಗಳು : 1980 (1983), 1985 ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, 1989 ರಾಜ್ಯೋತ್ಸವ ಪ್ರಶಸ್ತಿ, 1996ರಲ್ಲಿ ಹಾಸನದಲ್ಲಿ ನಡೆದ 65ನೇ ಅ.ಭಾ. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ಪಂಪ ಪ್ರಶಸ್ತಿ ಗೌರವ 1999.



## ಯಶವಂತ ಚಿತ್ತಾಲ

**ಜೀವನ ಪಥ** : ಜನನ : 1928, ಆಗಸ್ಟ್ 3, ಉತ್ತರ ಕನ್ನಡ ಜಿಲ್ಲೆಯ ಕುಮಟಾ ತಾಲ್ಲೂಕಿನ ಹನೇಹಳ್ಳಿಯಲ್ಲಿ. ತಂದೆ-ತಾಯಿ : ವಿಠೋಬಾ ಮತ್ತು ರುಕ್ಮಿಣಿ, ಗಂಗಾಧರ ಚಿತ್ತಾಲರ ಕಿರಿಯ ತಮ್ಮ. ಶಿಕ್ಷಣ : ಕುಮಟಾ ತಾಲ್ಲೂಕಿನ ಹನೇಹಳ್ಳಿ, ಧಾರವಾಡ, ಮುಂಬಯಿ ಹಾಗೂ ಅಮೆರಿಕೆಯ ನ್ಯೂಜೆರ್ಸಿಗಳಲ್ಲಿ ವಿಜ್ಞಾನ, ತಂತ್ರಜ್ಞಾನ ವ್ಯಾಸಂಗ. ರಾಸಾಯನಿಕ ತಂತ್ರಜ್ಞಾನದ ಪೊಲಿಮರ್ ಟೆಕ್ನಾಲಜಿಯಲ್ಲಿ ವಿಶೇಷ ಪರಿಣತಿ. ಮುಂಬಯಿ ಬೇಕ್‌ಲೈಟ್ ಹೈಲಮ್‌ಲಿ. ಕಂಪನಿಯಲ್ಲಿ ಜಿ.ಎಂ. ಮತ್ತು ಎಕ್ಸಿಕ್ಯುಟೀವ್ ಡೈರೆಕ್ಟರ್ ಆಗಿದ್ದು 1985ರಲ್ಲಿ ನಿವೃತ್ತಿ. ಇವರ 'ಕತೆಯಾದಳು ಹುಡುಗಿ' ಕೃತಿಗೆ 1983ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ, ಭಾರತೀಯ ಭಾಷಾ ಪ್ರಶಸ್ತಿ, ಮಹಾರಾಷ್ಟ್ರ ಸರ್ಕಾರದಿಂದ ಮಹಾರಾಷ್ಟ್ರ ಗೌರವ ಪುರಸ್ಕಾರ, ಮಾಸ್ತಿ ಪ್ರಶಸ್ತಿ, ಡಾ|| ಶಿವರಾಮ ಕಾರಂತ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಗೌರವಗಳು.

**ಸಾಹಿತ್ಯ ಪಥ** : ಕಥಾ ಸಂಕಲನ : ಸಂದರ್ಶನ (1957), ಆಬೋಲೀನ (1960), ಆಟ (1969), ಆಯ್ದ ಕತೆಗಳು (1976), ಕತೆಯಾದಳು ಹುಡುಗಿ (1980), ಬೇನ್ಯಾ (1983), ಚಿತ್ತಾಲರ ಕತೆಗಳು (ಸಮಗ್ರ) (1983), ಸಿದ್ಧಾರ್ಥ (1988), ಕುಮಟೆಗೆ ಬಂದ ಕಿಂದರಿಜೋಗಿ (1997), ಐವತ್ತೊಂದು ಕತೆಗಳು (2000). ಕಾದಂಬರಿ : ಮೂರು ದಾರಿಗಳು (1964), ಶಿಕಾರಿ (1979), ಛೇದ (1985), ಪುರುಷೋತ್ತಮ (1990), ಕೇಂದ್ರ ವೃತ್ತಾಂತ (1997). ಇತರೆ : ಪ್ರಬಂಧ ಸಂಗ್ರಹ : ಸಾಹಿತ್ಯ ಸೃಜನಶೀಲತೆ ಮತ್ತು ನಾನು (1980). ಇವರ ಕೃತಿಗಳ ಅನುವಾದ : ಕೊಂಕಣಿಯಲ್ಲಿ : ಖೇಳ್ ಆನಿ ಹೆರ್ ಕಥಾ (ಒಂಬತ್ತು ಕತೆಗಳ ಅನುವಾದ), ಕಾಣಿ ಜಾಲೀ ಚಲೀ (ಕತೆಯಾದಳು ಹುಡುಗಿ ಸಂಕಲನದ ಅನು.). ಇಂಗ್ಲಿಷ್‌ಗೆ ಅನುವಾದ : The Boy Who Talked to Trees.



## ತ್ರಿವೇಣಿ

**ಜೀವನ ಪಥ** : ಜನನ : 1928, ಸೆಪ್ಟೆಂಬರ್ 1, ಮೈಸೂರಿನಲ್ಲಿ. ಹೆಸರುಗಳು ಭಾಗೀರಥಿ, ಅನಸೂಯ. 'ತ್ರಿವೇಣಿ' ಕಾವ್ಯನಾಮ. ಶಿಕ್ಷಣ : ಮಂಡ್ಯ, ಮೈಸೂರುಗಳಲ್ಲಿ. ಮಹಾರಾಜಾ ಕಾಲೇಜಿನಿಂದ 1947ರಲ್ಲಿ ಬಿ.ಎ. ಪದವಿ. ಮನಶಾಸ್ತ್ರ ಐಚ್ಛಿಕ ವಿಷಯ. ನಿಧನ : 1963, ಜುಲೈ 29.

**ಸಾಹಿತ್ಯ ಪಥ** : ಸಣ್ಣಕತೆ : ಹೆಂಡತಿಯ ಹೆಸರು 1958, ಎರಡು ಮನಸ್ಸು 1960, ಸಮಸ್ಯೆಯ ಮಗು 1961. ಕಾದಂಬರಿ : ಹೂವು ಹಣ್ಣು 1953, ಅಪಸ್ವರ 1953, ಅಪಜಯ, ಸೋತುಗೆದ್ದವಳು 1954, ಕೀಲುಗೊಂಬೆ, ಮೊದಲ ಹೆಜ್ಜೆ 1956, ಹೃದಯಗೀತೆ 1956, ಕಂಕಣ, ಮುಕ್ತಿ, ಬೆಳ್ಳಿಮೋಡ 1959, ಅವಳ ಮನೆ 1960, ತಾವರೆಯ ಕೊಳ 1963, ಕಾಶೀಯಾತ್ರೆ 1962, ಬಾನು ಬೆಳಗಿತು 1963, ಹಣ್ಣೆಲೆ ಚಿಗುರಿದಾಗ 1963, ಅವಳ ಮಗಳು 1966, ಬೆಕ್ಕಿನ ಕಣ್ಣು 1954, ದೂರದ ಬೆಟ್ಟ 1955, ಮುಚ್ಚಿದ ಬಾಗಿಲು 1959, ಶರಪಂಜರ 1965, ವಸಂತಗಾನ.



## ಕೀರ್ತಿನಾಥ ಕುರ್ತಕೋಟಿ

**ಜೀವನ ಪಥ** : ಜನನ : 13-10-1928 ಧಾರವಾಡ ಜಿಲ್ಲೆಯ ಗದಗ ಸಮೀಪದ ಕುರ್ತಕೋಟಿಯಲ್ಲಿ. ಶಿಕ್ಷಣ : 1950 ಧಾರವಾಡದ ಕರ್ನಾಟಕ ಕಾಲೇಜಿನಿಂದ ಪದವಿ. 1958 ಕರ್ನಾಟಕ ವಿಶ್ವವಿದ್ಯಾಲಯದಿಂದ ಆಂಗ್ಲ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ. ವೃತ್ತಿ : 1950-55 ಗದಗದ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿದ್ದು ಮುಂದೆ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದರು. 1989ರಲ್ಲಿ ನಿವೃತ್ತಿ. 1972 ಕ.ಸಾ.ಅ. ಗೌರವ ಪ್ರಶಸ್ತಿ, 1990 ಕರ್ನಾಟಕ ನಾಟಕ ಅಕಾಡೆಮಿ ಫೆಲೋಷಿಪ್, 1995 'ಉರಿಯ ನಾಲಗೆ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

**ಸಾಹಿತ್ಯ ಪಥ** : ವಿಮರ್ಶೆ ಹಾಗೂ ಅಂಕಣ ಬರಹ : ಬೇಂದ್ರೆ ಹಾಗೂ ಕನ್ನಡ ಕಾವ್ಯ ಸ್ವರೂಪ 1961, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ 1962, ನವ್ಯ ಕಾವ್ಯ ಪ್ರಯೋಗ 1963, ಹೊಸಗನ್ನಡದಲ್ಲಿ ಮಹಾಕಾವ್ಯ: ಶ್ರೀ ರಾಮಾಯಣ ದರ್ಶನಂ 1965, ಭೃಂಗದ ಬೆನ್ನೇರಿ 1975, ಅಸಂಗತ ನಾಟಕಗಳು 1977, ದ.ರಾ. ಬೇಂದ್ರೆ 1982, ಯಶೋಧರ ಚರಿತೆ 1982, ವಿಮರ್ಶೆಯ ವಿನಯ : ಕಾದಂಬರಿ 1984, ಬೇಂದ್ರೆಯವರ ಕಾವ್ಯದಲ್ಲಿ ಶ್ರುತಿ ಮತ್ತು ಕೃತಿ 1984, ವಿಮರ್ಶೆಯ ವಿನಯ : ನಾಟಕ 1985, ಸಂಸ್ಕೃತಿ ಸ್ಪಂದನ 1986, ಕುಮಾರವ್ಯಾಸ 1989, ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ 1990, ಬಯಲು-ಆಲಯ 1992, ಬಾರೋ ಸಾಧನಕೇರಿಗೆ 1993, ಉರಿಯ ನಾಲಗೆ 1993, ಕನ್ನಡ ಸಾಹಿತ್ಯ ಸಂಗಾತಿ 1995, ರಾಜಸ್ಪರ್ಶ 1996, ನೂರು ಮರ ನೂರು ಸ್ವರ 1998, ಪ್ರತ್ಯಭಿಜ್ಞಾನ 1998. ನಾಟಕ : ಸ್ವಪ್ನದರ್ಶಿ ಮತ್ತು ಇತರ ಗೀತ ನಾಟಕಗಳು 1956, ಆ ಮನಿ 1956, ಚಂದ್ರಗುಪ್ತ 1983. ಸಂಪಾದಿತ : (ಇತರರೊಂದಿಗೆ) ನಡೆದು ಬಂದ ದಾರಿ 1958, ಶ್ರೀ ವಿನಾಯಕರು 1958, ವಾಸುದೇವ ಪ್ರಶಸ್ತಿ 1964, ಸಾಂಗ್ಯಬಾಳ್ಯ 1966,

ಮನ್ವಂತರ (ಅನಿಯತಕಾಲಿಕೆ - 10 ಸಂಪುಟಗಳು) 1963-68, ಪುಟ ಬಂಗಾರ (ಮೂರು ಸಂಪುಟಗಳು) 1985-87. The Tradition of Kannada Theatre 1986. ಅನುವಾದ : ಮರ್ಾಟೀ ಸಂಸ್ಕೃತಿ ಕೆಲವು ಸಮಸ್ಯೆಗಳು. ಕಾವ್ಯ : (ಇತರರೊಂದಿಗೆ) ಗಾನ ಕೇಳಿ 1948, ಜೀವಫಲ.



## ಶಾಂತಿನಾಥ ದೇಸಾಯಿ

**ಜೀವನಪಥ** : ಜನನ : 22-7-1929, ಉ.ಕ.ಜಿಲ್ಲೆಯ ಹಳಿಯಾಳ. ಶಿಕ್ಷಣ : ಹಳಿಯಾಳ, ಧಾರವಾಡ ಮತ್ತು ಮುಂಬಯಿ ವಿಲ್ಸನ್ ಕಾಲೇಜು. ವೃತ್ತಿ : ಕರ್ನಾಟಕ ವಿ.ವಿ. ಮತ್ತು ಕೊಲ್ಹಾಪುರದ ಶಿವಾಜಿ ವಿ.ವಿ.ದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರು. 1988 ಕುವೆಂಪು ವಿಶ್ವವಿದ್ಯಾನಿಲಯದ ಕುಲಪತಿಗಳು. 1987 ಕರ್ನಾಟಕ ಸಾ.ಅ. ಗೌರವ ಪ್ರಶಸ್ತಿ, 1958-59 ಬ್ರಿಟಿಷ್ ಕೌನ್ಸಿಲ್ ಸ್ಕಾಲರ್‌ಷಿಪ್. 1999ರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 'ಓಂಣಮೋ' ಕಾದಂಬರಿಗೆ ಲಭಿಸಿದೆ. ನಿಧನ : 26 ಮಾರ್ಚ್ 1998.

**ಸಾಹಿತ್ಯ ಪಥ** : ಕಥಾಸಂಕಲನ : ಮಂಜುಗಡ್ಡೆ 1959, ಕ್ಷಿತಿಜ 1966, ದಂಡೆ 1971, ರಾಕ್ಷಸ 1977, ಪರಿವರ್ತನೆ 1984, ಕೂರ್ಮಾವತಾರ 1988. ಕೆಲವು ಆಯ್ದ ಕತೆಗಳು 1977. ಕಾದಂಬರಿ : ಮುಕ್ತಿ 1961, ವಿಕ್ಷೇಪ 1971, ಸೃಷ್ಟಿ 1979, ಬೀಜ 1981, ಸಂಬಂಧ 1981, ಅಂತರಾಳ 1993, ಓಂಣಮೋ 1998. ವಿಮರ್ಶೆ : ಸಾಹಿತ್ಯ ಮತ್ತು ಭಾಷೆ 1980, ನವ್ಯ ಸಾಹಿತ್ಯದರ್ಶನ 1989, ಗಂಗಾಧರ ಚಿತ್ತಾಲರ ಕಾವ್ಯ ಸೃಷ್ಟಿ, (ಸಂಪಾದನ) 1987, ಕನ್ನಡ ಕಾದಂಬರಿ ನಡೆದು ಬಂದ ರೀತಿ 1989, ಎಂ.ಎನ್. ರಾಯ್ 1994.

**ಇಂಗ್ಲಿಷ್‌ನಲ್ಲಿ** : Critical Essays on Indian Writings in English (Ed: with Naik & Amur) 1969, Experimentation with Language in Indian Writing in English 1974, The Image of India in Western Creative Writing (Ed)1970, Critical Thought (Ed. with Devy) 1988, 20th Century Critical Essays in English, Santha Ramarao 1975, Indian poetry Today (Kannada) 1976, Bhahani Bhattacharya 1974, Indian Essays in American Fiction (Ed. with Naik & Amur) 1972, Colonial Consciousness in Commonwealth Literature (Ed. with Amur) 1984, Creative Aspects of English (Ed) 1994.



## ಹಾ.ಮಾ. ನಾಯಕ

**ಜೀವನ ಪಥ** : ಜನನ : 1931, ಫೆಬ್ರವರಿ 5, ತೀರ್ಥಹಳ್ಳಿ, ಶಿಕ್ಷಣ : ನಾಲೂರು, ಮೇಗರಹಳ್ಳಿ, ತೀರ್ಥಹಳ್ಳಿಗಳಲ್ಲಿ ಶಾಲಾ ವ್ಯಾಸಂಗ. ಶಿವಮೊಗ್ಗ ದಲ್ಲಿ ಇಂಟರ್ ಮೀಡಿಯೇಟ್, ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಬಿ.ಎ. ಆನರ್ಸ್. ಕಲ್ಕತ್ತ ವಿಶ್ವವಿದ್ಯಾಲಯದಲ್ಲಿ ಭಾಷಾ ವಿಜ್ಞಾನ ಎಂ.ಎ. ಅಮೇರಿಕಾದ ಇಂಡಿಯಾನಾ ವಿಶ್ವವಿದ್ಯಾಲಯದಿಂದ 'Kannada : Literary and Colloquial' ಪ್ರೌಢ ಪ್ರಬಂಧಕ್ಕೆ ಪಿಎಚ್.ಡಿ ಪದವಿ. 1955ರಲ್ಲಿ ತುಮಕೂರು ಪ್ರಥಮದರ್ಜೆ ಕಾಲೇಜಿನಲ್ಲಿ ಅಧ್ಯಾಪಕರಾಗಿ ವೃತ್ತಿ ಪ್ರಾರಂಭ. 1961ರಿಂದ ಮೈಸೂರು ವಿಶ್ವವಿದ್ಯಾಲಯದಲ್ಲಿ ಸೇವೆ. ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರು, ನಿರ್ದೇಶಕರ ಹುದ್ದೆ. 1984ರಲ್ಲಿ ಗುಲ್ಬರ್ಗಾ ವಿಶ್ವವಿದ್ಯಾಲಯದ ಕುಲಪತಿ. 1982ರಲ್ಲಿ ಕರ್ನಾಟಕ ಸರ್ಕಾರದಿಂದ ರಾಜ್ಯ ಪ್ರಶಸ್ತಿ. 1986ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 'ಸಂಪ್ರತಿ' ಅಂಕಣ ಬರಹಕ್ಕೆ 1989ರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ಬೀದರ್‌ನಲ್ಲಿ ನಡೆದ 57ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. 1991 ಮೈಸೂರು ವಿ.ವಿ. ಸೇವೆಯಿಂದ ನಿವೃತ್ತಿ. ಕನ್ನಡ ಸಾಹಿತ್ಯ ಪರಿಷತ್ತಿನ ಅಮೃತ ಮಹೋತ್ಸವ ಸನ್ಮಾನ, ಅಖಿಲ ಭಾರತ ದ್ರಾವಿಡ ಭಾಷಾ ವಿಜ್ಞಾನಿಗಳ ಸಮ್ಮೇಳನದ ಅಧ್ಯಕ್ಷತೆ 1992, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ಮಾಸ್ತಿ ಪ್ರಶಸ್ತಿಗಳು ಅವರಿಗೆ ಸಂದಿದೆ. ನಿಧನ : 10 ನವೆಂಬರ್ 2000.

**ಸಾಹಿತ್ಯ ಪಥ** : ಪ್ರಬಂಧ : ಬಾಳ್ನೋಟಗಳು 1950, ನಮ್ಮ ಮನೆಯ ದೀಪ 1956. ಜೀವನ ಚರಿತ್ರೆ : ಮಹಮ್ಮದ್ ಪೈಗಂಬರ್ 1952, ರವೀಂದ್ರನಾಥ್ ಠಾಕೂರ್ 1960, ಅಕ್ಕಮಹಾದೇವಿ 1975. ಅಂಕಣ ಇತ್ಯಾದಿ : ಸಂಕೀರ್ಣ 1966, ಸಂಚಯ 1969, ಸಾಹಿತ್ಯ ಸಲ್ಲಾಪ 1970, ಸಲ್ಲಾಪ 1972, ಸಂವಾದ 1972, ಸಂಗ್ರಹ 1976, ಸಂದರ್ಭ (ಉಪನ್ಯಾಸ 1978), ಸಂಪುಟ 1980, ಸಂಪದ (ವಿಮರ್ಶೆ, 1981), ಸ್ಮರಣ (ವ್ಯಕ್ತಿಚಿತ್ರಗಳು, 1981), ಸಮೂಹ 1982, ಸಂಪರ್ಕ 1982, ಸಾಂಪ್ರತ 1983, ಸಂವಹನ 1983, ಸ್ಪಂದನ 1983, ಸಂಪ್ರತಿ, (ಭಾಗ ೧,೨,೩), ಸಪ್ತಕ (ಲೇಖನಗಳು, 1984) ಸೃಜನ, ಸಿಂಚನ 1991, ಸಿವುಡು, ಸ್ತವನ, ಸೊಡರು 1991, ಸಂಭ್ರಮ 1991, ಸ್ವಂತ 1992, ಸನ್ನುಡಿ 1993, ಸೂಲಂಗಿ, ಸನಾದಿ 1994, ಸಂಕುಲ 1997, ಸುರಗಿ 2000, ಸೋಗಿಲು (ಪ್ರ.2001). ಇತರೆ : ಜಾನಪದ ಸ್ವರೂಪ 1971, ಗೋಕಾಕ್ ಗ್ರಂಥಾವಳಿ 1980, ಮಾಸ್ತಿಯವರ ಪುಸ್ತಕಗಳು 1983, ಅಪ್ಪಯ್ಯ (ಸಂ. 1984), ಸುನೇರಿ (ಅನು : 1986), ಸಿಂಗಾರ (ಮುನ್ನುಡಿಗಳು, 1981). ಕನ್ನಡ ಮನಸ್ಸು 1991, ವೆಂಕಣ್ಣಯ್ಯ ಕೆಲವು ಪ್ರಸಂಗಗಳು 1991, ಹಕ್ಕಿಯ ಪಯಣ, ಹಾವು ಮತ್ತು ಹೆಣ್ಣು, ಸಿದ್ದಲಿಂಗ ಶಿವಯೋಗಿ. ಇಂಗ್ಲಿಷ್‌ನಲ್ಲಿ : Kannada Literary and Colloquial, Kannada Literature : A Decade.



## ಎಂ. ಚಿದಾನಂದಮೂರ್ತಿ

**ಜೀವನ ಪಥ** : ಜನನ : 10-5-1931 ಶಿವಮೊಗ್ಗ ಜಿಲ್ಲೆ ಹಿರೇಕೋಗಲೂರು. ತಂದೆ-ತಾಯಿ : ಕೊಟ್ಟೂರಯ್ಯ ಮತ್ತು ಪಾರ್ವತಮ್ಮ. ಶಿಕ್ಷಣ : ಸಂತೆಬೆನ್ನೂರು, ದಾವಣಗೆರೆ, ಮೈಸೂರುಗಳಲ್ಲಿ ವಿದ್ಯಾಭ್ಯಾಸ. ಮಹಾರಾಜಾ ಕಾಲೇಜಿನಿಂದ ಬಿ.ಎ. ಆನರ್ಸ್ (1953), ಎಂ.ಎ. (1957). ಅಧ್ಯಾಪಕ, ಉಪ ಪ್ರಾಧ್ಯಾಪಕ, ಪ್ರಾಧ್ಯಾಪಕರು, ಬೆಂ.ವಿ.ವಿ. ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಸ್ವಯಂ ನಿವೃತ್ತಿ (1990), ಕನ್ನಡ ಶಕ್ತಿ ಕೇಂದ್ರದ ಅಧ್ಯಕ್ಷರು. ಕ.ಸಾ.ಅ. ಪ್ರಶಸ್ತಿ (1984), ರಾಜ್ಯೋತ್ಸವ ಪ್ರಶಸ್ತಿ (1985), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಗೌರವ (1993), ಕೇಂದ್ರ ಸಾ.ಅ. ಪ್ರಶಸ್ತಿ 'ಹೊಸತು ಹೊಸತು' ಕೃತಿಗೆ (1997), ಇತರ ಹಲವು ಪ್ರಶಸ್ತಿಗಳು.

